# ಮಾಧ್ವ ವಾಙ್ಮಯ ತಪಸ್ವಿಗಳು



ಪಂ|| ಪಂಢರೀನಾಥಾಚಾರ್ಯ ಗಲಗಲಿ

# ಮುನ್ನುಡಿ

ಬಾನಗಲವಾಗಿ ಬೆಳೆದು ನಿಂತ ಭಾರತೀಯ ಅಧ್ಯಾತ್ಮ ಪ್ರಪಂಚದಲ್ಲಿ ವೈಷ್ಣವ ಸಿದ್ಧಾಂತವು ಹೆಮ್ಮೆಯ ಶಿಖರವಾಗಿ ತಲೆ ಎತ್ತಿ ನಿಂತುಕೊಂಡಿದೆ. ವೇದೋಪನಿಷತ್ ಕಾಲದಿಂದ ಪ್ರಾರಂಭಿಸಿ ಸ್ಮೃತಿಯುಗ, ಪುರಾಣ ಯುಗಗಳಲ್ಲಿಯೂ ತನ್ನ ಸತ್ತತ್ವ ರತ್ನಗಳ ಸತ್ವಮಹತ್ವದ ಜಯಭೇರಿಯನ್ನು ಹೊಡೆದ ವೈಷ್ಣವ ಸಿದ್ಧಾಂತವು ಪ್ರಾಗೈತಿಹಾಸಿಕ ಕಾಲದಲ್ಲಿಯೂ, ಐತಿಹಾಸಿಕ ಕಾಲ ಖಂಡದಲ್ಲಯೂ ತನ್ನ ಗೆಲವು ಗಂಬಗಳನ್ನು ಅಲ್ಲಲ್ಲಿ ನೆಟ್ಟಿದೆ. ಬೌದ್ಧ, ಚಾರ್ವಾಕ, ಜೈನ, ನಿರೀಶ್ವರ ಸಾಂಖ್ಯ, ನೈಯಾಯಿಕ, ಅದ್ವೈತ ಮುಂತಾದ ಕುವಾದಿಗಳ ದುರ್ವಾದ ಆಟೋಪದಲ್ಲಿ ಕೆಲವು ದಿನ ವೇದ ಪುರುಷನ ನಿಜವಾದ ದನಿಯು ಕ್ಷೀಣ ಕ್ಷೀಣವಾಗಿ ಕೇಳದಂತಾವಾಗ ವಾಯುಅವತಾರಭೂತರಾದ ಶ್ರೀ ಮಧ್ವಾಚಾರ್ಯರು ದಕ್ಷಿಣ ಕನ್ನಡದ ಉಡುಪಿಯ ಬಳಿ ಪಾಜಕಕ್ಷೇತ್ರದಲ್ಲಿ ಅವತರಿಸಿ ಮತ್ತೆ ಆ ವೇದ ಮತವನ್ನು ಉದ್ಧರಿಸಿದರು.

ಆಧ್ಯಾತ್ಮ ದೃಷ್ಟಿಯಿಂದ ತಾತ್ವಿಕ ಪ್ರಪಂಚದಲ್ಲಿ ಮಧ್ವರ ಜನನವು ಬಹಳ ಮಹತ್ವದ ಘಟನೆಯಾಗಿದೆ. ಮಹತ್ಕ್ರಾಂತಿಯ ಘಟ್ಟವಾಗಿದೆ. ಪರಶುರಾಮ ಕ್ಷೇತ್ರದಲ್ಲಿ ಅಂದು ವೇದ ವಿರೋಧಿ ವಾದಗಳನ್ನೆಲ್ಲ ತನ್ನ ನುಡಿಗೊಡಲಿಯಿಂದ ಕಡಿದೊಗೆದು ವೇದ ಮಾತೆಯನ್ನು ಪುನರುಜ್ಜೀವಿಸುವ ಪೂರ್ಣಪ್ರಜ್ಞರಂಥ ಪ್ರಜ್ಞಾ ಪರಶುರಾಮನು ಪಾಜಕ ಕ್ಷೇತ್ರದಲ್ಲಿ ಅವತಾರ ಮಾಡಿರದಿದ್ದರೆ ವೇದ ಮತಕ್ಕೆ ಅದ್ವೈತ ಮತದ ಆಶ್ರಯದಲ್ಲಿ ಶೂನ್ಯ ಸಿಂಹಾಸನವೇ ಗತಿಯಾಗುತ್ತಿತ್ತೋ ಏನೋ! ಆಗುವದೇನು? "ಇದಮಂಧಂ ತಮಃ ಕೃತ್ಸ್ನಂ ಜಾಯೇತ ಭುವನತ್ರಯಂ"

ಹರಿ-ವಾಯುಗಳ ದೃಷ್ಟಿಯು ಜಗದೆಡೆಗೆ ಇನ್ನೂ ಕರುಣೋನ್ಮುಖವಾಗಿರುವಾಗ ಸರ್ವಾತ್ಮನಾ ಜ್ಞಾನ ಲೋಪವು ಹೇಗಾದೀತು!

ಹರಿಗೆ ಕರುಣೆ ಬಂದಿತು. ವಾಯುವಿಗೆ ಅವನ ಆದೇಶ ಬಂದಿತು. ಭೂಲೋಕಕ್ಕೆ ಭಾಗ್ಯ ಒದಗಿ ಬಂದಿತು.

ಗಾಳಿ ಗುರು ಹುಟ್ಟಿ ಬಂದರು. ಅವರ ವಿಷ್ಣು ಸರ್ವೋತ್ತಮತ್ವದ ಸಂದೇಶವು ಗಾಳಿಗುಂಟ ತೇಲಿತು. ಅವರು ಬೀರಿದ ಬೆಳಕು ಸೂರ್ಯನ ಬೆಳಕಿನ ಜೊತೆಗೆ ತಳಕು ಹಾಕಿ ಬೆಳೆಯಿತು. ಗಾಳಿ ಬೀಸಿದಲ್ಲೆಲ್ಲ ವೈಷ್ಣವ ಸಿದ್ಧಾಂತ ತಲೆ ಎತ್ತಿತು. ಬೆಳಕು ಬಿದ್ದಲ್ಲೆಲ್ಲ ವೇದ ಧರ್ಮವು ವ್ಯಾಪಿಸಿ ನಿಂತಿತು. ಆದರೆ ಅದರ ಉಪಯೋಗವನ್ನು ತೆಗೆದುಕೊಂಡವರು ಸಜ್ಜನರು ಮಾತ್ರ. ಸೂರ್ಯನ ಹೊಂಗಿರಣಗಳು ತೆರೆಗೆ ತೂರಿ ಬಂದಾಗ ತಾವರೆಗಳು ಮಾತ್ರ ಪಕಳೆದುಟಿ ತೆರೆಯುವವಷ್ಟೇ ! ನೇಸರಿನ ತುಂಬು ಬೆಳ್ಳಕು ಗೂಗೆಗಳಿಗೆ ಕಣ್ಣುಬೇನೆ ತಾನೇ !

ಮಧ್ವ ಮುನಿಗಳು ಶ್ರುತಿಶೈಲದ ಉತ್ತುಂಗ ಶೃಂಗಾಂಗಣದಲ್ಲಿ ಕಂಗೊಳಿಸುವ ತತ್ವಗಳ ಮಣಿ ಮೌಕ್ತಿಕಗಳನ್ನು ಜಿಜ್ಞಾಸುಗಳ ಉಡಿ ತುಂಬಿ ಕಳಿಸುವದನ್ನು ಕಂಡು ಕನಲಿ ಕೆಂಡದಂತಾದ ಕೆಲವು ಕುಹಕಿ ಕುವಾದಿಗಳು ಆ ಜ್ಞಾನ ಸೂರ್ಯನ ಮೇಲೆ ಧೂಳಿ-ಧೂಸರ ಪ್ರಕ್ಷೇಪದ ಸಾಹಸ ಮಾಡಿದ್ದೂ ಉಂಟು. ಆದರೆ ಆ ಜ್ಞಾನ ಭಾಸ್ಕರನ ಅಗ್ನಿದೂತರಂತಿದ್ದ— ಶ್ರೀ ಜಯತೀರ್ಥ, ಶ್ರೀ ವ್ಯಾಸರಾಜ, ಶ್ರೀ ರಘೂತ್ತಮ, ಶ್ರೀ ವಾದಿರಾಜ, ಶ್ರೀ ವಿದ್ಯಾಧೀಶ ಶ್ರೀ ರಾಘವೇಂದ್ರರಂಥ ಅಸಂಖ್ಯ ವಿಜ್ಞಾನ ಭಿಕ್ಷುಗಳು ಮಾಯಾವಾದಿಗಳ ಮಾತಿನ ಮಂಜನ್ನು ಹರಿದು ತತ್ವಜ್ಞಾನ ಜ್ಯೋತಿಯ ದಿವ್ಯ ಪ್ರಭೆಯು ಎಲ್ಲೆಡೆಗೂ ಚಲ್ಲುವರೆದು ಬೆಳಗುವಂತೆ ಮಾಡಿದರು.

ಅಧ್ಯಾತ್ಮಶಕ್ತಿಯ ಜ್ಯೋತಿರ್ಮಯವಾದ ಈ ಇತಿಹಾಸವನ್ನು ಸಂಕ್ಷಿಪ್ತವಾಗಿ ದಿಗ್ದರ್ಶಿಸುವ ಉದ್ದೇಶದಿಂದ ಈ ಹೆಜ್ಜ್ಯೋತಿಗೆಯು ಜನ್ಮ ತಾಳಿತು.

–ವೈದಿಕ ವೈಷ್ಣವ ಮತದ ಪುನರುದ್ಧಾರಕರಾದ ಶ್ರೀ ಮಧ್ವಾಚಾರ್ಯರಿಂದ ಆರಂಭಿಸಿ ಈ ಶತಮಾನದ ಶಕಪುರುಷರಾದ ಶ್ರೀ ಶ್ರೀ ಸತ್ಯಧ್ಯಾನತೀರ್ಥ ಮತ್ತು ಶ್ರೀ ಭಂಡಾರಕೇರಿ ಮಠಾಧೀಶ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಸುಧಾ ಮಂಡನಕಾರರಾದ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀ ಚರಣರ ವರೆಗಿನ ಎಂಟನೂರು ವರ್ಷದ ಸಾಗ್ರಸಮಗ್ರ ಇತಿಹಾಸವನ್ನು ಯಥಾಶಕ್ತಿ ಸುಮಾರು ಒಂದುವರೆ ಸಾವಿರ ಪುಟದಷ್ಟು ಪರಿಮಿತ ಪರಿಣಾಹದಲ್ಲಿ ಮೂಡಿಸಬೇಕೆಂಬ ಹಂಬಲದ ಪರಿಣತ ಸ್ವರೂಪವೇ ಈ ಗ್ರಂಥ.

ಆದರೆ ಇಂಥ ಹೆಜ್ಜ್ಯೋತಿಗೆಯ ಪ್ರಕಾಶನಕ್ಕಾಗಿ ಬೇಕಾಗುವ ಆರ್ಥಿಕ ಸೌಕರ್ಯ ಮತ್ತು ಆವಶ್ಯಕವಾದ ಸಾಹಿತ್ಯ ಸಂಭಾರಗಳು ನಮ್ಮ ಊಹಾ ಶಕ್ತಿಗೂ ದುರ್ಮಿಳ ವಾಮದರಿಂದ ಅದು ನಮ್ಮ ಮನಸ್ಸಿನ ಮಂಡಿಗೆಯಾಗಿ ಹೃದಂತರಾಳದಲ್ಲಿ ಸುಪ್ತ ವಾಗಿದ್ದಿತು.

ಮಾಧ್ವರೆಲ್ಲರೂ ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರ ಪರ್ಯಾಯ ಕಾಲವು ಸನ್ನಿಹಿತವಾಯಿತು. ಅದೇ ಕಾಲದಲ್ಲಿ

ಜನರ ಉತ್ಸಾಹಕ್ಕೆ ಮಹಾಪೂರ ಬಂದಿತು. ಧಾರ್ಮಿಕ ಚಟುವಟಿಕೆಗಳಿಗೆ ಸುವರ್ಣ ಸಂಧಿ ಬಂದಿತು. ಗ್ರಂಥ ಪ್ರಕಾಶನಗಳಿಗೆ ಸುಗ್ಗಿ ಬಂದಿತು.

ಅವರ ಪರ್ಯಾಯದ ೨ನೇ ವರ್ಷದ ಶ್ರೀ ಮಧ್ವನವಮಿಯ ಸಂದರ್ಭದಲ್ಲಿ ಶ್ರೀ ಟೀಕಾಚಾರ್ಯರ ಆರುನೂರನೇ ಮಹೋತ್ಸವ, ಶ್ರೀಮನ್ಮಾಧ್ವರಾದ್ಧಾಂತ ಸಭೆಯ ರಜತ ಮಹೋತ್ಸವ, ಅಖಿಲ ಭಾರತ ಮಾಧ್ವ ತತ್ವಜ್ಞಾನ ಸಮ್ಮೇಲನದ ಏಳನೇ ಅಧಿವೇಶನ ಹೀಗೆ ಮೂರು ಸಮಾರಂಭಗಳು ಏಕಕಾಲಕ್ಕೆ ಉಡುಪಿಯಲ್ಲಿ ಶ್ರೀ ಕೃಷ್ಣನ ಸನ್ನಿಧಾನದಲ್ಲಿ ನೆರವೇರಿದವು.

ಜ್ಞಾನಗಂಗೆಯ ಈ ತ್ರಿವೇಣಿ ಸಂಗಮದ ಮಂಗಲ ಪ್ರಸಂಗದಲ್ಲಿಯೇ ಮಾಧ್ವ ತತ್ವಜ್ಞಾನದ ಎಂಟನೂರು ವರ್ಷಗಳ ನಡೆದು ಬಂದ ದಾರಿಯಂತಿರುವ ಒಂದು ಮಹತ್ಪ್ರಬಂಧವನ್ನು ಪ್ರಕಟಿಸಬೇಕೆಂದು ಗದುಗಿನ ಶ್ರೀ ಸರ್ವಜ್ಞ ಸೇವಾ ಧುರೀಣ ಶ್ರೀ ಕೆ. ನಾರಾಯಣರಾಯರಿಗೆ ಸರ್ವಜ್ಞಾಚಾರ್ಯರ ಪ್ರೇರಣೆಯಾಯಿತು.

ಅವರೊಂದು ಮೌನವಾಗಿಯೇ ಮಧ್ವ ಮುನಿಗಳ ವಾಙ್ಮಯ ಸೇವೆಯನ್ನು ಮಾಡಬೇಕೆಂದು ಹಂಬಲಿಸುವ ಪುಣ್ಯಜೀವ. ಸರ್ವಮೂಲ ಗ್ರಂಥ ಪ್ರಕಾಶನದ ಲಕ್ಷಾವಧಿ ರೂಪಾಯಿ ವೆಚ್ಚದ ಕಾರ್ಯವೂ ಮೈಮೇಲೆ ಬಿದ್ದಿದ್ದರೂ— ಅಲ್ಲ, ಸ್ವ-ಸಂತೋಷದಿಂದ ತಾವಾಗಿ ಶಿರಸಾವಹಿಸಿದ್ದರೂ ಮತ್ತೆ ಹತ್ತಿಪ್ಪತ್ತು ಸಾವಿರ ರೂಪಾಯಿಗಳ ಖರ್ಚಿನ ಮತ್ತೊಂದು ಈ ಹೆಬ್ಬೊತ್ತಿಗೆಯ ಪ್ರಕಾಶನ ಕಾರ್ಯವನ್ನು ಕೈಕೊಂಡ ಅವರ ಅದಟು, ಉತ್ಸಾಹಗಳನ್ನು ಕಂಡು ನಾನಂತೂ ನಿಬ್ಬೆರಗಾಗಿನಿಂದೆ. ಉಭಯ ಶ್ರೀಗಳವರು ತುಂಬು ಹೃದಯದ ಹರಕೆ ಇತ್ತು ಆಶೀರ್ವದಿಸಿದರು. ಸಮಾಜದ ಹಿರಿಯ ಜೀವಿಗಳೂ ಮನಃಪೂರ್ವಕವಾಗಿ ಇಂಥ ಕಾರ್ಯವು ಈಗಾಗುವದು ಅತ್ಯಾವಶ್ಯಕ ಎಂದು ಪ್ರೋತ್ಸಾಹಿಸಿದರು.

ಆದರೆ ಈಗ ಬಂದ ಪ್ರಶ್ನೆ ಇಂಥ ಹೆಗ್ಗಡಲನ್ನು ಕಡೆಯುವವರಾರು? ಈ ಹೆಬ್ಬೊತ್ತಿಗೆಯನ್ನು ಬರೆಯುವವರಾರು? ನನ್ನ ಆತ್ಮೀಯ ಬಂಧುಗಳಾದ ಶ್ರೀ ಕೆ. ನಾರಾಯಣರಾಯರು ನನ್ನಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದಾಗ ಆಗ ನಾನು ಅವರಿಗೆ ನನ್ನ ಪ್ರಾಮಾಣಿಕ ಅಭಿಪ್ರಾಯವನ್ನು ತಿಳಿಸಿದೆ—

"ಕ್ವ ಸೂರ್ಯಪ್ರಭವೋ ವಂಶಃ ಕ್ವ ಚಾಲ್ಪ ವಿಷಯಾ ಮತಿಃ"

ನನ್ನಂಥ ಮಿತಮತಿಗಳಿಗೆ ಇದು ನೀಗದ ಕೆಲಸ, ಆಗದ ಮಾತು. ಇದಕ್ಕಾಗಿ ಕನ್ನಡ ಸಾಹಿತ್ಯದಲ್ಲಿ ಒಳ್ಳೇ ಗತಿಯುಳ್ಳ, ಸಂಸ್ಕೃತ ಸಾಹಿತ್ಯದಲ್ಲಿಯೂ ವಿಶೇಷ ಮತಿಯುಳ್ಳ, ಮಧ್ವಶಾಸ್ತ್ರದಲ್ಲಿ ಪಾಂಡಿತ್ಯವುಳ್ಳ, ಸಂಶೋಧಕ ದೃಷ್ಟಿಯುಳ್ಳ, ಐತಿಹಾಸಿಕ

ಪ್ರಜ್ಞೆಯುಳ್ಳ ಓರ್ವ ಬಹುಶ್ರುತ ವಿದ್ವಾಂಸರನ್ನು ನಿಯೋಜಿಸಬೇಕು" ಎಂದು ಹೇಳಿವೆ. ಅದಕ್ಕಾಗಿ— ನಾಲ್ಕಾರು ಹೆಸರುಗಳನ್ನೂ ಸೂಚಿಸಿದೆ.

ಆದರೆ ಏವಂಗುಣ ವಿಶೇಷಣ ವಿಶಿಷ್ಟರಾದ ವ್ಯಕ್ತಿಯನ್ನು ಈ ಅಲ್ಪಾವಕಾಶದಲ್ಲಿ ಹುಡುಕುವದು ಅಶಕ್ಯವೆನಿಸಿ ಅದಕ್ಕೆ ಯೋಗ್ಯತೆ ಇಲ್ಲದ ನಾನೇ ಆ ಕಾರ್ಯವನ್ನು ಕೈಕೊಳ್ಳುವ ಪ್ರಸಂಗ ಬಂದಿತು. "ಅಕರಣಾತ್ ಮಂದಕರಣಂ ಶ್ರೇಯಃ" ಮಾಡದೇ ಇರುವದಕ್ಕಿಂತ ಸ್ವಲ್ಪವಾದರೂ ಮಾಡುವದೇ ಲೇಸು ಎಂಬ ಉಕ್ತಿಯನ್ನು ನೆನೆದು ಈ ಕಾರ್ಯವನ್ನು ಕೈಕೊಳ್ಳಲಾಯಿತು.

ಅವಕಾಶವುಳಿದದ್ದು ಅತ್ಯಲ್ಪ. ಇದರ ಮೇಲೆ ನನಗೆ ವೇದಪುರಾಣ ಸಾಹಿತ್ಯ ಮಾಲೆಯ ಪುರಾಣ ಲೇಖನ, ಹಾಗೂ ತತ್ವವಾದ ಪಂಚಾಮೃತಾದಿ ಪತ್ರಿಕಾ ಸಂಪಾದನ ಮುಂತಾದ ಕಾರ್ಯಗಳು ನನ್ನ ಅವರ್ಜನೀಯ ಕರ್ತವ್ಯಗಳಾಗಿದ್ದವು. ಅದಕ್ಕಾಗಿ ಮಿತ್ರ ಶ್ರೀ ಮಳಗಿ ಜಯರಾಮಾಚಾರ್ಯರ ಸಹಾಯವನ್ನು ಯಾಚಿಸಿದೆ. ಅವರೂ ಸಹೃದಯತೆಯಿಂದ ಒಪ್ಪಿ ಕಾರ್ಯಕ್ಕೆ ಅಣಿಯಾದರು. ಹಗಲು ರಾತ್ರಿ ಕುಳಿತು ಸಂದರ್ಭ ಗ್ರಂಥಗಳನ್ನೆಲ್ಲ ತಲಕಾಡಿದೆವು. ಶಿಲಾಶಾಸನಗಳನ್ನು ಶೋಧಿಸಿದೆವು. ಚಾರಿತ್ರಿಕ ಗ್ರಂಥಗಳನ್ನು ಪರಿಶೀಲಿಸಿದೆವು. ಹಿರಿಯರನ್ನು ಕೇಳಿದೆವು. ಶ್ರೀ ಮಠಗಳಿಗೆಲ್ಲ ನಿಮ್ಮ ಸಂಸ್ಥಾನದ ನಿಮ್ಮ ಶಿಷ್ಯರ ಜ್ಞಾನ ಪ್ರಯೋಜಕ ವ್ಯಾಪಾರಗಳನ್ನು ತಿಳಿಸ ಬೇಕೆಂದು ಬಿನ್ನವಿಸಿದೆವು. ಅಸಂಖ್ಯ ಪಂಡಿತರಿಗೂ, ಪ್ರತಿಷ್ಠಿತರಿಗೂ, ಸಂಘ ಸಂಸ್ಥೆ ಗಳಿಗೂ ತಮ್ಮ ತಮ್ಮ ದೇಶದಲ್ಲಿ ಹಿಂದೆ ನಡೆದ ಇಂದು ನಡೆಯುವ ವಾಗ್ವ್ಯಾಪಾರ ಗಳನ್ನೂ ಸೈದ್ಧಾಂತಿಕ ಚಟುವಟಿಕೆಗಳನ್ನೂ ಬರೆದು ತಿಳಿಸಬೇಕೆಂದು ಪತ್ರಗಳನ್ನು ಹಾಕಿದೆವು. ಪತ್ರಿಕೆಗಳಲ್ಲಿಯೂ ೨-೩ ಬಾರಿ ಪ್ರಕಟನೆಗಳನ್ನು ಕೊಟ್ಟು ವಿದ್ಯಮಾನ ವಿದ್ವಾಂಸರ, ಪ್ರಾಚೀನ ಪಂಡಿತರ, ಗ್ರಂಥಕಾರರ, ಪ್ರವಚನಾಚಾರ್ಯರ ಚರಿತ್ರೆಗಳನ್ನು ವಾಙ್ಮಯೀನ ಕಾರ್ಯಗಳನ್ನೂ ಬರೆದು ತಿಳಿಸಬೇಕೆಂದು ಕೇಳಿಕೊಂಡೆವು.

ಆದರೆ ಈ ವಿಷಯದಲ್ಲಿ ಬಹ್ವಂಶವಲ್ಲಿ ನಮಗೆ ನಿರಾಶೆಯೇ ಕಾದಿತ್ತು. ಪತ್ರಿಕಾ ಪ್ರಕಟನೆಗೆ ಸಮಾಜದ ಗಣ್ಯ ವ್ಯಕ್ತಿಗಳಿಂದಾಗಲೀ ಪಂಡಿತರಿಂದಾಗಲೀ ನಿರೀಕ್ಷಿಸಿದಷ್ಟು ಪ್ರತಿಕ್ರಿಯೆ ಬರಲಿಲ್ಲ. ಹಾಕಿದ ಪತ್ರಗಳು ಉತ್ತರ ಕಾಣದೇ ಎಷ್ಟೋ ನಾಪತ್ತೆ ಯಾದವು. ಆದರೂ ಧೃತಿಗೆಡದೆ, ಮತಿಗೆಡದೆ ನಾವು ಮುಂದುವರೆದೆವು.

ಸ್ವತಃ !ನಾನು ದಕ್ಷಿಣ ಭಾರತದ ವಿದ್ವತ್ ಕೇಂದ್ರಗಳೆನಿಸಿದ— ಕುಂಭಕೋಣ, ತಿರುಪತಿ, ಶ್ರೀರಂಗ, ರಾಮೇಶ್ವರ, ಚಿದಂಬರ, ಕಂಚಿ, ಬೆಂಗಳೂರು, ಮೈಸೂರು, ಉಡುಪಿ, ಮುಂಬೈ, ಬೆಳಗಾವಿ, ಧಾರವಾಡ ಮುಂತಾದ ಊರುಗಳಿಗೆ ಹೋಗಿ ಅನೇಕ ಪಂಡಿತರನ್ನು ಭೆಟ್ಟಿಯಾಗಿ ಬಂದೆ. ಅನೇಕ ಜ್ಞಾನವೃದ್ಧರೂ, ಪಂಡಿತರೂ,

ನನಗೆ ಸಮಕ್ಷ ಭೆಟ್ಟಿಯಾದಾಗ— ಪ್ರಾಚೀನ, ಅರ್ವಾಚೀನ ಹಾಗೂ ವಿದ್ಯಮಾನ ವಿದ್ವಾಂಸರ ಮಾಹಿತಿಯನ್ನು ಒದಗಿಸಿದರು. ಅದಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ನಮ್ಮ ಪತ್ರಕ್ಕೆ ಉತ್ತರವನ್ನು ಕೊಟ್ಟು ಅನೇಕ ಪಂಡಿತರ ಪರಿಚಯವನ್ನು ಬರೆದು ಕಳುಹಿಸಿದ ಮಹನೀಯರಿಗೂ ನಾವು ಋಣಿಯಾಗಿದ್ದೇವೆ.

ಮುಖ್ಯವಾಗಿ— ಪಂಡಿತರಾಜ ಮಾಹುಲಿ ಗೋಪಾಲಾಚಾರ್ಯ, ಗೌಡಗಿರಿ ಶ್ರೀನಿವಾಸಾಚಾರ್ಯ, ಗಲಗಲಿ ರಾಮಾಚಾರ್ಯ, ವಟ್ಟಂಗಾಡ ಭೀಮಾಚಾರ್ಯ, ರಾ. ಬ. ವೆಂಕಟೇಶಾಚಾರ್ಯ, ಎಂ. ವ್ಹಿ. ಪದ್ಮನಾಭಾಚಾರ್ಯ, ಶ್ರೀ ಶ್ರೀ ಸಾಗರ ಕಟ್ಟೆ ಸ್ವಾಮಿಗಳು, ಬಿ. ರಾಮಮೂರ್ತಿ ಆಚಾರ್ಯ, ಅಡ್ಡೆ ವೇದವ್ಯಾಸಾಚಾರ್ಯ, ಸುಬೋಧ ರಾಮರಾವ, ವಾಸುದೇವಾಚಾರ್ಯ ಗುರಗುಂಡಿ, ಪೀ. ಪೀ. ಲಕ್ಷ್ಮೀ ನಾರಾಯಣ ಉಪಾಧ್ಯಾಯ, ಅವಧಾನಿ ರಾಮಾಚಾರ್ಯ, ಸ್ವಾಮಿರಾಚಾರ್ಯ ಕೊಪ್ಪಳ, ಬಿ. ಎನ್. ಕೆ. ಶರ್ಮಾ, ಪಾಂಡುರಂಗಿ ಶ್ರೀನಾಥಾಚಾರ್ಯ, ಚಿಕ್ಕೇರೂರು ಗೋವಿಂದಾಚಾರ್ಯ, ಹ. ರಾ. ಪುರೋಹಿತ, ಬುರ್ಲಿ ರಾಘವೇಂದ್ರಾಚಾರ್ಯ, ವಿಠ್ಠಲೋಪಾಧ್ಯಾಯ, ಬಾಳಿಬೈಲು ಪದ್ಮನಾಭಾಚಾರ್ಯ, ಡಾ|| ಕಮಲಾಪುರ ಕಾಂತರಾವ, ಮಹಿಷಿ ವೆಂಕಣ್ಣಾಚಾರ್ಯ, ಮಾಧವ ಮಹಿಷಿ, ಶ್ರೀ ಪ್ರಭುದಾಸ ಬ್ರಹ್ಮಚಾರಿ ಶ್ರೀ ಗೌಡೀಯ ಮಠ ಮುಂಬೈ ಮುಂತಾದ ಮಹನೀಯರೆಲ್ಲರಿಗೆ ನಾವು ಕೃತಜ್ಞರಾಗಿದ್ದೇವೆ.

ಎಷ್ಟಾದರೂ ಅವಕಾಶವು ಅತ್ಯಲ್ಪವಿದ್ದುದರಿಂದ ಪತ್ರ, ಪತ್ರಿಕೆಗಳಿಗೆ ಗಮನ ಕೊಡುವ ಸ್ವಭಾವವು ನಮ್ಮ ಜನರಲ್ಲಿ ಇಲ್ಲದುದರಿಂದ ಮತ್ತು ಎಷ್ಟೋ ಜನರಿಗೆ ಈ ವಿಷಯದ ಮಹತ್ವದ ಅರಿವೇ ಆಗದೇ ಇದ್ದುದರಿಂದ ಅನೇಕಾನೇಕ ಪಂಡಿತರ ಹಾಗೂ ಗ್ರಂಥಕಾರರ ಪರಿಚಯ ಹಾಗೂ ಜ್ಞಾನ ಕಾರ್ಯಗಳ ಉಲ್ಲೇಖವು ಆಗದೇ ಪೋಗಿರಬಹುದು. ಈಗಲಾದರೂ ಪರಿಚಯವಿದ್ದವರು ಅವುಗಳನ್ನು ಬರೆದು ಕಳಿಸಿದರೆ "ತತ್ವವಾದ"ವಲ್ಲಿಯೇ ಆಗಲೀ, ಅಥವಾ ಇದೇ ಪುಸ್ತಕದ ಎರಡನೇ ಆವೃತ್ತಿಯಲ್ಲಿ ಯಾಗಲಿ ಪ್ರಕಟಿಸಲಾಗುವದು.

ಈ ಗ್ರಂಥದಲ್ಲಿ ಶ್ರೀ ಮಧ್ವಮುನಿಗಳ ದಶಪ್ರಕರಣಗಳ ಮಹಿಮೆಯನ್ನು ನೆನೆದು ಅವುಗಳ ಸ್ಮರಣೆಯಾದರೂ ಆಗಲಿ ಎಂಬ ಉದ್ದೇಶದಿಂದ ಇದರಲ್ಲಿ ದಶ ಪ್ರಕರಣಗಳನ್ನು ಮಾಡಿದ್ದೇವೆ.

ಪ್ರಾರಂಭದಲ್ಲಿ ಶ್ರೀ ಮಧ್ವಾಚಾರ್ಯರ ಜೀವನ ಚರಿತ್ರವನ್ನು ಶ್ರೀ ಮಧ್ವ ವಿಜಯಕ್ಕನುಸಾರವಾಗಿ ಸಂಕ್ಷಿಪ್ತವಾಗಿ ಸಚಿತ್ರ ಕೊಡಲಾಗಿದೆ.

ಶ್ರೀ ಚಂದ್ರಿಕಾಚಾರ್ಯರು ರಚಿಸಿದ್ದೆಂದು ಹೇಳುವ 'ಶ್ರೀ ಮನ್ಮಧ್ವ ಮತೆ ಹರಿಃ ಪರತರಃ' ಎಂಬ ಪದ್ಯವನ್ನನುರಿಸಿ ಮಧ್ವ ಮತದ ಮುಖ್ಯ-ಮುಖ್ಯವಾದ ಸೈದ್ಧಾಂತಿಕ ತತ್ವ ಪ್ರಮೇಯಗಳನ್ನು— ಶ್ರುತಿ, ಸ್ಮೃತಿ, ಪುರಾಣ, ಪ್ರಮಾಣ ಸಹಿತವಾಗಿ ನಿರೂಪಿಸಲಾಗಿದೆ.

ಶ್ರೀ ಮಧ್ವಾಚಾರ್ಯರ ಸಮಕಾಲೀನರಾದ ವಿದ್ವದ್ವರೇಣ್ಯರ ಹಾಗೂ ಆಚಾರ್ಯ ಪುರುಷರ ಮತ್ತು ಗ್ರಂಥಕಾರ ಗುರುಪುಂಗವರ ಯಥೋಪಲಬ್ಧ ಮಿತಪರಿಚಯವನ್ನು ಬರೆಯಲಾಗಿದೆ.

ಮುಂದೆ ಆಚಾರ್ಯರ ಸಾಕ್ಷಾತ್ ಶಿಷ್ಯರ ಪರಿಚಯವನ್ನು ಕೊಟ್ಟು, ಮಾಧ್ವರ ಇತಿಹಾಸದಲ್ಲಿಯೇ ಅಭೂತಪೂರ್ವ ಘಟನೆ ಎನಿಸಿದ— ಶ್ರೀ ಅಕ್ಷೋಭ್ಯತೀರ್ಥ, ಶ್ರೀ ವಿದ್ಯಾರಣ್ಯರ ವಾಕ್ಯಾರ್ಥದ ಸಂದರ್ಭವನ್ನು ವಿವರವಾಗಿ ಪ್ರಮಾಣ ಗ್ರಂಥೋದಾಹರಣ ಪೂರ್ವಕವಾಗಿ ಚಿತ್ತರಿಸಲಾಗಿದೆ.

ಶ್ರೀ ಜಯತೀರ್ಥರ ಷಟ್ ಶತಮಾನೋತ್ಸವ ಸ್ಮಾರಕವಾಗಿ ಈ ಗ್ರಂಥವನ್ನು ಪ್ರಕಟಿಸುವ ಗುರಿ ಇದ್ದುದರಿಂದ ಹಾಗೂ ಶ್ರೀ ಜಯತೀರ್ಥರು ಮಾಧ್ವ ವಾಙ್ಮಯದ ಸೀಮಾ ಪುರುಷರಾದುದರಿಂದ ಅವರ ಚರಿತ್ರವನ್ನು ಅವತಾರತ್ರಯೋಪೇತವಾಗಿ ವಿಸ್ತಾರವಾಗಿಯೇ ಬರೆಯಲಾಗಿದೆ.

ಮುಂದೆ ಜಯತೀರ್ಥರ ಉತ್ತರ ಕಾಲದಲ್ಲಿ ಮಾಧ್ವ ವಾಙ್ಮಯಕ್ಕೆ ಅಮೋಘ ಸೇವೆ ಸಲ್ಲಿಸಿದ ಪರಮಹಂಸಾವತಂಸರಾದ ಅನೇಕ ಪಂಡಿತೋತ್ತಮ ಪರಿವ್ರಾಜಕರ, ಪೀಠಾಧಿಪತಿಗಳ ಚಾರು ಚರಿತ್ರೆಗಳನ್ನು ಸಂಕ್ಷೇಪ ವಿಸ್ತಾರದಿಂದ ಕೊಡಲಾಗಿದೆ.

ಇದರಲ್ಲಿ ಬಂದ ಒಬ್ಬೊಬ್ಬ ಮಹನೀಯರೂ ಅಪರೋಕ್ಷ ಜ್ಞಾನಿಗಳೂ ಮಹಾನುಭಾವರೂ ಆಗಿ ಮಾಧ್ವ ವಾಙ್ಮಯದ ಅಪಾರ ಸೇವೆಯನ್ನು ಸಲ್ಲಿಸಿದುದರಿಂದ ಅವರೆಲ್ಲರ ಮೇಲೆ ಒಂದೊಂದು ಗ್ರಂಥ ಬರೆಯುವಷ್ಟು ವಿಸ್ತಾರವಾಗಿದೆ. ಅವರ ಮಹಾ ಮಹಿಮೆ. ಆದರೆ ೮೦೦ ವರ್ಷದ ನೂರೆಂಟು, ಅದೇಕೆ ಸಾವಿರದೆಂಟು ವ್ಯಕ್ತಿಗಳ ಜಾಯ ಮಾನವನ್ನೆಲ್ಲ ವಿವರಿಸ ಹೊರಟ ಈ ಗ್ರಂಥದಲ್ಲಿ ಅಂಥ ಮಹತೋಮಹೀಯಾಂಸರಾದ ವಿದ್ವದ್ವರೀಯಾಂಸರಿಗೂ ಯತಿಗರೀಯಾಂಸರಿಗೂ ಪರ್ಯಾಪ್ತವಾದ ಸ್ಥಲಾವಕಾಶವನ್ನು ಒದಗಿಸಿ ಸಾಕಷ್ಟು ಶಬ್ದ ಕುಸುಮಗಳಿಂದ ಪೂಜ್ಯ ಪೂಜೆಯನ್ನು ಮಾಡಲಿಕ್ಕೆ ಆಗದ್ದರಿಂದ ವಿಷಾದವು ಎನಿಸಿದೆ. ಆದರೆ ನಮಗೆ ತಿಳಿದಮಟ್ಟಿಗೆ ಸಾಧ್ಯವಾದಷ್ಟು ಗ್ರಂಥಕಾರರಾದ ಯತೀಶ್ವರರನ್ನು ಬಿಡದೇ ಇದರಲ್ಲಿ ಕಾಣಿಸಲಾಗಿದೆ.

ಶ್ರೀ ಮಧ್ವಾಚಾರ್ಯರಿಂದ ಸಂಸ್ಥಾಪಿತವಾಗಿ ಅನೇಕ ರೀತಿಯಿಂದ ಕವಲೊಡೆದು, ಶತಮಾನ ಶತಮಾನಗಳಿಂದ ಜ್ಞಾನದಾನ, ಸಿದ್ಧಾಂತ ಪ್ರಸಾರ ಕಾರ್ಯವನ್ನು ಮಾಡುತ್ತಲಿರುವ ಎಲ್ಲ ಮಾಧ್ವ ಮಠಗಳ ಸಂಕ್ಷಿಪ್ತ ಚರಿತ್ರೆಯನ್ನೂ ಹಾಗೂ ಮಾಧ್ವ ತತ್ವಜ್ಞಾನದ ಔತ್ತರೇಯ ವಾರಸುದಾರರಾದ ಶ್ರೀ ಚೈತನ್ಯ ಸಂಪ್ರದಾಯದ ಮಠ ಮಠಾಧೀಶರ ಮತ್ತು ಗೌಡಸಾರಸ್ವತ ಸಂಪ್ರದಾಯದ ಅಪ್ಪಟ ಮಾಧ್ವ ಪರಂಪರೆಯ ಶ್ರೀ ಗೋಕರ್ಣ ಪರ್ತಗಾಳೀ ಜೀವೋತ್ತಮ ಮಠ, ಮತ್ತು ಕಾಶೀ ಮಠಗಳ ಹಾಗೂ ಕಾಣ್ವಮಠದ ಪರಿಚಯವನ್ನು ಸಮಾಸ ರೀತಿಯಿಂದ ಇದರಲ್ಲಿ ರೇಖಿಸಲಾಗಿದೆ.

ಒಟ್ಟು ಈ ಪ್ರಕರಣದಲ್ಲಿ ನಾವು ಲೇಖಿಸಿದ ವೃಂದಾವನದ ವಿಭೂತಿಗಳ ಪರಿ ಸಂಖ್ಯೆಯು ೧೦೦ ಗಳಷ್ಟಿದೆ.

ಆನಂತರ ಮಧ್ವ ಸಿದ್ಧಾಂತದ ವೃದ್ಧಿ ಪ್ರಸಿದ್ಧಿಗಳಿಗೆ ಕಾರಣರಾದ ಅನೇಕ ಪ್ರಾಚೀನ ಪಂಡಿತರ ಪರಿಚಯವನ್ನು ಸಂಕ್ಷೇಪದಲ್ಲಿ ಮಾಡಿ ಕೊಡಲಾಗಿದೆ. ನಮಗೆ ಗೊತ್ತಿದ್ದ ಹಾಗೂ ಬರೆದು ಬಂದ ಅನೇಕ ಮನೆತನಸ್ಥ ಆಚಾರ್ಯರ ಹಾಗೂ ಗ್ರಂಥ ಕಾರರ, ಅಲ್ಲಲ್ಲಿ ಪಾಠಪ್ರವಚನಗಳಲ್ಲಿ ನಿರತರಾದ ಜ್ಞಾನಯೋಗಿಗಳ ಚರಿತ್ರವನ್ನು ಬಹಳ ಕಷ್ಟಪಟ್ಟು ಸಂಗ್ರಹಿಸಿ ಈ ಪ್ರಕರಣದಲ್ಲಿ ಪ್ರಕಟಿಸಲಾಗಿದೆ. ೮೦೦ ವರ್ಷಗಳ ಕಾಲ ಖಂಡದಲ್ಲಿ ವಿಸ್ಮೃತಿಯ ಗರ್ಭದಲ್ಲಿ ಅಡಗಿ ಹೋದ ಅಸಂಖ್ಯ ವಿದ್ವಾಂಸರನ್ನು ಸಾವಿನ ಸಂಪುಟದ ಮುಚ್ಚಳವನ್ನು ಓರೆಮಾಡಿ ಮತ್ತೊಮ್ಮೆ ಜಗತ್ತಿನ ಕಣ್ಣೆದುರು ಕರೆತರುವ ವೀರ ಸಾಹಸ ಇದಾಗಿದೆ. ಇಂದಿನ ಜನಾಂಗದ ಸ್ಮರಣ ಶಕ್ತಿಯ ನೆನಪಿನ ಶಲಾಕೆಗಳಿಗೆ ನಿಲುಕುವಷ್ಟರ ಮಟ್ಟಿಗೂ ಶೋಧನೆಯ ಕಣ್ಣಾಡಿಸಿ ಕರ್ನಾಟಕ, ಮಹಾರಾಷ್ಟ್ರ, ತೆಲಂಗಾಣ, ತಮಿಳನಾಡು, ಕೇರಳ, ಬಂಗಾಲ, ಉತ್ತರ ಪ್ರದೇಶ, ಮಧ್ಯ ಪ್ರದೇಶ ಮುಂತಾದ ಛಪ್ಪನ್ನ ದೇಶದ ಪ್ರಾಚೀನ ಮಾಧ್ವ ಪಂಡಿತರನ್ನೆಲ್ಲ ಮತ್ತೊಮ್ಮೆ ಆವ್ಹಾನಿಸಿ ಇಲ್ಲಿಯ ಓದುಗರೆಲ್ಲರಿಗೂ ಅವರು ಸಂದರ್ಶನ ನೀಡುವಂತೆ ಮಾಡಲಾಗಿದೆ. ಒಟ್ಟು ಈ ಪ್ರಕರಣದಲ್ಲಿ ಬೆಳಕಿನ ವೇದಿಕೆಗೆ ಕರೆತಂದ ಪ್ರಾಚೀನ ವಿದ್ವಾಂಸರ ಸಂಖ್ಯೆ ೫೭೪ ಗಳಷ್ಟು ಇರುತ್ತದೆ.

ಇದರ ಮುಂದಿನ ಪ್ರಕರಣದಲ್ಲಿ ವಿಶಾಲ ಭಾರತದ ಮೂಲೆ–ಮೂಲೆಯಲ್ಲಿರುವ ಮಾಧ್ವ ವಿದ್ವಾಂಸರ ಗ್ರಾಮ, ಧಾಮ, ಮತ್ತು ವಾಙ್ಮಯೀನ ಚರಿತ್ರೆಯನ್ನು ದಿಗ್ದರ್ಶನ ಮಾಡಲಾಗಿದೆ. ಇವರಲ್ಲಿ ಅನೇಕರು ವಿದ್ವತ್ತೆಯ ಒರೆಗಲ್ಲಿನಲ್ಲಿ ಹದಿ ನಾರಾಣೆಯ ಚೊಕ್ಕ ಚಿನ್ನವಾಗಿ ಬೆಳಗಬಲ್ಲ ಯೋಗ್ಯತೆಯವರಾದರೆ ಹಲವರು ಅಂಥ ಖರೆ ಒರೆಗಲ್ಲಿಗೆ ಇಳಿಯಲಾರದ ಸಾಮಾನ್ಯರೂ ಇರುತ್ತಾರೆ. ಆದರೆ ಮಧ್ವಶಾಸ್ತ್ರದ ಪರಿಚಯ, ಪ್ರವೇಶ, ಅಭಿನಿವೇಶ, ಆಸಕ್ತಿ, ಪೂರ್ವಾಭ್ಯಾಸ ಇದ್ದವರೆಲ್ಲರೂ 'ಪುಣ್ಯ ಚೇತನರು' ಎಂಬ ದೃಷ್ಟಿಯಿಂದ ಅವರೆಲ್ಲರ ಅಲ್ಪಾಲ್ಪ ಸ್ಥೂಲ ಪರಿಚಯವನ್ನು

ಇವರಲ್ಲಿ ಮಾಡಿಕೊಡಲಾಗಿದೆ. ಇದರಂತೆ ಗ್ರಂಥಕಾರರ, ಪುರಾಣಿಕರ, ಯಾಜ್ಞಿಕರ, ವೇದಾಧ್ಯಾಯಿಗಳ, ಜ್ಯೋತಿಷ್ಕರ, ವೈದಿಕ ವೃತ್ತಿಯಿಂದ ಉಪಜೀವಿಸುವವರ ಹಿತ ಮಿತ ಪರಿಚಯವೂ ಇಲ್ಲಿದೆ. ಈ ಪ್ರಕರಣದಲ್ಲಿ ಉಲ್ಲೇಖಿಸಲಾದ ವಿದ್ಯಾವಂತರ ಒಟ್ಟು ಮೊತ್ತ ೫೦೦ ಇದೆ.

ಇದರ ಮುಂದಿನ ಪ್ರಕರಣವು ಏತತ್‌ಪೂರ್ವ ಪ್ರಕರಣದಂತೆ ಅತ್ಯಂತ ಮಹತ್ವದ್ದಾಗಿದ್ದು ಇದರಲ್ಲಿ ದಾಸಕೂಟದ ಧುರೀಣರೆಲ್ಲರ ಚರಿತ್ರೆ ಬಂದಿದೆ. ತಾಳ, ತಮ್ಮಟೆಗಳನ್ನು ಹಿಡಿದು, ಮನೆಯ ಮೇಲೆ ತುಳಸಿ ಪತ್ರವನ್ನಿಟ್ಟು, ಹರಿ ಸರ್ವೋತ್ತಮತ್ವದ ಹರಿಕಾರರಾಗಿ ದೇಶದ ಮೂಲೆ–ಮೂಲೆಗೂ ಹರಿದಾಡಿ ಜನ ಜಾಗೃತಿಯನ್ನು ಮಾಡಿದ ಹರಿದಾಸರ ಪುಣ್ಯ ಜೀವನ, ಪಾವನ ಚರಿತ್ರೆಯಿಂದ ಈ ಪ್ರಕರಣವು ಒಳ್ಳೇ ವಾಚನೀಯವಾಗಿದೆ. ಇದರಲ್ಲಿ ದೇವರ ನಾಮ, ಸುಳಾದಿ, ಉಗಾಭೋಗಗಳನ್ನು ರಚಿಸಿದ, ಕನ್ನಡ ವೈಷ್ಣವ ಕಾವ್ಯಗಳನ್ನು ಸರಳಗನ್ನಡದ ಸವಿನುಡಿಯಲ್ಲಿ ಕವನಿಸಿದ ದಾಸರ ಕೃತಿಗಳ ವಿಮರ್ಶೆಯನ್ನೂ ಯಥಾ ಯೋಗ್ಯವಾಗಿ ಮಾಡಿಕೊಡಲಾಗಿದೆ— ಶ್ರೀ ನರಹರಿ ತೀರ್ಥರಿಂದ ಆರಂಭಿಸಿ ಶ್ರೀ ಪುರಂದರದಾಸ, ಕನಕದಾಸರ ಕಾಲದಲ್ಲಿ ವೈಭವದ ಶಿಖರವನ್ನು ಮುಟ್ಟಿ ಗೋಪಾಲದಾಸ, ವಿಜಯದಾಸರ ಸುವರ್ಣ ಯುಗದಲ್ಲಿ ಅಭಿವೃದ್ಧಿಯ ಅತಿಶಯವನ್ನು ಪಡೆದು ಶ್ರೀ ಜಗನ್ನಾಥದಾಸರ ವಾಗ್ವೈಭವದಲ್ಲಿ ಉತ್ಕರ್ಷದ ಚರಮ ಸೀಮೆಯನ್ನು ಮುಟ್ಟಿದ ದಾಸ ವಾಙ್ಮಯವು ಗೋರೆಬಾಳ ಹನುಮಂತರಾಯರ ವರೆಗೂ ಹರಿದು ಬಂದ ಹೆದ್ದಾರಿಯನ್ನು ಗುರುತಿಸುವ ಪ್ರಯತ್ನವನ್ನು ಈ ಪ್ರಕರಣದಲ್ಲಿ ಮಾಡಲಾಗಿದೆ.

ಈ ಹರಿದಾಸ ವಾಙ್ಮಯವನ್ನು ವಿಶ್ವವ್ಯಾಪಿಯನ್ನಾಗಿ ಮಾಡಿ ಮಧ್ವಮತದ ಡಿಂಗರಿಗರಾಗಿ ಊರೂರಿಗೆ, ಮನೆ ಮನೆಗೆ ಮಧ್ವ ಸಿದ್ಧಾಂತದ ಡಂಗುರ ಹೊಡೆದ ಹರಿಕಥೆಗಾರರ ಅಥವಾ ಹರಿಕೀರ್ತನಕಾರರ ಯಥೋಪಲಬ್ಧ ಪರಿಚಯವನ್ನು ಇಲ್ಲಿ ಸೇರಿಸಲಾಗಿದೆ. ಮತ್ತೂ ಅಲ್ಲಲ್ಲಿ ಜನರ ಬಾಯಲ್ಲಿ ಹಾಗೂ ಕೆಲವು ಪ್ರಾಚೀನ ಪುಸ್ತಕ ಪೋಥಿಗಳಲ್ಲಿದ್ದ ಹಿಂದಿನ ಅನೇಕ ದಾಸರಾಯರ ಹಾಡುಗಳನ್ನು ಸಂಗ್ರಹಿಸಿ ಶೋಧಿಸಿ ಪ್ರಕಟಿಸಿದ ಅನೇಕ ಹರಿದಾಸ ವಾಙ್ಮಯ ಪ್ರಕಾಶಕರ ಸಾಹಸದ ಪರಿಚಯವನ್ನು ಇಲ್ಲಿ ಕಾಣಬಹುದು. ಇದರಂತೆ ಸಂಸ್ಕೃತ ಸರ್ವಮೂಲ ಆಚಾರ್ಯರ ಗ್ರಂಥಗಳ ಹಾಗೂ ಟೀಕೆ ಟಿಪ್ಪಣಿಗಳ, ಮಂತ್ರ ತಂತ್ರಗಳ ಆಚಾರ ವಿಚಾರ ಪುರಾಣ ಪುಣ್ಯ ಕಥಾದಿ ಗ್ರಂಥಗಳ ಪ್ರಕಾಶಕರ ಪರಿಚಯವನ್ನೂ ಇದರಲ್ಲಿ ಅಂಶತಃ ಮಾಡಿಕೊಡಲಾಗಿದೆ.

ಮಧ್ವ ಸಿದ್ಧಾಂತಾನುಸಾರಿಯಾದ ದಾಸ ಸಾಹಿತ್ಯವನ್ನು ಉಳಿಸಿ ಬೆಳಸಿ ಜೀವಂತವಾಗಿ ಇಡುವಲ್ಲಿ ಮಾಧ್ವ ಮಹಿಳೆಯರ ಪಾತ್ರವು ಹಿರಿದಾಗಿದೆ. ಅನೇಕ

ಹೆಣ್ಣು ಮಕ್ಕಳು ಸ್ವಯಂ ದಾಸಕೂಟದ ದೇಶಿಕೆಯರಾಗಿ ಅನೇಕ ಕಾವ್ಯ, ದೇವರ ನಾಮ, ಹಾಡು ಗಬ್ಬಗಳನ್ನು ರಚಿಸಿ ಹೆಸರಾಗಿದ್ದಾರೆ. ಅಂಥ ದಾಸ ವಾಙ್ಮಯಕ್ಕೆ ತಮ್ಮ ನುಡಿ ಕಾಣಿಕೆಯನ್ನಿತ್ತ ಅನೇಕ ಕನ್ನಡ ಕವಿ ಕಾಮಿನಿಯರ ಕೌತುಕ ಚರಿತ್ರೆಗಳನ್ನು ಈ ಪ್ರಕರಣದಲ್ಲಿ ಪೋಣಿಸಲಾಗಿದೆ. ಅವರವರ ಕೃತಿಗಳ ಯಥಾಯೋಗ್ಯ ವಿಮರ್ಶೆಯನ್ನೂ ಸ್ವಲ್ಪದರಲ್ಲಿ ಸ್ವಾರಸ್ಯವಾಗಿ ಒದಗಿಸಲಾಗಿದೆ.

ಇದರ ಮುಂದೆ ಮಧ್ವಾಚಾರ್ಯರ ಕಾಲದಿಂದ ಇಲ್ಲಿಯವರೆಗೆ ಮಧ್ವ ತತ್ವ ಜ್ಞಾನದ ಅಭಿವೃದ್ಧಿಯ ಆಧಾರ ಸ್ತಂಭರಾಗಿ ನಿಂತುಕೊಂಡು ಅದಕ್ಕೆ ಸರ್ವತೋಭದ್ರವಾದ ಸಂರಕ್ಷಣ ಮುದ್ರೆಯನ್ನು ಒದಗಿಸಿದ ರಾಜ ಮಹಾರಾಜರ, ಹಾಗೂ ಪ್ರತಿಷ್ಠಿತ ಲೌಕಿಕರ , ಸಭಾ ಸಂಸ್ಥಾಪಕರ, ಸಂಸ್ಥಾ ಸಂಚಾಲಕರ ಪರಿಚಯವನ್ನು ಹಾಕಲಾಗಿದೆ.

ಇತ್ತೀಚಿನ ವರ್ಷಗಳಲ್ಲಿ ಮಧ್ವ ಸಿದ್ಧಾಂತದ ಅಭಿವೃದ್ಧಿಗಾಗಿ ಮತ್ತು ಮಧ್ವ ಸಮಾಜದ ಸರ್ವತೋಮುಖ ಏಳಿಗೆಗಾಗಿ ನಾಡಿನ ಎಲ್ಲ ಬದಿಯಲ್ಲಿಯೂ ಪ್ರಯತ್ನಿಸುತ್ತಿರುವ ಅನೇಕ ಸಂಘ ಸಂಸ್ಥೆ, ಸಭಾ ಸಮ್ಮೇಲನಗಳ, ಸಮಿತಿ ಮಂಡಲಗಳ, ಪತ್ರಿಕೆ ಪ್ರಕಾಶನ ಮಾಲೆಗಳ ಸ್ಥೂಲ ಪರಿಚಯವನ್ನು ಬರೆಯಲಾಗಿದೆ.

ಕೊನೆಯದಾಗಿ ಶ್ರೀ ಮನ್ಮಧ್ವಾಚಾರ್ಯರ ಸರ್ವಮೂಲ ೩೭ ಗ್ರಂಥಗಳ ಸಂಕ್ಷಿಪ್ತವಾದ ಪರಿಚಯವನ್ನು ಬರೆದು ಮುದ್ರಿಸಲಾಗಿದೆ. ಈ ಮಧ್ವಾಚಾರ್ಯರ ಈ ೩೭ ಗ್ರಂಥಗಳ ಮೇಲೆ ಬರೆದ ಅನೇಕ ಟೀಕೆ, ಟಿಪ್ಪಣಿಗಳನ್ನೂ ಬಹು ಪರಿಶ್ರಮ ಪೂರ್ವಕವಾಗಿ ಶೋಧಿಸಿ ಅವುಗಳ ಒಂದು ದೊಡ್ಡ (ಯಾದಿ) ಸೂಚೀ ಪತ್ರವನ್ನು ಕೊಡಲಾಗಿದೆ.

ಟೀಕೆ–ಟಿಪ್ಪಣಿಗಳಲ್ಲದೆ ಮಧ್ವ ಸಿದ್ಧಾಂತದ ಪರಿಚಾಯಕ, ವಿಮರ್ಶಕ, ವಿವರಣಾತ್ಮಕ ಖಂಡನ, ಮಂಡನ ರೂಪ ಅನೇಕ ಸ್ವತಂತ್ರ ಗ್ರಂಥಗಳ ಹಾಗೂ ಅವುಗಳ ಟೀಕೆ, ಟಿಪ್ಪಣಿಗಳ ವಿವರಣವನ್ನೂ ಇಲ್ಲಿ ದಿಗ್ದರ್ಶಿಸಲಾಗಿದೆ.

ಹಾಗೂ ಮಾಧ್ವ ಪಂಡಿತರು ಸಂಸ್ಕೃತದಲ್ಲಿ ಬರೆದ ಬೇರೆ-ಬೇರೆ, ಶಾಸ್ತ್ರ, ಸಾಹಿತ್ಯ, ವ್ಯಾಕರಣ, ಜ್ಯೋತಿಷ್ಯ, ಮಹಾಕಾವ್ಯ, ನಾಟಕ, ಚಂಪು, ಸ್ತೋತ್ರ ಮುಂತಾದ ಕೃತಿಗಳ ಪರಿಚಯವನ್ನು ಹಾಕಲಾಗಿದೆ.

ಒಟ್ಟಾರೆ ಈ ಕೊನೆಯ ಪ್ರಕರಣವು ಈ ವರೆಗೆ ಪ್ರಕಟಿತಾಪ್ರಕಟಿತ ಮಾಧ್ವ ಸಂಸ್ಕೃತ ಗ್ರಂಥಗಳ ಚಿಕ್ಕ ಕೈಪಿಡಿಯೇ ಆಗಿದೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇದು ಈ ಗ್ರಂಥದ ಸಾಮಾನ್ಯವಾದ ಒಕ್ಕಣಿಕೆಯ ರೂಪವಾಗಿದೆ.

ಈ ಪುಸ್ತಕದ ಕೊನೆಗೆ ನೆನಪು ತಪ್ಪಿ ಉಳಿದು ಹೋದ ಅನೇಕ ಯತಿಗಳ, ಪಂಡಿತರ, ಲೌಕಿಕ ಪ್ರಾಚೀನ, ಅರ್ವಾಚೀನ ವಿದ್ವಾಂಸರ ಪರಿಚಯವನ್ನು "ಪರಿಶಿಷ್ಟ" ರೂಪದಲ್ಲಿ ಒಟ್ಟುಗೂಡಿಸಲಾಗಿದೆ.

ಇಷ್ಟಾದರೂ ಈ ಕೃತಿಯು ಈಗಾಗಲೇ ೧೪೦೦ ಪುಟ ಮಿಕ್ಕಿ ಬಂದಿದ್ದರೂ ಇದು ಪೂರ್ಣವಾಗಿದೆ ಎಂಬ ಅಭಿಮಾನವು ನಮಗಿಲ್ಲ. ನಾವು ಬರೆದದ್ದರ ಹತ್ತುಪಟ್ಟು ಬರೆಯ ಬೇಕಾದದ್ದು ಉಳಿದಿದೆ ಎಂಬ ಅರಿವೂ ನಮಗಿದೆ. ಮುಂದೆ ಯಾರಿಗಾದರೂ ಪರಿಪೂರ್ಣ ಕಾರ್ಯವನ್ನು ಮಾಡುವವರಿಗೆ ಸಹಾಯಕವಾಗಲಿ ಎಂದೇ ಈ ಪ್ರಯತ್ನ ವನ್ನು ಇಲ್ಲಿ ಮಾಡಲಾಗಿದೆ.

ಈ ಗ್ರಂಥವನ್ನು ಓದುವಾಗ ಮುಖ್ಯವಾಗಿ ವಾಚಕರು ಗಮನಿಸಬೇಕಾದ ಅಂಶವು ಒಂದಿದೆ. ಈ ಪ್ರಬಂಧವನ್ನು ಬರೆಯುವಾಗ ಯಾವದೇ ಮಠ ಅಥವಾ ಮನೆತನ ಹಿರಿದು, ಕಿರಿದು ಎಂಬ ಸಂಕುಚಿತ ಭಾವನೆಯನ್ನು ಇಟ್ಟುಕೊಂಡಿಲ್ಲ. ಎಲ್ಲ ಮಠಮಠೀಯರನ್ನೂ ಸಮಾನ ದೃಷ್ಟಿಯಿಂದ ನೋಡಿ ಮಾಧ್ವರೆಲ್ಲರೂ ಒಂದು ಎಂಬ ದೃಷ್ಟಿಯಿಂದ ಬರೆಯಲಾಗಿದೆ. ಮಠಾಭಿಮಾನ, ಮತ್ತು ಮಠದ ದ್ವೇಷ ಇವೆರಡೂ ಇಲ್ಲಿಯ ಲೇಖನ ಸಂದರ್ಭಕ್ಕೆ ಬಹು ದೂರ. ಯಾವುದೇ ಭಾಷಾಭಿಮಾನ, ದೇಶಾಭಿ ಮಾನಗಳ ಸೋಂಕು ನಮಗಿಲ್ಲ. ಕೇವಲ ಮಾಧ್ವ ಸಂಪ್ರದಾಯದ ತತ್ವಜ್ಞಾನ ಅಭಿ ವೃದ್ಧಿಯ ಪ್ರಾಮಾಣಿಕವಾದ ಒಂದು ಅಧಿಕೃತ ಇತಿಹಾಸವನ್ನು ಕೊಡಬೇಕೆಂಬುವ ದಿಷ್ಟೇ ನಮ್ಮ ಉದ್ದೇಶವಾಗಿದೆ.

ಕಾಲಕ್ರಮ ಅಥವಾ ಯೋಗ್ಯತಾಕ್ರಮ ಯಾವುದನ್ನೂ ಇಲ್ಲಿ ನಿರ್ದಿಷ್ಟವಾಗಿ ಅನುಸರಿಸಿಲ್ಲ. ನಮಗೆ ಯಾವ ಯಾವ ವಿಷಯಗಳ ಮಾಹಿತಿಯು ಹೇಗೆ ಹೇಗೆ ದೊರಕಿದೆಯೋ ಹಾಗೇ ಪ್ರಕಟಿಸುತ್ತ ಹೋಗಿದ್ದೇವೆ. ಪ್ರಾರಂಭದಲ್ಲಿ ವಿಸ್ತಾರವಾಗಿ ಹೇಳುತ್ತಹೊರಟ ಚರಿತ್ರಗಳ ಕಥನದ ರೀತಿಯನ್ನು ಮುಂದೆ ಪ್ರಕಾಶನದ ದಿನವು ಹತ್ತಿರ ಬಂದಿದ್ದರಿಂದ ಒಮ್ಮೆಲೆ ಬದಲಿಸಿ ಸಂಕ್ಷೇಪಿಸುವ ಸಂಕೋಚನ ಕ್ರಮವನ್ನು ಒಮ್ಮೆಲೇ ಕೈಕೊಳ್ಳಬೇಕಾಯಿತು. ಇದರಿಂದ ಅನೇಕ ಸಂದರ್ಭಗಳಲ್ಲಿ ದೊಡ್ಡ ದೊಡ್ಡ ವಿಭೂತಿ ಪುರುಷರ ಚರಿತ್ರೆಗಳೇ ಸಂಪುಷ್ಟಕ್ಕೆ ಬಂದಂತಾಗಿವೆ. ಮುಂದೆ ಮತ್ತೆ ತುಸು ಅವಕಾಶ ಸಿಕ್ಕದ್ದರಿಂದ ಮತ್ತೆ ಅಲ್ಲಲ್ಲಿ ವಿಸ್ತಾರ, ಅವಸರವಾದಲ್ಲಿ ಸಂಕೋಚ, ಒಂದನ್ನೊಂದು ಬೆಂಬಲಿಸಿ ನಡೆದಿವೆ. ಅದಕ್ಕಾಗಿ ಯಾರೂ ನಮ್ಮಲ್ಲಿಯ ಸಂಕ್ಷೇಪ ವಿಸ್ತಾರಗಳ ಕಣ್ಣು ಮುಚ್ಚಾಲೆಗೆ ಉದ್ದೇಶವನ್ನು ಕಲ್ಪಿಸಬಾರದೆಂದು ಪ್ರಾರ್ಥಿಸುತ್ತೇವೆ.

ಕೆಲವೊಂದು ಸಂದರ್ಭಗಳಲ್ಲಿ ಹಲವಾರು ಮಠಾಧೀಶರ ಬಣ್ಣನೆ ಹೆಚ್ಚಾಗಿರ ಬಹುದು. ಇದರಿಂದ ಇತರರು ನೊಂದುಕೊಳ್ಳುವ ಕಾರಣವಿಲ್ಲ. ಮತ್ತೊಂದು ಬೇರಾವ ಸಂದರ್ಭದಲ್ಲಿಯಾದರೂ ಆ–ಆ ಮಠಗಳ ಉತ್ಕರ್ಷ, ಪ್ರಶಂಸೆಗಳು ಬಂದೇ ಬಂದಿರುತ್ತವೆ.

ಒಟ್ಟಾರೆ ವರ್ಷಾರು ತಿಂಗಳವರೆಗೆ ನಡೆದ ಸುಮಾರು ೧,೫೦೦ ಪುಟದಷ್ಟು ವಿಸ್ತಾರವಾದ ಈ ಗ್ರಂಥದಲ್ಲಿ— ಒಂದು ಕ್ರಮ, ಒಂದು ನಿರ್ದಿಷ್ಟ ಅಳತೆಗೋಲು, ಶೈಲಿ, ಶಬ್ದಗಳ ತೂಕ, ವಿಶೇಷಣಗಳ ಪರಿಮಿತಿ, ಬಣ್ಣ, ಹಂಚಿಕೆ ಯಾವುದನ್ನೂ 'ಇದನಿತ್ಥಂ' ಎಂದು ಗೆರೆ ಹೊಡೆದು ಅನುಸರಣ ಮಾಡಲಿಕ್ಕೆ ಆಗಲಿಲ್ಲ. ತಾವತಾ ಇಲ್ಲಿಯ ರಾಹಿತ್ಯ, ಸಾಹಿತ್ಯ, ಆಧಿಕ್ಯ ಸಂಕೋಚಗಳಿಗೆ ಯಾವದೇ ಉದ್ದೇಶದ ಬಣ್ಣ ಬಳೆಯದೆ "ಇದೊಂದು ಮಾಧ್ವರ ವಾಙ್ಮಯ ಸೇವೆಯನ್ನು ಅರಿತು ಗುರುತಿಸುವ ಪ್ರಾಮಾಣಿಕ ಪ್ರಯತ್ನವಾಗಿದೆ" ಎಂಬ ದೃಷ್ಟಿಯಿಂದ ಓದಬೇಕೆಂದು ವಾಚಕರಲ್ಲಿ ಅರಿಕೆಯನ್ನು ಮಾಡಿಕೊಳ್ಳುತ್ತೇವೆ.

ನಾವು ಅನೇಕ ಸಲ ಪತ್ರಿಕೆಗಳಲ್ಲಿ ಪ್ರಕಟಿಸಿ, ಪತ್ರ ಹಾಕಿದರೂ— ಒಂದು ಅಕ್ಷರವನ್ನೂ ಬರೆದು ಕಳುಹದ ಮಹನೀಯರನೇಕರು ನಮ್ಮದು 'ಇಷ್ಟೇ ಹಾಕಿದಿರಿ, ಅಷ್ಟೇ ಹಾಕಿದಿರಿ' ಎಂದು ಆಕ್ಷೇಪಿಸಿದ್ದೂ ಉಂಟು. ಅವರಿಗೆ ನಮ್ಮದು ಒಂದೇ ಉತ್ತರ ನೀವು ಯಾರೂ ಬರೆದು ಕಳಿಸದಿದ್ದರೂ ನಾವಾಗಿ ಪ್ರಯತ್ನ ಮಾಡಿ ದೊರಕಿದಷ್ಟನ್ನು ಹಾಕಿ ಪ್ರಕಟಿಸಿದ್ದೇವೆ. ಅದು ಹೆಚ್ಚಿಗೆ ಬಾರದಿದ್ದದ್ದು ತಪ್ಪು ನಮ್ಮದಲ್ಲ— ಅದರ ಪೂರ್ಣ ಪರಿಚಯವಿದ್ದು ಎರಡು ಅಕ್ಷರಗಳನ್ನು ಬರೆದು ಕಳಿಸದ ನಿಮ್ಮದು. ಈಗ ಲಾದರೂ ಬರೆದು ಕಳಿಸಿದರೆ ಮುಂದೆ ಮತ್ತೊಂದಾವರ್ತಿಯಲ್ಲಿ ಪ್ರಕಟಿಸಲಾಗುವದು. ಈ ದಿಶೆಯಲ್ಲಿ ಇದು ನಮ್ಮ ಪ್ರಾಥಮಿಕ ಪ್ರಯತ್ನ. ಇದು ಪ್ರಥಮಾಧ್ಯಾಯ. ಇದರಲ್ಲಾದ ತಪ್ಪುಗಳಿಗೆ ಪ್ರಾಂಜಲಪಣದಿಂದ ಪ್ರಾಜ್ಞರಲ್ಲಿ ಕ್ಷಮೆ ಕೇಳುತ್ತೇವೆ. ಹಿರಿಯರಲ್ಲಿ ಮುಂದೆ ಮಾರ್ಗದರ್ಶನ ಮಾಡಿಸಲು ಬಿನ್ನವಿಸುತ್ತೇವೆ.

ಈ ಗ್ರಂಥವನ್ನು ಬರೆಯಲು ಪ್ರೋತ್ಸಾಹನೆಯನ್ನಿತ್ತು ಆಶೀರ್ವದಿಸಿದ ಶ್ರೀ ಶ್ರೀ ಭಂಡಾರಕೇರಿ ಶ್ರೀ ಫಲಿಮಾರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರ ಮಹೋಪಕಾರವನ್ನು ನಾವು ಎಂದಿಗೂ ಮರೆಯಲು ಶಕ್ಯವಿಲ್ಲ.

ಈ ಗ್ರಂಥಕ್ಕೆ ಮಣಿಯ ಮುಕುಟದಂತೆ "ವೇದ ಶಾಸ್ತ್ರಾತ್ ಪರಂ ನಾಸ್ತಿ" ಎಂಬ ತಮ್ಮ ಅಮೂಲ್ಯ ಲೇಖವನ್ನಿತ್ತು ಹರಸಿದ್ದಕ್ಕಾಗಿ ಅವರಿಗೆ ನಮ್ಮ ಅನಂತ ವಂದನೆಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥದ ಹುಟ್ಟು ಇನ್ನೂ ಗುಟ್ಟಾಗಿ ಹೊಳವಿನಲ್ಲಿದ್ದಾಗಲೇ ನಮಗೆ ಉಪಯುಕ್ತವಾದ ಸಲಹೆ ಸೂಚನೆಗಳನ್ನಿತ್ತು, ಗ್ರಂಥದ ದಕ್ಷ ನಿಷ್ಪಕ್ಷ ಪ್ರಮಾಣ ಪರಿಶುದ್ಧತೆಯ ಸಿದ್ಧಿ–ವೃದ್ಧಿಗಳಿಗಾಗಿ ಸರ್ವತೋ ಭದ್ರ ಮುದ್ರೆಯಿಂದ ಅನುಗ್ರಹಿಸಿದ ಶ್ರೀ ಪರ್ಯಾಯ ಪೀಠಾಧಿಪತಿ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಶ್ರೀ ಚರಣಗಳಲ್ಲಿ ನಮ್ಮ ಪ್ರಣಾಮ ಸ್ತೋಮಗಳನ್ನು ಅರ್ಪಿಸುತ್ತೇವೆ.

ಇದರಂತೆ ಶ್ರೀ ಜಯತೀರ್ಥರ ಷಟ್ ಶತಮಾನೋತ್ಸವ ಸುಪ್ರಸಂಗದಲ್ಲಿ ಈ ಗ್ರಂಥವನ್ನು ಪ್ರಕಾಶನಗೊಳಿಸಿ ಈ ಗ್ರಂಥದ ಬಗ್ಗೆ ಒಳ್ಳೇ ಮಾತುಗಳನ್ನು ಅಂತಃಕರುಣದಿಂದ ಹೇಳಿ ಆಶೀರ್ವಚನವನ್ನಿತ್ತು ಹರಿಸಿದ ಶ್ರೀ ಶ್ರೀ ಚಿತ್ರಾಪುರ ಶ್ರೀಗಳವರಿಗೂ ನಮ್ಮ ಶತ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ನಮ್ಮ ಪ್ರಾರ್ಥನಾ ಪತ್ರಕ್ಕೆ ಓಗೊಟ್ಟು ತಮ್ಮ ಮಠದ ಹಾಗೂ ವಿದ್ವಾಂಸರ ಚರಿತ್ರ, ಪರಿಚಯಗಳನ್ನು ಬರೆದು ಕಳಿಸಿ ಆಶೀರ್ವದಿಸಿದ ಶ್ರೀ ಶ್ರೀ ಮುಳಬಾಗಿಲು ಶ್ರೀಪಾದರಾಜ ಮಠದ ಶ್ರೀ ಶ್ರೀ ವಿದ್ಯಾನಿಧಿ ಶ್ರೀಪಾದಂಗಳವರಿಗೂ ಮತ್ತು ಶ್ರೀ ಕುಂದಾಪುರ ಮಠಾಧೀಶ ಶ್ರೀ ಶ್ರೀ ಲಕ್ಷ್ಮೀಶತೀರ್ಥ ಶ್ರೀಪಾದಂಗಳವರಿಗೂ, ಶ್ರೀ ಶ್ರೀ ಆರ್ಯ ಅಕ್ಷೋಭ್ಯ ಬಾಳಗಾರು ಮಠಾಧೀಶರಿಗೂ, ಶ್ರೀ ಶ್ರೀ ಸಾಗರಕಟ್ಟೆ ಶ್ರೀಪಾದಂಗಳವರಿಗೂ ನಾವು ಕೃತಜ್ಞತೆಯ ಪ್ರಣತಿ ಪರಂಪರೆಯನ್ನು ಸಲ್ಲಿಸುತ್ತೇವೆ.

ಪಂಡಿತ ಮಾಹುಲಿ ಗೋಪಾಲಾಚಾರ್ಯರ ಮುಖಾಂತರ ಅನೇಕ ಪ್ರಾಚೀನ, ಅರ್ವಾಚೀನ, ಸಂಪ್ರತಿಪನ್ನ ಪಂಡಿತರ ಹಾಗೂ ಗ್ರಂಥಕಾರರ ಪರಿಚಯವನ್ನು ನಮ್ಮ ಈ ಗ್ರಂಥಕ್ಕೆ ನೀಡಲು ಒದಗಿಸಲು ಸಾನುಗ್ರಹ ಸಹಕಾರವನ್ನು ನೀಡಿದ ಶ್ರೀ ಉತ್ತರಾದಿ ಮಠಾಧೀಶ ಶ್ರೀ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಿಗೂ ಅನಂತಾನಂತ ವಂದನಾಭಿನಂದನೆಗಳನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತೇವೆ.

ಮುಂಬೈಯಲ್ಲಿಯೂ, ಧಾರವಾಡದಲ್ಲಿಯೂ ರಾತ್ರಿ ನಿದ್ರೆಗೆಟ್ಟು, ಹಗಲು ಊಟ ಬಿಟ್ಟು ಅನೇಕಾನೇಕ ಸರ್ವ ಮಠೀಯ ಮಾಧ್ವ ಪ್ರಾಚೀನ ಪಂಡಿತರ ಹಾಗೂ ವಿದ್ಯಮಾನ ವಿದ್ವಾಂಸರ ಗ್ರಂಥಕಾರರ ಪರಿಚಯವನ್ನು ನಮಗಿಂತ ಹೆಚ್ಚು ಆದರ ಆಸಕ್ತಿ ಆಸ್ಥೆಗಳಿಂದ ಒದಗಿಸಿದ್ದಲ್ಲದೆ ಉಡುಪಿಯಲ್ಲಿ ಗ್ರಂಥ ಪ್ರಕಾಶನದ ವೇಳೆಯಲ್ಲಿ ಅಲ್ಲಿ ನೆರೆದ ಹತ್ತಿಪ್ಪತ್ತು ಸಾವಿರ ಜನರಿಗೆ ಈ ಗ್ರಂಥಧ ಮೇಲ್ಮೆ, ಮಹತಿಗಳನ್ನೂ ಇಂಥ ಮಹಾ ಕೃತಿಯನ್ನು ಹೊರತರಲಿಕ್ಕಾಗಿ— ಇದರ ಲೇಖಕ, ಪ್ರಕಾಶಕರು ಪಟ್ಟ ಶ್ರಮವನ್ನೂ, ಇದರ ಉಪಯುಕ್ತತೆಯನ್ನೂ ಒತ್ತಿ ಹೇಳಿ ಸಭೆಯಲ್ಲಿ ಇದರ ಬಗ್ಗೆ ಆದರಾತಿಶಯ ಉಂಟುಮಾಡುವಂತೆ ಮಾಡಿದ ಪಂಡಿತರಾಜ ಮಾಹುಲಿ ಗೋಪಾಲಾಚಾರ್ಯರಿಗೂ ಕೃತಜ್ಞತಾ ಭಾವಭರಿತವಾದ ಧನ್ಯವಾದ ಸಹಸ್ರವನ್ನು ಸಲ್ಲಿಸುತ್ತೇವೆ.

ಶ್ರೀ ಮದುತ್ತರಾದಿ ಮಗದ ಅನೇಕಾನೇಕ ಪಂಡಿತೋತ್ತಮರ ಫೋಟೋಗಳನ್ನು ತೆಗೆದುಕೊಂಡು ಈ ಗ್ರಂಥದಲ್ಲಿ ಪ್ರಕಟಿಸಲು ನಮಗೆ ಅನುಮತಿಯನ್ನೂ ಪಂಡಿತರೆಲ್ಲರಿಗೂ ಪ್ರೇರಣೆಯನ್ನೂ ನೀಡಿದ ಶ್ರೀ ೧೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಿಗೆ ನಾವು ಎಷ್ಟು ಸಪ್ರಣಾಮಸ್ತೋಮ ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಿಮೆಯೇ ಇದೆ.

ಈ ಗ್ರಂಥದಲ್ಲಿ ಸರ್ವಮೂಲ ಗ್ರಂಥಗಳ ಪರಿಚಯದ ಪ್ರಸಂಗದಲ್ಲಿ ನಾನು ಉಡುಪಿ ಬೆಂಗಳೂರ ಕಡೆಗೆ ಹೋದಾಗ ಕೆಲವು ಫಾರ್ಮುಗಳು ಪ್ರಿಂಟಾಗಿ ಭಯಂಕರ ಪ್ರಮಾದಗಳೂ ಅಕ್ಷಮ್ಯ ತಪ್ಪುಗಳೂ ಹೇರಳವಾಗಿ ಉಳಿದುಕೊಂಡು ಬಿಟ್ಟಿವೆ. ಮಹತ್ವದ ಆ ಭಾಗದಲ್ಲಿ ಆಗಿ ಹೋದ ಮುದ್ರಾರಾಕ್ಷಸನ ಹಾವಳಿಯಿಂದಾಗಿ ಉಳಿದ ಸ್ಖಾಲಿತ್ಯಕ್ಕಾಗಿ ಮತ್ತೊಮ್ಮೆ ಓದುಗರ ಕ್ಷಮೆ ಕೇಳುತ್ತೇನೆ. ಮುಂದಿನ ಮುದ್ರಣದಲ್ಲಿ ಖಂಡಿತವಾಗಿ ಅವೆಲ್ಲವುಗಳನ್ನು ಸರಿಪಡಿಸುವದಾಗಿ ಆಶ್ವಾಸನೆ ಯನ್ನೀಯುತ್ತೇವೆ.

ಎಲ್ಲ ಮಠದ ವಿದ್ವಾಂಸರಿಗೂ ಸಂಪ್ರದಾಯಜ್ಞರಿಗೂ ಈ ಗ್ರಂಥವನ್ನು ತೋರಿಸಿ ಕೆಲವು ತಿಂಗಳು ಪ್ರತೀಕ್ಷಿಸಿ ಅವರಿಂದ ಏನೂ ಆಕ್ಷೇಪ ಬಾರದಾದ ಮೇಲೆ ಇದನ್ನು ಪ್ರಕಟಿಸಿದ್ದೇವೆ. ಅಂತಹ ಕಾರಣದಿಂದ ಹಲಕೆಲವರು ಸೂಚಿಸಿದ ತಿದ್ದುಪಡಿಗಳನ್ನು ಆನಂದದಿಂದ ಹಾಕಿದ್ದೇವೆ.

ಇಷ್ಟಾಗಿಯೂ ಎಲ್ಲಿಯಾದರೂ ಏನಾದರೂ ತಪ್ಪುತಡೆ ಲೋಪದೋಷ ಉಂಟಾ ಗಿದ್ದರೆ ಅದು ಪ್ರಾಮಾದಿಕವೇ ಹೊರತು ಬುದ್ಧಿ ಪೂರ್ವಕವಲ್ಲ ಎಂದು ಹೇಳಿ ಇನ್ನು ಮುಂದೆ ಅಂಥ ದೋಷವನ್ನು ತೋರಿಸಿದರೆ ಅವುಗಳನ್ನು ಒಪ್ಪಿ ತಪ್ಪನ್ನು ತಿದ್ದಿಕೊಳ್ಳು ತ್ತೇವೆ ಇತಿ.

ಗ ದ ಗ
ಸೌಮ್ಯ ಸಂವತ್ಸರ
ವಿನಾಯಕ ಚತುರ್ಥೀ

ಗ್ರಂಥಕರ್ತ
ಪಂಢರೀನಾಥಾಚಾರ್ಯ ಗಲಗಲಿ

# ನಿವೇದನೆ



ಸಜ್ಜನರ ಮುಂದಿರುವ ಈ ಗ್ರಂಥವು ಶ್ರೀ ಕೃಷ್ಣಭಕ್ತರ ಚರಿತ್ರೆಯಾಗಿದ್ದು ಪವಿತ್ರವಾದುದು. ಉದ್ದೇಶ ರಹಿತವಾದ ಪುಸ್ತಕವು ತತ್ವಾಭಿಮಾನಿ ದೇವತೆಗಳ ಇಚ್ಛೆಯುದು. "ಮಾಧ್ವ ಜನರ ಕೈಪಿಡಿ" ಅಚ್ಚಾಗಬೇಕೆಂಬ ಬಯಕೆಯು ''ಮಾಧ್ವ ವಾಙ್ಮಯ ತಪಸ್ವಿಗಳು" ಎಂಬುದಾಗಿ ಹೊರಬಂದಿದೆ. ಪೂಜ್ಯ ಶ್ರೀ ಶ್ರೀ ವಾದಿರಾಜ ಶ್ರೀಪಾದಂಗಳವರ ಕಾಲದಲ್ಲಿ "ಹಯಗ್ರೀವ" ದೇವರ ಮೂರ್ತಿ ಹೊರಬಂದಂತೆ ಪರಿವರ್ತನೆ ಆಗಿದೆ. ''ಇಲ್ಲಿ ನೋಳ್ಪುದು ಪದುಮನಾಭನ ಮಹಿಮೆ'' ಎಂಬ ಸೊಲ್ಲನ್ನು ಕವಿ ನಾರಾಣಪ್ಪನು ಕುಮಾರವ್ಯಾಸ ಭಾರತದಲ್ಲಿ ನುಡಿದಂತೆ ಇದು ರೂಪುಗೊಂಡಿದೆ. ಶುದ್ಧ ಜಲವನ್ನು ಹೊಂದಿರುವ ಸರೋವರದಂತಿರುವ ಈ ಗ್ರಂಥದಲ್ಲಿ ಯಾವದೇ ವಿಷಯವನ್ನಾದರೂ ಯಾವದೇ ಭಾವನೆಗೆ ಸಿಲುಕಿಸಿಕೊಳ್ಳಲಾಗದು. ಗ್ರಂಥಕರ್ತರು ಪ್ರಸಿದ್ಧ ಪಂಡಿತ ಮನೆತನದ ಆಚಾರ್ಯರು. ಇವರು ಹಿಂದೆ ಬರೆದಿದ್ದ "ಗಂಗಾಲಹರಿ" ಎಂಬ ಹೊತ್ತಿಗೆಯನ್ನು ಉದ್ಘಾಟಿಸಿದಾಗ ಪ್ರಸಿದ್ಧ ವರಕವಿ ಬೇಂದ್ರೆಯವರು ಇವರ ಬಗ್ಗೆ ಹೀಗೆ ನುಡಿದಿದ್ದರು— "ಇವರ ಪೂಜ್ಯ ಪಿತೃವರ್ಯರು ಪ್ರತಿ ದಿನ ೧೦೮ ಕೊಡ ಜಲಸ್ನಾನ ಮಾಡುತ್ತಿದ್ದರು. ಅವರ ಮಸ್ತಕದ ಮೇಲೆ ಕುಣಿದಾಡಿದ ಗಂಗಾಮಾತೆಯು ಪೂಜ್ಯ ಪಂಢರೀನಾಥಾಚಾರ್ಯರ ಬಾಯಿಂದ ಹೊರಬರುತ್ತಿದ್ದಾಳೆ." ಎಂಬ ಸಿಹಿ ಸತ್ಯವನ್ನು ಸಾರಿದ್ದರು. ಈ ಗ್ರಂಥದಲ್ಲ ಹರಿವಾಯು ಗುರುಗಳು ನುಡಿಸಿದಂತೆ ಇಡೀ ಮಾಧ್ವ ಇತಿಹಾಸವನ್ನು ಕರಗಿಸಿ ಪವಿತ್ರ ಗಂಗಾ ಜಲದಂತೆ ಸಜ್ಜನರ ಮುಂದಿರಿಸಿದ್ದಾರೆ. ಇಂಥ ಶ್ರೀ ಗಲಗಲಿ ಆಚಾರ್ಯರಿಗೆ ಶತಪ್ರಣಾಮಗಳು.

ಕೇವಲ ೮೦೦ ಪುಟಗಳ ಪರಿಮಿತಿ ಹೊಂದಿ ರಜತಪೀಠ ಪುರದಲ್ಲಿ ಕಳೆದ ಜನವರಿಯಲ್ಲಿ ಅಖಿಲ ಭಾರತ ೭ ನೇ ತತ್ವಜ್ಞಾನ ಸಮ್ಮೇಲನದಲ್ಲಿ ಉದ್ಘಾಟಿಸಲ್ಪಟ್ಟಿರುವ ಈ ಗ್ರಂಥವು ಅನಪೇಕ್ಷಿತವಾಗಿ ಕೊನೆ ಹಂತದಲ್ಲಿ ಅಚ್ಚು ಬೆಳೆದು ೧೫೦೦ ಪುಟದಷ್ಟಾಗಿ ಇದೀಗ ಪ್ರಾದುರ್ಭವಿಸಿದೆ.

ಈ ಗ್ರಂಥಕ್ಕೆ ಕಲಶಪ್ರಾಯವಾಗಿರುವ 'ವೇದಶಾಸ್ತ್ರಾತ್ ಪರಂನಾಸ್ತಿ' ಎಂಬ ಲೇಖನವನ್ನು ಅನುಗ್ರಹಿಸಿ ಸೂಕ್ತಸಲಹೆ ಸೂಚನೆಗಳನ್ನಿತ್ತ ಶ್ರೀ ಫಲಿಮಾರು ಶ್ರೀ ಭಂಡಾರಕೇರಿ ಉಭಯ ಮಠಾಧೀಶರಾದ ಶ್ರೀ ೧೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀ ಚರಣರಿಗೆ ನನ್ನ ಅನಂತ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥ ಪ್ರಾರಂಭಕ್ಕೆ ನಮಗೆ ಉಪಯುಕ್ತ ಸಲಹೆ ಸೂಚನೆಗಳನ್ನಿತ್ತು ಆಶೀರ್ವದಿಸಿದ ಶ್ರೀ ಪರ್ಯಾಯ ಪೀಠಾಧಿಪತಿಗಳಾದ ಶ್ರೀ ೧೦೮ ಶ್ರೀ ಪೇಜಾವರ ಶ್ರೀಪಾದಂಗಳವರಿಗೆ ನನ್ನ ಸಹಸ್ರ ಅಭಿವಂದನೆಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥವನ್ನು ಉಡುಪಿಯಲ್ಲಿ ನೆರೆದ ಮಾಧ್ವ ತತ್ವಜ್ಞಾನ ಸಮ್ಮೇಲನ ಕಾಲದಲ್ಲಿ ಉದ್ಘಾಟಿಸಿ ಈ ಗ್ರಂಥದ ಬಗ್ಗೆ ಸದಭಿಪ್ರಾಯವನ್ನು ಅಂತಃಕರಣಪೂರ್ವಕ ವ್ಯಕ್ತಪಡಿಸಿ ಆಶೀರ್ವದಿಸಿದ ಶ್ರೀ ೧೦೮ ಶ್ರೀ ಚಿತ್ರಾಪುರ ಮಠಾಧೀಶರಿಗೆ ನನ್ನ ಶತ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಅನೇಕ ಪಂಡಿತೋತ್ತಮ ಸಜ್ಜನರೂ, ಗುರು ಪೀಠಗಳೂ, ಇದರಲ್ಲಿ ಅಭಿಮಾನದಿಂದ ಸಹಕರಿಸಿದ್ದಾರೆ. ವಿಶೇಷವಾಗಿ ಪಂಡಿತರ ಪರಿಚಯಕ್ಕಾಗಿ ಶ್ರಮವಹಿಸಿ ಅನುಕೂಲಿಸಿದ ಪಂಡಿತರಾಜ ಮಾಹುಲಿ ಗೋಪಾಲಾಚಾರ್ಯರು ಗಜೇಂದ್ರನ ಕೂಗಿಗೆ ಶ್ರೀ ಹರಿಯು ಒಲಿದಂತೆ ಸಹಕರಿಸಿ ಆಶೀರ್ವದಿಸಿದರು. ಅವರೆಲ್ಲರಿಗೂ ನನ್ನ ಅನಂತ ವಂದನೆಗಳು.

ನನ್ನ ಆತ್ಮೀಯರಾದ ಪೂಜ್ಯ ಶ್ರೀ ಮಳಗಿ ಜಯರಾಮಾಚಾರ್ಯರು ಈ ಗ್ರಂಥ ಹೊರಬರಲಿಕ್ಕೆ ಬಹುವಾಗಿ ತನುಮನಗಳಿಂದ ಪರಿಶ್ರಮಪಟ್ಟಿದ್ದಾರೆ. ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಶ್ರೀ ಶಂಕರನಾರಾಯಣೀ ಪ್ರೆಸ್ಸಿನವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ತಿಳಿಯದೆ ಅನೇಕ ವಿಷಯಗಳನ್ನು ಮರತೇ ಮುಂದುವರಿದು ಹೂವಿನ ಬದಲಿಗೆ ಹೂವಿನ ಎಸಳನ್ನು ತತ್ವಾಭಿಮಾನಿ ದೇವತೆಗಳ ಸನ್ನಿಧಿಗೆ ಸಲ್ಲಿಸಿದ್ದನ್ನು ಸಜ್ಜನರು ಒಪ್ಪಿ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ಈ ಗ್ರಂಥದಲ್ಲಿ ಯಾವದೇ ಲೋಪದೋಷಗಳಿದ್ದರೆ ಅದರ ಹೊಣೆ ಸಂಪೂರ್ಣ ನನ್ನದಾಗಿದ್ದು ಅದಕ್ಕೆ ಗ್ರಂಥಕರ್ತರಾಗಲೀ ಮಾಧ್ವ ಮಹಾ ಮಂಡಳವಾಗಲೀ ಯಾವದೇ ಮಠ ಮಾನ್ಯರದವರಾಗಲೀ ಹೊಣೆಯಿರುವದಿಲ್ಲವೆಂದು ಅಖಂಡವಾಗಿ ತಿಳಿಸ ಬಯಸುತ್ತೇನೆ. ಇದರ ಯಶಸ್ಸನ್ನು ತತ್ವಾಭಿಮಾನಿ ದೇವತೆಗಳಿಗೆ ಸಮರ್ಪಿಸಿ ನ್ಯೂನತೆಗಳನ್ನು ನನ್ನ ಉಡಿಯಲ್ಲಿ ಹಾಕಿ ಕ್ಷಮಿಸಬೇಕಾಗಿ ಪ್ರಾರ್ಥಿಸುತ್ತೇನೆ.

**ಗ ದ ಗ**
ಸೌಮ್ಯ ಸಂವತ್ಸರ
**ವಿನಾಯಕ ಚತುರ್ಥೀ**

ಅಂದೂ–ಇಂದೂ–ಎಂದೆಂದೂ
ಸಜ್ಜನರ ಸೇವಕ
**ಕೆ. ನಾರಾಯಣರಾವ**

# ಸಂದರ್ಭ ಗ್ರಂಥಗಳು


| ಗ್ರಂಥಗಳು | | ಲೇಖಕರು |
|---|---|---|
| ೧ | ಶ್ರೀ ಸುಮಧ್ವ ವಿಜಯ | ಶ್ರೀ ನಾರಾಯಣ ಪಂಡಿತಾಚಾರ್ಯರು |
| ೨ | ಶ್ರೀ ಜಯತೀರ್ಥ ವಿಜಯ | ಶ್ರೀ ವ್ಯಾಸ ತೀರ್ಥರು ಮತ್ತು ಛಲಾರಿ ಆಚಾರ್ಯರು |
| ೩ | ಮಣಿಮಂಜರಿ | ಶ್ರೀ ನಾರಾಯಣ ಪಂಡಿತಾಚಾರ್ಯ |
| ೪ | ವ್ಯಾಸಯೋಗಿ ಚರಿತ | ಶ್ರೀ ಸೋಮನಾಥ ಕವಿ |
| ೫ | ವ್ಯಾಸಯೋಗಿ ಚರಿತ ಇಂಗ್ಲೀಷ ಪ್ರಸ್ತಾವನೆ | ಶ್ರೀ ಬಿ. ವೆಂಕೋಬರಾವ |
| ೬ | ಲಾಯಿಫ ಆ್ಯಂಡ ಟೀಚಿಂಗ್ಸ ಆಫ ಮಧ್ವ | ದಿ. ಸಿ. ಎಂ. ಪದ್ಮನಾಭಾಚಾರ್ಯ |
| ೭ | ಶ್ರೀ ಅಕ್ಷೋಭ್ಯತೀರ್ಥರು | ಶ್ರೀ ಕೂಡ್ಲಿ ಅಕ್ಷೋಭ್ಯತೀರ್ಥ ಮಠದ ಪ್ರಕಾಶನ |
| ೮ | ಶ್ರೀಮದಾನಂದತೀರ್ಥರ ನಾಲ್ಕು ಶಿಷ್ಯರು | ಶ್ರೀ ಚಿಕ್ಕೇರೂರು ಗೋವಿಂದಾಚಾರ್ಯರು |
| ೯ | ಸತ್ಕಥಾ | ಶ್ರೀ ಕಮಲಾಪುರ ಭೀಮರಾಯರು |
| ೧೦ | ಗುರು ಚರಿತೆ | ಶ್ರೀ ಹೆಚ್. ಕೆ. ವೇದವ್ಯಾಸಾಚಾರ್ಯ |
| ೧೧ | ವೇದಾಂತ ಕುಸುಮಾಂಜಲಿ | ಶ್ರೀ ವ್ಯಾಸರಾಜ ಮಠದ ಪ್ರಕಾಶನ |
| ೧೨ | ಗ್ಲೋರೀಜ ಆಫ ಉತ್ತರಾದಿಮಠ | ಶ್ರೀ ಡಿ. ವಿ. ಸುಬ್ಬಾಚಾರ್ಯ |
| ೧೩ | ಗುರುವಂಶ ಕಥಾ ಕಲ್ಪತರು | ಶ್ರೀ ದೈವಜ್ಞ ಭೀಮಾಚಾರ್ಯ |
| ೧೪ | ಹಿಸ್ಟರಿ ಆಫ ದ ದ್ವೈತ ಸ್ಕೂಲ ಆಫ ವೇದಾಂತ ಆ್ಯಂಡ ಇಟ್ಸ ಲಿಟ್ರೇಚರ | ಡಾ॥ ಬಿ. ಎನ್. ಕೆ. ಶರ್ಮಾ |
| ೧೫ | ಡಿಸ್ಕ್ರಿಪ್ಟಿವ್ಹ ಕ್ಯಾಟಲಾಗ ಆಫ ಸಂಸ್ಕೃತ ಮ್ಯಾನಸ್ಕ್ರಿಪ್ಟ್ಸ | ಶ್ರೀ ಕೆ. ಟಿ. ಪಾಂಡುರಂಗಿ |
| ೧೬ | ಮಧ್ವಮುನಿ ವಿಜಯ | ಮಿಂಚಿನಬಳ್ಳಿ ಪ್ರಕಾಶನ |
| ೧೭ | ಮಧ್ವಮುನಿ ಸೇವಾ ಸಂಘ ಉಡುಪಿಯ ಪ್ರಕಟನೆಗಳು | |
| ೧೮ | ಕರ್ನಾಟಕದ ಭಕ್ತ ವಿಜಯ | ಶ್ರೀ ಬೇಲೂರ ಕೇಶವದಾಸ |
| ೧೯ | ಕರ್ನಾಟಕದ ಹರಿದಾಸರು | ಶ್ರೀ ಹೆಚ್. ಕೆ. ವೇದವ್ಯಾಸಾಚಾರ್ಯ |
| ೨೦ | ಹರಿಭಕ್ತ ವಿಜಯ | ಗುರುಗೋವಿಂದ ವಿಠ್ಠಲದಾಸ |

| | ಗ್ರಂಥಗಳು | ಲೇಖಕರು |
|---|---|---|
| ೨೧ | ಹರಿದಾಸರು | ಶ್ರೀ ಕಲಮದಾನಿ ಗುರುರಾಯರು |
| ೨೨ | ಕರ್ನಾಟಕ ಹರಿದಾಸ ಸಾಹಿತ್ಯದ ಇತಿಹಾಸ | ಶ್ರೀ ಆರ್. ಎಸ್. ಪಂಚಮುಖಿ |
| ೨೩ | ಕನ್ನಡ ಸಾಹಿತ್ಯ ಚರಿತ್ರ | ಡಾ|| ರಂ. ಶ್ರೀ. ಮುಗಳಿ |
| ೨೪ | ಕನ್ನಡ ಕವಯಿತ್ರಿಯರು | ಡಾ|| ಸರೋಜಿನಿ ಮಹಿಷಿ |
| ೨೫ | ಮಧ್ವಾಚಾರ್ಯ ವ ತ್ಯಾಂಚೆ ತತ್ವಜ್ಞಾನ (ಮರಾಠಿ) | ಶ್ರೀ ಅವಧಾನಿ ರಾಮಾಚಾರ್ಯ |
| ೨೬ | ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ | ಡಾ|| ದಾಸ ಗುಪ್ತಾ |
| ೨೭ | ರೇನ್ ಆಫ್ ರಿಯಾಲಿಝಮ್ | ಡಾ|| ಕೆ. ನಾಗರಾಜ ಶರ್ಮಾ |
| ೨೮ | ಶ್ರೀ ಮಧ್ವ ಹೀಸ ಲಾಯಿಃಫ ಆ್ಯಂಡ್ ಡಾಕ್ಟ್ರಿನ್ | ದಿ. ಸಿ. ಆರ್. ಕೃಷ್ಣರಾವ |
| ೨೯ | ಶ್ರೀ ಮಧ್ವ ಚರಿತಾಮೃತ | ಶ್ರೀ ಮಣ್ಣೂರಕರ |
| ೩೦ | ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಪ್ರಕಾಶನಗಳು | |
| ೩೧ | ಶ್ರೀ ಮಧ್ವಾಚಾರ್ಯ ಆ್ಯಂಡ ಹೀಜ ಬ್ರಹ್ಮತರ್ಕ | ದಿ. ಸಿ. ಆರ್. ಕೃಷ್ಣರಾವ |
| ೩೨ | ಮಧ್ವ ಫಿಲಾಸಫಿ ಆ್ಯಂಡ ಇಟ್ಸ ಪ್ಲೇಸ ಇನ್ ವೇದಾಂತ | ದಿ. ಹೆಚ್. ಎಸ್. ರಾಘವೇಂದ್ರಾಚಾರ್ಯ |
| ೩೩ | ಗೀತಾ ಪ್ರದೀಪ | ದಿ. ಡಿ. ವಾಸುದೇವಾಚಾರ್ಯ |
| ೩೪ | ಮುಖ್ಯಪ್ರಾಣ ಮಹಿಮೆ | ದಿ. ಆಲೂರ ವೆಂಕಟರಾವ |
| ೩೫ | ಮಧ್ವಾಚಾರ್ಯರ ಪೂರ್ಣ ಬ್ರಹ್ಮವಾದ | ,, ,, |
| ೩೬ | ಸಿಂಗನ್ನಡ ಚರಿತ್ರ ಕೋಶ | |
| ೩೭ | ಕನ್ನಡ ಕವಿ ಚರಿತೆ | ದಿ. ಆರ್. ನರಸಿಂಹಾಚಾರ್ಯ |
| ೩೮ | ಶ್ರೀಮದಾಚಾರ್ಯರ ತತ್ವಜ್ಞಾನ | ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರು |
| ೩೯ | ಶ್ರೀ ಮಧ್ವ ಸಿದ್ಧಾಂತ (ಹಿಂದಿ) | ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರು |
| ೪೦ | ಮಧ್ವ ಸಿದ್ಧಾಂತ ಸಾರ | |
| ೪೧ | ಸತ್‌ತತ್ವ ರತ್ನಮಾಲಾ | |
| ೪೨ | ಸಭಾಸಾರ ಸಂಗ್ರಹ | ಶ್ರೀ ಶ್ರೀ ಸತ್ಯಧ್ಯಾನತೀರ್ಥರು |
| ೪೩ | ಭೇದ ಪರಾಣ್ಯೇವ ಖಲು ಬ್ರಹ್ಮಸೂತ್ರಾಣಿ | ,, |
| ೪೪ | ಅರ್ಚಾಗತಿಕ್ರಮ | ಶ್ರೀ ವಾದೀಂದ್ರರು |
| ೪೫ | ತತ್ವವಾದ ಪತ್ರಿಕೆಯ ಹಳೆಯ ಸಂಚಿಕೆಗಳು | |




# ವಿಷಯಾನುಕ್ರಮಣಿಕೆ

## ಪ್ರಕರಣ— ೧

### ಮಧ್ವಾಚಾರ್ಯರ ಜೀವನ ಚರಿತ್ರೆ

## ಪ್ರಕರಣ— ೨

### ಶ್ರೀ ಮಧ್ವಸಿದ್ಧಾಂತ ಸಾರ



## ಪ್ರಕರಣ— ೩

### ಮಧ್ವ ಮತದ ವಾಙ್ಮಯ ವಿಭೂತಿಗಳು

| | | | |
|---|---|---|---|
| ಶ್ರೀ | ವೇದಪೂಜ್ಯ ತೀರ್ಥರು | .... | ೩೨೦ |
| ,, | ಮದ್ವಾದಿರಾಜ ಗುರುವರ್ಯರು | .... | ೩೩೫ |
| ,, | ವಿದ್ಯಾಧೀಶರು | .... | ೩೩೭ |
| ,, | ರಾಘವೇಂದ್ರ ತೀರ್ಥರು | .... | ೩೪೯ |
| ,, | ಕಂಬಾಲು ರಾಮಚಂದ್ರತೀರ್ಥರು | .... | ೩೫೦ |
| ,, | ರಘುನಾಥ ತೀರ್ಥರು (ಶೇಷಚಂದ್ರಿಕಾಚಾರ್ಯರು) | .... | ೩೫೫ |
| ,, | ಜಗನ್ನಾಥ ,, | .... | ೩೬೨ |
| ,, | ವಾದೀಂದ್ರರು | .... | ೩೭೩ |
| ,, | ವ್ಯಾಸತತ್ವಜ್ಞರು | .... | ೩೭೬ |
| ,, | ಸತ್ಯಬೋಧರು | .... | ೩೭೯ |
| ,, | ಧೀರೇಂದ್ರ ತೀರ್ಥರು | ... | ೩೮೨ |
| ,, | ವಿಷ್ಣುತೀರ್ಥ ಸ್ವಾಮಿಗಳು (ಆರಣ್ಯಕಾಚಾರ್ಯರು) | .... | ೩೮೫ |
| ,, | ಸತ್ಯಧರ್ಮ ತೀರ್ಥರು | .... | ೩೮೯ |
| ,, | ವಿಶ್ವಪ್ರಿಯ ,, | .... | ೩೯೨ |
| ,, | ಸತ್ಯಪರಾಕ್ರಮ ,, | .... | ೩೯೩ |
| ,, | ವಿದ್ಯಾಧೀಶ ,, | .... | ೩೯೬ |
| ,, | ಸುಧೀನಿಧಿ ,, | .... | ೪೦೦ |
| ,, | ವಿದ್ಯಾರತ್ನಾಕರ ,, | .... | ೪೦೨ |
| ,, | ವಿಬುಧಪ್ರಿಯ ,, | .... | ೪೦೫ |
| ,, | ಸುಶೀಲೇಂದ್ರ ,, | .... | ೪೦೮ |
| ,, | ಮತ್ಸುಧೀಂದ್ರ ,, | .... | ೪೧೧ |
| ,, | ವಿದ್ಯಾಸಮುದ್ರ ,, | .... | ೪೧೫ |
| ,, | ಲಕ್ಷ್ಮೀಂದ್ರ ,, | .... | ೪೧೭ |
| ,, | ವಿದ್ಯಾಪೂರ್ಣ ,, | .... | ೪೧೯ |
| ,, | ಸತ್ಯಧ್ಯಾನ ,, | .... | ೪೨೨ |
| ,, | ಇಂದಿರಾಕಾಂತ ,, | .... | ೪೩೬ |
| ,, | ಶ್ರೀಮದ್ಭುವನೇಂದ್ರ | .... | ೪೩೭ |
| ,, | ವರದೇಂದ್ರ ,, | .... | ೪೪೦ |
| ,, | ಕಮಲಾಕ್ಷ ,, | .... | ೪೪೪ |
| ,, | ರಾಜರಾಜೇಶ್ವರ ,, | .... | ,, |
| ,, | ವೇದಾತ್ಮ, ,, | .... | ,, |
| ,, | ವಿಶ್ವೇಶ ,, | .... | ,, |

## ಪ್ರಕರಣ— ೪

### ಮಾಧ್ವ ಮಠಗಳು

## ಪ್ರಕರಣ— ೫

### ಮಾಧ್ವ ಪ್ರಾಚೀನ ಪಂಡಿತರು

| | | |
|---|---|---|
| ಭಕ್ರಿ ಶ್ರೀನಿವಾಸಾಚಾರ್ಯ | .... | ೭೧೯ |
| ಮಾಗಿಕೆರೆ ಶೇಷಗಿರಿರಾವ | .... | ,, |
| ಅಪ್ಪರಾಯಾಚಾರ್ಯ ಚಿಂಚೋಳಿ | .... | ೭೨೦ |
| ರಂಗಣ್ಣಾಚಾರ್ಯ ,, | .... | ,, |
| ನರಸಿಂಹಾಚಾರ್ಯ ,, | .... | ,, |
| ಸೊಂಡೂರ ಹನಮಂತಾಚಾರ್ಯ | .... | ,, |
| ಘಭಾಡಿ ವೇದವ್ಯಾಸಾಚಾರ್ಯ | .... | ೭೨೧ |
| ಗದ್ವಾಲ ಶ್ರೀನಿವಾಸಾಚಾರ್ಯ | ... | ,, |
| ಓಂಕಾರ ರಾಮಾಚಾರ್ಯ | .... | ,, |
| ಕಾಳಗಿ ಶ್ರೀನಿವಾಸಾಚಾರ್ಯ | .... | ,, |
| ಕಿತ್ತೂರ ಹುಚ್ಚಾಚಾರ್ಯ | ... | ೭೨೨ |
| ಮಾನ್ವಿ ಕೃಷ್ಣಮೂರ್ತಿ ಆಚಾರ್ಯ (ಮೈಸೂರ) | ... | ,, |
| ಅಯ್ಯಾಜಿ ಗುಂಡಾಚಾರ್ಯ | .... | ,, |
| ನೆರೂರ ಕೃಷ್ಣಾಚಾರ್ಯ | .... | ,, |
| ನೆರೂರ ವೇದವ್ಯಾಸಾಚಾರ್ಯ | .... | ೭೨೩ |
| ಪೆರಿಯಾಕುಳಂ ರಾಮಚಂದ್ರಾಚಾರ್ಯ | .... | ,, |
| ಆನೆಕಲ್ಲ ಶ್ರೀನಿವಾಸಾಚಾರ್ಯ | .... | ೭೨೪ |
| ವಿ. ಶ್ಯಾಮಾಚಾರ್ಯ | .... | ,, |
| ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯ | ... | ‘, |
| ದುರ್ಗ ಹನಮಂತಾಚಾರ್ಯ | .... | ೭೨೫ |
| ,, ಕೃಷ್ಣಾಚಾರ್ಯ | ... | ,, |
| ಮುನವಳ್ಳಿ ಗೋವಿಂದಾಚಾರ್ಯ | .... | ,, |
| ಪ್ರಾಕ್ಟೂರ ಭೀಮಾಚಾರ್ಯ | .... | ೭೨೬ |
| ಗಾರ್ಲಪಾಡ ಕೃಷ್ಣಾಚಾರ್ಯ | .... | ,, |
| ಬಾಳಾಚಾರ್ಯ ಅವಧಾನಿ (ಅಕ್ಕಲಕೋಟ) | .... | ,, |
| ರಾಜಾಚಾರ್ಯ ಜಮಖಂಡಿ | .... | ,, |
| ಕಂಜಾಕ್ಷಾಚಾರ್ಯ ,, | .... | ,, |
| ಹಯಗ್ರೀವಾಚಾರ್ಯ ಜಂಬಿಗಿ (ಅಥಣಿ) | .... | ,, |
| ಗೋವಿಂದಾಚಾರ್ಯ - ,, ,, | .... | ,, |
| ಪಂಡಿತರಾವ ಕೊಲ್ಹಾಪುರ | .... | ೭೨೭ |
| ನಾರಾಯಣಾಚಾರ್ಯ ,, | .... | ,, |
| ಲೋಳಕರ ಶಾಸ್ತ್ರಿ ಸೊಲ್ಲಾಪುರ | .... | ,, |

| | | |
|---|---|---|
| ನರಸಿಂಹಾಚಾರ್ಯ ಕಟ್ಟಿ (ಉಗಾರ) | .... | ೭೩೬ |
| ಭಟ್ಟಾಚಾರ್ಯ ಪುರೋಹಿತ ಶೂರ್ಪಾಲಿ | .... | ,, |
| ವೆಂಕಣ್ಣಾಚಾರ್ಯ ವಾಳ್ವೇಕರ ಬೆಳಗಾವಿ | .... | ,, |
| ಅನಂತಭಟ್ಟ ಉಡುಪೀಕರ | .... | ೭೩೭ |
| ಗೋಕರ್ಣ ಮಾಧವಭಟ್ಟರು | .... | ,, |
| ಪದ್ಮನಾಭಾಚಾರ್ಯ ಬೆಳಗುಂದಿ | .... | ೭೩೮ |
| ಕೊಪ್ಪಳ ಹನಮಂತಾಚಾರ್ಯ ಅಗ್ನಿಹೋತ್ರಿ | .... | ,, |
| ,, ಶ್ರೀನಿವಾಸಾಚಾರ್ಯ ,, | .... | ,, |
| ಗಂಗೂರ ವೆಂಕೋಬಾಚಾರ್ಯ | .... | ೭೩೯ |
| ನಾರಾಯಣಾಚಾರ್ಯ ಪಂಢರಪುರ | .... | ,, |
| ಕೊಳ್ಳಿ ಕೃಷ್ಣಾಚಾರ್ಯ (ರಾಯಚೂರ) | .... | ,, |
| ಸರಪಳಿ ಕೃಷ್ಣಾಚಾರ್ಯ ಬಳ್ಳಾರಿ) | .... | ,, |
| ರಾಮಾಚಾರ್ಯ ಕೊಳ್ಳಿ | .... | ,, |
| ಶ್ರಿರಂಗ ಕೃಷ್ಣಾಚಾರ್ಯ ವಟ್ಟಂಗಾರ | .... | ,, |
| ವಾಸುದೇವಾಚಾರ್ಯ ಕರ್ಣಾಡಕರ | .... | ೭೪೦ |
| ನಾರಾಯಣಾಚಾರ್ಯ ,, | .... | ,, |
| ಗೋಪಾಲಾಚಾರ್ಯ ,, | .... | ,, |
| ಗುರುರಾವ ದಾತಾರ ವಕೀಲ ವಿಜಾಪುರ | .... | ೭೪೧ |
| ಮಠದ ಕೃಷ್ಣಾಚಾರ್ಯ ವಿಜಾಪುರ | .... | ೭೪೨ |
| ಶ್ಯಾಮರಾವ ದಾತಾರ | .... | ,, |
| ಹನುಮಂತರಾವ ಛಬ್ಬಿ | .... | ,, |
| ಅಶ್ವತ್ಥಾಚಾರ್ಯ ಕಟ್ಟಿ | .... | ,, |
| ಪ್ರಲ್ಹಾದಾಚಾರ್ಯ ಕಟ್ಟಿ | .... | ,, |
| ಕೌಜಲಗಿ ಕೃಷ್ಣಾಚಾರ್ಯ | .... | ,, |
| ವೆಂಕಟರಮಣಾಚಾರ್ಯ ಬೆಳಗಾವಿ | ... | ,, |
| ಅಣ್ಣಾಸಾಹೇಬ ಪರಮಾನಟ್ಟಿ (ಗಲಗಲಿ) | .... | ,, |
| ಕಾಂತಾಚಾರ್ಯ ಕೊಲ್ಹಾಪುರ | .... | ೭೪೩ |
| ರಾಯಚೂರ ದ್ವೈಪಾಯನ ಭೀಮಾಚಾರ್ಯ ಅಗರಖೇಡ | .... | ,, |
| ನರಸಿಂಹಾಚಾರ್ಯ ಯಜುರ್ವೇದಿ ,, | .... | ,, |
| ಚಕ್ರಪಾಣಿ ಆಚಾರ್ಯರು ,, | .... | ,, |
| ನಾಗರಹಳ್ಳಿ ಭೀಮಾಚಾರ್ಯ ,, | ... | ,, |
| ರಾಯಚೂರ ಅಣ್ಣೈಯ್ಯಾಚಾರ್ಯ ,, | .... | ,, |

| | | |
|---|---|---|
| ವೆಂಕಟರಮಣಾಚಾರ್ಯ ಶಿರಹಟ್ಟಿ | .... | ೨೪೪ |
| ರಾಮಾಚಾರ್ಯ ಬೀಡ | .... | ,, |
| ಭೀಮಾಚಾರ್ಯ ಮಾಹುಲಿ ಐನಾಪುರ | .... | ,, |
| ಹುನಗುಂದ ನರಸಿಂಹಾಚಾರ್ಯ | .... | ೨೪೫ |
| ,, ರಾಘವೇಂದ್ರಾಚಾರ್ಯ | .... | ,, |
| ,, ಶ್ರೀನಿವಾಸಾಚಾರ್ಯ | .... | ,, |
| ಕಂಚೀ ಕೃಷ್ಣಾಚಾರ್ಯ | .... | ,, |
| ಕಟ್ಟಿ ಹನಮಂತಾಚಾರ್ಯ ಬಾಗಲಕೋಟಿ | .... | ,, |
| ಮನಗೂಳಿ ರಾಘವೇಂದ್ರಾಚಾರ್ಯ ಬಾಗಲಕೋಟಿ | ... | ,, |
| ಗದ್ದನಕೇರಿ ರಾಮಚಂದ್ರಾಚಾರ್ಯ ಯಲಗೂರ | .... | ೨೪೬ |
| ಬಂಡಾಚಾರ್ಯ ಗುಡಿ | .... | ,, |
| ಕೆರೂರ ವಾಸುದೇವಾಚಾರ್ಯ | .... | ,, |
| ಕಂಚೀ ಗುರಾಚಾರ್ಯ ಬಾಗಲಕೋಟಿ | .... | ,, |
| ಮಳಗಿ ಬಂಡಾಚಾರ್ಯ ಬಾಗಲಕೋಟಿ | .... | ,, |
| ಝುಳಕೀಕರ ಭಟ್ಟ ವಾಮನಾಚಾರ್ಯ | .... | ,, |
| ಝುಳಕಿ ಭೀಮಾಚಾರ್ಯ | .... | ೨೪೭ |
| ಮುಳಬಾಗಿಲದ ಪಂಡಿತರು— | .... | ,, |
| ಆವರೂರ ಕೃಷ್ಣದ್ವೈಪಾಯನಾಚಾರ್ಯ | .... | ೨೪೮ |
| ,, ಪೂರ್ಣಪ್ರಜ್ಞಾಚಾರ್ಯ | .... | ,, |
| ,, ನರಹರಿ ಆಚಾರ್ಯ | .... | ,, |
| ,, ರಾಘವೇಂದ್ರಾಚಾರ್ಯ | .... | ,, |
| ,, ನರಸಿಂಹಾಚಾರ್ಯ | .... | ,, |
| ಹರಿಯಪ್ಪಾಚಾರ್ಯರು ಮುಳಬಾಗಿಲು (ಶ್ರೀ ಸುಧೀನಿಧಿತೀರ್ಥರು) | .... | ೨೪೯ |
| ವೆಂಕಣ್ಣಾಚಾರ್ಯ ಆಡೂರ | .... | ,, |
| ಬಾಳಯ್ಯಾಚಾರ್ಯ ಪಾಂಡುರಂಗಿ | .... | ೨೫೦ |
| ಸತ್ಯಧೀಶಾಚಾರ್ಯ ಪಾಚ್ಛಾಪುರ | .... | ೨೫೧ |
| ವಡ್ಡೀಗೇರಿ ವೆಂಕಪ್ಪಾಚಾರ್ಯ | .... | ,, |
| ಕೋಟೂರ ವೆಂಕಪ್ಪಾಚಾರ್ಯ | .... | ,, |
| ವಡ್ಡೀಗೇರಿ ನರಸಿಂಹಾಚಾರ್ಯ | .... | ,, |
| ಮುದ್ದು ಭೀಮಾಚಾರ್ಯ ಮಂತ್ರಾಲಯ | .... | ,, |
| ವ್ಯಾಸರಾಯ ಮಠದ ಅಪ್ಪಣ್ಣಾಚಾರ್ಯ | ,, | ೨೫೨ |
| ಬೊಜ್ಜಿ ಶ್ರೀನಿವಾಸಾಚಾರ್ಯ | ,, | ,, |

| | | |
|---|---|---|
| ಕಲ್ಲಾಪುರ ಶ್ರೀನಿವಾಸಾಚಾರ್ಯ | ,, | ೭೫೨ |
| ಪುಂಗನೂರ ರಾಘವೇಂದ್ರಾಚಾರ್ಯ | ,, | ,, |
| ಕೌಲಗಿ ನಾರಾಯಣಾಚಾರ್ಯ | ,, | ೭೫೩ |
| ಗುಂಡಾಚಾರ್ಯ ಅವಧಾನಿ ಮಣ್ಣೂರ | ,, | ,, |
| ರಾಮಾಚಾರ್ಯ ಮಾಹುಲಿ ಐನಾಪುರ | ,, | ,, |
| ಮಧುರೆ ಮಧ್ವಾಚಾರ್ಯ | ,, | ,, |
| ,, ಶ್ರೀನಿವಾಸಾಚಾರ್ಯ | ,, | ೭೫೪ |
| ನಾಗರಹಳ್ಳಿ ಶ್ರೀನಿವಾಸಾಚಾರ್ಯ | .... | ,, |
| ಸುರಪುರದ ಹನುಮೇಶಾಚಾರ್ಯ | .... | ,, |
| ಬಾಳಯ್ಯಾಚಾರ್ಯ ಆಲೂರ | .... | ೭೫೫ |
| ಹನುಮಂತಾಚಾರ್ಯ ,, | .... | ,, |
| ಕೇಶವಾಚಾರ್ಯ ವರಖೇಡಿ | .... | ,, |
| ಪಾಣಿನಿ ಕೃಷ್ಣಾಚಾರ್ಯ ಕೌಲಗಿ | .... | ,, |
| ಚತುರ್ವೇದಿ ಭೀಮಾಚಾರ್ಯ (ಕುಂಭಕೋಣ) | .... | ,, |
| ಪಾಂಡುರಂಗಿ ಶ್ರೀನಿವಾಸಾಚಾರ್ಯ | .... | ,, |
| ಹುಚ್ಚಾಚಾರ್ಯ ರಿತ್ತ ಮೈಸೂರ | .... | ೭೫೬ |
| ಹಯಗ್ರೀವಾಚಾರ್ಯ ಸಂಗಮ (ಗಲಗಲಿ) | .... | ,, |
| ಬಿಂದಾಚಾರ್ಯ ಹುಬ್ಬಳ್ಳಿ ,, | .... | ,, |
| ರಾಮಚಂದ್ರಾಚಾರ್ಯ ,, ,, | .... | ,, |
| ಮಂಗಲಗಿ ಉಡುಪಾಚಾರ್ಯ ಬಾಗಲಕೋಟ | .... | ೭೫೭ |
| ಪಂಢರೀ ಶೇಷಾಚಾರ್ಯ ,, | .... | ,, |
| ವೆಂಕಣ್ಣಾಚಾರ್ಯ ಬುರ್ಲಿ ,, | ... | ,, |
| ಸೂಳಿಭಾವಿ ಭೀಮಾಚಾರ್ಯ ,, | .... | ,, |
| ಗುಡಿ ಶ್ರೀನಿವಾಸಾಚಾರ್ಯ ,, | .... | ,, |
| ನಾಗಸಂಪಗಿ ಆಡಿವೀ ಆಚಾರ್ಯ ಯಲಗೂರ | .... | ,, |
| ಶ್ರೀರಂಗ ಮಾಧವಾಚಾರ್ಯ | .... | ,, |
| ಶ್ರೀರಂಗ ನಾರಾಯಣಾಚಾರ್ಯ | .... | ,, |
| ,, ರಾಮಚಂದ್ರಾಚಾರ್ಯ | .... | ,, |
| ಏರಿ ರಾಮಾಚಾರ್ಯ | .... | ,, |
| ರಂಗಂಪೇಟ ರಾಮಾಚಾರ್ಯ | .... | ,, |
| ಪದ್ಮನಾಭಾಚಾರ್ಯ ವರಖೇಡಿ | .... | ೭೫೮ |
| ಕೃಷ್ಣಾಚಾರ್ಯ ,, | .... | ,, |

## ಚೈತನ್ಯ ಸಂಪ್ರದಾಯದ ಪಂಡಿತರು

## ಪ್ರಕರಣ— ೬

### ವಿದ್ಯಮಾನ ವಿದ್ವಾಂಸರು

| | | |
|---|---|---|
| ಶ್ರೀನಿವಾಸಾಚಾರ್ಯ ಜಾಲೀಹಾಳ | .... | ೮೦೯ |
| ಕೇಶವಾಚಾರ್ಯ ,, ಗದಗ | .... | ೮೧೦ |
| ಭೀಮಸೇನಾಚಾರ್ಯ ಗಂಗೂರ | .... | ೮೧೧ |
| ಶ್ರೀನಿವಾಸಾಚಾರ್ಯ ,, | ... | ,, |
| ರಂಗಾಚಾರ್ಯ ಗುತ್ತಲ | .... | ,, |
| ಕೊರ್ಲಹಳ್ಳಿ ರಂಗಾಚಾರ್ಯ ಶೀರನಹಳ್ಳಿ | .... | ೮೧೨ |
| ಲಕ್ಷ್ಮಣಾಚಾರ್ಯ ಮುಂಜಿ ಕರ್ನೂಲ | .... | ,, |
| ಹುಚ್ಚಾಚಾರ್ಯ ಹುಲಗಿ | .... | ,, |
| ಗಲಗಲಿ ನಾರಾಯಣಾಚಾರ್ಯ ಗುಲಬುರ್ಗಾ | .... | ೮೧೩ |
| ಶ್ಯಾಮಣ್ಣ ದಾಸ ಬಳ್ಳಾರಿ | .... | ,, |
| ಪ್ರೊ. ಎಸ್. ಜಿ. ಮುದಗಲ್ಲ M.A. | .... | ,, |
| ಎನ್. ವ್ಹಿ. ಪದ್ಮನಾಭಾಚಾರ್ಯ ಮೈಸೂರ | .... | ೮೧೪ |
| ಎಳಮೇಲಿ ವಾಸುದೇವಾಚಾರ್ಯ ಬೆಂಗಳೂರು | .... | ,, |
| ಡಾ॥ ಬಿ. ಎನ್. ಕೆ. ಶರ್ಮಾ | .... | ೮೧೫ |
| ಎಂ. ರಾಮರಾವ ಕುಂಭಕೋಣ | .... | ೮೧೭ |
| ಪ್ರೊ. ಕೆ. ಟಿ. ಪಾಂಡುರಂಗಿ | .... | ೮೧೮ |
| ಕಾಶೀ ಕೃಷ್ಣಮೂರ್ತಿ ಆಚಾರ್ಯ | .... | ೮೧೯ |
| ರಾಘವಾಚಾರ್ಯ ಜವಳೀಕರ (ಮೋಹಾರ) | .... | ,, |
| ಶ್ರೀನಿವಾಸಾಚಾರ್ಯ ಬಾಳಿಗಾರು (ಶಿವಮೊಗ್ಗಾ) | .... | ೮೨೦ |
| ಮಹಾಮಹೋಪಾಧ್ಯಾಯ ಬಾಳಾಚಾರ್ಯ ಕುಪೇರಕರ ಕೊಲ್ಹಾಪುರ | | ,, |
| ಗುತ್ತಲ ಸ್ವಾಮಿರಾಯಾಚಾರ್ಯ | .... | ,, |
| ಎಚ್. ಸುಬ್ಬರಾವ | .... | ೮೨೧ |
| ಶೇಷಾಚಾರ್ಯ ಕೌಲಗಿ ಹುಬ್ಬಳ್ಳಿ | .... | ,, |
| ಕೇಶವಾಚಾರ್ಯ ಕಟ್ಟಿ | .... | ೮೨೨ |
| ಗುನ್ನಾಳ ನರಸಿಂಹಾಚಾರ್ಯ | .... | ,, |
| ರಾಘವಾಚಾರ್ಯ ಸಾಂಗಲಿ ಮುಂಬೈ | .... | ,, |
| ರಂಗನಾಥಾಚಾರ್ಯ ಮುಂಡರಗಿ ಶಿರಸಿ | .... | ೮೨೩ |
| ಹರ್ತಿ ವೆಂಕೋಬಾಚಾರ್ಯ ಬೆಂಗಳೂರ | .... | ,, |
| ಅಕ್ಷೋಭ್ಯಾಚಾರ್ಯ - ,, | .... | ,, |
| ರಾಮಾಚಾರ್ಯ ಕೂಸನೂರ | .... | ,, |
| ರಾಮಾಚಾರ್ಯ ಮಂಗಸೂಳಿ ಐನಾಪುರ | .... | ೮೨೪ |
| ಕೃಷ್ಣಾಚಾರ್ಯ ಗಲಗಲಿ ಶೂರ್ಪಾಲಿ | .... | ,, |

| | | |
|---|---|---|
| ಗೋಪಾಲಾಚಾರ್ಯ ಬೀಳೂರ ಅಥಣಿ | .... | ೧೮೪ |
| ರಾಮಾಚಾರ್ಯ ಕುಂದರಗಿ | .... | ,, |
| ಜಯಾಚಾರ್ಯ ಅರಕೇರಿ | .... | ೧೮೫ |
| ರಾಮಾಚಾರ್ಯ ಗಂಗೂರ ಜಾಲೀಹಾಳ | .... | ,, |
| ರಾಘವೇಂದ್ರಾಚಾರ್ಯ ಗಂಗೂರ | .... | ,, |
| ವಡವೀ ಮಾಧವಾಚಾರ್ಯ ಧಾರವಾಡ | .... | ೧೮೬ |
| ಕೃಷ್ಣಾಚಾರ್ಯ ಪಾಚ್ಛಾಪುರ | .... | ,, |
| ಡಿ. ಪ್ರಲ್ಹಾದಾಚಾರ್ಯ | .... | ೧೮೭ |
| ಉಮರ್ಜಿ ನರಸಿಂಹಾಚಾರ್ಯ | .... | ,, |
| ನರಸಿಂಹಾಚಾರ್ಯ ಬಂಡ್ಯಾಳ ನವಲಗುಂದ | .... | ,, |
| ಕೇಶವಾಚಾರ್ಯ ಬಾಯರಿ | .... | ,, |
| ಹನಮಂತಾಚಾರ್ಯ ಅಳವಂಡಿ ಹೊಸಪೇಟಿ | .... | ,, |
| ಹಯವದನಾಚಾರ್ಯ ಪುರಾಣಿಕ | .... | ೧೮೮ |
| ಶೇಷಗಿರಿರಾವ ಬೆಂಗಳೂರ | .... | ,, |
| ಪುಂಡರೀಕಾಕ್ಷಾಚಾರ್ಯ | .... | ,, |
| ಗುರುರಾಜಾಚಾರ್ಯ ಜೋಶಿ ಗದಗ | .... | ೧೮೯ |
| ಮಳಿಗಿ ಹನುಮಂತಾಚಾರ್ಯ ಬಾಗಲಕೋಟೆ | .... | ,, |
| ಬನ್ನಿಗೋಳ ವೆಂಕಣ್ಣಾಚಾರ್ಯ ಹೊಸಪೇಟ | .... | ೧೯೦ |
| ಗಲಗಲಿ ಶುಕಾಚಾರ್ಯ ಜಮಖಂಡಿ | .... | ,, |
| ಆದ್ಯ ಅನಂತಾಚಾರ್ಯ ವಿಜಾಪುರ | .... | ೧೯೧ |
| ನಾರಾಯಣಾಚಾರ್ಯ ಗಲಗಲಿ | .... | ,, |
| ಉಮರ್ಜಿ ತ್ರಿವಿಕ್ರಮಾಚಾರ್ಯ | .... | ೧೯೨ |
| ಗಲಗಲಿ ವೆಂಕಣ್ಣಾಚಾರ್ಯ | .... | ,, |
| ಅಣ್ಣೈಯಾಚಾರ್ಯ ಗಲಗಲಿ | .... | ,, |
| ಯದುಪತಿ ಆಚಾರ್ಯ ಹೊನ್ನಾಳಿ | .... | ೧೯೩ |
| ಬಿಂದಾಚಾರ್ಯ ಉಮರ್ಜಿ ಕಿತ್ತೂರ | .... | ,, |
| ಹನುಮಂತಾಚಾರ್ಯ ಶಿಗ್ಗಾವಿ ಬೆಂಗಳೂರ | .... | ,, |
| ನಾರಾಯಣಾಚಾರ್ಯ ಗಲಗಲಿ | .... | ೧೯೪ |
| ರಾಮಾಚಾರ್ಯ ಪಾಂಡುರಂಗಿ | .... | ,, |
| ಪದ್ಮನಾಭಾಚಾರ್ಯ ಗುಂಟೂರ (ಹೈದರಾಬಾದ) | .... | ,, |
| ರಾಘವೇಂದ್ರಾಚಾರ್ಯ ಬುರ್ಲಿ ಗದಗ | .... | ೧೯೫ |
| ಭೀಮಸೇನಾಚಾರ್ಯ ಸಂತೆಬೆನ್ನೂರ ಬಳ್ಳಾರಿ | .... | ,, |

| | |
|---|---|
| ಸಿ. ಎಚ್. ನರಸಿಂಹಾಚಾರ್ಯ | ೮೫೨ |
| ಬಿ. ಶ್ರೀನಿವಾಸ ಸಾಮಗರು | ೮೫೩ |
| ಕಾಶೀ ಹರಿದಾಸಾಚಾರ್ಯ | ” |
| ಕಳತ್ತೂರ ವೆಂಕಟಕೃಷ್ಣ ಉಪಾಧ್ಯಾಯ | ೮೫೪ |
| ಕೃಷ್ಣಾಚಾರ್ಯ ನಾಗಸಂಪಿಗಿ | ” |
| ಭಂಡಾರಕೆರೆ ನಾರಾಯಣಾಚಾರ್ಯ | ೮೫೫ |
| ಪ್ರಲ್ಹಾದಾಚಾರ್ಯ ಅಂಬೇಕರ | ” |
| ಕೆ. ನಾರಾಯಣಾಚಾರ್ಯ ಹುಮ್ಮಚ | ೮೫೬ |
| ವೈ. ಶ್ರೀಪತಿಭಟ್ಟ ಹೆದ್ದಾರಿಮನೆ | ” |
| ಅನಂತಪದ್ಮನಾಭ ಐತಾಳ ಸಗ್ರಿ | ” |
| ಮಹಿಷಿ ಭಾಗವತ ವೆಂಕಟರಮಣಾಚಾರ್ಯ | ೮೫೭ |
| ಚಿತ್ರಾಪುರ ವ್ಯಾಸಕೃಷ್ಣಾಚಾರ್ಯ | ” |
| ಎಚ್. ರಘುಪತಿ ಅಡಿಗ | ” |
| ವಾಮನಾಚಾರ್ಯ ಕಟ್ಟಿ | ” |
| ಮರಕೂರ ಕೃಷ್ಣಾಚಾರ್ಯ ಶಿರೋಮಣಿ | ೮೫೮ |
| ಕೆ. ಗೋವಿಂದ ಉಪಾಧ್ಯಾಯ ಕುಂಭಾಸಿ | ” |
| ಎಸ್. ಎನ್. ನಾಗರಾಜಾಚಾರ್ಯ ಮೈಸೂರು | ” |
| ವಿ. ವೆಂಕಟದಾಸ ಬಾಯರಿ | ” |
| ಜಿ. ಕೃಷ್ಣ ಉಪಾಧ್ಯಾಯ ಕುಂಭಾಸಿ | ೮೫೯ |
| ಕೆ. ಗೋಪಾಲಕೃಷ್ಣಾಚಾರ್ಯ ಕೋಣಂದೂರ | ” |
| ಬಳ್ಳಾರಿ ಕೃಷ್ಣಾಚಾರ್ಯ ಕಂಪ್ಲಿ | ” |
| ಕೆ. ಆರ್. ಜಯನರಸಿಂಹಾಚಾರ್ಯ, ಮದ್ರಾಸ | ” |
| ಎಂ. ಎಸ್. ಅನಂತಕೃಷ್ಣಾಚಾರ್ಯ ಉಡುಪಿ | ೮೬೦ |
| ಕೆ. ಟಿ. ಅನಂತ ಐತಾಳ ಕುಂದಾಪುರ | ” |
| ಪ್ರದ್ಯುಮ್ನಾಚಾರ್ಯ ಸಾಗರ | ” |
| ಆರ್. ಅಪ್ಪಣ್ಣಾಚಾರ್ಯ | ೮೬೧ |
| ಕಟ್ಟಿ ಗೋಪಾಲಕೃಷ್ಣಾಚಾರ್ಯ | ” |
| ಡಿ. ಶ್ರೀನಿವಾಸಾಚಾರ್ಯ, ಬೆಂಗಳೂರ | ” |
| ಎನ್. ಜಿತೇಂದ್ರಿಯಾಚಾರ್ಯ | ೮೬೨ |
| ಪಿ. ಆರ್. ನಾಗರಾಜರಾವ, ಮದ್ರಾಸ | ೮೬೩ |
| ಪಿ. ವಿ. ಗುರಾಚಾರ್ಯ, ಬೇಂಗ್ರೆ | ” |
| ಬೋಧರಾಜಾಚಾರ್ಯ ಶೀರನಹಳ್ಳಿ | ” |

| | | |
|---|---|---|
| ಅಡ್ಡೇ ವೇದವ್ಯಾಸಾಚಾರ್ಯ ಉಡುಪಿ | .... | ೮೬೪ |
| ಶ್ರೀ ಕುಂಭಕೋಣಂ ನದೀತೀರ ಶ್ರೀನಿವಾಸಾಚಾರ್ಯ, ಮಧುರಾ | .... | ,, |
| ಕುಟಾಕುಲಂ ಪಾಂಡುರಂಗೀ ಕೃಷ್ಣಮೂರ್ತಿ ಆಚಾರ್ಯ | .... | ,, |
| ಸ್ವಾಮಿರಾಯಾಚಾರ್ಯ ಅಧ್ಯಾಪಕ | ... | ೮೬೫ |
| ಡಿ. ವ್ಹಿ. ಸುಬ್ಬಾಚಾರ್ಯ | .... | ,, |
| ವೆಂಕಟಾಚಾರ್ಯ ಮಳಖೇಡ | .... | ,, |
| ಬಿದರಹಳ್ಳಿ ಶ್ರೀನಿವಾಸಾಚಾರ್ಯ, ಹೊನ್ನಾಳಿ | .... | ೮೬೬ |
| ಡಾ\|\| ಕೆ. ಜಿ. ಮಂಗಳವೇಢೆಕರ, ವಿಜಾಪುರ | .... | ,, |
| ಎಸ್. ಹಯಗ್ರೀವ ತಂತ್ರಿ ಶಿಬರೂರಮಠ | .... | ,, |
| ಬನ್ನಂಜೆ ಗೋವಿಂದಾಚಾರ್ಯ | ... | ೮೬೭ |
| ಎಂ. ಹರಿದಾಸಭಟ್ಟ, ಮಂಜರಬೆಟ್ಟು | .... | ,, |
| ಕಾಶಿ ಶ್ರೀಪಾದಾಚಾರ್ಯ, ಬೆಂಗಳೂರ | .... | ೮೬೮ |
| ಬಾಳಾಚಾರ್ಯ ಘಳಸಾಸಿ, ನಿಪ್ಪಾಣಿ | .... | ,, |
| ಅದಮಾರು ವಿಠಲಾಚಾರ್ಯ | .... | ,, |
| ತಾಮ್ರಂ ರಘೂತ್ತಮಾಚಾರ್ಯ, ಮದ್ರಾಸ | .... | ೮೬೯ |
| ಪಂಚಮುಖಿ ರಾಘವೇಂದ್ರಾಚಾರ್ಯ, ಧಾರವಾಡ | .... | ,, |
| ಎಸ್. ಕೆ. ವೆಂಕಟರಮಣಾಚಾರ್ಯ, ಶ್ರೀಮುಷ್ಣ | .... | ೮೭೦ |
| ವ್ಹಿ. ನಾರಾಯಣಾಚಾರ್ಯ, ತಿರುವಾದಿ | .... | ,, |
| ವೇದವ್ಯಾಸಾಚಾರ್ಯ ಅರ್ಚಕ, ಮಂತ್ರಾಲಯ | .... | ,, |
| ಪಿ. ಲಕ್ಷ್ಮೀನಾರಾಯಣ ಅಡಿಗ | ... | ,, |
| ನಾಗಾಚಾರ್ಯ ನರಸಿಂಹಪೂರ, ಪುಣೆ | .... | ,, |
| ಉಡುಪಿ ಗೋಪಾಲ ಉಪಾಧ್ಯಾಯರು, ಬೆಂಗಳೂರು | .... | ೮೭೧ |
| ಎಮ್. ಪದ್ಮನಾಭ ಮಂಗೇರಾಯ | .... | ,, |
| ಇನ್ನ. ಲಕ್ಷ್ಮೀನಾರಾಯಣಾಚಾರ್ಯ | .... | ,, |
| ಗುರಗುಂಡಿ ಶ್ರೀನಿವಾಸಾಚಾರ್ಯ | .... | ,, |
| ಉಡುಪಿ ವಾಸುದೇವ ಉಪಾಧ್ಯಾಯ | .... | ೮೭೨ |
| ಭಾಸ್ಕರ ನಾಗರಾಜಾಚಾರ್ಯ, ಮದ್ರಾಸ | ... | ,, |
| ಶ್ರೀ ವಟ್ಟಂಗಾರ ರಂಗನಾಥಾಚಾರ್ಯ | ... | ,, |
| ಪೂರಸೇಕುಪ್ಪ ಶ್ರೀ ರಾಜಗೋಪಾಲಾಚಾರ್ಯ | .... | ,, |
| ಚಿಕ್ಕೇರೂರ ಗೋವಿಂದಾಚಾರ್ಯ ಹರಪನಹಳ್ಳಿ | .... | ೮೭೩ |
| ಸರಪಳಿ ಶ್ರೀನಿವಾಸಾಚಾರ್ಯ | .... | ,, |
| ವಟ್ಟಂಗಾರ ಹಯಗ್ರೀವಾಚಾರ್ಯ | .... | ,, |

| | | |
|---|---|---|
| ಪುರಸಕೊಪ್ಪ ರಾಮಮೂರ್ತಿ ಆಚಾರ್ಯ | ... | ೮೮೩ |
| ಶ್ರೀರಂಗ ಭೀಮಾಚಾರ್ಯ | .... | ,, |
| ರಂಗಾಚಾರ್ಯ ಮಾಂಡವಗಣೆ ನಾಶಿಕ | .... | ,, |
| ಕಲ್ಮಂಜೆ ವೆಂಕಟರಮಣೋಪಾಧ್ಯಾಯ | .... | ೮೮೪ |
| ಕೆ. ಆರ್. ಅನಂತ ಪುರಾಣಿಕ | .... | ,, |
| ಪುರಸಕೊಪ್ಪ ಕುಪ್ಪಾಚಾರ್ಯರು | .... | ,, |
| ಕಟ್ಟೆ ವಾದಿರಾಜಾಚಾರ್ಯರು ಕುಂಜಬೆಟ್ಟು ಉಡುಪಿ | .... | ,, |
| ವೈ. ಸುಬ್ರಾಯ ಭಟ್ಟ | .... | ,, |
| ಗುರುಗೋವಿಂದ ವಿಠ್ಠಲದಾಸರು | .... | ೮೭೫ |
| ಮಧ್ವಾಚಾರ್ಯ ಆದ್ಯ ಕಾಶಿ | .... | ,, |
| ಸಗರಿ ಅನಂತರಾಮಾಚಾರ್ಯ | .... | ,, |
| ವ್ಹಿ. ನಾಗರಾಜಾಚಾರ್ಯ | .... | ,, |
| ಸುಸ್ವರ ಗೋಪಾಲ ಕೃಷ್ಣಾಚಾರ್ಯ | .... | ೮೭೬ |
| ಮಧ್ವಾಚಾರ್ಯ ಅಂಬೂರ | .... | ,, |
| ರಾಮ ಶರ್ಮಾ ವೃದ್ಧಾಚಲ | .... | ,, |
| ಬಿ. ಎ. ಕೃಷ್ಣಸ್ವಾಮಿರಾವ ಚಿಕ್ಕಬಳ್ಳಾಪುರ | .... | ,, |
| ರಿತ್ತಿ ವೆಂಕಣ್ಣಾಚಾರ್ಯ ಮೈಸೂರ | .... | ೮೭೭ |
| ವಾಯ್. ಕೆ. ರಘುನಾಥರಾವ ಮೈಸೂರು | .... | ,, |
| ವಟ್ಟಂಗಾರ ಕೃಷ್ಣಾಚಾರ್ಯ | .... | ,, |
| ಗುರಾಚಾರ್ಯ ಚಿತ್ರದುರ್ಗ ಬೆಂಗಳೂರು | .... | ,, |
| ಪಿ. ಕೆ. ಹರಿದಾಸಾಚಾರ್ಯ ಉಡುಪಿ | .... | ೮೭೮ |
| ಎಮ್. ರಾಜಗೋಪಾಲಾಚಾರ್ಯ ಉಡುಪಿ | .... | ,, |
| ಶ್ಯಾಮಾಚಾರ್ಯ ಕೋಯಿಮುತ್ತೂರ | .... | ,, |
| ತಿರುವಾದಿ ಕೃಷ್ಣಮೂರ್ತಿ ಆಚಾರ್ಯ | .... | ,, |
| ಸ್ವಾಮಿರಾಚಾರ್ಯ ಮುತ್ತಿಗಿ ಆದವಾನಿ | .... | ೮೭೯ |
| ಮಧ್ವಾಚಾರ್ಯ ಮಣ್ಣೂರ ಹೈದ್ರಾಬಾದ | .... | ,, |
| ಆರಣಿ ವಾಸುದೇವಾಚಾರ್ಯ ತುಮಕೂರು | .... | ,, |
| ಚಿಕ್ಕೆರೂರ ಸ್ವಾಮಿರಾಚಾರ್ಯ | .... | ,, |
| ಶ್ರೀರಂಗ ಭೀಮಾಚಾರ್ಯ ಬೆಂಗಳೂರು | .... | ೮೮೦ |
| ನಿಜಗಲ್ ನರಸಿಂಹಮೂರ್ತಿ ಆಚಾರ್ಯ ಬೆಂಗಳೂರ | .... | ,, |
| ಪ್ರಾಣೇಶಾಚಾರ್ಯ ಚಿತ್ರದುರ್ಗ ,, | ... | ,, |
| ಮುಳಬಾಗಿಲದ ರಂಗನಾಥಾಚಾರ್ಯ | .... | ,, |

| | |
|---|---|
| ವೈಯೂರು ವೆಂಕಟೇಶಾಚಾರ್ಯ ತಿರುಕೋಯಿಲೂರು | ೮೮೦ |
| ಗುರಗುಂಡಿ ನಾರಾಯಣಾಚಾರ್ಯ | ೮೮೧ |
| ಕಂಪ್ಲಿ ಬೋಧರಾಚಾರ್ಯ ಕಂಪ್ಲಿ | ,, |
| ಕೆ. ಅನಂತಪದ್ಮನಾಭಭಟ್ಟ ಕಿನ್ನಿಮೂಲ್ಕಿ ಉಡುಪಿ | ,, |
| ಬೀಡಿ ಭೀಮಸೇನಾಚಾರ್ಯ ಧಾರವಾಡ | ,, |
| ರೊಟ್ಟಿ ಸೇತುಮಾಧವಾಚಾರ್ಯ ಬೆಂಗಳೂರು | ,, |
| ಕಲ್ಲಾಪುರ ರಂಗಾಚಾರ್ಯ | ೮೮೨ |
| ಕಲ್ಮಂಜೆ ವಾಸುದೇವ ಉಪಾಧ್ಯಾಯ | ,, |
| ಎನ್. ಕೃಷ್ಣಮೂರ್ತಿ ಬೆಂಗಳೂರು | ,, |
| ಗುರಗುಂಡಿ ವಾಸುದೇವಾಚಾರ್ಯ | ೮೮೩ |
| ವಿಜಯೀಂದ್ರಮೂರ್ತಿ ಮೈಸೂರು | ,, |
| ಸಿಂಗನಮಲ್ಲಿ ಬಿಂದಾಚಾರ್ಯ ಬೆಂಗಳೂರು | ,, |
| ಮುಳಬಾಗಿಲದ ಗೋಪಿನಾಥಾಚಾರ್ಯ ಬೆಂಗಳೂರು | ,, |
| ಭೂವರಾಹಾಚಾರ್ಯ ಕುಂಭಕೋಣ | ೮೮೪ |
| ಅವಧಾನಿ ಹುಚ್ಚಾಚಾರ್ಯ ಮಣ್ಣೂರು | ,, |
| ಕೌಲಗಿ ಶೇಷಾಚಾರ್ಯ ಉಡುಪಿ | ,, |
| ಅವಧಾನಿ ವಿಠ್ಠಲಾಚಾರ್ಯ ಶ್ರೀರಂಗ | ,, |
| ವಟ್ಟಂಗಾರು ಹರಿಯಾಚಾರ್ಯ ಶ್ರೀರಂಗ | ,, |
| ಗೋಪಾಲಕೃಷ್ಣಾಚಾರ್ಯ ಉಡುಪಿ ಬೆಂಗಳೂರು | ,, |
| ಕೆ. ರಾಮಚಂದ್ರಾಚಾರ್ಯ ಕೋಲಾರ | ,, |
| ವಲ್ಲಾಕೊಂಡ ನರಸಿಂಹಾಚಾರ್ಯ | ೮೮೮ |
| ಎನ್. ಕೆ. ವೆಂಕಟರಮಣ ಬಲ್ಲಾಳ ಅಂಬಲಪಾಡಿ | ,, |
| ಕೆ. ನರಸಿಂಹ ಉಪಾಧ್ಯಾಯ ಉಡುಪಿ | ,, |
| ಆನಂದ ತೀರ್ಥಾಚಾರ್ಯ ಗಲಗಲಿ | ೮೮೯ |
| ಎನ್. ಜೆ. ಸ್ವಾಮಿರಾಯಾಚಾರ್ಯ, ತಿರುಪತಿ | ,, |
| ಪ್ರಲ್ಹಾದಾಚಾರ್ಯ ಪಾಚ್ಛಾಪುರ, ಕೊಲ್ಹಾರ (ವಿಜಾಪುರ ಜಿಲ್ಹಾ) | ,, |
| ರಾಮಾಚಾರ್ಯ ನರೇಗಲ್ಲ, ಗದಗ | ೮೯೦ |
| ಶ್ಯಾಮಾಚಾರ್ಯ ಕೃಷ್ಣಾಚಾರ್ಯ ವರಪ್ಪ, ರಾಯಚೂರ | ,, |
| ವಸಂತಾಚಾರ್ಯ ಮಳಿಗಿ ಬಾಗಲಕೋಟ | ,, |
| ಅಣ್ಣೈಯ್ಯಾಚಾರ್ಯ ಶೂರ್ಪಾಲಿ, ಬಾಗಲಕೋಟ | ೮೯೧ |
| ಘೂಳೀ ಕೃಷ್ಣಮೂರ್ತಿ ಆಚಾರ್ಯ, ಬಳ್ಳಾರಿ | ,, |
| ನಾಗಪ್ಪ ಪುರಾಣಿಕ ಕುಂಭಾಸಿ | ,, |

| | | |
|---|---|---|
| ಹನುಮಂತಾಚಾರ್ಯ ವಾಲುಕೊಂಡ | .. | ೮೯೧ |
| ಕೆ. ಟಿ. ಜೋಶಿ, ಬಾಗಲಕೋಟ | .. | ೮೯೨ |
| ಕೆ. ಲಕ್ಷ್ಮೀನಾರಾಯಣ ಪುರಾಣಿಕ, ಕುಂಭಾಸಿ | .. | ,, |
| ಭೀಮಾಚಾರ್ಯ ಪಂಚಮುಖಿ, ಬಾಗಲಕೋಟ | .. | ,, |
| ಗುರುರಾಜ ಉಡುಪ, ವಿಜಾಪುರ | .. | ,, |
| ಬಿ. ವೆಂಕಟೇಶಾಚಾರ್ಯ, ಮದ್ರಾಸ | .. | ,, |
| ಆಯಾಚಿತ ರಾಘವೇಂದ್ರಾಚಾರ್ಯ, ಮದ್ರಾಸ | .. | ೮೯೩ |
| ಕೃಷ್ಣಾಚಾರ್ಯ ಮುಧೋಳ, ರಾಮದುರ್ಗ | .. | ,, |
| ಜಯವೆಂಕಟಾಚಾರ್ಯ ನಾರಾಯಣಪೇಟ | .. | ,, |
| ಕಾರ್ಕಳ ವಾಸುದೇವಭಟ್ಟ, ಕೃಷ್ಣಗಿರಿ | .. | ,, |
| ನಾರಾಯಣಾಚಾರ್ಯ ಕಡಪಾ | .. | ,, |
| ವಾಸುದೇವಾಚಾರ್ಯ ಸಂಗನಾಳ, ಕಿನ್ನಾಳ | .. | ೮೯೪ |
| ಕಾಡೂರ ಹಣಮಂತಾಚಾರ್ಯ ಬಳ್ಳಾರಿ | .. | ,, |
| ರಾಮಕೃಷ್ಣ ಅನಂತಭಟ್ಟ ಕಾಶೀಕರ, ಹೊನ್ನಾವರ | .. | ,, |
| ನರಸಿಂಹಾಚಾರ್ಯ ಕೊಪ್ಪರ | .. | ೮೯೫ |
| ಕೃಷ್ಣಾಚಾರ್ಯ ನಿಪ್ಪಾಣಿ, ಶಹಾಪುರ–ಬೆಳಗಾಂವ | .. | ,, |
| ಹಯಗ್ರೀವಾಚಾರ್ಯ ಗುತ್ತಲ, ಪುಣೆ | .. | ,, |
| ಕಾಪೂ ವಿಠ್ಠಲ ತಂತ್ರಿ ಕಲ್ಯ | .. | ೮೯೬ |
| ಎಚ್. ವಾಸುದೇವ ವರ್ಣ, ಹಂಗೂರ ಗ್ರಾಮ | .. | ,, |
| ಪದ್ಮನಾಭಾಚಾರ್ಯ ವೈದ್ಯ, ಆತ್ಮಕೂರು | .. | ,, |
| ಬಿ. ಸೀತಾರಾಮ ಉಪಾಧ್ಯಾಯ ಬಿಚಾಡಿಗ್ರಾಮ | .... | ,, |
| ವರದಾಚಾರ್ಯ ಚಿಟಗುಬ್ಬಿ, ಸಿಕಂದರಾಬಾದ | .... | ,, |
| ಮಾಧವೇಶಾಚಾರ್ಯ ನರಗುಂದ, ಅಥಣಿ | .... | ೮೯೭ |
| ನರಸಿಂಹಾಚಾರ್ಯ ಆದವಾನಿ | .... | ,, |
| ಆದವಾನಿ ರಾಘವೇಂದ್ರಾಚಾರ್ಯ ಬೆಂಗಳೂರ | .... | ,, |
| ಎಸ್. ವ್ಹಿ. ಭೀಮಭಟ್ಟ, ಬೆಂಗಳೂರು | .... | ೮೯೮ |
| ಸಿ. ಕೃಷ್ಣಸ್ವಾಮಿರಾವ, ಬೆಂಗಳೂರು | .... | ,, |
| ರಾಮಾಚಾರ್ಯ ಅವಧಾನಿ, ಪುಣೆ | .... | ೮೯೯ |
| ಜ. ವಸಂತಾಚಾರ್ಯ ಕರ್ನೂಲ | .... | ,, |
| ಕೃಷ್ಣಾಚಾರ್ಯ ಪುರೋಹಿತ, ಚಿಮ್ಮಲಗಿ | .... | ,, |
| ರಾಯಚೂರ ಗೋಪಾಲಾಚಾರ್ಯ ಹೊನ್ನಾಳಿ | .... | ೯೦೦ |
| ನಾರಾಯಣಾಚಾರ್ಯ ಗೋಟೂರ, ಹುಬ್ಬಳ್ಳಿ | .... | ,, |

| | | |
|---|---|---|
| ಕೃಷ್ಣಾಚಾರ್ಯ ಖೇಡ | .... | ೯೦೦ |
| ನಾಗರಾಜಾಚಾರ್ಯ ಕೌಲಗಿ, ಮದ್ರಾಸ | .... | ,, |
| ವೇದವ್ಯಾಸಾಚಾರ್ಯ ಕರ್ನೂಲ | .... | ,, |
| ಬಾಳಾಚಾರ್ಯ ವಂಖೇಡಿ ಪಂಢರಪುರ | .... | ೯೦೧ |
| ರಾಮಾಚಾರ್ಯ ನಾಗರಳ್ಳಿ ವಿಜಾಪುರ | .... | ,, |
| ಕಟ್ಟಿ ವಾಸುದೇವಾಚಾರ್ಯ ವಿಜಾಪುರ | .... | ,, |
| ಉಮರ್ಜಿ ದಾಮೋದರಾಚಾರ್ಯ ಬೆಳಗಾಂವಿ | .... | ೯೦೨ |
| ಕೊರ್ಲಹಳ್ಳಿ ಭೀಮಸೇನಾಚಾರ್ಯ | .... | ,, |
| ಗೋಪಾಡಿ ವಿಷ್ಣುಮೂರ್ತಿ ಉಪಾಧ್ಯಾಯ ಗೋಪಾಡಿಗ್ರಾಮ, ಕೋಟೇಶ್ವರ | | ,, |
| ಬಿ. ಪದ್ಮನಾಭಭಟ್ಟ ಮಾಪ್ಕೋಡು ಕೊಡಗು | .... | ,, |
| ರಾಮಾಚಾರ್ಯ ಜೋಶಿ ರಾಯಚೂರ | .... | ೯೦೩ |
| ಕೆ. ಲಕ್ಷ್ಮೀನಾರಾಯಣ ಪುರಾಣಿಕ, ಕುಕ್ಕೇಹಳ್ಳಿ | .... | ,, |
| ಎಂ, ಎಸ್. ಗೋವಿಂದಾಚಾರ್ಯ, ಮುದರಂಗಡಿ | .... | ,, |
| ಗೊರ್ನಾಳ ರಾಮಾಚಾರ್ಯ ವಿಜಾಪುರ | .... | ೯೦೪ |
| ಸುಬ್ರಹ್ಮಣ್ಯಾಚಾರ್ಯ ಮುಂಡರಗಿ ರಾಯಚೂರ | .... | ,, |
| ಜಿ. ಕೃಷ್ಣಭಟ್ಟ ಗೋಪಾಡಿಗ್ರಾಮ ಕೋಟೇಶ್ವರ | .... | ,, |
| ದ್ವೈಪಾಯನ ಶ್ರೀನಿವಾಸಾಚಾರ್ಯ ರಾಯಚೂರ | .... | ,, |
| ಅಗ್ನಿಹೋತ್ರಿ ಜಯಾಚಾರ್ಯ, ಕೊಪ್ಪಳ | .... | ,, |
| ಮಾಧವಾಚಾರ್ಯ ಲಾತೂರ | .... | ,, |
| ಡಾ॥ ಶ್ರೀನಿವಾಸ ಹಾವನೂರ | .... | ೯೦೫ |
| ಭೀಮಾಚಾರ್ಯ ಜೋಶಿ, ದೇವದುರ್ಗ | .... | ,, |
| ಎರಡೆತ್ತು ಅಳಗಿರೀಶಾಚಾರ್ಯ, ವ್ಯಾಸರಾಜಪುರ | .... | ,, |
| ಮುದ್ರಾಡಿ ರಾಮಕೃಷ್ಣಾಚಾರ್ಯ. ಉಡುಪಿ | .... | ,, |
| ಪಾಂಡುರಂಗಾಚಾರ್ಯ ಕೊರ್ಲಹಳ್ಳಿ | ... | ೯೦೬ |
| ಬಡಾಕೆರೆ ಕೃಷ್ಣ ವರ್ಣ, ಕೋಟೇಶ್ವರ | .... | ,, |
| ಡಾ॥ ವೆಂಕಟರಾಯ ಆನಂದ ಶೆಣೈ, ಮುಂಬೈ | .... | ,, |
| ಕೆ. ಸೀತಾರಾಮಾಚಾರ್ಯ, ಉಡುಪಿ | .... | ,, |
| ಕೋಟಿಗುಂಡಿ ಗೋವಿಂದಾಚಾರ್ಯ | .... | ,, |
| ಕೃಷ್ಣ ಕೊಲ್ಹಾರ ಕುಲಕರ್ಣಿ, ಮುಂಬೈ | .... | ೯೦೭ |
| ಎಸ್. ನಾರಾಯಣರಾವ, ಮೂಡಗಿರಿ | .... | ,, |
| ಯು. ವೆಂಕಟಕೃಷ್ಣರಾವ | .... | ,, |
| ಕೊರ್ಲಹಳ್ಳಿ ಸತ್ಯವೀರಾಚಾರ್ಯ, ಹುಬ್ಬಳ್ಳಿ | .... | ,, |

| | | |
|---|---|---|
| ಶ್ರೀನಿವಾಸಾಚಾರ್ಯ ಷೊನ್ನಿ ಜಹಗೀರದಾರ ಹೈದರಾಬಾದ | .... | ೯೦೮ |
| ಪಿ. ಎಸ್. ಗೋಪಾಲಕೃಷ್ಣಾಚಾರ್ಯ ಪಾದುಬೆಟ್ಟು–ಪಡುಬಿದ್ರೆ | .... | ,, |
| ತೊಲೂರ ಮಾಧವಾಚಾರ್ಯ, ವೀರಚೋಳಪುರ | .... | ,, |
| ಬೋಧರಾಯಾಚಾರ್ಯ ಹುನಗುಂದ, ಧಾರವಾಡ | .... | ,, |
| ಕೃಷ್ಣಾಚಾರ್ಯ ರಾಜಪುರೋಹಿತ ಆರಕೇರಿ | .... | ೯೦೯ |
| ಬಂಡೇರಾವ ಕೌಜಲಗಿ, ಧಾರವಾಡ | .... | ,, |
| ಮಂಜುನಾಥ ಭಟ್ಟ ಅಡಿಗ, ಗದಗ | .... | ,, |
| ಪದ್ಮನಾಭ ಭಟ್ಟ ಸಾಲಿಗ್ರಾಮ | .... | ೯೧೦ |
| ಕೆ. ನರಸಿಂಹಾಚಾರ್ಯ, ಬೆಂಗಳೂರು | .... | ,, |
| ಮಧ್ವಾಚಾರ್ಯ ಮೂಗೂರು | .... | ,, |
| ಕೆ. ಶ್ರೀನಿವಾಸಭಟ್ಟ ಶಿರವ | .... | ೯೧೧ |
| ರಾಮಾಚಾರ್ಯ ಹುಯಿಲಗೋಳ, ಗದಗ | .... | ,, |
| ಗಡಚಿಂತಿ ರಾಮಾಚಾರ್ಯ | .... | ,, |
| ಚಿಪ್ಪಗಿರಿ ಗೋಪಾಲಕೃಷ್ಣಾಚಾರ್ಯ, ಉಡುಪಿ | .... | ,, |
| ಮಠದ ಗುಂಡಾಚಾರ್ಯ, ಶಿವಮೊಗ್ಗಾ | .... | ೯೧೨ |
| ಮಟಪಾಡಿ ನರಸಿಂಹಾಚಾರ್ಯ, ಬ್ರಹ್ಮಾವರ | .... | ,, |
| ನರಸಿಂಹಾಚಾರ್ಯ ಶಿರಹಟ್ಟಿ, ಗದಗ | .... | ,, |
| ರಾಮಕೃಷ್ಣ ತಂತ್ರಿ, ಉಡುಪಿ | .... | ೯೧೩ |
| ಪ್ರಾಣನಾಥಾಚಾರ್ಯ ಗಲಗಲಿ, ಬನಹಟ್ಟಿ | .... | ,, |
| ದಯಾನಂದ ಶಾನಭಾಗ, ಧಾರವಾಡ | .... | ,, |
| ಬಿ. ನಾಗೇಶರಾಯರು ಬಳ್ಳಾರಿ | .... | ೯೧೪ |
| ಬಿ. ನಾರಾಯಣಾಚಾರ್ಯ, ಬೈಲೂರ | .... | ,, |
| ತೆಕ್ಕಟ್ಟೆ ರಾಜಗೋಪಾಲಭಟ್ಟ, ತೆಕ್ಕಟ್ಟೆ | .... | ,, |
| ರಾಜಾ ಎಸ್. ಗುರುರಾಜಾಚಾರ್ಯ, ಮೈಸೂರು | .... | ೯೧೫ |
| ರಾಮಾಚಾರ್ಯ ಉಡಿಪಿ, ಬೆಳಗಾಂವಿ | .... | ೯೧೬ |
| ಜನಾರ್ದನ ಉಪಾಧ್ಯಾಯ ಕುಂಜುಬೆಟ್ಟು | .... | ,, |
| ಕೆ. ವೆಂಕಟ ಕೃಷ್ಣ ವರ್ಣ, ಕೋಟೇಶ್ವರ | .... | ,, |
| ನಾನಾ ಡಾಕ್ಟರ, ಐನಾಪುರ | .... | ,, |
| ಶ್ರೀನಿವಾಸರಾವ ವೈದ್ಯ, ಐನಾಪುರ | .... | ೯೧೭ |
| ಎನ್. ನಾರಾಯಣಾಚಾರ್ಯ ಬಡಾಕೆರೆ, ಕೋಟೇಶ್ವರ | .... | ,, |
| ಶಿಂಗನಮಲ್ಲಿ ಆಚಾರ್ಯ, ಧಾರವಾಡ | .... | ,, |
| ಪಿ. ವೆಂಕಟರಮಣ ತಂತ್ರಿ, ಉಡುಪಿ | .... | ,, |

| | | |
|---|---|---|
| ಮುಕುಂದಾಚಾರ್ಯ ಜಹಗಿರ್ದಾರ, ಹೈದರಾಬಾದ | .... | ,, |
| ಪಿ ಹರಿದಾಸಾಚಾರ್ಯ, ಪಡುಬಿದ್ರಿ | .... | ೯೧೮ |
| ಎ. ಆರ್. ಶ್ರೀಪಾದಾಚಾರ್ಯ, ಬೆಂಗಳೂರ | .... | ,, |
| ಕೆ. ಕೃಷ್ಣಾಚಾರ್ಯ ಐಜಿ | .... | ,, |
| ಮುದ್ಗಲಾಚಾರ್ಯ ವರಖೇಡ | .... | ,, |
| ಬಾಬಾಚಾರ್ಯ ಅಪಶಂಕರ, ನೀಲಂಗಾ | .... | ೯೧೯ |
| ಕೆ. ವೆಂಕಟಾಚಾರ್ಯ ರಾಯಚೂಡು | .... | ,, |
| ರಾಮಚಂದ್ರಭಟ್ಟ ಯಲ್ಲೂರ | .... | ,, |
| ಅನಂತಾಚಾರ್ಯ ಉದಯಗಿರಿ | ... | ,, |
| ಶ್ರೀಧರಾಚಾರ್ಯ ವರಖೇಡ | .... | ೯೨೦ |
| ಬಿ. ಮಾಧವ ವರ್ಣ, ಕೋಟೀಶ್ವರ | .... | ,, |
| ಮುಂಗ್ಲಿ ರಾಘವೇಂದ್ರಾಚಾರ್ಯ, ರಾಯಚೂರು | .... | ,, |
| ಬದರೀನಾರಾಯಣಾಚಾರ್ಯ, ರಾಯಚೂರು | .... | ,, |
| ಧೀರೇಂದ್ರ ಶ್ರೀನಿವಾಸಾಚಾರ್ಯ ಗೊಗ್ಗಿ ಹೊಸರಿತ್ತಿ | .... | ೯೨೧. |
| ನರಹರಿ ಕೃಷ್ಣಾಚಾರ್ಯ ಸುಂಕೇರಿ | .... | ,, |
| ಗಣಪತಿ ಶರ್ಮಾ ಕುಂದಾಪುರ | .... | ,, |
| ಪುರುಷೋತ್ತಮ ನಾರಾಯಣಭಟ್ಟ ಇಡಗುಂಜಿ | .... | ,, |
| ನರಸಿಂಹ ಹರಿ ಪುರಾಣಿಕ ಭಟಕಳ | .... | ,, |
| ಅಪ್ಪುಮಾಸ್ತರ ಚೇರಿ ಆಥಣಿ | .... | ,, |
| ಜಿ. ಪದ್ಮನಾಭ ಉಪಾಧ್ಯಾಯ ಗೋಪಾಡಿಗ್ರಾಮ | .... | ೯೨೨ |
| ಚಿತ್ರಹಳ್ಳಿ ಶ್ರೀನಿವಾಸಾಚಾರ್ಯ ಬೆಂಗಳೂರ | .... | ,, |
| ಅಗ್ರಹಾರ ವೆಂಕಟರಮಣ ತಂತ್ರಿ ಕುಂಜಬೆಟ್ಟು ಉಡುಪಿ | .... | ,, |
| ಶ್ರೀಧರ ಅನಂತಭಟ್ಟ ಹಳದೀಪುರ ಹುಬ್ಬಳ್ಳಿ | .... | ,, |
| ನಾರಾಯಣಾಚಾರ್ಯ ರಾಜಪುರೋಹಿತ ತೆಕ್ಕಲಕೋಟೆ ಜಿ. ಬಳ್ಳಾರಿ | .... | ೯೨೩ |
| ಅಡ್ಡೆ ರಾಮಕೃಷ್ಣಾಚಾರ್ಯ ಶೆಂಕಷೇಟಿ ಉಡುಪಿ | .... | ,, |
| ಗುಂಡಾಚಾರ್ಯ ಶ್ರೀನಿವಾಸಾಚಾರ್ಯ ಜೋಶಿ | .... | ,, |
| ಯಲವಟ್ಟಿ ಕೃಷ್ಣಾಚಾರ್ಯ ಬೆಂಗಳೂರ | .... | ,, |
| ಎ. ವ್ಹಿ. ಆಚಾರ್ಯ ಹುಬ್ಬಳ್ಳಿ | .... | ೯೨೪ |
| ಡಿ. ವೇಣುಗೋಪಾಲಾಚಾರ್ಯ ಮದ್ರಾಸ | .... | ,, |
| ಕೇಶವ ಕಾಮತ | .... | ,, |
| ಕರಿಬೆಳಗಲ್ಲ ಹನುಮಂತಾಚಾರ್ಯ ಆದವಾನಿ | .... | ,, |
| ಮುರಲೀಧರಾಚಾರ್ಯ ಗಲಗಲಿ | .... | ೯೨೫ |

| | | |
|---|---|---|
| ಕೆ. ಪದ್ಮನಾಭ ಉಡುಪಿ ಗೋಪೇನಹಳ್ಳಿ | .... | ,, |
| ವಿ. ರಾಮಕೃಷ್ಣ ಭಟ್ಟ ಹಂದಾಡಿಗ್ರಾಮ | .... | ,, |
| ಗೋವರ್ಧನಾಚಾರ್ಯ ಗಲಗಲಿ ಧಾರವಾಡ | .... | ೯೨೬ |
| ಟೊಣಪಿ ಗೋಪಾಲಾಚಾರ್ಯ ಕಾಶಿ | .... | ,, |
| ರಾಮಮೂರ್ತಿ ಆಚಾರ್ಯ ತುಮಕೂರ | .... | ,, |
| ಕೃಷ್ಣಾಚಾರ್ಯ ವರಖೇಡಿ ಹೈದರಾಬಾದ | .... | ೯೨೭ |
| ಕೃಷ್ಣಾಚಾರ್ಯ ಪಾಂಡುರಂಗಿ ಚಿಕ್ಕೇರೂರು | .... | ,, |
| ಕರಂಬಳ್ಳಿ ರಾಮಚಂದ್ರ ಐತಾಳ ಉಡುಪಿ | .... | ,, |
| ಕೆ. ವಿಶ್ವಂಭರ ಉಪಾಧ್ಯಾಯ ಕುಂಭಾಸಿ | .... | ೯೨೮ |
| ಗಿರಿ ಆಚಾರ್ಯರು ಮಂತ್ರಾಲಯ | .... | ,, |
| ರಾಘವೇಂದ್ರಾಚಾರ್ಯ ಜ್ಯೋಶಿ ಗುಡೇಬಲ್ಲೂರ | .... | ,, |
| ಗೋವಿಂದಾಚಾರ್ಯ ಬುರ್ಲಿ ಬಾಗಲಕೋಟ | .... | ೯೨೯ |
| ಹನುಮಂತಾಚಾರ್ಯ ಜೋಶಿ ಹುನಗುಂದ | .... | ,, |
| ಬಿ. ಭೀಮರಾವ ದಾವಣಗೇರಿ | .... | ,, |
| ಮಧ್ವ ವೊಕಾಶಿ ಮುಂಬೈ | .... | ೯೩೦ |
| ರಂಗಾಚಾರ್ಯ ಕರ್ನೂಲ ಮುಂಬೈ | .... | ,, |
| ಬಂಡಾಚಾರ್ಯ ಜಮದಗ್ನಿ ಮುಂಬೈ | .... | ,, |
| ಅನಂತಾಚಾರ್ಯ ಬಾಜೀಕರ ದೇವರಶೀಗೀಹಳ್ಳಿ | .... | ,, |
| ಎಚ್. ಸುಬ್ರಾಯಭಟ್ಟ ಉಡುಪಿ | .... | ,, |
| ಭಂಡಾರಕೇರಿ ಗುಂಡಾಚಾರ್ಯರು | .... | ,, |
| ಕೆ. ಲಕ್ಷ್ಮೀನಾರಾಯಣ ಸಾಮಗ ಕಲ್ಯಾಣಪುರ | .... | ೯೩೧ |
| ಪುತ್ತಿಗೆ ಶ್ರೀನಿವಾಸಭಟ್ಟ ಕಡೂರ | .... | ,, |
| ತ್ರಿವಿಕ್ರಮ ಕೃಷ್ಣಾಚಾರ್ಯರು ಆದವಾನಿ | .... | ,, |
| ಮಾಧವ ಉಪಾಧ್ಯಾಯ ಮದ್ರಾಸ | .... | ೯೩೨ |
| ಲಕ್ಷ್ಮೀನಾರಾಯಣಾಚಾರ್ಯ ಸಗರಿ | .... | ,, |
| ಹುಣಸಗೀ ಪಾಂಡುರಂಗಾಚಾರ್ಯರು ಮೈಸೂರು | ... | ,, |
| ಡಾ. ಕೆ. ಎಮ್. ಕೃಷ್ಣರಾವ ಬೆಂಗಳೂರು | ... | ,, |
| ಜಯತೀರ್ಥಾಚಾರ್ಯರು ಬೆಂಗಳೂರು | .... | ೯೩೩ |
| ಹನುಮಂತಾಚಾರ್ಯ ಜಂಬಗಿ ಅಥಣಿ | .... | ,, |
| ಚೀಮನಹಳ್ಳಿ ರಘುನಾಥಾಚಾರ್ಯ ಬೆಂಗಳೂರು | .... | ೯೩೪ |
| ಕೆ. ಕೃಷ್ಣ ಉಡುಪ ಕೋಟೀಶ್ವರ | .... | ,, |
| ಶ್ರೀನಿವಾಸಾಚಾರ್ಯ ನಾಗರಳ್ಳಿ ಮುಂಬೈ | .... | ,, |

## ಮಾಧ್ವ ಗೌಡಿಯ ಸಂಪ್ರದಾಯಾಚಾರ್ಯರೂ ಹಾಗೂ ಪಂಡಿತರು

| | |
|---|---|
| ತ್ರಿದಂಡಿಸ್ವಾಮಿ ಭಕ್ತಕೇವಲ ಚೌಡಲೋಮಿ ಮಹಾರಾಜ ನದಿಯಾ | ೧೩೫ |
| ತ್ರಿದಂಡಿಸ್ವಾಮಿ ಭಕ್ತವಿಲಾಸತೀರ್ಥ ಮಹಾರಾಜ ಮಾಯಾಪುರ ನದಿಯಾ | ,, |
| ರಾಧಾಗೋವಿಂದನಾಥ ಕಲಕತ್ತಾ | ,, |
| ಮಹಾಮಹೋಪಾಧ್ಯಾಯ ಗೋಪೀನಾಥ ಕವಿರಾಜ ವಾರಣಾಸಿ | ,, |
| ಮಹಾಮಹೋಪಾಧ್ಯಾಯ ಗೊಸ್ವಾಮಿ ದಾಮೋದರಾಚಾರ್ಯ ವೃಂದಾವನ | ,, |
| ಪ್ರಾಣಕಿಶೋರ ಗೋಸ್ವಾಮಿ ನವದ್ವೀಪ | ೧೩೬ |
| ಹರಿದಾಸಜಿ ಮಹಾರಾಜ ವೃಂದಾವನ | ,, |
| ದಾಮೋದರದಾಸ ಟಾಪೇವಾಲೆ ಜಯಪುರ | ,, |

## ಮಾಧ್ವ ಪಂಡಿತರು

| | | |
|---|---|---|
| ನಾರಾಯಣಾಚಾರ್ಯ ಕಿತ್ತೂರ | .... | ೧೩೬ |
| ರಾಮಾಚಾರ್ಯ ಕಟ್ಟಿ ಯಮಕನಮರಡಿ | .... | ,, |
| ನರಸಿಂಹಾಚಾರ್ಯ ಅಣ್ಣಿಗೇರಿ ಹುಬ್ಬಳ್ಳಿ | .... | ,, |
| ಪ್ರಲ್ಹಾದಾಚಾರ್ಯ ಪೂಜಾರ ಮುಗಟಖಾನ ಹುಬ್ಬಳ್ಳಿ | .... | ,, |
| ಹಾವನೂರ ಬಿಂದಾಚಾರ್ಯ ಧಾರವಾಡ | .... | ೧೩೭ |
| ಜಯತೀರ್ಥಾಚಾರ್ಯ ಅಡವಿ ಕೂಸನೂರ | .... | ,, |
| ರಾಮಾಚಾರ್ಯ ಉಪಾಧ್ಯಾಯ ಕೂಸನೂರು | .... | ,, |
| ವಿದ್ವಾನ್ ಎಸ್. ಎನ್. ರಾಮಚಂದ್ರಾಚಾರ್ಯ ಮೈಸೂರು | .... | ೧೩೮ |
| ಕಾಪು ಕೃಷ್ಣಾಚಾರ್ಯರು | .... | ,, |
| ಶ್ರೀನಿವಾಸಾಚಾರ್ಯ ಕೋದಂಡಿ ಕೂಸನೂರ | .... | ,, |
| ಗೋಪಾಲಕೃಷ್ಣಾಚಾರ್ಯ ಅಡವಿ ಕೂಸನೂರ | .... | ೧೩೯ |
| ಶ್ರೀನಿವಾಸಾಚಾರ್ಯ ತಾಸಗಾವಿ ಸೀತಿಮನಿ | .... | ,, |
| ರಾಯಸಂ ತಿರುಮಲರಾವ ಹರಪನಹಳ್ಳಿ | .... | ,, |
| ರಾಮಾಚಾರ್ಯ ಬಾಜೀಕರ ಬೆಳಗಾಂವಿ | .... | ,, |
| ಶ್ಯಾಮರಾವ ಮನೋಳಿ ,, | .... | ೧೪೦ |
| ಶೇಷಾಚಾರ್ಯ ಕಟ್ಟಿ ,, | .... | ,, |
| ವಾಯಿ ಕೃಷ್ಣಾಚಾರ್ಯ ಬೆಂಗಳೂರ | .... | ,, |
| ಮಾಧ್ವರಾವ ಬುದ್ಧಿಕೋಟಿ ಬೆಳಗಾವಿ | .... | ,, |
| ವೇಣೀ ಮಾಧವಾಚಾರ್ಯ ದೇವಳಿ ಬೆಂಗಳೂರ | .... | ,, |
| ನಾರಾಯಣಾಚಾರ್ಯ ಕಟ್ಟಿ ಶೂರ್ಪಾಲಿ | – | ,, |

| | | |
|---|---|---|
| ಮಾಹುಲಿ ಶ್ರೀನಿವಾಸಾಚಾರ್ಯ ಅಥಣಿ | .... | ೯೪೧ |
| ಅನಂತಾಚಾರ್ಯ ಪರಳೀಕರ ಸೋಲ್ಲಾಪುರ | .... | ,, |
| ರಾಮಭಾವು ಉಪಾಧ್ಯಾಯ ,, | .... | ,, |
| ಶ್ರೀನಿವಾಸಾಚಾರ್ಯ ಮಂಕಣಿ, ಬಾಗಲಕೋಟಿ | .... | ೯೪೨ |
| ಹನಮಂತಾಚಾರ್ಯ ಗದ್ದನಕೇರಿ, ಯಲಗುರ | .... | ,, |
| ಯಲಗುರದಾಚಾರ್ಯ ಹಿಪ್ಪರಗಿ ,, | .... | ,, |
| ಧೀರಾಚಾರ್ಯ ಸವದಿ | .... | ,, |
| ಅಣ್ಣಾಚಾರ್ಯ ಮೊಖಾಶಿ ಬಾಗಲಕೋಟಿ | .... | ,, |
| ಧೀರಾಚಾರ್ಯ ಕೆರಕಲಮಟ್ಟಿ ,, | .... | ,, |
| ಭೀಮಸೇನಾಚಾರ್ಯ ಜಾಲವಾದಿ | .... | ,, |
| ಶ್ರೀನಿವಾಸಾಚಾರ್ಯ ಹಳ್ಳೂರ | ... | ,, |
| ಕೃಷ್ಣಾಚಾರ್ಯ ಅಂಕಲಗಿ | .... | ೯೪೩ |
| ಭೀಮಸೇನಾಚಾರ್ಯ ಕಟ್ಟಿ, ಹಾವೇರಿ | .... | ,, |
| ಬಿಂದುಮಾಧವಾಚಾರ್ಯ ಜಹಗಿರದಾರ, ಧಾರವಾಡ | .... | ,, |
| ಅಯಾಚಿತ ವೆಂಕಣ್ಣಾಚಾರ್ಯ, ಶೂರ್ಪಾಲಿ | .... | ,, |
| ಅನಂತಾಚಾರ್ಯ ಬಾಗಲಕೋಟಿ ಧಾರವಾಡ | .... | ,, |
| ಮನಗೂಳಿ ಆಚಾರ್ಯರು, ವಿಜಾಪುರ | .... | ,, |
| ನಾರಾಯಣಾಚಾರ್ಯ ಹಾವನೂರ, ಧಾರವಾಡ | .... | ೯೪೪ |
| ಕೃಷ್ಣಾಚಾರ್ಯ ಪಾಚ್ಛಾಪುರ ,, | .... | ,, |
| ಹುಚ್ಚಾಚಾರ್ಯ ವಡವಿ ,, | .... | ,, |
| ಕಿರೇಸೂರ ವೆಂಕಣ್ಣಾಚಾರ್ಯ, ಬಾಗಲಕೋಟಿ | .... | ,, |
| ಗೋಟೂರ ಕೃಷ್ಣಾಚಾರ್ಯ ,, | .... | ,, |
| ಭೀಮಾಚಾರ್ಯ ಮುನವಳ್ಳಿ ಧಾರವಾತ | .... | ,, |
| ಸುಬ್ಬಣ್ಣಾಚಾರ್ಯ ಶೇಷಗಿರಿ ,, | .... | ,, |
| ಭೀಮಸೇನಾಚಾರ್ಯ ಮುದ್ದಾಪುರ ,, | .... | ೯೪೫ |
| ನಾರಾಯಣಾಚಾರ್ಯ ಪಾಮಡಿ | .... | ,, |
| ಭೀಮಸೇನಾಚಾರ್ಯ ಪುರೋಹಿತ ಸಂಗಮ | .... | ,, |
| ವೆಂಕಣ್ಣಾಚಾರ್ಯ ಮಂಗಲಗಿ ,, | .... | ,, |
| ಅಣ್ಣಾಚಾರ್ಯ ಕಾಖಂಡಕಿ ಬಾಗಲಕೋಟಿ | .... | ,, |
| ರಾಘವೇಂದ್ರಾಚಾರ್ಯ ಹೆರಕಲ್ಲ ಕೊಲ್ಹಾರ | .... | ,, |
| ಶ್ರೀನಿವಾಸಾಚಾರ್ಯ ಹೊಂಬಾಳಿ, ಗದಗ | .... | ,, |
| ರಾಘವಾಚಾರ್ಯ ಸಾಂಗಲಿ, ಮುಂಬೈ | .... | ,, |

| | | |
|---|---|---|
| ಕೆ. ವೆಂಕಟರಾಯಾಚಾರ್ಯ, ಸುರತ್ಕಲ್ಲ | .... | ೯೪೬ |
| ರಾಘವೇಂದ್ರಾಚಾರ್ಯ, ಮುಂಡರಗಿ | .... | ,, |
| ನರಹರಿ ಆಚಾರ್ಯ ಕಟ್ಟಿ, ವಿಜಾಪುರ | .... | ,, |
| ಸುಶೀಲೇಂದ್ರಾಚಾರ್ಯ ಪುರೋಹಿತ, ಸಂಗಮ | .... | ,, |
| ಬಂಡಾಚಾರ್ಯ ಗುಡ್ಡದ ಇಲಕಲ್ಲ | .... | ,, |
| ರಾಮಾಚಾರ್ಯ ಮನಗೂಳಿ ಜಮಖಂಡಿ | ... | ,, |

## ಕೀರ್ತನಕಾರರು

| | | |
|---|---|---|
| ಟಿ. ವ್ಹಿ. ಗುರುರಾಜದಾಸರು | .... | ೯೪೭ |
| ಟಿ. ವ್ಹಿ. ಗೋಪಿನಾಥದಾಸರು, ಬೆಂಗಳೂರ | .... | ,, |
| ತಂಗೋಡ ದಾಸಾಚಾರ್ಯರು ಸುರಪುರ | .... | ,, |
| ಮುಂಡರಗಿ ಹರಿಸರ್ವೋತ್ತಮದಾಸ | ... | ೯೪೮ |
| ಶ್ರೀ ಹರಿಕಥಾಮೃತಸಾರ ಎನ್. ನಾಗರಾಜರಾವ | .... | ,, |
| ಎಂ. ವಿ. ಶ್ಯಾಮಾಚಾರ್ಯರು ಚಿಂತಾಮಣಿ | .... | ೯೪೯ |
| ಚತುರ್ವೇದಿ ನರಸಿಂಹಮೂರ್ತಿದಾಸ, ಗೋಕರ್ಣ | .... | ,, |
| ವಾದಿರಾಜ ಭಾಗವತಾರ್, ಕುಂಭಕೋಣ, ಮದ್ರಾಸ | .... | ,, |
| ಯು. ಕೆ. ವ್ಯಾಸದಾಸರು, ಉಡುಪಿ | .... | ,, |
| ಸೇತೂಮಾಧವದಾಸರು, ಬೆಂಗಳೂರು | ... | ,, |
| ಶ್ರೀಧರಾಚಾರ್ಯ ಸುರತ್ಕಲ್ | --- | ೯೫೦ |
| ಪಿ. ಆರ್. ನಾರಾಯಣರಾವು | ... | ,, |
| ಗುರುರಾಜದಾಸರು ಮಂಡ್ಯ | .... | ,, |
| ಭದ್ರಗಿರಿ ಕೇಶವದಾಸರು, ಬೆಂಗಳೂರು | .... | ೯೫೧ |
| ಆರ್. ಶ್ರೀಶದಾಸರು ಉಡುಪಿ | .... | ,, |
| ಗೋಪಾಲದಾಸರು ಬೆಂಗಳೂರು | .... | ೯೫೨ |
| ಸೋಸಲೆ ನಾರಾಯಣದಾಸರು, ಬೆಂಗಳೂರು | .... | ,, |
| ಭದ್ರಗಿರಿ ಸರ್ವೋತ್ತಮದಾಸ | .... | ,, |
| ಭದ್ರಗಿರಿ ಅಚ್ಯುತದಾಸರು ಬೆಂಗಳೂರು | .... | ೯೫೩ |
| ರಾಮಚಂದ್ರರಾವ ಮೂರಟಗೆ ದಾವಣಗೆರೆ | .... | ,, |
| ಸೇತುಮಾಧವಾಚಾರ್ಯ ಬೆಂಗಳೂರು | .... | ,, |
| ಹಂಡೇ ಗುರುವೇದವ್ಯಾಸದಾಸರು ಬೆಂಗಳೂರು | ... | ,, |
| ಟಿ. ಕೆ. ವೇಣುಗೋಪಾಲದಾಸ ಬೆಂಗಳೂರು | .... | ೯೫೪ |

# ಪ್ರಕರಣ— ೭

## ದಾಸ ಸಾಹಿತ್ಯ– ದಾಸಕೂಟದ ಧುರೀಣರು

ಶ್ರೀ ವಿಜಯಮೋಹನ ವಿಠ್ಠಲದಾಸರು .... ,,
,, ಗುರು ಇಂದಿರೇಶದಾಸರು .... ೧೦೪೬
,, ಮುದ್ದು ಮೋಹನ ವಿಠ್ಠಲದಾಸರು .... ,,
,, ತಂದೆ ಮುದ್ದು ಮೋಹನ ವಿಠ್ಠಲದಾಸರು .... ೧೦೪೭
,, ಗುರು ಶ್ರೀಶವಿಠ್ಠಲರು ... ೧೦೪೮
,, ಗುರು ಜಗನ್ನಾಥ ವಿಠ್ಠಲದಾಸರು ... ೧೦೪೯
,, ಮೊದಲಕಲ್ಲು ಶೇಷದಾಸರು ... ೧೦೫೦
,, ಹೊನ್ನಾಳಿ ವೆಂಕಟದಾಸರು .... ೧೦೫೩
,, ಶ್ರೀನಿವಾಸದಾಸರು .... ೧೦೫೪
,, ಮೈಸೂರ ಕೃಷ್ಣದಾಸ .... ೧೦೫೭
,, ರಾಮರಾಯರು .... ,,
,, ಜಯೇಶ ವಿಠಲರು (ಅಟ್ಟಾಜಿ ವೆಂಕಟರಾಯರು) .... ೧೦೫೮
,, ದೂರಪ್ಪದಾಸರು .... ೧೦೫೯
,, ಮಡಕಶಿರದ ಭೀಮದಾಸರು .... ೧೦೬೦
,, ಕಮಲಾಪತಿದಾಸರು .... ೧೦೬೧
,, ಬೇಲೂರ ವೆಂಕಟಸುಬ್ಬದಾಸರು .... ೧೦೬೨
,, ಕರ್ಜಗಿಯ ರಾಜಗೋಪಾಲದಾಸರು .... ೧೦೬೩
,, ವರದೇಶ ವಿಠ್ಠಲರು .... ೧೦೬೪
,, ಶ್ರೀನಿವಾಸ ವಿಠ್ಠಲರು .... ,,
,, ಆಸಿಗ್ಯಾಳ ಗೋವಿಂದದಾಸರು .... ೧೦೬೫
,, ಮಾನವಿ ಗುಂಡಾಚಾರ್ಯರು .... ೧೦೬೬
,, ಗೋವಿಂದತೀರ್ಥರು (ಗೋವಿಂದ ಒಡೆಯರು) ... ,,
,, ಗೋಪತಿ ಕೃಷ್ಣವಿಠ್ಠಲದಾಸರು .... ೧೦೬೭
,, ಐಹೊಳಿಯ ವೆಂಕಟದಾಸರು .... ೧೦೬೯
,, ಆದವಾನಿಯ ರಾಮಸುಂದರದಾಸರು ... ೧೦೭೧
,, ವೆಂಕಟೇಶ ವಿಠ್ಠಲದಾಸರು .... ,,
,, ಹರಪನಹಳ್ಳಿ ರಾಮಾಚಾರ್ಯರು .... ೧೦೭೨
,, ಕೃಷ್ಣರಾವ ಹಾಗಲವಾಡಿ .... ೧೦೭೩
,, ಸಕ್ಕರಿ ಬಾಳಾಚಾರ್ಯರು ... ೧೦೭೪
,, ಭಗವದ್ದಾಸರು ... ,,
,, ತೃಣಪುರೀಶದಾಸರು .... ,,
,, ಎ. ತಿರುಮಲರಾವ ಮದ್ರಾಸ ... ,,

## ಪ್ರಕರಣ— ೮

### ದಾಸ ಸಾಹಿತ್ಯಕ್ಕೆ ಮಾಧ್ವ ಮಹಿಳೆಯರ ಕಾಣಿಕೆ

# ಪ್ರಕರಣ— ೬

## ಮಧ್ವ ಸಿದ್ಧಾಂತದ ರಕ್ಷಕರು

| | | |
|---|---|---|
| ಗಂಗರಾಯ | | ೧೧೪೮ |
| ತಿರುಮಲರಾಯ | | ,, |
| ಜಯರಂಗರಾಯ—ಚೊಕ್ಕನಾಥರಾಯ | .... | ,, |
| ಶ್ರೀರಂಗಪಟ್ಟಣದ ರಂಗರಾಜ | .... | ೧೧೪೯ |
| ಮೈಸೂರಿನ ನರಸರಾಜ | ... | ,, |
| ನಾರೋಭಾಸ್ಕರ | .... | ,, |
| ದಿವಾಣ ಕೃಷ್ಣಾಜಿಪಂತ | .... | ,, |
| ಆರಣಿರಾಜ | .... | ೧೧೫೦ |
| ಮೊದಲನೇ ಬಾಜೀರಾಯ | ... | ,, |
| ರಂಗ ಅರಸ | .... | ,, |
| ಆಂಧ್ರ ದೇಶದ ವಿಜಯನಗರದ ಮಹಾರಾಜ | .... | ,, |
| ಬಾಜೀರಾವ ಘೋರ್ಪಡೆ | .... | ೧೧೫೧ |
| ಕೊಲ್ಹಾಪುರ ಮಹಾರಾಜ | .... | ,, |
| ಬಾಜೀರಾವ ಪೇಶ್ವೆ (ಕಡೆಯ) | .... | ,, |
| ಕೆಳದಿ ಸಿದ್ದಣ್ಣ ನಾಯಿಕ | ... | ೧೧೫೨ |
| ಸೋದೆಯ ಅರಸಪ್ಪ ನಾಯಿಕ | .... | ,, |
| ಕೋಚೀನ ಸಂಸ್ಥಾನದ ರಾಜಾರಾಮವರ್ಮ | | ೧೧೫೩ |
| ಕೋಚೀನದ ರಾಜಾ ರವಿವರ್ಮ | | ೧೧೫೪ |
| ಮಾಟರಾಜಾ | | ,, |
| ಆಲೂರ ಪಾಳೇಗಾರ | | ,, |
| ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು | | ೧೧೫೫ |
| ದಿವಾಣ ಪೂರ್ಣಯ್ಯನವರು | | ೧೧೫೮ |
| ದಿವಾಣ ಖಂಡೇರಾಯರು | | ೧೧೬೦ |
| ಕಂಚಿ ಸುಬ್ಬರಾಯರು | | ೧೧೬೨ |
| ಕಮಲಾಪುರ ಭೀಮರಾಯರು | | ೧೧೬೩ |
| ರಾಮಕೃಷ್ಣಪ್ಪನವರು ಬೆಂಗಳೂರು | | ೧೧೬೪ |
| ದಿವಾಣ ಬಾಬುರಾವ | | ೧೧೬೫ |
| ಕರ್ಪೂರ ಶ್ರೀನಿವಾಸರಾಯರು | | ೧೧೬೬ |
| ದಿ. ಧರ್ಮಭೂಷಣ ಕೆ. ಸೀತಾರಾಮರಾಯರು | | ೧೧೬೭ |
| ದಿವಾಣ ಕೃಷ್ಣಮೂರ್ತಿಗಳು | | ೧೧೭೧ |
| ದಿ. ಎಚ್. ಸಿ. ಸುಬ್ಬರಾವ | | ,, |

## ಮಾಧ್ವ ಸಿದ್ಧಾಂತ ಪ್ರಸಾರಕ ಸಭಾ ಸಂಸ್ಥೆಗಳು

| | | |
|---|---|---|
| ಮಧ್ವ ಸಿದ್ಧಾಂತ ಉನ್ನಾಹಿನೀ ಸಭಾ ಪದ್ಮಸರೋವರ (ತಿರುಪತಿ) | | ೧೧೭೨ |
| ಮಧ್ವ ಸಿದ್ಧಾಂತ ಉತ್ತೇಜಕ ಸಭಾ ಧಾರವಾಡ | .... | ,, |
| ಶ್ರೀಮಧ್ವ ಸಿದ್ಧಾಂತಾಭಿವೃದ್ಧಿಕಾರಿಣೀ ಸಭಾ ಉತ್ತರಾದಿಮಠ | .... | ೧೧೭೩ |
| ಶ್ರೀ ಮದ್ದಶಪ್ರಮತಿ ದರ್ಶನ ಪ್ರಕಾಶಿನೀ ಸಭಾ ವ್ಯಾಸರಾಜಮಠ | .... | ,, |
| ಶ್ರೀ ಸಮೀರ ಸಮಯ ಸಂವರ್ಧಿನೀ ಸಭಾ ರಾಘವೇಂದ್ರಸ್ವಾಮಿಗಳಮಠ | | ,, |
| ಶ್ರೀಮನ್ಮಾಧ್ವರಾದ್ಧಾಂತ ಸಂವರ್ಧಿನೀ ಸಭಾ ಭಂಡಾರಕೇರಿಮಠ | .... | ,, |
| ಮಾಧ್ವ ಸಂಘ ಮದ್ರಾಸ | .... | ೧೧೭೬ |
| ಮಾಧ್ವ ಸಂಘ ಚಾಮರಾಜಪೇಟೆ ಬೆಂಗಳೂರು | ... | ೧೧೭೭ |
| ಮಾಧ್ವ ಸಂಘ ಮಲ್ಲೇಶ್ವರ ,, | ... | ,, |
| ಮಾಧ್ವ ಯುವಕ ಸಂಘ ,, | .... | ,, |
| ಪರಿಮಳ ಸಂಶೋಧನ ಪ್ರಕಾಶನ ಮಂದಿರ, ನಂಜನಗೂಡು | .... | ೧೧೭೮ |
| ಮಧ್ವ ಮುನಿ ಸೇವಾ ಸಂಘ, ಉಡುಪಿ | .... | ,, |
| ಶ್ರೀ ಮಧ್ವ ಸಿದ್ಧಾಂತ ಪ್ರಬೋಧಿನಿ ಸಂಸ್ಕೃತ ಪಾಠಶಾಲಾ, ಉಡುಪಿ | | ೧೧೭೯ |
| ,, ಭುವನೇಂದ್ರ ಸಂಸ್ಕೃತ ಮಹಾ ಪಾಠ ಶಾಲಾ, ಕಾರ್ಕಳ | .... | ೧೧೮೦ |
| ,, ಗುರು ಸಾರ್ವಭೌಮ ಸಂಸ್ಕೃತ ಪಾಠ ಶಾಲಾ, ಮಂತ್ರಾಲಯ | .... | ,, |
| ,, ಸರ್ವಜ್ಞಾಚಾರ್ಯ ಸೇವಾ ಸಂಘ, ದಾವಣಗೇರಿ | ... | ೧೧೮೧ |
| ,, ರಾಮಕೃಷ್ಣಪ್ಪ ದ್ವೈತ ವೇದಾಂತ ಪಾಠಶಾಲಾ, ಬೆಂಗಳೂರು | ... | ೧೧೮೨ |
| ದ್ವೈತ ವೇದಾಂತ ಗ್ರಂಥಾಲಯ, ವಿಜಾಪುರ | .... | ,, |
| ವಾಣಿವಿಲಾಸ ಸಂಸ್ಕೃತ ಪಾಠಶಾಲಾ, ಬಾಗಲಕೋಟೆ | .... | ೧೧೮೩ |
| ಪೂರ್ಣಪ್ರಜ್ಞ ಪಾಠಶಾಲಾ, ಪಂಢರಪುರ | .... | ,, |
| ವಿಷ್ಣುಪಾದ ಪಾಠಶಾಲಾ, ಗಯಾ | .... | ,, |
| ಶ್ರೀ ವರದೇಂದ್ರ ಸಾಹಿತ್ಯ ಮಂಡಲ, ಲಿಂಗಸೂಗೂರು | .... | ೧೧೮೪ |
| ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ | .... | ,, |
| ಆನಂದತೀರ್ಥ ಗ್ರಂಥಮಾಲಾ ,, | .... | ,, |
| ಶ್ರೀ ವಾದಿರಾಜೀಯ ಗ್ರಂಥ ಪ್ರಕಾಶನ ಸಮಿತಿ, ಉಡುಪಿ | .... | ೧೧೮೫ |
| ,, ರಾಮತತ್ವ ಪ್ರಕಾಶಿಕಾ, ಬೆಳಗಾಂವಿ | .... | ,, |
| ,, ದ್ವೈತ ವೇದಾಂತ ಕಾರ್ಯಾಲಯ, ಪುಣೆ | .... | ,, |
| ,, ಇಂದಿರಾಕಾಂತ ಸಂಸ್ಕೃತ ಪಾಠಶಾಲೆ ಪರ್ತಗಾಳಿಮಠ, ಗೋವಾ | | ೧೧೮೬ |
| ,, ಪೂರ್ಣಪ್ರಜ್ಞ ಸಂಸ್ಕೃತ ಪಾಠಶಾಲೆ, ಮುಂಬೈ–ವಡಾಲಾ | .... | ,, |
| ಸದ್ಧರ್ಮ ಗ್ರಂಥಮಾಲಾ | .... | ೧೧೮೭ |

## ಪ್ರಕರಣ— ೧೦

### ದ್ವೈತ ವೇದಾಂತದ ಇತಿಹಾಸ

## ಪರಿಶಿಷ್ಟ

| | |
|---|---|
| ಬೋಧರಾಯಾಚಾರ್ಯ ಮಹಿಷಿ | ೧೩೮೭ |
| ನಾರಾಯಣಾಚಾರ್ಯ ಮಹಿಷಿ | ,, |
| ಮಹಿಷಿ ವೆಂಕಟರಮಣಾಚಾರ್ಯ, ಶಿರಹಟ್ಟಿ | ೧೩೮೮ |
| ಅಚ್ಯುತಾಚಾರ್ಯರು | ,, |
| ರಾಮದಾಸಾಚಾರ್ಯರು | ೧೩೮೯ |
| ಸಂಗೀತ ವಿದ್ವಾನ್ ಕೆ. ವಾಸುದೇವಾಚಾರ್ಯ, ಮೈಸೂರು | ,, |
| ಹೊನ್ನಿಗನೂರ ಆಚಾರ್ಯರು | ೧೩೯೦ |
| ಪಂಡಿತ ಪೈಠಣಕರ ನಾರಾಯಣಾಚಾರ್ಯ | ,, |
| ಬಾಳಾಚಾರ್ಯರು | ,, |
| ದಾಸಾಚಾರ್ಯರು | ,, |
| ಖೊಬ್ಬಾಚಾರ್ಯರು | ೧೩೯೧ |
| ಬಾಳಾಚಾರ್ಯ | ,, |
| ಛಲಾರಿ ಆಚಾರ್ಯರು | ೧೩೯೨ |
| ಛಲಾರಿ ನರಸಿಂಹಾಚಾರ್ಯ | ,, |
| ಶೇಷಾಚಾರ್ಯ ಛಲಾರಿ | ,, |
| ಸಂಕರ್ಷಣಾಚಾರ್ಯ ಛಲಾರಿ | ೧೩೯೩ |
| ಸುಬ್ರಹ್ಮಣ್ಯಾಚಾರ್ಯ ಛಲಾರಿ | ,, |
| ಛಲಾರಿ ನಾರಾಯಣಾಚಾರ್ಯ | ,, |
| ಛಲಾರಿ ಶ್ರೀನಿವಾಸಾಚಾರ್ಯ | ,, |
| ನ್ಯಾಯರತ್ನಾಕರಕಾರ | ,, |
| ತತ್ವದೀಪಿಕಾಕಾರ | ೧೩೯೪ |
| ಪುರುಷೋತ್ತಮ ಸೂರಿ | ,, |
| ವೇಣಿವತ್ಸಾಚಾರ್ಯ ತರ್ಕವಾಗೀಶ | ,, |
| ವನಮಾಲಿ ಮಿಶ್ರ | ೧೩೯೫ |
| ಶಂಕರ ಮಿಶ್ರ | ,, |
| ವಿಶ್ವನಾಥ ಪಂಚಾನನ | ,, |
| ರಘುನಾಥರಾವ | ೧೩೯೬ |
| ಸಾಗರ ರಾಮಾಚಾರ್ಯ | ,, |
| ಜನಾರ್ದನ ಭಟ್ಟ | ೧೩೯೭ |
| ಇಂದೂರ ರಾಮಚಂದ್ರಾಚಾರ್ಯ, ಉಡುಪಿ | ,, |
| ಪೇರಾಜೆ ನಾರಾಯಣಾಚಾರ್ಯ ರಾಮಕುಂಜ ಉಡುಪಿ | ,, |
| ಅಡ್ಡೇ ಗುರುರಾಜಾಚಾರ್ಯ | ,, |

| | | |
|---|---|---|
| ಛಂ. ರಾಘವೇಂದ್ರಾಚಾರ್ಯ | .... | ೧೩೯೮ |
| ಕುತ್ಯಾರು ಕುಪ್ಪಣ್ಣ ತಂತ್ರಿಗಳು, ಉಡುಪಿ | .... | ,, |
| ಉಡುಪಿ ಸೇತು ಮಾಧವಾಚಾರ್ಯರು | .... | ,, |
| ಸೋಸಲೆ ರಾಮದಾಸರು | .... | ,, |
| ಶೇಷಗಿರಿರಾವ ಕಳ್ಳಂಕೆ | .... | ,, |
| ವಾಸುದೇವ ಶ್ಯಾನಭಾಗ | .... | ,, |
| ರಾಮಚಂದ್ರರಾವ ಪನಮಲೆ | .... | ೧೩೯೯ |
| ಮಧ್ವರಾವ ರಾಮಚಂದ್ರಪ್ಪ ಸತ್ಯಪ್ಪನವರ | .... | ,, |
| ಕೃಷ್ಣಾಚಾರ್ಯ ಪುರಾಣಿಕ | .... | ,, |
| ರಾಮರಾವ ಆನವಟ್ಟಿ | .... | ,, |
| ನಾರಾಯಣಾಚಾರ್ಯ ರಾಜಪುರೋಹಿತ | .... | ,, |
| ಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಲಿ | .... | ,, |
| ರಘುನಾಥಯತಿ | .... | ೧೪೦೦ |
| ಕಲ್ಯಾಣಿ ಸೇತುಮಾಧವಾಚಾರ್ಯ, ಬೆಂಗಳೂರ | .... | ,, |
| ಜೋಡೇನಹಳ್ಳಿ ಕೃಷ್ಣಮೂರ್ತ್ಯಾಚಾರ್ಯ, ಬೆಂಗಳೂರ | .... | ,, |
| ಕಲ್ಯಾಣಿ ನಾಗರಾಜಾಚಾರ್ಯ ಬೆಂಗಳೂರ | .... | ,, |
| ಸುಮತಿ ಅನಂತಾಚಾರ್ಯ ಬೆಂಗಳೂರ | .... | ,, |
| ರೊಟ್ಟಿ ಸೇತುಮಾಧವಾಚಾರ್ಯ ಬೆಂಗಳೂರ | .... | ,, |
| ಚಿಂಚೋಳಿ ಮೂರ್ತ್ಯಾಚಾರ್ಯ, ಬೆಂಗಳೂರ | .... | ,, |
| ದಿ. ಮುತ್ಯಾ ಶೇಷಾಚಾರ್ಯ, ಬೆಂಗಳೂರ | .... | ,, |
| ವೈ. ವಾ. ಪುರದ ಪುಟ್ಟಾಚಾರ್ಯ, ಬೆಂಗಳೂರ | .... | ,, |
| ಶ್ರೀ ಪುರಾಣಿಕ ಗುಂಡಾಚಾರ್ಯ ಸೊನ್ನಿ | .... | ೧೪೦೧ |
| ,, ಸೊನ್ನಿ ಹನುಮಂತಾಚಾರ್ಯ | .... | ,, |
| ,, ಟಿ. ವಿದುರಾಶ್ವತ್ಥರಾಮಾಚಾರ್ಯ, ಬೆಂಗಳೂರ | .... | ,, |
| ,, ರಾಮನರಸಿಂಹಾಚಾರ್ಯ | .... | ,, |
| ರಾಯಚೂರ ಆಚಾರ್ಯರು | .... | !, |
| ಬೋಧರಾಯಾಚಾರ್ಯ ರಾಯಚೂರ | .... | ,, |
| ರಾಮಾಚಾರ್ಯ ರಾಯಚೂರ | .... | ,, |
| ಗುರಾಚಾರ್ಯ ರಾಯಚೂರ | .... | ,, |
| ಪುರುಷೋತ್ತಮಾಚಾರ್ಯ ರಾಯಚೂರ | .... | ೧೪೦೨ |
| ಶ್ರೀ ಕಾಂತಾರಾವ ದಾತಾರ | .... | ,, |
| ಶ್ರೀ ಪಿ. ಬಿ. ಗಜೇಂದ್ರಗಡಕರ | .... | ,, |

॥ ಶ್ರೀ ॥

# ಮಾಧ್ವ ವಾಙ್ಮಯ ತಪಸ್ವಿಗಳು

## ಪ್ರಕರಣ ಒಂದು



## ಪಾವನ ಜೀವನ

### ೧.

ಎಂಟು ನೂರು ವರ್ಷಗಳ ಹಿಂದಿನ ಮಾತು. ಪಶ್ಚಿಮ ಕರಾವಳಿಯ ಶಿವಳ್ಳಿ ಗ್ರಾಮ (ಉಡುಪಿ)ದ ಅನಂತೇಶ್ವರ ದೇವಸ್ಥಾನದೆದುರು ಅಂದು ಭಾರೀ ಗಲಾಟೆ. ಉಡುಪಿಯ ಕ್ಷೇತ್ರಸ್ವಾಮಿಯಾದ ಅನಂತೇಶ್ವರ ಪರಶುರಾಮ ಕ್ಷೇತ್ರದ ಅಧಿದೈವ. ಸಂಕ್ರಮಣ ದಿನದಂದು ಅಲ್ಲಿ ನೆರೆಯುವ ದೊಡ್ಡ ಜಾತ್ರೆಗೆ ಅಸಂಖ್ಯ ಭಕ್ತರು ಕಿಕ್ಕಿರಿದು ನೆರೆದಿದ್ದರು.

ಮಂಗಲ ವಾದ್ಯಗಳು ಘೋರ್ಗರೆಯುತ್ತಿದ್ದವು. ವಿದ್ವಾಂಸರು ವೇದ ಘೋಷಗಳನ್ನು ಮಾಡುತ್ತಿದ್ದರು. ಉತ್ಸವದ ಕಾರ್ಯ-ಕಲಾಪಗಳನ್ನು ನಿರೀಕ್ಷಿಸುವ ಕುತೂಹಲದಿಂದ ದೇವಸ್ಥಾನದೆದುರು ಜನ ಜಾತ್ರೆಯು ಕೋಲಾಹಲವನ್ನು ಮಾಡುತ್ತಲಿತ್ತು.

## ಕಂಬದ ಮೇಲೆ ಕಣಿ ಹೇಳಿದ



ದೇವಾಲಯದ ಎದುರು ಗಗನ ಚುಂಬಿತವಾದ ಗರುಡ ಗಂಬವೊಂದು ತಲೆ ಎತ್ತಿ ನಿಂತಿದೆ. ಜನರ ಗುಂಪಿನೊಳಗಿಂದ ಹುಚ್ಚನಂತೆ ಕಾಣುವ ಒಬ್ಬ ಮನುಷ್ಯನು ಆ ಗರುಡಗಂಬವನ್ನು ಸರಸರನೇ ಏರತೊಡಗಿದನು. ಜನರೆಲ್ಲರು ಕುತೂಹಲದಿಂದ ಉಸಿರು ಬಿಗಿ ಹಿಡಿದು ಅವನೆಡೆಗೆ ನೋಡಹತ್ತಿದರು. ಆ ಕಂಬವನ್ನು ಏರುವವನ ಮೈಯಲ್ಲಿ ದೇವರ ಆವೇಶವು ಬಂದಂತೆ ಇತ್ತು. ತಲೆ ಎತ್ತಿ ನೋಡಿದರೆ ಕಣ್ಣು ತಿರುಗುವಂತಿದ್ದ ಆ ಎತ್ತರ ಕಂಬವನ್ನು ಚಪಲತೆಯಿಂದ ಅರೆಚಣದಲ್ಲಿ ಏರಿದ ಆ ಅರೆ ಹುಚ್ಚ. ಅಂಗೈ ಅಗಲದ ಕಂಬದ ತುದಿಯಲ್ಲಿ ಅವನು ಕುಣಿಯತೊಡಗಿದ. ರಂಗ ಭೂಮಿಯ ಮೇಲೆ ನಟ ಸಾರ್ವಭೌಮನ ನೃತ್ಯದಂತೆ ಇತ್ತು ಅವನ ಆ ಸ್ವಚ್ಛಂದ ನಾಟ್ಯ. ಜನರ ಸದ್ದು ಗದ್ದಲಗಳೆಲ್ಲ ಒಮ್ಮೆಲೆ ಶಾಂತವಾದವು. ಎವೆ ಪಿಳುಕಿಸದ ಸಾವಿರಾರು ಕಣ್ಣುಗಳು ಅವನಲ್ಲಿ ಕೇಂದ್ರೀಕೃತವಾದವು.

ಸ್ತಂಭದ ತುದಿಯಲ್ಲಿ ಸ್ವಚ್ಛಂದವಾಗಿ ತಾಂಡವ ಗೈಯುವ ಆ ನೃತ್ಯ ಧೀರನು ಎರಡೂ ಕೈಗಳನ್ನು ಮೇಲೆತ್ತಿ ಘೋಷಣೆ ಗೈದ “ಸ್ವಲ್ಪ ದಿನಗಳಲ್ಲಿ ಸರ್ವಜ್ಞರ ಅವತಾರ. ಸಜ್ಜನರಿಗೆಲ್ಲ ಕಲ್ಯಾಣ. ಅದು ಕೂಡ ಈ ಪರಶುರಾಮ ಕ್ಷೇತ್ರವಲ್ಲಿಯೇ ಬೇಗನೇ ಆಗಲಿರುವದು”.

ಅವನು ಈ ಮಾತನ್ನು ಮೂರು ಸಲ ಜನರಿಗೆಲ್ಲ “ಕೇಳಿರಿ” “ಕೇಳಿರಿ” ಎಂದು ಕೈ ಎತ್ತಿ ಮತ್ತೆ ಮತ್ತೆ ಹೇಳಿದ. ಆಣೆ ಇಟ್ಟು ಹೇಳಿದಂತೆ ಇತ್ತು ಅವನ ಆ ನಿರ್ಧಾರದ ಕಣಿ.

ಹುಸಿ ಹೋಗಲಿಲ್ಲ ಆ ಹುಚ್ಚನ ಮಾತು. ಮುಂದೆ ಕೆಲವೇ ದಿನಗಳಲ್ಲಿ ಉಡುಪಿಯ ಸಮೀಪದ ಪಾಜಕ ಕ್ಷೇತ್ರದಲ್ಲಿ ಜೀವೋತ್ತಮರು ಜನ್ಮ ತಾಳಿದರು.

೩

# ಮಾರುತಿಯು ಮಧ್ವರಾಗುವದಕ್ಕೆ ಮೊದಲು

## ೧

ಹತ್ತು ಅವತಾರಗಳನ್ನೆತ್ತಿ ಶ್ರೀ ಹರಿಯು ಮನುಕುಲವನ್ನು ಮೇಲಕ್ಕೆತ್ತಿದ್ದಾನೆ. ಅದರಲ್ಲಿಯೂ ರಾಮ, ಕೃಷ್ಣ ಮತ್ತು ವ್ಯಾಸರೂಪದಿಂದ ಆ ಸ್ವಾಮಿ ಮಾಡಿದ ಉಪಕಾರಕ್ಕೆ ಸೀಮೆ ಇಲ್ಲ. ಬಲಕಾರ್ಯ ಮತ್ತು ಜ್ಞಾನಕಾರ್ಯಾರ್ಥ ಅವತಾರಗಳಲ್ಲಿ ಆ ಭಗವಂತನಿಗೆ ಬೆಂಬಲಿಗರಾಗಿ ನಿಂತು ಆ ಸ್ವಾಮಿಯ ಸೇವೆಗೈಯುವದು ಮುಖ್ಯ ಪ್ರಾಣದೇವರ ಮುಖ್ಯ ಕರ್ತವ್ಯವಾಗಿದೆ.

ಆ ಸ್ವಾಮಿ ರಾಮನಾದಾಗ ಈ ಭಕ್ತ ಹನುಮಂತನಾಗಿ ಲೆಕ್ಕವಿಲ್ಲದಷ್ಟು ರಕ್ಕಸರನ್ನು ಸಂಹರಿಸಿದ. ಅವನು ಕೃಷ್ಣನಾಗಿ ಅವತರಿಸಿದಾಗ ಆ ವಾಯುದೇವ ಬಲಭೀಮನಾಗಿ ಜನ್ಮವೆತ್ತಿದ. ಭಗವದ್ದ್ವೇಷಿಗಳಾದ ದೈತ್ಯರನ್ನೆಲ್ಲ ಮಣ್ಣು ಮುಕ್ಕಿಸಿದ.

ದಾನವ ಧುರೀಣರಲ್ಲಿ ಬಲ ಕಡಿಮೆ ಇದ್ದರೂ ಛಲಕ್ಕೆ ಕೊರತೆಯಿಲ್ಲ. ಭೀಮನ ಗದೆಯ ಪೆಟ್ಟಿಗೆ ಕುರುಕ್ಷೇತ್ರದಲ್ಲಿ ನೆತ್ತರ ಕಾರಿ ನಷ್ಟರಾಗಿ ಹೋದ ಆ ದುಷ್ಟ ದೈತ್ಯರು ಕಲಿಯುಗದಲ್ಲಿ ಮತ್ತೆ ತಲೆ ಎತ್ತಿದ್ದರು.

ಜ್ಞಾನಪ್ರಸಾರಕ್ಕಾಗಿ ಭೂಮಂಡಲದಲ್ಲಿ ಅವತರಿಸಿದ ಭಗವಂತನ ಆ ಬಾದರಾಯಣ ರೂಪವು ದುರುಳ ದಾನವರಿಗೆಲ್ಲ ಬರ್ಷಣವಾಗಿದ್ದಿತು. ಜನರಿಗೆ ಕಲ್ಯಾಣವಾಗುವದನ್ನು ಕಂಡರೆ ಆ ದೈತ್ಯಾಧಮರಿಗೆ ಆಗದು.

ಬಾದರಾಯಣರು ಬೀರಿದ ಬೆಳಕಿನಿಂದ ಜನ ಉದ್ಧಾರದ ಮಾರ್ಗ ಹಿಡಿದಿದ್ದನ್ನು ಕಂಡು ಅವರು ಕುಳಿತಲ್ಲಿಯೇ ಕರುಬಿ ಹೋದರು ಅಸೂಯೆಯ ಕಿಚ್ಚಿನಲ್ಲಿ. ಭೂಮಂಡಲದ ತುಂಬ ಬೆಳೆದು ನಿಂತ ಬೌದ್ಧಮತವು ಮತ್ತೆ ಕ್ಷೀಣದೆಸೆಗೆ ಬಂದದ್ದನ್ನು ನೋಡಿ ಅವರಿಗೆ ಇನ್ನೂ ನಿರಾಶೆಯಾಯಿತು. ಅವರ ದೈತ್ಯರೂಪವು ಭೂಲೋಕದ ಜನರಲ್ಲಿ ಬಂದು ಬೆರೆಯಲಿಕ್ಕೆ ದೊಡ್ಡ ಬಾಧಕವೇ ಆಗಿದ್ದಿತು. ರಕ್ಕಸರ ಹೆಸರು ಕೇಳಿದರೆ ಜನ ಹೆದರುತ್ತಿದ್ದರು, ಹೇಸುತ್ತಿದ್ದರು.

**"ಶಠಶ್ಶತುಥಾಶತ್ರಮ ಮೋಷ ಭೇಜಿ"**

ಆದರೆ ಆ ದಾನವರು ದುರುಳರಿದ್ದರೂ ಮರುಳರಿದ್ದಿಲ್ಲ. ಲೋಕವು ಮನ್ನಿಸುವಂತಾಗಬೇಕಾದರೆ ಯಾವ ರೂಪದಿಂದ ಬರಬೇಕೆಂಬುದು ಅವರಿಗೆ ಗೊತ್ತು. ಹುಣಿಮಂತ ಒಳ್ಳೇ ಬುದ್ಧಿವಂತ.

ಸುರ ವೈರಿಗಳೆಲ್ಲರೂ ಸ್ವಾಮಿಗಳಾದರು. ಜಗತ್ತಿಗೆ ಕಾಟ ಕೊಡುವವರೆಲ್ಲ ಕಾಟಿ ಸುತ್ತಿಕೊಂಡರು. ಕ್ರೂರ ಆಯುಧ ಹಿಡಿದ ಕೈಯಲ್ಲಿ ಕಮಂಡಲು ಹಿಡಿದರು. ಮಾಯಾವಿಗಳಾದ ಆ ಕಪಟ ಸನ್ಯಾಸಿಗಳ ಮುಖದಲ್ಲಿ ವರ್ಚಸ್ಸಿತ್ತು. ಮಾತಿನಲ್ಲಿ ಮೋಹಕತೆ ಇತ್ತು. ಜನ ಮರುಳೋ ಜಾತ್ರೆ ಮರುಳೋ! ಹುಂಬಜನ ಬೆಂಬಲವಿತ್ತಿತು. ಜಗತ್ತಿನ ತುಂಬ ಅವರ ತತ್ವವೇ ಪ್ರಸಾರವಾಯಿತು. ಬೌದ್ಧ ಮತದ ಪುನರುದ್ಧಾರ ವಾಯಿತು.

## ಹಳೆಯ ಮದ್ದು ಹೊಸ ಬಟ್ಟಲ

ಆದರೆ ಅದಕ್ಕೆ ಬೌದ್ಧ ಮತ ಎಂದು ಸ್ಪಷ್ಟವಾಗಿ ಹೇಳುವಂತಿರಲಿಲ್ಲ. ಬುದ್ಧ ಮತಕ್ಕೆ ಜನ ಬೇಸತ್ತಿತ್ತು. ಶೂನ್ಯವಾದವನ್ನು ಭಾರತೀಯ ಜನತೆ ಮನಃಪೂರ್ವಕ ವಾಗಿ ತಿರಸ್ಕರಿಸುತ್ತಿತ್ತು. ಆದರೆ ಈ ಹೊಸ ಸ್ವಾಮಿಗಳಿಗೆ ಬೇಕಾದದ್ದು ಬುದ್ಧ ಮತದ ಪುನರುದ್ಧಾರ. ಜನರ ನಾಡಿಯನ್ನರಿತು ಹಳೆಯ ಮದ್ದನ್ನೇ ಹೊಸ ಬಟ್ಟಲದಲ್ಲಿ ಹಾಕಿ ಜನತೆಯ ಮುಂದೆ ಇಟ್ಟರು.

ಬೌದ್ಧರು 'ಅಸತ್' ಎಂಮುದಕ್ಕೆ ಇವರು 'ಸದಸದ್ವಿಲಕ್ಷಣ' ಎಂದರು. ಅವರು ಶೂನ್ಯವು ಅಖಂಡವೆಂದು ಸಾಧಿಸಿದರೆ ಇವರು ಬ್ರಹ್ಮವು ಅಖಂಡವೆಂದು ವಾದಿಸಿದರು. ಅವರು ಸಂವೃತಿ ಎಂದುದನ್ನು ಇವರು 'ಮಾಯಾ 'ಎಂದು ಕರೆದರು.

## ಮಂದಂ ವಿಷ್ಣುಃ ಮನಸಿ ಚ ಸತಾಂ-ಹಂತ ನೂನಂ ತಿರೋಭೂತ್

ಮಾಯಾವಾದವು ಶೂನ್ಯವಾದದ ತಿದ್ದಿ ಬೆಳಿಸಿದ ಹೊಸ ಆವೃತ್ತಿಯಾಗಿದ್ದಿತು. ಆದರೂ ಜನ ಮರುಳೊ ಜಾತ್ರೆ ಮರುಳೋ. ಹುರಳಿಲ್ಲದ ಈ ಮತದಲ್ಲಿಯೂ ತಿರುಳಿದೆ ಎಂದು ಭ್ರಮಿಸಿತು ಮರುಳ ಜನ. ಎಲ್ಲ ವಿಚಾರವಂತರೂ ಮಾಯಾವಾದದೆಡೆಗೆ ವಾಲಿದರು.

ಸನಕಾದಿ ಪರಂಪರಾ ಪ್ರಾಪ್ತವಾದ ಸರ್ವಜ್ಞ ಸಿಂಹಾಸನದ ಮೇಲೆ ಕುಳಿತವ ರಿಗೂ ಸಂದೇಹ. ಅದ್ವೈತ ತತ್ವವೇ ತಾರಕವೋ ? ಎಂದು ನಿಜವಾದ ವೈಷ್ಣವ ತತ್ವ ದಲ್ಲಿ ನಿಷ್ಠೆಯುಳ್ಳ ಕೆಚ್ಚೆದೆಯ ವೈಷ್ಣವರು ಅಲ್ಲಲ್ಲಿದ್ದರೂ ಅವರು ವೈಷ್ಣವರೆಂದು ತಲೆ ಎತ್ತಿ ತಿರುಗಾಡುವಂತಿರಲಿಲ್ಲ ಅಂದಿನ ಪರಿಸ್ಥಿತಿ.

" ಅಸುರಾ ಬಹುಲಾ ಯಸ್ಮಾತ್ ". ನೋಡಿದಲ್ಲೆಲ್ಲ ಮಾಯಾವಾದಿಗಳದೇ ಪ್ರಾಬಲ್ಯ. ಉದ್ದ ನಾಮ ಹಚ್ಚಿದವರನ್ನು ಕಂಡಕೆ ಉಪದ್ರವ ಕೊಡದೆ ಬಿಡುತ್ತಿರಲಿಲ್ಲ. ಹೊಡೆತ ಬಡಿತಗಳನ್ನು ತಿನ್ನುವ ವರೆಗೂ ಹೋಯಿತು ದಾರುಣ ಪ್ರಸಂಗ. ಅವರ ಮೇಲೆ ಹತ್ಯಾಚಾರದ ವರೆಗೆ ಬಂದಿತು ಮಾಯಿಗಳ ಅತ್ಯಾಚಾರ. " ಜೀವನ್ ಭದ್ರಾಣಿ ಪಶ್ಯತಿ " ಎಂಬ ಮಾತಿಗೆ ಆತುಕೊಂಡು ಹರಿಭಕ್ತರೆಲ್ಲರೂ ಮಾಯಾವಿಗಳ ಲಾಂಛನವನ್ನು ಧರಿಸಿ ತಿರುಗಾಡುವ ಪ್ರಸಂಗ ಬಂದಿತು.

## ದೇವತೆಗಳ ಮೊರೆ, ವಾಯು ದೇವರಿಗೆ ಕರೆ

ದೇವತೆಗಳಿಗೆ ದುಃಖವಾದದ್ದು ಈ ಮಾಯಾವಾದವು ಸಜ್ಜನರಲ್ಲಿಯೂ ಬುದ್ಧಿ ಭೇದವನ್ನು ಮಾಡಲು ಮೊದಲಿಟ್ಟಾಗಲೇ ! ವೈಷ್ಣವಾಗ್ರಣಿಗಳ ವಂಶದಲ್ಲಿ ನಿರ್ಗುಣ ಉಪಾಸನೆಯೇ ಬೆಳೆಯತೊಡಗಿದಾಗ ಸುರಪುರದ ನಾಗರಿಕರು ಸಂಭ್ರಾಂತರಾದರು. ಬ್ರಹ್ಮ ದೇವರನ್ನು ಮುಂದೆ ಮಾಡಿಕೊಂಡು ಹಾಲ್ಗಡಲಿನಲ್ಲಿ ಪವಡಿಸಿದ ಶ್ರೀ ಹರಿಯ ಚರಣಗಳಿಗೆ ಶರಣು ಹೋದರು. ಸರ್ವಜ್ಞ ಚೂಡಾಮಣಿಯಾದ ಪ್ರಭುವು ದೇವ ಭಾವವನ್ನರಿತ. ಆದರೆ ಮಾಡುವವೇನು ? ಅವನು ತ್ರಿಯುಗ ಹೂತಿಯಲ್ಲವೇ ! ಕಲಿ ಯುಗದಲ್ಲಿ ಬುದ್ಧಾವತಾರವಾದ ಬಳಿಕ ಅವನು ಅವತಾರ ಎತ್ತುವಂತಿಲ್ಲ. ಅದು ಅವನ ಸಂಕಲ್ಪ. ಬ್ರಹ್ಮ ದೇವರಿಗೂ ಅವತಾರವೇ ಇಲ್ಲ. ಬ್ರಹ್ಮ, ಭಗವಂತರನ್ನು ಬಿಟ್ಟರೆ ಬೇರೆ ಸರ್ವಜ್ಞರಿಲ್ಲ. ಸರ್ವಜ್ಞರಲ್ಲದವರಿಂದ ಕೆಲಸ ಸಾಗುವಂತಿಲ್ಲ. ಮಾಡಬೇಕೇನು ?

ಮರು ಚಣದಲ್ಲಿ ಆ ಮುಕುಂದ ಮಂದಹಾಸ ಬೀರಿ ಮುಖ್ಯ ಪ್ರಾಣರ ಕಡೆಗೆ ದೃಷ್ಟಿ ಬೀರಿದ. ಭಾವಿ ಬ್ರಹ್ಮರು ಕೈ ಮುಗಿದು ಅಪ್ಪಣೆ ಏನು ಎಂದು ಕೇಳಿದರು.

### ಶ್ರೀ ಭಗವಾನುವಾಚ—

" ಜೀವೋತ್ತಮ, ಭೂಮಂಡಲದಲ್ಲಿ ದೇವರನ್ನು ನಂಬಿದ ಜನರಿಗೆ ದಾರಿ ತೋರ ದಾಗಿದೆ. ವೇದಾಂತದ ಹೆಸರಿನಿಂದ ವೇದಗಳ ಅಂತವೇ ನಡೆದಿದೆ. ನಿಜವಾದ ತತ್ವವನ್ನು ತಿಳಿಯದೇ ತಪ್ಪು ದಾರಿಯಲ್ಲಿ ತಡವರಿಸುತ್ತಲಿರುವ ಆ ಸಜ್ಜನರ ಮೇಲೆ ನಾವು ಕರುಣೆ ತೋರದೆ ಮತ್ತಾರು ತೋರಬೇಕು ? ಆದ್ದರಿಂದ ನೀನು ಬುವಿಯಲ್ಲಿ ಅವತರಿಸು. ಆ ದುಷ್ಟ ದೈತ್ಯರು ಗುಣಪೂರ್ಣನಾದ ನನ್ನನ್ನು ನಿರ್ಗುಣನನ್ನಾಗಿ ಮಾಡಿ ಇಟ್ಟಿದ್ದಾರೆ. ನೀನು ನನ್ನ ನಿಜವಾದ ಗುಣ ಪರಿಪೂರ್ಣತೆಯನ್ನು ತಿಳಿಸು. ವೇದ ಮತವನ್ನು ಉದ್ಧಾರ ಮಾಡು. ಸಜ್ಜನರನ್ನು ಸಂತೋಷಗೊಳಿಸು."

ಜೀವೋತ್ತಮರು ಹಣೆ ಮಣಿದರು. " ಯದಾಜ್ಞಾಪಯತಿ ದೇವಃ " ಎನ್ನುವ ಭಾವವನ್ನು ಸೂಚಿಸುತ್ತಿತ್ತು ಅವರ ಬಾಗಿದ ತಲೆ. ಜೋಡಿಸಿದ ಕೈ.

೬

# ಪವಿತ್ರಂ ಪಾಜಕ ಕ್ಷೇತ್ರಂ

## ೧



ಪಾಜಕ ಕ್ಷೇತ್ರವು ಪರಶುರಾಮ ದೇವರ ಕಾಲದಿಂದಲೂ ಪ್ರಸಿದ್ಧ ಕ್ಷೇತ್ರವೆನಿಸಿದೆ. ಈ ಗ್ರಾಮದ ಬದಿಯ ಬೆಟ್ಟದಲ್ಲಿ ಆ ರಾಮ ಕೃಷ್ಣರ ತಂಗಿಯನ್ನು ಪ್ರತಿಷ್ಠೆ ಮಾಡಿದ. ಪರಶುರಾಮರ ಈ ದುರ್ಗಾ ಪ್ರತಿಷ್ಠಾ ಮಹೋತ್ಸವವನ್ನು ನೋಡಲು ಅಂದು ದೇವತೆಗಳು ವಿಮಾನದಲ್ಲಿ ಬಂದಿದ್ದರಂತೆ. ಅದಕ್ಕಾಗಿಯೇ ವಿಮಾನಗಿರಿ ಎಂದು ಈಗಲೂ ಅದಕ್ಕೆ ಹೆಸರು. ಈ ಪಾಜಕದ ಸುತ್ತಲೂ ಪರಶುರಾಮರ ಬಿಲ್ಲು, ಬಾಣ, ಕೊಡಲಿ, ಗದೆಗಳಿಂದ ರೂಪುಗೊಂಡಿವೆ ನಾಲ್ಕು ತೀರ್ಥಗಳು. ನಿಸರ್ಗ ಸೌಂದರ್ಯದ ನೆಲೆವೀಡಾದ ಈ ಪಾವನ ಕ್ಷೇತ್ರವೆಲ್ಲವು ಮಧ್ಯಗೇಹ ಮನೆತನದ ನಗರಿ ನಾರಾಯಣಾಚಾರ್ಯರ ಮನಸ್ಸನ್ನು ಸೆಳೆಯಿತು. ಅವರಿಗೆ ಮಧ್ಯಗೇಹ ಭಟ್ಟರೆಂದೂ ಕರೆಯುತ್ತಿದ್ದರು. ಭಟ್ಟರು ತಮ್ಮ ಗ್ರಾಮವನ್ನು ಬಿಟ್ಟು ಪಾಜಕ ಕ್ಷೇತ್ರದಲ್ಲಿ ಬಂದು ನೆಲಸಿದರು.

ಮಧ್ಯಗೇಹ ಭಟ್ಟರು ಉಡುಪಿಯ ಅನಂತೇಶ್ವರನ ಏಕನಿಷ್ಠ ಭಕ್ತರು. ಇತಿಹಾಸ ಪುರಾಣಗಳೆಲ್ಲ ಅವರ ಕರತಲದಲ್ಲಿ ಆ ಮಲಕ. ಮಧುರ ಕಂಠದಿಂದ ಅವರು ಪುರಾಣ ಹೇಳಹತ್ತಿದರೆ ಜನರ ಸರ್ವೇಂದ್ರಿಯಗಳಿಗೂ ಆಪ್ಯಾಯನವಾಗುತ್ತಿತ್ತು.

ಭಟ್ಟರು ಸಂತಾನಕ್ಕಾಗಿ ಹನ್ನೆರಡು ವರ್ಷ ಅನಂತೇಶ್ವರನನ್ನು ಸೇವಿಸಿದರು. ಅವರ ಮಡದಿ ವೇದವತಿಯೂ ಆ ಸ್ವಾಮಿಯ ಸೇವೆಯಲ್ಲಿ ಮೈ ಸವೆಯಿಸಿದಳು. ಭಟ್ಟರಿಗೆ ಬೇಕಾದದ್ದು ಬರಿ ತಮ್ಮ ವಂಶೋದ್ಧಾರ ಮಾಡುವ ಮಗನಲ್ಲ, ವಿಶ್ವೋದ್ಧಾ

ಮಾಡುವ ಮಗ. ಇಂಥ ಮಗನಿಗಾಗಿ ಆ ದಂಪತಿಗಳು ತಮ್ಮ ಕುಲ ಸ್ವಾಮಿಗೆ ಹರಕೆ ಹೊತ್ತರು. ಪಯೋವ್ರತ ಮೊದಲಾದ ವಿವಿಧ ವ್ರತಗಳನ್ನು ಮಾಡಿದರು. ದೇವ ಕಣ್ತೆರೆದ



## ಶ್ರೀ ಮಧ್ವಾಚಾರ್ಯರ ಅವತಾರ

ವಿಳಂಬಿ ಸಂವತ್ಸರದ ವಿಜಯ ದಶಮಿ ಮಹಾ ಶುಭ ದಿನದಂದು ಮಧ್ಯಗೇಹ ಭಟ್ಟರು ಅನಂತೇಶ್ವರನ ದರ್ಶನಕ್ಕಾಗಿ ಉಡುಪಿಗೆ ಹೋಗಿದ್ದರು. ಸ್ವಾಮಿಯ ಸೇವೆ ಮಾಡಿ ಭಟ್ಟರು ಮನೆಗೆ ಮರಳಿದಾಗ ಹೊತ್ತು ನೆತ್ತಿಗೇರಿತ್ತು. ಭಟ್ಟರು ಮನೆಯ ಹತ್ತಿರ ಬಂದಾಗ ಮಂಗಲ ವಾದ್ಯಗಳು ಮೊಳಗುತ್ತಿರುವುದು ಕೇಳಿಸಿತು. ಅವು ಮಾನವರು ಬಾರಿಸಿದ ವಾದ್ಯಗಳಲ್ಲ. ಆಗಸದ ಓಲಗದವರು ಬಾರಿಸಿದ ದೇವದುಂದುಭಿಗಳೇ ಆಗಿದ್ದವು. ಅಂಥ ಮಧುರವಾದ ಮಂಗಳ ವಾದ್ಯಗಳ ಮಂಜುಘೋಷವನ್ನು ನೆಲದ ಜನ ಎಂದೂ ಕೇಳಿರಲಿಲ್ಲ. ಅದನ್ನು ಕೇಳಿದ ಜನರೆಲ್ಲರೂ ಕೌತುಕದ ಕೊನೆ ಏರಿ ನಿಂತರು. ಆಚಾರ್ಯರು ಅವತರಿಸಿದರು. ಸಜ್ಜನರು ಸಂತಸಗೊಂಡರು. ದೇವತೆಗಳು ನಲಿದಾಡಿದರು.

ಮಧ್ಯಗೇಹ ಭಟ್ಟರು ಮನೆಗೆ ಬಂದು ತಮ್ಮ ಸುಂದರ ಮಗುವನ್ನು ಕಣ್ಣು ತುಂಬ ನೋಡಿ ತಣಿದರು. ಹನ್ನೆರಡು ವರ್ಷ ತಾವು ಸೇವಿಸಿದ ಮುಕುಂದನ ದಯೆಯೇ ಈ ಕಂದನ ರೂಪದಿಂದ ಬಂದಿದೆ ಎಂದು ತೋರಿತು ಅವರ ಮನಸ್ಸಿಗೆ. ಅವರು ನಿಂತಲ್ಲಿಂದಲೇ ಅನಂತೇಶ್ವರನನ್ನು ವಂದಿಸಿದರು. ವಾಯು ದೇವರ ಅವತಾರ ಭೂತನಾದ ಆ ಮಗುವಿಗೆ ತಂದೆ ಇಟ್ಟ ಹೆಸರು ವಾಸುದೇವ.

### “ಕೂಸಿನ ಕಂಡೀರಾ! ಮುಖ್ಯ ಪ್ರಾಣನ ಕಂಡೀರಾ!”



ಆ ಶಿಶುವಿಗೆ ಹಾಲು ಉಣಿಸಲಿಕ್ಕಾಗಿ ಒಂದು ಹಸುವನ್ನು ಕೊಟ್ಟ ಮೂಡಿಲ್ಲಾಯರಿಗೆ ಮೋಕ್ಷ ವಿದ್ಯೆಯು ಕರತಲಾಮಲಕವಾಯಿತು. ಭಟ್ಟರು ಒಂದು ದಿನ ಆ ಮಗುವನ್ನು ಉಡುಪಿಗೆ ಕರೆದುಕೊಂಡು ಹೋಗಿ ಅನಂತೇಶ್ವರನ ಪಾದದ ಮೇಲೆ ಹಾಕಿದರು. ಆ ಭಗವಂತನ ಆಶೀರ್ವಾದ ಪಡೆದುಕೊಂಡು ಮಗನೊಂದಿಗೆ ಮರಳಿ ಹೊರಟರು. ರಾತ್ರಿ ಕಾಡಿನಲ್ಲಿ ನಡೆದು ಬರುವಾಗ ಇವರನ್ನು ಕಬಳಿಸ ಬಂದ ಒಂದು ಭೂತವು ಆ ಮಗುವಿಗೆ ಹೆದರಿ ಅವರನ್ನು ಬಿಟ್ಟು ದೂರ ಹೋಯಿತು.

### “ಖಂಡಗ ಹುರಳಿ ತಿಂದಿತು ಕೂಸು।”

ಒಮ್ಮೆ ತಾಯಿ ಮನೆಯಲ್ಲಿ ಇಲ್ಲದಾಗ ಮಗುವು ಅಳತೊಡಗಿತು. ರೋದನವು ಜೋರಾದಾಗ ಅವನ ಅಕ್ಕ ಏನು ಮಾಡುವದು ತಿಳಿಯದೆ ದನಕ್ಕೆ ತಿನ್ನಿಸಲಿಕ್ಕೆ ನೆನಸಿ



ಇಟ್ಟ ಹುರಳಿಯನ್ನು ತಿನ್ನಲು ಕೊಟ್ಟಳು. ಅದೆಲ್ಲವನ್ನೂ ತಿಂದು ತೇಗಿತು ಆ ಪುಟ್ಟ ಕೂಸು. ತಾಯಿ ಬಂದು ಅದನ್ನು ಕೇಳಿ ಗಾಬರಿಯಾದಳು. ಅವಳಿಗೇನು ಗೊತ್ತು ಹಿಂದೆ ಎರಡು ಸಲ ವಿಷವುಂಡು ಪಚನಮಾಡಿಕೊಂಡ ಮಗು ಇದೆಂದು. ಭಂಡಿ ಅನ್ನ ಉಂಡ ಕೂಸು ಅದು.



ವಾಸುದೇವನು ತುಸು ದೊಡ್ಡವನಾದಾಗ ಭಟ್ಟ ದಂಪತಿಗಳಿಗೆ ಅವನನ್ನು ಹಿಡಿಯುವದೇ ಕಷ್ಟವಾಯಿತು. ಒಂದು ದಿನ ಬೆಳಿಗ್ಗೆ ಎತ್ತಿನ ಬಾಲ ಹಿಡಿದು ಆ ಕೂಸು ಕಾಡಿಗೆ ಹೋಗಿಬಿಟ್ಟಿತು. ಮನೆಯ ಜನ ಊರೆಲ್ಲ ಹುಡುಕಾಡಿ ದಿಗ್ಭ್ರಾಂತರಾಗಿ ಕುಳಿತುಕೊಂಡಿದ್ದರು. ಸಂಜೆಯ ಹೊತ್ತಿಗೆ ಬಸವನ ಹಿಂದೆ ಬಾಲವಾಗಿ ಲೀಲೆಯಿಂದ ಜೋಕಾಲಿ ಆಡುತ್ತ ಮಗು ಮನೆಗೆ ಬಂದ.

**ಅರ್ಥ ಬೇಡಬಂದವನಿಗೆ ಪುರುಷಾರ್ಥ**



ಭಟ್ಟರ ಪಾಲಿಗಿದ್ದದ್ದು ದಟ್ಟದಾರಿದ್ರ್ಯ. ಎತ್ತು ಕೊಳ್ಳಲಿಕ್ಕಾಗಿ ಎಂದೋ ಮಾಡಿದ ಸಾಲವನ್ನು ಅವರಿಗೆ ಮುಟ್ಟಿಸಲಿಕ್ಕೇ ಆಗಿರಲಿಲ್ಲ. ಸಾಲ ವಸೂಲಿಗಾಗಿ ಆ ಸಾಹುಕಾರ ಧರಣೀ ಕುಳಿತುಕೊಂಡಾಗ ಅಲ್ಲಿಯೇ ಆಡುವ ಈ ವಾಸುದೇವ ಅವನ ಉಡಿಯಲ್ಲಿ ಒಂದು ಹಿಡಿ ಹುಣಸೇ ಬೀಜ ಹಾಕಿದ. ಸಾಹುಕಾರನಿಗೆ ಜ್ಞಾನೋದಯ ವಾಯಿತು. ಭಟ್ಟರು ಮುಂದೆ ಹಣ ಕೊಡಲು ಹೋದಾಗ ಅವನು ತೆಗೆದುಕೊಳ್ಳಲಿಲ್ಲ. ಆ ಮಗು ಕೊಟ್ಟ ಬೀಜ ಅವನಿಗೆ ಮೋಕ್ಷಕ್ಕೆ ಬೀಜವಾಯಿತು.

ಮತ್ತೊಮ್ಮೆ ಭಟ್ಟದಂಪತಿಗಳು ಬಳಗದವರ ಮನೆಯ ಮಂಗಳ ಕಾರ್ಯಕ್ಕಾಗಿ ನೆಡೆಯೂರಿಗೆ ಹೋದರು. ಮದುವೆಯ ಗಲಾಟೆಯಲ್ಲಿ ಮಗು ಎಲ್ಲಿಯೋ ತಪ್ಪಿಸಿ ಕೊಂಡು, ಎಲ್ಲೆಲ್ಲಿಯೊ ಸುತ್ತಾಡಿ ಕಂಡ ದೇವರಿಗೆಲ್ಲ ಕೈಮುಗಿದು, ಉಡುಪಿಗೆ ಬಂದು ಅನಂತೇಶ್ವರನನ್ನು ನಮಿಸಿ ನಿಂತಿತು. ಭಟ್ಟರು ಮಗುವನ್ನು ಕಾಣದೆ ಕಂಗಾಲ ಆಗಿ ಉಡುಪಿಗೆ ಓಡುತ್ತ ಬಂದರು. ಅನಂತೇಶ್ವರನ ಪಾದ ಸನ್ನಿಧಿಯಲ್ಲಿ ಪುಟ್ಟ ಮಗು ನಿಂತುಕೊಂಡಿದ್ದಿತು. ಭಟ್ಟರು ಧಾವಿಸಿ ಎತ್ತಿಕೊಂಡು "ಮಗು, ಇಷ್ಟು ದೂರ ಒಬ್ಬನೇ ಹೇಗೆ ಬಂದೆ" ಎಂದು ಕೇಳಿದರು. "ಒಬ್ಬನೇ ಏಕೆ ? ಈ ನಾರಾಯಣ ನನ್ನ ಜೊತೆಗೇ ಇದ್ದ" ಎಂದು ಅನಂತೇಶ್ವರನ ಕಡೆಗೆ ಕೈತೋರಿಸಿತು ಆ ಕೂಸು.

## ಭಾವಿಬ್ರಹ್ಮ ಬಳಪ ಹಿಡಿದಾಗ



ವಾಸುದೇವನಿಗೆ ಅಕ್ಷರಾಭ್ಯಾಸ ಮಾಡಿಸತೊಡಗಿದಾಗ ತಂದೆಗೆ ಬಂದ ಅನುಭವ ವಿಚಿತ್ರವಾಗಿತ್ತು. ಅಕ್ಷರಾಭ್ಯಾಸದ ಮರುದಿನ ಭಟ್ಟರು ಅವೇ ಅಕ್ಷರಗಳನ್ನು ಹಲಿಗೆಯ ಮೇಲೆ ಹಾಕಿ ಕೊಟ್ಟಾಗ "ಅಪ್ಪಾ, ನಿನ್ನೆ ಬರೆದ ಅಕ್ಷರಗಳನ್ನೇ ಮತ್ತೆ ಇಂದೂ ಏಕೆ ಬರೆದಿರಿ" ಎಂದು ಕೇಳಿದನು. ದಿನದಿನವೂ ಹೊಸ ಅಕ್ಷರಗಳನ್ನು ಎಲ್ಲಿಂದ ತರಬೇಕು ಪಾಪ ಆ ತಂದೆ !

ಮತ್ತೊಂದು ದಿನ ವಾಸುದೇವ ತಾಯಿಯೊಡನೆ ಪುರಾಣಕ್ಕೆ ಹೋಗಿದ್ದ. ಪುರಾಣಿಕ ಮಡಿನಾಯ ಶಿವಭಟ್ಟ ಅಪದ್ಧ ಅರ್ಥ ಹೇಳಿದಾಗ ಅವನನ್ನು ತಡೆದು ನಿಲ್ಲಿಸಿದ ವಾಸುದೇವ. ಅವರು ಹೇಳುವದು ಅಪಾರ್ಥವೆಂದು ತೋರಿಸಿಕೊಟ್ಟ. ಭಟ್ಟನ ಕಣ್ಣು ಕೆಂಪಗಾದವು. ಆದರೆ ಆ ಎಳೆಮಗುವಿನ ಮುದ್ದು ಮಾತುಗಳನ್ನು ಕೇಳಿ ಕೌತುಕವಡೆದ ಕೂಡಿದ ಜನ ವಾಸುದೇವನಿಗೆ ನೀನೇ ಇವರ ಅರ್ಥ ಹೇಳು ಎಂದು ಕೇಳಿದರು. ಕೂಡಲೇ ಆ ಪುಟ್ಟ ಕೂಸು ದಿಟ್ಟತನದಿಂದ ಸರಸ ಸುಂದರವಾಗಿ ಆ ಪದ್ಯಗಳ ಅರ್ಥವನ್ನು ನಿರೂಪಿಸಿತು. ತಂದೆಗೂ ಒಂದು ದಿನ ತಿರುಗಿ ಹಚ್ಚಿದ ಈ ಭೂಪ ಬಾಲಕ. ಪುರಾಣ ಹೇಳುವಾಗ "ಲಿಕುಚ" ಎಂಬ ಶಬ್ದದ ಅರ್ಥ ತಿಳಿಯದೆ ಅದನ್ನು ಬಿಟ್ಟೇ ಮುಂದೆ ಸಾಗಿತು ಭಟ್ಟರ ಬಂಡಿ. ಮಗ ಕೇಳಿಯೇ ಬಿಟ್ಟ "ಅಪ್ಪಾ, ಲಿಕುಚ ಶಬ್ದದ ಅರ್ಥ ಹೇಳದೆ ಬಿಟ್ಟದ್ದೇಕೆ" ಎಂದು. ಭಟ್ಟರು ತಡವರಿಸ ಹತ್ತಿದರು. ಜನರಿಗೂ ಕುತೂಹಲ ಅದರ ಅರ್ಥವನ್ನು ತಿಳಿದೇತೀರಬೇಕೆಂದು. ಮಗುವನ್ನೇ ಕೇಳಿದರು " ಲಿಕುಚ ಎಂದರೆ ಏನು? " ಕೂಡಲೇ ವಾಸುದೇವ ಸ್ಪಷ್ಟವಾಗಿ ನುಡಿದ "ಲಿಕುಚ ಎಂದರೆ ಹೆಬ್ಬಲಸು" ಎಂದು.

## ಉಪನಯನ, ಅಧ್ಯಯನ

ವಾಸುದೇವನು ಎಂಟನೇ ವಯಸ್ಸಿನಲ್ಲಿದ್ದಾಗ ಮಧ್ಯಗೇಹ ಭಟ್ಟರು ಎಲ್ಲ ಆಪ್ತೇಷ್ಟರಿಂದೊಡಗೂಡಿ ಅವನ ಉಪನಯನವನ್ನು ನೆರವೇರಿಸಿದರು. ಉಪನಯನವಾದ ಬಳಿಕ ಭಟ್ಟರು ವಾಸುದೇವನನ್ನು ವೇದಶಾಸ್ತ್ರಗಳ ಅಧ್ಯಯನಕ್ಕಾಗಿ ತೋಟಂತಿಲ್ಲಾಯ ಎಂಬ ವಿದ್ವಾಂಸರ ಬಳಿಗೆ ಕಳಿಸಿದರು. ಗುರುಗಳು ವಾಸುದೇವನ ವಿಲಕ್ಷಣ ಪ್ರತಿಭೆಯನ್ನು ಕಂಡು ಬೆರಳು ಕಚ್ಚಿದರು. ಸರ್ವಜ್ಞನ ಸಂಕ್ಷಿಪ್ತ ಆವೃತ್ತಿಯಂತಿದ್ದ ವಾಸುದೇವನು ಕೆಲವು ದಿನಗಳಲ್ಲಿಯೇ ತೋಟಂತಿಲ್ಲಾಯರಲ್ಲಿ ಓದುವ ಶಾಸ್ತ್ರಮಾಡಿ ಮುಗಿಸಿದ. ಕೊನೆಗೆ ಅವರಿಗೆ ಗುರುದಕ್ಷಿಣಾ ರೂಪವಾಗಿ ಐತರೇಯ ಉಪನಿಷತ್ತಿನ ರಹಸ್ಯಾರ್ಥವನ್ನು ತಿಳಿಸಿದನು. ಆದರಿಂದ ಆ ಗುರುಗಳಿಗೆ ಗೋವಿಂದನಲ್ಲಿ ಭಕ್ತಿ ಹುಟ್ಟಿತು. ಮುಕ್ತಿ ಕರಗತವಾಯಿತು.

ಉಪನಯನವಾದ ಬಳಿಕ ವಾಸುದೇವನ ವೃತ್ತಿ ವಿಲಕ್ಷಣವಾಗಿದ್ದಿತು. ವೈಷ್ಣವ ಸಿದ್ಧಾಂತದ ಪ್ರಸಾರ ಮತ್ತು ವೇದಸಿದ್ಧಾಂತದ ಪುನರುದ್ಧಾರವನ್ನು ಮಾಡಬೇಕೆಂದು. ಶ್ರೀ ಹರಿಯು ಅಂದು ತಮಗೆ ಮಾಡಿದ ಆದೇಶದ ಅರಿವು ಅವನ ಹೃದಯದಲ್ಲಿ ನಿತ್ಯ ನಿಚ್ಚಳವಾಗಿದ್ದಿತು.

## ಕರ್ತವ್ಯದ ಕರೆ

ಇದಕ್ಕೂ ಮೊದಲು ಅನೇಕ ಜನ ಆಚಾರ್ಯರೂ, ಮತಸ್ಥಾಪಕರೂ ಸಂಪ್ರದಾಯ ಪ್ರವರ್ತಕರೂ ಹುಟ್ಟಿ ಬೇರೆ ಬೇರೆ ತತ್ವಗಳನ್ನು ಹೇಳಿ ತಾತ್ವಿಕ ಪ್ರಪಂಚದಲ್ಲಿ ಕೋಲಾಹಲವನ್ನು ಎಬ್ಬಿಸಿದ್ದರು. ದೇವರೇ ಇಲ್ಲ ಎಂದು ಕೆಲವರು. ಇದ್ದರೂ ಅವನಲ್ಲಿ ಗುಣವಿಲ್ಲವೆಂದು ಹಲವರು. ಗುಣಗಳಿದ್ದರೂ ಪರಿಮಿತ ಗುಣಗಳು ಎಂದು ಇತರರು. ಹೀಗೆ ದೇವರ ಜಗ್ಗಾಟ ನಡೆದಿತ್ತು. ಕಣ್ಣಿಗೆ ಕಂಡದ್ದು ಮಾತ್ರ ಸತ್ಯ. ಕಾಣದ್ದೆಲ್ಲವು ಮಿಥ್ಯ ಎಂದು ಒಬ್ಬರು ವಾದಿಸಿದರೆ ಕಣ್ಣಿಗೆ ಕಂಡದ್ದೇ ಮಿಥ್ಯ. ಕಾಣದ್ದು ಸತ್ಯ ಎಂದು ಮತ್ತೊಬ್ಬರು ಸಾಧಿಸಿದರು. ಕೆಲವರು ನಾನೇ ಈಶ್ವರ ಎಂದರು. ಜೀವ, ಜಡ, ಈಶ್ವರ ಎಲ್ಲವೂ ಒಂದು ಎಂದು ಅವರ ವಾದ. ಇಲ್ಲಿ ಆಗದಿದ್ದರೂ ಅಲ್ಲಿ ಜೀವರಲ್ಲಿ ತಾರತಮ್ಯವಿಲ್ಲ ಎಂದು ಸಮರ್ಥಿಸಿದರು ಮತ್ತೆ ಕೆಲ ಬುದ್ಧಿವಂತರು. ಕೆಲವರು ಕರ್ಮವೇ ತಾರಕವೆಂದರು. ಅದರಲ್ಲಿ ಸುಧಾರಣೆ ಮಾಡಹೋಗಿ ಜ್ಞಾನಮಾತ್ರ ಸಾಕು ಎಂದು ನುಡಿದು ಕರ್ಮವಾದವನ್ನು ಖಂಡಿಸಿದವರು ಹಲವರು. ಭಕ್ತಿ ಒಂದೇ ಸಾಕು ಎಂದು ನುಡಿದವರೂ ಅನೇಕರು. "ಪಿಂಡೇ ಪಿಂಡೇ ಮತಿರ್ಭಿನ್ನಾ". ನೂರು ಜನ, ನೂರು ಮನ, ನೂರು ಮತ. "ನೈಕೋ ಮುನಿಃಯಸ್ಯ ಮತಂ ಪ್ರಮಾಣಂ". ಇವರ ಯಾವ ಮತವೂ ಶಾಸ್ತ್ರಸಮ್ಮತವಾಗಿರಲಿಲ್ಲ. ಯಾವ ವಾದವೂ ವೇದಸಂವಾದಿ ಆಗಿರಲಿಲ್ಲ.

ನಿಜವಾದ ತತ್ವಬುಭುತ್ಸುಗಳು ವಸ್ತು ತತ್ವವನ್ನು ತಿಳಿಯದೆ ಕಂಗೆಟ್ಟಿದ್ದರು. ಎಲ್ಲ ಮತ ಧರ್ಮಗಳ ಕಲಹ ಕೋಲಾಹಲದಲ್ಲಿ ಶುತ್ರಿಯ ಸದ್ದೇ ಅಡಗಿತ್ತು. ಪ್ರಮಾಣಗಳು ಪರದೇಶಿಯಾಗಿದ್ದವು.

### ಗುರೂತ್ತಮರ ಗುರಿಯ ನಿರ್ಧಾರ

ಇದನ್ನು ನೋಡಿ ವಾಸುದೇವನಿಗೆ ತನ್ನ ಕರ್ತವ್ಯದ ಅರಿವು ಜಾಗ್ರತವಾಯಿತು. ಯತಿಯಾಗಿ ಸರ್ವಸಂಗವನ್ನು ಪರಿತ್ಯಾಗ ಮಾಡಿ ತನ್ನ ಇಡೀ ಜೀವನವನ್ನು ತತ್ವಜ್ಞಾನ ಪ್ರಸಾರಕ್ಕಾಗಿ ಮೀಸಲಾಗಿ ಇರಿಸಬೇಕೆಂದು ಅವನು ಸಂಕಲ್ಪಿಸಿದ. ಇದೇ ವಿಚಾರದಲ್ಲಿ ಅನಂತೇಶ್ವರನ ಅನುಗ್ರಹ ವಿಶೇಷವನ್ನು ಪಡೆಯಲು ಅವನು ಉಡುಪಿಗೆ ಆಗಮಿಸಿದ. ಅವನ ಕಣ್ಣುಗಳು ತನಗೆ ಯತ್ಯಾಶ್ರಮವನ್ನು ಕೊಡಲು ಯೋಗ್ಯನಾದ ಗುರುವನ್ನು ಅರಿಸುತ್ತಿದ್ದವು.

## ಗುರುವಿನ ಶೋಧದಲ್ಲಿ ಪೂರ್ಣಬೋಧರು

ಗುರುವಿನ ಅನ್ವೇಷಣೆಯಲ್ಲಿ ವಾಸುದೇವ ಅನಂತೇಶ್ವರನ ಗುಡಿಗೆ ಬಂದಾಗ ಅವನಿಗೆ ಅಚ್ಯುತಪ್ರೇಕ್ಷರೆಂಬ ಯತಿಗಳ ದರ್ಶನವಾಯಿತು. ಅವರು ಸಾಧಾರಣ ಸನ್ಯಾಸಿಯಾಗಿರಲಿಲ್ಲ. ಸನಕಾದಿ ಪರಂಪರಾ ಪ್ರಾಪ್ತವಾದ ವೈಷ್ಣವ ಪೀಠದಲ್ಲಿ ಅವರು ಮಂಡಿಸಿದ್ದರು. ಅಚ್ಯುತಪ್ರೇಕ್ಷರು ಹಿಂದೆ ದ್ವಾಪರದಲ್ಲಿ ಮಧುಕರೀ ವೃತ್ತಿಯಿಂದ ಜೀವನ ಮಾಡುತ್ತ ತಪಸ್ಸನ್ನು ಆಚರಿಸುತ್ತಿದ್ದರು. ಮುಂದೆ ಅವರು ಹಸ್ತಿನಾವತಿಗೆ ಬಂದು ಪಾಂಡವರ ಮನೆಯಲ್ಲಿ ದ್ರೌಪದೀ ದೇವಿಯರ ಕೈಯಿಂದ ಊಟ ಮಾಡಿದರು. ಭಾರತೀದೇವಿಯರು ಬಡಿಸಿದ ಪವಿತ್ರ ಅನ್ನವನ್ನು ಉಂಡು ಅವರು ಅನೇಕ ವರ್ಷ ಪಾಂಡವರ ಮನೆಯಲ್ಲಿಯೇ ವಾಸವಾಗಿದ್ದರು. ಆ ಪುಣ್ಯವೇ ಈಗ ಅವರನ್ನು ಸನಕಾದಿಗಳ ಪರಮಹಂಸ ಪೀಠಕ್ಕೆ ಏರಿಸಿತ್ತು."

## ಪುರಂದರದಾಸರು ಹೇಳಿದ ಪರಮಹಂಸ ಪೀಠದ ಪರಂಪರೆ

"ಶ್ರೀ ಪತಿಯನಾಭಿ ಕಮಲದಲಿ ಅಜ ಜನಿಸಿದನು.
ಅಜನ ಮಾನಸ ಪುತ್ರರೇ ಸನಕಾದಿಗಳು.
ಸನಕಾದಿಗಳ ಶಿಷ್ಯರೇ ದೂರ್ವಾಸರು.
ದೂರ್ವಾಸರ ಶಿಷ್ಯರೇ ಪರತೀರ್ಥರು.
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು.
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು.
ಪ್ರಾಜ್ಞತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು.
ಅಚ್ಯುತಪ್ರೇಕ್ಷರ ಸಂಜಾತರೇ ಮಹಾಭಾಷ್ಯಕಾರರು.
ಮಹಾಭಾಷ್ಯಕಾರರೇ ಗುರು ಮುಖ್ಯ ಪ್ರಾಣರು.
ಗುರು ಮುಖ್ಯ ಪ್ರಾಣ ಪತಿ ನಮ್ಮ ಪುರಂದರ ವಿಠಲನ
ದಾಸರಿಗೆ ನಮೋ ನಮಃ"

ಎಂದು ಪುರಂದರದಾಸರು ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾದ ಈ ಪರಮಹಂಸ ಪೀಠದ ಗುರು ಪರಂಪರೆಯನ್ನು ಬಣ್ಣಿಸಿದ್ದಾರೆ.

ಅಚ್ಯುತಪ್ರೇಕ್ಷರು ಅದೇ ಮಹಾ ಪೀಠದ ಗುರು ಗದ್ದಿಗೆಯಲ್ಲಿ ಮಂಡಿಸಿದ್ದರು.

ಸನಕಾದಿ ಪರಮಹಂಸರಿಂದ ಅಲಂಕೃತವಾದ ಆ ಜಗದ್ಗುರು ಪೀಠದ ಮಹಿಮೆಯನ್ನು ಅರಿತ ವಾಸುದೇವನು ಅಚ್ಯುತ ಪ್ರೇಕ್ಷರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದನು. ಈ ಬಾಲಯತಿಗಳ ಜ್ಞಾನದ ಗರಿಮೆಯನ್ನು ತಿಳಿದ ಗುರುಗಳು ತಮ್ಮ ಈ ಹೊಸ ಶಿಷ್ಯನಿಗೆ ಪೂರ್ಣಪ್ರಜ್ಞ ಎಂದು ಹೆಸರಿಟ್ಟರು. " ದಶಪ್ರಮತಿಂ ಜನಯಂತ

ಯೋಷಣಃ " ಎಂಬ ಋಗ್ವೇದದ ಮಂತ್ರದಲ್ಲಿ ಈ ಸರ್ವಜ್ಞರ ಸ್ಪಷ್ಟ ಉಲ್ಲೇಖವು ಕಂಡು ಬರುತ್ತದೆ.

ನಡ್ಡಂತಿಲ್ಲಾಯರ ಮಗ ವಾಸುದೇವನು ಅಂದಿನಿಂದ ಪೂರ್ಣಪ್ರಜ್ಞ ಎಂಬ ಹೆಸರಿನಿಂದ ಜಗತ್ಪ್ರಸಿದ್ಧನಾದನು.

## ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ

ಪೂರ್ಣಪ್ರಜ್ಞರು ಸ್ವಯಂ ಸರ್ವಜ್ಞರಾದರೂ ಶಿವ, ಶೇಷ, ಗರುಡಾದಿ ದೇವತೆಗಳಿಂದ ವಂದ್ಯರಾದರೂ ಅಚ್ಯುತಪ್ರೇಕ್ಷರೇ ಮೊದಲಾದ ಗುರು ಹಿರಿಯರನ್ನು ವಂದಿಸುವದನ್ನು ಕಂಡು ದೇವತೆಗಳೂ ಕೌತುಕಪಡುತ್ತಿದ್ದರು. ಲೋಕಶಿಕ್ಷಣಕ್ಕಾಗಿಯೇ ಅವರ ಅವತಾರವಲ್ಲವೇ ?

ಪೂರ್ಣಪ್ರಜ್ಞರ ನಯ ವಿನಯ ವೈದುಷ್ಯ ವೈರಾಗ್ಯಾದಿ ಗುಣಗಳನ್ನು ಕಂಡು ಅಚ್ಯುತಪ್ರೇಕ್ಷರಿಗೆ ಅವರಲ್ಲಿ ಅಭಿಮಾನ ಮೂಡಿ ಅರಗಳಿಗೆಯೂ ಅವರನ್ನು ಬಿಟ್ಟು ಅಗಲದಂತಾಯಿತು.

## ' ತೀರ್ಥೀ ಕುರ್ವಂತಿ ತೀರ್ಥಾನಿ '

ಒಮ್ಮೆ ಬಾಲ ಯತಿಗಳಿಗೆ ಗಂಗಾ ಸ್ನಾನ ಮಾಡಿ ಬರಬೇಕೆಂದು ಬಯಕೆಯಾಯಿತು. ಗುರುಸ್ವಾಮಿಗಳಿಗೆ ಧರ್ಮಸಂಕಟ. ಶಿಷ್ಯನನ್ನು ಬಿಟ್ಟು ಇರಲಾರರು. ಬೇಡವೆಂದೂ ಹೇಳಲಾರರು. ತಮ್ಮ ಈ ಹೊಸ ಶಿಷ್ಯನ ವಿರಹದ ಕಲ್ಪನೆಯೂ ಅಸಹ್ಯವಾಗಿ ಶ್ರೀಹರಿಗೆ ಅವರು ಮೊರೆ ಇಟ್ಟರು. ಆಗ ಅನಂತೇಶ್ವರ ಅವರ ಮೇಲೆ ದಯ ದೋರಿದ. ಇಂದಿನಿಂದ ಮೂರನೆಯ ದಿನ ಆ ದೇವಗಂಗೆಯು ದೇವಸ್ಥಾನದ ಪಕ್ಕದ ಪುಷ್ಕರಣಿಯಲ್ಲಿಯೇ ಪ್ರಕಟವಾಗುತ್ತಾಳೆ ಎಂದು ಶ್ರೀ ಹರಿಯು ಸೂಚನೆಯನ್ನಿತ್ತ. ಅದರಂತೆ ಮೂರನೇ ದಿನ ಅಲ್ಲಿ ಗಂಗಾವತರಣವಾಯಿತು. ಗುರು ಶಿಷ್ಯರಿಬ್ಬರೂ ನೆರೆದ ಮಂದಿಯೊಂದಿಗೆ ಅದರಲ್ಲಿ ಮಿಂದು ಪೂತರಾದರು. ಮನಸ್ಸಿನಲ್ಲಿ ಪ್ರೀತರಾದರು. ಈ ಪಾವನ ಪ್ರಸಂಗದ ಮಧುರ ನೆನಪಿಗಾಗಿ ೧೨ ವರ್ಷಕ್ಕೊಮ್ಮೆ ಈ ಪುಷ್ಕರಣಿಯಲ್ಲಿ ( ಮಧ್ವ ಸರೋವರ ) ಗಂಗೆಯ ಪ್ರಾದುರ್ಭಾವವು ಆಗಬೇಕು ಎಂದು ಅನಂತೇಶ್ವರನು ಆಜ್ಞೆ ಇತ್ತ. ಅಂದಿನಿಂದ ಆ ಅನಂತಸರೋವರ ಮಧ್ವಸರೋವರವಾಯಿತು.

## ಹಿಂದಿನ ವಾಸುದೇವನೆದುರು ತಾರ್ಕಿಕ ವಾಸುದೇವ ಶೃಗಾಲ ವಾಸುದೇವನಾದ

ಆಶ್ರಮವಾದ ನಲವತ್ತು ದಿನಗಳ ಅನಂತರ ವಾಸುದೇವ ಮೊದಲಾದ ಉದ್ದಂಡ ಪಂಡಿತರು ವಿಜಗೀಷೆಯಿಂದ ಅಲ್ಲಿಗೆ ಬಂದರು. ಮೂರು ದಿನ ನ್ಯಾಯ, ವೈಶೇ

ಷಿಕಾದಿ ಶಾಸ್ತ್ರಗಳಲ್ಲಿ ತುರುಸಿನಿಂದ ವಾದ ನಡೆಯಿತು. ವಾಸುದೇವ ಪಂಡಿತನು ಆ ಕಾಲವ ನಾಮಾಂಕಿತರಾದ ನೈಯಾಯಿಕ ಪಂಡಿತರನ್ನೆಲ್ಲ ಗೆದ್ದು ತರ್ಕ ಕರ್ಕಶ ವಿದ್ವಾಂಸ ಎಂದು ವಿಖ್ಯಾತನಾಗಿದ್ದ. ಇಂಥ ಅಪ್ರತಿಮ ಪಂಡಿತನನ್ನು ಪೂರ್ಣಪ್ರಜ್ಞರು ತಮ್ಮ ಪ್ರತಿಭಾಪ್ರಾಗಲ್ಭ್ಯದಿಂದ ಲೀಲಾಜಾಲವಾಗಿ ಸೋಲಿಸಿದರು. ಮಧ್ಯಸ್ಥರು ವಾಸುದೇವ ಪಂಡಿತ ಮೊದಲಾದವರು ಪರಾಜಿತರಾದರು ಎಂಬ ತಮ್ಮ ನಿರ್ಣಯ ಪತ್ರಿಕೆಯನ್ನು ಓದಿ ಘೋಷಿಸಿದರು.

## ಮೊದಲು ತುತ್ತಿನಲ್ಲಿಯೇ ಮಕ್ಷಿಕಾಪಾತ

ಅಚ್ಯುತಪ್ರೇಕ್ಷರಿಗೆ ಇದರಿಂದ ಪರಮಾನಂದವಾಯಿತು. ತಮ್ಮ ಶಿಷ್ಯನ ಬುದ್ಧಿ ಇನ್ನೂ ಹರಿತವಾಗಲಿ ಎಂದು ಅವರು ಇಷ್ಟಸಿದ್ಧಿ ಎಂಬ ಅದ್ವೈತ ಗ್ರಂಥವನ್ನು ತಮ್ಮ ಸುಕುಮಾರ ಶಿಷ್ಯನಿಗೆ ಪಾಠ ಹೇಳತೊಡಗಿದರು. ಆವರ ಮಂಗಲಾಚರಣ ಪದ್ಯ ದಲ್ಲಿಯೇ ಮೂವತ್ತೆರಡು ತಪ್ಪುಗಳನ್ನು ಎತ್ತಿ ತೋರಿಸಿದರು ಈ ಚಿಕ್ಕ ಶಿಷ್ಯೋತ್ತಮ. ಇದರಿಂದ ಗುರುಗಳಿಗೆ ತುಸು ಕೋಪ ಬಂದರೂ ಈ ಗುರು ಶಿಷ್ಯರ ಸಂವಾದವನ್ನು ಕೇಳುವ ಜನರಿಗೆ ಮಾತ್ರ ಅದ್ವೈತಸಿದ್ಧಾಂತದ ಬಗೆಗೆ ಇರುವ ಶ್ರದ್ಧೆಯ ಬುನಾದಿಯೇ ಅಭದ್ರವಾಗಿ ಹೊಯ್ದಾಡಹತ್ತಿತು.

ಮತ್ತೊಂದು ದಿನ ಅಚ್ಯುತಪ್ರೇಕ್ಷರು ಭಾಗವತವನ್ನು ಪ್ರವಚನ ಮಾಡುವಾಗ ಬೇರೆ ಬೇರೆ ಪುಸ್ತಕಗಳಲ್ಲಿ ಭಿನ್ನ ಭಿನ್ನ ಪಾಠಾಂತರಗಳು ಇರುವದು ಕಂಡುಬಂದಿತು. ಆಗ ಬಾದರಾಯಣ ಸಮ್ಮತವಾದ ಶುದ್ಧ ಪಾಠ ಯಾವದೆಂಬುದು ಸಂದೇಹ ಎಲ್ಲರಿಗೂ ಬಂದಿತು. ತಕ್ಷಣ ಪೂರ್ಣಪ್ರಜ್ಞರು ವ್ಯಾಸ ಸಮ್ಮತವಾದ ಶುದ್ಧ ಪಾಠವನ್ನು ಹೇಳಿದರು. ಉಳಿದ ಶಿಷ್ಯರೂ ಗುರುಗಳೂ ಬಗೆಬಗೆಯಿಂದ ಪೂರ್ಣಪ್ರಜ್ಞರನ್ನು ಭಾಗವತದಲ್ಲಿ ಪರೀಕ್ಷೆ ಮಾಡಿ ಕೊನೆಗೆ ಅವರು ಹೇಳಿದ ಪಾಠವೇ ವ್ಯಾಸ ಸಮ್ಮತವಾದ ಭಾಗವತ ಪಾಠವೆಂದು ಒಪ್ಪಿಕೊಂಡರು.

## ಮಧ್ವಾಖ್ಯಂ ಮಂತ್ರ ಸಿದ್ಧವ್

ತಮ್ಮ ಈ ಹೊಸ ಶಿಷ್ಯನ ಅದ್ಭುತ ಪಾಂಡಿತ್ಯ ಪ್ರತಿಭೆ, ಪ್ರಭಾವಗಳನ್ನು ನೋಡಿ ಪ್ರಸನ್ನರಾದ ಅಚ್ಯುತಪ್ರೇಕ್ಷಾಚಾರ್ಯರು ಪೂರ್ಣಪ್ರಜ್ಞರನ್ನು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು. ಹಾಗೂ ಆನಂದತೀರ್ಥ ಎಂಬ ಹೊಸ ಹೆಸರನ್ನು ಕೊಟ್ಟರು. ಆನಂದ ರೂಪನಾದ ಹರಿಯ ಮುಖ್ಯ ಆವಾಸಭೂತರೂ ಆನಂದದಾಯಕವಾದ ಶಾಸ್ತ್ರವನ್ನು ಮಾಡುವವರೂ ಆದ ಪೂರ್ಣಪ್ರಜ್ಞರಿಗೆ ಆನಂದ ತೀರ್ಥ ಅರ್ಥಾತ್ ಮಧ್ವ ಎಂಬ ಮಂತ್ರಸಿದ್ಧವಾದ ಹೆಸರು ಅನ್ವರ್ಥಕವೇ ಆಗಿದ್ದಿತು.

## ಅನುಮಾನ ತೀರ್ಥ ಎಲ್ಲ ಹೆಸರೂ ಸಾರ್ಥ

ಅಚ್ಯುತಪ್ರೇಕ್ಷರಿಗೆ ಒಬ್ಬ ಸನ್ಯಾಸಿ ಮಿತ್ರನಿದ್ದ. ಅವನ ಶಿಷ್ಯರು ನ್ಯಾಯ ಶಾಸ್ತ್ರದಲ್ಲಿ ಪ್ರಚಂಡ ಪಂಡಿತರು. ಅವರೆಲ್ಲರೂ ಆನಂದತೀರ್ಥರ ವಾದ-ವೈದುಷ್ಯ ವನ್ನು ಕೇಳಿ ಅವರೊಡನೆ ವಾಕ್ಯಾರ್ಥ ಮಾಡಲಿಕ್ಕೆ ಬಂದರು. ಗರುಡನ ಎದುರು ಹಾವುಗಳ ಹಾರಾಟ ಎಷ್ಟು ಹೊತ್ತು ನಡೆದೀತು ! ಆ ತರ್ಕ ವಿಚಕ್ಷಣರ ಅನುಮಾನ ವಾದವನ್ನು ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವಂತೆ ವೇದದ ಬೆಂಬಲವುಳ್ಳ ಅನುಮಾನಗಳಿಂದ ಅಕ್ಷರಶಃ ಆನಂದತೀರ್ಥರು ಖಂಡಿಸಿದರು. ಅದರ ಮೇಲೆ ಪ್ರತಿ ಪಕ್ಷಿಗಳು ಎತ್ತಿದ ಆಕ್ಷೇಪಗಳನ್ನೆಲ್ಲ ಕ್ಷಣಾರ್ಧದಲ್ಲಿ ದೂಷಿಸಿದರು. ಅವರ ಈ ವಿಲಕ್ಷಣ ವಾದ ಅನುಮಾನ ವೈಚಕ್ಷ್ಯವನ್ನು ಕಂಡು ಅಲ್ಲಿ ನೆರೆದ ವಿದ್ವಾಂಸರು ವಿಪಕ್ಷಿ ವರಿಷ್ಠರೂ ಆನಂದತೀರ್ಥರಿಗೆ ಅನುಮಾನ ತೀರ್ಥರು ಎಂಬ ಹೊಸ ಹೆಸರನ್ನು ಕೊಟ್ಟರು.

ಇದರಂತೆ ದಿಗ್ದೇಶದ ಪಂಡಿತ ದಿಗ್ಗಜಗಳನ್ನೆಲ್ಲ ಮುಖಭಂಗ ಮಾಡಿ ಬಂದ ವಾದಿಸಿಂಹ ಎಂಬ ಬೌದ್ಧ ಪಂಡಿತನು ಆನಂದತೀರ್ಥರ ಜೊತೆಗೆ ವಾದಕ್ಕೆ ಇಳಿದನು. ವಾದಿಸಿಂಹನ ವಾದಾಟೋಪ ಬಹಳ. ಅವನು ಮಾತನಾಡಿದರೆ ಮೇಘವು ಗುಡಿಗಿ ದಂತೆ ಇರುತ್ತಿತ್ತು. ಗುರುಮಧ್ವರು ಅವನ ಒಂದು ಮಾತನ್ನು ಖಂಡಿಸಿದಾಗ ಅದಕ್ಕೆ ಅವನು ಹದಿನೆಂಟು ಅರ್ಥಗಳನ್ನು ಹೇಳಿದನು. ನೆರೆದ ಜನರಿಗೆ ಈ ಸಿಂಹದ ಮುಂದೆ ಈ ಚಿಕ್ಕ ಕಂದನಾದ ಆನಂದತೀರ್ಥ ಯತಿಯು ಸೋಲುವದು ನಿಶ್ಚಿತ ಎಂದು ಎನಿಸ ಹತ್ತಿತು. ಆದರೆ ಜಗತ್ತನ್ನೇ ಕವಿದಕತ್ತಲೆಯ ಮೊತ್ತವನ್ನು ಕೊಚ್ಚಿ ಹಾಕಲು ಸೂರ್ಯನಿಗೆ ಏನು ಆಯಾಸ !

ಬೌದ್ಧಮತದ ಉದ್ದಾಮ ವಿದ್ವಾಂಸರಾದ ವಾದಿಸಿಂಹ, ಮತ್ತು ಬುದ್ಧಿಸಾಗರ ಮುಂತಾದ ಪಂಡಿತರು ಉಡುಪಿಗೆ ಬಂದು ಆಚಾರ್ಯರ ಜೊತೆಗೆ ವಾದವಿವಾದ ಮಾಡಿ ಸೋತು ಓಡಿಹೋದರು.

ತಮ್ಮ ಆಶ್ರಮ ಗುರುಗಳಾದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರ ಹಾಗೂ ಪೆಜ್ಜತ್ತಾಯ (ಲಿಕುಚ) ಕುಲದಲ್ಲಿ ಜನಿಸಿದ ಮತ್ತೊಬ್ಬ ಜ್ಯೇಷ್ಠ ಯತಿಗಳ ಅಪೇಕ್ಷೆ ಯಂತೆ ಪೂರ್ಣಪ್ರಜ್ಞರು ಬಾದರಾಮಣರ ಬ್ರಹ್ಮ ಸೂತ್ರಗಳಿಗೆ ಈ ವರೆಗೆ ಬೇರೆ ಬೇರೆ ಪಂಡಿತರು ಬರೆದ ದುರ್ಭಾಷ್ಯಗಳನ್ನೆಲ್ಲ ಖಂಡಿಸಿ ನಿರ್ದುಷ್ಟವಾದ ಪ್ರಮಾಣ ಪ್ರಮಿತವಾದ ಸಿದ್ಧಾರ್ಥವನ್ನು ಹೇಳುತ್ತ ವೇದಾಂತ ಪ್ರವಚನವನ್ನು ಮಾಡಿದರು.

## ಆಚಾರ್ಯರ ದಕ್ಷಿಣ ದೇಶದ ದಂಡಯಾತ್ರೆ

ತಮ್ಮ ಗುರುಗಳಾದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರು ಮತ್ತು ತಮ್ಮ ಶಿಷ್ಯ ರಿಂದ ಒಡಗೂಡಿಕೊಂಡು ಉಡುಪಿಯಿಂದ ಹೊರಟು ವಿಷ್ಣುಮಂಗಲ ದೇವಾಲಯಕ್ಕೆ

ಹೋಗಿ ಅಲ್ಲಿಯ ವಿದ್ವದ್ಭಕ್ತರಿಂದ ಸತ್ಕಾರಿತರಾಗಿ ಅನಂತಶಯನಕ್ಕೆ ದಯಮಾಡಿಸಿದರು. ಅಲ್ಲಿ ನೆರೆದ ವಿದ್ವಜ್ಜನರ ಎದುರು ವೇದ ಪುರಾಣ ಸಮ್ಮತವಾದ ಬ್ರಹ್ಮಸೂತ್ರಗಳ ಅರ್ಥ ವಿವರಣೆಯನ್ನು ಮಾಡಿದರು. ಬ್ರಹ್ಮ ಮೀಮಾಂಸಾ ಶಾಸ್ತ್ರಕ್ಕೆ ಜೀವಜಗದ್ವಿಲಕ್ಷಣನಾದ ಶ್ರೀವಿಷ್ಣುವಿನ ಮಹಾ ಮಹಿಮೆಯನ್ನೂ ಗುಣಪರಿಪೂರ್ಣತೆಯನ್ನೂ ಹೇಳುವದೇ ಮುಖ್ಯ ಉದ್ದೇಶವಾಗಿದೆ ಎಂದು ಸ್ಪಷ್ಟಪಡಿಸಿದರು. ಅನಂತಶಯನದಲ್ಲಿ ತಮ್ಮ ಜೊತೆಗೆ ವಾದಕ್ಕೆ ಬಂದ ಅದ್ವೈತ ಮತದ ಶಂಕರಾಚಾರ್ಯ ಎಂಬ ಯತಿಗಳನ್ನು ಅಲ್ಲಿ ನೆರೆದ ಅಶೇಷ ವಿದ್ವದ್ವೃಂದದ ಎದುರು ಸೋಲಿಸಿ ಸತ್‌ಸಿದ್ಧಾಂತವನ್ನು ಆಸ್ತಿಕರಿಗೆ ಬೋಧಿಸಿ ಅಲ್ಲಿಂದ ಕನ್ಯಾಕುಮಾರಿಯ ಕಡೆಗೆ ಪ್ರಯಾಣ ಬೆಳೆಸಿದರು. ಮುಂದೆ ರಾಮೇಶ್ವರಕ್ಕೆ ಹೋಗಿ ಅಲ್ಲಿ ಚಾತುರ್ಮಾಸ್ಯ ಸಂಕಲ್ಪವನ್ನು ಮಾಡಿ ನಾಲ್ಕು ತಿಂಗಳವರೆಗೆ ಪ್ರತಿ ದಿನವೂ ಸಚ್ಛಾಸ್ತ್ರಪಾಠ ಪ್ರವಚನ, ಉಪದೇಶಗಳಿಂದ ಸಿದ್ಧಾಂತ ಪ್ರಚಾರವನ್ನು ಮಾಡಿದರು. ಅನಂತರ ಶ್ರೀರಂಗ, ಶ್ರೀಮುಷ್ಣ ಮುಂತಾದ ಕ್ಷೇತ್ರಗಳಲ್ಲಿರುವ ಭಗವದ್ರೂಪಗಳನ್ನು ವಂದಿಸಿ ವೇದ ಮತದ ತತ್ವಗಳನ್ನು ತಿಳಿಸುತ್ತ ಪಯಸ್ವಿನೀ ನದೀ ತೀರದ ಪಲ್ಲಿಕೊಂಡೆ ಎಂಬ ಗ್ರಾಮಕ್ಕೆ ಬಂದರು. ಅಲ್ಲಿಯ ವೇದಶಾಸ್ತ್ರ ಚತುರರಾದ ವಿದ್ವಜ್ಜನರು ಐತರೇಯ ಶ್ರುತಿಯ ಮಂತ್ರಾರ್ಥವನ್ನು ವಿವರಿಸಬೇಕೆಂದು ಕೇಳಿಕೊಂಡರು.

## ವೇದಪ್ರತಿಪಾದ್ಯರ ವೇದವೈದುಷ್ಯ

ಸರ್ವಜ್ಞರಾದ ಶ್ರೀ ಮಧ್ವಾಚಾರ್ಯರು ಆ ಐತರೇಯ ಮಂತ್ರವನ್ನು ತಮ್ಮ ಸುಸ್ವರ ಕಂಠದಿಂದ ಮಧುರವಾಗಿ ಸ್ವರಪೂರ್ವಕ ಉಚ್ಚಾರ ಮಾಡಿ ಅನಂತರ ವೇದಾಂಗ ವೇದಾಂತಗಳಿಗೆ ಸಮ್ಮತವಾದ ಆ ಸೂಕ್ತಾರ್ಥವನ್ನು ಸುಂದರವಾಗಿ ವಿವರಿಸಿ ವೇದಗಳಿಗೆ ಕರ್ಮಪರ, ದೇವತಾಪರ, ವಿಷ್ಣುಪರ ಎಂದು ಮೂರು ಬಗೆಯಾದ ಅರ್ಥ, ಮಹಾ ಭಾರತಕ್ಕೆ ಹತ್ತು ಅರ್ಥ, ಮತ್ತು ವಿಷ್ಣುಸಹಸ್ರ ನಾಮಕ್ಕೆ ನೂರು ಅರ್ಥಗಳು ಆಗುತ್ತವೆಂದು ತಿಳಿಸಿದರು.

## ಪರವಾದಿಗಳಿಂದ ' ಸರ್ವಜ್ಞ ' ಎಂಬ ಬಿರುದು

ಗುರು ಮಧ್ವರ ಈ ಹೇಳಿಕೆಯನ್ನು ಕೇಳಿ ಅಲ್ಲಿ ನೆರೆದ ಪಂಡಿತ ಮಂಡಲಿಗೆ ಬಹಳ ಆಶ್ಚರ್ಯವಾಯಿತು. " ಹಾಗಾದರೆ ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥವನ್ನು ನೀವು ಹೇಳಿರಿ ನೋಡೋಣ " ಎಂದು ಸವಾಲು ಹಾಕಿದರು. ವಾದದಲ್ಲಿ ಸೋಲಿಸಲಿಕ್ಕಾಗದ ಅವರನ್ನು ಮಾತಿನಲ್ಲಿಯಾದರೂ ಹಿಡಿಯೋಣ ಎಂದು ಹೊಂಚು ಹಣಿಕಿಕ್ಕಿತ್ತು ಅವರ ಈ ಹಂಚಿಕೆಯಲ್ಲಿ.

" ಒಂದು ಕರಾರು " ಮುಗುಳು ನಗೆ ಸುಸುತ್ತ ನುಡಿದರು ಮಧ್ವ ಮುನಿಗಳು. ನಾನೇನೋ ವಿಷ್ಣುಸಹಸ್ರನಾಮದ ಪ್ರತಿಯೊಂದು ಶಬ್ದಕ್ಕೂ ನೂರು ನೂರು ಅರ್ಥ ವನ್ನು ಹೇಳುತ್ತೇನೆ. ಆದರೆ ನಾನು ಹೇಳಿದ್ದನ್ನೆಲ್ಲ ನೀವು ತಿಳಿದುಕೊಂಡು ಮರಳಿ ಅನುವಾದ ಮಾಡಬೇಕು. " ಆಚಾರ್ಯರ ಈ ನಿಬಂಧನೆಗೆ ಅಲ್ಲಿಯ ಪಂಡಿತರು ಸಮ್ಮ



ತಿಸಿದ ಕೂಡಲೇ ಗುರು ಮಧ್ವರು ವಿಷ್ಣುಸಹಸ್ರನಾಮದ ವಿಶ್ವ ಶಬ್ದಕ್ಕೆ ಶಾಸ್ತ್ರ ಸಮ್ಮತವಾದ ವ್ಯಾಕರಣ, ವ್ಯುತ್ಪತ್ತಿ, ನಿಘಂಟು, ನಿರುಕ್ತಿ ಮತ್ತು ಪ್ರಮಾಣ ಸಂವಾದಿ ಗಳನ್ನು ತೋರಿಸುತ್ತ ನೂರು ಅರ್ಥಗಳನ್ನು ವಿವರಿಸಿದರು. ಚಿಕ್ಕ ತಗ್ಗಿನಲ್ಲಿ ಸಾಗರವ ನೀರೇ ನುಗ್ಗಿ ಬಂದಂತಾಯಿತು. ಆಚಾರ್ಯರು ಹೇಳಿದ್ದನ್ನು ಗ್ರಹಿಸಲಿಕ್ಕೆ ಆಗದೆ ಆ ಚತುಶ್ಶಾಸ್ತ್ರ ಪಂಡಿತರೆಲ್ಲರೂ ಸೋತು ಶರಣಾಗತರಾಗಿ ಪೂರ್ಣಪ್ರಜ್ಞರಿಗೆ ದೀರ್ಘ ದಂಡ ನಮಸ್ಕಾರ ಹಾಕಿದರು. " ಸ್ವಾಮಿ ತಾವು ಸಾಕ್ಷಾತ್ ಸರ್ವಜ್ಞ ಕೇಸರಿ. ನಿಮ್ಮ ಬುದ್ಧಿ ಸಿದ್ಧಿಗಳು ದೇವಾಧಿದೇವತೆಗಳಲ್ಲಿಯೂ ದುರ್ಲಭ " ಎಂದು ಹೃದಯ ತುಂಬಿ ಪಾದಗಳಿಗೆ ಪೊಡಮಟ್ಟರು.

ಅಲ್ಲಿಂದ ಆಚಾರ್ಯರು ಕೇರಳ ದೇಶದ ದಿಗ್ವಿಜಯವನ್ನು ಮಾಡಿಕೊಂಡು ಅನೇಕ ಪಂಡಿತರಾದ ಪ್ರತಿವಾದಿಗಳನ್ನು ಪರಾಜಯಗೊಳಿಸಿ ದ್ವೈತ ದುಂದುಭಿಯನ್ನು ಮೊಳಗಿಸುತ್ತ ಉಡುಪಿಗೆ ಬಂದರು.

ಅನಂತರ ಕೆಲವು ದಿನ ಆಚಾರ್ಯರು ಉಡುಪಿಯಲ್ಲಿದ್ದು ಭಗವದ್ಗೀತೆಗೆ ಸರ್ವಶ್ರೇಷ್ಠವಾದ ಭಾಷ್ಯವನ್ನು ಬರೆದು ಗುರುಗಳಿಗೆ ಕೊಟ್ಟು ಅವರ ಅಪ್ಪಣೆ ಪಡೆದು ಉತ್ತರದೇಶ ದಿಗ್ವಿಜಯಕ್ಕೆ ಪ್ರಯಾಣ ಬೆಳೆಸಿದರು.

## ಆಚಾರ್ಯರ ಪ್ರಥಮ ಬದರೀಯಾತ್ರೆ



ಈ ಉತ್ತರ ದೇಶದ ಸಂಚಾರದಲ್ಲಿ ಮಧ್ವಾಚಾರ್ಯರು ಎಲ್ಲ ಕಡೆಗೂ ದುರ್ಮತ ಖಂಡನ ವೇದಮತ ಮಂಡನ ಮಾಡುತ್ತ ಮೋಕ್ಷ ಕಾರಣವಾದ ವೈಷ್ಣವ ಮತದ ತಿರುಳನ್ನು ಆಸ್ತಿಕರಿಗೆಲ್ಲ ತಿಳಿಸಿಹೇಳುತ್ತ ಗಂಗೆಯನ್ನು ದಾಟಿ ಹಿಮಾಲಯದಲ್ಲಿಯ ಬದರೀ ಕ್ಷೇತ್ರಕ್ಕೆ ಬಂದರು. ಬದರಿಕಾಶ್ರಮದಲ್ಲಿ ಅಲ್ಲಿಯ ಕ್ಷೇತ್ರ ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ ತಾವು ಉಡುಪಿಯಲ್ಲಿ ಬರೆದುತಂದ ಗೀತಾ ಭಾಷ್ಯವನ್ನು ಸಮರ್ಪಣೆಗೈದರು.

### ಮಧ್ವರ ಭಾಷ್ಯಕ್ಕೆ ಒಂದು ಮುದ್ದಾದ ತಿದ್ದುಪಡಿ

ಆಚಾರ್ಯರ ದಿವ್ಯವಾದ ಆ ಗೀತಾಭಾಷ್ಯವನ್ನು ನೋಡಿ ಭಗವಂತನಿಗೆ ಅತ್ಯಂತ ಸಂತೋಷವಾಯಿತು. ನಾರಾಯಣನ ಅಪೇಕ್ಷೆಯಂತೆ ಮಧ್ವಮುನಿಗಳು ಜನರನ್ನೆಲ್ಲ ಹೊರಗೆ ಕಳಿಸಿ ಆ ಭಗವನ್ಮೂರ್ತಿಯ ಎದುರು ತಾವು ರಚಿಸಿದ ಸಮಗ್ರ ಗೀತಾ ಭಾಷ್ಯವನ್ನು ಓದಿ ನಿವೇದಿಸಿದರು. ತನ್ನ ಶಿಷ್ಯನಾದ ಸರ್ವಜ್ಞಾಚಾರ್ಯರ ಈ ಗೀತಾಭಾಷ್ಯವು ಅವರ ಗುರು ಗೀತಾಚಾರ್ಯನಿಗೆ ಸಂಪೂರ್ಣ ಸಮ್ಮತವಾಯಿತು. ಆದರೆ ಒಂದೆಡೆ ಮಾತ್ರ ಬದರೀನಾರಾಯಣನು ಗೀತಾಭಾಷ್ಯ ಗ್ರಂಥಕ್ಕೆ ಒಂದು ತಿದ್ದುಪಡಿಯನ್ನು ಸೂಚಿಸಿದರು.

ಗೀತಾಭಾಷ್ಯದ ಪ್ರಾರಂಭದ ಮಂಗಲಾಚರಣ ಪದ್ಯದಲ್ಲಿ "ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ" "ನನಗೆ ಶಕ್ತಿ ಇದ್ದಷ್ಟು ಗೀತಾ ಅರ್ಥವನ್ನು ಹೇಳುತ್ತೇನೆ" ಎಂದು ಪೂರ್ಣಪ್ರಜ್ಞರು ವಿನಯ ಪ್ರದರ್ಶನವನ್ನು ಮಾಡಿದ್ದರು. ಆದಕ್ಕೆ ನಾರಾಯಣನು ನಸುನಕ್ಕು "ಗೀತೆಯ ಇನ್ನೂ ಸೂಕ್ಷ್ಮಾತಿ-ಸೂಕ್ಷ್ಮವಾದ ಅನೇಕ

ಗಹನ ಗೂಢಾರ್ಥಗಳನ್ನು ನೀವು ಬಲ್ಲಿರಿ ಮತ್ತು ಹೇಳಬಲ್ಲಿರಿ. ನಿಮಗೆ ತಿಳಿಯಲು ಶಕ್ಯವಿದ್ದದ್ದನ್ನೆಲ್ಲ ನೀವು ಇಲ್ಲಿ ಬರೆದಿಲ್ಲ. ಜನರ ಉಪಕಾರಕ್ಕಾಗಿ ಅವರಿಗೆ ತಿಳಿಯುವಷ್ಟನ್ನು ಮಾತ್ರ ಇಲ್ಲಿ ಬರೆದಿದ್ದೀರಿ. ಅದು ನಿಮಗೆ ತಿಳಿದಿದ್ದರ ಲೇಶ. ಏಕದೇಶ. ಆದುದರಿಂದ ಇಲ್ಲ ಶಕ್ತಿತಃ ಎಂಬ ಪದದ ಬದಲಾಗಿ ಲೇಶತಃ ಎಂಬ ಶಬ್ದವನ್ನು ಸೇರಿಸಿರಿ." ಎಂದು ಅಪ್ಪಣೆ ಮಾಡಿದರು.

ಬದರೀನಾರಾಯಣನು ತನ್ನ ಸರ್ವಜ್ಞ ಶಿಷ್ಯರ ಬಾಯಿಂದ ಅನೇಕಸಲ ಆ ಗೀತಾ ಭಾಷ್ಯವನ್ನು ಕೇಳಿ ಆನಂದಬಟ್ಟು ಅನುಗ್ರಹಿಸಿದನು. ನಾನು ಅಂದು ಕುರುಕ್ಷೇತ್ರದಲ್ಲಿ ಹೇಳಿದ ಗೀತೆಯ ಭಾವವನ್ನು ಒಬ್ಬನಾದರೂ ಪುಣ್ಯಾತ್ಮ ಸರಿಯಾಗಿ ತಿಳಿದು ವಿವರಿಸಿದನಲ್ಲ ಎಂಬ ಸಂತಸ ಆ ದೇವನ ಹಾವಭಾವದಲ್ಲಿ ಸೂಸುತ್ತಿತ್ತು.

ಬದರಿಕಾಶ್ರಮದಲ್ಲಿ ವಿಪರೀತ ಚಳಿ ಮೈಕೊರೆಯುತ್ತಲಿದ್ದರೂ ಆಚಾರ್ಯರು ಅರುಣೋದಯ ಕಾಲದಲ್ಲೆದ್ದು ಮಂಜುಗಟ್ಟಿದ ಮಂದಾಕಿನಿಯ ತಣ್ಣೀರಿನಲ್ಲಿ ಮಿಂದು ೪೮ ದಿನ ಕಾಷ್ಠ ಮೌನವ್ರತದಿಂದ ಮುಕುಂದನ ನಿರಶನ ಸೇವೆ ಮಾಡಿದರು.

## ಮಧ್ವಾಚಾರ್ಯರ ಶಾಸನ ಬದ್ಧ ಸಂದೇಶ

ಪೂರ್ಣ ಪ್ರಜ್ಞರು ಚಿಕ್ಕ ಬದರಿಯಲ್ಲಿದ್ದಾಗಲೇ ಒಂದು ದಿನ ರಾತ್ರಿ ಭಗವಾನ್ ಬಾದರಾಯಣರು ತಮ್ಮ ಹಿರೇ ಬದರಿಯ ನಾರಾಯಣಾಶ್ರಮದಿಂದ ಬಂದು ತಮ್ಮಲ್ಲಿಗೆ ಬರಬೇಕೆಂದು ಆಜ್ಞೆಯಿತ್ತರು. ಆಗ ಆಚಾರ್ಯರು ಆನಂದದಿಂದ ತಮ್ಮ ಶಿಷ್ಯರಿಗೆಲ್ಲ "ವಿಷ್ಣುವಿನಂಥ ದೇವರಿಲ್ಲ. ಗಂಗೆಯಂಥ ತೀರ್ಥವಿಲ್ಲ. ಬದರಿಯಂಥ ಕ್ಷೇತ್ರವಿಲ್ಲ. ಮಧ್ವಶಾಸ್ತ್ರದಂಥ ಹಿತವಚನವಿಲ್ಲ" ಎಂದು ಸಂದೇಶವನ್ನಿತ್ತು ಶಿಷ್ಯರಿಗೆಲ್ಲ ಅಲ್ಲಿಯೇ ಇರಹೇಳಿ ತಾವು ಪ್ರಯಾಣ ಬೆಳೆಸಿದರು.

ಸರ್ವಜ್ಞಾಚಾರ್ಯರ ಶಿಷ್ಯರಲ್ಲಿ ಸತ್ಯತೀರ್ಥರು ಅತ್ಯಂತ ಗುರುನಿಷ್ಠರು. ಅವರಿಗೆ ತಮ್ಮನ್ನು ಅಗಲಿ ವ್ಯಾಸಾಶ್ರಮಕ್ಕೆ ನಡೆದ ಸದ್ಗುರುವಿನ ವಿರಹವನ್ನು ತಾಳಲಿಕ್ಕೆ ಆಗಲಿಲ್ಲ. ಆಚಾರ್ಯರಿಗೂ ಸತ್ಯತೀರ್ಥರೆಂದರೆ ಅಚ್ಚುಮೆಚ್ಚು. ಶಿಷ್ಯನಿಗೂ ಗುರುಮಧ್ವರೆಂದರೆ ಹುಚ್ಚು. ಮೂರು ಮೂರು ಬಾರಿ ಅವರಲ್ಲಿ ಐತರೇಯಶಾಖೆಯನ್ನು ಓದಿದ್ದರು.

## ಮೊಂಡು ಶಿಷ್ಯನ ಭಕ್ತಿ ಗುರುವಿನ ಕರಳು ಹಿಂಡಿತು.

ಈಗ ಗುರುಗಳು ಬೇಡವೆಂದರೂ ಕೇಳದೆ ಅವರ ವಿರಹವನ್ನು ತಾಳದೆ ಅವರ ಬೆನ್ನುಹಿಂದೆ ನಡೆದುಬಿಟ್ಟ ಈ ಪಟ್ಟಶಿಷ್ಯ. ಗುರುಗಳು ಗಿರಿ, ಗುಹೆ, ದರಿ, ಕೊಳ್ಳ ಶೈಲ ಶಿಖರಗಳನ್ನೆಲ್ಲ ಹನುಮಂತನಂತೆ ಹಾರುತ್ತ ಬಲಭೀಮನಂತೆ ಜಿಗಿಯುತ್ತ ನಡೆದಿದ್ದರು. ಈ ಛಲದಂಕನಾದ ಶಿಷ್ಯನು ಕೂಡ ಆ " ಮನೋಜವಂ ಮಾರುತತುಲ್ಯವೇಗಂ " ಆದ ಗುರುವನ್ನು ಹಿಂಬಾಲಿಸಿ ಎಡುವುತ್ತ, ಬೀಳುತ್ತ ಏಳುತ್ತ ದುರ್ಗಮ ಮಾರ್ಗದಲ್ಲಿ

ತಡವರಿಸುತ್ತ ನಡೆದಿದ್ದ. ಸಾಯಂಕಾಲದ ಸಮಯದಲ್ಲಿ ಗುರುಗಳು ಸಹಜವಾಗಿ ಹಿಂತಿರುಗಿ ನೋಡಿದರು. ಕಗ್ಗಾಡಿನ ದುರ್ಗಮ ದಾರಿಯಲ್ಲಿ ಬೀಳುತ್ತ ಏಳುತ್ತ ಕುಗ್ಗುತ್ತ ಮುಗ್ಗರಿಸುತ್ತ ಸಾಗಿಬರುತ್ತಲಿದ್ದ ತಮ್ಮ ಪ್ರೀತಿಯ ಶಿಷ್ಯ ಸತ್ಯತೀರ್ಥ.



ಗುರುಗಳ ಹೃದಯ ಕರುಣೆ ತುಂಬಿತು. ಕೂಡಲೇ ಮರಳಿಹೋಗು ಎಂದು ಅವರು ಬೆರಳು ಬೀಸಿದರು. ಅಷ್ಟರಿಂದಲೇ ಸತ್ಯತೀರ್ಥರು ಬೆಳಗಿನಿಂದ ಸಂಜೆಯವರೆಗೆ ನಡೆವ ದಾರಿಯನ್ನು ದಾಟಿ ತಾನು ಹೊರಟ ನಾರಾಯಣ ದೇವರ ಗುಡಿಯಲ್ಲಿಯೇ ತಂದು ಕೂಡಿಸಲ್ಪಟ್ಟರು. ಆಗ ಸತ್ಯತೀರ್ಥರು ತನ್ನ ಸುತ್ತ ನೆರೆವ ಮಧ್ವಶಿಷ್ಯರಿಗೆ ತಾವು ನೋಡಿದ ಮಧ್ವಾಚಾರ್ಯರ ವಾಯು ಲೀಲೆ, ಭೀಮಗತಿಯನ್ನು ವಿಸ್ತರಿಸಿ ಹೇಳಿದರು.

## ಗುರು-ಶಿಷ್ಯರ ಮಧುರ ಮಿಲನ



ಇತ್ತ ಮಧ್ವಾಚಾರ್ಯರು ವಾಯುವೇಗದಿಂದ ಹಿರೇ ಬದರಿಗೆ ಬಂದು ಶ್ರೀ ವೇದವ್ಯಾಸ ದೇವರ ಪಾದಾರವಿಂದಗಳಿಗೆ ಸಾಷ್ಟಾಂಗ ವಂದನೆಯನ್ನು ಮಾಡಿದರು. ಮಂಗಳ ಮೂರ್ತಿಗಳಾದ ಭಗವಾನ್ ಬಾದರಾಯಣರು ಸ್ನೇಹದುಂಬಿದ ಕರಗಳಿಂದ ತಮ್ಮ ಅಡಿದಾವರೆಗಳಿಗೆ ಎರಗಿದ ಶಿಷ್ಯರನ್ನು ನೋಡಿ ಪ್ರೀತಿಯಿಂದ ಎರಡೂ ಕೈಗಳಿಂದ ಎಬ್ಬಿಸಿ ಸ್ನೇಹದಿಂದ ಬಿಗಿದಪ್ಪಿದರು. ವ್ಯಾಸರ ಮುಖದಲ್ಲಿ ಸೂಸುವ ನಗೆ ಅವರ ಹೃದಯದಲ್ಲಿ ತುಳುಕುವ ಆನಂದವನ್ನು ಬಿತ್ತರಿಸುತ್ತಲಿತ್ತು.

ಅಲ್ಲಿ ನೆರೆದ ವ್ಯಾಸ ಶಿಷ್ಯರಿಗೆಲ್ಲ ಆನಂದ ತೀರ್ಥರನ್ನು ನೋಡಿದಾಗ ಶಾರದೆಯ ಪತಿಗಳೇ ಸ್ವಾಮಿಗಳಾಗಿ ಬಂದರು ಎಂದು ಸಂದೇಹ. ವ್ಯಾಸರ ಚಿರಂಜೀವರಾದ ಶುಕನಿಗೂ ಕೂಡ ಇಂಥ ಹಾರ್ದಿಕ ಸ್ವಾಗತ, ಆನಂದದ ಅಪ್ಪುಗೆ ದೊರೆತದ್ದನ್ನು ಅವರು ಕಂಡಿದ್ದಿಲ್ಲ. ಆದುದರಿಂದ ಇದಾವದೋ ಮಹಾವ್ಯಕ್ತಿ ಎಂದು ಅರಿತು, ಆ ಬದರಿಕಾಶ್ರಮ ನಿವಾಸಿಗಳು ಆಚಾರ್ಯರಿಗೆ ಕೂಡಲು ಆಸನವನ್ನು ತಂದಿರಿಸಿದರು. ಆ ಗುರುಶಿಷ್ಯರೀರ್ವರ ಸಂಭಾಷಣೆ ಹಾಗೂ ಸರಸಾಲಾಪಗಳು ವ್ಯಾಸಾಶ್ರಮದ ಶಿಷ್ಯರಿಗೆಲ್ಲ ಕೇಳಲಿಕ್ಕೆ-ಒಳ್ಳೇ ಕರ್ಣರಸಾಯನವಾಗಿದ್ದವು.

ಜ್ಞಾನಸ್ವರೂಪಿಯಾದ ಶ್ರೀ ಹರಿಯು ಆ ಪೂರ್ಣಬೋಧರಿಗೆ ಇತಿಹಾಸ, ಪುರಾಣ, ಬ್ರಹ್ಮಸೂತ್ರ ಹಾಗೂ ನಿಗಮಾಗಮಗಳ ಪರಮ ರಹಸ್ಯವಾದ ಅರ್ಥವಿಶೇಷ ಗಳನ್ನು ತಿಳಿಸಿ ಅವರ ಜ್ಞಾನ ಸಾಗರವು ಉತ್ತರಂಗಿತವಾಗುವಂತೆ ಮಾಡಿದನು. ಅಲ್ಲಿಂದ ಶ್ರೀ ಮಧ್ವಾಚಾರ್ಯರು ತಮ್ಮ ಗುರು ವೇದವ್ಯಾಸರೊಂದಿಗೆ ನಾರಾಯಣಾ ಶ್ರಮಕ್ಕೆ ತೆರಳಿದರು.

ಲೋಕ ಶಿಕ್ಷಾರ್ಥವಾಗಿ ತಾಪಸ ವೇಷದಿಂದ ಬೆಂಕಿಯ ಬೆಟ್ಟದಂತೆ ನಿಂತು ತಪಗೈಯುತ್ತಿರುವ ಜಟಾಧಾರಿಯಾದ ಶ್ರೀಮನ್ನಾರಾಯಣನನ್ನು ಕಂಡರು. ಜಗದೀಶ್ವರನ ಈ ತಪೋಲೀಲೆಯನ್ನು ಕಂಡು ಆನಂದತೀರ್ಥರಿಗೆ ಆ ಭಗವಂತನ ದಶಾವತಾರ ಲೀಲೆಗಳೆಲ್ಲವೂ ಸ್ಮರಣಕ್ಕೆ ಬಂದು ಅವರು ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

## ಹರಿ-ಗುರುಗಳ ಸಂಭಾಷಣೆ

ಆಗ ಶ್ರೀಮನ್ನಾರಾಯಣನು ಶ್ರುತಿಸ್ಮೃತಿಗಳಿಗೆ ಸಮ್ಮತವಾಗುವಂತೆ ವೇದವ್ಯಾಸರ ಅಭಿಪ್ರಾಯಕ್ಕೆ ಅನುಸಾರವಾಗಿ ಬ್ರಹ್ಮಸೂತ್ರಗಳಿಗೆ ದಿವ್ಯವಾದ ಒಂದು ಭಾಷ್ಯ ಬರೆ ಎಂದು ಅಪ್ಪಣೆ ಮಾಡಿದರು. ಅದಕ್ಕೆ ಪೂರ್ಣಪ್ರಜ್ಞರು ಸಕಸ್ತು ನುಡಿದರು. "ಸ್ವಾಮಿ, ಇದು ಕಲಿಕಾಲ ಈಗ ಸದ್ಗುಣಗಳಿಗೆ ಅವಕಾಶವೇ ಇಲ್ಲ. ಈಗ ಭೂಮಂಡಲ ದಲ್ಲಿ ಯೋಗ್ಯ ಜನರೇ ಇರುವದಿಲ್ಲ. ನಾನು ಭಾಷ್ಯಮಾಡಿ ಸತ್ ಸಿದ್ಧಾಂತವನ್ನು

ತಿಳಿಸುವದು ಯಾರಿಗೆ ? ಅಯೋಗ್ಯರಿಗೆಲ್ಲ ಪರತತ್ವನ್ನು ಹೇಗೆ ತಿಳಿಸುವದು ? ಹಾಗೆ ತಿಳಿಸಿದರೆ ನಾಯಿಗೆ ಯಜ್ಞದ ಹವಿಷ್ಯಾನ್ನವನ್ನು ಹಾಕಿದಂತೆ ಆಗುವದಿಲ್ಲವೇ ?

ನನಗೆ ತಮ್ಮ ಪಾದಸೇವೆಯ ಭಾಗ್ಯವನ್ನು ಕರುಣಿಸಬೇಕು." ಇವಕ್ಕೆ ನಾರಾಯಣ ಮುನಿಯು ಶಾಂತಸ್ವರದಲ್ಲಿ ಮಾರ್ನುಡಿದನು. "ಋಜಪುಂಗವ ಈಗಲೂ ಭೂಲೋಕ ದಲ್ಲಿ ನಿನ್ನ ತತ್ವೋಪದೇಶಕ್ಕೆ ಅರ್ಹರಾದ ಸಜ್ಜನರು ಅಲ್ಲಲ್ಲಿ ಇರುತ್ತಾರೆ. ಹಾರ ಹರಿದು ದಾರಬಿಟ್ಟ ಮಣ್ಣಿನಲ್ಲಿ ಬಿದ್ದ ಮಣಿಗಳಾದಂತಾಗಿದೆ ಅವರ ಪಾಡು. ತಿಳಿ ನೀರಿನಂತಿದ್ದ ನಿನ್ನ ತತ್ವೋಪದೇಶದಿಂದ ಆಚೀಚೆ ಹರಿದು ಹಂಚಿಬಿದ್ದ ಆ ಉಜ್ವಲ ರತ್ನಗಳನ್ನೆಲ್ಲ ನೀನು ಶೋಧಿಸಿ, ಬೋಧಿಸಿ, ಉಜ್ಜಿ ಉಜ್ವಲಗೊಳಿಸು. ಉದ್ಧರಿಸು. "ನಿನ್ನ ಕೀರ್ತಿಯು ದುರ್ಜನರನ್ನು ದೂರಗೊಳಿಸಿ ಸಜ್ಜನರನ್ನು ಮುಂದೆ ತರುವಲ್ಲಿ ಸಂದೇಹವಿಲ್ಲ. ರವಿಯು ಬೆಳಕನ್ನು ಬೀರಿ ಗೂಗೆಗಳನ್ನು ಕಂಗೆಡಿಸಿ ಕಮಲಗಳನ್ನು ಅರಳಿಸುವದಿಲ್ಲವೇ.

## ಸಚ್ಛಾಸ್ತ್ರಗಳನ್ನು ರಚಿಸಿ ಸಜ್ಜನರನ್ನು ಸನ್ಮಾರ್ಗಕ್ಕೆ ತರುವದು ನನ್ನ ದೊಡ್ಡ ಸೇವೆ

ನಾರಾಯಣನ ಮಾತು ಆಚಾರ್ಯರಿಗೆ ಹೊಸದಾರಿ ತೋರಿತು. ಕರ್ತವ್ಯದ ಹೊಸ ಕ್ಷಿತಿಜವೇ ಅವರ ಕಣ್ಣೆದುರಿಗೆ ಗೋಚರಿಸಿತು. ತತ್ಕ್ಷಣದಲ್ಲಿ ಆನಂದತೀರ್ಥರು ಆ ಮುಕುಂದನ ಸಂದೇಶವನ್ನು ಆನದಿಂದ ಅಂಗೀಕರಿಸಿದರು.

ಸೂತ್ರಭಾಷ್ಯವನ್ನು ರಚಿಸುವ ಸಂಕಲ್ಪಗೈದು ವ್ಯಾಸನಾರಾಯಣರಿಬ್ಬರನ್ನೂ ವಂದಿಸಿ ಆಚಾರ್ಯರು ಆ ಬೆಟ್ಟದಿಂದ ಇಳಿದು ತಮ್ಮ ಶಿಷ್ಯರೆಲ್ಲರೂ ಇಳಿದುಕೊಂಡ ಚಿಕ್ಕ ಬದರಿಗೆ ಬಂದರು. ಅವರ ಕಿವಿಯಲ್ಲಿ ನಾರಾಯಣನ ಆಜ್ಞೆಯು ಇನ್ನೂ ನಿನದಿಸುತ್ತಿತ್ತು.

## ಬದರೀ ಕ್ಷೇತ್ರದಲ್ಲಿ ಬ್ರಹ್ಮಸೂತ್ರ ಭಾಷ್ಯದ ಹುಟ್ಟು ಹಬ್ಬ

ಬದರೀ ನಾರಾಯಣನ ಸನ್ನಿಧಿಯಲ್ಲಿ ಕುಳಿತುಕೊಂಡು ಸರ್ವಜ್ಞ ಶಿಖಾಮಣಿ ಗಳಾದ ಶ್ರೀ ಗುರು ಮಧ್ವರು ದೇವಮಾನ್ಯವಾದ ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿ ದರು. ಅವರ ನೆಚ್ಚಿನ ಶಿಷ್ಯ ಸತ್ಯತೀರ್ಥರೇ ಆ ಭಾಷ್ಯ ಗ್ರಂಥವನ್ನು ಮೊದಲು ಲಿಪಿ ಬದ್ಧಗೊಳಿಸಿದ ಪುಣ್ಯಾತ್ಮರು.

ಪೂರ್ಣಪ್ರಜ್ಞರ ಬ್ರಹ್ಮಸೂತ್ರ ಭಾಷ್ಯವೆಂದರೆ ತೆರಿದಿಟ್ಟ ವ್ಯಾಸರ ಹೃದಯ. ವಾಸುದೇವನ ಗುಣಪೂರ್ಣತೆಯ ಒಂದು ಕೈಗನ್ನಡಿ. ಅದರಲ್ಲಿ ಒಂದೂ ಕುಂದಿಲ್ಲ. ಆ ಮಧ್ವ ಭಾಷ್ಯದ ತುಂಬ ಕೇಳಿಬರುವದು ವೇದಗಳ ಪ್ರತಿಧ್ವನಿ. ಚಿಕ್ಕ ಮಕ್ಕಳೂ ಸ್ಥೂಲ ರೂಪವಾಗಿ ಅದನ್ನು ಅರಿಯಬಲ್ಲರು. ಆಳಕ್ಕೆ ಇಳಿದರೆ ಎಂಥ ಪಂಡಿತರೂ ತಲೆ ಚಚ್ಚಿ ಕೊಳ್ಳುವಂಥ ಗಹನ ವಿಷಯಗಳು ಅಲ್ಲಿ ಉಂಟು. ಈವರೆಗಾದ ಬ್ರಹ್ಮಸೂತ್ರದ ಮೇಲಿನ

೨೧ ಭಾಷ್ಯಗಳ ತಪ್ಪು ತ್ರುಟಿಗಳೆಲ್ಲ ಇದರಿಂದ ಹೊರಬಿದ್ದವು. ಆದರೆ ಈ ಮಧ್ವ ಭಾಷ್ಯದಲ್ಲಿ ಮಾತ್ರ ಈ ವರೆಗೂ ಎಂತೆಂಥ ವಿದ್ವಾಂಸರೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಪರಿಕಿಸಿ ನಿರುಕಿಸಿದರೂ ಅಪ್ಪಿತಪ್ಪಿ ಕೂಡ ಒಂದೂ ತಪ್ಪು ಸಿಕ್ಕಿಲ್ಲ. ಹೆಚ್ಚೇನು ? ಶ್ರೀ ಮನ್ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವೆಂದರೆ ಸರ್ವಜ್ಞರಾಯರ ಬೇರೊಂದು ದಿವ್ಯ ಸ್ವರೂಪವೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ತಾವು ರಚಿಸಿದ ಸೂತ್ರ ಭಾಷ್ಯವನ್ನು ಬದರೀನಾರಾಯಣನಿಗೆ ಸಮರ್ಪಿಸಿ ಆಚಾರ್ಯರು ಅಲ್ಲಿಂದ ಹೊರಟು ಅನೇಕ ದೇಶಗಳಲ್ಲಿ ದಿಗ್ವಿಜಯವನ್ನು ಮಾಡುತ್ತ ದ್ವೈತ ದುಂದುಭಿಯನ್ನು ಮೊಳಗಿಸುತ್ತ ಅನೇಕಾನೇಕ ಕಾಡುನಾಡುಗಳನ್ನು ದಾಟಿ ಗೋದಾವರೀ ತೀರಕ್ಕೆ ಬಂದರು.

ಆ ಗೋದಾ ತಟಾಕದಲ್ಲಿ ಆಗ ಒಂದು ದೊಡ್ಡ ಪಂಡಿತರ ಪರಿಷತ್ತೇ ಕೂಡಿದ್ದಿತು. ಹದಿನೆಂಟು ತರಹದ ಪಂಡಿತರಿಂದ ತುಂಬಿದ ಆ ವಿದ್ವದ್ಗೋಷ್ಠಿಯಲ್ಲಿ ಪೂರ್ಣ ಬೋಧರು ಕೇಳಿದ ಪ್ರಶ್ನೆಗಳಿಗೆಲ್ಲ ಸಮಂಜಸವಾಗಿ ಉತ್ತರವಿತ್ತರು. ಅವರು ಸೂಚಿಸಿದ ಶ್ರುತಿ ಮಂತ್ರಗಳನ್ನು ಸ್ವರಪೂರ್ವಕವಾಗಿ ಪಠಿಸಿ ಅವುಗಳಿಗೆ ವೇದಾಂಗಸಿದ್ಧವಾದ ಪ್ರಮಾಣಪ್ರಮಿತ ಅರ್ಥಗಳನ್ನು ಹೇಳಿದರು. ಮತ್ತು ಭಾಟ್ಟ, ಪ್ರಾಭಾಕರ, ವೈಶೇಷಿಕ ನೈಯಾಯಿಕ, ಬೌದ್ಧ ಮುಂತಾದ ಷಟ್‌ಶಾಸ್ತ್ರಗಳನ್ನೆಲ್ಲ ಖಂಡಿಸಿದರು. ಬೇರೆ ಬೇರೆ ಶಾಸ್ತ್ರಗಳಲ್ಲಿ ಪರಿನಿಷ್ಠಿತರಾದ ಪಂಡಿತ ಪರಿವೃಢರೆಲ್ಲ ಒಂದುಗೂಡಿ ತಾವು ಪ್ರಾವೀಣ್ಯ ಪಡೆದ ಶಾಸ್ತ್ರಗಳಲ್ಲಿ ಆನಂದತೀರ್ಥರನ್ನು ಎದುರಿಸಿ ವಾದಮಾಡಿ ಕೊನೆಗೆ ಸೋತು ಒಬ್ಬೊಬ್ಬರಾಗಿ ಶರಣಾಗತರಾದರು.

ಈ ಎಲ್ಲ ಪಂಡಿತ ಮಂಡಲಿಯಲ್ಲಿ ಪ್ರಚಂಡ ಪಂಡಿತನೆಂದರೆ ಶೋಭನಭಟ್ಟ. ವೇದದ ಶಾಖೋಪಶಾಖೆಗಳು ಅವನಿಗೆ ಕರತಲಾಮಲಕ. ವೇದವಾದಿಗಳ ಸಕಲ ದರ್ಶನಗಳಿಗೂ ಆ ಕಾಲದಲ್ಲಿ ಅವನೇ ಆಚಾರ್ಯಪುರುಷ. ಇಂಥ ಪ್ರಕಾಂಡ ಪಂಡಿತ ಪುಂಡರೀಕನಾದ ಶೋಭನಭಟ್ಟ ಈ ಜ್ಞಾನಮೇರುವಿನ ಎದುರು ಹಣೆ ಮಣಿದು 'ಶಿಷ್ಯಸ್ತೇಹಂ' ಎಂದು ಆಚಾರ್ಯರಿಗೆ ಶರಣು ಬಂದ.

ಪೂರ್ಣಪ್ರಜ್ಞರು ಕರುಣೆಯಿಂದ ತಮ್ಮ ಈ ನವ್ಯ ಶಿಷ್ಯನಿಗೆ ತಮ್ಮ ದಿವ್ಯ ಸೂತ್ರ ಭಾಷ್ಯವನ್ನು ಪಾಠ ಹೇಳಿದರು. ಅಂದಿನಿಂದ ಶೋಭನಭಟ್ಟರಿಗೆ ಬೇರಾವ ಗ್ರಂಥಗಳೂ ಬೇಕಾಗಲಿಲ್ಲ. ಕಮಲಕೋಶದಲ್ಲಿಯ ಹೆಜ್ಜೇನನ್ನು ಹೀರಿದ ಬಳಿಕ ಭೃಂಗವು ಬೇರೆ ಹೂವಿಗಾಗಿ ಹಾತೊರೆಯುವದೇ ? ಆಚಾರ್ಯರ ಭಾಷ್ಯಶ್ರವಣವನ್ನು ಮಾಡಿ ಪುನೀತರಾದ ಶೋಭನಭಟ್ಟರು ದಿಗ್ದೇಶಗಳಲ್ಲೆಲ್ಲ ತಮ್ಮ ದಿವ್ಯವಾದ ವಾಗ್ವೈಖರಿಯಿಂದ ಮಧ್ವ ಸಿದ್ಧಾಂತವನ್ನು ಉಪನ್ಯಾಸ ಮಾಡಿ ಜನಜಾಗ್ರುತಿಯನ್ನುಂಟು ಮಾಡಿದರು.

ಅಲ್ಲಿಂದ ಆಚಾರ್ಯರು ಉಡುಪಿಗೆ ಬಂದು ಅನಂತೇಶ್ವರನಿಗೆ ವಂದನೆಗೈದು ತಮ್ಮ ಗುರುಗಳಾದ ಅಚ್ಯುತಪ್ರೇಕ್ಷರಿಗೆ ನಮಸ್ಕಾರ ಮಾಡಿದರು.

ಶಿಷ್ಯನ ಈ ವಿಜಯ ವೈಭವವನ್ನು ಕಂಡು ಕೇಳಿ ಅಚ್ಯುತಪ್ರೇಕ್ಷರಿಗೆ ಆದ ಆನಂದ ಅಷ್ಟಿಷ್ಟಲ್ಲ. ಆದರೆ ಆನಂದತೀರ್ಥರು ಹೊಸದಾಗಿ ರಚಿಸಿದ ಅದ್ವೈತಾದಿ ಮತ ಖಂಡನಪರವಾದ ಬ್ರಹ್ಮಸೂತ್ರ ಭಾಷ್ಯವು ಮಾತ್ರ ಅವರ ಮನಸ್ಸಿಗೆ ಅಷ್ಟು ಹಿಡಿಸಲಿಲ್ಲ.

ಶಿಷ್ಯವಾತ್ಸಲ್ಯದಿಂದ ಅವರು ಮಧ್ವಾಚಾರ್ಯರ ಭಾಷ್ಯ ಪ್ರವಚನವನ್ನು ಕೇಳುತ್ತಲಿದ್ದರೂ ಅಲ್ಲಿ ಹೇಳಿದ ಭೇದ ಸಿದ್ಧಾಂತದಲ್ಲಿಯೇ ಅವರಿಗೆ ಇನ್ನೂ ಸಂದೇಹ. ಅವರ ಅದ್ವೈತ ವಾಸನೆ ಮನಸ್ಸಿನಿಂದ ತೊಲಗಿರಲಿಲ್ಲ. ಈ ಮಾತು ಆಚಾರ್ಯರ ಲಕ್ಷಕ್ಕೆ ಬಾರದೇ ಹೋಗಲಿಲ್ಲ. ಗುರುವಿನ ಮನದಲ್ಲಿ ಭೇದಿಸಿದ ಈ ರೋಗಕ್ಕೆ ಮೂಲ ದಲ್ಲಿಯೇ ಮದ್ದು ಮಾಡಬೇಕೆಂದು ಮಧ್ವಮುನಿಗಳು ಯೋಚಿಸಿದರು. ತಮ್ಮ ಗುರು ವಿನ ಹೃದಯವನ್ನು ಕಲಿ ಮಹಾರಾಯನು ಹಿಡದಿದ್ದನೆಂದು ಗೊತ್ತು ಆ ಸರ್ವಜ್ಞ ಶಿಷ್ಯನಿಗೆ.

ಗುರುವಿನ ಹೃದಯದ ಆಳದಲ್ಲಿ ಇಳಿದು ಬುಡದ ವರೆಗೂ ಬೇರು ಬಿಟ್ಟ ಈ ಅದ್ವೈತ ವಾಸನೆಯನ್ನು ಸಮೂಲವಾಗಿ ನಿರ್ಮೂಲ ಗೈಯ್ಯಬೇಕೆಂದು ಸಂಕಲ್ಪಗೈದು ಪೂರ್ಣಬೋಧರು ಅಸ್ಖಲಿತ ವಾಣಿಯಿಂದ ತಾವು ಬರೆದ ಸಂಪೂರ್ಣ ಭಾಷ್ಯವನ್ನು ಓದಿ ತೋರಿಸಿದರು. ಇತರ ಮತಗಳನ್ನು ಯುಕ್ತಿಯುಕ್ತವಾಗಿ ಖಂಡಿಸಿದರು. ತಾವು ಹೇಳಿದ ಮಾತು ಮಾತಿಗೂ ಶ್ರುತಿ, ಸ್ಮೃತಿ, ಪುರಾಣದ ಪ್ರಮಾಣಗಳ ಪ್ರಭೂತ ಸಂವಾದ ಸಮಾಖ್ಯಗಳನ್ನು ತೋರಿಸಿದರು.

ಮಧ್ವಮುನಿಗಳ ವಿದ್ವತ್ತಾ ಪರಿಪೂರ್ಣವಾದ ಉಪನ್ಯಾಸದಿಂದ ಅಚ್ಯುತಪ್ರೇಕ್ಷರ ಹೃದಯಕ್ಕೆ ತಗಲಿದ ಕಲಿಯು ತೊಲಗಿತು. ಗ್ರಹಣಬಿಟ್ಟಿತು. ಬೆಳಕು ಮೂಡಿತು. ಕಮಲವರಳಿತು. ಮಳೆ ಬಂದು ತೊಳೆದು ತಿಳಿಯಾದ ಮುಗಿಲಿನಂತೆ ಪ್ರಸನ್ನವಾಗಿತ್ತು ಅವರ ಅಂತಃಕರಣ. ತಪ್ಪಿ ಉಪ್ಪು ನೀರು ಕುಡಿದ ಮನುಷ್ಯನು ಅನಂತರ ಅಮೃತ ಪ್ರಾಶನ ಮಾಡಿದಂತಾಗಿತ್ತು ಅಚ್ಯುತಪ್ರೇಕ್ಷರ ಅವಸ್ಥೆ. ಆನಂದತೀರ್ಥರಶಾಸ್ತ್ರ ಆನಂದದಾಯಿಕ ಎಂದು ಅವರ ಅನುಭವಕ್ಕೆ ಬಂದಿತು. ಅಚ್ಯುತಪ್ರೇಕ್ಷರು ಮತ್ತು ಹಿರಿಯತಿಗಳಾದ ಲಿಕುಚ ಸೂರಿಗಳೂ ಮಧ್ವಶಾಸ್ತ್ರವನ್ನು ಕೇಳಿ ಉದ್ಧೃತರಾದರು.

ಈ ಕಲಿಯುಗದಲ್ಲಿ ಸಜ್ಜನರ ಮುಕ್ತಿ ಮಾರ್ಗಕ್ಕೆ ವಿಘ್ನಗಳು ಬಹಳ. ಸನ್ಮಾರ್ಗದಲ್ಲಿಯ ಈ ವಿಘ್ನ ವಿಡ್ಡೂರಗಳನ್ನು ದೂರ ಮಾಡಲಿಕ್ಕಾಗಿ ಭಗವಂತನ ದಿವ್ಯ ಮೂರ್ತಿಯೊಂದನ್ನು ಉಡುಪಿಯಲ್ಲಿ ಪ್ರತಿಷ್ಠಿಸಬೇಕೆಂದು ಆಚಾರ್ಯರ ಮನಸ್ಸಿನಲ್ಲಿ ಬಂದಿತು.

ಒಂದು ದಿನ ಸುಪ್ರಭಾತ ಸಮಯದಲ್ಲಿ ಶ್ರೀಮಧ್ವಾಚಾರ್ಯರು ಸಮುದ್ರಸ್ನಾನ ಮಾಡಿ ಮಲ್ಪೆಯ ಕಡಲ ತೀರದ ಮಳಲ ರಾಶಿಯ ಮೇಲೆ ಆಹ್ನಿಕ ಮಾಡುತ್ತ ಕುಳಿತಿ



ದ್ದರು. ದೂರದ ಸಮುದ್ರ ಮಧ್ಯದಲ್ಲಿ ನೌಕೆಯೊಂದು ಬಿರುಗಾಳಿಗೆ ಎದ್ದ ಪರ್ವೆರೆಗಳ ಮಧ್ಯದಲ್ಲಿ ಹೊಯ್ದಾಡುತ್ತಲಿತ್ತು. ನೌಕೆಯಲ್ಲಿ ಸಾವಿನ ಸಂಕಟದಿಂದ ಒರಲುತ್ತಲಿರುವ ಜನರ ಕರುಣೆಯ ಚೀತ್ಕಾರವು ಆಚಾರ್ಯರ ಕರುಳನ್ನು ಕೊರೆಯಿತು. ಕೂಡಲೇ ಆ ಗಾಳಿ ಗುರು ಕೈಮಾಡಿ ಶಾಟಿ ಬೀಸಿ ಆ ನೌಕೆಯು ನಿರಪಾಯವಾಗಿ ಸುರಕ್ಷಿತ ದಂಡೆಗೆ ಬರುವಂತೆ ಮಾಡಿದರು. ಜಲಗಂಡಾಂತರದಿಂದ ಪಾರಾಗಿ ಬಂದ ಪ್ರಯಾಣಿಕರೆಲ್ಲರೂ ತಮಗೆ ಜೀವದಾನ ಮಾಡಿದ ಈ ಜೀವೋತ್ತಮರನ್ನು ವಂದಿಸಿ ಹೋದರು. ಆ ನಾವಿನ ಒಡೆಯನು ಆಚಾರ್ಯರ ಅಡಿದಾವರೆಯ ಕೆಳಗಿನ ಹುಡಿಯನ್ನು ತನ್ನ ಮುಡಿಯಲ್ಲಿರಿಸಿಕೊಂಡು "ಸ್ವಾಮಿ, ನನ್ನಿಂದ ಏನಾದರೂ ಸೇವೆಯನ್ನು ಕೊಳ್ಳಬೇಕೆಂದು ನುಡಿದನು.

ಆಗ ಸರ್ವಜ್ಞಾಚಾರ್ಯರು ಅವನಿಗೆ ನೌಕೆಯ ತೂಕ ಹಿಡಿಯಲು ತಳದಲ್ಲಿ ಹಾಕಿದ ಮೂರು ಮಣ್ಣಿನ ಹೆಂಟೆಗಳನ್ನು ತಂದುಕೊಡಲು ತಿಳಿಸಿದರು. ಆ ನೌಕಾವಾಹಕನು ವ್ಯಾಪಾರಕ್ಕೆಂದು ದ್ವಾರಕೆಗೆ ಹೋಗಿ ಅಲ್ಲಿಂದ ಮರಳುವಾಗ ತನ್ನ ನೌಕೆಯು ಗಾಳಿಗೆ ಹೊಯ್ದಾಡಬಾರದೆಂದು ಭಾರವಾಗಲಿಕ್ಕೆ ಮೂರು ಗೋಪೀಚಂದನ ಮುದ್ದೆಗಳನ್ನು ದ್ವಾರಕೆಯಿಂದ ಎತ್ತಿ ತನ್ನ ನೌಕೆಯ ಬುಡದಲ್ಲಿ ಹಾಕಿದ್ದ. ಒಂದು ಗೋಪೀಚಂದನದ ಕರಣೆಯಲ್ಲಿ ರುಕ್ಮಿಣಿ ಮೊದಲಾದ ಅಷ್ಟ ಮಹಿಷಿಯರು ಪೂಜಿಸಿದ ಕಡಗೋಲು ಕೃಷ್ಣನ ದಿವ್ಯ ವಿಗ್ರಹವಿದ್ದಿತು. ಅದನ್ನು ತಲೆಯ ಮೇಲೆ ಹೊತ್ತುಕೊಂಡು ಆಚಾರ್ಯರು ದ್ವಾದಶ ಸ್ತೋತ್ರವನ್ನು ಹೇಳುತ್ತ ತಂದು ಮಧ್ವಸರೋವರದಲ್ಲಿ

ತೊಳೆದು ಅದರ ದಂಡೆಯ ಮೇಲೆ ಪ್ರತಿಷ್ಠೆಗೈದರು. ಆ ಮೂರ್ತಿಯನ್ನು ನವವಿಧವಾದ ನಿತ್ಯಪೂಜೆಗಳಿಂದ ನವವಿಧ ಭಕ್ತಿಯಿಂದ ಪೂಜಿಸಿ ಅಲ್ಲಿ ಭಗವಂತನ ವಿಶೇಷ ಸನ್ನಿಧಾನವು ನೆಲಸುವಂತೆ ಮಾಡಿ ಅವನನ್ನು ಸೇವಿಸುವ ಭಕ್ತರು ಉದ್ಧಾರವಾಗುವಂತೆ ಮಾಡಿದರು.

ತಾವು ಪ್ರತಿಷ್ಠಾಪಿಸಿದ ಶ್ರೀಕೃಷ್ಣನ ಪೂಜಾದಿ ವ್ಯವಸ್ಥೆಯನ್ನು ಸರಿಯಾಗಿ ಮಾಡಿ ಆಚಾರ್ಯರು ಮತ್ತೊಮ್ಮೆ ಬದರೀಯಾತ್ರೆಯನ್ನು ಮಾಡಿಬಂದರು. ಈ ಎರಡನೇ ಬದರೀಯಾತ್ರೆಯಲ್ಲಿ ಆಚಾರ್ಯರು ತೋರಿದ ಲೀಲೆಗಳಿಗೆ ಲೆಕ್ಕವಿಲ್ಲ.

ಒಂದು ಊರಲ್ಲಿ ಈಶ್ವರದೇವ ಎಂಬ ರಾಜನು ಬಂದ ಜನರಿಂದ ತನ್ನ ಕೆಲಸ ವನ್ನು ಬಿಟ್ಟಿ ಮಾಡಿಸಿಕೊಳ್ಳುತ್ತಿದ್ದನು. ಅವನು ಯಾತ್ರೆಗೆ ಹೊರಟ ಆಚಾರ್ಯರನ್ನು ತಡೆದು ನಿಲ್ಲಿಸಿ " ನೀವು ಈ ಹೊಲದಲ್ಲಿ ಉಳಿದೆಲ್ಲ ಪಾಂಥರಂತೆ ನಟ್ಟು ಕಡಿದು ನೆಲ ವನ್ನು ಅಗಿದು ಹೋಗಬೇಕು ಎಂದು ನಿರ್ಬಂಧ ಪಡಿಸಿದನು. ಆಗ ಆಚಾರ್ಯರು ಅವ ನಿಗೆ "ಈ ಮಣ್ಣನ್ನು ಅಗೆಯುವ ಬಗೆಯನ್ನೇ ನಾವು ಅರಿಯೆವು. ನೀನೊಮ್ಮೆ ಮಾಡಿ ತೋರಿಸು " ಎಂದು ಹೇಳಿದರು. ಆಗ ಮಹಾರಾಜನು ತನ್ನ ಕೈಯಲ್ಲಿ ಗುದ್ದಲಿ ಹಿಡಿದು ನೆಲವನ್ನು ಅಗೆಯತೊಡಗಿದ. ಅವನು ಇಚ್ಛಿಸಿದರೂ ಗುದ್ದಲಿಯನ್ನು ಕೆಳಗೆ ಇಡಲಿಕ್ಕೆ ಆಗಲಿಲ್ಲ. ಅಗೆಯುವದನ್ನು ನಿಲ್ಲಿಸಲಿಕ್ಕೂ ಆಗಲಿಲ್ಲ. ಯಾರದೋ ಪ್ರೇರಣೆಯಿಂದ ಕೈ ಎತ್ತುತ್ತಲಿತ್ತು ಕೆಳಕ್ಕೆ ಅಪ್ಪಳಿಸುತ್ತಲಿತ್ತು. ಗುದ್ದಲಿಯನ್ನು ಹಿಡಿದು ನೆಲವನ್ನು ಅಗೆ ಯುತ್ತಲೇ ಇತ್ತು. ಮೈ ಬೆವತು ದಣಿವಾಗಿ ಆ ಈಶ್ವರದೇವನು ನಿತ್ರಾಣನಾಗಿದ್ದರೂ ಆ ಅಗೆಯುವ ಕೆಲಸ ಮಾತ್ರ ಸಾಗಿಯೇ ಇದ್ದಿತು. ಆಚಾರ್ಯರು ಮುಂದೆ ಸಾಗಿದರು.

ಅಲ್ಲಿಂದ ಮುಂದೆ ಆಚಾರ್ಯರು ಸಂಚರಿಸುತ್ತ ಗಂಗಾತಟಾಕಕ್ಕೆ ಬಂದರು. ಅಲ್ಲಿ ಗಂಗೆಯ ಪ್ರವಾಹವು ಒಡಲು ತುಂಬಿ ಹರಿಯುತ್ತಲಿತ್ತು. ನದಿಯನ್ನು ದಾಟಿಸಲು ನೌಕೆಯಾಗಲೀ ನಾವಾಡಿಗರಾಗಲೀ ಇರಲಿಲ್ಲ. ಆಗ ಆಚಾರ್ಯರು ಶಿಷ್ಯರಿಗೆ ತಮ್ಮ ಕೈಯನ್ನು ಹಿಡಿಯಲು ಹೇಳಿದರು. ಅದರಂತೆ ಆ ಶಿಷ್ಯನ ಕೈಯನ್ನು ಮತ್ತೊಬ್ಬನಿಗೆ ಹಿಡಿಯಲು ಹೇಳಿದರು. ಹೀಗೆ ಆಚಾರ್ಯರು ಎಲ್ಲ ಶಿಷ್ಯರೊಂದಿಗೆ ಆ ಗಂಗಾ ನದಿ ಯನ್ನು ಹೀಗೆ ಲೀಲೆಯಿಂದ ದಾಟಿದರು. ಸಂಸಾರ ಸಾಗರವನ್ನೇ ದಾಟಿಸುವವನಿಗೆ ಒಂದು ನದಿಯನ್ನು ದಾಟಿಸುವದು ಏನಾಶ್ಚರ್ಯ !

ಆಚೆಯ ದಡವನ್ನು ಸೇರಿದ ಕೂಡಲೇ ಅಲ್ಲಿ ಕಾವಲಿದ್ದ ಮುಸಲ್ಮಾನ ಸೈನಿಕರು, " ಹೊಡೆಯಿರಿ, ಬಡಿಯಿರಿ, ಕಡಿಯಿರಿ " ಎಂದು ಒದರುತ್ತ ಆಚಾರ್ಯರ ಶಿಷ್ಯ ಪರಿ ವಾರದವರ ಮೇಲೆ ಏರಿ ಬಂದರು. ಆಗ ಮಧ್ವ ಮುನಿಗಳು ಗದರಿಸಿದರು."ನಾವು ನಿಮ್ಮ ರಾಜನನ್ನೇ ಕಾಣಲಿಕ್ಕೆ ಹೊರಟಿದ್ದೇವೆ. ನಮ್ಮ ತಂಟೆಗೆ ಬಂದರೆ ನಿಮ್ಮೆಲ್ಲರಿಗೂ ಗಂಗೆಯಲ್ಲಿಯೇ ಗತಿಗಾಣಿಸುವೆವು. ವ್ಯರ್ಥವಾಗಿ ನಮ್ಮೊಡನೆ ಕಾಲು ಕೆದರಿ ಕಲಹಕ್ಕೆ

ಇಳಿಯಬೇಡಿರಿ. " ಗುರು ಮಧ್ವರ ಈ ಗುಡುಗಾಟವನ್ನು ಕೇಳಿ ಯವನ ಸೈನಿಕರು ಮಂತ್ರ ಹಾಕಿದ ಹಾವುಗಳಂತೆ ತೆಪ್ಪಗಾದರು.

ಶಿಷ್ಯರನ್ನೆಲ್ಲ ಸುರಕ್ಷಿತವಾಗಿ ಅಲ್ಲಿಂದ ಪಾರುಗೊಳಿಸಿ ಸಹಸ್ರಾರು ಯವನ ಸೈನಿಕರ ನಡುವೆ ಹಾದು ನಿರ್ಭಯವಾಗಿ ಮುಂದೆ ನಡೆದರು. ಚಿಗರೆಗಳ ಹಿಂಡಿನಲ್ಲಿ ಸಿಂಹದಗತಿಯಂತೆ ಇತ್ತು ಅವರ ಆ ಧೀರ ಗಮನ.



ಇದೆಲ್ಲವನ್ನು ತನ್ನ ಉಪ್ಪರಿಗೆಯ ಮೇಲೆ ನಿಂತು ಆ ಯವನ ದೊರೆ ನೋಡಿದ. ಮಧ್ವಮುನಿಗಳ ನದೀತರಣ, ಭಯ ಪರಿಹರಣಗಳು ಅವನ ಕೌತುಕಕ್ಕೆ ಕವಲೊಡೆಸಿದ್ದವು. ಅವನು ಭಕ್ತಿಯಿಂದ ಬಾಗಿ ಆಚಾರ್ಯರ ಅಡಿದಾವರೆಗಳಿಗೆ ತನ್ನ ಅರ್ಧ ರಾಜ್ಯವನ್ನೇ ಸಮರ್ಪಿಸಿ ಬಿಟ್ಟ. ಆಚಾರ್ಯರು ಶುದ್ಧ ಯವನ ಭಾಷೆಯಲ್ಲಿಯೇ ಉತ್ತರ ದೇಶದ ಯಾತ್ರೆಗೆ ಹೊರಟಿದ್ದೇವೆಂದು ತಿಳಿಸಿ ಮುಂದೆ ನಡೆದರು.

ಬದರಿಯ ದಾರಿಯಲ್ಲಿ ಆಚಾರ್ಯರ ಗುಂಪಿಗೆ ಅನೇಕ ಜನ ಕಳ್ಳರು ಗಂಟು ಬಿದ್ದರು. ಆಚಾರ್ಯರು ತಮ್ಮ ಕೈಯಲ್ಲಿಯ ಪಂಚೆಯನ್ನು ಗಂಟುಕಟ್ಟಿ ಕಳ್ಳರ ನಡುವೆ ಚೆಲ್ಲಿದರು. ಅದರಲ್ಲಿ ಮುತ್ತು ರತ್ನಗಳಿವೆಯೆಂದು ಬಗೆದು ಕಳ್ಳರು ಅವಕ್ಕಾಗಿ ಒಬ್ಬರಿಗೊಬ್ಬರು ಬಡಿದಾಡಿ ನಾಶ ಹೊಂದಿದರು.

ಮತ್ತೊಮ್ಮೆ ದಾರಿಯಲ್ಲಿ ಇನ್ನೊಂದು ಕಳ್ಳರಗುಂಪು ಇವರ ಮೇಲೆ ಕೈ ಮಾಡಿದಾಗ ಆಚಾರ್ಯರು ತಮ್ಮ ಶಿಷ್ಯ ಉಪೇಂದ್ರತೀರ್ಥರಿಗೆ ಅವರನ್ನು ಮರ್ದಿಸಲು ಅಪ್ಪಣೆ ಇತ್ತರು. ಗುರುವಿನ ಆಣತಿಯನ್ನು ತಲೆಯಲಾಂತು ಉಪೇಂದ್ರತೀರ್ಥರು ಕೂಡಲೇ ವೈರಿಗಳ ಹಿಂಡಿನಲ್ಲಿ ನೊಕ್ಕು ಅವರ ಕೈಯಲ್ಲಿಯ ಖಡ್ಗವನ್ನೇ ಕಸಿದು ಅದರಿಂದಲೇ ಅವರೆಲ್ಲರನ್ನೂ ತರಿದು ಹೊಡೆದೋಡಿಸಿದರು.

ಮತ್ತೊಮ್ಮೆ ಕಗ್ಗಾಡಿನಲ್ಲಿ ಆಚಾರ್ಯ ಪರಿವಾರವು ಮುನ್ನಡೆವಾಗ ದೇವರ ಪೆಟ್ಟಿಗೆಯನ್ನು ತಲೆಯ ಮೇಲೆ ಹೊತ್ತು ಮುಂದೆ ಹೊರಟ ಸತ್ಯತೀರ್ಥರ ಮೇಲೆ ಒಂದು ದೈತ್ಯನಂಥ ಹುಲಿಯು ಎರಗಿತು. ಉಳಿದ ಶಿಷ್ಯರೆಲ್ಲರೂ ಗದಗುಟ್ಟಿ ನಡುಗತೊಡಗಿದರು. ಆಗ ಆನಂದತೀರ್ಥರು ಮುಂದೆ ಬಂದು ಆ ಹುಲಿಯನ್ನು ಲೀಲೆಯಿಂದ ಹೊಡೆದರು. ಕೂಡಲೇ ಅದು ಸತ್ಯತೀರ್ಥರನ್ನು ಬಿಟ್ಟು ಕಾಡಿನಲ್ಲಿ ಓಡಿಹೋಯಿತು.



ಕೊನೆಗೆ ಆಚಾರ್ಯರು ಬದರಿಗೆ ಬಂದು ನಾರಾಯಣನಿಗೆ ನಮಸ್ಕರಿಸಿದರು. ಆಗ ಶ್ರೀಮನ್ನಾರಾಯಣನು ಆಚಾರ್ಯರಿಗೆ ಶುದ್ಧ ಶಿಲಾತ್ಮಕವಾದ ಪ್ರತಿಮೆಗಳನ್ನು ಕೊಟ್ಟು ಅನುಗ್ರಹಿಸಿದನು. ಲಕ್ಷ್ಮೀಸಹಿತನಾದ ನಾರಾಯಣನ ನಿತ್ಯ ಸನ್ನಿಧಾನೋಪೇತವಾದ ಆ ಶಿಲಾಪ್ರತಿಮೆಗಳು ವ್ಯಾಸ ಮುಷ್ಟಿ ಎಂದು ಪ್ರಸಿದ್ಧವಾದವುಗಳು. ಶ್ರೀ ವೇದವ್ಯಾಸರು ತಮ್ಮ ಶಿಷ್ಯ ಮಧ್ವಾಚಾರ್ಯರ ಸೂತ್ರಭಾಷ್ಯ, ಗೀತಾಭಾಷ್ಯಾದಿ ಗ್ರಂಥಗಳನ್ನು ನೋಡಿ ಸುಪ್ರೀತರಾಗಿ ತಾವು ರಚಿಸಿದ ಮಹಾಭಾರತದ ಮುಖ್ಯ ತಾತ್ಪರ್ಯವನ್ನು ಜನರಿಗೆಲ್ಲ ಸುಲಭವಾಗಿ ಸ್ಪಷ್ಟವಾಗಿ ತಿಳಿಸಲಿಕ್ಕಾಗಿ ಒಂದು ಗ್ರಂಥವನ್ನು ಬರೆಯಬೇಕೆಂದು ಅಪ್ಪಣೆಯಿತ್ತರು.

ವ್ಯಾಸ ಗುರುಗಳು ಇತ್ತ ಆದೇಶವನ್ನು ಆಚಾರ್ಯರು ತಲೆಯ ಮೇಲೆ ಹೊತ್ತು ತಮ್ಮ ಸಮ್ಮತಿಯನ್ನಿತ್ತು ಅಲ್ಲಿಂದ ಮರಳಿ ಹೊರಟರು. ದಾರಿಯಲ್ಲಿ ಎಲ್ಲ ತೀರ್ಥ ಕ್ಷೇತ್ರಗಳಲ್ಲಿ ಗೋವಿಂದನನ್ನು ವಂದಿಸುತ್ತ ಮತ್ತೆ ಗಂಗೆಯ ದಡಕ್ಕೆ ಬಂದರು.

### ಜಲಧಿಯನ್ನು ಜಿಗಿದವನು ಜಾಹ್ನವಿಯ ಲಂಘಿಸನೆ

ಆ ಗಂಗೆಯ ತಡಿಯಲ್ಲಿ ಮತ್ತೆ ಅದೇ ಹಾಡು. ಕಡೆ ಹಾಯಿಸಲು ಹೋದಿ ಇಲ್ಲ. ಅಂಬಿಗನೂ ಇಲ್ಲ. ಸೂರ್ಯನು ಆಗಲೇ ಪಡುವಣ ಕಡಲಲ್ಲಿ ಇಳಿದಿದ್ದ. ಶಿಷ್ಯರೆಲ್ಲರೂ

ಖಿನ್ನರಾಗಿ ದಂಡೆಯ ಮೇಲೆ ಕೈ ಚೆಲ್ಲಿ ಕುಳಿತುಬಿಟ್ಟರು. ಪಾಪ ಅವರಿಗೇನು ಗೊತ್ತು ತಮ್ಮ ಈ ಗುರು ಹಿಂದೆ ಜಲಧಿಯನ್ನೇ ಜಿಗಿದಿದ್ದನೆಂದು. ಆಚಾರ್ಯರು ಅವರ ವಿಷಾದ ವನ್ನು ನೋಡಿ ನಕ್ಕು ಗಂಗೆಯ ತುಂಬಿ ಸೂಸುವ ಪ್ರವಾಹದಲ್ಲಿ ಹೊಕ್ಕರು. ಶಿಷ್ಯರು ಕುಳಿತಲ್ಲಿಯೇ ಹೆದರಿ ಹೌಹಾರಿದರು. ಆಚಾರ್ಯರು ಗರುಡನು ಕರುವಿನ ಹೆಜ್ಜೆಯನ್ನು ದಾಟುವಂತೆ ಅರೆ ಚಣದಲ್ಲಿ ದಾಟಿ ಆಚೆಯ ದಡದಲ್ಲಿ ನಿಂತುಕೊಂಡರು. ಅವರ ಬಟ್ಟೆ ಕೂಡ ಒದ್ದೆಯಾಗಿರಲಿಲ್ಲ. ಎದುರು ದಂಡೆಯ ಮೇಲೆ ನಿಂತುಕೊಂಡು ನೋಡುತ್ತಲಿರುವ ರಾಜನಿಗೆ ಅಚ್ಚರಿ. ಬ್ರಾಹ್ಮಣರಿಗೆ ವಿಸ್ಮಯ. ಉಳಿದೆಲ್ಲ ಜನರಿಗೆ ಕೌತುಕ. ಅವರೆಲ್ಲರೂ ಓಡಿಬಂದು ಆಚಾರ್ಯರ ಅಡಿದಾವರೆಗಳ ಮುಂದೆ ಅಡ್ಡಬಿದ್ದರು. ಈಚೆಯ ದಡದಲ್ಲಿ ಆಚಾರ್ಯರ ಕಿಂಕರನಾಗಿ ನಿಂತ ರಾಜನು ತನ್ನ ನೌಕೆಗಳನ್ನು ಕಳಿಸಿ ಶಿಷ್ಯರೆಲ್ಲರೂ ಇತ್ತ ಬರುವಂತೆ ಮಾಡಿದನು. ಆಚಾರ್ಯರು ಆ ಗಂಗಾ ತಟಾಕದಲ್ಲಿ ನೆರೆದ ಮಹಾ ಪಂಡಿತ ಪರಿಷತ್ತಿನಲ್ಲಿ ಮಾತನಾಡಿ ವೇದಗಳ ರಹಸ್ಯವನ್ನು ತಿಳಿಸಿದರು.

## ಸುಖತೀರ್ಥರ ದರ್ಶನಕ್ಕೆ ಗಂಗಾತೀರ್ಥ ಬಂದಿತು

ಅಲ್ಲಿಂದ ಆಚಾರ್ಯರು ಶಿಷ್ಯ ಸಮೇತರಾಗಿ ಹಸ್ತಿನಾವತಿಗೆ ಬಂದು ಸಮೀಪದ ಗಂಗಾ ತಟಾಕದಲ್ಲಿ ಚಾತುರ್ಮಾಸ್ಯ ಸಂಕಲ್ಪಗೈದರು. ಅಲ್ಲಿದ್ದಾಗ ಗಂಗೆ ಒಂದು ದಿನ ಭೂಮಿಯನ್ನು ಭೇದಿಸಿ ಕಾಲುವೆಯ ರೂಪದಿಂದ ಪ್ರತ್ಯಕ್ಷಳಾಗಿ ಆಚಾರ್ಯರ ಸೇವೆ ಗೈದಳು. ಚಾತುರ್ಮಾಸ್ಯವು ಮುಗಿದ ಬಳಿಕ ಪೂರ್ಣಬೋಧರು ಗಂಗೆಯ ಪ್ರಾರ್ಥನೆ ಯಂತೆ ಕಾಶಿಗೆ ಹೋಗಿ ಅಲ್ಲಿ ಇಂದ್ರಪುರಿ ಎಂಬ ಅದ್ವೈತ ಸನ್ಯಾಸಿಯನ್ನು ಸೋಲಿಸಿ ದರು. ಅನೇಕ ಅದ್ವೈತ ಪಂಡಿತರ ಸಭೆಗಳಲ್ಲಿ ಉಪನ್ಯಾಸ ಮಾಡಿ ಪರಮಾತ್ಮನ ಗುಣಪೂರ್ಣತ್ವವನ್ನೂ ವೇದಗಳ ಭೇದಪರತ್ವವನ್ನೂ ತಿಳಿಸಿ ಹೇಳಿದರು. ವಾದಿಗಳ ನ್ನೆಲ್ಲ ಗೆದ್ದು ದಿಗ್ವಿಜಯ ಮಾಡಿಕೊಂಡು ಕುರುಕ್ಷೇತ್ರ ಮಾರ್ಗವಾಗಿ ಹೃಷೀಕೇಶ ಕ್ಷೇತ್ರ ದಲ್ಲಿ ರುದ್ರ ದೇವರು ನೀಡಿದ ಆತಿಥ್ಯವನ್ನು ಸ್ವೀಕರಿಸಿ ಇಕ್ಷುಪಾತ ಎಂಬ ಕ್ಷೇತ್ರಕ್ಕೆ ದಯಮಾಡಿಸಿದರು.

## ದೊಡ್ಡವರ ದ್ರೋಹ ಮಾಡಿದ ಬಳಿಕ ಸರ್ವನಾಶಕ್ಕೆ ಬೇರೆ ಆಮಂತ್ರಣ ಬೇಡ

ಅಲ್ಲಿ ಆಚಾರ್ಯರು ಒಂದು ದಿನ ಬಾಗಿಲ ಹಾಕಿಕೊಂಡು ದೇವರ ಪೂಜೆ ಮಾಡುತ್ತ ಕುಳಿತುಕೊಂಡಾಗ ಗೋವೆಯ ರಾಜನು ಅಲ್ಲಿಗೆ ಬಂದು ಉದ್ಧಟತನದಿಂದ ವರ್ತಿಸಿದ್ದರಿಂದ ೬ ತಿಂಗಳಲ್ಲಿ ಅವನ ರಾಜ್ಯವು ಅಪಹೃತವಾಯಿತು.

ಆಚಾರ್ಯರು ಗೋವಾ ಪ್ರಾಂತದಲ್ಲಿ ಪರುಪೆ ಎಂಬ ಊರಲ್ಲಿ ಇದ್ದಾಗ ಅಲ್ಲಿಯ ಜನರ ಅಪೇಕ್ಷೆಯಂತೆ ತಮ್ಮ ಸುಸ್ವರ ಕಂಠದಿಂದ ಗಾಯನ ಮಾಡುತ್ತ ಭಗವಂತನ

ಗುಣವರ್ಣನೆಯನ್ನು ಮಾಡಿದರು. ಅವರ ಅತ್ಯದ್ಭುತ ಸಂಗೀತ ಸುಧೆಯಿಂದ ಜನರಿಗೆಲ್ಲ ಪರಮಾನಂದವಾಯಿತು. ಅವರು ಕುಳಿತ ಸುತ್ತುಮುತ್ತಲಿನ ಗಿಡಗಂಟೆ ಬರಡು ಕೊರಡು ಗಳೆಲ್ಲ ಚಿಗುರಿ ಕೊನರಿ ಹೂತು ಕಾತು ಫಲಭಾರದಿಂದ ಬಾಗಿನಿಂತಿದ್ದವು.

ಅಲ್ಲಿಂದ ಆಚಾರ್ಯರು ನೇರವಾಗಿ ಉಡುಪಿಗೆ ಬಂದು ಶ್ರೀಕೃಷ್ಣನ ದರ್ಶನ ಮಾಡಿಕೊಂಡು ಪಾಠ ಪ್ರವಚನವನ್ನು ಪ್ರಾರಂಭಿಸಿದರು. ಆಚಾರ್ಯರ ಭಾಷ್ಯ ಪ್ರವಚನ ನಡೆದಾಗ ದೇವತೆಗಳು ಕೂಡ ಅದೃಶ್ಯರೂಪದಿಂದ ಅವರ ಭಾಷ್ಯ ಶ್ರವಣ ವನ್ನು ಮಾಡಿ ಧನ್ಯರಾಗುತ್ತಿದ್ದರು.

## ಭೂಮಿ ಹೊತ್ತವನು ಭಾಷ್ಯಪಾಠಕ್ಕೆ ಬಂದಾಗ

ಒಂದು ದಿನ ಆಚಾರ್ಯರು ರಾತ್ರಿಯಲ್ಲಿ ಬ್ರಹ್ಮಸೂತ್ರದ ಮೇಲೆ ಉಪನ್ಯಾಸ ವನ್ನು ಮಾಡುತ್ತಲಿರುವಾಗ ಒಮ್ಮೆಲೆ ಎಲ್ಲ ಕಡೆಗೂ ಅಪೂರ್ವವಾದ ಬೆಳಕು ಚಿಮ್ಮಿ ಚಲ್ಲವರಿದು ಬಂಧಿತು. ಕೃಷ್ಣಪಕ್ಷದಲ್ಲಿ ಇಂಥ ತಿಂಗಳ ಕಾಂತಿಯು ಹೇಗೆ ತುಳಕಿತು ಎಂದು ಶಿಷ್ಯರು ಕೌತುಕಬಟ್ಟಾಗ ಆಚಾರ್ಯರು ಆದಿಶೇಷನು ಭಾಷ್ಯ ಶ್ರವಣಕ್ಕಾಗಿ ಬಂದಿದ್ದಾನೆ. ಅವನ ಹೆಡೆಯಲ್ಲಿಯ ರತ್ನಗಳ ಕಾಂತಿಯು ತಿಂಗಳಿನ ಬೆಳಕಿನಂತೆ ಇಲ್ಲಿ ಎಲ್ಲ ಕಡೆಗೂ ಸೂಸಿದೆ ಎಂದು ಹೇಳಿದರು.

ಆದಿಶೇಷನು ತನ್ನ ದರ್ಶನಕ್ಕಾಗಿ ಬಂದ ಸನಕಾದಿ ಮುನಿಗಳಿಗೆ ಮಧ್ವಶಾಸ್ತ್ರದ ಮಹಾ ಮಹಿಮೆಯನ್ನೂ ಅವರಿಂದಾಗುವ ಮೋಕ್ಷರೂಪಿ ಫಲಪ್ರಾಪ್ತವಾಗುವದನ್ನೂ ಬಣ್ಣಿಸಿ ಹೇಳಿದನು.

## ಪಂಚಾಂಗ ಕದ್ದರೆ ನಕ್ಷತ್ರಕಾಂತಿ ಕಡಿಮೆಯಾಗುವದೇ !

ಆಚಾರ್ಯರ ಕೀರ್ತಿಯು ಅನುದಿನವೂ ಬೆಳೆಯುತ್ತಿರುವದನ್ನು ಕಂಡು ಅನೇಕ ಅದ್ವೈತ ಪಂಡಿತರ ಹೃದಯದಲ್ಲಿ ಹಗೆ ಹೊಗೆಯಾಡಹತ್ತಿತು. ವಾದದಲ್ಲಿ ಸರ್ವಜ್ಞ ರನ್ನು ಸೋಲಿಸುವದು ಶಕ್ಯವಿಲ್ಲವೆಂದು ಅವರಿಗೆ ನಿಶ್ಚಯವಾಗಿದ್ದಿತು. ಹೇಗಾದರು ಮಾಡಿ ಆಚಾರ್ಯರ ಜ್ಞಾನಪ್ರಸಾರ ಕಾರ್ಯವನ್ನು ತಡೆಗಟ್ಟಬೇಕೆಂದು ಅವರು ಹಂಚಿಕೆ ಹಾಕಿದರು. ಈ ಕಾರ್ಯಕ್ಕೆ ಪುಂಡರೀಕಪುರಿ, ಪದ್ಮತೀರ್ಥ ಮುಂತಾದವರು ಮುಂದಾಗಿ ಆನಂದ ತೀರ್ಥರ ಗ್ರಂಥ ಭಾಂಡಾರವನ್ನೇ ಕದ್ದು ಬಿಟ್ಟರು.

## ರಾಜ ತೇಜವು ಬ್ರಹ್ಮ ತೇಜಕ್ಕೆ ಶರಣಾದಾಗ

ಇದನ್ನು ತಿಳಿದು ಜಯಸಿಂಹನೆಂಬ ಆ ದೇಶದ ಮಹಾರಾಜನಿಗೆ ಮಹಾ ವ್ಯಥೆ ಯಾಯಿತು. ಇಂಥ ವಿಭೂತಿ ಪುರುಷರಿಗೆ ತನ್ನ ರಾಜ್ಯದಲ್ಲಿ ಇಂತು ಅಪಚಾರ

ವಾದುದನ್ನು ಕಂಡು ಮನಸ್ಸಿನಲ್ಲಿ ನೊಂದುಕೊಂಡು ಆ ಗ್ರಂಥ ಭಾಂಡಾರವನ್ನು ಪತ್ತೆ ಮಾಡಿ ತರಿಸಿ ಆಚಾರ್ಯರಿಗೆ ತನ್ನ ರಾಜಧಾನಿಗೆ ಬಂದು ಅನುಗ್ರಹಿಸಬೇಕೆಂದು ಹೇಳಿಕಳುಹಿಸಿದನು. ರಾಜನ ಪ್ರಾರ್ಥನೆಯಂತೆ ಮಧ್ವ ಮುನಿಗಳು ವಿಷ್ಣುಮಂಗಲ ದೇವಾಲಯಕ್ಕೆ ದಯಮಾಡಿಸಿದರು. ಆಚಾರ್ಯರ ಮುಖ್ಯ ಶಿಷ್ಯರಾದ ಹೃಷೀಕೇಶ ತೀರ್ಥರು ತಮ್ಮ ಮಧುರ ಕಂಠದಿಂದ ಭಾಗವತವನ್ನು ವಾಚನ ಮಾಡಿದರು. ಆಚಾರ್ಯರು ಭಾಗವತದ ಅರ್ಥವನ್ನು ವಿವರಿಸುತ್ತ ವಿಷ್ಣುವಿನ ಮಹಾ ಮಹಿಮೆಯನ್ನು ಪ್ರವಚನ ಮಾಡಿದರು. ರಾಜನ ಪ್ರಾರ್ಥನೆಯಂತೆ ತಮ್ಮ ಗ್ರಂಥಗಳನ್ನು ಪರಿಗ್ರಹಿಸಿದರು.



## ತ್ರಿವಿಕ್ರಮರ ವಾದ ವಿಕ್ರಮ

ಈ ಸಭೆಗೆ ಅದ್ವೈತಮತದ ದಿಗ್ದಂತಿ ಪಂಡಿತರಾದ ತ್ರಿವಿಕ್ರಮ ಪಂಡಿತಾಚಾರ್ಯರು ಬಂದಿದ್ದರು. ತ್ರಿವಿಕ್ರಮರಿಗೆ ಸರ್ವ ಶಾಸ್ತ್ರಗಳೂ ಕರತಲಾಮಲಕವಾಗಿದ್ದವು. ಮುಂದೆ ಕುಡೇಲ ಗ್ರಾಮದಲ್ಲಿ ಅವರು ೧೫ ದಿನ ಆನಂದತೀರ್ಥರೊಡನೆ ತುರಸಿನಿಂದ ವಾಕ್ಯಾರ್ಥ ಮಾಡಿದರು. ಆದರೆ ಸರ್ವಜ್ಞಾಚಾರ್ಯರ ಸರ್ವಂಕಷ ಪ್ರತಿಭಾ ಪಾಂಡಿತ್ಯದ ಎದುರು ಮುಂದೆ ಮಾತನಾಡಲಾಗದೆ ಸೋತು ಶರಣಾಗತರಾದರು.

ಪೂರ್ಣಪ್ರಜ್ಞರ ಜ್ಞಾನದ ಮಟ್ಟವನ್ನು ತಿಳಿದು "ಶಿಷ್ಯಸ್ತೇಹಂ" ಎಂದ ತ್ರಿವಿಕ್ರಮರು ಆಚಾರ್ಯರಿಗೆ "ಸ್ವಾಮಿ, ನನ್ನ ಚಾಪಲ್ಯವನ್ನು ಕ್ಷಮಿಸಬೇಕು ತಮ್ಮ ಪಾದಧೂಳಿಯ ದಾಸ್ಯವನ್ನು ನೀಡಬೇಕು. ಬ್ರಹ್ಮಸೂತ್ರ ಭಾಷ್ಯವನ್ನು ಪ್ರವಚನ ಮಾಡಬೇಕೆಂದು" ಕೇಳಿಕೊಂಡರು. ಆಗ ಆಚಾರ್ಯರು ಅವರ ಅಪೇಕ್ಷೆಯಂತೆ ಸೂತ್ರಾರ್ಥವನ್ನು ವಿಶದ ವಿವರವಾಗಿ ನಿರೂಪಿಸಿದರು.

ಪಂಡಿತೋತ್ತಮರಾದ ತ್ರಿವಿಕ್ರಮರು ಆಚಾರ್ಯರಲ್ಲಿ ಎಲ್ಲ ಗ್ರಂಥಗಳನ್ನು ಓದಿ ಅವರ ಅಪ್ಪಣೆಯಂತೆ ಮಧ್ವಭಾಷ್ಯಕ್ಕೆ "ತತ್ವಪ್ರದೀಪ" ಎಂಬ ಟೀಕೆಯನ್ನು ಬರೆದು ಆ ಗುರುವಿನ ಪೂರ್ಣಾನುಗ್ರಹಕ್ಕೆ ಪಾತ್ರರಾದರು.

ತ್ರಿವಿಕ್ರಮ ಪಂಡಿತಾಚಾರ್ಯರು ಆಚಾರ್ಯರಿಂದ ರಚಿತವಾದ ಸರ್ವಮೂಲ ವಲ್ಲಿಯ ಎಲ್ಲ ಗ್ರಂಥಗಳ ವಸ್ತು, ಮಹಿಮೆ, ವಿಷಯ ವ್ಯಾಪ್ತಿ ನಿರೂಪಣೆಯ ವೈಖರಿ ಮುಂತಾದವುಗಳನ್ನು ಜನರಿಗೆಲ್ಲ ತಿಳಿಯುವಂತೆ ಉಪನ್ಯಾಸ ಮಾಡಿದರು.

ಆಚಾರ್ಯರು ಅನಂತರ ತ್ರಿವಿಕ್ರಮ ಪಂಡಿತಾಚಾರ್ಯರ ಪ್ರಾರ್ಥನೆಯಂತೆ ಅನುವ್ಯಾಖ್ಯಾನ ಎಂಬ ಮತ್ತೊಂದು ಶ್ರೇಷ್ಠ ಗ್ರಂಥವನ್ನು ರಚಿಸಿ ಲೋಕೋಪಕಾರ ಮಾಡಿದರು. ನಾಕು ಶಿಷ್ಯರಿಂದ ಒಂದೊಂದು ಅಧ್ಯಾಯಗಳನ್ನು ರಚಿಸುತ್ತಲೇ ಹೇಳಿ ಬರೆಸಿದ ಆ ನೈಪುಣ್ಯ ಸರ್ವಜ್ಞರಿಗೇ ಮೀಸಲು.

## ಯೋಗಿ ಅಣ್ಣ ತ್ಯಾಗಿ ತಮ್ಮ

ಆಚಾರ್ಯರು ವಿಷ್ಣುಮಂಗಲದಲ್ಲಿ ಇದ್ದಾಗ ಅವರ ಪೂರ್ವಾಶ್ರಮ ತಾಯಿ ತಂದೆಗಳು ಕಾಲವಾದರೆಂದು ಸಮಾಚಾರ ಬಂದಿತು. ಆಚಾರ್ಯರ ತಮ್ಮಂದಿರಾದ ವಿಷ್ಣುತೀರ್ಥರು ಪಾಜಕ ಕ್ಷೇತ್ರದಲ್ಲಿದ್ದು ತಾಯಿ-ತಂದೆಗಳ ಸೇವೆಯನ್ನು ಮಾಡುತ್ತ ಲಿದ್ದರು. ಆ ಅಣ್ಣನಂತೆ ಈ ತಮ್ಮ ಹುಟ್ಟಿದಂದಿನಿಂದಲೇ ಮಹಾ ವಿರಕ್ತರು. ಅವರು ಕರ್ತವ್ಯವೆಂದು ಪಿತೃಸೇವೆ ಮಾಡುತ್ತ ಊರಲ್ಲಿದ್ದರು. ತಾಯಿತಂದೆಗಳಿಬ್ಬರೂ ನಿರ್ಯಾಣ ಹೊಂದಿದ ಬಳಿಕ ಒಂದೊಂದಾಗಿ ಬಂದ ಆಪತ್ತುಗಳೆಲ್ಲ ಅವರ ಜನ್ಮಜಾತ ವೈರಾಗ್ಯವನ್ನು ಹುರಿಗೊಳಿಸಿದವು. ಅವರು ನೇರವಾಗಿ ವಿಷ್ಣುಮಂಗಲಕ್ಕೆ ಬಂದು ಅಣ್ಣನ ಅಡಿದಾವರೆಗಳ ಮುಂದೆ ಅಡ್ಡಬಿದ್ದು ಸನ್ಯಾಸಾಶ್ರಮವನ್ನು ಇತ್ತು ಅನುಗ್ರಹಿಸ ಬೇಕೆಂದು ಕೇಳಿಕೊಂಡರು.

## ಸೋದರನ ಹಂಬಲಕ್ಕೆ ಆದರದ ಬೆಂಬಲ

ತಮ್ಮನ ಅಪೇಕ್ಷೆಯಂತೆ ಆಚಾರ್ಯರು ಚಾತುರ್ಮಾಸ್ಯ ಸಂಕಲ್ಪ ಮುಗಿದ ಬಳಿಕ ಊರಿಗೆ ಬಂದು ಅನುಜನ ಜ್ಞಾನ ಭಕ್ತಿ ವೈರಾಗ್ಯಗಳು ಪಕ್ವವಾಗಿರುವದನ್ನು ಕಂಡು ಸುಮುಹೂರ್ತದಲ್ಲಿ ಸನ್ಯಾಸ ದೀಕ್ಷೆಯನ್ನಿತ್ತು ವಿಷ್ಣುತೀರ್ಥ ಎಂದು ನಾಮ ಕರಣ ಮಾಡಿದರು. ಆಚಾರ್ಯರಿಂದ ದಿವ್ಯಜ್ಞಾನವನ್ನು ಪಡೆದ ವಿಷ್ಣುತೀರ್ಥರು ಕುಕ್ಷಿಕ್ಷಂದ್ರ ಪರ್ವತದಲ್ಲಿ ನಿಂತು ಉಗ್ರತಪಸ್ಸನ್ನು ಮಾಡಿ ಭಗವಂತನನ್ನು ಒಲಿಸಿ ಕೊಂಡು ಅಣ್ಣನ ಅನುಗ್ರಹಕ್ಕೆ ಪಾತ್ರರಾದರು.

## ಘಟ್ಟಿ ಇಳಿದು ಬಂದ ಶಿಷ್ಯನನ್ನು ಪಟ್ಟಕ್ಕೆ ಏರಿಸಿದರು

ಆಚಾರ್ಯರ ಸದ್ಗುಣದ ಕೀರ್ತಿಯು ತಿರೆಯ ತುಂಬ ವ್ಯಾಪಿಸಿತ್ತು. ಇವರ ಮಹಾಮಹಿಮೆಗಳನ್ನು ತಿಳಿದು ಇವರ ಗುಣ ಗೌರವದಿಂದ ಆಕೃಷ್ಟರಾಗಿ ಇವರ ಆತ್ಮೀಯ ಶಿಷ್ಯ ಪರಿವಾರದಲ್ಲಿ ಪ್ರಮುಖರೆಂದು ಪರಿಗಣಿತರಾದ ಪಂಡಿತ ಪ್ರಕಾಂಡ ಶೋಭನಭಟ್ಟರಿಗೂ ಅವರ ಅಪೇಕ್ಷೆಯಂತೆ ಆಚಾರ್ಯರು ಸನ್ಯಾಸಾಶ್ರಮವನ್ನಿತ್ತು ಪದ್ಮನಾಭತೀರ್ಥರೆಂದು ಶುಭನಾಮ ಕರುಣಿಸಿದರು.

ಪದ್ಮನಾಭತೀರ್ಥರ ಭಕ್ತಿ, ವಿರಕ್ತಿ, ನಿತ್ಯ ಸೇವೆ, ಮತ್ತು ಬುದ್ಧಿ, ಶುದ್ಧಿ, ಸಿದ್ಧಿಗಳನ್ನು ಕಂಡು ಸಂಪ್ರೀತರಾದ ಶ್ರೀಮದಾಚಾರ್ಯರು ಅವರಿಗೆ ಪರಮಾತ್ಮವಿದ್ಯೆಯ ಪರಮ ರಹಸ್ಯವನ್ನು ಬೋಧಿಸಿ ಅನುಗ್ರಹಿಸಿದರು. ವೇದಾಂತ ಶರಧಿಯಲ್ಲಿ ಪದ್ಮನಾಭ ತೀರ್ಥರೆಂದರೆ ಒಂದು ತಿಮಿಂಗಲ. ವಾದ ಭೂಮಿಯಲ್ಲಿ ಮಾಯಿ ನರಿಗಳನ್ನು ಓಡಿಸುವ ಒಂದು ಸಿಂಹ. ಇವರ ಸಿಂಹನಾದವನ್ನು ಕೇಳಿಯೇ ದುರ್ವಾದಿಗಳು ಗರ್ವಗಲಿತರಾಗಿ ಓಡಿ ಹೋಗುತ್ತಿದ್ದರು. 'ಆಚಾರ್ಯರ ನಿಜವಾದ ಶಿಷ್ಯರು' ಇವರು ಎಂದು ಜನರು ಹೋದ ಹೋದಲ್ಲಿ ಇವರನ್ನು ಪೂಜಿಸುತ್ತಿದ್ದರು. ವೇದ ಪ್ರವಚನಗಳಲ್ಲಿ ಇವರದು ಎತ್ತಿದ ಕೈ. ಪರಮತ ಖಂಡನದಲ್ಲಿ ಅವರೊಬ್ಬ ಖಂಡಪರಶು. ಅವರು ರಚಿಸಿದ ಅನುವ್ಯಾಖ್ಯಾನದ ಟೀಕೆಯಾದ ಸನ್ಯಾಯರತ್ನಾವಳಿ ಎಂಬ ಗ್ರಂಥವು ವೇದಾಂತ ವಾಙ್ಮಯದಲ್ಲಿಯ ಒಂದು ಅನರ್ಘ್ಯ ರತ್ನ.

ಈ ವಿಷ್ಣುತೀರ್ಥ ಮತ್ತು ಪದ್ಮನಾಭತೀರ್ಥರ ಹೊರತಾಗಿ ಆಚಾರ್ಯರಿಗೆ ಇನ್ನೂ ಅನೇಕ ಜನ ಸನ್ಯಾಸಿ ಶಿಷ್ಯರು ಇದ್ದರು. ಅವರಲ್ಲಿ ೭ ಜನರು ಪರಮ ಮುಖ್ಯರಾಗಿದ್ದರು.

## ಆಚಾರ್ಯರ ಪಟ್ಟಶಿಷ್ಯರಾದ ಕಲಿಯುಗದ ಸಪ್ತರ್ಷಿಗಳು

ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡ ಹೃಷೀಕೇಶತೀರ್ಥರು, ಭಗವದನುಗ್ರಹದಿಂದ ಜನನ ಮರಣಾದಿ ಜಾಲಜಂಜಡದಿಂದ ಪಾರಾಗುವ ಯೋಗ್ಯತೆಯನ್ನು ಪಡೆದ ಜನಾರ್ದನತೀರ್ಥರು, ನರಸಿಂಹ ದೇವರನ್ನೇ ನಂಬಿ ನಿಂತ ನರಸಿಂಹ ತೀರ್ಥರು, ನಿರಂತರವೂ ಶ್ರೀಹರಿಯ ಧ್ಯಾನ ಮಾಡುವ ಉಪೇಂದ್ರ ತೀರ್ಥರು, ಸರ್ವಸಂಗ ಪರಿತ್ಯಾಗ ಮಾಡಿದ ವಾಮನ ತೀರ್ಥರು, ರಾಮನಾಮ ರತರಾದ ಶ್ರೀರಾಮ ತೀರ್ಥರು, ಲಕ್ಷ್ಮೀರಮಣನನ್ನು ಪ್ರತ್ಯಕ್ಷೀಕರಿಸಿಕೊಂಡ ಅಧೋಕ್ಷಜ ತೀರ್ಥರು.

## ನೆಲಕೆ ಬಂದ ನೇಸರ, ಬ್ರಹ್ಮತೇಜ ಭಾಸುರ

ಸಪ್ತ ಋಷಿಗಳಂತಿದ್ದ ಈ ಏಳು ಜನ ಸ್ವಾಮಿಗಳು ಮಹಾ ಪಂಡಿತರು. ವೀತರಾಗ ರಾವ ಪೂತಾತ್ಮರು. ಅವರು ಪಾದವಿಟ್ಟ ನೆಲ ಪುನೀತವಾಗುತ್ತಿತ್ತು. ಅವರು ಸಂಚರಿಸಿದ ನಾಡು ಉದ್ಧಾರವಾಗುತ್ತಿತ್ತು. ಅವರು ಹೋದಲ್ಲೆಲ್ಲ ಬೆಳಕು ಬೀರಿ ಕತ್ತಲೆಯನ್ನು ಕಳೆಯುತ್ತಿದ್ದರು. ಅಜ್ಞಾನವನ್ನು ಅಳಿಯುತ್ತಿದ್ದರು. ಹರಿಪದಕ್ಕೆ ಹೋಗುವ ದಾರಿಯನ್ನು ತೋರುತ್ತಿದ್ದರು.

ಇವರಲ್ಲದೆ ಆಚಾರ್ಯರಿಗೆ ಇನ್ನೂ ಅನೇಕ ಯತಿ ಶಿಷ್ಯರೂ ಗೃಹಸ್ಥಾಶ್ರಮಿ ಶಿಷ್ಯರೂ ಇದ್ದು ಅವರೆಲ್ಲರೂ ಭೂಮಂಡಲ ತುಂಬ ವೈಷ್ಣವ ಮತವನ್ನು ಬೋಧಿಸಿ ತಮ್ಮ ಗುರುಗಳ ವೈದಿಕ ಮತ ಪುನರುದ್ಧಾರ ಕಾರ್ಯದಲ್ಲಿ ಯಥಾಶಕ್ತಿ ಸೇವೆ ಸಲ್ಲಿಸಿದರು.

### ವಾಚಮರ್ಥೋ(ಽ)ನುಧಾವತಿ



ಗೋಮತೀ ನದಿಯ ದಂಡೆಯಲ್ಲಿ ಆಚಾರ್ಯರು ಒಮ್ಮೆ ಸಂಚಾರದಲ್ಲಿದ್ದಾಗ ಒಬ್ಬ ಶೂದ್ರ ರಾಜನು ಆಚಾರ್ಯರ ಹತ್ತರ ಬಂದು "ವೇದಗಳೆಲ್ಲ ಹುಚ್ಚನ ಮಾತುಗಳಿದ್ದಂತೆ. ವೇದಗಳಲ್ಲಿ ಹೇಳಿದಂತೆ ಆದದ್ದು ಎಲ್ಲಿಯೂ ಕಂಡು ಬರುವದಿಲ್ಲ. ವೇದ ವಚನಗಳಂತೆ ನಡೆದರೂ ಅದರಲ್ಲಿ ಹೇಳಿದ ಫಲವು ಮಾತ್ರ ದೊರಕುವದಿಲ್ಲ ಎನ್ನುವದಕ್ಕೆ ಅನೇಕ ದೃಷ್ಟಾಂತಗಳುಂಟು" ಎಂದು ಆಗ್ರಹದಿಂದ ಪ್ರತಿಪಾದಿಸತೊಡಗಿದನು. ಆಗ ಆಚಾರ್ಯರು ತಮ್ಮ ಎರಡೂ ಕೈಗಳಲ್ಲಿ ಕೆಲವು ಹೆಸರು ಬೀಜಗಳನ್ನು ತಲಿಸಿಕೊಂಡು "ಯಾಓಷಧೀಃ ಪೂರ್ವಾಜಾತಾಃ" ಎಂಬ ವೇದಮಂತ್ರ

ವನ್ನು ಹೇಳಿ ಅಲ್ಲಿಯೇ ಬಿತ್ತಿವರು. ತಕ್ಷಣವಲ್ಲಿಯೇ ಆ ಬೀಜಗಳು ಮೊಳೆತು, ಅಂಕುರುಸಿ, ಚಿಗುರಿ, ಕುಡಿಬಿಟ್ಟು, ಮಿಡಿಮೂಡಿ, ಕಾಯಿಆಗಿ, ಹೂಬಿಟ್ಟು, ಹಣ್ಣಾಗಿ ಎಲ್ಲರ ಕಣ್ಣೆದುರೇ ಅದರ ಫಲಗಳು ಗೊನೆಯಾಗಿ ತೊನೆದಾಡ ತೊಡಗಿದವು. ಆಗ ಜನರಿಗೆಲ್ಲ ವೇದಗಳ ಮೇಲೆ ವಿಶ್ವಾಸ ಮೂಡಿತು.

ಮತ್ತೊಮ್ಮೆ ಆಚಾರ್ಯರು ಸಂಚಾರಕ್ಕೆ ಹೊರಟಾಗ ತುಂಗಾ ನದಿಗೆ ಸೇತುವೆಯಾಗಿ ಇಡಲು ಒಂದು ದೊಡ್ಡ ಹೆಬ್ಬಂಡೆಯನ್ನು ಹೊತ್ತು ಸಾವಿರಾರು ಜನರು ಕೂಡಿ ತರತೊಡಗಿದ್ದರು. ಅರ್ಧದಾರಿಯಲ್ಲಿ ಕೈಸೋತು ಶಕ್ತಿಸಾಲದೆ ಅವರು ಸುಮ್ಮನೆ ಕುಳಿತುಕೊಂಡಾಗ ಆಚಾರ್ಯರು ಬಂದು ಅದನ್ನು ಒಂಟಿಗೈಯಿಂದ ಎತ್ತಿ ನಿರ್ದಿಷ್ಟ ಸ್ಥಳದಲ್ಲಿ ಅನಾಯಾಸವಾಗಿ ಇರಿಸಿದರು. ಕಡೂರ ಜಿಲ್ಲೆಯ ಕಳಸ ಎಂಬ ಊರಿನ ಹತ್ತಿರ ತುಂಗಾ ನದಿಯಲ್ಲಿ ಈಗಲೂ ಅದನ್ನು ನೋಡಬಹುದು.

## ಗಾಳಿ ಮಳೆ ತರಿಸಿತು

ಇಡೇತುದೆ ಎಂಬ ಗ್ರಾಮದಲ್ಲಿ ಬೇಸಿಗೆಯಲ್ಲಿ ಕೆರೆಯಲ್ಲಿ ನೀರಿಲ್ಲದೆ ಕಷ್ಟಪಡುವ ಜನರನ್ನು ಕಂಡು ಕರುಣೆಯಿಂದ ಆಚಾರ್ಯರು ಮೋಡಗಳನ್ನು ತರಿಸಿ ಕೆರೆ ತುಂಬುವಂತೆ ಮಾಡಿದರು.

## " ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಃಷ್ಕರಂ "

ಮತ್ತೊಮ್ಮೆ ಮಹಾ ಬಲಿಷ್ಠರಾದ ಅಪ್ರತಿಮಲ್ಲ ಮಲ್ಲರೆಂದು ಪ್ರಖ್ಯಾತಿ ಪಡೆದ ಕೊಬ್ಬಿದ ಗಂಡವಾಟ ಸಹೋದರರು ಆಚಾರ್ಯರ ಶಕ್ತಿ ಪರೀಕ್ಷೆ ಮಾಡಬೇಕೆಂದು ಬಂದು ಅವರ ಕತ್ತನ್ನು ಹಿಚುಕತೊಡಗಿದರು. ಅವರು ಹಿಸುಕಿದಂತೆ ಆಚಾರ್ಯರ ಕೊರಳು ಉಬ್ಬುತ್ತ ಹೋಯಿತು. ಹಿಸುಕಿ ಹಿಸುಕಿ ಕೈಸೋತು ಕೊನೆಗೆ ಅವರೇ ಮೂರ್ಛಿತರಾಗಿ ನೆಲಕ್ಕೆ ಬಿದ್ದರು.

ಮತ್ತೊಮ್ಮೆ ಶಿವ, ಅಗ್ನಿ, ವಾಸುದೇವ, ಉಗ್ರ, ಅನೋಘ ಎಂಬ ಐಯ್ದು ಜನ ಜಗಜಟ್ಟಿಗಳು ಆಚಾರ್ಯರ ಮೇಲೆ ಒಮ್ಮೆಲೆ ಎರಗಿದರು. ನಾನಾಯುಕ್ತಿ ಪ್ರಯುಕ್ತಿಗಳಿಂದಲೂ ಪೇಚು ಪಟ್ಟುವರಸೆಗಳಿಂದಲೂ ಸೋಲಿಸಬೇಕೆಂದು ಶತಪ್ರಯತ್ನ ಮಾಡಿದರೂ ಆಗದೆ ಕೈಸಾಗದೆ ಕೊನೆಗೆ ತಾವೇ ಸೋತು ಅವರ ಚರಣಗಳಿಗೆ ಶರಣುಹೊಡೆದು ಹೋದರು.

## ಪಾರಂತಿಯ ದೇವರನ್ನು ಧೂಳಿಸ್ನಾನದಿಂದ ಪಾರು ಮಾಡಿದರು

ಪಾರಂತಿ ಎಂಬ ದೇವಾಲಯದಲ್ಲಿ ದೇವರ ಪೂಜೆಯು ಸರಿಯಾಗಿ ನಡೆಯುವದಿಲ್ಲವೆಂದು ಕೇಳಿ ಅಲ್ಲಿಗೆ ಹೋಗಿ ಆ ದೇವಾಲಯದ ಜೀರ್ಣೋದ್ಧಾರ ಮಾಡಿಸಿ ನಿತ್ಯ

ನೈಮಿತ್ತಿಕ ಪೂಜೆ, ಉತ್ಸವಾದಿಗಳು ಯಥಾಪ್ರಕಾರ ವೈಭವದಿಂದ ನಡೆಯುವಂತೆ ಮಾಡಿದರು.

ಆಚಾರ್ಯರು ವೈದ್ಯನಾಥ ಸ್ವಾಮಿಯ ಕೊಕ್ಕಡ ಕ್ಷೇತ್ರಕ್ಕೆ ಬಂದಾಗ "ಕೃಷ್ಣಾಮೃತ ಮಹಾರ್ಣವ" ಎಂಬ ಪುರಾಣವಚನ ಸಂಕಲನ ರೂಪವಾದ ಕಿರು ಹೊತ್ತಿಗೆಯನ್ನು ಬರೆದರು. ಇವರಿಂದ ಒಟ್ಟು ಆಚಾರ್ಯರು ಬರೆದ ಗ್ರಂಥಗಳ ಸಂಖ್ಯೆ ೩೭ ಆಯ್ತು.

## ಆಚಾರ್ಯರ ೩೭ ಗ್ರಂಥಗಳು

೧) ತತ್ತ್ವ ಸಂಖ್ಯಾನ ೨) ತತ್ತ್ವ ವಿವೇಕ ೩) ಉಪಾಧಿ ಖಂಡನ ೪) ಮಾಯಾವಾದ ಖಂಡನ ೫) ಮಿಥ್ಯಾತ್ವಾನುಮಾನ ಖಂಡನ ೬) ತತ್ತ್ವೋದ್ಯೋತ ೭) ತತ್ತ್ವ ನಿರ್ಣಯ ೮) ಕರ್ಮ ನಿರ್ಣಯ ೯) ಕಥಾಲಕ್ಷಣ ೧೦) ಗೀತಾ ಭಾಷ್ಯ ೧೧) ಗೀತಾ ತಾತ್ಪರ್ಯ ೧೨) ಋಗ್ಭಾಷ್ಯ ೧೩) ಬ್ರಹ್ಮಸೂತ್ರ ಭಾಷ್ಯ ೧೪) ಅಣುಭಾಷ್ಯ ೧೫) ಅನುವ್ಯಾಖ್ಯಾನ ೧೬) ನ್ಯಾಯ ವಿವರಣ ೧೭) ತಂತ್ರಸಾರ ೧೮) ದ್ವಾದಶ ಸ್ತೋತ್ರ ೧೯) ಯತಿಪ್ರಣವಕಲ್ಪ ೨೦) ಜಯಂತೀ ಕಲ್ಪ ೨೧) ನಖಸ್ತುತಿ ೨೨) ಯಮಕ ಭಾರತ ೨೩) ಕೃಷ್ಣಾಮೃತ ಮಹಾರ್ಣವ ೨೪) ಸದಾಚಾರ ಸ್ಮೃತಿ ೨೫) ಭಾಗವತ ತಾತ್ಪರ್ಯ ೨೬) ಪ್ರಮಾಣ ಲಕ್ಷಣ ೨೭) ಮಹಾಭಾರತ ತಾತ್ಪರ್ಯ ೨೮) ಐತರೇಯ ಭಾಷ್ಯ ೨೯) ತೈತ್ತಿರೀಯ ಭಾಷ್ಯ ೩೦) ಬೃಹದಾರಣ್ಯಕಭಾಷ್ಯ ೩೧) ಈಶಾವಾಸ್ಯಭಾಷ್ಯ ೩೨) ಕಾಠಕಭಾಷ್ಯ ೩೩) ಛಾಂದೋಗ್ಯ ಭಾಷ್ಯ ೩೪) ಅಥರ್ವಣ ಭಾಷ್ಯ ೩೫) ಮಾಂಡೂಕ ಭಾಷ್ಯ ೩೬) ಷಟ್‌ಪ್ರಶ್ನಭಾಷ್ಯ ೩೭) ತಲವಕಾರ ಭಾಷ್ಯ ಎಂದು ೩೭ ಗ್ರಂಥಗಳನ್ನು ರಚಿಸಿದರು.

## ವಾಯು ಲೀಲೆಯ ವಿಹಂಗಮ ನೋಟ

ಹೀಗೆ ಸಕಲ ವೇದಶಾಸ್ತ್ರ ನಿರ್ಣಾಯಕವಾದ ಅನೇಕ ಗ್ರಂಥಗಳನ್ನು ರಚಿಸಿ, ಪರವಾದಿಗಳನ್ನು ಜಯಿಸಿ, ನಾಸ್ತಿಕ್ಯವನ್ನು ನಿರಾಕರಣ ಮಾಡಿ, ವೇದ ಮತವನ್ನು ಉದ್ಧರಿಸಿ, ವೈಷ್ಣವ ಸಿದ್ಧಾಂತವನ್ನು ಮೆರೆಸಿ, ಎಲ್ಲ ಕಡೆಗೂ ನಿಜವಾದ ತತ್ತ್ವಜ್ಞಾನವನ್ನು ಪ್ರಚಾರ ಮಾಡಿ, ತತ್ತ್ವೋಪದೇಶ, ತಪ್ತ ಮುದ್ರಾಧಾರಣಗಳಿಂದ ಸಜ್ಜನರಿಗೆಲ್ಲ ವೈಷ್ಣವ ದೀಕ್ಷೆಯನ್ನು ಕರುಣಿಸಿ, ಸನಕಾದಿ ಪರಂಪರಾ ಪ್ರಾಪ್ತವಾದ ಜಗದ್ಗುರು ಪೀಠದ ಪರಮಹಂಸ ಪರಂಪರೆಯನ್ನು ಮುಂದುವರಿಸಿ, ತಮ್ಮ ಮಧ್ವ ಸಿದ್ಧಾಂತ ಪ್ರಚಾರ ಪ್ರಸಾರಕ್ಕಾಗಿ ಉಡುಪಿಯಲ್ಲಿ ಅಷ್ಟದಿಗ್ಗಜಗಳಂತಿರುವ ಎಂಟು ಜನ ಬಾಲ

ಯತಿಗಳನ್ನೂ ಘಟ್ಟದ ಮೇಲೆ ಪದ್ಮನಾಭತೀರ್ಥರೆಂಬ ಪ್ರಾಜ್ಞ ಪುಂಗವರನ್ನೂ ನಿಯಮಿಸಿ, ಲೋಕೋದ್ಧಾರಕ್ಕಾಗಿ ಉಡುಪಿಯಲ್ಲಿ ಶ್ರೀಕೃಷ್ಣನನ್ನುಸ್ಥಾಪಿಸಿ, ತಮ್ಮ ಸಾಕ್ಷಾತ್ ಶಿಷ್ಯರಾದ ೯ ಜನ ಪರಮ ಜ್ಞಾನಿಗಳಾದ ಪರಮಹಂಸರಿಗೂ ತಮ್ಮ ಕರಕಮಲದಿಂದ ಪೂಜಿತವಾದ ಬೇರೆ ಬೇರೆ ದಿವ್ಯ ಭಗವದ್ವಿಗ್ರಹಗಳನ್ನು ದಯಪಾಲಿಸಿ, ಅನೇಕ ಮಹಾ ಮಹಿಮೆಗಳನ್ನು ಮೆರೆದು, ದೇವಸಭೆಗಳಲ್ಲಿ ಗಂಧರ್ವರಿಂದ ಹೊಗಳಿ ಹಾಡಲ್ಪಟ್ಟವರಾಗಿ, ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಶಾಲಿವಾಹನ ಶಕೆ ೧೨೩೯ ಪಿಂಗಳ ಸಂವತ್ಸರ ಮಾಘ ಶುದ್ಧ ನವಮಿ ( ಕ್ರಿ. ಶ. ೧೩೧೮ ಜನೇವರಿ ೧೧ನೇ ದಿನದಂದು ಶ್ರೀ ಅನಂತೇಶ್ವರ ದೇವಸ್ಥಾನದಲ್ಲಿ ಕೆಲವು ವಿಶಿಷ್ಟ ಶಿಷ್ಯರಿಗೆ ಐತರೇಯ ಭಾಷ್ಯ ಪಾಠ ಹೇಳುತ್ತ ಕುಳಿತುಕೊಂಡಿದ್ದರು.

## ಪಾಠ ಕೇಳಿ ಪುಷ್ಪಾರ್ಚನೆ ಗೈದರು

ಆಚಾರ್ಯರ ಈ ದಿವ್ಯ ಪ್ರವಚನವನ್ನು ಕೇಳಬೇಕೆಂದು ಬ್ರಹ್ಮಾದಿ ದೇವತೆಗಳು ಅನೇಕ ಋಷಿಮುನಿಗಳೊಂದಿಗೆ ಮುಗಿಲ ಮೇಲೆ ಬಂದು ನಿಂತುಕೊಂಡರು. ಆಚಾರ್ಯರ ವೇದಾಂತ ವಾಣಿಯು ಗಂಗಾ ಪ್ರವಾಹದಂತೆ ನಿರರ್ಗಳ ಹರಿಯುತ್ತಿತ್ತು. ಇಂಥ ಅಪೂರ್ವವಾದ ಸಚ್ಛಾಸ್ತ್ರ ಪ್ರವಚನವನ್ನು ಕೇಳಿ ಧನ್ಯರಾದ ದೇವತೆಗಳು ನಿಂತಲ್ಲಿಯೇ ನಮಸ್ಕಾರ ಮಾಡಿ " ಸ್ವಾಮಿ, ತಾವು ದುರ್ಮತಗಳನ್ನೆಲ್ಲ ಅಳಿದಿರಿ. ಅಜ್ಞಾನವನ್ನು ಕಳೆದಿರಿ. ನಿಮ್ಮ ಮಾತುಗಳಿಂದ ಭಗವಂತನ ಗುಣಗಳನ್ನು ಜನರಿಗೆ ಗೋಚರವಾಗುವಂತೆ ಉಪದೇಶ ಮಾಡಿದಿರಿ, ಎಲ್ಲ ಕಡೆಗೆ ದಿಗ್ವಿಜಯ ಮಾಡಿದಿರಿ. ನಿಮ್ಮ ಗುಣಗಳಿಂದ ಹದಿನಾಲ್ಕು ಲೋಕಗಳನ್ನು ಗೆದ್ದಿರಿ. ಸರ್ವಜ್ಞರೇ, ಇನ್ನು ನಮ್ಮ ಮೇಲೆ ನಿಮ್ಮ ಕೃಪಾದೃಷ್ಟಿಯನ್ನು ಬೀರಿರಿ. ದಯದೋರಿರಿ.

" ನಮಸ್ತೇ ಪ್ರಾಣೇಶ ಪ್ರಣತ ವಿಭವಾಯಾವನಿಮಗಾ ।  
ನಮಸ್ವಾಮಿನ್ ರಾಮ ಪ್ರಿಯತಮ ಹನೂಮನ್ ಗುರುಗುಣ ।  
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್  
ನಮ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯಜಯ ॥ "

ಎಂದು ಅವತಾರ ತ್ರಯೋಪೇತವಾದ ಆನಂದತೀರ್ಥರ ಮಹಾ ಮಹಿಮೆಯನ್ನು ಬಣ್ಣಿಸುತ್ತ ಅವರ ಕೃಪಾ ಕಟಾಕ್ಷವನ್ನು ಬಯಸಿ ಪ್ರಾರ್ಥನೆಯನ್ನು ಸಲ್ಲಿಸುತ್ತ ಪಾಠ ಹೇಳುತ್ತ ಕುಳಿತ ಶ್ರೀ ಮಧ್ವಾಚಾರ್ಯರ ಮೇಲೆ ರಾಶಿರಾಶಿಯಾಗಿ ಹೂವಿನ ಮಳೆಗರೆದರು. ೩೩ ಕೋಟಿ ದೇವತೆಗಳು ಒಂದೊಂದು ಹಿಡಿಯಂತೆ ಹೂಗಳನ್ನು ಎರಚಿದರೂ ಅದೊಂದು ದೊಡ್ಡ ರಾಶಿಯಾಗಿಯೇ ಆಚಾರ್ಯರ ಮೇಲೆ ಬಿದ್ದಿತು.

ಮುಂದೆ ಕೆಲ ಸಮಯದ ನಂತರ ಶಿಷ್ಯರು ಆ ಪುಷ್ಪ ಪರ್ವತವನ್ನೆಲ್ಲ ಆಚೀಚೆ ಸರಿಸಿ ನೋಡಿದಾಗ ಅಲ್ಲಿ ಆಚಾರ್ಯರೇ ಇರಲಿಲ್ಲ. ಅವರು ಅಲ್ಲಿಂದ ಅದೃಶ್ಯರಾಗಿ ಬದರಿಕಾಶ್ರಮಕ್ಕೆ ತಮ್ಮ ಗುರುಗಳಾದ ವೇದವ್ಯಾಸರ ಬಳಿಗೆ ತೆರಳಿದ್ದರು. ಆ ವ್ಯಾಸಾಶ್ರಮದಲ್ಲಿ ಅವರು ಇಂದಿಗೂ ಎಲ್ಲರ ಕಣ್ಣಿಗೆ ಕಾಣುವಂತೆ ದೃಶ್ಯರಾಗಿಯೇ ಇದ್ದಾರೆ. ಉಡುಪಿಯಲ್ಲಿ ಮಾತ್ರ ಈಗಲೂ ಅದೃಶ್ಯ ರೂಪದಿಂದ ಇರುತ್ತಾರೆ.

"ಅದೃಶ್ಯೋ ರೌಪ್ಯ ಪೀಠೇಸ್ತಿ
ದೃಶ್ಯೋಸ್ತಿ ಬದರೀತಟೆ"

ಎಂಬ ಗುರುರಾಜರ ಮಾತು ಮಧ್ವಶಾಸ್ತ್ರದಲ್ಲಿ ನಂಬಿಗೆಯಿಟ್ಟು ನೆಚ್ಚಿ ಮೆಚ್ಚಿ ನಡೆದವರಿಗೆ ತಾರಕ ಮಂತ್ರವಾಗಿದೆ.



# ಪ್ರಕರಣ ಎರಡು

# ಶ್ರೀ ಮಧ್ವ ಸಿದ್ಧಾಂತ ಸಾರ

## ಮಧ್ವ ಮತದ ತತ್ವರತ್ನಗಳು

" ಶ್ರೀಮನ್ ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೊ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚ ಭಾವಂ ಗತಾಃ ॥
ಮುಕ್ತಿರ್ನೈಜ ಸುಖಾನು ಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋ ಹರಿಃ ॥ "

ಮಧ್ವಮತದ ಮುಖ್ಯ ತತ್ವವೆಂದರೆ ಹರಿ ಸರ್ವೋತ್ತಮತ್ವ. ಸಕಲ ವೇದ ಪುರಾಣ ಸಚ್ಛಾಸ್ತ್ರಗಳೆಲ್ಲವೂ ಶ್ರೀ ವಿಷ್ಣುವಿನ ಮಹಾ ಮಹಿಮೆಯನ್ನು ಬಗೆಬಗೆಯಾಗಿ ಬಣ್ಣಿಸಲಿಕ್ಕಾಗಿಯೇ ಹುಟ್ಟಿವೆ, ಹೊರಟಿವೆ.

ಆದುದರಿಂದಲೇ ಶ್ರೀ ಚಂದ್ರಿಕಾಚಾರ್ಯರೂ ಅವರ ಶಿಷ್ಯ ಪ್ರಶಿಷ್ಯರಾದ ಶ್ರೀಕೃಷ್ಣ ಚೈತನ್ಯ, ಬಲದೇವ, ಪದ್ಮಭೂಷಣ, ಮೊದಲಾದವರು ವೈಷ್ಣವ ಮತದ ಮುಖ್ಯ ತತ್ವಗಳನ್ನು ಹೇಳುವಾಗ ಮೊದಲು "ಶ್ರೀಮನ್ಮಧ್ವಮತೇ ಹರಿಃ ಪರತರಃ" ಎಂದು ಶ್ರೀಹರಿಯ ಸರ್ವೋತ್ತಮತ್ವವನ್ನು ಉಸುರಿದ್ದಾರೆ.

ಈ ಮೇಲೆ ಉದಾಹರಿಸಿದ ಪದ್ಯವು ವೇದ-ಶಾಸ್ತ್ರ ಸಾಗರವನ್ನು ಕಡೆದು ಪಡೆದ ತತ್ವರತ್ನಗಳ ಒಂದು ಸುಂದರ ಮಣಿ ಮಂಜೂಷಿಕೆಯಂತಿದೆ. ಇದರಲ್ಲಿ ಮಧ್ವಮತದ ನವರತ್ನಗಳಂತಿದ್ದ ನವತತ್ವಗಳನ್ನು ಒಳ್ಳೇ ಜಾಣತನದಿಂದ ಪೋಣಿಸಿದ್ದಾರೆ. ಇಲ್ಲಿ ಹೇಳಿದ ಪ್ರತಿಯೊಂದು ತತ್ವಕ್ಕೂ ವೇದದ ಆಧಾರವಿದೆ. ಸ್ಮೃತಿಯ ಬೆಂಬಲವಿದೆ. ಸೂತ್ರದ ಸಮ್ಮತಿ ಇದೆ. ಪುರಾಣದ ಪುಷ್ಟಿ ಇದೆ. ಗೀತೆಯ ಸಂವಾದವಿದೆ. ಇತಿಹಾಸದ ಅನುಮೋದನ ಇದೆ. ಯುಕ್ತಿಗಳ ಅನುಕೂಲ್ಯವಿದೆ. ಇಷ್ಟೆಲ್ಲ ಪ್ರಮಾಣಾನುಕೂಲ್ಯ ಯಾವ ಮತದ ಯಾವ ತತ್ವಕ್ಕೂ ಹಿಂದೆ ದೊರಕಿಲ್ಲ ಮುಂದೆ ದೊರಕಲಾರದು. ಇದೇ ಮಧ್ವಮತದ ವೈಶಿಷ್ಟ್ಯವಾಗಿದೆ.

ಪಾವನ ತಮವಾದ ಈ ಪಾವನ ಮತದ ಪ್ರಮಾಣಪ್ರಮಿತತತ್ವವನ್ನು ಇಲ್ಲಿ ನಿರೀಕ್ಷಿಸೋಣ.

# ( ೧ )

## ಹರಿಃ ಪರತರಃ

### ಶ್ರೀ ಹರಿಯೇ ಸರ್ವೋತ್ತಮ

ಚರಾಚರಾತ್ಮಕವಾದ ಈ ವಿಶ್ವ ಪ್ರಪಂಚವನ್ನೆಲ್ಲ ವ್ಯವಸ್ಥಿತವಾಗಿ ನಿಯಮಿಸುವ, ರೂಪಿಸುವ, ರಕ್ಷಿಸುವ ಪರಾಶಕ್ತಿ ಒಂದನ್ನು ಎಲ್ಲ ಆಸ್ತಿಕರೂ ಒಪ್ಪುತ್ತಾರೆ. ಅದಕ್ಕೆ ವೇದವಲ್ಲಿ 'ಬ್ರಹ್ಮ' ಎಂದು ಕರೆದಿದ್ದಾರೆ.

"ಯತೋವಾ ಇಮಾನಿ ಭೂತಾನಿ ಜಾಯಂತೆ ।
ಯೇನ ಜಾತಾನಿ ಜೀವಂತಿ ।
ಯತ್ಪ್ರಯಂತ್ಯಭಿಸಂವಿಶಂತೀತಿ । ತದ್ವಿಜಿಜ್ಞಾಸಸ್ವ । ತದ್ ಬ್ರಹ್ಮೇತಿ ॥"
(ತೈತ್ತಿರೀಯೋಪನಿಷತ್)

(ಜಗತ್ತಿನ ಹುಟ್ಟು ಅಳಿವು ಉಳಿವುಗಳಿಗೆ ಮೂಲ ಕಾರಣವೇ ಬ್ರಹ್ಮ ಎಂದು ವಿಚಾರಿಸಿ ತಿಳಿದುಕೋ.)

ಇದೇ ಅಭಿಪ್ರಾಯವನ್ನು ಭಗವಾನ್ ಬಾದರಾಯಣರು ಬ್ರಹ್ಮ ಸೂತ್ರದಲ್ಲಿ "ಓಂ ಜನ್ಮಾದ್ಯಸ್ಯಯತಃ" ಎಂಬ ಲಕ್ಷಣ ಸೂತ್ರದಿಂದ ನಿರೂಪಿಸಿದ್ದಾರೆ.

ಈ 'ಜನ್ಮಾದ್ಯಸ್ಯಯತಃ' ಎಂಬ ಸೂತ್ರಕ್ಕೆ ಶ್ರೀ ಮಧ್ವಾಚಾರ್ಯರು ಸ್ಕಂದ ಪುರಾಣದ ವಚನಾನುಸಾರವಾಗಿ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಆವರಣ, ಬಂಧ, ಮೋಕ್ಷ ಎಂಬ ಎಂಟನ್ನೂ ಮಾಡುವವ ಎಂದು ಅರ್ಥ ಮಾಡಿದ್ದಾರೆ.

ಈ ವಿಷಯದಲ್ಲಿ ಸಾಮಾನ್ಯವಾಗಿ ಎಲ್ಲ ಆಸ್ತಿಕ ದರ್ಶನಕಾರರಲ್ಲಿ ಐಕ್ಯಮತ್ಯ ಇದೆ. ಜಗತ್ಕಾರಣವಾದ ವಸ್ತು ಬ್ರಹ್ಮ ಎಂಬಲ್ಲಿ ಯಾರಿಗೂ ವಿವಾದವಿಲ್ಲ.

ಆದರೆ ಆ ಬ್ರಹ್ಮ ಯಾರು? ಹರಿಯೋ, ಹರನೋ, ಶಕ್ತಿಯೋ, ಗಣಪತಿಯೋ, ಸೂರ್ಯನೋ, ಸ್ಕಂದನೋ ಯಾರು? ಇಲ್ಲಿಯೇ ಮತಭೇದ ಹುಟ್ಟಿದ್ದು.

ಪ್ರಥಮ ಸೂತ್ರದಲ್ಲಿ ಕೇವಲ 'ಬ್ರಹ್ಮ' ಎಂಬ ಶಬ್ದ ಮಾತ್ರ ಇದೆ. ವಿಷ್ಣು ಎಂದಿಲ್ಲ. ಶಿವ ಎಂದಿಲ್ಲ. ಬೇರಾವದೂ ಇಲ್ಲ. 'ಯತೋವಾ ಇಮಾನಿ ಭೂತಾನಿ ಜಾಯಂತೆ' ಎಂಬ ಶ್ರುತಿಯಲ್ಲಿಯೂ ಅದೇ ಬ್ರಹ್ಮ ಶಬ್ದದ ಪುನರುಚ್ಚಾರ.

ಶ್ರುತಿ, ಸೂತ್ರ, ಪ್ರತಿಪಾದ್ಯವಾದ ಈ ಬ್ರಹ್ಮ ಯಾರು!

ಇದಕ್ಕೆ ಶ್ರೀ ಮಧ್ವಮುನಿಗಳ ಉತ್ತರ ಸಿದ್ಧವಿದೆ.

'ಬ್ರಹ್ಮಶಬ್ದಶ್ಚ ವಿಷ್ಣಾವೇವ'

ಬ್ರಹ್ಮ ಶಬ್ದವು ವಿಷ್ಣುವಿನಲ್ಲಿ ಮಾತ್ರ ಇದೆ.

ಏಕೆ! ಏನು ಪ್ರಮಾಣ!

ಇದಕ್ಕೆ ಆಚಾರ್ಯರು ಹೇಳುವ ಪ್ರಮಾಣ ಒಂದಲ್ಲ ಹತ್ತು. ಹತ್ತಲ್ಲ ನೂರು. ನೂರಲ್ಲ ಸಾವಿರ. ಅಸಂಖ್ಯ.

ಅದರಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ—

"ಬ್ರಹ್ಮ ಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೆ
ಅಸಂಪೂರ್ಣಾಃ ಪರೇ ಯಸ್ಮಾದುಪಚಾರೇಣ ವಾ ಭವೇತ್ ॥
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೆ ।
ಭಗವಾನ್ ವಾಸುದೇವೇತಿ ಪರಮಾತ್ಮೇತಿ ವೈ ಹರಿಃ ।
ವಿಷ್ಣುರ್ನಾರಾಯಣಶ್ಚೇತಿ ಬ್ರಹ್ಮೇತಿ ಶ್ರುತಯೋ ಜಗುಃ ॥

ಬೃ. ಬ್ರ. ಸಂ. ೨—೨—೪

ಬ್ರಹ್ಮ ಶಬ್ದವು ಪರಾತ್ಪರನಾದ ಶ್ರೀ ವಿಷ್ಣುವಿಗೇ ಕೂಡುತ್ತದೆ. ಯಾಕಂದರೆ ಬ್ರಹ್ಮ ಎಂದರೆ ಗುಣಪೂರ್ಣ. ಉಳಿದವರೆಲ್ಲರೂ ಅಪೂರ್ಣರು. ಶ್ರೀ ವಿಷ್ಣುವೊಬ್ಬನೇ ಗುಣಪೂರ್ಣನಾಗಿದ್ದರಿಂದ ಅವನೊಬ್ಬನಿಗೇ ಆ ಬ್ರಹ್ಮ ಶಬ್ದವು ಹೊಂದಿಕೆಯಾಗುತ್ತದೆ. ಚತುರ್ಮುಖಾದಿಗಳಲ್ಲಿ ಬ್ರಹ್ಮ ಶಬ್ದವಿದ್ದರೂ ಅದು ಔಪಚಾರಿಕ, ಗೌಣ. ಉಳಿದವರೆಲ್ಲರೂ ಗೌಣಬ್ರಹ್ಮರು. ಮುಖ್ಯ ಬ್ರಹ್ಮ ಅಥವಾ ಪರಬ್ರಹ್ಮನೆಂದರೆ ಶ್ರೀ ವಿಷ್ಣುವೇ ಸರಿ.

ಬ್ರಹ್ಮ, ಪರಮಾತ್ಮ, ಭಗವಾನ್ ವಾಸುದೇವ ಮುಂತಾದ ಶಬ್ದಗಳು ಆ ಶ್ರೀಹರಿಯನ್ನೇ ಬೋಧಿಸುತ್ತವೆ.

ಶ್ರೀಮನ್ನಾರಾಯಣನೇ ವಿಷ್ಣು, ಅವನೇ ಬ್ರಹ್ಮ ಎಂದು ವೇದಗಳೆಲ್ಲವೂ ಘೋಷಿಸುತ್ತವೆ.

ಈ ಮಾತನ್ನು ಕೂಡ ಎಲ್ಲ ಮತಾಚಾರ್ಯರೂ ತಮ್ಮ ಗ್ರಂಥಗಳಲ್ಲಿ ಒಪ್ಪಿದ್ದಾರೆ.

ಶಂಕರಾಚಾರ್ಯರೂ ಕೂಡ

" ಪರಬ್ರಹ್ಮಲಿಂಗಂ ಭಜೆ ಪಾಂಡುರಂಗಂ."

ಎಂದು ವಿಠ್ಠಲನಲ್ಲಿ ಪರಬ್ರಹ್ಮದ ಲಕ್ಷಣಗಳೆಲ್ಲ ಇರುತ್ತವೆ ಎಂದು ಹೇಳಿದ್ದಾರೆ.

" ವಾಸುದೇವಃ ಪರಂಬ್ರಹ್ಮ ಕಲ್ಯಾಣ ಗುಣ ಸಂಯುತಃ "

( ಸರ್ವದರ್ಶನ )

ಸಕಲ ಕಲ್ಯಾಣ ಗುಣ ಪೂರ್ಣವಾದ ಶ್ರೀ ವಾಸುದೇವನೇ ಪರಬ್ರಹ್ಮ ಎಂದು ಹೇಳಲಾಗಿದೆ.

" ಬ್ರಹ್ಮ ಶಬ್ದವಾಚ್ಯೋ ವಿಷ್ಣ್ವಾಖ್ಯೋ ಪರಃ ವಾಸುದೇವಃ ನಾರಾಯಣ ಏವ ಏಕಂ ತತ್ವಮಿತಿ ವಿಶಿಷ್ಟಾದ್ವೈತವಾದಿನಾಂ ದರ್ಶನಮಿತಿ ಸಿದ್ಧಮ್ ॥

ಬ್ರಹ್ಮ ಶಬ್ದವಾಚ್ಯನಾದ ವಿಷ್ಣು ಎಂಬ ಹೆಸರಿನ ವಾಸುದೇವರೂಪಿ ಶ್ರೀ ನಾರಾಯಣನೇ ಒಂದು ಮುಖ್ಯ ತತ್ವ ಎಂದು ವಿಶಿಷ್ಟಾದ್ವೈತವಾದಿಗಳ ಸಿದ್ಧಾಂತವಾಗಿದೆ.

ರಾಮಾನುಜಾಚಾರ್ಯರು ಇನ್ನೂ ಸ್ಪಷ್ಟ ವಚನದಿಂದ ಬ್ರಹ್ಮ ಶಬ್ದಾರ್ಥವು ನಾರಾಯಣನೇ ಎಂದು ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

" ಬ್ರಹ್ಮ ಶಬ್ದೇನ ಸ್ವಭಾವತೋ ನಿರಸ್ತ ನಿಖಿಲದೋಷೋ ಅನವಧಿಕಾತಿಶಯಾ ಸಂಖ್ಯೇಯ ಕಲ್ಯಾಣ ಗುಣಗಣಃ ಪುರುಷೋತ್ತಮೋ ಅಭಿಧೀಯತೆ

( ಶ್ರೀಭಾಷ್ಯಜಿಜ್ಞಾಸಾಧಿಕರಣ )

ಬ್ರಹ್ಮ ಶಬ್ದದಿಂದ ಸ್ವಭಾವತಃ ನಿರ್ದೋಷ ಅನಂತಾನಂತ ಕಲ್ಯಾಣಗುಣ ಪರಿಪೂರ್ಣನೂ ( ಗೀತಾದಿ ಗ್ರಂಥಗಳಲ್ಲಿ ) ಪುರುಷೋತ್ತಮ ಶಬ್ದದಿಂದ ವಾಚ್ಯನೂ, ಆದ ಸಾಕ್ಷಾತ್ ಶ್ರೀಹರಿಯೇ ಹೇಳಲ್ಪಡುತ್ತಾನೆ.

ವಲ್ಲಭಾಚಾರ್ಯರು ಯಶೋದೆಯ ತೊಡೆಯ ಮೇಲೆ ಆಡಿದ ಕೂಸೇ ಪರ ತತ್ವ. ಅದೇ ಪರಬ್ರಹ್ಮ. ಆ ಗೋಪಾಂಗನೆಯ ಉತ್ಸಂಗದಲ್ಲಿ ಆಡುವ ಆ ಮಗುವಿನ ಹೊರತು ಬೇರೊಬ್ಬನು ಪರಬ್ರಹ್ಮ ಎಂದು ಭಾವಿಸಿದವರು ದೈತ್ಯರೇ ಸರಿ ಎಂದು ಸ್ಪಷ್ಟವಾಗಿ ನುಡಿದಿದ್ದಾರೆ.

"ಜಾನೀತ ಪರಮಂ ತತ್ವಂ ಯಶೋದೋತ್ಸಂಗಲಾಲಿತಂ
ತದನ್ಯಮಿತಿ ಯೇ ಪ್ರಾಹುಃ ಅಸುರಾಂಸ್ತಾನಹೋ ಬುಧಾಃ ||

(ವಲ್ಲಭಾಚಾರ್ಯಕೃತ ಅಣುಭಾಷ್ಯ)

ನಿಂಬಾರ್ಕಾಚಾರ್ಯರು— ದೋಷರಹಿತನೂ, ಕಲ್ಯಾಣ ಗುಣ ರಾಶಿಯೂ ಆದ, ಕಮಲದಂತೆ ಕಣ್ಣಿರುವ ಕೃಷ್ಣನೇ ಪರಬ್ರಹ್ಮ ಎಂದು ಘೋಷಿಸಿದ್ದಾರೆ.

"ಸ್ವಭಾವತೋಪಾಸ್ತ ಸಮಸ್ತ ದೋಷಮಶೇಷ ಕಲ್ಯಾಣ ಗುಣೈಕರಾಶಿಂ
ವ್ಯೂಹಾಂಗಿನಂ ಬ್ರಹ್ಮ ಪರಂ ವರೇಣ್ಯಂ ಧ್ಯಾಯೇಮ ಕೃಷ್ಣಂ
ಕಮಲೇಕ್ಷಣಂ ಹರಿಮ್ ||"

ಎಂದು ಬ್ರಹ್ಮಸೂತ್ರದ ಮೇಲಿನ ತಮ್ಮ ನಿಂಬಾರ್ಕ ಭಾಷ್ಯದ ಜನ್ಮಾಧಿಕರಣದಲ್ಲಿ ಖಚಿತವಾಗಿ ಹೇಳಿದ್ದಾರೆ.

ಇದರ ಮೇಲಿಂದ ಬ್ರಹ್ಮ ಎಂದರೆ ವಿಷ್ಣು ಎಂದು ಎಲ್ಲರೂ ಒಪ್ಪಿದಂತಾಯಿತು. ಆ ಬ್ರಹ್ಮವೇ ಜಗತ್ಕಾರಣ, ಸರ್ವವೇದ ಪ್ರತಿಪಾದ್ಯ, ಸರ್ವೋತ್ತಮ, ಗುಣ ಪರಿಪೂರ್ಣ ಎಂದು ವೇದ ವೇದಾಂತಗಳು ಸಾರುತ್ತವೆ. ಅರ್ಥಾತ್ ಶ್ರೀ ವಿಷ್ಣುವೇ ಸರ್ವ ಶ್ರೇಷ್ಠ ತತ್ವ, ಸರ್ವೋತ್ತಮ ದೇವತಾ ಎಂದು ಸಿದ್ಧವಾಗುತ್ತದೆ.

ಇನ್ನು ಸಾಕ್ಷಾತ್ ಶ್ರೀ ವಿಷ್ಣುವೇ ಪರದೇವತೆ ಎನ್ನುವದಕ್ಕೆ ಅಸಂಖ್ಯ ಪ್ರಮಾಣಗಳು ಉಂಟು.

"ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೆ ರಜಾಂಸಿ" (ಋಗ್ವೇದ)

ವಿಷ್ಣುವಿನ ಮಹಿಮೆಯನ್ನು ಯಾರು ಹೇಳಬಲ್ಲರು! ಬ್ರಹ್ಮದೇವ ಬೇಕೆಂದರೆ ಭೂಮಿಯಲ್ಲಿಯ ಎಲ್ಲ ಮಣ್ಣಿನ ಕಣಗಳನ್ನು ಎಣಿಸಬಲ್ಲ. ಆದರೆ ಅವನಿಗೂ ಹರಿಯ ಗುಣಗಳನ್ನು ಗಣಿಸುವದು ಶಕ್ಯವಿಲ್ಲ.

"ಅಸ್ಯ ದೇವಸ್ಯ ಮೀಳ್ಹುಷೋವಯಾ ವಿಷ್ಣೋರೇಷಸ್ಯ ಪ್ರಭೃಥೆ ಹವಿರ್ಭಿಃ।
ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾ" ॥

ದೇವದೇವೋತ್ತಮನಾದ ಭಕ್ತವತ್ಸಲ ಶ್ರೀ ವಿಷ್ಣುದೇವನ ಯಜನ-ಭಜನ-ಪೂಜನಗೈದು ರುದ್ರನು ಮಹಾದೇವತ್ವದ ಮಹತ್ವವನ್ನು ಪಡೆದನು. (ಋಗ್ವೇದ)

"ಪರೋಮಾತ್ರಯಾ ತನ್ವಾ ವೃಧಾನ ನತೇ ಮಹಿತ್ವಮನ್ವಶ್ನುವಂತಿ।
ನತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂ ತಮಾಸ ॥"

ವಿಷ್ಣುವಿನ ಅಮಿತವಾದ ಮಹಿಮೆಯನ್ನು ಯಾವ ಕಾಲದಲ್ಲಿಯೂ ಯಾರೂ ಪಡೆಯಲಾರರು. ಯಾರೂ ತಿಳಿಯಲಾರರು.

ಪ್ರಾಣೋ ವಾ ಆಶಾಯಾ ಭೂಯಾನ್ ವಿಷ್ಣುರ್ವೈ ದೇವೇಭ್ಯೋ
ಭೂಯಾನ್ ತಸ್ಮಾದ್ಭೂಯಾನ್ನಾಮ (ಛಾಂದೋಗ್ಯೋಪನಿಷತ್)

ಭಾರತೀ ದೇವಿಗಿಂತ ಪ್ರಾಣದೇವರೂ ಎಲ್ಲ ದೇವರಗಿಂತ ಮಹಾ ವಿಷ್ಣುವೂ ದೊಡ್ಡವರಾಗಿದ್ದಾರೆ. ಆದುದರಿಂದಲೇ ಆ ಭಗವಂತನಿಗೆ ಭೂಯಾನ್ ಎಂದು ಪ್ರಸಿದ್ಧಿ.

ಬ್ರಹ್ಮಣಾ ಸೃಜತಿ, ರುದ್ರೇಣ ವಿಲಾಪಯತಿ ಸೋನುತ್ಪತ್ತಿ ಲಯಃ
ಏಕಏವ ಹರಿಃ ಪರಃ **ಪೂರ್ಣಾ**ನಂದಃ । (ಮಹೋಪನಿಷತ್)

ಜಗತ್ತಿನ ಉದಯ ಅಳಿವು ಉಳಿವುಗಳಿಗೆ ಮುಖ್ಯ ಕಾರಣ ಒಬ್ಬನೇ. ಅವನೇ ಶ್ರೀಹರಿ. ಅವನಿಗೆ ಹುಟ್ಟು ಇಲ್ಲ. ಸಾವು ಇಲ್ಲ. ಅವನು ತಾನೇ ನಿಂತುಕೊಂಡು ಬ್ರಹ್ಮನಿಂದ ಉತ್ಪತ್ತಿಯನ್ನೂ ರುದ್ರನಿಂದ ಸಂಹಾರವನ್ನೂ ಮಾಡಿಸುತ್ತಾನೆ.

ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ ಮಹಾತಾತ್ಪರ್ಯಮ್
ನೈವಚಾನ್ಯತ್ರ ಸತ್ಯಂ । ( ಪೈಂಗಿಶ್ರುತಿ )

ವೇದ ಶಾಸ್ತ್ರಗಳಿಗೆಲ್ಲ ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳುವದೇ ಮುಖ್ಯ ತಾತ್ಪರ್ಯ.

ಇವಲ್ಲದೇ—

" ಯಂಕಾಮಯೇ ತಂತಮುಗ್ರಂಕೃಣೋಮಿ........ ಮಮಯೋನಿರಪ್ಸು "

" ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ "

" ಏಕೋ ನಾರಾಯಣೋ ಆಸೀನ್ನ ಬ್ರಹ್ಮಾ ನ ಚ ಶಂಕರಃ "

" ಯೋನಃ ಪಿತಾ ಜನಿತಾ ಯೋ ವಿಧಾತಾ । "

" ಏಷ ಸರ್ವಗತಃ ಏಷ ಸರ್ವೇಶ್ವರಃ "

" ಏಕಃ ಪುರಸ್ತಾದ್ ಯ ಇದಂ ಬಭೂವ.... ಸನೋಹರಿ
ರ್ಘೃತಮಿಹಾಯುಷೇತ್ತು ದೇವಃ । "

ಮುಂತಾದ ಅಸಂಖ್ಯ ವೇದೋಪನಿಷತ್ ಪ್ರಮಾಣ ವಚನಗಳು ಜಾಗರೂಕವಾಗಿವೆ ಶ್ರೀಹರಿಯ ಸರ್ವೋತ್ತಮತ್ವ ವಿಷಯದಲ್ಲಿ.

ಇವರಂತೆ—

" ಮತ್ತಃ ಪರತರಂ ನಾನ್ಯತ್ "

" ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಃ "

" ಅಹಮಾದಿರ್ಹಿ ಭೂತಾನಾಂ "

" ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ "

" ಯಸ್ಮಾತ್ ಕ್ಷರ ಮತೀತೋಽಹಂ ಅಕ್ಷರಾದಪಿ ಚೋತ್ತಮಃ "

ಮುಂತಾದ ಗೀತೆಯ ವಚನಗಳೂ

" ನಾಸ್ತಿ ನಾರಾಯಣ ಸಮಂ ನ ಭೂತಂ ನ ಭವಿಷ್ಯತಿ "

" ಭೂಯಾಂಸಃ ಶ್ರದ್ಧಧುಃ ವಿಷ್ಣುಂ "

" ನಾಹಂ ನ ಚ ಶಿವೋಽನ್ಯೇಚ ತತ್‌ಶಕ್ತ್ಯೈಕಾಂಶ ಭಾಗಿನಃ "

ಮುಂತಾದ ಅನೇಕಾನೇಕ ಸ್ಮೃತಿ ಪುರಾಣ ವಚನಗಳೂ ಶ್ರೀ ಹರಿಯೇ ಸರ್ವೋತ್ತಮ ಎಂದು ಉಗ್ಗಡಿಸುತ್ತವೆ.

( ೨ )

# ಸತ್ಯಂ ಜಗತ್

## ಜಗತ್ತು ಸತ್ಯ

ಈ ಚರಾಚರವಾದ ಪ್ರಪಂಚವೆಲ್ಲವೂ ಸತ್ಯವಾಗಿದೆ. ಇದು ಆಚಾರ್ಯರ ಮತ್ತೊಂದು ತತ್ವ. ಈ ವಿಶ್ವವೆಲ್ಲವೂ ಸತ್ಯವಾದದ್ದು ಎಲ್ಲರ ಕಣ್ಣಿಗೂ ಕಾಣುತ್ತದೆ. ಆದಕ್ಕಾಗಿ ಬೇರೆ ಯುಕ್ತಿ ಹೇಳುವದು ಬೇಡ. ಪ್ರತ್ಯಕ್ಷವಾಗಿ ಕಂಡದ್ದು ಸುಳ್ಳು ಎಂದು ಹೇಳಿದರೆ ಅದಕ್ಕೆ ಕಾರಣ ಹೇಳಬೇಕಾಗುವದು. ಕಣ್ಣಿಗೆ ಕಂಡದ್ದೇ ಸತ್ಯ ಎಂದು ಸಾದಿಸಲಿಕ್ಕೆ ಯಾವ ಪ್ರತ್ಯಕ್ಷವೂ ಬೇಡ. ಯುಕ್ತಿಯೂ ಬೇಡ. ಇದೇ ಮಾತನ್ನು ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ

"ದೃಷ್ಟ ವಸ್ತುನಃ ಮಿಥ್ಯಾತ್ವಾಂಗೀಕಾರೇ ಚ ಯುಕ್ತ್ಯಪೇಕ್ಷಾ
ನತು ಸತ್ಯತ್ವೇ"

ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾರೆ.

ಜಗತ್ತು ಸತ್ಯ ಎಂಬುದು ಪ್ರತ್ಯಕ್ಷಾನುಮಾನಸಿದ್ಧವಾದಂತೆ ಆಗಮ ಪ್ರಸಿದ್ಧವೂ ಆಗಿದೆ.

"ವಿಶ್ವಂ ಸತ್ಯಂ" ( ಋಗ್ವೇದ ೨—೭—೩ )

ಜಗತ್ತೆಲ್ಲ ಸತ್ಯವಾಗಿದೆ.

"ಸ್ವಯಂಭೂರ್ಯಾಥಾತಥ್ಯತೋ ಅರ್ಥಾನ್ವ್ಯದಧಾತ್"

ಶ್ರೀ ವಿಷ್ಣುವು ಮಹದಾದಿ ಪದಾರ್ಥಗಳನ್ನೆಲ್ಲ ಸತ್ಯಭೂತವಾದವುಗಳನ್ನೆ ಸೃಷ್ಟಿ ಮಾಡಿದ್ದಾನೆ. ( ಈಶಾವಾಸ್ಯೋಪನಿಷತ್ )

"ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ
ವಸು ಸ್ಪಾರ್ಹಮುತ ಜೇತೋತದಾತಾ"

ಭಗವಂತನು ಸೃಷ್ಟಿಸಿದ ಜಗತ್ತೆಲ್ಲವೂ ಸತ್ಯವೇ ಆಗಿದೆ. ಅದಾವದೂ ವ್ಯರ್ಥವಲ್ಲ. ಮಿಥ್ಯೆ ಅಲ್ಲ. ಯಾಕಂದರೆ ದೈತ್ಯರನ್ನು ಗೆದ್ದು ದೇವತೆಗಳಿಗೆ ಈ ಲೋಕಗಳನ್ನು ಶ್ರೀಹರಿಯು ಕೊಟ್ಟಿದ್ದಾನೆ. (ಋಗ್ವೇದ )

"ಪ್ರಭಾನ್ವಸ್ಯ ಮಹತೋ ಮಹಾನಿ ಸತ್ಯಾಸತ್ಯಸ್ಯಕರಣಾನಿ ವೋಚಂ"

ಮಹಾಮಹಿಮನಾದ ಭಗವಂತನ ಜಗತ್ಸೃಷ್ಟ್ಯಾದಿವ್ಯಾಪಾರಗಳೆಲ್ಲವೂ ಸತ್ಯವೆಂದೇ ಹೇಳುತ್ತೇವೆ. (ಋಗ್ವೇದ ೨-೬-೧೫)

ಇದರಂತೆ—

"ತದೇತತ್ಸತ್ಯಂ ಸತ್ಯಮೇವೇದಂ ವಿಶ್ವಮಸೌಸೃಜತಿ," "ಯತ್ಸತ್ಯ ರೂಪಂ ಜಗದೇತದೀದೃಕ್" "ಸೃಷ್ಟ್ವಾಭೂತ್ ಸತ್ಯಕರ್ಮಾ" "ತವೇತ್ಸತ್ಯಮಂಗಿರಃ"

"ಸ್ಥಾತುಶ್ಚ ಸತ್ಯಂ ಜಗತಶ್ಚ ಧರ್ಮಣಿ" "ಯೋಽಭೂತ್ಯೋ ವೈಸ್ಸತ್ಯಮದ್ವಾ" "ಕೃಣ್ವನ್ವಿಶ್ವಾನ್ಯಪಾಂಸಿಸತ್ಯಾ" ಮುಂತಾವ ಅನೇಕ ವೇದ ವಚನಗಳು ಜಗತ್ತಿನ ಸತ್ಯತ್ವಕ್ಕೆ ಸಾಕ್ಷಿಯಾಗಿವೆ.

ಜಗತ್ತು ಸುಳ್ಳು ಎಂದು ಹೇಳುವವರನ್ನು ಗೀತೆಯಲ್ಲಿ ಅಸುರರು ಎಂದು ಸ್ವಯಂ ಶ್ರೀ ಹರಿಯೇ ನಿಂದಿಸಿದ್ದಾನೆ.

" ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ "*

ಸತ್ಯ ಎನ್ನುವದಕ್ಕೆ "ನ ತ್ವೇವಾಹಂ ಜಾತು ನಾಸಂ" "ಅವಿನಾಶಿತು ತದ್ವಿದ್ಧಿ" "ಪ್ರಕೃತಿಂ ಪುರುಷಂ ಚೈವ" ಮುಂತಾಗಿ ಅನೇಕ ಗೀತಾ ವಚನಗಳು ಸಾಕ್ಷಿಯಾಗಿವೆ.

ಭಾಗವತದಲ್ಲಿ " ಸತ್ಯಸ್ಯಯೋನಿಂ " ಭಗವಂತನನ್ನು ಸತ್ಯಭೂತವಾದ ಪ್ರಪಂಚಕ್ಕೆ ಕಾರಣನೆಂದು ಬ್ರಹ್ಮದೇವರು ಬಣ್ಣಿಸಿದ್ದಾರೆ.

" ಅಸತ್ಯಮಾಹುರ್ಜಗದೇತದಜ್ಞಾಃ " ಎಂಬ ಸ್ಮೃತಿ ವಚನವೂ ಇದೇ ಮಾತನ್ನು ಸ್ಪಷ್ಟಪಡಿಸುತ್ತ ಜಗತ್ತು ಅಸತ್ಯ ಎಂದು ಹೇಳುವವರು ಅಜ್ಞಾನಿಗಳೆಂದು ಹೇಳುತ್ತವೆ.

ಈ ಜಗತ್ತೆಲ್ಲವೂ ಸುಳ್ಳಾದರೆ ಜಗತ್ಕಾರಣನೆಂದು ವೇದ ಶಾಸ್ತ್ರಗಳು ಹೊಗಳಿದ್ದೂ 'ಜನ್ಮಾದ್ಯಸ್ಯಯತಃ,' ಎಂದು ವೇದಾಂತ ಸೂತ್ರಗಳಲ್ಲಿ ಅವನ ಲಕ್ಷಣ ಹೇಳಿದ್ದೂ ವ್ಯರ್ಥವೇ ಆಗುತ್ತದೆ. ಸುಳ್ಳು ಜಗತ್ತನ್ನು ನಿರ್ಮಿಸಿದರೆ ಇವರಲ್ಲಿ ಭಗವಂತನ ಮಹಿಮೆ ಏನು ಬಂತು! ಸುಳ್ಳು ರೂಪಾಯಿ, ಸುಳ್ಳು ಪಾತ್ರೆಗಳನ್ನು ನಿರ್ಮಿಸಿ ತೋರಿಸುವ ಜಾದುಗಾರನಿಗೂ ಸುಳ್ಳು ಪ್ರಪಂಚ ಸೃಷ್ಟಿಸಿದ ದೇವರಿಗೂ ಏನು ಅಂತರ! ಸುಳ್ಳು ಸಾಮಗ್ರಿಗಳನ್ನು ನಿರ್ಮಿಸಿದ ಜಾದೂಗಾರನನ್ನು ಯಾರಾದರೂ ಬಣ್ಣಿಸುವರೇ! ಇಂಥ ಸುಳ್ಳು ಜಗತ್ತಿನ ಸುಳ್ಳು ಕರ್ತೃತ್ವಕ್ಕೆ ಸರ್ವಸಮರ್ಥ ಪರಮಾತ್ಮನೇ ಏಕೆ ಆಗಬೇಕು! ಭಾಗವತದಲ್ಲಿ "ಧಾಮ್ನಾಸ್ವೇನ ಸದಾ ನಿರಸ್ತಕುಹಕಂ ಸತ್ಯಂಪರಂ ಧೀಮಹಿ" ಎಂದು ಇಂದ್ರಜಾಲಿಕನಂತೆ ಪರಮಾತ್ಮನು ಮಿಥ್ಯಾ ಪ್ರಪಂಚದ ನಿರ್ಮಾಪಕನಲ್ಲ. ಅವನ ಕೃತಿಯೂ ಸತ್ಯ, ಕರ್ತೃತ್ವವೂ ಸತ್ಯ, ಅವನೂ ಸತ್ಯ ಎಂದು ಸ್ಪಷ್ಟವಾಗಿ ಆದ್ಯಪದ್ಯದಲ್ಲಿಯೇ ಡಂಗುರ ಹೊಡೆದಿದ್ದಾರೆ ಬಾದರಾಯಣ ಪ್ರಭುಗಳು.

---

* ಈ ಶ್ಲೋಕಕ್ಕೆ ಅರ್ಥ ಬರೆಯುವಾಗ ಶಂಕರಾಚಾರ್ಯರು ಕೂಡ ಶಂಕರ ಭಾಷ್ಯದಲ್ಲಿ "ಅಸತ್ಯಂ ಯಥಾವಯಂ ಅನೃತಪ್ರಾಯಾಃ ತಥಾ ಇದಂ ಜಗತ್ಸರ್ವಂ ಅಸತ್ಯಂ, ತೇ ಅಸುರಾ ಜನಾಃ " ಎಂದು ಜಗತ್ತು ಅಸತ್ಯ ಎಂದು ಹೇಳುವವರು ಅಸುರರೆಂದು ನಿರ್ದೇಶಿಸಿದ್ದಾರೆ.

ಈ ಜಗತ್ತೆಲ್ಲವೂ ನಿಜವಾಗಿ ಸುಳ್ಳಾಗಿದ್ದರೆ "ಹಿರಣ್ಯಾಕ್ಷನು ಭೂಮಿಯನ್ನು ಕದ್ದು ಪಾತಾಳಕ್ಕೆ ಓಡಿದ. ವಿಷ್ಣು ವರಾಹ ರೂಪ ಧರಿಸಿ ಅದನ್ನು ಮೇಲೆ ತಂದಿರಿಸಿದ" ಎಂದು ಭಾಗವತಾದಿ ಪುರಾಣಗಳಲ್ಲಿ ಭೂಮಂಡಲದ ಇತಿಹಾಸ ಹೇಳಿದ್ದಾರೆ. ಭೂಮಿಯು ಸುಳ್ಳೇ ಆಗಿದ್ದರೆ ದೈತ್ಯ ಏಕೆ ಕದಿಯುತ್ತಿದ್ದ! ಅದನ್ನು ತರಲಿಕ್ಕೆ ಹರಿ ಏಕೆ ವರಾಹನಾಗಿ ಅವತರಿಸುತ್ತಿದ್ದ!

ಜಗತ್ತು ಸುಳ್ಳು ಎಂದು ಹೇಳಿದರೆ ಬರುವ ಅನುಪಪತ್ತಿಗಳಿಗೆ ಲೆಕ್ಕವೇ ಇಲ್ಲ. ಒಂದು ಸುಳ್ಳನ್ನು ಮುಚ್ಚಿಕೊಳ್ಳಲಿಕ್ಕಾಗಿ ಸಾವಿರ ಸುಳ್ಳು ಹೇಳಬೇಕು. ಆದರೂ ಅದು ಸಿದ್ಧಿಸಲಾರದು.

ಆದ್ದರಿಂದ ಸರ್ವರ ಪ್ರತ್ಯಕ್ಷಸಿದ್ಧವಾದ, ಯುಕ್ತಿಯುಕ್ತವಾದ, ಆಗಮ ಸಮ್ಮತವಾದ ಜಗತ್ತು ಸತ್ಯ ಎಂಬ ಮಧ್ವಮುನಿಗಳು ಹೇಳಿದ ತತ್ವವನ್ನು ಒಪ್ಪಿ ಇಂಥ ಸತ್ಯ ಜಗತ್ತಿನ ಕರ್ತನಾದ ಭಗವಂತನ ಉಪಾಸನೆ ಮಾಡುವದೇ ಶ್ರೇಯಸ್ಕರವಾಗಿದೆ.

## ( ೩ )

## ತತತೋ ಭೇದಃ

### ಭೇದವು ಪಾರಮಾರ್ಥಿಕ

ಆಚಾರ್ಯರ ಸಿದ್ಧಾಂತವು ಮುಖ್ಯವಾಗಿ ಭೇದ ಸಿದ್ಧಾಂತ. ದ್ವೈತವಾದ. ಭೇದವಾದ ಎಂದೇ ಇದಕ್ಕೆ ಹೆಸರು. ಮಾಧ್ವರು ವೇದಶಾಸ್ತ್ರೋಕ್ತವಾದ ಐದು ಬಗೆಯ ಭೇದಗಳನ್ನು ಒಪ್ಪುತ್ತಾರೆ.

" ಜೀವೇಶಯೋರ್ಜಡಾನಾಂ ಚ ಜೀವಾನಾಂ ಚ ಪರಸ್ಪರಂ ।
ಪಂಚಭೇದಾ ಇಮೇ ನಿತ್ಯಾಃ ಸರ್ವಾವಸ್ಥಾಸು ಸರ್ವದಾ ॥ "

ಜೀವ ಪರಮಾತ್ಮರಲ್ಲಿ ಭೇದ, ಜೀವಜೀವರಲ್ಲಿ ಭೇದ, ಜಡಜಡಗಳಲ್ಲಿ ಭೇದ, ಜಡಈಶ್ವರ ಭೇದ, ಜೀವ ಜಡಗಳಲ್ಲಿ ಭೇದ, ಹೀಗೆ ಪಂಚಭೇದ ಸಿದ್ಧಾಂತವು ಅನುಭವ ಸಿದ್ಧವೂ ಪ್ರಮಾಣ ಬದ್ಧವೂ ಆಗಿದೆ.

" ಪಂಚ ಭೇದಾಂಶ್ಚ ವಿಜ್ಞಾಯ............ಭವೇನ್ ಮುಕ್ತೋ ನ
ಚಾನ್ಯಥಾ "

ಎಂಬ ಪ್ರಮಾಣ ವಚನದಿಂದ ಈ ಭೇದಜ್ಞಾನವು ಮೋಕ್ಷಸಾಧಕ ಎಂದು ಸಿದ್ಧವಾಗುತ್ತದೆ.

ವಾಸ್ತವಿಕವಾಗಿ ವಿಚಾರಿಸಿದರೆ ಜಗತ್ತಿನಲ್ಲಿರುವ ಎಲ್ಲ ವಸ್ತುಗಳೂ ಭಿನ್ನ ಭಿನ್ನ ಗುಣಧರ್ಮ ಸ್ವಭಾವಗಳುಳ್ಳವುಗಳಾಗಿವೆ. ಅವುಗಳಲ್ಲಿ ಪರಸ್ಪರ ಭಿನ್ನತೆ ಕೆಲವು ಸಂದರ್ಭಗಳಲ್ಲಿ ವಿರೋಧವು ಕೂಡ ಇದ್ದುದರಿಂದ ಭೇದವಿರುವದು ಪ್ರತ್ಯಕ್ಷ ಸಿದ್ಧವಾಗಿರುತ್ತದೆ. ಈ ಭೇದ ಜ್ಞಾನಕ್ಕೆ ಮುಂದೆ ಎಂದೂ ಬಾಧಕ ಪ್ರತ್ಯಯವು ಬರುವದಿಲ್ಲವಾದ್ದರಿಂದ ಇದು ಪ್ರಮಾಣ ಎಂದೇ ಒಪ್ಪಬೇಕಾಗುವದು.

ಇದಕ್ಕೆ ಶ್ರುತಿ ಸ್ಮೃತಿಸೂತ್ರ ಪುರಾಣಗಳಲ್ಲಿ ಬೇಕಾದಷ್ಟು ಪ್ರಮಾಣಗಳುಂಟು.

"ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂಭಿದಾ ಸತ್ಯಂಭಿದಾ"

(ಪೈಂಗಿಶ್ರುತಿ)

ದೇವನು ಸತ್ಯ, ಜೀವನೂ ಸತ್ಯ; ಅವರಿಬ್ಬರ ಭೇದವೂ ಸತ್ಯ.

"ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ ಅನ್ಯೋ ಅಭಿಚಾಕಶೀತಿ॥"

ದೇಹವೆಂಬ ಮರದಲ್ಲಿ ಕುಳಿತ ಎರಡು ಹಕ್ಕಿಗಳಲ್ಲಿ ಒಂದು ಆ ಮರದ ಹಣ್ಣನ್ನು ತಿನ್ನುತ್ತದೆ. ಇನ್ನೊಂದು ಏನನ್ನೂ ತಿನ್ನದಿದ್ದರೂ ಸ್ವಯಂ ಪ್ರಕಾಶದಿಂದ ಬೆಳಗುತ್ತಿದೆ. ಇಲ್ಲಿ "ದ್ವಾ ಸುಪರ್ಣಾ" "ಅನ್ಯಃ" ಎರಡು ಹಕ್ಕಿಗಳು, ಜೀವನಿಂದ ಭಿನ್ನನಾದವ ಎಂಬ ಅರ್ಥದ ಶಬ್ದಗಳು ಸ್ಪಷ್ಟವಾಗಿಯೇ ಜೀವಬ್ರಹ್ಮರ ಭೇದವನ್ನು ಬೋಧಿಸುತ್ತವೆ.

ಭಗವದ್ಗೀತೆಯಲ್ಲಿ "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎಂದು ಅನ್ಯ ಶಬ್ದವನ್ನು ಪ್ರಯೋಗಿಸಿ ಪರಮಾತ್ಮನು ಜೀವರಿಂದ ಅನ್ಯನೂ ಉತ್ತಮನೂ ಆಗಿದ್ದಾನೆಂದು ಸ್ಪಷ್ಟಪಡಿಸಲಾಗಿದೆ.

ಗಾಯತ್ರೀ ಮಂತ್ರದಲ್ಲಿ— "ಧಿಯೋಯೋನಃ ಪ್ರಚೋದಯಾತ್" ಶ್ರೀಮನ್ನಾರಾಯಣನು ನಮ್ಮೆಲ್ಲ ಜೀವರ ಬುದ್ಧಿಯನ್ನು ಪ್ರೇರಿಸಲಿ ಎಂಬ ಪ್ರಾರ್ಥನೆಯಲ್ಲಿ ಪ್ರೇರಕನಾದ ಪರಮಾತ್ಮನಿಗೆ ಜೀವಭೇದವು ಹೇಳಲ್ಪಟ್ಟಿದೆ.

"ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ.................
ಪ್ರೋಚ್ಯಾತ್ಮನೈವೈವ ಸುಜ್ಞಾನಾಯ ಪ್ರೇಷ್ಠ"

ಈ ಉಪನಿಷದ್ ಮಂತ್ರಗಳಲ್ಲಿ ಪ್ರೇರಕನಾದ ಆ ಪರಮಾತ್ಮನು ಪ್ರೇರ್ಯನಾದ ಜೀವನಿಗಿಂತ ಅತ್ಯಂತ ಭಿನ್ನನೇ ಆಗಿದ್ದಾನೆ ಎಂದು ಸ್ಪಷ್ಟವಾಗಿಯೇ 'ಪೃಥಕ್' ಎಂಬ

ಶಬ್ದದಿಂದ ಹೇಳಿದ್ದಾರೆ. ಜೀವ ಪರಮಾತ್ಮರ ಭೇದವನ್ನು ಚೆನ್ನಾಗಿ ಬಲ್ಲವರು ಉಪದೇಶಿಸಿದ ಮಾತಿನಿಂದಲೇ ಮನುಷ್ಯರಿಗೆ ದಿವ್ಯ ಜ್ಞಾನೋದಯವಾಗುತ್ತದೆ ಎಂದು ಸಾವಧಾರಣವಾಗಿಯೇ ನಿರೂಪಿಸಿದ್ದಾರೆ.

"ನಿರಂಜನಃ ಪರಮಂ ಸಾಮ್ಯ ಮುಪೈತಿ" ಎಂಬ ಆಥರ್ವಣ ಶ್ರುತಿಯಲ್ಲಿ ಜೀವನು ಶ್ರೀಹರಿಯ ದರ್ಶನವಾದ ಬಳಿಕ ದೋಷರಹಿತನಾಗಿ ಆ ಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ ಎಂದು ಹೇಳಿದ್ದಾರೆ. ಐಕ್ಯವನ್ನು ಹೊಂದುತ್ತಾನೆ ಎಂದು ಹೇಳಲಿಲ್ಲ. ಸಾದೃಶ್ಯವು ಭೇದ ಘಟಿತವಾದದ್ದು ಎಲ್ಲರಿಗೂ ತಿಳಿದೇ ಇದೆ.

ಹಾಗೂ ಪರಮಶ್ರುತಿಯಲ್ಲಿ—

" ತಸ್ಮಾನ್ ಮುಕ್ತಾ ನ ಚ ಸಾ ನ ಕ್ವಚಿದ್ ವಿಷ್ಣು ವೈಭವಂ ।
ಪ್ರಾಪ್ನುವಂತಿ ಸ ಏವೈಕಃ ಸ್ವತಂತ್ರಃ ಪೂರ್ಣಷಡ್ಗುಣಃ "

ಎಂಬ ವಚನದಿಂದ " ಮುಕ್ತಜೀವರಾಗಲಿ ಲಕ್ಷ್ಮೀದೇವಿಯೇ ಆಗಲಿ ಎಂದೂ ಆ ಮುಕುಂದನ ವೈಭವವನ್ನು ಯೋಗ್ಯತೆಯನ್ನು ಹೊಂದಲಾರರು, " ಎಂದು ಸ್ಪಷ್ಟಪಡಿಸಿದ್ದಾರೆ. ಅವನ ಐಕ್ಯವಂತೂ ದೂರದ ಮಾತು.

ಜೀವೇಶ್ವರರ ಭೇದಜ್ಞಾನದಿಂದಲೇ ಮಾನವನಿಗೆ ಮುಕ್ತಿ ಎಂಬುವದಕ್ಕೆ—

"ಜುಷ್ಟಂ ಯದಾ ಪಶ್ಯತ್ಯನ್ಯ ಮೀಶ ಮಸ್ಯ ಮಹಿಮಾನ
ಮಿತಿ ವೀತ ಶೋಕಃ"

ಎಂಬ ಆಥರ್ವಣ ಮಂತ್ರವು ನಿರವಕಾಶ ಪ್ರಮಾಣವಾಗಿದೆ.

ಈ ವೇದ ವಚನಗಳಲ್ಲದೆ ಭಗವದವತಾರಭೂತರಾದ ಶ್ರೀ ಬಾದರಾಯಣರು ರಚಿಸಿದ ಬ್ರಹ್ಮಸೂತ್ರದಲ್ಲಿ ಪಂಚಭೇದ ಸಿದ್ಧಾಂತವು ಮುಖ್ಯವಾಗಿ ಪ್ರತಿಪಾದಿತ ವಾಗಿದೆ. ಪ್ರಾತಃಸ್ಮರಣೀಯರಾದ ಶ್ರೀ ಸತ್ಯಧ್ಯಾನ ತೀರ್ಥರು ' ಭೇದ ಪರಾಣ್ಯೇವ ಖಲು ಬ್ರಹ್ಮ ಸೂತ್ರಾಣಿ ' ಎಂಬ ದಿವ್ಯ ಗ್ರಂಥವನ್ನು ಬರೆದು ಬ್ರಹ್ಮಸೂತ್ರಗಳೆಲ್ಲವೂ ಭೇದ ಬೋಧಕವೇ ಆಗಿವೆ ಎಂದು ಸಿದ್ಧಮಾಡಿದ್ದಾರೆ. ಅವಕಾಶವಿಲ್ಲದ್ದರಿಂದ ಕೆಲವು ಸೂತ್ರಾರ್ಥಗಳನ್ನು ಮಾತ್ರ ಇಲ್ಲಿ ವಿಮರ್ಶಿಸಲಾಗುವದು.

ಬ್ರಹ್ಮಸೂತ್ರದ ಪ್ರಥಮ ಪಾದದ ಆನಂದಮಯಾಧಿಕರಣದಲ್ಲಿ ಆನಂದಮಯ ಶಬ್ದದಿಂದ ಪರಬ್ರಹ್ಮನಾದ ನಾರಾಯಣನನ್ನೇ ಏಕೆ ತೆಗೆದುಕೊಳ್ಳಬೇಕು ? ಚತುರ್ಮುಖಾದಿ ದೇವತೆಗಳು ಏಕಾಗಬಾರದು. ಎಂಬ ಶಂಕೆಗೆ ಉತ್ತರರೂಪವಾಗಿ,

' ಓಂ ಭೇದವ್ಯಪದೇಶಾತ್ ಓಂ '

' ತೇಯೇ ಶತಂ ಪ್ರಜಾಪತೇರಾನಂದಾಃ ' ಇತ್ಯಾದಿ ತೈತ್ತಿರೀಯ ಶ್ರುತಿಯ ಆನಂದವಲ್ಲಿಯಲ್ಲಿ ಬ್ರಹ್ಮ ರುದ್ರಾದಿ ದೇವತೆಗಳಿಗೆ ಪರಿಮಿತವಾದ ಆನಂದವನ್ನೂ, ಪರಮಾತ್ಮನಿಗೆ ಅಪರಿಮಿತವಾದ ಆನಂದವನ್ನೂ ಹೇಳಿರುತ್ತದೆ. ಮಿತಾನಂದತ್ವ, ಅಮಿತಾನಂದತ್ವರೂಪವಾದ ಭೇದಕ ಧರ್ಮಗಳನ್ನು ಹೇಳಿದ್ದರಿಂದ ಆನಂದಮಯ ಶಬ್ದ ವಾಚ್ಯರು ಚತುರ್ಮುಖಾದಿ ಯಾವ ಜೀವರೂ ಆಗುವದಿಲ್ಲ. ಎಲ್ಲ ಜೀವ ರಿಂದ ಭಿನ್ನನಾದ ಪರಮಾತ್ಮನೇ ಆನಂದಮಯನು, ಎಂದು ಸ್ಪಷ್ಟವಾಗಿಯೇ ಭೇದ ವನ್ನು ತೋರಿಸಿಕೊಟ್ಟಿದ್ದಾರೆ.

ಇದರಂತೆ ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ಮೂರನೇ ಪಾದದ ಇಪ್ಪತ್ತೆಂಟನೇ ಸೂತ್ರವಾದ

' ಓಂ ಪೃಥಗುಪದೇಶಾತ್ '

ಎಂಬ ಸೂತ್ರದಲ್ಲಿ ' ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್, ದ್ವಾಸುಪರ್ಣಾ ' ಮುಂತಾದ ಶ್ರುತಿಗಳಲ್ಲಿ ಜೀವರ ಸಮುದಾಯದಿಂದ ಪರಮಾತ್ಮನು ಭಿನ್ನನು ಎಂದು ವೇದವು ಉಪದೇಶಿಸುವದರಿಂದ, ಜೀವಪರಮಾತ್ಮರಲ್ಲಿ ಅತ್ಯಂತ ಭೇದವಿದೆ ಎಂದು ಸಾಧಿಸಿದ್ದಾರೆ.

" ಓಂ ಶಾರೀರಶ್ಚೋಭಯೇಽಪಿಹಿ ಭೇದೇನೈನಮಧೀಯತೆ " (೧-೨-೨೦)

ಜೀವನು ಅಂತರ್ಯಾಮಿಯಾಗಿರುವದಿಲ್ಲ. ಆದುದರಿಂದ ಅವನು ಪರಮಾತ್ಮನಿಂದ ಭಿನ್ನನಾಗಿದ್ದಾನೆ, ಎಂದು ಕಾಣ್ವ ಮತ್ತು ಮಾಧ್ಯಂದಿನ ಶ್ರುತಿಗಳು ಸಾರುತ್ತವೆ. ಆದುದರಿಂದ ಜೀವ ಮತ್ತು ಪರಮಾತ್ಮರಲ್ಲಿ ಭೇದವಿದೆ.

" ಓಂ ಕರ್ಮಕರ್ತೃ ವ್ಯಪದೇಶಾತ್ " ( ೧-೨-೪ ).

" ಏತದಾತ್ಮಾನಂ ಪರಸ್ಮೈ ಶಂಸತಿ "

ಎಂಬೀ ಶ್ರುತಿಯಲ್ಲಿ ಜೀವನು ಶಂಸನ ಕರ್ತನಾಗಿಯೂ, ಪರಮಾತ್ಮನು ಶಂಸನ ಕರ್ಮನಾಗಿಯೂ ಉಲ್ಲಿಖಿತರಾಗಿದ್ದಾರೆ. ಅವರಿಬ್ಬರಲ್ಲಿಯೂ ಕರ್ತೃತ್ವ, ಕರ್ಮತ್ವ ರೂಪವಾದ ಭಿನ್ನ ಧರ್ಮಗಳನ್ನು ಐತರೇಯ ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದ್ದರಿಂದ ಜೀವ ಪರಮಾತ್ಮರು ನಿತ್ಯಭೇದವುಳ್ಳವರು.

" ಓಂ ಸ್ಥಿತ್ಯ ದ ನಾಭ್ಯಾಂ ಚ ಓಂ "

ದ್ವಾಸುಪರ್ಣಾ ಎಂಬ ವೇದ ಮಂತ್ರದಲ್ಲಿ ಪರಮಾತ್ಮನಿಗೆ ತಿನ್ನದೇ; ಪ್ರಕಾಶಮಾನ ಸ್ಥಿತಿಯನ್ನೂ ಜೀವನಿಗೆ ಭೋಜನವನ್ನೂ ಹೇಳಿ ಇಬ್ಬರಲ್ಲಿಯೂ ಬೇರೆ

ಬೇರೆ ಗುಣಸ್ವಭಾವ ಹಾಗೂ ವ್ಯಾಪಾರಗಳನ್ನು ಹೇಳಿದ್ದರಿಂದ ಅವರಿಬ್ಬರಲ್ಲಿಯೂ ಭೇದವಿದೆ ಎಂದು ತಿಳಿಯಬೇಕು.

ಹೀಗೆ—

" ಓಂ ಭೇದ ವ್ಯಪದೇಶಾಚ್ಚಾನ್ಯಃ ಓಂ "

" ಓಂ ಭೇದವ್ಯಪ ದೇಶಾತ್ ಓಂ "

" ಓಂ, ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ ಓಂ "

" ಓಂ ನೇತರೋನುಪಪತ್ತೇಃ ಓಂ "

ಮುಂತಾದ ಅನೇಕ ಸೂತ್ರಗಳಲ್ಲಿ ಬಾದರಾಯಣರು ಸ್ಪಷ್ಟ ಶಬ್ದಗಳಲ್ಲಿ ಭೇದ ಸಿದ್ಧಾಂತವನ್ನೇ ಪುಷ್ಟೀಕರಿಸಿದ್ದಾರೆ.

ಇದರಂತೆ ಭಗವದ್ಗೀತೆಯಲ್ಲಿ—

" ಈಶ್ವರೋಽಹ ಮಹಂಭೋಗೀ "

ಎಂದು ಜೀವ ಈಶ್ವರರಲ್ಲಿ ಈ ಐಕ್ಯಚಿಂತನ ಮಾಡುವ ಜನರನ್ನು,

" ಆಸುರೀ ಯೋನಿಮಾಪನ್ನಾಃ ಮೂಢಾ ಜನ್ಮನಿಜನ್ಮನಿ ।
ಮಾಮ ಪ್ರಾಪ್ಯೈವವತು ಕೌಂತೇಯ ತತೋಯಾಂತ್ಯಧಮಾಂ ಗತಿಂ "

ಎಂದು ಐಕ್ಯೋಪಾಸಕರು ಅಸುರರೆಂದೂ ಅವರಿಗೆ ಅಂಧಂತಮಸ್ಸಾಗುವದೆಂದೂ ಸ್ಪಷ್ಟವಾಗಿ ಪ್ರಭು ತಿಳಿಸಿದ್ದಾನೆ. ಮತ್ತು ಜೀವ ಪರಮಾತ್ಮರ ಭೇದವನ್ನು ಕಂಠರವೇಣ ಅನೇಕ ಪದ್ಯಗಳಲ್ಲಿ ಅಸ್ಪಷ್ಟ ಕೊಡಿಸಿದ್ದಾನೆ.

" ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವಚ ।
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ "

ಈ ಪದ್ಯಗಳಿಂದ ಗೀತಾಚಾರ್ಯನು ಮಧ್ವಸಿದ್ಧಾಂತವ ಅಥವಾ ಅವನ ಸ್ವಂತ ಸಿದ್ಧಾಂತವ ಪಂಚಭೇದಗಳನ್ನೂ ಪ್ರತಿಪಾದಿಸಿದ್ದಾನೆ, ಎಂದರೆ ಅತಿಶಯೋಕ್ತಿ ಯಾಗಲಿಕ್ಕಿಲ್ಲ.

ಕ್ಷರ ಅಕ್ಷರ ಎಂದು ಜೀವರಾಶಿಗಳಲ್ಲಿ ಎರಡು ಭೇದವಿದೆ, ಎಂದು ಹೇಳಿದ್ದರಿಂದ ಜೀವಜೀವರಲ್ಲಿ ಭೇದವನ್ನೂ, ರತ್ವ ಅಕ್ಷರತ್ವ ರೂಪಗಳಾದ ಭೇದಕ ಧರ್ಮಗಳನ್ನೂ ಹೇಳಿದಂತಾಯಿತು. ಸರ್ವಾಣಿ ಭೂತಾನಿ ಎಂದು ಬಹುವಚನ ಪ್ರಯೋಗ ಮಾಡುವ ದರಿಂದಲೇ, ಜಡಜಡಗಳಲ್ಲಿಯೂ, ಜಡಜೀವರಲ್ಲಿಯೂ ಭೇದವನ್ನು ಸೂಚಿಸಿದಂತಾ

ಯಿತು. ಚರಾಚರಾತ್ಮಕವಾದ ಜೀವಜಡಾತ್ಮಕವಾದ ಈ ಪ್ರಪಂಚವೆಲ್ಲವೂ ಕ್ಷರ ಅರ್ಥಾತ್ ನಾಶವುಳ್ಳದ್ದು. ಮಹಾಲಕ್ಷ್ಮೀದೇವಿಯು ಅಕ್ಷರ-ನಾಶರಹಿತಳು. ಅವಳಿಗೆ ಕೂಟಸ್ಥ ಎಂದು ಹೆಸರು. ಈ ಕ್ಷರಾಕ್ಷರರಿಗಿಂತ ಅನ್ಯಃ— ಅಂದರೆ ಭಿನ್ನನಾದವನೇ ಪರಮಾತ್ಮನೆಂದು ಕರೆಸಿಕೊಳ್ಳಲ್ಪಡುತ್ತಾನೆ. ಇದರಿಂದ ಜೀವೇಶ್ವರ ಭೇದವನ್ನೂ ಜಡೇಶ್ವರ ಭೇದವನ್ನೂ ಹೇಳಿದಂತಾಯಿತು.

ಹೀಗೆ ವೇದಶಾಸ್ತ್ರ ಪುರಾಣಗಳ ಸರ್ವ ವಚನಗಳಿಂದಲೂ ಶ್ರೀ ಮಧ್ವಾಚಾರ್ಯರ ಪಂಚಭೇದ ಸಿದ್ಧಾಂತವು ಪ್ರತಿಪಾದಿತವಾಗುತ್ತದೆ.

## ( ೪ )

# ಜೀವಗಣಾಃ ಹರೇರನುಚರಾಃ

## ಜೀವರೆಲ್ಲರೂ ವಿಷ್ಣುವಿನ ದಾಸರು

ಶ್ರೀ ಹರಿಯು ಎಲ್ಲ ಜೀವರಿಂದಲೂ ಉತ್ತಮನೆಂದು ಸಿದ್ಧವಾದ ಬಳಿಕ ದೇವಾದಿ ಜೀವರೆಲ್ಲ ಅವನ ಅನುಚರರೆಂದು ಸಿದ್ಧವಾಗುತ್ತದೆ. ಜೀವಜಡಾತ್ಮಕವಾದ ಪ್ರಪಂಚವು ಹಿಂದೆ ಹೇಳಿದ ಉಕ್ತಿಯುಕ್ತಿಗಳಿಂದ ಪರಮಾತ್ಮನಿಂದ ಭಿನ್ನ ಎಂದು ಸಿದ್ಧವಾದ ಬಳಿಕ ಈ ಪ್ರಪಂಚಕ್ಕೆ ನಿಯಾಮಕನೊಬ್ಬನು ಬೇಕು. ಅವನೇ ಶ್ರೀಹರಿ. 'ಏತಸ್ಯವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಎಂಬ ಶ್ರುತಿಯು ನಾರಾಯಣನಿಗೆ ನಿಯಾಮಕತ್ವವನ್ನೂ ಮತ್ತು ದೇವತೆಗಳಿಗೆ ಭಗವದಧೀನತ್ವವನ್ನೂ ಹೇಳುತ್ತದೆ.

'ಚತುರ್ಭಿಸ್ಸಾಕಂ ನವತಿಂ ಚ ನಾಮಭಿಃ ಚಕ್ರನವೃತ್ತಂ ವ್ಯತೀಂ ರವೀ ವಿಶತ್' ನಾರಾಯಣನು ಶ್ರೀಸ್ಥರಾದ ೯೪ ದೇವತೆಗಳನ್ನು ನಿಯಮಿಸುತ್ತಾನೆ. ಚಕ್ರದಂತೆ ತಿರುಗಿಸುತ್ತಾನೆ.

( ಋಗ್ವೇದ ( ೬—೬—೫೫)

' ಪೃಕ್ಷೇ ಪೀರ ಉಗ್ರ ಮುಗ್ರಂ ದಮಾಯನ್ನನ್ಯಮನ್ಯ ಮತಿನೇನೀಯ ಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್॥'

( ಋಗ್ವೇದ ೪-೭-೩೩ )

ನಾರಾಯಣನೂ ಕ್ರೂರರಾದ ದುಷ್ಟ ಜನರನ್ನು ದಮನ ಮಾಡಿ ಸಜ್ಜನರನ್ನು ಅನುಗ್ರಹಿಸುತ್ತಾನೆ. ನಿತ್ಯ ಸಂಸಾರಿಗಳನ್ನು ತಿರುಗಿಸುತ್ತಾನೆ ಎಂದು ಕೇಳಿದ್ದೇವೆ.

'ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ ಭೀಷಾಸ್ಮಾದಗ್ನಿಶ್ಚೇಂದ್ರಶ್ಚ'

ಆ ಪರಮಾತ್ಮನ ಅಂಜಿಕೆಯಿಂದ ಗಾಳಿಯು ಬೀಸುತ್ತದೆ. ಸೂರ್ಯನು ಬೆಳಗುತ್ತಾನೆ. ಬೆಂಕಿಯು ಸುಡುತ್ತದೆ. ಇಂದ್ರನು ಮಳೆಗರೆಯುತ್ತಾನೆ. ಹೀಗೆ ತೈತ್ತರೀಯ ಶ್ರುತಿಯು ಎಲ್ಲ ದೇವೋತ್ತಮರಿಗೂ ಶ್ರೀ ಹರಿಯ ಆಜ್ಞಾಧಾರಕತ್ವವನ್ನು ಹೇಳುತ್ತದೆ.

ಜೀವಗಣದಲ್ಲಿ ಶ್ರೇಷ್ಠರಾದ ದೇವಾಧಿದೇವತೆಗಳೇ ಅವನ ಆಜ್ಞಾಧಾರಕರಾದ ದಾಸರೆಂದಾದ ಬಳಿಕ ಉಳಿದ ಕ್ಷುದ್ರ ಜೀವರೆಲ್ಲ ಆ ವಿಷ್ಣುವಿನ ಅನುಚರರೇದು ಪ್ರತ್ಯೇಕ ಹೇಳಬೇಕಾಗಿಲ್ಲ.

ಜೀವರಲ್ಲಿ ಉತ್ಕೃಷ್ಟಗತಿಯನ್ನು ಹೊಂದಿದ ಮುಕ್ತಜೀವರೂ ಕೂಡ ಆ ಶ್ರೀಹರಿಯ ದಾಸರಾಗಿದ್ದಾರೆಂಬುವದು "ಉತಾಮೃತತ್ವಸ್ಯೇಶಾನಃ ಅಣೀಂ ನ ರಥ್ಯಂ ಅಮೃತಾಧಿ ತಸ್ಥುಃ" "ಮುಕ್ತಾನಾಂ ಪರಮಾಗತಿಃ" ಮುಂತಾದ ಶ್ರುತಿ ಸ್ಮೃತಿ ವಾಕ್ಯಗಳು ಮುಕ್ತ ಜೀವನಿಯಾಮಕತ್ವವನ್ನು ಪರಮಾತ್ಮನಿಗೆ ಸ್ಪಷ್ಟವಾಗಿ ಉದ್ಘೋಷಿಸುತ್ತವೆ.

ಇದರಂತೆ ಭಗವದ್ಗೀತೆಯಲ್ಲಿ ಕೂಡ ೧೮ನೇ ಅಧ್ಯಾಯದಲ್ಲಿ—

"ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥"

ಎಂಬ ಪದ್ಯದಲ್ಲಿ ವಿಷ್ಣುವು ತನ್ನ ಇಚ್ಛೆಯಿಂದ ಎಲ್ಲ ಪ್ರಾಣಿಗಳನ್ನು ಯಂತ್ರಾರೂಢವಾದ ಗೊಂಬೆಗಳಂತೆ ತಿರುಗಿಸುತ್ತ ಎಲ್ಲ ಪ್ರಾಣಿಗಳ ಹೃದಯದಲ್ಲಿ ಇರುತ್ತಾನೆ, ಎಂದು ದೇವರಿಗೆ ಸರ್ವಜೀವ ನಿಯಾಮಕತ್ವವನ್ನೂ ಜೀವರಿಗೆ ಅವನ ಕೈಗೊಂಬೆಯಂತೆ ಅವನ ಅನುಚರತ್ವವನ್ನೂ ಹೇಳುತ್ತದೆ.

ದೇವತೆಗಳಲ್ಲಿ ಸರ್ವಶ್ರೇಷ್ಠರೆನಿಸಿದ ರಮಾ ಬ್ರಹ್ಮ ರುದ್ರಾದಿ ದೇವತೆಗಳೂ ತಾವು ಆ ಶ್ರೀಹರಿಯ ದಾಸರೆಂದೂ ಅವನ ಸೇವಕರೆಂದೂ ಅನೇಕ ಸಂದರ್ಭಗಳಲ್ಲಿ ಒಪ್ಪಿಕೊಂಡಿದ್ದಾರೆ.

"ಶುಶ್ರೂಷಣಂ ಮದುಚಿತಂ ಸ್ತವನಂ ರಮೇಶ" ಭಗವನ್, ನಿನ್ನ ಸೇವೆಗೈಯ್ಯುವದು ಮತ್ತು ನಿನ್ನನ್ನು ಸ್ತುತಿಸುವದು ಇದೇ ನನಗೆ ಉಚಿತವಾಗಿರುತ್ತದೆ, ಎಂದು ರಮಾದೇವಿಯು ತಾನು ಆ ಶ್ರೀಹರಿಯ ಸೇವಕಳೆಂದು ಹೇಳಿಕೊಂಡಿದ್ದಾಳೆ.

"ಅಹಂಭವೋ ದಕ್ಷ ಭೃಗು ಪ್ರಧಾನಾಃ ಪ್ರಜೇಶಭೂತೇ
ಶ ಸುರೇಶ ಮುಖ್ಯಾಃ । ಸರ್ವೇ ವಯುಂಯನ್ನಿಯಮಂ ಪ್ರಸನ್ನಾಃ ॥"

ನಾನು (ಬ್ರಹ್ಮ,) ಮಹಾದೇವ ದಕ್ಷ, ಭೃಗು, ಮೊದಲಾದ ಎಲ್ಲ ಪ್ರಜಾಪತಿಗಳೂ ಭೂತಪತಿ, ದೇವೇಂದ್ರ ಮೊದಲಾದ ನಾವೆಲ್ಲರೂ ಆ ವಿಷ್ಣುವಿನ ನಿಯಂತ್ರಣಕ್ಕೆ ಒಳಪಟ್ಟು ಕಾರ್ಯ ಮಾಡುತ್ತೇವೆಂದು ಬ್ರಹ್ಮದೇವರು ತಾವು

ಮೊದಲುಗೊಂಡು ಎಲ್ಲ ದೇವತಾ ಧುರೀಣರಿಗೂ ವಿಷ್ಣುವಿನ ಆಜ್ಞಾಧಾರಕತ್ವವನ್ನು ಹೇಳಿದ್ದಾರೆ.

' ಏತೇಽಪಿ ದೇವಾಸ್ತವ ಭೃತ್ಯಭೂತಾಃ ಪಾದಾರವಿಂದಂ
ಪರಮಂ ಸುದುರ್ಲಭಂ ॥

ಜೀವೋತ್ತಮರಾದ ವಾಯುದೇವರೂ ಕೂಡ

( ಸ್ವಾಮಿನ್, ನಾವೆಲ್ಲ ದೇವತೆಗಳೂ ನಿನ್ನ ಕಿಂಕರರಾಗಿದ್ದು ಪರಮ ದುರ್ಲಭ ವಾದ ನಿನ್ನ ಪಾದಾರವಿಂದವನ್ನು ಸೇವಿಸುತ್ತೇವೆ ) ಎಂದು ತಮಗೆ ಶ್ರೀ ಹರಿಯ ಪಾದಸೇವಕತ್ವವನ್ನೂ ಕೈಂಕರ್ಯವನ್ನೂ ಸಾರಿದ್ದಾರೆ.

ಇದೇ ಪ್ರಕಾರ ರುದ್ರದೇವರು

" ವಯಂ ನ ತಾತಪ್ರಭವಾಮ ಭೂಮ್ನೋ...........
ತಮೇವ ಶರಣಂ ಯಾಹಿ ಹರಿಸ್ತೇ ಶಂ ವಿಧಾಸ್ಯತಿ ॥ "

ಶ್ರೀ ಹರಿಯೇ ರಕ್ಷಕನೆಂದು ಹೇಳಿ ತಮ್ಮ ಅಸಮರ್ಥತೆಯನ್ನು ಪ್ರಾಮಾಣಿಕ ವಾಗಿ ಒಪ್ಪಿಕೊಂಡಿದ್ದಾರೆ.

ಇದರಂತೆ ಇನ್ನೂ ಅನೇಕ ಶ್ರುತಿಸ್ಮೃತಿ ಗೀತಾದಿ ವಾಕ್ಯಗಳನ್ನು ಈ ವಿಷಯದಲ್ಲಿ ಪ್ರಮಾಣವೆಂದು ಹೇರಳವಾಗಿ ಉದಾಹರಿಸಬಹುದು.

' ಮತ್ತಃ ಸರ್ವಂ ಪ್ರವರ್ತತೆ '
' ವಯಮನುಚರಮುಖ್ಯಾಃ ಕರ್ಮಭಿಸ್ತೇ ಮನೋಜ್ಞೈಃ '
' ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ '
' ತ್ವಯೋಪಭುಕ್ತಸೃಗ್ಗಂಧವಾಸೋಽಲಂಕಾರ ಚರ್ಚಿತಾಃ '
' ಉಚ್ಛಿಷ್ಟ ಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ '

ಎಂದು ಮುಂತಾದ ಸಹಸ್ರಾರು ಪ್ರಮಾಣ ವಚನಗಳಿಂದ ಜೀವರೆಲ್ಲರೂ ಆ ಪರಮಾತ್ಮನ ಅನುಚರರೆಂದು ಸಿದ್ಧವಾಗುತ್ತದೆ.

( ೫ )

# ನೀಚೋಚ್ಚಭಾವಂ ಗತಾಃ

## ಜೀವರಲ್ಲಿ ತಾರತಮ್ಯವಿದೆ

ತಾರತಮ್ಯ ತತ್ವವು ಮಧ್ವಮತದ ಜೀವಾಳವಾಗಿದೆ. ಜೀವಜೀವರಲ್ಲಿ ತರತಮ ಭಾವವಿದ್ದುದು ಎಲ್ಲರ ಅನುಭವ ಸಿದ್ಧವಾಗಿದೆ. ಇದರಂತೆ ಜೀವೋತ್ತಮರಲ್ಲಿಯೂ ದೇವೋತ್ತಮರಲ್ಲಿಯೂ ಒಬ್ಬರಿಗಿಂತ ಒಬ್ಬರು ನಿಕೃಷ್ಟೋತ್ಕೃಷ್ಟರಾಗಿ ಇದ್ದುದನ್ನು ಉಪನಿಷತ್ತುಗಳು ಪ್ರಮಾಣಬದ್ಧವಾಗಿ ಖಚಿತಗೊಳಿಸಿ ಹೇಳಿದ್ದನ್ನು ನಾವು ಕಾಣುತ್ತಿದ್ದೇವೆ.

" ತಾರತಮ್ಯಂಚ ಮುಕ್ತಿಗಂ "

" ತಾರತಮ್ಯಂ ತತೋಜ್ಞೇಯಂ ಸರ್ವೋಚ್ಚತ್ವಂ ತಥಾ ಹರೇಃ ।
ಏತದ್ವಿನಾ ನಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ "

ಇತ್ಯಾದಿ ಅನೇಕ ವಚನಗಳು ತಾರತಮ್ಯ ಜ್ಞಾನದ ಆವಶ್ಯಕತೆಯನ್ನು ಎತ್ತಿ ಸಾರುತ್ತವೆ.

"ಅಗ್ನಿರ್ವೈ ದೇವಾನಾ ಮವಮೋ ವಿಷ್ಣುಃ ಪರಮಃ ತದನಂತರೇಣ ಸರ್ವಾ ದೇವತಾಃ" ಎಂಬ ಶ್ರೌತ ಮಂತ್ರದಲ್ಲಿ ದೇವತೆಗಳಲ್ಲಿ ಉತ್ತಮ ವಿಷ್ಣು, ಕನಿಷ್ಠ ಅಗ್ನಿ, ಉಳಿದ ದೇವತೆಗಳೆಲ್ಲರೂ ಈ ಉತ್ತಮಾಧಮರ ನಡುವೆ ತಾರತಮ್ಯ ಪ್ರಕಾರ ಬರುತ್ತಾರೆ ಎಂದು ತಿಳಿಸಿದೆ.

ಜೀವರಲ್ಲಿ ತಾರತಮ್ಯವನ್ನು ಭಗವದ್ಗೀತೆಯ ಹದಿನಾಲ್ಕನೇ ಅಧ್ಯಾಯದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

" ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯ ಗುಣವೃತ್ತಿಸ್ಥಾಃ ಅಧೋಗಚ್ಛಂತಿ ತಾಮಸಾಃ "

ಸಾತ್ವಿಕರು ಉತ್ತಮ ಗತಿಯನ್ನೂ, ರಾಜಸರು ಮಧ್ಯಮ ಗತಿಯನ್ನೂ ತಾಮಸರು ಅಧೋಗತಿಯನ್ನೂ ಹೊಂದುತ್ತಾರೆ ಎಂದು ಹೇಳಿ ಜೀವರಲ್ಲಿ ಮೂರು ಭಾಗಗಳಿವೆಯೆಂದು ಸೂಚಿಸಿದ್ದಾರೆ. ಶ್ರೀಕೃಷ್ಣನಿಗೆ ಸಮ್ಮತವಾದ ಈ ಜೀವತ್ರೈವಿಧ್ಯವಾದವನ್ನು ಯುಕ್ತಿಯುಕ್ತವಾಗಿ ಮಂಡಿಸಿದವರು ಶ್ರೀ ಮಧ್ವಾಚಾರ್ಯರೊಬ್ಬರೇ ?

ದೇವತಾ ತಾರತಮ್ಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಜಿಜ್ಞಾಸುಗಳು ಅದನ್ನು ಓದಿ ತಿಳಿದುಕೊಳ್ಳಬೇಕು. ತಾರತಮ್ಯ ಜ್ಞಾನವಿಲ್ಲದಿದ್ದರೆ " ತಾರತಮ್ಯಾಪರಿಜ್ಞಾನಾದನುತ್ಥಾನಂ ತಮೋ ವ್ರಜೇತ್ " ಮುಂತಾದ

ಪ್ರಮಾಣ ವಚನಗಳಲ್ಲಿ ನಿತ್ಯ ನರಕವಾಗುವದೆಂದು ಹೇಳಿದ್ದಾರೆ. ಆದುದರಿಂದ ಅವಶ್ಯವಾಗಿ ತಿಳಿದುಕೊಳ್ಳಬೇಕು.

ಶ್ರೀನಾರಾಯಣ ಪಂಡಿತಾಚಾರ್ಯರು ತಾರತಮ್ಯ ಸ್ತೋತ್ರದ ೪ ಪದ್ಯಗಳಲ್ಲಿ ದೇವತಾ ತಾರತಮ್ಯವನ್ನು ಚೆನ್ನಾಗಿ ತಿಳಿಸಿದ್ದಾರೆ.

## ( ೬ )

## " ಮುಕ್ತಿರ್ನೈಜ ಸುಖಾನುಭೂತಿಃ "

### ಸ್ವರೂಪ ಸುಖಾನುಭವವೇ ಮುಕ್ತಿ

ತನ್ನ ಸ್ವರೂಪಭೂತವಾದ ಆನಂದವನ್ನು ಅನುಭವಿಸುವದೇ ಸಜ್ಜೀವರ ಮೋಕ್ಷ. ಛಾಂದೋಗ್ಯ ಶ್ರುತಿಯಲ್ಲಿ ಈ ಮುಕ್ತಿಯ ಸ್ವರೂಪವನ್ನು ಹೀಗೆ ನಿರೂಪಿಸಿದ್ದಾರೆ.

" ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ "

(ಜೀವನು ಪರಬ್ರಹ್ಮನನ್ನು ಹೊಂದಿ ತನ್ನ ಸುಖರೂಪಸ್ವರೂಪವನ್ನು ಪಡೆಯುತ್ತಾನೆ.) ಎಂದು ಹೇಳಲಾಗಿದೆ.

ನೈಯ್ಯಾಯಿಕರು ಇಪ್ಪತ್ತೊಂದು ತರಹದ ದುಃಖಗಳ ಧ್ವಂಸವೇ ಮೋಕ್ಷವೆನ್ನುತ್ತಾರೆ. ಜೈನರು ಮೇಲೆ ಮೇಲೆ ಮುಗಿಲಿನಂತೆ ಹಾರಾಡುತ್ತ ಹೋಗುವದೇ ಮುಕ್ತಿ ಎಂದು ಹೇಳುತ್ತಾರೆ. ಅದ್ವೈತಿಗಳು ಜೀವ ಬ್ರಹ್ಮೈಕ್ಯವೇ ಮೋಕ್ಷ ಎನುತ್ತಾರೆ. ರಾಮಾನುಜರು ಬ್ರಹ್ಮನ ಸಾಮ್ಯವೇ ಮುಕ್ತಿ ಎಂದು ಹೇಳುತ್ತಾರೆ.

ಇವೆಲ್ಲವೂ ಯುಕ್ತಿ ವಿರುದ್ಧವಾಗಿಯೂ ವೇದ ಪುರಾಣ ಉಕ್ತಿ ವಿರುದ್ಧವೂ ಆಗಿವೆ.

ನೈಯ್ಯಾಯಿಕರ ರೀತಿಯಲ್ಲಿ ಮೋಕ್ಷದಲ್ಲಿ ಆನಂದದ ಅನುಭವವೇ ಇಲ್ಲ. ಸುಖಾನುಭವವಿಲ್ಲದ ಬಳಿಕ ಅದನ್ನಾರು ಬಯಸುವವರು ! ಜೈನರ ಮೋಕ್ಷವಂತೂ ಅವ್ಯವಹಾರ್ಯ. ಸುಖವಾಗಿ ಒಂದೆಡೆ ವಿಶ್ರಾಂತಿಯಿಲ್ಲದೇ ಕೂಡಲಿಕ್ಕಿಲ್ಲದೇ ನಿರಂತರವೂ ಪಕ್ಷಿಯಂತೆ ಹಾರುತ್ತ ಹೋಗುವದು ಮನುಷ್ಯನಿಗೆ ಮೋಕ್ಷವೆನಿಸದೆ ಶಾಪ ಎನಿಸೀತು. ಅದರಂತೆ ಅದ್ವೈತಿಗಳ ನಿರ್ಗುಣ ಭಾವಾಪತ್ತಿರೂಪ ಮೋಕ್ಷದಲ್ಲಿಯೂ ಸುಖದ ಸುದ್ದಿಯೇ ಇಲ್ಲ. ರಾಮಾನುಜರ ಮೋಕ್ಷವನ್ನು ಬಯಸುವದೂ ಕೂಡ ಅಧಃಪಾತಕ್ಕೆ ಕಾರಣ. ಯಾವ ಕಾಲದಲ್ಲಿಯೂ ಶ್ರೀ ಹರಿಯ ಸಾಮ್ಯಾಪೇಕ್ಷೆಯು ತಮಃ ಪ್ರಾಪಕನೆಂದು ಶಾಸ್ತ್ರಗಳು ಸಾರುತ್ತವೆ. ಆದುದರಿಂದ ಆಚಾರ್ಯರು ಹೇಳಿದ

ಸ್ವಸ್ವರೂಪಾನಂದಾವಿರ್ಭಾವವೇ ಮೋಕ್ಷ ಎಂಬ ಮಾತು ಯುಕ್ತಿ ಸಂಗತವೂ ಪ್ರಮಾಣಾನುಸಾರಿಯೂ ಆಗಿದೆ.

"ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿ ಕರಣಾನಿ ತೈರೀಶಾನುಗ್ರಹೀತೈಃ ಭೋಗಾನ್ ಭುಂಕ್ತೇ॥"

ಮುಕ್ತನ ದೇಹ ಇಂದ್ರಿಯ ಎಲ್ಲವೂ ಆನಂದಾತ್ಮಕವೇ ಆಗುತ್ತವೆ. ದೇವದೇವನ ದಯೆಯಿಂದ ದೊರೆತ ಆ ಸುಖ ಶರೀರದಿಂದ ಅವನು ಎಲ್ಲ ವಿಧವಾದ ಭೋಗ ಭಾಗ್ಯಗಳನ್ನು ಅನುಭವಿಸುತ್ತಾನೆ.

"ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೆ"

ಶರೀರದ ಪಾಪಗಳನ್ನೆಲ್ಲ ಕಳೆದುಕೊಂಡು ತನ್ನ ಕನಸಿನ ಸುಖಗಳನ್ನೆಲ್ಲ ಅನುಭವಿಸುತ್ತಾನೆ.

"ಬಲಮಾನಂದ ಓಜಶ್ಚ ಸಹೋಜ್ಞಾನ ಮನಾಕುಲಂ
ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ ವಿಭೋಃ॥"

ಬಲ, ಆನಂದ, ಕಾಂತಿ, ಜ್ಞಾನ, ಸ್ಫುರಣೆ ಮುಂತಾದ ಜೀವನ ಸ್ವರೂಪಭೂತವಾದ ಗುಣಗಳೇ ಪರಮಾತ್ಮನ ದಯೆಯಿಂದ ಮುಕ್ತಿಯಲ್ಲಿ ವ್ಯಕ್ತವಾಗುತ್ತವೆ. ಇದೇ ಮೋಕ್ಷ.

" ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ........"

ಮುಕ್ತನು ಮುಕ್ತಿಮಂದಿರದಲ್ಲಿ ಬಯಸಿದ ಆಹಾರ ತಿಂದು ಬೇಕಾದ ಅನಿಷಿದ್ಧವಾದ ವಿಲಾಸ ವಿಹಾರ ಮಾಡುತ್ತ ಸಂಚರಿಸುತ್ತಾನೆ. ಎಂದು ಮುಂತಾಗಿ ಅನೇಕಾನೇಕ ಶ್ರುತಿ ಸ್ಮೃತಿ ಪುರಾಣ ವಚನಗಳು ಸುಖಾನುಭವರೂಪವಾದ ಮೋಕ್ಷದ ಸ್ವರೂಪವನ್ನು ಸಾರಿ ಸಾರಿ ಹೇಳುತ್ತವೆ.

ಇಂಥ ಮೋಕ್ಷವು ಆ ನಾರಾಯಣನ ಅನುಗ್ರಹದಿಂದ ಮಾತ್ರ ಲಭ್ಯ. ಬೇರಾವುದರಿಂದಲೂ ಬೇರಾರಿಂದಲೂ ಮೋಕ್ಷ ದುರ್ಲಭ. ನಾರಾಯಣ ಶ್ರುತಿಯಲ್ಲಿ ಈ ಮಾತನ್ನು ಸ್ಪಷ್ಟಪಡಿಸಿದ್ದಾರೆ.

" ಯಸ್ಯ ಪ್ರಸಾದಾತ್ಪರಮಾರ್ತಿ ರೂಪಾತ್ ಸಂಸಾರಾ
ನ್ಮುಚ್ಯತೇ ನಾಪರೇಣ "

ದುಃಖ ಪರಿಪೂರ್ಣವಾದ ಈ ಸಂಸಾರದಿಂದ ಬಿಡುಗಡೆಯು ಹರಿಯ ಪ್ರಸಾದದಿಂದಲೇ ಹೊಂದಲಿಕ್ಕೆ ಶಕ್ಯವಿದೆ. ಬೇರೆ ಉಪಾಯವಿಲ್ಲ.

ಇಂಥ ಮೋಕ್ಷವನ್ನು ಹೊಂದಿದ ಬಳಿಕ ಜೀವರು—

" ನಚ ಪುನರಾವರ್ತತೆ "

ಮರಳಿ ಈ ಲೋಕಕ್ಕೆ ಬರುವದೇ ಇಲ್ಲ ಎಂದು ಭಗವದ್ಗೀತೆಯಲ್ಲಿ—

" ಯದ್ಗತ್ವಾ ನ ನಿವರ್ತಂತೆ ತದ್ಧಾಮಪರಮಂ ಮಮ "
" ಸರ್ಗೇಪಿ ನೋಪಜಾಯಂತೆ ಪ್ರಲಯೇ ನ ವ್ಯಥಂತಿ ಚ "

ಮುಂತಾದ ಪದ್ಯಗಳಿಂದ ಸೂಚಿಸಿದ್ದಾನೆ ಮಹಾಪ್ರಭು.

## ಮೋಕ್ಷ ಸ್ವರೂಪ ವಿಚಾರ

ಎಲ್ಲ ಜೀವರಿಗೂ ಸ್ಥೂಲ, ಸೂಕ್ಷ್ಮ, ಲಿಂಗ ಮತ್ತು ಸ್ವರೂಪ ಎಂದು ನಾಲ್ಕು ತರಹದ ದೇಹಗಳಿರುತ್ತವೆ. ಮೊದಲಿನ ಮೂರು ಪ್ರಾಕೃತಿಕ ದೇಹಗಳನ್ನು ಕಳಚಿದ ಬಳಿಕ ನಾಲ್ಕನೇಯ ಸ್ವರೂಪ ದೇಹವು ಪ್ರಕಟವಾಗುತ್ತದೆ. ಈ ಸ್ವರೂಪ ದೇಹದಿಂದ ಸ್ವಯೋಗ್ಯವಾದ ಸುಖಾನುಭವವನ್ನು ಹೊಂದುವದೇ ಮೋಕ್ಷವೆನಿಸುತ್ತದೆ. ಪ್ರಾಕೃತ ದೇಹಗಳಿಂದ ಅನುಭವಿಸುವ ಸುಖಕ್ಕಿಂತ ಸ್ವರೂಪ ದೇಹದಿಂದ ಅನುಭವಿಸುವ ಸುಖವು ಉತ್ಕೃಷ್ಟವೂ ನಿರ್ಮಲವೂ ಆಗಿರುತ್ತದೆ.

ಇಂಥ ಸ್ವರೂಪ ಸುಖಾನುಭವ ರೂಪವಾದ ಮೋಕ್ಷವು ಎಲ್ಲ ಜೀವಿಗಳಿಗೂ ಇಲ್ಲ. ಕೇವಲ ಯೋಗ್ಯ ಜೀವರಿಗೂ ಬ್ರಹ್ಮಾಂತ ದೇವರಿಗೂ ಮಾತ್ರ ಉಂಟು.

ರಜೋಗುಣಿಗಳಾದ ಜೀವರಿಗೆ ನಿತ್ಯ ಸಂಸಾರ ರೂಪವಾದುದೇ ಮೋಕ್ಷ. ಅವರಲ್ಲಿ ಕೆಲವರದು ಸ್ವರ್ಗ ಪ್ರಚುರ, ಹಲವರದು ಭೂಮಿ ಪ್ರಚುರ, ಮತ್ತೆ ಕೆಲವರದು ನರಕ ಪ್ರಚುರ.

ತಮೋಗುಣಿಗಳಾದ ದೈತ್ಯ ಪಿಶಾಚ ಮತ್ತು ನೀಚ ಜೀವ ಇವರಿಗೆ ನಿತ್ಯ ನರಕವೇ ಮೋಕ್ಷ.

ಸಾತ್ವಿಕ ಜೀವರಿಗೆ ದೊರಕುವ ಮೋಕ್ಷವು ನಾಲ್ಕು ವಿಧವಾಗಿದೆ.

" ಕರ್ಮಕ್ಷಯಃ ತಥೋತ್ಕ್ರಾಂತಿಃ ಮಾರ್ಗೋ ಭೋಗಶ್ಚತುಷ್ಟಯಮ್ "

೧) ಕರ್ಮಕ್ಷಯ, ೨) ಉತ್ಕ್ರಮಣ, ೩) ಮಾರ್ಗ, ೪) ಭೋಗ.

## ಕರ್ಮಕ್ಷಯ

ಸಾಧಕನಿಗೆ ಬಿಂಬಾಪರೋಕ್ಷವಾದ ಕೂಡಲೇ ಅವನ ಸಂಚಿತ ಕರ್ಮಗಳೆಲ್ಲವೂ ನಾಶವಾಗುತ್ತವೆ. ನಾಶವೆಂದರೆ ಅವನು ತನ್ನ ಅನಿಷ್ಟ ಪುಣ್ಯಗಳನ್ನೆಲ್ಲ ತನಗೆ ಬೇಕಾದವರಿಗೆ ದಾನಮಾಡಿಬಿಡುತ್ತಾನೆ. ಪಾಪಗಳನ್ನು ಹರಿದ್ವೇಷಿಗಳಿಗೆ ಹಂಚಿಬಿಡುತ್ತಾನೆ. ಕೆಲವು ಪುಣ್ಯಗಳು ಸ್ವರೂಪದಿಂದಲೇ ನಾಶಹೊಂದುತ್ತವೆ. ಪ್ರಾರಬ್ಧ ಕರ್ಮಗಳ ನಾಶವು ಭೋಗದಿಂದಲೇ ಆಗುತ್ತದೆ. ಬ್ರಹ್ಮಾದಿ ಉತ್ತಮ ಜೀವರು ತಮ್ಮ ತಮ್ಮ ಅಧಿಕಾರಾನುಭವರೂಪವಾದ ಭೋಗಗಳಿಂದಲೇ ಪ್ರಾರಬ್ಧವನ್ನು ಭೋಗಿಸುತ್ತಾರೆ.

## ಉತ್ಕ್ರಮಣ

ಈರೀತಿಯಾಗಿ ಪ್ರಾರಬ್ಧ ಕರ್ಮವು ಭೋಗದಿಂದ ನಾಶವಾದ ಒಳಿಕ ಶ್ರೀ ಹರಿಯ ಪ್ರಸಾದದಿಂದ ಚರಮ ದೇಹದಿಂದ ಬ್ರಹ್ಮ ನಾಡಿಯ ಮುಖಾಂತರ ಉತ್ಕ್ರಮಣವಾಗುವದು.

" ಹೃದಿಸ್ಥೇನೈವ ಹರಿಣಾ ತಸ್ಯೈವಾನಾಗ್ರಹೇಣತು
ಉತ್ಕ್ರಾಂತಿರ್ಬ್ರಹ್ಮರಂಧ್ರೇಣ ತಮೇವೋಪಾಸತೋ ಭವೇತ್ ॥ "

ಬ್ರಹ್ಮರಂಧ್ರ ಎಂದರೆ ಬ್ರಹ್ಮನಾಡೀ. ಇದಕ್ಕೇ ಸುಷುಮ್ನಾನಾಡೀ ಎಂತಲೂ ಹೆಸರು ಇದೆ.

"ಶತಂಚೈಕಾ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ"
(ಛಾತಕೋಪನಿಷತ್)

ಹೃದಯದಲ್ಲಿಯ ೧೦೧ ನಾಡಿಗಳಲ್ಲಿ ಮೂಲದಿಂದ ಶಿರಃ ಪರ್ಯಂತರ ಸರಳವಾಗಿರುವ ನಾಡಿಗೆ ಸುಷುಮ್ನಾ ಎನ್ನುವರು.

ಮಧ್ಯೇಸುಷುಮ್ನಾ ವಿಜ್ಞೇಯಾ ವಜ್ರಿಕಾರ್ಯಾ ಪ್ರಕಾಶಿನೀ ।
ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚ ಪ್ರಭೇದಿನೀ ॥ (ತಂತ್ರಸಾರ)

ವಜ್ರಿಕಾ, ಆರ್ಯಾ, ಪ್ರಕಾಶಿನೀ, ವೈದ್ಯುತಾ, ಬ್ರಹ್ಮನಾಡೀ ಎಂದು ಐದು ಪ್ರಕಾರವಿರುತ್ತದೆ. ಈ ಸುಷುಮ್ನಾ ನಾಡಿಯು ದೇಹದಲ್ಲಿ ಮೂಲಾಧಾರದಿಂದ ಮಸ್ತಕದ ವರೆಗೆ ಸರಳ ರೇಷೆಯಲ್ಲಿ ನಿಂತಿದೆ. ಇದರ ಸುತ್ತಲೂ ಇರುವ ನಾಡಿಗಳು ಇಡಾ, ಪಿಂಗಲಾ, ವಜ್ರೀಕಾ, ಧಾರಿಣೀ ಎಂದು ನಾಲ್ಕು ಬಗೆಯಾಗಿವೆ.

ಅಪರೋಕ್ಷ ಜ್ಞಾನಿಗಳಲ್ಲಿ ಪ್ರತೀಕಾಲಂಬನರು ಅಪ್ರತೀಕಾಲಂಬನರು ಎಂದು ಎರಡು ಬಗೆಯಾಗಿದ್ದಾರೆ.

ಅಪ್ರತೀಕಾಲಂಬನರ ಪ್ರಾಣೋತ್ಕ್ರಮಣದ ಸಮಯದಲ್ಲಿ ನಿರಂತರ ಹರಿ ಧ್ಯಾನದ ಪುಣ್ಯದಿಂದ ಅವರ ಹೃದಯದ ಅಗ್ರಭಾಗವು ಪ್ರಕಾಶಿತವಾಗಿ ಹೊರ ಬೀಳುವ ಹಾದಿಯು ಕಾಣತೊಡಗುತ್ತವೆ. ಆ ದ್ವಾರದಿಂದ ಆ ಸಾಧಕರು ಪ್ರಾಜ್ಞ ನಾಮಕ ಪರಮಾತ್ಮನೊಂದಿಗೆ ಹೊರಬಿದ್ದು ಊರ್ಧ್ವಗಮನಗೈಯುತ್ತಾರೆ. ಅವರ ಮುಂದೆ ವಾಯುದೇವರು ಮಾರ್ಗದರ್ಶನ ಮಾಡಿಸುತ್ತ ನಡೆದಿರುತ್ತಾರೆ. ಅರ್ಚಿರಾದಿ ಮಾರ್ಗದಿಂದ ಪ್ರಯಾಣಿಸುವಾಗ ಅವರಿಗೆ ಅಲ್ಲಲ್ಲಿ ದಾರಿಯಲ್ಲಿ ಗೌರವಾದರಗಳು ಆಗುತ್ತವೆ. ಅಲ್ಲಿಂದ ಅವರು ಕ್ರಮೇಣ ವೈಕುಂಠ ಲೋಕಕ್ಕೆ ತಲಪುತ್ತಾರೆ. ಅಲ್ಲಿ ಅವರಿಗೆ ತುರೀಯ ನಾಮಕ ಪರಮಾತ್ಮನ ಪ್ರಾಪ್ತಿಯಾಗುತ್ತದೆ.

ಪ್ರತೀಕಾಲಂಬನರಾದ ಸಾಧಕರು ಅಂತ್ಯ ಕಾಲದಲ್ಲಿ ಹರಿಸ್ಮರಣೆ ಮಾಡುತ್ತ ಸುಷುಮ್ನಾ ನಾಡಿಯ ಪಕ್ಕದ ನಾಡಿಯಿಂದ ಹೊರಟು ಅರ್ಚಿರಾದಿ ಮಾರ್ಗದಿಂದ ಹೋಗುವಾಗ ಅರ್ಚಿ, ಅಹರ್ಲೋಕ, ಶುಕ್ಲಪಕ್ಷ, ಕ್ರಮದಿಂದ ವಾಯುಲೋಕಕ್ಕೆ ಬರುತ್ತಾರೆ. ವಾಯು ದೇವರು ಅವರನ್ನು ತಂದು ಬ್ರಹ್ಮಲೋಕಕ್ಕೆ ಮುಟ್ಟಿಸುತ್ತಾರೆ. ಬ್ರಹ್ಮದೇವರು ತಮ್ಮ ಜೊತೆಗೆ ಅವರನ್ನು ವೈಕುಂಠಕ್ಕೆ ಕರೆದೊಯ್ಯುತ್ತಾರೆ.

"ಪ್ರಣವೇನ ಹರಿಂ ಧ್ಯಾಯನ್ ಬ್ರಹ್ಮಲೋಕಂ ಸಮೇತ್ಯ ಚ ।
ಜ್ಞಾನಂ ಚತುರ್ಮುಖಾತ್ ಪ್ರಾಪ್ಯ ಮುಚ್ಯತೇ ನಾತ್ರ ಸಂಶಯಃ ॥"

ಪ್ರಣವ ಮಂತ್ರದಿಂದ ಶ್ರೀಹರಿಯನ್ನು ಧ್ಯಾನಮಾಡಿ ಬ್ರಹ್ಮಲೋಕಕ್ಕೆ ಬಂದ ಜ್ಞಾನಿಗಳಿಗೆಲ್ಲ ಬ್ರಹ್ಮದೇವರು ಬ್ರಹ್ಮೋಪದೇಶ ಮಾಡಿದ ಬಳಿಕ ಮುಕ್ತಿಯಾಗುವದು.

ಸ್ವರ್ಗಕ್ಕೆ ಹೋದವರಿಗೆ ಪುನರಾವೃತ್ತಿ ಇದೆ. ಮಹರ್ಲೋಕಕ್ಕೆ ಹೋದ ಕೆಲವರಿಗೆ ಪುನರಾವೃತ್ತಿ ಇದೆ ಕೆಲವರಿಗೆ ಇಲ್ಲ. ಆದರೆ ಜನಲೋಕ, ತಪೋಲೋಕ ಸತ್ಯ ಲೋಕಗಳಿಗೆ ಹೋದವರು ಮಾತ್ರ ಮರಳಿ ಬರುವದಿಲ್ಲ.

ದೇವತೆಗಳಿಗೆ ದೇಹೋತ್ಕ್ರಮಣವಿಲ್ಲ. ಅರ್ಚಿರಾದಿ ಮಾರ್ಗದಿಂದ ಪ್ರಯಾಣವೂ ಇಲ್ಲ. ಅವರಿಗೆ ಸ್ವೋತ್ತಮರು ದೇಹದಲ್ಲಿ ಲಯವಾದ ನಂತರ ಮುಕ್ತಿಯಾಗುತ್ತದೆ.

**ಲಯ ಮಾರ್ಗ**

ಸಾಮಾನ್ಯವಾಗಿ ದೇವತೆಗಳಿಗೆ ದೇಹೋತ್ಕ್ರಮಣದ್ವಾರಾ ಅರ್ಚಿರಾದಿ ಪಥ ಪ್ರಯಾಣವಿಲ್ಲದಿದ್ದರೂ ಮನುಷ್ಯ ಯೋನಿಯಲ್ಲಿ ಅವತಾರ ಮಾಡಿದಾಗ ಈ ಎಲ್ಲ ಉತ್ಕ್ರಮಣ ಅರ್ಚಿರಾದಿ ಮಾರ್ಗಗಳೂ ಉಂಟು.

ಲಯ ಮಾರ್ಗದಲ್ಲಿ ಗರುಡ ಮಾರ್ಗ, ಶೇಷ ಮಾರ್ಗ ಎಂದು ಎರಡು ವಿಧ ವಾಗಿದೆ. ಅಗ್ನಿ, ಸೂರ್ಯ, ಗುರು, ಇಂದ್ರ, ಸೌಪರ್ಣಿ, ಗರುಡ ಇದು ಗರುಡ ಮಾರ್ಗ. ವರುಣ, ಸೋಮ, ಅನಿರುದ್ಧ, ಕಾಮ, ವಾರುಣಿ, ಶೇಷ ಇದು ಶೇಷ ಮಾರ್ಗ. ಕೆಲವು ದೇವತೆಗಳಿಗೆ ಗರುಡ ಮಾರ್ಗದಿಂದ ಲಯವಿದ್ದರೆ ಹಲವರಿಗೆ ಶೇಷ ಮಾರ್ಗದಿಂದ ಲಯವೆಂದು ಹೇಳಿದ್ದಾರೆ.

## ಗರುಡ ಮಾರ್ಗದಲ್ಲಿ ಲಯಹೊಂದುವ ದೇವತೆಗಳು

ಭೃಗು ಮೊದಲಾದ ಮುನಿಗಳು ದಕ್ಷನಲ್ಲಿಯೂ, ದಕ್ಷನು ಗರುಡಮಾರ್ಗದ ಇಂದ್ರನಲ್ಲಿಯೂ ಲಯ ಹೊಂದುತ್ತಾರೆ. ಆಕಾಶಾಭಿಮಾನಿಯಾದ ಗಣೇಶನು, ಧರಾಭಿಮಾನಿಯಾದ ಧರೆಯಲ್ಲಿ ಧರೆಯು ಗುರುವಿನಲ್ಲಿ ಲಯ ಹೊಂದುವರು. ಕರ್ಮಜ ದೇವತೆಗಳು ಪ್ರಿಯವ್ರತ, ಗಯ ಮುಂತಾದವರು ಸ್ವಾಯಂಭುವ ಮನುವಿನಲ್ಲಿ ಲಯವಾಗುವರು.

ನಿರತಿ ಮತ್ತು ಪಿತೃಗಳು ಯಮನಲ್ಲಿ, ಯಮನು ಮನುವಿನಲ್ಲಿ, ಮನು ಇಂದ್ರನಲ್ಲಿ. ಆಜಾನಜದೇವತೆಗಳೂ ಅಗ್ನಿಪುತ್ರರೂ ಮತ್ತು ಉಳಿದ ದೇವತೆಗಳೂ ಇವರಿಗೆಲ್ಲ ಅಗ್ನಿ ಮುಖಾಂತರ ಗರುಡಮಾರ್ಗವಾಗಿ ಲಯವಾಗುತ್ತದೆ.

## ಶೇಷಮಾರ್ಗ

ಗಂಧರ್ವರಿಗೆ ಕುಬೇರನಲ್ಲಿ, ಕುಬೇರಗೆ ಸೋಮನಲ್ಲಿ, ಲಯವಾಗುವದು. ಸನಕಾದಿಗಳಿಗೆ ಕಾಮ ಮುಖಾಂತರ ಮತ್ತು ವಿಷ್ವಕ್ಸೇನನಿಗೆ ಅನಿರುದ್ಧನದ್ವಾರಾ ಶೇಷಮಾರ್ಗದಲ್ಲಿ ಲಯವಾಗುತ್ತದೆ.

ಗರುಡನ ವರೆಗಿನ ಕೆಳಗಿನ ಜೀವರುಗಳಿಗೆ ಸ್ವೋತ್ತಮರ ದೇಹದಲ್ಲಿ ಲಯವಾದ ಬಳಿಕ ಗರುಡ, ಶೇಷರಿಗೆ ಸರಸ್ವತಿಯಲ್ಲಿ ಲಯವಾಗುವದು. ಸರಸ್ವತಿಗೆ ಚತುರ್ಮುಖ ಬ್ರಹ್ಮನಲ್ಲಿ. ಬ್ರಹ್ಮದೇವರಿಗೆ ಲಕ್ಷ್ಮೀದ್ವಾರಾ ಪರಮಾತ್ಮನಲ್ಲಿ ಲಯವನ್ನು ಹೇಳಿದ್ದಾರೆ.

ಪಾರ್ವತಿಗೆ ರುದ್ರನಲ್ಲಿ,ರುದ್ರದೇವರಿಗೆ ಭಾರತಿಯಲ್ಲಿ, ಭಾರತಿಗೆ ವಾಯುದೇವರಲ್ಲಿ ವಾಯುದೇವರಿಗೆ ಲಕ್ಷ್ಮೀದ್ವಾರಾ ಪರಮಾತ್ಮನಲ್ಲಿ ಲಯವಾಗುವದು.

ಈ ರೀತಿಯಾಗಿ ಲಯವಾದ ಬಳಿಕ ಬ್ರಹ್ಮಕಲ್ಪದಲ್ಲಿ ಲಿಂಗಭಂಗವಾಗಲು ಯೋಗ್ಯರಾದ ಎಲ್ಲ ಜೀವರಿಂದ ಒಡಗೂಡಿ ಬ್ರಹ್ಮದೇವರು ಸತ್ಯಲೋಕದ ಮೇಲಿರುವ ವಿರಜಾ ನದಿಯ ದಂಡೆಗೆ ಬರುತ್ತಾರೆ. ಆ ನದಿಯ ನೋಟದಿಂದಲೇ ಎಲ್ಲ ಜೀವರಿಗೂ ಆನಂದ ವಾಗುವದು. ಬ್ರಹ್ಮದೇವರು ಆ ವಿರಜಾ ನದಿಯ ನೀರನ್ನು ತಾವು ಪ್ರೋಕ್ಷಣಾ ಮಾಡಿಕೊಂಡು ಎಲ್ಲ ಜೀವರಿಗೂ ಆ ನದಿಯಲ್ಲಿ ಸ್ನಾನಮಾಡಲು ಅಪ್ಪಣೆ ಕೊಡುತ್ತಾರೆ.

ಅವರ ಅಪ್ಪಣೆಯಂತೆ ಜೀವರೆಲ್ಲರೂ ಪರಮಾತ್ಮನ ನಾಮಸ್ಮರಣ ಮಾಡುತ್ತಾ ಆ ವಿರಜಾ ನದಿಯಲ್ಲಿ ಸ್ನಾನ ಮಾಡುತ್ತಾರೆ. ಆದರಿಂದ ಅವರ ಲಿಂಗದೇಹವು ಭಂಗ ವಾಗುವದು. ಜೀವರಿಗೆ ಅನಾದಿ ಕಾಲದಿಂದ ಬಂದ ಛೇವಾಚ್ಛಾದಿಕಾ ಎಂಬ ಪ್ರಕೃತಿಯ ಪರದೆಯು ದೂರವಾಗುತ್ತದೆ. ಅನಂತರ ಜೀವರಿಗೆ ಸ್ವರೂಪ ದೇಹವು ಪ್ರಾಪ್ತವಾಗುತ್ತದೆ.

ಲಿಂಗ ದೇಹವು ಭಂಗವಾದ ಬಳಿಕ ಪ್ರಳಯಕಾಲದಲ್ಲಿ ಎಲ್ಲ ಮುಕ್ತ ಜೀವರೂ ಮತ್ತು ಬ್ರಹ್ಮದೇವರೂ ಭಗವಂತನ ಉದರದಲ್ಲಿ ಪ್ರವೇಶ ಮಾಡುವರು. ಸೃಷ್ಟಿ ಕಾಲವು ಬರುವ ವರೆಗೆ ಶ್ರೀ ಹರಿಯ ಉದರದಲ್ಲಿಯೇ ಇದ್ದು ಅನಂತರ ಸೃಷ್ಟಿಯ ಪ್ರಾರಂಭಕಾಲದಲ್ಲಿ ಅಲ್ಲಿಂದ ಹೊರಬೀಳುತ್ತಾರೆ.

ಪ್ರಳಯ ಕಾಲದಲ್ಲಿ ಭಗವಂತನ ಉದರದಲ್ಲಿದ್ದಾಗ ಆ ಜೀವರಿಗೆ ಯಾವದೇ ತರಹದ ಭೋಗಾನುಭೂತಿ ಇಲ್ಲ. ಸೃಷ್ಟಿ ಕಾಲ ಪ್ರಾರಂಭವಾದ ಬಳಿಕ ಲಿಂಗದೇಹವು ಭಂಗವಾದ ಸಚ್ಚೇತನಗಳೆಲ್ಲ ತಮ್ಮ ಸ್ವರೂಪ ದೇಹವನ್ನು ಧಾರಣ ಮಾಡಿಕೊಂಡು ಪರಮಾತ್ಮನ ಅಪ್ಪಣೆಯಂತೆ ಶ್ವೇತ ದ್ವೀಪಕ್ಕೆ ಹೋಗುವರು. ಅಲ್ಲಿಂದ ಶ್ವೇತದ್ವೀಪಕ್ಕೆ ಒಡೆಯನಾದ ಶ್ರೀವಿಷ್ಣುವಿನ ದರ್ಶನದಿಂದ ಆನಂದ ತುಂದಿಲರಾಗುತ್ತರೆ. ಅನಂತರ ಆ ಪರಮಾತ್ಮನ ಅಪ್ಪಣೆಯಂತೆ ಶ್ವೇತದ್ವೀಪ, ವೈಕುಂಠ, ಮತ್ತು ಉಳಿದ ಪುಣ್ಯ ಪ್ರದೇಶಗಳಲ್ಲಿ ವಾಸಮಾಡುತ್ತಾರೆ. ಈ ಸ್ಥಳಗಳಲ್ಲಿ ಜೀವರಿಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ವಿಧವಾದ ಮೋಕ್ಷಗಳು ಅವರವರ ಯೋಗ್ಯ ತಾನುಸಾರವಾಗಿ ಪ್ರಾಪ್ತವಾಗುತ್ತವೆ.

ಇಲ್ಲಿ ಎಲ್ಲ ಜೀವರಿಗೆ ಸ್ವರೂಪ ದೇಹದಿಂದಲೇ ಸುಖಾನುಭವ. ಸ್ವರೂಪ ದೇಹವು ಷೋಡಶಕಲೋಪೇತ ಲಿಂಗ ದೇಹದಂತೆ—

" ಸ್ವರೂಪಂ ಜಾಯತೇ ತೇಷಾಂ ಷೋಡಶ್ಯಾ ಕಲಯೈವತು "

ಎಂದು ಆಚಾರ್ಯರು ಗೀತಾ ಭಾಷ್ಯದಲ್ಲಿ ಅಪ್ಪಣೆ ಕೊಡಿಸಿದ್ದಾರೆ. ಹತ್ತು ಇಂದ್ರಿಯಗಳು, ಪಂಚಪ್ರಾಣಗಳು ಮತ್ತುಮನಸ್ಸು ಕೂಡಿ ಹದಿನಾರು. ಇಂಥ ಸ್ವರೂಪ ದೇಹದಿಂದ ದಿವ್ಯ ಲೋಕಗಳಲ್ಲಿ ಭಗವತ್ಪ್ರಸಾದದಿಂದ ಜೀವರು ಸುಖಾನುಭವವನ್ನು ಮಾಡುತ್ತಾರೆ.

## ಚತುರ್ವಿಧವಾದ ಮುಕ್ತಿ

ಮುಕ್ತಿಯು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ನಾಲ್ಕು ಬಗೆಯಾಗಿದೆ.

ಸಾಲೋಕ್ಯ ಮುಕ್ತಿಯೆಂದರೆ:—

"ಕೇಚದೇವ ವಸಂತ್ಯತ್ರ ಹ್ಯಂತರಿಕ್ಷೇ ಚ ಕೇಚನ
ಕೇಚಿತ್ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ
ಕೇಚಿತ್ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಮ್"

ಕೆಲವರು ಇಲ್ಲಿ, ಹಲವರು ಅಂತರಿಕ್ಷದಲ್ಲಿ, ಸ್ವರ್ಗದಲ್ಲಿ ಕೆಲವರು, ಇನ್ನು ಕೆಲವರು ಮಹರ್ಲೋಕ ಜನಲೋಕ ತಪೋಲೋಕ, ಸತ್ಯಲೋಕ, ಕ್ಷೀರಸಾಗರ ಮುಂತಾದ ತಾಣಗಳಲ್ಲಿ ನಿಂತು ಭಗವಂತನ ದಿವ್ಯ ದರ್ಶನದ ಆನಂದವನ್ನು ಅನುಭವಿಸುವದು ಸಾಲೋಕ್ಯ ಮುಕ್ತಿ.

## ಸಾರೂಪ್ಯ ಮುಕ್ತಿ

" ಸರ್ವೇಚತುರ್ಬಾಹವ ಉನ್ನಿಷನ್ಮಣಿ ಪ್ರವೇಕಾಭರಣಾಃ ಸುಪೇಶಸಃ "

ಪರಮಾತ್ಮನಂತೆ ಚತುರ್ಬಾಹು, ಪೀತಾಂಬರ, ಮಣಿ, ಸುವರ್ಣಾಭರಣಗಳಿಂದ ಭೂಷಿತರಾಗಿ ಅವನಂಥ ಶರೀರದಿಂದ ಸುಖಾನುಭವಗೈಯುವದು.

## ಸಾಯುಜ್ಯ ಮುಕ್ತಿ

ಆದತ್ತೆ ಹರಿ ಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಿಸ್ಸ್ಯೈಷಾಸ್ಥಿತಿರ್ಭವೇತ್ (ಮಧ್ವಭಾಷ್ಯ)

ಶ್ರೀ ಹರಿಯ ಶರೀರದಲ್ಲಿ ಪ್ರವೇಶ ಮಾಡಿ ಆ ಹರಿಯ ಕೈಯಿಂದ ಉಣ್ಣುವದು. ಹರಿಯ ಕಣ್ಣಿನಿಂದಲೇ ನೋಡುವದು. ಹರಿಯ ಪಾದದಿಂದಲೇ ನಡೆಯುವದು. ಇದು ಸಾಯುಜ್ಯ ಮೋಕ್ಷ ಪಡೆದವನ ಭಾಗ್ಯ.

ಇಷ್ಟು ಹರಿಯ ದೇಹದಲ್ಲಿ ಪ್ರವೇಶ ಮಾಡಿದ್ದರೂ ಇವನ ಆನಂದ ಇವನಿಗೆ, ಅವನ ಆನಂದ ಅವನಿಗೆ. ಹರಿಯ ಆನಂದವಾವುದೂ ಆ ಜೀವನ ಅನುಭವಕ್ಕೆ ಬರುವದಿಲ್ಲ. ತನ್ನ ಆನಂದವೇ ಅವನಿಗೆ ಅನುಭವಕ್ಕೆ ಈ ವಿಷಯವಾಗುವದು. ಇದೇ ಮಾತನ್ನು ಆಚಾರ್ಯರು—

" ಮುಕ್ತಾಃ ಪ್ರಾಪ್ಯಪರಂ ವಿಷ್ಣುಂ ತದ್ಭೋಗಾನ್ ಲೇಶತಃ ಕ್ವಚಿತ್
ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ "
( ಬ್ರಹ್ಮಸೂತ್ರ ಭಾಷ್ಯ )

ಜೀವನಿಗೆ ಈಶನ ಅನಾದಿ ಭೋಗವು ಸರ್ವಥಾ ಇಲ್ಲವೆಂದು ತಿಳಿಸಿದ್ದಾರೆ. ಮೀನವು ಸಮುದ್ರದಲ್ಲಿಯೇ ಹೊಕ್ಕು ಹರಿದಾಡುತ್ತಿದ್ದರೂ ಅದಕ್ಕೆ ಸಾಗರದ ವಿಶಾಲತೆ ಗಾಂಭೀರ್ಯ ಇಲ್ಲದಿರುವಂತೆ ಜೀವನಿಗೆ ಭಗವಂತನ ಗುಣಾವಾಪ್ತಿ ಆನಂದಾನುಭೂತಿ ಇಲ್ಲ.

( ೭ )

## " ಅಮಲಾ ಭಕ್ತಿಶ್ಚ ತತ್ಸಾಧನಂ "

### ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಕಾರಣವಾಗಿದೆ

ಮೋಕ್ಷಕ್ಕೆ ಮುಖ್ಯ ಸಾಧನವೆಂದರೆ ನಿರ್ಮಲವಾದ ಭಗವದ್ಭಕ್ತಿ. ಭಕ್ತಿ ಎಂದರೆ ಸುದೃಢಸ್ನೇಹ. ಮೋಕ್ಷೋಪಯೋಗಕವಾದ ಸಕಲ ಸಾಮಗ್ರಿಗಳಲ್ಲಿ ಭಕ್ತಿಯು ಅತ್ಯಂತ ಶ್ರೇಷ್ಠವಾಗಿದೆ. ಅನುವ್ಯಾಖ್ಯಾನದಲ್ಲಿ ಆಚಾರ್ಯರು—

"ಸಾಧನೇಭ್ಯೋಧಿಕಾ ಭಕ್ತಿರ್ನೈವಾನ್ಯತ್ತಾದೃಶಂ ಕ್ವಚಿತ್
ಭಕ್ತಿಶ್ಚೈವ ಪರಾವೇವ ಮುಖ್ಯಾ ಅನ್ಯತ್ರ ಯಥಾಕ್ರಮಮ್॥"

(ಅನು ೩-೩-೭೮)

ಎಂದು ಭಕ್ತಿಯ ಆಧಿಕ್ಯವನ್ನು ಹೇಳಿ ಅದು ಶ್ರೀಹರಿಯಲ್ಲಿ ಮುಖ್ಯವಾಗಿರಬೇಕು. ಇತರ ದೇವತೆಗಳಲ್ಲಿಯೂ ತಾರತಮ್ಯಾನುಸಾರವಾಗಿ ಭಕ್ತಿ ಮಾಡಬೇಕು. ಗುರುಗಳಲ್ಲಿಯೂ ಕ್ರಮಾನುಸಾರ ಮಾಡಬೇಕೆಂದು— "ಯಥಾದೇವೇ ತಥಾ ಗುರೌ" ಎಂದು ಶಾಸ್ತ್ರದಲ್ಲಿ ಉದಾಹರಿಸಿದ್ದಾರೆ.

"ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥"

ಯಾವನ ಭಕ್ತಿಗೆ ಮೆಚ್ಚಿ ಭಗವಂತ ಅನುಗ್ರಹ ಗೈಯ್ಯುವನೋ ಅವನಿಗೆ ಮಾತ್ರ ಭಗವದಪರೋಕ್ಷವಾಗಿ ಸ್ವರೂಪದೇಹದಿಂದ ಅನುಭವಿಸಬೇಕಾದ ಮೋಕ್ಷ ಸುಖ ಪ್ರಾಪ್ತವಾಗುತ್ತದೆ. ಎಂಬ ವೇದ ವಚನವು ಮುಕ್ತಿಗೆ ಭಕ್ತಿ ಪ್ರಾಶಸ್ತ್ಯವನ್ನೇ ಹೇಳುತ್ತದೆ.

ಅದಕ್ಕಾಗಿ ಯೋಗ್ಯವಾದ ಉಪಾಸನೆಯನ್ನು ಮಾಡಬೇಕು.

"ಯೋಗ್ಯೋಪಾಸಾಂ ವಿನಾ ನೈವ ಮುಕ್ತಿಃ ಕಸ್ಯಾಪಿ ಕುತ್ರಚಿತ್॥"

ಎಂಬ ಅನುವ್ಯಾಖ್ಯಾನದಲ್ಲಿ ಯೋಗ್ಯತಾನುರೂಪವಾದ ಭಕ್ತಿ ಉಪಾಸನಗಳೇ ಮೋಕ್ಷಜನಕವಾಗುತ್ತವೆ ಎಂದು ಅಪ್ಪಣೆಕೊಡಿಸಿದ್ದಾರೆ.

ಈ ಭಕ್ತಿಯ ವ್ಯಾಖ್ಯೆಯನ್ನು ಸ್ವಯಂ ಶ್ರೀಮದಾಚಾರ್ಯರೇ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ—

"ಮಾಹಾತ್ಮ್ಯ ಜ್ಞಾನ ಪೂರ್ವಸ್ತು ಸುದೃಢಃ ಸರ್ವತೋ ಮುಖಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ ॥

ಭಗವಂತನ ಗುಣಗಳನ್ನು ಅರಿತು ಅವನ ಮಹಾಮಹಿಮೆಗಳನ್ನು ತಿಳಿದು ಕೊಂಡು ಅವನಲ್ಲಿ ನಿರತಿಶಯವಾದ ಪ್ರೇಮುವನ್ನು ಮಾಡುವದೇ ಭಕ್ತಿ. ಅದರಿಂದಲೇ ಮುಕ್ತಿ" ಎಂದು ಹೇಳಿದ್ದಾರೆ.

ಇದೇ ಆಚಾರ್ಯರ ಅಭಿಪ್ರಾಯವನ್ನು ಶ್ರೀ ಜಯತೀರ್ಥರು ಇನ್ನೂ ಹಿಗ್ಗಿಸಿ ನಿಷ್ಕೃಷ್ಟವಾಗಿ ನ್ಯಾಯ ಸುಧೆಯಲ್ಲಿ—

"ನಿರವಧಿಕಾನಂತಾನವದ್ಯ ಕಲ್ಯಾಣ ಗುಣತ್ವಜ್ಞಾನ ಪೂರ್ವಕಃ
ಸ್ವಾತ್ಮಾತ್ಮೀಯ ಸಮಸ್ತ ವಸ್ತುಭ್ಯಃ ಅನೇಕ ಗುಣಾಧಿಕಃ ಅಂತರಾಯ
ಸಹಸ್ರೇಣಾಪ್ಯ ಪ್ರತಿಬದ್ಧಃ ನಿರಂತರ ಪ್ರೇಮ ಪ್ರವಾಹಃ ॥"

ಪರಮಾತ್ಮನ ಗುಣಗಳಿಗೆ ಇತಿ ಇಲ್ಲ ಮಿತಿ ಇಲ್ಲ. ಅವು ಅಸಂಖ್ಯ. ದೋಷ ದೂರ. ಅವನು ಕಲ್ಯಾಣ ಗುಣಗಳ ಒಂದು ಖಣಿಯಿದ್ದಂತೆ. ಅಂಥ ಅಗಣಿತ ಗುಣಗಳ ಒಂದು ನಿಧಿಯೆಂದು ತಿಳಿದು ಆ ಪರಮೇಶ್ವರನಲ್ಲಿ ಪ್ರೀತಿ ಮಾಡಬೇಕು. ಸಾವಿರ ವಿಘ್ನಗಳೂ ಬಂದರೂ ಆ ಪ್ರೇಮಕ್ಕೆ ಚ್ಯುತಿ ಬರಬಾರದು. ತನ್ನ ಆತ್ಮ, ಆತ್ಮೀಯರು ಮತ್ತು ತನಗೆ ಅತ್ಯಂತ ಪ್ರಿಯವಾದ ಇತರ ವಸ್ತುಗಳು ಅವೆಲ್ಲವುಗಳ ಗಿಂತ ಅನಂತಪಟ್ಟು ಹೆಚ್ಚಿನದಾಗಿರಬೇಕು ಆ ಪ್ರೇಮ. ಇಂಥ ನಿರಂತರ ಅಚ್ಛಿನ್ನ ಪ್ರೇಮದ ಪ್ರವಾಹವೇ ಭಕ್ತಿ."

ಎಷ್ಟು ಸುಂದರವಾಗಿದೆ ಈ ಭಕ್ತಿಯ ವ್ಯಾಖ್ಯೆ ! ಇದಕ್ಕಿಂತ ಹೆಚ್ಚು ಇದನ್ನು ಹಿಂಜುವದೇ ಸಾಧ್ಯವಿಲ್ಲ. ಇದೇ ಸುಧಾಕಾರರ ವೈಶಿಷ್ಟ್ಯ.

ಈ ಭಕ್ತಿಯು ಸಾಧನಭಕ್ತಿ ಸಾಧ್ಯಭಕ್ತಿ ಎಂದು ಎರಡು ವಿಧವಾಗಿದೆ. ಎರಡೂ ಭಕ್ತಿಯ ಸ್ವರೂಪವನ್ನು ಅನುವ್ಯಾಖ್ಯಾನದಲ್ಲಿ—

"ಭಕ್ತ್ಯಾ ಜ್ಞಾನಂ ತತೋ ಭಕ್ತಿಸ್ತತೋ ದೃಷ್ಟಿಸ್ತತಶ್ಚ ಸಾ ।
ತತೋ ಮುಕ್ತಿಸ್ತತೋ ಭಕ್ತಿಃ ಸೈವ ಸ್ಯಾತ್ ಸುಖರೂಪಿಣೀ ॥"

ಭಕ್ತಿಯಿಂದ ಪರೋಕ್ಷಜ್ಞಾನ, ಅದರಿಂದ ನಿಶ್ಚಲ ಭಕ್ತಿ, ಅದರಿಂದ ಪರಮಾತ್ಮನ ಸಾಕ್ಷಾತ್ಕಾರ, ಅದರಿಂದ ಅಪರೋಕ್ಷ ಜ್ಞಾನ, ಅಪರೋಕ್ಷ ಜ್ಞಾನದಿಂದ ಪರಿಪಕ್ವಭಕ್ತಿ, ಅದರಿಂದ ಮೋಕ್ಷ. ಅನಂತರವೂ ಮತ್ತೆ ಭಕ್ತಿ. ಆ ಭಕ್ತಿಯು ಮಾತ್ರ ಸಾಧನ ರೂಪವಲ್ಲ ಸಾಧ್ಯರೂಪ. ಅದು ಸುಖರೂಪ."

ಎಂದು ಆಚಾರ್ಯರು ಮೋಕ್ಷದವರೆಗೆ ಎಲ್ಲ ಹಂತಗಳಲ್ಲಿಯೂ ಸಂಪುಟಾಕಾರೇಣ ಭಕ್ತಿ ಸಂಪೃಕ್ತಿಯನ್ನು ಹೇಳಿ ಮೋಕ್ಷಾ ನಂತರವೂ ಆನಂದಾಭಿವೃದ್ಧಿಯಾಗಿ ಭಗವಂತ ನಲ್ಲಿ ಭಕ್ತಿಯ ಊರ್ಜಿತಾವಸ್ಥೆಯನ್ನು ಹೇಳಿದ್ದಾರೆ.

ಭಗವಂತನನ್ನು ಮಾನವರು ಭಕ್ತಿಯಿಂದ ತಮ್ಮ ತಮ್ಮ ಯೋಗ್ಯತಾನುಗುಣ ವಾಗಿಯೇ ಉಪಾಸನ ಮಾಡಬೇಕು. ಲಕ್ಷ್ಮೀದೇವಿಯು ನಿತ್ಯ ಮುಕ್ತಳಾದರೂ ಅನಂತ ಗುಣದಿಂದ ಪರಮಾತ್ಮನ ಉಪಾಸನೆಯನ್ನು ಮಾಡುತ್ತಾಳೆ. ಬ್ರಹ್ಮದೇವರು ಕೂಡ ವೇದೋಕ್ತ ಸರ್ವ ಗುಣಗಳಿಂದ ಪರಮಾತ್ಮನ ಉಪಾಸನೆಯನ್ನು ಮಾಡು ತ್ತಾರೆ. ಆದರೆ ಮನುಷ್ಯರು ಮಾತ್ರ ಸತ್, ಚಿತ್, ಆನಂದ, ಆತ್ಮ ಎಂದು ಚತುರ್ಗು ಣೋಪಾಸನೆಯನ್ನು ಮಾಡಬೇಕೆಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

" ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈಃ ಬ್ರಹ್ಮಾದ್ಯೈಸ್ತ್ವಖಿಲೈಃ ಗುಣೈಃ ॥ "

( ಅಣುಭಾಷ್ಯ )

ಶ್ರುತಿಸ್ಮೃತಿ ಪುರಾಣಗಳಲ್ಲಿ ಮತ್ತು ಭಗವದ್ಗೀತೆಯ ಅನೇಕ ಸಂದರ್ಭಗಳಲ್ಲಿ ಶ್ರೀ ಕೃಷ್ಣನು ಈ ಭಕ್ತಿಯ ಗರಿಮೆಯನ್ನು ಹೇಳಿದ್ದಾನೆ.

" ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ "

( ಅನನ್ಯವಾದ ಭಕ್ತಿಯಿಂದಲೇ ಆ ಪರಮಾತ್ಮನ ಜ್ಞಾನ ಹಾಗೂ ಅವನ ಸಾಕ್ಷಾತ್ಕಾರ ಮತ್ತು ಮೋಕ್ಷಾದಿ ಪ್ರಾಪ್ತಿಯು ಆಗುವದು. )

ಇದರಂತೆ ಭಾಗವತಾದಿ ಗ್ರಂಥಗಳಲ್ಲಿ—

" ಅನಿಮಿತ್ತಾ ಭಗವತಿ ಭಕ್ತಿಸ್ಸಿದ್ಧೇರ್ಗರೀಯಸೀ ।
ಜರಯತ್ಯಾಶು ಯಾಕೋಶಂ ನಿಗೀರ್ಣಮನಿಲೋ ಯಥಾ ॥ "

ಶ್ರೀ ಹರಿಯಲ್ಲಿ ಮಾಡಿದ ನಿಷ್ಕಾಮ ಭಕ್ತಿಯೇ ಮುಕ್ತಿಗೆ ಕಾರಣವಾಗುತ್ತದೆ. ಅದು ಬೆಂಕಿಯು ಒಣಸೌದೆಯನ್ನು ಸುಡುವಂತೆ ಲಿಂಗದೇಹವನ್ನು ನಾಶಮಾಡುತ್ತದೆ.

" ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾದ್ ಜ್ಞಾನಮನಾಕುಲಂ ।
ತಸ್ಯೈವ ದರ್ಶನಂ ಯಾತಃ ಪ್ರಸಾದ್ಯಾನ್ಮುಕ್ತಿಮೇತಯಾ ॥ "

ಭಕ್ತಿಯಿಂದ ಪ್ರಸನ್ನನಾದ ಭಗವಂತನು ಜ್ಞಾನವನ್ನೂ ತನ್ನ ಸಾಕ್ಷಾತ್ಕಾರವನ್ನೂ ಕೊನೆಗೆ ಮುಕ್ತಿಯನ್ನೂ ಕರುಣಿಸುತ್ತಾನೆ.

" ಅಭ್ಯಾಸಪಾಟವಾತ್ ಸ್ನೇಹಾದಪ್ಯನುತ್ತಮುಪಾಸನಾ ।
ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ ॥ "
" ಸಾಧನಾನಿ ತು ಸರ್ವಾಣಿ ಭಕ್ತಿ ಜ್ಞಾನ ಪ್ರವೃದ್ಧಯೇ ।
ನೈವಾನ್ಯಸಾಧನಾ ಭಕ್ತಿಃ ಫಲರೂಪಾಹಿಸಾಯತಃ ॥ "
" ಸರ್ವಸ್ಮಾದುತ್ತಮ ಇತಿ ಸಮ್ಯಕ್ ಸ್ನೇಹಯುತಾ ಮತಿಃ ।
ಸುಸ್ಥಿರಾ ಭಕ್ತಿರುದ್ದಿಷ್ಟಾ ತಯಾ ಮುಕ್ತಿರ್ನಚಾನ್ಯತಃ ॥ "

ಎಂದು ಮುಂತಾಗಿ ಪರಸ್ಸಹಸ್ರ ಪ್ರಮಾಣ ವಚನಗಳು

" ಭಕ್ತ್ಯೈಕಲಭ್ಯಃ ಪುರುಷೋತ್ತಮೋಸಿ "

ಎಂಬ ಬ್ರಹ್ಮದೇವರ ಪಾಂಚರಾತ್ರೋಕ್ತಿಯನ್ನೇ ಪುಷ್ಟೀಕರಿಸುತ್ತವೆ.

ಈ ಭಕ್ತಿಯು ಭಾಗವತದಲ್ಲಿ ಹೇಳಿದಂತೆ

" ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ "

ಶ್ರವಣ, ಕೀರ್ತನ, ಸ್ಮರಣ, ಪಾದಸೇವೆ, ಪೂಜೆ, ನಮಸ್ಕಾರ, ಕೈಂಕರ್ಯ, ಸ್ನೇಹಾತಿಶಯ ಮತ್ತು ಆತ್ಮಾರ್ಪಣೆ ಎಂದು ಒಂಭತ್ತು ವಿಧವಾಗಿದೆ.

ಇಂಥ ಭಕ್ತಿ ಒಂದಿದ್ದರೆ ಸಾಕು. ಭಗವಂತ ಕುಲ, ಜಾತಿ, ಧನ, ರೂಪ ಒಂದೂ ನೋಡುವದಿಲ್ಲ.

ಮನ್ಯೇ ಧನಾಭಿಜನರೂಪ ತಪಶ್ರುತೌಜಸ್ತೇಜಃ ಪ್ರಭಾವಬಲ
ಪೌರುಷಬುದ್ಧಿಯೋಗಾಃ ।
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸಃ ಭಕ್ತ್ಯಾ ತುತೋಷ
ಭಗವಾನ್ ಗಜ ಯೂಥಪಾಯ ॥

ಬರೀ ಐಶ್ವರ್ಯ, ಕುಲೀನತೆ, ಸೌಂದರ್ಯ, ತಪಸ್ಸು, ಅಧ್ಯಯನ, ತೇಜಸ್ಸು, ಪ್ರಭಾವ, ಪರಾಕ್ರಮ, ಬುದ್ಧಿ ಶಕ್ತಿ ಮುಂತಾದ ಸಾಧನಗಳಿಂದ ಮಾತ್ರ ಪರಮಾತ್ಮನು ಒಲಿಯುವದಿಲ್ಲ. ಅವನನ್ನು ಮೆಚ್ಚಿಸಲಿಕ್ಕೆ ಒಂದೇ ಒಂದು ಸಾಧನವೆಂದರೆ ಶುದ್ಧವಾದ ಅನನ್ಯ ಭಕ್ತಿ. ಗಜೇಂದ್ರನಲ್ಲಿ ಅಂಥ ಭಕ್ತಿಯ ಹೊರತು ಬೇರೆ ಏನಿದ್ದಿತು ! ಅದಕ್ಕೇ. ಒಲಿದು ಅವನನ್ನು ಹರಿ ಉದ್ಧರಿಸಿದ.

ಭಗವತ್ ಪ್ರೇಮರೂಪವಾದ ಭಕ್ತಿಯು ಒಂಬತ್ತು ವಿಧವಾಗಿದ್ದಂತೆ ಭಗವಂತನ ದ್ವೇಷವೂ ನವವಿಧವಾಗಿದೆ.

ಜೀವಾಭೇದೋ ನಿರ್ಗುಣತ್ವಂ ಅಪೂರ್ಣಗುಣತಾ ತಥಾ
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ
ಪ್ರಾದುರ್ಭಾವ ವಿಪರ್ಯಾಸಸ್ತದ್ಭಕ್ತದ್ವೇಷ ಏವ ಚ
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ||

ಜೀವಬ್ರಹ್ಮೈಕ್ಯಜ್ಞಾನ, ಬ್ರಹ್ಮನ ಸರ್ವಜ್ಞತ್ವಾದಿ ಗುಣಗಳು ಮಿಥ್ಯೆ ಎಂಬ ನಿರ್ಗುಣತ್ವಜ್ಞಾನ, ಪರಬ್ರಹ್ಮನಲ್ಲಿ ಅಪೂರ್ಣತ್ವ ಬುದ್ಧಿ, ಬ್ರಹ್ಮ ವಿಷ್ಣು ಶಿವರು ಸಮಾನರೆಂಬ ಭ್ರಾಂತಿ, ಇತರ ದೇವತೆಗಳು ಹರಿಗಿಂತ ಹಿರಿಯರೆಂಬ ಮೌಢ್ಯ, ವಿಷ್ಣುವಿನ ವಾಸುದೇವಾದಿ ರೂಪಗಳು, ಜ್ಞಾನಾನಂದಾದಿ ಗುಣಗಳು, ಅವನ ಕರಚರಣಾದಿ ಅವಯವಗಳು ಅವನಿಂದ ಭಿನ್ನ ಎಂದು ತಿಳುವಳಿಕೆ, ಮಾನವರನ್ನು ವಿಷ್ಣುವೆಂದೂ ವಿಷ್ಣುವನ್ನು ಮಾನವನೆಂದೂ ಬಗೆಯುವದು, ಹರಿಯ ಭಕ್ತರನ್ನು ದ್ವೇಷ ಮಾಡುವದು, ಭಗವಂತನ ಮಹಿಮೆಯನ್ನು ತಿಳಿಸಿಕೊಡುವ ವೇದಶಾಸ್ತ್ರಗಳು ಅಪ್ರಮಾಣ ಎಂದು ನಿಂದಿಸುವದು ಇವು ಒಂಬತ್ತು ಭಗವಂತನ ದ್ವೇಷಗಳಾಗಿವೆ.

ಇಂಥ ನವವಿಧವಾದ ಭಗವದ್ದ್ವೇಷವನ್ನು ಮಾಡದೇ ಮೊದಲು ಹೇಳಿದ ನವವಿಧ ಭಗವದ್ಭಕ್ತಿಯನ್ನು ಮಾಡಿದರೆ ಮುಕ್ತಿಯು ಕರತಲಾಮಲಕವಾಗುತ್ತದೆ.

“ ಯಥಾ ದೇವೇ ತಥಾ ಗುರೌ ”

ಹರಿಯಂತೆ ಗುರುಗಳಲ್ಲಿಯೂ ಯಥಾ ಯೋಗ್ಯವಾದ ಭಕ್ತಿಯನ್ನು ಮಾಡಲೇಬೇಕೆಂದು ಶಾಸ್ತ್ರಗಳ ಆದೇಶವಿದೆ. ಆದುದರಿಂದ ಗುರುಗಳಲ್ಲಿಯೂ ಭಕ್ತಿ ಮಾಡಬೇಕು.

ಮಾನವರ ನಿಜವಾದ ಸ್ವರೂಪೋದ್ಧಾರಕ ಜಗದ್ಗುರುಗಳೆಂದರೆ ಶ್ರೀ ವಾಯುದೇವರು. ಆ ವಾಯು ದೇವರು ಜೀವೋತ್ತಮರು. ಅವರ ಮಹಿಮೆಯು ಛಾಂದೋಗ್ಯ,

ಐತರೇಯ ಷಟ್ಪ್ರಶ್ನಾದಿ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿದೆ. ಅಂಥ ವಾಯು ದೇವರೇ ಮಧ್ವಾಚಾರ್ಯರಾಗಿ ಅವತಾರ ಮಾಡಿದ್ದಾರೆಂದು ಬಳಿತ್ಥಾ ಸೂಕ್ತ, ಪವಮಾನ ಸೂಕ್ತ, ಮುಂತಾದ ವೇದಮಂತ್ರಗಳಲ್ಲಿ ಸ್ಪಷ್ಟವಾಗಿ ಸಾರಿದ್ದಾರೆ. ಅಂಥ ಮಂತ್ರ ಪ್ರತಿಪಾದ್ಯರಾದ ಮಧ್ವ ಗುರುಗಳಲ್ಲಿಯೂ ಅವರ ಶಾಸ್ತ್ರದಲ್ಲಿಯೂ ಭಕ್ತಿಮಾಡಿ ಶ್ರದ್ಧೆಯಿಂದ ಓದಿ ಉದ್ಧೃತರಾಗಬೇಕು.

## ( ೮ )

## " ಅಕ್ಷಾದಿತ್ರಿತಯಂ ಪ್ರಮಾಣಂ "

### ಪ್ರತ್ಯಕ್ಷ, ಅನುಮಾನ, ಆಗಮ ಮೂರು ಪ್ರಮಾಣ

ಪ್ರತ್ಯಕ್ಷ, ಯುಕ್ತಿ, ಮತ್ತು ಶಾಸ್ತ್ರ ಇವು ಮೂರೂ ಮಧ್ವಾಚಾರ್ಯರು ಪ್ರಮಾಣವೆಂದು ಹೇಳಿದ್ದಾರೆ. ಇದೇ ಮಾತನ್ನು ಆದ್ಯ ಸ್ಮೃತಿಕಾರನಾದ ಮನುಃ ಮಹರ್ಷಿಯು—

"ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ ।
ತ್ರಯಂ ಸುವಿದಿತಂ ಕಾರ್ಯಂ ಧರ್ಮಸಿದ್ಧಿ ಮಭೀಪ್ಸತಾ ॥"

ಧರ್ಮದ ಸಿದ್ಧಿಯು ಆಗಬೇಕೆಂದು ಬಯಸುವವರು ಈ ಮೂರೂ ಪ್ರಮಾಣ ಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ಎಂದು ಅಪ್ಪಣೆ ಕೊಡಿಸಿದ್ದಾನೆ.

ಮಾಯಾವಾದಿಗಳು ಪ್ರತ್ಯಕ್ಷವನ್ನು ಅಲ್ಲಗಳೆಯುತ್ತಾರೆ. ನಾಸ್ತಿಕರು ಅನುಮಾನ ಯುಕ್ತಿಗಳನ್ನು ಅಪ್ರಮಾಣ ಎಂದು ಹೇಳುತ್ತಾರೆ. ಆಚಾರ್ಯರು ಮಾತ್ರ ಇವು ಮೂರೂ ಪ್ರಮಾಣ ಎಂದು ಸಿದ್ಧಾಂತ ಮಾಡಿದ್ದಾರೆ.

ಇದೇ ಶ್ರೀ ಕೃಷ್ಣನಿಗೆ ಸಮ್ಮತವಾದ ಸಿದ್ಧಾಂತ. ಗೀತೆಯಲ್ಲಿ—

" ದಿವ್ಯಂ ದದಾಮಿ ತೇ ಚಕ್ಷುಃ "

ಎಂದು ಅರ್ಜುನನಿಗೆ ತನ್ನ ವಿಶ್ವರೂಪವನ್ನು ನೋಡಲಿಕ್ಕಾಗಿ ದಿವ್ಯ ಚಕ್ಷುಸ್ಸನ್ನು ಕೊಡುತ್ತೇನೆ ಎಂದು ಹೇಳುವಾಗ ಅರ್ಜುನನ ಪ್ರತ್ಯಕ್ಷವು ' ದಿವ್ಯ ' ಎಂಬ ಶಬ್ದದಿಂದ ಪ್ರಮಾಣಭೂತವಾದದ್ದು ಎಂದು ಸಾಧಿಸಿದ್ದಾನೆ.

" ಬ್ರಹ್ಮಸೂತ್ರ ಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಂ "

ಎಂಬ ವಚನದಲ್ಲಿ ' ಹೇತು ' ಅರ್ಥಾತ್ ಯುಕ್ತಿಯು ಪ್ರಮಾಣವೆಂದು ಸಾರಿದ್ದಾನೆ. ಮತ್ತು—

" ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ "

ಎಂಬ ವಾಕ್ಯದಿಂದ ಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸುಸ್ಪಷ್ಟವಾಗಿ ತಿಳಿಯಪಡಿಸಿದ್ದಾನೆ.

ಈ ಮೂರು ಪ್ರಮಾಣಗಳಲ್ಲಿ ಅನುಮಾನವು ಸ್ವತಂತ್ರ ಪ್ರಮಾಣವಲ್ಲ.

" ಅನುಸೃತ್ಯ ಮಾನಂ ಅನುಮಾನಂ "

ಅದಕ್ಕೆ ಪ್ರತ್ಯಕ್ಷ ಆಗಮಗಳ ಬೆಂಬಲವಿದ್ದರೆ ಮಾತ್ರ ಅದು ಪ್ರಮಾಣವಾಗಬಲ್ಲದು. ಸ್ವತಂತ್ರ ಅನುಮಾನಕ್ಕೆ ಪ್ರಾಮಾಣ್ಯವಿಲ್ಲ.

" ನಾನುಮಾ ಕಾಮಚಾರಿಣೀ "

ಎಂದು ಆಚಾರ್ಯರು ಕಾಮಚಾರಿಯಾದುದರಿಂದ ಅನುಮೆಯು ತನ್ನಷ್ಟಕ್ಕೆ ತಾನೇ ಪ್ರಮಾಣವಾಗಲಾರದೆಂದು ಸ್ಪಷ್ಟಪಡಿಸಿದ್ದಾರೆ.

" ಆಗಮಾನುಗ್ರಹಾಭಾವೇ ನ ತರ್ಕಃಸ್ಯಾತ್ ಪ್ರತಿಷ್ಠಿತಃ ।
ಅಕ್ಷಜಾಗಮ ಮೂಲಸ್ಯ ಸ್ಯಾದೇವಾಸ್ಯ ಪ್ರತಿಷ್ಠಿತಿಃ ॥
ಪ್ರತ್ಯಕ್ಷಮಾಗಮೋ ವಾಪಿ ಭವೇದ್ಯತ್ರ ನಿಯಾಮಕಃ ।
ಸೈವ ವ್ಯಾಪ್ತಿರ್ಭವೇನ್ನ್ಯಾಸಂ ಸಾನ್ಯಾ ಸಂದಿಗ್ಧ ಮೂಲತಃ ॥

( ಅನುವ್ಯಾಖ್ಯಾನ )

ಎಂಬ ಅನೇಕ ವಾಕ್ಯಗಳಿಂದ ಕೇವಲ ಅನುಮಾನಕ್ಕೆ ಪ್ರಾಮಾಣ್ಯವನ್ನು ನಿರಾಕರಣ ಮಾಡಿ ಪ್ರತ್ಯಕ್ಷ ಆಗಮಾದ್ಯನುಗ್ರಹೀತವಾದ ಯುಕ್ತಿಗೆ ಬಲಿಷ್ಠತ್ವವನ್ನು ಹೇಳಿದ್ದಾರೆ.

ಪ್ರತ್ಯಕ್ಷದ ಲಕ್ಷಣವನ್ನು ಆಚಾರ್ಯರು ಪ್ರಮಾಣ ಲಕ್ಷಣದಲ್ಲಿ

" ನಿರ್ದೋಷಾರ್ಥೇಂದ್ರಿಯ ಸನ್ನಿಕರ್ಷಃ ಪ್ರತ್ಯಕ್ಷಂ "

ಎಂಬ ಸೂತ್ರ ರೂಪ ವಚನದಿಂದ ನಿರ್ದುಷ್ಟವಾದ ಇಂದ್ರಿಯ ನಿರ್ದುಷ್ಟವಾದ ವಿಷಯ ಇವೆರಡರ ಸಂಬಂಧವೇ ಪ್ರತ್ಯಕ್ಷ ಎಂದು ಹೇಳಿದ್ದಾರೆ.

ಅನಂತರ ಅನುಮಾನವನ್ನು ಕೂಡ

" ನಿರ್ದೋಷೋಪಪತ್ತಿರನುಮಾನಂ "

ನಿರ್ದೋಷವಾದ ಉಪಪತ್ತಿ ಯುಕ್ತಿಯೇ ಅನುಮಾನ ಎಂದು ಅಷ್ಟಕೆ ಕೊಡಿಸಿದ್ದಾರೆ.

ಆಗಮ ಎಂದರೆ ಶಾಸ್ತ್ರ. " ಆ – ಸಮ್ಯಕ್ ಗಮ್ಯತೆ ಜ್ಞಾಯತೆ " ಇವುಗಳಿಂದ ಪರಮಾತ್ಮನ ಸ್ವರೂಪವು ಚೆನ್ನಾಗಿ ತಿಳಿದುಕೊಳ್ಳಲ್ಪಡುವದರಿಂದ ಅವುಗಳಿಗೆ ಆಗಮ ಎಂದು ಹೆಸರು. " ನಿರ್ದೋಷ ಶಬ್ದಃ ಆಗಮಃ " ಭಗವಂತನನ್ನು ತಿಳಿಸಿಕೊಡುವ ನಿರ್ದುಷ್ಟ ಶಬ್ದಗಳೇ ಆಗಮ.

ಅವು ಪೌರುಷೇಯ ಅಪೌರುಷೇಯ ಎಂದು ಎರಡು ವಿಧವಾಗಿವೆ. ವೇದಾದಿಗಳು ಅಪೌರುಷೇಯ. ಮತ್ತು ನಿತ್ಯ. ಸ್ಮೃತಿ ಇತಿಹಾಸ ಪುರಾಣ ಸೂತ್ರಾದಿಗಳು ಅನಿತ್ಯ. ಇನಿಷ್ಟೇ ಪ್ರಮಾಣ.

" ಋಗ್ಯಜುಸ್ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ ।
ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ ॥

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಮಹಾಭಾರತ, ಪಂಚರಾತ್ರ, ಮೂಲ ರಾಮಾಯಣ ಇವು ಆರು ಶಾಸ್ತ್ರವೆನಿಸುತ್ತವೆ. ಇವಕ್ಕೆ ಅನುಕೂಲವಾದದ್ದೆಲ್ಲವೂ ಶಾಸ್ತ್ರ, ಪ್ರಮಾಣ. ಇವಕ್ಕೆ ಹೊರತಾದದ್ದೆಲ್ಲ ಅಪ್ರಮಾಣ. ಅದು ಅಡ್ಡದಾರಿ. "

ಎಂದು ನಿಸ್ಸಂಶಯವಾಗಿ ತೋರಿಸಿಕೊಟ್ಟಿದ್ದಾರೆ. ಪುರಾಣಗಳಲ್ಲಿ ಭಾಗವತ, ಪದ್ಮ ಪುರಾಣ (ಉತ್ತರಖಂಡ), ವಿಷ್ಣು ಪುರಾಣ, ನಾರದ ಪುರಾಣ, ವರಾಹ ಪುರಾಣ, ಗರುಡ ಪುರಾಣ, ಇವು ಆರು ಮಾತ್ರ ಸಾತ್ವಿಕ ಪುರಾಣಗಳಾದುದರಿಂದ ಪ್ರಮಾಣಗಳಾಗಿವೆ.

ಉಳಿದ ರಾಜಸ ಪುರಾಣಗಳೂ ತಾಮಸ ಪುರಾಣಗಳೂ ಪ್ರಮಾಣವಲ್ಲ. ಅಜ್ಞ ಜನ ಮೋಹನಾರ್ಥವಾಗಿ ವ್ಯಾಸರು ಅವುಗಳ ರಚನೆಯನ್ನು ಮಾಡಿದ್ದಾರೆ. ಈ ರಾಜಸ ತಾಮಸ ಪುರಾಣಗಳಲ್ಲಿ ಹೇಳಿದ ವಿಷಯಗಳು ಸಾತ್ವಿಕ ಪುರಾಣದಲ್ಲಿ ಹೇಳಿದ ವಿಷ್ಣು ಸರ್ವೋತ್ತಮತ್ವಾದಿ ತತ್ವಗಳಿಗೆ ವಿರುದ್ಧವಾಗಿರದಿದ್ದರೆ ವಿಷ್ಣುವಿಗೆ ಅಪಕರ್ಷ ವನ್ನು ಹೇಳದಿದ್ದರೆ ಆ ಅಂಶದಲ್ಲಿ ಪ್ರಮಾಣವಾಗಿರುತ್ತವೆ.

ಪ್ರಮಾಣ ಮೂರ್ಧನ್ಯವಾದ ವೇದವು ಅಪೌರುಷೇಯವೂ ನಿತ್ಯವೂ ಆಗಿದೆ.

ನೈಯಾಯಿಕರು ವೇದವು ಈಶ್ವರ ಕರ್ತೃಕ ಎಂದು ಹೇಳುವರು. ಆದರೆ ಸ್ವತಃ ಆ ಈಶ್ವರ ಗೀತೆಯಲ್ಲಿ "ವೇದಾಂತ ಕೃದ್ ವೇದ ವಿದೇವ ಚಾಹಂ" ಎಂಬ ವಚನದಿಂದ ಈಶ್ವರನಾದ ನಾನು ವೇದಾಂತವನ್ನು ರಚಿಸಿದ್ದೇನೆ. ವೇದಗಳನ್ನು ತಿಳಿದಿದ್ದೇನೆ. ಎಂದು ಸ್ಪಷ್ಟವಾಗಿ ಹೇಳಿದ್ದಾನೆ. 'ವೇದಾಂತಕೃತ್' ಎಂದು ಹೇಳಿದಂತೆ 'ವೇದಕೃತ್' ಎಂದು ಮಾತ್ರ ಎಲ್ಲಿಯೂ ಹೇಳಲಿಲ್ಲ. ಮತ್ತು ಆ ವೇದಗಳು ನಿತ್ಯವಾಗಿವೆ ಎಂಬುದು ಶ್ರುತಿ ಪ್ರಮಾಣಬದ್ಧವೂ ಮತ್ತು ಶತಪ್ರಮಾಣ ಸಿದ್ಧವೂ ಆಗಿದೆ.

" ವಾಗ್ವಾವನಿತ್ಯಾ ನಹ್ಯೇಷೋತ್ಪದ್ಯತೇ ಅಸ್ಯಾಂ ಹಿ ಶ್ರುತಿರವತಿಷ್ಠತಿ "

ವೇದವಾಣಿಯು ನಿತ್ಯವಾಗಿದ್ದು ಅದೂ ಎಂದೂ ಹುಟ್ಟಲಾರದು.

" ನಿತ್ಯಾ ವೇದಾಸ್ಸಮಸ್ತಾಶ್ಚ ಶಾಶ್ವತಾ ವಿಷ್ಣು ಬುದ್ಧಿಗಾಃ "

ವೇದಗಳು ನಿತ್ಯವಾಗಿವೆ. ಅವುಗಳ ಆನುಪೂರ್ವಿಯೂ ಇನಿತೂ ಬದಲಾಗದು. ಅವು ಯಾವಾಗಲೂ ವಿಷ್ಣುವಿನ ಬುದ್ಧಿಗೆ ಗೋಚರವಾಗಿರುತ್ತವೆ.

" ಶ್ರುತಿರ್ವಾವನಿತ್ಯಾ ಅನಿತ್ಯಾ ವಾ ಸ್ಮೃತಯಃ ಯಾಶ್ಚಾನ್ಯಾ ವಾಚಃ "

ಶ್ರುತಿಯು ನಿತ್ಯ, ಸ್ಮೃತಿಗಳೂ ಇತರ ವಾಕ್ಯಗಳೂ ಅನಿತ್ಯ.

" ತಸ್ಮೈನೂನಮಭಿದ್ಯವೇ ವಾಚಾ ವಿರೂಪನಿತ್ಯಯಾ
ವೃಷ್ಣೇ ಚೋಧಸ್ವ ಸುಷ್ಟುತಿಮ್ "

ಸೂರ್ಯಾದಿ ಪ್ರಕಾಶಕನೂ ಇಷ್ಟಾರ್ಥಪ್ರದನೂ ಆದ ಆ ಪರಮೇಶ್ವರನನ್ನು ನಿತ್ಯವಾದ ವೇದವಚನದಿಂದ ಸ್ತೋತ್ರ ಮಾಡು.

" ನಿತ್ಯಯಾ ನಿತ್ಯಯಾ ಸ್ತೌಮಿ ಬ್ರಹ್ಮ ತತ್ಪರಮಂ ಪದಂ
ನಿತ್ಯಯಾ ನಿತ್ಯಯಾ ಸ್ತೌಮಿ ಪರಮಾತ್ಮಾನ ಮಚ್ಯುತಮ್ "

ನಾಶರಹಿತನೂ ಗುಣ ಪರಿಪೂರ್ಣನೂ ಮುಕ್ತ ಪ್ರಾಪ್ಯನೂ ಮತ್ತು ಸರ್ವ ಶ್ರೇಷ್ಠನೂ ಆದ ಆ ಪರಮಾತ್ಮನನ್ನು ನಿತ್ಯವಾದ ವೇದಗಳಿಂದ ಸ್ತುತಿಸುತ್ತೇನೆ ಎಂದು ಮುಂತಾಗಿ ಅನೇಕ ಶ್ರುತಿ ಸ್ಮೃತಿ ವಚನಗಳು ವೇದಗಳಿಗೆ ನಿತ್ಯತ್ವವನ್ನೂ ಅಪೌರುಷೇಯತ್ವವನ್ನೂ ನಿಸ್ಸಂದಿಗ್ಧವಾದ ಶಬ್ದಗಳಲ್ಲಿ ಪ್ರತಿಪಾದಿಸಿರುತ್ತವೆ.

ಪೌರುಷೇಯವಾದ ಮಹಾಭಾರತವು ಸಾಕ್ಷಾತ್ ಪರಬ್ರಹ್ಮಾವತಾರಿಗಳಾದ ಭಗವಾನ್ ಶ್ರೀ ವೇದವ್ಯಾಸರಿಂದ ವಿರಚಿತವಾದದ್ದರಿಂದ ಪರಮ ಪ್ರಮಾಣವಾಗಿದೆ.

" ಕೃಷ್ಣ ದ್ವೈಪಾಯನಂ ವಿದ್ಧಿ ಸಾಕ್ಷಾತ್ ನಾರಾಯಣಂ ಪ್ರಭುಂ "

" ಕೋಹ್ಯನ್ಯಃ ಪುಂಡರೀಕಾಕ್ಷಾತ್ ಮಹಾಭಾರತ ಕೃದ್‌ಭವೇತ್ "

" ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್
ಉತ್ಸನ್ನಾನ್ ಭಗವಾನ್ ವೇದಾನ್ ಉಜ್ಜಹಾರ ಹರಿಃಸ್ವಯಂ"

ಎಂದು ಮುಂತಾದ ಅನೇಕ ಪ್ರಮಾಣ ವಚನಗಳಿಂದ ಸಾಕ್ಷಾತ್ ಶ್ರೀ ವಿಷ್ಣುವೇ ವೇದವ್ಯಾಸರೂಪದಿಂದ ಜ್ಞಾನ ಕಾರ್ಯಾರ್ಥವಾಗಿ ಅವತಾರವನ್ನು ಮಾಡಿ ಬ್ರಹ್ಮ ಸೂತ್ರಗಳನ್ನು ರಚಿಸಿದನು. ವೇದಗಳನ್ನು ವಿಭಜಿಸಿದನು. ಮಹಾಭಾರತವನ್ನು ನಿರ್ಮಿಸಿದನು. ಸಾಕ್ಷಾತ್ ಶ್ರೀ ಹರಿಯಿಂದಲೇ ಮಾಡಲ್ಪಟ್ಟದ್ದರಿಂದ ಮಹಾಭಾರತವು ವೇದ ಸಮಾನ ಅಥವಾ ಐನೆಯ ವೇದ ಎಂದು ಮನುಮಹರ್ಷಿಯು—

" ಇತಿಹಾಸಃ ಪಂಚಮೋವೇದಾನಾಂ ವೇದಃ "

ಎಂದು ಸಾರಿದ್ದಾನೆ. ವೇದಗಳಿಗಿಂತ ಒಂದು ತೂಕ ಹೆಚ್ಚು ಮಹಾಭಾರತ, ಎಂದು ಸರ್ವಜ್ಞರ ಅಭಿಪ್ರಾಯ.

ಇದೇ ಅಭಿಪ್ರಾಯವನ್ನು ಭಾರತದ ವಿಷಯದಲ್ಲಿ ಆಚಾರ್ಯರು ತಮ್ಮ ಗೀತಾ ತಾತ್ಪರ್ಯ ಗ್ರಂಥದಲ್ಲಿ—

" ಸ್ವಯಂ ನಾರಾಯಣೋದೇವೋ ಬ್ರಹ್ಮರುದ್ರೇಂದ್ರ ಪೂರ್ವಕೈಃ
ಅರ್ಥಿತೋ ವ್ಯಾಸತಾಂ ಪ್ರಾಪ್ಯ ಕೇವಲಂ ತತ್ವ ನಿರ್ಣಯಂ
ಚಕಾರ ಪಂಚಮಂ ವೇದಂ ಮಹಾಭಾರತ ಸಂಜ್ಞಿತಮ್ "

ಬ್ರಹ್ಮ ರುದ್ರಾದಿ ದೇವತೆಗಳಿಂದ ಪ್ರಾರ್ಥಿತನಾಗಿ ಶ್ರೀಮನ್ನಾರಾಯಣನು ವ್ಯಾಸ ರೂಪದಿಂದ ಅವತರಿಸಿ ತತ್ವನಿರ್ಣಾಯಕವಾದ ಮಹಾಭಾರತ ಎಂಬ ಹೆಸರಿನ ಐದನೇಯ ವೇದವನ್ನು ರಚಿಸಿದನು. ಎಂದು ಮಹಾಭಾರತದ ಮಹತಿಯನ್ನು ನಿರೂಪಿಸಿದ್ದಾರೆ.

'' ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃಸ್ವಯಂ ''

ಎಂದು ಪುರಾಣ ವಚನ ಪ್ರಮಾಣವಿದ್ದುದರಿಂದ ಪಂಚರಾತ್ರಾಗಮವೆಲ್ಲವೂ ಪ್ರಮಾಣವೆಂದು ಒಪ್ಪಿಕೊಳ್ಳಬೇಕು. ಇದರಂತೆ ಮೂಲ ರಾಮಾಯಣವಾದರೂ ಮಹಾ ಪ್ರಮಾಣವಾಗಿದೆ, ಹಾಗೂ ಅದೇ ವೇದವ್ಯಾಸ ದೇವರು ರಚಿಸಿದ ಬ್ರಹ್ಮ ಸೂತ್ರಗಳು ಪರಮ ಪ್ರಮಾಣವಾಗಿವೆ.

ವೇದ, ಪುರಾಣ, ಸ್ಮೃತಿ, ಇತಿಹಾಸ ಮುಂತಾದ ಸರ್ವ ಪ್ರಮಾಣ ಗ್ರಂಥಗಳ ನಿರ್ಣಾಯಕ ಶಾಸ್ತ್ರವಾದುದರಿಂದ ಬ್ರಹ್ಮ ಸೂತ್ರಗಳು ಅತ್ಯುತ್ತಮ ಪ್ರಮಾಣವಾಗಿರುತ್ತವೆ. ಇದನ್ನೇ ಆಚಾರ್ಯರು ಅನುವ್ಯಾಖ್ಯಾನದಲ್ಲಿ,

" ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಿ ಭವ ಪೂರ್ವಕೈಃ |
ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರ ಮನುತ್ತಮಮ್
... .... ... .... ... .... ... .... ...
ಅತಸ್ತದುದಿತಂಮಾನ ಮಜಾದಿಭ್ಯಸ್ತದರ್ಥತಃ
... ... .... .... ... ...

'' ಅತೋಽನ್ಯೈತಾದೃಶಂ ಕಿಂಚಿತ್ ಪ್ರಮಾಣ ತಮಮಿಷ್ಯತೇ ''

ಎಂಬ ವಚನಗಳಿಂದ ಭಗವಾನ್ ಶ್ರೀ ಹರಿಯು ರಚಿಸಿದ ಈ ಬ್ರಹ್ಮ ಮೀಮಾಂಸಾ ಶಾಸ್ತ್ರದಂತಹ ಮಹಾ ಪ್ರಮಾಣವೇ ಬೇರೊಂದಿಲ್ಲವೆಂದು ಹೇಳಿದ್ದಾರೆ.

ವೇದಗಳಿಗೆಲ್ಲ ಕರ್ಮ, ದೇವತಾ, ವಿಷ್ಣು ಹೀಗೆ ಮೂರು ಬಗೆಯಾಗಿ ಅರ್ಥವಿದೆ. ಮಹಾ ಭಾರತಕ್ಕೆ ಹತ್ತು ಅರ್ಥ. ವಿಷ್ಣು ಸಹಸ್ರ ನಾಮಕ್ಕೆ ನೂರು ಅರ್ಥ ಎಂದು ಆಚಾರ್ಯರು,

" .... ....ತ್ರ್ಯರ್ಥತಾಂ ಶ್ರುತಿಷುವಿತ್ತ, ದಶಾರ್ಥಂ |
ಭಾರತಂನನು, ಶತಾರ್ಥಮಪಿಸ್ಯಾದ್ ವೈಷ್ಣವಂ ಪದ ಸಹಸ್ರತಯಂ ಹಿ ||

ಎಂದು ಮಧ್ವ ವಿಜಯದಲ್ಲಿ ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದನ್ನು ತಿಳಿಸಿದ್ದಾರೆ.

ಮಧ್ವ ಮತದಲ್ಲಿ ಪ್ರಮಾಣ ಮೂರಾದರೆ, ಅದ್ವೈತದಲ್ಲಿ ಆರು.

' ತಾನಿಪ್ರಮಾಣಾನಿ ಷಟ್ '

ಪ್ರತ್ಯಕ್ಷ, ಅನುಮಾನ, ಉಪಮಾನ, ಆಗಮ, ಅರ್ಥಾಪತ್ತಿ, ಅನುಪಲಬ್ಧಿ ಬೇದಾತ್" ಎಂದು.

ಈ ಉಪಮಾನ, ಅರ್ಥಾಪತ್ತಿ, ಅನುಪಲಬ್ಧಗಳು ಮತ್ತು ಇತರ ವಾದಿಗಳು ಹೇಳುವ ಬೇರೆ ಪ್ರಮಾಣಗಳು ಪ್ರತ್ಯಕ್ಷಾನುಮಾನಗಳಲ್ಲಿಯೇ ಅಂತರ್ಗತ ವಾಗುವದರಿಂದ ಅವು ಪ್ರತ್ಯೇಕ ಪ್ರಮಾಣ ಎಂದು ಒಪ್ಪುವ ಆವಶ್ಯಕತೆ ಇಲ್ಲ ಎಂದು ಆಚಾರ್ಯರು ತಿಳಿಸಿದ್ದಾರೆ ಅನುವ್ಯಾಖ್ಯಾನ ಭಕ್ತಿಪಾದದಲ್ಲಿ,

" ಅರ್ಥಾಪತ್ತ್ಯುಪಮಾ ಭಾವಾ ಅನುಮಾಂತರ್ಗತಾಃ ಕ್ವಚಿತ್ "

ಶಂಕರಾಚಾರ್ಯರೊಬ್ಬರನ್ನು ಬಿಟ್ಟು ಉಳಿದ ದಾರ್ಶನಿಕ ಆಚಾರ್ಯರೆಲ್ಲರೂ ಪ್ರಮಾಣ ಮೂರೇ ಎಂದು ಹೇಳಿ ಅರ್ಥಾಪತ್ತ್ಯಾದಿಗಳಿಗೆ ಇತರ ಪ್ರಮಾಣಗಳಲ್ಲಿಯೇ ಅಂತರ್ಭಾವವನ್ನು ಹೇಳಿದ್ದಾರೆ.

" ಉಪಮಾದೀನಾಂ ಚ ಅತ್ರೈವ ಅಂತರ್ಭಾವಾತ್ ನ ಪಾರ್ಥಕ್ಯಂ "

(ನಿಂಬಾರ್ಕಾಚಾರ್ಯರ ವೇದಾಂತರತ್ನ ಮಂಜೂಷಾ)

ರಾಮಾನುಜಾಚಾರ್ಯರೂ ಪ್ರಮಾಣತ್ರೈವಿಧ್ಯವಾದಿಗಳೇ.

ವಿಚಾರವಂತರಾದ ಎಲ್ಲ ಮತಾಚಾರ್ಯರೂ

" ಅಕ್ಷಾದಿ ತ್ರಿತಯಂ ಪ್ರಮಾಣಮ್ "

ಎಂಬ ಮಧ್ವ ಸೂಕ್ತಿಗೆ ಸಮ್ಮತಿಯನ್ನು ಶ್ರುತಿ ಸ್ಮೃತಿ ಸಿದ್ಧವಾದುದರಿಂದ ಕೊಡಲೇಬೇಕಾಗುತ್ತದೆ.

(೯)

# " ಅಖಿಲಾಮ್ನಾಯೈಕವೇದ್ಯೋಹರಿಃ "

## ಸರ್ವ ವೇದಗಳಿಂದ ಶ್ರೀ ಹರಿಯೇ ಪ್ರತಿಪಾದ್ಯ

ವೇದವೂ ವೇದಾನುಸಾರಿಯಾದ ಉಳಿದ ಪೌರುಷೇಯ ಆಗಮಗಳೂ ಪ್ರಮಾಣವಾದ ಬಳಿಕ ಈ ಎಲ್ಲ ನಿಗಮಾಗಮಗಳಿಂದ ಪ್ರತಿಪಾದ್ಯವಾದ ದೇವತೆ ಯಾರು ಎಂದು ಶಂಕೆ ಬಂದರೆ ಅದಕ್ಕೆ ಮಧ್ವಾಚಾರ್ಯರ ಉತ್ತರ

" ಅಖಿಲಾಮ್ನಾಯೈಕವೇದ್ಯೋಹರಿಃ "

ಸಕಲ ವೇದ ಶಾಸ್ತ್ರಗಳು ಆ ಹರಿಯ ಮಹಾಮಹಿಮೆಯನ್ನು ತಿಳಿಸಲಿಕ್ಕಾಗಿಯೇ ಹೊರಟಿರುತ್ತವೆ. ವೇದ ವಚನಗಳು ಮುಖ್ಯ ವೃತ್ತಿಯಿಂದ ಕರ್ಮವನ್ನೂ ಉಳಿದ ಇಂದ್ರಾದಿ ದೇವತೆಗಳನ್ನೂ ಪ್ರತಿಪಾದಿಸಿದರೂ ಪರಮ ಮುಖ್ಯ ವೃತ್ತಿಯಿಂದ ಶ್ರೀ ಹರಿಯನ್ನು ಮಾತ್ರ ಪ್ರತಿಪಾದಿಸುತ್ತವೆ. ಅಮುಖ್ಯ ವೃತ್ತಿಯಿಂದ ಉಳಿದುದನ್ನು ಹೇಳುತ್ತವೆ. ಮುಖ್ಯವೃತ್ತಿ, ವಿದ್ವದ್ರೂಢಿ ಮಹಾ ತಾತ್ಪರ್ಯಗಳಿಂದ ಸಕಲ ವೈದಿಕ ಶಬ್ದಗಳೂ ಸಾಕ್ಷಾತ್ ಶ್ರೀಮನ್ನಾರಾಯಣನನ್ನೇ ಪ್ರತಿಪಾದಿಸುತ್ತವೆ. ಭಗವದ್ಗೀತೆಯಲ್ಲಿ

'' ವೇದೈಶ್ಚ ಸರ್ವೈರಹಮೇವ ವೇದ್ಯೋ "

ಎಲ್ಲ ವೇದಗಳಿಂದಲೂ ನಾನೇ ಪ್ರತಿಪಾದ್ಯ ಎಂದು ಕೃಷ್ಣನು ಕಂಠರವೇಣ ಹೇಳಿದ್ದಾನೆ.

'' ನಾರಾಯಣಪರಾ ವೇದಾಃ ''

ಎಂದು ಶ್ರುತಿಯು ಸಾರುತ್ತದೆ.

" ಸರ್ವೇ ವೇದಾ ಯತ್ಪದ ಮಾಮನಂತಿ " (ಕಠೋಪನಿಷತ್)

ಎಲ್ಲ ವೇದಗಳೂ ಆ ಭಗವಂತನ ಸ್ವರೂಪವನ್ನೇ ತಿಳಿಸಿಕೊಡುತ್ತವೆ.

" ಸರ್ವೇ ವೇದಾ ಯುಕ್ತಯಃ ಸುಪ್ರಮಾಣಾ ಬ್ರಾಹ್ಮಂ ಜ್ಞಾನಂ
ಪರಮಂ ತ್ವೇಕಮೇವ ।
ಪ್ರಕಾಶಯಂತೆ ನ ವಿರೋಧಃ ಕುತಶ್ಚಿದ್ವೇದೇಷು ತಥೇತಿಹಾಸೇ ॥
(ಪೈಂಗಿಶ್ರುತಿ)

ಎಲ್ಲ ವೇದಗಳೂ, ವೇದಾನುಗ್ರಹೀತವಾದ ಯುಕ್ತಿಗಳೂ ಶ್ರೀ ವಿಷ್ಣುವೇ ಸರ್ವೋತ್ತಮ ಎಂಬ ಏಕ ವಿಧವಾದ ಬ್ರಹ್ಮಜ್ಞಾನವನ್ನು ಪ್ರಕಾಶಗೊಳಿಸುತ್ತವೆ. ಆದುದರಿಂದ ಎಲ್ಲಿಯೂ ವೇದವಚನಗಳಲ್ಲಿಯೂ ಇತಿಹಾಸ ಪುರಾಣ ಗಳಲ್ಲಿಯೂ ಪರಸ್ಪರ ವಿರೋಧವಿಲ್ಲ.

" ನ ಚ ಕೇವಲ ತರ್ಕೇಣ ನಾಕ್ಷಜೇನ ಚ ಕೇನಚಿತ್ ।
ಕೇವಲಾಗಮ ವಿಜ್ಞೇಯೋ ಭಕ್ತೈರೇವ ನ ಚಾನ್ಯಥಾ ॥

ಬರೀ ಶುಷ್ಕ ತರ್ಕದಿಂದಾಗಲಿ ಪ್ರತ್ಯಕ್ಷದಿಂದಾಗಲಿ ಅಥವಾ ಬೇರಾವದರಿಂದಾಗಲಿ ಅವನನ್ನು ತಿಳಿಯಲಿಕ್ಕೆ ಶಕ್ಯವಿಲ್ಲ. ಕೇವಲ ವೇದಗಳಿಂದ ಮಾತ್ರ ಭಕ್ತರಾದವರು ಮಾತ್ರ ಅವನನ್ನು ತಿಳಿಯಬಲ್ಲರು.

" ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಸ್ತಥೈವಚ
ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷ ಕೋಟಿ ಶತೈರಪಿ "
(ವರಾಹ ಪುರಾಣ)

ವೇದ ಪಂಚರಾತ್ರಾಗಮಗಳಲ್ಲಿ ಹೇಳಿದಂತೆ ತಿಳಿದುಕೊಂಡು ಭಕ್ತಿಯಿಂದ ನನ್ನನ್ನು ಭಜಿಸಿ ಪೂಜಿಸಿದರೆ ಮಾತ್ರ ನಾನು ದರ್ಶನವೀಯುತ್ತೇನೆ.

" ನತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ
ಯಾದೃಶೀ ಸ್ಯಾತ್ ।
ತತ್ಪ್ರೀಣನಾತ್ ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ
ಸರ್ವ ಏವ ॥
(ಸೌಪರ್ಣಶ್ರುತಿ)

ಸರ್ವ ದೇವತೆಗಳಿಂದ ಹೊಗಳಲ್ಪಡುವ ವಿಷ್ಣುವಿನ ಗುಣಪೂರ್ಣತೆಯನ್ನು ತಿಳಿದ ಜ್ಞಾನಿಯ ಮೇಲೆ ಇರುವಷ್ಟು ಪ್ರೀತಿಯು ಆ ಪರಮಾತ್ಮನಿಗೆ ಬೇರಾರ ಮೇಲೆಯೂ ಇರುವದಿಲ್ಲ. ಆ ಭಗವಂತನು ಪ್ರೀತನಾದರೆ ಅದರಿಂದಲೇ ಮೋಕ್ಷವಾಗುವದು. ಆದುದರಿಂದಲೇ ಎಲ್ಲ ವೇದಗಳೂ ಆ ಜಗದೀಶ್ವರನ ಗುಣಗಾಯನವನ್ನೇ ಮಾಡುತ್ತಲಿವೆ.

ಇವಲ್ಲದೇ

" ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ
ಪರಮ ಮುದಾಹರಂತಿ । "

" ವೇದೇ ರಾಮಾಯಣೇಚೈವ ಪುರಾಣೇ ಭಾರತೇ ತಥಾ
ಆದಾವಂತೇಚ ಮಧ್ಯೇಚ ವಿಷ್ಣುಸ್ಸರ್ವತ್ರಗೀಯತೇ ॥ "

" ವಾಸುದೇವಪರಾವೇದಾಃ ॥ "

" ನಾನಾವೇದ್ಯೈರಿತಿ ಹಾಸ್ಯೈಃ ಪುರಾಣೈ ಸುಜ್ಞೇಯ ಏಕೋ
ಭಗವಾನ್ ಯುಕ್ತಿಭಿಶ್ಚ "

ಮುಂತಾದ ಅನೇಕಾನೇಕ ಪ್ರಮಾಣ ವಚನಗಳು ಆ ಭಗವಂತನಿಗೆ ವೇದೈಕ ವೇದ್ಯತ್ವವನ್ನು ನಿರೂಪಿಸುತ್ತವೆ.

ವೇದೈಕವೇದ್ಯ ಅಥವಾ ಆಮ್ನಾಯೈಕವೇದ್ಯ ಎನ್ನುವ ಮಾತಿಗೆ ಎರಡು ಅರ್ಥ. ಎಲ್ಲ ವೇದಗಳಿಂದ ಅವನೇ ವೇದ್ಯ ಮತ್ತು ಅವನು ವೇದಗಳಿಂದ ಮಾತ್ರ ವೇದ್ಯ ಎಂದು. ಎಲ್ಲ ವೇದಗಳೂ ಅವನನ್ನೇ ಬೋಧಿಸಹೊರಟಿವೆ ಎನ್ನುವದಕ್ಕೆ ಈವರೆಗೆ ಅನೇಕ ಪ್ರಮಾಣಗಳನ್ನು ಹೇಳಿದ್ದಾಯಿತು.

ವೇದಗಳಿಂದಲೇ ಅವನು ವೇದ್ಯ ಎನ್ನುವದನ್ನೂ ಆಚಾರ್ಯರು ತಮ್ಮ ಗ್ರಂಥ ಗಳಲ್ಲಿ ಸಿದ್ಧ ಮಾಡಿದ್ದಾರೆ.

ಪ್ರತ್ಯಕ್ಷವು ಅವನನ್ನು ತೋರಿಸಿಕೊಡಲಿಕ್ಕೆ ಸಮರ್ಥವಾಗಲಾರದು. ಆದುದ ರಿಂದಲೇ ಪರಮಾತ್ಮನು ಅರ್ಜುನನಿಗೆ,

" ದಿವ್ಯಂ ದದಾಮಿ ತೇ ಚಕ್ಷುಃ "

ಎಂದು ತನ್ನ ಯೋಗ ಬಲದಿಂದ ದಿವ್ಯ ದೃಷ್ಟಿಯನ್ನು ಕೊಟ್ಟೇ ತನ್ನ ರೂಪ ವನ್ನು ಕಾಣಿಸಬೇಕಾಯಿತು. ಇಂದ್ರಾವತಾರಿಯಾದ ಅರ್ಜುನನಿಗೇ ಕಾಣಿಸದಿದ್ದ ಬಳಿಕ ನಮ್ಮಂಥ ಪಾಮರರ ಪ್ರತ್ಯಕ್ಷಕ್ಕೆ ಭಗವಂತನು ಗೋಚರನಾಗಲಾರ.

" ನೈಷಾತರ್ಕೇಣ ಮತಿರಾಪನೇಯಾ "

ಎಂಬ ಶ್ರುತಿಯು ಪರಮಾತ್ಮನು ಅನುಮಾನದಿಂದಲೂ ಗಮ್ಯನಲ್ಲ ಎಂದು ಸಾರುತ್ತದೆ.

" ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ "

ಎಂದು ಮತ್ತೊಂದು ಪ್ರಮಾಣ ವಚನವು ಪರಮಾತ್ಮನಿಗೆ ಚಕ್ಷುರಾದ್ಯಗೋಚ ರತ್ವವನ್ನು ಸ್ಪಷ್ಟಪಡಿಸುತ್ತದೆ.

ಪಿಪ್ಪಲಾದ ಶ್ರುತಿಯು ಇದೇ ಮಾತನ್ನೇ ಇನ್ನೂ ಸ್ಪಷ್ಟವಾಗಿ

" ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೈನಂ ವೇದಯಂತಿ ''

ಇಂದ್ರಿಯಗಳಾಗಲಿ ಅನುಮಾನವಾಗಲಿ ಆ ಪರಮಾತ್ಮನನ್ನು ತಿಳಿಸಿಕೊಡಲಾರವು. ವೇದಗಳೇ ಅವನನ್ನು ತಿಳಿಸಿಕೊಡುತ್ತವೆ. ಆ ಪರಮಾತ್ಮನನ್ನು

" ವೇದಯಂತಿ ಇತಿ ವೇದಾಃ "

ತಿಳಿಸಿಕೊಡುತ್ತವೆ ಎಂದೇ ಅವುಗಳಿಗೆ ವೇದ ಎಂಬ ಅನ್ವರ್ಥಕ ಹೆಸರಿದೆ.

ಬಾದರಾಯಣರ ಬ್ರಹ್ಮಮೀಮಾಂಸಾ ಶಾಸ್ತ್ರದ

'' ಶಾಸ್ತ್ರಯೋನಿತ್ವಾತ್ '

ಎಂಬ ಮೂರನೇ ಸೂತ್ರದಲ್ಲಿ ವೇದ ಶಾಸ್ತ್ರಗಳೇ ಆ ಪರಮಾತ್ಮನ ಜ್ಞಪ್ತಿಗೆ ಮುಖ್ಯ ಕಾರಣ ಎಂದು ಪ್ರತಿಪಾದಿಸಿದ್ದಾರೆ.

ಇಂಥ ಪರಮಪ್ರಮಾಣಭೂತವಾದ ದಿವ್ಯವಾದ ವೇದಜ್ಞಾನವಿಲ್ಲದೇ ಪರಮಾತ್ಮನ ಜ್ಞಾನವಾಗಲಿ, ಪ್ರಸಾದವಾಗಲಿ, ಮೋಕ್ಷವಾಗಲಿ ಆಗಲಾರದು.

" ನಾವೇದ ವಿನ್ಮನುತೇ ಇದಂ ಬೃಹಂತಂ ಆತ್ಮಾನಂ ಸಾಂಪರಾಯೇ ''

"ವೇದವನ್ನು ಅರಿಯದವನು ಗುಣಪರಿಪೂರ್ಣನೂ ಸರ್ವತ್ರ ವ್ಯಾಪ್ತನೂ ಆದ ಪರಮಾತ್ಮನನ್ನು ತಿಳಿಯಲಾರನು." ಎಂದು ಮುಂತಾಗಿ ಅನೇಕ ಪ್ರಮಾಣ ವಚನಗಳಿದ್ದುದರಿಂದ ವೇದಶಾಸ್ತ್ರಗಳನ್ನು ಓದಿ ಆ ಪರಮಾತ್ಮನ ಜ್ಞಾನವನ್ನು ಮಾಡಿಕೊಂಡು ಅದರಂತೆ ಉಪಾಸನೆ ಮಾಡಿ ಅವನ ಅನುಗ್ರಹದಿಂದ ಪ್ರಸಾದವನ್ನು ಪಡೆದು ಮೋಕ್ಷವನ್ನು ಹೊಂದಬೇಕು. ''

ದೇವಾಧಿ ದೇವತೆಗಳೂ ಕೂಡ ಮುಖ್ಯ ಪ್ರಾಣದೇವರ ಈ ದ್ವೈತ ತತ್ವೋಪದೇಶದಿಂದಲೇ ಮೋಕ್ಷವನ್ನು ಹೊಂದುವರು. ಎಲ್ಲ ದೇವತೆಗಳಿಗೂ ಸ್ವೋತ್ತಮ ದೇವತೆಗಳಲ್ಲಿ ಲಯವಾಗುತ್ತ ವಾಯು ಬ್ರಹ್ಮದ್ವಾರಾ ಲಕ್ಷ್ಮೀದೇವಿಯ ದಯೆಯಿಂದ ಮುಕ್ತಿಯಾಗುವದು. ನಿತ್ಯ ಮುಕ್ತಳಾದ ಶ್ರೀ ದೇವಿಗೆ ಮಾತ್ರ ಲಯವಿಲ್ಲ. ಅವಳು ಶ್ರೀ ಹರಿಗೆ ಸಮವ್ಯಾಪ್ತಳು. ಅವಳಿಗೆ ಲಯವೆಂದರೆ ನಿರಂತರ ಭಗವಲ್ಲೀನ ಪ್ರಕೃತಿಕಳಾಗಿ ವಿಭುವಾಗಿ ಇರುವದೆಂದು ಅರ್ಥ. ಎಂದು ಆನಂದತೀರ್ಥರು ದಿವ್ಯ ಸಂದೇಶವನ್ನು ಮಾನವರಿಗೆಲ್ಲ ನೀಡಿದ್ದಾರೆ.



# "ವೇದಶಾಸ್ತ್ರಾತ್ ಪರಂನಾಸ್ತಿ"

ಅನುಗ್ರಹಿಸಿದವರು :

**ಶ್ರೀ ಭಂಡಾರಕೇರಿ ಮಠಾಧೀಶರಾದ**

**ಶ್ರೀ ೧೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಗಳವರು**



ತತ್ತ್ವವಾದಿಗಳ ಸಿದ್ಧಾಂತದಲ್ಲಿ ವೇದವು ಸತ್ಯವು ಮತ್ತು ಅನಾದಿ ನಿತ್ಯವು. ವೇದಮೂಲಕವಾದ ಜ್ಞಾನವೆಲ್ಲವೂ ಪ್ರಮಾಣವು. ವೇದಗಳಲ್ಲಿರುವ ಸ್ಪಷ್ಟವಚನಗಳಿಂದ ವೇದವು ನಿತ್ಯವೆಂದು ಸಿದ್ಧಿಸುತ್ತದೆ.

"ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ।
ವೃಷ್ಣೇ ಚೋದಸ್ವ ಸುಷ್ಟುತಿಂ ॥"

ಈ ವೇದ ವಾಕ್ಯದ ಅರ್ಥ— ಹೇ ವಿರೂಪ = ವಿರೂಪನೆಂಬ ಮುನಿಯೇ, ನಿತ್ಯಯಾ ವಾಚಾ=ನಿತ್ಯ ವಾಕ್ಯದಿಂದ, ಅಭಿದ್ಯವೇ=ಸರ್ವತ್ರ ಪ್ರಕಾಶಮಾನವಾದ, ವೃಷ್ಣೇ = ಅಭೀಷ್ಟಗಳನ್ನು ವರ್ಷಿಸುವ, ತಸ್ಮೈ = ಆ ಪರಮಾತ್ಮನಿಗೋಸ್ಕರ, ಸುಷ್ಟುತಿಂ=ಉತ್ತಮ ಸ್ತುತಿಯನ್ನು, ಚೋದಸ್ವ=ಮಾಡು. ಈ ಮಂತ್ರದ ಆಧಾರದಿಂದ ಪರಮಾತ್ಮನನ್ನು ಸ್ತೋತ್ರಮಾಡುವ ನಿತ್ಯ ವಾಕ್ಯವು ಇದೆ ಎಂದು ಸಿದ್ಧವಾಗುತ್ತದೆ. ಇಡೀ ವಿಶ್ವದಲ್ಲಿ ಕರ್ತೃಪ್ರಸಿದ್ಧಿ ಇಲ್ಲದ ದೇವರ ಸ್ತೋತ್ರವನ್ನು ಮಾಡುವಂಥಾ ವಾಕ್ಯವು ವೇದದ ಹೊರತು ಇನ್ನು ಯಾವುದೂ ಇಲ್ಲ. ಆದ್ದರಿಂದ ವೇದವು ನಿತ್ಯ ವಾಕ್ಯವು ಎಂದು ಮಂತ್ರದಿಂದ ಸಿದ್ಧವಾಗುತ್ತದೆ.

"ಸಹಸ್ರಧಾ ಮಹಿಮಾನಃ ಸಹಸ್ರಂ ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್
ಕಶ್ಛಂದಸಾಂ ಯೋಗಮಾವೇದ ಧೀರಃ ಕೋ ಧಿಷ್ಣ್ಯಾಂ ಪ್ರತಿವಾಚಂ ಪಪಾದ ॥"

ಇದರ ಅರ್ಥ— ಮಹಿಮಾನಃ = ಪರಬ್ರಹ್ಮನ ಮಹಿಮೆಗಳು, ಸಹಸ್ರಧಾ = ಅನಂತ ಪ್ರಕಾರವಾಗಿ ಇವೆ. ಸಹಸ್ರಂ= ಆ ಅನಂತ ಮಹಿಮೆಗಳಲ್ಲಿ ಒಂದೊಂದೂ ಅನಂತವಾಗಿ ಇವೆ. ಬ್ರಹ್ಮ=ಪರಬ್ರಹ್ಮನು, ಯಾವತ್=ಎಷ್ಟು ಕಾಲದಲ್ಲಿ, ವಿಷ್ಠಿತಂ=

ಇರುವನೋ, ತಾವತೀ=ಅಷ್ಟು ಕಾಲದಲ್ಲಿ ಇರತಕ್ಕದ್ದು, ವಾಕ್=ವೇದವಾಕ್ಯವು, ಛಂದಸಾಂ=ವೇದಗಳ, ಯೋಗಂ=ಅರ್ಥವನ್ನು, ಕಃ=ಯಾರು, ಆವೇದ=ಸಂಪೂರ್ಣ ವಾಗಿ ತಿಳಿದಿದ್ದಾರೆ, ಕಃ=ಯಾರು, ಧಿಷ್ಣ್ಯಂ=ಅರ್ಥಜ್ಞಾನಪೂರ್ವಕವಾಗಿ, ವಾಚಂ= ವೇದ ವಾಕ್ಯವನ್ನು, ಪ್ರತಿಪಪಾದ=ರಚಿಸಿದರು ! ಈ ವೇದ ಮಂತ್ರದ ಆಧಾರದಿಂದ ಪರಬ್ರಹ್ಮನು ಇರುವಷ್ಟು ಕಾಲದಲ್ಲಿ ಆ ಪರಬ್ರಹ್ಮನನ್ನು ಪ್ರತಿಪಾದಿಸುವ ವೇದಗಳು ಇವೆ ಎಂದು ಸಿದ್ಧವಾಗುತ್ತದೆ. ಮತ್ತು ವೇದವು ಯಾರಿಂದಲೂ ಮಾಡಲ್ಪಟ್ಟದ್ದು ಅಲ್ಲ ಎಂಬ ವಿಷಯದಲ್ಲಿ ಒಂದು ಯುಕ್ತಿಯೂ ಕೂಡಾ ಈ ಮಂತ್ರದಿಂದ ಹೇಳಲ್ಪಟ್ಟಿದೆ. ಅದೇನಂದರೆ ವೇದಗಳ ಅರ್ಥವನ್ನು ಸಂಪೂರ್ಣವಾಗಿ ಯಾರೂ ತಿಳಿದಿಲ್ಲ. ಹೀಗಿರು ವಾಗ ಅಂಥಾ ವೇದವನ್ನು ರಚಿಸುವದು ಯಾರಿಂದಲೂ ಸಾಧ್ಯವಿಲ್ಲ ಎಂದು.

"ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ
ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉತ್ವಃ॥"

ಈ ವೇದಮಂತ್ರದ ಅರ್ಥ— ಮೋಕ್ಷದಲ್ಲಿ ಅನೇಕ ಕಲ್ಪಗಳ ಅನೇಕ ಚತು ರ್ಮುಖ ಬ್ರಹ್ಮರುಗಳು ಇದ್ದಾರೆ. ಅವರುಗಳ ಪೈಕಿ ತ್ವಃ=ಒಬ್ಬ ಚತುರ್ಮುಖ ಬ್ರಹ್ಮನು, ಋಚಾಂ ಪೋಷಂ ಆಸ್ತೇ= ಋಗ್ವೇದಗಳನ್ನು ಪಠಿಸುತ್ತಾ ದೇವರ ಸ್ತುತಿ ಯನ್ನು ಮಾಡುತ್ತಾ ಇದ್ದಾನೆ. ತ್ವಃ= ಇನ್ನೊಬ್ಬ ಬ್ರಹ್ಮನು, ಗಾಯತ್ರಂ= ಗಾಯತ್ರ ಸಾಮವನ್ನು, ಗಾಯತಿ=ಗಾನ ಮಾಡುತ್ತಾ ಇದ್ದಾನೆ. ತ್ವಃ=ಮತ್ತೊಬ್ಬ ಬ್ರಹ್ಮನು, ಜಾತವಿದ್ಯಾಂ=ಪೌರುಷೇಯ ವಿದ್ಯೆಗಳನ್ನು, ವದತಿ=ಪಠಿಸುತ್ತಾ ಇದ್ದಾನೆ. ತ್ವಃ= ಇನ್ನೊಬ್ಬ ಬ್ರಹ್ಮನು, ಯಜ್ಞಸ್ಯ= ಯಜ್ಞರೂಪಿ ಪರಮಾತ್ಮನ, ಮಾತ್ರಾಂ= ಅಂಶವನ್ನು, ವಿಮಿಮೀತೆ=ಧ್ಯಾನಿಸುತ್ತಾ ಇದ್ದಾನೆ. ಈ ವೇದ ಮಂತ್ರದ ಆಧಾರ ದಿಂದ ಋಗಾದಿ ವೇದಗಳಿಗಿಂತ ಬೇರೆಯಾದ ವಿದ್ಯೆಗಳು ಪೌರುಷೇಯಗಳೆಂದು ಹೇಳಿ ರೋಣದರಿಂದ ಋಗಾದಿ ವೇದಗಳು ಅಪೌರುಷೇಯಗಳು ಎಂದು ಸಿದ್ಧವಾಯಿತು. ವೇದಗಳು ಅಪೌರುಷೇಯ ಎಂದು ಹೇಳುವದು ನನ್ನ ಕಿವಿಯ ಒಳಗೆ ಆನೆಯು ಪ್ರವೇಶ ಮಾಡಿರುತ್ತದೆ ಎಂಬ ವಾಕ್ಯದಂತೆ ಅಸಂಭಾವಿತವಾದ ಮಾತು ಎಂದು ಕೆಲವರು ಆಕ್ಷೇಪಿಸುತ್ತಾರೆ. ಇದು ಸರಿಯಾದ ಆಕ್ಷೇಪವಲ್ಲ. ಜಗತ್ತಿನಲ್ಲಿ ಎರಡು ಪಂಗಡ ಇದೆ. ನಾಸ್ತಿಕರು ಭೂ–ಸಾಗರಾದಿಗಳನ್ನು ನಿರ್ಮಿಸಿದವನು ಸೂರ್ಯ–ಚಂದ್ರಾದಿಗಳನ್ನು ಗಗನದಲ್ಲಿ ಸ್ಥಾಪಿಸಿದವನು ಒಬ್ಬ ಪರಮೇಶ್ವರನು ಇದ್ದಾನೆಂದು ಒಪ್ಪುವದಿಲ್ಲ. ಮನೆ–ಭಾವಿ–ಸರೋವರಾದಿಗಳು ಒಬ್ಬ ಪುರುಷನಿಂದ ನಿರ್ಮಿತ ವಾಗಿಯೇ ಕಂಡಿವೆ. ಮಾರ್ಗಗಳಲ್ಲಿ ಅಲ್ಲಲ್ಲಿ ಎತ್ತರದ ಸ್ಥಳಗಳಲ್ಲಿ ದೀಪಗಳು ಪುರುಷ

ರಿಂದ ಸ್ಥಾಪಿತವಾದಂಥದ್ದಾಗಿಯೇ ಕಂಡು ಬರುತ್ತವೆ. ಹೀಗಿರುವಾಗ ಭೂ–ಸಾಗರಾದಿಗಳನ್ನು ಯಾವ ಪುರುಷನೂ ನಿರ್ಮಿಸಲಿಲ್ಲ. ಸೂರ್ಯ–ಚಂದ್ರಾದಿಗಳನ್ನು ಆಕಾಶದಲ್ಲಿ ಯಾರೂ ಸ್ಥಾಪಿಸಲಿಲ್ಲ ಎಂದು ಹೇಗೆ ನಾಸ್ತಿಕನು ಒಪ್ಪುತ್ತಾನೋ ಹಾಗೆಯೇ ಎಲ್ಲ ಗ್ರಂಥಗಳೂ ಒಬ್ಬೊಬ್ಬ ಪುರುಷರಿಂದ ರಚಿತವಾಗಿಯೇ ಇದ್ದರೂ ಕರ್ತೃ ಪ್ರಸಿದ್ಧಿ ಇಲ್ಲದ ವೇದಗಳು ಮಾತ್ರ ಯಾವ ಪುರುಷರಿಂದಲೂ ರಚಿತವಲ್ಲ ಎಂದು ಹೇಳಿದಾಗ ನಾಸ್ತಿಕನು ಇದು ಅಸಂಭಾವಿತ ಎಂದು ಶಂಕಿಸಲು ಅವಕಾಶವಿಲ್ಲ.

ಆಸ್ತಿಕರು ಸರ್ವಜ್ಞನಾದ ಪರಮೇಶ್ವರನನ್ನು ಒಪ್ಪುತ್ತಾರೆ. ಆ ಪರಮೇಶ್ವರನ ಜ್ಞಾನವು ನಿತ್ಯವೆಂತಲೂ ಅಂಗೀಕರಿಸುತ್ತಾರೆ. ಅಂಥ ಪರಮೇಶ್ವರನು ಸೃಷ್ಟಿಯ ಆದಿಯಲ್ಲಿ ಚತುರ್ಮುಖ ಬ್ರಹ್ಮನಿಗೆ ವೇದಗಳನ್ನು ಉಪದೇಶಿಸಿದನು. ಎಂದು ವೇದದಲ್ಲಿ ಹೇಳಿದ್ದರಿಂದ ಸೃಷ್ಟಿಯ ಆದಿಯಲ್ಲಿ ಪರಮೇಶ್ವರನಿಂದ ಬ್ರಹ್ಮದೇವರಿಗೆ ಉಪದಿಷ್ಟವಾದದ್ದು ವೇದ ಎಂಬುದನ್ನೂ ಅವರು ಸ್ವೀಕರಿಸುತ್ತಾರೆ. ಅಂಥ ಆಸ್ತಿಕರನ್ನು ಕುರಿತು ಪ್ರಶ್ನೆಯನ್ನು ಕೇಳಬೇಕು. ಪರಮೇಶ್ವರನು ಸೃಷ್ಟಿಯ ಆದಿಯಲ್ಲಿ ವೇದಗಳನ್ನು ರಚಿಸಿ ಬ್ರಹ್ಮದೇವರಿಗೆ ಉಪದೇಶಿಸಿದನೋ ಅಥವಾ ಹಿಂದೆಯೇ ಇದ್ದ ವೇದಗಳನ್ನು ಉಪದೇಶಿಸಿದನೋ ಎಂದು. ಆಗ ರಚಿಸಿದನು ಎಂದು ಒಪ್ಪಿದರೆ,

" ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ "

ಎಂದು ವೇದದಲ್ಲಿ ಹಿಂದಿನ ಕಲ್ಪದ ಆದಿಯಲ್ಲಿ ಯಾವುದನ್ನು ಹೇಗೆ ಸೃಷ್ಟಿ ಮಾಡಿದನೊ ಅದೇ ರೀತಿ ಈ ಕಲ್ಪದ ಆದಿಯಲ್ಲಿ ಪರಮೇಶ್ವರನು ಸೃಷ್ಟಿ ಮಾಡಿದನು ಎಂದು ಹೇಳಿದ್ದರಿಂದ ಹಿಂದಿನ ಕಲ್ಪದ ಆದಿಯಲ್ಲಿಯೂ ಈ ಕಲ್ಪದ ಆದಿಯಲ್ಲಿ ವೇದಗಳನ್ನು ಸೃಷ್ಟಿಮಾಡಿದಂತೆಯೇ ಸೃಷ್ಟಿ ಮಾಡಿದ್ದನೆಂದೂ, ಹಾಗೆಯೇ ಅದಕ್ಕಿಂತ ಹಿಂದಿನ ಹಿಂದಿನ ಕಲ್ಪಗಳ ಆದಿ ಭಾಗದಲ್ಲಿಯೂ ವೇದಗಳನ್ನು ಸೃಷ್ಟಿ ಮಾಡಿದ್ದನೆಂದೂ ಒಪ್ಪಬೇಕಾಗುತ್ತದೆ. ಹಿಂದಿನ ಕಲ್ಪಗಳಲ್ಲಿ ಸೃಷ್ಟಿ ಮಾಡಲ್ಪಟ್ಟ ವೇದಗಳು ಆ ಪರಮೇಶ್ವರನ ನಿತ್ಯವಾದ ಬುದ್ಧಿಯಲ್ಲಿ ಸದಾ ಇರುವಾಗ ಅದನ್ನು ಬಿಟ್ಟು ಈ ಕಲ್ಪದ ಆದಿಯಲ್ಲಿ ಬೇರೆ ವೇದವನ್ನು ಸೃಷ್ಟಿ ಮಾಡಲಿಕ್ಕೆ ಕಾರಣವೇನು ? ಇದೇ ರೀತಿ ಹಿಂದಿನ ಕಲ್ಪದಲ್ಲಿಯೂ ಅದಕ್ಕಿಂತ ಹಿಂದಿನ ಕಲ್ಪದಲ್ಲಿ ಉಪದೇಶಿಸಿದ ವೇದವು ನಿತ್ಯವಾದ ತನ್ನ ಬುದ್ಧಿಯಲ್ಲಿದ್ದಾಗ ಬೇರೆ ವೇದವನ್ನು ನಿರ್ಮಿಸಲಿಕ್ಕೆ ಕಾರಣವೇನು ? ಎಂದು ಪ್ರಶ್ನೆ ಬರುತ್ತದೆ. ಆದ್ದರಿಂದ ಪರಮೇಶ್ವರನು ಅನಾದ್ಯನಂತಕಾಲಗಳಲ್ಲಿ ವಿಶ್ವದ ಸೃಷ್ಟಿ ಸಂಹಾರಗಳನ್ನು ಮಾಡುತ್ತ ಪ್ರತಿಕಲ್ಪಗಳ ಆದಿಯಲ್ಲಿ ಸದಾ ತನ್ನ ಬುದ್ಧಿಯಲ್ಲಿದ್ದ, ಹಿಂದಿನ ಕಲ್ಪಗಳಲ್ಲಿ ತನ್ನಿಂದ ಉಪದಿಷ್ಟಗಳಾದ ವೇದಗಳನ್ನೇ ಈ ಕಲ್ಪದ ಆದಿಯಲ್ಲಿಯೂ ಚತುರ್ಮುಖ ಬ್ರಹ್ಮ

ದೇವರಿಗೆ ಉಪದೇಶಿಸುತ್ತಾನೆಂದು ಹೇಳಬೇಕಾಗುತ್ತದೆ. ಸದಾ ಪರಮೇಶ್ವರನ ಬುದ್ಧಿಯಲ್ಲಿ ವೇದವು ಇದ್ದ ಮೇಲೆ ವೇದವು ನಿತ್ಯವೇ ಆಯಿತು. ಇತರ ಘಟಾದಿ ವಸ್ತುಗಳಿಗೂ ಒಂದು ಗ್ರಂಥಕ್ಕೂ ಇಷ್ಟು ವಿಶೇಷವಿದೆ. ಘಟಾದಿ ವಸ್ತುಗಳು ನಮ್ಮ ಬುದ್ಧಿ ವಿಷಯವಾಗಿ ಇದ್ದಂತೆ ನಷ್ಟವಾಗುವದೂ ಇದೆ. ಆದರೆ ಒಂದು ಗ್ರಂಥವು ಮಾತ್ರ ಒಬ್ಬ ಪುರುಷನ ಬುದ್ಧಿಸ್ಥವಾಗಿ ಇದ್ದರೆ ಆ ಗ್ರಂಥವು ನಾಶವಾಗಿದೆ ಎಂದು ಯಾರೂ ಹೇಳುವದಿಲ್ಲ. ಆ ಗ್ರಂಥವು ಇದೆ ಎಂದೇ ಹೇಳುತ್ತಾರೆ. ಆದ್ದರಿಂದ ಪರಮೇಶ್ವರನ ಅನಾದಿ ನಿತ್ಯ ಬುದ್ಧಿಯಲ್ಲಿ ವೇದವು ಇದ್ದ ಕಾರಣ ವೇದವು ಪೌರುಷೇಯ ಅಥವಾ ಅನಿತ್ಯ ಎಂದು ಹೇಳುವದೇ ಅಸಂಭಾವಿತವಾಗುತ್ತದೆ. ತಥಾ ಚ ಆಸ್ತಿಕನಾಗಲೀ ನಾಸ್ತಿಕನಾಗಲೀ ವೇದವು ಅಪೌರುಷೇಯವೆಂಬ ಮಾತನ್ನು ಅಸಂಭಾವಿತ ಎಂದು ಹೇಳಲು ಶಕ್ಯವಿಲ್ಲ.

## ವೇದವು ಅಪೌರುಷೇಯವು ಎಂಬ ವಿಷಯದಲ್ಲಿ ಯುಕ್ತಿಗಳು

" ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾಶ್ರುತಿಃ ।
ಅನಾದಿ ನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ ॥ "

ಈ ವೇದ ವಾಕ್ಯದ ಅರ್ಥ— ಪರಬ್ರಹ್ಮನು ಯಾವಾಗಲೂ ತಿಳಿಯಲ್ಪಡತಕ್ಕವನು. ಅವನನ್ನು ತಿಳಿಸತಕ್ಕ ಉತ್ತಮ ಪ್ರಮಾಣ ಶ್ರುತಿ ಒಂದೇ. ಆ ಪರಬ್ರಹ್ಮನು ಅನಾದಿ ನಿತ್ಯನು. ಆದ್ದರಿಂದ ಅಂಥವನನ್ನು ತಿಳಿಸಿಕೊಡುವ ಪ್ರಮಾಣಭೂತವಾದ ಶ್ರುತಿಯೂ ಅನಾದಿ ನಿತ್ಯವೇ ಆಗಬೇಕು. ಈ ಯುಕ್ತಿಯು ವೇದೋಕ್ತವಾದದ್ದು. ಇದರ ಆಕಾರವು ಹೇಗೆಂದರೆ—

" ವೇದಃ ಅನಾದಿ ನಿತ್ಯಃ ಅನಾದಿ ನಿತ್ಯೇ ಬ್ರಹ್ಮ ವಿಷಯಕ
ಜ್ಞಾನೇ ಸಾಧಕಾಂತರಾಭಾವೇ ಸತಿ ಅಸ್ಯೈವ ಸಾಧಕತ್ವಾತ್
ಯಾವತ್ ಕಾಲಂ ಪ್ರಮೇಯಜ್ಞಾನಮಸ್ತಿ ತಾವತ್ ಕಾಲಂ
ತತ್ಸಾಧಕ ಪ್ರಮಾಣಮಪ್ಯಸ್ತಿ ಇತಿ ವ್ಯಾಪ್ತೇಃ ॥ "

" ಅನಂತಾ ವೈ ವೇದಾಃ "

ವೇದಗಳು ಅನಂತ ಇವೆ ಎಂದು ವೇದವು ಹೇಳುತ್ತದೆ. ಪರಿಮಿತ ಜ್ಞಾನವುಳ್ಳ ಪುರುಷರಿಂದ ರಚಿತಗಳಾದ ಗ್ರಂಥಗಳು ಪರಿಮಿತಗಳೇ ಆಗುತ್ತವೆ. ವೇದವು ಅಪರಿಮಿತವಾದದ್ದು. ಆದ್ದರಿಂದ ವೇದವು ಪೌರುಷೇಯವಲ್ಲ.

" ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ
ವೇದಾಂಶ್ಚ ಪ್ರಹಿಣೋತಿ ತಸ್ಮೈ । "

ಈ ವೇದವಾಕ್ಯದ ಅರ್ಥ– ಪರಮೇಶ್ವರನು ಆದಿ ಸೃಷ್ಟಿಯಲ್ಲಿ ಆ ಆದಿಕವಿಯೆಂದು ಪ್ರಸಿದ್ಧನಾದ ಚತುರ್ಮುಖನನ್ನು ಸೃಷ್ಟಿಮಾಡಿದನು. ಅವನಿಗೆ ವೇದಗಳನ್ನು ಉಪದೇಶಿಸಿದನು. ಸರ್ವರಿಗೂ ಪಿತಾಮಹನಾದ ಚತುರ್ಮುಖನು ವೇದದ ಉಪದೇಶವನ್ನು ಪಡೆಯಬೇಕಾದರೆ ವೇದವು ಇತರ ಪುರುಷರಿಂದ ರಚಿತವಲ್ಲವೆಂದು ಒಪ್ಪಬೇಕು. ಇತರರು ಎಲ್ಲರೂ ಚತುರ್ಮುಖನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು. ಅಂಥವರು ಮಾಡಿದ್ದನ್ನು ಸರ್ವ ಪಿತಾಮಹನಾದ ಬ್ರಹ್ಮನು ಉಪದೇಶ ರೂಪವಾಗಿ ಪಡೆದನು ಎಂದು ಹೇಳುವದು ಹೇಗೆ ಕೂಡುತ್ತದೆ.

ಯೋಗ, ಸಾಂಖ್ಯ, ನೈಯಾಯಿಕ, ವೈಶೇಷಿಕ, ಮೀಮಾಂಸಕ, ಎಂದು ಷಟ್ ಶಾಸ್ತ್ರಕಾರರು ಇರುತ್ತಾರೆ. ಆಸ್ತಿಕ ಮತಗಳೆಲ್ಲ ಈ ಆರು ಮತಗಳಲ್ಲಿ ಅಂತರ್ಭಾವವನ್ನು ಹೊಂದುತ್ತವೆ. ಇವರು ಯಾರೂ ವೇದವನ್ನು ಮಾಡಲಿಲ್ಲ. ಏಕೆಂದರೆ ಈ ಆರು ಆಸ್ತಿಕ ಮತದವರು ಪರಸ್ಪರ ವಿರುದ್ಧ ಮತದವರು. ಇವರೆಲ್ಲರೂ ವೇದವನ್ನು ಪ್ರಮಾಣವೆಂದು ಹೇಳುತ್ತಾರೆ. ಒಂದು ವೇಳೆ ಈ ಆರು ಮತದವರಲ್ಲಿ ಒಬ್ಬರು ವೇದವನ್ನು ರಚಿಸಿದ್ದಾದರೆ ಅವರಿಗೆ ವಿರುದ್ಧ ಮತದವರಾದ ಉಳಿದ ಐದು ಮತದವರು ಆ ವೇದವನ್ನು ಪ್ರಮಾಣವೆಂದು ಒಪ್ಪಲು ಶಕ್ಯವಿಲ್ಲ. ಈ ಆರು ಮತಕಾರರು ತತ್ವಜ್ಞಾನಿಗಳಲ್ಲದ, ಅತಏವ ತಮ್ಮಕ್ಕಿಂತ ಕೆಳಮಟ್ಟದ ಪುರುಷರು ವೇದವನ್ನು ಮಾಡಿದ್ದರೂ ಅದನ್ನು ತಮ್ಮ ಮತಕ್ಕೆ ಮೂಲಾಧಾರವನ್ನಾಗಿ ಒಪ್ಪಲು ಶಕ್ಯವಿಲ್ಲ. ಆದುದರಿಂದ ಪರಸ್ಪರ ವಿರುದ್ಧ ಮತದ ತತ್ವಜ್ಞಾನಿಗಳೆಲ್ಲರೂ ವೇದವನ್ನು ಪ್ರಮಾಣವೆಂದು ಒಪ್ಪಿದ ನಿಮಿತ್ತದಿಂದ ವೇದವು ಅನಾದಿ ನಿತ್ಯವಾದದ್ದು. ಯಾವ ಪುರುಷನಿಂದಲೂ ರಚಿತವಲ್ಲ ಎಂದು ಸಿದ್ಧವಾಗುತ್ತವೆ.

ವೇದವನ್ನು ದೈತ್ಯರು ಮಾಡಿದ್ದು. ದೈತ್ಯರು ತಾಮಸರು— ಆದ್ದರಿಂದ ಸುಳ್ಳು ಹೇಳುವದೇ ಅವರ ಸ್ವಭಾವ. ಆದ್ದರಿಂದ ತಾವು ವೇದವನ್ನು ಮಾಡಿ ಆ ವೇದವನ್ನು ಅಪೌರುಷೇಯ ಎಂದು ವೇದದಲ್ಲಿ ಬರೆದರು ಆದ್ದರಿಂದ ವೇದದಲ್ಲಿ ವೇದವನ್ನು ಅಪೌರುಷೇಯ ಎಂದು ಹೇಳಿದರು. ಅದು ವಿಶ್ವಾಸಕ್ಕೆ ಅರ್ಹವಲ್ಲ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ವೇದದಲ್ಲಿ ದೇವತೆಗಳಿಗೆ ಆಹುತಿಯನ್ನು ಕೊಡಬೇಕು. ದೇವತೆಗಳನ್ನು ತೃಪ್ತಿ ಪಡಿಸಬೇಕು. ದೇವತೆಗಳು ತೃಪ್ತರಾದರೆ ಸಕಲ ಇಷ್ಟ ಸಿದ್ಧಿಯು ಆಗುತ್ತದೆ ಎಂದು ಹೇಳಿರುತ್ತದೆ. ದೈತ್ಯರು ದೇವತೆಗಳಿಗೆ ದ್ವೇಷಿಗಳು ಆದ್ದರಿಂದ ದೈತ್ಯರು ವೇದವನ್ನು ಮಾಡಿದ್ದರೆ ಅದರಲ್ಲಿ ದೇವತೆಗಳ ಆರಾಧನೆಯನ್ನು ಮಾಡಬೇಕೆಂದು ಹೇಳುತ್ತಿದ್ದಿಲ್ಲ. ಮತ್ತು ರಕ್ಷೋಘ್ನ ಮಂತ್ರಗಳು ದೈತ್ಯ

ನಾಶಕ ಮಂತ್ರಗಳು ವೇದಗಳಲ್ಲಿ ಇವೆ. ದೈತ್ಯರು ರಾಕ್ಷಸರು ವೇದವನ್ನು ಮಾಡಿದ್ದರೆ ಅದರಲ್ಲಿ ಈ ಮಂತ್ರಗಳು ಇರಲು ಶಕ್ಯವಿಲ್ಲ. ಆದ್ದರಿಂದ ಸುಳ್ಳು ಹೇಳುವ ಸ್ವಭಾವದ ತಾಮಸರಾದ ಅಸುರಾದಿಗಳು ವೇದವನ್ನು ಮಾಡಲಿಲ್ಲವಾದ್ದರಿಂದ ವೇದವಲ್ಲಿರುವ ವೇದಾಪೌರುಷೇಯತ್ವ ವಚನವು ಅತ್ಯಂತ ಶ್ರದ್ಧೆಗೆ ಅರ್ಹವಾಗಿರುತ್ತದೆ.

"ವೇದವನ್ನು ಬ್ರಾಹ್ಮಣರು ಅನೇಕರು ಸೇರಿ ಹಿಂದಿನ ಕಾಲದಲ್ಲಿ ಮಾಡಿ ಎಲ್ಲ ವರ್ಣಗಳಕ್ಕಿಂತ ಬ್ರಾಹ್ಮಣರೇ ಶ್ರೇಷ್ಠರೆಂದು ಅದರಲ್ಲಿ ಬರೆದು ಇತರರನ್ನು ತಮ್ಮ ಸೇವಕರನ್ನಾಗಿ ಮಾಡಿಕೊಂಡರು. ಆ ವೇದಕ್ಕೆ ಪ್ರಾಮಾಣ್ಯವು ಬರುವದಕ್ಕೋಸ್ಕರ ವೇದವು ಅಪೌರುಷೇಯವೆಂದು ಸುಳ್ಳು ಮಾತನ್ನು ಅದರಲ್ಲಿ ಸೇರಿಸಿದರು" ಎಂದು ಕೆಲವರು ಶಂಕಿಸುತ್ತಾರೆ. ಇದು ಸರಿಯಲ್ಲ. ಏಕಂದರೆ ಬ್ರಾಹ್ಮಣರು ಸ್ವಾರ್ಥಿಗಳಾಗಿ ವೇದವನ್ನು ಬರೆದಿದ್ದರೆ "ರಾಜ್ಯಸಂಪತ್ತಿನ ಅಧಿಕಾರ, ವ್ಯಾಪಾರಮಾಡುವ ಅಧಿಕಾರವು ಬ್ರಾಹ್ಮಣರಿಗೇನೇ ಇರತಕ್ಕದ್ದು. ಇತರರು ಅದಕ್ಕೆ ಅರ್ಹರಲ್ಲ" ಎಂದು ವೇದವಲ್ಲಿ ಬರೆಯುತ್ತಿದ್ದರು. ಹಾಗೆ ಬರಿಯದೆ— ರಾಜ್ಯದ ಸಂಪತ್ತಿನ ಸರ್ವಾಧಿಕಾರ ಕ್ಷತ್ರಿಯರಿಗೆ, ವ್ಯಾಪಾರ–ಕೃಷಿ ಮುಂತಾದ್ದರಲ್ಲಿ ವೈಶ್ಯರಿಗೆ ಅಧಿಕಾರ ಎಂದೂ, ಬ್ರಾಹ್ಮಣನು ಸಂಪತ್ತಿನ ಮೋಹಕ್ಕೆ ಒಳಗಾದರೆ ನರಕಾದಿ ದುಃಖವನ್ನು ಅನುಭವಿಸುತ್ತಾನೆ ಮತ್ತು ಬ್ರಾಹ್ಮಣ್ಯದಿಂದ ಪತಿತನಾಗುತ್ತಾನೆಂದು ವೇದದಲ್ಲಿದೆ ಎಂದೂ ಬ್ರಾಹ್ಮಣರು ಹೇಳುತ್ತಾರೆ. ಸ್ವಾರ್ಥಿಗಳಾಗಿದ್ದರೆ ಬ್ರಾಹ್ಮಣರು ಹೀಗೆ ಹೇಳುತ್ತಿದ್ದಿಲ್ಲ. ಮತ್ತು ಸುಳ್ಳು ಹೇಳಿದವರನ್ನು ಬ್ರಾಹ್ಮಣ ಜಾತಿಯಿಂದ ಬಹಿಷ್ಕರಿಸಿ ತೆಗೆದು ಇಡಬೇಕು ಎಂದು ನಿಯಮವನ್ನು ಪುರಾತನ ಬ್ರಾಹ್ಮಣರು ಮಾಡಿದ್ದರು. ಆದ್ದರಿಂದ ಹಿಂದಿನ ಬ್ರಾಹ್ಮಣರು ಸತ್ಯದ ನಿಷ್ಠೆಯುಳ್ಳವರೆಂದು ಸಿದ್ಧವಾಗುವದರಿಂದ ವೇದವಲ್ಲಿ ವೇದವು ಅಪೌರುಷೇಯವೆಂಬ ಸುಳ್ಳು ಮಾತನ್ನು ಸೇರಿಸಿದರು ಎಂದು ಶಂಕಿಸುವದು ಅಯುಕ್ತ ಮತ್ತು ನಿರಾಧಾರವೂ ಆಗಿರುತ್ತದೆ.

ಒಂದೊಂದು ವೇದದ ಭಾಗಕ್ಕೆ ಒಬ್ಬೊಬ್ಬ ಋಷಿ ಇರುವವರಿಂದ ಆ ಆ ವೇದ ಭಾಗವನ್ನು ಆ ಆ ಋಷಿಯು ಮಾಡಿದ್ದು ಎಂದು ಕೆಲವರು ಶಂಕಿಸುತ್ತಾರೆ. ಅದೂ ಸರಿಯಲ್ಲ. ಏಕೆಂದರೆ " ಋಷಿರ್ದರ್ಶನಾತ್ " ಎಂಬ ನಿರುಕ್ತ ಗ್ರಂಥದಲ್ಲಿ ಅನಂತ ವೇದಗಳ ಮಧ್ಯದಲ್ಲಿ ಯಾವ ಭಾಗವನ್ನು ತನ್ನ ತಪಃ ಪ್ರಭಾವದಿಂದ ಯಾರು ನೋಡಿದರೊ ಅವರು ಆ ಭಾಗಕ್ಕೆ ಋಷಿಗಳು ಎಂದು ಹೇಳಿರುತ್ತದೆ. ತಥಾಚ 'ಋಷಿ' ಎಂದರೆ ಮಂತ್ರದ್ರಷ್ಟಾ ಎಂದು ಅರ್ಥ ಹೊರತು ಮಂತ್ರಕರ್ತಾ ಎಂದು ಅರ್ಥವಲ್ಲ. ಮತ್ತು ಆ ಋಷಿಗಳು ತಾವು 'ವೇದಕರ್ತಾ' ಎಂದು ಹೇಳುವದಿಲ್ಲ. **ವೇದವು ಅನಾದಿ ನಿತ್ಯವೆಂದೇ ಹೇಳುತ್ತಾರೆ.** ವೇದವು ಅನಾದಿ ನಿತ್ಯವೆಂದು ಸಾರುವ **' ವಾಚಾ ವಿರೂಪ ನಿತ್ಯಯಾ '** ಇತ್ಯಾದಿ ವೇದ ವಾಕ್ಯಗಳು ಋಷಿಗಳ ಮುಖದಿಂದ

ಪ್ರಾದುರ್ಭೂತವಾದವುಗಳು. ಇವನ್ನೇ ನಾವು ಹಿಂದೆ ಉದಾಹರಿಸಿದ್ದೇವೆ. ಋಷಿಗಳು ಸುಳ್ಳು ಮಾತನ್ನು ಹೇಳುವ ಪ್ರಸಂಗವೇ ಇಲ್ಲ. ಏಕೆಂದರೆ ಋಷಿಗಳು ಸರ್ವ ತ್ಯಾಗಿಗಳು. ವನದಲ್ಲಿ ಗುಡಿಸಲುಗಳಲ್ಲಿ, ಗುಹೆಗಳಲ್ಲಿ ವಾಸ ಮಾಡುತ್ತಾ ನಿರಪೇಕ್ಷರಾಗಿ ಸದಾ ತಪಸ್ಸನ್ನು ಮಾಡತಕ್ಕವರು. ತಪಃ ಪ್ರಭಾವದಿಂದ ದೇವತೆಗಳನ್ನು ಪ್ರತ್ಯಕ್ಷವಾಗಿ ನೋಡಿ ಆ ದೇವತೆಗಳ ಪ್ರಸಾದದಿಂದ ಅದ್ಭುತ ಸಾಮರ್ಥ್ಯವನ್ನು ಹೊಂದಿದವರು. ಶಾಪಾನುಗ್ರಹ ಸಮರ್ಥರು. ಇಂಥ ಸತ್ಯ ವಚನದಲ್ಲಿ ನಿಷ್ಠೆಯುಳ್ಳ ಋಷಿಗಳ ಮುಖದಿಂದ ಪ್ರಾದುರ್ಭೂತವಾದ ವೇದದಲ್ಲಿರುವ 'ವೇದವು ಅನಾದಿ ನಿತ್ಯ' ಎಂಬ ವಚನವು ಅತ್ಯಂತ ವಿಶ್ವಾಸಾರ್ಹವಾಗುತ್ತದೆ.

ಒಂದೊಂದು ವೇದ ಭಾಗವು ಒಂದೊಂದು ಋಷಿಯಿಂದ ರಚಿತವಾಗಿದ್ದರೆ ಎಲ್ಲ ವೇದಗಳಿಗೆ ಏಕ ವಾಕ್ಯತೆಯು ಇಲ್ಲದೇ ಇರಬೇಕಾಗಿತ್ತು. ಬೇರೆ ಬೇರೆ ಜನರ ಬುದ್ಧಿಯ ಗತಿಯು ಬೇರೆ ಬೇರೆಯಾಗಿಯೇ ಇರುವದು ಕಾಣುತ್ತದೆ. ಎಲ್ಲ ವೇದಗಳಿಗೆ ಏಕ ವಾಕ್ಯತೆಯು ಇದೆ ಎಂದು ಯುಕ್ತಿಯುಕ್ತವಾಗಿ ಮೀಮಾಂಸಾ ಶಾಸ್ತ್ರಗಳಲ್ಲಿ ಸಮರ್ಥಿಸಿದ್ದಾರೆ. ಆದ್ದರಿಂದ ಬೇರೆ ಬೇರೆ ಋಷಿಗಳು ಬೇರೆ ಬೇರೆ ವೇದ ಭಾಗವನ್ನು ರಚಿಸಿದ್ದಲ್ಲ ಎಂದೇ ಹೇಳಬೇಕು.

ವಿವಿಧ ವೇದ ಭಾಗಗಳನ್ನು ಅನೇಕ ಋಷಿಗಳು ರಚಿಸಿದ್ದರೆ ಆಯಾ ಭಾಗಗಳ ವಾಕ್ಯ ಶೈಲಿಯು ವಿಭಿನ್ನವಾಗಿ ಇರಬೇಕಾಗಿತ್ತು. ಆದರ ವೇದದಲ್ಲಿ ಅನೇಕ ಋಷಿಗಳುಳ್ಳ ವೇದ ವಾಕ್ಯಗಳ ಶೈಲಿಯು ಒಂದೇ ರೀತಿಯಾಗಿ ಕಾಣುತ್ತದೆ. ಆದ್ದರಿಂದ ಅವರು ಮಂತ್ರದ್ರಷ್ಟಾರರೇ ಹೊರತು ಕರ್ತೃಗಳು ಅಲ್ಲ.

ಈ ವೇದ ಮಂತ್ರಕ್ಕೆ ಇವನು ಋಷಿಯು ಎಂದರೆ ಈ ಮಂತ್ರದ ಕರ್ತಾ ಎಂದೇ ಅರ್ಥವಾದರೆ ಮಹಾಭಾರತಕ್ಕೆ ಕರ್ತಾ ವ್ಯಾಸರು, ರಾಮಾಯಣಕ್ಕೆ ಕರ್ತಾ ವಾಲ್ಮೀಕಿ ಎಂದು ಹೇಳುವ ಬದಲಿಗೆ ಮಹಾ ಭಾರತಕ್ಕೆ ವ್ಯಾಸರು ಋಷಿಗಳು, ರಾಮಾಯಣಕ್ಕೆ ವಾಲ್ಮೀಕಿಯು ಋಷಿಯು ಎಂದು ಲೋಕದಲ್ಲಿ ವ್ಯವಹಾರವು ಏಕೆ ಬರಲಿಲ್ಲ ? ಶಾಸ್ತ್ರ ಗ್ರಂಥಗಳಲ್ಲಿ ಎಲ್ಲಿಯಾದರೂ ಆ ರೀತಿ ವ್ಯವಹಾರವು ಏಕೆ ಬರಲಿಲ್ಲ ? ಈ ಮಂತ್ರಕ್ಕೆ ಇವನು ಋಷಿಯು ಎಂದು ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ವ್ಯವಹರಿಸುವಂತೆ ಈ ಮಂತ್ರಕ್ಕೆ ಇವನು ಕರ್ತಾ ಎಂಬ ಶಬ್ದವನ್ನು ಎಲ್ಲಿಯೂ ಏಕೆ ಪ್ರಯೋಗಿಸಲಿಲ್ಲ ?

ವೇದಕ್ಕೆ ಇವನು ಕರ್ತಾ ಎಂದು ಪ್ರಸಿದ್ಧಿಯು ಇಲ್ಲದ್ದರಿಂದ ವೇದವು ಅಪೌರುಷೇಯ ಎಂದು ಹೇಳುವದಾದರೆ ಕರ್ನಾಟಕ, ತೆಲಗು, ತಮಿಳು ಮುಂತಾದ ಭಾಷೆ

ಗಳಿಗೆ ಇಂಥವರು ಕರ್ತರು ಎಂದು ಪ್ರಸಿದ್ಧಿಯು ಇಲ್ಲದ ಕಾರಣ ಆ ಭಾಷೆಗಳನ್ನೂ ಅಪೌರುಷೇಯವೆಂದು ಹೇಳುವದೇ ಎಂದು ಕೆಲವರು ಕೇಳುತ್ತಾರೆ. ಆ ಭಾಷೆಗಳನ್ನು ಅಪೌರುಷೇಯವೆಂದೇ ಹೇಳಿದರೆ ವಾಚಾರಂಭಣಶ್ರುತಿಯ ವಿರೋಧವು ಪ್ರಾಪ್ತವಾಗುತ್ತದೆ. ಆ ಶ್ರುತಿಯಲ್ಲಿ 'ಸಂಸ್ಕೃತೇತರ ಭಾಷೆಗಳು ಜನ್ಯಗಳು ಅನಾದಿಗಳಲ್ಲ' ಎಂದು ಹೇಳಿರುತ್ತದೆಂದು ಶ್ರೀ ಮಧ್ವಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ. ತಥಾಚ ಕರ್ನಾಟಕಾದಿ ಭಾಷೆಗಳು ಕರ್ತೃಪ್ರಸಿದ್ಧಿರಹಿತವಾಗಿದ್ದರೂ ಹೇಗೆ ಅವುಗಳು ಅನಾದಿಗಳಲ್ಲವೊ ಹಾಗೆ ವೇದವೂ ಕರ್ತೃಪ್ರಸಿದ್ಧಿರಹಿತವಾಗಿದ್ದರೂ ಯಾರಿಂದಲೊ ಹುಟ್ಟಿದ್ದು ಆಗಬಹುದು ಎಂದು ಕೆಲವರು ಶಂಕಿಸಬಹುದು. ಆದರೆ ಭಾಷೆಗಳಿಗೂ ವೇದಗಳಿಗೂ ಬಹಳ ವ್ಯತ್ಯಾಸವು ಇದೆ. ಏನೆಂದರೆ— ಭಾಷೆಗಳ ಅಭ್ಯಾಸವು ಅತ್ಯಂತ ಬಾಲ್ಯದಲ್ಲಿ ಆಗುತ್ತದೆ. ಆಗ ಈ ಭಾಷೆಯನ್ನು ರಚಿಸಿದ್ದು ಯಾರು ಎಂದು ಪ್ರಶ್ನೆಯನ್ನು ಮಾಡುವಷ್ಟು ಬುದ್ಧಿಯು ಆ ಬಾಲಕರಿಗೆ ಇರುವದಿಲ್ಲ. ಹೀಗಾಗಿ ಎಲ್ಲರಿಗೂ ಭಾಷೆಗಳ ಕರ್ತಾ ಯಾರು ಎಂದು ತಿಳಿಯದೇ ಇರುವದು ಯುಕ್ತವಾಗುತ್ತದೆ. ವೇದಗಳು ಹೀಗೆ ಅಲ್ಲ. ಪ್ರೌಢಾವಸ್ಥೆಯಲ್ಲಿ ವ್ಯಾಕರಣ, ಕಾವ್ಯ ಇತ್ಯಾದಿಗಳನ್ನು ಅಭ್ಯಾಸ ಮಾಡಿದವರು ಆ ಗ್ರಂಥಗಳಿಗೆಲ್ಲಾ ಕರ್ತಾ ಇಂಥವರು ಎಂದು ತಿಳಿದವರು ವೇದಶಾಸ್ತ್ರದ ಮೀಮಾಂಸಾವನ್ನು ಮಾಡಲು ಪ್ರವೃತ್ತರಾಗುತ್ತಾರೆ. ಆಗ ಈ ವೇದಕ್ಕೆ ಕರ್ತಾ ಯಾರು ಎಂಬ ಪ್ರಶ್ನೆಯು ಬರಲೇಬೇಕು. ಅಧ್ಯಾಪಕರು ಕಾವ್ಯಾದಿಗಳಿಗೆ ಇಂಥವರು ಕರ್ತೃಗಳು ಎಂದು ಹೇಳಿದಂತೆ ವೇದಕ್ಕೆ ಇಂಥವರು ಕರ್ತೃಗಳು ಎಂದು ಹೇಳಬೇಕಾಗುತ್ತದೆ. ಈ ರೀತಿಯಾಗಿ ವೇದ ಕರ್ತಾ ಅಪ್ರಸಿದ್ಧನಾಗಿ ಇರಲು ಶಕ್ಯವಾಗುವದಿಲ್ಲ. ರಘುವಂಶ ಎಂಬ ಸಣ್ಣದಾದ ಕಾವ್ಯ ಕರ್ತಾ ಮಹಾಕವಿ ಕಾಳಿದಾಸನು ಎಂದು ಪ್ರಸಿದ್ಧಿಯು ಇರುವಾಗ ವೇದದಂಥ ಶಾಸ್ತ್ರ ಗ್ರಂಥದ ಕರ್ತಾ ಇರುತ್ತಿದ್ದರೆ ಆ ಕರ್ತನ ಪ್ರಸಿದ್ಧಿಯು ಎಂದಿಗೂ ಲೋಕದಲ್ಲಿ ಇಲ್ಲದೇ ಇರಲು ಶಕ್ಯವಿಲ್ಲ. ಆದ್ದರಿಂದ ವೇದವು ಅಪೌರುಷೇಯವೆಂದು ಸಿದ್ಧವಾಗುತ್ತದೆ.

ವೇದವು ಇಂಥಾ ಪುರುಷನಿಂದ ರಚಿತವಾಗಿದೆ ಎಂಬುದನ್ನು ಯಾರೂ ನೋಡಿಲ್ಲ, ನೋಡಿ ನಾನು ನೋಡಿದ್ದೇನೆಂದೂ ಯಾರೂ ಯಾವ ಗ್ರಂಥದಲ್ಲಿಯೂ ಬರೆದಿಲ್ಲ. ಆದ್ದರಿಂದ ವೇದವು ಪೌರುಷೇಯವೆಂಬ ಬಗ್ಗೆ ಪ್ರತ್ಯಕ್ಷ ಪ್ರಮಾಣವು ಇಲ್ಲ.

"ಛಂದಾಸಿ ಜಜ್ಞಿರೆ ತಸ್ಮಾತ್ ಋಚಃ ಸಾಮಾನಿ ಜಜ್ಞಿರೇ"

ಇತ್ಯಾದಿ ವೇದ ರೂಪ ಪ್ರಮಾಣದಿಂದ ವೇದವು ಪೌರುಷೇಯವೆಂದು ಸಿದ್ಧವಾಗುತ್ತದೆಂದು ಕೆಲವರು ಶಂಕಿಸುತ್ತಾರೆ. ಈ ವೇದದ ಅರ್ಥ— ಪರಮೇಶ್ವರನಿಂದ ವೇದಗಳು ಹುಟ್ಟಿದವು ಎಂದು. ಆದರೆ ಜಜ್ಞಿರೇ ಎಂಬ ಪದಕ್ಕೆ ವ್ಯಾಕರಣದಲ್ಲಿ— 'ಜನಿಪ್ರಾದುರ್ಭಾವೆ" ಎಂದು. ಪ್ರಾದುರ್ಭಾವ ಅರ್ಥವನ್ನು ಹೇಳಿದ್ದರಿಂದ ವೇದಗಳು

ಪರಮೇಶ್ವರನಿಂದ ಪ್ರಾದುರ್ಭೂತಗಳಾದವು ಎಂದೂ ಅರ್ಥವಾಗುತ್ತದೆ. ಅಥವಾ ನಿತ್ಯವೆಂದು ವೇದದಲ್ಲಿ ಹೇಳಲ್ಪಟ್ಟ ಆಕಾಶ ಜೀವ ಮೊದಲಾದ ವಸ್ತುಗಳೂ ಕೂಡ ಪರಮೇಶ್ವರನಿಂದ ಹುಟ್ಟಿದವು ಎಂದು ಹೇಳಲ್ಪಟ್ಟಿದೆ. ಆ ವಾಕ್ಯಗಳಿಗೆ ಯಾವ ಅರ್ಥವೋ ಅದೇ ಅರ್ಥವನ್ನು ಪ್ರಕೃತದಲ್ಲಿಯೂ ಹೇಳಬಹುದು. ಜೀವನು ಪರಮೇಶ್ವರನಿಂದ ಹುಟ್ಟಿದನು ಎಂಬ ವಾಕ್ಯಕ್ಕೆ ನಿತ್ಯನಾದ ಜೀವನಿಗೆ ಪರಮೇಶ್ವರನಿಂದ ದೇಹ ಸಂಬಂಧವು ಆಯಿತು ಎಂದು ಅರ್ಥ. ಅದರಂತೆ ವೇದಗಳು ಪರಮೇಶ್ವರನಿಂದ ಹುಟ್ಟಿದವು ಎಂಬ ವಾಕ್ಯದಲ್ಲಿ ವೇದವೆಂಬ ಶಬ್ದಕ್ಕೆ ವೇದಾಭಿಮಾನಿಗಳಾದ ದೇವತೆಗಳು ಎಂದು ಅರ್ಥ. ಅವರಿಗೆ ದೇಹಸಂಬಂಧವಾಯಿತು ಎಂದು ಅಭಿಪ್ರಾಯ. ಈ ರೀತಿಯಾಗಿ ಅರ್ಥ ಮಾಡದೇ ಪರಮೇಶ್ವರನಿಂದ ವೇದವು ಹುಟ್ಟಿತು ಎಂದೇ ಅರ್ಥವನ್ನು ಮಾಡುವದಾದರೆ

" ಋಗ್ವೇದಃ ಅಗ್ನೇರ ಜಾಯತ ವಾಯೋಃ ಯಜುರ್ವೇದಃ
ಆದಿತ್ಯಾತ್ ಸಾಮವೇದಃ । "

ಈ ವೇದ ವಾಕ್ಯದ ಅರ್ಥ — ಋಗ್ವೇದವು ಅಗ್ನಿಯಿಂದ ಹುಟ್ಟಿತು. ಯಜುರ್ವೇದವು ವಾಯುವಿನಿಂದ ಹುಟ್ಟಿತು. ಸಾಮವೇದವು ಆದಿತ್ಯನಿಂದ ಹುಟ್ಟಿತು ಎಂದು. ಈ ವೇದ ವಾಕ್ಯದ ಆಧಾರದಿಂದ ಋಗ್ವೇದಾದಿಗಳು ಅಗ್ನ್ಯಾದಿ ದೇವತೆಗಳಿಂದ ಹುಟ್ಟಿದವೆಂದೂ ಅರ್ಥಮಾಡಬೇಕಾಯಿತು. ತಥಾಚ ಋಗ್ವೇದಾದಿಗಳು ಪರಮೇಶ್ವರನಿಂದ ಹುಟ್ಟಿದವು ಹಾಗೆ ಅಗ್ನ್ಯಾದಿ ದೇವತೆಗಳಿಂದ ಹುಟ್ಟಿದವು ಎಂದು ಹೇಳಿದಾಗ ಒಂದು ವಾಕ್ಯಕ್ಕೆ ಅನೇಕ ಕರ್ತರು ಹೇಗೆ ಎಂದು ಪ್ರಶ್ನೆಯು ಬರುತ್ತದೆ. ಈ ಪ್ರಶ್ನೆಯ ಪರಿಹಾರಕ್ಕಾಗಿ ವೇದಗಳು ಪರಮೇಶ್ವರನಿಂದ ಹಾಗೆಯೇ ದೇವತೆಗಳಿಂದ ಹುಟ್ಟಲಿಲ್ಲ. ವೇದದ ಉಪದೇಶಕರು ಮಾತ್ರ ಅವರು ಎಂದು ಅಭಿಪ್ರಾಯವನ್ನು ಹೇಳಬೇಕು. ಆದ್ದರಿಂದ ವೇದವು ಪೌರುಷೇಯ ಎಂಬ ವಿಷಯದಲ್ಲಿ ಆಗಮರೂಪ ಪ್ರಮಾಣವು ಇಲ್ಲ. ಇಷ್ಟೇ ಅಲ್ಲದೆ ವೇದಾದಿ ಆಗಮಗಳಲ್ಲಿ ಸ್ಪಷ್ಟವಾಗಿ ವೇದವು ಅಪೌರುಷೇಯವೆಂದೇ ಹೇಳಿರುತ್ತದೆ.

ಯುಕ್ತಿರೂಪ ಪ್ರಮಾಣವನ್ನು ವೇದವು ಪೌರುಷೇಯವೆಂಬ ವಿಷಯದಲ್ಲಿ ಕೆಲವರು ಶಂಕಿಸುತ್ತಾರೆ– ವೇದವು ವಾಕ್ಯರೂಪವಾದ್ದರಿಂದ ಕಾಳಿದಾಸಾದಿಗಳ ವಾಕ್ಯದಂತೆ ಪೌರುಷೇಯವಾಗಿದೆ. ಈ ಯುಕ್ತಿಯು ಸರಿ ಇಲ್ಲ. ಪರಮೇಶ್ವರನು ಒಬ್ಬ ಪುರುಷನಾದುದರಿಂದ ನಮ್ಮಂತೆ ತಂದೆ ತಾಯಿಗಳಿಂದ ಹುಟ್ಟಿದವನು ಅನಾದಿ ನಿತ್ಯನಲ್ಲ ಎಂಬ ಯುಕ್ತಿಯು ಶಾಸ್ತ್ರವಿರುದ್ಧವಾದ್ದರಿಂದ ಹೇಗೆ ದುಷ್ಟವೋ ಹಾಗೆಯೇ ಈ ಯುಕ್ತಿಯೂ ಕೂಡ ಶಾಸ್ತ್ರವಿರುದ್ಧವಾದ್ದರಿಂದ ದುಷ್ಟವಾಗಿದೆ.

ಕೆಲವರು ಬೇರೆ ಯುಕ್ತಿಯನ್ನು ಹೇಳುತ್ತಾರೆ. ಅದೇನೆಂದರೆ ಈ ಅರ್ಥದಲ್ಲಿ ಈ ವೇದ ವಾಕ್ಯಕ್ಕೆ ತಾತ್ಪರ್ಯವು ಇದೆ ಎಂದು ವ್ಯವಹರಿಸುವಾಗ ವೇದವು ಅಚೇತನವಾದ್ದರಿಂದ ತಾತ್ಪರ್ಯವು ಚೇತನ ಧರ್ಮವಾದ್ದರಿಂದ ವೇದದ ತಾತ್ಪರ್ಯವೆಂಬ ಶಬ್ದಕ್ಕೆ ವೇದ ಕರ್ತನ ತಾತ್ಪರ್ಯ ಎಂದು ಅರ್ಥವನ್ನು ಹೇಳಬೇಕು. ಆಗ ವೇದಕರ್ತಾ ಇದ್ದನೆಂದು ಒಪ್ಪದೆ ನಿರ್ವಾಹವಿಲ್ಲ. ತಥಾಚ ಈ ಯುಕ್ತಿಯಿಂದ ವೇದವು ಪೌರುಷೇಯವೆಂದು ಸಿದ್ಧವಾಯಿತು ಎಂದು. ಈ ಯುಕ್ತಿಯೂ ಸರಿಯಲ್ಲ. ಏಕೆಂದರೆ ಎಲ್ಲರೂ ಆಸ್ತಿಕರು ದೇವರ ಸನ್ನಿಧಿಯಲ್ಲಿ ಪ್ರಾರ್ಥಿಸುವಾಗ

"ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಪುಂಡರೀಕಾಕ್ಷ ಶರಣಾಗತ ವತ್ಸಲ ॥"

ಎಂದು ಪುರಾಣದಲ್ಲಿದ್ದ ಶ್ಲೋಕವನ್ನು ಪಠಿಸುತ್ತ ನಾನು ಪಾಪ ಮಾಡಿದವನು ದೇವ! ನನ್ನನ್ನು ರಕ್ಷಿಸು ಎಂದು ಅಭಿಪ್ರಾಯವುಳ್ಳವರಾಗುತ್ತಾರೆ. ಇಲ್ಲಿ ಆ ಶ್ಲೋಕವನ್ನು ಮಾಡಿದವರು ಬೇರೆಯವರಾದರೂ ಆ ಶ್ಲೋಕವನ್ನು ಪಠಿಸುವವರು ತಮ್ಮ ಅಭಿಪ್ರಾಯವನ್ನು ಅದರಲ್ಲಿ ಸೇರಿಸಿ ಪಠಿಸುತ್ತಾರೆ. ತಥಾಚ ಶ್ಲೋಕದ ಕರ್ತೃವಿನ ತಾತ್ಪರ್ಯವೇ ಶ್ಲೋಕ ತಾತ್ಪರ್ಯವೆಂಬುವ ನಿಯಮವಿಲ್ಲ ಎಂದಾಯಿತು. ಅವರಂತೆ ಅನಾದಿ ವೇದವನ್ನು ಉಪದೇಶಿಸುವಾಗ ಪರಮೇಶ್ವರನು ಯಾವ ಅಭಿಪ್ರಾಯವುಳ್ಳವನಾಗಿದ್ದನೋ ಆ ಅಭಿಪ್ರಾಯವೇ ವೇದದ ಅಭಿಪ್ರಾಯವೆಂದು ವ್ಯವಹರಿಸಲ್ಪಡುತ್ತದೆ. ಆದ್ದರಿಂದ ಈ ಯುಕ್ತಿಯಿಂದ ವೇದಕ್ಕೆ ಪೌರುಷೇಯತ್ವವು ಸಿದ್ಧಿಸುವದಿಲ್ಲ. ತಥಾಚ ಯಾವ ಪ್ರಮಾಣದಿಂದಲೂ ವೇದವು ಪೌರುಷೇಯವೆಂದು ಸಿದ್ಧಿಸುವದಿಲ್ಲವಾದ್ದರಿಂದ ನಿರಾಧಾರವಾಗಿ ವೇದವನ್ನು ಪೌರುಷೇಯವೆಂದು ಹೇಳಬಾರದು ಎಂದು ಸಿದ್ಧವಾಯಿತು.

ವೇದವು ಅಪೌರುಷೇಯ ಎಂಬುದು ವೇದದ ಹೆಸರುಗಳಿಂದಲೂ ಸಿದ್ಧವಾಗುತ್ತದೆ. ವೇದಕ್ಕೆ ಶ್ರುತಿ ಎಂದು ಹೆಸರು ಇದೆ. ಶ್ರುತಿ ಎಂದರೆ ಎಲ್ಲರೂ ಅದನ್ನು ಕೇಳಿದ್ದೇ ಹೊರತು ಯಾರೂ ಮಾಡಿದವರು ಇಲ್ಲ ಎಂದು ಅರ್ಥ. ವೇದಕ್ಕೆ ಆಮ್ನಾಯವೆಂದು ಹೆಸರು ಇದೆ ಇದರ ಅರ್ಥ— ಎಲ್ಲ ಬ್ರಹ್ಮಕಲ್ಪದಲ್ಲಿಯೂ ವೇದವು ಒಂದೇ ಕ್ರಮದಿಂದ ಪಠಿತವಾಗುತ್ತವೆ. ಅದನ್ನು ಎಂದೂ ಯಾರೂ ವ್ಯತ್ಯಾಸವಾಗಿ ಹೇಳುವದಿಲ್ಲ. ಹಾಗೆ ಹೇಳಿದರೆ ಅದು ವೇದವೇ ಅಲ್ಲ. ವೇದ ಶಬ್ದದ ಅರ್ಥ— ಯಾವಾಗಲೂ ಇರತಕ್ಕದ್ದು ಎಂದು "ವಿದ್" ಸತ್ತಾಯಾಂ ಎಂಬ ಧಾತುವಿನಿಂದ ಸಿದ್ಧವಾಗುತ್ತದೆ.

ಶ್ರೀ ಪರಮೇಶ್ವರನ ಅವತಾರಭೂತರಾದ ಶ್ರೀ ವೇದವ್ಯಾಸ ದೇವರು ತಾವು ಮಾಡಿದ ಬ್ರಹ್ಮಸೂತ್ರ ಗ್ರಂಥವಲ್ಲಿ ವೇದವನ್ನು ಆಧಾರವಾಗಿ ಇಟ್ಟು ಕೊಂಡು ಎಷ್ಟೋ ನಿರ್ಣಯಗಳನ್ನು ಮಾಡುತ್ತಾರೆ. ಇದರಿಂದ ವೇದವು ಅಪೌರುಷೇಯವೆಂದು ಸಿದ್ಧವಾಗುತ್ತದೆ. ಪರಮೇಶ್ವರನು ವೇದವನ್ನು ಮಾಡಿದ್ದರೆ ತಾನು ಮಾಡಿದ ಗ್ರಂಥ ವನ್ನು ತಾನು ಮಾಡುವ ಅರ್ಥ ನಿರ್ಣಯಕ್ಕೆ ಆಧಾರವಾಗಿ ಹೇಳುವದು ಕೂಡುವ ದಿಲ್ಲ. ಬೇರೆಯವರು ಮಾಡಿದ್ದರೆ ಅವರೆಲ್ಲರೂ ತನಗಿಂತ ಕಡಿಮೆಯವರಾದ್ದರಿಂದ ಕಡಿಮೆ ಯೋಗ್ಯತೆಯುಳ್ಳವರ ವಾಕ್ಯವನ್ನು ಆಧಾರವನ್ನಾಗಿ ಇಟ್ಟುಕೊಂಡು ದೊಡ್ಡ ವರು ಅರ್ಥನಿರ್ಣಯವನ್ನು ಮಾಡುವದು ಕೂಡುವದಿಲ್ಲ.

ಶ್ರೀ ಹಯಗ್ರೀವರೂಪಿ ಪರಮೇಶ್ವರನೂ ಕೂಡ ತನ್ನ ಒಂದು ಹಸ್ತದಲ್ಲಿ ವೇದಶಾಸ್ತ್ರ ಪುಸ್ತಕವನ್ನು ಹಿಡಿದುಕೊಂಡು ಬೆರಳಿನಿಂದ ತನ್ನಪಾದವನ್ನು ಭಕ್ತರಿಗೆ ತೋರಿಸುತ್ತ "ಈ ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ನನ್ನ ಪಾದವನ್ನು ಭಜನೆ ಮಾಡಿರಿ. ಈ ಶಾಸ್ತ್ರವಲ್ಲಿ ಹೇಳಿದ ನನ್ನ ಮಂತ್ರಗಳನ್ನು ಜಪಿಸಿರಿ. ಈ ಶಾಸ್ತ್ರದಲ್ಲಿ ಹೇಳಿದಂತೆ ಶಂಖ ಚಕ್ರಾದಿ ನನ್ನ ಚಿಹ್ನೆಗಳನ್ನು ಧರಿಸಿರಿ. ಇದರಿಂದ ನಿಮಗೆ ಸಕಲ ಐಹಿಕ ಪಾರತ್ರಿಕ ಭಾಗ್ಯಗಳು ಪ್ರಾಪ್ತವಾಗುತ್ತವೆ. ಕೊನೆಯಲ್ಲಿ ನನ್ನ ಪಾದದ ಪ್ರಾಪ್ತಿಯಾಗುತ್ತದೆ" ಎಂದು ಉಪದೇಶ ಮಾಡುತ್ತಾನೆ. ಮಂತ್ರವನ್ನು ಜಪಿಸಿರಿ ಎಂದು ತಿಳಿಸುವದಕ್ಕೋಸ್ಕರ ಕೈಯಲ್ಲಿ ಜಪಮಾಲೆಯನ್ನು, ಚಕ್ರ-ಶಂಖಾದಿ ತನ್ನ ಚಿಹ್ನೆಗಳನ್ನು ಧರಿಸಿರಿ ಎಂದು ಸೂಚನೆಯನ್ನು ಮಾಡುವದಕ್ಕೋಸ್ಕರ ಕೈಯಲ್ಲಿ ಶಂಖ ವನ್ನೂ ಧರಿಸಿದ್ದಾನೆ. . ಅದೆಲ್ಲವೂ ವೇದಶಾಸ್ತ್ರೋಕ್ತಪ್ರಕಾರವಾಗಬೇಕು ಎಂದು ತಿಳಿ ಸುವದಕ್ಕೋಸ್ಕರ ವೇದಪುಸ್ತಕದನ್ನು ಧರಿಸಿದ್ದಾನೆ. ಒಂದು ಹಸ್ತದಲ್ಲಿ ಜ್ಞಾನಮುದ್ರೆ ಯನ್ನು ತೋರಿಸುತ್ತಾ ವೇದ ಶಾಸ್ತ್ರದಿಂದ ಉಂಟಾಗುವ ಜ್ಞಾನವೇ ಯಥಾರ್ಥ ಜ್ಞಾನವೆಂದೂ ಸೂಚಿಸುತ್ತಿದ್ದಾನೆ. ಈ ಜ್ಞಾನದಿಂದಲೇ ತನ್ನ ಪಾದದ ಪ್ರಾಪ್ತಿ ಯಾಗುತ್ತದೆ ಎಂದು ಸೂಚಿಸುವದಕ್ಕೋಸ್ಕರ ಬೆರಳಿನಿಂದ ತನ್ನ ಪಾದವನ್ನು ತೋರಿ ಸುತ್ತಾ ಇದ್ದಾನೆ.

ಇದರಿಂದ ವೇದಶಾಸ್ತ್ರಕ್ಕೆ ಸಮಾನವಾದ ಇನ್ನೊಂದು ಶಾಸ್ತ್ರವಿಲ್ಲ. ಅದನ್ನು ಭಕ್ತಿಶ್ರದ್ಧಾಪೂರ್ವಕವಾಗಿ ಅಭ್ಯಾಸಮಾಡಿ ಮುಮುಕ್ಷುಗಳು ಉದ್ಧೃತರಾಗಬೇಕೆಂದು ಸಿದ್ಧವಾಯಿತು. ಪುರಾತನ ಕಾಲದಲ್ಲಿ ಇಂಥ 'ವೇದಶಾಸ್ತ್ರವನ್ನು ಅಭ್ಯಾಸಮಾಡಿದ ಸಜ್ಜನರು ಬಹಳವಾಗಿ ಈ ಭಾರತಭೂಮಿಯಲ್ಲಿದ್ದರು. ಈಗ ಅತ್ಯಂತ ವಿರಳರಾಗಿ ದ್ದಾರೆ. ಸಜ್ಜನರು ಸನ್ಮಾರ್ಗದಿಂದ ಭ್ರಷ್ಟರಾಗದೆ ಮಹಾ ಶಾಸ್ತ್ರವಾದ ವೇದದ ಅಧ್ಯಯನದಲ್ಲಿ ವಿಶೇಷವಾಗಿ ಆಸಕ್ತರಾಗಿದ್ದರೆ ಈ ಭಾರತಭೂಮಿಗೆ ದೊಡ್ಡ ಭೂಷಣ.

|| ಇತಿಶಂ ||



# ಪ್ರಕರಣ ೩

# ಮಧ್ವಮತದ ವಾಙ್ಮಯ ವಿಭೂತಿಗಳು

## ಮಧ್ವ ಸಿದ್ಧಾಂತವನ್ನು ಪ್ರಚುರಪಡಿಸಿದ ಮಹಾನುಭಾವರು

ಮುಖ್ಯ ಪ್ರಾಣರ ಅವತಾರರಾದ ಶ್ರೀಮನ್ಮಧ್ವಾಚಾರ್ಯರು ಸಜ್ಜನರಿಗೆ ಸದ್ಬೋಧವಾಗಬೇಕು, ಆಸ್ತಿಕರೆಲ್ಲರ ಉದ್ಧಾರವಾಗಬೇಕು ಎಂಬ ಸದ್ಬುದ್ಧಿಯಿಂದ ವೇದಸಿದ್ಧವಾದ ವೈಷ್ಣವ ಮತವನ್ನು ಪ್ರಸಾರ ಮಾಡಿದರು. ಅಸನ್ನಿಹಿತರಾದ ಶಿಷ್ಯರಿಗೂ ವೈಷ್ಣವ ಸಿದ್ಧಾಂತದ ರಹಸ್ಯವು ಗೊತ್ತಾಗಬೇಕೆಂದು ಅನೇಕ ಗ್ರಂಥಗಳನ್ನು ಬರೆದು ತಾವಿರುವ ವರೆಗೆ ಅವುಗಳನ್ನು ಪಾಠ ಹೇಳಿ, ಪ್ರವಚನ ಮಾಡಿ, ಪಂಡಿತ ರಾದ ಶಿಷ್ಯರನ್ನು ತಯಾರು ಮಾಡಿ ಅವರಿಂದ ಆ ದಿವ್ಯ ಜ್ಞಾನ ಗಂಗೆಯು ನಿರಂತರ ಪ್ರವಹಿಸುವಂತೆ ಮಾಡಿದರು. ಆಚಾರ್ಯರು ಅಂದು ಹೊತ್ತಿಸಿದ ಆ ಜ್ಞಾನ ಜ್ಯೋತಿಯ ನಂದಾದೀಪವು ಈ ವರೆಗೂ ಅವಿಚ್ಛಿನ್ನವಾಗಿ ನಡೆಮಕೊಂಡು ಬಂದಿದೆ. ಆಚಾರ್ಯರ ಮೂಲ ಗ್ರಂಥ ಹಾಗೂ ಟೀಕೆ, ಟಿಪ್ಪಣೆ, ಪರಾಮರ್ಶಾತ್ಮಕ ಗ್ರಂಥಗಳಿಂದಲೂ ಮತ್ತು ನಿರಂತರ ಪಾಠ ಪ್ರವಚನ ಉಪನ್ಯಾಸಾದಿಗಳಿಂದಲೂ ದಿವ್ಯವಾದ ತತ್ವ ಪ್ರಭೆಯನ್ನು ಅದು ಇಂದಿಗೂ ಬೆಳಗುತ್ತಲೇ ಇದೆ. ಆ ಬೆಳಕಿನ ಬೆಟ್ಟ ವನ್ನು ಹೊತ್ತು ಎತ್ತಿಹಿಡಿದ ತತ್ವಜ್ಞಾನಿ ಗುರುಗಳ ಜ್ಞಾನೋಪಾಸನೆಯ ಕ್ರಮವು ಉದ್ಬೋಧಕವೂ ಉಜ್ವಲವೂ ಆಗಿದೆ.

ಆ ವಿದ್ವದ್ ವಿಭೂತಿಗಳು ಶ್ರುತಿಸ್ಮೃತಿ ಸಿದ್ಧವಾದ ಮಧ್ವ ಸಿದ್ಧಾಂತವನ್ನೂ ಅನಾದಿಸಿದ್ಧವಾದ ಆ ವೈದಿಕ ವಿಜ್ಞಾನವನ್ನೂ ಆಸ್ತಿಕರ ತಲೆಯಲ್ಲಿ ಇಳಿಸಿ, ಹೃದಯ ದಲ್ಲಿ ನೆಲಸಿ, ಅವರಿಗೆ ಉದ್ಧಾರದ ಮಾರ್ಗವು ಗೋಚರವಾಗುವಂತೆ ಮಾಡಲಿಕ್ಕಾಗಿ ಕೈಕೊಂಡ ಕ್ರಮ ಶ್ರಮಗಳೂ, ಆಡಿದ ಪಾತ್ರ, ಮಾಡಿದ ಗೈಮೆ, ತೋರಿದ ಮೈಮೆ, ಎಲ್ಲವೂ ಅಸಾಧಾರಣವಾಗಿವೆ. ಅಂಥ ಕೆಲವು ಜ್ಞಾನಯೋಗಿಗಳ ಜ್ಞಾನ ಮಯವಾದ ತಪಶ್ಚರಣದ ಚಾರುಚರ್ಯೆ ಹಾಗೂ ಪವಿತ್ರ ಚರಿತ್ರಗಳಲ್ಲಿ ಕೆಲ ವನ್ನು ಮಾತ್ರ ಸ್ಥಳಾವಕಾಶವು ಹೆಚ್ಚಿಗಿಲ್ಲದ್ದರಿಂದ ಸಂಕ್ಷೇಪವಾಗಿ ಇಲ್ಲಿ ಕೊಡಲಾಗಿದೆ.

# ವೈರಾಗ್ಯನಿಧಿ ವಿಷ್ಣು ತೀರ್ಥರು

ಗುರು ಮಧ್ವರಿಗೆ ವಿಷ್ಣುತೀರ್ಥರು ರಾಮನಿಗೆ ಲಕ್ಷ್ಮಣನಿದ್ದಂತೆ. ಆ ಭೀಮನಿಗೆ ತಕ್ಕ ಅರ್ಜುನ. ಅದು ತಿರುಳು, ಇದು ನೆರಳು. ಅವನು ತ್ಯಾಗಿ, ಇವನು ವಿರಾಗಿ. ಅವನು ಯೋಗಿ. ಇವನು ಅನುಯೋಗಿ. ಅಣ್ಣನು ಸನ್ಯಾಸಿ, ತಮ್ಮ ಅದೇ ಹೆಜ್ಜೆಯ ಮೇಲೆಯೇ ಪಾದ ವಿನ್ಯಾಸಿ. ವೇದಾಂತ ವಿಶ್ವದಲ್ಲಿ ಹೀಗೆ ಸರ್ವಸಂಗ ಪರಿತ್ಯಾಗ ಮಾಡಿ ದಿವ್ಯ ಜ್ಞಾನದ ಪಲ್ಲಕ್ಕಿಯನ್ನು ಹೊತ್ತು ವ್ಯಾಸರ ಮೆರವಣಿಗೆ ಮಾಡಿದ ಬಂಧು ದ್ವಂದ್ವ ದುರ್ಮಿಳ.

ಶ್ರೀ ಮಧ್ವಾಚಾರ್ಯರು ಅಚ್ಯುತ ಪ್ರೇಕ್ಷರಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸ ಹೊರಟಾಗ ಅವರ ತಾಯಿ ತಂದೆಗಳು ವಿರೋಧ ಮಾಡಿದರು. "ಇದ್ದ ಒಬ್ಬ ಮಗನಾದ ನೀನು ನಮ್ಮನ್ನು ಬಿಟ್ಟು ಸನ್ಯಾಸಿಯಾದರೆ, ಮುಪ್ಪಿನ ಕಾಲದಲ್ಲಿ ನಮ್ಮನ್ನು ನೋಡುವವರಾರು ? ನಮ್ಮ ಸೇವೆ ಶುಶ್ರೂಷೆಗಳನ್ನು ಮಾಡುವವರಾರು?" ಎಂದು ಗೋಳಿಟ್ಟು ಅಲ್ಪರಿದರು. ವೇದ ಶಾಸ್ತ್ರಗಳ ಉಪದೇಶದ ತಿರುಳನ್ನೂ, ವಿರಕ್ತ ಜೀವನದ ಗರಿಮೆಯನ್ನೂ ಅರಿತ ಮಧ್ಯಗೇಹ ಭಟ್ಟರು ಮಗನ ಮುಂಬರುವ ಆಧ್ಯಾತ್ಮಿಕ ಉತ್ಕರ್ಷವನ್ನು ನೆನೆದು ಮನಸ್ಸಿಗೆ ಹೇಗೋ ಸಮಾಧಾನ ತಂದುಕೊಂಡರು. ಆದರೆ ತಾಯಿ ವೇದವತಿಗೆ ಮಾತ್ರ ತನ್ನ ಮುದ್ದು ಮಗ ವಾಸುದೇವನ ಅಗಲುವಿಕೆಯು ಅಸಹ್ಯವಾಯಿತು. ವಾಸುದೇವನು ಹುಟ್ಟಿದಾಗಲೇ ಏನೇನೋ ಕನಸುಗಳನ್ನು ಕಂಡ ಆ ಹೆತ್ತ ಕರುಳಿಗೆ ವಾಸುದೇವನ ಈ ಯತ್ಯಾಶ್ರಮ ಸ್ವೀಕಾರವು ಅತ್ಯಂತ ದುಃಖವನ್ನುಂಟು ಮಾಡಿತು. ತಾಯ್ಗರುಳಿನ ಈ ಅಳಲನ್ನು ಅರಿತ ವಾಸುದೇವನು ಅವರಿಗೆ ಮತ್ತೊಬ್ಬ ಮಗನು ಹುಟ್ಟುತ್ತಾನೆಂದು ಆಶ್ವಾಸನೆಯನ್ನಿತ್ತನು.

ಆ ಹಸುಳನ ಮಾತು ಹುಸಿ ಹೋಗಲಿಲ್ಲ. ವರ್ಷ ತುಂಬುವಷ್ಟರಲ್ಲಿ ಮುತ್ತಿನಂಥ ಒಂದು ಗಂಡು ಮಗು ತಾಯಿಯ ಉಡಿ ತುಂಬಿತು. ತೊಡೆಯ ಮೇಲೆ ಆಡಿತು.

" ಸರ್ವೇಷಾಂ ಅಭಯಂ ದತ್ವಾ ವಿರಕ್ತಃ ಪ್ರವ್ರಜೇತ್ " ಎಂಬ ಅನುಶಾಸನದಂತೆ ವಾಸುದೇವನು ತಾಯಿ–ತಂದೆಗಳಿಗೆ ಮುಪ್ಪಿನ ಕಾಲದಲ್ಲಿ ರಕ್ಷಣೆಗಾಗಿ ಬೇರೊಬ್ಬ ಮಗನನ್ನಿತ್ತು ತಾನು ಸನ್ಯಾಸಾಶ್ರಮವನ್ನು ಸ್ವೀಕಾರ ಮಾಡಿದನು. ಆ ಸನ್ಯಾಸಿಯೇ

ಶ್ರೀ ಮಧ್ವಾಚಾರ್ಯರು. ತಾಯ್ಗುರುಗಳಿನ ಒಲುಮೆಯ ಸುರುಳಿಯಿಂದ ತಮ್ಮನ್ನು ಬಿಡಿಸಿಕೊಳ್ಳಲಿಕ್ಕಾಗಿ ಆ ಮಧ್ವಾಚಾರ್ಯರು ತಮ್ಮ ತಾಯಿ–ತಂದೆಗಳಿಗೆ ನೀಡಿದ ಕರುಣೆಯ ಕೂಸೇ ಈ ವಿಷ್ಣುತೀರ್ಥರು.

ಅಣ್ಣನು ವಿರಕ್ತನಾಗಿ ಯತಿಯಾಗಿದ್ದರೆ ಈ ತಮ್ಮನು ಮನೆಯಲ್ಲಿದ್ದುಕೊಂಡೇ ವಿರಕ್ತಶಿಖಾಮಣಿಯಾಗಿದ್ದನು. ರಾಮನು ಊರು ಬಿಟ್ಟು ವನವಾಸವನ್ನು ಅನುಭವಿಸಿದರೆ, ಅವನ ತಮ್ಮನಾದ ಭರತನು ಊರಲ್ಲಿದ್ದುಕೊಂಡೇ ವನವಾಸವನ್ನನುಭವಿಸುತ್ತಿದ್ದನಂತೆ. ಅದರಂತೆ— ಈ ಮಧ್ವಾಚಾರ್ಯರ ತಮ್ಮನಾದರೂ ಮನೆಯಲ್ಲಿಯೇ ಮುನಿಯಂತಿದ್ದ. ಆ ಬ್ರಹ್ಮಚರ್ಯಾಶ್ರಮದಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳೇ ಅವನ ಸಂಗಾತಿಗಳಾಗಿದ್ದವು. ಹಡೆದ ತಾಯಿ–ತಂದೆಗಳನ್ನು ಪುಂಡರೀಕನಂತೆ ಅವನು ಪರಿ–ಪರಿಯಿಂದ ಸೇವಿಸಿದ; ಶ್ರವಣಕುಮಾರನಂತೆ ಅದೇ ಒಂದು ದೊಡ್ಡ ತಪಸ್ಸೆಂದು ಭಾವಿಸಿದ. ಇವನ ಈ ಸೇವೆಗೆ ಮಧ್ಯಗೇಹಭಟ್ಟ ಮತ್ತು ವೇದವತಿಯರು ವಾಸುದೇವನ ವಿರಹ–ವೇದನೆಯನ್ನು ಮರೆತರು. ಸರ್ವಜ್ಞರ ಪಿತೃಗಳು ಎನ್ನುವಂತೆ ಅಧ್ಯಾತ್ಮ ಜೀವನವನ್ನು ಬಾಳಿ ಅಧ್ಯಾತ್ಮರಸದಲ್ಲಿ ಬೆರೆತರು. ಆಯುಷ್ಯದ ಉತ್ತರಾಯಣದಲ್ಲಿ ಅವರು ನಿಶ್ಚಿಂತರಾಗಿ ಧ್ಯಾನ–ಗಾನ–ಜಪತಪಗಳನ್ನು ಮಾಡುವಂತೆ ಅವರ ಬದುಕಿಗೆ ಒಂದು ಭರವಸೆಯನ್ನೂ, ಅವರ ನಂಬುಗೆಗೆ ಒಂದು ನೆಚ್ಚಿಕೆಯನ್ನೂ ನೀಡಿದವ ಈ ಸರ್ವಜ್ಞರ ಸಹೋದರ.

ಮೊದಲು ಆ ಮಗನ ವೈರಾಗಿ ಜೀವನಕ್ಕೆ ಬೇಡವೆಂದ ಭಟ್ಟ ದಂಪತಿಗಳು ಮುಂದೆ ಅವನ ಸಾಧನೆ, ಜ್ಞಾನಪ್ರಸಾರ, ಪ್ರಭಾವಗಳನ್ನು ಕಂಡು ಅವನ ಆಧ್ಯಾತ್ಮಿಕ ಗೆಲುವಿನಲ್ಲಿಯೇ ಸಂತಸಗೊಂಡರು. ಅಂಥ ದೊಡ್ಡ ಜೀವನವನ್ನು ನಾಡಿಗೆ ನೀಡುವ ಭಾಗ್ಯವನ್ನು ಅನಂತೇಶ್ವರ ತಮಗೆ ದಯಪಾಲಿಸಿದನಲ್ಲ! ಎಂದು ತೃಪ್ತಿಗೊಂಡರು.

ಕೊನೆಗೆ ಆ ಎರಡು ಪುಣ್ಯ ಜೀವಿಗಳು ಶ್ರೀಹರಿಯ ಸ್ಮರಣೆಗೈಯುತ್ತಲೇ ಮರಣ ಹೊಂದಿದವು.

ಹಾಲು ಕೊಟ್ಟವರಿಗೂ ಸಾಲ ಕೊಟ್ಟವರಿಗೂ ಕೈವಲ್ಯದ ಕದ ತೆರೆದ ಮಗ ಹಡೆದ ತಂದೆ ಬಂದಾಗ ಬಾಗಿಲಿಗೆ ಬೀಗ ಹಾಕುವನೇ !

ಈ ಮಧ್ವ ಸೋದರನಿಗೆ ಪಿತೃಗಳ ಮರಣ ನಾರದರಿಗೆ ಮಾತ್ರ ವಿಯೋಗವಾದಂತಾಯಿತು. ಅವನು "ಅಪ್ಪ–ಅಪ್ಪ" ಎಂದು ಅಳುತ್ತ ಅಪ್ಪುಗೈ ಹಚ್ಚಿ ಕೂಡಲಿಲ್ಲ. ಮುಂದಿನ ಸಾಧನದೆಡೆಗೆ ಅವರ ಮನಸ್ಸು ಓಡುತ್ತಿತ್ತು. ಅವನ ಚಿತ್ತ ಅಣ್ಣನ ವಿರಕ್ತ ಜೀವನದ ತ್ಯಾಗದ ಅಂಚನ್ನೇ ತೀಡುತ್ತಿತ್ತು. ಅವನು ಮನೆಯಲ್ಲಿದ್ದರೂ ಎತ್ತೋ ಚಿತ್ತ, ಏನೋ ಯೋಚನೆ.

ಕಡಲ ತೀರದಲ್ಲಿ ಕಳ್ಳರಿಗೇನು ಕಡಿಮೆಯೇ! ಕಣ್ಮುಚ್ಚಿ ಕುಳಿತವನ ಮನೆಗೆ ಕನ್ನ ಹಾಕಿದರು ಚತುರ ಚೋರರು. ಯೋಚನೆ ಮಾಡುತ್ತ ಮನೆಯ ಒಡೆಯ ಕುಳಿತಾಗಲೇ ಇದ್ದದ್ದನ್ನೆಲ್ಲ ದೋಚಿಕೊಂಡು ಹೋದರು. ಈ ಮಧ್ಯಗೇಹ ಕುಮಾರನಿಗೆ ಅತ್ತ ಲಕ್ಷವೆಲ್ಲಿ! ಅವನಿಗಿರುವ ಯೋಚನೆ ಒಂದೇ— "ನಾನು ಆ ಸರ್ವಜ್ಞನಾದ ಅಣ್ಣನಿಗೆ ತಕ್ಕ ಸಹೋದರ ಎಂತಾಗಬೇಕು! ಅವನು ಸಿದ್ಧಿಯ ತುದಿಯಲ್ಲಿದ್ದಾಗ ನಾನು ಈ ಕೆಸರಿನಲ್ಲಿ ಒದ್ದಾಡಬೇಕೇ! ಜ್ಞಾನದ ಕಡಲನ್ನೆಲ್ಲ ಕುಡಿದ ಆ ನನ್ನ ಅಗಸ್ತ್ಯ-ಅಣ್ಣ ನನ್ನ ಬೊಗಸೆಯಲ್ಲಿ ಅವರ ನಾಕು ಹನಿ ಹಾಕಲಿಕ್ಕಿಲ್ಲವೇ! ಕಾಲಿಗೆ ಬಿದ್ದವರನ್ನು ಕೈ ಹಿಡಿದು ಉದ್ಧರಿಸುವ ಅಗ್ರಜ ಬೆನ್ನಿಗೆ ಬಿದ್ದ ನನ್ನನ್ನು ಕಡೆಗಣಿಸುವನೇ! ಛೇ, ಎಂದಿಗೂ ಇಲ್ಲ. ನಾನು ಅಲ್ಲಿಗೇ ಹೋಗಬೇಕು. ಆ ಜ್ಞಾನ–ಸಿಂಧುವಿನಿಂದ ನಾಕು ಬಿಂದುಗಳನ್ನಾದರೂ ಪಡೆಯಬೇಕು" ಎಂದು ಏನೇನೋ ವಿಚಾರ ವೀಚಿಗಳು ಮೆದುಳನ್ನು ಕಡೆಯುತ್ತಿದ್ದವು.

ಕತ್ತೆರೆಯುವಷ್ಟರಲ್ಲಿ ಮನೆ ಸ್ವಚ್ಛವಾಗಿದ್ದಿತು. ಮನೆ ಬಿಟ್ಟು ಹೋಗಲಿಕ್ಕೆ ಯೋಚಿಸುವಂಥದೇನನ್ನೂ ಕಳ್ಳರು ಉಳಿಸಿರಲಿಲ್ಲ. ಮನೆ ಬಿಟ್ಟು ಹೊರಡಲಿಕ್ಕೆ ಅನುಕೂಲ ಮಾಡಿಕೊಟ್ಟ ಚೋರ ವೀರರನ್ನು ಅಭಿನಂದಿಸಿದ ಆ ಮಾಧ್ವ ಬಂಧು.

ವೈರಾಗ್ಯದ ಹಂಬಲ ಅವನಿಗೆ ದುಂಬಾಲು ಬಿದ್ದಿತ್ತು. ಪೂರ್ಣಪ್ರಜ್ಞರಿದ್ದಲ್ಲಿ ಅದೇ ಅವನನ್ನು ಎಳೆದು ತಂದಿತು. ಎಲ್ಲ ಬಲ್ಲ ಅಗ್ರಜನ ಅಡಿದಾವರೆಗಳಿಗೆ ಅಡ್ಡ ಬಿದ್ದ ದೈನ್ಯಭರಿತನಾದ ಈ ಭರತ. "ಅಣ್ಣಾ, ನನಗೇನೂ ಬೇಡ. ನಾನು ನಿನ್ನ ತಮ್ಮನಲ್ಲವೇ! ನಿನ್ನ ಸರ್ವಸ್ವ ತ್ಯಾಗದ ಭಾಗ್ಯದಲ್ಲಿ ನನಗೂ ಪಾಲ ಬೇಕು. ಸರಿಪಾಲ ಬೇಡ. ನಿನ್ನ ಕರುಣೆಯ ಕಮಂಡಲುವಿನಲ್ಲಿಯ ಎರಡು ಹನಿ ಪ್ರೋಕ್ಷಿಸಿದರೂ ಸಾಕು. ನಿನ್ನ ವೈರಾಗ್ಯ ನಿಧಿಯಲ್ಲಿಯ ಒಂದೆರಡು ಎಸಳು. ನಿನ್ನ ಜ್ಞಾನ ಜ್ಯೋತಿಯ ಚೂರುಚಾರು ಕಿರುಬೆಳಕನ್ನು ನನ್ನ ಮೇಲೆ ಬೀರು. ನನಗಾವ ರಾಜ್ಯವೂ ಬೇಡ. ಆದರೆ ಪಾರಿವ್ರಾಜ್ಯವನ್ನು ಮಾತ್ರ ದಯಪಾಲಿಸು" ಎಂದು ಅಂಗಲಾಚಿದ.

"ಇವನ ವೈರಾಗ್ಯಕ್ಕೆ ಇನ್ನೂ ಪಾಕ ಬರಲಿ" ಎಂದು ಅವರ ಬಂಧು ಆನಂದ ತೀರ್ಥರು "ಇನ್ನೂ ಕೆಲ ದಿನ ಹೋಗಲಿ" ಎಂದು ಹೇಳಿ ಮನೆಗೆ ಕೊಟ್ಟು ಕಳಿಸಿದರು. ತಮ್ಮ ಮನೆಗೆ ಬಂದ ಈ ಆನಂದತೀರ್ಥ ಬಂಧುವಿಗೆ ಊಟ ರುಚಿಸಲಿಲ್ಲ. ಕಣ್ಣಿಗೆ ಕಣ್ಣು ಹತ್ತಲಿಲ್ಲ. ಅವನು ಮನೆಗೆ ಬಂದ ಬಳಿಕ ಒಮ್ಮೆಯೂ ಉಣ್ಣಲಿಲ್ಲ. ತಿನ್ನಲಿಲ್ಲ. ಮಲಗಲಿಲ್ಲ, ನಗಲಿಲ್ಲ, ನಲಿಯಲಿಲ್ಲ. ಅವನಿಗೆ ಇದ್ದದ್ದು ಒಂದೇ ಧ್ಯಾಸ. ತನ್ನ ಅಣ್ಣನ ಬಳಿಯಲ್ಲಿ ಸನ್ಯಾಸ ಸ್ವೀಕರಿಸಿ ಸರಿಯಾಗಿ ದೇವರ ಧ್ಯಾನ ಮಾಡಬೇಕು. ಆತ್ಮೋದ್ಧಾರ ಮಾಡಿಕೊಳ್ಳಬೇಕು. ಅಣ್ಣನ ಜ್ಞಾನ ಭಕ್ತಿ ವೈರಾಗ್ಯ ಭಾಗ್ಯದಲ್ಲಿ ತನ್ನ ಯೋಗ್ಯತಾನು

ಗುಣವಾಗಿ ಅವನ ಸೇವೆಯಿಂದ ಅವನ ಅನುಗ್ರಹದಿಂದ ಯತ್ಕಿಂಚಿದಂಶವನ್ನು ತಾನೂ ಪಡೆಯಬೇಕು." ಎಂದು ಇಂಥ ಹೆಬ್ಬಯಕೆಯನ್ನು ಹೃದಯದಲ್ಲಿ ಹೊತ್ತು ಹಿಂದೆ ನಂದಿ ಗ್ರಾಮದಲ್ಲಿ ಭರತನು ಶ್ರೀ ರಾಮನ ಆಗಮನವನ್ನು ನಿರೀಕ್ಷಿಸುತ್ತ ಹದಿನಾಲ್ಕು ವರ್ಷ ಶಿಲಾ ತಪಸ್ಸನ್ನು ಆಚರಿಸಿದಂತೆ ಈ ಮಧ್ವಾನುಜನು ಅಣ್ಣನ ಆಗಮನವನ್ನು ಕಾದು ಕುಳಿತನು.

ಆಚಾರ್ಯರು ತಮ್ಮ ಭಾವೀ ವಿರಹದ ಯೋಚನೆಯಿಂದ ದುಃಖಿತರಾದ ವಿಷ್ಣು ಮಂಗಲದ ಭಕ್ತರನ್ನೂ, ಮಂತ್ರಿ ಮಹಾರಾಜರನ್ನೂ ಸಂತೈಸಿ ತಮ್ಮ ಜನ್ಮ ಭೂಮಿಯಾದ ಪಾಜಕ ಕ್ಷೇತ್ರಕ್ಕೆ ದಯಮಾಡಿಸಿದರು. ಅಲ್ಲಿ ಅವರ ಸಹೋದರನು ಚಾತಕದಂತೆ ಅವರ ಮಾರ್ಗವನ್ನು ನಿರೀಕ್ಷಿಸುತ್ತ ಕುಳಿತಿದ್ದ. ಅವನ ವೈರಾಗ್ಯವು ಪರಿಪಕ್ವವಾಗಿದ್ದಿತು. ಸನ್ಯಾಸಕ್ಕೆ ಅವನು ಪೂರ್ಣ ಅರ್ಹನಾಗಿ ಬಿಟ್ಟಿದ್ದನು. ಆಚಾರ್ಯರು ಹಗಲಿರುಳೂ ಭಗವತ್ ಧ್ಯಾನವನ್ನು ಮಾಡುತ್ತ ಸರ್ವ ಸಂಗವನ್ನು ಪರಿತ್ಯಜಿಸಿ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕೆಂದು ಸನ್ಯಾಸ ಆಶ್ರಮವನ್ನು ಅಪೇಕ್ಷಿಸುತ್ತಿರುವ ತಮ್ಮ ಪೂರ್ವಾಶ್ರಮದ ಸಹೋದರರಿಗೆ ಯತ್ಯಾಶ್ರಮವನ್ನು ಕೊಟ್ಟು, ಪ್ರಣವ ಮಂತ್ರವನ್ನು ಉಪದೇಶಿಸಿ, ವಿಷ್ಣುತೀರ್ಥ ಎಂದು ಹೆಸರನ್ನು ಇಟ್ಟರು.

ವಿಷ್ಣುತೀರ್ಥರು ಆಶ್ರಮವನ್ನು ಸ್ವೀಕರಿಸಿದ ಬಳಿಕ ತಮ್ಮ ಸ್ವರೂಪ ಉದ್ಧಾರಕ ಗುರುಗಳಾದ ಆನಂದ ತೀರ್ಥರಲ್ಲಿ ಬ್ರಹ್ಮವಿದ್ಯೆಯ ರಹಸ್ಯವನ್ನು ಓದಿ ತಿಳಿದುಕೊಂಡರು. ಮಹಾ ತಪಸ್ವಿಗಳಿಗೂ ತಿಳಿಯದ ಬ್ರಹ್ಮಸ್ವರೂಪವನ್ನು ಆಚಾರ್ಯರು ಆ ಅನುಜನ ಯೋಗ್ಯತೆಯನ್ನು ಅರಿತು ರಹಸ್ಯವಾಗಿ ತಿಳಿಸಿಕೊಟ್ಟರು.

ವಿಷ್ಣು ತೀರ್ಥಾಚಾರ್ಯರು ಯತಿಯಾದ ಬಳಿಕ ಒಂದು ಕ್ಷಣವನ್ನೂ ವ್ಯರ್ಥ ಕಳೆಯಲಿಲ್ಲ. ಅಗ್ರಜರ ಬಳಿಯಲ್ಲಿ ಸತ್ಶಾಸ್ತ್ರವನ್ನು ಶ್ರವಣ ಮಾಡುವದು, ಹಾಗೂ ಅದರ ಅನುವಾದ ಮಾಡುವದು, ತಾವೂ ಮನಸ್ಸಿನಲ್ಲಿ ಮನನ ಮಾಡುವದು ಹೀಗೆ ನಿರಂತರವೂ ವೇದ ವೇದಾಂತ ಚಿಂತನದಲ್ಲಿಯೇ ಕಾಲ ಕಳೆಯುತ್ತಿದ್ದರು. ಇವರ ಇಂದ್ರಿಯ ನಿಗ್ರಹ, ಭಕ್ತಿ, ಸೇವಾ, ಶುಶ್ರೂಷೆ, ಪಾಠ ಪ್ರವಚನ, ವೈರಾಗ್ಯ ಮೊದಲಾದ ಗುಣಗಳಿಂದ ಆಚಾರ್ಯರು ಅವರಲ್ಲಿ ಇರಿಸಿದ ಕರುಣೆಯ ಅಂಕುರವು ಚಿಗಿತು, ಕುಡಿಯೊಡೆದು, ಹೂತು, ಕಾತು, ಹೆಮ್ಮರವಾಗಿ ಬೆಳೆಯಿತು. ಕರುಣೆಯ ಕಲ್ಪ ವೃಕ್ಷವು ಅವರ ಕೈ ಅಳತೆಯಲ್ಲಿಯೇ ಇದ್ದಿತು. ಆ ವಿಷ್ಣು ತೀರ್ಥರಿಗೆ. "ಇಂಥ ಮಹಾನುಭಾವರ ಚರಿತ್ರವನ್ನು ನಾನೆಂತು ಬಣ್ಣಿಸಬಲ್ಲೆನು" ಎಂದು ಅಸಹಾಯವಾಗಿ ನುಡಿದಿದ್ದಾರೆ ನಾರಾಯಣ ಪಂಡಿತರು ತಮ್ಮ ಮಧ್ವ ವಿಜಯದಲ್ಲಿ.

ಮಧ್ವಶಾಸ್ತ್ರ ವ್ಯಾಖ್ಯಾನದಲ್ಲಿ ಅವರು ಅಪ್ರತಿಮರಾಗಿದ್ದರು. ಹಾಗೂ ಅವರಿಗೆ ಮಂತ್ರ ಸಿದ್ಧಿ ಇದ್ದಿತು. ಮಧ್ವ ಶಿಷ್ಯರ ಎಣಿಕೆಯಲ್ಲಿ ಅವರಿಗೆ ಎಂದಿನಿಂದಲೂ ಕನಿಷ್ಠಿಕಾ ಬೊಟ್ಟಿನಲ್ಲಿ ಪಟ್ಟಾಧಿಷ್ಠಾನವು ಕ್ಲಪ್ತವಾಗಿದ್ದಿತು. ಅವರು ಮುಂದೆ ಆಚಾರ್ಯರಲ್ಲಿ ಕೆಲ ಸಮಯ ಇದ್ದು ಅವರಲ್ಲಿಯ ವೇದ ವೇದಾಂತದ ಶಾಸ್ತ್ರಗಳ ರಹಸ್ಯ ತಿಳಿದು, ದಿವ್ಯ ಮಂತ್ರಗಳ ಉಪದೇಶ ಪಡೆದು, ಪುಣ್ಯ ಕ್ಷೇತ್ರಗಳ ಯಾತ್ರೆ ಹಾಗು ತಪಸ್ಸನ್ನು ಮಾಡಬೇಕೆಂದು ಉತ್ತರದತ್ತ ನಡೆದರು. ಗಂಗಾದಿ ತೀರ್ಥಗಳಲ್ಲಿ ಮಿಂದು ತಾವು ಪಾವನರಾಗಿ ಆ ಪುಣ್ಯ ತೀರ್ಥಗಳನ್ನು ಪಾವನಗೈದರು.

ಅಲ್ಲಿಂದ ಅವರು ಹರಿಶ್ಚಂದ್ರ ಬೆಟ್ಟಕ್ಕೆ ಬಂದು ಘೋರವಾದ ತಪಸ್ಸನ್ನು ಮಾಡತೊಡಗಿದರು. ಹರಿಶ್ಚಂದ್ರ ಬೆಟ್ಟವು ವೀತರಾಗರಾದ ಅನೇಕ ಪೂತಾತ್ಮರು ತಪಂಗೈದು ಭಗವತ್ ಕೃಪೆಯನ್ನು ಪಡೆದ ಸಿದ್ಧಿ ಕ್ಷೇತ್ರವಾಗಿದ್ದಿತು. ಇಂಥ ಪುಣ್ಯ ಸ್ಥಳದಲ್ಲಿ ನಿಂತುಕೊಂಡು ವಿಷ್ಣು ತೀರ್ಥರು ಅನ್ನ ನೀರುಗಳನ್ನು ಬಿಟ್ಟು ಘೋರ ತಪಸ್ಸನ್ನು ಆಚರಿಸತೊಡಗಿದರು.

ಇವರ ಈ ಉಗ್ರ ತಪಸ್ಸನ್ನು ಕಂಡು ಶಿಷ್ಯರಿಗೆಲ್ಲ ತುಂಬ ಕಳವಳ ಉಂಟಾಯಿತು. ಇವರಿಂದ ಯತ್ಯಾಶ್ರಮ ಪಡೆದು ಶಿಷ್ಯರಾದ ಅನೇಕ ಸನ್ಯಾಸಿಗಳೂ ಸಾಮಾನ್ಯರೂ ಬಹು ವಿಧವಾಗಿ ಬಿನ್ನಹ ಮಾಡಿಕೊಂಡ ಬಳಿಕ ಅವರು ಐದು ದಿನಕ್ಕೊಮ್ಮೆ ಪಂಚಗವ್ಯ ಪ್ರಾಶನವನ್ನು ಮಾಡಿ ಮತ್ತೆ ತಪಸ್ಸಿಗೆ ತೊಡಗುತ್ತಿದ್ದರು. ಮುಂದೆ ಕೆಲವು ದಿನಗಳಲ್ಲಿ ಅದನ್ನೂ ಬಿಟ್ಟು–ಬಿಟ್ಟು ನೆಲದ ಮೇಲೆ ತಾವಾಗಿ ಉದುರಿ ಬಿದ್ದ ಎಲೆಗಳನ್ನು ತಿಂದು, ನೀರು ಕುಡಿದು, ಬೆಟ್ಟದ ತುಟ್ಟ ತುದಿಯಲ್ಲಿ ಕುಳಿತು ತಪಂಗೈಯ ತೊಡಗಿದರು. ಹೀಗೆ ದಿನ-ದಿನಕ್ಕೆ ಉಗ್ರವಾಗುತ್ತ ಹೋಯಿತು ಅವರ ದಿವ್ಯ ತಪಸ್ಸು. ಆ ಹರಿಶ್ಚಂದ್ರ ಗಿರಿಯಲ್ಲಿ ಗೌರೀ–ಶಂಕರ ಶಿಖರದಂತೆ ತಂಪು ಹೆಪ್ಪುಗಟ್ಟಿದ ಹಿಮ ಬಂಡೆಯೊಂದು ನಿಂತುಕೊಂಡಿತ್ತು. ಅದರ ಮೇಲೆ ಎಂಥ ತಪಸ್ವಿಗಳಿಗೂ ಒಂದು ಒಪ್ಪತ್ತುಕೂಡ ಕುಳಿತುಕೊಳ್ಳಲಿಕ್ಕಾಗುತ್ತಿರಲಿಲ್ಲ. ಇಂಥ ತಂಪುಗಲ್ಲಿನ ತಲೆಯಮೇಲೆ ಇಂದ್ರಿಯಗಳನ್ನು ನಿಗ್ರಹಿಸಿ, ಸ್ಥಿರವಾಗಿ ಕುಳಿತು ವಿಷ್ಣುತೀರ್ಥರು ಯಾವ ತಾಪಸರಿಗೂ ಮಾಡಲು ಅಶಕ್ಯವಾದ ಅತ್ಯುಗ್ರ ತಪಶ್ಚರಣಕ್ಕೆ ಮೊದಲು ಮಾಡಿದರು. ಪ್ರಾಣಾಯಾಮದಿಂದ ಅವರು ತಮ್ಮ ಶ್ವಾಸವನ್ನು ನಿರೋಧ ಮಾಡಿ ತಮ್ಮ ಹೃದಯದಲ್ಲಿ ಭಗವಂತನ ದಿವ್ಯವಾದ ರೂಪವನ್ನು ಧ್ಯಾನಮಾಡತೊಡಗಿದರು. ಆನಂದ ಪೂರ್ಣನಾದ ಮುಕುಂದನ ಸುಂದರವಾದ ರೂಪವನ್ನು ನೆನೆಯ ತೊಡಗಿದ ಅವರಿಗೆ ಹೊರಗಿನ ಪ್ರಪಂಚದ ಅರಿವೇ ಉಳಿಯಲಿಲ್ಲ. ಅವರ ಮನಸ್ಸು ಬಿಂಬರೂಪಿ ಯಾದ ಪರಮಾತ್ಮನ ಚರಣ ಕಮಲಗಳಲ್ಲಿ ಲೀನವಾಯಿತು. ಧ್ಯಾನೈಕತಾನಲೀನ

ಮಾನಸರಾಗಿ ಅವರು ಪುಣ್ಯದ ಪುತ್ಥಳಿಯಂತೆ ಅಚಲರಾಗಿ ಕುಳಿತು ಯಾವ ತಾಪಸಿಯೂ ಈ ವರೆಗೆ ಮಾಡದಂಥ ಅತ್ಯುತ್ಕಟ ತಪಸ್ಸನ್ನು ಆಚರಿಸಿದರು. ಅವರು ಬಹುಕಾಲ ಸರ್ವಜ್ಞಾಚಾರ್ಯರ ಸೇವೆ ಮಾಡಿದ ಪುಣ್ಯವು ಅಂದು ಲಭಿಸಿತು. ಶ್ರೀಮನ್ ನಾರಾಯಣನ ದಿವ್ಯಾಪರೋಕ್ಷವು ಅವರಿಗೆ ಆಯಿತು. ಶ್ರೀ ವಿಷ್ಣುತೀರ್ಥರು ಪಡೆವ ಸಿದ್ಧಿಯನ್ನು ನೋಡಿ ದೇವತೆಗಳುಕೂಡ ಆಶ್ಚರ್ಯಪಟ್ಟು "ಅಹೋ! ಇದೆಲ್ಲವೂ ಸರ್ವಜ್ಞಾಚಾರ್ಯರ ಸೇವೆಯ ಫಲ" ಎಂದು ಉದ್ಗಾರ ತೆಗೆದರು.

ಸಿದ್ಧಿ ಸಾಕ್ಷಾತ್ಕಾರಗಳನ್ನು ಪಡೆದ ಶ್ರೀ ವಿಷ್ಣುತೀರ್ಥಾಚಾರ್ಯರ ಮುಖದ ಮೇಲೆ ಅಪೂರ್ವವಾದ ಕಾಂತಿಯು ಮಿಂಚಾಡುತ್ತಿತ್ತು. ಅದನ್ನು ಕಂಡು ಅವರ ನೆಚ್ಚಿನ ಶಿಷ್ಯರಾದ ಅನಿರುದ್ಧತೀರ್ಥರು ಇವರಿಗೆ ಭಗವದಪರೋಕ್ಷವಾಗಿದೆಯಂದು ಅವರಿಗೆ "ಸಾಷ್ಟಾಂಗ" ವಂದನೆಗೈದರು. ಮತ್ತು ಆಚಾರ್ಯರಿಗೆ ಉಡುಪಿಗೆ ದಯ ಮಾಡಿಸಬೇಕೆಂದು ಬಿನ್ನಹ ಮಾಡಿಕೊಂಡರು.

ಅವರ ಪ್ರಾರ್ಥನೆಯಂತೆ ಆ ಮಧ್ವಾನುಜರು ರೌಪ್ಯಪೀಠಕ್ಕೆ ದಯಮಾಡಿಸಿದರು. ಆಚಾರ್ಯರ ಆಜ್ಞೆಯಂತೆ ತಮ್ಮ ಪರ್ಯಾಯವು ಬಂದಾಗ ಶ್ರೀಕೃಷ್ಣನ ಪೂಜೆಯನ್ನು ಅತ್ಯಂತ ಭಾವಭರಿತರಾಗಿ ವೈಭವದಿಂದ ನೆರವೇರಿಸಿದರು. ಇವರ ಮೇಲೆ ಆನಂದ ತೀರ್ಥರಿಗೆ ಮಹಾ ಪಂಡಿತರೆಂದೂ ವೈರಾಗ್ಯ ನಿಧಿಗಳೆಂದೂ ತಪೋ-ವಿಭೂತಿಗಳೆಂದೂ ವಿಶೇಷ ಪ್ರೇಮವಿಷ್ಟಿತು.

ಕಲಿಯ ಪ್ರಾಬಲ್ಯದಿಂದ ಧರ್ಮಗ್ಲಾನಿಯಾಗಿ ಸುಜ್ಞಾನವು ಲೋಪವಾಗುವ ಪ್ರಸಂಗ ಬಂದಾಗ ನಿಜವಾದ ತತ್ವಜ್ಞಾನವು ಭೂಲೋಕದಲ್ಲಿ ಪ್ರಸಾರವಾಗಲಿ ಎಂಬ ಸದುದ್ದೇಶದಿಂದ ಆಚಾರ್ಯರು ತಮ್ಮ ಎಲ್ಲ ಮೂವತ್ತೇಳು ಗ್ರಂಥಗಳನ್ನು ಸೇತುತಿಲ (ಕಡಿತ್ತಿಲ) ದಲ್ಲಿ ಹೂತಿಟ್ಟಿದ್ದಾರೆ. ಮಾನವೀಯ ಮಾನದಿಂದ ಮೂವತ್ತಾರುಸಾವಿರ ವರ್ಷಗಳು ಕಳೆದ ಬಳಿಕ ವಿಷ್ಣುತೀರ್ಥರು ಮತ್ತೆ ಉಡುಪಿಗೆ ಬಂದು ಆ ಸೇತುತಿಲ ದಲ್ಲಿಯ ಶ್ರೀ ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳನ್ನೆಲ್ಲ ಹೊರ ತೆಗೆದು ಸತ್ಸಿದ್ಧಾಂತವನ್ನು ಪ್ರಸಾರಮಾಡಬೇಕೆಂದು ಆಚಾರ್ಯರು ಅವರಿಗೆ ಅಪ್ಪಣೆಗೈದಿದ್ದಾರೆ.

ಶ್ರೀ ವಿಷ್ಣುತೀರ್ಥರು ಆಚಾರ್ಯರ ಅನಂತರ ಅನೇಕ ವರ್ಷ ಶ್ರೀ ಕೃಷ್ಣನ ಪೂಜೆ ಮಾಡಿ ವೇದವ್ಯಾಸತೀರ್ಥರೆಂಬ ಮಹಾನುಭಾವರಿಗೆ ಆಶ್ರಮವಿತ್ತು ನಮ್ಮ ಸರ್ವಜ್ಞಪೀಠ ಪರಂಪರೆಯನ್ನು ಮುಂದುವರಿಸಿ ನೀವು ಶ್ರೀ ಕೃಷ್ಣ ಸ್ವಾಮಿಯನ್ನೂ ಮತ್ತು ಸರ್ವಜ್ಞಾಚಾರ್ಯರು ನಮಗೆ ದಯಪಾಲಿಸಿದ ಶ್ರೀ ಭೂವರಾಹ ಮೂರ್ತಿ ಯನ್ನೂ ಪೂಜಿಸಬೇಕೆಂದು ಆದೇಶವಿತ್ತರು. ಅದೇ ಮುಂದೆ ಸೋದೆಯ ಶ್ರೀ ವಾದಿ

ರಾಜಮಠವೆಂದು ಸುಪ್ರಸಿದ್ಧವಾಯಿತು. ಮತ್ತು ಅನಿರುದ್ಧತೀರ್ಥ ಎಂಬ ತಮ್ಮ ಮತ್ತೊಬ್ಬ ಶಿಷ್ಯನನ್ನು ಸುಬ್ರಹ್ಮಣ್ಯಮಠದ ಸಂಪುಟ ನರಸಿಂಹ ದೇವರ ಪೂಜೆಯನ್ನು ಮಾಡಬೇಕೆಂದು ಆಜ್ಞಾಪಿಸಿದರು. ಅವರಿಂದ ಸುಬ್ರಹ್ಮಣ್ಯಮಠದ ಪರಂಪರೆಯು ಮುಂದುವರೆಯಿತು.

ಶ್ರೀ ವಿಷ್ಣುತೀರ್ಥರು— ಸನ್ಯಾಸ ಪದ್ಧತಿ, ಶ್ರವಣ ದ್ವಾದಶಿ ನಿರ್ಣಯ, ಮಧ್ವವಿಜಯ ಪ್ರಮೇಯ ಮಾಲಿಕಾ ಮುಂತಾದ ಅನೇಕ ಅಮೂಲ್ಯ ಗ್ರಂಥಗಳನ್ನು ಬರೆದಿದ್ದಾರೆ. ಇವರು ಚಿರಂಜೀವರಾಗಿ ಸುಬ್ರಹ್ಮಣ್ಯ ಕ್ಷೇತ್ರದ ಕುಮಾರ ಪರ್ವತದಲ್ಲಿ ಈಗಲೂ ತಪಸ್ಸನ್ನು ಆಚರಿಸುತ್ತಲಿದ್ದಾರೆ.



## ಮಧ್ವ ವಿಜಯದಲ್ಲಿ ಹೇಳಿದ ಶ್ರೀ ವಿಷ್ಣುತೀರ್ಥ ಚರಿತ್ರ

ವಿಧಿಭ್ರೂ ವಿಭ್ರಮಭ್ರಶ್ಯದ್ ಧನ-ಗೋ-ಧಾನ್ಯ ಸಂಪದಾ ।
ನಿರ್ವೇದಿನಾ ವೇದವಿದಾ ತೇನಾಪೆ ವೇದವಾದಿರಾಟ್ ॥

ಪಾರಿವ್ರಾಜ್ಯಂ ಪ್ರಾರ್ಥಯಂತಂ ಪಾದಾನಮ್ರಮಿಮಂ ಮುಹುಃ ।
ಸಮಯಾಪೇಕ್ಷಯೋರ್ವೀಕ್ಷ್ಯೋಗಮಯಾಮಾಸ ಧಾಮ ತಮ್ ॥

ನ ಜಘಾಸ ನ ಸುಷ್ವಾಪ ನ ಜಹಾಸ ಸ ಧೀರಧೀಃ ।
ಸಮಯಾರ್ಥೀ ಸ್ಮರನ್ ಜ್ಯೇಷ್ಠಂ ರಾಮಂ ರಾಮಾನುಜೋಯಥಾ ॥

ವಿಶುದ್ಧದ್ವಿಕುಲಂ ಶ್ರೌತಂ ಶುಚಿಂ ಕೃತಪಿತೃ ಕ್ರಿಯಂ ।
ವಿರಕ್ತಂ ವಿಷಯಾನ್ ಭುಕ್ತ್ವಾ ವ್ಯಧಾನ್ಮಧ್ವೋಽನುಜಂಯತಿಂ ॥

ಮಧ್ವಾನುಜೇ ಮಧ್ವನಾಥೋ ಯಂ ಪ್ರಸಾದಂ ವ್ಯಧಾತ್ತದಾ ।
ಸಚಿತ್ತಾವಿಷಯತ್ವಾದ್ವಾ ಗೋಪ್ಯತ್ವಾದ್ವಾ ನ ವರ್ಣ್ಯತೆ ॥

ಅಹೋ ಮಹಾಬೋಧ ಸೇವಾ ಮಹಿಮಾಸ್ಮಿನ್ ಯುಗೇ ಯತಃ ।
ಧನ್ಯೋಽಸೌ ಸಿದ್ಧಿಮಾಪೇಮಾಂ ಸ್ತೋಮರ್ತ್ಯೈರಿತ್ಯ ಲಾಲ್ಯತ ॥

ತೇನ ಸಂಪ್ರಾರ್ಥಿತಂ ಪ್ರಾಪ್ತಂ ರೂಪ್ಯಪೀಠಮಿಮಂ ಪುನಃ ।
ಸರ್ವಜ್ಞಂ ಕೃಪಯಾ ಸ್ವೇಷು ಸಂಪ್ರಾಪ್ತಂ ಮೇನಿರೇ ಪ್ರಜಾಃ ॥



## ಮಧ್ವ ಭಾಷ್ಯದ ಮೂಲ ಲಿಪಿಕಾರರಾದ

# ಶ್ರೀ ಸತ್ಯ ತೀರ್ಥರು

ಶ್ರೀಮನ್ ಮಧ್ವಾಚಾರ್ಯರ ನೆಚ್ಚಿನ ಶಿಷ್ಯರಲ್ಲಿ ಸತ್ಯತೀರ್ಥರು ಒಬ್ಬರು. ಶ್ರೀಮದಾನಂದ ತೀರ್ಥರು ತಮ್ಮ ಗುರುಗಳು ಅಲಂಕರಿಸಿದ ಸನಕಾದಿ ಪರಂಪರಾ ಪ್ರಾಪ್ತವಾದ, ಪರಮಹಂಸ ಪೀಠದಲ್ಲಿ ಶ್ರೀ ಸತ್ಯ ತೀರ್ಥರನ್ನು ಆಸ್ಥಾಪಿತಗೊಳಿಸಿದರು. ಅದೇ ಈಗ ಶ್ರೀ ಭೀಮನಕಟ್ಟೆ, ಮತ್ತು ಭಂಡಾರಕೆರೆ, ಮಠಗಳಾಗಿ ಕವಲೊಡೆದಿದೆ.

ಶ್ರೀ ಸತ್ಯ ತೀರ್ಥರು, ಮಧ್ವಾಚಾರ್ಯರ ನೆರಳಿನಂತೆ ಅವರನ್ನು ಅನುಸರಿಸುತ್ತಿದ್ದರು. ಅವರಿಗೆ ಆಚಾರ್ಯರಲ್ಲಿ ಸಚ್ಛಾಪ್ತ್ರವನ್ನು ಎಷ್ಟು ಬಾರಿ ಓದಿದರೂ ಬೇಸರವೂ ಇಲ್ಲ, ತೃಪ್ತಿಯೂ ಇಲ್ಲ. ಸರ್ವಜ್ಞರಲ್ಲಿ ಅವರಿಗೆ ಪ್ರಿಯವಾದ ಐತರೇಯ ಶಾಖೆಯನ್ನು ಅವರು ಓದಿದ್ದು ಒಂದು ಬಾರಿಯಲ್ಲ, ಎರಡು ಬಾರಿಯಲ್ಲ. ಮೂರು ಬಾರಿ.

> " ಯಸ್ತ್ರಿವಾರ ಮಿತರಾ ಸುತಶಾಖಾ ಸ್ವರ್ಥಮಗ್ರ್ಯ
> ಮಶೃಣೋತ್ ಪುರು ಸಂಖ್ಯಾತ್ "

ಎಂದು ಮಧ್ವವಿಜಯಕಾರರು ಬಹು ಗೌರವದಿಂದ ಅವರನ್ನು ಉಲ್ಲೇಖಿಸಿದ್ದಾರೆ.

ಆಚಾರ್ಯರು ಎಲ್ಲಿಯೇ ದಿಗ್ವಿಜಯಕ್ಕೆ ಹೊರಟರೂ ಅವರ ಜಯ ಪತಾಕೆಯಂತೆ ಸತ್ಯ ತೀರ್ಥರು ಅವರ ಮುಂದೆ ಇರಲೇಬೇಕು. ಆಚಾರ್ಯರ ಜೀವನ ಸರ್ವಸ್ವ ಅವರು ಪೂಜಿಸುವ ರಾಮ–ಕೃಷ್ಣಾದಿ ಪ್ರತಿಮೆಗಳು. ಭಗವಾನ್ ಶ್ರೀ ಬದರೀ ನಾರಾಯಣನು ಅನುಗ್ರಹಾತಿಶಯದಿಂದ ಕರುಣಿಸಿ ಕೊಟ್ಟ. ಶುದ್ಧ ಶಿಲಾತ್ಮಕವಾದ ವ್ಯಾಸ ಮುಷ್ಟಿಗಳು, ಇವೆಲ್ಲವುಗಳಿಂದ ಒಡಗೂಡಿದ ದೇವರ ಪೆಟ್ಟಿಗೆಯೇ ಜಗದ್ಗುರು ಸಂಸ್ಥಾನ. ಗಾಳಿ ಗುರುಗಳ ಎಲ್ಲ ಜೈತ್ರ ಯಾತ್ರೆಗಳಲ್ಲಿ, ಆ ದೇವಪೂಜೆಯ ಮಹಾ ಮಂಜೂಷಕೆಯು ಮೆಚ್ಚಿನ ಶಿಷ್ಯರಾದ ಸತ್ಯ ತೀರ್ಥರ ತಲೆಯ ಮೇಲೆಯೇ ಇರುತ್ತಿತ್ತು. ಇದರ ಮೇಲಿಂದಲೇ ನಾವು ಸುಲಭವಾಗಿ ಅರಿಯಬಹುದು ಆಚಾರ್ಯರಿಗೆ ಈ ಶಿಷ್ಯೋತ್ತಮನ ಮೇಲೆ ಎಂಥ ನಂಬುಗೆ, ಯಾವ ತರಹದ ನೆಚ್ಚಿಕೆ ಇದ್ದಿತೆಂಬುದನ್ನು.

ಒಂದು ಸಲ, ಬದರೀ ಯಾತ್ರೆಯ ಪ್ರಸಂಗದಲ್ಲಿ ಆಚಾರ್ಯರ ಪರಿವಾರವು, ಒಂದು ಘೋರಾರಣ್ಯದಲ್ಲಿ ನುಗ್ಗಿ ನಡೆದಿತ್ತು. ಆ ಗೊಂಡಾರಣ್ಯದಲ್ಲಿ ನೆಲಸಿದ ಓರ್ವ ಕ್ರೂರ ರಕ್ಕಸನಿಗೆ ಈ ಬದರೀ ಯಾತ್ರಿಕರ ತಂಡವು ಕಣ್ಣಿಗೆ ಬಿದ್ದಿತು. ಶ್ರೀರಾಮ ವೇದವ್ಯಾಸರ ಮಳಲಮುಷ್ಟಿಗಳುಳ್ಳ ದೇವತಾ ಮಂಜೂಷಿಕೆಯನ್ನು ತಲೆಯ ಮೇಲೆ ಹೊತ್ತು, ಸತ್ಯ ತೀರ್ಥರು ಮುಂದೆ ಮುಂದೆ ನಡೆಯುತ್ತಿದ್ದರು. ಹಿಂದಿನಿಂದ ಬರುವ ಸರ್ವಜ್ಞ ಗುರುಗಳಿಗೆ ಬರಲು ದಾರಿಯನ್ನು ಸರಿಪಡಿಸುತ್ತ ಆ ಹರಿ ಭಕ್ತರ ಹರಿಕಾರರಾಗಿ ಹೋಗುವದೇ ಅವರ ನಿತ್ಯ ಕ್ರಮ.

ರಾಮ – ಸೀತೆಯರು ಬರಲಿಕ್ಕಾಗಿ ಕಾಡು ಕಂಟೆಗಳನ್ನು ಕಡಿದು ದಾರಿ ಮಾಡುತ್ತ ಮುಂದೆ ಹೋಗುತ್ತಿರಲಿಲ್ಲವೇ ಅಂದು ಲಕ್ಷ್ಮಣ ! ಅಂತೆಯೇ ಇದ್ದಿತು ಈ ಸತ್ಯತೀರ್ಥರ ಮುಂಚೂಣಿಯಲ್ಲಿ ಸಂಚರಿಸುವ ಚಲನಚರ್ಯೆ.

ಆ ವಟ್ಟಡವಿಯಲ್ಲಿ ದಿಟ್ಟ ಹೆಜ್ಜೆ ಇಟ್ಟು ಮುನ್ನಡೆದ ಈ ಸತ್ಯತೀರ್ಥರ ಮೇಲೆ ಹೆಬ್ಬುಲಿಯೊಂದು ಹಾರಿ ಹೆಗಲಿಗೆ ಪಂಜರ ಹಚ್ಚಿ ನಿಂತಿತು. ಹಿಂದಿನಿಂದಲೇ ಬರುವ ಪೂರ್ಣಪ್ರಜ್ಞರು ಇದನ್ನು ನೋಡಿದರು. ಅದು ಬರೀ ಹುಲಿಯಾಗಿರದೇ ಅವನೊಬ್ಬ ದೈತ್ಯ ಕಲಿಯಾಗಿದ್ದ. ಸರ್ವಜ್ಞರಿಗೋ " ಮಮ ಪ್ರಾಣಾ ಹಿ ಪಾಂಡವಾಃ " ಎನ್ನುವಂಥ ಪ್ರೇಮಾಭಿಮಾನ ಈ ಶಿಷ್ಯನಲ್ಲಿ.

ಕೂಡಲೇ ಅವರು ಆ ದೈತ್ಯನ ಆಶಯವನ್ನು ತಿಳಿದರು. ಹತ್ತು ಮುಖದ ರಾವಣನನ್ನು ನೆತ್ತರು ಕಾರಿಸಿದ ಈ ಭೀಮ ಸನ್ಯಾಸಿಯ ಹತ್ತಿರ ಹೋದರೆ ತಾನೇ ಸತ್ತು ಹೋಗುವೆನೆಂದು ಹೆದರಿ, ಆ ಮರುಳ ದೈತ್ಯನು ವ್ಯಾಘ್ರ ವೇಷ ದಿಂದ ಅವರ ಶಿಷ್ಯನನ್ನು ಹಿಡಿದಿದ್ದನು.

ಈ ಹುಲಿ ವೇಷದ ಹಿನ್ನೆಲೆಯನ್ನು ಗುರುತಿಸಿದ ಗುರು ಮಧ್ವರು ಆ ದೈತ್ಯ ವ್ಯಾಘ್ರನಿಗೆ ತಮ್ಮ ಮುಷ್ಟಿ ಪ್ರಸಾದದ ರುಚಿಯನ್ನು ತೋರಿಸಿದರು. ಕೂಡಲೇ ಆ ದೈತ್ಯಾಧಮನು ಅವರನ್ನು ಬಿಟ್ಟು ಹೆದರಿ ಓಡಿಹೋದನು.

ಮೃತ್ಯುವಿನ ದವಡೆಯಿಂದಲೂ ಎತ್ತಿಕೊಂಡು ಬರಲು ಸಮರ್ಥರಾದ ಈ ಜೀವೋತ್ತಮರಿಗೆ ಈ ಹುಲಿಯ ಬಾಯಿಂದ ತಮ್ಮ ನೆಚ್ಚಿನ ಶಿಷ್ಯನನ್ನು ಉಳಿಸುವದು ಏನು ಅಚ್ಚರಿ !

ಸತ್ಯ ತೀರ್ಥರಿಗೆ ಗುರು ಮಧ್ವರಲ್ಲಿ ಅವ್ಯಾಜ ಪ್ರೇಮ ಅವಿಚ್ಛಿನ್ನ ಭಕ್ತಿ. ಅವರ ಗುರು ನಿಷ್ಠೆ ಸೀತೆಯ ರಾಮ ಭಕ್ತಿಯಂತೆ, ಗೋಪಿಕೆಯರ ಕೃಷ್ಣ ಭಕ್ತಿ

ಯಂತೆ ವಿರಹಾಸಹಿಷ್ಣುವಾಗಿದ್ದಿತು. ಪೂರ್ಣಬೋಧರು ಕಣ್ಣೆದುರು ಇಲ್ಲದಾಗ ಅವರಿಗೆ "ತ್ರುಟಿ ಯುಗಾಯತೆ ತ್ವಾಮ ಪಶ್ಯತಾಮ್" ಎನ್ನುವ ಪರಿಸ್ಥಿತಿ ಪ್ರೈದೋರುತ್ತಿತ್ತು. ಒಮ್ಮೆ ಇದರ ಪರೀಕ್ಷೆಯೂ ಆಗಿ ಹೋಯಿತು.

ಆನಂದತೀರ್ಥರು ಚಿಕ್ಕ ಬದರಿಯಲ್ಲಿದ್ದಾಗ ವ್ಯಾಸಪ್ರಭುಗಳು ಅವರಿಗೆ ತಮ್ಮ ಪುಣ್ಯಾಶ್ರಮಕ್ಕೆ ಬಂದು ಹೋಗಬೇಕೆಂದು ಆಮಂತ್ರಣವಿತ್ತರು. ದೇವದುರ್ಗಮವಾದ ಆ ಹಿರೇಬದರಿಯು ಮನುಷ್ಯರಿಗೆ ಅಗಮ್ಯ. ಆದುದರಿಂದ ಆಚಾರ್ಯರು ತಮ್ಮ ಎಲ್ಲ ಶಿಷ್ಯರಿಗೂ ಚಿಕ್ಕಬದರಿಯ ಅನಂತ ಮಠದಲ್ಲಿಯೇ ಇರಲು ಹೇಳಿ, ಶಿಲಾ ಶಾಶ್ವತ ವಾದ ಸಂದೇಶವನ್ನು ನೀಡಿ ತಾವು ವಾಯು ಸಂಚಾರವನ್ನು ಕೈಕೊಂಡರು.

ಶಿಷ್ಯರೆಲ್ಲರಿಗೂ ಎದೆಗುದಿ, ಗುರುಗಳನ್ನು ಬಿಟ್ಟಿರಲು ಯಾರಿಗೂ ಮನಸ್ಸಿಲ್ಲ.

"ನಾಥ ನಾಥ ಬತನೋಽತ್ರ ವಿನಾಥಾನ್
ಮಾ ತ್ಯಜೋರು ಕರುಣೋ ಭಗವನ್ ತ್ವಮ್"

ಎನ್ನೊಡೆಯಾ, ನಮ್ಮನ್ನು ಬಿಡಬೇಡ. ನೀನು ನಮ್ಮನ್ನು ತೊರೆದು ಹೋದರೆ ನಾವೆಲ್ಲರೂ ಅನಾಥರಾಗುವೆವು. ಕರುಣೆಯ ಕೈವಾರಿಯಾದ ಗುರುವರನೇ, ನಮ್ಮ ಕೈ ಬಿಡಬೇಡ". ಎಂದು ಎಲ್ಲರ ಹೃದಯಗಳೂ ಒಳಗೊಳಗೇ ನುಡಿಯುತ್ತಿದ್ದವು. ಅಂತರಂಗದಲ್ಲಿಯೇ ತುಡಿಯುತ್ತಿದ್ದವು, ಕಣ್ಣೀರು ಮಿಡಿಯುತ್ತಿದ್ದವು. ಗುರುಗಳ ಆಜ್ಞೆ ಯನ್ನು ಮೀರಬಾರದೆಂದು ಎಲ್ಲ ಶಿಷ್ಯರೂ ತಮ್ಮ ಈ ಹೃದಯದ ಅಳಲನ್ನು ಬಿಗಿ ಹಿಡಿದು ಅಲ್ಲಿಯೇ ಇದ್ದರು.

ಆದರೆ ಸತ್ಯತೀರ್ಥರಿಗೆ ಮಾತ್ರ ಗುರುವಿನ ವಿರಹವನ್ನು ತಾಳಲಿಕ್ಕೇ ಆಗಲಿಲ್ಲ. ಆನಂದತೀರ್ಥರನ್ನು ಬಿಟ್ಟು ಅಗಲಿ ಎಂದೂ ಇರದ ಅವರು ಇಂದು ಹೇಗೆ ಅವ ರನ್ನು ಬಿಟ್ಟು ಇರುವರು! ಅದರಲ್ಲಿಯೂ, ತಾವು ಮರಳಿ ಬರುವದು ನಿಯಮವಿಲ್ಲ ಎಂದು ಅವರು ತಮ್ಮ ಬಾಯಿಂದಲೇ ನುಡಿದಾಗ ಸತ್ಯತೀರ್ಥರ ಹಲ್ಲಣವೇ ಹಾರಿತು.

ಅವರ ಭಕ್ತಿ ಅತಿಶಯವು ಅವರನ್ನು ಮನೆಯಲ್ಲಿ ಉಳಿಯಗೊಡಲಿಲ್ಲ. ಅವರ ಶ್ರದ್ಧಾ ಜಾಡ್ಯವು ಗುರುಗಳ ಹಿಂದಿನಿಂದಲೇ ಸೆಳೆಯಿತು. ಅವರಿಗೆ ತಾವೇನು ಮಾಡು ತ್ತಿರುವೆವು ಎಂಬುದು ತಿಳಿಯದೆ ಅವರು ಆ ಗುರುವಿನ ಬೆನ್ನು ಹತ್ತಿದರು.

ಆ ಗುರುವೋ, "ಮನೋಜವಂ ಮಾರುತ ತುಲ್ಯ ವೇಗಂ". ಅವರ ಸಂಚಾರ— ಗಿರಿಯಿಂದ, ದರಿಗೆ. ಶೃಂಗದಿಂದ ಶಿಖರಕ್ಕೆ. ಈ ಗರುಡೋಡ್ಡಾಣದ ಶೈಲ

ಚಂಕ್ರಮಣದಿಂದ ಮುಂದುವರಿಯುವ ಆ ಗಾಳಿಗುರುವನ್ನು ಬೆನ್ನು ಹತ್ತಿ ಈ ಶಿಷ್ಯ ಗಾಳಿಗರವಾದ. ಗುರುವನ್ನು ಬಿಡಬಾರದು ಎಂಬ ಅದಮ್ಯವಾದ ಸಂಕಲ್ಪ ಶಕ್ತಿಯು ಅವನಿಗೆ ಇರುವ ಏಕಮಾತ್ರ ಹಂಬಲಕ್ಕೆ ಬೆಂಬಲವಾಗಿದ್ದಿತು. ಈ ಗುರು ಭಕ್ತಿಯು ನೀಡಿದ ಆತ್ಮ ಶಕ್ತಿಯಿಂದಲೇ, ಅವನು ದುರ್ಗಮವಾದ ಆ ಭಯಂಕರ ಅರಣ್ಯ ಮಾರ್ಗದಲ್ಲಿ ಗುರುವನ್ನು ಬಿಡದೇ ಹಿಂಬಾಲಿಸಿದ. ಗಿರಿದರಿ, ಹಳ್ಳಕೊಳ್ಳ, ನದಿನಾಲೆ, ಶೈಲಶಿಖರ, ಯಾವುದೂ ಅವನಿಗೆ ಆತಂಕವೆನಿಸಲಿಲ್ಲ. ಬೆಳಗಿನಿಂದ ಸಾಯಂಕಾಲದ ವರೆಗೂ ಶಿಖರಗಳನ್ನು ಏರುತ್ತ, ಕಣಿವೆಗಳಲ್ಲಿ ಜಾರುತ್ತ, ಕಗ್ಗಾಡುಗಳಲ್ಲಿ ಮುಗ್ಗರಿ ಸುತ್ತ, ಕುಂಟುತ್ತ ಕುದುರುತ್ತ ಗುರುವನ್ನು ಅನುಸರಿಸುತ್ತಲೇ ನಡೆದಿದ್ದ.

ಸಂಜೆಯ ಹೊತ್ತಿಗೆ, ಸಹಜವಾಗಿ ಗುರುಗಳು ಹಿಂತಿರುಗಿ ನೋಡಿದರು. ವಾನರೇಂದ್ರನಂತೆ ಹಾರುತ್ತ ನಡೆದ ತಮ್ಮನ್ನು ತಮ್ಮ ಶಿಷ್ಯನೊಬ್ಬನು ಅನುಸರಿಸಿ, ದೂರಿಂದ ಸಾರುತ್ತಲಿರುವದು, ಗಗನ ಚುಂಬಿತವಾದ ಶೈಲ ಶಿಖರಗಳೊಂದಿಗೆ ಹೋರುತ್ತಲಿರುವುದು ಅವರ ಕಣ್ಣಿಗೆ ಬಿದ್ದಿತು. ಕೂಡಲೇ ಆಚಾರ್ಯರಿಗೆ ಆ ಶಿಷ್ಯನ ಬಗೆಗೆ ಬಂದದ್ದು ಕೋಪವಲ್ಲ; ಕರುಣೆ. ತಮ್ಮ ಆಜ್ಞೆಯನ್ನು ಮೀರಿ, ಸಾರಿ, ತಮ್ಮ ಹಿಂದೆ ಬರುತ್ತಿದ್ದಾನೆ; ಎಂಬ ಭಾವನೆಯ ಬದಲು, ನನ್ನ ವಿರಹವನ್ನು ತಾಳಲಾರದೆ ನನ್ನನ್ನೇ ಹಿಂಬಾಲಿಸಿ ಬರುವ ಈ ಶಿಷ್ಯನು ಇಷ್ಟು ಹೊತ್ತಿನವರೆಗೆ ಈ ದುರ್ಗಮ ಮಾರ್ಗದಲ್ಲಿ ನಡೆದು ಎಷ್ಟು ಕಷ್ಟಪಟ್ಟನಲ್ಲ! ಎಂಬ ಮರುಕ ತುಂಬಿ ಬಂದಿತು. ಕರುಣೆ ಕೋಡಿಯೊಡೆಯಿತು. ಗುರುವಿನ ಕರುಳು ಕರಗಿತು.

ಕೂಡಲೇ ಅವರು ಅವನಿಗೆ ಮರಳಿ ಹೋಗು, ಎಂದು ಬೆರಳು ಬೀಸಿದರು. ಅವರು ಬೀಸಿದ ಬೆರಳಿನಿಂದ ಸೂಸಿದ ಸುಳಿ ಗಾಳಿಯು ಈ ಅಚ್ಚುಮೆಚ್ಚಿನ ಶಿಷ್ಯ ನನ್ನು ಹಸುಗೂಸಿನಂತೆ ಹಾಯಾಗಿ ಎತ್ತಿ; ಅವನು ಹೊರಟ ಅನಂತ ಮಠದಲ್ಲಿ ತಂದು ಇಳಿಸಿತು. ಉಳಿದೆಲ್ಲ ಶಿಷ್ಯರು ಅರೆದಾರಿಯ ವರೆಗೆ ಗುರುಗಳನ್ನು ಬೀಳ್ಕೊಟ್ಟು ಬಂದ ಈ ಸತ್ಯ ತೀರ್ಥರನ್ನು ಮುಕುರಿದರು.

ಗುರುಗಳ ಹಿಂದಿನಿಂದ ನಡೆದ ಅವರ ಸಂಚಾರದ ಅನುಭವವು ಏನು ಎಂದು ಕೇಳಿದರು. ಆಗ ಸತ್ಯತೀರ್ಥರು ಹೇಳಿದ ಮಾತು ಅನುಭೂತಿಪೂತ ವಾಗಿದ್ದಿತು.

"ನಮ್ಮ ಗುರು ಬರಿ ಗುರುವಲ್ಲ; ಗಾಳಿ. ಅವರು ನರರಲ್ಲ; ವಾನರ. ಅವರು ನಡೆಯುವದಿಲ್ಲ; ಹಾರುತ್ತಾರೆ. ಅವಕ್ಕಿಂತ ಮುಂದೆ ಹರಿಯುತ್ತಾರೆ. ಅವರು ಹಾರಿ ದಾಗ ಹನುಮ ಎನಿಸುತ್ತದೆ. ಜಿಗಿದಾಗ ಭೀಮ ಎನಿಸುತ್ತದೆ. ಆ ಹನುಮ ಭೀಮರೇ ಈ ಮಧ್ವರಾಗಿದ್ದಾರೆ."

ತ್ರಿವಿಕ್ರಮ ಪಂಡಿತರು ಆಚಾರ್ಯರ ಮೂರು ರೂಪಗಳನ್ನು ಕಣ್ಣಿನಿಂದ ಕಂಡರೆ ಸತ್ಯ ತೀರ್ಥರು ಆ ಮೂರೂ ರೂಪಗಳ ಕಾರ್ಯ, ಸ್ಥೈರ್ಯ, ಶಕ್ತಿ, ಸಡಗರ ಗಳನ್ನು ಕಣ್ಣಾರೆ ಕಂಡ ಪುಣ್ಯವಂತರು. ಅವರ ಗುರು ಭಕ್ತಿಯೇ ಈ ವಾಯು ಲೀಲಾ ವೈಭವವನ್ನು, ಹೈಮಾಚಲದ ರಮ್ಯಾಗಮ್ಯ ಸ್ಥಳಗಳಲ್ಲಿ ಕರೆದೊಯ್ದು ನಡೆದು ತೋರಿಸಿ ಕೃತಾರ್ಥರನ್ನಾಗಿಸಿತು.

ಶ್ರೀಮದಾನಂದತೀರ್ಥರ ಮಧ್ವ ಭಾಷ್ಯವು ನಮ್ಮೆಲ್ಲರ ಕೈಗೆ ಇಂದು ದೊರ ಕುತ್ತಲಿರುವುದು ಸತ್ಯತೀರ್ಥರ ಪುಣ್ಯ. ಅವರ ಬಾಯಿಂದ ಸ್ಫೂರ್ತಿ ಗಂಗೆಯು ಹೊಮ್ಮಿ ಹರಿಯುವಾಗ, ಅದನ್ನು ಮಹಾ ದೇವರಂತೆ ತಮ್ಮ ತಲೆಯಲ್ಲಿ ತೆಗೆದು ಕೊಂಡು, ಲಿಪಿಬದ್ಧಗೊಳಿಸಿ, ಸತ್ಯತೀರ್ಥರೇ ಜಗತ್ತಿಗೆ ನೀಡಿದವರು.

ಈ ಭಾಷ್ಯದಲ್ಲಿಯ ಒಂದು ಅಕ್ಷರವನ್ನು ಬರೆದರೂ ಗಂಗೆಯ ತಡಿಯಲ್ಲಿ, ಉತ್ತುಂಗವಾದ ಹರಿ ಮಂದಿರವನ್ನು ನಿರ್ಮಿಸಿದಷ್ಟು ಪುಣ್ಯ ಬರುವದಂತೆ. ಅಂಥ ಶ್ರೀಮದಾನಂದತೀರ್ಥರ ದಿವ್ಯ ಭಾಷ್ಯವನ್ನು ಕೇಳಿ, ಮೊಟ್ಟಮೊದಲು ಇಡಿಯಾಗಿ ಬರೆದು ಜಗತ್ತಿಗೆ ನೀಡಿದ ಸತ್ಯತೀರ್ಥರು ಎಂಥ ಪುಣ್ಯವಂತರಿರಬೇಡ !

ಚಂದ್ರ–ಸೂರ್ಯರಿರುವ ವರೆಗೂ ಮಧ್ವಭಾಷ್ಯದ ಕೀರ್ತಿಯು ಭೂಲೋಕದಲ್ಲಿ ಮೆರೆಯುತ್ತದೆ. ಮಧ್ವಭಾಷ್ಯವು ಇರುವ ವರೆಗೂ ಶ್ರೀ ಸತ್ಯತೀರ್ಥರ ಹೆಸರು ಅಜ ರಾಮರವಾಗಿ ಉಳಿಯುತ್ತದೆ.

ಆಮುದರಿಂದಲೇ ಮಧ್ವಾಚಾರ್ಯರು ತಮ್ಮ ಈ ಪ್ರಿಯ ಶಿಷ್ಯನನ್ನು ತಮ್ಮ ನಂತರ ತಾವೇರಿದ ಗುರುಗಳ ಗದ್ದುಗೆಯ ಮೇಲೆ ಕೂಡಿಸಿ ಕೃತಾರ್ಥರನ್ನಾಗಿ ಮಾಡಿದರು. ತಾವು ಪೂಜಿಸಿದ ರಾಮ–ಲಕ್ಷ್ಮಣ–ಸೀತಾ ವಿಗ್ರಹಗಳನ್ನೂ ಶ್ರೀ ದಾಮೋದರ ಸಾಲಿಗ್ರಾಮವನ್ನೂ ಇತ್ತು ಕರುಣಿಸಿದರು.

ಜನಮೇಜಯ ರಾಜನು ಕೊಟ್ಟ ತಾಮ್ರ ಶಾಸನವು ಸತ್ಯತೀರ್ಥರ ಮಠ ದಲ್ಲಿಯೇ ಇದೆ.



## ವಾದದಲ್ಲಿ ವಿಕ್ರಮ ಸ್ಥಾಪಿಸಿದ

# ತ್ರಿವಿಕ್ರಮಪಂಡಿತಾಚಾರ್ಯರು

ವಿಷ್ಣುಮಂಗಲವು ದಕ್ಷಿಣ ದೇಶದ ಒಂದು ದಿವ್ಯಕ್ಷೇತ್ರ. ಅಲ್ಲಿಯ ವಿಷ್ಣು ದೇವಾಲಯವು ನಾಡಿನಲ್ಲೆಲ್ಲ ಪ್ರಸಿದ್ಧವಾದ ಪವಿತ್ರಸ್ಥಳವೆನಿಸಿದೆ. ಎಂಟು ನೂರು ವರ್ಷಗಳ ಹಿಂದೆ ಆ ದೇಶದಲ್ಲಿ ಜಯಸಿಂಹ ಎಂಬ ದೊರೆಯು ರಾಜ್ಯವಾಳುತ್ತಿದ್ದನು. ಶ್ರೀಮನ್ ಮಧ್ವಾಚಾರ್ಯರು ಉಡುಪಿಯಲ್ಲಿ ಜನ್ಮವೆತ್ತಿ, ಲೋಕಜೀವನವನೆಲ್ಲ ಪಾವನಗೈಯುತ್ತಿದ್ದ ಕಾಲವದು. ಆಚಾರ್ಯರ ಕೀರ್ತಿಯನ್ನು ಕೇಳಿದ ಜಯಸಿಂಹ ನೃಪನಿಗೆ ಆ ಪುಣ್ಯ ಪುರುಷರ ಅಡಿದಾವರೆಯ ಹುಡಿಯು ತನ್ನ ನಾಡಿನಲ್ಲಿ ಬೀಳುವಂತೆ ಮಾಡಬೇಕೆಂದು ಬಲವತ್ತರವಾದ ಬಯಕೆಯಾಯಿತು. ಅವನ ಭಕ್ತಿಯುಕ್ತವಾದ ಬೇಡಿಕೆಗಳನ್ನು ಮನ್ನಿಸಿ ಆನಂದ ತೀರ್ಥರು ವಿಷ್ಣುಮಂಗಲಕ್ಕೆ ದಯಮಾಡಿಸಿದರು. ಆಚಾರ್ಯರ ಪಾದ ಧೂಳಿಯ ಕಣವನ್ನು ರಾಜನು ಹಣೆಗೆ ಹಚ್ಚಿಕೊಂಡು ಕೃತಾರ್ಥನಾದ.

ವಿಷ್ಣು ಮಂಗಲ ದೇವಾಲಯದಲ್ಲಿ ಆಚಾರ್ಯರ ಸ್ವಾಗತಕ್ಕಾಗಿ ನೆರೆದ ಸಭೆಯಲ್ಲಿ ಕೂಡಿದ ಪಂಡಿತರಿಗೆ ಲೆಕ್ಕವಿಲ್ಲ. ಸೇರಿದ ನರ-ನಾರಿಯರಿಗೆ ಮಿತಿಯಿಲ್ಲ. ಜನಸ್ತೋಮದಿಂದ ಕಿಕ್ಕಿರಿದ ಆ ಪ್ರಚಂಡ ಸಭೆಯಲ್ಲಿ ಋಜುಪುಂಗವರಾದ ಮಧ್ವಮುನಿಗಳು, ಮೇಘ ಗಂಭೀರವಾದ ಧ್ವನಿಯಿಂದ ಭಾಗವತ ಪ್ರವಚನವನ್ನು ಮಾಡಿದರು. ಆಚಾರ್ಯರ ಮಾತಿನ ಮಾದರಿ, ಭಾಷೆಯ ಮಾಧುರಿ, ವಿದ್ವತ್ತೆಯ ಚಾತುರಿ ಮತ್ತು ಅಸ್ಖಲಿತವಾದ ಅವರ ವಾಗ್ವೈಖರಿ ಇವುಗಳನ್ನೆಲ್ಲ ಕಂಡು – ಕೇಳಿ ಸಭಿಕರೆಲ್ಲರೂ ಹಿಗ್ಗಿ ಸಂತಸದಿಂದ ಪುಲಕಗೊಂಡರು. ಮಹಾರಾಜನಂತೂ ಇಂಥ ಸದ್ಗುರುಗಳು ದೊರಕಿದ್ದು ತನ್ನ ಅಹೋಭಾಗ್ಯ ಎಂದುಕೊಂಡ. ಕಳೆದು ಹೋದ ಅವರ ಗ್ರಂಥ ಭಾಂಡಾರವನ್ನು ಪತ್ತೆ ಮಾಡಿ ತರಿಸಿ ತಂದು ಒಪ್ಪಿಸಿ ದಯಮಾಡಿ ಸ್ವೀಕರಿಸಬೇಕು ಎಂದು ಬಿನ್ನವಿಸಿದ. ಆಚಾರ್ಯರು ತಮ್ಮ ಅಪೂರ್ವವಾದ ಗ್ರಂಥ ಭಾಂಡಾರವನ್ನು ಸ್ವೀಕರಿಸಿ ರಾಜನನ್ನೂ ಸಭಿಕರನ್ನೂ ಆಶೀರ್ವಾದಗಳಿಂದ ಅನುಗ್ರಹಿಸಿದರು. ಈ ಮಹಾರಾಜನ ಭಾಗ್ಯಕ್ಕೆ ಎಣೆ ಇಲ್ಲ ಎಂದಿತು ನೆರೆದ ಜನ.

ಅಷ್ಟರಲ್ಲಿ ಆ ಸಭೆಯಲ್ಲಿ ತೇಜಃಪುಂಜವಾದ ಒಂದು ವ್ಯಕ್ತಿಯು ಪ್ರವೇಶಿಸಿತು. ಅವರು ನೇರವಾಗಿ ಬಂದು ಆಚಾರ್ಯರಿಗೆ ನಮಸ್ಕಾರ ಮಾಡಿದ್ದರು. ಅವರ ಪಾದದಡಿಯಲ್ಲಿ ಬಾಗಿ ವಿನಯದಿಂದ ನಮ್ರನಾಗಿ ಕುಳಿತ ಜಯಸಿಂಹ ದೊರೆಯನ್ನು ನೋಡಿದರು. ಮತ್ತು ಗಂಭೀರವಾದ ಧ್ವನಿಯಿಂದ ಆಶೀರ್ವಾದ ಪದ್ಯವೊಂದನ್ನು ಹಾಡಿದರು.

ಸ್ವಃಸುಂದರೀ ಭುಜಲತಾ ಪರಿರಂಭಣೀ ಧೂಃ ।
ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ॥
ಆನಂದತೀರ್ಥ ಭಗವತ್ಪದ ಪದ್ಮರೇಣುಃ ।
ಸ್ವಾನಂದದೋ ಭವತು ತೇ ಜಯಸಿಂಹ ಭೂಪ ॥

"ಆನಂದತೀರ್ಥ ಭಗವತ್‌ಪಾದರ ಅಡಿದಾವರೆಯ ಹುಡಿಯನ್ನು ಮುಡಿಯಲ್ಲಿ ಧರಿಸಿದವರನ್ನು ಸ್ವರ್ಗ ಸಿರಿಯು ದಾಸಿಯಾಗಿ ಸೇವಿಸುತ್ತದೆ. ಇಂಥ ಶ್ರೀ ಮಧ್ವಾಚಾರ್ಯರ ಚರಣ ಧೂಳಿಯ ಕಣವು ನಿನಗೆ ಆನಂದವನ್ನು ನೀಡಲಿ."

ಆಗಂತುಕರ ಈ ಆಶೀರ್ವಾದ ಪದ್ಯದಲ್ಲಿಯ ಸಂಸ್ಕೃತದ ಸೊಗಸು - ಸೌಂದರ್ಯವನ್ನೂ ನಾದ ಮಾಧುರ್ಯವನ್ನೂ ಕೇಳಿದ ಸಭಿಕರೆಲ್ಲರೂ ಸ್ತಬ್ಧರಾದರು. ವಿಸ್ಮಯ ಮುಗ್ಧರೂ ಆದರು. ಪಂಡಿತ ಪಾಮರರೆಲ್ಲರೂ ಆ ಪಂಡಿತ ಪ್ರಕಾಂಡರನ್ನು ಕೌತುಕದಿಂದ ನೋಡತೊಡಗಿದರು.

ಅವರು ಬೇರಾರೂ ಆಗದೆ ತುಳು ದೇಶದ ಸುಪ್ರಸಿದ್ಧ ಅದ್ವೈತ ವಿದ್ವಾಂಸರಾದ ತ್ರಿವಿಕ್ರಮಪಂಡಿತರೇ ಆಗಿದ್ದರು.

ತ್ರಿವಿಕ್ರಮಪಂಡಿತಾಚಾರ್ಯರ ಮನೆತನವು ದಕ್ಷಿಣ ದೇಶದಲ್ಲೆಲ್ಲ ವಿದ್ವಾಂಸರ ಮನೆತನವೆಂದು ಪ್ರಸಿದ್ಧವಾಗಿತ್ತು. ಆಂಗಿರಸ ಗೋತ್ರದ ಈ ಪಂಡಿತ ಕುಟುಂಬದಲ್ಲಿ ಸುಬ್ರಹ್ಮಣ್ಯಪಂಡಿತರು ಮಹಾ ವಿದ್ವದ್ವರೇಣ್ಯರಾಗಿದ್ದರು. ಅವರ ಮಕ್ಕಳಾದ— ತ್ರಿವಿಕ್ರಮ ಪಂಡಿತರೂ ಸರ್ವವಿದ್ಯೆಗಳ ತವರು ಮನೆಯಂತಿದ್ದರು. ಅವರ ತಾಯಿ–ತಂದೆಗಳು ಹರಿ–ಹರೇಶ್ವರನ ಸೇವೆ ಮಾಡಿ, ಅವನ ಕೃಪಾ–ಪ್ರಸಾದದಿಂದ ಇಂಥ ವಿದ್ವತ್ ಪುತ್ರನನ್ನು ಹೆತ್ತಿದ್ದರು. ಸುಬ್ರಹ್ಮಣ್ಯ ದಂಪತಿಗಳ ಈ ಮೊದಲಿನ ಅನೇಕ ಮಕ್ಕಳು ಉತ್ಪನ್ನ ವಿನಷ್ಟ ಘಟದಂತೆ ಹುಟ್ಟಿದ ಕೂಡಲೆ ಪಟ–ಪಟನೆ ಬಿದ್ದು ಸತ್ತು ಹೋಗಿದ್ದವು. ಆದುದರಿಂದ ಅವರು ಹರಿ–ಹರೇಶ್ವರನನ್ನು ಸೇವಿಸಿ ಇಂಥ ವಿದ್ವರೇಣ್ಯನಾದ ಮಗನನ್ನು ಪಡೆದು ಕೃತಾರ್ಥರಾಗಿದ್ದರು.

ಮೇಧಾವಿಯಾದ ಈ ತ್ರಿವಿಕ್ರಮನು ಕಾವ್ಯ ಪ್ರಯೋಗ ಪರಿಣತನಾಗಿದ್ದನು. ಚಿಕ್ಕ ಬಾಲಕನಿದ್ದಾಗಲೆ ಅವನು ಉಷಾಹರಣ ಎಂಬ ಭಾವ ಬಂಧುರವೂ ಅರ್ಥ ಸುಂದವೂ ಆದ ದಿವ್ಯಕಾವ್ಯವನ್ನು ರಚಿಸಿದನು. ಕಾವ್ಯ ಮಾತ್ರವಲ್ಲದೇ ತ್ರಿವಿಕ್ರಮನಿಗೆ ಎಲ್ಲ ಶಾಸ್ತ್ರಗಳಲ್ಲಿಯೂ ಅಸಾಧಾರಣ ಪರಾಕ್ರಮವಿದ್ದಿತು. ವೇದ–ವೇದಾಂತಗಳನ್ನೆಲ್ಲ ಅಂಗೈಯಲ್ಲಿಯ ನೆಲ್ಲಿಕಾಯಿಯಂತೆ ಅವನು ಚನ್ನಾಗಿ ಬಲ್ಲವನಾಗಿದ್ದನು. ಅದ್ವೈತ ವೇದಾಂತದ ಒಂದೂಕಾಲು ಲಕ್ಷಗ್ರಂಥಗಳನ್ನು ಅವನು ಆಲೋಡನ ಮಾಡಿ ಅವರಲ್ಲಿ

ಪ್ರಚಂಡ ಪಾಂಡಿತ್ಯವನ್ನು ಸಂಪಾದಿಸಿದನು. ನ್ಯಾಯ, ವೈಶೇಷಿಕ, ಭಾಟ್ಟ, ಭಾಸ್ಕರ ಮುಂತಾದ ಶಾಸ್ತ್ರಗಳಲ್ಲೆಲ್ಲ ತ್ರಿವಿಕ್ರಮನಿಗೆ ತಲಸ್ಪರ್ಶಿ ಪಾಂಡಿತ್ಯವಿತ್ತು. ಭಾಸ್ಕರ ಮತದ ಭಾನು ಎಂಬ ಪಂಡಿತನು ಈ ಪಂಡಿತಾಚಾರ್ಯರ ಜೊತೆಗೆ ವಾದಕ್ಕಿಳಿದು ಅತ್ಯಲ್ಪ ಸಮಯದಲ್ಲಿಯೇ ಸೋತು ಹೋದನು. ಅಂದಿನಿಂದ ಪಂಡಿತಾಚಾರ್ಯರು ಪ್ರತಿವಾದಿ ಭಯಂಕರ ತ್ರಿವಿಕ್ರಮ ಪಂಡಿತರೆಂದು ಹೆಸರಾದರು. ಅದ್ವೈತ ಶಾಸ್ತ್ರದಲ್ಲಿ ಪ್ರಕಾಂಡ ಪಂಡಿತರಾಗಿ ಭೂಮಂಡಲದಲ್ಲಿ ಎಲ್ಲ ಕಡೆಗೂ ಜಯಭೇರಿಯನ್ನು ಹೊಡೆದು ಮನ್ನಣೆಯನ್ನು ಪಡೆದು ಬಂದ ತ್ರಿವಿಕ್ರಮ ಪಂಡಿತರನ್ನು ಅವರ ತಂದೆ ಸುಬ್ರಮ್ಹಣ್ಯ ಸೂರಿಗಳು ಒಂದು ದಿನ ಏಕಾಂತದಲ್ಲಿ ಕರೆದು, ರಹಸ್ಯವಾಗಿ ಹೇಳಿದರು—

"ಮಗು ನಾವೇನೊ ಅದ್ವೈತ ವಿದ್ವಾಂಸರ ವಂಶದಲ್ಲಿ ಜನಿಸಿದ್ದೇವೆ. ನಿರ್ಗುಣ ಉಪಾಸನೆಯೇ ನಮ್ಮ ಮತ ಪರಂಪರೆಯಲ್ಲಿ ಸಮುದಾಚಾರವಾಗಿ ನಡೆದು ಬಂದಿದೆ. ಆದರೆ ಶಾಸ್ತ್ರೀಯ ಗ್ರಂಥಗಳನ್ನು ಪರಿಶೀಲಿಸಿದರೆ ನಿರ್ಗುಣೋಪಾಸನೆಯಿಂದ ಮುಕ್ತಿಯು ಆಗುವದಿಲ್ಲವೆಂದು ಖಚಿತವಾಗಿ ತಿಳಿದು ಬರುತ್ತದೆ. ಜ್ಞಾನಾನಂದಾದಿ ಗುಣಗಳಿಂದ ಸ್ಪೃಹಣೀಯವಾದ ನಿಜವಾದ ಮೋಕ್ಷ ದೊರೆಯಬೇಕಾದರೆ ನಿತ್ಯ ನಿರ್ದೋಷನೂ, ಜ್ಞಾನಾನಂದಾದಿ ಗುಣ ಪರಿಪೂರ್ಣನಾದ ವಸುದೇವ ಪುತ್ರನೂ ಆದ ಶ್ರೀ ಕೃಷ್ಣನನ್ನೇ ನಿತ್ಯ ನಿರಂತರ ಧ್ಯಾನ ಮಾಡು.''

ತಂದೆಯ ಈ ಮಾತನ್ನು ಕೇಳಿ ಆ ತ್ರಿವಿಕ್ರಮರ ಮನಸ್ಸಿನಲ್ಲಿ ಹೊಯ್ದಾಟವು ಪ್ರಾರಂಭವಾಯಿತು. ಅವರು ನಿರ್ಗುಣ ಉಪಾಸನೆಯ ಬಗ್ಗೆ ಅನೇಕ ಅದ್ವೈತ ಪಂಡಿತರ ಜೊತೆಗೆ ಚರ್ಚೆ ಮಾಡಿದರು. ಅಸಂಖ್ಯ ಶಾಸ್ತ್ರೀಯ ಉದ್ಗ್ರಂಥಗಳನ್ನು ಸಮಾಲೋಚನೆ ಗೈದರು. ಬ್ರಹ್ಮಸೂತ್ರಗಳ ಮೇಲಿನ ಇಪ್ಪತ್ತೊಂದು ಭಾಷ್ಯಗಳನ್ನು ಪರಿಶೀಲಿಸಿದರು. ಎಲ್ಲ ಭಾಷ್ಯಗಳ ಚಿಂತನ-ಮಂಥನಗಳ ಅನಂತರ ಅವರಿಗೆ ಅತ್ಯಂತ ಕೌತುಕವೆನಿಸಿತು. ಆ ಭಾಷ್ಯಗಳಿಗೂ ಮೂಲ ಸೂತ್ರಗಳಿಗೂ ಸಂಗತಿಯೇ ಇರಲಿಲ್ಲ. ಮತ್ತು ಈ ಭಾಷ್ಯಗಳೆಲ್ಲವೂ ಪರಸ್ಪರ ವಿಸಂಗತವಾಗಿದ್ದವು. ಈ ಎಲ್ಲ ಸೂತ್ರ ಭಾಷ್ಯಗಳ ವಿಸಂಗತಿಯನ್ನು ಕಂಡು ಅವರ ಮನಸ್ಸು ವ್ಯಾಕುಲವಾಯಿತು. ಇಂಥ ಉತ್ಸೂತ್ರವಾದ ಭಾಷ್ಯ ಗ್ರಂಥಗಳನ್ನೆಲ್ಲ ಬಿಟ್ಟು ಬಿಡಬೇಕಂದರೆ ಆ ಕಾಲದಲ್ಲಿ ಬಾದರಾಯಣರ ಅಭಿಪ್ರಾಯಕ್ಕೆ ಅನುಗುಣವಾದ ಬೇರಾವ ಭಾಷ್ಯವೂ ಇರಲಿಲ್ಲ. ಆದುದರಿಂದ ಏನು ಮಾಡುವದು ! ಸೂತ್ರ ವಿರುದ್ಧವೆಂದು ಗೊತ್ತಿದ್ದರೂ ಅವರು ಪರಂಪರಾ ಪ್ರಾಪ್ತವೆಂದು ಶಂಕರ ಭಾಷ್ಯವನ್ನೇ ಪಾರಾಯಣ, ಪ್ರವಚನ ಮಾಡುತ್ತಿದ್ದರು.

ಆದರೆ ಆ ಶಂಕರ ಭಾಷ್ಯವನ್ನು ಓದಿ-ಓದಿದಂತೆ ಅದರಲ್ಲಿಯ ಮಾತುಗಳೆಲ್ಲ ವೇದಶಾಸ್ತ್ರ, ಪುರಾಣ, ಭಾರತಾದಿ ವಚನಗಳಿಗೆ ವಿರುದ್ಧವಾಗಿವೆ ಎಂದು ಅವರಿಗೆ ಕಂಡು ಬಂದಿತು. ಆದುದರಿಂದ ಸರ್ವಂಕಷಶೇಮುಷೀಕರಾದ ತ್ರಿವಿಕ್ರಮ ಪಂಡಿತಾ

ಚಾರ್ಯರು ಸರ್ವ-ಮೂಲವಾದ ನಿಗಮಾಗಮಗಳನ್ನೆಲ್ಲ ಸ್ವಯಂ ಸಂಮರ್ಶನಗೈದು, ನಿರ್ಗುಣ ಉಪಾಸನೆಯನ್ನು ಬಿಟ್ಟು, ಗುಣಪೂರ್ಣನಾದ ಮುಕುಂದನ ಉಪಾಸನೆಯನ್ನೇ ವೇದ ಶಾಸ್ತ್ರೋಕ್ತ ಮಾರ್ಗದಿಂದ ಮಾಡಬೇಕೆಂದು ನಿರ್ಧರಿಸಿದರು.

ಹೀಗೆ ವೇದಾಂತ ವಿಚಾರಜನ್ಯವಾದ ವಿವೇಕದಿಂದ ಪಂಡಿತಾಚಾರ್ಯರು ಗುಣಪೂರ್ಣನ ಉಪಾಸನೆಯನ್ನು ಮಾಡಲು ಉಪಕ್ರಮಿಸಿದಾಗ ಜಗತ್ಪೂರ್ಣವಾದ ಪೂರ್ಣಬೋಧರ ಕೀರ್ತಿಯು ಅವರ ಕಿವಿಗೂ ತಲುಪಿತು. ಶ್ರೀಮದಾನಂದತೀರ್ಥರು ವಿಷ್ಣುಮಂಗಲಕ್ಕೆ ದಯಮಾಡಿಸಿರುವರು ಎಂಬ ಸಮಾಚಾರವು ಅವರಿಗೆ ತಿಳಿದು ಬಂದಿತು. ಮತ್ತು ವೇದ ಮತದ ಉದ್ಧಾರಕರೆಂದು ಸುಪ್ರಸಿದ್ಧರಾದ ಮಧ್ವಮುನಿಗಳ ದರ್ಶನವನ್ನು ತೆಗೆದುಕೊಳ್ಳಬೇಕು ಎಂಬ ಸುಪ್ತಾಕಾಂಕ್ಷೆಯು ಅವರಲ್ಲಿ ಹೆಡೆ ಎತ್ತಿತು.

ಶ್ರೀ ಮಧ್ವಾಚಾರ್ಯರು ಹೋದ-ಹೋದಲ್ಲೆಲ್ಲ ಅದ್ವೈತ ಮತವನ್ನು ಖಂಡಿಸುವವನ್ನು ಕಂಡು ಆ ಮತಾನುಯಾಯಿಗಳಿಗೆಲ್ಲ ಕಡುಕೋಪ ಬರುತ್ತಿತ್ತು. ಆದರೆ ಮಾಡುವದೇನು? ಹೊಟ್ಟೆಯಲ್ಲಿ ಎಷ್ಟೇ ಸಿಟ್ಟು ಅವರಲ್ಲಿ ತುಂಬಿದ್ದರೂ ಆಚಾರ್ಯರ ಜೊತೆಗೆ ವಾದ-ವೇದಿಕೆಯಲ್ಲಿ ಕುಳಿತಾಗ ಎಂಥ ದಿಗ್ಗಜ ಪಂಡಿತರೂ ಧೂಳೀಪಟವಾಗಿ ಹೋಗುತ್ತಿದ್ದರು. ಪ್ರಮಾಣ ಬದ್ಧವೂ, ಶಾಸ್ತ್ರ ಶುದ್ಧವೂ ಆದ ಗುರು ಮಧ್ವರ ವಾಗ್ವೈಖರಿಗೆ ಅದ್ವೈತ ಪಂಡಿತರ ಎಲ್ಲ ವಾದಾಟೋಪವು ಕುಸಿದು ಅವರೆಲ್ಲರೂ ಮೂಢ ಮೂಕರಾಗುತ್ತಿದ್ದರು.

ಹೀಗೆ ಆಚಾರ್ಯರ ಜೊತೆಗೆ ವಾದ ಮಾಡುವ ಧೈರ್ಯವಾಗಲಿ, ಚಾತುರ್ಯವಾಗಲಿ ಇಲ್ಲದ ಪಂಡಿತರೆಲ್ಲರೂ ತ್ರಿವಿಕ್ರಮ ಪಂಡಿತರಿಗೆ ದುಂಬಾಲು ಬಿದ್ದರು. ತ್ರಿವಿಕ್ರಮ ಪಂಡಿತರ ಅದ್ಭುತವಾದ ಶಾಸ್ತ್ರ ಪಾಂಡಿತ್ಯ ಮತ್ತು ವಾದ-ವೈದುಷ್ಯ, ಗ್ರಂಥ ಸ್ಫೂರ್ತಿ ಹಾಗೂ ತರ್ಕ ಕರ್ಕಶವಾದ ತೈಲ ಬುದ್ಧಿಯ ಚಾಕಚಕ್ಯತೆ, ಮುಂತಾದ ಗುಣಗಳನ್ನೂ ಅವರ ಪ್ರತಿಭಾ ಪ್ರಭಾವವನ್ನೂ ತಿಳಿದ ಅವರಿಗೆ ಈ ಪಂಡಿತಾಚಾರ್ಯರೊಬ್ಬರೇ ಮಧ್ವಾಚಾರ್ಯರ ಜೊತೆಗೆ ವಾದ ಮಾಡಿ ತಮ್ಮ ಮತದ ಮಾನವನ್ನು ಉಳಿಸಬಲ್ಲವರೆಂದು ಎನಿಸಿತು. ಆದುದರಿಂದ ಅವರೆಲ್ಲರೂ ಪಂಡಿತಾಚಾರ್ಯರ ಬಳಿಗೆ ಬಂದು ಅವರನ್ನು ವಾದಕ್ಕೆ ಹುರುದುಂಬಿಸಿದರು.

"ಆಚಾರ್ಯರೆ, ಪರಂಪರಾ ಪ್ರಾಪ್ತವಾದ ನಮ್ಮ ಸನಾತನ ಶಂಕರಾದ್ವೈತ ಮತವನ್ನು ಮಧ್ವಾಚಾರ್ಯರೂ ಅವರ ಶಿಷ್ಯರೂ ಖಂಡಿಸುತ್ತಿದ್ದಾರೆ. ನಿಮ್ಮಂಥ ಮಹಾ ಪಂಡಿತರು ನಮ್ಮ ಅದ್ವೈತ ವಾದವನ್ನು ಯುಕ್ತಿಯುಕ್ತವಾಗಿ ಖಂಡಿಸ

ತೊಡಗಿದರೆ ದ್ವೈತ ವಾದಿಗಳ ಸದ್ದು ಅಡಗಿ ಹೋಗುವವು. ವೇದದ ನದಿಗಳಲ್ಲಿ ಅವಗಾಹನ ಮಾಡಿ ಶಾಸ್ತ್ರ ಸಾಗರದಲ್ಲಿ ಈಸಾಡುವ ಕಾವ್ಯ ಕಲಾ ಕುಶಲರಾದ ನಿಮ್ಮನ್ನು ವಾದ-ವೇದಿಕೆಯಲ್ಲಿ ಎದುರಿಸಿ ಗೆಲುವನ್ನು ಗಳಿಸಿದ ಗಜೇಂದ್ರನು ಈ ವರೆಗೂ ಹುಟ್ಟಿಲ್ಲ. ಆದರೆ ಈಗ ಮಾತ್ರ ದೈವವು ಅಂಥ ಓರ್ವ ಪ್ರಚಂಡ ಪ್ರತಿ ವಾದಿ ಗಜವನ್ನು ಇಂದು ನಿಮ್ಮೆದುರು ತಂದು ನಿಲ್ಲಿಸಿದೆ. ನೀವು ಆ ಮಥ ಗಜೇಂದ್ರನ ಜೊತೆಗೆ ವಾದ ಹೂಡಿರಿ. ಅವರನ್ನು ನಿರುತ್ತರರನ್ನು ಮಾಡಿರಿ. ನಿಮ್ಮ ಸ್ವಮತೀಯ ಪಂಡಿತರಿಗೆ ಒದಗಿ ಬಂದ ಭಯಾಪಾಯವನ್ನು ದೂರ ಮಾಡಿರಿ. ನಮ್ಮ ಅದ್ವೈತ ಮತದ ಗೌರವವನ್ನು ಉಳಿಸಿದ ಗುರುತರವಾದ ಹೊಣೆಯು ನಿಮ್ಮ ಮೇಲೆಯೇ ಇರುತ್ತದೆ. "

ಎಲ್ಲ ಶಾಸ್ತ್ರಗಳನ್ನು ತಳದಿಂದ ತುದಿಯ ವರೆಗೆ ತಲಸ್ಪರ್ಶಿಯಾಗಿ ವಿಮರ್ಶಿಸಿ ಅವು ಗಳಲ್ಲೆಲ್ಲ ಪೂರ್ಣ ಪ್ರಭುತ್ವವನ್ನು ಸಂಪಾದಿಸಿದ ತ್ರಿವಿಕ್ರಮ ಪಂಡಿತಾಚಾರ್ಯರಿಗೆ ವಾದ ಮಾಡುವದೂ ಎದುರಾಳಿಗಳನ್ನು ಸುಲಭವಾಗಿ ಸೋಲಿಸುವದೂ ಸ್ವಲ್ಪ ಸಮ ಯದಲ್ಲಿಯೇ ಎಂಥ ದಿಗ್ಗಜ ಪಂಡಿತನನ್ನೂ ಮಾತಿನ ಮಲಕಿನಲ್ಲಿ ಹಿಡಿದು ಮೂಕ ನನ್ನಾಗಿಸುವದೂ ಕರಗತವಾದ ಕೌಶಲ್ಯವಾಗಿತ್ತು. ಆದುದರಿಂದ ಅವರು ತಮ್ಮ ಅನುಯಾಯಿಗಳಾದ ಮಾಯಿ ಜನರಿಗೆ "ನಾನು ಮಧ್ವ ಮತವನ್ನು ನಿರಾಕರಣ ಮಾಡಲು ಬರುತ್ತೇನೆ." ಎಂದು ಧೈರ್ಯ ಹೇಳಿದ್ದರು. ಮತ್ತು ಅನೇಕ ಮಧ್ವ ಮತಾನುಯಾಯಿ ಪಂಡಿತರನ್ನು ತಮ್ಮ ವಾದ ಪಾಂಡಿತ್ಯದಿಂದ ಖಂಡಿಸಿ ಉತ್ತರ ರೂಪವಾಗಿ ಅನೇಕ ಬಗೆಯ ಜಾಣ್ಮೆಯ ನುಡಿಯ ಪುಡಿ ಕಿಡಿಗಳನ್ನು ತೂರಿ ಅವರೆಲ್ಲರನ್ನು ಕಂಗೆಡಿಸಿದ್ದರು.

ಆದರೆ ಅವರಿಗೆ ಮನಸ್ಸಿನಲ್ಲಿ ಆತ್ಮ ವಿಶ್ವಾಸ ಬರಲಿಲ್ಲ ಮಧ್ವಾ ಚಾರ್ಯರನ್ನು ಜಯಿಸಬಲ್ಲೆನೆಂದು. ಅವರ ತಮ್ಮನಾದ ಪೆಜತ್ತಾಯ ಶಂಕರಾಚಾರ್ಯರು ಈ ಮೊದಲೇ ಶ್ರೀ ಮಧ್ವಾಚಾರ್ಯರ ಶಿಷ್ಯರಾಗಿ ಅವರ ಗ್ರಂಥಾಗಾರದ ಪಾಲಕರಾಗಿ ದ್ದರು. ಅವರು ಶ್ರೀ ಪೂರ್ಣಪ್ರಜ್ಞರು ಬರೆದ ಅಗಮ್ಯವಾದ ದಿವ್ಯ ಗ್ರಂಥಗಳನ್ನು ತಂದು ತಮ್ಮ ಮನೆಯಲ್ಲಿ ಇಟ್ಟಿರುತ್ತಿದ್ದರು. ಮನೆಯಲ್ಲಿ ಎಲ್ಲರೂ ಮಲಗಿದಾಗ ತ್ರಿವಿಕ್ರಮ ಪಂಡಿತರು ಎದ್ದು ಆ ಮಧ್ವಾಚಾರ್ಯರ ಗ್ರಂಥಗಳ ಕಟ್ಟನ್ನು ಬಿಚ್ಚಿ ಓಲೆಗಳನ್ನು ಬಿಡಿಸಿ ಮೆಲ್ಲನೆ ಓದತೊಡಗಿದರು. ಆಚಾರ್ಯರ ಆ ದಿವ್ಯ ಗ್ರಂಥಗಳನ್ನು ಓದಿದಾಗ ವಿದ್ವದ್ವರೇಣ್ಯರಿಗೆ ಜ್ಞಾನದ ತವನಿಧಿಯೇ ದೊರಕಿದಂತಾಯಿತು. ಅನೇಕ ವರ್ಷಗಳ ಹಿಂದೆ ಅವರ ಮನಸ್ಸನ್ನು ಕಾಡಿಸಿದ ಪ್ರಶ್ನೆಗಳಿಗೆಲ್ಲ ಆ ಆಚಾರ್ಯರ ಗ್ರಂಥ ಗಳಲ್ಲಿ ಸಮಾಧಾನಕಾರಕವಾದ ಉತ್ತರಗಳು ಕಂಡು ಬಂದವು. ಜ್ಞಾನ ಪ್ರಪಂಚ ದಲ್ಲಿ ಶತಕಾನುಶತಕಗಳಿಂದ ಬಿಡಿಸಲು ಬಾರದ ಒಗಟುಗಳಾಗಿ ನಿಂತುಕೊಂಡ ಸಮ

ಸೈಗಳಿಗೆಲ್ಲ ಈ ಮಧ್ವ ಗ್ರಂಥಗಳಲ್ಲಿ ಸಮಂಜಸವಾದ ಪರಿಹಾರವಿದ್ದಿತು. ಅದನ್ನು ಕಂಡು ಸ್ವಯಂ ಶ್ರೀಷ್ಠ ಪಂಡಿತರಾದ ಪಂಡಿತಾಚಾರ್ಯರಿಗೆ ಶಾಂತಿಯೂ ಸಿಕ್ಕಿತ್ತು ಸಮಾಧಾನವೂ ಆಯಿತು. ಅವರು ಆನಂದದಿಂದ ನೇರವಾಗಿ ಎದ್ದು ವಿಷ್ಣುಮಂಗ ಲಕ್ಕೆ ಬಂದು, ಅಲ್ಲಿ ವೇದಾಂತ ಪ್ರವಚನವನ್ನು ಗೈಯುತ್ತಿದ್ದ ಆನಂದತೀರ್ಥರ ಪಾದಾರವಿಂದಗಳಿಗೆ ಸಾಷ್ಟಾಂಗ ವಂದಿಸಿದರು. ಅವರ ಪ್ರತಿಯೊಂದು ಭಾವಭಾವ ದಲ್ಲಿಯೂ ತತ್ವಜಿಜ್ಞಾಸೆಯ ಹಂಬಲವು ಹೊಮ್ಮುತ್ತಿತ್ತು.

ಅವರು ಪೂರ್ಣಬೋಧರ ಜೊತೆಗೆ ಅನೇಕ ಪ್ರಮೇಯಗಳ ವಿಷಯದಲ್ಲಿ ಚರ್ಚೆ ನಡೆಸಿದರು. ವೇದಾಂತ ವಿಷಯಗಳಲ್ಲಿ ವಾಕ್ಯಾರ್ಥವನ್ನು ಮಾಡಿದರು. ಶ್ರೀ ಮಧ್ವಾ ಚಾರ್ಯರ ಮತವೇ ನಿರ್ದುಷ್ಟವಾದ ಮತ ಎಂದು ಅವರಿಗೆ ಖಚಿತವಾಯಿತು. ಇಷ್ಟಾದರೂ ಅವರಿಗೆ ತಮ್ಮ ಅದ್ವೈತ ಮತವನ್ನು ಬಿಟ್ಟು ಬಿಡಲಿಕ್ಕೆ ಆಗಲಿಲ್ಲ. ಮಧ್ವ ಮತವನ್ನು ಅವರು ಅಂಗೀಕರಿಸಲಿಲ್ಲ. ಸಾರಾಸಾರ ವಿಚಾರ ಮಾಡಿ ನಿರ್ಣಯ ಕೈಕೊಳ್ಳುವದೇ ಪಂಡಿತರ ಲಕ್ಷಣವಲ್ಲವೆ ?

ಒಂದು ದಿನ ಮಧ್ವಾಚಾರ್ಯರು ತಾಡಿಕೂಡೆಲ್ ಎಂಬ ಊರಿನಲ್ಲಿ ಕೂಡೆಲ್ ಎಂಬ ದೇವಸ್ಥಾನದಲ್ಲಿ ಕೂಡಿದ ಪ್ರಚಂಡ ಜನಸ್ತೋಮದೆದುರು ತಮ್ಮ ಭಾಷ್ಯ ವನ್ನು ಪ್ರವಚನ ಮಾಡುತ್ತಿದ್ದರು. ಸಭೆಯಲ್ಲಿ ದಿಗ್‌ದೇಶಗಳ ದಿಗ್‌ದಂತಿ ಪಂಡಿತ ರೆಲ್ಲರೂ ನೆರೆದಿದ್ದರು. ಅವರ ಎದುರು ತ್ರಿವಿಕ್ರಮ ಪಂಡಿತಾಚಾರ್ಯರು ಪ್ರತಿವಾದಿ ಪಂಡಿತರಾಗಿ ಆಚಾರ್ಯರನ್ನು ಎದುರಿಸುವ ಸನ್ನಾಹದಲ್ಲಿ . ನಿಂತುಕೊಂಡಿದ್ದರು. ಮಾಯಾವಾದದ ಮಹಾರಥವನ್ನು ಏರಿ ತರ್ಕಾಯುಧವನ್ನು ಹಿರಿದು ತಮ್ಮ ಮೇಲೆ ಎರಗುವ ಸಿದ್ಧತೆಯಲ್ಲಿದ್ದ ತ್ರಿವಿಕ್ರಮ ಪರಾಕ್ರಮಿಗಳನ್ನು ಕಂಡು ಶಾಸ್ತ್ರದ ಸಾಣೆ ಹಿಡಿದು ಹದನವಾದ ಆಚಾರ್ಯರ ವಾಣಿಯು ಬಾಣದಂತೆ ಹೊರಬಿದ್ದಿತು. ಬ್ರಹ್ಮ ಸೂತ್ರಗಳೆಂಬ ರಥ, ವೇದ–ಮಂತ್ರಗಳೆಂಬ ಗಜ, ಸ್ಮೃತಿ–ವಚನಗಳೆಂಬ ಕುದುರೆ, ನಿರ್ದುಷ್ಟ–ತರ್ಕಗಳೆಂಬ ಸೈನಿಕರು ಹೀಗೆ ಚತುರಂಗಬಲ ಸಹಿತವಾಗಿ ಆಚಾರ್ಯರ ತತ್ವನಿರ್ಣಾಯಕವಾದ ಸಮರವು ಆರಂಭವಾಯಿತು. ಗಂಗಾ ಪ್ರವಾಹದಂತೆ ನಿರ ರ್ಗಳವಾಗಿ ಹರಿಯಿತು ಆಚಾರ್ಯರ ಅಂದಿನ ಉಪನ್ಯಾಸ ಭಾರತಿ. ಮಾತು ಮಾತಿಗೆ ವೇದ–ಮಂತ್ರಗಳ ಸಮಾಖ್ಯೆಯನ್ನೂ, ವೇದೋಪನಿಷತ್ತುಗಳ ಸಂವಾದವನ್ನೂ, ಯುಕ್ತಿಯ ಬೆಂಬಲವನ್ನೂ ಉದಾಹರಿಸುತ್ತ, ಮೇಘ–ಗಂಭೀರವಾದ ಧ್ವನಿಯಿಂದ ಸುಸ್ಪಷ್ಟವಾದ ಶೈಲಿಯಲ್ಲಿ ವೇದ–ವೇದಾಂತಗಳ ರಹಸ್ಯವನ್ನೆಲ್ಲ ತಿಳಿಸುತ್ತ, ಬ್ರಹ್ಮ ಮೀಮಾಂಸಾ ಶಾಸ್ತ್ರದ ಮೇಲೆ ನಡೆಸಿದ ಆಚಾರ್ಯರ ಅಮೋಘ ಪ್ರವಚನವನ್ನು ಕೇಳಿ ತ್ರಿವಿಕ್ರಮ ಪಂಡಿತಾಚಾರ್ಯರು ತಬ್ಬಿಬ್ಬಾಗಿ ಹೋದರು. ಹೆದ್ದೆರೆಗಳಿಂದ ಘೂರ್ಮಿಸುವ ಸಮುದ್ರಕ್ಕೆ ತೆಕ್ಕೆಮುಕ್ಕೆ ಬಿದ್ದಂತೆ ಎನಿಸಿತು ತ್ರಿವಿಕ್ರಮರಿಗೆ.

ಆಚಾರ್ಯರು— "ನಾರಾಯಣನು ಗುಣಪರಿಪೂರ್ಣನು. ವೇದ ಪ್ರತಿಪಾದ್ಯನಾದ ಪರಬ್ರಹ್ಮನೆಂದರೆ ಅವನೆ. ಈ ಪ್ರಪಂಚಕ್ಕೆ ಸೃಷ್ಟ್ಯಾದ್ಯಷ್ಟ ಕರ್ತನು ಅವನ ಹೊರತು ಬೇರೆ ಯಾರೂ ಇಲ್ಲ. ಈ ಜಗತ್ತಿನಲ್ಲಿ ನಿರ್ದೋಷ ವಸ್ತುವೆಂದರೆ ನಾರಾಯಣನೊಬ್ಬನೆ. ಅವನೇ ಸರ್ವಜ್ಞ" ಎಂದು ಯುಕ್ತಿಯಿಂದ ಸಾಧಿಸಿದರು. ಅವಕ್ಕೆ ಬೆಂಬಲವಾಗಿ ಅನೇಕ ವೇದಾದಿ ಉಕ್ತಿಗಳನ್ನು ಉದಾಹರಿಸಿದರು. ಇದಕ್ಕೆ ವಿರುದ್ಧವಾದ— ಸಾಂಖ್ಯ, ವೈಶೇಷಿಕ, ನೈಯಾಯಿಕ, ಭಾಸ್ಕರ, ಬೌದ್ಧ, ಅದ್ವೈತಾದಿ ವಾದಗಳನ್ನೆಲ್ಲ ಮೊದಲು ತಾವು ಅನುವಾದ ಮಾಡಿ ಅನಂತರ ಅವುಗಳನ್ನು ಒಂದೊಂದಾಗಿ ಅಕ್ಷರಶಃ ಖಂಡಿಸಿದರು. ಮತ್ತು ಶ್ರುತಿ-ಸ್ಮೃತಿ ಸಿದ್ಧವಾದ ವೇದ ಮತವನ್ನು ಸೋಪಪತ್ತಿಕವಾಗಿ ಮಂಡಿಸಿದರು. ಸದ್ಗತಿಯನ್ನು, ಮೋಕ್ಷವನ್ನು ಬಯಸುವವರೆಲ್ಲ ವೇದೈಕವೇದ್ಯನಾದ ಶ್ರೀ ವಿಷ್ಣುವನ್ನು ಉಪಾಸನೆ ಮಾಡಿ ಒಲಿಸಿಕೊಳ್ಳಬೇಕು. ಅವನ ಪ್ರಸಾದದಿಂದಲೇ ಜೀವರಿಗೆ ಮೋಕ್ಷ. ಅವನ ಅಪರೋಕ್ಷ ಜ್ಞಾನದಿಂದ ನಿತ್ಯ ಸುಖರೂಪವಾದ ಮೋಕ್ಷವು ದೊರೆಯುತ್ತದೆ. ಅದಕ್ಕಾಗಿ ಶ್ರೀ ಹರಿಯನ್ನು ನಿತ್ಯ ನಿರಂತರವೂ ಭಕ್ತಿಯಿಂದ ಧ್ಯಾನ ಮಾಡಬೇಕು."

ಶ್ರೀ ಮಧ್ವಮುನಿಗಳ ಪಾಂಡಿತ್ಯಪೂರ್ಣವೂ, ಯುಕ್ತಿಜಾಲಬದ್ಧವೂ, ಪ್ರಮಾಣ ಪರಿಭ್ರುಂಹಿತವೂ ಆದ ಈ ಉಪನ್ಯಾಸವನ್ನು ಕೇಳಿ, ಸಭಿಕರೆಲ್ಲರೂ ಆನಂದ ಪರವಶರಾದರು. ತ್ರಿವಿಕ್ರಮಪಂಡಿತಾಚಾರ್ಯರಿಗೂ ಆಚಾರ್ಯರ ಜ್ಞಾನದ ಉಚ್ಚ ಮಟ್ಟವನ್ನೂ ಅದರ ಆಳ ಅಗಲಗಳನ್ನೂ ಅಂಶತಃ ನೋಡಿ ಅತ್ಯಂತ ಆಶ್ಚರ್ಯವೆನಿಸಿತು. ಆವರೂ ಅವರು ಅದ್ವೈತ ಸಂಸ್ಕಾರಾನುಗುಣವಾಗಿ ಮಾಯಾವಾದವನ್ನು ಮಂಡಿಸಿದರು. ಮಧ್ವಾಚಾರ್ಯರ ಮೇಲೆ ತಮ್ಮ ಬುದ್ಧಿಯ ಬಿಲ್ಲಿಗೆ ಯುಕ್ತಿ ಬಾಣಗಳನ್ನು ಹೊಡಿ ಬಿಟ್ಟರು. ಅದನ್ನು ಕೇಳಿ ಮಧ್ವಾಚಾರ್ಯರು ಸುಂದರವಾಗಿ ಮಂದಹಾಸಮಾಡುತ್ತ ತ್ರಿವಿಕ್ರಮರ ಎಲ್ಲ ತರ್ಕಗಳಿಗೂ ಪ್ರತಿ ತರ್ಕಗಳನ್ನು ಹೇಳಿ ಕೊಟ್ಟಿ ಹಾಕಿದರು.

ಅನುಮಾನತೀರ್ಥರ ತರ್ಕ ಕೌಶಲ್ಯದಿಂದ ಸೋತು ಮಾತು ನಿಂತು ಹೋದ ಪಂಡಿತಾಚಾರ್ಯರು ಯುಕ್ತಿಗಳ ಕೈ ಬಿಟ್ಟು ತಮ್ಮ ಅದ್ವೈತವಾದಕ್ಕೆ ಉಪಷ್ಟಂಭಕವಾಗಿ ಅನೇಕ ವೇದ-ಮಂತ್ರಗಳನ್ನೂ ಪಾಶುಪತ್ಯಾದ್ಯಾಗಮಗಳನ್ನೂ ಉದಾಹರಿಸತೊಡಗಿದರು. ಕೂಡಲೇ ಆಚಾರ್ಯರು ಪಂಡಿತಾಚಾರ್ಯರ ಪ್ರವಚನಗಳಿಗೆಲ್ಲ ಅರ್ಥಾಂತರವನ್ನು ಅರ್ಥಾತ ನಿಜಾರ್ಥವನ್ನು ಹೇಳಿ ಅವೆಲ್ಲವೂ ಸಾವಕಾಶ ಪ್ರಮಾಣವೆಂದು ಪ್ರಕಾಶಪಡಿಸಿದರು. ಮಾಯಾವಾದದ ಪ್ರತಿಯೊಂದು ತತ್ವ ವೇದ ವಿರುದ್ಧವೆನ್ನುವದಕ್ಕೆ ಅನೇಕಾನೇಕ ನಿರವಕಾಶವಾದ ಪ್ರಜ್ವಲ ಪ್ರಮಾಣವೆನಿಸಿದ ವೇದ ವಚನಗಳನ್ನೂ ಉದಾಹರಿಸಿ ಅದ್ವೈತ ವಾದವನ್ನು ಖಂಡಿಸಿದರು. ಉಪ

ಕ್ರಮಾದಿ ತಾತ್ಪರ್ಯಗಳಿಂದ ವಿಷ್ಣು ಸರ್ವೋತ್ತಮತ್ವ ಪಂಚಭೇದ ತಾರತಮ್ಯಾದಿ ದ್ವೈತ ಸಿದ್ಧಾಂತವೇ ವೇದ ಸಿದ್ಧಾಂತ ಎಂದು ಸಯುಕ್ತಿಕವಾಗಿಯೂ ಸಪ್ರಮಾಣವಾಗಿಯೂ ಸಿದ್ಧಮಾಡಿ ತೋರಿಸಿದರು.

ಹೀಗೆ ಮಧ್ವಾಚಾರ್ಯ–ತ್ರಿವಿಕ್ರಮ ಪಂಡಿತರ ವಾದ ಹದಿನೈದು ದಿನಗಳ ವರೆಗೆ ಸಾಗಿತು. ಕೊನೆಗೆ ಪ್ರಾಮಾಣಿಕರಾದ ಆ ಪಂಡಿತಾಚಾರ್ಯರು ನಿರುತ್ತರ ರಾಗಿ ಆ ಜ್ಞಾನ ಮೇರುವಿನ ಎದುರು ತಮ್ಮ ಸೋಲನ್ನು ಪ್ರಾಂಜಲವಾಗಿ ಒಪ್ಪಿ ಕೊಂಡರು. ಸೋಲಿನಲ್ಲಿ ಸುಖವನ್ನು ಕಂಡ ಸಚ್ಚೇತನರಲ್ಲಿ ಅವರೊಬ್ಬರು. ಅವರ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿಬಂದವು. ಕೊರಳು ಬಿಗಿದು ಬಂದಿತು. ಎಂದಿನಿಂದಲೂ ಮಿದುಳಿನಲ್ಲಿ ಕೂಡಿ ಬಿದ್ದ ಸಂದೇಹಗಳ ಕಗ್ಗಂಟುಗಳು ತಾವಾಗಿ ಬಿಚ್ಚಿಕೊಂಡವು. ಆಗ ಅವರು ಶ್ರೀಮಧ್ವಾಚಾರ್ಯರ ಪಾದಕಮಲಗಳಿಗೆ ಸಾಷ್ಟಾಂಗ ವಂದನೆ ಗೈದು " ಪೂಜ್ಯರೆ, ಈ ನನ್ನ ವಾದ ಚಾಪಲ್ಯವನ್ನು ಕ್ಷಮಿಸಬೇಕು. ತಮ್ಮ ಪಾದ ಪದ್ಮಗಳ ಧೂಳಿ ದಾಸ್ಯವನ್ನು ಕೊಟ್ಟು ನನ್ನನ್ನು ಅನುಗ್ರಹಿಸಬೇಕು." ಎಂದು ಕೇಳಿಕೊಂಡರು.

ಆಗ ಅಲ್ಲಿ ನೆರೆದ ಸಭಿಕರೆಲ್ಲರೂ ಆನಂದ ಉದ್ರೇಕದಿಂದ " ಶ್ರೀಮದಾನಂದ ತೀರ್ಥ ಗುರುಭ್ಯೋ ನಮಃ " ಎಂದು ಜಯಘೋಷ ಮಾಡಿದರು.

ಅನಂತರ ತ್ರಿವಿಕ್ರಮ ಪಂಡಿತಾಚಾರ್ಯರು ಆಚಾರ್ಯರ ಶಿಷ್ಯರಾಗಿ ಅವರಲ್ಲಿ ವೈಷ್ಣವ ದೀಕ್ಷೆಯನ್ನು ಪಡೆದುಕೊಂಡು ತಪ್ತ ಮುದ್ರಾಧಾರಣದಿಂದ ಧನ್ಯರಾದರು. ಮತ್ತು ಆಚಾರ್ಯರಲ್ಲಿ ಅತ್ಯಂತ ಭಕ್ತಿಯಿಂದ "ಶಿಷ್ಯಸ್ತೇಹಂ" ಎಂದು ಶಾಂತಿ ಹಾಕಿ ಅವರ ಬಾಯಿಂದ ಬ್ರಹ್ಮಸೂತ್ರ ಭಾಷ್ಯವನ್ನು ಸಂಪೂರ್ಣವಾಗಿ ಶ್ರವಣ ಮಾಡಿದರು.

ಆಚಾರ್ಯರ ಗ್ರಂಥಗಳನ್ನು ಓದಿದಂತೆಲ್ಲ ಹೊಸದಾದ ಒಂದು ಬೆಳಕಿನ ಭಾಂಡಾರವೇ ತಮ್ಮ ಕೈವಶವಾದಂತಾಯಿತು ಆಚಾರ್ಯ ತ್ರಿವಿಕ್ರಮರಿಗೆ. ಮಧ್ವ ಮುನಿಗಳ ಆ ಭಾಷ್ಯವನ್ನು ಕೇಳಿದ ಬಳಿಕ ಅವರ ತಲೆಯಲ್ಲಿ ದಿವ್ಯ ಜ್ಞಾನದ ತುಂಬು ತಡಸಲವೇ ತುಳುಕಿದಂತಾಯಿತು.

ಗುರುಗಳ ಅಪ್ಪಣೆಯಂತೆ ತ್ರಿವಿಕ್ರಮ ಪಂಡಿತರು ಮಧ್ವ ಭಾಷ್ಯದಲ್ಲಿ ತಾವು ಕಂಡ ಸೊಬಗನ್ನು, ಉಂಡ ಸವಿಯನ್ನು ಜನಸಾಮಾನ್ಯರಿಗೆಲ್ಲ ತಿಳಿಸುವದಕ್ಕಾಗಿ " ತತ್ವಪ್ರದೀಪ " ಎಂಬ ಮಧ್ವ ಭಾಷ್ಯದ ಟೀಕೆಯನ್ನು ಬರೆದರು.

ತ್ರಿವಿಕ್ರಮ ಪಂಡಿತರ ಈ ಭಾಷ್ಯ ಟೀಕೆಯು ವೇದಾಂತ ಪ್ರಪಂಚದಲ್ಲಿ ಸರ್ವ ಮಾನ್ಯವಾದ ಉತ್ಕೃಷ್ಟ ಗ್ರಂಥವಾಗಿದೆ. ಶ್ರೀ ಜಯತೀರ್ಥರು ಮಧ್ವ ಭಾಷ್ಯಕ್ಕೆ

ವಿರಚಿಸಿದ " ತತ್ವಪ್ರಕಾಶಿಕಾ " ಅದಕ್ಕೆ " ಚಂದ್ರಿಕಾ" ಅವುಗಳಿಗೆ 'ಪ್ರಕಾಶ' 'ಭಾವ ದೀಪ' 'ಭಾಷ್ಯದೀಪಿಕಾ' 'ತಂತ್ರದೀಪಿಕಾ' ಮುಂತಾಗಿ ಸೂತ್ರ ಪ್ರಸ್ಥಾನವು ಸಾಕಷ್ಟು ಬೆಳೆದಿದ್ದರೂ ತ್ರಿವಿಕ್ರಮರ ತತ್ವಪ್ರದೀಪ ಗ್ರಂಥವು ಗತಾರ್ಥವಾಗಲಿ ವ್ಯರ್ಥವಾಗಲಿ ಎನಿಸುವದಿಲ್ಲ. ಸಾಕ್ಷಾತ್ ಆಚಾರ್ಯರ ಮುಖದಿಂದಲೇ ಭಾಷ್ಯ ಶ್ರವಣವನ್ನು ಮಾಡಿ ಅವರ ಭಾವಾಭಿವ್ಯಂಜನವನ್ನು ಚನ್ನಾಗಿ ಮಾಡಿದ ತತ್ವಪ್ರದೀಪವು ಇಂದಿಗೂ ಅನನ್ಯಸಾಮಾನ್ಯವಾದ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿದೆ.

ಪಾವನ ಗುರುಗಳ ಶಿಷ್ಯತ್ವವನ್ನು ಅಂಗೀಕರಿಸಿದ ಬಳಿಕ ಪಂಡಿತಾಚಾರ್ಯರು ಶ್ರೀಮಧ್ವಾಚಾರ್ಯ ಎಲ್ಲ ಗ್ರಂಥಗಳನ್ನೂ ಅಧ್ಯಯನ ಮಾಡಿದರು. ಒಂದೊಂದೂ ಅನರ್ಘ್ಯರತ್ನವಾಗಿ ತೋರಿದವು ಆ ವಿದ್ವದ್ಬುದ್ಧಿಗೆ. ಹೋದ–ಹೋದಲ್ಲೆಲ್ಲ ಅವರು ಮಾಧ್ವ ಗ್ರಂಥಗಳ ಹಿರಿಮೆಯನ್ನು ಮುಕ್ತ ಕಂಠದಿಂದ ಹೊಗಳಿ ಹೇಳುತ್ತಿದ್ದರು. ಆಚಾರ್ಯರ ಗ್ರಂಥಗಳ ವೈಶಿಷ್ಟ್ಯ ಹಾಗೂ ಮಹತ್ವಗಳ ಬಗೆಗೆ ಅವರು ಒಂದು ಸಭೆಯಲ್ಲಿ ಇತ್ತ ಉಪನ್ಯಾಸದ ಸೊಬಗನ್ನು ನೋಡಿರಿ.

"ಶ್ರೀಮದಾನಂದತೀರ್ಥರು ಬರೆದ ಬ್ರಹ್ಮಸೂತ್ರ ಭಾಷ್ಯವೆಂದರೆ ಅದೊಂದು ರಸ ರತ್ನಾಕರ. ಆ ಸಾಗರದ ಆಳದಲ್ಲಿ ಇಳಿದು ಎಷ್ಟು ಮಣಿಗಳನ್ನು ಹೊರತೆಗೆದರೂ ಅವು ಮುಗಿಯುವದಿಲ್ಲ. ಅಸಂಖ್ಯ ಯುಕ್ತಿರತ್ನಗಳ ಆಗರ ಅದು.

ಅವರು ರಚಿಸಿದ ಹತ್ತು ಉಪನಿಷತ್ತುಗಳ ಭಾಷ್ಯಗಳ ಅರ್ಥಪ್ರತಿಪಾದನೆಯ ಸೊಗಸೇ ಬೇರೆ.

ಗುರು ಮಧ್ವರು ರಚಿಸಿದ ಗೀತಾಭಾಷ್ಯ, ಗೀತಾ ತಾತ್ಪರ್ಯ ಎಂಬ ಎರಡು ಗ್ರಂಥಗಳು ವೇದಾಂತ ವಿಶ್ವದಲ್ಲಿ ಚಂದ್ರ ಸೂರ್ಯರಂತೆ ತಮ್ಮ ಕಾಂತಿಯಿಂದ ಬೆಳಗುತ್ತಿವೆ.

ಇತಿಹಾಸ ಪುರಾಣಗಳ ಸಾಗರವನ್ನು ಮಧ್ವರು ತಮ್ಮ ಮನೋಮಂದರವನ್ನಿಟ್ಟು ಮಂಥನ ಮಾಡಿ ಕಡೆದು ತೆಗೆದ ಅಮೃತವೇ ಮಹಾಭಾರತದ ತಾತ್ಪರ್ಯ ನಿರ್ಣಯವು. ಅದನ್ನು ಯಾವ ಪುಣ್ಯಾತ್ಮನು ಸೇವಿಸಲಿಕ್ಕಿಲ್ಲ!

ಗುಹ್ಯಭಾಷೆ, ದರ್ಶನಭಾಷೆ, ಸಮಾಧಿ ಭಾಷೆ ಎಂದು ಮೂರು ವಿಧವಾದ ಭಾಷಾ ಪ್ರಭೇದವನ್ನು ತಿಳಿಯದೆ ಪೌರಾಣಿಕ ಪಥದಲ್ಲಿ ತಡವರಿಸುವವರಿಗೆ ಆಚಾರ್ಯರು ರಚಿಸಿದ ಭಾಗವತ-ತಾತ್ಪರ್ಯ ನಿರ್ಣಯ ಗ್ರಂಥವು ಮಿತ್ರನಂತೆ ಮಾರ್ಗದರ್ಶನ ಮಾಡಿಸುವದು.

ಅವರ ತಂತ್ರಸಾರ ಗ್ರಂಥವಂತೂ ಬಯಸಿದ್ದನ್ನು ಕೊಡುವ ಕಲ್ಪವೃಕ್ಷದಂತಿದೆ. ಅದರಲ್ಲಿ ಹೇಳಿದಂತೆ ನಡೆದರೆ ಇಷ್ಟಾರ್ಥ ಸಿದ್ಧಿಯನ್ನು ಪಡೆಯದವನಾರು!

ಪ್ರತ್ಯಕ್ಷವೇ ಮೊದಲಾದ ಮೂರು ಪ್ರಮಾಣಗಳ ಉದ್ದೇಶ ವಿಭಾಗ ಲಕ್ಷಣ ಗಳನ್ನು ತಿಳಿದುಕೊಳ್ಳಲಿಕ್ಕೆ ಅನುಕೂಲವಾದ ಪ್ರಮಾಣಲಕ್ಷಣ ಮತ್ತು ಕಥಾಲಕ್ಷಣ ಎಂಬ ಎರಡು ಗ್ರಂಥಗಳು ದಿವ್ಯ ಕಣ್ಣುಗಳಂತೆ ಇವೆ.

ಆನಂದತೀರ್ಥರ ತತ್ತ್ವ ನಿರ್ಣಯ ಗ್ರಂಥವಂತೂ ಪ್ರತಿ ಪಕ್ಷಿಗಳ ತಲೆಯ ಮೇಲೆ ಕಾಲಿರಿಸಿ ಎಲ್ಲರನ್ನೂ ಗೆದ್ದ ಅರ್ಜುನನಂತೆ ವೇದಾಂತ ಪ್ರಪಂಚದಲ್ಲಿಯ ಪ್ರತಿವಾದಿಗಳ ವಿಧಾನಗಳನ್ನೆಲ್ಲ ಖಂಡತುಂಡವಾಗಿ ನಿರಾಕರಣ ಮಾಡುತ್ತದೆ. ಇಂಥ ಗುರುಮಧ್ವರ ಶ್ರೀ ವಿಷ್ಣುತತ್ತ್ವ ನಿರ್ಣಯ ಕೃತಿಯನ್ನು ಪೂಜಿಸದವರಾರು?

ಇದರಂತೆ ಮಾಯಾವಾದ ಖಂಡನ, ತತ್ತ್ವೋದ್ಯೋತ ಮುಂತಾದ ಆಚಾರ್ಯರ ಪ್ರಕರಣ ಗ್ರಂಥಗಳು ಬೆಂಕಿಯ ಕಿಡಿಗಳಂತೆ ಕಾಣಲು ಚಿಕ್ಕವಾದರೂ ಮಧ್ವ ಮಾರುತಿಯಿಂದ ಪ್ರೇರಿತವಾಗಿ, ವಾದಿವಾದಪ್ರಸ್ಥಾನಗಳನ್ನೆಲ್ಲ ಖಂಡಿಸಿ ಹಾಕಲು ಸಮರ್ಥವಾಗಿರುತ್ತವೆ.

ಪೂರ್ಣಪ್ರಜ್ಞರು ರಚಿಸಿದ ಅಣುಭಾಷ್ಯದಲ್ಲಿ ಅನಂತ ಅರ್ಥವು ಅಡಗಿದೆ. ಕೃಷ್ಣನು ತನ್ನ ಪುಟ್ಟ ಬಾಯಲ್ಲಿ ಬ್ರಹ್ಮಾಂಡವನ್ನೇ ತೋರಲಿಲ್ಲವೆ!

ಚಿತ್ರಕಾವ್ಯದ ಶೈಲಿಯಲ್ಲಿ ಬರೆದ ಆಚಾರ್ಯರ ಯಮಕಭಾರತ ಎಂಬ ಗ್ರಂಥದಲ್ಲಿ ಮಹಾಭಾರತದ ಸಾರವನ್ನೆಲ್ಲ ಸಂಕ್ಷೇಪವಾಗಿ ನಿರೂಪಿಸಿದ್ದು ಸರ್ವಜ್ಞರ ಕಾವ್ಯ ಕಲಾ ಕೌಶಲ್ಯಕ್ಕೂ, ಕಿರಿದರಲ್ಲಿ ಪಿರಿದರ್ಥ ಹೇಳುವ ಅವರ ಜಾಣ್ಮೆಗೂ ನಿದರ್ಶನವಾಗಿದೆ.

ಇವಲ್ಲದೆ ಬಗೆ-ಬಗೆಯ ಸುಭಾಷಿತಗಳೂ, ಸ್ತೋತ್ರಗಳೂ, ಗೀತಗಳೂ, ಗಾಥೆಗಳೂ ಇವೇ ಮೊದಲಾದ ರಸಭರಿತ ಅನೇಕ ಕೃತಿಗಳನ್ನು ಆಚಾರ್ಯರು ರಚಿಸಿದ್ದು ಅವುಗಳನ್ನು ಗಣಿಸಬಲ್ಲವರಾರು! ಸಮುದ್ರದಲ್ಲಿರುವ ರತ್ನಗಳನ್ನು ಎಣಿಸಬಲ್ಲವರಾರು! ಪೂರ್ಣಪ್ರಜ್ಞರು ರಚಿಸಿದ ಗ್ರಂಥಗಳು ಅನಂತಾರ್ಥಗಳನ್ನು ಬೋಧಿಸುತ್ತವೆ. ಚಿಂತಾಮಣಿಗಳಂತೆ ಸರ್ವಾಭೀಷ್ಟಗಳನ್ನು ಪ್ರದಾನ ಮಾಡಲು ಸಮರ್ಥವಾಗಿರುತ್ತವೆ. ಆಚಾರ್ಯರ ಶೈಲಿಯಲ್ಲಿ ಮಾತು—ಮಿತ. ಅರ್ಥ—ಅಮಿತ. ಅವುಗಳ ಭಾವ—ಗಂಭೀರ. ಫಲ—ಪುರುಷಾರ್ಥ."

ತ್ರಿವಿಕ್ರಮ ಪಂಡಿತರು ಆಚಾರ್ಯರ ಎದುರು ಹಾಗೂ ಎಲ್ಲ ಜನರೆದುರು ಅವರ ಸರ್ವಮೂಲಗ್ರಂಥಗಳ ಮಹಿಮೆಯನ್ನು ಬಣ್ಣಿಸಿ ಮತ್ತೆ ಆಚಾರ್ಯರಲ್ಲಿ ಬಿನ್ನ

ವಿಸಿಕೊಂಡರು— "ಗುರುವರ್ಯರೆ, ತಾವು ಬರೆದ ಗ್ರಂಥಗಳೆಲ್ಲವೂ ಅತ್ಯಪೂರ್ವ ವಾಗಿವೆ. ಆದರೂ ನನಗಾಗಿ ತಾವು ಇನ್ನೊಂದು ಗ್ರಂಥವನ್ನು ಬರೆದು ಕರುಣಿಸ ಬೇಕು. ತಾವು ಈ ವರೆಗೆ ಬರೆದ ಗ್ರಂಥಗಳೆಲ್ಲವೂ ಯುಕ್ತಿಜಾಲಜಟಿಲವಾಗಿ ಪ್ರಮಾಣ ಪ್ರಮೇಯಗಳಿಂದ ಖಚಿತ ನಿಜಿತವಾಗಿದ್ದರೂ ಮಂದಮತಿಗಳಿಗೆ ಅದರಲ್ಲಿಯ ಯುಕ್ತಿಗಳನ್ನು ಗ್ರಹಿಸಲಿಕ್ಕಾಗುವದಿಲ್ಲ. ಅದಕ್ಕಾಗಿ ಸುಸ್ಪಷ್ಟವಾಗಿ, ಯುಕ್ತಿ-ಉಪನ್ಯಾಸ ವನ್ನು ಸುಲಲಿತ ಶೈಲಿಯಲ್ಲಿ ಸರಳವಾಗಿ ತಿಳಿಯುವಂತೆ ಒಂದು ಗ್ರಂಥವನ್ನು ಬರೆಯಬೇಕು."

ಶಿಷ್ಯೋತ್ತಮರ ಈ ಬಿನ್ನಹವನ್ನು ಮನ್ನಿಸಿ ಆಚಾರ್ಯರು "ಅನುವ್ಯಾಖ್ಯಾನ" ಎಂಬ ಮಹಾ ಗ್ರಂಥವನ್ನು ರಚಿಸಿದರು. ಅನುವ್ಯಾಖ್ಯಾನವು ವಾದಿಗಳಿಗೆ ವಜ್ರ, ಮಾಯಾವಾದದ ಕತ್ತಲೆಗೆ ಚಂಡಕಿರಣ. ಆಚಾರ್ಯರು ಈ ಗ್ರಂಥವನ್ನು ಬರೆಯಿಸಿದ ರೀತಿಯನ್ನು ಕೇಳಿದರೆ ಬೆರಗೇ–ಬೆಪ್ಪಾಗುವಂತಿದೆ.

ನಾಲ್ಕು ಅಧ್ಯಾಯದ ಆ ಗ್ರಂಥವನ್ನು ಆಚಾರ್ಯರು ನಾಲ್ಕು ಜನ ಶಿಷ್ಯ ರನ್ನು ಕರೆದು ಏಕ ಕಾಲಕ್ಕೆ ಒಬ್ಬೊಬ್ಬರಿಗೆ ಒಂದೊಂದು ಅಧ್ಯಾಯವನ್ನು ಹೇಳುತ್ತ ಬರೆದು ಮುಗಿಸಿಬಿಟ್ಟರು. ಮಧ್ವಾಚಾರ್ಯರ ಸರ್ವಜ್ಞತ್ವಕ್ಕೆ ಇನ್ನು ಬೇರೆ ಸಾಕ್ಷಿ ಏನು ಬೇಕು !

ಒಂದು ದಿನ ಶ್ರೀಮದಾಚಾರ್ಯರು ಶ್ರೀಮೂಲ ರಾಮನನ್ನು ಶ್ರೀಕೃಷ್ಣ ವೇದವ್ಯಾಸ ದೇವರನ್ನು ಪೂಜೆ ಮಾಡುತ್ತಲಿದ್ದರು. ತ್ರಿವಿಕ್ರಮ ಪಂಡಿತಾಚಾರ್ಯರು ಅಲ್ಲಿಯೇ ಕುಳಿತು ಈ ಪೂಜಾ ಪ್ರಕಾರವನ್ನು ನಿರೀಕ್ಷಿಸುತ್ತಿದ್ದರು. ನೈವೇದ್ಯ ಸಮ ರ್ಪಣ ಕಾಲದಲ್ಲಿ ಎಲ್ಲ ಶಿಷ್ಯರೂ ಗರ್ಭ ಗುಡಿಯಿಂದ ಹೊರಗೆ ಬಂದು ದ್ವಾದಶ ಸ್ತೋತ್ರ ವನ್ನು ಪಾರಾಯಣ ಮಾಡುತ್ತ ನಿಂತುಕೊಂಡರು. ಆಚಾರ್ಯರು ಮಾತ್ರ ಬಾಗಿಲು ಹಾಕಿಕೊಂಡು ದೇವ ಪೂಜೆಯನ್ನು ನಡೆಸಿದ್ದರು. ಹನ್ನೆರಡು ಅಧ್ಯಾಯ ದ್ವಾದಶ ಸ್ತೋತ್ರದ ಪಾರಾಯಣವು ಪೂರ್ಣ ಮುಗಿದರೂ ಗರ್ಭ ಗುಡಿಯ ಮುಚ್ಚಿದ ಕದ ತೆಗೆಯಲೇ ಇಲ್ಲ. ಆಗ ತ್ರಿವಿಕ್ರಮ ಪಂಡಿತಾಚಾರ್ಯರು 'ಏಕೆ ಇಷ್ಟು ವಿಲಂಬ ವಾಗುತ್ತದೆ' ಎಂದು ಕುತೂಹಲಭರಿತರಾಗಿ ಬಾಗಿಲು ಸಂದಿಯಲ್ಲಿ ಇಣಿಕಿ ನೋಡಿ ದರು. ಅಲ್ಲಿ ಅವರು ಕಂಡ ದೃಶ್ಯ ಆಶ್ಚರ್ಯಕಾರಕವಾಗಿದ್ದಿತು. ಕಡಗೋಲು ಕೃಷ್ಣ, ಕೋದಂಡ ರಾಮ, ವೇದವ್ಯಾಸ ಮೂರು ಭಗವನ್ ಮೂರ್ತಿಗಳು ಪೀಠದಲ್ಲಿ ವಿರಾ ಜಿಸುತ್ತಲಿವೆ. ಅವರೆದುರು ಮಧ್ವಾಚಾರ್ಯರು ಹನುಮ ಭೀಮ ಮಧ್ವ ಈ ಮೂರು ರೂಪಗಳನ್ನು ತೆಗೆದುಕೊಂಡು ಆ ಮೂರು ಭಗವದ್ರೂಪಗಳನ್ನು ಭಕ್ತಿಯಿಂದ ಪೂಜಿಸು ತ್ತಿದ್ದಾರೆ. ಈ ದೃಶ್ಯವನ್ನು ಕಂಡು ಪಂಡಿತಾಚಾರ್ಯರಿಗೆ ಒಮ್ಮೆಲೆ ಆಶ್ಚರ್ಯ, ಆನಂದ,

ಅಂಜಿಕೆ, ಉದ್ವೇಗ, ಉಲ್ಲಾಸ, ಭಕ್ತಿಭರ ಮುಂತಾದ ಬಗೆಬಗೆಯ ಭಾವೋದ್ರೇಕಗಳು ಉಕ್ಕಿ ಮಿಕ್ಕಿ ಅವರ ದೇಹವೆಲ್ಲವೂ ಪುಲಕಗೊಂಡಿತು. ಶ್ರದ್ಧಾಭಾರದಿಂದ ಶರೀರವು ಆಕಂಪಿಸಿತು. ಆನಂದ ಬಾಷ್ಪಗಳು ಕಣ್ಣುಗಳಿಂದ ಕೋಡಿಯೊಡೆದು ಹರಿಯತೊಡಗಿದವು. ಅವರ ಕಂಠವು ಗದ್ಗದವಾಯಿತು. ಅವರ ಹದಗೊಂಡ ಹೃದಯದಲ್ಲಿ ಮೂಡಿ ಮಿಕ್ಕಿದ ಭಕ್ತಿ ಆನಂದಾದಿ ಭಾವನೆಗಳ ಆವೇಶವು ಸದ್ಯಃಸ್ಫೂರ್ತಿಯಿಂದ ಕಾವ್ಯವಾಗಿ ಹರಿಯಿತು. ಭಾವಗೀತೆಯಾಗಿ ಮೆರೆಯಿತು. ಅಂದಿನ ಆ ಪರವಶತೆಯಲ್ಲಿ ಗುರು ಮಹಿಮೆಯನ್ನು ಕಂಡು ಸಂತಸಗೊಂಡ ತ್ರಿವಿಕ್ರಮರ ಹೃದಯದಿಂದ ಹೊರಹೊಮ್ಮಿದ ಆ ಹಿಗ್ಗಿನ ಹಾಡೇ ಇಂದು 'ವಾಯುಸ್ತುತಿ' ಎಂದು ಸುಪ್ರಸಿದ್ಧವಾಗಿದೆ. ಅದರಲ್ಲಿ ರಾಮಕೃಷ್ಣ ವೇದವ್ಯಾಸರ ಸೇವಾ–ಶುಶ್ರೂಷೆಗಳಿಗಾಗಿ ಹನುಮ ಭೀಮ ಮಧ್ವರಾಗಿ ಅವತಾರ ಮಾಡಿದ ಆನಂದತೀರ್ಥ ಭಗವತ್ಪಾದಾಚಾರ್ಯರ ದಿವ್ಯ ಮಹಿಮೆಯು ಕಾವ್ಯವಸ್ತುವಾಗಿ ಮೆರೆದಿದೆ.

ಈ ವಾಯು ಸ್ತುತಿಯನ್ನು ಆಚಾರ್ಯರಿಗೆ ತಂದು ಸಮರ್ಪಿಸಿದಾಗ ಅದನ್ನು ನೋಡಿ ಆನಂದತೀರ್ಥರು ಆನಂದಬಟ್ಟರು. ಆದರೆ ತಮ್ಮ ಸ್ತುತಿಯಿಂದಲೇ ಪ್ರಾರಂಭವಾಗುವ ಆ ಖಂಡಕಾವ್ಯವನ್ನು ಕಂಡು ಆಚಾರ್ಯರ ಭಗವದ್ಭಕ್ತಿಗೆ ಇದು ಒಂದು ಕುಂದು ಎಂದು ತೋರಿತು. ತಮ್ಮ ಸ್ತೋತ್ರಕ್ಕಿಂತ ಮೊದಲು ತನ್ನ ಗುರುವಾದ ಶ್ರೀಹರಿಯ ಪ್ರಾರ್ಥನಾ ರೂಪವಾದ ಮಂಗಳಾಚರಣವು ಇರುವದು ಅತ್ಯಂತ ಆವಶ್ಯಕ ಎಂದು ಎನಿಸಿತು ಅವರ ಆ ಭಗವನ್ನಿಷ್ಠವಾದ ಬುದ್ಧಿಗೆ. ಆದುದರಿಂದ ಕೂಡಲೇ ಅವರು ಶ್ರೀಮನ್ ನರಸಿಂಹದೇವರ ಉಗುರಿನ ಬಣ್ಣನೆ ಮಾಡಿ ಎರಡು ಪದ್ಯಗಳನ್ನು ಬರೆದು ಆ ಖಂಡಕಾವ್ಯಕ್ಕೆ ಕಿರೀಟವನ್ನಾಗಿ ಅದರ ಪ್ರಾರಂಭದಲ್ಲಿ ಜೋಡಿಸಿದರು. ಶ್ರೀಮದಾಚಾರ್ಯಕೃತ ನರಸಿಂಹ ಸ್ತೋತ್ರದೊಂದಿಗೆ ಪ್ರಾರಂಭವಾದ ಶ್ರೀ ಮುಖ್ಯಪ್ರಾಣದೇವರ ಮಹಾ–ಮಹಿಮಾ–ಪ್ರತಿಪಾದಕವಾದ ಈ ವಾಯುಸ್ತುತಿಯು ಇಂದಿಗೂ ವೈಷ್ಣವರಿಗೆಲ್ಲ ಒಂದು ತಾರಕ ಮಂತ್ರವಾಗಿದೆ. ಭಕ್ತಿಯಿಂದ ಪಾರಾಯಣ ಮಾಡುವವರಿಗೆ ಬೇಕಾದ ಪುರುಷಾರ್ಥಗಳನ್ನು ಕೊಡಬಲ್ಲ ದಿವ್ಯ ಮಂತ್ರವಾಗಿದೆ. ಶ್ರೀ ವಾದಿರಾಜ ಶ್ರೀಪಾದಂಗಳವರಂಥ ವಾಗ್ವಿಭೂತಿಗಳು ದಿವ್ಯ ಜ್ಞಾನೋದಯದ ಪರಮ ಸಿದ್ಧಿಯನ್ನು ಪಡೆದದ್ದು ಈ ತ್ರಿವಿಕ್ರಮಪಂಡಿತಾಚಾರ್ಯ ಕೃತ ವಾಯು–ಸ್ತುತಿಯ ಪಾರಾಯಣ, ಪುರಶ್ಚರಣ ಪ್ರಭಾವದಿಂದಲೇ. ಈ ಮಾತನ್ನು ಅವರೇ ತಮ್ಮ ಗ್ರಂಥಗಳಲ್ಲಿ ಅನೇಕಬಾರಿ ಒಪ್ಪಿಕೊಂಡಿದ್ದಾರೆ. ತ್ರಿವಿಕ್ರಮರ ವಾಗ್ವೈಭವಕ್ಕೆ ಇನ್ನೇನು ಸಾಕ್ಷ್ಯ ಬೇಕು !



## ಆನಂದ ತೀರ್ಥರ ಅಂಗೈ ಅರಗಿಳಿ

# ಶ್ರೀ ವೇದವ್ಯಾಸ ತೀರ್ಥರು

ಶ್ರೀ ಸೋದಾಮಠದ ಮೂಲ ಪುರುಷ ವಿಷ್ಣುತೀರ್ಥರ ಪಟ್ಟಶಿಷ್ಯರಾದ ಶ್ರೀವೇದ ವ್ಯಾಸ ತೀರ್ಥರು ಮಹಾ ಪಂಡಿತರು. ವೈರಾಗ್ಯವು ಹುಟ್ಟಿನಿಂದಲೇ ಅವರು ಪಡೆದು ಬಂದ ಭಾಗ್ಯವಾಗಿತ್ತು. ಸರಸ ಸುಂದರವಾದ ಕಾವ್ಯ ನಾಟಕ ವಿರಚನೆಯಲ್ಲಿ ಆ ಕಾಲದಲ್ಲಿ ಅವರಿಗೆ ಸರಿದೊರೆಯಾಗಿ ನಿಲ್ಲ ಬಲ್ಲ ಬೇರೊಂದು ವ್ಯಕ್ತಿ ಇರಲಿಲ್ಲ. ಸಚ್ಛಾಸ್ತ್ರಗಳಲ್ಲಿಯೂ ಅವರಿಗೆ ಒಳ್ಳೇ ಸ್ವಚ್ಛಂದವಾದ ಪಾಂಡಿತ್ಯವಿದ್ದಿತು. ಮೇಲಾಗಿ ಅವರು ಮಹಾ ತಪಸ್ವಿಗಳು.

ಶಾಸ್ತ್ರ ಪಾಂಡಿತ್ಯ ಮತ್ತು ತಪೋವೈರಾಗ್ಯಗಳು ಒಂದು ತಾಣದಲ್ಲಿ ಕೂಡು ವದು ಬಹಳ ಅಪರೂಪ. ಗುರುವಿನ ಅನುಗ್ರಹದಿಂದ ಅದ್ಭುತ ಪಾಂಡಿತ್ಯ, ಸರಸ ಕವಿತ್ವ, ಮಹಾ ವೈರಾಗ್ಯ, ದಿವ್ಯವಾದ ತಪಶ್ಶಕ್ತಿ ಮುಂತಾದವುಗಳೆಲ್ಲ ಶ್ರೀ ವೇದ ವ್ಯಾಸ ತೀರ್ಥರಲ್ಲಿ ಮೇಳವಿಸಿದ್ದವು. ಅವರೊಂದು ಸದ್ಗುಣಗಳ ಸಂಗಮದ ರಂಗ ಸ್ಥಳವಾಗಿದ್ದರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ಎಲ್ಲ ಸದ್ಗುಣಗಳಿಂದ ಶ್ರೀವೇದವ್ಯಾಸತೀರ್ಥರು ಅಚ್ಚುಮೆಚ್ಚಿನ 'ಅಚ್ಛಿಯ' ಕೂಸಾಗಿದ್ದರು ಗುಣಗ್ರಾಹಿಗಳಾದ ಶ್ರೀಮದಾನಂದ ತೀರ್ಥರಿಗೆ.

ಇವರ ಆಶು ಕವಿತ್ವ ಶಾಸ್ತ್ರ, ಪ್ರಭುತ್ವ, ಮತ್ತು ತಪಸ್ಸಾಮರ್ಥ್ಯಗಳು ಅವ ರನ್ನು ಆಚಾರ್ಯರ ಅಂಗೈಯಲ್ಲಿಯ ಅರಗಿಳಿಯನ್ನಾಗಿ ಮಾಡಿದ್ದವು.

ಶ್ರೀ ವೇದವ್ಯಾಸ ತೀರ್ಥರ ಈ ಮಹದ್ಭಾಗ್ಯವನ್ನು ಒಂದು ಪದ್ಯದಲ್ಲಿ ಬಹು ಸುಂದರವಾಗಿ ಚಿತ್ರಿಸಿದ್ದಾರೆ ಮಧ್ವವಿಜಯದಲ್ಲಿ ಪಂಡಿತಾಚಾರ್ಯರು.

" ಕವೀಂದ್ರ ತಿಲಕೋ ವಿದ್ವಚ್ಛೇಖರಃ ತಾಪಸಾಗ್ರಣೀಃ ।
ಮಧ್ವಕೇಲೀ ಶುಕೋ ಸ್ಯಾಽಭೂತ್ ಶಿಷ್ಯೋ ವ್ಯಾಸಪದಾಶ್ರಯಃ ॥ "

ಈ ವೇದವ್ಯಾಸ ತೀರ್ಥರು ಶ್ರೀ ವಿಷ್ಣುತೀರ್ಥರ ಮಹಾ ಯೋಗ್ಯತೆಯನ್ನು ಸರಿಯಾಗಿ ಅರಿತಿದ್ದರು. ಅವರ ತಪಶ್ಶಕ್ತಿಯ ಅಗಾಧತೆಯ ಪರಿಜ್ಞಾನವು ಅವರಿಗೆ ಚನ್ನಾಗಿದ್ದಿತು. ಅವರು ತಪೋವರಿಷ್ಠರಾದರೆ ಇವರು ತಪೋನಿಷ್ಠರು. ಆದುದರಿಂದ ಈ ವ್ಯಾಸತೀರ್ಥರು ಆ ತಪಸ್ಸಿನ ತವನಿಧಿಯಂತಿದ್ದ ಆನಂದತೀರ್ಥಬಂಧುಗಳ ಶಿಷ್ಯತ್ವವನ್ನು ಪಡೆದರು.

ಶ್ರೀ ವಿಷ್ಣು ತೀರ್ಥರು ತಮ್ಮ ದಯಾ ದಾಸ್ಯವನ್ನು ಬಯಸಿ ಬಂದ ವ್ಯಾಸ ತೀರ್ಥರ ಮೇಲೆ ಮಾಡಿದ ಕರುಣೆಯನ್ನು ಕಂಡು ಎಲ್ಲರಿಗೂ ಕೌತುಕವೆನಿಸಿತು. ವಿಷ್ಣು ತೀರ್ಥರ ಕರುಣೆಯ ಕಿರೀಟವನ್ನು ತಲೆಯ ಮೇಲೆ ಹೊತ್ತ ವೇದವ್ಯಾಸ ತೀರ್ಥರ " ವೇದವ್ಯಾಸ " ಎಂಬ ಶುಭ ನಾಮವು ಚರಿತಾರ್ಥವಾಯಿತು.

ವೇದವೇದಾಂತಗಳ ದಿವ್ಯ ಜ್ಞಾನ ಜ್ಯೋತಿಯು ಅವರ ಹೃದಯಾಕಾಶದಲ್ಲಿ ಬೆಳಗತೊಡಗಿತು. ಬ್ರಹ್ಮ ವಿದ್ಯೆಯ ರಹಸ್ಯವು ಅವರ ಸೊತ್ತಾಯಿತು. ಮಹಾ ಮಹಾ ಜ್ಞಾನಿಗಳೂ, ಮೇಧಾವಿಗಳೂ ಮಧ್ವಶಿಷ್ಯಪ್ರಶಿಷ್ಯರಾದ ಈ ಮೇಧಾವಿ ಮೇರುಮಣಿಗೆ ಹಣೆ ಮಣಿಯುವಂತಾಯಿತು. ಕರ ಜೋಡಿಸುವಂತಾಯಿತು.

ಮುಂದೆ ಶ್ರೀ ಶ್ರೀ ವಾದಿರಾಜ ಶ್ರೀಪಾದಂಗಳವರ ಸೋದಾಮಠದ ಪರಂಪರೆಯು ಇವರಿಂದ ಉತ್ತರೋತ್ತರ ಉಜ್ವಲೋಜ್ವಲವಾಗಿ ಬೆಳಗಿ ಬೆಳಕು ಬೀರಲು ಮೊದಲಿಟ್ಟಿತು.



## ಸುಬ್ರಹ್ಮಣ್ಯಮಠದ ಮೂಲಪುರುಷರಾದ

# ಶ್ರೀ ಅನಿರುದ್ಧತೀರ್ಥರು

ವಾಸ್ತವಿಕವಾಗಿ ಈ ಸುಬ್ರಹ್ಮಣ್ಯಮಠಕ್ಕೆ ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಸಹೋದರರಾದ ಶ್ರೀ ವಿಷ್ಣುತೀರ್ಥರೆ ಕಾರಣಪುರುಷರು ಮತ್ತು ಮೂಲಪುರುಷರು. ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಸೋದೆ ಮಠದ ಆದ್ಯಪ್ರವರ್ತಕರಾದ ಶ್ರೀ ವಿಷ್ಣುತೀರ್ಥರೇ ಅನಿರುದ್ಧತೀರ್ಥರೆಂಬ ಅಪರೋಕ್ಷಜ್ಞಾನಿಗಳಿಗೆ ಆಶ್ರಮವನ್ನಿತ್ತು ಸುಬ್ರಹ್ಮಣ್ಯಮಠದ ಪರಂಪರೆಯನ್ನು ಮುಂದುವರಿಸಲಿಕ್ಕೆ ಅಪ್ಪಣೆಯಿತ್ತರು.

ಅನಿರುದ್ಧತೀರ್ಥರು ಮಹಾವ್ರತಿಗಳೂ ಅಹುದು, ಶ್ರೇಷ್ಠ ಯತಿಗಳೂ ಅಹುದು. ಹಿಂದಾದುದನ್ನು, ಇಂದು ನಡೆದುದನ್ನು, ಮುಂದೆ ಜರಗುವದನ್ನು ಅವರು ಅರಿಯ ಬಲ್ಲವರಾಗಿದ್ದರು. ಇಷ್ಟು ಅತ್ಯದ್ಭುತವಾಗಿತ್ತು ಅವರ ತಪಶ್ಶಕ್ತಿ. ಅದೊಂದು ವಿವಿಧ ವಿದ್ಯಾ–ವಾಹಿನಿಗಳ ಜೇಂಗಡಲು. ಬ್ರಹ್ಮತರ್ಕದಲ್ಲಿ ಅವರ ಪಾಂಡಿತ್ಯ ಚಿಗುರು ಚರ್ವಣ ಮಾಡುವಂತಹದಾಗಿರಲಿಲ್ಲ, ತಲಸ್ಪರ್ಶಿಯಾಗಿದ್ದಿತು. ಅವರು ವಾದಮಾಡ ತೊಡಗಿದಾಗ ನೈಯಾಯಿಕರ ಪ್ರಾಚೀನ ತರ್ಕ, ನವೀನ ತರ್ಕಗಳು ಕುಂಠಿತವಾಗಿ ಕುಂಟುತ್ತಿದ್ದವು. ಅತ್ಯಂತ ಕಠಿಣತರವಾದ ವ್ರತೋಪವಾಸಗಳನ್ನು ಮಾಡಿ, ದೇಹ ದಂಡನೆ ಮಾಡುವಲ್ಲಿಯೂ ಅವರು ಬಹು ಸಮರ್ಥರು. ಯೋಗ-ಪಥದಲ್ಲಿ ಬಹು ದೂರ ಸಾಗಿದ ಅವರ ಪಯಣವು ಎಂದೂ ಯಾವುದರಿಂದಲೂ ನಿರುದ್ಧವಾಗಲಿಲ್ಲ. ಅವರ ಆಧ್ಯಾತ್ಮ ಸಾಧನೆಯು ಯಾವ ಕಾಲಕ್ಕೂ ಅವರುದ್ಧವಾಗಲಿಲ್ಲ. 'ಅನಿರುದ್ಧ' ಶಬ್ದವು ಅವರ ಶುಭನಾಮಧೇಯಕ್ಕೆ ಸಾಫಲ್ಯವನ್ನು ಒದಗಿಸಿತ್ತು.

"ತೀವ್ರವ್ರತೋಽತೀಂದ್ರಿಯ ವಿದ್ ವಿದ್ಯಾಬ್ಧಿಸ್ತರ್ಕ ಪಂಡಿತಃ।
ಅನಿರುದ್ಧ ಪದಾಧಾರಃ ಪ್ರೇಷ್ಠಶಿಷ್ಯಸ್ತಮಾಯಯೌ ॥"

ಅವರು ವಿಷ್ಣುತೀರ್ಥರ ಸಾಕ್ಷಾತ್ ಶಿಷ್ಯರು. ಗುರುವಿಗೆ ತಕ್ಕ ಶಿಷ್ಯ. ಅವರು ಊರು ತೊರೆದರೆ, ಇವರು ದೇಶ ತೊರೆದರು. ಅವರು ಪಾಠ ಹೇಳಿದರೆ, ಇವರು ಶ್ರವಣ ಮಾಡುತ್ತಿದ್ದರು. ಅವರ ಗುರು ಹರಿಶ್ಚಂದ್ರ ಪರ್ವತಕ್ಕೆ ಹೋದರೆ, ಈ ಶಿಷ್ಯರು ಶ್ರೀಮದಾಚಾರ್ಯರಿಗೆ ಸತ್ಯತೀರ್ಥರಂತೆ ಬೆಂಬತ್ತಿ .ಅಲ್ಲಿಗೆ ಹೋದರು.

ಅವರು ತಪಕ್ಕೆ ಕುಳಿತರೆ, ಇವರು ಜಪಕ್ಕೆ ಕುಳಿತರು. ಅವರು ಭಗವಂತನನ್ನು ಕಂಡರೆ, ಅವರ ಸಿದ್ಧಿಯನ್ನು ಅವರ ಮುಖದ ಮೇಲೆಯೇ ಅನಿರುದ್ಧತೀರ್ಥರು ಕಂಡುಕೊಂಡರು. ಆ ದೇವರನ್ನು ಕಂಡು, ಅವನ ದರ್ಶನಾನಂದದಲ್ಲಿಯೇ ಮೈ ಮರೆತು ಅಲ್ಲಿಯೇ ತಪಸ್ಸು ಮಾಡುತ್ತ ನಿಂತುಕೊಂಡ ಗುರುಗಳಿಗೆ ಶ್ರೀ ಕೃಷ್ಣಪೂಜೆ ಹಾಗೂ ಲೋಕೋದ್ಧಾರ ಕಾರ್ಯವನ್ನು ನೆನಪಿಗೆ ತಂದುಕೊಟ್ಟು ಅವರನ್ನು ಮತ್ತೆ ಉಡುಪಿಗೆ ಕರೆತಂದವರು ಶ್ರೀ ಅನಿರುದ್ಧತೀರ್ಥರೇ.

ಸಿದ್ಧಿಯ ಶಿಖರವನ್ನು ಮುಟ್ಟಿ ಶ್ರೀ ವಿಷ್ಣುತೀರ್ಥರು ಶಿಷ್ಯನ ಬಿನ್ನಹದ ಮೇರೆಗೆ ಉಡುಪಿಗೆ ಬಂದರು. ಉಡುಪಿಯ ಅಷ್ಟಮಠಾಧೀಶರೂ, ಅಲ್ಲಿಯ ನೆರೆದ ಭಕ್ತ–ವೃಂದವೂ ಹೂವಿನರಾಶಿಯಲ್ಲಿ ಅದೃಶ್ಯರಾದ ಮಧ್ವಾಚಾರ್ಯರೇ ಮತ್ತೆ ಎದ್ದು ಬಂದರೆಂದು ತಿಳಿದು ಎದ್ದು ನಿಂತರು. ಅಷ್ಟು ಹೋಲಿಕೆ ಆ ಅಣ್ಣ–ತಮ್ಮಂದಿರಲ್ಲಿ. ರಾಮ–ಲಕ್ಷ್ಮಣರಂತೆ. ಲವ–ಕುಶರಂತೆ. ಭೀಮಾರ್ಜುನರಂತೆ. ಬಲರಾಮ–ಕೃಷ್ಣರಂತೆ. ಅದೇ ರೂಪ, ಅದೇ ಬಣ್ಣ, ಅದೇ ಕಣ್ಣು, ಹಾಗೆಯೇ ಮೂಗು, ಅಂತಹದೇ ನಿಲುವು, ಅಂತೆಯೇ ಚಲುವು ಎಂಥ ಹೋಲಿಕೆ !

ಶ್ರೀ ವಿಷ್ಣುತೀರ್ಥರು ಉಡುಪಿಯಲ್ಲಿ ಇರುವವರೆಗೆ ಅವರ ಪಾಠ–ಉಪದೇಶ–ಉಪನ್ಯಾಸಗಳನ್ನು ಕೇಳುವ ಮಾಧ್ವವೃಂದಕ್ಕೆ ಶ್ರೀ ಮಧ್ವಾಚಾರ್ಯರ ವಿರಹ ವಿಹ್ವಲವು ಎಷ್ಟೋ ಕಡಿಮೆಯಾಗಿದ್ದಿತು.

ಶ್ರೀ ವಿಷ್ಣುತೀರ್ಥರು ತಮ್ಮ ಶ್ರೀ ಕೃಷ್ಣನ ಪರ್ಯಾಯವನ್ನು ಒಳ್ಳೆಯ ವೈಭವದಿಂದ ನೆರವೇರಿಸಿದರು. ಮಧ್ವ ಸಿದ್ಧಾಂತವನ್ನು ಎಲ್ಲೆಡೆಗೂ ಪ್ರಸಾರಮಾಡಿ ದರು. ಅನೇಕ ಗ್ರಂಥಗಳನ್ನು ರಚಿಸಿದರು. ಪಾಠ–ಪ್ರವಚನಪಟೀಯಾಂಸರಾದ ಅನೇಕ ವಿದ್ವಾಂಸರನ್ನು ತಯಾರು ಮಾಡಿದರು. ತಮ್ಮ ಸರ್ವಜ್ಞ ಸಂಸ್ಥಾನವನ್ನು ಶ್ರೀ ವೇದವ್ಯಾಸತೀರ್ಥರಿಗೆ ಒಪ್ಪಿಸಿದರು. ಮುತ್ತು ಸುಬ್ರಹ್ಮಣ್ಯಮಠದಲ್ಲಿ ತಾವು ಪೂಜಿ ಸುತ್ತಿರುವ ಶ್ರೀ ಲಕ್ಷ್ಮೀ–ನರಸಿಂಹ ಸಂಪುಟ ಮತ್ತು ವ್ಯಾಸ ಮುಷ್ಟಿಗಳನ್ನು ಪೂಜಿಸ ಲಿಕ್ಕಾಗಿ ಮತ್ತು ಸುಬ್ರಹ್ಮಣ್ಯ ಮಠವನ್ನು ಪರಂಪರೆಯಾಗಿ ಮುಂದುವರಿಸಲಿಕ್ಕಾಗಿ ಹರಿಶ್ಚಂದ್ರ ಪರ್ವತದಿಂದ ತಮ್ಮನ್ನು ಉಡುಪಿಗೆ ಕರೆತಂದ ಶ್ರೀ ಅನಿರುದ್ಧತೀರ್ಥರಿಗೆ ಆಶ್ರಮವಿತ್ತರು. ಆ ಪರಂಪರೆಯೇ ಸುಬ್ರಹ್ಮಣ್ಯ ಮಠವೆಂದು ಹೆಸರಾಗಿದೆ.

ಸುಬ್ರಹ್ಮಣ್ಯ ಕ್ಷೇತ್ರವು ದಕ್ಷಿಣ ಕನ್ನಡದ ಸಪ್ತ ಕ್ಷೇತ್ರಗಳಲ್ಲಿ. ಕುಮಾರಾದ್ರಿ ಎಂದು ಹೆಸರಾಗಿದೆ. ಇದನ್ನು ಶ್ರೀ ವಾದಿರಾಜ ಪೂಜ್ಯ ಚರಣರು ಮುಕ್ತಿದ್ವಾರ ವೆಂದು ವರ್ಣಿಸಿದ್ದಾರೆ. ಶ್ರೀ ಮಧ್ವಾಚಾರ್ಯರು ಸಂಚಾರ ಕ್ರಮದಿಂದ ಇಲ್ಲಿಗೆ

ಬಂದಾಗ ಇಲ್ಲಿಯ ಕುಮಾರಧಾರಾ ನದಿಯ ದಂಡೆಯ ಮೇಲೆ ತಮ್ಮ ದೇವರ ಸಂಪುಷ್ಟವನ್ನು ಇಟ್ಟು ತಮ್ಮ ಪೂಜಾಆನ್ಹಿಕಗಳನ್ನು ಮಾಡಿದರು. ಆ ಸಮಯ ದಲ್ಲಿ ಆ ಕಾಡಿನಲ್ಲಿರುವ ಕ್ರೂರ ಪಶುಗಳೆಲ್ಲವೂ ತಮ್ಮ ಜಾತಿ ವೈರವನ್ನು ಮರೆದು, ಭೀತಿಯನ್ನು ತೊರೆದು, ಸ್ನೇಹ ಸಲುಗೆಯಿಂದ ಕೂಡಿ ಆಡಿದವು. ಆಚಾರ್ಯರಿಗೆ ಪ್ರದಕ್ಷಿಣೆ ಮಾಡಿದವು. ಇದನ್ನು ನೋಡಿದ ಜನರಿಗೆಲ್ಲ ಅತ್ಯಾಶ್ಚರ್ಯವಾಯಿತು. ಕೂಡಲೇ ಅವರು ಓಡಿ ಹೋಗಿ ತಮ್ಮ ದೊರೆ ಬಲ್ಲಾಳ ರಾಜನಿಗೆ ಈ ಕೌತುಕ ವನ್ನು ತಿಳಿಯಪಡಿಸಿದರು. ಅದನ್ನು ಕೇಳಿದ ಆ ನಾಡಿನ ಒಡೆಯನು ಆಚಾರ್ಯರ ಪಾದಗಳಿಗೆ ಬಂದು ಪೊಡಮಟ್ಟನು. ತನ್ನ ಅರಮನೆಗೆ ಕರೆತಂದು ಆದರದಿಂದ ಆತಿಥ್ಯ ನೀಡಿ ಸತ್ಕರಿಸಿದನು.

ಅದೇ ವೇಳೆಯಲ್ಲಿ ಭಟ್ಟಾಚಾರ್ಯ ಪರಂಪರೆಯ ನರಸಿಂಹ ತೀರ್ಥ ಎಂಬ ಯತಿಗಳು ಅಲ್ಲಿನ ತಮ್ಮ ಮಠದಲ್ಲಿ ಇದ್ದರು. ಶ್ರೀ ಮಧ್ವಾಚಾರ್ಯರಿಗೂ ಶ್ರೀನರ ಸಿಂಹತೀರ್ಥರಿಗೂ ವೇದಾಂತದಲ್ಲಿ ವಾದವಿವಾದ ನಡೆಯಿತು. ಭಾರತೀಶರ ಪ್ರತಿಭಾ ಪಾಂಡಿತ್ಯಗಳೆದುರು ನರಸಿಂಹ ತೀರ್ಥರ ವಾದಾಟೋಪವು ಸಾಗದಾಯಿತು. ಕೊನೆಗೆ ಅವರು ಸೋತು ಇವರಿಗೆ ಶರಣಾಗತರಾದರು. ತಮ್ಮ ಮಠ ಹಾಗೂ ಸಂಸ್ಥಾನ ಮತ್ತು ದೇವತಾ ಪ್ರತಿಮೆಗಳನ್ನು ಶ್ರೀಮದಾಚಾರ್ಯರಿಗೆ ಸಮರ್ಪಿಸಿ ದರು. ಅವುಗಳಲ್ಲಿ ಆಚಾರ್ಯರು ಮುಖ್ಯವಾದ ಪರಶುರಾಮದೇವರು ಪೂಜಿಸಿದ ಶ್ರೀ ಲಕ್ಷ್ಮೀ ನರಸಿಂಹ ಮೂರ್ತಿಯನ್ನು ಮಾತ್ರ ತೆಗೆದುಕೊಂಡರು. ಅದರೊಂದಿಗೆ ದಿಗ್ವಿಜಯ ಪಾಂಡುರಂಗ ವಿಠ್ಠಲ, ಹನ್ನೆರಡು ಕ್ಷೇತ್ರ ಲಕ್ಷ್ಮೀನಾರಾಯಣ ಸಾಲಿ ಗ್ರಾಮ, ಒಂದು ಲಕ್ಷ್ಮೀನರಸಿಂಹ ಸಾಲಿಗ್ರಾಮ, ಮತ್ತು ವ್ಯಾಸ ಮುಷ್ಟಿ, ಹಾಗೂ ಒಂದುನೂರಾಐವತ್ತೊಂದು ಸಾಲಿಗ್ರಾಮಗಳಿಂದ ಕೂಡಿದ ದೇವ ಸಂಪುಟ ಇವು ಗಳನ್ನೆಲ್ಲ ಆ ಮಠದಲ್ಲಿ ಪ್ರತಿಷ್ಠಾಪಿಸಿ ಅದೊಂದು ಪರಂಪರೆಯು ಮುಂದುವರೆಯು ವಂತೆ ಮಾಡಿದರು.

ಶ್ರೀ ಮಧ್ವಾಚಾರ್ಯರು ಪ್ರಾತಃಕಾಲದಲ್ಲಿ ಸುಬ್ರಹ್ಮಣ್ಯದಲ್ಲಿ ವ್ಯಾಸ ಪೂಜೆ ಯನ್ನು ಮಾಡಿಕೊಂಡು, ಮಧ್ಯಾಹ್ನದಲ್ಲಿ ಮಧ್ಯ ವಾಟಕ್ಕೆ ಬಂದು, ಅಲ್ಲಿ ದೇವರ ಪೂಜೆಯನ್ನು ಪೂರೈಸಿಕೊಂಡು, ಸಾಯಂಕಾಲದ ಶ್ರೀ ಕೃಷ್ಣನ ಪೂಜೆಗೆ ಉಡು ಪಿಗೆ ಬರುತ್ತಿದ್ದರು. ಮಾರನೆಯ ದಿನ ಬೆಳಿಗ್ಗೆ ಉಡುಪಿಯಲ್ಲಿ ಕೃಷ್ಣ ಪೂಜೆಯನ್ನು ಮುಗಿಸಿಕೊಂಡು, ಮಧ್ಯಾಹ್ನ ಮಧ್ಯವಾಟದಲ್ಲಿ ಪೂಜೆಯನ್ನು ಮಾಡಿ, ಸಾಯಂ ಕಾಲದಲ್ಲಿ ಸುಬ್ರಹ್ಮಣ್ಯದಲ್ಲಿ ಶ್ರೀ ವ್ಯಾಸ ವಿಠ್ಠಲ ನರಸಿಂಹ ದೇವರನ್ನು ಪೂಜಿಸುತ್ತಿ ದ್ದರಂತೆ. ಆಚಾರ್ಯರು ಇರುವ ವರೆಗೆ ನಿತ್ಯವೂ ಉಡುಪಿ ಹಾಗೂ ಸುಬ್ರಹ್ಮಣ್ಯ ಗಳಲ್ಲಿ ಶ್ರೀ ಮಧ್ವಾಚಾರ್ಯರಿಂದಲೇ ದೇವತಾರ್ಚನೆ ಆಗುತ್ತಿತ್ತು ಎಂದು ಐತಿಹ್ಯವಿದೆ.

ಆಚಾರ್ಯರು ತಮ್ಮ ಅನಂತರ ಸುಬ್ರಹ್ಮಣ್ಯ ಮಠದ ಸರ್ವಾಧಿಕಾರವನ್ನು ಶ್ರೀ ವಿಷ್ಣು ತೀರ್ಥರಿಗೆ ಒಪ್ಪಿಸಿದ್ದರು. ಆ ವಿಷ್ಣು ತೀರ್ಥರು ತಾವು ಕೊನೆಯದಾಗಿ ಕುಮಾರ ಪರ್ವತಕ್ಕೆ ತಪೋನುಷ್ಠಾನಕ್ಕಾಗಿ ತೆರಳುವಾಗ ತಮ್ಮ ನೆಚ್ಚಿನ ಶಿಷ್ಯರಾದ ಶ್ರೀ ಶ್ರೀ ಅನಿರುದ್ಧ ತೀರ್ಥರನ್ನು ಸುಬ್ರಹ್ಮಣ್ಯ ಮಠದ ಮಹಾ ಪೀಠದಲ್ಲಿ ಅಭಿಷೇಕಗೈದು ಆ ಮಠದ ಪಟ್ಟದ ದೇವರನ್ನು ಕೊಟ್ಟು ಅನುಗ್ರಹಿಸಿದರು. ಆದರೆ ವ್ಯಾಸ ಮುಷ್ಟಿಯುಳ್ಳ ಸಂಪುಷ್ಟವನ್ನು ಮಾತ್ರ ತಮ್ಮ ಜೊತೆಗೆ ಕುಮಾರ ಪರ್ವತಕ್ಕೆ ತಮ್ಮ ನಿತ್ಯ ಪೂಜೆಗಾಗಿ ಕೊಂಡೊಯ್ದಿದ್ದರು.

ಮುಂದೆ ಕೆಲವು ದಿನಗಳ ಬಳಿಕ ವೇದ ವ್ಯಾಸರು ಮಧ್ವಾಚಾರ್ಯರಿಗೆ ಕರುಣಿಸಿದ ಮಳಲ ಮುಷ್ಟಿ ರೂಪವಾದ ವೇದವ್ಯಾಸರನ್ನು ಪೂಜಿಸಬೇಕೆಂದು ಅನಿರುದ್ಧ ತೀರ್ಥರಿಗೆ ಬಯಕೆಯಾಯಿತು.

ಅತ್ತ ಕುಮಾರ ಪರ್ವತದಲ್ಲಿ ತಪೋನಿರತರಾದ ವಿಷ್ಣು ತೀರ್ಥರ ತಪಸ್ಸು ದಿನದಿನಕ್ಕೆ ಉಗ್ರವಾಗುತ್ತ ನಡೆಯಿತು. ಅವರು ಮೇಲಿಂದ ಮೇಲೆ ಅಸಂಪ್ರಜ್ಞಾತ ತಪಸ್ಸಮಾಧಿಯಲ್ಲಿ ಕೂಡುವ ಪ್ರಸಂಗ ಬರುತ್ತಿತ್ತು.

ಅಂಥ ಪ್ರಸಂಗದಲ್ಲಿ ಶ್ರೀ ವೇದ ವ್ಯಾಸರ ಪೂಜೆಯು ನಿಲ್ಲಬಾರದೆಂದು ವಿಷ್ಣು ತೀರ್ಥರು ಆ ವ್ಯಾಸ ಸಂಪುಟವನ್ನು ತಮ್ಮ ಶಿಷ್ಯೋತ್ತಮರಾದ ಅನಿರುದ್ಧ ತೀರ್ಥರಿಗೆ ಕೊಟ್ಟು ಕಳಿಸಬೇಕೆಂದು ವಿಚಾರಿಸಿದರು.

ಅದೇ ವೇಳೆಯಲ್ಲಿ ಶ್ರೀ ಅನಿರುದ್ಧ ತೀರ್ಥರು ವ್ಯಾಸ ಸಂಪುಟದ ಪೂಜೆಯ ಆಶೆಯಿಂದ ಶ್ರೀ ವಿಷ್ಣು ತೀರ್ಥರನ್ನು ಹಗಲಿರುಳೂ ಮನಸ್ಸಿನಲ್ಲಿಯೇ ನೆನೆಯುತ್ತಿದ್ದರು. ಭಕ್ತಿಯಿಂದ ಬೇಡಿಕೊಳ್ಳುತ್ತಿದ್ದರು.

ಶಿಷ್ಯನ ಈ ಹೃದಯದ ಹಂಬಲವನ್ನು ಅರಿತು ಗುರುತು ಹಿಡಿದ ಗುರುಸ್ವಾಮಿಗಳು ವಜ್ರ ಸಂಪುಟದಂತೆ ಸರ್ವತೋಭದ್ರವಾದ ಆ ವ್ಯಾಸ ಸಂಪುಟವನ್ನು ತಾವು ಕುಳಿತ ತೀರ ತಪೋವನದಿಂದಲೇ ಕುಮಾರಧಾರಾ ನದಿಯ ಪ್ರವಾಹದಲ್ಲಿ ತೇಲಿಬಿಟ್ಟರು.

ಶ್ರೀ ವೇದವ್ಯಾಸರ ದೇವರ ಸಂಪುಟವು ಅನಿರುದ್ಧತೀರ್ಥರು ಸ್ನಾನಮಾಡುವಾಗ ಕುಮಾರಾಧಾರೆಯ ಸೆಳವಿನಲ್ಲಿ ತೆರೆ–ನೊರೆಗಳಗುಂಟ ತೇಲಿ ಬರುತ್ತಿತ್ತು. ಅನಿರುದ್ಧ ತೀರ್ಥರಿಗೆ ತಮ್ಮ ಭಾಗ್ಯದ ನಿಧಿಯೇ ತೇಲಿ ಬಂದಂತೆನಿಸಿತು.

ಸಂತೋಷಾತಿರೇಕದಿಂದ ಅವರು ಸಾಗರಬಿದ್ದು ಪ್ರವಾಹದಲ್ಲಿ ತೇಲುವ ಆ ವ್ಯಾಸಸಂಪುಟವನ್ನು ತೆಗೆದುಕೊಂಡು ಆನಂದದಿಂದ ತಲೆಯ ಮೇಲೆ ಹೊತ್ತು ಆಚಾರ್ಯರು ಶ್ರೀ ಕೃಷ್ಣನನ್ನು ಶರಧಿತಟದಿಂದ ಉಡುಪಿಗೆ ತಂದಂತೆ, ಶ್ರೀ ಮಠಕ್ಕೆ ಕರೆ ತಂದರು. ಶ್ರೀ ಅನಿರುದ್ಧತೀರ್ಥರಿಗೆ ಕುಮಾರಾಧಾರಾ ನದಿಯಲ್ಲಿ ಈ ವ್ಯಾಸ ಸಂಪುಟವು ದೊರೆತ ಸ್ಥಳವೇ ಸಂಪುಟ ತೀರ್ಥವೆಂದು ಈಗಲೂ ಹೆಸರಾಗಿದೆ. ಈ ಮೊದಲು ಆಚಾರ್ಯರು ಇಲ್ಲಿಗೆ ಬಂದಾಗ ತಮ್ಮ ರಾಮ–ಕೃಷ್ಣ ವೇದವ್ಯಾಸಾದಿ ದೇವರ ಸಂಪುಟವನ್ನು ಇಟ್ಟು ತಮ್ಮ ಜಪಾನ್ಹಿಕ ದೇವತಾರ್ಚನ ಮುಂತಾದವುಗಳನ್ನು ಇಲ್ಲಿಯೇ ಮಾಡಿದ್ದರು.

ನದೀ ಪ್ರವಾಹದಲ್ಲಿ ಸಂಪುಟವೊಂದು ತೇಲಿ ಬಂದ ಸಮಾಚಾರವು ಆ ದೇಶದ ದೊರೆಯಾದ ಬಲ್ಲಾಳ ರಾಜನ ಕಿವಿಗೆ ತಲುಪಿತು. ಆ ಸಂಪುಟದಲ್ಲಿ ಬರಿ ಮುತ್ತು ರತ್ನಗಳೆ ತುಂಬಿವೆಯೆಂದು ಯಾರೋ ಮಹಾರಾಜನ ಕಿವಿ ಊದಿದರು. ರನ್ನ–ಹೊನ್ನು–ಹಣದ ಆಸೆಯಿಂದ ಆ ರಾಜನು ಮಠಕ್ಕೆ ಬಂದು ಬಲಾತ್ಕಾರದಿಂದ ಆ ಸಂಪುಟವನ್ನು ಕಿತ್ತುಕೊಂಡನು. ಆದರೆ ಎಷ್ಟು ಪ್ರಯತ್ನಪಟ್ಟರೂ ಅವನಿಗೆ ಆ ಸಂಪುಟವನ್ನು ತೆರೆಯಲಿಕ್ಕಾಗಲಿಲ್ಲ.

ಅವನ ಆಸ್ಥಾನದಲ್ಲಿಯ ಮಹಾಮಲ್ಲರೂ, ಶೂರರೂ ಆ ಸಂಪುಟವನ್ನು ಮುರಿಯಬೇಕೆಂದು ಪ್ರಯತ್ನಿಸಿದರು. ಕಲ್ಲಿನಿಂದ ಜಜ್ಜಿದರು, ಉಪ್ಪರಿಗೆಯ ಮೇಲಿನಿಂದ ಅಪ್ಪಳಿಸಿ ಕಲ್ಲ ಮೇಲೆ ಒಗೆದರು. ಸುತ್ತಿಗೆಯಿಂದ ಹಣಿದರು. ಏನಾದರೂ ಅದು ಅಚ್ಛೇದ್ಯ. ಎಷ್ಟು ಒಡೆಯಬೇಕೆಂದರೂ ಅಭೇದ್ಯ. ಕೊನೆಗೆ ಮಹಾರಾಜನು ತನ್ನ ಮದ್ದಾನೆಯನ್ನು ತರಿಸಿ ಅದರ ಕಾಲಿನಿಂದ ತುಳಿಸಿ ಅದನ್ನು ಒಡೆಯಲು ಪ್ರಯತ್ನಪಟ್ಟನು. ಏನಾದರೂ ಆ ವಜ್ರ ಸಂಪುಟವು ಬಾಯಿ ಬಿಡಲಿಲ್ಲ. ಒಡೆಯಲೂ ಇಲ್ಲ. ಯಾವದಕ್ಕೂ ಜಗ್ಗಲಿಲ್ಲ. ನೆಗ್ಗಲಿಲ್ಲ.

ಆದರೆ ಆ ವ್ಯಾಸ ಸಂಪುಟವನ್ನು ಆನೆಯ ಕಾಲಿನಿಂದ ತುಳಿಸಲು ಹೊರಟ ಆ ಮಹಾರಾಜನ ಮೈತುಂಬ ಗುಳ್ಳೆಗಳು ಎದ್ದವು. ಅವನ ಸರ್ವಾಂಗದಲ್ಲಿಯೂ ಉರಿಯುವ ಪಂಜು ಹಚ್ಚಿದಂತೆ ಮೈಯಲ್ಲವೂ ಸುಡತೊಡಗಿತು. ಸಂಪುಟವನ್ನು ಕಾಲಿನಿಂದ ತುಳಿದ ಆನೆಗೂ ಮೈತುಂಬ ಗುಳ್ಳೆಗಳು. ಅದರ ಉರಿ ಸಂಕಟವನ್ನು ತಾಳಲಾರದೇ ಆ ಗಜೇಂದ್ರವು ಹುಡಿಯಲ್ಲಿ ಬಿದ್ದು ಹೊರಳಾಡಹತ್ತಿತು.

ಆಗ ಮಹಾರಾಜನು ಪಶ್ಚಾತ್ತಾಪದಿಂದ ತಪ್ತನಾಗಿ ಶ್ರೀ ಮಠಕ್ಕೆ ಧಾವಿಸಿ ಬಂದು ಶ್ರೀ ಅನಿರುದ್ಧತೀರ್ಥರ ಪಾದದಡಿಗೆ ಅಡ್ಡಬಿದ್ದನು.

"ಸ್ವಾಮಿ ನನ್ನದು ಮಹಾ ಅಪರಾಧವಾಯಿತು. ತಾವು ಕರುಣೆಯಿಂದ ಈ ಮಹಾಪಾಪಿಯನ್ನು ಕ್ಷಮಿಸಬೇಕು. ಇಂದಿನಿಂದ ಸುಬ್ರಹ್ಮಣ್ಯಸ್ವಾಮಿಯ ಆಜ್ಞಾನುಸಾರವಾಗಿ ಈ ದೇವಸ್ಥಾನದ ಸರ್ವಾಧಿಕಾರವನ್ನೂ ತಮಗೆ ಒಪ್ಪಿಸಿದ್ದೇನೆ. ನಾನು ಈ ನನ್ನ ಮಹಾಪಾಪದ ಪ್ರಾಯಶ್ಚಿತ್ತಕ್ಕಾಗಿ ಸುಬ್ರಹ್ಮಣ್ಯ ಸ್ವಾಮಿಯ ಎದುರು ದೊಡ್ಡ ಕಲ್ಲಾಗಿ ಅಡ್ಡ ಬಿದ್ದು ಶಿಲಾ ತಪಸ್ಸನ್ನು ಆಚರಿಸುವೆನು."

ಎಂದು ಹೇಳಿ ಅವನು ಆ ದೇವಸ್ಥಾನದ ಅಧಿಕಾರವನ್ನೆಲ್ಲ ತಾಮ್ರ ಶಾಸನದ ಮೂಲಕವಾಗಿ ಶ್ರೀ ಶ್ರೀಗಳವರಿಗೆ ಸಮರ್ಪಿಸಿದನು. ಆ ಮಹಾರಾಜನು ಕಲ್ಲಾಗಿ ನಿಂತ ಪ್ರತಿಮೆ ಈಗಲೂ ದೇವರ ಎದುರಿಗೆ ಇದ್ದು ಭಕ್ತರು ಅದಕ್ಕೆ ಉರಿ ಶಾಂತಿಗಾಗಿ ಬೆಣ್ಣೆ, ಕುಂಬಳಹತ್ತಿ ಮುಂತಾದ ಕಾಣಿಕೆ ನೀಡುವರು.

ಆಚಾರ್ಯರ ಹಾಗೂ ವಿಷ್ಣುತೀರ್ಥರ ಪರಮಾನುಗ್ರಹಕ್ಕೆ ಪಾತ್ರರಾದ ಅನಿರುದ್ಧತೀರ್ಥರು ಅನೇಕ ವರ್ಷಕಾಲ ಸುಬ್ರಹ್ಮಣ್ಯದಲ್ಲಿ ಇದ್ದುಕೊಂಡು ವ್ಯಾಸವಿಠ್ಠಲ ಹಾಗೂ ಸಂಪುಟ ನರಸಿಂಹ ದೇವರನ್ನು ಭಕ್ತಿಯಿಂದ ಪೂಜಿಸಿದರು. ಪಾಠ–ಪ್ರವಚನ ಉಪನ್ಯಾಸಗಳಿಂದ ಮಧ್ವ ಸಿದ್ಧಾಂತವನ್ನು ಅಭಿವೃದ್ಧಿಗೈದರು. ಕೊನೆಗೆ ಮಹಾಯೋಗಿಗಳಾದ ಶ್ರೀ ವರಾಹತೀರ್ಥರಿಗೆ ಆಶ್ರಮವನ್ನಿತ್ತು, ಮಠಾಧಿಕಾರವನ್ನು ಒಪ್ಪಿಸಿ ಅದೇ ಸಂಪುಟ ಕ್ಷೇತ್ರದಲ್ಲಿ ಹರಿಚರಣವನ್ನು ಸೇರಿದರು.



## ಸುಬ್ರಹ್ಮಣ್ಯ ಕ್ಷೇತ್ರದ ಮಹಿಮೆ

ರೂಪ್ಯಪೀಠಂ ಕುಮಾರಾದ್ರಿಃ ಕುಂಭಾಸೀ ಚ ಧ್ವಜೇಶ್ವರಃ ।
ಕ್ರೋಡಗೋಕರ್ಣ ಮೂಕಾಂಬಾಃ ಸಪ್ತೈತೆ ಮೋಕ್ಷದಾಯಕಾಃ ॥

ಸುಬ್ರಹ್ಮಣ್ಯಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ ।
ಯತ್ಕ್ರೋಷ್ಟಿಪ್ತಮಪಿ ಸ್ಪೃಷ್ಟಂ ಶ್ವಿತ್ರಿಣಃ ಶೋಧಯತ್ಯಹೊ ॥

ಶ್ರೀ ವಿಷ್ಣುತೀರ್ಥ ಮುನಿಮಿತ್ರ ಸುರಾರಿಜೈತ್ರ ।
ಶ್ರೀ ಕೃಷ್ಣ ಪಜ್ಜಲಜಭೃಂಗ ಕೃತಾಘಭಂಗ ॥

ಸಹ್ಯೇಶವೇಹಿ ಸಕಲೈರುಪ ಜೀವ್ಯಮನ್ನಂ ।
ಸಂಹರ್ತೃ ಸರ್ವ ಭುವನಸ್ಯ ಕುಮಾರ ಮಹ್ಯಂ ॥



## ಆದ್ಯ ಟೀಕಾಕಾರರಾದ

# ಶ್ರೀ ಪದ್ಮನಾಭ ತೀರ್ಥರು

ಕೃಪಾಲವಃ ಪಂಕಜನಾಭ ತೀರ್ಥಾಃ ।
ಕೃಪಾಲವಃ ಸ್ಯಾನ್ಮಯಿನಿತ್ಯಮೇಷಾಂ ॥
—ಶ್ರೀ ಜಯತೀರ್ಥಾಃ

ಶ್ರೀಮದಾನಂದ ತೀರ್ಥರ ಉದ್ಗ್ರಂಥ ಸದ್ಗ್ರಂಥಗಳಿಗೆ ಮೊಟ್ಟಮೊದಲಿನ ಟಿಪ್ಪಣಿ ಬರೆದ ಯತೀಶ್ವರರೆಂದರೆ ಶ್ರೀ ಪದ್ಮನಾಭ ತೀರ್ಥರೇ. ಇವರೇ ಮಾಧ್ವ ಮತದ ಮೂರು ಮಹಾ ಗುರುಪೀಠಗಳಾದ ಉತ್ತರಾದಿಮಠ, ರಾಘವೇಂದ್ರ ಸ್ವಾಮಿಗಳ ಮಠ, ವ್ಯಾಸರಾಯ ಮಠಗಳೆಂಬ ಮಠತ್ರಯದ ಮೂಲ ಪುರುಷರು ಮತ್ತು ಶ್ರೀಪಾದ ರಾಜ ಮಠದ ಆದ್ಯ ಸಂಸ್ಥಾಪಕರು.

ಇವರು ಈ ದೇಶದಲ್ಲೆಲ್ಲ ಪೀಠ ಪರಂಪರೆಯಿಂದ ಮಾತ್ರ ಶ್ರೀಮದಾಚಾರ್ಯರ ಉತ್ತರಾಧಿಕಾರಿಗಳಾಗದೇ ಸಿದ್ಧಾಂತ ಪ್ರಸಾರ ಟೀಕಾಭಿಲೇಖನಾದಿಗಳಿಂದಲೂ ಶ್ರೀ ಶ್ರೀ ಮಧ್ವರ ವೇದಾಂತ ಸಾಮ್ರಾಜ್ಯದ ವಾರಸದಾರರಾಗಿ ವಿಶ್ವವಂದ್ಯರಾದ ವಾಗ್ವಿ ಭೂತಿಗಳೆಂದು ಮಹಿತರಾಗಿದ್ದಾರೆ.

ದಾರ್ಶನಿಕ ಧುರೀಣರಾದ ಈ ಪದ್ಮನಾಭ ತೀರ್ಥರ ದಿವ್ಯ ಟೀಕಾ ವೈಖರಿಯು ಮಾರ್ಗದರ್ಶನವಿಲ್ಲದಿದ್ದರೆ ವೇದಾಂತಕಾಂತಾರದಲ್ಲಿ ದಾರಿಯೇ ದೊರಕದೆ ತತ್ವಜ್ಞಾನವೇ ಆಗಲಾರದು ಎಂದು ಸ್ವತಃ ಟೀಕಾಕೃತ್ಪಾದರೇ

" ನ ತತ್ವ ಮಾರ್ಗೇ ಗಮನಂ ವಿನಾ ಯದುಪ ಜೀವನಂ ''

ಎಂಬ ಉಕ್ತಿಯಿಂದ ಸ್ಪಷ್ಟವಾಗಿ ಹೇಳಿದ್ದಾರೆ. ತೌಳವ ವೈಷ್ಣವಾಗ್ರಣಿಗಳಾದ ಶ್ರೀ ನಾರಾಯಣಪಂಡಿತಾಚಾರ್ಯರಂತೂ ಶ್ರೀ ಪದ್ಮನಾಭ ತೀರ್ಥರ ಸಂದರ್ಭ ಬಂದಾಗಲೆಲ್ಲ ಮಧ್ವವಿಜಯದಲ್ಲಿ ಹರ್ಷಪುಳಕಿತರಾಗಿ ಅವರ ಬಗ್ಗೆ ಬಣ್ಣನೆಯ ಬೆಟ್ಟವನ್ನು ಕಟ್ಟಿದಂತೆ ಮಾಡಿ ಬಾಯಿ ತುಂಬ ಹೊಗಳುತ್ತಾರೆ.

ಶ್ರೀ ಪದ್ಮನಾಭ ತೀರ್ಥರ ವಾಗ್ವೈಖರಿ ವ್ಯಾಖ್ಯಾನಾದಿಗಳನ್ನು ದೂರಿಂದ ಕೇಳಿದ ಮಾತ್ರಕ್ಕೇ ಮಾಯಿಗಳು ನಾಯಿಗಳಂತೆ ಓಡಿಹೋಗುತ್ತಿದ್ದರಂತೆ.

" ವ್ಯಾಖ್ಯಾಪ್ರಸಾದಮಾತ್ರೇಣ ವೀರಂ ಮನ್ಯಾನ್ ಸ್ವಮಂಡಲೇ ।
ಮಾಯಾವಿಗ್ರಾಮಸಿಂಹಾನ್ಯೋ ವಾದಿಸಿಂಹೋ ನಿರಾಕರೋತ್ ॥

ಪ್ರತಿವಾದಿಗಳೆಂಬ ಮದೋನ್ಮತ್ತವಾದ ಆನೆಗಳ ದುಸ್ತರ್ಕ ಮಸ್ತಕಗಳನ್ನು ಹೊಡೆದು ಸೀಳಿಹಾಕಲಿಕ್ಕೆ ಶ್ರೀ ಪದ್ಮನಾಭರು ಚತುರಾಸ್ಯರಾದರೂ ಪಂಚಾಸ್ಯರಾಗಿದ್ದರು ಎಂದು ಅವರ ಚಾತುರ್ಯ ಹಾಗೂ ಸಿಂಹ ವಿಕ್ರಮಗಳನ್ನು ಪಂಡಿತಾಚಾರ್ಯರು ಚತುರೋಕ್ತಿಗಳಿಂದ ಅಲಂಕಾರಿಕವಾಗಿ ನಿರೂಪಿಸಿದ್ದಾರೆ.

ತಮ್ಮ ಕಾಲದಲ್ಲಿ ಬದುಕಿದ್ದ ವಿಪಕ್ಷ ವಿದ್ವಾಂಸರನ್ನು ನಿಗ್ರಹ ಮಾಡಿ ಜಯಿಸಿದ್ದು ಮಾತ್ರವಲ್ಲದೇ ಮುಂದಿನ ಮಾಧ್ವಮತೀಯ ವಿದ್ವಾಂಸರಿಗೆ ಆಚಾರ್ಯರ ಮತ ಹಾಗೂ ಅವರ ಗ್ರಂಥಗಳ ಮೇಲೆ ದುರ್ವಾದಿಗಳು ಕೊಡತಕ್ಕ ದೂಷಣಾಭಾಸಗಳನ್ನು ಖಂಡಿಸುವ ಮತ್ತು ಸಿದ್ಧಾಂತವನ್ನು ಮಂಡಿಸುವ ಪ್ರಮಾಣಪ್ರಮಿತವಾದ ಶಾಸ್ತ್ರೀಯ ಪ್ರಕ್ರಿಯೆಯ ಪರಿಜ್ಞಾನವುಂಟಾಗಲಿ ಎಂದು ಸನ್ಯಾಯರತ್ನಾವಳಿ, ಸತ್ತರ್ಕದೀಪಾವಳಿ, ಮಾಯಾವಾದಖಂಡನಟೀಕಾ ಮುಂತಾದ ಟೀಕಾಗ್ರಂಥಗಳನ್ನು ಬರೆದು ಮಾರ್ಗದರ್ಶಿ ಮಹರ್ಷಿಗಳಾಗಿದ್ದಾರೆ. ಇವರ ಗ್ರಂಥ ವಿಲೇಖನ ಪರಿಪಾಟಿಯಲ್ಲಿಯೇ ಮುಂದುವರೆದು ಶ್ರೀ ಜಯತೀರ್ಥರು ಆಚಾರ್ಯರ ಗ್ರಂಥಗಳಿಗೆ ಶ್ರೀ ನ್ಯಾಯಸುಧಾದಿ ಟೀಕೆಗಳನ್ನು ಬರೆದು ಪದ್ಮನಾಭೀ ಪದ್ಧತಿಯನ್ನು ಪರಿಷ್ಕರಿಸಿದ್ದಾರೆ. ಆದುದರಿಂದಲೇ ಟೀಕಾಚಾರ್ಯರು ತಮ್ಮ ಸುಧಾ ತತ್ವಪ್ರಕಾಶಿಕಾದಿ ಮುಖ್ಯ ಗ್ರಂಥಗಳ ಟೀಕಾ ಪ್ರಾರಂಭದಲ್ಲಿ ಈ ಪದ್ಮನಾಭ ತೀರ್ಥರ ಕರುಣಾ ಲೇಶವಾದರೂ ನನ್ನ ಮೇಲಾದರೆ ನನ್ನ ಈ ಗ್ರಂಥ ಲೇಖನ ಕಾರ್ಯವು ಯಶಸ್ವಿಯಾಗಬಹುದೆಂಬ ಆಶೆ ಆಶಯಗಳಿಂದ

"ಶ್ರೀಮಧ್ವ ಸಂಸೇವನ ಲಬ್ಧ ಶುದ್ಧ ವಿದ್ಯಾಸುಧಾಂಭೋನಿಧಯೋಽಮಲಾಯೇ ||
ಕೃಪಾಲವಃಪಂಕಜನಾಭ ತೀರ್ಥಾಃ ಕೃಪಾಲವಃಸ್ಯಾ ನ್ಮಯಿ ನಿತ್ಯಮೇಷಾಂ ||"

ಎಂದು ಮುಂತಾಗಿ ಸ್ತೋತ್ರ ಮಾಡಿದ್ದಾರೆ.

ಹೀಗೆ ಆಚಾರ್ಯರಿಂದ ಸಾಕ್ಷಾತ್ ವಿದ್ಯಾಸಂಪಾದನೆ, ಪರವಾದಿ ಖಂಡನ, ಸಿದ್ಧಾಂತ ಮಂಡನ, ಗ್ರಂಥ ಲೇಖನ, ವೈರಾಗ್ಯ ಭಾಗ್ಯ, ತತ್ವ ಪ್ರಸಾರ, ವೇದ ವ್ಯಾಖ್ಯಾನ ಮುಂತಾದವುಗಳಿಂದ ಹೋದಲ್ಲೆಲ್ಲ ದ್ವೈತವಿಜಯದ ದುಂದುಭಿಯನ್ನು ಮೊಳಗಿಸುತ್ತ ಹೊರಟ ಪದ್ಮನಾಭತೀರ್ಥರನ್ನು ಕಂಡು ಮೇಲಿನ ಸ್ವಮತೀಯ ವಿಮತೀಯ ಪಂಡಿತರೆಲ್ಲರೂ ಕೂಡಿ ನಿಜವಾದ ಆಚಾರ್ಯರ ಶಿಷ್ಯರು ಇವರೇ ಎಂದು ಪೂಜಿಸುವಂತಾಯಿತು.

" ವೇದಪ್ರವಚನಾಚಾರ್ಯಶಿಷ್ಯೋಽಸಾವಿತಿ ಪೂಜಿತಃ "

ಎಂದು ಪಂಡಿತಾಚಾರ್ಯರು ಹೇಳಿದ್ದಾರೆ.

ಮತ್ತು ನಾರಾಯಣಪಂಡಿತಾಚಾರ್ಯರು ಶ್ರೀ ಪದ್ಮನಾಭತೀರ್ಥರಿಗೆ—

"ವೇದಾಂತಾಬ್ಧಿ ವಿಹರಣ ನಿಪುಣ ವಿದ್ವತ್ತಿಮಿಂಗಿಲಃ"

"ವ್ಯಾಖ್ಯಾಪ್ರಣಾವ ಮಾತ್ರ ನಿರಾಕೃತ ಮಾಯಿ ಗ್ರಾಮ ಸಿಂಹೋ ವಾದಿಸಿಂಹಃ"
"ಮತ್ತ ದುರ್ವಾದಿ ಮಾತಂಗ ತರ್ಕಮಸ್ತಕದಾರಣ ಪಂಚಾಸ್ಯಃ"

ಎಂದು ಬಣ್ಣಿಸುವ ವಿಶೇಷಣಗಳನ್ನು ನೋಡಿದರೆ ಪದ್ಮನಾಭತೀರ್ಥರ ಸರ್ವ ಸಂಪ್ರತಿಪನ್ನವಾದ ಸರ್ವಂಕಷವಾದ ಪಾಂಡಿತ್ಯ-ಪಟುತ್ವ, ಶಾಸ್ತ್ರ-ಪ್ರಭುತ್ವ, ಪ್ರತಿಭಾ-ಪ್ರಾಗಲ್ಭ್ಯ, ಪ್ರಾವಚನಿಕ ಪ್ರೌಢಿಮೆ, ಟೀಕಾಪರಿಷ್ಕರಣ ಪ್ರಣಾಲಿಕಾದಿಗಳು ಹೇಗೆ ಇದ್ದವೆನ್ನುವದು ತಿಳಿದು ಬರುವದು.

ಇವರ ಪೂರ್ವಾಶ್ರಮದ ಹೆಸರು ಶೋಭನಭಟ್ಟರು. ಗೋದಾವರೀ ತೀರದ ರಾಜ ಮಹೇಂದ್ರಿ ಮಂಡಲದಲ್ಲಿ ರಾಜ್ಯವಾಳುತ್ತಿದ್ದ ಕಾಕತೀಯ ಗಣಪತಿ ದೇವನ ಆಸ್ಥಾನ ದಲ್ಲಿ ಶೋಭನಭಟ್ಟರು ಆಪ್ತ ಮಂತ್ರಿಗಳೂ, ಆಸ್ಥಾನ ವಿದ್ವಾಂಸರೂ ಆಗಿದ್ದರು. ಪಂಡಿತಮಂಡಲೀ ಮಂಡನ ಮಣಿಗಳೂ ತಾರ್ಕಿಕ ಶಿಖಾಮಣಿಗಳೂ ಆದ ಶೋಭನ ಭಟ್ಟರು ೧೨೮೧ ನೇ ಇಸ್ವಿಯಲ್ಲಿ ಒಂದು ವಿದ್ವತ್ಸಭೆಯನ್ನು ಕರೆದು ಅಲ್ಲಿ ಜಗತ್ತಿನ ಸರ್ವಶಾಸ್ತ್ರಪಂಡಿತರನ್ನೂ ಆವ್ಹಾನಿಸಿದ್ದರು. ಮಹಾ-ಮಹಾ ಪಂಡಿತರಿಂದ ಮಂಡಿತ ವಾದ ಆ ಸಭೆಗೆ ಶ್ರೀ ಮಧ್ವರೂ ಬಂದರು. ಆಗ ಅಲ್ಲಿ ನೆರೆದ ವಿದ್ವಾಂಸರೆಲ್ಲರೂ ಒಂದಾಗಿ ಆಚಾರ್ಯರನ್ನು ಪರೀಕ್ಷಿಸಲು ಮುಂದಾಗಿ ಕೊನೆಗೆ ಎಲ್ಲರನೂ ಬಾಯಿ ಬಂದಾಗಿ ಹಿಂದೆ ಸರಿದರು. ಆದರೆ ಗುಣಗ್ರಾಹಿಗಳಾದ ಶ್ರೀ ಶೋಭನ ಭಟ್ಟರು ಆ ಸಭೆಯ ಅಧ್ಯಕ್ಷರಾದವರೂ ತಮ್ಮ ಪಾಂಡಿತ್ಯದ ಅಭಿಮಾನವನ್ನು ಬಿಟ್ಟು ಜ್ಞಾನದ ಖಣಿ ವಿದ್ವನ್ಮಣಿಯಾದ ಮಧ್ವರ ಪಾದಕ್ಕೆ ಮಣಿದು ಶಿಷ್ಯರಾದರು. ದ್ವೈತಭಾಷ್ಯ ವನ್ನು ಅವರಿಂದಲೇ ಓದಿ ಧನ್ಯರಾದರು.

(ಮಧ್ವವಿಜಯದಲ್ಲಿ ಹೇಳಿದ ಈ ವಿದ್ವತ್ಸಭೆಯ ವೃತ್ತಾಂತವನ್ನು ಸಾರುವ ಶಿಲಾಲೇಖವೊಂದು ಈಗಲೂ ರಾಜಮಹೇಂದ್ರಿಯಲ್ಲಿ ಉಂಟು ಎಂದು ಕಿನ್ನಾಳದ ದಿ. ಸೀತಾರಾಮಾಚಾರ್ಯರು ಹೇಳುತ್ತಿದ್ದರು.)

"ಶ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ
ಅಸ್ಮೈ ಪ್ರಸನ್ನಃ ಪ್ರಾಜ್ಯೇಕ್ಷಃ ಸದ್ಯೋ ವಿದ್ಯಾಂ ದದೌ ಶುಭಾಂ ||"

ಆಚಾರ್ಯರು ಶೋಭನಭಟ್ಟರ ಭಕ್ತಿ, ವೈರಾಗ್ಯ, ಗುರು-ಸೇವಾ, ಶಾಸ್ತ್ರ ಪಾಂಡಿತ್ಯ, ಪರವಾದಿ ನಿಗ್ರಹಗಳಿಂದ ಪ್ರೀತ ಪ್ರಸನ್ನರಾಗಿ ಅವರಿಗೆ ವೇದಾಂತ ವಿದ್ಯೆ ಯನ್ನು ಇತ್ತು ಅನುಗ್ರಹಿಸಿದರು.

ಅನಂತರ ಶೋಭನಭಟ್ಟರು ಮಧ್ವಾಚಾರ್ಯರಿಂದ ವೇದಾಂತ ಅಧ್ಯಯನ ಮಾಡುತ್ತ, ಪರಮತಗಳನ್ನು ಖಂಡಿಸುತ್ತ, ಆಚಾರ್ಯರ ಜೊತೆಗೆ ಉಡುಪಿಗೆ ದಯ

ಮಾಡಿಸಿದರು. ಅಲ್ಲಿ ಆಚಾರ್ಯರು ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಶ್ರೀ ವಿಷ್ಣುತೀರ್ಥರಿಗೂ ಶ್ರೀ ಶೋಭನಭಟ್ಟರಿಗೂ ಆಶ್ರಮವಿತ್ತು ಇವರಿಗೆ ಪದ್ಮನಾಭ ತೀರ್ಥ ಎಂದು ಹೆಸರಿಟ್ಟರು.

"ಸೋದರ್ಯಂ ಸ್ವಂ ವಿರಕ್ತಂ ಯತಿಮಕೃತ ಮಹಾಸದ್ಗುಣಂ ವಿಷ್ಣುತೀರ್ಥಂ ||
ವಾದೀಂದ್ರಂ ಪದ್ಮನಾಭಂ ಪ್ರಿಯಮಥಚ ||"

ಮುಂತಾಗಿ ಅಣು ಮಧ್ವ ವಿಜಯದಲ್ಲಿ ಹೇಳಿದೆ.

ಪದ್ಮನಾಭ ತೀರ್ಥರಿಗೆ ಸನ್ಯಾಸಾಶ್ರಮ ಕೊಡುವಾಗ ಆಚಾರ್ಯರು ಅವರಿಗೆ ತಾವು ದಿನವೂ ಪೂಜಿಸುವ ಗೋಪೀನಾಥ ಪ್ರತಿಮೆಯನ್ನು ಪೂಜಿಸಲಿಕ್ಕೆ ಕೊಟ್ಟಿದ್ದರು. ಮುಂದೆ ಶ್ರೀ ಪದ್ಮನಾಭ ತೀರ್ಥರು ಶ್ರೀ ಮಧ್ವಾಚಾರ್ಯರ ಮಹಾ ಸಂಸ್ಥಾನಕ್ಕೆ ಉತ್ತರಾಧಿಕಾರಿಗಳಾಗಿ ಆ ಮೂಲ ಪೀಠವನ್ನು ಆರೋಹಣ ಮಾಡಿದ ಮೇಲೆ ತಮ್ಮ ಮೊದಲಿನ ಪೀಠ ಪರಂಪರೆಯೂ ಮುಂದುವರೆಯಲೆಂಬ ಇಚ್ಛೆಯಿಂದ ಬೇರೊಬ್ಬ ಯೋಗ್ಯ ವಿದ್ವಾಂಸರಿಗೆ ಆಶ್ರಮವಿತ್ತು ಲಕ್ಷ್ಮೀಧರ ತೀರ್ಥರೆಂದು ನಾಮಕರಣ ಮಾಡಿದರು. ಮತ್ತು ಇವರಿಗೆ ಆಚಾರ್ಯರು ತಮಗೆ ಮೊದಲು ಕೊಟ್ಟ ಶ್ರೀ ಗೋಪೀನಾಥ ಪ್ರತಿಮೆಯನ್ನು ಕೊಟ್ಟು ಅನುಗ್ರಹಿಸಿದರು. ಅಂದು ಪದ್ಮನಾಭ ತೀರ್ಥರಿಂದ ಪ್ರವರ್ತಿತವಾದ ಮಠವೇ ಮುಂದೆ ಶ್ರೀಪಾದರಾಜರಂಥ ಶಕ ಪುರುಷರು ಆ ಪೀಳಿಗೆಯಲ್ಲಿ ಬಂದದ್ದರಿಂದ ಶ್ರೀಪಾದರಾಜಮಠ ಎಂದು ಪ್ರಸಿದ್ಧವಾಗಿದೆ.

ಮುಂದೆ ಶ್ರೀ ಪದ್ಮನಾಭ ತೀರ್ಥರು ಸರ್ವಜ್ಞ ಸಂಸ್ಥಾನದ ಉತ್ತರಾಧಿಕಾರಿಗಳಾಗಿ ಶ್ರೀ ಮೂಲರಾಮ ದೇವರ ಪೂಜೆ ಮಾಡುತ್ತ ಪರವಾದಿ ನಿಗ್ರಹ ಮಾಡುತ್ತ ತುಂಗಾ ತೀರದ ಆನೆಗೊಂದಿಯಲ್ಲಿರುವ ಜಂಬುಕೇಶ್ವರ ಮಹಾರಾಜನಿಂದ ಆಹ್ವಾನಿತರಾಗಿ ಹಂಪೆಯ ಬಳಿ ಬಂದರು. ರಾಜನು ತುಂಗಾ ತೀರದ ಆ ನಡುಗಡ್ಡೆ ಹಾಗೂ ಅಲ್ಲಿಯ ಪರಿಸರ ಪ್ರದೇಶಗಳನ್ನೆಲ್ಲ ಪದ್ಮನಾಭ ತೀರ್ಥರಿಗೆ ದಾನವಾಗಿತ್ತು ಅಲ್ಲಿಯೇ ಇರಬೇಕೆಂದು ಪ್ರಾರ್ಥಿಸಿದನು. ತಮ್ಮ ತಪೋನುಷ್ಠಾನಕ್ಕೆ ಈ ವಿವಿಕ್ತ ಸ್ಥಳ ಯೋಗ್ಯವಾಗಿದೆಯೆಂದು ತಿಳಿದು ಅಲ್ಲಿಯೇ ಇದ್ದು ಕೆಲ ದಿನಗಳ ಬಳಿಕ ಆಚಾರ್ಯರ ಆದೇಶದಂತೆ ಮೂಲ ರಾಮ ದೇವರನ್ನು ತಂದ ಶ್ರೀ ನರಹರಿ ತೀರ್ಥರಿಗೆ ಆಶ್ರಮವಿತ್ತು ೧೬—೧೧—೧೩೨೪ ನೇ ಇಸ್ವಿ ರಕ್ತಾಕ್ಷಿ ಸಂವತ್ಸರ ಕಾರ್ತಿಕ ಬಹುಳ ಚತುರ್ದಶಿ ದಿನ ವೈಕುಂಠವಾಸಿಗಳಾದರು. ಮುಂದೆ ಇದೇ ಸ್ಥಾನದಲ್ಲಿಯೇ ಎಂಟು ಜನ ಪೀಠಾಧಿಪತಿಗಳು ವೃಂದಾವನಸ್ಥರಾದ್ದರಿಂದ ಇದಕ್ಕೆ ನವ ವೃಂದಾವನ ಎಂದು ಹೆಸರು ಬಂದಿದೆ.



## ಶ್ರೀ ಮೂಲ ರಾಮ ದೇವರನ್ನು ಕರೆತಂದ

# ಶ್ರೀ ನರಹರಿ ತೀರ್ಥರು

" ಅಗ್ರತಶ್ಚತುರೋ ವೇದಾಃ ಪೃಷ್ಠತಃ ಸಶರಂ ಧನುಃ ।
ಇದಂ ಬ್ರಾಹ್ಮ ಮಿದಂ ಕ್ಷಾತ್ರಂ ಶಾಪಾದಪಿ ಶರಾದಪಿ ॥

ಪೂರ್ವ ಕಾಲದಲ್ಲಿ ಭರತ ಖಂಡದ ಅನೇಕ ಜನ ಮಹಾತ್ಮರಿಗೆ ಶಸ್ತ್ರಪಾಂಡಿತ್ಯ ಶಾಸ್ತ್ರಪಾಂಡಿತ್ಯ ಎರಡೂ ಇದ್ದಿತು. ಶ್ರೀ ಪರಶುರಾಮ ದೇವರು ಈ ತರಹದ ಸವ್ಯ ಸಾಚಿ ವ್ಯಕ್ತಿತ್ವಕ್ಕೆ ಆದಿ ಪುರುಷರೆಂದು ಹೇಳಬಹುದು. ಮುಂದೆ ದ್ರೋಣಾಚಾರ್ಯರು, ಕೃಪಾಚಾರ್ಯರು ಮಹಾ ಭಾರತದಲ್ಲಿ ಹೇಳಿದಂತೆ ಬ್ರಾಹ್ಮಣ ಕ್ಷತ್ರಿಯರಾಗಿ ಬಾಳಿ ಬೆಳಗಿದರು.

ಆದರೆ ಇತಿಹಾಸದಲ್ಲಿ ನಮಗೆ ಗೊತ್ತಿದ್ದಂತೆ ಶಾಸ್ತ್ರ ಪಂಡಿತರಾಗಿ ಆಧ್ಯಾತ್ಮ ಸಾಧನ ಪಥದಲ್ಲಿದ್ದರೂ ರಾಷ್ಟ್ರದ ಮೇಲೆ ಗಂಡಾಂತರ ಬಂದಾಗ ರಾಜಕಾರಣದಲ್ಲಿ ಇಳಿದು ದೇಶದ ದುರ್ದಶೆಯನ್ನು ದೂರ ಮಾಡಿ ರಾಜ ಮಹಾರಾಜರಿಗೆ ಮಾರ್ಗದರ್ಶಕರಾಗಿ ಮಿನು ಗಿದ ಮಹರ್ಷಿಗಳಲ್ಲಿ ಶ್ರೀ ನರಹರಿ ತೀರ್ಥರೇ ಮೊದಲಿಗರೆಂದು ಹೇಳಬಹುದು. ಮುಂದೆ ಶ್ರೀ ವಿದ್ಯಾರಣ್ಯರು ಶ್ರೀ ಶ್ರೀ ವ್ಯಾಸರಾಯರು ರಾಮದಾಸರು ಇದೇ ದಾರಿ ಯಲ್ಲಿ ನಡೆದು ನಾಡಿಗೆ ಒದಗಿದ ಭಯಾಪಾಯಗಳನ್ನು ಪರಿಹರಿಸಿದ ಸಂಗತಿಯು ಇತಿಹಾಸದಲ್ಲಿ ಕಂಡು ಬರುತ್ತದೆ.

ಶ್ರೀ ಮನ್ ಮಧ್ವಾಚಾರ್ಯರ ಜಗದ್ಗುರು ಸಂಸ್ಥಾನವನ್ನು ಪದ್ಮನಾಭ ತೀರ್ಥರ ಅನಂತರ ಆರೋಹಣ ಮಾಡಿದ ನರಹರಿ ತೀರ್ಥರು ವೇದ ವೇದಾಂತ ವಿದ್ಯೆಯಲ್ಲಿ ಲೋಕೋತ್ತರ ಪಂಡಿತರು. ಬಾಲ್ಯದಿಂದಲೂ ಅವರಿಗೆ ವೈರಾಗ್ಯದತ್ತ ಒಲವು. ಹೊನ್ನು ಮಣ್ಣು ಹೆಣ್ಣುಗಳ ಬಗ್ಗೆ ಜುಗುಪ್ಸೆ, ಜಿಹಾಸೆ. ಐಶ್ವರ್ಯ, ಅಧಿ ಕಾರ, ಆಧಿಪತ್ಯ, ಸುಖ ವಿಲಾಸಗಳಂತೂ ಅವರಿಗೆ ಹುಲ್ಲು ಕಡ್ಡಿಯಂತೆ ಕ್ಷುಲ್ಲಕ ಎನಿಸುತ್ತಿದ್ದವು- ಇಂಥ ವೈರಾಗ್ಯದ ನಿಧಿ ಇಪ್ಪತ್ತು ಮೂವತ್ತು ವರ್ಷಗಳ ವರೆಗೆ ರಾಜ್ಯ ಶಾಸನ ಯಂತ್ರಕ್ಕೆ ಹೆಗಲು ಕೊಡಬೇಕಾಗಿ ಬಂದದ್ದು ಒಂದು ವಿಧಿಯ ಸಂಕೇತ.

ಏನಾದರೂ ಅದೊಂದು ಪದ್ಮ ಪತ್ರ. ಎಲ್ಲಿದ್ದರೂ ನಿರ್ಲಿಪ್ತ. ರಾಜ್ಯದಲ್ಲಿದ್ದರೂ ರಾಮನದೇ ಧ್ಯಾನ. ದರ್ಬಾರ ನಡೆಸುತ್ತಿದ್ದರೂ ದೇವರ ಕಡೆಗೇ ಧ್ಯಾಸ. ವ್ಯವಹಾರವನ್ನು ಮಾಡುತ್ತಲಿದ್ದರೂ ಸಂತತವೂ ವೇದಾಂತ ವಿಷಯಗಳ ಅಂತಶ್ಚಿಂತನ.

"ಯತ್ರಾಕ್ಕಾಂಕ್ಷಂತಿ ತಪೋಭಿರನ್ಯ ಮುನಯಃ ತಸ್ಮಿನ್ ತಪಸ್ಯಂತ್ಯಮೀ"

ಎಂಬ ಕಾಲಿದಾಸನ ಉಕ್ತಿಗೆ ಅಧ್ಯಾತ್ಮ ಪ್ರಪಂಚದಲ್ಲಿ ದೊರಕುವ ಏಕಮಾತ್ರ ಉದಾಹರಣವೆಂದರೆ ಶ್ರೀ ನರಹರಿ ಭಿಕ್ಷುಗಳು.

ಇವರ ಮೂಲ ಸ್ಥಳವು ಗಂಜಾಮ್ ಜಿಲ್ಲೆಯ ಚಿಕಾಕೋಲು ನಗರ. ಇವರ ತಂದೆಯ ಹೆಸರು ನರಸಿಂಹ ಭಟ್ಟ. ನರಸಿಂಹ ಭಟ್ಟರು ಅನಂಗ ಭೀಮರಾಜರ ಬಳಿಯಲ್ಲಿ ಮಂತ್ರಿಗಳಾಗಿದ್ದರು. ಈ ತಂದೆ ಮಕ್ಕಳಿಬ್ಬರೂ ರಣರಂಗ ಧೀರರು. ವೈರಿ ವಿನಾಶನದಲ್ಲಿ ವೀರರು. ಉಭಯತರು ರಾಜಕಾರಣ ಧುರಂಧರರು. ಅವರು ಅನೇಕ ಗುಡಿ ಗೋಪುರಗಳನ್ನು ಕಟ್ಟಿಸಿದರು. ದಾನ ಧರ್ಮಗಳನ್ನು ಮಾಡಿದರು. ದತ್ತಿವೃತ್ತಿಗಳನ್ನು ನೀಡಿದರು. ರಾಜಗುರುಗಳಾಗಿ ಮೆರೆದರು. ಅನೇಕ ಮಾಂಡಲೀಕ ರಾಜರು ದಾನ ದತ್ತಿಗಳನ್ನು ಶ್ರೀ ನರಹರಿ ತೀರ್ಥರ ಆಜ್ಞೆಯ ಮೇರೆಗೆ ಕೊಡುತ್ತಿದ್ದರು. ಸಿಂಹಾಚಲದಲ್ಲಿ ಇರುವ ಹನ್ನೆರಡುನೂರಾತೊಂಭತ್ತೆರಡನೆಯ ಇಸ್ವಿಯ ಶಾಸನದಲ್ಲಿ ವಡ್ಡಿವಾಡಿಯ ಮತ್ಸ್ಯರಾಜನಾದ ಶ್ರೀ ಜಯಂತನು ದೇವರಿಗೆ ಅನೇಕ ದಾನ ಧರ್ಮಗಳನ್ನು ನೀಡಿದನೆಂದು ಉಲ್ಲೇಖಿಸಲಾಗಿದೆ. (Vide Gezetteer of Vizaga p. 133 to 139). ಈ ವಡ್ಡಿವಾಡಿಯ ಮತ್ಸ್ಯರಾಜರು ಕಲಿಂಗ ದೇಶದ ಗಂಗ ರಾಜರಿಗೆ ಸಾಮಂತರಾಗಿದ್ದರು. ಈ ರಾಜ ಕುಟುಂಬದ ಅರ್ಜುನ ಮಂಕಾದಿತ್ಯ ಮುಂತಾದ ಅನೇಕ ಜನರು ಶ್ರೀ ನರಹರಿ ತೀರ್ಥರಿಂದ ಶ್ರೀಮನ್ ಮಧ್ವ ಮತದ ದಿವ್ಯ ತತ್ವಗಳನ್ನು ತಿಳಿದು ವೈಷ್ಣವ ದೀಕ್ಷೆಯನ್ನು ಪಡೆದರು. ( E. I Vol. V. Dibbide Coper plates and Epigraphical report of Madras, 1900 A. D.)

ಶ್ರೀ ನರಹರೀತೀರ್ಥರು ಕಲಿಂಗ ದೇಶದ ರಾಜಧಾನಿಯಾದ ಗಜಪತಿ ನಗರದಲ್ಲಿದ್ದು ಒಂದನೇ ನರಸಿಂಹದೇವ, ಒಂದನೇ ಭಾನದೇವ ಮತ್ತು ಎರಡನೇ ನರಸಿಂಹ ದೇವ ಎಂಬ ರಾಜರ ಕಾಲದಲ್ಲಿ ಪಂತ-ಪ್ರಧಾನರಾಗಿದ್ದುಕೊಂಡು ರಾಜ್ಯ ರಕ್ಷಣೆಯ ಭಾರವನ್ನು ಸಮರ್ಥರೀತಿಯಿಂದ ನಿರ್ವಹಿಸಿದರು.

ಶ್ರೀ ನರಹರೀತೀರ್ಥರ ಪೂರ್ವಾಶ್ರಮದ ಹೆಸರು ಶಾಮಶಾಸ್ತ್ರಿಗಳು. ಚಾಣಕ್ಯನಂತೆ ಅವರು ರಾಜ ಕಾರಣದಲ್ಲಿ ಚತುರರಾಗಿ ಇದ್ದುದಲ್ಲದೆ, ಸಂಗ್ರಾಮಾಂಗಣದಲ್ಲಿ

ಶಸ್ತ್ರ ಹಿಡಿದು ಹಗೆಗಳ ಜೊತೆಗೆ ಹಣಾಹಣಿ ಹೋರಾಡಬಲ್ಲವರಾಗಿದ್ದರು. ರಾಜ್ಯದ ಮೇಲೆ ದಂಡೆತ್ತಿ ದೇವಸ್ಥಾನಗಳನ್ನು ಧ್ವಂಸಗೈಯಬಂದ ಶಬರ ರಾಜರ ತಂಡ–ದಂಡುಗಳನ್ನೆಲ್ಲ ಅವರು ತಮ್ಮ ಪ್ರಚಂಡ ಪರಾಕ್ರಮದಿಂದ ಕೊಚ್ಚಿ ಹಾಕಿದರು. ಈ ಅಭಿಪ್ರಾಯವು ಕೂರ್ಮ ಕ್ಷೇತ್ರದ ಒಂದು ಶಿಲಾಶಾಸನದಿಂದ ದೃಢಪಟ್ಟಿದೆ.

ಯಶ್ಚ ಶ್ರೀ ಕಮಠಾಧಿನಾಯಕ ಮಹಾಕಾರ್ಯೈಕಬದ್ಧ ವ್ರತಃ ।
ತಸ್ಯ ಪ್ರತ್ಯುತಿವಾರಣಾಯ ಶಬರಾನೀಕ ಕ್ಷಿತೀಧ್ರಾಶನಿಮ್ ॥
ಧತ್ತೇ ಸತ್ಕರವಾಲಮಸ್ಯ ತಟಿತಾ ಸಂತ್ಯಕ್ತ ಜೀವೇ ರಿಪೌ ।
ಹಂತವ್ಯಾನವಶೇಷಣಾನ್ನಿಜವಿಧಿರ್ನೋಯಸ್ಯ ಬೋಧ್ಯಸ್ತರಾಮ್ ॥

"ಕೂರ್ಮ ದೇವಾಲಯವನ್ನು ಸಂರಕ್ಷಿಸುವದು ಅವರ ಮುಖ್ಯ ವ್ರತವಾಗಿತ್ತು. ಆ ದೇವಸ್ಥಾನವನ್ನು ಸುಲಿಯಲು ಬಂದ ಲೂಟಿಗಾರರ ತಂಡದ ಮೇಲೆ ನರಹರಿ ತೀರ್ಥರು ಹಸಿದ ಹುಲಿಯಂತೆ ಎರಗಿ ತಮ್ಮ ಕರಾಳ ಖಡ್ಗದಿಂದ ಆ ಪುಂಡರ ತಂಡವನ್ನೆಲ್ಲ ಸಂಪೂರ್ಣ ನಾಶಗೊಳಿಸಿದರು. ನಂತರ ದೇವಸ್ಥಾನಗಳ ಮೇಲಾಗಲಿ, ತಮ್ಮ ರಾಜ್ಯಗಳ ಮೇಲಾಗಲಿಮತ್ತೆ ಯಾರೂ ಬಾರದಂತೆ ಮಾಡಿದ ಬಳಿಕವೇ ಅವರು ತಮ್ಮ ಖಡ್ಗವನ್ನು ಕೆಳಗೆ ಇಟ್ಟರು."

ಇದರ ಮೇಲಿಂದ ನರಹರಿತೀರ್ಥರ ಶೌರ್ಯ, ಭುಜಬಲಗಳು ಯಾವ ಮಟ್ಟದವು ಇದ್ದವು ಎಂಬುದು ಚನ್ನಾಗಿ ತಿಳಿದು ಬರಲು ಸಾಕು.

ಶಾಮಶಾಸ್ತ್ರಿಗಳಿಗೆ ಯುದ್ಧತಂತ್ರ ಹಾಗೂ ರಾಜಕಾರಣಗಳಲ್ಲಿ ಇದ್ದ ಪ್ರಭುತ್ವ ಪಾಂಡಿತ್ಯಗಳಿಗಿಂತ ನೂರುಪಟ್ಟು ಹೆಚ್ಚಿನ ಪಾಂಡಿತ್ಯ–ಪರಾಕ್ರಮಗಳು ವೇದ–ಶಾಸ್ತ್ರ ವಿದ್ಯೆಗಳಲ್ಲಿ ಇದ್ದಿತು. ಆದುದರಿಂದಲೇ ಅವರು ಗೋದಾವರೀ ತಟಾಕದ ರಾಜ ಮಹೇಂದ್ರಿಯಲ್ಲಿ ಪದ್ಮನಾಭತೀರ್ಥರು ( ಶೋಭನಭಟ್ಟರು ) ನೆರವೇರಿಸಿದ ಪ್ರಚಂಡ ಸಭೆಗೆ ಆಗಮಿಸಿದ್ದರು. ಆ ವಿದ್ವತ್ಸಭೆಗೆ ನಾಲ್ಕುವೇದಗಳ ಪಂಡಿತರೂ, ಆರು ಶಾಸ್ತ್ರಗಳ ಪರಿಣತರೂ, ಹದಿನೆಂಟು ವೇದಗಳ ವಿದ್ವಾಂಸರೂ ಸಮ್ಮಿಲಿತರಾಗಿದ್ದರು. ದಿಗ್ಗಜ ಪಂಡಿತರ ನಡುವೆ ಸೂಕ್ಷ್ಮವಾದ ಶಾಸ್ತ್ರೀಯ ವಿಷಯಗಳಲ್ಲಿ ಅತಿ ಉಚ್ಚಮಟ್ಟದ ವಾಕ್ಯಾರ್ಥ ವಿಚಾರಗಳು, ಶಾಸ್ತ್ರೀಯ ವಾದ–ಸಂಘರ್ಷಗಳು ನಡೆಯುತ್ತಿದ್ದವು.

ಬಾಲ್ಯದಿಂದಲೇ ವೈದುಷ್ಯದ ವಾತಾವರಣದಲ್ಲಿ ಉಸುರಾಡಿಸಿ ಬೆಳೆದ ಶಾಮ ಶಾಸ್ತ್ರಿಗಳಿಗೆ ಇಂತಹ ವಿದ್ವದ್‌ಗೋಷ್ಠಿಗಳಲ್ಲಿ ವಾದಾಟೋಪದಿಂದ ವಾಕ್ಯಾರ್ಥ ವಿಕ್ರಮವನ್ನು ಸ್ಥಾಪಿಸುವದೆಂದರೆ ನೀರು ಕುಡಿದಷ್ಟು ಸುಲಭ. ಆದುದರಿಂದಲೆ ಶೋಭನಭಟ್ಟರೊಡನೆ ಅವರು ಬಂದು ಉತ್ಸಾಹದಿಂದ ಈ ಸಭೆಯಲ್ಲಿ ಭಾಗವಹಿಸಿದ್ದರು.

ಸರ್ವಮತೀಯ ಶ್ರೇಷ್ಠ ಪಂಡಿತರ ಈ ಸಭೆಗೆ ಇದೇ ವೇಳೆಯಲ್ಲಿ ಬದರೀ ಯಾತ್ರೆ ಮುಗಿಸಿಕೊಂಡು ಶ್ರೀಮದಾನಂದ ತೀರ್ಥರು ದಯಮಾಡಿಸಿದರು. ಆ ವಿದ್ವದ್ ವರೇಣ್ಯರ ಸಭೆಯಲ್ಲಿ ಅಂದು ಎಲ್ಲ ವೇದ ಶಾಸ್ತ್ರ ವಿದ್ವಾಂಸರು ಶ್ರೀಮಧ್ವಾಚಾರ್ಯರ ಜೊತೆಗೆ ವಾದ ಮಾಡಿ ಒಬ್ಬೊಬ್ಬರಾಗಿ ಸೋತು ಶರಣಾಗತರಾದರು. ಅಂದಿನ ಅವರ ವಾಖ್ಯಾರ್ಥಕ್ರಮ, ಮತ್ತು ವಾದ ವಿಕ್ರಮ, ಪಾಂಡಿತ್ಯ ಪರಾಕ್ರಮಗಳನ್ನು ಕಂಡು ಅಲ್ಲಿ ನೆರೆದ ಸಹಸ್ರಾರು ಜನ ಪಂಡಿತ ಪುಂಡರೀಕರೆಲ್ಲರೂ ತಬ್ಬಿಬ್ಬಾದರು. ಎಲ್ಲ ವೇದದ ಶಾಖೋಪಶಾಖೆಗಳಲ್ಲಿಯೂ, ವೇದಾಂತ ವೇದಾಂಗ ವಿಷಯಗಳಲ್ಲಿಯೂ, ಸರ್ವ ದರ್ಶನ ಧರ್ಮ ಶಾಸ್ತ್ರಗಳಲ್ಲಿಯೂ ಅವರಿಗಿರುವ ಪೂರ್ಣ ಪ್ರಭುತ್ವ, ಕ್ಲಪ್ತಿ, ವ್ಯುತ್ಪತ್ತಿ, ಸ್ಫೂರ್ತಿ, ಪಾಂಡಿತ್ಯಗಳನ್ನು ಮತ್ತು ನಿರ್ದುಷ್ಟವಾದ ಅವರ ನಿರರ್ಗಳ ವಾಗ್ಧೋರಣೆಗಳನ್ನು ಕಂಡು, ಕೇಳಿ, ತಿಳಿದು, ಅಳೆದು, ತೂಗಿ, ತಾಗಿ, ವಾದಿಸಿ ನೋಡಿದ ಶಾಮ ಶಾಸ್ತ್ರಿಗಳಿಗೆ ಇವರು ಮಾನವರಲ್ಲ ಎಂದು ಖಾತರಿಯಾಯಿತು. "ಇವರೊಬ್ಬ ನೆಲಕ್ಕಿಳಿದ ಸಾಕ್ಷಾತ್ ಸರ್ವಜ್ಞರು" ಎಂದು ಅವರಿಗೆ ನಿಶ್ಚಯವಾಯಿತು.

ಆಗ ಶೋಭನ ಭಟ್ಟರೆ ಮುಂತಾದ ಸಹಸ್ರಾರು ಪಂಡಿತರ ಜೊತೆಗೆ ಶಾಮ ಶಾಸ್ತ್ರಿಗಳೂ ಆಚಾರ್ಯರ ಶಿಷ್ಯತ್ವವನ್ನು ಅಂಗೀಕರಿಸಿ, ತಪ್ತಮುದ್ರೆಯನ್ನು ಧರಿಸಿ, ವೈಷ್ಣವ ದೀಕ್ಷೆಯನ್ನು ಪಡೆದರು.

ಪೂರ್ಣಪ್ರಜ್ಞರ ಸರ್ವಜ್ಞ ಸಮ್ಮಿತವಾದ ಪ್ರಜ್ಞಾ ಗೌರವವನ್ನು ಕಂಡು ಮನ ಸೋತು ಮುಗ್ಧರಾದ ಶಾಮ ಶಾಸ್ತ್ರಿಗಳು ಅವರ ಬೆನ್ನು ಹತ್ತಿ ಉಡುಪಿಗೆ ಬಂದರು. ಉಡುಪಿಯ ಶ್ರೀಕೃಷ್ಣನ ಸನ್ನಿಧಾನದಲ್ಲಿ ಮಧ್ವ ಮುನಿಗಳಿಂದ ವೇದ ವೇದಾಂತ ಶಾಸ್ತ್ರಗಳ ನಿಜವಾದ ತಿರುಳನ್ನು ತಿಳಿದರು.

ಶಾಮ ಶಾಸ್ತ್ರಿಗಳ ಘನತರವಾದ ಪಾಂಡಿತ್ಯ, ಜನ್ಮಜಾತವಾದ ವೈರಾಗ್ಯ, ಸ್ವಭಾವಸಿದ್ಧವಾದ ದೈವಭಕ್ತಿ, ಗುರುನಿಷ್ಠೆ, ತ್ಯಾಗವೃತ್ತಿ, ಪರೋಪಕಾರ ಪ್ರವೃತ್ತಿಗಳನ್ನು ಕಂಡು ಪ್ರೀತಪ್ರಸನ್ನರಾದ ಪೂರ್ಣಬೋಧರು ಶಾಮ ಶಾಸ್ತ್ರಿಗಳಿಗೆ ಸನ್ಯಾಸ ಆಶ್ರಮವನ್ನು ಇತ್ತು ನರಹರಿ ತೀರ್ಥರು ಎಂದು ನಾಮಕರಣವನ್ನು ಮಾಡಿದರು.

ಶ್ರೀ ನರಹರಿ ತೀರ್ಥರಿಗೆ ಸಾಕ್ಷಾತ್ ಆಚಾರ್ಯರಿಂದ ಆಶ್ರಮವಾಗದೆ ಶ್ರೀ ಪದ್ಮನಾಭತೀರ್ಥರಿಂದ ಆಶ್ರಮವಾಯತು ಎಂಬ ವಾದದಲ್ಲಿ ಹುರುಳಿಲ್ಲ. ಶ್ರೀ ಮಧ್ವಾಚಾರ್ಯರಿಂದಲೇ ಅವರಿಗೆ ಆಶ್ರಮವಾಯಿತು ಎಂಬ ಮಾತಿಗೆ ನೂರಾರು ಪ್ರಮಾಣಗಳನ್ನು ಉದಾಹರಿಸಬಹುದು. ಅವುಗಳಲ್ಲಿ ಕೆಲವನ್ನು ಇಲ್ಲಿ ಕಾಣಿಸಲಾಗಿದೆ.

" ವಿರಕ್ತಂ ಕಂಚನಾಸನ್ನ ಮಂತೇ ವಾಸಿನಮಾತ್ಮನಃ ।
ಆನಂದತೀರ್ಥೋವಿದಧೇ ನಾಮ್ನಾ ನರಹರಿಂ ಯತಿಂ ॥"

( ಸತ್ಯನಿಧಿವಿಲಾಸ )

ಭಗವತ್ಪಾದ ಸಂಪ್ರಾಪ್ತ ಸನ್ಯಾಸೊ .... .... .... "

( ಅರ್ಚಾಗತಿಕ್ರಮ )

"ಪುರಾ ಬದರ್ಯಾಶ್ರಮ ಯಾನತಃ ಪ್ರಾಗಾನಂದತೀರ್ಥೇ ರಜತಾಸನಸ್ಥೇ ।
ತಸ್ಮಾದನುಜ್ಞಾಂ ನೃಹರೀಂದ್ರತೀರ್ಥಃ ಪ್ರಾಪ್ಯಾನ್ವಗಾದ್ದಿಗ್ವಿಜಯೇ ಸಶಿಷ್ಯಃ ॥"

(ಜಯತೀರ್ಥವಿಜಯ)

"ತಸ್ಯಾಂ ನಗರ್ಯಾಂ ಯತಿರಾಟ್ ನಾಮ್ನಾ ನರಹರಿಃ ಶ್ರುತಃ ।
ಸ್ವಗುರೋರಾಜ್ಞಯಾ ತತ್ರ ಪ್ರಾಪ್ತಂ ಸ್ವರಘುಪಸ್ಯ ಸಃ ॥
ರಾಮಚಂದ್ರಂ ಸ ಸಂಗೃಹ್ಯ ಗುರವೇ ಚಾರ್ಪಯದ್ಯತಿಃ।
ಗುರುಣಾ ಪೂಜಿತಂ ರಾಮಂ ತತಃ ಸ್ವಯಮಪೂಜಯತ್ ॥"

(ಅಧ್ಯಾತ್ಮರಾಮಾಯಣ)

"ದದೌ ತುರ್ಯಾಶ್ರಮಂ ತುಷ್ಟಃ ಚತುರ್ಭ್ಯಃ ಸಂಸೃತಿ ಚ್ಛಿದೇ ।
ತತ್ರಾದ್ಯಃ ಪದ್ಮನಾಭಾಖ್ಯಃ ದ್ವಿತೀಯೋ ನೃಹರಿಃ ಸ್ಮೃತಃ ॥"

(ಆನಂದತೀರ್ಥಕಥಾಕಲ್ಪತರು)

" ನೃಹರಿ ಪ್ರತಿನಾಮಕಂ ಪರಂ ಯತಿವರ್ಯಂ ಸ ಚಕಾರ ಸಾದರಂ । "

(ವ್ಯಾಸತೀರ್ಥವಿಜಯ)

" ಸುಖತೀರ್ಥಮುನಿಸ್ತಸ್ಮೈ ನತ್ವಾ ತುರ್ಯಾಶ್ರಮಂ ತತಃ ।
ದದೌ ನೃಹರಿ ತೀರ್ಥೋಽಯಮಿತಿ ನಾಮ ಮುದಾನ್ವಿತಃ॥ "

(ಗುರುವಂಶಕಥಾ)

" ಗುರುವರ್ಯಾನಂದ ತೀರ್ಥರಿಂದ ಚತುರ್ಥಾಶ್ರಮ ಸ್ವೀಕರಿಸಿ "

(ಪುರಂದರದಾಸರು)

ಶಾಮಶಾಸ್ತ್ರಿಗಳು ಮಧ್ವ ಶಿಷ್ಯರಾಗಿ ಅವರ ಸೇವೆ ಮಾಡಿಕೊಂಡು ಕೆಲವು ದಿನ ಇದ್ದ ಬಳಿಕ ಒಂದು ದಿನ ಆನಂದ ತೀರ್ಥರು ಅವರಿಗೆ ಒಂದು ರಹಸ್ಯ ಕಾರ್ಯವನ್ನು ಮಾಡಿಕೊಂಡು ಬರಲು ಆಜ್ಞೆ ಗೈದರು.

ಸುಖತೀರ್ಥರಿಗೆ ತಮ್ಮ ಈ ಶಿಷ್ಯೋತ್ತಮನ ಯೋಗ್ಯತೆಯು ಪೂರ್ಣವಾಗಿ ಗೊತ್ತು. ಅವರ ರಾಜಕಾರಣ-ಧೌರಂಧರೀಯನ್ನೂ, ಮತ್ತು ದೇವಸ್ಥಾನ ಹಾಗೂ ಧರ್ಮಕ್ಷೇತ್ರಗಳ ಸಂರಕ್ಷಣ-ದೀಕ್ಷಾದಾಕ್ಷ್ಯವನ್ನೂ, ಲೋಕ-ಕ್ಷೇಮಾಕಾಂಕ್ಷೆಯನ್ನೂ ತಿಳಿದ ಭಗವತ್ಪಾದರು ಮುಂದಾಗುದದನ್ನೆಲ್ಲ ಮೊದಲೇ ಅರಿತು, ಮಹಾ ದೇವತಾ ಕಾರ್ಯಕ್ಕಾಗಿ ಅವರನ್ನು ಕಳಿಂಗ ದೇಶಕ್ಕೆ ಕಳುಹಿಸಿದರು.

"ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ"

ಎಂದು ಶ್ರೀ ಮಧ್ವಾಚಾರ್ಯರು ತಮ್ಮ ಗ್ರಂಥದಲ್ಲಿ ಹೇಳಿದ ಮಾತು ಬರಿ ಪ್ರೌಢಿವಾದವಾಗಿರಲಿಲ್ಲ. ನುಡಿದಂತೆ ತಾವು ನಡೆದು, ಯೋಗ್ಯತೆ ಇದ್ದ ತಮ್ಮ ಶಿಷ್ಯರಿಗೆಲ್ಲ ಅದೇ ಹಾದಿ ಹಿಡಿದು ಲೋಕೋದ್ಧಾರ ಮಾಡಬೇಕೆಂದು ಅನುಶಾಸನ ಗೈದಿದ್ದರು ಆಚಾರ್ಯರು.

ನರಹರಿತೀರ್ಥರಲ್ಲಿ ಲೋಕ ಸೇವಾ, ರಾಷ್ಟ್ರ ಸೇವಾ, ಧರ್ಮ ಸೇವಾ ಮತ್ತು ದೇವತಾ ಕಾರ್ಯಗಳನ್ನು ಮಾಡುವ ಶಕ್ತಿ, ಜಾಣ್ಮೆ, ಅನುಭವ ಇರುವದನ್ನು ಗುರುತಿಸಿದ ಆ ಜಗದ್ಗುರುಗಳು ಕಲಿಂಗ ದೇಶದ ಜನರ ಕಂಗಾಲ ಪರಿಸ್ಥಿಯನ್ನು ಅರಿತು, ಅವರ ಕಲ್ಯಾಣಕ್ಕಾಗಿ ನರಹರಿತೀರ್ಥರನ್ನು ಕೊಟ್ಟು ಕಳಿಸಿದರು.

"ಲೋಕ ರಿರಕ್ಷಣಾತಿ ನಿಪುಣಾತ್ ಸಂಪ್ರಾಪ್ತ ಕರ್ತವ್ಯಧೀಃ"

ಕಲಿಂಗ ದೇಶದ ದೊರೆಯು ಆಕಸ್ಮಿಕವಾಗಿ ಮಡಿದುದರಿಂದ ಆ ನಾಡಿನಲ್ಲಿ ಅರಾಜಕತೆ ಉಂಟಾಗಿತ್ತು. ರಾಜನಿಲ್ಲದ ರಾಜ್ಯ, ಎಳೆವಯಸ್ಸಿನ ರಾಜಕುಮಾರ, ಅಧಿಕಾರಕ್ಕಾಗಿ ಕಚ್ಚಾಡುವ ಮಂತ್ರಿಗಳು, ಸರ್ವಾಧಿಕಾರಿಗಳಾಗಲು ಹವಣಿಸುವ ಸೇನಾಪತಿಗಳು, ಇದರ ಮೇಲೆ ನೆರೆನಾಡಿನ ಕಾಡು-ಬೇಡರ ಪಡೆಗಳು ರಾಜ್ಯದ ಗಡಿಗಳಲ್ಲಿ ನುಗ್ಗಿ, ಲೂಟಿ-ದರೋಡೆಗಳನ್ನು ನಡೆಸುತ್ತಿದ್ದರು. ಮಹಾರಾಣಿಗೆ ಏನು ಮಾಡಬೇಕು ತಿಳಿಯದಾಯಿತು. ತನ್ನ ಗಂಡ ಹಾಗೂ ಮಾವಂದಿರ ಕಾಲದಲ್ಲಿಯೂ ಅದಕ್ಕೂ ಮೊದಲು ಶಾಮಶಾಸ್ತ್ರಿ ಹಾಗೂ ನರಸಿಂಹಭಟ್ಟ ಮೊದಲಾದ ಉಪಾಧ್ಯಾಯ ಮನೆತನದವರು ಮೂರು-ನಾಲ್ಕು ತಲೆಮಾರುಗಳಿಂದಲೂ ಕಳಿಂಗ ದೇಶದ ಸಾಚಿವ್ಯವನ್ನು; ಸ್ವಾಮಿನಿಷ್ಠರಾಗಿ ಸಮರ್ಥರೀತಿಯಿಂದ ನಿರ್ವಹಿಸಿಕೊಂಡು ಬಂದಿದ್ದನ್ನು ಆವಳು ಕೇಳಿ ತಿಳಿದಿದ್ದಳು. ಅದಕ್ಕಾಗಿ ಅವಳು ಶಾಮಶಾಸ್ತ್ರಿಗಳನ್ನು ಕರೆಕಳಿಸಬೇಕೆಂದು ವೃದ್ಧ ಮಂತ್ರಿಗಳ ಜೊತೆಗೆ ವಿಚಾರಿಸಿದ್ದಳು. ಆದರೆ ಶಾಮಶಾಸ್ತ್ರಿಗಳು ಉಡುಪಿಗೆ ಹೋಗಿ ಮಧ್ವಮುನಿಗಳಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಸರ್ವಸಂಗ ಪರಿತ್ಯಾಗ ಮಾಡಿದ್ದಾರೆಂದು ಕೇಳಿ ಅವಳಿಗೆ ಬಹಳ ನಿರಾಶೆಯಾಯಿತು.

ಸಂಸ್ಥಾನದ ಆಡಳಿತವನ್ನು ಯಾರಿಗೆ ಒಪ್ಪಿಸಬೇಕೆಂಬುವದು ಒಂದು ವಿಕಟ ಸಮಸ್ಯೆಯಾಯಿತು. ಕೊನೆಗೆ ಹಿರಿಯ ಮಂತ್ರಿಗಳೆಲ್ಲ ಸೇರಿ ಒಂದು ನಿರ್ಧಾರಕ್ಕೆ ಬಂದರು.

ಒಳ್ಳೆ ಬುದ್ಧಿವಂತವಾದ ಪಟ್ಟದಾನೆಯನ್ನು ಸಿಂಗರಿಸಿ ಒಡ್ಡಿ ಜಗನ್ನಾಥಪುರಿಯ ಜಗನ್ನಾಥ ಸ್ವಾಮಿಯ ಕೊರಳಲ್ಲಿನ ಪುಷ್ಪಹಾರವನ್ನು ತಂದು ಆದರ ಸೊಂಡಿಯಲ್ಲಿ ಕೊಟ್ಟರು. ಆ ಕಾಲವಲ್ಲಿ ಅಲ್ಲಿಯ ಜನರಿಗೆಲ್ಲ ವಿಶ್ವಾಸ— ದೇವರ ಕೊರಳೊಳಗಿನ ಮಾಲೆಯನ್ನು ಪಟ್ಟದಾನೆಯ ಸೊಂಡೆಯಲ್ಲಿ ಕೊಟ್ಟರೆ ಯೋಗ್ಯವಾದ ವ್ಯಕ್ತಿಯ ಕೊರಳಲ್ಲಿಯೇ ಅದು ಹಾಕುತ್ತದೆಂದು.

ಇಂಥ ಅನೇಕ ಸಂದರ್ಭಗಳಲ್ಲಿ ಆನೆಯ ಕೈಯಲ್ಲಿ ಸ್ವಾಮಿಯ ಮೈಮೇಲಿನ ಮಾಲೆಯನ್ನಿತ್ತು ಮೆರೆಸಿದಾಗ ರಾಜ್ಯವು ಗಂಡಾಂತರದಿಂದ ಪಾರಾದದ್ದು ಅವರ ಅನುಭವ ಸಿದ್ಧವಾಗಿದ್ದಿತು. ಈ ಸಲವೂ ಅವರು ಕರಿಯ ಕೈಗೆ ಕುಸುಮ-ಮಾಲೆ ಇತ್ತರು.

ಆ ಪಟ್ಟದಾನೆಯು ಜಗನ್ನಾಥ ದೇವರ ಆ ನಿರ್ಮಾಲ್ಯ ಪುಷ್ಪಹಾರವನ್ನು ಸೊಂಡೆಯಲ್ಲಿ ಎತ್ತಿಕೊಂಡು ಒಂದು ದೇವಸ್ಥಾನದೆಡೆಗೆ ಬಂದಿತು.

ನರಹರಿತೀರ್ಥರು ಅದೇ ದೇವರಿಗೆ ನಮಸ್ಕಾರ ಮಾಡಿ ಹೊರಗೆ ಬರುತ್ತಿದ್ದರು. ಆನೆಯು ಆ ಮಾಲೆಯನ್ನು ಈ ಸನ್ಯಾಸಿಗಳ ಕೊರಳಿಗೆ ಹಾಕಿ, ತನ್ನ ಮೊಳಕಾಲು ಮೊಂಡೆಯನ್ನೂರಿ ತನ್ನಶುಂಡಾದಂಡವನ್ನು ಕುಂಡಲಾಕಾರವನ್ನಾಗಿ ಮಾಡಿ ಮಣಿದು ನಮಸ್ಕರಿಸಿತು. ನೆರೆದ ಜನರೆಲ್ಲರೂ ಚಪ್ಪಾಳೆ ಇಕ್ಕಿ ನರಹರಿತೀರ್ಥರನ್ನು ಅದೇ ಪಟ್ಟದಾನೆಯ ಮೇಲೆ ಕೂಡಿಸಿ ಮೆರೆಸುತ್ತ ಅರಮನೆಗೆ ಕರೆತಂದು ಅಧಿಕಾರ ಸೂತ್ರಗಳನ್ನೆಲ್ಲ ಅವರಿಗೆ ಒಪ್ಪಿಸಿದರು.

ಮೊದಲಿನಿಂದಲೂ ಶಾಮಶಾಸ್ತ್ರಿಗಳ ರಾಜಕಾರಣ ಚಾತುರ್ಯ, ಧೈರ್ಯ, ಶೌರ್ಯಗಳನ್ನು ಚನ್ನಾಗಿ ಅರಿತ ಮಂತ್ರಿ ಮಹಾಜನರೆಲ್ಲರೂ ಅವರ ಮುಂದೆ ತಮ್ಮ ಆಟವು ಸಾಗದೆಂದು ಅವರಿಗೆ ಅನುಕೂಲರಾದರು. ರಾಜನ ಮರಣದಿಂದ ನಾಡೆಲ್ಲವೂ ನಾಯಕನಿಲ್ಲದೇ ತರಗೆಲೆಯಂತೆ ಗಾಳಿಗೀಡಾದಾಗ ನರಹರಿತೀರ್ಥರು ತಮ್ಮ ನಯ-ನೈಪುಣಿಯಿಂದ ಆ ನಾಡಿನ ನೌಕೆಯನ್ನು ಚುಕ್ಕಾಣಿಯಂತೆ ಹಿಡಿದು ಸುಖ-ಸಂಪದಗಳ ಸಮೃದ್ಧಿಗೆ ತಲುಪಿಸಿದರು. ಸ್ವಾರ್ಥರಹಿತವಾದ, ನ್ಯಾಯ-ನಿಷ್ಠುರವಾದ ಶಾಸನ ಕೌಶಲ್ಯದಿಂದ ಕಳಿಂಗ ರಾಜ್ಯದಲ್ಲಿ ಎಂದೂ ಇಲ್ಲದ ಶಾಂತಿ-ಸಂತಸಗಳೂ, ತುಷ್ಟಿ-ಪುಷ್ಟಿಗಳೂ ರಾಜ್ಯದ ತುಂಬ ಆಗ ತುಳುಕಾಡಿದವು.

ಇಷ್ಟೆಲ್ಲ ರಾಜ್ಯದ ಅಧಿಕಾರ, ಐಶ್ವರ್ಯ ಸುಖ-ಸಾಮಗ್ರಿಗಳಿದ್ದರೂ, ನರಹರಿತೀರ್ಥರು ಮಾತ್ರ ಜಲದ ಮೇಲೆ ತೇಲುವ ತಾವರೆಯ ಎಲೆಯಂತೆ ನಿರ್ಲಿಪ್ತರಾಗಿಯೇ ಇದ್ದರು. ಒಂದು ಕಾವಿಯ ಒಟ್ಟೆಯ ತುಂಡು ಕಮಂಡಲುವಿನ ಹೊರತು ಅವರ ಬಳಿ ಬೇರೆ ಏನೂ ಆಸ್ತಿ ಇರಲಿಲ್ಲ.

ಆದರೆ ಅವರು ಅನೇಕ ದೇವಸ್ಥಾನ, ಧರ್ಮ ಸಂಸ್ಥೆಗಳಿಗೆ ಕೊಟ್ಟ ದಾನಗಳಿಗೆ ಲೆಕ್ಕವಿಲ್ಲ. ಈಗ ನಮಗೆ ದೊರೆತ ದತ್ತಿದಾನಗಳ ಶಾಸನ ಲೇಖಗಳೇ ಹತ್ತೆಂಟು ಇರುತ್ತವೆ. ಇವಲ್ಲದೆ ಅವರು ತಮ್ಮ ಕೈಕೆಳಗಿನ ಮಾಂಡಲಿಕ ರಾಜರಿಗೂ ಹೇಳಿ ದೇವಸ್ಥಾನ, ಧರ್ಮಕ್ಷೇತ್ರಗಳಿಗೆ, ಪಂಡಿತ ಪರಿವ್ರಾಜಕರಿಗೆ ದತ್ತಿವೃತ್ತಿಗಳನ್ನು ಕೊಡಿಸಿವಂತೆ ಸಾಕಷ್ಟು ಶಿಲಾ ಶಾಸನಗಳೂ, ತಾಮ್ರಶಾಸನಗಳೂ ಹುಡುಕಿದಷ್ಟೂ ಸಿಗುತ್ತಲೇ ಇವೆ.

೧೨೮೧ನೇ ಇಸ್ವಿಯ ೯೬೫ನೇ ನಂ. ಶಾಸನದಿಂದ ಶ್ರೀ ನರಹರಿ ತೀರ್ಥರು ಸಿಂಹಗಿರಿಯ ಸಿಂಹಾಚಲ ಸ್ವಾಮಿಗೆ ಅನೇಕ ವಿಧವಾದ ದಾನಗಳನ್ನು ನೀಡಿದ್ದಾರೆಂದು ತಿಳಿದು ಬರುತ್ತದೆ. ಮತ್ತು ೧೨೯೨ ನೇ ಇಸ್ವಿಯ ೯೪೩ ನೇ ಶಾಸನದಲ್ಲಿ ಗಂಗ ರಾಜರ ಮಾಂಡಲಿಕನಾದ ಒಡ್ಡವಾಡಿಯ ಮತ್ಸ್ಯ ವಂಶದ ಜಯಂತ ರಾಜನು ನರಹರಿ ತೀರ್ಥರ ಆಜ್ಞಾನುಸಾರವಾಗಿ ಅನೇಕ ದಾನ ಧರ್ಮಗಳನ್ನು ಮಾಡಿದ ಉಲ್ಲೇಖವಿದೆ. ಶ್ರೀ ನರಹರಿ ತೀರ್ಥರು ಸಿಂಹಾಚಲದಲ್ಲಿ ನರಹರಿ ಮಠ ಎಂಬ ಮಠವನ್ನು ಸ್ಥಾಪಿಸಿ ಅದರ ಮೇಲ್ವಿಚಾರಣೆಗಾಗಿ ತಮ್ಮ ಶಿಷ್ಯರಾದ ಶ್ರೀ ಜಗನ್ನಾಥ ತೀರ್ಥರನ್ನು ನೇಮಿಸಿದ್ದರು. ಇವರು ಕೂಡ ನರಹರಿ ತೀರ್ಥರ ಅನಂತರ ೧೩೦೩ನೇ ಇಸ್ವಿಯಲ್ಲಿ ಈ ಮಠಕ್ಕೆ ಸಿಂಹಾಚಲ ಸ್ವಾಮಿಯ ಸೇವೆಗೆ ಅನೇಕ ದಾನಗಳನ್ನು ಕೊಟ್ಟ ಶಾಸನ ಪತ್ರಗಳು ಈಗ ದೊರಕಿವೆ.

ನರಸಿಂಹನೆಂಬ ಮತ್ತೊಬ್ಬ ಮಾಂಡಲಿಕ ರಾಜನು ಸಿಂಹಾಚಲದ ದೇವರಿಗೆ ಎಷ್ಟೋ ದಾನಗಳನ್ನು ಕೊಟ್ಟದ್ದು ೧೨೮೮ ನೇ ಇಸ್ವಿಯ ೭೯೯ ನೇ ನಂ. ಶಾಸನದಿಂದ ತಿಳಿದುಬರುತ್ತದೆ. ಸುರಭಿ ವಂಶದಲ್ಲಿ ಹುಟ್ಟಿದ ಒಬ್ಬ ಸಾಮಂತ ರಾಜನು ಸಿಂಹಾಚಲದ ಮೇಲಿರುವ ನರಹರಿ ಮಂದಿರಕ್ಕೆ ಕೊಟ್ಟ ದಾನಗಳ ಉಲ್ಲೇಖವು ೧೨೮೬ ನೇ ಇಸ್ವಿಯ ೭೧೩ ನೇ ನಂ. ಶಾಸನದಲ್ಲಿ ದೊರಕುತ್ತದೆ. ಮತ್ಸ್ಯರಾಜನಾದ ಅರ್ಜುನನ ಮಗನಾದ ಜಯಂತನು ಸಿಂಹಾಚಲ ಸ್ವಾಮಿಯ ನಿತ್ಯ ಪೂಜೆಗಾಗಿ ಒಂದು ಹೂದೋಟವನ್ನೇ ದಾನವಾಗಿತ್ತನೆಂದು ೧೨೯೨ ನೇ ಇಸ್ವಿಯ ಮತ್ತೊಂದು ಶಾಸನದಲ್ಲಿ ನಮೂದಿಸಲಾಗಿದೆ.

ಹೀಗೆ ಕೂರ್ಮ ಕ್ಷೇತ್ರದಲ್ಲಿಯೂ ಸಿಂಹಾಹಾಚಲ ಕ್ಷೇತ್ರದಲ್ಲಿಯೂ ನರಹರಿ ತೀರ್ಥರಿಗೆ ಸಂಬಂಧಿಸಿದ ಅನೇಕ ಶಿಲಾಶಾಸನಗಳೂ, ತಾಮ್ರಶಾಸನಗಳೂ ದೊರಕಿವೆ. ಸ್ವಯಂ ಶ್ರೀ ನರಹರಿ ತೀರ್ಥರು ಶ್ರೀ ಕೂರ್ಮ ದೇವರ ದೀಪಾರಾಧನೆಗಾಗಿ ದೀಪಸ್ತಂಭಗಳನ್ನೂ, ಯೋಗಾನಂದ ನರಸಿಂಹ ದೇವರಿಗಾಗಿ ಗದ್ದೆ ಹಾಗೂ ತೋಟಗಳನ್ನೂ ಮತ್ತು ಅವರು ಪ್ರತಿಷ್ಠಾಪಿಸಿದ ರಾಮ ಸೀತಾ ಲಕ್ಷ್ಮಣ ಮೂರ್ತಿಗಳ

ಪೂಜಾ ಪರಿಚರ್ಯೆಗಾಗಿ ಕೆಲವು ಮಾಸಾಶನ, ವರ್ಷಾಶನಗಳನ್ನೂ ಹಾಕಿಕೊಟ್ಟ ಉಲ್ಲೇಖವು ಆ ದೇಶದ ಇತಿಹಾಸದಲ್ಲಿ ಕಂಡುಬರುತ್ತಿದೆ.

ಇದರ ಮೇಲಿಂದ ಕಲಿಂಗ ದೇಶದಲ್ಲಿ ನರಹರಿ ತೀರ್ಥರು ಧರ್ಮ ಚಕ್ರದ ಪ್ರವರ್ತಕರಾಗಿ ನಾಡಿನ ಶಾಸನ ಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡಾಗ ಎಂತೆಂಥ ದಾನ ಧರ್ಮದ ಕಾರ್ಯಗಳು ನಿರಂತರ ನಡೆಯುತ್ತಿದ್ದವೆಂಬುದು ತಿಳಿದು ಬರಲಿಕ್ಕೆ ಸಾಕು. ಕೂರ್ಮ ಕ್ಷೇತ್ರದಲ್ಲಿ ಕೂರ್ಮ ದೇವರ ಎದುರು ಶ್ರೀ ಯೋಗಾ ನಂದ ನರಸಿಂಹ ದೇವರನ್ನು ಪ್ರತಿಷ್ಠಾಪಿಸಿ ದಿವ್ಯ ಭವ್ಯವಾದ ಮಂದಿರವನ್ನು ಸುಂದರ ವಾಗಿ ನಿರ್ಮಿಸಿದ್ದು ಅವರ ಹೃದಯದ ಔದಾರ್ಯಕ್ಕೆ ಸಾಕ್ಷಿಯಾಗಿವೆ.

ಶ್ರೀ ನರಹರಿ ತೀರ್ಥರ ಈ ತರಹದ ಲೋಕಕ್ಷೇಮಕರವಾದ ಕಾರ್ಯದಕ್ಷತೆ ಯನ್ನು ಕಂಡೇ ಆಚಾರ್ಯರು ಅವರನ್ನು ಕಳಿಂಗ ರಾಜ್ಯಕ್ಕೆ ಕೊಟ್ಟುಕಳುಹಿಸಿ ದ್ದರು. ನಿಸ್ವಾರ್ಥ ಬುದ್ಧಿಯಿಂದ ಲೋಕಾರಾಧನರೂಪವಾದ ಧರ್ಮ ಕಾರ್ಯವನ್ನು ಹೊಣೆಗಾರಿಕೆಯಿಂದ ಹೊತ್ತು ಸಮರ್ಥ ರೀತಿಯಿಂದ ಮಾಡುವದು ಅವರಿಗೆ ಪಿತೃ ಪರಂಪರಾಪ್ರಾಪ್ತವಾಗಿದ್ದಿತು. ಈ ಮಾತನ್ನು ಒಂದು ಕೂರ್ಮ ಶಾಸನದಲ್ಲಿ ಕೊರಿಸಿ ಇಟ್ಟಿದ್ದಾರೆ.

"ತಸ್ಮಾಲ್ಲೋಕ ಸುರಕ್ಷಣಾತಿ ನಿಪುಣಾತ್ ಸಂಪ್ರಾಪ್ತ ಕರ್ತವ್ಯಧೀಃ
ದ್ವೇಧಾಮುತ್ರತಥಾ ತ್ರಯೋಽವತಿ ಜನಾನ್ ಕಾಳಿಂಗ ಭೂಸಂಭವಾನ್ ।
ಪಿತ್ರಾಚಾರಮುಪೈತಿ ಸೂನುರಿತಿ ಸನ್ನೀತಿಸ್ಥಿತೋ ಧರ್ಮತಃ ।
ಶತ್ರುಕ್ಷ್ಮಾಪತಿ ವರ್ಗದುರ್ಗ ನಿವಹಾನ್ ಭೀತಾನಭೀತಃ ಸ್ವಯಂ ॥"

"ಸ್ವಸ್ತಿಶ್ರೀ ಶಕವತ್ಸರೇ ಹುತವಹವ್ಯೋಮದ್ವಯಕ್ಷ್ಮಾಯುತೇ ।
ಮೇಷೇ ಶುಕ್ರ ಶಶಾಂಕ ಶೇಖರದಿನೇ ವಾರೇ ಚ ಸೌಮ್ಯೆ ವರೇ ॥
ಪ್ರಾಸಾದಂ ಕಮಠಾಧಿಪಸ್ಯ ಪುರತೋ ನಿರ್ಮಾಯ ಶರ್ಮಪ್ರದೋ ।
ಯೋಗಾನಂದ ನೃಸಿಂಹ ಏವ ಭಗವಾನ್ ಪ್ರೀತ್ಯಾ ಪ್ರತಿಷ್ಠಾಪಿತಃ ॥"

ಶ್ರೀ ನರಹರಿ ತೀರ್ಥರು ಹೀಗೆ ೧೨ ವರ್ಷಗಳ ಕಾಲ ರಾಜ್ಯವನ್ನು ಕಳಿಂಗ ದೇಶದಲ್ಲಿ ಪ್ರವರ್ತನಗೊಳಿಸಿ ರಾಜಕುಮಾರನು ತುಸು ದೊಡ್ಡವನಾದ ಬಳಿಕ ರಾಜ್ಯಶಾಸನದ ತಂತ್ರವನ್ನು ಅವನಿಗೆ ತಿಳಿಸಿಕೊಟ್ಟು ರಾಜ್ಯಾಧಿಕಾರವನ್ನೆಲ್ಲ ಅವ ನಿಗೆ ಒಪ್ಪಿಸಿ ತಾವು ಅಲ್ಲಿಂದ ಹೊರಟರು.

೧೨ ವರ್ಷ ಶ್ರೀನರಹರಿ ತೀರ್ಥರ ಸುಖ ಸಾಮ್ರಾಜ್ಯದಲ್ಲಿ ಎಲ್ಲ ಬಗೆಯ ನಲಿವು, ಸೌಕರ್ಯ, ಶಾಂತಿ ಸಮಾಧಾನಗಳನ್ನು ಪಡೆದ ರಾಜ್ಯದ ಎಲ್ಲ ಪ್ರಜೆಗಳೂ ಮಂತ್ರಿ

ಮಹಾ ಜನರೂ ರಾಜಕುಮಾರನೂ ಮಹಾರಾಣಿಯೂ ಶ್ರೀ ಸ್ವಾಮಿಗಳ ವಿರಹ ವೇದನೆಯಿಂದ ಖಿನ್ನರಾಗಿ ಅವರಿಗೆ ಕೈ ಮುಗಿದು ಕೇಳಿಕೊಂಡರು.

"ಸ್ವಾಮೀ ! ತಾವು ಇಷ್ಟು ದಿನ ರಾಜ್ಯಕ್ಕಾಗಿ ಸಲ್ಲಿಸಿದ ಸೇವೆಗಾಗಿ ನಮ್ಮಿಂದ ಏನಾದರೂ ಕಾಣಿಕೆ ಸ್ವೀಕರಿಸಬೇಕು " ಎಂದು.

ಸರ್ವಸಂಗವನ್ನು ತೊರೆದು ಯತಿಗಳಾದ ಆ ಮಹನೀಯರಿಗೆ ಏನು ಬೇಕಾಗಿದೆ! ತಮಗೆ ಏನೂ ಬೇಡವೆಂದು ಹೇಳಿದರು. ಆದರೆ ರಾಜಕುಮಾರ, ರಾಣಿ ಮತ್ತು ಮಂತ್ರಿಗಳು ಬಲವಂತ ಪಡಿಸಿದಾಗ ಆ ಗಜಪತಿ ಭಾಂಡಾರದಲ್ಲಿ ಧೂಳಿ ಸ್ನಾನಮಾಡುತ್ತ ಬಿದ್ದ ರಾಮ ಸೀತೆಯರ ವಿಗ್ರಹವನ್ನು ಕೊಡಬೇಕೆಂದು ಕೇಳಿದರು. ರಾಜ ಪರಿವಾರದವರೆಲ್ಲರೂ ಅದಕ್ಕೆ ಸಂತೋಷದಿಂದ ಒಪ್ಪಿಗೆಯನ್ನೀಯಲು ನರಹರಿ ತೀರ್ಥರು ಆ ಮೂಲ ಸೀತಾ ರಾಮ ಮೂರ್ತಿಗಳನ್ನು ತೆಗೆದುಕೊಂಡು ಅವರೆಲ್ಲರನ್ನು ತುಂಬಿದ ಹೃದಯದಿಂದ ಬೀಳ್ಕೊಂಡು ಅಲ್ಲಿಂದ ಮುಂದೆ ಪ್ರಯಾಣ ಮಾಡಿದರು. ವೇಗಗಾಮಿಯಾದ ಕುದುರೆಯಿಂದ ಹೊರಟು ಅವರು ನೇರವಾಗಿ ಸಿಂಹಾಚಲಕ್ಕೆ ಬಂದು ತಂಗಿದರು.

ಇತ್ತ ರಾಮ ಸೀತಾ ವಿಗ್ರಹಗಳನ್ನು ಭಾಂಡಾರದಿಂದ ಒಯ್ದ ಕೂಡಲೇ ಆ ಅರಮನೆಗೆ ಬೆಂಕಿ ಹತ್ತಿತು. ಅದನ್ನು ಕಂಡು ಹೌಹಾರಿದ ರಾಜ ಮತ್ತು ರಾಜಮಾತೆಯರು ಹಿರಿಯರನ್ನು ಕರೆದು ಕೇಳಿದರು. ಊರಲ್ಲಿಯ ವಯೋವೃದ್ಧರು ಅವರಿಗೆ ಮೂಲ ರಾಮರ ಮಹಿಮೆಯನ್ನು ಹೇಳಿ ಆ ಸ್ವಾಮಿಯು ನಮ್ಮ ರಾಜಧಾನಿಯ ಸೀಮೆಯನ್ನು ಬಿಟ್ಟು ಹೋದದ್ದೇ ಈ ಅರಮನೆಯ ಅಗ್ನಿ ತಾಂಡವಕ್ಕೆ ಕಾರಣ ಎಂದು ಹೇಳಿದರು.

ಕೂಡಲೇ ರಾಜನು ಆ ಪ್ರತಿಮೆಗಳನ್ನು ಮರಳಿ ತರಲು ನರಹರಿತೀರ್ಥರ ಬೆನ್ನು ಹಿಂದೆ ರಾಜಭಟರನ್ನು ಅಟ್ಟಿದನು. ಧಾವಿಸಿ ಬಂದ ಅವರ ಎದುರು ಸ್ವಾಮಿಗಳು ಆ ರಾಮದೇವರ ಪೆಟ್ಟಿಗೆಯನ್ನಿಟ್ಟು— "ಇದು ನಿಮಗೆ ಬೇಕಾಗಿದ್ದರೆ ನೀವು ತೆಗೆದುಕೊಂಡು ಹೋಗಬಹುದೆಂದು" ಹೇಳಿದರು.

ಆಚಾರ್ಯರ ಅನುಗ್ರಹ ಬಲದಿಂದ, ನರಹರಿತೀರ್ಥರ ಹಸ್ತಸ್ಪರ್ಶಮಾತ್ರದಿಂದಲೇ ಆ ಪ್ರತಿಮೆಗಳಲ್ಲಿ ರಾಮದೇವರ ವಿಶೇಷ ಸನ್ನಿಧಾನವು ಅಭಿವ್ಯಕ್ತವಾಗಿ ನೂರಾರು ಜನ ಬಲಿಷ್ಠರಾದ ರಾಜಭಟರು ಪ್ರಯತ್ನಿಸಿದರೂ ಆ ಪ್ರತಿಮೆಗಳನ್ನು ನೆಲ ಬಿಟ್ಟು ಎತ್ತಲಿಕ್ಕೆ ಆಗಲಿಲ್ಲ. ಬಹಳ ಹೊತ್ತು ಹೆಣಗಾಡಿ ಆ ಎಲ್ಲ ರಾಜಭಟರು ಅವನ್ನು ಕೊಂಡೊಯ್ಯಲಾರದೇ ಅಲ್ಲಿಯೇ ಬಿಟ್ಟು ನಿರಾಶರಾಗಿ ರಾಜಧಾನಿಗೆ ಮರಳಿದರು.

ಇತ್ತ ನರಹರಿತೀರ್ಥರು ಆ ರಾಮ–ಸೀತಾ ಪ್ರತಿಮೆಗಳನ್ನು ತಾವು ತೆಗೆದು ಕೊಂಡು ನೇರವಾಗಿ ಉಡುಪಿಗೆ ಬಂದರು.

ಆಚಾರ್ಯರ ಅವತಾರ ಕಾರ್ಯವು ಮುಗಿಯ ಬಂದಿತ್ತು. ತಮ್ಮ ಗುರುಗಳಾದ ಶ್ರೀ ವೇದವ್ಯಾಸ ದೇವರ ದರ್ಶನಕ್ಕಾಗಿ ಹಿರೇ–ಬದರಿಗೆ ಹೋಗಲು ಅವರು ಇಚ್ಛಿ ಸುತ್ತಿದ್ದರು. ಆದರೆ ಮೂಲ–ರಾಮದೇವರ ಪೂಜೆ ಮಾಡದೆ ಅವರ ಅವತಾರ ಕಾರ್ಯವು ಪೂರ್ಣವಾಗುವಂತೆ ಇರಲಿಲ್ಲ. ಹಿಂದಿನ ತಮ್ಮ ಹನುಮ ಭೀಮಾವ ತಾರಗಳಲ್ಲಿ ತಾವು ಭಕ್ತಿಯಿಂದ ಪೂಜಿಸಿದ ಆ ಪ್ರಭು ಶ್ರೀರಾಮನನ್ನು ಈ ಅವ ತಾರದಲ್ಲಿಯೂ ಪೂಜಿಸಬೇಕೆಂದು ಅವರ ಹೃದಯವು ತವಕಿಸುತ್ತಿತ್ತು. ಅವರು ತಮ್ಮ ಶಿಷ್ಯ ನರಹರಿತೀರ್ಥರ ದಾರಿಯನ್ನೇ ಕಾಯುತ್ತಿದ್ದರು.

ಕಾರ್ತೀಕ ಶುದ್ಧ ದ್ವಾದಶಿ ಸಂಧ್ಯಾಕಾಲದಲ್ಲಿ ಶ್ರೀ ನರಹರಿತೀರ್ಥರು ಬ್ರಹ್ಮ ಕರಾರ್ಚಿತವಾದ ಶ್ರೀ ಮೂಲ ಸೀತಾ–ರಾಮಪ್ರತಿಮೆಗಳನ್ನು ಶ್ರೀಮದಾನಂದತೀರ್ಥ ರಿಗೆ ತಂದು ಒಪ್ಪಿಸಿ, ಸಾಷ್ಟಾಂಗ ವಂದನೆಗೈದರು. ಅದನ್ನು ಕಂಡು ಪೂರ್ಣಪ್ರಜ್ಞ ರಿಗೆ ಅತ್ಯಂತ ಆನಂದವಾಯಿತು. ತಮ್ಮ ಅವತಾರದ ಮುಖ್ಯ ಕಾರ್ಯಗಳಲ್ಲಿ ಒಂದು ಮಹತ್ವದ ಕಾರ್ಯವು ಇಂದು ಪೂರೈಸಿದಂತಾಯಿತೆಂದು ಅವರು ಭಾವಿಸಿ ದರು.

ಹಿಂದೆ ಶ್ರೀ ಹನುಮಂತದೇವರು ಸೀತಾದೇವಿಗೆ ಶ್ರೀ ರಾಮನ ಉಂಗುರವನ್ನಿತ್ತು ಅವಳ ಸಂದೇಶದೊಂದಿಗೆ ಚೂಡಾಮಣಿಯನ್ನು ತಂದು ರಾಮನಿಗೆ ಒಪ್ಪಿಸಿದಾಗ ಆ ಪ್ರಭು ತನ್ನ ಪವನ ದೂತನಿಗೆ ಮಾಡಿದ ಪುರಸ್ಕಾರವನ್ನೇ ಅದೇ ಪವನಭೂತರಾದ ಗುರು ಮಧ್ವರು ನರಹರಿತೀರ್ಥರಿಗೆ ಮಾಡಿದರು.

ಅಂದು ಕಾರ್ತೀಕ ಶುದ್ಧ ದ್ವಾದಶಿ. ಬೆಳಿಗ್ಗೆ ಸ್ನಾನ ಪೂಜಾದಿಗಳೆಲ್ಲವೂ ಮುಗಿದು ಹೋಗಿದ್ದವು. ಸಾಯಂಕಾಲ ದೇವರನ್ನು ಮುಟ್ಟುವ ಸಂಪ್ರದಾಯವಿಲ್ಲ. ಆದರೆ ಮಧ್ವಾಚಾರ್ಯರಿಗೆ ಮರುದಿನ ಬೆಳಗಾಗುವವರೆಗೂ ಆ ಮೂಲ ರಾಮನ ದರ್ಶನ ಗೈಯದೆ, ಸ್ಪರ್ಶ ಮಾಡದೇ, ಪೂಜೆಯನ್ನು ಆಚರಿಸದೆ ಇರುವದು ಅಶಕ್ಯವಾಯಿತು. ಅಂಥ ಉತ್ಕಟ ಉತ್ಕಂಠೆ ಆ ಮೂಲ ರಾಮನನ್ನು ಪೂಜಿಸುವಲ್ಲಿ ಆನಂದತೀರ್ಥರಿಗೆ.

ಆದುದರಿಂದ ಅವರು ಕೂಡಲೇ ಮಧ್ವ ಸರೋವರಕ್ಕೆ ಸ್ನಾನಕ್ಕೆ ತೆರಳಿದರು. ಅಂದು ರಾತ್ರಿಯೇ ಶ್ರೀ ಮೂಲ ರಾಮದೇವರನ್ನು ಕಡಗೋಲು ಕೃಷ್ಣನ ಪಕ್ಕದಲ್ಲಿ ಕುಳ್ಳಿರಿಸಿ ಯಥಾ ಪ್ರಕಾರ ವೈಭವದಿಂದ ಪೂಜೆ ಮಾಡಿದರು. ಬ್ರಹ್ಮಕರಾರ್ಚಿತವಾದ ಆ ಮೂಲ ಸೀತಾ–ರಾಮರ ಸುಂದರ ವಿಗ್ರಹಗಳನ್ನು ಭಕ್ತಿಯಿಂದ ಪೂಜಿಸಿ, ಭಾವಿ ಬ್ರಹ್ಮರು ಪರಮಾನಂದಪಟ್ಟರು.

ಅನಂತರ ಆಚಾರ್ಯರು ತಾವಿರುವವರೆಗೆ ಅಂದರೆ ಮಾಘ ಶುದ್ಧ ನವಮಿಯವರೆಗೆ ಆ ದಿವ್ಯ ವಿಗ್ರಹಗಳನ್ನು ಪೂಜಿಸಿದರು. ಮತ್ತು ಮುಂದೆ ಆ ಸೀತಾ–ರಾಮರ ಪ್ರತಿಮೆ ಗಳನ್ನು ಪೂಜಿಸಬೇಕೆಂದೂ ತಮ್ಮ ಸಂಸ್ಥಾನದ ಪರಂಪರೆಯನ್ನು ಮುಂದುವರಿಸ ಬೇಕೆಂದೂ ಶ್ರೀ ಪದ್ಮನಾಭತೀರ್ಥರಿಗೆ ಅಪ್ಪಣೆಯಿತ್ತರು. ಮತ್ತು ಮುಂದೆ ಆ ಪ್ರತಿಮೆ ಗಳನ್ನು ಕಳಿಂಗ ರಾಜ್ಯದಿಂದ ತಂದ ಶ್ರೀ ನರಹರಿತೀರ್ಥರಿಗೆ ಒಪ್ಪಿಸಬೇಕೆಂದು ಅಪ್ಪಣೆಗೈದರು.

ಆಚಾರ್ಯರ ಅನಂತರ ಆ ಪದ್ಮನಾಭ ತೀರ್ಥರು ಸರ್ವಜ್ಞ ಸಿಂಹಾಸನ ವನ್ನು ಆರೂಢರಾಗಿ, ದೇಶ ವಿದೇಶಗಳಗಳಲ್ಲಿ ದಿಗ್ವಿಜಯ ಮಾಡಿ, ದಶ ದಿಕ್ಕುಗಳ ಲ್ಲಿಯೂ ದ್ವೈತ ಮತದ ದುಂದುಭಿಯನ್ನು ಮೊಳಗಿಸಿ, ಭಕ್ತ ಜನರಿಗೆಲ್ಲ ತಪ್ತ ಮುದ್ರಾಧಾರಣೆ ಹಾಗೂ ಶ್ರೀ ಮೂಲ ರಾಮ ದೇವರ ದರ್ಶನ ಮಾಡಿಸಿ, ನಿರಂತರ ಮಧ್ವಶಾಸ್ತ್ರ ಪ್ರವಚನದಿಂದ ಭಕ್ತ ಜನರನ್ನು ಉದ್ಧರಿಸಿ, ಕೊನೆಗೆ ಆನೆಗೊಂದಿಯ ರಾಜರಿಂದ ಪ್ರಾರ್ಥಿತರಾಗಿ ಅಲ್ಲಿಯೇ ಬಂದು ನೆಲಸಿದರು.

ಶ್ರೀ ನರಹರಿ ತೀರ್ಥರಾದರೂ ದಿಗ್ದೇಶಗಳಲ್ಲಿ ಸಂಚಾರ ಮಾಡಿ, ಅದ್ವೈತ ಮತವನ್ನು ಮರ್ದಿಸಿ, ವಿಷ್ಣು ಸರ್ವೋತ್ತಮತ್ವವನ್ನು ಎಲ್ಲ ಕಡೆಗೂ ಪ್ರಚಾರ ಮಾಡಿ, ಗುರುಗಳ ಸೇವೆಯನ್ನು ಮಾಡಬೇಕೆಂದು ಹಂಪಿ ಕ್ಷೇತ್ರಕ್ಕೆ ಆಗಮಿಸಿದರು.

ಹಂಪಿಯಲ್ಲಿ ಶ್ರೀ ನರಹರಿ ತೀರ್ಥರು ಅತ್ಯಂತ ಭಕ್ತಿಯಿಂದ ಗುರುಗಳನ್ನು ಸೇವೆ ಮಾಡಿಕೊಂಡಿದ್ದರು. ಶ್ರೀ ಪದ್ಮನಾಭ ತೀರ್ಥರು ಈ ತಮ್ಮ ಶಿಷ್ಯರನ್ನು ಸಮೀ ಪದ ಗ್ರಾಮಗಳಿಗೆ ಭಕ್ತರು ಬಿನ್ನವಿಸಿದಾಗ ಸಂಚಾರ ಮಾಡಿಕೊಂಡು ಬರಲು ಕೊಟ್ಟು ಕಳಿಸುತ್ತಿದ್ದರು.

ಒಂದು ದಿನ ಅಲ್ಲಿಯೇ ಹತ್ತು ಮೈಲು ದೂರದಲ್ಲಿರುವ ಗೊಲ್ಲರ ಹಳ್ಳಿ ಎಂಬ ಗ್ರಾಮಕ್ಕೆ ಶ್ರೀ ನರಹರಿತೀರ್ಥರು ಆಗಮಿಸಿದರು. ಆ ಊರ ಹೊರಗೆ ಇದ್ದ ಒಂದು ಚಿಕ್ಕ ಕೆರೆಯಲ್ಲಿ ಅವರ ಶಿಷ್ಯರು ಗುರುಗಳ ಬಟ್ಟೆಗಳನ್ನು ಒಗೆದುಕೊಂಡು ಬಂದರು. ಅಂದು ರಾತ್ರಿಯೇ ನರಹರಿ ತೀರ್ಥರಿಗೆ ಕನಸು. "ಇಂದು ನಿನ್ನ ಶಿಷ್ಯರು ಒಂದು ಕರಿ ಕಲ್ಲಿನ ಮೇಲೆ ಬಟ್ಟೆಯನ್ನು ಒಗೆದಿದ್ದಾರೆ. ಅದು ನನ್ನ ಬೆನ್ನು. ಅವರು ಬಟ್ಟೆ ಒಗೆದ ಆ ಕರಿ ಕಲ್ಲು ಲಕ್ಷ್ಮೀ ನಾರಾಯಣ ಮೂರ್ತಿಯ ಹಿಂಬದಿಯ ಬೆನ್ನಿನ ಭಾಗವಾಗಿದೆ. ಈ ಗ್ರಾಮದ ಕೋಟೆಯಲ್ಲಿರುವ ಆಂಜನೇಯ ದೇವಸ್ಥಾನದ ಪಕ್ಕ ದಲ್ಲಿ ನನ್ನ ಆ ಶಿಲಾ ಮೂರ್ತಿಯನ್ನು ಪ್ರತಿಷ್ಠೆ ಮಾಡು." ಎಂದು ಸ್ವತಃ ಲಕ್ಷ್ಮೀ ನಾರಾಯಣ ದೇವರು ಸ್ವಪ್ನದಲ್ಲಿ ಕಾಣಿಸಿಕೊಂಡು ಅಪ್ಪಣೆ ಕೊಟ್ಟರು. ಸ್ವಪ್ನದಲ್ಲಿ ಶ್ರೀಮನ್ ನಾರಾಯಣನನ್ನು ಕಂಡ ಶ್ರೀ ನರಹರಿ ತೀರ್ಥರಿಗೆ ಮೈ ರೋಮಾಂಚನ ವಾಯಿತು.

ಮರುದಿನ ಬೆಳಗು ಮುಂಜಾವು ಅರುಣೋದಯ ಸಮಯದಲ್ಲಿ ಶ್ರೀ ನರಹರಿ ತೀರ್ಥರು ಎದ್ದು ಸ್ನಾನಮಾಡಿಕೊಂಡು ಎಲ್ಲ ಶಿಷ್ಯರೊಂದಿಗೆ ಕೆರೆಯ ತಟಾಕಕ್ಕೆ ಬಂದರು. "ನಿನ್ನೆ ದಿನ ನಮ್ಮ ಬಟ್ಟೆಯನ್ನು ನೀವು ಎಲ್ಲಿ ಒಗೆದಿರಿ ?" ಎಂದು ಶಿಷ್ಯರನ್ನು ಕೇಳಿದರು. ಅದಕ್ಕೆ ಶಿಷ್ಯರು ಮುಂದೆ ಬಂದು ದಂಡೆಯಲ್ಲಿಯ ಕಿರು ನೀರಿನಲ್ಲಿ ಅಡ್ಡ ಮಲಗಿದ ಬಂಡೆಯನ್ನು ತೋರಿಸಿದರು. ನರಹರಿ ತೀರ್ಥರು ಬಂದು ಆ ಕೃಷ್ಣ ಶಿಲೆಯ ಮೇಲ್‌ಮೈಯನ್ನು ನೋಡಿದರು. ಅದರ ಹಿಮ್ಮೈ ಹೊರಮೈಗಳ ಮೇಲೆ ಕೈಯಾಡಿಸಿ ನೋಡಿದರು.

ಆ ಕರಿಕಲ್ಲಿನ ಒಳ ಮೈಗೆ ಕೈ ಹಚ್ಚಿದಾಗ ನರಹರಿ ತೀರ್ಥರಿಗೆ ಒಂದು ವಿಚಿತ್ರ ಅನುಭವವಾಯಿತು. ಕೂಡಲೆ ಅವರು ಆ ಹೆಬ್ಬಂಡೆಯನ್ನು ತಮ್ಮ ಕೈ ಬೆರಳುಗಳಿಂದ ಹೊರಳಿಸಿದರು. ಮತ್ತು ಒಂದು ಕ್ಷಣ ಕಣ್ಣು ಅರಳಿಸಿ ನಿಂತು ಕೊಂಡರು.

" ಇದೇನು ಆ ದೃಶ್ಯ! ಇದೆಂಥ ಶಿಲ್ಪ, ಲಕ್ಷ್ಮೀ ನಾರಾಯಣರ ಮೂರ್ತಿ ಗಳು ಆ ಕಲ್ಲಿನ ಹೃದಯದ ಮೇಲೆ ಕಮನೀಯವಾಗಿ ಸುಂದರವಾಗಿ ಕಂಗೊಳಿಸು ತ್ತಲಿದ್ದವು. ಶ್ರೀ ನರಹರಿ ತೀರ್ಥರು ತಮಗಿತ್ತ ಭಗವಂತನ ಸ್ವಪ್ನ ಸಂದೇಶದಂತೆ ಆ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಆ ಗ್ರಾಮದ ಹಳೆಯ ಕೋಟೆಯಲ್ಲಿ ಪ್ರಶಸ್ತವಾದ ದೇವಾಲಯವನ್ನು ನಿರ್ಮಿಸಿ ಅದರಲ್ಲಿ ವಿಧಿಪೂರ್ವಕವಾಗಿ ಪ್ರತಿಷ್ಠೆ ಯನ್ನು ಮಾಡಿದರು. ಅಂದಿನಿಂದ ಆ ಕೆರೆಗೆ ನಾರಾಯಣ ದೇವರ ಕೆರೆ ಎಂದು ಹೆಸರಾಯಿತು. ಶ್ರೀ ನರಹರಿ ತೀರ್ಥರು ನಾರಾಯಣ ದೇವರ ಕೆರೆಯನ್ನು ವಿಸ್ತಾರ ವಾಗಿ ಅಗಿಸಿ, ಮಣ್ಣು ತಗಿಸಿ ದೊಡ್ಡದನ್ನಾಗಿ ಮಾಡಿದರು. ಅದರಿಂದ ಸುತ್ತು ಮುತ್ತಲಿನ ಅನೇಕ ಗ್ರಾಮಗಳ ಹೊಲ ನೆಲಗಳೆಲ್ಲ ನೀರುಂಡು ಆ ಪರಿಸರದ ಪ್ರದೇಶವು ಧಾನ್ಯಗಳ ಕಣಜವಾಯಿತು. ಅವರು ಸ್ಥಾಪನೆ ಮಾಡಿದ ಲಕ್ಷ್ಮೀ ನಾರಾಯಣ ದೇವಸ್ಥಾನವು ಒಳ್ಳೆ ಜಾಗ್ರ್ರತ ಸ್ಥಳವೆಂದು ಪ್ರಸಿದ್ಧವಾಯಿತು.

ಟೀಪೂ ಸುಲ್ತಾನನಂಥ ಮೂರ್ತಿಭಂಜಕನಾದ ಹಿಂದೂ ಧರ್ಮ ದ್ವೇಷಿಯಾದ ರಾಜನೂ ಕೂಡ ಈ ಲಕ್ಷ್ಮೀ ನಾರಾಯಣಸ್ವಾಮಿಯ ಭಕ್ತನಾಗಿ ರತ್ನಖಚಿತ ವಾದ ಕಿರೀಟಗಳನ್ನು ಮಾಡಿಸಿ ಕೊಟ್ಟಿದ್ದಾನೆ. ಸುಲ್ತಾನನು ಕೋಪಣ ನಗರವನ್ನು ಗೆಲ್ಲಲು ದಂಡೆತ್ತಿ ನಡೆದಿದ್ದನು. ಅದು ರಾಮನವಮಿಯ ಸಂದರ್ಭವಾದುದರಿಂದ ನಾರಾಯಣ ದೇವರ ರಥೋತ್ಸವವು ನಡೆದಿತ್ತು. ಜನಜಾತ್ರೆ ನೆರೆದಿತ್ತು. ಇದೇನು ಗಲಾಟೆ ಎಂದು ಟಿಪ್ಪು ತಲೆ ಎತ್ತಿ ತೇರಿನ ಕಡೆಗೆ ನೋಡಿದ. ತೇರಿನ ನಟ್ಟ ನಡುವೆ ಪೀಠದಲ್ಲಿ ಲಕ್ಷ್ಮೀ ನಾರಾಯಣರ ಎರಡು ಸುಂದರವಾದ ಮೂರ್ತಿಗಳು ಕಂಗೊಳಿಸುತ್ತಿದ್ದವು. ಟಿಪ್ಪುವು ತನ್ನ ಕುದುರೆಯ ಮೇಲೆ ಕುಳಿತೇ ದೂರಿಂದ ಆ

ಸುಂದರ ಮೂರ್ತಿಗಳನ್ನು ನೋಡಿದನು. ಅವೆರಡು ಕುಲು ಕುಲು ನಗುತ್ತಿರುವಂತೆ ಭಾಸವಾಯಿತು. ಸುಲ್ತಾನನು ತನ್ನ ಕಣ್ಣನ್ನು ಮತ್ತೊಮ್ಮೆ ತಿಕ್ಕಿಕೊಂಡು ಮೂರ್ತಿಗಳನ್ನು ನೋಡಿದನು. ಅದೇ ಸುಂದರವಾದ ಮಂದಹಾಸ. ಅದೇ ತುಂಟ ನಗೆ ಅವುಗಳ ತುಟಿಯ ಮೇಲೆ ತಾಂಡವವಾಡುತ್ತಿತ್ತು. ಟಿಪ್ಪುವಿನ ಹೃದಯ ದಲ್ಲಿ ಏನೊ ಮಿಂಚಿದಂತಾಯಿತು. ಅವನು ಕಣ್ಣರಳಿಸಿ ಮತ್ತೆ ಮತ್ತೆ ಮುಗುಳು ನಗುವ ಆ ಮುಗ್ಧ ಮೂರ್ತಿಗಳನ್ನು ನೋಡಿದ. ಅವನ ಹೃದಯದಲ್ಲಿ ಭಕ್ತಿಯ ಸೆಳಕು ಮಿಂಚಿದಂತಾಯಿತು. ನಿಂತಲ್ಲಿಯೇ ತಲೆ ತಗ್ಗಿತು. ಮೂರ್ತಿಯೆಡೆಗೆ ಕತ್ತು ಬಗ್ಗಿತು. ಕೈ ಮುಗಿಯಿತು. ಅವನು ಮುಂದೆ ನಡೆದ.

ಮೂರ್ತಿ ದರ್ಶನದ ಪ್ರಭಾವವೋ ಏನೋ ! ಕೋಪಣನಗರದಲ್ಲಿ ಅನಿರೀಕ್ಷಿತ ವಾದ ಗೆಲವು ಅವನ ಕೊರಳಿಗೆ ಒಲವಿನ ಮಾಲೆ ಹಾಕಿತು. ಇಷ್ಟು ಅಲ್ಪ ಕಾಲದಲ್ಲಿ ಇಂಥ ಭದ್ರ ದುರ್ಗದ ಆ ವಿಜಯಕ್ಕೆ ತಾನು ಬರುವಾಗ ದಾರಿಯಲ್ಲಿ ಕಂಡ ನಗೆ ಮುಖದ ನಾರಾಯಣ ಸ್ವಾಮಿಯ ದರ್ಶನವೇ ಕಾರಣ ಎನಿಸಿತು ಆ ಮುಸಲ್ಮಾನನ ಮನಸ್ಸಿಗೂ ಕೂಡ. ಆದುದರಿಂದ ಅವನು ಕೊಪ್ಪಳವನ್ನು ಗೆದ್ದುಕೊಂಡು ಮೈಸೂರಿಗೆ ಹೋಗುವಾಗ ಮರಳಿ ನಾರಾಯಣ ದೇವರ ಕೆರೆಗೆ ಬಂದನು. ಆ ನಗೆಯ ನಾರಾ ಯಣನಿಗೆ ತಮ್ಮ ಭಕ್ತಿಯ ಕುರುಹಾಗಿ ಅನರ್ಘ್ಯವಾದ ರತ್ನ ಕಿರೀಟಗಳನ್ನು ಮಾಡಿಸಿಕೊಟ್ಟನು. ನಾರಾಯಣದೇವರ ತಲೆಯ ಮೇಲೆ ಆ ಮುಸಲ್ಮಾನದೊರೆಯು ಮಾಡಿಸಿಕೊಟ್ಟ ಆ ಮಣಿಮಯ ಮುಕುಟವು ಮಂಡಿಸಿರುವುದನ್ನು ನಾವು ಈಗಲೂ ನೋಡಬಹುದು.

ಈ ನಾರಾಯಣದೇವರಕೆರೆ ಎಂಬ ಗ್ರಾಮವು ಈಗ ತುಂಗಭದ್ರಾ ಆಣೇ ಕಟ್ಟಿನ ಜಲಾಶಯದಲ್ಲಿ ಮುಳುಗಿ ಹೋಗಿದೆ. ಆ ಲಕ್ಷ್ಮೀನಾರಾಯಣನ ಪ್ರತಿಮೆ ಗಳನ್ನು ಮುಳುಗುವ ಮೊದಲು ಅಲ್ಲಿಂದ ಸ್ಥಾನಪಲ್ಲಟಮಾಡಿ ಮರಿಯಮ್ಮನಹಳ್ಳಿ ಎಂಬ ಗ್ರಾಮದಲ್ಲಿ ದೇವಾಲಯವನ್ನು ಕಟ್ಟಿಸಿ ಪ್ರತಿಷ್ಠೆಯನ್ನು ಮಾಡಿದ್ದಾರೆ.

ಮೊಳಕಾಲುಮುರು ತಾಲೂಕಿನಲ್ಲಿ ಚಿಕ್ಕೇರಹಳ್ಳಿ ಎಂಬ ಒಂದು ಚಿಕ್ಕ ಗ್ರಾಮ ವಿದೆ. ಜನಮೇಜಯ ರಾಜನ ಕಾಲದಲ್ಲಿ ಪ್ರತಿಷ್ಠೆಗೊಂಡ ಆಂಜನೇಯನ ದೇವ ಸ್ಥಾನವು ಒಂದು ಅಲ್ಲಿದೆ. ನರಹರಿತೀರ್ಥರು ಅಲ್ಲಿಗೆ ದಯಮಾಡಿಸಿದಾಗ ಆ ಹನು ಮನ ಮೂರ್ತಿಯು ಹಾವಿನ ಹುತ್ತದಲ್ಲಿ ಹುದುಗಿ ಹೋಗಿದ್ದಿತು. ತನ್ನ ಪೀಠದ ಸ್ವಾಮಿಗಳೊಬ್ಬರು ಬಂದುದನ್ನು ಕಂಡು ಆ ಹನುಮಂತನು ನರಹರಿತೀರ್ಥರ ಕನಸಿ ನಲ್ಲಿ ಕಾಣಿಸಿಕೊಂಡು ತನ್ನನ್ನು ಹುತ್ತದಿಂದ ಎತ್ತಿ ಮೇಲೆ ತಂದು ಪ್ರತಿಷ್ಠೆಗೈಯ ಬೇಕೆಂದು ಸೂಚಿಸಿದ. ಅದರಂತೆ ಮಹಾ ಸ್ವಾಮಿಗಳು ಹಾವಿನ ಹುತ್ತದಲ್ಲಿ ಸರ್ಪ

ಭೂಷಣನಾಗಿ ಬಹುಕಾಲ ಶಯನಮಾಡಿದ ಮಾರುತಿಯನ್ನು ಮೇಲೆ ತಂದು ಗುಡಿ ಕಟ್ಟಿಸಿ ವಿಧಿಪೂರ್ವಕ ಪ್ರತಿಷ್ಠೆಗೈದರು. ಅಲ್ಲಿಯೂ ಈಗ ರಾಮನವಮಿಯಂದು ಜಾತ್ರೆಯಾಗುತ್ತದೆ. ಜನ ಕೂಡುತ್ತದೆ. ತೇರು ಎಳೆಯಲ್ಪಡುತ್ತದೆ.

ಈಗ ಮುಳುಗಡೆಯಾದ ನಾರಾಯಣದೇವರಕೆರೆ ಗ್ರಾಮದ ತುಸು ಅಂತರದ ಮೇಲೆ ಒಂದು ಹಾಳು ಬಿದ್ದ ಊರು ಇದ್ದಿತಂತೆ. ಅಲ್ಲಿ ಒಂದು ಶಿಲಾಸ್ತಂಭದ ಮೇಲೆ ನಾಗಬಂಧನದಲ್ಲಿ "ನರಹರಿಪುರ" ಎಂಬ ಅಕ್ಷರಗಳೂ, ಮೇಲೆ ಕೆಳಗೆ ಸೂರ್ಯ-ಚಂದ್ರರ ಗುರುತುಗಳೂ ಕಾಣುತ್ತಿದ್ದವು. ಆ ಶಿಲಾಸ್ತಂಭದ ಪಕ್ಕದ ಮತ್ತೊಂದು ಕಲ್ಲಿನ ಮೇಲೆ ಅಂತಹದೆ ನಾಗಬಂಧನ. ಅದರ ಮೇಲೆಯೂ ವಿಜಯನಗರದ ಅರಸರ ಏನೇನೋ ಶಾಸನ ಲಿಪಿಗಳು ಇದ್ದವಂತೆ.* ಇದರ ಮೇಲಿಂದ ವಿಜಯನಗರದ ರಾಜರು ನರಹರಿತೀರ್ಥರ ಹೆಸರಿನಿಂದ ಒಂದು ನಗರವನ್ನೆ ನಿರ್ಮಿಸಿ ಅವರ ಉತ್ತರಾಧಿಕಾರಿಗಳಿಗೆ ಉಂಬಳಿಯಾಗಿ ಕೊಟ್ಟಿರಬಹುದು ಎಂದು ಊಹಿಸಲು ಅವಕಾಶವಿದೆ.

ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ನರಹರಿತೀರ್ಥರಿಗೆ ವೇದಶಾಸ್ತ್ರಗಳಲ್ಲಿ ವಿಲಕ್ಷಣವಾದ ಪಾಂಡಿತ್ಯವಿದ್ದಿತು ಎಂದು ಹೇಳಿದರೆ ಸೂರ್ಯ ಕಿರಣಗಳಲ್ಲಿ ಬೆಳಕು ಬೀರುವ ಶಕ್ತಿ ಇದ್ದಿತು ಎಂದು ಹೇಳಿದಷ್ಟೇ ಪುನರುಕ್ತಿಯಾಗಬಹುದು.

ಇಡೀ ಜೀವನವನ್ನೆಲ್ಲ ಪ್ರಜಾ ಸಾಮಾನ್ಯರಿಗೆ ರಾಜಕೀಯ ಭೌಗೋಲಿಕ ಹಾಗೂ ಆಧ್ಯಾತ್ಮಿಕ ನೆಮ್ಮದಿ ಮತ್ತು ಸುಖ-ಶಾಂತಿಗಳನ್ನು ಕೊಡಲಿಕ್ಕಾಗಿ ಶ್ರಮಿಸಿದ ಶ್ರೀ ನರಹರಿತೀರ್ಥರಿಗೆ ವಿಶೇಷಾವಕಾಶವಿಲ್ಲದಿದ್ದರೂ ಅವರು ಅನೇಕ ಗ್ರಂಥಗಳನ್ನು ಬರೆದದ್ದು ಅತ್ಯಾಶ್ಚರ್ಯಕರವಾದ ವಿಷಯವಾಗಿದೆ.

ಈಗ ಅವರು ಬರೆದವೆಂದು ಉಪಲಬ್ಧವಾದ ಒಂದೊಂದು ಗ್ರಂಥವೂ ವೇದಾಂತ ಪ್ರಪಂಚದಲ್ಲಿ ಕೊಹಿನೂರ ರತ್ನದಂತೆ ಬೆಳಗುವಂತಹವಿರುತ್ತವೆ. ಗೀತಾ ಭಾಷ್ಯಕ್ಕೆ ಅವರು ಬರೆದ ಟೀಕೆಯು ಅಮೋಘವಾಗಿದೆ. ಆನಂದತೀರ್ಥರ ಯಮಕ ಭಾರತಕ್ಕೆ ಅವರು ಬರೆದ ಟೀಕೆಯು ಆಚಾರ್ಯರ ಹೃದಯಕ್ಕೆ ಕನ್ನಡಿ ಹಿಡಿಯುತ್ತದೆ.

---

* ಶ್ರೀ ಚಿಕ್ಕೇರೂರ ಗೋವಿಂದಾಚಾರ್ಯರ "ಶ್ರೀಮದಾನಂದ ತೀರ್ಥರ ಸಾಕ್ಷಾತ್ ಶಿಷ್ಯರಲ್ಲಿ ನಾಲ್ವರು" ಎಂಬ ಪುಸ್ತಿಕೆಯ ಪುಟ ೨೬.

ಶ್ರೀ ನರಹರಿತೀರ್ಥರು ಕನ್ನಡ ನಾಡಿಗೆ ನೀಡಿದ ಮುಖ್ಯ ಕೊಡುಗೆಯೆಂದರೆ ಅವರ ದೇವರ ನಾಮಗಳು. ಅವು ಈಗ ಎಲ್ಲವೂ ದೊರಕದಿದ್ದರೂ, ದೊರಕಿದಷ್ಟು ಮುಕ್ತಕಗಳಂತೆ ಮುತ್ತಿನಂತೆ ಅಮೂಲ್ಯವಾಗಿವೆ. ಭಕ್ತಿ ಭಾಗೀರಥಿಯನ್ನು ಮನೆ ಮನೆಗೆ, ಮನ–ಮನಕ್ಕೆ ತುಂಬಿ ತುಳುಕಿಸುವ ದಾಸ ಸಾಹಿತ್ಯಕ್ಕೆ ಆದ್ಯ ದೃಷ್ಟಾರರೆಂದರೆ ಶ್ರೀ ನರಹರಿತೀರ್ಥರೆಂದು ಹೇಳಬಹುದು.

ಇವರು ಸರ್ವಜ್ಞ ಸಿಂಹಾಸನವನ್ನು ಒಂಭತ್ತು ವರ್ಷವಾಳಿದರು. ಕಲಿಂಗ ರಾಜ್ಯದಲ್ಲಿಯೂ, ಕರ್ಣಾಟಕದಲ್ಲಿಯೂ, ಆಂಧ್ರ ದೇಶದಲ್ಲಿಯೂ ಅವರು ಅಸಂಖ್ಯ ಆಸ್ತಿಕರಿಗೆ ಮಾಧ್ವ ದೀಕ್ಷೆಯಿತ್ತು ವೈಷ್ಣವರನ್ನಾಗಿ ಮಾಡಿದರು. ಕೊನೆಗೆ ಅವರು ಹಂಪಿಯ ಚಕ್ರತೀರ್ಥದ ಬಳಿಯಲ್ಲಿಯೇ ವೃಂದಾವನಸ್ಥರಾದರು. ತಾವು ವೃಂದಾವನಸ್ಥರಾಗುವಾಗ ಅವರು ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರೇ ಆದ ಶ್ರೀ ಮಾಧವತೀರ್ಥರಿಗೆ ಸರ್ವಜ್ಞ ಸಿಂಹಾಸನವನ್ನು ಒಪ್ಪಿಸಿದರು.

ಸಸೀತಾ ಮೂಲರಾಮಾರ್ಚಾ ಕೋಶೇಗಜ ಪತೇಃ ಸ್ಥಿತಾ ।
ಯೇನಾನೀತಾ ನಮಸ್ತಸ್ಮೈ ಶ್ರೀಮನ್ನೃಹರಿಭಿಕ್ಷವೇ ॥



## ವೇದ ಭಾಷ್ಯಕಾರರಾದ

# ಶ್ರೀ ಮಾಧವ ತೀರ್ಥರು

ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ಶ್ರೀ ಮಾಧವ ತೀರ್ಥರು ಒಬ್ಬರು. ಈ ವಿಷಯದಲ್ಲಿ ಘಟ್ಟದ ಮೇಲಿನ ಎಲ್ಲ ಮಠಗಳಲ್ಲಿಯೂ ಏಕಾಭಿಪ್ರಾಯವಿದೆ. ಮತ್ತು ಶ್ರೀ ಪೂರ್ಣಬೋಧ ಗುರುವಂಶ ಕಥಾ ಕಲ್ಪತರು ಎಂಬ ಗ್ರಂಥದಲ್ಲಿ

" ತಸ್ಮೈ ದತ್ವಾ ಸ ಸನ್ಯಾಸಂ ಪೂರ್ಣಪ್ರಜ್ಞೋऽನು ಕಂಪಯಾ ।
ದದೌ ಮಾಧವ ತೀರ್ಥೋಯಮಿತಿ ನಾಮ ಸಭೂತಲೇ ॥

ಸನ್ಯಾಸಾಶ್ರಮವನ್ನು ಕೊಡಬೇಕು ಎಂದು ಬಿನ್ನಹ ಮಾಡಿಕೊಂಡ ಉತ್ತರ ದೇಶದ ಯಜುರ್ವೇದಿ ಬ್ರಾಹ್ಮಣರಾದ ಶ್ರೀ ವಿಷ್ಣು ಶಾಸ್ತ್ರಿಗಳಿಗೆ ಶ್ರೀ ಮಧ್ವಾಚಾರ್ಯರು ಅಂತಃಕರಣದಿಂದ ಯತ್ಯಾಶ್ರಮವನ್ನು ಇತ್ತು, ಮಾಧವ ತೀರ್ಥಯೆಂಬ ಹೆಸರನ್ನು ಇಟ್ಟರು.

ಇದರ ಮೇಲಿಂದ ಮಾಧವ ತೀರ್ಥರಿಗೆ ಸಾಕ್ಷಾತ್ ಶ್ರೀ ಮಧ್ವಾಚಾರ್ಯರಿಂದಲೇ ಆಶ್ರಮವಾದದ್ದು ಎಂದು ತಿಳಿದು ಬರುತ್ತದೆ. ಇದರಂತೆ ಗುರುಚರ್ಯ ಗ್ರಂಥದಲ್ಲಿ,

"ತತಃ ಕರ್ನಾಟಕಂ ಮೇತಿ ಶಬ್ದಿತಂ ಕೃಷ್ಣ ಶಾಸ್ತ್ರಿಣಂ ।
ಸನ್ಯಸ್ಯ ಸೌಖ್ಯತೀರ್ಥಸ್ತು ಬ್ರಹ್ಮಚರ್ಯಸ್ಥಿತಂ ತದಾ ।
ಶ್ರೀಮನ್ ಮಾಧವ ತೀರ್ಥೇತಿ .... .... .... .... "

ಕರ್ನಾಟಕದವರಾದ ಕೃಷ್ಣಶಾಸ್ತ್ರಿಯೆಂಬ ಹೆಸರಿನ ಬ್ರಾಹ್ಮಣರಿಗೆ ಸನ್ಯಾಸ ಆಶ್ರಮವನ್ನಿತ್ತು ಪೂರ್ಣಪ್ರಜ್ಞರು ಮಾಧವ ತೀರ್ಥ ಎಂಬ ಹೆಸರನ್ನು ಇಟ್ಟರು. ಎಂದು ಸ್ಪಷ್ಟವಾಗಿ ವರ್ಣಿಸಿದ್ದಾರೆ.

ಆದುದರಿಂದಲೇ ಮಧ್ವವಿಜಯದಲ್ಲಿ—

"ಅನಂತ ಬೋಧಸ್ಯಾನೇಕೇ ಯತೀಂದ್ರಾ ಬಹುದೇಶಜಾಃ ॥ "

"ಮಧ್ವಾಚಾರ್ಯರಿಗೆ ಬೇರೆ–ಬೇರೆ ದೇಶಗಳ ಬಹು ಜನ ಯತಿ ಶಿಷ್ಯರು ಇದ್ದರು." ಎಂದು ತಿಳಿಸಿದ್ದಾರೆ. ಮಧ್ವ ವಿಜಯದಲ್ಲಿಯ ಈ ಪಂಡಿತಾಚಾರ್ಯರ

ವಚನವು ಗುರುಚರ್ಯೆ ಮತ್ತು ಗುರುವಂಶ ಕಲ್ಪತರು ಅಭಿಪ್ರಾಯವನ್ನು ಪುತ್ತು ಘಟ್ಟದ ಮೇಲಿನ ಎಲ್ಲ ಮಠಗಳಲ್ಲಿಯೂ ಮತ್ತು ಶಿಷ್ಯರಲ್ಲಿಯೂ ಪ್ರಚಲಿತವಿದ್ದ ಐತಿಹ್ಯವನ್ನು ಪುಷ್ಟೀಕರಿಸುತ್ತದೆ.

ಉತ್ತರ ಕರ್ನಾಟಕದವರಾದ ಶ್ರೀ ವಿಷ್ಣು ಶಾಸ್ತ್ರಿಗಳು ಬ್ರಹ್ಮಚರ್ಯ ಆಶ್ರಮ ದಿಂದಲೆ ಶ್ರೀಮದಾನಂದತೀರ್ಥರಲ್ಲಿ ಯತ್ಯಾಶ್ರಮವನ್ನು ಸ್ವೀಕರಿಸಿದರು. ಇವರು ಕ್ರಿ. ಶ. ೧೩೩೩ ರಲ್ಲಿ ಶ್ರೀ ನರಹರಿತೀರ್ಥರಿಂದ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಕ್ತರಾಗಿ ಹದಿನೇಳು ವರ್ಷಗಳ ವರೆಗೆ ದ್ವೈತಸಿದ್ಧಾಂತದ ಪ್ರಸಾರಕಾರ್ಯ ವನ್ನು ಮಾಡಿದರು. ಇಂದಿನ ಮಿತಿಗೆ ಶ್ರೀ ಮಾಧವತೀರ್ಥರದೆಂದು ಹೇಳುವ ಒಂದೂ ವೇದಾಂತಗ್ರಂಥ ದೊರೆತಿಲ್ಲ. ತಾವತಃ ಅವರು ಗ್ರಂಥಗಳನ್ನೇ ಬರೆಯಲಿಲ್ಲ ಎಂದು ಹೇಳುವದು ಅಥವಾ ಗ್ರಂಥ ಬರೆಯದಿದ್ದುದರಿಂದ ಅವರು ಪಂಡಿತರಾಗಿರಲಿಲ್ಲ ಅಥವಾ ಜ್ಞಾನ ಪ್ರಪಂಚದ ಕಡೆಗೆ ಅವರಿಗೆ ಒಲವು ಅಥವಾ ಅಭಿರುಚಿ ಇರಲಿಲ್ಲ* ಎಂದು ಹೇಳುವದು ತುಂಬ ಸಾಹಸದ ಮಾತಾದೀತು.

ಶ್ರೀ ಮಾಧವತೀರ್ಥರು ನಾಕು ವೇದಗಳಿಗೂ ಭಾಷ್ಯವನ್ನು ಬರೆದರೆಂದು ಪ್ರತೀತಿ ಇದೆ. ವೇದಚತುಷ್ಟಯಕ್ಕೆ ಭಾಷ್ಯ ಬರೆಯುವದೆಂದರೆ ಸಾಮಾನ್ಯ ಕೆಲಸವಲ್ಲ. ಸ್ವಲ್ಪ ಸಮಯದಲ್ಲಿ ಆಗತಕ್ಕ ಕಾರ್ಯವೂ ಅಲ್ಲ. ಅವರು ಆಚಾರ್ಯರ ಸಾಕ್ಷಾತ್ ಶಿಷ್ಯರಾದುದರಿಂದ ಅವರ ಬಾಯಿಂದಲೇ ಋಗ್ಭಾಷ್ಯ ಮುಂತಾದ ಗ್ರಂಥಗಳನ್ನು ಚನ್ನಾಗಿ ಅಧ್ಯಯನ ಮಾಡಿ ವೇದ ಮಂತ್ರಗಳನ್ನು ಅರ್ಥೈಸಿಸುವ ಆಚಾರ್ಯರ ವಾಕ್ಯದ ವೈಖರಿಯನ್ನು ಅವಗತಮಾಡಿಕೊಂಡು, ಆ ದಿಶೆಯಲ್ಲಿ ಸಂಪೂರ್ಣ ವೇದ ಗಳಿಗಲ್ಲ ಮಧ್ವಾನುಸಾರಿ ಭಾಷ್ಯವನ್ನು ಬರೆದದ್ದು ತೊಂಬತ್ತೊಂಭತ್ತು ಪಾಲು ಸಂಭಾ ವಿತವಿದೆ.

ಅದೇ ಕಾಲದಲ್ಲಿ ಅವರ ಸಮಕಾಲೀನರಾದ ವಿದ್ಯಾರಣ್ಯರು ಹುಕ್ಕ–ಬುಕ್ಕರ ಆಶ್ರಯದಿಂದ ವೇದಗಳಿಗೆ ವ್ಯಾಖ್ಯಾನವನ್ನು ಬರೆಯಬೇಕೆಂದು ಯೋಚಿಸಿದ್ದರು. ಅದ ಕ್ಕಿಂತ ಮೊದಲು ಶ್ರೀ ಮಧ್ವಾಚಾರ್ಯರು ನಲವತ್ತು ಸೂಕ್ತಗಳಿಗೆ ಬರೆದ ವೇದ ಭಾಷ್ಯವನ್ನು ಅನುಸರಿಸಿ ಯಾರಾದರೂ ಒಬ್ಬರು ಮಾಧ್ವರು ವೇದವ್ಯಾಖ್ಯಾನ ಮಾಡುವದು ಅತ್ಯಾವಶ್ಯಕವಾಗಿದ್ದಿತು. ಇಲ್ಲದಿದ್ದರೆ ಶ್ರೀ ಮಧ್ವಾಚಾರ್ಯರಿಗೆ ಮುಂದಿನ ವೇದಸೂಕ್ತಗಳಿಗೆ ಅರ್ಥ ಬರಿಯಲಿಕ್ಕಾಗದೆ ಕೈ ಬಿಟ್ಟರೆಂದು ಆಚಾರ್ಯರ ಮೇಲೆ ಅಪಶಬ್ದವು ಬರುವ ಸಂಭವವು ಇದ್ದಿತು.

---

*He had probably no literary leanings— Shri B. N. K. Sharma. History of the Dvaita School of Vedanta and its Literature Page No. 300

ಇಂಥ ಕುವಾದಿಗಳ ಬಾಯಿಯನ್ನು ಮುಚ್ಚಿಸಲಿಕ್ಕಾಗಿ ಶ್ರೀ ಮಾಧವತೀರ್ಥರು ಶ್ರೀ ಮಧ್ವಾಚಾರ್ಯರು ವೇದಾರ್ಥಕರಣದಲ್ಲಿ ತೋರಿದ ದಿಗ್ದರ್ಶನದ ಪದ್ಧತಿಯಲ್ಲಿ ವೇದಭಾಷ್ಯವನ್ನು ಬರೆದು ತೋರಿಸಿದರು. ಅಲ್ಲಿ ಶ್ರೀ ಸಾಯಣ ಮಾಧವರು ವೇದ ಭಾಷ್ಯ ಬರೆಯಬೇಕೆಂದು ವಿಚಾರಿಸಿದರೆ ಇಲ್ಲಿ ಸರ್ವಜ್ಞ ಶಿಷ್ಯರಾದ ಮಾಧವರು ವೇದಭಾಷ್ಯವನ್ನು ಬರೆದೇ ತೋರಿಸಿದರು.

ಶ್ರೀ ಮಾಧವತೀರ್ಥರು ವೇದಚತುಷ್ಟಯಕ್ಕೆ ಭಾಷ್ಯ ಬರೆದು ಅದನ್ನು ವಿಜಯ ನಗರಕ್ಕೆ ಕೊಟ್ಟು ಕಳಿಸಿದರು. ಅದರ ಜೊತೆಗೆ ಶ್ರೀಮನ್ ಮಧ್ವಾಚಾರ್ಯರು ಅರ್ಥಕ್ಕೆ ಬಿಟ್ಟ ಋಗ್ಭಾಷ್ಯವನ್ನು ಟೀಕಿಸುವ ಜನರಿಗೆ ಉತ್ತರರೂಪವಾಗಿ ಈ ಕೆಳ ಗಿನ ಪದ್ಯಗಳನ್ನು ಬರೆದು ಕಳಿಸಿದರಂತೆ

"ರೇ ರೇ, ಮಧ್ವಮುನಿ ಪ್ರಣೀತ ನಿಗಮವ್ಯಾಖ್ಯಾನ ಸತ್ಪದ್ಧತಿಂ ।
ಸಂಪ್ರಿತ್ಯೈವ ಸಮಸ್ತವೇದ ವಿವೃತಿಂ ಕೃತ್ವಾದ್ಯ ಸಂದರ್ಶಿತಂ ॥
ಅಲ್ಪೇನಾಪಿ ಮಯಾ ಪರಂ ಕೃತಮಿದಂ ಮಧ್ವಾಂಘ್ರಿರೇಣ್ವಾಶ್ರಯಾತ್ ।
ವಕ್ತವ್ಯಂಕಿಮುಹೋ ಸಮೀರಣ ಮಹಾಚಾರ್ಯಾಃ ಸಮರ್ಥಾ ಇತಿ ॥
ವದಸಿ ವದನ ಸತ್ವಾದ್ದೂಷಣಂ ಮಧ್ವಭಾನೌ ।
ಜ್ವಲತಿ ನಿಜ ಜನಾಂಸ್ತ್ವಂ ಮೋಹಯನ್ ಘೂಕಬುದ್ಧೇ ॥"

"ಎಲೋ ನಿಂದಕನೆ, ನಮ್ಮ ಮಧ್ವಮುನಿಗಳು ರಚಿಸಿದ ವೇದವ್ಯಾಖ್ಯಾನದ ಪದ್ಧತಿಯನ್ನು ಅನುಸರಿಸಿ ನಾನು ನಾಲ್ಕು ವೇದಗಳಿಗೂ ಭಾಷ್ಯವನ್ನು ಬರೆದು ನಿಮಗೆ ತೋರಿಸಿದ್ದೇನೆ. ಅಲ್ಪನಾದ ನನ್ನಂತಹ ಪಾಮರನೂ ಕೂಡ ಶ್ರೀ ಮಧ್ವ ಗುರುಗಳ ಪಾದವನ್ನು ಆಶ್ರಯಿಸಿ ಸರ್ವ ವೇದಗಳ ಸುಂದರವಾದ ವ್ಯಾಖ್ಯಾನವನ್ನು ಮಾಡಿದ ಬಳಿಕ ಸ್ವಯಂ ಶ್ರೀ ಮಧ್ವಾಚಾರ್ಯರು ಇಂಥ ವೇದ ಭಾಷ್ಯಗಳನ್ನು ಸಹಜವಾಗಿ ಮಾಡಬಲ್ಲರು ಎಂಬ ವಿಷಯದಲ್ಲಿ ಸಂದೇಹವಿಲ್ಲ. ಗೂಗೆಯ ಬುದ್ಧಿಯ ನೀನು ಬೆಳಗುತ್ತಿರುವ ಆ ಮಧ್ವಸೂರ್ಯನ ಮೇಲೆ ಮೋಹದಿಂದ ದೋಷಾರೋಪ ವನ್ನು ಮಾಡುವಿ. ಬಾಯಿಯಿದೆ ಎಂದು ನೀನು ಬೇಕಾದ ಮಾತನ್ನು ಹೇಳುತ್ತ ಲಿರುವೆ. ನಮ್ಮ ಈ ವೇದ ವಿವೃತ್ತಿಯನ್ನು ಕಂಡಬಳಿಕಾದರೂ ನಿನಗೆ ನಮ್ಮ ಗುರು ಗಳ ಯೋಗ್ಯತೆಯು ಗೊತ್ತಾಗಲಿ ಎಂದು ಇದನ್ನು ನಿನ್ನ ಬಳಿಗೆ ಕಳಿಸಿದ್ದೇನೆ."†

---

† ಬಿ. ಗೋವಿಂದಾಚಾರ್ಯರ ಪ್ರಸ್ತಾವನೆ ಪುಟ ೪.

ಶ್ರೀ ಮಾಧವ ತೀರ್ಥರು ವೇದ ಭಾಷ್ಯದಂತಹ ಘನತರ ಕಾರ್ಯವನ್ನು ಕೈಕೊಂಡಿದ್ದರಿಂದಲೆ ಅವರಿಗೆ ಬೇರೆ ವೇದಾಂತ ಗ್ರಂಥಗಳನ್ನು ಬರೆಯಲಿಕ್ಕಾಗಲಿಲ್ಲ. ಅವರ ಸಮಯವನ್ನೆಲ್ಲ ಗುರುತರವಾದ ಈ ವೇದ ವ್ಯಾಖ್ಯಾನ ಕಾರ್ಯವೇ ತೆಗೆದುಕೊಂಡಿರಬೇಕು. ಶ್ರೀ ವಿದ್ಯಾರಣ್ಯರಂತೆ ಅವರಿಗೆ ರಾಜಾಶ್ರಯವಿರಲಿಲ್ಲ. ಅನೇಕ ಜನ ಪಂಡಿತರನ್ನು ನೇಮಿಸಿಕೊಂಡು ಅವರ ಕಡೆಯಿಂದ ಬರೆಯಿಸುವ ಸೌಕರ್ಯವಿರಲಿಲ್ಲ. ಮತ್ತು ಅವರ ಕಾಲದಲ್ಲಿ ಈ ದಕ್ಷಿಣ ಭಾಗದ ರಾಜಕೀಯ ಪರಿಸ್ಥಿತಿಯು ನೆಮ್ಮದಿಯಂದ ಒಂದೆಡೆ ಬರೆಯುತ್ತ ಕೂಡುವಷ್ಟು ಸುಭದ್ರವಾಗಿರಲಿಲ್ಲ.

ಇಷ್ಟೆಲ್ಲ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಒಬ್ಬಂಟಿಗರಾಗಿ, ವಿಚಿತ್ರ ಚಾತುರ್ಯದಿಂದ, ತಮ್ಮ ವೇದವೇದಾಂತ ವೈದುಷ್ಯದಿಂದ ಮತ್ತು ತಮ್ಮ ಗುರುಗಳ ಆಶೀರ್ವಾದದಿಂದ, ಇಂಥ ಪ್ರಚಂಡ ಕಾರ್ಯವನ್ನು ಮಾಡಿ ಮುಗಿಸಿದ ಮಾಧವತೀರ್ಥರ ಸಾಹಸ, ಪಾಂಡಿತ್ಯ, ಕಾರ್ಯದೀಕ್ಷೆಗಳು ಅತ್ಯಂತ ಪ್ರಶಂಸನೀಯವಾಗಿವೆ. ಆದರೆ ಅಂಥ ದಿವ್ಯ ಗ್ರಂಥವು ಈಗ ನಮಗೆ ದೊರಕದಿದ್ದುದು ನಮ್ಮ ಸಮಾಜದ ದುರ್ದೈವವಾಗಿದೆ.*

ಅವರ ಈ ಗ್ರಂಥದ ಗರಿಮೆಯನ್ನು ನೋಡಿ, ಮಾತ್ಸರ್ಯದಿಂದಲೋ ಏನೊ ಅವರಿಗೆ ವಿಜಯ ನಗರದ ಸಾಮ್ರಾಜ್ಯದಲ್ಲಿ ಕುಹಕಿಗಳಿಂದ ಬಹಳ ಉಪದ್ರವವಾಯಿತು. ವಿದ್ಯಾರಣ್ಯರ ಉಚ್ಛ್ರಾಯ ಕಾಲದಲ್ಲಿ ದ್ವೈತಿಗಳಿಗೂ ವಿಶಿಷ್ಟಾದ್ವೈತಿಗಳಿಗೂ ಉಳಿದ ವೈಷ್ಣವರಿಗೂ ಆದ ಉಪಟಳವು ಅಷ್ಟಿಷ್ಟಲ್ಲ. † ಆದುದ

---

* ಈಗಲ್ಲದಿದ್ದರೂ ಮುಂದೆ ಎಂದಾದರೊಂದು ದಿನ ಅದು ಸಿಗಬಹುದು. ಈಗ ದೊರಕದಿದ್ದ ಮಾತ್ರಕ್ಕೆ ಅದು ಇರಲಿಲ್ಲವೆಂದು ಹೇಳಲಿಕ್ಕಾಗುವದಿಲ್ಲ. ಇತ್ತೀಚೆಗೆ ನರಹರಿ ತೀರ್ಥರ, ಪದ್ಮನಾಭ ತೀರ್ಥರ ಮುಂತಾದವರ ಅನೇಕ ಗ್ರಂಥಗಳು ದೊರಕಿವೆ. ಸ್ವಯಂ ಆಚಾರ್ಯರ ಎರಡು ಗ್ರಂಥಗಳು ಉಡುಪಿಯ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಹೊಸದಾಗಿ ಶೋಧ ಮಾಡಿದ್ದಾರೆ.

† It is evidently this great undertaking of the Advaita School and the atmosphere engendered by it, that made both Akshobhya Thirtha and Vedanta Desika leave the neighbourhood of Vijayanagar, and seek more congenial surroundings where their individuality and convictions would not be stifled. Vedanta Desika expressed this feeling, when in replying to an invitation from his old friend Vidyaranya who asked him to come and stay at Vijayanagar, he wrote :-

ಕ್ರೋಶೇ ಕೋಶ ಶತಾಂತ .... .... .... ....

INTRODUCTION. To ಶ್ರೀ ವ್ಯಾಸಯೋಗಿ ಚರಿತಂ.

By ಸೋಮನಾಥ ಕವಿ of B. Venkobarao Page no. xxxvii.

ರಿಂದಲೇ ವೇದಾಂತ ದೇಶಿಕರು ಅಲ್ಲಿಯ ವೈಷ್ಣವ ವಿದ್ರೋಹಕ್ಕೆ ಬೇಸತ್ತು, ದೂರ ಹೋಗಿ ಪತ್ರ ಬರದು ಕಳಿಸಿದ್ದು ವಿಶ್ವ ವಿಶ್ರುತವಿದೆ.

"ಕ್ಷೋಣೀಕೋಣ ಶತಾಂಶ ಪಾಲನಕಲಾ ದುರ್ವಾರಗರ್ವಾನಲ ।
ಕ್ಷುಭ್ಯತ್‌ಕ್ಷುದ್ರ ನರೇಂದ್ರ ಚಾಟು ರಚನಾ ಧನ್ಯಾನ್ನ ಮನ್ಯಾಮಹೇ ॥
ದೇವಂ ಸೇವಿತುಮೇವ ನಿಶ್ಚಿನುಮಹೇ ಯೋಸೌ ದಯಾಲುಃ ಪುರಾ ।
ಧಾನಾ ಮುಷ್ಟಿಮುಚೇ ಕುಚೇಲ ಮುನಯೇ ದತ್ತೇ ಸ್ಮ ವಿತ್ತೇಶತಾಮ್ ॥"

" ಭೂಮಂಡದ ಯಾವುದೋ ಒಂದು ಮೂಲೆಯಲ್ಲಿ ನೂರರಲ್ಲಿ ಒಂದು ಅಂಶದಷ್ಟು ಮಾತ್ರ ಸ್ಥಳವನ್ನು ಆಳುವದರಿಂದಲೇ ಗರ್ವದಿಂದ ಉಬ್ಬಿ ಕೊಬ್ಬಿಹೋದ ಕ್ಷುದ್ರ ರಾಜರನ್ನು ಮೆಚ್ಚಿಸಲಿಕ್ಕಾಗಿ ಚಾಟು ರಚನೆಗಳನ್ನು ಮಾಡಿ, ಅವರನ್ನು ಹೊಗಳಿ ಹಾಡಿ ಅನುಸರಣ ಮಾಡುವ ಅಲ್ಪ ಜನರನ್ನು ನಾವು ಧನ್ಯರೆಂದು ತಿಳಿಯುವದಿಲ್ಲ. ಮುಷ್ಟಿ ಅವಲಕ್ಕಿಯನ್ನು ಕೊಟ್ಟ ಕುಚೇಲನಿಗೆ ಕುಬೇರನ ಐಶ್ವರ್ಯವನ್ನು ದಯಪಾಲಿಸಿದ ಆ ಹರಿಯನ್ನೇ ಸೇವೆ ಮಾಡುತ್ತೇವೆ."

ಇವರಂತೆ ಶ್ರೀ ಮಾಧವ ತೀರ್ಥರೂ ತಮ್ಮ ಗುರುಗಳು ಪರಮ ಗುರುಗಳು ವಾಸಿಸಿದ ತುಂಗಾ ತೀರದ ಹಂಪೀ ಪರಿಸರವನ್ನು ಬಿಟ್ಟು ಮಹಾರಾಷ್ಟ್ರದ ಸೀಮೆಗೆ ಭೀಮಾ ತೀರಕ್ಕೆ ಪಯಣ ಬೆಳೆಸಿದರು. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ದೇಶಗಳಲ್ಲೆಲ್ಲ ಅವರು ದಿಗ್‌ವಿಜಯಮಾಡಿ ಮಧ್ವ ಮತವನ್ನು ಪ್ರಸಾರ ಮಾಡಿದರು

ಶ್ರೀ ಮಾಧವ ತೀರ್ಥರ ಸಹಾಧ್ಯಾಯಿಗಳಾದ ಶ್ರೀ ಪದ್ಮನಾಭ ತೀರ್ಥರು ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಹಾಗೂ ಶ್ರೀ ನರಹರಿ ತೀರ್ಥರು ಆಚಾರ್ಯರ ಸೂತ್ರಪ್ರಸ್ಥಾನ, ಗೀತಾ ಪ್ರಸ್ಥಾನಗಳ ಮೇಲೆ ಟೀಕೆಗಳನ್ನು ಬರೆದದ್ದರಿಂದ ಮಾಧವ ತೀರ್ಥರು ವೇದ ಪ್ರಸ್ಥಾನವನ್ನು ಎತ್ತಿಕೊಂಡು ಗುರೂಕ್ತ ದಿಶೆಯಲ್ಲಿ ವೇದಭಾಷ್ಯವನ್ನು ಬರೆದರು. ಅವರು ಅದನ್ನು ವಿಜಯ ನಗರಕ್ಕೆ ಕಳಿಸಿದ ಬಳಿಕವೇ ಕದಾಚಿತ್ ವಿದ್ಯಾರಣ್ಯರು ತಾವೂ ಅದನ್ನು ನೋಡಿ ಅಂಥ ವೇದ ಭಾಷ್ಯವನ್ನು ಬರೆಯಲು ಉಪಕ್ರಮಿಸಿರಬಹುದು. ರಾಜಾಶ್ರಯವಿದ್ದುದರಿಂದ ಮತ್ತು ಅನುಯಾಯಿಗಳ ಬಾಹುಲ್ಯದಿಂದ ಆವರ ವೇದ ಭಾಷ್ಯವು ಮುಂದೆ ಬಂದು ಮಾಧವ ತೀರ್ಥರ ವೇದವ್ಯಾಖ್ಯಾನವು ಜನರ ದೃಷ್ಟಿಯಿಂದ ಮರೆಯಾಗಿರಲಿಕ್ಕೆ ಸಾಕು.

ಶ್ರೀ ಮಾಧವ ತೀರ್ಥರು ಉದ್ದಾಮ ವಿದ್ವಾಂಸರೂ ಪರವಾದಿ ಖಂಡನವನ್ನು ನಿರ್ಭಯವಾಗಿ ಮಾಡುವಷ್ಟು ಪ್ರಚಂಡ ಪಂಡಿತರೂ ಆಗಿದ್ದರೆಂಬುವದು ಆವರ ಚರಮ ಶ್ಲೋಕದಿಂದ ಗೊತ್ತಾಗುತ್ತದೆ.

ಸಾಧಿತಾಖಿಲ ಸತ್ತತ್ವಂ ಬಾಧಿತಾಖಿಲ ದುರ್ಮತಂ ।
ಬೋಧಿತಾಖಿಲ ಸನ್ಮಾರ್ಗಂ ಮಾಧವಾಖ್ಯ ಯತಿಂ ಭಜೆ ॥

ಇದರ ಮೇಲಿಂದ ಶ್ರೀ ಮಾಧವ ತೀರ್ಥರು ದುರ್ಮತಗಳನ್ನೆಲ್ಲ ಖಂಡಿಸಿ, ಮಧ್ವ ಮತವನ್ನು ಬೋಧಿಸಿ, ವೈಷ್ಣವ ಮತದ ವಿಜಯ ಪತಾಕೆಯನ್ನು ಎಲ್ಲ ಕಡೆಗೂ ಮೆರೆಸಿದರೆಂಬುವದು ಸ್ಪಷ್ಟವಾಗುತ್ತದೆ.

ಶ್ರೀ ಮಾಧವ ತೀರ್ಥರು ಧರ್ಮ ಶಾಸ್ತ್ರದ ಮೇಲೆಯೂ ಒಂದು ಅಧಿಕೃತ ಗ್ರಂಥವನ್ನು ಬರೆದಿದ್ದರೆಂದು ಐತಿಹ್ಯವಿದೆ. ಅದು ಈಗ ಉಪಲಬ್ಧವಿಲ್ಲ.

ಹಂಪಿ–ಹೊಸಪೇಟೆಯ ಸುತ್ತುಮುತ್ತು ಮತ್ತು ಕನ್ನಡ ಒಳನಾಡಿನಲ್ಲಿಯೂ ಆಂಧ್ರ ದೇಶದಲ್ಲಿಯೂ, ತುಳು ನಾಡಿನಲ್ಲಿಯೂ, ಹಾಗೂ ಕಳಿಂಗ, ಓರಿಸಾ ಮುಂತಾದ ನಾಡುಗಳಲ್ಲಿಯೂ ಶ್ರೀಮದಾಚಾರ್ಯರಿಂದ ಹಾಗೂ ಶ್ರೀ ಪದ್ಮನಾಭ ತೀರ್ಥ, ಶ್ರೀ ನರಹರಿ ತೀರ್ಥರಿಂದ ಮಧ್ವ ಮತದ ಸಾಕಷ್ಟು ಪ್ರಚಾರವಾಗಿದ್ದಿತು. ಆದರೆ ಕನ್ನಡದ ಗಡಿ ಸೀಮೆಗಳಲ್ಲಿಯೂ, ಮಹಾರಾಷ್ಟ್ರದಲ್ಲಿಯೂ ಮಧ್ವ ಮತವನ್ನು ಪ್ರಸಾರ ಮಾಡುವದಕ್ಕಾಗಿ ಶ್ರೀ ಮಾಧವ ತೀರ್ಥರು ಭೀಮಾ ತೀರಕ್ಕೆ ಸಂಚಾರ ಬೆಳೆಸಿದರು.

ಶ್ರೀ ಪಾಂಡುರಂಗನ ಕ್ಷೇತ್ರವಾದ ಪಂಢರಪುರವು ಎಂದಿನಿಂದಲೂ ವೈಷ್ಣವ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಆದರೆ ಅಲ್ಲಿಯೂ ಅದ್ವೈತ ಮತದ ಅಧಿಷ್ಠಾನವೇ ಹೆಚ್ಚಾದುದನ್ನು ಕಂಡು ಮಾಧವ ತೀರ್ಥರು ಆ ಕಡೆಗಳಲ್ಲೆಲ್ಲ ಬಂದು, ಪ್ರತಿವಾದಿಗಳನ್ನು ಗೆದ್ದು, ಅದ್ವೈತ ಮತವನ್ನು ಖಂಡಿಸಿ, ವೈಷ್ಣವ ತತ್ವಗಳನ್ನು ಪ್ರಚುರಪಡಿಸಿದರು.

ಹಾಗೆಯೇ ಸಂಚಾರ ಮಾಡುತ್ತ ಭೀಮಾತೀರದ ಮಣೂರ ಗ್ರಾಮಕ್ಕೆ ದಯಮಾಡಿಸಿದರು. ಅಲ್ಲಿ ಧ್ರುವರಾಜನು ಪ್ರತಿಷ್ಠಿಸಿ ಪೂಜೆಗೈದ ಕೇಶವದೇವರ ದೇವಾಲಯವಿದ್ದದ್ದು ಶ್ರೀಗಳವರಿಗೆ ತಿಳಿದುಬಂದಿತು. ಆದುದರಿಂದ ಅವರು ಭಕ್ತಶ್ರೇಷ್ಠರಾದ ಧ್ರುವನಿಂದ ಅರ್ಚಿತವಾದ ಆ ಕೇಶವ ದೇವರ ದರ್ಶನಕ್ಕಾಗಿ ಅಲ್ಲಿಗೆ ಬಂದರು.

ಮಣೂರ ಗ್ರಾಮದಲ್ಲಿ ಪ್ರಾಚೀನ ಕಾಲದಿಂದ ಒಂದು ವಿಶ್ವ–ವಿದ್ಯಾಲಯವು ನಡೆಯುತ್ತಲಿತ್ತು. ಅದು ಈಗ ಜೈನರ ವಶದಲ್ಲಿ ಹೋಗಿ ತೀರ ದುರ್ದೆಶೆಗೆ ಈಡಾಗಿತ್ತು. ಮತ್ತು ಆ ಕಾಲದಲ್ಲಿ ಆ ವಿಶ್ವವಿದ್ಯಾಲಯದ ಉಪಕುಲಪತಿಯಾದ ಪದ್ಮರಾಜ ಪಂಡಿತನೆಂಬ ಜೈನ ಪಂಡಿತನು ವಿಜಯನಗರ ರಾಜಾಶ್ರಯ ದೊರೆತಿದ್ದರಿಂದ ಮಣೂರನ್ನು ಬಿಟ್ಟು ಹೋಗಿಬಿಟ್ಟಿದ್ದನು.

ಶ್ರೀ ಮಾಧವತೀರ್ಥರ ವೇದ ವಿದ್ವತ್ತೆ, ಮತ್ತು ಸ್ವಾಧ್ಯಾಯ ತತ್ಪರತೆಗಳನ್ನು ಕಂಡ ಆ ಗ್ರಾಮದ ಪ್ರಮುಖರೆಲ್ಲರೂ ಶ್ರೀಗಳವರ ಹತ್ತಿರ ಬಂದು ದಂಡವತ್ ಪ್ರಣಾಮಗಳನ್ನು ಮಾಡಿ ಕೇಳಿಕೊಂಡರು—

"ಪರಮಪೂಜ್ಯರೇ ! ನಮ್ಮ ಊರಿನ ಈ ವಿಶ್ವವಿದ್ಯಾಲಯಕ್ಕೆ ಇನ್ನು ಮೇಲೆ ತಾವೇ ಕುಲಪತಿಗಳಾಗಿ ನಡೆಯಿಸಬೇಕು." ಮಾಧವತೀರ್ಥರಿಗೆ ಆ ನದೀತಟಾಕ, ಕೇಶವ ಸನ್ನಿಧಾನ, ಮತ್ತು ವೇದಶಾಸ್ತ್ರಗಳ ಅಧ್ಯಾಪನ ಕಾರ್ಯವನ್ನೂ ಮುಂದು ವರಿಸಲು ಅತ್ಯಂತ ಅನುಕೂಲವಾದ ವಿಶ್ವವಿದ್ಯಾಲಯದಂಥ ಮಹಾ ಸಂಸ್ಥೆ, ಮೇಲೆ ವಿವಿಕ್ತ ವಾತಾವರಣ ಇದನ್ನೆಲ್ಲ ಕಂಡು ಇದನ್ನೇ ತಮ್ಮ ಜ್ಞಾನ ಪ್ರಸಾರದ ಕೇಂದ್ರ ವನ್ನು ಮಾಡಿಕೊಳ್ಳವದು ಒಳ್ಳೇದು ಎಂದು ಎನಿಸಿತು. ಆ ಗ್ರಾಮದ ಧುರೀಣರ ಪ್ರಾರ್ಥನೆಗೆ ಸಮ್ಮತಿಯನ್ನಿತ್ತು ಅವರು ಅಲ್ಲಿಯೇ ನೆಲೆಸಿದರು.

ಶ್ರೀ ಮಾಧವತೀರ್ಥರ ಕೈಯಲ್ಲಿ ಅದೊಂದು ದೊಡ್ಡ ಮಾಧ್ವ ವಿಶ್ವವಿದ್ಯಾಲಯವೇ ಆಯಿತು. ಅವರ ನೇತೃತ್ವದಲ್ಲಿ ಅನೇಕ ಜನ ಯುವಕರು ಮಧ್ವ ಸಿದ್ಧಾಂತ ವಿದ್ವಾಂಸ ರಾಗಿ ಅಲ್ಲಿಂದ ಹೊರಬಿದ್ದು ವೈಷ್ಣವ ಧರ್ಮದ ಪ್ರಸಾರವನ್ನು ಎಲ್ಲೆಡೆಗೂ ಮಾಡಿದರು.

ಶ್ರೀ ಮಾಧವ ತೀರ್ಥರು ಶ್ರೀ ಮಧ್ವಾಚಾರ್ಯರಿಂದ ಆಶ್ರಮ ತೆಗೆದುಕೊಂಡು ಯತಿಗಳಾದಾಗ ಶ್ರೀ ಗುರು ಮಧ್ವರು ಅವರಿಗೆ ನಿತ್ಯ ಪೂಜೆಗೆಂದು ವೀರ ರಾಮನ ಮೂರ್ತಿಯನ್ನು ಕೊಟ್ಟಿದ್ದರು. ಅದನ್ನು ಮಾಧವ ತೀರ್ಥರು ಅನೇಕ ವರ್ಷ ಪೂಜೆ ಮಾಡಿದರು. ಮುಂದೆ ಅವರು ಶ್ರೀ ನರಹರಿತೀರ್ಥರಿಂದ ಶ್ರೀ ಸರ್ವಜ್ಞ ಸಿಂಹಾಸನ ವನ್ನು ಆರೋಹಣ ಮಾಡುವಾಗ ತಮ್ಮ ಶಿಷ್ಯರಾದ ಶ್ರೀ ಮಧುಹರಿ ತೀರ್ಥರಿಗೆ ಆ ವೀರರಾಮನ ಮೂರ್ತಿಯನ್ನು ಕೊಟ್ಟು ತಮ್ಮ ಸಂಸ್ಥಾನವನ್ನು ಮುಂದುವರಿಸಲಿಕ್ಕೆ ಹೇಳಿದರು. ಅದು ಈಗ ಮಜ್ಜಿಗೆಹಳ್ಳಿ ಮಾಧವ ತೀರ್ಥರ ಮಠವೆಂದು ಪ್ರಸಿದ್ಧವಾಗಿದ್ದು ಮುಳಬಾಗಿಲ ಹತ್ತಿರ ತಂಜೆಹಳ್ಳಿಯಲ್ಲಿ ಈಗ ಆ ಸಂಸ್ಥಾನದ ಮಠವು ಇರುತ್ತದೆ.

ಶ್ರೀ ಮಾಧವ ತೀರ್ಥರು ಸರ್ವಜ್ಞ ಸಂಸ್ಥಾನದಲ್ಲಿ ವಂಶರಾಮನ ಪ್ರತಿಮೆ ಯೊಂದನ್ನು ಇರಿಸಿ ಹೋಗಿದ್ದಾರೆ. ಮೂಲ ರಾಮ ಸೀತಾದಿ ಪ್ರತಿಮೆಗಳು ಮೋಕ್ಷಾದಿ ಪುರುಷಾರ್ಥಗಳನ್ನು ಕೊಡಲಿಕ್ಕಾದರೆ ಶಿಷ್ಯರ ಲೌಕಿಕ ಇಷ್ಟಾರ್ಥಗಳನ್ನು ಈ ವಂಶ ರಾಮನು ಪ್ರದಾನ ಮಾಡುತ್ತಾನಂತೆ. ಮೂಲ ರಾಮ, ದಿಗ್ವಿಜಯ ರಾಮ, ಸೀತಾದಿ ಪ್ರತಿಮೆಗಳು ಸ್ವಯಂ ವ್ಯಕ್ತವಾದುದರಿಂದ ಅವುಗಳಲ್ಲಿ ಆವಾಹನ ವಿಸರ್ಜನಗಳ ಆವಶ್ಯ ಕತೆ ಇಲ್ಲ. ಆದುದರಿಂದ ತಮ್ಮ ಕ್ರಮ ಪ್ರಕಾರ ಪ್ರತಿಮಾರ್ಚನ ಪೂಜೆಗೆಂದು ಶ್ರೀ ವಂಶರಾಮನನ್ನು ಶ್ರೀ ಮಾಧವತೀರ್ಥರು ಮೂಲರಾಮನ ಮಂಟಪದಲ್ಲಿ ತಂದು

ಕೂಡಿಸಿದರು. ಭಕ್ತರ ಅಭೀಷ್ಟಗಳನ್ನು ಪೂರ್ಣ ಮಾಡುವ ಈ ವಂಶರಾಮನ ವಿಗ್ರಹವನ್ನು ಉತ್ತರಾದಿಮಠದ ಪೂಜಾ ಮಂಟಪದಲ್ಲಿ ಇಂದಿಗೂ ಕಾಣಬಹುದು.

ಮುಂದೆ ಈ ವಂಶರಾಮನ ಪ್ರತಿಮೆಯು ಪೆಟ್ಟಿಗೆಯಿಂದ ಹಾರಿ ಹೋಗುತ್ತಿಂತೆ. ಆ ಹನುಮನೊಡೆಯನ ಹಾರಾಟವನ್ನು ನಿರ್ಬಂಧಿಸುವದಕ್ಕಾಗಿ ಅವನ ಎರಡೂ ಕಾಲುಗಳನ್ನು ಕಟ್ಟಿದ್ದಾರೆ. ಇದನ್ನು ಮೊದಲಿನ ಸಾಲಿನ ದಿಗ್ವಿಜಯ ರಾಮುಮೂರ್ತಿಯ ಕೆಳಗೆ ಎರಡನೇ ಸಾಲಿನಲ್ಲಿ ಈಗಲೂ ನೋಡಬಹುದು.

ಹೀಗೆ ವೈಭವದಿಂದ ೧೭ ವರ್ಷಗಳ ಕಾಲ ಪರಮಹಂಸ ಪೀಠದಲ್ಲಿ ವಿರಾಜಮಾನರಾಗಿ ಕೊನೆಗೆ ಆಚಾರ್ಯರ ಆದೇಶದಂತೆ ಶ್ರೀ ಅಕ್ಷೋಭ್ಯತೀರ್ಥರಿಗೆ ಆಶ್ರಮವನ್ನಿತ್ತು, ವಿಕೃತಿ ಸಂವತ್ಸರ ಭಾದ್ರಪದ ಬಹುಳ ಅಮಾವಾಸ್ಯೆಯ ದಿನ ಸರ್ವ ಸಂಸ್ಥಾನವನ್ನು ಅವರಿಗೆ ಒಪ್ಪಿಸಿ ಮಣೂರಲ್ಲಿಯೇ ವೃಂದಾವನಸ್ಥರಾದರು.

ಇವರ ವೃಂದಾವನವು ಮೊದಲು ಭೀಮರಥಿಯ ತೀರದಲ್ಲಿ ಶ್ರೀ ರಾಮ ಒತ್ತು ಎಂಬಲ್ಲಿ ಇತ್ತು. ಕಾಲಕ್ರಮೇಣ ಆ ಒತ್ತು ವೃಂದಾವನವಿದ್ದ ಸ್ಥಳವನ್ನೂ ಕೊರೆಯತೊಡಗಿತ್ತು. ಆ ಕಾಲದಲ್ಲಿ ಅಲ್ಲಿಗೆ ಬಂದ ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪರಾಯಣ ತೀರ್ಥ ಶ್ರೀಗಳವರಿಗೆ ಸ್ವಪ್ನವಾದುದರಿಂದ ಅವರು ಅದನ್ನು ತೆಗೆಯಿಸಿ ಮಣ್ಣೂರ ಗ್ರಾಮದಲ್ಲಿಯ ಶ್ರೀ ವೇದೇಶ ತೀರ್ಥರ ವೃಂದಾವನವಿದ್ದ ಸ್ಥಳಕ್ಕೆ ತಂದು ಶ್ರೀ ಮಾಧವ ತೀರ್ಥರ ವೃಂದಾವನವನ್ನು ಪುನಃ ಪ್ರತಿಷ್ಠಾಪನವನ್ನು ಮಾಡಿಸಿದರು.

ಶ್ರೀ ಮಾಧವ ತೀರ್ಥರು ಪೂಜೆ ಮಾಡುತ್ತಲಿರುವ ಶ್ರೀಮನ್ಮಧ್ವಾಚಾರ್ಯರ ಮಹಾ ಸಂಸ್ಥಾನದ ದೇವರ ಪ್ರತಿಮಾ, ಸಾಲಿಗ್ರಾಮ ಮುಂತಾದವುಗಳ ಯಾದಿ ಹೀಗಿದೆ.

ಲಕ್ಷ್ಮೀನಾರಾಯಣ ಶ್ರೀಹಯಮುಖದಧಿಕೃದ್ರಾಮನ ಶ್ರೀಧರಾಖ್ಯಾನ್ ।
ವ್ಯಾಸ ಶ್ರೀಜೇತೃರಾಮಾನವನಿಜ ಸಹಿತ ಶ್ರೀಜಗನ್ಮೂಲ ರಾಮಾನ್ ॥

ವಂದೇ ಶ್ರೀರಾಮ ನಿಷ್ಕಾಸ ಮಿತ ವಿನುತ ಸತ್ವಂ ಚ ಸೌದರ್ಶನಾಖ್ಯಾನ್ ।
ಪಂಚಾರ್ಯಾಂಕಾಂದ್ವಿಬಾಣೌ ಭುಜಯುಗ ಸಹಿತಾಮಕ್ಷಯಾಖ್ಯಂ ಚ ಪಾತ್ರಂ॥



## ವಿದ್ಯಾರಣ್ಯರನ್ನು ಗೆದ್ದ

# ಶ್ರೀ ಅಕ್ಷೋಭ್ಯ ತೀರ್ಥರು

ಶ್ರೀ ಮಧ್ವಾಚಾರ್ಯರಿಂದ ಯತ್ಯಾಶ್ರಮವನ್ನು ಸ್ವೀಕರಿಸಿ ಧನ್ಯರಾದ ವಿಶ್ವ ಮಾನ್ಯ ಸನ್ಯಾಸಿಗಳಲ್ಲಿ ಶ್ರೀ ಅಕ್ಷೋಭ್ಯ ತೀರ್ಥರು ಒಬ್ಬರು. ಅವರ ಪೂರ್ವಾ ಶ್ರಮದ ಹೆಸರು ಗೋವಿಂದ ಶಾಸ್ತ್ರಿಗಳು. ಗುರುಕಥಾಕಲ್ಪತರುವಿನಲ್ಲಿ,

"ತತ ಉತ್ತರದೇಶಾದ್ ಬ್ರಹ್ಮಚರ್ಯ ಸಮನ್ವಿತಃ ।
ಗೋವಿಂದಶಾಸ್ತ್ರೀ ತಂ ಗತ್ವಾ ಸನ್ಯಾಸಂ ಸಮಯಾಚತ ।
ತಸ್ಮೈ ದತ್ವಾ ತು ಸನ್ಯಾಸಂ ಅಕ್ಷೋಭ್ಯಮುನಿರಿತ್ಯಥ ।
ನಾಮ ದತ್ವಾ ಚತುರ್ಭ್ಯೋಽಸೌ ಸರ್ವಾನ್ ಗ್ರಂಥಾನಬೋಧಯತ್

ಗುರುರುಚರ್ಯೆ ಎಂಬ ಗ್ರಂಥದಲ್ಲಿ ಅಕ್ಷೋಭ್ಯ ತೀರ್ಥರು ಉತ್ತರ ಕರ್ನಾ ಟಕದವರೆಂದು ಹೇಳಿ ಸಾಕ್ಷಾತ್ ಮಧ್ವಾಚಾರ್ಯರಿಂದಲೇ ಅವರು ಆಶ್ರಮ ಸ್ವೀಕ ಕರಿಸಿದರೆಂದು ಹೇಳಲಾಗಿದೆ.*

ಇದರ ಮೇಲಿಂದ ಅವರು ಆನಂದ ತೀರ್ಥರ ಸಾಕ್ಷಾತ್ ಶಿಷ್ಯರೆಂದು ವ್ಯಕ್ತ ವಾಗುವದು.

ಅಕ್ಷೋಭ್ಯ ತೀರ್ಥರು ನರಹರಿ ತೀರ್ಥರಂತೆ ಪೂರ್ವಾಶ್ರಮದಲ್ಲಿ ರಾಜಕಾರಣ ಧುರಂಧರರೂ, ಶೂರ ಧೀರರೂ ಆಗಿದ್ದರು.

ಹಿಂದೆ ಕದಂಬ ಯಾದವ ರಾಜ್ಯದಲ್ಲಿ ರಾಜಾಶ್ರಯದ ಉನ್ನತ ಅಧಿಕಾರಿ ಗಳಾಗಿದ್ದ, ಲೌಕಿಕ ವೈದಿಕ ಚತುರ ಮತಿಗಳ ಮನೆತನಗಳಲ್ಲಿ ಇವರ ಮನೆತನವು ಒಂದಾಗಿದೆ. ಭಾರದ್ವಾಜ ಗೋತ್ರದ ಇವರ ವಂಶಕ್ಕೆ ಸ್ವರ್ಣಭಂಡಾರದವರು

---

* At this time Akshobhyateertha, disciple of Anandateertha was Vaishnava Pontiff. E. I. VI, 260. He was a contemporary of Madhavacharya Vidyaranya who assisted the 5 Vijayangara brothers. Vide Page 191 of the s. i. i. by Sewell.

ಎಂದು ಉಪನಾಮವಿದ್ದಿತು. ಈ ಸ್ವರ್ಣಭಂಡಾರ ಮನೆತನದ ಮುಂದಾಳುಗಳನ್ನು ಬದಾಮಿಯ ಚಾಲುಕ್ಯ ರಾಜರು ಜಮಖಂಡಿ ರಾಜ್ಯಕ್ಕೆ ಮಾಂಡಲಿಕರನ್ನಾಗಿ ಮಾಡಿದ್ದರು.

ಜಮಖಂಡೀ ಸಂಸ್ಥಾನದ ಮಾಂಡಲಿಕರಾದ ಸ್ವರ್ಣಭಂಡಾರಕುಲದಲ್ಲಿ ಕೇಶವ ಭಟ್ಟರು ಅತ್ಯಂತ ಸುಪ್ರಸಿದ್ಧರಾಗಿದ್ದರು. ಈ ಮನೆತನದ ವೈಶಿಷ್ಟ್ಯವೇನಂದರೆ— ಈ ರಾಜಕುಲದ ಧರೀಣರೆಲ್ಲರೂ ಶಸ್ತ್ರವಿದ್ಯೆ, ಶಾಸ್ತ್ರವಿದ್ಯೆ ಎರಡರಲ್ಲಿಯೂ ಪಾರಂಗತ ರಾಗಿರುತ್ತಿದ್ದರು. ರಾಜರಾದರೂ ಋಷಿಗಳಂತೆ ಇರುವದು ಆ ಮನೆತನದ ಪರಂಪರಾ ಪ್ರಾಪ್ತವಾದ ಸದ್ಗುಣವಾಗಿತ್ತು. ಮನುಮಹರ್ಷಿಯ—

"ಸೇನಾಪತ್ಯಂ ಚ ರಾಜ್ಯಂ ಚ ವೇದಶಾಸ್ತ್ರವಿದರ್ಹತಿ"

ಎಂಬ ಮನುಸ್ಮೃತಿಯ ಮಾತಿಗೆ ಅವರು ಜೀವಂತ ದೃಷ್ಟಾಂತವಾಗಿದ್ದರು.

ಕೇಶವಭಟ್ಟರು— ಜನಕರಾಜ, ಧರ್ಮರಾಜರಂತೆ ಧರ್ಮವೀರರೂ ಸದಾಚಾರ ಸಂಪನ್ನರೂ ಅಧ್ಯಾತ್ಮವಿದ್ಯಾ ಕೋವಿದರೂ ಆಗಿದ್ದರು.

ಅವರ ಮಕ್ಕಳಾದ ಗೋವಿಂದಶಾಸ್ತ್ರಿಗಳು ವೀರವರೇಣ್ಯರಾದಂತೆ ವಿದ್ವದ್ವರೇಣ್ಯರೂ ಆಗಿದ್ದರು. ಧೈರ್ಯ-ಶೌರ್ಯಗಳಂತೆ, ವೈರಾಗ್ಯ-ದೈವಭಕ್ತಿಗಳೂ ಅವರಿಗೆ ಹಿರಿಯ ರಿಂದ ಬಳುವಳಿಯಾಗಿ ಬಂದಿದ್ದವು. ಕೇಶವ ಭಟ್ಟರ ಅನಂತರ ಅವರು ಶಾಸನ ಸೂತ್ರ ವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಸಮರ್ಥರೀತಿಯಿಂದ ಆ ಡ ಳಿ ತ ವ ನ್ನು ನಡೆಸಿದರು.

ಆದರೆ ಕೆಲವು ದಿನಗಳಲ್ಲಿಯೆ ಗೋವಿಂದ ಶಾಸ್ತ್ರಿಗಳಿಗೆ ವಿಷಯದಲ್ಲಿ ವೈರಾಗ್ಯ ಹುಟ್ಟಿತು. ಅವರು ಜಾತ್ಯಾ ವಿರಕ್ತರು. ಅಗತ್ಯಾ ಲೌಕಿಕ ಕಾರ್ಯಾಸಕ್ತರು.

ಗೌತಮಬುದ್ಧನಂತೆ ಒಂದಾನೊಂದು ದಿನ ಅವರು ಐಶ್ವರ್ಯ ತುಂಬಿದ ಅಂತ:ಪುರವನ್ನೂ, ಧನ-ಕನಕಗಳಿಂದ ತುಂಬಿದ ಅರಮನೆಯನ್ನೂ ರಾಜೈಶ್ವರ್ಯ ವನ್ನೂ ತೊರೆದು ತಪಸ್ಸಿಗೆ ಹೊರಟರು.

ಅದು ರಾಜಕೀಯ ವಿಪ್ಲವದ ಕಾಲ. ಯವನರ ದಾರುಣವಾದ ದಾಳಿಗಳಿಂದ ಭಾರತದ ಅನೇಕ ವೀರರಾಜ ಮನೆತನಗಳೆಲ್ಲ ಮಣ್ಣುಮುಕ್ಕಿದ್ದವು. ಮೊನ್ನೆ-ಮೊನ್ನೆ ಅಧಿಕಾರದ ಉಬ್ಬಿನಿಂದ ಐಶ್ವರ್ಯದ ಉಪ್ಪರಿಗೆಯ ಮೇಲೆ ಸುಖ-ವಿಲಾಸಗಳಲ್ಲಿ ಮೈಮರೆತು ಮೆರೆಯುವ ರಾಜ-ಮಹಾರಾಜರೆಲ್ಲರೂ ಬೆಳಗಾಗುವಷ್ಟರಲ್ಲಿ ನಿರ್ನಾಮ

ರಾಗಿ ನಷ್ಟವಾಗಿ ಹೋಗುತ್ತಿದ್ದರು. ಅವರ ಸಿರಿ, ಸತ್ವ, ಸಾಮ್ರಾಜ್ಯಗಳೆಲ್ಲ ಕಾಲಗರ್ಭದಲ್ಲಿ ಕರಗಿ ಹೋದವು.

ನೀರ ಗುಳ್ಳೆಯಂತೆ ಅತ್ಯಂತ ಅಶಾಶ್ವತವಾದ ರಾಜಕೀಯ ಜೀವನದ ಅಸ್ಥಿರತೆಗೆ ಜುಗುಪ್ಸೆಗೊಂಡ ಅವರ ಬದುಕು ಆಧ್ಯಾತ್ಮಗತ್ತ ತಿರುಗಿತು. ಅಶಾಂತವಾದ ಈ ಜೀವನದ ಜಂಜಾಟದಿಂದ ತಮ್ಮನ್ನು ಮೇಲಕ್ಕೆ ಎತ್ತಿ, ಮೋಕ್ಷ ಪಥದಲ್ಲಿ ಮಾರ್ಗ ದರ್ಶನ ಮಾಡಿಸುವ ಸದ್ಗುರುವನ್ನು ಅವರು ಹುಡುಕುತ್ತ ಹೊರಟರು.

ಆ ಕಾಲದಲ್ಲಿ ಪರುಶರಾಮ ಕ್ಷೇತ್ರದಲ್ಲಿ ಪುಣ್ಯ ಪುರುಷರೊಬ್ಬರು ಅವತಾರ ಮಾಡಿ, ಮಾನವ ಕುಲವನ್ನೆಲ್ಲ ಉದ್ಧರಿಸುತ್ತಲಿದ್ದಾರೆ- ಎಂಬ ಸುದ್ದಿಯು ಅವರಿಗೆ ಈ ಮೊದಲೆ ತಿಳಿದಿತ್ತು. ಕಾಶಿಯಿಂದ ರಾಮೇಶ್ವರದವರೆಗೆ ಶ್ರೀ ಮಧ್ವಮುನಿಗಳು ಕೈಕೊಂಡ ದಿಗ್ವಿಜಯದ ಸಮಾಚಾರವನ್ನು ಅವರು ಕೇಳಿದ್ದರು. ಅವರ ಪ್ರವಚನ ಪಾಟವ ಮತ್ತು ಅವರ ಗ್ರಂಥಗಳ ಅಸಾಧಾರಣ ಮಹಿಮೆಗಳು, ಹಾಗೂ ಅವರ ಶಿಷ್ಯ ವೈಭವ ಮುಂತಾದವುಗಳೆಲ್ಲ ಸರ್ವತ್ರ ಜನಜನಿತವಾಗಿದ್ದವು.

ಇದನ್ನೆಲ್ಲ ಕೇಳಿ ತಿಳಿದ ಗೋವಿಂದಭಟ್ಟರು ನೇರವಾಗಿ ಉಡುಪಿಯ ಕ್ಷೇತ್ರಕ್ಕೆ ಬಂದರು. ಅಲ್ಲಿ ಶ್ರೀಮಧ್ವಾಚಾರ್ಯರನ್ನು ಕಂಡು ಅವರ ಪ್ರವಚನವನ್ನು ಕೇಳಿದಾಗ ಅವರಿಂದ ಎಂದೋ ದೂರ ಓಡಿ ಹೋದ ಮಾನಸಿಕ ಶಾಂತಿಯು ಅವರಿಗೆ ಮತ್ತೆ ದೊರಕಿದಂತಾಯಿತು. ಆನಂದತೀರ್ಥರ ದರ್ಶನದಲ್ಲಿ ಅವರ ಬಾಳಿನ ಒಗಟುಗಳ ನ್ನೆಲ್ಲ ಬಿಡಿಸಿ ಇಟ್ಟಂತೆ ಕಂಡಿತು. ಗತಿ ತಪ್ಪಿದ ಅವರ ಹೃದಯದ ಹಕ್ಕಿಗೆ ಒಂದು ನೆಮ್ಮದಿಯ ನೀಡ ಅಥವಾ ಭರವಸೆಯ ಬೀಡು, ಶಾಂತಿಯ ಗೂಡು, ಸಂತಸದ ಆಸರ ದೊರಕಿದಂತಾಯಿತು. ಸರ್ವವನ್ನೂ ಮರೆತು ಅವರು ಆಚಾರ್ಯರ ಶಿಷ್ಯ ರಾಗಿ ಉಡುಪಿಯಲ್ಲಿ ನಿಂತು ಬಿಟ್ಟರು.

ಮೊದಲಿನಿಂದಲೂ ವೇದ-ಶಾಸ್ತ್ರಗಳ ಪರಿಚಯವಿದ್ದ ಗೋವಿಂದಭಟ್ಟರ ಭಕ್ತಿ ವೈರಾಗ್ಯಗಳಿಗೆ ಮೆಚ್ಚಿದ ಮಧ್ವಮುನಿಗಳು ಸತ್ಸಿದ್ಧಾಂತವನ್ನು ಪಾಠ ಹೇಳಿದರು. ಇವರಿಗಿಂತ ಹಿರಿಯರಾದ ತಮ್ಮ ದೇಶದ ಶೋಭನಭಟ್ಟರೂ, ಶಾಮಶಾಸ್ತ್ರಿಗಳೂ, ವಿಷ್ಣು ಶಾಸ್ತ್ರಿಗಳೂ ಈ ಮೊದಲೇ ಆಚಾರ್ಯರ ದೈವಿಕ ವ್ಯಕ್ತಿತ್ವ, ಅಮಾನುಷ ಮಹಿಮೆ ಗಳಿಂದ ಸೆಳೆಯಲ್ಪಟ್ಟು ಅಲ್ಲಿ ಬಂದು ಅವರ ಶಿಷ್ಯರಾಗಿ ಅವರಿಂದಲೇ ಸನ್ಯಾಸಾಶ್ರಮ ವನ್ನು ಸ್ವೀಕರಿಸಿ— ಪದ್ಮನಾಭ, ನರಹರಿ, ಮಾಧವತೀರ್ಥರೆಂದು ಹೆಸರಾಗಿದ್ದರು.

ಅವರೆಲ್ಲರಿಗಿಂತ ವಯಸ್ಸಿನಲ್ಲಿ ಕಿರಿಯರಾದ ಗೋವಿಂದ ಭಟ್ಟರೂ ಆ ಅರಿ ವಿನ ಆಗರದಿಂದ, ಸದ್ಗುಣದ ಸಾಗರದಿಂದ ಜ್ಞಾನಾಮೃತವನ್ನು ಹೀರಿಕೊಂಡರು.

ಘಟ್ಟದ ಮೇಲಿನಿಂದ ಕೊನೆಕೊನೆಗೆ ಬಂದ ಗೋವಿಂದ ಭಟ್ಟರ ಮೇಲೆ ಕಡೆ ಹುಟ್ಟಮಗನ ಮೇಲಿದ್ದಂತೆ ದಯಾರ್ದ್ರದೃಷ್ಟಿಯುಳ್ಳವರಾಗಿದ್ದರು ಆಚಾರ್ಯರು.

ಗೋವಿಂದ ಭಟ್ಟರ ವಿಷಯ ವೈಮುಖ್ಯ, ಅಧ್ಯಯನಾಭಿಮುಖ್ಯ, ವೈರಾಗ್ಯ ಪ್ರಾಮುಖ್ಯಗಳನ್ನು ಕಂಡು ಸುಪ್ರೀತರಾದ ಗುರುಗಳು ಅವರಿಗೆ ತಮ್ಮ ಎಲ್ಲ ಮೂವತ್ತೇಳೂ ಗ್ರಂಥಗಳನ್ನು ಆಚೂಲ ಮೂಲವಾಗಿ ಪಾಠ ಹೇಳಿದರು. ಸನ್ಯಾಸಾಶ್ರಮವನ್ನಿತ್ತು "ಅಕ್ಷೋಭ್ಯ ತೀರ್ಥ" ಎಂದು ಅನ್ವರ್ಥಕ ಹೆಸರನ್ನಿತ್ತು ಅನುಗ್ರಹಿಸಿದರು. ಯಾವ ಇಂದ್ರಿಯದಿಂದಲೂ ಯಾವ ವಿಷಯದಿಂದಲೂ ಎಂದೂ ಅವರ ಮನಸ್ಸು ಕ್ಷೋಭಗೊಳ್ಳುತ್ತಿರಲಿಲ್ಲ. ಆದುದರಿಂದ ಅವರಿಗೆ 'ಅಕ್ಷೋಭ್ಯ' ಎಂದು ಆಚಾರ್ಯರು ಗುಣಾನುರೂಪವಾದ ನಾಮವನ್ನು ಕೊಟ್ಟದ್ದು ಸಾರ್ಥಕವೇ ಆಗಿದ್ದಿತು.

ಅಕ್ಷೋಭ್ಯ ತೀರ್ಥರು ಆಚಾರ್ಯರಿಂದ ಕೇಳಿದ ಪಾಠವನ್ನು ಚನ್ನಾಗಿ ಬಾಯಿಪಾಠ ಮಾಡಿ ಎದೆಯಲ್ಲಿ ಮೂಡಿಸಿಗೊಂಡು ಬಿಟ್ಟಿದ್ದರು. ಅದನ್ನೆಲ್ಲ ಇಡಿಕಿಡಿಯಾಗಿ ಶ್ರೀ ಟೀಕಾ ರಾಯರಿಗೆ ಪಾಠ ಹೇಳಿದರು. ಶ್ರೀ ಜಯತೀರ್ಥರಿಗೆ ಬಂದ ಜ್ಞಾನ ಸಾಕ್ಷಾತ್ ಶ್ರೀಮದಾಚಾರ್ಯರ ಮುಖದಿಂದ ಬಂದದ್ದೇ.

ಆ ಸರ್ವಜ್ಞರ ವಿದ್ಯಾಶರಧಿಯಿಂದ ತಮ್ಮ ಜ್ಞಾನಾಂಜಲಿಯಲ್ಲಿ ತುಂಬಿ ತಂದ ತತ್ತ್ವಾಮೃತವನ್ನು ಅಕ್ಷೋಭ್ಯ ತೀರ್ಥರು ಒಂದು ಹನಿಯೂ ಎಲ್ಲಿಯೂ ಸೋರದಂತೆ ಜಯ ತೀರ್ಥರೂಪ ಸತ್ಪಾತ್ರದಲ್ಲಿ ಹನಿಸಿದರು. ಆ ಜ್ಞಾನದ ಭರಣಿಯನ್ನು ಎಲ್ಲಿಯೂ ಬಸಿಯದಂತೆ ಬೆಸುಗೆ ಹಾಕಿ ತಂದು ಇವರ ಬೊಗಸೆಯಲ್ಲಿ ಬಾಯಿ ಬಿಚ್ಚಿ ಬಗ್ಗಿಸಿದರು. ಆದುದರಿಂದಲೇ ಜಯತೀರ್ಥರು ಪ್ರಾಯಃ ತಮ್ಮ ಪ್ರತಿಯೊಂದು ಗ್ರಂಥದ ಪ್ರಾರಂಭದಲ್ಲಿ ಅಕ್ಷೋಭ್ಯ ತೀರ್ಥರ ಉಪಕಾರವನ್ನು ನೆನೆಯದೇ ಮುಂದುವರೆಯುವದಿಲ್ಲ.

"ಅಕ್ಷೋಭ್ಯತೀರ್ಥ ಗುರುಣಾಶುಕವಚ್ಛಿಕ್ಷಿತಸ್ಯಮೇ"
"ಯೈರಹಂ ಶುಕವದ್ಬಾಲ್ಯೇ ಶಿಕ್ಷಿತೋಸ್ಮ್ಯನುಕಂಪಯಾ"

ಎಂದು ಹೆಜ್ಜೆ ಹೆಜ್ಜೆಗೂ ತಮಗೆ ಸರ್ವಜ್ಞರ ಜ್ಞಾನಾಚಲದ ಶಿಖರ ಶ್ರೇಣಿಗಳನ್ನೆಲ್ಲ ತೋರಿಸಿದ ಅಕ್ಷೋಭ್ಯ ತೀರ್ಥರ ಉಪಕಾರವನ್ನು ಹರ್ಷಪುಲಕಿತರಾಗಿ ಸ್ಮರಿಸುತ್ತಾರೆ.

ಸುಧಾ, ತತ್ತ್ವ ಪ್ರಕಾಶಿಕಾದಿ ಗ್ರಂಥಗಳ ಟೀಕಾ ವಚನಗಳಲ್ಲೆಲ್ಲ ಸಾಕ್ಷಾತ್ ಶ್ರೀ ಮಧ್ವರ ಪ್ರತಿಧ್ವನಿಯೇ ಕೇಳಿ ಬರಲಿಕ್ಕೆ ಆಚಾರ್ಯರ ಗ್ರಂಥಗಳ ಪ್ರವಚನವನ್ನು ಅವರ ಆನುಪೂರ್ವಿ ಅಕ್ಷರಗಳಲ್ಲಿಯೇ ಧ್ವನಿಮುದ್ರಿತಗೊಳಿಸಿಕೊಂಡ ಶ್ರೀ ಅಕ್ಷೋಭ್ಯತೀರ್ಥರ ಸ್ಮರಣ ಶಕ್ತಿ ಹಾಗೂ ಪಾಠ ಪಾಟವಗಳೇ ಕಾರಣವಾಗಿವೆ.

ಶ್ರೀಮನ್ನ್ಯಾಯಸುಧೆಯಲ್ಲಿ ಮೊಳಗಿದ್ದು ಆಚಾರ್ಯರ ವಾಣಿಯೇ. ವಿದ್ಯಾರಣ್ಯರ ಎದುರು ವೇದಾಂತದ ಗುಡುಗು ಹಾಕಿದ್ದೂ ಆಚಾರ್ಯರ ಸಿಂಹನಾದವೇ. ಹೀಗೆ ಜಯತೀರ್ಥರ ಧ್ವನಿಯಲ್ಲಿ, ನಮಗೆ ಶ್ರೀ ಮಧ್ವಾಚಾರ್ಯರ ಪ್ರತಿಧ್ವನಿಯು ಕೇಳಿ ಬರುತ್ತಲಿರುವದು ಈ ಅಕ್ಷೋಭ್ಯತೀರ್ಥರ ಪುಣ್ಯ. ಅದಕ್ಕಾಗಿ ಜಗತ್ತೆಲ್ಲವೂ ಕೃತಜ್ಞತೆಯಿಂದ ಋಣಿಯಾಗಿ ಬಾಗಬೇಕಾಗಿದೆ ಅವರ ಪಾದದೆಡೆಗೆ. ಈ ಭಾವವು ಜಯತೀರ್ಥರ—

"ಯೈ ರಹಂ ಶುಕವದ್ ಬಾಲ್ಯೇ ಶಿಕ್ಷಿತೋಽಸ್ಮಿ"

ಎಂಬ ಮಾತಿನಲ್ಲಿ ಚನ್ನಾಗಿ ಧ್ವನಿತವಾಗಿದೆ.

ಶ್ರೀ ಮಧ್ವಾಚಾರ್ಯರು ೧೩೧೭ ನೇ ಇಸ್ವಿಯಲ್ಲಿ ಅಕ್ಷೋಭ್ಯತೀರ್ಥರಿಗೆ ಯತ್ಯಾಶ್ರಮವನ್ನಿತ್ತು, ರಾಮ–ಸೀತಾ–ಲಕ್ಷ್ಮಣ ಪ್ರತಿಮೆಗಳನ್ನು ಪೂಜೆ ಮಾಡಲು ಕರುಣಿಸಿದರು.

ಘಟ್ಟದ ಮೇಲಿನಿಂದ ಬಂದ ನಾಲ್ವರೂ ಆಚಾರ್ಯರ ಶಿಷ್ಯರು ಮಹಾ ವಿಭೂತಿ ಪುರುಷರೇ ಆದುದರಿಂದ ಅವರೆಲ್ಲರಿಗೂ ಬ್ರಹ್ಮಕರಾರ್ಚಿತವಾದ ಶ್ರೀ ಮೂಲ ರಾಮದೇವರನ್ನು ಪೂಜಿಸುವ ದೈವೀ ಯೋಗ್ಯತೆಯು ಅಕ್ಷತವಾಗಿ ಇದ್ದಿತು.

"ಸುರಾಶ್ಚಯತಯೋಭೂತ್ವಾ ರಾಮಚಂದ್ರಮಪೂಜಯನ್"

ಎಂಬ ಪ್ರಮಾಣವಚನವನ್ನನುಸರಿಸಿ ಮೂಲ ರಾಮದೇವರನ್ನು ಪೂಜಿಸಲು ದೇವತೆಗಳೇ ಯತಿಗಳಾಗಿ ಬರುತ್ತಾರೆ. ಈ ತಮ್ಮ ಶಿಷ್ಯರ ಯೋಗ್ಯತೆಯನ್ನು ತಿಳಿದ ಸರ್ವಜ್ಞಾಚಾರ್ಯರು ಮೊದಲು ವಯೋ–ಜ್ಯೇಷ್ಠರೂ, ಯತಿ–ಜ್ಯೇಷ್ಠರೂ ಆದ ಶ್ರೀ ಪದ್ಮನಾಭತೀರ್ಥರಿಗೆ ಶ್ರೀ ಮೂಲ–ರಾಮಚಂದ್ರ ದೇವರನ್ನು ಮತ್ತು ತಮ್ಮ ಮಹಾ ಸಂಸ್ಥಾನವನ್ನೂ, ಉಳಿದೆಲ್ಲ ಸಂಸ್ಥಾನದ ಪೂಜಾ ಪರಿಕರಗಳನ್ನೂ ತಪ್ತ ಮುದ್ರಾದಿದಾನಾಧಿಕಾರಗಳನ್ನೂ ಕರುಣಿಸಿದರು.

ಪದ್ಮನಾಭತೀರ್ಥರ ಅನಂತರ ಶ್ರೀ ನರಹರಿತೀರ್ಥರು ಅವರ ಪಶ್ಚಾತ್ ಮಾಧವ ತೀರ್ಥರೂ ಕೊನೆಗೆ ಶ್ರೀ ಅಕ್ಷೋಭ್ಯತೀರ್ಥರೂ ತಮ್ಮ ಪರಮಹಂಸ ಪೀಠವನ್ನು ಆರೋಹಣ ಮಾಡಿ ಶ್ರೀ ಮೂಲ–ರಾಮದೇವರ ಪೂಜೆಯನ್ನು ಕ್ರಮವಾಗಿ ಮಾಡಬೇಕೆಂದು ಅಪ್ಪಣೆ ಇತ್ತರು.

ಆಚಾರ್ಯರ ಆದೇಶದಂತೆ ಪದ್ಮನಾಭತೀರ್ಥರು—ನರಹರಿತೀರ್ಥರಿಗೂ, ನರಹರಿತೀರ್ಥರು—ಮಾಧವತೀರ್ಥರಿಗೂ, ಮಾಧವತೀರ್ಥರು—ಅಕ್ಷೋಭ್ಯತೀರ್ಥ

ರಿಗೂ ಮೂಲ ರಾಮದೇವರೊಂದಿಗೆ ಮಧ್ವಾಚಾರ್ಯರ ಮಹಾಸಂಸ್ಥಾನವನ್ನು ಒಪ್ಪಿಸಿದರು.

ಶ್ರೀ ಅಕ್ಷೋಭ್ಯ ತೀರ್ಥರು ಆಚಾರ್ಯರ ಆಜ್ಞೆಯಂತೆ ತಾವು ಶ್ರೀಮನ್ ಮಧ್ವಾಚಾರ್ಯರ ಮಹಾ ಸಂಸ್ಥಾನವನ್ನು ಆರೋಹಣ ಮಾಡುವಾಗ ತ್ರೈಲೋಕ್ಯ ಭೂಷಣರು ಎಂಬ ತಮ್ಮ ಪ್ರಿಯಶಿಷ್ಯರಿಗೆ ಶ್ರೀ ಮಧ್ವಾಚಾರ್ಯರು ಈ ಮೊದಲು ತಮಗೆ ಕೊಟ್ಟ ರಾಮ ಸೀತಾ ಲಕ್ಷ್ಮಣರ ಪ್ರತಿಮೆಗಳನ್ನು ಕೊಟ್ಟು ತಮ್ಮ ಹೆಸರಿನ ಮಠ ಪರಂಪರೆಯನ್ನು ಮುಂದುವರಿಸಿದರು.

ಅಕ್ಷೋಭ್ಯ ತೀರ್ಥರು ಸಂಚಾರ ಮಾಡುತ್ತ, ತುಂಗಾ ಮತ್ತು ಭದ್ರಾ ನದಿಗಳ ಸ್ಥಳವಾದ ಕೂಡಲಿ ಎಂಬ ಸ್ಥಳದಲ್ಲಿ ತಮ್ಮ ಮಠ ಸ್ಥಾಪಿಸಿದರು. ಮತ್ತು ತೀರ್ಥಹಳ್ಳಿ ತಾಲೂಕಿನಲ್ಲಿ ದೂರ್ವಾಸ ಪುರದಲ್ಲಿ ಇದ್ದ, ಶಂಕರಾಚಾರ್ಯ ಮಠಕ್ಕೆ ಪ್ರತಿಯಾಗಿ ತುಂಗಾ ತೀರದ ಬಾಳಗಾರು ಎಂಬಲ್ಲಿಯೂ ಒಂದು ಮಠವನ್ನು ಸ್ಥಾಪಿಸಿದರು. ಶ್ರೀ ಲೋಕಪೂಜ್ಯರೆಂಬ ತಮ್ಮ ಇನ್ನೊಬ್ಬ ಶಿಷ್ಯರಿಗೆ ಶ್ರೀ ರಾಮದೇವರ ಮೂರ್ತಿಯನ್ನು ಕೊಟ್ಟು, ಅದೂ ಒಂದು ಪರಂಪರೆಯು ಮುಂದುವರೆಯುವಂತೆ ಮಾಡಿದರು. ಈಗ ಆ ಮಠವು ಬಾಳಗಾರು ಆರ್ಯ ಅಕ್ಷೋಭ್ಯತೀರ್ಥ ಮಠವೆಂದು ಹೆಸರಾಗಿದೆ.

ಶ್ರೀ ಅಕ್ಷೋಭ್ಯ ತೀರ್ಥರು ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡಿದ ಬಳಿಕ, ಎಲ್ಲ ಕಡೆಗೂ ದಿಗ್ವಿಜಯ ಮಾಡಿ, ದುರ್ವಾದಿಗಳ ಸದ್ದನ್ನು ಅಡಗಿಸಿದರು. ಪ್ರತಿವಾದಿ ನಿಗ್ರಹದಲ್ಲಿ ಅಕ್ಷೋಭ್ಯ ತೀರ್ಥರಿಗೆ ಇದ್ದ ಕೌಶಲ್ಯವು ಅನ್ಯಾದೃಶವಾಗಿತ್ತು. ನ್ಯಾಯ ವೇದಾಂತ ವ್ಯಾಕರಣ ಮೀಮಾಂಸಾದಿ ಚತುಃಶಾಸ್ತ್ರಗಳೂ ಅವರಿಗೆ ಕರತಲಾಮಲಕವಾದುದರಿಂದ ಎಂಥ ದಿಗ್ಗಜ ಪಂಡಿತರು ಬಂದರೂ ಅವರು ವಾಕ್ಯಾರ್ಥದಲ್ಲಿ ಹಿಂದೆಗೆಯುವ ಪ್ರಸಂಗವೇ ಬರುತ್ತಿರಲಿಲ್ಲ. ಅವರು ವಾದ ಹೂಡಿದಲ್ಲೆಲ್ಲ ಗೆಲವು ಅವರ ಬೆನ್ನಿಗೆ ಬೀಳುತ್ತಲಿತ್ತು.

ಅದನ್ನು ನೋಡಿಯೇ ಶ್ರೀ ಜಯ ತೀರ್ಥರು ಅವರನ್ನು

" ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿ ಮದಚ್ಛಿದಃ "

ಎಂದು ಬಣ್ಣಿಸಿದ್ದಾರೆ.

ಶ್ರೀ ಅಕ್ಷೋಭ್ಯ ತೀರ್ಥರು ಆಗಿನ ಕಾಲದಲ್ಲಿ ಸುಪ್ರಸಿದ್ಧರಾಗಿದ್ದ ಎಲ್ಲ ಅದ್ವೈತ ವಿದ್ವಾಂಸರನ್ನೂ ವಾದದಲ್ಲಿ ಗೆದ್ದು ದ್ವೈತ ತತ್ವಗಳ ಡಿಂಡಿಮವನ್ನು ದಶ ದಿಕ್ಕುಗಳಲ್ಲಿಯೂ ಬಾರಿಸಿ ಬಂದರು.

ಆ ಕಾಲದಲ್ಲಿ ಶಂಕರಾಚಾರ್ಯರ ಮುಖ್ಯ ಮಠವಾದ ಶೃಂಗೇರಿ ಪೀಠದಲ್ಲಿ ವಿದ್ಯಾರಣ್ಯರು ವಿರಾಜಮಾನರಾಗಿದ್ದರು. ಅವರು ಷಟ್‌ಶಾಸ್ತ್ರ ಪಂಡಿತರು. ಜಗದ್ಗುರು

ಪೀಠ ಮಂಡಿತರು. ಮೇಲೆ ವಿಜಯ ನಗರದ ರಾಜ ಗುರುಗಳು. ಷಡ್‌ದರ್ಶನಾಚಾರ್ಯರೆಂಬುದು ಅವರ ಬಿರುದು. ಇದಲ್ಲದೆ ನಾಲ್ಕೂ ವೇದಗಳಿಗೆ ಅವರು ಭಾಷ್ಯವನ್ನು ಬರೆದಿದ್ದರಿಂದ ಅವರ ಕೀರ್ತಿಯು ಪಂಡಿತ ಪ್ರಪಂಚದಲ್ಲಿಯೂ ಅನನ್ಯ ಸಾಮಾನ್ಯವಾಗಿತ್ತು.

ಶ್ರೀ ಶಂಕರಾಚಾರ್ಯ ಮತದ ಮೂಲ ಪೀಠಾಧಿಪತಿಗಳಾದ ಆ ವಿದ್ಯಾರಣ್ಯರ ಜೊತೆಗೆ ವೇದಾಂತ ವಿಷಯದಲ್ಲಿ ವಾಕ್ಯಾರ್ಥ ಮಾಡಿ ವಾದದಲ್ಲ ಅವರನ್ನು ಸೋಲಿಸಿ ಮಧ್ವ ಮತದ ಮೇಲ್ಮೆಯನ್ನು ಅದ್ವೈತ ಮತದ ಅಪದ್ಧತ್ವವನ್ನೂ ಜಗತ್ತಿನ ಕಣ್ಣಿಗೆ ಕಾಣಿಸಬೇಕೆಂದು ಶ್ರೀ ಅಕ್ಷೋಭ್ಯ ತೀರ್ಥರ ಹೆಬ್ಬಯಕೆಯಾಗಿದ್ದಿತು.

ಆದರೆ ಇದು ಹೇಗೆ ಸಾಧ್ಯ! ರಾಜಾಧಿರಾಜರೂ ವಿದ್ಯಾರಣ್ಯರ ಪಾದ ಪೀಠಕ್ಕೆ ಹಣೆ ಚಾಚುತ್ತಿದ್ದರು. ಅಕ್ಷೋಭ್ಯ ತೀರ್ಥರಿಗೋ ಅಂಥ ಯಾವ ಐಶ್ವರ್ಯ ಆಡಂಬರಗಳಿಲ್ಲ. ಅದೆಲ್ಲವೂ ಒಂದು ಕಾಲಕ್ಕೆ ಇದ್ದರೂ ಬೇಡವೆಂದು ಆ ಬೇಡಿಯಿಂದ ಬಿಡಿಸಿಗೊಂಡು ಮೇಲೆ ಎದ್ದು ಬಂದವರು ಅವರು. ಆ ಕಾಲದಲ್ಲಿ ಈ ಮಧ್ವ ಮಠಕ್ಕೆ ಈಗಿನಂತೆ ಸಂಸ್ಥಾನದ ಸ್ವರೂಪವೂ ಇಲಿಲ್ಲ. ಅವರಷ್ಟು ಅನುಯಾಯಿಗಳೂ ಇರಲಿಲ್ಲ.

ಆದರೂ ವೇದಾಂತ ವಿದ್ಯೆಯ ಅರಣ್ಯದಲ್ಲಿಯ ಮೃಗರಾಜ ಎನಿಸಿದ ಅಕ್ಷೋಭ್ಯ ತೀರ್ಥರು ದಿಗ್ವಿಜಯವನ್ನು ಮಾಡುತ್ತ ವಿಜಯನಗರಕ್ಕೆ ಬಂದರು. ಅಲ್ಲಿರುವ ಉಳಿದೆಲ್ಲ ಪಂಡಿತರನ್ನೂ ಅವರು ವಾದ ಸಮರದಲ್ಲಿ ಜಯಿಸಿದರು. ವಿದ್ಯಾರಣ್ಯರಿಗೂ ವಾದಕ್ಕಾಗಿ ಬರಬೇಕೆಂದು ಆಹ್ವಾನವನ್ನು ಕೊಟ್ಟು ಕಳಿಸಿದರು.

ದೇಶದಲ್ಲಿಯ ಅದ್ವೈತ ಮತದ ಚಂಡಾತಿಚಂಡ ಪಂಡಿತರನ್ನೆಲ್ಲ ವಾದ ಭೂಮಿಕೆಯಲ್ಲಿ ಸೋಲಿಸಿ ಮುಖ ಬಂಧನವನ್ನು ಮಾಡಿದ ಅಕ್ಷೋಭ್ಯತೀರ್ಥರ ವಾದ ವಿಕ್ರಮವನ್ನು ವಿದ್ಯಾರಣ್ಯರು ಕೇಳಿದ್ದರು. ಅವರಿಂದ ಸೋತು ಬಂದ ಘಟಾನುಘಟಿಕ ಪಂಡಿತರ ಮುಖದಿಂದ ಅಕ್ಷೋಭ್ಯತೀರ್ಥರ ವಿಲಕ್ಷಣವಾದ ವಾದಕ್ರಮ, ಹಾಗೂ ಪ್ರತ್ಯುತ್ಪನ್ನಮತಿತ್ವ ಸದ್ಯಃಸ್ಫೂರ್ತಿಗಳನ್ನು ಕೇಳಿದ್ದರು. ಇದರಿಂದ ಅವರಿಗೆ ಇವರು "ವಾದದಲ್ಲಿ ನಿಜವಾಗಿಯೂ ಅಕ್ಷೋಭ್ಯರೇ" ಎಂದು ಖಾತರಿಯಾಗಿದ್ದಿತು. ಅವರೊಡನೆ ವಾದ ಭೂಮಿಗೆ ಇಳಿದರೆ ವಿಜಯನಗರದಲ್ಲಿಯೇ ತಮಗೆ ಅಪಜಯವಾಗುವದೆಂದು ಅವರ ಮನೋದೇವತೆ ಹೇಳುತ್ತಿತ್ತು.

ತಮ್ಮನ್ನು ಸಾಕ್ಷಾತ್ "ಸರ್ವಜ್ಞ ಮೂರ್ತಿಗಳು" ಎಂದು ಬಗೆದ ವಿಜಯನಗರದ ಮಹಾರಾಜರ ಸಮಕ್ಷಮ ತಾವು ವಾದದಲ್ಲಿ ಸೋತು ಹೋದರೆ ಸಾಮ್ರಾಜ್ಯದ ಮೇಲಿನ ತಮ್ಮ ಭದ್ರ ಮುಷ್ಟಿಯೇ ಸಡಿಲಾಗಬಹುದೆಂಬ ಹೆದರಿಕೆಯೂ ಅವರಿಗಿದ್ದಿತು. ಆದುದರಿಂದ ಅವರು ಅಕ್ಷೋಭ್ಯತೀರ್ಥರ ವಾದದ ಆಹ್ವಾನವನ್ನು ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ.

ಅಕ್ಷೋಭ್ಯತೀರ್ಥರೂ ಬಿಡಲಿಲ್ಲ. ಏನಾದರೂ ಮಾಡಿ ವಿದ್ಯಾರಣ್ಯರಂಥ ಹೆಬ್ಬುಲಿಯೊಡನೆ ವಾಕ್ಯಾರ್ಥದ ಸಂಗ್ರಾಮಾಂಗಣದಲ್ಲಿ ಶಾರ್ದೂಲ ವಿಕ್ರೀಡಿತವನ್ನು ಆಡಿ ಮಧ್ವ ಮತದ ವಿಜಯ ಪತಾಕೆಯನ್ನು ವಿಜಯನಗರದಲ್ಲಿ ಹಾರಿಸ ಬೇಕೆಂದು ಹರಿದುಂಬಿದ ಹಂಬಲವು ಅವರಲ್ಲಿ ಅತ್ಯುತ್ಕಟವಾಗಿತ್ತು. ಅವರು ಮತ್ತೊ ಒಂದು ಸಲ ವಾಕ್ಯಾರ್ಥಕ್ಕೆ ವಿದ್ಯಾರಣ್ಯರನ್ನು ತಮ್ಮ ಪಂಡಿತ ಶಿಷ್ಯರ ಮುಖಾಂತರ ನಿಮಂತ್ರಿಸಿದರು.

ವಿದ್ಯಾರಣ್ಯರ ಅನುಯಾಯಿಗಳು ಅಕ್ಷೋಭ್ಯತೀರ್ಥರ ಆಮಂತ್ರಣಕ್ಕೆ ಪ್ರತಿಯಾಗಿ "ನಮ್ಮ ರಾಜ ಗುರುಗಳು ಇಂಥ ಪುಡಿಕಾಸಿನ ಪಂಡಿತರ ಜೊತೆಗಾಗಲೀ, ಬಿಡಿ ಮಠದ ಸನ್ಯಾಸಿಗಳ ಜೊತೆಗಾಗಲೀ ವಾಕ್ಯಾರ್ಥವನ್ನು ಮಾಡುವದಿಲ್ಲ. ಅವರಂತೆ ರಾಜಪೂಜಿತರಾದ ಯತಿರಾಜರ ಜೊತೆಗೇ ಅವರು ವಾದ ಹೂಡುವರು ಮತ್ತು ವಾಕ್ಯಾರ್ಥ ಮಾಡುವರು" ಎಂದು ನಿಷ್ಠುರವಾಗಿ ನುಡಿದರು.

ಇದನ್ನು ಕೇಳಿ ಅಕ್ಷೋಭ್ಯತೀರ್ಥರಿಗೆ ನಿರಾಶೆಯಾಯಿತು. ಆದರೂ ಅವರು ಧೈರ್ಯಗುಂದಲಿಲ್ಲ. ವಿದ್ಯಾರಣ್ಯರನ್ನು ಪರಾಜಯಗೊಳಿಸುವ ತಮ್ಮ ವೀರಸಂಕಲ್ಪವನ್ನೂ ಬಿಡಲಿಲ್ಲ. ಅಲ್ಲಿಂದ ಹೊರಟ ಅವರು ದಿಗ್ವಿಜಯ ಮಾಡುತ್ತ ಶಿವಮೊಗ್ಗೆಯ ಹತ್ತರವಿರುವ :ಕೂಡಲೀ ಕ್ಷೇತ್ರಕ್ಕೆ ಬಂದರು. ಅಲ್ಲಿರುವ ಚಿಂತಾಮಣಿ ನರಸಿಂಹ ದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದರು. ಈ ತಪಸ್ಸಿನ ಉದ್ದೇಶ ರಾಜ್ಯ, ಐಶ್ವರ್ಯ, ಅಧಿಕಾರ ಯಾವದೂ ಆಗಿರಲಿಲ್ಲ. ಅವೈದಿಕ ಮತಗಳ ಖಂಡನೆ, ಮಾಧ್ವ ಸಿದ್ಧಾಂತ ಮಂಡನೆ. ಇದಕ್ಕಾಗಿ ತಮಗೆ ಅವಕಾಶ ಸಿಕ್ಕಬೇಕು ಎಂದು ಅವರು ನರಸಿಂಹದೇವರಲ್ಲಿ ಮೊರೆ ಇಟ್ಟರು.

ಒಂದು ದಿನ ಅಕ್ಷೋಭ್ಯ ಮುನಿಗಳು ಅಲ್ಲಿಯ ಆಲದ ಮರದ ನೆರಳಿನಲ್ಲಿ ಕುಳಿತುಕೊಂಡು ಜಪಮಾಡುತ್ತಿದ್ದರು. ಆ ಹೆಮ್ಮರದ ಕೊಂಬೆಯೊಂದರ ಮೇಲೆ ಕುಳಿತ ಒಂದು ಕೋತಿಯು ಎರಡು ನೀರಲ ಹಣ್ಣಿನಂಥ ಶಾಲಿಗ್ರಾಮಗಳನ್ನು ಜಪ ಮಾಡುತ್ತ ಕುಳಿತ ಸ್ವಾಮಿಗಳ ಉಡಿಯಲ್ಲಿ ಎಸೆಯಿತು. ಅದೇ ರಾತ್ರಿ ಆಂಜನೇಯನು ಅವರಿಗೆ ಮಾರ್ಗದರ್ಶನ ಮಾಡಿಸಿದನು.

ಮರುದಿನ ಆನೆಗೊಂದೆಯ ಮಹಾರಾಜನು ತೀರ್ಥ ಕ್ಷೇತ್ರ ಯಾತ್ರೆ ಮಾಡುತ್ತ ಕೂಡಲೀ ಗ್ರಾಮಕ್ಕೆ ಬಂದನು. ಅದೇ ಆಲದ ಮರದ ಕೆಳಗೆ ಕುಳಿತು ಶಾಸ್ತ್ರ ಪ್ರವಚನ ಮಾಡುವ ತೇಜಃಪುಂಜರಾದ ಯತಿವರರನ್ನು ಕಂಡು ಅವನಿಗೆ ಭಕ್ತಿ ಉಕ್ಕಿತು. ಸಾಷ್ಟಾಂಗ ನಮಸ್ಕಾರ ಮಾಡಿದನು. ಅಕ್ಷೋಭ್ಯ ತೀರ್ಥರು ಅವನ ಮುಖದ ಮೇಲಿಂದಲೇ ಅವನ ಮನಸ್ಸನ್ನು ಕೊರೆಯುತ್ತಿರುವ ಚಿಂತೆಯನ್ನು ಗುರು

ಶಿಸಿ ಕಪಿಯು ತಮಗೆ ಕೊಟ್ಟ ಎರಡು ಶಾಲಿಗ್ರಾಮಗಳಲ್ಲಿ ಒಂದನ್ನು ಅವನಿಗೆ ಕೊಟ್ಟರು. " ಇದನ್ನು ನೀನು ಭಕ್ತಿಯಿಂದ ಪೂಜಿಸಿದರೆ ಕೂಡಲೇ ನಿನಗೆ ಅಪೇಕ್ಷಿತವಾದ ಸಂತಾನ ಪ್ರಾಪ್ತಿಯಾಗುವದು " ಎಂದು ಹೇಳಿದರು.

"ಮಹಾರಾಜನ ಆಶ್ಚರ್ಯಕ್ಕೆ ಪಾರವಿಲ್ಲ. ಅವನ ಆನಂದಕ್ಕೆ ಸೀಮೆ ಇಲ್ಲ. ಶ್ರೀಗಳವರನ್ನು ನಾನು ಕಂಡದ್ದು ಇದೇ ಮೊದಲು. ಅವರಿಗೆ ನನ್ನ ಮನಸ್ಸಿನ ಕೊರಗು ಹೇಗೆ ಗೊತ್ತಾಯಿತು ? ಇಂಥ ದಿವ್ಯಾಪರೋಕ್ಷಿಗಳು ಹೇಳಿದ ಮಾತು ಎಂದೂ ಸಟಿಯಾಗಲಾರದು. ನನ್ನ ಭಾಗ್ಯದ ಶುಕ್ರೋದಯವನ್ನು ಸಾರುವ ಗುರುದೇವತೆಯೇ ಈ ಸ್ವಾಮಿಗಳು" ಎಂದು ಭಕ್ತಿಯಿಂದ ವಂದನೆ ಗೈದನು. ಶ್ರೀಗಳವರ ಫಲ ಮಂತ್ರಾಕ್ಷತೆಗಳನ್ನು ತೆಗೆದುಕೊಂಡು ತನ್ನ ಊರಿಗೆ ತೆರಳಿದನು.

ಒಂದು ವರ್ಷ ತುಂಬುವಷ್ಟರಲ್ಲಿ ಮಗುವಿನ ನಗೆ ಅವನ ಮನ ತುಂಬಿತು. ಮನೆ ತುಂಬಿತು. ಸಂತೋಷಭರಿತನಾದ ಮಹಾರಾಜನು ಅಕ್ಷೋಭ್ಯ ತೀರ್ಥರ ಬಳಿಗೆ ಬಂದು ಅವರ ಕಾಲಿನ ಮೇಲೆ ತನ್ನ ಕೂಸನ್ನು ಹಾಕಿದನು. ಅವರ ಕಣ್ಣೆದುರು ಮುತ್ತು ರತ್ನಗಳ ರಾಶಿ ಹಾಕಿದನು.

ಅದನ್ನು ನೋಡಿ ಅಕ್ಷೋಭ್ಯ ತೀರ್ಥರು ಮಿದುವಾಗಿ ನಕ್ಕು " ಮಹಾರಾಜ ! ನಿನಗೆ ಒಳ್ಳೇದಾಗಲಿ. ನಿನ್ನ ಮಗನಿಗೆ ಉತ್ತರೋತ್ತರ ಉತ್ಕರ್ಷವಾಗಲಿ. ಈ ನಿನ್ನ ಮುತ್ತು, ರತ್ನ, ಧನ, ಕನಕಗಳನ್ನು ತೆಗೆದುಕೊಂಡು ಸನ್ಯಾಸಿಯಾದ ನಾನು ಏನು ಮಾಡಬೇಕಾಗಿದೆ! ಇದನ್ನೆಲ್ಲ ನೀನು ರಾಜಧಾನಿಗೆ ತೆಗೆದುಕೊಂಡು ಹೋಗು." ಎಂದು ಹೇಳಿದರು. ಅದಕ್ಕೆ ಶ್ರದ್ಧಾಳುವಾದ ಆ ಮಹಾರಾಜನು ಕೈ ಮುಗಿದು, " ಸ್ವಾಮಿ ! ತಮ್ಮ ಅನುಗ್ರಹದಿಂದ ನನಗೆ ಸಂತಾನವಾದ ಕೂಡಲೇ ನಾನು ಇಷ್ಟೆಲ್ಲ ಐಶ್ವರ್ಯವನ್ನು ತಮಗೆ ದಾನ ಕೊಡಬೇಕೆಂದು ಸಂಕಲ್ಪ ಮಾಡಿ, ಆನೆ, ಒಂಟೆಗಳ ಮೇಲೆ ಹೇರಿಕೊಂಡು ಇಲ್ಲಿಗೆ ತಂದು ತಮ್ಮ ಅಡಿದಾವರೆಗಳಿಗೆ ಅರ್ಪಿಸಿದ್ದೇನೆ. ಇದನ್ನು ಮರಳಿ ನಾನೆಂತು ತೆಗೆದುಕೊಳ್ಳಲಿ! ತಮ್ಮಂಥ ಯತಿವರೇಣ್ಯರಿಗೆ ದಾನ ಕೊಟ್ಟು ನಾನೆಂದೂ ದತ್ತಾಪಹಾರವನ್ನು ಮಾಡಲಾರೆನು. ಈಗ ಇದನ್ನು ತಾವೂ ಸ್ವೀಕರಿಸದಿದ್ದರೆ ಈ ದ್ರವ್ಯವನ್ನೆಲ್ಲ ಏನು ಮಾಡಬೇಕು ?" ಎಂದು ಚಿಂತಾತುರನಾಗಿ ಕೇಳಿದ.

ಅದಕ್ಕೆ ಅಕ್ಷೋಭ್ಯ ತೀರ್ಥರು ನಕ್ಕು "ಮಹಾರಾಜಾ, ನಾನಂತೂ ಹಣವನ್ನು ಹಿಡಿಯುವದಿಲ್ಲ. ಹೊನ್ನನ್ನು ಮುಟ್ಟುವದಿಲ್ಲ. ಅರ್ಥವೆಂದರೆ ಅನರ್ಥವೆಂದೇ ನನ್ನ

ಭಾವನೆ. ನಾನು ಇದಾವದನ್ನೂ ಸ್ವೀಕರಿಸುವದಿಲ್ಲ. ನಿನಗೂ ಇದು ಬೇಡವಾಗಿ ದ್ದರೆ ಇದನ್ನು ತುಂಗಾ ನದಿಗೆ ಹಾಕಿಬಿಡು."

ಆಗ ಮಹಾರಾಜನು ಹಿರಿಯ ಪಂಡಿತರ ಜೊತೆಗೆ ಆಲೋಚನೆ ಗೈದು ಆ ತುಂಗಾ ಮತ್ತು ಭದ್ರಾ ನದಿಗಳಿಗೆ ಯಾತ್ರಿಕರು ಬಂದು ಸ್ನಾನ ಮಾಡಿಕೊಂಡು ಹೋಗಲು ಅನುಕೂಲವಾಗುವಂತೆ ಉತ್ತಮವಾದ ಕರಿ ಕಲ್ಲುಗಳಿಂದ ಮೆಟ್ಟಲು ಗಳನ್ನು ಕಟ್ಟಿಸಿದನು. 'ನದಿಗೆ ಹಾಕು' ಎಂದ ಶ್ರೀಗಳ ಮಾತನ್ನು ಲೋಕೋಪ ಯೋಗವಾಗುವಂತೆ ಪ್ರಯೋಜನಕಾರಿಯನ್ನಾಗಿ ಮಾಡಿ ಸಾರ್ಥಕಗೊಳಿಸಿದನು.

ಮುಂದೆ ಮಹಾರಾಜನು ಕಾಲಕ್ರಮದಿಂದ ಅಕ್ಷೋಭ್ಯ ತೀರ್ಥ ಶ್ರೀಪಾದಂಗ ಳವರಿಗೆ ಕೂಡಲೀ ಕ್ಷೇತ್ರದಲ್ಲಿ ಭದ್ರ ಭವ್ಯವಾದ ಒಂದು ಮಠವನ್ನು ಕಟ್ಟಿಸಿ ಕೊಟ್ಟನು.

ಇದೇ ಸಮಯದಲ್ಲಿ ವಿಜಯ ನಗರ ಸಾಮ್ರಾಟ ಹರಿಹರನ ಮಗ ನಾದ ಕುಮಾರ ಕೆಂಪರಾಯನು ಮುಳಬಾಗಿಲು ರಾಜಧಾನಿಯಲ್ಲಿ ರಾಜ ಪ್ರತಿ ನಿಧಿಯಾಗಿದ್ದನು. ಶ್ರೀ ವಿದ್ಯಾರಣ್ಯರು ವಿಜಯ ನಗರದಿಂದ ಹೊರಟು ತಮ್ಮ ಸಂಸ್ಥಾನದ ಮೂಲ ಸ್ಥಳವಾದ ಶೃಂಗೇರಿಗೆ ಹೋಗಿ ನೆಲಸಿದ್ದರು.

ಅಕ್ಷೋಭ್ಯ ತೀರ್ಥರು ಮತ್ತೊಮ್ಮೆ ವಿದ್ಯಾರಣ್ಯರನ್ನು ವಾದಕ್ಕಾಗಿ ಆಹ್ವಾನ ಮಾಡಲು ಕೂಡಲೀ ಕ್ಷೇತ್ರದಿಂದ ಶೃಂಗೇರಿ ಕಡೆಗೆ ಹೊರಟರು. ಇದನ್ನು ತಿಳಿದು ಅವರ ಶಿಷ್ಯನೂ ಸೇವಕನೂ ಆದ ಆನೆಗೊಂದಿಯ ಅರಸನು ತನ್ನ ಗಜ, ತುರಗ, ಪಲ್ಲಕ್ಕಿ, ಆನೆ, ಅಂಬಾರಿ ಸಹಿತ ಚತುರಂಗ ಸೈನ್ಯವನ್ನು ಅಕ್ಷೋಭ್ಯ ತೀರ್ಥರಿಗೆ ಕೊಟ್ಟು ಕಳಿಸಿದನು. ಈ ಚತುರಂಗ ಸೇನೆಯ ವೆಚ್ಚ ಖರ್ಚುಗಳನ್ನೆಲ್ಲ ಕೆಳದಿಯ ರಾಜನಾದ ಇಕ್ಕೇರಿಯ ನಾಯಕನಿಗೆ ವಹಿಸಬೇಕೆಂದು ಆನೆಗೊಂದಿಯ ಮಹಾ ರಾಜನು ಅಪ್ಪಣೆ ಮಾಡಿದ್ದನು.

ಈ ಎಲ್ಲ ರಾಜ ಗೌರವದಿಂದ ಶ್ರೀಮದಕ್ಷೋಭ್ಯ ತೀರ್ಥರು ಶೃಂಗೇರಿಗೆ ಬಂದು ವಾದಕ್ಕೆ ಆವ್ಹಾನವನ್ನು ಕೊಟ್ಟು ಕಳಿಸಿದರು. ಆ ಕಾಲದಲ್ಲಿ ವಿಜಯ ನಗರದ ಮಹಾರಾಜನಾದ ಹರಿಹರ ರಾಯನ ಪುತ್ರನಾದ ಮುಳಬಾಗಿಲದ ರಾಜ ಪ್ರತಿ ನಿಧಿಯೂ ವಿದ್ಯಾರಣ್ಯರ ಬಳಿಯಲ್ಲಿಯೇ ಇದ್ದನು.

ರಾಜವೈಭವದಿಂದ ಬಂದು ವಾದ ಭಿಕ್ಷೆಯನ್ನು ಕೇಳಿದ ಯತಿರಾಜರಿಗೆ ಕುಮಾರ ಕೆಂಪರಾಯನ ಎದುರು ಆಗುವದಿಲ್ಲ ಎಂದು ಹೇಳಲಿಕ್ಕೆ ಆಗಲಿಲ್ಲ ಸ್ವಾಭಿ

ಮಾನಿಗಳಾದ ವಿದ್ಯಾರಣ್ಯರಿಗೆ. ಹಾಗೆ ಅವರು ನಿರ್ವೇಧಿಸಿದ್ದರೆ ಶ್ರೀ ಅಕ್ಷೋಭ್ಯ ತೀರ್ಥರ ಜೊತೆಗೆ ವಾಕ್ಯಾರ್ಥ ಮಾಡುವಷ್ಟು ಯೋಗ್ಯತೆಯಾಗಲಿ ಪಾಂಡಿತ್ಯವಾಗಲಿ ವಿದ್ಯಾರಣ್ಯರಲ್ಲಿ ಇಲ್ಲ ಎಂದು ಆ ರಾಜಪುತ್ರನಿಗೆ ಕಲ್ಪನೆಯಾಗುತ್ತಿತ್ತು. ಆದುದರಿಂದ ಅವರು ಅಕ್ಷೋಭ್ಯತೀರ್ಥರ ವಾದಗೋಷ್ಠಿಯ ಆಮಂತ್ರಣವನ್ನು ಅಂಗೀಕರಿಸಿದರು.

ಮುಳಬಾಗಲದ ಸಾಮಂತನಾದ ಕುಮಾರ ಕೆಂಪರಾಯನಿಗೆ ಇದನ್ನು ಕೇಳಿ ಬಹಳ ಕುತೂಹಲವೆನಿಸಿತು.

ಒಬ್ಬರು ಶಂಕರಾಚಾರ್ಯರ ಮಹಾಸಂಸ್ಥಾನದ ಅಧಿಪತಿಗಳು, ಮತ್ತೊಬ್ಬರು ಮಧ್ವಾಚಾರ್ಯರ ಮಹಾಸಂಸ್ಥಾನದ ಅಧಿಪತಿಗಳು. ಒಬ್ಬರು ಷಡ್ದರ್ಶನಾಚಾರ್ಯರು, ಮತ್ತೊಬ್ಬರು ಪ್ರತಿವಾದಿ ಭಯಂಕರರು. ಒಬ್ಬರು ವಿದ್ಯೆಯ ಅರಣ್ಯರು, ಇನ್ನೊಬ್ಬರು ವೇದಾಂತವನದ ಮೃಗರಾಜರು. ಒಬ್ಬರು ರಾಜಗುರುಗಳು, ಮತ್ತೊಬ್ಬರು ಸ್ವಯಂ ಪಂಡಿತರಾಜರು.

ಈ ಇಬ್ಬರು ದಿಗ್ಗಜ ಪಂಡಿತರು ವೇದಾಂತ ವೇದಿಕೆಯಲ್ಲಿ ಸೆಣೆಸ್ಯಾಡುವದನ್ನು ಕಾಣುವದೇ ಒಂದು ಸೊಗಸು. ಇಂಥ ಸಂದರ್ಭದಲ್ಲಿ ಈ ಎರಡು ದಿಗ್ಗಜಗಳು ಪಾಂಡಿತ್ಯದ ಪರಾಕಾಷ್ಠೆಯಲ್ಲಿ ಒಬ್ಬರನ್ನೊಬ್ಬರು ತಾಗಿ-ತಿಕ್ಕಿ, ಎದುರಿಸಿ-ಗದರಿಸಿ, ಖಂಡನ-ಮಂಡನ ಮಾಡುವದನ್ನು ನೋಡದಿದ್ದರೆ ನಮ್ಮ ಜನ್ಮವೇ ವ್ಯರ್ಥ ಎಂದಿತು ಅವನ ಹೊಸ ಹರೆಯದ ಬಿಸಿ ರಕ್ತ.

ಸಂಗ್ರಾಮಾಂಗಣದಲ್ಲಿ ವೀರ ಭಟರು ಒಬ್ಬರೊಬ್ಬರನ್ನು ಹೊಡೆದು-ಬಡಿದು ಕಲಿತನದಿಂದ ಕಾದುವದನ್ನು ಅವನು ಅನೇಕ ಬಾರಿ ನೋಡಿದ್ದ. ಸ್ವಯಂ ಯುದ್ಧ ಮಾಡಿದ್ದ. ಆದರೆ ಉಚ್ಚತರವಾದ ಬೌದ್ಧಿಕ ಮಟ್ಟದಲ್ಲಿ ಭೂತಲ ಬೃಹಸ್ಪತಿಗಳಿಬ್ಬರ ಯುಕ್ತಿ-ಪ್ರಯುಕ್ತಿಗಳ ಎಸೆದಾಟ, ಮಾತಿನ ಮಸೆದಾಟ, ತರ್ಕಗಳ ತೂರಾಟ, ಕೋಟಿ ಕ್ರಮಗಳ ಏರಾಟ ಇವುಗಳನ್ನು ಕಣ್ತುಂಬ ನೋಡಿ, ಕಿವಿ ತುಂಬ ಕೇಳಿ ಆನಂದಪಡಬೇಕೆಂದು ಅವನ ಉತ್ಸಾಹವು ಉಕ್ಕಿನಿಂತಿತು.

ಮತ್ತು ಯಾವಾಗಲೂ ಗೆಲುವಿನ ಹಾರವು ತಮ್ಮ ಗುರುಗಳಾದ ವಿದ್ಯಾರಣ್ಯರ ಕೊರಳಿಗೇ ಎಂಬುದು ಅವರಿಗೆ ದೃಢ ನಿಶ್ಚಯ. ಇದರಿಂದ ತಮ್ಮ ರಾಜ ಗುರುಗಳು ಆದ ಶ್ರೀ ವಿದ್ಯಾರಣ್ಯರ ಕೀರ್ತಿಯ ಗೋಪುರವು ಗಗನ ಚುಂಬಿಯಾಗುವದೆಂದು ಅವನು ಎಣಿಕೆ ಹಾಕಿದ್ದ.

ಆದುದರಿಂದ ಆ ವಿಜಯನಗರದ ಯುವರಾಜನು ಈ ಮುನಿಪುಂಗವರಿಬ್ಬರ ವೇದಾಂತ ವಾಕ್ಯಾರ್ಥವು ತಾನಿದ್ದ ಮುಳಬಾಗಲದಲ್ಲಿಯೇ ನಡೆಯಬೇಕೆಂದು

ಸ್ವಾಮಿಗಳಿಬ್ಬರಿಗೂ ಬಿನ್ನಹ ಮಾಡಿಕೊಂಡ. ಅದಕ್ಕೆಲ್ಲ ತಕ್ಕ ಏರ್ಪಾಡನ್ನು ಮಾಡಿದ. ದೇಶ–ವಿದೇಶಗಳ ಮಹಾರಾಜರಿಗೂ, ಪಂಡಿತ–ಪ್ರತಿಷ್ಠಿತರಿಗೂ ಆಮಂತ್ರಣ ಪತ್ರಗಳು ಹೋದವು.

ಈ ಸುಪ್ರಸಿದ್ಧವಾದ ವಾದ ಸಮರದಲ್ಲಿ ದ್ವೈತ–ಅದ್ವೈತ ಸಿದ್ಧಾಂತಗಳ ತತ್ವ–ಸತ್ವ–ಮಹತ್ವಗಳ ಇತ್ಯರ್ಥವೇ ಆಗುವದಿದ್ದಿತು. ಶಂಕರಾಚಾರ್ಯ ಪೀಠಾಧಿಪತಿಗಳು, ಮಧ್ವಾಚಾರ್ಯ ಪೀಠಾದಿಪತಿಗಳು ಒಂದು ಕಣದಲ್ಲಿ ವಾದದ ಕುಸ್ತಿ ಆಡಲಿಕ್ಕೆ ಹಿಂದೆ ಎಂದೂ ಇಳಿದಿರಲಿಲ್ಲ. ಮುಂದೆಯೂ ಇಳಿಯುಲಿಲ್ಲ.

ಆದರೆ ಇತಿಹಾಸ ಪ್ರಸಿದ್ಧವಾದ ಈ ದಿಗ್ದಂತಿಗಳವಾದ ದ್ವಂದ್ವಕ್ಕೆ ಮಧ್ಯಸ್ಥರಾರು? ಈ ಇಬ್ಬರು ಶಾಸ್ತ್ರಾರ್ಥ ಧುರಂಧರರ ಕೋಟಿ ಕ್ರಮದ ವ್ಯುತ್ಕ್ರಮ, ಪರಾಕ್ರಮಗಳ ನಿರ್ಣಯವನ್ನು ಕೈಕೊಳ್ಳುವ ಪುರುಷ ಸರಸ್ವತಿಯು ಎಲ್ಲಿಂದ ಬರಬೇಕು! ಆ ಮಧ್ಯಸ್ಥರಾಗುವವನು ಇತ್ತ ಮಾಧ್ವನೂ ಆಗಬಾರದು, ಅತ್ತ ಸ್ಮಾರ್ತನೂ ಆಗಬಾರದು ಅಂದರೆ ಮಾತ್ರ ಅವನಿಗೆ ನಿಷ್ಪಕ್ಷ ನಿರ್ಣಯವನ್ನು ಕೈಕೊಳ್ಳಲಿಕ್ಕಾಗುವದು. ಇಂಥ ಮಹಾ ಪಂಡಿತರು ಯಾರು?

ಬಹಳ ಹೊತ್ತು ವಿಚಾರಿಸಿ "ರಾಮಾನುಜ ಮತದ ಪಂಡಿತ ಮಾರ್ತಾಂಡರಾದ ಶ್ರೀ ವೇದಾಂತದೇಶಿಕರು ಮಧ್ಯಸ್ಥರಾದರೆ ನಿಮಗೆ ಒಪ್ಪಿಗೆಯೇ"? ಎಂದು ಕೇಳಿದರು ಶ್ರೀ ವಿದ್ಯಾರಣ್ಯರು ಕೆಂಪರಾಯನ ಸಲಹೆಯಂತೆ.

'ವೇದಾಂತ ದೇಶಿಕ' ಎಂದು ಪ್ರಸಿದ್ಧರಾದ ವೆಂಕಟನಾಥರು ಬಾಲ್ಯದಿಂದಲೂ ವಿದ್ಯಾರಣ್ಯರ ಸ್ನೇಹಿತರು, *ಸಹಾಧ್ಯಾಯಿಗಳು. ಶೃಂಗೇರಿ, ಕಂಚಿ ಮುಂತಾದ ಕಡೆಗಳಲ್ಲಿ ಇಬ್ಬರೂ ಕೂಡಿಯೇ ಶಾಸ್ತ್ರಾಧ್ಯಯನ ಮಾಡಿದವರು. ಇದೆಲ್ಲವನ್ನೂ ತಿಳಿದಿದ್ದರೂ ಶ್ರೀ ಅಕ್ಷೋಭ್ಯ ತೀರ್ಥರು "ಏನಾದರೂ ಆಗಿ ಮೊದಲು ವಾಕ್ಯಾರ್ಥವು ನಡೆಯಲಿ" ಎಂದು ವಿದ್ಯಾರಣ್ಯರ ಮಿತ್ರರ ಮಧ್ಯಸ್ಥಿಗೆ ತಮ್ಮ ಒಪ್ಪಿಗೆಯನ್ನು ಇತ್ತರು.

"ಯಾರಾದರೇನು! ವಾಕ್ಯಾರ್ಥದಲ್ಲಿ ಸೋಲಿಸಿ, ಪ್ರತಿವಾದಿಗಳ ಬಾಯಿಕಟ್ಟಿ, ಮಾತನ್ನು ನಿಲ್ಲಿಸಿ, ಅವರ ವಾದಗಳನ್ನು ಸಂಪೂರ್ಣವಾಗಿ ಖಂಡಿಸಿಬಿಟ್ಟರೆ ಆಯಿತಲ್ಲವೇ? ಎಂಥ ನಿರ್ಣಾಯಕನಾದರೂ ಅಂಥ ಪ್ರಸಂಗದಲ್ಲಿ ತಮ್ಮ ವಿರುದ್ಧ ನಿರ್ಣಯವನ್ನು ಸಾರಲಾರ. ಎಲ್ಲಿ ಹೋದರೂ ಮಧ್ವ ಸಿದ್ಧಾಂತಕ್ಕೆ ಗೆಲವು ಶತಸಿದ್ಧ." ಎಂಬ ಆತ್ಮ ವಿಶ್ವಾಸದ ಕೆಚ್ಚು ನಿಚ್ಚಳವಾಗಿ ವ್ಯಕ್ತವಾಗುತ್ತಿತ್ತು ಅವರ ಆ ಸಮ್ಮತಿಯಲ್ಲಿ.

---

* "Vidyaranyaru" by Madhura Chenna. Aravainda Granthamala. Page No. 22.

ಆದರೆ ಇನ್ನು ಮೇಲೆ ಇಬ್ಬರೂ ಕೂಡಿ ವೇದಾಂತದೇಶಿಕರಿಗೆ ಹೇಳಿ ಕಳಿಸಿ ಅವರು ಬಂದ ಬಳಿಕ ವಾಕ್ಯಾರ್ಥವನ್ನು ಪ್ರಾರಂಭಿಸುವದೆಂದರೆ ತುಂಬ ವಿಲಂಬ ವಾಗುವದು. ಆದುದರಿಂದ "ತಾವಿಬ್ಬರೂ ಮುಳಬಾಗಲದಲ್ಲಿ— ವಿಜಯನಗರ, ಆನೆ ಗೊಂದಿ ಹಾಗೂ ಕೆಳದಿಯ ರಾಜರ ಸಮಕ್ಷಮದಲ್ಲಿ, ಮತ್ತು ಅಲ್ಲಿ ನೆರೆದ ಅನೇಕ ತ್ರಿಮತಸ್ಥ ಪಂಡಿತ ಮಂಡಲಿಯ ಎದುರು, ಇಬ್ಬರೂ ಲೇಖಬದ್ಧವಾಗಿ ವಾಕ್ಯಾರ್ಥ ವನ್ನು ಮಾಡಬೇಕು. ಅನಂತರ ಅದನ್ನು ಬರೆದು ವೇದಾಂತ ದೇಶಿಕರ ಕಡೆಗೆ ಕಳಿಸ ಬೇಕು. ಅವರ ನಿರ್ಣಯವನ್ನು ಇಬ್ಬರೂ ಅಂಗೀಕರಿಸಬೇಕು." ಎಂದು ಪರಸ್ಪರ ಸಮ್ಮತಿಯಿಂದ ಇಬ್ಬರೂ ನಿರ್ಧರಿಸಿದರು.

ಅದರಂತೆ ಮುಳಬಾಗಿಲಲ್ಲಿರುವ ಹಂಚು-ಕಲ್ಲು ಬೆಟ್ಟದ ಮೇಲೆ ಇಬ್ಬರೂ ಶ್ರೀಗಳವರು ನಿರ್ದಿಷ್ಟ ಸ್ಥಳದಲ್ಲಿ ಬಂದು ನೆಲಿಸಿ, ತಮ್ಮ-ತಮ್ಮ ವಾದದ ಸಿದ್ಧತೆಯನ್ನು ಮಾಡತೊಡಗಿದರು. ತಮಗೆ ಸಮ್ಮತರಾದ ತಮ್ಮ ತಮ್ಮ ಮತದ ವಿಶಿಷ್ಟ ಶ್ರೇಷ್ಠರಾದ ಪಂಡಿತರನ್ನು ಕರೆಸಿಕೊಂಡರು. ಅವರವರ ಭಕ್ತರಾದ ರಾಜ–ಮಹಾರಾಜರು ಅಲ್ಲಿಗೆ ಬಂದು ತಮ್ಮ ಸೇನೆಗಳೊಂದಿಗೆ ಬಿಡಾರ ಮಾಡಿದರು. ಕೆಲವೇ ದಿನಗಳಲ್ಲಿ ಆ ಕೆಟ್ಟ ಕಾಡು ಗಂಧರ್ವರ ನಾಡಿನಂತೆ ಕಂಗೊಳಿಸಹತ್ತಿತು.

ಇಬ್ಬರೂ ಶ್ರೀಗಳವರು ಆ ಬೆಟ್ಟದ ಮೇಲಿರುವ ಎರಡು ಬೇರೆ–ಬೇರೆ ಗುಹೆ ಗಳಲ್ಲಿ ತಮ್ಮ ಸಿದ್ಧಾಂತದ ವಿಜಯಕ್ಕಾಗಿ ತಮ್ಮ ಇಷ್ಟ ದೇವತೆಯನ್ನು ಅರ್ಚಿಸಿದರು. ತಮ್ಮ ಮತದ ಗುರುಗಳನ್ನು ಪೂಜಿಸಿದರು. ನಿರ್ಣಾಯಕವಾದ ವಾದ ಸಮರದಲ್ಲಿ ತಮ್ಮ ಸಿದ್ಧಾಂತಕ್ಕೆ ಗೆಲವು ಆಗಬೇಕೆಂಬ ತಪಸ್ಸನ್ನು ಮಾಡಿದರು.

ಮುಳಬಾಗಿಲಿನ ಆ ಹಂಚು–ಕಲ್ಲು ಬೆಟ್ಟದ ಮೇಲೆ ಈಗಲೂ ನಾವು ಎರಡು ಗುಹೆಗಳನ್ನು ಕಾಣಬಹುದು. ಅಲ್ಲಿರುವ ಈಶ್ವರ ದೇವಾಲಯ ಹಾಗೂ ಅದರ ಎದುರಿಗಿರುವ ಗುಹೆಯಲ್ಲಿ ಶ್ರೀ ಅಕ್ಷೋಭ್ಯತೀರ್ಥರೂ ಅವರ ಪರಿವಾರದ ಪಂಡಿತರೂ ಉಳಿದುಕೊಂಡಿದ್ದರು.

ಅದರ ಸಮೀಪದಲ್ಲಿಯೇ ಮತ್ತೊಂದು ಗುಹೆ ಇದೆ. ಅಲ್ಲಿಯೇ ಶ್ರೀ ವಿದ್ಯಾರಣ್ಯರ ವಾಸ. ಅದಕ್ಕೆ ಈಗಲೂ ವಿದ್ಯಾರಣ್ಯ ಗುಹೆಯೆಂದೇ ಕರೆಯುತ್ತಾರೆ. ರಾಜ ಗುರುಗ ಳಾದ ಶ್ರೀ ವಿದ್ಯಾರಣ್ಯರ ಪ್ರಚಂಡ ಪರಿವಾರ ಹಾಗೂ ಅಸಂಖ್ಯ ಅನುಯಾಯಿ ಭಕ್ತ, ಭೃತ್ಯ, ಪಂಡಿತ, ಪ್ರತಿಷ್ಠಿತ ಜನಸ್ತೋಮಕ್ಕಾಗಿ ವಿಜಯನಗರದ ರಾಜರು ಭವ್ಯವಾದ ತಾತ್ಕಾಲಿಕ ವಸತಿ–ಸೌಕರ್ಯಗಳನ್ನು ಸುಂದರವಾಗಿ ಮಾಡಿದ್ದರು. ಬೆಟ್ಟದ ಆಚೀಚೆ ದಿಬ್ಬಗಳ ಡುಬ್ಬದ ಮೇಲೆ ಉಭಯ ಶ್ರೀಗಳವರ ಶಿಷ್ಯರಾದ ಅನೇಕ ರಾಜರ ಚತುರಂಗ ಸೇನಾ ಪರಿವಾರವು ಬೀಡು ಬಿಟ್ಟಿತ್ತು.

ನಿರ್ದಿಷ್ಟಪಡಿಸಿದ ಮುಹೂರ್ತದಲ್ಲಿ ಅನೇಕ ಪಂಡಿತ ಪ್ರಕಾಂಡರ ಹಾಗೂ ರಾಜ-ಮಹಾರಾಜರ ಸಮ್ಮುಖದಲ್ಲಿ ಶ್ರೀ ಅಕ್ಷೋಭ್ಯತೀರ್ಥರಿಗೂ ಹಾಗೂ ವಿದ್ಯಾರಣ್ಯರಿಗೂ "ತತ್ತ್ವಮಸಿ" ಎಂಬ ಶ್ರುತ್ಯರ್ಥ ವಿಷಯದಲ್ಲಿ ವಾಕ್ಯಾರ್ಥವು ಪ್ರಾರಂಭವಾಯಿತು.

## "ತತ್ತ್ವಮಸಿ" ವಾಕ್ಯಾರ್ಥ

"ಈ ವೇದವಾಕ್ಯವು ಸರ್ವಜ್ಞತ್ವ ವಿಶಿಷ್ಟನಾದ ಪರಮಾತ್ಮನಿಗೂ, ಅಲ್ಪಜ್ಞತ್ವ ವಿಶಿಷ್ಟನಾದ ಜೀವಾತ್ಮನಿಗೂ ಜಹದಜಹಲ್ಲಕ್ಷಣಾವೃತ್ತಿಯಿಂದ 'ತತ್ ತ್ವಮ್ ಅಸಿ' 'ಅವನೇ ನೀನು ಇರುತ್ತೀ' ಎಂದು ವಿಶೇಷಣ ತ್ಯಾಗ ಪೂರ್ವಕವಾಗಿ ಶುದ್ಧ ಚಿತ್ತುಗಳಿಗೆ ಐಕ್ಯವನ್ನು ಬೋಧಿಸುತ್ತದೆ. ಜೀವ-ಬ್ರಹ್ಮರುಗಳ ಐಕ್ಯ ವಿಷಯದಲ್ಲಿ ಅಖಂಡಾರ್ಥ ಬೋಧಕವಾದ ಈ ತತ್ತ್ವಮಸಿ ಎಂಬ ವಾಕ್ಯವು ಪರಮ ಪ್ರಮಾಣವಾಗಿದೆ" ಎಂದು ವಿದ್ಯಾರಣ್ಯರು ವಾದಿಸಿದರು.

ಶ್ರೀ ಅಕ್ಷೋಭ್ಯ ತೀರ್ಥರು ಆ ಮಾತನ್ನು ಖಂಡಿಸುತ್ತ "ಸರ್ವಜ್ಞತ್ವ ವಿಶಿಷ್ಟನಾದ ಪರಮಾತ್ಮನಿಗೂ ಅಲ್ಪಜ್ಞತ್ವ ವಿಶಿಷ್ಟನಾದ ಜೀವಾತ್ಮನಿಗೂ ಅಭೇದವು ದಹನ ತುಹಿನಗಳಂತೆ ಎಂದೂ ಕೂಡುವದಿಲ್ಲ. ಮುಖ್ಯಾರ್ಥಕ್ಕೆ ಬಾಧಕವಿಲ್ಲದಾಗ ಗೌಣವಾದ ಲಕ್ಷಣಾ ವೃತ್ತಿಯನ್ನು ಅಂಗೀಕರಿಸುವದು ಶಾಸ್ತ್ರ ಮರ್ಯಾದೆಗೆ ವಿರುದ್ಧವಾಗಿದೆ. ಮತ್ತು ಜಹದಜಹಲ್ಲಕ್ಷಣಾವೆನ್ನುವದು ಅಪ್ರಾಮಾಣಿಕ ಯಾವ ಶಾಸ್ತ್ರಕಾರರೂ ಇಂಥ ವಿಲಕ್ಷಣವಾದ ಲಕ್ಷಣವನ್ನು ಅಂಗೀಕರಿಸಿಲ್ಲ. ಮತ್ತು ಉಪಕ್ರಮ ಉಪಸಂಹಾರಗಳನ್ನು ಪರಿಶೀಲನ ಮಾಡಿದರೆ ಆ ಶ್ರುತಿಗೆ ಜೀವ ಬ್ರಹ್ಮರ ಐಕ್ಯ ಬೋಧನದಲ್ಲಿ ಸರ್ವಥಾ ತಾತ್ಪರ್ಯವಿಲ್ಲ ಎಂದು ಗೊತ್ತಾಗುವದು.

ಭೇದ ಜ್ಞಾನವು ಅತಿ ಸೂಕ್ಷ್ಮವಾದುದರಿಂದ ಉದ್ದಾಲಕ ಮಹರ್ಷಿಯು ಶ್ವೇತಕೇತುವಿಗೆ ಜೀವಬ್ರಹ್ಮರಲ್ಲಿಯ ಭೇದವನ್ನು ಮನಗಾಣಿಸಿಕೊಡುವದಕ್ಕಾಗಿ ಒಂಬತ್ತು ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. ಆ ಎಲ್ಲ ದೃಷ್ಟಾಂತಗಳೂ ಭೇದ ಬೋಧಕವೂ ಐಕ್ಯ ಬಾಧಕವೂ ಆಗಿವೆ.

> ನವಕೃತ್ವೋ ಭಿನ್ನಸ್ಯ ವಸ್ತುನಃ ಭೇದಾ ಪರಿಜ್ಞಾನಾತ್ ಅನರ್ಥಂ,
> ಸೂಕ್ಷ್ಮತ್ವಾತ್ ಭೇದಸ್ಯ ದುರ್ಜೇಯತ್ವಂ ಸದೃಷ್ಟಾಂತಂ ತಾತ್ಪರ್ಯೇಣ ಆಹ।
> ನ ಚ ಭೇದೇ ಕ್ವಚಿದ್ ದೃಷ್ಟಾಂತಃ ಉಕ್ತಃ । ನ ಪಿ ಶಕುನಿ ಸೂತ್ರಯೋಃ,
> ನಾನಾ ವೃಕ್ಷ ರಸಾನಾಂ, ನದೀ ಸಮುದ್ರಯೋಃ, ವೃಕ್ಷ ಪರಮಾತ್ಮನೋಃ,
> ಲವಣೋದಕಯೋಃ, ಪುರುಷ ಗಾಂಧಾರಯೋಃ, ನಿಯತಜ್ಞಾನ ಅನಿಯತ
> ಜ್ಞಾನಯೋಃ, ಚೋರ ಅಸ್ತೈಯಮಾಣಯೋಶ್ಚ ಅಭೇದೋಸ್ತಿ ।

ಈ ಉಪನಿಷತ್ತಿನಲ್ಲಿ ಕೊಟ್ಟ ದೃಷ್ಟಾಂತಗಳಲ್ಲಿ ಹಕ್ಕಿಗೂ ಮತ್ತು ಅದರ ಬಲೆಗೂ ಐಕ್ಯವಿಲ್ಲ, ಅವೆರಡೂ ಭಿನ್ನ ಭಿನ್ನವಾಗಿವೆ. ಇದರಂತೆ ಗಿಡ ಹಾಗೂ ಅದರ ಹಂಣಿನ ರಸ, ನದೀ ಸಮುದ್ರ, ಮರ ಮತ್ತು ಪರಮಾತ್ಮ, ಧಾನ್ಯ ಮತ್ತು ಪರಮಾತ್ಮ, ಉಪ್ಪು ಮತ್ತು ನೀರು, ಪುರುಷ ಮತ್ತು ಗಾಂಧಾರ ದೇಶ, ನಿಯತ ಜ್ಞಾನ ಅನಿಯತ ಜ್ಞಾನ, ಕಳ್ಳ ಹಾಗೂ ಅವನು ಕದಿಯುವ ಮಾಲು ಇವುಗಳಲ್ಲಿ ಎಂದೂ ಅಭೇದವಿಲ್ಲ. ಇವೆಲ್ಲವೂ ಭಿನ್ನಭಿನ್ನವಾದಂತೆ ಜೀವ ಪರಮಾತ್ಮರಲ್ಲಿಯೂ ಭೇದವಿದೆ ಎಂದು ಭೇದ ವಿಷಯದಲ್ಲಿ ಒಂಬತ್ತು ದೃಷ್ಟಾಂತಗಳನ್ನು ಹೇಳಿದ್ದಾರೆ. ಅಭೇದ ವಿಷಯದಲ್ಲಿ ಮಾತ್ರ ಈ ಉಪನಿಷತ್ತು ಒಂದೂ ದೃಷ್ಟಾಂತವನ್ನು ಹೇಳಲಿಲ್ಲ. ಆದುದರಿಂದ 'ಸ ಆತ್ಮಾ ತತ್ತ್ವಮಸಿ' ಎಂಬ ವಾಕ್ಯದ 'ಸ ಆತ್ಮಾ' ಎಂಬ ಅ ಕಾರ ಪ್ರಶ್ಲೇಷ ಮಾಡಿಕೊಂಡು 'ಅತತ್ತ್ವ ಮಸಿ' ನೀನು ಆ ಪರಮಾತ್ಮನಿಂದ ಭಿನ್ನನಿರುತ್ತೀ ಎಂದು ಅರ್ಥ ಮಾಡಬೇಕು. ಅ ಕಾರ ಪ್ರಶ್ಲೇಷವನ್ನು ಮಾಡಿಕೊಳ್ಳದಿದ್ದರೂ ತತ್ತ್ವಮಸಿ ಎಂಬ ವಾಕ್ಯಕ್ಕೆ ಸುಪಾಂ ಸುಲುಕ್ .... ಎಂಬ ಸೂತ್ರದಿಂದ ತೇನ ತ್ವಮಸಿ, ತಸ್ಮಾತ್ ತ್ವಮಸಿ, ತಸ್ಮಿನ್ ತ್ವಮಸಿ ಎಂದು ಬೇರೆ ಬೇರೆಯಾಗಿ ಅರ್ಥ ಮಾಡಬೇಕು. ಅದರ ತಾತ್ಪರ್ಯ

" ಎಲೋ ಶ್ವೇತಕೇತುವೇ ತತ್ ತ್ವಮಸಿ = ತಸ್ಮಾತ್ ತ್ವಮಸಿ

ಆ ಪರಮಾತ್ಮನಿಂದ ನೀನು ಉತ್ಪನ್ನನಾಗಿರುತ್ತಿ.

ತಸ್ಮಿನ್ ತ್ವಮಸಿ = ಆ ಪರಮಾತ್ಮನನ್ನು ಆಶ್ರಯಿಸಿ ಅವನನ್ನೇ ಆಧರಿಸಿ ನೀನು ಇರುವಿ.

ತೇನ ತ್ವಮಸಿ = ಆ ಪರಮಾತ್ಮನ ಪ್ರಸಾದದ್ವಾರಾ ನೀನು ಮೋಕ್ಷವನ್ನು ಹೊಂದಲು ಯೋಗ್ಯನಾಗುತ್ತಿ.

ಛಾಂದೋಗ್ಯೋಪನಿಷತ್ತಿನ ಆರನೇಯ ಅಧ್ಯಾಯದಲ್ಲಿಯ ಈ ವೇದ ವಚನಕ್ಕೆ ಇದೇ ರೀತಿಯಾಗಿಯೇ ಅರ್ಥ ಮಾಡಬೇಕು.

ಈ ಭೇದಪರವಾದ ಅರ್ಥವೇ ಪೂರ್ವಾಪರ ವಾಕ್ಯಗಳಿಗೆ ಸುಸಂಗತವಾಗುತ್ತದೆ.

" ಸನ್ಮೂಲಾಃ ಸೌಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್‌ಪ್ರತಿಷ್ಠಾಃ "

ಎಂಬ ಇದರ ಅವ್ಯವಹಿತ ಪೂರ್ವ ವೃತ್ತಿಯಾದ ಉಪನಿಷದ್ವಾಕ್ಯವನ್ನು ನೋಡಿದರೂ ಕೂಡ ಭೇದ ಪರವಾಗಿ ಅರ್ಥ ಮಾಡುವದೇ ಸೂಕ್ತವು ಎಂದು ಖಚಿತವಾಗಿ ತಿಳಿದು ಬರುವದು.

ಹೆ ಸೌಮ್ಯ = ಎಲೌ ಶ್ವೇತಕೇತುವೇ

ಇಮಾಃ ಸರ್ವಾಃ ಪ್ರಜಾಃ = ನಾನು ನೀನು ವೊದಲಾದ ಎಲ್ಲ ಜನರು

ಸನ್ಮೂಲಾಃ = ಸತ್ ಎಂಬ ಹೆಸರುಳ್ಳ ಪರಮಾತ್ಮನಿಂದ ಉತ್ಪನ್ನರಾಗಿರುತ್ತಾರೆ

ಸದಾಯತನಾಃ = ಸರ್ವರಿಗೂ ಸತ್ತಾಪ್ರದನಾದ ಆ ಪರಮಾತ್ಮನನ್ನೇ ಆಶ್ರಯಿಸಿಕೊಂಡು ಇರುತ್ತಾರೆ.

ಸತ್ ಪ್ರತಿಷ್ಠಾಃ = ಜಗತ್ತಿಗೆಲ್ಲ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುವ ಆ ಪರಮಾತ್ಮನಿಂದಲೇ ಮುಕ್ತಿರೂಪವಾದ ಉತ್ತಮ ಸ್ಥಿತಿಯನ್ನು ಹೊಂಮುತ್ತಾರೆ. ಈ ಪೂರ್ವವಾಕ್ಯದ ಅರ್ಥಕ್ಕೆ ಅನುಸರಿಸಿ ತತ್ವಮಸಿ ಎಂಬ ವಾಕ್ಯಕ್ಕಾದರೂ ತಸ್ಮಾತ್ ತ್ವಮಸಿ, ತಸ್ಮಿನ್ ತ್ವಮಸಿ, ತೇನತ್ವಮಸಿ. ಬ್ರಹ್ಮನಿಂದ ಜನಿಸಿ, ಬ್ರಹ್ಮನನ್ನೇ ಆಶ್ರಯಿಸಿ, ಆ ಬ್ರಹ್ಮದ್ವಾರಾ ಮೋಕ್ಷವನ್ನು ಹೊಂದುವಿ ಎಂದು ಅರ್ಥ ಮಾಡುವದೇ ಸಂದರ್ಭಕ್ಕೆ ಅನುಗುಣವಾಗುವದು.

ಮತ್ತು ಪ್ರಕರಣ ಸಂಗತಿಯನ್ನು ವಿಚಾರಿಸಿದರೆ ಜೀವ—ಬ್ರಹ್ಮರ ಭೇದ ಬೋಧನೆಯೇ ಔಚಿತ್ಯಪೂರ್ಣವೆನಿಸುವದು. ಹನ್ನೆರಡು ವರ್ಷ ಗುರುಕುಲದಲ್ಲಿ ವೇದ ಶಾಸ್ತ್ರಗಳನ್ನು ಓದಿ ಪಾಂಡಿತ್ಯದ ಮದದಿಂದ ಅವಿನೀತನಾದ ತನ್ನ ಮಗನ ಅಹಂಕಾರವನ್ನು ಕಡಿಮೆ ಮಾಡುವದಕ್ಕಾಗಿ ಅವನ ತಂದೆಯಾದ ಉದ್ಧಾಲಕ ಮಹರ್ಷಿಯು ಉಪದೇಶ ಕೊಡಲು ಇಲ್ಲಿ ಪ್ರಾರಂಭಿಸಿದ್ದಾನೆ. ಈ ಪ್ರಕರಣದಲ್ಲಿ ತತ್ವಮಸಿ ಎಂಬ ವಾಕ್ಯಕ್ಕೆ ಮಾಯಾ ವಾದಿಗಳು ಅರ್ಥ ಮಾಡಿದಂತೆ "ಹೇ ಶ್ವೇತಕೇತು, ನೀನು ಸಾಕ್ಷಾತ್ ಬ್ರಹ್ಮನೇ ಇರುವಿ" ಎಂದು ಅರ್ಥ ಮಾಡಿದರೆ ಎಂಥ ಅನರ್ಥವಾದೀತು! ಮೊದಲೇ ವಿದ್ಯೆಯ ಮದದಿಂದ ಬೀಗಿ ನಿಂತ ಆ ಮಗನಿಗೆ ನೀನು ಬ್ರಹ್ಮ ಎಂದು ಹೇಳಿದರೆ ಅವನು ಗರ್ವದ ಗೋಪುರವನ್ನೇ ಏರಬಹುದು. ಉದ್ದಾಲಕ ಮಹರ್ಷಿಯು ತನ್ನ ಉದ್ದೇಶಕ್ಕೆ ವಿರುದ್ಧವಾಗಿ ಮೊದಲೇ ಮತ್ತನಾದ ಮಗನನ್ನು ಮತ್ತಿಷ್ಟು ಉನ್ಮತ್ತನನ್ನಾಗಿ ಮಾಡುವಂಥ ವಚನವನ್ನು ಎಂದೂ ಪ್ರಯೋಗಿಸಲಾರ. ಆದುದರಿಂದ ಅವನು ಪ್ರಯೋಗಿಸಿದ, ಮಗನ ಅಹಂಕಾರವನ್ನು ಕಡಿಮೆ ಮಾಡಲಿಕ್ಕಾಗಿ ಉಪದೇಶಿಸಿದ ಈ ತತ್ವಮಸಿ ಎಂಬ ವಾಕ್ಯಕ್ಕೆ—

"ತಮ್ಮ, ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳು ಆ ಪರಬ್ರಹ್ಮನಿಂದಲೇ ಜನಿಸಿ ಜೀವಿಸಿ ಕೊನೆಗೆ ಗತಿಕಾಣುವಂತೆ ನೀನಾದರೂ ಅವನಿಂದಲೇ ಹುಟ್ಟಿರುವಿ, ಅವನಿಂದಲೇ ಬದುಕಿರುವಿ ಆದುದರಿಂದ ಅವನನ್ನೇ ಆರಾಧಿಸಿ ಅವನ ಅನುಗ್ರಹವನ್ನು ಪಡೆದು ಅವನ ಪ್ರಸಾದದಿಂದ ಮೋಕ್ಷವನ್ನು ಹೊಂದು" ಎಂಬ ಅಭಿಪ್ರಾಯದಿಂದ

ತತ್ವಮಸಿ ಎಂಬ ವಾಕ್ಯವನ್ನು ಉದ್ದಾಲಕ ಮಹರ್ಷಿಯು ಉಪದೇಶಿಸಿದ್ದಾನೆ. ದ್ವಾಸುಪರ್ಣಾ,....'ಏತಸ್ಯ' 'ಅಕ್ಷರಸ್ಯಪ್ರಶಾಸನೇ,....' ಸತ್ಯಂಭಿದಾ,....'ಭೇದಪದೇ, ಶಾತ್' ಮುಂತಾದ ಸಹಸ್ರಾವಧಿ ಶ್ರುತಿ_ಸ್ಮೃತಿ–ಸೂತ್ರ–ಪುರಾಣ ಪ್ರಮಾಣ ವಚನ ಗಳು ಭೇದಪರ ಅರ್ಥಕ್ಕೆ ಉಪಷ್ಟಂಭಕವಾಗಿವೆ. ಜೀವೇಶ್ವರ ಐಕ್ಯಪರವಾಗಿ ಈ ಶ್ರುತಿಗೆ ಅರ್ಥ ಮಾಡಿದರೆ ಈ ಎಲ್ಲ ಪ್ರಮಾಣ ವಚನಗಳ ವಿರೋಧವು ಬರುವದು. ಇದಲ್ಲದೇ ಸಾಮ ಸಂಹಿತೆಯಲ್ಲಿಯು—

"ಅತತ್ವಮಸಿ ಪುತ್ರೇತಿ ಯ ಉಕ್ತೋ ಗೌತಮೇನ ತು
ನವಕೃತ್ವಃ ಸದೃಷ್ಟಾಂತಂ ಸರ್ವಂ ಭೇದೇನ ಕೇಶವಃ ॥"

ಈ ಪ್ರಮಾಣ ವಚನದಿಂದ ತತ್ವಮಸಿ ಎಂಬ ವಾಕ್ಯದಲ್ಲಿ ಒಂಭತ್ತು ದೃಷ್ಟಾಂತ ಪೂರ್ವಕವಾಗಿ ಜೀವೇಶ್ವರ ಭೇದವನ್ನೇ ಬೋಧಿಸಿದ್ದಾರೆ ಎಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಐಕ್ಯಪರವಾದ ಅರ್ಥದಲ್ಲಿ ಪ್ರಬಲ ಶ್ರುತಿ ವಿರೋಧ, ಸಂದರ್ಭ ವಿರೋಧ, ಪ್ರಕರಣ ವಿರೋಧ, ವಾಕ್ಯ ವಿಸಂಗತಿ, ಅಮುಖ್ಯಾರ್ಥ ಆಶ್ರಯಣ, ಅಪ್ರಾಮಾಣಿಕ ವಾದ ಹೊಸ ಲಕ್ಷಣವನ್ನು ಕಲ್ಪಿಸುವದು. ಹೀಗೆ ಒಂದಲ್ಲ ಅನೇಕಾನೇಕ ದೋಷ ಗಳು ಬರುವದರಿಂದ, ಇರುವದರಿಂದ ಸರ್ವಜ್ಞರಾದ ನಮ್ಮ ಮಧ್ವಮುನಿ ಗಳು ಹೇಳಿದಂತೆ— ಭೇದಪರವಾಗಿ ಅರ್ಥವನ್ನು ಮಾಡುವದೇ ಸಮುಚಿತವೂ ಆಗಿದೆ, ಸಮಂಜಸವೂ ಆಗಿದೆ, ಯುಕ್ತಿ ಯುಕ್ತವೂ ಆಗಿದೆ, ಸೂಕ್ತವೂ ಆಗಿದೆ, ಎಂದು ಸ್ಪಷ್ಟವಾಗಿ, ವಿವರವಾಗಿ, ಪುಂಖಾನು-ಪುಂಖವಾಗಿ ನಿಗಮಾಗಮ ಪ್ರಮಾಣ ವಚನ ಗಳನ್ನು ಉದಾಹರಿಸುತ್ತ ಶ್ರೀ ಅಕ್ಷೋಭ್ಯತೀರ್ಥ ಮುನಿಗಳು ತತ್ವಮಸಿ ವಾಕ್ಯದ ಮೇಲಿನ ಅದ್ವೈತ ವಾದವನ್ನೆಲ್ಲ ಅಕ್ಷರಶಃ ಖಂಡಿಸಿ ದ್ವೈತವಾದವನ್ನು ಮಂಡಿಸಿದರು.

ಸಾಗರದ ನಿರ್ಘೋಷದಂತೆ, ಸ್ವರ್ಗಂಗೆಯ ತಡಸಲಿನಂತೆ ನಿರರ್ಗಳವಾಗಿ ಪ್ರವ ಹಿಸುವ ಈ ಮಾಧ್ವ ಯತಿಗಳ ವಾಗ್ವೈಖರಿಯನ್ನೂ, ಶ್ರುತಿ ವಾದವನ್ನು ಖಂಡಿ ಸುವ ಚಾತುರ್ಯವನ್ನೂ, ಹೇರಳವಾಗಿ ತಕ್ಷಣದಲ್ಲಿಯೇ ನಿರವಕಾಶ ಪ್ರಮಾಣ ಗಳನ್ನು ಉದಾಹರಿಸುತ್ತ ಅವರ ಸ್ವಮತ ಮಂಡನದ ಮಾದರಿಯನ್ನೂ ಮೂರು ಮತದ ಪಂಡಿತರೆಲ್ಲರೂ ನಿಬ್ಬೆರಗಾಗಿ ಕೇಳುತ್ತ ಕುಳಿತಿದ್ದರು.

ಇವರ ವಾದಕ್ಕೆ ಪ್ರತಿಯಾಗಿ ವಿದ್ಯಾರಣ್ಯರು ತುಸು ಹೊತ್ತು ತಲೆ ತುರಿಸಿ, ವಿಚಾರಿಸಿ, ಅನೇಕ ಗ್ರಂಥಗಳನ್ನು ಇದ್ದಲ್ಲಿ ತರಿಸಿ, ತಮ್ಮ ಮಠೀಯ ಪಂಡಿತರೊಡನೆ ಚರ್ಚಿಸಿ-ವಿಚಾರಿಸಿ ಉತ್ತರವನ್ನು ಹೇಳುತ್ತಿದ್ದರು. ವಿದ್ಯಾರಣ್ಯರು ತಮ್ಮ ಆಕ್ಷೇಪ ಹಾಗೂ ಉತ್ತರ ವಚನಗಳ ಉಪನ್ಯಾಸಗಳನ್ನು ಮಾಡುವವನ್ನುರಲ್ಲಿಯೇ ವಿಲಕ್ಷಣ

ಪ್ರತಿಭೆಯುಳ್ಳ ಅಕ್ಷೋಭ್ಯತೀರ್ಥರು ತಕ್ಷಣದಲ್ಲಿಯೇ ಅವರ ವಾದ ವಚನಗಳನ್ನೆಲ್ಲ ನಿಶಿತವಾದ ಯುಕ್ತಿಗಳಿಂದ ಖಂಡಿಸುತ್ತಿದ್ದರು. ಅದಕ್ಕೆ ಉಪಷ್ಟಂಭಕವಾಗಿ ಅನೇಕ ವೇದ-ವೇದಾಂತ ವಚನಗಳನ್ನು ಉದಾಹರಿಸಿ ಅವರ ವಾದದಲ್ಲಿಯ— ವಿಸಂಗತಿ, ವೈಸಾದೃಶ್ಯ, ವ್ಯಾಹತಿ, ಪ್ರಮಾಣ ವಿರೋಧ, ಅನ್ಯೋನ್ಯಾಶ್ರಯ ಮುಂತಾದ ದೋಷಗಳನ್ನು ತೋರಿಸಿ ಕೊಟ್ಟು ಅವರ ವಾಗ್ಬಂಧನ ಮಾಡಿಬಿಡುತ್ತಿದ್ದರು.

ಶ್ರೀ ಅಕ್ಷೋಭ್ಯ ತೀರ್ಥರು ಅನೇಕ ಪ್ರಮಾಣ ಪುಂಜಗಳಿಂದ ಉಪ್ಪೋದ್ಬಲಿತವಾದ ತರ್ಕಾನುಬದ್ಧ ಮಧ್ವ ಸಿದ್ಧಾಂತವನ್ನು ಇದಮಿತ್ಥಂ ಎಂದು ಖಚಿತವಾದ ಆತ್ಮವಿಶ್ವಾಸದ ಶುದ್ಧ ಸರಣಿಯಲ್ಲಿ ಮಂಡಿಸಿದಾಗ ಶ್ರೀ ವಿದ್ಯಾರಣ್ಯರು ಮೌನವನ್ನೇ ವಹಿಸಬೇಕಾಗುತ್ತಿತ್ತು.

ಹೀಗೆ ವಾಕ್ಯಾರ್ಥದ ಒಂದೊಂದು ಘಟ್ಟಕ್ಕೂ ಅಕ್ಷೋಭ್ಯ ತೀರ್ಥರು ವಿದ್ಯಾರಣ್ಯರ ಅದ್ವೈತವಾದದ ಪ್ರತಿಯೊಂದು ವಿಧಾನವನ್ನೂ ನಿರಾಕರಣ ಮಾಡಿ ಅವರ ಮೇಲೆ ಕೋಟಿ ಕ್ರಮದ ಆಕ್ಷೇಪಗಳ ಗೋಪುರವನ್ನೇ ಎತ್ತಿ ಕಟ್ಟಿ ಅನಂತರ ಸ್ವಮತ ಮಂಡನದ ಸಂದರ್ಭದಲ್ಲಿ ಅನೇಕ ಪ್ರಮಾಣ ಪರಿಬೃಂಹಿತ ವೈಷ್ಣವ ತತ್ವಗಳನ್ನು ಸಭಿಕರೆದುರು ಇಟ್ಟಾಗ ವಿದ್ಯಾರಣ್ಯರು ಹೆಜ್ಜೆ ಹೆಜ್ಜೆಗೂ ಮೂಕರಾಗತೊಡಗಿದರು.

ಇವರಿಬ್ಬರ ವಾದ ಪ್ರತಿವಾದಗಳನ್ನೆಲ್ಲ ರಾಜ ಪ್ರಮುಖರು ನಿಯಮಿಸಿದ ಶೀಘ್ರಲಿಪಿಕಾರರು ಬರೆದುಕೊಳ್ಳುತ್ತಿದ್ದರು.

ಅಥ ಪತ್ರೇಷು ಲಿಖಿತಾ ಮನಯೋರ್ಯುಕ್ತಿ ಸಂತತಿಂ ।
ದರ್ಶಯಂತಿ ಸ್ಮ ಗುರವೇ ರಾಜ್ಞಾ ಕೇಚನ ಚೋದಿತಾಃ ॥

( ಆಚಾರ್ಯಚಂಪು ೫-೫೧ )

ವಿದ್ಯಾರಣ್ಯರು ಮೇಲಿಂದ ಮೇಲೆ ನಿರುತ್ತರರಾಗಿ ಮೌನಿಗಳಾಗುವ ಪ್ರಸಂಗವನ್ನು ನೋಡಿದ ಅಲ್ಲಿಯ ಜನರಿಗೆಲ್ಲರಿಗೂ ಶ್ರೀ ಅಕ್ಷೋಭ್ಯ ತೀರ್ಥರ ಗೆಲವು ಅರ್ಥವಾಯಿತು.

ವಿದ್ಯಾರಣ್ಯರಿಗೆ ಮುಂದೆ ಏನೂ ಉತ್ತರ ಹೇಳಲಿಕ್ಕೆ ಬಾರದಂತೆ ಆಗಿ ಅವರು ಸುಮ್ಮನೆ ಕುಳಿತುಕೊಂಡಾಗ ರಾಜಪ್ರಮುಖರು ಸಭಾ ವಿಸರ್ಜನೆಯನ್ನು ಮಾಡಿದರು.

ಮೊದಲೇ ನಿರ್ಣಯವಾದಂತೆ ಅವರಿಬ್ಬರ ವಾಕ್ಯಾರ್ಥದ ವಿಷಯಗಳನ್ನೆಲ್ಲ ಪೂರ್ತಿಯಾಗಿ ಕರಣಿಕರು ಬರೆದು ತೆಗೆದಿದ್ದರು. ಅವುಗಳಿಗೆ ಇಬ್ಬರೂ ಶ್ರೀಪಾದಂಗಳವರ ಹಸ್ತಾಕ್ಷರವನ್ನು ಮಾಡಿಸಿ ಮಧ್ಯಸ್ಥರಿಂದು ನಿರ್ಧರಿಸಲಾದ ಶ್ರೀ ವೇದಾಂತ ದೇಶಿಕರ ಕಡೆಗೆ ಕೊಟ್ಟು ಕಳಿಸಲಾಯಿತು.

ಚತುಃಶಾಸ್ತ್ರ ಪಂಡಿತರಾದ ಶ್ರೀ ವೇದಾಂತ ದೇಶಿಕರು ಎರಡೂ ಪಕ್ಷಗಳ ಉಕ್ತಿಗಳನ್ನೂ ಯುಕ್ತಿಗಳನ್ನೂ ಸರಿಯಾಗಿ ಪರಾಮರ್ಶ ಮಾಡಿ ತಮ್ಮ ನಿರ್ಣಯವನ್ನು ಒಂದು ಪದ್ಯರೂಪವಾಗಿ ಬರೆದು ಕೊಟ್ಟು ಕಳಿಸಿದರು. ಇದೇ ಆ ಸುಪ್ರಸಿದ್ಧ ಪದ್ಯವು.

**ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ ।**
**ವಿದ್ಯಾರಣ್ಯ ಮಹಾರಣ್ಯ ಮಕ್ಷೋಭ್ಯ ಮುನಿರಚ್ಛಿನತ್ ॥**

ಜೀವ ಬ್ರಹ್ಮರ ಭೇದವನ್ನು ಪ್ರತಿಪಾದಿಸುವ 'ತತ್ವಮಸಿ' ಎಂಬ ಖಡ್ಗದಿಂದ ವಿದ್ಯಾರಣ್ಯರೆಂಬ ದೊಡ್ಡ ಅರಣ್ಯವನ್ನು ಅಕ್ಷೋಭ್ಯತೀರ್ಥರೆಂಬ ಮುನಿಗಳು ಕಡಿದು ಹಾಕಿದರು.

ಅನೇಕ ಶಾಸ್ತ್ರ ಗ್ರಂಥಗಳ ಜೊತೆಗೆ ಪಾದುಕಾಸಹಸ್ರ, ಯಾದವಾಭ್ಯುದಯ ಮುಂತಾದ ಸರಸ ಕಾವ್ಯಗಳನ್ನು ಬರೆದು "ಕವಿತಾರ್ಕಿಕಸಿಂಹ" ಎಂದು ಹೆಸರಾದ ಶ್ರೀ ವೇದಾಂತ ದೇಶಿಕರ ನಿರ್ಣಯವು ನಿಷ್ಪಕ್ಷಪಾತವೂ ಖಚಿತವೂ ಆದಂತೆ ಸೂತ್ರ ರೂಪವೂ ಕಾವ್ಯ ರೂಪವೂ ಆಗಿದ್ದಿತು. ಅವರ ನಿರ್ಣಯವನ್ನು ತಂದು ಸಭೆಯಲ್ಲಿ ಓದಿಸಿದಾಗ ಶ್ರೀ ಅಕ್ಷೋಭ್ಯ ತೀರ್ಥರ ಪಾದ ಕಮಲಗಳಿಗೆ ಎಲ್ಲ ರಾಜ ಮಹಾರಾಜರೂ ಎಲ್ಲ ಮಂತ್ರಿ ಮಹಾಜನರೂ, ಎಲ್ಲ ಮತದ ಪಂಡಿತರೂ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದರು.

ಮಾಕರ್ಣ್ಯ ಜೃಂಭಿತ ಹಷಃ ಸ್ತಂಭಿತ ವಿಪಕ್ಷಪಕ್ಷಂ ।
ಅಕ್ಷೋಭ್ಯಂ ಅಕ್ಷೋಭ್ಯ ಮುನಿಂ ಮಧ್ಯೇ ಸಭಂ ಭೃಶಂ ಪ್ರಶಸಂಸ ॥

ಕೂಡಲೇ ಕುಮಾರ ಕಂಪರಾಯನೂ ಹಾಗೂ ಆನೆಗೊಂದೆಯ ರಾಜನೂ ಶ್ರೀ ಅಕ್ಷೋಭ್ಯ ತೀರ್ಥರ ಅಪ್ಪಣೆಯ ಪ್ರಕಾರ ಈ ಘಟನೆಯನ್ನು ಶಿಲಾ ಶಾಸನವನ್ನಾಗಿ ಮಾಡಿ ಕೊರೆಯಿಸಿ ಇಟ್ಟರು.ಆ ಸ್ಥಳದಲ್ಲಿ ಒಂದು ದೊಡ್ಡ ಜಯ ಸ್ತಂಭವನ್ನು ನೆಟ್ಟು ಅದರ ಮೇಲೆ ವಿದ್ಯಾರಣ್ಯ ಹಾಗೂ ಅಕ್ಷೋಭ್ಯ ತೀರ್ಥರ ನಡುವೆ ನಡೆದ ವಾದ ವಿವಾದವನ್ನು ಉಲ್ಲೇಖಿಸಿ ಶ್ರೀ ವೇದಾಂತ ದೇಶಿಕರ ನಿರ್ಣಾಯಕ ಪದ್ಯವನ್ನು ಗ್ರಂಥಾಕ್ಷರದಲ್ಲಿ ಬರಿಸಿ ಇಟ್ಟರು. ಮತ್ತು ಅರವ, ಕನ್ನಡ, ಅಕ್ಷರಗಳಿಂದ ಈ ವಾಕ್ಯಾರ್ಥ ಸಂಗತಿಗಳನ್ನೆಲ್ಲಿ ವಿವರವಾಗಿ ಬರೆದಿಟ್ಟು ಶಾಸನಗಳನ್ನು ಕೆತ್ತಿಸಿ ವಿಜಯಸ್ತಂಭದ ಸಮೀಪದ ಗುಡ್ಡದ ಮೇಲೆ ಸ್ಥಾಪನೆ ಮಾಡಿದರು.

ಆ ಶಿಲಾ ಸ್ತಂಭವು ಮೊನ್ನೆ ಮೊನ್ನಿನ ವರೆಗೂ ಮುಳಬಾಗಿಲಿನಲ್ಲಿ ಸುರಕ್ಷಿತವಾಗಿಯೇ ಇದ್ದಿತು. ಆದರೆ ಈಗ ಕೆಲವು ವರ್ಷಗಳ ಹಿಂದೆ ಒಬ್ಬ ಸ್ಮಾರ್ತ ಅಮಲದಾರರು ಆ ಜಯಸ್ತಂಭವನ್ನು ನೋಡಿ ಅದು ತಮ್ಮ ಮತಕ್ಕೆ ಅವಮಾನ ಕರವೆಂದು ಭಾವಿಸಿ ಅದೆಲ್ಲವನ್ನು ವಿಕೃತಗೊಳಿಸಿದರು. ಪಂಚಾಂಗವನ್ನು ಅಡಗಿಸಿ ಇಟ್ಟರೆ ನಕ್ಷತ್ರಗಳ ಅಸ್ತಿತ್ವ ಸುಳ್ಳಾಗುವದೇ !

ಇಷ್ಟಾದರೂ ಜಯಸ್ತಂಭದ ಮೇಲಿನ ದೇಶಿಕರ ನಿರ್ಣಯ ಪದ್ಯವನ್ನೂ ಗುಡ್ಡದ ಮೇಲಿನ ಶಾಸನಗಳನ್ನೂ ಈಗಲೂ ನಾವು ಅಲ್ಲಿ ಕಾಣಬಹುದು.

ಆ ಜಯಸ್ತಂಭವೂ, ಶಾಸನಗಳೂ ಕಾಲಕ್ರಮದಿಂದ ಜೀರ್ಣವಾಗಿದ್ದರೂ ಕೂಡಲೀ ಹಾಗೂ ಮುಳಬಾಗಿಲ ಮಠದ ಶ್ರೀಪಾದಂಗಳವರ ಪ್ರಯತ್ನದಿಂದ ಅದರ ಮೇಲಿನ 'ಅಸಿನಾ ತತ್ವಮಸಿನಾ' ಎಂಬ ಪದ್ಯವನ್ನು ಈಗ ಸ್ಪಷ್ಟವಾಗಿ ಕಾಣು ವಂತಾಗಿದೆ.

ಈ ವಿಷಯವನ್ನು ಅನೇಕ ಮಾಧ್ವ ಗ್ರಂಥಗಳಲ್ಲಿ ಇತಿಹಾಸಜ್ಞರು ಸುಸ್ಪಷ್ಟ ವಾಗಿ ಬರೆದು ಇಟ್ಟಿದ್ದಾರೆ. ಅದಕ್ಕಿಂತ ಹೆಚ್ಚಾಗಿ ರಾಮಾನುಜ ಮತೀಯರೂ ತಮ್ಮ ಅನೇಕ ಗ್ರಂಥಗಳಲ್ಲಿ ಈ ವಿದ್ಯಾರಣ್ಯ ಹಾಗೂ ಅಕ್ಷೋಭ್ಯತೀರ್ಥರ ವಾದ ವನ್ನೂ ಅದರಲ್ಲಿ ವಿದ್ಯಾರಣ್ಯರ ಪರಾಜಯವನ್ನೂ ಬಹು ಸುಂದರವಾಗಿ ಬರೆದು ಇಟ್ಟಿದ್ದಾರೆ. ವಿಶಿಷ್ಟಾದ್ವೈತಮತದ ದೊಡ್ಡ ಪಂಡಿತರಾದ ಶ್ರೀ ದೊಡ್ಡಯ್ಯಾಚಾರ್ಯರು ತಮ್ಮ "ವೇದಾಂತ ದೇಶಿಕ ವೈಭವ ಪ್ರಕಾಶಿಕಾ'' ಎಂಬ ಗ್ರಂಥದಲ್ಲಿ—

"ಕದಾಚಿದಕ್ಷೋಭ್ಯ ಮುನೇಶ್ಚ ವಿದ್ಯಾ ।
ರಣ್ಯಸ್ಯ ಜಾತಂ ಬಹುಳಂ ವಿವಾದಂ ॥
ವಿಲಿಖ್ಯ ಭೂಪೋ ವಿಬುಧಾಯ ಯಸ್ಮೈ ।
ಸಂಪ್ರೇಷಯಾಮಾಸ ತಮಾಶ್ರಯೇಽಹಂ ॥
ತತ್ವಮಸಿನಾಸಿನಾ ತಂ ವಿದ್ಯಾರಣ್ಯಂ ಮುನಿಸ್ತದಾಕ್ಷೋಭ್ಯಃ
ಅಚ್ಛಿನದಿತ್ಯವದದ್ಯಃ ತಂ ಸೇವೆ ತತ್ವನಿರ್ಣಯೇ ಚತುರಂ ॥ "

"ಅಕ್ಷೋಭ್ಯತೀರ್ಥರಿಗೂ, ವಿದ್ಯಾರಣ್ಯರಿಗೂ ನಡೆದ ವಿಸ್ತೃತವಾದ ವಾದ-ವಿವಾದವನ್ನೆಲ್ಲ ಮಹಾರಾಜನು ಬರೆದು ಕಳಿಸಿದಾಗ : ಅದರ ಮೇಲೆ ಅಕ್ಷೋಭ್ಯ ತೀರ್ಥರು ವಿದ್ಯಾರಣ್ಯರನ್ನು ತತ್ವಮಸಿ ಎಂಬ ಕೊಡಲಿಯಿಂದ ಕಡಿದು ಹಾಕಿದರು ಎಂದು ನಿರ್ಣಯವನ್ನು ಕೊಟ್ಟ ವೇದಾಂತ ದೇಶಿಕರಿಗೆ ನನ್ನ ನಮಸ್ಕಾರ ಎಂದು ಬರೆದಿದ್ದಾರೆ.

ಮತ್ತು ಆಚಾರ್ಯ ಚಂಪೂ ಎಂಬ ಶ್ರೀ ವೈಷ್ಣವ ಪ್ರಬಂಧದಲ್ಲಿ ಮುಳಬಾಗಿಲದ ಸಭಾ ವೃತ್ತಾಂತವನ್ನೆಲ್ಲ ಬಹು ಸುಂದರವಾಗಿ ಬರೆದು ಅಕ್ಷೋಭ್ಯ ತೀರ್ಥರ ವಿಜಯದ ಹಾಡನ್ನು ಸುಮಧುರವಾಗಿ ಹಾಡಿದ್ದಾರೆ ವಿಶಿಷ್ಟಾದ್ವೈತ ಕವಿಗಳು.

"ಅಥ ಕದಾಚಿದಖಿಲ ಬುಧಜನ ರಂಜನ ಮಂಜುಳಮತಿ ವಿಕಸಿತ ನಿರ್ವಾಪಿತ ಗೀರ್ವಾಣ ಗುರು ಗರ್ವಾಂಕುರಸ್ಯ ವಿವಿಧಗುಣಶೇವಧೇಃ ವಿಜಯ ನಗರಪತೇರಾಸ್ಥಾನೇ ವಿದ್ಯಾರಣ್ಯೇನ ಸಮಮಕ್ಷೋಭ್ಯಮುನೇರ್ಮಧ್ವ ಮತಾಧ್ವನ್ಯ ಮೂರ್ಧನ್ಯಸ್ಯ ತತ್ವಮಸೀತಿವಾಕ್ಯೇ ತರಂಗಿತ ಮದಾವದಾ ಮೋದಃ ಪ್ರಾದುರಾಸೀತ್ ।
ತದಾ ಸಮುದಿತಾ ಚಿಂತಾ ತಸ್ಯ ರಾಜಶಿರೋಮಣೇಃ ತತ್ವ ನಿರ್ಧಾರಣೇ ದಕ್ಷಸ್ತಟಸ್ಥಃ ಕೋಽಭವೇದಿತಿ ॥"

" ಪ್ರಸಕ್ತೇ ಯುವಯೋರ್ವಾದೇ ಪ್ರಾಕ್ತನೋಕ್ತಿ ವಿದಾಂವರಂ ।
ಮಾನ್ಯಂ ವೆಂಕಟನಾಥಾರ್ಯಂ ಮಧ್ಯಸ್ಥಂ ಮನುತೆ ಮನಃ ॥ "

ಸ ಚ ಕರ್ಮ ಬ್ರಹ್ಮ ಮೀಮಾಂಸಯೋಃ ಮರ್ಮವೇದೀ ಕವಿ ಕಥಕ ಪಂಚಾನನಾಚಾರ್ಯೋ ಮಹತಾ ಮಹೀಭೃತಾ ಪ್ರೇರಿತೈರ್ಮನೀಷಿಭಿಃ ಹೃತಂ ಅಕ್ಷೋಭ್ಯಮುನೇರ್ವಿದ್ಯಾರಣ್ಯಸ್ಯ ಚ ವಚನ ನಿಚಯಂ ವಿಚಾರ್ಯ ಹಂತ ಕಷ್ಟನ ಕರಬದರ ಕಲ್ಪಮಪಿ ಜೀವಪರಯೋರ್ಭೇದಮಪಲಪತಿ ಪ್ರಲಪತಿ ಚ ವಿಯದಂಬುಜ ವಿಡಂಬನ ಧುರಂಧರಾಮಪಿ ತಯೋರಭೇದ ತಾತ್ವಿಕತಾಮಿತಿ ತರ್ಕಯನ್ ಜಯಾಪಜಯೌ ತತ್ಕ್ಷಣ ವಿರಚಿತೇನ

"ಅಸಿನಾ ತತ್ವಮಸಿನಾ ಪರಜೀವ ಪ್ರಭೇದಿನಾ।
ವಿದ್ಯಾರಣ್ಯ ಮಹಾರಣ್ಯ ಮಕ್ಷೋಭ್ಯಮುನಿರಚ್ಛಿನತ್ ॥"
ಇತಿ ಪದ್ಯೇನ ವಿದ್ಯೋತಯಾಮಾಸ ।
ವಾಣೇ ಮಾದಾಯ ತಾಂ ಸೂರೇಃ ಕ್ಷೋಣೇ ಪರಿವೃಢ ಪ್ರಿಯಾ
ಶಿರಸಾ ಕ್ಲಪ್ತನತಯಃ ತರಸಾ ಸ್ವಾಂ ಪುರೀಂ ಯಯುಃ ।

ಈ ಪ್ರಬಂಧದಲ್ಲಿ ವಿದ್ಯಾರಣ್ಯ ಹಾಗೂ ಅಕ್ಷೋಭ್ಯ ತೀರ್ಥರ ವಾದದಲ್ಲಿ ಮಹಾರಾಜನ ಅಪೇಕ್ಷೆಯಂತೆ ವೇದಾಂತ ದೇಶಿಕರು ಮಧ್ಯಸ್ಥರಾಗಿ ರಾಜನು ಬರೆದು

ಕಳಿಸಿದ ಉಭಯತರ ವಾದವನ್ನು ಕೇಳಿ ಅಕ್ಷೋಭ್ಯ ತೀರ್ಥರೇ ಗೆದ್ದರೆಂದು ತಮ್ಮ ನಿರ್ಣಯವನ್ನು "ಅಸಿನಾ ತತ್ವಮಸಿನಾ" ಎಂಬ ಪದ್ಯ ರೂಪವಾಗಿ ಬರೆದು ಕಳಿಸಿದರೆಂದು ಸ್ಫುಟವಾಗಿ ಹೇಳಲಾಗಿದೆ.

ಅದೇ ಗ್ರಂಥದಲ್ಲಿ ಈ ನಿರ್ಣಯವನ್ನು ಕೇಳಿದ ಬಳಿಕ ವಿಜಯನಗರದ ರಾಜರು ಅಕ್ಷೋಭ್ಯತೀರ್ಥರಿಗೆ ವಿಶೇಷಾಕಾರದಿಂದ ಸತ್ಕಾರ ಮಾಡಿ ಸಭೆಯಲ್ಲಿಯೇ ಬಹಳ ಪ್ರಶಂಸಿವರೆಂದು ಹೇಳಲಾಗಿದೆ.

"ವಸುಧಾತಲಜಿದಾಚಾರ್ಯ ಸವಿಧಾತ್ ಆಯಾತ್ಯೈಃ ವಿನಿವೇದಿತಂ
ಕಥಾಹವಜಯಾಪಜಯ ಸೂಚಕಂ ಕರ್ಣೇಜಪಂ ಶ್ಲೋಕ
ಮಾಕರ್ಣ್ಯ ಜೃಂಭಿತ ಹರ್ಷಃ ಸ್ತಂಭಿತ ವಿಪಕ್ಷ–ಪಕ್ಷಂ ಅಕ್ಷೋಭ್ಯ ಮುನಿಂ
ಮಧ್ಯೇಸಭಂ ಭೃಶಂ ಪ್ರಶಂಸ ॥"

ಇವಲ್ಲದೇ ಪರಕಾಲ ಮಠದಲ್ಲಿ ಶ್ರೀ ವೇದಾಂತ ದೇಶಿಕರ ತರುವಾಯ ಅದೇ ಪೀಠಕ್ಕೆ ಬಂದ ಮೂರನೇ ತಲೆಯವರಾದ ಬ್ರಹ್ಮತಂತ್ರ ಸ್ವತಂತ್ರ ತೃತೀಯ ಜೀಯರ ಎಂಬುವವರು ತಮ್ಮ "ಗುರು ಪರಂಪರಾ ಪ್ರಭಾವಂ" ಎಂಬ ಗ್ರಂಥದಲ್ಲಿ ತಮಿಳ ಭಾಷೆಯಲ್ಲಿ—

"ತತ್ವವಾದಿಯಾನ ಅಕ್ಷೋಭ್ಯಮುನಿಕ್ಕುಂ ಮಾಯಾವಾದಿಯಾನ
ವಿದ್ಯಾರಣ್ಯನಿಕ್ಕುಂ ವೇದಾಂತತ್ತಿಲ್ ವಾದಂ ಪ್ರವೃತ್ತಮಾಹ।
ಇವರೊಹಳೊಡೆಯ ಅಭಿಪ್ರಾಯತ್ತಿಯಂ ರಾಜ ಪತ್ರಿಕಾ ಮೂಲ
ಮಾಹ ವೇದಾಂತದೇಶಿಕರ್ ಸನ್ನಿಧಿಕ್ಕೆ ಅನುಪ್ಪವೈ। ಯಾಥಾರ್ಥ್ಯತ್ತೈ
ಅರಿಂದುಹರುಳ್ಳು ವೇಣುಮನ್ನು ಅನುಪ್ಪವೈಕ್ಕವೇದಾಂತ ದೇಶಿಕರ್
ಅಸಿನಾ ತತ್ವಮಸಿನಾ............ಇತಿಪದ್ಯೇನ ವಿದ್ಯೋತಯಾಮಾಸ।"

ಇದರಂತೆ ಭಲಾರಿ ಆಚಾರ್ಯರು ತಮ್ಮ ಜಯತೀರ್ಥ ವಿಜಯ ಕಾವ್ಯದಲ್ಲಿ—

"ಅಕ್ಷೋಭ್ಯತೀರ್ಥ ಯತಿರಾಡವಿಶೈರಭೇದ್ಯೋ
ದುರ್ವಾದಿವಾರಣ ವಿದಾರಣ ಕೇಸರೀಂದ್ರಃ
ಸತ್ತತ್ವಮಸ್ಯಭಿಧವಾಗಸಿನಾ ವಿದ್ಯಾ
ರಣ್ಯಂ ಭಿನತ್ತಿ ಪರಜೀವ ವಿಭೇದಿನಾ ತಂ ॥"

ಇದೇ ರೀತಿಯಾಗಿ 'ಜಯತೀರ್ಥ ವಿಜಯ ಪ್ರಕಾಶಿಕಾ' ಎಂಬ ಗ್ರಂಥದಲ್ಲಿಯೂ

"ಅಕ್ಷೋಭ್ಯತೀರ್ಥಸ್ಯ ವಿದ್ಯಾರಣ್ಯೇನ ಸಭ್ಯಸಭಾಮಿಳಿತ ರಾಜ
ಸಭಾಯಾಂ ಪ್ರಸಂಗೇ ಜಾತೇ, ವಿದ್ಯಾರಣ್ಯೇ ಸ್ಫುಟಂ ಪರಾಜಿತೇ
ಸತಿ ತತ್ರ ಮಧ್ಯಸ್ಥಃ ವೇದಾಂತಾಚಾರ್ಯನಾಮಾ ಮಹಾ
ರಾಮಾನುಜ ಪಂಡಿತೋ ಅಕ್ಷೋಭ್ಯತೀರ್ಥ ಮಹಾ ಪಾಂಡಿತ್ಯೇನ
ಸಂತುಷ್ಟಃ। ಲೋಕೇ ತದ್ವಿಜಯ ಪ್ರಶಂಸಕಂ ಅಸಿನಾ ತತ್ವ
ಮಸಿನಾ...................ಇತಿ ಶ್ಲೋಕಂ ರಚಿತವಾನ್ ಇತಿ।"

ಶ್ರೀ ಸತ್ಯನಿಧಿ ವಿಲಾಸ ಎಂಬ ಕಾವ್ಯದಲ್ಲಿಯೂ ಈ ಘಟನೆಯನ್ನು ಮಾರ್ಮಿಕವಾಗಿ ಒಂದು ಪದ್ಯದಲ್ಲಿ ಚಿತ್ರಿಸಿದ್ದನ್ನು ನಾವು ಕಾಣಬಹುದು.

" ಮಿಥ್ಯಾವಾದೀಭ ಸಂಸತ್ಪ್ರಕಟಿತ ವಚನಾಟೋಪ ಸಿಂಹಸ್ವನಸ್ಯ ।
ಕ್ಷೋಣೀಶದ್ವಾರವೇಶಾಧ್ಯುಷಿತ ನಿಜ ಜಯಾಪೂರಿತಾ ಶಾಂತರಸ್ಯ ॥
ಅಕ್ಷೋಭ್ಯಾಖ್ಯಸ್ಯ ಭಿಕ್ಷೋಃ ಪ್ರಥಯತಿ ಜಯಿತಾಮುತ್ತಮಾರಣ್ಯವಾದೇ ॥
ವೇದಾಂತಾಚಾರ್ಯನಾಮ್ನಾ ವಿರಚಿತ ಜಯಪದ್ಯಾತ್ಮಕೋsಯಂ ನಿಬಂಧಃ॥

ಈ ಮುಳಬಾಗಿಲದಲ್ಲಿ ವಿಜಯನಗರದ ಮಹಾರಾಜರ ಹಾಗೂ ಆನೆಗೊಂದಿಯ ಅರಸರ ಅಪೇಕ್ಷೆಯಂತೆ ಶ್ರೀ ಅಕ್ಷೋಭ್ಯ ತೀರ್ಥರು ನಿಲ್ಲಿಸಿದ ಜಯ ಸ್ತಂಭದ ಮೇಲೆ ಕೊರೆಯಲ್ಪಟ್ಟ ಈ ವೇದಾಂತ ದೇಶಿಕರ ನಿರ್ಣಾಯಕ ಪದ್ಯವು ಆ ಸುಪ್ರಸಿದ್ಧವಾದ ವಾಕ್ಯಾರ್ಥದಲ್ಲಿ ವಿದ್ಯಾರಣ್ಯರ ಸೋಲನ್ನೂ ಜಯ ತೀರ್ಥರ ಗೆಲವನ್ನೂ ಸಾರುತ್ತದೆ ಎಂದು ಸತ್ಯನಿಧಿ ವಿಲಾಸದಲ್ಲಿಯ ಈ ಪದ್ಯವು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ.

ಇಷ್ಟೆಲ್ಲ ಸ್ವಮತೀಯ ಮತ್ತು ವಿಮತೀಯ ಪ್ರಮಾಣಗಳು ಇದ್ದುದರಿಂದ ಆ ಜಯಸ್ತಂಭ ಮತ್ತು ಶಿಲಾಶಾಸನಗಳನ್ನು ಯಾರೋ ಕುಹಕಿಗಳು ಹಾಳುಮಾಡಿದರೂ, ಶಾಸನಾಕ್ಷರಗಳನ್ನು ಓದಲಿಕ್ಕೆ ಬಾರದಂತೆ ಅಳಿಸಿ ಹಾಕಿದ್ದರೂ ಈ ಎಲ್ಲ ಅನ್ಯಾನ್ಯ ಗ್ರಂಥಗಳಿಂದ ಆ ಶಾಸನ ಹಾಗೂ ಶಿಲಾಸ್ತಂಭಗಳಲ್ಲಿ ಕೊರೆಯಿಸಿದ ವಿಷಯವು ತಿಳಿಯುವಂತಿದೆ.

ಈ ಶಿಲಾಲೇಖ ಹಾಗೂ ಜಯಸ್ತಂಭವನ್ನು ಅನುಚ್ಛಿನ್ನವಾಗಿ ನೋಡಿದ ಶ್ರೀ ಕಮಲಾಪೂರ ಭೀಮರಾಯರು ತಮ್ಮ ಸತ್ಕಥಾ ಎಂಬ ಪುಸ್ತಕದಲ್ಲಿ ಆ ಸ್ತಂಭವು ಇನ್ನೂ ಇದೆಯೆಂದು ಬರೆದಿದ್ದಾರ. ಮತ್ತು—

ಬರೀ ಮಾಧ್ವರು ಮಾತ್ರವಲ್ಲದೇ ಬ್ರಾಹ್ಮಣರೂ, ವಿಜಾತೀಯರೂ ಕೂಡ ಈ ಜಯಸ್ತಂಭವು ಹಾಳಾವದ್ದನ್ನು ಕಂಡು ಮರಗಿ ಸಮೀಪದ ಜನರ ಹಾಗೂ ವಯೋವೃದ್ಧ ಹಿರಿಯರ ಬಾಯಿಂದ 'ಇಥ್ಥಂಭೂತ' ಸಂಗತಿಯನ್ನು ಕೇಳಿ ತಿಳಿದುಕೊಂಡು ಬರೆಧಿಟ್ಟಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಚಾರಿತ್ರಿಕ ಗ್ರಂಥವನ್ನು ಬರೆಯಲಿಕ್ಕೆ ಶ್ರೀಕಾರ ಹಾಕಿದ ರಾಯಿಸ ಸಾಹೇಬರು ಮುಳಬಾಗಿಲಕ್ಕೆ ಬಂದು ಅಲ್ಲಿಯ ಜಯ ಧ್ವಜಸ್ತಂಭ ಹಾಗೂ ಶಾಸನಗಳನ್ನು ನೋಡಿ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದನ್ನು ನೋಡಿರಿ.

**At Mulbagal an inscription in Grantha characters on a boulder was brought to notice which appears to record the fact of a refutation of Vidyaranya by Akshobhya Teertha in some public disputation. But the inscription has been lately purposely destroyed so that only a few letters remain visible. The above account of it's contents is given by persons who saw it before it was damaged and who had made a copy of it.**

ಮುಳಬಾಗಿಲಿನಲ್ಲಿ ಒಂದು ಬಂಡೆಗಲ್ಲ ಮೇಲಿನ ಗ್ರಂಥಾಕ್ಷರದ ಲಿಪಿಯೊಂದನ್ನು ನನ್ನ ಗಮನಕ್ಕೆ ತರಲಾಯಿತು. ಬಹಿರಂಗ ಸಭೆಯಲ್ಲಿ ಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು ವಾದದಲ್ಲಿ ಸೋಲಿಸಿದ ಸಂಗತಿಯು ಅದರಲ್ಲಿ ಇತ್ತೆಂದು ತೋರುತ್ತದೆ. ಆದರೆ ಈ ಶಿಲಾಲಿಪಿಯೂ ಇತ್ತೀಚೆಗೆ ಬುದ್ಧಿಪೂರ್ವಕವಾಗಿ ಕೆಡಿಸಲ್ಪಟ್ಟಿದೆಯಾದರೂ ಕೆಲವು ಅಕ್ಷರಗಳು ಮಾತ್ರ ಕಾಣುತ್ತವೆ. ಮೇಲೆ ಕಾಣಿಸಿದ ಶಾಸನಸ್ಥ ಸಂಗತಿಯನ್ನು ಆ ಶಾಸನವನ್ನು ಕೆಡಿಸಿ ಬಿಡುವದಕ್ಕೆ ಮುಂಚೆ ಅದನ್ನು ನೋಡಿ ಅದರ ನಕಲು ಮಾಡಿಕೊಂಡವರು ನನಗೆ ತಿಳಿಸಿದರು.*

*Mys. Archological Annual Report   Dated : 30–6–1896
By Mr. L. RICE, C. I. E

ಈ ಎಲ್ಲ ಪ್ರಮಾಣ ವಚನಗಳನ್ನು ಮತ್ತು ಸ್ವಯಂ ಅಕ್ಷೋಭ್ಯತೀರ್ಥರು ನಿಲ್ಲಿಸಿದ ಗೆಲುವಿನ ಕಂಬವನ್ನೂ ವಿಜಯ ನಗರದ ರಾಜರು ಬರೆಯಿಸಿ ಇಟ್ಟ ಶಿಲಾ ಶಾಸನಗಳನ್ನೂ ಹಾಗೂ ಶ್ರೀವೈಷ್ಣವರು ಈ ವಿಷಯದಲ್ಲಿ ಬರೆದಿಟ್ಟ ಗ್ರಂಥ ಗಳನ್ನು ನೋಡಿದರೆ ಕ್ರಿ. ಶ. ೧೩೫೦ ನೇ ಇಸ್ವಿಯಲ್ಲಿ ಶ್ರೀ ಅಕ್ಷೋಭ್ಯತೀರ್ಥರಿಗೂ ಹಾಗೂ ಶ್ರೀ ವಿದ್ಯಾರಣ್ಯರಿಗೂ ವಾದ ಕಥೆ ಏರ್ಪಟ್ಟದ್ದು ಸುನಿಶ್ಚಿತ. ಅದರಲ್ಲಿ ವಿದ್ಯಾ ರಣ್ಯರು ಸೋತದ್ದು, ಅಕ್ಷೋಭ್ಯತೀರ್ಥರು ಗೆದ್ದದ್ದು ನಿರ್ವಿವಾದವಾಗಿ ಸಿದ್ಧವಾಗುವದು.

ನಮ್ಮ ವೈಷ್ಣವ ಸಮಾಜದ ಇತಿಹಾಸದಲ್ಲಿ ಶಂಕರಾಚಾರ್ಯ ಪೀಠಾಧಿಪತಿ ಗಳಾದ ಷಟ್ಶಾಸ್ತ್ರ ಪಂಡಿತರಾದ ರಾಜಗುರು ಶ್ರೀ ವಿದ್ಯಾರಣ್ಯರನ್ನು ಅಕ್ಷೋಭ್ಯ ತೀರ್ಥರು ಪರಾಭವಗೊಳಿಸಿದ್ದು ಅತ್ಯಂತ ಅಭಿಮಾನದ ಮತ್ತು ಅಷ್ಟೇ ಮಹತ್ವದ ಸಂಗತಿಯಾಗಿದೆ. ಮಾಧ್ವರ ಇತಿಹಾಸದಲ್ಲಿ ಇದು ನಿಜವಾಗಿಯೂ ಬಂಗಾರದ ಅಕ್ಷರಗಳಿಂದ ಬರೆದಿಡಲಿಕ್ಕೆ ಯೋಗ್ಯವಾದ ಘಟನೆಯೇ ಆಗಿದೆ. ವೈಷ್ಣವ ಸಮಾಜ ಕ್ಕೆಲ್ಲ ಹೆಮ್ಮೆಯಾದ ಈ ಸಂದರ್ಭವನ್ನು ಇಲ್ಲಿ ಸಾಧಕ–ಬಾಧಕ ಪ್ರಮಾಣ ಪರಿ ಶೀಲನ ಪುರಸ್ಸರವಾಗಿ ತುಸು ಪರಿಷ್ಕರಿಸಿಯೇ ಬರೆಯಲಾಗಿದೆ. ಈ ವಿಷಯದಲ್ಲಿ ಇದಕ್ಕೂ ಹೆಚ್ಚಿನ ವಿವರವನ್ನು ತಿಳಿಯಬೇಕೆಂದು ಅಪೇಕ್ಷಿಸುವವರು ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀ ಕೂಡಲೀ ಅಕ್ಷೋಭ್ಯತೀರ್ಥ ಮಠಾಧೀಶ ವೈ. ವಾ. ಶ್ರೀ ರಘುವೀರ ತೀರ್ಥ ಶ್ರೀಪಾದಂಗಳವರು ರಚಿಸಿದ ಶ್ರೀ ಅಕ್ಷೋಭ್ಯ ತೀರ್ಥ ಎಂಬ ಪುಸ್ತಕವನ್ನು ಓದಬೇಕು.

ಮುಂದೆ ಶ್ರೀ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರು ಸಂಚಾರಮಾಡುತ್ತ ಮಳ ಖೇಡಕ್ಕೆ ದಿಗ್ವಿಜಯ ಮಾಡಿದರು. ಅಲ್ಲಿ ರಂಗಣ್ಣ, ಧಾಮಣ್ಣ ಎಂಬ ಬ್ರಾಹ್ಮಣರಿಗೆ ಅಕಲ್ಪಿತವಾಗಿ ಬ್ರಹ್ಮಹತ್ಯಾ ದೋಷವು ತಗಲಿತ್ತು. ಅದರಿಂದ ಗ್ರಾಮಸ್ಥರು ಅವ ರನ್ನು ಬಹಿಷ್ಕರಿಸಿದ್ದರು. ಅದರಿಂದ ದುಃಖ ತಪ್ತರಾದ ರಂಗಣ್ಣ, ಧಾಮಣ್ಣರು ಅಕ್ಷೋಭ್ಯತೀರ್ಥರ ಶ್ರೀಚರಣಗಳ ಮುಂದೆ ಅಡ್ಡಬಿದ್ದು ತಮ್ಮನ್ನು ಪುನೀತರನ್ನಾಗಿ ಮಾಡಬೇಕೆಂದು ಬೇಡಿಕೊಂಡರು. ಕರುಣಾಶಾಲಿಗಳಾದ ಶ್ರೀ ಅಕ್ಷೋಭ್ಯತೀರ್ಥರು ತಮ್ಮ ಶಂಖೋದಕವನ್ನು ಅವರಿಗೆ ಪ್ರೋಕ್ಷಣೆಮಾಡಿ ಅವರ ಪಾಪವನ್ನು ಸಂಪೂರ್ಣ ವಾಗಿ ಕಳೆದು ಅವರನ್ನು ಉದ್ಧರಿಸಿದರು. ಕುಹಕಿಗಳು ಇದನ್ನು ನೋಡಿ ಹಿಂದೆ ಮುಂದೆ ಆಡಿಕೊಳ್ಳತೊಡಗಿದಾಗ ಕೇರೆಣ್ಣೆಯಲ್ಲಿ ಎದ್ದಿದ ಬಿಳಿ ಬಟ್ಟೆಯ ಕಪ್ಪು ಬಣ್ಣ ವನ್ನು ಸಂಪೂರ್ಣವಾಗಿ ಕಳೆದು ಮೊದಲಿನಂತೆ ಶುಭ್ರವಾಗಿ ಮಾಡಿ ತೋರಿಸಿದರು. ಅದರಿಂದ ನಿಂದಕರ ಬಾಯಿ ಕಟ್ಟಿತು.

ಅಲ್ಲಿಂದ ಅವರು ಪಂಢರಪುರಕ್ಕೆ ದಯಮಾಡಿಸಿ ಶ್ರೀ ಪಾಂಡುರಂಗ ವಿಠ್ಠಲನ ದರ್ಶನ ತೆಗೆದುಕೊಂಡರು. ಆ ಊರಲ್ಲಿ ಓರ್ವ ಅಕ್ಕಸಾಲಿಗನು ಸುಂದರವಾದ ಶ್ರೀ

ವಿಠ್ಠಲನ ಮೂರ್ತಿಯನ್ನು ನಿರ್ಮಾಣ ಮಾಡುತ್ತಿದ್ದನು. ಮೂರ್ತಿ ಎಲ್ಲವೂ ಸಿದ್ಧವಾಗಿ ಅವನು ಅದರ ಪಾದವನ್ನು ಕೆತ್ತುತ್ತಿದ್ದಾಗ ರಕ್ತ ಕಂಡಂತಾಯಿತು. ಆಗ ಆ ಶಿಲ್ಪಿಯು ಅದನ್ನು ಕಂಡು ಗಾಬರಯಾಗಿ ಅದನ್ನು ಅಷ್ಟಕ್ಕೇ ಬಿಟ್ಟನು. ಅಂದು ರಾತ್ರಿ ಅವನ ಕನಸಿನಲ್ಲಿ ಪಾಂಡುರಂಗ ಸ್ವಾಮಿಯು ಅವನಿಗೆ ದರ್ಶನವಿತ್ತು ಆ ಪಾಂಡುರಂಗ ಪ್ರತಿಮೆಯಲ್ಲಿ ಈಗ ತಾನು "ಸನ್ನಿಹಿತನಾಗಿರುತ್ತೇನೆ." ಎಂದು ತಿಳಿಸಿ ಇನ್ನು ಅದನ್ನು ಮುಟ್ಟದೆ, ಈ ಊರಿಗೆ ದಯಮಾಡಿಸಿದ ಶ್ರೀ ಅಕ್ಷೋಭ್ಯತೀರ್ಥ ಸ್ವಾಮಿಗಳಿಗೆ ಒಪ್ಪಿಸಬೇಕೆಂದು ಅಪ್ಪಣೆ ಮಾಡಿದನು. ಅಂದು ರಾತ್ರಿ ಶ್ರೀ ಅಕ್ಷೋಭ್ಯ ತೀರ್ಥರಿಗೂ ಅದೇ ರೀತಿಯಾಗಿ ಕನಸು ಬಿದ್ದುದರಿಂದ ಅವರು ಬೆಳಿಗ್ಗೆ ಸ್ನಾನಮಾಡಿ ಅನಂತ ತುಕೋಬ ಎಂಬ ಅಕ್ಕಸಾಲಿಗನ ಮನೆಗೆ ತಾವಾಗಿ ದಯಮಾಡಿಸಿದರು. ಆ ಶಿಲ್ಪಿಯು ಭಕ್ತಿಯಿಂದ ಸ್ವಾಮಿಗಳವರಿಗೆ ಅದನ್ನು ಸಮರ್ಪಿಸಿದನು. ಅಕ್ಷೋಭ್ಯತೀರ್ಥರು ವಾದ್ಯ-ವೈಭವಗಳೊಂದಿಗೆ ಮೆರಿಸುತ್ತ ಆ ಪ್ರತಿಮೆಯನ್ನು ಶ್ರೀ ಮಠಕ್ಕೆ ಕರೆತಂದು ಪೂಜೆಗೈದರು. ಶ್ರೀ ಸರ್ವಜ್ಞರ ಮಹಾಸಂಸ್ಥಾನವಾದ ಶ್ರೀಮದುತ್ತರಾದಿ ಮಠದಲ್ಲಿ ವಜ್ರ ಪೀಠದಲ್ಲಿ ಆ ಪ್ರಸನ್ನ ವಿಠ್ಠಲ ಪ್ರತಿಮೆಯನ್ನು ಈಗಲೂ ನಾವು ಕಾಣಬಹುದು.

ಹೀಗೆ ಶ್ರೀಮದಕ್ಷೋಭ್ಯತೀರ್ಥರು ಅನೇಕ ಮಹಾ ಮಹಿಮೆಗಳನ್ನು ಮೆರೆದು ಶ್ರೀ ಜಯತೀರ್ಥರಿಗೆ ೧೩೬೭ ನೇ ಇಸ್ವಿಯಲ್ಲಿ ಜಯತೀರ್ಥರಿಗೆ ಆಶ್ರಮವನ್ನಿತ್ತು ಮಳಖೇಡದಲ್ಲಿ ವೃಂದಾವನಸ್ಥರಾದರು.

ಶ್ರೀ ಅಕ್ಷೋಭ್ಯತೀರ್ಥರು ಎಲ್ಲ ದೃಷ್ಟಿಯಿಂದಲೂ ಮಹಾ ವಿಭೂತಿ ಪುರುಷರು. ಅವರು ವೈಷ್ಣವ ಸಮಾಜಕ್ಕೆ ಮಾಡಿದ ಎರಡು ಉಪಕಾರಗಳನ್ನು ಯಾವ ಮಾಧ್ವನೂ ಎಂದೆಂದಿಗೂ ಮರೆಯಲಿಕ್ಕೆ ಸಾಧ್ಯವಿಲ್ಲ. ಒಂದು ವಿದ್ಯಾರಣ್ಯರನ್ನು ಗೆದ್ದದ್ದು, ಇನ್ನೊಂದು ಶ್ರೀ ಜಯತೀರ್ಥರನ್ನು ಜಗತ್ತಿಗೆ ನೀಡಿದ್ದು. ಟೀಕಾ ಕೃತಾ ಪಾದರಂಥ ದಿವ್ಯ ವೇದಾಂತ ವೀಣೆಯನ್ನು ನುಡಿಸಿದ ವೈಣಿಕರೇ ಅಕ್ಷೋಭ್ಯತೀರ್ಥರು.

ಶ್ರೀ ಅಕ್ಷೋಭ್ಯತೀರ್ಥರ ಅನಂತರ ಶ್ರೀ ಜಯತೀರ್ಥರು ಸಂಸ್ಥಾನಾಧಿಪತ್ಯ ಒಪ್ಪಿಸಿಕೊಂಡು ಮಧ್ವಮತದ ಜಯ-ಧ್ವಜವನ್ನು ಎಂದೆಂದಿಗೂ ಯಾರಿಗೂ ಕೆಳಗೆ ಬಾರದಷ್ಟು ಎತ್ತರದಲ್ಲಿ ಎತ್ತಿ ಹಿಡಿದರು.

ಈ ಅಕ್ಷೋಭ್ಯತೀರ್ಥರು ಬರೆದ ಗ್ರಂಥಗಳು ಉಪಲಬ್ಧವಿಲ್ಲ. ವೇದಸಾರ ಸ್ತೋತ್ರ ಎಂಬ ಅವರು ರಚಿಸಿದ ಚಿಕ್ಕ ಸ್ತೋತ್ರವು ಅಚ್ಚಾಗಿದೆ. ಅವರು ಸ್ವಹಸ್ತಾಕ್ಷರದಿಂದ ಬರೆದ ಆಚಾರ್ಯರ ಸರ್ವಮೂಲ ಗ್ರಂಥದ ಒಂದು ತಾಡಾವಲಿ ಪ್ರತಿಯು ಶ್ರೀ ಆರ್ಯ ಅಕ್ಷೋಭ್ಯತೀರ್ಥರ ಮಠದಲ್ಲಿ ಇಂದಿಗೂ ಸುರಕ್ಷಿತವಾಗಿದೆ.



# ಶ್ರೀ ರಾಮ ದೇವರು ಬಂದ ಸುಳಾದಿ

## ಮಟ್ಟತಾಳ

ಪೆರ್ಮೆಯಿಂದಲಿ ವಿಶ್ವ ।
ಕರ್ಮನಿಂದಲೆ ಅಂದು ನಿರ್ಮಿತವಾಗಿದ್ದ ನಿರ್ಮಲ ಶರೀರ ಧರ್ಮಬೋಧಕರಾಮ।
ನಿರ್ಮಯನ :ಚಾತುಮೊಗನಿತ್ಯನಿ ।
ಸ್ವಕರ್ಮಭವದಲ್ಲಿ ನಿರ್ಮತ್ಸರನಾದ ವಿಜಯ ವಿಠ್ಠಲರಾಯನ ।
ನಿರ್ಮಲ ಚಿತ್ತದಲ್ಲಿ ಅರ್ಚನೆ ಮಾಡಿದರು.

## ತ್ರಿವುಟತಾಳ

ಬಲುಕಾಲ ಲೋಕೇಶ ತನ್ನ ಮನೆಯಲ್ಲಿ ।
ಚಲುವ ರಾಮನ ಪೂಜೆ ಮಾಡುತ್ತಲಿರಲು ।
ಒಲಿದು ಜಾಬಾಲಿಮುನಿ ಪ್ರಾರ್ಥನೆಯಿಂದಲಿ ।
ಸಲಿಸಿ ಮಾತನು ಋಷಿಗೆ ಈ ಪ್ರತಿಮೆ ಕೊಡಲಾಗಿ ।
ಒಲಿಸಿಕೊಂಡಲ್ಲಿಂದ ಶಿವಗೆ ಕೊಡಲು ।
ಸುಲಭದಿಂದಲಿ ಆ ಶಿವನು ತನ್ನಯ ನಿಜ ಲಲನೆಗೆ ಕೊಡಲಾಗಿ ವಿನಯದಿಂದ ।
ಕೆಲವು ದಿವಸ ಗಿರಿಜೆ ಪೂಜಿಸಿ ಆ ।
ಮ್ಯಾಲೆ ತಿಳಿದು ದಕ್ಷಕನ ಯಾಗದಲ್ಲಿ ಪೋಗಿ ।
ಇಳಿದು ಪೋಗುವಾಗ ವೈಮಾನಿಕ ಕೈ ।
ಯಲಿಟ್ಟು ತರುವಾಯ ರಾಮಪ್ರತಿಮೆಯನ್ನ ।
ಜಲಜಾಗರ್ಭನನಾವಾಸಕೆ ತಂದು ಕೊಡಲು ।
ಪೊಳೆವ ಸುಮೇರು ಪರ್ವತದಲ್ಲಿ ಇಟ್ಟು ನಿ ।
ಶ್ಚಲ ಪೂಜೆ ಮಾಡುತ್ತ ಇದ್ದನೆಂದು ।
ಬಲು ದೈವ ವಿಜಯ ವಿಠಲ ಜಾನಕೀ ಪತಿ ।
ಬಲವಂತ ಭಕ್ತರ ಪ್ರಿಯಾ ಸುಜನಗೇಯಾ ॥

**ಅಟತಾಳ**

ತಪ ಮಾಡಿ ಇಕ್ಷ್ವಾಕು ಬ್ರಹ್ಮಗೆ ಮೆಚ್ಚಿಸಿ ।
ಕೃಪೆಯಲ್ಲಿ ಮೂಲ ರಾಮನ ಕೊಡುತ್ತಲೆ ।
ಕ್ಷಿತಿಯೊಳ ಆಯೋಧ್ಯಾದಲ್ಲಿ ಪೂಜಿಸಲಾಗೆ ।
ಅತಿಶಯವಾಗಿ ರಾಮಚಂದ್ರ ಪರಿಯಂತ ।
ಮಿತಿಯಿಲ್ಲದ ವಾಲಗದಲ್ಲಿ ಒಪ್ಪುವ ।
ಕ್ಷಿತಿಸುತೆ ತಾನೆ ಪೂಜಿಸಿ ಹನುಮಂತಗೆ ಪ್ರತಿಮೆಯ ಪಾಲಿಸೆ ಅಲ್ಲಿಂದ ಮಾ ।
ರುತ ಸುತನು ಜಾಂಬವಂತಗೆ ದಯಮಾಡಿದ ।
ಸತತ ಮಂಗಳಕಾಯ ವಿಜಯ ವಿಠಲ ರಾಮ ।
ನುತಿಸಿಕೊಳ್ಳುತಲಿದ್ದನು ಸುರರಾದಿಗಳ ಕೈಯಾ ।

**ಆದಿತಾಳ**

ವೇದಗರ್ಭಾನೆಂಬೂ ಭೂಸುರ ರಾಮನ ।
ಪಾದಸಂದರುಶನವಾ ತಿಳಿಯದಲೆ ಅ ।
ನ್ನೋದಕ ಕೊಳ್ಳದಿರೆ ರಾಘವ ಭಕ್ತ ।
ನಿಂದಾದ ಪ್ರತಿಜ್ಞೆಯನ್ನು ಕಾಮ ತನ್ನ ಮೂರ್ತಿಯ ।
ಆದರದಿಂದಲಿ ಕೊಟ್ಟು ಕಳಹುಲಿತ್ತ ।
ಭೂದೇವ ಬಹು ಕಾಲ ಪೂಜಿಸಿ ತೀರ್ಥ ಯಾತ್ರೆ ।
ಆದರದಿಂದ ಮಾಡಿಕೊಳ್ಳುತ್ತ ಬರಲು ಗತಿಗೆ ।
ಐದುವ ಕಾಲದಿ ಸೀತಾ ರಾಮ ಪ್ರತಿಮೆಯ ।
ಮೇದಿನಿಯಲ್ಲಿ ಬಿಟ್ಟು ಹೋಗಲಾಗಿ ಇತ್ತ ।
ಸಾಧುಗುಣವುಳ್ಳ ಮುಕುಂದವರ್ಮನೆಂಬೋ ಮೇದಿನೀಪತಿಯಾಗಿ
ವದ್ದಿ ವೇಶವಲ್ಲರೆ ।
ಆದ ಅಶರೀರ ವಾಕ್ಯಾಂತರವ ಕೇಳಿ ।
ಆದಿತ್ಯವಂಶಜರಾಮಾ ।
ರಾಧನೆ ಕೊಳುತಿದ್ದ ಆ ಜನಾವ ಕೋಶದಲ್ಲಿ ।
ನರಹರಿ ತೀರ್ಥರಿಗೆ ಒಲಿದ ವಿಜಯ ವಿಠಲ ।
ಸ್ಮರಿಸಿದವರ ಕಾವ ನಿತ್ಯ ರಘುರಾಮ ।



# ಮೂಲ ರಾಮ ದೇವರು

ಮೂಲ ರಾಮ ದೇವರ ಮಹಿಮೆಯು ವಾಸಿಷ್ಠ ರಾಮಾಯಣದಲ್ಲಿಯೂ, ಮಾರ್ಕಂಡೇಯ ಪುರಾಣದಲ್ಲಿಯೂ, ಪುಷ್ಕರ ಮಹಾತ್ಮ್ಯದಲ್ಲಿಯೂ ಉಕ್ತವಾಗಿದೆ.

ಈ ಮೂಲ ರಾಮ ಸೀತಾ ಪ್ರತಿಮೆಗಳು ಸ್ವಯಂ ವ್ಯಕ್ತವೆಂದು ವಾಸಿಷ್ಠ ರಾಮಾಯಣದಲ್ಲಿ —

" ಸ್ವಯಂ ವ್ಯಕ್ತಂ ಮಹೀಪಾಲ ಬ್ರಹ್ಮಣೋ ದೇವತಾರ್ಚನಂ ।
ಇಕ್ವ್ವಾಕು ಪ್ರಮುಖ್ಯೈಃ ಸಮ್ಯಕ್ ಪೂಜಿತಂ ಮಾನವೋತ್ತಮೈಃ ।

ಎಂದು ಹೇಳಿದ್ದಾರೆ. ಕೆಲವು ಪುರಾಣಗಳಲ್ಲಿ ವಿಶ್ವಕರ್ಮ ನಿರ್ಮಿತವಾದ ವೆಂದು ಉಲ್ಲೇಖಿಸಿದ್ದಾರೆ. ಯುಗಭೇದದಿಂದ ಎರಡೂ ಸರಿ ಎಂದು ಹೇಳಬೇಕು.

ಚತುರ್ಮುಖ ಬ್ರಹ್ಮದೇವರು ಆ ಪ್ರತಿಮೆಗಳನ್ನು ತಾವು ಬಹು ಕಾಲ ಪೂಜೆ ಮಾಡಿ ಮುಂದೆ ಅವುಗಳನ್ನು ಜಾಬಾಲಿಯ ಋಷಿಗಳು ತಪಸ್ಸಂಗೈದು ಪೂಜೆ ಮಾಡಲಿಕ್ಕೆ ಬೇಡಲಾಗಿ ಅವರಿಗೆ ಇತ್ತರು. ಅನಂತರ ಕೈಲಾಸಪತಿಗಳಾದ ಮಹಾ ದೇವರು ಪಾರ್ವತಿದೇವಿ ದಕ್ಷ ಪ್ರಜಾಪತಿ ಸೌಭರಿ ಮುನಿಗಳು ತಪಃ ಸಿದ್ಧಿ ರೂಪವಾಗಿ ಆ ವಿಗ್ರಹಗಳನ್ನು ಪಡೆದು ಪೂಜಿಸಿದರು. ಅನಂತರ ಅವು ಮತ್ತೆ ಸತ್ಯ ಲೋಕಕ್ಕೆ ಬಂದ ಬಳಿಕ ಅಲ್ಲಿ ಬಹು ಕಾಲ ಪರ್ಯಂತ ಬ್ರಹ್ಮದೇವರು ಮೂಲ ರಾಮ ಸೀತಾ ಪ್ರತಿಮೆಗಳನ್ನು ಪೂಜಿಸಿದರು.

ಅನಂತರ ಸೂರ್ಯದೇವನು ಆ ಮೂಲ ರಾಮನನ್ನು ಪೂಜಿಸಬೇಕೆಂದು ಉಗ್ರ ತಪಸ್ಸನ್ನು ಆಚರಿಸಿದನು. ಅವನ ತಪೋ ಭಕ್ತಿಗೆ ಪ್ರಸನ್ನರಾದ ಬ್ರಹ್ಮ ದೇವರು ಕರುಣಿಸಿ ಕೊಟ್ಟರು. ಸೂರ್ಯನಿಂದ ಅವು ಅವನ ಮಗ ವೈವಸ್ವತ ಮನುವಿಗೂ ಆ ವೈವಸ್ವತಮನು ತನ್ನ ವಂಶದವರಾದ ಇಕ್ವ್ವಾಕು ರಾಜರಿಗೂ ಒಪ್ಪಿಸಿದರು. ಅದೇ ವಂಶದ ಮಾಂಧಾತ, ಅನರಣ್ಯ, ತ್ರಿಶಂಕು, ಹರಿಶ್ಚಂದ್ರ, ದಿಲೀಪ ಮುಂತಾದ ರಾಜರು ಆ ರಾಮ ಸೀತಾ ಮೂರ್ತಿಗಳನ್ನು ತಮ್ಮ ಮನೆತನದ ಕುಲದೇವರೆಂದು ಭಕ್ತಿಯಿಂದ ಪೂಜಿಸುತ್ತ ಬಂದರು.

ಮುಂದೆ ದಶರಥ ಮಹಾರಾಜನೂ ಕೂಡ ಅತ್ಯಂತ ಶ್ರದ್ಧಾ ಬುದ್ಧಿಯಿಂದ ಆ ಮೂಲ ರಾಮ ದೇವರನ್ನು ಆರಾಧನೆ ಮಾಡಿದನು. ಮತ್ತು ತನ್ನ ಜ್ಯೇಷ್ಠ ಪುತ್ರನಿಗೆ ತಮ್ಮ ಕುಲ ದೇವರ ಹೆಸರನ್ನೇ ರಾಮ ಎಂದಿಟ್ಟನು. ಅಂದಿನಿಂದ ಆ ಪ್ರತಿಮೆ ಮೂಲ ರಾಮ ಎಂದು ಹೆಸರು ಹೊಂದಿತು. ಸ್ವಯಂ ಶ್ರೀ ರಾಮ ದೇವರೂ ಕೂಡ ತಮ್ಮ ಕುಲದೇವರನ್ನು ಸಾಂಪ್ರದಾಯಾನುಸಾರವಾಗಿ ಪೂಜಿಸಿದರು.

ಶ್ರೀ ರಾಮ ದೇವರು ರಾಜ ಕಾರಣದ ಕೆಲಸಗಳಿಗಾಗಿ ಹೊರಗೆ ಹೋದಾಗ ಸೀತಾ ದೇವಿಯವರಿಗೆ ಪ್ರಭುವಿನ ವಿರಹವನ್ನು ತಾಳಲಿಕ್ಕಾಗುತ್ತಿರಲಿಲ್ಲ. ಅಂಥ ಸಮಯದಲ್ಲಿ ಸೀತಾ ದೇವಿಯು ಈ ಮೂಲ ರಾಮನನ್ನು ನೋಡಿ, ಪೂಜಿಸಿ, ಸಂತೋಷ ಪಡುತ್ತಿದ್ದಳು. ಅದಕ್ಕಾಗಿಯೇ ಅವಳು ಶ್ರೀ ರಾಮನನ್ನು ಪ್ರಾರ್ಥಿಸಿ, ಬೇಡಿ ಪಡೆದುಕೊಂಡಳೆಂದು ವಾಸಿಷ್ಠ ರಾಮಾಯಣದಲ್ಲಿ ಹೇಳಿದ್ದಾರೆ. ಮುಂದೆ ಲಕ್ಷ್ಮಣನು ಶ್ರೀ ಸೀತಾದೇವಿಯನ್ನು ಆರಾಧಿಸಿ, ತಾನು ಪಡೆದುಕೊಂಡು ಅವುಗಳನ್ನು ಪೂಜಿಸಿದನು.

" ಯಂ ಪೂಜಯಸಿ ದೇವೇಶ ತ್ವಂ ಮೂಲ ರಘು ಪುಂಗವಂ
ಸೀತಯಾ ಸಹಿತಂ ರಾಮಂ ಮಹ್ಯಂ ಪ್ರದೇಹಿ ಪುರುಷೋತ್ತಮ
ರಾಮಾನುಜಸ್ತುತದ್ಭಕ್ತಃ ಸೀತಾ ರಾಮ ಮಪೂಜಯತ್
ಸೀತಯಾ ಸಹಿತಾ ರಾಮಂ ಸ್ವಗೃಹೇ ಸ್ಥಾಪ್ಯ ಭಕ್ತಿತಃ "

ಮುಂದೆ ಲಕ್ಷ್ಮಣನು ತಾನಿರುವ ವರೆಗೆ ಪೂಜಿಸಿ ಕೊನೆಗೆ ಅವನು ಸರಯೂ ನದಿಯಲ್ಲಿ ಜಲಸಮಾಧಿ ಹೊಂದುವಾಗ ನದೀ ತೀರದಲ್ಲಿ ಪೂಜಿಸುತ್ತ ಕುಳಿತುಕೊಂಡಿದ್ದನು. ಆಗ ಗೃತ್ಸಮದ ಎಂಬ ಮುನಿಯು ಅವುಗಳನ್ನು ತಮಗೆ ಪೂಜೆಗೆ ಆ ಪ್ರತಿಮೆಗಳನ್ನು ಕೊಡಬೇಕೆಂದು ಕೇಳಿದನು. ಆಗ ಲಕ್ಷ್ಮಣದೇವರು— "ನೀನು ಕೆಲ ದಿನ ಪೂಜಿಸಿ ಮುಂದೆ ಇವುಗಳನ್ನು ಕಿಂಪುರುಷ ಖಂಡದಲ್ಲಿರುವ ಹನುಮಂತನಿಗೆ ಕೊಡಬೇಕೆಂದು" ಹೇಳಿಕೊಟ್ಟರು. ಅದರಂತೆ ಗೃತ್ಸಮದನು ಅವುಗಳನ್ನು ಹನುಮಂತದೇವರಿಗೆ ತಂದು ಒಪ್ಪಿಸಿದನು. ಹನುಮಂತ ದೇವರು ದ್ವಾಪರ ಯುಗದ ಕೊನೆಯ ವರೆಗೆ ಆ ಮೂಲ–ರಾಮದೇವರನ್ನು ಪೂಜೆಗೈದರು.

ದ್ವಾಪರದಲ್ಲಿ ಭೀಮಸೇನನು ಸೌಗಂಧಿಕಾ ಪುಷ್ಪವನ್ನು ತೆಗೆದುಕೊಳ್ಳಲಿಕ್ಕೆ ಬಂದಾಗ ಹನುಮಂತ ದೇವರು ಸ್ವಾಭಿನ್ನರೂಪವಾದ ಭೀಮಸೇನದೇವರಿಗೆ ರಾಮ–ಸೀತಾ ಪ್ರತಿಮೆಗಳನ್ನು ಕೊಟ್ಟರು.

"ತಸ್ಮೈ ಪ್ರದಾದ್ರಾಮಚಂದ್ರಪ್ರತಿಮಾಂ ಸೀತಯಾ ಸಹ''

ಮುಂದೆ ಭೀಮಸೇನನ ಅನಂತರ ಪಾಂಡವರ ವಂಶದ ಪರೀಕ್ಷಿತ, ಜನಮೇಜಯ ಮುಂತಾದ ರಾಜರು ಪೂಜಿಸಿದರು. ಅದೇ ಪಾಂಡವ ವಂಶದ ಕ್ಷೇಮಕ ರಾಜನ ಮಂತ್ರಿಯಾದ ವಿಷ್ಣುವರ್ಮನು ಆ ಪ್ರತಿಮೆಗಳನ್ನು ಗಜಪತಿರಾಜನಿಗೆ ಕೊಟ್ಟನು.

ಆ ಗಜಪತಿಯ ಆಸ್ಥಾನದಲ್ಲಿದ್ದ ಆ ಎರಡೂ ಮೂಲ–ಸೀತಾರಾಮರ ಪ್ರತಿಮೆಗಳನ್ನು ನರಹರಿತೀರ್ಥರು ತಂದು ಆಚಾರ್ಯರಿಗೆ ಒಪ್ಪಿಸಿದರು.



### ಶ್ರೀ ಮಧ್ವಾಚಾರ್ಯರ ಆಪ್ತ ಕಾರ್ಯದರ್ಶಿಗಳಾದ

# ಶ್ರೀ ಹೃಷಿಕೇಶ ತೀರ್ಥರು

ಉಡುಪಿಯ ಎಂಟು ಮಠಗಳಲ್ಲಿ ಒಂದಾದ ಶ್ರೀ ಪಲಿಮಾರು ಮಠಕ್ಕೆ ಮೂಲ ಪುರುಷರು— ಶ್ರೀ ಹೃಷೀಕೇಶರು. ಅವರ ಮೇಲೆ ಆಚಾರ್ಯರಿಗೆ ವಿಶೇಷ ವಾತ್ಸಲ್ಯ. ಆದುದರಿಂದಲೇ "ಅಸ್ಮೋತ್ಕೃಷ್ಟ" ಎಂದು ಗೌರವದ ಬಿರುದು. ಆಚಾರ್ಯರು ಎಲ್ಲಿ ಹೋದರೂ— ಬಸವನ ಹಿಂದಿನ ಬಾಲದಂತೆ, ರಾಮನ ಹಿಂದೆ ಹನುಮನಂತೆ, ಸೂರ್ಯನ ಮುಂದೆ ಅರುಣನಂತೆ ಈ ಶಿಷ್ಯರು ಸರ್ವಜ್ಞ ಗುರುವಿನ ಸೇವೆಗೆ ಸದಾ ಸಿದ್ಧ.

ವಿಷ್ಣುಮಂಗಲದ ದೇವಾಲಯದಲ್ಲಿ ಶ್ರೀಮದಾನಂದತೀರ್ಥರ ಸ್ವಾಗತ ಸತ್ಕಾರಕ್ಕಾಗಿ ಪ್ರಚಂಡ ಜನ ಸಂದಣಿಯು ನೆರೆದಿದ್ದಿತು. ಆ ದೇಶದ ದೊರೆಯಾದ ಜಯಸಿಂಹ ಭೂಪಾಲನು ಆಚಾರ್ಯರ ಅಮೃತ ವಾಣಿಯನ್ನು ಕೇಳಬೇಕೆಂದು ಉತ್ಕಂಠಿತನಾಗಿ, ಕಿವಿ ತೆರೆದು, ಕಣ್ಣಗಲಿಸಿ ಕೈ ಮುಗಿದು ನಿಂತುಕೊಂಡಿದ್ದನು. ಸಭಿಕರೆಲ್ಲರೂ ಅಪಲಕ ನೇತ್ರದಿಂದ ಮಧ್ವ ಮುನಿಗಳ ಮುದ್ದು ಮೂರುತಿಯನ್ನು ನೋಡುತ್ತ ಅವರ ಉಪದೇಶಾಮೃತವನ್ನು ಪಾನ ಮಾಡಬೇಕೆಂದು ಉತ್ಸುಕರಾಗಿ ಕುಳಿತುಕೊಂಡಿದ್ದರು.

ಭಗವತ್‌ಪಾದರು ತಮ್ಮ ಪಕ್ಕದಲ್ಲಿರುವ ತಮ್ಮ ಮೆಚ್ಚಿನ ಪ್ರವರರಿಗೆ ಸಂಕೇತಗೈದರು. ಕೂಡಲೇ ಮೇಘ ಗಂಭೀರವಾದ ಮಧುರ ಧ್ವನಿಯೊಂದು ಸಭಾಂಗಣವನ್ನು ತುಂಬಿತು.

"ನಮೋ ನಮಸ್ತೇ ಋಷಭಾಯ ಸಾತ್ವತಾಂ ವಿದೂರ ಕಾಷ್ಠಾಯ
ಮುಹುಃ ಕುಯೋಗಿನಾಂ ।
ನಿರಸ್ತ ಸೌಮ್ಯಾತಿಶಯೇನ ರಾಧಸಾ ಮಹೀಯಸಿ ಬ್ರಹ್ಮಣಿರಂಸ್ಯತೇ ನಮಃ ।
ವಿಚಕ್ಷಣಾಯಚ್ಚರಣೋಪಸಾದನಾತ್ ।
ಸಂಗಂ ವ್ಯುದಸ್ಯೋಭಯತೋಽಂ ತದಾತ್ಮನಃ ॥
ವಿಂದಂತಿ ಹಿ ಬ್ರಹ್ಮಗತಿಂ ಗತ ಕ್ಲಮಾಃ ।
ತಸ್ಮೈ ಸುಭದ್ರ ಶ್ರವಸೇ ನಮೋ ನಮಃ ॥

ಸ ಏಷ ಆತ್ಮಾತ್ಮವತಾಮಧೀಶ್ವರಃ ।
ತ್ರಯೀ ಮಯೋ ಧರ್ಮಮಯಸ್ತಪೋಮಯಃ ॥
ಗತವ್ಯಲೀಕೈ ರಜ ಶಂಕರಾದಿಭಿ ।
ರ್ವಿತರ್ಕ್ಯ ಲಿಂಗೋ ಭಗವಾನ್ ಪ್ರಸೀದ ತಾಂ ॥
ಯತ್ಕೀರ್ತನಂ ಯತ್ಸ್ಮರಣಂ ಯದೀಕ್ಷಣಂ ।
ಯದ್ವಂದನಂ ಯತ್‌ಶ್ರವಣಂ ಯದರ್ಹಣಂ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ ।
ತಸ್ಮೈ ಸುಭದ್ರ ಶ್ರವಸೇ ನಮೋ ನಮಃ ।
ಯದಂಘ್ರ್ಯನುಧ್ಯಾತ ಸಮಾಧಿ ಧೌತಯಾ ।
ಧಿಯಾನು ಪಶ್ಯಂತಿ ಹಿ ತತ್ವಮಾತ್ಮನಃ ।
ವದಂತಿ ಚೈತತ್ ಕವಯೋಃ ಯಥಾ ರುಚಂ ।

ಶ್ರೀ ವೇದವ್ಯಾಸ ದೇವರು ರಚಿಸಿದ ಶ್ರೀಮನ್ ಮಹಾ ಭಾಗವತ ಗ್ರಂಥದಲ್ಲಿಯ ಮಂಗಳ ಪದ್ಯಗಳನ್ನು ಆಚಾರ್ಯರ ಶಿಷ್ಯೋತ್ತಮರು ಪುಂಸ್ಕೋಕಿಲದಂಥ ತಮ್ಮ ಮಧುರ ಕಂಠದಿಂದ ಹಾಡಿ ಹೇಳಿದಾಗ ಸಭೆ ಎಲ್ಲವೂ ಮಂತ್ರ ಮುಗ್ಧವಾಗಿ ಕುಳಿತಿತು. ಇಂಥ ಸುಸ್ವರದ ಗಾನ ಗಂಧರ್ವನು ಯಾರು ಎಂದು ಕುತೂಹಲದಿಂದ ಜಯಸಿಂಹರಾಜನೂ ಪಂಡಿತ ಪ್ರವರರೂ ಕತ್ತೆತ್ತಿ ನೋಡಿದಾಗ ಆಚಾರ್ಯರ ಪಾದದಡಿಯಲ್ಲಿ ನಿಂತು ಶ್ರೀಹೃಷಿಕೇಶ ತೀರ್ಥರು ಭಾಗವತ ಪದ್ಯಗಳನ್ನು ಜಲ ತರಂಗವನ್ನು ನುಡಿಸಿದಂತಿದ್ದ ತಮ್ಮ ಕಿನ್ನರ ಕಂಠದಿಂದ ರಾಗಾನುರಾಗ ಭರಿತವಾಗಿ ಉಚ್ಚ ಧ್ವನಿಯಲ್ಲಿ ಉಚ್ಚರಿಸುತ್ತಲಿದ್ದರು. ಮಾಂತ್ರಿಕನೊಬ್ಬನು ಪುಂಗಿಯನ್ನು ಊದಿದಂತೆ ಇಡೀ ಸಭಾಂಗಣವೆಲ್ಲವೂ ವ್ಯಾಸವಾಣಿಯ ನಾದ ಮಾಧುರಿಗೆ ಮನ ಸೋತು ಸಂತಸ–ತುಂಬಿ ತಲೆದೂಗಹತ್ತಿತು.

ಅನಂತರ ಆಚಾರ್ಯರು ತಮ್ಮ ಸ್ನಿಗ್ಧ ಗಂಭೀರವಾದ ಧ್ವನಿಯಿಂದ ಆ ಭಾಗವತ ಪದ್ಯಗಳ ಸ್ವಾದ–ಸ್ವಾರಸ್ಯಗಳನ್ನು ವಿವರಿಸಿದರು. ಅದರ ಪ್ರತಿಯೊಂದು ಪದ–ಪದದಲ್ಲಿ ಹುದುಗಿದ ಅರ್ಥ ವಿಶೇಷಣಗಳನ್ನು ಮುದದಿಂದ ವಿವೇಚಿಸಿದರು.

ಹೃಷೀಕೇಶತೀರ್ಥರ ಮುಖದಿಂದ ವ್ಯಾಸ–ವಚನಗಳ ಶಬ್ದ ಸೌಂದರ್ಯಕ್ಕೆ ಮುಗ್ಧವಾದ ಜನತೆಯು ಆಚಾರ್ಯರ ಪ್ರವಚನವನ್ನು ಕೇಳಿ ಅವರ ಅರ್ಥ ಗಾಂಭೀರ್ಯಕ್ಕೂ ಭಾವ–ಬಂಧುರತೆಗೂ ಮನಸೋತು ತಲೆದೂಗುವಂತಾಯಿತು. ವೇದವ್ಯಾಸರ ಹೃದಯ ಸಂಪುಟದ ಅನರ್ಘ್ಯ ರತ್ನಗಳನ್ನೆಲ್ಲ ಎತ್ತಿ ಹಿಡಿದು ಅವುಗಳಿಂದ ತೂರಿ ಬರುವ ಕಾಂತಿಪೂರದ ಪರಿಚಯವನ್ನು ಸಭಿಕರಿಗೆ ತಿಳಿಸಿ ಕೊಟ್ಟರು. ಭಾಗ

ವತದಲ್ಲಿ ಪ್ರತಿಪಾದಿತವಾದ ವಿಷ್ಣುವಿನ— ಪಾರಮ್ಯ, ಭೇದ ಸಿದ್ಧಾಂತ, ಭಕ್ತಿಯ ವೈಶಿಷ್ಟ್ಯ, ಶ್ರೀ ಹರಿಯ ಕಾರುಣ್ಯ ಮುಂತಾದವುಗಳನ್ನು ಎಲ್ಲರಿಗೂ ಮನಂಬುಗುವ ರೀತಿಯಲ್ಲಿ ತಿಳಿಸಿ ಹೇಳಿದರು.

ಆಚಾರ್ಯರ ಅರ್ಥ ವಿವರಣೆಯು ಮುಗಿದ ಕೂಡಲೇ ಶ್ರೀ ಹೃಷೀಕೇಶ ತೀರ್ಥರು ಮತ್ತೆ ತಮ್ಮ ಸಾಗರದ ನಿರ್ಘೋಷದಂತಿರುವ ಧ್ವನಿಯಿಂದ ಶ್ರೀಮದ್ ಭಾಗವತದ ಗದ್ಯ-ಪದ್ಯಗಳನ್ನು ಹೇಳುತ್ತಿದ್ದರು. ಆಚಾರ್ಯರು ಆ ಪದ್ಯಗಳಲ್ಲಿ ಗೂಢವಾದ ಗಹನ ಗಂಭೀರವಾದ ಅರ್ಥವನ್ನು ವಿಶದವಾಗಿ ಸಭಿಕರಿಗೆ ತಿಳಿಸಿ ಹೇಳುತ್ತಿದ್ದರು.

ಹೀಗೆ ಮೊದಲು ಸಂಗೀತಮಯವಾದ ಭಾಗವತ ಪದ್ಯಗಳ ಮಧುರಾಲಾಪ, ಅನಂತರ ಅದರ ಚಾರು ಚತುರ ವಿವರ್ಣನೆ ಎರಡನ್ನೂ ಕೇಳಿ ಜನರಿಗೆ ಆನಂದದ ಮೇಲೆ ಆನಂದ, ಉಲ್ಲಾಸದ ಮೇಲೆ ಉಲ್ಲಾಸಗಳು ಉಂಟಾಗುತ್ತಿದ್ದವು. ಶಾಸ್ತ್ರ ಪ್ರವಚನದ ಇಂಥ ಮಧುರ ಸಂಯೋಜನೆಯನ್ನು ಜಯಸಿಂಹರಾಜನಾಗಲೀ, ಅಲ್ಲಿ ನೆರೆದ ಪಂಡಿತರಾಗಲಿ, ಕೂಡಿದ ಸಭಿಕರಾಗಲಿ, ಎಂದೂ ಕೇಳಿರಲಿಲ್ಲ. ಮತ್ತು ನೋಡಿರಲಿಲ್ಲ. ಗಾರುಡಿಗನ ಪುಂಗಿಗೆ ಮುಗ್ಧರಾದಂತೆ ಅವರೆಲ್ಲರೂ ಆನಂದ ತುಂದಿಲ ರಾಗಿ ತಲೆದೂಗುತ್ತ ಕುಳಿತು ಬಿಟ್ಟರು. ಇದೊಂದು ಶ್ರೋತೃಗಳಿಗೆ ದೊಡ್ಡ ಹಬ್ಬವೇ ಆಯಿತು. ಶ್ರವಣೇಂದ್ರಿಯಕ್ಕೆ ಅಂದು ಅವರೆಲ್ಲರಿಗೂ ಅದು ಒಂದು ಸವಿಯೂಟ. "ಇವನ್ನು ಕಂಡು ಕೇಳಿದ ನಮ್ಮ ಭಾಗ್ಯಕ್ಕೆ ಎಣೆ ಇಲ್ಲ. ನಮ್ಮ ಜನ್ಮ ಸಾರ್ಥಕವಾಯಿತು" ಎಂದಿತು ಜನ.

ಇದು ಆಚಾರ್ಯರ ಪ್ರತಿಪ್ರವಚನದಲ್ಲಿಯೂ ಪ್ರಾಯಃ ನಡೆಯುವ ಪ್ರಾರಂಭಿಕ ಕ್ರಮ. ಸ್ವಯಂ ಸಂಗೀತ ಸರಸ್ವತಿಯೇ ಪ್ರತಿ ದಿನವೂ ಪಾದ ಸೇವೆ ಗೈಯ್ಯುತ್ತಿರುವ ಶ್ರೀ ಮಧ್ವಾಚಾರ್ಯರಿಗೆ ಇದಕ್ಕಿಂತ ಸಹಸ್ರಪಟ್ಟು ಮಧುರಾದಪಿ ಮಧುರವಾಗಿ ಗಾನ ಗೈದು, ಶ್ಲೋಕಗಳನ್ನು ಸರಸವಾಗಿ ಹೇಳಿ ಪ್ರವಚನ ಮಾಡುವ ಶಕ್ತಿ ಇದ್ದಿತು. ಆದರೆ ತಮ್ಮ ಅನುಗ್ರಹದಿಂದ ತಮ್ಮ ಶಿಷ್ಯರಿಗೂ ಆ ಶಕ್ತಿ ಇದೆ ಎಂದು ತಿಳಿ ಸುವದಕ್ಕಾಗಿ ಮತ್ತು ತಮ್ಮ ಶಿಷ್ಯರನ್ನು ಮುಂದೆ ತರಲಿಕ್ಕಾಗಿ ಮತ್ತು ಸಭಿಕರ ಮೇಲೆ ಒಂದು ವಿಶಿಷ್ಟ ಪರಿಣಾಮನ್ನು ಉಂಟು ಮಾಡಲಿಕ್ಕಾಗಿ ತಮ್ಮ ಪ್ರಿಯ ಛಾತ್ರರಿಗೆ ಆದೇಶವೀಯುತ್ತಿದ್ದರು.

ಸರ್ವಜ್ಞ ಮುನಿಗಳ ಇಂಥ ವಿಶೇಷ ಅನುಗ್ರಹಕ್ಕೆ ಪಾತ್ರನಾದ ಛಾತ್ರ ಎಂದರೆ ಶ್ರೀ ಹೃಷೀಕೇಶ ತೀರ್ಥರು. ಇದು ಅವರು ಪಡೆದು ಬಂದ ಭಾಗ್ಯ. ಅವರು ಮಾಡಿದ ಗುರು ಸೇವೆಯ ಫಲ. ಹೃಷೀಕೇಶ ತೀರ್ಥರ ಈ ಸೌಭಾಗ್ಯವನ್ನು ಮಧ್ವ ವಿಜಯಕಾರರು ಮನೋಹರವಾಗಿ ಬಣ್ಣಿಸಿದ್ದಾರೆ.

ಅವದತ್ಸ ಕಥಾಂ ರಥಾಂಗಪಾಣೇರ್ಭಗವಾನ್ ಭಾಗವತೇ ಭವಾಪಹಂತ್ರೀಂ ।
ಅನುರೂಪಗುಣಸ್ವರಾದಿಭಾಜಾ ನಿಜ ಶಿಷ್ಯ ಪ್ರವರೇಣ ವಾಚ್ಯಮಾನೇ ॥

ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಜೀವನದ ಉತ್ತರಾರ್ಧದ ಸಮಕಾಲೀನರಾದುದರಿಂದ ಆನಂದ ತೀರ್ಥರು ಅವರ ಮೇಲೆ ಮಾಡುತ್ತಿರುವ ವಿಶೇಷ ಅನುಗ್ರಹವನ್ನು ಕಣ್ಣಿನಿಂದ ನೋಡಿಯೋ ಕಿವಿಯಿಂದ ಕೇಳಿಯೋ " ನಿಜ ಶಿಷ್ಯ ಪ್ರವರೇಣ " ಎಂದು ಮಧ್ವ ವಿಜಯದಲ್ಲಿ ವಿಶೇಷಣವನ್ನು ಹೃಷೀಕೇಶ ತೀರ್ಥರಿಗೆ ಕೊಟ್ಟಿರುತ್ತಾರೆ. " ಅಪ್ರೋಕ್ತ್ಯಷ್ಟ " ಎಂಬ ಹೃಷೀಕೇಶ;ತೀರ್ಥರ ವಿಶೇಷಣದಲ್ಲಿಯೂ ಅವರ ಮೇಲೆ ಗುರು ಮಧ್ವರ ಅನುಗ್ರಹಾತಿಶಯವು ಸ್ಫುಟಪ್ರತಿಪತ್ತಿಗೋಚರ ವಾಗುತ್ತದೆ.

ಆಚಾರ್ಯರ ಈ ಪ್ರೇಮಾತಿಶಯಕ್ಕೆ ಹೃಷೀಕೇಶರ ಗುರು ಭಕ್ತಿ, ತಪೋ, ವಿರಕ್ತಿ ಗಳಂತೆ ಅವರ ವಿಲಕ್ಷಣವಾದ ಸರ್ವೇಂದ್ರಿಯ ನಿಗ್ರಹ ಶಕ್ತಿಯೂ ಮುಖ್ಯ ಕಾರಣ ವಾಗಿದ್ದಿತು. ಅವರು ವಶೀಕೃತ ಹೃಷೀಕರು. ಅವರ ಸರ್ವೇಂದ್ರಿಯಗಳೂ ಸೈದ್ಧಾಂತಿಕ ಸೇವಾ ರೂಪವಾದ ಗುರು ಪೂಜೆಗೆ ಅನುಕೂಲವಾಗಿ ಸದಾ ಕಾಲವೂ ಕೈಂಕರ್ಯವನ್ನು ಎಸಗುತ್ತಿದ್ದವು.

ಶ್ರೀ ಹೃಷೀಕೇಶರು ಬರೆದ ಸಂಪ್ರದಾಯ ಪದ್ಧತಿ ಎಂಬ ಗ್ರಂಥವು ಅತ್ಯಂತ ಉಪಯುಕ್ತವಾದ ಸದ್ಗ್ರಂಥವಾಗಿದೆ.

ಶ್ರೀಮದಾನಂದ ತೀರ್ಥರ ಶಿಷ್ಯ ಪರಿವಾರವು ವಿಶ್ವವಿಶಾಲವಾದುದು. ದೇಶ ವಿದೇಶಗಳಿಂದ ಬಂದು, ಅವರ ಪಾದದಡಿಯಲ್ಲಿ ನಿಂದು, ಜ್ಞಾನಾಮೃತ ರೂಪವಾದಮಧ್ವ ಸರೋವರದಲ್ಲಿ ಮಿಂದು, ಅವರಿಂದ ಅನುಗ್ರವನ್ನು ಪಡೆದು ಧನ್ಯ ಮೂರ್ಧನ್ಯರಾದ ಸನ್ಯಾಸಿ ಶಿಷ್ಯರೇಷ್ಟೋ ! ಗೃಹಸ್ಥ ಶಿಷ್ಯರೆಷ್ಟೋ ! ಅವರ ಅಲ್ಪವಯೀ ಸಮಕಾಲೀನ ರಾದ ನಾರಾಯಣ ಪಂಡಿತಾಚಾರ್ಯರಿಗೇ ಆ ಶಿಷ್ಯ ಸಮುದಾಯವನ್ನು ಎಣಿಸಲಿಕ್ಕೆ ಆಗಲಿಲ್ಲವಂತೆ. ನಮ್ಮಂಥವರ ಪಾಡೇನು !

"ಅನಯೋಃ ಪ್ರಥಮೇ ಶಿಷ್ಯಾಃ ಚರಮೇಚಾಭವನ್ನಿಹ ।
ಅನಂತಬೋಧಸ್ಯಾನೇಕೇ ಯತೀಂದ್ರಾ ಬಹುದೇಶಜಾಃ "
ಮಧ್ವಪ್ರತಿಷ್ಠಾ ಬಹವಃ ಶಿಷ್ಯಾ ಏಷಾಂ ಮುಹುಸ್ತಥಾ ।
ಅಲಂಚಕ್ರುರಲಂ ಪೃಥ್ವೀಂ ಸರ್ವೇ ಸದ್ಗುಣ ಭೂಷಣಾಃ ।
ಬಹವೋ ಗೃಹಿಣೋಪ್ಯಸ್ಮಾತ್ ಸಮಗ್ರಾನುಗ್ರಹಂ ಯಯುಃ ॥ "

ಎಂದು ಮುಂತಾಗಿ ಮಧ್ವಾಚಾರ್ಯರ ಶಿಷ್ಯ ಪ್ರಶಿಷ್ಯರು ಅಸಂಖ್ಯರಾಗಿದ್ದರೆಂದು ಮಾತ್ರ ತಿಳಿಸಿದ್ದಾರೆ.

ಇಷ್ಟೆಲ್ಲ ಶಿಷ್ಯ ಪ್ರಶಿಷ್ಯರು ಆಚಾರ್ಯರಲ್ಲಿಯೇ ಅನೂಚಾನವಾಗಿ ಅಧ್ಯಯನ ಮಾಡಿ ಮಹಾ ವಿದ್ವಾಂಸರಾಗಿದ್ದರೂ ಆಚಾರ್ಯರ ಎಲ್ಲ ಗ್ರಂಥಗಳನ್ನೂ ಅವರ ಮುಖ ದಿಂದ ಬಂದ ಆನುಪೂರ್ವೀ ಸಹಿತವಾಗಿ ಸುಂದರವಾಗಿ ಬರೆದಿಟ್ಟ ಪುಣ್ಯಾತ್ಮರೆಂದರೆ ಇಬ್ಬರು ಮಾತ್ರ. ಮೊದಲಿನವರು ಶ್ರೀ ಹೃಷೀಕೇಶ ತೀರ್ಥರು ಎರಡನೇಯವರು ಶ್ರೀ ಅಕ್ಷೋಭ್ಯ ತೀರ್ಥರು.

ಶ್ರೀ ಹೃಷೀಕೇಶತೀರ್ಥರ ಸರ್ವಮೂಲ ಪ್ರತಿಯು ಶ್ರೀ ಫಲಿಮಾರು ಮಠ ದಲ್ಲಿಯೂ ಇನ್ನೊಬ್ಬರು ಬರೆದದ್ದು ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥರ ಮಠ ದಲ್ಲಿಯೂ ಸುರಕ್ಷಿತವಾಗಿ ಇರುತ್ತವೆ. ಇದಕ್ಕಾಗಿ ನಮ್ಮ ಇಡೀ ಮಾಧ್ವ ಸಮಾಜ ವೆಲ್ಲವೂ ಈ ಈರ್ವರು ಪುಣ್ಯಾತ್ಮರಿಗೆ ಕೃತಜ್ಞರಾಗಿರಬೇಕಾಗಿದೆ.

ಆದರಲ್ಲಿಯೂ ಸಂತಸದ ಸಂಗತಿಯೆಂದರೆ ಈಗ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರೂ ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರೂ ಮಾಧ್ವ ಮಹಾ ಮಂಡಲದ ಪರವಾಗಿ ಶ್ರೀ ಹೃಷೀಕೇಶತೀರ್ಥರ ಪಾಠ ಸಹಿತವಾಗಿ ಶ್ರೀ ಮಧ್ವಾ ಚಾರ್ಯರ ಸರ್ವಮೂಲ ಗ್ರಂಥದ ಮುದ್ರಣದ ಕಾರ್ಯವನ್ನು ಕೈಕೊಂಡಿದ್ದಾರೆ.

ಶ್ರೀ ಮಧ್ವಾನಂದತೀರ್ಥರು ಶ್ರೀ ಹೃಷೀಕೇಶ ತೀರ್ಥರಿಗೆ ತಾವು ಪೂಜಿಸಿದ ಶ್ರೀ ಸೀತಾ ಲಕ್ಷ್ಮಣ ಸಹಿತ ಶ್ರೀ ರಾಮ ದೇವರನ್ನು ಅನುಗ್ರಹಿಸಿದರು. ಸರ್ವಶಾಸ್ತ್ರ ನದೀಷ್ಣರಾದ ಶ್ರೀ ಹೃಷೀಕೇಶತೀರ್ಥರು ಆಚಾರ್ಯರ ಅನಂತರ ಉತ್ತರ ದೇಶದಲ್ಲಿ ಸಂಚಾರ ಮಾಡಿ ಮಾಧ್ವ ಮತವನ್ನು ಪ್ರಚಾರ ಮಾಡಿದರು. ಮರಣ ಕಾಲದವರೆಗೂ ಉತ್ತರಾಪಥದಲ್ಲಿ ವೈಷ್ಣವ ಸಿದ್ಧಾಂತ ದುಂದುಭಿಯನ್ನು ಮೊಳಗಿಸುತ್ತಲೇ ಗಂಗೆಯ ತೆರೆಗಳು ತೊಳೆದು ಪಾವನಗೊಳಿಸಿದ ಕಾಶೀ ಕ್ಷೇತ್ರದಲ್ಲಿಯೇ ವೃಂದಾವನಸ್ಥರಾದರು.



## ಶ್ರೀ ಮಧ್ವಾಚಾರ್ಯರ ಬಲಗೈಯಂತಿದ್ದ

# ಶ್ರೀ ಉಪೇಂದ್ರ ತೀರ್ಥರು

## ( ಶ್ರೀ ಪುತ್ತಿಗೆ ಮಠ )

ಶ್ರೀ ಪುತ್ತಿಕಾ ಮಠದ ಮೂಲ ಪುರುಷರ ಹೆಸರು ಉಪೇಂದ್ರ ತೀರ್ಥರು. ನಿತ್ಯ ನಿರಂತರವೂ ಶ್ರೀ ಉಪೇಂದ್ರ ತೀರ್ಥರು ಭಗವಂತನ ನಾಮವನ್ನು ಉಚ್ಚರಿಸುತ್ತ ಧ್ಯಾನ ಸಮಾಧಿಯಲ್ಲಿಯೇ ಇರುತ್ತಿದ್ದರು. ಇದನ್ನು ಮಧ್ವ ವಿಜಯದ ವ್ಯಾಖ್ಯಾನಕಾರರಾದ ಶ್ರೀ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರು ತಮ್ಮ "ಪದಾರ್ಥ ದೀಪಕೋಮ್ಬೋಧಿಕಾ" ಎಂಬ ಮಧ್ವ ವಿಜಯದ ಟೀಕೆಯಲ್ಲಿ 'ಅಸಕೃದುಚ್ಚರಿತ ಭಗವನ್ನಾಮ ಇತಿ ಧ್ವನಿತೋsರ್ಥಃ' ಎಂದು ಬರೆದಿದ್ದಾರೆ. ಇದರಿಂದ ಉಪೇಂದ್ರ ತೀರ್ಥರು ಅತ್ಯಂತ ಭಗವದ್ಭಕ್ತರಾಗಿದ್ದರೆಂದು ವಿದಿತವಾಗುತ್ತದೆ.

ಶ್ರೀ ಉಪೇಂದ್ರ ತೀರ್ಥರಿಗೆ ತಮ್ಮ ಗುರುಗಳಾದ ಪೂರ್ಣಬೋಧರಲ್ಲಿ ಭೀಮ ಭಕ್ತಿ. ಅವರ ಬಾಯಿಂದ ಬಂದ ಅಪ್ಪಣೆಯನ್ನು ಯಾವ ಯೋಚನೆಯೇ ಇಲ್ಲದೆ ತಲೆಯಿಂದ ಹೊತ್ತು ಕೈಯಿಂದ ಆಚರಿಸುವದೊಂದೇ ಅವರ ಕೆಲಸ. ಧರ್ಮರಾಜನಂತೆ "ನರೋ ವಾ ಕುಂಜರೋ ವಾ" ಎನ್ನುವ ಸಂದೇಹದ ಆಂದೋಲಿಕೆಗೆ ಎಂದೂ ಅವರು ಜೋತು ಬಿದ್ದವರಲ್ಲ. ಗುರುಗಳ ಮಾತು ಅವರಿಗೆ ವೇದವಚನ. ಅಲ್ಲಿ ಹಿಂದೇಟು ಹಾಕುವ ಪ್ರಶ್ನೆ ಯೇ ಇಲ್ಲ ಅವರಿಗೆ.

ಒಮ್ಮೆ ಪೂರ್ಣಬೋಧಾಚಾರ್ಯರು ತಮಗೆ ವಿಶಿಷ್ಯ ಪ್ರಿಯರಾದ ಕೆಲವು ಶಿಷ್ಯರೊಂದಿಗೆ ಶ್ರೀ ವ್ಯಾಸ ನಾರಾಯಣರ ದರ್ಶನಕ್ಕೆಂದು ಬದರಿಗೆ ನಡೆದಿದ್ದರು. ದಾರಿಯಲ್ಲಿ ಒಂದು ನಿಬಿಡವಾದ ಕಾಡಿನ ಗೂಡಿನಲ್ಲಿ ಈ ಯಾತ್ರಿಕರ ತಂಡವು ನಡೆವಾಗ ಒಂದು ದೊಡ್ಡ ದರೋಡೆಖೋರರ ಗುಂಪು ಇವರಿಗೆ ಗಂಟು ಬಿತ್ತು. ನೂರಕ್ಕಿಂತ ಮಿಗಿಲಾಗಿತ್ತು ಆ ಕಳ್ಳ ಕದೀಮರ ಸಂಖ್ಯೆ. ಎಲ್ಲರ ಕೈಯಲ್ಲಿಯೂ ಹದನವಾದ ಆಯುಧಗಳು ಹೊಳೆಯುತ್ತಿದ್ದವು. ಮೇಲಾಗಿ ಅವರೆಲ್ಲರೂ ಸುಲಿಗೆ, ಕಳವು, ಕೊಲೆ, ಕದನ, ಕಾದಾಟಗಳಲ್ಲಿ ಒಳ್ಳೇ ಪಳಗಿದವರು.

ಆ ತುಡುಗರ ತಂಡವು ಬೆರಳ ಮೇಲೆ ಎಣಿಸುವಷ್ಟಿರುವ ಆಚಾರ್ಯರ ಪರಿವಾರದ ಮೇಲೆ ಏರಿಬಂದು ಎರಗಿದಾಗ ಗುರುಮಧ್ವರು ತಮ್ಮ ಭೀಮಶಿಷ್ಯ ಶ್ರೀ ಉಪೇಂದ್ರ ತೀರ್ಥರ ಕಡೆಗೆ ನೋಡಿದರು.

ಆಯಿತು. ಎದ್ದೇ ಬಿಟ್ಟ ಆ ಗುರುವಿನ ಈ ಶಿಷ್ಯ ಗುರುವಿನ ಇಂಗಿತವನ್ನು ಅರಿತು.

ಕೈಯಲ್ಲಿ ಅಸ್ತ್ರವಿಲ್ಲ, ಶಸ್ತ್ರವಿಲ್ಲ. ಗುರುಗಳ ಅಸ್ಪಣೆಯಾದುದು ಒಂದೇ ತಡ. ಕೆಣಕಿದ ಕೇಸರಿಯಂತೆ ಕಳ್ಳರ ಗುಂಪಿನಲ್ಲಿ ನುಗಿದ್ದೇ ನುಗಿದ್ದು. "ಜೈ ಗುರುವೇ ನಮಃ" ಎಂದು ಆ ಚೋರ ವೀರರ ನಡುವೆ ನಿಂತರು. ಒಬ್ಬ ಕಳ್ಳ ಅವರನ್ನು ಹೊಡೆಯ ಬಂದ. ಹೊಡೆಯ ಬಂದ ಆ ತುಡುಗನ ಕೈಯಲ್ಲಿಯ ಕುಠಾರವನ್ನೇ ಅವನ ನಿಡಿದೋಳನ್ನು ಒಡ ಮುರಿದು ಕಿತ್ತುಕೊಂಡರು. ಗುರುವಿನ ಆಜ್ಞೆ ಅವರ ಮೈಯಲ್ಲಿ ಆವೇಶವಾಗಿ ಬಲದುಂಬಿತ್ತು. ಕಸಿದ ಖಡ್ಗದಿಂದ ಭೀಮ ಭಯಂಕರರಾಗಿ ತೊಟ್ಟ ಶ್ಯಾಟಿಯನ್ನು ಗಟ್ಟಿಯಾಗಿ ಬಿಗಿದುಕೊಂಡು ಆ ದುಷ್ಟರಿಗೆಲ್ಲ ಪೆಟ್ಟು ಕೊಡಹತ್ತಿದರು. ಶ್ಯಾಟಿ ಉಟ್ಟ ಸ್ವಾಮಿಗಳು ಶೌರ್ಯದಿಂದ ಕಠೋರವಾದ ಆ ಕುಠಾರವನ್ನು ಬೀಸತೊಡಗಿದಾಗ ಒಳ್ಳೇ ಶೂರರಾದ ಕಳ್ಳರೆಲ್ಲರೂ ಅವರ ಪ್ರಹಾರದಿಂದ ಜರ್ಜರಿತರಾದರು. ಈ ಶ್ಯಾಟಿಯ ಏಟವನ್ನು ತಾಳಲಾರದೇ ಆ ಆ ಎಲ್ಲ ಚೋರವೀರರು ಅಲ್ಲಿಂದ ಓಟ ಕಿತ್ತಿದರು.

ಉಪೇಂದ್ರತೀರ್ಥರ ಕಲಿತನದ ಕಾದಾಟವನ್ನು ಕಂಡು ಅವರ ಸಹಚರರಿಗೆಲ್ಲ ಅತ್ಯಂತ ಕೌತುಕವೆನಿಸಿತು. "ಇಷ್ಟು ಯುದ್ಧದ ಅನುಭವವು ನಿಮಗೆಲ್ಲಿ" ಎಂದು ಅವರೆಲ್ಲರೂ ಉಪೇಂದ್ರತೀರ್ಥರನ್ನು ಕೇಳಿದರು. ಆಗ ಅವರು ಹೇಳಿದ ಉತ್ತರ ಮನನೀಯವಾಗಿದೆ. "ನನಗೆ ಎಂದೂ ಕದನವಾಡಿ ಕಲಹಮಾಡಿ ಗೊತ್ತಿಲ್ಲ. ನಾನು ಶಸ್ತ್ರವನ್ನು ಹಿಡಿದಿಲ್ಲ. ಅಸ್ತ್ರವನ್ನು ನೋಡಿಲ್ಲ. ಇಷ್ಟು ಹೊತ್ತಿನ ವರೆಗೆ ಈ ತುಂಟ ತಸ್ಕರರ ತಂಡದೊಡನೆ ಹೋರಾಡಿದವನು ನಾನಲ್ಲ. ಗುರುಗಳ ಆದೇಶ, ಇಂಗಿತ, ಆಶಯ" ಎಂದು ಭಕ್ತಿಯಿಂದ ಗುರುಪಾದಕ್ಕೆ ವಂದಿಸಿದರು.

ಇಂಥ ಅಚ್ಚಿನ್ನ ಭಕ್ತಿ ಶ್ರೀ ಉಪೇಂದ್ರತೀರ್ಥರಿಗೆ ಶ್ರೀ ಮಧ್ವಾಚಾರ್ಯರಲ್ಲಿ.

"ಅನ್ಯತ್ರ ಚ ಚೋರಾನ್ ಧನ್ಯಪ್ರವರೋsಸೌ ಶೂರಾನ್
ಶತಸಂಖ್ಯಾನ್ ಪ್ರಾಪ್ತಾನ್ ಸ್ವಜಿಘಾಂಸೂನ್ ।
ಏಕೇನ ತು ಶಿಷ್ಯೇಣಾಕೃಷ್ಟ ಕುಠಾರಾನ್ನಿರತತಾಡಿತ ಯೂಥ್ಯಾ
ನ ದ್ರಾವಯತ ದ್ರಾಕ್ ।"

ಈ ಪದ್ಯದ ಟೀಕೆಯನ್ನು ಬರೆಯುವಾಗ 'ಭಾವಪ್ರಕಾಶಿಕಾ'ದ ಸ್ವಯಂ ನಾರಾಯಣ ಪಂಡಿತಾಚಾರ್ಯರೂ ಮತ್ತು ವಿಶ್ವಪತಿತೀರ್ಥರೂ—

"ಏಕೇನ ಶಿಷ್ಯೇಣ ಉಪೇಂದ್ರ ನಾಮಕೇನ" ಎಂದು ಅರ್ಥವಿಸಿದ್ದಾರೆ.

ಈ ತಮ್ಮ ಪ್ರೀತಿಯ ಶಿಷ್ಯರಿಗೆ ಆಚಾರ್ಯರು ತಮ್ಮ ಕರಾರ್ಚಿತವಾದ ಶ್ರೀ ಪಾಂಡುರಂಗ ವಿಠಲನ ಮೂರ್ತಿಯನ್ನು ಅನುಗ್ರಹಿಸಿದರು.

## ಭವರೋಗ ಪರಿಹಾರಕರಾದ

# ಶ್ರೀ ಜನಾರ್ದನ ತೀರ್ಥರು

## ( ಶ್ರೀ ಕೃಷ್ಣಾಪೂರ ಮಠ )

ಶ್ರೀ ಭಗವತ್ಪಾದರು ತಾವು ತಂದು ಪ್ರತಿಷ್ಠಾಪಿಸಿದ ಶ್ರೀ ಕೃಷ್ಣ ಪರಮಾತ್ಮನ ಪೂಜಾ ಕೈಂಕರ್ಯಕ್ಕಾಗಿ ಎಂಟು ಜನ ಶ್ರೀ ಪಾದಂಗಳವರನ್ನು ತಾವೇ ನೇಮಿಸಿದರು. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಅವರೆಲ್ಲರೂ ಜ್ಞಾನದ ಖಣಿಗಳು, ವಿರಕ್ತ ಶಿಖಾಮಣಿಗಳು, ಭಕ್ತಾಗ್ರಣಿಗಳು.

ಅವರಲ್ಲಿ ಕೃಷ್ಣಾಪುರದ ಮಠದ ಮೂಲ ಪುರುಷರಾದ ಶ್ರೀ ಜನಾರ್ದನ ತೀರ್ಥರ ಯೋಗ್ಯತೆ ಅಸಾಧಾರಣವಾಗಿದ್ದಿತು. ಅವರು ತಮ್ಮ ಭಗವದ್ಭಕ್ತಿಯ ನೈರ್ಭರ್ಯ, ಮತ್ತು ತಪಶ್ಚರ್ಯ, ಧ್ಯಾನ ನೈರಂತರ್ಯ, ಮತ್ತು ವೈರಾಗ್ಯ ಪ್ರಾಚುರ್ಯಾದಿಗಳಿಂದ ಸಿದ್ಧಿಯ ಶಿಖರದಲ್ಲಿ ನಲಿದಾಡುತ್ತಿದ್ದರು. ಐಹಿಕ ವಿಷಯಗಳನ್ನೆಲ್ಲ ಕಃ ಪದಾರ್ಥವೆಂದು ಎಣಿಸಿ ದ್ವಂದ್ವಾತೀತರಾಗಿ ಭಗವಧ್ಯಾನವನ್ನು ಮಾಡಿ ಆ ಧ್ಯಾನಯೋಗದಿಂದ ಅವರು ಜನನ ಮರಣಾದಿ ಜಾಲದಿಂದ ಮುಕ್ತರಾಗಿದ್ದರು. ಇಷ್ಟೇ ಅಲ್ಲ ಅವರು ತಮ್ಮನ್ನು ನಂಬಿ ಶಿಷ್ಯರಾಗಿ ಬಂದ ಭಕ್ತ ಜನರನ್ನು ಕೂಡ ತಮ್ಮ ಉಪದೇಶದ ಪ್ರಭಾವದಿಂದ ಜನನ, ಜರಾ, ಮರಣಾದಿ ದುಃಖಗಳನ್ನು ದೂರಮಾಡಬಲ್ಲವರಾಗಿದ್ದರು.

ಇದನ್ನು ಶ್ರೀ ಪಂಡಿತಾಚಾರ್ಯರು " ಜನಾನಾದ್ಯುಪಮರ್ದಿನಃ " ಎಂದು ಮಧ್ವ ವಿಜಯದಲ್ಲಿ ಬಣ್ಣಿಸಿದ್ದಾರೆ.

ಶ್ರೀ ವಿಶ್ವಪತಿ ತೀರ್ಥರು ಸೂತ್ರರೂಪವಾದ ಈ ವಿಶೇಷಣದಲ್ಲಿ ಘಟಕವಾದ ಈ ಶಬ್ದಗಳ ಭಾವೋದ್ಘಾಟನೆಯನ್ನು ಮಾಡುತ್ತ—

" ಜನನಂ ಆದಿಃ ಏಷಾಂ ತಾನಿ ಜನನಾದೀನಿ, ಉಪಮರ್ದಯಿತುಂ ಶೀಲಂ ಏಷಾಮಸ್ತೀತಿ ಜನನಾದ್ಯುಪಮರ್ದಿನಃ ಜನ್ಮಮರಣಾದಿ ದೋಷ ನಿರಾಕರಣಶೀಲಾ ಇತ್ಯರ್ಥಃ. ಅತ ಏವ ಜನಾರ್ದನ ತೀರ್ಥಾರ್ಯಾಃ ಇತಿ ಭಾವಃ "

ಪಂಡಿತಾಚಾರ್ಯರು ಆರಿಸಿ ಪ್ರಯೋಗಿಸಿದ ಇಲ್ಲಿಯ ಕೆಲವೇ ಪದ ಪುಂಜಗಳಿಂದ ಶ್ರೀ ಜನಾರ್ದನ ತೀರ್ಥರ ಮಹಾ ಮಹಿಮೆಯ ಕಲ್ಪನೆಯು ಬಲ್ಲವರೆಲ್ಲರಿಗೂ ಬರುವಂತೆ ಬರೆದಿಟ್ಟಿದ್ದಾರೆ.

ಈ ಮಹಾನುಭಾವರಾದ ಜನಾರ್ದನ ತೀರ್ಥರಿಗೆ ದಶಪ್ರಮತಿಗಳು ನಿತ್ಯ ಪೂಜೆಗಾಗಿ ಕರುಣೆಯಿಂದ ಕೊಟ್ಟ ಸ್ವಕರಾರ್ಚಿತ ಪ್ರತಿಮೆಯೆಂದರೆ— ಕಾಲಿಯಾ ಮರ್ದನ ಕೃಷ್ಣ.

ಕೃಷ್ಣಭಕ್ತಿಗೆ ಶ್ರೀ ಜನಾರ್ದನತೀರ್ಥರ ಹೃದಯದಲ್ಲಿ ಮಹಾಪೂರವೇ ಬಂದು ತುಳಕಿದಂತಾಗಿತ್ತು. ಅವರ ಹೃದಯದ ತುಂಬ ಪೂರಾ ಕೃಷ್ಣನೇ ತುಂಬಿದ್ದ. ಆದುದರಿಂದಲೇ ಅದು ಕೃಷ್ಣಾಪೂರ ಮಠವೆಂದು ಹೆಸರಾಯಿತು.



## ಶ್ರೀ ನರಸಿಂಹದೇವರನ್ನು ನಂಬಿದ, ನಿಷ್ಠಾವಂತ ಭಕ್ತ

# ಶ್ರೀ ನರಸಿಂಹ ತೀರ್ಥರು

## (ಶ್ರೀ ಅದಮಾರು ಮಠ)

ದಾಸ-ಶ್ರೇಷ್ಠರು "ನರಸಿಂಹ ಮಂತ್ರ ಒಂದಿರಲು ಸಾಕು" ಎಂದು ಹಾಡಿದ್ದಾರೆ. ಅಪರೋಕ್ಷ ಜ್ಞಾನಿಗಳಾದ ಇಂಥ ದಾಸರಾಯರ ವೇದ ಸಮ್ಮಿತವಾದ ವಚನಗಳಿಗೆ ಯಾಥಾರ್ಥ್ಯ ಮತ್ತು ಚಾರಿತಾರ್ಥ್ಯಗಳನ್ನು ತಂದು ಕೊಟ್ಟ ಪುಣ್ಯಾತ್ಮರು ಇಬ್ಬರು. ಪೂರ್ವ ಯುಗದಲ್ಲಿ— ಪ್ರಲ್ಹಾದ ರಾಜರು. ಈ ಯುಗದಲ್ಲಿ— ಶ್ರೀ ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ನರಸಿಂಹ ತೀರ್ಥರು.

ಶ್ರೀ ನರಸಿಂಹದೇವರಲ್ಲಿದ್ದ ಅವರ ಅಚಲ ನಿಷ್ಠೆಯೇ ಅವರಿಗೆ ಸರ್ವಜ್ಞರ ಸಾಕ್ಷಾತ್ ಶಿಷ್ಯತ್ವದ ಸೌಭಾಗ್ಯವನ್ನು ಕರುಣಿಸಿತ್ತು. ಶ್ರೀ ವಾಯುಕುಮಾರರಿಂದಲೇ ಅವರಿಗೆ ದಿವ್ಯ ಮಂತ್ರೋಪದೇಶವಾಯಿತು. ಬ್ರಹ್ಮ ರಹಸ್ಯದ ಅರಿವು ಉಂಟಾಯಿತು.

ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯರು ಇವರ ನೃಸಿಂಹ ನಿಷ್ಠೆ ಮತ್ತು ಜ್ಞಾನ ಭಕ್ತ್ಯಾದಿಗುಣಗಳಿಂದ ಇವರ ನರಕುಲದ ಶ್ರೇಷ್ಠತೆಯನ್ನು ಗಮನಿಸಿ ಇವರಿಗೆ ನರಸಿಂಹ ಎಂದು ನಾಮ ಇತ್ತು ಅನುಗ್ರಹಿಸಿದರು. ಮತ್ತು ಅವರಿಗೆ ತಾವು ಪೂಜಿಸಿದ ಕಾಲಿಯಾಮರ್ದನ ಕೃಷ್ಣ ಪ್ರತಿಮೆಯನ್ನು ಪೂಜೆಗಾಗಿ ಕೊಟ್ಟರು.

ಈ ನರಸಿಂಹತೀರ್ಥರ ಮಠವೇ ಈಗ ಶ್ರೀಮದದಮಾರು ಮಠವೆಂದು ಸುಪ್ರಸಿದ್ಧವಾಗಿದೆ.



## ಶ್ರೀ ಶಿರೂರ ಮಠದ ಮೂಲ ಪುರುಷರಾದ

# ಶ್ರೀ ವಾಮನ ತೀರ್ಥರು

ಶ್ರೀ ಪೂರ್ಣಪ್ರಜ್ಞರ ಸಾಕ್ಷಾತ್ ಶಿಷ್ಯರಾದ ಅಷ್ಟಮಠಾಧೀಶರು ಒಬ್ಬೊಬ್ಬರೂ ಗುಣದಿಂದ ಗರಿಷ್ಠರು, ವಿದ್ಯೆಯಿಂದ ವರಿಷ್ಠರು. ವೈರಾಗ್ಯದಿಂದ ಮಹಿಷ್ಠರು, ತಪಸ್ಸಿನಿಂದ ಶ್ರೇಷ್ಠರೂ, ಆಚಾರ್ಯರಿಗೆ ಪ್ರೇಷ್ಠರೂ ಆಗಿದ್ದರು.

ಆಚಾರ್ಯರ ಇಷ್ಟಪ್ರೇಷ್ಠರಾದ ಅಷ್ಟಯುತೀಶ್ವರರಲ್ಲಿ ವಾಮನ ತೀರ್ಥರು ಅನ್ಯತಮರು, ಧನ್ಯತಮರು. ವಾಮನ ದೇವರಂತೆ ಅವರ ಮೂರ್ತಿ ಚಿಕ್ಕದಾದರೂ ಅವರ ತಪಃ ಪ್ರಭಾವದ ಕೀರ್ತಿಯು ವಿಶ್ವವಿಶ್ರುತವಾಗಿಪ್ಪಿತು. ಹೊನ್ನು ಹೆಣ್ಣುಗಳನ್ನು ಅವರು ಮಣ್ಣಿನಂತೆ ಕಡೆಗಣಿಸಿದ್ದರು. ವಿಷಯ ಸುಖವನ್ನೆಲ್ಲ ವಿಷ ವಿಷಮವಾಗಿ ಭಾವಿಸಿಪ್ಪರು. ಅರ್ಥ ಎಂದರೆ ಅನರ್ಥ ಎಂದೇ ಅವರ ಭಾವನೆ. ಎಲ್ಲ ಲೌಕಿಕ ಸುಖವೂ ಕ್ಷುಲ್ಲಕವೆಂದು ಬಗೆದು ಅವರು ಹುಲ್ಲಿನಂತೆ ಕಡೆಗಣಿಸಿಪ್ಪರು. ಈ ಅಭಿಪ್ರಾಯವನ್ನು ಪಂಡಿತಾಚಾರ್ಯರು

> " ದೀರ್ಘೋನ ಭವತೀತ್ಯ ದೀರ್ಘಃ ವಾಮನ ಇತಿತ್ಯ
> ವತ್ ಅದೀರ್ಘ ಇತ್ಯನ್ಯಾಭಿ ಧಾನಂ ಯೇಷಾಂ ತೇ
> ಅದೀರ್ಘಾನ್ಯಾಭಿ ಧಾನಾಃ ವಾಮನ ತೀರ್ಥಾ ಇತಿಯಾವತ್
> ಅಲ್ಪೀಕೃತ ಲೌಕಿಕ ವ್ಯವಹಾರಶ್ಚೇತಿ ಧ್ವನಿತೋಽರ್ಥಃ "

ಎಂಬ ಮಾತುಗಳಿಂದ ಸೂಚ್ಯವಾಗಿ ವ್ಯಕ್ತಪಡಿಸಿದ್ದಾರೆ.

ಈ ಶ್ರೀ ವಾಮನ ತೀರ್ಥರಿಗೆ ಭಗವತ್ಪಾದರು ತಮ್ಮ ಉಪಾಸ್ಯ ದೈವತವಾದ ಶ್ರೀ ಪಾಂಡುರಂಗ ವಿಠ್ಠಲನ ಪ್ರತಿಮೆಯನ್ನು ಕರುಣಿಸಿದರು. ಈ ವಾಮನ ತೀರ್ಥರ ಪರಂಪರೆಯೇ ಶಿರೂರ ಮಠವೆಂದು ಹೆಸರಾಯಿತು.

ಈಗಿನ ಶಿರೂರ ಮಠದ ಶ್ರೀಪಾದಂಗಳವರ ಹಿಂದಿನವರಾದ, ಜ್ಞಾನ ಕ್ಷೇತ್ರದಲ್ಲಿ ಮುಂದಿನವರಾದ, ಪಂಡಿತ ಪರಿವ್ರಾಜಕ ಶ್ರೀ ಲಕ್ಷ್ಮೀಂದ್ರ ತೀರ್ಥ ಶ್ರೀಪಾದಂಗಳವರು ಶ್ರೀ ಮದುತ್ತರಾದಿ ಮಠದ ವಿದ್ವದ್ವಿಭೂತಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ

ಬ್ರಹ್ಮ ಮೀಮಾಂಸಾ ಶಾಸ್ತ್ರಗಳನ್ನು ಓವಲಿಕ್ಕೆ ಹೋಗಿದ್ದರು. ಒಂದು ದಿನ ಶ್ರೀ ಸತ್ಯಧ್ಯಾನ ತೀರ್ಥರು ಶಿರೂರ ಮಠದಲ್ಲಿರುವ ಸರ್ವಜ್ಞ ಕರಾರ್ಚಿತ ಶ್ರೀ ಪಾಂಡು ರಂಗ ವಿಠ್ಠಲನ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಶ್ರೀ ಲಕ್ಷ್ಮೀಂದ್ರ ತೀರ್ಥರು ಪೂಜೆ ಮಾಡುವಾಗಲೇ ದಯಮಾಡಿಸಿದರು.

ಶ್ರೀ ಭಗವತ್ಪಾದರು ತಮ್ಮ ಕೈಯಿಂದಲೇ ಪೂಜಿಸಿ ಕೊಟ್ಟ ಆ ಮುದ್ದು ಮೂರುತಿಯನ್ನು ಕಣ್ತುಂಬ ನೋಡಿ ಆನಂದಭರಿತರಾದರು. ಆ ಮಧ್ವಕರಾರ್ಚಿತವಾದ ದಿವ್ಯ ವಿಗ್ರಹವು ಸಾಮಾನ್ಯ ಬೆಳ್ಳಿಯ ಪೀಠದಲ್ಲಿ ಕುಳಿತಿರುವದನ್ನು ನೋಡಿ ಉದಾರ ಹೃದಯರಾದ ಶ್ರೀ ಸತ್ಯಧ್ಯಾನ ತೀರ್ಥರು ಒಂದು ಬಂಗಾರದ ಮಂಟಪವನ್ನೇ ಮಧ್ವಕರಾರ್ಚಿತವಾದ ಮುದ್ದು ಮೂರುತಿಯನ್ನು ಕೂಡಿಸಲಿಕ್ಕೆ ಕೊಟ್ಟುಬಿಟ್ಟರು. ಮತ್ತು ಆ ಸುವರ್ಣ ಮಂಟಪದಲ್ಲಿ ಬಂಗಾರದ ಪೀಠದ ಮೇಲೆ ಆ ಸರ್ವಜ್ಞ ಕರಾರ್ಚಿತವಾದ ಪಾಂಡುರಂಗ ವಿಠ್ಠಲನ ಪ್ರತಿಮೆಯನ್ನು ಕೂಡಿಸಲು ಒಂದು ದಿವ್ಯವಾದ ವಜ್ರದ ಪೀಠ ಪ್ರಭಾವಳಿಯನ್ನೂ ಮಾಡಿಸಿಕೊಟ್ಟರು. ಅವುಗಳನ್ನು ಇಂದಿಗೂ ಶ್ರೀ ಶಿರೂರ ಮಠದಲ್ಲಿ ಕಾಣಬಹುದು.

ಇಷ್ಟು ಸುಂದರವಾಗಿದೆ ಶಿರೂರ ಮಠದ ಶ್ರೀ ವಾಮನ ತೀರ್ಥರಿಗೆ ಸುಖ ತೀರ್ಥರು ಕೊಟ್ಟ ವಿಠ್ಠಲ ಮೂರ್ತಿ.



### ಶ್ರೀ ರಾಮೋಪಾಸಕರಾದ

## ಶ್ರೀ ರಾಮ ತೀರ್ಥರು

### (ಶ್ರೀ ಕಾಣಿಯೂರು ಮಠ)

ಈಗಿನ ಕಾಣಿಯೂರ ಮಠದ ಪರಂಪರೆಯು ಪ್ರಾರಂಭವಾದದ್ದು ಶ್ರೀ ರಾಮ ತೀರ್ಥರಿಂದ. ಶ್ರೀ ರಾಮತೀರ್ಥರು ವೈರಾಗ್ಯದ ನಿಧಿಗಳೂ, ಸುಜ್ಞಾನ ಶರಧಿಗಳೂ, ಭಗವನ್ನಿಷ್ಠರೂ, ತಪಃಪರಿಪೂತರೂ ಆಗಿದ್ದರು. ಅವರ ಈ ಅಸಾಧಾರಣ ಗುಣ ಗಳೇ ಅವರನ್ನು ಆಚಾರ್ಯರ ಪಟ್ಟ ಶಿಷ್ಯರಲ್ಲಿ ಗಣನಾ ಗೌರವಕ್ಕೆ ಅರ್ಹತೆಯನ್ನು ಒದಗಿಸಿದವು.

ಅಷ್ಟ ಮಠಾಧೀಶರಲ್ಲಿ ಬಹು ಜನ ಶ್ರೀಪಾದಂಗಳವರ ಪೂರ್ವಾಶ್ರಮದ ನಾಮ–ಧಾಮಗಳು ಗೊತ್ತಿಲ್ಲ. ದೇಶ–ಕೋಶಗಳ ಗೊತ್ತಿಲ್ಲ. ಗೈಮೆ–ಮೈಮೆಗಳ ಪರಿಚಯವಿಲ್ಲ, ಇತಿಹಾಸವು ಈ ವಿಷಯದಲ್ಲಿ ಮೂಕವಿದೆ. ಅವರ ಪ್ರತಿಷ್ಠಾ–ಪರಾಙ್ಮುಖತೆಯೇ ಕಾರಣವಿರಬಹುದು. ಎಲೆಯ ಮರೆಯ ಹೂವಿನಂತೆ, ಧ್ವಜದ ಹಿಂದಿನ ದಂಡದಂತೆ ಹಿಂದೆ ನಿಂತುಕೊಂಡು ಯಾವ ಸದ್ದುಗದ್ದಲವಿಲ್ಲದೆ ಗುರುಗಳು ಹೇಳಿದಂತೆ— ಸೇವಾ, ಸಮಾರಾಧನೆ, ಪಾಠ–ಪ್ರವಚನ, ಪೂಜೆ–ಪುರಸ್ಕಾರ ಮುಂತಾದ ಧರ್ಮ–ಕರ್ಮಗಳನ್ನು ಅನುಷ್ಠಾನ ಗೈದ ಪುಣ್ಯಾತ್ಮರವರು. ಅವರಿಗೆ ಯಾವಾಗಲೂ 'ಅರತಿರ್ಜನ ಸಂಸದಿ.'

ಹಾವತಾ ಆ ಅಷ್ಟಮಠಾಧೀಶ್ವರರ ಯೋಗ್ಯತೆಯು ಸಾಮಾನ್ಯವಾಗಿರಲಿಲ್ಲ. ಆ ಎಂಟು ಜನ ಭೂಸುರ ಕುಲದ ಅಗ್ರೇಸರರು ಜ್ಞಾನಭಾಸುರರು. ನೆಲಕ್ಕಿಳಿದ ಬಂದ ನೇಸರರು. ಹಾಗೆಂದು ಪಂಡಿತಾಚಾರ್ಯರು ಅವರನ್ನು ಮಧ್ವವಿಜಯದಲ್ಲಿ ಬಣ್ಣಿಸಿದ್ದಾರೆ.

ಅವರು ಎಂಟೂ ಜನರೂ ಮಹಾ ಯೋಗ್ಯತಾ ಸಂಪನ್ನರೂ, ದೈವಿಕ ಪುರುಷ ರೆಂದು ಸಂಪ್ರತಿಪನ್ನರು.

ಇದಕ್ಕೆ ಸರ್ವಜ್ಞಮುನಿಗಳು ತಮ್ಮ ಜೀವನದ ಮುಖ್ಯ ಕಾರ್ಯಗಳಾದ— ಶ್ರೀ ಕೃಷ್ಣಪೂಜೆ, ಮತ್ತು ವಿಷ್ಣು ಸಿದ್ಧಾಂತದ ಪ್ರಸಾರ ಇವುಗಳಿಗಾಗಿ ಈ ಅಷ್ಟ ಸನ್ಯಾಸಿಗಳನ್ನು ತಮ್ಮ ಅಷ್ಟ–ಪ್ರಧಾನರನ್ನಾಗಿ ಆಯ್ದುಕೊಂಡಿದ್ದಾರೆ.

ಇನ್ನೇನು ಬೇಕು! ಅವರ ಮಹಿಮಾ ಮಾಪನಕ್ಕೆ ಮತ್ತು ಅವರ ಪ್ರಭಾವ ಜ್ಞಾಪನಕ್ಕೆ ಬೇರೆ ಸಾಕ್ಷಿ.

ಶ್ರೀ ಕಾಣಿಯೂರ ಮಠದ ಶ್ರೀ ರಾಮತೀರ್ಥರಿಗೆ ಶ್ರೀ ಪೂರ್ಣಪ್ರಜ್ಞರು ತಮ್ಮ ಉಪಾಸ್ಯ ಮೂರ್ತಿಯಾದ ನರಸಿಂಹದೇವರನ್ನು ಕೊಟ್ಟರು.



## ಭಕ್ತಿ ವೈರಾಗ್ಯ ಸಾಗರರಾದ

# ಶ್ರೀ ಅಧೋಕ್ಷಜ ತೀರ್ಥರು

## ( ಶ್ರೀ ಪೇಜಾವರ ಮಠ )

ಪೇಜಾವರ ಮಠದ ಮೂಲ ಪುರುಷರು ಶ್ರೀಮದಧೋಕ್ಷಜ ತೀರ್ಥರು. ಅಧೋಕ್ಷಜ ತೀರ್ಥರಲ್ಲಿ ಜನಸಾಮಾನ್ಯರ ಕಣ್ಣಿಗೆ ಗೋಚರವಾಗದ ಅನೇಕ ಸದ್ಗುಣಗಳಿದ್ದವು. ಶುಕ ಮುನಿಗಳಂತೆ ಅವರೊಬ್ಬರು ಅವಧೂತ ಯೋಗಿಗಳು. ಅವರ ಗುಣಗಳೆಲ್ಲವೂ ಗೂಢ, ಅವರ ಚರ್ಯೆ ಮೂಢ. ಆದರೆ ಅಂತರಂಗದಲ್ಲಿ ಮಾತ್ರ ಆಧ್ಯಾತ್ಮ ಜ್ಯೋತಿಯು ನಿರಂತರ ಬೆಳಗುತ್ತಿತ್ತು. ಅದೊಂದು ಜ್ಞಾನದ ಖಣಿ. ಭಕ್ತಿಯ ಸಾಗರ. ಸದ್ಗುಣಗಳ ಆಗರ.

ಈ ಅಭಿಪ್ರಾಯವನ್ನು ಪಂಡಿತಾಚಾರ್ಯರು—

"ಅಪ್ರತ್ಯಕ್ಷ ಗುಣೋದ್ರಿಕ್ತಾಃ ಭಕ್ತಿ ವೈರಾಗ್ಯ ಸಾಗರಾಃ"

ಎಂದು ಬಣ್ಣಿಸಿದ್ದಾರೆ.

ಭಕ್ತಿ ವೈರಾಗ್ಯ ಸಾಗರ ಎಂಬ ಪಂಡಿತಾಚಾರ್ಯರ ವಿಶೇಷಣವು ಅವ್ಯವಹಿತ ಪೂರ್ವವರ್ತಿಗಳಾದ ಶ್ರೀ ಅಧೋಕ್ಷಜ ತೀರ್ಥರನ್ನೇ ಮೊದಲು ಪರಾಮರ್ಶಿಸುತ್ತದೆ.

ಶಾಸ್ತ್ರ ಸಂಸ್ಕೃತವಾದ ಶ್ರೀ ಅಧೋಕ್ಷಜ ತೀರ್ಥರ ಮಿದುಳಿನ ಮಡಲಿನಲ್ಲಿ ವೇದವೇದಾಂತ ಜನ್ಯವಾದ ದಿವ್ಯ ಜ್ಞಾನವು ಕಡಲಾಡುತ್ತಿತ್ತು.

ಅವರ ಈ ಗುಣ ಗೌರವ ಗರಿಮೆಯನ್ನು ಅಪರೋಕ್ಷ ಜ್ಞಾನಿಗಳಾದ ಪ್ರಾಣೇಶ ದಾಸರು ತಮ್ಮ ೨೩೩ ನೇ ದೇವರ ನಾಮದಲ್ಲಿ—

"ಅತಿಸುಗುಣ ಅಧೋಕ್ಷಜ ತೀರ್ಥರಿಗೆ ವಿಠ್ಠಲನ ।  
ಇಂತು ಒಂಭತ್ತು ಮೂರ್ತಿಗಳನು ಕೊಟ್ಟು ।  
ಕ್ಷಿತಿಯೊಳಗೆ ರೌಪ್ಯಪೀಠಪುರಸ್ಥ ।  
ಪ್ರಾಣೇಶ ವಿಠ್ಠಲನ ಅರ್ಚನೆಗಿಟ್ಟರು ಕೇಳಿ ॥"

ಎಂದು ಬಣ್ಣಿಸಿದ್ದಾರೆ.

ಷಟ್ಪದ ಮೇಲಿನವರಾದ ಶ್ರೀ ಪ್ರಾಣೇಶ ವಿಠ್ಠಲ ದಾಸರು ಶ್ರೀ ಅಧೋಕ್ಷಜ ತೀರ್ಥರನ್ನು ಬಣ್ಣಿಸಬೇಕಾದರೆ ಅವರು ಎಂಥ ಗುಣ ಗಣ ಮಣಿಗಳ ಗಣಿಯಾಗಿ ರಬೇಡ! ಎಂಬುದನ್ನು ವಾಚಕರೇ ಊಹಿಸಬಹುದು.

ಕಣ್ಣಿಗೆ ಕಾಣದ, ಎಣಿಸಲು ಬಾರದ ಶ್ರೀ ಅಧೋಕ್ಷಜ ತೀರ್ಥರ ಗೂಢ ಗುಣಗಳಿಂದ ಶ್ರೀ ಭಗವತ್ಪಾದರು ತುಷ್ಟಾಕೃಷ್ಟರಾಗಿ ಅವರಿಗೆ ಶ್ರೀ ವಿಠ್ಠಲ ಮೂರ್ತಿಯನ್ನಿತ್ತು ಅನುಗ್ರಹಿಸಿದರು.

ಶ್ರೀಮದಾಚಾರ್ಯರು ಶ್ರೀ ಕೃಷ್ಣನ ಸೇವೆಗಾಗಿ ನಿಯೋಜಿಸಿದ ಈ ಎಂಟು ಜನ ಸ್ವಾಮಿಗಳವರೂ ಮಹಾ ಜ್ಞಾನಿಗಳು, ಮಹಾ ವಿರಕ್ತರು, ಮಹಾ ತಪಸ್ವಿಗಳು, ಮಹಾ ಭಕ್ತರೂ ಆಗಿದ್ದರು. ಆಚಾರ್ಯರು ತಮಗೆ ಕೊಟ್ಟ ದಿವ್ಯ ಪ್ರತಿಮೆಗಳನ್ನು ನಿತ್ಯವೂ ಭಕ್ತಿಯಿಂದ ಪೂಜಿಸಿ ಅವರೆಲ್ಲರೂ ಧನ್ಯರಾಗಿದ್ದರು. ಜಗನ್ಮಾನ್ಯರಾಗಿದ್ದರು. ಅವರೆಲ್ಲರೂ ಭಗವದಪರೋಕ್ಷವನ್ನು ಕಂಡವರು. ಬ್ರಹ್ಮ ಜ್ಞಾನದ ಸವಿಯನ್ನು ಉಂಡವರು. ಅವರು ನಡೆದ ನೆಲ ಪವಿತ್ರವಾಗುತ್ತಿತ್ತು. ನಿಂತ ನೆಲ ಕ್ಷೇತ್ರವಾಗುತ್ತಿತ್ತು. ಸ್ನಾನ ಮಾಡಿದ ಜಲ ತೀರ್ಥವಾಗುತ್ತಿತ್ತು. ಅವರು ನಡೆದಾಡಿದರೆ ಧರಣಿಯಲ್ಲಿ ತರಣಿ ಸಂಚರಿಸಿದಂತೆ. ಅವರು ನಡೆದಲ್ಲಿ ಕತ್ತಲೆ (ಅಜ್ಞಾನ) ತಲೆ ಕಿತ್ತುತ್ತಿತ್ತು. ಅವರು ನುಡಿದರೆ ಜ್ಞಾನದ ಕಿರಣಗಳು ಚಲ್ಲುವರಿಯುತ್ತಿದ್ದವು. ಅವರೆಲ್ಲರೂ ಒಂದೊಂದು ಜಂಗಮ ಜ್ಞಾನ ಕೋಶಗಳಂತೆ ಇದ್ದರು. ಬೆಳಕಿನ ಬೆಟ್ಟಗಳಂತೆ ಬೆಳಗುತ್ತಿದ್ದರು. ಭಕ್ತರಿಗೆ ಭಗವಂತನ ದರ್ಶನ ಮಾಡಿಸುತ್ತಿದ್ದರು.

ಪಂಡಿತಾಚಾರ್ಯರು ಅವರನ್ನು ಬಣ್ಣಿಸಿದ ಬಗೆ ಇದು.

" ಪಾದ್ಯೈಃ ಪುನಂತಃ ಪೃಥಿವೀಂ ದರ್ಶಯಂತೋ ಹರೇಃ ಪದಂ ।
ಧೂತ ದುಸ್ಸಮಯಧ್ವಾಂತಾಃ ಆದಿತ್ಯಾ ಇವ ಗಾಂಗತಾಃ ॥
ಮೋಕ್ಷಶಾಸ್ತ್ರಾಮೃತಾಂಬೋಧಿ ಸೇವಯಾ ನಿತ್ಯ ನಿರ್ವೃತಾಃ ।
ಚಕ್ರಿ ಚಾರು ತರಾರ್ಚಾಸು ಚಕ್ರಿಣಶ್ಚರಣಾರ್ಚಕಾಃ ॥



### ಕಣ್ವ ತೀರ್ಥದಲ್ಲಿ

# ಶ್ರೀ ಆನಂದ ತೀರ್ಥರು

## ಅಷ್ಟಮಠಾಧೀಶರಿಗೆ ಶ್ರೀ ಮಧ್ವಾಚಾರ್ಯರಿಂದ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ

ಕಣ್ವ ತೀರ್ಥವು ತುಳು ನಾಡಿನಲ್ಲಿ ಪರಮ ಪವಿತ್ರವಾದ ಕ್ಷೇತ್ರವು. ಅಲ್ಲಿ ಕಣ್ವ ಋಷಿಗಳಿಂದ ಪೂಜಿತವಾದ ಶ್ರೀ ರಾಮ ದೇವರ ಪರಮ ಸುಂದರವಾದ ಪ್ರತಿಮೆಯು ತನ್ನ ವಿಶಿಷ್ಟ ಸೌಂದರ್ಯದಿಂದ ಜನರನ್ನು ಆಕರ್ಷಿಸುತ್ತದೆ. ರಾಮ ಭಕ್ತನಾದ ರಾವಣಾನುಜ ವಿಭೀಷಣನು ಚಿರಂಜೀವಿಯಾದುದರಿಂದ ಬಹು ಕಾಲ ಪರ್ಯಂತ ಈ ಕಣ್ವ ತೀರ್ಥದಲ್ಲಿ ವಾಸಿಸಿದನು. ಮತ್ತು ಋಷಿ ಪೂಜಿತವಾದ ಆ ರಾಮ ಮೂರ್ತಿಯನ್ನು ಭಕ್ತಿಯುಕ್ತನಾಗಿ ಅನೇಕ ವರ್ಷಗಳ ವರೆಗೆ ಆರಾಧನೆಗೈದು ಕೃತಕೃತ್ಯನಾದನು.

ಶ್ರೀ ಕ್ಷೇತ್ರ ಉಡುಪಿಯಿಂದ ದಕ್ಷಿಣಕ್ಕೆ ೩೭ ಮೈಲು ದೂರದಲ್ಲಿ ಈ ಪುಣ್ಯ ಕ್ಷೇತ್ರವಾದ ಕಣ್ವ ತೀರ್ಥವು ಕಂಗೊಳಿಸುತ್ತಲಿದೆ. ಕಣ್ಣೆದುರು ಕ್ಷಿತಿಜದಂಚಿನ ವರೆಗೆ ನೀರು ಚಾಚಿದ ಹೆಗ್ಗಡಲು. ಸುತ್ತಲೂ ತೊನೆದಾಡಿ ಚಾಮರ ಬೀಸುವ ತೆಂಗಿನ ಬನಗಳು. ಅಕ್ಕಪಕ್ಕದಲ್ಲಿ ಸ್ಫಟಿಕದಂತಹ ತಿಳಿ ನೀರಿನಿಂದ ಥಳಥಳಿಸುವ ಎರಡು ಪೊಕ್ಕರಣಿಗಳು. ಸಮುದ್ರ ಮಧ್ಯದಲ್ಲಿ ತಲೆ ಕೆದರಿ ನಿಂತ ಹೆಬ್ಬಂಡೆಗಳು. ನಯನ ಮನೋಹರವಾದ ಪರಿಸರದ ಸುಂದರ ದೃಶ್ಯಗಳು. ಇವೆಲ್ಲವೂ ಈ ಕಣ್ವ ತೀರ್ಥವನ್ನು ನಿಸರ್ಗ ಸೌಂದರ್ಯದ ನೆಲೆವೀಡನ್ನಾಗಿ ಮಾಡಿವೆ.

ಶ್ರೀ ಪೂರ್ಣಪ್ರಜ್ಞಾಚಾರ್ಯರು ಪ್ರಕೃತಿ ದೇವಿಯ ಮಡಿಲಲ್ಲಿ ಪವಡಿಸಿದ ಈ ಪುಣ್ಯ ಕ್ಷೇತ್ರದಲ್ಲಿ ಒಂದು ಸಲ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತರು. ಆಗ ದೇಶ ವಿದೇಶಗಳಲ್ಲಿಯ ತತ್ವ ಜಿಜ್ಞಾಸುಗಳೆಲ್ಲರೂ ಆ ಕಡಲ ತಡಿಯ ಕಣ್ವಾಶ್ರಮಕ್ಕೆ ಹರಿದು ಬಂದರು. ಆನಂದ ತೀರ್ಥರ ಭಾಷ್ಯ ಪ್ರವಚನದ ಭಾಗೀರಥಿಯಲ್ಲಿ ಮಿಂದರು. ಅವರ ಉಪದೇಶ ಉಪನ್ಯಾಸಗಳನ್ನು ಕೇಳಿ ಆನಂದಪುಲಕಿತರಾಗಿ ನಿಂದರು. ನಮ್ಮ ಜನ್ಮವು ಪಾವನವಾಯಿತು ಎಂದರು.

ಈ ಕಣ್ವ ತೀರ್ಥದ ಪೂರ್ವ ದಿಕ್ಕಿನಲ್ಲಿ ಒಂದು ದೊಡ್ಡ ಅಶ್ವತ್ಥ ಮರವು ತನ್ನ ಟೊಂಗೆ ಗರಿಗಳಿಂದ ಬಾನನ್ನೇ ಬಾಚುತ್ತ ನಿಂತಿದೆ. ಈ ಹೆಮ್ಮರಕ್ಕೆ

ಸುತ್ತಲು ಎತ್ತರವಾದ ಒಂದು ಕಟ್ಟೆ ಇದೆ. ಈ ಗಿಡದ ನಾಲ್ಕು ನಿಟ್ಟಿನ ಗಡಿಗಳಲ್ಲಿ ನಾಲ್ಕು ಬಾಗಿಲುಗಳಿವೆ. ಪಡುವಲದ ನಿಟ್ಟಿನಲ್ಲಿ ಆಂಜನೇಯನ ದೇವಸ್ಥಾನವು ಕಣ್ಣಿಗೆ ಎಸೆಯುತ್ತಿದೆ.

ಸಾಗರದ ಸೆರಗಿನಲ್ಲಿರುವ ಈ ಕಣ್ವಾಶ್ರಮವು ಆಚಾರ್ಯರಿಗೆ ಅತ್ಯಂತ ಪ್ರೀತಿಯ ಸ್ಥಾನವಾಗಿದೆ.

ಇಲ್ಲಿ ಮಧ್ವ ಗುರುಗಳು ಅನೇಕ ಬಾಲ ವಟುಗಳಿಗೆ ಸನ್ಯಾಸಾಶ್ರಮವನ್ನಿತ್ತು ಧನ್ಯರನ್ನಾಗಿ ಮಾಡಿದ್ದರು. ಜನ ಸಂಪರ್ಕ ಶೂನ್ಯವಾದ ಈ ಏಕಾಂತ ಸ್ಥಾನದಲ್ಲಿ ತಮ್ಮ ಶಿಷ್ಯರಾದ ಬಾಲ ಸನ್ಯಾಸಿಗಳನ್ನೆಲ್ಲ ಇಟ್ಟು ಇಲ್ಲಿಯ ಆರಣ್ಯಕ ವಾತಾವರಣದಲ್ಲಿ ತಮ್ಮ ಸನ್ಯಾಸಿ ಶಿಷ್ಯರಿಗೆಲ್ಲ ಬ್ರಹ್ಮ ವಿದ್ಯಾಭ್ಯಾಸದ ಏರ್ಪಾಡನ್ನು ಮಾಡಿದ್ದರು.

ಓ ! ಎಂಥ ದಿವ್ಯ ಯೋಜನೆ ! ಎಂಥ ಉದಾತ್ತ ಕಲ್ಪನೆ! ಕಣ್ವ ಋಷಿಗಳ ತಪೋವನದಲ್ಲಿ ಶ್ರೀ ರಾಮ ಹನುಮಂತ ದೇವರ ಸನ್ನಿಧಿಯಲ್ಲಿ ಆಚಾರ್ಯರಿಂದ ಬ್ರಹ್ಮೋಪದೇಶವನ್ನು ಪಡೆವ ಆ ಎಳೆ ಮನಸ್ಸಿನ ಮೇಲೆ ಎಂಥ ಪರಿಣಾಮವಾಗಬೇಡ !

ಇದೇ ಕಾರಣದಿಂದಾಗಿಯೇ ಆಚಾರ್ಯರ ಆ ವೇದಾಂತದ ಗರಡೀಮನೆಯಲ್ಲಿ ವಿಷ್ಣುತೀರ್ಥರಂತಹ ಎಂಟು ಜನ ಅಪರೋಕ್ಷ ಜ್ಞಾನಿಗಳು ಸಿದ್ಧಿ ಪಡೆದು ಜಗದುದ್ಧಾರಕ್ಕಾಗಿ ಸಿದ್ಧರಾಗಿ ಹೊರಬಿದ್ದರು.

ಈ ಎಲ್ಲ ಯೋಗಿ ವಿರಾಗಿಗಳ ಯೋಗ್ಯತೆಯನ್ನು ಗುರುತಿಸಿದ ಆನಂದ ತೀರ್ಥರು ತಾವು ಸಂಸ್ಥಾಪಿಸಿದ ವೇದಾಂತ ಸಾಮ್ರಾಜ್ಯಕ್ಕೆ ಅಷ್ಟದಿಕ್ಪಾಲಕರಂತೆ ಈ ಅಷ್ಟೋತ್ಕೃಷ್ಟ ಯತಿ ಶ್ರೇಷ್ಠರನ್ನು ನಿಯೋಜಿಸಬೇಕೆಂದು ಸಂಕಲ್ಪಿಸಿದರು.

ಎಂದಿನಂತೆ ಒಂದು ದಿನ ಆನಂದ ತೀರ್ಥರು ಈ ಕಣ್ವ ತೀರ್ಥದ ಮೂಡಲ ಬದಿಯಲ್ಲಿರುವ ಅಶ್ವತ್ಥ ವೃಕ್ಷದ ವಿಶಾಲ ವೇದಿಕೆಯ ಮೇಲೆ ಆಸನದಲ್ಲಿ ಆಸೀನರಾಗಿದ್ದರು. ಶ್ರೀ ಹೃಷೀಕೇಶ ತೀರ್ಥರೇ ಮೊದಲಾದ ಬಾಲ ಸನ್ಯಾಸಿಗಳು ಸನಕ, ಸನಂದನ, ಸನಾತನ, ಸನತ್ಕುಮಾರರಂತೆ ತೇಜೋಭಾಸುರರಾಗಿ ಆಚಾರ್ಯರ ಕೈಂಕರ್ಯಕ್ಕೆ ಕೈಕಟ್ಟಿ ನಿಂತುಕೊಂಡಿದ್ದರು.

ಆಗ ಮಧ್ವ ಮುನಿಗಳು ನೇಹದುಂಬಿದ ನಲುಮೆಯ ನೋಟದಿಂದ ತೇಜಃಪುಂಜರಾದ ಆ ಯತಿ ಪತಿಗಳನ್ನು ನೋಡಿ ಗಂಭೀರ ಸ್ವರದಿಂದ ನುಡಿದರು.

"ಹಂಸಾಃ ಪರಮಹಂಸಾಶ್ಚ ಕುಟೀಚಕ ಬಹೂದಕಾಃ ।
ಪಾರಿವ್ರಾಜ್ಯ ಪದಸ್ಥಾಶ್ಚ ಇತಿ ಪಂಚ ಪ್ರಭೇದಿನಃ ॥
ತತ್ರಾಂತ್ಯೋಕ್ತಸ್ತು ಗುರುಭಿರಭಿಷಿಕ್ತಃ ಪದಂ ವ್ರಜೇತ್ ।
ಪಾರಿವ್ರಾಜ್ಯಪದಸ್ಥಸ್ಯ ತಪ್ತಮುದ್ರಾಧಿಕಾರಿತಾ ।
ನಿಗ್ರಹೋನುಗ್ರಹಶ್ಚೈವ ವ್ಯಾಖ್ಯಾ ಪೂಜಾ ಮುರದ್ವಿಷಃ ।
ಅನ್ನಾಭಯ ಪ್ರದಾನಂ ಚ ವೈಭವೋ ರಾಜವತ್ ಸ್ಮೃತಃ ॥
ದಾನಾದಾನಂ ಕಾಂಚನಾದೇಃ ಸಂಗ್ರಹಃ ಸ್ನೇಹವರ್ಜನಂ ।
ಅಹಂ ಮಮೇತಿ ತದ್ಭಾವಂ ವರ್ಜಯೇತ್ ದೇಹಗೇಹಯೋಃ ॥ "

(ಬ್ರಹ್ಮಾಂಡಪುರಾಣ)

ಎಂದು ಪ್ರಮಾಣ ವಚನವಂತೆ ಈ ಮೊದಲು ನಮ್ಮಿಂದ ಯತ್ಯಾಶ್ರಮವನ್ನು ಸ್ವೀಕರಿಸಿದ ನೀವೆಲ್ಲರೂ ಇನ್ನು ಮೇಲೆ ಪಾರಿವ್ರಾಜ್ಯ ಪದಸ್ಥರಾಗಬೇಕು.

ಸಾಮಾನ್ಯ ಸನ್ಯಾಸಿಗಳಿಗೂ, ಪಾರಿವ್ರಾಜ್ಯ ಪದಾಧಿರೂಢರಾದ ಪರಮಹಂಸರಿಗೂ ಬಹಳ ಅಂತರವುಂಟು. ಇವರು ಬರಿ ಬಿಡಿ ಸನ್ಯಾಸಿಗಳಂತೆ ಅಲ್ಲ. ಗುರುಗಳಾದವರು ಯೋಗ್ಯತೆಯನ್ನರಿತು ಅರ್ಹರಾದ ಸನ್ಯಾಸಿಗಳನ್ನು ಮಾತ್ರಪಾರಿವ್ರಾಜ್ಯ ಪದವಿಯಲ್ಲಿ ವಿಧಿಪೂರ್ವಕಬಾಗಿ ಪಟ್ಟಾಭಿಷೇಕ ಮಾಡಬೇಕು.

ಹಂಸ, ಪರಮಹಂಸ, ಕುಟೀಚಕ, ಬಹೂದಕ, ಪರಿವ್ರಾಜಕ ಎಂದು ಸನ್ಯಾಸಿ ಪ್ರಪಂಚದಲ್ಲಿ ಪಾರಿವ್ರಾಜ್ಯಪದಾಭಿಷಿಕ್ತರಾದ ಪರಮಹಂಸರು ಅತ್ಯಂತ ಶ್ರೇಷ್ಠರಾಗಿದ್ದಾರೆ.

ತಪ್ತ-ಮುದ್ರೆಗಳನ್ನು ಕೊಟ್ಟು ಯೋಗ್ಯ ಬ್ರಾಹ್ಮಣರಿಗೆ ವೈಷ್ಣವ ದೀಕ್ಷೆಯನ್ನು ಕೊಡುವ ಅಧಿಕಾರವು ಇಂಥ ಪರಿವ್ರಾಜಕರಿಗೆ ಮಾತ್ರ ಮೀಸಲು. ಮತ್ತು ಪರ್ವಕಾಲ, ಪುಣ್ಯಕಾಲಗಳಲ್ಲಿ ತಮ್ಮ ಶಿಷ್ಯರಿಗೆ ತಪ್ತಮುದ್ರೆಯನ್ನು ಕೊಡುವ ಅಧಿಕಾರವು ಇಂಥ ಪರಿವ್ರಾಜಕರಿಗೆ ಮಾತ್ರ ಉಂಟು.

ಈ ಸ್ವಾಮಿಗಳು ರಾಜರಿದ್ದಂತೆ. ಶಿಷ್ಯರನ್ನು ನಿಗ್ರಹಿಸುವ, ಅನುಗ್ರಹಿಸುವ ಅಧಿಕಾರ ಇವರಿಗಿದೆ. ಅಯೋಗ್ಯರಾದ ಶಿಷ್ಯರಿಗೆ ಬಹಿಷ್ಕಾರ ಹಾಕಿ, ಶಿಷ್ಯವಿಶಿಷ್ಟರನ್ನು ಪುರಸ್ಕಾರ ಮಾಡುವ ಸಾಮಾಜಿಕ ಹೊಣೆಗಾರಿಕೆಯೂ ಇಂಥ ಗುರುಗಳಿಗೇ ಸೇರಿದ್ದು. ಇವರ ಮುಖ್ಯ ಕಾರ್ಯವು ಸ್ವಾಧ್ಯಾಯ ಮತ್ತು ವಾಙ್ಮಯ ತಪಸ್ಸು. ಶ್ರೀ ಹರಿಯ ವಿಶೇಷ ಸನ್ನಿಧಾನೋಪೇತವಾದ ದಿವ್ಯ ಪ್ರತಿಮೆಗಳನ್ನು ಪೂಜೆ ಮಾಡಿ ಇವರು

ಜನರಲ್ಲಿ ಭಕ್ತಿಯನ್ನು ಕುದುರಿಸಬೇಕು. ಊರೂರಿಗೆ ಹೋದಲ್ಲೆಲ್ಲ ಶ್ರೀ ಹರಿಯ ದರ್ಶನ ಮಾಡಿಸಿ ತೀರ್ಥ ಮತ್ತು ಪ್ರಸಾದ ರೂಪವಾಗಿ ಅನ್ನದಾನ ಮಾಡುವದು ಇವರ ಮುಖ್ಯ ಕರ್ತವ್ಯ. ಮತ್ತು ಸಿದ್ಧಾಂತ ಪ್ರಸಾರ ಕಾರ್ಯದಲ್ಲಿ ಬರುವ ವಿಘ್ನವಿಡ್ಡೂರಗಳನ್ನೂ, ಭಯಾಪಾಯಗಳನ್ನೂ ಇವರು ನಿವಾರಣ ಮಾಡಬೇಕು. ಈ ಎಲ್ಲ ಲೌಕಿಕ-ಧಾರ್ಮಿಕ ಕಾರ್ಯಗಳಿಗಾಗಿ ಬೇಕಾಗುವ ಧನ-ಧಾನ್ಯಗಳನ್ನೂ, ಮುತ್ತು-ರತ್ನಗಳನ್ನೂ, ಬೆಳ್ಳಿ-ಬಂಗಾರವನ್ನೂ ಇವರು ಸಂಗ್ರಹಿಸಬಹುದು.

ಶಾಸ್ತ್ರ ವಿದ್ಯೆಯನ್ನೋದಿ ಅಧ್ಯಾತ್ಮ ಪಥದಲ್ಲಿ ಪರಿಶ್ರಮಿಸುವ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಆಶ್ರಯವಿತ್ತು ಅವರಿಗೆಲ್ಲ ಅಭಯದಾನವನ್ನು ಮಾಡಬೇಕು. ಅದಕ್ಕಾಗಿ ಅವರಿಗೆಲ್ಲ ವೃತ್ತಿ ದತ್ತಿಗಳನ್ನು ನೀಡಬೇಕು. ಇದಕ್ಕಾಗಿ ಶಿಷ್ಯರಿಂದಲೂ, ಸಿರಿವಂತರಿಂದಲೂ ವಿಪುಲವಾಗಿ ಧನ-ಕನಕಗಳನ್ನು ತೆಗೆದುಕೊಳ್ಳಬೇಕು.

ಆದರೆ ಈ ಸಂಗ್ರಹ, ಪ್ರತಿಗ್ರಹಗಳ ಉದ್ದೇಶವು— ದಾನ ಮತ್ತು ತ್ಯಾಗ ಗಳೇ ಆಗಿರಬೇಕು. ಈ ಪರಿವ್ರಾಜಕರು ತ್ಯಾಗಿ-ಯೋಗಿಗಳಾಗಿ ಎಂಥ ರಾಜೈಶ್ವರ್ಯವನ್ನಾದರೂ ಸಂಪಾದಿಸಿ ರಾಜರಂತೆಯೇ ಮೆರೆಯಬಹುದು. ಆದರೆ ಒಂದು ಎಚ್ಚರಿಕೆ—

ಇಂಥ ಪರಿವ್ರಾಜಕರ ಆದಾನವೆಲ್ಲವೂ ದಾನಕ್ಕಾಗಿಯೇ ಉಪಯೋಗವಾಗ ಬೇಕು. ಎಷ್ಟು ಐಶ್ವರ್ಯವಿದ್ದರೂ ಅಹಂಕಾರವಿರಬಾರದು. ಎಷ್ಟೇ ಧನ-ಧಾನ್ಯ ಗಳನ್ನು ಸಂಗ್ರಹಿಸಿದರೂ ಅದರಲ್ಲಿ ಆಸಕ್ತಿ ಇರಬಾರದು. ಮನೆ-ಮಾರು, ಆಸ್ತಿ-ಪಾಸ್ತಿ ಗಳ ಮೇಲೆ ಇದು ನನ್ನದು ಎಂಬ ಅಭಿಮಾನವು ಎಂದೂ ಮೂಡಬಾರದು.

ಈ ರೀತಿಯಾಗಿ ಐಶ್ವರ್ಯ, ಅಧಿಕಾರ, ಪ್ರತಿಷ್ಠೆ, ಆಧಿಪತ್ಯಗಳ ಮಧ್ಯದಲ್ಲಿ ದ್ದರೂ ಅವರು ಪದ್ಮ ಪತ್ರದಂತೆ ನಿರ್ಲಿಪ್ತರಾಗಿ, ನಿರ್ಲೋಭರಾಗಿ, ತ್ಯಾಗ ಮೂರ್ತಿಗ ಳಾಗಿ, ಪರೋಪಕಾರಿಗಳಾಗಿ, ಲೋಕಾನುಗ್ರಹಕಾರಿಗಳಾಗಿ ಇರಬೇಕು.

ಅಧಿಕಾರ, ಐಶ್ವರ್ಯಗಳ ಮಧ್ಯದಲ್ಲಿ ತ್ಯಾಗ-ವಿರಾಗಗಳ ಮೂರ್ತಿಯಾಗಿ ಇರುವದೊಂದು ಅಸಿಧಾರಾವ್ರತ. ಇಂಥ ಕಠೋರವಾದ ತ್ಯಾಗ, ಸೇವಾ ವ್ರತವನ್ನು ಕೈಕೊಂಡು, ವಿಷ್ಣು ಸರ್ವೋತ್ತಮತ್ವವನ್ನು ಸಾರುತ್ತ ವೇದ-ಶಾಸ್ತ್ರಗಳ ಉಪದೇಶ ವನ್ನು ಗೈಯುತ್ತ ಪಾಠ-ಪ್ರವಚನ, ಉಪನ್ಯಾಸ ರೂಪದಿಂದ ಜನರಲ್ಲಿ ಧರ್ಮ ಜಾಗೃತಿಯನ್ನುಮಾಡಬೇಕು. ಇದು ಬ್ರಹ್ಮಾಂಡ ಪುರಾಣೋಕ್ತವಾದ ಪರಮಹಂಸ ಪರಿವ್ರಾಜಕಾಚಾರ್ಯರ ಕರ್ತವ್ಯವಾಗಿದೆ.

ನಾವು ಇಂದು ನಿಮ್ಮೆಲ್ಲರನ್ನೂ ಇಂಥ ಪಾರಿವ್ರಾಜ್ಯ ಪದದಲ್ಲಿ ಪ್ರತಿಷ್ಠಾಪಿಸಬೇಕೆಂದು ಸಂಕಲ್ಪಿಸಿದ್ದೇವೆ. ನಾವು ಈ ಭೂಮಂಡಲದಲ್ಲಿ ಪುನಃ ಪ್ರತಿಷ್ಠಾಪಿಸಿದ ವೈಷ್ಣವ ಸಿದ್ಧಾಂತವಾದ ಮಧ್ವಮತದ ಪ್ರಸಾರ, ಪ್ರಚಾರದ ಕಾರ್ಯವನ್ನೂ ಮತ್ತು ಶ್ರೀಕೃಷ್ಣನ ನಿತ್ಯ ಪೂಜಾ–ಕೈಂಕರ್ಯದ ಕಾರ್ಯವನ್ನೂ ನೀವು ಇಂದಿನಿಂದ ವಹಿಸಿಕೊಳ್ಳಬೇಕು.

ಅದಕ್ಕಾಗಿ ನೀವು ಎಂಟು ಜನರೂ ಈ ಅಶ್ವತ್ಥ ವೇದಿಕೆಯ ನಾಲ್ಕೂ ದಿಕ್ಕುಗಳಲ್ಲಿರುವ, ನಾಲ್ಕೂ ಬಾಗಿಲುಗಳಲ್ಲಿ ಹಾದು ಹೊರಗೆ ಬನ್ನಿರಿ" ಎಂದು ಆಜ್ಞೆಗೈದರು.

ಆಗ ಆ ಬಾಲ–ಸನ್ಯಾಸಿಗಳೆಲ್ಲರೂ ಗುರುಗಳಿಗೆ ವಂದನೆಗೈದು ಅಶ್ವತ್ಥನಾರಾಯಣನ ಪ್ರದಕ್ಷಿಣೆ ಹಾಕಿ ಒಂದೊಂದು ದ್ವಾರದಿಂದ ಇಬ್ಬಿಬ್ಬರಂತೆ ಜೋಡಾಗಿ ಹೊರಬಿದ್ದು ಬಂದರು.

ಶ್ರೀ ಹೃಷೀಕೇಶತೀರ್ಥರೂ–ಶ್ರೀ ನರಸಿಂಹತೀರ್ಥರೂ ಕೂಡಿ ಮೂಡಲ ಬಾಗಿಲದಿಂದಲೂ, ಶ್ರೀ ಜನಾರ್ದನ—ಶ್ರೀ ಉಪೇಂದ್ರತೀರ್ಥರು ದಕ್ಷಿಣ ದ್ವಾರದಿಂದಲೂ, ಶ್ರೀ ವಾಮನ—ಶ್ರೀ ವಿಷ್ಣುತೀರ್ಥರು ಪಡುವಣ ಬಾಗಿಲಿನಿಂದಲೂ, ಶ್ರೀ ರಾಮ—ಶ್ರೀ ಅಧೋಕ್ಷಜ ತೀರ್ಥರು ಉತ್ತರ ದ್ವಾರದಿಂದಲೂ ಹೊರಬಂದು, ದೀನಬಂಧು ಆನಂದತೀರ್ಥರಿಗೆ ವಂದಿಸಿ ನಿಂದರು. "ಅಪ್ಪಣೆ ಏನು" ಎಂದರು.

ಆಗ ಶ್ರೀ ಮಧ್ವಾಚಾರ್ಯರು ಆ ಸ್ವಾಮಿಗಳಿಗೆಲ್ಲ—. "ಯತಿಶಿಷ್ಯರೇ ! ಈಗ ನೀವು ಈ ದ್ವಾರಗಳಿಂದ ಜೋಡಾಗಿ ಕೂಡಿ ಬಂದವರು ದ್ವಂದ್ವ ಮಠದವರಾಗಿ ಮುಂದಾದರೂ ಸ್ನೇಹದಿಂದ ಕೂಡಿ ನಡೆಯ ಬೇಕು. ಒಂದು ಮಠದವರಿಗೆ ಏನಾದರೂ ತೊಂದರೆ ಬಂದರೆ ದ್ವಂದ್ವ ಮಠದವರು ಅವರಿಗೆ ಸಹಾಯ–ಸಹಕಾರ ನೀಡಲು ಮುಂದಾಗಬೇಕು. ಮಠಗಳ ಪೀಠಪರಂಪರೆಯು ವಿಚ್ಛೇದವಾಗದಂತೆ ದ್ವಂದ್ವ ಮಠದವರಿಬ್ಬರೂ ನೋಡಿಕೊಳ್ಳಬೇಕು.'' ಎಂದು ಹೇಳಿ ಆಚಾರ್ಯರು ಅವರೆಲ್ಲರಿಗೂ ಪಾರಿವ್ರಾಜ್ಯ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿದರು. ಮತ್ತು ಸೂಕ್ಷ್ಮವಾದ ಯತಿಧರ್ಮಗಳನ್ನೆಲ್ಲ ರಹಸ್ಯವಾಗಿ ಬೋಧಿಸಿದರು. ಅವರಿಗೂ ಮತ್ತು ಅಸನ್ನಿಹಿತ ಸನ್ಯಾಸಿಗಳಿಗೂ ಮಾರ್ಗದರ್ಶನವಾಗಲಿ ಎಂಬ ಉದ್ದೇಶದಿಂದ "ಯತಿಪ್ರಣವಕಲ್ಪ" ಎಂಬ ಗ್ರಂಥವನ್ನೂ ರಚಿಸಿದರು.

ಒಂದು ದಿನ ಆನಂದ ತೀರ್ಥರು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾದ ಆ ಎಲ್ಲ ಯತಿಗಳಿಗೂ ಸ್ನಾನ ಮಾಡಿಕೊಂಡು ಬರಲಿಕ್ಕೆ ಹೇಳಿದರು. ಸ್ವಾಮಿಗಳೆಲ್ಲರೂ ಸ್ನಾನ ಮಾಡಿ ಗುರುಗಳ ಎದುರು ಕೈ ಜೋಡಿಸಿಕೊಂಡು ಕುಳಿತರು. ಭಗವತ್ಪಾದರು ಅಂದು ಅತ್ಯಂತ ವೈಭವದಿಂದ ಶ್ರೀ ರಾಮ ದೇವರೇ ಮುಂತಾದ ಎಲ್ಲ ಪ್ರತಿಮೆಗಳನ್ನು ಪೂಜೆ ಮಾಡಿದರು.

ತಮ್ಮ ದೇವರ ಪೂಜೆ ಮಂಗಳಾರತಿ ಮುಗಿದ ಬಳಿಕ ಆಚಾರ್ಯರು ತಮ್ಮ ಆ ಪೂಜಾ ಮಂಟಪದಲ್ಲಿ ಕೂಡಿಸಿದ ಸುಂದರವಾದ ದೇವರ ಮೂರ್ತಿಗಳನ್ನು ಒಂದೊಂದಾಗಿ ತೆಗೆದು ತಮ್ಮ ಕೈಯಿಂದಲೇ ಶಿಷ್ಯರಿಗೆ ಕೊಟ್ಟು ಅನುಗ್ರಹಿಸಿದರು.

ಶ್ರೀ ಫಲಿಮಾರು ಮಠದ ಶ್ರೀ ಹೃಷೀಕೇಶ ತೀರ್ಥರಿಗೆ ಶ್ರೀ ರಾಮ ದೇವರನ್ನೂ, ಅದಮಾರು ಮಠದ ಶ್ರೀ ನರಸಿಂಹ ತೀರ್ಥರಿಗೆ ಕಾಳಿಂಗ ಮರ್ದನ ಕೃಷ್ಣನನ್ನೂ, ಶ್ರೀಕೃಷ್ಣಾಪುರ ಮಠದ ಶ್ರೀ ಜನಾರ್ದನ ತೀರ್ಥರಿಗೆ ಮತ್ತೊಂದು ಕಾಲಿಯಾ ಮರ್ದನ ಕೃಷ್ಣ ಪ್ರತಿಮೆಯನ್ನೂ, ಪುತ್ತಿಕಾ ಮಠದ ಶ್ರೀ ಉಪೇಂದ್ರತೀರ್ಥರಿಗೆ ವಿಠ್ಠಲ ವಿಗ್ರಹವನ್ನೂ, ಶಿರೂರ ಮಠದ ವಾಮನ ತೀರ್ಥರಿಗೆ ಬೇರೊಂದು ಪಾಂಡುರಂಗನ ಮೂರ್ತಿಯನ್ನೂ, ಸೋದೆ ಮಠದ ಶ್ರೀ ವಿಷ್ಣು ತೀರ್ಥರಿಗೆ ಭೂ ವರಾಹ ಮೂರ್ತಿಯನ್ನೂ, ಕಾಣಿಯೂರು ಮಠದ ಶ್ರೀ ರಾಮ ತೀರ್ಥರಿಗೆ ಲಕ್ಷ್ಮೀ ನರಸಿಂಹ ದೇವರನ್ನೂ, ಪೇಜಾವರ ಮಠದ ಶ್ರೀ ಅಧೋಕ್ಷಜ ತೀರ್ಥರಿಗೆ ವಿಠ್ಠಲ ಮೂರ್ತಿಯನ್ನೂ ಕರುಣಿಸಿಕೊಟ್ಟರು.

"ಎಂಟೂ ಜನ ಶ್ರೀ ಪಾದಂಗಳವರು ಈಗ ತಾವಿತ್ತ ಈ ದಿವ್ಯ ಸುಂದರವಾದ ಭಗವನ್ಮೂರ್ತಿಗಳನ್ನೂ ನಿತ್ಯವೂ ಪೂಜಿಸುವದಲ್ಲದೆ ಉಡುಪಿಯಲ್ಲಿ ತಾವು ಪ್ರತಿಷ್ಠಾಪಿಸಿದ ಶ್ರೀ ಕಡಗೋಲು ಕೃಷ್ಣನನ್ನೂ ಪರ್ಯಾಯವಾಗಿ ಎಲ್ಲ ಶ್ರೀಗಳವರೂ ಕೂಡಿ ಪೂಜಿಸಬೇಕು. ಮತ್ತು ಪಾಠ ಪ್ರವಚನ ಮುಖಾಂತರ ಶ್ರೀವಿಷ್ಣು ಸರ್ವೋತ್ತಮತ್ವವನ್ನು ಪ್ರಚಾರ ಮಾಡಬೇಕು. ಶ್ರೀ ಮಧ್ವ ಸಿದ್ಧಾಂತ ಪ್ರಚಾರದ ಭಾರವನ್ನು ಎಲ್ಲರೂ ಸಮವಾಗಿ ಹೊರಬೇಕು." ಎಂದು ಆದೇಶವಿತ್ತರು.



## ಶ್ರೀ ಗುರು ಮಧ್ವರ ಅಧಿಕೃತ ಇತಿಹಾಸವನ್ನು ಬರೆದ

# ಶ್ರೀ ನಾರಾಯಣ ಪಂಡಿತಾಚಾರ್ಯರು

ಸರ್ವಜ್ಞ ಮುನಿಗಳ ಅಧಿಕೃತವಾದ ಚರಿತ್ರೆಯನ್ನು ಮೊದಲು ನಾಡಿಗೆ ನೀಡಿದ ಮಹಾನುಭಾವರೆಂದರೆ ಶ್ರೀ ನಾರಾಯಣ ಪಂಡಿತಾಚಾರ್ಯರು. ಇವರು ಆಚಾರ್ಯರ ಸಾಕ್ಷಾತ್ ಶಿಷ್ಯರಾದ ತ್ರಿವಿಕ್ರಮ ಪಂಡಿತರ ನಿಜವಾದ ಪಂಡಿತ ಪುತ್ರರು.

* ಮೂಲತಃ ಇವರು ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡಿನ ಹತ್ತಿರದ ಕಾವು ಅಥವಾ ಕಾವುಗೋಳಿ ಎಂಬ ಗ್ರಾಮದವರು. ಇದೇ ಈ ಮನೆತನದ ಮೂಲ ಸ್ಥಳ. ಎಂದಿನಿಂದಲೂ ಇದೊಂದು ಪಂಡಿತ ಕುಟುಂಬ. ಇವರ ಗೋತ್ರ ಆಂಗೀರಸ. ಇವರು ಹಸೀ ಸ್ಮಾರ್ತರು. ಅದ್ವೈತ ಮತದ ಅಭಿಮಾನ, ಮೋಹ, ಮೆಚ್ಚು, ಮಮತೆ, ಕೆಚ್ಚುಗಳ ಹುಚ್ಚು ಎನ್ನುವಷ್ಟರ ಮಟ್ಟಿಗೆ ಅವರ ಮುತ್ತಾತ ಮೂರು ತಲೆಗಳಿಂದವೈ ಗೂಡಿ ಬಂದಿದ್ದವು. ಶ್ರೀಮಧ್ವಾಚಾರ್ಯರ ಸಂಪರ್ಕವಲ್ಲಿ ಬಂದ ಬಳಿಕ ಎಷ್ಟೋ ದಿನ ಗಳು ಕಳೆದರೂ, ಮಧ್ವಾಚಾರ್ಯರ ಗ್ರಂಥಗಳನ್ನು ನೋಡಿ ತಮ್ಮ ಅದ್ವೈತ ತತ್ವವು ಸರ್ವಾಪದ್ಧ, ವೇದ ವಿರುದ್ಧ ಪ್ರಮಾಣ ವಿಸಂಗತ ಎಂದು ಪಂಡಿತ ಪ್ರಕಾಂಡರಾದ ತ್ರಿವಿಕ್ರಮಾಚಾರ್ಯರಿಗೆ ತಿಳಿದರೂ ತಮ್ಮ ಮತದ ಮೇಲಿನ ಮೋಹವು ಬಿಟ್ಟಿರಲಿಲ್ಲ. ಇವರ ತಮ್ಮಂದಿರಾದ ಶಂಕರಾಚಾರ್ಯರು ಶ್ರೀಮಧ್ವಾಚಾರ್ಯರ ತಪಃ ಪೂತವಾದ ವಿದ್ವತ್ತೆಯನ್ನು ಕಂಡು ಅವರ ಶಿಷ್ಯತ್ವವನ್ನು ಅಂಗೀಕರಿಸಿದ್ದರೂ ತ್ರಿವಿಕ್ರಮ ಪಂಡಿತರು ಮಾತ್ರ ತಮ್ಮ ಅದ್ವೈತ ಮತವನ್ನು ತ್ಯಜಿಸಲಿಲ್ಲ. ಕೊನೆಗೆ ಪಾಡಿಕುಡೆಲ್ ಎಂಬ ಗ್ರಾಮದಲ್ಲಿ ಶ್ರೀ ಮಧ್ವಾಚಾರ್ಯರನ್ನು ಕಂಡಾಗ ಅವರೊಡನೆ ತ್ರಿವಿಕ್ರಮರು ಹದಿನೈದು ದಿನ ವಾದಿಸಿದರು. ಅದ್ವೈತ ಮತವೇ ಸರ್ವ ಶ್ರೇಷ್ಠವೆಂದು ಸಾಧಿಸಿದರು. ಆದರೆ ಸರ್ವಜ್ಞರ ಅತಿ ಮಾನವ ಪ್ರಜ್ಞೆ, ಪಾಂಡಿತ್ಯ, ಪ್ರತಿಭೆ, ಪ್ರವಚನ ಪಟುತ್ವ ಮುಂತಾದ ದೈವಿಕ ಗುಣಗಳಿಂದ ಪ್ರಭಾವಿತರಾಗಿ ಪರಾಜಿತರಾಗಿ ಅವರ ಶಿಷ್ಯತ್ವವನ್ನೂ, ವೈಷ್ಣವ ಮತವನ್ನೂ ಅಂಗೀಕರಿಸಿದರು.

---

* ಇವರು ಧಾರವಾಡ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಕೋಡಿಯಾಲ ಗ್ರಾಮದವರು ಎಂದು " ಸತ್ಕಥಾ "ದಲ್ಲಿ ೧೭೦ ನೇ ಪುಟದಲ್ಲಿ ಹೇಳಿದ್ದಕ್ಕೆ ಸಾಕಷ್ಟು ಪುಷ್ಟಿ ಇಲ್ಲ.

ಬಹು ವರ್ಷ ವಿಚಾರ ವಿಮರ್ಶೆ ಮಾಡಿ ಇದೇ ಸರ್ವ ಶ್ರೇಷ್ಠವಾದ ಮತ ಎಂಬ ವಿವೇಕವು ಉದಯವಾಗಿ ತ್ರಿವಿಕ್ರಮ ಪಂಡಿತಾಚಾರ್ಯರು ವೈಷ್ಣವ ಮತವನ್ನು ಅಂಗೀಕರಿಸಿದ ಬಳಿಕ ಮಾತ್ರ ಅವರಲ್ಲಿ ಅದ್ವೈತ ಮತದ ವಾಸನೆಯು ಸ್ವಲ್ಪವೂ ಉಳಿಯಲಿಲ್ಲ. ಅವರು ಅಪ್ಪಟ ಮಾಧ್ವರಾಗಿ ಅನೇಕ ಗ್ರಂಥಗಳನ್ನು ಬರೆದು ಅದ್ವೈತ ಮತವನ್ನು ಖಂಡಿಸಿದರು.

ಅವರಿಗೆ ಮೂರು ಜನ ಗಂಡು ಮಕ್ಕಳು. ಕೊನೆಯವರೇ ನಾರಾಯಣ ಪಂಡಿತಾಚಾರ್ಯರು. ನಾರಾಯಣಾಚಾರ್ಯರ ಅಣ್ಣಂದಿರ ಬಗ್ಗೆ ಇಲ್ಲಿಯ ವರೆಗೆ ಯಾವುದೇ ಅಧಿಕೃತ ಚಾರಿತ್ರಿಕ ಅಂಶಗಳು ಸಿಕ್ಕಿಲ್ಲ.

ಆದರೆ ತ್ರಿವಿಕ್ರಮ ಪಂಡಿತರ ಕೊನೆಯ ಮಗನಾದ ಈ ನಾರಾಯಣಾರ್ಯನು ಮಾತ್ರ ತಂದೆಯಂತೆ ಸಾಹಿತ್ಯದಲ್ಲಿ ಸಿದ್ಧ ಹಸ್ತ, ವೇದಾಂತದಲ್ಲಿ ವಾಚಸ್ಪತಿ, ಪ್ರೌಢ ಗ್ರಂಥ ಲೇಖನದಲ್ಲಿಯೂ ಅವನಿಗೆ ಪ್ರಗಲ್ಭ ಪಾಂಡಿತ್ಯ.

'ಪಂಡಿತಾಚಾರ್ಯ' ಎಂಬುವದು ಈ ಮನೆತನದ ಆನುವಂಶಿಕ ವಿದ್ವತ್ತೆಗೆ ಒಲಿದು ಬಂದ ಬಿರುದು ಆಗಿರಬಹುದು. ಆದರೆ ನಾರಾಯಣಾಚಾರ್ಯರು ತಮ್ಮ ಜನ್ಮಜಾತ ಕವಿತ್ವ, ಪ್ರಯತ್ನ ಸಂಪಾದಿತ ಪಾಂಡಿತ್ಯಗಳಿಂದ ಅದನ್ನು ಸಾರ್ಥಕ ಮಾಡಿಕೊಂಡಿದ್ದರು.

ಈ ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಸಮಕಾಲೀನರು ಅಹುದೋ ಅಲ್ಲವೋ ಎಂಬುದು ಸಂದಿಗ್ಧವಾಗಿದೆ. ಸಾಂಪ್ರದಾಯಿಕ, ಐತಿಹ್ಯದಂತೆ ಶ್ರೀ ಪಂಡಿತಾಚಾರ್ಯರು ( ನಾರಾಯಣ ಪಂಡಿತಾಚಾರ್ಯರು ) ತಮ್ಮ ಬಾಲ್ಯದಲ್ಲಿ ತಮ್ಮ ಮನೆಯಲ್ಲಿಯೇ ಶ್ರೀ ಮಧ್ವ ಮುನಿಗಳನ್ನು ಕಂಡು ತಮ್ಮ ಗ್ರಂಥವನ್ನು ಅವರ ಪಾದಾರವಿಂದಗಳಿಗೆ ಅರ್ಪಿಸಿದ್ದರಂತೆ.

ಶ್ರೀ ಪೂರ್ಣಪ್ರಜ್ಞರು ತಮ್ಮ ಕೊನೆಯ ಕಾಲದಲ್ಲಿ ಒಮ್ಮೆ ದಕ್ಷಿಣ ಕನ್ನಡ ಜಿಲ್ಲೆಯ ಸಂಚಾರ ಕೈಕೊಂಡಾಗ ತಮ್ಮ ನೆಚ್ಚಿನ ಶಿಷ್ಯ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ಮನೆಗೆ ದಯಮಾಡಿಸಿದರು. ತಮ್ಮ ಸ್ವರೂಪೋದ್ಧಾರಕರಾದ ಮಧ್ವಗುರು ತಮ್ಮ ಮನೆಗೆ ಚಿತ್ತೈಸಿದಾಗ ಆ ಪಂಡಿತ ಕುಟುಂಬವು ಹರ್ಷೋದ್ರೇಕದಿಂದ ಹಿಗ್ಗಿ ಕುಣಿಯಿತು. ಎಲ್ಲರೂ ಭಕ್ತಿಭರಿತರಾಗಿ ಅವರ ಪಾದಪಯೋಜಗಳಿಗೆ ಮಣಿದರು. ಅವರ ಮುಖದಿಂದ ಹರಿದು ಬಂದ ಉಪದೇಶಾಮೃತದ ದಿವ್ಯ ಧಾರೆಯಲ್ಲಿ ಮಿಂದು ಧನ್ಯಂಮನ್ಯರಾದರು.

ಆಗ ಭಗವತ್ಪಾದರು ಪಂಡಿತರ ಮನೆಯವರಿಗೆಲ್ಲ ಆಶೀರ್ವಾದ ಮಾಡಿದ ಬಳಿಕ ಕೊನೆಯ ಮಗನಾದ ಬಾಲಕ ನಾರಾಯಣ ಪಂಡಿತನು ಶ್ರೀ ಶ್ರೀಗಳವರ ಪಾದದಡಿಯಲ್ಲಿ ಒಂದು ಹೊತ್ತಿಗೆಯನ್ನು ತಂದಿಟ್ಟು ದೀರ್ಘ ದಂಡ ನಮಸ್ಕಾರ ಹಾಕಿದನು. ಆಚಾರ್ಯರು "ಇದು ಏನು" ಎಂದು ಕೇಳಿದರು. ಆಗ ಆ ಪುಟ್ಟ ಬಾಲಕನು ದಿಟ್ಟತನದಿಂದ " ತಮ್ಮ ತಾತ್ಪರ್ಯ ನಿರ್ಣಯದಲ್ಲಿಯ ರಾಮ ಕಥೆಯನ್ನು ಕೇಳಿ ಏನೋ ಪ್ರೇರಣೆ, ಸ್ಫೂರ್ತಿ ಬಂದಂತಾಗಿ ಅದನ್ನೇ ಕಾವ್ಯ ಧರ್ಮಕ್ಕೆ ಒಗ್ಗುವಂತೆ ತುಸು ಹಿಗ್ಗಿಸಿ ಸಂಗ್ರಹ ರಾಮಾಯಣವೆಂಬ ಒಂದು ಚಿಕ್ಕ ಪ್ರಬಂಧವನ್ನು ಬರೆದಿದ್ದೇನೆ. ಶ್ರೀ ಚರಣರು ಇದನ್ನು ಕರುಣೆಯಿಂದ ತುಸು ಅವಲೋಕಿಸಿದರೆ ನಾನು ಕೃತಾರ್ಥ " ಎಂದು ಕರ ಜೋಡಿಸಿ ಬಿನ್ನವಿಸಿದನು.

ಆನಂದ ತೀರ್ಥ ಮುನಿಗಳು ಅಭಿಮಾನದಿಂದಲೂ, ಅಂತಃಕರಣದಿಂದಲೂ ಆ ಬಾಲ ಕವಿಯ ಪ್ರೌಢ ಕೃತಿಯನ್ನು ಆ ಮೂಲಾಗ್ರ ಓದಿ ಆನಂದ ಪಟ್ಟರು. ಮೆಚ್ಚಿಕೆಯನ್ನು ವ್ಯಕ್ತಪಡಿಸಿದರು. ಆ ಪಂಡಿತ ಕುಮಾರನಲ್ಲಿ ಸುಪ್ತವಾದ ಕಾವ್ಯಕಲಾಂಕುರಕ್ಕೆ ಪ್ರೋತ್ಸಾಹನೆಯ ದುಗ್ಧ ಧಾರೆ ಎರೆದು ಅದು ಮುಂದೆ ಕುಡಿಯೊಡೆದು ಪಲ್ಲವಿಸಿ, ಚಲ್ಲುವರೆಯುವಂತೆ ಅನುಗ್ರಹಿಸಿದರು. * ಆಚಾರ್ಯರ ಪ್ರೋತ್ಸಾಹನೆಯೇ ಶ್ರೀ ಸುಮಧ್ವವಿಜಯವನ್ನು ಬರೆಯಲು ಪ್ರೋತ್ಸಾಹಕ ಪ್ರೇರಣಾ ಕಾರಣವಾಗಿದೆ ಎಂದೂ ಹೇಳುವದುಂಟು.

ಆದರೆ ಆಚಾರ್ಯರ ಕಾಲ ಹಾಗೂ ನಾರಾಯಣ ಪಂಡಿತಾಚಾರ್ಯರ ಸುಮಧ್ವ ವಿಜಯದ ಸ್ವಯಂಕೃತ ಟೀಕೆಯಾದ ಭಾವ ಪ್ರಕಾಶಿಕೆಯ ಕೆಲವು ಪದ್ಯಗಳನ್ನು ಪರಿಶೀಲಿಸಿದರೆ ಪಂಡಿತಾಚಾರ್ಯರು ಚರಿತ್ರ ನಾಯಕನನ್ನು ನೋಡಿರಲಿಲ್ಲವೇನೋ ಎಂದು ಎನಿಸುತ್ತವೆ. ಭಾವಪ್ರಕಾಶಿಕೆಯ ಅನೇಕ ಪದ್ಯಗಳಲ್ಲಿ ಗ್ರಂಥಕಾರರು ಆಚಾರ್ಯರ ಚರಿತ್ರವನ್ನು ಅನೇಕ ಜನರ ಮುಖದಿಂದ ಕೇಳಿ ಬರೆದದ್ದು ಎಂದು ಒಪ್ಪಿಕೊಂಡಿದ್ದಾರೆ.

ಪ್ರಾಯೇಣ ನೈಕ ಮಾತ್ರೋಕ್ತಾಃ ಕಥಿತಾ ಇಹ ಸರ್ವಶಃ ।
ಮಯಾ ದೃಷ್ಟ್ವಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ ॥
ದ್ವಯೋಃ ವಕ್ತ್ರೋಃ ವಿರೋಧೇ ತು ಸ್ವೀಕೃತಾ ಪ್ರಬಲಸ್ಯಗೀಃ ।
ಕಾವ್ಯಾಶ್ರಯೇ ವಾ ಗುರುಕೀರ್ತಯೇ ವಾ ಪ್ರೋಕ್ತಂ ಸ್ವಯೈವಾಪಿ
ಮನೀಷಯಾನಾ ॥

ತಸ್ಮಾನ್ನ ಶಂಕ್ಯೇತ ಮಹಾ ಜನೇನ ಪುಂಸಾ ಕುಶಾಗ್ರೀಯ ಧಿಯಾಪ್ಯವಶ್ಯಂ।

* ಮಿಂಚಿನ ಬಳ್ಳಿಯ ಮಧ್ವಮುನಿ ವಿಜಯವಲ್ಲಿ ಸು. ರಾ. ಯಕ್ಕುಂಡಿಯವರು ೯೯ನೇ ಪುಟವಲ್ಲಿ ಈ ಘಟನೆಯನ್ನು ಉಲ್ಲೇಖಿಸಿದ್ದಾರೆ. ಆದರೆ ಈ ಘಟನೆಯು ತಿಳಿದು ಬಂದ ಮೂಲವನ್ನು ಮಾತ್ರ ಕಾಣಿಸಿಲ್ಲ.

ಇಲ್ಲಿ ಪಂಡಿತಾಚಾರ್ಯರು ಮಧ್ವ ವಿಜಯವನ್ನು ತಾವು ಬರೆಯುವಾಗ ಯಾವ ಕ್ರಮವನ್ನು ಅನುಸರಿಸಿದ್ದು ಮತ್ತು ಯಾವ ಮೂಲವನ್ನು ಆಧರಿಸಿದ್ದು ಎಂಬುವ ವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

" ಆಚಾರ್ಯರ ಜೀವನದ ಬೇರೆ ಬೇರೆ ಘಟನೆ ಸಂದರ್ಭ ಸನ್ನಿವೇಶಗಳನು, ಬಲ್ಲಂಥ ನೋಡಿದಂಥ ಅಥವಾ ಅವರಲ್ಲಿ ಭಾಗವಹಿಸಿದಂಥ ಅನೇಕ ಗುರು ಹಿರಿಯರ ಬಾಯಿಂದ ಕೇಳಿದ್ದೇನೆ. ಮತ್ತು ಒಂದೊಂದೇ ಘಟನೆಯನ್ನು ಅನೇಕ ಜನರ ಬಾಯಿಂದ ಕೇಳಿ ಅದನ್ನು ಸತ್ಯದ ಒರೆಗಲ್ಲಿಗೆ ಹಚ್ಚಿ ನೋಡಿ ಅದು ಅತ್ಯಂತ ಪ್ರಾಮಾಣಿಕ ಎಂದು ನನ್ನ ಬುದ್ಧಿಗೆ ಸ್ಪಷ್ಟವಾಗಿ ತಿಳಿದ ಬಳಿಕವೇ ಆ ವಿಷಯವನ್ನು ಈ ಗ್ರಂಥದಲ್ಲಿ ನಾನು ಕಾಣಿಸಿದ್ದೇನೆ. ಹೇಳುವವರಲ್ಲಿಯೇ ಭಿನ್ನಾಭಿಪ್ರಾಯವಾದರೆ ಅವುಗಳಲ್ಲಿ ಪ್ರಬಲ ದುರ್ಬಲ ವಿಚಾರಿಸಿ ಎರಡನ್ನೂ ತೂಗಿ ನೋಡಿ ಬಹು ಜನ ಸಂವಾದದಿಂದ 'ಸತ್ಯಸ್ಯ ಸತ್ಯಂ' ಎಂದು ತೋರಿದ ವೃತ್ತಗಳನ್ನೇ ನಾನು ಇಲ್ಲಿ ಬಿತ್ತರಿಸಿದ್ದೇನೆ. ಇದು ಬರಿ ಕಾವ್ಯ ವೆಂದು ಅಥವಾ ಗುರುಗಳ ಕೀರ್ತಿಯನ್ನು ಸಾರುವ ಪ್ರಬಂಧವೆಂದು ಅಥವಾ ಕಲ್ಪನೆ ಯಿಂದ ಏನಾದರೂ ಸರಸ ಸುಂದರವಾಗಿ ಹೇಳಿರಬಹುದಾದ ಕಥಾನಕವೆ ಎಂದು ಯಾರೂ ಶಂಕಿಸಕೂಡದು. ಇದರಲ್ಲಿ ಹೇಳಿದ್ದು ಅಪ್ಪಟ ಸತ್ಯ. ವಸ್ತುತಸ್ತು ನಡೆದ 'ಇತ್ಥಂಭೂತ ಸಂಗತಿಯನ್ನೇ ನಾನು ಹತ್ತು ಮೂಲಗಳಿಂದ ಸಂಗ್ರಹಿಸಿ,ವಿಚಾರಿಸಿ, ಪ್ರಾಮಾಣಿಕತೆಯ ನಿಕಷದಲ್ಲಿ ಪರಿಕಿಸಿ ಹದಿನಾರಾಣೆ ಸತ್ಯನೆಂದು ಖಾತರಿಯಾದ ಬಳಿಕವೇ ಅಂಥ ವಾಸ್ತ ವಿಕ ವಿಷಯಗಳನ್ನು ಮಾತ್ರ ಇಲ್ಲಿ ಬರೆದಿದ್ದೇನೆ." ಎಂದು ಹೇಳಿದ್ದಾರೆ.

ಇದರ ಮೇಲಿಂದ ಆಚಾರ್ಯರ ಜೀವನದಲ್ಲಿಯ ಸುಮಧ್ವವಿಜಯದಲ್ಲಿ ನಿರೂಪಿ ಸಿದ ವಿಷಯಗಳೆಲ್ಲ ತಾವು ಕೇಳಿ ಬರೆದದ್ದು, ನೋಡಿ ಬರೆದದ್ದಲ್ಲವೆಂದು ಸೂಚಿತವಾಗು ತ್ತವೆ. ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಸಮಕಾಲೀನರಾಗಿದ್ದರೆ ಕೆಲವು ಘಟನೆಗಳನ್ನಾದರೂ ತಾವು ನೋಡಿದ್ದೇವೆಂದು ಹೇಳಬಹುದಾಗಿತ್ತು. ಭಾವಪ್ರಕಾಶಿಕೆಯ ಈ ಪದ್ಯಗಳಲ್ಲಿಯ ತೀಲು ಸುಪಿಗಳು 'ವರ್ಣ್ಯವಸ್ತುವಿಗೂ ಮತ್ತು ಅವುಗಳ ನಿರೂಪಕ ವ್ಯಕ್ತಿಗೂ ಸಾಮೀಪ್ಯ ಸಂಬಂಧವು ಇರಲಿಲ್ಲ' ಎಂಬ ಅರ್ಥಕ್ಕೆ ಧ್ವನಿ ಕೊಡುತ್ತವೆ.

"ಆಚಾರ್ಯರ ಜೀವನದಲ್ಲಿಯ ಇನ್ನೂ ಅನೇಕಾನೇಕ ಘಟನೆಗಳು, ಪವಾಡ ಗಳು, ಅನುಭಾವಗಳು, ಪ್ರಭಾವಗಳು ನಾನು ಕಂಡ ಆಚಾರ್ಯರ ಸಮಕಾಲೀನ ಜನ ರಿಗೆ ಮರೆತುಹೋಗಿವೆ. ಆಚಾರ್ಯರ ಜೀವನವನ್ನು ತಮ್ಮ ಕಣ್ಣಿನಿಂದಲೇ ನೋಡಿ ಆ ಎಲ್ಲ ಘಟನೆಗಳನ್ನು ತಮ್ಮ ನೆನಪಿನಲ್ಲಿ ಇಟ್ಟುಕೊಂಡ ಅನೇಕ ಪ್ರತ್ಯಕ್ಷದರ್ಶಿ ಪುಣ್ಯಾ ತ್ಮರೂ ಇರಬಹುದು. ಆದರೆ ಅವರೆಲ್ಲರನ್ನು ಕಂಡು ಅವರು ನೋಡಿದ ಘಟನೆಗಳನ್ನು ಕೇಳಿಕೊಳ್ಳಲಿಕ್ಕೆ ನನ್ನಿಂದ ಶಕ್ಯವಾಗಲಿಲ್ಲ." ಎಂಬ ಅಭಿಪ್ರಾಯವನ್ನು ಕೆಳಗಿನ ಪದ್ಯ ದಿಂದ ಸೂಚಿಸಿದ್ದಾರೆ. ನಾರಾಯಣ ಪಂಡಿತರು.

ಚರ್ಯಾ ದೃಷ್ಟ್ವಾ ನರೈಃ ಕಾಶ್ಚಿದ್ವಿಸ್ಮೃತಾ ದೇವಮಾಯಯಾ ।
ಅವಿಸ್ಮೃತಾಶ್ಚ ಪುರುಷೈರ್ನಾಸ್ಮಾಭಿಃ ಸಕಲಾಃ ಶ್ರುತಾಃ ॥

ಇದರ ಮೇಲಿಂದ ಹಿರಿಯರ ಹೇಳಿಕೆ ತಮ್ಮ ಕೇಳಿಕೆಗಳೇ ಮಧ್ವ ವಿಜಯದ ಮೂಲ ಭಾಂಡವಲು ಎಂದು ನಾರಾಯಣಾಚಾರ್ಯರ ಅಭಿಪ್ರಾಯವು ತಿಳಿದು ಬರುವದು. ಕಾಣಿಕೆಗಿಂತ ಕೇಳಿಕೆಗೆ ಹೆಚ್ಚು ಪ್ರಾಶಸ್ತ್ಯವಿತ್ತು ಬರೆದ ಭಾವಪ್ರಕಾಶಿಕೆಯಲ್ಲಿಯ ಈ ಪದ್ಯಗಳನ್ನು ನೋಡಿದರೆ ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಸಮಕಾಲೀನರಾಗಿರಲಿಲ್ಲ ಎಂದು ಶ್ರೀ B. N. K. ಶರ್ಮರವರು ತಮ್ಮ ಮಧ್ವ ವಿಜಯ ಮುನ್ನುಡಿಯಲ್ಲಿ:– **It is doubtful if he could be regarded as having been old enough to have had any close personal contact or acquaintance with Madhva** ಎಂದು ಹೇಳಿದ್ದಾರೆ.

ಆದರೆ ಈ ಪದ್ಯಗಳ ಮೇಲಿಂದಲೇ ನಾರಾಯಣ ಪಂಡಿತರು ಆಚಾರ್ಯರನ್ನು ಕಂಡಿರಲೇ ಇಲ್ಲ ಎಂದು ನಿರ್ಧರಿಸಲಿಕ್ಕೂ ಆಗುವದಿಲ್ಲ. ಆಚಾರ್ಯರ ಸಮಕಾಲೀನರಾದರೂ ಕನ್ಯಾಕುಮಾರಿಯಿಂದ ಬದರೀ ಕ್ಷೇತ್ರದ ವರೆಗೆ ಹಮ್ಮಿದ ಅವರ ಕಾರ್ಯರಂಗದಲ್ಲಿ ನಡೆದ ಎಲ್ಲಘಟನೆಗಳನ್ನು ಅವರಿಗೆ ನೋಡುವದು ಆಗಿರಲಿಕ್ಕಿಲ್ಲ.

ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಅಲ್ಪವಯಿ ಸಮಕಾಲೀನರಾದರೂ ಅವರ ಸಂಪೂರ್ಣ ಚರಿತಾತ್ಮಕವಾದ ಈ ಸುಮಧ್ವ ವಿಜಯ ಕಾವ್ಯವನ್ನು ಮಾತ್ರ ಆಚಾರ್ಯರು ಅದೃಶ್ಯರಾದ ಬಳಿಕವೇ ಬರೆದಿರಬಹುದು. ತಾವು ರಚಿಸಬೇಕೆಂದು ಮಾಡಿರುವ ಗುರುವಿನ ಗೆಲುವನ್ನು ಬಿತ್ತರಿಸುವ ಗ್ರಂಥವು ಅಧಿಕೃತವೂ ಅತ್ಯಂತ ಪ್ರಾಮಾಣಿಕವೂ ನಿರ್ದುಷ್ಟವೂ ಆಗಬೇಕೆಂದು ಬಯಸಿ ಅವರು ಆಚಾರ್ಯರ ಸಮಕಾಲೀನರಾದ ಹಿರಿಯ ಶಿಷ್ಯರನ್ನೂ ಸ್ವಾಮಿಗಳನ್ನೂ ಕೇಳಿ ವಿಚಾರಿಸಿ ಈ ಗ್ರಂಥವನ್ನು ಬರೆದಿರಬಹುದು. ಇದರಲ್ಲಿ ತಾವು ನೋಡಿದ ಅನೇಕ ಘಟನೆಗಳು ಇರಲಿಕ್ಕೆ ಸಾಕು. ಈ ಅಭಿಪ್ರಾಯವನ್ನು ಭಾವಪ್ರಕಾಶಿಕೆಯಲ್ಲಿ " ಮಯಾ ದೃಷ್ಟಾಃ " ಎಂಬ ಶಬ್ದದಿಂದ ಸೂಚಿಸಿದ್ದಾರೆ.

ಶ್ರೀ ಭಗವತ್ಪಾದರಂಥ ವಿಶ್ವತೋಮುಖ ಜೀವನವುಳ್ಳ ಮಹಾ ವ್ಯಕ್ತಿಗಳ ಸಮಗ್ರ ಬಾಳಿನ ಚಾರು ಚರಿತ್ರೆಯನ್ನು ಇಡಿಯಾಗಿ ಯಾವದೇ ಒಬ್ಬ ಸಮಕಾಲೀನ ವ್ಯಕ್ತಿಗೆ ನೋಡಿ ತಿಳಿದುಕೊಳ್ಳುವದು ಶಕ್ಯವಿಲ್ಲ. ಆದುದರಿಂದ ಆ ಆ ಘಟನೆಗಳು ನಡೆದ ಸ್ಥಳದಲ್ಲಿ ಆ ಸಮಯದಲ್ಲಿ ಅಲ್ಲಿ ಇದ್ದ ಪ್ರತ್ಯಕ್ಷ ದರ್ಶಿಗಳ ಹೇಳಿಕೆ ಕೇಳಿಕೆಗಳಿಂದಲೇ ಆ ಆ ವಿಷಯಗಳನ್ನು ತಿಳಿದುಕೊಂಡು ಎಂಥ ಸಮಕಾಲೀನನಾದರೂ ಬರೆಯಬೇಕಾಗುತ್ತದೆ. ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಸಮಕಾಲೀನ

ರಾದ ತಮಗೆ ದೂರ ದೂರ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ನಡೆದ ಘಟನೆಗಳೆಲ್ಲವೂ ಸಾಮಾನ್ಯವಾಗಿ ಗೊತ್ತಿದ್ದರೂ ಅವರ ಮೇಲೆಯೇ ಅವಲಂಬಿಸದೆ ಆ ಸ್ಥಳಗಳಿಗೆ ಹೋಗಿ ಆ ಕಾಲದಲ್ಲಿ ಅಲ್ಲಿ ಇದ್ದ ಪ್ರತ್ಯಕ್ಷದರ್ಶಿಗಳನ್ನು ಕಂಡು ಅವರನ್ನು ವಿಚಾರಿಸಿ,

"ಮಯಾ ದೃಷ್ಟಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ"

"ನಾನು ಖಂಡಿತವಾಗಿಯೂ ನನ್ನ ಕಣ್ಣಿನಿಂದಲೇ ಇದನ್ನು ಕಂಡಿದ್ದೇನೆ." ಎಂದು ಅವರು ಹೇಳಿದ ಬಳಿಕನೇ ಅದನ್ನು ತಮ್ಮ ಗ್ರಂಥದಲ್ಲಿ ಬರೆದಿದ್ದಾರೆ. ಎಂದು ಅವರ ವಭಾಪ್ರಕಾಶಿಕೆಯ ಪದ್ಯಗಳಿಗೆ ಅರ್ಥ ಮಾಡಬಹುದು. ಶ್ರೀ B. N. K. ಶರ್ಮರವರ "retained any vivid recollections of them." ಎಂಬ ಮುಂದಿನ ಮಾತು " ಶ್ರೀ ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಸಮಕಾಲೀನರಾಗಿದ್ದರೂ ಅವರ ಜೀವನದ ಎಲ್ಲ ಘಟನೆಗಳನ್ನು ವಿಶದ ವಿವರವಾಗಿ ನೆನಪಿಟ್ಟುಕೊಳ್ಳುವಷ್ಟು ಪ್ರೌಢರಾಗಿರಲಿಲ್ಲ." ಎಂಬುದನ್ನೇ ಸೂಚಿಸುತ್ತದೆ.

ಆದುದರಿಂದ ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಜೀವನದ ಉತ್ತರಾರ್ಧ ಸಮಕಾಲೀನರಾಗಿದ್ದು ಅವರಿಗೆ ತಮ್ಮ ಮೊದಲ ಕೃತಿಯಾದ ಸಂಗ್ರಹ ರಾಮಾಯಣವನ್ನು ಸಮರ್ಪಿಸಿದರು. ಎಂಬ ಐತಿಹ್ಯವು ಸತ್ಯ ಸಂಗತಿಯಾಗಿರಬೇಕು. ಆಚಾರ್ಯರ ಆಶೀರ್ವಾದದಿಂದಲೇ ಪ್ರೋತ್ಸಾಹಿತರಾಗಿ ನಾರಾಯಣ ಪಂಡಿತಾಚಾರ್ಯರು ಮುಂದೆ ಈ ಗುರು ವಿಜಯ ಕಾವ್ಯವನ್ನು ಬರೆದಿರಬೇಕು. ಮುಖ್ಯವಾಗಿ ಈ ಸುಮಧ್ವ ವಿಜಯ ಕಾವ್ಯವನ್ನು ಅವರು ತಾವು ನೋಡಿದ್ದಕ್ಕಿಂತ ಹೆಚ್ಚಾಗಿ ತಮ್ಮ ತಂದೆ ತ್ರಿವಿಕ್ರಮಾಚಾರ್ಯರಿಂದಲೂ ಮತ್ತು ಆಚಾರ್ಯರ ಸುವರ್ಣ ಯುಗದಲ್ಲಿ ಚಿಕ್ಕ ದೊಡ್ಡ ಪಾತ್ರವಾಡಿದ ಅಥವಾ ಪ್ರತ್ಯಕ್ಷವಾಗಿ ನೋಡಿದ ಆಚಾರ್ಯರ ಸೇವೆ ಮಾಡಿದ ಅನೇಕ ನಿಕಟ ವರ್ತಿಗಳಿಂದಲೂ ಅಧಿಕೃತವಾದ ಸತ್ಯಸಂಗತಿಗಳನ್ನೆಲ್ಲ ತಿಳಿದುಕೊಂಡು ಸುಮಧ್ವ ವಿಜಯವನ್ನು ಬರೆದಿದ್ದಾರೆ.

ಶ್ರೀ ನಾರಾಯಣ ಪಂಡಿತಾಚಾರ್ಯರು ಸುಮಧ್ವವಿಜಯವಲ್ಲದೆ ಇನ್ನೂ ಅನೇಕ ಕಾವ್ಯ ಶಾಸ್ತ್ರ ಪ್ರಬಂಧಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸಂಗ್ರಹ ರಾಮಾಯಣ, ಮಣಿಮಂಜರಿ, ಪಾರಿಜಾತ ಹರಣ, ತತ್ವಮಂಜರೀ, ಪ್ರಮಾಣ ಲಕ್ಷಣಟೀಕಾ, ನಯಚಂದ್ರಿಕಾ, ಯೋಗದೀಪಿಕಾ, ಮಧ್ವ ವಿಜಯ ಭಾವ ಪ್ರಕಾಶಿಕಾ, ಶಿವಸ್ತುತಿ, ಶುಭೋದಯ, ಕೃಷ್ಣಾಮೃತಮಹಾರ್ಣವ ಟೀಕೆ ಮೊದಲಾದವುಗಳು ಪ್ರಮುಖ

ವಾಗಿವೆ. ಅವರ ಭಾವ ಪ್ರಕಾಶಿಕಾ ಟಿಪ್ಪಣಿಯಿಂದ ಮಧ್ವ ವಿಜಯದಲ್ಲಿ ನಿರ್ದೇಶಿಸಿದ ಆಚಾರ್ಯರ ಜೀವನ ಚರಿತ್ರದಲ್ಲಿಯ ಅನೇಕ ಘಟನೆಗಳ ಸ್ಥಾನಗಳನ್ನು ಭೌಗೋಲಿಕ ಸನ್ನಿವೇಶಗಳನ್ನು ಮತ್ತು ಸಂಸ್ಕೃತ ಶಬ್ದಗಳಿಗೆ ಸಮಾನಾರ್ಥಕ ತುಳು ಭಾಷೆಯ ಶಬ್ದಗಳನ್ನು ತಿಳಿಯಲಿಕ್ಕೂ, ಅವುಗಳ ಸಹಾಯದಿಂದ ಇಂದು ಅವುಗಳ ವಿಶಿಷ್ಟ ಸ್ಥಿತಿ ಗತಿಯನ್ನು ಗುರುತಿಸಲಿಕ್ಕೂ ಬಹಳ ಉಪಯೋಗವಾಗಿದೆ.

ಶ್ರೀ ನಾರಾಯಣ ಪಂಡಿತಾಚಾರ್ಯರು ಜಗತ್ತಿಗೆಲ್ಲ ಶ್ರೀಮನ್ ಮಧ್ವಾಚಾರ್ಯರ ದಿವ್ಯ ಜೀವನದ ದಿಗ್ದರ್ಶನ ಮಾಡಿಸಿದ ಪುಣ್ಯಾತ್ಮರು. ಅವರು ಸುಮಧ್ವ ವಿಜಯ ಗ್ರಂಥವನ್ನು ಬರೆಯದೆ ಇದ್ದಿದ್ದರೆ ಪಾವನ ಗುರುಗಳ ಜೀವನದ ಪಾವನ ಚರಿತ್ರೆಯು ಯಾರಿಗೂ ಗೊತ್ತಾಗದೆ,

" ಇದಮಂಧಂ ಜಗತ್ ಕೃತ್ಸ್ನಂ ಜಾಯೇತ ಭುವನ ತ್ರಯಂ "

ಎಂಬ ವಚನದಂತೆ ಜಗತ್ತೆಲ್ಲವೂ ಕತ್ತಲೆಯಲ್ಲಿಯೇ ಕೊಳೆಯಬೇಕಾಗುತ್ತಿತ್ತು. ಆಚಾರ್ಯರ ವಿರಾಡ್ ಜೀವನದ ದಿವ್ಯ ದರ್ಶನವನ್ನು ಹದಿನಾರು ಸರ್ಗದ ಈ ಮಹಾ ಕಾವ್ಯದಲ್ಲಿ ಮೂಡಿಸಿದ, ಜನರಿಗೆಲ್ಲ ಮಾಡಿಸಿದ, ಪಂಡಿತಾಚಾರ್ಯರ ಉಪಕಾರವು ಮಾಧ್ವರಿಗೆಲ್ಲ ಚಿರಸ್ಮರಣೀಯವಾಗಿದೆ. ಅವರ ಕಾವ್ಯ ಕೌಶಲವು ಅನ್ಯಾದೃಶವಾಗಿದೆ.

ಚತುರನಾದ ಚಿತ್ರಕಾರನು ಚಿಕ್ಕ ಕಾಗದದ ತುಂಡಿನಲ್ಲಿ ಉನ್ನತೋನ್ನತವಾದ ಹೈಮಾಚಲದ ಶೈಲಶ್ರೇಣಿಗಳನ್ನೆಲ್ಲ ಚಿತ್ರಿಸಿ ತೋರಿಸುವಂತೆ ನಾರಾಯಣ ಪಂಡಿತಾಚಾರ್ಯರು ಶ್ರೀ ಸರ್ವಜ್ಞಾಚಾರ್ಯರ ಬಾನಗಲವಾದ ಬದುಕಿನ ವಿರಾಡ್ ದರ್ಶನವನ್ನು ಈ ಹದಿನಾರು ಸರ್ಗದ ಮಹಾ ಕಾವ್ಯದಲ್ಲಿ ವೈವಿಧ್ಯಮಯವಾಗಿ ಮಾಡಿಸಿದ್ದು ಅವರ ಕವಿತ್ವ ಸಿದ್ಧಿಯ ಕೌಶಲದ ಕಳಸವಾಗಿದೆ.

ಶಂಕರಾಚಾರ್ಯ, ರಾಮಾನುಜಾಚಾರ್ಯ ಮುಂತಾದ ಮತಾಚಾರ್ಯರ ಮೇಲೆ ಎಷ್ಟೋ ಕಾವ್ಯ ಗ್ರಂಥಗಳು ಬರೆಯಲ್ಪಟ್ಟಿದ್ದರೂ ಅವೆಲ್ಲವೂ ನೂರಾರು ಸಾವಿರಾರು ವರ್ಷಗಳ ಅನಂತರದ ಕವಿಗಳಿಂದ ಕಲ್ಪನಾತ್ಮಕವಾಗಿ ಬರೆಯಲ್ಪಟ್ಟದ್ದರಿಂದ ಅವುಗಳಲ್ಲಿ ಕೇವಲ ಅತಿ ರಂಜಿತ ವರ್ಣನೆ, ಅಸಂಭಾವಿತ ಘಟನೆ, ಪೂರ್ವಾಪರ ವಿಸಂಗತಿ, ಬರೀ ಪವಾಡಗಳ ಪ್ರದರ್ಶನ, ಪರಸ್ಪರ ವಿರೋಧ ಮುಂತಾದ ದೋಷಗಳೇ ತುಂಬಿ ಅವೆಲ್ಲವೂ ನಂಬಲಿಕ್ಕೆ ಅಶಕ್ಯವೆನಿಸಿವೆ. ಆದರೆ ನಾರಾಯಣ ಪಂಡಿತಾಚಾರ್ಯರ ಈ ಸುಮಧ್ವವಿಜಯವು ಪ್ರಾಮಾಣಿಕತೆಯ ಎಂಥ ಒರೆಗಲ್ಲಿಗೂ ಇಳಿಯಬಹುದಾದ ಚೊಕ್ಕ ಚಿನ್ನದಂಥ ಸತ್ಯ ರೂಪವಾದ ಪ್ರಮಾಣಬದ್ಧವಾದ ರಸವತ್ ಕೃತಿಯಾಗಿದೆ.

ಇಂಥ ಮಹಾ ವಿಭೂತಿಯ ಬೃಹಜ್ಜೀವನದ ದೇದೀಪ್ಯಮಾನವಾದ ದಿವ್ಯ ದರ್ಶನವನ್ನು ಮಧುರ ಕೋಮಲ ಕಾಂತ ಪದಾವಲಿಗಳಲ್ಲಿ ಪ್ರಸನ್ನ ವರ್ಣ ಪುಂಜ ಗಳಿಂದ ರಸರಂಜನಿಯಾದ ಸುಂದರ ಶೈಲಿಯಲ್ಲಿ ಮಾಡಿಸಿದ್ದಕ್ಕಾಗಿ ಶ್ರೀ ನಾರಾಯಣ ಪಂಡಿತಾಚಾರ್ಯರಿಗೆ ಸಹೃದಯ ಪ್ರಪಂಚವೆಲ್ಲವೂ ಋಣಿಯಾಗಿ ಇರಬೇಕಾಗಿದೆ.

ಶ್ರೀ ನಾರಾಯಣ ಪಂಡಿತಾರ್ಯರು ಆಚಾರ್ಯರ ಹಾಗೂ ತಮ್ಮ ತಂದೆ ಯವರ ಅನಂತರ ಮಂಗಳೂರಿನ ದಕ್ಷಿಣಕ್ಕೆ ಕುಂಬಳೆ ಗ್ರಾಮದ ಹತ್ತಿರ ಇರುವ ತಮ್ಮ ಕಾವು ಮಠದಲ್ಲಿಯೇ ಇದ್ದು ಸರ್ವಜ್ಞಾಚಾರ್ಯರ ಗ್ರಂಥಗಳ ಪಾಠಪ್ರವಚನ, ಟೀಕಾ ಲೇಖನ, ಗ್ರಂಥ ರಚನೆ, ಪೂಜೆಪುರಸ್ಕಾರಗಳನ್ನು ಮಾಡಿಕೊಂಡು ವಾಸವಾಗಿ ದ್ದರು. ತಮ್ಮ ತಂದೆ ತ್ರಿವಿಕ್ರಮಪಂಡಿತಾಚಾರ್ಯರಿಗೆ ಸರ್ವಜ್ಞಾಚಾರ್ಯರು ದಯ ಪಾಲಿಸಿದ ಶ್ರೀಕರ ವಿಗ್ರಹವನ್ನು ಅನುದಿನವೂ ಭಕ್ತಿಯಿಂದ ಪೂಜೆ ಮಾಡುತ್ತಿದ್ದರು.

ಸರ್ವಜ್ಞರ ಸಾಕ್ಷಾದ್ದರ್ಶನದ ಸೌಭಾಗ್ಯವನ್ನು ಪಡೆದು ಅವರ ಸಾಕ್ಷಾತ್ ಶಿಷ್ಯ ರಾದ ತಮ್ಮ ತಂದೆಯವರಿಂದ ಶ್ರೀ ಮಧ್ವದರ್ಶನದ ದಿವ್ಯ ಜ್ಞಾನವನ್ನು ಪಡೆದು ಧನ್ಯರಾದ ನಾರಾಯಣ ಪಂಡಿತಾಚಾರ್ಯರಿಗೆ ವಯಸ್ಸು ಆದಂತೆ ಮನವು ಮಾಗಿತು. ವೈರಾಗ್ಯದೆಡೆಗೆ ಬಾಗಿತು. ಸಂಸಾರದಲ್ಲಿ ಜುಗುಪ್ಸೆ ಮೂಡಿತು. ಅವರ ತಂದೆಯವ ರಾದ ತ್ರಿವಿಕ್ರಮ ಪಂಡಿತಾಚಾರ್ಯರೂ ವಾರ್ಧಕ್ಯದಲ್ಲಿ ವಿರಕ್ತರಾಗಿ ಯತ್ಯಾಶ್ರಮ ವನ್ನು ಸ್ವೀಕರಿಸಿದ್ದರು.

ಆದರಂತೆ ನಾರಾಯಣ ಪಂಡಿತಾಚಾರ್ಯರೂ ವಯಸ್ಸಾದಂತೆ ಭವಬಂಧನದ ಜೇಡಿಗಳನ್ನೆಲ್ಲ ಕಳಚಿದರು. ಸಾಂಸಾರಿಕ ಸ್ನೇಹದ ಎಳೆ–ತೊಳೆಗಳನ್ನೆಲ್ಲ ಹರಿದು ಹಾಕಿದರು. ಧನ–ಕನಕಗಳನ್ನು ತೊರೆದರು. ಮಡದಿ–ಮಕ್ಕಳನ್ನು ಮರೆತರು. ಸರ್ವ ಸಂಗವನ್ನು ಪರಿತ್ಯಾಗ ಮಾಡಿ ಸನ್ಯಾಸಿಗಳಾಗಿ ನಾರಾಯಣತೀರ್ಥರಾದರು. ಈ ಪರಮಹಂಸಾಶ್ರಮದಿಂದಲೇ ಪರಮಾತ್ಮನ ಸೇವೆ ಮಾಡಿ ಕೃತಾರ್ಥರಾದರು.

ಈ ಕಾವು ಮಠದಲ್ಲಿ ಯತ್ಯಾಶ್ರಮವನ್ನು ಸ್ವೀಕರಿಸಿ ಸ್ವಾಮಿಗಳಾದ ಈ ತಂದೆ ಮಕ್ಕಳಿಬ್ಬರ ವೃಂದಾವನಗಳು ಇರುತ್ತವೆ.



## ಮಾಧ್ವ ವಾಙ್ಮಯಕ್ಕೆ ನುಡಿ ಮುಡುಪನ್ನಿತ್ತ ಮೊಟ್ಟಮೊದಲಿನ ಮಹಿಳಾಮಣಿ

# ಕಲ್ಯಾಣೀದೇವಿ

ಮಾಧ್ವ ಸಾಹಿತ್ಯಕ್ಕೆ ವಾಙ್ಮಯೀನ ಸೇವೆ ಸಲ್ಲಿಸಿದ ವನಿತೆಯರಲ್ಲಿ ಆಚಾರ್ಯರ ಸೋದರಿಯಾದ ಕಲ್ಯಾಣೀದೇವಿಯೇ ಪ್ರಪ್ರಥಮ ಪ್ರಮದಾಮಣಿಯಾಗಿದ್ದಾಳೆ. ಇವಳು ತ್ರಿವಿಕ್ರಮ ಪಂಡಿತಾಚಾರ್ಯರ ತಂಗಿಯೆಂದೂ ಕೆಲವರ ಅಭಿಪ್ರಾಯವಿದೆ. ಯಾರೇ ಆಗಲಿ ಶ್ರೀ ಮಧ್ವಾಚಾರ್ಯರ ಸಿದ್ಧಾಂತವನ್ನು ಪದ್ಯಬದ್ಧವಾಗಿ ಮಾಡಿದ ಮೊಟ್ಟ ಮೊದಲಿನ ಮಹಿಳೆಯೆಂದರೆ ಕಲ್ಯಾಣೀದೇವಿಯೇ ಸರಿ.

ಕಲ್ಯಾಣೀದೇವಿಯು ಬರೆದ ಮೂರು ನಾಲ್ಕು ಸಂಸ್ಕೃತ ಕಾವ್ಯ ಖಂಡಗಳು ಈಗ ನಮಗೆ ದೊರಕುತ್ತವೆ. ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಹೃಷೀಕೇಶ ತೀರ್ಥರು ಬರೆದದ್ದೆಂದು ಹೇಳಲಾಗುವ ತಾಡಾವಲಿ ಪುಸ್ತಕ ಪೋಥಿಯಲ್ಲಿ ಕಲ್ಯಾಣಿ ದೇವಿಯವೆಂದು ಹೇಳಲಾಗುವ ಈ ಪದ್ಯ ಪ್ರಬಂಧಗಳು ದೊರಕಿವೆ. ಇವುಗಳಲ್ಲಿ ಶ್ರೀ ಮುಕುಂದ ಸ್ತೋತ್ರ, ತಾರತಮ್ಯ ಸ್ತೋತ್ರ, ಅಣು ಮಧ್ವವಿಜಯ, ಅಣು ವಾಯು ಸ್ತುತಿ ಮುಂತಾದವುಗಳು ಇರುತ್ತವೆ.

ಇವೆಲ್ಲ ಗೀತಪ್ರಧಾನವಾದ ಕೃತಿಗಳಾಗಿದ್ದು ಬಂಧದಲ್ಲಿ ಬಿಗುವಿದೆ. ಪ್ರಾಸವಿದ್ದರೂ ಪ್ರಾಸಾದಿಕತೆಯಿದೆ. ಪದಪ್ರಯೋಗದಲ್ಲಿ ಕಾವ್ಯದ ಲೀಲಾ ಲಾಲಿತ್ಯವಿದೆ. ಅರ್ಥದಲ್ಲಿ ವೇದಾಂತದ ಗಾಂಭೀರ್ಯವಿದೆ. ನಿರೂಪಿತವಾದ ತತ್ತ್ವಗಳಲ್ಲಿ ಪ್ರಮಾಣ ಶುದ್ಧತೆಯಿದೆ.

"ಇಂದು ರುಚಿ ಸುಂದರ ಸುಮಂದ ಹಸಿತಾಸ್ಯಂ
ನಂದ ತನಯಂ ದುರಿತ ಸಂದಹನ ದಕ್ಷಂ ।
ಸೇಂದ್ರಂ ಸುರವೃಂದ ಪರಿವಂದಿತ ಪದಾಬ್ಜಂ
ಸಂಸ್ಮರ ಸದಾಂತರ ಮುಕುಂದ ಮತಿ ಕಾಂತಂ ॥
ನೀಲಮಣಿ ನೀರದ ನಿರಾಜಿತ ತನು ಶ್ರೀ–
ರಂಜಿತ ಸದಂಜನರುಚಂ ಜಗತಿ ಹೃದ್ಯಂ ॥
ರಂಜಿತ ಜನ ದುರಿತ ಭಂಜನ ಮಜಸ್ರಂ
ಸಂಸ್ಮರ ಸದಾಂತರ ಮುಕುಂದಮತಿ ಕಾಂತಂ ॥

ಈ ಮುಕುಂದ ಸ್ತೋತ್ರದಲ್ಲಿಯ ಮಧುರ ಕೋಮಲಕಾಂತ ಪದಾವಲಿಗಳನ್ನು ನೋಡಿದರೆ ಜಯದೇವನ ಗೀತ-ಗೋವಿಂದದ ಬಂಧುರ ಪದ ಬಂಧದ ಅಂದ ಚೆಂದಗಳು ಜ್ಞಾಪಕಕ್ಕೆ ಬರುತ್ತವೆ. ಬಹುಶಃ ಕಲ್ಯಾಣೀದೇವಿಯು ಈ ಮಂಜುಳ ಪದಪುಂಜಗಳನ್ನು ಅವನೆಲ್ಲಿಯಾದರೂ ಕೇಳಿದ್ದನೋ ಏನೋ!

ಅವಳ ತಾರತಮ್ಯ ಸ್ತೋತ್ರವಂತೂ ಮಾಧ್ವರಿಗೆಲ್ಲ ದೇವರ್ಷಿ ಮುನಿ ಮಾನವರ ಶಾಸ್ತ್ರೋಕ್ತ ತಾರತಮ್ಯ ಭಾವವನ್ನು ತಿಳಿಸುವ ಚಿಕ್ಕದಾದರೂ ಚೊಕ್ಕ ಕೈಗನ್ನಡಿಯೇ ಆಗಿದೆ. ಮಾಧ್ವರಲ್ಲೆಲ್ಲ ನಿತ್ಯವೂ ಪೂಜೆಯ ಕಾಲಕ್ಕೆ ಈ ತಾರತಮ್ಯ ಸ್ತೋತ್ರವನ್ನು ಅನ್ನುವದು ಒಂದು ಸತ್ಸಂಪ್ರದಾಯವೇ ಆಗಿದೆ.

ಕಲ್ಯಾಣೀದೇವಿಯ ಅಣು ವಾಯುಸ್ತುತಿ, ಅಣು ಮಧ್ವಚರಿತ ಎಂಬ ಪುಟ್ಟ ಪ್ರಬಂಧಗಳು ಕವಯಿತ್ರಿಯ ಸುಂದರ ಸಂಕ್ಷೇಪೀಕರಣ ಸಾಮರ್ಥ್ಯವನ್ನು ಎತ್ತಿ ತೋರುತ್ತವೆ. ಇವುಗಳಲ್ಲಿ ಅವತಾರತ್ರಯದ ಪಾವನ ಚರಿತ್ರವೂ ಮಧ್ವಾಚಾರ್ಯರ ಜೀವನ ಚರಿತ್ರವೂ ಸಕೃದ್ದರ್ಶನಕ್ಕೆ ಬುದ್ಧ್ಯಾರೋಹವಾಗುವಂತೆ ನಯವಾಗಿ ಹೆಣೆಯಲ್ಪಟ್ಟಿವೆ.



# ಶ್ರೀ ಮಧ್ವಾಚಾರ್ಯರಿಂದ ಪ್ರತಿಮೆಗಳನ್ನು ಪಡೆದ ಗೃಹಸ್ಥಾಶ್ರಮಿಗಳು



## ಪೂರ್ವಾಲಯ ಶ್ರೀನಿವಾಸ ಬಲ್ಲಾಳರು

### ಶ್ರೀ ಲಕ್ಷ್ಮೀನಾರಾಯಣ ವಿಗ್ರಹ

ಬಹಳ ಹಿಂದಿನ ಕಾಲದಲ್ಲಿ— ಶ್ರೀಮದ್ರಜತಪೀಠಪುರದ ಶ್ರೀಮದನಂತಾಸನ ದೇವಾಲಯದಲ್ಲಿ ನಡೆಯತಕ್ಕ ನ್ಯಾಯ ತೀರ್ಮಾನಕ್ಕೆ ಪೂರ್ವಾಲಯ ಪಕ್ಷನಾಥರೂ, ಪಶ್ಚಿಮಾಲಯ ಪಕ್ಷನಾಥರೂ ಮುಖಂಡರಾಗಿ ಕಾರಣರಾಗಿರುತ್ತಿದ್ದರು. ಈ ಎರಡು ಪಕ್ಷನಾಥರನ್ನು ಬಲ್ಲಾಳರೆಂದು ಅಂದಿನಿಂದ ಈ ವರೆಗೂ ವ್ಯವಹರಿಸುತ್ತಿದ್ದರು. ಈ ಉಡುಪಿಯಲ್ಲಿ ಧರ್ಮ ನಿರ್ಣಯ ಮತ್ತು ನ್ಯಾಯ ತೀರ್ಮಾನಗಳು ಈ ಇಬ್ಬರು ಬಲ್ಲಾಳರಿದ್ದೇ ಆಗತಕ್ಕದ್ದಾಗಿದ್ದಿತು. ಶ್ರೀಮದಾನಂದತೀರ್ಥರು ಅನಂತೇಶ್ವರದಲ್ಲಿ ಯಜ್ಞ ಮಾಡಲು ಹವಣಿಸಿದಾಗ ಜರಾಘಟಿತ ಗೋತ್ರದ ಬ್ರಾಹ್ಮಣನು ತಡೆ ಮಾಡಿದಾಗ ಈ ಇಬ್ಬರು ಬಲ್ಲಾಳರನ್ನು ಕರೆಯಿಸಿಯೇ ಆಚಾರ್ಯರು ಆ ಜರಾಘಟಿತ ಗೋತ್ರನನ್ನು ಓಡಿಸಿ ಯಜ್ಞ ಮಾಡಿಸಿದರೆಂದು ಮಧ್ವ ವಿಜಯದ ಒಂಬತ್ತನೆಯ ಸರ್ಗದಲ್ಲಿ ವರ್ಣಿಸಲ್ಪಟ್ಟಿರುತ್ತದೆ. ಇಂತಹ ಪೂರ್ವಾಲಯ ಪಕ್ಷನಾಥರು ಶ್ರೀ ಮಧ್ಯಗೇಹರಿಗೆ ಅನುಬಂಧಿಗಳಾಗಿದ್ದರು. ವಾಯು ದೇವರು ಮಧ್ಯಗೇಹರ ಪತ್ನಿಯಲ್ಲಿ ಅವತರಿಸಿರುವಾಗ ಈ ಪೂರ್ವಾಲಯ ಪಕ್ಷನಾಥರು ಕಡುಬಡವರಾಗಿದ್ದ ಮಧ್ಯಗೇಹರಿಗೆ ದಿವ್ಯವಾದೊಂದು ಗೋವನ್ನು ದಾನಮಾಡಿದರು. ಈ ಗೋವಿನ ಹಾಲನ್ನು ಚತುರ್ದಶ ಭುವನ ಗುರುವಾದ ಶ್ರೀ ಮುಖ್ಯ ಪ್ರಾಣಾವತಾರಿಯಾದ ವಾಸುದೇವನು ಕುಡಿದಿದ್ದನು. ಇಂತಹ ಸತ್ಪಾತ್ರಕ್ಕೆ ಗೋದಾನ ಮಾಡಿದ ಆ ಪಕ್ಷನಾಥರು ತನ್ನ ಮಗನಾಗಿ ಜನಿಸಿ ಶ್ರೀಮನ್ ಮಧ್ವಾಚಾರ್ಯರಿಂದ ಪರಾತ್ಮ ವಿದ್ಯೆಯನ್ನು ಹೊಂದಿ ಮುಕ್ತಿ ಕಾರಣವಾದ ಜ್ಞಾನವನ್ನು ಪಡೆದರು. ಈ ವಿಷಯವೂ ಮಧ್ವವಿಜಯದಲ್ಲಿ ಎರಡನೆಯ ಸರ್ಗದಲ್ಲಿ ವರ್ಣಿತವಾಗಿದೆ. ಈ ಆಚಾರ್ಯರಿಗೆ ತನ್ನ ಶಿಷ್ಯರಾಗಿ ಬಂದಿರುವ ಬಲ್ಲಾಳರಲ್ಲಿ ಬಹಳ ಮಮತೆ ಇದ್ದಿತು. ಈ ಕಾರಣದಿಂದ ಇವರ ಮನೆತನದ

ಸರ್ವತ್ತೋಮುಖ ಅಭಿವೃದ್ಧಿಯಾಗಲೆಂದು ಆಚಾರ್ಯರು ತಮ್ಮ ಕೈಯಿಂದ ಪೂಜಿಸಲ್ಪಟ್ಟ ಶ್ರೀ ಲಕ್ಷ್ಮೀ ನಾರಾಯಣ ವಿಗ್ರಹವನ್ನಿತ್ತು ಅನುಗ್ರಹಿಸಿದ್ದರು. ಅಂತಹ ವಿಗ್ರಹವು ಬಹಳ ಅಪೂರ್ವವೆಂದೇ ಹೇಳಬೇಕಾಗುತ್ತದೆ. ಒಂದು ಕಮಲದ ಮಧ್ಯದಲ್ಲಿ ಲಕ್ಷ್ಮೀನಾರಾಯಣ ವಿಗ್ರಹವಿದ್ದು ಆ ಕಮಲವನ್ನು ಬಿಡಿಸಲೂ ಬರುತ್ತದೆ. ಮೊಗ್ಗೆಯಂತೆ ಮುಚ್ಚಲೂ ಬರುತ್ತವೆ. ಮೊಗ್ಗೆಯಂತೆ ಮುಚ್ಚುವಾಗ ವಿಗ್ರಹವು ಅದರಲ್ಲಡಗುತ್ತದೆ. ಈ ದಿವ್ಯ ವಿಗ್ರಹವು ಅವರ ಮನೆತನದಲ್ಲಿ ಈಗಲೂ ಉಡುಪಿ ಮಠಗಳ ಸಂಪ್ರದಾಯದಂತೆ ಪೂಜಾ–ಆರಾಧನೆಗಳು ನಡೆಯುತ್ತಿವೆ. ಪರ್ಯಾಯ ಪೀಠವನ್ನೇರಲಿರುವ ಶ್ರೀಪಾದಂಗಳವರು ಅಲ್ಲಿಗೆ ಹೋಗಿ ಶ್ರೀ ದೇವರಿಗೆ ಕಾಣಿಕೆಯನ್ನಿಟ್ಟು ದರ್ಶನ ಮಾಡಿ ಬರುವ ಸಂಪ್ರದಾಯವು ಅವ್ಯಾಹತವಾಗಿ ನಡೆದುಕೊಂಡು ಬರುತ್ತಿದೆ. ಈ ಕ್ರಮವು ಶ್ರೀಮದಾಚಾರ್ಯರಿತ್ತ ಪ್ರತಿಮೆಯ ಸೂಚಕವೂ ಆಗಿರುತ್ತದೆ. ಈ ವಿಷಯವು ಸುಮಧ್ವವಿಜಯದಲ್ಲಿ—

'ಬಹವೋ ಗೃಹಿಣೋಽಪ್ಯಸ್ಮಾತ್ಸಮಗ್ರಾನುಗ್ರಹಂ ಯಯುಃ'

ಎಂದು ಹದಿನೈದನೆಯ ಸರ್ಗದಲ್ಲಿ ಸಾಮಾನ್ಯವಾಗಿ ತಿಳಿಸಿರುವರು.



# ದಂಡತೀರ್ಥದ ಉಪಾಧ್ಯಾಯರು
## ಕುಂಚಿ ಕೃಷ್ಣ ವಿಗ್ರಹವು

ಶ್ರೀಮದಾನಂದ ತೀರ್ಥರು ಪೂರ್ವಾಶ್ರಮದಲ್ಲಿ ವಾಸುದೇವನೆಂಬ ಬಾಲ ವಟು ವಾಗಿದ್ದಾಗ ಈಗ ದಂಡತೀರ್ಥವೆಂದು ಹೆಸರುಳ್ಳ ಸ್ಥಳದಲ್ಲಿ ವಾಸಿಸುತ್ತಿದ್ದ ಪೂಗವನಾನ್ವಯಜರಲ್ಲಿ ವೇದವಿದ್ಯಾಭ್ಯಾಸಂಗ ಮಾಡುತ್ತಿದ್ದರು. ಆ ಉಪಾಧ್ಯಾಯರಿಗೆ ವಾಸುದೇವನೆಂಬ ಮಗನಿದ್ದನು. ಅಲ್ಲದೆ ಇವರ ಮನೆಯ ಮುಂದೊಂದು ಜಲಾಶಯವೂ ಇದ್ದಿತು. ಈ ಜಲಾಶಯದ ಪೂರ್ವ ಭಾಗವಲ್ಲಿ ದೊಡ್ಡ ದಿಣ್ಣೆಯಿದ್ದುದರಿಂದ ಈ ಜಲಾಶಯದ ನೀರು ದಿಣ್ಣೆಯಿಂದಾಚೆಗೆ ಬೈಲು ಗದ್ದೆಗೆ ಹೋಗುತ್ತಿರಲಿಲ್ಲ. ಇದರ ನೀರು ಗದ್ದೆಗೆ ಹೋಗದೆ ಪೈರೂ ಚೆನ್ನಾಗಿ ಆಗುತ್ತಿರಲಿಲ್ಲ. ಇದಕ್ಕಾಗಿ ಬಾಲವಟು ವಾಸುದೇವನು ತನ್ನ ದಂಡಕಾಷ್ಠದಿಂದ ಆ ದಿಣ್ಣೆಯ ಮೇಲೆ ಪಶ್ಚಿಮದಿಂದ ಪೂರ್ವಕ್ಕೊಂದು ಗೆರೆಯನ್ನು ಎಳೆದನು. ಇಷ್ಟರಿಂದ ಆ ಜಲಾಶಯದ ನೀರು ಆ ಗೆರೆಯ ಮುಖಾಂತರ ಗದ್ದೆಗೆ ಹರಿಯತೊಡಗಿತು. ಹೀಗೆ ಹರಿಯುತ್ತ ಅದೊಂದು ಚಿಕ್ಕ ತೋಡಾಗಿ ಪರಿಣಮಿಸಿ ಆ ಗದ್ದೆಯ ಪೈರಿಗೆಲ್ಲ ಈ ಜಲಾಶಯದ ನೀರು ಸೇರುವಂತಾಗಿ ಆ ಉಪಾಧ್ಯಾಯರಿಗೆ ಅನುಕೂಲವಾಯಿತು. ಅಲ್ಲಿ ವೇದಾಭ್ಯಾಸವನ್ನು ಮುಗಿಸಿ ಬಂದ ಮೇಲೆ ಸನ್ಯಾಸವನ್ನು ಪರಿಗ್ರಹಿಸಿ, ದ್ವೈತ ವಿದ್ಯೆಯನ್ನು ಪ್ರಚಾರಮಾಡತೊಡಗುವಾಗ ಆ ಉಪಾಧ್ಯಾಯರಿಗೆ ಐತರೇಯ ಪಾಠವನ್ನು ಹೇಳಿ ಗೋವಿಂದನಲ್ಲಿ ಅತಿಶಯ ಭಕ್ತಿಯು ಆ ಉಪಾಧ್ಯಾಯರಿಗೆ ಉಂಟಾಗುವಂತೆ ಮಾಡಿದರು. ಮತ್ತು ಆ ಮನೆತನದವರಿಗೆ ನಿತ್ಯ ಪೂಜೆಗಾಗಿ ಸ್ವಕರಾರ್ಚಿತ ಕುಂಚಿ ಕೃಷ್ಣನ ಬಾಲವಿಗ್ರಹವನ್ನಿತ್ತು ಅನುಗ್ರಹಿಸಿದರು. ಆ ವಿಗ್ರಹವು ಬಹು ಕಾಲ ದಂಡ ತೀರ್ಥದಲ್ಲೇ ಇರುತ್ತ ಸರಿಯಾದ ಪೂಜೆ ನಡೆಯುತ್ತಿದ್ದಿತ್ತು. ಶ್ರೀ ಸೋದೇ ಮಠದ ಅಪರೋಕ್ಷಜ್ಞಾನಿಗಳಾದ ವಿಶ್ವಪ್ರಿಯ ತೀರ್ಥರು ( ವೃಂದಾವನಾಚಾರ್ಯರು ) ಆ ವಿಗ್ರಹದಂತಿರುವ ಬೇರೊಂದು ವಿಗ್ರಹವನ್ನಿಲ್ಲಿರಿಸಿ ಸರ್ವಜ್ಞ ಕರಾರ್ಚಿತ ವಿಗ್ರಹವನ್ನು ಅಲ್ಲಿಂದ ತಂದು ತಮ್ಮ ಗೃಹಸ್ಥ ಸನ್ಯಾಸಿಗಳಾದ ವರಾಹ ತೀರ್ಥರೆಂಬ ಶಿಷ್ಯರಿಗೆ ಕೊಟ್ಟು ಪೂಜೆ ಮಾಡುವಂತೆ ಅನುಗ್ರಹಿಸಿದರು. ಅವರ ಕಾಲಾನಂತರ ಅವರಿಗೆ ಸನ್ಯಾಸಿ ಶಿಷ್ಯರಿಲ್ಲದ ಕಾರಣದಿಂದ ಅವರ ಅನುಬಂಧಿಗಳು ಆ ವಿಗ್ರವನ್ನು ಮಠಸಂಪ್ರದಾಯದಿಂದ ಪೂಜಿಸಿಕೊಂಡು ಬರುತ್ತಿದ್ದಾರೆ. ಉದಿಯಾವರ ಎಂಬಲ್ಲಿ ಆ ವರಾಹ ತೀರ್ಥರ ಮಠವಿದೆ. ಅಲ್ಲಿ ಆ ವಿಗ್ರಹವಿದೆ. ಇದೂ ' ಬಹವ್ರೋಗೃಹಿಣೋ ' ಎಂಬಲ್ಲಿ ಸಾಮಾನ್ಯವಾಗಿ ಹೇಳಲ್ಪಟ್ಟಿರುತ್ತದೆ. ಅದು ಕೈಯಲ್ಲಿ ಬೆಣ್ಣೆಯನ್ನು ಹಿಡಿದಿರುವ ಕುಂಚಿಯಿರುವ ಬಾಲ ಕೃಷ್ಣ ವಿಗ್ರಹವು ಅತಿ ಸುಂದರವಾಗಿರುತ್ತದೆ. ದಂಡದಿಂದ ನೀರು ಹೋಗುವಂತೆ ಮಾಡಿದುದರಿಂದ ಆ ಜಲಾಶಯವು ದಂಡತೀರ್ಥವೆಂಬ ಹೆಸರಿನದ್ದಾಯಿತು. ಆ ಸ್ಥಳವೂ ಈ ತೀರ್ಥದ ಸಂಬಂಧದಿಂದ ದಂಡ ತೀರ್ಥವೆಂಬ ಹೆಸರಿನದ್ದಾಯಿತು.

# ವೆಂಕಟರಮಣ ಉಪಾಧ್ಯಾಯರು

## ಕೇಶವ ವಿಗ್ರಹ

ಶ್ರೀ ಮನ್ಮಧ್ವಾಚಾರ್ಯರು ಪಾರಂತೀ ದೇವಾಲಯದಲ್ಲಿ ಪೂಜೋತ್ಸವಗಳ ಏರ್ಪಾಡನ್ನು ಮಾಡಿ, ಪುತ್ತೂರು ತಾಲೂಕಿನ ರಾಮಕುಂಜ ಗ್ರಾಮಕ್ಕೆ ಬಂದರು. ಇಲ್ಲಿ ಉತ್ತಮ ಕುಲದ ಅನೇಕ ಬ್ರಾಹ್ಮಣರು ವಾಸಿಸುತ್ತಿದ್ದರು. ಈ ಆಚಾರ್ಯರ ದಿಗಂತ ವ್ಯಾಪ್ತವಾದ ಮಹಾ ಮಹಿಮೆಯನ್ನು ಮೊದಲೇ ಕೇಳಿರುವ ಈ ಬ್ರಾಹ್ಮಣ ವರ್ಗದವರು ತಮ್ಮೂರಿಗೆ ಆಚಾರ್ಯರು ಬರುವರೆಂಬುದನ್ನು ಕೇಳಿ ಆಚಾರ್ಯರ ದರ್ಶನಾತುರರಾಗಿ ನಿರೀಕ್ಷಿಸಿಕೊಂಡಿದ್ದರು. ಅಲ್ಲದೇ ಆಚಾರ್ಯ ಶ್ರೇಷ್ಠರ ದರ್ಶನ ದಿಂದ ಕೃತಾರ್ಥರಾಗಬಯಸಿಕೊಂಡೂ ಇರುತ್ತಿದ್ದರು. ಆ ಬ್ರಾಹ್ಮಣ ವರ್ಗಕ್ಕೆ ' ನೂರಿ ತ್ತಾಯರು ' ಎಂಬ ಬ್ರಾಹ್ಮಣೋತ್ತಮರು ಮುಖಂಡರಾಗಿರುತ್ತ ಆ ಬ್ರಾಹ್ಮಣ ವರ್ಗಕ್ಕೆ ಮಾರ್ಗದರ್ಶಕರೂ ಆಗಿರುತ್ತಿದ್ದರು. ಆಚಾರ್ಯರು ಬರುವುದನ್ನು ತಿಳಿದ ಆ ಬ್ರಾಹ್ಮಣ ವರ್ಗದವರೆಲ್ಲರೂ ಆನಂದ ಹೊಂದಿ ಆ ಮುಖಂಡರಾದ ' ನೂರಿತ್ತಾಯ ' ಬ್ರಾಹ್ಮಣರನ್ನು ( ನೂರಿತ್ತಾಯರು ಎಂಬುದು ಕುಲದ ಹೆಸರು. ) ಮುಂದಕ್ಕೆ ಮಾಡಿ ಕೊಂಡು ಆಚಾರ್ಯರನ್ನೆದುರುಗೊಂಡು ಸಂಭ್ರಮದ ಸ್ವಾಗತವನ್ನು ಮಾಡಿ ನೂರಿ ತ್ತಾಯ ಬ್ರಾಹ್ಮಣರ ಮನೆಗೆ ಕರೆದುಕೊಂಡು ಹೋದರು. ಆದರೆ ಆಚಾರ್ಯರು ಅಲ್ಲಿಗೆ ಬಂದಾಗ ಸ್ನಾನದ ಕೊಳವು ಒಣಗಿದ್ದಿತ್ತು. ಈ ವಿಷಯದಿಂದ ಅಲ್ಲಿಯವರೆಲ್ಲರೂ ಆಚಾರ್ಯರ ಅವಗಾಹನ ಸ್ನಾನಕ್ಕೆ ಅನುಕೂಲವಿಲ್ಲವಲ್ಲ ಎಂದು ಖಿನ್ನಮನಸ್ಕ ರಾದರು. ಸರ್ವಜ್ಞರಾದ ಶ್ರೀ ಮನ್ಮಧ್ವಾಚಾರ್ಯರು ಅವರ ಮನೋಭಿಲಾಷೆಯನ್ನ ರಿತು ತಾವು ಅವರಿಂದ ಕೂಡಿ ಆ ಜಲಾಶಯದ ಹತ್ತಿರಕ್ಕೆ ಬಂದರು. ಕೂಡಲೇ ಇಂದ್ರನಿಗೆ ಆಜ್ಞಾಪಿಸುವಂತೆ ಒಂದು ಕ್ಷಣ ಆಕಾಶವನ್ನು ನೆಟ್ಟ ದೃಷ್ಟಿಯಿಂದ ನೋಡಿ ದರು. ಕೂಡಲೇ ಒಂದು ಮೇಘವು ಆ ಜಲಾಶಯದ ಮೇಲ್ಭಾಗದಲ್ಲಿ ಕಾಣಿಸಿ ಕೊಂಡಿತು. ಕೂಡಲೇ ಅಷ್ಟೇ ಪ್ರದೇಶದಲ್ಲಿ ಧಾರಾಕಾರವಾದ ಮಳೆಯು ಬಂದು ಕ್ಷಣ ಮಾತ್ರದಿಂದ ಆ ಜಲಾಶಯವು ತುಂಬಿ ನೀರು ಹರಿಯತೊಡಗಿತು. ಅನಂತರ ಶ್ರೀ ಮನ್ಮಧ್ವಾಚಾರ್ಯರು ಅದೇ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ತಮ್ಮ ನಿತ್ಯ ನೈಮಿ ತ್ತಿಕ ಕರ್ಮಗಳನ್ನು ಮಾಡಿ ಅಲ್ಲಿಯ ಜನರ ಭಕ್ತಿ ವಿಶ್ವಾಸಗಳಿಗೆ ಮೆಚ್ಚಿ ಅವರ ಪ್ರಾರ್ಥನೆಯಂತೆ ಕೆಲವು ದಿನ ಅಲ್ಲಿ ಉಳಿದು ತತ್ತ್ವೋಪದೇಶದಿಂದ ಮತ್ತು ತಪ್ತ ಮುದ್ರಾಧಾರಣಗಳಿಂದ ಪುನೀತರನ್ನಾಗಿ ಮಾಡಿದರು. ಅಲ್ಲಿಂದ ಹೊರಡುವಾಗ ಅಲ್ಲಿಯ ನೂರಿತ್ತಾಯ ಬ್ರಾಹ್ಮಣರಿಗೆ ತನ್ನ ಕರಾರ್ಚಿತವಾದ ಶ್ರೀ ಕೇಶವ ವಿಗ್ರಹ

ಪನ್ನಿತ್ತು, ಹಿಂದಿನ ಭಾಟ್ಟ ಸಂಪ್ರದಾಯವ ಪಂಚ ಪೂಜೆಯನ್ನು ನಿಲ್ಲಿಸಿ ತಂತ್ರ ಪೂಜಾವಿಧಿಯನ್ನುಪದೇಶಿಸಿ, ಮಠದ ಹಿಡಿಯ ಮುದ್ರಾಧಾರಣ ಯೋಗ್ಯಗಳಾದ ಚಕ್ರ, ಶಂಖ ಮುದ್ರೆಗಳನ್ನು ಕೊಟ್ಟು, ಇನ್ನು ಮುಂದೆ ಶಯನೀಯ ಏಕಾದಶಿ ಮೊದಲಾದ ಉತ್ತಮ ದಿನಗಳಲ್ಲಿ ಸುದರ್ಶನ ಹೋಮವನ್ನು ಮಾಡಿ ನಮ್ಮ ಅನುಜ್ಞೆಯಂತೆ ಈ ಬ್ರಾಹ್ಮಣ ವರ್ಗಕ್ಕೆ ಮುದ್ರಾ ಧಾರಣ ಮಾಡಿಸಿರೆಂದು ಆಜ್ಞಾಪಿಸಿದರು. ಆಗ ಅಲ್ಲಿಯ ಬ್ರಾಹ್ಮಣರು ತತ್ವ ಬುಭುತ್ಸುಗಳಾಗಿ, ಮುಂದೆ ನಮಗಾರು ಉಪದೇಶಕರು, ಎಂದು ಕೇಳಿದರು. ಆಗ ಆಚಾರ್ಯರು, ಇಲ್ಲಿಯೇ ಸಮೀಪದಲ್ಲಿರುವ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ನಮ್ಮ ಮೂಲ ಪೀಠದಲ್ಲಿರುವ ಗುರುಗಳಿಂದ ತತ್ವಶ್ರವಣ ಮಾಡಿರೆಂದು ಆಜ್ಞಾಪಿಸಿ ಅಲ್ಲಿಂದ ತೆರಳಿದರು. ಆ ಸ್ಥಳವು ಈರನೆಂದು ಹೆಸರಿನ ವಾಯು ದೇವರಿಂದ ಕಂ ಎಂಬ ನೀರುಂಟಾದ ಸ್ಥಳವಾದುದರಿಂದ ಈರಕಿ ಮಠವೆಂದು ಪ್ರಸಿದ್ಧಿಗೊಂಡು, ಆ ಮನೆಯೂ ಆಚಾರ್ಯ ಕರಾರ್ಚಿತ ಪ್ರತಿಮೆಯುಳ್ಳದ್ದಾದುದರಿಂದ ಮಠವೆಂದೂ ಪ್ರಸಿದ್ಧಿಗೊಂಡಿತು. ಆ ಹೆಸರೀಗ ಬದಲಾಯಿಸಿಹೋಗಿ ಎರ್ಕಿ ಮಠವೆಂದು ಪ್ರಸಿದ್ಧಿಗೊಂಡಿರುತ್ತದೆ. ಇಲ್ಲಿ ನಿತ್ಯವೂ ಮಠ ಸಂಪ್ರದಾಯದ ಪೂಜಾ ವಿನಿಯೋಗಗಳೂ ವಿಶೇಷ ದಿನಗಳಲ್ಲಿ ಉತ್ಸವಾದಿಗಳೂ ನಡೆಯುತ್ತಿವೆ. ಮತ್ತು ಈ ಜಲಾಶಯದಲ್ಲಿ ಆಚಾರ್ಯರು ದಂಡೋದಕ ಮಾಡಿದುದರಿಂದ ಅದು ದಂಡ ತೀರ್ಥವೆಂದಾಯಿತು. ಉಡುಪಿಯಿಂದ ಸುಬ್ರಹ್ಮಣ್ಯಕ್ಕೆ ಹೋಗುವಾಗ, ಸುಬ್ರಹ್ಮಣ್ಯಕ್ಕೆ ೨೫ ಮೈಲು ಇರುವಾಗ ಈ ಮಠವಿದೆ. ಈ ಕೇಶವ ವಿಗ್ರಹವು ಅತಿ ಕ್ಷೀಣವಾಗಿರುತ್ತದೆ. ಈ ಮನೆತನದ ಉಪಾಧ್ಯಾಯರಲ್ಲಿ ಅಂದು ಆಚಾರ್ಯರು ಇತ್ತಿರುವ ಮುದ್ರೆಗಳು ಜೋಪಾನವಾಗಿರಿಸಲ್ಪಟ್ಟಿವೆ.

---

ಆ ಊರ ಇತಿಹಾಸದ ಆಧಾರದಿಂದ—ಈ ವಿಷಯಗಳು ಸುಮಧ್ವ ವಿಜಯದ ಹದಿನಾರನೆಯ ಸರ್ಗದ, 'ತತ್ಕಾಲೇ ಪರಮಭಿವರ್ಷಯನ್ ಘನೌಘಂ' ಎಂಬಲ್ಲಿ ಸೂಚಿತವಾಗಿವೆ. ಅಲ್ಲದೆ, 'ಬಹವೋಗ್ಯಹಿಣ್ಯೋಪ್ಯಸ್ಯಾತ್ತ್ಸಮಗ್ರಾನುಗ್ರಹಂಯುಃ' ಎಂಬಲ್ಲಿ ಸೂಚಿತವಾಗಿರುತ್ತವೆ.



# ಎಡಪಾಡಿತ್ತಾಯರು

## ವಾಸುದೇವ ವಿಗ್ರಹ

ಪುತ್ತೂರು ತಾಲೂಕಿನ ರಾಮಕುಂಜಕ್ಕೆ ಬಂದು ' ನೂರಿತ್ತಾಯ ' ಕುಲದ ಬ್ರಾಹ್ಮಣನಿಗೆ ಕೇಶವ ದೇವರನ್ನಿತ್ತು ಅಲ್ಲಿಂದ ವೈದ್ಯನಾಥ ದೇವಾಲಯವಿರುವ ಕೊಕ್ಕಡ, ನೇರಂಕಿ, ಗ್ರಾಮಗಳಲ್ಲಿರುವ ಸದ್ಬ್ರಾಹ್ಮಣರ ಉದ್ಧಾರಕ್ಕಾಗಿ ಹೊರಟರು. ಹೀಗೆ ಹೊರಟಾಗ ಆ ಗ್ರಾಮಗಳ ಬ್ರಾಹ್ಮಣರ ಉದ್ಧಾರಕ್ಕಾಗಿ ಶ್ರೀ ಕೃಷ್ಣಾಮೃತ ಮಹಾರ್ಣವವೆಂಬ ಗ್ರಂಥವನ್ನು ಸಂಗ್ರಹಿಸಿಕೊಂಡು ಹೋಗತೊಡಗಿದರು. ಆಗ ನೂರಿತ್ತಾಯರಿಗೆ ಅನುಗ್ರಹಿಸಿರುವ ಶ್ರೀ ಕೇಶವ ದೇವರನ್ನೇ " ಸಮಾಂ ರಕ್ಷತು ಕೇಶವಃ " ಎಂದು ಪ್ರಾರ್ಥಿಸಿ ಆ ಗ್ರಂಥವನ್ನು ಸಂಗ್ರಹಿಸತೊಡಗಿದರು. ಹೀಗೆ ಇವರು ಹೋಗುತ್ತಿರುವಾಗ, ಗ್ರಾಮೇಶನಾದ ವೃಷಲಪತಿಯು ಇವರನ್ನು ಮುಂದಕ್ಕೆ ಬರ ಬಾರದೆಂದು ತಡೆದನು. ಆದರೂ ಇವರು ಲಕ್ಷಿಸದೆ ಮುಂದೆ ಬಂದರೆಂದು ಇವನು ಆಚಾರ್ಯರನ್ನು ಹೊಡೆಯ ಬಂದನು. ಆಗ ಆಚಾರ್ಯರು ಅವನಿಗೆ ಉದಿಸುವ ಸೂರ್ಯನಂತೆ ಕಾಣತೊಡಗಲು ಆಶ್ಚರ್ಯಚಕಿತನಾಗಿ ನಮಿಸಿ ಕ್ಷಮೆಯನ್ನು ಕೇಳಿ ದನು. ಇಷ್ಟು ಕೆಲಸವಾಗುವಾಗ ಬಹಳ ಹೊತ್ತು ಕಳೆದು ಹೋಯಿತು. ಆಚಾರ್ಯರು ಸಂಕಲ್ಪಿಸಿದಂತೆ ವೈದ್ಯನಾಥದೇವಾಲಯಕ್ಕೆ ಹೊರಟರು.

ಪುತ್ತೂರು ತಾಲೂಕಿಗೆ ಸೇರಿದ ನೇರಂಕಿ ಗ್ರಾಮದವರೂ ಕೊಕ್ಕಡ ಗ್ರಾಮ ದವರೂ ತಮಗೆ ಮುಖಂಡರೆನಿಸಿರುವ 'ಎಡಪಾಡಿತ್ತಾಯ' ಕುಲದ ಬ್ರಾಹ್ಮಣೋ ತ್ತಮರಿಂದ ಕೂಡಿ ಅವರ ಮಾತನ್ನು ನಡೆಸುತ್ತ ಗುರುಗಳನ್ನಾಗಿ ಪರಿಗ್ರಹಿ ಸಿದ್ದರು. ಅವರು ಸದಾಚಾರ ಸಂಪನ್ನರೂ ಯಜ್ಞಶೀಲರೂ ಆಗಿರುತ್ತ ಅಗ್ನಿಹೋತ್ರ ವನ್ನಿಟ್ಟಿದ್ದರು. ಈ ವೈದ್ಯನಾಥ ದೇವಾಲಯದಲ್ಲಿ ಈ 'ಎಡಪಾಡಿತ್ತಾಯ' ಬ್ರಾಹ್ಮಣರು ತಮ್ಮ ಶಿಷ್ಯ ವರ್ಗದವರಿಂದಕೂಡಿ ದರ್ಶೇಷ್ಟಿ, ಪೂರ್ಣಮಾಸೇಷ್ಟಿಯನ್ನು ಮಾಡುತ್ತಿ ದ್ದರು. ಆ ಕೊಕ್ಕಡ, ನೇರಂಕಿಯ ಎಲ್ಲ ಬ್ರಾಹ್ಮಣರೂ ಹೆಂಗಸುಮಕ್ಕಳಾದಿಯಾಗಿ ಈ ಇಷ್ಟಿಗೆ ತಪ್ಪದೆ ಬರುತ್ತಿದ್ದರು. ಶ್ರೀಮನ್ಮಧ್ವಾಚಾರ್ಯರು ಇಂತಹ ಇಷ್ಟಿಯ ದಿನದಲ್ಲೇ ವೈದ್ಯನಾಥ ದೇವಾಲಯಕ್ಕೆ ಹೊರಟಿದ್ದರು. ಆದರೆ ಬರುವಾಗ ತಡೆ ಯಾದುದರಿಂದ ಸ್ವಲ್ಪ ತಡವಾಗಿ ಬರಬೇಕಾಯಿತು. ಆಗ, ಇವರ ಬರುವಿಕೆಯು ಮೊದಲು ತಿಳಿಯದ ಆ ಎಡಪಾಡಿತ್ತಾಯರು ಸಾಂಗೋಪಾಂಗ ಇಷ್ಟಿಯನ್ನು ಪೂರೈಸಿ ತಮ್ಮಾರಾಧ್ಯನೃಸಿಂಹನನ್ನು ಮೆಚ್ಚಿಸಿದ್ದರು. ಅಂದಿನ ಯಜ್ಞದಿಂದ ಆ ನೃಸಿಂಹ

ವಿಗ್ರಹದಲ್ಲಿ ಸನ್ನಿಹಿತನಾದ ಶ್ರೀ ನೃಸಿಂಹನು ಈ ಎಡಪಾಡಿತ್ತಾಯರಿಗೆ ತೋರಿಸಿಕೊಂಡಿದ್ದನು. ಅಂತೂ ಯಜ್ಞಾವಸಾನಕಾಲದಲ್ಲಿ ಬ್ರಾಹ್ಮಣ ಸಂತರ್ಪಣೆಯೂ ಮುಗಿಯಿತು. ಆ ಮೇಲೆ ಮಧ್ವಾಚಾರ್ಯರು ಅಲ್ಲಿಗೆ ಬಂದರು. ಇದರಿಂದ ಆ ಎರಡು ಗ್ರಾಮದವರೂ ಪ್ರಸನ್ನರಾದರು. ಆದರೆ ತಮ್ಮ ಭೋಜನೋತ್ತರದಲ್ಲಿ ಬಂದುದರಿಂದ ಖಿನ್ನರೂ ಆದರು.

ಅನಂತರ ಆಚಾರ್ಯರ ಪೂಜಾದಿಗಳಿಗೆ ಬೇಕಾಗಿರುವ ಸಕಲ ಸಿದ್ಧತೆಯನ್ನು ಕೂಡಲೇ ಮಾಡಿದರು. ಆಚಾರ್ಯರು ಪೂಜೆಯನ್ನು ಮುಗಿಸಿದರು. ಅನಂತರ ಆ ಬ್ರಾಹ್ಮಣರನ್ನು ಕುರಿತು 'ನೀವೆಲ್ಲರೂ ನಮ್ಮ ಜೊತೆಯಲ್ಲಿ ತೀರ್ಥ ಪ್ರಸಾದವನ್ನು ಸ್ವೀಕರಿಸಬೇಕು' ಎಂದಾಜ್ಞಾಪಿಸಿದರು. ಆಗ ಆ ಬ್ರಾಹ್ಮಣರು 'ಈ ದಿನ ಅಮಾವಾಸ್ಯೆಯಾದುದರಿಂದ ಎರಡು ಭೋಜನ ಮಾಡುವಂತಿಲ್ಲ. ಒಮ್ಮೆ ಭೋಜನವಾಗಿ ಹೋಗಿದೆ. ಆದರೆ ಮಹನೀಯರು ಆಜ್ಞೆ ಮಾಡಿದ್ದಾದರೆ, ಗುರುಗಳ ಆಜ್ಞೆಯನ್ನು ಮೀರುವಂತಿಲ್ಲ.' ಎಂದು ತಮ್ಮ ತಮ್ಮೊಳಗೇ ವಿಚಾರ ಪರರಾದರು. ಈ ವಿಚಾರವನ್ನು ಅರಿತ ಸರ್ವಜ್ಞರು ಅವರನ್ನು ಕುರಿತು 'ನಮ್ಮಾಜ್ಞೆಯಂತೆ ತೀರ್ಥ–ಪ್ರಸಾದ ಸ್ವೀಕಾರದಿಂದ ನಿಮಗೇನೂ ವಿಧಿಲೋಪವಾಗುವುದಿಲ್ಲ. ಬನ್ನಿರಿ' ಎಂದು ಕರೆದು ತೀರ್ಥವನ್ನಿತ್ತು ಪ್ರಸಾದವನ್ನು ಸ್ವೀಕರಿಸುವಂತೆ ಮಾಡಿದರು. ಅಂದಿನಿಂದ ಆ ವರ್ಗದವರು ಈ ಗುರುತಿಗಾಗಿ ಅಮವಾಸ್ಯೆಯ ದಿನ ಎರಡು ಹೊತ್ತು ಭೋಜನ ಮಾಡುವ ಸಂಪ್ರದಾಯದವರಾಗಿದ್ದಾರೆ.

ಮರುದಿನ ಶ್ರೀಮನ್ಮಧ್ವಾಚಾರ್ಯರು— ಆ ಊರವರು ಪರಮ ಸಾತ್ವಿಕರಾದುದರಿಂದ ಅವರನ್ನೆಲ್ಲರನ್ನೂ ಸೇರಿಸಿ ತಾವು ಪುರಾಣೇತಿಹಾಸಗಳಿಂದ ಸಂಗ್ರಹಿಸಿರುವ ಶ್ರೀ ಕೃಷ್ಣಾಮೃತ ಮಹಾರ್ಣವವನ್ನು ಉಪದೇಶಿಸಿದರು. ಅನಂತರ ತಪ್ತಮುದ್ರಾಧಾರಣವನ್ನಿತ್ತು ಅವರನ್ನು ಪವಿತ್ರೀಕರಿಸಿ ತತ್ತ್ವೋಪದೇಶವನ್ನು ಮಾಡಿದರು. ಇದರಿಂದ ಆ ಊರ ಮಹನೀಯರಿಗೆ ಆಚಾರ್ಯರಲ್ಲಿ ಭಕ್ತಿಯೂ ಸಂಸಾರದಲ್ಲಿ ವಿರಕ್ತಿಯೂ ತತ್ತ್ವಶ್ರವಣಾಸಕ್ತಿಯೂ, ಹರಿಚರಣ ಭಕ್ತಿಯೂ ಉಂಟಾದವು. ಆಚಾರ್ಯರು ಕೆಲವು ದಿನ ಅಲ್ಲಿದ್ದು ಭಾಷ್ಯಾದಿ ಸದ್ಗ್ರಂಥಗಳನ್ನು ಉಪದೇಶಿಸಿ, ಹೊರಡುವಾಗ ಮುಖ್ಯಸ್ಥರಾದ ಆ ಎಡಪಾಡಿತ್ತಾಯರಿಗೆ ಶ್ರೀ ವಾಸುದೇವ ವಿಗ್ರಹವನ್ನೂ ಮುದ್ರಾಧಾರಣಯೋಗ್ಯ ಮುದ್ರೆಗಳನ್ನೂ ಕರುಣಿಸಿ 'ಶ್ರೀ ಹರಿಯ ಪೂರ್ಣಾನುಗ್ರಹ ಪಾತ್ರರಾಗಿ' ಎಂದು ಅನುಗ್ರಹಿಸಿದರು.

ಅಂದಿನಿಂದ ಆ ಎಡಪಾಡಿತ್ತಾಯರು ತಮ್ಮ ಹಿಂದಿನ ಭಾಟ್ಟ ಸಂಪ್ರದಾಯವನ್ನು ತೊರೆದು ಸತ್ಸಂಪ್ರದಾಯನಿರತರಾದರು. ಅಂದಿನಿಂದ ಈ ಮನೆತನದವರಲ್ಲಿ

ಇದುವರೆಗೂ ನೃಸಿಂಹ ವಾಸುದೇವರ ಪೂಜೆಯು ಮಠ ಸಂಪ್ರದಾಯದಿಂದ ನಡೆಯುತ್ತಿದೆ. ಕೆಲವು ವರ್ಷಗಳಿಂದೀಚೆಗೆ ಆ ಕುಲದವರು ಆ ಕೊಕ್ಕಡ ಗ್ರಾಮವನ್ನು ಬಿಟ್ಟು ಬಳ್ಪ ಎಂಬಲ್ಲಿಗೆ ದೇವರನ್ನು ತಂದು ಪೂಜಿಸುತ್ತಿದ್ದಾರೆ. ಈ ಸ್ಥಳವು ಸುಬ್ರಹ್ಮಣ್ಯಕ್ಕೆ ಹೋಗುವಾಗ ಸುಬ್ರಹ್ಮಣ್ಯದಿಂದ ಕೆಲವು ಮೈಲೀಚೆಗೆ ಇರುತ್ತದೆ. ಅಷ್ಟಮಠದ ಯತಿಗಳು ಇಂತಹ ಆಚಾರ್ಯ ಕರಾರ್ಚಿತ ವಿಗ್ರಹವಿದ್ದಲ್ಲಿಗೆ ಹೋದರೆ ಆ ದೇವ ವಿಗ್ರಹಗಳನ್ನು ತಮ್ಮ ಸಂಸ್ಥಾನದ ದೇವರ ಜೊತೆಯಲ್ಲಿರಿಸಿ ಪೂಜಿಸಿ ಫಲಕಾಣಿಕೆ ಮಾಡುವ ಸಂಪ್ರದಾಯವು ಈಗಲೂ ಇರುತ್ತದೆ. ಈ ವೈದ್ಯನಾಥ ದೇವಾಲಯವು ವಿಸ್ತಾರವಾದ ಶಿವ ದೇವಾಲಯವಾಗಿದೆ. ಇದರಲ್ಲಿ ಶ್ರೀ ಕೃಷ್ಣನ ಗುಡಿಯೂ ಇರುತ್ತದೆ. ಇಲ್ಲಿ ಹಾವು ಕಟ್ಟಿದರೆ ಈ ದೇವರ ಪ್ರಸಾದದಿಂದಲೇ ವಿಷ ಬಾಧೆಯು ಕಡಿಮೆಯಾಗುತ್ತದೆ ಎಂಬ ಐತಿಹ್ಯವಿರುತ್ತದೆ.



# ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರು
## ಮತ್ತು
# ಶ್ರೀಮನ್ನಾರಾಯಣಪಂಡಿತಾಚಾರ್ಯರು

## ಶ್ರೀಕರ ವಿಗ್ರಹವು

ಮಂಗಳೂರಿನಿಂದ ದಕ್ಷಿಣಕ್ಕೆ ಕುಂಬ್ಳೆ ಎಂಬ ಊರಿದೆ. ಆ ಊರಿನಿಂದ ಒಂದು ಮೈಲು ದಕ್ಷಿಣಕ್ಕೆ ಕಾವು ಮಠವಿದೆ. ಈ ಸ್ಥಳವು ಶ್ರೀಮದಾನಂದ ತೀರ್ಥ ಭಗವತ್ಪಾದರ ಪೂರ್ಣಾನುಗ್ರಹ ಪಾತ್ರರಾದ ಲಿಕುಚ ( ಪೇಜತ್ತಾಯ ) ಕುಲದ ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರ ಮನೆಯಾಗಿದ್ದಿತ್ತು. ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮನ್ಮಧ್ವಾಚಾರ್ಯರೊಡನೆ ಹದಿನೈದು ದಿನ ವಾದ ಮಾಡಿ ಶ್ರೀಮನ್ಮಧ್ವಮತವೇ ತತ್ವಮತವೆಂದು ವಿಮರ್ಶಿಸಿ ಆ ಆಚಾರ್ಯರ ಶಿಷ್ಯರಾಗಿ ಆಚಾರ್ಯರಿಂದಲೇ ವೈಷ್ಣವ ದೀಕ್ಷೆಯನ್ನು ಪಡೆದು ಆಚಾರ್ಯರ ಜೊತೆಯಲ್ಲೇ ಕೆಲವು ಕಾಲ ಉಳಿಯುವ ಭಾಗ್ಯವನ್ನು ಹೊಂದಿದ್ದಿರು. ಇವರು ವೃದ್ಧರಾಗುತ್ತ ಬಂದಾಗ ಆಚಾರ್ಯರು ಒಂದು ದಿನ ಅವರ ಮನೆಯಲ್ಲಿ ಪೂಜೆಯನ್ನು ನಡೆಯಿಸಿ ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರನ್ನು ಕರೆದು, " ಪಂಡಿತಾಚಾರ್ಯರೇ ! ನೀವೀಗ ಸರಿಯಾದ ತತ್ವಜ್ಞಾನಿಗಳಾಗಿರುವಿರಿ. ನೀವಿನ್ನು ಮುಂದೆ ನಮ್ಮ ಜೊತೆಯಲ್ಲೇ ಬರುವ ಬದಲಾಗಿ ಇಲ್ಲಿಯೇ ಇದ್ದು ಜನರಿಗೆ ತತ್ವ ಬೋಧನೆಯ ಕಾರ್ಯವನ್ನು ಮಾಡುತ್ತಿರಬೇಕು. ಇದಕ್ಕಾಗಿ ನಿಮಗೆ ನಮ್ಮ ಕರಾರ್ಚಿತವಾದ ಶ್ರೀ ದೇವರ ವಿಗ್ರಹವನ್ನು ಅನುಗ್ರಹಿಸುವೆವು. ನೀವೀ ದೇವರ ಪೂಜೆಯನ್ನು ತಂತ್ರಸಾರೋಕ್ತ ಕ್ರಮದಿಂದ ಮಾಡುತ್ತ ಬರಬೇಕು. ಅಲ್ಲದೆ ಇಲ್ಲಿಯ ವರೆಗೆ ವೈಷ್ಣವ ದೀಕ್ಷೆಯನ್ನು ಮಾಡುವ ಅಧಿಕಾರವನ್ನೂ ಕೊಡುವೆವು. ಈ ಚಕ್ರ ಶಂಖ ಮುದ್ರೆಗಳನ್ನು ನೀವು ಸುದರ್ಶನ ಹೋಮ ಮಾಡಿ ಕಾಯಿಸಿ ಭಕ್ತರಿಗೆ ವೈಷ್ಣವ ದೀಕ್ಷೆಯನ್ನು ಮಾಡಿರಿ. ಹೀಗೆ ನೀವು ನಿಮ್ಮ ಕಾಲವನ್ನಿಲ್ಲೇ ಕಳೆಯಿರಿ, ಎಂದಾಜ್ಞಾಪಿಸಿದರು. ಹಾಗೆಯೇ ಶ್ರೀ ದೇವಿಯನ್ನು ಅಂಜಲಿಯಲ್ಲಿ ಧರಿಸಿರುವ ಶ್ರೀ ನಾರಾಯಣನ ವಿಗ್ರಹವನ್ನೂ, ಬೆಳ್ಳಿಯ ಮುದ್ರಾಧಾರಣಕ್ಕೆ ಅನುಕೂಲಗಳಾದ ಎರಡು ಮುದ್ರೆಗಳನ್ನೂ ಅನುಗ್ರಹಿಸಿ ಕೊಟ್ಟರು. ಆ ದೇವರಿಗೆ ಶ್ರೀಕರ ವಿಗ್ರಹವೆಂಬ ಹೆಸರಾಯಿತು. ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮದಾನಂದ ತೀರ್ಥರ ವಿಯೋಗಾತುರರಾಗಿದ್ದರೂ ಗುರುಗಳ ಆಜ್ಞೆಯಂತೆ ನಡೆದುಕೊಂಡರು. ಅಂದಿನಿಂದ ಆ ಕಾವು ಮಠದಲ್ಲಿ ಈ

ಶ್ರೀಕರನ ಪೂಜೆಯೂ, ಮುದ್ರಾ ಧಾರಣವೂ ಮಠ ಸಂಪ್ರದಾಯದಂತೆ ನಡೆಯುತ್ತ ಬಂದಿತ್ತು. ಆದರೆ ಈಗೀಗ ಆ ಮನೆತನದವರು ಕೇರಳ ಸಂಪ್ರದಾಯದವರಾಗಿ ಈ ದೇವರ ಪೂಜೆಯನ್ನು ಇತರರಿಂದ ಮಾಡಿಸುತ್ತಿರುವರು. ಮುದ್ರಾ ಧಾರಣ ಯೋಗ್ಯ ಮುದ್ರೆಗಳು ಪೆಟ್ಟಿಗೆಯಲ್ಲಿ ಭದ್ರವಾಗಿರಿಸಲಾಗಿರುತ್ತದೆ. ಇಲ್ಲಿಗೆ ಉಡುಪಿಯ ಪೀಠಾಧಿಪತಿಗಳು ಬಂದರೆ ಆ ಶ್ರೀಕರ ವಿಗ್ರಹಕ್ಕೆ ಪಂಚಾಮೃತವನ್ನು ಮಾಡಿ ತಮ್ಮ ಸಂಸ್ಥಾನದ ದೇವರ ಜೊತೆಗೆ ಪೂಜಿಸುವ ಪದ್ಧತಿ ಇರುತ್ತದೆ.

ಈ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರಿಗೆ ತಂದೆಗೆ ತಕ್ಕಂತೆ ಮಗನೆಂಬಂತೆ ನಾರಾಯಣ ಪಂಡಿತಾಚಾರ್ಯರೆಂಬ ಮಕ್ಕಳಾಗಿದ್ದರು. ಇವರು ಬಾಲ್ಯದಲ್ಲಿ ತಮ್ಮ ತಂದೆಯಿಂದಲೇ ಅಧ್ಯಯನಾದಿಗಳನ್ನು ಮಾಡಿದವರು. ಇವರ ಪಾಂಡಿತ್ಯವೂ ಅಸದಳವಾಗಿದ್ದಿತು. ಅನಂತರ ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳನ್ನೂ ಪಾಠ ಕೇಳಿ ಪರವಾದಿ ನಿಗ್ರಹ ಪಟುಗಳಾಗಿ, ಕಾವ್ಯ ನಿರ್ಮಾತೃರಾಗಿ ಮೆರೆದರು. ಶ್ರೀಮನ್ಮಧ್ವಾ-ಚಾರ್ಯರೊಮ್ಮೆ ತಮ್ಮಲ್ಲಿಗೆ ಬಂದಾಗ, ಈ ನಾರಾಯಣಪಂಡಿತಾಚಾರ್ಯರು ತಾವು ರಚಿಸಿರುವ ಸಂಗ್ರಹ ರಾಮಾಯಣವನ್ನು ಆಚಾರ್ಯರಿಗರ್ಪಿಸಿ ವಿಮರ್ಶಿಸಬೇಕೆಂದು ಪ್ರಾರ್ಥಿಸಿದರು. ಆಚಾರ್ಯರು ಅದನ್ನು ವಿಮರ್ಶಿಸಿ ಆಶ್ಚರ್ಯವನ್ನು ವ್ಯಕ್ತಪಡಿಸುತ್ತ ಅವರ ಕವಿತಾ ಶಕ್ತಿಗೆ ತಲೆದೂಗಿ— 'ಪಂಡಿತಾಚಾರ್ಯನೇ! ಇದನ್ನು ಅತ್ಯುತ್ತಮವಾಗಿ ರಚಿಸಿರುವೆ. ವಾಲ್ಮೀಕಿ ರಾಮಾಯಣದ ಒಂದೊಂದು ಸರ್ಗವನ್ನು ಒಂದೊಂದೇ ಶ್ಲೋಕದಲ್ಲಿ ತುಂಬಿಸಿದ್ದನ್ನು ನೋಡಿದರೆ ಸಾಸಿವೆಯೊಳಗೆ ಕುಂಬಳಕಾಯಿಯನ್ನು ತುಂಬಿಸಿದಂತಾಗಿರುತ್ತದೆ. ಇದರ ಪಾರಾಯಣದಿಂದ ರಾಮಾಯಣ ಪಾರಾಯಣದ ಫಲ ಬರಲಿ' ಎಂದು ಅನುಗ್ರಹ ಮಾಡಿದರು.

ಶ್ರೀಮನ್ಮಧ್ವಾಚಾರ್ಯರ ಮಹಿಮೆಯಿಂದ ತವಕಗೊಂಡಿರುವ ಈ ಪಂಡಿತಾಚಾರ್ಯರು, ಆಚಾರ್ಯರ ಜೊತೆಯಲ್ಲೇ ಇರುವ ಜನರಿಂದ ಆಚಾರ್ಯರ ಅಮಾನುಷ ವ್ಯಾಪಾರಗಳನ್ನು ಕೇಳಿ, ಸ್ವತಃ ಪರಿಚಯದಿಂದ ಅಮಾನುಷ ಬಾಲಲೀಲೆಯನ್ನು ಅರಿತು, ಶ್ರೀಮತ್ಸುಮಧ್ವವಿಜಯವೆಂಬ ಮಹಾ ಕಾವ್ಯವನ್ನು ಕಾವ್ಯ ಲಕ್ಷಣಕ್ಕೆ ಸ್ವಲ್ಪವೂ ಕೊರತೆ ಬಾರದಂತೆ ರಚಿಸಿದರು. ಇದಕ್ಕೆ ಮಲ್ಲಿನಾಥನಂತಹ ವ್ಯಾಖ್ಯಾನಕಾರರು ವ್ಯಾಖ್ಯಾನ ಮಾಡಿದ್ದಾರೆ, ಮಾಘ ಮೊದಲಾದ ಕಾವ್ಯಗಳಿಂದಲೂ ಅತ್ಯುತ್ತಮವೆಂದು ಕೊಂಡಾಡಲ್ಪಡುತ್ತಿದ್ದಿತು. ಆದರೂ ಅದರ ಸ್ವಾರಸ್ಯವನ್ನು ಬಲ್ಲವರು ಸರಿಯಾಗಿ ಅರಿಯದಿರುವುದಿಲ್ಲ. ಇಂತಹ ಶ್ರೀಮತ್ಸುಮಧ್ವವಿಜಯವು ಆನಂದತೀರ್ಥರ ಅನುಗ್ರಹಕ್ಕೆ ಮುಖ್ಯ ಕಾರಣವೂ ವೈಷ್ಣವರಿಗೆ ಮಂತ್ರರೂಪವೂ ಆಗಲೆಂದು ಶ್ರೀಮನ್ಮಧ್ವಾಚಾರ್ಯರು ಅನುಗ್ರಹಿಸಿರುವರು. ಈಗಲೂ ಈ ಮಂತ್ರಗಳಿಂದ ಸಕಲಾಭೀಷ್ಟಪೂರ್ಣವಾಗುತ್ತಿರುವವನ್ನು ವೈಷ್ಣವರು, ನೋಡುತ್ತಲೇ ಇದ್ದಾರೆ.

ಇವರು ಇನ್ನೂ ಅನೇಕ ಗ್ರಂಥಗಳನ್ನು ಮಾಡಿರುವರು— (೧) ಅಣುಮಧ್ವ ವಿಜಯ (೨) ಮಣಿಮಂಜರೀ (೩) ಶುಭೋದಯ (೪) ಪಾರಿಜಾತಾಹರಣ (೫) ನಯನ ಚಂದ್ರಿಕಾ ಎಂಬ ಅನುವ್ಯಾಖ್ಯಾನ ಟೀಕಾ (೬) ತತ್ವಮಂಜರೀ ಎಂಬ ವಿಷ್ಣುತತ್ವ ನಿರ್ಣಯ ಟೀಕಾ (೭) ಪ್ರಮಾಣ ಲಕ್ಷಣ ಟೀಕಾ (೮) ಕೃಷ್ಣಾಮೃತ ಮಹಾರ್ಣವ ಟೀಕಾ (೯) ಯಮಕ ಭಾರತ (೧೦) ಯೋಗ ದೀಪಿಕಾ (೧೧) ಶಿವ ಸ್ತುತಿ (೧೨) ಭಾವ ಪ್ರಕಾಶಿಕಾ ಇತ್ಯಾದಿಗಳು.

ಇನ್ನೂ ಅನೇಕ ಗ್ರಂಥಗಳನ್ನು ಮಾಡಿರಬಹುದು. ಇದು ವರೆಗೆ ದೊರಕಿ ಅಚ್ಚಾಗಿರುವದನ್ನು ಮಾತ್ರ ಹೇಳಲಾಗಿರುತ್ತದೆ. ಹೀಗೆ ಶ್ರೀಮದಾನಂದ ತೀರ್ಥರ ಪೂರ್ಣಾನುಗ್ರಹ ಪಾತ್ರರಾದ ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯರಂತೆ ಈ ನಾರಾಯಣ ಪಂಡಿತಾಚಾರ್ಯರೂ ಅಂತ್ಯದಲ್ಲಿ ಸನ್ಯಾಸಿಗಳಾಗಿ ಹರಿಲೋಕವನ್ನೈದಿರುವರು. ಇವರ ವೃಂದಾವನಗಳು ಕಾವು ಮಠದಲ್ಲಿವೆ.

ಮಾಧ್ವ ಸಮಾಜದ ಸೂರ್ಯ–ಚಂದ್ರರಂತಿರುವ ಈ ಪಿತಾ–ಪುತ್ರರೀರ್ವರ ವೃಂದಾವನಗಳೆರಡೂ ಈಗ ವಿಮತೀಯರ ಕೈವಶವಾಗಿ ಸರಿಯಾಗಿ ಪೂಜೆ ಕಾಣದೆ ಕುಳಿತಿವೆ. ಕಾಸರಗೋಡು ಕನ್ನಡಿಗರ ಕೈತಪ್ಪಿ ಹೋದುದಕ್ಕಿಂತ ಹೆಚ್ಚಿನ ಹಾನಿ ಈ ಮಾಧ್ವ ವಿಭೂತಿ ಪುರುಷರ ದಿವ್ಯ ವೃಂದಾವನಗಳ ಹಸ್ತಾಂತರದಿಂದ ವೈಷ್ಣವ ಸಮಾಜಕ್ಕೆ ಆಗಿದೆ. ಆಚಾರ್ಯರು ತಮ್ಮ ಕರಾರ್ಜಿತ ಕೊಟ್ಟ ಶ್ರೀಕರ ವಿಗ್ರಹ ಕೈತಪ್ಪಿದ್ದರಿಂದ ನಮ್ಮ ಸಮಾಜದ ಸಿರಿ–ಸೌಭಾಗ್ಯಗಳೇ ಹೋದಂತಾಗಿವೆ.

ಸಕಲ ಮಾಧ್ವರೂ ಮಾಧ್ವ ಎಲ್ಲ ಪೀಠಾಧಿಪತಿಗಳು, ಉಡುಪಿಯವರೂ, ಘಟ್ಟದ ಮೇಲಿನವರೂ ಸರ್ವ ಪ್ರಯತ್ನದಿಂದ ಆ ಶ್ರೀಕರ ವಿಗ್ರಹ ಮತ್ತು ಪಂಡಿತ ಪಿತಾ–ಪುತ್ರರ ವೃಂದಾವನಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳ ಸರಿಯಾದ ಪೂಜೆ ನಡೆಯುವಂತೆ ಮಾಡಬೇಕು. ಹಾಗೂ ಅಲ್ಲಿ ಒಂದು ಗ್ರಂಥ ಭಾಂಡಾರ, ಪಾಠಶಾಲೆಗಳನ್ನಿಟ್ಟು ಜ್ಞಾನ ಸತ್ರ, ಶಿಬಿರ, ಸಭಾದಿಗಳನ್ನು ಪ್ರತಿ ವರ್ಷ ನೆರವೇರಿಸಿ ಮತ್ತೊಮ್ಮೆ ಅವರ ಸ್ಮೃತಿ ಜನರ ಮನಸ್ಸಿನಲ್ಲಿ ಜಾಗ್ರತವಾಗುವಂತೆ ಅವರ ಕೃತಿಗಳ ಸಾರ ಸಂದೇಶಗಳು ಜನ ಹೃದಯದಲ್ಲಿ ಅಚ್ಚೊತ್ತುವಂತೆ ಮಾಡಬೇಕೆಂದು ಸೂಚಿಸುತ್ತೇವೆ.



## ಮಧ್ವಾಚಾರ್ಯರ ಶಿಷ್ಯರಾದ

# ಶಂಕರಾಚಾರ್ಯರು

ತ್ರಿವಿಕ್ರಮ ಪಂಡಿತಾಚಾರ್ಯರಿಗೆ ಶಂಕರಾಚಾರ್ಯರೆಂಬ ಪಂಡಿತೋತ್ತಮ ರಾದ ತಮ್ಮಂದಿರರೊಬ್ಬರಿದ್ದರು. ಅವರು ಗುರು ಮಧ್ವರ ಲೋಕೋತ್ತರ ವೈದುಷ್ಯಕ್ಕೆ ಮಣಿದು ಅವರ ಪ್ರಭಾವಕ್ಕೆ ಮಾರು ಹೋಗಿ ಅವರ ಪ್ರವಚನ ಪರಿಪಾಟಿಗೆ ಮುಗ್ಧ ರಾಗಿ ಅವರ ತಪಃ ಸಿದ್ಧಿಗೆ ಶರಣಾಗತರಾಗಿ ತ್ರಿವಿಕ್ರಮ ಪಂಡಿತಾಚಾರ್ಯರಿಗಿಂತ ಮೊದಲೇ ಅವರ ಶಿಷ್ಯರಾಗಿ ಬಿಟ್ಟಿದ್ದರು. ಅವರು ತಮ್ಮ ಶಂಕರಾಚಾರ್ಯ ಎಂಬ ಹೆಸರನ್ನು ಉಳಿಸಿಕೊಂಡೇ ಮಧ್ವಾಚಾರ್ಯರ ನೆಚ್ಚಿನ ಶಿಷ್ಯರ ಪ್ರಭಾವಳಿಯಲ್ಲಿ ಸೇರ್ಪಡೆ ಹೊಂದಿದ್ದು ಶ್ರೀ ಮಧ್ವಾಚಾರ್ಯರ ಉದಾರ ದೃಷ್ಟಿಗೆ ಸಾಕ್ಷಿಯಾಗಿದೆ. ಆಚಾರ್ಯರು ಶಂಕರಾಚಾರ್ಯರ ತಮ್ಮ ಈ ಪಾಂಡಿತ್ಯ ಪ್ರಭಾವಿತವಾದ ಭಕ್ತಿ ಕೈಂಕರ್ಯವನ್ನು ಕಂಡು ಸುಪ್ರೀತರಾಗಿ ಅವರನ್ನು ತಮ್ಮ ಗ್ರಂಥಪಾಲನನ್ನಾಗಿ ಮಾಡಿದರು.

ಸರ್ವಜ್ಞಾಚಾರ್ಯರ ಗ್ರಂಥಪಾಲಕ ( ಲಾಯಬ್ರೇರಿಯನ್ ) ಆಗುವದು ಸಾಮಾನ್ಯ ಕಾರ್ಯವೇ ! ವೇದ, ಸ್ಮೃತಿ, ಆಗಮ ಹಾಗೂ ಸರ್ವ ಶಾಸ್ತ್ರ ಪುರಾಣ ಮೊದಲಾದ ಪ್ರಾಚೀನ ಗ್ರಂಥ ರಾಶಿಗಳನ್ನೆಲ್ಲ ಸಂಶೋಧನಾತ್ಮಕ ದೃಷ್ಟಿಯಿಂದ ಓದಿ ತಿಳಿದುಕೊಂಡು ಸರ್ವಜ್ಞರು ಹೇಳಿದ ಪ್ರಮೇಯ ಸಿದ್ಧಾಂತಗಳಿಗೆ ನಮ್ಮ ಪ್ರಾಚೀನ ವಾಙ್ಮಯ ಭಾಂಡಾರವೆಲ್ಲವೂ ಪ್ರತಿಧ್ವನಿ ಕೊಡುತ್ತದೆ ಎಂಬುದನ್ನು ಬೇಕೆಂದಾಗ ತತ್ ಕ್ಷಣವಲ್ಲಿ ಪರವಾದಿಗಳಿಗೂ ಸ್ವಕೀಯ ಪಂಡಿತರಿಗೂ ತೋರಿಸಬಲ್ಲಂಥ ಸಿದ್ಧ ಪಂಡಿತರಾಗಿದ್ದರು. ಅವರು ಆಚಾರ್ಯರು ಬರೆದ ಗ್ರಂಥಗಳನ್ನು ರಾತ್ರಿ ಓದಲಿಕ್ಕೆಂದು ತಮ್ಮ ಮನೆಗೆ ತಂದಿರುತ್ತಿದ್ದರು. ಅವುಗಳನ್ನು ಇನ್ನೂ ಸ್ವಾರ್ತರಾಗಿಯೇ ಇದ್ದ ತ್ರಿವಿಕ್ರಮ ಪಂಡಿತಾಚಾರ್ಯರು ಜಿಜ್ಞಾಸೆಯಿಂದಲೇ ಓದಿ ತಮಗೆ ತಿಳಿಯದಂತೆಯೇ ತುಂಬ ಪ್ರಭಾವಿತರಾಗುತ್ತಿದ್ದರು. ಶಾಸ್ತ್ರ ಸಂಸ್ಕೃತವಾದ ಆ ಪಂಡಿತ ಹೃದಯಕ್ಕೆ ಆಚಾ ರ್ಯರ ಮಾತುಗಳೆಲ್ಲವೂ ಪ್ರಮಾಣಗಳ ಒರೆಗಲ್ಲಿಗೆ ತಿಕ್ಕಿ ತೀಡಿ ಚೊಕ್ಕ ಚೆನ್ನವಾ ಗಿಯೇ ತೋರುತ್ತಿದ್ದವು. ಆಚಾರ್ಯರನ್ನು ಕಾಣುವ ಮೊದಲೇ ಅವರ ಸರ್ವಜ್ಞ ಹೃದ ಯದ ವಿರಾಟ್ ಪಾಂಡಿತ್ಯದ ದಿವ್ಯ ದರ್ಶನವನ್ನು ತ್ರಿವಿಕ್ರಮರಿಗೆ ಮಾಡಿಸಿದ ಶ್ರೇಯಸ್ಸು ಅವರ ಈ ಪಂಡಿತ ಸಹೋದರರಾದ ಶಂಕರಾಚಾರ್ಯರಿಗೇ ಸಲ್ಲುತ್ತದೆ.

•

ಶಂಕರಾಚಾರ್ಯರು 'ಸಂಬಂಧದೀಪಿಕಾ' ಎಂಬ ಹೆಸರಿನ ಟೀಕೆಯನ್ನು ಶ್ರೀ ಮಧ್ವಾಚಾರ್ಯರ ಬ್ರಹ್ಮ ಸೂತ್ರ ಭಾಷ್ಯಕ್ಕೆ ಬರೆದಿದ್ದಾರೆ. ಅನುವ್ಯಾಖ್ಯಾನವ ಮೇಲೆಯೂ ಅವರದೊಂದು ಟೀಕೆ ಇದೆ. ತಂಜಾವೂರ ಪ್ಯಾಲೇಸ ಲಾಯಬ್ರರಿಯಲ್ಲಿಯೂ ಮೈಸೂರ ಓರಿಯಂಟಲ್ ಲಾಯಬ್ರರಿಯಲ್ಲಿಯೂ ಅವುಗಳ ಎರಡು ಪ್ರತಿಗಳು ಇದ್ದದ್ದು ನಮ್ಮ ಸುದೈವವಾಗಿದೆ.

ಶ್ರೀಮಂತ್ರಾಲಯ ಶ್ರೀಗುರು ಸಾರ್ವಭೌಮರು ತಮ್ಮ ಪರಿಮಳದಲ್ಲಿ ಈ ಶಂಕರಾಚಾರ್ಯರ ಸಂಬಂಧದೀಪಿಕೆಯನ್ನು ಆದರದಿಂದ ಉಲ್ಲೇಖಿಸಿದ್ದಾರೆ. ಮತ್ತು ಶೇಷ ಚಂದ್ರಿಕಾಚಾರ್ಯರಾದ ಶ್ರೀ ರಘುನಾಥ ತೀರ್ಥರೂ ತಮ್ಮ ಗ್ರಂಥವಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಇದರ ಮೇಲಿಂದಲೇ ಶಂಕರಾಚಾರ್ಯರ ಗ್ರಂಥಗಳ ಮೇಲ್ಮೆ ಮಟ್ಟಗಳನ್ನು ನಾವು ತಿಳಿಯಬಹುದು.

ಈ ಗ್ರಂಥಗಳ ಪ್ರಕಾಶನವನ್ನು ಬೇಗನೆ ಕೈಕೊಳ್ಳುವದು ಅತ್ಯಾವಶ್ಯಕವಾಗಿದೆ. ಅಂತೂ ಸುಬ್ರಹ್ಮಣ್ಯ ಸೂರಿಗಳು-ಸ್ವಯಂ ಸ್ಮಾರ್ತರಾದರೂ ಅವರು ಮಧ್ವ ಮತಕ್ಕೆ ನೀಡಿದ ಕಾಣಿಕೆಯನ್ನು ಯಾವ ವೈಷ್ಣವನೂ ಮರೆಯುವಂತಿಲ್ಲ. ಶ್ರೀ ಮಧ್ವಾಚಾರ್ಯರ ಭಾಷ್ಯಕ್ಕೆ ಟೀಕೆ ಬರೆದ ತ್ರಿವಿಕ್ರಮ, ಶಂಕರರನ್ನೇ ಆಚಾರ್ಯರು ತಮ್ಮ ನೆಚ್ಚಿನ ಶಿಷ್ಯರೆಂದು ಎರಡು ಬೆರಳುಗಳಿಂದ ತೋರಿದರೋ ಏನೋ ಎನ್ನುವಂಥ ಸೇವೆಯನ್ನು ಈ ಬಂಧು ದ್ವಂದ್ವವು ದ್ವೈತ ಮತಕ್ಕೆ ಸಲ್ಲಿಸಿದೆ.



# ಕುಂಞಾಣ್ಣಾಯರು

## ಕೃಷ್ಣವಿಗ್ರಹ

ಮಧ್ಯತಾಳ (ನಡ್ಡಂತಾಳ) ಯಲ್ಲಿ ಮಧ್ಯಗೇಹ ಭಟ್ಟರ ಅನುಬಂಧಿಗಳಾದ ಕುಂಞಾಣ್ಣಾಯ ಕುಲದ ಬ್ರಾಹ್ಮಣರೊಬ್ಬರಿರುತ್ತಿದ್ದರು. ಅವರು ದೈವೀ ಭಕ್ತಿಯುಳ್ಳವರಾಗಿರುತ್ತಿದ್ದರು. ಅಲ್ಲದೆ ಶ್ರೀಮನ್ಮಧ್ವಾಚಾರ್ಯರಲ್ಲಿ ಅತಿಶ ಭಕ್ತಿಯುಳ್ಳವರಾಗಿ ಅವರಿಂದ ಕೆಲವು ಕಾಲ ತತ್ವ ಶ್ರವಣ ಮಾಡುತ್ತಿದ್ದರು.

ಇಂತಹ ಅನುಬಂಧಿಗಳಾದ ಕುಂಞಾಣ್ಣಾಯ ಕುಲದ ಬ್ರಾಹ್ಮಣನ ಭಕ್ತಿಗೆ ಮೆಚ್ಚಿದ ಶ್ರೀಮನ್ಮಧ್ವಾಚಾರ್ಯರು ಸ್ವಕರಾರ್ಚಿತವಾದ ಶ್ರೀ ಕೃಷ್ಣ ವಿಗ್ರಹವನ್ನು ದಯಪಾಲಿಸಿ ಪೂಜಾ ವಿಧಾನಗಳನ್ನೂ ಮುಂದೆ ನಡೆದುಕೊಳ್ಳುವ ಅಂಶವನ್ನು ಸರಿಯಾಗಿ ಉಪದೇಶಿಸಿದರು.

ಮುಂದೆ ಈ ವಿಪ್ರವರ್ಯನು ಆ ದೇವರನ್ನು ಭಕ್ತಿಯಿಂದ ಪೂಜಿಸುತ್ತ ಕಾಲವನ್ನು ಕಳೆದನು. ಅನಂತರ ಅವರ ವಂಶ ಪಾರಂಪರ್ಯವಾಗಿ ಈ ಪೂಜೆ ನಡೆಯುತ್ತಲಿದ್ದಿತು. ಕಾಲಕ್ರಮೇಣ ಅವರ ವಂಶವು ಅಳಿದು ಹೋಗಲು ಆ ದೇವರ ವಿಗ್ರಹವನ್ನು ನಡ್ಡಂತಾಡಿ ಮಠದಲ್ಲಿರಿಸಿದರು.

ಈಗ ಆ ಶ್ರೀ ಕೃಷ್ಣ ಪ್ರತಿಮೆ ಸೋದೆ ವಾದಿರಾಜ ಮಠದಲ್ಲಿದ್ದು ಪೂಜೆಯಾಗುತ್ತಿದೆ. ಅದು ಬಲು ಚಿಕ್ಕ ವಿಗ್ರಹವಾದುದರಿಂದ ಅದನ್ನು ಸಂಪುಟದಲ್ಲೇ ಇರಿಸಿ ನಿತ್ಯ ಪಂಚಾಮೃತಾದಿ ಪೂಜೆಗಳಿಂದ ಪೂಜಿಸುತ್ತಿದ್ದಾರೆ.



ಸರ್ವಜ್ಞಕಲ್ಪರಾದ

# ಶ್ರೀ ಜಯತೀರ್ಥರು

## ಹಿಂದಿನ ಜನ್ಮಗಳ ಹಿನ್ನೆಲೆ



ಯಸ್ತು ಶ್ರೀ ಜಯ ಪಾಂಡುರಾಜತನಯಃ ಪುಸ್ತಾದ ವಕ್ತ್ರಾದ್ ಹರೇಃ
ಗೀತಾಂ ಭಾರತ ಶಾಸ್ತ್ರ ಸಾರ ಸುರಸಾಂ ಪಾರ್ಥೋ ಹನೂಮದ್ಧ್ವಜಃ ।
ತಂ ವಂದೇ ಪುನರೇವ ಯಃ ಪಶುರಭೂತ್ ಗ್ರಂಥಾನ್ ಸಮಸ್ತಾನ್ ಗುರೋಃ
ಶ್ರುತ್ವಾತೋ ಜಯನಾಮಕಿರಾಟ್ ರಚಿತವಾನ್ ಟೀಕಾಂ ಸುಲೇಖಾದ್ವೃತಾನ್

## ಇಂದ್ರದೇವರ ಮೂರು ಅವತಾರಗಳು

### ಅವತಾರ (೧)

### ಅರ್ಜುನ

ಐದು ಸಾವಿರ ವರ್ಷಗಳ ಹಿಂದಿನ ಮಾತು. ಮಾರ್ಗಶೀರ್ಷ ಶುಕ್ಲ ಏಕಾದಶಿಯ ದಿನ ಸೂರ್ಯೋದಯ ಸಮಯ.

ಧರ್ಮಕ್ಷೇತ್ರವಾದ ಕುರುಕ್ಷೇತ್ರದ ವಿಶಾಲವಾದ ಬಯಲು. ಕ್ಷತ್ರಿಯಂಜನ ನಡೆಗೆ ಬಾಟನ ೮ ಕುರುಬಾಂಗಳಿನ ಪರವಿನಲ್ಲಿ ಹನ್ನೊಂದು ಅಕ್ಷೋಹಿಣಿ ಸೇನೆ ಬಂದು

ಕಡೆ ಶಸ್ತ್ರ ಹಿರಿದು ನಿಂತುಕೊಂಡಿವೆ. ಏಳು ಅಕ್ಷೋಹಿಣಿ ಸೈನ್ಯವು ಮತ್ತೊಂದೆಡೆ ಬಿಲ್ಲಿನಲ್ಲಿ ಶರಸಂಧಾನ ಮಾಡಿ ಹೆದೆಯನ್ನು ಜಗ್ಗಿ ಬಾಣ ಬಿಡಲು ತಮ್ಮ ತಮ್ಮ ಸೇನಾಪತಿಯ ಆಣತಿಯನ್ನು ಎದುರ ನೋಡುತ್ತಲಿದೆ. ಹೀಗೆ ಎರಡು ಸೇನೆಗಳೂ ಯುದ್ಧೋನ್ಮಾದದಿಂದ ಕಾಲು ಕೆದುರುತ್ತ ತಮ್ಮ ತಮ್ಮ ಸೀಮಾರೇಖೆಯ ಅಂಚನ್ನು ತೀಡುತ್ತ ಎದುರು ನಿಂತುಕೊಂಡಾಗ ಎರಡೂ ಸೇನೆಯ ನಟ್ಟನಡುವೆ ಅಚ್ಚ ಬಿಳಿ ಬಣ್ಣದ ನಾಕು ಕುದುರೆಗಳು ಒಂದು ದೊಡ್ಡ ತೇರನ್ನು ಎಳೆದು ತಂದವು. ಹಳದೀ ಪಟ್ಟೆ ಉಟ್ಟ ಕಪ್ಪು ಬಣ್ಣದ ಒಬ್ಬ ತೇಜಸ್ವೀ ಮನುಷ್ಯ ಆ ಕುದುರೆಗಳ ಲಗಾಮನ್ನು ಹಿಡಿದು ಆ ತೇರಿನ ಮುಂಭಾಗದಲ್ಲಿ ಕಾಂತಿ ಕಿರಣಗಳನ್ನು ಚಿಮ್ಮುತ್ತ ಕುಳಿತು ಕೊಂಡಿದ್ದ. ಒಳಗೆ ಗಾಂಡೀವ ಧನಸ್ಸನ್ನು ಹಿಡಿದು ಆ ಆಜಾನುಬಾಹು ಆದ ಮೂರು ಲೋಕದ ಗಂಡ ಪಾರ್ಥ ಕುರು ಸೈನ್ಯದೆಡೆಗೆ ದೃಷ್ಟಿಯನ್ನು ಬೀರುತ್ತ ನಿಂತುಕೊಂಡಿದ್ದ.

ಅವನು ಕೂಡಲೇ ತನ್ನ ಸಾರಥಿಗೆ "ಅಚ್ಯುತ! ದುಷ್ಟನಾದ ದುರ್ಯೋಧನನಿಗೆ ಸಹಾಯ ಮಾಡಲು ಬಯಸುವ ದೊರೆಗಳನ್ನೆಲ್ಲ ನೋಡಬೇಕೆಂದಿದ್ದೇನೆ. ಆದುದರಿಂದ ಆ ನನ್ನ ವೈರಿಗಳೆದುರು ನನ್ನ ರಥವನ್ನು ಒಯ್ದು ನಿಲ್ಲಿಸು" ಎಂದು ಹೇಳಿದ.

ಆ ಬಂಡಿಯ ಚಾಲಕ ತನ್ನ ಮಾಲಕನ ಈ ಮಾತುಗಳನ್ನು ಆಲಿಸಿ ಮನೋಹರವಾಗಿ ಮುಗುಳು ನಗೆ ನಕ್ಕು ಅವನ ಆಪ್ಪಣೆಯಂತೆ ರಥವನ್ನು ಕುರು ವೃದ್ಧರಾದ ಭೀಷ್ಮ ದ್ರೋಣರ ಎದುರು ತಂದು ನಿಲ್ಲಿಸಿದ.

ತನ್ನನ್ನು ಸಾಕಿ ಸಲಹಿ ವಿದ್ಯೆ ಕಲಿಸಿ ಕೀರ್ತಿವಂತನನ್ನಾಗಿ ಮಾಡಿದ ಅಜ್ಜ ಮತ್ತು ಗುರುಗಳನ್ನು ಕಂಡು ಅರ್ಜುನನ ಮೈ ಬೆವತು ಹೋಯಿತು. ಅಲ್ಲಿ ನಿಂತವರು ಎಲ್ಲರೂ ವೈರಿಗಳಾಗದೇ ಆಪ್ತೇಷ್ಟರೂ ಗುರು ಹಿರಿಯರೂ ಬಂಧು ಬಳಗದವರೇ ಆಗಿದ್ದರು. ಅವರನ್ನು ಕಂಡು ವೈರದ ಕ್ರೂರ ಭಾವವು ಶಾಂತವಾಗಿ ಸ್ನೇಹ,ತುಂಬಿ ಬಂದು ಈ ಆತ್ಮೀಯರನ್ನು ಹೇಗೆ ನಾನು ಕೊಲ್ಲಲಿ ಎಂಬ ಮಂಕು ಅವನಿಗೆ ಆವರಿಸಿತು. ಅವನ ಈ ಕರ್ತವ್ಯ ಮೌಢ್ಯವನ್ನು ದೂರ ಮಾಡಿ ಅವನಿಗೆ ಸ್ವಧರ್ಮ ಜ್ಞಾನವನ್ನು ಉಂಟು ಮಾಡಿಕೊಟ್ಟು ವಿಹಿತ ಕರ್ಮಾನುಷ್ಠಾನದ ಎಚ್ಚರವನ್ನು ಅವನಲ್ಲಿ ಹುಟ್ಟಿಸುವದಕ್ಕಾಗಿ ಅವನ ಬಂಡಿಯ ಬೋವಿಯಾದ ಭಗವಾನ್ ಕೃಷ್ಣ ಭಗವದ್ಗೀತೆಯನ್ನು ಬೋಧಿಸಿದ. ಅದನ್ನು ಮುಖ್ಯವಾಗಿ ಕೇಳಿದವ ಅರ್ಜುನನ ತೇರಿನ ತುದಿಯಲ್ಲಿ ಕುಳಿತ ಕೋತಿ ಹನುಮಂತ. ಅನಂತರ ಅರ್ಜುನ. ಸಂಪೂರ್ಣ ಗೀತೆಯನ್ನು ಕೇಳಿದ ಪಾರ್ಥನಿಗೆ ಗೀತೆಯ ಅರ್ಥ ನಿಚ್ಚಳವಾಗಿ ಎದೆಯಲ್ಲಿ ಮೂಡಿತು. ಮಿದುಳಿನಲ್ಲಿ ದಿವ್ಯ ಜ್ಞಾನದ ಬೆಳಕು ಆಡಿತು. ಹೃದಯವು ಸಂತಸಗೊಂಡಿತು. ಕೂಡಲೇ ಅವನು ತನ್ನ ಬಂಡೀ ಹೊಡೆಯುವವನಿಗೆ ಕೈ ಮುಗಿದು,

" ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾತ್ ಮಯಾಚ್ಯುತ
ಸ್ಥಿತೋಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ "

ಅಚ್ಯುತ ! ನನ್ನ ಮಿದುಳಿನಲ್ಲಿ ಕವಿದ ಮಬ್ಬು ಕಳೆಯಿತು. ಅಜ್ಞಾನವು ಅಳಿಯಿತು. ಎಚ್ಚರ ಮೂಡಿತು. ಸಂಶಯ ದೂರಾಯಿತು. ಸ್ವಾಮಿ, ಇದೆಲ್ಲ ನಿನ್ನ ದಯೆ. ಇನ್ನು ನಿನ್ನ ಅಪ್ಪಣೆಯನ್ನು ತಪ್ಪದೇ ಪಾಲಿಸುವೆ. " ಎಂದು ನುಡಿದು ಒಡಮುರಿದು ಎದ್ದ. ಯುದ್ಧ ಮಾಡಿದ. ಕುದುರೆಯ ಲಗಾಮು ಹಿಡಿದವ ಜಯಲಕ್ಷ್ಮಿಗೂ ಲಗಾಮು ಹಾಕಿ ಹಿಡಿದು ತಂದು ಪಾಂಡವರ ಶಿಬಿರದಲ್ಲಿ ನಿಲ್ಲಿಸಿದ. ಅರ್ಜುನನ ಆ ಜಟಕಾ ಸಾಬಿಯ ಪ್ರಭಾವದಿಂದ ಗೆಲವು ಪಾರ್ಥರ ಗುಲಾಮವಾಯಿತು. ಅರ್ಜುನ 'ವಿಜಯ' ಎಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿಗೊಂಡ.

ಯುದ್ಧ ಮುಗಿಯಿತು. ಅಣ್ಣ ಅರಸನಾದ. ಅರ್ಜುನ ನಿಶ್ಚಿಂತನಾದ. ಆದರೆ ಕೃಷ್ಣ ಹೇಳಿದ ಗೀತೆ ಅದರಲ್ಲಿಯ ಅಮೂಲ್ಯ ವಿಷಯಗಳು ಮಿದುಳಿನಲ್ಲಿ ಇನ್ನೂ ಸುತ್ತುತ್ತಲೆ ಇದ್ದವು. ವೇದ ವೇದಾಂತದ ಸಾರ ಸರ್ವಸ್ವವನ್ನೆಲ್ಲ ಸ್ವಾಮಿ ತನ್ನ ತಲೆಯಲ್ಲಿ ತುಂಬಿದ್ದ. ಆ ಜ್ಞಾನದ ಭಾಂಡಾರ ಪಾರ್ಥನ ತಲೆಯಲ್ಲಿ ತುಂಬಿ ತುಳುಕಾಡುತ್ತಲಿತ್ತು. ಪಾರ್ಥ ಆ ಗೀತೆಯ ಅರ್ಥವನ್ನು ಯಾರಿಗಾದರೂ ತಿಳಿ ಹೇಳಿ ಕೃತಕೃತ್ಯನಾಗಬೇಕೆಂದು ಬಯಸುತ್ತಿದ್ದ. ತಲೆಯಲ್ಲಿ ಜ್ಞಾನ ತುಂಬಿ ತುಳುಕುವಾಗ ಅದನ್ನು ಪ್ರವಚನ ಪಾಠ ಲೇಖ ಗ್ರಂಥ ರೂಪವಾಗಿ ಇಳಿಸದಿದ್ದರೆ ಹೇಳದಿದ್ದರೆ ಅದನ್ನು ತಲೆಯಲ್ಲಿ ಹೊತ್ತವರಿಗೆ ಸಮಾಧಾನವಾಗುವದಿಲ್ಲ.

ಆದರೆ ಅರ್ಜುನ ಕ್ಷತ್ರಿಯ ಇನ್ನೊಬ್ಬರಿಗೆ ವಿದ್ಯಾದಾನ ಮಾಡುವಂತಿಲ್ಲ. ಅದೊಂದು ' ಒನ್ ವೇ ಟ್ರಾಫಿಕ್ ' ಈ ಜಾತಿಯಲ್ಲಿ ತಲೆಯಲ್ಲಿ ತುಂಬಿಕೊಳ್ಳುವ ದಷ್ಟೇ. ತೆರವು ಮಾಡಲಿಕ್ಕೆ ಬರುವಂತಿಲ್ಲ. ಅಣ್ಣ ಭೀಮನಿಗೆ ತಮ್ಮನ ಜ್ಞಾನ ದಾನದ ಉತ್ಕಟ ಇಚ್ಛೆ ಅರ್ಥವಾಯಿತು. ಸರಿ ಪಾರ್ಥ ನಿನಗೆ ನೀನು ತಿಳಿದುಕೊಂಡ ಗೀತೆಯ ಅರ್ಥವನ್ನೂ ವೇದಾಂತ ಶಾಸ್ತ್ರದ ರಹಸ್ಯವನ್ನೂ ಜನರಿಗೆ ಬೋಧಿಸಲಿಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಡುವೆನು ಎಂದು ಸಂಕೇತವಿತ್ತನು.

ಅದನ್ನು ಕೇಳಿ ಅರ್ಜುನನಿಗೆ ಧನ್ಯತೆಯೆನಿಸಿತ್ತು. ಸರ್ವಜ್ಞನಾದ ಅಣ್ಣನಲ್ಲಿ ಅವನಿಗೆ ಪೂರ್ಣವಾದ ನಂಬುಗೆ. " ಅಣ್ಣ ಅಷ್ಟು ಮಾಡಿದರೆ ನಾನು ನಿನ್ನ ಮನೆಯ ಎತ್ತಾಗಿ ತೊತ್ತಾಗಿ ದುಡಿದು ಸೇವೆ ಮಾಡಲಿಕ್ಕೆ ಸಿದ್ಧ " ಎಂಬ ಅಭಿಪ್ರಾಯ ಸೂಚಿಸಿದ. " ತಥಾಸ್ತು " ಎಂದಿತ್ತು ಭೀಮ ದೃಷ್ಟಿ. ತಮ್ಮ ಈ ಕಾಲ ಪರಿವರ್ತನೆಯ ದಾರಿ ಕಾಯುತ್ತ ಕುಳಿತ.

--------

## ಇಂದ್ರ ದೇವರ ಅವತಾರತ್ರಯ

## ಅವತಾರ ( ೧ )

# ವೃಷಭ—ಋಷಭ



ಇಪ್ಪತ್ತೆಂಟನೇ ಕಲಿಯುಗದಲ್ಲಿ ಇಂದಿಗೆ ಎಂಟು ನೂರು ವರ್ಷಗಳ ಹಿಂದೆ ಮಧ್ಯಗೇಹ ಭಟ್ಟರೆಂಬ ವೇದ ವೇದಾಂತ ವಿದ್ವಾಂಸರೊಬ್ಬರು ದಕ್ಷಿಣ ಕನ್ನಡ ದೇಶದಲ್ಲಿ ವಾಸವಾಗಿದ್ದರು. ಅವರ ಗ್ರಾಮ ಪಶ್ಚಿಮ ಕರಾವಳಿಯ ಸಮೀಪದ ರಜತಪೀಠಪುರದ ಬಳಿಯಲ್ಲಿರುವ ಪಾಜಕಕ್ಷೇತ್ರ. ಇತಿಹಾಸ, ಪುರಾಣ, ವೇದ ಶಾಸ್ತ್ರಗಳಲ್ಲಿ ಭಟ್ಟರು ಎತ್ತಿದ ಕೈ. ಸುತ್ತಮುತ್ತಲಿನ ಹಳ್ಳಿಯ ಜನರೆಲ್ಲರಿಗೂ ಭಟ್ಟರೆಂದರೆ—ದೇವತಾ ಮನುಷ್ಯರು ಎಂಬ ವಿಶ್ವಾಸ.

ಭಟ್ಟರಿಗೆ ಇಷ್ಟೆಲ್ಲ ಶಾಸ್ತ್ರ–ಪುರಾಣ ಪಾಂಡಿತ್ಯವಿದ್ದರೂ ಬಡತನ ಮಾತ್ರ ಅವರ ಬೆನ್ನು ಬಿಟ್ಟಿರಲಿಲ್ಲ. ಹಿಟ್ಟಿಲ್ಲದಿದ್ದರೂ ಭಟ್ಟರು "ದೇಹಿ" ಎಂದು ಯಾರೆದುರೂ ಕೈ ಒಡ್ಡಿದವರಲ್ಲ. ಅಯಾಚಿತ ವೃತ್ತಿ ಅವರ ಕುಲಧರ್ಮ. ಅವರು ರಟ್ಟೆ ಮುರಿದು ದುಡಿದು ಹೊಟ್ಟೆ ತುಂಬಿಕೊಳ್ಳುತ್ತಿದ್ದರು.

ಅವರು ತಮ್ಮ ಮನೆಯ ಹಿಂದಿನ ಕಾಡಿನಲ್ಲಿ ತಮಗೆ ಸೇರಿದ ಭಾಗದಲ್ಲಿ ತಮಗೆ ಬೇಕಾಗುವ ಬತ್ತ, ತೆಂಗು, ರಾಗಿ, ನವಣೆ ಮುಂತಾದ ಧಾನ್ಯಗಳನ್ನು ಸ್ವಂತ ಕೃಷಿ ಮಾಡಿ ಬೆಳೆಯುತ್ತಿದ್ದರು. ತಾವು ಕಷ್ಟಪಟ್ಟು ಮಾಡಿದ ಬೇಸಾಯದಿಂದ ಬಂದಷ್ಟರಲ್ಲಿಯೇ ತೃಪ್ತಿಪಟ್ಟು ಯದೃಚ್ಛಾ ಲಾಭ ಸಂತುಷ್ಟರಾಗಿ ಪಾಠ ಪುರಾಣ ಹೇಳಿಕೊಂಡು ಉಡುಪಿಯ ಅನಂತೇಶ್ವರನ ಸೇವೆ ಮಾಡುತ್ತ ಇರುತ್ತಲಿದ್ದರು.

ಒಮ್ಮೆ ಮಧ್ಯಗೇಹ ಭಟ್ಟರಿಗೆ ತಮ್ಮ ಗದ್ದೆಯ ಬೇಸಾಯಕ್ಕಾಗಿ ಒಂದು ಎತ್ತು ಕೊಳ್ಳಬೇಕಾಗಿತ್ತು. ಪಾಜಕಕ್ಷೇತ್ರವಲ್ಲಿಯ ಒಬ್ಬ ಸಾಹುಕಾರನೊಬ್ಬನ ಬಳಿಯಲ್ಲಿ ಒಂದು ಎತ್ತು ಇದ್ದಿತು. ಅದನ್ನು ನೋಡಿದ ಕೂಡಲೇ ಭಟ್ಟರಿಗೆ ಅದನ್ನು ತಾವು ಕೊಳ್ಳಬೇಕೆನಿಸಿತು.

ಆದರೆ ಸಾಹುಕಾರನಿಗೆ ತನ್ನ ಮನೆಯಲ್ಲಿರುವ ಉತ್ತಮವಾದ ಎತ್ತನ್ನುಮಾರುವ ಪ್ರಸಂಗವೇನಿರಲಿಲ್ಲ. ಆದರೂ ಭಟ್ಟರು ಮನೆಯ ಎದುರಿಗೆ ಬಂದು ಅದನ್ನು ಕೊಡ ಬೇಕೆಂದು ಕೇಳಿದಾಗ ಸಾಹುಕಾರನು ಅದಕ್ಕೆ ತುಂಬ ಬೆಲೆ ಹೇಳಿದ. ಆದರೆ ಭಟ್ಟರಿಗೆ ಏಕೋ ಆ ಎತ್ತಿನ ಮೇಲೆ ಮಮತೆ ಮೂಡಿದ್ದರಿಂದ ಕೈಯಲ್ಲಿ ಹಣವಿಲ್ಲದಿದ್ದರೂ ಆ ಮೇಲೆ ಕೊಡುತ್ತೇನೆಂದು ಹೇಳಿ ಆ ಎತ್ತನ್ನು ಹೊಡೆದು ಕೊಂಡು ಮನೆಗೆ ಬಂದುಬಿಟ್ಟರು.

ಭಟ್ಟರಿಗೆ ವಾಸುದೇವ ಎಂಬ ಪುಟ್ಟ ಮಗುವಿತ್ತು. ಅದು ಆ ಎತ್ತನ್ನು ಕಂಡ ಕೂಡಲೇ ಹಿಗ್ಗಿ ಕೇಕೆ ಹಾಕಹತ್ತಿತು. ಆ ವೃಷಭವೂ ಕೂತ ಬಂದು ವಾಸುದೇವನ ಎದುರು ಗೋಣು ಹಾಕುತ್ತ ನಿಂತುಕೊಂಡಿತು. ಕೆಲವೇ ದಿನಗಳಲ್ಲಿ ಆ ಬಸವನಿಗೂ ಈ ಬಾಲಕನಿಗೂ ಅತ್ಯಂತ ಸ್ನೇಹವಾಯಿತು. ವಾಸುದೇವನು ಆ ಎತ್ತನ್ನು ಎಂದೂ ಬಿಟ್ಟಿರುತ್ತಿರಲಿಲ್ಲ. ಜನರಿಗೆಲ್ಲರಿಗೂ ಈ ಬಸವ ವಾಸುದೇವರ ಅನ್ಯೋನ್ಯ ಸ್ನೇಹ ವನ್ನು ಕಂಡು ಕೌತುಕವೆನಿಸುತ್ತಿತ್ತು.

ಒಂದು ದಿನವಂತೂ ಬೆಳಗ್ಗೆ ವಾಸುದೇವನು ಮನೆಯಲ್ಲಿ ಎಲ್ಲಿಯೂ ಕಾಣಲಿಲ್ಲ. ತಾಯಿ ವೇದವತಿಯು ನೆರೆಮನೆಯಲ್ಲಿಯೂ, ಊರಿನ ಎಲ್ಲ ಕೇರಿಗಳಲ್ಲಿಯೂ ವಾಸು ದೇವನನ್ನು ಹುಡುಕಿ ಕಾಣದಾಗಲು ಗಾಬರಿಯಾದಳು. ಮಧ್ಯಗೇಹ ಭಟ್ಟರು ಊರ ಹತ್ತಿರದ ಕಾಡು-ಮೇಡುಗಳಲ್ಲಿ ಹುಡುಕಿ ಮಗನನ್ನು ಕಾಣದೇ ಕಂಗೆಟ್ಟರು. ಯಾವ ದಾದರೂ ಭಾವಿಯನ್ನು ಬಿದ್ದನೋ, ಕಾಡುಮಿಕಗಳ ಪಾಲಾದನೋ ಏನೋ ಎಂದು ಎಲ್ಲರೂ ಚಿಂತಿಸುತ್ತಿದ್ದರು. ಸಾಯಂಕಾಲದ ವರೆಗೆ ಹುಡುಕಾಡಿದರೂ ಮಗುವಿನ ಪತ್ತೆಯಿಲ್ಲ.

ಸಂಜೆಯ ಮುಂದೆ ಕಾಡಿಗೆ ಅಟ್ಟಿದ ಭಟ್ಟರ ಎತ್ತು ಮರಳಿ ಮನೆಗೆ ಬರುತ್ತಿತ್ತು. ಅದರ ಹಿಂದೆ ಪುಟ್ಟ ಮರಿ ವಾಸುದೇವನು ಬಾಲವನ್ನು ಗಟ್ಟಿಯಾಗಿ ಹಿಡಿದುಕೊಂಡು ಜೋಕಾಲಿ ಆಡುತ್ತ ನಗುತ್ತ ಬರುತ್ತಿದ್ದನು. ಅದನ್ನು ಕಂಡು ಊರ ಜನರಿಗೆಲ್ಲರಿಗೂ ಅತ್ಯಂತ ಆಶ್ಚರ್ಯವಾಯಿತು. ಆ ಎತ್ತಿಗೂ ಈ ಬಾಲಕನಿಗೂ ಏನೋ ಜನ್ಮಾಂತರದ ಸಂಬಂಧವಿದೆ ಎಂದು ಎಲ್ಲರೂ ಮಾತನಾಡಹತ್ತಿದರು.

ಅಂದಿನ ವೃಷಭ ವಾಸುದೇವರ ವನ ಪ್ರಯಾಣಕ್ಕಿಂತ ಮೊದಲು ಬೆಳಗ್ಗೆ ಕಾಡಿಗೆ ಬಿಟ್ಟ ಆ ಎತ್ತು ತನ್ನ ದಿನ ನಿತ್ಯದ ನಿಯಮದಂತ ವಾಸುದೇವನ ಬಳಿಗೆ ಬಂದು ನಿಂತಿತ್ತು. ನಿತ್ಯದಂತೆ ವಾಸುದೇವನು ತನ್ನ ಕೈಯಿಂದಲೇ ಅದಕ್ಕೆ ತಂದೆ ತೋಯಿಸಿಟ್ಟ ಹುರುಳಿಯನ್ನು ತಿನ್ನಿಸಿದ್ದನು. ಅದು ತನ್ನ ಗೋಣನ್ನು ಬಾಲಕನ ಮುಂದೆ ಮಾಡಿತು. ಮಗು ಅದರ ಗೋಣು ತುರಿಸಿ ಹಣೆ ತಟ್ಟಿದ ಬಳಿಕ ಅದು ಅಡವಿಗೆ ನಡೆಯಿತು.

ಇಂದು ವಾಸುದೇವನು ಅದರ ಬಾಲ ಹಿಡಿದು ನೇತಾಡುತ್ತ ಅದರ ಜೊತೆಗೇ ವನಕ್ಕೆ ನಡೆದನು. ಅರಣ್ಯದಲ್ಲಿ ಹುಲ್ಲುಗಾವಲಿನಲ್ಲಿ ಎಲ್ಲ ಹಸು, ಎತ್ತು, ಕರುಗಳು ಹಸಿರನ್ನು ಮೇಯುತ್ತಲಿದ್ದಾಗ ಈ ಎತ್ತು ಮಾತ್ರ ಹುಲ್ಲನ್ನು ಕಚ್ಚದೇ ವಾಸುದೇವನ ಎದುರು ಕಣ್ಣೀರನ್ನು ಉದುರಿಸುತ್ತ ನಿಂತುಬಿಟ್ಟಿತು.

ವಾಸುದೇವನಿಗೆ ಆ ವೃಷಭದ ಮಾತು ಅರ್ಥವಾಯಿತು. ಆದಕ್ಕೆ ಆ ಮಗುವಾದ ವಾಯುದೇವರ ಅವತಾರೀ ಪುರುಷನು ಅದಕ್ಕೆ ತಿಳಿಯುವ ಭಾಷೆಯಲ್ಲಿ " ನಾನು ನಿನ್ನನ್ನು ಎಂದಿಗೂ ಬಿಟ್ಟುಕೊಡುವದಿಲ್ಲ. ನಿನಗೆ ಬೇಕಾದ ದಿವ್ಯ ಜ್ಞಾನವನ್ನೂ ಆದಷ್ಟು ಬೇಗ ಉಪದೇಶ ಮಾಡುತ್ತೇನೆ. " ಎಂದು ಹೇಳಿ ಅದರ ಮೈಯನ್ನು ಚಪ್ಪರಿಸಿದನು. ಅದರಿಂದ ಉತ್ಸಾಹಗೊಂಡು ಆ ವೃಷಭವು ಆನಂದದಿಂದ ಹುಲ್ಲು ತಿಂದು ನೀರು ಕುಡಿದು ಮರಳಿ ಮನೆಗೆ ಬರುವಾಗ ವಾಸುದೇವನನ್ನು ತನ್ನ ಬಾಲದ ಆಂದೋಲಿಕೆಯಲ್ಲಿ ತೂಗುತ್ತ ಮನೆಗೆ ತಂದಿಳಿಸಿತು. ಅದನ್ನು ನೋಡಿ ಭಟ್ಟರಿಗೆ ಆದ ಆನಂದ ಅಷ್ಟಿಷ್ಟಲ್ಲ. ಅಂದಿನಿಂದ ಭಟ್ಟ ಕುಟುಂಬದವರಿಗೆ ಆ ಎತ್ತಿನ ಬಗ್ಗೆ ಅತ್ಯಂತ ಆದರವು ಉತ್ಪನ್ನವಾಯಿತು. ಆದರೆ ಭಟ್ಟರು ಎತ್ತನ್ನು ಸಾಲಮಾಡಿ ತಂದಿದ್ದರು.

ಮುಂದೆ ಬಡತನದಲ್ಲಿದ್ದ ಮಧ್ಯಗೇಹ ಭಟ್ಟರಿಗೆ ಆ ಎತ್ತಿನ ಬೆಲೆಯನ್ನು ಅದರ ಸಾಹುಕಾರನಿಗೆ ಮುಟ್ಟಿಸುವದಕ್ಕೆ ಆಗಲಿಲ್ಲ. ಆಗ ಸಾಹುಕಾರನು ಭಟ್ಟರ ಮನೆಗೆ ಬಂದು " ಧರಣೆ " ಕುಳಿತನು. " ನನ್ನ ಹಣವನ್ನಾದರೂ ಕೊಡಿ ಇಲ್ಲವೇ ಎತ್ತನ್ನಾದರೂ ವಾಪಸು ಕೊಡಿರಿ " ಎಂದು ಹಟ ಹಿಡಿದನು.

ಭಟ್ಟರಿಗೆ ಎರಡೂ ಇಚ್ಛೆಯಿಲ್ಲ. ದುಡ್ಡಿಲ್ಲದ್ದರಿಂದ ಸಾಲದ ಹಣವನ್ನು ಕೊಡಲಾರರು. ತಮ್ಮ ಪ್ರೀತಿಯ ಎತ್ತನ್ನೂ ಮರಳಿ ಕೊಡಲಾರರು. ತಮ್ಮ ಮಗ ವಾಸುದೇವನಂತೂ ಆ ಎತ್ತಿನ ಮೇಲೆ ಪ್ರಾಣಕ್ಕಿಂತ ಹೆಚ್ಚು ಪ್ರೀತಿ ಮಾಡುತ್ತಿದ್ದ. ಏನು ಮಾಡಬೇಕೋ ತಿಳಿಯದೇ ಭಟ್ಟರು ದಿಙ್ಮೂಢರಾಗಿ ತಲೆ ಹಿಡಿದುಕೊಂಡು ಕುಳಿತಿದ್ದರು. ಅಷ್ಟರಲ್ಲಿ ಮನೆಯ ಹೊರಗಿನ ಕೊಟ್ಟಿಗೆಯಲ್ಲಿ ಎತ್ತಿನೊಡನೆಯೇ ಆಟವಾಡುತ್ತಲಿದ್ದ ವಾಸುದೇವನಿಗೆ ಹಸಿವೆಯಾಗಿ ಮನೆಯೊಳಗೆ ಓಡಿ ಬಂದು ತಾಯಿಗೆ ಊಟಕ್ಕೆ ಹಾಕಲು ಹೇಳಿದ. ಅವಳು ನಿನ್ನ ತಂದೆಯನ್ನು ಕರೆ ಎಂದು ಹೇಳಿದಳು.

ವಾಸುದೇವ ಬಂದು ಭಟ್ಟರನ್ನು ಊಟಕ್ಕೆ ಬರಲು ಬಿನ್ನವಿಸಿದ. ಆದಕ್ಕೆ ಭಟ್ಟರು ಸಾಹುಕಾರನಿಗೆ ಎತ್ತಿನ ಸಾಲದ ಹಣ ಕೊಡುವ ವರೆಗೆ ನಾನು ಊಟಕ್ಕೆ ಬರುವಂತಿಲ್ಲ, ಮಗು, ನೀನು ಊಟ ಮಾಡು, ನಾನೀಗ ದುಡ್ಡು ಕೊಡದಿದ್ದರೆ ಆ ಸಾಹುಕಾರನು ಈ ಎತ್ತನ್ನು ತಿರುಗಿ ತನ್ನ ಮನೆಗೆ ತೆಗೆದುಕೊಂಡು ಹೋಗುತ್ತಾನೆ.

ಆದ್ದರಿಂದ ನಾನು ಏನಾದರೂ ಮಾಡಿ ಅದರ ಸಾಲ ತೀರಿಸಲೇ ಬೇಕಾಗಿದೆ " ಎಂದು ಹೇಳಿದರು.

ಬಾಲಕ ವಾಸುದೇವನಿಗೆ ಎತ್ತನ್ನು ಸಾಹುಕಾರನ ಮನೆಗೆ ವಾಪಸು ಕೊಡುವ ವಿಚಾರವೇ ಅಸಹ್ಯ ಎನಿಸಿತು. ಏನು ಬೇಕಾದರೂ ಕೊಟ್ಟು ಆ ಎತ್ತನ್ನು ಉಳಿಸಿ ಕೊಳ್ಳಬೇಕೆನಿಸಿತು ಆ ಪುಟ್ಟ ಮನಸ್ಸಿಗೆ. ಆ ಎತ್ತಿಗಾಗಿ ಆ ಬಾಲಕ ತನ್ನ ಸರ್ವಸ್ವ ವನ್ನು ಕೊಡಲೂ ಸಿದ್ಧನಿದ್ದ.

ಕೂಡಲೇ ಆ ಮಗು ಓಡುತ್ತ ಆ ಸಾಹುಕಾರನ ಬಳಿಗೆ ಬಂದು ಅವನ ಉಡಿ ಯಲ್ಲಿ ಹಿಡಿ ಹುಣಸೇ ಬೀಜ ಹಾಕಿತು. ಅದನ್ನು ನೋಡಿದ ಸಾಹುಕಾರನಿಗೆ ಆ ಮಗು ಸಾಮಾನ್ಯ ಮಗುವಲ್ಲ ಎನಿಸಿತು. ಆ ಹುಣಸೆ ಬೀಜದ ನೆವದಿಂದ ಆ ಸಾಹುಕಾರನಿಗೆ ವಾಸುದೇವನು ಮೋಕ್ಷವನ್ನೇ ಪ್ರದಾನ ಮಾಡಿದ. ಸಾಹುಕಾರ ಉದ್ಧಾರವಾದ. ಅವ ತಾರೀ ಪುರುಷನಾದ ವಾಸುದೇವನು ಮನುಷ್ಯ ದುರ್ಲಭವಾದ ದಿವ್ಯ ಪುರುಷಾರ್ಥ ವನ್ನು ಕೊಟ್ಟು ಆ ಎತ್ತನ್ನು ಖರೀದಿಸಬೇಕಾದರೆ ಆ ಎತ್ತಿನ ಯೋಗ್ಯತೆ ಎಂಥದಿರ ಬೇಡ! ಆ ಸಾಹುಕಾರನಿಗೇ ಅತ್ಯಂತ ಆಶ್ಚರ್ಯವಾಯಿತು.

ಆ ಪುಟ್ಟ ಮಗು ವಾಸುದೇವನು ಸಾಕ್ಷಾತ್ ವಾಯು ದೇವರ ಮೂರನೆಯ ಅವ ತಾರವಾದ ಮಧ್ವಾಚಾರ್ಯರು. ಆ ಎತ್ತು ಸಾಕ್ಷಾದ್ ಇಂದ್ರ ದೇವರು. ವಾಯುದೇ ವರು ಭೀಮಸೇನನಾಗಿ ಜನಿಸಿದಾಗ ಇಂದ್ರ ದೇವರು ಅರ್ಜುನನಾಗಿ ಜನಿಸಿ ಶ್ರೀ ಕೃಷ್ಣ ನಿಂದ ಗೀತೋಪದೇಶವನ್ನು ಪಡೆದಿದ್ದರು. ಕೃಷ್ಣ ಗೀತೆ ಹೇಳುವಾಗ ಅರ್ಜುನನ ರಥದ ಮೇಲೆ ಹನುಮಂತ, ಬಂಡಿಯ ಬಳಿಗೆ ಭೀಮಸೇನ ನಿಂತಕೊಂಡಿದ್ದರು. ರಣಾಂಗ ಣದ ಗಡಿಬಿಡಿಯಲ್ಲಿ ಭಗವಂತ ಹೇಳಿದ ವಿಷಯವನ್ನು ಅವಸರದಲ್ಲಿ ಚನ್ನಾಗಿ ಕೇಳ ಲಿಕ್ಕಾಗದ್ದರಿಂದ ಅವಕಾಶವಾದಾಗ ಮತ್ತೊಮ್ಮೆ ಅಣ್ಣ ಭೀಮಸೇನನಿಂದ ಚನ್ನಾಗಿ ಕೇಳಿ ತಿಳಿದುಕೊಂಡು ಅರ್ಜುನನಿಗೆ ಮನನ ಮಾಡಬೇಕಾಗಿದ್ದಿತು. ಮಾನವನಾಗಿ ಜನಿ ಸಿದಾಗ ನೂರೆಂಟು ಉಪಾಧಿ, ಕಾರ್ಯ ಕಲಾಪಗಳ ಜಂಜಾಟ, ಆದುದರಿಂದ ಎತ್ತಾಗಿ ಜನಿಸಿ ಪ್ರಶಾಂತ ಮನಸ್ಸಿನಿಂದ ಭಗವಂತನು ತನಗೆ ಉಪದೇಶಿಸಿದ ಆ ಅಮೂಲ್ಯ ತತ್ತ್ವ ಜ್ಞಾನವನ್ನು ಸರ್ವಜ್ಞನಾದ ಅಣ್ಣ ಭೀಮನಿಂದ ಮರಳಿ ಕೇಳಿ ಚಿಂತನೆ ಹೇಳಿಸಿ ಕೊಂಡು ಆ ದಿವ್ಯ ಜ್ಞಾನವನ್ನು ಬಲಪಡಿಸಿಕೊಳ್ಳಬೇಕೆಂದು ಮತ್ತು ಆ ಸುಜ್ಞಾನ ವನ್ನು ಯೋಗ್ಯ ಜನರೆಲ್ಲರಿಗೂ ತಿಳಿಪಡಿಸಬೇಕೆಂದೂ ಅರ್ಜುನ ರೂಪಿಯಾದ ಇಂದ್ರ ದೇವರಿಗೆ ಬಲವತ್ತರವಾದ ಬಯಕೆಯಾಯಿತು.

ಹಿಂದೊಮ್ಮೆ ಇಂದ್ರ ದೇವರು ದೇವಾಸುರ ಯುದ್ಧದಲ್ಲಿ ಎತ್ತಾಗಿ ರಾಮಚಂದ್ರನ ಪೂರ್ವಜನಾದ ಕಕುತ್ಸ್ಥ ಮಹಾರಾಜನಿಗೆ ವಾಹನವಾಗಿದ್ದರು. ಈಗಲೂ ಎತ್ತಾಗಿಯೇ

ವಾಯು ದೇವರ ಸೇವೆ ಮಾಡಬೇಕೆಂದು ಇಚ್ಛೆಯಾಗಿ ವೃಷಭವಾಗಿ ಹುಟ್ಟಿ ಮಧ್ಯ ಗೇಹರ ಮನೆಗೆ ಬಂದಿತು. ಅದರ ಇಷ್ಟರೂಪವನ್ನು ತಿಳಿದ ಗುರು ಮಧ್ವರು ಅದರಮೇಲೆ ಅನುಗ್ರಹಮಾಡಿ ಅದರ ಬಾಲ ಪಿಡಿದು ಕಾಡಿಗೆ ಹೋಗಿ ಅದರ ಜ್ಞಾನ ಪಿಪಾಸೆಯನ್ನು ಕೇಳಿ ತಿಳಿದು ಅದಕ್ಕೆ ಆಶ್ವಾಸನೆಯನ್ನಿತ್ತರು. ಅದಕ್ಕಾಗಿಯೇ ಮೋಕ್ಷರೂಪವಾದ ಮಹಾ ಬೆಲೆಯನ್ನು ತೆತ್ತು ಆ ಎತ್ತನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಂಡರು.

" ಬೀಜಚ್ಛಲೇನ ಪುರುಷಾರ್ಥಮಹೋ ವಿಶಿಷ್ಟಮ್ "
" ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತಯೋಷಣಃ ॥"

ಯೋಷಣಃ = ವೇದಾಭಿಮಾನಿನಿಯರಾದ ಶ್ರೀ, ಭೂ, ದುರ್ಗಾದಿ ದೇವತೆಯರು. ಅಸ್ಯ = ಈ ವಾಯುದೇವರ ದಶಪ್ರಮತಿಂ = ಪೂರ್ಣ ಪ್ರಜ್ಞರೆಂಬ, ತೃತೀಯಂವಪು= ಮೂರನೇ ರೂಪವನ್ನು ವೃಷಭಸ್ಯದೋಹಸೇ= ಎತ್ತಿನ ರೂಪದಿಂದಿರುವ ಇಂದ್ರ ದೇವ ರಿಗೆ ಜ್ಞಾನದಾನ ಮಾಡಲಿಕ್ಕಾಗಿ ಅಜನಯಂತ = ಹುಟ್ಟಿಸಿದರು. ಎಂಬ ಆಚಾರ್ಯರ ಅವತಾರವನ್ನು ಸ್ಪಷ್ಟವಾಗಿ ಸಾರುವ ಬಳಿತ್ಥಾ ಸೂಕ್ತದಲ್ಲಿ ವೃಷಭರೂಪಿಯಾದ ಇಂದ್ರ ದೇವರ ಸುಸ್ಪಷ್ಟವಾದ ಉಲ್ಲೇಖವು ಇರುತ್ತದೆ.

ಮುಂದೆ ವಾಸುದೇವನು ಅಚ್ಯುತ ಪ್ರೇಕ್ಷರಿಂದ ಆಶ್ರಮವನ್ನು ಸ್ವೀಕರಿಸಿ ಆನಂದ ತೀರ್ಥನಾಗಿ ದಿಗ್ವಿಜಯಕ್ಕಾಗಿ ದೇಶ ಸಂಚಾರಕ್ಕೆ ಹೊರಟಾಗ ಈ ಎತ್ತು ಅವರ ಜೊತೆಗೇ ಇರುತ್ತಿತ್ತು. ಆಚಾರ್ಯರು ಸಂಚಾರದಲ್ಲಿ ತಮ್ಮ ಗ್ರಂಥಗಳನ್ನೂ ಹಾಗೂ ಮೂಲ ರಾಮ ವೇದ ವ್ಯಾಸಾದಿ ದೇವರ ಪೆಟ್ಟಿಗೆಗಳನ್ನೂ ಆ ಎತ್ತಿನ ಮೇಲಿಯೇ ಹಾಕಿ ತಾವಿದ್ದ ತಾಣಕ್ಕೆ ಕೊಂಡೊಯ್ಯುತ್ತಿದ್ದರು.

ಹೀಗೆ ಆಚಾರ್ಯರ ಜ್ಞಾನವಾಹಕವೂ ದೇವ ಮಂಜೂಷಾ ವಾಹಕವೂ ಆದ ಆ ವೃಷಭ ಬರೀ ಗ್ರಂಥ ಭಾರ ಧಾರಕವಾಗದೇ ನಿತ್ಯವೂ ಪಾಠದ ವೇಳೆಯಲ್ಲಿ ಗುರು ಗಳ ಎದುರು ಬಂದು ನಿಂತು ಮಧ್ವಾಚಾರ್ಯರ ಬಾಯಿಂದ ಬಂದ ಪ್ರತಿ ಅಕ್ಷರವನ್ನು ತದೇಕ ಚಿತ್ತದಿಂದ ಆಲಿಸುತ್ತಿತ್ತು. ಗುರು ಮಧ್ವರು ಬ್ರಹ್ಮಸೂತ್ರ ಭಗವದ್ಗೀತಾ ಉಪ ನಿಷದಾದಿಗಳಲ್ಲಿಯ ಜಟಿಲ ಕುಟಿಲವಾದ ವಿಷಯಗಳನ್ನು ವಿಶದ ವಿವರವಾಗಿ ಹೃದ ಯಂಗಮವಾಗಿ ತಿಳಿಸಿ ಹೇಳಿದಾಗ ಅದನ್ನೆಲ್ಲ ಕಿವಿ ನಿಮಿರಿಸಿ ಕೇಳುತ್ತ ನಿಂತ ಆ ವೃಷ ಭಕ್ಕೆ ಪರಮಾನಂದವಾಗಿ ಅದೇ ಮೈ ಅಲ್ಲಾಡಿಸಿ ಗೋಣು ಹಾಕುತ್ತಿತ್ತು.

ಆಚಾರ್ಯರಿಗೆ ಆ ಕಾಲದಲ್ಲಿ ಶಿಷ್ಯರು ಬಹಳ. ಅವರಲ್ಲಿ ಕೆಲವರು ಪಾಠ ನಡೆ ದಾಗ ಕಠಿಣ ಭಾಗ ಬಂದಲ್ಲಿ ತೂಕಡಿಸುವದು, ಆಚೀಚೆ ನೋಡುವದು; ಆಕಳಿಸು ವದು ನಡೆಯುತ್ತಿತ್ತು. ಆದರೆ ಆಚಾರ್ಯರ ಪಾಠವನ್ನು ಒಂದಕ್ಷರವೂ ಬಿಡದಂತೆ

ವಂತೆ ಲಕ್ಷವಿಟ್ಟು ತನ್ಮಯತೆಯಿಂದ ಕೇಳಿವ ಸಚ್ಛಿಷ್ಯ ಎಂದರೆ ಈ ಎತ್ತು. ಆದುದರಿಂದ ಆಚಾರ್ಯರು ಆ ಎತ್ತಿನ ಕಡೆಗೇ ಮುಖ ಮಾಡಿಯೇ ಪಾಠ ಹೇಳುತ್ತಿದ್ದರು.

ಶಿಷ್ಯರಲ್ಲಿ ಒಬ್ಬಿಬ್ಬರು ಬಾರದಿದ್ದರೂ ಪಾಠವು ಮುಂದುವರಿಯುತ್ತಿತ್ತು. ಆದರೆ ಆ ಎತ್ತು ಇಲ್ಲವಿದ್ದರೆ ಮಾತ್ರ ಆಚಾರ್ಯರು ಪಾಠವನ್ನೇ ಪ್ರಾರಂಭಿಸುತ್ತಿದ್ದಿಲ್ಲ. ಆ ಎತ್ತು ಬಂದು ತಮ್ಮ ಎದುರು ಕೌಲೆತ್ತಿನಂತೆ ತಲೆ ಹಾಕುತ್ತ ನಿಂತುಕೊಂಡಾಗಲೇ ಆಚಾರ್ಯರಿಗೆ ಪಾಠ ಹೇಳಲಿಕ್ಕೆ ಸ್ಫೂರ್ತಿ ಬರುತ್ತಿತ್ತು.

ಒಂದು ದಿನ ಕೆಲವು ಶಿಷ್ಯರು ಶ್ರೀಮದಾನಂದ ತೀರ್ಥರ ಹತ್ತಿರ ಬಂದು— "ಸ್ವಾಮಿ, ತಮ್ಮ ಈ ಗ್ರಂಥಗಳು ಅಸರ್ವಜ್ಞ ದುಜ್ಞೇಯವಾಗಿವೆ. ನಾವೇನೋ ತಾವು ಅನುಗ್ರಹಿಸಿ ಪಾಠ ಹೇಳಿದ್ದರಿಂದ ಯಥಾ ಕಥಂಚಿತ್ ಇವುಗಳ ಭಾವವನ್ನು ತಿಳಿದುಕೊಂಡಿದ್ದೇವೆ. ಆದರೆ ಮುಂದೆ ಇವು ಜನರಿಗೆ ಟೀಕೆ ಟಿಪ್ಪಣೆ ಇಲ್ಲದೆ ಅರ್ಥ ವಾಗಲಾರವು. ಆದುದರಿಂದ ಇವುಗಳಿಗೆ ತಮ್ಮ ಶಿಷ್ಯರಲ್ಲಿ ಟೀಕೆಯನ್ನು ಬರೆಯುವ ವರಾರು ? " ಎಂದು ಪ್ರಶ್ನಿಮಾಡಿದರು.

ಆಗ ಮಧ್ವಮುನಿಗಳು ಅಲ್ಲಿ ಕುಳಿತ ತಮ್ಮ ಎಲ್ಲ ಶಿಷ್ಯರ ಮುಖಗಳತ್ತ ಒಮ್ಮೆ ನೋಡಿ ನಿರಾಶರಾಗಿ ಕೊನೆಗೆ ಎತ್ತಿನತ್ತ ದೃಷ್ಟಿಕ್ಷೇಪ ಮಾಡಿದರು. ಆವರ ಮುಖದಲ್ಲಿ ಸಂತಸದ ಗೆರೆ ಮೂಡಿತು. ತುಟಿಯ ಮೇಲೆ ನಗೆಯ ಮುಗುಳು ಆಡಿತು. ಕೂಡಲೇ ಅವರು ಉತ್ಸಾಹದಿಂದ ಕಣ್ಣುಗಳನ್ನು ಅರಳಿಸಿ ಆ ತಮ್ಮ ನೆಚ್ಚಿನ ನಂದಿಯೆಡೆಗೆ ಬೆರಳು ತೋರಿಸುತ್ತ "ವ್ಯಾಖ್ಯಾಸ್ಯತ್ಯೇಷ ಗೋರಾಟ್" ನಮ್ಮ ಎಲ್ಲ ಗ್ರಂಥಗಳಿಗೆ ಈ ಎತ್ತೇ ಟೀಕೆ ಬರೆಯಲು ಸಮರ್ಥವಿದೆ, ಬರೆಯುತ್ತದೆ. ಎಂದು ಹೇಳಿದರು.

ಗುರುಗಳ ಈ ಮಾತು ಶಿಷ್ಯರೆಲ್ಲರಿಗೂ ನುಂಗಲಾರದ ತುತ್ತಾಯಿತು. ಅವರ ಮುಖ ಪೆಚ್ಚಾದವು. ಕೆಲವರಿಗೆ ಆಚಾರ್ಯರ ನುಡಿ ಯಥಾರ್ಥವೆನಿಸಿ ಆದರಿಂದ ನಾಚಿಕೆಯಾಗಿ ತಾವಿನ್ನು ಲಕ್ಷವಿಟ್ಟು ಎತ್ತಿನಂತೆ ಏಕಾಗ್ರ ಮನಸ್ಸಿನಿಂದ ಗುರುಗಳ ಪಾಠವನ್ನು ಓದಬೇಕೆಂದು ತಿಳುವಳಿಕೆ ಬಂದರೆ ಮತ್ತೆ ಕೆಲವರಿಗೆ ಆ ಎತ್ತಿನ ಮೇಲೆ ಅಸೂಯೆಯು ಉಂಟಾಯಿತು.

ತಮ್ಮಂಥ ನ್ಯಾಯ ವೇದಾಂತ ವಿದ್ವಾಂಸರಾದ ಪಂಡಿತ ಶಿಷ್ಯರು ಬೇಕಾದಷ್ಟಿ ದ್ದರೂ ತಮ್ಮನ್ನೆಲ್ಲ ಬಿಟ್ಟು ಗುರುಗಳು ಅವರ ಕಡೆಗೆ ಮುಖಮಾಡಿ ಪಾಠ ಹೇಳು ವದೂ, ಮತ್ತು ಎಲ್ಲರ ಎದುರು ಅದೇ ತಮ್ಮ ಗ್ರಂಥಗಳಿಗೆ ಟೀಕೆ ಬರೆಯುವದೆಂದು ಭವಿಷ್ಯ ನುಡಿಯುವದೂ ಅವರಿಗೆ ಅಪಮಾನವೆನಿಸಿತು. ಅವರಾರಿಗೂ ಆಚಾರ್ಯ ರಿಗೆ ಏನೂ ಮಾಡಲಿಕ್ಕೆ ಬರುವಂತಿರಲಿಲ್ಲ. ಅವರು ಆ ಎತ್ತಿನ ಮೇಲೆಯೇ ತಮ್ಮ ಸೇಡನ್ನು ತೀರಿಸಿಕೊಳ್ಳಬೇಕೆಂದು ನಿರ್ಧರಿಸಿದರು.

ಗುರುಗಳು ಮನೆಯಲ್ಲಿಲ್ಲದಾಗ ಭಯಂಕರವಾದ ಉಗ್ರ ವಿಷವನ್ನು ತಂದು ಅವರ ಆಹಾರದಲ್ಲಿ ಬೆರಸಿ ಕೊಟ್ಟು ಬಿಟ್ಟರು. ಅದನ್ನು ತಿಂದು ಆ ಮೂಕ ಪ್ರಾಣಿಯು ಸಂಕಟಪಡಹತ್ತಿತು. ತಿಂದ ತಕ್ಷಣದಲ್ಲಿಯೇ ವಿಷವು ಪರಿಣಾಮವನ್ನು ಉಂಟುಮಾಡಿದ ಆ ಉಲ್ಬಣ ವಿಷದಿಂದಾಗಿ ಅದರ ಮೈಯೆಲ್ಲ ಉರಿಯತೊಡಗಿತು. ಆದರಿಂದ ಗುರು ಮಧ್ವರ ಮೆಚ್ಚಿನ ವೃಷಭವು ಉರಿ-ಸಂಕಟ ತಾಳಲಾರದೇ ಆಚಾರ್ಯರಿದ್ದಲ್ಲಿ ಬಂದು ಅವರ ಅಡಿಯ ಬಳಿಯು ಹುಡಿಯಲ್ಲಿ ಹೊರಳಾಡಹತ್ತಿತು. ಅದರ ದೀನ ದೃಷ್ಟಿಯ ಕಾತರತೆ ಮತ್ತು ಯಾತನೆಗಳನ್ನು ಕಂಡು ಮಧ್ವಮುನಿಗಳ ಕರಳು ಕರಗಿತು. ಕೂಡಲೇ ಅವರು ತಾವೇ ರಚಿಸಿದ ದ್ವಾದಶ ಸ್ತೋತ್ರವನ್ನು ಪಠಿಸುತ್ತ ಅದರ ಮೇಲೆ ಕೈಯಾಡಿಸ ತೊಡಗಿದರು. ಆಚಾರ್ಯರು ಕರುಣಾಪೂರ್ಣ ದೃಷ್ಟಿಯಿಂದ ಅನುಗ್ರಹ ಪೂರ್ವಕವಾಗಿ ನೋಡಿ ಶ್ರೀ ಕೃಷ್ಣನ ಗೀತೆಯನ್ನು ಉಚ್ಚರಿಸುತ್ತ ಆ ವೃಷಭೇಂದ್ರನ ಮೈತುಂಬ ಕೈಯಾಡಿಸಿದಾಗ ಅದಕ್ಕೆ ಅಮೃತಲೇಪನ ಮಾಡಿದಂತಾಯಿತು. ಅದರ ಉರಿ, ಸಂಕಟ, ನೋವು, ನರಳಿಕೆಗಳೆಲ್ಲವೂ ತಕ್ಷಣ ಕಡಿಮೆಯಾಗಿ ಚಂದನವನ್ನು ಮೈತುಂಬ ಸವರಿದಂತಾಯಿತು. ಕೂಡಲೇ ಅದು ಉತ್ಸಾಹತುಂಬಿ ಮೈ ಕೊಡವಿ ಉಲ್ಲಾಸದಿಂದ ಬಾಲ ಜಾಡಿಸುತ್ತ ಎದ್ದು ನಿಂತಿತು. ಅದರ ಕಣ್ಣಿನಿಂದ ಆನಂದ ಬಾಷ್ಪಗಳು ಉದುರುತ್ತಿದ್ದವು. ಆಚಾರ್ಯರು ದ್ವಾದಶ ಸ್ತೋತ್ರದ ಕೊನೆಯ ಅಧ್ಯಾಯವನ್ನು—

"ಆನಂದ ಚಂದ್ರಿಕಾಸ್ಯಂದಕ ವಂದೇ ಆನಂದತೀರ್ಥ ಪರಾನಂದ ವರದ"

ಎಂದು ಉಚ್ಚರಿಸಿದಾಗ ಅದರ ಮೇಲೆ ಬೆಳದಿಂಗಳಿನ ತಂಪನ್ನೆಲ್ಲ ಚಿಮುಕಿಸಿ ದಂತಾಗಿ ಅದು ಕೃತಜ್ಞತೆಯಿಂದ ಆಚಾರ್ಯರನ್ನು ನೋಡುತ್ತ ಅವರ ಪಾದಕ್ಕೆ ಹಣೆ ಹಚ್ಚಿತು. ಅದನ್ನು ಕಂಡು ಶಿಷ್ಯರಿಗೆಲ್ಲ ಕಣ್ಣು ಹಸಿಗೂಡಿತು. ಅದಕ್ಕೆ ವಿಷ ಹಾಕಿದ ಶಿಷ್ಯರು ಪಶ್ಚಾತ್ತಾಪ ವ್ಯಕ್ತಪಡಿಸಿ ಕ್ಷಮೆ ಕೇಳಿ ಗುರುಗಳ ಪಾದಕ್ಕೆ ಬಿದ್ದರು. ಗುರುಗಳು ಎಲ್ಲರನ್ನು ಹರಸಿ ಈ ಎತ್ತಿನಂತೆ ಪಾಠ ಶ್ರವಣ ಮಾಡ ಬೇಕೆಂದು ಹೇಳಿದರು. ಅಂದಿನಿಂದ ವಿಷಬಾಧೆಯ ಪರಿಹಾರಕ್ಕಾಗಿ ನೈವೇದ್ಯ ಕಾಲ ದಲ್ಲಿ ದ್ವಾದಶ ಸ್ತೋತ್ರವನ್ನು ಪಠಿಸುವ ಸಂಪ್ರದಾಯವು ಮಾಧ್ವರಲ್ಲಿ ರೂಢ ವಾಯಿತು.

ಹೀಗೆ ಆಚಾರ್ಯರು ಇರುವವರೆಗೆ ಎತ್ತಾಗಿ ಅವರ ಸೇವೆ ಮಾಡಿ ಅವರ ಮನೆಯ ಊಳಿಗಕ್ಕೆ ನಿಂತ ಅರ್ಜುನನೇ ಮುಂದೆ ಜಯತೀರ್ಥರಾಗಿ ಅವತರಿಸಿ ಅವರ ಗ್ರಂಥಗಳಿಗೆಲ್ಲ ಟೀಕೆ ಬರೆದು ಟೀಕಾಚಾರ್ಯರೆಂದು ಹೆಸರಾದರು.



## ಇಂದ್ರದೇವರ ಅವತಾರತ್ರಯ

## ಅವತಾರ ( ೩ )

# ಶ್ರೀ ಟೀಕಾಕೃತ್ಪಾದರು



ಪ್ರಥಮಸ್ತ್ವರ್ಜುನೋ ನಾಮ
ದ್ವಿತೀಯೋ ವೃಷಭರ್ಷಭಃ
ಟೀಕಾಚಾರ್ಯಸ್ತೃತೀಯಸ್ತು
ಹನುಮತ್ತ್ವಾರ್ಯ ಸಾಧಕಃ

ವೈಶಾಖದ ಒಂದು ಮಧ್ಯಾಹ್ನ. ಬೇಸಿಗೆಯ ಬಿರುಸಿನ ಕುಳ್ಳು ಹಚ್ಚಿದಂತೆ ಉರಿ ಬಿಸಿಲು. ಕಿಚ್ಚಿನ ಹಚ್ಚಡ ಹೊದಿಸಿದಂತೆ ಬಿಳಿ ಬಾನುಗಳೆಲ್ಲ ಬೇಯುತ್ತಲಿವೆ. ಆಗಾಗ ಬೀಸುವ ಗಾಳಿಯು ಕಾದ ಎರಕದ ಮೇಲಿನ ಉಗಿಯಂತೆ ಬಿಸಿಯಾಗಿಯೇ ಬೀಸುತ್ತಲಿದೆ.

ಇಂಥ ಕಡು ಬೇಸಿಗೆಯ ನಡುಹಗಲಿನಲ್ಲಿ ಕುದುರೆ ಸವಾರರ ಪಡೆಯೊಂದು ಸಹ್ಯಾದ್ರಿಯ ಕಾಡಿನಲ್ಲಿ ನಡೆದಿದೆ. ಅವರ ಮೈತುಂಬ ದಣಿವು. ಹಣೆ ತುಂಬ ಬೆವರು, ಏನೋ ಆಯಾಸ, ಬೇಟೆಯಾಡಿದ್ದರೋ, ಯುದ್ಧ ಮಾಡಿದ್ದರೋ ಯಾರಿಗೆ ಗೊತ್ತು !

ಅವರು ಏರಿದ ಕುದುರೆಗಳು ಓಡಿ ಓಡಿ ದಣಿದಿದ್ದವು. ಆ ಸ್ವೈರಸ್ವಾರರು ಕೂಡ ಈ ಬಿಸಿಲು ಪಯಣದಿಂದ ಬಸವಳಿದು ಬೆಂಡಾಗಿದ್ದರು. ಬಾಯಾರಿಕೆ ಅವರ ಗಂಟಲ ವನ್ನೇ ಕಿತ್ತುತ್ತಲಿತ್ತು. ಅವರ ಕಣ್ಣುಗಳು ನೀರಿನ ಸೆಲೆಯಯನ್ನು ಅರಸುತ್ತಿದ್ದವು.

ಕೊನೆಗೆ ಆ ಕಾಂತಾರದ ಅಂತರಂಗದಲ್ಲಿ ಶಾಂತವಾಗಿ ಹರಿಯುವ ಚಂದ್ರಭಾಗಾ ನದಿಯು ದೂರದಿಂದ ಗೋಚರಿಸಿತು. ಕುದುರೆಗಳು ಕೊಸರಿಕೊಂಡು ಅತ್ತ ಓಟ ಕಿತ್ತಿದವು.

ಮುಗಿಲಿನ ಹಾಲು ಹೊಳೆಯೇ ದಾರಿ ತಪ್ಪಿ ಇಲ್ಲಿಯ ಸಾಲು ಬನಗಳಲ್ಲಿ ಹರಿ ದಂತಿತ್ತು. ಸ್ಫಟಿಕದ ಬೆಟ್ಟವೇ ಕರಗಿ ಪ್ರವಹಿಸಿದಂತಿರುವ ಆ ತಿಳಿ ನೀರಿನ ತರಂಗಿಣಿ ಯನ್ನು ಕಂಡು ಆ ತರುಣರೆಲ್ಲರೂ ಅಲ್ಲಿಗೆ ಧಾವಿಸಿದರು. ನದಿಯ ದಂಡೆಗೆ ಬಂದ ಕೂಡಲೇ ಎಲ್ಲ ಸ್ವಾರರೂ ತಮ್ಮ ಕುದುರೆ ಬಿಟ್ಟು ಕೆಳಗೆ ಇಳಿದು ಮನದಣಿ ನೀರು ಕುಡಿದರು. ಅಮೃತದ ಅಂಜಲಿಗಳನ್ನು ಹೀರಿ ತಣಿದರು.

ಆದರೆ ಈ ತರುಣ ತಂಡದ ನಾಯಕನು ಮಾತ್ರ ನದಿ ಬಂದರೂ ಕೆಳಗೆ ಇಳಿಯ ಲಿಲ್ಲ. ಹಾಗೇ ತನ್ನ ಕುದುರೆಯನ್ನು ನೀರಿನ ನಡುವೆ ನೂಕಬೇಕೆಂದು ಚಾಟಿಯಿಂದ ಒಂದು ಏಟನ್ನು ಕುದುರೆಯ ಬೆನ್ನಿಗೆ ಬಾರಿಸಿದ. ಆ ಚುರುಕು ಪ್ರಾಣಿಯು ತನ್ನ ಸವಾ ರನ ಆಶಯವನ್ನು ತಿಳಿದು ನೀರಿನಲ್ಲಿಯೇ ನುಗ್ಗಿತು. ಪ್ರವಾಹದ ಮಧ್ಯದಲ್ಲಿ ಬಂದಿತು. ಅದರ ಮೈತುಂಬ ನೀರಾದರೂ ಗೋಣನ್ನು ಎತ್ತಿಕೊಂಡು ಅದು ನದಿಯ ನಡು ನೀರಿಗೆ ಬಂದು ನಿಂತಿತು.

ತರುಣ ಸವಾರ ಮುಖವನ್ನು ಬಗ್ಗಿಸಿದ, ಕಳಪಿನಿಂದ ತುಳುಕುವ ನೀರು ಅವನ ಮುಖಕ್ಕೆ ತಗಲಿತು. ತೃಪ್ತಿಯಾಗುವವರೆಗೆ ಹೀರಿದನು. ಕಾದ ಕರಳುಗಳೆಲ್ಲ ತಣಿವೇರುವಂತೆ ಅಮೃತಪಾನ ಮಾಡಿದನು. ಬಾಯಾರಿಕೆ ಹಿಂಗಿದರೂ ಹೊಟ್ಟೆ ತುಂಬಿದ್ದರೂ ಆದರ ಸವಿಯುಂಡ ಆ ಸಾದಿಯು ಕಲ್ಲು–ಸಕ್ಕರೆಯಂಥ ನೀರನ್ನು ಹೀರುತ್ತಲೇ ಇದ್ದ.

"ಕಿಂ ಪಶುಃ ಪೂರ್ವ ದೇಹೆ ?"

ಎಲ್ಲಿಂದಲೋ ಒಂದು ಗಂಭೀರ ಧ್ವನಿಯು ತೂರಿ ಬಂತು. ನೀರು ಹೀರು ತ್ತಿದ್ದ ಆ ಸವಾರನು ಮೋರೆಯನ್ನು ಮೇಲೆ ಎತ್ತಿದನು. ಮೋಡ ಗುಡುಗಿದಂತಿದ್ದ ಆ ಗಂಭೀರ ಧ್ವನಿಯು ಎಲ್ಲಿಂದ ಬಂದಿತೆಂದು ಸುತ್ತಲೂ ನೋಡಿದ.

"ಕಿಂ ಪಶುಃ ಪೂರ್ವ ದೇಹೇ ?"

ಇಕ್ಕೆಲದ ದಂಡೆಯ ಮೇಲಿನ ಗೊಂಡಾರಣ್ಯವು ಅದೇ ಶಬ್ದವನ್ನು ಮತ್ತೆ ಪ್ರತಿಧ್ವನಿಸಿತು. ನೀರು ಕುಡಿಯುವ ನಾಯಕ ಕಕ್ಕಾವಿಕ್ಕಿಯಾದ.

ಹರಿಯುವ ನದಿ, ಹಸಿರು ಮುರಿಯುವ ವನರಾಜ, ಮೂಕ ಮಳಲ ರಾಶಿ ಎಲ್ಲವೂ ಅವನನ್ನು ಅಣಕಿಸುವಂತೆ ತೋರಿತು.

"ನೀನು ಜನ್ಮಾಂತರದಲ್ಲಿ ಪಶುವಾಗಿದ್ದಿಯಾ!" ಅವನ ಮಿದುಳನ್ನು ಮೀಟಿದಂತಾಯಿತು. ಅವನ ತಲೆಗೆ ಗಿರಿಗಿರಿ ಚಕ್ರ, ನೆನಪಿನ ನಿದಿಯೆಲ್ಲ ತಿರುಗುಮುರಗು. "ನೀನು ಹಿಂದೆ ಪಶುವಾಗಿದ್ದೀಯಾ?" ಅವನ ಬದುಕನ್ನೇ ಕೆದಕಿದಂತಿತ್ತು ಈ ಪ್ರಶ್ನೆ. ಅವರ ಒಂದೊಂದು ಶಬ್ದಗಳೂ ಅವನ ಜನ್ಮಾಂತರದ ಸುರುಳಿ ಬಿಚ್ಚಿ ಅವನ ಕಣ್ಣೆದುರು ಹೊರಳಿ ಹಿಡಿಯತೊಡಗಿದವು.

ಅವನ ತಲೆಯಲ್ಲಿ ನೂರು ವಿಚಾರಗಳು ನುಗ್ಗಿದವು. ಅವುಗಳ ಭಾರ ತಾಳಲಾರದೆ ಅವನ ತಲೆ ಸಿಡಿಯ ತೊಡಗಿತು. ಅಸಾಹಾಯನಾಗಿ ಅವನು ಆಚೆಯ ದಂಡೆಗೆ ತನ್ನ ದೃಷ್ಟಿಯನ್ನು ಚಾಚಿದ. ಅಲ್ಲಿಯ ದೃಶ್ಯ ಚೇತೋಹಾರಿಯಾಗಿತ್ತಿತು.

ತೇಜಃಪುಂಜರಾದ ಪರಮಹಂಸರೊಬ್ಬರು ಅಲ್ಲಿ ಪಾಠ ಹೇಳುತ್ತ ಕುಳಿತಿದ್ದರು. ತಪ್ಪೋದೀಪ್ತಿ ಅವರ ಮುಖ ಮಂಡಲದ ಮೇಲೆ ತಾಂಡವವಾಡುತ್ತಿತ್ತು. ಕಂಗಳಲ್ಲಿ ಶಾಂತಿ–ಕಾಂತಿಗಳು ಪವಡಿಸಿದ್ದವು.

ಅವರ ತುಟಿ ಅಂಚಿನಲ್ಲಿ ತುಳುಕುವ ನಗೆ ಈ ತರುಣ ಸಾದಿಗೆ ಆ ಪಶು ಪ್ರಶ್ನೆಯನ್ನು ಕೇಳಿದವರು ಇವರೇ ಎಂದು ಸಾರುತ್ತಿತ್ತು.

ಅವರನ್ನು ಕಂಡಕೂಡಲೇ ತುರುಗಾರೂಢನಾದ ಈ ತರುಣನಿಗೆ ಮೈ ಜುಮ್ಮೆಗಟ್ಟಿತು. ಕೂಡಲೇ ಅವನು ಆ ತೇಜಿಯನ್ನು ಬಿಟ್ಟು ಕೆಳಗಿಳಿದ. ಆ ತುಂಬು ನೀರಿನ ಪ್ರವಾಹದಲ್ಲಿಯೇ ಈಜುತ್ತ ಆಚೆಯ ದಂಡೆಗೆ ನಡೆದ. ಅಲ್ಲಿ ಗಿಡದ ಕೆಳಗೆ ದಟ್ಟ ನೆರಳಿನಲ್ಲಿ ಪಾಠ ಹೇಳುತ್ತ ಕುಳಿತ ಸ್ವಾಮಿಗಳವರ ಎದುರು ಹೋಗಿ ನೀರು ಬಸಿಯುವ ಒದ್ದೆ ಬಟ್ಟೆಯಿಂದಲೇ ನೆಲದುದ್ದ ದೀರ್ಘದಂಡ ನಮಸ್ಕಾರವನ್ನು ಹಾಕಿದ.

"ಸ್ವಾಮಿ, ಪೂರ್ವ ದೇಹದಲ್ಲಿ ಮಾತ್ರವಲ್ಲ ಈ ದೇಹದಲ್ಲಿಯೂ ನಾನು ಪಶುವಾಗಿಯೇ ಇದ್ದೇನೆ. ನನ್ನ ಮೇಲೆ ತಾವು ದಯಮಾಡಬೇಕು. ಈ ಪಶುತ್ವದಿಂದ ನನ್ನನ್ನು ತಾವೇ ಮೇಲೆತ್ತಬೇಕು." ಎಂದು ಬೇಡಿಕೊಂಡ.

ಶ್ರೀ ಅಕ್ಷೋಭ್ಯ ತೀರ್ಥರು ದೃಷ್ಟಿಯೆತ್ತಿ ನೀರಿನಲ್ಲಿಯೇ ನೆನೆದು ಬಂದ ಆ ತರುಣ ನನ್ನು ನಖದಿಂದ ಶಿಖಾದ ವರೆಗೆ ಒಮ್ಮೆ ನೋಡಿದರು. ಅವನ ಮುಖದಲ್ಲಿ ತಳವೂರಿದ ಶಾಂತಿಕಾಂತಿಗಳನ್ನು ಕಂಡು ಆ ಚೇತನವನ್ನು ಗುರುತಿಸಿದರು. ಸರ್ವಜ್ಞ ಸಂಸ್ಥಾನ ವನ್ನು ಒಪ್ಪಿಸಲು ತಾವು ಅರಿಸುತ್ತಿರುವ ವ್ಯಕ್ತಿಯು ದೊರಕಿದಂತಾಯಿತು.

ಶ್ರೀ ಅಕ್ಷೋಭ್ಯ ತೀರ್ಥರ ಅಂತರಂಗವನ್ನು ಚಿರಕಾಲದಿಂದ ಮಂಥನ ಮಾಡುವ ಚಿಂತೆ ವಿಚಾರಗಳಿಗೆಲ್ಲ ಇಂದು ಪೂರ್ಣ ವಿರಾಮ ದೊರೆತಂತಾಯಿತು.

ಶ್ರೀ ಅಕ್ಷೋಭ್ಯ ತೀರ್ಥರಿಗೆ ವಯಸ್ಸಾದಂತೆ ತಾವು ಆಳುತ್ತಲಿರುವ ಈ ವೇದಾಂತ ಸಾಮ್ರಾಜ್ಯದ ಧೌರಂಧರಿಯನ್ನು ಮುಂದೆ ಯಾರಿಗೆ ಒಪ್ಪಿಸಬೇಕೆಂಬುವದು ಒಂದು ದೊಡ್ಡ ಸಮಸ್ಯೆಯಾಗಿದ್ದಿತು. ಇವರ ಹಿಂದಿನವರಿಗೆ ಇದರ ಯೋಚನೆಯೇ ಇರಲಿಲ್ಲ. ಸರ್ವಜ್ಞ ಚೂಡಾಮಣಿಗಳಾದ ಶ್ರೀ ಭಗವತ್ಪಾದರೇ 'ಇವರಾದ ಬಳಿಕ ಇವರು' 'ಇವರಾದ ಬಳಿಕ ಅವರು' ಎಂದು ನಾಮನಿರ್ದೇಶಪೂರ್ವಕವಾಗಿ ತಮ್ಮ ಮಹಾ ಸಂಸ್ಥಾನವನ್ನು ಒಪ್ಪಿಸಲಿಕ್ಕೆ ಆಜ್ಞೆ ಮಾಡಿದ್ದರು. ಅವರ ಆದೇಶದಂತೆಯೇ ಶ್ರೀ ಪದ್ಮ ನಾಭ ತೀರ್ಥರು ನರಹರಿ ತೀರ್ಥರಿಗೂ , ನರಹರಿ ತೀರ್ಥರು ಮಾಧವ ತೀರ್ಥರಿಗೂ ಮಾಧವ ತೀರ್ಥರು ಅಕ್ಷೋಭ್ಯ ತೀರ್ಥರಿಗೂ, ಸನಕಾದಿ ಪರಂಪರಾ ಪ್ರಾಪ್ತವಾದ ಆ ಸರ್ವಜ್ಞ ಪೀಠದ ವೇದಾಂತ ಸಾಮ್ರಾಜ್ಯದ ಆಧಿಪತ್ಯವನ್ನು ಒಪ್ಪಿಸಿ ಕೃತಕೃತ್ಯ ರಾಗಿದ್ದರು.

ಆದರೆ ಸರ್ವಜ್ಞಾಚಾರ್ಯರ ಮೌಖಿಕ ಆಜ್ಞೆ ಇಲ್ಲದೆ ಈ ವೇದಾಂತ ಸಾಮ್ರಾ ಜ್ಯದ ಭಾರವನ್ನು ತಾವೇ ಆರಿಸಿ ಯೋಗ್ಯವಾದ ವ್ಯಕ್ತಿಗೆ ವಹಿಸಿ ಕೊಡುವ ಗುರುತರ ವಾದ ಹೊಣೆಗಾರಿಕೆಯನ್ನು ಮೊಟ್ಟಮೊದಲು ಶ್ರೀ ಅಕ್ಷೋಭ್ಯ ತೀರ್ಥರೇ ನಿಸ್ತ್ರಂಸ ಬೇಕಾಗಿ ಬಂದಿತು.

ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾದ ಈ ಜಗದ್ಗುರು ಪೀಠವನ್ನು ಆರೋಹಣ ಮಾಡುವ ವ್ಯಕ್ತಿಯು ಅಸಾಮಾನ್ಯವಾದ ದೈವಕ ಶಕ್ತಿಯಿಂದ ಒಡಗೂಡಿ ದವನಿರಬೇಕು. ಅವನಲ್ಲಿ ಶಮದಮಾದಿ ಸಂಪತ್ತಿ, ಭಗವತ್ಪ್ರಸತ್ತಿ, ವಿಷಯ ವಿರಕ್ತಿ, ನಿಶ್ಚಲವಾದ ವಿಷ್ಣು ಭಕ್ತಿ, ದಿವ್ಯವಾದ ವೇದ ವೇದಾಂತ ಶಾಸ್ತ್ರಗಳ ಸಂಪ್ರತಿಪತ್ತಿ, ಪ್ರಾಠ ಪ್ರವಚನ ಆಸಕ್ತಿ, ಮುಂತಾದಕ ಅನೇಕ ಸದ್ಗುಣಗಳು ಪರ್ಯಾಪ್ತವಾಗಿಯೇ ಇರಬೇಕು. ಇಂಥ ವ್ಯಕ್ತಿ ಯಾರು ?

ಅಂದಿನ ಕಾಲವು ಮತಪ್ರಸಾರಾದಿ ದೃಷ್ಟಿಯಿಂದ ಬಹು ಸೂಕ್ಷ್ಮವಾದ ಕಾಲ ವಾಗಿದ್ದಿತು. ವೈದಿಕ ಸಿದ್ಧಾಂತಗಳನ್ನೆಲ್ಲ ಪ್ರಚ್ಛನ್ನ ಬೌದ್ಧ ಪದ್ಧತಿಯಿಂದ ವಿಫಲಗೊಳಿ

ಸುತ್ತಲಿರುವ ಅದ್ವೈತವಾದವು ವಿದ್ಯಾರಣ್ಯರಂಥ ಉದ್ದಾಮ ವಿದ್ವಾಂಸರ ರಾಜಾಶ್ರಯ ಬಲದಿಂದ ಎಲ್ಲೆಡೆಗೂ ಜಯಭೇರಿಯನ್ನು ಹೊಡೆಯುತ್ತಲಿತ್ತು. ಅತ್ತ ವಿಶಿಷ್ಟಾದ್ವೈತ ಮತವು ಎಲ್ಲ ಜಾತಿ ಜನಾಂಗದವರಿಗೂ ಮೂರು ನಾಮ ಬಳಿದು ಪ್ರಚಂಡ ಜನಬಲ ದಿಂದ ಸಮಗ್ರ ದಕ್ಷಿಣಾಪಥವನ್ನೆಲ್ಲ ಆಕ್ರಮಿಸಿ ತಲೆ ಎತ್ತಿ ಮೆರೆಯುತ್ತಲಿತ್ತು.

ಕರ್ನಾಟಕದಲ್ಲಿಯಂತೂ ಶಕ್ತಿ ವಿಶಿಷ್ಟಾದ್ವೈತ ಪಂಥವು ದೇವ ಭಾಷೆಯ ಛಂದ ಬಂಧಗಳೆಂಬ ಛಾಂದಸತನವನ್ನು ತೊರೆದು ಎಲ್ಲ ಜಾತಿ ಜನಾಂಗಗಳ ಪಾತಳಿಗೆ ಇಳಿದು ಅವರ ಆಡು ನುಡಿ ನಾಡು ನುಡಿಗಳಲ್ಲಿಯೇ ತಮ್ಮ ಧರ್ಮದ ತಿರುಳನ್ನು ಹಾಡಿ ಹೇಳಿ ವೀರಶೈವದ ವಿಜಯ ಧ್ವಜವನ್ನೆತ್ತಿ ನಾಡಿನ ತುಂಬ ಗುಡುಗುತ್ತಲಿದ್ದಿತು. ಬೌದ್ಧಮತವು ಹಣ್ಣಾಗಿದ್ದರೂ ಅದರ ಸತ್ವ, ಸ್ಫೂರ್ತಿ, ಕಸವುಗಳನ್ನು ಮೈಗೂಡಿಸಿ ಕೊಂಡು ಜೈನ ಮತವು ಸಮಗ್ರ ಭಾರತವನ್ನೇ ಕಬಳಿಸುವ ಹಂಚಿಕೆ ಹಾಕಿ ಕನ್ನಡ ನಾಡಿನ ಒಳದೇಶಗಳಲ್ಲೆಲ್ಲ ಬೇರು ಬಿಟ್ಟು, ಗೂಡು ಕಟ್ಟಿ ದಕ್ಷಿಣದಲ್ಲಿ ತನ್ನ ಪ್ರಸ್ಥವನ್ನು ಸ್ಥಾಪಿಸಿದ್ದಿತು.

ಇಂಥ ಸಂದರ್ಭದಲ್ಲಿ ಸರ್ವಜ್ಞಪೀಠದ ಮೇಲೆ ಬಹಳ ಸಮರ್ಥವಾದ ವ್ಯಕ್ತಿಯ ಅವಶ್ಯಕತೆ ಇದ್ದಿತು. ಜೈನ ಬೌದ್ಧ, ಚಾರ್ವಾಕ, ವೀರಶೈವ ಮುಂತಾದ ಅವೈದಿಕ ಮತಗಳ ಅಬ್ಬರ ಉಬ್ಬರ ದಬ್ಬಾಳಿಕೆಯನ್ನು ದಮನ ಮಾಡುವದಲ್ಲದೆ ಅದ್ವೈತ, ವಿಶಿಷ್ಟಾದ್ವೈತ ಮುಂತಾದ ಆಸ್ತಿಕ ಮತಗಳ ಆಕ್ರಮಣವನ್ನು ತಡೆಗಟ್ಟಿ ತಾತ್ವಿಕ ತಳಹದಿಯ ಮೇಲೆ ವೈದಿಕ ವೈಷ್ಣವ ಮತದ ಪ್ರಗತಿ ಪ್ರತ್ಯುತ್ಥಾನಗಳನ್ನು ಸಾಧಿಸ ಬಲ್ಲ ಪ್ರಚಂಡ ಪ್ರಭಾವವುಳ್ಳ ಮಹಾ ವ್ಯಕ್ತಿಯನ್ನು ಶ್ರೀ ಅಕ್ಷೋಭ್ಯತೀರ್ಥರು ಹುಡುಕುತ್ತಲಿದ್ದರು. ಇಂಥ ಚತುರಸ್ರ ಪಾಂಡಿತ್ಯದ ಪ್ರತಿಭಾ ಪರ್ವತದಂತಿರುವ ತಪೋ ನಿಧಿಯಾದ ಮಹಾ ವ್ಯಕ್ತಿಯು ಎಷ್ಟು ಹುಡುಕಿದರೂ ಗೋಚರಿಸದಂತಾಗಿತ್ತು.

ಆಗ ಆಕಸ್ಮಾತ್ತಾಗಿ ಅವರಿಗೆ ಶ್ರೀಮದಾನಂದತೀರ್ಥರ ಒಂದು ಸಂದೇಶಾತ್ಮಕ ವಾದ ಸೂಚನೆಯು ನೆನಪಾಯಿತು. ಆಚಾರ್ಯರನ್ನು ಅವರ ಶಿಷ್ಯರು ಹಿಂದೆ ಒಂದು ಸಂದರ್ಭದಲ್ಲಿ— "ಸ್ವಾಮಿ! ಅಸರ್ವಜ್ಞ ಮುಷ್ಟೀಯವಾದ ತಮ್ಮ ಈ ಉದ್ಗ್ರಂಥ-ಸದ್ಗ್ರಂಥಗಳಿಗೆಲ್ಲ ಟೀಕೆ ಬರೆಯುವ ಧೀಮಂತನಾರು ?" ಎಂದು ಕೇಳಿದ್ದರು. ಆಗ ಭಗವತ್ಪಾದರು ನಸುನಕ್ಕು ತಮ್ಮೆದುರು, ಶಿವನ ಎದುರು ನಂದಿಯಂತೆ ಏಕ ಚಿತ್ತ ದಿಂದ ತಮ್ಮ ಬಾಯಿಂದ ಬಂದ ಪ್ರತ್ಯಕ್ಷರವನ್ನೂ ಕೇಳಿ ತಲೆ ಹಾಕುತ್ತ ಕುಳಿತು ಕೊಂಡ ಎತ್ತಿನ ಕಡೆಗೆ ಬೆರಳು ತೋರಿಸಿ— "ವ್ಯಾಖ್ಯಾಸ್ಯತ್ಯೇಷ ಗೋರಾಟ್" ಈ ವೃಷಭ-ಋಷಭವು ನಮ್ಮ ಗ್ರಂಥಗಳಿಗೆ ವ್ಯಾಖ್ಯೆಯನ್ನು ಬರೆಯುತ್ತದೆ ಎಂದು ನುಡಿದಿದ್ದರು. ಅದನ್ನು ಕೇಳಿಯೋ ಏನೋ ಅವರ ಆಶಯವನ್ನು ತಿಳಿದ ತಾವು

ಗುರು ಗ್ರಂಥಗಳನ್ನು ವ್ಯಾಖ್ಯಾನಿಸುವ ಗೋಜಿಗೆ ಹೋಗಿದ್ದಿಲ್ಲ.* ಪೂರ್ಣ ಪ್ರಜ್ಞರು 'ವ್ಯಾಖ್ಯಾಸ್ಯತ್ಯೈಷ ಗೋರಾಟ್' ಎಂದು ತುಂಬ ಮೋಡದಂತೆ ಗಂಭೀರಧ್ವನಿಯಿಂದ ಉಚ್ಚರಿಸಿದ ಮಂದ್ರ ಮಧುರ ಶಬ್ದವು ಇವರ ಕಿವಿಯಲ್ಲಿ ಇನ್ನೂ ಗುಂಗುಣಿಸುತ್ತ ಲಿತ್ತು. ಅವರು 'ಆ ಗೋರಾಟ'ನನ್ನು ಹೋದಲ್ಲೆಲ್ಲ ಅರಸುಗಣ್ಣಿನಿಂದ ಹುಡುಕುತ್ತಲೇ ಇದ್ದರು. ಶ್ರೀಮನ್ಮಧ್ವಾಚಾರ್ಯರ ಮಹಾ ಮುಖ್ಯ ಸಂಸ್ಥಾನದ ಗುರುತರವಾದ ಹೊಣೆಯನ್ನು, ತಮ್ಮ ಗುರುಗಳ ವಿಶೇಷಾನುಗ್ರಹದ ಹೊರೆಯನ್ನು ಹೊತ್ತ ಆ ಎತ್ತಿನ ಮೇಲೆ ಹಾಕಿ ತಾವು ನಿಶ್ಚಿಂತವಾಗಿ ನಾರಾಯಣ ಪರಾಯಣರಾಗಬೇಕೆಂದು ಬಯಸಿದ್ದರು.

ಧರ್ಮಸ್ವರೂಪಿಯಾದ ಆ ಎತ್ತಿನ ಮಾನುಷ ಭಾವವನ್ನು ಅವರು ಎತ್ತೆತ್ತ ಹುಡುಕಿದರೂ ಗೊತ್ತು ಗುರುತು ಆಗಲಿಲ್ಲ. ಆದುದರಿಂದ ಅವರು ತಮ್ಮ ಉಪಾಸ್ಯ ಮೂರ್ತಿಯಾದ ಪಂಢರಪುರ ಪಾಂಡುರಂಗ ವಿಠ್ಠಲನಿಗೆ ಮೊರೆ ಹೋದರು "ಸ್ವಾಮಿ! ನಿನ್ನ ಸರ್ವೋತ್ತಮತ್ವವನ್ನು ನಮ್ಮ ಗುರುಗಳಾದ ಶ್ರೀಮದಾನಂದತೀರ್ಥರು ನಿಶ್ಶಂಕಾತಂಕವಾಗಿ ಪ್ರಸ್ಥಾಪಿಸಿದ್ದಾರೆ. "ಸೂತ್ರ ಪ್ರಸ್ಥಾನ, ಉಪನಿಷತ್ ಪ್ರಸ್ಥಾನ, ಗೀತಾ ಪ್ರಸ್ಥಾನ ಈ ಪ್ರಸ್ಥಾನತ್ರಯವು ನಿನ್ನ ರಮ್ಯ ಪಾರಮ್ಯವನ್ನು ಬಿತ್ತರಿಸುವಲ್ಲಿಯೇ ಕೃತಾರ್ಥವಾಗಿದೆ" ಎಂದು ಅನೇಕ ಗ್ರಂಥಗಳಿಂದ ಸಿದ್ಧಮಾಡಿ ತೋರಿಸಿದ್ದಾರೆ.

ಈ ಪ್ರಸ್ಥಾನತ್ರಯವನ್ನು ಮುಖ್ಯಸ್ಥಾನವಾದ ನಿನ್ನನ್ನು ಬಿಟ್ಟು ಅಸ್ಥಾನದಲ್ಲಿ ಯೋಜನೆ ಮಾಡುವ ಪ್ರಚ್ಛನ್ನ ನಾಸ್ತಿಕರನ್ನು ನಿರಾಕರಣ ಮಾಡಿ ನಿಗಮಾಗಮಗಳನ್ನೆಲ್ಲ ಯಾರೂ ಉಚ್ಚಾಟಿಸದಂತೆ ಸ್ವಸ್ಥಾನಸ್ಥಿತವನ್ನಾಗಿ ಮಾಡಲು ಮಹಾ ಸಂಸ್ಥಾನ ಒಂದನ್ನು ಸ್ಥಾಪಿಸಿದ್ದಾರೆ. ನಿನ್ನ ಮಹಾ ಮಹಿಮಾ ಪ್ರತಿಷ್ಠಾಪಕವಾದ ಶ್ರೀಮನ್ಮಧ್ವಾಚಾರ್ಯರ ಮಹಾ ಸಂಸ್ಥಾನದ ಆ ಪರಮಹಂಸ ಪದಕ್ಕೆ ನಮ್ಮ ಗುರುಗಳಿಗೆ ಅಭಿಮತವಾದ ವ್ಯಕ್ತಿಯನ್ನು ತಂದು ಕೂಡಿಸುವ ಭಾರವು ನಿನ್ನದು. ಆ ಕಾರ್ಯ ನಿನ್ನನ್ನೇ ಕೂಡಿದೆ" ಎಂದು ಬಿನ್ನಹ ಮಾಡಿಕೊಂಡರು.

---

* ಶ್ರೀ ಅಕ್ಷೋಭ್ಯತೀರ್ಥರು ''ಶ್ರೀ ಮಧ್ವ ತತ್ವಸಾರ ಸಂಗ್ರಹ" ಎಂಬ ಮಹಾ ಗ್ರಂಥವೊಂದನ್ನು ರಚಿಸಿದ್ದಾರೆಂದು ವಿ. ಕಮಲಾಪೂರ ಭೀಮರಾಯರು ಉಲ್ಲೇಖಿಸಿದ್ದಾರೆ. ಆದರೆ ಈವರೆಗೂ ಆ ಗ್ರಂಥದ ಪಾಂಡುಲಿಪಿಯು ಯಾವ ಗ್ರಂಥಾಗಾರದಲ್ಲಿಯೂ ದೊರೆತಿಲ್ಲ. ಈ ಗ್ರಂಥವನ್ನು ಅವರು ಬರೆದದ್ದು ನಿಜವಿದ್ದರೂ ಇದು ಆಚಾರ್ಯರ ಯಾವ ಗ್ರಂಥಗಳ ಟೀಕಾರೂಪವಾಗದೇ ಸಮಗ್ರ ಮಾಧ್ವ ವಾಙ್ಮಯದ ಮುಖ್ಯ-ಮುಖ್ಯವಾದ ತತ್ವಗಳ ಹಾಗೂ ಪ್ರಮಾಣ ಪ್ರಮೇಯಗಳ ಸಾರ ಸಂಗ್ರಹ ರೂಪವಾಗಿರಬಹುದು.

ಭಗವಂತನು ತನ್ನ ಭಕ್ತಾಗ್ರೇಸರನಾದ ಶ್ರೀ ಅಕ್ಷೋಭ್ಯತೀರ್ಥರ ಪ್ರಾರ್ಥನೆಯನ್ನು ಮನ್ನಿಸಿದ. ಶ್ರೀ ಅಕ್ಷೋಭ್ಯತೀರ್ಥರಿಗೆ ಅಂದು ರಾತ್ರಿ ಕನಸಿನಲ್ಲಿ ಶ್ರೀ ಪಂಢರೀನಾಥನು ಪ್ರತ್ಯಕ್ಷ ಗೋಚರನಾಗಿ— "ನಾಳೆ ಸಂಧ್ಯಾವಳಿ ಎಂಬ ಭೀಮರಥಿಯ ತೀರ ಪ್ರದೇಶದಲ್ಲಿ ಓರ್ವ ತರುಣ ಕುದುರೆ ಸವಾರನು ಬರುವನು. ಅವನಿಗೆ ನೀನು ಸರ್ವಜ್ಞ ಸಂಸ್ಥಾನವನ್ನು ಒಪ್ಪಿಸು" ಎಂದು ಅಪ್ಪಣೆ ಇತ್ತನು. ಸ್ವಪ್ನಸಂದೇಶದಂತೆ ಶ್ರೀಗಳವರು ಪಾಂಡುರಂಗ ವಿಠ್ಠಲನ ದರ್ಶನವನ್ನು ತೆಗೆದುಕೊಂಡು ಪಂಢರಪುರದ ಸಮೀಪದ ಸಂಧ್ಯಾವಳಿ ಎಂಬ ಚಂದ್ರಭಾಗಾತೀರದ ತಪೋವನಕ್ಕೆ ಬಂದರು.

ಏಕಾಂತರಮಣೀಯವಾದ ಆ ನದೀ ತೀರದಲ್ಲಿ ನಿಸರ್ಗ ಸೌಂದರ್ಯವನ್ನೆಲ್ಲ ಕಟ್ಟಿ ಹಾಕಿದಂತಾಗಿತ್ತು. ಎಂಥ ಬೇಸಿಗೆಯಲ್ಲಿಯೂ ಅಲ್ಲಿಯ ನಿಬಿಡವಾದ ಗಿಡಗಂಟೆಗಳ ಗುಂಪುಗಳಲ್ಲಿ ಬಿಸಿಲು ಬೀಳುತ್ತಿರಲಿಲ್ಲ. ಇಂಥ ತಂಪಿನ ತಾಣದಲ್ಲಿ ಸ್ವಾಧ್ಯಾಯ ತಪಂಗೈಯುತ್ತ ಶ್ರೀ ಅಕ್ಷೋಭ್ಯತೀರ್ಥರು ಶಿಷ್ಯರಿಗೆ ಶ್ರೀಮನ್ಮಧ್ವ ಭಾಷ್ಯವನ್ನು ಪಾಠ ಹೇಳುತ್ತ ಕುಳಿತ್ತಿದ್ದರು.

ಅಂದು ಅವರ ಸೂತ್ರಭಾಷ್ಯ ಪಾಠವು ಮುಂದುವರೆದಾಗ ಚಂದ್ರಾಭಾಗಾ ನದಿಯ ಆಚೆಯ ದಂಡೆಯಲ್ಲಿ ಕುದುರೆಗಳ ಖುರಪುಟದಿಂದ ಒಮ್ಮೆಲೆ ಕೆಂಧೂಳಿಯು ಎದ್ದಿತು. ವೀರರ ವೇಷದಲ್ಲಿದ್ದ ತುರಗಾರೂಢ ತರುಣರ ತಂಡವೊಂದು ಧಾವಿಸಿ ತೀರಕ್ಕೆ ಸಾಗಿತು. ನೀರಿಗೆ ಧುಮುಕಿತು. ಅವರ ನಾಯಕನು ಮಾತ್ರ ತನ್ನ ತರುಣ ತೇಜಿಯನ್ನು ಏರಿಕೊಂಡೇ ನಡುನೀರಿಗೆ ಬಂದು ಕುಳಿತಲ್ಲಿಯೇ ಪಶುವಿನಂತೆ ನದಿಗೇ ಬಾಯಿ ಹಚ್ಚಿ ನೀರನ್ನು ಹೀರತೊಡಗಿದನು. ಅವನನ್ನು ಕಂಡಕೂಡಲೇ ಅಕ್ಷೋಭ್ಯತೀರ್ಥರ ತಲೆಯಲ್ಲಿ ಏನೋ ಮಿಂಚಿದಂತಾಯಿತು. ಕೂಡಲೇ ಕೂಗಿದರು.

"ಕಿಂ ಪಶುಃ ಪೂರ್ವದೇಹೇ"

ಇದನ್ನು ಕೇಳಿದ ಆ ಸಾದಿಯು ಕಕ್ಕಾವಿಕ್ಕಿಯಾದನು. ನದಿಯಲ್ಲಿಂದೇ ಸಾಗರ ಬಿದ್ದು ಈಚೆಯ ದಂಡೆಗೆ ಬಂದು ಶ್ರೀ ಅಕ್ಷೋಭ್ಯತೀರ್ಥರಿಗೆ ನಮಸ್ಕರಿಸಿ ನಿಂತ.

ಶ್ರೀ ಅಕ್ಷೋಭ್ಯತೀರ್ಥರು ತಮ್ಮ ಮಧ್ವಭಾಷ್ಯ ಪಾಠವನ್ನು ಮುಂದುವರಿಸಿದರು. ಮುಂದೆ ಹರಿಯುವ ಚಂದ್ರಭಾಗೆಯ ಪ್ರವಾಹವು ನಾಚುವಂತೆ ನಿರರ್ಗಳವಾಗಿ ಹರಿಯುತ್ತಲಿತ್ತು ಅವರ ಪ್ರವಚನದ ವಾಗ್ಝರಿ. ಭಗವಾನ್ ಬಾದರಾಯಣರು ರಚಿಸಿದ ಬ್ರಹ್ಮಸೂತ್ರಗಳ ಮೇಲೆ ಮಧ್ವಮುನಿಗಳು ಪ್ರಮಾಣಬದ್ಧವಾದ ಶಾಸ್ತ್ರಶುದ್ಧವಾದ ಶೈಲಿಯಲ್ಲಿ ರಚಿಸಿದ ಮಹಾ ಭಾಷ್ಯವನ್ನು ತಮ್ಮ ಮುದ್ದಾದ ವಾಗ್ಧೋರಣೆಯಿಂದ ವಿವರಿಸುತ್ತಲಿದ್ದರು. ಶಿಷ್ಯರೆಲ್ಲರೂ ಏಕಚಿತ್ತದಿಂದ ಆ ಶಾಸ್ತ್ರ ಪ್ರವಚನವನ್ನು ಆಲಿಸುತ್ತಲಿದ್ದರು.

ನದೀ ದಾಟಿ ಬಂದ ಈ ಸ್ವಾರನು ಹಾಗೆಯೇ ಅಲ್ಲಿಯೇ ಕೈಮುಗಿದುಕೊಂಡು ನಿಂತಿದ್ದನು. ಅವನ ಬಟ್ಟೆಗಳಿಂದ ಇನ್ನೂ ನೀರಿನ ಹನಿಗಳು ತಟಕಿಕ್ಕುತ್ತಲಿದ್ದವು. ಶ್ರೀಮದಕ್ಷೋಭ್ಯರ ಬಾಯಿಂದ ಮಧ್ವಭಾಷ್ಯದ ಪದಪಂಕ್ತಿಗಳ ಉಚ್ಚಾರವನ್ನು ಕೇಳಿದಾಗ ಅವರ ಹೃದಯದಲ್ಲಿ ಮಧುರ ಸ್ಮೃತಿಗಳ ಬುಗ್ಗೆಯೇ ದಗ್ಗನೆ ಎದ್ದು ನಿಂತಂತಾಯಿತು. ಅವುಗಳನ್ನೆಲ್ಲ ಹಿಂದೆ ತಾನು ಎಂದೊ ಕೇಳಿದ ನೆನಪು ಮರುಕಳಿಸ ತೊಡಗಿತು. ತಾನು ನದಿಯಲ್ಲಿ ಮಿಂದದ್ದನ್ನೂ ತನ್ನ ಬಟ್ಟೆಗಳೆಲ್ಲ ನೆನೆದದ್ದನ್ನೂ ತಾನು ನೀರು ಕುಡಿಯಲಿಕ್ಕೆ ಬಂದದ್ದನ್ನೂ ಮರೆತು ಹನ್ನೆರಡು ವರ್ಷ ಪಾಠ ಓದಿದ ಪ್ರೌಢ ಶಿಷ್ಯನಂತೆ ಅವನು ಶ್ರೀ ಶ್ರೀಗಳವರ ವೇದಾಂತ ಪ್ರವಚನವನ್ನು ಆಲಿಸತೊಡಗಿದ. ಇವರು ಹೇಳಿ ಹೇಳಿದಂತೆ ತದೇಕಚಿತ್ತನಾಗಿ ಎತ್ತಿನಂತೆ ಗೋಣು ಹಾಕಹತ್ತಿದ.

ಅವನ್ನು ಕಂಡು ಶ್ರೀ ಅಕ್ಷೋಭ್ಯತೀರ್ಥರಿಗೆ ಗೊತ್ತಾಯಿತು ತಮ್ಮ ಗುರುಗಳ ಹೊತ್ತಿಗೆಗಳನ್ನೆಲ್ಲ ಹೊತ್ತು ಅವರ ಸಿದ್ಧಾಂತದ ಗೆಲುವಿನ ಬಾವುಟವನ್ನು ಎತ್ತುವ ಎತ್ತು ಇದೇ ಎಂದು.

ಸಂಜೆಯಾಗುವವರೆಗೆ ಪಾಠ ಮುಗಿಯುವವರೆಗೆ ಆ ತರುಣನು ಮಧ್ವ ಸಿದ್ಧಾಂತದ ಪ್ರವಚನವನ್ನು ಕೇಳುತ್ತ ಹಾಗೆಯೇ ನಿಂತುಕೊಂಡಿದ್ದ. ಪಾಠವು ಮುಗಿದ ಬಳಿಕ ಅವನು ಅಕ್ಷೋಭ್ಯತೀರ್ಥರ ಮುಂದೆ ಅಡ್ಡಬಿದ್ದು ಅಂಗಲಾಚಿದ.

"ಸ್ವಾಮಿ ! ಈ ಪಾಮರನನ್ನು ಶಿಷ್ಯತ್ವೇನ ಸ್ವೀಕರಿಸಿ ಅನುಗ್ರಹಿಸಬೇಕು. ತಾವು ಹೇಳುವ ಈ ಗ್ರಂಥಗಳನ್ನು ಪೂರ್ತಿಯಾಗಿ ನನಗೂ ಕೇಳಿಸಬೇಕು."

ಶ್ರೀ ಅಕ್ಷೋಭ್ಯತೀರ್ಥರಿಗೆ ಪರಮಾನಂದವಾಯಿತು. ತಾವು ಹುಡುಕುವ ನಿಧಿಯೇ ತಮ್ಮ ಕಾಲ ತುದಿಗೆ ಬಡೆದು ಬಿದ್ದಂತಾಗಿತ್ತು ಅವರ ಪರಿಸ್ಥಿತಿ. ಎರಡು ಜನ್ಮಗಳಲ್ಲಿ ವಾಯುದೇವರ ಸೇವೆಯನ್ನು ಮಾಡಿ ಅವರ ಮನೆಯ ಎತ್ತಾಗಿ, ತೊತ್ತಾಗಿ ಅವರು ಪರಮಾನುಗ್ರಹಪೂರ್ವಕವಾಗಿ ಇತ್ತ ಜ್ಞಾನದ ಸೊತ್ತನ್ನು ಹೊತ್ತು ತಂದ ಎತ್ತು ಇದೇ ಎಂದು ನಿಶ್ಚಯವಾದದ್ದರಿಂದ ಅವರು ಅವನಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟು ಕರುಣಿಸಿದರು. ಸನ್ಯಾಸಾಶ್ರಮವನ್ನು ಕೊಟ್ಟು ಸರ್ವಜ್ಞ ಸಂಸ್ಥಾನವನ್ನು ಒಪ್ಪಿಸುವ ಸಂಕಲ್ಪಗೈದರು. ಗುರು ಬಯಸಿದ್ದು ಅದೇ, ಈ ಶಿಷ್ಯ ಬೇಡಿದ್ದು ಅದೇ.

ಈ ತರುಣ ಶಿಷ್ಯನ ಹೆಸರು ಧೋಂಡೋಪಂತ. ಅವರ ತಂದೆ ರಘುನಾಥ ಪಂತರು. ಸದಾಚಾರ ಸಂಪನ್ನರಾದ ವೈದಿಕ ವಿದ್ವಾಂಸರಾಗಿದ್ದರೂ ರಾಜಕೀಯ ವ್ಯವಹಾರದಲ್ಲಿ ಕುಶಲರಾದ ಅಧಿಕಾರಿಗಳು ಆಗಿದ್ದರು. ಇವರ ಊರು ಪಂಢರಪುರದ ಹತ್ತರವಿರುವ ಮಂಗಳವೇಡೆ ಗ್ರಾಮ. ಪಂಢರಪುರ, ಮಂಗಳವೇಡೆ ಗ್ರಾಮಗಳ ಪರಿಸರದ ಪ್ರದೇಶವೆಲ್ಲ ಆ ಕಾಲದಲ್ಲಿ ಶುದ್ಧ ಕರ್ನಾಟಕ ಪ್ರಾಂತವೇ ಆಗಿತ್ತು.

ಆದುದರಿಂದಲೇ ಜ್ಞಾನೇಶ್ವರ ಮುಂತಾದ ಮಹಾರಾಷ್ಟ್ರ ಸಂತರು ಪಂಢರಪುರದ ವಿಠ್ಠಲನನ್ನು "ಕನ್ನಡಿಗನಾದ ವಿಠ್ಠಲ"1 ಎಂದು ಕರೆದಿದ್ದಾರೆ. "ಕಾನಡಾ ವಿಠ್ಠಲು, ಕರ್ನಾಟಕು" ಎಂದೂ "ತೂ ಕಾನಡೀ, ತುಝಿ ಭಾಷಾ ಕಾನಡಿ" ಎಂದೂ ಅನೇಕ ಅಭಂಗ ವಚನಗಳು ದೊರಕುತ್ತವೆ. ಇವಲ್ಲದೆ ಪಂಢರಪುರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊರೆಯುವ ಕನ್ನಡ ಶಿಲಾ-ಶಾಸನಗಳು ಆ ಭಾಗದ ಕರ್ನಾಟಕತ್ವವನ್ನು ದೃಢಪಡಿಸುತ್ತವೆ.2

ರಘುನಾಥಪಂತರು ಮಂಗಳವೇಡೆ ಪ್ರಾಂತದಲ್ಲಿ ಚಿಕ್ಕ ಸಂಸ್ಥಾನಾಧಿಪತಿಗಳಾಗಿ ವಾಸವಾಗಿದ್ದರು. ಅವರ ಮನೆತನದ ಉಪನಾಮ ದೇಶಪಾಂಡೆ. ಇವರ ಗೋತ್ರ ವಿಶ್ವಾಮಿತ್ರ.3 ಅವರ ಪೂರ್ವಜರು ಚಾಲುಕ್ಯ, ಕದಂಬ ವಂಶದ ರಾಜರ ಆಶ್ರಯದಿಂದ ಜಮಖಿಂಡಿ ಮುಂತಾದ ಪ್ರದೇಶಗಳ ಆಧಿಪತ್ಯವನ್ನು ಪಡೆದಿದ್ದರು.

ಅವರು ತಮ್ಮ ರಾಜ್ಯದಲ್ಲಿ ಯುದ್ಧಪಟುಗಳಾದ ಅಶ್ವಾರೋಹಿಗಳ ಒಂದು ದೊಡ್ಡ ಪಡೆಯನ್ನು ತಮ್ಮ ಹತ್ತರ ಇಟ್ಟುಕೊಂಡಿದ್ದರು. ಅದರಿಂದ ಪರಚಕ್ರದ ದಾಳಿಗಳನ್ನು ಎದುರಿಸಿ ತಮ್ಮ ರಾಜ್ಯದ ಗಡಿಯನ್ನು ವಿಸ್ತರಿಸುತ್ತ ಒಳ್ಳೆ ಗೌರವದಿಂದ ಧಾರ್ಮಿಕ ಜೀವನವನ್ನು ನಡೆಸುತಿದ್ದರು. ರಘುನಾಥಪಂತರ ಪತ್ನಿಯ ಹೆಸರು ರಖಮಾಬಾಯಿ. ಪಂತರಿಗೆ ರಖಮಾಬಾಯಿಯಿಂದ ಅನೇಕ ಮಕ್ಕಳಾದರೂ ಯಾವವೂ ಬದುಕಿ ಉಳಿಯಲಿಲ್ಲ. ಕೊನೆಗೆ ಅವರಿಗೆ ಒಂದು ಗಂಡು ಮಗು ಜನಿಸಿತು. ಆ ಕೂಸು ಎಲ್ಲಿಯಾದರೂ ಕಲ್ಲಾಗಿ ಗಟ್ಟಿಮುಟ್ಟಿಯಾಗಿ ಚಿರಕಾಲ ಉಳಿಯಲಿ ಎಂಬ ಅಭಿಪ್ರಾಯದಿಂದ ಆ ಮಗುವಿಗೆ ದುಂಡಪ್ಪಾ ಎಂದು ಕರೆದರು.4 ಆದರೆ ಆ ಮಗುವಿಗೆ ಇಟ್ಟ ಹೆಸರು ನರಸಿಂಹ.5 ಅದೇ ಮುಂದೆ ಧೋಂಡಪ್ಪಾ, ಧೋಂಡೋಪಂತ ಅಂತ ಹೆಸರಾಯಿತು.

---

1 ಶ್ರೀ ಬಿ. ಎನ್. ಕೆ. ಶರ್ಮಾರವರ ದ್ವೈತ ವೇದಾಂತ ಇತಿಹಾಸ ( ಇಂಗ್ಲೀಷ ) ೩೩೫ ನೇ ಪುಟ.

2 ಸತ್ಕಥಾ ಪುಟ : ೨೭.

3 ಇವರ ಗೋತ್ರ ಭಾರದ್ವಾಜವೆಂದೂ ಕೆಲವರು ಹೇಳುತ್ತಾರೆ.

4 ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ೧೯೬೧ ನೇ ಜೂನ ಸಂಚಿಕೆಯ ಶ್ರೀ ಪಿ. ಬಿ. ದೇಸಾಯಿಯವರ "ಜಯತೀರ್ಥರ ಜನ್ಮಸ್ಥಳ" ಎಂಬ ಲೇಖ ನೋಡಿರಿ.

5 ಕರ್ಕಿಹಳ್ಳಿ ಶ್ರೀನಿವಾಸಾಚಾರ್ಯರ "ಮಹೇಂದ್ರೋದಯ" ಎಂಬ ಕಾವ್ಯದ ಒಂದು ಪ್ರತಿಯು ಮೈಸೂರಿನ ಓರಿಯಂಟಲ್ ಲಾಯಬ್ರರಿಯಲ್ಲಿದ್ದು ಅದರಲ್ಲಿ ರಾಜಕುಮಾರನಾದ ಈ ಧೋಂಡೋಪಂತರ ನಿಜವಾದ ಹೆಸರು ನರಸಿಂಹ ಎಂದು ಬಣ್ಣಿಸಿದ್ದಾರೆ.

ಈ ಧೋಂಡೋಪಂತರು ತಂದೆಯಂತೆ ಒಳ್ಳೇ ಶೂರ. ವೈರಿವಿಜಯದಲ್ಲಿ ವೀರ. ಆವನು ದೊಡ್ಡವನಾದ ಬಳಿಕ ತಮ್ಮ ತಂದೆಯ ಬಳಿಯಲ್ಲಿರುವ ಅಶ್ವದಳವನ್ನು ತೆಗೆದುಕೊಂಡು ರಣರಂಗದೀರರಾದ ತನ್ನ ಅನೇಕ ಮಿತ್ರ ಮತ್ತು ಅನುಚರರೊಂದಿಗೆ ಹೋಗಿ ದಿಗ್ವಿಜಯ ಮಾಡಿಕೊಂಡು ಬರುತ್ತಿದ್ದ. ರಾಷ್ಟ್ರಕೂಟ ರಾಜಧಾನಿಯಾದ ಮಳಖೇಡವು (ಮಾನ್ಯಖೇಟವು) ರಾಜಕೀಯ ದೃಷ್ಟಿಯಿಂದ ಅತ್ಯಂತ ಮಹತ್ವದ ಸ್ಥಳವೆಂದು ಬಗೆದು ಧೋಂಡೋಪಂತನು ತನ್ನ ಸಾದಿ ಸೈನಿಕಪಡೆಯೊಂದಿಗೆ ಹೋಗಿ ಅದನ್ನು ತನ್ನ ಸ್ವಾಧೀನಪಡಿಸಿಕೊಂಡನು.

ಹೀಗೆ ಅನೇಕ ಕಡೆಗಳಲ್ಲಿ ದಿಗ್ವಿಜಯವನ್ನು ಮಾಡಿಕೊಂಡು ವೈರಿಗಳನ್ನು ಗೆದ್ದು ಗೆಲುವಿನ ಉತ್ಸಾಹದಿಂದ ಆವರು ಗೆಳೆಯರೊಂದಿಗೆ ಕೂಡಿಕೊಂಡು ಮರಳಿ ಊರಿಗೆ ಹೊರ ಟಿದ್ದರು. ದಾರಿಯಲ್ಲಿ ಪಂಢರಪುರದ ಹತ್ತಿರ ಸಂಧ್ಯಾವಳಿಯ ಮುಂದಿನ ಭೀಮಾ ನದಿಯಲ್ಲಿ ನೀರಡಿಸಿ ನೀರು ಕುಡಿಯುವಾಗ ಆಚೆಯ ದಂಡೆಯಲ್ಲಿ ಕುಳಿತ ಶ್ರೀ ಅಕ್ಷೋಭ್ಯತೀರ್ಥ ಮುನೀಶ್ವರರ 'ಕಿಂ ಪಶುಃ ಪೂರ್ವದೇಹೇ' ಎಂಬ ಶಬ್ದವು ಆಯು ಷ್ಯದ ಪರಿವರ್ತನೆಗೆ ಕಾರಣವಾಯಿತು ಅವರಿಗೆ.

ರಾಜ್ಯ, ಭೋಗ, ಅಧಿಕಾರ, ವಿಲಾಸ, ಸುಖಸಂಪದಗಳ ಸುಷ್ಪತ್ತಿಗೆಯಲ್ಲಿ ನಲಿಯುತ್ತಿರುವ ಧೋಂಡೋಪಂತನಿಗೆ ಈ ವರೆಗೆ ವೈರಾಗ್ಯದ ಮುಖದರ್ಶನವೇ ಇರಲಿಲ್ಲ. ತಂದೆ-ತಾಯಿಗಳ ಅಚ್ಚಿಯ ಮಗನಾಗಿ ಅಂಗೈ ಅರಗಿಳಿಯಾಗಿ ಬಂಗಾರದ ಚಮಚೆಯನ್ನು ಬಾಯಿಯಲ್ಲಿ ಹಿಡಿದುಕೊಂಡೇ ಬೆಳೆದ ಧೋಂಡೋಪಂತನಿಗೆ ಜೀವನ ದಲ್ಲಿ ಯಾವದಕ್ಕೂ ಕೊರತೆ ಇರಲಿಲ್ಲ.

ಪ್ರೀತಿಸುವ ತಂದೆ, ಮಗನೆಂದರೆ ಪ್ರಾಣಕೊಡುವ ತಾಯಿ, ಬೇಕಾದ ಐಶ್ವರ್ಯ, ಬಯಸಿದ ಭೋಗ, ಬೇಡಿದ ಭಾಗ್ಯ, ಸ್ಪೃಹಣೀಯವಾದ ರೂಪ, ಲೋಭನೀಯ ವಾದ ಲಾವಣ್ಯ, ತುಂಬಿ ತುಳುಕುವ ಲಾವಣ್ಯ ಇನ್ನೇನು ಬೇಕು.

ಆವರ ತಂದೆ-ತಾಯಿಗಳು ತಮ್ಮ ಈ ನೆಚ್ಚಿನ ಮಗನಿಗೆ ಒಂದಲ್ಲದಂತೆ ಎರಡು ಮದುವೆಯನ್ನು ಮಾಡಿದ್ದರು. ಚಲುವಿಕೆಯಲ್ಲಿ ಒಬ್ಬರಿಗಿಂತ ಒಬ್ಬರು ಮಿಗಿಲು.* ಒಬ್ಬಳು ರೂಪದಲ್ಲಿ ರತಿಯಾಗಿದ್ದರೆ, ಮತ್ತೊಬ್ಬಳು ಸೌಂದರ್ಯದಲ್ಲಿ ಸತಿಯಾಗಿದ್ದಳು. ಗುಣಗಳಿಂದ ಇಬ್ಬರೂ ಗಂಗೆ-ಗೌರಿಯಂತೆ ಪತಿಗೆ ಅನುಕೂಲರಾಗಿದ್ದರು.

---

* 'ಕಾಂತಾಯುಗ್ಮೇ ಕನಕವತನೆ ಚಾರುವರ್ಕೇಷ ಪ್ರತೀಕೆ' ಸಂಕರ್ಷಣಾಚಾರ್ಯರ ಜಯತೀರ್ಥ ವಿಜಯ.

ಒಂದು ಮದುವೆಯಂತೂ ಧೋಂಡೋಪಂತರಿಗೆ ಅವರ ಹದಿಮೂರನೇ ವಯಸ್ಸಿಗೇ ಆಯಿತು. ಕುಪ್ಪಸಗೀ ಹಳ್ಳಿಯ ಭೀಮಾಬಾಯಿ ಎಂಬ ಸಾಧ್ವಿಮಣಿಯೇ ಅವರ ಪ್ರಥಮ ಪತ್ನಿ.1

2ಧೊಂಡೋಪಂತರಿಗೆ ಶೇಷಾದ್ರಿ ಎಂಬ ಒಬ್ಬ ಸತ್ಪುತ್ರನಿದ್ದನು. ಈ ಮನೆತನದಲ್ಲಿ ಶೇಷ ದೇವರ ಉಪಾಸನೆಯು ವಿಶೇಷವಾಗಿ ಇದ್ದಂತೆ ಕಂಡುಬರುತ್ತಿದೆ. ಮಂಗಳವೇಢೆಯಲ್ಲಿರುವ ಈ ದೇಶಪಾಂಡೆ ಮನೆತನದಲ್ಲಿ ಈ ಶೇಷಾದ್ರಿ ಮತ್ತು ಧೋಂಡೋಪಂತ ಹೆಸರುಗಳನ್ನು ಮೇಲಿಂದ ಮೇಲೆ ಎಲ್ಲ ತಲೆಮಾರುಗಳಲ್ಲಿಯೂ ಇಡುತ್ತ ಬಂದದ್ದನ್ನು ನಾವು ಕಾಣಬಹುದು.

ಧೋಂಡೋಪಂತರು ಆ ಕಾಲದಲ್ಲಿ ಹಿಂದುತ್ವದ ಪ್ರಾಪ್ರತಿಷ್ಠಾಪಕರಾದ ಮಹಾ ಪರಾಕ್ರಮಿ ಪುರುಷರಾಗಿದ್ದರು. ಅವರು ಕಟ್ಟಿ ನಿಲ್ಲಿಸಿದ ವೀರ ಅಶ್ವಾರೋಹಿಗಳ ಬಲಿಷ್ಠವಾದ ದಳವು ಅವರು ಇಡೀ ನಾಡಿಗೆ ಹೆಮ್ಮೆಯ ಹಾಗೂ ಸಂರಕ್ಷಣ ದಕ್ಷವಾದ ವೀರ ವೃಂದವಾಗಿದ್ದಿತು. ಧೋಂಡೋಪಂತರು ಕೈಯಲ್ಲಿ ಖಡ್ಗವನ್ನು ಹಿಡಿದು ರಕ್ಷಣ ಮಾಡುತ್ತಿರುವವರೆಗೆ ವಿಜಯನಗರದ ವಿರುದ್ಧವಾಗಿ ತಲೆ ಎತ್ತಿದ ಮುಸಲ್ಮಾನರ ಬಾಮಿನೀ ರಾಜ್ಯಕ್ಕೆ ಕನ್ನಡ ಮಹಾರಾಷ್ಟ್ರ ದೇಶಗಳಲ್ಲಿ ಬಲವಾಗಿ ಕಾಲೂರಲಿಕ್ಕೆ ಆಗಿರಲಿಲ್ಲ. ಬಾಮಿನಿ ಸುಲ್ತಾನ ಅಲ್ಲಾವುದ್ದೀನನ ದಾಳಿಯನ್ನು ಎದುರಿಸಿದ ಧೀರರೆಂದರೆ ಧೋಂಡೋಪಂತರೊಬ್ಬರೇ.

ಧೋಂಡೋಪಂತರ ಇಂಥ ಅನೇಕ ದುಷ್ಟದಮನ ಶಿಷ್ಟಪಾಲನ, ರಾಷ್ಟ್ರರಕ್ಷಣ ಮುಂತಾದ ಲೋಕೋಪಕಾರಕ ಕಾರ್ಯಗಳ ಮತ್ತು ಅನೇಕ ದಿಗ್ವಿಜಯಗಳಲ್ಲಿಯ ಶೌರ್ಯ, ಧೈರ್ಯಗಳ ವೀರವೃತ್ತಾಂತದ ವಿಶದವರ್ಣನೆಯನ್ನು ನಾವು ಕರ್ಕಿಹಳ್ಳಿ ಶ್ರೀನಿವಾಸಾಚಾರ್ಯರ "ಜಯೀಂದ್ರೋದಯ" ಕಾವ್ಯದಿಂದ ಅರಿತುಕೊಳ್ಳಬಹುದು.

ಹೀಗೆ ಧೋಂಡೋಪಂತರಿಗೆ ಸಂತಾನ, ಸಂಪತ್ತು, ಅಧಿಕಾರ, ರಾಷ್ಟ್ರ ರಕ್ಷಣಾ ದಕ್ಷವಾದ ಪರ್ಯಾಪ್ತ ಸಾಮರ್ಥ್ಯ, ಅನುಕೂಲ ಸತೀದ್ವಯ, ಸಕಲಸಿದ್ಧವಾದ ಭೋಗಭಾಗ್ಯದ ಸಾಮಗ್ರಿ ಸಲಕರಣೆಗಳು ಸಮೃದ್ಧವಾಗಿದ್ದರೂ—

"ತ್ಯಕ್ತ್ವಾಶೇಷೋ ಯತಿರಯ ಮಭೂತ್ ಸ್ವವಲೋಕೇ ವಿರಕ್ತಿ॥"

---

1 ಸತ್ಕಥಾ ಪುಟ ೨೭.

2 ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ವೃಷ ಸಂವತ್ಸರದ ಆಷಾಢ ಮಾಸದ ಸಂಚಿಕೆ ೮೩ ನೇ ಪುಟ.

ಇಷ್ಟೆಲ್ಲ ಸುಖವಿಲಾಸ ಸೌಭಾಗ್ಯ ಸಮೃದ್ಧಿಯನ್ನು ಬಿಟ್ಟು ಸಿದ್ಧಾರ್ಥ ಬುದ್ಧ ನಂತೆ ಅವರು ಒಮ್ಮೆಲೆ ವಿರಕ್ತರಾಗಿ ಅಕ್ಷೋಭ್ಯತೀರ್ಥರ ಶಿಷ್ಯರಾಗಿ ಸನ್ಯಾಸಾ-ಶ್ರಮಕ್ಕೆ ಸಿದ್ಧರಾದರು. ಸರ್ವಸಂಗವನ್ನೂ ತೊರೆದು ಮನೆ-ಮಾರುಗಳನ್ನು ಮರೆ ತರು. ವಿಷಯ ಸುಖಗಳನ್ನೆಲ್ಲ ಜರಿದರು. ಮನೆ, ಮಕ್ಕಳು, ಮಡದಿಯರ ಮಾಯಾ ಬಂಧನಗಳನ್ನೆಲ್ಲ ಹರಿದರು. ಅಧ್ಯಾತ್ಮ ಪ್ರಪಂಚದಲ್ಲಿ ಸಾಧಕರಾಗಿ ಸದ್ಗುರುವಿನ ಶಿಷ್ಯತ್ವವನ್ನು ವಹಿಸಿ ಸಾಧನಪಥದಲ್ಲಿ ಮುಂದುವರೆದರು. ಗೌತಮ ಬುದ್ಧನಂತೆ ಜನಿಸಿದ ವೈರಾಗ್ಯ ವಿಷಯ ಜಿಹಾಸೆಯನ್ನು ಅಪದ್ಧ ಮಾರ್ಗದಲ್ಲಿ ಹರಿಬಿಡದಂತೆ ವೇದಶಾಸ್ತ್ರೋದಿತವಾದ ಮೋಕ್ಷ ಮಾರ್ಗದಲ್ಲಿ ಶ್ರೀ ಮಧ್ವಮುನಿಗಳು ತೋರಿದ ಹೆದ್ದಾರಿಯಲ್ಲಿ ನಡೆಯಲು ಸಿದ್ಧರಾದರು.

ರಘುನಾಥಪಂತರಿಗೆ ಮಗನ ಈ ಆಕಸ್ಮಿಕ ವೈರಾಗ್ಯದ ಸುದ್ದಿ ತಿಳಿಯಿತು. ಅವರು ಧಾವಿಸಿ ಶ್ರೀ ಅಕ್ಷೋಭ್ಯತೀರ್ಥರಿದ್ದಲ್ಲಿ ಬಂದರು. ವೀರವರೇಣ್ಯನಾದ ಧೊಂಡೋ ಪಂತನು ವೈರಾಗ್ಯದ ಮೂರ್ತಿಯಾಗಿ ಗುರುವಿನ ಎದುರು ಕೈಮುಗಿದು ಕುಳಿತು ಕೊಂಡಿದ್ದನು.

ರಘುನಾಥಪಂತರಿಗೆ ಕೈಗೆ ಬಂದ ಮಗ ಒಮ್ಮೆಲೆ ಸನ್ಯಾಸಿಯಂತೆ ಸರ್ವಸಂಗ ವನ್ನು ಪರಿತ್ಯಾಗಮಾಡಿ ಬೈರಾಗಿ ಆಗಿ ಕುಳಿತಿದ್ದನ್ನು ಕಂಡು ಕೆಟ್ಟ ಸಂಕಟವಾಯಿತು. ಅತ್ಯಂತ ಪರಾಕ್ರಮಿಯಾದ ಆ ಮಗನಿಂದ ಮುಂದೆ ಅವರು ತಮ್ಮ ಮನೆತನದ ಲೌಕಿಕ ಅಭ್ಯುದಯದ ಕನಸನ್ನು ಕಂಡಿದ್ದರು. ಅವರ ಸ್ವಪ್ನಸುಂದರವಾದ ಆ ಮನೋರಥದ ಗೋಪುರದ ಕಟ್ಟಡವೆಲ್ಲ ಮಗನ ಆಕಸ್ಮಿಕ ಸನ್ಯಾಸ ಸಂಕಲ್ಪದಿಂದ ಮುರಿದು ಮಣ್ಣು ಪಾಲಾಗಿತ್ತು.

ಮೊದಲು ಅವರು ಆ ಮಗನನ್ನು ಬೈಯುವದಕ್ಕಿಂತ ಗೊಡ್ಡು ವೈರಾಗ್ಯದ ಅಡ್ಡದಾರಿಗೆ ಎಳೆದ ಶ್ರೀ ಅಕ್ಷೋಭ್ಯತೀರ್ಥರನ್ನೇ ಹೀನಾಮಾನವಾಗಿ ಬೈಯತೊಡಗಿದರು.

"ಎಳೆ ವಯಸ್ಸಿನ ಈ ತರುಣ ಕುಮಾರನನ್ನು ಶ್ಯಾಟಿ ಉಡಿಸಿ ಸನ್ಯಾಸಿ ಯನ್ನಾಗಿ ಮಾಡಲು ನಿಮಗೆ ತಿಳಿಯುವದಿಲ್ಲವೇ ? ಇಂಥ ಪ್ರಾಯದಲ್ಲಿ ಸುಖ ಸಂಪತ್ತು ಗಳ ಸಮೃದ್ಧಿಯಲ್ಲಿ ಇದ್ದ ಈ ಮಗನು ಬೈರಾಗಿಯಾಗಿ ಕುಳಿತರೆ ಹಡೆದ ತಾಯಿ ತಂದೆ ಗಳ ಗತಿ ಏನು ? ಪಡೆದ ಪುತ್ರರ ಗತಿ ಏನು ? ಕೈಹಿಡಿದ ಮಡದಿಯ ಪಾಡೇನು ? ನಾನು ಗಳಿಸಿದ, ಅವನು ಬೆಳೆಸಿದ ಆಸ್ತಿಪಾಸ್ತಿಗಿಗೆ ಯಾರುದಿಕ್ಕು ? ಇಂಥ ಎಳೆವರೆಯ ದಲ್ಲಿ ಈ ನಮ್ಮ ಕೂಸಿನ ಸರ್ವ ಸಮೃದ್ಧವಾದ ಬಾಳನ್ನೆಲ್ಲ ಹಾಳುಗೈದು ನಮ್ಮ ಕುಟುಂಬವನ್ನೇ ಹಾಳುಮಾಡುವ ನಿಮ್ಮಂಥ ಸನ್ಯಾಸಿಗಳಿಗೆ ಏನು ಮಾಡಬೇಕು ? ಬಹಳ ದೊಡ್ಡವರಿದ್ದೀರಿ ಸಾಕು ನಿಮ್ಮ ಸಹವಾಸ. ನಿಮ್ಮ ದಿಕ್ಕಿಗೆ ನೂರು ನಮಸ್ಕಾರ.

ಒಳ್ಳೆ ಮಾತಿನಿಂದ ಈಗ ನನ್ನ ಮಗನನ್ನು ಮನೆಗೆ ಕಳಿಸಿಕೊಡಿರಿ. ಅವನ ಮೇಲೆ ಅವಲಂಬಿಸಿರುವ ಇಷ್ಟು ಜನರನ್ನೆಲ್ಲ ಕಷ್ಟಕ್ಕೆ ಗುರಿ ಮಾಡಿದರೆ ನಿಮಗಾವ ದೇವರೂ ಮೆಚ್ಚಲಾರ. ಪ್ರಪಂಚದಲ್ಲಿ ರಾಜ್ಯ, ಐಶ್ವರ್ಯ, ಕೀರ್ತಿ, ಅಧಿಕಾರ ಪ್ರತಿಷ್ಠೆಗಳಿಂದ ಮುಂದಾಗಲಿರುವ ನಮ್ಮ ಮನೆತನದ ಈ ವೀರ ಯುವಕನನ್ನು ಮಂಡೆ ಬೋಳಿಸಿ ಕೂಡಿಸಿದರೆ ನಮ್ಮೆಲ್ಲರ ಕರುಳಿಗೂ ಕೊಳ್ಳಿ ಇಟ್ಟಂತಾಗುವದು"

ತಂದೆಯ ಈ ಅಬ್ಬರವನ್ನು ಕೇಳಿ ಅಕ್ಷೋಭ್ಯತೀರ್ಥರು ಸೌಮ್ಯವಾಗಿಯೇ ನಕ್ಕು "ನಿಮ್ಮ ಮಗುವನ್ನು ಮನೆಗೆ ಕರೆದುಕೊಂಡು ಹೋಗಿರಿ." ಎಂದು ಹೇಳಿ ಧೋಂಡೋಪಂತರಿಗೆ ತಂದೆಯ ಆಜ್ಞೆಯಂತೆ ನಡೆಯಲು ಹೇಳಿದರು.

ಧೋಂಡೋಪಂತರಲ್ಲಿ ಅವಧೂತಚರ್ಯೆಯು ಕಾಣಿಸಿಕೊಂಡಿತ್ತು. ಸಮಲೋಷ್ಟಾಶ್ಮಕಾಂಚನದ ಸ್ಥಿತಪ್ರಜ್ಞನ ವೈರಾಗ್ಯದ ಮಟ್ಟಕ್ಕೆ ಮುಟ್ಟಿತ್ತು ಅವರ ಮನಸ್ಸು.

ದ್ವಂದ್ವಾತೀತವಾದ ಧೋಂಡೋಪಂತರಿಗೆ ಈಗ ಅಂತಃಪುರವೂ ಅಷ್ಟೇ! ಏಕಾಂತವನಾಂತವೂ ಅಷ್ಟೇ! ಉಪವನದಲ್ಲಿ ಉಲ್ಹಾಸವಿಲ್ಲ. ತಪೋವನದಲ್ಲಿ ವಿರಾಗವಿಲ್ಲ. ಎಲ್ಲಿ ಕುಳಿತರೂ— ದೇವರ ಧ್ಯಾನ, ವೇದಾಂತ ಚಿಂತನ. ಹೃದಯದಲ್ಲಿ ನಿರಂತರವೂ ತತ್ವಮಂಥನ.

ಅವರು ಮರುಮಾತನಾಡದೇ ತಂದೆಯ ಜೊತೆಗೆ ಮನೆಗೆ ಬಂದರು. ಮಗ ಮನೆಗೆ ಬಂದಕೂಡಲೇ ತಾಯಿಗೆ ಸಂತಸದ ಮೇರೆ ಮೀರಿತು. ಅವರ ಮಡದಿಯರಿಗೆ ಪರಮಾನಂದವಾಯಿತು. ಇಡಿ ದೇಶಪಾಂಡೆಯವರ ಮನೆತನ ಮಾತ್ರವಲ್ಲ, ಸಮಗ್ರ ಪಟ್ಟಣವೇ ಆನಂದದಿಂದ ತನ್ನ ಒಡೆಯನನ್ನು ಪಡೆದು ನಕ್ಕು ನಲಿಯಿತು.

ಆದರೆ ಧೋಂಡೋಪಂತರು ಪೂರ್ತಾವಧೂತ, ಸ್ಥಿತಪ್ರಜ್ಞ. ಯಾರೊಡನೆಯೂ ಹೆಚ್ಚಿನ ಮಾತಿಲ್ಲ. ಯಾವದಕ್ಕೂ ನಿಷೇಧವಿಲ್ಲ. ಹೇಳಿದಲ್ಲಿ ಕೂಡುತ್ತಿದ್ದರು. ಕರೆದಲ್ಲಿ ಬರುತ್ತಿದ್ದರು. ಹಾಕಿದ್ದನ್ನು ಉಣ್ಣುತ್ತಿದ್ದರು. ಆ ಮೊದಲಿನ ನಗೆ ಇಲ್ಲ. ಮೆಚ್ಚಿನ ಮಡದಿಯರು ಮುಂದೆ ಬಂದು ನಿಂತಾಗ ಆ ಪ್ರೇಮದ ಬಗೆ ಇಲ್ಲ. ಮಾತಿನಲ್ಲಿ ವಿನೋದವಿಲ್ಲ, ವಿಲಾಸವಿಲ್ಲ. ಮುತ್ತಿನಂಥ ಮಗನನ್ನು ಮುಂದೆ ಕೂಡಿಸಿದರೂ ಮೊದಲಿನಂತೆ ಮುದ್ದಾಡುವ ರಾಗೋದ್ರೇಕವಿಲ್ಲ. ಯಾವಾಗಲೂ ಅಂತರ್ಮುಖನಾಗಿಯೇ ಇರುತ್ತಿದ್ದರು. ಆ ಸನ್ಯಾಸಿಯ ಸೋಬತಿ ಈ ತಮ್ಮ ಮಗನಲ್ಲಿ ಅಕಾಲಿಕವಾದ ಈ ವೈರಾಗಿಯ ಭಾವವನ್ನು ಹುಟ್ಟಿಸಿದೆ. ಈಗ ಇನ್ನೂ ಆ ಉಪದೇಶದ ಪ್ರಭಾವವು ಅವನಲ್ಲಿ ಗಾಢವಾಗಿದೆ. ಕೆಲದಿನಗಳಾದ ಬಳಿಕ ಮುಂದೆಲ್ಲವೂ ತಾನೇ ಸರಿ ಹೋಗುವನು ಎಂದು ತಾಯಿ-ತಂದೆಗಳು ಭಾವಿಸಿದರು.

ಅಂದು ಧೋಂಡೋಪಂತರಿಗೆ ಸಂಭ್ರಮದಿಂದ ಅಭ್ಯಂಗ ಸ್ನಾನವನ್ನು ಮಾಡಿಸ ಲಾಯಿತು. ಮಧ್ಯಾನ್ಹದಲ್ಲಿ ಅವರ ತಂದೆ, ಮಗ ಮರಳಿ ಬಂದ ಸಂತೋಷದಿಂದ ತಮ್ಮ ಇಷ್ಟಮಿತ್ರರಿಗೆಲ್ಲ ಭಾರಿ ಔತಣವನ್ನು ಏರ್ಪಡಿಸಿದ್ದರು. ಧೋಂಡೋಪಂತರು ಎಲೆಯ ಮುಂದೆ ಕುಳಿತಿದ್ದರೂ ಅವರ ಚಿತ್ತವೆಲ್ಲ ಅಕ್ಷೋಭ್ಯತೀರ್ಥರ ಉಪದೇಶ ದಲ್ಲಿಯೇ ನೆಟ್ಟಿತ್ತು. ಸಾಕು—ಇಲ್ಲ, ಬೇಕು—ಇಲ್ಲ, ಹಾಕಿದ್ದನ್ನೆಲ್ಲ ತಿಂದರು, ಬಡಿ ಸಿದ್ದನ್ನೆಲ್ಲ ಉಂಡರು.

ಅಂದು ರಾತ್ರಿ ಅವರ ಶಯ್ಯಾಗೃಹವನ್ನು ಶೃಂಗಾರ ಮಾಡಲಾಯಿತು. ಸುಸ ಜ್ಜಿತವಾದ ಆ ಶಯನ ಮಂದಿರದಲ್ಲಿ ಅವರನ್ನು ಶೃಂಗಾರ ರಂಗ ಮಂಚದ ಮೇಲೆ ಕುಳ್ಳಿರಿಸಲಾಯಿತು. ರತಿ, ರಂಭೆಯರನ್ನು ನಾಚಿಸುವವರೂ, ರೂಪಶ್ರೀಯನ್ನು ತಮ್ಮ ಅಂಗಾಂಗಗಳಲ್ಲಿ ಚಿಮ್ಮುತ್ತ ಅವರ ಮಡದಿಯರಿಬ್ಬರೂ ಬಂಗಾರ ಬಟ್ಟಲಲ್ಲಿ ಕೇಶರ ಹಾಲನ್ನು ಹಿಡಿದುಕೊಂಡು ಶಯನಾಗರವನ್ನು ಪ್ರವೇಶಿಸಿದರು.

ಅಲ್ಲಿ ಅವರು ಕಂಡ ದೃಶ್ಯವು ಭಯಾನಕ ವಾಗಿದ್ದಿತು. ಅಲಂಕೃತವಾದ ಆ ಹಂಸದುಪ್ಪಳದ ಹಾಸಿಗೆಯ ಮೇಲೆ ತಮ್ಮ ಪ್ರೀತಿಯ ಪತಿಯ ಬದಲು ಐಯ್ದು ಹೆಡೆಯ ಹಾವು ಹೆಡೆ ಬಿಡಿಸಿ ಕುಳಿತುಕೊಂಡಿತ್ತು. ಅದನ್ನು ಕಂಡು ಆ ಇಬ್ಬರೂ ಕಾಮಿನಿಯರು ಚಿಟ್ಟನೇ ಚೀರಿದರು. ತಂದೆ-ತಾಯಿಗಳು, ಬಂಧು-ಬಳಗದವರು ಎಲ್ಲರೂ ಗಾಬರಿಯಾಗಿ ಒಳಗೆ ಹೋಗಿ ನೋಡಿದರು. ಎಲ್ಲರಿಗೂ ಶೇಷ ದರ್ಶನ. ಅವರಿಗೆಲ್ಲ ಖಾತರಿಯಾಯಿತು— ಈ ಧೋಂಡೋಪಂತ ಇನ್ನು ಮೇಲೆ ದುಕ್ಕುವ ತುತ್ತಲ್ಲ, ಇವನಾರೊ ದೈವೀ ಪುರುಷ.

ಅವರನ್ನು ನೋಡಿದವರಿಗೆಲ್ಲ ನಿಚ್ಚಳವಾಗಿ ತೋರಿಬರುತ್ತಿತ್ತು— ಇವರಲ್ಲಿ ಯಾವದೋ ದೈವೀ ಚೇತನ ಸವಾರಿಯಾಗಿದೆಂದು. ಅವರೆಲ್ಲರೂ ಕೂಡಿ ವಿಚಾರ ಮಾಡಿ ಇವರನ್ನು ಒಯ್ದು ಶ್ರೀ ಅಕ್ಷೋಭ್ಯತೀರ್ಥರಿಗೆ ಒಪ್ಪಿಸುವದೇ ವಾಸಿಯೆಂದು ನಿರ್ಧರಿಸಿದರು. ಇಂಥ ಪುಣ್ಯ ಪುರುಷರು ಇಷ್ಟು ದಿನವಾದರೂ— ಕೂಡಿ, ಆಡಿ, ಓಡಾಡಿ ತಮ್ಮ ಜೊತೆಗೆ ಇದ್ದದ್ದೇ ತಮ್ಮೆಲ್ಲರ ದೊಡ್ಡ ಭಾಗ್ಯವೆಂದು ಕೊಂಡರು ಅವರ ಬಂಧು-ಬಳಗದವರೆಲ್ಲ.

ಜಗದೋದ್ಧಾರ ಮಾಡುವ ಈ ಮಹಾಪುರುಷನನ್ನು ಸಂಸಾರದ ಬಂಧನಕ್ಕೆ ಸಿಲುಕಿಸಿ ಮುಂದೆ ಈ ಮಹಾಪುರುಷರಿಂದ ಆಗಬೇಕಾದ ಲೋಕೋದ್ಧಾರ ಕಲ್ಯಾ ಣದ ಮಹಾ ಕಾರ್ಯಕ್ಕೆ ನಾವು ಆತಂಕವಾಗುವದು ಬೇಡ. ಈ—ಇಂಥ ಸತ್ಪುರು ಷರ ಕೈಹಿಡಿದು ಅವರ ಕೈಯಿಂದಲೇ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟಿಸಿ ಕೊಂಡು ಇಷ್ಟು ವರ್ಷ ಈ ಮಹಾಪುರುಷರೊಂದಿಗೆ ಸಂಸಾರ ಮಾಡಿದ್ದೇ ನಮ್ಮ

ಅಹೋಭಾಗ್ಯ ಎಂದು ಇಬ್ಬರೂ ಮಡದಿಯರು ಧೋಂಡೋಪಂತರ ಹತ್ತಿರ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದರು. ತಂದೆ ತಾಯಿಗಳೂ ದುಃಖದಿಂದ ಅವರನ್ನು ಬೀಳ್ಕೊಟ್ಟರು. ಧೋಂಡೋಪಂತರು ಅಲ್ಲಿಂದ ಹೊರಟು ನೇರವಾಗಿ ಶ್ರೀ ಅಕ್ಷೋಭ್ಯ ತೀರ್ಥರಿದ್ದಲ್ಲಿ ಬಂದರು. 'ಶಿಷ್ಯಸ್ತೇಹಂ' ಎಂದರು.

ಸರ್ವೇಷಾಂ ಅಭಯಂ ದತ್ವಾ ಆಗಮಿಸಿದ ಈ ಶಿಷ್ಯೋತ್ತಮನಿಗೆ ಅಕ್ಷೋಭ್ಯ ತೀರ್ಥರು ಆನಂದದಿಂದ ಸನ್ಯಾಸಾಶ್ರಮವನ್ನಿತ್ತು 'ಜಯತೀರ್ಥ'ರೆಂದು ನಾಮಕರಣ ಮಾಡಿ ಸರ್ವಜ್ಞ ಸಿಂಹಾಸನಕ್ಕೆ ಪಟ್ಟಗಟ್ಟಿದರು. ಅಂದಿನಿಂದ ಜಯತೀರ್ಥರಿಗೆ ಸರ್ವಜ್ಞಾಚಾರ್ಯರ ಗ್ರಂಥಗಳ ಪಾಠವು ಪ್ರಾರಂಭವಾಯಿತು.

ಅಕ್ಷೋಭ್ಯತೀರ್ಥರು ತಮ್ಮ ಗುರುಗಳಲ್ಲಿ ವೇದಾಂತಪಾಠವನ್ನು ಬಹು ಆಸ್ಥೆ ಯಿಂದ ಕೇಳಿದವರು. ಆನಂದತೀರ್ಥರ ಮುಖಾರವಿಂದದಿಂದ ಉದುರಿದ ಪ್ರತಿಯೊಂದು ಮಾತು ಮುತ್ತುಗಳನ್ನು ಅವರು ಎತ್ತಿಕೊಂಡಿದ್ದರು. ತಮ್ಮ ಹೃದಯದಲ್ಲಿ ಒತ್ತಿ ಕೊಂಡಿದ್ದರು. ತಮ್ಮ ಮಿದುಳು ತುಂಬ ಮೆತ್ತಿಕೊಂಡಿದ್ದರು. ಅವರ ಪಾಠವನ್ನು ಕೇಳು ವಾಗ ಜಯತೀರ್ಥರಿಗೆ ತಾವು ಮತ್ತೊಮ್ಮೆ ಎತ್ತಾಗಿ ಆನಂದತೀರ್ಥರ ಎದುರೇ ಕುಳಿತಿದ್ದೇವೊ ಎಂದು ಎನಿಸುತ್ತಿತ್ತು. ತಮ್ಮ ಸ್ಮೃತಿ ಮಂಜೂಷಿಕೆಯಲ್ಲಿ ಆಚಾ ರ್ಯರ ಶಬ್ದಗಳೆಂಬ ಮಣಿ ಮುಕ್ತಾ ಮಂಜರಿಗಳನ್ನು ಜತನದಿಂದ ಕಾದಿಟ್ಟುಕೊಂಡು ಶ್ರೀ ಅಕ್ಷೋಭ್ಯತೀರ್ಥರು ಆ ಎಲ್ಲ ಐಶ್ವರ್ಯವನ್ನು ಸೂರೆ ಮಾಡಿದರು.

ಅವರ ಉಪಕಾರವನ್ನು ಶ್ರೀ ಜಯತೀರ್ಥರು—

"ಅಕ್ಷೋಭ್ಯತೀರ್ಥಗುರುಣಾ ಶುಕವತ್ ಶಿಕ್ಷಿತಸ್ಯ ಮೇ"

ಎಂದು ಪುಳಕತುಳಕಿತರಾಗಿ ಹರ್ಷಗೊಂಡು ಹಾಡಿದ್ದಾರೆ.

ಆಚಾರ್ಯರ ಪಾಠವನ್ನು ಎತ್ತಾಗಿ ಕೇಳಿದ ಜಯತೀರ್ಥರಿಗೆ ಶ್ರೀ ಅಕ್ಷೋಭ್ಯ ತೀರ್ಥರಿಂದ ಮತ್ತೊಮ್ಮೆ ಚಿಂತನೆಯಾದಂತಾಯಿತು. ಸರ್ವಜ್ಞರ ಹೃದಯ ಪುನಃ ಸಾಕ್ಷಾತ್ಕಾರವಾದಂತಾಗಿ ಸ್ವಯಂ ಅವರೂ ಕೂಡ ಸರ್ವಜ್ಞಕಲ್ಪರೇ ಆದರು. ಆನಂದ ತೀರ್ಥರ ದಿವ್ಯ ಜ್ಞಾನಾಮೃತವೆಲ್ಲವೂ ಅವರ ತಲೆಯಲ್ಲಿ ಕಡಲಾಡತೊಡಗಿತು.

ತಮ್ಮ ಶಿಷ್ಯೋತ್ತಮನ ಮಿದುಳಿನಲ್ಲಿ ಮೊರೆಯುವ ಜ್ಞಾನ ಶರಧಿಯ ತೆರೆ–ನೊರೆಗಳನ್ನು ಕಂಡ ಅಕ್ಷೋಭ್ಯತೀರ್ಥರಿಗೆ ತಮ್ಮ ಆಯ್ಕೆ ಸರಿಯಾಗಿದೆಂದು ಹೆಮ್ಮೆ ಎನಿಸಿತು. ಗುರುಗಳ ಆದೇಶವು ತಮ್ಮಿಂದ ಸರಿಯಾಗಿ ಪಾಲಿಸಲ್ಪಟ್ಟಿತೆಂದು ತೃಪ್ತಿ ಎನಿಸಿತು.

ಇಂಥ ಪಂಡಿತೋತ್ತಮ ಪರಿವ್ರಾಜಕರಾದ ಜಯತೀರ್ಥರಿಗೆ ಪರವಾದಿ ನಿಗ್ರಹ ಮಾಡಿ ವಿಷ್ಣುಸರ್ವೋತ್ತಮತ್ವವನ್ನು ಎಲ್ಲೆಡೆಗೂ ಪ್ರಸಾರಮಾಡಿ ಬರಬೇಕೆಂದು ಅಪ್ಪಣೆಯಿತ್ತು ಅವರಿಗೆ ಕೆಲವೊಂದು ಪ್ರತಿಮೆಗಳನ್ನು ಕೊಟ್ಟು ಕಳುಹಿಸಿದರು.

" ಸ್ವಗುರುದತ್ತ ಸುರಪ್ರತಿಮಾದಿಕಾನುಪದಿ ಸಂಪದಿತೋ
ಜಯತೀರ್ಥರಾಟ್ ।
ಭುವಿ ಸದಿಗ್ವಿಜಯಾಯ ತದಾತದಾ ಕಿಲಚಚಾರ ತದೀಯ ಮಾಜ್ಞಯಾ"॥
(ಜಯತೀರ್ಥ ವಿಜಯ)

ಶ್ರೀ ಅಕ್ಷೋಭ್ಯತೀರ್ಥರು ಬದುಕಿ ಇದ್ದಾಗಲೇ ಜಯತೀರ್ಥರು ದಿಗ್ದೇಶಗಳಲ್ಲಿ ದಿಗ್ವಿಜಯ ಮಾಡಿ ಅದ್ವೈತ ಮತದ ಉದ್ದಾಮ ಪಂಡಿತರ ಸದ್ದನ್ನೇ ಅಡಗಿಸಿಬಿಟ್ಟರು. ವಿಶಿಷ್ಟಾದ್ವೈತಮತದ ಶಾಸ್ತ್ರ ವಿರುದ್ಧವಾದ ತತ್ವಗಳನ್ನು ವೇದವೇದಾಂತಗಳ ಉಕ್ತಿ-ಯುಕ್ತಿಗಳಿಂದ ನಿರಾಕರಣ ಮಾಡಿದರು. ಶ್ರೀ ಜಯತೀರ್ಥರ ನಿಶಿತವಾದ ವಾಗ್ಬಾಣಗಳ ಪ್ರಹಾರದಿಂದ ಬೌದ್ಧ ಮತದ ಬುನಾದಿಯೇ ಅಲುಗಾಡಿ ಅವರ ಪುರಾತನವಾದ ತತ್ವಜ್ಞಾನದ ಕಟ್ಟಣವೆಲ್ಲ ಕುಸಿದು ನೆಲಸಮವಾಯಿತು. ಜೈನ ಮತದ ತರ್ಕಜಟಿಲವಾದ ಯುಕ್ತಿ ನಿಚಿತವಾದ ಶಾದ್ವಾದವು ಜಯತೀರ್ಥರ ವಾದಾಟೋಪದ ಮುಂದೆ ನಸ್ಯಾದ್ವಾದವಾಯಿತು. ಇತರ ನಾಸ್ತಿಕ ಮತಗಳು ಕೂಡ ಇವರ ಪ್ರಚಂಡ ಪಾಂಡಿತ್ಯ ಅದ್ಭುತವಾದ ಕೌಶಲ್ಯದ ಮುಂದೆ ತಮ್ಮ ಅಸ್ತಿತ್ವವನ್ನೆ ಕಳೆದುಕೊಂಡವು.

ಹೀಗೆ ಜಗತ್ತಿನಲ್ಲಿ ಮಲೆತು ನಿಂತ ದುರ್ವಾದಿಗಳ ಮತಗಳನ್ನೆಲ್ಲ ಅಕ್ಷರ ಶಹ ಖಂಡನೆಮಾಡಿ ಎಲ್ಲ ಕಡೆಗೂ ಮಧ್ವಮತದ ತತ್ವಗಳನ್ನು ಮನಮುಟ್ಟುವಂತೆ ತಿಳಿಸಿ ಹೇಳಿ ಸತ್ಸಿದ್ಧಾಂತವನ್ನು ಪ್ರಚಾರ ಮಾಡಿ ಅನೇಕ ಸಜ್ಜನರಿಗೆ ಸದ್ವೈಷ್ಣವದೀಕ್ಷೆ ಇತ್ತು ದೇಶದ ಮೂಲೆ–ಮೂಲೆಗೂ ವೈಷ್ಣವ ಮತದ ಜಯಭೇರಿ ಹೊಡೆದು ಜಯ ಧ್ವಜವನ್ನು ಮೆರಿಸಿ ಜಯಪತ್ರಗಳನ್ನು ಸಂಪಾದಿಸಿ ಜಯತೀರ್ಥರು ತಮ್ಮ ಗುರುಗಳಾದ ಅಕ್ಷೋಭ್ಯತೀರ್ಥರಿದ್ದಲ್ಲಿ ಬಂದು ತಮ್ಮ ಈ ಎಲ್ಲ ಗೆಲವು–ಗೈಮೆಗಳನ್ನು ಗುರುಪೂಜೆಯಾಗಿ ಅವರಿಗೆ ಸಮರ್ಪಿಸಿದರು.

ಈ ಅತ್ಯದ್ಭುತ ಲೋಕವಿಲಕ್ಷಣವಾದ ಜಯತೀರ್ಥರು ಮಾಡಿದ ಗುರುಪೂಜೆಯಿಂದ ಅಕ್ಷೋಭ್ಯತೀರ್ಥರು ಪ್ರೀತಿ ಪ್ರಸನ್ನರಾಗಿ ಇಂಥ ಶಿಷ್ಯನನ್ನು ತಮಗೆ ಒದಗಿಸಿದ ತಮ್ಮ ಗುರು ಆನಂದತೀರ್ಥರನ್ನೇ ಮನಸಾ ವಂದಿಸಿದರು.

ಏವಂ ಸಮಸ್ತಾನ್ ಸಮಯಾನ್ನಿರಸ್ಯ ಸಂಪೂರ್ಣಧೀ
ಹೃದ್ಯಪಥಾಜಯೀಂದ್ರಃ ವಿಷ್ಣೋಃ ಪರತ್ವಂ ಪ್ರತಿಪಾದ್ಯ
ಭೂಮಾವಸೌಚಕಾರ ಸ್ವಗುರೋಃ ಸಪರ್ಯಾಃ ॥ "

ಎಂದು ಮುಂತಾಗಿ 'ಜಯೀಂದ್ರೋದಯ' ಕಾವ್ಯದಲ್ಲಿ ಜಯತೀರ್ಥರು ಮಾಡಿದ ಈ ವಿಧವಾದ ಅನೇಕ ಗುರುಪೂಜೆಗಳ ವರ್ಣನೆಯನ್ನು ಮಾಡಿದ್ದಾರೆ.

ಅನಂತರ ಜಯತೀರ್ಥರು ತಮ್ಮ ಸಮಕಾಲೀನರಾದ ವಿಮತೀಯ ವಿದ್ವಾಂಸರನ್ನೆಲ್ಲ ವಾದಮಾಡಿ ಗೆದ್ದು ದ್ವೈತಮತದ ಪ್ರಮಾಣ ಪರಿಶುದ್ಧತೆಯನ್ನು ಜಗತ್ತಿಗೆಲ್ಲ ಸಾರಿ ವೈಷ್ಣವಮತದ ವೈದಿಕತ್ವವನ್ನು ಪ್ರಸ್ಥಾಪಿಸಿ ಈ ದಿವ್ಯವಾದ ತತ್ವಜ್ಞಾನದ ಸದುಪಯೋಗವು ಮುಂದಿನ ಭಾವಿ ಜನಾಂಗಕ್ಕೆ ಆಗಬೇಕು. ಎಲ್ಲ ಕಾಲದ ಸಚ್ಚೇತನರೂ ವಿಷ್ಣು ಮಂದಿರ ಮಾರ್ಗವನ್ನು ಗುರುತಿಸಿ ಆ ಸತ್ ಪಥದಲ್ಲಿ ಮುನ್ನಡೆದು ಸದ್ಗತಿಯನ್ನು ಹೊಂದಬೇಕು, ಹಾಗೂ ಜೈನ, ಬೌದ್ಧ, ಅದ್ವೈತ ಮೊದಲಾದ ನಾಸ್ತಿಕ ಆಸ್ತಿಕ ದುರ್ಮತಗಳು ಮುಂದೆ ಎಂದೂ ತಲೆ ಎತ್ತದಂತೆ ವೇದಾಂತ ಪ್ರಪಂಚದಲ್ಲಿ ಸಕಲ ವಿಧವಾದ ತಾತ್ವಿಕ ಚಿಂತನ ಮಂಥನಗಳನ್ನು ಮಾಡಿ ಅಂತೇ ಸಿದ್ಧ ಸಿದ್ಧಾಂತವಾದ ಮಧ್ವಸಿದ್ಧಾಂತದ ವಾಙ್ಮಯೀನ ವಿಜಯಸ್ತಂಭವನ್ನು ಸಾರಸ್ವತ ಲೋಕದಲ್ಲಿ ಸ್ಥಾಪಿಸಿ ಬಿಡಬೇಕೆಂದು ಸಂಕಲ್ಪಗೈದರು.

ಅದಕ್ಕಾಗಿ ಮಹಾನುಭಾವರಾದ ವಾಙ್ಮಯ ವಿಭೂತಿಗಳಾದ ಜಯತೀರ್ಥರು ವಿವಿಕ್ತ ರಮಣೀಯವಾದ ಎರಗೋಳ ಗ್ರಾಮಕ್ಕೆ ಬಂದರು. ಅಲ್ಲಿಯೇ ಸಮೀಪದಲ್ಲಿರುವ ಒಂದು ಏಕಾಂತ ಗುಹೆಯನ್ನು ತಮ್ಮ ವಾಙ್ಮಯ ತಪೋನುಷ್ಠಾನಕ್ಕೆ ಶ್ರೀ ಜಯತೀರ್ಥರು ಆರಿಸಿಕೊಂಡರು. ಆ ಗುಹೆಯಲ್ಲಿ ಕುಳಿತು ಶ್ರೀಮದಾಚಾರ್ಯರ ಮುಖ್ಯವಾದ ಕಠಿಣ ಗ್ರಂಥಗಳಿಗೆಲ್ಲ ಟೀಕೆಯನ್ನು ಬರೆಯಲು ಪ್ರಾರಂಭಿಸಿದರು.

ಆ ಕಾಲದಲ್ಲಿ ಟೀಕಾಚಾರ್ಯರ ಶಾಸ್ತ್ರೋಕ್ತ ವಾಙ್ಮಯ ತಪಶ್ಚರ್ಯೆಯು ಅತ್ಯಂತ ಶ್ಲಾಘನೀಯವೂ, ಅನುಕರಣೀಯವೂ, ಆದರ್ಶವೂ ಆಗಿದ್ದಿತು. ಸಂಸ್ಥಾನದ ಯಾವ ವ್ಯಾಪ ವ್ಯಗ್ರತೆ ಇಲ್ಲ. ಸ್ವಾಮಿಗಳ ಭಿಕ್ಷೆ, ಪಾದಪೂಜೆಗಳ ಗಲಾಟೆ ಇಲ್ಲ. ಜನರ ಜೊತೆಗೆ ಮಾತು-ಕತೆ ಇಲ್ಲ. ಊಟದ ಸಡಗರವಿಲ್ಲ. ವಾಸದ ಚಿಂತೆ ಇಲ್ಲ.

"ಯತಿವರತಿಲಕೋಽಸೌ ಯಾವನಾವಾದ್ವಾಸ"

ಇರಲಿಕ್ಕೆ ಪ್ರಕೃತಿ ನಿರ್ಮಿತ ಗುಹೆ, ಉಣ್ಣಲಿಕ್ಕೆ ಶಿಷ್ಯರು ಶ್ರೋತ್ರಿಯ ಗೃಹದಿಂದ ಭಿಕ್ಷೆ ಬೇಡಿ ತಂದ ಜೋಳದ ನುಚ್ಚೋ, ರೊಟ್ಟಿಯೋ ಯಾವದಾದರೂ ಅಷ್ಟೆ. ಹಗಲು ರಾತ್ರಿ ಆಚಾರ್ಯರ ಸಚ್ಛಾಸ್ತ್ರ ಪ್ರವಚನ, ಸದ್ಗ್ರಂಥ ಲೇಖನ.

ಇದನ್ನೇ ಶ್ರೀ ಕೃಷ್ಣನು— "ವಾಙ್ಮಯಂ ತಪ ಉಚ್ಯತೇ" ಎಂಬ ವಚನದಿಂದ ವಾಙ್ಮಯ ತಪಸ್ಸು ಎಂದು ಕರೆದಿದ್ದಾನೆ.

ಇಂಥ ವಾಙ್ಮಯ ತಪಸ್ಸನ್ನು ಮಾಡುತ್ತ ಶ್ರೀಮದಾನಂದತೀರ್ಥರ ದಿವ್ಯ ಗ್ರಂಥಗಳನ್ನು ಕಣ್ಣೆದುರಿಟ್ಟುಕೊಂಡು ಜಯತೀರ್ಥರು ಅವುಗಳ ಟೀಕೆ ಬರೆಯ ಬೇಕೆಂದು ಕುಳಿತಾಗ ಹೊಸ-ಹೊಸ ಅರ್ಥ, ಭಾವಗಾಂಭೀರ್ಯ, ಘನತೆ, ಗೌರವ ಗಳು ಅವರ ಪ್ರತಿಯೊಂದು ಪದಪಂಕ್ತಿಗಳಲ್ಲಿಯೂ ತೂರಿ ಬಂದಂತೆ, ತೋರಿ ಬಂದಂತಾಗುತ್ತಿತ್ತು.

ಅವರು ಅರ್ಜುನನಾದಾಗ, ವೃಷಭನಾದಾಗ-ಆ ಗುರು ಭೀಮ, ಮಧ್ವರು ಹೇಳಿದ ಅರ್ಥವೆಲ್ಲವೂ ಆ ಸರ್ವಮೂಲ ಗ್ರಂಥದ ವಚೋವಿನ್ಯಾಸದಲ್ಲಿ ಈಗ ಸ್ವಂಸ್ಫೂರ್ತವಾಗಿ ತಿಳಿದು ಬರುತ್ತಿತ್ತು. ಆನಂದತೀರ್ಥರ ಒಂದೊಂದು ಪದ್ಯ ವಚನದ ಸ್ವಾರಸ್ಯ, ಸೌಂದರ್ಯವನ್ನು ಕಂಡುಂಡು ತೃಪ್ತಿಗೊಂಡ ಜಯತೀರ್ಥರ ಮನಸ್ಸು ದುಂಬಿಯಂತೆ ಆ ಅರ್ಥ ಸೌರಭದ ಮಧುರ ಝುಂಕಾರವನ್ನು ನಾದಗೈಯುತ್ತ ಅಲ್ಲಿಯೇ ಸುತ್ತು ತ್ತಿತ್ತು. ಈ ಮಾತಿನ ಅನುಭವವು ಅವರಿಗೆ ಶ್ರೀ ಮಧ್ವಾಚಾರ್ಯರ ಅನುವ್ಯಾ ಖ್ಯಾನ ಗ್ರಂಥವನ್ನು ಕೈಯಲ್ಲಿ ಹಿಡಿದಕೂಡಲೇ ಆಯಿತು.

"ಅನುವ್ಯಾಖ್ಯಾನ ನಲಿನೇ ಚಂಚರೀಕತಿ ಮೇ ಮನಃ"

ಸರ್ವತ್ರ ಪಾರದರ್ಶಿಯಾದ ಜಯತೀರ್ಥರ ತೈಲ ಬುದ್ಧಿಗೆ ಗುರು ಮಧ್ವರ ಯಾವ ಗ್ರಂಥವನ್ನು ತೆಗೆದುಕೊಂಡರೂ ಅಲ್ಲಿ ವಿಲಕ್ಷಣವಾದ ಅಪೂರ್ವ ಅರ್ಥದ ಬೆಳಕು, ಕಿರಣಗಳು, ಭಾವದ ಊರ್ಮಿಗಳು ತೇರ್ಸೈಸಿ ಬಂದಂತೆ ಅನುಭವವಾಗು ತ್ತಿತ್ತು. ಪ್ರಮಾಣ ಲಕ್ಷಣದಂಥ ಆಕಾರದಿಂದ ಚಿಕ್ಕ ಗ್ರಂಥವನ್ನು ಟೀಕಿಸಲು ಕೈಗೆ ಎತ್ತಿಕೊಂಡಾಗಲೂ ಅದೇ ಅನುಭವ ಅವರಿಗೆ. ಬೆಳಕಿನ ಬೆಟ್ಟವನ್ನೇ ತಂದು ಒಟ್ಟಿದಂತೆ· ಜ್ಞಾನದ ಮಿಂಚುಗಳೇ ಗೊಂಚಲಿಗಟ್ಟಿದಂತೆ. ಅರ್ಥದ ಹೊಸದೊಂದು ಗಣಿಯೇ ಕಣ್ಣೆದುರು ಮಣಿಗಳನ್ನು ಎರಚಿದಂತೆ. ನವೋನವೋವಾದ ಪ್ರಮೆಯ ಪ್ರಪಂಚವೇ ದೃಗ್ಗೋಚರಿಸಿದಂತೆ.

ಈ ಪ್ರಮಾಣಲಕ್ಷಣದ ಜಯತೀರ್ಥರ ಟೀಕಾಬರೆಯುವ ಕಾರ್ಯ ನಡೆದಾಗ ಒಂದು ಅಪೂರ್ವವಾದ ಘಟನೆಯು ಜರುಗಿತು.

ವಿಜಯನಗರ ರಾಜ್ಯ ಸಂಸ್ಥಾಪಕರೂ ರಾಜಗುರುಗಳೂ ಷಡ್‌ದರ್ಶನಾಚಾರ್ಯರೂ, ವೇದಭಾಷ್ಯವನ್ನು ರಚಿಸಿ ಜಗನ್ಮಾನ್ಯರೂ, ಶ್ರೀ ಶಂಕರಾಚಾರ್ಯರ ಮುಖ್ಯಪೀಠ ವಾದ ಜಗದ್ಗುರು ಸಿಂಹಾಸನವನ್ನು ಆರೋಹಣ ಮಾಡಿದ ಮಹಾ ವಿದ್ವದ್ವರೇಣ್ಯ ಶಾಂಕರ ಸನ್ಯಾಸಿ ಶ್ರೇಷ್ಠರಾದ ಶ್ರೀ ವಿದ್ಯಾರಣ್ಯರು ಕಾಶೀ ಯಾತ್ರೆಯನ್ನು ಮಾಡಿ

ಕೊಂಡು ಮರಳಿ ಬರುತ್ತಲಿದ್ದರು. ಎರಗೋಳದ ಹತ್ತಿರ ಬಂದಾಗ ಅವರಿಗೆ ಜಯ ತೀರ್ಥರ ಗುಹಾ ತಪಸ್ಸಿನ ಸಮಾಚಾರ ತಿಳಿಯಿತು.

ಮುಳಬಾಗಿನಲ್ಲಿ ತಮ್ಮ ಜೊತೆಗೆ ವಾಕ್ಯಾರ್ಥ ಮಾಡಿ ವಾದದಲ್ಲಿ ತಮ್ಮನ್ನು ಸೋಲಿಸಿದ ಅಕ್ಷೋಭ್ಯತೀರ್ಥರ ಸಾಕ್ಷಾತ್ ಶಿಷ್ಯರೇ ಈ ಜಯತೀರ್ಥರು ಎಂದು ಕೇಳಿದ ವಿದ್ಯಾರಣ್ಯರ ಹೃದಯದಲ್ಲಿ ಮತ್ತೆ ಸೇಡಿನ ಹೊಗೆ ಕಿಡಿಯಾಡಿತು. ಅಕ್ಷೋಭ್ಯ ತೀರ್ಥರ ಶಿಷ್ಯನಾದ ಈ ಎಳೇ ಸನ್ಯಾಸಿಯನ್ನಾದರೂ ಸೋಲಿಸಿ ಹಿಂದಿನ ತಮ್ಮ ಪರಾಜಯಕ್ಕೆ ಪ್ರತೀಕಾರವನ್ನು ಮಾಡಬೇಕು ಎಂದು ಅವರು ಜಯತೀರ್ಥರು ಕುಳಿತ ಆ ವೇದಾಂತ ಗೌಹರಕ್ಕೆ ತಾವಾಗಿಯೇ ಬಂದರು.

"ಅಕ್ಷೋಭ್ಯತೀರ್ಥೋಪರಿ ಪೂರ್ವಜಾತ ವೈರ ಪ್ರತೀಕಾರ ಮಸೌ ವಿಧಾತುಂ ।
ಆವಾಪ ವಿದ್ಯಾವಿಪಿನಃ ಕೃತೀಂದ್ರಂ ಪಾಠಂ ವದಂತಂ ಜಯಿನಂ ಗುಹಾಯಾಂ ॥"

(ಜಯತೀರ್ಥ ವಿಜಯ)

ಆಗ ಜಯತೀರ್ಥರು ತಮ್ಮ ಶಿಷ್ಯರಿಗೆ ಶ್ರೀ ಮನ್ಮಧ್ವಾಚಾರ್ಯರ ಪ್ರಮಾಣ ಲಕ್ಷಣ ಗ್ರಂಥವನ್ನು ಪಾಠ ಹೇಳುತ್ತಲಿದ್ದರು. ವಿದ್ಯಾರಣ್ಯರು ಬಂದದ್ದನ್ನು ನೋಡಿ ಜಯತೀರ್ಥರಿಗೆ ಬಹಳ ಸಂತೋಷವಾಯಿತು. ವಿದ್ಯಾರಣ್ಯರಿಗೆ ಕೂಡಲಿಕ್ಕೆ ಹೇಳಿ ಅವರ ಕೈಯಲ್ಲಿ ಆಚಾರ್ಯರ ಆ ಪ್ರಮಾಣಲಕ್ಷಣ ಗ್ರಂಥವನ್ನು ಕೊಟ್ಟು—

''ತತಃ ಸಂಭಾವನೀಯಂ ತಂ ಸಂಭಾವ್ಯ ಜಯತೀರ್ಥರಾಟ್ ।
ಪ್ರೋವಾಚ ವೇದ ಭಾಷ್ಯಾದಿ ಕರ್ತೇತಿ ಶ್ರೂಯತೆ ಭವಾನ್ ।
ಪ್ರಮಾಣಲಕ್ಷಣಂ ವ್ಯಾಖ್ಯಾಂ ವಿದಧಾತುಂ ಭವಾನಲಂ ॥''

(ಜಯತೀರ್ಥವಿಜಯ ಸಂಕರ್ಷಣ ಕೃತ)

ಸತ್ಕಾರಕ್ಕೆ ಅರ್ಹರಾದ ಆ ವಿದ್ಯಾರಣ್ಯರಿಗೆ ಜಯತೀರ್ಥರು ಉಚಿತವಾದ ಸ್ವಾಗತ ಸತ್ಕಾರ ಆದರೋಪಚಾರಗಳನ್ನು ಮಾಡಿ ಕೂಡಿಸಿ ನುಡಿದರು— "ನೀವು ವೇದಗಳಿಗೆಲ್ಲ ಭಾಷ್ಯವನ್ನು ಬರೆದಿದ್ದೀರೆಂದು ಕೇಳಿದ್ದೇನೆ. ನಮ್ಮ ಗುರುಗಳಾದ ಮಧ್ವ ಮುನಿಗಳು ಬರೆದ ಈ ಪ್ರಮಾಣಲಕ್ಷಣವೆಂಬ ಗ್ರಂಥವು ನೋಡಲಿಕ್ಕೆ ಚಿಕ್ಕದಾದರೂ ಭಾವಾರ್ಥಗಳ ದೃಷ್ಟಿಯಿಂದ ಗಹನ ಗಂಭೀರವಾಗಿದೆ. ನಿಮ್ಮಂಥ ವೇದಭಾಷ್ಯಕಾರರಾದ ಘನವಿದ್ವಾಂಸರೇ ಇದಕ್ಕೆ ವ್ಯಾಖ್ಯಾನವನ್ನು ಬರೆಯಲು ಸಮರ್ಥರು. ಇಕೋ ಇದನ್ನು ನೋಡಿ, ಇದಕ್ಕೆ ಸರಿಯಾಗಿ ಅರ್ಥಮಾಡಿ" ಎಂದು ಹೇಳಿದರು.

ಪಂಡಿತ ಪ್ರವರರಾದ ವಿದ್ಯಾರಣ್ಯಸ್ವಾಮಿಗಳು ಆ ಪ್ರಮಾಣಲಕ್ಷಣ ಗ್ರಂಥವನ್ನು ಓದಿ ನೋಡಿದರು. ಒಂದು ಸಲ ಓದಿದಾಗ ಅರ್ಥವಾಗಲಿಲ್ಲ. ಮತ್ತೊಂದು ಸಲ ಓದಿದರು. ಆಗಲೂ ಅದರ ಭಾವ ಹೊಳೆಯಲಿಲ್ಲ. ಇನ್ನೊಂದು ಸಲ ಪರಿಕಿಸಿದರು. ಅರ್ಥ ತಿಳಿಯಲಿಲ್ಲ. ಸೂತ್ರರೂಪವಾದ ಆಚಾರ್ಯರ ನಿರ್ಣಾಯಕ ವಚನಗಳ ಸಂದರ್ಭವೇ ವಿದ್ಯಾರಣ್ಯರಿಗೆ ಹತ್ತಲಿಲ್ಲ. ಸಮುಚಿತ ಸಂಗತಿಯೂ ತಿಳಿಯಲಿಲ್ಲ. ಗೂಢ ಗಹನವಾದ ಅವುಗಳ ಆಶಯವೂ ಗೋಚರಿಸಲಿಲ್ಲ. ಹತ್ತು ಸಲ ಹೊರಳಿಸಿ ಮರಳಿಸಿ ನೋಡಿದರೂ ಎಷ್ಟು ಪ್ರಯತ್ನಪಟ್ಟರೂ ಮುಕ್ತಕಗಳಂತಿರುವ ಆ ಉಕ್ತಿಗಳ ಸಮಂಜಸವಾದ ಅರ್ಥಗಾಂಭೀರ್ಯವು ವಿದ್ಯಾರಣ್ಯರ ತಲೆಗೆ ಹತ್ತಲೇ ಇಲ್ಲ.

ಆಗ ಅವರು ಆ ಗ್ರಂಥವನ್ನು ಜಯತೀರ್ಥರಿಗೆ ತಿರುಗಿ ಕೊಡುತ್ತ —"ಬಾಲವಾಕ್ಯೇನ ಕಿಂ ಮೇ'' ಇಂಥ ಹುಡುಗ ಮಾತಿನಿಂದ ನನಗೇನಾಗಬೇಕಾಗಿದೆ ಎಂದು ನುಡಿದು ತಮ್ಮ ಶ್ರೀಮದ್ಗಾಂಭೀರ್ಯವನ್ನು ಮೆರೆದರು.

ಆಗ ಜಯತೀರ್ಥರು ತಾವು ಬರೆದ ಆ ಪ್ರಮಾಣ ಲಕ್ಷಣದ ಟೀಕೆಯನ್ನು ತೆಗೆದು ವಿದ್ಯಾರಣ್ಯರಿಗೆ ತೋರಿಸಿದರು. ವಿದ್ಯಾರಣ್ಯರು ಜಯತೀರ್ಥರ ಟೀಕೆಯನ್ನು ಹಿಡಿದು ಆ ಪ್ರಮಾಣ ಲಕ್ಷಣ ಗ್ರಂಥವನ್ನು ಓದತೊಡಗಿದರು.

"ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ"

ಎಂಬ ವಚನವಂತೆ ಸ್ವಯಂ ವೇದ ಶಾಸ್ತ್ರ ಪಂಡಿತರೂ ಅನೇಕ ಶಾಸ್ತ್ರೀಯ ಗ್ರಂಥಕಾರರೂ ಆದ ವಿದ್ಯಾರಣ್ಯರಿಗೆ ಜಯತೀರ್ಥರ ಟೀಕೆಯನ್ನು ಓದಿ–ಓದಿದಂತೆ ಮಧ್ವಾಚಾರ್ಯರ ಗ್ರಂಥದ ಮಹತ್ವ, ವೈಶಿಷ್ಟ್ಯ ಮತ್ತು ಗಹನಾರ್ಥ, ಗಾಂಭೀರ್ಯಗಳೂ ತೋರತೊಡಗಿದವು. ಈ ವರೆಗೆ ತಾವು ಓದಿದ, ಕೇಳಿದ, ನೋಡಿದ ಯಾವ ಶಾಸ್ತ್ರೀಯ ಉದ್ಗ್ರಂಥಗಳಲ್ಲಿಯೂ ಇಲ್ಲದ ತತ್ವ ನಿಷ್ಕೃತೆ, ವಸ್ತು ಪ್ರಾಮಾಣಿಕತೆ, ಪ್ರಮಾಣ ಪರಿಶುದ್ಧಿ, ತರ್ಕಬದ್ಧ ವಿವೇಚನೆ, ಯುಕ್ತಿಯುಕ್ತ ಅನುಭವಾರೂಢ ವಸ್ತುನಿಷ್ಠ ತತ್ವ ನಿರೂಪಣೆ ಮುಂತಾದ ಅನೇಕ ಗುಣಗಳು ಗೋಚರಿಸಿದವು ಶ್ರೀಮನ್ಮಧ್ವಾಚಾರ್ಯರ ಕೃತಿಗಳಲ್ಲಿ.

ಆದರೆ ಈ ಎಲ್ಲ ಶ್ರೀ ಮಧ್ವಮುನಿಗ್ರಂಥಗಳ ಭಾವಭೂಮತೆಯಾಗಲೀ ಅರ್ಥ ವೈಶಿಷ್ಟ್ಯವಾಗಲೀ, ತಾತ್ವಿಕ ಮಹತಿಯಾಗಲೀ ಜಯತೀರ್ಥರ ಟೀಕಾಗ್ರಂಥಗಳಿಲ್ಲ ದಿದ್ದರೆ ಜನರಿಗೆ ಗೊತ್ತಾಗುವದೇ ಸಾಧ್ಯವಿಲ್ಲ. ನಿಜವಾಗಿಯೂ ಅಸರ್ವಜ್ಞ ದುರ್ಜ್ಞೇಯ ಎಂದು ಅವರ ವಿದ್ವದ್ಬುದ್ಧಿಗೆ ಎನಿಸಿತು.

ಶ್ರೀ ವಿದ್ಯಾರಣ್ಯರು ಟೀಕಾಚಾರ್ಯರ ಗ್ರಂಥ ಶೋಧನದ ಮತ್ತು ಮೂಲ ಗ್ರಂಥಗಳ ವ್ಯಾಖ್ಯಾನವನ್ನು ಬರೆಯುವ ಅದ್ಭುತವಾದ ಕೌಶಲ್ಯವನ್ನು ಕಂಡು ಪರಮಾನಂದಭರಿತರಾಗಿ ಮುಕ್ತಕಂಠದಿಂದ ಅವರ ಗ್ರಂಥ ಗಾಂಭೀರ್ಯವನ್ನು ಟೀಕಾ ಚಾತುರ್ಯ

ವನ್ನು ಹೊಗಳಿದರು. ಅವರ ಟೀಕಾ ಗ್ರಂಥಗಳ ಅದ್ಭುತವಾದ ಪರಪಕ್ಷ ನಿರಾಕರಣದ ಕ್ರಮವಿಕ್ರಮಗಳನ್ನು ಕೋಟಿ ಕ್ರಮ ಪರಾಕ್ರಮಗಳನ್ನು ಕಂಡು ಮೂಕ ವಿಸ್ಮಿತರಾದ ಅವರಿಗೆ 'ಇವರೊಡನೆ ವಾದಮಾಡಿ ಯಾವ ಬೃಹಸ್ಪತಿಯೂ ವಿಜಯಶಾಲಿಯಾಗಲಾರ' ಎಂದೂ ಮನಸ್ಸಿಗೆ ಖಾತರಿಯಾಯಿತು.

ವಿದ್ಯಾಪಕ್ಷಪಾತಿಗಳೂ, ಗುಣಗ್ರಾಹಿಗಳೂ ಆದ ವಿದ್ಯಾರಣ್ಯರು ಜಯತೀರ್ಥರು ಬರೆದ ಬೇರೆ ಬೇರೆ ಟೀಕಾ ಗ್ರಂಥಗಳನ್ನು ಕಂಡು ಹರ್ಷಪುಳಕಿತರಾಗಿ ಶಾಸ್ತ್ರ ಪ್ರಪಂಚ ದಲ್ಲಿ ಇಷ್ಟು ಸುಲಲಿತ, ಪ್ರೌಢ, ಪ್ರಮಾಣಬದ್ಧ, ಖಚಿತ ರಚಿತ ಗ್ರಂಥಗಳನ್ನೇ ನಾನು ಈ ವರೆಗೆ ನೋಡಿಲ್ಲ ಎಂದಂದು ಅವುಗಳನ್ನು ತಲೆಯ ಮೇಲಿಟ್ಟುಕೊಂಡು ಕುಣಿ ದಾಡಿದರು.

ತಾವು ಈ ವರೆಗೆ ದಿಗ್‌ದೇಶಗಳಲ್ಲೆಲ್ಲ ದಿಗ್ವಿಜಯ ಮಾಡಿಕೊಂಡು ಬಂದ ವಿಜಯ ನಗರದ ಪಟ್ಟದಾನೆಯ ಮೇಲೆ ಅಂಬಾರಿಯಲ್ಲಿ ತಮ್ಮ ಜಯಪತ್ರಗಳನ್ನೆಲ್ಲ ಕೆಳಗೆ ಹಾಕಿ ಅದರ ಮೇಲೆ ಜಯತೀರ್ಥರ ಟೀಕಾ ಗ್ರಂಥಗಳನ್ನಿರಿಸಿ ಸ್ವಯಂ ಜಯತೀರ್ಥ ರನ್ನು ಅಲ್ಲಿ ಕೂಡಿಸಿ ಎಲ್ಲ ಕಡೆಗೂ ಮೆರವಣಿಗೆಯನ್ನು ಸ್ವತಃ ನಿಂತು ಮಾಡಿಸಿದರು. ಇದಕ್ಕೆನ್ನಬೇಕು ವಿದ್ಯಾಪಕ್ಷಪಾತ!

ಈ ಅಂಶವನ್ನು ಶ್ರೀ ಸಂಕರ್ಷಣಾಚಾರ್ಯರು ಬಹು ಸುಂದರವಾಗಿ ಬಣ್ಣಿಸಿ ದ್ದಾರೆ.

" ವಾರಣೇಂದ್ರಂ ಯಮಾರುಹ್ಯ ಗತವಾನ್ ಸರ್ವದಿಗ್‌ಜಯೀ ।
ಸವಾದಿತ್ರಾದಿ ಸಂಪತ್ಯಾಸತ್ರಾ ಭೂಮಂಡಲೇ ಚರನ್ ॥
ತಂ ಸಮಾರೋಹ್ಯ ನಾಗೇಂದ್ರಂ ಜಯತೀರ್ಥಂ ಜಯಾಸ್ಪದಂ ।
ಚಾರಯಾಮಾಸ ತತ್ರಾಸೌ ಸವಾದಿತ್ರ ಮಹಾಂ ಕಿಲ ॥ "

ವಿದ್ಯಾರಣರಂಥ ವಾದಿಸಿಂಹರಿಂದ ಮಧ್ವ ಗ್ರಂಥಗಳಿಗೂ ಜಯತೀರ್ಥರ ಟೀಕಾ ಗ್ರಂಥಗಳಿಗೂ ಹಾಗೂ ಸ್ವಯಂ ಶ್ರೀ ಟೀಕಾಚಾರ್ಯರಿಗೂ ಬಂದ ಗೌರವ, ಸಂದ ಮರ್ಯಾದೆಗಳು ನಿಜವಾಗಿಯೂ ವೈಷ್ಣವ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಿಂದ ಬರೆದಿಡತಕ್ಕಂಥವುಗಳಾಗಿವೆ. ವಿದ್ಯಾರಣ್ಯರಿಂದ ಈ ವೈಷ್ಣವ ಸನ್ಮಾನ ಹಾಗೂ ಜಯತೀರ್ಥರ ಗೌರವ ಮತ್ತು ಟೀಕಾ ಗ್ರಂಥಗಳ ಆನೆಯ ಮೇಲಿನ ಮೆರವಣಿಗೆಯ ಸಮಾಚಾರವನ್ನು ಕೇಳಿದರೆ ಯಾವ ಮಾಧ್ವನ ಮೈತುಂಬ ಹಿಗ್ಗಿನ ಮುಳ್ಳುಗಳು ಮೂಡಿ ನಿಲ್ಲುವದಿಲ್ಲ!

ಹೀಗೆ ಶ್ರೀ ಜಯತೀರ್ಥರು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮರ್ಹೋಘವಾದ ಎಲ್ಲ ಗ್ರಂಥಗಳಿಗೂ ಅತ್ಯಂತ ಪ್ರೌಢವಾದ ಮತ್ತು ಸುಂದರವಾದ, ಸಮಂಜಸವಾದ ಸರ್ವಾರ್ಥ ಸಂಗ್ರಾಹಕವಾದ ಅತ್ಯುಪಯುಕ್ತವಾದ ಟೀಕೆಗಳನ್ನು ಬರೆದು ಟೀಕಾಚಾರ್ಯರೆಂದು ಹೆಸರಾದರು.

ಸಾಕ್ಷಾತ್ ಶ್ರೀ ದುರ್ಗಾದೇವಿಯೇ ಅವರ ಈ ವಾಙ್ಮಯೀನ ತಪಸ್ಸಿಗೆ ಸಂತುಷ್ಟಳಾಗಿ ಪ್ರತ್ಯಕ್ಷ ದರ್ಶನವನ್ನಿತ್ತು ತನ್ನ ಪ್ರಸಾದ ರೂಪವಾಗಿ ಪೂಗಿಫಲ, ಘಂಟೆಾವನ್ನು ಕರುಣಿಸಿದ್ದಳು. ಸ್ವಯಂ ಶ್ರೀಮದಾನಂದತೀರ್ಥರು ಜನ್ಮ ಜನ್ಮಾಂತರದಲ್ಲಿ ಇವರ ಮೇಲೆ ತಮ್ಮ ಅನುಗ್ರಹದ ಕೃಪಾಛತ್ರವನ್ನು ನಿರಂತರವೂ ಬಿಡಿಸಿಯೇ ಹಿಡಿದಿದ್ದರು. ಅಂದ ಬಳಿಕ ಇಂಥ ಟೀಕಾ ವೈಖರಿ ಅವರಿಗೆ ಸ್ವಾಧೀನವಾದದ್ದು ಏನಾಶ್ಚರ್ಯ.

ಶ್ರೀ ಟೀಕಾಕೃತ್ಪಾದರು ಶ್ರೀ ಮಧ್ವಮುನಿಗಳ ನಿರತಿಶಯ ಕೃಪಾಭಾಜನರಾಗಿ ಒಟ್ಟು ೨೩ ಗ್ರಂಥಗಳನ್ನು ಬರೆದು ಸಮಾಜಕ್ಕೆ ನೀಡಿದ್ದಾರೆ.

## ಶ್ರೀಗಳು ರಚಿಸಿದ ಗ್ರಂಥಗಳು

| | ಗ್ರಂಥಗಳು | | ವಿಷಯಗಳು |
|---|---|---|---|
| ೧ | ತತ್ವಪ್ರಕಾಶಿಕಾ | .... | ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ ಮೂಲ ೨೦೦೦ ಗ್ರಂಥಕ್ಕೆ ೮೦೦೦ ಟೀಕಾ ಗ್ರಂಥ. |
| ೨ | ಸುಧಾ | .... | ಶ್ರೀಮಧ್ವಾಚಾರ್ಯರ ಅನುವ್ಯಾಖ್ಯಾನ ೨೮೦೦ ಗ್ರಂಥಕ್ಕೆ ೪೦೦೦೦ ಟೀಕಾ ಗ್ರಂಥ. |
| ೩ | ನ್ಯಾಯವಿವರಣೆ | .... | ಆಚಾರ್ಯರ ಮೂಲ ಗ್ರಂಥಕ್ಕೆ ಟೀಕಾ ೨ ಪಾದ. |
| ೪ | ಪ್ರಮೇಯದೀಪಿಕಾ | .... | ಗೀತಾಭಾಷ್ಯ ಟೀಕಾ |
| ೫ | ನ್ಯಾಯದೀಪಿಕಾ | .... | ಗೀತಾತಾತ್ಪರ್ಯ ಟೀಕಾ |
| ೬ | ತತ್ವಸಂಖ್ಯಾನ | .... | ಆಚಾರ್ಯರ ಗ್ರಂಥಕ್ಕೆ ಟೀಕಾ |
| ೭ | ತತ್ವವಿವೇಕ | .... | ” ” ” |
| ೮ | ಉಪಾಧಿಖಂಡನ | .... | ” ” ” |
| ೯ | ಮಾಯಾವಾದ ಖಂಡನ | .... | ” ” ” |
| ೧೦ | ಮಿಥ್ಯಾತ್ವಾನುಮಾನಖಂಡನ | .... | ” ” ” |
| ೧೧ | ತತ್ವನಿರ್ಣಯ | .... | ” ” ” |
| ೧೨ | ಕಥಾಲಕ್ಷಣ | .... | ” ” ” |
| ೧೩ | ತತ್ತ್ವೋದ್ಯೋತ | .... | ” ” ” |
| ೧೪ | ಕರ್ಮನಿರ್ಣಯ | .... | ” ” ” |
| ೧೫ | ಷಟ್‌ಪ್ರಶ್ನ | .... | ” ” ” |
| ೧೬ | ಈಶಾವಾಸ್ಯಭಾಷ್ಯ | .... | ” ” ” |
| ೧೭ | ಋಗ್ಭಾಷ್ಯ | .... | ” ” ” |
| ೧೮ | ನ್ಯಾಯಕಲ್ಪತರು | .... | ಪ್ರಮಾಣ ಲಕ್ಷಣಕ್ಕೆ ಟೀಕಾ |

## ಸ್ವತಂತ್ರ ಗ್ರಂಥಗಳು

೧೯ ಪ್ರಮಾಣಪದ್ಧತಿ
೨೦ ವಾದಾವಲಿ
೨೧ ಶತಾಪರಾಧ ಸ್ತೋತ್ರ
೨೨ ಪದ್ಯಮಾಲಾ
೨೩ ಅಧ್ಯಾತ್ಮಾಮೃತ ತರಂಗಿಣಿ

ವ್ಯಾಕರಣ ಶಾಸ್ತ್ರವಲ್ಲಿ ಪಾಣಿನಿ, ವರರುಚಿ, ಪತಂಜಲಿ ಈ ಮೂವರು ಮುನಿತ್ರಯ ಎಂದು ಹೆಸರಾಗಿದ್ದಾರೆ. ಅದರಂತೆ ದ್ವೈತವೇದಾಂತ ಪ್ರಪಂಚದಲ್ಲಿಯೂ ಶ್ರೀ ಮಧ್ವಾಚಾರ್ಯರು, ಶ್ರೀ ಜಯತೀರ್ಥರು, ಶ್ರೀ ಚಂದ್ರಿಕಾಚಾರ್ಯರು ಈ ಮೂವರು ಮಹನೀಯರು ಮುನಿತ್ರಯರೆಂದು ವಿಶ್ವಮಾನ್ಯರಾಗಿದ್ದಾರೆ. ಶ್ರೀಮುಷ್ಣ ಮಹಾತ್ಮ್ಯ ಎಂಬ ಗ್ರಂಥದಲ್ಲಿ ಈ ಅಭಿಪ್ರಾಯವನ್ನು ಸುಂದರವಾಗಿ ಸೂಚಿಸಿದ್ದಾರೆ.

"ಶ್ರೀಮಧ್ವಃ ಕಲ್ಪವೃಕ್ಷಶ್ಚ ಜಯಾರ್ಯಃ ಸುರಧೇನವಃ ।
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯ ಮುದಾಹೃತಂ ॥"

ಈ ಮೂರು ಮಹಾ ವ್ಯಕ್ತಿಗಳು ನಮ್ಮ ಮಾಧ್ವ ಸಮಾಜವಲ್ಲಿ ನಿಜವಾದ ಶಕಪುರುಷರು ಮಹಾ ವಿಭೂತಿ ಪುರುಷರು. ಶ್ರೀಮನ್ ಮಧ್ವಮುನಿಗಳ ಗಹನಾದ್ ಗಹನತರವಾದ ಕ್ಲಿಷ್ಟ ಸೂಕ್ಷ್ಮ ಗ್ರಂಥಗಳ ಸ್ಪಷ್ಟವಾದ ಅರ್ಥವು ಟೀಕಾ ಗ್ರಂಥಗಳು ಇಲ್ಲದಿದ್ದರೆ ಯಾರಿಗೂ ಗೊತ್ತಾಗದ ವಾಯು ದೇವರ ಮೂರನೇ ಅವತಾರದ ಪೂರ್ಣ ಭಾವವನ್ನು ಪಡೆಯುವದು ಜಗತ್ತಿಗೆ ಶಕ್ಯವಾಗುತ್ತಿರಲಿಲ್ಲ.

ಆಚಾರ್ಯರ ವಚನ ಗುಂಫನವು ತನ್ನ ಪದ ಪಂಕ್ತಿಗಳ ಅಪರು ಪದರುಗಳಲ್ಲಿ ಮುಚ್ಚಿ ಬಚ್ಚಿಟ್ಟುಕೊಂಡಿದ್ದ ಹೆಚ್ಚಿನ ರಹಸ್ಯಾರ್ಥಗಳನ್ನೆಲ್ಲ ಶ್ರೀ ಜಯತೀರ್ಥರ "ಕ್ಷ" ಕಿರಣದಂತಿರುವ ಚಿಂತನ ಮಂಥನ ಶೀಲವಾದ ಶಾಸ್ತ್ರ ಸಮ್ಮರ್ಶಿನಿ ಬುದ್ಧಿ ಎದುರು ತೋರಿದಂತೆ ಬೇರಾವ ಅರಿವುಗಣ್ಣಿನೆದುರು ತನ್ನ ತೆರೆ ಪರದೆಗಳನ್ನು ತೆರೆದು ತನ್ನ ಭಾವದ ಭಾಗ್ಯ ನಿಧಿಯನ್ನು ತೋರಿಲ್ಲ. ಇದು ಅವರಿಗೆ ಆನಂದತೀರ್ಥರ ಅತಿಶಯಿತವಾದ ಅನುಗ್ರಹ ವಿಶೇಷದಿಂದಲೇ ಲಭ್ಯವಾಗಿದೆ.

ಶ್ರೀ ಸರ್ವಜ್ಞಕಲ್ಪ ಅರ್ಥಾತ್ ಸರ್ವಜ್ಞಪ್ರಾಯ ಎಂಬ ಬಿರುದು ಬರಲಿಕ್ಕೆ ಇವರು ಮಧ್ವಾಚಾರ್ಯರ ಗ್ರಂಥಗಳಲ್ಲಿಯ ಪದ ಪದಗಳಿಂದ ಸಾಕ್ಷಾದ್ ಆಚಾರ್ಯರ ಎದೆಯ ಬದಿ ಬದುವುಗಳಲ್ಲಿ ಹುದುಗಿದ ಸುಧೆಯ ಗ್ರಂಥಿಗಳನ್ನು ಗುರುತಿಸಿ ತಮ್ಮ

ನಿರಂತರ ಜ್ಞಾನೋಪಾಸನೆಯಿಂದ ಅವೆಲ್ಲವೂ ಮುದ ಒಡೆದು ಶಿಲೆಯಾಗಿ ಶ್ರವಿಸಿ ಕರುಣೆಯಿಂದ ದ್ರವಿಸಿ ಸುಧಾಸಾಗರವಾಗಿ ಕಲ್ಲೋಲಿಸುವಂತೆ ಮಾಡುತ್ತಲಿರುವವರೇ ಆಗಿದೆ. ಇಂಥ ವಾಙ್ಮಯ ವಿಭೂತಿಯನ್ನು ಪಡೆದ ಮಧ್ವ ಸಮಾಜವು ಧನ್ಯಮೂರ್ಧನ್ಯ ವಾಗಿದೆ. ಅಸಾಮಾನ್ಯಮಾನ್ಯವಾಗಿದೆ.

ಜಯತೀರ್ಥರು ವಾದ ನಿಗ್ರಹ ಮತ್ತು ಟೀಕಾ ಲೇಖನ ಹೀಗೆ ಉಭಯ ಮುಖವಾದ ಸೇವೆಯನ್ನು ಶ್ರೀಮನ್ ಮಧ್ವ ಸಿದ್ಧಾಂತಕ್ಕೆ ಸಲ್ಲಿಸಿ ಇದನ್ನೆಲ್ಲ ತಮ್ಮ ಗುರು ಅಕ್ಷೋಭ್ಯತೀರ್ಥ ದ್ವಾರಾ ಶ್ರೀಮದಾನಂದತೀರ್ಥರ ಅಡಿದಾವರೆಗಳಲ್ಲಿ ಅರ್ಪಿಸಿದರು.

ಶ್ರೀ ಜಯತೀರ್ಥರ ಎರಡೂ ಕಾರ್ಯಗಳು ಪೂರ್ತಿಯಾಗುವ ವರೆಗೆ ಅವರ ಗುರುಗಳು ಅಕ್ಷೋಭ್ಯತೀರ್ಥರು ಬದುಕಿ ಇರಲಿಕ್ಕಿಲ್ಲ. ಆದರೆ ವಿದ್ಯಾರಣ್ಯರ ವಿಜಯ ಹಾಗೂ ಪ್ರಮಾಣಲಕ್ಷಣಾದಿ ಟೀಕಾ ಗ್ರಂಥಗಳ ಆನೆಯ ಮೇಲಿನ ಮೆರವಣಿಗೆ ಮುಂತಾದವುಗಳನ್ನೆಲ್ಲ ಅವರು ತಾವಿದ್ದಾಗಲೇ ಜರುಗಿದ್ದನ್ನು ನೋಡಿ ತಮ್ಮ ಜಯತೀರ್ಥರ ಬಾಯಿಂದಲೇ ಕೇಳಿ ಆನಂದಪಟ್ಟಿರಬಹುದು.

ಆದರೆ ಶ್ರೀ ಸಂಕರ್ಷಣಾಚಾರ್ಯರು ತಮ್ಮ ಜಯತೀರ್ಥ ವಿಜಯದಲ್ಲಿ ಶ್ರೀ ಅಕ್ಷೋಭ್ಯತೀರ್ಥರ ಕಾಲವಾದ ಬಳಿಕವೇ ವಿದ್ಯಾರಣ್ಯರಿಗೂ ಶ್ರೀ ಜಯತೀರ್ಥರಿಗೂ ಮಿಲನವಾಯಿತೆಂದು ಸೂಚಿಸಿದ್ದಾರೆ. ಆದರೆ ಕರ್ಕಿಹಳ್ಳಿ ಶ್ರೀನಿವಾಸಾಚಾರ್ಯರು ತಮ್ಮ ಜಯೋಂಮ್ರೋದಯ ಎಂಬ ಕಾವ್ಯದಲ್ಲಿ—

"ಏವಂ ಸಮಸ್ತಾನ್ ಸಮಯಾನ್ ನಿರಸ್ಯ................
.......................ಚಕಾರ ಸ್ವಗುರೋಃ ಸಪರ್ಯಾಃ ॥"

ಎಂಬ ಪಾಠದಿಂದ ಶ್ರೀ ಅಕ್ಷೋಭ್ಯತೀರ್ಥರು ಬದುಕಿದ್ದಾಗಲೇ ಜಯತೀರ್ಥರು ವಾದನಿಗ್ರಹವನ್ನು ಮಾಡಿಕೊಂಡು ಅದನ್ನು ತಮ್ಮ ಗುರು ಪೂಜೆಗಾಗಿ ಸಲ್ಲಿಸಿದ್ದರೆಂದು ಹೇಳಿದ್ದಾರೆ. ಇದರ ಮೇಲಿಂದ ಶ್ರೀ ಬಿ. ವೆಂಕೋಬರಾಯರು—"ಶ್ರೀ ಜಯತೀರ್ಥರು ವಿದ್ಯಾರಣ್ಯರನ್ನು ಗೆದ್ದದ್ದು ಶ್ರೀ ಅಕ್ಷೋಭ್ಯತೀರ್ಥರು ಬದುಕಿದ್ದಾಗಲೇ ಎಂದು ನಿರ್ಧರಿಸಿ ಸಂಕರ್ಷಣಾಚಾರ್ಯರ ಜಯತೀರ್ಥ ವಿಜಯ ಕಾವ್ಯವು ಜಯತೀರ್ಥರ ಸಮಕಾಲೀನವಲ್ಲ" ಎಂದು ಸಾರಿದ್ದಾರೆ.

**"It appears. therefore that the Jayatiratha Vijaya of Sankaranacharya which is not a contemporary work is mistaken."**

ಆದರೆ ಜಯತೀರ್ಥರು ವಿದ್ಯಾರಣ್ಯರೊಬ್ಬರನ್ನೇ ಗೆದ್ದಿದ್ದಿಲ್ಲ. ಶ್ರೀ ಅಕ್ಷೋಭ್ಯ ತೀರ್ಥರು ಬದುಕಿದಾಗ ಇನ್ನೂ ಅನೇಕಾನೇಕ ವಾದಿಗಳನ್ನು ಗೆದ್ದಿರಬಹುದು. ಆ ಜಯಪತ್ರಗಳನ್ನೆಲ್ಲ ತಂದು ಅವರ ಪಾದಪೀಠದ ಜಲ್ಲರಿಗೆ ಕಟ್ಟಿರಬಹುದು- ಎಂಥ ವಿಲಕ್ಷಣವಾದ ಗುರುಪೂಜೆಯನ್ನು ಮಾಡಿರಬಹುದು. ಜಯಿಂದ್ರೋದಯ ಕಾವ್ಯದಲ್ಲಿ "ಸಮಸ್ತಾನ್ ಸಮಯಾನ್" ಎಂದು ಇಷ್ಟೇ ಹೇಳಿದ್ದಾರೆ. ಅಲ್ಲಿ ವಿದ್ಯಾರಣ್ಯರೆಂದು ಉಲ್ಲೇಖ ಮಾಡಲಿಲ್ಲ. ಇಂಥ ಸಂದಿಗ್ಧ ಸಮ್ಮುಗ್ಧ ಸಾಮಾನ್ಯ ಶಬ್ದವನ್ನು ನಂಬಿ ಶ್ರೀ ಸಂಕರ್ಷಣಾಚಾರ್ಯರಿಂದ ಪ್ರಾಮಾಣಿಕ ಚರಿತ್ರಕಾರರನ್ನು ಅಲ್ಲಗಳೆಯುವ ಶ್ರೀ ವೆಂಕೋಬರಾಯರ ವಿಧಾನವು ಅಷ್ಟು ಸಮಂಜಸವೆಂದು ತೋರುವದಿಲ್ಲ.

ಇಸ್ವಿ ಸನ್ ೧೩೬೮ರ ಸುಮಾರು ವಿಜಯನಗರದವರಿಗೂ ಕಲಬುರ್ಗಿಯವರಿಗೂ ಯುದ್ಧವು ಪ್ರಾರಂಭವಾಗಿ ದೇಶದಲ್ಲಿ ಅಶಾಂತ ವಾತಾವರಣವು ನಿರ್ಮಾಣಗೊಂಡಾಗ ಪಾಠಪ್ರವಚನಗಳಾಗಲೀ ಪ್ರಶಾಂತ ಸ್ಥಳಗಳಲ್ಲಿ ಕುಳಿತು ಗ್ರಂಥ ಲೇಖನವಾಗಲೀ ಸಾಧ್ಯವಿಲ್ಲವೆಂದು ಬಗೆದು ಶ್ರೀ ಜಯತೀರ್ಥರು ದಕ್ಷಿಣದ ಕಡೆಗೆ ಸಂಚಾರಕ್ಕೆ ಹೊರಟರು. ಪರುಶುರಾಮ ಕ್ಷೇತ್ರದಲ್ಲಿ ಪಾವನತಮವಾದ ಶ್ರೀಉಡುಪಿಗೆ ದಯಮಾಡಿಸಿ ಆಚಾರ್ಯರು ಪ್ರತಿಷ್ಠಾಪಿಸಿದ ಶ್ರೀಕೃಷ್ಣನಿಗೆ ತಮ್ಮ ಗ್ರಂಥಗಳನ್ನು ಸಮರ್ಪಿಸಿದರು. ಶ್ರೀ ಜಯತೀರ್ಥರು ಉಡಿಪಿಗೆ ಬಂದಾಗ ಆ ಕಾಲದಲ್ಲಿ ಏನು ನಡೆಯಿತು ? ಯಾವ ಸ್ವಾಮಿಗಳ ಪರ್ಯಾಯವಿದ್ದಿತು ? ಅಷ್ಟ ಮಠಗಳಲ್ಲಿ ಯಾವ ಯಾವ ಸ್ವಾಮಿಗಳು ಇದ್ದರು ? ಎಂಬುವದರ ಅಧಿಕೃತ ಇತಿಹಾಸವು ಉಪಲಬ್ಧವಿಲ್ಲ. ಅಂತೂ ಆಚಾರ್ಯರ ಜನ್ಮಸ್ಥಳ ಹಾಗೂ ಕರ್ಮಭೂಮಿಯಾದ ಪಾಜಕಕ್ಷೇತ್ರ ಉಡಿಪಿ ಮುಂತಾದ ದಿವ್ಯ ಕ್ಷೇತ್ರ ಯಾತ್ರೆ ಮಾಡಿಕೊಂಡು ಶ್ರೀ ಟೀಕಾಚಾರ್ಯರು ಕಾವೇರಿ ತೀರದ ಶ್ರೀರಂಗ ಕ್ಷೇತ್ರಕ್ಕೆ ದಿಗ್ವಿಜಯ ಮಾಡಿದರು. ಈ ಸಂದರ್ಭವನ್ನು ಜಯಿಂದ್ರೋದಯ ಕಾವ್ಯದಲ್ಲಿ ಚೇತೋಹಾರಿಯಾಗಿ ಬಣ್ಣಿಸಿದ್ದಾರೆ.

" ಜಲದೋರು ಭಾಗ್ಯ ಮರವಿಂದದೃಶಂ
ಕಮಲಾಕರಾರ್ಚಿತ ಪದಾಂಬುಜಂ ।
ಅಧಿಜಾನುಸಕ್ತ ಪೃಥುದೀರ್ಘಭುಜಂ
ಸ ಸಿರೀಕ್ಷ್ಯ ಕರ್ಮ ಭೃಶಮಾಪ ಮುನಿಃ ॥ "

' ಶ್ರೀ ರಂಗನಾಥನ ಮೋಡದ ಬಣ್ಣ, ತಾವರೆಗಣ್ಣು, ಸಿರಿದೇವಿ ಪೂಜಿಸುವ ಕಮಲದಂತಿರುವ ಕಾಲುಗಳು, ಮೊಳಕಾಲ ಮೇಲಿಟ್ಟ ನೀಳದೋಳು, ಇಂಥ ಸುಂದರವಾದ ರಂಗನಾಥಸ್ವಾಮಿಯ ದಿವ್ಯ ವಿಗ್ರಹವನ್ನು ಕಂಡು ಜಯತೀರ್ಥರು ಹರ್ಷಗೊಂಡರು. ಜಯತೀರ್ಥರು ಶ್ರೀ ರಂಗಂ ಕ್ಷೇತ್ರವನ್ನು ಸಂದರ್ಶಿಸಿದ್ದು ೧೩೭೦ ನೇ ಇಸ್ವಿಯ ನಂತರ ಇರಬಹುದು.

ಹೀಗೆ ಸುಮಾರು ೧೩೬೬ ರಿಂದ ೬೨ ನೇ ಇಸ್ವಿಯ ವರಗೆ ಶ್ರೀ ಟೀಕಾಚಾರ್ಯರು ದೇಶ ವಿದೇಶಗಳಲ್ಲಿ ಸಂಚಾರಮಾಡಿ ತಮ್ಮ ಪ್ರವಚನದ ಪಟಿಮೆಯಿಂದ ಮತ್ತು ವಾದ ಚತುರಿಮೆಯಿಂದ ದಕ್ಷಿಣೋತ್ತರ ದೇಶದ ಅದ್ವೈತ ವಿಶಿಷ್ಟಾದ್ವೈತರನ್ನೆಲ್ಲ ಸೋಲಿಸಿ ತಮ್ಮ ವಾಗ್ವೈಖರಿ ಮತ್ತು ಮಧ್ವ ಮತದ ಮಹತಿಗೆ ಮುಗ್ಧರಾದ ಅಸಂಖ್ಯ ಸಚ್ಚೇತನರಿಗೆ ಸದ್ವೈಷ್ಣವ ದೀಕ್ಷೆಯನ್ನಿತ್ತು ವೇದಾಂತ ಪ್ರಪಂಚದಲ್ಲಿ ಆ ವರೆಗೂ ಕಡೆಗಣಿಸಲ್ಪಟ್ಟ ಮಧ್ವ ಸಿದ್ಧಾಂತಕ್ಕೆ ಸರ್ವವಿದ್ವನ್ ಮಾನ್ಯವಾದ ಸರ್ವೋಚ್ಚತಮ ಸ್ಥಾನಮಾನವನ್ನು ಸಂಪಾದಿಸಿ ಹರಿಸರ್ವೋತ್ತಮತ್ವವನ್ನು ಹೇಳದ ಮತಗಳೆಲ್ಲವೂ ಅಪಧ್ಧ, ಅನುಪಾದೀಯ, ಶಾಸ್ತ್ರ ವಿರುದ್ಧ ಎಂದು ಸಾಧಿಸಿ ಸಜ್ಜನರನ್ನು ಉದ್ಧರಿಸಿ ಮತ್ತೆ ಮಳಖೇಡಕ್ಕೆ ದಯಮಾಡಿಸಿದರು.

ಕಾಗಿನೀ ನದಿಯ ತೀರದಲ್ಲಿರುವ ಮಳಖೇಡದಲ್ಲಿ ಅವರ ಗುರುಗಳಾದ ಶ್ರೀ ಅಕ್ಷೋಭ್ಯತೀರ್ಥರು ವೃಂದಾವನಸ್ಥರಾಗಿದ್ದರು. ಆ ಗುರುಗಳ ಸೇವೆಯನ್ನು ಮಾಡುತ್ತ ಶ್ರೀ ಟೀಕಾಚಾರ್ಯರು ಕೆಲವು ದಿವಸ ಅಲ್ಲಿಯೇ ವಾಸವಾಗಿದ್ದರು.

ಶ್ರೀ ಟೀಕಾಚಾರ್ಯರು ಕೇವಲ ಮಾಧ್ವರ ದೃಷ್ಟಿಯಿಂದಲ್ಲ ಶಾಸ್ತ್ರೀಯ ಉದ್ಗ್ರಂಥ ಲೇಖನದ ಕಲಾಪರಿಣತಿಯ ದೃಷ್ಟಿಯಿಂದ ವಿಚಾರಿಸಿದರೂ ಮಹತೋ ಮಹೀಯಾಂಸರಾಗಿ ಗುರುತೋ ಗರೀಯಾಂಸರಾಗಿ ವಿದ್ಯಾ ವೈಶಿಷ್ಟ್ಯದಿಂದ ವರೀಯಾಂಸರಾಗಿ ಅತ್ಯುತ್ತಮ ವಿಶ್ವಮಾನ್ಯ ಗ್ರಂಥ ಲೇಖನ ಪಟೀಯಾಂಸರಾಗಿ ಬೆಳಗುತ್ತಲಿರುವರು.

ಇಷ್ಟೆಲ್ಲ ಶಾಸ್ತ್ರ ಪಾಂಡಿತ್ಯ, ವಾದ ವೈದುಷ್ಯ, ಗ್ರಂಥಕರ್ತೃತ್ವ, ಪ್ರವಚನ ಪಾಂಡಿತ್ಯ ಮುಂತಾದ ಅಸಂಖ್ಯ ಸದ್ಗುಣಗಳು ಅವರಲ್ಲಿ ತುಂಬಿ ತುಳುಕುತ್ತಲಿದ್ದರೂ ಅವರಿಗಿರುವ ವಿನಯ, ಸೌಜನ್ಯ, ಗುರುಭಕ್ತಿ, ಸಿದ್ಧಾಂತ ದೀಕ್ಷೆಗಳನ್ನು ಕಂಡು ಎಂಥವರಿಗೂ ಆಶ್ಚರ್ಯವೆನಿಸಬಹುದು.

ಅವರೆಗೆ ಶಾಸ್ತ್ರೀಯ ಪ್ರಪಂಚದ ಸೀಮಾ ಪುರುಷರೆಂದು ಪತಂಜಲಿ, ಉದಯನ ಹಾಗೂ ಶಂಕರಾಚಾರ್ಯ ಈ ಮೂವರು ಪ್ರಸಿದ್ಧರಾಗಿದ್ದರು. ಶ್ರೀ ಜಯತೀರ್ಥರ ಪ್ರೌಢ ಸುಂದರವೂ ಭಾವ ಬಂಧುರವೂ ಅರ್ಥಗಂಭೀರವೂ ಯುಕ್ತಿ ಮನೋಹರವೂ ಸುಸ್ಪಷ್ಟ ವಿವೇಚನಾ ಪ್ರಚುರವೂ, ಅಲಂಕಾರಕವೂ ಆದ ಗ್ರಂಥ ಲೇಖನ ಶೈಲಿಯು ಹಿಂದಿನ ಪತಂಜಲಿ, ಶಂಕರಾಚಾರ್ಯ, ಉದಯನ ಮೊದಲಾದ ವಿಪಶ್ಚಿದ ಪಶ್ಚಿಮರ ಕೀರ್ತಿಯನ್ನು ಅಳಿಸಿ ತನ್ನ ಅಪೂರ್ವವಾದ ವೈಶಿಷ್ಟ್ಯದಿಂದ ಅನನ್ಯ ಸಾಮಾನ್ಯವಾದ ರೀತಿಯಲ್ಲಿ ತಾನೇ ತಾನಾಗಿ ವಿಜೃಂಭಿಸಿತು.

ಇಷ್ಟೆಲ್ಲ ಸರ್ವಶಾಸ್ತ್ರ ನದೀಷ್ಣತೆ ಅವರ ಪ್ರತಿಭೆಯ ಊಳಿಗದ ಆಳಿನಂತಾಗಿದ್ದರೂ ವಿನಯ ಸೌಜನ್ಯಗಳು ಅವರ ವ್ಯಕ್ತಿತ್ವದ ಪ್ರಧಾನಾಂಗವಾಗಿದ್ದವು.

ಅವರು ತಮ್ಮ ಕಲಶಕೃತಿಯಾದ ಶ್ರೀಮನ್ನ್ಯಾಯಸುಧಾ ಗ್ರಂಥದ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಹೇಳಿದ ಪದ್ಯಗಳು ಅವರ ವೈದುಷ್ಯಪೂರ್ಣವಾದ ವ್ಯಕ್ತಿತ್ವಕ್ಕೆ ಒಪ್ಪವಿಡುವಂತಿವೆ.

"ನಶಬ್ದಾಬ್ಧೌ ಗಾಢಾ ನ ಚ ನಿಗಮ ಚರ್ಚಾಸು ಚತುರಃ
ನಚನ್ಯಾಯೇ ಪ್ರೌಢಾಃ ನಚ ವಿದಿತ ವೇದ್ಯಾ ಅಪಿವಯಂ ।
ಪರಂ ಶ್ರೀಮತ್ಪೂರ್ಣಪ್ರಮತಿ ಗುರು ಕಾರುಣ್ಯ ಸರಣಿಂ ।
ಪ್ರಪನ್ನಾ ಮಾನ್ಯಾಸ್ಮಃ ಕಿಮತಿಚ ವದಂತೋಪಿ ಮಹತಾಂ ॥"

"ನ ವೈದುಷ್ಯಭ್ರಾಂತ್ಯಾ ನ ಚ ವಚನಚಾತುರ್ಯ ಕುಧಿಯಾ ।
ನಮಾತ್ಸರ್ಯಾವೇಶಾತ್ ನಚ ಚಪಲತಾ ದೋಷವಶತಃ ॥
ಪರಂ ಶ್ರದ್ಧಾ ಜಾಡ್ಯಾದಕೃಷಿ ಕೃತಿರಾಚಾರ್ಯ ವಚಸಿ ।
ಸ್ಖಲಂಸ್ತತ್ಸ್ಯತಸ್ಮಾದಾ ಜನತಿ ನಹಿ ನಿಂದ್ಯೋಸ್ಮಿ ವಿದುಷಾಂ ॥"

ಶ್ರೀ ಜಯತೀರ್ಥರು ಇತರ ಪಂಡಿತಾಗ್ರೇಸರರು ನೂರು ಜನ್ಮಗಳಲ್ಲಿ ಸಾಧಿಸಲಾರದ್ದನ್ನು ಸಾಧಿಸಿ ನೂರಾರು ಜನ ವಿದ್ವದ್ವ್ಯಕ್ತಿಗಳಿಂದ ಮಾಡಲು ಅಶಕ್ಯವಾದದ್ದನ್ನೆಲ್ಲ ಮಾಡಿ ಅತ್ಯಪೂರ್ವವಾದ ಸರ್ವ ಜಗದೋಪಕಾರಕವಾದ ಶಾಸ್ತ್ರೀಯ ಪವಿತ್ರ ಸಾಹಿತ್ಯ ರಾಶಿಯನ್ನು ನಿರ್ಮಿಸಿ, ಯಾವ ದುರ್ವಾದಿಗಳೂ ಎಂದೂ ತಲೆ ಎತ್ತದಂತೆ, ಶ್ರೀ ಮಧ್ವಮತದ ಮೇಲೆ ಆಕ್ಷೇಪ ಧೂಳಿ ಪ್ರಕ್ಷೇಪವನ್ನು ಮಾಡದಂತೆ, ಅನೇಕ ಗ್ರಂಥಗಳನ್ನು ರಚಿಸಿದ್ದೆಲ್ಲವೂ— ಕೇವಲ ನಲವತ್ತೆರಡು ವಯಸ್ಸಿನಲ್ಲಿಯೇ. ಭೂಲೋಕದ ಜನರಿಗೆ ಅಂಥ ದಿವ್ಯ ಜೀವನವನ್ನು ಇನ್ನೂ ಹೆಚ್ಚುಕಾಲ ಇಟ್ಟುಕೊಂಡು ಅವರ ಪೂರ್ಣಲಾಭವನ್ನು ಪಡೆಯುವ ಸೌಭಾಗ್ಯವು ಇರಲಿಲ್ಲ. ಅವರು ಶ್ರೀ ವಿದ್ಯಾಧಿರಾಜ ಎಂಬ ಮಹಾ ವಿದ್ವಾಂಸರಿಗೆ ಆಶ್ರಮವನ್ನಿತ್ತು ಸರ್ವಜ್ಞಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಿ, ಮಳಖೇಡದಲ್ಲಿ ತಮ್ಮ ಗುರುಗಳಾದ ಶ್ರೀ ಅಕ್ಷೋಭ್ಯತೀರ್ಥರ ಸನ್ನಿಧಿಯಲ್ಲಿಯೇ ೧೩೮೮ ನೇ ಇಸ್ವಿ ಆಷಾಢ ಬಹುಳ ಪಂಚಮಿ ಯಾಗಿಸೀ ತಮಾಕದಲ್ಲಿ ವೃಂದಾವನಸ್ಥರಾದರು.

ಶ್ರೀ ಟೀಕಾಕೃತ್ಪಾದರ ಮಹಾ ಸಮಾರಾಧನಾ ಮಹೋತ್ಸವವು ಆಷಾಢ ಬಹುಳ ಪಂಚಮಿಯಂದು ಮಳಖೇಡದಲ್ಲಿ ಶ್ರೀ ಶ್ರೀಮದುತ್ತರಾದಿ ಮಠದ ಶ್ರೀಪಾದಂಗಳವರ ನೇತೃತ್ವದಲ್ಲಿ ವಿಜೃಂಭಣೆಯಿಂದ ನೆರವೇರುತ್ತದೆ.

ಭಾಗವತದ ಟೀಕಾಕೃತ್ಪಾದರಾದ

# ಶ್ರೀ ವಿಜಯಧ್ವಜ ತೀರ್ಥರು



ಅಂಜನಾನಂದನ ಸಾನ್ನಿಧ್ಯಾತ್ ವಿಜಯೇನ ವಿರಾಜಿತಂ ।
ಅಜಿತಪ್ರೀತಿಜನಕಂ ಭಜೇऽಹಂ ವಿಜಯಧ್ವಜಮ್ ॥

ಶ್ರೀಮದಾಚಾರ್ಯ ಸಮ್ಮತವಾದ ಭಾಗವತ ಧರ್ಮದ ವಿಜಯಧ್ವಜವನ್ನು ಎತ್ತಿ ಹಿಡಿದ ಮಹಾ ಮಹಿಮರಲ್ಲಿ ವಿಜಯಧ್ವಜತೀರ್ಥರು ಮುಖ್ಯರೂ ಮೊದಲಿಗರೂ ಆಗಿದ್ದಾರೆ. ಆನಂದತೀರ್ಥರಿಂದ ರಜತಪೀಠಪುರದಲ್ಲಿ ಪ್ರತಿಷ್ಠಿತನಾದ ಬಾಲಗೋಪಾಲ ಕೃಷ್ಣನ ಪರ್ಯಾಯ ಪೂಜಾಪರ್ಯಾಯೋಪಾಸನೆಗಾಗಿ ಎಂಟು ಸರ್ವಜ್ಞಪೀಠಗಳು ರಚಿತವಾಗಿವೆ. ಈ ಅಷ್ಟ ಮಠಗಳಲ್ಲಿ ಪೇಜಾವರ ಪೀಠವು ಅಪರೋಕ್ಷಜ್ಞಾನಿಗಳೂ ಗ್ರಂಥ ಕರ್ತರೂ ಭಕ್ತ ವಿರಕ್ತರೂ ಆದ ಅನೇಕ ಪರಿವ್ರಾಟ್ ಪರಿವೃಢರಿಂದ ಅಧಿಷ್ಠಿತವಾ

ಒಂದು ವಿಶಿಷ್ಟ ಸ್ಥಾನಮಾನವನ್ನು ಪಡೆದು ಇಂದಿಗೂ ಪ್ರಸಿದ್ಧವಾಗಿದೆ. ಶ್ರೀಕೃಷ್ಣನ ಪೂಜಾ ಸೌಭಾಗ್ಯ ಪುನೀತರಾದ ಪರಮಹಂಸರಪೀಠ ಪ್ರಭಾವಳಿಯಲ್ಲಿ ವಿಜಯಧ್ವಜರು ಮಹನೀಯ ಮೂರ್ತಿಗಳು ಪಾವನ ಕೀರ್ತಿಗಳು. ಶ್ರೀಮದಾಚಾರ್ಯರ ಅನಂತರ ಪರಶುರಾಮಕ್ಷೇತ್ರವು ವೈಷ್ಣವಸಮಾಜಕ್ಕಿತ್ತಕಾಣಿಕೆಯಲ್ಲಿ ತ್ರಿವಿಕ್ರಮಪಂಡಿತಾಚಾರ್ಯರು ವಿಜಯಧ್ವಜರು ಮತ್ತು ವಾದಿರಾಜರು. ಈ ಮೂವರು ಮೂರು ಮೇರುಮಣಿಯಂತೆ ವಿಶ್ವವಂದ್ಯರಾಗಿದ್ದಾರೆ. ಪ್ರತಿಯೊಬ್ಬ ಮಾಧ್ವನೂ ಈ ಮುನಿತ್ರಯರನ್ನು ವಂದಿಸಿಯೇ ಮಧ್ವಾಗಮದಲ್ಲಿ ಮುಂದುವರಿಯಬೇಕಾಗುವದು. ಈ ಮೂವರಲ್ಲಿ ಮಧ್ಯಮ ಮಣಿಯಾದ ನಾಯಕ ರತ್ನದಂತಿದ್ದ ಶ್ರೀ ವಿಜಯಧ್ವಜರ ಮಾತುಗಳಂತೆಯೇ ಕೃತಿಗಳು ಪರಿಪೂರ್ಣತ್ವವಾಗಿವೆ. ಕೃತಿಗಳಂತೆ ಅವರ ಜೀವನವೂ ಪರಮಪಾವನವಾಗಿದೆ.

ಜ್ಞಾನಜ್ಯೋತಿಯ ದಿವ್ಯದೀವಟಿಗೆಯನ್ನು ಎತ್ತಿಹಿಡಿದು ಆಧ್ಯಾತ್ಮಪ್ರಪಂಚದಲ್ಲಿ ಮೂಢ ಮಾನವ ಸಮಾಜವನ್ನು ಮುನ್ನಡೆಯಿಸಿ ಮೋಕ್ಷಮಂದಿರದ ಮಹಾ ದ್ವಾರಕ್ಕೆ ಕರೆದೊಯ್ಯುವ ಜ್ಞಾನಯೋಗಿ ಮುನಿಗಳ ಮಾಲಿಕೆಯಲ್ಲಿ ವಿಜಯಧ್ವಜರು ಹಿಡಿದ ಹಾದಿಯೇ ಬೇರೆ, ಬೀರಿದ ಬೆಳಕೇ ಬೇರೆ. ಉದ್ದಂಡ ಪಂಡಿತರಾದ ಅನೇಕ ಪ್ರಾಜ್ಞರೂ ಪರಿವ್ರಾಜಕರೂ ಶಿಷ್ಯ ಸಮೂಹದ ಉದ್ವಿಘ್ನೀರ್ಷೆಯಿಂದ ಕರುಣಾಯಂತ್ರಿತ ರಾಗಿ ಕೆಲವರು ತ್ರಿವಿಕ್ರಮ ಕ್ರಮದಲ್ಲಿಯೂ ಇನ್ನು ಹಲವರು ಜಯತೀರ್ಥರ ಜಾಡಿನಲ್ಲಿಯೂ ನಡೆದು ನುಡಿದು ವೇದಾಂತ ವೀಥಿಯಲ್ಲಿ ತಮ್ಮ ತಮ್ಮ ಟೀಕಾ ಟಿಪ್ಪಣಿಗಳಿಂದ ಅಲ್ಲಲ್ಲಿ ಪ್ರಭಾವಲಯಗಳನ್ನು ನಿರ್ಮಿಸಿದರು.

ಆದರೆ ಮಂದಮತಿಗಳಿಗೆ ಈ ಪ್ರಭಾವಲಯಗಳನ್ನು ಕಂಡೇ ಕಣ್ಣು ಕುಕ್ಕಿ ಮುಂದೇನೂ ತೋಚದಂತಾದಾಗ ಅನೇಕ ಜನರು ಹಿಂದೇಟು ಹಾಕತಹತ್ತಿದರು. ಆಗ ವಿಜಯಧ್ವಜರು ಆಚಾರ್ಯರು ತೋರಿದ ವೈಕುಂಠದ ಒಳದಾರಿಯೊಂದನ್ನು ಕಂಡು ಹಿಡಿದು ಭಗವತ್ಪ್ರಸಾದದಲ್ಲಿ ಪಾಮರರಿಗೂ ಪಾಲು ಸಿಗುವಂತೆ ಮಾಡಿದರು. ತರ್ಕ ಮೀಮಾಂಸಾ ವ್ಯಾಕರಣಾದಿ ಪರಿಭಾಷೆಗಳಿಂದ ಕ್ಲಿಷ್ಟವಾದ ವೇದಾಂತದ ಶಾಸ್ತ್ರೀಯ ಪ್ರಕ್ರಿಯೆಗೆ ಬೆದರಿ ದೂರ ಸರಿದು ನಿಂತವರನ್ನು ಭಕ್ತಿಯ ಪ್ರವಾಹದಲ್ಲಿ ತೇಲಿಸಿ ಆಮೇಲೆ ಕ್ರಮೇಣ ಅವರಿಗೆ ಜ್ಞಾನಾಮೃತದ ಗುಟುಕುಗಳನ್ನು ಕುಡಿಸಿ ವಿರಕ್ತಿಯನ್ನು ದೃಢಪಡಿಸಿ ಕೊನೆಗೆ ಮುಕ್ತಿಮಂದಿರಕ್ಕೆ ಕರೆದೊಯ್ಯುವ ಶುಕ ಸಂಪ್ರದಾಯದ ಸುಲಭ ಮಾರ್ಗವನ್ನು ತೋರಿಸಿದ ಪ್ರೇರಿಸಿದ ಶ್ರೇಯಸ್ಸನ್ನು ಸರ್ವಜ್ಞ ಸಮ್ಮತ ಸಿದ್ಧಾಂತೋಪ ದೇಶಕರಾದ ವಿಜಯಧ್ವಜರಿಗೆ ಸಲ್ಲುವದು.

ಪುರಾಣ ಚೂಡಾಮಣಿಯಾದ ಶ್ರೀಮದ್ಭಾಗವತ ಗ್ರಂಥಕ್ಕೆ ಜ್ಞಾನ ಕರ್ಮ ನಿರಪೇಕ್ಷವಾದ ಬರಿ ಭಕ್ತಿ ಪರ ಅರ್ಥ ಮಾಡಿ ಟೀಕಾಕಾರರು ಬಾದರಾಯಣರ ಮೂಲ

ಉದ್ದೇಶಕ್ಕೆ ಭಂಗ ಬರುವಂತೆ ಮಾಡಿದರೆ ಇನ್ನೂ ಹಲವು ಮಹನೀಯರು ಈ ಉದ್ಗ್ರಂಥವನ್ನು ಮಾಯಾವಾದದ ಮರುಳುಗಾಡಿಗೆ ಜಗ್ಗಿ ತಂದು ಮೋಕ್ಷಪ್ರಾಪಕವಾದ ಈ ಪುರಾಣದಿಂದ ನರಕಾದ್ಯನರ್ಥಗಳು ಉಂಟಾಗುವಂತೆ ಮಾಡಿದರು. ಜಗದೋದ್ಧಾರಕ್ಕಾಗಿ ಭಗವಾನ್ ಬಾದರಾಯಣರು ನಾರದರ ಪ್ರಾರ್ಥನೆಯಂತೆ ರಚಿಸಿದ ಈ ಪುರಾಣ ರತ್ನದ ಈ ಅವಸ್ಥೆ ಕಂಡು ಪೂರ್ಣಬೋಧರು ಮನನೊಂದು ಸಜ್ಜನರ ಉದ್ಧಾರಕ್ಕಾಗಿ ಭಾಗವತ ತಾತ್ಪರ್ಯ ಎಂಬ ಸಾವಿರಾರು ಪ್ರಮಾಣವಚನ ಪರಿಬೃಂಹಿತವಾದ ಬೃಹದ್ಗ್ರಂಥವನ್ನು ರಚಿಸಿ ಆ ಮೂಲ ಗ್ರಂಥಕರ್ತರಾದ ಶುಕ ವ್ಯಾಸರ ನಿಜವಾದ ಆಶಯವನ್ನು ವ್ಯಕ್ತ ಮಾಡಿದರು. ಆದರೆ "ದುರ್ನಿರೂಪ ವಚನಂ ಚ ಪಂಡಿತೈಃ" ಎಂಬಂತೆ ಇರುವ ಆ ಭಾರತೀಶರ ವಚನ ವಾಗ್ಗುಂಫನದ ಗೂಢಾರ್ಥಸಂಧಿಗಳನ್ನೆಲ್ಲ ತಿಳಿದುಕೊಂಡು ಅದನ್ನು ನೆನಪಿನಲ್ಲಿಟ್ಟು ಆ ಒರೆಗಲ್ಲಿಗೆ ಭಾಗವತ ಪ್ರತಿ ಪದ್ಯಾರ್ಥವನ್ನೆಲ್ಲ ತಿಕ್ಕಿ ತೂಗಿ ವಿವೇಚಿಸಿ ತಪ್ಪು ಒಪ್ಪು ಒರೆ ಕೊರೆಗಳನ್ನು ಅಳೆದು ತಿಳಿದು ನೋಡುವದೂ ಬಳಿಕ ಅದರಂತೆ ಉಪಾಸನೆ ಮಾಡುವದೂ ಸಾಮಾನ್ಯ ಶ್ರಾವಕ ಭಾವುಕರ ಅಳವಿಗೆ ಮೀರಿದ ಮಾತಾಗಿತ್ತು. ಆದುದರಿಂದಲೇ ಆಚಾರ್ಯರ ಪೀಠ ಪ್ರತಿಷ್ಠಿತರಾದ ವಿಜಯಧ್ವಜರು ನಿರ್ಣಯಾಚಾರ್ಯರ ಸರ್ವಜ್ಞಸೂತ್ರ ಹಿಡಿದು ಭಾಗವತದ ಪ್ರತಿಪದ್ಯದ ಸ್ವಾರಸ್ಯವನ್ನು ಬಗೆದು ತೆಗೆದು ತೋರಿಸುತ್ತ ಇಡೀ ಗ್ರಂಥಕ್ಕೆ 'ಪದ ರತ್ನಾವಲಿ' ಎಂಬ ಟೀಕೆಯನ್ನು ಬರೆದರು. ವಿಜಯಧ್ವಜರ ತಾತ್ಪರ್ಯಾನುಸಾರ ಟಿಪ್ಪಣಿಯೊಂದಿದ್ದರೆ ಸಮಗ್ರ ಭಾಗವತವೆಲ್ಲ ಮತ್ತೊಂದು ಅಭ್ಯಾಸ ಭಾಷ್ಯವೇ ಆಗುತ್ತಿತ್ತೊ ಏನೋ! ಅನೇಕ ಟೀಕೆ ಟೂಕೆಗಳಿಂದ ಆಕುಲಗೊಂಡ ಈ ಪವಿತ್ರ ಕೃತಿಯನ್ನು ಸುಸಂಗತ ಸಿದ್ಧಾಂತದ ಚೌಕಟ್ಟಿನಲ್ಲಿ ಕೂಡಿಸಿ ಆ ಪುರಾಣ ಗ್ರಂಥಕ್ಕೆ ಔಪನಿಷದಿಕ ಗೌರವವನ್ನು ಮರಳಿ ತಂದು ಕೊಟ್ಟ ಕೀರ್ತಿ ಶ್ರೀಮದಾಚಾರ್ಯರಿಗೆ ಸಲ್ಲುತ್ತಿದರೆ ಆ ಪುರಾಣ ಗ್ರಂಥದಲ್ಲಿಯೇ ಸಕಲ ವೇದ ವೇದಾಂತ ದರ್ಶನ ಮಾಡಿಸಿದ ಧನ್ಯತೆ ಮಾನ್ಯತೆಗಳು ಶ್ರೀ ವಿಜಯಧ್ವಜರ ಪದರಿಗೆ ಬಿದ್ದಿವೆ. ಬರೀ ಶಾಸ್ತ್ರ ಗ್ರಂಥವನ್ನೂ ಬರೆಯಬಹುದು ಅಥವಾ ಪುರಾಣ ಟಿಪ್ಪಣಿಯನ್ನೂ ಬರೆಯಬಹುದು. ಆದರೆ ಶಾಸ್ತ್ರದ ಶೈಲಿಯಲ್ಲಿ ಪ್ರಮಾಣ ವಚನಗಳ ಪರಿವೇಷಣದಲ್ಲಿ ಪುರಾಣದ ಟೀಕೆಯನ್ನು ವೈಖರಿಸುವದು ವಿಜಯಧ್ವಜೀಯ ವೈಶಿಷ್ಟ್ಯವಾಗಿದೆ.

ಪುರಾಣ ಪ್ರಾಸಾದದ ಮೇಲೆ ಇಂದಿಗೂ ಅಂಥ ಧ್ವಜ ಏರಿಲ್ಲ. ಇಂಥ ವಿಜಯ್ಯ ಯಾರ ಬಳಿಗೂ ಸಾರಿಲ್ಲ. ಆದುದರಿಂದಲೇ ಅವರಿಗೆ ಭಾಗವತದ ಟೀಕಾಕೃತ್ಪಾದರು ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಈ ವಿಜಯಧ್ವಜತೀರ್ಥರು ಉಡುಪಿಯ ಪೂಜ್ಯ ಶ್ರೀ ಪೇಜಾವರ ಮಠದವರು. ಶ್ರೀಮದಾನಂದತೀರ್ಥರಿಂದ ಶ್ರೀ ಪಾಂಡುರಂಗವಿಠ್ಠಲನ ಪ್ರತಿಮೆಯನ್ನು ಪೂಜೆಗಾಗಿ

ಪಡೆದ ಪೇಜಾವರ ಮಠದ ಶ್ರೀ ಅಧೋಕ್ಷಜತೀರ್ಥರು ಈ ದಿವ್ಯ ಪರಂಪರೆಯ ಮೂಲಪ್ರವರ್ತಕ ಪುಣ್ಯಾತ್ಮರು.

ಅವರಿಂದ ಎಳನೆಯವರಾದ ಶ್ರೀ ಮಹೇಂದ್ರತೀರ್ಥರಿಂದ ಶ್ರೀ ವಿಜಯಧ್ವಜ ತೀರ್ಥರು ಆಶ್ರಮವನ್ನು ಸ್ವೀಕರಿಸಿ ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡಿದರು.

"ಆಂಜನಾ ಸೂನು ಸಾನ್ನಿಧ್ಯಾತ್ ವಿಜಯೇನ ವಿರಾಜಿತಂ"

ಎಂಬ ಅವರ ಚರಮಶ್ಲೋಕದಲ್ಲಿ ಅವರಲ್ಲಿ ವಾಯುದೇವರ ವಿಶೇಷ ಸನ್ನಿಧಾನ ವಿದ್ದಿತೆಂದು ಹೇಳಿದ್ದಾರೆ. ಅವರ ಲೋಕೋತ್ತರವಾದ ಗೈಮೆ ಮಹಿಮೆಗಳನ್ನು ನೋಡಿ ಕೇಳಿದರೆ ಅವರಲ್ಲಿ ವಾಯುದೇವರು ಮಧ್ವರೂಪದಿಂದ ನಿಶ್ಚಿತವಾಗಿಯೂ ವಿಶೇಷವಾಗಿ ಸನ್ನಿಹಿತರಾಗಿದ್ದರೆಂದು ತಾನಾಗಿ ತಿಳಿದುಬರುವದು.

ಉಡುಪಿಯಿಂದ ನಲವತ್ತೇಳು ಮೈಲುದೂರದಲ್ಲಿರುವ ಮಂಜೇಶ್ವರದ ಹತ್ತಿರ ಇರುವ ಕಣ್ವತೀರ್ಥವು ಪರಮಪಾವನವೂ, ಅತ್ಯಂತ ಪ್ರಾಚೀನವೂ ಆದ ಪುಣ್ಯ ಕ್ಷೇತ್ರವಾಗಿದೆ.

ಮಂತ್ರದ್ರಷ್ಟಾರರಾದ ವೈದಿಕ ಮಹರ್ಷಿ ಮಹಾತ್ಮ ಕಣ್ವರು ತಪಂಗೈದ ಪುಣ್ಯ ಸ್ಥಳವೇ ಇದು. ಇಲ್ಲಿರುವ ಶ್ರೀ ರಾಮದೇವರನ್ನು ಪೂಜಿಸಿ ಕಣ್ವ ಮುನಿಗಳು ತಮ್ಮ ತಪಸ್ಸಿದ್ಧಿಯ ಮಧುರ ಹಣ್ಣಿನ ಸವಿಗಂಡು ಧನ್ಯರೂ, ಕೃತಾರ್ಥರೂ ಆದರು.

ಇದನ್ನು ತಿಳಿದ ಲಂಕಾಧಿಪತಿಯಾದ ಚಿರಂಜೀವಿ ವಿಭೀಷಣನೂ ಅಲ್ಲಿಗೆ ಓಡಿ ಬಂದ.

ಆಗ ಅವನ ಕಿವಿಗೆ ಕಣ್ವಾಶ್ರಮದಲ್ಲಿರುವ ಶ್ರೀ ರಾಮನ ದಿವ್ಯ ವಿಗ್ರಹದ ಸಮಾಚಾರವು ತಿಳಿದು ಬಂದಿತು. ಈ ರಾಮಮೂರ್ತಿಯ ಅವಿರತ ಉಪಾಸನೆಯಿಂದಲೇ ಮಹಾ ಮುನಿ ಕಣ್ವ ಋಷಿಗಳು ಸಿದ್ಧಿ-ಪ್ರಸಿದ್ಧಿಗಳನ್ನು ಪಡೆದರೆಂದು ಕೇಳಿದ ಒಳಿಕಂತೂ ವಿಭೀಷಣನು ಲಂಕೆಯನ್ನೇ ಬಿಟ್ಟ.

ನೇರವಾಗಿ ದಕ್ಷಿಣ ಕನ್ನಡ ಜಿಲ್ಹೆಯ ಮಂಗಳೂರ ಬಳಿಯ ಮಂಜೇಶ್ವರಕ್ಕೆ ಬಂದು ಅಲ್ಲಿಂದ ನೇರವಾಗಿ ಕಣ್ವಾಶ್ರಮಕ್ಕೆ ಚಿತ್ತೈಸಿದ.

ಅಲ್ಲಿ ಕಣ್ವಮುನಿ ಪೂಜಿತವಾದ ಶ್ರೀ ರಾಮಚಂದ್ರ ಪ್ರಭುವಿನ ದಿವ್ಯ ಮೂರ್ತಿಯನ್ನು ಕಂಡಾಗ ತನ್ನ ಅಣ್ಣನನ್ನು ಕೊಂದು ಬಂದ ಆ ರಾಮನೇ ಇಲ್ಲಿ ಕಣ್ವ

ಋಷಿಗಳ ಕೈಗೊಂಬೆಯಾಗಿ ನಿಂತಂತೆ ತೋರಿತು. ಪ್ರಭುವಿನ ವಿರಹ ದುಃಖವನ್ನು ಮರೆತು ಬಹು ಕಾಲ ಅವನು ಅಲ್ಲಿಯೇ ಆ ರಾಮದೇವರ ಪೂಜೆ ಮಾಡುತ್ತ ವಾಸ ವಾಗಿದ್ದ.

ಈ ಶ್ರೀ ರಾಮ ಪ್ರತಿಮೆಯ ಮಹಿಮೆ–ಮಹತಿಗಳನ್ನು ಅರಿತ ವಾಯು ಸನ್ನಿಹಿತರಾದ ಶ್ರೀ ವಿಜಯಧ್ವಜತೀರ್ಥರು ಆ ಕಣ್ವತೀರ್ಥಕ್ಕೆ ಬಂದು ಅಲ್ಲಿಯೇ ನೆಲಿಸಿ ಆ ರಾಮದೇವರನ್ನು ಅತ್ಯಂತ ಭಕ್ತಿಯಿಂದ ಅರ್ಚಿಸಿದರು.

ಶ್ರೀ ರಾಮಭಕ್ತರಾದ ಪೂಜ್ಯ ವಿಜಯಧ್ವಜತೀರ್ಥರು ಕಣ್ವತೀರ್ಥದಲ್ಲಿ ಪ್ರಾಣ ದೇವರ ಪ್ರತಿಷ್ಠೆ ಮಾಡಿದ್ದಾರೆ.

ಈ ಕಣ್ವತೀರ್ಥವು ತುಳು ನಾಡಿನಲ್ಲಿ ಎಂದಿನಿಂದಲೂ ಪ್ರಸಿದ್ಧವಾದ ಕ್ಷೇತ್ರ. ಪರಮ ಪವಿತ್ರ. ಸಮೀಪದಲ್ಲಿಯೇ ಪೆರ್ದೆರೆಗಳಿಂದ ಮೊರೆಯುವ ಸಮುದ್ರ. ಅಕ್ಕ–ಪಕ್ಕದಲ್ಲಿ ತಿಳಿನೀರಿನಿಂದ ರನ್ನಗನ್ನಡಿಯಂತೆ ತುಳುಕಿ ತೊಳಗುವ ರಾಮತೀರ್ಥ, ಕಣ್ವತೀರ್ಥ ಸರೋವರಗಳು. ಆಗಸದ ಅಗಲನ್ನು ಅಳೆಯುವ ತೆಂಗು, ತಾಳೆ ಮುಂತಾದ ವೃಕ್ಷರಾಜಿಗಳು. ಕಣ್ವತೀರ್ಥದ ಪೂರ್ವ ದಿಕ್ಕಿನಲ್ಲಿ ಅಧ್ಯಾತ್ಮದ ಬಾವುಟ ವನ್ನು ಎತ್ತಿ ಹಿಡಿದಂತಿರುವ ಅಶ್ವತ್ಥವೃಕ್ಷ ಒಟ್ಟಾರೆ ಇದು ರಮಣೀಯತೆಗಳ ರಂಗ ಸ್ಥಳ ಎಂದು ಯಾರಿಗಾದರೂ ಎನ್ನಿಸದಿರದು.

ಹಿಂದೆ ಆನಂದತೀರ್ಥರು ಇಲ್ಲಿ ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತಿದ್ದರು. ಉಡುಪಿಯ ಎಂಟು ಬಾಲ ವಟುಗಳಿಗೆ ಪವಮಾನಗುರುಗಳು ಪರಮಹಂಸ ಪದವಿ ಯಲ್ಲಿ ಪಟ್ಟಾಭಿಷೇಕ ಮಾಡಿದ್ದು ಇದೇ ಪುಣ್ಯಾಶ್ರಮದಲ್ಲಿ.

ಆ ಪವಿತ್ರವಾದ ಈ ಪುಣ್ಯಕ್ಷೇತ್ರದಲ್ಲಿ ವಾಸಮಾಡಿದ್ದು— ಪಾಠ, ಪ್ರವಚನ, ಸ್ವಾಧ್ಯಾಯರೂಪವಾದ ವಾಙ್ಮಯ ತಪಸ್ಸನ್ನು ಆಚರಿಸುತ್ತಲಿದ್ದರು. ಅವರು ಒಮ್ಮೆ ಇಲ್ಲಿಯ ಅಶ್ವತ್ಥವೃಕ್ಷದ ಕಟ್ಟೆಯ ಮೇಲೆ ತಮ್ಮ ಶಿಷ್ಯರಿಗೆ ಸಚ್ಛಾಸ್ತ್ರ ಪಾಠವನ್ನು ಹೇಳುತ್ತ ಕುಳಿತಿದ್ದರು. ಆಗ ಗಾಳಿಯು ಬಿರುಸಾಗಿ ಬೀಸಿ ಗಿಡದ ಎಲೆಗಳು ಪಟ–ಪಟ ಸಪ್ಪಳ ಮಾಡಹತ್ತಿದವು. ಈ ವೃಕ್ಷ ಪರ್ಣಗಳ ಮರ್ಮರ ಶಬ್ದಗಳ ಸದ್ದು–ಗದ್ದಲದಿಂದ ವಿಜಯಧ್ವಜತೀರ್ಥರ ಪಾಠಕ್ಕೆ ಆತಂಕವಾಗತೊಡಗಿತು. ಆಗ ಆ ತಪೋನಿಧಿಗಳು ತಮ್ಮ ಕೈಯೆತ್ತಿ ಅಶ್ವತ್ಥಮರಕ್ಕೆ ಸದ್ದು ಮಾಡದಿರಲು ಸೂಚನೆ ಇತ್ತರು.

ಏನಿದು ಆಶ್ಚರ್ಯ! ಗಾಳಿ ಬೀಸುತ್ತಿದ್ದರೂ, ಎಲೆಗಳು ಚಲಿಸುತ್ತಿದ್ದರೂ ಸದ್ದು ಮಾತ್ರ ಇಲ್ಲ. ಎಲ್ಲವೂ ಒಮ್ಮೆಲೇ ಶಾಂತ. ವಾತಾವರಣವೆಲ್ಲವೂ ಪ್ರಶಾಂತ. ಪರಿಸರದ ಪ್ರಕೃತಿ ಎಲ್ಲವೂ ಜಿಜ್ಞಾಸು ಶಿಷ್ಯನಂತೆ ನಿಶ್ಚಲವಾಗಿ ನಿಂತುಕೊಂಡು ಸರ್ವಜ್ಞ

ಶಾಸ್ತ್ರದ ಪಾಠವನ್ನು ಶ್ರೀ ವಿಜಯಧ್ವಜರ ಮುಖದಿಂದ ಆಲಿಸುತ್ತಿದೆ. ಗಾಳಿಕೂಡ ಪ್ರಾಣಿಗಳ ಶ್ವಾಸೋಚ್ಛ್ವಾಸಕ್ಕೆ ತೊಂದರೆಯಾಗದಂತೆ ತಿಳುಗಾಳಿಯಾಗಿ ತೀಡುತ್ತಿದೆ. ಇಂಥದು ಶ್ರೀ ವಿಜಯಧ್ವಜರ ತಪೋಮಹಿಮೆ.

ಶ್ರೀ ವಿಜಯಧ್ವಜರು ತಮ್ಮ ಗ್ರಂಥಗಳನ್ನು ಬರೆಯಲಿಕ್ಕೂ ಧ್ಯಾನ ಸಮಾಧಿಯಲ್ಲಿ ಲೀನರಾಗಿ ತಪಸ್ಸಂಗೈಯಲಿಕ್ಕೂ ಸಮುದ್ರದ ಮಧ್ಯದಲ್ಲಿಯ ಒಂದು ಹೆಬ್ಬಂಡಿಯ ಮೇಲೆ ಕುಳಿತುಕೊಳ್ಳುತ್ತಿದ್ದರಂತೆ. ಆ ಶಿಲಾಸನದ ಮೇಲೆ ಅವರು ಚಿಂತನಶೀಲರಾಗಿ ಅನಂತನ ಧ್ಯಾನಮಾಡುತ್ತ ಕುಳಿತುಕೊಂಡಾಗ ಕಡಲಿನ ಒಡಲಿನಲ್ಲಿ ಎದ್ದೇಳುವ ಹೆದ್ದರೆಗಳು ಕೂಡ ಒಮ್ಮೆಲೇ ಶಾಂತವಾಗಿ ಸದ್ದು–ಗದ್ದಲ ಮಾಡದೆ ಒಮ್ಮೆಲೇ ತಿಳುವಾಗಿ ತರಳವಾಗಿ ತೆವಳಿಕೊಂಡು ಹೋಗುತ್ತಿದ್ದವಂತೆ. ಶ್ರೀ ವಿಜಯಧ್ವಜರು ತಪೋನಿಷ್ಠಾನಗ್ಗೈದ ಆ ಪುಣ್ಯ ಪಾಷಾಣ ಖಂಡವನ್ನು ಈಗಲೂ ಪಶ್ಚಿಮ ಸಮುದ್ರದಲ್ಲಿ ಕಣ್ವತೀರ್ಥದ ಬಳಿಯಲ್ಲಿ ನಾವು ಕಾಣಬಹುದು. ಶ್ರೀ ಶ್ರೀಪಾದಂಗಳವರು ಅಲ್ಲಿ ಚಿಂತನ ಶೀಲರಾಗಿ ಕುಳಿತಾಗ ತಮ್ಮ ಧ್ಯಾನ ಗೋಚರವಾದ ಅನೇಕ ಸಂಗತಿಗಳನ್ನು ಆ ಸಮುದ್ರ ಶಿಲೆಯ ಮೇಲೆ ಕೊರೆದಿಟ್ಟು ಅನಂತರ ತಾಡವಾಲೆಗಳಲ್ಲಿ ಬರೆಯುತ್ತಿದ್ದರಂತೆ. ಶ್ರೀ ವಿಜಯಧ್ವಜ ತೀರ್ಥರು ತಮ್ಮ ಹಸ್ತಾಕ್ಷರದಿಂದ ಉಟ್ಟಂಕಿಸಿದ ಅನೇಕ ವರ್ಣ ಮಾಲೆಗಳನ್ನು ಆ ಕಡಲುಗಲ್ಲಿನ ಬೆನ್ನಮೇಲೆ ಇಂದಿಗೂ ನಾವು ಕಾಣಬಹುದು. ಹೇಳುತ್ತ ಹೋದರೆ ಶ್ರೀ ವಿಜಯಧ್ವಜತೀರ್ಥರ ಮಹಿಮೆಗಳು ಅಪಾರವಾಗಿವೆ.

ಶ್ರೀ ವಿಜಯಧ್ವಜ ತೀರ್ಥರು ಪರಮ ಪಾವನ ಪುಣ್ಯಾಶ್ರಮವಾದ ಈ ಕಣ್ವಾಶ್ರಮದಲ್ಲಿ ಬಹುಕಾಲ ಇದ್ದು ಕಣ್ವಋಷಿಗಳಿಂದ ಅರ್ಚಿತನಾದ ಶ್ರೀ ರಾಮದೇವರನ್ನೂ ಸರ್ವಜ್ಞ ಕರಾರ್ಚಿತ ವಿಠ್ಠಲ ದೇವರನ್ನೂ ಪೂಜೆಮಾಡಿ, ಸಮೀರ ಸಮಯ ಸಿದ್ಧಾಂತವನ್ನು ಶಿಷ್ಯರಿಗೆ ಪಾಠ ಹೇಳಿ ಕ್ರಿ. ಶ. ೧೪೩೮ ನೇ ವರ್ಷದಲ್ಲಿ ಅಂದರೆ— ಸಿದ್ಧಾರ್ಥ ಸಂ. ವೈಶಾಖ ಶುದ್ಧ ದ್ವಿತಿಯಾ ದಿವಸ ಈ ಕಣ್ವತೀರ್ಥದಲ್ಲಿಯೇ ವೃಂದಾವನಸ್ಥರಾದರು. ಪ್ರತಿ ವರ್ಷ ಮೂರು ದಿನ ಆರಾಧನೆಯು ಇಲ್ಲಿ ಬಹು ಸಂಭ್ರಮದಿಂದ ನಡೆಯುವದು.

ಶ್ರೀ ವಿಜಯಧ್ವಜತೀರ್ಥರು ಶ್ರೀ ಮದ್ಭಾಗವತಕ್ಕೆ ಪದರತ್ನಾವಳಿ ಎಂಬ ವ್ಯಾಖ್ಯಾನವನ್ನು ಬರೆದು ಅದರ ಕೊನೆಗೆ ಒಂದು ಪದ್ಯದಲ್ಲಿ ತಮ್ಮ ಈ ಕೃತಿಯನ್ನು ಶ್ರೀ ಕೃಷ್ಣನ ಪಾದಾರವಿಂದದಲ್ಲಿ ಸಮರ್ಪಣೆ ಮಾಡುತ್ತ ಮೂರು ವರಗಳನ್ನು ಕೇಳಿದ್ದಾರೆ.

ಸ್ವಾಮೀ ಕೃಷ್ಣ ನೀನು ಈ ಭಾಗವತದ ವ್ಯಾಖ್ಯಾನದಿಂದ ನಿಜವಾಗಿಯೂ ಸಂತುಷ್ಟನಾಗಿದ್ದರೆ ನನಗೆ ಮೂರು ವರಗಳನ್ನು ಕೊಡು.

೧) ಮೊದಲನೇಯದಾಗಿ ಸಂಪೂರ್ಣ ದಾರಿದ್ರ್ಯ.

೨) ಪ್ರತಿ-ಜನ್ಮದಲ್ಲಿಯೂ ನಿನ್ನ ಪಾದಾರವಿಂದಗಳಲ್ಲಿ ಭಕ್ತಿ.

೩) ಸರ್ವಜ್ಞ ಶಾಸ್ತ್ರದಲ್ಲಿ ಆಸಕ್ತಿ.

ಇದರ ಮೇಲಿಂದ ಶ್ರೀ ವಿಜಯಧ್ವಜತೀರ್ಥರ ವೈರಾಗ್ಯವು ಯಾವ ಮಟ್ಟದ್ದು ಇದ್ದಿತೆಂಬುವದನ್ನು ಸುಲಭವಾಗಿ ಅರಿತುಕೊಳ್ಳಬಹುದು. ಮತ್ತು ಅವರ ಹರಿಭಕ್ತಿ ಹಾಗೂ ಮಧ್ವಶಾಸ್ತ್ರ ದೀಕ್ಷೆಗಳು ಎಷ್ಟು ಉತ್ಕಟವಾಗಿದ್ದವು ಎನ್ನುವದು ಕೂಡ ಅವರ ಗ್ರಂಥದ ಕೊನೆಯ ಪದ್ಯದ ಈ ವಚನ ರಚನೆಯಿಂದ ಸುಸ್ಪಷ್ಟವಾಗಿ ಗೋಚರ ವಾಗುತ್ತದೆ.

ಶ್ರೀ ವಿಜಯಧ್ವಜರು ಸಾಕ್ಷಾತ್ ಶುಕಾಚಾರ್ಯರ ಅವತಾರ ಭೂತರೇ ಆಗಿದ್ದ ರೆಂಬುವದು ಅವರ ಭಾಗವತ ಟೀಕೆಯನ್ನು ನೋಡಿದರೆ ಯಥಾರ್ಥವೆಂದೇ ಎನಿಸುವದು. ಅವರ ವೃಂದಾವನದ ಬಳಿಗೆ ಕುಳಿತು ಸಮಗ್ರ ಭಾಗವತವನ್ನು ಪಾರಾಯಣ ಮಾಡಿ ದರೆ ಎಂಥ ಮಂದಮತಿಗೂ ಶ್ರೀ ಮದ್ಭಾಗವತದ ದಿವ್ಯವಾದ ಅರ್ಥವು ಹೊಳೆಯುವ ದಂತೆ. ಶ್ರೀ ಮದಾನಂದತೀರ್ಥರ ಭಾಗವತ ತಾತ್ಪರ್ಯದ ಸಾರಸಂದೇಶವೆಲ್ಲವೂ ತಿಳಿಯಾಗಿ ತಿಳಿಯುವದಂತೆ.

ಶ್ರೀ ಮದ್ಭಾಗವತದ ಟೀಕೆಯನ್ನು ಬರೆಯುವಾಗ ಶ್ರೀ ವಿಜಯಧ್ವಜತೀರ್ಥರು ಪ್ರತಿಯೊಂದು ಸ್ಕಂದದ ಪ್ರಾರಂಭಕ್ಕೂ ಆ ಇಡೀ ಸ್ಕಂದದ ಭಾವವೇ ತೇಲಿ ತೂಂ ತೋರಿ ಬರುವಂತೆ ಸುಂದರವಾದ ಒಂದೊಂದು ಪದ್ಯವನ್ನು ರಚಿಸಿದ್ದಾರೆ.

ಆ ಹನ್ನೆರಡು ಪದ್ಯಗಳಲ್ಲಿಯೂ ಅವರ ಹೃದಯದಲ್ಲಿ ಉಕ್ಕುವ ಹರಿಭಕ್ತಿಯ ಹಲಬು ಹಂಬಲಗಳು ಹಾಡಾಗಿ ಹೊಮ್ಮಿವೆ. ಪದ್ಯವಾಗಿ ಚಿಮ್ಮಿವೆ. ಪ್ರತಿ ನಿತ್ಯವೂ ಬಿಡುವಿದ್ದಾಗ ಅನ್ನಲಿಕ್ಕೂ ಸಮಗ್ರ ಭಾಗವತದ ಅರ್ಥಾನುಸಂಧಾನಕ್ಕೂ ಭಾವ ಬಂಧುರವಾದ ಈ ಪದ್ಯಗಳು ಉಪಯುಕ್ತವಾಗಬಹುದೆಂದು ಭಾವಿಸಿ ಇಲ್ಲಿ ವಿಜಯ ಧ್ವಜರ ಮಂಗಲ ದ್ವಾದಶೀ ಎಂಬ ಹೆಸರಿನಿಂದ ಅರ್ಥ ಸಹಿತವಾಗಿ ಮುಂದೆ ಕೊಡ ಲಾಗಿದೆ. ಭಕ್ತರು ಪ್ರತಿ ನಿತ್ಯವೂ ಅರ್ಥ ಸಹಿತವಾಗಿ ಅವುಗಳನ್ನು ಪಾರಾಯಣ ಮಾಡಿದರೆ ಅವರಿಗೆ ಉಧ್ಧೃತಿ ಸದ್ಗತಿ ಎರಡೂ ಆಗುವದು ನಿಶ್ಚಿತ.



# ಶ್ರೀ ವಿಜಯಧ್ವಜರ ಮಂಗಲ ದ್ವಾದಶೀ

ಯತೋ ಜನ್ಮಾದ್ಯಸ್ಯ ಶ್ರುತಿ ಸುನಯ ಮಾನೈಕ ವಿಷಯಾತ್
ಸ್ವತಂತ್ರಸ್ತಂತ್ರಜ್ಞೋ ಗುರುರಪಿ ಗುರೋರ್ಯಶ್ಚ ಜಗತಾಮ್ ॥
ವಿಮೂಢಾಯತ್ತತ್ವಂ ಪ್ರಕಟಮಿಹವೇತ್ತುಂ ಸುಮನಸೋ
ಮುಕುಂದಂ ಧ್ಯಾಯಾಮಾಪಹತ ಕುಹಕಂ ತಂ ಸ್ವಮಹಸಾ ॥

ವೇದ ಮತ್ತು ವೇದಾನುಗೃಹೀತವಾದ ಯುಕ್ತ್ಯಾದಿ ಪ್ರಮಾಣಗಳಿಗೆ ಮಾತ್ರ ವಿಷಯನಾಗತಕ್ಕ, ಸರ್ವತಂತ್ರ ಸ್ವತಂತ್ರನಾದ ಜಗದ್ಗುರುಗಳಾದ ಭಾರತೀಶರಿಗೂ ಕೂಡ ಪರಮಗುರುವಾದ ಯಾವ ಭಗವಂತನಿಂದ ಈ ಪ್ರಪಂಚಕ್ಕೆಲ್ಲ ಸೃಷ್ಟಿಸ್ಥಿತ್ಯಾದಿಗಳು ಸಂಭವಿಸುವವೋ ಮತ್ತು ಯಾವನನ್ನು ಸಾಕಲ್ಯೇನ ತಿಳಿಯಲಿಕ್ಕೆ ದೇವಾಧಿದೇವತೆಗಳಿಗೂ ಸಾಧ್ಯವಿಲ್ಲವೋ ಅಂಥ ತನ್ನ ತೇಜಃಪ್ರಭಾವದಿಂದ ಅಜ್ಞಾನವನ್ನು ದೂರ ಮಾಡತಕ್ಕ ಮೋಕ್ಷದಾತನಾದ ಮುಕುಂದನನ್ನು ಧ್ಯಾನ ಮಾಡುತ್ತೇನೆ.

ಯಲ್ಲೀಲಾ ಜಲರಾಶಿ ಲೋಲಲಹರೀ ಸ್ನಾನಕ್ಷಮಾಣಾಂ ನೃಣಾಂ
ಸಂಸಾರೋದಧಿರಾಶು ರುಷ್ಯತಿತರಾಮಗ್ನ್ಯಸ್ತಶುಷ್ಕೈಧವತ್
ಯಸ್ಮಾದ್ವಿಶ್ವ ಮಶೇಷ ಮುದ್ಭವತಿ ಯಸ್ತತ್ವಂ ಪರಂ ಯೋಗಿನಾಂ
ಶ್ರೀಮಂತಂ ಸಮುಪಾಸ್ಮಹೇಸುಮನಸಾಸುಸ್ಮಪ್ರಸಂ ವಿಠ್ಠಲಮ್ ॥

ಯಾವ ಭಗವಂತನ ಚರಿತ್ರಲೀಲಾ ಲಹರಿಗಳಲ್ಲಿ ಸ್ನಾನಮಾಡುವ ಮನುಷ್ಯರ ಸಂಸಾರವೆಂಬ ಸಮುದ್ರವು ಬೆಂಕಿಯಲ್ಲಿ ಹಾಕಿದ ಒಣ ಸೌದೆಯಂತೆ ಕೂಡಲೇ ಸುಟ್ಟು ಒಣಗಿ ಹೋಗುವವೋ ಮತ್ತು ಯಾರಿಂದಲೇ ಈ ಜಗತ್ತೆಲ್ಲ ಉತ್ಪನ್ನವಾಗಿದೆಯೋ ಅಂಥ ಯೋಗಿಗಮ್ಯನಾದ ದೇವತೆಗಳ ಪ್ರಸನ್ನನಾದ ರುಕ್ಮಿಣೀ ಸಹಿತನಾದ ಶ್ರೀ ವಿಠ್ಠಲನನ್ನು ಉಪಾಸಿಸುತ್ತೇವೆ.

ಪಶುಪತಿರಪಿ ಪ್ರೇಕ್ಷಾದಕ್ಷೋ ಯತೋಽಗಮದುನ್ನತಿಂ
ಸಕಲಜನತಾಪಂಕ್ತ್ಯಾಂ ಸ್ಥಾನಂ ಧೃವೋ ಯದನುಗ್ರಹಾತ್
ಸ್ವಭರಭ ಮಹಿಮೋದಾರಾತ್ ಯಥಾಂ ಸಮುಪಾಸಲಿ
ತ್ರಿಭುವನಮಜಿತಂ ವಂದಾರೂಣಾಂ ಪದಂ ಮುದಂ ನಮಃ

ಯಾವ ಭಗವಂತನ ಅರಿಯ ಅನುಕ್ಷಣಗಳನ್ನು ತಿಳಿದು ಆಚರಿಸುವವನು ದಕ್ಷನಾದ ಪಶುಪತಿ ಪ್ರಜಾಪತಿಗಳೂ ಮತ್ತು ಮಹಾದೇವನೂ ಯಾರಿಂದ

ಉನ್ನತಿಯನ್ನು ಹೊಂದಿದರೋ, ಯಾರ ಅನುಗ್ರಹದಿಂದ ಧ್ರುವರಾಜರು ವಿಶ್ವ ವಂದ್ಯವಾದ ಉಚ್ಚಸ್ಥಾನವನ್ನು ಪಡೆದರೋ ಮತ್ತು ಪೃಥುರಾಜನಾದರೂ ಭೂ ದೋಹನಮಾಡಿ ತನ್ನ ಮಂಗಳಕರವಾದ ಕೀರ್ತಿಯನ್ನು ಆಚಂದ್ರಾರ್ಕ ಕಾಯ್ದು ಕೊಂಡನೋ ಅಂಥ ತನ್ನನ್ನು ಭಕ್ತಿಯಿಂದ ನಮಿಸುವವರೆಗೆ ಆಮಂದಾನಂದ ಕೊಡತಕ್ಕ ಭಗವಂತನಿಗೆ ನಮಸ್ಕರಿಸುತ್ತೇವೆ.

ಪ್ರಭವತಿ ಜಗದೇತದ್ ಯತ್ ಕಟಾಕ್ಷೇಕ್ಷಣೇನಸ್ಥಿತ
ಯತಿ ಯದುಪೇಕ್ಷಾ ಲೇಶತೋ ನಾಶಮೇತಿ ॥
ಗತಮುಗತಮಭಿಜ್ಞಾ ಜಾನತೆ ಯಸ್ಯ ವೃತ್ತಂ
ಶರಣಮಿಮುಮಯೇಹಂ ಕಾಲಸಂಜ್ಞಂ ಮುಕುಂದಂ ॥

ಯಾವನ ಕಟಾಕ್ಷ ವೀಕ್ಷಣ ಮಾತ್ರದಿಂದ ಈ ಜಗತ್ತಿನ ಸೃಷ್ಟಿ ಸ್ಥಿತ್ಯಾದಿ ಗಳಾಗುವವೋ ಹಾಗೂ ಯಾವನ ಉಪೇಕ್ಷಾಲೇಶದಿಂದಲೂ ಈ ಪ್ರಪಂಚ ವಿನಾಶ ವಾಗುವದೋ ಮತ್ತು ಗತಾಗತ ಜ್ಞಾನಿಗಳಾದ ಪಂಡಿತರು ಯದನುಗ್ರಹ ಮಾತ್ರದಿಂದ ಯಾವನ ಮಹಾತ್ಮ್ಯವನ್ನು ತಿಳಿವಕೊಳ್ಳಲು ಸಮರ್ಥರಾಗುವರೋ ಅಂಥ ಕಾಲ ನಾಮಕನಾದ ಪರಮಾತ್ಮನಿಗೆ ಶರಣು ಹೋಗುತ್ತೇನೆ.

ಭವಭಯ ಜಟಾಂ ಘೋರಾಂ ಯಸ್ಯಾಭಿಧಾನಮಘಚ್ಚಿದೋ
ದಲಯತಿ ನೃಣಾಂ ಸದ್ಯಃ ಸಂಕೀರ್ತಿತಂ ಸ್ಖಲನಾದಿಷು
ಅಹಿರಿಪುರಹೆರ್ಹತ್ಯಾದ್ಯಂ ಹೋ ಜಹೌ ಹಿ ಯದರ್ಚಯಾ
ಶರಣಮನಿಶಂ ಶಾಂತಂ ಕಾಂತಂ ನಮಾಮಿ ಮುರದ್ವಿಷಂ ॥

ಆಪತ್ಕಾಲದಲ್ಲಿ ಪಾಪಪರಿಹಾರಕನಾದ ಯಾವನ ನಾಮಸ್ಮರಣೆಯು ಘೋರವಾದ ಸಂಸಾರದ ಭಯವನ್ನು ಪರಿಹರಿಸುವದೋ ಮತ್ತು ಪನ್ನಗಾರಿಯು ಯಾವನನ್ನು ಪೂಜಿಸಿ ತನ್ನ ಸರ್ಪಕುಲ ಸಂಹಾರಜನಿತ ಪಾತಕವನ್ನು ಪರಿಹರಿಸಿಗೊಂಡನೋ ಅಂಥ ಶಾಂತ ಕಾಂತ ಸ್ವರೂಪಿಯಾದ ಮುರಾರಿಯನ್ನು ಶರಣೆಂದು ವಂದಿಸುತ್ತೇನೆ.

ಅಸ್ತಾವಿಶ್ರುತಿಮಸ್ತಕೇನ ಮನುನಾ ಸ್ವಾಯಂಭುವೇನಾ
ಪಿಯೋಯೇನಾರಕ್ಷಿ ಜಗತ್ರಯಂ ಚ ಮುನಿಭಿಃ ಸ್ಮಾತ್ಮಾನುವಿದ್ಧಾತ್ಮಭಿಃ॥
ಯೇನಾಮೋಚಿ ಗಜಾಧಿಪಃ ಕ್ರಕಚವಚ್ಚಕ್ರೇಣ ನಕ್ರಾನನಾತ್
ಕ್ಷೀರಾಂಬೋಧಿರಮಂಥಿ ಯೇನ ಧೃತಭೂಃ ಸೋಯಂ ಹರಿಃ ಪಾತುನಃ॥

ವೇದಗಳಿಂದಲೂ ಸ್ವಾಯಂಭುವ ಮನುವಿನಿಂದಲೂ ಮತ್ತು ತನ್ನಲ್ಲಿ ಸಮಾಸಕ್ತ ಚೇತಸ್ಕರಾದ ಅನನ್ಯ ಭಕ್ತ ಮುನಿಗಳಿಂದಲೂ ಯಾರು ಸ್ತುತಿಸಲ್ಪಟ್ಟರು

ವರೋ, ಮೂರು ಲೋಕಗಳೂ ಯಾರಿಂದ ರಕ್ಷಿಸಲ್ಪಡುವವೋ, ಕರಗಸದಂತೆ ಕಠೋರವಾದ ತನ್ನ ಸುದರ್ಶನ ಚಕ್ರದಿಂದ ಮೊಸಳೆಯ ಬಾಯಿಂದ ಯಾರು ಗಜೇಂದ್ರನನ್ನು ಪಾರುಮಾಡಿದರೋ, ದೇವ ದಾನವರಲ್ಲಿ ಸ್ವಯಂ ಪ್ರವಿಷ್ಟನಾಗಿ ಯಾರು ಕ್ಷೀರಸಾಗರವನ್ನು ಮಂಥನ ಮಾಡಿದರೋ ಹದಿನಾಲ್ಕು ಲೋಕಗಳನ್ನು ಕೂರ್ಮರೂಪದಿಂದ ಯಾರು ಹೊತ್ತಿರುವರೋ ಅಂಥಶ್ರೀಹರಿಯು ನಮ್ಮನ್ನು ಕಾಯಲಿ.

ಯೇನಾಧಾರಿ ಗಿರಿಃ ಪರ್ವೇಚ ವಿಭುಧೈಃ ಯೇನಾವೃತ್ರಂ ಪ್ರೇರಿತೈಃ
ಯೇನಾತಾಪಿ ಸುರದ್ವಿಷಾಂ ಚ ಹೃದಯಂ ಶರ್ವೋಽಪ್ಯಮೋಹಿ ಸ್ತ್ರಿಯಾ ॥
ಯೇನಾಮಾಯಿ ಜಗಂತ್ಯಬಂಧಿ ಚ ಬಲಿಃಯೇನಾಪ್ಯದಾಯೆ ಶ್ರುತಿಃ
ಧಾತ್ರೆಯೇನ ನಿಹತ್ಯ ಮತ್ಸ್ಯವಪುಷಾ ದೈತ್ಯಂ ತಮೀಡೆ ಹರಿಂ ॥

ಯಾರು ಮಂದರಾಚಲವನ್ನು ಎತ್ತಿ ಹಿಡಿದರೋ, ಯಾರ ಪ್ರೇರಣಾನುಗ್ರಹ ಗಳಿಂದ ದೇವತೆಗಳು ಅಮೃತವನ್ನು ಕುಡಿದದ್ದರಿಂದ ದೈತ್ಯರ ಹೃದಯ ಸಂತಾಪದಿಂದು ರಿಯಿತೋ, ಮತ್ತು ಯಾರು ಮೋಹಿನೀ ವೇಷದಿಂದ ಮಹಾದೇವರನ್ನ ಕೂಡ ಮರುಳು ಮಾಡಿದರೋ, ವಾಮನ ವೇಷದಿಂದ ಮೂರು ಲೋಕಗಳನ್ನು ಅಳೆದುಕೊಂಡು ಯಾರು ಬಲಿಚಕ್ರವರ್ತಿಯನ್ನು ಬಂಧಿಸಿದರೋ, ಮತ್ಸ್ಯರೂಪದಿಂದ ದೈತ್ಯರನ್ನು ಸಂಹರಿಸಿ ಯಾರು ಬ್ರಹ್ಮದೇವರಿಗೆ ವೇದವನ್ನು ತಂದುಕೊಟ್ಟರೋ ಅಂಥ ಶ್ರೀಹರಿಯನ್ನು ಭಜಿಸುತ್ತೇನೆ.

ಸತ್ಯಂ ಜ್ಞಾನಮನಂತ ಮಚ್ಯುತ ಮಜಂ ನಿರ್ದುಃಖ ಸೌಖ್ಯೋದಧಿಂ
ನಿರ್ದೋಷಾಮಿತ ವೇದ ವೇದಿತಮಹಂ ವಂದೆ ಮುಕುಂದಂ ಸದಾ ॥
ಯದ್ಭಕ್ತ್ಯಾ ಕಮಲಾಬ್ಜ ಜೇಂದ್ರ ಗಿರಿಶಾನಂತಾದಿ ದೇವಾಃ ಪದಂ
ಸಾಯುಜ್ಯಂ ಪ್ರಸರಂತ್ಯನೇಕ ವಿಧಯಾ ಸತ್ಯೋ ವಿರತ್ಯಾಚತಮ್ ॥

ಜಗತ್ತಿನ ಜನನ ಮರಣಗಳಿಗೆ ಕಾರಣನೂ ಜ್ಞಾನಸ್ವರೂಪನೂ, ನಾಶರಹಿತನೂ, ದುಃಖಾಸಂಭಿನ್ನ ಆನಂದಸಾಗರನೂ ನಿರ್ದೋಷ ವೇದ ವೇದ್ಯನೂ, ಬ್ರಹ್ಮ ರುದ್ರಾದಿ ದೇವತೆಗಳಿಗೆ ಸಾಯುಜ್ಯಾದಿ ದಿವ್ಯಗತಿಪ್ರದನೂ ಆದ ಮುಕುಂದನನ್ನು ವಂದಿಸುತ್ತೇವೆ.

ಯೋಽಯಾಚಿ ತ್ರಿದಶೈಃ ಕುಭಾರ ಹೃತಯೆ ವಾತಾರಿಯೇನ ಕ್ಷಿತೌ
ಜಜ್ಞೇ ಯೇನ ಸುರಾಸುಹೃತ್ಸಮುದಯೋ ಯೇನ ತ್ರಿಲೋಕ್ಯಾಪಿ ಸಾ ॥
ಯೇನಾಧಾಯಿ ಯುಧಿಷ್ಠಿರೋ ನಿಜಪದೇ ಧರ್ಮೋಽಪಿ ಯೇನಾಂಕುರಿ
ಶ್ರೀಕೃಷ್ಣಂ ತಮಕೃಷ್ಣಕೃಷ್ಣದಯಿತಂ ವಂದಾಮಹೆ ಸಂತತಮ್ ॥

ಭೂ ಭಾರ ಹರಣಕ್ಕಾಗಿ ಯಾವನು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಭೂಮಿ ಯಲ್ಲಿ ಅವತರಿಸಿದನೋ ಯಾವನಿಂದ ದೈತ್ಯರ ಗುಂಪು ಸಂಹರಿಸಲ್ಪಟ್ಟಿತೋ, ಧರ್ಮ

ರಾಜನನ್ನು ಧರ್ಮಪೀಠದಲ್ಲಿ ಕುಳ್ಳಿರಿಸಿ ಧರ್ಮವು ಎಲ್ಲೆಡೆಗೆ ಅಂಕುರಿತವಾಗುವಂತೆ ಯಾವನು ಮಾಡಿದನೋ ಅಂಥ ಗೌರವಾಯನನಾದ ಅರ್ಜುನನಿಗೆ ಅತ್ಯಂತ ಪ್ರಿಯನಾದ ಶ್ರೀಕೃಷ್ಣನನ್ನು ಯಾವಾಗಲೂ ವಂದಿಸುತ್ತೇವೆ.

ವಾರಿಜವಾಸಾ ವಾರಿಜಯೋನಿ ತ್ರಿನಯನ ಶತಮಖಮುಖಸುರಮುಕುಟ।
ಶ್ರೇಣಿ ನಿಷಣ್ಣ ಶ್ರೀಪದಪೀಠಂ ಸಲಿಲಜ ಸಲೀಲ ದೃಗತಿ ರುಚಿರಂ ॥
ಮೃದುಹಾಸೇಂದ್ವಾನಂದಿತ ಲೋಕಂ ದಾರಿತ ದಿತಿಸುತ ತತಗಿರಿ ಶಿಖರಂ
ಕೃಷ್ಣಮಕೃಷ್ಣಂ ಚಿಂತಯಚೇತಃ ಶುಚಿತರಮಗುಣ ಯದುಕುಲತಿಲಕಂ॥

ಲಕ್ಷ್ಮೀದೇವಿ, ಬ್ರಹ್ಮದೇವರು, ಮಹಾದೇವರು, ಇಂದ್ರ ಮೊದಲಾದ ದೇವಾಧಿ ದೇವತೆಗಳ ಮಣಿಮುಕುಟಗಳ ಮೇಲೆ ಇರಿಸಿದ ಪಾದಪೀಠವುಳ್ಳ ದೈತ್ಯನಿಷೂದನನೂ ಮಂದಹಾಸದಿಂದ ಜಗತ್ತನ್ನೇ ಆನಂದಗೊಳಿಸುವವನೂ ನಿರ್ದೋಷನೂ ಕಮಲಾಕ್ಷನೂ ಯದುಕುಲಕ್ಕೆ ತಿಲಕಪ್ರಾಯನೂ ಆದ ಶ್ರೀಕೃಷ್ಣನನ್ನು ಎಲೆ ಮನಸ್ಸೇ ಚಿಂತಿಸು.

ಸುನೀಲ ನೀರದ ಶ್ಯಾಮಂ ಸಚ್ಚಿದಾನಂದ ವಿಗ್ರಹಮ್
ರಮಾರಮಣ ಮೀಶೇಶಂ ವಿಠ್ಠಲಂ ಸಮುಪಾಸ್ಮಹೆ ॥

ನೀಲಮೇಘದಂತೆ ಶ್ಯಾಮಸುಂದರವಾದ ಶರೀರವುಳ್ಳ, ರುದ್ರಾದಿ ದೇವತೆಗಳಿಗೂ ಪ್ರಭುವಾದ ಜ್ಞಾನಾನಂದಮಯವಾದವಪುಸ್ಸುಳ್ಳ ರುಕ್ಮಿಣೀಪತಿಯಾದಶ್ರೀವಿಠ್ಠಲನನ್ನು ಉಪಾಸಿಸುತ್ತೇವೆ.

ವ್ಯಾಖ್ಯಾ ಭಾಗವತಸ್ಯ ಕೃಷ್ಣ ರಚಿತಾ ತ್ವತ್ ಪ್ರೀತಿ ಕಾಮಾತ್ಮನಾ
ಪ್ರೀತಶ್ಚೇತ್ ಪ್ರದದಾಸಿತತ್ಪ್ರತಿನಿಧಿಂ ತತ್ರೀನ್ ವರಿಷ್ಯೇವರಾನ್ ॥
ಪ್ರಾಙ್ ನಿಷ್ಕಿಂಚನತಾಂ ತವ ಪ್ರತಿಭವಂ ಪಾದಾರವಿಂದಾತ್ಮನಾ
ಸಂಸಕ್ತಿಂ ಸುಖತೀರ್ಥ ಶಾಸ್ತ್ರ ವಿಜರಾಹಾರಸ್ಯ ಪಾರಂ ತಯಾ ॥

ಭಗವಾನ್ ಶ್ರೀಕೃಷ್ಣ, ನೀನು ಸುಪ್ರೀತನಾಗಲೆಂಬ ಹಿರಿಯಾಸೆಯಿಂದ ಭಾಗವತಕ್ಕೆ ನಾನು ಈ"ಪದರತ್ನಾವಳಿ"ಎಂಬ ವ್ಯಾಖ್ಯಾನವನ್ನು ಬರೆದಿದ್ದೇನೆ. ಇದರಿಂದ ನಿಜವಾಗಿಯೂ ಪ್ರೀತನಾಗಿದ್ದರೆ ನಿನ್ನಲ್ಲಿ ಮೂರು ವರಗಳನ್ನು ಕೇಳಿಕೊಳ್ಳುತ್ತೇನೆ. ೧) ನಾನು ಯಾವದೇ ಜನ್ಮದಲ್ಲಿರಲಿ ಎಲ್ಲಿಯೇ ಹುಟ್ಟಿರಲಿ ಮೊದಲು ನನ್ನನ್ನು ನಿಷ್ಕಿಂಚನನನ್ನಾಗಿ ಮಾಡು. ೨) ನಿನ್ನಪಾದಾರವಿಂದ ನಿಷೇವಣದಲ್ಲಿಯೇ ನನ್ನ ದೇಹಾತ್ಮಗಳು ಸರ್ವದಾ ಆಸಕ್ತವಾಗಿರಬೇಕು. ಮೂರನೆಯದಾಗಿ ಆ ಭಗವದ್ಭಕ್ತಿ ಯಿಂದ ಮಧ್ವ ಶಾಸ್ತ್ರದಲ್ಲಿ ಪಾರಂಗತತ್ತ್ವ ಬಂದು ಆದರಿಂದ ಭವಸಾಗರದ ಪಾರಂಗತನೇ ನಾನಾಗಬೇಕು.

## ಶ್ರೀ ಸುಬ್ರಮ್ಹಣ್ಯ ಭಕ್ತರಾದ

# ಶ್ರೀ ವಿಭುಧೇಶ ತೀರ್ಥರು

ಸುಬ್ರಮ್ಹಣ್ಯ ಮಠದ ಗುರು ಪರಂಪರೆಯಲ್ಲಿ ಹದಿನಾಲ್ಕನೇಯವರಾದ ಶ್ರೀ ವಿಭುಧೇಶ ತೀರ್ಥರು ಸಿದ್ದರೂ ಪ್ರಸಿದ್ಧರೂ ಆಗಿದ್ದರು. ಅವರ ಅಚ್ಛಿನ್ನ ಭಕ್ತಿಗೆ ಮೆಚ್ಚಿ ಸುಬ್ರಮ್ಹಣ್ಯ ಸ್ವಾಮಿಯು ಅವರು ಹೋದಲ್ಲೆಲ್ಲ ಬೆಂಬತ್ತಿ ಬರುತ್ತಿದ್ದರು. ಅವರು ಬಯಸಿದಾಗೆಲ್ಲ ಅವರಿಗೆ ಸುಬ್ರಮ್ಹಣ್ಯ ಸಾಕ್ಷಾತ್ಕಾರ. ಇವರಿಗೆ ಒಳ್ಳೇ ವಾಕ್‌ಸಿದ್ಧಿ ಇದ್ದದು ಪ್ರಸಿದ್ಧವಾದ ವಿಷಯ.

ಇವರ ಕಾಲವಲ್ಲಿ ಶ್ರೀ ಮಠದಲ್ಲಿ ಒಂದು ದುರ್ದೈವಿ ಘಟನೆ ನಡೆದುಬಂದಿತು.

ಒಂದು ದಿನ ವಿಭುಧೇಶ ತೀರ್ಥರು ಸಂಪುಟ ನರಸಿಂಹ ದೇವರ ಮಧ್ಯಾಸ್ಹ ಮಹಾ ಪೂಜೆ ಮಂಗಳಾರತಿ ಮಾಡಿ ಮುಗಿಸಿದರು. ಪರಿಚಾರಕರು ಉರಿಯುವ ಆ ಮಂಗಳಾರತಿ ಬತ್ತಿಯನ್ನು ಹೊರಗೆ ಹಾಕಿದಾಗ ಅವಕ್ಕೆ ಹತ್ತಿರ ತುಪ್ಪದ ಆಸೆಯಿಂದ ಒಂದು ಕಾಗೆಯು ಅವನ್ನು ತನ್ನ ಕೊಕ್ಕಿನಲ್ಲಿ ಎತ್ತಿಕೊಂಡು ಒಯ್ಯಿತು. ಅದು ಸುಡತೊಡಗಲು ಮಠದ ಮೇಲ್ಮಾಳಿಗೆಯ ಹುಲ್ಲು ಚಾವಣಿಯ ಮೇಲೆ ಆ ಉರಿಯುವ ಬತ್ತಿಯನ್ನು ಒಗೆದು ಹಾರಿಹೋಯಿತು. ಆ ಉರಿಯುವ ಬತ್ತಿಯು ಹುಲ್ಲಿನ ಮೇಲೆ ಗಾಳಿಗೆ ಹೊತ್ತಿಕೊಂಡು ಎಲ್ಲ ಕಡೆಗೂ ಬೆಂಕಿಯು ಹಬ್ಬಿ ದೇವ ಸ್ಥಾನದ ಕಟ್ಟಡಗಳೆಲ್ಲ ಸುಟ್ಟು ಹೋದವು. ಶ್ರೀಗಳವರು ಹೇಗೋ ಸಾಹಸ ಮಾಡಿ ಒಳಗಿರುವ ದೇವರ ಸಂಪುಟಗಳನ್ನು ಸುರಕ್ಷಿತವಾಗಿ ಹೊರ ತಂದು ಪಾರು ಮಾಡಿ ದರೂ ಚಿನ್ನ ರನ್ನದ ಆಭರಣಗಳೆಲ್ಲವೂ ಬೆಂಕಿಯಲ್ಲಿ ಬೆಂದು ಹೋದವು.

ಶ್ರೀ ವಿಭುಧೇಶ ತೀರ್ಥರಿಗೆ ಎಲ್ಲ ವಿದ್ಯಾ ಕಲಾ ಕೌಶಲ್ಯಗಳು ಕರಗತವಾಗಿ ದ್ದವು. ಅವರು ತಮ್ಮ ಯೋಗ ಶಕ್ತಿಯ ಪ್ರಭಾವದಿಂದ ಕಿಮಿಯಾ ವಿದ್ಯೆಯ ಸಿದ್ಧಿಯಿಂದ ದೇವರ ಆಭರಣ ಉಪಕರಣಗಳನ್ನು ಮಾಡಲಿಕ್ಕೆ ಬೇಕಾಗುವಷ್ಟು ಚಿನ್ನ ರತ್ನಗಳನ್ನು ಸಿದ್ಧಪಡಿಸಿಕೊಂಡು ಅಕ್ಕಸಾಲಿಗರನ್ನು ಕರೆಸಿ ಬೆಂಕಿಯಲ್ಲಿ ಸುಟ್ಟು ಕರಗಿ ಹೋದ ವಸ್ತುವಹವೆಗಳನ್ನೆಲ್ಲ ಮತ್ತೆ ಮೊದಲಿದ್ದಂತೆ ಮಾಡಿಸಿ ಇಟ್ಟರು. ಮತ್ತು ಸುಟ್ಟು ಹೋದ ಮಠ ದೇವಸ್ಥಾನದ ಕಟ್ಟಡಗಳನ್ನು ಕೂಡ ಹೊಸದಾಗಿ ಕಟ್ಟಿಸಿಬಿಟ್ಟರು.

ಇದನ್ನು ತಿಳಿದ ಮಹಾರಾಜನಿಗೆ ಕೌತುಕವೂ ಆಯಿತು. ಆಶೆಯೂ ಹುಟ್ಟಿತು ಈ ಸ್ವಾಮಿಗಳವರನ್ನು ಕರೆಸಿ ತನ್ನ ಅರಮನೆಯಲ್ಲಿಯೇ ಬೇಕಾದಷ್ಟು ಮುತ್ತು ರತ್ನಗಳನ್ನು ಅವರಿಂದ ಮಾಡಿಸಿ ಕುಬೇರ ಕುಮಾರನಂತೆ ಒಮ್ಮೆಲೆ ಸಿರಿವಂತನಾಗ ಬೇಕೆಂದು ಹೊಂಚು ಹಾಕಿದನು. ಈ ದುಷ್ಟ ವಿಚಾರದಿಂದ ಆ ದುರ್ಬುದ್ಧಿ ದೊರೆಯು ತನ್ನ ರಾಜ ಭಟರನ್ನು ಶ್ರೀ ಗಳವರನ್ನು ಕರೆದುಕೊಂಡು ಬರಲು ಶ್ರೀ ಮಠಕ್ಕೆ ಕಳಿಸಿದನು. ಅವರು ಒಳ್ಳೇ ಮಾತಿನಿಂದ ಬರದಿದ್ದರೆ ಬಲವಂತದಿಂದಲೂ ಅವರನ್ನು ಎತ್ತಿಕೊಂಡು ಬನ್ನಿರಿ ಎಂದು ಅವರಿಗೆ ಗುಪ್ತವಾಗಿ ಅಪ್ಪಣೆಯನ್ನು ಇತ್ತಿದ್ದ.

ಮಹಾರಾಜನು ಇಷ್ಟು ಹೇಳಿದ್ದೇ ತಡ ಉನ್ಮತ್ತರಾದ ರಾಜ ದೂತರು ಮಠಕ್ಕೆ ಮುತ್ತಿಗೆ ಹಾಕಿದರು. ಬತ್ತಲೆ ಖಡ್ಗವನ್ನು ಕುಣಿಸುತ್ತ ಸ್ವಾಮಿಗಳು ಎಲ್ಲಿ ಎಂದು ಗುಡುಗಿದರು.

ಈ ಮುಂದಾಗುವ ದುರ್ಘಟನೆಯನ್ನು ಶ್ರೀಗಳವರ ಭವಿಷ್ಯ ಭೇದಿನಿಯಾದ ದಿವ್ಯ ದೃಷ್ಟಿಯು ಮುಂಚಿತವಾಗಿಯೇ ತಿಳಿದುಕೊಂಡಿತ್ತು. ಅದಕ್ಕಾಗಿ ಅವರು ತಮ್ಮ ಪ್ರಿಯ ಶಿಷ್ಯರಿಗೆ ಆಶ್ರಮವಿತ್ತು ಪ್ರಣವ ಮಂತ್ರವನ್ನು ಉಪದೇಶ ಮಾಡಿ ಅವರಿಗೆ ತಮ್ಮ ಪೀಠ ಪರಂಪರೆಯನ್ನು ಮುಂದುವರಿಸಲು ಹೇಳಿದರು.

ಅಂದು ಮಧ್ಯಾನ್ಹ ದೇವರ ಪೂಜೆಯ ವೇಳೆಯಲ್ಲಿ ಮತ್ತರಾದ ರಾಜ ಭಟರು ಮುತ್ತಿಗೆ ಹಾಕಿ ಸುತ್ತಲೂ ಬಿಚ್ಚುಗತ್ತಿಯನ್ನು ಹಿಡಿದು ನಿಂತುಕೊಂಡಿದ್ದರು. ಶ್ರೀ ವಿಭುಧೇಶ ತೀರ್ಥರು ನಿರ್ಭಯವಾಗಿ ತಮ್ಮ ದೇವತಾರ್ಚನೆಯನ್ನು ಮುಗಿಸಿ ಆ ರಾಜಭಟರ ಕಣ್ಣೆದುರೆ ಹಾಯ್ದು ಹೊರಬಿದ್ದು ಹೋದರು. ಅವರನ್ನು ಹಿಡಿಯುವ ಧೈರ್ಯವಾಗಲಿ, ತಡೆಯುವ ಛಾತಿಯಾಗಲಿ ಯಾವ ರಾಜ ದೂತನಿಗೂ ಆಗಲಿಲ್ಲ.

ಅಲ್ಲಿಂದ ಹೊರಟ ವಿಭುಧೇಶ ತೀರ್ಥರು ಅಲ್ಲಲ್ಲಿ ತಂಗುತ್ತ ಕೊಡಗು ಸೀಮೆ ಯಲ್ಲಿ ಹಾದು ರಾಮನಾಥ ಪುರಕ್ಕೆ ನಡೆದರು.

ಶ್ರೀಗಳವರು ಸುಬ್ರಮ್ಹಣ್ಯ ಸ್ವಾಮಿಗಳನ್ನು ಬಿಟ್ಟು ಹೋದರೂ ಸುಬ್ರಮ್ಹಣ್ಯ ಸ್ವಾಮಿಯು ಮಾತ್ರ ಶ್ರೀಗಳವರನ್ನು ಬಿಡಲಿಲ್ಲ. ಅವರು ಹೋದಹೋದಲ್ಲೆಲ್ಲ ಅವ ರನ್ನು ಬೆಂಬಲಿಸಿ ತಾನೂ ಹೋದನು. ಅವರು ಇಳಿದುಕೊಂಡಲ್ಲೆಲ್ಲ ತಾನೂ ಉಳಿ ದುಕೊಂಡನು. ಅಲ್ಲಿ ಎಲ್ಲ ಕಡೆಗೂ ಒಂದೊಂದು ಸುಬ್ರಮ್ಹಣ್ಯ ದೇವಸ್ಥಾನಗ ಳಾದವು. ಅಲ್ಲಿ ಎಲ್ಲ ಕಡೆಗಳಲ್ಲಿಯೂ ಇಂದಿಗೂ ಪೂಜೆ ಪುರಸ್ಕಾರ ಸೇವಾ ಸೂತ್ರ ಉತ್ಸವ ಉಪಚಾರಗಳು ಸುಬ್ರಮ್ಹಣ್ಯ ಕ್ಷೇತ್ರದಲ್ಲಿ ನಡೆದಂತೆ ನಡೆಯುತ್ತವೆ.

ಹೀಗೆ ಶ್ರೀಗಳವರು ಗ್ರಾಮೈಕರಾತ್ರಿ ಸಂಚಾರ ಮಾಡುತ್ತ ಕಾವೇರಿ ತೀರದ ರಾಮನಾಥಪುರಕ್ಕೆ ಬಂದರು. ಅಂದು ಸುಬ್ರಹ್ಮಣ್ಯಸ್ವಾಮಿಯು ಅವರ ಕನಸಿನಲ್ಲಿ ದರ್ಶನವಿತ್ತು ಅಪ್ಪಣೆ ನೀಡಿದನು.

"ನಾನು ಇಲ್ಲಿಯವರೆಗೆ ನನ್ನನ್ನು ಹಿಂಬಾಲಿಸಿ ಬಂದುದಾಗಿದೆ. ಈ ರಾಮನಾಥಪುರವು ಪ್ರಸಿದ್ಧವಾದ ಪುಣ್ಯಕ್ಷೇತ್ರ. ಇನ್ನು ಮೇಲೆ ನನ್ನ–ನಿನ್ನ ಸಂಚಾರ ಸಾಕು. ನನಗೆ ಇಲ್ಲಿಯೇ ನೆಲೆಸಬೇಕೆಂದು ಅಪೇಕ್ಷೆಯಿದೆ. ನನಗೆ ನೀನೂ ಇಲ್ಲಯೇ ನೆಲೆಸಬೇಕೆಂದು ಆಶೆಯಿದೆ. ನನಗೆ ನೀನು ಇಲ್ಲಿಯೇ ಒಂದು ದೇವಸ್ಥಾನವನ್ನು ಕಟ್ಟಿಸಿ, ಪೂಜಾ ಪರಿಚರ್ಯೆಗಳ ವ್ಯವಸ್ಥೆಯನ್ನು ಮಾಡು."

ಸ್ವಾಮಿಯ ಆಜ್ಞೆಯಂತೆ ಶ್ರೀಗಳವರು ರಾಮನಾಥಪುರದಲ್ಲಿ ಒಂದು ದಿವ್ಯವಾದ ದೇವಸ್ಥಾನವನ್ನು ನಿರ್ಮಿಸಿದರು.

ಆ ದೇಶದ ಅರಸನಿಗೆ ಗಂಡು ಸಂತತಿ ಇರಲಿಲ್ಲ. ಕಾವೇರಿ ತೀರದ ರಾಮನಾಥಪುರದಲ್ಲಿ ಬಂದು ನೆಲೆಸಿದ ಶ್ರೀಗಳವರಿಗೆ ವಾಕ್ ಸಿದ್ಧಿ ಇದೆ ಎಂಬ ಸುದ್ದಿಯು ಅವನಿಗೆ ತಲ್ಪಿತು. ಸಂತಾನ ಪ್ರಾಪ್ತಿಗಾಗಿ ಅವನು ಈ ವರೆಗೂ ಮಾಡಿದ ಸೇವಾ ಸೂತ್ರಗಳೂ, ವ್ರತ–ನೇಮಗಳೂ ವ್ಯರ್ಥವಾಗಿದ್ದವು. ಆದುದರಿಂದ ಅವನು ಶ್ರೀಪಾದಂಗಳವರ ಪಾದ ಸನ್ನಿಧಿಯಲ್ಲಿ ಬಂದು ತನ್ನ ಬೆಸನ-ಬಯಕೆಗಳನ್ನು ತಿಳಿಸಿ ತನ್ನ ಕುಲದ ಬಳ್ಳಿಗೆ ಕುಡಿಬರುವಂತೆ ಮಾಡಬೇಕೆಂದು ಬಿನ್ನವಿಸಿಕೊಂಡನು. ಶ್ರೀಗಳವರು ಅವನಿಗೆ ಅನುಗ್ರಹಿಸಿದರು. ವರ್ಷ ತುಂಬುವಷ್ಟರಲ್ಲಿ ಅವನಿಗೆ ಗಂಡು ಸಂತಾನವಾಯಿತು. ಸಂತುಷ್ಟನಾದ ಮಹಾರಾಜನು ಶ್ರೀಗಳವರ ಆದೇಶದಂತೆ ಸುಬ್ರಹ್ಮಣ್ಯಸ್ವಾಮಿಗೆ ಒಂದು ದೊಡ್ಡ ದೇವಾಲಯವನ್ನು ಕಟ್ಟಿಸಿಕೊಟ್ಟು. ನಿರಂತರ ಪೂಜೆ ಉತ್ಸವಾದಿಗಳು ನಡೆಯುವಂತೆ ಧಾರಾಳವಾಗಿ ದಾನ–ದತ್ತಿಗಳನ್ನು ಬಿಟ್ಟು, ಸೇವೆ ಸಲ್ಲಿಸಿದ.

ಶ್ರೀ ವಿಭುಧೇಶತೀರ್ಥ ಸ್ವಾಮಿಗಳಿಗೆ ಪ್ರಸನ್ನನಾಗಿ ಸುಬ್ರಹ್ಮಣ್ಯಸ್ವಾಮಿಯು ಅಲ್ಲಿ ಬಂದು ನೆಲೆಸಿದ್ದರಿಂದ ಪ್ರಸನ್ನ ಸುಬ್ರಹ್ಮಣ್ಯಸ್ವಾಮಿ ಎಂದು ಆ ದೇವರಿಗೆ ಹೆಸರಾಗಿದೆ. ಆ ದೇವಸ್ಥಾನದ ಅಧಿಕಾರ ಆಧಿಪತ್ಯಗಳು ಇಂದಿಗೂ ಸುಬ್ರಹ್ಮಣ್ಯಾಮಠದ ಶ್ರೀಗಳವರ ಅಧೀನದಲ್ಲಿಯೇ ಇರುತ್ತವೆ.

ಶ್ರೀ ವಿಭುಧೇಶತೀರ್ಥ ಶ್ರೀಪಾದಂಗಳವರು ರಾಮನಾಥಪುರದಲ್ಲಿ ಸುಬ್ರಹ್ಮಣ್ಯಾ ಸ್ವಾಮಿಯನ್ನು ಪ್ರತಿಷ್ಠೆಗೈದು, ತಾವೂ ಅಲ್ಲಿಯೇ ಆ ಸ್ವಾಮಿಯ ಸೇವೆಗೈಯ್ಯುತ್ತ ನಿಂತುಬಿಟ್ಟರು. ತಪೋಧ್ಯಾನ ನಿರತರಾದ ಅವರು ಅಲ್ಲಿಯೇ ಹರಿಪದವನ್ನೈದರು.

ಈ ರಾಮನಾಥಪುರ ಕ್ಷೇತ್ರವು ಹಾಸನ ಜಿಲ್ಲೆಯಲ್ಲಿ ಕಾವೇರಿ ತಟಾಕದಲ್ಲಿ ಇರುತ್ತದೆ. ದೇವಸ್ಥಾನದ ಅಂಗಳವನ್ನು ತೊಳೆದು, ತೀರ್ಥವಾದ ಆ ಕಾವೇರಿಯ ನದೀ ಪ್ರವಾಹದ ನಟ್ಟನಡುವೆ ಗಾಯತ್ರಿಯ ಶಿಲೆ ಎಂಬ ಹೆಬ್ಬಂಡೆ ಇವೆ. ಹಿಂದೆ ವಿಶ್ವಾಮಿತ್ರರು ಗಾಯತ್ರಿಯ ಪುರಶ್ಚರಣವನ್ನು ಮಾಡಿ, ಬ್ರಹ್ಮತ್ವದ ಸಿದ್ಧಿಯನ್ನು ಪಡೆದದ್ದು ಈ ಶಿಲೆಯ ಮೇಲೆಯೆ. ಇಲ್ಲಿ ರಾಮದೇವರು ಸ್ಥಾಪಿಸಿದ ರಾಮನಾಥ ದೇವಾಲಯವೂ, ಅಗಸ್ತ್ಯೇಶ್ವರ ದೇವಾಲಯವೂ ಇರುತ್ತವೆ. ಮಾರ್ಗಶೀರ್ಷ ಮಾಸದಲ್ಲಿ ಚಂಪಾಷಷ್ಠಿಯ ಉತ್ಸವವು ಸುಬ್ರಹ್ಮಣ್ಯದಲ್ಲಿ ನಡೆಯುವಂತೆ ಇಲ್ಲಿಯೂ ವಿಜೃಂಭಣೆಯಿಂದ ನಡೆಯುತ್ತಿದೆ.



## ಶ್ರೀ ಟೀಕಾಚಾರ್ಯರಿಂದ ಸರ್ವಜ್ಞ ಸಂಸ್ಥಾನವನ್ನು ವಹಿಸಿದ
# ಶ್ರೀ ವಿದ್ಯಾಧಿರಾಜ ತೀರ್ಥರು

ಶ್ರೀ ವಿದ್ಯಾಧಿರಾಜ ತೀರ್ಥರ ಪೂರ್ವಾಶ್ರಮದ ಹೆಸರು ಶ್ರೀ ಕೃಷ್ಣಭಟ್ಟರು. ಇವರ ಊರು ಗೋತ್ರ ತಾಯಿ–ತಂದೆಗಳ ಬಗೆಗೆ ವಿವರವು ಉಪಲಬ್ಧವಿಲ್ಲ. ಶ್ರೀ ಕೃಷ್ಣ ಭಟ್ಟರು ಶ್ರೀ ಟೀಕಾಚಾರ್ಯರ ವೇದಾಂತ ಕಾಂತಾರದಲ್ಲಿ ಪಳಗಿದ ಸಿಂಹ. ಆ ಗುರು ಗರಡಿಯಲ್ಲಿ ಮಿದುಳಿನ ಅಂಗ ಸಾಧನೆ ಮಾಡಿದ ಜಗಜಟ್ಟಿ ಜ್ಞಾನದಗಟ್ಟಿ.

" ಮಾಧ್ಯದದ್ವೈತ್ಯಂಧಕಾರ ಪ್ರದ್ಯೋತನ ಮಹರ್ನಿಶಂ ।
ವಿದ್ಯಾಧಿರಾಜಂ ಸುಗುರುಂ ಧ್ಯಾಯಾಮಿ ಕರುಣಾಕರಂ ॥ "

ಎಂಬ ಚರಮ ಶ್ಲೋಕದಿಂದಲೇ ಅವರೆಂಥ ಉದ್ದಾಮ ವಿದ್ವಾಂಸರಾಗಿದ್ದರೆಂಬುವದು ಸುವ್ಯಕ್ತವಾಗುವದು.

ಅಂಥ ಅಪ್ರತಿಮ ಪ್ರತಿಭೆ ಪ್ರಭೆ, ಪಾಂಡಿತ್ಯ ಪ್ರಾಗಲ್ಭ್ಯ ಮತ್ತು ತಪೋಮಹಿಮೆಗಳು ಇಲ್ಲದಿದ್ದರೆ ಶ್ರೀ ಟೀಕಾ ಕೃತ್ಪಾದರು ಅವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಆರಿಸುತ್ತಿದ್ದರೇ !

ಅವರು ಶ್ರೀಮದ್ ಭಗವದ್ಗೀತೆಯ ಮೇಲೆ ಬರೆದ ಟೀಕೆಯು ಸರ್ವಶಾಸ್ತ್ರಾರ್ಥ ದರ್ಶನಿಯಾದ ಆದರ್ಶದಂತಿದೆ.

" ಮಧ್ವೋಕ್ತಿದ್ಯು ನದೀ ಜಯಾರ್ಯ ಶುಭವಾಕ್ ಸೂರ್ಯಾತ್ಮಜಾ
ಸಂಗಮೇ
ವ್ಯಾಖ್ಯಾಸ್ನಾನ ಮಹೋವಿಧಾಯ ನೃಹರೇಃ ಪ್ರಾಪ್ಯಪ್ರಸಾದಂ ಪರಮ್ ॥"
ಪ್ರಾಪುರ್ಯೇ ಕೃತಕೃತ್ಯತಾಂ ಗತಮಲಾ ವಿದ್ಯಾಧಿರಾಜಾದಯಃ............

ಶ್ರೀ ಮಧ್ವವಾಣಿಯೆಂಬ ಗಂಗೆಗೆ, ಜಯತೀರ್ಥವಾಕ್ ಎಂಬ ಯಮುನೆಯು ಕೂಡಿದಾಗ ಈ ಎರಡು ವಾಕ್ಪ್ರವಾಹದ ಮಧ್ಯದಲ್ಲಿ ವ್ಯಾಖ್ಯಾನ ಸ್ನಾನ ಮಾಡಿದ ಪುಣ್ಯಾತ್ಮರೆಂದರೆ ಶ್ರೀ ವಿದ್ಯಾಧಿರಾಜರೇ ಮೊದಲಾದ ದೈವಿಕ ಪುರುಷರು."

ಎಂಬ ಈ ಪದ್ಯದಲ್ಲಿ ಸರ್ವಜ್ಞ ಮತ್ತು ಸರ್ವಜ್ಞಕಲ್ಪರ ವಾಗ್ಗಂಗಾ ಸಂಗಮ ರಂಗದ ತರಂಗಾಂತರಂಗದಲ್ಲಿ ಈಜಾಡುವ ವಿದ್ವತ್ತಿಮಿಂಗಿಲಗಳೆಂದರೆ ಶ್ರೀ ವಿದ್ಯಾಧಿರಾಜ ಪ್ರಭೃತಿಗಳು ಎಂದು ಹೇಳಿದ್ದಾರೆ.

---

ಡಾ. ಶ್ರೀ ಬಿ. ಎನ್. ಕೆ. ಶರ್ಮರವರ ಶ್ರೀ ಬ್ರಹ್ಮಣ್ಯತೀರ್ಥ ಎಂಬ ಲೇಖನವನ್ನು ಓದಿರಿ.

ಶ್ರೀ ವಿದ್ಯಾಧಿರಾಜರು ಅನೇಕ ದುರ್ವಾದಿಗಳ ಗರ್ವನಿರ್ವಾಪಣವನ್ನು ಮಾಡಿ ಎಲ್ಲ ಕಡೆಗೂ ಅಧ್ಯಾತ್ಮ ಜ್ಞಾನದ ಕಿರಣಗಳನ್ನು ಪ್ರದ್ಯೋತನ ಅಂದರೆ ಸವಿತೃ ದೇವನಂತೆ ಹರಡಿ ಹಬ್ಬಿಸಿದರು.

ಶ್ರೀ ವಿದ್ಯಾಧಿರಾಜರ ತಪಃಶಕ್ತಿಯೂ, ದೇವಭಕ್ತಿಯೂ, ವಿಷಯವಿರಕ್ತಿಯೂ ಒಂದೊಂದೂ ಅಸಾಧಾರಣವಾಗಿದ್ದವು.

ಒಮ್ಮೆ ಅವರು ಗಂಗಾಸ್ನಾನಕ್ಕಾಗಿ ಕಾಶಿಗೆ ಹೋಗಬೇಕೆಂದು ವಿಚಾರಿಸಿದರು. ಆದರೆ ಆಗ ಅವರು ಇದ್ದದ್ದು ಭೀಮಾತೀರದಲ್ಲಿ, ಹೋಗಬೇಕೆಂದು ಬಯಸಿದ್ದು ಗಂಗಾ ತೀರಕ್ಕೆ. ಅಷ್ಟುದೂರ ಹೋಗುವದೆಂತು? ವಯಸ್ಸಾದದ್ದರಿಂದ ಶ್ರೀಗಳವರಲ್ಲಿ ಅಷ್ಟು ಶಕ್ತಿ ಇರಲಿಲ್ಲ. ಮಾರ್ಗ ಮಧ್ಯದಲ್ಲಿ ರಾಜಕೀಯ ವಿಪ್ಲವದಿಂದ ಅನೇಕ ಆತಂಕ ಗಳು. ಆದರೂ ಶ್ರೀಗಳವರಿಗೆ ಗಂಗಾಸ್ನಾನವನ್ನು ಮಾಡೇ ಬರಬೇಕೆಂದು ಬಲವತ್ತರ ವಾದ ಬಯಕೆಯಾದುದರಿಂದ ಅವರು ಹೊರಡಲು ಎಲ್ಲ ಸನ್ನಾಹವನ್ನೂ ಮಾಡಿದರು.

ಅವರು ಅಂದು ಭೀಮಾ ನದಿಯಲ್ಲಿ ಸ್ನಾನ ಮಾಡಿ ದಂಡೆಯ ಮೇಲೆ ಆಹ್ನಿಕ ವನ್ನೂ ಮಾಡುತ್ತ ಕುಳಿತುಕೊಂಡಾಗ— ತರಂಗಾಂತರಂಗದಿಂದ ಗಂಗಾ ನದಿಯು ಒಮ್ಮೆ ಅವರಿಗೆ ಪ್ರತ್ಯಕ್ಷ ಗೋಚರವಾದಳು. ಮತ್ತು ಭಾಗೀರಥಿಯು ನಾನೇ ನಿಮ್ಮಂಥ ಸ್ವಾಂತಸ್ಥಗದಾಭೃತರಾದ ಪುಣ್ಯತೀರ್ಥರಿದ್ದಲ್ಲಿಗೆ ಬರುತ್ತೇನೆ. ನೀವು ಅಲ್ಲಿಗೆ ಬರುವದು ಬೇಡ ಎಂದು ಸಂಕೇತಗೈದಳು.

ಆ ಗಂಗಾತಾಯಿಯ ಆಶಯವನ್ನು ಅರಿತ ಶ್ರೀ ಶ್ರೀ ಗಳವರು ವಸ್ತ್ರ, ಆಭರಣ, ಬಾಗಿಣ, ಪುಷ್ಪ, ಮಂತ್ರಾಕ್ಷತೆಗಳಿಂದ ಆ ಭಾಗೀರಥಿಯ ಪೂಜೆ ಮಾಡಿದರು. ಆ ಸುರಸರಿತೆಯು ಸಾಕ್ಷಾತ್ ಕೈ ಚಾಚಿ ಶ್ರೀಗಳವರ ಪೂಜೆಯನ್ನು ಸ್ವೀಕರಿಸಿ ಮತ್ತೆ ಅದೃಶ್ಯಳಾದಳು.

> ಯದೃಚ್ಛಯಾಭೀಮರಥಿ ಜಲಾದ್ಗಂಗಾಂ ಸಮುತ್ಥಿತಾಂ।
> ಪುಷ್ಪೈರ್ಗಂಧೈಶ್ಚ ಧೂಪೈಶ್ಚ ರಾತ್ರಿಮ್ಯೈರ್ದಿವ್ಯಾದೃಷ್ಟಿಪಥಂಗತಾಂ।
> ಜ್ಞಾತ್ವಾಮುಹಾರ್ಘ್ಯೋಪಚಾರೈರ್ದಿವ್ಯೈಸ್ತಾಂ ಸಮುಪೂಜಯನ್॥

ಇಂಥ ಮಹಾ ಮಹಿಮೋಪೇತರಾದ ಶ್ರೀ ರಾಜೇಂದ್ರರಿಗೂ, ಶ್ರೀ ಕವೀಂದ್ರ ರಿಗೂ ಆಶ್ರಮವನ್ನಿತ್ತು ಅನುಗ್ರಹಿಸಿದರು. ಶ್ರೀ ರಾಜೇಂದ್ರರ ಪರಂಪರೆಯೇ ಮುಂದೆ ಶ್ರೀ ವ್ಯಾಸರಾಜಮಠವೆಂದು ಪ್ರಸಿದ್ಧವಾಯಿತು. ಶ್ರೀ ಕವೀಂದ್ರರ ಪರಂಪರೆಯು ಮುಂದೆ ರಾಯರಮಠ ಉತ್ತರಾದಿಮಠ ಎಂದು ಕವಲೊಡೆದು ಬೆಳೆಯಿತು.

ಕೊನೆಗೆ ಶ್ರೀ ವಿದ್ಯಾಧಿರಾಜತೀರ್ಥರು ಎರಗೋಳದಲ್ಲಿ ಶ್ರೀ ಹರಿ ಧ್ಯಾನ ಮಾಡುತ್ತ ಸಮಾಧಿಸ್ಥರಾದರು.



## ಶ್ರೀ ವ್ಯಾಸರಾಜ ಮಠದ ಮೂಲ ಪುರುಷರಾದ

# ಶ್ರೀ ರಾಜೇಂದ್ರ ತೀರ್ಥರು

ಶ್ರೀ ಟೀಕಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ವಿದ್ಯಾಧಿರಾಜ ತೀರ್ಥರಿಂದ ಆಶ್ರಮ ಪಡೆದ ಶ್ರೀ ರಾಜೇಂದ್ರತೀರ್ಥರು ಅಸಾಧಾರಣ ಪಂಡಿತ ಪರಿವ್ರಾಜಕರಾಗಿದ್ದರು. "ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ" ಎಂಬ ಆಚಾರ್ಯರ ಸಂದೇಶವನ್ನು ತಲೆಯ ಮೇಲೆ ಹೊತ್ತು ಹತ್ತು ದಿಕ್ಕುಗಳಲ್ಲಿಯೂ ಸುತ್ತಾಡಿ ಮಧ್ವ ಮತದ ಗೆಲುವಿನ ಬಾವುಟವನ್ನು ಗಗನಗೋಪುರದ ಎತ್ತರಕ್ಕೆ ಎತ್ತಿ ಮೆರೆಯಿಸಿದ ಮನೀಷಿ ಮೂರ್ಧನ್ಯರೆಂದರೆ ಶ್ರೀ ರಾಜೇಂದ್ರ ತೀರ್ಥರು.

ಶ್ರೀ ರಾಜೇಂದ್ರ ತೀರ್ಥರು ಸುಧೀಶೇಖರ ಇದ್ದಷ್ಟೇ ಮಹಾ ಸಾಹಸಿಗಳೂ ಆಗಿದ್ದರು. ಪ್ರಯಾಣ ಸೌಕರ್ಯವಿಲ್ಲದ ಅಂದಿನ ರಾಜಕೀಯ ವಿಪ್ಲವ ಕಾಲದಲ್ಲಿ ಅವರು ಮಧ್ವಮತದ ಸಿದ್ಧಾಂತಗಳನ್ನು ಪ್ರಚಾರ ಮಾಡುತ್ತ ಆಂಧ್ರ, ಮಹಾರಾಷ್ಟ್ರ, ಗುಜರಾಥ, ಬಂಗಾಲಗಳಲ್ಲೆಲ್ಲ ಸಂಚರಿಸಿ ದುರ್ಮತಗಳನ್ನೆಲ್ಲ ಖಂಡಿಸಿದರು. ಆ ಕಾಲದಲ್ಲಿ ಉತ್ತರ ಹಿಂದುಸ್ಥಾನವು ಅನೇಕ ಪಂಡಿತರ ಕೇಂದ್ರವಾಗಿದ್ದಿತು. ಊರೂರಿಗೆ ಚತಃಶಾಸ್ತ್ರಗಳನ್ನು ಅರಿತ, ನುರಿತ ಮಹಾ ವಿದ್ವಾಂಸರು ಮೆರೆಯುತ್ತಿದ್ದರು.

ಅತ್ಯಂತ ಧೈರ್ಯಮೇರುಗಳಾದ ಶ್ರೀ ರಾಜೇಂದ್ರರು ಪಂಡಿತರ ತವರು ಮನೆಗಳಂತಿದ್ದ ಆ ಎಲ್ಲ ವಿದ್ಯಾಕೇಂದ್ರಗಳಿಗೆ ತಾವಾಗಿಯೇ ಹೋಗಿ ವಾದಹೂಡಿ ಆ ಜಗಜಟ್ಟಿಗಳನ್ನೆಲ್ಲ ವಾಕ್ಯಾರ್ಥದ ಮಲ್ಲಯುದ್ಧದಲ್ಲಿ ನಿರುತ್ತರರನ್ನಾಗಿ ಮಾಡುತ್ತಿದ್ದರು.

ಯರಗೋಳದ ಗುಹೆಯಲ್ಲಿ ಕುಳಿತು ಶ್ರೀ ಜಯತೀರ್ಥರು ಪರಿಷ್ಕರಿಸಿದ ಮಾಧ್ವಮತೀಯ ವಾದಪ್ರಕ್ರಿಯೆ, ಮತ್ತು ಪರಮತ ಖಂಡನದ ಹದನವಾದ ಹೊಸ ಪ್ರಣಾಳಿಕೆಗಳನ್ನು ಮೊಟ್ಟ ಮೊದಲು ಉಪಯೋಗಿಸಿಕೊಂಡು ಪರಮತದ ಕೋಟೆ ಕಟ್ಟಣಗಳನ್ನು ಪುಡಿಗಟ್ಟಿ ನೆಲಸಮಮಾಡಿ ಮಣ್ಣುಗೂಡಿಸಿದ ಪುಣ್ಯಾತ್ಮರೆಂದರೆ ಶ್ರೀ ರಾಜೇಂದ್ರರು.

ಕಾಶೀ, ಕಲಕತ್ತಾ, ನವದ್ವೀಪ, ಮಿಥಿಲೆ ಮೊದಲಾದ ಸರಸ್ವತೀ ಪೀಠಗಳಲ್ಲಿಯ ಪಂಡಿತ ಪುನ್ನಾಗಗಳು ಜಯತೀರ್ಥರ ಸುಘೋಕ್ತ ವಾದಿನಿಗ್ರಹ ಪರಿಪಾಟಿಯನ್ನು ಮೈಗೂಡಿಸಿಕೊಂಡು ಬಂದ ಶ್ರೀ ರಾಜೇಂದ್ರರ ಮಿಂಚಿನ ಅಂಚಿಗೆ ಮಸೆದು ಬಂದಂತಿರುವ ಕೋಟಿ ಕ್ರಮಗಳಿಂದ ಕಂಗೆಟ್ಟು ದಿಕ್ಕೆಟ್ಟು ಹೋಗುತ್ತಿದ್ದವು.

ನಿಜವಾದ ಪಂಡಿತರು ಅನೇಕ ದಿನಗಳ ವರೆಗೆ ಶ್ರೀ ರಾಜೇಂದ್ರರೊಡನೆ ಹೋರಾಡಿ ಚೀರಾಡಿ ಕೊನೆಗೆ ಸೋತು ಮಧ್ವಮತಕ್ಕೆ ಶರಣು ಬರುತ್ತಿದ್ದರು. ನಿಷ್ಪಕ್ಷರಾದ ಅನೇಕ ಅಲ್ಲಿಯ ಶಾಸ್ತ್ರ ಪಂಡಿತರಿಗೆ ಮಧ್ವಾಚಾರ್ಯರ ಮತವು ಬಹಳ ಹಿಡಿಸಿತು.

ವೇದವ ತಿರುಳು ಮಧ್ವ ಸೂಕ್ತಿಗಳಲ್ಲಿ ಅರಳಿ ತನ್ನ ಕಂಪಿಂಪು ಬೀರುವದನ್ನು ಅವರು ಕಂಡರು. ನಿಜವಾದ ಭಕ್ತಿಯ ವಿಕಾಸಕ್ಕೆ ಮಧ್ವ ಮತದಲ್ಲಿ ಇದ್ದಷ್ಟು ವಿಶ್ವಾಸವು ಬೇರಾವ ಮತದಲ್ಲಿದ್ದದ್ದು ಅವರಿಗೆ ಕಂಡು ಬರುಲಿಲ್ಲ. ಆದುದರಿಂದ ಉತ್ತರಾ ಪಥದ ಅನೇಕ ಪಂಡಿತ ಮಂಡಲಗಳು ಪರಿವರ್ತಿತವಾದವು ಮಧ್ವಮತಕ್ಕೆ.

ಹೀಗೆ ಉತ್ತರಾಪಥದಲ್ಲಿ ಇಂದು ತುಂಬಿ ತುಳುಕುತ್ತಿರುವ ಭಕ್ತಿಭಾಗೀರಥಿಯ ಶ್ರೀಮುಖ ಗೋಮುಖರಾದ ಶ್ರೀಪಾದಂಗಳವರೆಂದರೆ ಶ್ರೀ ರಾಜೇಂದ್ರತೀರ್ಥರು.

ಶ್ರೀಪಾದರಾಜರ ಗುರುಗಳಾದ ಶ್ರೀ ವಿಬುಧೇಂದ್ರತೀರ್ಥರೂ ಮತ್ತು ವಾದ ರತ್ನಾವಲೀಕಾರರಾದ ಶ್ರೀ ವಿಷ್ಣುದಾಸಾಚಾರ್ಯರೂ ಶ್ರೀ ರಾಜೇಂದ್ರತೀರ್ಥರ ವಿದ್ಯಾ ಶಿಷ್ಯರಾಗಿದ್ದರು. ಪಂಡಿತ ಮಾರ್ತಾಂಡರಾದ ಈ ಶಿಷ್ಯದ್ವಯರ ಗುರುಗಳೆಂದ ಬಳಿಕ ಯಾರಿಗಾದರೂ ಶ್ರೀ ರಾಜೇಂದ್ರರ ಅಮಾನುಷ ದುರ್ಲಭವಾದ ಪ್ರಖರ ಪಾಂಡಿತ್ಯದ ಕಲ್ಪನೆಯು ಬರಲಿಕ್ಕೆ ಸಾಕು.

ಬಂಗಾಲದಲ್ಲಿ ವಿಷ್ಣು ಭಕ್ತಿಯ ಪ್ರಚಾರಮಾಡಿ ಚೈತನ್ಯ ಮತಕ್ಕೆ ಮಾಧ್ವ ದೀಕ್ಷೆಯನ್ನು ಶ್ರೀ ರಾಜೇಂದ್ರತೀರ್ಥರೇ ಮೊಟ್ಟ ಮೊದಲು ಕೊಟ್ಟರು. ಇಂದಿಗೂ ಚೈತನ್ಯ ಮಠೀಯರ ಗುರುಪರಂಪರೆಯಲ್ಲಿ ಶ್ರೀ ರಾಜೇಂದ್ರರ ಹೆಸರು " ವಿದ್ಯಾನಿಧಿಶ್ಚ ರಾಜೇಂದ್ರೋ ಜಯಧರ್ಮಮುನಿಸ್ತಥಾ " ಎಂದು ಮಧ್ಯಮ ಮಣಿಯಂತೆ ಕಂಗೊಳಿ ಸುತ್ತದೆ.

ಶ್ರೀ ರಾಜೇಂದ್ರರಿಗೆ ಪರವಾದಿಗಳನ್ನು ನಿಗ್ರಹಿಸಿ ಮಧ್ವ ಮತವನ್ನು ಪ್ರಸಾರ ಮಾಡುವಲ್ಲಿರುವಷ್ಟು ತೀವ್ರಾಸಕ್ತಿಯು ಮತ್ತೆಯಾವುದರ ಮೇಲೆಯೂ ಇರಲಿಲ್ಲ. ಆದುದ ರಿಂದ ಪರಮತಗಳನ್ನು ಖಂಡಿಸಿ ಹಿಂಡು ಹಿಂಡಾಗಿ ಪ್ರತಿವಾದಿ ಪಂಡಿತರಿಗೆ ವೈಷ್ಣವ ದೀಕ್ಷೆಯಿತ್ತು ಮಧ್ವ ತತ್ವವನ್ನು ಉಪದೇಶಿಸುವ ಸಂಭ್ರಮದಲ್ಲಿದ್ದ ಅವರಿಗೆ ಗುರುಗಳು ಹೇಳಿ ಕಳಿಸಿದ ಕೂಡಲೇ ಆ ಮತ ಪ್ರಸಾರದ ಮುಖ್ಯ ಕಾರ್ಯವನ್ನು ಬಿಟ್ಟು ಇತ್ತ ಬರಲಿಕ್ಕೂ ಆಗಲಿಲ್ಲ. ಅವರ ವಾದ ದೀಕ್ಷೆ, ಮತ ಪ್ರಸಾರದ ನಿಷ್ಠೆ, ವೈಷ್ಣವ ಸಿದ್ಧಾಂತ ಪ್ರಚಾರ ದಾಕ್ಷ್ಯಗಳು ಅಷ್ಟು ಉಚ್ಚಮಟ್ಟದವಾಗಿದ್ದವು.

ಅವರು ಬಹುಕಾಲ ಬಂಗಾಲದಲ್ಲಿಯೇ ನೆಲೆಸಿ ಉತ್ತರ ಹಿಂದುಸ್ತಾನದಲ್ಲೆಲ್ಲ ಕಡೆಗೂ ಮಧ್ವ ಮತದ ಬೇರುಗಳು ಭದ್ರವಾಗಿ ನೆಲಿಸುವಂತೆ ಮಾಡಿದರು. ಇವರೇ ಶ್ರೀ ವ್ಯಾಸರಾಜಮಠದ ಮೂಲ ಪುರುಷರಾಗಿ ಅನೇಕ ಶಕಪುರುಷರು ಬೆಳಗಿ ಬಾಳಿದ ಮಹಾಸಂಸ್ಥಾನದ ಆದ್ಯ ಪ್ರವರ್ತಕ ಪುಣ್ಯ ಪುರುಷರೆಂದು ಪ್ರಸಿದ್ಧರಾದರು.

## ಮಧ್ವ ಮತ ಪ್ರಸಾರಕ್ಕಾಗಿ
## ಉತ್ತರ ದೇಶದಲ್ಲಿಯೇ ಧ್ವಜ ಹಾಕಿದ

# ಶ್ರೀ ಜಯಧ್ವಜತೀರ್ಥರು

ಶ್ರೀ ರಾಜೇಂದ್ರತೀರ್ಥರಿಂದ ವಿದ್ಯೆಯನ್ನೂ ವಾದ ಕೌಶಲ್ಯವನ್ನೂ ದ್ವೈತ ದಿಗ್ವಿಜಯವನ್ನೂ ಪಡೆದ ಶ್ರೀ ಜಯಧ್ವಜತೀರ್ಥರು ಯತ್ಯಾಶ್ರಮವನ್ನೂ ಕೂಡ ಅವರಿಂದಲೇ ಸ್ವೀಕರಿಸಿದರು. ಇವರು ಮುಂದೆ ದ್ವೈತಧ್ವಜವನ್ನು ಯಾರಿಗೂ ಎಟಕದಷ್ಟು ಎತ್ತರಕ್ಕೆ ಎತ್ತಿ ಹಾರಿಸುವರೆಂದು ಮುಂಚಿತವಾಗಿ ಮನಗಂಡೋ ಏನೋ ಶ್ರೀ ರಾಜೇಂದ್ರರು ಅವರನ್ನು ಜಯಧ್ವಜ ಎಂದು ಹೆಸರಿಟ್ಟು ಕರೆದರು.

ಶಾಸ್ತ್ರ ಪಾಂಡಿತ್ಯವು ಅವರ ಪ್ರತಿಭೋಪ ಜೀವಿಯಾಗಿತ್ತು. ಪ್ರತಿವಾದಿ ನಿಗ್ರಹ ಸಿಗ್ರಹ ಸಾಮರ್ಥ್ಯ ಅವರ ಗುರ್ವಾನುಗ್ರಹದ ಬಳುವಳಿಯಾಗಿ ಬಂದಿದ್ದಿತು.

ಈ ಗುರು ಶಿಷ್ಯರಿಬ್ಬರ ಮನಸ್ಸಿನಲ್ಲಿರುವ ಒಂದೇ ಒಂದು ಹೆಬ್ಬಯಕೆಯೆಂದರೆ ಮಧ್ವ ಮತವನ್ನು ಭಾರತದ ಮೂಲೆ ಮೂಲೆಗೂ ಹಬ್ಬಿಸಬೇಕು. ಉಳಿದ ಮತಗಳೆಲ್ಲವೂ ಅವೈದಿಕ ಎಂದು ಸ್ಥಾಪಿಸಬೇಕು. ವಿಮತೀಯ ವಿದ್ವದ್‌ವರೇಣ್ಯರನ್ನೆಲ್ಲಾ ವಾದದಲ್ಲಿ ಸೋಲಿಸಿ ಅವರ ಮುಖದಿಂದ "ನ ಮಾಧವ ಸಮೋ ದೇವೋ ನ ಚ ಮಧ್ವ ಸಮೋ ಗುರುಃ" ಎಂಬ ಉದ್ಗಾರವನ್ನು ಹೊರಡಿಸಬೇಕು. ಭೂಮಂಡಲದಲ್ಲಿಯ ಮಹಾ ಮಹಾ ಪಂಡಿತರೆಲ್ಲರಿಗೂ ಮುದ್ರೆ ಕೊಟ್ಟು ಭಸ್ಮ ಅಳಿಸಿ ಗೋಪೀಚಂದನ ಬಳಿದು ವೈಷ್ಣವರನ್ನಾಗಿ ಮಾಡಿ ಕೂಡಿಸಬೇಕು.

ಈ ಹಿರಿಯಾಶೆಯನ್ನು ಹೃದಯದಲ್ಲಿ ಹೊತ್ತು ಅವರಿಬ್ಬರೂ ಹತ್ತು ದಿಕ್ಕುಗಳಲ್ಲಿಯೂ ಸುತ್ತಾಡಿ ಕಂಠ ಪಂಡಿತರೆಲ್ಲರ ಎದುರು ಮಾಯಾವಾದವನ್ನು ಖಂಡಿಸಿದರು. ಜೈನ-ಬೌದ್ಧಾದಿ ನಾಸ್ತಿಕ ಮತಗಳನ್ನು ತುಂಡರಿಸಿದರು. ನಿರ್ದುಷ್ಟವಾದ ಮಧ್ವ ಮತವನ್ನು ಮಂಡಿಸಿದರು.

ಆ ಕಾಲದಲ್ಲಿ ನಿಜವಾದ ಮಹಾ-ಮಹಾ ಮೇಧಾವಿ ಮೂರ್ಧನ್ಯ ಮಣಿಗಳಂತಿದ್ದ ನಾಡೆಂದರೆ ಬಂಗಾಲ. ಗಂಗೇಶೋಪಾಧ್ಯಾಯ, ವಾಸುದೇವ ಸಾರ್ವಭೌಮ, ರಘುನಾಥ ಶಿರೋಮಣಿ ಮುಂತಾದ ಸರಸ್ವತೀ ವರಪುತ್ರರು ತಮ್ಮ ದೇದೀಪ್ಯಮಾನವಾದ

ದಿವ್ಯ ಪ್ರತಿಭೆಯಿಂದ ವಿದ್ವತ್ ಕುಲದ ಮಿದುಳುಗಳನ್ನೇ ಮಸೆಯ ತಕ್ಕ ನವ್ಯ ನ್ಯಾಯದ ಹೊಸ ಪರಿಷ್ಕಾರ ಪ್ರಣಾಲಿಕೆಯನ್ನು ಕಂಡು ಹಿಡಿದು, ಶಾಸ್ತ್ರ ಪ್ರಪಂಚ ವನ್ನೆಲ್ಲ ಬೇರೆ ದಿಕ್ಕಿನಲ್ಲಿಯೇ ತಿರುಗಿಸಿ ನವೋನವವಾದ ನಡೆಗೆಯನ್ನು ಹಿಡಿಸಿದ್ದರು.

ಇಂಥ ಪ್ರಚಂಡ ಪಂಡಿತರಾದ ಉತ್ತರಾ ಪಥದ ನ್ಯಾಯ ನಿಪುಣರ ತಲೆಗೆ ಒಮ್ಮೆ ಮಧ್ವ ಶಾಸ್ತ್ರವನ್ನು ಹಿಡಿಸಿಬಿಟ್ಟರೆ ಇಡೀ ಭಾರತದಲ್ಲೆಲ್ಲ ಮಧ್ವ ಮತದ ವೈಷ್ಣವ ಸಿದ್ಧಾಂತವು ಬದ್ಧಮೂಲವಾಗಿ ಬಂಗಾಲ ಉಪಸಾಗರದಿಂದ ದಕ್ಷಿಣ ಸಮುದ್ರವವರೆಗೂ ಹರಿಸರ್ವೋತ್ತಮತ್ವದ ಡಂಗುರವು ಪ್ರತಿಧ್ವನಿತವಾಗುವದು ಎಂದು ಅವರು ಎಣಿಸಿದರು. ಅದರಂತೆ ಶ್ರೀ ರಾಜೇಂದ್ರರೂ ಶ್ರೀ ಜಯಧ್ವಜರೂ—

"ದಂಡಕಾರಣ್ಯೇऽದೇಶೆ ಗೋದಾವರ್ಯಾಃ ದಕ್ಷಿಣೇ ತೀರೆ"

ಎಂದು ಸಂಕಲ್ಪಿಸುವ ದೇಶಗಳ ಗಡಿದಾಟಿ ಕಾವೇರಿ, ಕೃಷ್ಣಾ, ಗೋದಾವರಿ ಗಳನ್ನು ಉಲ್ಲಂಘಿಸಿ ಗಂಗಾ ಸಾಗರ ಸಂಗಮದ ರಂಗಸ್ಥಳವನ್ನೂ ಗಂಗಾ ಯಮುನಾ ಬ್ರಹ್ಮಪುತ್ರಾದಿ ನದೀ ತೀರಗಳನ್ನೂ ಸಾರಿ ಅಲ್ಲಲ್ಲ ಜಯ ಸ್ತಂಭಗಳನ್ನು ನೆಟ್ಟರು. ಅಲ್ಲಿಯ ತರ್ಕ ಕೇಸರಿಗಳನ್ನು ಕೆಣಕಿದರು. ಅವರ ನವ್ಯ ತರ್ಕ ಪದ್ಧತಿಯಿಂದಲೇ ಅವರ ಕೋಟಿ ಕ್ರಮಗಳ ಕೋಟಿ ಕೊತ್ತಳಗಳು ಅವರ ಮೇಲೆಯೇ ಹೊರಳಿಬಿದ್ದ ಅವರ ಶುಷ್ಕ ತರ್ಕಗಳೆಲ್ಲ ಪುಡಿಗಟ್ಟುವಂತೆ ಮಾಡಿದರು.

ಅಂಗ, ವಂಗ, ಮಿಥಿಲಾ, ಕಾಶ್ಮೀರ, ಕೋಸಲ, ಪಂಜಾಬ ಮುಂತಾದ ನಾಡುಗಳ ಪಂಡಿತರಿಗೆಲ್ಲ ನಿಜವಾಗಿಯೂ ಮಧ್ವ ಮತವು ಹಿಡಿಯಿತು. ವಿಷ್ಣು ಸರ್ವೋತ್ತಮತ್ವ ತತ್ವವು ಪಟಾಯಿಸಿತು. ತಮ್ಮ ಶುಷ್ಕ ತರ್ಕಕ್ಕಿಂತ ಸರ್ವಜ್ಞರ ಬ್ರಹ್ಮ ತರ್ಕವು ಶಾಸ್ತ್ರ ಸುಸಂಸ್ಕೃತವಾದ ಶಿರಃಪಿಂಡಕ್ಕೆ ಅತ್ಯುತ್ತಮವೆಂದು ತಗಲಿ ಕೊಂಡಿತು. ಅದು ತಾತ್ಕಾಲಿಕವಾಗಿ ಪ್ರಸೂತಿ ವಿವೇಕದಂತೆ ಅಚಿರಸ್ಥಾಯ್ಯ ಆಗಿ ಬೇಗ ಅಳಿಸಿ ಹೋಗಬಾರದೆಂದು ಶ್ರೀ ರಾಜೇಂದ್ರತೀರ್ಥರು ಅಲ್ಲಿಯೇ ಉಳಿದರು.

ಅಸಾಧರಣವಾದ ಈ ಸರ್ವಜ್ಞ ಸಿದ್ಧಾಂತದ ಮಹಾ ಸೇವೆಯ ಮುಂದೆ ಅವರಿಗೆ ಪೀಠಪ್ರತಿಷ್ಠೆ ಸಾಂಪ್ರದಾಯಿಕ ಪೂಜೆ, ಭಿಕ್ಷೆ, ಪಾದಪೂಜೆ ಎಲ್ಲವೂ ಗೌಣವೆನಿಸಿದವು. ಅವರಿಗೆ ಕಿವಿಯಲ್ಲಿ ನಿರಂತರ ಮೊಳಗುತ್ತಿರುವದು ಒಂದೇ ಒಂದು ಆಚಾರ್ಯರ ಸಂದೇಶವೆಂದರೆ—

"ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಸರ್ವತ್ರ ಪ್ರತಿಪಾದಯ"

ಇದಕ್ಕಾಗಿ ಶ್ರೀ ರಾಜೇಂದ್ರರು ಮನೆ ಮಾರು ಮಠ ಮಾನ್ಯತೆ ದೇಶ ಕೋಶ ಜನ ಶಿಷ್ಯ ಸಂಪತ್ತು ಎಲ್ಲವನ್ನೂ ತೊರೆದರು. ಬಂಗಾಲದಲ್ಲಿಯೇ ನೆಲೆಸಿದರು.

ಅಲ್ಲೆಲ್ಲ ಕಡೆಗೂ ಗೆಲುವಿನ ಗೋಪುರವನ್ನೇ ನಿಲಿಸಿದರು. ಅವರ ತ್ಯಾಗ ಅಸಾಮಾನ್ಯ. ಮಾನ್ಯ ಅನನ್ಯ.

ಜಯಧ್ವಜರು ಈ ಧಿಟ್ಟ ಗುರುವಿನ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ನಡೆದ ಧೀರ ಶಿಷ್ಯರು. ಗುರುಗಳಂತೆ ಈ ಜಯಧ್ವಜರೂ ಉತ್ತರ ದೇಶದಲ್ಲಿಯೇ ತಮ್ಮ ಧ್ವಜ ಹಾಕಿ ಕುಳಿತರು. ಅಲ್ಲಿಯ ವಾದಿಗಳನ್ನೆಲ್ಲ ವಾದ ಭೂಮಿಯಲ್ಲಿ ಗೆದ್ದು ಅವರ ಹೃದಯವನ್ನು ಕದ್ದು ಅಲ್ಲಿ ಹದನೋಡಿ ಎಲ್ಲರ ಹೃದಯದಲ್ಲಿಯೂ ವಿಷ್ಣು ಭಕ್ತಿಯ ಬೀಜಗಳನ್ನು ಬಿತ್ತಿದರು. ಅವರು ಬಿತ್ತಿದ ಬೀಜವೇ ಮುಂದೆ ಶ್ರೀ ಚೈತನ್ಯ ಮಹಾಪ್ರಭು, ಮೀರಾ, ನರಸಿಂಹ ಮೆಹತಾ ಚಂಡೀದಾಸ, ರೂಪಗೋಸ್ವಾಮಿ ಮುಂತಾದವರಲ್ಲಿ ಅಂಕುರಿಸಿ ಪಲ್ಲವಿಸಿ ಚಿಲ್ವರಿಡು ಈಗ ರಾಧಾಕೃಷ್ಣ ಭಕ್ತಿಯ ರೂಪದಿಂದ ದೇಶವ್ಯಾಪಿ ಕಲ್ಪವೃಕ್ಷವಾಗಿ ಕಂಗೊಳಿಸುತ್ತಲಿದೆ.

ಅಂತೂ ರಾಜೇಂದ್ರ, ಜಯಧ್ವಜರ ಹರಕೆ ಸಂದಿತು. ಇಡೀ ಉತ್ತರಾಪಥವೆಲ್ಲವೂ ಕೃಷ್ಣ ಭಕ್ತಿಯ ನಾಮಧ್ಯಾನದಿಂದ ದುಂದುಮಿಸಿತು. ಇಂದು ಉತ್ತರಾಪಥದಲ್ಲಿ ಮನೆ ಮನೆಗೂ ಮೊರೆಯುತ್ತಲಿರುವ ರಾಧೇಶ್ಯಾಮ ನಾಮೋಚ್ಚಾರಣೆಯ ಭಜನ ಧ್ವನಿಯಲ್ಲವೂ ಶ್ರೀ ರಾಜೇಂದ್ರ ಮತ್ತು ಜಯಧ್ವಜತೀರ್ಥರ ಮಹಾಪ್ರಯತ್ನದ ಪ್ರತಿಧ್ವನಿ ಎಂದು ಹೇಳಬಹುದು.

ಶ್ರೀ ಜಯಧ್ವಜರನ್ನು ಬಂಗಾಲದ ವೈಷ್ಣವ ಸಂತರು ಜಯಧರ್ಮ ಎಂದು ಉಲ್ಲೇಖ ಮಾಡುತ್ತಾರೆ.

ಇಂದು ಬಂಗಾಲ ಮತ್ತು ಉತ್ತರ ಹಿಂದುಸ್ತಾನವಲ್ಲೆಲ್ಲ ಪ್ರಮುಖ ಧರ್ಮ ಪಂಥವೆಂದು ಮೆರೆಯುತ್ತಿರುವ ಚೈತನ್ಯ ಪಂಥವು ಮಾಧ್ವ ಮತದ ಶಾಖೆಯೆಂದು ತನ್ನನ್ನು ಕರೆದುಕೊಳ್ಳಲಿಕ್ಕೆ ಹೆಮ್ಮೆಪಡುತ್ತದೆ. ಆ ಮತದ ವಿದ್ವಾಂಸರೂ ಸಂಶೋಧಕರೂ ಪೀಠಾಧಿಪತಿಗಳೂ ತಮ್ಮ ಮತದ ಇತಿಹಾಸದಲ್ಲಿ ತಮ್ಮ ಮತವು ಮಧ್ವ ಮತಾನುಸಾರಿಯೆಂದು ಒಪ್ಪಿಕೊಂಡು ತಮ್ಮ ಮತಸ್ಥಾಪಕರಾದ ಶ್ರೀ ಚೈತನ್ಯ ಮಹಾಪ್ರಭುಗಳು ವಿಷ್ಣುಪುರಿಯ ಶಿಷ್ಯರೆಂದೂ ಆ ವಿಷ್ಣುಪುರಿಯು ಶ್ರೀ ಜಯಧ್ವಜ (ಜಯಧರ್ಮ)ರ ಶಿಷ್ಯರೆಂದೂ ಹೇಳುತ್ತಾರೆ.

ಶ್ರೀಮದ್ವಿಷ್ಣುಪುರೀಯಸ್ಯ ಭಕ್ತಿರತ್ನಾವಲಿ ಕೃತಿಃ।
ಜಯಧರ್ಮಸ್ಯ ಶಿಷ್ಯೋಽಭೂತ್........

ಭಕ್ತಿರತ್ನಾವಲೀ ಎಂಬ ಮಹಾ ಗ್ರಂಥವನ್ನು ಬರೆದ ಶ್ರೀ ಚೈತನ್ಯರ ಗುರು ವಿಷ್ಣು ಪುರಿಯು ಜಯಧರ್ಮರ ಅರ್ಥಾತ್ ಜಯಧ್ವಜರ ಶಿಷ್ಯರಾಗಿದ್ದರು,

ಈ ಪದ್ಯಗಳ ಮೇಲಿಂದ ಶ್ರೀ ಜಯಧ್ವಜರು ಶ್ರೀ ಮಧ್ವ ಮುನಿಗಳ ಎಂಥ ಸೇವೆ ಮಾಡಿದ್ದಾರೆನ್ನುವದು ಸುಸ್ಪಷ್ಟವಾಗುವದು.

ಇಂಥ ಮಹಾ ವಾಙ್ಮಯ ವಿಭೂತಿಗಳ ಕೃತಿಗಳಾಗಲಿ, ಚರಿತ್ರವಾಗಲಿ ಈ ವರೆಗೂ ನಮಗೆ ದೊರಕದಿದ್ದದ್ದು ನಮ್ಮ ಸಮಾಜದ ದುರ್ದೈವ. ಈಗ ದೊರಕುವ ಅಲ್ಪ ಸ್ವಲ್ಪ ಮಾಹಿತಿಯೂ ಕೂಡ ಚೈತನ್ಯ ಪಂಥೀಯರ ಗ್ರಂಥ ಹಾಗೂ ಗುರು ಪರಂಪರಾ ಪದ್ಯಗಳಿಂದ ಮಾತ್ರ.

ಈ ಗುರು ಶಿಷ್ಯರಿಬ್ಬರ ಗ್ರಂಥಗಳು ಮಾತ್ರವಲ್ಲದೇ ಇಂದಿಗೂ ಅವರ ವೃಂದಾವನಗಳು ಎಲ್ಲಿವೆಯೆನ್ನುವದು ಈ ವರೆಗೂ ಗುರುತಾಗದಿದ್ದುದು ನಮ್ಮ ಜನರ ಔದಾಸ್ಯ ಐತಿಹಾಸಿಕ ದೃಷ್ಟಿ, ಸಾಹಸ ಪ್ರವೃತ್ತಿ, ಧೀರ ವೃತ್ತಿಗಳ ಅಭಾವ ದ್ಯೋತಕವಾಗಿರುತ್ತವೆ.

ಶ್ರೀರಾಜೇಂದ್ರ, ಶ್ರೀ ಜಯಧ್ವಜರಂತೆ ಮುಂದಿನ ಸ್ವಾಮಿಗಳು ಉತ್ತರ ದೇಶದಲ್ಲಿಯೂ ತಮ್ಮದೊಂದು ಮತಪ್ರಸಾರದ ಕೇಂದ್ರವನ್ನು ತೆರೆದು ಮಠ ಮಾಡಿ ವಾಸವಾಗಿದ್ದರೆ ಉತ್ತರ ಹಿಂದುಸ್ತಾನವೆಲ್ಲವೂ ಉಡುಪಿ, ಕುಂಭಕೋಣ, ಬೆಂಗಳೂರ, ಮೈಸೂರುಗಳಂತೆ ಅಪ್ಪಟ ದ್ವೈತ ಮತದ ಸಿದ್ಧಾಣಗಳಾಗಿ ಪರಿಣಮಿಸುತ್ತಿದ್ದವು. ಶ್ರೀ ರಾಜೇಂದ್ರ ಶ್ರೀ ಜಯಧ್ವಜರು ಬರೆದಿರಬಹುದಾದ ಅನೇಕ ಗ್ರಂಥಗಳು ಗುರುತಾಗಿ ಬೆಳಕಿಗೆ ಬರಬಹುದಾಗಿತ್ತು. ಆದರೆ ಮಾಡುವದೇನು ? " ಕಾಲಾಯ ತಸ್ಮೈ ನಮಃ ".



## ಕಾಶೀನಾಥ ಪಂಡಿತನನ್ನು ಸೋಲಿಸಿದ

# ಶ್ರೀ ರಾಮಚಂದ್ರತೀರ್ಥರು

ಶ್ರೀ ರಾಮಚಂದ್ರತೀರ್ಥರು ಮಹಾ ಮೇಧಾವಿಗಳು. ಅವರ ಪೂರ್ವಾಶ್ರಮದ ಹೆಸರು ಮಾಧವ ಶಾಸ್ತ್ರಿಗಳು. ಸರ್ವಜ್ಞ ಸಂಸ್ಥಾನದ ಶ್ರೀ ವಾಗೀಶತೀರ್ಥ ಶ್ರೀಪಾದಂಗ ಳವರ ವಾಗ್ವೈಭವಕ್ಕೆ ಮನಸೋತು, ಅವರ ಶಿಷ್ಯರಾದರು. ನ್ಯಾಯ, ವೇದಾಂತ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಮಾಧವಶಾಸ್ತ್ರಿಗಳಿಗೆ ಮೊದಲಿನಿಂದಲೂ ಮಹಾ ಪಾಂಡಿತ್ಯ ವಿದ್ದಿತು. ವಾಗೀಶತೀರ್ಥರ ಶಿಷ್ಯರಾದ ಬಳಿಕ ಅವರಲ್ಲಿ ಮಧ್ವಶಾಸ್ತ್ರವನ್ನೆಲ್ಲ ಅಧ್ಯ ಯನ ಮಾಡಿ ಮಹಾ ಪಂಡಿತರಾದರು. ಅವರ ವಿದ್ವತ್ತೆ, ವೈರಾಗ್ಯ, ಸಾತ್ವಿಕ ತೇಜಸ್ಸು ಗಳನ್ನು ಕಂಡು ಗುರುಗಳು ಸುಪ್ರೀತರಾದರು. ಶ್ರೀ ವಾಗೀಶತೀರ್ಥರು ಶ್ರೀ ಮಾಧವ ಶಾಸ್ತ್ರಿಗಳಿಗೆ ಆಶ್ರಮವಿತ್ತು ಶ್ರೀ ರಾಮಚಂದ್ರತೀರ್ಥರೆಂದು ನಾಮಕರಣ ಮಾಡಿದರು.

ಶ್ರೀ ರಾಮಚಂದ್ರತೀರ್ಥರು ಸರ್ವಜಿತ್ ಸಂವತ್ಸರದಿಂದ [illegible] ನೇ ಸಾಲಿ ಸಂವತ್ಸರದವರೆಗೆ ವೇದಾಂತ ಸಾಮ್ರಾಜ್ಯವನ್ನಾಳಿದರು.

ಶ್ರೀ ಮನ್ಮಧ್ವಾಚಾರ್ಯ ಮಹಾ ಸಂಸ್ಥಾನದ ಶ್ರೀ ರಾಮಚಂದ್ರತೀರ್ಥರು ಶ್ರೀರಂಗಪಟ್ಟಣಕ್ಕೆ ಬಂದಾಗ ಕಾಶೀನಾಥ ಎಂಬ ಅದ್ವೈತ ಪಂಡಿತನೊಡನೆ ವಾಕ್ಯಾರ್ಥ ನಡೆಯಿಸಿದರು. ಅವರಲ್ಲಿ ಶ್ರೀ ರಾಮಚಂದ್ರತೀರ್ಥರು ತಮ್ಮ ಅದ್ಭುತ ವಾದ ಪಾಂಡಿತ್ಯದಿಂದ ಕಾಶೀನಾಥ ಪಂಡಿತನನ್ನು ನಿರುತ್ತರನನ್ನಾಗಿ ಮಾಡಿದರು. ಅದ್ವೈತ ಮತವು ವೇದ ಶಾಸ್ತ್ರ ವಿರುದ್ಧ ಎಂದು ಸಿದ್ಧಮಾಡಿ ತೋರಿಸಿದರು.

ಕಾಶೀನಾಥ ಶಾಸ್ತ್ರಿಯು ಬಹಳ ಗಟ್ಟಿಗ. ಅನೇಕ ಶಾಸ್ತ್ರಗಳಲ್ಲಿ ಅವನಿಗೆ ತಲ ಸ್ಪರ್ಶಿಯಾದ ಪಾಂಡಿತ್ಯವಿದ್ದಿತು. ಅವನ ಜೊತೆಗೆ ಅನೇಕ ನೈಯಾಯಿಕ, ವೈಯಾ ಕರಣ ಪಂಡಿತರೂ ಬಂದಿದ್ದರು. ಶ್ರೀ ಸ್ವಾಮಿಗಳಿಗೆ ತರ್ಕ ಶಾಸ್ತ್ರದಲ್ಲಿ ಮಾತ್ರ ಗತಿ ಮತಿ ಇರಲಾರದೆಂದು ಎಣಿಸಿ ಆ ಶಾಸ್ತ್ರಿಯು ತರ್ಕ ಶಾಸ್ತ್ರದಲ್ಲಿ ಪೂರ್ವ ಪಕ್ಷ ತೆಗೆದ. ನ್ಯಾಯ ನಯ ನಿಪುಣವಾದ ತಮ್ಮ ವಾಗ್ಧೋರಣೆಯಿಂದ ಶ್ರೀ ರಾಮಚಂದ್ರತೀರ್ಥರು ಆ ಪ್ರತಿವಾದಿ ಪಂಡಿತರ ಕೋಟಿಕ್ರಮದ ಶಾಬ್ದಿಕ ಗೋಪುರಗಳನ್ನೆಲ್ಲ ಪುಡಿಗೈದರು.

ಅನಂತರ ವೈಯಾಕರಣ ದಿಗ್ದಂತಿಗಳು ಕಣಕ್ಕೆ ಇಳಿದರು. ಶ್ರೀಗಳವರು ತಮ್ಮ ಅಪ್ರತಿಮವಾದ ವ್ಯಾಕರಣ ವಿದ್ವತ್ತೆಯಿಂದ, ನ್ಯಾಯ ಘಟಿತವಾದ ಪರಿಷ್ಕಾರ ಪದ್ಧತಿಯಿಂದ ಆ ಶುದ್ಧ ಶಾಸ್ತ್ರ ವಿದ್ವಾಂಸರನ್ನೆಲ್ಲ ಮೂಕ ಮುಗ್ಧರನ್ನಾಗಿ ಮಾಡಿದರು. ಅನಂತರ ಆ ಪ್ರತಿವಾದಿ ಪಂಡಿತರೆಲ್ಲರೂ ವಾದದಲ್ಲಿ ಖಂಡಿತರಾಗಿ ಜಯಪತ್ರಗಳನ್ನು ಬರೆದುಕೊಟ್ಟರು.

ಆ ಕಾಲದಲ್ಲಿ ಶ್ರೀರಂಗಪಟ್ಟಣವನ್ನು ಆಳುತ್ತಿದ್ದ ಮಹಾರಾಜನು ಕಾಶೀನಾಥ ಪಂಡಿತ ಮತ್ತು ಶ್ರೀ ರಾಮಚಂದ್ರತೀರ್ಥರಲ್ಲಿ ನಡೆದ ವಾಕ್ಯಾರ್ಥವನ್ನು ಶಿಲಾಶಾಸನವನ್ನಾಗಿ ಮಾಡಿ ಬರೆದು ಇಡಿಸಿದ್ದಾನೆ.

ಆ ಮಹಾರಾಜನು ಶ್ರೀ ರಾಮಚಂದ್ರ ತೀರ್ಥರಿಗೆ ವಿಶೇಷವಾಗಿ ಮಾನ–ಮರ್ಯಾದೆ ಮಾಡಿ ತನ್ನ ರಾಜಧಾನಿಯಲ್ಲಿಯೇ ಬಹುಕಾಲ ಇರಿಸಿಕೊಂಡಿದ್ದನು.

ಮುಂದೆ ಶ್ರೀ ರಾಮಚಂದ್ರತೀರ್ಥರು ರಾಜಮಹೇಂದ್ರಿ ಮುಂತಾದ ತೆಲಂಗಾಣ ದೇಶದಲ್ಲಿ ಸಂಚಾರ ಮಾಡಿ ಎರಗೋಳಕ್ಕೆ ಬಂದರು.

ಶ್ರೀ ರಾಮಚಂದ್ರತೀರ್ಥರು— ಶ್ರೀ ವಿಬುಧೇಂದ್ರರು, ಶ್ರೀ ವಿದ್ಯಾನಿಧಿತೀರ್ಥರು ಎಂಬ ಇಬ್ಬರು ಶಿಷ್ಯರನ್ನು ಮಾಡಿಕೊಂಡರು. ಶ್ರೀ ವಿಬುಧೇಂದ್ರರ ಮಠವೇ— ಶ್ರೀ ರಾಘವೇಂದ್ರಸ್ವಾಮಿಗಳಮಠ. ಶ್ರೀ ವಿದ್ಯಾಧಿರಾಜರ ಪರಂಪರೆಯೇ— ಉತ್ತರಾದಿಮಠ.



## ಪಂಡಿತ ಪ್ರಪಂಚಕ್ಕೆ ಇಂದ್ರನೆಂತಿದ್ದ

# ಶ್ರೀ ವಿಬುಧೇಂದ್ರತೀರ್ಥರು

ಶ್ರೀ ವಿಬುಧೇಂದ್ರರು ಅಸಾಧಾರಣ ಮೇಧಾವಿಗಳು. ಉತ್ತರ ಹಿಂದುಸ್ತಾನದಲ್ಲಿ ಬಂಗಾಲ ಉಪಸಾಗರದ ವರೆಗೆ ವಿಷ್ಣು ಸರ್ವೋತ್ತಮತ್ವ ಸಿದ್ಧಾಂತದ ಜಯಘೋಷದ ಅಲೆಗಳನ್ನು ಚಾಚಿದವರುವಿಬುಧೇಂದ್ರತೀರ್ಥರು. ಅವರ ಶಿಷ್ಯರು ಎಲ್ಲ ಪೀಠಾಧಿಪತಿ ಶ್ರೀಪಾದಂಗಳವರಿಂದ ಶ್ರೀಪಾದರಾಜರೆಂದು ಮಾನಿತರಾದ ಶ್ರೀ ಲಕ್ಷ್ಮೀನಾರಾಯಣ ಯೋಗಿಗಳು. ಇಂಥ ಜ್ಞಾನ ಮೇರುಗಳು ಎನಿಸಿದ ಶ್ರೀ ವಿಬುಧೇಂದ್ರತೀರ್ಥರು ತಮ್ಮ ಹೆಸರಿಗೆ ತಕ್ಕಂತೆ ವಿಬುಧ ಪ್ರಪಂಚದಲ್ಲಿ ಇಂದ್ರರೇ ಆಗಿದ್ದರು.

ಇವರ ಪೂರ್ವಾಶ್ರಮದ ಹೆಸರು ರಘುನಾಥ ಭಟ್ಟರು. ಇವರ ಅಸಾಧಾರಣವಾದ ಪಾಂಡಿತ್ಯ ಮತ್ತು ಪ್ರತಿವಾದಿ ನಿಗ್ರಹ ಸಾಮರ್ಥ್ಯ ವೈಷ್ಣವ ಮತ ಪ್ರಸಾರ ದೀಕ್ಷೆ ಮತ್ತು ಸತ್‌ಸಿದ್ಧಾಂತ ಪ್ರಸಾರ ಪರಾಯಣತೆಗಳನ್ನು ಕಂಡು ಸಂತೃಪ್ತರಾದ ಶ್ರೀ ರಾಮಚಂದ್ರ ತೀರ್ಥರು ಅವರಿಗೆ ಆಶ್ರಮವನ್ನಿತ್ತು ವಿಬುಧೇಂದ್ರ ಎಂದು ನಾಮಕರಣ ಮಾಡಿದರು.

ಶ್ರೀ ವಿಬುಧೇಂದ್ರತೀರ್ಥರು ಕೆಲವು ದಿನ ತಮ್ಮ ಗುರುಗಳಾದ ಶ್ರೀ ರಾಮಚಂದ್ರ ತೀರ್ಥರ ಸೇವೆಯನ್ನು ಮಾಡಿಕೊಂಡು ಅವರಲ್ಲಿ ಮಧ್ವ ಶಾಸ್ತ್ರದ ಉದ್ಗ್ರಂಥಗಳನ್ನು ಓದುತ್ತಲಿದ್ದರು. ಮಹಾ ಮೇಧಾವಿಗಳಾದ ವಿಬುಧೇಂದ್ರರ ನಾಲಿಗೆಯ ಮೇಲೆ ಸರ್ವ ಶಾಸ್ತ್ರಗಳೂ ನಲಿಯುತ್ತಿದ್ದವು. ಶ್ರೀಮದಾನಂದತೀರ್ಥರ ಸರ್ವ ಮೂಲದ ಮೂವತ್ತೇಳು ಗ್ರಂಥಗಳೂ ಟೀಕಾ ಸಹಿತವಾಗಿ ಅವರಿಗೆ ಮುಖೋದ್ಗತವಾಗಿದ್ದವು ಈ ಅತ್ಯದ್ಭುತವಾದ ಪಾಂಡಿತ್ಯ, ಸ್ಫೂರ್ತಿ, ಗ್ರಂಥ ಕ್ಲಪ್ತಿಗಳು ಅವರಲ್ಲಿ ವಾದಿ ವಿಜಗೀಷೆ ಮತ್ತು ಮಧ್ವ ಮತ ಪ್ರಸಾರಾಭಿಲಾಷೆಗಳನ್ನು ಕೆರಳಿಸಿದ್ದವು.

ಪಾಂಡಿತ್ಯದ ಮೇರು ಶಿಖರದಲ್ಲಿ ಬೌದ್ಧಿಕ ಚಂಕ್ರಮಣವನ್ನು ಗೈಯ್ಯುತ್ತಿರುವ ಶಿಷ್ಯೋತ್ತಮರ ಈ ಅತ್ಯುತ್ಕಟ ದಿಗ್ವಿಜಯ ಆಕಾಂಕ್ಷೆಗಳನ್ನು ಗುರುತಿಸಿ ಶ್ರೀರಾಮಚಂದ್ರ ತೀರ್ಥರು ಅವರನ್ನು ದೇಶ ವಿದೇಶ ಸಂಚಾರಕ್ಕಾಗಿ ಕೊಟ್ಟು ಕಳುಹಿಸಿದರು.

ಸರ್ವಜ್ಞ ಸಂಸ್ಥಾನದ ಶ್ರೀ ರಾಜೇಂದ್ರ, ಶ್ರೀ ಜಯಧ್ವಜರಂತೆ ಸುಧೀಶೇಖರರಾದ ಶ್ರೀ ವಿಬುಧೇಂದ್ರರು ಕೂಡ ದಕ್ಷಿಣೋತ್ತರ ದೇಶದ ವಿದ್ಯಾ ಕೇಂದ್ರಗಳಿಗೆ ಹೋಗಿ

ಅಲ್ಲಿಯ ವಾದಿ ಸಿಂಹಗಳನ್ನೆಲ್ಲ ಕೆಣಕಿ ವಾಕ್ಯಾರ್ಥದಲ್ಲಿ ಸೋಲಿಸಿ ಜಯ ಪತ್ರಗಳನ್ನು ತೆಗೆದುಕೊಂಡು ಮತ್ತೆ ಮುಂದೆ ಸಾಗುತ್ತಿದ್ದರು.

ಕಾಶಿಗೆ ಬಂದಾಗಲಂತೂ ಅಲ್ಲಿಯ ಅದ್ವೈತ ಮತದ ಪಂಡಿತ ವೇತಂಡ ತಂಡಗಳನ್ನು ಕಂಡು ಅವರಿಗೆ ಪರಮಾನಂದವಾಯಿತು. ಅಲ್ಲಿಯ ವಿದ್ವದ್ವೃಂದಕ್ಕೆಲ್ಲ ಅವರು ವಾಕ್ಯಾರ್ಥಕ್ಕೆ ಆಹ್ವಾನವನ್ನು ಕಳಿಸಿ ಒಬ್ಬೊಬ್ಬರನ್ನಾಗಿ ವಾದದಲ್ಲಿ ಸೋಲಿಸಿ ಜಯ ಪತ್ರಗಳನ್ನು ತೆಗೆದುಕೊಳ್ಳಲಿಕ್ಕೆ ಪ್ರಾರಂಭಿಸಿದರು.

ವಾದದಲ್ಲಿ ಶ್ರೀ ವಿಬುಧೇಂದ್ರರು ಒಬ್ಬೊಬ್ಬರನ್ನಾಗಿ ಗೆದ್ದಂತೆ ಪ್ರತಿವಾದಿ ವಿದ್ವಾಂಸರೆಲ್ಲ ದಿನಕ್ಕೊಬ್ಬರಂತೆ ಕೌಶಲ್ಯದ ಕಣದಲ್ಲಿ ಸೋತುಬಿದ್ದಂತೆ ಶ್ರೀ ವಿಬುಧೇಂದ್ರ ವಾದಾವೇಶವು, ವಿಜಯೋಲ್ಲಾಸವು, ವಾಕ್ಯಾರ್ಥ ಉತ್ಸಾಹವು ಇಮ್ಮಡಿಸ ತೊಡಗಿತು.

ಆ ಕಾಲದಲ್ಲಿ ಅವರ ಗುರುಗಳಾದ ಶ್ರೀ ರಾಮಚಂದ್ರತೀರ್ಥರಿಗೆ ದೇಹಾಲಸ್ಯವಾಗಿ ಹೇಳಿ ಕಳಿಸಿದರೂ ವಾದಿ ನಿಗ್ರಹದ ರಭಸದಲ್ಲಿ ಅವರಿಗೆ ಇತ್ತ ಕಡೆ ಬರಲಿಕ್ಕೆ ಆಗಲಿಲ್ಲ. ಪ್ರತಿವಾದಿಗಳನ್ನೆಲ್ಲ ಸಂಪೂರ್ಣವಾಗಿ ಪರಾಜಿತ, ಪರಾಹತರನ್ನಾಗಿ ಮಾಡುವ ವರೆಗೆ ಆ ವಾದರಂಗವನ್ನು ಬಿಟ್ಟು ಹೋಗಲಿಕ್ಕೆ ಮನಸ್ಸಾಗಲಿಲ್ಲ. ಅವರ ಈ ವಾದಾವೇಶ, ವಾಕ್ಯಾರ್ಥಾಭಿನಿವೇಶ, ಮಧ್ವಮತ ಪ್ರಸಾರ ದೀಕ್ಷೆ, ಸಿದ್ಧಾಂತ ಪ್ರಸಾರದ ದಾಕ್ಷ್ಯಗಳೇ ಅವರಿಗೆ ಗುರುಗಳ ಬಳಿಗೆ ಬರಲು ವಿಲಂಬಕ್ಕೆ ಕಾರಣವಾದವು.

ಅವರು ಹೋದ ಹೋದಲ್ಲೆಲ್ಲ ಅವರ ಪಾಂಡಿತ್ಯ, ಪ್ರತಿಭೆಗಳಿಗೆ ಮನಸೋತು ರಾಜ-ಮಹಾರಾಜರು, ಪಂಡಿತ-ಪಾಮರರು ಹಣೆ ಮಣಿದರು. ವಿಶಿಷ್ಯ ಶಿಷ್ಯತ್ವವನ್ನು ಅಂಗೀಕರಿಸಿದರು. ದತ್ತಿ ದಾನಗಳನ್ನಿತ್ತರು. ಅವರಿಂದ ಮುಂದೆ ಈ ಸರ್ವಜ್ಞ ಪೀಠಪರಂಪರೆಯು ಶ್ರೀ ರಾಘವೇಂದ್ರ ಮಠ ಎಂದು ಪ್ರಸಿದ್ಧವಾಯಿತು.

ಶ್ರೀ ಲಕ್ಷ್ಮೀನಾರಾಯಣ ಯೋಗಿಗಳು ಶ್ರೀ ಪದ್ಮನಾಭತೀರ್ಥ ಪರಂಪರೆಯ ಒಂದು ತೇಜೋ ಬೀಜ. ಅವರು ಶ್ರೀ ವಿಬುಧೇಂದ್ರತೀರ್ಥರ ಮಿದುಳಿನಲ್ಲಿ ಕಡಲಾಡುವ ಜ್ಞಾನ ರಾಶಿಯ ಕೀರ್ತಿಯನ್ನು ಕೇಳಿ ಅವರ ಶಿಷ್ಯತ್ವವನ್ನು ಸ್ವೀಕರಿಸಿದರು. ಶ್ರೀವಿಬುಧೇಂದ್ರತೀರ್ಥರಲ್ಲಿ ಸುಧಾಂತ ವೇದಾಂತವನ್ನು ಓದಿದ ಶ್ರೀಲಕ್ಷ್ಮೀನಾರಾಯಣ ತೀರ್ಥರು ಬಾಲಬೃಹಸ್ಪತಿಗಳಂತೆ ವೇದಾಂತ ವಿದ್ಯಾವಿಶಾರದರಾದರು.

ಒಮ್ಮೆ ಕೊಪ್ಪರ ಕ್ಷೇತ್ರದಲ್ಲಿ ಶ್ರೀ ವಿಬುಧೇಂದ್ರರಿಗೂ ಉತ್ತರಾದಿಮಠದ ಶ್ರೀ ರಘುನಾಥತೀರ್ಥರಿಗೂ ಮೇಲನವಾಯಿತು. ಆ ಕಾಲದಲ್ಲಿ ಶ್ರೀ ವಿಬುಧೇಂದ್ರ

ತೀರ್ಥರು ತಮ್ಮ ಶಿಷ್ಯ ಶ್ರೀ ಲಕ್ಷ್ಮೀನಾರಾಯಣ ಯೋಗಿಗಳಿಗೆ ಪ್ರಾಜ್ಞಪುಂಗವರಾದ ಶ್ರೀ ರಘುನಾಥತೀರ್ಥರೆದುರು ಸುಧಾ ಅನುವಾದವನ್ನು ಮಾಡಲಿಕ್ಕೆ ಹೇಳಿದರು. ಅವರ ಅದ್ಭುತವಾದ ಸುಧಾ ಅನುವಾದವನ್ನು ಕೇಳಿ ಅತ್ಯಂತ ಸಂತುಷ್ಟರಾದ ಶ್ರೀ ರಘುನಾಥ ತೀರ್ಥರು ಆ ಲಕ್ಷ್ಮೀನಾರಾಯಣ ಯೋಗಿಗಳಿಗೆ 'ಶ್ರೀಪಾದರಾಜ' ಎಂಬ ಬಿರುದನ್ನು ಇತ್ತು ಗೌರವಿಸಿದರು. ಅದೇ ಹೆಸರಿನಿಂದ ಮುಂದೆ ಅವರು ಪ್ರಸಿದ್ಧರಾದರು.

ಶ್ರೀವಿಬುಧೇಂದ್ರರು ಅನೇಕ ಗ್ರಾಮ, ಜಹಗೀರುಗಳನ್ನು ಸಂಪಾದನಮಾಡಿದರು. ವಿಜಯ ನಗರದ ಕೃಷ್ಣದೇವರಾಯನು ಪ್ರತಾಪ ರುದ್ರದೇವನನ್ನು ಸೋಲಿಸಿ ಉದಯ ಗಿರಿಯನ್ನು ವಶಪಡಿಸಿಕೊಂಡ ಸಮಯದಲ್ಲಿ ಕೃಷ್ಣಾ ಭೀಮಾ ಸಂಗಮ ಕ್ಷೇತ್ರದಲ್ಲಿ ೧೯೧೩ ನೇ ಶಕೆ ಸಾಧಾರಣ ಸಂವತ್ಸರ ವೈಶಾಖದಲ್ಲಿ ಚಿಕ್ಕಕೊಳ್ಳಿ ಎಂಬ ಗ್ರಾಮವನ್ನು ದಾನವಿತ್ತನು ಎಂದು ಮೈಸೂರಿನ ೧೯೪೪ ನೇ ಇಸ್ವಿಯ ಆರ್ಕಿಯಾಲಾಜಿಕಲ್ ರಿಪೋರ್ಟ ೭೧ ನೇ ಪುಟದಲ್ಲಿ ಹೇಳಿದ್ದಾರೆ.*

**ಶ್ರೀ ವಿಬುಧೇಂದ್ರತೀರ್ಥರ ಹಾಗೂ ಶ್ರೀ ರಘುನಾಥತೀರ್ಥರ ಕಾಲವು ಐತಿಹಾಸಿಕ ದೃಷ್ಟಿಯಿಂದ ಹೊಂದಿಕೆಯಾಗುವದಿಲ್ಲ.**

---

*ಡಾ. H. K. ವೇದವ್ಯಾಸಾಚಾರ್ಯರು ತಮ್ಮ "ಗುರು ಚರಿತೆ" ಪುಸ್ತಕದಲ್ಲಿ ಕೃಷ್ಣದೇವರಾಜನು ಶ್ರೀ ವಿಬುಧೇಂದ್ರರಿಗೆ ಕೊಟ್ಟ ಚಿಕ್ಕಕುಳ್ಳಿ ಗ್ರಾಮದ ದಾನ ಶಾಸನ ಪತ್ರದಲ್ಲಿಯ ಕೆಲವು ಪದ್ಯಗಳನ್ನು ಉದಾಹರಿಸಿ ಮೈಸೂರ Mysore Archaclogical Report 1964 P.71 ಉದ್ಧರಿಸಿದ್ದಾರೆ. ಆದರೆ ಕೃಷ್ಣದೇವರಾಯನ ಕಾಲಕ್ಕೂ ಇವರ ಕಾಲಕ್ಕೂ ಬಹಳ ಅಂತರವಿರುತ್ತದೆ. ಡಾ. ಹುಲಿಯವರು ಹೇಳಿದಂತೆ ಶ್ರೀ ವಿಬುಧೇಂದ್ರರ ಕಾಲವು ೧೪೩೫ ರಿಂದ ೧೪೯೦ ರ ವರೆಗೆ ಎಂದು ಹಿಡಿದರೂ ಶ್ರೀ ಕೃಷ್ಣದೇವರಾಯನಿಗೂ ಶ್ರೀ ವಿಬುಧೇಂದ್ರರಿಗೂ ಭೇಟಿಯಾಗುವ ಸಂಭವವೇ ಇಲ್ಲ. ಶ್ರೀಕೃಷ್ಣದೇವರಾಜನ ಆಳಿಕೆಯು ವಿಜಯನಗರದಲ್ಲಿ ೧೫೦೯ ರಿಂದ ೧೫೩೦ನೇ ಇಸ್ವಿಯ ವರೆಗೆ ಎಂಬುದು ಇತಿಹಾಸ ಪ್ರಸಿದ್ಧವಾಗಿರುತ್ತದೆ. ೧೪೯೦ ರಲ್ಲಿಯೇ ಗತಿಸಿದ ಶ್ರೀ ವಿಬುಧೇಂದ್ರರಿಗೆ ೧೫೦೦ ನೇ ಇಸ್ವಿಯ ಅನಂತರ ರಾಜ್ಯಾಧಿಕಾರವನ್ನು ಪಡೆದ ಕೃಷ್ಣದೇವರಾಯನು ಜಹಾಗೀರಿಯನ್ನು ಕೊಡುವದೆಂತು. ಆದುದರಿಂದ ೧೯೪೪ ನೇ ಇಸ್ವಿಯದೆಂದು ಡಾ. ಹುಲಿಯವರು ಉದ್ಧರಿಸಿದ ಮೈಸೂರ ಆರ್ಕ್ಯಾಲಾಜಿಕಲ್ ರಿಪೋರ್ಟಿನ ವರದಿಯು ಕೃತಕವಿರಬಹುದೆಂದು ಸಂದೇಹ ಬರುತ್ತದೆ.

**Dr. B N. K. Sharma's History of the Dvaita School of Vedanta and its literature Page No. 276.**

ಈ ಮಹಾಮಹಿಮೋಪೇತರಾದ ಶ್ರೀ ವಿಬುಧೇಂದ್ರರು ಬಹು ಕಾಲ ಬಾಳಿ ವಿದ್ಯಾ ಸಿಂಹಾಸನವನ್ನು ಆಳಿ ಅನಂತಪ್ಪ ಎಂಬ ಶಾನಭೋಗರಿಗೆ ಆಶ್ರಮವಿತ್ತು ಜಿತಾಮಿತ್ರರು ಎಂದು ನಾಮಕರಣ ಮಾಡಿದರು.

ಶ್ರೀ ವಿಬುಧೇಂದ್ರರು ಶ್ರೀ ನರಸಿಂಹದೇವರ ಉಪಾಸಕರು. ಅವರು ಅಹೋಬಲ ಕ್ಷೇತ್ರಕ್ಕೆ ಹೋಗಿ ಬಹು ಕಾಲ ಅಲ್ಲಿ ಇದ್ದು ಶ್ರೀ ನರಸಿಂಹನ ಸೇವೆಯನ್ನು ಮಾಡಿದರು. ಹಾಗೇ ಅವರು ಸಂಚಾರ ಕ್ರಮದಲ್ಲಿ ಒಂದು ನದೀ ತೀರದಲ್ಲಿದ್ದಾಗ ಅವರಿಗೆ ಸ್ವಪ್ನವಾಗಿ ಆ ನದಿಯಲ್ಲಿ ಷೋಡಶಬಾಹು ನರಸಿಂಹ ದೇವರ ಪ್ರತಿಮೆ ದೊರಕಿತು. ಈಗಲೂ ಆ ಪ್ರತಿಮೆಗೆ ಶ್ರೀ ರಾಯರ ಮಠದಲ್ಲಿ ಶ್ರೀ ನರಸಿಂಹ ಜಯಂತೀ ದಿನ ಪ್ರತಿವರ್ಷ ವಿಶೇಷ ಪೂಜಾ ಉತ್ಸವಗಳು ನಡೆಯುತ್ತಿವೆ.

ಮುಂದೆ ಅವರು ಈಗಿನ ಮಂತ್ರಾಲಯ ಗ್ರಾಮಕ್ಕೆ ದಯಮಾಡಿಸಿದರು. ಹಿಂದೆ ಆ ಮಂತ್ರಾಲಯ ಗ್ರಾಮದಲ್ಲಿ ಪ್ರಲ್ಹಾದರಾಜರು ಯಜ್ಞ ಮಾಡಿದ್ದರೆಂದು ಸ್ವಪ್ನದಲ್ಲಿ ಸೂಚನೆಯಾಗಿದ್ದರಿಂದ ವಿಜಯನಗರದ ರಾಜರಿಂದ ಆ ಗ್ರಾಮವನ್ನು ಪಡೆದರು. ಆ ಮಂತ್ರಾಲಯದಿಂದ ಅವರು ಸಂಚಾರ ಮಾಡುತ್ತ ಮೈಸೂರ ದೇಶಕ್ಕೆ ಬಂದು ಅಲ್ಲಿಯ ಮಹಾರಾಜರಿಂದ ಆಸ್ತಿ ಸ್ವಾಸ್ಥ್ಯಗಳನ್ನು ಸಂಪಾದಿಸಿ ದಕ್ಷಿಣಕ್ಕೆ ಪ್ರಯಾಣ ಮಾಡಿ ತಾಮ್ರಪರ್ಣೀ ತೀರವಾದ ತಿನ್ನವೇಲ್ಲಿ ಗ್ರಾಮದಲ್ಲಿ ಪರಾಭವ ಸಂವತ್ಸರದ ಮಾರ್ಗಶೀರ್ಷ ಶುಕ್ಲ ದಶಮಿಯಂದು ವೃಂದಾವನ ಪ್ರವೇಶ ಮಾಡಿದರು.

"ಆ ಕೇರಳಂ ತಥಾಸೇತು ಮಾಗಂಗಂ ಚ ಹಿಮಾಲಯಂ ।
ನಿರಾಕೃತಾದ್ವೈತ ಶೈವಂ ವಿಬುಧೇಂದ್ರ ಗುರುಂ ಭಜೆ ॥"*

---

*ವಾದರತ್ನಾವಲೀಕಾರರಾದ ಶ್ರೀ ವಿಷ್ಣುದಾಸಾಚಾರ್ಯರೇ ಮುಂದೆ ಶ್ರೀ ವಿಬುಧೇಂದ್ರತೀರ್ಥರಾಗಿರಬಹುದು ಎಂದು ಡಾ. ಬಿ. ಎನ್. ಕೆ. ಶರ್ಮರವರು ಶ್ರೀ ಪಡಮನ್ನೂರ ನಾರಾಯಣಾಚಾರ್ಯ ಸತ್ಕಾರ ಸಮಿತಿಯಿಂದ ಪ್ರಕಟಿಸಲ್ಪಟ್ಟಿರುವ ಶ್ರೀ ವಿಷ್ಣುದಾಸಾಚಾರ್ಯರ ವಾದರತ್ನಾವಲಿ ಎಂಬ ಗ್ರಂಥದ ಮುನ್ನುಡಿಯಲ್ಲಿ ತರ್ಕಿಸಿದ್ದಾರೆ.

See the introduction to "वादरत्नावलि" by Dr. B. N. K. Sharma Page No. 6. "Having regard to the obvious fact of the contemporaneity of Vibudhendra

and Vishnudasacharya and fact of both of them having been accepted by tiaditions as pupils of Rajendra Tirtha and last but not the least taking in to account dialectical pre-eminence attained by both of them as attested by the facts at our dispoal, I can tempted to put forward a suggestion af their identity.

ಡಾ. ಶರ್ಮಾರವರ ವಿಚಾರವೇನೋ ಸ್ಪೃಹಣೀಯವದೆ. ಆದರೆ ಶ್ರೀ ವಿಷ್ಣುದಾಸಾಚಾರ್ಯರೇ ಮುಂದೆ ವಿಬುಧೇಂದ್ರ ತೀರ್ಥರಾದರೆಂಬ ವಿಷಯದಲ್ಲಿ ಸಾಕಷ್ಟು ಪ್ರಮಾಣ ಪುಷ್ಟಿ ಇಲ್ಲ. ವಿಬುಧೇಂದ್ರರ ಗ್ರಂಥವಾವುದೂ ಉಪಲಬ್ಧವಿಲ್ಲ. ಹಾಗೂ ಅವರ ಪೂರ್ವಾಶ್ರಮದ ಹೆಸರು ವಿಷ್ಣುದಾಸಾಚಾರ್ಯರೆಂದಿರದೆ ರಘುನಾಥ ಭಟ್ಟರು ಎಂದಿದ್ದಿತು ಎಂದು ಗುರು ಚರಿತದಲ್ಲಿ ಹೇಳಿದ್ದಾರೆ. ಡಾ. ಶರ್ಮಾರವರು ಅಪೇಕ್ಷಿಸುವಂತೆ ಶ್ರೀ ವಿಬುಧೇಂದ್ರರೇ ವಾದರತ್ನಾವಲಿ ರಚಿಸಿದ್ದರೆ ಶ್ರೀ ರಾಯರ ಮಠವ ಪರಂಪರೆಯ ಗ್ರಂಥಕಾರರಲ್ಲಿ ಯಾರಾದರೂ ಅದನ್ನು ಉಲ್ಲೇಖಿಸುತ್ತಿದ್ದರು. ಈ ವಿಷಯದಲ್ಲಿ ಇನ್ನೂ ಸಂಶೋಧನದ ಅಗತ್ಯವಿದೆ.



## ಬ್ರಹ್ಮಜ್ಞಾನಿಗಳಾದ

# ಶ್ರೀ ಬ್ರಹ್ಮಣ್ಯತೀರ್ಥರು



ಉತ್ತರಾ ಪಥದಲ್ಲಿ ದ್ವೈತ ಧ್ವಜವನ್ನು ಗಗನದೆತ್ತರಕ್ಕೆ ಎತ್ತಿ ಹಾರಿಸಿದ ಶ್ರೀ ಜಯಧ್ವಜತೀರ್ಥರ ತರುವಾಯ ಶ್ರೀ ಪುರುಷೋತ್ತಮ ತೀರ್ಥರು ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡಿದರು. ಅವರ ಗುರು ಹಾಗೂ ಪರಮ ಗುರುಗಳಾದ ಶ್ರೀ ಜಯಧ್ವಜ ತೀರ್ಥರು ಮತ್ತು ಶ್ರೀ ರಾಜೇಂದ್ರ ತೀರ್ಥರು ಮಧ್ವ ಸಿದ್ಧಾಂತದಲ್ಲಿ ಅಸಾಧಾರಣವಾದ ಅಭಿನಿವೇಶ, ಅವೈದಿಕ ಮತಗಳನ್ನು ನಿರಾಕರಣ ಮಾಡಿ ಎಲ್ಲ ವಿಪಕ್ಷಿ ವಿದ್ವಾಂಸರನ್ನು ಗೆಲ್ಲುವ ಆವೇಶ, ಆನಂದತೀರ್ಥರ ಸಂದೇಶವನ್ನು ಜಗತ್ತಿನ ಮೂಲೆ-ಮೂಲೆಗೂ ಮುಟ್ಟಿಸುವ ಹೌಸು-ಹುಮ್ಮಸು-ಹವ್ಯಾಸಗಳಿಂದ ಪ್ರೇರಿತರಾಗಿ ಉತ್ತರ ಹಿಂದುಸ್ತಾನಕ್ಕೆ ಹೋಗಿ ಅಲ್ಲಿಯೇ ನೆಲಸಿಬಿಟ್ಟರು.

ಶ್ರೀ ಸರ್ವಜ್ಞ ಕರಾರ್ಚಿತ ಪ್ರತಿಮಾ ಪ್ರತೀಕ ಸಂಸ್ಥಾನದ ಶ್ರೀ ಮುದ್ರಾದಿ ಹಲಕೆಲವು ಆವಶ್ಯಕ ಸಾಮಗ್ರಿಯ ಹೊರತಾಗಿ ಬೇರಾವದನ್ನೂ ಮುಟ್ಟದೆ ಕೇವಲ ಸಿದ್ಧಾಂತ ಪ್ರಚಾರದಲ್ಲಿ ದತ್ತಚಿತ್ತರಾಗಿ, ಇತ್ತ ಕಡೆಯ ಎಲ್ಲವನ್ನೂ ಬಿಟ್ಟುಬಿಟ್ಟಿದ್ದರು. ಅವರ ಅನಂತರ ಪೀಠಾರೋಹಣ ಮಾಡಿದ ಶ್ರೀ ಪುರುಷೋತ್ತಮ ತೀರ್ಥರು ತಮ್ಮ ಗುರುಗಳ ಜೊತೆಗೆ ತಾವೂ ಉತ್ತರ ದೇಶದಲ್ಲಿ ಮತ್ತೆ ತಲೆಯೆತ್ತಿದ ವಿಮತೀಯ ವಾದಿಗಳನ್ನೆಲ್ಲ ಗೆದ್ದರು. ಮಧ್ವ ಸಿದ್ಧಾಂತದ ತತ್ವಗಳನ್ನು ಎಲ್ಲ ಕಡೆಗೂ ಪ್ರಸಾರ ಮಾಡಿದರು. ಆ ದೇಶದಲ್ಲಿ ಮತ ಪ್ರಸಾರದ ಕಾರ್ಯವು ಮುಗಿದ ಬಳಿಕ ಶ್ರೀ ಪುರುಷೋತ್ತಮ ತೀರ್ಥರ ಚಿತ್ತವು ತಾಯಿನಾಡಿನೆಡೆಗೆ ಹರಿಯಿತು.

ಮತ-ಮಠಗಳ ಕಲಹ ಕೋಲಾಹಲದ ಕೇಂದ್ರ ಸ್ಥಳವೆಂದರೆ ದಕ್ಷಿಣ ದೇಶ. ಅದರಲ್ಲಿಯೂ ಇತ್ತ ಕಡೆ ತಲೆಯೆತ್ತಿ ರಾಜಾಶ್ರಯದ ಬಲದಿಂದ ತನ್ನ ಮತದ ಜಾಲ ವನ್ನು ಸುತ್ತೆಲ್ಲ ಹರಡುತ್ತಲಿರುವ—ಜೈನ, ವೀರಶೈವ ಮುಂತಾದ ಅವೈದಿಕ ಮತಗಳ ಆಕ್ರಮಣದಿಂದಲೂ ಅದ್ವೈತ, ವಿಶಿಷ್ಟಾದ್ವೈತ ಮತಗಳ ವರ್ಧಿಷ್ಣು ಪ್ರಭಾವ ದಿಂದಲೂ ಎತ್ತಲೂ ಹತ್ತಿಕ್ಕಿದಂತಾಗುತ್ತಿರುವ ಮಧ್ವಮತದ ನಿರಾತಂಕ ಪ್ರಸಾರಕ್ಕಾಗಿ ಎಷ್ಟು ಜನ ಸ್ವಾಮಿಗಳಿದ್ದರೂ ಕಡಿಮೆಯನ್ನುವಂತಿತ್ತು ಇಲ್ಲಿಯ ಪರಿಸ್ಥಿತಿ.

ಅದಕ್ಕಾಗಿ ಶ್ರೀ ಪುರುಷೋತ್ತಮ ತೀರ್ಥರು ತಮ್ಮ ಮಹಾ ಸಂಸ್ಥಾನದ ವಾಸ್ತವ್ಯ ಕೇಂದ್ರವನ್ನು ಉತ್ತರದಿಂದ ಬದಲಿಸಿ ದಕ್ಷಿಣಕ್ಕೆ ತಂದರು. ಕಾವೇರಿ ತೀರದ ಚನ್ನಪಟ್ಟಣವು (ಅಬ್ಬೂರ) ತಮ್ಮ ಏಕಾಂತ ತಪಃ ಸಾಧನೆಗೆ ಬಹಳ ಚನ್ನಾಗಿದೆ ಎಂದು ಎನಿಸಿತು. ಆದುದರಿಂದ ಶ್ರೀ ಶ್ರೀಗಳವರು ಅಲ್ಲಿಯೇ ನೆಲಸಿ ಪಾಠ ಪ್ರವಚನ ತಪೋನುಷ್ಠಾನಗಳಲ್ಲಿ ನಿರತರಾದರು.

ಶ್ರೀ ಪುರುಷೋತ್ತಮ ತೀರ್ಥರು ತಮ್ಮ ಅನಂತರ ಶ್ರೀ ಬ್ರಹ್ಮಣ್ಯತೀರ್ಥರೆಂಬ ಮಹಾ ಯೋಗಿಗಳಿಗೆ ಆಶ್ರಮವಿತ್ತು ಸಂಸ್ಥಾನವನ್ನು ಒಪ್ಪಿಸಿದರು.

ಶ್ರೀ ಬ್ರಹ್ಮಣ್ಯತೀರ್ಥರು ಮಹಾ ವಿರಕ್ತರು. ವಾಕ್‌ಶುದ್ಧಿ, ಮಂತ್ರಸಿದ್ಧಿ, ತಪಃ ಪ್ರಭಾವ, ದಿವ್ಯಜ್ಞಾನ ಮುಂತಾದ ಇವರ ಸದ್ಗುಣಗಳನ್ನು ಕಂಡು ಕೇಳಿದವರಿಗೆ ಇವರೊಬ್ಬ ಮಹಾ ಬ್ರಹ್ಮರ್ಷಿಗಳೆಂದು ತಿಳಿದು ಹೋಗುತ್ತಿತ್ತು. ಅವರು ನಿರಂತರವೂ ಶ್ರೀ ಕೃಷ್ಣನ ಧ್ಯಾನದಲ್ಲಿಯೇ ಅನವರತ ನಿರತರಾಗಿರುತ್ತಿದ್ದರು. ಆದುದರಿಂದಲೇ ಶ್ರೀ ಚಂದ್ರಿಕಾಚಾರ್ಯರು ಅವರನ್ನು ಹಂಸಪುಂಗವ ಎಂದು ಕರೆದಿದ್ದಾರೆ.

ಶ್ರೀ ಚಂದ್ರಿಕಾಚಾರ್ಯರು ಶ್ರೀ ಬ್ರಹ್ಮಣ್ಯತೀರ್ಥರ ಕೃಷ್ಣ ಭಕ್ತಿಯೂ ಅತ್ಯುಚ್ಚ ಮಟ್ಟದ್ದಿತ್ತೆಂದು ತಮ್ಮ ಈ ಪ್ರಣಾಮ ಪದ್ಯದಲ್ಲಿ ಸೂಚಿಸಿದ್ದಾರೆ.

"ಕಂಸಧ್ವಂಸಿ ಪದಾಂಭೋಜ ಸಂಸಕ್ತೋ ಹಂಸಪುಂಗವಃ ॥
ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥ "

ತೆರೆಯ ಮರೆಯ ಅರಿವಿನ ಆಗರದಂತೆ ಪ್ರಸಿದ್ಧಿ ಪರಾಙ್ಮುಖರಾಗಿ ಶ್ರೀ ಕೃಷ್ಣನ ನಿರಂತರ ಧ್ಯಾನೋಪಾಸನಾಲೀನರಾಗಿರುವ ಶ್ರೀ ಬ್ರಹ್ಮಣ್ಯ ತೀರ್ಥ ಬ್ರಹ್ಮ ಋಷಿಗಳ ವಾಕ್‌ಸಿದ್ಧಿಯ ಮಹಾ ಮಹಿಮೆಯು ಜಗತ್ತಿಗೆಲ್ಲ ಗೊತ್ತಾಗುವ ಒಂದು ಸಂದರ್ಭವು ಒದಗಿ ಬಂದಿತು.

ಸಿದ್ಧ ಪುರುಷರಾದ ಶ್ರೀ ಬ್ರಹ್ಮಣ್ಯ ತೀರ್ಥರು ಒಂದು ದಿನ ಮೈಸೂರ ಜಿಲ್ಹೆಯ ಕಾವೇರಿ ನದಿಯ ದಂಡೆಯ ಮೇಲಿರುವ ಬನ್ನೂರ ( ವಹ್ನಿಕ್ಷೇತ್ರ ) ಎಂಬ ಗ್ರಾಮಕ್ಕೆ ದಯಮಾಡಿಸಿನರು. ಶ್ರಿ ಶ್ರೀಗಳವರು ಊರ ಹೊರಗಿನ ದೇವಸ್ಥಾನದ ಪ್ರಾಕಾರದಲ್ಲಿ ಅಶ್ವತ್ಥ ವೃಕ್ಷದ ಕೆಳಗೆ ಶಿಷ್ಯರಿಗೆ ಪಾಠ ಹೇಳುತ್ತ ಕುಳಿತಿದ್ದರು.

ಆ ಸಂದರ್ಭದಲ್ಲಿ ದುಃಖವಗ್ಧಳಾದ ಓರ್ವ ಹೆಣ್ಣುಮಗಳು ಶೋಕಾವೇಗವನ್ನು ತಡೆಯಲಾರದೆ ಬಿಕ್ಕುತ್ತ ಬಂದು ಶ್ರಿ ಶ್ರೀಗಳವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು. ಬಂದವಳು ಹೆಣ್ಣುಮಗಳೆಂದು ಶ್ರೀಗಳವರು ಅವಳತ್ತ ಕಣ್ಣೆತ್ತಿಕೂಡ ನೋಡದೆ ತಮ್ಮ ತಾಡವಾಲಿಯ ಪುಸ್ತಕದಲ್ಲಿಯೇ ದೃಷ್ಟಿ ಇಟ್ಟು ಎಲ್ಲರಿಗೂ ಹರಿಸುವಂತೆ "ದೀರ್ಘ ಸುಮಂಗಲೀ ಭವ" ಎಂದು ಆಶೀರ್ವಾದ ಮಾಡಿದರು.

ಅದನ್ನು ಕೇಳಿ ಆ ಹೆಣ್ಣುಮಗಳ ದುಃಖದ ಕಟ್ಟೊಡೆದು ಅಳುವು ಒಟ್ಟರಿಸಿ ಬಂದಿತು. ಆವಳು ದೊಡ್ಡ ಧ್ವನಿ ತೆಗೆದು ರೋದಿಸತೊಡಗಿದಳು.

"ಅಯ್ಯೋ ಸ್ವಾಮಿ ಇನ್ನೆಲ್ಲಿಯ ದೀರ್ಘ ಸುಮಂಗಲೀ ! ಈ ಪಾಪಿ ಜೀವಕ್ಕೆ. ಆ ಮಾಂಗಲ್ಯವನ್ನು ಕಾಪಾಡಿಕೊಳ್ಳಲಿಕ್ಕೆ ಆಗಲಿಲ್ಲ.

ಸ್ವಾಮಿ ತಾವು ಶಾಪಾನುಗ್ರಹ ಸಮರ್ಥರಾದ ಮಹಾ ಸ್ವಾಮಿಗಳು. ತಮ್ಮ ಬಾಯಿ ಹರಿಕೆಯಿಂದಾದರೂ ನನ್ನ ಮಾಂಗಲ್ಯವು ಉಳಿಯಲಾರದೇ ? ಎಂದು ಆಕ್ರೋಶ ಮಾಡಿದಳು.

ಈ ಆಕ್ರಂದನದ ದನಿಯನ್ನು ಕೇಳಿ ಶ್ರೀ ಬ್ರಹ್ಮಣ್ಯ ಯೋಗಿಗಳು ತಲೆ ಎತ್ತಿ ಆವಳೆಡೆಗೆ ನೋಡಿದರು.

ಆ ಬನ್ನೂರ ಗ್ರಾಮದಲ್ಲಿಯ ಕಾಶ್ಯಪ ಗೋತ್ರದ ರಾಮಾಚಾರ್ಯ ಓರ್ವ ಸದಾಚಾರಿ ಬ್ರಾಹ್ಮಣನು ಮರಣಕ್ಕೆ ತುತ್ತಾಗಿದ್ದನು. ಅವನ ಮಡದಿಯೂ, ಪರಮ ಪತಿವ್ರತೆಯು, ಕಲಿಯುಗದ ಸಾವಿತ್ರಿ, ಅಭಿನವ ಅರುಂಧತಿ ಅವಳಿಗೆ ಪತಿ

ವಿರಹವನ್ನು ತಾಳಲಿಕ್ಕಾಗಲಿಲ್ಲ. ಪತಿಯ ಜೊತೆಗೇ ಸಹಗಮನ ಮಾಡಬೇಕೆಂದು ಸಿದ್ಧಳಾಗಿದ್ದಳು. ಸತಿ ಹೋಗುವ ಮುನ್ನ ದೊಡ್ಡವರ ಅನುಜ್ಞೆಯನ್ನು ತೆಗೆದುಕೊಳ್ಳುವದು ಸಂಪ್ರದಾಯ. ಆಕಸ್ಮಿಕವಾಗಿ ಅಂದು ಅಲ್ಲಿಗೆ ಮಹಾ ಯೋಗೀಶ್ವರರಾದ ಶ್ರೀ ಬ್ರಹ್ಮಣ್ಯತೀರ್ಥರು ಚಿತ್ತೈಸಿದ ವೃತ್ತಾಂತವು ಅವಳಿಗೆ ತಿಳಿಯಿತು. ಸಹಗಮನಕ್ಕೆ ಮುನ್ನ ಇಂಥ ಪಾವನ ಪುರುಷರಿಗೆ ನಮಸ್ಕಾರ ಮಾಡಿ ಬರಬೇಕೆಂದು ಅವಳು ಶ್ರೀಗಳಿದ್ದಲ್ಲಿಗೆ ಬಂದಳು. ಪಾಠ ಹೇಳುತ್ತ ಕುಳಿತ ಆ ತಪೋಯೋಗಿಗಳಿಗೆ ಮೂಕ ಶೋಕದಿಂದ ನಮನ ಮಾಡಿದಳು. ಪತಿಯನ್ನು ಕಳೆದುಕೊಂಡು ಅವನೊಡನೆ ಶರೀರವನ್ನು ಸುಟ್ಟುಕೊಂಡು ಸಾಯಲಿಕ್ಕೆ ಹೊರಟ ಸತೀಮಣಿಗೆ ಶ್ರೀಗಳವರು ಕೊಟ್ಟ ಆಶೀರ್ವಾದ— "ದೀರ್ಘ ಸುಮಂಗಲೀಭವ"

ಅವಳ ಮಾಂಗಲ್ಯವು ಹರಿದು ಮಸಣಗಟ್ಟೆಯನ್ನು ಕಂಡಾಗ ದೀರ್ಘ ಸುಮಂಗಲೀತ್ವವು ಎಲ್ಲಿಂದ ಬರಬೇಕು. ಸ್ವಾಮಿಗಳೇನೋ ನುಡಿದು ಬಿಟ್ಟರು. ಅದರಿಂದ ಆ ಸಾಧ್ವಿಯ ದುಃಖವು ಮತ್ತಿನ್ನು ಉಕ್ಕೇರಿ ಬಂದಂತಾಗಿ ಅವಳು ಮತ್ತೂ ಬಿಕ್ಕಿಸಿ ದುಃಖಿಸಹತ್ತಿದಳು.

ಅದನ್ನು ಕೇಳಿ ಶ್ರೀ ಬ್ರಹ್ಮಣ್ಯ ಯೋಗಿಗಳಿಗೆ ಅಂತಃಕರುಣವು ಕರಗಿತು. ಅವರು ವಾತ್ಸಲ್ಯದುಂಬಿದ ಕಂಠದಿಂದ ಹೇಳಿದರು.

"ಏನಮ್ಮಾ ನೀನು ಸಹಗಮನ ವೇಷವನ್ನು ತೊಟ್ಟು ನಮ್ಮನ್ನು ಅಪ್ಪಣೆ ಕೇಳಲು ಬಂದಾಗ ನನ್ನ ಬಾಯಿಂದ ದೀರ್ಘಸುಮಂಗಲೀಭವ ಎಂದು ಆ ಸ್ವಾಮಿಯು ನುಡಿಸಿದನಲ್ಲ. ನನ್ನಂಥ ಸನ್ಯಾಸಿಯ ಬಾಯಿಂದ ಆ ಮಾತನ್ನು ನುಡಿಸಿದ ಆ ಗೋಪಾಲ ಕೃಷ್ಣನು—

"ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ"

ಏನಾದರೂ ವಿಶೇಷ ಅನುಗ್ರಹವನ್ನು ಮಾಡುವನೋ ಏನೋ! ನೋಡೋಣ ಬನ್ನಿ ಎಂದು ಹೇಳಿ ಶ್ರೀ ಶ್ರೀಗಳವರು ಅವಳ ಪತಿಯ ಶವವಿದ್ದಲ್ಲಿಗೆ ಬಂದರು. ಆ ಶವವನ್ನು ಒಂದು ಚಟ್ಟಕ್ಕೆ ಬಿಗಿದು ನಾಲ್ಕು ಜನ ಬ್ರಾಹ್ಮಣರು ಹೆಗಲ ಮೇಲೆ ಹೊತ್ತುಕೊಂಡು ನಡೆದಿದ್ದರು. ಸಹಗಮನ ಮಾಡಲಿರುವ ಆ ಮೃತ ಪುರುಷನ ಸತಿಯು ಶ್ರೀಗಳವರ ಅಪ್ಪಣೆ ತೆಗೆದುಕೊಂಡು ಬರುವವರನ್ನೇ ಎದುರು ನೋಡುತ್ತ ನಿಂತುಕೊಂಡಿದ್ದರು. ಸ್ವಯಂ ಶ್ರೀಗಳವರೇ ಇತ್ತ ಕಡೆಗೆ ಬರುತ್ತಲಿರುವವರನ್ನು ನೋಡಿ ಆ ಶವವಾಹಕರು ಸನ್ಯಾಸಿಗಳು ಶವವನ್ನು ನೋಡಬಾರದು ಎಂಬ ಧರ್ಮಶಾಸ್ತ್ರವನ್ನು ಬಲ್ಲವರಾದುದರಿಂದ ಸ್ಮಶಾನದ ಕಡೆಗೆ ಶೀಘ್ರ ಸಾಗಹತ್ತಿದರು.

ಆಗ ಸ್ವಯಂ ಶ್ರೀಗಳವರೇ ಕೂಗಿ ಕೈಮಾಡಿ ಅವರನ್ನು ನಿಲ್ಲಿಸಿದರು. ಆ ಶವವನ್ನು ಕೆಳೆಗೆ ಇಳಿಸಲು ಹೇಳಿದರು. ತಮ್ಮ ಕಮಂಡಲದಲ್ಲಿಯ ನೀರನ್ನು ಕೈಯಲ್ಲಿ ತೆಗೆದುಕೊಂಡು ಮೃತಸಂಜೀವನೀ ಮಂತ್ರವನ್ನು ಹೇಳಿ ಪ್ರೋಕ್ಷಣ ಮಾಡತಹತ್ತಿದರು. 'ಔಷಧಂ ಜಾನ್ಹವೀ ತೋಯಂ ವೈದ್ಯೋ ನಾರಾಯಣೋ ಹರಿಃ' ಎಂದು ಹೇಳಿ ಶ್ರೀ ಧನ್ವಂತರಿಯನ್ನು ಸ್ಮರಣಮಾಡಿ ರಾಮಕೃಷ್ಣ ವೇದವ್ಯಾಸರ ನಾಮಗಳನ್ನು ಉಚ್ಚರಿಸಿ ಕಮಂಡಲುವಿನಲ್ಲಿಯ ತೀರ್ಥೋದಕವನ್ನು ಗೊಜ್ಜಲು ಹಗ್ಗಬಿಗಿದ ಆ ಹೆಣವು ಹರಿದಾಡ ತೊಡಗಿತು.

ನೆರೆದ ಜನರೆಲ್ಲರೂ ತಮ್ಮ ಪಂಚ ಪ್ರಾಣಗಳನ್ನೂ ತಮ್ಮ ಕಣ್ಣು ತುದಿಗೆ ತುದು ಈ ಕೌತುಕವನ್ನು ನಿರೀಕ್ಷಿಸುತ್ತಿದ್ದರು. ಶ್ರೀ ಶ್ರೀಗಳವರ ಮಂತ್ರೋಚ್ಚಾರಣೆ ಹಾಗೂ ತೀರ್ಥೋದಕ ಪ್ರೋಕ್ಷಣೆಯಿಂದ ಮೃತನಾದ ಆ ರಾಮಾಚಾರ್ಯನು ಮೆಲ್ಲ ಮೆಲ್ಲನೆ ಕಣ್ಣು ತೆರೆದನು. ನೆರೆದವರೆಲ್ಲರೂ ಆ ಶವದ ಬಂಧನದ ದಾರಗಳನ್ನು ಸರಸರ ಹರಿದರು. ಮೃತ ರಾಮಾಚಾರ್ಯನು ನಿದ್ದೆಯಿಂದ ಎಚ್ಚತ್ತವರಂತೆ ನಿದಾನವಾಗಿ ಎದ್ದು ಶ್ರೀ ಬ್ರಹ್ಮಣ್ಯ ತೀರ್ಥರಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿದನು. ಆನಂದಭರಿತ ಳಾದ ಅವನ ಮಡದಿಗಂತೂ ಮಾತೇ ಬಾರದಾಯಿತು. ಮೂಕ ಮುಗ್ಧಳಾದ ಅವಳು ಯಮಪುರದಿಂದ ಬದುಕಿ ಬಂದ ಗಂಡನನ್ನೊಮ್ಮೆ ಸ್ವಾಮಿಗಳವರನ್ನೊಮ್ಮೆ ಎವೆ ಪಿಳು ಕಿಸದೆ ನಿಂತುಕೊಂಡಳು.

ಕೂಡಿದ ಜನರೆಲ್ಲರೂ ಬನ್ನೂರ ರಾಮಾಚಾರ್ಯನ ಈ ಪುನರ್ಜನ್ಮದ ಕೌತುಕ ವನ್ನು ಕಣ್ಣಾರೆ ಕಂಡು ಶ್ರೀ ಸ್ವಾಮಿಗಳವರ ಹೆಸರಿನಿಂದ ಎಲ್ಲರೂ ಜಯಘೋಷ ಮಾಡಿದರು.

ಅನಂತರ ಗಂಡಹೆಂಡದಿರಿಬ್ಬರೂ ಕೂಡಿ ಶ್ರೀ ಬ್ರಹ್ಮಣ್ಯ ಯೋಗಿಗಳಿಗೆ ಮತ್ತೆ ನಮಸ್ಕಾರವನ್ನು ಮಾಡಿದಾಗ ಆ ಸತೀ ಶಿರೋಮಣಿಗೆ ಆ ಶ್ರೀಗಳವರು " ಪುತ್ರ ಸೌಭಾಗ್ಯವತೀ ಭವ " ಎಂದು ಆಶೀರ್ವಾದ ಮಾಡಿದರು.

ನೆರೆದ ಜನರಿಗೆಲ್ಲ ಮತ್ತೂ ಕೌತುಕ ! ಶ್ರೀಗಳವರ ಆಶೀರ್ವಾದದಿಂದ ಸತ್ತು ಹೋದ ರಾಮಾಚಾರ್ಯನು ಮತ್ತೆ ಬದುಕಿ ಬಂದದ್ದೇನೋ ನಿಜ. ಆದರೆ ಮುಪ್ಪಿನ ಮುರುಕರಾದ ಜರಠ ದಂಪತಿಗಳಿಗೆ ಇನ್ನು ಮೇಲೆ ಸಂತಾನ ಪ್ರಾಪ್ತಿಯು ಎಂತಾಗುವದು!

ಆದರೆ ಶ್ರೀಗಳವರ ಮಾತೂ ಕೂಡ ಎಂದೂ ಹುಸಿಹೋಗುವಂತಹದಲ್ಲ. ಅವರ ಆಶೀರ್ವಾದವನ್ನು ಕೇಳಿದ ರಾಮಾಚಾರ್ಯ ದಂಪತಿಗಳು ಒಬ್ಬರ ಮುಖವನ್ನು

ಒಬ್ಬರು ನೋಡಿದರು. ಸ್ವಾಮಿಗಳವರ ಆಶೀರ್ವಾದದಿಂದ ಸತ್ತವರೇ ಮತ್ತೆ ಬದುಕಿ ಬಂದಾಗ ಇದ್ದವರಿಗೆ ಮಕ್ಕಳಾಗುವದು ಏನಾಶ್ಚರ್ಯ ಎಂಬ ಆತ್ಮ ವಿಶ್ವಾಸವು ಆ ಸಾಧ್ವೀಮಣಿಯ ಹೃದಯದಲ್ಲಿ ತುಂಬಿ ತುಳುಕುತ್ತಿತ್ತು.

ಆದುದರಿಂದಲೇ ಅವಳು ಗುರುಗಳ ಆಶೀರ್ವಾದವನ್ನು ಕೇಳಿ ಮತ್ತೆ ಪತಿ ಯೊಡನೆ ಆ ಯತಿವರ್ಯರ ಪಾದ ಕಮಲಗಳಿಗೆ ನಮಸ್ಕಾರ ಮಾಡಿದಳು. ಮತ್ತೆ ಅದೇ ಆಶೀರ್ವಾದ— "ಪುತ್ರ ಸೌಭಾಗ್ಯವತೀಭವ''. ಆಗ ಶ್ರೀ ಶ್ರೀಗಳವರ ಆಶೀರ್ವಚನವನ್ನು ಕೇಳಿ ರಾಮಾಚಾರ್ಯರು ಬೆಕ್ಕಸ ಬೆರಗಾಗಿ ನಿಂತುಕೊಂಡಿದ್ದನು. ಆಗ ಶ್ರೀ ಬ್ರಹ್ಮಣ್ಯ ಯೋಗಿಗಳು ಸ್ನಿಗ್ಧದೃಷ್ಟಿಯಿಂದ— ರಾಮಾಚಾರ್ಯ ನನ್ನ ಮಾತಿನ ಮೇಲೆ ಸಂದೇಹ ಬೇಡ. ನೀನು ಮರಣಹೊಂದಿದಾಗ ನಿನ್ನ ಮಡದಿಗೆ ನಾನು ಮಾಡಿದ ಸೌಭಾಗ್ಯ ಆಶೀರ್ವಚನವನ್ನು ಆ ಸ್ವಾಮಿಯು ಸತ್ಯವನ್ನಾಗಿ ಮಾಡಿದ್ದಾನೆ. ಅಂದ ಬಳಿಕ ಈ ಸಂತಾನಾಶೀರ್ವಾದವನ್ನು ಕೂಡ ಸತ್ಯವನ್ನಾಗಿ ಮಾಡುವ ಹೊಣೆ ಆ ಶ್ರೀ ಹರಿಯ ಮೇಲೆಯೇ ಇದೆ.

ಆದರೆ ನೀವು ನನಗೀಗ ಒಂದು ವಚನ ಕೊಡಬೇಕು— ನಿಮಗೆ ಹುಟ್ಟುವ ಮೊದಲನೇ ಮಗುವನ್ನು ನನಗೆ ತಂದು ಒಪ್ಪಿಸಬೇಕು.

"ಪೂರ್ವ ಪೂರ್ವಂ ದೇಹಿ ಮಹ್ಯಂ ದ್ವಿತೀಯೇನ ಸುಖಂ ವಸ"

ಪ್ರಥಮ ಪುತ್ರನನ್ನು ನನಗೆ ಕೊಟ್ಟು, ಮುಂದಿನ ಎರಡನೆಯ ಮಗನನ್ನು ನಿನ್ನ ವಂಶಾಭಿವೃದ್ಧಿಗಾಗಿ ಇಟ್ಟುಕೋ.

ಮುಪ್ಪಿನ ಮುದುಕರಾಗುವವರೆಗೂ ಮಕ್ಕಳ ಮುಖವನ್ನೇ ನೋಡದ ಆ ರಾಮಾಚಾರ್ಯ ದಂಪತಿಗಳಿಗೆ ಶ್ರೀ ಶ್ರೀಗಳವರ ಮುಖದಿಂದ ಬಂದ ಸುಖಾಶೀರ್ವಾದವನ್ನು ಕೇಳಿ ತಮ್ಮ ಸೌಭಾಗ್ಯಕ್ಕೆ ಒಮ್ಮೆಲೇ ಶುಕ್ರದೆಶೆ ಬಂದಂತಾಯಿತು. ಜನ್ಮವೆಲ್ಲವೂ ಸಂತಾನದ ಚಿಂತೆಯಲ್ಲಿಯೇ ಕೊರಗಿ ಹೋದ ಅವರಿಗೆ ಒಂದಲ್ಲದಂತೆ ಎರಡು ಸಂತತಿಯನ್ನು ಆಶೀರ್ವದಿಸುವ ಸತ್ಯಸಂಧರಾದ ಶ್ರೀ ಶ್ರೀಗಳವರ ಹರಕೆಯು ಮತ್ತೆ ಆಶಾಂಕುರವನ್ನು ಹುಟ್ಟಿಸಿತು. ಅವರು ಆನಂದದಿಂದ ಶ್ರೀಗಳವರ ಕರಾರಿಗೆ ಒಪ್ಪಿಕೊಂಡು ಅವರ ಆಶೀರ್ವಾದವನ್ನು ಪಡೆದು ಅವರಿಗೆ ಭಿಕ್ಷೆ, ಪಾದಪೂಜೆ ಮೊದಲಾದ ಮರ್ಯಾದೆಯನ್ನು ಮಾಡಿ ತಮ್ಮ ಸ್ಥಳಕ್ಕೆ ತೆರಳಿದರು.

ಇಂಥ ಮಹಾನುಭಾವರ ಆಶೀರ್ವಚನವು ಅದೆಂತು ಸುಳ್ಳಾದೀತು. ವರುಷ ತುಂಬುವಷ್ಟರಲ್ಲಿ ಆ ರಾಮ ರಮಣೀಯು ಮುತ್ತಿನಂಥ ಒಂದು ಗಂಡು ಮಗುವನ್ನು

ಹೆತ್ತಳು. ಆ ಕೂಸೇ ಮುಂದೆ ಬ್ರಹ್ಮಣ್ಯತೀರ್ಥರ ಅನುಗ್ರಹದಿಂದ ಶ್ರೀ ವ್ಯಾಸರಾಜ ತೀರ್ಥರು ಚಂದ್ರಿಕಾಚಾರ್ಯರು ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.

ನೋಡಿದಿರಾ ಬ್ರಹ್ಮಣ್ಯತೀರ್ಥರ ಮಹಾ ಮಹಿಮೆಯನ್ನು!

"ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನು ಧಾವತಿ"

ಎಂಬ ಕವಿಯ ಉಕ್ತಿಗೆ ಇಂಥ ಮಹಾನುಭಾವರೇ ಅಲ್ಲವೇ ಜೀವಂತ ದೃಷ್ಟಾಂತ!

ಹೀಗೆ ಶ್ರೀ ಬ್ರಹ್ಮಣ್ಯ ಯೋಗಿಗಳು ಮಹಾ ಬ್ರಹ್ಮಜ್ಞಾನಿಗಳಾಗಿ ಇಂಥ ಅನೇಕಾನೇಕ ಮಹಾ ಮಹಿಮೆಗಳನ್ನು ಮೆರೆದು ಶಾಸ್ತ್ರೀಯ ಪ್ರಪಂಚದ ಸೀಮಾ ಪುರುಷರಾದ ಶ್ರೀ ವ್ಯಾಸರಾಜತೀರ್ಥರಿಗೆ ವೇದಾಂತ ಸಾಮ್ರಾಜ್ಯದ ಭಾರವನ್ನು ವಹಿಸಿಕೊಟ್ಟು, ಅಬ್ಬೂರಲ್ಲಿಯೇ ವೃಂದಾವನಸ್ಥರಾದರು.

ಶ್ರೀ ಚಂದ್ರಿಕಾಚಾರ್ಯರಂಥ ಶಕಪುರುಷರನ್ನು ಮಾಧ್ವ ಸಮಾಜಕ್ಕೆ ಕಾಣಿಕೆಯಾಗಿ ನೀಡಿದ ಬ್ರಹ್ಮಋಷಿ ಬ್ರಹ್ಮಣ್ಯತೀರ್ಥರನ್ನು ಯಾವನಾದರೂ ಬ್ರಾಹ್ಮಣನು ಎಂದಾದರೂ ಮರೆಯಬಹುದೇ ?

ನಮೋ ಬ್ರಹ್ಮಣ್ಯ ದೇವಾಯ
ನಮೋ ಬ್ರಹ್ಮಣ್ಯ ಗುರುವೇ ॥

ಬ್ರಹ್ಮಜ್ಞಾನಿಗಳಾದ ಈ ಬ್ರಹ್ಮಣ್ಯ ತೀರ್ಥರ ಬಗೆಗೆ ಮಧ್ವರಾದ ನಾವು ಹೇಳುವ ದಕ್ಕಿಂತ ವಿಮತಿಯ ಮತಿಮಾನ್ ಕಪಿಯಾದ ಸೋಮನಾಥ ಪಂಡಿತನು ಹೇಳಿದುದನ್ನು ನೋಡಿದರೆ ಎಂಥವರಿಗೂ ಅವರ ವಿಷಯದಲ್ಲಿ ಭಕ್ತಿಯ ಉದ್ರೇಕವು ಆಗದೆ ಇರದು.

> ಬದ್ಧಮೂರ್ತಿಮಿವ ಮಧ್ವರಾದ್ಧಾಂತಂ ಮೂಲ ಕೋಶಮಿವ ಮಹಾ ಮಂತ್ರಾಣಾಂ, ವೈ(ಕಟ)ಕಮಿವ ವೈಷ್ಣವಾಚಾರ ರತ್ನಾನಾಂ, ಖಲಿನ ಮಿವ ದುರ್ಲಲಿಂತೇದ್ರಿಯ ಘೋಟಕಾನಾಂ, ನೀಡಮಿವ ನಿಯಮ ಶಕುಂ ತಾನಾಂ, ಚಂಕ್ರಮಣ ರಂಗಮಿವ ಷಡ್ದರ್ಶನಾನಾಂ, ವಿಜಯಸ್ತಂಭ ಮಿವ, ತತ್ವಜ್ಞಾನಸ್ಯ,, ಲಲಿತಮಿಲಿತಾಕೃತಿ ತತ್ತಾದೃಶ ಪೈ ಭ ವಂ ಯೋಗಿನ ಮೇನಮವಲೋಕ್ಯ ವಿಸ್ಮಯ ಕಬಲಿತ ಹೃದಯೋ ಭಗ್ವಾನು ಕಂಪಿನಾ ವ್ಯಾಸದೇವೇನ ಸ್ವಪ್ನ ಸಮಯಾನುಗ್ರಹೀತಸ್ಯ ಮಹೀಯಸೋ ಬ್ರಹ್ಮಣ್ಯ ಶಬ್ದಸ್ಯಾಯ ಮೇವಾರ್ಥ ಇತಿ ಚೇತಸಾ ನಿಶ್ಚಿಕಾಯ।

ಶ್ರೀ ಬ್ರಹ್ಮಣ್ಯ ತೀರ್ಥರು ಮೂರ್ತಿಮಂತ ಮಧ್ವಸಿದ್ಧಾಂತದಂತಿದ್ದರು. ಶ್ರೀ ಬ್ರಹ್ಮಣ್ಯ ತೀರ್ಥರಿಂದರೇ ಮಹಾ ಮಂತ್ರಗಳ ಒಂದು ಕೋಶ. ಶ್ರೀ ವಿಷ್ಣುವನ್ನು ಪ್ರಸನ್ನಗೊಳಿಸುವ ಸದಾಚಾರವೆಂಬ ರತ್ನಗಳ ಮಣಿಕಾರ. ಇಂದ್ರಿಯಗಳೆಂಬ ಎಟ್ಟೆ ಕುದುರೆಗಳನ್ನು ಬಿಗಿ ಹಿಡಿಯುವ ಒಂದು ಕಡಿವಾಣ. ಯಮ ನಿಯಮಗಳೆಂಬ ಹಕ್ಕಿಗಳು ಬೀಡು ಬಿಟ್ಟ ಒಂದು ಗೂಡು. ಷಡ್‌ದರ್ಶನಗಳು ಅಂಬೆಗಾಲಿಡುವ ಒಂದು ರಂಗ ಭೂಮಿ. ತತ್ವಜ್ಞಾನದ ಒಂದು ಗೆಲವು ಗಂಬ. ಇಂಥ ಗುಣ ಅಂಥ ಆಕಾರಗಳು ಈ ಒಂದು ತಾಣದಲ್ಲಿ ಲಲಿತಮಿಲಿತವಾಗಿ ಮಧುರ ಮೇಲನವನ್ನು ಹೊಂದಿ ಈ ತರಹದ ಅಧ್ಯಾತ್ಮ ವೈಭವವನ್ನು ಉದ್ದೀಪನ ಗೈದಿದ್ದವು. ಈ ಮಹಾ ಯೋಗಿಗಳನ್ನು ನೋಡಿದಾಗ ಬಲ್ಲಣ ಸುಮತಿಗೆ ತನ್ನ ಕನಸಿನಲ್ಲಿ ವೇದವ್ಯಾಸ ದೇವರು ಬಂದು ಬ್ರಹ್ಮಣ್ಯ ತೀರ್ಥ ಎಂದು ಉಚ್ಚರಿಸಿದ ಶಬ್ದಕ್ಕೆ ಇವರೇ ಅರ್ಥ ಎಂದು ನಿಶ್ಚಯವಾಯಿತು.

ಶ್ರೀ ಸೋಮನಾಥ ಕವಿಯ ವ್ಯಾಸಯೋಗಿ ಚರಿತ ಎಂಬ ಚಂಪು ಪ್ರಬಂಧದಲ್ಲಿಯ ಈ ಬಣ್ಣನೆಯನ್ನು ಓದಿದಾಗ ಶ್ರೀ ಬ್ರಹ್ಮಣ್ಯ ತೀರ್ಥರ ಬಗ್ಗೆ ಭಕ್ತ್ಯುದ್ರೇಕವಾಗಿ ಕೈಗಳು ತಾವಾಗಿ ಮುಗಿಯುತ್ತವೆ. ತಲೆ ಬಾಗುತ್ತದೆ. ಹೃದಯವು ತುಂಬಿ ಬರುತ್ತದೆ.



## ದಾಸಸಾಹಿತ್ಯಕ್ಕೆ ಶ್ರೀಕಾರ ಹಾಕಿದ

# ಶ್ರೀಪಾದರಾಜರು



ಶಬ್ದಬ್ರಹ್ಮದಲ್ಲಿ ನಿಷ್ಣಾತರಾಗಿ ನಾದ ಬ್ರಹ್ಮನಲ್ಲಿ ಲೀನರಾಗಿ ಅನ್ನಬ್ರಹ್ಮನ ಪೂರ್ಣಾನುಗ್ರಹಕ್ಕೆ ಪಾತ್ರರಾದ ಬ್ರಹ್ಮರ್ಷಿಗಳೆಂದರೆ ಶ್ರೀಪಾದರಾಜರು. ಶ್ರೀಪಾದರಾಜರ ನಾಮಧಾಮಗಳ ನೆನಪಾದರೂ ಸಾಕು. ಎಂಥ ಕಾಡು ನಾಡಿನಲ್ಲಿದ್ದರೂ ಮೃಷ್ಟಾನ್ನ ಭೋಜನ ಲಭ್ಯವಾಗುವದು ಎಂದ ಹಿರಿಯರು ಹೇಳುವದುಂಟು. ಆ ಮಹನೀಯರ ಹೆಸರೇ ಒಂದು ಅಭ್ಯರ್ಥಿಗಳಿಗೆ ಅಕ್ಷಯಪಾತ್ರವಿದ್ದಂತೆ. ಅವರ ಅನುಗ್ರಹವಾದರೆ ಅನ್ನಪೂರ್ಣಾ ಪ್ರಸನ್ನ ಆದಂತೆಯೇ ಸರಿ.

ಶ್ರೀಪಾದರಾಜರು ಅನ್ನಪೂರ್ಣರಾದಂತೆ ಜ್ಞಾನಪೂರ್ಣರೂ ಆಗಿದ್ದರು. ಅವರು ಬರೆದ "ವಾಗ್ವಜ್ರಹಾರ" ಎಂಬ ಶಾಸ್ತ್ರೀಯ ಉದ್ಗ್ರಂಥವು ಅವರ ಶಬ್ದಬ್ರಹ್ಮ ನೈಪುಣ್ಯವನ್ನು ಎತ್ತಿ ತೋರುತ್ತದೆ. ಅತ್ಯಂತ ಕಠಿಣ ಹಾಗೂ ಗಹನ ಗಂಭೀ

ರಾರ್ಥವುಳ್ಳ ಜಯತೀರ್ಥರ ಟೀಕಾ ಗ್ರಂಥಗಳಿಗೆ ಪ್ರಾಯಃ ಶ್ರೀಪಾದರಾಯರೇ ಮೊಟ್ಟಮೊದಲಿನ ಟಿಪ್ಪಣಿಕಾರರಾಗಿದ್ದಾರೆ. ಟೀಕಾಗ್ರಂಥದ ಭಾವಬಂಧುರತೆಯನ್ನು ಸುಗಮ ಸುಂದರವಾದ ಶಾಸ್ತ್ರೀಯ ಶೈಲಿಯಲ್ಲಿ ಎಲ್ಲರಿಗೂ ಮನಂಬುಗುವ ರೀತಿಯಿಂದ ತಿಳಿಸಿ ಹೇಳುವ ಹೊಸ ಹೆದ್ದಾರಿಯೊಂದನ್ನು ಪ್ರಥಮತಯಾ ಕಂಡು ಹಿಡಿದ ಶ್ರೇಯಸ್ಸು ಈ ಮಹನೀಯರಿಗೇ ಸಲ್ಲುತ್ತದೆ. ಮಾರ್ಗದರ್ಶಿ ಮಹರ್ಷಿಗಳಾದ ಈ ಮಹನೀಯರು ತೋರಿದ ದಾರಿಯಲ್ಲಿ, ಬೀರಿದ ಬೆಳಕಿನಲ್ಲಿ ಮುನ್ನಡೆದು ಶ್ರೀ ವ್ಯಾಸ ರಾಜರೂ, ವಾದಿರಾಜರೂ, ರಾಘವೇಂದ್ರರೂ, ರಘೂತ್ತಮರೂ ಮತ್ತು ಇನ್ನೂ ಅನೇಕ ಟಿಪ್ಪಣಿಕಾರರು ಜ್ಞಾನಾಮೃತಪೂರ್ಣವಾದ ಈ ಮಾಧ್ವಸರೋವರದ ಆಳ ಅಗಲ ಗಾಂಭೀರ್ಯಗಳನ್ನು ಎತ್ತಿ ತೋರಿದ್ದಾರೆ.

ಹೀಗೆ ಶ್ರೀಪಾದರಾಜರು ಶಬ್ದಪ್ರಪಂಚದಲ್ಲಿ ರಾಜರು. ಶ್ರೀ ರಾಯರಂಥವರಿಗೆ ಮಾರ್ಗದರ್ಶಕರಾದಂತೆ ನಾದಪ್ರಪಂಚದಲ್ಲಿಯೂ ಚಂದ್ರಿಕಾಚಾರ್ಯರು, ಪುರಂದರ ದಾಸರು, ವಾದಿರಾಜರಂಥ ದಾಸ ಶ್ರೇಷ್ಠರಿಗೂ, ದಾಸ ಸಂಥದ ದಾರಿತೋರಿದ— ದೇಶಿಕೇಂದ್ರರಾಗಿದ್ದಾರೆ. ಇವರಿಗಿಂತ ಮೊದಲು ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ನರಹರಿತೀರ್ಥರು ಕೆಲವೊಂದು ಕನ್ನಡ ಹಾಡುಗಳನ್ನು ರಚಿಸಿದ್ದರೂ, ತಾರ ತಮ್ಯಕ್ಕೆ ಅನುಸಾರವಾಗಿ ಪದ-ಪದ್ಯಗಳನ್ನು ಸ್ವಯಂ ರಚಿಸಿ ಅವುಗಳನ್ನು ವೇದ- ಮಂತ್ರಗಳಂತೆ ಪ್ರತಿ ನಿತ್ಯವೂ ತಮ್ಮ ದೇವರ ಪೂಜೆಯ ವೇಳೆಯಲ್ಲಿ ಶಿಷ್ಯರೊಡನೆ ಸುಸ್ವರ ಕಂಠದಿಂದ ತಾವೂ ಹಾಡಿ-ಪಾಡಿ ಅವುಗಳಿಗೆ ಸಂಸ್ಕೃತದ ಸ್ತೋತ್ರ ಮಂತ್ರ ಗಳ ಸಮಾನ ಸ್ಥಾನಮಾನಗಳನ್ನು ಕೊಟ್ಟ ಕೀರ್ತಿ ಶ್ರೀಪಾದರಾಜರಿಗೇ ಸಲ್ಲುತ್ತದೆ.

ಸಂಸ್ಕೃತವನ್ನು ಬಿಟ್ಟು ಬೇರೆ ಭಾಷೆಯ ಶಬ್ದ ಆಡುವದೇ " ಅಬ್ರಹ್ಮಣ್ಯಂ " "ಅಬ್ರಹ್ಮಣ್ಯಂ" ಎಂದಂದಾಗ ಇಂಥ ಪೀಠಾಧಿಪತಿಗಳು ಅನಾರ್ಯ ಭಾಷೆಯಾದ ಕನ್ನಡದಲ್ಲಿ ಪದಗಳನ್ನು ಮಾಡುವದೂ ಅವುಗಳನ್ನು ಬೆಳಗ್ಗೆ, ಸಾಯಂಕಾಲ ಪೂಜೆಯ ವೇಳೆಯಲ್ಲಿ ಹಾಡುವದೂ ಒಂದು ಧೈರ್ಯದ ಮಾತೇ ಆಗಿತ್ತು.

ಆದರೆ ತಮಿಳು ದೇಶದಲ್ಲಿ ಆ ಭಾಷೆಯಲ್ಲಿಯೇ ಆಳ್ವಾರರು ಬರೆದ ಶ್ರೀವೈಷ್ಣವ ಪ್ರಬಂಧಗಳಿಗೆ ವೇದ ಸಮಾನವಾದ ಮಾನ ಮನ್ನಣೆಗಳು ದೊರೆತು ಅವುಗಳಿಂದ ಮನೆ-ಮನೆಗೂ ಸ್ತ್ರೀ-ಪುರುಷರಾದಿಯಾಗಿ ಎಲ್ಲ ಜಾತಿ ಜನಾಂಗಗಳಲ್ಲಿಯೂ ವಿಷ್ಣು ಭಕ್ತಿ ಪ್ರಸಾರವಾದದ್ದನ್ನು ತಮ್ಮ ತಮಿಳು ನಾಡಿನ ಸಂಚಾರದಲ್ಲಿ ಕಂಡುಕೊಂಡ ಶ್ರೀಪಾದರಾಜರೂ ಕನ್ನಡ ದೇಶದಲ್ಲಿಯೂ ಅಂಥ ಜ್ಞಾನ ಭಕ್ತಿ ಪ್ರಸಾರಕವಾದ ಪದಪದ್ಯ ಪದ್ಧತಿಯನ್ನು ಪ್ರಸಾರದಲ್ಲಿ ತರಬೇಕೆಂದು ಸಂಕಲ್ಪಿಸಿದರು. ಈಗಾಗಲೇ ನರಹರಿತೀರ್ಥರು ಆ ಮಾರ್ಗದಲ್ಲಿ ಹತ್ತು ಹೆಜ್ಜೆ ಹಾಕಿದ್ದರಿಂದ ಶ್ರೀಪಾದರಾಜರಿಗೆ ದಾಸಸಾಹಿತ್ಯದಲ್ಲಿ ಮುಂದುವರೆಯುವದು ಇನ್ನೂ ಸುಗುಮವಾಯಿತು. ಅವರು

ಕನ್ನಡದಲ್ಲಿ ಬರೀ ದೇವರನಾಮುಗಳನ್ನು ಮಾತ್ರ ರಚಿಸದೇ ಭಾಗವತ ದಶಮುಸ್ಕಂದ ದಲ್ಲಿಯ ರಸೋತ್ಕಟ ಸಂದರ್ಭಗಳೆನಿಸಿದ— ಗೋಪಿಗೀತ, ಭ್ರಮರಗೀತ, ಹಾಗೂ ವೇಣುಗೀತೆಗಳನ್ನೂ ಕನ್ನಡದಲ್ಲಿ ಮೂಲದ ಅರ್ಥಸೌಂದರ್ಯ, ನಾದಮಾಧುರ್ಯ, ಭಾವಕೋಮಲತೆಗಳಾವುದಕ್ಕೂ ಚ್ಯುತಿ ಬಾರದಂತೆ ಸರಸ ಸುಂದರವಾಗಿ ಭಾಷಾಂತ ರಿಸಿ ಕನ್ನಡದಲ್ಲಿ ಆಧ್ಯಾತ್ಮಿಕ ಖಂಡ ಕಾವ್ಯ ಪರಂಪರೆಗೂ ಮಂಗಳ ನಾಂದಿಯನ್ನು ಎತ್ತಿದರು. ಹೀಗೆ ಕನ್ನಡ ಭಕ್ತಿಗೀತ, ಭಕ್ತಿಕಾವ್ಯಗಳಿಗೂ, ಸಂಸ್ಕೃತ ಟೀಕಾಟಿಪ್ಪಣಿ ಗಳಿಗೂ ಶ್ರೀಪಾದರಾಜರು ಆದ್ಯಪುರುಷರಾಗಿ ದಾಸಪಂಥದ ಬೆಳವಣಿಗೆಗೂ ವ್ಯಾಸ ಕೂಟದ ಉತ್ಕರ್ಷಕ್ಕೂ ಭಕ್ತಿಮಾರ್ಗ ಪ್ರಸಾರಣೆಗೂ ಪ್ರೇರಣಾಪ್ರದಾತೃಗಳಾದ ಕಾರಣಪುರುಷರಾದರು.

ಶ್ರೀಪಾದರಾಜರು ಹೀಗೆ ಶಬ್ದಬ್ರಹ್ಮ ನಾದಬ್ರಹ್ಮಗಳಲ್ಲಿ ಪರಿನಿಷ್ಠಿತರಾಗಿ ಪರ ಬ್ರಹ್ಮನ ಪರಮ ಪ್ರಸಾದಕ್ಕೆ ಪಾತ್ರರಾಮುದರಿಂದಲೇ ಉತ್ತರಾದಿ ಮಠದ ಪೀಠ ಪರಂಪರೆಯಲ್ಲಿ ಸುಪ್ರಸಿದ್ಧರಾದ ಶ್ರೀ ರಘುನಾಥತೀರ್ಥ ಶ್ರೀಸ್ವಾಮಿಗಳವರು ಅವರಿಗೆ ಉಳಿದ ಸನ್ಯಾಸಿಗಳೆಲ್ಲರೂ ಬರೀ "ಶ್ರೀಪಾದ" ರಾದರೆ ನೀವು "ಶ್ರೀಪಾದಂಗಳವರಿಗೆಲ್ಲ ರಾಜರು" ಎಂದು ಬಹುಮಾನಪೂರ್ವಕವಾಗಿ ನುಡಿದರಂತೆ. ಅಪರೋಕ್ಷಜ್ಞಾನಿಗಳಾದ ರಘುನಾಥರು ದಿವ್ಯ ದೃಷ್ಟಿಯಿಂದ ಅವರ ಘನತೆಯನ್ನು ತಿಳಿದು ಇತ್ತ ಗೌರವದ ಬಿರುದಿನಿಂದಲೇ ಅವರು ಅಂದಿನಿಂದ ಶ್ರೀಪಾದರಾಜರೆಂದೇ ಕರೆಯಲ್ಪಡಹತ್ತಿದರು. ಇವರನ್ನು ಧ್ರುವಾಂಶರೆಂದು ಅನೇಕ ಅಪರೋಕ್ಷ ಜ್ಞಾನಿಗಳು ಕರೆದಿದ್ದಾರೆ.

ಶ್ರೀಪಾದರಾಜರ ಮೊದಲಿನ ಹೆಸರು ಲಕ್ಷ್ಮೀನಾರಾಯಣ ಯೋಗಿಗಳೆಂದಿತ್ತು. ಚನ್ನಪಟ್ಟಣ ತಾಲೂಕಿನ ಹತ್ತಿರ ತೆಂಗಿನ ತೋಟದಲ್ಲಿ ಮನೆಮಾಡಿಕೊಂಡಿದ್ದ ಶೇಷ ಗಿರಿ ಆಚಾರ್ಯರಿಗೆ ಗಿರಿಯಮ್ಮ ಎಂಬ ಸಾಧ್ವೀಮಣಿಯಲ್ಲಿ ಲಕ್ಷ್ಮೀನಾರಾಯಣನ ಜನನವಾಯಿತು. ಇದೇ ಬಾಲಕನೇ ಮುಂದೆ ಶ್ರೀಪಾದರಾಜ ಎಂಬ ಹೆಸರಿನಿಂದ ವಿಶ್ವವಿಖ್ಯಾತನಾದನು. ಈ ಬಾಲಕ ಚಿಕ್ಕವನಿದ್ದಾಗಲೇ ಕಲ್ಲು–ಮಣ್ಣುಗಳಿಂದ ದೇವರ ಮೂರ್ತಿಗಳನ್ನು ಮಾಡಿ ಗೆಳೆಯರನ್ನು ಕರಕೊಂಡು ಪೂಜಿಸಿ ಹಾಡು ಹಾಡಿ ಧ್ಯಾನ ಮಾಡಿ ಗಾನದಲ್ಲಿ ಮೈಮರೆಯುತ್ತಿದ್ದನಂತೆ.

ಈ ಚಿಕ್ಕಬಾಲಕನ ಅಸಾಧಾರಣವಾದ ಧಾರಣಾಶಕ್ತಿ, ಪ್ರತಿಭಾವಿಶೇಷ, ಭಕ್ತಿ ಭಾವ ಮುಂತಾದವುಗಳನ್ನು ಕಂಡು ಪ್ರಸನ್ನರಾದ ಪದ್ಮನಾಭತೀರ್ಥರ ಪೀಠಾಧಿಷ್ಠಿತ ರಾದ ಶ್ರೀ ಸ್ವರ್ಣವರ್ಣತೀರ್ಥರು ಅವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ತಮ್ಮ ಅಂತ್ಯ ಕಾಲದಲ್ಲಿ ಶ್ರೀರಂಗ ಕ್ಷೇತ್ರದಲ್ಲಿ ಅವರಿಗೆ ಆಶ್ರಮವಿತ್ತು ಅನುಗ್ರಹಿ ಸಿದರು.

ಮುಂದೆ ಶ್ರೀಪಾದರಾಜರು ದಾಸಕೂಟದ ಕುಲದೇವತೆಯಾದ ವಿಠ್ಠಲನ ದರ್ಶನಕ್ಕೆಂದು ಪಂಢರಪುರಕ್ಕೆ ಹೋಗಿದ್ದರು. ಅಲ್ಲಿ ವಿಠ್ಠಲನ ದರ್ಶನ ತೆಗೆದುಕೊಂಡು ಮನೆಗೆ ಬಂದು ಮಲಗಿದಾಗ ಅವರಿಗೆ ಒಂದು ಕನಸು ಬಿದ್ದಿತು. ಬೆಳಿಗ್ಗೆ ಎದ್ದ ಕೂಡಲೇ ಅವರು ನೇರವಾಗಿ ಶಿಷ್ಯರೊಂದಿಗೆ ಚಂದ್ರಭಾಗಾ ನದಿಗೆ ಹೋಗಿ ಅಲ್ಲಿ ಒಂದು ಸ್ಥಳದಲ್ಲಿ ಮಳಲರಾಶಿಯನ್ನು ಅಗಿಯಲಿಕ್ಕೆ ಶಿಷ್ಯರಿಗೆ ಆಜ್ಞೆ ಮಾಡಿದರು. ಅಲ್ಲಿ ಉಸುಕಿನ ಆಳದಲ್ಲಿ ಒಂದು ಬಂಗಾರದ ಪೆಟ್ಟಿಗೆಯು ದೊರಕಿತು. ಕೂಡಲೆಯೇ ಶ್ರೀಪಾದರಾಜರು ಭೀಮರಥಿಯಲ್ಲಿ ಮಿಂದು ಬಂದು ಆ ಸುವರ್ಣ ಸಂಪುಟದ ಮೇಲು ಮುಚ್ಚಳವನ್ನು ತೆರೆದರು. ಒಳಗೆ ಶ್ರೀ ರಂಗವಿಠ್ಠಲನ ಸುಂದರ ಪ್ರತಿಮೆಯು ಕಂಗೊಳಿಸುತ್ತಿತ್ತು. ಶ್ರೀಪಾದರಾಜರಿಗೆ ದೊಡ್ಡವಾದ ಒಂದು ನಿಧಿಯೇ ದೊರೆತಂತೆ ಸಂತೋಷವಾಗಿ ಮೈಯೆಲ್ಲ ರೋಮಾಂಚಿತವಾಗಿ ಆನಂದಬಾಷ್ಪ ಉದುರಹತ್ತಿದವು.

ಆನಂದತೀರ್ಥರು ಉಡುಪಿಯ ಕೃಷ್ಣನನ್ನು ತಲೆಯ ಮೇಲೆ ಹೊತ್ತುಕೊಂಡು ಬಂದಂತೆ ಶ್ರೀಪಾದರಾಜರೂ ರಂಗವಿಠ್ಠಲನನ್ನು ತಮ್ಮ ಮಸ್ತಕದ ಮೇಲಿಟ್ಟುಕೊಂಡರು.

"ಪಾಂಡುರಂಗ ಭವಭಂಗ ಪಾದಪಯೋಜೋದಿತ ಗಂಗ ।
ಪಾಂಡುರಂಗ ಕಂಸಾರೆ ತಾರಯ ಮಾಮಿಹ ಸಂಸಾರೆ "

ಎಂದು ಕೂಗುತ್ತ ಹಾಡುತ್ತ ಕುಣಿಯುತ್ತ ವಿಠ್ಠಲನ ಮಂದಿರಕ್ಕೆ ಬಂದರು. ಅಂದು ಸ್ವಾಮಿಗಳ ಸ್ವಪ್ನ ಸೂಚಿತನಾದ ರಂಗವಿಠ್ಠಲನಿಗೂ ಕೂಡಿಯೇ ಏಕಾಸನದ ಪೀಠದಲ್ಲಿಯೇ ಶ್ರೀಪಾದರಾಜರಿಂದ ಮಾನಸೋಪಚಾರ ಪೂಜೆಗಳು ನಡೆದವು.

ಅಂದಿನಿಂದಲೇ ಶ್ರೀಪಾದರಾಜರು ರಂಗವಿಠ್ಠಲ ಮುದ್ರಿಕೆಯಿಂದ ಕನ್ನಡ ಪದ್ಯಗಳನ್ನು ಕಟ್ಟಿ ಹಾಡಲು ಪ್ರಾರಂಭ ಮಾಡಿದರು. ತಮ್ಮಿಂದ ಪ್ರಾರಂಭವಾದ ದಾಸ ಸಾಹಿತ್ಯಕ್ಕೆ ವಿಠ್ಠಲನನ್ನೇ ಕುಲದೇವತೆಯನ್ನಾಗಿ ಮಾಡಿಟ್ಟರು. ಅವರ ಸೂಚನೆಯನ್ನೇ ಅನುಸರಿಸಿ ಬಂದ ಪಂಢರಪುರದ ವಿಠ್ಠಲನನ್ನು ತಮ್ಮ ಪದ್ಯಗಳ ಅಂಕಿತವನ್ನಾಗಿ ಮಾಡಿಕೊಂಡು ಪುರಂದರದಾಸ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸ, ಮನೋಹರದಾಸ ಮೊದಲಾದ ಅನೇಕ ದಾಸಶ್ರೇಷ್ಠರು ಪದ ಪದ್ಯ ಸುಳಾದಿ ಉಗಾಭೋಗ ಮೊದಲಾದವುಗಳನ್ನು ರಚಿಸಿದ್ದಾರೆ.

ಪ್ರತಿ ನಿತ್ಯವೂ ಪೂಜೆಯ ಕೊನೆಗೆ ಋಗ್ವೇದಾದಿ ಸೇವೆಗಳು ಮುಗಿದ ಬಳಿಕ

" ಸಂಗೀತ ಸೇವಾ ಪ್ರಿಯ ಸಂಗೀತ ಸೇವಾ ಮವಧಾರಯ'' ಎಂದ ಕೂಡಲೇ ಸ್ವತಃ ಶ್ರೀ ಶ್ರೀಪಾದರಾಜರೇ ಮಧುರ ಕಂಠದಿಂದ ಭಕ್ತಿಭಾವದಿಂದ ಪರವಶರಾಗಿ ಸ್ವ

ವಿರಚಿತ ಕನ್ನಡ ಪದ್ಯಗಳನ್ನು ಹಾಡುತ್ತಿದ್ದರು. ಆಗ ಅದಕ್ಕೆ ಸರಿಯಾಗಿ ಎಷ್ಟೋ ಜನರು ತಾಳ ಕಟ್ಟಿಕೊಂಡು ಕುಣಿಯುತ್ತಲಿದ್ದರು. ಜನರಿಗೆಲ್ಲ ಇದೊಂದು ನೋಡಲಿಕ್ಕೆ ಹಬ್ಬವಾದಂತೆಯೇ ಆಗುತ್ತಿತ್ತು. ಇದರಿಂದ ಆಸ್ತಿಕರಿಗೆ ಸಂಸ್ಕೃತದಷ್ಟೇ ಕನ್ನಡ ಪದ ಪದ್ಯಗಳ ಮೇಲೆಯೂ ಆದರ, ಅಭಿಮಾನ, ರುಚಿಗಳು ಹುಟ್ಟುವಂತಾಯಿತು.

ಒಂದು ರೀತಿಯಿಂದ ದಾಸ ಸಾಹಿತ್ಯದ ಅಧ್ವರ್ಯುಗಳಾದ ಶ್ರೀ ಪುರಂದರ ದಾಸರಗೆ ಮಹಾ ಕಾರ್ಯಕ್ಕೆ ಅನುಕೂಲವಾದ ವಾತಾವರಣವನ್ನು ನಿರ್ಮಾಣ ಮಾಡಿದವರೇ ಶ್ರೀಪಾದರಾಜರೆಂದು ಹೇಳಬಹುದು.

ಶ್ರೀಪಾದರಾಜರು ಮಾಧ್ವ ಸಮಾಜಕ್ಕಿತ್ತ ಅಮೂಲ್ಯ ಇನ್ನೊಂದು ಕಾಣಿಕೆ ಯೆಂದರೆ ಶ್ರೀ ವ್ಯಾಸರಾಜರು. ಬ್ರಹ್ಮಣ್ಯ ತೀರ್ಥರ ಶಿ ಷ್ಯ ರಾ ದ ವ್ಯಾಸರಾಜರಿಗೆ ನ್ಯಾಯ, ವೇದಾಂತ ಪಾಠ ಹೇಳಿ ಅವರನ್ನು ಶ್ರೀಖಂಡ ಭೂಖಂಡದಲ್ಲಿಯೇ ಅಪ್ರತಿಮ ಪಂಡಿತರೆಂದು ಜಯ ಡಿಂಡಿಮೆ ಹೊಡಿಸಿದವರು ಶ್ರೀಪಾದರಾಯರೇ-

ವ್ಯಾಸತ್ರಯ ಪ್ರಣೇತಾರರಾದ ಚಂದ್ರಿಕಾಚಾರ್ಯರು ಇವರ ವಿದ್ಯಾಶಿಷ್ಯರೆಂದ ಬಳಿಕ ಶ್ರೀಪಾದರಾಜರ ಶಾಸ್ತ್ರ ಪಾಂಡಿತ್ಯವು ಎಷ್ಟು ಪ್ರಚಂಡವಿದ್ದಿತೆಂಬುದನ್ನು ಎಲ್ಲರೂ ಊಹಿಸಬಹುದು. ವ್ಯಾಸರಾಜರು ಉತ್ತರ ದೇಶಕ್ಕೆ ಸಂಚಾರ ಮಾಡಿ ಅಲ್ಲಿಯ ಕಾಶಿ, ಮಿಥಿಲಾ ನವದ್ವೀಪ ಮು ೦ ತಾ ದ ಕಡೆಯ ಮಹಾ ಮಹಾ ಜಗಜಟ್ಟಿ ಗಳನ್ನೆಲ್ಲ ನ್ಯಾಯಶಾಸ್ತ್ರದಲ್ಲಿಯೂ ವೇದಾಂತದಲ್ಲಿಯೂ ಪರಾಭವ ಮಾಡಿ ಜಯಪತ್ರ ಗಳನ್ನು ಸಂಪಾದಿಸಿ ಉತ್ತರಾಖಂಡದಲ್ಲೆಲ್ಲ ಮಧ್ವ ಮತದ ಜಯಭೇರಿ ಹೊಡೆಸಿದರು. ಮತ್ತು ಗಂಗೇಶೋಪಾಧ್ಯಾಯರಿಂದ ಹೊಸದಾಗಿ ಪ್ರವರ್ತಿತವಾದ ನವ್ಯ ನ್ಯಾಯದ ಭವ್ಯ ಪರಿಷ್ಕಾರ ಪ್ರಣಾಲಿಕೆಯನ್ನು ಚನ್ನಾಗಿ ತಿಳಿದುಕೊಂಡು ಅದನ್ನು ಅಕ್ಷರಶಃ ಖಂಡಿಸಿ " ತರ್ಕತಾಂಡವ " ಎಂಬ ಉದ್ಗ್ರಂಥವನ್ನು ರಚಿಸಿದರು.

ಇವರ ಇಂಥ ಅಪ್ರತಿಮ ಪ್ರತಿಭಾ, ಪಾಂಡಿತ್ಯ ಪ್ರೌಢಿಮಾ ಪ್ರಕರ್ಷವನ್ನು ಕಂಡ ಔತ್ತರೇಯ ನೈಯ್ಯಾಯಿಕರೆಲ್ಲರೂ ಬೆರಳು ಕಚ್ಚಿದರು. ,ಅದರಲ್ಲಿಯೂ ಪಕ್ಷಧರ ಮಿಶ್ರನೆಂಬ ಪ್ರಕಾಂಡ ಪಂಡಿತನಂತೂ ಇಂಥ ಶಿಷ್ಯನನ್ನು ತಯಾರು ಮಾಡಿದ ಆ ಗುರುವಾದರೂ ಹೇಗಿರಬಹುದು ? ನೋಡೋಣವೆಂಬ ಕುತೂಹಲದಿಂದ ಮುಳ ಬಾಗಿಲ ವರೆಗೆ ಬಂದು ಶ್ರೀಪಾದರಾಜರ ದರ್ಶನವನ್ನು ತೆಗೆದುಕೊಂಡನಂತೆ. ಆಗ ಅವನು ಶ್ರೀಪಾದರಾಜರೆದುರು ಅವರ ಶಿಷ್ಯನ ದಿಗ್ವಿಜಯ ಸಮಾಚಾರ ತಿಳಿಸಿ—

"ಯದಧೀತಂ ತದಧೀತಂ ಯನ್ನಾಧೀತಂ ತದಪ್ಯಧೀತಂ
ಪಕ್ಷಧರ ವಿಪಕ್ಷಃ ನಾವೇಕ್ಷಿ ವಿನಾ ನವೀನ ವ್ಯಾಸೇನ "

“ಸ್ವಾಮಿ ! ಈ ಜಗತ್ತಿನಲ್ಲಿ ಪಕ್ಷಧರನಿಗೆ ವಿಪಕ್ಷಿಯರಿರಲೇ ಇಲ್ಲ. ಆದರೆ ಇಂದು ತಮ್ಮ ಶಿಷ್ಯನಾದ ನವೀನ ವ್ಯಾಸ ಮಾತ್ರ ·ನಾನು ಓಧಿದ್ದನ್ನೂ ಓದಿ ನಾನು ಓದದೆ ಇದ್ದದ್ದನ್ನೂ ಓದಿ ನನಗೊಬ್ಬ ಪ್ರಬಲ ಪ್ರತಿಕಕ್ಷಿಯಾಗಿದ್ದಾನೆ”ಎಂದು ತನ್ನ ಸೋಲನ್ನು ಒಪ್ಪಿಕೊಂಡನಂತೆ. ಒಂದು ದೃಷ್ಟಿಯಿಂದ ವಿಚಾರಿಸಿದರೆ ಚಂದ್ರಿಕಾಚಾರ್ಯರ ವ್ಯಾಸ ತ್ರಯದ ಪ್ರತಿ ಪಂಕ್ತಿಯಲ್ಲಿಯಲ್ಲಿಯೂ ಶ್ರೀಪಾದರಾಜರ ಪಾಂಡಿತ್ಯ ಪ್ರಭಾವ ಬಿದ್ದದು ಕಂಡುಬರದಿರದು. ಅನೇಕ ಸಂದರ್ಭಗಳಲ್ಲಿ ವ್ಯಾಸರಾಜರೂ ‘ ಗುರುಪಾದ ’ ಶಬ್ದದಿಂದ ಶ್ರೀಪಾದರಾಜರನ್ನು ಉಲ್ಲೇಖ ಮಾಡಿದ್ದುಂಟು. ಹೀಗೆ ಶ್ರೀಪಾದರಾಜರು ವ್ಯಾಸ ಕೂಟಕ್ಕೆ ತಮ್ಮ ಪ್ರಥಮ ಟಿಪ್ಪಣಿಯಿಂದ ಓಂಕಾರವನ್ನೂ ದಾಸ ಕೂಟಕ್ಕೆ ಶ್ರೀಕಾರ ವನ್ನೂ ಹಾಕಿದ ಪುಣ್ಯ ಪುರುಷರೆಂದು ಹೇಳಬಹುದು.



## ಕರ್ನಾಟಕ ಸಾಮ್ರಾಜ್ಯವನ್ನು ಕುತ್ತಿನಿಂದ ಪಾರು ಮಾಡಿದ

# ಶ್ರೀ ಚಂದ್ರಿಕಾಚಾರ್ಯರು



ಇತಿಹಾಸದಲ್ಲಿ ಕರ್ನಾಟಕದ ಕೀರ್ತಿಯನ್ನು ಮೆರೆದ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿದವರು ಶ್ರೀ ವಿದ್ಯಾರಣ್ಯರು. ಆದರೆ ಅದನ್ನು ಅಳಿಗಾಲದಲ್ಲಿ ಉಳಿಸಿ, ಬೆಳೆಸಿ ಬೆಳಗಿಸಿದ ಶ್ರೇಯಸ್ಸು ಶ್ರೀ ವ್ಯಾಸರಾಜರಿಗೆ ಸೇರುತ್ತದೆ. ಕರ್ನಾಟಕ ಸಾಮ್ರಾಜ್ಯವು ವೈಭವದ ಪರಮೋಚ್ಚ ಶಿಖರವನ್ನು ಮುಟ್ಟಿದ್ದು ಶ್ರೀ ಕೃಷ್ಣದೇವರಾಯನ ಕಾಲದಲ್ಲಿ. ಅದಕ್ಕೆ ಅವನ ಕುಹುಯೋಗವನ್ನು ನಿವಾರಿಸಿದ ವ್ಯಾಸರಾಜರ ಅಧ್ಯಾತ್ಮ ತೇಜಸ್ಸೇ ಕಾರಣವಾಗಿದ್ದಿತು.

ವ್ಯಾಸಯೋಗಿಗಳಿಗೆ ಸೂರ್ಯಾಂಶರಾದ ಶ್ರೀ ಬ್ರಹ್ಮಣ್ಯತೀರ್ಥರಿಂದ ಆಶ್ರಮವಾಯಿತು. ಮುಳಬಾಗಲದ ಶ್ರೀಪಾದರಾಜರಲ್ಲಿ ಶಾಸ್ತ್ರಾಧ್ಯಯನವಾಯಿತು. ಗುರುಗಳಿಂದ ಇಂಥ ಪ್ರಚಂಡ ಪಾಂಡಿತ್ಯವನ್ನು ಪಡೆದ ಬಳಿಕ ದಕ್ಷಿಣೋತ್ತರ ದೇಶಗಳಲ್ಲೆಲ್ಲ ದಿಗ್ವಿಜಯಮಾಡಿ ಮಧ್ವ ಮತದ ವಿಜಯ ಧ್ವಜವನ್ನು ಭಾರತದ ತುಂಬ ಹಾರಿಸಿದರು.

ಹಿಂದೊಮ್ಮೆ ಜಯಧ್ವಜತೀರ್ಥರು ಬಂಗಾಲಾದಿ ಉತ್ತರ ದೇಶದಲ್ಲಿ ದ್ವೈತ ಮತದ ವಿಜಯ ದುಂದುಭಿಯನ್ನು ಹೊಡೆದು ಎಲ್ಲ ಕಡೆಗೂ ವೈಷ್ಣವ ಮತವನ್ನು

ಪ್ರಸಾರ ಮಾಡಿದ್ದರು. ಈಗ ಮತ್ತೆ ವ್ಯಾಸರಾಯರು ಅಲ್ಲಿಗೆ ಹೋಗಿ ನ್ಯಾಯಶಾಸ್ತ್ರದ ಕೇಂದ್ರವಾದ ನವ ದ್ವೀಪಕ್ಕೇ ಬಂದು ಅಲ್ಲಿಯ ತರ್ಕ ಕೇಸರಿ ಪಕ್ಷಧರಮಿಶ್ರನೊಡನೆ ನವ್ಯ ನ್ಯಾಯದಲ್ಲಿ ವಾಕ್ಯಾರ್ಥಮಾಡಿ ಅವನನ್ನು ಸೋಲಿಸಿದರು.

ಇದರಂತೆ ಕಾಶಿ, ಕಂಚಿ, ಮಧುರಾ, ಮಥುರಾ, ಕುಂಭಕೋಣ, ಕಾಶ್ಮೀರ ಮುಂತಾದ ದಕ್ಷಿಣೋತ್ತರ ದೇಶಗಳಲ್ಲೆಲ್ಲ ದ್ವೈತ ದುಂದುಭಿಯನ್ನು ಮೊಳಗಿಸಿ ಬಂದು ವಿಜಯಗರ ರಾಜನ ಬಿನ್ನಹದಂತೆ ಹಂಪೆಯಲ್ಲಿದ್ದು ಅಲ್ಲಿ ವ್ಯಾಸರಾಜ ವಿದ್ಯಾಪೀಠವನ್ನು ಸ್ಥಾಪಿಸಿವರು. ಇದರಲ್ಲಿ ವಿಜಯೀಂದ್ರ, ವಾದಿರಾಜ, ನಾರಾಯಣಯತಿ, ಗೋವಿಂದ ತೀರ್ಥ, ವನಮಾಲಿಮಿಶ್ರರಂಥ, ಉದ್ದಂಡ ಪಂಡಿತರು ತಯಾರಾದರು. ಈ ವೇದಾಂತ ವಿಶ್ವವಿದ್ಯಾಲಯದ ಶಾಖೆಗಳನ್ನು ಇಡೀ ಭರತ ಖಂಡದ ತುಂಬ ಸ್ಥಾಪಿಸಿ ಅಲ್ಲೆಲ್ಲ ಒಬ್ಬ ಘನ ವಿದ್ವಾಂಸರನ್ನು ಪ್ರಧಾನಾಧ್ಯಾಪಕರನ್ನಾಗಿ ನಿಯಮಿಸಿದರು.

ಉತ್ತರ ಭಾರತದ ಹರಿದ್ವಾರದಲ್ಲಿ ಸತ್ಯನಾಥ, ಕಾಶಿಯಲ್ಲಿ ಜಯದೇವ, ಬಂಗಾಲದಲ್ಲಿ ಈಶ್ವರಸೂರಿ, ಗಯಾದಲ್ಲಿ ಹರಿಮಿಶ್ರ ಮುಂತಾದ ಪಂಡಿತ ಪ್ರಕಾಂಡರನ್ನೂ ದಕ್ಷಿಣ ಭಾರತದ ಕುಂಭಕೋಣದಲ್ಲಿ ವಿಜಯೀಂದ್ರರನ್ನೂ , ಉಡುಪಿಯಲ್ಲಿ ವಾದಿರಾಜ ರನ್ನೂ , ಮುಳಬಾಗಿಲದಲ್ಲಿ ಪ್ರಜ್ಞಾನಿಧಿಗಳನ್ನೂ , ಕಂಚಿಯಲ್ಲಿ ಶ್ರೀನಿವಾಸತೀರ್ಥರನ್ನೂ ಉಪಕುಲಪತಿಗಳನ್ನಾಗಿ ನಿಯಮಿಸಿವರು. ಹೀಗೆ ವ್ಯಾಸರಾಜ ವಿಶ್ವವಿದ್ಯಾಲಯವು ಸಮಗ್ರ ಭಾರತದಲ್ಲಿ ತನ್ನ ಅನೇಕ ಅಧೀನ ವಿದ್ಯಾಲಯಗಳನ್ನು ನಡೆಸಿ ಭಾರತದ ಇಂಥ ವ್ಯಾಪಕ ವಿಶ್ವವಿದ್ಯಾಲಯದ ಪ್ರಪ್ರಥಮ ಕುಲಪತಿಗಳಾದರು.

ತಿರುಪತಿಯ ವೆಂಕಟೇಶ ದೇವರನ್ನು ಹನ್ನೆರಡು ವರ್ಷ ಪೂಜೆಮಾಡಿ ಆ ದೇವಸ್ಥಾನದ ಆಡಳಿತ ಹಾಗೂ ಪೂಜಾ ಪದ್ಧತಿಯಲ್ಲಿ ಸುವ್ಯವಸ್ಥೆಯನ್ನುಂಟು ಮಾಡಿದರು. ಜನಸಾಮಾನ್ಯರ ಮನಸ್ಸಿಗೆ ವೇದ ವೇದಾಂತಗಳ ತಿರುಳು ತಿಳಿದು ಮುಟ್ಟಬೇಕೆಂಬ ಉದ್ದೇಶದಿಂದ ಕನ್ನಡದಲ್ಲಿಯೇ ಆಧ್ಯಾತ್ಮಿಕ ಗೀತಗಳನ್ನು ಬರೆಯಲಿಕ್ಕೆ ಪ್ರಾರಂಭಿಸಿ ದಾಸಕೂಟವನ್ನು ಸ್ಥಾಪಿಸಿ ಪುರಂದರದಾಸರು, ಕನಕದಾಸರಂಥ ಹರಿದಾಸ ಧುರೀಣರನ್ನು ತಯಾರಮಾಡಿ ಭಕ್ತಿ ಭಾಗೀರಥಿಯನ್ನು ದೇಶವಲ್ಲೆಲ್ಲ ಹರಡಿಸಿದರು. ಅವರ ಗುಣದಿಂದ ಲುಬ್ಧನಾಗಿ ಅವರ ಶಿಷ್ಯತ್ವ ವಹಿಸಿದ ಸೋಮನಾಥ ಕವಿಯು "ವ್ಯಾಸಯೋಗಿ ಚರಿತ" ಎಂಬ ಸಂಸ್ಕೃತ ಚಂಪೂ ಕಾವ್ಯ ಬರೆದು ಅದರಲ್ಲಿ ಅವರ ಜೀವನ ಚರಿತ್ರವನ್ನು ಸುಂದರವಾಗಿ ವಿವರಿಸಿದ್ದಾನೆ. ಹೀಗೆ ವ್ಯಾಸಕೂಟ, ದಾಸಕೂಟ ಗಳೆರಡರ ಅಧ್ವರ್ಯುಗಳಾಗಿ ನ್ಯಾಯಾಮೃತ, ಚಂದ್ರಿಕಾ, ತರ್ಕತಾಂಡವ, ಭೇದೋಜ್ಜೀವನ, ಮಂದಾರ ಮಂಜರಿ ಮುಂತಾದ ಪ್ರೌಢ ಗ್ರಂಥಗಳನ್ನು ಬರೆದರು. ಅವರ ಚಂದ್ರಿಕಾ ಗ್ರಂಥದಿಂದ ಅವರಿಗೆ ಚಂದ್ರಿಕಾಚಾರ್ಯರೆಂದೇ ಹೆಸರು ಬಂದಿದೆ.

ನ್ಯಾಯಾಮೃತದ ಮೇಲೆ ಅದ್ವೈತ ಸಿದ್ಧಿ, ತರಂಗಿಣಿ, ಬ್ರಹ್ಮಾನಂದಿ ಕಂಟಕೋದ್ಧಾರ ವನಮಾಲಾಮಿಶ್ರೀಯ, ಆಮೋದ, ಸೌಗಂಧ್ಯ, ವಿಮರ್ಶ ಮುಂತಾದ ಖಂಡನ ಮಂಡನ ಗ್ರಂಥಗಳ ಪರಂಪರೆ ಇನ್ನೂ ನಡೆದಿದೆ. ಹೀಗೆ ವ್ಯಾಸಕೂಟದ ಅಧ್ವರ್ಯುಗಳಾಗಿ ದಾಸಕೂಟದ ಧುರೀಣರಾಗಿ ಕೃಷ್ಣದೇವರಾಯನ ಕುಹಯೋಗ ನಿವಾರಣಾದಿಗಳಿಂದ ಕರ್ನಾಟಕ ರಾಜ್ಯದ ಪರಮೋತ್ಕರ್ಷದ ಕಾರಣ ಪುರುಷರಾಗಿ, ವ್ಯಾಸತ್ರಯದ ಕರ್ತೃಗಳಾಗಿ, ವಾದಿರಾಜ, ವಿಜಯೀಂದ್ರ, ಪುರಂದರದಾಸ, ಕನಕದಾಸರಂಥ ಮಾಧ್ವ ವಿಭೂತಿಗಳ ನಿರ್ಮಾಪಕರಾಗಿ ವ್ಯಾಸಸಮುದ್ರ, ತುಂಗಾ ಕಾಲುವೆಗಳಿಂದ ಕೃಷಿ, ವಾಣಿಜ್ಯ ವರ್ಧಕರಾಗಿ ಭಾರತದ ಪ್ರಮುಖ ದೇವಾಲಯದ ತಿರುಪತಿ ವೆಂಕಟೇಶ ದೇವಸ್ಥಾನದ ವ್ಯವಸ್ಥಾಪಕರಾಗಿ ವಲ್ಲಭಾಚಾರ್ಯ, ಸೋಮನಾಥ ಕವಿ ಮುಂತಾದ ವಿಮತೀಯ ಪಂಡಿತರ ಪೋಷಕರಾಗಿ ಉತ್ತರ ಹಿಂದುಸ್ತಾನದಲ್ಲಿಯೂ ಭಕ್ತಿ ಮಾರ್ಗ ಪ್ರಸಾರದ ಮೂಲಪುರುಷರಾಗಿ ಮೆರೆದ ವ್ಯಾಸವಿಭೂತಿಗಳು ಚಿರಸ್ಮರಣೀಯರಾಗಿದ್ದಾರೆ.



### ಭಾವಬೋಧಕಾರರಾದ

## ಶ್ರೀ ಶ್ರೀ ರಘೂತ್ತಮ ತೀರ್ಥರು

"ಸಚ್ಛಾಸ್ತ್ರಾಮಲಭಾವಬೋಧಕಿರಣೈಃ ಸಂವರ್ಧಯನ್ ಮಧ್ವಸತ್ ।
ಸಿದ್ಧಾಂತಾಬ್ಧಿಮನಂತ ಶಿಷ್ಯಕುಮುದವ್ರಾತಂ ವಿಕಾಸಂ ನಯನ್ ॥
ಉದ್ಭೂತೋ ರಘುವರ್ಯತೀರ್ಥ ಜಲಧೇಃ ತಾಪತ್ರಯಂ ತ್ರಾಸಯನ್ ।
ಯಸ್ತಂ ನೌಮಿ ರಘೂತ್ತಮಾಖ್ಯ ಶಶಿನಂ ಶ್ರೀ ವಿಷ್ಣು ಪಾದಾಶ್ರಯಮ್ ॥"

—ಶ್ರೀ ವಿದ್ಯಾಧೀಶ ಸ್ವಾಮಿಗಳು

ಈ ಪುಷ್ಯ ಮಾಸದಲ್ಲಿ ಬರುವ ಮುಕ್ಕೋಟಿ ದ್ವಾದಶಿಯು ಪ್ರಾತಃಸ್ಮರಣೀಯ ಶ್ರೀ ಶ್ರೀ ರಘೂತ್ತಮತೀರರ್ಥ ಶ್ರೀಪಾದಂಗಳವರ ಪುಣ್ಯ ದಿನವಾದುದರಿಂದ ವೈಷ್ಣವರಿಗಲ್ಲ ಒಂದು ಪುಣ್ಯ ಪರ್ವಕಾಲವಾಗಿದೆ. ಉತ್ತರಾದಿ ಮಠಾಧಿಪತಿಗಳಲ್ಲಿ ಶಕ ಪುರುಷರೆನಿಸಿದ ಇವರ ವೃಂದಾವನವು ದಕ್ಷಿಣ ದೇಶದ ಪಿನಾಕಿನಿ ನದಿಯ ದಂಡೆಯ ಮೇಲೆ ತಿರುಕೊಯಿಲೂರು ಎಂಬ ಪ್ರಸಿದ್ಧ ಕ್ಷೇತ್ರದಲ್ಲಿರುತ್ತದೆ. ಅಲ್ಲಿ ಅನುಗಾಲವೂ ಶ್ರೀಗಳವರ ವೃಂದಾವನದ ಸೇವಾ ಸೂತ್ರಗಳು, ಆರಾಧನೆ, ಉಪಾಸನೆಗಳು ಅವಿಚ್ಛಿನ್ನವಾಗಿ ನಡೆಯುತ್ತಲಿದ್ದು ಇದೊಂದು ಪ್ರತಿ ಮಂತ್ರಾಲಯದಂತೆ ಪ್ರಸಿದ್ಧವಾಗಿದೆ. ಕಲಿಯುಗದ ಕಲ್ಪವೃಕ್ಷದಂತಿರುವ ಶ್ರೀ ಶ್ರೀಗಳವರ ವೃಂದಾವನದ ಸೇವೆಯಿಂದ ಪ್ರತಿ ವರ್ಷವೂ ಸಾವಿರಾರು ಜನರು ತಮ್ಮ ಇಷ್ಟಾರ್ಥಗಳನ್ನು ಪಡೆದು ಧನ್ಯರಾಗಿರುತ್ತಾರೆ. ಅನೇಕ ವೈದ್ಯ ಡಾಕ್ಟರುಗಳು ಅಸಾಧ್ಯವೆಂದು ಕೈಬಿಟ್ಟ ಎಷ್ಟೋ ರೋಗಿಗಳು ಶ್ರೀರಘೂತ್ತಮರ ಸೇವಾ ವೃಂದಾವನ ಪ್ರದಕ್ಷಿಣ ನಮಸ್ಕಾರ ಮೃತ್ತಿಕಾ ತೀರ್ಥಪ್ರಾಶನಗಳಿಂದ ಪರಿಹಾರವಾದದ್ದು ಅಸಂಖ್ಯ ಜನರ ಅನುಭವಕ್ಕೆ ಬಂದ ವಿಷಯವಾಗಿದೆ. ಮಕ್ಕಳುಗಳಿಗೆ ಜೇನೆ ಬಂದಾಗ ಶ್ರೀಗಳವರ ವೃಂದಾವನ ಪ್ರದಕ್ಷಿಣೆ ಮೃತ್ತಿಕಾ ಪ್ರಾಶನಾದಿಗಳನ್ನು ಮಾಡಿಸುವದರಿಂದ ಅವುಗಳಿಗೆ ಗುಣವಾಗುವ ಪ್ರಸಂಗಗಳು ಪ್ರಸಿದ್ಧವಾಗಿವೆ.

ಇಂಥ ದೀನ ದಯಾಳುಗಳಾದ ಶ್ರೀ ರಘೂತ್ತಮತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಹೆಸರು ರಾಮಚಂದ್ರಾಚಾರ್ಯರು. ಇವರು ಚಿಕ್ಕವರಿರುವಾಗಲೇ ಇವರ ಯೋಗ್ಯತೆಯನ್ನು ಕಂಡು ಉತ್ತರಾದಿಮಠದ ಶ್ರೀ ರಘುವರ್ಯತೀರ್ಥ ಶ್ರೀಪಾದಂಗಳವರು ಸನ್ಯಾಸಾಶ್ರಮಕೊಟ್ಟು ತಮ್ಮ ಉತ್ತರಾಧಿಕಾರಿಗಳನ್ನುಮಾಡಿದರು. ಬಾಲಬ್ರಹ್ಮಚಾರಿಗಳಾದ ಇವರು ಆಶ್ರಮವನ್ನು ಸ್ವೀಕರಿಸಿದ ಬಳಿಕ ಗುರುಗಳಲ್ಲಿಯೇ ವಿದ್ಯಾಧ್ಯಯನವನ್ನು ಕೈಕೊಳ್ಳಲು ಪ್ರಾರಂಭಿಸಿದರು. ಬಾಲ್ಯದಲ್ಲಿ ಇವರ ಮೇಧಾಶಕ್ತಿಯೂ,

ಕಾವ್ಯ ಪಾಂಡಿತ್ಯವೂ, ಸತ್ಯಸಂಧತೆಯೂ ಲೋಕೋತ್ತರವಾಗಿದ್ದವು. ಆಶ್ರಮವಾದ ಹೊಸತರಲ್ಲಿ ಪ್ರಾತಃಸ್ನಾನಮಾಡಿ ತಮ್ಮ ಆನ್ಹಿಕ ಜಪ, ತಪಗಳನ್ನು ಮುಗಿಸಿ ಬಾಲ ಯತಿ ರಘೂತ್ತಮರನ್ನು ಕರೆದು ನಿರ್ಮಾಲ್ಯತೀರ್ಥ ನೇವೇದ್ಯಕ್ಕಿಟ್ಟ ಖೊಬ್ಬರಿ, ಕಲ್ಲುಸಕ್ಕರೆ ಮಂತ್ರಾಕ್ಷತೆಗಳನ್ನು ಕೊಟ್ಟರು. ಆಗ ರಘೂತ್ತಮರು ನಿರ್ಮಾಲ್ಯತೀರ್ಥ ತೆಗೆದುಕೊಂಡು ಗುರುಪ್ರಸಾದವೆಂದು ಖೊಬ್ಬರಿ ಕಲ್ಲುಸಕ್ಕರೆಯನ್ನು ಬಾಯಿಯಲ್ಲಿ ಹಾಕಿಕೊಂಡು ತಮ್ಮ ಅಧ್ಯಯನವನ್ನು ಮುಂದುವರಿಸಿದರು. ಅಂದು ಮಧ್ಯಾಹ್ನ ಗುರುಗಳು ಅವರಿಗೆ ಮೂಲ ರಾಮನ ಪೂಜಾ ಪದ್ಧತಿ ಪ್ರಕಾರಗಳನ್ನು ಚನ್ನಾಗಿ ತಿಳಿಸಿ ಕೊಡಬೇಕೆಂದು ಸಂಕಲ್ಪಿಸಿ " ಇಂದು ನೀವೇ ರಾಮದೇವರ ಪೂಜೆಮಾಡಬೇಕೆಂದು " ಹೇಳಿದರು. ಆಗ ಸತ್ಯನಿಷ್ಠರಾದ ಶ್ರೀ ರಘೂತ್ತಮರು ತಮ್ಮ ಕಾವ್ಯಮಯವಾದ ವಾಣಿಯಲ್ಲಿ—

" ಇಂದೂ ನಾನು ರಾಮದೇವಸ್ಯ ಪೂಜಾಂ
ಮಾಡೋದಿಲ್ಲ ಖೊಬ್ಬರಿ ತಿಂದ ಪ್ರಯುಕ್ತ "

ಎಂದು ಸರಸ ಸುಂದರವಾಗಿಯೇ ಹೇಳಿದರಂತೆ. ಇವರ ಸತ್ಯವಾದಿತ್ವ ವೈರಾಗ್ಯ ಗಳಿಗೆ ಮೆಚ್ಚಿದ ಗುರುಗಳು ಇವರಿಗೆ ಮುಂದೆ ಸಂಸ್ಥಾನದ ಸರ್ವಾಧಿಕಾರವನ್ನು ಒಪ್ಪಿಸಿ ಆನೇಗುಂದಿಯಲ್ಲಿ ವೃಂದಾವನಸ್ಥರಾದರು.

ಜ್ಞಾನ ಲಾಲಸೆಯುಳ್ಳ ಈ ಬಾಲಯತಿಗಳು ತಮ್ಮ ಗುರುಗಳ ಅಪ್ಪಣೆಯ ಪ್ರಕಾರ ಅಭಿಮಾನಪಟ್ಟು ಶ್ರೀಮಠದ ಶಿಷ್ಯರಾದ ಶ್ರೀ ವರದರಾಜಾಚಾರ್ಯರಲ್ಲಿ ಶಾಸ್ತ್ರಾಧ್ಯಯನಕ್ಕೆ ನಿಂತರು. ಶ್ರೀ ವರದಾಚಾರ್ಯರು ಶ್ರೀ ರಘೂತ್ತಮರ ಪರಮ ಗುರುಗಳಾದ ಶ್ರೀ ರಘುನಾಥತೀರ್ಥರಲ್ಲಿ ಶಾಸ್ತ್ರಾಧ್ಯಯನಮಾಡಿ ಶ್ರೀ ಚಂದ್ರಿಕಾಚಾರ್ಯರ ಸಮ್ಮುಖದಲ್ಲಿ ವಾಕ್ಯಾರ್ಥಮಾಡಿ ಅವರ ಮೆಚ್ಚುಗೆಗೆ ಪಾತ್ರರಾಗಿದ್ದರು. ಅಂದು ತಮ್ಮ ಶಿಷ್ಯನ ವಾಕ್ಯಾರ್ಥ ಕೌಶಲ್ಯವನ್ನು ಕಂಡು ಸಂತೋಷಪಟ್ಟು ಶ್ರೀ ರಘುನಾಥತೀರ್ಥರು ಅವರಿಗೆ " ಆದ್ಯ " ಎಂಬ ಬಹುಮಾನದ ಪದವಿಯನ್ನಿತ್ತರು.

ತಮ್ಮ ಪರಮ ಗುರುಗಳ ಸಾಕ್ಷಾತ್ ಶಿಷ್ಯರಾದ ಆದ್ಯರಲ್ಲಿ ಶ್ರೀ ರಘೂತ್ತಮರು ಅಧ್ಯಯನ ಮಾಡುತ್ತಿರುವಾಗ ಒಂದು ಸಾಧನ ದ್ವಾದಶಿದಿನ ನದಿಗೆ ಸ್ನಾನಕ್ಕೆ ಹೋಗಿ ಅಲ್ಲಿಯೇ ತಮ್ಮ ಸ್ನಾನಾನ್ಹಿಕಗಳನ್ನು ಮಾಡುತ್ತ ಕುಳಿತ್ತಿದ್ದರು. ಇತ್ತ ಮನೆಯಲ್ಲಿ ತಾಸು ಹೊತ್ತು ಹಾದಿ ನೋಡಿ ಸ್ವಾಮಿಗಳು ಬಾರದ್ದರಿಂದ ದ್ವಾದಶಿ ಸಾಧನ ಮೀರುತ್ತ ದೆಂದು ಆದ್ಯರು ಊಟಕ್ಕೆ ಕುಳಿತರು. ಅಷ್ಟರಲ್ಲಿ ಶ್ರೀಗಳು ತಮ್ಮ ರಾಮದೇವರ ಪೂಜೆಯನ್ನು ಮುಗಿಸಿಕೊಂಡು ಬಂದರು. ಎಲ್ಲರೂ ಊಟಕ್ಕೆ ಕುಳಿತದ್ದನ್ನು ನೋಡಿ ಮರಳಿ ದೇವಸ್ಥಾನಕ್ಕೆ ಹೋದರು. " ಅತಿ ಪರಿಚಯಾದವಜ್ಞಾ " ಎಂಬಂತೆ ತಮ್ಮ ಈ ಪರಿಗ್ರಹ ವಾಸದಿಂದ ಸಂಸ್ಥಾನಕ್ಕೆ ಅವಮಾನವಾದಂತಾಯಿತು ಎಂಬ ಈ ವಿಚಾರ

ದಿಂದ ಚಿಂತಿಸುತ್ತ ಅವರು ದೇವಾಲಯದಲ್ಲಿ ವಿಶ್ರಮಿಸಿದರು. ಆಗ ಅವರ ಸ್ವಪ್ನದಲ್ಲಿ ಗುರುಗಳಾದ ಶ್ರೀ ರಘುವರ್ಯತೀರ್ಥರು ಬಂದು “ಇನ್ನು ನೀವು ಈ ಆದ್ಯ ಆಚಾರ್ಯರಲ್ಲಿ ಓದುವದನ್ನು ನಿಲ್ಲಿಸಿ ಸರ್ವಜ್ಞ ಸಿಂಹಾಸನದಲ್ಲಿ ಕುಳಿತು ಸ್ವಯಂ ಪಾಠ ಹೇಳಲು ಪ್ರಾರಂಭ ಮಾಡಿರಿ, ಮತ್ತು ಮಠವನ್ನು ಸಂಸ್ಥಾನ ಕ್ರಮದಿಂದ ಬೆಳಿಸಿ ಸಂಚಾರಮಾಡಿ ಶಿಷ್ಯಸಂಪತ್ತು ಹೆಚ್ಚಿಸಿರಿ” ಎಂದು ಅಪ್ಪಣೆ ಮಾಡಿದರು. ಮುಂದೆ ಅದರಂತೆ ಶ್ರೀ ರಘೂತ್ತಮರು ಸುಧಾದಿ ಗ್ರಂಥಗಳನ್ನು ನಿರರ್ಗಳವಾಗಿ ಪಾಠ ಹೇಳಹತ್ತಿದರು. ಇದನ್ನು ಕೇಳಿ ತಿಳಿದ ಶ್ರೀ ವರದಾಚಾರ್ಯರು ನನ್ನ ಸಹಾಯವಿಲ್ಲದೇ ಇವರು ಹೇಗೆ ಪಾಠ ಹೇಳುವರು ಎಂದು ಆಕ್ಷೇಪಿಸಿ ಕೆಲವು ಜನ ತಮ್ಮ ಪ್ರೌಢ ಶಿಷ್ಯರನ್ನು ರಘೂತ್ತಮರ ಬಳಿ ಕಳುಹಿಸಿದರು. ಆಗ ಶ್ರೀಗಳವರ ಹತ್ತರ ಖುಗ್ಭಾಷ್ಯ, ನ್ಯಾಯವಿವರಣ, ಅನುವ್ಯಾಖ್ಯಾನ ಪಾಠಗಳು ನಡೆದಿದ್ದವು. ಆ ಎಲ್ಲ ಪಾಠಗಳು ಆಗುವ ವರೆಗೆ ಕುಳಿತು ಕೇಳಿದ ಶ್ರೀ ವರದರಾಜಾಚಾರ್ಯರ ಶಿಷ್ಯರು ಈ ಬಾಲಸನ್ಯಾಸಿಗಳ ಅದ್ಭುತ ಪಾಂಡಿತ್ಯವನ್ನು ನೋಡಿ ಬೆರಳು ಕಚ್ಚಿದರು. ತಮ್ಮ ಗುರುಗಳಾದ ಶ್ರೀ ವರದ ರಾಜಾಚಾರ್ಯರಿಗೂ ಹೇಳಲು ಬಾರದೆ ನಿಂತು ಹೋದ ಎಷ್ಟೋ ವಿಷಯಗಳನ್ನು ಶ್ರೀಗಳವರು ಸುಲಲಿತವಾಗಿ ಬಿಡಿಸಿ ಹೇಳಿದ್ದನ್ನು ಕಂಡು ಇದು ಸರ್ವಜ್ಞಾಚಾರ್ಯರ ಪೀಠದ ಪ್ರಭಾವವೇ ಸರಿ ಎಂದೆಂದು ನಮಸ್ಕರಿಸಿ ತಮ್ಮ ಗುರುಗಳಿಗೆ ಎಲ್ಲ ಸಮಾಚಾರ ತಿಳಿಸಿದರು. ಆಗ ವರದರಾಜಾಚಾರ್ಯರು ಸ್ವತಃ ಬಂದು ಬಾಲ ಶ್ರೀಪಾದಂಗಳವರ ಪಾಠ ಕೇಳಿ ಅವರ ಪಾಂಡಿತ್ಯಕ್ಕೆ ಬೆರಗಾಗಿ ಎದ್ದು ನಿಂತು ಸಾಷ್ಟಾಂಗ ನಮಸ್ಕಾರ ಹಾಕಿ ನನ್ನ ಸರ್ವಾಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ಆಗ ಶ್ರೀಗಳವರು ಅವರ ತಪ್ಪನ್ನು ಮನ್ನಿಸಿ ಮರ್ಯಾದೆಮಾಡಿ ಕೊಟ್ಟು ಕಳಿಸಿದರು.

ಮುಂದೆ ಶ್ರೀಗಳವರು ತಮ್ಮ ಗುರುಗಳ ಸ್ವಪ್ನ ಸಂದೇಶದಂತೆ ಛತ್ರ, ಚಾಮರ, ಆನೆ, ಕುದುರೆ ದೊಡ್ಡ ಶಿಷ್ಯ ಪರಿವಾರದೊಂದಿಗೆ ಸಂಸ್ಥಾನೀ ರೀತಿಯಲ್ಲಿ ಮಠವನ್ನು ಬೆಳೆಯಿಸಿ ದೇಶ ವಿದೇಶ ಸಂಚಾರಮಾಡಿ ಅನೇಕ ಪರವಾದಿ ನಿಗ್ರಹ ಮಾಡಿದರು. ಇವರ ಕಾಲದಿಂದಲೇ ಮಠದಲ್ಲಿ ಚಿಕ್ಕ ನೈವೇದ್ಯ ಮಹಾ ನೈವೇದ್ಯಗಳು ಪ್ರಾರಂಭ ವಾಗಿ ಊರ್ರ ಜನರಿಗೆಲ್ಲ ಊಟ, ಕ್ಷೇತ್ರಭೋಜನ, ವಿದ್ವತ್ಸಂಭಾವನೆ, ದಾನ; ದಕ್ಷಿಣೆಗಳು, ಸುರುವಾದವು. ಶ್ರೀಗಳವರು ಯಾವದಾದರೊಂದು ಊರಿಗೆ ಬಂದರೆ ಯಾವದಾದರೂ ಮಹಾರಾಜರು ಬಂದಂತಾಗಿ ಅವರನ್ನು ಪುರಜನರೆಲ್ಲರೂ ಮೆರವಣಿಗೆಯಿಂದ ಕರೆತಂದು ಭಿಕ್ಷೆ ಪಾದಪೂಜೆಗಳಿಂದ ವಿಶೇಷವಾಗಿ ಸತ್ಕರಿಸುವ ಪ್ರಥೆ ಪ್ರಾರಂಭವಾಯ್ತು.

ಶ್ರೀ ಜಯತೀರ್ಥರ ತತ್ತ್ವಪ್ರಕಾಶಿಕಾ, ತತ್ವನಿರ್ಣಯ, ಪ್ರಮೇಯದೀಪಿಕಾ ಮೊದಲಾದ ಟೀಕಾ ಗ್ರಂಥಗಳಿಗೆ ಇವರು ಬರೆದ ಭಾವಬೋಧ ಎಂಬ ಹೆಸರಿನ ಪ್ರೌಢ ಟಿಪ್ಪಣೆಗಳು ಇವರ ಅತ್ಯದ್ಭುತ ಶಾಸ್ತ್ರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ.

ಸರ್ವೋತ್ಕೃಷ್ಟವಾದ ಈ ಭಾವಬೋಧ ಟಿಪ್ಪಣಿಗಳಿಂದಾಗಿ ಶ್ರೀ ರಘೂತ್ತಮರು ಭಾವಬೋಧಕಾರರೆಂದೇ ಹೆಸರಾಗಿದ್ದಾರೆ. ಇವಲ್ಲದೆ ಶ್ರೀಗಳವರು ಬೃಹತೀ ಸಹಸ್ರಕ್ಕೆ ಒಂದು ಭಾವಬೋಧ ಟೀಕೆ ಬರೆದು ವೇದೋಕ್ತಿಗಳ ನಿಜವಾದ ಭಾವ ಜನರಿಗೆ ಬೋಧವಾಗುವಂತೆ ಮಾಡಿದರು. ಅವರು ನ್ಯಾಯವಿವರಣಕ್ಕೆ ಬರೆದ ಬ್ರಹ್ಮ ಪ್ರಕಾಶಿಕಾ ಟಿಪ್ಪಣಿ ಆಚಾರ್ಯರ ಅಮೋಘ ಸೇವೆಯಾಗಿದೆ. ಜಯತೀರ್ಥರ ಟೀಕೆ ಇಲ್ಲದ ನ್ಯಾಯವಿವರಣದ ಮುಂದಿನಭಾಗ ಭಾವಬೋಧಕಾರರ ಟಿಪ್ಪಣಿ ಇಲ್ಲದೇ ಇದ್ದರೆ ಅಸರ್ವಜ್ಞರ್ದುಜ್ಞೇಯವೇ ಆಗುತ್ತಿತ್ತು. ಇದರಂತೆ ಅನುವ್ಯಾಖ್ಯಾನ ನ್ಯಾಯಮಾಲಾ ಎಂಬ ಪ್ರಬಂಧವು ಅನುವ್ಯಾಖ್ಯಾನ ನ್ಯಾಯ ವಿವರಣಗಳಲ್ಲಿ ಆಚಾರ್ಯರು ಹೇಳಿದ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳಿಗೆಲ್ಲ ಸೂತ್ರಾರೂಢತ್ವವು ಹೇಗೆ ಬರುವದೆಂಬುದನ್ನು ಸಮಂಜಸವಾಗಿ ಪ್ರತಿಪಾದಿಸಿದ್ದಾರೆ. ಅಂತೂ ದ್ವೈತ ಸಿದ್ಧಾಂತದ ವೇದಾಂತ ವೀಥಿಯಲ್ಲಿ ಭಾವಬೋಧ ಗ್ರಂಥಗಳು ಒಂದು ವಿಶಿಷ್ಟ ವ್ಯಾಖ್ಯಾಪ್ರಕ್ರಿಯೆಗೆ ಮೈಲುಗಲ್ಲುಗಳಾಗಿವೆ. ಈ ಭಾವಬೋಧೀ ಪದ್ಧತಿಗೆ ಶ್ರೀ ರಘೂತ್ತಮರೇ ಸೀಮಾ ಪುರುಷರು, ಶಕ ಪುರುಷರು ಮತ್ತು ಮಹಾ ಪುರುಷರು.

ತಿರಕೋಯಿಲೂರನಲ್ಲಿರುವ ಇವರ ವೃಂದಾವನವು ಭವ್ಯವಾಗಿದ್ದು ಕಟ್ಟಿ ಹತ್ತಿ ಪೂಜೆ ಮಾಡಬೇಕಾಗುತ್ತದೆ. ವೃಂದಾವನದ ಸುತ್ತಲೂ ಕಟಾಂಜನವಿದ್ದು ಮೇಲೆ ಚಪ್ಪರವಿರುವದಿಲ್ಲ. ಚಪ್ಪರ ಹಾಕಬೇಕೆಂದು ಪ್ರಯತ್ನಿಸಿದಾಗೆಲ್ಲ ಶ್ರೀಗಳು ಸ್ವಪ್ನದಲ್ಲಿ ಬಂದು ನನಗೇನೂ ಬೇಡ, ಮಳೆ-ಗಾಳಿ-ಬಿಸಿಲಿನಲ್ಲಿ ನಾನು ಹೀಗೆಯೇ ಕೂಡುವೆ ಎಂದು ಆದೇಶಿಸುವರಂತೆ. ಇಷ್ಟೊಂದು ವಿರಕ್ತ ಸ್ವಾಮಿಗಳು ವಿದ್ವೆಯಂತೆ ವೈರಾಗ್ಯವೂ, ತಪಶ್ಶಕ್ತಿಯೂ ಈ ಶ್ರೀಗಳವರಲ್ಲಿ ಸಮ್ಮಿಲಿತವಾಗಿವೆ. ಅವರ ಗುರು ಭಕ್ತಿ, ಸಿದ್ಧಾಂತ ದೀಕ್ಷೆ, ಶಿಷ್ಯವಾತ್ಸಲ್ಯಾದಿಗಳು ಅಸಾಧಾರಣವಾಗಿದ್ದವು. ಈ ಕೆಳಗಿನ ಪದ್ಯದಿಂದ ಅವರ ಪಾಂಡಿತ್ಯ ಕವಿತ್ವಗಳ ಜೊತೆಗೆ ಆಚಾರ್ಯರಲ್ಲಿಯೂ ಟೀಕಾಚಾರ್ಯರಲ್ಲಿಯೂ, ಅವರಿಗೆ ಇರುವ ಅನನ್ಯ ಭಕ್ತಿ ಶ್ರದ್ಧೆಗಳು ವ್ಯಕ್ತವಾಗುತ್ತವೆ.

ವಾಗ್ವಜ್ರೇಣಾಚ್ಛಿನದ್ಯೋಽ ಸಕೃದತಿಪಿಸದದ್ವಾದಿ ಸಂದೋಹ ಭೂಭೃತ್-
ಪಕ್ಷಾನ್ ಧೀ ಮಂದರೇಣ ಪ್ರಮಥನಮಕರೋತ್ ಮಧ್ವಸಿದ್ಧಾಂತವಾರ್ಧೇಃ।
ಸಂಪ್ರಾಪ್ಯಾಘೋ ಸುಧಾಂ ಯೋ ನಿಖಿಲ ಸುಮನಸಃ ಪಾಯಯಾಮಾಸ
ಮುಕ್ತ್ಯೈ ತಂ ಸೇವೆ ಶ್ರೀ ಜಯಾರ್ಯಂ ಸಪದಿ ಬಹುದೃಶಂ
ಸಂಯಮೀಂದ್ರಂ ನಮಾಮಿ

ಇದು ಅವರ ಚರಮ ಶ್ಲೋಕ.

ಭಾವಬೋಧಕೃತಂ ಸೇವೆ ರಘೂತ್ತಮ ಮಹಾ ಗುರುಂ ।
ಯಚ್ಛಿಷ್ಯಶಿಷ್ಯಶಿಷ್ಯಾದ್ಯಾಃ ಟಿಪ್ಪಣ್ಯಾಚಾರ್ಯ ಸಂಜ್ಞಿತಾಃ ॥

### ವೇದಾಂತ ವಾಚಸ್ಪತಿ

# ಶ್ರೀ ವಿಜಯೀಂದ್ರ ತೀರ್ಥರು



"ಚಾತುರ್ಯೈಕಾಕೃತಿರ್ಯಶ್ಚತುರಧಿಕ ಶತಗ್ರಂಥ ರತ್ನ ಪ್ರಣೇತಾ
ಧೂತಾರಾತಿಪ್ರಬಂಧ ಸ್ಫುಟವಿದಿತ ಚತುಃಷಷ್ಟಿ ವಿದ್ಯಾ ವಿಲಾಸ
ಸೋsಯಂನಃ ಶ್ರೀ ಸುರೇಂದ್ರವ್ರತಿವರ ತನಯೋs ದ್ವೈತ ಕೈವಾಸಯುಸ್ಸು
ಪುಷ್ಣಾತು ಶ್ರೀ ವಿಜಯೀಂದ್ರ ಸ್ತ್ರಿಭುವನ ವಿದಿತ. ಸರ್ವತಂತ್ರ ಸ್ವತಂತ್ರಃ"

—ಶ್ರೀ ಗುರುಗುಣಸ್ತವನಂ

ಶ್ರೀ ವಿಜಯೀಂದ್ರತೀರ್ಥರ ಮಹಾಮಹಿಮೆಯು ಎಂಥದೆಂಬುದು "ವಿಜಯೀಂದ್ರ ಕರಾಬ್ಜೋತ್ಥ ಸುಧೀಂದ್ರವರ ಪುತ್ರಕಾನ್" ಎಂಬ ಶ್ರೀ ಗುರುಸಾರ್ವಭೌಮರ ನಿರೂಪಣ

ದಿಂದಲೇ ತಿಳಿಯ ಬರುತ್ತದೆ. ಶ್ರೀ ವಿಜಯೀಂದ್ರತೀರ್ಥರು ಶ್ರೀ ರಾಘವೇಂದ್ರಸ್ವಾಮಿಗಳವರಿಗೆ ಆಶ್ರಮಕ್ರಮದಲ್ಲಿ ಮಾತ್ರ ಪರಮ ಗುರುಗಳಾಗಿರದೆ ವಿದ್ಯಾವೈಭವ ಗ್ರಂಥ ಕರ್ತೃತ್ವಾದಿಗಳಲ್ಲಿ ತಮ್ಮ ಗುರುಗಳಾದ ಶ್ರೀ ಸುಧೀಂದ್ರತೀರ್ಥರಿಗೆ ಗುರುಗಳಾದುದರಿಂದಲೂ ಪರಮ ಗುರುಗಳಾಗಿದ್ದಾರೆ. ಆದುದರಿಂದಲೇ ಶ್ರೀ ಪರಿಮಳಾಚಾರ್ಯರು ತಮ್ಮ ಗ್ರಂಥಗಳಲ್ಲಿ ಶ್ರೀ ಸುಧೀಂದ್ರತೀರ್ಥರನ್ನೂ, ಶ್ರೀ ವಿಜಯೀಂದ್ರತೀರ್ಥರನ್ನೂ "ಗುರುಪಾದರು. ಗುರುಪಾದರು" ಎಂದು ಬಹು ಭಕ್ತಿಯಿಂದ ಗೌರವಿಸುವುದಲ್ಲದೆ "ಗುರುಪಾದ ಕೃತಾಸ್ವಸ್ತಿ ಟೀಕಾತ್ವತ್ಯರ್ಥ ವಿಸ್ತರಾ" "ವಿಸ್ತರಸ್ತು ಗುರುಪಾದಕೃತ ನ್ಯಾಯಮೌಕ್ತಿಕ ಮಾಲಾಯ್ಯಾಂ ದ್ರಷ್ಟವ್ಯಃ" ಎಂದು ಮುಂತಾಗಿ ಗುರುಗಳನ್ನೂ ಪರಮ ಗುರುಗಳನ್ನೂ ಅತ್ಯಂತ ಆದರಾತಿಶಯ ಪೂರ್ವಕವಾಗಿ ಉಲ್ಲೇಖಮಾಡುತ್ತಾರೆ.

ಶ್ರೀ ವಿಜಯೀಂದ್ರತೀರ್ಥರು ಶ್ರೀ ಚಂದ್ರಿಕಾಚಾರ್ಯರ ಶಿಷ್ಯ ಸಂಪುಟದಲ್ಲಿಯ ಒಂದು ಅನರ್ಘ್ಯರತ್ನ. ಕರ್ಣಾಟಕ ಸಾಮ್ರಾಜ್ಯದ ರಾಜಧಾನಿಯಾದ ವಿಜಯನಗರದಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಶ್ರೀ ವ್ಯಾಸರಾಜರು ರಾಜಗುರುಗಳಾಗಿ ಅಲ್ಲಿ ಒಂದು ದರ್ಶನಶಾಸ್ತ್ರಗಳ ವಿಶ್ವವಿದ್ಯಾಲಯವನ್ನೇ ನಡೆಯಿಸುತ್ತಲಿದ್ದರು.

ಸಾಕ್ಷಾತ್ ವೇದವ್ಯಾಸರೇ ಅವತಾರ ಮಾಡಿದಂತಿದ್ದ ಶ್ರೀ ವ್ಯಾಸಯೋಗಿಗಳು ಭಾರತದ ಎಲ್ಲ ಕಡೆಗೂ ಅನೇಕ ವೇದಾಂತ ವಿದ್ಯಾಪೀಠಗಳನ್ನು ಸ್ಥಾಪಿಸಿ ವಿದ್ಯಾಕೇಂದ್ರವಾದ ವಿಜಯನಗರದ ವಿಶ್ವವಿದ್ಯಾನಿಲಯದಲ್ಲಿ ಹತ್ತುಸಾವಿರ ವಿದ್ಯಾರ್ಥಿಗಳಿಗೆ ಊಟ. ವಸತಿ ಸೌಕರ್ಯ ಮಾಡಿಕೊಟ್ಟು ಶಾಸ್ತ್ರ ಪಾಠ ಹೇಳುತ್ತಲಿದ್ದರು. ತಮ್ಮಲ್ಲಿ ಓದುವ ಅತ್ಯಂತ ಮೇಧಾಶಾಲಿಗಳಾದ ಕೆಲವು ವಿರಕ್ತ ವಿದ್ಯಾರ್ಥಿಗಳಿಗೆ ಅವರು ಪರಮ ಹಂಸಾಶ್ರಮ ಕೊಟ್ಟು ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು ಮುಂತಾಗಿ ಇಪ್ಪತ್ತುನಾಲ್ಕು ದೇವರ ಹೆಸರನ್ನಿಟ್ಟು ಸುಧಾ–ನ್ಯಾಯಾಮೃತ, ಚಂದ್ರಿಕಾದಿ ಗ್ರಂಥಗಳನ್ನು ನಿತ್ಯನಿರಂತರವೂ ಪಾಠ ಹೇಳುತ್ತಿದ್ದರು.

ಕೇಶವಾದಿ ಚತುರ್ವಿಂಶತಿ ಪರಮಹಂಸ ಶಿಷ್ಯರಲ್ಲಿ ಐದನೇಯವರಾದ ಶ್ರೀ ವಿಷ್ಣುತೀರ್ಥರೇ ಶ್ರೀ ವಿಜಯೀಂದ್ರತೀರ್ಥರು. ಇದರಂತೆ ಶ್ರೀ ವಾದಿರಾಜತೀರ್ಥರೂ ಪುರಂದರದಾಸರೂ, ಕನಕದಾಸರೂ, ಕುಮಾರವ್ಯಾಸ, ವಲ್ಲಭಾಚಾರ್ಯರೂ, ನಾರಾಯಣಯೋಗಿ ಮುಂತಾದ ಜ್ಞಾನಯೋಗಿ, ಭಕ್ತಿಯೋಗಿ ಮುಂತಾದ ರಸಯೋಗಿಗಳೂ ಆ ಸೌರವಲಯದ ಬೆಳಕಿನಲ್ಲಿ ಬೆಳಗುತ್ತಿದ್ದರು.

ವಿಷ್ಣುತೀರ್ಥರ ಪೂರ್ವಾಶ್ರಮದ ಹೆಸರು ವಿಠಲಾಚಾರ್ಯರು. ಇವರು ಶ್ರೀ ವ್ಯಾಸರಾಜರ ಅನುಗ್ರಹದಿಂದ ವೃದ್ಧ ತಂದೆ ತಾಯಿಗಳಿಗೆ ಪುತ್ರರಾಗಿ ಅವತರಿಸಿದ್ದು ಶ್ರೀ ವ್ಯಾಸಯೋಗಿಗಳ ಅನುಗ್ರಹದಿಂದ. ಚಂದ್ರಮನಂತೆ ದಿನೇ ದಿನೇ ವೃದ್ಧಿಗೊಳ್ಳುತ್ತ

ದರು. ಬಾಲ್ಯದಲ್ಲಿ ಚತುರ ಬಾಲಕ ವಿಠ್ಠಲನ ವಿಲಕ್ಷಣವಾದ ಬುದ್ಧಿ ತೀಕ್ಷ್ಣತೆ, ವಾಕ್ಪಟುತ್ವ, ಸ್ಮರಣ ಶಕ್ತಿಗಳನ್ನು ಕಂಡು ಅವರ ತಾಯಿ–ತಂದೆಗಳು ಆ ಮಗುವಿಗೆ ಉಪನಯನ ಮಾಡಿ ಮೊದಲೇ ಶ್ರೀ ವ್ಯಾಸರಾಜರಿಗೆ ವಚನವಿದ್ದಂತೆ ವಿಠ್ಠಲನನ್ನು ಅವರಿಗೆ ಒಪ್ಪಿಸಿಕೊಟ್ಟರು. ವಿಠ್ಠಲನು ವಿಜಯನಗರದ ಶ್ರೀ ವ್ಯಾಸರಾಜರ ವಿದ್ಯಾ ಪೀಠದಲ್ಲಿ ಅವರ ವಿಶೇಷ ತರಬೇತಿಯಲ್ಲಿ ವಿದ್ಯೆಯನ್ನಭ್ಯಸಿಸಹತ್ತಿದ್ದನು. ಸರ್ವಂಕಷ ಪ್ರತಿಭಾಶಾಲಿಯಾದ ವಿಠ್ಠಲನ ಇತರಾಸಾಧಾರಣವಾದ ಮೇಧಾವೈದುಷ್ಯಗಳನ್ನು ಕಂಡು ಚಕಿತರಾದ ಚಂದ್ರಿಕಾಚಾರ್ಯರು ಅವರನ್ನು ಮಹಾ ಸಂಸ್ಥಾನಾಧಿಪತಿಗಳನ್ನಾಗಿ ಮಾಡಲು ಬಯಸಿ ಅವರಿಗೆ ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಶಾಸ್ತ್ರ ಗಳನ್ನು ಪಾಠ ಹೇಳಿ, ಚತುಃಷಷ್ಠಿ ಕಲೆಗಳನ್ನು ಉಪದೇಶಿಸಿ ವಿದ್ವತ್ತಲ್ಲಜರನ್ನಾಗಿ ಮಾಡಿದರು.

ಇದೇ ವೇಳೆಗೆ ಶ್ರೀಮದಾಚಾರ್ಯ ಸಂಸ್ಥಾನದ ಶ್ರೀ ವಿಬುಧೇಂದ್ರ ತೀರ್ಥ ಪರಂಪರೆಯ ಶ್ರೀ ಸುರೇಂದ್ರತೀರ್ಥ ಶ್ರೀಪಾದಂಗಳವರು ಸಾಮ್ರಾಟ್ ಕೃಷ್ಣದೇವ ರಾಜನ ಆಹ್ವಾನದ ಪ್ರಕಾರ ಅಲ್ಲಿಗೆ ಬಂದು ವಿದ್ಯಾಪೀಠದ ಕುಲಪತಿಗಳೂ, ರಾಜ ಗುರುಗಳೂ ತಮ್ಮ ಪೂರ್ವಾಶ್ರಮ ಬಂಧುಗಳೂ ಆದ ಚಂದ್ರಿಕಾಚಾರ್ಯರ ಜೊತೆಗೆ ಕೆಲವು ದಿನ ವಾಸವಾಗಿದ್ದರು.

ಶ್ರೀ ಸುರೇಂದ್ರತೀರ್ಥರಿಗೆ ಶ್ರೀ ವ್ಯಾಸರಾಜರ ವಿಶ್ವವಿದ್ಯಾಲಯದ ಸಾವಿರಾರು ವಿದ್ಯಾರ್ಥಿಗಳಲ್ಲಿ ಅಸಾಧಾರಣವಾದ ಕೌಶಲ್ಯ, ಅಪರೂಪವಾದ ನಿರೂಪಣ ಶಕ್ತಿ, ಸರ್ವಂಕಷವಾದ ಪ್ರತಿಭಾಪ್ರಕರ್ಷ, ತಲಸ್ಪರ್ಶಿ ಪಾಂಡಿತ್ಯ, ಆಕರ್ಷಕ ವ್ಯಕ್ತಿತ್ವ, ವಿಲಕ್ಷಣ ವರ್ಚಸ್ಸು ಮೊದಲಾದ ಗುಣಗಳಿಂದ ವಿಷ್ಣುತೀರ್ಥರು ಒಳ್ಳೇ ಪ್ರಶಂಸನೀಯ ವ್ಯಕ್ತಿ ಎನಿಸಿತು. ಅವರು ತಮ್ಮ ಶಿಷ್ಯರಾಗಬೇಕೆಂಬ ಬಯಕೆ ಸುರೇಂದ್ರತೀರ್ಥರಲ್ಲಿ ಒಡ ಮೂಡಿತು. ತಮ್ಮ ಆಶಯವನ್ನು ವ್ಯಾಸರಾಜರಲ್ಲಿ ಬೇರೆ ಬೇರೆ ವಿಧಗಳಿಂದ ನಿರೂಪಿಸಿದಾಗ ಶ್ರೀ ವ್ಯಾಸರಾಜರು ಬಹಳ ಸಂತೋಷದಿಂದ ಅವರಿಗಾಗಿಯೇ ತಯಾರಿ ಸಿದ್ಧ ವಿಷ್ಣುತೀರ್ಥರನ್ನು ಸುರೇಂದ್ರತೀರ್ಥರಿಗೆ ಅರ್ಪಿಸಿ ಮಹೋಪಕಾರ ಮಾಡಿದರು.

ಶ್ರೀ ಸುರೇಂದ್ರತೀರ್ಥರು ವಿಷ್ಣುತೀರ್ಥರನ್ನು ಆನಂದದಿಂದ ಸ್ವೀಕರಿಸಿ ದಂಡ ಪಲ್ಲಟ ಮಾಡಿಸಿ, ಮಂತ್ರ–ಮುದ್ರಾಧಾರಣೆ, ಗುರೂಪದೇಶಾದಿಗಳಿಂದ ತಮ್ಮ ಶಿಷ್ಯ ರನ್ನಾಗಿ ಮಾಡಿಕೊಂಡು, "ಶ್ರೀ ವಿಜಯೀಂದ್ರತೀರ್ಥ"ರೆಂಬ ನಾಮಕರಣ ಪೂರ್ವಕ ಶ್ರೀ ಸರ್ವಜ್ಞ ಪೀಠದಲ್ಲಿ ಮಂಡಿಸಿ ಸಾಮ್ರಾಜ್ಯಾಭಿಷೇಕ ಮಾಡಿದರು. ಶ್ರೀ ವಿಜ ಯೀಂದ್ರರು ತಮ್ಮ ಹೆಸರಿಗೆ ತಕ್ಕಂತೆ ದೇಶ–ವಿದೇಶಗಳಲ್ಲೆಲ್ಲ ಸಂಚಾರ ಮಾಡಿ ವಾದ ವಿಜಯಮಾಡಿ ತಮ್ಮ "ವಿಜಯೀಂದ್ರ" ಎಂಬ ಹೆಸರನ್ನು ಸಾರ್ಥಕಗೊಳಿಸಿದರು.

ಅವರು ೧೦ಳ ಶಾಸ್ತ್ರೀಯ ಉದ್ಗ್ರಂಥಗಳನ್ನು ಬರೆದಿದ್ದು ಶ್ರೀ ರಾಘವೇಂದ್ರಸ್ವಾಮಿಗಳವರ ಮಠದ ಪೀಠಾಧೀಶರಾಗಿದ್ದ ಕೀರ್ತಿ ಶೇಷ ಪೂಜ್ಯ ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞಾನುಸಾರವಾಗಿ ಪ್ರಾರಂಭಿಸಲ್ಪಟ್ಟ ನಂಜನಗೂಡಿನ ಶ್ರೀ ಪರಿಮಳ ಪ್ರಕಾಶನ ಮಂದಿರದವರು ಶ್ರೀ ವಿಜಯೀಂದ್ರ ಯತೀಂದ್ರರ ಅನೇಕ ಗ್ರಂಥರತ್ನಗಳನ್ನು ಸಂಗ್ರಹಿಸಿ, ಸಂಶೋಧಿಸಿ ಈಗಾಗಲೇ ಅನೇಕ ಗ್ರಂಥಗಳನ್ನು ಪ್ರಕಾಶಪಡಿಸಿದ್ದು ಉಳಿದೆಲ್ಲ ಗ್ರಂಥಗಳನ್ನೂ ಕ್ರಮವಾಗಿ ಆದಷ್ಟು ಬೇಗನೆ ಪ್ರಕಟಿಸುವ ಯೋಜನೆ ಕೈಗೊಂಡಿರುವುದು ಅತ್ಯಂತ ಶ್ಲಾಘ್ಯವೂ ಸರ್ವಥಾಯೋಗ್ಯವೂ ಆಗಿದೆ.

ಬಹುತರ ಶ್ರೀ ವಿಜಯೀಂದ್ರರು ರಚಿಸಿದ ೧೦ಳ ಗ್ರಂಥಗಳಲ್ಲಿ ಈಗ ಎಲ್ಲವೂ ಉಪಲಬ್ಧವಿಲ್ಲದಿದ್ದರೂ ಅರ್ಧಕ್ಕೂ ಮೇಲ್ಪಟ್ಟು ಪರಿಮಳ ಪ್ರಕಾಶನ ಸಂಸ್ಥೆಯವರ ಪ್ರಯತ್ನದಿಂದ ದೊರೆತು ಒಂದೊಂದಾಗಿ ಮುದ್ರಣ ಮುಖ ಕಾಣತೊಡಗಿವೆ.

ಈಗ ಸಧ್ಯ ಉಪಲಬ್ಧವಿರುವ ೬೦–೭೦ ಗ್ರಂಥಗಳ ಮೇಲಿಂದಲೇ ವಿಚಾರ ಮಾಡಿದರೂ ಶ್ರೀ ವಿಜಯೀಂದ್ರತೀರ್ಥರ ವ್ಯಾಖ್ಯಾರ್ಥಕ್ರಮ, ವಾದಿನಿಗ್ರಹಣವಿಕ್ರಮ, ಪ್ರತಿವಾದಿಗಳ ಗ್ರಂಥಗಳನ್ನು ಪ್ರತ್ಯಕ್ಷರ ಖಂಡಿಸುವ ಪಾಂಡಿತ್ಯ ಪ್ರಕಾರ ಪ್ರಕಮ ಪರಾಕ್ರಮಗಳು ಹೇಗೆ ಇದ್ದವೆಂಬುದರ ಕಲ್ಪನೆ ವಿದ್ವಾಂಸರಿಗೆ ಚನ್ನಾಗಿ ಬರಲಿಕ್ಕೆ ಸಾಕು.

ಶ್ರೀಗಳವರ ಗ್ರಂಥಗಳನ್ನು ನಾವು ಸ್ಥೂಲಮಾನದಿಂದ ಐದು–ಆರು ಬಗೆಯಾಗಿ ವಿಂಗಡಿಸಬಹುದು.

೧. ಶ್ರುತಿ–ಸೂತ್ರಗಳ ಮೇಲೆ ಸಿದ್ಧಾಂತಾನುಸಾರಿಯಾಗಿ ಬರೆದ ಸ್ವತಂತ್ರ ಗ್ರಂಥಗಳು.

೨. ಆಚಾರ್ಯರು, ಟೀಕಾಚಾರ್ಯರು ಮುಂತಾದ ಸ್ವಪೂರ್ವಾಚಾರ್ಯರ ಗ್ರಂಥೋಕ್ತ ವಿಷಯಗಳನ್ನು ತಮ್ಮ ಟೀಕಾ–ಟಿಪ್ಪಣಿಗಳಿಂದ ವಿಶದವಾಗಿ ವಿವರಿಸಿ ಅಲ್ಲಿಯ ಗೂಢಾರ್ಥ–ತಾತ್ಪರ್ಯ–ರಹಸ್ಯಾರ್ಥಗಳನ್ನು ಬಯಲಿಗೆಳೆದು ಮೂಲಗ್ರಂಥಗಳ ಮೌಲಿಕತೆ, ಮಹತಿಗಳನ್ನು ಜಗತ್ತಿಗೆ ಎತ್ತಿ ತೋರಿಸುವ ಟಿಪ್ಪಣಿಗಳು.

೩. ತಾವು 'ಶಿಷ್ಯಸ್ತೇಹಂ' ಎಂದು ಶಾಂತಿ ಪಾಠ ಹಾಕಿ ಅಧ್ಯಯನವನ್ನು ಮಾಡಿದ ತಮ್ಮ ವಿದ್ಯಾಗುರು ಚಂದ್ರಿಕಾಚಾರ್ಯರ ಮೂರು ಮಹಾ ಗ್ರಂಥಗಳಾದ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ, ಮುಂತಾದ ಕೃತಿರತ್ನಗಳಿಗೆ ಬರೆದ ಟೀಕಾ ಟಿಪ್ಪಣಿಗಳು.

೪. ಮಾಧ್ವ ಗ್ರಂಥಗಳ ಮೇಲೆ ಹರಕೀಯುರು ಅವರಲ್ಲೂ ತಮ್ಮ ಸಮಕಾಲೀನರಾದ ಶ್ರೀ ಅಪ್ಪಯ್ಯ ದೀಕ್ಷಿತರೇ ಮೊದಲಾದ ಅದ್ವೈತವಾದಿಗಳು ಮಾಡಿದ

ಖಂಡನಾಭಾಸಗಳನ್ನು ಪ್ರತಿಯಾಗಿ ಖಂಡಿಸಿ ಮೂಲ ಮಧ್ವ ಸಿದ್ಧಾಂತದ ನಿರ್ದುಷ್ಟತೆ ಮತ್ತು ಪ್ರಮಾಣ ಪುಷ್ಟತೆಗಳನ್ನು ಸುಸ್ಪಷ್ಟವಾಗಿ ಮಂಡಿಸಿ ಯುಕ್ತಿ ಯುಕ್ತವಾದ ಉಕ್ತಿ ವಿಲಾಸಗಳನ್ನು ವೈಖರಿಸುವ ವಾದ ಗ್ರಂಥಗಳು.

೫. ವೇದಾಂತ ವ್ಯತಿರಿಕ್ತವಾದ ನ್ಯಾಯಶಾಸ್ತ್ರ, ಮೀಮಾಂಸಾ, ವ್ಯಾಕರಣ ಮತ್ತು ಧರ್ಮಶಾಸ್ತ್ರ ಮುಂತಾದ ವಿಭಿನ್ನ ದರ್ಶನಗಳಲ್ಲಿ ಅವರಿಗಿರುವ ಅಸಾಧಾರಣವಾದ ತಲಸ್ಪರ್ಶಿ ಪಾಂಡಿತ್ಯಪೂರ್ಣ ಪ್ರಭುತ್ವ, ವಾದಿನಿಜಯ, ಪರಪಕ್ಷ ದೂಷಣ, ವೈಚಕ್ಷಣ್ಯಾದಿಗಳನ್ನು ವಿದ್ವದ್ವೃಂದಕ್ಕೆ ಮನಗಾಣಿಸಿ ಕೊಡುವ ಮಹಾ ಕೃತಿಗಳು.

೬. ಕಾವ್ಯ, ನಾಟಕಾಲಂಕಾರಾದಿ ಸಾಹಿತ್ಯ ಶಾಸ್ತ್ರದಲ್ಲಿ ಉನ್ನತ ಸ್ಥಾನಗಳನ್ನು ಗಳಿಸಿ ಕಂಗೊಳಿಸುವ ಉತ್ತಮ ಕೃತಿಗಳು ಮತ್ತು ಸ್ತೋತ್ರಗಳು.

ಇವುಗಳಲ್ಲಿ ೧ ನೇ ವಿಭಾಗದಲ್ಲಿ ಬರುವ ಶ್ರೀ ವಿಜಯೀಂದ್ರ ತೀರ್ಥರ " ಶ್ರುತಿ ತಾತ್ಪರ್ಯ ಕೌಮುದೀ, ಶ್ರುತ್ಯರ್ಥಸಾರ " ಮುಂತಾದ ಗ್ರಂಥಗಳು " ತ್ರ್ಯರ್ಥತಾಂ ಶ್ರುತಿಷುವಿತ್ತ " ಎಂಬ ಆಚಾರ್ಯರ ಉಪಬೃಂಹಣಾತ್ಮಕಗಳಾಗಿ ವೇದ-ವೇದಾಂಗ ಗಳಲ್ಲಿಯ ರಚನಾ ಕರ್ಮೀಭೂತಗಳಾಗದ ವಚನ ನಿಚಯಂಗಳೆಲ್ಲ ಪರಮ ಮುಖ್ಯ ವೃತ್ತಿ ಮಹಾ ತಾತ್ಪರ್ಯಗಳಿಂದ ಹೇಗೆ ವಿಷ್ಣು ಪಾರಮ್ಯ, ಜೀವ ತಾರತಮ್ಯ, ಭೇದ ಸಿದ್ಧಾಂತಗಳನ್ನೇ ಪ್ರತಿಪಾದಿಸುತ್ತವೆ ಎನ್ನುವದನ್ನು ಚನ್ನಾಗಿ ವಿವರಿಸುತ್ತವೆ. ಮತ್ತು ಆಪಾತತಃ ಅನನ್ವಿತ ಅಬೋಧಕವೆಂದು ತೋರಬಹುದಾದ ವೇದ ವಚನಗಳಿಗೆ ಆ ವೇದದ ಗೌರವ, ಘನತೆ, ಗಾಂಭೀರ್ಯಗಳಿಗೆ ಕಿಂಚಿತ್ತಾದರೂ ಲೋಪಬಾರದಂತೆ ಆಧ್ಯಾತ್ಮಿಕ ಅರ್ಥ ಮಾಡಬೇಕಾದರೆ ಅಥವಾ ವೇದ ಪುರುಷನ ನಿಜವಾದ ಅಂತರಂಗದ ಗುಟ್ಟಾದ ಅರ್ಥವನ್ನು ಕಂಡು ಹಿಡಿಯಬೇಕಾದರೆ ಮಧ್ವಮತದ ಅಧ್ವರ್ಯುಗಳಾದ ವಿದ್ವಾಂಸರೇ ಸಮರ್ಥರು ಎಂಬುದನ್ನು ಜಗತ್ತಿಗೆ ಶ್ರೀ ವಿಜಯೀಂದ್ರರ ಈ ಗ್ರಂಥಗಳೇ ತೋರಿಸಿ ಕೊಡುತ್ತವೆ.

ಅವರ " ನಾರಾಯಣ ಶಬ್ದಾರ್ಥ ನಿರ್ವಚನ " ಎಂಬ ವಿಚಾರ ಪ್ರಬೋಧಕ ಪ್ರಮಾಣ ಪ್ರಚುರ ಮತ್ತು ನಿರ್ಣಾಯಕವಾದ ಗ್ರಂಥವು ನಿರಸವಾದ ಯುಕ್ತಿ ಸಂಸ್ಕೃತವಾದ ಉಕ್ತಿಗಳ ಹಿಡಿತದಿಂದ ವಸಿಷ್ಠರ ಬ್ರಹ್ಮ ದಂಡದಂತೆ ಅದ್ವೈತರ ಎಲ್ಲ ಆಕ್ಷೇಪ ಪ್ರತಿಕ್ಷೇಪಾಸ್ತ್ರಗಳನ್ನು ನುಂಗಿ ನೀರು ಕುಡಿದು ಕೊನೆಗೆ ಅವರೇ ಕೈ ಸೋತು, ಬಾಯಿ ಸೋತು " ಣತ್ವಂ ಪರಂ ಬಾಧತೇ " ಎಂದು ನಿರಾಶೋದ್ಗಾರವನ್ನು ತೆಗೆಯುವಂತೆ ಮಾಡುತ್ತವೆ.

ಇದೇ ವಿಭಾಗದಲ್ಲಿ ಬರುವ ಅವರ ಸೂತ್ರ ನ್ಯಾಯ ಸಂಗ್ರಹ, ಅಧಿಕರಣಮಾಲಾ, ಮಧ್ವ ಸಿದ್ಧಾಂತಸಾರಾಸಾರ ವಿವೇಕ, ಸನ್ಮಾರ್ಗದೀಪಿಕಾ, ಪದಾರ್ಥಸಂಗ್ರಹ,

ದಶೋಪನಿಷದ್ವ್ಯಾಖ್ಯಾನಗಳು, ಆನಂದ ತಾರತಮ್ಯವಾದಾರ್ಥ, ಮುಂತಾದ ಗ್ರಂಥಗಳು ಅಪೂರ್ವ ಮತ್ತು ಅಪರೂಪವಾಗಿವೆ.

ಮತ್ತು ಎರಡನೆಯ ವಿಭಾಗದಲ್ಲಿ ಅಣುಭಾಷ್ಯ ಟಿಪ್ಪಣಿ, ನ್ಯಾಯವಿವರಣ ಟಿಪ್ಪಣಿ, ನ್ಯಾಯದೀಪಿಕಾ, ಪ್ರಮೇಯ ದೀಪಿಕಾದಿ ಟೀಕಾ ಗ್ರಂಥಗಳ ಟಿಪ್ಪಣಿಗಳು ಬರುತ್ತವೆ.

ವಿಷ್ಣುತತ್ವ ನಿರ್ಣಯಾದಿ ದಶ ಪ್ರಕರಣಗಳ ಮೇಲೆ ಜಯತೀರ್ಥರು ಬರೆದ ಎಲ್ಲ ಟೀಕೆಗಳಿಗೂ ವಿಜಯೀಂದ್ರರು ಪ್ರಾಯಃ ಮಾರ್ಮಿಕವಾದ ಟಿಪ್ಪಣಿಗಳನ್ನು ಬರೆದಿದ್ದಾರೆ. ಪ್ರಮಾಣಲಕ್ಷಣ, ತತ್ತ್ವೋದ್ಯೋತ, ತತ್ವ ನಿರ್ಣಯಾದಿ ಟೀಕಾ ಗ್ರಂಥಗಳಿಗೆ ಶ್ರೀ ವಿಜಯೀಂದ್ರ ಗುರುವರೇಣ್ಯರ ಟಿಪ್ಪಣಿಗಳು ಮುದ್ರಿತವಾಗಿ ಬಂದರೆ ಮಾಧ್ವರ ಜ್ಞಾನಭಾಂಡಾರದಲ್ಲಿ ಮತ್ತೊಮ್ಮೆ ಮುತ್ತಿನ ಮಳೆಯೇ ಸುರಿದಂತಾದೀತು. ಶ್ರೀ ವಿಜಯೀಂದ್ರ ಗುರುಗಳ ಪೀಠದಲ್ಲಿ ವಿರಾಜಿಸುವ ಶ್ರೀ ಶ್ರೀ ಪಾದಂಗಳವರು ಈ ದಿಶೆಯಲ್ಲಿ ತಮ್ಮ ಪ್ರಯತ್ನವನ್ನು ತ್ವರಿತಗೊಳಿಸಬೇಕೆಂದೂ, ಇನ್ನಿತರ ಎಲ್ಲ ಮಠ ಮಂದಿರ ಮನೆತನದವರೂ ಈ ಕಾರ್ಯದಲ್ಲಿ ಭೇದ ಭಾವ ಮರೆತು ಒಂದಾಗಿ ಮುಂದುವರಿಯಬೇಕೆಂದೂ ಆ ಕಾರ್ಯದಲ್ಲಿ ಆಸಕ್ತರಾಗಿರುವ ಶ್ರೀ ಪರಿಮಳ ಪ್ರಕಾಶನ ಮಂದಿರದವರಿಗೆ ಸಕಲ ಸಹಕಾರ ನೀಡಬೇಕೆಂದೂ ಬಿನ್ನವಿಸಿಕೊಳ್ಳುತ್ತೇವೆ.

ಮೂರನೆಯ ವಿಭಾಗದಲ್ಲಿ ಪರಪಕ್ಷ ಖಂಡನ ಸ್ವಪಕ್ಷ ಮಂಡನಾತ್ಮಕವಾದ ತಮ್ಮ ಗುರುವರ್ಯ ಶ್ರೀ ಚಂದ್ರಿಕಾಚಾರ್ಯರ 'ವ್ಯಾಸತ್ರಯ'ದ ಮೇಲಿನ ವಿವರಣಾ ಟೀಕಾ ಗ್ರಂಥಗಳು ಬರುತ್ತವೆ. ಇದರಲ್ಲಿ ಚಂದ್ರಿಕಾಚಾರ್ಯರ ಗ್ರಂಥಗಳಲ್ಲಿ ಅದ್ವೈತರಿಗೆ ಅತ್ಯಂತ ಹೆಚ್ಚಾಗಿ ಕಣ್ಣಲ್ಲಿ ಚುಚ್ಚುವ ಮತ್ತು ಅವರ ಮತದ ಮೂಲ ಬೇರುಗಳನ್ನೇ ಕೊಚ್ಚುವ ಗ್ರಂಥವಾದ ನ್ಯಾಯಾಮೃತದ ಮೇಲೆ ಅವರ ವಿದ್ಯಾ ಶಿಷ್ಯರಾದ ವಿಜಯೀಂದ್ರರು ನ್ಯಾಯಾಮೃತ ಗುರ್ವಾಮೋದ, ಮಧ್ಯಮಾಮೋದ, ಲಘ್ವಾಮೋದ, ನ್ಯಾಯಾಮೃತ ನ್ಯಾಯರತ್ನಮಾಲಾ, ನ್ಯಾಯಾಮೃತೋದಾಹೃತ ಜೈಮಿನೀಯ ನ್ಯಾಯಮಾಲಾ ಮುಂತಾದ ನಾಲ್ಕಾರು ಗ್ರಂಥಗಳನ್ನು ಬರೆದಿದ್ದಾರೆ. ಅದರಂತೆ ಚಂದ್ರಿಕೋದಾಹೃತ ನ್ಯಾಯವಿವರಣ, ನ್ಯಾಯಮಾಲಾ, ಚಂದ್ರಿಕಾ ಟಿಪ್ಪಣಿ ಮತ್ತು ತರ್ಕತಾಂಡವದ ಮೇಲೆ "ಯುಕ್ತಿ ರತ್ನಾಕರ" ಮುಂತಾದ ಉದ್ಗ್ರಂಥಗಳನ್ನು ಬರೆದು ಚಂದ್ರಿಕಾ ತರ್ಕತಾಂಡವಾದಿ ಗ್ರಂಥಗಳ ಗೂಢಾರ್ಥ ಪ್ರಕಾಶನವನ್ನು ಬಹಳ ಚನ್ನಾಗಿ ಮಾಡಿ ತಮ್ಮ ಗುರುಗಳಿಗೆ ನಿಜವಾದ ಗುರು ದಕ್ಷಿಣೆಯನ್ನು ನೀಡಿದ್ದಾರೆ. ಶ್ರೀ ಮಂತ್ರಾಲಯ ಶ್ರೀಪಾದಂಗಳವರು ತಮ್ಮ ತರ್ಕ ತಾಂಡವ ಟಿಪ್ಪಣಿಯ ಪ್ರಾರಂಭದಲ್ಲಿ ಮತ್ತು ಅಲ್ಲಲ್ಲಿ ತರ್ಕತಾಂಡವದ ಮೇಲೆ ತಮ್ಮ ಪರಮ ಗುರುಗಳಾದ ಶ್ರೀ ವಿಜಯೀಂದ್ರ ತೀರ್ಥರು ಗುರುಗಳಾದ ಶ್ರೀ ಸುಧೀಂದ್ರ ತೀರ್ಥರು ವಿಸ್ತಾರವಾದ ಟಿಪ್ಪಣಿ

ಗಳನ್ನು ಬರೆದಿದ್ದು * ಹೆಚ್ಚಿನ ವಿಷಯವನ್ನು ಅಲ್ಲಿ ನೋಡಬಹುದು ಎಂದು ಅತ್ಯಂತ "ಗೌರವ" ಪೂರ್ವಕವಾಗಿ ಉಲ್ಲೇಖನ ಮಾಡುತ್ತಾರೆ. ಶ್ರೀ ವಿಜಯೀಂದ್ರರ ಲೋಕೋತ್ತರ ವೈಶಿಷ್ಟ್ಯ ಶ್ರೇಷ್ಠತೆಗಳಿಗೆ ಇನ್ನೇನು ನಿದರ್ಶನ ಬೇಕು ?

ನಾಲ್ಕನೆಯ ವಿಭಾಗದಲ್ಲಿ ಪರಮತ ನಿರಾಕರಣಪೂರ್ವಕ ಸ್ವಮತಸ್ಥಾಪನ ಮಾಡಿ ಪರ ಮತೀಯರು ದ್ವೈತ ಸಿದ್ಧಾಂತದ ಮೇಲೆ ಹೊರಸಿದ್ದ ದೋಷಾಭಾಸಗಳ ಖಂಡನ ಮಾಡಿ ಆಚಾರ್ಯ ಸಿದ್ಧಾಂತದ ಶ್ರೇಷ್ಠತೆಯನ್ನು ಎತ್ತಿ ತೋರುವ ಮಧ್ವಾಧ್ವಕಂಟಕೋದ್ಧಾರ, ಶೈವಸರ್ವಸ್ವ ಖಂಡನ, ತುರೀಯ ಶಿವ ಖಂಡನ, ಕಪೋಲಚಪೇಟಿಕಾ, ಅದ್ವೈತ ಶಿಕ್ಷಾ್ಯ ವಿರೋಧೋದ್ಧಾರ, ಪ್ರಣವದರ್ಪಣ ಖಂಡನ, ಕುಚೋದ್ಯ ಕುಠಾರ, ಲಿಂಗಮೂಲಾನ್ವೇಷಣ ಖಂಡನ, ಭೇದವಿದ್ಯಾವಿಲಾಸ, ವಾಗ್ವೈಖರಿ, ವಾದಮಾಲಿಕಾ ಮುಂತಾದ ಉದ್ಗ್ರಂಥಗಳು ಬರುತ್ತವೆ. ಇವುಗಳಲ್ಲೆಲ್ಲ ವಿಜಯೀಂದ್ರರು ನಿಜವಾಗಿ ವಿಜಯೀಂದ್ರರಾಗಿ "ವಿಪಕ್ಷಕುಕ್ಷಿಂ ಕ್ಷಪಯನ್ ವಿರೇಜೇ" ಆಗಿದ್ದಾರೆ. ಈ ವಾದಿ ವಿಗ್ರಹ, ಪರಪಕ್ಷ ನಿಗ್ರಹಗಳಲ್ಲಿ ವಿಜಯೀಂದ್ರರು ತಮ್ಮ ಪರಶುರಾಮ ಪ್ರಜ್ಞೆಯಿಂದ ಮಾಯಿ ಮತವನ್ನು ನಿರ್ಮೂಲವಾಗಿ ತರಿದು ಹಾಕಿ ಹತ್ತಾರು ತಲೆಮಾರುಗಳ ವರೆಗೆ ಅವರು ತಲೆ ಎತ್ತದಂತೆ ಮಾಡಿದ್ದಾರೆ. ( ಆಚಂದ್ರಾರ್ಕಸ್ಥಾಯಿಯಾಗಿ ತಮ್ಮ ಗ್ರಂಥಗಳು ರಾಜಿಸುವಂತೆ ಮಾಡಿದ್ದಾರೆ. ) ಪರ ಪಕ್ಷ ಖಂಡನದ ಪ್ರಸಂಗ ಬಂದಾಗ ವಿಜಯೀಂದ್ರರು ಒಮ್ಮೆಲೇ ತಮ್ಮ ಪ್ರಜ್ಞಾ ಪ್ರಕರ್ಷದಿಂದ ವೇದಾಂತ ವಿಶ್ವಾಮಿತ್ರರಂತೆ ವಿಜೃಂಭಿಸಿ ಮಿಂಚಿನ ಮಾತು, ಬರ್ಚಿಯಂತಹ ಯುಕ್ತಿ, ಪ್ರಖರವಾದ ವಾಗ್ವೈಖರಿ, ಪರಶುಪ್ರತಿಭೆ ಎಲ್ಲವನ್ನೂ ಉಪಯೋಗಿಸಿ ಅವರ ಮತ ಮೂಲನಾಲಗಳನ್ನೆಲ್ಲ ಅಲುಗಾಡಿಸಿ, ಪ್ರಮಾಣ ತಂತಿಗಳಿಂದ ವಾದಿಗಳನ್ನು ಬಂಧಿಸಿ ವಾದಿಸಿಂಹಗಳನ್ನೆಲ್ಲ ತಮ್ಮ ನುಡಿಯ ಕೋಲು ಕುಣಿತಕ್ಕೆ ತಕ್ಕಂತೆ ಕುಣಿಸಾಡುತ್ತಾರೆ. ಇದು ಅವರಿಗೆ ಚಂದ್ರಿಕಾಚಾರ್ಯರಿಂದ ಸಾಕ್ಷಾತ್ತಾಗಿ ದೊರೆತ ಶಿಷ್ಯ ಸಂಭಾವನೆ. ಇದನ್ನು ನಾವು ಮುಂದೆ ತದುತ್ತರಕಾಲೀನರಾದ ಯಾವ ಟೀಕಾ ಟಿಪ್ಪಣಿಕಾರರಲ್ಲಿಯೂ ಇಂಥ ಪ್ರಜ್ಞಾ ತಾಂಡವ, ವಾದ ವಿಲಾಸ, ವಿಪಕ್ಷಕಕ್ಷವಿಕ್ಷೋಭಕಾರಕವಾದ ವಿಲಕ್ಷಣವಾಗ್ವೈಚಕ್ಷಣ್ಯವನ್ನು ಕಾಣಲಾರೆವು.

ಐದನೆಯ ವಿಭಾಗದಲ್ಲಿಯ ಅವರ "ಪಿಷ್ಟಪಶು ಮೀಮಾಂಸಾ" ಎಂಬ ಗ್ರಂಥವು ಶ್ರೀ ಶ್ರೀಗಳವರಿಗೆ ಶ್ರೌತ ಕಾಂಡದಲ್ಲಿರುವ ಪ್ರಾಯೋಗಿಕ ಪರಿಜ್ಞಾನದ

---

* ೧. ಯುಕ್ತಿರತ್ನಾಕರ —ಶ್ರೀ ವಿಜಯೀಂದ್ರ ತೀರ್ಥರು.
೨. ಸದ್ಯುಕ್ತಿರತ್ನಾವಲಿ —ಶ್ರೀ ಸುಧೀಂದ್ರ ತೀರ್ಥರು.

ಅಗಾಧತೆಯೊಂದಿಗೆ ಧರ್ಮಶಾಸ್ತ್ರಗಳಲ್ಲಿ ಅವರಿಗಿರುವ ಚತುರಸ್ರ ವೈದುಷ್ಯದ ವಿಚಿತ್ರ ಚಾತುರ್ಯಕ್ಕೂ ಕನ್ನಡಿ ಹಿಡಿಯುತ್ತದೆ. ವೇದ ಪುರಾಣ ಕಾಲದಿಂದಲೂ ನಡೆದು ಬಂದ ಪಾಪಭೀರುಗಳಾದ ಅಹಿಂಸಾವಾದಿ[ಸಾತ್ವಿಕ ಯಾಜ್ಞಿಕರ ತಲೆ ತಿನ್ನುವ ಮಹಾ ಸಮಸ್ಯೆ ಯೊಂದಕ್ಕೆ ಸಮಂಜಸ ಹಾಗೂ ಶಾಸ್ತ್ರೋಕ್ತ ಸಮಾಧಾನ ಹೇಳಿ ಶತಕಾನು ಶತಕ ಗಳಿಂದ ಶ್ರೌತ ಪ್ರಪಂಚದಲ್ಲಿ ಪ್ರಚಲಿತವಾಗಿದ್ದ ವಾದ ಪ್ರತಿವಾದಗಳಿಗೆ ಸೈದ್ಧಾಂತಿಕ ಪೂರ್ಣವಿರಾಮ ಚಿನ್ಹವನ್ನು ಇಟ್ಟುಬಿಟ್ಟಿದ್ದಾರೆ ಪ್ರಗಾಢ ಪಂಡಿತೋತ್ತಮರಾದ ಶ್ರೀ ವಿಜಯೀಂದ್ರ ತೀರ್ಥರು.

ಇದರಂತೆ ಅವರ ' ತತ್ವ ಮಾಣಿಕ್ಯ ಪೇಟಿಕೆ ' ಯಂತೂ ಮಣಿಮುತ್ತುಗಳನ್ನು ಆಯ್ದು ಆಯ್ದಿಟ್ಟ ಮಾಣಿಕ್ಯ ಮಂಜೂಷಿಕೆಯಂತೆ ತತ್ವಜಿಜ್ಞಾಸುಗಳಿಗೆ ಅತ್ಯಂತ ಉಪಯುಕ್ತವಾಗಿದೆ. ಇದು ದರ್ಶನ ಕುತೂಹಲಿಗಳಿಗೆ ಒಂದು ಸುಂದರವಾದ ತಾತ್ವಿಕ ಕೈಪಿಡಿಯಂತಿದೆ.

ಅವರ ಮೀಮಾಂಸಾ ನ್ಯಾಯಕೌಮುದೀ ಮತ್ತು ನ್ಯಾಯಾಮೃತೋದಾಹೃತ ಜೈಮಿನೀಯ ನ್ಯಾಯಮಾಲಾ ಮುಂತಾದ ಮೀಮಾಂಸ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥ ಗಳು ಪೂರ್ವ ಮೀಮಾಂಸಾ ದರ್ಶನದಲ್ಲಿಯೂ ಅನೇಕ ಸಮಸ್ಯಾತ್ಮಕ ಜಟಿಲ ಪ್ರಕ್ರಿ ಯಗಳಿಗೆ ಸೂಕ್ತ ಪರಿಹಾರ ಕಂಡು ಹಿಡಿದು ಬ್ರಹ್ಮ ಮೀಮಾಂಸೆಗಳ ಮತ್ತು ಪೂರ್ವ ಮೀಮಾಂಸೆಗಳ ಪಾರಸ್ಪರಿಕ ಪೂರಕತ್ವ ವಿವಿಧಶ್ಲೋಪಕಾರತ್ವವನ್ನು ಹೇಳಿ ಆ ಶಾಸ್ತ್ರಕ್ಕೆ ಒಂದು ಅಪೂರ್ವ ಗೌರವ ಪ್ರಾಪ್ತವಾಗುವಂತೆ ಮಾಡುತ್ತವೆ.

ಇದರಂತೆ ವ್ಯಾಕರಣ, ನಿರುಕ್ತ, ನವೀನನ್ಯಾಯ, ಪ್ರಾಚೀನ ತರ್ಕ, ಸಾಂಖ್ಯ ಧರ್ಮಶಾಸ್ತ್ರ ಮೊದಲಾದ ಪ್ರಾಚೀನ ಸರ್ವ ಶಾಸ್ತ್ರಗಳಲ್ಲಿಯೂ, ಅದ್ವೈತ, ವಿಶಿಷ್ಟಾ ದ್ವೈತ, ಜೈನ, ಬೌದ್ಧ, ಕಾಪಾಲಿಕ, ಪಾಶುಪತ, ಶಾಕ್ತ ಮುಂತಾದ ಆಸ್ತಿಕ ನಾಸ್ತಿಕದರ್ಶನಗಳಲ್ಲಿ ಶ್ರೀ ವಿಜಯೀಂದ್ರರಿಗೆ ತತ್ತನ್ಮತೀಯ ವಿಶಿಷ್ಟ ಪಂಡಿತರಿಗೂ ತತ್ತಚ್ಛಾಸ್ತ್ರಪ್ರವರ್ತಕ ಆಚಾರ್ಯರಿಗೂ ಇರಲಾರದಷ್ಟು ಪಾಂಡಿತ್ಯ, ಸೂಕ್ಷ್ಮ ಜ್ಞಾನಗಳಿದ್ದುದು ಅವರ ಅನೇಕ ಗ್ರಂಥಗಳಿಂದ ಗೊತ್ತಾಗುತ್ತದೆ. ಇದಕ್ಕೆ ಶ್ರೀ ವಿಜಯೀಂದ್ರತೀರ್ಥರು ಶ್ರೀ ರಾಮಾನುಜಮತ ರೀತ್ಯಾ ಸೂತ್ರಾರ್ಥ ವಿವರಣ ಪರವಾಗಿ ರಚಿಸಿರುವ " ಶಾರೀರಿಕ ಮೀಮಾಂಸಾ " ಎಂಬ ಗ್ರಂಥವೇ ಸಾಕ್ಷಿಯಾಗಿದೆ.

ಶ್ರೀ ವಿಜಯೀಂದ್ರರು ವೈಷ್ಣವರಿಗೆ ಅತಿ ಮುಖ್ಯವಾದ ತಪ್ತಮುದ್ರಾಂಕನದಬಗ್ಗೆ ಬರೆದಿರುವ '' ಚಕ್ರ ಮೀಮಾಂಸಾ '' ಗ್ರಂಥವು ವೈಷ್ಣವ ಸಮಾಜಕ್ಕೆ ಅವರು ನೀಡಿದ ಮಹತ್ವಪೂರ್ಣ ಕೊಡುಗೆಯಾಗಿದೆ.

ಆರನೆಯ ವಿಭಾಗದಲ್ಲಿನ ಅವರು ಸ್ತೋತ್ರ, ಕಾವ್ಯ, ನಾಟಕ, ಅಲಂಕಾರ ಶಾಸ್ತ್ರಗಳ ಮೇಲೆ ರಚಿಸಿರುವ "ಶ್ರೀನೃಸಿಂಹಾಷ್ಟಕ", "ಪಾಪಮೋಚನಸ್ತೋತ್ರ", "ಶ್ರೀವ್ಯಾಸರಾಜಾಭ್ಯುದಯ ಕಾವ್ಯ", "ಸುಭದ್ರಾಧನಂಜಯ" ನಾಟಕಗಳು ಬರುತ್ತವೆ. ಮಾಧ್ವರಿಗೆ ಸಾಹಿತ್ಯ ಶಾಸ್ತ್ರದಲ್ಲಿ ಜ್ಞಾನವಿಲ್ಲ ಎಂದು ಪರಮತೀಯರು ಹೊರಿಸುವ ಅಪವಾದಕ್ಕೆ ಸವಾಲಿನಂತಿವೆ ಶ್ರೀಯವರ ಈ ಗ್ರಂಥಗಳು. ಶ್ರೀಗಳವರ ಕಾವ್ಯಪ್ರೌಢಿಮೆ–ಪದಲಾಲಿತ್ಯ, ಅರ್ಥ–ಭಾವ ಗಾಂಭೀರ್ಯಾದಿಗಳನ್ನು ಜಗತ್ತಿಗೆ ಎತಿ ಸಾರುತ್ತಿರುವ ಈ ಗ್ರಂಥಗಳು ಬೆಳಕಿಗೆ ಬಂದಲ್ಲಿ ಸಾಹಿತ್ಯ ಪ್ರಪಂಚಕ್ಕೆ ಒಂದು ನಿಧಿಯೇ ದೊರಂತಾದೀತು !

ಶ್ರೀ ವಿಜಯೀಂದ್ರತೀರ್ಥರ ಅಮರಚರಿತೆ ಅವರು ತೋರಿದ ಪವಾಡಗಳು, ವಾದಿ ನಿಗ್ರಹ, ಚತುಃಷಷ್ಠಿಕಲಾ ಪಾರೀಣತೆ, ನಾಡು–ನುಡಿಗಳಿಗೆ ಮಾಡಿರುವ ಮಹೋಪಕಾರ, ಅಗಮ್ಯ ಮಹಿಮೆ ಇವುಗಳನ್ನು ವರ್ಣಿಸುತ್ತ ಹೋದರೆ ಅದೊಂದು ದೊಡ್ಡ ಗ್ರಂಥವೇ ಆಗುತ್ತದೆ. ಅಂಥ ಒಂದು ಅಪೂರ್ವ ಮಹದ್ಗ್ರಂಥವನ್ನು ನಮ್ಮ ಪ್ರಿಯಮಿತ್ರರಾದ "ವಿದ್ಯಾವೈಭವ" ರಾಜಾ ಶ್ರೀ ಗುರುರಾಜಾಚಾರ್ಯರು "ಬೃಂದಮಂದಿರ ಕಂದ" ಎಂಬ ಕಾವ್ಯನಾಮದಿಂದ ಬರೆದಿದ್ದು ಶೀಘ್ರವಾಗಿ ಪ್ರಕಾಶನವಾಗಲಿರುವುದರಿಂದ ಆ ವಿಚಾರವಾಗಿ ಹೆಚ್ಚು ಬರೆಯುವುದು ಅನವಶ್ಯವೆಂದು ಭಾವಿಸುತ್ತೇವೆ.

ಇಂಥ ಮಹಾಮಹಿಮರಾದ ಶ್ರೀ ವಿಜಯೀಂದ್ರತೀರ್ಥರು ವಿದ್ವತ್ಪ್ರಪಂಚಕ್ಕೆ ಮತ್ತು ಮಾಧ್ವ ಸಮಾಜಕ್ಕೆ ಮಾಡಿರುವ ಮಹೋಪಕಾರವನ್ನು ಎಂದಿಗೂ ಮರೆಯ ಲಾರದಂತಹದಾಗಿದೆ. ಜ್ಯೇಷ್ಠ ಕೃಷ್ಣ ೧೩ ರಂದು ಅವರ ಪುಣ್ಯದಿನವಿದ್ದು ಅವರಿಂದ ಉಪಕೃತರಾದವರೆಲ್ಲರೂ ಅಂದು ಅವರ ಸೇವೆಗೈದು ಕೃತಜ್ಞತಾರ್ಪಣಪೂರ್ವಕ ಕೃತಕೃತ್ಯರಾಗುವುದು ಕರ್ತವ್ಯವೆಂದು ವಿಜ್ಞಾಪಿಸಿ ವಿರಮಿಸುತ್ತೇವೆ.



## ಶ್ರೀ ಸುಬ್ರಹ್ಮಣ್ಯಮಠದ ಮಹಾ ತಪಸ್ವಿಗಳಾದ

# ವೇದ ಪೂಜ್ಯತೀರ್ಥರು

ಶ್ರೀ ಸುಬ್ರಹ್ಮಣ್ಯ ಮಠದ ಪರಂಪರೆಯಲ್ಲಿ ಪರಮಪೂಜ್ಯರಾದ ಶ್ರೀ ವೇದಪೂಜ್ಯ ತೀರ್ಥರು ವಿಷ್ಣುತೀರ್ಥರಿಂದ ಹತ್ತೊಂಬತ್ತನೆಯವರು. ಇವರು ಮಹಾ ಕರ್ಮಠ ಕರ್ಮಂದಿಗಳೆಂದು ಪ್ರಸಿದ್ಧರಾಗಿದ್ದರು. ಇವರಿಗೆ ಆಶ್ರಮಕೊಟ್ಟ ವೇದಗರ್ಭ ಗುರುಗಳು ಇನ್ನೂ ಇದ್ದಾಗಲೆ ಇವರ ದೈನಂದಿನ ಪೂಜಾ ಜಪ ತಪ ಮುಂತಾದ ಆಹ್ನಿಕವು ಬೆಳೆದು ಹೋಗಿತ್ತು. ಭಕ್ತಿಪೂರ್ವಕವಾಗಿ ಶ್ರೀ ಕೃಷ್ಣವೇದವ್ಯಾಸಾದಿ ಮಹಾಮಂತ್ರ ಗಳನ್ನು ಜಪಿಸುತ್ತ ಕುಳಿತಾಗ ಅವರಿಗೆ ಹೊತ್ತು ಹೋದದ್ದೇ ಗುರುತಾಗುತ್ತಿರಲಿಲ್ಲ. ಇಷ್ಟು ತಲ್ಲೀನರಾಗಿಬಿಡುತ್ತಿದ್ದರು ಜಪತಪಗಳಲ್ಲಿ.

ಒಂದು ದಿನ ಇವರ ಗುರುಗಳಾದ ವೇದಗರ್ಭರು ತಮ್ಮ ಪೂಜಾ ಆಹ್ನಿಕ ಗಳನ್ನು ಮುಗಿಸಿಕೊಂಡು ವೇದಪೂಜ್ಯ ತೀರ್ಥರ ದಾರಿ ಕಾಯುತ್ತ ಕುಳಿತು ಕೊಂಡರು. ಅವರು ದರ್ಪಣತೀರ್ಥಕ್ಕೆ ದಂಡೋದಕಕ್ಕೆ ಹೋದವರು ಬಹಳ ವಿಲಂಬ ಮಾಡಿದುದರಿಂದ ಗುರುಗಳು ಬಹಳ ಬೇಸರಪಟ್ಟುಕೊಂಡರೆಂದು ಅವರಿಗೆ ತಿಳಿದು ಬಂದಿತು. ಪ್ರತಿನಿತ್ಯವೂ ಇವರ ಜಪ ಆಹ್ನಿಕಗಳಿಂದ ಗುರುಗಳಿಗೆ ಹೊತ್ತಾಗುತ್ತಿತ್ತು.

ಪ್ರತಿದಿನವೂ ಗುರುಗಳಿಗೆ ತಮ್ಮಿಂದ ತೊಂದರೆಯಾಗಬಾರದೆಂದು ಅಂದು ಅವರು ಶ್ರೀ ಮಠದಲ್ಲಿ ಭಿಕ್ಷೆಗಾಗಿ ಬಿಡಿಸಿಟ್ಟ ಬಾಳೆಯ ಎಲೆಯನ್ನು ದರ್ಪಣ ತೀರ್ಥಕ್ಕೆ ತರಿಸಿಕೊಂಡರು. ಆ ಬಾಳೆಯ ಎಲೆಯನ್ನು ನೀರಿನ ಪ್ರವಾಹದಲ್ಲಿ ಇಟ್ಟು ಅದರ ಮೇಲೆ ತಾವು ಕುಳಿತುಕೊಂಡು ದರ್ಪಣತೀರ್ಥದಿಂದ ಹೊರಟರು. ದಾರಿಯಲ್ಲಿ ಬಿಸಿಲಿನ ಬೇಗೆ ಹೆಚ್ಚಾಗಲು ತಮ್ಮ ಕಾವಿಶ್ಯಾಟಿಯನ್ನು ಮೇಲೆ ಬಿಡಿಸಿ ಬಿಸುಟು ಬಿಟ್ಟರು. ಇವರು ಹರಿಯುವ ಪ್ರವಾಹದಲ್ಲಿ ಹೋದ ಹೋದಂತೆ ಆ ಶ್ಯಾಟಿಯ ತುಂಡು ಇವರ ಮೇಲೆ ತುಂಡು ಮೋಡದಂತೆ, ಒಂದು ದೊಡ್ಡ ಕೊಡೆಯಂತೆ ಇವರಿಗೆ ತುಂಬು ನೆರಳನ್ನು ನೀಡುತ್ತಿತ್ತು. ದರ್ಪಣ ತೀರ್ಥದಿಂದ ಅವರು ಪ್ರವಾಹದಗುಂಟ ಕುಮಾರಧಾರಾ ನದಿಯ ಪ್ರವಾಹದಲ್ಲಿ ತೇಲುತ್ತ ಮುಂದೆ ಪ್ರಯಾಣ ಮಾಡಿದರು. ಹೀಗೆ ಅವರು ಆ ನದಿಯಲ್ಲಿ ಹತ್ತು ಮೈಲು ಹೋದ ಬಳಿಕ ಕಾಯಂಬಾಡಿ ಎಂಬ ಊರಿನಲ್ಲಿಯ ಜನರಿಗೆ ಶ್ರೀ ವೇದಪೂಜ್ಯರ ಈ ನದಿಯ ಪ್ರಯಾಣವು ಗೊತ್ತಾಯಿತು. ಕೂಡಲೆ ಆ ಊರಿನ ಭಕ್ತಜನರೆಲ್ಲರೂ ನದಿಗೆ ಹೋಗಿ ಪ್ರವಾಹದಲ್ಲಿ ಬಾಳೆಯ ಎಲೆಯ ಮೇಲೆ ಕುಳಿತು ಧ್ಯಾನಾರೂಢರಾಗಿ ತೇಲಿ ಬರುತ್ತಲಿರುವ ಶ್ರೀ ವೇದಪೂಜ್ಯತೀರ್ಥರನ್ನು ಅಡ್ಡಗಟ್ಟಿದರು.

" ಸ್ವಾಮಿ ತಾವು ನಮ್ಮಲ್ಲಿ ಇಳಿದು ಈ ಕಾಯಂಬಾಡಿಯ ಜನರಿಗೆಲ್ಲ ತಮ್ಮ ನಿತ್ಯ ದರ್ಶನದ ಭಾಗ್ಯವನ್ನು ದಯಪಾಲಿಸಬೇಕು" ಎಂದು ಬಿನ್ನವಿಸಿಕೊಂಡರು. ಶ್ರೀ ವೇದಪೂಜ್ಯತೀರ್ಥರು ಮಹಾಜನರ ಬಿನ್ನಹವನ್ನು ಮನ್ನಿಸಿ ಅಲ್ಲಿಯೇ ಉಳಿದುಕೊಂಡರು. ಅಲ್ಲಿಯೇ ನದಿಯ ತೀರದಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದಲ್ಲದೆ ಪ್ರಾಣ ದೇವರನ್ನೂ ಪ್ರತಿಷ್ಠಿಸಿದರು.

ಮುಂದೆ ಇವರ ಗುರುಗಳಾದ ವೇದಗರ್ಭತೀರ್ಥರಿಗೆ ಅನಾರೋಗ್ಯವಾದಾಗ ಇವರನ್ನು ಕರೆಸಿಕೊಂಡು ಇವರಿಗೇ ತಮ್ಮ ಸಂಸ್ಥಾನದ ಉತ್ತರಾಧಿಕಾರವನ್ನು ಒಪ್ಪಿಸಿದರು. ಗುರುಗಳ ಅಪ್ಪಣೆಯಂತೆ ಅವರು ಸುಬ್ರಮ್ಹಣ್ಯಕ್ಷೇತ್ರದಲ್ಲಿ ಬಹುಕಾಲ ವಾಸಮಾಡಿ ತಮ್ಮ ಕೊನೆಗಾಲದಲ್ಲಿ ಶ್ರೀ ವೇದೇಶತೀರ್ಥ ಎಂಬವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿದರು. ಅನಂತರ ತಾವು ಕೊನೆಗೆ ಕಾಯಂಬಾಡಿಗೆ ಬಂದು ಲಕ್ಷ್ಮೀನರಸಿಂಹದೇವರು ಪ್ರಾಣ ದೇವರು, ಮುಂತಾದ ದೇವೋತ್ತಮ ಜೀವೋತ್ತಮರನ್ನು ಪೂಜೆಗೈಯುತ್ತ ಅಲ್ಲಿಯೇ ವೃಂದಾವನಸ್ಥರಾದರು. ಆ ಕಾಯಂಬಾಡಿಯಲ್ಲಿ ಇಂದಿಗೂ ಶ್ರೀ ಲಕ್ಷ್ಮೀನರಸಿಂಹ, ಶ್ರೀ ಪ್ರಾಣದೇವರ ಹಾಗೂ ಶ್ರೀ ವೇದಪೂಜ್ಯ ತೀರ್ಥರ ವೃಂದಾವನ ಇವುಗಳ ಪೂಜೆ ಪುನಸ್ಕಾರವು ಸುಬ್ರಮ್ಹಣ್ಯ ಮಠದಿಂದಲೇ ಯಥಾಸಾಂಗವಾಗಿ ನಡೆಯುತ್ತಲಿವೆ.



## ಯುಕ್ತಿಮಲ್ಲಿಕಾ ವ್ಯಾಖ್ಯಾನಕಾರರಾದ

# ಶ್ರೀ ಸುರೋತ್ತಮತೀರ್ಥರು



ಶ್ರೀ ಭಂಡಾಕೇರಿಮಠದ ಪರಂಪರೆಯಲ್ಲಿ ಶ್ರೀ ಸುರೋತ್ತಮ ತೀರ್ಥರೆಂಬವರು ಮಹಾ ಮಹಿಮಶಾಲಿಗಳಾಗಿದ್ದರು. ಇವರು ಶ್ರೀ ವಾದಿರಾಜ ಯತಿಗಳ ಪೂರ್ವಾಶ್ರಮದ ತಮ್ಮಂದಿರು. ಇವರು ಶ್ರೀ ವಾದಿರಾಜರ ಯುಕ್ತಿಮಲ್ಲಿಕಾ ಗ್ರಂಥಕ್ಕೆ ವ್ಯಾಖ್ಯಾನವನ್ನೂ ಶ್ರೀ ವಿಷ್ಣುತೀರ್ಥರ ಸನ್ಯಾಸ ಪದ್ಧತಿಗೆ ಟೀಕೆಯನ್ನೂ ಪಾಖಂಡ ಮತಖಂಡನವೆಂಬ ಗ್ರಂಥಕ್ಕೆ ವ್ಯಾಖ್ಯಾನವನ್ನೂ ಬರೆದು, ಲೋಕೋಪಕಾರವನ್ನು ಮಾಡಿದ್ದಾರೆ. ಇವರ ವೃಂದಾವನವು ಭಂಡಾರಕೇರಿ ಮಠದಲ್ಲಿರುತ್ತದೆ.



## ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಗುರುಗಳಾದ

# ಶ್ರೀ ಸುಧೀಂದ್ರತೀರ್ಥರು



ಶ್ರೀ ಸುಧೀಂದ್ರತೀರ್ಥರು ಮಹಾಮಹಿಮಾಶಾಲಿಗಳೂ, ಉದ್ದಾಮ ಪಂಡಿತರೂ, ಸರಸ ಕವಿಗಳೂ ಆಗಿದ್ದರು.

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಆಶ್ರಮ ಗುರುಗಳು.

ಶ್ರೀ ಸುಧೀಂದ್ರರು ಶ್ರೀ ವಿಜಯೀಂದ್ರ ತೀರ್ಥರಿಂದ ಆಶ್ರಮ ಸ್ವೀಕರಿಸಿ ಸರ್ವಜ್ಞ ಸಿಂಹಾಸನಾರೋಹಣ ಮಾಡಿದರು. ಶ್ರೀ ವಿಜಯೀಂದ್ರ ಮಹಾ ಸ್ವಾಮಿಗಳಲ್ಲಿ ಶಾಸ್ತ್ರಾಭ್ಯಾಸ ಮಾಡಿ ಅವರಂತೆಯೇ ಚತುಃಷಷ್ಟಿ ಕಲಾ ಪರಿಣತರೂ ಆದರು.

ದೇಶ ಸಂಚಾರ ಮಾಡಿ ವಾದಿಗಳನ್ನು ನಿಗ್ರಹ ಮಾಡಿ ಸರ್ವಜ್ಞ ಸಿದ್ಧಾಂತವನ್ನು ಪ್ರಚಾರ ಮಾಡಿದರು.

ಸದ್ಯುಕ್ತಿ ರತ್ನಾಕರ, ಮಲ್ಪ ಸೂತ್ರ ಪ್ರದೀಪ, ಭಾಗವತ ದ್ವಿತೀಯ, ಏಕಾದಶ ಸ್ಕಂಧಗಳಿಗೆ ವ್ಯಾಖ್ಯಾನ ಮುಂತಾದ ಶಾಸ್ತ್ರೀಯ ಗ್ರಂಥಗಳನ್ನು ರಚಿಸಿದ್ದಲ್ಲದೆ ಸುಭದ್ರಾ ಪರಿಣಯ ನಾಟಕ, ವ್ಯಾಸರಾಜಾಭ್ಯುದಯ, ಅಮೃತಾಹರಣ, ದಯಾಳು ಶತಕ,

ವೈರಾಗ್ಯ ಶತಕ ಮುಂತಾದ ಕಾವ್ಯಗಳನ್ನೂ, ಅಲಂಕಾರ ಮಂಜರಿ, ಅಲಂಕಾರ ನಿಕಷ ಮುಂತಾದ ಶಾಸ್ತ್ರೀಯ ಸಾಹಿತ್ಯ ಗ್ರಂಥಗಳನ್ನು ಬರೆದಿದ್ದಾರೆ.

ಇವರು ಬಹು ಕಾಲ ಶ್ರೀ ರಾಮ ದೇವರ ಪೂಜೆಯನ್ನು ಮಾಡುತ್ತ ಶ್ರೀ ಮಠದ ಕೀರ್ತಿಯನ್ನೂ ವೈಭವವನ್ನೂ ಹೆಚ್ಚಿಸಿದರು.

ವೈಷ್ಣವ ಸಮಾಜದ ಶಕ ಪುರುಷರೆನಿಸಿದ ಶ್ರೀ ರಾಘವೇಂದ್ರ ಗುರು ಸಾರ್ವಭೌಮರಿಗೆ ಆಶ್ರಮನಿತ್ತು ಶಾಲಿವಾಹನ ಶಕೆ ೧೫೪೪ ಫಾಲ್ಗುಣ ಕೃಷ್ಣ ದ್ವಿತಿಯಾ ೧೬೨೩ನೇ ಇಸ್ವಿದಿನ ವ್ಯಾಸ ರಾಜರ ವೃಂದಾವನದ ಹತ್ತಿರ ನವ ವೃಂದಾವನದಲ್ಲಿ ಹರಿಧ್ಯಾನಪರರಾನರು.

ಕುಶಾಗ್ರ ಮತಯೇ ಭಾನು ದ್ಯುತಯೇ ।
ಆರಾಧಿತ ಶ್ರೀಪತಯೇ ಶ್ರೀ ಸುಧೀಂದ್ರ ಯತಯೇ ನಮಃ ॥



## ಪುಣ್ಯಶ್ಲೋಕರಾದ

# ಶ್ರೀ ಮದ್ವಾದಿರಾಜ ಗುರುವರ್ಯರು



ಶ್ರೀಮದಾನಂದತೀರ್ಥ ಭಗವತ್ಪಾದರು ಶ್ರೀಮದುಡುಪಿ ಕ್ಷೇತ್ರದಲ್ಲಿ, ವೇದಾಂತ ಸಾಮ್ರಾಜ್ಯದ ಆಳುವಿಕೆಗಾಗಿಯೂ ದ್ವಾರಕೆಯಿಂದ ಬಂದಿರುವ ಶ್ರೀಕೃಷ್ಣನ ಪೂಜೆಗಾಗಿಯೂ, ಎಂಟುಜನ ಬ್ರಹ್ಮಚಾರಿಗಳನ್ನಾಗಿಸಿ ಪರಮಹಂಸ ಸನ್ಯಾಸ ದೀಕ್ಷೆಯನ್ನಿತ್ತು ಪ್ರತಿಯೊಬ್ಬರಿಗೂ ತನ್ನ ಕರಾರ್ಚಿತ ಪ್ರತಿಮೆಯನ್ನಿತ್ತು ತನ್ನವತಾರ ಕಾರ್ಯವನ್ನು ಪೂರೈಸಿ ಬದರಿಕಾಶ್ರಮವನ್ನು ಸೇರಿ ಶ್ರೀ ವ್ಯಾಸದೇವರ ಸೇವಾನಿರತರಾಗಿರುವರು. ಇಂತಹ ಎಂಟು ಸಂಸ್ಥಾನಗಳಲ್ಲಿ ಶ್ರೀಮದಾಚಾರ್ಯರ ಸಹೋದರರಾದ ಶ್ರೀಮದ್ವಿಷ್ಣುತೀರ್ಥರ ಸಂಸ್ಥಾನವೂ ಒಂದಾಗಿರುತ್ತದೆ. ಈ ಸಂಸ್ಥಾನದಲ್ಲಿ ಹದಿನಾರು ಸನ್ಯಾಸಿಗಳಾಗಿ ಹದಿನೇಳನೆಯವರೇ ಶ್ರೀ ವಾಗೀಶತೀರ್ಥರೆಂಬ ಮಹಾತಪಸ್ವಿಗಳೂ, ಮೇಧಾವಿಗಳೂ, ತತ್ವವೇತ್ತರೂ, ತ್ರಿಕಾಲಜ್ಞರೂ ಆಗಿದ್ದರು. ಇವರು ಉಡುಪಿಯಿಂದ ಸುಮಾರು ಹದಿನೆಂಟು ಮೈಲುಗಳ ಉತ್ತರದಲ್ಲಿರುವ ಸಪ್ತ ಕ್ಷೇತ್ರಗಳಲ್ಲೊಂದಾದ ಶ್ರೀ ಕುಂಭಾಸಿ ಕ್ಷೇತ್ರದಲ್ಲಿರುವ ತಮ್ಮ ಮಠದಲ್ಲಿ, ಸಹಾದಲ್ಲಿ ಕೆಲವು ತಿಂಗಳುಗಳ

ವರೆಗೆ ತಮ್ಮ ಸಂಸ್ಥಾನದ ದೇವರನ್ನರ್ಚಿಸುತ್ತ ತಪಸ್ಸು ಮತ್ತು ಪಾಠ ಪ್ರವಚನವನ್ನು ಮಾಡುತ್ತಿದ್ದರು.

ಈ ಕ್ಷೇತ್ರದಿಂದ ಪೂರ್ವದಲ್ಲಿರುವ ಹೂವಿನಕೆರೆ ಎಂಬ ತಾಣದಲ್ಲಿ ಶಿವಳ್ಳಿ ಬ್ರಾಹ್ಮಣ ವರ್ಗಕ್ಕೆ ಸೇರಿದ ಸಾಮ ಶಾಖೆಯ ರಾಮಾಚಾರ್ಯರೆಂಬ ಪಂಡಿತರು ತಮ್ಮ ಸರಸ್ವತಿ ಮತ್ತು ಗೌರಿಯೆಂಬ ಪತ್ನಿಯರಿಂದ ಕೂಡಿಕೊಂಡು ಸತ್ಕರ್ಮಾನುಷ್ಠಾನಪರರಾಗಿ ವಾಸಿಸುತ್ತಿದ್ದರು. ಈ ದಂಪತಿಗಳಿಗೆ ಮಧ್ಯಗೇಹ ದಂಪತಿಗಳಂತೆ ಮೊದಲೊಂದು ಕನ್ಯೆ ಜನನವಾಗಿ ಆಮೇಲೆ ಮಕ್ಕಳಾಗಲಿಲ್ಲ. ಸಂತತಿಯಾಗವ ತರವೂ ತೋರಿಬರಲಿಲ್ಲ. ಆಗ ಅವರು ಮಧ್ಯಗೇಹ ದಂಪತಿಗಳಂತೆ ಸತ್ಪುತ್ರನ ಜನನಕ್ಕಾಗಿ ಅನೇಕ ವ್ರತಗಳನ್ನಾಚರಿಸಿ ದೇಹ ಶುದ್ಧಿಯನ್ನು ಪಡೆಯುತ್ತ, ಶ್ರೀ ವಾಗೀಶತೀರ್ಥ ಮುನಿಯನ್ನರ್ಚಿಸುತ್ತ, ಶ್ರೀ ಸಂಸ್ಥಾನದ ಭೂ ವರಾಹ ದೇವರನ್ನು ಬಹುವಾಗಿ ಪ್ರಾರ್ಥಿಸುತ್ತಿದ್ದರು. ಹೀಗಿರಲೊಮ್ಮೆ ರಾಮಾಚಾರ್ಯರ ಪತ್ನಿಯು ತನಗುತ್ತಮ ಮಗನು ಜನಿಸಿದರೆ ದೇವರಿಗೆ ಲಕ್ಷಾಲಂಕಾರವನ್ನರ್ಪಿಸುವೆನೆಂಬ ಹರಕೆಯನ್ನು ಹೇಳಿ ಕೊಂಡಳು.

ಈ ಕಾರಣದಿಂದಾಗಿ ಭಗವಂತನು ಪ್ರಸನ್ನನಾಗಿ ಶ್ರೀ ವಾಗೀಶ ಮುನಿಗಳಿಗೆ ಸ್ವಪ್ನದಲ್ಲಿ, ಈ ರಾಮಾಚಾರ್ಯ ದಂಪತಿಗಳಿಗೆ ಫಲ–ಮಂತ್ರಾಕ್ಷತೆಯನ್ನೀಯಬೇಕೆಂತಲೂ ಇದರಿಂದ ಜನಿಸುವ ಬಾಲಕನು ಮನೆಯ ಹೊರಗೆ ಜನಿಸಿದರೆ, ತಮ್ಮ ಸಂಸ್ಥಾನಕ್ಕರ್ಪಿಸಬೇಕೆಂದೂ ಸೂಚಿಸಿದರು. ಈ ಸೂಚನೆಯಂತೆ ವಾಗೀಶ ಮುನಿಗಳು ಆ ರಾಮಾಚಾರ್ಯರಿಗೆ ಫಲಮಂತ್ರಾಕ್ಷತೆಯನ್ನಿತ್ತು, ಸ್ವಪ್ನದಲ್ಲಿ ತೋರಿದ ಸೂಚನೆಯನ್ನು ಮಾಡಿದರು. ಆಗ ಆ ದಂಪತಿಗಳು ಖಿನ್ನರಾದರೂ ದೈವಲೀಲೆಯನ್ನು ಸ್ಮರಿಸಿ ತಮ್ಮ ಮನೆಗೆ ಹೊರಟರು.

ಇದರ ಫಲವಾಗಿ ರಾಮಾಚಾರ್ಯರ ಪತ್ನಿಯು ಗರ್ಭಿಣಿಯಾಗಿ ಒಂಬತ್ತು ತಿಂಗಳು ತುಂಬಿದ ಮೇಲೆ ಕ್ರಿ. ಶ. ೧೪೮೦ ನೆಯ ಶಾರ್ವರಿ ಸಂವತ್ಸರದ ಮಾಘ ಶುದ್ಧ ದ್ವಾದಶಿಯಂದು ಪ್ರಾತಃಕಾಲದಲ್ಲಿ ಗಂಡು ಶಿಶುವಿಗೆ ತಾಯಿಯಾದಳು. ಅಂದು ರಾಮಾಚಾರ್ಯರು ಸಾಧನ ದ್ವಾದಶಿ ಪಾರಣವನ್ನೇ ಮಾಡುತ್ತಿರುವಾಗ ಗರ್ಭಿಣಿಯು ಹೊರಗಿರುತ್ತ ತಮ್ಮ ಪೈರನ್ನು ಗೋವು ಮೆದ್ದು ಹಾಳುಮಾಡುತ್ತಿರುವದನ್ನು ಸಹಿಸದೆ ಮನೆಯಿಂದ ಉತ್ತರದಲ್ಲಿರುವ ಗದ್ದೆಗೆ ಬಂದಾಗ ಮೂರ್ಛಿತಳಾಗಿ ಆ ಗದ್ದೆಯಲ್ಲೇ ಬಿದ್ದು ಬಿಟ್ಟಳು. ಶ್ರೀ ವಾಗೀಶ ಮುನಿಗಳು ಇದನ್ನೆಲ್ಲವನ್ನು ಮೊದಲೇ ತಿಳಿದು ಆದಕ್ಕೆ ಬೇಕಾದ ವ್ಯವಸ್ಥೆಯನ್ನು ದಾದಿಯರಿಂದ ಮಾಡಿಸಿ ಆ ಬಾಲಕನನ್ನು ನೆಲಕ್ಕೆ ಮುಟ್ಟದಂತೆ ಚಿನ್ನದ ಹರಿವಾಣದಲ್ಲಿ ಹಿಡಿಸಿ ಆ ರಾಮಾಚಾರ್ಯರಲ್ಲಿಗೆ ಬಂದು ತಿಳಿಸಿದರು. ಆಗ ಆ ರಾಮಾಚಾರ್ಯರು ಆ ಬಾಲಕನನ್ನಾಗಲೇ ಶ್ರೀ ಶ್ರೀ ಗುರುಗಳಿಗೆ

ಅರ್ಪಿಸಿಬಿಟ್ಟರು. ಆಗ ಆ ಬಾಲಕನು ತನ್ನೆರಡು ಕೈಗಳನ್ನು ಜೋಡಿಸಿ ತಲೆಯ ಮೇಲೆ ಇಟ್ಟುಕೊಂಡನು.

ಅನಂತರ ಆ ಬಾಲಕನ ಲಾಲನೆ–ಪೋಷಣೆಗಳನ್ನು ಈ ರಾಮಾಚಾರ್ಯ ದಂಪತಿಗಳೇ ಶ್ರೀ ಗುರುಗಳಾಜ್ಞೆಯಿಂದ ಮಾಡತೊಡಗಿದರು. ಈ ಬಾಲಕನು ತನ್ನ ಬಾಲಲೀಲೆಯಿಂದ ಎಲ್ಲರ ಮೆಚ್ಚುಗೆಗೆ ಪಾತ್ರನಾಗಿದ್ದನು. ಐದನೆ ವರ್ಷದಲ್ಲಿ ತಂದೆಯು ಅಕ್ಷರಾಭ್ಯಾಸವನ್ನು ಮಾಡಿಸುವಾಗ ತನ್ನಲ್ಲಿರುವ ಸರ್ವಜ್ಞತೆಯನ್ನು ಶ್ರೀಮನ್ಮಧ್ವಾಚಾರ್ಯರಂತೆ ಪ್ರಕಟಿಸಹತ್ತಿದನು. ಎಂಟನೆಯ ವಯಸ್ಸಿನಲ್ಲಿ ಉಪನಯನವಾಯಿತು. ತಂದೆಯೇ ಮಗನಿಗೆ ವೇದವನ್ನೂ ಶಾಸ್ತ್ರವನ್ನೂ ಕಲಿಸತೊಡಗಿದನು. ಈ ಬಾಲ, ತಂದೆಯ ಉಪದೇಶಕ್ಕಿಂತಲೂ ಹೆಚ್ಚಿನ ವಿಷಯಗಳನ್ನು ಹೇಳುತ್ತ ಎಲ್ಲರನ್ನೂ ಬೆರಗುಗೊಳಿಸಿದನು.

ಈ ವಿಷಯವನ್ನು ಕೇಳಿದ ಶ್ರೀ ವಾಗೀಶ ಮುನಿಗಳು ಈ ಬಾಲಕನನ್ನು ತಮ್ಮ ಸಂಸ್ಥಾನಕ್ಕೆ ಕರೆಸಿಕೊಂಡು, ಹಲವು ತರದಿಂದ ಇವನ ಆಚಾರ–ವಿಚಾರಗಳನ್ನು ಪರೀಕ್ಷಿಸಿ ಯೋಗ್ಯ ದಿನದಲ್ಲಿ ಸುಮುಹೂರ್ತದಲ್ಲಿ ಶ್ರೀ ಸಂಸ್ಥಾನ ದೇವರಾದ ಶ್ರೀ ಭೂವರಾಹನ ದಯೆಯಿಂದ ಜನಿಸಿದ ವರಾಹನೆಂಬ ಈ ವಟುವಿಗೆ ಸನ್ಯಾಸ ದೀಕ್ಷೆಯನ್ನಿತ್ತು 'ಶ್ರೀ ವಾದಿರಾಜತೀರ್ಥ'ರೆಂಬ ಹೆಸರನ್ನಿಟ್ಟರು. ಅನಂತರ ಸಂಸ್ಥಾನದ ವಿಧಿಗಳನ್ನೆಲ್ಲವನ್ನು ಉಪದೇಶಿಸಿ, ತಮ್ಮಿಂದಲೇ— ವಿರಕ್ತರಾಗಿ ಆಶ್ರಮ ಸ್ವೀಕಾರ ಮಾಡಿ ಗೃಹಸ್ಥ ಸನ್ಯಾಸಿಗಳಾದ ವಿದ್ಯಾನಿಧಿ ಮುನಿಗಳಿಂದ ಶಾಸ್ತ್ರಾಧ್ಯಯನವನ್ನು ಮಾಡಿಸಿದರು. ಕೇವಲ ಈ ನಿಮಿತ್ತಮಾತ್ರದಿಂದಲೇ ಲೋಕೋತ್ತರ ಪಾಂಡಿತ್ಯವನ್ನು ಪಡೆದಿರುವ ಶ್ರೀ ಮದ್ವಾದಿರಾಜ ಮುನಿವರ್ಯರು ತಮ್ಮ ಗುರುಗಳಾಜ್ಞೆಯನ್ನು ಪಡೆದು ತೀರ್ಥಕ್ಷೇತ್ರ ಸಂಚಾರ ಸಂಕಲ್ಪಿಸಿದರು. ಆಗ ಅವರ ಜನನಿಯು ವಿಯೋಗ ಕಾತರಳಾಗಿ ದುಃಖಿಸತೊಡಗಲು ತನ್ನಂತೆಯೇ ಇರುವ ಕಂಚಿನ ವಿಗ್ರಹವನ್ನು ಮಾಡಿ ಇವನ್ನು ನೋಡುತ್ತಿದ್ದರೆ ವಿಯೋಗ ದುಃಖವಾಗುವದಿಲ್ಲೆಂದು ತಾಯಿಯನ್ನು ಸಂತೈಸಿ ಸಂಚಾರ ಮಾಡತೊಡಗಿ, ಹೋದಹೋದಲ್ಲಿಗೆ ತಕ್ಕ ತೀರ್ಥ ಕ್ಷೇತ್ರಗಳ ಅವುಗಳ ಒಡೆಯರ ವರ್ಣನೆಯನ್ನು ಮಾಡುತ್ತ ಅಲ್ಲಲ್ಲಿಗಿರತಕ್ಕವಾದಿಗಳನ್ನು ನಿಗ್ರಹಿಸುತ್ತ ಸನ್ಮತ ಪ್ರಚಾರಕರಾಗಿ ತಿರುಗುತ್ತಿದ್ದರು. ಈ ಕೃತಿಯು ಪಶ್ಚಿಮ–ಉತ್ತರ–ದಕ್ಷಿಣ ಪ್ರಬಂಧಗಳೆಂಬ ಭೇದವುಳ್ಳದ್ದಾಗಿ ತೀರ್ಥ ಪ್ರಬಂಧವೆಂದು ಹೆಸರುಳ್ಳದ್ದಾಗಿದೆ. ಇದನ್ನು ನಿತ್ಯ ಪಾರಾಯಣ ಮಾಡುತ್ತಿರುವವರು ಆ ತೀರ್ಥ ಸ್ನಾನವನ್ನು ಕ್ಷೇತ್ರಸ್ವಾಮಿಯ ದರ್ಶನ ಫಲವನ್ನು ಹೊಂದುವರು.

ಈ ಮಹಾನುಭಾವರು ತಮ್ಮ ಸೂಚನೆಯಂತೆ ಕನ್ನಡದಲ್ಲಿ ಲಕ್ಷ್ಮೀಶೋಭಾನವೆಂಬ ಹಾಡನ್ನು ರಚಿಸಿರುವರು. ಇವರಲ್ಲಿ ಶ್ರೀಮದ್ಭಾಗವತದ ಕ್ಷೀರ ಸಮುದ್ರಮಂಥನ

ಕಾಲದ ಲಕ್ಷ್ಮೀ ನಾರಾಯಣರ ವಿವಾಹದ ಕಥೆಯನ್ನು ಅಂದವಾಗಿ ಪೋಣಿಸಿ ಶ್ರೀ ವಿಷ್ಣುವಿನ ಸರ್ವೋತ್ತಮತೆಯನ್ನು ಚಂದವಾಗಿ ಎಲ್ಲರಿಗೂ ಮನದಟ್ಟಾಗುವಂತೆ ವರ್ಣಿಸಿರುವರು. ಅಲ್ಲದೆ ಮಾಂಗಲ್ಯ ಕಾಲದಲ್ಲಿ ಈ ಹಾಡನ್ನು ತಾಲ ಲಯಬದ್ಧವಾಗಿ ಹಾಡಿದರೆ ಮಾಂಗ್ಯಲ್ಯಾಭಿವೃದ್ಧಿಯಾಗುವದು. ಇದರಲ್ಲಿ ವರ್ಣಿಸಿರುವ ವಿಷಯಗಳು ಪಂಡಿತರಿಗೂ ವಿಚಾರ ಮಾಡಿ ತಿಳಿಯುವಂತಿವೆ. ಶ್ರೀ ವಾದಿರಾಜರೇ ಇದನ್ನು ಹಾಡಿ ವಿವಾಹ ಕಾಲದಲ್ಲಿ ಸರ್ಪವು ಕಚ್ಚಿ ಸಾಯಲು ಹೊರಟ ವರನನ್ನು ಬದುಕಿಸಿ ಆ ಮಾಂಗಲ್ಯವನ್ನು ನಡೆಯಿಸಿಕೊಟ್ಟು ಇದರ ಪ್ರತ್ಯಕ್ಷ ಫಲವನ್ನು ತೋರಿಸಿರುವರು.

ಇವರು ಪ್ರಯಾಗ ಕ್ಷೇತ್ರದಲ್ಲಿರುವ ಬ್ರಹ್ಮದೇವರ ಸಂಧ್ಯಾ ಮಂಟಪದಲ್ಲಿ ಧ್ಯಾನ ಪರಾಯಣರಾಗಿದ್ದಾಗ ಶ್ರೀ ವ್ಯಾಸದೇವರು ಮುನಿವೇಷದಿಂದವರಿಗೆ ದರ್ಶನವನ್ನಿತ್ತು ಮಗುವೆ! ನಿನ್ನ ತಾಯಿಯು ಹೇಳಿಕೊಂಡ ಲಕ್ಷಾಲಂಕಾರಾರ್ಪಣೆಗಾಗಿ ನೀನು ಭಾರತ ದೊಳಗಿನ ಲಕ್ಷ ಶ್ಲೋಕಗಳ ಕಠಿಣ ತಾತ್ಪರ್ಯವನ್ನು ವಿವರಿಸಿ ಬರೆದು ನನಗರ್ಪಿಸಿವರೆ ಲಕ್ಷಾಲಂಕಾರಾರ್ಪಣ ಫಲವು ಬರುವದೆನಲು ಇವರು ಲಕ್ಷಾಲಂಕಾರವನ್ನು ಬರೆದು ಬದರಿಕಾಶ್ರಮಕ್ಕೆ ಶ್ರೀ ಮನ್ಮಧ್ವಾಚಾರ್ಯರಂತೆ ಹೋಗಿ ಶ್ರೀ ವ್ಯಾಸದೇವರಿ ಗರ್ಪಿಸಿದರು. ಈ ಲಕ್ಷಾಲಂಕಾರ ಗ್ರಂಥದಿಂದ ಭಾರತದ ಬಹುಭಾಗದ ತಾತ್ಪರ್ಯವು ಸುಲಲಿತವಾಗುತ್ತದೆ.

"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂಸಮಾಃ"

ಎಂಬ ಈಶಾವಾಸ್ಯ ಉಪನಿಷತ್ತಿನ ಮಂತ್ರಾರ್ಥದ ಮೇಲ್ಮೆಗೆ ಒಂದು ನೂರಾ ಇಪ್ಪತ್ತು ವರುಷ ತುಂಬ ಬದುಕನ್ನು ಬಾಳಿದ ಸ್ವಾದಿ ವಾದಿರಾಜರು ಸಜೀವ ನಿದರ್ಶನ ರಾಗಿದ್ದಾರೆ. ಕಲಿಯುಗದಲ್ಲಿ ದೇವರನ್ನು ಕಂಡು ಆತ್ಮಾನುಭವವನ್ನು ಉಂಡ ಕೆಲವೇ ಪ್ರಭಾವಿಗಳಾದ ಅನುಭಾವಿಗಳಲ್ಲಿ ಶ್ರೀಮದ್‌ವಾದಿರಾಜರು ಅಗ್ರಗಣ್ಯರು. ಶ್ರೀಗಳವರ ಜೀವನ ಬ್ರಹ್ಮನಂತೆ ಚತುರ್ಮುಖ ಜೀವನ. ಅವರು ಯತಿಗಳಾದರೂ ರಾಜರೆಂದೇ ಕರೆಯಲ್ಪಡುತ್ತಾರೆ. ಯುಕ್ತಿಮಲ್ಲಿಕೆ, ಗುರ್ವರ್ಥದೀಪಿಕಾದಂಥ ಗಹನತರ ಉದ್-ಗ್ರಂಥಗಳನ್ನು ಬರೆದು ಮಹಾ ದಾರ್ಶನಿಕರೆನಿಸಿದರೂ, ಮಾಘನಂತಹ ಮಹಾಕೃತಿ ಯಾದ ಶಿಶುಪಾಲ ವಧವನ್ನು ರಸನಿರ್ಭರತೆಯಿಂದ ಮೀರಿಸುವ ರುಕ್ಮಿಣೀಶ ವಿಜಯ ವೆಂಬ ಮಹಾಕಾವ್ಯವನ್ನು ಬರೆದು ಕವಿರಾಜರೂ ಆಗಿದ್ದಾರೆ. ಅವರ ಅಶ್ವಧಾಟಿ ಕಾವ್ಯವಲ್ಲಿ ಹೆಜ್ಜೆ–ಹೆಜ್ಜೆಗೂ ಶಾರದೆ ಗೆಜ್ಜೆ ಕಟ್ಟಿಕೊಂಡು ಕುಣಿದಂತೆ ಪ್ರಾಸಾ-ಲಂಕಾರಗಳ ಕಿಂಕಿಣಿನಾದ ಕೇಳಿಬರುವದು. ರುಕ್ಮಿಣೀಶ ವಿಜಯದಲ್ಲಿಯಂತೂ ಅವರ ಕಲ್ಪನಾ ಸೌಂದರ್ಯ ಗರಿಗೆದರಿದೆ. ಭಾಷೆ ಈ ಪರಿಯಿಂದ ಭಾವದರಿಂಗಣಗುಣಿತಕ್ಕೆ ಅನುಗುಣವಾಗಿ ತಾಳಹಾಕಿ ರಸಮೇಳವನ್ನು ಉಂಟು ಮಾಡಿದ ಸಂದರ್ಭ ಸಂಸ್ಕೃತ ಸಾಹಿತ್ಯದಲ್ಲಿಯೇ ವಿರಳ. ವೈರಾಗ್ಯ ಭೂಮಿಕೆಯಲ್ಲಿ ನಿಲ್ಲಿಸಿದ ಭಕ್ತಿಯ ಭಿತ್ತಿಯ

ಮೇಲೆ ಶೃಂಗಾರ ರೇಖೆಗಳಿಂದಲೇ ಶ್ರೀ ಕೃಷ್ಣನ ರಸಮಯ ಮೂರ್ತಿಯನ್ನು ರೂಪಿಸಿದ್ದು ಅವರ ಅನ್ಯಾದೃಶವಾದ ವೈಶಿಷ್ಟ್ಯವಾಗಿದೆ.

ಮಹಾರಾಷ್ಟ್ರ ದೇಶದ ರಾಜಧಾನಿಯಾದ ಪುಣೆ ನಗರದಲ್ಲಿ ಮಾಘನ ಶಿಶು ಪಾಲವಧದಂಥ ಶಬ್ದಾರ್ಥ ಸುಂದರವಾದ ಬಂಧುರ ಕಾವ್ಯವೇ ಇಲ್ಲವೆಂದುಕೊಂಡು ಅದನ್ನು ಮೆರಸ ಹೊರಟ ಪಂಡಿತ ಮಂಡಲಿಯು ರಾಜರ ಈ ಮಹಾಕಾವ್ಯದಲ್ಲಿಯ

ಕುಂಡಲೀಕೃತ ಮನೋರಮು ರಾಮಾ
ಖಂಡಿತಾನನ ಸರೋರುಹ ಧಾಮಾ
ಗಂಡ ಚುಂಬನ ಕುತೂಹಲ ಕಾಮಾ ||

ಶಂಭ್ವಾದ್ಯೈಃ ಪರಿಸೇವಿತಾಂ ಸುವಸನಾಂ ಜಾಂಬೂನದಾಲಂ ಕೃತಾಂ
ಅಂಬಾಂ ತಾಂ ಪ್ರಣತೋಸ್ಮಿ ಕೃಷ್ಣರಮಣೀಂ ಲಂಬಾಲಕಾಂ ರುಕ್ಮಿಣೀಂ||

ಮುಂತಾದ ಪದಪುಂಜಗಳಲ್ಲಿ ಅಲ್ಲಿಯ ಸುಮಧುರ ಶಬ್ದ ಕುಂಜಗಳಲ್ಲಿ ಪುಟಿ ಯುವ ರಸಕಾರಂಜಿಯನ್ನು ಕಂಡು ವಿಸ್ಮಯ ಮೂಢರಾದರಂತೆ. ಕಾವ್ಯ ಪ್ರಪಂಚದಲ್ಲಿ ತಮ್ಮ ಕೃತಿ ಕೌಶಲ್ಯದಿಂದ ಹೊರ ನಾಡಿನಲ್ಲಿ ಕನ್ನಡಿಗರ ಗೆಲುವಿನ ಬಾವುಟವನ್ನು ಎತ್ತಿ ಹಿಡಿದ ಮಾಘ ಭಾರವಿಗಳಂಥವರ ಕವಿಗಳಿಗೆ ಹೆಗಲೆಣೆಯಾಗಿ ನಿಂತವರೆಂದರೆ ಶ್ರೀ ರಾಜರೊಬ್ಬರೇ ಎಂದು ಹೇಳಬಹುದು.

ಅವರು ಆ ಮಹಾರಾಷ್ಟ್ರದ ಮಂದಿರದಲ್ಲಿ ಕನ್ನಡಿಗರ ವಿಜಯದುಂದುಭಿಯನ್ನು ಹೊಡೆದಂತೆ ವೈಷ್ಣವರಿಗೆ ಅದರಲ್ಲಿಯೂ ಮಾಧ್ವರಿಗೆ ಸಾಹಿತ್ಯದಲ್ಲಿ ಗತಿಯು ಇಲ್ಲ ಎಂಬ ಪುರಾತನ ಅಪವಾದವನ್ನು ಅಳಿಸಿ, ಮಾಧ್ವರು ಮನಸ್ಸು ಮಾಡಿದರೆ ಎಂಥ ಕಾವ್ಯ ಶಾಸ್ತ್ರಗಳನ್ನೂ ಸರಸವಾಗಿ ಸೃಜಿಸಬಲ್ಲರು ಎನ್ನುವವನ್ನು ಜಗತ್ತಿಗೆ ತೋರಿಸಿ ಕೊಟ್ಟರು.

ಅವರ ಯುಕ್ತಿಮಲ್ಲಿಕೆ ಶಾಸ್ತ್ರೀಯ ಸಾಹಿತ್ಯದಲ್ಲಿ ಒಂದು ಸೀಮೆಗಲ್ಲು. ಶಾಸ್ತ್ರ, ಸಾಹಿತ್ಯ ಇವೆರಡರ ಮಧುರ ದಾಂಪತ್ಯ ರಸಾನುಬುಧಗಳು ಯುಕ್ತಿಮಲ್ಲಿಕೆಯನ್ನು ಬಿಟ್ಟರೆ ಬೇರೆಯಲ್ಲಿಯೂ ನೋಡಲಿಕ್ಕೆ ಸಿಕ್ಕಲಾರವು. ಶಾಸ್ತ್ರ ಮತ್ತು ಸಾಹಿತ್ಯಗಳೆಂದರೆ ಬೆಂಕಿ ನೀರು ಅಥವಾ ಅಹಿನಕುಲ ಎಂಬ ಕಲ್ಪನೆಯನ್ನು ಕಳೆಮ ಶಾಸ್ತ್ರೀಯ ವಾಙ್ಮ ಯದ :ರುಕ್ಷಾರಣ್ಯದಲ್ಲಿ ಸಾಹಿತ್ಯದ ಸುಸ್ವರ ಸಂಗೀತ ಕೇಳಿ ಬರುವಂತೆ ಮಾಡಿದ ಶ್ರೇಯಸ್ಸು ರಾಜರಿಗೆ ಮಾತ್ರ ಮೀಸಲು.

ಸುಧಾ ಹಾಗೂ ತತ್ತ್ವ ಪ್ರಕಾಶಿಕೆಗಳಿಗೆ ಅವರು ಬರೆದ ಗುರ್ವರ್ಥ ದೀಪಿಕೆ ಎಂಬ ಟೀಕೆ ವೇದಾಂತಾರ್ಥದ ರಹಸ್ಯೋದ್ಘಾಟನೆಗೆ ಕುಂಚಿಕೆಯಂತೆ ಪರಮೋಪಕಾರಕವಾ

ಗಿವೆ. ಅವರು ತಾತ್ಪರ್ಯ ನಿರ್ಣಯಕ್ಕೆ ಬರೆದ ಶ್ರೀಲ್ಕ ಟಿಪ್ಪಣಿಯು ಸರ್ವಜ್ಞಾಚಾರ್ಯರ ಜ್ಞಾನ ಮೇರುವಿಗೆ ರನ್ನಗನ್ನಡಿಯನ್ನು ಹಿಡಿದಂತಿದೆ. ಶ್ರುತ್ಯರ್ಥ ಪ್ರಕಾಶಿಕೆಯು ರಾಜರ ವೇದಾರ್ಥ ವಿಕ್ರಮದ ಬೌದ್ಧಿಕ ಸಾಕ್ಷಾತ್ಕಾರಕ್ಕೆ ಲಘುಸಾಧನೆಯಾಗಿದೆ. ಉಪನ್ಯಾಸ ಭಾರತೀ ಮತ್ತು ಅವರ ಸರಸ ಭಾರತೀ ವಿಲಾಸ ಮೊದಲಾದ ಗ್ರಂಥಗಳು ವಾದಿರಾಜರ ವಾದ ಕೌಶಲ್ಯ, ವಾಗ್ವೈಖರೀ, ವಿಷಯ ವಿನ್ಯಾಸ ಪಾಟವ ಮತ್ತು ನಿರೂಪಣ ನೈಪುಣ್ಯಗಳಿಗೆ ನಿತ್ಯನಿದರ್ಶನಗಳಾಗಿವೆ. ಅವರು ಬರೆದ ಅನೇಕಾನೇಕ ಸ್ತೋತ್ರ ಪ್ರಬಂಧಗಳ ಪ್ರತಿ ಪಾದ ಪಲ್ಲವಿಗಳ ಪದಪದಗಳಲ್ಲಿಯೂ ವಾದಿರಾಜರ ಭಾವಪೇಶಲತೆ ಮತ್ತು ಮಾತಿನ ರಸಾಲತೆಗಳು ಮೂಡಿ ನಿಂತಿವೆ. ಅದ್ದರಿಂದ ರಾಜರ ಕೃತಿಗಳೆಂದರೆ ಆನಂದದ ಅವಿತರ ಒರತೆ. ಅವುಗಳನ್ನು ಓದುವವರೇ ಇಲ್ಲ ಎನ್ನುವದೊಂದೇ ಇಂದಿನ ಸಾರಸ್ವತ ಪ್ರಪಂಚದಲ್ಲಿಯ ಮುಖ್ಯ ಕೊರತೆ.

ಶ್ರೀ ರಾಜರು ಸಂಸ್ಕೃತದ ಶಾಸ್ತ್ರ ಸಾಹಿತ್ಯಗಳಲ್ಲಿ ತಮ್ಮದೇ ಒಂದು " ವಾದಿರಾಜ ವೀಥಿ " ಯನ್ನು ನಿರ್ಮಾಣ ಮಾಡಿದಂತೆ ಕನ್ನಡದಲ್ಲಿಯೂ ಹೊಸ ದಾರಿಯನ್ನೇ ತುಳಿದಿದ್ದಾರೆ. ಇಂಥ ಅಪ್ರತಿಮ ಸಂಸ್ಕೃತ ಪಾಂಡಿತ್ಯ ಶ್ರೀಮದಾಚಾರ್ಯರ ಮಹಾ ಸಂಸ್ಥಾನ ಮತ್ತು ಪರಮಹಂಸ ಪದವಿಗಳ ತ್ರಿಕೂಟಾಚಲದ ಶಿಖರ ಶೃಂಗದಲ್ಲಿ ವಿರಾಜುಮಾನರಾಗಿದ್ದರೂ ಅವರು ಕನ್ನಡದ ಭಾಷೆಯನ್ನು ಕಡೆಗಣಿಸದೆ ಆ ಮಹಾ ತಾಯಿಯ ಅಡಿದಾವರೆಗಳಿಗೆ ಅನೇಕ ಭಕ್ತಿ ಕುಸುಮಗಳನ್ನು ಸಮರ್ಪಿಸಿದ್ದಾರೆ. ಉಡುಪಿಯ ಪೀಠ ಪರಂಪರೆ ಹಾಗೂ ಶ್ರೀ ಕೃಷ್ಣ ಪೂಜಾ ಪರಿಸರದ ಸಂಸ್ಕೃತದ ಅಂತಃಪುರ ವಲ್ಲಿಯೂ ಕೂಡ ಕನ್ನಡದ ಕಿನ್ನರಿಯ ಮಂಜುಘೋಷ ಇಂದಿಗೂ ಕೇಳಿ ಬರುತ್ತಿದ್ದರೆ ಅದು ಶ್ರೀ ವಾದಿರಾಜರ ಪುಣ್ಯ. ಅವರ " ಲಕ್ಷ್ಮೀಮಿ ನಾರಾಯಣ " ಎಂಬ ಪದಕ್ಕೆ. ಸನ್ಯಾಸಿಗಳ ಆನ್ಹಿಕದಲ್ಲಿಯೂ ಕೂಡ ಪುರುಷ ಸೂಕ್ತದ ಪಂಕ್ತಿಯಲ್ಲಿ ಸ್ಥಾನ ದೊರೆತದ್ದು ಗಮನೀಯ ಅಂಶವಾಗಿದೆ. ನಮನೀಯ ವಿಷಯವಾಗಿದೆ.

ವಾದಿರಾಜರ ಕನ್ನಡದ ಮೇಲಿನ ಪ್ರಭುತ್ವ ಹಾಗು ಕಲ್ಪನೆಯ ಚಾತುರ್ಯ ತಿಳಿದುಕೊಳ್ಳಲು ಈ ಒಂದೇ ಪದ್ಯವಾದರೂ ಸಾಕಾಗಬಹುದು. ಇದರಲ್ಲಿ ಭಗವಂತನ ದಶಾವತಾರಗಳನ್ನೆಲ್ಲ ಒಂದೊಂದು ವಿಧದ ಚಮತ್ಕಾರ ರೀತಿಯಿಂದಲೇ ಬಣ್ಣಿಸಿದ್ದಾರೆ. ಇದು ಕೊನೆಯದಾದ ಕಲ್ಕಿಯ ವರ್ಣನೆ—

ಮಿಂಚನೊಡ್ಡಿದ ಮೇಘವಂದದ
ಪಂಚವರ್ಣದ ತುರುಗವೇರಿ
ಸಂಚರಿಸಿ ಮ್ಲೇಂಛರನು ಗೆಲಿದ ಶಿ-
ಲೋಛಜೀವರ ಪಲವನೆ ( ೧ )

ಇದೇ ಗೀತದ ಇನ್ನೊಂದ ಪದ್ಯದಲ್ಲಿಯ ವಕ್ರೋಕ್ತಿಯ ಚಮತ್ಕಾರವನ್ನು ನಿರೀಕ್ಷಿಸಿರಿ.

ಪಕ್ಷಿ ವಾಹನವಂತೆ ನಿನಗೆ
ಸರ್ಪ ನಿನ್ನ ಶಯನವಂತೆ
ಮುಕ್ಕಣ್ಣ ಮೊಮ್ಮಗನಂತೆ
ಮುದ್ದು ಮುಖದ ಚೆಲುವನಂತೆ (೧)

ಕಡಲ ಮಗಳ ಗಂಡನಂತೆ
ಕರಡಿ ಮಗಳು ಮಡದಿಯಂತೆ
ಬೆಡಗಿನಿಂದ ಬಂದೆಯಂತೆ
ಮಧ್ವ ಮುನಿಗೆ ಒಲಿದಿಯಂತೆ (೨)

ಹೀಗೆ ತಮ್ಮ ಶಬ್ದ ಶಕ್ತಿಯಿಂದ ವಾಚಾಮಗೋಚರವಾದ ಅಪಾರ ಶಕ್ತಿಯನ್ನು ಒಲಿಸಿ ಕುಣಿಸಿ ಬಿಟ್ಟ ಶ್ರೀ ರಾಜರು ಪಂಡಿತ ವಂದ್ಯರೂ ಪಾಮರೋದ್ಧಾರಕರೂ ಆಗಿದ್ದಾರೆ.



## ವಾಕ್ಯಾರ್ಥ ಚಂದ್ರಿಕಾಕಾರರಾದ

# ಶ್ರೀ ವಿದ್ಯಾಧೀಶರು

ಶ್ರೀಮನ್ನ್ಯಾಯ ಸುಧಾ ಗ್ರಂಥದ ಮೇಲೆ ನೂರಾರು ಟಿಪ್ಪಣಿಗಳಾದರೂ ವಾಕ್ಯಾರ್ಥ ಚಂದ್ರಿಕೆಯ ಸ್ಥಾನ ಚಂದ್ರಿಕಾ ಸ್ಥಾನವೇ. ಅಂತರಿಕ್ಷದಲ್ಲಿ ಲಕ್ಷ ಲಕ್ಷ ನಕ್ಷತ್ರಗಳು ಮಿಂಚಿ ಮಿನುಗಿ ಬೆಳಕು ಬೀರುತ್ತಿದ್ದರೂ ಸರ್ವತ್ರಾಪಿ ಸುಧೆಯನ್ನು ಸೂರೆಗೈಯ್ಯುವ ಚಂದ್ರಿಕೆಯ ಕಾಂತಿಯೇ ಬೇರೆ, ಸೊಬಗೇ ಬೇರೆ, ಸೊಗಸೇ ಬೇರೆ. ಆ ಚಂದ್ರಿಕೆಯಂತೆ ಶ್ರೀ ವಿದ್ಯಾಧೀಶರ ವಾಕ್ಯಾರ್ಥ ಚಂದ್ರಿಕೆಗೂ ಅನನ್ವಯದಿಂದಲೇ ಅಲಂಕಾರ ಪೂಜೆ.

ಇಂಥ ಗ್ರಂಥ ರತ್ನವನ್ನು ಬರೆದು ವೇದಾಂತ ವಾಙ್ಮಯಕ್ಕೆ ಮಣಿ ಮಂಟಪವನ್ನು ಕಟ್ಟಿದ ಶ್ರೀ ವಿದ್ಯಾಧೀಶ ತೀರ್ಥರು ಶ್ರೀ ಉತ್ತರಾದಿ ಮಠದ ಪೀಠಿಗೆಯಲ್ಲಿ ಬೆಳಗಿದ ಓರ್ವ ಸುಧಾಕರ.

ಇವರು ದಕ್ಷಿಣ ಭಾರತದ ಸುಪ್ರಸಿದ್ಧ ವಿದ್ವತ್ ಕುಟುಂಬವಾದ ಪಾಂಡುರಂಗಿ ಮನೆತನದವರು. ಇವರ ಪೂರ್ವಾಶ್ರಮದ ತಂದೆ ಆನಂದ ಭಟ್ಟಾರಕರು 'ಕಂಟಕೋದ್ಧಾರ' ವೆಂಬ ಗ್ರಂಥ ಕರ್ತರು. ಇವರ ತಮ್ಮ ಕೇಶವ ಭಟ್ಟಾರಕರು 'ಶೇಷವಾಕ್ಯಾರ್ಥ ಚಂದ್ರಿಕಾ', ದಶ ಪ್ರಕರಣ ಗುರುರಾಜೀಯ ಟಿಪ್ಪಣಿ, ವಾಕ್ಯಾರ್ಥ ಮಂಜರಿ ಮುಂತಾದ ಅನೇಕ ಗ್ರಂಥ ಕರ್ತರು. ಈ ವಿದ್ವತ್ ಕುಟುಂಬದಲ್ಲಿ ನರಸಿಂಹಾಚಾರ್ಯ ಪಾಂಡುರಂಗಿಯವರು ಒಂದು ಕೊಹಿನೂರ ರತ್ನ.

ಇವರ ಪ್ರಚಂಡವಾದ ಪಾಂಡಿತ್ಯ ಮತ್ತು ತಪಃ ಶಕ್ತಿಗಳನ್ನು ಕಂಡು ಉತ್ತರಾದಿ ಮಠದ ಶ್ರೀ ವೇದವ್ಯಾಸ ತೀರ್ಥರು ಮುಗ್ಧರಾಗಿ ವಿದಗ್ಧ ಪುಂಗವರಿಗೆ ಸರ್ವಜ್ಞ ಸಿಂಹಾಸನವನ್ನು ಒಪ್ಪಿಸಿ "ಶ್ರೀ ವಿದ್ಯಾಧೀಶತೀರ್ಥ" ರೆಂದು ನಾಮಕರಣ ಮಾಡಿದರು.

ತಮ್ಮ ಶ್ರೀ ಗುರುಗಳ ವೃಂದಾವನ ಪ್ರವೇಶಾನಂತರ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ದಿಗ್ವಿಜಯಕ್ಕೆ ಹೊರಟರು. ಆಸೇತು ಹಿಮಾಚಲ ಪರ್ಯಂತರ ಚಂಡ ಮಾರುತನಂತೆ ಸಂಚಾರ ಮಾಡಿ ಪರವಾದಿಗಳ ಪ್ರಬಲ ಕೇಂದ್ರ ಸ್ಥಳಗಳಿಗೆ ಹೋಗಿ ವಾದಕ್ಕೆ ಆಹ್ವಾನಿಸುತ್ತಿದ್ದರು. ಗವಿಯಲ್ಲಿ ಮಲಗಿದ ಸಿಂಗಗಳನ್ನು ಕೆಣಕಿ ಎಬ್ಬಿಸಿದಂತೆ ಎಲ್ಲ ವಿಮತೀಯ ವಿದ್ವಾಂಸರನ್ನು ವಾದರಂಗದಲ್ಲಿ ಕೂಡಿಸಿ ಅವರನ್ನೆಲ್ಲ ತಮ್ಮ ವಿಚಿತ್ರ

ವಾದ ವಾಕ್ಯಾರ್ಥ ವೈಖರಿಯಿಂದ ಮೂಕ ಮುಗ್ಧರನ್ನು ಮಾಡಿ ಮಧ್ವ ಮತದ ಮುದ್ರೆಯೊತ್ತಿ ವೈಷ್ಣವ ದೀಕ್ಷೆಯನ್ನಿತ್ತು ಕಳಿಸುತ್ತಿದ್ದರು.

ಶ್ರೀಗಳವರು ರಾಜಮಹೇಂದ್ರಿ, ಪಂಢರಪುರ ಮೊದಲಾದ ಆಂಧ್ರ, ಮಹಾರಾಷ್ಟ್ರ ದೇಶಗಳಲ್ಲಿ ದಿಗ್ವಿಜಯ ಮಾಡಿಕೊಂಡು ಶ್ರೀ ಮಳಖೇಡ ಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಟೀಕಾಕೃತ್ಪಾದರ ಎದುರು ಶ್ರೀ ಶ್ರೀಗಳವರು ಆದ್ಯ, ವಾಯಿ, ಗಲಗಲಿ, ಪಾಂಡುರಂಗಿ ಮುಂತಾದ ಮನೆತನದ ಅನೇಕ ವಿದ್ವಾಂಸರಿಗೆ ಶ್ರೀ ಜಯ ತೀರ್ಥರ ಎದುರು ಸಮಗ್ರ ಸುಧಾ ಗ್ರಂಥ ಪಾಠ ಹೇಳಿ ಮಂಗಳ ಮಾಡಿದರು.

ಅನಂತರ ಶ್ರೀಗಳವರು ನೂರಾರು ಜನ ತಮ್ಮ ದಿಗ್ಗಜ ಶಿಷ್ಯ ಪಂಡಿತರೊಡ ಗೂಡಿ ದೇಶ ವಿದೇಶಗಳಲ್ಲಿ ದಿಗ್ವಿಜಯ ಮಾಡುತ್ತ ವೇಣುಪುರಿಗೆ ಬಂದರು. ವಿದ್ಯೆಯ ಆಗರವಾದ ಅಲ್ಲಿ ಶ್ರೀ ಶ್ರೀಗಳವರು ದ್ವೈತ ಧ್ವಜವನ್ನು ಎತ್ತಿಹಿಡಿದರು.

ಹೋದಹೋದಲ್ಲೆಲ್ಲ ಅದ್ವೈತ ಮತವನ್ನು ಖಂಡಿಸುತ್ತಲಿರುವ ಶ್ರೀಗಳವರ ವಾದ ಕ್ರಮವನ್ನು ಕಂಡು ಈ ದೇಶದ ಅದ್ವೈತಾಭಿಮಾನಿಗಳೆಲ್ಲರೂ ಒಟ್ಟಾಗಿ ಅವರನ್ನು ಎದುರಿಸಬೇಕೆಂದು ಕಾಶಿ ಮುಂತಾದ ದೇಶ ವಿದೇಶಗಳಿಂದ ತಮ್ಮ ಮತದ ನೂರಾರು ಜನ ಅದ್ವೈತ ವಿದ್ವಾಂಸರನ್ನು ಕರೆಯಿಸಿದರು.

ಶ್ರೀ ಮಾಧ್ವ ಪರಂಪರೆಯ ಪ್ರತಿಭಾ ಪಾಂಡಿತ್ಯದ ಪ್ರತೀಕದಂತಿರುವ ಈ ಪರಿವ್ರಾಜಕ ಪರಿವೃಢರ ವಾದಾನುವಾದಗಳ ವೇಗ ವಿಕ್ರಮಗಳನ್ನು ತಿಳಿಯದೆ, ತಾಳದೆ ಕಾಶಿಯ ಕುಶಲ ಪಂಡಿತ ಕೇಸರಿಗಳೆಲ್ಲ ತತ್ತರಿಸಿ ಹೋದರು. ತರ್ಕದಲ್ಲಿ ಶ್ರೀಗಳವರು ಪ್ರಾಚೀನ ನವೀನ ಪ್ರಕ್ರಿಯೆಗಳನ್ನೆಲ್ಲ ತಮ್ಮ ಕ್ರಕಚ ಕರ್ಕಶವಾದ ವಾಗ್ವೈಖರಿಯಿಂದ ಖಂಡಿಸಿ ಹಾಕುತ್ತಿದ್ದರು. ಅವರು ವ್ಯಾಕರಣದಲ್ಲಿಯಂತೂ ಶ್ರೀಗಳು ಪಾಣಿನಿಯ ಅಪರಾವತಾರ. ಶಾಸ್ತ್ರದ ಮೇಲೆ ನಡೆದ ವಿಚಾರ ವಿಮರ್ಶೆಯಲ್ಲಿ ಅಲ್ಲಿಯ ಮೀಮಾಂಸಾ ಪಂಡಿತರು ಶ್ರೀ ಮೀಮಾಂಸಾಗಳವರ ಬಾಯಿಂದ ಅತ್ಯಪೂರ್ವವಾದ ಹೊಸ ಹೊಸ ವಿಷಯಗಳನ್ನು ಕೇಳಿ, ತಿಳಿದು, ಕಲಿತು ಕೈಕಟ್ಟಿಕೊಂಡು ನಿಂತರು. ವೇದಾಂತದಲ್ಲಿಯಂತೂ ಶ್ರೀಗಳವರ ಜೊತೆಗೆ ವಾದಿಸುವ ಪಂಡಿತರು ಭಾರತದಲ್ಲಿಯೇ ಒಬ್ಬನೂ ಇರಲಿಲ್ಲ. ಶ್ರೀ ವಿದ್ಯಾಧೀಶ ತೀರ್ಥರಿಂವರೇ ಸರ್ವಜ್ಞ ಸ್ವಾಮಿಗಳೆಂದು ಉತ್ತರ ದೇಶದಲ್ಲಿ ಪ್ರಸಿದ್ಧಿಯೂ ಆಯಿತು. ಪಂಡಿತರ ಜಯ ಪತ್ರಗಳೆಲ್ಲವೂ ಶ್ರೀಮಠದ ಮುಂದಿನ ಸಭಾ ಮಂಟಪದ ಘರಿ ಘರಿಗಳಾಗಿ ಹಾರಾಡಿದವು.

ಇವನ್ನು ನೋಡಿ ಕೆಲವು ಕಟ್ಟಾ ಅದ್ವೈತ ಪಂಡಿತರಿಗೆ ಬಹಳ ಸಂಕಟವಾಯಿತು. ಅವರೆಲ್ಲರೂ ಮತ್ತೊಮ್ಮೆ ಒಂದುಗೂಡಿ ರಂಗೋಜಿಭಟ್ಟ ಎಂಬ ಪ್ರಸಿದ್ಧ ಪಂಡಿತನನ್ನು ಮುಂದೆ ಮಾಡಿ ವಾಕ್ಯಾರ್ಥಕ್ಕೆ ಬಂದರು.

"ದಶನಾದರ್ಧಶಿರಸಃ" ಎಂಬ ಶ್ಲೋಕದ ಮೇಲೆ ವಾಕ್ಯಾರ್ಥ ನಡೆಯಿತು.

ರಂಗೋಜೀಭಟ್ಟನಿಗೂ ಮತ್ತು ಅವನ ಅನುಯಾಯಿ ಪಂಡಿತರಿಗೂ ಹಿಮಾಲಯ ಪರ್ವತದ ಜೊತೆಗೆ ತಿಕ್ಕೆಮುಕ್ಕೆ ಬಿದ್ದಂತೆ ಅನುಭವವಾಯಿತು. ಮಾತು ಮಾತಿಗೆ ಅವನು ಸೋತು ಮೂಕನಾಗಿ ನಿಲ್ಲಬೇಕಾಗುತ್ತಿತ್ತು.

ಆದರೂ ಅಲ್ಲಿ ನೆರೆದ ಪ್ರಚಂಡ ಜನಸ್ತೋಮದ ಎದುರು ಸೋಲನ್ನೊಪ್ಪಿ ಕೊಳ್ಳುವದೆಂತು? ಇದು ತನಗೆ ಮಾತ್ರವಲ್ಲದೆ ಅದ್ವೈತ ಭೂಯಿಷ್ಠವಾದ ಕಾಶೀ ಖಂಡಕ್ಕೇ ಅವಮಾನವಲ್ಲವೇ? ಆದುದರಿಂದ ರಂಗೋಜೀಭಟ್ಟನು ವ್ಯಧಿಕರಣ, ವಿತಂಡಾ ಅಪ್ರಸಿದ್ಧ ಗ್ರಂಥಗಳ ಹವಾಲೀ, ಹಾರಿಕೆ ಉತ್ತರ ಮೊದಲಾದ ವಾಮ ಮಾರ್ಗದ ವಾಕ್ಯಾರ್ಥ ಪದ್ಧತಿಯಿಂದ ಹೇಗೋ ಹೊತ್ತು ಕಳೆದು ಕೊನೆಗೆ ಎಲ್ಲವೂ ಕಟ್ಟಾಗಿ ಅವನ ಬಾಯಿ ಮೂಕವಾಗುವ ಪ್ರಸಂಗ ಬಂದಾಗ ಇದಕ್ಕೆ ನಾಳೆ ಉತ್ತರ ಹೇಳು ತ್ತೇನೆಂದು ಹೇಳಿ ತನ್ನ ಅನುಯಾಯಿ ಪಂಡಿತರೊಂದಿಗೆ ಸಭೆ ಬಿಟ್ಟು ಎದ್ದು ಹೋದನು.

ಆಗಲೇ ಅಲ್ಲಿ ನೆರೆದ ನಿಷ್ಪಕ್ಷಪಾತಿಗಳಾದ ಅದ್ವೈತ ವಿದ್ವಾಂಸರೇ—

"ರಂಗೋ ಭಂಗಮವಾಪ ಮಾಧ್ವ ಯತಿಭಿಃ ವಾದ ಪ್ರಸಂಗೇ ಜಿತಃ"

ಎಂದು ಘೋಷಿಸಿದರು. ಆದರೂ ಶ್ರೀಗಳವರು ನಾಳೆಯಾದರೂ ನೀನು ಬಂದು ವಾಕ್ಯಾರ್ಥವನ್ನು ಮುಂದುವರಿಸಬೇಕು ಎಂದು ಒತ್ತಾಯಪಡಿಸಿದರು.

ಆದರೆ ಮಾರನೇ ದಿನ ಆ ರಂಗೋಜಿಭಟ್ಟನ ಪತ್ತೆಯೇ ಇಲ್ಲ. ಎಲ್ಲ ಪಂಡಿತ ಮಂಡಲಿಯೊಡನೆ ವೇಣಿಪುರಿಯನ್ನು ಬಿಟ್ಟು ಪಲಾಯನ ಸೂಕ್ತವನ್ನು ಪಠಿಸಿದ್ದ.

ಇದನ್ನು ತಿಳಿದು ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಅವನು ಪೈಠಣ ಗ್ರಾಮಕ್ಕೆ ಓಡಿ ಹೋಗಿದ್ದಾನೆಂದು ತಿಳಿದು ಅಲ್ಲಿಗೇ ಸಂಸ್ಥಾನ ಸಮೇತರಾಗಿ ಹೋಗಿ ಅವನನ್ನು ಮತ್ತೆ ವಾದಕ್ಕೆಳೆದರು. ರಂಗೋಜಿಭಟ್ಟನು ಕಳ್ಳಾವಿಕ್ಕಿಯಾದ. ಪೈಠಣದಲ್ಲಿ ರುವ ಅದ್ವೈತಮತದ ಅಭಿಮಾನಿಗಳೆಲ್ಲರೂ ಅವನನ್ನು ಹುರಿದುಂಬಿಸಿದರು. ತನ್ನ ಮಾನವನ್ನು ಉಳಿಸಿಕೊಳ್ಳಲಿಕ್ಕಾಗಿ ಭಟ್ಟನು ಮತ್ತೆ ಹೊಸ ಪಂಡಿತರೊಡನೆ ಶ್ರೀಗಳವ ರೊಂದಿಗೆ ವಾದ ಭೂಮಿಗಿಳಿದ.

ಆದರೆ ಶ್ರೀಗಳವರ ಪ್ರಖರ ಪಾಂಡಿತ್ಯದೆದುರು ಅವನ ಗರ್ವ ಗೋಪುರವು ನೆಲಸಮವಾಯಿತು. ಯಾವ ಉತ್ತರವನ್ನೂ ಹೇಳದೆ ಶಬ್ದದರಿದ್ರನಾಗಿ ಅವನು ಕೈ ಕಟ್ಟಿ ನಿಂತುಕೊಂಡ. ಶ್ರೀಗಳವರಿಗೆ ಸ್ವಹಸ್ತಾಕ್ಷರದಿಂದ ಜಯಪತ್ರ ಬರೆದು ಕೊಟ್ಟ.

ಹೀಗೆ ಅಲ್ಲಲ್ಲಿ ದಿಗ್ವಿಜಯವನ್ನು ಮಾಡುತ್ತ ಶ್ರೀಗಳವರು ಕಾಶಿಗೆ ಬಂದರು. ಅಲ್ಲಿಯೂ ವಿದ್ವತ್ ಸಭೆಯನ್ನು ಮಾಡಿ ಎಲ್ಲ ವಿದ್ವಾಂಸರನ್ನು ಕರೆಯಿಸಿ ಮಧ್ವ ಮತವೇ ವೈದಿಕ ಮತವೆಂದು ಸಿದ್ಧಮಾಡಿ ತೋರಿಸಿದರು.

ಈ ಮೊದಲೇ ವೇಣುಪುರಿಯಲ್ಲಿ ಶ್ರೀಗಳವರ ವಾಕ್ಯಾರ್ಥವ ರುಚಿ ನೋಡಿದ ಪಂಡಿತರು ಈ ಸಲ ಹೆಚ್ಚಿನ ವಾದ-ವಿವಾದ ಪ್ರಸಂಗಕ್ಕೆ ಹೋಗದೆ ಶ್ರೀಗಳವರ ಅಭೂತಪೂರ್ವವಾದ ಪಾಂಡಿತ್ಯವನ್ನು ಒಪ್ಪಿಕೊಂಡು ಸರ್ವಜ್ಞಪೀಠದ ಸ್ವಾಮಿಗಳೆಂದು ಬಹು ವಿಶ್ವಾಸದಿಂದ ಗೌರವ ಸತ್ಕಾರಗಳನ್ನು ಸಲ್ಲಿಸಿದರು.

ಕಾಶೀ ಕ್ಷೇತ್ರದಿಂದ ಸಂಸ್ಥಾನವು ಗಯಾ ಕ್ಷೇತ್ರಕ್ಕೆ ಬಂದಿತು. ಅಲ್ಲಿಯ ವಿಷ್ಣು ಪಾದದ ಪೂಜಾರಿಗಳಾದ ಗಯಾವಾಡರು ಯಾತ್ರಿಗೆ ಬಂದ ಭಕ್ತರಿಂದ ಒತ್ತಾಯ ದಿಂದ ಹಣ ದೋಚಿಕೊಳ್ಳುವದನ್ನು ಕಂಡು ಶ್ರೀಗಳವರಿಗೆ ಅಸಹ್ಯ ಬಂದಿತು. ಆ ಗಯಾವಾಡರ ಗರ್ವಭಂಗವನ್ನು ಮಾಡಲಿಕ್ಕಾಗಿ ಶ್ರೀಗಳವರು ಎಲ್ಲ ಜನರಿಗೂ ದಿಗ್ವಿಜಯ ರಾಮನ ಸನ್ನಿಧಾನದಲ್ಲಿಯೇ ರಾಮಗಯಾ ಎಂಬ ಭಾವನೆಯಿಂದ ಪಿಂಡ ಪ್ರದಾನವನ್ನು ಮಾಡಲು ಆದೇಶವಿತ್ತರು.

ಸರ್ವಜ್ಞಸಂಸ್ಥಾನದಿಂದ ಆದೇಶ ಹೊರಟ ಬಳಿಕ ಕೇಳಬೇಕೆ ? ವಿಷ್ಣುಪಾದದ ಕಡೆಗೆ ಯಾರೂ ಹೋಗದಂತಾದರು. ಗುಡಿಯಲ್ಲಿ ಕುಳಿತ ಗಯಾವಾಡರು ನೊಣ ಜಾಡಿಸಿದರು. ದೇವಾಲಯವು ಹಾಳು ಬಿದ್ದಿತು. ಹಗಲು ಹೊತ್ತು ತೊಗಲಿ ಬಾವಲಿ ಗಳು ಸ್ವಚ್ಛಂದವಾಗಿ ಹಾರಾಡಹತ್ತಿದವು. ಕೇಲವೇ ದಿನಗಳಲ್ಲಿ ದೇವಾಲಯವು ನಿರ್ಮಕ್ಷಿಕವಾಗಿ ಗಯಾವಾಡರ ಗರ್ವಭಂಗವಾಗಿ ಅವರೆಲ್ಲರೂ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ಚರಣಗಳಿಗೆ ಶರಣು ಬಂದರು.

ಅನಂತರ ಶ್ರೀಗಳವರು ತಮ್ಮ ಶಿಷ್ಯರಿಗೆ ಮೊದಲಿನಂತೆ ವಿಷ್ಣು ಪಾದದಲ್ಲಿಯೇ ಪಿಂಡ ಪ್ರದಾನ ಮಾಡುವಂತೆ ಪುನರಾಜ್ಞೆಯಿತ್ತರು.

ಮುಂದೆ ಒಂದು ದಿನ ಶ್ರೀಗಳವರ ಕೈಯಲ್ಲಿಯ ತೀರ್ಥವು ಗಯಾ ಕ್ಷೇತ್ರ ದಲ್ಲಿಯ ಒಂದು ಮೋಟ ಮರದ ಮೇಲೆ ಬಿದ್ದಿತು. ಅದರಿಂದ ಕೂಡಲೇ ಕೊರಡು ಕೊನರಿ ಪಲ್ಲವಿಸಿ ನಿಂತಿತು. ಅದನ್ನು ತಮ್ಮ ಕಣ್ಣಾರೆ ಕಂಡ ಗಯಾವಾಡರೆಲ್ಲರೂ ಶ್ರೀಗಳವರ ಮಹಾ ಮಹಿಮೆಗೆ ಬೆರಗಾಗಿ ಅವರ ಶಿಷ್ಯತ್ವವನ್ನು ಅಂಗೀಕರಿಸಿದರು. ಈಗಲೂ ಗಯಾವಾಡರು ವೈಷ್ಣವರಾಗಿಯೇ ಇದ್ದು ಉತ್ತರಾದಿ ಮಠದ ಶ್ರೀಗಳವರು ಹೋದಾಗ್ಗೆ ವಿಷ್ಣು ಪಾದದ ಬಳಿಯಲ್ಲಿಯೇ ಮಂಟಪವನ್ನು ಹಾಕಿಸಿ ಪೂಜೆ ಮಾಡಿಸಿ ಕೃತಾರ್ಥರಾಗುತ್ತಾರೆ.

ಅಲ್ಲಿಂದ ಶ್ರೀಗಳವರು ಮತ್ತೆ ಕಾಶಿಯ ಯಾತ್ರೆಯನ್ನು ಮಾಡಿಕೊಂಡು ಬ್ರಹ್ಮಾವರ್ತ ಕ್ಷೇತ್ರಕ್ಕೆ ಬಂದರು. ಒಮ್ಮೆ ಅವರು ಗಂಗಾ ತೀರದ ಮೇಲಿನ ವಾಲ್ಮೀಕಾಶ್ರಮದ ಚಪ್ಪರದಲ್ಲಿ ಮಲಗಿಕೊಂಡಾಗ ತಮಗಾದ ಸ್ವಪ್ನ ಸೂಚನೆಯಂತೆ ಶ್ರೀಪದ್ಮನಾಭಾಚಾರ್ಯರೆಂಬುವ ವಿದ್ವಾಂಸರಿಗೆ ಆಶ್ರಮವಿತ್ತು ವೇದನಿಧಿಗಳೆಂದು ನಾಮಕರಣ ಮಾಡಿದರು. ಮತ್ತು ಶ್ರೀ ವೇದನಿಧಿ ತೀರ್ಥರ ಕೈಯಲ್ಲಿ ಕಾಶೀ ಗಂಗೋದಕ ತುಂಬಿದ ಕೊಡಗಳನ್ನು ಕೊಟ್ಟು ರಾಮೇಶ್ವರಕ್ಕೆ ಕಳಿಸಿದರು.

ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಕೃಷ್ಣಾ ತೀರವಾದ ಶೂರ್ಪಾಲಿ ಕ್ಷೇತ್ರದಲ್ಲಿ ಪಾಠ–ಪ್ರವಚನ ಮಾಡುತ್ತ ಬಹುದಿನ ವಾಸವಾಗಿದ್ದರು. ಅವರು ಅಲ್ಲಿ ಇದ್ದಾಗ ತಮ್ಮ ತಾಯಿಯ ಹರಕೆಯಂತೆ ಒಂದು ಸಾಧನೀ ದ್ವಾದಶೀ ದಿನ ಒಂದು ಲಕ್ಷ ಜನ ಬ್ರಾಹ್ಮಣ ಭೋಜನ ಮಾಡಿಸಿದರು.

ಶ್ರೀ ರಾಘವೇಂದ್ರ ತೀರ್ಥ ಶ್ರೀಪಾದಂಗಳವರಿಗೂ, ಶ್ರೀವಿದ್ಯಾಧೀಶ ಶ್ರೀಪಾದಂಗಳವರಿಗೂ ಅದವಾನಿಯಲ್ಲಿ ಪರಸ್ಪರ ಭೆಟ್ಟಿಯು ಆಯಿತಂತೆ. ಶ್ರೀ ರಾಘವೇಂದ್ರ ಸ್ವಾಮಿಗಳವರು ಶ್ರೀ ವಿದ್ಯಾಧೀಶರ ವಾಕ್ಯಾರ್ಥ ಚಂದ್ರಿಕೆಯ ಪ್ರೌಢಿಮೆಯನ್ನೂ, ಘನತೆ ಗಾಂಭೀರ್ಯಗಳನ್ನೂ ಮೆಚ್ಚಿ ಮಾತನಾಡಿದರು. ಶ್ರೀ ವಿದ್ಯಾಧೀಶರು ಪರಿಮಳ ಟಿಪ್ಪಣಿಯ ಮಾರ್ಮಿಕತೆ ಮತ್ತು ವೈಶಿಷ್ಟ್ಯವನ್ನು ಎತ್ತಿ ಕೊಂಡಾಡಿದರಂತೆ-

ಮಹಿಸೂರ ಮಹಾರಾಜನಿಗೆ ಬ್ರಹ್ಮಹತ್ಯಾದೋಷದಿಂದ ಊಟ ಮಾಡುವ ಅನ್ನದಲ್ಲಿ ಕ್ರಿಮಿಗಳೇ ಕಾಣುತ್ತಿದ್ದವಂತೆ. ಶ್ರೀಗಳವರ ತೀರ್ಥ ಪ್ರಸಾದದ ಪ್ರಭಾವದಿಂದ ಅವನ ಬ್ರಹ್ಮಹತ್ಯಾ ದೋಷವು ಪರಿಹಾರವಾಯಿತು. ಅದರಿಂದ ಸಂತುಷ್ಟನಾದ ಮಹಾರಾಜನು ಚೆಣ್ಣೆಯ, ವೃತಿ, ಸಣ್ಣಚಿಕ್ಕೂರು ಎಂಬ ಮೂರು ಗ್ರಾಮಗಳನ್ನು ಉಂಬಳಿ ಹಾಕಿಕೊಟ್ಟನು. ಶ್ರೀಗಳವರು ಅಲ್ಲಿ ಸಂಚರಿಸುವಾಗ ಒಂದು ಹೊಲದಲ್ಲಿ ಕಾಲಿಗೆ ಬಿಸಿ ಜಳ ತಾಕಿದಂತಾಯಿತು. ಆಗ ಶ್ರೀಗಳವರು ಆ ಸ್ಥಳವನ್ನು ಅಗಿಸಿ ಅಲ್ಲಿರುವ ಪ್ರಾಣ ದೇವರನ್ನು ತೆಗಿಸಿ ಚಂದಗುರು ಗ್ರಾಮದಲ್ಲಿ ಸ್ಥಾಪಿಸಿದರು. ಆ ಪ್ರಾಣ ದೇವರ ಪೂಜೆಗಾಗಿ ೧೭ ಜನರು ಬ್ರಾಹ್ಮಣರನ್ನು ನೇಮಿಸಿ, ಚೆಣ್ಣೆ ಗ್ರಾಮದ ಅರ್ಧ ಭಾಗವನ್ನು ವಶ್ತಿಕೊಟ್ಟು ವೃತ್ತಿ ಕಲ್ಪಿಸಿದರು.

ಸ್ವತಃ ಶ್ರೀಗಳವರು ಬದರೀ ಯಾತ್ರೆಗೆ ಹೊರಟರು. ಶ್ರೀ ಬದರೀ ನಾರಾಯಣನ ದರ್ಶನ ಮಾಡಿಕೊಂಡು ರಂಗಾಚಾರ್ಯರೇ ಮೊದಲಾದ ತಮ್ಮ ವಿದ್ವತ್ ಪರಿವಾರದೊಂದಿಗೆ ಕಾಶ್ಮೀರ ಮಾರ್ಗವಾಗಿ ಮರಳಿ ಹೋಗಟರು. ಮಾರ್ಗಕ್ರಮದಿಂದ ಅವರು ಏಕಚಕ್ರ ನಗರಕ್ಕೆ ಬಂದಾಗ ಶ್ರೀಗಳವರಿಗೆ ದೇಹಾಲಸ್ಯವಾಯಿತು. ಆಗ ಶ್ರೀಚರಣರು ತಮ್ಮ ಜೊತೆಗಿರುವ ಶ್ರೀ ರಂಗಾಚಾರ್ಯರಿಗೆ ಆಶ್ರಮವನ್ನಿತ್ತು ಸಂಸ್ಥಾ

ನದ ದೇವರ ಪ್ರತಿಮೆಗಳನ್ನೆಲ್ಲ ಒಪ್ಪಿಸಿ ಶ್ರೀ ವೇದನಿಧಿ ತೀರ್ಥರಿಗೆ ಕೊಡಲಿಕ್ಕೆ ತಿಳಿಸಿದರು. ತಾವು ಅಲ್ಲಿಯೇ ಹರಿಧ್ಯಾನಪರರಾದರು.

ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ಅಪ್ಪಣೆಯಂತೆ ರಂಗಾಚಾರ್ಯರು ಪಂಢರಪುರದಲ್ಲಿದ್ದ ಶ್ರೀ ವೇದನಿಧಿತೀರ್ಥರಿಗೆ ವಂಶರಾಮ, ದಿಗ್ವಿಜಯರಾಮ ಮುಂತಾದ ಸಂಸ್ಥಾನದ ಪ್ರತಿಮೆಗಳನ್ನು ಒಪ್ಪಿಸಿದರು.

ಶ್ರೀ ವೇದನಿಧಿಗಳು ಶ್ರೀ ರಂಗಾಚಾರ್ಯರ ಪ್ರಾಮಾಣಿಕತೆ ಮತ್ತು ಗುರು ಭಕ್ತಿಗೆ ಮೆಚ್ಚಿ, ತಮ್ಮ ನಂತರ ಅವರಿಗೇ ಆಶ್ರಮವಿತ್ತು ಸತ್ಯವ್ರತತೀರ್ಥರೆಂದು ನಾಮಕರಣ ಮಾಡಿದರು.

ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ರಚಿಸಿದ ಗ್ರಂಥಗಳು

೧) ಸುಧಾ ವಾಕ್ಯಾರ್ಥ ಚಂದ್ರಿಕಾ
೨) ದ್ವಿತ್ವವಾದಾರ್ಥ
೩) ಓಂಕಾರ ವಾದಾರ್ಥ
೪) ತಲವಕಾರೋಪನಿಷತ್ ಖಂಡಾರ್ಥ
೫) ತಿಥಿತ್ರಯ ನಿರ್ಣಯ
೬) ವಿಷ್ಣುತತ್ವ ನಿರ್ಣಯ ಟೀಕಾಗ್ರಂಥಕ್ಕೆ ಟಿಪ್ಪಣಿ
೭) ವಿಷ್ಣು ಪಂಚಕ ಉಪವಾಸ ನಿರ್ಣಯ

ಮುಂತಾದ ಅನೇಕ ಅತ್ಯುತ್ತಮ ಗ್ರಂಥಗಳನ್ನು ಬರೆದಿದ್ದಾರೆ.



### ಪರಿಮಳಾಚಾರ್ಯರಾದ

## ಶ್ರೀ ರಾಘವೇಂದ್ರ ತೀರ್ಥರು



ಸಮಗ್ರ ದಕ್ಷಿಣ ಭಾರತದಲ್ಲಿ ಮಂತ್ರಾಲಯದ ಗುರುಸಾರ್ವಭೌಮರಾದ ಶ್ರೀ ರಾಘವೇಂದ್ರತೀರ್ಥ ಶ್ರೀ ಪಾದಂಗಳವರ ಹೆಸರನ್ನು ಕೇಳದ ಮಾಧ್ವರಿಲ್ಲ. ಅವರ ಪುಣ್ಯ ಪ್ರಭಾವವರಿಯದ ವೈದಿಕನಿಲ್ಲ. ಅವರ ಅಗಮ್ಯ ಮಹಿಮೆಗೆ ತಲೆ ಬಾಗದ ಆಸ್ತಿಕನಿಲ್ಲ. ನಾಸ್ತಿಕ ಭೂಯಿಷ್ಠವಾದ ಇಂಥ ಕಲಿಯುಗದಲ್ಲಿ ಕೂಡ ಹರಿ ಭಕ್ತಿ, ಗುರು ಭಕ್ತಿ, ವೇದ ವಿಶ್ವಾಸಗಳನ್ನು ಜನಮನದಲ್ಲಿ ಕುದುರಿಸಿ ಸನಾತನ ಧರ್ಮ ಧ್ವಜವು ಭಾರತ ಭೂಖಂಡದಲ್ಲಿ ಅಖಂಡವಾಗಿ ಬೆಳಗುವಂತೆ ಮಾಡಿದ ಶ್ರೇಯಸ್ಸು ಶ್ರೀ ಮಂತ್ರಾಲಯ ಪ್ರಭುಗಳಿಗೆ ಸೇರುತ್ತವೆ. ಅವರು ತಾವಿರುವ ವರೆಗೆ ಜನರಿಗೆ ಕಾಮಧೇನುವಿನಂತೆ ಕಾಮಿತಾರ್ಥಗಳನ್ನು ಇತ್ತುದಲ್ಲದೆ ವೃಂದಾವನಸ್ಥರಾದ ಮೇಲೆಯೂ ಕಲ್ಪವೃಕ್ಷದಂತೆ ಲಕ್ಷಾವಧಿ ಜನರ ಇಷ್ಟಾರ್ಥಗಳನ್ನೆಲ್ಲ ಪೂರೈಸುತ್ತಲಿದ್ದಾರೆ. ಅವರ ಮಹಾ ಮಹಿಮೆಯಿಂದ ಎಂಥೆಂಥ ನಾಸ್ತಿಕರೂ ಆಸ್ತಿಕರಾಗುತ್ತಲಿದ್ದಾರೆ. ಅವರ ವೃಂದಾವನದ ಪ್ರಭಾವದಿಂದ ಮಂತ್ರಾಲಯವೂ ಕೂಡ ತಿರುಪತಿ, ಉಡುಪಿ, ಪಂಢರಪುರ, ಕಾಶಿ, ಒದರಿಗಳಂತೆ ಪುಣ್ಯ ಕ್ಷೇತ್ರವಾಗಿ ಪರಿಣಮಿಸಿದೆ. ಅಲ್ಲಿ ಶ್ರೀ ರಾಯರ

ಅನುಗ್ರಹದಿಂದ ಎಂಥೆಂಥ ಅಶಕ್ಯ ರೋಗಗಳೂ, ಅಸಾಧ್ಯ ಪೀಡೆಗಳೂ ಪರಿಹೃತ ವಾಗಿ ಭೂತ ಪ್ರೇತ ಬಾಧೆಗಳು ನಿವಾರಣೆಯಾಗುತ್ತಲಿರುವದು ಸಾವಿರಾರು ಜನರ ಅನುಭವಕ್ಕೆ ಬಂದ ವಿಷಯವಾಗಿದೆ. ರಾಯರ ಅನುಗ್ರಹಕ್ಕೆ ಪಾತ್ರರಾದ ಭಕ್ತರ ವೈಯಕ್ತಿಕ ಅನುಭವಗಳನ್ನು ಕೂಡಿಸಿ ಬರೆದರೆ ಅದೊಂದು ಅದ್ಭುತ ರಮ್ಯ ರೋಮಾಂಚಕಾರಿಯಾದ ಹೆಬ್ಬೊತ್ತಿಗೆಯಾಗಬಹುದು.

ಹೀಗೆ ಜನರ ಕಷ್ಟ ನಿವಾರಣ, ಇಷ್ಟಾರ್ಥ ಪ್ರದಾನಾದಿಗಳಿಂದ ಆಧ್ಯಾತ್ಮ ಪ್ರಪಂಚದಲ್ಲಿ ರಾಯರು ಶಕ ಪುರುಷರೆನಿಸಿದರೆ ಜ್ಞಾನ ಪ್ರಪಂಚದಲ್ಲಿಯಂತೂ ಅವರು ಸೀಮಾ ಪುರುಷರೇ ಎನಿಸಿದ್ದಾರೆ. ಅವರ ಶೈಲಿ ಪಂಡಿತ ರಂಜಕವಾಗಿದೆ. ಪಾಮರ ಬೋಧಕವಾಗಿದೆ. ಆದುದರಿಂದಲೇ ಅವರ ಅನೇಕ ಗ್ರಂಥಗಳು ಮಂದ ನಂದಿನಿಯಾಗಿಯೂ ಪ್ರಾಜ್ಞಬೋಧಿನಿಯಾಗಿವೆ. ಆ ಗ್ರಂಥಗಳನ್ನು ಪರಿಶೀಲಿಸಿದರೆ ಶ್ರೀ ಗುರು ಸಾರ್ವಭೌಮರ ವ್ಯಾಕರಣ ಪಾಂಡಿತ್ಯವನ್ನು ಹೊಗಳಬೇಕೋ, ಮೀಮಾಂಸಾ ಪಾಂಡಿತ್ಯವನ್ನು ಪ್ರಶಂಸಿಸಬೇಕೋ, ನ್ಯಾಯನೈಪುಣ್ಯವನ್ನು ಬಣ್ಣಿಸಬೇಕೋ, ವೇದ ವೈದುಷ್ಯವನ್ನು ಸ್ತುತಿಸಬೇಕೋ, ಧರ್ಮ ಶಾಸ್ತ್ರ ಪಾರಂಗಮತ್ವವನ್ನು ಕೊಂಡಾಡಬೇಕೋ ತಿಳಿಯದಂತಾಗುತ್ತದೆ. ಒಬ್ಬಾರೆ ಪರಿಮಳ, ಪ್ರಕಾಶ, ಭಾವದೀಪ ಮೊದಲಾದ ಗ್ರಂಥಗಳನ್ನು ಕಂಡಾಗ ಇವರೊಬ್ಬರು ಸರ್ವಜ್ಞಕಲ್ಪರಾದ ಭೂಲೋಕದ ಕಲ್ಪವೃಕ್ಷ ಎಂಬ ಭಾವ ಉದಿಸಿ ನಿಲ್ಲುತ್ತದೆ.

ಶ್ರೀಮದ್ರಾಘವೇಂದ್ರ ಶ್ರೀಪಾದಂಗಳವರು ಮಾಡಿದ ಇನ್ನೊಂದು ಅಪೂರ್ವ ಕಾರ್ಯವೆಂದರೆ ವೇದದ ಅರ್ಥ ವಿವೃತ್ತಿ. ವೇದಗಳೆಂದರೆ " ಅಪ್ರಬುದ್ಧ ಆರ್ಯರ ಅನಾಗರಿಕ ಅವಸ್ಥೆಯಲ್ಲಿಯ ಅಸಂಸ್ಕೃತ ಪ್ರಲಾಪ " ಎಂದು ಕೂಡ ಎಷ್ಟೋ ಪ್ರಾಜ್ಞಂಮನ್ಯರಾದ ಪಾಶ್ಚಾತ್ಯರೂ ಅವರ ಪುಚ್ಛಾವಲಂಬಿಗಳಾದ ಅನೇಕ ಭಾರತೀಯ ವಿಮರ್ಶಕರೂ ಹೇಳುವದುಂಟು. ಆದುದರಿಂದ ವೇದಗಳಿಗೆ ಆಪಾತತಃ ತೋರುವ ಬರೀ ಬೆಂಕಿ, ಬೆಳಕು, ನೀರು ಮುಂತಾದವುಗಳ ಸ್ತುತಿರೂಪತ್ವ ಮಾತ್ರವಲ್ಲದೆ ಆಧ್ಯಾತ್ಮಿಕ ಅರ್ಥ ಬೇರೆಯೇ ಉಂಟು ಎಂಬುದನ್ನು ಆಚಾರ್ಯರು

" ತ್ರ್ಯರ್ಥತಾಂ ಶ್ರುತಿಷು ಪಿತ್ತ "

ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದನ್ನು ನೋಡಿಯೇ ವಿದ್ಯಾರಣ್ಯರಾದರೂ ತಮ್ಮ ವೇದ ಭಾಷ್ಯದಲ್ಲಿ ವೇದಗಳಿಗೆ ಆಧ್ಯಾತ್ಮಿಕ, ಆದಿದೈವಿಕ, ಆದಿಭೌತಿಕ ಎಂಬ ಮೂರು ಅರ್ಥಗಳಿವೆ ಎಂದು ಸೂಚಿಸಿದ್ದಾರೆ. ಆದರೆ ಅವರಿಗೆ ಆನರಂತೆ ಎಲ್ಲ ವೇದ ಮಂತ್ರಗಳಿಗೆ ಹಾಗೆ ಅರ್ಥ ಬರೆಯುವದು ಮಾತ್ರ ಸಾಧ್ಯವಾಗದೆ ಬರೀ ಒಂದೇ ಅರ್ಥವನ್ನು ಮಾತ್ರ ಬರೆದಿದ್ದಾರೆ. ಇದರಿಂದ ಎಷ್ಟೋ ಜನರಿಗೆ ವೇದದ ಮೇಲೆ ಇದ್ದ ಅಲ್ಪ ಸ್ವಲ್ಪ ವಿಶ್ವಾಸವೂ ಕೂಡ ಹಾರಿಹೋಗುವ ಸಂಭವವುಂಟು.

ಅದಕ್ಕಾಗಿಯೇ ಶ್ರೀರಾಯರು ಸಮಗ್ರ ವೇದಕ್ಕೆಲ್ಲ ಆಚಾರ್ಯರು ತೋರಿದ ರೀತಿಯಲ್ಲಿ ಮೂರು ವಿಧವಾದ ಅರ್ಥವನ್ನು ಪ್ರದರ್ಶಿಸಿ, ವೇದಾರ್ಥ ವಿವೃತ್ತಿ ಎಂಬ ಬೃಹದ್ಗ್ರಂಥವನ್ನು ಬರೆದಿದ್ದರೆಂದು ಪ್ರತೀತಿ ಇದೆ. ಉತ್ತರಾದಿ ಮಠದ ಶ್ರೀ ಸತ್ಯ ಜ್ಞಾನ ತೀರ್ಥರು ಹೈದರಾಬಾದಿಗೆ ಹೋದಾಗ ಅಲ್ಲಿ ಓರ್ವ ಜಹಗೀರದಾರರ ಮನೆ ಯಲ್ಲಿ ಅದರ ಒಂದು ಪ್ರತಿಯನ್ನು ತಾವು ನೋಡಿರುವದಾಗಿ ದಿವಂಗತ ಮಳಗಿ ಕೃಷ್ಣಾಚಾರ್ಯರು ನಮ್ಮೆದುರು ಅನೇಕ ಸಲ ಹೇಳಿದ್ದುಂಟು.

ಈಗ ಉಪಲಬ್ಧವಿದ್ದ ರಾಯರ ಮಂತ್ರಾರ್ಥ ಮಂಜರೀ ಎಂಬ ವೇದ ವ್ಯಾಖ್ಯಾ ನವು ಋಗ್ವೇದದ ೪೦ ಸೂಕ್ತಗಳಿಗೆ ಶ್ರೀಗುರು ಮಧ್ವರು ಪ್ರದರ್ಶಿಸಿದ ರೀತಿಯಲ್ಲಿ ವಿಶಿಷ್ಟ ಪರಿಪಾಟಿಯಿಂದ ವೈಖರಿತವಾಗಿದೆ. ಇದಿಷ್ಟರಿಂದಲೇ ವೇದಪುರುಷನ ಅಂತ ರಂಗದ ಆಶಯ ಗೂಢರಹಸ್ಯ ಪದಸ್ವಾರಸ್ಯಗಳನ್ನು ತಿಳಿಯುವ ಹಾಗೂ ತಿಳಿಸುವ ಶ್ರೀ ಗುರುಗಳ ಜಾಣ್ಮೆ ಮೇಲ್ಮೆಗಳು ಎಷ್ಟು ಅಗಾಧವಾಗಿವೆಯೆಂಬುದು ವಿದ್ವದ್ವೇದ್ಯ ವಾಗುವವರಲ್ಲಿ ಸಂದೇಹವೇ ಇಲ್ಲ. ಶ್ರೀಮದ್ರಾಘವೇಂದ್ರ ತೀರ್ಥರ ವೇದಾರ್ಥ ವ್ಯಾಖ್ಯಾನದ ಜಾಣ್ಮೆ ಜಾಡುಗಳನ್ನೇ ಹಿಡಿದು ವೈದಿಕ ವೀಥಿಯಲ್ಲಿ ನವೀನ ವಿಕ್ರಮ ಸಾಧಿಸಹೊರಟ ಶ್ರೀ ಅರವಿಂದ ಪಂಥೀಯರಾದ ಕಪಾಲಿಶಾಸ್ತ್ರಿಗಳು ತಮ್ಮ ಅಭಿನವ ವೇದಭಾಷ್ಯ ಭೂಮಿಕೆಯಲ್ಲಿ ಶ್ರೀ ರಾಯರ ಉಪಕಾರವನ್ನು ನೆನೆದು ತುಂಬ ಹೊಗಳಿ ಅವರ ಮಾರ್ಗದರ್ಶನದಲ್ಲಿಯೇ ತಾವು ಮುನ್ನಡೆದಿದ್ದನ್ನು ಹೇಳಿದ್ದಾರೆ. ಹಿಂದಿನ ಯಾವ ವೇದ ಭಾಷ್ಯಕಾರರಿಗೂ ಹೊಳೆಯದ, ವಿದ್ಯಾರಣ್ಯರಂಥ ಯಾವ ವೇದ ವಿದ್ವಾಂಸರಿಗೂ ತಿಳಿಯದ ವೇದಾಂತ ಸಮ್ಮತವಾದ ಗೂಢ-ಗಹನ ವೇದ ಭಾವಾರ್ಥ ಗಳನ್ನು ಸುಲಲಿತವಾದ ಶೈಲಿಯಿಂದ ಮಂತ್ರಾರ್ಥ ಮಂಜರಿಯಲ್ಲಿ ಬರೆದು ಶ್ರೀ ರಾಯರು ಅಖಿಲ ಆಸ್ತಿಕ ಸಮಾಜಕ್ಕೆ ಪರಮೋಪಕಾರ ಮಾಡಿದ್ದಾರೆ. ಸಕಲ ವೈದಿಕ ಪ್ರಪಂಚಕ್ಕೆ ಗೌರವ ತಂದಿದ್ದಾರೆ. ವೇದಪಿನಿಂದಕರ ಬಾಯಿ ಮುಚ್ಚಿಸಿದ್ದಾರೆ. ಶ್ರುತಿ ಸ್ಮೃತಿಗಳ ಗೌರವ ಕಾಯ್ದಿದ್ದಾರೆ. ಇದು ಶ್ರೀ ರಾಘವೇಂದ್ರ ಸ್ವಾಮಿಗಳ ವೇದಾರ್ಥ ವ್ಯಾಖ್ಯಾನದ ವೈಶಿಷ್ಟ್ಯವಾಗಿದೆ.

ಇದರಂತೆ ವೇದಾಂತ ಪ್ರಪಂಚದಲ್ಲಿಯೂ ಅವರು ಮಾಡಿದ ಕಾರ್ಯ ಪ್ರಚಂಡ ವಾಗಿದೆ, ಪ್ರಶಂಸನೀಯವಾಗಿದೆ. ಪ್ರತಿಯೊಂದು ಗ್ರಂಥದಲ್ಲಿಯೂ ಅವರ ಅಸಾಧಾರಣ ವಾದ ಪ್ರತಿಭೆ ಹಾಗೂ ಚತುರಸ್ರ ಪಾಂಡಿತ್ಯಗಳು ಎದ್ದುಕಾಣುತ್ತವೆ. ಅವರ ಗ್ರಂಥ ವಿಲೇಖನ ಶೈಲಿ ಕೂಡ ಅನ್ಯಾದೃಶ್ಯವೂ, ಅನನುಕರಣೀಯವೂ ಆಗಿ ಜಗನ್ಮಾನ್ಯ ವಾಗಿದೆ. ಹಲಕೆಲವು ಮಾಧ್ವ ಗ್ರಂಥಗಳಿಗಂತೂ ರಾಯರ ಟಿಪ್ಪಣಿಗಳಿಲ್ಲದಿದ್ದರೆ ಅಸರ್ವಜ್ಞಮುಷ್ಕರೀಯತ್ವದಿಂದ ಅವೆಲ್ಲ ಮೂಲೆಗುಂಪಾಗುವ ಪ್ರಸಂಗವೇ ಬರುತ್ತಿತ್ತು. ಚಂದ್ರಿಕಾಚಾರ್ಯರ ತರ್ಕತಾಂಡವಕ್ಕಂತೂ ರಾಯರ ಹೊರತು ಗತ್ಯಂತರವೇ ಇಲ್ಲ. ಪ್ರಾಮಾಣ್ಯವಾದ ಮೊದಲಾದ ನ್ಯಾಯಶಾಸ್ತ್ರದ ಉದ್ಗ್ರಂಥಗಳಲ್ಲಿ ಬರುವ ಮೂಲ

ಮಣಿಕಾರನ ಎಷ್ಟೋ ಕ್ಲಿಷ್ಟ ಕಠಿಣೋಕ್ತಿ, ಕುಟಿಲ ಯುಕ್ತಿಗಳನ್ನು ತಮ್ಮ ತರ್ಕ ಬದ್ಧವಾದ ಶಾಸ್ತ್ರೀಯ ಶೈಲಿಯಿಂದ ವಿಶ್ಲೇಷಿಸಿ, ಶುಷ್ಕ ತರ್ಕದ ಪೊಳ್ಳು ಪೊದರು ಗಳನ್ನು ಬಯಲಿಗೆಳೆದು ತೋರಿಸುವಾಗ ರಾಯರ ನ್ಯಾಯ ಪಾಂಡಿತ್ಯದ ಪ್ರೌಢಿಮೆ ಎಂಥೆಂಥ ನೈಯ್ಯಾಯಿಕರನ್ನೂ ಬೆರಗುಗೊಳಿಸುತ್ತದೆ. ಶಾಸ್ತ್ರಸಾಮ್ರಾಜ್ಯದ ಸಮ್ರಾಟ ರೆನಿಸಿದ ಮಣಿ, ದಿಧೀತಿಕಾರರಂಥ ಭೂತಲ ಬೃಹಸ್ಪತಿಗಳ ಅರಸು ಕೃತಿಗಳ ಮೇಲೆ ವಾಗ್ವಜ್ರವನ್ನು ಎತ್ತುವದೆಂದರೆ ಎಂಥ ಎಂಟೆದೆಯ ಬಂಟ ಬುದ್ಧಿವಂತನೂ ನಡುಗಿ ಹೋಗಬಹುದು. ಆದರೆ ಶ್ರೀಮತ್ಪೂರ್ಣ ಪ್ರಮತಿಗುರು ಕಾರುಣ್ಯ ಸರಣಿಯನ್ನು ಹೊಂದಿದ ಚಂದ್ರಿಕಾಚಾರ್ಯರೂ ಶ್ರೀ ರಾಘವೇಂದ್ರಸ್ವಾಮಿಗಳೂ ಇಂಥ ಶಾಸ್ತ್ರೀಯ ವಿದ್ಯಾರಣ್ಯದಲ್ಲಿ ಸಿಂಹದಂತೆ ಗುಡುಗಿ ಗರ್ಜಿಸಿ ಪ್ರಜ್ಞಾತಾಂಡವಗೈದಿದ್ದಾರೆ. ನ್ಯಾಯ ಶಾಸ್ತ್ರದ ಹೆಸರಿನಲ್ಲಿ ನಡೆದ ಅನ್ಯಾಯದ ಉಕ್ತಿ-ಯುಕ್ತಿಗಳನ್ನು ಇಷ್ಟು ಸಮರ್ಥ ರೀತಿಯಿಂದ ಖಂಡಿಸುವ ಸಾಹಸಕ್ಕೆ ಅದ್ವೈತಿಗಳಾಗಲಿ, ರಾಮಾನುಜೀಯರಾಗಲಿ ಇಂದಿನ : ವರೆಗೆ ಕೈ ಹಾಕಿಲ್ಲ. ಆದುದರಿಂದಲೇ ತರ್ಕತಾಂಡವವು ಮತ್ತು ಅದಕ್ಕೆ ಶ್ರೀಮದ್ರಾಘವೇಂದ್ರ ಶ್ರೀ ಚರಣರು ಬರೆದ ಟಿಪ್ಪಣಿಯೂ, ಮಾಧ್ವರ ತೀಕ್ಷ್ಣ ಬುದ್ಧಿಮತ್ತೆ ಲೋಕೋತ್ತರ ವಿವೇಚನಾ ಶಕ್ತಿ ಹಾಗೂ ಯುಕ್ತಿಪಾಟವಗಳಿಗೆ ಸಮರ್ಥ ನಿದರ್ಶನವಾಗಿದೆ.

ವೇದಾಂತಶಾಸ್ತ್ರದ ಸರ್ವಸ್ವವಾದ ಪ್ರಸ್ಥಾನತ್ರಯದಲ್ಲಿ ಟಿಪ್ಪಣಿಕಾರರಲ್ಲಿ ಕೂಡ ರಾಯರ ಸ್ಥಾನವು ಅತ್ಯುಚ್ಚತರವಾಗಿದೆ. ಬ್ರಹ್ಮಸೂತ್ರ, ಭಗವದ್ಗೀತಾ ಮತ್ತು ಉಪ ನಿಷತ್ತುಗಳಮೇಲಿನ ಆಚಾರ್ಯರ ಭಾಷ್ಯದ ಜಯತೀರ್ಥರ ಟೀಕೆಗಳಿಗೆ ಸರ್ವ ಸಮಂಜಸವಾದ ಸುಂದರ ಟಿಪ್ಪಣಿಗಳನ್ನು ಬರೆದು ಮತ್ತೆ ಬುಭುತ್ಸುಗಳಿಗೆ ಮೂಲದ ವಿಷಯವೆಲ್ಲ ಏಕಬುದ್ಧ್ಯಾರೋಹವಾಗಲಿ ಎಂಬ ಸದಯಾಂತಃಕರಣದಿಂದ ಮತ್ತೆ ಮೂಲ ಗ್ರಂಥಗಳಿಗೆ ಸಕಲ ಟೀಕಾ ವಿಷಯ ಸಂಗ್ರಾಹಕವಾಗುವಂಥ ಸ್ವತಂತ್ರ ವ್ಯಾಖ್ಯಾನಗಳನ್ನೂ ಕೂಡ ಬರೆದಿದ್ದಾರೆ. ಇವು ಮೂಲ ಗ್ರಂಥದ ಮುಖ್ಯ ತಾತ್ಪರ್ಯ ವನ್ನು ಸಿದ್ಧಾಂತದ ಬೆಳಕಿನಲ್ಲಿ ಸಮಂಜಸವಾಗಿ ತಿಳಿದುಕೊಳ್ಳಲಿಕ್ಕೆ ಅತ್ಯಂತ ಉಪ ಯುಕ್ತವಾಗಿವೆ. ಬ್ರಹ್ಮಸೂತ್ರದ ಮೇಲೆ ಶ್ರೀಮದಾನಂದ ತೀರ್ಥರು ಬರೆದ ಭಾಷ್ಯಕ್ಕೆ ಮುಖ್ಯ ಟೀಕೆಯಾದ ತತ್ತ್ವಪ್ರಕಾಶಿಕೆಗೆ ರಾಯರು ಭಾವದೀಪ ಎಂಬ ಸರ್ವಂಕಷ ಟಿಪ್ಪಣಿಯನ್ನು ಬರೆದು ತಮಗೆ ಮೂಲವಾದ ತತ್ತ್ವಪ್ರಕಾಶಿಕೆಗೆ ಮೂಲವಾದ ಮಧ್ವಭಾಷ್ಯಕ್ಕೂ ಮೂಲವಾದ ಬ್ರಹ್ಮಸೂತ್ರಗಳಿಗೇ ನೇರವಾಗಿ ಟೀಕೆ ಬರೆದು ತಂತ್ರ ದೀಪಿಕಾ ಎಂದು ಅದಕ್ಕೆ ಹೆಸರಿಟ್ಟಿದ್ದಾರೆ.

ತಂತ್ರದೀಪಿಕೆಯು ಇದೊಂದು ಸೂತ್ರಗಳ ಮೇಲಿನ ಸ್ವತಂತ್ರ ಭಾಷ್ಯವೇ ಎನ್ನುವಷ್ಟು ಪ್ರೌಢವೂ, ಬಂಧುರವೂ ಆಗಿವೆ. ಅದರಂತೆ ಸೂತ್ರದ ಮೇಲಿನ ಭಾಷ್ಯ, ತತ್ತ್ವಪ್ರಕಾಶಿಕೆ, ಚಂದ್ರಿಕಾದಿ ಗ್ರಂಥಗಳ ಸಾರೋದ್ಧಾರಿಣಿಯೂ ಆಗಿದೆ

ಇದಲ್ಲದೇ ಸೂತ್ರಪ್ರಸ್ಥಾನದ ಮೇಲಿನ ಅವರ ನ್ಯಾಯಮುಕ್ತಾವಲಿ ಗ್ರಂಥ ಅತ್ಯಪೂರ್ವವಾಗಿದ್ದು ವ್ಯಾಸರ ಹೃದಯ ದರ್ಶನವನ್ನು ಮಾಡಿಸುತ್ತದೆ.

ಇದರಂತೆ ಭಗವದ್ಗೀತೆಯ ಮೇಲೆ ಆಚಾರ್ಯರು ಬರೆದ ಭಾಷ್ಯಕ್ಕೆ, ಜಯತೀರ್ಥರು ಬರೆದ ಪ್ರಮೇಯ ದೀಪಿಕೆಗೆ ರಾಯರು ತಾವು ಟಿಪ್ಪಣಿ ಬರೆದುದಲ್ಲದೆ ಮತ್ತೆ ಸ್ವತಂತ್ರವಾಗಿ ಅಂದರೂ ಮಧ್ವಾಧ್ವ ಪರತಂತ್ರರಾಗಿ ಗೀತೆಗೆ ವಿವೃತ್ತಿ ಎಂಬ ಟಿಪ್ಪಣಿಯನ್ನು ಬರೆದು ಗೀತಾಚಾರ್ಯನ ಆಶಯವನ್ನು ಸ್ಪಷ್ಟವಾಗಿ ಬಯಲಿಗಿಟ್ಟಿದ್ದಾರೆ. ಆಚಾರ್ಯರ ಭಾಷ್ಯ ಜಯತೀರ್ಥರ ಪ್ರಮೇಯ ದೀಪಿಕೆಗಳ ಮುಖಾಂತರ ಕೃಷ್ಣನ ಅಂತರಂಗದ ಆಶಯದ ವರೆಗೆ ತಲುಪಲಾರದ ಮಂದಮತಿಗಳಿಗೂ ಕೂಡ ಒಂದು ವಿಚಿತ್ರವಾದ ವೇದಾಂತದ ಒಳ ದಾರಿಯಿಂದ ಶ್ರೀ ಕೃಷ್ಣನ ಗರ್ಭ ಗುಡಿಗೆ ಕರೆದೊಯ್ಯುವ ಅತ್ಯದ್ಭುತ ಮತ್ತು ಸರ್ವೋಪಕಾರಕವಾದ ಕಾರ್ಯವನ್ನು ಈ ವಿವೃತ್ತಿ ಟಿಪ್ಪಣಿಯು ಮಾಡುತ್ತದೆ.

ಇದರಂತೆ ಆಚಾರ್ಯರ ಭಾಷ್ಯದ ಮುಖಾಂತರ ದಶೋಪನಿಷತ್ತುಗಳನ್ನು ಓದಿ ಅರಗಿಸಿಗೊಳ್ಳಲು ಶಕ್ತಿ ಇಲ್ಲದವರಿಗೂ ಆಚಾರ್ಯರ ಅಭಿಪ್ರಾಯ ಜ್ಞಾನವಾಗಿ ಮೂಲ ಉಪನಿಷತ್ತುಗಳ ಮಂತ್ರಾರ್ಥವು ಮನಂಬುಗುವ ರೀತಿಯಲ್ಲಿ ಉಪನಿಷತ್ಖಂಡಾರ್ಥ ಎಂಬ ಟಿಪ್ಪಣಿ ಬರೆದು ಜಗದೋಪಕಾರಕ ಕಾರ್ಯವನ್ನೇ ಅಗಮ್ಯಮಹಿಮರು ಮಾಡಿದ್ದಾರೆ.

ಹೀಗೆ ಪಂಡಿತರಿಗೆ ವಿಶೇಷ ಸಮಾಕಲನೆಗಾಗಿ ಉಪಯುಕ್ತವಾಗುವಂತೆ ಪಾಮರರಿಗೂ ಸ್ಥೂಲ ದೃಷ್ಟಿಯಿಂದ ಮೂಲಾರ್ಥವು ಅನುಸಂಧಾನಕ್ಕೆ ಬರುವಂತೆ ಒಂದೇ ವಿಧವಾದ ಗ್ರಂಥಗಳಿಗೆ ಎರಡು ವಿಧವಾದ ಟಿಪ್ಪಣಿ ಬರೆದ ಮಹನೀಯರು ರಾಯರ ಹೊರತಾಗಿ ಎರಡನೆಯವರು ಯಾರೂ ಇದ್ದಂತಿಲ್ಲ. ಅದರಂತೆ ಅವರು ತತ್ತ್ವಸಂಖ್ಯಾನಕ್ಕೆ ಬರೆದ ಟಿಪ್ಪಣಿಯಂತೂ ವೇದಾಂತಶಾಸ್ತ್ರದ ಕೈಪಿಡಿಯಂತೆ ಉತ್ತರ ಮೀಮಾಂಸಾ ಶಾಸ್ತ್ರದಲ್ಲಿ ಪ್ರವಿವಿಕ್ಷುಗಳಿಗೆ ಅತ್ಯಂತ ಉಪಯುಕ್ತವಾಗಿವೆ ಮತ್ತು ಅತ್ಯಂತ ಸಾಮಾನ್ಯವೆಂದು ತೋರುವ ಅವರ ಪ್ರಾತಃಸಂಕಲ್ಪ ಗದ್ಯಕೂಡ ಅವಶ್ಯ ವಿಜ್ಞೇಯವಾದ ಅನೇಕ ಪ್ರಮೇಯ ವಿಷಯಗಳಿಂದ ಪರಿಪ್ಲುತವಾಗಿ ವೈಷ್ಣವ ದರ್ಶನದ ಸಂಕ್ಷಿಪ್ತ ಸಿದರ್ಶನ ಮಾಡಿಸುವ ಆದರ್ಶದಂತಿದೆ.

ಇದರಂತೆ ಶ್ರೀ ರಾಯರು ಅತ್ಯಂತ ಸುರಸ ಸುಂದರವಾದ ಸಾಹಿತ್ಯ ಶೈಲಿಯಲ್ಲಿ ಬರೆದ ರಾಮಚಾರಿತ್ರ್ಯಮಂಜರಿ ಮುಂತಾದ ಖಂಡ ಕಾವ್ಯಗಳು ಭಾಗವತ ರಾಮಾಯಣಗಳಲ್ಲಿ ಬರುವ ರಾಮಃಕೃಷ್ಣರ ಚರಿತ್ರೆಗಳನ್ನು ಭಕ್ತಿರಸವು ಹೃದಯದಲ್ಲಿ ತುಂಬಿ ತುಳುಕುವಂತೆ ಚಿತ್ರರಿಸಿದ್ದಾರೆ. ಇದರಿಂದ ನ್ಯಾಯ, ವ್ಯಾಕರಣ, ವೇದಾಂತಾದಿ

ಶಾಸ್ತ್ರ ಸಂಪರ್ಕದಿಂದ ಗಟ್ಟಿಯಾದ ಅವರ ಹೃದಯದಲ್ಲಿಯ ಕಾವ್ಯದ ಸೆಲೆ ಬತ್ತಿಪ್ಪಿಲ್ಲವೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ.

ಇವಲ್ಲದೇ ಅವರು ರಚಿಸಿದ್ದೆಂದು ಹೇಳಲಾಗುವ ಒಂದೇ ಒಂದು ದೇವರ ನಾಮವು ನಂದನವನದ ಮಂದಾರ ವೃಕ್ಷದಂತೆ ಇಡೀ ಕನ್ನಡ ಸಾಹಿತ್ಯವನ್ನು ಅದರಲ್ಲಿಯೂ ದಾಸ ವಾಙ್ಮಯದ ಭಕ್ತಿಯ ಬನವನ್ನು ತನ್ನ ನಾದ ಮಾಧುರ್ಯ ಅರ್ಥ ಸೌಂದರ್ಯ ಭಾವ ಗಾಂಭೀರ್ಯಗಳಿಂದ ಸುರಭೀಕರಿಸಿ ಬಿಟ್ಟಿದೆ. ಈ ದಾಸ ಪ್ರಾಸಾದವಲ್ಲಿ ಅವರು ಹಚ್ಚಿಟ್ಟ ದೀಪ ಮುಂದಿನ ಹರಿದಾಸರಿಗೆ ನಂದಾ ದೀಪವಾಗಿ ಮುಕ್ತಿ ಮಂದಿರದ ಮಾರ್ಗ ತೋರುತ್ತ ನಿಂತಿದೆ.

ಹೀಗೆ ಮಂತ್ರಾಲಯದ ಮಾಂತ್ರಿಕರಾದ, ಈ ಗುರುಸಾರ್ವಭೌಮರು ಪ್ರಾಕೃತ ಸಂಸ್ಕೃತ ಸಾಹಿತ್ಯಗಳಿಗೆ ಪೂರಣ ಪೋಷಣೆಗೈದಿದ್ದಾರೆ. ಪಾಮರರಿಗೆ ಬೋಧನ ಮೋದನಗಳನ್ನು ಉಂಟುಮಾಡಿದ್ದಾರೆ. ಆಸ್ತಿಕ, ನಾಸ್ತಿಕರೆಲ್ಲರಲ್ಲಿಯೂ ಭಕ್ತಿ ಭಾಗೀರಥಿಯನ್ನು ಹರಿಯಿಸಿದ್ದಾರೆ. ಲೌಕಿಕ, ಪಾರಮಾರ್ಥಿಕ ಎರಡೂ ವಿಧವಾದ ಫಲಗಳನ್ನು ಜನರಿಗೆ ಸಲ್ಲಿಸಿದ್ದಾರೆ. ಸ್ವತಂತ್ರ ಟೀಕಾ ಪದತಂತ್ರ ಟಿಪ್ಪಣಿ ಹೀಗೆ ಎರಡೂ ವಿಧವಾದ ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ. ತಮ್ಮ ಅಮೋಘವಾದ ಟಿಪ್ಪಣಿಗಳಿಂದ ಜಯತೀರ್ಥ, ವ್ಯಾಸರಾಜ ಹಾಗೂ ವೇದವ್ಯಾಸ ಮಧ್ವರ ಉಭಯವಿಧ ಸೇವೆ ಸಲ್ಲಿಸಿದ್ದಾರೆ. ಜೀವಿಸಿದ್ದಾಗಲೂ, ವೃಂದಾವನಸ್ಥರಾದ ಬಳಿಕವೂ ಜನರಿಗೆ ಕಲ್ಪವೃಕ್ಷ ಕಾಮಧೇನು ಎರಡೂ ಆಗಿದ್ದಾರೆ. ಹೀಗೆ ದ್ವೈತಮತ ಪ್ರತಿಪಾದಕರಾದ ಅವರು ಈ ಬಗೆಯ ಅನೇಕ ದ್ವಂದ್ವಸಾಮರ್ಥ್ಯದಿಂದ ಭೂಲೋಕ ಮತ್ತು ಸ್ವರ್ಗಲೋಕ ಎರಡರಲ್ಲಿಯೂ ಪರಮ ಮಾನ್ಯರಾಗಿದ್ದಾರೆ.



# ಶ್ರೀ ರಾಘವೇಂದ್ರ ಸ್ವಾಮಿಗಳ ೪೭ ಗ್ರಂಥಗಳು

೧) ಶ್ರೀಮನ್ನ್ಯಾಯಸುಧಾ ಪರಿಮಳ

೨) ಚಂದ್ರಿಕಾ ಪ್ರಕಾಶ

೩) ತತ್ವಪ್ರಕಾಶಿಕಾ ಭಾವದೀಪ

೪) ತರ್ಕತಾಂಡವ ವ್ಯಾಖ್ಯಾ

೫) ತಾತ್ಪರ್ಯ ನಿರ್ಣಯ ಭಾವಸಂಗ್ರಹ

೬) ಮಂತ್ರಾರ್ಥಮಂಜರೀ

೭—೧೬) ವಶೋಪನಿಷತ್ತುಗಳ ಖಂಡಾರ್ಥ

೧೭) ತಂತ್ರದೀಪಿಕಾ

೧೮) ನ್ಯಾಯಮುಕ್ತಾವಲೀ

೧೯) ಪ್ರಮೇಯದೀಪಿಕಾ ವ್ಯಾಖ್ಯಾ

೨೦) ಗೀತಾ ತಾತ್ಪರ್ಯ ಟೀಕಾ ವಿವರಣಂ

೨೧—೨೩) ವೇವತ್ರಯ ಪಿವೃತ್ತಿ

೨೪—೨೮) ಪುರುಷಸೂಕ್ತಾದಿ ಪಂಚಸೂಕ್ತ ವ್ಯಾಖ್ಯಾ

೨೯) ತತ್ವಮಂಜರಿ

೩೦) ವಾದಾವಲೀ ವ್ಯಾಖ್ಯಾ

೩೧—೪೦) ದಶಪ್ರಕರಣ ವ್ಯಾಖ್ಯಾ

೪೧) ರಾಮಾಚಾರಿತ್ರ್ಯ ಮಂಜರಿ

೪೨) ಕೃಷ್ಣಚಾರಿತ್ರ್ಯ ಮಂಜರಿ

೪೩) ಪ್ರಮಾಣ ಪದ್ಧತಿ ವ್ಯಾಖ್ಯಾ

೪೪) ಅಣುಮಧ್ವವಿಜಯ ವ್ಯಾಖ್ಯಾ

೪೫) ಪ್ರಾತಃಸಂಕಲ್ಪ ಗದ್ಯ

೪೬) ಭಾಟ್ಟಸಂಗ್ರಹ

೪೭) ಗೀತಾರ್ಥ ಸಂಗ್ರಹ



## ಶ್ರೀಮನ್ನ್ಯಾಯ ಸುಧಾ ಟಿಪ್ಪಣಿಕಾರರಾದ

# ಶ್ರೀ ಕಂಬಾಲೂರು ರಾಮಚಂದ್ರ ತೀರ್ಥರು

ಶ್ರೀಮನ್ನ್ಯಾಯ ಸುಧಾ ಗ್ರಂಥಕ್ಕೆ ಟಿಪ್ಪಣಿ ಬರೆದು ವ್ಯಾಸ ಪೂಜೆಯನ್ನು ಮಾಡಿದ ಕೆಲವೇ ಪೀಠಾಧಿಪತಿಗಳಲ್ಲಿ ಶ್ರೀ ರಾಮಚಂದ್ರ ತೀರ್ಥರು ಅನ್ಯತಮರು ಮತ್ತು ಧನ್ಯತಮರು. ಶ್ರೀ ಚಂದ್ರಿಕಾಚಾರ್ಯರಿಂದ ಐದನೇಯವರಾದ ಶ್ರೀ ಕಂಬಾಲೂರು ರಾಮಚಂದ್ರ ತೀರ್ಥರು. ಚತುಶ್ಶಾಸ್ತ್ರಗಳಲ್ಲಿಯೂ ಚತುರಸ್ರ ಪಾಂಡಿತ್ಯವುಳ್ಳ ಚತುರಮತಿ ಯತಿಗಳಾಗಿದ್ದರು. ವಿದ್ವತ್‌ಪತಿಗಳೂ ಆಗಿದ್ದರು. ಅವರು ಬರೆದ ಶ್ರೀ ಮನ್ನ್ಯಾಯಸುಧಾ ಗ್ರಂಥದ ಕಂಬಾಲು ಟಿಪ್ಪಣಿಯು ಶಾಸ್ತ್ರೋದಧಿಯನ್ನು ಆಲೋಡನ ಮಾಡಲು ಸಮರ್ಥವಾದ ಅವರ ಮತಿ ಮಂಥಾಚಲದ ಮಂದರ ಮೈಮೆಯನ್ನು ಗುರುತರ ಗೈಮೆಯನ್ನು ಎತ್ತಿ ತೋರಿಸುತ್ತದೆ. ಸುಧಾ ಗ್ರಂಥಕ್ಕೆ ಹತ್ತಿಪ್ಪತ್ತು ಟಿಪ್ಪಣಿಗಳಿದ್ದರೂ ಶ್ರೀ ರಾಮಚಂದ್ರ ತೀರ್ಥರ ಟಿಪ್ಪಣಿಯು ಯಾವುದರಿಂದಲೂ ಗತಾರ್ಥವಲ್ಲ. ಯಾರೂ ಬಾರಿಸದೆ ಬಿಟ್ಟ ತಂತಿಯನ್ನೇ ಮಿಡಿವ ಜಾಣ್ಮೆಯು ಶ್ರೀ ರಾಮಚಂದ್ರ ತೀರ್ಥರಿಗೆ ಕರಗತವಾಗಿದೆ. ಶ್ರೀ ಸುಧಾ ಗ್ರಂಥವನ್ನು ಓದುವ ಸಾಮಾನ್ಯ ಪಂಡಿತರು ಮುಗ್ಗರಿಸುವ ತಗ್ಗುಗಳು, ಕುಗ್ಗುವ ಕಗ್ಗಂಟುಗಳು ಯಾವವು, ಎಲ್ಲಿ ಎಂಬುದನ್ನು ಗುರುತಿಸಿ ಆ ಆ ಸ್ಥಳಗಳಲ್ಲಿ ಬೆಳಕಿನ ಸಲಕುಗಳನ್ನು ತೋರಿ ಜಟಿಲವಾದ ಗ್ರಂಥ ಗ್ರಂಥಿಗಳನ್ನು ಸರಳವಾಗಿ ಬಿಡಿಸುತ್ತ ಹೋಗುತ್ತಾರೆ ಶ್ರೀ ರಾಮಚಂದ್ರ ತೀರ್ಥರು. ಆದುದರಿಂದಲೇ ಶ್ರೀ ರಾಮಚಂದ್ರ ತೀರ್ಥರ ಟಿಪ್ಪಣಿಯು ಸರ್ವ ವಿದ್ವನ್‌ಮಾನ್ಯವಾಗಿದೆ.

ಶ್ರೀ ರಾಮಚಂದ್ರ ತೀರ್ಥರ ವಿಷಯದಲ್ಲಿ ಅವರ ಶ್ರೀ ವ್ಯಾಸರಾಯ ಮಹಾಸಂಸ್ಥಾನವನ್ನು ಆರೋಹಣ ಮಾಡಿದ ಶ್ರೀ ಶ್ರೀ ೧೦೮ ವಿದ್ಯಾಪ್ರಸನ್ನ ತೀರ್ಥ ಶ್ರೀಪಾದಂಗಳವರು ಬರೆದ ಲೇಖನವು ಅತ್ಯಂತ ಮಾರ್ಮಿಕವೂ, ಸರ್ವ ವಿಷಯ ಸಂಗ್ರಾಹಕವೂ ಆಗಿರುವದರಿಂದ ಅದನ್ನೇ ಇಲ್ಲಿ ಇಡಿ ಕಿಡಿಯಾಗಿ ಅವಿಕಲವಾಗಿ ಎತ್ತಿಕೊಡಲಾಗಿದೆ.

" ವಂದಾರು ಕಲ್ಪತರವೆ ವಾದಿಕೈರವ ಭಾನವೆ ।  
ಶ್ರೀ ರಾಮಚಂದ್ರ ಗುರವೇ ನಮಃ ಕಾರುಣ್ಯ ಸಿಂಧವೆ ॥ "

ಮಾಧ್ವ ವೇದಾಂತ ಇತಿಹಾಸದಲ್ಲಿ ಶ್ರೀ ವ್ಯಾಸ ರಾಜ ಗುರು ಪರಂಪರೆಯ ಶ್ರೀ ಶ್ರೀ ಕಂಬಾಲು ರಾಮಚಂದ್ರ ತೀರ್ಥರ ಹೆಸರು ಅಜರಾಮರವಾದುದು.

ಇವರು ಶ್ರೀ ಮುದಾನಂದ ತೀರ್ಥ ಭಗವತ್ಪಾದರ ಮಹಾ ಮೂಲ ಪೀಠದಲ್ಲಿ ಹದಿನೇಳನೆಯವರಾಗಿಯೂ ಶ್ರೀ ಶ್ರೀ ವ್ಯಾಸರಾಜ ಗುರುವರ್ಯರ ನಂತರ ಅವರ ಪೀಠದಲ್ಲಿ ಐದನೇಯವರಾಗಿಯೂ ಸರ್ವಜ್ಞ ಸಿಂಹಾಸನವನ್ನು ಅಲಂಕಾರ ಮಾಡಿದ ವರು. ಇವರು ೧೭ ನೇ ಶತಮಾನದ ಆದಿ ಭಾಗದಲ್ಲಿ ಜೀವಿಸಿದ್ದರೆಂದು ೧೬೨೭ ನೇ ಇಸವಿಯ ಗ್ರ್ಯಾಂಟಿನಿಂದ ವ್ಯಕ್ತವಾಗುತ್ತದೆ.

ಇವರು ಶ್ರೀಮನ್ನ್ಯಾಯಸುಧಾಕ್ಕೆ ಟಿಪ್ಪಣಿ, ಋಗ್ಭಾಷ್ಯಕ್ಕೆ ವಿವೃತ್ತಿ ಮುಂತಾದ ಉದ್ಗ್ರಂಥಗಳನ್ನು ರಚಿಸಿ ಜಿಜ್ಞಾಸುಗಳಿಗೆ ಮಹೋಪಕಾರ ಮಾಡಿದ್ದಾರೆ. ಇವರು ಸಿದ್ಧಾಂತ ಪ್ರಚಾರದಲ್ಲಿಯೇ ತಮ್ಮ ಜೀವಿತವನ್ನು ಕಳೆದರು. ಶ್ರೀ ಮಧ್ವ ಸಿದ್ಧಾಂತ ಸ್ಥಾಪನೆ ಮತ್ತು ವಿರೋಧಿಗಳ ಖಂಡನೆಯೇ ಇವರ ಜೀವನದ ಸಾರಸರ್ವಸ್ವ ವಾಗಿತ್ತು. ತಮ್ಮ ನಂತರವೂ ಸಜ್ಜನರಿಗೆ ಸರಿಯಾದ ಜ್ಞಾನವುಂಟಾಗಲು ಶ್ರೀನ್ಯಾಯ ಸುಧೆಗೆ ಟಿಪ್ಪಣಿಯನ್ನು ಬರೆದಿರುವರು. ಈ ಗ್ರಂಥವು ಮುದ್ರಿತವಾಗಿರುತ್ತದೆ.

ಈ ಗ್ರಂಥವು ಸರಳ ಶೈಲಿ, ವ್ಯಾಖ್ಯಾನ ಪರಿಪಾಟಿ, ಅಲ್ಲಲ್ಲಿ ಪ್ರಸಕ್ತವಾಗಿರುವ ತರ್ಕವ್ಯಾಕರಣಾದಿ ಶಾಸ್ತ್ರಾಂತರ ಪ್ರಕ್ರಿಯೆಗಳ ವಿವರಣೆ ಮುಂತಾದವುಗಳಿಂದ ಕೂಡಿ ಕೊಂಡು ಶ್ರೇಷ್ಠ ಮಟ್ಟದ ವ್ಯಾಖ್ಯಾನವೆಂದು ಲೋಕಪ್ರಸಿದ್ಧವಾಗಿದೆ. ನ್ಯಾಯ ಸುಧೆಗೆ ಅನೇಕ ವ್ಯಾಖ್ಯಾನಗಳಿವೆ. ಇತರ ವ್ಯಾಖ್ಯಾನಗಳಲ್ಲಿ ಸ್ಪಷ್ಟವಾಗಿ ವಿವರಿಸ ದಿರುವ ವಿಷಯಗಳು ಬಹಳವಾಗಿ ಈ ವ್ಯಾಖ್ಯಾನದಲ್ಲಿ ವಿವರಿಸಲ್ಪಟ್ಟಿವೆ. ಅಷ್ಟೇ ಅಲ್ಲ ಕೆಲವೆಡೆಗಳಲ್ಲಿ ತಮ್ಮದೇ ಒಂದು ನೂತನ ಭಾವವನ್ನು ಮೂಲ ಗ್ರಂಥದಿಂದ ಹೊರ ಡಿಸಿ ಉಂಟಾಗಬಹುದಾದ ಆಕ್ಷೇಪಗಳನ್ನು ಪರಿಹರಿಸಿ ನ್ಯಾಯಸುಧಾ ಗ್ರಂಥದ ಗಾಂಭೀರ್ಯವನ್ನು ಎತ್ತಿ ತೋರಿಸಿದ್ದಾರೆ. ಇವರ ವಿವರಣೆಯ ವೈಖರಿಯನ್ನು ಸ್ವಲ್ಪ ನೋಡಿರಿ—

"ವಸ್ತುತಸ್ತುಧರ್ಮಾಯ ಜಿಜ್ಞಾಸಾ ಇತಿ ಚತುರ್ಥೀ ಸಮಾಸೋ ಯಥಾನ ಭವತಿ ತಥಾ ಬ್ರಹ್ಮಣೇ ಜಿಜ್ಞಾಸಾ ಇತಿ ಚತುರ್ಥೀ ಸಮಾಸೋಽತ್ರ ನ ಭವತೀ ತ್ಯೇತದರ್ಥಪರತ್ವೇನ " ನಪುನರ್ಧರ್ಮಾಯ ಜಿಜ್ಞಾಸೇತಿ ಚ ಚತುರ್ಥೀ ಸಮಾಸ " ಇತಿ ವಾಕ್ಯಂ ವ್ಯಾಖ್ಯಾಯ ಉಭಯತ್ರಾಪಿ ಚತುರ್ಥೀ ಸಮಾಸಃ ಕಸ್ಮಾನ್ನ ಭವತೀತಿ ಶಂಕಾ ಪರಿಹಾರಾರ್ಥತ್ವೇನೋತ್ತರಂ ವಾಕ್ಯಂ ವ್ಯಾಖ್ಯೇಯಂ " ಇತ್ಯಾದಿ. ಹೀಗೆಯೇ ಇವರು ಬಹು ಸ್ಥಳಗಳಲ್ಲಿ ಅವಶ್ಯ ಜ್ಞಾತವ್ಯವಾದ ಅಪೂರ್ವಾ ರ್ಥಗಳನ್ನು ವಿವರಿಸಿ ಶಾಶ್ವತ ವೇದಾಂತ ಸೇವೆಯನ್ನು ಸಲ್ಲಿಸಿರುತ್ತಾರೆ.

ಇಷ್ಟೇ ಅಲ್ಲ, ಈ ಮಹನೀಯರೇ ಈಗ ಅನುಷ್ಠಾನದಲ್ಲಿರುವ ಶ್ರೀ ವ್ಯಾಸರಾಜ ಮಠದ ಸಂಪ್ರದಾಯ ಪ್ರವರ್ತಕರು. ಮೂಲಭೂತವಾದ ಪ್ರಮಾಣ ಗ್ರಂಥಗಳನ್ನು

ಸರಿಯಾಗಿ ವಿಮರ್ಶಿಸಿ ನೇರವಾದ ಅರ್ಥಗಳನ್ನು ಕಂಡು ಹಿಡಿದು, ಅದರಂತೆ ಏಕಾದಶ್ಯಾದಿಗಳನ್ನು ನಿರ್ಣಯಿಸುವ ಸಂಪ್ರದಾಯ ಗ್ರಂಥವನ್ನು ರಚಿಸಿರುತ್ತಾರೆ.

ಇವರ ಚತುಶ್ಶಾಸ್ತ್ರ ಪಾಂಡಿತ್ಯ ಮತ್ತು ವಾಕ್ಯಾರ್ಥದಲ್ಲಿಯ ಪ್ರತಿಭೆಗಳನ್ನು ಕಂಡು ಪರವಾದಿಗಳು ಇವರೊಡನೆ ವಾದಮಾಡಲು ಅಂಜಿ ಚದರಿ ಹೋಗುತ್ತಿದ್ದರು. ಇವರು ಸಿಂಹದ ಗುಹೆ ಪ್ರವೇಶಿಸಿ ಸಿಂಹವನ್ನು ಹೊರಗೆ ತಂದು ಮರ್ದಿಸುವಂತೆ ಪ್ರೌಢವಾದಿಗಳಿದ್ದ ಸ್ಥಳಕ್ಕೆ ತಾವೇ ಹೋಗಿ ವಾದಿಗಳನ್ನು ಕೆರಳಿಸಿ, ಅವರೊಡನೆ ವಾದಮಾಡಿ ಪರಾಜಯಗೊಳಿಸಿ ಮಧ್ವಮತದ ಜಯಧ್ವಜವನ್ನು ಸರ್ವತ್ರ ಹಾರಾಡಿಸುತ್ತಿದ್ದರು. ಅಂಥ ಮಹಾಮಹಿಮರಿವರು. ಇವರು ಸಂಚಾರ ಕಾಲದಲ್ಲಿ ಶ್ರೀ ಮಠದ ಬಿರುದುಗಳ ಜೊತೆಯಲ್ಲಿ— ಸೆಗಣಿ ನೀರನ್ನು ತುಂಬಿಸಿ ಕಸಪೊರಕೆಯನ್ನು ಜತೆಗೊಳಿಸಿ ಒಬ್ಬ ಶಿಷ್ಯರಿಂದ "ವಾದಿಗಳು ವಾದಕ್ಕೆ ಬರಲಿ, ವಾದದಲ್ಲಿ ಸೋತರೆ ಸೆಗಣಿ ನೀರು ಕಸಪೊರಕೆಯ ಬಹುಮಾನ"ವೆಂದು ಘೋಷಿಸುತ್ತಿದ್ದರಂತೆ. ಇವರ ಪಾಂಡಿತ್ಯದ ಕೆಚ್ಚು ಅಂಥದು.

"ನಹಿಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೆ"

ಜ್ಞಾನಯಜ್ಞಕ್ಕೆ ಸಮಾನವಾದ ಯಜ್ಞವಿಲ್ಲ. ಇದೇ ಭಗವಂತನ ಪ್ರಸಾದಕ್ಕೆ ಸಹಾಯಕವೆಂಬ ಮಾತಿಗೆ ಇವರೇ ನಿದರ್ಶನರಾಗಿದ್ದರೆಂದು ತಿಳಿದು ಬರುತ್ತದೆ. ಇವರು ದೇವರ ಪೂಜಾದಿಗಳನ್ನು ಸಂಕೋಚ ಮಾಡಿ ಆ ಸಮಯವನ್ನು ಶಾಸ್ತ್ರಪ್ರವಚನಕ್ಕೆ ಮೀಸಲಾಗಿಟ್ಟದ್ದರಿಂದ ಅಜ್ಞ ಶಿಷ್ಯರಲ್ಲಿ ಹುಟ್ಟಿದ ದೇವತಾರ್ಚನೆಯ ಸಂಕೋಚದ ಆಕ್ಷೇಪಣೆಯನ್ನು ಇವರು ಆಂಧ್ರ ಭಾಷೆಯಲ್ಲಿ ಮಾತನಾಡುತ್ತಿದ್ದರಿಂದ "ವಾಗ್ಬೊ-ಮ್ಮಲೇ ಬೊಮ್ಮಲು" ಎಂದು ಹೇಳಿ ಲೋಹ ಪ್ರತಿಮೆಗಳಿಗಿಂತ ವಾಗ್ರೂಪವಾದ ಅಂದರೆ ಪ್ರವಚನ ರೂಪವಾದ ಪ್ರತಿಮೆಯಲ್ಲಿ ಭಗವದಾರಾಧನೆಯು ಶ್ರೇಷ್ಠನೆಂದು ಪರಿಹರಿಸಿದರು.

ಇವರು ಪೂರ್ವಾಶ್ರಮದಲ್ಲಿ ತೆಲಗು ಭಾಷೆಯಲ್ಲಿ ಮಾತನಾಡುತ್ತಿದ್ದ ವೈಷ್ಣವ ಪಂಗಡಕ್ಕೆ ಸೇರಿದವರಾಗಿದ್ದರು. ಪೂರ್ವಾಶ್ರಮದಲ್ಲಿಯೂ ಕೂಡ ಉದ್ದಾಮ ಪಂಡಿತರಾಗಿ ಪ್ರವಚನ, ವಾದಿ ನಿಗ್ರಹದಿಂದ ಪ್ರಖ್ಯಾತರಾಗಿ ಶ್ರೀ ಹರಿ ಸರ್ವೋತ್ತಮತ್ವ ಜ್ಞಾನದಲ್ಲಿ ದೃಢವಾದ ನಂಬಿಕೆಯುಳ್ಳ ಹರಿಯನುಗ್ರಹಕ್ಕೆ ವಿಶೇಷವಾಗಿ ಪಾತ್ರರಾಗಿದ್ದರು. ತಿರುಪತಿ ಶ್ರೀನಿವಾಸ ದೇವರಲ್ಲಿ ಇವರಿಗೆ ನಿಷ್ಕಲ-ಭಕ್ತಿಯಿತ್ತು.

ಪೂರ್ವಾಶ್ರಮದಲ್ಲಿ ಇವರು ಒಂದು ಸಲ ನವರಾತ್ರಿಯಲ್ಲಿ ತಿರುಪತಿ ಶ್ರೀನಿವಾಸನ ದರ್ಶನಕ್ಕೆ ಹೋದರು. ಜನಸಂದಣಿಯಲ್ಲಿ ಇವರಿಗೆ ದೇವರ ದರ್ಶನವಾಗುವ ಅವಕಾಶವೇ ದೊರೆಯಲಿಲ್ಲ. ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಆಗ ಇವರು

ಹೊರಗೆ ಬಂದು ಭಕ್ತಿಪಾರವಶ್ಯದಿಂದ ಆಪಾತತಃ ಆಕ್ಷೇಪರೂಪವಾದ ಅಂತತಃ ಭಕ್ತಿ ಪಾರವಶ್ಯದ್ಯೋತಕವಾದ ಸ್ತೋತ್ರ ಮಾಡಿದರು.

"ಐಶ್ವರ್ಯ ಮದಮತ್ತೋಽಸ್ತಿ ಇದನೀಂ ಮಾಂ ಉಪೇಕ್ಷಸೆ।
ವಾದಿನಾಂ ಕಲಹೇ ಪ್ರಾಪ್ತೆ ಅಹಮೇವ ಗತಿಸ್ತವ॥"

ಎಂದು ನುಡಿದಿರುವದು ಇವರ ಪಾಂಡಿತ್ಯದ ಕೆಚ್ಚು, ವಾದಿನಿಗ್ರಹ ಸಾಮರ್ಥ್ಯ, ಮತ್ತು ತಾವು ಭಗವತ್ಪ್ರಸಾದಕ್ಕೆ ಪಾತ್ರರೆಂಬ ದೃಢನಂಬಿಕೆಯನ್ನು ಸ್ಪಷ್ಟಪಡಿಸುತ್ತದೆ. ಇವರ ಅನುಸಂಧಾನದಂತೆ ಕ್ಷಿಪ್ರದಲ್ಲಿ ಶ್ರೀನಿವಾಸದೇವರು ಅರ್ಚಕನಲ್ಲಿ ಆವೇಶ ಬಂದು ಹೇಳಿದ ಪ್ರಕಾರ ದೇವಸ್ಥಾನದ ಅಧಿಕಾರಿಗಳು ಹೊರಗೆ ಬಂದು ಇವರನ್ನು ಗುರುತಿಸಿ ದೇವರ ದರ್ಶನ ಮಾಡಿಸಿ ಬಹು ವಿನಯದಿಂದ ಬೀಳ್ಕೊಟ್ಟರು.

"ಪೆನ್ನತ್ತೂರು" ಎಂಬ ದೊಡ್ಡ ಬ್ರಾಹ್ಮಣರ ಗುಂಪು ಇವರ ಕಾಲದಲ್ಲಿ ಇವರ ಮಹಿಮೆಗೆ ಮಾರುಹೋಗಿ ಶ್ರೀಗಳವರಿಂದ ತಪ್ತ ಮುದ್ರಾದಿಗಳನ್ನು ಸ್ವೀಕರಿಸಿ ವೈಷ್ಣವರಾಗಿ ಇಂದಿಗೂ ಶ್ರೀಮಠದ ಭಕ್ತರಾಗಿದ್ದಾರೆ.

ಶ್ರೀ ರಾಮಚಂದ್ರತೀರ್ಥರ ಸಂಗಡ ವಾದಮಾಡಿ ಪರಾಜಿತರಾದ ಪರವಾದಿಗಳು ಇವರನ್ನೇ ನಾಶ ಮಾಡಬೇಕೆಂದು ಯೋಚಿಸಿ ಇವರು ತಪಸ್ಸು ಮಾಡುತ್ತಿರುವಾಗ ದೊಡ್ಡ ಬಂಡೆಗಲ್ಲನ್ನು ಇವರ ಮೇಲೆಯೇ ಬೀಳುವಂತೆ ಮಾಡಿ ಪಲಾಯನ ಮಾಡಿದರು. ಆ ಕಲ್ಲು ಗುರುಗಳ ತಲೆಯ ಮೇಲೆ ಬೀಳದೆ ಅವರನ್ನು ಕಚ್ಚಬೇಕೆಂದು ಬಂದ ಒಂದು ದೊಡ್ಡ ಸರ್ಪದ ಮೇಲೆ ಬಿದ್ದಿತು. ಅದರಿಂದ ಆ ಸರ್ಪವು ಮೃತವಾಗಿ ಗುರುಗಳಿಗೆ ಏನೂ ಅಪಾಯವಾಗಲಿಲ್ಲ. ಇದನ್ನು ನೋಡಿದ ಕೆಲವು ಶಿಷ್ಯರು ಆ ದುಷ್ಟರನ್ನು ಹಿಡಿದು ತಂದು ಅಧಿಕಾರಿಗಳಿಗೆ ಒಪ್ಪಿಸಬೇಕೆಂದಾಗ ಶ್ರೀಗಳವರು ಇವರು ನನಗೆ ಅಪಾಯ ಮಾಡಿಲ್ಲ. ಅಪಾಯ ಮಾಡ ಬಂದ ಸರ್ಪವು ಇವರಿಂದ ನಾಶವಾಗಿದೆ. ಇವರನ್ನು ಬಿಟ್ಟು ಬಿಡಿ ಎಂದು ಅಪ್ಪಣೆ ಮಾಡಿದರು.

ಅಂದಿನಿಂದ ಇವರು ಆ ಕಲ್ಲನ್ನು ತಮ್ಮ ಸಂಗಡ ಸಂಚಾರದಲ್ಲಿ ಒಯ್ಯುತ್ತಿದ್ದರಂತೆ.

ಇಹ ಲೋಕದಲ್ಲಿ ತಮ್ಮ ಸಾಧನೆಗಳು ಪೂರ್ಣವಾದಾಗ ತಾವು ವೃಂದಾವನಸ್ಥರಾಗುವ ಮುಂಚೆ ಶಿಷ್ಯರನ್ನು ಕರೆದು ನನ್ನಲ್ಲಿ ಭಗವದನುಗ್ರಹವು ಎಷ್ಟಿತ್ತೆಂಬುದರ ಚಿಹ್ನೆಯಾಗಿ ತಾವು ಕಾಲವಾದ ಮೇಲೆಯೂ ತಮ್ಮ ವೃಂದಾವನದ ಮೇಲೆ ಈ ಕಲ್ಲನ್ನು ಇಡಬೇಕೆಂದು ಆಜ್ಞೆ ಮಾಡಿದರು. ಆ ಕಲ್ಲನ್ನು ಈಗಲೂ ಇವರ ವೃಂದಾವನದ ಮೇಲೆ ನೋಡಬಹುದು.

ಇವರ ವೃಂದಾವನವು ಆರ್ಕಾಟ ಜಿಲ್ಲೆಯ ಪಯಸ್ವಿನೀತೀರದ ರಾಯವೇಲೂರಿನಲ್ಲಿ ತಮ್ಮ ಸಾಕ್ಷಾದ್ಗುರುಗಳಾದ ಶ್ರೀ ಶ್ರೀಪತಿತೀರ್ಥರ ವೃಂದಾವನದ ಸಮೀಪದಲ್ಲಿರುತ್ತದೆ. ಇವರು ಮಾರ್ಗಶಿರ ಶುದ್ಧ ತೃತೀಯಾ ವೃಂದಾವನಸ್ಥರಾಗಿರುವರು. ಇವರ ಆರಾಧನೆಯು ಅಲ್ಲಿ ಪ್ರತಿವರ್ಷ ಬಹು ವೈಭವದಿಂದ ನಡೆಯುತ್ತದೆ. ಸಹಸ್ರಾರು ಭಕ್ತರು ನಿತ್ಯವೂ ಇವರ ವೃಂದಾವನ ಸೇವೆ ಮಾಡಿ ಕೃತಾರ್ಥರಾಗುತ್ತಲಿದ್ದಾರೆ.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಮೂಲ ಪರಂಪರೆಯಾದ ಶ್ರೀ ವ್ಯಾಸರಾಜ ಮಠದ ಕೀರ್ತಿಧ್ವಜವನ್ನು ಅತ್ಯುನ್ನತದಲ್ಲಿ ಹಾರಿಸಿದ ಮಹನೀಯರಲ್ಲಿ ಅಗ್ರಗಣ್ಯಸ್ಥಾನವನ್ನು ಪಡೆದು, ಮುಕ್ತಿ-ಭಾಜನರಾದ ಯತಿವರೇಣ್ಯರಿವರು ಎಂಬುದರಲ್ಲಿ ಅತಿಶಯೋಕ್ತಿ ಇಲ್ಲ.

ಆಪಾದ ಮೌಳಿ ಪರ್ಯಂತಂ ಗುರೂಣಾಂ ಆಕೃತಿಂ ಸ್ಮರೇತ್ ।
ತೇನವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥



# ಚಂದ್ರಿಕಾಚಾರ್ಯರ ಚಿಕ್ಕ ಆವೃತ್ತಿ

# ಶ್ರೀ ರಘುನಾಥ ತೀರ್ಥರು

ಅಥವಾ

# ಶೇಷಚಂದ್ರಿಕಾಚಾರ್ಯರು

ವೇದಾಂತ ವಿಶ್ವದಲ್ಲಿ ಶ್ರೀ ವ್ಯಾಸರಾಜರದು ಒಂದು ವಿಕ್ರಮಾಂಕ ಚರಿತ. ಅವರ ಲೋಕೋತ್ತರ ಪಾಂಡಿತ್ಯದ ಪ್ರಭಂಜನ ರಭಸಕ್ಕೆ ಪೊಳ್ಳು ಮತಗಳ ಜೊಳ್ಳು ವಾದಗಳೆಲ್ಲ ಧೂಳೀಪಟವಾಗಿ ಹಾರಿಹೋದವು. ಆಧ್ಯಾತ್ಮ ಪ್ರಪಂಚದ ಪರಶುರಾಮನಂತೆ ಅವರು ತಮ್ಮ ಶಾಸ್ತ್ರದ ಸಾಣೆಗೆ ತೀಡಿ ಹದನಗೊಂಡ ನುಡಿಗೊಡಲಿಯಿಂದ ವೈಶೇಷಿಕ, ಪ್ರಾಭಾಕರ, ನೈಯಾಯಿಕ, ಮಾಯಾವಾದಿ ಮುಂತಾದ ನಾನಾ ಮತೀಯರ ವಾದಾನುವಾದಗಳನ್ನೆಲ್ಲ ತರಿದೊಗೆದು ಮಧ್ವ ಮತದ ಜಯಭೇರಿಯನ್ನು ಎಲ್ಲೆಡೆಗೆ ಮೊಳಗಿಸಿದರು.

ಭಾರತೀಯ ಶಾಸ್ತ್ರ ಪ್ರಪಂಚದಲ್ಲಿ ತಾರ್ಕಿಕರ ವಿರಾಟ ಹಾರಾಟ ಬಹಳ. ನಿಷ್ಪಕ್ಷ ಹಾಗೂ ನಿರ್ದಾಕ್ಷಿಣ್ಯವಾದ ವಿಚಾರದ ಒರೆಗಲ್ಲಿಗೆ ಮಸೆದು ಹದನಗೊಂಡ ಮಿದುಳು. ಮೇಧಾಶಕ್ತಿಯಿಂದ ಅವರು ಪ್ರತಿಯೊಂದು ವಿಷಯವನ್ನೂ ಪೃಥಕ್ಕರಿಸಿ ಪರಿಕಿಸಿ ನಿರುಕಿಸಿ ವಿವೇಚಿಸಿಯೆ ನಿರ್ಣಯಕ್ಕೆ ಬರುವವರಿಂದ ಪ್ರಾಯಃ ಅವರ ನಿರ್ಣಯವು ಬಹಳ ಸಲ ಸತ್ಯದ ಸೀಮೆಯಲ್ಲಿಯೇ ಸುಳಿದಾಡುತ್ತಿರುತ್ತದೆ. ಆದರೂ ಅವರು ಒಮ್ಮೊಮ್ಮೆ ಶುಷ್ಕ ತರ್ಕದ ಬೆನ್ನು ಹತ್ತಿ ಶಬ್ದದ ಮೇಲೆ ಲಾಗ ಹಾಕಹತ್ತಿದಾಗ ಅವರ ಪರಿಷ್ಕಾರದ ಅಬ್ಬರದಲ್ಲಿ ವಾಸ್ತವಾರ್ಥವು ಕಣ್ಮರೆಯಾಗಿ ಬಿಡುತ್ತದೆ. ಆದರೆ ಬುದ್ಧಿವಂತರಾದ ಅವರು ತಾವು ಹೇಳಿದ ಜೊಳ್ಳು ಮಾತನ್ನೇ ಜೋರಾಗಿ ಯುಕ್ತಿಪ್ರಯುಕ್ತಿಗಳಿಂದ ಸಾಧಿಸಿ ವಾದಿಸಿ ಸತ್ಯವೆನಿಸಿಬಿಡುತ್ತಾರೆ. ಆದರೆ ಶಾಸ್ತ್ರೀಯ ಕ್ಷೇತ್ರದಲ್ಲಿ ಬುದ್ಧಿಯ ಬಲಾತ್ಕಾರ ಮಾಡುವ ಈ ತಾರ್ಕಿಕ ಹೆಬ್ಬುಲಿಗಳನ್ನು ಕೆಣಕುವ ಸಾಹಸ ಯಾರಿಗೂ ಆಗಿದ್ದಿಲ್ಲ. ಈಗಲೂ ಆಗುವದಿಲ್ಲ. ಈ ಭೂತಲದಲ್ಲಿ ನಾವೇ ಬೃಹಸ್ಪತಿಯ ಬೌದ್ಧಿಕ ವಾರಸುದಾರರೆಂದು ಜಂಭವನ್ನು ಕೊಚ್ಚಿಕೊಳ್ಳುವ ಈ ನ್ಯಾಯ ಕೇಸರಿಗಳ ಮೀಸೆ ಹಿಡಿದು ಅಲುಗಾಡಿಸಿ ಅವರ ತರ್ಕದ ತಪ್ಪು ತಿಪ್ಪರಲಾಗಗಳನ್ನು ತೋರಿಸಿಕೊಟ್ಟು ಅವರ ವಾದಕ್ಷೋದಗಳನ್ನೆಲ್ಲ ಖಂಡಿಸಿದ ಏಕೈಕ ವೀರರೆಂದರೆ ಬಲಿಭೀಮನ ಗುರುಗರಡಿಯಲ್ಲಿ ತಯಾರಾದ ಶ್ರೀ ವ್ಯಾಸರಾಯರೊಬ್ಬರೆ.

ಅವರ ತರ್ಕತಾಂಡವ ಗ್ರಂಥವನ್ನು ತೆರೆದು ನೋಡಿದರೆ ಆಗಮದ ಭದ್ರ ಬುನಾದಿ ಯಿಲ್ಲದೆ ಬರಿ ಯುಕ್ತಿ ಹಾಗೂ ಬುದ್ಧಿ ಶಕ್ತಿಗಳ ಬಲದಿಂದ ಕಟೆದು ನಿಲ್ಲಿಸಿದ ನೈಯ್ಯಾಯಿಕರ ಮಾತಿನ ಕೋಟೆಗಳೆಲ್ಲವೂ ಮಂಜಿನ ಮಹಡಿಗಳಂತೆ ಒಂದೊಂದೇ ವಾಸ್ತವಿಕ ವಿಚಾರ ರಶ್ಮಿಗಳಿಂದ ಕರಗಿ ಕುಪ್ಪಳಿಸಿ ಹೋಗುತ್ತವೆಯೆಂಬುದನ್ನು ಕಾಣಬಹುದು. ಕಾಶೀ ನವದ್ವೀಪದ ಅಂದಿನ ನವ್ಯ ನ್ಯಾಯದ ನಿರತಿಶಯ ಕೌಶಲದ ಕಿರೀಟವನ್ನೇ ಹೊತ್ತ ಪಕ್ಷಧರ ಮಿಶ್ರಾದಿ ಪಂಡಿತರು ವ್ಯಾಸರಾಜರಿಂದ ನ್ಯಾಯಶಾಸ್ತ್ರದಲ್ಲಿಯೇ ಸೋತು ಅವರ ಗುರುಗಳಿದ್ದ ಊರಿಗೇ ಮುಳಬಾಗಿಲದ ವರೆಗೆ ಬಂದು ತಮ್ಮ ಸೋಲನ್ನು ಒಪ್ಪಿ ಶರಣಾಗತರಾಗಿ “ ವ್ಯಾಸರಾಜರೆಂದರೆ ಬರೀ ವ್ಯಾಸರಾಜರಲ್ಲ, ಸಕ್ಷಾತ್ ವೇದವ್ಯಾಸರೇ ” ಎಂದು ನುಡಿದು ಅವರ ಪಾಂಡಿತ್ಯದ ಬಗೆಗೆ ತಮಗಿರುವ ಅಗಾಧ ಶ್ರದ್ಧೆಯನ್ನು ಅವರ ಗುರುಗಳಾದ ಶ್ರೀಪಾದರಾಜರ ಎದುರು ವ್ಯಕ್ತ ಮಾಡಿ ಹೋದರಂತೆ.

ಆದರೆ ಅವರ ಇನ್ನೊಂದು ಗ್ರಂಥವಾದ ನ್ಯಾಯಾಮೃತದ ವಿಷಯವೇ ಬೇರೆ. ಅದೊಂದು ತರ್ಕಕಠೋರವಾದ ಅದ್ವೈತ ಕುಠಾರ, ಅದು ಮಾಯಾವಾದಿಗಳ ಮತ ಮತಿ ಮಾತು ರೀತಿಗಳ ಮೂಲ ನಾಲಗಳನ್ನೇ ಕಡಿದು ಕೊಚ್ಚಿ ಹಾಕಿಬಿಡುತ್ತದೆ. ಇಂದಿಗೂ ಅದ್ವೈತಿಗಳಿಗೆ ನ್ಯಾಯಾಮೃತವೆಂದರೆ ಒಂದು ಸಿಂಹ ಸ್ವಪ್ನವಿದ್ದಂತೆ. ನ್ಯಾಯಾಮೃತದಲ್ಲಿ ವ್ಯಾಸರಾಯರು ಹಾಕಿದ ಪೇಚಿನಿಂದ ಬಿಡಿಸಿಕೊಳ್ಳಲಿಕ್ಕಾಗಿ ಮಧುಸೂದನ ಸರಸ್ವತಿಯೇ ಮೊದಲಾದ ಸ್ಮಾರ್ತ ಜಗಜಟ್ಟಿಗಳು ನಾನೂರು ವರ್ಷಗಳಿಂದ ಪ್ರಯತ್ನ ಮಾಡುತ್ತಲೇ ಇದ್ದಾರೆ. ಆದರೆ ವ್ಯಾಸರಾಜರ ನುಡಿಯ ಹಿಡಿತ, ಯುಕ್ತಿಯ ಪಟ್ಟುಬಂಧಗಳು ದುರ್ವಿಮೋಚಗಳಾಗಿವೆಯೆಂಬುದು ತರಂಗಿಣೀ, ಕಂಟಕೋದ್ಧಾರ ಸೌಗಂಧ್ಯ ಮುಂತಾದ ಗ್ರಂಥಗಳಿಂದ ಗೊತ್ತಾಗುತ್ತದೆ. ನ್ಯಾಯಾಮೃತ ಗ್ರಂಥ ಇರುವ ವರೆಗೂ ಅದ್ವೈತ ಪಂಥವು ತಲೆಯೆತ್ತುವದೇ ಸಾಧ್ಯವಿಲ್ಲ.

ಇನ್ನು ವ್ಯಾಸರಾಜರ ಮೂರನೇಯ ಗ್ರಂಥವಾದ ಚಂದ್ರಿಕೆಯು ಅವರ ಕಲಶ ಕೃತಿ ಅಥವಾ ಅರಸು ಕೃತಿ, ( master peace ) ಅದರಿಂದಲೇ ಅವರಿಗೆ ಚಂದ್ರಿಕಾಚಾರ್ಯರೆಂದು ಹೆಸರು ಬಂದಿತು.

ಚಂದ್ರಿಕೆಯು ಶ್ರೀ ಮಧ್ವಾಚಾರ್ಯರ ಸರ್ವಜ್ಞತ್ವಕ್ಕೆ ಹಿಡಿದ ಒಂದು ರನ್ನಗನ್ನಡಿ. ಇದರಲ್ಲಿ ಸೂತ್ರಕಾರರಾದ ಶ್ರೀ ವೇದವ್ಯಾಸರ ಹೃದಯಾಕಾಶದಲ್ಲಿ ತೊಳಗುವ ಪ್ರತಿಯೊಂದು ಭಾವೋನ್ಮೇಷವೂ ಸಕಲಾವಿಕಲವಾಗಿ ಪ್ರತಿಬಿಂಬಿತವಾಗಿವೆ. ಮತ್ತು ಶಂಕರ, ರಾಮಾನುಜ ಮುಂತಾದ ಭಾಷ್ಯಕಾರರೆಲ್ಲರೂ ಬಾದರಾಯಣೀಯ ಆಶಯಾಕೂತಗಳಿಂದ ಎಷ್ಟು ದೂರಲ್ಲಿದ್ದಾರೆ ಇತರ ಭಾಷ್ಯಕಾರರು ಅಡ್ಡದಾರಿ ಹಿಡಿದು ಯಾವ-ಯಾವ ತಳ್ಳಕೊಳ್ಳ, ವರಿ-ಕೊರಿಗಳಲ್ಲಿ ಬಿದ್ದಿದ್ದಾರೆ ಎಂಬುದೆಲ್ಲವೂ

ಸ್ಪಷ್ಟವಾಗಿಯೇ ಕಂಡು ಬರುತ್ತದೆ. ಮಧ್ವ ಭಾಷ್ಯ ಮಾತ್ರ ಸೂತ್ರದ ಹೆಜ್ಜೆಗೆ ಕಟ್ಟಿದ ಗೆಜ್ಜೆಯೋ ಏನೋ ಎನ್ನುವಷ್ಟು ವ್ಯಾಸಧ್ವನಿಯನ್ನೇ ಪ್ರತಿಧ್ವನಿಸುತ್ತ ಹೊರಟಿದೆಯೆನ್ನುವದೂ ಮಧ್ವ ಭಾಷ್ಯದ ಉಪನ್ಯಾಸವೆಂದರೆ ವ್ಯಾಸ ಹೃದಯದ ವಾಸ್ತವಿಕ ವಾಗ್ವಿನ್ಯಾಸ ಎಂಬುವದೂ ಚಂದ್ರಿಕೆಯ ಪುಟ–ಪುಟಗಳಲ್ಲಿ ಕಂಡು ಬರುತ್ತದೆ. ಪ್ರತಿ ಅಧಿಕರಣದಲ್ಲಿಯೂ ಎದ್ದು ಕಾಣುತ್ತವೆ.

ಮಧ್ವ ಸಿದ್ಧಾಂತಕ್ಕೆ ಆಚಾರ್ಯರ ಅನಂತರ ಮೌಲಿಕವಾದ ಕಾಣಿಕೆಯಿತ್ತ ಮಹನೀಯರಲ್ಲಿ ಟೀಕಾಚಾರ್ಯರು ಅಗ್ರಗಣ್ಯರಾಗಿದ್ದಾರೆ. ವ್ಯಾಸರಾಯರು ದ್ವಿತೀಯ ರಾಗಿಯೂ ಅದ್ವಿತೀಯರಾಗಿದ್ದಾರೆ. ಮುಂದೆಲ್ಲವೂ "ವಾಸೋಚ್ಛಿಷ್ಟಮಿದಂ ಜಗತ್".

ಚಂದ್ರಿಕಾ ಗ್ರಂಥವು ಸ್ವತಂತ್ರ ಕೃತಿಯಲ್ಲ. ಶ್ರೀ ವೇದವ್ಯಾಸದೇವರ ಬ್ರಹ್ಮ ಸೂತ್ರಕ್ಕೆ ಶ್ರೀ ಮಧ್ವಾಚಾರ್ಯರು ಬರೆದ ಭಾಷ್ಯಕ್ಕೆ ಶ್ರೀ ಟೀಕಾಚಾರ್ಯರು ತತ್ತ್ವ ಪ್ರಕಾಶಿಕಾ ಎಂಬ ಟೀಕಾ ಗ್ರಂಥವನ್ನು ಬರೆದಿದ್ದಾರೆ. ಜಯತೀರ್ಥರ ಆ ತತ್ವಪ್ರಕಾ ಶಿಕೆಗೆ ಚಂದ್ರಿಕೆಯು ಟಿಪ್ಪಣಿಯಾಗಿದೆ. ಇದನ್ನು ಬಾಯಿ ಬಿಟ್ಟು ಹೇಳಬೇಕಾಗು ತ್ತದೆ. ಇಲ್ಲದಿದ್ದರೆ ಇದೊಂದು ಸ್ವತಂತ್ರ ಗ್ರಂಥವೇ ಎಂದು ಯಾರಿಗಾದರೂ ಎನಿಸ ಲಿಕ್ಕೆ ಸಾಕು. ಇದೇ ಇದರ ವೈಶಿಷ್ಟ್ಯ.

ಈ ಚಂದ್ರಿಕೆಯಿಂದ ಜಯತೀರ್ಥರು "ಸರ್ವಜ್ಞ ಕಲ್ಪರೇ" ಎಂಬ ಮಾತು ಸಿದ್ಧಾಂತಿತವಾಗುತ್ತದೆ ಹಾಗೂ ಟೀಕಾಚಾರ್ಯರು ಗುರುಕಾರುಣ್ಯ ಸರಣಿಯ ಪ್ರಪತ್ತಿ ಯಿಂದ ಪಡೆದ ಅಭೂತಪೂರ್ವವಾದ ಪ್ರತಿಭಾ ವಿಲಾಸ ಹಾಗೂ ಪಾಂಡಿತ್ಯಪ್ರಕಾಶ ಗಳ ವಿರಾಟ್ ಸ್ವರೂಪದ ಸಮ್ಯಗ್ ದರ್ಶನವೂ ಆಗುತ್ತದೆ. ಮತ್ತು ಮಧ್ವಾಚಾ ರ್ಯರ ಮಾತುಗಳೆಂದರೆ ವೇದ ಶಾಸ್ತ್ರ ಪುರಾಣಾದಿ ಪ್ರಮಾಣ ಕುಂಡಗಳಲ್ಲಿ ಹೂತು ನಿಂತ ಪ್ರಮೇಯ ಪುಷ್ಪ ವಾಟಿಕೆಯೇ ಸರಿ ಎಂಬ ವಿಷಯ ಪ್ರತಿಯೊಬ್ಬನಿಗೂ ಖಾತರಿಯಾಗುತ್ತದೆ.

ಆದುದರಿಂದಲೇ ಮಂತ್ರಾಲಯದ ಗುರು ಸಾರ್ವಭೌಮರಾದ ಶ್ರೀ ರಾಘವೇಂದ್ರ ತೀರ್ಥರು

"ಟೀಕಾ ಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ"

ಶ್ರೀ ಜಯತೀರ್ಥರ ಟೀಕಾ ಗ್ರಂಥದ ಗಾಂಭೀರ್ಯವನ್ನು ತಿಳಿದು ಅದನ್ನು ಎತ್ತಿ ತಿಳಿಸಬೇಕೆಂದರೆ ಶ್ರೀ ವ್ಯಾಸರಾಜರೊಬ್ಬರೇ ಸಮರ್ಥರು ಎಂದು ಪ್ರಾಂಜಲ ಮನದಿಂದ ನುಡಿದಿದ್ದಾರೆ.

ಈ ಚಂದ್ರಿಕೆಯಲ್ಲಿ ವ್ಯಾಸರಾಜರು ಟೀಕಾಚಾರ್ಯರ ಮತ್ತು ಮಧ್ವಾಚಾರ್ಯರ ಮತ ಹಾಗೂ ಮತಿಗಳ ಮಹತ್ತೋ ಮಹೀಯಸ್ತ್ವವನ್ನೂ ಸರ್ವತಃ ಶ್ರೇಷ್ಠತ್ವವನ್ನೂ ಮನಗಾಣಿಸಿ ಭಾಮತೀ, ವಿವರಣ, ಶಾರೀರ ಭಾಷ್ಯ, ಶ್ರೀಭಾಷ್ಯಾದಿ ಕರ್ತೃಗಳಾದ ಶಂಕರಾಚಾರ್ಯ ರಾಮಾನುಜಾಚಾರ್ಯ ಮತ್ತು ಅವರ ಶಿಷ್ಯಾನುಯಾಯಿ ಮುಂತಾದವರು ಪ್ರತಿಪಾದಿಸಿದ ಮತಗಳೆಲ್ಲ ಸರ್ವಾಪಸದ್ಧ ಎಂದು ಖಂಡಿಸಿ ಅವರ ವಿಧಾನಗಳನ್ನೆಲ್ಲ ತಲೆ ಕೆಳಗಾಗುವಂತೆ ಮಾಡಿ ಅವರ ಮತಿಗಳೆಲ್ಲ ಶೀರ್ಷಾಸನ ಹಾಕುವಂತೆ ಮಾಡಿದ್ದಾರೆ.

ಈ ವಿಷಯದಲ್ಲಿ ವ್ಯಾಸರಾಯರು ಹಿಡಿದ ಹಾದಿಯೇ ಬೇರೆ. ಸೈದ್ಧಾಂತಿಕ ವಿಷಯೋವಿನ್ಯಾಸ ನಿರೂಪಣಾದಿಗಳಲ್ಲಿ ಅವರು ಶ್ರೀ ಟೀಕಾರಾಯರು ಹಾಗೂ ಆಚಾರ್ಯರ ಕ್ರಮವನ್ನೇ ಅನುಸರಿಸಿದರೂ ವಿಪಕ್ಷ ಖಂಡನದ ಪ್ರಸಂಗಗಳಲ್ಲಿ ಅವರು ಹೂಡುವ ಹೂಟವೇ ಬೇರೆ, ಆಡುವ ಆಟವೇ ಬೇರೆ. ಮಾಯಾವಾದಿ ಮೃಗಗಳನ್ನು ಹಿಡಿಯಲು ಚಂದ್ರಿಕಾಚಾರ್ಯರು ತೀರ ಹೊಚ್ಚ ಹೊಸದಾದ ವ್ಯಾಸವಾಗುರಾಗಳನ್ನೇ ರಚಿಸಿದ್ದಾರೆ. ಹೀಗೆ ಯಾವ ಪ್ರಾಚೀನ ಆಚಾರ್ಯರ ವಾಚೋಕ್ತವಾಗದ ಮಹಾ ಚಾತುರ್ಯದ ಕೆಲ ಹಲವಾರು ಮಾತಿನ ಹಿಡಿತ, ಭಾವದ, ಬಂಧ ಯುಕ್ತಿಯ ಮಲಕು, ಶಾಸ್ತ್ರದ ತಳಕು, ತರ್ಕದ ತಿರುಗಣೆ, ಪ್ರಮಾಣದ ಪಟ್ಟುವರಸೆಗಳನ್ನು ನಾವು ಚಂದ್ರಿಕೆಯಲ್ಲಿ ಕಾಣಬಹುದು. ಈ ಎಲ್ಲ ಯುಕ್ತಿ ಚಾತುರಿ ಮತ್ತು ಉಕ್ತಿ ವೈಖರಿಯ ಹಿಂದೆ ಗಟ್ಟಿಯಾದ ಪ್ರಮಾಣದ ನೆಲಗಟ್ಟು, ಅನುಭವದ ಆಧಾರ, ಶಾಸ್ತ್ರೀಯ ಸತ್ಸಂಪ್ರದಾಯಗಳ ಬಲಿಷ್ಠ ಬೆಂಬಲ ಮತ್ತು ದಾರ್ಶನಿಕ ಪ್ರಪಂಚದ ನಿಯಮ ನಿಬಂಧನೆಗಳ ಹಿನ್ನೆಲೆಯು ಅಬಾಧಿತವಾಗಿ ಇದ್ದುದರಿಂದಲೇ ಈ ವ್ಯಾಸ ವಾಗ್ವ್ಯೂಹಗಳೆಲ್ಲ ವಿದ್ವನ್ಮಾನ್ಯವೂ, ವಿಮತೀಯರಿಗೂ ಏನೂ ಹೆಸರಿಡಲೂ ಬಾರದಂಥವುಗಳೂ ಆಗಿವೆ.

ಆದುದರಿಂದಲೇ ನ್ಯಾಯಾಮೃತದ ವಿರುದ್ಧವಾಗಿ ಯಾರೋ ಒಬ್ಬಿಬ್ಬರು ಧ್ವನಿ ಎತ್ತುವ ಸಾಹಸ ಮಾಡಿದ್ದರೂ ಚಂದ್ರಿಕೆಯ ವಿರುದ್ಧ ಮಾತೆತ್ತುವ ಹುಚ್ಚು ಸಾಹಸವನ್ನೂ ಕೂಡ ಮೊನ್ನೆ ಮೊನ್ನೆಯ ವರೆಗೆ ಯಾವ ನಿಜವಾದ ಅದ್ವೈತ ವಿದ್ವಾಂಸನೂ ಮಾಡಿರಲಿಲ್ಲ. ಮಧುಸೂದನ ಸರಸ್ವತಿ, ವಾಚಸ್ಪತಿ ಮಿಶ್ರ, ಶ್ರೀ ಹರ್ಷ, ಚಿತ್ಸುಖಾಚಾರ್ಯ ಮುಂತಾದ ದಿಗ್ದಂತಿ ಅದ್ವೈತ ವಿದ್ವಾಂಸರೆಲ್ಲರೂ ಇವರ ಮುಂದೆ ಕೈಯೂರಿ, ಬಾಯ್ಮುಚ್ಚಿ, ಮೂಕ ಸಮ್ಮತಿ ತೋರಿದಾಗ ಇತ್ತೀಚಿನ ರಾಮಸುಬ್ಬಾಶಾಸ್ತ್ರಿ, ಅನಂತಕೃಷ್ಣ ಶಾಸ್ತ್ರಿ ಮುಂತಾದ ಕುಣಿಯುತ್ತ ಗಣೆ ಊರುವ ಗಿಡ್ಡ ನೀರಿನ ಅಡ್ಡ ಪಂಡಿತರು ಅವರ ತಲೆ ಬಾಲ ತಿಳಿದುಕೊಳ್ಳುವ ಯೋಗ್ಯತೆ ಇಲ್ಲದೆ ಬಡಬಡಿಸಿದರೆ ಅದು ಚಂದ್ರಿಕೆಯ ಮೇಲಿನ ಘೂಕ ಘೀಳಿಡುವಂತೆ ಸರ್ವಥಾ ಅನಾದರಣೀಯ

ವಾಗುವದರಲ್ಲಿ ಸಂದೇಹವಿಲ್ಲ. ಅವುಗಳ ಮೇಲೆ ಬೇಕಾದಷ್ಟು ಖಂಡನ ಮಂಡನಗಳೂ ಹುಟ್ಟಿವೆ, ಹುಟ್ಟುತ್ತಲೂ ಇವೆ. ಆದರೆ ಇವಾವುದರಿಂದಲೂ ಚಂದ್ರಿಕೆಯ ವಿಶ್ವಾಲ್ಹಾದಕ ಸ್ವರೂಪಕ್ಕೆ ಯಾವ ಚ್ಯುತಿಯೂ ಇಲ್ಲ, ಯಾವ ಕ್ಷತಿಯೂ ಇಲ್ಲ.

ಈ ಜಗನ್ಮಾನ್ಯವಾದ ಚಂದ್ರಿಕಾ ಗ್ರಂಥವು ನಮ್ಮ ಮಾಧ್ವರ ದುರ್ದೈವದಿಂದ ಅರ್ಧಕ್ಕೆ ನಿಲ್ಲಿಸಲ್ಪಟ್ಟಿದೆ. ಈಗಿರುವ ಸುಮಾರು ೧೧ ನೂರು ಪುಟದ ಚಂದ್ರಿಕಾ ಗ್ರಂಥವು ನಮ್ಮ ತತ್ವಪ್ರಕಾಶಿಕೆಯ ಅರ್ಧ ಅಂದರೆ ಪ್ರಥಮ ದ್ವಿತೀಯ ಈ ಎರಡು ಅಧ್ಯಾಯಕ್ಕೆ ಮಾತ್ರ ಇರುತ್ತದೆ. ಮೂರು ನಾಲ್ಕು ಅಧ್ಯಾಯಕ್ಕೆ ವ್ಯಾಸರಾಜರ ಟೀಕೆ ಚಂದ್ರಿಕೆಯು ಯಾವದೋ ಕಾರಣದಿಂದ ಬರೆಯಲ್ಪಡಲಿಲ್ಲ.

ಇವೆರಡು ಅಧ್ಯಾಯ ಬರೆಯುವಷ್ಟರಲ್ಲಿ ಚಂದ್ರಿಕಾಚಾರ್ಯರ ತಲೆಗೆ ವ್ಯಾಸರಾಜ ವಿಶ್ವವಿದ್ಯಾಲಯ ಹಾಗೂ ವಿಜಯನಗರದ ರಾಜಕಾರಣ, ಮಧ್ವಮತ ಪ್ರಸಾರ ದಿಗ್ವಿಜಯಾದಿ ಕಾರ್ಯಭಾರಗಳ ಒತ್ತಡ ಹೆಚ್ಚಾಗಿ ಅವರಿಗೆ ಅವುಗಳನ್ನು ಪೂರ್ತಿಗೊಳಿಸಲಿಕ್ಕೆ ಆಗಲಿಲ್ಲ.

ತತ್ವಪ್ರಕಾಶಿಕೆಯ ಮುಂದಿನ ಮೂರು ನಾಲ್ಕು ಅಧ್ಯಾಯಗಳಿಗೆ ಚಂದ್ರಿಕೆಯ ಬೆಳಕಿಲ್ಲದೇ ಕೂಡುವ ಪ್ರಸಂಗ ಬಂದಿತು.

ಆಗಿನ ಕಾಲದಲ್ಲಿ ಪಂಡಿತರಿಗೂ, ಪಂಡಿತೋತ್ತಮರಾದ ಪೀಠಾಧಿಪತಿಗಳಿಗೂ ಕೊರತೆಯೇನಿರಲಿಲ್ಲ. ಆದರೆ ಆ ಚಂದ್ರಿಕೆಯ ಅಸಾಧಾರಣವಾದ ಶೈಲಿ ಮತ್ತು ಸಮಸ್ತ ಶಾಸ್ತ್ರೋದಧಿಗಳ ಸರ್ವಂಕಷವಾದ ಪ್ರಗಲ್ಭಸರಣಿಯನ್ನು ನೋಡಿದ ಯಾವನಿಗೆ ತಾನೇ ಆ ಕಾರ್ಯವನ್ನು ಮುಂದುವರಿಸುವ ಧೈರ್ಯವಾದೀತು.

ಹೀಗಾಗಿ ಎಷ್ಟೋ ವರ್ಷ, ಎಷ್ಟೋ ತಲೆಮಾರು ತತ್ವಪ್ರಕಾಶಿಕೆಯ ಮೂರು ನಾಲ್ಕು ಅಧ್ಯಾಯಗಳು ನಿಶ್ಚಂದ್ರಿಕೆಗಳಾಗಿಯೇ ಉಳಿಯಬೇಕಾಯಿತು.

ಅದಕ್ಕಾಗಿ ಮತ್ತೆ ಚಂದ್ರಿಕಾಚಾರ್ಯರೇ ತಮ್ಮ ಹತ್ತನೆಯ ತಲೆಯಲ್ಲಿ, ತಮ್ಮ ಚಂದ್ರಿಕಾ ಗ್ರಂಥವನ್ನು ಪೂರ್ತಿ ಮಾಡಲಿಕ್ಕೆ ತಮ್ಮ ವ್ಯಾಸರಾಜ ಮಠದಲ್ಲಿ ಶ್ರೀ ರಘುನಾಥತೀರ್ಥರಾಗಿ ಅವತಾರಮಾಡಿ ಬರಬೇಕಾಯಿತು. ಚಂದ್ರಿಕಾ ಹಾಗೂ ಶೇಷ ಚಂದ್ರಿಕಾ ಎರಡೂ ಗ್ರಂಥಗಳ ಪದಸಂಕ್ತಿ, ವಚನ ರಚನಾ ವಿಶೇಷ, ತತ್ವನಿರೂಪಣ ವೈಖರೀ, ಮೂಲ ಗ್ರಂಥದ ಅರ್ಥಾಪ ಪ್ರಣಾಲೀ, ಪ್ರತಿಪಕ್ಷ ಖಂಡನ ಚಾತುರಿ ಮುಂತಾದವುಗಳನ್ನು ಸೂಕ್ಷ್ಮವಾಗಿ ತುಲನಾತ್ಮಕವಾಗಿ ಅಭ್ಯಸಿಸಿದವರಿಗೆ "ಸೋಯಂ ವ್ಯಾಸಃ" ಎಂಬ ಸುಜ್ಞೈಕ ಪ್ರಾಸ್ಯಪ್ರತ್ಯಭಿಜ್ಞೆಯು ಬರತ್ತದೆ. ಇಲ್ಲದಿದ್ದರೆ ವಿಭಿನ್ನ ಕರ್ತೃಕ ಗ್ರಂಥಗಳ ಈ ಅಚೂಲ ಮೂಲ ಶೈಲಿಯ ಏಕತಾನತೆಗೆ ಕಾರಣ ಹೇಳು

ವದು ಕಠಿಣವಾಗುವದು. ಅಥವಾ ಶ್ರೀ ರಘುನಾಥತೀರ್ಥರ ವಾಙ್ಮಯ ತಪಸ್ಸಿಗೆ ಮೆಚ್ಚಿದ ಶ್ರೀ ಚಂದ್ರಿಕಾಚಾರ್ಯರೇ ಅವರಲ್ಲಿ ಒಂದು ರೂಪದಿಂದ ತಾವೇ ನಿಂತು ಇಲ್ಲವೇ ಅವರ ಕೃಪಾ ವಿಶೇಷವೇ ಅವರಲ್ಲಿದ್ದು ಈ ಅನನ್ಯಸಾಧ್ಯವಾದ ಚಂದ್ರಿಕಾ ಪೂರಣ ರೂಪವಾದ ಮಹಾ ಕಾರ್ಯವನ್ನು ಮಾಡಿತು ಎಂದಾದರೂ ಹೇಳಬೇಕು.

ಶ್ರೀ ಚಂದ್ರಿಕಾಚಾರ್ಯರು ಅಪ್ಪಣೆ ಕೊಡಿಸಿದ "ದಶಮೋಽಮತ್ಸಮಃ" ಎಂಬ ವಚನಾನುಸಾರ ಅವರ ಶಿಷ್ಯ ಪರಂಪರೆಯಲ್ಲಿ ಶ್ರೀ ರುಘುನಾಥತೀರ್ಥರು ಹತ್ತನೆ ಯವರು. ಇವರು ದೊಡ್ಡ ಜ್ಞಾನಿಗಳು. ದ್ವೈತ ವೇದಾಂತಕ್ಕೆ ವಜ್ರಕವಚದಂತಿರುವ ವ್ಯಾಸತ್ರಯಗಳಲ್ಲೊಂದಾದ ತಾತ್ಪರ್ಯ ಚಂದ್ರಿಕೆ ಎಂಬ ಗ್ರಂಥದ ಅವಶಿಷ್ಟ ಭಾಗ ವೆಂದರೆ ತತ್ವಪ್ರಕಾಶಿಕೆಯ ಮೂರು ನಾಲ್ಕನೆಯ ಅಧ್ಯಾಯಗಳ ವ್ಯಾಖ್ಯಾನ ಭಾಗ ವನ್ನು ರಚಿಸಿರುವರು. ಅದಕ್ಕೆ ಶೇಷ–ಚಂದ್ರಿಕೆಯೆಂದು ಹೆಸರು. ಅದು ಸುಮಾರು ಇಪ್ಪತ್ತು ಸಾವಿರ ಗ್ರಂಥಗಳನ್ನೊಳಗೊಂಡಿರುವ ದೊಡ್ಡ ಗ್ರಂಥವು. ತತ್ವಪ್ರಕಾಶಿಕೆಯ ಮೂರು, ನಾಲ್ಕನೆಯ ಅಧ್ಯಾಯಗಳು ಕ್ರಮವಾಗಿ ಸಾಧನ, ಫಲಗಳನ್ನು ನಿರೂಪಿಸುವವು. ಈ ಭಾಗದಲ್ಲಿ ಮುಮುಕ್ಷುಜ್ಞೇಯವಾದ ಬಹು ಪ್ರಮೇಯಗಳು ಅಡಗಿವೆ. ಅವು ಬಹು ಸೂಕ್ಷ್ಮ ದೃಷ್ಟಿಯಿಂದ ಪರಿಭಾವಿಸಿ ತಿಳಿಯಬೇಕಾದ ಅಂಶಗಳು. ಅಂತಹ ಗಹನ ವಾದ ಪ್ರಮೇಯಗಳನ್ನೆಲ್ಲ ಪರಪಕ್ಷ ನಿರಾಕರಣ ಪೂರ್ವಕವಾಗಿ ಚನ್ನಾಗಿ ನಿರೂ ಪಿಸಿ ಮೂಲ ಟೀಕಾ ಭಾವವನ್ನು ಆವಿಷ್ಕರಿಸುವ ಕಾರಣ ಆ ಗ್ರಂಥನಾಮದಿಂದಲೇ ಪ್ರಖ್ಯಾತರಾಗಿ, ರಾಜಸಭೆಗಳಲ್ಲಿ ಬಂದ ವಾದಿಗಳನ್ನೆಲ್ಲ ಜಯಿಸಿ, ಸಿದ್ಧಾಂತ ಸ್ಥಾಪನೆ ಮಾಡಿ ಈ ಶೇಷಚಂದ್ರಿಕಾಚಾರ್ಯರು ಪಂಡಿತರ, ರಾಜರ ಹಾಗೂ ಮಹಾರಾಜರ ಮನ್ನಣೆಯನ್ನು ಪಡೆದರು.

ತಂತ್ರಸಾರ ಗ್ರಂಥಕ್ಕೆ "ತತ್ವಕಣಿಕಾ" ಎಂಬ ವ್ಯಾಖ್ಯಾನವನ್ನೂ "ಗಂಗಾಸ್ತುತಿ" ಎಂಬ ಗ್ರಂಥವನ್ನೂ ರಚಿಸಿರುವರು.

ಮೈಸೂರು ಹತ್ತಿರ ಕಾವೇರಿ ಕಪಿಲಾ ಸಂಗಮ ಸ್ಥಳವಾದ ತಿರುಮಕೂಡಲು ಕ್ಷೇತ್ರದಲ್ಲಿ ಆಷಾಢ ಶುದ್ಧ ೪ ರಂದು ವೃಂದಾವನಸ್ಥರಾಗಿರುವರು.

ಶ್ರೀ ಮಹಾ ತಪಸ್ವಿಗಳಾದ ಈ ಮಹಾನುಭಾವರು ಈಗಲೂ ಅಲ್ಲಿ ಸೇವಿಸುವ ಭಕ್ತವೃಂದಕ್ಕೆ ಐಹಿಕಾಮುಷ್ಮಿಕ ಶ್ರೇಯಸ್ಸನ್ನು ಅನುಗ್ರಹಿಸುತ್ತಿರುವರು. ಶ್ರೀ ಶ್ರೀ ವ್ಯಾಸರಾಜ ಮಠದಲ್ಲಿ ಮಾಧ್ವ ಇತಿಹಾಸದಲ್ಲಿ ಅತಿಮಾನ್ಯ ಸ್ಥಾನವನ್ನು ಪಡೆದ ಮಹನೀಯರಿವರು. ಇವರು ಹದಿನೇಳನೇಯ ಶತಮಾನದ ಆದಿ ಭಾಗದಲ್ಲಿದ್ದರೆಂಬ ಅಂಶವು ಕ್ರಿ. ಶ. ೧೬೨೮ನೇ ಇಸ್ವಿಯಲ್ಲಿ 'ಜಯರಂಗರಾಯ' 'ಚೊಕ್ಕನಾಥರಾಯ' ರಿಂದ ಕೊಡಲ್ಪಟ್ಟ ಶಾಸನದಿಂದ ವ್ಯಕ್ತವಾಗುತ್ತದೆ. ಈ ಮಹನೀಯರು ಪೂರ್ವೋಕ್ತ

ರೀತಿಯಲ್ಲಿ ಗ್ರಂಥ ರಚನಾದಿಗಳನ್ನು ಮಾಡಿ ಆಸೇತು ಹಿಮಾಚಲ ತೀರ್ಥ ಯಾತ್ರಾರೂಪ ದಿಗ್ವಿಜಯಗಳಿಂದ ಸಜ್ಜನರಿಗೆ ಸನ್ಮಾರ್ಗ ಉಪದೇಶಿಸಿರುವರು.

ಇವರು ಶ್ರೀ ವ್ಯಾಸರಾಜ ಮಠದ ಶ್ರೀ ಲಕ್ಷ್ಮೀನಾರಾಯಣ ತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರು. ಇವರ ಸಾಕ್ಷಾತ್ ಶಿಷ್ಯರೇ ' ಭಾಷ್ಯದೀಪಿಕಾಚಾರ್ಯರು ಎಂದು ಪ್ರಸಿದ್ಧರಾದ ಶ್ರೀ ಜಗನ್ನಾಥ ತೀರ್ಥರು. ಈ ಇಬ್ಬರು ಗುರು ಶಿಷ್ಯರು ೩೦ ವರ್ಷಗಳ ಕಾಲ ಸರ್ವಜ್ಞ ಸಿಂಹಾಸನದಲ್ಲಿ ಮಂಡಿಸಿ ಸರ್ವಜ್ಞ ಶಾಸ್ತ್ರಗಳಲ್ಲಿ ಅಜರಾಮರವಾದ ಗ್ರಂಥಗಳನ್ನು ರಚಿಸಿದ್ದು ಮಾಧ್ವ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕ ಸಂಗತಿಯಾಗಿದೆ.

ಈ ಶೇಷಚಂದ್ರಿಕಾಚಾರ್ಯರು ತಮ್ಮ ಸಂಸ್ಥಾನದ ಆರ್ಥಿಕ ಭದ್ರತೆಗೂ ವಿಶೇಷ ಗಮನಕೊಟ್ಟು, ಕೊಡೆಯಾಲ, ಶೇಷಗಿರಿಹಳ್ಳಿ, ಎಲಹಂಕಾ, ಶೆಟ್ಟಿಹಳ್ಳಿ ಮುಂತಾದ ಗ್ರಾಮಗಳನ್ನೂ ಮತ್ತು ಇತರ ಭೂಸ್ಥಳಗಳನ್ನೂ ಶ್ರೀ ಮಠಕ್ಕೆ ಸಂಪಾದಿಸಿದ್ದಾರೆ.

ಶೇಷಚಂದ್ರಿಕಾದಂಥ ಅಮೌಲ್ಯ ಗ್ರಂಥವು ಇಲ್ಲಿಯವರೆಗೂ ಅಚ್ಚಾಗಿದ್ದಿಲ್ಲ. ಅಲ್ಲಲ್ಲಿ ನಾಲ್ಕೆಂಟು ಕೈಬರಹದ ಪ್ರತಿಗಳು ಮಾತ್ರ ಉಪಲಬ್ಧವಿದ್ದು, ಇವುಗಳ ಮೇಲೆಯೇ ಪಾಠಪ್ರವಚನ ನಡೆಯುತ್ತಿತ್ತು.

ಸಕಲ ಸಜ್ಜನರಿಗೂ ಈ ಅಪೂರ್ವ ಗ್ರಂಥವು ಉಪಲಬ್ಧವಾಗಬೇಕೆಂದು ಅ. ಭಾ. ಮಾಧ್ವ ಮಹಾ ಮಂಡಲದ ಪರವಾಗಿ ಶ್ರೀ ಶ್ರೀ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಈ ಶೇಷಚಂದ್ರಿಕೆಯನ್ನು ಅನೇಕ ಪ್ರಸಿದ್ಧ ಪಂಡಿತರಿಂದ ಪರಿಶೋಧಿಸಿ, ಈಗ ಅಚ್ಚು ಹಾಕಿಸಲಿಕ್ಕೆ ಮದ್ರಾಸದಲ್ಲಿ ಪ್ರಾರಂಭ ಮಾಡಿದ್ದು ಈಗ ಮುಕ್ಕಾಲುಭಾಗ ಅಚ್ಚಾಗಿದೆ.

ಮಾಧ್ವ ಮಹಾ ಮಂಡಲವು ಮಾಡತಕ್ಕ ಜ್ಞಾನ ಪ್ರಸಾರ ಕಾರ್ಯದಲ್ಲಿ ಈ ಗ್ರಂಥಪ್ರಕಾಶನವು ಒಂದು ಮೈಲುಗಲ್ಲಾಗಿದೆ.





## ಭಾಷ್ಯದೀಪಿಕಾಕಾರರಾದ

# ಶ್ರೀ ಜಗನ್ನಾಥತೀರ್ಥರು

ಶ್ರೀ ವ್ಯಾಸರಾಜ ಮಠಾಧೀಶರಾದ ಶ್ರೀ ಜಗನ್ನಾಥತೀರ್ಥರು ಮಹಾ ಪಂಡಿತರು ಮಾತ್ರವಲ್ಲದೆ ಅತ್ಯುಚ್ಚಮಟ್ಟದ ಶಾಸ್ತ್ರೀಯ ಗ್ರಂಥಕಾರರೂ ಆಗಿದ್ದರು. ಅವರ ಭಾಷ್ಯ ದೀಪಿಕಾ ಹಾಗೂ ಸೂತ್ರದೀಪಿಕಾ ಗ್ರಂಥಗಳು ಅವರ ಅದ್ಭುತವಾದ ಪಾಂಡಿತ್ಯ, ವೇದವಾಙ್ಮಯ ಪ್ರಭುತ್ವ, ಸರ್ವಜ್ಞ ಶಾಸ್ತ್ರದಲ್ಲಿ ಘನತರವಾದ ವ್ಯುತ್ಪತ್ತಿ ಜಾಡ್ಯಗಳಿಗೆ ಕನ್ನಡ ಹಿಡಿಯುತ್ತವೆ.

ಸಕ್ಯದ್ದರ್ಶನಕ್ಕೆ ಸೂತ್ರಾರ್ಥಗಳು ಬುದ್ಧ್ಯಾರೋಹವಾಗುವಂತೆ ಮಾಡಿ ಎಲ್ಲ ಸೂತ್ರಗಳಿಗೂ ಸುಂದರವಾದ ಸಂಗತಿಯನ್ನು ಹಚ್ಚಿ ಶ್ರೀ ಬಾದರಾಯಣರ ಭಾವವು ನೇರವಾಗಿ ಓದುಗರ ಹೃದಯವನ್ನು ಮುಟ್ಟುವಂತೆ ಹೇಳುವ ನಿರೂಪಣದ ನಿಪುಣಿಮೆ ಯನ್ನು ಅವರ ಈ ಸೂತ್ರ ದೀಪಿಕೆಯಲ್ಲಿ ಕಾಣುತ್ತೇವೆ. ಅದರ ಖಂಡನ ಮಂಡನ ವಿಷಯಗಳನ್ನು ಬಿಟ್ಟರೆ ಅವರ ಭಾಷ್ಯದೀಪಿಕಾ ಗ್ರಂಥವಾದರೂ ಶ್ರೀಮದಾನಂದತೀರ್ಥರ ಹೃದಯ ದರ್ಶನವನ್ನು ಮಾಡಿಸಲು ಅತ್ಯಂತ ಉಪಯುಕ್ತ ವಾಗಿದೆ.

ಆಚಾರ್ಯರು ಭಾಷ್ಯವಲ್ಲಿ ಉದಾಹರಿಸಿದ ಪ್ರತಿಯೊಂದು ಪ್ರಮಾಣ ವಚನ ವೇದ ಮಂತ್ರಗಳ ಪ್ರತಿಪದದ ಅರ್ಥವನ್ನೂ ತಿಳಿಸಿ ಆಚಾರ್ಯರ ಆಶಯವು ಓದು ಗರಿಗೆ ಅವಗತವಾಗುವಂತೆ ಮಾಡುತ್ತದೆ ಈ ದಿವ್ಯಗ್ರಂಥ. ಮತ್ತು ಸೂತ್ರ ಕಾರರ ಭಾವಾಭಿವ್ಯಂಜನದೊಂದಿಗೆ ಭಾಷ್ಯಘಟಕವಾದ ಗುರು ಮಧ್ವರ ಪ್ರತಿಯೊಂದು ವಾಕ್ಯ ವಚನ ವಿನ್ಯಾಸಕ್ಕೆ ಪದಕೃತ್ಯವನ್ನು ಹೇಳಿ ಕೃತಕೃತ್ಯವಾಗುವ ಈ ಮಹಾ ಕೃತಿಯು ಶ್ರೀಮದಾಚಾರ್ಯರು ಬರೆದ ಸುವಿಸ್ತೃತವಾದ ಭಾಷ್ಯಗ್ರಂಥದಲ್ಲಿ ಚ, ವೈ, ತು, ಹಿ, ಏವ, ಮುಂತಾದ ಶಬ್ದಗಳೂ ಅನುಸ್ವಾರ ಮಾತ್ರಾ ವಿಶೇಷ ಗಳೂ ಕೂಡ ಸಾರ್ಥಕ, ಬಹುಲಾರ್ಥಕ, ಸೂಚಕ, ಸಾಧಕ, ವಿಶೇಷಾರ್ಥಪ್ರತಿ ಪಾದಕ, ಗೂಢಾಭಿಪ್ರಾಯ ಸ್ಫೋರಕ ಎಂದು ಮುಂತಾಗಿ ತೋರಿಸಿಕೊಟ್ಟಿದ್ದಾರೆ.

ಸಂಕ್ಷೇಪವಲ್ಲಿ ಭಾಷ್ಯಸಪ್ತಾಹ, ಸಾಮಾನ್ಯವಾಗಿ ಭಾಷ್ಯಪ್ರವಚನ ಮಾಡು ವವರಿಗೆ ಇವರ ಈ ಭಾಷ್ಯದೀಪಿಕಾ ಪುಸ್ತಕವು ಒಳ್ಳೇ ಮಾರ್ಗದರ್ಶಕವೂ ಅತ್ಯಂತ ಉಪಯುಕ್ತವೂ ಆಗಿದೆ.

ಶ್ರೀ ಜಗನ್ನಾಥತೀರ್ಥರು ತಮ್ಮ ಗುರುಗಳಾದ ಶ್ರೀ ರಘುನಾಥ ತೀರ್ಥರಲ್ಲಿಯೇ ವಿದ್ಯಾಧ್ಯಯನ ಮಾಡಿದರು. ಒಂದು ದಿನ ರಾತ್ರಿ ಅವರು ಭಾಷ್ಯ ದೀಪಿಕಾ ಗ್ರಂಥ ವನ್ನು ಬರೆಯುತ್ತಲಿರುವಾಗಲೇ ನಿದ್ರೆ ಬಂದು ಹಾಗೇ ಒರಗಿಕೊಂಡಿದ್ದರು. ಅವರ ಗುರುಗಳಾದ ಶ್ರೀ ರಘುನಾಥತೀರ್ಥರು ಆಕಸ್ಮಿಕವಾಗಿ ಬಂದು ನೋಡಿದರು. ಅವರು ಬರೆದಿಟ್ಟ ಭಾಷ್ಯ ದೀಪಿಕಾ ಗ್ರಂಥದ ತಾಡವಾಲೆಯ ಗರಿಗಳು ಅಚೀಚೆ ಸುತ್ತಲೂ ಹರಡಿವೆ. ಲೇಖನ ಸಾಮಗ್ರಿಗಳೂ ಅಲ್ಲಿಯೇ ಇವೆ. ಈ ಪುಸ್ತಕ ಪ್ರಪಂಚದ ಮಧ್ಯ ದಲ್ಲಿ ಕೈಯಲ್ಲಿ ಲೆಕ್ಕಣಿಕೆಯನ್ನು ಹಿಡಿದೇ ತಮ್ಮ ಶಿಷ್ಯ ಒರಗಿದ್ದಾನೆ. ಗುರುಗಳು ಮೆಲ್ಲಡಿ ಇಡುತ್ತ ಬಂದು ಆ ಎಲ್ಲ ಬರೆದಿಟ್ಟ ತಾಳೆವಾಲಿಗಳನ್ನು ಕೂಡಿ ಸಿಟ್ಟು ಓದಿದರು. ಅದೊಂದು ಶ್ರೀ ಮಧ್ವರ ಹೃದಯಕ್ಕೆ ಹಿಡಿದ ಕೈಗನ್ನಡಿಯಾಗಿತ್ತು.

ಚಳಿಗೆ ನಡುಗುತ್ತ ಮೈಮುದುಡಿ ಮಲಗಿದ ಈ ಮೇಧಾವಿ ಶಿಷ್ಯನನ್ನು ಕಂಡು ಶ್ರೀಗಳವರ ಕರುಳು ಮಿಡಿಯಿತು. ಮೈಮೇಲಿನ ಜರದ ಶಾಲು ಅವನಿಗೆ ಹೊದಿಸಿದರು.

ಮರುದಿನ ಇಂಥ ಗ್ರಂಥವನ್ನು ಬರೆದ ಆ ಪಂಡಿತೋತ್ತಮರನ್ನು ಕರೆದು ಅವರಿಗೆ ಸಂಸ್ಥಾನದ ಸರ್ವಾಧಿಕಾರವನ್ನೂ ಒಪ್ಪಿಸಿದರು.

ಶ್ರೀ ಜಗನ್ನಾಥ ತೀರ್ಥರು ಮಹಾ ಪಂಡಿತರಿದ್ದಂತೆ ಸಾಹಸೈಕರಸರಾದ ಧೀರ ಧೀಮಂತರೂ ಆಗಿದ್ದರು. ಆ ಕಾಲದಲ್ಲಿ ಎಲ್ಲ ಕಡೆಗೂ ಯವನರ ಹಾವಳಿ ಬಹಳ. ಆ ದುಷ್ಟರ ದೃಷ್ಟಿಯು ಮುತ್ತು ರತ್ನಾದ್ಯಾಭರಣಗಳಿಂದ ವಿಭೂಷಿತವಾದ ಸಂಸ್ಥಾನದ ದೇವರ ಪೆಟ್ಟಿಗೆಯ ಮೇಲೆ ಬಿದ್ದಿತು. ಕೇಳುವದೇನು ? ಆಗ ಮೂರ್ತಿ ಭಂಜಕರದೇ ರಾಜ್ಯ. ಧರ್ಮಧ್ವಂಸಿಗಳದೇ ಸರ್ವಾಧಿಕಾರ.

ಒಮ್ಮೆಂದೊಮ್ಮೆಲೆ ಶಾಸ್ತ್ರಾಸ್ತ್ರ ಸನ್ನದ್ಧರಾದ ತುರುಷ್ಕ ತುಡುಗರ ತಂಡವು ಒಂತುಹಿಂಡಾಗಿ ಎರಬಂದು ಶ್ರೀ ಮಠದ ಮೇಲೆ ದಾಳಿ ಮಾಡಿದರು. ಕೂಡಲೇ ವೀರಸಾಹಸಿಗಳಾದ ಶ್ರೀ ಸ್ವಾಮಿಗಳು ಮುಖ್ಯ ಪ್ರಾಣ ದೇವರನ್ನು ಮನದಲ್ಲಿ ನೆನೆದು ದೇವರ ಪೆಟ್ಟಿಗೆಯನ್ನು ಕೊರಳಲ್ಲಿ ಕಟ್ಟಿಕೊಂಡು ತುಂಬಿ ಹರಿಯುವ ಕಾವೇರಿ ಪ್ರವಾಹದಲ್ಲಿ ಈಜು ಬಿದ್ದರು. ಪಾಪಿಗಳು ದುಡ್ಡು ಕೊಟ್ಟು ಅನೇಕ ಅಶಿಬುರುಕ ಅಂಬಿಗರನ್ನು ಹುರುದುಂಬಿಸಿ ನೌಕೆಯಿಂದ ಬೆನ್ನಟ್ಟಿದರು ಆದರೆ ಶ್ರೀಗಳವರು ಧೈರ್ಯ ದಿಂದ ಇಪ್ಪತ್ತು ಮೈಲುಗಳ ವರೆಗೆ ಈಜುತ್ತ ಹೋದರು. ಭಯಂಕರವಾದ ಮಹಾ ಪೂರದಿಂದ ಮೇರೆ ಮೀರಿ ಸಾಗರಾಕಾರವಾಗಿ ಭೋರ್ಗರೆಯುವ ಆ ಕಾವೇರಿಯ ಕೆರಳಿದ ಪ್ರವಾಹವನ್ನು ಕಂಡು ಅಂಬಿಗರು ಕೂಡ ಹೆದರಿ ಹಿಂಜರಿದರು. ಆದರೆ ಶ್ರೀ ಗಳವರ ಕೊರಳಿಗೆ ಕಟ್ಟಿದ ದೇವರ ಪೆಟ್ಟಿಗೆಯಲ್ಲಿ ಭವಸಾಗರವನ್ನು ದಾಟಿಸುವ ಅಂಬಿಗನೇ ಇರುವಾಗ ಅವರಿಗೆ ಈ ಕಾವೇರಿ ಪ್ರವಾಹದ ಅಂಜಿಕೆ ಏನು ?

ದೇವರ ಮೇಲಿರುವ ಈ ನಂಬುಗೆಯೇ ಶ್ರೀ ಜಗನ್ನಾಥ ಸ್ವಾಮಿಗಳನ್ನು ಕಾವೇರಿ ಪ್ರವಾಹದ ೨೦ ಮೈಲು ದೂರದ ಹರಹಿನಲ್ಲಿ ಎಷ್ಟೋ ಸೆಳವು, ಸುಳಿ, ನೀರಿನ ಮಲಕು, ತಳಕುಗಳಿಂದ ಪಾರುಮಾಡಿ ಅಕ್ಷತವಾಗಿ ಸುರಕ್ಷಿತ ಸ್ಥಳಕ್ಕೆ ತಂದು ತಲುಪಿಸಿತು.

ಆದರೆ ದಾಳಿಗಾರರ ಕಣ್ಣು ತಪ್ಪಿಸಿ ಕಾವೇರೀ ಪ್ರವಾಹಕ್ಕೆ ಧುಮುಕುವಾಗ ಯಾವನೋ ನೀಚನು ಅವರೆಡೆಗೆ ಗುರಿ ಇಟ್ಟು ಹದನವಾದ ಒಂದು ಅಸ್ತ್ರವನ್ನು ಬೀಸಿದನಂತೆ. ಅದರಿಂದ ಅವರ ದೇಹಕ್ಕೆ ಗಾಯವಾಗಿ ರಕ್ತವು ಸೋರುತ್ತಲಿದ್ದರೂ ಹೇಗಾದರೂ ಮಾಡಿ ಸಂಸ್ಥಾನದ ಪ್ರತಿಮೆಗಳನ್ನು ಪಾರುಮಾಡಬೇಕು ಎಂಬ ವೀರ ಸಂಕಲ್ಪದಿಂದ ಇಂಥ ಘೋರ ಪ್ರವಾಹದ ಕಾವೇರಿ ಮಹಾಪೂರವನ್ನು ಈಸಿ ಬಂದದ್ದು, ಜೈಸಿ ಬಂದದ್ದು, ಅವರ ಭಗವನ್ನಿಷ್ಠೆಗೆ ದಿವ್ಯ ಸಾಕ್ಷಿಯಾಗಿದೆ.

" ವಿಕಾರೋsಪಿಶ್ಲಾಘ್ಯೋ ಭುವನ ಭಯ ಭಂಗವ್ಯಸನಿನಾಂ "

ಎಂಬ ನುಡಿಯಂತೆ ದೇವರ ಪೆಟ್ಟಿಗೆಯ ಸಂರಕ್ಷಣಾಕಾರ್ಯದಲ್ಲಿ ಅವರಿಗೆ ಏನಾದರೂ ಅಂಗವಿಕೃತಿಯುಂಟಾದದ್ದು ನಿಜವಾಗಿದ್ದರೂ ಅದು ಸುತರಾಂ ಶ್ಲಾಘನೀಯವೇ ಸರಿ.

ಶ್ರೀ ಜಗನ್ನಾಥ ತೀರ್ಥರು ಮಹಾ ನರಸಿಂಹ ಭಕ್ತರಾಗಿದ್ದರು. ಒಮ್ಮೆ ಶ್ರೀ ಶ್ರೀಗಳವರು ಸಂಚಾರದಲ್ಲಿದ್ದಾಗ ಅನೇಕ ವೀರ ಯವನ ಸೈನಿಕರು ಒರೆ ಹಿರಿದ ಖಡ್ಗಗಳನ್ನು ಝಳಪಿಸುತ್ತ ಅವರ ಮೇಲೆ ಒಮ್ಮೆಲೆ ಎರಗಿದರಂತೆ ಆಗ ಶ್ರೀಶ್ರೀಗಳವರು ಭಯನಾಶನನಾದ ಶ್ರೀ ನರಸಿಂಹನನ್ನು ಸ್ಮರಿಸಿದರು. ಕೂಡಲೇ ಹತ್ತಿರದ ಮಾವಿನ ಮರದಿಂದ ವಿಚಿತ್ರ ಶಕ್ತಿಯೊಂದು ಪ್ರಕಟವಾಗಿ ಆ ತುರುಕರ ತಂಡವನ್ನೆಲ್ಲ ಹೊಡೆದೋಡಿಸಿತಂತೆ.

ಇಂಥ ಗಂಡಾಂತರದಿಂದ ತಮ್ಮನ್ನು ಪಾರುಮಾಡಿದ ಶ್ರೀ ನರಸಿಂಹಸ್ವಾಮಿಯನ್ನು ಶ್ರೀ ಜಗನ್ನಾಥ ತೀರ್ಥರು ತಮ್ಮ ಭಾಷ್ಯ ದೀಪಿಕೆಯ ಪ್ರಾರಂಭದಲ್ಲಿಯೇ ಸ್ತುತಿಸಿದ್ದಾರೆ.

" ಆಮ್ರಸ್ತಂಭಾತ್ ಸಮಾಗತ್ಯ ತಾಮ್ರತುಂಡಾನ್ ನಿಹತ್ಯ ಯಃ ।
ನಮ್ರಂ ನೌಮಿ ಜಗನ್ನಾಥಂ ಕಮ್ರೋsಪಾತ್ತಂ ನೃಕೇಸರೀ ॥ "

ಶ್ರೀ ಜಗನ್ನಾಥ ತೀರ್ಥರು ಗಾಲವ ಋಷಿಯ ಅವತಾರಭೂತರೆಂದು ಸಂಪ್ರದಾಯಬಲ್ಲವರ ಹೇಳಿಕೆ.

ಓರ್ವ ಪಂಡಿತನಿಗೆ ಯಾರನ್ನೂ ಕೇಳಿದರೂ ಪರಿಹಾರವಾಗದ ಕೆಲವು ಸಂಶಯಗಳು ಬಹುಕಾಲದಿಂದ ಮಿದುಳು ಮೇಯುತ್ತಲಿದ್ದವು. ಎಲ್ಲಿಯೂ ಅವುಗಳಿಗಾಗಿ ಸಮಾಧಾನಕಾರಕವಾದ ಪರಿಹಾರವು ದೊರೆಯದಿದ್ದಾಗ ಗಾಲವ ಋಷಿಗಳೊಬ್ಬರೇ ಈ ಎಲ್ಲ ನಿನ್ನ ಶಂಕಾತಂಕಗಳಿಗೆ ಸಮಂಜಸ ಉತ್ತರವನ್ನು ಕೊಡಬಲ್ಲರೆಂದು ಸೂಚನೆಯಾಯಿತಂತೆ. ಮಾರನೇದಿನವೇ ಜಗನ್ನಾಥತೀರ್ಥರು ಆ ಊರಿಗೆ ದಯಮಾಡಿಸಿದರು.

ಕೂಡಲೇ ಆ ಪಂಡಿತನು ಶ್ರೀಗಳವರಿಗೆ ಬಂದು ತಗುಲಿದ. ತನ್ನ ಪ್ರಶ್ನೆಮಾಲಿಕೆಗಳನ್ನೆಲ್ಲ ಹೇಳಿದ. ಅವನ ಎಲ್ಲ ಸಂಶಯಗಳಿಗೂ ಶ್ರೀಗಳವರು ಅವನ ಮನಸ್ಸಿಗೆ ಒಪ್ಪಿತವಾಗುವಂತೆ ಸಮಂಜಸವಾದ ಸೂಕ್ತ ಸಮಾಧಾನಗಳನ್ನು ಹೇಳಿದರು. ಆ ಪಂಡಿತನು ತತ್‌ಕ್ಷಣದಲ್ಲಿ ಎದ್ದು "ಶ್ರೀ ಗಾಲವ ಗುರುಭ್ಯೋ ನಮೋ ನಮಃ" ಎಂದು ಸಾಷ್ಟಾಂಗ ನಮಸ್ಕಾರ ಹಾಕಿದನು.

ಇಂಥ ಅನೇಕ ಮಹಾಮಹಿಮೋಪೇತರಾದ ಶ್ರೀ ಜಗನ್ನಾಥತೀರ್ಥರು ಮೂವತ್ತು ವರ್ಷಗಳಕಾಲ ವೇದಾಂತ ಸಾಮ್ರಾಜ್ಯವನ್ನು ಆಳಿ ಪಾಠಪ್ರವಚನ, ಗ್ರಂಥ ಲೇಖನ, ಮತ ಪ್ರಸಾರ ಮುಂತಾದ ಕಾರ್ಯಗಳನ್ನು ಮಾಡಿ ಮಧ್ವ ಸಿದ್ಧಾಂತದ ಸುದೀರ್ಘ ಸೇವೆಯನ್ನು ಸಲ್ಲಿಸಿದರು.

ಗುರುಗಳಾದ ಶ್ರೀ ರಘುನಾಥ ತೀರ್ಥರು ವೃಂದಾವನಸ್ಥರಾದ ಬಳಿಕ ಶ್ರೀ ಜಗನ್ನಾಥ ತೀರ್ಥರು ತಮ್ಮ ಸಂಸ್ಥಾನವನ್ನು ತಿರುಮಕೂಡಲು ಕ್ಷೇತ್ರದಿಂದ ವಿದ್ವತ್ಕೇಂದ್ರವಾದ ಕುಂಭಕೋಣಕ್ಕೆ ಸ್ಥಳಾಂತರಿಸಿದರು. ಅವರು ಅಲ್ಲಿಯೇ ಬಹುವರ್ಷ ಪರ್ಯಂತರ ವಾದಿನಿಗ್ರಹ, ತತ್ವ ಪ್ರಸಾರವನ್ನು ಮಾಡುತ್ತ ವಾಸವಾಗಿದ್ದು ಶ್ರೀನಾಥತೀರ್ಥರೆಂಬ ಮಹಾಪಂಡಿತರಿಗೆ ಆಶ್ರಮವಿತ್ತು ಹರಿಪದವನ್ನೈದಿದರು.



## ಶ್ರೀಗುರು ರಾಘವೇಂದ್ರ ವಂಶಾವತಂಸರಾಗಿ
## ವೇದಾಂತ ಕೋಶಗಳನ್ನು ರಚಿಸಿದ

# ಶ್ರೀ ಸುಮತೀಂದ್ರ ತೀರ್ಥರು

" ಪೂರ್ಣ ಬೋಧ ಮತಾಂಭೋಧಿ ಪೂರ್ಣೇಂದುಮಕಲಂಕಿನಂ ।
ಸುಜನಾಂಭೋಧಿ ಭಾಸ್ವಂತಂ ಸುಮತೀಂದ್ರ ಗುರುಂ ಭಜೇ ॥ "

ಮಾಧ್ವ ಮುನಿಗಳ ಮಾಲೆಯಲ್ಲಿ ಶ್ರೀ ಸುಮತೀಂದ್ರರೊಂದು ಮಧ್ಯಮ ಮಣಿ. ರಾಯರ ಮಠದ ಪರಂಪರೆಯಲ್ಲಿ ಅವರೊಂದು ಮಧ್ಯಾಹ್ನದ ಸೂರ್ಯ. ಅವರ ಪ್ರಭಾವ ಪ್ರಭೆಗೆ ನಮ್ಮ ಸಮಾಜದ ದಳದಳವೂ ಅರಳಿ ಸಹಸ್ರಾರವಾಗಿ ನಿಂತ ಕಾಲವೊಂದಿತ್ತು.

ಶ್ರೀ ರಾಯರ ಮಠಕ್ಕೆ ಸುಮತೀಂದ್ರ ಮಠವೆಂದೇ ಹೆಸರು ಬೀಳುವಷ್ಟು ಉಜ್ವಲವಾಗಿತ್ತು ಅವರ ವ್ಯಕ್ತಿತ್ವ. ಅವರು ತತ್ವಪ್ರಕಾಶಿಕಾ, ತಂತ್ರಸಾರ, ಋಗ್ಭಾಷ್ಯಟೀಕಾ, ಗೀತಾಭಾಷ್ಯ ಪ್ರಮೇಯ ದೀಪಿಕಾ ಮುಂತಾದ ಗ್ರಂಥಗಳಿಗೆ ಬರೆದ "ಭಾವರತ್ನಕೋಶ" ಎಂಬ ಟಿಪ್ಪಣಿಗಳು ವೇದಾಂತ ವೇದಿಕೆಯ ಮೇಲೆ ಹೊಚ್ಚ ಹೊಸದಾದ ರತ್ನ ಮಂಟಪವನ್ನೇ ನಿರ್ಮಿಸಿವೆ.

ಹಿಂದಿನ ಯಾವ ಟಿಪ್ಪಣಿಕಾರರಿಗೂ ಹೋಳೆಯದ ಹೊಸ ಹಾದಿಯಲ್ಲಿ ತಮ್ಮ ಮಿದುಳಿನ ಮೊನೆಯನ್ನು ಮಿಂಚಾಡಿಸಿ ಆ ಉದ್ಗ್ರಂಥಗಳ ಅರ್ಥ ಸಂಚಯನೆಲ್ಲ ಗೊಂಚಲಗಟ್ಟಿ ಓದುಗರ ಕಿಂಚಿಜ್ಞ ಬುದ್ಧಿಯ ಅಂಚಿಗೆ ಇಳಿಯುವಂತೆ ಮಾಡಿದ್ದಾರೆ ಮತಿಮಂತರೂ ದಯಾವಂತರೂ ಆದ ಶ್ರೀ ಸುಮತೀಂದ್ರರು. ಟಿಪ್ಪಣಿ ಕ್ರಮದಲ್ಲಿ ಸುಮತೀಂದ್ರರದೊಂದು "ಡಾಯಜೆಸ್ಟ" ಪದ್ಧತಿ. ತತ್ವಪ್ರಕಾಶಿಕಾ ಮುಂತಾದವುಗಳ ಟಿಪ್ಪಣಿಗಳಲ್ಲಿ ಜಯತೀರ್ಥರ ಕಾಲದಿಂದ ತಮ್ಮವರೆಗೆ ಆ ಆ ಗ್ರಂಥಗಳ ಮೇಲೆ ಯಾರೇ ಬರೆಯಲಿ, ಎಂದೇ ಬರೆಯಲಿ ಆ ಎಲ್ಲ ಟೀಕೆ ಟಿಪ್ಪಣಿಯಲ್ಲಿಯ ಮಾತುಗಳನ್ನೆಲ್ಲ ಆ ಆ ವಿಷಯಕ್ಕೆ ಸಂಬಂಧಿಸಿದಂತೆ ಅಲ್ಲಲ್ಲಿ ಹೇಳುತ್ತ ಟೀಕೆಯ ಪಂಕ್ತಿಗಳು ಎಲ್ಲೆಲ್ಲಿ ಹೇಗೆ ಹೇಗೆ ಎಷ್ಟೆಷ್ಟು ತರಹದ ಭಾವ ಬೆಳಕನ್ನು ತೂರಿವೆ ಎನ್ನುವದನ್ನು ತೋರಿಸಿಕೊಟ್ಟಿದ್ದಾರೆ.

ಶ್ರೀ ಸುಮತೀಂದ್ರರ ಈ ಸಂಚಯನಾತ್ಮಕವಾದ ಮಿಂಚಿನ ಪದ್ಧತಿಯನ್ನು ಮುಂದಿನ ಟಿಪ್ಪಣಿಕಾರರು ಮುಂದುವರಿಸಿದ್ದರೆ ಮುದ್ರಣದ ಅನುಕೂಲ್ಯ, ಯುವಜನರ

ಹಾವಳಿಯಿಂದಾದ ವೇದಾಂತ ವಾಙ್ಮಯದ ಗರ್ಭ ಸ್ರಾವದ ಪರಿಣಾಮ ಇಷ್ಟು ಗಂಭೀರವಾಗುತ್ತಿದ್ದಿಲ್ಲವೋ ಏನೋ !

ಶ್ರೀ ಸುಮತೀಂದ್ರ ತೀರ್ಥರು ಮಠ ಪರಂಪರೆಯಲ್ಲಿ ಶ್ರೀ ಮಂತ್ರಾಲಯ ಸ್ವಾಮಿಗಳ ವಾರಸುದಾರರಾದಂತೆ ಜ್ಞಾನ ಪ್ರಪಂಚದಲ್ಲಿಯೂ ಅವರ ಉತ್ತರಾಧಿಕಾರಿಗಳೇ ಆಗಿದ್ದರು. ಅವರಂತೆ ಗುರು ಸಾರ್ವಭೌಮರ ಪೂರ್ವಾಶ್ರಮದ ಬಾಂಧವ್ಯದ ಬಾಂದಳದಲ್ಲಿ ಶ್ರೀ ಸುಮತೀಂದ್ರರೂ ಒಂದು ಹೊಳೆಯುವ ಸುಂದರವಾದ ಸಂಧ್ಯಾ ನಕ್ಷತ್ರ.

ಗುರು ಸಾರ್ವಭೌಮರ ಅಣ್ಣ ಗುರುರಾಜಾಚಾರ್ಯರ ಮಕ್ಕಳಾದ ವೆಂಕಟ ನಾರಾಯಣಾಚಾರ್ಯರ ಚಿರಂಜೀವರೇ ಈ ಮುದ್ದು ಕೃಷ್ಣಾಚಾರ್ಯರು.

ಈ ಮುದ್ದು ಕೃಷ್ಣ ತನ್ನ ಪ್ರತಿಭೆಯ ಚಾಕಚಕ್ಯತೆಯಿಂದ ಶ್ರೀರಾಯರಿಗೆ ಬಹಳ ಮುದ್ದಾಗಿದ್ದ. ರಾಯರು ತಾವೇ ಸ್ವಂತ ಕುಳಿತು ಮುದ್ದು ಕೃಷ್ಣನ ತಲೆಯ ತಡಿಯಲ್ಲಿ ಜ್ಞಾನ ಗಂಗೆಯ ತಡಿಸಲವೇ ತುಳುಕಾಡುವಂತೆ ಮಾಡಿದರು.

ಇಂತಹ ವೇದವೇದಾಂತಾದಿ ವಿದ್ಯಾಧರನು ಮುಂದೆ ತಮ್ಮ ಸಂಸ್ಥಾನವನ್ನು ಬೆಳಗಿಸಬೇಕೆಂಬ ತಮ್ಮ ಆಶಯವನ್ನು ಶ್ರೀ ರಾಯರು ತಮ್ಮ ಸಾಕ್ಷಾತ್ ಶಿಷ್ಯರಾದ ಶ್ರೀ ಯೋಗೀಂದ್ರರಿಗೆ ಸೂಚಿಸಿದ್ದರು. ಅವರ ಆದೇಶದಂತೆ ಶ್ರೀಯೋಗೀಂದ್ರರ ಉತ್ತರಾಧಿಕಾರಿಗಳಾದ ಶ್ರೀ ಸೂರೀಂದ್ರರು ತಮ್ಮ ತರುವಾಯ ಆ ಸರ್ವಜ್ಞ ಸಂಸ್ಥಾನಕ್ಕೆ ಶಾಸ್ತ್ರ ಸಾಹಿತ್ಯ ಪಾಂಡಿತ್ಯಗಳ ತವನಿಧಿಯಂತಿದ್ದ ಮುದ್ದು ಕೃಷ್ಣಾಚಾರ್ಯರಿಗೆ ಆಶ್ರಮವಿತ್ತು ಸುಮತೀಂದ್ರತೀರ್ಥರೆಂದು ನಾಮಕರಣ ಮಾಡಿದರು.

ಇದರಿಂದ ಬೆಳಕಿನ ಬೆಟ್ಟದ ಮೇಲೆ ಭಾಸ್ಕರನ ಬಿಂಬವನ್ನು ಇಟ್ಟಂತಾಯಿತು. ಮೊದಲಿನಿಂದಲೇ ಮಿದುಳಿನ ಮಡಿಲಲ್ಲಿ ಜ್ಞಾನವು ಕಡಲಾಡುವ ಸುಮತೀಂದ್ರರಿಗೆ ಗುರು ಮಧ್ವರ ಗದ್ದುಗೆಯು ದಿಗ್ವಿಜಯಕ್ಕೆ ದೀಕ್ಷೆ ಇತ್ತಿತು. ಇಷ್ಟು ದಿನ ಪಾಂಡಿತ್ಯದ ಕಂಡೂತಿ ಎನಿಸುತ್ತಿದ್ದ ಅವರ ವಾದಕೇಲೀ ಕುತೂಹಲವು ಈಗ ಅವರಿಗೆ ಅವಶ್ಯ ಕರ್ತವ್ಯ ಕೃತಿಯಾಯಿತು.

ಅವರು ದೇಶದಲ್ಲಿಯ ವಿದ್ವತ್ಕೇಂದ್ರಗಳಿಗೆ ಹೋಗಿ ನ್ಯಾಯದಲ್ಲಿ ಗುಡುಗಿದರು. ವ್ಯಾಕರಣದಲ್ಲಿ ಗರ್ಜಿಸಿದರು. ಮೀಮಾಂಸೆಯಲ್ಲಿ ಮತಿಮಂಥನ ಮಾಡಿದರು. ವೇದಾಂತದಲ್ಲಿಯಂತೂ ಅವರೊಡನೆ ವಾದ ಹೂಡುವ ಧೈರ್ಯ ಚಾತುರ್ಯಗಳು ಆ ಕಾಲದಲ್ಲಿ ಯಾವ ಪಂಡಿತರಿಗೂ ಇರಲಿಲ್ಲ. ಸಾಹಿತ್ಯದಲ್ಲಿ ಶಾರದೆ ಅವರ ಊಳಿಗದವಳಂತೆ ಅವರ ನುಡಿಯು ಹೆಜ್ಜೆ ಇಟ್ಟಲ್ಲೆಲ್ಲ ತನ್ನ ಗೆಜ್ಜೆ ನುಡಿಸುತ್ತಿದ್ದಳು.

ಮಹಾ ಪಂಡಿತನಾದ ಆರಣಿಯ ಜಹಗಿರ್ದಾರ ಸುಭಾನುರಾಯನು ಶ್ರೀ ಸುಮತೀಂದ್ರತೀರ್ಥರ ತರ್ಕ ಕರ್ಕಶವಾದ ಪ್ರತಿಭೆಯ ಸಾಹಿತ್ಯ, ಸರಸಾಲಾಪ, ಸದ್ಯಃ ಕವಿತ್ವಗಳನ್ನು ಕಂಡು ತಬ್ಬಿಬ್ಬಾಗಿ ಹೋದ.

ಸುಭಾನುರಾಯನು ಆಯುರ್ವೇದದಲ್ಲಿಯ ಬೌದ್ಧಿಕ ರಸಾಯನವೆಂದು ಪ್ರಸಿದ್ಧವಾದ ಜ್ಯೋತಿಷ್ಮತೀ ತೈಲವನ್ನು ಕುಡಿದು, ಲೋಕೋತ್ತರವಾದ ಬುದ್ಧಿ-ಕೌಶಲ್ಯವನ್ನು ಪಡೆದಿದ್ದ. ಅವನು ಕುಳಿತಲ್ಲೇ ಕಾವ್ಯ ಕಟ್ಟುತ್ತಿದ್ದ. ನಿಂತಲ್ಲೇ ನಾಟಕ ಬರೆಯುತ್ತಿದ್ದ. ಅವನೊಬ್ಬ ಸಂಚಾರೀ ಸಾಹಿತ್ಯ ಪುರುಷನೆಂದು ಪ್ರಸಿದ್ಧನಾಗಿದ್ದ. ವ್ಯಾಕರಣ ಪಾಂಡಿತ್ಯವಂತೂ ಪಾಣಿನಿ ಸತ್ತಬಳಿಕ ಇವನನ್ನೇ ಪಾಣಿಗ್ರಹಣ ಮಾಡಿದಂತಿತ್ತು.

ಶ್ರೀ ಸುಮತೀಂದ್ರರು ಈ ಸುಭಾನುರಾಯನ ಜೊತೆಗೆ ಎಂಟು ದಿನ ವ್ಯಾಕರಣದಲ್ಲಿ ವಾಕ್ಯಾರ್ಥ ಮಾಡಿ ಅವನ ಮಾತು ಕುಂಠಿತವಾಗುವಂತೆ ಮಾಡಿದರು. ಮತ್ತೆ ಯಾವುದರಲ್ಲಿಯಾದರೂ ಶ್ರೀಗಳವರನ್ನು ಸೋಲಿಸಬೇಕೆಂದು ಅವನು ತುಂಟತನದಿಂದ "ಸ್ವಾಮಿ ತಮಗೆ ಶ್ಲೋಕ ರಚನೆಯ ಕ್ರಮದ ಪರಿಚಯವುಂಟೇ ?" ಎಂದು ಪ್ರಶ್ನಿಸಿದ.

ಅವನ ಈ ಕವಡುಗಂಟಕ ಪ್ರಶ್ನೆಗೆ ಶ್ರೀಗಳಾದರೂ ಸೋಲ್ಲುಂಠವಾಗಿಯೇ—

"ಅನಾರಾಧ್ಯ ಕಾಳೀಂ ಅನಾಸ್ವಾದ್ಯ ಚೌಳೀಂ ।
ವಿನಾ ಮಂತ್ರತಂತ್ರೈ ಋತೇ ಶಬ್ದಚೌರ್ಯಾತ್ ॥
ಪ್ರಪಂಚ ಪ್ರಸಿದ್ಧ ಪ್ರಬಂಧಂ ವಿಧಾತುಂ ।
ವಿರಿಂಚಿ ಪ್ರಪಂಚೇ ಮದನ್ಯಃ ಕವೀಕಃ ॥

(ನಾವೇನು ಕಾಳಿಯನ್ನು ಆರಾಧಿಸಿಲ್ಲ. ಜ್ಯೋತಿಷ್ಮತಿಯ ರಸವನ್ನು ಕುಡಿದಿಲ್ಲ. ಮಂತ್ರ-ಮಾಟ ಮಾಡಿಲ್ಲ. ಕೃತಿಚೌರ್ಯ ಗೈದಿಲ್ಲ. ಇಷ್ಟಾದರೂ ಜಗತ್ಪ್ರಸಿದ್ಧವಾದ ಸರಸ ಕಾವ್ಯಬಂಧ, ಸಾಹಿತ್ಯ ಪ್ರಬಂಧಗಳನ್ನು ಸಹಜವಾಗಿ ರಚಿಸಲಿಕ್ಕೆ ನಾವು ಸಮರ್ಥರಿದ್ದೇವೆ. ಈ ಸೃಷ್ಟಿಯಲ್ಲಿ, ನಮ್ಮ ಜೊತೆಗೆ ಈ ಸಾಹಿತ್ಯ ಸ್ಪರ್ಧೆಯಲ್ಲಿ ಯಾರು ಬರುವರೋ ಬರಲಿ.)

ಎಂದು ಆಗಿಂದಾಗಲೇ ಈ ಪದ್ಯಕಟ್ಟಿ ಆಹ್ವಾನವನ್ನು ನೀಡಿದರು.

ಸುಭಾನುರಾಯನು ಶ್ರೀಗಳವರ ವಿಲಕ್ಷಣ ಕವಿತ್ವವನ್ನು ಕಂಡು ಆಶ್ಚರ್ಯಚಕಿತನಾದ. ಕವಿತಾ ಸ್ಪರ್ಧೆಯಲ್ಲಿ ಈ ವರಕವಿಗಳ ಮುಂದೆ ನಿಲ್ಲಲಾರದೆ ತತ್ತರಿಸಿ ಹೋದ. ಕೊನೆಗೆ ಮಾತು ಸೋತು ಅವರ ಚರಣಗಳಿಗೆ ಶರಣು ಬಂದ.

**ಇದರಂತೆ** ಶ್ರೀ ಶ್ರೀಗಳವರ ಅಸಾಧಾರಣವಾದ ಕವಿತ್ವ ಮತ್ತು ವಿದ್ವತ್ತೆಗಳ ಪ್ರಭಾವದಿಂದ ಅವರು ಹೋದಲ್ಲೆಲ್ಲ ಮಾನದ ಮಣೆ, ಗೌರವದ ಗದ್ದುಗೆ, ಪ್ರಶಂಸೆಯ

ಪುಷ್ಪ, ವಿಜಯದ ಹಾರ, ಕೀರ್ತಿಯ ಕಿರೀಟಗಳು ತಾವಾಗಿ ಬಂದು ಅವರ ಪಾದ ಪೀಠದ ಬಳಿ ಕಾದು ಕುಳಿತಿರುತ್ತಿದ್ದವು.

ಆ ಕಾಲದಲ್ಲಿ ವಿದ್ವನ್ಮಣಿಗಳ ಕೂಡು ಮನೆಯಂತಿದ್ದ ಮಧುರೆಯ ಮಂಗಮ್ಮ ಮಹಾರಾಣಿಯ ಆಸ್ಥಾನದಲ್ಲಿ ಅದ್ವೈತ ಮತದ ದಿಗ್ದಂತಿ ಪಂಡಿತನೊಬ್ಬನಿದ್ದ. ಬೃಹಸ್ಪತಿಗೇ ಬುದ್ಧಿಯನ್ನು ಎರವು ಕೊಡಬಲ್ಲೆನೆಂದು ಹೇಳುವ ಆ ಶಾಂಕರ ಪಂಡಿತನ ಸಾಹಂಕಾರ ಹೂಂಕಾರವನ್ನು ಕೇಳಿ ಶ್ರೀ ಸುಮತೀಂದ್ರ ತೀರ್ಥರು ಅಲ್ಲಿಗೆ ಬಂದು ಅವನನ್ನು ಕೆಣಕಿದರು. ಶ್ರೀಗಳವರ ಹಿಂದೆ ಅನೇಕ ಮತತ್ರಯ ಪಂಡಿತರೂ ಮಂಡಲಗಟ್ಟಿ ಕುಳಿತಿದ್ದರು.

ಇಂಥ ನೂರಾರು ವಾದ ವಾಕ್ಯಾರ್ಥಗಳ ಕುಸ್ತಿಯ ಕಣಗಳಲ್ಲಿ ಹೊಕ್ಕು ಹರಿದಾಡಿ ಗೆದ್ದು ಎದ್ದು ಬಂದ ಆ ಅದ್ವೈತ ಪಂಡಿತ ತನ್ನ ಅರಿತ ನುರಿತ ಪೇಚು ಪಟ್ಟುಬಂಧಗಳಿಂದ ತರ್ಕದ ತಿಪ್ಪರಲಾಗ ಹಾಕಹತ್ತಿದಾಗ ಮತತ್ರಯ ಪಂಡಿತರೂ ಮತತ್ರಯ ಪಂಡಿತರೂ ಗಪ್ಪು ಚಿಪ್ಪಾಗಿ ಕುಳಿತರು.

ಆದರೆ ಹತ್ತು ನಿಮಿಷಗಳಲ್ಲಿಯೇ ಆ ಪಂಡಿತನ ವಾದ ಪದ್ಧತಿಯ ಗತಿ ಗತ್ತುಗಾರಿಕೆಗಳನ್ನೆಲ್ಲ ಗೊತ್ತು ಮಾಡಿಕೊಂಡ ಶ್ರೀ ಶ್ರೀಗಳವರು ಅವನ ಮಾತಿನ ಮಲಕುಗಳಿಗೆ ಹಾಕಿದ ತರ್ಕದ ತಳಕುಗಳನ್ನೆಲ್ಲ ಬಿಡಿಸಿ ಪ್ರಮಾಣದ ಪ್ರಾಕಾರದಲ್ಲಿಯೇ ಪ್ರಮೇಯ ಚರ್ಚೆಯು ಮುಂದುವರಿಯುವಂತೆ ಮಾಡಿದರು. ಇದರಿಂದ ಶಾಖಾಮೃಗದಂತೆ ಶಬ್ದಗಳ ಸಂದು ಸಂದಿಗಳಲ್ಲಿ ಸ್ವಚ್ಛಂದ ಶಾಖಾ ಚಂಕ್ರಮಣ ಮಾಡಿ ವಿಷಯದಿಂದ ವಿಷಯಕ್ಕೆ ಉದ್ದಾಮ ಉಡ್ಡಾಣ ಮಾಡುವ ಆ ಶಾಸ್ತ್ರಿಯ ಅಡ್ಡಾದಿಡ್ಡಿ ಅಲೆದಾಟಕ್ಕೆ ಅಡ್ಡಿಯಾದಂತಾಯಿತು.

ಶ್ರೀ ಶ್ರೀಗಳವರು ಉಭಯ ಸಂಪ್ರತಿಪನ್ನರಾದ ಮಧ್ಯಸ್ಥರನ್ನು ನಡುವೆ ಕೂಡಿಸಿ ಹೆಜ್ಜೆ ಹೆಜ್ಜೆಗೂ ಶಾಸ್ತ್ರಿಯ ಬಾಯಿ ಕಟ್ಟಿ ತಲೆ ತಟ್ಟಿ ಕೂಡಿಸಹತ್ತಿದರು. ಇದರಿಂದ ಅದ್ವೈತ ಪಂಡಿತನು ಹೆಬ್ಬುಲಿಯಂತೆ ಅಬ್ಬರಿಸಿದ. ಬಿರುಗಾಳಿಯಂತೆ ಬೊಬ್ಬಿರಿದ, ಹೆಬ್ಬಾವಿನಂತೆ ಹರಿದಾಡಿದ. ಏನಾದರೂ ಶ್ರೀ ಶ್ರೀಗಳವರು ಹಾಕಿದ ಪ್ರಮಾಣದ ಚೌಕಟ್ಟಿನಲ್ಲಿ ತಾತ್ಪರ್ಯಲಿಂಗಗಳ ಷಟ್ಕೋಣದಲ್ಲಿ ಎಷ್ಟು ಕೊಸರಾಡಿದರೂ ಅವನಿಗೆ ಆಚೀಚೆ ಮಿಸುಕಾಡಲಾಗಲಿಲ್ಲ. ಕೊನೆಗೆ ಮಧ್ಯಸ್ಥರು ಶ್ರೀ ಸುಮತೀಂದ್ರರು ವಿಜಯಶಾಲಿಗಳಾದರೆಂದು ಅವಸಿಂದಲೇ ಒಪ್ಪಿಸಿದರು. ಇಡೀ ಸಭೆಯು ಶ್ರೀ ಸುಮತೀಂದ್ರರ ಜಯಜಯಕಾರ ಮಾಡಿತು. ರಾಣಿ ಮಂಗಮ್ಮನು ಶ್ರೀಗಳವರ ಲೋಕೋತ್ತರ ಪಾಂಡಿತ್ಯ ಪ್ರಭಾವಗಳಿಗೆ ಮನಸೋತು ೧೬೭೭ನೇ ಇಸ್ವಿಯ ಮಾಘ ಹುಣ್ಣಿಮೆಯ ದಿನ ವಿಲ್ಲಿಪುತ್ತೂರು ಸೀಮೆಯಲ್ಲಿಯ ಆಯುರ್ವನ ಎಂಬ

ಗ್ರಾಮವನ್ನು ದಾನ ಕೊಟ್ಟಳು. ಮತ್ತು ಅಲ್ಲಿ ಶ್ರೀ ಶ್ರೀಗಳವರ ಮಹಾ ಸಂಸ್ಥಾನವು ಶಿಷ್ಯ ಪಂಡಿತ ಪರಿಚಾರಕ ಪರಿವಾರದೊಂದಿಗೆ ಸುಖವಾಗಿ ಇರುವಂತೆ ದೊಡ್ಡದಾದ ಒಂದು ಮಠವನ್ನೂ ಕಟ್ಟಿಸಿಕೊಟ್ಟಳು, ತಮ್ಮ ಅರಮನೆಯಲ್ಲಿ ಬಹು ಪುರಾತನ ಕಾಲದಿಂದಲೂ ಪೂಜೆಗೊಳ್ಳುತ್ತ ಬಂದ ನವರತ್ನ ಖಚಿತವಾದ ವೈಕುಂಠ ವಾಸುದೇವ ಪ್ರತಿಮೆಯನ್ನೂ ಮತ್ತು ಮಣಿ ನಿಚಿತವೂ ಮೌಕ್ತಿಕ ಯುಕ್ತವೂ ಆದ ಕಲ್ಪವೃಕ್ಷವೊಂದನ್ನೂ ಶ್ರೀ ಶ್ರೀಗಳವರ ಮುಂದಿಟ್ಟು " ಕೃಷ್ಣಾರ್ಪಣ " ಎಂದಳು.

ಇದರಂತೆ ಶ್ರೀ ಶ್ರೀಗಳವರ ತಪಃ ಪ್ರಭಾವವೂ ಅತ್ಯದ್ಭುತವಾಗಿದ್ದಿತ್ತು. ಶ್ರೀರಂಗ ಕ್ಷೇತ್ರದಲ್ಲಿ ಒಬ್ಬ ಮಾಂತ್ರಿಕನು ರಂಗನಾಥ ಸ್ವಾಮಿಯ ಕಳಾಕರ್ಷಣ ಮಾಡಿ ಆ ಪ್ರಾಚೀನ ಪುರಾಣೋಕ್ತ ಪ್ರತಿಮೆಯು ನಿಸ್ತೇಜವಾಗುವಂತೆ ಮಾಡಿದ್ದ. ಬಂದವರಿಗೆಲ್ಲ ರಂಗನಾಥ ಮೂರ್ತಿಯು ದೊಡ್ಡ ಕಲ್ಲೊಂದು ಅಡ್ಡ ಬಿದ್ದಂತೆ ಕಾಣುತ್ತಿತ್ತು. ಅದರ ಕಣ್ಣಲ್ಲಿಯ ಕಾಂತಿಯೇ ಇಂಗಿ ಹೋಗಿತ್ತು. ಮೋರೆಯ ಮಿಂಚು ಮಾಯವಾಗಿತ್ತು. ಅದನ್ನು ನೋಡಿದರೆ ಯಾರಿಗೂ ಅದರ ಮೇಲೆ ಭಕ್ತಿ ಹುಟ್ಟುತ್ತಿರಲಿಲ್ಲ.

ಇದರಿಂದ ದೇವಸ್ಥಾನದ ಪೂಜಾರಿಗಳೂ ಪಾರುಪತ್ಯಗಾರರೂ ನಾಡಿನಲ್ಲಿಯ ಭಕ್ತಾದಿಗಳೂ ಚಿಂತಾಕ್ರಾಂತರಾಗಿದ್ದರು.

ಎಷ್ಟು ರೀತಿಯಿಂದ ಪುನಃ ಪ್ರಾಣಪ್ರತಿಷ್ಠಾಪನ, ಆವ್ಹಾನ, ಸನ್ನಿಧಾಪನ, ಸಂಪ್ರೋಕ್ಷಣಗಳನ್ನು ಮಾಡಿದರೂ ಕಳೆಗೆಟ್ಟು ಹೋದ ಆ ಪ್ರತಿಮೆಯಲ್ಲಿ ದೇವರ ಸನ್ನಿಧಾನ ಬಂದ ಚಿನ್ಹಗಳೇ ಕಾಣಲಿಲ್ಲ. ಮೊದಲಿನ ಮಿಂಚು ಮರಳಲಿಲ್ಲ. ಚೈತನ್ಯ ಚಿಮ್ಮಲಿಲ್ಲ.

ಇದರಿಂದ ಆ ದೇಶದ ಜನರೆಲ್ಲ ಕಂಗೆಟ್ಟು ನಮ್ಮ ದೇಶಕ್ಕೇ ಏನೋ ಗಂಡಾಂತರ ಬಂದಿದೆ ಎಂದು ಹೆದರಿ ಹೌಹಾರಿ ಹೋಗಿದ್ದರು.

ಇದೇ ವೇಳೆಯಲ್ಲಿ ಶ್ರೀ ಶ್ರೀಗಳವರು ಮೈಸೂರ, ಹೈದರಾಬಾದ ಪ್ರಾಂತಗಳ ಸಂಚಾರ ಮುಗಿಸಿ ತಮ್ಮ ಪರಮ ಗುರುಗಳಾದ ಶ್ರೀ ಮಂತ್ರಾಲಯ ಗುರು ಸಾರ್ವಭೌಮರ ದರ್ಶನ ತೆಗೆದುಕೊಂಡು ಶ್ರೀರಂಗಕ್ಕೆ ದಿಗ್ವಿಜಯ ಮಾಡಿದರು.

ರಂಗನಾಥನನ್ನು ಕಳೆದುಕೊಂಡು ಮಂಗನಂತಾದ ಅಲ್ಲಿಯ ಭಕ್ತಭಾವುಕ ಜನ ಜಂಗುಳಿಯೆಲ್ಲ ಶ್ರೀಗಳವರ ಶ್ರೀ ಚರಣಗಳಿಗೆ ಶರಣು ಬಂದು "ಸ್ವಾಮಿ, ತಮ್ಮ ತಪಃ ಪ್ರಭಾವದಿಂದ ನಮ್ಮ ರಂಗನಾಥನನ್ನು ಮರಳಿ ಕರೆತಂದು ಕೊಡಿಸಬೇಕು" ಎಂದು ಬಿನ್ನವಿಸಿದರು.

ಆಗ ಶ್ರೀ ಶ್ರೀಗಳವರು ಇವನ್ನೆಲ್ಲ ಕೇಳಿ, ಇದರ ಹಿಂದೆ ಯಾವ ದುಷ್ಟ ಬುದ್ಧಿಯ ಕೈವಾಡವಿರಬಹುದೆಂದು ದಿವ್ಯ ದೃಷ್ಟಿಯಿಂದ ನೋಡಿ ತಿಳಿದರು. ಒಬ್ಬ

ಮಾಂತ್ರಿಕನ ಹಸ್ತಲಾಘವದಿಂದ ಇಷ್ಟೆಲ್ಲ ಅನಾಹುತವಾಗಿದೆಯೆಂದು ಅವರಿಗೆ ಖಾತರಿ ಯಾಯಿತು.

ಮೊದಲು ಶ್ರೀ ಶ್ರೀಗಳವರು ತಮ್ಮ ಮಂತ್ರ ಶಕ್ತಿಯಿಂದ ಆ ಮಾಟಗಾರನು ಊರು ಬಿಟ್ಟು ಓಡಿ ಹೋಗುವಂತೆ ಮಾಡಿದರು.

ಒಂದು ಭಯಂಕರವಾದ ಕೃತ್ಯಾ ಬೆನ್ನುಹತ್ತಿ ಅವನನ್ನು ಸುಡಹತ್ತಿತು. ಆಗ ಆ ದುಷ್ಟನಿಗೆ ಒಂದು ಕೊಳ್ಳಿಯ ದೆವ್ವವೇ ಬೆನ್ನುಹತ್ತಿದಂತಾಗಿ ಅವನನ್ನು ಆ ಊರಿನ ಗಡಿ ದಾಟಿಯೇ ಓಡಿಸಿ ಬಿಟ್ಟಿತು.

ಇತ್ತ ಶ್ರೀ ಶ್ರೀಗಳವರು ರಂಗನಾಥಸ್ವಾಮಿಯನ್ನು ಆವ್ಹಾನಮಾಡಿ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಿದರು. ಅದರಿಂದ ಆ ರಂಗನಾಥಸ್ವಾಮಿಯ ಮುಖದಲ್ಲಿ ಮೊದಲಿನಂತೆ ಕಳೆ–ಕಾಂತಿಗಳು ಕಂಗೊಳಿಸಹತ್ತಿದವು. ಆ ಪ್ರತಿಮೆಯ ಕಂಗಳಲ್ಲಿ ಅದೇ ಮೊದಲಿನ ಮಂಗಳ ಕಾಂತಿಯು ಮತ್ತೆ ಮಿಂಚಾಡ ಹತ್ತಿತು. ಜನರಿಗೆಲ್ಲ ಶ್ರೀಗಳವರ ಅಸಾಧಾರಣ ತಪಃ ಶಕ್ತಿ ಹಾಗೂ ಮಂತ್ರಸಿದ್ಧಿಗಳನ್ನು ಕಂಡು ಕಣ್ಣಲ್ಲಿ ಆನಂದಾಶ್ರುಗಳು ತುಳುಕಿದವು. ಹೃದಯದಲ್ಲಿ ಭಕ್ತಿಭಾವ ಉದ್ರೇಕಗೊಂಡಿತು. ಎಲ್ಲರೂ "ಶ್ರೀ ಗುರುಭ್ಯೋ ನಮಃ" ಎಂದು ಅವರ ಅಡಿದಾವರೆಗಳಿಗೆ ವಂದಿಸಿದರು.

ದೇವಸ್ಥಾನದ ಪೂಜಾರಿ ಪರಿಚಾರಕ ವರ್ಗದವರು "ಸ್ವಾಮಿ, ಮುಂದೆ ಹೀಗೆಂದಿಗೂ ಆಗದಂತೆ ವ್ಯವಸ್ಥೆ ಮಾಡಬೇಕೆಂದು ಬೇಡಿಕೊಂಡರು. ಆಗ ಶ್ರೀಗಳವರು ಮುಂದೆ ಇಂಥ ದುಷ್ಟಶಕ್ತಿಗಳು ಅಲ್ಲಿ ಬಂದು ಇಂಥ ಕುಚೇಷ್ಟೆ ಮಾಡಲಿಕ್ಕೆ ಸಾಧ್ಯ ವಾಗಬಾರದೆಂದು ರಂಗನಾಥಸ್ವಾಮಿಯ ಎದುರೇ "ಆಖಣಾಶ್ಮ"ರೆಂದು ಉಪನಿಷತ್ತಿನಲ್ಲಿ ಪ್ರಸಿದ್ಧವಾದ ಪ್ರಾಣದೇವರ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿದರು. ಆ ಬಳಿಕ ಇಂದಿನವರೆಗೂ ಶ್ರೀರಂಗದಲ್ಲಿ ಆ ಪ್ರಾಣದೇವರ ಪುಣ್ಯಪ್ರಭಾವದಿಂದ ಈ ವರೆಗೂ ಅಂಥ ಅಪಚಾರ ನಡೆದಿಲ್ಲ.

ಆ ಕಾಲದಲ್ಲಿ ಹೇಳವನಕಟ್ಟೆ ಗಿರಿಯಮ್ಮ ಎಂಬ ಹೆಣ್ಣುಮಗಳು ಪರಮ ಭಗ ವದ್ ಭಕ್ತಳೆಂದು ಹೆಸರಾಗಿದ್ದಳು. ಅವಳ ಭಕ್ತಿ ಗೀತಗಳಿಗೆ ಪ್ರಸನ್ನನಾದ ಕೃಷ್ಣನು ಅವಳ ಕೈ ಕೂಸಾಗಿ ತೊಡೆಯ ಮೇಲಾಡುತ್ತಿದ್ದನಂತೆ.

ಆದರೆ ಇಂಥ ಸಾಧ್ವೀಮಣಿಯ ಸಿದ್ಧಿ ಶುದ್ಧಿಗಳನ್ನು ಕಂಡು ಕರುಬುವ ಕಡು ಖಲರಿಗೆ ಆಗೇನು ಕೊರತೆಯಿರಲಿಲ್ಲ. ಅವಳಿಗೆ ಮಕ್ಕಳಾಗಿಲ್ಲವೆಂದು ಆ ಊರಲ್ಲಿಯ ಶಿಷ್ಟರು ಅವಳ ಕೈಯಿಂದ ಉಣ್ಣುತ್ತಿರಲಿಲ್ಲ.

ಮೈಸೂರು ಪ್ರಾಂತದಲ್ಲಿ ಒಮ್ಮೆ ಶ್ರೀಗಳವರು ಸಂಚಾರ ಕೈಕೊಂಡಾಗ ಹೇಳವನ ಕಟ್ಟೆಯಲ್ಲಿ ಒಂದು ದಿನ ತಂಗಿದರು. ಅಂದು ಶಾನಭೋಗರ ಮನೆಯಲ್ಲಿಯೇ ಭಿಕ್ಷೆ.

ತೀರ್ಥ ಕೊಡುವಾಗ ಅಪರೋಕ್ಷಜ್ಞಾನಿಗಳಾದ ಶ್ರೀಗಳವರು ಗಿರಿಯಮ್ಮ ಎಲ್ಲಿ ಎಂದು ಕೇಳಿದರು. ಆಗ ಮಠಾಧಿಕಾರಿಯು ಬಂದು "ಸ್ವಾಮಿ, ಅವಳು ಬಂಜೆ. ಮತ್ತು ಇನ್ನೂ ಹಲವಾರು ದೋಷಗಳು ಅವಳಲ್ಲಿವೆ. ತೀರ್ಥ ಸಾಗಲಿ" ಎಂದು ಪಿಸುಗುಟ್ಟಿದ.

ಅದಕ್ಕೆ ಶ್ರೀಗಳವರು— "ಏನೇ ಇರಲಿ ಇಂದು ಅವಳಿಗೆ ಮೊದಲು ತೀರ್ಥ" ಎಂದರು. ಗಿರಿಯಮ್ಮ ಬಂದು ತೀರ್ಥಕ್ಕೆ ಕೈ ಒಡ್ಡಿದಳು. ಅದನ್ನು ನೋಡಿ ಶ್ರೀಗಳವರು "ಚಕ್ರಪಾಣಿಯೇ ಮಗನಾಗಿರುವ ಇವಳು ಬಂಜೆಯೇ! ದೇವರನ್ನು ಎತ್ತಿ ಮುದ್ದಾಡಿ ಮಗುವನ್ನಾಗಿಸಿ ಲಾಲಿಯಾಡಿಸುವ ಇವಳ ಯೋಗ್ಯತೆ ಯಾರಿಗಿದೆ?" ಎಂದು ಮೊದಲು ತೀರ್ಥ ಮುದ್ರೆಗಳನ್ನಿತ್ತು ಅನುಗ್ರಹಿಸಿದರು.

ಆಗ ಆಶುಕವಯಿತ್ರಿಯಾದ ಅವಳು ಆಗಲೇ

" ಸುಮತೀಂದ್ರ ಹೃದಯ ಪಂಕಜಭೃಂಗ ।
ಸದಾನಂದ ಕದನವಿಕ್ರಮ ಬಾಹು ಕೋದಂಡ ಧೃತ ।
ಸೀತಾ ರಾಮ ಶ್ರೀ ರಘುನಂದನ

ಎಂದು ಮುಂತಾಗಿ ಶ್ರೀ ಸುಮತೀಂದ್ರ ತೀರ್ಥರ ಉಪಾಸ್ಯ ಮೂರ್ತಿಯಾದ ಶ್ರೀ ರಾಮಚಂದ್ರನನ್ನು ಕೊಂಡಾಡಿ ಹಾಡು ಕಟ್ಟಿದಳು.

ಶ್ರೀ ಶ್ರೀಗಳವರು ವೇದಾಂತದಲ್ಲಿ " ಭಾವರತ್ನ ಕೋಶ " ಎಂಬ ಅಪೂರ್ವ ಕೋಶ ಗ್ರಂಥಗಳನ್ನು ರಚಿಸಿ ವೇದಾಂತ ಪ್ರಪಂಚದಲ್ಲಿ ಚಿರಂಜೀವಿಗಳಾದಂತೆ ಸಾಹಿತ್ಯ ವಲ್ಲಿಯೂ ಅಭಿನವ ಕಾದಂಬರೀ, ಯೋಗೀಂದ್ರ ವಿಜಯ, ಯೋಗೀಂದ್ರ ತಾರಾವಲಿ, ರಾಮದಂಡಕ, ರಾಮತಾರಾವಲಿ ಮುಂತಾದ ಅನೇಕ ಸರಸ ಪ್ರಬಂಧಗಳನ್ನೂ ರಚಿಸಿ ರಸಸಿದ್ಧ ಕವೀಶ್ವರರೆಂದೂ ಖ್ಯಾತರಾಗಿದ್ದಾರೆ.

ಛತ್ರಪತಿ ಶಿವಾಜಿ ಮಹಾರಾಜನ ಮೊಮ್ಮಗನಾದ ಶಹಾಜಿ ರಾಜನು ಶ್ರೀ ಸುಮತೀಂದ್ರರ ಕವಿಚಕ್ರವರ್ತಿತ್ವವನ್ನೂ ಪಂಡಿತ ಸಾರ್ವಭೌಮತ್ವವನ್ನೂ ಮೊದಲಿನಿಂದಲೂ ಬಲ್ಲವನಾಗಿದ್ದ. ಗುಣಗ್ರಾಹಿಗಳಾದ ಶ್ರೀಗಳವರೂ ಕೂಡ ವಿದ್ಯಾಪಕ್ಷಪಾತಿಯಾದ ಆ ಛತ್ರಪತಿ ಪೌತ್ರನ ಸದ್ಗುಣಗಳನ್ನು ಪೂರ್ವಾಶ್ರಮದಲ್ಲಿಯೇ ಶಾಹು ವಿಜಯ, ಚಕ್ರಪಾಲ ಪ್ರಬಂಧ, ರಾಜಸ್ತುತಿ, ಜಯಘೋಷಣಾ ಮುಂತಾದ ಚಾಟು ಪ್ರಬಂಧಗಳನ್ನು ರಚಿಸಿ ಬಣ್ಣಿಸಿದ್ದರು. ಆಶ್ರಮವಾದ ಬಳಿಕ ಆ ಶಹಾಜಿಯು ಅವರನ್ನು ಕರೆಯಿಸಿಕೊಂಡು ಅವರಿಗೆ ಅನೇಕ ದಾನದತ್ತಿಗಳನ್ನಿತ್ತು ಸತ್ಕರಿಸಿದ.

ಇವರು " ಮಂತ್ರರತ್ನಕೋಶ " ಎಂಬ ಅತ್ಯುಪಯುಕ್ತವಾದ ಗ್ರಂಥವನ್ನು ಬರೆದಿದ್ದು ಅದು ವೈಷ್ಣವರ ಆಹ್ನಿಕೋಪಯುಕ್ತವಾದ ಎಲ್ಲ ಮಂತ್ರ, ತಂತ್ರ, ಧ್ಯಾನ ಆವಾಹನ, ಪ್ರತಿಷ್ಠಾಪನ, ಪ್ರಾರ್ಥನಾ ಪದ್ಯ ಗದ್ಯಗಳನ್ನು ಒಳಗೊಂಡಿದೆ. ಅದನ್ನು ಮುದ್ರಿಸಿ ಮಾಧ್ವರಲ್ಲಿಯ ದೊಡ್ಡ ಕೊರತೆಯೊಂದನ್ನು ದೂರ ಮಾಡಬೇಕೆಂದು ಶ್ರೀ ಸುಮತೀಂದ್ರ ತೀರ್ಥ ಮಠಾಧೀಶರಲ್ಲಿ ಬಿನ್ನವಿಸುತ್ತೇವೆ.

## ಶ್ರೀ ರಾಯರ ಪಕ್ಕದಲ್ಲಿರುವ ಋಷಿ ಪುಂಗವ

# ಶ್ರೀ ವಾದೀಂದ್ರರು

ಪರಮ ಪವಿತ್ರ ಕ್ಷೇತ್ರವಾದ ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ತೀರ್ಥ ಸ್ವಾಮಿಗಳ ಪಕ್ಕದಲ್ಲಿ ಮತ್ತೊಂದು ಅಷ್ಟೇ ಭವ್ಯವಾದ ವೃಂದಾವನವಿರುವದು. ಶ್ರೀ ರಾಯರ ಮಗ್ಗಲಲ್ಲಿಯೇ ಚಿರಂತನ ವಾಸಸ್ಥಳ ದೊರೆತ ಈ ಪುಣ್ಯಾತ್ಮರು ಯಾರಿರ ಬಹುದು ಎಂದು ಯಾತ್ರಿಕರಿಗೆಲ್ಲ ಕುತೂಹಲವಾಗುವದು ಸಹಜವಾಗಿದೆ.

ರಾಯರ ಪರಂಪರೆಯಲ್ಲಿ ವಾಗ್ವಿಭೂತಿ ಎಂಬ ಹೆಸರಾದ ಶ್ರೀ ವಾದೀಂದ್ರರೇ ಆ ಮಹನೀಯರು. ವಿಮತೀಯ ವಿದ್ವಾಂಸರ ಜೊತೆಗೆ ನಡೆದ ವೇದಾಂತ ವಾದ ವಿವಾದಗಳಲ್ಲಿ ಅವರು ತಮ್ಮ ವಾಗ್ವಜ್ರಾಯುಧವನ್ನು ಪ್ರಯೋಗಿಸಿ ಜಯಗಳಿಸುತ್ತ ಲಿದ್ದುದರಿಂದ ಅವರು ವಾದೀಂದ್ರರೆಂಬ ಅನ್ವರ್ಥಕ ನಾಮವನ್ನು ಪಡೆದಿದ್ದರು.

ಅವರ 'ಗುರುಗುಣಸ್ತವನ' ಖಂಡ ಕಾವ್ಯವನ್ನು ನೋಡಿದರೆ ಅವರು ಸರಸ ಕವೀಂದ್ರ ಮತ್ತು ಅವರ ಮೀಮಾಂಸಾನಯ ದರ್ಪಣ ಎಂಬ ತತ್ವಪ್ರಕಾಶಿಕಾ ಟಿಪ್ಪಣಿಯನ್ನು ಅವಲೋಕಿಸಿದರೆ 'ವಿಬುಧೇಂದ್ರರೂ' ಹಾಗೂ 'ನವ್ಯದುರುಕ್ತಿ ಶಿಕ್ಷಾ' ಎಂಬ ಪ್ರೌಢ ಪ್ರಬಂಧವನ್ನು ನಿರೀಕ್ಷಿಸಿದರೆ ' ಸುಜ್ಞಾನೇಂದ್ರ ' ರೂ ' ಖಗೋಳ ಭುಗೋಳ ವಿಚಾರ ' ಎಂಬ ವಿವೇಚನಾ ಪ್ರಚುರ ಪ್ರಬುದ್ಧ ವೈಜ್ಞಾನಿಕ ಗ್ರಂಥವನ್ನು ಪರಿಶೀಲಿಸಿದಾಗ " ಸೂರೀಂದ್ರರೂ " ಆಗಿದ್ದರೆಂಬುದು ತಿಳಿದುಬರುತ್ತದೆ.

ಮನೆತನದ ದೃಷ್ಟಿಯಿಂದ ವಿಚಾರಿಸಿದರೆ ಇವರು ಶ್ರೀ ರಾಯರ ಪೂರ್ವಾಶ್ರಮದ ಮರಿಮಕ್ಕಳೆಂದು ಹೇಳಬಹುದು. ಗುರುರಾಜರ ಪೂರ್ವಾಶ್ರಮದ ಪುತ್ರರು ಲಕ್ಷ್ಮೀನಾರಾಯಣಾಚಾರ್ಯರು. ಅವರ ಮಕ್ಕಳು ಪುರುಷೋತ್ತಮಾಚಾರ್ಯರು. ಪುರುಷೋತ್ತಮಾಚಾರ್ಯರ ಚಿರಂಜೀವರಾದ ಶ್ರೀನಿವಾಸಾಚಾರ್ಯರೇ ಮುಂದೆ ಶ್ರೀ ವಾದೀಂದ್ರ ತೀರ್ಥರೆಂದು ವಿಖ್ಯಾತರಾದರು.

ಶ್ರೀ ಗುರುಸಾರ್ವಭೌಮರ ವಿದ್ವದ್ ವಂಶದಲ್ಲಿ ಜನಿಸಿದ ಶ್ರೀನಿವಾಸಾಚಾರ್ಯರಿಗೆ ಚತುಶ್ಶಾಸ್ತ್ರ ಪಾಂಡಿತ್ಯವು ಪಿತೃ ಪರಂಪರೆಯಿಂದ ಬಳುವಳಿಯಾಗಿ ಬಂದಿದ್ದರೆ ವೈರಾಗ್ಯವು ರಕ್ತಗತ ಗುಣವಾಗಿ ಬೆಳೆದು ಬಂದಿದ್ದಿತು. ಮಾಘ ಕಾಲಿದಾಸರಿಗೆ ಸರಿದೊರೆಯಾದ ಕವಿತ್ವವು ಅವರ ಕಲ್ಪನಾ ಶಕ್ತಿಯ ಕೈಕೂಸಾಗಿ ಹರಿಗುರು

ಗಳ ಚರಣ ಚಾರಣ ರೂಪದಿಂದ ಚಿಮ್ಮುತ್ತಲಿತ್ತು. ಮಾಧ್ವರು ಮನಸ್ಸು ಮಾಡಿದರೆ ಮಾಘ, ಮುರಾರಿ, ಮಯೂರ ಮುಂತಾದ ಮಹಾ ಕವಿಗಳಿಗಿಂತ ಸರಸ ಸುಂದರವಾದ ಕಾವ್ಯ ಪ್ರಬಂಧಗಳನ್ನು ಸಲೀಸಾಗಿ ಬರೆಯಬಲ್ಲರು, ಎಂಬುದನ್ನು ಶ್ರೀ ವಾದೀಂದ್ರರು ತಮ್ಮ ರಸಾಳ ಕೃತಿಗಳಿಂದ ತೋರಿಸಿಕೊಟ್ಟಿದ್ದಾರೆ. ಗುರುಭಕ್ತಿಯ ಹಾಸಿನಲ್ಲಿ ಅವರ ಕವಿಶಕ್ತಿಯು ನೆಯ್ದ ಪದ್ಯ ಪೀತಾಂಬರಗಳ ಸೆರಗು ಸೊಬಗುಗಳನ್ನು ಕಂಡು ಸಹೃದಯರ ಹೃದಯ ಆನಂದದಿಂದ ಗರಿಗೆದರುತ್ತದೆ. ಅವರು ಪ್ರಾರಂಭದ ಮಂಗಳ ಪದ್ಯದಲ್ಲಿ ಶ್ರೀಪತಿಯ ಬರೀ ಕಟಾಕ್ಷವನ್ನು ಬೇಡಿ ಬಯಸಿದ ಬಗೆ ಬಿನ್ನಾಣಗಳೂ ಕೂಡ ಎಷ್ಟು ಮಾರ್ಮಿಕವಾಗಿವೆ ನೋಡಿ.

ಉನ್ನಿದ್ರೈಲನ್ನೀಲ ನೀರೇರುಹನಿವಹಮಹಃ ಪುಷ್ಟಿ ಮುಷ್ಟಿಂಧಯ ಶ್ರೀಃ ।
ಶ್ರೀಭೂದುರ್ಗಾ ದೃಗಂತ ಪ್ರಚಯ ಪರಿಚಯೋ ದಾರಕೆರ್ಮೀರಭಾವಃ ॥
ಸ್ವೈರಕ್ಷೀರೋದನಿರ್ಯಚ್ಛಶಿರುಚಿ ನಿಚಯಾಖರ್ವ ಗರ್ವಾಪ ನೋದೀ ।
ಪಾತು ಶ್ರೀನೇತುರಸ್ಮಾನ್ ಸಪದಿ ಬುಧ ಜನ ತ್ರಾಣದಕ್ಷಃ ಕಟಾಕ್ಷಃ ॥

ಈ ಗುರುಗುಣಸ್ತವನದಲ್ಲಿ ಶ್ರೀ ಹರಿಯಿಂದ ಆರಂಭಿಸಿ ಗುರುರಾಜರ ವರೆಗಿನ ಗುರು ಪರಂಪರೆಯ ಮಹಾ ವ್ಯಕ್ತಿಗಳನ್ನೆಲ್ಲ ತಮ್ಮ ಶಬ್ದ ಶಿಲ್ಪದಲ್ಲಿ ಕಟೆದು ನಿಲ್ಲಿಸಿದ ವ್ಯಕ್ತಿಗಳು ಶ್ರೀ ವಾದೀಂದ್ರರ ವಿರಾಟ ಪ್ರತಿಭೆಗೆ ಜೀವಂತ ಸಾಕ್ಷಿಗಳಾಗಿವೆ.

ಅವರು ಬಣ್ಣಿಸಿದ ಈ ವ್ಯಾಸರಾಜರ ಮಹಾ ಮಹಿಮೆಯನ್ನು ಕೇಳಿ—

" ಮಾಯಾತಂತ್ರಾಮರಾರಿಸ್ಮಯಮಪನಯತೋ ಮಧ್ವಸಿದ್ಧಾಂತನಾಮ್ನಃ ।
ನೇತ್ರಾಣೀ ವತ್ರಯೋಪೀತ್ರಿ ಜಗತಿ ನೃಹರೇರಿಂಧತೇ ಯತ್ಪ್ರಬಂಧಾಃ ॥
ಯದ್ವಾಗದ್ವೈತ-ವಿದ್ಯಾಚಲ-ಕುಲಿಶ-ಕುಲ-ಪ್ರೌಢಿಮಾಢೌಕತೇ ಸಃ ।
ಶ್ರೇಯೋ ಭೂಯೋ ವಿದಧ್ಯಾತ್ಸ ಮಹಿತ ಮಹಿಮಾ ಸಂಪ್ರತಿ ವ್ಯಾಸರಾಜಃ ॥

ಶ್ರೀ ವಾದೀಂದ್ರರು ಶ್ರೀ ರಾಘವೇಂದ್ರರ ವಾಗ್ವೈಭವವನ್ನು ಬಣ್ಣಿಸಿದ ಬಗೆಯನ್ನು ನೋಡಿರಿ—

"ಧೀರ ಶ್ರೀ ರಾಘವೇಂದ್ರ ತ್ವದತುಲರಸನಾರಂಗ ನೃತ್ಯತ್ ಸ್ವಯಂಭೂ—
ಯೋಷಾ ಧಮ್ಮಿಲ್ಲಭಾರಶ್ಲಥಕುಸುಮತ್ವತೀ ಸ್ತ್ವದ್ಗಿರಃ ಸಂಗಿರಾಮಃ ।
ಯಾಭಿಃ ಸಂಮಿಶ್ರಿತಾಭಿಃ ನಿರವಧಿವಸು ದಾವಿಶ್ರುತಾ ಸಾ ಸುಧಾಪಿ ।
ಕ್ಷೋಣೀ ಗೀರ್ವಾಣ ಗಮ್ಯಂ ಪರಿಮಲಮತುಲಂ ಸಾಂಪ್ರತಂ ಸಂಪ್ರಪೇದೇ ॥

ಅರ್ಥ ತಿಳಿಯದಿದ್ದರೂ ಈ ಪದ್ಯಗಳ ಮಧುರವಾದ ಶಬ್ದ ಗುಂಫನವೇ ಕಿವಿಗೆ ಇಂಪಾಗಿ ಮನಸ್ಸಿಗೆ ಆನಂದವನ್ನು ಉಂಟು ಮಾಡುತ್ತದೆ. ಅರ್ಥ ತಿಳಿದರಂತೂ ರಸಿಕರ ಹೃದಯಗಳು ಹರ್ಷೋದ್ರೇಕದಿಂದ ಲೀಲಾತಾಂಡವಗೈಯುತ್ತವೆ. ಅವಕಾಶ ವಿಲ್ಲವ್ದರಿಂದ ಆದನ್ನು ವಾಚಕರಿಗೇ ಓದಲು ಬಿಟ್ಟುಕೊಟ್ಟಿದ್ದೇವೆ.

ಶ್ರೀನಿವಾಸಾಚಾರ್ಯರ ಪ್ರಚಂಡ ಪಾಂಡಿತ್ಯ, ಸರಸ ಕವಿತ್ವ, ಅದ್ಭುತ ವೈರಾಗ್ಯ, ನಿಸ್ವಾರ್ಥ ವೃತ್ತಿ, ಪ್ರವಚನ ಪಟುತ್ವ, ಗ್ರಂಥ ರಚನಾ ಪ್ರಾವೀಣ್ಯ ಮುಂತಾದ ಸದ್ಗುಣಗಳನ್ನು ಕಂಡು ಸಂಪ್ರೀತರಾದ ಶ್ರೀ ಉಪೇಂದ್ರ ತೀರ್ಥರು, ಇವರೇ ತಮ್ಮ ಶ್ರೀ ಮಠಕ್ಕೆ ಉತ್ತರಾಧಿಕಾರಿಗಳಾಗಲಿಕ್ಕೆ ಯೋಗ್ಯ ವರವೆಂದು ಭಾವಿಸಿ ಆಶ್ರಮವಿತ್ತು ವಾದೀಂದ್ರರೆಂದು ನಾಮಕರಣ ಮಾಡಿದರು. ಇವರು ಮಂತ್ರಾಲಯದಲ್ಲಿ ಶ್ರೀ ಗುರು ರಾಜರ ಪಕ್ಕದಲ್ಲಿ ಜ್ಯೇಷ್ಠ ಶುದ್ಧ ನವಮಿಯಂದು ವೃಂದಾವನಸ್ಥರಾದರು.



## ವ್ಯಾಸಕೂಟ – ದಾಸಕೂಟಗಳ ಧುರೀಣರಾದ

# ಶ್ರೀ ವ್ಯಾಸತತ್ವಜ್ಞರು

ಶ್ರೀ ವ್ಯಾಸತತ್ವಜ್ಞರು ಮಹಾ ಅಪರೋಕ್ಷಜ್ಞಾನಿಗಳೂ ಧೃಷ್ಟದ್ಯುಮ್ನಾವತಾರಿಗಳೂ ಆಗಿದ್ದರೆಂದು ತಿಳಿದು ಬರುತ್ತಿದೆ. ಇವರ ಪೂರ್ವಾ ಶ್ರಮದ ಹೆಸರು ಐಜಿ ವೆಂಕಟರಾಮಾಚಾರ್ಯರು. ಐಜಿ ಮನೆತನವು ಪಾಂಡಿತ್ಯಕ್ಕೆ ಮೊದಲಿನಿಂದಲೂ ಪ್ರಸಿದ್ಧವಾದದ್ದು. ಶ್ರೀ ವೆಂಕಟನರಸಿಂಹಚಾರ್ಯರು ಮಹಾ ವಿದ್ವಾಂಸರಾಗಿದ್ದಷ್ಟೆ ಇವರ ಮಗ ವೆಂಕಟರಾಮಾಚಾರ್ಯರು ಚಿಕ್ಕಂದಿನಲ್ಲಿ ದಡ್ಡರಾಗಿದ್ದರು. ಮುಂದೆ ಇದೇ ವೆಂಕಟರಾಮಾಚಾರ್ಯರು ಶ್ರೀ ಗೋಪಾಲದಾಸರ ಅನುಗ್ರಹದಿಂದ ಚತುಃಶಾಸ್ತ್ರ ಪಂಡಿತರಾಗಿ ಶಿಷ್ಯರಿಗೆ ಸುಧಾಚಂದ್ರಿಕಾದಿಗ್ರಂಥಗಳ ಪಾಠಪ್ರವಚನ ಮಾಡಿಸತಕ್ಕ ಸಾಮರ್ಥ್ಯವುಳ್ಳವರಾಗಿ ಮೂರು ವರ್ಷಕ್ಕೆ ಒಂದು ಸಲದಂತೆ ೧೩ ಸಾರಿ ಸುಧಾ ಮಂಗಲ ಮಾಡಿದರು.

ಇವರಲ್ಲಿ ನೂರಾರು ಜನ ಶಿಷ್ಯರು ವ್ಯಾಸಂಗ ಮಾಡುತ್ತಿದ್ದರು. ಅಡವೀ ಸ್ವಾಮಿಗಳು (ಶ್ರೀ ವಿಷ್ಣುತೀರ್ಥರು) ಇವರ ಶಿಷ್ಯರೆಂದಮೇಲೆ ವ್ಯಾಸತತ್ವಜ್ಞರ ಪಾಂಡಿತ್ಯ ವೈರಾಗ್ಯಗಳ ಬಗ್ಗೆ ಹೆಚ್ಚಿಗೆ ಹೇಳಬೇಕಿಲ್ಲ. ರಾಯಚೂರವರು, ವಾಮನ ಪ್ಯಾಟಿಯವರು, ಕಣೇಕಲ್ಲೂರವರು ಶ್ರೀ ವ್ಯಾಸತತ್ವಜ್ಞರ ಶಿಷ್ಯರಲ್ಲಿ ಪ್ರಮುಖರು ಇವರು ಸಂಸ್ಕೃತದಲ್ಲಿ ಮಾನಸಸ್ಮೃತಿ ಉಪಾಸನಾಭಾಗ, ಸಪ್ತಮಸ್ಕಂಧ (ಭಾಗವತ ಮಂದನಂದನೀ, ಎಂಬ ಟೀಕೆ, ಸುಧಾಟಿಪ್ಪಣಿ (ರಸರಂಜನೀ ಲಘು, ಮತ್ತು ಗುರು;) ವಿಷ್ಣು ತತ್ವನಿರ್ಣಯ ಟಿಪ್ಪಣಿ ಲಘು, ಮತ್ತುಗುರು, ನ್ಯಾಯಾಮೃತ ಟಿಪ್ಪಣಿ ವ್ಯಜನ, ಚಂದ್ರಿಕಾ ಟಿಪ್ಪಣಿ ಶಿವಾಗಮ ಪ್ರಮಾಣಾಧಿಕರಣ ಮುಂತಾದ ಗ್ರಂಥಗಳನ್ನೂ ಕನ್ನಡದಲ್ಲಿ "ವಾಸುದೇವ ವಿಠ್ಠಲ" ಅಂಕಿತದಿಂದ ಹತ್ತು ಉಗಾಭೋಗ, ಹದಿನಾರು ಸುಳಾದಿ, ನೂರಾರು ಸುಳಾದಿ, ನೂರಾರು ಪದಗಳನ್ನು ರಚಿಸಿದ್ದಾರೆ.

ಇವರು ಗೋಪಾಲದಾಸರಿಂದ "ವಾಸುದೇವ ವಿಠ್ಠಲ" ಎಂಬ ಅಂಕಿತವನ್ನು ಪಡೆದರು. ಶ್ರೀ ಗೋಪಾಲದಾಸರೂ ಇವರೂ ಕೂಡಿಯೇ ಒಂದೆಡೆ ಬಹುದಿನ ವಾಸವಾಗಿದ್ದರು. ಇಷ್ಟಾದರೂ ತಮಗೆ ಬಿಂಬಾಪರೋಕ್ಷವಾಗಲಿಲ್ಲವೆಂದು ಪರಿತಪಿಸುತ್ತಿದ್ದರು. ಕೊನೆಗೆ ಶ್ರೀ ಗೋಪಾಲದಾಸರನ್ನು ಕೇಳಲಾಗಿ ಈ ಜನ್ಮದಲ್ಲಿ ನಿಮಗೆ ಅಪರೋಕ್ಷಜ್ಞಾನವಿಲ್ಲವೆಂದು ಹೇಳಿದರು. ದಾಸರು ಇವರಿಗೆ ಈ ಜನ್ಮ ಬಿಡು ಅಂದರೆ ಅಪರೋಕ್ಷವಾಗುತ್ತದೆಂದು ಹೇಳಿದಾಗ ಬಹಳ ಚಿಂತಾಕ್ರಾಂತರಾದರು. ಇವನ್ನು ಕಂಡು

ಶ್ರೀಗೋಪಾಲದಾಸರು ಇವರಿಗೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದರೆ ಈ ಜನ್ಮ ಹೋದಂತಾಗುತ್ತದೆಂದು ಅಂದರು. ಮುಂದೆ ಇದೇ ಐಜಿ ವೆಂಕಟರಾಮಾಚಾರ್ಯರು ಮಂತ್ರಾಲಯಕ್ಕೆ ಬಂದು ಶ್ರೀರಾಯರು ಸೇವೆಮಾಡಿ ಶ್ರೀರಾಯರ ಮಠದ ಪೀಠಸ್ಥರಾದ ಶ್ರೀ ಶ್ರೀ ಭುವನೇಂದ್ರ ತೀರ್ಥರಿಂದ ತುರಿಯಾಶ್ರಮವನ್ನು ಸ್ವೀಕರಿಸಿ ಪ್ರಣವ ಮಂತ್ರೋಪದೇಶ, "ವ್ಯಾಸತತ್ವಜ್ಞ" ರೆಂಬ ಅಭಿದಾನವನ್ನು ಪಡೆಯುತ್ತಾರೆ. ಶ್ರೀ ಭುವನೇಂದ್ರ ತೀರ್ಥರು ಐಜಿ ಆಚಾರ್ಯರಂಥ ಪಂಡಿತರೂ, ವೈರಾಗ್ಯಶಾಲಿಗಳೂ ಅನಾಯಾಸವಾಗಿ ತಮ್ಮ ನಂತರ ತಮ್ಮ ಪೀಠಕ್ಕೆ ದೊರೆತರೆಂದು ಸಂತೋಷ ಪಡುತ್ತಾರೆ.

ಇವರು ಮಹಾಮಹಿಮಶಾಲಿಗಳಾಗಿದ್ದರು. ಗದ್ವಾಲ ಮಹಾರಾಜನಂತೂ ಇವರ ದಾಸಾನುದಾಸನಾಗಿದ್ದನು. ಇವರು ಅವನನ್ನು ಅನೇಕ ವಿಪತ್ತುಗಳಿಂದ ಪಾರು ಮಾಡಿದರು. ಆ ರಾಜನಿಂದ ಅದಕ್ಕಾಗಿಯೇ ವೇಣಿಸೋಮಪುರವು ಜಹಗೀರಾಗಿ ಇವರಿಗೆ ಕೊಡಲ್ಪಟ್ಟಿತು. ಇದೂ ಅಲ್ಲದೆ ಇವರು ಐಜಿಹಳ್ಳವು ಗರುಡ ನದಿಯಾದದ್ದು, ತಿರುಪತಿಯಲ್ಲಿ ಕಾಲರಾ ಬೇನೆ ಶಾಂತವಾದದ್ದು, ತುಂಗಾ ನದಿಯು ಇವರ ಹತ್ತರ ಬಂದದ್ದು, ಶ್ರೀ ವಿರುಪಾಕ್ಷನ ರಥವನ್ನು ರಕ್ಷಣೆ ಮಾಡಿದ್ದು ಮುಂತಾದ ಅನೇಕ ಮಹಿಮೆಗಳನ್ನು ಮಾಡಿ ತೋರಿದ್ದಾರೆ.

ಇವರು ಮಂತ್ರಾಲಯ ಮಹಾಪ್ರಭುಗಳ ನಿಸ್ಸೀಮ ಭಕ್ತರಾಗಿದ್ದರು. "ನಾನ್ಯಾಕೆ ಚಿಂತಿಸಲಿ, ನಾನ್ಯಾಕರ್ಥೆನಿಸಲಿ ತಾನಾಗಿ ಶ್ರೀರಾಘವೇಂದ್ರಯತಿಯೊಲಿದ" ಎಂದು ಭಕ್ತಿಭಾವ ಭರವಾಗಿ ಹಾಡಿ ಕುಣಿದಿದ್ದಾರೆ.

ಇವರಿಗೆ ಪುತ್ರ ಸಂತಾನವಿರಲಿಲ್ಲ. ಮೊದಲನೇಯ ಹೆಂಡತಿಯ ಮಗಳಾದ ಲಕ್ಷ್ಮಕ್ಕನ ಮಕ್ಕಳಾದ ಶ್ರೀ ಗೋಪಾಲಕೃಷ್ಣಾಚಾರ್ಯರನ್ನು ದತ್ತಕ ತೆಗೆದುಕೊಂಡರು. ಇವರ ವಂಶಸ್ಥರು ಇನ್ನೂ ವೇಣೀ ಸೋಮಪುರದಲ್ಲಿರುವರು.

ಶ್ರೀ ವ್ಯಾಸತತ್ವಜ್ಞರು ಶಾಲಿವಾಹನ ಶಕೆ [illegible] ರಲ್ಲಿ ಜನಿಸಿದರೆಂದೂ ಶ್ರೀ ಜಗನ್ನಾಥ ದಾಸರು ಹೇಳುತ್ತಾರೆ. ಶಾ. ಶಕೆ, [illegible] ರಲ್ಲಿ ಹರಿಪದವನ್ನೈದಿದರು. ಇವರೇ ಶ್ರೀ ವ್ಯಾಸರಾಜಮಠದಲ್ಲಿ "ಗುರುಕೃಷ್ಣ" ಎಂಬ ಅಂಕಿತವಿರುವ ಶ್ರೀನಿವಾಸ ತೀರ್ಥರೆಂದೂ ಮತ್ತು ನಂತರ ಉತ್ತರಾದಿ ಮಠದಲ್ಲಿ "ಶ್ರೀ ಕೃಷ್ಣ ದ್ವೈಪಾಯನರಾಗಿ ಅವತಾರಮಾಡಿದರೆಂದೂ ಶ್ರೀ ವರದ ಗೋಪಾಲದಾಸರ, ಶ್ರೀ ಜಗನ್ನಾಥದಾಸರ ವಚನಗಳಿವೆ.

ಶ್ರೀ ಅಡವಿಸ್ವಾಮಿಗಳು, ವರದಗೋಪಾಲ ವಿಠ್ಠಲರು, ತಂದೆ ಗೋಪಾಲವಿಠ್ಠಲರು, ಶ್ರೀ ಜಗನ್ನಾಥ ವಿಠ್ಠಲರು, ಅಭಿನವ ಜನಾರ್ದನ ವಿಠ್ಠಲರು, ತಂದೆ ವಾಸುದೇವ ವಿಠ್ಠಲರು, ಶೀವವಿಠ್ಠಲರು, ಶ್ರೀ ಗೋಪಾಲ ವಿಠ್ಠಲರು ಮುಂತಾದ ದಾಸ ವರೇಣ್ಯರು ಇವರನ್ನು ಬಹುವಾಗಿ ಕೊಂಡಾಡಿದ್ದಾರೆ.

ಇವರು ವೇಣೀಸೋಮಪುರದಲ್ಲಿ ಶಾಲಿವಾಹನ ಶಕ ೧೭೨೨ ರಲ್ಲಿ ಗೋಕುಲಾಷ್ಟಮಿಯಂದು ಹರಪದವನ್ನೈದಿದರು. ಇಲ್ಲಿ ಮೂರು ದಿನ ಶ್ರೀಗಳವರ ಆರಾಧನೆಯು ಮಹಾ ವೈಭವದಿಂದ ನೆರವೇರುವದು.



## ಸವಣೂರಿನ ಪವಾಡ ಪುರುಷರಾದ

# ಶ್ರೀ ಸತ್ಯಬೋಧರು

ಶ್ರೀ ಸತ್ಯಬೋಧೋ ನಿಜಕಾಮಧೇನುಃ।
ಮಾಯಾಮತಃ ಖಂಡನಚಂಡಭಾನುಃ॥
ದುರಂತಪಾಪ ಪ್ರದಹೇ ಕೃಶಾನುಃ।
ದೇಯಾನ್ ಮಮೇಷ್ಟಂ ಗುರುರಾಜ ಸೂನುಃ॥

ಉತ್ತರಾದಿಮಠದ ಉತ್ತರೋತ್ತರ ಉತ್ಕರ್ಷಕ್ಕೆ ಕಾರಣೀಭೂತರಾದ ಶಕ ಪುರುಷ ಶ್ರೀಗಳೆಂದರೆ ಶ್ರೀ ಸತ್ಯಬೋಧಸ್ವಾಮಿಗಳು. ಸರಕಾರೀಶಾಸನ ಕಾಗದ ಪತ್ರಗಳಲ್ಲಿ ಇಂದಿಗೂ ಉತ್ತರಾದಿಮಠಕ್ಕೆ ಸತ್ಯಬೋಧಮಠವೆಂದು ಉಲ್ಲೇಖವಿದ್ದದ್ದು ಕಂಡು ಬರುತ್ತದೆ. ಇವರ ಕಾಲದಲ್ಲಿ ಉತ್ತರಾದಿಮಠ, ಮಧ್ವಮತ, ವೈಷ್ಣವ ಧರ್ಮ ಈ ಮೂರು ಅಭ್ಯುನ್ನತಿಯ ಪರಾಕಾಷ್ಠೆಯನ್ನು ಮುಟ್ಟಿದವು.

ಇವರ ಪೂರ್ವಾಶ್ರಮದ ಹೆಸರು ರಾಮಾಚಾರ್ಯ. ತಂದೆಯ ಹೆಸರು ಹರಿಯಪ್ಪಾಚಾರ್ಯ, ತಾಯಿ ಅರಕಾಬಾಯಿ. ರಾಯಚೂರಿನ ಈ ಭಕ್ತ ದಂಪತಿಗಳ ಬಡ ಕುಟುಂಬವಲ್ಲಿ ಜನಿಸಿದ ರಾಮಾಚಾರ್ಯರಿಗೆ ಆಗಿನ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಪ್ರಿಯತೀರ್ಥರಲ್ಲಿ ವಿದ್ಯಾಧ್ಯಯನವಾಯಿತು. ಈ ಶಿಷ್ಯನ ಚತುಃಶಾಸ್ತ್ರಗಳಲ್ಲಿಯ ಚತುರಸ್ರ ಪಾಂಡಿತ್ಯ, ವಾದವೈದುಷ್ಯಗಳನ್ನು ಕಂಡು ಗುರುಗಳು ತಮ್ಮ ತರುವಾಯ ಉತ್ತರಾದಿಮಠಕ್ಕೆ ಉತ್ತರಾಧಿಕಾರಿಯಾಗಲಿಕ್ಕೆ ಇವರೇ ಉತ್ತಮಾಧಿಕಾರಯೆಂದು ಯೋಚಿಸಿದ್ದರು. ಇವರ ಧ್ಯಾನೋಪಾಸನೆಯಿಂದ ವರಾಹರೂಪಿಯಾದ ಶ್ರೀ ಹರಿಯು ಪ್ರಸನ್ನನಾಗಿ ಇವರಿಗೆ ವಿಶೇಷಾನುಗ್ರಹಗೈದದ್ದು ಶ್ರೀಗಳವರಿಗೂ ಗೊತ್ತಿದ್ದುದರಿಂದ ಅವರು ಇವರಿಗೇ ಸಂಸ್ಥಾನವನ್ನು ಒಪ್ಪಿಸಿ ಸತ್ಯಬೋಧರೆಂದು ನಾಮಕರಣ ಮಾಡಿದರು.

ಶ್ರೀ ಸತ್ಯಬೋಧರ ತಪೋಮಹಿಮೆ ಅಗಾಧವಾದದ್ದು. ಅವರ ಸಿದ್ಧಾಂತ ದೀಕ್ಷೆ ಅನನ್ಯಸಾಮಾನ್ಯವಾದದ್ದು. ಅವರು ಆಸೇತು ಹಿಮಾಚಲದವರೆಗೆ ಸಂಚಾರ ಮಾಡಿ ಮಧ್ವ ಸಿದ್ಧಾಂತದ ಜಯಭೇರಿಯನ್ನು ಭಾರತದ ತುಂಬ ಮೊಳಗಿಸಿ ಬಂದರು. ಧನದವುದವಿಂದ ಅಂಧರಾದ ಗಯಾವಾಳರು ವಿಷ್ಣು ಪಾದದ ವ್ಯಾಪಾರ ಮಾಡುವುದನ್ನು ಕಂಡು ಶ್ರೀಗಳವರು ಅಲ್ಲಿಯೇ "ರಾಮಗಯಾ" ವನ್ನು ನಿರ್ಮಿಸಿ

ಎಲ್ಲರೂ ಅಲ್ಲಿಯೇ ರಾಮಪಾದದಲ್ಲಿ ಪಿಂಡಪ್ರದಾನ ಮಾಡುವಂತೆ ಮಾಡಿ ಗಯಾವಾಡರ ಕಣ್ಣು ತೆಗೆಯಿಸಿದರು. ಅದ್ವೈತ ಮತದ ಕೇಂದ್ರ ಸ್ಥಳದಂತಿದ್ದ ಕಾಶಿಯ ದುರ್ಗಾಘಟ್ಟದಲ್ಲಿ ಒಂದು ಮಾಧ್ವ ವಿದ್ಯಾಪೀಠವನ್ನು ಸ್ಥಾಪಿಸಿ ಉತ್ತರ ಹಿಂದುಸ್ಥಾನದಲ್ಲೆಲ್ಲ ಮಧ್ವಮತವು ಪ್ರಸಾರ ಹೊಂದುವಂತೆ ಮಾಡಿದರು. ಆದರಲ್ಲಿ ದಕ್ಷಿಣದಲ್ಲಿಯೂ ತಂಜಾವೂರಿನ ಸೇತು ಗೋಸಾಯಿ ಮುಂತಾದ ಅದ್ವೈತ ಮತದ ದಿಗ್ದಂತಿ ಪಂಡಿತರ ವಾಗ್ಬಂಧನವನ್ನು ಮಾಡಿ ಅವರಿಂದ ಜಯ ಪತ್ರ, ಪ್ರಣಾಮ ಪತ್ರಗಳನ್ನು ದೊರಕಿಸಿ ಮಠದ ಹಾಗೂ ಮತದ ಮಹತಿಯನ್ನು ಮೆರೆದರು.

ಆಗಿನ ಕಾಲದ ದೊಡ್ಡ ದೊಡ್ಡ ಮಹಾರಾಜರಲ್ಲಿಯ ಕಲಹ ಕಲಾಪಗಳನ್ನು ನಿವಾರಿಸಿ ಸಾಮಾಜಿಕ ಸುವ್ಯವಸ್ಥೆಯನ್ನು ಕಾಪಾಡಿದ ಶಾಂತಿದೂತರೆಂದು ಇತಿಹಾಸದಲ್ಲಿ ಅವರ ಉಲ್ಲೇಖ ಬರುತ್ತದೆ. ವೈದಿಕ ವಿದ್ಯೆಯಂತೆಯೇ ಲೌಕಿಕದಲ್ಲಿಯೂ ಅವರಿಗೆ ಅಸಾಧಾಧಾರಣ ಚಾತುರ್ಯವಿದ್ದಿತು. ಅಂತೆಯೇ ಅನೇಕ ಸಂಸ್ಥಾನಿಕರು ಸಂಕಟಕಾಲದಲ್ಲಿ ಸಂಧಾನ ಸಮಾಧಾನಗಳಿಗಾಗಿ ಈ ಸ್ವಾಮಿಗಳವರಿಗೇ ಶರಣು ಬರುತ್ತಿದ್ದರು. ಇವರಂತೆ ಬೇರೆ ಬೇರೆ ಮಠಗಳಲ್ಲಿಯ ಗುರು ಶಿಷ್ಯ ಸ್ವಾಮಿಗಳ ಮನಸ್ತಾಪಗಳನ್ನೂ ಸತ್ಯಬೋಧರು ಶಮನ ಮಾಡಿದ್ದುಂಟು.

ಪೂನಾ–ಬೆಂಗಳೂರ ರೈಲ ಮಾರ್ಗದಲ್ಲಿ ಹುಬ್ಬಳ್ಳಿ-ಹರಿಹರಗಳ ನಡುವೆ ಸವಣೂರ ಎಂಬ ಚಿಕ್ಕ ಸ್ಟೇಶನ್ನು ಬರುತ್ತದೆ. ಹಿಂದೆ ಮುಸಲ್ಮಾನ ನವಾಬರಿಂದ ಆಳಲ್ಪಡುತ್ತಿದ್ದ ಈ ಸವಣೂರ ಗ್ರಾಮದಲ್ಲಿ ಜಗದ್ಗುರುಗಳಾದ ಶ್ರೀ ಸತ್ಯಬೋಧರ ವೃಂದಾವನವಿದ್ದು ಪ್ರತಿ ವರ್ಷ ಹೋಳೀ ಹುಣ್ಣಿಮೆಯಿಂದ ಮೂರು ದಿನ ಈ ಗುರುಗಳ ಆರಾಧನೆಯು ಒಳ್ಳೇ ವಿಜೃಂಭಣೆಯಿಂದ ನಡೆಯುತ್ತದೆ.

ಶ್ರೀ ರಾಘವೇಂದ್ರ ಶ್ರೀಗಳವರಂತೆ ಅವರು ಇದ್ದಾಗಲೂ ವೃಂದಾವನಪ್ರವೇಶಾನಂತರವೂ ಭಕ್ತರ ಇಷ್ಟಾರ್ಥಗಳನ್ನು ಕರುಣಿಸಿ, ಅನರ್ಥಗಳನ್ನು ಪರಿಹರಿಸಿ, ಕಲಿಯುಗದ ಕಲ್ಪವೃಕ್ಷರೆಂದು ಪ್ರಸಿದ್ಧರಾಗಿದ್ದಾರೆ. ದೈವೀ ಸಂಪತ್ತಿಯ ಮೇಲ್ಮೆಯನ್ನು ಪ್ರದರ್ಶಿಸುವ ಪವಾಡ ಪುರುಷರಲ್ಲಿ ಸತ್ಯಬೋಧರು ವರಿಷ್ಠರಾಗಿದ್ದಾರೆ. ಆದುದರಿಂದಲೇ ಸವಣೂರಿನ ಮುಸಲ್ಮಾನ ನವಾಬನೂ ಇವರ ದಾಸಾನುದಾಸನಾದ.

ಇವರನ್ನು ಪರೀಕ್ಷಿಸಬೇಕೆಂದು ನೈವೇದ್ಯಕ್ಕೆ ತಂದಿಟ್ಟ ಮಾಂಸಖಂಡಗಳೆಲ್ಲ ಇವರ ಶಂಖೋದಕ ಪ್ರೋಕ್ಷಣೆಯಿಂದ ಹಣ್ಣು–ಹೂ–ಕಾಯಿಗಳಾದವು. ಕುಹಕಿಗಳು ಇವರಿಗೆ ವಿಷ ಹಾಕಿದರೂ ಶ್ರೀ ಮೂಲರಾಮದೇವರ ಅನುಗ್ರಹದಿಂದ ಅದು ಅಮೃತವಾಗಿ— "ವಿಷಮಪ್ಯಮೃತಂ ಕ್ವಚಿದ್ಭವೇತ್" ಎಂಬ ಉಕ್ತಿ ಇವರಲ್ಲಿ ಚರಿತಾರ್ಥ

ವಾಯಿತು. ನಡು ರಾತ್ರಿಯಲ್ಲಿ ಸುಡುವ ಸೂರ್ಯನ ದರ್ಶನ ಮಾಡಿಸಿದ ಮಹ ನೀಯರಿವರು. ಇವರು ಇದ್ದಲ್ಲಿಯೇ ಸಿದ್ಧಗಂಗೆಯು ಹರಿದು ಬಂದು ಇವರನ್ನು ಸ್ನಾನ ಮಾಡಿಸಿ ತಾನು ಪಾವನೆಯಾದಳು. ಕೋತಿ ಜನ್ಮ ಬಂದ ಕೋನೇರಿ ಆಚಾರ್ಯ ರಿಗೆ ತೀರ್ಥಪ್ರಾಶನ ಮಾಡಿಸಿ ಮುಕುತಿ ದಾರಿ ತೋರಿದರು. ಶ್ರೀ ಮೂಲರಾಮ ದೇವರ ಹೆಸರಿನಿಂದಲೇ ಒಂದು ಟಂಕ ಸಾಲೆಯನ್ನು ಹಾಕಿಸಿ ಬಡ ಬ್ರಾಹ್ಮಣರಿಗೆಲ್ಲ ಅದರಲ್ಲಿಯೂ ವಿದ್ವಾಂಸರಿಗೆ ಬೇಕಾದಷ್ಟು ಬಂಗಾರ ನಾಣ್ಯ, ಹೊಲಗಳನ್ನಿತ್ತು ಅವ ರಿಗೆ ವೃತ್ತಿ ಒದಗಿಸಿಕೊಟ್ಟ ಯತಿರಾಜರೆಂದರೆ ಶ್ರೀ ಸತ್ಯಬೋಧರು. ಅವರ ಮಹಿಮೆ ಹೇಳಿದಷ್ಟೂ ಕಡಿಮೆ. ಆದರೆ ಇಲ್ಲಿ ಸ್ಥಳಾಭಾವವಿದ್ದುದರಿಂದ ಇಲ್ಲಿಗೇ ಮುಗಿಸುವೆವು.

ನೈವೇದ್ಯಗ ವಿಷಂ ರಾಮೇ ವೀಕ್ಷ್ಯ ತದ್ಭುಕ್ತಿ ಭಾಗ್ ಗುರುಃ ।
ಯೋ ದರ್ಶಯದ್ ರವಿಂ ರಾತ್ರೌ ಸತ್ಯಬೋಧೋsಸ್ತು ನೋ ಮುದೇ ॥



### ರಿತ್ತಿಯ ಋಷಿಪುಂಗವರಾದ

# ಶ್ರೀ ಧೀರೇಂದ್ರ ತೀರ್ಥರು

ವೇದಾಂತ ವಿದ್ಯಾ ಸಾಮ್ರಾಜ್ಯವನ್ನು ವರದೇಂದ್ರರು ಆಳುತ್ತಿದ್ದ ಕಾಲ. ವರದೇಂದ್ರರ ತಪೋ ವಿದ್ಯಾ ವೈರಾಗ್ಯ ಮುಂತಾದ ಗುಣಗಾಥೆಯನ್ನು ಕೇಳಿದ ಪೇಶ್ವೇ ಬಾಜೀರಾಯ ಅವರನ್ನು ಪುಣೆಕ್ಕೆ ಆದರದಿಂದ ಬರಮಾಡಿಕೊಂಡ. ಪೇಶ್ವೆಯವರ ಆಸ್ಥಾನದಲ್ಲಿ ರಾಮಾಶಾಸ್ತ್ರಿಗಳೆಂಬ ದಿಗ್ದಂತಿ ಪಂಡಿತರು ಗುರುಸ್ಥಾನದಲ್ಲಿದ್ದರು. ಬಾಜೀರಾಯನು ಓರ್ವ ವೈಷ್ಣವ ಯತಿಗೆ ಇಷ್ಟು ನಿಷ್ಠನಾಗಿ ನಡೆದುಕೊಳ್ಳುವದು ಇಷ್ಟವಿರಲಿಲ್ಲ. ಅವನು ಪೇಶವಾಯೀ ಪುಣ್ಯ ಭೂಮಿಯಲ್ಲಿ ಈ ವೇದಾಂತಕೇಸರಿಯನ್ನು ಕೆಣಕಿ ಕಣಕ್ಕಿಳಿದನು. ವೇದಾಂತ ಕಾಂತಾರದಲ್ಲಿ ಅಕುಂಠ ಕಂಠೀರವನಂತಿದ್ದ ಶ್ರೀ ವರದೇಂದ್ರರು ಸಿಂಹದ ಗವಿಯಲ್ಲಿಯೇ ಹೊಕ್ಕಂತೆ ರಾಮಾಶಾಸ್ತ್ರಿಯ ಮನೆಯಲ್ಲಿಯೇ ಪ್ರವೇಶಿಸಿ ಅವರ ಮತ ಮಂದಿರವನ್ನು ವಿಧ್ವಂಸಗೊಳಿಸಹತ್ತಿದರು. ಸ್ವಾಮಿಗಳು ಸೋತರೆ ತಮ್ಮ ಬಿರುದುಬಾವಲಿ, ಮಾನಮರ್ಯಾದೆಗಳನ್ನೆಲ್ಲ ಶಾಸ್ತ್ರಿಗಳಿಗೆ ಬಿಟ್ಟು ಕೊಡಬೇಕೆಂದೂ, ಶಾಸ್ತ್ರಿಗಳೇ ಸೋತರೆ ವಾಕ್ಯಾರ್ಥ ನಡೆದ ಅವರ ಮನೆಯನ್ನೇ ಶ್ರೀ ಮಠಕ್ಕೆ ಬಿಟ್ಟುಕೊಡಬೇಕೆಂದೂ ಕಟ್ಟು ಕಟ್ಟಳೆಯಾಗಿದ್ದವು. ಇವರಂತೆ ತುರುಸಿನ ವಾಕ್ಯಾರ್ಥ ಬಿರುಸಾಗಿಯೇ ಸಾಗಿತ್ತು. ಶಾಸ್ತ್ರಿಗಳೂ ಸಾಧಾರಣರಲ್ಲ. ನ್ಯಾಯ ವ್ಯಾಕರಣಾದಿ ಚತುಃಶಾಸ್ತ್ರಗಳನ್ನು ಅರೆದು ಕುಡಿದ ಕಥಕಕಲಾ ಕೋವಿದರು. ನೈಯಾಯಿಕ ಪ್ರಣಾಲಿಕೆಯಲ್ಲಿ ವಾಕ್ಯಾರ್ಥದ ವೇಗ ವಾಹಿನಿಯನ್ನು ಹರಿಬಿಟ್ಟು, ಪರಿಷ್ಕಾರದ ಪ್ರಾಕಾರ ಕಟ್ಟಿ, ಅರ್ಥದಲ್ಲಿ ಗೆಲ್ಲಲಾಗದ್ದನ್ನು ಶಬ್ದದ ಇಕ್ಕಳದಲ್ಲಿ ವಾಚಾಲತೆಯ ವೀಚಿ ಜಾಲದಿಂದ ಹಿಡಿಯಲೆತ್ನಿಸುತ್ತಿದ್ದರು. ಅಷ್ಟರಲ್ಲಿ ಶ್ರೀ ವಾದೀಂದ್ರ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರಾದ ಪಂಡಿತಪ್ರಕಾಂಡ ಜಯರಾಮಾಚಾರ್ಯರು ವಾದ ರಂಗಸ್ಥಳಕ್ಕೆ ಆಕಸ್ಮಿಕವಾಗಿ ಒದಗಿ ಬಂದರು. ಅವರ ಆಗಮನದಿಂದ ವಾದರಂಗಕ್ಕೆ ಬೇರೆಯೇ ರಂಗು ಬಂದಿತು. ಅವರ ತುಟಿತಟದಲ್ಲಿ ತರ್ಕ ತಾಂಡವವಾಡುತ್ತಿದ್ದರೆ ಹೃದಯ ವೇದಾಂತ ಚಂದ್ರಿಕೆಯ ಚಂದ್ರಕಾಂತವಾಗಿದ್ದಿತು. ಅವರ ವಾಣಿಯಲ್ಲಿ ನ್ಯಾಯಾಮೃತ ಲಹರಿಯಾಗಿ ತರಂಗಿಸುತ್ತಿತ್ತು. ಅವರು ಬಂದದ್ದರಿಂದ ಸಮರ್ಥರಾದ ಶ್ರೀಗಳವರಿಗೆ ಮತ್ತಿಷ್ಟು ಬಲ ಬಂದಂತಾಯಿತು. ಶಿಷ್ಯರಿಗೆ ಕೀರ್ತಿ ಬರಲೆಂದು ವರದೇಂದ್ರರು ಜಯರಾಮಾಚಾರ್ಯರಿಗೆ ಮಾತಾಡಲು ಅವಕಾಶ ಕೊಟ್ಟರು. ಆ ಶ್ರೀಪಾದಪುತ್ರರು ಪ್ರತಿವಾದಿಗಳ ಮತಮೂಲಗಳ ತಳಬುಡಗಳನ್ನೆಲ್ಲ

ತಲಕಾಡಿ ಅವರು ಮಂಡಿಸಿದ ಮಾತಿನ ಮಳಲ ಗೋಪುರಗಳೆಲ್ಲ ತಾವಾಗಿ ಹೊರಳಿ ಉರುಳುವಂತೆ ಮಾಡಿದರು. ಅಂದು ಜಯರಾಮಾಚಾರ್ಯರಿಂದ ರಾಮದೇವರ ಸಂಸ್ಥಾನಕ್ಕೆ ಜಯ ಬಂದಿತು. ರಾಮಾಶಾಸ್ತ್ರಿಗಳು ಸೋತು ಮೊದಲಿನ ಮಾತಿನಂತೆ ಆ ಮನೆಯನ್ನು ಶ್ರೀ ಮಠಕ್ಕೆ ಬರೆದುಕೊಟ್ಟು ಕಾಶಿಗೆ ಹೊರಟು ಹೋದರು.

ಈಗಲೂ ಆ ಮನೆಯು ರಾಯರ ಮಠದ ಅಧೀನದಲ್ಲಿದ್ದು ಅಲ್ಲಿಯೇ ವರದೇಂದ್ರರ ವೃಂದಾನವಿದೆ.

ಜಯರಾಮಾಚಾರ್ಯರ ಅದ್ಭುತ ಪಾಂಡಿತ್ಯ ಅವರಲ್ಲಿರುವ ಗುರುರಾಜರ ನಿರವಗ್ರಹ ಅನುಗ್ರಹಗಳನ್ನು ಕಂಡು ಸುಪ್ರೀತರಾದ ರಾಯರ ಮಠದ ಮೂವರು ಸ್ವಾಮಿಗಳು ಅವರಿಗೆಆಶ್ರಮ ಕೊಡಬೇಕೆಂದು ಹವಣಿಸಿದರು.

ಆದರೆ ನವತಾರುಣ್ಯ, ಸರ್ವ ಶಾಸ್ತ್ರ ಪ್ರಾವೀಣ್ಯ, ಲೌಕಿಕದಲ್ಲಿಯೂ ನೈಪುಣ್ಯ, ಮಠ–ಸಂಸ್ಥಾನ–ಸರಕಾರ–ಸಮಾಜದಲ್ಲಿರುವ ಮಹಾಗೌರವ, ಅನುಕೂಲ ದಾಂಪತ್ಯ, ತುಂಬಿದ ಮನೆ— "ಧನ್ಯೋ ಗೃಹಸ್ಥಾಶ್ರಮಃ" ಎಂಬತಿದ್ದ ಗಾರ್ಹಸ್ಥ ಜೀವನ ಬಿಟ್ಟು ಮಂಡೆ ಬೋಳಿಸಿ ದಂಡಿಯಾಗಲಿಕ್ಕೆ ಏಕೋ ಅವರ ಮನ ಹಿಂಜರಿಯುತ್ತಿತ್ತು.

ಕೊನೆಗೆ ಅವರೊಮ್ಮೆ ಕುಂಭಕೋಣಕ್ಕೆ ಬಂದಾಗ ವಿಜಯೀಂದ್ರರ ವೃಂದಾವನದಿಂದ ಪ್ರಬಲ ಪ್ರೇರಣೆಯಾಯಿತು. ಅಕ್ಕಸಾಲಿಗ ಬೇರೆ ಕಿವಿ ಚುಚ್ಚಬೇಕಾಯಿತು. "ಸಂಸ್ಥಾನ ಕೊಡುತ್ತೇವೆಂದಾಗ ಕೊಡಬೇಡಿ"ಎಂದವರು ಕೊಡುವವರಿಲ್ಲದಾಗ ತಾವೇ ಸರ್ವಸಂಗ ಪರಿತ್ಯಾಗ ಮಾಡಿ ವೃಂದಾವನದೆದುರೇ ಆಶ್ರಮ ಸ್ವೀಕರಿಸಿದರು.

"ಯದಾ ವಿರಕ್ತಃ ಪುರುಷಃ ಪ್ರಜಾಯತೆ ತದೈವ ಸನ್ಯಾಸ ವಿಧಿಃ ಶ್ರುತೌ ಶ್ರುತಃ"

ಇದನ್ನು ಕೇಳಿದ ಭುವನೇಂದ್ರತೀರ್ಥರು ಧಾವಿಸಿ ಬಂದು ಅವರಿಗೆ ಸಂಸ್ಥಾನ ಒಪ್ಪಿಸಿದರು. ಅದನ್ನು ಸ್ವೀಕರಿಸಿ ಕೆಲವು ದಿನ ರಾಮದೇವರನ್ನು ಪೂಜಿಸಿ ಮತ್ತೆ ಆ ಸಂಸ್ಥಾನವನ್ನು ಭುವನೇಂದ್ರರಿಗೆ ಒಪ್ಪಿಸಿಬಿಟ್ಟರು. ಇದರಿಂದ ಶ್ರೀ ಧೀರೇಂದ್ರರಲ್ಲಿ ತ್ಯಾಗ, ವೈರಾಗ್ಯಗಳು ಎಷ್ಟಿದ್ದವೆಂಬುದು ವ್ಯಕ್ತವಾಗುತ್ತದೆ. ಭುವನೇಂದ್ರರು ಧೀರೇಂದ್ರರಲ್ಲಿಯೇ ಸುಧಾದಿ ಗ್ರಂಥಗಳನ್ನು ಗುರುತ್ವಾಭಿಮಾನ ಬಿಟ್ಟು, ವ್ಯಾಸಂಗ ಮಾಡಿದರು. ಇತರ ಸಂಸ್ಥಾನಗಳಲ್ಲಿ ಮಠಾಧಿಪತ್ಯಕ್ಕಾಗಿ ಗುರು–ಶಿಷ್ಯರು ಕಲಹ ಮಾಡುತ್ತಿದ್ದರೆ ರಾಮ–ಭರತರಂತೆ ಅಧಿಕಾರ, ಐಶ್ವರ್ಯ ತ್ಯಾಗಕ್ಕಾಗಿ ಈ ಇಬ್ಬರು ಸ್ವಾಮಿಗಳು ಪ್ರಣಯಕಲಹ ಮಾಡಿದ್ದು ಪೀಠಾಧಿಪತಿಗಳ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಲ್ಲಿ ಬರೆದಿಡುವಂತಹದಾಗಿದೆ. ವೀತರಾಗರಾದ ಧೀರೇಂದ್ರರು

ಕೊನೆಗೆ ಸಂಸ್ಥಾನದ ಹೊಣೆಯನ್ನೆಲ್ಲ ಭುವನೇಂದ್ರರ ಕೊರಳಿಗೆ ಕಟ್ಟಿ ತಾವು ರಿತ್ತಿಯಲ್ಲಿ ತಪಸ್ಸು ಮಾಡುತ್ತ ಕುಳಿತುಬಿಟ್ಟರು.

ವಿಶಾಲ ಹೃದಯದ ಧೀರೇಂದ್ರರು— ಜಗನ್ನಾಥದಾಸರು, ಶ್ರೀ ಸತ್ಯಬೋಧರು ವಿಷ್ಣುತೀರ್ಥರು ಮುಂತಾದ ಮಹನೀಯರೊಂದಿಗೆ ಸೇರಿ ಶ್ರೀ ಹರಿಯ ಧ್ಯಾನ, ಗಾನ, ಸಂಕೀರ್ತನ–ಸಮಾಧಿಯಲ್ಲಿ ಲೀನರಾಗುತ್ತಿದ್ದರಂತೆ.

ಸಾಕ್ಷಾತ್ ರಾಯರು ಶ್ರೀ ಧೀರೇಂದ್ರರಲ್ಲಿ ಸ್ವಯಂ ಸನ್ನಿಹಿತರಾಗಿ ಭಕ್ತರ ಅಭೀಷ್ಟಗಳನ್ನು ಪೂರೈಸುತ್ತಲಿದ್ದಾರೆ. ಪ್ರತಿ ಮಂತ್ರಾಲಯದಂತೆ ಇಂದಿಗೂ ರಿತ್ತಿಯಲ್ಲಿ ಸೇವಾಸೂತ್ರಗಳು ನಡೆಯುವದನ್ನು ನಾವು ಕಾಣುತ್ತೇವೆ.

ಅವರು ತಮ್ಮ ಹಿರಿಯರಾದ ವಾದೀಂದ್ರರಿಂದ ರಚಿತವಾದ ಗುರುಗುಣ ಸ್ತವಕ್ಕೆ ವ್ಯಾಖ್ಯಾನ, ಮನ್ಯುಸೂಕ್ತಕ್ಕೆ ನರಸಿಂಹಪರ ಭಾಷ್ಯ, ಪುರುಷ ಸೂಕ್ತ, ಶ್ರೀ ಸೂಕ್ತ ಅಂಭರಣೀ ಸೂಕ್ತಗಳಿಗೆ ವ್ಯಾಖ್ಯಾನ ಮಾಡಿದ್ದಾರೆ. ವಿಷಯವಾಕ್ಯ ಸಂಗ್ರಹ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

ಇವರ ಆರಾಧನೆ ಫಾಲ್ಗುಣ ಶುದ್ಧ ತ್ರಯೋದಶಿ ದಿನವಾಗುತ್ತವೆ.

ಧರಣೀಮಂಡಲ ವಿಖ್ಯಾತಂ ಧೈರ್ಯಾದಿ ಗುಣ ಬೃಂಹಿತಂ ।
ಧಿಕ್ಕೃತಾ ಶೇಷವಾದೀಭಂ ಧೀರಸಿಂಹ ಗುರುಂ ಭಜೆ ॥



## ಶ್ರೀಮದ್ಭಾಗವತ ಸಾರೋದ್ಧಾರ ಕರ್ತೃಗಳಾದ

# ಶ್ರೀ ವಿಷ್ಣುತೀರ್ಥ ಸ್ವಾಮಿಗಳು

## ( ಆರಣ್ಯಕಾಚಾರ್ಯರು )

"ಯಸ್ಯ ಪ್ರಚಂಡತಪಸಾ ಶ್ರುತಿಗೀತವೃತ್ತ್ಯೈಸ್ತುಷ್ಟೋ ಹರಿಃ ಕಿಲ ವಶಂ ಪದತಾಮವಾಪ । ಶ್ರೀ ಮಧ್ವಸಮ್ಮತ ಪಯೋನಿಧಿ ಪೂರ್ಣಚಂದ್ರಃ ಶ್ರೀ ವಿಷ್ಣು ತೀರ್ಥ ಮುನಿರಾಣ್ಮ್ರದಮಾತನೋತು ॥ "

ಶ್ರೀ ವಿಷ್ಣುತೀರ್ಥರಂತಹ ಮಹಾತ್ಮರು ಜನಿಸುವದು ವಿರಳ. ಇಂಥ ಉತ್ತಮ ಶ್ಲೋಕರ ಗುಣಾನುಕಥನವು ಪರಮ ಶ್ರೇಯಸ್ಸಿಗೆ ಕಾರಣವಾಗಿದೆ. ಇವರ ಚರಿತ್ರೆಯು ಜನತೆಗೆ ಮಾರ್ಗದರ್ಶಕವೂ ಆಗಿದೆ.

ಶ್ರೀ ವಿಷ್ಣುತೀರ್ಥರು ಕ್ರಿ. ಶ. ೧೭೫೬ ಸಂವತ್ಸರ ಶ್ರಾವಣ ಕೃಷ್ಣ ಅಷ್ಟಮಿದಿನ ಸವಣೂರ ಪ್ರಾಂತ ಸಿದ್ದಾಪೂರ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಶ್ರೀಬಾಬಾಚಾರ್ಯರು ತಾಯಿ ಭಾಗೀರಥೀಬಾಯಿ. ಈ ದಂಪತಿಗಳು ಮಹಾ ಸದಾಚಾರ ಸಂಪನ್ನರೂ ಆಚಾರ ನಿಷ್ಠರೂ ಆಗಿದ್ದರು. ಈ ದಂಪತಿಗಳಿಗೆ ಬಹುದಿನ ಮಕ್ಕಳಾಗದ ಕಾರಣ ಶ್ರೀ ಜಯತೀರ್ಥ (ಟೀಕಾಚಾರ್ಯ)ರ ಸೇವೆ ಮಾಡಿದರು. ಶ್ರೀ ಜಯತೀರ್ಥರ ಚರಣಾನುಗ್ರಹದಿಂದ ಹುಟ್ಟಿದ ಕಾರಣ ಇವರಿಗೆ ಜಯತೀರ್ಥ ಎಂದು ನಾಮಕರಣ ಮಾಡಿದರು. ಜನ್ಮಾಷ್ಟಮಕ್ಕೆ ಉಪನಯನಾದಿಗಳು ಜರುಗಿದವು.

ಶ್ರೀ ಜಯತೀರ್ಥರ ನಾಮ ಇಟ್ಟುಕೊಂಡದ್ದರಿಂದ ಇವರು ಮುಂದೆ ವೈರಾಗ್ಯಶಾಲಿಗಳಾಗುತ್ತಾರೆ. ಪೇಟೇ ಸೋಮಪುರದ ವಜೀ ಆಚಾರ್ಯರಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸಮಾಡಿ ನ್ಯಾಯ ವೇದಾಂತಗಳಲ್ಲಿ ಘನಪಂಡಿತರಾದರು. ಇವರ ಗುರುಗಳಾದ ಶ್ರೀ ವಜೀ ಆಚಾರ್ಯರ ಜೀವನವೂ ಶ್ರೀ ವಿಷ್ಣುತೀರ್ಥರ ಜೀವನವೂ ಒಂದೇ ರೀತಿಯಾಗಿರುವದು ಆಶ್ಚರ್ಯಕರವಾಗಿದೆ. ಶ್ರೀ ವಜೀ ಆಚಾರ್ಯರು ಗೃಹಸ್ಥಾಶ್ರಮಿಗಳಾಗಿ ಪಾಠ ಪ್ರವಚನ ನಿರತರಾಗಿ ಮುಂದೆ ಶ್ರೀ ರಾಘವೇಂದ್ರ ಸ್ವಾಮಿಗಳ ಮಠಾ ಪೀಠಸ್ಥರಾದ ಶ್ರೀ ಭುವನೇಂದ್ರರಿಂದ ಸನ್ಯಾಸ ಸ್ವೀಕಾರ ಮಾಡಿ "ವ್ಯಾಸತತ್ವಜ್ಞ" ರೆಂದು ನಾಮಕರಣ ಹೊಂದಿ ಮಠ, ಮಾನ್ಯಗಳನ್ನು

ತೊರೆದು ಗ್ರಂಥ ರಚನೆ ಮಾಡಿ ಅಪರೋಕ್ಷಜ್ಞಾನಿಗಳಾಗಿ ವೃಂದಾವನಸ್ಥರಾದರು. ಹೀಗೆಯೇ ವಿಷ್ಣುತೀರ್ಥರ ಜೀವನದಲ್ಲಿಯೂ ಜರುಗತ್ತದೆ.

ಶ್ರೀ ವಿಷ್ಣುತೀರ್ಥರು ಏಜೀ ಆಚಾರ್ಯರಲ್ಲಿ ವ್ಯಾಸಂಗಮಾಡಿ ಗುರುಪುತ್ರರಿಗೆ ಕಟ್ಟಿನಜ್ವರಹರಣಕ್ಕಾಗಿ ಗುರ್ವಾಜ್ಞಾ ಪ್ರಕಾರ ಒಂದು ಸಪ್ತಾಹ ನಿರಾಹಾರದಿಂದ ನೃಸಿಂಹ ಜಪ ಮಂತ್ರಿಸಿ ಗುರುದಕ್ಷಿಣಾ ಸಮರ್ಪಿಸಿದ ಮಹಾನುಭಾವರು.

ಮುಂದೆ ಗೃಹಸ್ಥಾಶ್ರಮಿಗಳಾಗಿ ತಮ್ಮಲ್ಲಿಯೇ ಶಿಷ್ಯರಿಗೆ ಆದರದಿಂದ ಪಾಠ ಪ್ರವಚನ ಮಾಡಿಸುತ್ತಲಿದ್ದರು. ದೇವರು ತಕ್ಕಮಟ್ಟಿಗೆ ಐಶ್ವರ್ಯ ಕೊಟ್ಟದ್ದರಿಂದ ಯಾವದಕ್ಕೂ ಕೊರತೆಯಿಲ್ಲದೆ ಹೆಂಡರು ಮಕ್ಕಳು ಕೂಡಿ ಸಂಸಾರದಲ್ಲಿ ತಲ್ಲೀನ ರಾಗಿದ್ದರು.

ಒಂದು ದಿನ ಹಂಸ ತೂಲಿಕಾತಲ್ಪದಲ್ಲಿ ಮಲಗಿಕೊಂಡು ತಮ್ಮ ಪತ್ನಿಯ ಕೈಯಿಂದ ಪಾದ ಸಂವಾಹನ ಮಾಡಿಸಿಕೊಳ್ಳುತ್ತಲಿದ್ದ ಸಮಯದಲ್ಲಿ—

"ಮಂಚ ಬಾರದು ಮಡದಿ ಬಾರಳು ಕಂಚು ಕನ್ನಡಿ ಬಾರದು ।
ಸಂಚಿತಾರ್ಥದ ದ್ರವ್ಯಬಾರದು ಮುಂಚೆ ಮಾಡಿರಿ ಧರ್ಮವಾ"

ಎಂಬ ಪದವು ಬೀದಿ ದಾಸಯ್ಯನಿಂದ ಹಾಡಿದ್ದು ಕೇಳಿ ಬಂತು. ಶ್ರೀ ಪುರಂದರ ದಾಸರ ಈ ಪದವು ಶ್ರೀ ವಿಷ್ಣು ತೀರ್ಥರ ಜೀವನ ದಿಶೆಯನ್ನೇ ಬದಲು ಮಾಡಿತು. ತತ್‌ಕ್ಷಣವೇ ಶ್ರೀ ಜಯತೀರ್ಥಾಚಾರ್ಯರು ವೈರಾಗ್ಯ ತಾಳಿ ಪತ್ನಿ ಪುತ್ರ ಗೃಹಾದಿಗಳನ್ನು ತ್ಯಾಗ ಮಾಡಿದರು, ಮಳಖೇಡಕ್ಕೆ ಹೋಗಿ ಸೇವೆಯನ್ನು ಮಾಡಬೇಕೆಂದು ಪ್ರಯಾಣ ಮಾಡಿದರು. ಎರಡು ಸಾರೆ ಪ್ರಯತ್ನಿಸಿದರೂ ದಾರಿ ಯಲ್ಲಿ ದೊಡ್ಡ ಸರ್ಪವು ಅಡ್ಡಗಟ್ಟಿದ್ದರಿಂದ ಅಪಶಕುನವೆಂದು ಭಾವಿಸಿ ರಾತ್ರಿ ಮಲ ಗಿದರು. ಆ ರಾತ್ರಿ ಈ ರೀತಿ ಸ್ವಪ್ನವಾಯಿತು.

'ವೃಥಾ ಪರ್ಯಟನದಿಂದ ಏನು ಪ್ರಯೋಜನ?' ಎಂದು ಕೇಳಿದಂತಾಗಿ

"ಸ್ವಾಧ್ಯಾಯಾನ್ ಮಾ ಪ್ರಮದಃ ।
ಸ್ವಾಧ್ಯಾಯ ಪ್ರವಚನ ಏವೇತಿ ।

ನಾಕೋ ಮೌದ್ಗಲ್ಯಃ ತದ್ಧಿ ತಪಃ ತದ್ಧಿ ತಪಃ"

ಎಂದು ಹೇಳಿದಂತಾಯಿತು.

ಮುಂದೆ ವಾನಪ್ರಸ್ಥಾಶ್ರಮ ಸ್ವೀಕಾರ ಮಾಡಿ ಮಲಾಪಹಾರಿಣೀ ತೀರದಲ್ಲಿ ರುವ ಮುನವಳ್ಳಿ ಗ್ರಾಮದಲ್ಲಿ ವಾಸ ಮಾಡಿಕೊಂಡು ಶಿಷ್ಯರಿಗೆ ಪಾಠ ಪ್ರವಚನ ಮಾಡಿಸುತ್ತಿದ್ದರು.

ಮೊದಲು ಕೆಲವು ದಿನ ಇವರ ಶಿಷ್ಯರಾದ ಮೊರಬ ಮನೆತನದ ಮೂಲ ಪುರುಷರಾದ ರಾಮಾಚಾರ್ಯ ಮೊರಬರು ಇವರನ್ನು ತಮ್ಮಲ್ಲಿಟ್ಟುಕೊಂಡಿದ್ದರೆಂದು ತಿಳಿದು ಬರುತ್ತದೆ. ಇವರು ಮುಂದೆ ಮುನವಳ್ಳಿಗೆ ಪ್ರಯಾಣಬೆಳೆಸಿದರು.

ಮುನವಳ್ಳಿಯಲ್ಲಿ ನಿತ್ಯ ಕರ್ಮಾನುಷ್ಠಾನ ಮಾಡುತ್ತ ಪ್ರತಿ ದಿನ ಸುಮಧ್ವ ವಿಜಯ ಪೂರ್ತಿ ಪಾರಾಯಣದಿಂದ ಸಂಚಾರ ಮಾಡಿ ಮಧುಕರೀ ವೃತ್ತಿಯಿಂದ ಶಿಷ್ಯರನ್ನು ಪೋಷಿಸಿ ೧೨ ಆವರ್ತಿ ಶ್ರೀಮನ್ನ್ಯಾಯಸುಧಾ ಪಾಠ ಪ್ರವಚನ ಜರುಗಿಸಿ ಮಂಗಳ ಮಾಡಿ ಶ್ರೀ ಹರಿಗೆ ಸಮರ್ಪಣ ಮಾಡಿದರು. ಇವರಲ್ಲಿ ಶಿಷ್ಯ ಸಂಪತ್ತು ಹೆಚ್ಚಾಗಿತ್ತು. ಇವರ ಮುಖ್ಯ ಶಿಷ್ಯರು—ರಾಮಾಚಾರ್ಯ ಮೊರಬ, ಬಾಳಾಚಾರ್ಯ ಟೋಣಪಿ, ವೆಂಕಟಾಚಾರ್ಯ ಕೌಲಗಿ, ಅಣ್ಣಾಚಾರ್ಯ ಅಣ್ಣಿಗೇರಿ ಮುಂತಾದವರು.

ರಮಾ ಸ್ತೋತ್ರದ ಮಹಿಮೆ—

ಈ ಅವಧೂತ ಶಿಖಾಮಣಿಗಳು ಪ್ರತಿ ನಿತ್ಯ ಆಹ್ನಿಕ ಮಾಡುವ ಕಾಲದಲ್ಲಿ ಇವರ ಶಿಷ್ಯರು ಇವರಿಗೆ ತಿಳಿಯದಂತೆ ಒಂದು ತಾಮ್ರದ ಘಟ್ಟಿ ದೊಡ್ಡ ಅರ್ಧಾಣೆಯನ್ನು ಇವರ ಆಸನದ ಬುಡದಲ್ಲಿ ಇಟ್ಟಿರುತ್ತಿದ್ದರು. ೧೪ ಶ್ಲೋಕಗಳಿಂದ ರಮಾ ಸ್ತೋತ್ರವನ್ನು ನಿತ್ಯವೂ ಅಭಿಮಂತ್ರಿಸುತ್ತಿದ್ದರು. ಇವರ ಆಹ್ನಿಕ ಮುಗಿದ ಮೇಲೆ ಆ ಆಸನ ಬುಡದಲ್ಲಿಯ ಆ ತಾಮ್ರದ ನಾಣ್ಯವು ಚಿನ್ನದ್ದಾಗಿರುತ್ತಿತ್ತು. ಈ ಚಿನ್ನದ ನಾಣ್ಯವನ್ನು ಮಾರಿ ೨೦೦ ಜನ ಶಿಷ್ಯರಿಗೆ ನಿತ್ಯವೂ ಮೃಷ್ಟಾನ್ನ ಭೋಜನ ನಡೆಯುತ್ತಿತ್ತು. ಈ ರೀತಿ ಒಂದು ವರ್ಷ ನಡೆಯಿತು.

"ಇತಿದೇವೀಸ್ತವಂಪುಣ್ಯಂ ಸರ್ವಪಾಪ ಪ್ರಣಾಶನಂ
ಯಃಪಠೇತ್ ಶೃಣುಯಾದ್ವಾಪಿ ಸ ಮುಕ್ತೋ ನಾತ್ರ ಸಂಶಯಃ ॥"

ಕಾರಣಾಂತರದಿಂದ ಇವರಿಗೆ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಸಂಧ ತೀರ್ಥರಿಂದ ಬಹಿಷ್ಕಾರ ಪತ್ರ ಬಂದಿತು. ಅದನ್ನು ಮಾನ್ಯಮಾಡಿ ಶ್ರೀಗಳವರಿದ್ದಲ್ಲಿಗೆ ಹೋಗಿ ಅವರು ಬಿಡಾರ ಮಾಡಿದ ಗೃಹದ ಸುತ್ತಲೂ ಸುಧಾ ಪಠಣ ಮಾಡುತ್ತ ಕಸ ಬಳಿದು ಗೋಮಯದಿಂದ ಸಾರಿಸಿ ಭಗವದ್ರೂಪಗಳನ್ನು ರಂಗವಲ್ಲಿಯಿಂದ ಅಲಂಕರಿಸಿ ಜನರು ಏಳುವದರಲ್ಲಿಯೇ ಅದೃಶ್ಯರಾಗುತ್ತಿದ್ದರು. ಹೀಗೆ ಎಷ್ಟೋ ದಿನ ನಡೆಯಿತು. ಮುಂದೆ ಶ್ರೀ ಸತ್ಯವರ ತೀರ್ಥರು ಪೀಠಕ್ಕೆ ಬಂದರು. ಇವರು ನಿತ್ಯವೂ ಇವನ್ನು ನೋಡಿ ಆಶ್ಚರ್ಯಚಕಿತರಾಗಿ ಯಾರು ಹೀಗೆ ಮಾಡುತ್ತಾರೆಂಬದನ್ನು ಪತ್ತೆ ಮಾಡಬೇಕೆಂದು ಕರದೀಪ ಹಿಡಿಸಿಕೊಂಡು ಬಂದು ಇವರನ್ನು ವಿಚಾರಿಸಲಾಗಿ "ತಮಗೆ ಮಠದಿಂದ ಬಹಿಷ್ಕಾರಾಜ್ಞೆ ಆಗಿದೆ. ಅದರ ನಿವಾರಣಕ್ಕೆ ಗುರ್ವನುಗ್ರಹಕ್ಕಾಗಿ ಈ ರೀತಿ ಸೇವಾನಿರತನಾಗಿದ್ದೇನೆಂದು" ಬಿನ್ನವಿಸಿದರು. ನಿಮ್ಮಂಥವರಿಗೆ

ಯಾರು ಬಹಿಷ್ಕಾರ ಪತ್ರ ಕಳಿಸಿದ್ದೆಂದು ಖಿನ್ನರಾಗಿ ಸನ್ಮಾನ ಮಾಡಿ ಸಮ್ಮುಖದಲ್ಲಿ ಕೂಡಿಸಿಕೊಂಡು ಭೋಜನಾದಿಗಳನ್ನು ಮಾಡಿಸಿದರು.

ತಮ್ಮ ೪೫ ನೇ ವಯಸ್ಸಿನಲ್ಲಿ ಉತ್ತರಾದಿ ಮಠದ ಶ್ರೀ ಸತ್ಯವರತೀರ್ಥರಿಂದ ತುರೀಯಾಶ್ರಮವನ್ನು ಸ್ವೀಕರಿಸಿ ಶ್ರೀ ವಿಷ್ಣು ತೀರ್ಥರೆಂದು ನಾಮವನ್ನು ಪಡೆದರು. ಉತ್ತರಾದಿ ಮಠದ ಸಂಸ್ಥಾನಾಧಿಪತ್ಯಕ್ಕೆ ಆಗಲೀ ಬಹು ಜನ ಶಿಷ್ಯ ಸಂಪತ್ತಿಗಾಗಲೀ ಆ ಮಠದ ಅಪರಿಮಿತ ಐಶ್ವಯಕ್ಕಾಗಲೀ ಇವರು ಆಶ್ರಮವನ್ನು ಹೊಂದಲಿಲ್ಲ. ಕೇವಲ ವೈರಾಗ್ಯದಿಂದ ಸನ್ಯಾಸಾಶ್ರಮವನ್ನು ಹೊಂದಿ ಸಮಲೋಷ್ಟಾಶ್ಮಕಾಂಚನರಾಗಿ ಶಿಷ್ಯರ ಉದ್ಧಾರ ಮಾಡಿದರು. ಇವರು ೧೨ ವರ್ಷ ಅರಣ್ಯದಲ್ಲಿ ವಾಸವಾಗಿದ್ದರಿಂದ ಇವರನ್ನು ಆರಣ್ಯಕಾಚಾರ್ಯರು ( ಅಡವಿಸ್ವಾಮಿಗಳು ) ಎಂದು ಜನ ಕರೆದರು. ಇವರು ಶಿಷ್ಯರಿಗೆ ಪಾಠ ಪ್ರವಚನ ಮಾಡಿಸುತ್ತ ಸಂಚಾರ ಮಾಡುತ್ತಿದ್ದರು. ಇವರು ೧) ಶ್ರೀಮನ್ನ್ಯಾಯಸುಧಾ ಟಿಪ್ಪಣಿ ೨) ತತ್ವಪ್ರಕಾಶಿಕಾ ಟಿಪ್ಪಣಿ ೩) ಭಾಗವತಸಾರೋದ್ಧಾರ ೪) ಅಧ್ಯಾತ್ಮರಸರಂಜಿನೀ ೫) ಚತುರ್ದಶಿ=ಷೋಡಶೀ ೬) ಆಜ್ಞಾಪತ್ರ ೭) ಆತ್ಮಸುಖಬೋಧಿನೀ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.

ಸಂಚಾರ ಕ್ರಮದಿಂದ ಕಿನ್ನಾಳ ಗ್ರಾಮಕ್ಕೆ ಬಂದು ಆ ಗ್ರಾಮದ ದೇಸಾಯರಿಗೆ ಬಂದ ವಿಪತ್ತನ್ನು ಪರಿಹಾರ ಮಾಡಿ ೧೦೮ ಸಾರೆ ಸುಧಾ ಪಾಠ ಪ್ರವಚನ ಜರುಗಿಸಿ, ೧೮೧೬ ಇಸ್ವಿ ಮಾಘ ಬಹುಳ ತ್ರಯೋದಶಿ ದಿನ ಕಿನ್ನಾಳ ಗ್ರಾಮದ ಹತ್ತಿರವಿರುವ ಮಾದನೂರಿನಲ್ಲಿ ವೃಂದಾವನಸ್ಥರಾದರು. ಇಲ್ಲಿ ಇವರ ಆರಾಧನೆ ಪ್ರತಿ ವರ್ಷ ನಡೆಯುತ್ತಿದೆ.



## ಅಪರೋಕ್ಷೀಕೃತ ಶ್ರೀಶರಾದ

# ಶ್ರೀ ಶ್ರೀ ಸತ್ಯಧರ್ಮ ತೀರ್ಥರು

ಶ್ರೀ ತುಂಗಭದ್ರಾತಟಿನೀ ನಿಕಟ ವಿರಾಜಮಾನವಾದ ಶಿವಮೊಗ್ಗಾ ಜಿಲ್ಲೆಗೆ ಸೇರಿದ ಹೊಳೆಹೊನ್ನೂರು ಕ್ಷೇತ್ರವು ಬಹು ಕಾಲದಿಂದ ಪ್ರಸಿದ್ಧವಾದುದು. ಇಲ್ಲಿಯೇ ಶ್ರೀಮದುತ್ತರಾದಿ ಮಠದಲ್ಲಿ ಪ್ರಸಿದ್ಧರಾದ ಶ್ರೀ ವೇದಾಂತ ಸಾಮ್ರಾಜ್ಯಪಾಲನಾ ಧುರಂಧರರಾಗಿ ಸುಮಾರು ೩೨ ವರ್ಷಕ್ಕಿಂತಲೂ ಅಧಿಕವಾಗಿ ಶ್ರೀ ಮೂಲ ರಾಮ ದೇವರನ್ನು ಪೂಜಿಸುತ್ತ ಅನೇಕ ಟೀಕಾ ಟಿಪ್ಪಣಿಗಳನ್ನು ರಚಿಸಿ ಭಾಗೀರಥಿಯನ್ನು ಪ್ರತ್ಯಕ್ಷೀಕರಿಸಿಕೊಂಡ ಶ್ರೀ ಶ್ರೀ ಸತ್ಯಧರ್ಮ ತೀರ್ಥ ಶ್ರೀಪಾದಂಗಳವರ ಭವ್ಯ ವೃಂದಾವನವು ಪ್ರಕಾಶಿಸುತ್ತದೆ.

ಶ್ರೀ ಗುರುವರ್ಯರು ರುದ್ರಾಂಶರೆಂಬ ಐತಿಹ್ಯವು ಪರಂಪರೆಯಿಂದಲೂ ಇದೆ. ಆದ್ದರಿಂದಲೇ ವೃಂದಾವನದ ಮುಂಭಾಗದಲ್ಲಿ ಉದ್ಭವಿಸಿದ ಲಿಂಗದ್ವಯಗಳನ್ನು ಈಗಲೂ ಸಹ ನೋಡಬಹುದು.

ಈ ಗುರುವರ್ಯರು ವೃಂದಾವನಸ್ಥರಾಗಿ ೧೩೭ ವರ್ಷಗಳಾದವು. ಪ್ರತಿ ವರ್ಷ ಹೊಳೆಹೊನ್ನೂರಿನಲ್ಲಿ ಶ್ರಾವಣ ಬಹುಳ ತ್ರಯೋದಶಿ ಶ್ರೀ ಸತ್ಯಧರ್ಮರ ಮಹಾ ಸಮಾರಾಧನೆಯು ೩ ದಿನಗಳಲ್ಲಿ ಬಹು ವಿಜೃಂಭಣೆಯಿಂದ ನಡೆಯುತ್ತದೆ.

ನವರತ್ನವೆಂದು ಪ್ರಸಿದ್ಧವಾದ ಮನೆತನದಲ್ಲಿ ಶ್ರೀ ಮುದ್ಗಲಾಚಾರ್ಯರೆಂಬವರು ಶಮದಮಾದಿ ಗುಣಸಂಪನ್ನರಾದ ಮಹಾ ಪಂಡಿತರು ಅಪರೋಕ್ಷ ಜ್ಞಾನಿಗಳಾದ ಶ್ರೀ ಶ್ರೀ ಸತ್ಯಬೋಧ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿ ಸವಣೂರಲ್ಲಿಯೇ ವಾಸವಾಗಿದ್ದರು. ಅವರ ಕುಲಸ್ವಾಮಿಯಾದ ಶ್ರೀ ಲಕ್ಷ್ಮೀನರಸಿಂಹ ದೇವರ ಅನುಗ್ರಹದಿಂದ ಶ್ರೀ ಮುದ್ಗಲಾಚಾರ್ಯರಿಗೆ ಪುತ್ರ ಸಂತಾನವಾಯಿತು. ಈ ಶಿಶುವಿಗೆ ಪುರುಷೋತ್ತಮನೆಂದು ನಾಮಕರಣ ಮಾಡಿದರು. ಆದರೆ ಮುಂದೆ ಇವರು ಅಣ್ಣಯ್ಯಾಚಾರ್ಯರೆಂದೇ ಪ್ರಸಿದ್ಧರಾದರು. ಶ್ರೀ ಪುರುಷೋತ್ತಮಾಚಾರ್ಯರು ಶ್ರೀ ಸತ್ಯಬೋಧ ತೀರ್ಥರಲ್ಲಿಯೇ ಅಧ್ಯಯನ ಮಾಡಿ ಚತುಃಶಾಸ್ತ್ರ ಪಂಡಿತರಾದರು. ನಂತರ ಸುಧಾ ಗ್ರಂಥಗಳ ಪಾಠ ಪ್ರವಚನವನ್ನು ತಾವೇ ಸ್ವತಃ ಪ್ರಾರಂಭಿಸಿದರು. ಇವರು ಗೃಹಸ್ಥಾಶ್ರಮಿಗಳಾಗಿ ಅನೇಕ ಶಿಷ್ಯರಿಂದೊಡಗೂಡಿ ಗುತ್ತಿ ಗ್ರಾಮದಲ್ಲಿ ವಾಸವಾಗಿದ್ದರು.

ಶ್ರೀಮದುತ್ತರಾದಿ ಮಠದ ಮಹಾ ಸಂಸ್ಥಾನಾಧೀಶ್ವರರೂ ಮಹಾ ತಪಸ್ವಿಗಳೂ ಆದ ಶ್ರೀ ಸತ್ಯವರತೀರ್ಥರು ಈ ನವರತ್ನ ಪುರುಷೋತ್ತಮಾಚಾರ್ಯ

(ಆಣ್ಣೈಯಾಚಾರ್ಯ) ರಿಗೆ ಚತುರ್ಥಾಶ್ರಮವನ್ನು ಕೊಟ್ಟು ಶ್ರೀ ಸತ್ಯಧರ್ಮತೀರ್ಥರೆಂದು ನಾಮಕರಣಮಾಡಿ ಸರ್ವಜ್ಞ ಸಿಂಹಾಸನದಲ್ಲಿ ಕೂಡಿಸಿದರು. ಶ್ರೀ ಸತ್ಯಧರ್ಮತೀರ್ಥರು ತಮ್ಮ ಗುರುಗಳಾದ ಶ್ರೀ ಸತ್ಯವರತೀರ್ಥರ ವೃಂದಾವನವನ್ನು ನಾಮಗೊಂಡ್ಲುದಲ್ಲಿ ಪ್ರತಿಷ್ಠಿಸಿ ಸಂಚಾರಕ್ಕೆ ಹೊರಟರು. ಈ ಕಾಲಕ್ಕೆ ಶ್ರೀಗಳವರಿಗೆ ೪೮ ವರ್ಷಗಳಾಗಿದ್ದವು.

ಮೈಸೂರು ಸಂಸ್ಥಾನದ ದಿವಾನರಾದ ಶ್ರೀ ಪೂರ್ಣಯ್ಯನವರು ಶ್ರೀ ಶ್ರೀಗಳವರ ನಿಷ್ಠಾವಂತ ಭಕ್ತರಾಗಿದ್ದರು. ಶ್ರೀಗಳವರಲ್ಲಿ ಶಾಂತಿಪಾಠಪೂರ್ವಕ ಮಧ್ವ ಶಾಸ್ತ್ರಾಧ್ಯಯನವನ್ನು ಮಾಡಿದರು. ಶ್ರೀಗವಳರ ತಪಃಪ್ರಭಾವದಿಂದ ಮೈಸೂರು ಮಹಾರಾಜರು ಪ್ರಭಾವಿತರಾಗಿ ಶ್ರೀಗಳವರನ್ನು ತಮ್ಮ ಸಂಸ್ಥಾನದಲ್ಲಿಯೇ ವಾಸವಾಗಿರಬೇಕೆಂದು ಪ್ರಾರ್ಥಿಸಿಕೊಂಡರು. ಶ್ರೀಗಳವರು ಮಹಾರಾಜರ ಪ್ರಾರ್ಥನೆಯ ಮೇರೆಗೆ ಹೊಳೆನರಸೀಪುರದಲ್ಲಿ ವಾಸವಾಗಿದ್ದರು. ಶ್ರೀ ಪೂರ್ಣಯ್ಯನವರ ಸಹಾಯದಿಂದ ಮಹಾರಾಜರು ಹೊಳೆನರಸೀಪುರದಲ್ಲಿ ಬಹು ವಿಶಾಲವಾದ ಭವ್ಯಮಠವನ್ನು ಕಟ್ಟಿಸಿ ಶ್ರೀಗಳಿಗರ್ಪಿಸಿದರು. ಶ್ರೀಗಳವರು ಇಲ್ಲಿದ್ದಾಗಲೇ ಶ್ರೀ ಭಾಗವತಕ್ಕೆ ಪ್ರಸಿದ್ಧವಾದ ವ್ಯಾಖ್ಯಾನವನ್ನು ರಚಿಸಿದರು. ಶ್ರೀ ಭಾಗವತದ ೬-೭-೮-೯-೧೦-೧೨ ಸ್ಕಂದಗಳಿಗೆ ಟಿಪ್ಪಣಿಯನ್ನು ಬರೆದಿದ್ದಾರೆ.

'ವೈಯಾಕರಣ ಕಂಠೀರವ' ಎಂಬ ಬಿರುದುಗಳನ್ನು ಪಡೆದ ಶ್ರೀ ತ್ರ್ಯಂಬಕ ಶಾಸ್ತ್ರೀ, ಅಹೋಬಲಮಠಜೀರ, ಶ್ರೀ ತಿರುಮಲಾಚಾರ್ಯ ಮುಂತಾದವರನ್ನು ವಾಕ್ಯಾರ್ಥದಲ್ಲಿ ಶ್ರೀಗಳವರು ಜಯಿಸಿದರು.

ಇವರಲ್ಲಿ— ಶ್ರೀ ಕಾಶೀ ತಿಮ್ಮಣ್ಣಾಚಾರ್ಯ, ಗಾರ್ಲಪಾಡ ಕೃಷ್ಣಾಚಾರ್ಯ, ಉಡುಪಿ ವಾಸುದೇವಾಚಾರ್ಯ ಮುಂತಾದವರು ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿ ಮಹಾಪಂಡಿತರಾಗಿದ್ದರು.

ಶ್ರೀಗಳು ೧೭ ಸಲ ಸುಧಾ ಮಂಗಳವನ್ನು ಮಾಡಿದರು.

ಶ್ರೀ ಸತ್ಯಧರ್ಮತೀರ್ಥರು ಕಾಶಿ, ರಾಮೇಶ್ವರ, ಉಡುಪಿ, ತಿರುಪತಿ ಮುಂತಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಶಿಷ್ಯರಿಗೆ ತಪ್ತಮುದ್ರಾದಿಗಳನ್ನು ಕೊಟ್ಟು ಸಜ್ಜನರನ್ನು ಉದ್ಧರಿಸಿದರು.

ಶ್ರೀಗಳವರು ಉದ್ದಾಮ ಪಂಡಿತರಷ್ಟೇ ಪ್ರೌಢ ಗ್ರಂಥಕಾರರೂ ಆಹುದು. ನ್ಯಾಯ ಶಾಸ್ತ್ರವು ಇವರ ಮನೆಯ ಊಳಿಗದ ಆಳಾಗಿತ್ತು. ವೇದಾಂತವಂತೂ ಇವರಿಗೆ ಬಾಲ್ಯದಿಂದಲೇ ಬಳುವಳಿಯಾಗಿ ಬಂದಿತ್ತು. ವ್ಯಾಕರಣ, ಮೀಮಾಂಸಗಳು ಇವರಿಗೆ ಅಂಗೈನೆಲ್ಲಿ. ಇವರು ಶುಷ್ಕ ತಾರ್ಕಿಕರಾಗಿರದೆ ಸರಸ ಕವಿಗಳೂ ಆಗಿದ್ದರು. ಇವರ ಕಾವ್ಯದಲ್ಲಿ ವಚನ ರಚನಾ ಮಾಧುರಿಯೂ, ಕಲ್ಪನಾ ವಿಲಾಸಗಳೂ, ಭಾವ

ನಿರ್ಭರತೆಗಳೂ ಅಲ್ಲಲ್ಲಿ ಮಡುವುಗೊಂಡಿವೆ. ಇವರ ಗಂಗಾಸ್ತುತಿ ಕಾವ್ಯವು ಸಾಹಿತ್ಯ ಪ್ರಪಂಚದಲ್ಲಿಯೇ ಮೇರುಕೃತಿಯಾಗಿದೆ. ಮಾಧ್ವರು ಮನಸ್ಸು ಮಾಡಿದರೆ ಮಹಾ ಕಾವ್ಯಗಳನ್ನೂ ರಚಿಸಬಲ್ಲರೆಂಬುದು ಇವರ ಗಂಗಾ ಸ್ತುತಿಯಿಂದ ವ್ಯಕ್ತವಾಗುತ್ತದೆ.

ಇವರ ವಾಙ್ಮಾಧುರ್ಯವನ್ನು ಆಸ್ವಾದಿಸಿರಿ—

ಜಲೆ ಪೀತೇಪೀತೆ ಮನಸಿಜ ಶುಚಿತ್ವಂ ಜನಕಜಾ—
ಭಿರಾಮೇ ಶ್ರೀರಾಮೇ ಮತಿರಿತಿ ಭವೇಸ್ಮಿನ್ನಪಿ ಭವೇತ್ ॥
ಸುಮೂರ್ಧನ್ಯೆ ಮೂರ್ಧನ್ಯೆ ನಿಮಿಷವುಷೊ ಬಿಭ್ರತಿ ಚ ಯ
ತ್ಸಸೋಮೇ ಸೋಮೇ ಸತ್ಕವಿಕುಲ ಲಲಾಮೇ ಯದ ಭವತ್ ॥

ಬಹು ಭಕ್ತಿಯಿಂದ ಗಂಗಾದೇವಿಯನ್ನು ಸ್ತೋತ್ರ. ಮಾಡುತ್ತ ಅವಳನ್ನು ಪ್ರಾರ್ಥಿಸುತ್ತಾರೆ.

" ಭವತ್ತೀರೇ ಸುಘಟಯ ಕುಟೀರೇ ಸಿವಸತಿ "

ನನಗೆ ಸುಂದರ ಮಂದಿರಗಳ ಆಶೆಯಿಲ್ಲ. ನಿನ್ನ ತೀರದಲ್ಲಿ ವಾಸ ಮಾಡಬೇಕೆಂಬುದೇ ಆಶೆ. ನಿನ್ನ ತಟದಲ್ಲಿ ಒಂದು ಕುಟೀರವಾದರೂ ಚಿಂತೆಯಿಲ್ಲ. ಅಲ್ಲಿ ವಾಸ ಮಾಡುವದನ್ನು ಕರುಣಿಸು.

" ಸ್ಮರನ್ ಗಾಯನ್ ನೃತ್ಯನ್ನವಿಗಳ ದಿಯಾಂ ಮಂಗಳಮಹಂ "

ಎಂದು ಮುಂತಾಗಿ ಹಾಡಿದ್ದಾರೆ. ಮತ್ತು ವಿರಹಿಮೋದ ಸುಧಾ, ಶೃಂಗಾರ ಲಹರಿ, ಶ್ರೀ ವಾಲ್ಮೀಕಿ ರಾಮಾಯಣ ಟಿಪ್ಪಣಿ ಇದಲ್ಲದೆ ಭಾರತ ಉದ್ಯೋಗ ಪರ್ವ, ಸನತ್ಸುಜಾತೀಯ ಟಿಪ್ಪಣಿ, ತತ್ವ ಸಂಖ್ಯಾನ ಟಿಪ್ಪಣಿ, ತತ್ವ ನಿರ್ಣಯ ಟಿಪ್ಪಣಿ ಮುಂತಾದ ಗ್ರಂಥಗಳನ್ನು ರಚಿಸಿ ಮಂದರಿಗೆ ಉಪಕಾರ ಮಾಡಿದ್ದಾರೆ.

ಶ್ರೀ ಸತ್ಯಧರ್ಮ ತೀರ್ಥರು ಮೈಸೂರು ಕೊಲ್ಹಾಪೂರ, ಪುಣೆ ಪೇಶ್ವೆಯ ಸಂಸ್ಥಾನಿಕರಿಂದ ಶ್ರೀ ಮಠಕ್ಕೆ ಅನರ್ಘ್ಯವಾದ ಮಣಿ, ಮುಕುಟ, ಕನಕ ರತ್ನಾದಿಗಳನ್ನು ಸಂಪಾದಿಸಿದರು.

ಈ ರೀತಿ ಶ್ರೀಗಳವರು ಮಾಧ್ವ ಇತಿಹಾಸದಲ್ಲಿ ಆಚಂದ್ರಾರ್ಕವಾದ ಮಹಾ ಕಾರ್ಯಗಳನ್ನು ಮಾಡಿ ಯುಗ ಪುರುಷರಾಗಿ ಮೆರೆದು ೮೦ ವರ್ಷ ಜೀವಿಸಿ ವಿಕೃತಿ ಸಂವತ್ಸರ ಶ್ರಾವಣ ಶುದ್ಧ ೧೩ ನೇ ದಿನ ತುಂಗಭದ್ರಾ ತೀರ ಹೊಳೆಹೊನ್ನೂರಲ್ಲಿ ವೃಂದಾವನಸ್ಥರಾದರು. ವೃಂದಾವನ ವ್ಯವಸ್ಥೆಗಾಗಿ ಮೈಸೂರ ಸರಕಾರದಿಂದ ವರ್ಷಾಶನವು ಸಿಕ್ಕುತ್ತಲಿದೆ.

"ಶ್ರೀ ಸತ್ಯವರವಾರಾಶಿ ಸಂಭೂತಶ್ಚಿಂತಿತಾರ್ಥದಃ
ಚಿಂತಾಮಣಿಃ ಸತ್ಯಧರ್ಮ ಶರ್ಮಾಸ್ಯಾಚ್ಛರ್ಮದಃ ಸದಾ ॥ "



### ಮಹಿಮಾಶಾಲಿಗಳಾದ

# ಶ್ರೀ ವಿಶ್ವಪ್ರಿಯ ತೀರ್ಥರು

## (ಶ್ರೀ ವೃಂದಾವನಾಚಾರ್ಯರು)

ಸೋದೇಮಠದ ಪರಂಪರೆಯಲ್ಲಿ ೩೦ ನೇ ಯವರಾದ ಶ್ರೀ ವಿಶ್ವಪ್ರಿಯತೀರ್ಥರು ಮಹಾ ಮಹಿಮಾಶಾಲಿಗಳಾಗಿದ್ದು, ಇವರು ಅವಧೂತ ಚರ್ಯೆಯುಳ್ಳವರಾಗಿದ್ದರು.

ಹಿಂದಿನ ಜನ್ಮದಲ್ಲಿ ಲಕ್ಷ್ಮೀಪತಿ ಎಂಬ ಏಡ ಮೂಕ ಬ್ರಾಹ್ಮಣನೇ ಈಗ ಶ್ರೀ ವಿಶ್ವಪ್ರಿಯ ತೀರ್ಥರಾಗಿ ಅವತರಿಸಿದರು. ಹಿಂದಿನ ಜನ್ಮದಲ್ಲಿಯೂ ಈ ಜನ್ಮದಲ್ಲಿಯೂ ಶ್ರೀ ವಾದಿರಾಜರ ಸಂಪೂರ್ಣ ಮಹಿಮೆಯನ್ನರಿತು, ಅವರ ಅನುಗ್ರಹಕ್ಕೆ ಪೂರ್ಣ ಪಾತ್ರರಾಗಿದ್ದರು.

ಇವರು ತಮ್ಮ ವ್ಯಾಸಂಗವನ್ನು ಶ್ರೀ ರಾಜರ ಅಪ್ಪಣೆಯಂತೆ ರಾಜರಲ್ಲಿಯೇ ಅವರ ವೃಂದಾವನಹತ್ತಿರ ಮಾಡಿದ್ದರಿಂದ ಇವರಿಗೆ ಶ್ರೀ ವೃಂದಾವನಾಚಾರ್ಯರೆಂದು ಕರೆಯ ಹತ್ತಿದರು.

ಇವರು ಕೊಚ್ಚಿ, ತ್ರಾವಣಕೋರ ಸಂಸ್ಥಾನಗಳಿಗೆ ಹೋಗಿ ಅವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಆ ಸಂಸ್ಥಾನದಿಂದ ತಮ್ಮ ಮಠಕ್ಕೆ ವರ್ಷಾಶನ ಬರುವಂತೆ ಮಾಡಿದ್ದಾರೆ.

ಇವರ ಪರ್ಯಾಯ ಕಾಲದಲ್ಲಿ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ಆಗಮಿಸಿ ಶ್ರೀ ಕೃಷ್ಣನ ಮೂರ್ತಿಯನ್ನು ನೋಡಿ ಆನಂದಭರಿತರಾಗಿ, ಈ ಸ್ವಾಮಿಗಳಿಗೆ— "ಆ ಮೂರ್ತಿಯ ಆಲಿಂಗನವನ್ನು ಮಾಡಿಕೊಳ್ಳಬೇಕೆಂದೆನಿಸುತ್ತದೆಂದು" ಹೇಳಿದರು. ಅದಕ್ಕೆ ಶ್ರೀಗಳವರು— "ರಾಜರ ಕೊರಳಲ್ಲಿರುವ ನವರತ್ನ ಹಾರವನ್ನು ಕೃಷ್ಣನಿಗೆ ಅರ್ಪಿಸಿದರೆ ಮೂರ್ತಿಯನ್ನು ಆಲಂಗಿಸಿದಂತಾಗುತ್ತದೆಂದು ಹೇಳಿದರು." ಆ ಪ್ರಕಾರ ಮೈಸೂರ ಅರಸರು ನವರತ್ನಹಾರವನ್ನು ಕೃಷ್ಣನಿಗೆ ಅರ್ಪಿಸಿದರು.

ಶ್ರೀ ವಿಶ್ವಪ್ರಿಯ ತೀರ್ಥರು ಅಪರೋಕ್ಷಜ್ಞಾನಿಗಳೆಂದು ಹೇಳುತ್ತಾರೆ.

## ಪೂರ್ಣಬೋಧರ ಪರಮಾನುಗ್ರಹಕ್ಕೆ ಪಾತ್ರರಾದ

# ಶ್ರೀ ಸತ್ಯಪರಾಕ್ರಮತೀರ್ಥರು

ಪಾಂಡಿತ್ಯ, ವಾದಿನಿಗ್ರಹ, ವಾಕ್ಯಾರ್ಥ ಪಟುತ್ವಗಳಲ್ಲಿ ಅದ್ವಿತೀಯರೆನಿಸಿದವರು ಶ್ರೀ ಸತ್ಯಪರಾಕ್ರಮತೀರ್ಥರು. ಸತ್ಯಪರಾಕ್ರಮವೆನ್ನುವ ಹೆಸರು ಇವರಿಗೆ ಸಾರ್ಥಕ ವಾಗಿತ್ತು. ಸರ್ವಜ್ಞ ಸಿಂಹಾಸನಾರೋಹಣ ಮಾಡಿದ ಪರಮಹಂಸ ಪೀಠಸ್ಥರಲ್ಲಿ ಇತ್ತೀಚಿನ ಇತಿಹಾಸದಲ್ಲಿ ಇವರಷ್ಟು ಪ್ರತಿಭಾಶಾಲಿಗಳಾದವರು ಬಹಳ ಕಡಿಮೆ.

ಇವರು ಘನವಾದ ವ್ಯಕ್ತಿತ್ವವುಳ್ಳವರಾಗಿದ್ದರು. ಉತ್ತರಾದಿ ಮಠದ ಶ್ರೀ ಸತ್ಯೇಷ್ಟತೀರ್ಥರು ಇವರ ಪಾಂಡಿತ್ಯ ಪ್ರಭಾವಗಳನ್ನು ಕಂಡು ಅವರಿಗೆ ಪ್ರಣವೋಪ ದೇಶ ಮಾಡಿ ತಮ್ಮ ತರುವಾಯ ಸರ್ವಜ್ಞ ಪೀಠಕ್ಕೆ ಕೂಡಿಸಿದರು.

ಇವರಿಗೆ ಪಟ್ಟವಾಗುವ ಕಾಲಕ್ಕೆ ೩-೪ ಜನರ ಹೆಸರುಗಳು ಸೂಚಿತವಾಗಿ ದ್ದವು. ಆದರೆ ಶ್ರೀ ಸತ್ಯೇಷ್ಟರಿಗೆ ಹಿಂದಿನ ದಿನ ಸ್ವಪ್ನವಾಗಿ ಶ್ರೀರಾಮ ದೇವರು ಇವರಿಗೇ ಅಪ್ಪಣೆ ಕೊಟ್ಟಂತಾಯಿತು. ಕೂಡಲೇ ಇವರನ್ನು ಕರೆದು ಆಶ್ರಮ ಕೊಡಲಾಯಿತು.

ಶ್ರೀ ಸತ್ಯಪರಾಕ್ರಮರ ಪೂರ್ವಾಶ್ರಮದ ಹೆಸರು ವಾಯಿ ಶ್ರೀನಿವಾಸಾಚಾ ರ್ಯರು. ಇವರ ಮನೆತನವು ಪಾಂಡಿತ್ಯಕ್ಕೆ ಮೊದಲಿನಿಂದಲೂ ಪ್ರಸಿದ್ಧವಾದದ್ದು. ಇವರು ಮೂಲತಃ ವಾಯಿಯವರು. ಶ್ರೀ ಶ್ರೀನಿವಾಸಾಚಾರ್ಯರು ಪಾಠ ಪ್ರವಚನ ಮಾಡಿಸುತ್ತ ಅನೇಕ ಪಂಡಿತ ಸಭೆ ಮುಂತಾದವುಗಳಲ್ಲಿ ಆಮಂತ್ರಿತರಾಗಿ ಹೋಗಿ ಪರವಾದಿಗಳನ್ನು ಗೆದ್ದು ಶ್ರೀಮದಾಚಾರ್ಯರ ಸಿದ್ಧಾಂತದ ಮೇಲ್ಮೆಯನ್ನು ಎಲ್ಲೆ ಡೆಗೂ ಬೆಳಗಿಸಿದ್ದರು.

ಇವರು ಪೂರ್ವಾಶ್ರಮದಲ್ಲಿ ತಮ್ಮ ಹದಿನೆಂಟನೇ ವಯಸ್ಸಿಗೆ ನ್ಯಾಯ ಶಾಸ್ತ್ರ ದಲ್ಲಿ ಅಪ್ರತಿಮ ಪಾಂಡಿತ್ಯವನ್ನು ಗಳಿಸಿದ್ದರು. ಇವರ ಪ್ರತಿಭೆಗೆ ಮೆಚ್ಚಿ ಅನೇಕ ರಾಜರು ಇವರಿಗೆ ಪಾಲಕಿ, ಜಹಗೀರನ್ನು ಕೊಟ್ಟಿದ್ದರು.

ಇವರು ಪಾಲಕಿ ಪದಸ್ಥರಾಗಿಯೇ ದೇಶದಲ್ಲಿ ದಿಗ್ವಿಜಯ ಮಾಡಿ ಪೀಠಸ್ಥರಂತೆ ಮಾನ ಸನ್ಮಾನಗಳನ್ನು ಪಡೆದಿದ್ದರು. ಇವರು ಹೈದರಾಬಾದ ನವಾಬರಿಂದ ಚಿಕ್ಕಾ ಪುರ ಗ್ರಾಮವನ್ನು ಜಹಗೀರಾಗಿ ಗಳಿಸಿದರು.

ಶ್ರೀ ಸತ್ಯಪರಾಕ್ರಮರು ಆಶ್ರಮ ಪಡೆದ ಮೇಲಂತೂ ಇವರ ಕೀರ್ತಿ ಎಲ್ಲೆಡೆಗೂ ಪಸರಿಸಿತು. ಶ್ರೀ ಮಠದಲ್ಲಿ ನಿತ್ಯವೂ ಪಾಠ ಪ್ರವಚನ ನಡೆಯುತ್ತಿತ್ತು.

ಸುಧಾ ಪಾಠ ಕ್ರಮದಲ್ಲಿ ನವೀನ ರೀತಿಯನ್ನು ಪ್ರಾರಂಭಿಸಿದ ಶ್ರೇಯಸ್ಸು ಇವರಿಗೆ ಸಲ್ಲತಕ್ಕದ್ದಾಗಿದೆ. ಇವರು ಪಂಡಿತರಿದ್ದಂತೆ ಪರಮ ಉದಾರಿಗಳೂ ಆಗಿದ್ದರು. ಅನ್ನ ಸಂತರ್ಪಣೆ, ಪಾಠ ಪ್ರವಚನಗಳು ಉತ್ತರಾದಿ ಮಠದ ವೈಶಿಷ್ಟ್ಯಗಳೆಂಬದನ್ನು ಇವರು ಎತ್ತಿ ತೋರಿಸಿದರು.

ಶ್ರೀಗಳವರು ದಿಗ್ವಿಜಯ ಮಾಡಿದಲ್ಲೆಲ್ಲ ಜನರು ಇವರ ವಾಗ್ಲಹರಿಗೆ ಮುಗ್ಧರಾಗುತ್ತಿದ್ದರು.

ಶ್ರೀಯುತರು ಲೌಕಿಕ ವೈದಿಕಗಳೆರಡರಲ್ಲಿಯೂ ನಿಪುಣರಾಗಿದ್ದರು. ಸಂಸ್ಥಾನವು ಹೈದರಾಬಾದಕ್ಕೆ ಬಂದಾಗ ಶ್ರೀಗಳವರ ಪ್ರಭಾವಕ್ಕೊಳಗಾಗಿ ಸರ ಸಾಲಾರಜಂಗ ನವಾಬರು ಸಾವೀಕುಂಬಾರಿ ಎಂಬ ಹಳ್ಳಿಯನ್ನು ಇನಾಮಾಗಿ ಕೊಟ್ಟರು.

ಶ್ರೀಗಳವರು ಸಂಚಾರ ಮಾಡುತ್ತ ಪುಣೆ ನಗರಕ್ಕೆ ಆಗಮಿಸಿದರು. ಬುಧವಾರ ಪೇಟೆಯಲ್ಲಿಯ ವಾಡೇದಲ್ಲಿ ಮಠವು ಬೀಡಾರ ಮಾಡಿತ್ತು. ಆಗ ಧಾತು, ಈಶ್ವರ ಸಂವತ್ಸರಗಳ ಭಯಂಕರ ಬರಗಾಲವು ಇತ್ತಿತು. ಇಂಥ ಬರಗಾಲದಲ್ಲಿಯೂ ಸಾವಿರಾರು ಜನರ ಅನ್ನ ಸಂತರ್ಪಣೆ ಯಥಾಸಾಂಗವಾಗಿ ನಡೆದದ್ದು ನೋಡಿ ಪುಣೇ ನಗರವೇ ಆಶ್ಚರ್ಯಚಕಿತವಾಯಿತು.

ಆಗ ಪುಣೆ ನಗರದಲ್ಲಿ ಅಭೂತಪೂರ್ವವಾದ ದೊಡ್ಡ ವಿದ್ವತ್ ಸಭೆ ನಡೆಯಿತು. ಅನೇಕ ಅದ್ವೈತ, ರಾಮಾನುಜೀಯ ಪಂಡಿತರು ಆಗಮಿಸಿದ್ದರು. ರಾಮಶಾಸ್ತ್ರೀ ಮಹಾಮಹೋಪಾಧ್ಯಾಯ, ದಾದಾ ದತ್ತೋಪಂತ ಮುಂತಾದವರು ವಾಕ್ಯಾರ್ಥಕ್ಕೆ ಆಗಮಿಸಿದ್ದರು.

ಈ ವಾದವು ಪುಣೆಯ ಮುರಲೀಧರನ ದೇವಸ್ಥಾನದಲ್ಲಿ ನಡೆಯಿತು. ೧೪ ದಿನಗಳ ವರೆಗೆ ಸಭೆಯಲ್ಲಿ ದ್ವೈತಾದ್ವೈತ ವಾದವು ಸಾಗಿತು. ಶ್ರೀಗಳವರ ದ್ವೈತ ತತ್ತ್ವ ಮಂಡನೆಯು ಸರ್ವರನ್ನೂ ಆಕರ್ಷಿಸಿತು. ಶ್ರೀಗಳವರ ಚತುರಸ್ರ ಪಾಂಡಿತ್ಯ ಪ್ರಕಟವಾಯಿತು. ಪುಣೆಯಂಥ ನಗರದಲ್ಲಿ ಶ್ರೀಗಳವರು ದ್ವೈತ ದುಂದುಭಿಯನ್ನು ಮೊಳಗಿಸಿದರು.

ತಾತ್ಯಾಸಾಹೇಬ ಗೋಡಬೋಲೆ, ಕರ್ಹಾತಕರ ಮೊದಲಾದವರೂ ಶ್ರೀಗಳವರಿಂದ ಮಂತ್ರಾಕ್ಷತೆ, ಮುದ್ರಾಧಾರಣೆಗಳನ್ನು ಪಡೆದರು. ಶ್ರೀಗಳವರು ನೆರೆದ ಪಂಡಿತರಿಗೆ ವಿಶೇಷ ಸಂಭಾವನೆಯನ್ನು ಅನುಗ್ರಹಿಸಿದರು.

ಶ್ರೀಗಳವರು ಗೋದಾವರೀ ತೀರಕ್ಕೆ ಸಂಚಾರಕ್ಕೆ ಹೋದಾಗ್ಗೆ ಶ್ರೀಗಳವರ ಪ್ರವಚನಕ್ಕೆ ಮುಗ್ಧರಾಗಿ, ನೂರಾರು ಜನ ಸ್ಮಾರ್ತರು ಮಠದ ಶಿಷ್ಯರಾಗಿ ತಪ್ತ ಮುದ್ರಾಧಾರಣೆಯನ್ನು ಮಾಡಿಕೊಂಡರು.

ಶ್ರೀಗಳವರು ಬಡೋದೆಯ ಸಭೆಯಲ್ಲಿ ಸ್ವತಃ ಉಪಸ್ಥಿತರಾಗಿ ಮಹಾಮಹಾ ಪಂಡಿತರಿಂದ ಜಯಪತ್ರಗಳನ್ನು ಸಂಪಾದಿಸಿದರು. ಆಗಿನ ಕಾಲದಲ್ಲಿ ಶ್ರೀಗಳವರ ಪಾಂಡಿತ್ಯಕ್ಕೆ ಸಮಾನರಾದವರು ಯಾರೂ ಇಲ್ಲವೆಂದು ಪ್ರಸಿದ್ಧವಾಗಿತ್ತು.

ಶ್ರೀಗಳವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ವ್ಯಾಸತ್ರಯಕ್ಕೆ ಸುಧಾಕ್ಕೆ ಕ್ರೋಡಪತ್ರ ಗ್ರಂಥಗಳನ್ನು ಬರೆದಿದ್ದಾರೆ. ಶ್ರೀ ಸತ್ಯಪರಾಕ್ರಮರು ಮಾಧ್ವ ಇತಿಹಾಸದಲ್ಲಿ ಹೊಸ ವಿಕ್ರಮವನ್ನೇ ಪ್ರಾರಂಭಿಸಿದರು.

ಶ್ರೀಗಳವರು ಸಂಚಾರ ಮಾಡುತ್ತ ವಿಜಾಪುರ ಜಿಲ್ಹೆ ಹುನಗುಂದ ತಾಲೂಕ ಬಲಕುಂದಿ ಎಂಬ ಗ್ರಾಮಕ್ಕೆ ಆಗಮಿಸಿದರು. ಬಲಕುಂದಿ ಗ್ರಾಮದ ಜಹಗೀರದಾರರು ವೈಷ್ಣವರೂ ಪರಮ ಸಾತ್ವಿಕರೂ ಆಗಿದ್ದರು. ಶ್ರೀಗಳವರು ಇಲ್ಲಿ ಒಂದು ತಿಂಗಳ ವರೆಗೆ ವಾಸವಾಗಿದ್ದರು.

ಇಲ್ಲಿಯೇ ಶ್ರೀಗಳವರಿಗೆ ದೇಹಾಯಾಸವಾಯಿತು. ಕೂಡಲೇ ಶ್ರೀಗಳವರು ತಮ್ಮ ಪ್ರಿಯ ಶಿಷ್ಯರಾಗಿದ್ದ ಶ್ರೀ ಕೊರ್ಲಹಳ್ಳಿ ಬೋಧರಾಯಾಚಾರ್ಯರೆಂಬವರಿಗೆ ಬಲಕುಂದಿಯಲ್ಲಿಯೇ ಪ್ರಣವೋಪದೇಶ ಮಾಡಿ ಆಶ್ರಮವನ್ನು ಕೊಟ್ಟು ಶ್ರೀ 'ಸತ್ಯವೀರ' ರೆಂದು ನಾಮಕರಣಮಾಡಿದರು. ಮುಂದೆ ಶ್ರೀಗಳವರು ಪೂರ್ವನಿಯೋಜಿತವಾಗಿಯೇ ನಿರ್ಧರಿಸಿದಂತೆ ಕೃಷ್ಣಾ ತೀರದ ಚಿತ್ತಾಪುರ ಗ್ರಾಮಕ್ಕೆ ಆಗಮಿಸಿದರು. ಅಲ್ಲಿಯೇ ಆಶ್ವಿನ ಶುದ್ಧ ಅಷ್ಟಮಿ ಪರಂಧಾಮವನ್ನೈದಿದರು. ಇವರ ವೃಂದಾವನವು ಚಿತ್ತಾಪುರದಲ್ಲಿರುತ್ತದೆ. ಇದು ರಮ್ಯವಾದ ಸ್ಥಳವಾಗಿದೆ. ಇವರ ಆರಾಧನೆಯು ಬಹು ವಿಜೃಂಭಣೆಯಿಂದ ವರ್ಷವರ್ಷವೂ ಇಲ್ಲಿ ನಡೆಯುತ್ತಿದೆ.



## ಶ್ರೀ ಕೃಷ್ಣಾಪುರ ಮಠದ

# ಶ್ರೀ ವಿದ್ಯಾಧೀಶ ತೀರ್ಥರು

ಪ್ರಪಂಚದಲ್ಲಿ ಶ್ರೀ ಮನ್ನ್ಯಾಯಸುಧಾ ಗ್ರಂಥದ ತಿರುಳನ್ನು ಬೆಳಗಿಸಿರುವವರಲ್ಲಿ ಶ್ರೀ ಶ್ರೀ ಕೃಷ್ಣಾಪುರ ಮಠದ ಕೀರ್ತಿಶೇಷರಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥರು ಒಬ್ಬರು. ಉಡುಪಿಯಿಂದ ಸಾಧಾರಣ ಹನ್ನೊಂದು ಮೈಲು ಈಶಾನ್ಯದಲ್ಲಿ ಭಾಗವತ ಬೆಟ್ಟ ಎಂಬ ಒಂದು ಹಳ್ಳಿ ಇದೆ. ಇದು ಕಾನನಗಳಿಂದ ಸುತ್ತುವರಿಯಲ್ಪಟ್ಟದ್ದಾಗಿ ಒಂದು ಋಷ್ಯಾಶ್ರಮದಂತೆ ಈಗಲು ಕಂಗೊಳಿಸುತ್ತದೆ. ಇದೇ ಇವರ ಜನ್ಮ ಭೂಮಿ.

ಇಲ್ಲಿ ಹಿಂದೆ ಮಧ್ವ ವಿಜಯದಲ್ಲಿ ವರ್ಣಿಸಲ್ಪಟ್ಟ ಜರಾಘಟಿತ ಗೋತ್ರ ( ಮಡಿಕುಳಾಯ ) ಕುಲದ ವೈದಿಕ ದಂಪತಿಗಳಿರುತ್ತಿದ್ದರು. ಇವರಿಗೆ ಯೋಗ್ಯ ಕಾಲ ದಲ್ಲಿ ಒಂದು ಗಂಡು ಮಗು ಸಂತತಿಯಾಯಿತು. ಈ ಬಾಲಕನು ಎಂಟು ವರ್ಷದವ ನಾದಾಗ ತಂದೆ ತಾಯಿಗಳು ಉಪನಯನ ಸಂಸ್ಕಾರವನ್ನು ಮಾಡಿದರು. ಆ ಕಾಲ ದಲ್ಲಿ ಮಕ್ಕಳನ್ನು ಕಲಿಸುವ ಸಲುವಾಗಿ ಮಠಗಳಿಗೆ ಕಳುಹಿಸುವ ಪದ್ಧತಿ ಇದ್ದಿತು. ಆದುದರಿಂದ ಆ ಬಾಲಕನನ್ನು ಕಲಿಯುವದಕ್ಕಾಗಿ ಶ್ರೀ ಪುತ್ತಿಗೆ ಮಠಕ್ಕೆ ಸೇರಿಸಿ ದ್ದರು. ಆಗ ಆ ಪುತ್ತಿಗೆಯ ಮಠದಲ್ಲಿ ಅಪರೋಕ್ಷ ಜ್ಞಾನಿಗಳೂ, ದಾನಿಗಳೂ, ಸಕಲ ಶಾಸ್ತ್ರ ಪಾರಂಗತರೂ ಆಗಿದ್ದ ಶ್ರೀ ಭುವನೇಂದ್ರ ತೀರ್ಥರು ಸಂಸ್ಥಾನದಲ್ಲಿ ಅಧಿಪತಿ ಗಳಾಗಿರುತ್ತಿದ್ದರು. ಈ ಹುಡುಗನ ಮೇಲೆ ಆ ಶ್ರೀಪಾದಂಗಳವರಿಗೆ ಒಂದು ತರದ ವಾತ್ಸಲ್ಯವಿದ್ದಿತು. ಈ ಹುಡುಗನು ಆಗ ಅಲ್ಲಿ ಶ್ರೀ ಸುಮಧ್ವ ವಿಜಯವನ್ನು ಪಾಠ ಕೇಳುತ್ತ ಚತುರನಾಗಿರುತ್ತಿದ್ದನು.

ಹೀಗಿರುವಾಗ ಕರ್ಮಧರ್ಮ ಸಂಯೋಗದಿಂದ ಶ್ರೀ ಕೃಷ್ಣಾಪುರ ಮಠದ ಶ್ರೀ ಶ್ರೀ ವಿದ್ಯಾಸಮುದ್ರ ತೀರ್ಥರು ಪರಂಧಾಮವನ್ನು ಹೊಂದಿದರು.

ಆಗ ಅವರು ಶಿಷ್ಯಪರಿಗ್ರಹಣ ಮಾಡಿದ್ದಿಲ್ಲ. ಆದ ಕಾರಣ ಆ ಮಠದ ಒಡೆತನವು ಪುತ್ತಿಗೆ ಮಠದ ಶ್ರೀಪಾದಂಗಳವರಿಗೆ ದ್ವಂದ್ವಮಠವಾದುದರಿಂದ ಬಂದಿತು. ಆ ಶ್ರೀ ಶ್ರೀ ಭುವನೇಂದ್ರ ತೀರ್ಥರು ಕೂಡಲೇ ಕೃಷ್ಣಾಪುರ ಮಠಕ್ಕೆ ತೆರಳಿ ಆ ವೃಂದಾ ವನ ಕಾರ್ಯವನ್ನು ಕೊನೆಗೊಳಿಸಿ ತಮ್ಮ ಮಠಕ್ಕೆ ಬಂದು ಇನ್ನು ಮುಂದೆ ಶ್ರೀ ಕೃಷ್ಣಾಪುರ ಮಠಕ್ಕೆ ಯಾರನ್ನು ಉತ್ತರಾಧಿಕಾರಿಯನ್ನಾಗಿ ಮಾಡುವದೆಂದು ಯೋಚಿಸುತ್ತಿದ್ದರು.

ಒಂದು ದಿನ ರಾತ್ರಿಯಲ್ಲಿ ಶ್ರೀ ಶ್ರೀ ಭುವನೇಂದ್ರ ತೀರ್ಥರು ಶ್ರೀ ದೇವರಿಗೆ ಪ್ರದಕ್ಷಿಣೆಯಾಗಿ ದೀಪ ಸಹಿತರಾಗಿ ಬಂದರು. ಆಗ ದೇವರೆದುರಿನ ಚಂದ್ರಸಾಲೆಯಲ್ಲಿ ಮಲಗಿರುವ ಈ ಬಾಲಕನು ಕನಸಿನಲ್ಲಿ ಕನವರಿಸುತ್ತ ಕೈಗಳನ್ನು ತಲೆಯ ಮೇಲೆ ಜೋಡಿಸಿಕೊಂಡು

'ಯದಾ ವಿರಕ್ತಃ ಪುರುಷಃ ಪ್ರಜಾಯತೆ '

ಎಂಬ ಶ್ಲೋಕವನ್ನುಚ್ಚರಿಸಿದನು. ಕೂಡಲೇ ಗುರುಗಳು ಅಲ್ಲಿಗೆ ಹೋಗಿ ದೀಪದ ಬೆಳಕಿನಲ್ಲಿ ಈ ಬಾಲಕನನ್ನು ಕಂಡರು. ಆಗ ಈ ಬಾಲಕನು ದಿವ್ಯ ತೇಜಃಪುಂಜ ನಾಗಿಯೂ ವಿರಕ್ತ ಶಿಖಾಮಣಿಯಾಗಿಯೂ ಅವರಿಗೆ ಕಾಣಿಸಿದನು. ಕೂಡಲೇ ಈ ಭುವನೇಂದ್ರ ಗುರುವರ್ಯರು ಈ ವಟುವಿನ ಮುಖದಿಂದ ಆಗಿರುವ ಶುಭ ಸೂಚನೆ ಯಿಂದ ಆನಂದ ಹೊಂದಿ, ಬೆಳಗಾದ ಮೇಲೆ ಈ ವಟುವಿನ ಕುಲ ಗೋತ್ರಗಳನ್ನು ವಿಚಾರಿಸಿ ಸತ್ಕುಲ ಪ್ರಸೂತನೆಂದು ಖಚಿತಪಡಿಸಿಕೊಂಡು ಇವನೇ ಈ ಜನಾರ್ದನ ತೀರ್ಥರ ಸಂಸ್ಥಾನಾದಿಪತಿಯಾಗಲು ಯೋಗ್ಯನೆಂದು ನಿರ್ಣಯವನ್ನು ಮಾಡಿ ಕೊಂಡು ಶ್ರೀ ಕೃಷ್ಣಾಪುರ ಮಠಕ್ಕಾಗಿ ಆಶ್ರಮವನ್ನಿತ್ತು ವಿದ್ಯಾಧೀಶ ತೀರ್ಥರೆಂಬ ಹೆಸರನ್ನಿಟ್ಟು ಅನುಗ್ರಹಿಸಿದರು.

ಈ ವಿದ್ಯಾಧೀಶ ತೀರ್ಥರು ಶ್ರೀ ಭುವನೇಂದ್ರ ತೀರ್ಥರ ಜೊತೆಯಲ್ಲೇ ಎಲ್ಲ ಗ್ರಂಥಗಳನ್ನು ಅಭ್ಯಾಸ ಮಾಡಿ ಚತುರ ಪಂಡಿತರಾದರು. ಅನಂತರ ಈ ವಿದಾಧೀಶ ತೀರ್ಥರು ತಮ್ಮ ಪಾಂಡಿತ್ಯಕ್ಕೆ ಮತ್ತು ತಮ್ಮ ಬುದ್ಧಿ ಶಕ್ತಿಗೆ ಇಷ್ಟು ಕಲಿತದ್ದು ಸಾಲದೆಂದು ವಿಶೇಷವಾದ ವಿದ್ಯಾರ್ಜನೆಗಾಗಿ ವಿದ್ಯಾ ಕೇಂದ್ರವಾದ ಕಾಶೀ ಕ್ಷೇತ್ರಕ್ಕೆ ಬಂದು ಅಲ್ಲಿ ಹನ್ನೆರಡು ವರ್ಷಗಳ ವರೆಗೆ ತರ್ಕ ವಿದ್ಯೆ ಮೊದಲಾದವುಗಳನ್ನು ಅಭ್ಯಾಸ ಮಾಡಿ ದಕ್ಷಿಣ ಭಾರತದಲ್ಲಿ ಪ್ರಥಮ ತರಗತಿಯ ಪಂಡಿತರಾಗಿ ಉಡುಪಿಗೆ ಬಂದರು.

ಇವರಿಗೆ ಪ್ರಸಿದ್ಧ ಪಂಡಿತರಾಗಿದ್ದ ಕಾಶೀ ಶ್ರೀ ತಿಮ್ಮಣ್ಣಾಚಾರ್ಯರು ಸಹಾ-ಧ್ಯಾಯಿಗಳಾಗಿದ್ದರು. ಶ್ರೀ ವಿದ್ಯಾನಿಧಿತೀರ್ಥರು ತಪಸ್ವಿಗಳೂ, ಪಂಡಿತಾಗ್ರಣಿಗಳೂ ಆಗಿದ್ದರು.

ಇವರಿಗೆ ಆಶ್ರಮವಾದುದು ಶಾ. ಶ. ೧೭೩೬ ನೇ ಮಾಘ ಬಹುಳ ೨ ರಲ್ಲಿ.

ಈ ಶ್ರೀ ಶ್ರೀಗಳವರು ತಮ್ಮ ಪ್ರಯಾಗ ಮಠದಲ್ಲೂ, ದಂಡತೀರ್ಥ ಮಠದಲ್ಲೂ, ಕೃಷ್ಣಾಪುರ ಮಠದಲ್ಲೂ ಅನ್ನಛತ್ರ ಬೈರಾಗಿ ಛತ್ರಗಳನ್ನಿಡಿಸಿದ್ದರು. ಕೃಷ್ಣಾಪುರ ದಲ್ಲೂ ಉಡುಪಿಯಲ್ಲೂ ಇರುವ ತಮ್ಮ ಮಠದ ಜೀರ್ಣೋದ್ಧಾರ ಕಾರ್ಯವನ್ನು ಮಾಡಿಸಿದ್ದರು.

ಇವರು ೧೨ ಸಲ ಸುಧಾ ಪ್ರವಚನವನ್ನು ಮಾಡಿ ಸಂಭ್ರಮದ ನ್ಯಾಯಸುಧಾ ಮಂಗಳವನ್ನು ಮಾಡಿರುವರು.

ಇವರ ವಿದ್ಯಾಶಿಷ್ಯರು— ಶ್ರೀಮುಷ್ಣ ಸುಬ್ರಾಯಾಚಾರ್ಯರು, ಶ್ರೀ ಜಂಬುಖಂಡಿವಾದಿ ರಾಜಾಚಾರ್ಯರೂ, ಶ್ರೀ ಶ್ರೀ ಪೇಜಾವರ ಮಠದ ವಿಶ್ವರಾಜತೀರ್ಥರೂ, ಶಿರೂರು ಮಠದ ಶ್ರೀ ಶ್ರೀ ಲಕ್ಷ್ಮೀವಲ್ಲಭ ತೀರ್ಥರೂ, ಸೋದೆ ಮಠದ ಪಂಡಿತ ಪ್ರಕಾಂಡರಾದ ಶ್ರೀ:ಶ್ರೀ ವಿಶ್ವಾಧೀಶತೀರ್ಥರೂ ಆಗಿದ್ದರಲ್ಲದೆ ಅನೇಕ ಘಟ್ಟದ ಮೇಲಿನ ವಿದ್ವಾಂಸರೂ ಸಹ ಇವರ ನ್ಯಾಯ ಸುಧಾ ಪ್ರವಚನಕ್ಕಾಗಿ ತಮ್ಮ ಸಂಸಾರ ಸಮೇತ ಬಂದು ಉಡುಪಿಯಲ್ಲಿ ನೆಲಿಸುತ್ತಿದ್ದರು. ಪ್ರತಿ ಸಲದ ಶ್ರೀಮನ್ನ್ಯಾಯ ಸುಧಾ ಪಾಠಕ್ಕೂ ನೂರಾರು ಮಂದಿ ದೇಶದ ನಾನಾಭಾಗಗಳ ಪಂಡಿತರು ಬಂದು ಸೇರಿ ಈ ನ್ಯಾಯ ಸಾಧಾ ಗ್ರಂಥದ ತಿರುಳನ್ನರಿತು ತಮ್ಮ ದೇಶಕ್ಕೆ ಹೋಗಿ ಅಲ್ಲಿ ಶಿಷ್ಯರಿಗೆ ಪ್ರವಚನ ಮಾಡಿಸುತ್ತಿದ್ದರು.

ಹೀಗಾಗಿ ಇವರು ಅಂದಿನ ಕಾಲದಲ್ಲಿ ದಿಗ್ದೇಶಗಳಲ್ಲಿ ನಡೆಯುವ ಈ ಶ್ರೀಮನ್ನ್ಯಾಯ ಸುಧಾ ಪ್ರವಚನಕ್ಕೆ ಆಚಾರ್ಯ ಪುರುಷರಂತಿಪ್ಪರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇವರು ನಾಲ್ಕು ಸಲ ಶ್ರೀ ಕೃಷ್ಣ ಪರ್ಯಾಯ ಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸಿದ್ದರು.

ತಮ್ಮ ಕೊನೆಯ ಪರ್ಯಾಯದಲ್ಲಿ ಪುತ್ತಿಗೆ ಮಠದ ಸುಮತೀಂದ್ರರು ಅಯೋಗ್ಯ ವಟುವಿಗೆ ಹಠದಿಂದ ಆಶ್ರಮವನ್ನಿತ್ತು ತಮ್ಮ ಶಿಷ್ಯ ಪರಿಗ್ರಹಣ ಮಾಡಲು ಒಪ್ಪಲಿಲ್ಲ. ಈ ಶ್ರೀ ವಿದ್ಯಾಧೀಶತೀರ್ಥರು ಇತರ ಮಠದ ಯತಿಗಳಿಂದ ಕೂಡಿ ಆ ಪುತ್ತಿಗೆ ಮಠಕ್ಕೆಂದು ಒಬ್ಬ ವಟುವಿಗೆ ಆಶ್ರಮವನ್ನಿತ್ತುಬಿಟ್ಟರು. ಅಲ್ಲದೆ ಆ ಸುಮತೀಂದ್ರರಿಗೆ ಕಟ್ಟನ್ನೂ ಮಾಡಿದರು.

ಈ ವ್ಯವಹಾರವನ್ನು ಕೋರ್ಟಿನಲ್ಲಿ ತಮ್ಮ ಪೂರ್ವಾಶ್ರಮದ ಅಣ್ಣನ ಮಗ ವೆಂಕಟಕೃಷ್ಣಾಚಾರ್ಯರಿಂದ ನಡೆಯಿಸಿ ತಾವಾಶ್ರಮವಿತ್ತ ಸುಧೀಂದ್ರತೀರ್ಥರಿಂದ ಕೂಡಿ ತಿರುಪತಿ ಯಾತ್ರೆಗೆ ಹೋದರು.

ಅಲ್ಲಿ ಇವರಿಗೆ ದೇವರ ದರ್ಶನವಾಗುವವಕ್ಕೆ ತೊಂದರೆಯಾಯಿತು. ಆಗ ಇವರು ದೇವರ ದರ್ಶನವಾಗದೆ ಮುಂದಿನ ಯಾವ ಕೆಲಸವನ್ನೂ ಮಾಡಲಾರೆಯೆಂದು ಕುಳಿತುಬಿಟ್ಟರು.

ಆಗ ಇವರ ವಿದ್ಯಾಶಿಷ್ಯರಲ್ಲೊಬ್ಬರಾದ— ಜಮಖಂಡಿ ವಾದಿರಾಜಾಚಾರ್ಯರು ಬಂದು ಮಹಾಂತನೊಡನೆ ಮಾತನಾಡಿ ಸಕಲ ಸಂಸ್ಥಾನೋಚಿತ ಮರ್ಯಾದೆಯಿಂದ ಶ್ರೀ ದೇವರ ದರ್ಶನವಾಗುವಂತೆ ಮಾಡಿದರು.

ಪುತ್ತಿಗೆಯ ಮಠದ ವ್ಯವಹಾರದಲ್ಲಿ ಶ್ರೀ ವಿದ್ಯಾಧೀಶತೀರ್ಥರಿಗೆ ಜಯವಾಗಿ, ಆ ಮಠವು ಅವರಿಂದ ಆಶ್ರಮ ಹೊಂದಿರುವ ಸುಧೀಂದ್ರತೀರ್ಥರಿಗೇ ದೊರಕಿತು.

ಆಗ ಬಹಳ ವೃದ್ಧರಾದರಿವರು ಬೆಂಗಳೂರಿಗೆ ಬಂದಿದ್ದರು. ಅಲ್ಲಿ ಜ್ವರ ಬಾಧೆಯಿಂದ ಈ ಪಾರ್ಥಿವ ಶರೀರವನ್ನು ಶಾ. ಶ. ೧೮೦೩ (೧೮೮೧) ನೇ ವಿಕ್ರಮ ಸಂವತ್ಸರದ ಜೇಷ್ಠ ಬಹುಳ ೧೧ ನೇ ಶನಿವಾರ ತ್ಯಾಗ ಮಾಡಿ ಹರಿಪದವಿಗೆ ಸೇರಿದರು. ಇವರ ವೃಂದಾವನವು ಬೆಂಗಳೂರಿನ ಗುಂಡೋಪಂತ ಛತ್ರದಲ್ಲಿದೆ.



## ಪ್ರಕಾಂಡ ಪಂಡಿತರಾದ

# ಶ್ರೀ ಸುಧೀನಿಧೀ ತೀರ್ಥರು



ಶ್ರೀಪಾದರಾಜರ ಮಠವು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರಿಂದ ಸಂಸ್ಥಾಪಿತವಾದ ಮಠವು.

ಈಗ ಈ ಮಠವು ಮುಳಬಾಗಿಲಿನಲ್ಲಿಯೇ ವಾಸ್ತವ್ಯವಾಗಿದೆ. ಮುಳಬಾಗಿಲಿನ ಸಮೀಪದಲ್ಲಿರುವ ನರಸಿಂಹತೀರ್ಥದಲ್ಲಿ ಶ್ರೀ ಶ್ರೀಪಾದರಾಜರ ವೃಂದಾವನವಿದೆ.

ಈ ಪರಂಪರೆಯಲ್ಲಿ ಶ್ರೀ ಶ್ರೀಪಾದರಾಜರಂಥ ಯುಗ ಪುರುಷರು ಉದಯಿಸಿದ್ದರಿಂದ ಮುಂದೆ ಈ ಮಠವು ಶ್ರೀಪಾದರಾಜ ಮಠವೆಂದೇ ಪ್ರಸಿದ್ಧವಾಗಿದೆ.

ಮುಳಬಾಗಿಲು ಪುರಾಣ ಪ್ರಸಿದ್ಧ ಕ್ಷೇತ್ರವಾಗಿದೆ. ದ್ವಾಪರಯುಗದಲ್ಲಿ ಅರ್ಜುನನು ಇಲ್ಲಿ ಪ್ರಾಣದೇವರನ್ನು ಪ್ರತಿಷ್ಠಾಪಿಸಿ ಪೂಜಿಸಿದ್ದಾನೆ. ಶ್ರೀ ಅಕ್ಷೋಭ್ಯತೀರ್ಥರಿಗೂ ಶ್ರೀ ವಿದ್ಯಾರಣ್ಯರಿಗೂ ವಾಕ್ಯಾರ್ಥ ನಡೆದು ಶ್ರೀ ವಿದ್ಯಾರಣ್ಯರು ಪರಾಜಿತರಾದದ್ದು ಇಲ್ಲಿಯೇ.

ಶ್ರೀ ಅಕ್ಷೋಭ್ಯತೀರ್ಥರಿಂದ ಪ್ರತಿಷ್ಠಿತ— ನರಸಿಂಹ ದೇವರೂ, ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತವಾದ— ಪ್ರಾಣದೇವರೂ ಇಲ್ಲಿಯೇ ಸನ್ನಿಹಿತರಾಗಿರುವರು.

ಶ್ರೀ ವ್ಯಾಸರಾಜರು ತಪಸ್ಸು ಮಾಡಿದ ಗುಹೆಯೂ ಇಲ್ಲಿಯೇ ಉಂಟು.

ಅನೇಕ ಅಪರೋಕ್ಷ ಜ್ಞಾನಿಗಳೂ, ಪಂಡಿತ ಪರಿವ್ರಾಜಕರೂ ಈ ಪೀಠವನ್ನು ಅಲಂಕರಿಸಿದ್ದಾರೆ. ಇತ್ತೀಚಿನ ಇತಿಹಾಸದಲ್ಲಿ ಶ್ರೀ ಸುಧಿನಿಧಿತೀರ್ಥರು ಬಹಳ ಪ್ರಸಿದ್ಧರು.

ಶ್ರೀ ಸುಧೀನಿಧಿಗಳು ಈ ಪೀಠದಲ್ಲಿ ೩೪ ನೇಯವರು. ಇವರು ಪೂರ್ವಾಶ್ರಮ ದಲ್ಲಿ ಘನವಿದ್ವಾಂಸರೆಂದು ದಿಗ್‌ದೇಶಗಳಲ್ಲಿ ಕೀರ್ತಿ ಪಡೆದಿದ್ದರು.

ಮುಳಬಾಗಿಲು ಶ್ರೀಪಾದರಾಜರು, ಶ್ರೀ ವ್ಯಾಸರಾಜರ ಕಾಲದಿಂದಲೂ ದೊಡ್ಡ ವಿದ್ವತ್ಕೇಂದ್ರವಾಗಿತ್ತು.

ಶ್ರೀ ಹರಿಯಪ್ಪಾಚಾರ್ಯರ ಕಾಲದಲ್ಲಿ ಮತ್ತೆ ಮುಳಬಾಗಿಲವು ತನ್ನ ಪೂರ್ವದ ವಿದ್ಯಾ ವೈಭವವನ್ನು ಮೆರೆದಿತ್ತು.

ಇವರ ಕಾಲದಲ್ಲಿ ನೂರಾರು ಜನ ವಿದ್ಯಾರ್ಥಿಗಳು ಪರಸ್ಥಳದಿಂದ ವಿದ್ಯಾವ್ಯಾಸಂಗ ಕ್ಕಾಗಿ ಬಂದು ನೆಲೆಸಿದ್ದರು. ಇವರಲ್ಲಿ ಓದಿದ ಅನೇಕ ಜನ ಪಂಡಿತರು ಅಲ್ಲಲ್ಲಿ ಪಾಠ ಪ್ರವಚನ ಮಾಡುತ್ತಿರುವದು ಕಂಡುಬರುತ್ತಿವೆ.

ಶ್ರೀ ಹರಿಯಪ್ಪಾಚಾರ್ಯರು ನ್ಯಾಯ, ವೇದಾಂತಗಳಲ್ಲಿ ಅಪ್ರತಿಮ ಪಂಡಿತರು. ಗದ್ವಾಲ, ಬಡೋದ, ಅನಂತಶಯನಂ, ಪುದುಕೊಟ್ಟಾ ಮೊದಲಾದ ಸಭೆಗಳಲ್ಲಿ ಭಾಗವಹಿಸಿ ಘಟಾನುಘಟಕರಾದ ಪಂಡಿತರನ್ನು ವಾಕ್ಯಾರ್ಥದಲ್ಲಿ ಪರಾಜಯಗೊಳಿಸಿ, ಜಯಪತ್ರಗಳನ್ನೂ, ಚಿನ್ನದ ಕಡಗ, ಶಾಲುಗಳನ್ನೂ ಬಹುಮಾನವಾಗಿ ಪಡೆದು ಕೊಂಡು ಬಂದಿದ್ದರು.

ಶ್ರೀ ಸುಧಿನಿಧಿಗಳು ಅಖಂಡ ೩೦ ವರ್ಷಗಳ ಕಾಲ ಸರ್ವಜ್ಞ ಸಿಂಹಾಸನದಲ್ಲಿ ಮಂಡಿತರಾಗಿ ದಕ್ಷಿಣೋತ್ತರ ದೇಶಗಳಲ್ಲಿ ಮಧ್ವಸಿದ್ಧಾಂತದ ಡಿಂಡಿಮವನ್ನು ಮೊಳ ಗಿಸಿದರು.

ಇವರಿಗೆ ಆಶ್ರಮವಾಗಿ ಸನ್ಯಾಸಿಗಳಾದರೂ ಪೂರ್ವಾಶ್ರಮದ ಹೆಸರಿನಿಂದಲೇ ಪ್ರಸಿದ್ಧರಾಗಿದ್ದರು.

ಪದ್ಮಸರೋವರದಲ್ಲಿ ಬಿ. ಕಂಚಿಸುಬ್ಬ್ರಾಯರಿಂದ ಸ್ಥಾಪಿತವಾದ ಮಧ್ವಸಿದ್ಧಾಂತ ಉನ್ನಾಹಿನಿ ಸಭಾ ಮಂದಿರದಲ್ಲಿ ಶ್ರೀ ವೇದವ್ಯಾಸ ದೇವರ ಮೂರ್ತಿ ಪ್ರತಿಷ್ಠೆಯು ಶ್ರೀ ಸುಧಿನಿಧಿತೀರ್ಥರಿಂದ ನೆರವೇರಿದೆಂದಮೇಲೆ ಇವರ ನಿರ್ವಿವಾದ ಪಾಂಡಿತ್ಯಕ್ಕೆ ಬೇರೆ ಸಾಕ್ಷಿ ಏಕೆ ಬೇಕು !

ಇವರು ಮುಳಬಾಗಿಲಿನಲ್ಲಿರುವ ಶ್ರೀ ಶ್ರೀಪಾದರಾಜರ ಸನ್ನಿಧಾನದಲ್ಲಿಯೇ ವೃಂದಾವನಸ್ಥರಾಗಿರುವ ಭಾಗ್ಯವನ್ನು ಪಡೆದಿದ್ದಾರೆ.

## ಜ್ಞಾನಮೇರುವಾದ

# ಶ್ರೀ ವಿದ್ಯಾರತ್ನಾಕರ ತೀರ್ಥರು



"ದುರ್ವಾದಿ ಮತ್ತ ನಾಗೇಂದ್ರ ವಿದಾರಣ ಮೃಗಾಧಿಪಃ ।
ವಿದ್ಯಾರತ್ನಾಕರ ಗುರುಃ ಸನ್ನಿಧತ್ತಾಂ ಸದಾ ಹೃದಿ ॥ "

ಶ್ರೀಮದ್ವ್ಯಾಸರಾಜ ಮಠದ ವೇದಾಂತ ರಾಜ್ಯದ ಸಿಂಹಾಸನವನ್ನು ಅಲಂಕರಿಸಿದ ಮಹನೀಯರೆಲ್ಲರೂ ವೇದಾಂತ ಸೇವಾ ಧುರೀಣರು. ವಾದಿ ನಿಗ್ರಹ, ಗ್ರಂಥ ರಚನೆ, ವೇದಾಂತ ಪ್ರವಚನ ಇವೇ ಅವರ ಜೀವನದ ಉಸಿರಾಗಿದ್ದವು.

ಶ್ರೀ ವ್ಯಾಸರಾಜ ಮಠದ ಗುರು ಪರಂಪರೆಯಲ್ಲಿ ಶ್ರೀ ವ್ಯಾಸರಾಜರು, ಅವರಿಗೆ ಐದನೇಯವರಾದ ಶ್ರೀ ರಾಮಚಂದ್ರ ತೀರ್ಥರು, ಹತ್ತನೇಯವರಾದ ಶ್ರೀ ರಘುನಾಥ ತೀರ್ಥರು ಮತ್ತು ಅವರ ಶಿಷ್ಯರಾದ ಶ್ರೀ ಜಗನ್ನಾಥ ತೀರ್ಥರು ಮುಂತಾದ ಅನೇಕ ಮಹನೀಯರು ಮಾಧ್ವ ವೇದಾಂತಕ್ಕೆ ಅಜರಾಮರವಾದ ಸೇವೆಯನ್ನು ಮಾಡಿದ್ದಾರೆ.

ಇದೇ ಪೀಠದಲ್ಲಿ ೨೩ನೆಯವರಾದ ಶ್ರೀ ವಿದ್ಯಾರತ್ನಾಕರ ತೀರ್ಥ ಶ್ರೀಪಾದಂಗಳವರು ಲೋಕೋತ್ತರ ವ್ಯಕ್ತಿಗಳಾಗಿದ್ದರು. ಇವರ ಆಳವಾದ ಪಾಂಡಿತ್ಯ, ಪ್ರವಚನ ಪಟುತ್ವ, ಪಾಠಪ್ರವಚನ ಪರಿಪಾಟಿಗಳು ಅದ್ವಿತೀಯವಾಗಿದ್ದವು. ಇವರಲ್ಲಿ ಪಾಂಡಿತ್ಯಕ್ಕೆ ಸರಿಯಾಗಿ ಕವಿತಾಶಕ್ತಿಯೂ ಕೂಡಿತ್ತು.

ಇವರು ಸಂಸ್ಕೃತದಲ್ಲಿ ಅನೇಕ ಸ್ತೋತ್ರ, ಕಾವ್ಯಾದಿಗಳನ್ನು ಮಾಡಿದ್ದಾರೆ. ಶ್ರೀ ವಿದ್ಯಾರತ್ನಾಕರರು ಸಾರ್ಥಕ ನಾಮಧೇಯವುಳ್ಳವರಾಗಿದ್ದರು. ಕನ್ನಡದಲ್ಲಿಯೂ ದೇವರ ನಾಮಗಳು, ಕಾವ್ಯಾದಿಗಳನ್ನು ಇವರು ರಚಿಸಿರುವರು.

ಇವರ ಪೂರ್ವಾಶ್ರಮದ ಹೆಸರು ಅಹೋಬಲಾಚಾರ್ಯರು. ಇವರು ಚತುಃ ಶಾಸ್ತ್ರ ಪಂಡಿತರೆಂದೂ, ಪ್ರಾಚೀನ ಸಂಪ್ರದಾಯ ಪೋಷಕರೆಂದೂ, ಶಾಸ್ತ್ರ ಪ್ರವಚನ ಚತುರರೆಂದೂ ಪ್ರಸಿದ್ಧರಾಗಿದ್ದರು. ಇವರು ಪಂಡಿತರಿದ್ದಷ್ಟೇ ವೈರಾಗ್ಯಶಾಲಿಗಳಾಗಿದ್ದರು. ಆಶ್ರಮ ತೆಗೆದುಕೊಳ್ಳುವ ಪೂರ್ವದಲ್ಲಿಯೇ ಶ್ರೀ ಆಚಾರ್ಯರು ಮಹಾ ಪ್ರಸಿದ್ಧರಾಗಿದ್ದರು.

ಇವರು ಆಶ್ರಮ ಸ್ವೀಕರಿಸಿದಾಗ ವೃದ್ಧರಾಗಿದ್ದರು. ಬಹಳ ಸಂಚಾರಮಾಡದೇ ಮಠದಲ್ಲಿಯೇ ನಿತ್ಯವೂ ಪಾಠ ಪ್ರವಚನ ಮಾಡಿಸುತ್ತ ಇವರು ಶಿಷ್ಯರನ್ನು ಉದ್ಧಾರ ಮಾಡಿದರು.

ಇವರು ಪ್ರತಿಷ್ಠಾಪರಾಙ್ಮುಖರಾಗಿದ್ದರು. ಮೈಸೂರಿನ ಮಹಾ ಪ್ರಭುಗಳಾಗಿದ್ದ ಶ್ರೀ ಚಾಮರಾಜೇಂದ್ರ ಒಡೆಯರು ಇವರ ವಿದ್ವತ್ತೆಯನ್ನು ಕೇಳಿ ಅರಮನೆಯಿಂದ ಮರ್ಯಾದೆ ಮಾಡಬೇಕೆಂದಿದ್ದರು. ಆದರೆ ಆಚಾರ್ಯರು ಅದನ್ನು ನಿರಾಕರಿಸಿದರು. ಇವರು ರಾಜಾಸ್ಥಾನಗಳಿಂದ, ಪಂಡಿತ ಮಂಡಲಿಗಳಿಂದ ಬಂದ ಪ್ರಶಸ್ತಿಗಳನ್ನು ಸವಿನಯವಾಗಿ ನಿರಾಕರಿಸುತ್ತಲಿದ್ದರು.

ಕೊಯಿಮತ್ತೂರು, ಕುಂಭಕೋಣ ಮುಂತಾದ ದಕ್ಷಿಣ ದೇಶದಲ್ಲಿ ಇಂದಿಗೂ ಪ್ರತಿಯೊಂದು ಮಾಧ್ವರ ಮನೆಯಲ್ಲಿ ಇವರ ಹೆಸರು ಮನೆಯ ಮಾತಾಗಿದೆ. ಇವರು ಮಹಾ ಪಂಡಿತರಾಗಿದ್ದರೂ ಬಹಳ ಸರಳರೂ, ನಿಗರ್ವಿಗಳೂ ಆಗಿದ್ದರು. ಸಾಂಸಾರಿಕ ಕ್ಲೇಶಗಳಿಂದ ಪೂರ್ಣ ವಿರಕ್ತಿಯನ್ನು ಹೊಂದಿದ್ದರು. ಯತ್ಯಾಶ್ರಮಕ್ಕೆ ಇರಬೇಕಾದ ಸಮಸ್ತ ಸಂಪತ್ತುಗಳಿಂದಲೂ ಪೂರ್ಣರಾಗಿದ್ದರು.

ಇವರಿಗೆ ಆಶ್ರಮ ಕೊಡುತ್ತೇವೆಂದು ಹೇಳಿದಾಗ ಆಚಾರ್ಯರು ಪ್ರಥಮತಃ ನಿರಾಕರಿಸಿದ್ದು ಇವರ ಪಾಪಭೀರುತ್ವ, ಪ್ರತ್ಯವಾಯಶಂಕಾ, ಯತ್ಯಾಶ್ರಮದ ಮುಖ್ಯಾರ್ಥಜ್ಞಾನ ಎಷ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

ಸ್ವಪ್ನದಲ್ಲಿ ಭಗವದಾಜ್ಞೆಯಾದ ಮೇಲೆ ಅದರಂತೆ ಜ್ಞಾನಿಗಳಾದ ಇವರ ಆಶ್ರಮಗುರುಗಳ ಒತ್ತಾಯದ ಆಜ್ಞೆ ನಿರಾಕರಿಸದೆ ಪೀಠಾಧಿಪತ್ಯವನ್ನು ಸ್ವೀಕಾರ ಮಾಡಿದರು. ಶ್ರೀ ವಿದ್ಯಾಸಮುದ್ರ ತೀರ್ಥರಿಂದ ಆಶ್ರಮ ಸ್ವೀಕರಿಸಿ ಸರ್ವಜ್ಞಸಿಂಹಾಸನಾರೋಹಣ ಮಾಡಿ ಶ್ರೀ ವಿದ್ಯಾರತ್ನಾಕರ ತೀರ್ಥರೆಂದು ನಾಮಕರಣ ಹೊಂದಿದ ಮೇಲೆ ಜ್ಞಾನಪಿಪಾಸುಗಳಾದನೇಕ ವಿದ್ಯಾರ್ಥಿಗಳೂ, ಪಂಡಿತರೂ, ಇವರಲ್ಲಿಗೆ ಆಗಮಿಸಿದರು. ಮಠವು ಜ್ಞಾನಾರ್ಜನೆಗೆ ತವರುಮನೆಯಾಯಿತು.

ಇವರು ಪೀಠಾಧಿಪತಿಗಳಾಗಿ ಪಂಡಿತರಾಗಿದ್ದರೂ ಸ್ವಲ್ಪವೂ ಹೆಮ್ಮೆಯಾಗಲೀ ಅಭಿಮಾನವಾಗಲೀ ಇದ್ದಿಲ್ಲ. ಸಣ್ಣಮಕ್ಕಳು ಕೂಡ ಪ್ರಶ್ನೆ ಮಾಡಿದರೂ ಉತ್ತರ ಕೊಟ್ಟು ಸಮಾಧಾನ ಮಾಡುತ್ತಿದ್ದರು. ಇವರು ೧೯೧೬ ರಲ್ಲಿ ಆಶ್ರಮ ಸ್ವೀಕಾರ ಮಾಡಿದರು. ಆಗಿನ ಕಾಲದ ಮಹಾ ಮಹಾ ಪಂಡಿತರು ಇವರಲ್ಲಿ ಬಂದು ಶಾಸ್ತ್ರಗಳಲ್ಲಿ ಬಂದ ಸಂಶಯಗಳನ್ನು ನಿವಾರಣ ಮಾಡಿಕೊಳ್ಳುತ್ತಿದ್ದರು.

ಶ್ರೀಪಾದರಾಜರ ಮಠಾಧೀಶರಾದ ಶ್ರೀ ಸುಧೀನಿಧೀ ತೀರ್ಥರ ( ಪೂರ್ವಾಶ್ರಮದಲ್ಲಿ ಹರಿಯಪ್ಪಾಚಾರ್ಯರು ) ವರು ಇವರನ್ನು ಪರಲೋಕ ಬಂಧುಗಳೆಂದು ಕರೆದಿದ್ದು ಇವರ ಪ್ರಕಾಂಡ ಪಾಂಡಿತ್ಯಕ್ಕೆ ದ್ಯೋತಕವಾಗಿದೆ.

ಇವರು "ದಶ ಪ್ರಮತಿ ದರ್ಶನ ಪ್ರಕಾಶಿನೀಸಭಾ" ಎಂಬ ಸಭೆಯನ್ನು ಬೆಂಗಳೂರಲ್ಲಿ ಅಭೂತಪೂರ್ವ ರೀತಿಯಲ್ಲಿ ನಡೆಯಿಸಿದ್ದು ಚರಿತ್ರಾರ್ಹವಾಗಿದೆ. ಶ್ರೀ ವ್ಯಾಸರಾಜ ಮಠದ ಈಗಿನ ಶ್ರೀ ಶ್ರೀ ವಿದ್ಯಾಪ್ರಸನ್ನ ತೀರ್ಥ ಶ್ರೀಪಾದಂಗಳವರು ಇವರ ಪೂರ್ವಾಶ್ರಮದ ಸಾಕ್ಷಾತ್ ಪುತ್ರರು. ಶ್ರೀ ವಿದ್ಯಾಪ್ರಸನ್ನ ತೀರ್ಥ ಶ್ರೀಪಾದಂಗಳವರಿಗೆ ಇವರು ಆಶ್ರಮದಲ್ಲಿ ಪರಮ ಗುರುಗಳೂ ಆಗಬೇಕು.

ಈ ರೀತಿ ಶ್ರೀಗಳವರು ೯ ವರ್ಷಗಳ ಕಾಲ ವೇದಾಂತ ಸಿಂಹಾಸನದಲ್ಲಿ ಮಂಡಿಸಿದ ಕಾಲ ಮಾಧ್ವರ ಸುವರ್ಣಯುಗವೆಂದು ಹೇಳಬಹುದು.

ಇವರ ದೇಹತ್ಯಾಗವೂ ಅಪೂರ್ವ ರೀತಿಯಲ್ಲಿಯೇ ಆಯಿತು. ಹರಿಧ್ಯಾನ ಮಾಡುತ್ತ ಬ್ರಹ್ಮರಂಧ್ರದಿಂದ ಪ್ರಾಣೋತ್ಕ್ರಮಣವನ್ನು ಮಾಡಿ ೧೯೨೫ ರಲ್ಲಿ ಹರಿಪದವನ್ನೈದಿದರು.



## ಪ್ರಾತಃಸ್ಮರಣೀಯ ಪಂಡಿತ ಪ್ರಕಾಂಡ

# ಶ್ರೀ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು



ಉಡುಪಿ ಅಷ್ಟ ಮಠಗಳಲ್ಲಿ ಒಂದಾದ ಅದಮಾರು ಮಠದ ಶ್ರೀ ವಿಬುಧಪ್ರಿಯ ತೀರ್ಥರು ಮಹಾ ಪಂಡಿತರೂ, ಮೇಧಾವಿಗಳೂ, ಲೌಕಿಕ ವ್ಯವಹಾರ ಚತುರರೂ ಆದ ಪ್ರಸಿದ್ಧ ಪರಮಹಂಸ ಯತಿಗಳಾಗಿದ್ದರು.

ಅದಮಾರು ಮಠದ ಶ್ರೀ ವಿಬುಧಪ್ರಿಯತೀರ್ಥರು ಆಧುನಿಕ ವೈಷ್ಣವ ಸಮಾಜದ ನಿರ್ಮಾಪಕರಲ್ಲೊಬ್ಬರು. ನ್ಯಾಯ, ವೇದಾಂತಗಳಲ್ಲಿ ಅಪ್ರತಿಮ ಪಂಡಿತರು. ಪರಮ ಉದಾರಿಗಳು. ಆಗಿನ ಕಾಲದ ಉಡುಪಿಯ ಅಷ್ಟ ಮಠದ ಯತಿಗಳಲ್ಲಿ ಅಗ್ರಗಣ್ಯರಾಗಿದ್ದರು.

ಅಂದು ಉಡುಪಿಯ ಪ್ರಾಂತದಲ್ಲಿ ಯಾವದೇ ವಿಷಯದಲ್ಲಿಯಾಗಲೀ ಶ್ರೀ ವಿಬುಧಪ್ರಿಯತೀರ್ಥರ ಮಾತೇ ಕೊನೆಯದಾಗಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಅನಭಿಷಕ್ತ ರಾಜನಂತಿದ್ದರು ಶ್ರೀಗಳವರು. ಅವರ ಕಾಲವೆಂದರೆ ವೈಷ್ಣವ ಸಮಾಜದ ಸ್ವರ್ಣ ಯುಗವೆಂದು ಕರೆಯುತ್ತಾರೆ.

ಶ್ರೀ ವಿಬುಧಪ್ರಿಯತೀರ್ಥರ ಪೂರ್ವಾಶ್ರಮದ ಹೆಸರು ವಾಸಪ್ಪಾಚಾರ್ಯರು. ಇವರ ತಂದೆ ರಂಗಪ್ಪಾಚಾರ್ಯರು. ತಾಯಿ ಶ್ರೀಮತಿ ಸತ್ಯಾವತಮ್ಮ.

ಶ್ರೀ ವಿಬುಧಪ್ರಿಯತೀರ್ಥರು ಪ್ರಮೋದೂತ ಸಂವತ್ಸರದ ಜ್ಯೇಷ್ಠ ಬಹುಳ ಅಮಾವಾಸ್ಯೆಯ ದಿನ ಕುಂಜಾರು ದುರ್ಗಾ ದೇವಿಯ ಸನ್ನಿಧಿಯ ಸಮೀಪವಿರುವ ಎಡನೀರು ಎಂಬ ಗ್ರಾಮದಲ್ಲಿ ಜನಿಸಿದರು.

೮ ನೇ ವಯಸ್ಸಿನಲ್ಲಿ ಉಪನಯನವಾದ ಮೇಲೆ ಅದಮಾರು ಮಠದ ಶ್ರೀ ವಿಬುಧಾಧಿರಾಜತೀರ್ಥರಲ್ಲಿ ಅಧ್ಯಯನಕ್ಕೆ ಬಂದರು.

ಇವರ ಬುದ್ಧಿ ಸಾಮರ್ಥ್ಯ, ಮೇಧಾಶಕ್ತಿ, ಚಾಕಚಕ್ಯತೆಗಳನ್ನು ಕಂಡು ಶ್ರೀ ವಿಬುಧಾಧಿರಾಜರು ಇವರಿಗೆ ಅದಮಾರು ಮಠದ ಸರ್ವಜ್ಞ ಸಿಂಹಾಸನದಲ್ಲಿ ಕುಳ್ಳಿರಿಸಿ ಶ್ರೀ ವಿಬುಧಪ್ರಿಯತೀರ್ಥರೆಂದು ನಾಮಕರಣ ಮಾಡಿದರು.

ಮುಂದೆ ಇವರು ಶ್ರೀ ಸೋದೆ ಮಠದ ಋಷಿತುಲ್ಯರಾದ ಶ್ರೀ ವಿಶ್ವೋತ್ತಮ ತೀರ್ಥರಲ್ಲಿ ನ್ಯಾಯ, ವೇದಾಂತಗಳನ್ನು ಓದಿ ಅಪ್ರತಿಮ ಪಂಡಿತರಾದರು.

ಇವರು ಸಂಸ್ಕೃತ ವಿದ್ಯಾ ವ್ಯಾಸಂಗಕ್ಕೂ, ವೇದಾಂತ ವಿದ್ಯೆಗೂ ಬಹಳ ಪ್ರೋತ್ಸಾಹ ಕೊಟ್ಟರು.

ಆಗಿನ ಕಾಲದಲ್ಲಿ ಸುಧಾ ವ್ಯಾಸಂಗ ಮಾಡತಕ್ಕವರಿಗೆ ಚಿನ್ನದ ಸರ, ಸಾವಿರಾರು ರೂಪಾಯಿಗಳನ್ನು ಕೊಡುತ್ತೇವೆಂದು ಸಾರಿ, ಆ ಪ್ರಕಾರ ಮಠದಲ್ಲಿ ಅನೇಕ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ಪಾಠ–ಪ್ರವಚನ ಮಾಡಿಸಿ ಪಂಡಿತರನ್ನಾಗಿ ಮಾಡಿದರು.

ಇವರು ಅನೇಕ ಸಾರಿ ಸುಧಾ ಮಂಗಳ ಮಹೋತ್ಸವಗಳನ್ನು ಮಾಡಿದರು. ಅದರಲ್ಲಿ ಅದಮಾರು ಗ್ರಾಮದಲ್ಲಿ ಮಾಡಿದ ಸುಧಾ ಮಂಗಳ ಮಹೋತ್ಸವವು ಅವಿಸ್ಮರಣೀಯವಾದುದು.

ಶ್ರೀ ಕಾಣೂರ ಮಠದ ವಿದ್ಯಾಸಮುದ್ರತೀರ್ಥರು, ಫಲಿಮಾರು ಮಠದ ಶ್ರೀ ರಘುಮಾನ್ಯತೀರ್ಥರು, ಶ್ರೀ ಪೇಜಾವರ ಮಠದ ವಿಶ್ವಮಾನ್ಯತೀರ್ಥರು, ಶ್ರೀ ಪುತ್ತಿಗೆ ಮಠದ ಶ್ರೀ ಸುಜ್ಞಾನೇಂದ್ರತೀರ್ಥರೂ ಮತ್ತು ಅನೇಕ ಗೃಹಸ್ಥಾಶ್ರಮಿಗಳೂ ಇವರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿದರು.

ಇವರ ಕಾಲದಲ್ಲಿಯೇ ಉತ್ತರಾದಿಮಠದ ಶ್ರೀ ಶ್ರೀ ಸತ್ಯಜ್ಞಾನತೀರ್ಥ ಶ್ರೀಪಾದಂಗಳವರೂ, ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಶ್ರೀ ಶ್ರೀ ಸುಶೀಲೇಂದ್ರ ತೀರ್ಥ ಸ್ವಾಮಿಗಳವರೂ ಉಡುಪಿಗೆ ಆಗಮಿಸಿದ್ದರು.

ಶ್ರೀ ವಿಬುಧಪ್ರಿಯರು ಆ ಉಭಯ ಶ್ರೀಪಾದಂಗಳವರಿಗೆ ಅಭೂತಪೂರ್ವರೀತಿ ಯಲ್ಲಿ ಸ್ವಾಗತ ಮಾಡಿ ಗೌರವಿಸಿದ್ದು ಇತಿಹಾಸಕಾರರು ಮರೆಯುವಂತಿಲ್ಲ. ಶ್ರೀ ಸತ್ಯ ಜ್ಞಾನರು ಉಡುಪಿಗೆ ಆಗಮಿಸಿದಾಗ ಉಭಯ ಶ್ರೀಪಾದಂಗಳವರ ಸಮ್ಮುಖದಲ್ಲಿ ಶ್ರೀಪಾದ ಪುತ್ರರಾದ ಶ್ರೀ ಸೇತುರಾಮಾಚಾರ್ಯರು (ಶ್ರೀ ಸತ್ಯಧ್ಯಾನತೀರ್ಥರು) ವಾಕ್ಯಾರ್ಥವನ್ನು ಮಾಡಿದರು.

ಸದ್ಯದ ಭಂಡಾರಕೇರಿ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರಿಗೆ ಶ್ರೀ ವಿಬುಧಪ್ರಿಯತೀರ್ಥರೇ ಪ್ರಣವ ಮಹಾ ಮಂತ್ರೋಪದೇಶ ಮಾಡಿದವರು. ಪ್ರಥಮದಲ್ಲಿ ಶ್ರೀ ಭಂಡಾರಕೇರಿಯವರಿಗೆ ವೇದಾಂತ ಗ್ರಂಥಗಳ ಪಾಠ ಹೇಳಿದವರೂ ಇವರೇ.

ಅದಮಾರು ಮಠದ ಪರಂಪರೆಯಲ್ಲಿ ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯ ರಾದ ಶ್ರೀ ನರಸಿಂಹತೀರ್ಥರಿಂದ ಶ್ರೀ ವಿಬುಧಪ್ರಿಯರು ೨೦ ನೇಯವರು.

ಇವರು ಉಡುಪಿ ಶ್ರೀ ಕೃಷ್ಣ ಮಠದ ಚೌಕಿಯ ವಿಶಾಲ ಶಿಲಾಮಯ ಕಟ್ಟಡವನ್ನು ಕಟ್ಟಿಸಿದರು. ಈ ಕಟ್ಟಡದಲ್ಲಿ ಏಕಕಾಲಕ್ಕೆ ೬೦೦ ಜನರಿಗೆ ಭೋಜನ ನಡೆಯಬಹು ದಾಗಿದೆ.

ಶ್ರೀಗಳವರು ಬದರಿ, ಕಾಶಿ, ರಾಮೇಶ್ವರ ಮುಂತಾದ ಯಾತ್ರೆಗಳನ್ನು ಮಾಡಿದರು.

ಇವರು ವಿದ್ಯಾಭಿಮಾನಿಗಳೂ, ಪಂಡಿತ ಪೋಷಕರೂ ಆಗಿದ್ದರು. ಶ್ರೀ ಘಟಿಕಾ ಚಲ ಶ್ರೀ ನರಸಿಂಹದೇವರಿಗೆ ಒಂದು ಸುಂದರವಾದ ದೊಡ್ಡ ರಥವನ್ನು ಮಾಡಿಸಿ ಸಮರ್ಪಿಸಿದರು.

ಅನೇಕ ಶ್ರೀಪಾದಂಗಳವರಿಗೆ ಪಾಠ ಹೇಳಿಯೂ ಮಠದಲ್ಲಿ ಅನೇಕ ವಿದ್ಯಾರ್ಥಿ ಗಳನ್ನು ಇಟ್ಟುಕೊಂಡು ಸುಧಾದಿ ಪಾಠ ಪ್ರವಚನಮಾಡಿಯೂ ಬಹಳ ಜನ ಪಂಡಿತರನ್ನು ಸಿದ್ಧಗೊಳಿಸಿದರು.

ಇವರು ೨ ಪರ್ಯಾಯಗಳನ್ನು ಬಹು ವಿಜೃಂಭಣೆಯಿಂದ ನೆರವೇರಿಸಿದರು.

ಇವರು ೧೯೫೪ ರಲ್ಲಿ ಘಟಿಕಾಚಲಕ್ಷೇತ್ರ ಶ್ರೀ ನರಸಿಂಹಸ್ವಾಮಿ ಸನ್ನಿಧಾನದಲ್ಲಿ ಚೈತ್ರ ಬಹುಳ ೧೪ ರಂದು ವೃಂದಾವನಸ್ಥರಾದರು. ಇವರ ವೃಂದಾವನವು ಘಟಿಕಾ ಚಲದಲ್ಲಿರುತ್ತದೆ.



## ಶೀಲ-ಸೌಜನ್ಯಗಳ ಸಾಕಾರ ಮೂರ್ತಿಗಳಾದ

# ಶ್ರೀ ಸುಶೀಲೇಂದ್ರ ತೀರ್ಥರು



"ಸುಧ್ಯಾದ್ಯಮಲ ಸದ್ಬೋಧಂ ಸುಕೀರ್ತಿ ನಿಲ ಸತ್ಪಥಂ ।
ಸುಧೀ ಸಂಸ್ತುತ್ಯ ಸುಗುಣಂ ಸುಶೀಲೇಂದ್ರ ಗುರುಂ ಭಜೇ ॥"

ಶ್ರೀ ಗುರು ರಾಘವೇಂದ್ರ ಮಹಾ ಸ್ವಾಮಿಗಳವರ ಪರಂಪರೆಯ ಇತ್ತೀಚಿನ ಇತಿಹಾಸದಲ್ಲಿ ಶ್ರೀ ಶ್ರೀ ಸುಶೀಲೇಂದ್ರ ತೀರ್ಥ ಶ್ರೀಪಾದಂಗಳವರ ಹೆಸರು ಅಜರಾಮರವಾಗಿದೆ.

ಇವರ ವ್ಯಕ್ತಿತ್ವ ಘನವಾದದ್ದು. ಕಾದ ಬಂಗಾರದಂತಿದ್ದ ಮೈ ಬಣ್ಣ. ಸ್ಫುರದ್ರೂಪ. ಸತೇಜ ಕಣ್ಣುಗಳು. ಯಾವಾಗಲೂ ಹಸುಗೂಸಿನ ನಿರ್ಮಲ ನಗೆ ಮುಖದ ಮೇಲೆ ಲಾಸ್ಯವಾಡುತ್ತಿರಬೇಕು. ತುಂಬಿದ ಕಪೋಲಗಳು. ಹರವಾದ ಹಣೆ, ಕಂಡವರನ್ನು ಕೈಮುಗಿಯುವಂತೆ ಮಾಡುತ್ತಿದ್ದವು.

ಪರಮಹಂಸ ಪದವು ಇವರ ಮನೆತನಕ್ಕೆ ಬಳುವಳಿಯಾಗಿ ಬಂದಿದೆ. ಇವರ ಪೂರ್ವಾಶ್ರಮದ ಅಣ್ಣಂದಿರಾದ ಶ್ರೀ ವೇಣುಗೋಪಾಲಾಚಾರ್ಯರೂ ಶ್ರೀ ಸುಕೃತೀಂದ್ರರೆಂದು ಇದೇ ಪೀಠದಲ್ಲಿ ಅಭಿಷಿಕ್ತರಾಗಿದ್ದರು. ಇವರ ಆಶ್ರಮ ಗುರುಗಳು ಶ್ರೀ ಶ್ರೀ ಸುಕೃತೀಂದ್ರ ತೀರ್ಥ ಶ್ರೀಪಾದಂಗಳವರು.

ಶ್ರೀ ಸುಶೀಲೇಂದ್ರ ತೀರ್ಥರ ಪೂರ್ವಾಶ್ರಮದ ಹೆಸರು ಶ್ರೀ ಕೃಷ್ಣಾಚಾರ್ಯರು. ಇವರ ತಂದೆ ಶ್ರೀ ವೆಂಕಟರಾಘವೇಂದ್ರಾಚಾರ್ಯರು.

ಇವರು ಚಿಕ್ಕವರಿರುವಾಗ ತಮ್ಮ ಅಣ್ಣಂದಿರ ಕೂಡ ವಿದ್ಯಾಭ್ಯಾಸ ಮಾಡಿದರು. ಇವರದು ಬಹು ಕುಶಾಗ್ರ ಬುದ್ಧಿ. ಜ್ಞಾಪಕ ಶಕ್ತಿಯೂ ಅದ್ಭುತವಾಗಿತ್ತು.

ಶ್ರೀ ಸುಕೃತೀಂದ್ರರ ಕಾಲದಲ್ಲಿಯೂ ವಿದ್ವತ್ಸಭೆಗಳನ್ನು ಮಾಡಿ ಪಂಡಿತರ ಕೂಡ ವಾಕ್ಯಾರ್ಥ ಮಾಡುತ್ತಿದ್ದರು. ನ್ಯಾಯ, ವೇದಾಂತಗಳಲ್ಲಿ ಒಳ್ಳೇ ನಿಷ್ಣಾತ ಪಂಡಿತರಾಗಿದ್ದರು.

ಇವರು ಶ್ರೀ ಸುಕೃತೀಂದ್ರರಿಂದ ೧೯೧೨ ರಲ್ಲಿ ಆಶ್ರಮ ಸ್ವೀಕಾರ ಮಾಡಿ ಸರ್ವಜ್ಞ ಸಿಂಹಾಸನಾರೋಹಣ ಮಾಡಿದರು.

ಇವರು ವೇದಾಂತ ಸಾಮ್ರಾಜ್ಯವನ್ನು ೧೪ ವರ್ಷ ಆಳಿದರು. ಇವರು ಮಧ್ವ ಶಾಸ್ತ್ರದ ಮುನ್ನಡೆಗೆ ತುಂಬ ದುಡಿದರು. "ಸಮೀರಸಮಯಸಂವರ್ಧಿನಿ ಸಭೆ" ಯನ್ನು ಮಹಾ ವೈಭವದಿಂದ ವರ್ಷ ವರ್ಷವೂ ನೆರವೇರಿಸಿ ಶ್ರೀಮಠದ ಪಂಡಿತರಿಗೂ, ಶ್ರೀಮತಸ್ಥ ಪಂಡಿತರಿಗೂ ಸಂಭಾವನಾದಿಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು.

ಇವರು ದೇಶ ಸಂಚಾರ ಮಾಡಿ ಆಚಾರ್ಯರ ಸಿದ್ಧಾಂತ ಪ್ರಚಾರವನ್ನು ಮಾಡಿದರು.

ಶ್ರೀ ಸುಶೀಲೇಂದ್ರರು ಉಡುಪಿಗೆ ದಯಮಾಡಿಸಿ ಶ್ರೀ ಕೃಷ್ಣನ ದರ್ಶನ ಮಾಡಿಕೊಂಡದ್ದು ಅವಿಸ್ಮರಣೀಯ ಘಟನೆಯಾಗಿದೆ. ಉಡುಪಿಯಲ್ಲಿ ಆಗ ಅದಮಾರು ಮಠಾಧೀಶರಾದ ಶ್ರೀ ವಿಬುಧಪ್ರಿಯ ತೀರ್ಥರ ಪರ್ಯಾಯ ಕಾಲವಾಗಿತ್ತು.

ಶ್ರೀ ವಿಬುಧಪ್ರಿಯರು ಶ್ರೀ ಸುಶೀಲೇಂದ್ರರಿಗೆ ಉಡುಪಿಗೆ ಆಗಮಿಸಲಿಕ್ಕೆ ಆಮಂತ್ರಣ ಕಳಿಸಿದ್ದರು. ಆ ಆಮಂತ್ರಣದ ಮೇರೆಗೆ ಶ್ರೀ ಸುಶೀಲೇಂದ್ರರು ಉಡುಪಿಗೆ ಚಿತ್ತೈಸಿದರು.

ಉಡುಪಿಯಲ್ಲಿ ಶ್ರೀ ಸುಶೀಲೇಂದ್ರರಿಗೆ ಬಹು ವೈಭವದಿಂದ ಮೆರವಣಿಗೆಯೊಂದಿಗೆ ಸ್ವಾಗತ ಮಾಡಲಾಯಿತು. ಪುನಃ ಶ್ರೀ ವಿಜಯೀಂದ್ರರೂ ಶ್ರೀ ವಾದಿರಾಜರೂ ಭೆಟ್ಟಿಯಾದಂತಾಯಿತು.

ಉಡುಪಿಯಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಶ್ರೀ ಸುಶೀಲೇಂದ್ರರು ಶ್ರೀ ಗುರುರಾಯರ ವೃಂದಾವನವನ್ನು ಪ್ರತಿಷ್ಠೆ ಮಾಡಿ ಉಡುಪಿಯ ಭಕ್ತರಿಗೆ ರಾಯರ ವೃಂದಾವನ ದರ್ಶನದ ಲಾಭವನ್ನು ಮಾಡಿಕೊಟ್ಟರು.

ಇವರು ಶ್ರೀ ರಾಮಚಂದ್ರ ದೇವರಿಗೆ ತಮ್ಮ ಮಠದಲ್ಲಿ ಚಿನ್ನದ ದೊಡ್ಡ ಮಂಟಪವನ್ನು ಮಾಡಿಸಿದರು.

ಇವರು ಬಹು ಉದಾರಿಗಳೂ, ಶಿಷ್ಯವತ್ಸಲರೂ ಆಗಿದ್ದರು. ಇವರ ಕಾಲ ಮಾಧ್ವರ ಉಚ್ಛ್ರಾಯ ಕಾಲವೆಂದು ಹೇಳಬಹುದು.

ಮಂತ್ರಾಲಯದಲ್ಲಿ ಶ್ರೀ ಗುರು ಸಾರ್ವಭೌಮರ ಆರಾಧನಾ ಮಹೋತ್ಸವ ವನ್ನು ಒಳ್ಳೇ ಸುವ್ಯವಸ್ಥಿತವಾಗಿ ನಡೆಯುವಂತೆ ಏರ್ಪಾಟು ಮಾಡಿದ ಶ್ರೇಯಸ್ಸು ಶ್ರೀ ಸುಶೀಲೇಂದ್ರರಿಗೆ ಸಲ್ಲುತ್ತದೆ.

ಇವರು ತಮ್ಮ ತರುವಾಯ ಶ್ರೀ ಸುವ್ರತೀಂದ್ರರಿಗೆ ಆಶ್ರಮ ಕೊಟ್ಟು ೧೯೨೬ ರಲ್ಲಿ ಶ್ರೀ ಧೀರೇಂದ್ರ ತೀರ್ಥ ಸ್ವಾಮಿಗಳ ಸನ್ನಿಧಾನವಾದ ರಿತ್ತಿಯಲ್ಲಿ ವೃಂದಾ ವನಸ್ಥರಾದರು.



### ಪುತ್ತಿಗೆ ಮಠದ ಶತಾಯುಷಿ

## ಶ್ರೀಮತ್ಸುಧೀಂದ್ರತೀರ್ಥ ಶ್ರೀಪಾದಂಗಳವರು



ಶ್ರೀಮದುಡಪಿಯ ಅಷ್ಟ ಮಠಗಳಲ್ಲಿ ಒಂದಾದ ಶ್ರೀ ಪುತ್ತಿಗೆ ಮಠದ ಹರಿಪದವನ್ನೈದಿದ ಶತಾಯುಷಿ ಪ್ರಾತಃಸ್ಮರಣೀಯ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರ ಹೆಸರು ಮಾಧ್ವ ಚರಿತ್ರೆಯಲ್ಲಿ ಅಜರಾಮರವಾದುದು. ಈ ಪುಣ್ಯ ಶ್ಲೋಕರು ಗೋಪಾಲರಿಂದ ಭೂಪಾಲರ ವರೆಗೂ ಪರಿಚಿತರು.

ಶ್ರೀ ವಾದಿರಾಜ ಗುರುಸಾರ್ವಭೌಮರ ನಂತರ ನೂರು ವರ್ಷ ಕಾಲ ಬದುಕಿ ಶ್ರೀ ಕೃಷ್ಣ ಪೂಜೆ ಮತ್ತು ಶ್ರೀ ಮಧ್ವ ಸಿದ್ಧಾಂತವನ್ನು ಆ ಸೇತು ಹಿಮಾಚಲ ಪ್ರಚಾರ ಮಾಡಿದವರೆಂದರೆ ಶ್ರೀ ಪುತ್ತಿಗೆ ಮಠದ ಶ್ರೀ ಸುಧೀಂದ್ರ ತೀರ್ಥರೊಬ್ಬರೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಶ್ರೀ ಕೃಷ್ಣನ ಮಹಾಸನ್ನಿಧಾನದಲ್ಲಿದ್ದುದರಿಂದಲೇ ಶ್ರೀ ಶ್ರೀಪಾದಂಗಳವರು ಸರ್ವತ್ರ ಸುಪ್ರಸಿದ್ಧರಾಗಿಯೂ, ಶತಸಂವತ್ಸರಾತ್ಮಕವಾದ ಉತ್ಸವವನ್ನು ಆಚರಿಸಿ ಕೊಂಡವರಾಗಿಯೂ ಬಾಳಿದರು.

ಇಂಥ ವೃದ್ಧಾಪ್ಯ ವಯಸ್ಸಿನಲ್ಲಿಯೂ ಶ್ರೀ ಕೃಷ್ಣ ಸನ್ನಿಧಿಯಲ್ಲಿ ತಮ್ಮ ಅಸ್ರಪ್ರೋಟಿತವಾದ ತ್ರಿಕಾಲಸ್ನಾನ, ಜಪತಪೋನುಷ್ಠಾನ ಶ್ರೀ ಕೃಷ್ಣಪೂಜಾ, ಸದಾ ಸಚ್ಛಾಸ್ತ್ರ ಪ್ರವಚನ, ಸತ್‌ಕಥಾ ಶ್ರವಣ, ಸದಾ ಭಗವತ್ಸ್ಮರಣ, ಸಕಲಚೇತನರ

ಶ್ರೇಯಶ್ಚಿಂತನಾದಿಗಳಿಂದ ಪ್ರಾಚೀನ ಋಷಿಗಳ ದಿವ್ಯಚರ್ಯೆಯನ್ನು ಈ ಕಾಲದಲ್ಲಿ ನಮಗೆ ಪ್ರತ್ಯಕ್ಷ ತೋರಿಸಿದ ಆಧುನಿಕ ಮಹಾ ಮುನಿಗಳಿವರು.

ಶ್ರೀ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ಶಾಲಿವಾಹನ ಶಕೆ ೧೭೭೪ ನೇ ನಳ ಸಂವತ್ಸರ ಚೈತ್ರ ಶುದ್ಧ ಏಕಾದಶೀ ದಿನ ಉಡುಪಿಗೆ ಹತ್ತಿರವಿರುವ ಹೆಜಮಾಡಿ ಎಂಬ ಗ್ರಾಮದಲ್ಲಿ ಜನಿಸಿದರು.

ತಮ್ಮ ಎಂಟನೆಯ ವಯಸ್ಸಿನಲ್ಲಿ ಉಪನಯನವುಳ್ಳವರಾಗಿ ಊರಲ್ಲಿಯೇ ವೇದಾಧ್ಯಯನ, ಸಂಸ್ಕೃತವನ್ನು ಪ್ರಾರಂಭಿಸಿದರು. ಇವರು ಯಜುಶ್ಶಾಖಿಗಳಾದ್ದ ರಿಂದ ಯಜುರ್ವೇದವನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿದರು.

ಶ್ರೀ ವಿದ್ಯಾಧೀಶರು ತಮ್ಮ ಪರ್ಯಾಯ ಕಾಲದಲ್ಲಿ ಈ ಚಿಕ್ಕ ಗೋಪಾಲ ಭಟ್ಟರಿಗೆ ಶ್ರೀ ಪುತ್ತಿಗೆ ಮಠಕ್ಕೆ ಸನ್ಯಾಸ ದೀಕ್ಷೆಯನ್ನು ಕೊಟ್ಟು ಶ್ರೀ ಸುಧೀಂದ್ರ ತೀರ್ಥರೆಂದು ನಾಮಕರಣ ಮಾಡಿ, ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತ ರನ್ನಾಗಿ ಮಾಡಿದರು. ಆ ಜಗತ್ಪೂಜ್ಯ ಶ್ರೀ ವಿದ್ಯಾಧೀಶರಲ್ಲಿಯೇ ಪೂಜಾದಿ ಸಕಲ ಸದಾಚಾರಕ್ರಮವನ್ನು ಅಭ್ಯಸಿಸಿ, ಆಚರಿಸಿ ಅವರ ಮೆಚ್ಚುಗೆಯನ್ನು ಪಡೆದರು. ಶ್ರೀ ವಿದ್ಯಾಧೀಶರ ಪರ್ಯಾಯ ಕಾಲದಲ್ಲಿಯೇ ಶ್ರೀ ಕೃಷ್ಣ ಪೂಜೆಯನ್ನು ಮಾಡಿ ಗುರುಗಳನುಗ್ರಹವನ್ನು ಪಡೆದರು.

ಶ್ರೀ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶ ತೀರ್ಥರ ಸಂಗಡ ಸಂಚಾರ ಮಾಡುತ್ತ ಶ್ರೀ ಸುಧೀಂದ್ರ ತೀರ್ಥರೂ ಬೆಂಗಳೂರಿಗೆ ಆಗಮಿಸಿದರು. ಇಲ್ಲಿ ಗುರು ಗಳಾದ ಶ್ರೀ ವಿದ್ಯಾಧೀಶರಿಗೆ ದೇಹಾಯಾಸವಾಗಿ ತಮ್ಮ ನಿರ್ಯಾಣ ಕಾಲ ಸಮೀ ಪಿಸಿತೆಂದು ತಿಳಿದುಕೊಂಡ ಅವರು ಶ್ರೀ ಸುಧೀಂದ್ರ ತೀರ್ಥರಿಗೆ ಅಂತಿಮೋಪದೇಶ ವನ್ನು ಕೊಟ್ಟು ಕೃಷ್ಣಾಪುರ ಮಠದ ಸರ್ವಾಧಿಕಾರವನ್ನೂ ಇವರಿಗೆ ಸಂಪೂರ್ಣ ವಹಿಸಿ ಬೆಂಗಳೂರಿನಲ್ಲಿಯೇ ವೃಂದಾವನಸ್ಥರಾದರು. ಬೆಂಗಳೂರಿನಲ್ಲಿ ಶ್ರೀ ಗುರುಗಳ ವರ ಮಹಾ ಸಮಾರಾಧನೆಯನ್ನು ಮಾಡಿಕೊಂಡು ಉಡುಪಿಗೆ ಆಗಮಿಸಿದರು.

ಶ್ರೀ ಸುಧೀಂದ್ರ ತೀರ್ಥ ಶ್ರೀ ಪಾದಂಗಳವರಿಗೆ ಪುತ್ತಿಗೆ ಮಠಕ್ಕೆ ಅಧಿಕಾರ ವಾಗಿದ್ದರೂ ಆ ಮಠದ ಸ್ವಾಮಿತ್ವ, ಸಂಪತ್ತು ಮೊದಲಾದವು ಯಾವವೂ ಇವರಿಗೆ ದೊರೆತಿದ್ದಿಲ್ಲ. ಆಗ ಹಾಯಕೋರ್ಟಿನಲ್ಲಿ ಪುತ್ತಿಗೆ ಮಠದ ವ್ಯಾಜ್ಯ ನಡೆದಿತ್ತು. ಈ ಕಾಲದಲ್ಲಿ ಎಲ್ಲರೂ ಶ್ರೀ ಕೃಷ್ಣಾಪುರ ಮಠಕ್ಕೂ ಶ್ರೀ ಸುಧೀಂದ್ರರೇ ಎಂದು ತಿಳಿದಿ ದ್ದರು. ವಸ್ತುಸ್ಥಿತಿಯೂ ಹಾಗೇ ಇದ್ದಿತು. ಆದರೆ ಶ್ರೀ ಸುಧೀಂದ್ರ ತೀರ್ಥರು ಉಡು ಪಿಗೆ ಬಂದ ಮೇಲೆ ಶ್ರೀ ಕೃಷ್ಣಾಪುರ ಮಠಕ್ಕೆ ಬೇರೊಬ್ಬ ವಟುವಿಗೆ ಸನ್ಯಾಸ ದೀಕ್ಷೆ ಯನ್ನೂ ಅಧಿಕಾರವನ್ನೂ ಕೊಟ್ಟು ತಮ್ಮ ವಿರಕ್ತಿಯನ್ನು ವ್ಯಕ್ತಪಡಿಸಿದರು.

ತಮಗೊಂದು ದೊಡ್ಡ ಸಂಸ್ಥಾನವಿದ್ದಾಗ ಇನ್ನೊಂದು ಬಿಟ್ಟು ಕೊಡುವುದು ದೊಡ್ಡ ಮಾತಲ್ಲ. ಆದರೆ ತಮಗೆ ಯಾವುದೂ ಇಲ್ಲದಿರುವಾಗ ಇಂಥ ದೊಡ್ಡ ಸಧನ ಮಠವನ್ನು ಬಿಟ್ಟು ಕೊಡುವದು ಸಾಮಾನ್ಯವೇ !

ಮುಂದೆ ಕೃಷ್ಣಾಪುರ ಮಠದ ಚಿಕ್ಕ ಸ್ವಾಮಿಗಳ ವಿದ್ಯಾಭ್ಯಾಸ ಮುಂತಾದ ವ್ಯವಸ್ಥೆಯನ್ನು ಮಾಡಿದರು.

ಶ್ರೀ ವಿದ್ಯಾಧೀಶರ ವಿದ್ಯಾ ಶಿಷ್ಯರೂ, ಶ್ರೀ ಶಿರೂರ ಮಠಾಧೀಶರೂ ಆಗಿನ ಕಾಲದಲ್ಲಿ ಋಷಿತುಲ್ಯರೆಂದು ವಂದ್ಯರಾಗಿದ್ದ ಶ್ರೀ ಲಕ್ಷ್ಮೀವಲ್ಲಭ ತೀರ್ಥರಲ್ಲಿ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರು ಸುಧಾದಿ ಗ್ರಂಥಗಳ ವ್ಯಾಸಂಗವನ್ನು ಪೂರೈಯಿಸಿದರು.

ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ತಮ್ಮ ನೂರು ವರ್ಷ ಕಾಲದಲ್ಲಿ ನಾಲ್ಕು ಪರ್ಯಾಯಗಳನ್ನು ಬಹು ವೈಭವದಿಂದ ಆಚರಿಸಿದರು.

ನಾಲ್ಕು ಪರ್ಯಾಯಗಳನ್ನು ಯಶಸ್ವಿಯಾಗಿ ನೆರವೇರಿಸಿದವರಿಗೆ "ಯದುಕುಲ ಚಕ್ರವರ್ತಿ" ಎಂಬ ಬಿರುದನ್ನು ಕೊಡುವದು ಉಡುಪಿ ಮಠಗಳಲ್ಲಿ ವಾಡಿಕೆ. ಆ ರೀತಿ ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ಶ್ರೀ ಕೃಷ್ಣ ಸನ್ನಿಧಾನದಲ್ಲಿ ಅಷ್ಟಮಠದ ಶ್ರೀಪಾದಂಗಳವರಿಂದ "ಯದುಕುಲ ಚಕ್ರವರ್ತಿ" ಎಂಬ ಬಿರುವನ್ನು ಪಡೆದು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದರು.

ಈ ಶತಾಯುಷಿ ಶ್ರೀಗಳವರು ಸಂತಾನವಿಲ್ಲದವರಿಗೆ ಪುತ್ರರತ್ನವಾಗುವಂತೆ ಅನುಗ್ರಹಿಸಿದ್ದಾರೆ. ಭೂತ, ಪ್ರೇತ, ಪಿಶಾಚ ಬಾಧೆಗಳನ್ನು ನಿವಾರಿಸಿದ್ದಾರೆ. ದೇಶದಲ್ಲಿ ಈಗಲೂ ಶ್ರೀಗಳವರ ಅನುಗ್ರಹವನ್ನು ಪಡೆದವರು ಅವರನ್ನು ನಿತ್ಯವೂ ಸ್ಮರಿಸುತ್ತಾರೆ. ಇಂಥ ನೂರಾರು ಉದಾಹರಣೆಗಳು ಉಂಟು.

ಆಧುನಿಕ ಕಾಲದ ಋಷಿಪುಂಗವರೆಂದು ಪ್ರಸಿದ್ಧರಾದ ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯ ಶ್ರೀಪಾದಂಗಳವರು ತಮ್ಮ ಉಪನಯನ ಕಾಲದಲ್ಲಿ ಶ್ರೀ ಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಿಂದ ಉಪದಿಷ್ಟ ಶ್ರೀ ಕೃಷ್ಣಮಂತ್ರದಿಂದಲೇ ಶ್ರೀ ಸರ್ವಜ್ಞ ಸಿಂಹಾಸನ ಲಾಭ, ಶ್ರೀಮದಾಚಾರ್ಯ ಕರಾರ್ಚಿತ ಶ್ರೀ ರಾಮದೇವರ ಪೂಜೆ, ಶ್ರೀ ಮಧ್ವ ಸಿದ್ಧಾಂತ ಪ್ರಚಾರ ಮಾಡುವ ಮಹದ್ಭಾಗ್ಯಗಳು ತಮಗೆ ದೊರಕಿವೆಯೆಂದು ಒಳ್ಳೆ ಅಭಿಮಾನದಿಂದ ಹೇಳುತ್ತಲಿರುವರು. ಇದಕ್ಕಿಂತ ಹೆಚ್ಚಿನ ದೃಷ್ಟಾಂತಗಳು ಏತಕ್ಕೆ ಬೇಕು ?

ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಪಾಠ ಶಾಲೆಯನ್ನು ಇದೇ ಶ್ರೀಪಾದಂಗಳವರೇ ಉಳಿದ ಅಷ್ಟಮಠದ ಯತಿಗಳ ಸಹಾಯದಿಂದ ಪ್ರಾರಂಭಿಸಿದ್ದಲ್ಲದೆ ಓದುವ ವಿದ್ಯಾರ್ಥಿಗಳಿಗೆ ಊಟ ವಸತಿಗಳ ವ್ಯವಸ್ಥೆಯನ್ನೂ ಮಾಡಿದರು.

ಕೃಷ್ಣಮಠದ ಮುಂದೆ ಪ್ರದಕ್ಷಿಣೆ ಬರುವವರಿಗೆ ಮಳೆಯಿಂದ ತೊಂದರೆಯಾಗುವದನ್ನು ಕಂಡು ಕೂಡಲೇ ಅದಕ್ಕೆ ನಾಲ್ಕು ಸಾವಿರ ರೂಪಾಯಿ ಖರ್ಚು ಮಾಡಿ ಚಪ್ಪರ ಹಾಕಿಸಿದರು. ಕೃಷ್ಣ ಮಠದ ಒಳಗಿನ ಚಪ್ಪರಕ್ಕೆ ತಾಮ್ರದ ತಗಡು ಹಾಕಿಸಿದರು.

ದಿನಾಂಕ ೨೪—೩—೫೬ ರಂದು ಉಡುಪಿಯಲ್ಲಿ ಶ್ರೀ ಅದಮಾರು ಮಠದ ಶ್ರೀ ಶ್ರೀ ವಿಬುಧೇಶ ತೀರ್ಥರ ಅಧ್ಯಕ್ಷತೆಯಲ್ಲಿ ಶ್ರೀ ಸುದೀಂದ್ರ ತೀರ್ಥ ಶ್ರೀಪಾದಂಗಳವರ ಶತಮಾನೋತ್ಸವವು ಬಹು ಅಭೂತಪೂರ್ವವಾಗಿ ನ ಡೆ ಯಿ ತು. ಸರ್ವಜ್ಞ ಸಿಂಹಾಸನಾರೋಹಣ ಮಾಡಿದ ಯತೀಶ್ವರರಲ್ಲಿ ಶತಮಾನೋತ್ಸವವನ್ನು ಕಂಡವರು ಇತ್ತೀಚಿನ ಇತಿಹಾಸದಲ್ಲಿ ಇವರೇ ಮೊದಲಿಗರೆಂದ ಹೇಳಬಹುದು. ಕಣ್ಣಿದ್ದವರು ಆ ಉತ್ಸವವನ್ನು ನೋಡಬೇಕಿತ್ತು. ಎಷ್ಟು ಜನ ಪಂಡಿತರು, ಎಷ್ಟು ಮಂದಿ ಕಲಾವಿದರು, ಗಮಕಿಗಳೆಷ್ಟು, ಕವಿಗಳೆಷ್ಟು, ಹರಿದಾಸರು, ಪುರಾಣಿಕರು ಸಾವಿರ ಸಾವಿರ ಜನ ಸೇರಿದ್ದರು. ಭಕ್ತ ಜನರಿಗಂತೂ ಲೆಕ್ಕವೇ ಇಲ್ಲ ಅಂದಿನ ಶ್ರೀಗಳವರ ಮೆರವಣಿಗೆಗೆ.

ಮದ್ರಾಸಿನ ಧರ್ಮಭೂಷಣ ದಿ. ಕೆ. ಸೀತಾರಾಮರಾಯರು ಈ ಸಂದರ್ಭದಲ್ಲಿ ಶ್ರೀಗಳವರಿಗೆ ಕನಕಾಭಿಷೇಕ ಮಾಡಿ ಆ ಸುವರ್ಣವನ್ನು ಶ್ರೀಗಳವರ ಹಸ್ತದಿಂದ ದಾನ ಮಾಡಿಸಿದರು.

ಶ್ರೀ ಶ್ರೀ ಅದಮಾರು ಶ್ರೀಗಳವರು ಈ ಶತಮಾನೋತ್ಸವ ನೆನಪಿಗಾಗಿ ಶ್ರೀ ಕೃಷ್ಣನಿಗೆ ಭಕ್ತರ ಸಹಾಯದಿಂದ ರಜತ ರಥವನ್ನು ಅರ್ಪಿಸಿದರು.

ಶ್ರೀ ಶ್ರೀ ಪೇಜಾವರ ಶ್ರೀಗಳವರು ಈ ಸಂದರ್ಭದಲ್ಲಿ ಮಾಧ್ವ ಮಹಾ ಮಂಡಳದ ಪರವಾಗಿ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯ ವಿರಚಿತ "ತತ್ವಪ್ರದೀಪ" ಗ್ರಂಥವನ್ನು ಪ್ರಕಾಶಿಸಿದರು.

ಮಾಧ್ವ ಇತಿಹಾಸದಲ್ಲಿಯೇ ಇದೊಂದು ಸುವರ್ಣಾಕ್ಷರಗಳಿಂದ ಬರೆದಿಡತಕ್ಕ ಅವಿಸ್ಮರಣೀಯ ಘಟನೆಯಾಗಿದೆ.

ಇಂತು ಶತಾಯುಷಿ ಶ್ರೀಪಾದಂಗಳವರು ೧೯೫೭ ನೇ ಇಸ್ವಿ ಫಾಲ್ಗುಣ ಶುದ್ಧ ಪೌರ್ಣಿಮೆ ಉಡುಪಿಯಲ್ಲಿ ಶ್ರೀ ಕೃಷ್ಣ ಸನ್ನಿಧಾನದಲ್ಲಿ ಹರಿಧ್ಯಾನ ಮಾಡುತ್ತ ವೈಕುಂಠಕ್ಕೆ ತೆರಳಿದರು. ಇಂಥ ಸಿರಿನಿಲಯನ ಭಕ್ತರ ಗುಣಗಳ ತಿಳಿದು ಭಜಿಪುದೇ ಫಲವಿದು ಬಾಳ್ವುದಕೆ.



### ವಿರಾಗಿಯೋಗಿಗಳಾದ

# ಶ್ರೀ ವಿದ್ಯಾಸಮುದ್ರ ತೀರ್ಥರು



ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾಸಮುದ್ರತೀರ್ಥರು ಕರ್ಮಠ ಕರ್ಮಂದಿಗಳಾಗಿದ್ದರು. ಶ್ರೀಪಾದಂಗಳವರ ಗಾಢಸಿದ್ಧತ್ತ್ವ, ಅನುಪಮ ವೈರಾಗ್ಯಗಳು ಮಾಧ್ವರ ಮನೆಮಾತಾಗಿತ್ತು.

ಶ್ರೀ ಮಧ್ವಾಚಾರ್ಯರ ಮೂಲ ಸಂಸ್ಥಾನಗಳಾದ ಉಡುಪಿ ಅಷ್ಟಮಠಗಳಲ್ಲಿ ಒಂದಾದ ಶ್ರೀ ಕಾಣೀಯೂರು ಮಠದ ವಿದ್ಯಾಸಮುದ್ರ ತೀರ್ಥ ಶ್ರೀಪಾಂದಗಳವರು ಈ ಸೀಳಿಗೆಯಲ್ಲಿ ೨೮ ನೆಯವರಾಗಿದ್ದರು. ಇವರು ೧೮೮೯ ನೇ ಇಸ್ವಿಯಲ್ಲಿ ಜನಿಸಿದರು. ಇವರ ತಂದೆಯವರ ಹೆಸರು ಶ್ರೀ ನರಸಿಂಹಾಚಾರ್ಯರು, ತಾಯಿ ಸೌ॥ ರುಕ್ಮಿಣೆಮ್ಮನವರು. ಇವರು ೧೯೧೨ ನೇ ಇಸ್ವಿಯಲ್ಲಿ ಈ ಮಠಕ್ಕೆ ಆಶ್ರಮವನ್ನು ಸ್ವೀಕರಿಸಿದರು.

ಶ್ರೀ ಶ್ರೀಗಳವರು ಆಚಾರ್ಯರ ಸತ್‌ಸಿದ್ಧಾಂತದಲ್ಲಿ ಅಪಾರ ಪಾಂಡಿತ್ಯವನ್ನು ಸಂಪಾದಿಸಿದ್ದರು. ಅದಮಾರು ಮಠದ ಶ್ರೀ ವಿಬುಧಪ್ರಿಯ ತೀರ್ಥರಲ್ಲಿ ಶ್ರೀಮನ್ನ್ಯಾಯ

ಸುಧಾ ಪಾಠವನ್ನು ಮಾಡಿದ್ದರು. ನ್ಯಾಯ, ವ್ಯಾಕರಣ, ಶಾಸ್ತ್ರಗಳಲ್ಲಿಯೂ ಅಸದೃಶ ಪಾಂಡಿತ್ಯವನ್ನು ಹೊಂದಿದ್ದರು. ಇವರು ಮೂರು ಪರ್ಯಾಯಗಳನ್ನು ಯಶಸ್ವಿಯಾಗಿ ನೆರವೇರಿಸಿದ್ದರು. ಶ್ರೀಪಾದಂಗಳವರು ವೈಷ್ಣವ ಸಮಾಜಕ್ಕೆ ಆದರ್ಶಪ್ರಾಯರಾದ ಗುರುಗಳಾಗಿದ್ದರು.

ಇವರ ವೈರಾಗ್ಯವು ಉಡುಪಿಯ ಮನೆ ಮಾತಾಗಿದೆ. ನಿತ್ಯವೂ ಇವರ ಜಪ, ತಪ, ಪೂಜಾದಿಗಳು ಮುಗಿದು ಭೋಜನವಾಗಬೇಕಾದರೆ ರಾತ್ರಿಯಾಗುತ್ತಿತ್ತು. ನ್ಯಾಯ ವೇದಾಂತಗಳಲ್ಲಿ ಅದ್ಭುತ ಪಂಡಿತರಾಗಿದ್ದರು. ಉಡುಪಿಯ ಅಷ್ಟ ಮಠದ ಯತಿಗಳನೇಕರು ಇವರಲ್ಲಿಯೇ ಪಾಠವನ್ನು ಓದಿದರು. ಸುಧಾದಿ ಗ್ರಂಥಗಳ ಪಾಠವನ್ನು ಸರಾಗವಾಗಿ ಹೇಳುತ್ತಿದ್ದರು. ಶ್ರೀ ಮದ್ಭಾಗವತವು ಇವರಿಗೆ ಜೀವದುಸಿರಾಗಿತ್ತು- ಯಾವಾಗಲೂ ಭಾಗವತವನ್ನು ನೋಡುತ್ತಲಿದ್ದರು. ಭಾಗವತದ ಪಾಠಾಂತರ, ಅದರ ಮೇಲಿನ ವ್ಯಾಖ್ಯಾನಗಳನ್ನು ಬಹು ಆಳವಾಗಿ ಅಭ್ಯಾಸ ಮಾಡಿದ್ದರು. ವ್ರತ ನಿಯಮಾದಿಗಳಿಂದ ದೇಹವು ಅಶಕ್ತವಾಗಿದ್ದರೂ ನಿತ್ಯ ತ್ರಿಕಾಲದಲ್ಲಿ ಮಧ್ವ ಸರೋವರದ ಸ್ನಾನ, ಶ್ರೀಕೃಷ್ಣನ ಪೂಜಾ ದರ್ಶನಗಳು ತಪ್ಪುವಂತಿದ್ದಿಲ್ಲ.

ಇವರು ಮಲ್ಲಂಪಳ್ಳಿ, ಉಡುಪಿಯ ಮಠಗಳನ್ನು ಜೀರ್ಣೋದ್ಧಾರ ಮಾಡಿಸಿದರು. ಹಳೆಯ ಹಿಂದಿನ ಚಿಕ್ಕ ರಥವನ್ನು ಪುನಃ ಕಟ್ಟಿಸಿದರು. ಬದರಿ, ಕಾಶಿ, ರಾಮೇಶ್ವರಾದಿ ಎಲ್ಲ ತೀರ್ಥ ಯಾತ್ರೆಗಳನ್ನು ಮಾಡಿದರು.

ಈ ಮಠಕ್ಕೆ ಇನ್ನೂ ಐಯ್ದು ಮಠಗಳಿವೆ. ಪೇಜಾವರ ಮಠವು ಈ ಮಠಕ್ಕೆ ದ್ವಂದ್ವಮಠವಾಗಿದೆ.

ತಾ. ೨೧ ಜನೆವರಿ ೧೯೬೪ ನೇ ರಾತ್ರಿ ೯-೩೦ ಕ್ಕೆ ಕಾಣೇಯೂರು ಮಠದ ಶ್ರೀಮದ್ವಿದ್ಯಾಸಮುದ್ರ ತೀರ್ಥ ಶ್ರೀಪಾದಂಗಳವರು ೭೫ ನೇ ವಯಸ್ಸಿನಲ್ಲಿ ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿ ಹರಿಪದವನ್ನು ಸೇರಿದರು.



### ಜ್ಞಾನ ನಿಧಿಗಳಾದ

## ಶ್ರೀ ಲಕ್ಷ್ಮೀಂದ್ರ ತೀರ್ಥರು



ಉಡುಪಿಯ ಅಷ್ಟಮಠಗಳಲ್ಲೊಂದಾದ ಶ್ರೀ ಶಿರೂರ ಮಠಾಧೀಶರು, ಉದ್ದಾಮ ಪಂಡಿತರೂ, ಶ್ರೇಷ್ಠ ಗ್ರಂಥ ಕರ್ತರೂ ಆಗಿದ್ದರು. ಶ್ರೀಮನ್ನ್ಯಾಯಸುಧಾಪಾಠ ಹೇಳುವದರಲ್ಲಿ ಪಳಗಿದ ಕೈ. ಶ್ರೀಗಳವರು ಚಿಕ್ಕ ವಯಸ್ಸಿನಲ್ಲಿಯೇ ಪರಮಹಂಸ ಸರ್ವಜ್ಞ ಪೀಠಾರೋಹಣ ಮಾಡಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಭ್ಯಾಸ ಮಾಡಿದ್ದರು. ಈ ವಾಸಂಗಕ್ಕೆ ಕಳಸವಿಟ್ಟಂತೆ ಪ್ರಾತಃಸ್ಮರಣೀಯ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರ ಹತ್ತ್ರ ಸುಧಾದಿ ಗ್ರಂಥಗಳನ್ನು ಓದಿ ಶ್ರೀ ಸತ್ಯಧ್ಯಾನ ತೀರ್ಥರ ಪ್ರೀತಿಗೆ ಪಾತ್ರರಾಗಿದ್ದರು. ಶ್ರೀಗಳವರು ಎರಡು ಸಲ ಪರ್ಯಾಯ ಮಹೋತ್ಸವವನ್ನು ಒಳ್ಳೇ ಯಶಸ್ವಿಯಾಗಿ ನೆರವೇರಿಸಿ ಮೊನ್ನೆ ಮೂರನೇ ಸಲ ತಮ್ಮ ಪರ್ಯಾಯ ಮುಗಿಯುವದರಲ್ಲಿಯೇ ಕಾಲವಾದದ್ದು ದೈವಲೀಲೆ.

ಶ್ರೀಗಳವರು ೮ ಸಲ ಸುಧಾ ಮಂಗಲವನ್ನು ಮಾಡಿ ಅನೇಕ ಶ್ರೀಗಳವರಿಗೂ ನಾಗರಕಟ್ಟೆ ಚಿಕ್ಕ ಸ್ವಾಮಿಗಳಿಗೆ ಸುಧಾಪಾಠ ಹೇಳುತ್ತಿದ್ದರು. ಇವರು

ಅನೇಕ ಜನ ಪಂಡಿತರನ್ನು ಸಿದ್ಧಗೊಳಿಸಿದರು. ಗೀತೋಪದೇಶ, ಸಿದ್ಧಾಂತಸಾರ, ಋಜುತ್ವಮಂಡನ ಮುಂತಾದ ಗ್ರಂಥಗಳನ್ನು ಬರೆದು ಪ್ರಸಿದ್ಧಿಸಿ ಮಠದ ಖರ್ಚಿನಿಂದ ಉಚಿತವಾಗಿ ಶ್ರೀಮದಾಚಾರ್ಯರ ಸಿಂದ್ಧಾಂತವನ್ನು ಪ್ರಚಾರ ಮಾಡಿದರು.

ಶಿರೂರ ಮಠಾಧೀಶರಾದ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು ಸುಧಾದಿ ಗ್ರಂಥಗಳನ್ನು ಓದಿ, ಉಡುಪಿಯಲ್ಲಿ ತಮ್ಮ ಜೀವನದುದ್ದಕ್ಕೂ "ವಾಙ್ಮಯಂ ತಪ ಉಚ್ಯತೆ" ಎಂಬ ಕೃಷ್ಣನ ವಾಕ್ಯವನ್ನು ಅಕ್ಷರಶಃ ಪಾಲನ ಮಾಡುತ್ತಿದ್ದರು. ಶ್ರೀಗಳವರು ವೇದಾಂತದಲ್ಲಿ ವಾಚಸ್ಪತಿಗಳಾದರೆ, ಭಾಷಣದಲ್ಲಿ ಬೃಹಸ್ಪತಿಗಳಂತೆ ಜನರಂಜನ ಮಾಡುತ್ತಿದ್ದರು. ನಿರಂತರ ಸುಧಾದಿ ಸಚ್ಛಾಸ್ತ್ರ ಪಾಠ, ಗ್ರಂಥ ಪ್ರಕಾಶನ, ಧರ್ಮ ಬೋಧನೆ, ಪಂಡಿತ ಪೋಷಣೆ, ಶ್ರೀ ವಾದಿರಾಜರ ಮಹಿಮಾ ಪ್ರಸಾರ ಮುಂತಾದ ಸತ್ಕಾರ್ಯಗಳಿಂದ ಅವರ ಜೀವನವು ಪರಮ ಪಾವನವಾಗಿದ್ದಿತು.

ಶ್ರೀಗಳವರು ತಮ್ಮ ಪರ್ಯಾಯದ ಒಂದೇ ವರ್ಷದಲ್ಲಿ ಶ್ರೀ ಕೃಷ್ಣ ಮಠವ ಜೀರ್ಣೋದ್ಧಾರವನ್ನು ಸ್ವಂತ ಖರ್ಚಿನಿಂದ ಮಾಡಿದ್ದರು. ಶ್ರೀಗಳವರು ಇನ್ನೂ ಅನೇಕ ಮಹಾ ಯೋಜನೆಗಳನ್ನು ಇಟ್ಟುಕೊಂಡಿದ್ದರು. ಆದರೆ ಅವು ಪೂರ್ತಿಯಾಗುವವ ರೊಳಗಾಗಿಯೇ ಶ್ರೀ ಕೃಷ್ಣ ಪರಮಾತ್ಮನು ಅವರನ್ನು ತನ್ನಡಿಗೆ ಕರೆದುಕೊಂಡನು.

ಪಾಠ-ಪ್ರವಚನೆಯನ್ನು ಕಾಯ್ದುಕೊಂಡು ಬಂದ ಶ್ರೀಗಳವರಲ್ಲಿ ಇವರೊಬ್ಬರಾಗಿದ್ದರು.



## ಮಹಾ ವಿರಕ್ತರಾದ

# ಶ್ರೀ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರು



ಶ್ರೀಮದ್ವಿದ್ಯಾಪೂರ್ಣತೀರ್ಥಃ ಖ್ಯಾತಕೀರ್ತಿರನಾಮಯಃ ।
ಚಿತ್ರಾಪುರ ಮಠೀಯೋಽದ್ಯ ರಾಜತೇ ರಾಜವನ್ಮುದಾ ॥
ವಿರಕ್ತಿ ಸಹಜಃ ಶ್ರೀಮಾನ್ ಭಾತಿ ವಿಷ್ಣುಪದಾಶ್ರಯಃ ।
ಶ್ರೀ ವಿದ್ಯಾಪೂರ್ಣನಾಮಾಬ್ಜಃ ಭೂರಿವಿದ್ಯಾಕಲಾಂಚಿತಃ ॥

"ಶುಚೀನಾಂ ಶ್ರೀಮತಾಂ ಗೇಹೇ
ಯೋಗಭ್ರಷ್ಟೋಽಭಿಜಾಯತೇ''

—ಗೀತಾ

ಪಾರಮಾರ್ಥಿಕ ದೃಷ್ಟಿಯ ಸಾಧನೆಯ ಸಂಪೂರ್ಣತೆಗಾಗಿ ಲೌಕಿಕ ಜೀವನದ ಕರ್ಮ ಭೂಮಿಯಲ್ಲಿ ಕೆಲವರು ಅಭಿವ್ಯಕ್ತವಾಗುವರು. ಅವರು ಆ ತಮ್ಮ ಕಾರ್ಯವು ಸಂಪೂರ್ಣವಾದೊಡನೆ ಈ ಪಾಂಚಭೌತಿಕ ದೇಹವನ್ನು ತ್ಯಜಿಸಿ, ತಮ್ಮ ಸತ್ಕರ್ಮ ಫಲರೂಪ ಪರಂಧಾಮಕ್ಕೆ ನಿರ್ಯಾಣರಾಗುವರು. ಶ್ರೀ ಚಿತ್ರಾಪುರ ಮಠಾಧೀಶ ಶ್ರೀ ವಿದ್ಯಾಪೂರ್ಣ ತೀರ್ಥ ಸ್ವಾಮಿಯವರ ಜೀವನ ಚರಿತೆಯ ಬಗ್ಗೆ ಈ ವಚನವು ಸಮನ್ವಯಿಸುತ್ತದೆ. ಇವರು ಬ್ರಹ್ಮಚರ್ಯ ಹಾಗೂ ಮಾಧ್ವತತ್ವಜ್ಞಾನಗಳಲ್ಲಿಯೇ ತಮ್ಮ ಯಾವಜ್ಜೀವನವನ್ನು ಸದ್ವ್ಯಯಿಸಿದ ಮಹಾ ಮಹಿಮರಾಗಿದ್ದರು.

ಇದುವರೆಗೆ ಚಿತ್ರಾಪುರ ಮಠದಲ್ಲಿ ಹದಿನೆಂಟು ಜನ ಸ್ವಾಮಿಗಳಾಗಿದ್ದಾರೆ. ಹದಿನಾಲ್ಕನೆಯವರಾದ ಶ್ರೀ ವಿದ್ಯಾಸಾಗರ ತೀರ್ಥರು ಶ್ರೀ ವಿದ್ಯಾಪೂರ್ಣ ತೀರ್ಥರ ಗುರುಗಳು ಕಳೆದ ಶತಕದಲ್ಲಿ ಬಾಳಿ ಬೆಳಗಿದವರು. ಇವರು ಅಖಿಲ ಭಾರತದ ತೀರ್ಥ ಕ್ಷೇತ್ರಗಳನ್ನು ಸಂಚರಿಸಿದ್ದರೆಂದು " ವಿಜಯ ನಗರ '' ಸಂಸ್ಥಾನದವನೊಬ್ಬನ ಪತ್ರಗಳು ಈ ಮಠದಲ್ಲಿರುವ ' ಹರಿವಂಶ ' ಗ್ರಂಥಾದಿಗಳಿಂದ ತಿಳಿದುಬರುತ್ತದೆ. ಅಂದಿನ ಜನಜನಿತ ವಾರ್ತೆಗಳು ಸಾಕ್ಷಿಗಳಾಗಿವೆ. ಚಿತ್ರಾಪುರ ದೇವಳದ ಮಠದ

ಪ್ರಾಚೀನ ಚರಿತೆಯ ಬಗ್ಗೆ ಬೇರೆ ಪುರಾವೆಗಳು ದೊರಕಿಲ್ಲ. ಈ ಮೊದಲು ಇಲ್ಲಿ ೩ ಬಾರಿ ಸಂಭವಿಸಿದ ಅಗ್ನಿದಾಹಾದಿ ಅನಾಹುತಗಳಿಂದ ಅವೆಲ್ಲ ಕಣ್ಮರೆಯಾಗಿವೆ. ಶ್ರೀ ವಿದ್ಯಾಸಾಗರ ತೀರ್ಥರ ಕಾಲದಿಂದ ಸಂಗ್ರಹೀತವಾದ ಪುಸ್ತಕ ಭಾಂಡಾಗಾರದಲ್ಲಿ ಅನೇಕ ತಾಳೆಯೋಲೆಯಲ್ಲಿ ಬರೆದ ಗ್ರಂಥಗಳಿವೆ. ಅಮರಕೋಶಕ್ಕೆ ಕನ್ನಡದಲ್ಲಿ ವಿಠ್ಠಲನು ಬರೆದ ಟೀಕೆ ಮೊದಲಾದ ಹಲವು ಕೃತಿರತ್ನಗಳಿವೆ. ಇಸ್ವಿ ೧೯೫೮ನೆಯ ವಿಳಂಬಿ ಸಂವತ್ಸರದ ಫಾಲ್ಗುಣ ಶುದ್ಧ ಸಪ್ತಮಿಯಂದು ಶ್ರೀ ವಿದ್ಯಾಸಾಗರ ತೀರ್ಥರು ಪರಂಧಾಮಕ್ಕೆ ನಿರ್ಯಾಣರಾದರು.

ಆಗ ಚಿತ್ರಾಪುರ ಮಠದ ಪರಿಸರ ಪರಿವಾರಕ್ಕೆ ಸೇರಿದ ಗೋವಿಂದಾಚಾರ್ಯರ ಪ್ರಥಮ ಪುತ್ರ ವೆಂಕಟರಮಣನಿಗೆ ಹದಿನಾರು ವರ್ಷವಾಗಿದ್ದು, ಇವನೇ ಇಲ್ಲಿ ಸನ್ಯಾಸಿಯಾಗಲು ತಕ್ಕವನೆಂದು ಭಾವಿಸಿದ ಬೆಳ್ಳೆ ವಾಸುದೇವ ಉಪಾಧ್ಯಾಯರು ಮರುದಿನವೇ ಪೇಜಾವರ ಮಠದ ಶ್ರೀ ವಿಶ್ವಜ್ಞ ತೀರ್ಥರ ಹಸ್ತದಿಂದ ಶ್ರೀ ವಿದ್ಯಾಪೂರ್ಣ ತೀರ್ಥರೆಂಬ ಹೆಸರಿನಲ್ಲಿ ಸನ್ಯಾಸ ದೀಕ್ಷೆ ಕೊಡಿಸಿದರು.

ಅನಂತರ ಕಾರ್ಕಳದ ಅತ್ತೂರು ವೆಂಕಟರಮಣಾಚಾರ್ಯರಲ್ಲಿ ೭ ವರ್ಷಗಳನ್ನು ವಿದ್ಯಾಭ್ಯಾಸಂಗಕ್ಕಾಗಿ ಕಳೆದ ಶ್ರೀ ವಿದ್ಯಾಪೂರ್ಣ ತೀರ್ಥರು ಅನ್ವರ್ಥನಾಮಾಂಕಿತರಾದರು. " ಸುಧಾ ವಾ ಪಠನೀಯಾ, ವಸುಧಾ ವಾ ಪಾಲನೀಯಾ " ಎಂಬಂತೆ ಮಾಧ್ವ ಗ್ರಂಥಗಳಾದ " ಸರ್ವಮೂಲ " ಗಳೊಂದಿಗೆ ಸುಧಾ ಗ್ರಂಥದ ಸಾರ್ಥಜ್ಞಾನ ಪಡೆದರು. ಅಂದಿನಿಂದ ದಿನಾಲೂ ಈ ಉದ್ದಾಮ ತತ್ವ ಗ್ರಂಥಗಳನ್ನೂ, ರಾಮಾಯಣ, ಭಾರತ, ಭಾಗವತಾದಿ ಸದ್ಗ್ರಂಥಗಳನ್ನೂ ವಾಚಿಸುತ್ತಾ ಶ್ರಾವಕ ಬಂಧುಗಳಿಗೆ ಭಕ್ತಿ ಜ್ಞಾನಗಳನ್ನು ಉಪದೇಶಿಸುತ್ತಿದ್ದರು. ಶ್ರೀ ದುರ್ಗಾದೇವಾಲಯ, ಶ್ರೀಮಠಗಳಿಗೆ ಆಗಾಗ ಬರುತ್ತಿರುವ ಯಾವತ್ತೂ ಜನಸಮುದಾಯವು ಶ್ರೀ ಸ್ವಾಮಿಗಳ ವಚನಾಮೃತ ಬಿಂದುಗಳನ್ನು ಯಥೋಚಿತವಾಗಿ ಪಡೆದು ಧನ್ಯತೆಯನ್ನು ತಾಳುತ್ತಿತ್ತು. ಉಡುಪಿ ಮೊದಲಾದ ಕಡೆಗಳಂತೆ ಚಿತ್ರಾಪುರಮಠಕ್ಕೆ ಪ್ರತ್ಯೇಕ ಆಸ್ತಿಗಳಾಗಲೀ ಶಿಷ್ಯಜನಾವಳಿಗಳಾಗಲೀ ಇರುವದಿಲ್ಲ. ಆದರೆ ಇಲ್ಲಿಗೆ ಪರಿಸರದ ಕುಳಾಯಿ, ಹೊಸಬೆಟ್ಟು, ಇಡ್ಯ, ಸುರತ್ಕಲ್ಲು, ಚೇಳಾರು, ಮಧ್ಯ, ಬಾಳ, ಕುತ್ತೆತ್ತೂರು, ಕಳವಾರು, ಪೇಜಾವರ, ಬೈಕಂಪಾಡಿ, ಪಣಂಬೂರು, ತಣ್ಣೀರ್ಬಾವಿ, ಬೋಳೂರು ಮೊದಲಾದ ಹಲವು ಗ್ರಾಮಾಂತರಗಳಿಂದ ಶ್ರೀ ದೇವಳಕ್ಕೆ ಬರುವ ಭಕ್ತರಾದ ಅವೆಲ್ಲ ಜಾತಿಗಳ ಜನರು ಇಲ್ಲಿಯ ಸ್ವಾಮಿಗಳೆಂದರೆ ಶ್ರೀ ದುರ್ಗಾಂಬಿಕೆಯ ಬಾಹ್ಯ ಚರಮೂರ್ತಿಗಳೆಂದು ಭಾವಿಸುತ್ತಿದ್ದರು.

ಶ್ರೀಗಳವರು [illegible] ರಲ್ಲಿ ಮತ್ತು [illegible] ರಲ್ಲಿ ಶ್ರೀ ದೇವಳದಲ್ಲಿ ಅಷ್ಟಗಂಧ ಪ್ರತ್ಯೇಕಲಶಾಭಿಷೇಕಗಳನ್ನು ನಡೆಯಿಸಿದರು. [illegible] ರಲ್ಲಿ ಇವರಿಗೆ "ರಾಜಗುರು"

ಮೂಡಿತ್ತು, ಆ ಪರಿಸ್ಥಿತಿಯಲ್ಲಿ ಇಲ್ಲಿ ಚಿಕ್ಕ ಸ್ವಾಮಿಗಳೊಬ್ಬರ ಪಟ್ಟವಾಗಿತ್ತು. ಆ ಶ್ರೀ ವಿಬುಧಪ್ರಿಯತೀರ್ಥರು ಐದು ವರ್ಷಗಳ ಮೇಲೆ ಅಕಾಲಿಕವಾಗಿ ನಿರ್ಯಾಣ ರಾದರು. ಆದರಿಂದ ಶ್ರೀ ವಿದ್ಯಾಪೂರ್ಣತೀರ್ಥರಲ್ಲಿ ವೈರಾಗ್ಯವು ಹೆಚ್ಚಳಗೊಂಡಿತ್ತು. ಹಲವಾರು ಬಾರಿ ಭಾಗವತಸಪ್ತಾದಿಗಳನ್ನು ಕೈಕೊಂಡರು.

೧೯೩೭—೩೯ ರ ಮೂರು ವರ್ಷಗಳಲ್ಲಿಯೂ ಚಾತುರ್ಮಾಸ್ಯ ಕಾಲಕ್ಕೆ ದಿನಾಲೂ ೨ ಕುಡತೆ ಹಾಲು (ಮೊಸರು) ಸೇವಿಸುವ ನೈಷ್ಠಿಕ ಉಪವಾಸವ್ರತವನ್ನು ಪೂರೈಸಿದರು. ಆಗ ಇವರು ಕೇವಲ ಅಸ್ಥಿಪಂಜರವಷ್ಟು ಕೃಶರಾಗಿದ್ದರೆಂದು ಮಠ ದಲ್ಲಿರುವ ಭಾವಚಿತ್ರದಿಂದ ಸುಸ್ಪಷ್ಟವಾಗುತ್ತದೆ. ಆದರೆ ದೇವರ ಪೂಜೆ, ಗ್ರಂಥಪಠನ ಮೊದಲಾದ ನಿತ್ಯ ಸತ್ಕರ್ಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಶ್ರೀಗಳಿಂದ ಪ್ರಾರಂಭದ ಭಕ್ತಿ ಜ್ಞಾನಗಳ ಅಭ್ಯಾಸವನ್ನು ಪಡೆದ ಶ್ರೀ ಜಿತೇಂದ್ರಿಯಾಚಾರ್ಯ (ಕಾಶಿ), ವೆಂಕಟರಾಯಾಚಾರ್ಯ (ಸುರತ್ಕಲ್ಲು), ಶ್ರೀಧರಾಚಾರ್ಯ (ಹೊಸಬೆಟ್ಟು), ಮೊದಲಾದವರು ತಮ್ಮ ವಿದ್ವತ್ತಿನಿಂದ ಪ್ರಸಿದ್ಧರಾದರು.

೧೯೩೯ ಹಾಗೂ ೧೯೪೯ ರಲ್ಲಿ ಭಕ್ತಬಂಧುಗಳಪೇಕ್ಷೆಯಂತೆ ಶ್ರೀಗಳವರು ಕರ್ನಾಟಕದ ಹಲವೆಡೆಗಳಲ್ಲಿ ಸಂಚರಿಸಿದ್ದರು. ಅನಂತರ ತಮ್ಮ ವಯೋಧಿಕ್ಯವ ದೆಸೆ ಯನ್ನೂ ಶ್ರೀ ದೇವಳ ಮಠಗಳ ಆಡಳಿತೆಯ ಸೌಲಭ್ಯವನ್ನೂ ಮುಂದಾಲೋಚಿಸಿ ೧೯೫೩ ರಲ್ಲಿ ಶ್ರೀ ವಿದ್ಯಾವಲ್ಲಭತೀರ್ಥರನ್ನು ಪಟ್ಟಕಟ್ಟಿದರು.

ದೈಹಿಕ-ಮಾನಸಿಕ ಶುದ್ಧತೆಯನ್ನು ಸದಾ ಕಾಪಾಡಿದ, ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಸದಾ ಅಳವಡಿಸಿದ, ಸದಾ ನಿರಾಡಂಬರ ಜೀವನವನ್ನು ಸಾಧಿಸಿದ ಶ್ರೀ ವಿದ್ಯಾಪೂರ್ಣತೀರ್ಥರು ಈ ಶತಕದಲ್ಲಿ ಬಾಳಿದ ಸನ್ಯಾಸಿಗಳಲ್ಲಿ ಏಕೈಕ ಗೌರವಾಸ್ಪದವಾಗಿದ್ದರು.

ಇವರು ತಾ. ೪—೧೨—೧೯೬೨ ನೆಯ ರಾತ್ರಿ ೧೧-೧೫ ಕ್ಕೆ ಪರಂಧಾಮಕ್ಕೆ ನಿರ್ಯಾಣರಾದರು.



## ವೈಷ್ಣವ ಸಮಾಜದ ಶಕಪುರುಷರಾದ

# ಶ್ರೀ ಸತ್ಯಧ್ಯಾನ ತೀರ್ಥರು



ಇತ್ತೀಚಿನ ಕಾಲದಲ್ಲಿ ಪ್ರಾತಃಸ್ಮರಣೀಯರಾದ ಶ್ರೀ ಸತ್ಯಧ್ಯಾನತೀರ್ಥರೊಬ್ಬರು ಯುಗಪ್ರವರ್ತಕ ಪುಣ್ಯಾತ್ಮರಾದರು. ಇಪ್ಪತ್ತನೇ ಶತಮಾನದ ಪೂರ್ವಾರ್ಧಕ್ಕೆ ಶ್ರೀ ಸತ್ಯಧ್ಯಾನ ಯುಗ ಎಂದು ಕರೆಯುವಂತಾಯಿತು. ಪ್ರತಿಯೊಬ್ಬ ಮಾಧ್ವನೂ ಈ ಕಾಲವನ್ನು ಸತ್ಯಧ್ಯಾನರ ಸುವರ್ಣಯುಗ ಎಂದು ಹೆಮ್ಮೆಯಿಂದ ಹೇಳುವಷ್ಟು ಉಜ್ವಲವಾಗಿದ್ದಿತು ಆ ಕಾಲ ಖಂಡ.

ಕಲಿಯುಗವು ಕೃತಯುಗವಾಯಿತು. ಸಾವಿರಾರುಜನ ಮಾಧ್ವ ಪಂಡಿತರು ಸುಧಾದಿ ಗ್ರಂಥಗಳ ಪಾಠ ಪ್ರವಚನ ಪರೀಕ್ಷೆಯಾಂಪರಾಗಿ ಶ್ರೀ ಮಠದಲ್ಲಿ ಅಧ್ಯಯನ ಮಾಡಿ ಹೊರಬಿದ್ದರು. ಹತ್ತುಹದಿನಾರುಜನ ಶ್ರೀಪಾದಂಗಳವರು ತಮ್ಮ ಪೀಠಾಧಿಪತಿತ್ವದ ಹಮ್ಮುಬಿಮ್ಮುಗಳನ್ನು ಬಿಟ್ಟು ಅವರೆದುರು "ಶಿಷ್ಯಸ್ತೇಹಂ" ಎಂದು ಶಾಂತಿ ಹಾಕಿ ಸುಧಾದಿಗ್ರಂಥಗಳನ್ನು ಓದಿ ಧನ್ಯರಾದರು.

ಆಸೇತು ಹಿಮಾಚಲ ಪರ್ಯಂತ ಊರೂರಿಗೆ ದ್ವೈತ ಮತದ ದುಂದುಭಿಯು ಮೊಳಗಿತು. ಅದ್ವೈತಮತವು ಅವೈದಿಕ, ಮಾಯಾವಾದವು ಪ್ರಚ್ಛನ್ನ ಬೌದ್ಧ ಮತ ಎಂದುಸಾರಿ ದೇಶದಲ್ಲಿಯ ಎಲ್ಲ ಅದ್ವೈತ ಮತದ ಪಂಡಿತರನ್ನೂ ತಾವಿದ್ದಲ್ಲಿ ಕರೆಯಿಸಿ ಕೊಂಡು ಅಥವಾ ಅವರಿದ್ದಲ್ಲಿಗೇ ಹೋಗಿ ವಾಕ್ಯಾರ್ಥ ಮಾಡಿ ಗೆದ್ದು ಕೊನೆಗೆ— "ನಿರ್ವೈರ ಮುರ್ವೀತಲಂ" ಎಂದು ಘೋಷಿಸಲಾಯಿತು.

ನಂತರ ಅನ್ನದಾನದಿಂದ ವೈಷ್ಣವಸ್ವಾಮಿಗಳೆಂದರೆ ಜನಸಾಮಾನ್ಯರಿಗೆಲ್ಲ ಅನ್ನ ಬ್ರಹ್ಮದ ಸಾಕ್ಷಾತ್ಕಾರ ಮಾಡಿಸುವ ಪುಣ್ಯಾತ್ಮರೆಂದು ಎಲ್ಲ ಜಾತಿಯವರೂ ಕೊಂಡಾಡು ವಂತಾಯಿತು.

ಪ್ರತಿವರ್ಷ ನೆರವೇರುವ ಮಹಾಸಮಾರಾಧನೆ ವಿದ್ವತ್‌ಸಭೆಗಳಿಂದ ೨೦-೩೦-೪೦ ಸಾವಿರ ವೈಷ್ಣವರೆಲ್ಲರೂ ಏಕತ್ರಸೇರಿ ಯಾವ ಘಟನೆ, ಠರಾವು, ಮಂಡಲ ಕಮೀಟಿ ಗಳಿಲ್ಲದೇ ಅಖಿಲ ಭಾರತದ ಮಾಧ್ವರಲ್ಲಿ ಸ್ನೇಹಸಂಘಟನೆಯು ತಾನಾಗಿ ರೂಪಗೊಳ್ಳು ವಂತಾಯಿತು. ವೈಷ್ಣವ ಸಮಾಜದ ಪ್ರಚಂಡಶಕ್ತಿ ಹಾಗೂ ಐಕ್ಯಮತ್ಯವು ಜಗತ್ತಿನ ನಿದರ್ಶನಕ್ಕೆ ಬರುವಂತಾಯಿತು.

ಸಭೆಯಲ್ಲಿ ಪ್ರತಿವರ್ಷವೂ ಪಂಡಿತರಿಗೂ ವಿದ್ಯಾರ್ಥಿಗಳಿಗೂ ವಿಪುಲವಾಗಿ ದಕ್ಷಿಣೆ ದಾನ,ಬೆಳ್ಳಿತಂಬಿಗೆ, ಥಾಲಿ,ತಟ್ಟೆ, ಗಿಂಡಿ, ಶ್ರೀಮುದ್ರೆ, ಶಾಲಜೋಡಿ ಮುಂತಾದವುಗಳನ್ನು ಧಾರಾಳವಾಗಿ ಕೊಡುವದರಿಂದ ಸಂಸ್ಕೃತ ಓದಲು ಜನರಿಗೆಲ್ಲ ಉತ್ಸಾಹಕವಾಗಿ ಕಲಿಯ ಪ್ರಭಾವದಿಂದ ಮುಗ್ಗರಿಸಿ ಬಂದಿರುವ ಶಾಸ್ತ್ರವಿದ್ಯೆಗೆ ಮತ್ತೆ ನೂರಿನ್ನೂರ ವರ್ಷ ಜೀವ ದಾನವಾಗಿ ಸಂಸ್ಕೃತ ಸಂಸಾರದಲ್ಲಿ ಮತ್ತೊಮ್ಮೆ ಭೋಜವಿಕ್ರಮರ ಸುವರ್ಣ ಶತಕವು ಮರಳಿ ಮೆರೆಯುವಂತಾಯಿತು. ಸಮಾಜದಲ್ಲಿಯ ಮಠ ಮತಗಳ ಬೇಲಿಗಳೆಲ್ಲವೂ ಕಳಚಿದವು.

ಎಲ್ಲ ಮಠದ ಶಿಷ್ಯರೂ ಶ್ರೀ ಶ್ರೀಗಳವರಲ್ಲಿ ಬಂದು ಶಾಂತಿ ಹಾಕಿ ಸುಧಾದಿ ಗ್ರಂಥ ಗಳನ್ನು ಓದಿ ಘನಪಂಡಿತರಾಗಿ " ಸರ್ವೇ ಶಿಷ್ಯಾಃ ಸತ್ಯವವತೀ ಸುತಸ್ಯ " ಎಂಬಂತೆ ಶ್ರೀ ಸತ್ಯಧ್ಯಾನರ ಶಿಷ್ಯರೆಂಬ ಹೆಸರಿನಿಂದ ಜಗತ್ತಿನಲ್ಲಿ ಮೆರೆಯುತೊಡಗಿದರು.

ಅನೇಕ ಶಂಕರ ರಾಮಾನುಜ ಮತದ ನಿಷ್ಪಕ್ಷಪಾತಿ ಅನುಯಾಯಿಗಳು ಶ್ರೀಗಳವರ ಮುಖದಿಂದ ವೇದಾಂತ ಪ್ರವಚನ ಕೇಳಿ ಪ್ರಭಾವಿತರಾಗಿ ವೈಷ್ಣವ ದೀಕ್ಷೆ ಯನ್ನು ಪಡೆದರು. ಭಸ್ಮ ಅಳಿಸಿ ಗೋಪೀಚಂದನ ಧರಿಸಿ ವೈಷ್ಣವ ದೀಕ್ಷೆ ಪಡೆದು ಶ್ರೀಗಳಿಂದ ತಪ್ತಮುದ್ರೆ ತೆಗೆದುಕೊಂಡು ಮಾಧ್ವರಾದರು.

ಆ ಕಾಲದಲ್ಲಿ ಉತ್ತರಾದಿ ಮಠವೊಂದು ಮಹಾ ವಿಶ್ವವಿದ್ಯಾಲಯವೇ ಆಗಿದ್ದಿತು. ಯಾವ ವಿಶ್ವವಿದ್ಯಾಲಯದಲ್ಲಿಯೂ ಹೀಗೆ ಸಾವಿರಾರು ಜನ ವಿದ್ಯಾರ್ಥಿಗಳಿಗೆ ಅನ್ನ ವಸ್ತ್ರ ಬೆಳ್ಳಿ ಬಂಗಾರ ಹೊಲಮನೆ ಮಾಸಾಶನ ವರ್ಷಾಶನ ಹಾಕಿಕೊಟ್ಟು ವಿದ್ಯಾದಾನ ಮಾಡಿ ಪಂಡಿತ ಪ್ರಕಾಂಡರನ್ನಾಗಿ ಮಾಡಿದ ಉದಾಹರಣೆಗಳು ಯಾವ ರಾಜ ಮಹಾ ರಾಜ, ಸ್ವಾಮಿಗಳ, ಪೀಠಾಧಿಪತಿಗಳ ಕಾಲದಲ್ಲಿಯೂ ಆದದ್ದರ ಉಲ್ಲೇಖ ಈ ವರೆಗೂ ದೊರತಿಲ್ಲ.

ಇಂಥ ಶಕಪುರುಷರ ಚಾರುಚಾರಿತ್ರ್ಯ ಸಂಪನ್ನವಾದ ಪಾವನ ಜೀವನವನ್ನು ಬಂಗಾರ ಅಕ್ಷರಗಳಿಂದ ರೇಖಿಸಿ ಇತಿಹಾಸವು ಉಜ್ವಲವಾಗಿದೆ. ಈ ಇಪ್ಪತ್ತನೆ ಶತ ಮಾನವು ಸೌಭಾಗ್ಯ ಸಂಪನ್ನವಾಗಿದೆ.

ಶ್ರೀ ಸತ್ಯಧ್ಯಾನರು ಸುಪ್ರಸಿದ್ಧ ಕೊರ್ಲಹಳ್ಳಿ ಆಚಾರ್ಯರ ಮನೆತನಕ್ಕೆ ಸೇರಿದವರು. ಉತ್ತರಾದಿ ಮಠದ ನಾಮಾಂಕಿತ ಸ್ವಾಮಿಗಳಾದ ಶ್ರೀ ಸತ್ಯವೀರರು ಈ ಮನೆತನಕ್ಕೆ ಸೇರಿದವರು. ಶ್ರೀ ಸತ್ಯಧ್ಯಾನರ ಪೂರ್ವಾಶ್ರಮದ ಹೆಸರು ಸೇತು ರಾಮಾಚಾರ್ಯರು. ಇವರ ತಂದೆಯ ಹೆಸರು ಶ್ರೀ ಜಯರಾಮಾಚಾರ್ಯರು. ತಾಯಿಯ ಹೆಸರು ಕೃಷ್ಣಾಬಾಯಿಯವರು. ಇವರ ಊರು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ. ಶ್ರೀ ಸತ್ಯಧ್ಯಾನರ ಪೂರ್ವಾಶ್ರಮದ ತಂದೆಯವರು ಉತ್ತರಾದಿ ಮಠದ ಶ್ರೀ ಸತ್ಯಧೀರರೆಂದು ಪ್ರಖ್ಯಾತರಾದ ಸ್ವಾಮಿಗಳಾಗಿದ್ದರು. ಪೂರ್ಣಪ್ರಜ್ಞರ ಪರಮ ಹಂಸ ಪೀಠವು ಶ್ರೀ ಸತ್ಯಧ್ಯಾನರಿಗೆ ಪರಂಪರೆಯಾಗಿ ಬಂದದ್ದು. ಶ್ರೀ ಸತ್ಯಧ್ಯಾನರ ತಂದೆಯವರಾದ ಶ್ರೀಜಯರಾಮಾಚಾರ್ಯರು ವ್ಯಾಕರಣ, ವೇದಾಂತಗಳಲ್ಲಿ ಅಗಾಧ ಪಂಡಿತರಾಗಿದ್ದರು. ಶ್ರೀ ಜಯರಾಮಾಚಾರ್ಯರಿಗೆ ಮೊದಲು ಹೆಣ್ಣುಮಕ್ಕಳೇ ಆದರು. ಪುತ್ರ ಸಂತಾನವಿರಲಿಲ್ಲ. ತಂದೆತಾಯಿಗಳು ಪುತ್ರಸಂತಾನಾರ್ಥವಾಗಿ ಅನೇಕ ವ್ರತ ನಿಯಮಾದಿಗಳನ್ನು ಮಾಡಿದರು. ರಾಮೇಶ್ವರ ಯಾತ್ರೆಯನ್ನು ಮಾಡಿಕೊಂಡು ಬಂದರು. ಶ್ರೀ ಜಯರಾಮಾಚಾರ್ಯರು ಶ್ರೀ ವಾದಿರಾಜಸ್ವಾಮಿಗಳ ಪರಮ ಭಕ್ತ ರಾಗಿದ್ದರು. ರಾಜರ ಅನುಗ್ರಹವೂ ಆಯಿತು. ಮುಂದೆ ಶ್ರೀ ಜಯರಾಮಾಚಾರ್ಯರಿಗೆ ಪುತ್ರಸಂತಾನವಾಯಿತು. ಈ ಮಗುವಿಗೆ ಸೇತುರಾಮಾಚಾರ್ಯರೆಂದು ನಾಮಕರಣ ಮಾಡಿದರು. ಶ್ರೀ ಸೇತುರಾಮಾಚಾರ್ಯರು ತಂದೆ ತಾಯಿಗಳಿಗೆ ಏಕಮಾತ್ರ ಪುತ್ರರು. ತಂದೆತಾಯಿಗಳ ಕಣ್ಮಣಿಯಾಗಿ ಬೆಳೆದರು.

ಒಂದು ದಿನ ಮಗು ಚಿಕ್ಕದಿದ್ದಾಗ ತಾಯಿ ಮಲಗಿಸಿ ನೀರು ತರಲಿಕ್ಕೆ ಹೋಗಿ ದ್ದರು. ಮಗುವಿನ ಸಣ್ಣ ವಯಸ್ಸಿನ ಅಕ್ಕ ಅದರ ಹತ್ತಿರವಿದ್ದಳು. ಎಲ್ಲಿಂದಲೋ ಒಂದು ದೊಡ್ಡ ಸರ್ಪ ಬಂದು ಹೆಡೆ ತೆಗೆದು ಮಗುವಿನ ಹತ್ತಿರ ಆಡುತ್ತಲಿತ್ತು. ಮಗುವೂ ಕೂಡ ಸರ್ಪದ ಕೂಡ ಕೈಕಾಲು ಮೇಲೆ ಕೆಳಗೆ ಮಾಡಿ ನಲಿಯುತ್ತಿತ್ತು. ಇದನ್ನು ನೋಡಿದ ಆ ಹೆಣ್ಣು ಮಗು ಗಾಬರಿಯಾಗಿ ಅಳುತ್ತ ತಾಯಿಯನ್ನು ಕೂಗಹತ್ತಿತು. ತಾಯಿಯು ಬಂದು ಈ ದೃಶ್ಯವನ್ನು ನೋಡಿ ಹೌಹಾರಿದಳು. ಅನೇಕ ಜನರು ಬಂದು ಸೇರಿದರು. ಏನು ಮಾಡಲೂ ತಿಳಿಯಲಿಲ್ಲ. ಅವರಲ್ಲಿ ಒಬ್ಬ ಹಿರಿಯ ಆಚಾರ್ಯರು ಬಂದು ಶ್ರೀ ಜಯರಾಮಾಚಾರ್ಯರಿಗೆ "ಒಂದು ಬಟ್ಟಲು ಹಾಲು ತಂದು ಇಡಿ. ಗಾಬರಿಯಾಗಬೇಡಿರಿ. ಪರಮಾತ್ಮನ ಧ್ಯಾನ ಮಾಡಿರಿ" ಎಂದು ಹೇಳಿದರು. ಆಚಾರ್ಯರು ಹಾಲು ತಂದು ಇಟ್ಟ ಕೂಡಲೇ ಆ ಸರ್ಪವು ಒಂದು

ಹಾಲನ್ನು ಕುಡಿದು ಹೋಗಿಬಿಟ್ಟಿತು. ಆಗ್ಗೆ ಆ ಹಿರಿಯ ಆಚಾರ್ಯರು "ಈ ಮಗು ಸಾಮಾನ್ಯವಾದುದಲ್ಲ. ಅಲೌಕಿಕವಾದ ಮಹಾಪುರುಷನಾಗುತ್ತಾನೆ" ಎಂದು ಹೇಳಿದರು.

ಶ್ರೀ ಸೇತುರಾಮಾಚಾರ್ಯರಿಗೆ ಎಂಟು ವರ್ಷಕ್ಕೆ ಬಹು ಸಂಭ್ರಮದಿಂದ ಉಪನಯನವನ್ನು ಮಾಡುತ್ತಾರೆ. ಉಪನಯನವಾದಮೇಲೆ ಶ್ರೀ ಸೇತುರಾಮಾಚಾರ್ಯರು ಪೂಜ್ಯಪಾದರಾದ ತಮ್ಮ ತಂದೆಯವರ ಹತ್ತಿರವೇ ವ್ಯಾಸಂಗ ಮಾಡುತ್ತಾರೆ. ಮಹಾಪ್ರತಿಭಾಶಾಲಿಗಳಾದ್ದರಿಂದ ಪಾಠಗಳು ತೀವ್ರ ಗತಿಯಿಂದ ನಡೆಯುತ್ತಿದ್ದವು. ವ್ಯಾಕರಣ ವೇದಾಂತಗಳನ್ನು ತಮ್ಮ ತಂದೆಯವರ ಹತ್ತಿರವೇ ಮುಗಿಸಿದರು. ನ್ಯಾಯಶಾಸ್ತ್ರವನ್ನು ಶ್ರೀರಂಗಂಪೇಟ ರಾಮಾಚಾರ್ಯರ ಹತ್ತರ ಪರಿಶೀಲಿಸಿದರು. ಸ್ವಲ್ಪೇ ದಿನಗಳಲ್ಲಿ ನ್ಯಾಯವೇದಾಂತಗಳಲ್ಲಿ ಅಪ್ರತಿಮ ಪಂಡಿತರಾದರು.

ಚಿಕ್ಕೋಡಿಯ ಗಣ್ಯಗೃಹಸ್ಥರಾದ ದಾತಾರರ ಮನೆತನದ ಶ್ರೀ ಸೌ. ಸೀತಾಬಾಯಿ ಎಂಬವರ ಕೂಡ ಇವರ ವಿವಾಹವಾಯಿತು. ಶ್ರೀ ಜಯರಾಮಾಚಾರ್ಯರು ಉತ್ತರಾದಿ ಮಠದ ಶ್ರೀಗಳಾದ ಮೇಲಂತೂ ಮಠ ವಿಶ್ವವಿದ್ಯಾನಿಲಯವಾಯಿತು. ದೇಶದಲ್ಲಿರುವ ಅನೇಕ ಪಂಡಿತರು ಶ್ರೀಗಳವರ ದರ್ಶನಾದಿಗಳಿಗೆ ಬಂದಾಗ ಶ್ರೀ ಸೇತುರಾಮಾಚಾರ್ಯರು ಅವರ ಸಂಗಡ ವಾಕ್ಯಾರ್ಥ ಮಾಡಬೇಕು.

ಆ ಕಾಲಕ್ಕೆ ಪ್ರಸಿದ್ಧರಾದ ಶ್ರೀ ಚಿಕ್ಕೇರೂರ ಸ್ವಾಮಿರಾಜಾಚಾರ್ಯರು, ಗೌಡಗಿರಿ ವೆಂಕಟರಮಣಾಚಾರ್ಯರು, ಸೂರಟೂರ ಭೀಮಸೇನಾಚಾರ್ಯರು, ಗೋವಿಂದ ಕೃಷ್ಣಾಚಾರ್ಯರು ಮುಂತಾದ ಹಿರಿಯ ವಿದ್ವಾಂಸರು ಶ್ರೀ ಸೇತುರಾಮಾಚಾರ್ಯರ ತರ್ಕಸರಣಿ, ಕುಶಾಗ್ರಬುದ್ಧಿ ವಾಕ್ಯಾರ್ಥಪಟುತ್ವಕ್ಕೆ ತಲೆದೂಗುತ್ತಿದ್ದರು.

ನಿತ್ಯವೂ ಶಿಷ್ಯರಿಗೆ ಉದ್ಗ್ರಂಥಗಳ ಪಾಠ–ಪ್ರವಚನ ನಡೆಯಿಸುತ್ತಿದ್ದರು. ಶ್ರೀಗಳವರ ಸಂಚಾರದಲ್ಲಿ ತ್ರಿಮತಸ್ಥ ಪಂಡಿತರನ್ನು ಕರೆಯಿಸಿ ವಾಕ್ಯಾರ್ಥಮಾಡುವದು ಇವರಿಗೆ ಅಭ್ಯಾಸವಾಗಿ ಬಿಟ್ಟಿತ್ತು. ಐಶ್ವರ್ಯ, ಪಾಂಡಿತ್ಯ ಮೇಲೆ ಶ್ರೀಪಾದ ಪುತ್ರರು ಕೇಳುವದೇನು ! ಗೌರವ ಪ್ರತಿಷ್ಠೆಗಳು ಹೆಚ್ಚಿದವು.

ಶ್ರೀ ಸತ್ಯಧೀರರು ಶ್ರೀ ಸತ್ಯಜ್ಞಾನರಿಗೆ ತಮ್ಮ ತರುವಾಯ ಪೀಠವನ್ನು ಕೊಟ್ಟು ವೃಂದಾವನಸ್ಥರಾದರು.

ಶ್ರೀ ಸತ್ಯಜ್ಞಾನರು ( ಶ್ರೀ ಕಿನ್ನಾಳ ಜಯಾಚಾರ್ಯರು ) ಪೂರ್ವಾಶ್ರಮದಲ್ಲಿ ಶ್ರೀ ಸೇತುರಾಮಾಚಾರ್ಯರ ಹತ್ತರವೇ ಚಂದ್ರಿಕಾದಿ ಗ್ರಂಥಗಳನ್ನು ಓದುತ್ತಲಿದ್ದರು. ಶ್ರೀ ಕಿನ್ನಾಳ ಆಚಾರ್ಯರು ಮಹಾ ಸಾತ್ವಿಕರೂ, ಪಂಡಿತರೂ, ಯೋಗ್ಯರೂ ಎಂದು ಕಂಡುಬಂದದ್ದರಿಂದ ಶ್ರೀ ಸತ್ಯಧೀರರು ಕಿನ್ನಾಳ ಆಚಾರ್ಯರಿಗೇ ಪೀಠವನ್ನುಕೊಟ್ಟರು.

ಶ್ರೀ ಸತ್ಯಜ್ಞಾನರು ಮಹಾ ತಪಸ್ವಿಗಳೂ, ವೈರಾಗ್ಯಶಾಲಿಗಳೂ ಆಗಿದ್ದರು. ಮಠದ ಸರ್ವಾಧಿಕಾರವನ್ನು ಶ್ರೀ ಸೇತುರಾಮಾಚಾರ್ಯರಿಗೆ ಒಪ್ಪಿಸಿ ತಾವು ಶ್ರೀರಾಮ ದೇವರ ಪೂಜೆಯಲ್ಲಿ ನಿರತರಾಗಿರುತ್ತಿದ್ದರು.

ಶ್ರೀ ಸತ್ಯಜ್ಞಾನರು ೭ ವರ್ಷ ಉತ್ತರಾದಿ ಮಠದ ಪೀಠವನ್ನಲಂಕರಿಸಿ ರಾಜ ಮಹೇಂದ್ರಿಯಲ್ಲಿ ವೃಂದಾವನಸ್ಥರಾದರು.

ಶ್ರೀ ಸತ್ಯಜ್ಞಾನರು ಗುರುಪುತ್ರರಾದ ಶ್ರೀ ಸೇತುರಾಮಾಚಾರ್ಯರಿಗೇ ಪ್ರಣವೋಪದೇಶ ಮಾಡಿ ತಮ್ಮ ತರುವಾಯ ಶ್ರೀ ಸತ್ಯಧ್ಯಾನರೆಂದು ನಾಮಕರಣಮಾಡಿ ಉತ್ತರಾದಿ ಮಠದ ಸರ್ವಜ್ಞಪೀಠಾರೋಹಣ ಮಾಡಿಸಿದರು.

ಶ್ರೀ ಸತ್ಯಧ್ಯಾನರು ತಮ್ಮ ಗುರುಗಳ ಆರಾಧನೆಯನ್ನು ಬಹು ವೈಭವದಿಂದ ವರ್ಷವರ್ಷವೂ ಆಚರಿಸುತ್ತಿದ್ದರು. ಈ ಮಹಾ ಸಮಾರಾಧನೆಗಳಿಗೆ ಸುಮಾರಾಗಿ ಪ್ರತಿವರ್ಷ ಕನಿಷ್ಠ ೨೦-೨೫ ಸಹಸ್ರ ಜನರು ಸೇರುತ್ತಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಸಮಾರಂಭದಿಂದ ವೈಷ್ಣವರೆಲ್ಲರೂ ಏಕತ್ರ ಸಮ್ಮಿಲಿತರಾಗುತ್ತಿಪ್ಪುದರಿಂದ ಒಂದು ಸಂಘಟನೆ, ಸಿದ್ಧಾಂತೋಪದೇಶಗಳಿಂದ ಜನತೆಯಲ್ಲಿ ಮಾಧ್ವ ಸಾಂಪ್ರದಾಯದ ಬಗ್ಗೆ ವಿಶೇಷ ಆಸಕ್ತಿ ಉತ್ಪನ್ನವಾಯಿತು.

ನೂರಾರು ಜನ ದಿಗ್ಗಜ ಪಂಡಿತರನ್ನು ಸಿದ್ಧಪಡಿಸಿದರು. ಇವರ ಶಿಷ್ಯವಾತ್ಸಲ್ಯ ಅವರ್ಣನೀಯ. ಪ್ರಥಮ ಶ್ರೇಣಿಯ ವಿದ್ಯಾರ್ಥಿಗಳಿಗೆ ಚಿನ್ನದ ಕಡಗಗಳನ್ನು ಹಾಕಿಸಿ ಸಮೀಚಿನವಾದ ಊಟ, ಉಪಹಾರ, ವಸ್ತ್ರಗಳನ್ನು ಕೊಟ್ಟು ಮಠದಲ್ಲಿಟ್ಟುಕೊಂಡು ಪಾಠ ಹೇಳಿ ವಿದ್ವಾಂಸರನ್ನಾಗಿ ಮಾಡಿದರು.

ಗಲಗಲಿ ಕೂರ್ಮಾಚಾರ್ಯರು, ಗಲಗಲಿ ರಾಮಾಚಾರ್ಯರು, ಪ್ರಮ್ಯವನ್ನಾಚಾರ್ಯ ವರವೇಡಿ, ಮಾಹುಲಿ ಗೋಪಾಲಾಚಾರ್ಯ, ಗುರಾಚಾರ್ಯ ಜೋಶಿ, ಕೃಷ್ಣಾಚಾರ್ಯ ಪಾಂಡುರಂಗಿ, ಹುಲಗಿ ಹುಚ್ಚಾಚಾರ್ಯರು, ವರಖೇಡ ನರಸಿಂಹಾಚಾರ್ಯರು, ಮಳಗಿ ವೇದವ್ಯಾಸಾಚಾರ್ಯರು, ಪಾಂಡುರಂಗಿ ಜಯಾಚಾರ್ಯರು, ಉಡುಸಿ ಕಟ್ಟೇ ಶ್ರೀನಿವಾಸಾಚಾರ್ಯರು ಇನ್ನೂ ಅನೇಕ ಇಂಥ ಪಂಡಿತರನ್ನು ತಯಾರಿಸಿದರು.

ಇವರ ಶಿಷ್ಯಪ್ರಶಿಷ್ಯರೇ ಇಂದು ಎಲ್ಲೆಡೆಯಲ್ಲಿಯೂ ಪಾಠಪ್ರವಚನ ಮಾಡುತ್ತಲಿದ್ದಾರೆ. ಸುಧಾದಿ ಗ್ರಂಥಗಳ ಪಾಠದಲ್ಲಿ ಶಾಬ್ದಬೋಧಕ್ರಮಗಳನ್ನು ಪ್ರಾರಂಭಿಸಿದವರು ಶ್ರೀ ಸತ್ಯಧ್ಯಾನರು.

# ಶ್ರೀ ಸತ್ಯಧ್ಯಾನತೀರ್ಥರ ಸನ್ಯಾಸಿ ಶಿಷ್ಯರು

ಈ ಜಗತ್ತಿನಲ್ಲಿ ಪ್ರಾಯಃ ಸನ್ಯಾಸಿಗಳು ಬೇರೆ ಮತದ ಸನ್ಯಾಸಿಗಳಲ್ಲಿ ಶಿಷ್ಯರಾಗಿ ಶಾಸ್ತ್ರಾಧ್ಯಯನವನ್ನು ಮಾಡಲಿಕ್ಕೆ ಸಹಸಾ ಹೋಗುವದಿಲ್ಲ. ಎಷ್ಟೋ ದೊಡ್ಡ ಮನೆತನದ ಗೃಹಸ್ಥರಾದ ಆಚಾರ್ಯರು ಕೂಡ ಇನ್ನೊಂದು ಮನೆತನಸ್ಥ ಆಚಾರ್ಯ ರಲ್ಲಿ ಸುಧಾದಿ ಗ್ರಂಥಗಳನ್ನು ಶಾಂತಿ ಹಾಕಿ ಅಧ್ಯಯನ ಮಾಡುವದಿಲ್ಲ. ಅಂದ ಬಳಿಕ ಯತಿಗಳ ವಿಷಯದಲ್ಲಿ ಕೇಳುವದೇನು !

ಸಾಮಾನ್ಯ ಯತಿಗಳೇ ಹೀಗಿರುವಾಗ ಸರ್ವಜ್ಞ ಪೀಠದ ಪರಮಹಂಸ ಪದಸ್ಥ ರಾದ ಶ್ರೀಪಾದಂಗಳವರ ಬಗೆಗಂತೂ ವಿಚಾರಿಸುವದೇ ಬೇಡ. ಅವರು ಎಂದೂ ಯಾವ ಪರಪೀಠಾಧಿಪತಿಗಳ ಬಳಿಗೂ ಹೋಗುವದಿಲ್ಲ "ಶಿಷ್ಯಸ್ತೇಹಂ" ಎನ್ನುವದಿಲ್ಲ. ಪಾಠವನ್ನು ಕೇಳುವದಿಲ್ಲ.

ಆದರೆ ಮಾಧ್ವರ ಇತಿಹಾಸದಲ್ಲಿ ಇದಕ್ಕೆ ಅಪವಾದಗಳು ಎರಡು.

(೧) ಶ್ರೀ ಚಂದ್ರಿಕಾಚಾರ್ಯರು (೨) ಶ್ರೀ ಸತ್ಯಧ್ಯಾನತೀರ್ಥರು.

ಶ್ರೀ ಚಂದ್ರಿಕಾಚಾರ್ಯರು ವಿಜಯನಗರದಲ್ಲಿ ರಾಜಾಶ್ರಯದ ಬಲದಿಂದ ವ್ಯಾಸರಾಜ ವಿಶ್ವವಿದ್ಯಾಲಯವನ್ನು ನಡಿಸಿದರು.

ಶ್ರೀ ಸತ್ಯಧ್ಯಾನ ತೀರ್ಥರು ಜನಬಲದಿಂದ ತಮ್ಮ ಉತ್ತರಾದಿ ಮಠ ದಲ್ಲಿಯೇ 'ವಿಶ್ವವಿದ್ಯಾಲಯ' ಎಂದು ಹೆಸರು ಕೊಡದೇ ಅದರ ಕಾರ್ಯವನ್ನು ಮಾಡಿ ತೋರಿಸಿದರು.

ಶ್ರೀ ವ್ಯಾಸರಾಜರಲ್ಲಿ ಶ್ರೀ ವಾದಿರಾಜ ತೀರ್ಥರು, ಶ್ರೀ ವಿಜಯೀಂದ್ರತೀರ್ಥರು, ಗೋವಿಂದ ತೀರ್ಥರು, ಮೊದಲಾದ ಇಪ್ಪತ್ತುನಾಲ್ಕು ಯತಿಗಳೂ ಪುರಂದರದಾಸರಾದಿ ಗೃಹಸ್ಥಾಶ್ರಮಿಗಳೂ ಶಿಷ್ಯರಾಗಿ ಪಾಠ ಓದಿದರು.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಉಡುಪಿಯ ಅಷ್ಟಮಠಾಧಿಪತಿಗಳಲ್ಲಿ ಒಬ್ಬರಾದ (೧) ಶ್ರೀ ಶಿರೂರು ಮಠದ ಸ್ವಾಮಿಗಳೂ, (೨) ಶ್ರೀ ಭೀಮನಕಟ್ಟೆ ಮಠದ ಸ್ವಾಮಿ ಗಳೂ, (೩) ಶ್ರೀ ಸುಬ್ರಹ್ಮಣ್ಯಮಠದ ಸ್ವಾಮಿಗಳೂ, (೪) ಶ್ರೀ ಕುಂದಾಪುರ ವ್ಯಾಸರಾಯ ಮಠದ ಸ್ವಾಮಿಗಳೂ, (೫) ಭಂಡಾರಕೆರೆ ಮಠದ ಸ್ವಾಮಿಗಳೂ, (೬) ಶ್ರೀ ಸಾಗರಕಟ್ಟೆ ಸ್ವಾಮಿಗಳೂ, (೭) ಶ್ರೀ ಟಂಕಸಾಲೀ ಸ್ವಾಮಿಗಳೂ, (೮) ಶ್ರೀ ಕೂಡಲಿ ಅಕ್ಷೋಭ್ಯಮಠದ ಸ್ವಾಮಿಗಳೂ, (೯) ಮಹಾಜ್ಞಾನಿಗಳಾದ ಶ್ರೀ ಸತ್ಯಜ್ಞಾನತೀರ್ಥ ಶ್ರೀಪಾದಂಗಳವರೂ, (೧೦) ಬಾಳಿಗಾರು ಮಠದ ಆರ್ಯ ಅಕ್ಷೋಭ್ಯತೀರ್ಥ ಪರಂಪರೆಯ ಸ್ವಾಮಿಗಳೂ, (೧೧) ಶ್ರೀ ಸತ್ಯಪ್ರಜ್ಞ ತೀರ್ಥ

ಶ್ರೀಪಾದಂಗಳವರು, (೧೨) ಶ್ರೀ ಸತ್ಯಾಭಿಜ್ಞ ತೀರ್ಥ ಶ್ರೀಪಾದಂಗಳವರು. ಈ ಮಾಧ್ವ ಯತಿಗಳು ಮಾತ್ರವಲ್ಲದೇ ವಲ್ಲಭಾಚಾರ್ಯ ಸಂಪ್ರದಾಯದ ಮುಖ್ಯ ಪೀಠಾಧಿಪತಿಗಳಾದ (೧೩) ಶ್ರೀ ಗೋಕುಲನಾಥ ದೀಕ್ಷಿತಜೀ ಮಹಾರಾಜರೂ ಕೂಡ ಶ್ರೀ ಸತ್ಯಧ್ಯಾನ ತೀರ್ಥರ ಶಿಷ್ಯತ್ವ ಸೌಭಾಗ್ಯವನ್ನು ಹೊಂದಿ ಸುಧಾ ಚಂದ್ರಿಕಾದಿ ಗ್ರಂಥಗಳನ್ನು ಅವರಲ್ಲಿ ಪಾಠ ಓದಿ ಮಹಾ ವಿದ್ವಾಂಸರಾಗಿ ಧನ್ಯಧನ್ಯರಾದರು. ಕೃತಕೃತ್ಯರಾದರು.

ಈಗಿನ ಪೇಜಾವರಮಠಾಧೀಶ್ವರರಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರೂ ಶ್ರೀಮದುತ್ತರಾದಿ ಮಠಾಧೀಶ್ವರರಾದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರೂ ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯಪ್ರಶಿಷ್ಯರಾದ ಪಂಡಿತ ಪರಿವ್ರಾಟ್ ಸಮ್ರಾಟ್‌ರಾಗಿದ್ದಾರೆ.

ಇಷ್ಟು ಜನ ಪರಮಹಂಸ ಪೀಠಾಧಿಪತಿಗಳಾದ ಸನ್ಯಾಸಿವರೇಣ್ಯರು ಯಾವ ಮಠದ ಸ್ವಾಮಿಗಳಲ್ಲಿಯೂ ಯಾವ ಕಾಲದಲ್ಲಿಯೂ ಶಿಷ್ಯರಾಗಿ ಅಧ್ಯಯನ ಮಾಡಿಲ್ಲ. 'ಶ್ರೀ ಗುರುಭ್ಯೋ ನಮಃ' ಎಂದು ಯಾವ ಪರ ಪೀಠಾಧಿಪತಿಯನ್ನೂ ವಂದಿಸಿಲ್ಲ.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಪೀಠಾಧಿಪತಿಗಳು ಶಿಷ್ಯರಾಗಿ ಓದಿದಷ್ಟು ಗೃಹಸ್ಥಾಮಿಗಳು ಕೂಡ ಶಿಷ್ಯರಾಗಿ ಇನ್ನೊಬ್ಬರಲ್ಲಿ ಅಧ್ಯಯನ ಮಾಡುವದು ಅಪರೂಪ.

ಶ್ರೀ ಸತ್ಯಧ್ಯಾನ ತೀರ್ಥರ ಈ ಅತ್ಯದ್ಭುತವಾದ ಗುರೂಣಾಮಪಿ ಗುರುತ್ವ' ವನ್ನೂ ಯತಿತತಿ ಪತಿತ್ವವನ್ನೂ ಕಂಡು ಇತಿಹಾಸವೂ ಕೂಡ ಮೂಕ ವಿಸ್ಮಿತವಾಗಿ ವಿಸ್ಮಯ ಸ್ತಿಮಿತವಾಗಿ ಈ ಗುರುಪೀಠಕ್ಕೆ ನತಮಸ್ತಕವಾಗಿ ನಿಂತುಕೊಂಡಿವೆ.

'ಅನೇಕ ಪೀಠಾಧಿಪತಿಗಳಾದ ಗುರುಗಳಿಗೆಲ್ಲ ಗುರುಗಳು, ಮಾನ್ಯರು, ವಂದ್ಯರು' ಎಂಬ ಅರ್ಥದಲ್ಲಿ "ಗುರುಸಾರ್ವಭೌಮ" ಎಂಬ ಹೆಸರು ಶ್ರೀ ಸತ್ಯಧ್ಯಾನ ತೀರ್ಥರಿಗೆ ಹೊಂದಿಕೆಯಾಗುತ್ತದೆ. ಈ ಶತಕದ ಈ ಅರ್ಥದಿಂದ ಅವರನ್ನು ಗುರು ಸಾರ್ವಭೌಮ ಎಂದು ಕರೆದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

## ಶ್ರೀ ಸತ್ಯಧ್ಯಾನ ತೀರ್ಥರ ಅನ್ನದಾನ

ಶ್ರೀ ಸತ್ಯಧ್ಯಾನ ತೀರ್ಥರ ಅನ್ನದಾನವು ಅನ್ಯಾದೃಶವಾಗಿತ್ತು. ನಮ್ಮ ಪ್ರಾಚೀನ ವೇದಶಾಸ್ತ್ರಗಳಲ್ಲಿ ಹೇಳಿದಂತೆ

" ಅನ್ನದಾನಾತ್ ಪರಂ ನಾಸ್ತಿ" "ಅನ್ನಸ್ಯ ಕ್ಷುಧಿತಂ ಪಾತ್ರಂ "

ಮುಂತಾವ ವಚನಗಳಿಗನುಸಾರವಾಗಿ ಹೋದ ಹೋದಲ್ಲೆಲ್ಲ ಸಹಸ್ರಾವಧಿ ಜನರಿಗೆ ಪ್ರತಿ ನಿತ್ಯ ಅನ್ನದಾನವನ್ನು ಮಾಡುವದು ಶ್ರೀ ಮಠದ ಸಂಪ್ರದಾಯವಾಗಿತ್ತು.

ಭೀಮಸೇನ ದೇವರು ವನವಾಸದಲ್ಲಿದ್ದಾಗಲೂ ಪ್ರತಿ ನಿತ್ಯವೂ ಶ್ರೀ ಭಾರತೀ ದೇವಿಯರ ದ್ವಾರಾ ೮೮೦೦೦ ಜನರಿಗೆ ಅನ್ನದಾನವನ್ನು ಮಾಡುತ್ತಿದ್ದರಂತೆ. ಅದೇ ದ್ರೌಪದೀ ದೇವಿಯರ ಆ ಅಕ್ಷಯ ಪಾತ್ರವು ಶ್ರೀ ಮಠದಲ್ಲಿ ಈಗಲೂ ಇದ್ದುದರಿಂದ ಅಲ್ಲಿ ಅನ್ನದಾನಕ್ಕೆ ಎಂದಿಗೂ ಕೊರತೆಯಾಗುವದಿಲ್ಲ.

ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ಕಾಲದಲ್ಲಿ ಶೂರ್ಪಾಲಯ ಕ್ಷೇತ್ರದಲ್ಲಿ ಒಂದು ಸಾಧನೀ ದ್ವಾದಶಿಯ ದಿನ ಒಂದು ಲಕ್ಷ ಬ್ರಾಹ್ಮಣರಿಗೆ ಏಕ ಕಾಲದಲ್ಲಿ ಭೋಜನ ಮಾಡಿಸಿದರಂತೆ. ಶ್ರೀ ಸತ್ಯಬೋಧ ಶ್ರೀಪಾದಂಗಳವರೇ ಮೊದಲಾದ ಎಲ್ಲ ಸ್ವಾಮಿಗಳ ಕಾಲದಲ್ಲಿ ಶ್ರೀ ಮಠದ ಮುಕ್ಕಾಂ ಇದ್ದಲ್ಲಿ ಯಾವ ಬ್ರಾಹ್ಮಣರ ಮನೆಯಲ್ಲಿಯೂ ಒಲೆ ಹೊತ್ತಿಸುವಂತಿಲ್ಲ. ಅಡಿಗೆ ಮಾಡುವಂತಿಲ್ಲ. ಸಂಸ್ಥಾನ ಬಂದಿತೆಂದರೆ ಇಡೀ ಊರಿಗೇ ಆಮಂತ್ರಣವಿತ್ತಂತೆ. ಕ್ಷೇತ್ರಭೋಜನವು ಶ್ರೀ ಮಠದ ದೈನಂದಿನ ಕಾರ್ಯಕ್ರಮಗಳಲ್ಲಿ ಸೇರಿತ್ತು.

ಶ್ರೀ ಸತ್ಯ ಪರಾಕ್ರಮ ಶ್ರೀಪಾದಂಗಳವರು ಅವರ ಕಾಲದಲ್ಲಿ ದೊಡ್ಡ ಬರ ಬಿದ್ದಾಗ ಮಹಾರಾಷ್ಟ್ರದ ರಾಜಧಾನಿಯಾದ ಪುಣೆ ಪಟ್ಟಣದಲ್ಲಿ ನಿಂತುಕೊಂಡು ದಕ್ಷಿಣೋತ್ತರ ದೇಶದ ಪಂಡಿತರನ್ನೆಲ್ಲ ಕರಿಸಿ ಇಟ್ಟುಕೊಂಡು ಇಡೀ ಪುಣೆ ಪಟ್ಟಣದಲ್ಲಿಯ ಕರ್ನಾಟಕ ಮಹಾರಾಷ್ಟ್ರದೇಶದ ಬ್ರಾಹ್ಮಣರಿಗೆಲ್ಲ ಬರಗಾಲ ಮುಗಿಯುವ ವರೆಗೆ ಊಟಕ್ಕೆ ಹಾಕಿದ್ದು ಅಂದಿನ ಸರಕಾರೀ ಕಾಗದ ಪತ್ರಗಳಲ್ಲಿಯೂ ವೃತ್ತ ಪತ್ರಿಕೆಗಳಲ್ಲಿಯೂ ನಮೂದಿಸಲಾಗಿದೆ.

ಶ್ರೀ ಮಠದ ಈ ಅನ್ನ ದಾನದ ಕುಲಕ್ರಮಾಗತವಾದ ಕಾರ್ಯ ವಿಶೇಷಕ್ಕೆ ಕಳಸವಿಟ್ಟ ಕಲಿಯುಗದ ಕರ್ಣರೆಂದರೆ ಶ್ರೀ ಶ್ರೀ ಸತ್ಯಧ್ಯಾನ ತೀರ್ಥರು.

ಅವರು ಹೋದಲ್ಲೆಲ್ಲ, ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತಲ್ಲೆಲ್ಲ ಪ್ರತಿನಿತ್ಯವೂ ಮಧ್ಯಾಹ್ನ ಸಂಜೆ ಎರಡೂ ಹೊತ್ತು ನಾಲ್ಕಾರು ಸಾವಿರ ಜನರು ಶ್ರೀ ರಾಮದೇವರ ದರ್ಶನ ತೀರ್ಥ ಪ್ರಸಾದಗಳನ್ನು ತೆಗೆದುಕೊಳ್ಳುತ್ತಿದ್ದರು. ಯಾವ ಮನೆ ಮಠ ಮಂದಿರಗಳಲ್ಲಿಯೂ ಜನರು ಹಿಡಿಸದೆ ಹಾದಿ ಬೀದಿಗಳಲ್ಲಿಯೇ ಎಲೆ ಹಾಕಿಕೊಂಡು ಪ್ರಸಾದವನ್ನು ಭಕ್ತಿಯಿಂದ ಊಟ ಮಾಡುತ್ತಲಿರುವದು ಎಲ್ಲರೂ ಕಂಡ ವಿಷಯ ವಾಗಿದೆ.

ಬಾಗಲಕೋಟೆ, ಕರ್ಜಗಿ, ಶೂರ್ಪಾಲಯ, ಬೆಂಗಳೂರು, ಗದಗು, ತಿರುಪತಿ, ಮಳಖೇಡ, ಬೆಳಗಾವಿ, ಮದ್ರಾಸ, ಬಳ್ಳಾರಿ, ತಿರಿಚಾನೂರು ಮೊದಲಾದ ಅನೇಕ

ಸ್ಥಳಗಳಲ್ಲಿ ೩೦–೪೦ ಸಾವಿರ ಬ್ರಾಹ್ಮಣರಿಗೆ ಪಂಚ ಭಕ್ಷ್ಯ ಪಕ್ವಾನ್ನಗಳ ಯಥೇಚ್ಛ ಭೋಜನವನ್ನು, ಹೊಟ್ಟೆ ತುಂಬ ಮೃಷ್ಟಾನ್ನಗಳನ್ನು, ಕೈತುಂಬ ದಕ್ಷಿಣೆಯನ್ನು, ಮೈ ತುಂಬ ಬಟ್ಟೆ ಶಾಲು ಶಕಲಾತಿಗಳನ್ನು, ಮನೆ ತುಂಬುವಷ್ಟು ಬೆಳ್ಳಿಯ ಸಾಮಾನುಗಳನ್ನು, ಮನ ತುಂಬುವಷ್ಟು ಸ್ನೇಹಾನುಗ್ರಹದ ಪ್ರೇಮ ರಸವನ್ನೂ ಕೊಟ್ಟು ಕರುಣಿಸಿ ಉಣಿಸಿ ತಣಿಸಿದ ಪುಣ್ಯಾತ್ಮರೆಂದರೆ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.

ಈ ಮಹಾ ಸಮಾರಾಧನೆಗಳಲ್ಲಿ ಲಕ್ಷಾವಧಿ ಜನರಿಗೆ ಬಡಿಸಲಿಕ್ಕಾಗಿ ಮಾಡಿ ಒಟ್ಟಿದ ಅನ್ನಾಚಲವನ್ನೂ, ಶಿರದ ಬೆಟ್ಟವನ್ನೂ, ಗೋಡಂಬಿಯ ಗುಡ್ಡವನ್ನೂ, ಹುಳಿಯ ಹೊಂಡವನ್ನೂ, ಮೃಷ್ಟಾನ್ನದ ರಾಶಿಗಳನ್ನೂ ಪಕ್ವಾನ್ನಗಳ ಪರ್ವತಗಳನ್ನೂ, ಕಣ್ಣಿಂದ ಕಂಡವರು, ಬಾಯಿಂದ ಉಂಡವರು, ತಾವಾಗಿ ನಿಂತು ಬಡಿಸಿದವರು, ಎಷ್ಟೋ ಜನರು ಇನ್ನೂ ಬದುಕಿ ಇರುವದರಿಂದ ಇದೆಲ್ಲವೂ ಕಟ್ಟು ಕಥೆಯಾಗಲೀ ಕಾದಂಬರಿಯಾಗಲೀ ಅಲ್ಲ. ವಾಸ್ತವಿಕವಾಗಿ ಇದೆಲ್ಲವೂ ನಡೆದ ಸತ್ಯ ಸಂಗತಿಯೇ ಎಂದು ಯಾರಿಗಾದರೂ ತುಸು ಹಿರಿಯರನ್ನು ವಿಚಾರಿಸಿದರೆ ತಿಳಿದುಬರಲಿಕ್ಕೆ ಸಾಕು. ನಾಲ್ವತ್ತು ಐವತ್ತು ವರ್ಷದ ಮೇಲಿನ ಯಾವ ಪ್ರಾಮಾಣಿಕ ಮಾಧ್ವನನ್ನು ಕೇಳಿದರೂ ಶ್ರೀ ಸತ್ಯಧ್ಯಾನ ತೀರ್ಥರ ಮಹಾ ಸಮಾರಾಧನೆಗಳಲ್ಲಿ ನಡೆದ ಅತ್ಯದ್ಭುತವಾದ ಅನ್ನದಾನ, ವಿದ್ಯಾದಾನ, ರಜತ ದಾನಗಳ ಇತ್ಥಂ ಭೂತವಾಗಿ ನಡೆದ, ತಾನು ಪ್ರತ್ಯಕ್ಷ ನೋಡಿದ ಸಂಗತಿಯನ್ನು ಹೆಮ್ಮೆಯಿಂದ ವಿವರಿಸುವರು.

## ಶ್ರೀ ಸತ್ಯಧ್ಯಾನತೀರ್ಥರ ಗ್ರಂಥ ಸಂಪತ್ತಿ

ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರೆಂದರೆ ಒಂದು ಜಂಗಮ ಜ್ಞಾನಕೋಶ. ಅವರ ತಲೆ ಎಂದರೆ ನೂರು ಗ್ರಂಥ ಭಾಂಡಾರಗಳ ಹೊತ್ತಿಗೆಗಳ ವಿಷಯಗಳನ್ನೆಲ್ಲ ಹೊತ್ತ ಒಂದು ವಿಶಾಲವಾದ ವ್ಯಾಸಪೀಠ. ಅವರು ಕುಳಿತಲ್ಲಿಯೇ— ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಬೌದ್ಧ, ಚಾರ್ವಾಕ, ಜೈನ, ವಲ್ಲಭ, ನಿಂಬಾರ್ಕ, ಚೈತನ್ಯ, ಶಾಕ್ತ, ಶೈವ ಮುಂತಾದ ದರ್ಶನಗಳ ಸಾವಿರಾರು ಗ್ರಂಥಗಳಲ್ಲಿ "ಎಲ್ಲಿ, ಯಾವ ಪುಟದಲ್ಲಿ ಯಾವ ಪ್ಯಾರಾದಲ್ಲಿ ಎಷ್ಟು ವಿಷಯ ಬಂದಿದೆ, ಏನು ವಿಚಾರವಿದೆ, ಯಾವ ಆನುಪೂರ್ವೀ ಇದೆ, ಯಾವ ತರಹದ ವರ್ಣವಿನ್ಯಾಸವು ಉಂಟು" ಎಂಬುವದನ್ನು ಕೂಡ ಅವರು ಮುಖತಃ ಹೇಳುತ್ತಿದ್ದರು. ಯಾವದೇ ಊರಿನಲ್ಲಿ ಯಾವನಾದರೂ ಜಿಜ್ಞಾಸು ವ್ಯಕ್ತಿಯು ಅವರ ಮುಂದೆ ಹೋಗಿ ಕುಳಿತರೆ ಸಾಕು ನೂರಾರು ಗ್ರಂಥಗಳನ್ನು ಆಗಲೇ ಅಲ್ಲಿಯೇ ತರಿಸಿ, ಭರಭರ ತೆಗೆದು ಆ ಆ ಪಂಕ್ತಿಗಳನ್ನು ತೋರಿಸಿ, ಅವರ ಕಡೆಯಿಂದಲೇ ಓದಿಸುತ್ತಿದ್ದರು. ಈ ವಿಷಯದಲ್ಲಿ ಅನೇಕ ವೃದ್ಧ ಗೃಹಸ್ಥರು ಈಗಲೂ ಊರೂರಿಗೆ ಅವರ ಈ ಚತುರಸ್ರ ಪಾಂಡಿತ್ಯವನ್ನು ನೆನೆಸುತ್ತಿದ್ದಾರೆ. ಇಂದಿಗೂ ಶ್ರೀ ಮಠದಲ್ಲಿಯೂ ಅವರ ಶಿಷ್ಯರಲ್ಲಿಯೂ ಇದ್ದ ಅವರ ಸಾವಿರಾರು

ಗ್ರಂಥಗಳಲ್ಲಿ ಅವರು ತಮ್ಮ ಸ್ವಂತ ಕೈಯಿಂದ ಪುಟಪುಟಗಳಲ್ಲಿಯೂ ಕೆಂಪು ಮಶಿಯಿಂದ ಗುರುತು ಹಾಕಿರುವದನ್ನು ನಾವು ಕಾಣಬಹುದು.

ಇಷ್ಟೆಲ್ಲ ಪರಿಶ್ರಮಪಟ್ಟು ತಾವು ಸಂಪಾದಿಸಿದ ಅನೇಕ ಸಹಸ್ರಾರು ಗ್ರಂಥಗಳ ಅಜಸ್ರ ಚಿಂತನ ಮಂಥನದಿಂದ ಪ್ರಾಪ್ತವಾದ ದಿವ್ಯಜ್ಞಾನವು ತಮ್ಮಲ್ಲಿಯೇ ಇಂಗಿ ಹೋಗಬಾರದು. ಎಲ್ಲ ಜನರಿಗೂ ಅದರ ಉಪಯೋಗವಾಗಬೇಕು ಎಂಬ ಸದಾಶಯದಿಂದ ಶ್ರೀ ಶ್ರೀಗಳವರು ಅನೇಕ ಗ್ರಂಥ ರೂಪಗಳಿಂದ ಬರೆದು ಇಟ್ಟಿದ್ದಾರೆ.

ನಿಜವಾದ ವೇದ-ಶಾಸ್ತ್ರಗಳ ರಹಸ್ಯವನ್ನು ಜನ ಸಾಮಾನ್ಯರಿಗೆ ಸುಲಭವಾಗಿ ತಿಳಿಸಿಕೊಡಬೇಕೆಂಬ ಧೀರೋದಾತ್ತ ಧ್ಯೇಯದಿಂದ ಪ್ರೇರಿತವಾದ ಶ್ರೀಗಳವರು ಬೇಕಾದಂಥ ಸುಂದರ ಪ್ರೌಢವಾದ ಸಂಸ್ಕೃತ ಭಾಷೆಯಲ್ಲಿ ಪ್ರಗಲ್ಭ ಪದ್ಧತಿಯಿಂದ ಬರೆಯಲು ಸಮರ್ಥರಾಗಿದ್ದರೂ, ಶ್ರೀ ಸಾಮಾನ್ಯನಿಗೆ ಸರಳವಾಗಿ ಬೋಧವಾಗಲಿ ಎಂಬ ಸದುದ್ದೇಶದಿಂದ ಪ್ರಾಯಃ ದೇಶ ಭಾಷೆಗಳಲ್ಲಿಯೇ ತಮ್ಮ ಎಲ್ಲ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

ಅವರ ಗ್ರಂಥ ಲೇಖನದ ಸಂಸ್ಕೃತ ಶೈಲಿಯನ್ನು ನೋಡಬಯಸುವವರು ಅವರ "ಭೇದ ಪರಾಣ್ಯೇವ ಖಲು ಬ್ರಹ್ಮಸೂತ್ರಾಣಿ" ಎಂಬ ಗ್ರಂಥವನ್ನು ಓದಬೇಕು. ಮಧುರವಾಣಿ ಎಂಬ ಸಂಸ್ಕೃತ ಮಾಸ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಲೇಖಮಾಲಾ ರೂಪದಿಂದ ಪ್ರಕಟವಾದ ಈ ಉದ್ಗ್ರಂಥದಲ್ಲಿ ಭಗವಾನ್ ಬಾದರಾಯಣರ ಬ್ರಹ್ಮ ಮೀಮಾಂಸಾ ಶಾಸ್ತ್ರದಲ್ಲಿಯ ೫೬೪ ಸೂತ್ರಗಳೂ ಕೂಡ ದ್ವೈತ ತತ್ವವನ್ನು ಪುಷ್ಟೀಕರಿಸಿ ಪ್ರಮಾಣಿಸಿ ಹೇಳಲಿಕ್ಕೇ ಹೊರಟಿವೆ ಎಂದು ಸಿದ್ಧಮಾಡಿ ತೋರಿಸಿದ್ದಾರೆ.

ಸುಧಾ, ವ್ಯಾಸತ್ರಯ ಹಾಗೂ ಗುರುರಾಜ, ಶ್ರೀನಿವಾಸ ತೀರ್ಥ ಮುಂತಾದವರ ಗ್ರಂಥಗಳ ಅನಂತರ ಇಂಥ ಪ್ರೌಢ ಮಟ್ಟದ ಉಚ್ಚ ಶಾಸ್ತ್ರೀಯ ಸದ್ಗ್ರಂಥವು ಈಗ ನೂರಿನ್ನೂರು ವರ್ಷಗಳಲ್ಲಿಯೇ ನಿರ್ಮಿತಗೊಂಡಿಲ್ಲ. ಇಂಥ ಅಪರೂಪವಾದ ಅತ್ಯುಪಯುಕ್ತವಾದ ಶ್ರೀ ಸತ್ಯಧ್ಯಾನ ತೀರ್ಥರ ಈ ಉದ್ಗ್ರಂಥವು ಈಗ ದುರ್ಮಿಳವಾಗಿದೆ. ಅದನ್ನು ಪುನರ್ಮುದ್ರಿಸುವ ಕಾರ್ಯವನ್ನು ಬೇಗ ಕೈಕೊಳ್ಳಬೇಕೆಂದು ನಾವು ಸಜ್ಜನರಲ್ಲಿ ಕೇಳಿಕೊಳ್ಳುತ್ತೇವೆ.

ಅವರು ಪ್ರತಿ ಒಬ್ಬ ಮಾಧ್ವನು ಅವಶ್ಯವಾಗಿ ತಿಳಿದುಕೊಳ್ಳಲೇ ಬೇಕಾದ ದ್ವೈತ ಮತದ ತತ್ವಗಳನ್ನು ಎಲ್ಲ ಪಾಮರ ಜನರಿಗೂ ಬೋಧವಾಗುವಂತೆ ಕೋರ್ಟಿನ ವಾದಿ, ಪ್ರತಿವಾದಿ ಹಾಗೂ ನ್ಯಾಯಾಧೀಶರ ನಿರ್ಣಯದ ಪದ್ಧತಿಯಿಂದ ಮಂಡಿಸಿ ಸಿವ್ಹಿಲ್ ಸೂಟ ಎಂಬ ಹೆಸರಿನಿಂದ ಅನೇಕ ಗ್ರಂಥಗಳನ್ನು ಬರೆದು ಕನ್ನಡ, ಮರಾಠಿ, ಹಿಂದೀ, ತೆಲುಗು, ತಮಿಳು, ಇಂಗ್ಲೀಷ ಮೊದಲಾದ ದೇಶ ಭಾಷೆಗಳಲ್ಲಿ ಪ್ರಕಟಿಸಿದ್ದಾರೆ. ಇವುಗಳಲ್ಲಿ ೧-೨ ಭಾಗಗಳಲ್ಲಿ ಜಗತ್ತು ಪಾರಮಾರ್ಥಿಕ ಸತ್ಯವಾಗಿದೆ

ಎಂದು ಪ್ರತಿಪಾದಿಸಲಾಗಿದೆ. ಶಂಕರಾಚಾರ್ಯರು ಒಪ್ಪಿಕೊಂಡ ವ್ಯಾವಹಾರಿಕ ಸತ್ಯ ಪಾರಮಾರ್ಥಿಕ ಸತ್ಯ ಮುಂತಾಗಿ ಸತ್ಯದ ದ್ವೈವಿಧ್ಯವನ್ನು ಖಂಡಿಸಿ ಶಂಕರಾಚಾರ್ಯರು ಶ್ರುತಿ ವಾಕ್ಯಗಳಿಗೆ ಮಾಡುವ ಅರ್ಥದಿಂದ ಆಗಬಹುದಾದ ಅನರ್ಥ ಹಾಗೂ ಅಬದ್ಧತೆಗಳನ್ನು ತೋರಿಸಿ ತಾತ್ವಿಕ ಸತ್ಯತ್ವವನ್ನು ಪ್ರಪಂಚಕ್ಕೆ ಸಮರ್ಥಿಸಿದ್ದಾರೆ.

೩ ನೇ ಭಾಗದಲ್ಲಿ ಜೀವ ಬ್ರಹ್ಮರ ಭೇದವು ನಿತ್ಯವೂ ಶ್ರುತಿ ಶತಸಿದ್ಧವೂ ಆಗಿದೆ ಎಂದು ಮನಗಾಣಿಸಿ ಕೊಟ್ಟಿದ್ದಾರೆ. ಜೀವಬ್ರಹ್ಮೈಕ್ಯವನ್ನು ಪ್ರತಿಪಾದಿಸುವವೆಂದು ಅದ್ವೈತಿಗಳು ತೋರಿಸುವ ಶ್ರುತಿ ವಚನಗಳನ್ನು ಉಪಕ್ರಮ ಉಪಸಂಹಾರಾದಿ ತಾತ್ಪರ್ಯ ಲಿಂಗಗಳಿಂದ ಪರಿಶೀಲಿಸಿದರೆ ಅವೆಲ್ಲವೂ ವಾಸ್ತವವಾಗಿ ಜೀವ ಬ್ರಹ್ಮೈಕ್ಯ ಬೋಧಕವಾಗದೆ ಅದಕ್ಕೆ ಬಾಧಕವಾಗಿ ಭೇದಸಾಧಕವೇ ಆಗಿವೆ ಎಂಬುವದನ್ನು ಯುಕ್ತಿಯುಕ್ತವಾಗಿ ಉಕ್ತಿ ಸಹಿತವಾಗಿ ವಿವರಿಸಲಾಗಿದೆ.

೪ ನೇ ಭಾಗದಲ್ಲಿ ಪರಮಾತ್ಮನ ಗುಣ ಪರಿಪೂರ್ಣತ್ವವನ್ನು ಮಂಡಿಸಲಾಗಿದೆ. ನಿರ್ಗುಣ ಬ್ರಹ್ಮ ಪ್ರತಿಪಾದಕವೆಂದು ಅದ್ವೈತಿಗಳು ಉದಾಹರಿಸಿದ ವೇದವಚನಗಳ ನಿಜವಾದ ಅರ್ಥವು ಏನು ಎಂಬುವದನ್ನು ಸೂಕ್ಷ್ಮವಿವೇಚನ ಮಾಡಿ ಯಥಾರ್ಥ ಅರ್ಥ ದರ್ಶನವಾಗುವಂತೆ ಇಲ್ಲಿ ವಿವರಿಸಲಾಗಿದೆ.

೫ ನೇ ಭಾಗದಲ್ಲಿ ಅದ್ವೈತ ಮತವು ಪ್ರಚ್ಛನ್ನ ಬೌದ್ಧಮತ ಎಂಬುವದನ್ನು ಸಿದ್ಧಗೊಳಿಸಲಾಗಿದೆ. ಬೌದ್ಧರ ಶೂನ್ಯ ವಾದಕ್ಕೂ ಅದ್ವೈತಿಗಳ ನಿರ್ಗುಣವಾದಕ್ಕೂ ಏನೂ ವೈಲಕ್ಷಣ್ಯವಿಲ್ಲವೆಂದು ಎರಡೂ ತತ್ವಗಳನ್ನು ಪೃಥಕ್ಕರಿಸಿ ತೋರಿಸಲಾಗಿದೆ.

## ಸಭಾಸಾರ ಸಂಗ್ರಹ

ಇದರಲ್ಲಿ ಶ್ರೀ ಸತ್ಯಧ್ಯಾನತೀರ್ಥರು ದೇಶದಲ್ಲಿ ಎಲ್ಲ ಕಡೆ ದಿಗ್ವಿಜಯಮಾಡಿ ಅಲ್ಲಲ್ಲಿ ಅನುಗ್ರಹಿಸಿದ ಶಾಸ್ತ್ರೀಯ ಭಾಷಣಗಳನ್ನು ಸಂಗ್ರಹಿಸಿ ಸಾರೋದ್ಧಾರಮಾಡಿ ಕೊಡಲಾಗಿದೆ. ಈ ಐದೂ ಗ್ರಂಥಗಳ ಒಟ್ಟು ಮೊತ್ತವು (೫೦೦೦) ಐದು ಸಾವಿರ ಪುಟಗಳಷ್ಟು ಆಗಬಹುದು. ಈ ಬೃಹದ್ಗ್ರಂಥದಲ್ಲಿ— ಬಾರದ ವಿಷಯವಿಲ್ಲ. ಬರಯದ ಪ್ರಮೇಯವಿಲ್ಲ. ವಿವೇಚಸದ ಶಾಸ್ತ್ರಾರ್ಥವಿಲ್ಲ. ಒಂದೇ ಮಾತಿನಲ್ಲಿ ಹೇಳಬೇಕಂದರೆ— "ಯದಿಹಾಸ್ತಿ ತದನ್ಯತ್ರಯನ್ನೇಹಾಸ್ತಿ ನ ತತ್ ಕ್ವಚಿತ್"

## ಗೀತಾಸಾರ ಸಂಗ್ರಹ

ಸಭಾಸಾರ ಸಂಗ್ರಹದಂತೆಯೇ ಗೀತಾ ಸಾರ ಸಂಗ್ರಹವೂ ಕೂಡ ಅಪೂರ್ವ ಗ್ರಂಥವಾಗಿದೆ. ಶ್ರೀಮನ್ ಮಧ್ವಮತದ ಎಲ್ಲ ತತ್ವಗಳನ್ನೂ ಗೀತಾ ಗ್ರಂಥದಿಂದಲೇ ಸಾಧಿಸಬಹುದು ಎಂಬುವದನ್ನು ಇಲ್ಲಿ ಸಪ್ರಮಾಣವಾಗಿ ತೋರಿಸಿ ಕೊಟ್ಟಿದ್ದಾರೆ.

"ಶ್ರೀಮನ್ ಮಧ್ವಮತೇ ಹರಿಃ ಪರತರಃ'' ಎಂದು ಮುಂತಾದ ನವತತ್ವಗಳಿಗೂ ಗೀತೆಯ ಪ್ರತಿ ಪದ್ಯದ ಬೆಂಬಲವು ಹೇಗಿದೆ ಎನ್ನುವದನ್ನು ವಿಶದವಾಗಿ ಇದರಲ್ಲಿ ತಿಳಿಸಿಕೊಟ್ಟಿದ್ದಾರೆ. ಸಮಗ್ರ ಗೀತಾ ಗ್ರಂಥವು ಮಧ್ವ ಪ್ರದರ್ಶಿತವಾದ ದ್ವೈತಮತ ಬೋಧಕವೂ, ಸಾಧಕವೂ, ಪ್ರತಿಪಾದಕವೂ ಹೇಗೆ ಆಗಿದೆ ಎಂಬುವದನ್ನು ಸೋದಾಹರಣವಾಗಿ ಇಲ್ಲಿ ವಿವೇಚಿಸಲಾಗಿದೆ.

ಈ ಗ್ರಂಥವು ಸುಮಾರು ನಾಲ್ಕು ನೂರು ಪುಟಗಳಷ್ಟಿದೆ.

## ಗೀತಾ ಪ್ರತಿಪದಾರ್ಥ ಚಂದ್ರಿಕಾ

ಐದನೂರು ಪುಟದ ಈ ಪುಸ್ತಕದಲ್ಲಿ ಸಾಮಾನ್ಯ ಜನರಿಗೂ ಗೀತೆಯ ಅರ್ಥವು ತಿಳಿಯುವಂತೆ ಗೀತೆಯ ಪ್ರತಿಯೊಂದು ಪದ್ಯವನ್ನು ಭಾಷಾಂತರಿಸಿ ಕೊಡಲಾಗಿದೆ. ಶ್ರೀ ಗೀತಾಚಾರ್ಯರ ಹಾಗೂ ಮಧ್ವಾಚಾರ್ಯರ ಟೀಕಾಚಾರ್ಯರ ಭಾವ ಬ್ರಹ್ಮರ ಸಾಕ್ಷಾತ್ಕಾರಕ್ಕೆ ಇದೊಂದು ಕನಕನ ಕಿಂಡಿಯಂತಿದೆ.

## " ಭಸ್ಮಧಾರಣ ನಿಷೇಧಃ ತಥಾ ಊರ್ಧ್ವ ಪುಂಡ್ರ ಧಾರಣಂ "

ಇದರಲ್ಲಿ ಶೈವ ವೀರಶೈವಾದಿಗಳು ಮಾಡುವ ಭಸ್ಮಧಾರಣ, ಲಿಂಗಧಾರಣ ಮುಂತಾದವುಗಳು ಅವೈದಿಕ, ಅಪದ್ಧ, ಪ್ರಮಾಣ ವಿರುದ್ಧ, ಎಂದು ಎತ್ತಿ ತೋರಿಸಿ ಊರ್ಧ್ವಪುಂಡ್ರಧಾರಣ ಮತ್ತು ತಪ್ತ ಮುದ್ರಾಧಾರಣಾದಿಗಳನ್ನು ಪ್ರತಿ ಒಬ್ಬ ಮಾಧ್ವನೂ ಅವಶ್ಯವಾಗಿ ಮಾಡಲೇಬೇಕೆಂದು ಸಪ್ರಮಾಣವಾಗಿ ಸಾಧಿಸಲಾಗಿದೆ. ೧೫೦ ಪುಟದ ಈ ಗ್ರಂಥವನ್ನು ಸಂಸ್ಕೃತದಲ್ಲಿಯೂ ಹಿಂದಿಯಲ್ಲಿಯೂ ಬರೆಯಲಾಗಿದೆ.

## ಅದ್ವೈತ ಭ್ರಾಂತಿ ಪ್ರಕಾಶ

ಇದರಲ್ಲಿ ಶಂಕರಾಚಾರ್ಯ ಹಾಗೂ ಅವರ ಅನುಯಾಯಿಗಳಾದ ಅದ್ವೈತ ಪಂಡಿತರ ಗ್ರಂಥಗಳನ್ನು ಎತ್ತಿಕೊಂಡು ಅವರ ವಚನಗಳನ್ನೇ ಉದಾಹರಿಸಿ ಅವರ ವಾದಗಳಲ್ಲಿ ಸ್ವವ್ಯಾಹತಿ, ವಿರೋಧ, ಉತ್ಸೂತ್ರತೆ, ಅನುಭವಾಪಲಾಪ, ವಿವಿಧ ನಿಗ್ರಹ ಸ್ಥಾನ ಕವಲಿತತ್ವ ಸ್ವಮತೀಯ ವಿರೋಧ ಶಾಸ್ತ್ರಮರ್ಯಾದಾ ಉಲ್ಲಂಘನ ಮುಂತಾದ ಅನೇಕ ದೋಷೋದ್ಘಾಟನವನ್ನು ಮಾಡಿ ಖಂಡಿಸಿದ್ದಾರೆ.

## ದ್ವೈತ ದರ್ಶನ

ಪರಕೀಯರು ಪರಿಗ್ರಹಿಸಿದ ಶ್ರುತಿ ವಚನಗಳನ್ನೆಲ್ಲ ಕ್ರೋಢೀಕರಿಸಿ ಅವುಗಳಿಗೆಲ್ಲ ಆ ಆ ಮತದವರು ಹೇಳುವ ಅರ್ಥವು ಸ್ವಯಂ ವೇದಪುರುಷನಿಗೇ ಸಮ್ಮತವಾಗಿಲ್ಲ

ಎಂದು ತೋರಿಸಿ ಅವುಗಳಿಗೆಲ್ಲ ಪ್ರಮಾಣ ಪರಿಶುದ್ಧವಾದ ನಿಷ್ಕೃಷ್ಟವಾದ ಅರ್ಥವನ್ನು ನಿರೂಪಿಸಲಾಗಿದೆ.

ಯಜ್ಞದಲ್ಲಿ ಪ್ರತ್ಯಕ್ಷ ಪಶು ಹಿಂಸೆಯನ್ನು ಮಾಡದೆ ಪಿಷ್ಟ ಪಶುವನ್ನು ಮಾಡಿಯೇ ಯಜ್ಞ ಮಾಡಬೇಕು ಎಂಬುವದನ್ನು ಅನೇಕ ಪ್ರಮಾಣ ವಚನಗಳನ್ನು ಉದಾಹರಿಸಿ ಸಿದ್ಧ ಮಾಡಿ ತೋರಿಸಿದ್ದಾರೆ.

## ಅದ್ವೈತ ಕಪೋಲ ಚಪೇಟಿಕಾ

ಕಾಶಿಯ ನರಹರಿಗಿರಿಶರ್ಮ ಎಂಬ ಪಂಡಿತನು ಮಾಧ್ವ ಮುಖ ಭಂಗ ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದ್ದನು. ಅದಕ್ಕೆ ಖಂಡನ ರೂಪವಾಗಿ ಶ್ರೀ ಶ್ರೀ ಗಳವರು ಈ ಗ್ರಂಥವನ್ನು ಶ್ರೀ ವರಖೇಡ ನರಸಿಂಹಾಚಾರ್ಯರ ಕಡೆಯಿಂದ ಬರೆ ಯಿಸಿದ್ದಾರೆ.

## ಚಂದ್ರಿಕಾ ಮಂಡನ

ಶ್ರೀ ರಾಮಸುಬ್ಬಾ ಶಾಸ್ತ್ರಿಯೆಂಬ ಅದ್ವೈತ ಪಂಡಿತನು ಶ್ರೀ ವ್ಯಾಸರಾಜರ ಚಂದ್ರಿಕಾ ಗ್ರಂಥವನ್ನು ಆಪಾತತಃ ಖಂಡಿಸಿ ಚಂದ್ರಿಕಾ ಖಂಡನ ಎಂಬ ಗ್ರಂಥ ವನ್ನು ಬರೆದಿದ್ದನು. ಅದನ್ನು ಕೇಳಿ ಶ್ರೀಗಳವರು ತಕ್ಷಣದಲ್ಲಿಯೇ ಅದಕ್ಕೆ ಖಂಡನ ವನ್ನು ಬರೆದು, ಚಂದ್ರಿಕಾ ಮಂಡನ ಎಂಬ ಹೆಸರಿಟ್ಟು ಅದನ್ನು ಆ ರಾಮಸುಬ್ಬಾ ಶಾಸ್ತ್ರಿಗೆ ಕಳಿಸಿಕೊಟ್ಟರು. ಮತ್ತು ಮಠದಿಂದ ಪ್ರತಿನಿಧಿಗಳನ್ನು ಕಳಿಸಿ, ತಿರುಪತಿಯಲ್ಲಿ ನಡೆಯಲಿರುವ ಸಭೆಯಲ್ಲಿ ಆ ಚಂದ್ರಿಕಾ ಖಂಡನಾಭಾಸರೂಪವಾಗಿರುವ ಗ್ರಂಥವನ್ನು ಖಂಡಿಸಿ ದ್ವೈತ ಮಂಡನವನ್ನು ಮಾಡುತ್ತೇವೆ. ಅದಕ್ಕೆ ನೀವು ಸ್ವತಃ ಬಂದು ನಿಮ್ಮ ಪಕ್ಷವನ್ನು ಮಂಡಿಸಬೇಕು ಎಂದು ಹೇಳಿಕಳುಹಿಸಿದರು. ಆದರೆ ಅದಕ್ಕೆ ಶ್ರೀಗಳವರ ಮಹಾ ಪಾಂಡಿತ್ಯವನ್ನು ತಿಳಿದ ಆ ಶಾಸ್ತ್ರಿಯು "ಮಹಾ ವಿದ್ವಾಂಸರಾದ ಸ್ವಾಮಿ ಗಳೆಲ್ಲಿ, ನಾನೆಲ್ಲಿ ! ನಾನು ಹೇಳುವದೆಲ್ಲ ನನ್ನ ಗ್ರಂಥದಲ್ಲಿ ಹೇಳಿಬಿಟ್ಟಿದ್ದೇನೆ. ನಾನು ತಿರುಪತಿಗೆ ಬರಲಾರೆ. ಶ್ರೀಗಳವರು ಇಲ್ಲಿಯೇ ಬಂದರೂ ನಾನು ಅವರೊಡನೆ ವ್ಯಾಖ್ಯಾರ್ಥ ಮಾಡಲಾರೆ" ಎಂದು ಹೇಳಿ ಕಳುಹಿಸಿದನು. ಆಗ ಶ್ರೀಗಳವರು ನಿರು ಪಾಯರಾಗಿ ತಿರುಪತಿ ಸಭೆಗೆ ಬಂದು ಅಲ್ಲಿ ೭ ದಿನವೂ ಆ ಚಂದ್ರಿಕಾ ಖಂಡನಾಭಾಸ ಗ್ರಂಥವನ್ನು ಅಕ್ಷರಶಃ ಖಂಡಿಸಿ ಚಂದ್ರಿಕಾ ಮಂಡನವನ್ನು ಮಾಡಿದರು. ಕೊನೆಯ ದಿವಸ ಆನೆಯ ಮೇಲೆ ಅಂಬಾರಿ ಹಾಕಿ ವ್ಯಾಸರಾಜರ ಆ ಚಂದ್ರಿಕಾ ಗ್ರಂಥವನ್ನು ಮೆರೆಸಿದರು. ಆ ಗ್ರಂಥವು ಚಂದ್ರಿಕಾ ಮಂಡನ ಎಂದು ಈಗಲೂ ಪ್ರಸಿದ್ಧವಿದೆ.

## ಶಂಕರ ಭಾಷ್ಯ ವಿಚಾರ

ಈ ಗ್ರಂಥದಲ್ಲಿ ಸತ್ಯಧ್ಯಾನ ತೀರ್ಥರು ಸಂಪೂರ್ಣ ಶಂಕರಾಚಾರ್ಯರ ಸೂತ್ರ ಭಾಷ್ಯವನ್ನು ಸಮಾಲೋಚನೆಗೈದು ಖಂಡನ ಬರೆದಿದ್ದಾರೆ. ಇದು ೬೦೦ ಪುಟಗಳ ವರೆಗೆ ಇದ್ದು, ಇದರಲ್ಲಿ ಶಂಕರ ಭಾಷ್ಯದ ಜೊತೆಗೆ ರಾಮಾನುಜ, ಶ್ರೀಕರ ಮುಂತಾದ ಬೇರೆ ಬೇರೆ ಭಾಷ್ಯಗಳ ಖಂಡನವೂ ಬಂದಿದೆ. ಇದು ೨೧ ಇತರ ಭಾಷ್ಯಗಳ ಖಂಡನ ಪೂರ್ವಕ ಮಧ್ವ ಭಾಷ್ಯ ಮಂಡನ ರೂಪವಾದ ಶ್ರೇಷ್ಠ ಸಂಸ್ಕೃತ ಗ್ರಂಥ ವಾಗಿದೆ. ಈ ದಿವ್ಯ ದಾರ್ಶನಿಕ ಗ್ರಂಥವೂ ಕೂಡ ಈಗ ದುರ್ಮಿಳವಾಗಿದ್ದು ಅದರ ಪುನರ್ಮುದ್ರಣವು ಅತ್ಯಾವಶ್ಯಕವಾಗಿದೆ.

## ಶ್ರೀ ಸತ್ಯಧ್ಯಾನತೀರ್ಥರು ಅಚ್ಚು ಹಾಕಿಸಿದ ಪ್ರಾಚೀನ ಗ್ರಂಥಗಳು

೧) ಶ್ರೀ ಹುಲಗಿ ಆಚಾರ್ಯರ— "ದ್ವೈತದ್ಯುಮಣಿ"
೨) ಶ್ರೀ ಸತ್ಯನಾಥತೀರ್ಥರ— "ಅಭಿನವ ಚಂದ್ರಿಕಾ"
೩) ಶ್ರೀ ಸತ್ಯನಾಥತೀರ್ಥರ— "ಅಭಿನವ ಗದಾ"
೪) ನಾರೋಪಂತೀಯ— "ತತ್ತ್ವೋದ್ಯೋತ ಟಿಪ್ಪಣಿ"
೫) ಶ್ರೀ ವ್ಯಾಸನಾರಾಯಣಾಚಾರ್ಯರ—"ಅದ್ವೈತ ಕಾಲಾನಲ"
೬) ಶ್ರೀ ವನಮಾಲಿ ಮಿಶ್ರರ— "ಮಧ್ವ ಮುಖಾಲಂಕಾರ"

ಮುಂತಾದ ಅನೇಕ ಮಾಧ್ವ ಗ್ರಂಥಗಳನ್ನು ಸಂಶೋಧನ ಮಾಡಿಸಿ, ಹಣ ಕೊಟ್ಟು ಅಚ್ಚು ಹಾಕಿಸಿದರು.

ಹೀಗೆ ಇವರು ನಾನಾ ಮುಖದಿಂದ ಶ್ರೀಮದಾಚಾರ್ಯರ ಸೇವೆಯನ್ನು ಮಾಡಿ ೧೯೪೩ ರಲ್ಲಿ ಭೀಮರಥಿ ತೀರದ ಪಾಂಡುರಂಗ ಕ್ಷೇತ್ರವಾದ ಪಂಢರಪುರದಲ್ಲಿ ವೃಂದಾವನಸ್ಥರಾದರು.

ಮುಂದೆ ಶ್ರೀ ಪಾಂಡುರಂಗಿ ಜಯಾಚಾರ್ಯರಿಗೆ ಸತ್ಯಪ್ರಜ್ಞರೆಂದು ನಾಮಕರಣ ಮಾಡಿ ಪ್ರಣವೋಪದೇಶ ಮಾಡಿದರು.

ಚೈತ್ರ ಶುದ್ಧ ಅಷ್ಟಮಿ ಶ್ರೀ ಸತ್ಯಧ್ಯಾನತೀರ್ಥರ ಪುಣ್ಯದಿನ.

ಯಚ್ಛಾಯಾತಲ ಸಂಶ್ರಯಾತ್ ಸಕೃದಹೋ
ಚೇತಃ ಪಥಾಗೋಚರಾನ್ ।
ಕಾಮಾನ್ ಕಾಮ ಮವಾಪ್ಯ ಕಾಮಸುರಭೌ
ನಿಷ್ಕಾಮನಾ ಮಾನವಾಃ ॥
ಸ್ವಚ್ಚಿಂತಾಮಣಿ ಚಿಂತನೇಽಪ್ಯರುಚಯೋ
ಮಂದಾರ ಮಂದಾದರಾಃ ॥
ಸತ್ಯಧ್ಯಾನ ಗುರುಂ ನಮಾಮಿ ವಿದುಷಾಂ ವೃಂದಸ್ಯ
ವೃಂದಾರಕಂ ॥

## ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠಾಧೀಶರಾದ

# ಶ್ರೀ ಇಂದಿರಾಕಾಂತ ತೀರ್ಥರು



ಗೋಕರ್ಣ ಪರ್ತಗಾಳಿ ಜೀವೋತ್ತಮಮಠದ ಪರಂಪರೆಯಲ್ಲಿ ೨೦ ನೇಯವರಾದ ಶ್ರೀಮದ್ ಇಂದಿರಾಕಾಂತ ಶ್ರೀಪಾದ ಒಡೆಯರು ಮಹಾ ಕೀರ್ತಿಶಾಲಿಗಳೂ, ಘನ ವಿದ್ವಾಂಸರೂ ಗ್ರಂಥಕರ್ತರೂ ಆಗಿದ್ದರು.

ಇವರ ಕಾಲದಲ್ಲಿ ಮಠವು ವೈಭವ ಶಿಖರವನ್ನು ಮುಟ್ಟಿದ್ದಿತು. ಇವರು ನಿತ್ಯವೂ ಸುಧಾ ಪಾಠಪ್ರವಚನ ನಡೆಯಿಸುತ್ತಿದ್ದರು. ಇವರಲ್ಲಿ ಎಷ್ಟೋ ವಿದ್ಯಾರ್ಥಿಗಳು ಸುಧಾಂತ ವ್ಯಾಸಂಗ ಮಾಡಿ ಪರಿಣತ ಪಂಡಿತರಾದರು. ವೇ|| ರಘುವೀರಾಚಾರ್ಯ, ಶ್ರೀ ಕುಮಟಾ ನಾರಾಯಣಾಚಾರ್ಯ, ವೈಕುಂಠಾಚಾರ್ಯ, ವೈಕುಂಠ ಪ್ರಭು, ದಾಮೋದರಾಚಾರ್ಯ ಮುಂತಾದವರು ಪ್ರಸಿದ್ಧರಾಗಿದ್ದಾರೆ.

ಇವರು ಮರಾಠಿಭಾಷೆಯಲ್ಲಿ ಶ್ರೀ ಭಗವದ್ಗೀತೆಗೆ ಶ್ರೀಮದಾಚಾರ್ಯರ ತತ್ವಾನುಸಾರ ಬಹಳ ಸುಂದರವಾದ ಟೀಕೆಯನ್ನು ಬರೆದಿದ್ದಾರಲ್ಲದೆ ಸಂಧ್ಯಾರ್ಥವೆಂಬ ಗ್ರಂಥವನ್ನೂ ರಚಿಸಿದ್ದಾರೆ.

ಇವರು ಅನೇಕ ಕಡೆಗಳಲ್ಲಿ ದೇವಮಂದಿರಗಳನ್ನೂ, ಮಠಗಳನ್ನೂ ಕಟ್ಟಿಸಿ ಭಕ್ತರಿಗೆ ಉದ್ಧಾರದ ಮಾರ್ಗವನ್ನು ಕಲ್ಪಿಸಿಕೊಟ್ಟಿದ್ದಾರೆ. ಇವರು ಸಕಲ ತೀರ್ಥಯಾತ್ರೆಗಳನ್ನು ಮಾಡಿದರು. ಇವರು ಉಡುಪಿಗೆ ಆಗಮಿಸಿದಾಗ ಆಗಿನ ಪರ್ಯಾಯ ಪೀಠಸ್ಥರಾದ ಶ್ರೀ ಫಲಿಮಾರು ಮಠದ ಶ್ರೀಪಾದಂಗಳವರು ಇವರಿಗೆ ಮರ್ಯಾದೆ ಮಾಡಿ ಸತ್ಕರಿಸಿದರು. ಇವರ ವೃಂದಾವನವು ಪರ್ತಗಾಳಿಯಲ್ಲಿ ಆಗಿರುತ್ತದೆ.



### ಶ್ರೀ ಸಂಸ್ಥಾನ ಕಾಶೀಮಠಾಧೀಶ

## ಶ್ರೀಮದ್ಭುವನೇಂದ್ರತೀರ್ಥ ಶ್ರೀಪಾದಂಗಳವರು



ಶ್ರೀ ಸಂಸ್ಥಾನ ಕಾಶೀಮಠದ ಯತಿ ಪರಂಪರೆಯಲ್ಲಿ ಆಗಿಹೋದ ಋಷಿತುಲ್ಯ ಪೂಜ್ಯ ಯತಿವರ್ಯರುಗಳಲ್ಲಿ ಶ್ರೀಮದ್ ಭುವನೇಂದ್ರತೀರ್ಥ ಶ್ರೀಪಾದಂಗಳವರು ಒಬ್ಬರು. ಶ್ರೀಗಳವರ ವಿದ್ಯಾಪ್ರೌಢಿಮೆ, ತಪಃಶಕ್ತಿ, ಭಗವದ್ಭಕ್ತಿ, ಯೋಗಸಾಧನೆ, ಭೂತದಯೆ, ನಿರ್ವೈರಭಾವ, ಪ್ರಸನ್ನ ಶಾಂತ ಸ್ವಭಾವ ಇತ್ಯಾದಿ ಪ್ರತಿಯೊಂದೂ ಉಜ್ವಲವಾಗಿದ್ದವು. ಅವರು ಹತ್ತೊಂಬನೆಯ ಶತಮಾನದಲ್ಲಿ ಇದ್ದವರಾದ ಕಾರಣ, ಈಗಿನ ಕಾಲದಲ್ಲಿ ಅವರ ಹೆಸರನ್ನೂ ಮಹಿಮೆಯನ್ನೂ ಕೇಳಿ ತಿಳಿಯದವರು ಅತಿ ವಿರಳವೆನ್ನಬಹುದು.

ಶ್ರೀಭುವನೇಂದ್ರ ತೀರ್ಥರು ಲೋಕ ವಿಖ್ಯಾತರೂ ತಿರುವಾಂಕೂರು ಸಂಸ್ಥಾನದ ಮಹಾರಾಜರಿಂದ ಬಹುವಾಗಿ ಸನ್ಮಾನಿತರೂ ಆಗಿದ್ದ ಶ್ರೀಮತ್ ಸುಮತೀಂದ್ರ ತೀರ್ಥ ಶ್ರೀಪಾದಂಗಳವರ ಶಿಷ್ಯರು. ಸದಾಚಾರ ಸಂಪನ್ನರೂ ಸದ್ಧರ್ಮನಿಷ್ಠರೂ ಆಗಿರುವ ಕಾಮತರ ಮನೆತನದ ಚಿಕ್ಕ ವಯಸ್ಸಿನ ವಟುವಿಗೆ ಸುಮತೀಂದ್ರರು ಸನ್ಯಾಸಾಶ್ರಮವನ್ನು ಕೊಟ್ಟು ಶಿಷ್ಯನನ್ನಾಗಿ ಸ್ವೀಕರಿಸಿ ಧರ್ಮ ಪೀಠಾಧಿಪತಿಯನ್ನಾಗಿ ಮಾಡಿದರು. ಶ್ರೀಭುವನೇಂದ್ರರು ಚಿಕ್ಕ ವಯಸ್ಸಿನವರಾಗಿದ್ದರೂ ಆಶ್ರಮ ಸ್ವೀಕಾರಕ್ಕೆ

ಮೊದಲೇ ವೇದಾಧ್ಯಯನಾದಿಗಳನ್ನು ಮಾಡಿ ಒಳ್ಳೆಯ ವಿಚಾರಶಕ್ತಿಯುಳ್ಳವರಾಗಿದ್ದರು. ತನ್ನ ಪೂರ್ವ ವಯಸ್ಸಿನಲ್ಲಿಯೇ ಹಲವಾರು ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಗಳಿಸಿದ್ದರು.

ಶ್ರೀಗಳವರಿಗೆ ದ್ವೈತ ವೇದಾಂತ, ಧರ್ಮಶಾಸ್ತ್ರ, ಆಗಮಶಾಸ್ತ್ರ, ಜ್ಯೋತಿಷ, ಆಯುರ್ವೇದ, ಮಂತ್ರ ಶಾಸ್ತ್ರ, ಶಿಲ್ಪ ಶಾಸ್ತ್ರ ಇತ್ಯಾದಿಗಳಲ್ಲಿ ಅತ್ಯುಚ್ಚ ಪಾಂಡಿತ್ಯವಿದ್ದು ಮಹಾ ಮೇಧಾವಿಗಳಾಗಿದ್ದರು.

ಜಗತ್ತಿನಲ್ಲಿ ಬಹು ಮಂದಿ ವಿದ್ಯಾವಂತರಾಗಿದ್ದಾರೆ. ಯಾರಾದರೂ ಒಂದೆರಡು ವಿದ್ಯೆಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿರಬಹುದು. ಆದರೆ, ಶ್ರೀ ಭುವನೇಂದ್ರ ತೀರ್ಥರು ಹಲವಾರು ವಿದ್ಯೆಗಳಲ್ಲಿ ಅತ್ಯುಚ್ಚಮಟ್ಟದ ಪ್ರೌಢಿಮೆಯನ್ನು ಹೊಂದಿದ್ದರು. ಅದರಂತೆ ಮಹಾ ತಪಸ್ವಿಗಳಾಗಿಯೂ ಇದ್ದರಲ್ಲದೇ ತಮ್ಮ ತಪಃ ಪ್ರಭಾವದ ಫಲವಾಗಿ ಲೋಕಾನುಗ್ರಹ ಶಕ್ತಿಯನ್ನೂ ಚನ್ನಾಗಿ ಹೊಂದಿದ್ದರು. ಶ್ರೀಗಳವರ ಸಮಗ್ರವಾದ ಚರಿತ್ರೆಯನ್ನು ಈ ವರೆಗೆ ಯಾರೂ ಬರೆದಿಟ್ಟುದು ಕಂಡು ಬರುವುದಿಲ್ಲ. ಆದರೆ ಅವರ ಅನುಗ್ರಹದ ಫಲವಾಗಿ ಅಲ್ಲಲ್ಲಿ ಇರತಕ್ಕ ವಿದ್ಯಮಾನಗಳನ್ನು ಅವುಗಳ ಚರಿತ್ರೆಯನ್ನು ವೀಕ್ಷಿಸಿ ಶ್ರೀಗಳವರ ಜೀವಿತ ಕಾಲದ ವಿಷಯಗಳನ್ನು ನಾವು ತಿಳಿದುಕೊಳ್ಳಬಹುದು.

ಗುರುವರ್ಯರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ವೇದಾಧ್ಯಯನವನ್ನೂ ಸಂಸ್ಕೃತಾಭ್ಯಾಸವನ್ನೂ ಮಾಡಿ ಉತ್ತಮ ಪಾಂಡಿತ್ಯವನ್ನು ಗಳಿಸಿದ್ದರು. ಬಳಿಕ ದ್ವೈತ ವೇದಾಂತವನ್ನು ಶ್ರೀಮನ್ನ್ಯಾಯಸುಧಾ ಪರ್ಯಂತ ಅಧ್ಯಯನ ಮಾಡಿದ್ದರು. ಆಯುರ್ವೇದ, ಜ್ಯೋತಿಷ, ಆಗಮಶಾಸ್ತ್ರ, ಗಣಿತ, ಮಂತ್ರಶಾಸ್ತ್ರ ಇತ್ಯಾದಿ ಪ್ರತಿಯೊಂದು ವಿಷಯದಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಪಡೆದಿದ್ದರು ಹಾಗೂ ಕುಶಲ ವಿದ್ಯೆಗಳಾದ ಶಿಲ್ಪಶಾಸ್ತ್ರ, ಚಿತ್ರಕಲೆ, ಸಂಗೀತ ಮೊದಲಾದವುಗಳಲ್ಲಿಯೂ ಉತ್ತಮ ಪ್ರೌಢಿಮೆ ಇತ್ತು. ವಿದ್ಯಾಭಿಮಾನಿಗಳಾಗಿ ಇದ್ದುದರಿಂದ ಅವರ ಬಳಿ ಯಾವಾಗಲೂ ಅನೇಕ ವಿದ್ಯಾವಂತರು ಇರುತ್ತಿದ್ದರು.

ನಾನು ವಿದ್ಯಾವಂತನಾಗಿದ್ದೇನೆ. 'ಸಾಕು' ಎನ್ನುವಷ್ಟರಲ್ಲಿಯೇ ತೃಪ್ತಿ ಪಡದೆ ಸತ್ಪಾತ್ರ ಅಧಿಕಾರಿಯಾಗಿರುವ ಬಹು ಮಂದಿಗೆ ವಿದ್ಯಾದಾನವನ್ನು ಮಾಡಿರುತ್ತಾರೆ; ದ್ವೈತ ವೇದಾಂತ, ಆಗಮ ಶಾಸ್ತ್ರ, ಗಣಿತ, ಜ್ಯೋತಿಷ ಶಾಸ್ತ್ರಗಳನ್ನು ಭುವನೇಂದ್ರ ತೀರ್ಥರಲ್ಲಿ ಅಧ್ಯಯನವನ್ನು ಮಾಡಿ ವಿದ್ಯಾವಂತರಾದವರು ಒಳ್ಳೆಯ ಕೀರ್ತಿಶಾಲಿಗಳಾಗಿ ಬಾಳಿದ್ದಾರೆ. ಕೊಚ್ಚಿಯ ಶ್ರೀ ವೇಂಕಟಪತಿ ದೇವಸ್ಥಾನದಲ್ಲಿ ಬ್ರಹ್ಮತ್ವದ (ತಂತ್ರಿ) ಗುಣಭಟ್ಟರು, ಎರ್ನಾಕುಲಂ ಶ್ರೀನಿವಾಸ ಭಟ್ಟರು, ಮಂಗಳೂರಿನ ಕೃಷ್ಣಾ

ಚಾರ್ಯರು, ಕಾರ್ಕಳದ ಸುಬ್ಬಾ ಭಟ್ಟಾಚಾರ್ಯರು ವೊದಲಾದ ಪ್ರಸಿದ್ಧ ವಿದ್ಯಾವಂತರೆಲ್ಲರೂ ಶ್ರೀ ಭುವನೇಂದ್ರ ತೀರ್ಥರಲ್ಲಿ ವಿದ್ಯಾಭ್ಯಾಸ ಮಾಡಿದವರು.

ಸಾವಂಜೆ ಲಕ್ಷ್ಮೀನಾರಣಪ್ಪನೆಂಬವರು ಶ್ರೀಗಳವರಲ್ಲಿ ದ್ವೈತ ವೇದಾಂತವನ್ನು ಅಭ್ಯಾಸ ಮಾಡಿ ವಿದ್ಯಾವಂತರಾಗಿ ಪುರಾಣ ಪ್ರವಚನಗಳಲ್ಲಿಯೂ ಉತ್ತಮ ಪ್ರೌಢಿಮೆಯನ್ನು ಹೊಂದಿದ್ದರು. ಕವಿಗಳಾಗಿಯೂ ಇದ್ದರು. ಅವರು ಕ್ರಮೇಣ ಹರಿಕಥೆಯನ್ನು ಮಾಡಲು ಪ್ರಾರಂಭಿಸಿ ಉತ್ತಮ ಹರಿದಾಸರೆಂದು ಕೀರ್ತಿಗಳಿಸಿದ್ದರು. ಅವರು ರಚಿಸಿದ ದೇವರ ನಾಮಗಳು ಕನ್ನಡ ಜಿಲ್ಲೆಯಲ್ಲಿಯೂ ಹತ್ತಿರದ ಇತರ ಕರ್ನಾಟಕ ಪ್ರಾಂತದಲ್ಲಿಯೂ ಈಗಲೂ ರೂಢಿಯಲ್ಲಿ ಇವೆ.

ಶ್ರೀ ಭುವನೇಂದ್ರ ತೀರ್ಥರು ಕೆಲವು ಕಾಲ ಕಾಶಿಯಲ್ಲಿ ತಮ್ಮ ಸ್ವಮಠದಲ್ಲಿದ್ದರು. ಆಗ ಅಲ್ಲಿಯ ಬಹು ಮಂದಿ ಮಹಾ ವಿದ್ವಾಂಸರೆಲ್ಲರೂ ಮಠಕ್ಕೆ ಬಂದು ಶ್ರೀಗಳವರನ್ನು ಭೇಟಿಯಾಗಿ ಸ್ವಾಮಿಗಳ ಪಾಂಡಿತ್ಯವನ್ನು ಮುಕ್ತ ಕಂಠದಿಂದ ಹೊಗಳಿರುತ್ತಾರೆ. ಹಾಗೂ ಅಲ್ಲಿಯ " ಬ್ರಹ್ಮವಿದ್ಯಾ ಪ್ರಬೋಧಿನೀ ವಿದ್ಯಾ ಪೀಠ " ವೆಂಬ ಸಂಸ್ಥೆಗೂ " ಭಾರತಧರ್ಮಸಂವರ್ಧಿನೀಸಭಾ " ಎಂಬ ಸಂಸ್ಥೆಗೂ ಕರೆದುಕೊಂಡು ಹೋಗಿ, ಶ್ರೀಗಳವರ ಅದ್ಭುತವಾದ ಪ್ರೌಢಿಮೆಯನ್ನು ಶ್ಲಾಘನೆ ಮಾಡಿ ಸನ್ಮಾನಿಸಿದ್ದಾರೆ. ಅನೇಕ ಮಹಾ ವಿದ್ಯಾವಂತರು ರುಜುಮಾಡಿ ಬಿನ್ನವತ್ತಳೆಯನ್ನು ಅರ್ಪಿಸಿದ್ದಾರೆ.

ಶ್ರೀ ಭುವನೇಂದ್ರ ಶ್ರೀಪಾದಂಗಳವರು ಮೊದಲೇ ತಮಗೆ ತಿಳಿದಿರುವಂತೆ ಮಾರ್ಗಶೀರ್ಷ ಶುಕ್ಲಪಾಡ್ಯ(ಕ್ರಿ. ಶ. ೧೮೮೬) ದಿನ ಶ್ರೀಮನ್ನಾರಾಯಣ ಸ್ಮರಣೆ ಮಾಡುತ್ತ ವಿಷ್ಣುಸಾಮೀಪ್ಯವನ್ನು ಸೇರಿದರು. ಶ್ರೀಗಳವರ ವೃಂದಾವನವು ಬಸರೂರು ಮಠದಲ್ಲಿ ಇರುತ್ತದೆ.

ಅಲ್ಲಿ ಬಸರೂರಿನಲ್ಲಿ ಗುರುಗಳ ಸೇವೆಯನ್ನು ಮಾಡಿದವರಿಗೆ ಈಗಲೂ ಇಷ್ಟಾರ್ಥಸಿದ್ಧಿಯಾಗುತ್ತದೆಂದು ಪ್ರಸಿದ್ಧಿ ಇದೆ. ಅನೇಕ ಭಕ್ತಾದಿಗಳು ಸೇವಾರ್ಥ ನಡೆಸಿ ಕೃತಾರ್ಥರಾಗುತ್ತಿದ್ದಾರೆ.



## ಕಾಶೀಮಠಾಧೀಶರಾದ

# ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರು



ಶ್ರೀ ವರದೇಂದ್ರತೀರ್ಥರು ಶ್ರೀ ಕಾಶೀಮಠ ಸಂಸ್ಥಾನದ ಗುರುಪರಂಪರೆಯಲ್ಲಿನ ಒಂದು ಅದ್ಭುತವಾದ ಯತಿರತ್ನವು. ಮೇಲಾಗಿ ಜಗತ್ತಿನಲ್ಲಿಯ ಮಾನವ ರತ್ನವು. ದಿಗಂತ ವಿಶ್ರಾಂತವಾದ ಕೀರ್ತಿಯುಳ್ಳ ಗುರುವರ್ಯ ಶ್ರೀಮದ್ಭುವನೇಂದ್ರ ತೀರ್ಥ ಶ್ರೀಪಾದಂಗಳವರು ಇವರು ಗುರುಗಳು.

ಶ್ರೀ ವರದೇಂದ್ರತೀರ್ಥರು ಕೇರಳದಲ್ಲಿನ ಕೊಚ್ಚಿಯಲ್ಲಿ ಕ್ರಿಸ್ತ ಶಕ ೧೮೭೭ ನೇ ವರ್ಷ ಜನಿಸಿದರು. ಸದಾಚಾರ ಸಂಪನ್ನರೂ, ಉತ್ತಮ ನಿಷ್ಠಾವಂತರೂ ಆಗಿರುವ ಮಹಾಲೆ ಮನೆತನವು ಅವರ ಜನನದಿಂದ ಪಾವನವಾಯಿತು. ಇವರಿಗೆ ಗರ್ಭಾಷ್ಟಮ ವಯಸ್ಸಿನಲ್ಲಿಯೇ ಉಪನಯನವೂ ಆಯಿತು.

ಮಹಾ ತಪಸ್ವಿಗಳೂ, ಪ್ರಜ್ಞಾವಂತರೂ ಆಗಿದ್ದ ಪೂಜ್ಯ ಗುರುಗಳಾದ ಶ್ರೀ ಭುವನೇಂದ್ರತೀರ್ಥರು ಈ ಹುಡುಗನ ಆಚಾರ ಚಟುವಟಿಕೆಗಳನ್ನು ನೋಡಿ ಸಂತೋಷ ಪಟ್ಟು, ಹುಡುಗನ ಮಾತಾ-ಪಿತೃಗಳನ್ನು ಕರೆಯಿಸಿ— ಆ ಹುಡುಗನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಬೇಕೆಂಬ ಮನೋಭಿಪ್ರಾಯವನ್ನು ತಿಳಿಸಿದರು. ತಂದೆ ತಾಯಿಗಳೂ ಪ್ರತಿ ಮಾತನ್ನು ಆಡದೇ ಗುರುಗಳ ಮಾತನ್ನು ಶಿರಸಾವಹಿಸಿ ಕೂಡಲೇ

ಸಮ್ಮತಿಯನ್ನು ಕೊಟ್ಟರು. ಆಗಲೇ ಹುಡುಗನು ವೇದಾಧ್ಯಯನವನ್ನು ಮಾಡುತ್ತಿದ್ದನು. ಸ್ವಲ್ಪಮಟ್ಟಿಗೆ ಸಂಸ್ಕೃತಾಭ್ಯಾಸವೂ ಆಗಿತ್ತು.

ಕ್ರಿಸ್ತಶಕ ೧೮೭೭ ನೆಯ ವರ್ಷ ಅಂದರೆ ವಟುವಿನ ಹನ್ನೊಂದನೆಯ ವರ್ಷದಲ್ಲಿ ಆತನಿಗೆ ಸನ್ಯಾಸಾಶ್ರಮವನ್ನು ಕೊಟ್ಟು ತನ್ನ ಶಿಷ್ಯನನ್ನಾಗಿ ಸ್ವೀಕರಿಸಿದರು.

ಈ ಶಿಷ್ಯ ಸ್ವೀಕಾರ ಸಮಾರಂಭವು ಮಂಜೇಶ್ವರದಲ್ಲಿ ಬಹು ವೈಭವದಿಂದ ನಡೆಯಿತು. ಅದೊಂದು ಭಾರಿ ಜಾತ್ರೆಯೇ ಆಗಿ ಪರಿಣಮಿಸಿತು. ರೈಲು, ಮೋಟಾರು ಇತ್ಯಾದಿ ವಾಹನ ಸೌಕರ್ಯವು ಯಾವುದೂ ಇಲ್ಲದ ಆ ಕಾಲದಲ್ಲಿಯೂ ಸಾವಿರ ಗಟ್ಟಲೆಯಲ್ಲಿ ಭಕ್ತಾದಿಗಳು ಬಂದು ಸೇರಿದ್ದರು.

ಶಿಷ್ಯ ಸ್ವೀಕಾರವಾದ ಬಳಿಕ ಗುರುಗಳಾದ ಶ್ರೀ ಭುವನೇಂದ್ರತೀರ್ಥ ಶ್ರೀಗಳು ಶಿಷ್ಯ ವಿದ್ಯಾಭ್ಯಾಸಕ್ಕಾಗಿ ಎಲ್ಲ ವ್ಯವಸ್ಥೆಗಳನ್ನು ಮಾಡಿದ್ದರು. ಇದರಿಂದ ಒಳ್ಳೆಯ ಮೇಧಾಶಕ್ತಿಯುಳ್ಳ ಶ್ರೀ ವರದೇಂದ್ರರು ಅತ್ಯಲ್ಪ ಕಾಲದೊಳಗಾಗಿ ವೇದಾಧ್ಯಯನ ಮಾಡಿ ವ್ಯಾಕರಣ, ನ್ಯಾಯಶಾಸ್ತ್ರ, ದ್ವೈತ ವೇದಾಂತಗಳಲ್ಲಿ ಅದ್ಭುತವಾಗಿ ಪಾಂಡಿತ್ಯವನ್ನು ಸಂಪಾದಿಸಿದರು.

ಛಂದಃಶಾಸ್ತ್ರ, ಜ್ಯೋತಿಷ, ಗಣಿತ, ಆಗಮಶಾಸ್ತ್ರ, ಮಂತ್ರಶಾಸ್ತ್ರ, ಆಯುರ್ವೇದಗಳಲ್ಲಿಯೂ ಅವರಿಗೆ ಅಗಾಧವಾದ ಪಾಂಡಿತ್ಯವಿತ್ತು. ಲಲಿತ ಕಲೆಗಳಲ್ಲಿಯೂ, ಕುಶಲ ವಿದ್ಯೆಗಳಲ್ಲಿಯೂ ಅವರ ಪ್ರೌಢಿಮೆಯು ಅತ್ಯಂತ ಹಿರಿದಾದುದು. ಸ್ಮೃತಿ ಮೊದಲಾದ ಧರ್ಮಶಾಸ್ತ್ರ ಗ್ರಂಥಗಳು ಅವರಿಗೆ ಕಂಠಗತವಾಗಿದ್ದವು. ಸಂಸ್ಕೃತ ಭಾಷೆಯ ಮೇಲಿನ ಅವರ ಹಿಡಿತವು ಅಸಾಧಾರಣವಾಗಿದ್ದಿತು. ಒಟ್ಟಿನಲ್ಲಿ ಅವರು ವಿದ್ಯಾಸಾಗರವಾಗಿದ್ದರು. ಶ್ರೀಗಳವರಿಗೆ ಕಂಠವು (ಧ್ವನಿಯು) ಸ್ನಿಗ್ಧವಾಗಿಯೂ ಅತಿ ರಮ್ಯವಾಗಿಯೂ ಇದ್ದುದರಿಂದ ಅವರು ವೇದಮಂತ್ರಗಳನ್ನು ಹೇಳುತ್ತಿದ್ದರೆ ಉತ್ತಮವಾದ ಮಧುರ ಗಾನದಂತೆ ಇಂಪಾಗಿ ಇರುತಿತ್ತು.

ಶ್ರೀ ವರದೇಂದ್ರರ ಪ್ರತಿಭೆ ಮತ್ತು ವಿದ್ಯಾ ನೈಪುಣ್ಯವನ್ನು ನೋಡಿ ಗುರುಗಳಾದ ಶ್ರೀ ಭುವನೇಂದ್ರರಿಗೆ ಅತ್ಯಾನಂದವಾಗಿತ್ತು. ಶ್ರೀ ವ್ಯಾಸರಘುಪತಿ ದೇವರು ತಮ್ಮ ಉತ್ತರಾಧಿಕಾರಿಯಾಗಲಿರುವ ಶಿಷ್ಯರು ಶ್ರೇಷ್ಠ ವಿದ್ಯಾವಂತರಾಗುವಂತೆ ಅನುಗ್ರಹ ಮಾಡಿದರೆಂದು ಹಿಗ್ಗಿದರು. ವಿಧಿನಿಯಮದಂತೆ ಶ್ರೀ ಭುವನೇಂದ್ರತೀರ್ಥರು ಕ್ರಿಸ್ತಶಕ ೧೮೮೭ ನೇ ವರ್ಷ ಬಸರೂರು ಸ್ವಮಠದಲ್ಲಿ ವಿಷ್ಣು ಸಾನಿಧ್ಯವನ್ನು ಸೇರಿದರು.

ಮುಂದೆ ಶ್ರೀ ವರದೇಂದ್ರ ತೀರ್ಥರು ಸಂಸ್ಥಾನದ ಸಂಪೂರ್ಣ ಆಗುಹೋಗುಗಳ ಅಧಿಕಾರವನ್ನು ವಹಿಸಿಕೊಂಡು ಶಿಷ್ಯಸಮುದಾಯಕ್ಕೆ ದರ್ಶನಕೊಟ್ಟು ಧರ್ಮೋಪದೇಶ ಮಾಡಿ ಅನುಗ್ರಹಿಸುವುದಕ್ಕಾಗಿ ದಿಗ್ವಿಜಯ ಪ್ರವಾಸ ಕೈಗೊಂಡರು.

ಶ್ರೀಗಳವರು ಒಳ್ಳೆಯ ಕವಿಗಳಾಗಿಯೂ ಇದ್ದರು. ತಮ್ಮ ಆರಾಧ್ಯದೇವತೆಯಾದ ಶ್ರೀ ವೇದವ್ಯಾಸದೇವರು, ಶ್ರೀ ರಾಮದೇವರು, ಶ್ರೀ ನರಸಿಂಹ ದೇವರು ಮತ್ತು ಶ್ರೀ ಮಧ್ವಾಚಾರ್ಯರನ್ನು ಸ್ತುತಿಸಿ ಅಷ್ಟಕಗಳನ್ನು ರಚಿಸಿರುತ್ತಾರೆ. ಇವುಗಳಲ್ಲಿ ಶಬ್ದಾಲಂಕಾರ ಪ್ರಧಾನವಾಗಿಯೂ, ಅರ್ಥಾಲಂಕಾರ ಪ್ರಧಾನವಾಗಿಯೂ, ಶಬ್ದಾರ್ಥ ಅಲಂಕಾರ ಪ್ರಧಾನವಾಗಿಯೂ ಇರುವ ಉತ್ತಮ ಕವಿತೆಗಳಿವೆ.

ಅವುಗಳಲ್ಲದೆ—ಚಕ್ರಬಂಧ, ಕಮಲಬಂಧ, ವೇಣಿಬಂಧ, ನಾಗಬಂಧ ಇತ್ಯಾದಿ ಕೌತುಕದ ಕವಿತೆಗಳನ್ನು ರಚಿಸುವುದು ಶ್ರೀಗಳವರಿಗೆ ಕರತಲಾಮಲಕವಾಗಿತ್ತು. ತಮ್ಮ ಪ್ರೀತಿಗೆ ಪಾತ್ರರಾದ ಕೆಲವು ಮಂದಿ ಶಿಷ್ಯರಿಗೆ ಚಕ್ರಬಂಧ ಇತ್ಯಾದಿ ಕವಿತೆಗಳಲ್ಲಿ ಶ್ಲೋಕಗಳನ್ನು ರಚಿಸಿ ಆಶೀರ್ವಾದಗಳನ್ನು ಕಳುಹಿಸಿರುತ್ತಾರೆ.

ಉಡುಪಿಯ ಶ್ರೀ ಲಕ್ಷ್ಮೀವೇಂಕಟೇಶ ಸ್ವಾಮಿ ದೇವಾಲಯದಲ್ಲಿನ ಒಂದು ಕಂಬದ ಮೇಲೆ ಆ ದೇವರ ಸ್ತುತಿರೂಪವಾಗಿ ಕಮಲಬಂಧರೂಪವಾದ ಚಿತ್ರಕವಿತೆಯ ಶ್ಲೋಕವು ಕೆತ್ತಿರುವುದು ಇದೆ. ಅದನ್ನು ಶ್ರೀ ವರದೇಂದ್ರ ತೀರ್ಥರು ರಚಿಸಿಕೊಟ್ಟಿದ್ದಾರೆ.

ಆಗಮ ಶಾಸ್ತ್ರ ಹಾಗೂ ಧರ್ಮ ಶಾಸ್ತ್ರಗಳ ವಿಷಯದಲ್ಲಿ ಶ್ರೀಗಳವರು ಒಂದು ಪ್ರಮಾಣಭೂತ ವ್ಯಕ್ತಿಗಳಾಗಿದ್ದರು. ಸ್ಮೃತಿಮುಕ್ತಾವಲಿ, ತಂತ್ರಸಾರ, ಕೃಷ್ಣಾಮೃತ ಮಹಾರ್ಣವ, ಹಾಗೂ ಇತರ ಸ್ಮೃತಿಗಳು ಅವರಿಗೆ ಮುಖೋದ್ಗತವಾಗಿದ್ದವು. ಯಾವ ವಿಷಯವಾಗಿ ನಿರ್ಣಯವನ್ನು ಕೇಳಿದರೂ ಕೂಡಲೇ ಸಪ್ರಮಾಣವಾಗಿ ಹೇಳಿಬಿಡುತ್ತಿದ್ದರು. ಪುಸ್ತಕವನ್ನು ಬಿಚ್ಚಿ ನೋಡುವ ಅವಶ್ಯಕತೆಯೇ ಅವರಿಗೆ ಇರಲಿಲ್ಲ. ಮತ್ತು ಒಮ್ಮೆ ಸಪ್ರಮಾಣವಾಗಿ ಒಂದು ನಿರ್ಣಯವನ್ನು ಹೇಳಿದ ಬಳಿಕ ಪುನಃ ಅದನ್ನು ತಿದ್ದುವ ಪ್ರವೃತ್ತಿಯೇ ಅವರಲ್ಲಿ ಇರಲಿಲ್ಲ. ಇವರ ಸಿದ್ಧಾಂತವು ಅಷ್ಟು ನಿರ್ಣೀತವಾದುದು.

ಕ್ರಿ. ಶ. ೧೯೦೮—೯ ನೆಯ ವರ್ಷವಿರಬಹುದು. ಶ್ರೀ ವರದೇಂದ್ರತೀರ್ಥ ಸ್ವಾಮಿಗಳು ಅನಂತಶಯನಕ್ಕೆ (ತಿರುವಾಂಕೂರು) ದಯಮಾಡಿಸಿದ್ದರು. ಆಗ ಅಲ್ಲಿಯ ಮಹಾರಾಜರು ಶ್ರೀ ಗುರುಗಳನ್ನು ಸಕಲ ರಾಜವೈಭವಗಳೊಂದಿಗೆ ಅರಮನೆಗೆ ಕರೆದುಕೊಂಡು ಹೋಗಿ ಪಾದಪೂಜಾದಿಗಳನ್ನು ಮಾಡಿ ಶ್ರೀ ಗುರುಗಳ ಸೇವೆಯನ್ನು ಮಾಡಿದರು. ಶ್ರೀ ಗುರುಗಳಿಗೆ ರತ್ನಹಾರ, ಪೀತಾಂಬರಾದಿಗಳನ್ನು ಅರ್ಪಿಸಿ, ಫಲ ಮಂತ್ರಾಕ್ಷತೆ ಆಶೀರ್ವಾದವನ್ನು ಪಡೆದರು. ಒಂದೆರಡು ಸಲ ಮಹಾರಾಜರು ಶ್ರೀ ಮಠಕ್ಕೆ ಬಂದು ಗುರುಗಳ ದರ್ಶನವನ್ನು ಪಡೆದು ಕೃತಾರ್ಥರಾದುದೂ ಇದೆ.

ತಿರುವಾಂಕೂರು, ಹಾಗೂ ಕೊಚ್ಚಿಯ ಮಹಾರಾಜರುಗಳಿಗೆ ಶ್ರೀ ವರದೇಂದ್ರ ತೀರ್ಥ ಶ್ರೀಪಾದಂಗಳವರ ವಿಷಯದಲ್ಲಿ ತುಂಬ ಭಕ್ತಿ ಗೌರವಗಳಿದ್ದವು.

ಕ್ರಿ. ಶ. ೧೯೧೨ ನೆಯ ಪರಿಧಾವಿ ಸಂವತ್ಸರದ ಶ್ರಾವಣ ಬಹುಳ ಚತುರ್ಥಿಯ ದಿನ, ಕೊಚ್ಚಿಯಲ್ಲಿನ ಸತ್ಕುಲ ಪ್ರಸೂತರಾದ ವಟುವನ್ನು ಕರೆತರಿಸಿ ಆತನಿಗೆ ಸನ್ಯಾಸಾಶ್ರಮವನ್ನು ಕೊಟ್ಟು ಶಿಷ್ಯನನ್ನಾಗಿ ಸ್ವೀಕರಿಸಿ "ಸುಕೃತೀಂದ್ರತೀರ್ಥ" ರೆಂದು ನಾಮಕರಣ ಮಾಡಿದರು.

ಮುಂದೆ ಇವರು ಮುಂಬೈ ವಾಲ್ಕೇಶ್ವರದ ಬಾಣಗಂಗಾ ತೀರದಲ್ಲಿರುವ ಕಾಶೀ ಮಠದಲ್ಲಿ ಆನಂದ ಸಂವತ್ಸರದ ಆಷಾಢ ಶುಕ್ಲ ದ್ವಿತೀಯಾ ದಿನ ಇಹಲೋಕಯಾತ್ರೆಯನ್ನು ಮುಗಿಸಿ ನಾರಾಯಣಸ್ಮರಣೆಮಾಡುತ್ತ ವೃಂದಾವನಸ್ಥರಾದರು.

ಶ್ರೀಗಳ ತಪೋಮಹಿಮೆಯ ಪ್ರಭಾವವು ಈಗಲೂ ಅನುಭವಕ್ಕೆ ಬರುತ್ತಿದೆ. ಶ್ರೀಗಳ ವೃಂದಾವನಕ್ಕೆ ನಮಸ್ಕಾರ ಮಾಡಿ ಔಷಧಿಯನ್ನು ಸೇವಿಸಿದರೆ ಎಂಥ ಕಠಿಣವಾದ ಕಾಯಿಲೆಯೂ ಗುಣವಾಗುತ್ತದೆ ಎಂಬ ಪ್ರಸಿದ್ಧಿಯೂ, ನಂಬಿಕೆಯೂ, ಅಲ್ಲಿಯ ಜನಗಳಿಗೆ ಈಗಲೂ ಇದೆ. ಬಹು ಮಂದಿ ಹರಕೆಗಳನ್ನು ಸಲ್ಲಿಸುತ್ತಿರುತ್ತಾರೆ.

ಶ್ರೀಗಳವರ ವೃಂದಾವನದ ಮುಂದೆ ಭಜನೆ, ಹರಿಕಥೆ, ಪುರಾಣ ಇತ್ಯಾದಿಗಳು ಭಕ್ತಾದಿಗಳಿಂದ ನಡೆಯುತ್ತಲೇ ಇರುತ್ತವೆ. ಅನೇಕರು ಶ್ರೀಗಳ ಸೇವೆಯನ್ನು ಮಾಡಿ ತಮ್ಮ ಇಷ್ಟಾರ್ಥವನ್ನು ಹೊಂದಿದ್ದಾರೆ, ಹೊಂದುತ್ತಲೂ ಇದ್ದಾರೆ.



## ಶ್ರೀ ಕಮಲಾಕ್ಷತೀರ್ಥರು

ಇವರು ಪೇಜಾವರ ಮಠದ ಮೂಲ ಯತಿಗಳಾದ ಅಧೋಕ್ಷಜ ತೀರ್ಥರಿಂದ ತುರೀಯಾಶ್ರಮವನ್ನು ಪಡೆದು ಶ್ರೀಕೃಷ್ಣನ ಸೇವೆ, ಸಿದ್ಧಾಂತ ಪ್ರವಚನ ಪ್ರಚಾರದಲ್ಲಿಯೇ ನಿರತರಾಗಿದ್ದರು. ಇವರು ರಚಿಸಿದ "ಹರಿಗಾಥಸ್ತುತಿ"ಯು ಅತಿ ರಮಣೀಯವಾಗಿದೆ.

## ಶ್ರೀ ರಾಜರಾಜೇಶ್ವರತೀರ್ಥರು

ಇವರು ಉಡುಪಿ ಪಲಿಮಾರು ಮಠದ ಯತಿ ಪರಂಪರೆಯಲ್ಲಿ ಆರನೆಯವರು. ವಿದ್ವನ್ಮಣಿಗಳಾದ ಯತಿಶ್ರೇಷ್ಠರು. ವೇದಾಂತ, ವ್ಯಾಕರಣ, ಸಾಹಿತ್ಯದಲ್ಲಿ ನಿಸ್ಸೀಮ ಪಂಡಿತರು. ಇವರ "ರಾಮಸಂದೇಶ" ಎಂಬ ಖಂಡಕಾವ್ಯವು ಇದಕ್ಕೆ ಉತ್ತಮ ಸಾಕ್ಷಿ. ಈ ಶ್ರೀಗಳವರ ಕೃತಿ "ಮಂಗಳಾಷ್ಟಕ"ವೆಂಬ ಪಾತ್ರಃಸ್ತೋತ್ರವಂತೂ ಹೆಂಗಸರು ಮಕ್ಕಳಿಗೂ ಚಿರಪರಿಚಿತವಾದ ಬೇಗು ಜಾವದಲ್ಲಿ ಪ್ರತಿಯೊಬ್ಬರ ಬಾಯಲ್ಲಿ ಗುಣಿಸುಣಿಸುವ ಅತ್ಯಂತ ಜನಪ್ರಿಯ ಸ್ತೋತ್ರವಾಗಿದೆ.

## ಶ್ರೀ ವೇದಾತ್ಮತೀರ್ಥರು

ಈ ಮಹಾತ್ಮರು ಉಡುಪಿ ಸೋದೇ ವಾದಿರಾಜ ಮಠದ ಪೀಠದಲ್ಲಿ ಹತ್ತನೆಯವರು. ಇವರು ಸಿದ್ಧಾಂತ ಗ್ರಂಥಗಳ ಮೇಲೆ ಟಿಪ್ಪಣಿ ಬರೆದಿರುತ್ತಾರೆಂದು ಗ್ರಂಥ ಶೋಧನೆಯಿಂದ ತಿಳಿದು ಬಂದಿದೆ. ಇವರು ಬರೆದಿರುವ "ಕವಿಕರ್ಣಾಮೃತ"ವೆಂಬ ವಾಯುಸ್ತುತಿ ವ್ಯಾಖ್ಯಾನವು ಅತ್ಯಂತ ಸುಂದರವಾಗಿದ್ದು ಈಗ ದೊರೆತಿರುತ್ತದೆ.

## ಶ್ರೀ ವಿಶ್ವೇಶ್ವರತೀರ್ಥರು

ಇವರು ಪೇಜಾವರ ಮಠದ ಪರಂಪರೆಯಲ್ಲಿ ಹದಿನಾರನೆಯವರು. ಶ್ರೀ ವಿಶ್ವಪ್ರಜ್ಞತೀರ್ಥರಿಂದ ಪರಮಹಂಸ ಪದಾರೂಢರಾಗಿ ದ್ವೈತಸಿದ್ಧಾಂತ, ನ್ಯಾಯಶಾಸ್ತ್ರಗಳಲ್ಲಿ ವಿಖ್ಯಾತ ಮೇಧಾವಿಗಳಾಗಿದ್ದರು. ಐತರೇಯ ಭಾಷ್ಯಕ್ಕೆ ಸುಂದರವಾದ ಟೀಕಾ ಬರೆದಿರುವರು.

## ಶ್ರೀ ವಿಶ್ವಪತಿತೀರ್ಥರು

ಶ್ರೀ ಪೇಜಾವರ ಮಠದ ಪರಂಪರೆಯಲ್ಲಿ ಇಪ್ಪತ್ತನೆಯವರಾದ ಇವರು ಪಂಚ ಸ್ತುತಿಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಬ್ರಹ್ಮಸಾರಸ್ತೋತ್ರವ್ಯಾಖ್ಯಾನ, ಮಣಿಮಂಜರೀ, ಮಧ್ವವಿಜಯಗಳಿಗೆ ವ್ಯಾಖ್ಯಾನ ಮತ್ತು ಸಂಗ್ರಹರಾಮಾಯಣ ಟೀಕೆ ಇವರು ಬರೆದ ಇತರ ಗ್ರಂಥಗಳು.

## ಶ್ರೀ ವೇದಾಂಗತೀರ್ಥರು

ಇವರು ಸೋದೇ ಮಠದ ಗುರು ಪರಂಪರೆಯಲ್ಲಿ ಹದಿಮೂರನೆಯವರು. ಇವರು ಭಗವದ್ಗೀತೆಗೆ 'ಟಿಪ್ಪಣಿ' ಬರೆದಿದ್ದಾರೆ. ಶ್ರೀ ನಾರಾಯಣಪಂಡಿತಾಚಾರ್ಯ ವಿರಚಿತ 'ಮಧ್ವವಿಜಯ' ಕ್ಕೆ 'ಪದಾರ್ಥದೀಪಿಕೋದ್ಬೋಧಿನೀ'ಎಂಬ ವ್ಯಾಖ್ಯಾನ ಬರೆದಿದ್ದಾರೆ. ಮಹಾಭಾರತ ತಾತ್ಪರ್ಯ ನಿರ್ಣಯಕ್ಕೂ ಇವರು ಬರೆದ ವ್ಯಾಖ್ಯಾನ ಉಪಲಬ್ಧ ವಾಗಿದೆ. ಇವರ ವೃಂದಾವನವು ಬೀಳಗಿ ಎಂಬಲ್ಲಿದೆ.

## ಶ್ರೀ ರಾಘವೇಂದ್ರತೀರ್ಥರು

ಶ್ರೀಮದಾಚಾರ್ಯರ ಶಿಷ್ಯರಲ್ಲಿ ಪುತ್ತಿಗೆ ಮಠದ ಪೀಠಿಗೆಯಲ್ಲಿ ಪ್ರಸಿದ್ಧರಾದ ಇವರು ಜ್ಞಾನಿಶ್ರೇಷ್ಠರೂ, ವೈರಾಗ್ಯನಿಧಿಗಳೂ ಆಗಿದ್ದರು. ಇವರು 'ಶ್ರೀಮನ್ನ್ಯಾಯ ಸುಧಾ' ಗ್ರಂಥಕ್ಕೆ ಟಿಪ್ಪಣಿ ಬರೆದಿರುವರೆಂದು ಪ್ರಸಿದ್ಧಿ ಇದೆ.

## ಶ್ರೀಯಾದವೇಂದ್ರತೀರ್ಥರು

ಉಡುಪಿ ಪುತ್ತಿಗೆ ಮಠವಲ್ಲಿ ವಿರಾಜಿಸಿದ ವಿದ್ವನ್ಮಣಿಗಳೆಂದು ಊಹಿಸಲಾಗಿದೆ. ಇವರು ತತ್ವಶಾಸ್ತ್ರದಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಶ್ರೀಮದ್ಭಾಗವತಕ್ಕೆ ಸುಂದರ ವ್ಯಾಖ್ಯಾನ ಬರೆದಿರುತ್ತಾರೆ. ಈ ತನಕ ಸಿಕ್ಕಿರುವ ಭಾಗವತ ವ್ಯಾಖ್ಯಾನಗಳಲ್ಲಿ ಇದಕ್ಕೆ ಅದ್ವಿತೀಯ ಸ್ಥಾನವಿದೆ.

## ಶ್ರೀ ವಿಬುಧವರ್ಯತೀರ್ಥರು

ಶ್ರೀ ಸೋದೇ ವಾದಿರಾಜ ಮಠದ ಪರಂಪರೆಯಲ್ಲಿ ೨೩ ನೆಯವರು. ಇವರ ಸುಭದ್ರಾಹರಣ' ಎಂಬ ಮಹಾಕಾವ್ಯ ಸುಂದರವಾದ ಕೃತಿ.

## ಶ್ರೀ ವಿಶ್ವಾಧೀಶತೀರ್ಥರು

ಶ್ರೀ ಸೋದೇ ವಾದಿರಾಜ ಮಠದ ಪೀಠಿಗೆಯಲ್ಲಿ ೩೩ ನೇ ಯವರಾದ ಈ ಯತಿ ಪುಂಗವರು ಅಪ್ರತಿಮ ಪಂಡಿತರಾಗಿದ್ದರು. ಬೆಂಗಳೂರಿನಲ್ಲಿ ವೃಂದಾವನಸ್ಥರಾದ ಶ್ರೀ ಕೃಷ್ಣಾಪುರ ಮಠದ ಶ್ರೇಷ್ಠ ಪಂಡಿತರಾದ ಶ್ರೀ ವಿದ್ಯಾಧೀಶತೀರ್ಥರಲ್ಲಿ ಇವರು ಸಕಲ ಶಾಸ್ತ್ರಗಳನ್ನು ಓದಿ, ಕರಗತ ಮಾಡಿಕೊಂಡಿದ್ದರು. ಬ್ರಿಟಿಷರ ಆಡಳಿತೆಗೊಳಪಟ್ಟ ಆ ಕಾಲದಲ್ಲಿದ್ದ ವಿಕ್ಟೋರಿಯಾ ಮಹಾರಾಣಿಯವರು, ಇವರ ಪಾಂಡಿತ್ಯಕ್ಕೆ ಮೆಚ್ಚಿ ಇವರಿಗೆ ಪ್ರಶಸ್ತಿ ಪತ್ರಗಳನ್ನು ಕೊಟ್ಟಿದ್ದಾರೆ. ಅವು ಇನ್ನೂ ಶ್ರೀ ಸೋದೇ ಮಠದಲ್ಲಿ ಉಪಲಬ್ಧವಿವೆ.

## ಶ್ರೀ ರಘುವರ್ಯತೀರ್ಥರು

ಆಚಾರ್ಯರ ಶ್ರೇಷ್ಠ ಶಿಷ್ಯರಾದ ಶ್ರೀ ಹೃಷೀಕೇಶ ತೀರ್ಥರ ಸಂಸ್ಥಾನ, ಶ್ರೀ ಫಲಿಮಾರು ಮಠದ ಪರಂಪರೆಯಲ್ಲಿ ರಾರಾಜಿಸಿದ ಈ ಯತಿಲಲಾಮರು ವಿದ್ವನ್ಮಣಿಗಳೂ ತಪಸ್ವಿಗಳೂ ಆಗಿದ್ದರು. "ಅಣುಮಧ್ವವಿಜಯ" ಕ್ಕೆ ವ್ಯಾಖ್ಯಾನ ಬರೆದಿರುವರು. ಇವರಿಂದ ರಚಿತವಾದ "ರಘುನಾಥವಿಜಯ"ವೆಂಬ ಗ್ರಂಥವು ಉತ್ತಮ ಕಾವ್ಯವೆನಿಸಿದೆ. ಇದು ಛಂದೋಲಕ್ಷಣವನ್ನು ವಿವರಿಸುವ ಗ್ರಂಥ. ಅನೇಕ ಕೀರ್ತನೆಗಳೂ ಇವರಿಂದ ರಚಿತವಾಗಿವೆ.

## ಶ್ರೀ ರಘುಪ್ರವೀರತೀರ್ಥರು

ಶ್ರೀಫಲಿಮಾರು ಮಠದ ಪರಂಪರೆಯಲ್ಲಿ ದೇದೀಪ್ಯಮಾನರಾದ ಯತಿಪುಂಗವರು. ಇವರು ಘನ ವಿದ್ವಾಂಸರಾಗಿದ್ದು ತುಂಬ ಸಜ್ಜನರಿಗೆ ಪಾಠ ಹೇಳಿ ಅನುಗ್ರಹಿಸಿದ್ದಾರೆ. ಪರಮ ಸಾತ್ವಿಕರೂ ಹಠಯೋಗಿಗಳೂ ಆದ ಇವರ ಪರ್ಯಾಯ ಪೂಜಾ ಕಾಲದಲ್ಲಿ ಒಂದು ದಿನ ಶ್ರೀಕೃಷ್ಣನ ಪಂಚಾಮೃತ ಹಾಲಿಗಾಗಿಯೇ ಇದ್ದ ಮಠದ ದನವನ್ನು ಆಕಸ್ಮಾತ್ತಾಗಿ ಒಂದು ಹುಲಿಯು ಕೊಂದಿತು. ಈ ಬಗ್ಗೆ ದುಃಖಿತರಾದ ಶ್ರೀಗಳವರು ಪಂಚಾಮೃತ ಪೂಜಾದಿಗಳನ್ನು ಮಾಡದೇ, ದೇವರ ಸಮ್ಮುಖದಲ್ಲಿ ಹಠದಿಂದ ಕುಳಿತು ಧ್ಯಾನಮಗ್ನರಾದರು. ಸಂಜೆಯೊಳಗೆ ಆ ಹುಲಿ ಶ್ರೀ ಕೃಷ್ಣಮಠದ ಎದುರಲ್ಲಿ ಬಂದು, ರಕ್ತ ಕಾರಿ ಪ್ರಾಣ ಬಿಟ್ಟಿತು. ಆಮೇಲೆ ಪೂಜಾದಿಗಳನ್ನು ನೆರವೇರಿಸಿದರು. ಈ ಸ್ಮಾರಕವಾಗಿ ಉಡುಪಿಯ ಇವರ ವೃಂದಾವನದ ಬಳಿ ಶಿಲಾಮಯ ಹುಲಿಮುಖವನ್ನು ಇಟ್ಟಿರುವುದನ್ನು ಈಗಲೂ ಕಾಣಬಹುದು. ಇವರು "ಹನುಮದ್ಭೀಮಮಧ್ವಾಷ್ಟೋತ್ತರ ಸ್ತೋತ್ರ" ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ.

## ಶ್ರೀ ಪುರುಷೋತ್ತಮತೀರ್ಥರು

ಗೋಕರ್ಣ ಪರ್ತಗಾಳಿ ಮಠದಲ್ಲಿ ನಾಲ್ಕನೇಯವರಾದ ಶ್ರೀ ಪುರುಷೋತ್ತಮ ತೀರ್ಥ ಶ್ರೀಪಾದ ಒಡೆಯರು ಮಹಾ ಮೇಧಾವಿ ಗ್ರಂಥಕರ್ತರಾಗಿದ್ದರು. ಇವರು " ಕರ್ಮಸಿದ್ಧಾಂತ " " ಸನ್ಯಾಸ ಪದ್ಧತಿ " ಎಂಬ ಎರಡು ಸಂಸ್ಕೃತ ಗ್ರಂಥಗಳನ್ನು ಬರೆದಿರುತ್ತಾರೆ.



## ಪ್ರಕರಣ ೪

# ಮಾಧ್ವ ಮಠಗಳು

### ಶ್ರೀ ಪೇಜಾವರ ಮಠ

ಶ್ರೀ ಪೇಜಾವರ ಮಠದ ಮೂಲ ಪುರುಷರಾದ ಶ್ರೀ ಅಧೋಕ್ಷಜ ತೀರ್ಥರು ಅಪರೋಕ್ಷಜ್ಞಾನಿಗಳು. ಮಹಾ ಭಗವದ್ಭಕ್ತರು. ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು. ಉಡುಪಿಯ ಎಂಟು ಮಠಗಳೂ ಶ್ರೀ ಗುರು ಮಧ್ವರ ಮಹಾ ಪೀಠಗಳೆಂದು ಪ್ರಸಿದ್ಧವಾಗಿವೆ.

ಶ್ರೀಮದಾನಂದ ತೀರ್ಥರು ಅವರ ಜ್ಞಾನ ಭಕ್ತಿ ವೈರಾಗ್ಯಗಳಿಗೆ ಪ್ರಸನ್ನರಾಗಿ ತಾವು ಪೂಜಿಸಿದ ಶ್ರೀ ಪಾಂಡುರಂಗ ವಿಠ್ಠಲ ಮೂರ್ತಿಯನ್ನು ಕರುಣಿಸಿದರು.

ಈ ಪೇಜಾವರದ ಸರ್ವಜ್ಞ ಪೀಠ ಪರಂಪರೆಯಲ್ಲಿ ಭಾಗವತಕ್ಕೆ ವಿಶ್ವಮಾನ್ಯವಾದ ಟೀಕೆಯನ್ನು ಬರೆದು ಪುರಾಣ ಪ್ರಸ್ಥಾನದ ಗೌರವದ ಗರಿಮೆಯನ್ನು ಮಾಧ್ವರಲ್ಲಿ ಮೆರೆಯಿಸಿದ ಶ್ರೀ ವಿಜಯಧ್ವಜ ತೀರ್ಥರೇ ಮೊದಲಾದ ಅನೇಕ ಮಹಾ ಪುರುಷರು ಆಗಿ ಹೋಗಿದ್ದಾರೆ.

ಈ ಮಠದ ಗುರು ಪರಂಪರೆಯು—

೧ ಶ್ರೀ ಮಧ್ವಾಚಾರ್ಯರು
೨ ಶ್ರೀ ಅಧೋಕ್ಷಜ ತೀರ್ಥರು
೩ ಕಮಲಾಕ್ಷ ,,
೪ ಪುಷ್ಕರಾಕ್ಷ ,,
೫ ಅಮರೇಂದ್ರ ,,
೬ ವಿಜಯ ,,
೭ ಮಹೇಂದ್ರ ,,
೮ ವಿಜಯಧ್ವಜ ,,
೯ ದಾಮೋದರ ,,
೧೦ ವಾಸುದೇವ ,,
೧೧ ವಾದೀಂದ್ರ ,,
೧೨ ವೇದಗರ್ಭ ,,
೧೩ ಚಾರುಪ್ರಜ್ಞ ,,
೧೪ ವಿಶ್ವಪ್ರಜ್ಞ ,,
೧೫ ವಿಶ್ವೇಶ್ವರ ,,
೧೬ ವಿಶ್ವಭೂಷಣ ,,
೧೭ ವಿಶ್ವವಂದ್ಯ ತೀರ್ಥರು
೧೮ ವಿದ್ಯಾರಾಜ ,,
೧೯ ವಿಶ್ವಮೂರ್ತಿ ,,
೨೦ ವಿಶ್ವಪತಿ ,,
೨೧ ವಿಶ್ವನಿಧಿ ,,
೨೨ ವಿಶ್ವಾಧೀಶ ,,
೨೩ ವಿಶ್ವಾಧಿರಾಜ ,,
೨೪ ವಿಶ್ವಬೋಧ ,,
೨೫ ವಿಶ್ವವಲ್ಲಭ ,,
೨೬ ವಿಶ್ವಪ್ರಿಯ ,,
೨೭ ವಿಶ್ವವರ್ಯ ,,
೨೮ ವಿಶ್ವರಾಜ ,,
೨೯ ವಿಶ್ವಮನೋಹರ ,,
೩೦ ವಿಶ್ವಜ್ಞ ,,
೩೧ ವಿಶ್ವಮಾನ್ಯ ,,
೩೨ ವಿಶ್ವೇಶ ತೀರ್ಥರು (ಈಗಿನವರು)

# ಶ್ರೀ ೧೦೮ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು



ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ೧೨ ವರ್ಷ ಅಧ್ಯಯನ ಮಾಡಿ ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅನ್ಯಾದೃಶವಾದ ಪಾಂಡಿತ್ಯ, ಪ್ರಭುತ್ವ, ಪ್ರವಚನ ಪಟುತ್ವ, ವಾಕ್ಯಾರ್ಥ ಪ್ರಾವೀಣ್ಯತೆಗಳನ್ನು ಪಡೆದ ಶ್ರೀ ಶ್ರೀಗಳವರು ಇಂದಿನ ಮಾಧ್ವ ಸಮಾಜದ ಉದ್ಧಾರಕರಾಗಿದ್ದರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಅವರ ಕಾರ್ಯ ಬಹು ಮುಖ, ಅವರ ಜೀವನ ಅನಂತ ಮುಖ, ಅವರ ದೃಷ್ಟಿ ವಿಶ್ವತೋ ಮುಖ, ಸಮಾಜದೆಡೆಗೆ ಸರ್ವಾದಪಿ ಕರುಣೋನ್ಮುಖ.

ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ವೇದಾಂತ ಗರಡಿಯಿಂದ ತಲೆಯಲ್ಲಿ ವೇದಶಾಸ್ತ್ರ ವಿದ್ಯಾಭಾರವನ್ನು ಹೊತ್ತು ಹೊರ ಬಂದ ಎಳೆವಯದ ಶ್ರೀಗಳವರಿಗೆ ಸಮಾಜದ ವಿಕಟ ಚಿತ್ರವು ಕಣ್ಣೆದುರಿಗೆ ನಿಂತಿತು.

ಒಂದು ಕಡೆ ಆಂಗ್ಲವಿದ್ಯಾಪ್ರಭಾವದಿಂದ ಜಡವಾದ, ನಾಸ್ತಿಕವಾದ, ಭೌತ ವಾದದ ಕಡೆಗೆ ಸೆಳೆಯಲ್ಪಟ್ಟು ಆಚಾರ ವಿಚಾರಗಳನ್ನು ಬಿಟ್ಟು ಶುದ್ಧ ನಾಸ್ತಿಕರಾಗುತ್ತಿರುವ ಬ್ರಾಹ್ಮಣ ಸಮಾಜದ ಶೋಚನೀಯ ಪರಿಸ್ಥಿತಿ.

ಇನ್ನೊಂದೆಡೆಗೆ ಸಂಸ್ಕೃತವನ್ನು ಓದಿ ಪ್ರೋತ್ಸಾಹನವಿಲ್ಲದೆ, ಉಪಜೀವನಕ್ಕೆ ದಿಕ್ಕಿಲ್ಲದೆ, ದಾರಿದ್ರ್ಯದಿಂದ ದೀನದೂನರಾಗಿ ಶಾಸ್ತ್ರ ಓದಿದ್ದಕ್ಕಾಗಿ ಪಶ್ಚಾತ್ತಾಪ

ಪಡುತ್ತಿರುವ ಪಂಡಿತ ವರ್ಗ ಇನ್ನೊಂದು ಕಡೆಗೆ. ಆರ್ಥಿಕ ಮುಗ್ಗಟ್ಟಿನಲ್ಲಿ ಸಿಲುಕಿ ಪೀಠಾಧಿಪತಿಗಳ ಮಾರ್ಗ ದರ್ಶನವಿಲ್ಲದೆ ಗುರು ಮಠಗಳ ಕಡೆಗೆ ಸಾಶಂಕ ದೃಷ್ಟಿಯಿಂದ ನೋಡುವ ಸಮಾಜದ ಅಕರ್ಮಣ್ಯ ಅವಸ್ಥೆ ಇನ್ನೊಂದು ಕಡೆಗೆ.

ಹೀಗೆ ದೃಷ್ಟಿ ಹರಿಸಿದತ್ತೆಲ್ಲ ಕಡೆಗೆ ಸಮಾಜದ ಪುನರುತ್ಥಾನ, ಸಿದ್ಧಾಂತದ ಪ್ರಸಾರ, ಬ್ರಾಹ್ಮಣ ಜಾತಿಯ ಪುನಃ ಸಂಘಟನೆ, ನಾಸ್ತಿಕ್ಯವಾದ ನಿರಾಕರಣ ಪೂರ್ವಕವಾಗಿ ಆಸ್ತಿಕ್ಯದೆಡೆಗೆ ಜನರ ಸಮಾಕರ್ಷಣೆ, ಗುರು ಶಿಷ್ಯರ ನಡುವೆ ಮಧುರ ಸಂಬಂಧ ಸ್ಥಾಪನೆ, ಪಂಡಿತ ಪೋಷಣೆ ಮುಂತಾದ ಅನೇಕ ಅವಶ್ಯಕ ಕಾರ್ಯಗಳು ಕೈಮಾಡಿ ಕರೆಯುತ್ತಲಿದ್ದವು. ಓರ್ವ ದೈವೀ ಪುರುಷನ ಮಾಂತ್ರಿಕ ಹಸ್ತ ಸ್ಪರ್ಶಕ್ಕಾಗಿ ನೂರು ಕೆಲಸಗಳು ಕಾದುಕೊಂಡು ಕುಳಿತಿದ್ದವು.

ಜೀವನದ ವಸಂತ ಮಾಸದಲ್ಲಿ ಕಾಲಿಡುತ್ತಿರುವ ಶ್ರೀಗಳವರೆದುರು ಶ್ರೀಕೃಷ್ಣನ ಪರ್ಯಾಯ ಪೀಠವೂ ಇವರ ಆರೋಹಣಕ್ಕಾಗಿ ನಿರೀಕ್ಷಿಸುತ್ತಲಿತ್ತು.



ಶ್ರೀ ಪೇಜಾವರ ಶ್ರೀಗಳವರ ಪ್ರಥಮ ಸುಧಾ ಮಂಗಳ

ಪೂಜ್ಯ ಶ್ರೀ ವಾದಿರಾಜ ಶ್ರೀಪಾದಂಗಳವರಂತೆ ಸುಧಾ ಪಾಠ ಪ್ರಾರಂಭ ಪೂರ್ವಕವಾಗಿ ಶ್ರೀಗಳವರು ಶ್ರೀಕೃಷ್ಣನ ಪ್ರಥಮ ಪರ್ಯಾಯದ ಕೈಂಕರ್ಯವನ್ನು ಅಂದು ಅಲ್ಲಿ ಶ್ರೀಕೃಷ್ಣ ಕ್ಷೇತ್ರದಲ್ಲಿ ಸೇರಿದ ಸಾವಿರ ಪಂಡಿತ ಪಾಮರ ಪರಿವ್ರಾಜಕ, ಲೌಕಿಕ, ವೈದಿಕ, ಯೋಗಿ, ಯಾಗಿ, ತ್ಯಾಗಿ, ವಿರಾಗಿ ಜನಸ್ತೋಮದ ಎದುರು ಸಮಾಜ ಸೇವೆಯ ವ್ರತವನ್ನು ಹರಿಗುರುಗಳೆದುರು ಸ್ವೀಕರಿಸಿದರು.



ಶ್ರೀ ೧೦೮ ಶ್ರೀ ಉತ್ತರಾದಿ ಮಠಾಧೀಶ್ವರರಾದ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಗಳವರು
ಶ್ರೀ ೧೦೮ ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು

ಸುರುವಾಯಿತು ಆ ದಿಶೆಯಲ್ಲಿ ಕಾರ್ಯ. ಅಖಿಲ ಭಾರತ ಮಾಧ್ವ ಮಹಾ ಮಂಡಳವು ಪ್ರಾರಂಭಿಸಲ್ಪಟ್ಟಿತು. ಪ್ರಾಚೀನ ಗುರುಕುಲ ಪದ್ಧತಿಯಿಂದ ದಿಗ್ಗಜ ಪಂಡಿತರನ್ನು ಸಿದ್ಧಪಡಿಸಲಿಕ್ಕಾಗಿ ಪೂರ್ಣಪ್ರಜ್ಞ ವಿದ್ಯಾನಿಲಯ ಕಾರ್ಯಪ್ರವೃತ್ತ ವಾಯಿತು. ಶ್ರೀಗಳವರ ಮಹಾ ಪ್ರಯತ್ನಗಳ ಫಲವಾಗಿ ಊರೂರಿಗೆ ಮಾಧ್ವವಿದ್ಯಾರ್ಥಿ ನಿಲಯಗಳು ತಲೆ ಎತ್ತಿದವು. ಒಂದಲ್ಲದಂತೆ ಮೂರು ಭಾಷೆಗಳಲ್ಲಿ ತತ್ತ್ವವಾದವೆಂಬ ಮಾಸ ಪತ್ರಿಕೆಯು ಸಿದ್ಧಾಂತ ಪ್ರಸಾರದ ಕಾರ್ಯವನ್ನು ಭರದಿಂದ ನಡೆಸಿತು.

ಪ್ರತಿ ವರ್ಷವೂ ಜ್ಞಾನಸತ್ರ, ಶಿಬಿರ, ವಿದ್ವದ್ಗೋಷ್ಠಿ, ತತ್ತ್ವಜ್ಞಾನ ಸಮ್ಮೇಲನ, ಸಭಾ ಮುಂತಾದವುಗಳ ಮುಖಾಂತರ ಆಚಾರ್ಯರ ಸಂದೇಶವು ಮನೆ ಮನೆಗೆ ಮುಟ್ಟುವಂತಾಯಿತು. ಸಂಸ್ಕೃತ ಪಂಡಿತರಿಗೂ, ಸಾಮಾನ್ಯರಿಗೂ ಸ್ನೇಹ ಏರ್ಪಟ್ಟಿತು. ಪ್ರತಿ ಪ್ರಾಂತದಲ್ಲಿಯೂ ಆಂಗ್ಲ ಭಾಷೆಯನ್ನು ಓದುತ್ತಲಿರುವ ವಿದ್ಯಾರ್ಥಿಗಳಿಗೆ ಮಧ್ವ ಮತದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಸಾಲರೂಪ ಶಿಷ್ಯವೃತ್ತಿಯನ್ನು ಕೊಟ್ಟು ಪ್ರೋತ್ಸಾಹಿಸಲಾಯಿತು.

ಹೀಗೆ ವಿದ್ಯಾರ್ಥಿ ನಿಲಯ ಮತ್ತು ಶಿಷ್ಯ ವೃತ್ತಿಗಳಿಂದ ಮತನಿಷ್ಠರಾದ ಹೊಸ ಮಾಧ್ವ ಪೀಳಿಗೆಯೇ ನಿರ್ಮಾಣಗೊಂಡಿತು. ಅತ್ತ ವಿದ್ಯಾಪೀಠದಲ್ಲಿ ಪಂಡಿತರ ಪಡೆ ನಿರ್ಮಾಣವಾಗುತ್ತ ನಡೆಯಿತು.

ಇತ್ತ ಶ್ರೀ ಶ್ರೀಗಳವರ ವರ್ಚಸ್ಸಿನಿಂದ ಸ್ವಾಮಿ ಸ್ವಾಮಿಗಳವರಲ್ಲಿಯೂ, ಶ್ರೀಗಳೂ ಹಾಗೂ ಸಾಮಾಜಿಕರಲ್ಲಿಯೂ, ಪರಸ್ಪರ ಎಲ್ಲ ಮಾಧ್ವರಲ್ಲಿಯೂ ಸ್ನೇಹಮಯವಾದ ಸೌಹಾರ್ದವು ಕುದುರಲು ಅನುಕೂಲವಾಯಿತು.

ಇವಲ್ಲದೆ ಗ್ರಂಥ ಸಂಶೋಧನೆ, ಗ್ರಂಥ ಭಾಂಡಾರ, ಗ್ರಂಥ ಪ್ರಕಾಶನ, ಪ್ರಾಚೀನ ಗ್ರಂಥ ಮುದ್ರಣ, ಗೋ ರಕ್ಷಣೆ, ವಿಶ್ವ ಹಿಂದೂ ಪರಿಷನ್ಮಾರ್ಗ ದರ್ಶನ, ಶ್ರೀ ಕೃಷ್ಣ ಸೇವಾಶ್ರಮ ಸ್ಥಾಪನಾ ಮುಂತಾಗಿ ವಿವಿಧ ಬಗೆಗಳಿಂದ ಸಾಮಾಜಿಕ, ಸಾಂಸ್ಕೃತಿಕ ಸೈದ್ಧಾಂತಿಕ ಕಾರ್ಯಗಳು ಮುಂದುವರೆಯುತ್ತಲೇ ಇವೆ.

ಅನೇಕ ಬಾರಿ ಕಾಶೀ, ಕೋಚೀನ, ಕುಂಭಕೋಣ, ರಾಮೇಶ್ವರದ ವರೆಗೆ ಸಂಚರಿಸಿ ಪಂಡಿತರ ಜೊತೆಗೆ ವಾಕ್ಯಾರ್ಥ ಮಾಡಿ ಪರ ವಾದಿಗಳನ್ನು ನಿಗ್ರಹಿಸಿದ್ದಾರೆ, ದ್ವೈತ ದುಂದುಭಿಯನ್ನು ಮೊಳಗಿಸಿದ್ದಾರೆ. ಮಧ್ವ ಮತವನ್ನು ಪ್ರಸಾರ ಮಾಡಿದ್ದಾರೆ. ಗ್ರಂಥ ರಚನೆ ಮಾಡಿದ್ದಾರೆ.

ಈಗ ಶ್ರೀಗಳವರ ದ್ವಿತೀಯ ಪರ್ಯಾಯವು ಅದ್ವಿತೀಯವಾಗಿ ನಡೆದಿರುತ್ತದೆ. ಈ ಪರ್ಯಾಯ ಕಾಲದಲ್ಲಿ ಜಯತೀರ್ಥರ ಷಟ್‌ಶತಮಾನೋತ್ಸವ, ೭ನೇ ತತ್ತ್ವಜ್ಞಾನ ಸಮ್ಮೇಲನ, ಮಾಧ್ವರಾದ್ಧಾಂತ ಸಭೆಯ ರಜತ ಮಹೋತ್ಸವ ಈ ಮೂರು ಸಮಾರಂಭಗಳು ಯೌಗಪದ್ಯೇನ ಮಹಾ ಸಂಭ್ರಮದಿಂದ ನೆರವೇರುತ್ತಲಿವೆ. ಇದರಿಂದ ಮಾಧ್ವ ಸಮಾಜದ ಶಾಶ್ವತ ಹಿತೋಪಧಾಯಿಕವಾದ ಒಂದು ಹೊಸ ಕ್ರಮವು ರೂಪಿತಗೊಳ್ಳುವದರಲ್ಲಿ ಸಂದೇಹವಿಲ್ಲ.

---

# ಶ್ರೀ ವ್ಯಾಸರಾಜಮಠ

ಶ್ರೀಮಧ್ವಾಚಾರ್ಯರ ಮಹಾಸಂಸ್ಥಾನಾಧಿಪತಿಗಳಾದ ಶ್ರೀ ರಾಜೇಂದ್ರತೀರ್ಥರಿಂದ ಶ್ರೀ ಬ್ರಹ್ಮಣ್ಯ ತೀರ್ಥರು, ಶ್ರೀವ್ಯಾಸರಾಜರೇ ಮೊದಲಾಗಿ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀವ್ಯಾಸರಾಜ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿವೆ.

ಶ್ರೀ ರಾಜೇಂದ್ರರು ಸ್ವಯಮೇವ ಮೃಗೇಂದ್ರರು. ಆವರ ಸೈದ್ಧಾಂತಿಕ ಸಿಂಹ ನಾದವನ್ನು ಕೇಳಿಯೇ ಪಂಡಿತವುನ್ನಾಗಗಳೆಲ್ಲ ದಿಗಂತಧಾವನ ಮಾಡುತ್ತಲಿದ್ದವು.

ಈ ಸರ್ವಜ್ಞ ಪರಂಪರೆಯು ಬ್ರಹ್ಮಣ್ಯ ತೀರ್ಥರು, ಶ್ರೀ ೧೦೦೮ ಶ್ರೀ ವ್ಯಾಸ ರಾಜರು, ರಾಮಚಂದ್ರ ತೀರ್ಥರು, ಶೇಷಚಂದ್ರಿಕಾಚಾರ್ಯರು ಮುಂತಾದ ಯತಿ ವಿಭೂತಿಗಳನ್ನು ವೈಷ್ಣವ ಸಮಾಜಕ್ಕಿತ್ತು ಚಿರಸ್ಮರಣೀಯವಾದ ಉಪಕಾರಗೈದಿದೆ.

ವೈಷ್ಣವ ಮತಕ್ಕೆ ಗುರುಪರಂಪರಾಸಿದ್ಧವಾದ ಬ್ರಹ್ಮತೇಜದೊಂದಿಗೆ ರಾಜತೇಜ ವನ್ನೂ ಮೇಳವಿಸಿ ಸಾಮಾಜಿಕ ಸುಸ್ಥಿತಿ, ತಾತ್ವಿಕ ಪ್ರತಿಷ್ಠೆ, ಭದ್ರತೆಗಳನ್ನು ತಂದು ಕೊಟ್ಟ ಶ್ರೇಯಸ್ಸು ಮಾಧ್ವ ಮಹಾ ಸಂಸ್ಥಾನವೆನಿಸಿದ ಈ ರಾಜೇಂದ್ರ ಪರಂಪರೆಗೆ ಸಲ್ಲುತ್ತದೆ.

ಶ್ರೀಸರ್ವಜ್ಞಕರಾರ್ಚಿತವಾದ ಶ್ರೀಗೋಪಾಲಕೃಷ್ಣನ ಪ್ರತಿಮೆಯನ್ನು ಪೂಜಿಸುವ ಈ ವ್ಯಾಸರಾಜ ಮಠವು ವೇದಾಂತ ವಿಶ್ವದಲ್ಲಿ ಹಚ್ಚಿದ ಜ್ಞಾನಜ್ಯೋತಿಯ ನಂದಾ ದೀಪಗಳ ಹೊಂಬೆಳಗು ಇಂದಿಗೂ ಅಥವಾ ಮುಂದೆಂದಿಗೂ ಕಂದದೆ ಕುಂದದೆ ಉಜ್ವಲ ವಾಗಿಯೇ ಬೆಳಗುತ್ತಲಿರುವದರಲ್ಲಿ ಸಂದೇಹವಿಲ್ಲ.

ಶ್ರೀ ರಾಜೇಂದ್ರ ತೀರ್ಥರಿಂದ ಆರಂಭಿಸಿ ಈ ಮಠದಲ್ಲಿ ಈಗ ವಿದ್ಯಮಾನ ಶ್ರೀ ವಿದ್ಯಾಪ್ರಸನ್ನ ತೀರ್ಥಶ್ರೀಪಾದಂಗಳ ವರೆಗೆ ಸಂಸ್ಥಾನವನ್ನು ಅಲಂಕರಿಸಿದ ಪುಣ್ಯ ಪುರುಷರು.

## ವ್ಯಾಸರಾಜ ಮಠದ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಪದ್ಮನಾಭ ತೀರ್ಥರು
೩ ನರಹರಿ ,,
೪ ಮಾಧವ ,,
೫ ಅಕ್ಷೋಭ್ಯ ,,
೬ ಜಯತೀರ್ಥರು
೭ ವಿದ್ಯಾಧಿರಾಜ ,,
೮ ರಾಜೇಂದ್ರ ,,
೯ ಜಯಧ್ವಜ ,,
೧೦ ಪುರುಷೋತ್ತಮ,,
೧೧ ಬ್ರಹ್ಮಣ್ಯ ,,
೧೨ ವ್ಯಾಸರಾಜ ,,
೧೩ ಶ್ರೀನಿವಾಸ ,,
೧೪ ಶ್ರೀರಾಮ ,,
೧೫ ಲಕ್ಷ್ಮೀಕಾಂತ ,,
೧೬ ಶ್ರೀಪತಿ ,,
೧೭ ರಾಮಚಂದ್ರ ,,
೧೮ ಲಕ್ಷ್ಮೀವಲ್ಲಭ ,,
೧೯ ಲಕ್ಷ್ಮೀನಾಥ ,,
೨೦ ಲಕ್ಷ್ಮೀಪತಿತೀರ್ಥರು
೨೧ ಲಕ್ಷ್ಮೀನಾರಾಯಣತೀರ್ಥರು
೨೨ ರಘುನಾಥ ತೀರ್ಥರು
(ಲಕ್ಷ್ಮೀನಿಧಿ)
೨೩ ಜಗನ್ನಾಥ ತೀರ್ಥರು
೨೪ ಶ್ರೀನಾಥ ,,
೨೫ ವಿದ್ಯಾನಾಥ ,,
೨೬ ವಿದ್ಯಾಪತಿ ,,
೨೭ ವಿದ್ಯಾವಲ್ಲಭ ,,
೨೮ ವಿದ್ಯಾಕಾಂತ ,,
೨೯ ವಿದ್ಯಾನಿಧಿ ,,
೩೦ ವಿದ್ಯಾಸಿಂಧು ,,
೩೧ ವಿದ್ಯಾಧರ ,,
೩೨ ವಿದ್ಯಾನಿವಾಸ ,,
೩೩ ವಿದ್ಯಾಸಮುದ್ರ ,,
೩೪ ವಿದ್ಯಾರತ್ನಾಕರ,,
೩೫ ವಿದ್ಯಾವಾರಿನಿಧಿ ,,
೩೬ ವಿದ್ಯಾಪ್ರಸನ್ನ ,,
(ಈಗಿನವರು)

# ಶ್ರೀ ೧೦೮ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು



ಶ್ರೀ ವಿದ್ಯಾಪ್ರಸನ್ನ ತೀರ್ಥರು ಶಾಸ್ತ್ರ ಪಂಡಿತರಿದ್ದಂತೆಯೇ ಆಂಗ್ಲ ಪದವೀ ಧರರೂ ಆಗಿದ್ದಾರೆ. ಆಂಗ್ಲ ಪದವೀಧರರಾದರೂ ಸಂಪ್ರದಾಯನಿಷ್ಠರಾದ "ಕಟ್ಟಾ" ಸನಾತನಿಗಳಾಗಿದ್ದಾರೆ.

ಹಿಂದೊಮ್ಮೆ ವಕೀಲರಾಗಿದ್ದರೂ ಪ್ರಾಮಾಣಿಕತೆಯ ಪ್ರತೀಕರಾಗಿದ್ದಾರೆ. ಪಾಂಡಿತ್ಯದ ಭಾಂಡಾರವಾಗಿದ್ದರೂ ಸೌಜನ್ಯದ ಸಾಕಾರ ಸ್ವರೂಪರಾಗಿದ್ದಾರೆ.

ಹೀಗೆ ವಿವಿಧ ಗುಣಗಳ ಆಗರರೂ ಶಾಂತಸಾಗರರೂ ಆದ ಶ್ರೀ ವಿದ್ಯಾಪ್ರಸನ್ನ ತೀರ್ಥರು ೩೨ ವರ್ಷಗಳಿಂದ ಸರ್ವಜ್ಞ ಸಿಂಹಾಸನವನ್ನು ಆಳುತ್ತ ಬಂದಿದ್ದಾರೆ.

ಸಮಾಜದ ಹಿತ ಸಾಧನೆಯಲ್ಲಿ ಈ ಶ್ರೀಗಳವರ ಆಸಕ್ತಿ ಹಿರಿದಾಗಿದೆ. ಮಾಧ್ವರ ಕಲ್ಯಾಣಕ್ಕಾಗಿ ದುಡಿಯತಕ್ಕ ಸಂಘ-ಸಂಸ್ಥೆಗಳಿಗೆ ಬಿಕ್ಕಟ್ಟಿನ ಪ್ರಸಂಗ ಬಂದಾಗ ಅವುಗಳನ್ನು ಉಳಿಸಲು, ಬೆಳೆಸಲು ಶ್ರೀಗಳವರ ವರದ ಹಸ್ತವು ಸದಾ ಸಿದ್ಧವಾಗಿರುತ್ತದೆ.



ಎಡದಿಂದ ಬಲಕ್ಕೆ ಮೈಸೂರಿನ ಉಡುಪಿ ಶ್ರೀಕೃಷ್ಣ ಭವನದಲ್ಲಿ ಹರಿಪದವನ್ನೈದ ೧೦೮ ಶ್ರೀ ಶ್ರೀ ಸುಯಮೀಂದ್ರತೀರ್ಥ ಶ್ರೀಗಳವರು
ಶ್ರೀ ವ್ಯಾಸರಾಜ ಮಠಾಧೀಶ ಶ್ರೀ ೧೦೮ ಶ್ರೀ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು
ಶ್ರೀ ೧೦೮ ಶ್ರೀ ಭಂಡಾರಕೇರಿ ಮಠಾಧೀಶ ವಿದ್ಯಾಮಾನ್ಯತೀರ್ಥ ಶ್ರೀ ಶ್ರೀಗಳವರು
ಶ್ರೀ ಪೇಜಾವರ ಮಠಾಧೀಶ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥ ಶ್ರೀ ಚರಣರು ಪಾದಪೂಜೆಯನ್ನು ಸ್ವೀಕರಿಸುವಾಗ

ಅಖಿಲ ಭಾರತ ಮಾಧ್ವ ಮಹಾ ಮಂಡಲದ ಅಧ್ಯಕ್ಷತೆಯ ಭಾರವನ್ನು ಅವರು ಅನೇಕ ಸಲ ಹೊತ್ತು ಸಂಸ್ಥೆಯ ಚುಕ್ಕಾಣಿಯನ್ನು ಹಿಡಿದು ಸುರಕ್ಷಿತತೆಯ ತಡೆಗೆ ತಲುಪಿಸಿದ್ದಾರೆ.

ಶ್ರೀ ಶ್ರೀಗಳವರ ಸಲಹೆ, ಸೂಚನೆಗಳೂ ಸಮಯೋಚಿತವಾದ ಸಹಾಯ ಸಹಕಾರಗಳೂ ಮಂಡಲದ ಮುನ್ನಡೆಗೆ ಮುಖ್ಯವಾಗಿ ಕಾರಣವಾಗಿವೆ.

ತಪಃಪರಿಪೂತವಾದ ಶ್ರೀ ಶ್ರೀಗಳವರ ಸುದೀರ್ಘ ಜೀವನದ ಪರಿಪಕ್ವ ಅನುಭವದ ಪ್ರಯೋಜನವು ವೈಷ್ಣವ ಸಮಾಜಕ್ಕೆ ಚಿರಕಾಲ ದೊರಕುವಂತಾಗಲಿ.





ಶ್ರೀ ವ್ಯಾಸರಾಜ ಮಠದ ಶ್ರೀ ೧೦೮ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಗಳವರು
ಶ್ರೀ ಪೇಜಾವರ ಮಠದ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥ ಶ್ರೀಗಳವರು

# ಶ್ರೀ ಪಲಿಮಾರು ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ಹೃಷೀಕೇಶ ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ಫಲಿಮಾರು ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಪಲಿಮಾರು ಮಠದ ಮೂಲ ಪುರುಷರಾದ ಶ್ರೀ ಹೃಷೀಕೇಶ ತೀರ್ಥರು ಶ್ರೀ ಮಧ್ವಾಚಾರ್ಯರಿಂದ ಕೃಷ್ಣ ಪೂಜೆಗಾಗಿ ನಿಯೋಜಿತರಾದ ಅಷ್ಟ ಮಠಾಧೀಶರಲ್ಲಿ ಅನ್ಯತಮರು. ಅತಏವ ಧನ್ಯತಮರು. ಅಷ್ಟೋತ್ಕೃಷ್ಟರೆಂದು ಅವರಿಗೆ ಬಿರುದು. ಆಚಾರ್ಯರ ನುಡಿ ಕಿಡಿಗಳನ್ನು ಬರೆದಿಟ್ಟು ಗ್ರಂಥ ರೂಪವಾಗಿ ಕಾಪಾಡಿಕೊಂಡು ಬಂದ ಪುಣ್ಯಾತ್ಮರವರು.

ಇಂದ್ರಿಯಗಳೆಲ್ಲವೂ ಅವರ ವಶದಲ್ಲಿ. ಅವರು ಆಚಾರ್ಯರ ವಶದಲ್ಲಿ. ಮಧ್ವಾಚಾರ್ಯರ ಕರಾರ್ಚಿತವಾದ ಶ್ರೀ ರಾಮ, ಲಕ್ಷ್ಮಣ, ಸೀತಾ ಪ್ರತಿಮೆಗಳನ್ನು ಈ ಮಠದವರು ಪೂಜೆ ಮಾಡುತ್ತ ಬಂದಿದ್ದಾರೆ.

ಮದುವೆ, ಮುಂಜಿವೆ ಮುಂತಾದ ಮಂಗಲ ಪ್ರಸಂಗಗಳಲ್ಲಿ ಎಲ್ಲರೂ ಪಠಿಸುತ್ತಲಿರುವ ಮಂಗಲಾಷ್ಟಕವನ್ನು ರಚಿಸಿದ ಶ್ರೀ ರಾಜರಾಜೇಶ್ವರ ತೀರ್ಥರು ಇದೇ ಮಠದ ಸರ್ವಜ್ಞಪೀಠ ಪರಂಪರೆಗೆ ಸೇರಿದವರು.

ಈ ಪರಂಪರೆಯ ಶ್ರೀ ರಾಘವೇಂದ್ರ ತೀರ್ಥರು, ಶ್ರೀ ರಘುವರ್ಯ ತೀರ್ಥರು, ಶ್ರೀ ರಘುಪ್ರವೀರ ತೀರ್ಥರು ಮುಂತಾದ ಯತಿಪತಿಗಳು ಈ ಸಂಸ್ಥಾನವನ್ನು ಬೆಳಗಿದ್ದಾರೆ.

ಶ್ರೀ ಹೃಷೀಕೇಶ ತೀರ್ಥರಿಂದ ಈ ವರೆಗೆ ಈ ಮಾಧ್ವ ಮಹಾ ಸಂಸ್ಥಾನದಲ್ಲಿ ಆಗಿ ಹೋದ ಯೋಗಿವರೇಣ್ಯರು.

## ಶ್ರೀ ಪಲಿಮಾರು ಮಠದ ಶ್ರೀ ಗುರು ಪರಂಪರೆ

| | | |
|---|---|---|
| ೧ | ಶ್ರೀ ಮಧ್ವಾಚಾರ್ಯರು | |
| ೨ | ಹೃಷಿಕೇಶ | ತೀರ್ಥರು |
| ೩ | ಸಮಾತ್ಮೇಶ್ವರ | ,, |
| ೪ | ಸಂಭವ | ,, |
| ೫ | ಅಪರಾಜಿತ | ,, |
| ೬ | ವಿದ್ಯಾಮೂರ್ತಿ (ರಾಜರಾಜೇಶ್ವರ) | ,, |
| ೭ | ಶ್ರೀನಿಧಿ | ,, |
| ೮ | ವಿದ್ಯೇಶ | ,, |
| ೯ | ಶ್ರೀ ವಲ್ಲಭ | ,, |
| ೧೦ | ಜಗದ್ಭೂಷಣ | ,, |
| ೧೧ | ರಾಮಚಂದ್ರ | ,, |
| ೧೨ | ವಿದ್ಯಾನಿಧಿ | ,, |
| ೧೩ | ಸುರೇಶ | ,, |
| ೧೪ | ರಾಘವೇಂದ್ರ | ,, |
| ೧೫ | ರಘುನಂದ | ,, |
| ೧೬ | ವಿದ್ಯಾಪತಿ | ,, |
| ೧೭ | ರಘುಪತಿ | ,, |
| ೧೮ | ರಘುನಾಥ | ,, |
| ೧೯ | ರಘೂತ್ತಮ | ,, |
| ೨೦ | ರಾಮಚಂದ್ರ | ,, |
| ೨೧ | ರಘುವರ್ಯ | ,, |
| ೨೨ | ರಘುಪುಂಗವ | ,, |
| ೨೩ | ರಘುವರ | ,, |
| ೨೪ | ರಘುಪ್ರವೀರ | ,, |
| ೨೫ | ರಘುಭೂಷಣ | ,, |
| ೨೬ | ರಘುರತ್ನ | ,, |
| ೨೭ | ರಘುಪ್ರಿಯ | ,, |
| ೨೮ | ರಘುಮಾನ್ಯ | ,, |
| ೨೯ | ವಿದ್ಯಾಮಾನ್ಯ | ತೀರ್ಥರು (ಈಗಿನವರು) |

## ಶ್ರೀ ೧೦ಲ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು



ಪ್ರಕೃತ ಶ್ರೀ ಪಲಿಮಾರು ಮಠಾ ಸಂಸ್ಥಾನವನ್ನು ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಅಲಂಕರಿಸಿದ್ದಾರೆ.

(ಇವರ ಚರಿತ್ರೆ ಇದೇ ಗ್ರಂಥದ ೪೮೧ ನೇ ಪುಟದಲ್ಲಿ ನೋಡಿರಿ.)

# ಶ್ರೀ ರಾಘವೇಂದ್ರ ಸ್ವಾಮಿಗಳ ಮಠ

ಶ್ರೀಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ವಿಬುಧೇಂದ್ರ ತೀರ್ಥರಿಂದ ಶ್ರೀ ವಿಜಯೀಂದ್ರತೀರ್ಥ, ಶ್ರೀ ಸುಧೀಂದ್ರತೀರ್ಥ, ಶ್ರೀ ರಾಘವೇಂದ್ರತೀರ್ಥರೇ ಮೊದಲಾಗಿ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ರಾಘವೇಂದ್ರ ಸ್ವಾಮಿಗಳ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಶ್ರೀಪಾದರಾಜರಂಥ ವಾಗ್ವಿಭೂತಿಗಳಿಗೆ ವಿದ್ಯಾದಾನ ಮಾಡಿದ ಶ್ರೀ ೧೦೮ ಶ್ರೀ ವಿಬುಧೇಂದ್ರರ ಸರ್ವಜ್ಞ ಪರಂಪರೆಯಲ್ಲಿ ಶ್ರೀ ವಿಜಯೀಂದ್ರರಂಥ ವಾಗ್ಭಟರೂ, ಶ್ರೀ ರಾಘವೇದ್ರಸ್ವಾಮಿಗಳಂಥ ತಪೋ ವಿಭೂತಿಗಳೂ, ಶ್ರೀ ವರದೇಂದ್ರರಂಥ ವಿದ್ವದ್ವರಿಷ್ಠರೂ, ಶ್ರೀ ಧೀರೇಂದ್ರರಂಥ ಋಷಿ ಪುಂಗವರು ಬೆಳಗಿ ಬಂದದ್ದು ಏನಾಶ್ಚರ್ಯ !

ಈ ಪಂಡಿತ ಪರಿವ್ರಾಜಕ ಪರಂಪರೆಯಲ್ಲಿ ಅನೇಕ ಪೀಠಾಧಿಪತಿಗಳು ತಮ್ಮ ಕೃತಿ ಕಲಶಗಳಿಂದ ವೇದಾಂತ ಸೌಧಗಳನ್ನು ಮಂಗಲತರಂಗವನ್ನಾಗಿ ಮಾಡಿದ್ದಾರೆ.

ಶ್ರೀ ಮಧ್ವಾಚಾರ್ಯರ ಕರಾರ್ಚಿತವಾದ ಶ್ರೀ ರಾಮ ವೇದವ್ಯಾಸರನ್ನು ಪೂಜಿಸುತ್ತ ಬಂದ ಈ ಪರಂಪರೆಯಲ್ಲಿ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು ಕಲಪುರುಷರಾಗಿ ಅಧ್ಯಾತ್ಮ ಪ್ರಪಂಚವನ್ನೆಲ್ಲ ಬೆಳಗಿದ್ದರಿಂದ ಈ ಪರಂಪರೆಗೆ ಮುಂದೆ ಶ್ರೀ ರಾಘವೇಂದ್ರ ಸ್ವಾಮಿಗಳ ಮಠವೆಂದು ಹೆಸರು ಬಂದಿತು.

ಶ್ರೀ ವಿಬುಧೇಂದ್ರ ತೀರ್ಥರಿಂದ ಈ ಮಹಾ ಸಂಸ್ಥಾನವನ್ನು ಆಳಿ ಬಾಳಿದ ಮಹಾ ಮಹಿಮರ ನಾಮಾವಳಿ ಇಂತಿದೆ.

## ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಪದ್ಮನಾಭ ತೀರ್ಥರು
೩ ನರಹರಿ ,,
೪ ಮಾಧವ ,,
೫ ಅಕ್ಷೋಭ್ಯ ,,
೬ ಜಯ ತೀರ್ಥರು
೭ ವಿದ್ಯಾಧಿರಾಜ ,,
೮ ಕವೀಂದ್ರ ,,
೯ ವಾಗೀಶ ,,
೧೦ ರಾಮಚಂದ್ರ ,,
೧೧ ವಿಬುಧೇಂದ್ರ ,,
೧೨ ಜಿತಾಮಿತ್ರ ,,
೧೩ ರಘುನಂದನ ,,
೧೪ ಸುರೇಂದ್ರ ,,
೧೫ ವಿಜಯೀಂದ್ರ ,,
೧೬ ಸುಧೀಂದ್ರ ,,
೧೭ ರಾಘವೇಂದ್ರ ,,
(ಯಾದವೇಂದ್ರ)
೧೮ ಯೋಗೀಂದ್ರ ,,
೧೯ ಸೂರೀಂದ್ರ ತೀಥರು
೨೦ ಸುಮತೀಂದ್ರ ,,
೨೧ ಉಪೇಂದ್ರ ,,
೨೨ ವಾದೀಂದ್ರ ,,
೨೩ ವಸುಧೇಂದ್ರ ,,
೨೪ ವರದೇಂದ್ರ ,,
(ಧೀರೇಂದ್ರ)
೨೫ ಭುವನೇಂದ್ರ ,,
೨೬ ಸುಬೋಧೇಂದ್ರ ,,
೨೭ ಸುಜನೇಂದ್ರ ,,
೨೮ ಸುಜ್ಞಾನೇಂದ್ರ ,,
೨೯ ಸುಧರ್ಮೇಂದ್ರ ,,
೩೦ ಸುಗುಣೇಂದ್ರ ,,
೩೧ ಸುಪ್ರಜ್ಞೇಂದ್ರ ,,
೩೨ ಸುಕೃತೀಂದ್ರ ,,
೩೩ ಸುಶೀಲೇಂದ್ರ ,,
೩೪ ಸುವ್ರತೀಂದ್ರ ,,
೩೫ ಸುಯಮೀಂದ್ರ ,,
೩೬ ಸುಜಯೀಂದ್ರ ,,
(ಈಗಿದ್ದವರು)

# ಶ್ರೀ ೧೧೦ಲ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು



ಪ್ರಕೃತ ಶ್ರೀ ರಾಘವೇಂದ್ರ ಮಠಾಧೀಶರಾದ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ವಿದ್ಯಾ ಪಕ್ಷಪಾತಿಗಳು. ಅವರು ಸ್ವಯಂ ಪಂಡಿತರಾದುದರಿಂದ ವಿದ್ವತ್ತಿಗೆ ಯಾವ ತರಹದ ಗೌರವವನ್ನು ನೀಡಬೇಕೆಂಬುದು ಅವರಿಗೆ ಗೊತ್ತಿದೆ. ಪಂಡಿತರ ಕಷ್ಟ-ನಷ್ಟಗಳು ಅವರಿಗೆ ಚನ್ನಾಗಿ ಅರ್ಥವಾಗಿವೆ. ಆದುದರಿಂದ ಅವರು ತಮ್ಮ ಕೈಯಿಂದ ಸಾಧ್ಯವಾದಷ್ಟು ಪ್ರಯತ್ನಗಳನ್ನು ಮಾಡಿ ವಿದ್ವಾಂಸರಿಗೆ ಸಹಾಯ ಮಾಡುತ್ತಾರೆ.

ಅದಕ್ಕಾಗಿಯೇ ವರ್ಷದಲ್ಲಿ ಒಂದಲ್ಲದಂತೆ ಎರಡು ವಿದ್ವತ್ ಸಭೆಗಳನ್ನು ಮಾಡಿ ಅವರು ಕ್ರಮಶಸ್ಥ ಪಂಡಿತರನ್ನೂ ಸನ್ಮಾನಿಸಿ ಕೈತುಂಬ ದಕ್ಷಿಣೆ ಇತ್ತು ಅನುಗ್ರಹಿಸುತ್ತಾರೆ.

ಶ್ರೀ ಎಲ್ಲತ್ತೂರ ಕೃಷ್ಣಾಚಾರ್ಯರಲ್ಲಿ ತರ್ಕ ಶಾಸ್ತ್ರಾಧ್ಯಯನವನ್ನು ಮಾಡಿದ ಶ್ರೀಗಳವರ ಶಾಸ್ತ್ರಶಾಣೋಲ್ಲೀಢವಾದ ಬುದ್ಧಿಯು ವಾದದಲ್ಲಿ ಪ್ರಖರವಿದೆ. ವಾಕ್ಯಾರ್ಥದಲ್ಲಿ ಅವರ ವಾಣಿಯು ಧೀರಮುಖರವಿದೆ. ಮಹಾ ಮಹಾ ಪಂಡಿತರು ವಾದಿಸುವಾಗ ಅದರಲ್ಲಿಯ ತಪ್ಪು ಒಪ್ಪುಗಳನ್ನು ಗುರುತಿಸಿ ನ್ಯಾಯ ನಿರ್ಣಯವನ್ನು ನೀಡುವ ಅವರ ನಯ ನೈಪುಣಿಯು ಎಲ್ಲ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದೆ.

· ಶ್ರೀಗಳವರ ಅಂತಃಕರಣ ಕೋಮಲ. ಶ್ರೀ ಗುರು ಸಾರ್ವಭೌಮರ ದರ್ಶನಕ್ಕಾಗಿ ಬರುವ ಲಕ್ಷಾವಧಿ ಯಾತ್ರಿಕರ ಸುಖ ಸೌಕರ್ಯಗಳ ಕಡೆಗೆ ಅವರ ಲಕ್ಷವು ಯಾವಾಗಲೂ ವೇಧಿಸಿರುತ್ತದೆ. ಇವರ ಪ್ರಯತ್ನದಿಂದ ಇಂದು ಮಂತ್ರಾಲಯವು ಎಲ್ಲ ಮಹೀಯರ ಯಾತ್ರಾ ಸ್ಥಾನವಾಗಿದೆ.

ಶ್ರೀಗಳವರು ಮಾಧ್ವ ಸಮಾಜದ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಹಾಗೂ ಶ್ರೀ ರಾಯರ ಭಕ್ತರಿಗೂ ಅನೇಕ ಮುಖದಿಂದ ಉನ್ನತಿ, ಉತ್ಕರ್ಷಗಳನ್ನು ಸಾಧಿಸಲಿಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸುತ್ತಲಿದ್ದಾರೆ. ಸಮಾಜದ ಕಲ್ಯಾಣಾಕಾಂಕ್ಷಿಗಳಾದ ಶ್ರೀ ಸುಜಯೊಂದ್ರತೀರ್ಥ ಶ್ರೀಪಾದಂಗಳವರು ಕಂಡರಿಸುವ ಕನಸುಗಳಲ್ಲಿ ನಮ್ಮ ಸಮಾಜಕ್ಕೆ ಭವ್ಯ ಭವಿಷ್ಯವು ಕಾದಿದೆ. ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರು ಸಮಾಜಕ್ಕೆ ಮಾಡುವ ಯೋಚನೆಗಳೆಲ್ಲ ಯೋಜನೆಗಳಾಗಿ ಅವುಗಳ ಪ್ರಯೋಜನಗಳ ಸಮೀಚೀನ ಫಲವನ್ನು ಸಮಾಜವು ಬೇಗನೆ ಪಡೆಯುವಂತೆ ಶ್ರೀಗುರು ಸಾರ್ವಭೌಮರು ಬೇಗನೇ ಅನುಗ್ರಹಿಸಲಿ.





ಶ್ರೀ ರಾಘವೇಂದ್ರ ಸ್ವಾಮಿಗಳ ಮಠಾಧೀಶರಾದ
ಶ್ರೀ ೧೦೮ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರು
ರಾತ್ರಿಯಲ್ಲಿ ನಡೆಯಿಸಿದ ವಿದ್ವತ್ಸಭೆ.
ಶ್ರೀಗಳು ಪಂಡಿತರ ಮಧ್ಯದಲ್ಲಿ ವಿರಾಜಮಾನರಾಗಿದ್ದಾರೆ.

# ಶ್ರೀ ಸೋದೆ ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ವಿಷ್ಣು ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ಸೋದೆ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಶ್ರೀಮನ್ಮಧ್ವಾಚಾಯರ ಪೂರ್ವಾಶ್ರಮದ ಸಹೋದರರಾದ ಶ್ರೀ ವಿಷ್ಣು ತೀರ್ಥಾಚಾರ್ಯರೇ ಈ ಪರಂಪರೆಯ ಮೂಲ ಪುರುಷರು.

" ತೇಷು ಮುಖ್ಯೌ ವಿಷ್ಣುತೀರ್ಥ ಪದ್ಮನಾಭಾಖ್ಯ ಯೋಗಿನೌ "

ಶ್ರೀಮನ್ಮಧ್ವಾಚಾರ್ಯರ ೯ ಜನ ಪ್ರಧಾನ ಶಿಷ್ಯರಲ್ಲಿ ಶ್ರೀ ವಿಷ್ಣುತೀರ್ಥರೂ ಹಾಗೂ ಶ್ರೀ ಪದ್ಮನಾಭ ತೀರ್ಥರೂ ಪರಮ ಶ್ರೇಷ್ಠರೆಂದೂ ಶ್ರೀ ವಾದಿರಾಜ ಶ್ರೀಪಾದಂಗಳವರು ಹೇಳಿದ್ದಾರೆ.

ಶ್ರೀ ವಿಷ್ಣು ತೀರ್ಥರು ಮಹಾ ತಪಸ್ವಿಗಳೂ ಅತ್ಯಂತ ವಿರಕ್ತರೂ ಶ್ರೀಮಧ್ವಾ-ಚಾರ್ಯರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು. ಹರಿಶ್ಚಂದ್ರ ಗಿರಿಯಲ್ಲಿ ಅತ್ಯದ್ಭುತ ವಾದ ತಪಂ ಗೈದು ಅವರು ಸಾಕ್ಷಾದ್ ಭಗವದಪರೋಕ್ಷವನ್ನು ಹೊಂದಿದರು.

ಮನುಷ್ಯಮಾನದಿಂದ ಕಲಿಯುಗದ ೩೬ ಸಹಸ್ರ ವರ್ಷಗಳು ಕಳೆದ ಬಳಿಕ ಸೇತುತಿಲದಲ್ಲಿಟ್ಟಿಸ್ವ ಶ್ರೀಮದಾನಂದ ತೀರ್ಥರ ಎಲ್ಲ ಗ್ರಂಥಗಳನ್ನು ಹೊರತೆಗೆದು ದ್ವೈತ ತತ್ವವನ್ನು ಮತ್ತೆ ಭೂಮಂಡಲದಲ್ಲಿ ಪ್ರಚಾರ ಮಾಡಲಿಕ್ಕಾಗಿ ತಮ್ಮ ಸಹೋದರ ವಿಷ್ಣು ತೀರ್ಥರನ್ನು ಆಜ್ಞೆ ಗೈದು ಚಿರಂಜೀವಿಯಾಗಿ ಇರುವಂತೆ ಆಶೀರ್ವದಿಸಿದರೆಂದು ಐತಿಹ್ಯವಿದೆ.

ಭಗವತ್ಪಾದರು ಈ ಮಠಕ್ಕೆ ಭೂವರಾಹ ಮತ್ತು ಹಯಗ್ರೀವ ದೇವರನ್ನು ತಾವು ಪೂಜಿಸಿ ಅನುಗ್ರಹಿಸಿದ್ದಾರೆ.

ಈ ಗುರು ಮಧ್ವ ಪರಂಪರೆಯಲ್ಲಿ ಶ್ರೀ ೧೧ನೇ ಶ್ರೀ ವಾದಿರಾಜ ತೀರ್ಥ ಶ್ರೀಪಾದಂಗಳವರು ಅನೇಕ ಗ್ರಂಥಗಳನ್ನು ಬರೆದು ತಮ್ಮ ತಪಶ್ಶಕ್ತಿಯಿಂದ ಅನೇಕ ಪುಣ್ಯ ಪವಾಡಗಳನ್ನು ಮೆರೆದು ಅಸಾಧಾರಣವಾದ ಮನುಷ್ಯ ಮಾಡಲಿಕ್ಕೆ ಅಶಕ್ಯ ವಾದ ಅನೇಕ ದೈವೀ ಕಾರ್ಯಗಳನ್ನು ಮಾಡಿ ಲೋಕೋದ್ಧಾರ ಗೈದ ಪಾವನ ಜೀವಿಗಳು ಇವರು.

ಈ ಸರ್ವಜ್ಞ ಸಂಸ್ಥಾನದಲ್ಲಿ ಇವರಗಿಂತ ಮೊದಲು, ನಂತರ— ಶ್ರೀ ವಿಶ್ವವಂದ್ಯ ತೀರ್ಥ, ವೇದಾಂಗ ತೀರ್ಥ, ವಾಗೀಶ ತೀರ್ಥ, ವೇದನಿಧಿ, ವಿಬುಧವರ್ಯ, ವಿಶ್ವಪ್ರಿಯ, ವಿಶ್ವಾಧೀಶ, ವಿಶ್ವೇಂದ್ರ ತೀರ್ಥ ಮೊದಲಾಗಿ ಅನೇಕ ಸನ್ಯಾಸಿ ಧುರೀಣರು ಆಗಿ ಹೋಗಿದ್ದಾರೆ.

# ಶ್ರೀ ಪಲಿಮಾರು ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ಹೃಷೀಕೇಶ ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ಫಲಿಮಾರು ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಪಲಿಮಾರು ಮಠದ ಮೂಲ ಪುರುಷರಾದ ಶ್ರೀ ಹೃಷೀಕೇಶ ತೀರ್ಥರು ಶ್ರೀ ಮಧ್ವಾಚಾರ್ಯರಿಂದ ಕೃಷ್ಣ ಪೂಜೆಗಾಗಿ ನಿಯೋಜಿತರಾದ ಅಷ್ಟ ಮಠಾಧೀಶರಲ್ಲಿ ಅನ್ಯತಮರು. ಅತಏವ ಧನ್ಯತಮರು. ಅಷ್ಟೋತ್ಕೃಷ್ಟರೆಂದು ಅವರಿಗೆ ಬಿರುದು. ಆಚಾರ್ಯರ ನುಡಿ ಕಿಡಿಗಳನ್ನು ಬರೆದಿಟ್ಟು ಗ್ರಂಥ ರೂಪವಾಗಿ ಕಾಪಾಡಿಕೊಂಡು ಬಂದ ಪುಣ್ಯಾತ್ಮರವರು.

ಇಂದ್ರಿಯಗಳೆಲ್ಲವೂ ಅವರ ವಶದಲ್ಲಿ. ಅವರು ಆಚಾರ್ಯರ ವಶದಲ್ಲಿ. ಮಧ್ವಾಚಾರ್ಯರ ಕರಾರ್ಚಿತವಾದ ಶ್ರೀ ರಾಮ, ಲಕ್ಷ್ಮಣ, ಸೀತಾ ಪ್ರತಿಮೆಗಳನ್ನು ಈ ಮಠದವರು ಪೂಜೆ ಮಾಡುತ್ತ ಬಂದಿದ್ದಾರೆ.

ಮದುವೆ, ಮುಂಜಿವೆ ಮುಂತಾದ ಮಂಗಲ ಪ್ರಸಂಗಗಳಲ್ಲಿ ಎಲ್ಲರೂ ಪಠಿಸುತ್ತಲಿರುವ ಮಂಗಲಾಷ್ಟಕವನ್ನು ರಚಿಸಿದ ಶ್ರೀ ರಾಜರಾಜೇಶ್ವರ ತೀರ್ಥರು ಇದೇ ಮಠದ ಸರ್ವಜ್ಞಪೀಠ ಪರಂಪರೆಗೆ ಸೇರಿದವರು.

ಈ ಪರಂಪರೆಯ ಶ್ರೀ ರಾಘವೇಂದ್ರ ತೀರ್ಥರು, ಶ್ರೀ ರಘುವರ್ಯ ತೀರ್ಥರು, ಶ್ರೀ ರಘುಪ್ರವೀರ ತೀರ್ಥರು ಮುಂತಾದ ಯತಿಪತಿಗಳು ಈ ಸಂಸ್ಥಾನವನ್ನು ಬೆಳಗಿದ್ದಾರೆ.

ಶ್ರೀ ಹೃಷೀಕೇಶ ತೀರ್ಥರಿಂದ ಈ ವರೆಗೆ ಈ ಮಾಧ್ವ ಮಹಾ ಸಂಸ್ಥಾನದಲ್ಲಿ ಆಗಿ ಹೋದ ಯೋಗಿವರೇಣ್ಯರು.

## ಶ್ರೀ ಪಲಿಮಾರು ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಹೃಷಿಕೇಶ ತೀರ್ಥರು
೩ ಸಮೀರೇಶ್ವರ ,,
೪ ಸಂಭವ ,,
೫ ಅಪರಾಜಿತ ,,
೬ ವಿದ್ಯಾಮೂರ್ತಿ ,,
(ರಾಜರಾಜೇಶ್ವರ)
೭ ಶ್ರೀನಿಧಿ ,,
೮ ವಿದ್ಯೇಶ ,,
೯ ಶ್ರೀ ವಲ್ಲಭ ,,
೧೦ ಜಗದ್ಭೂಷಣ ,,
೧೧ ರಾಮಚಂದ್ರ ,,
೧೨ ವಿದ್ಯಾನಿಧಿ ,,
೧೩ ಸುರೇಶ ,,
೧೪ ರಾಘವೇಂದ್ರ ,,
೧೫ ರಘುನಂದ ,,
೧೬ ವಿದ್ಯಾಪತಿ ,,
೧೭ ರಘುಪತಿ ,,
೧೮ ರಘುನಾಥ ,,
೧೯ ರಘೂತ್ತಮ ,,
೨೦ ರಾಮಚಂದ್ರ ,,
೨೧ ರಘುವರ್ಯ ,,
೨೨ ರಘುಪುಂಗವ ,,
೨೩ ರಘುವರ ,,
೨೪ ರಘುಪ್ರವೀರ ,,
೨೫ ರಘುಭೂಷಣ ,,
೨೬ ರಘುರತ್ನ ,,
೨೭ ರಘುಪ್ರಿಯ ,,
೨೮ ರಘುಮಾನ್ಯ ,,
೨೯ ವಿದ್ಯಾಮಾನ್ಯ ತೀರ್ಥರು (ಈಗಿನವರು)

## ಶ್ರೀ ೧೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು



ಪ್ರಕೃತ ಶ್ರೀ ಪಲಿಮಾರು ಮಹಾ ಸಂಸ್ಥಾನವನ್ನು ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರು ಅಲಂಕರಿಸಿದ್ದಾರೆ.

(ಇವರ ಚರಿತ್ರೆ ಇದೇ ಗ್ರಂಥದ ೪೮೧ ನೇ ಪುಟದಲ್ಲಿ ನೋಡಿರಿ.)

# ಶ್ರೀ ರಾಘವೇಂದ್ರ ಸ್ವಾಮಿಗಳ ಮಠ

ಶ್ರೀಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ಭುವನೇಂದ್ರ ತೀರ್ಥರಿಂದ ಶ್ರೀ ವಿಜಯೀಂದ್ರತೀರ್ಥ, ಶ್ರೀ ಸುಧೀಂದ್ರತೀರ್ಥ, ಶ್ರೀ ರಾಘವೇಂದ್ರತೀರ್ಥರೇ ಮೊದಲಾಗಿ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ರಾಘವೇಂದ್ರ ಸ್ವಾಮಿಗಳ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಶ್ರೀಪಾದರಾಜರಂಥ ವಾಗ್ವಿಭೂತಿಗಳಿಗೆ ವಿದ್ಯಾದಾನ ಮಾಡಿದ ಶ್ರೀ ೧೦೮ ಶ್ರೀ ವಿಬುಧೇಂದ್ರರ ಸರ್ವಜ್ಞ ಪರಂಪರೆಯಲ್ಲಿ ಶ್ರೀ ವಿಜಯೀಂದ್ರರಂಥ ವಾಗ್ಭಟರೂ, ಶ್ರೀ ರಾಘವೇದ್ರಸ್ವಾಮಿಗಳಂಥ ತಪೋ ವಿಭೂತಿಗಳೂ, ಶ್ರೀ ವರದೇಂದ್ರರಂಥ ವಿದ್ವದ್ವರಿಷ್ಠರೂ, ಶ್ರೀ ಧೀರೇಂದ್ರರಂಥ ಋಷಿ ಪುಂಗವರು ಬೆಳಗಿ ಬಂದದ್ದು ಏನಾಶ್ಚರ್ಯ !

ಈ ಪಂಡಿತ ಪರಿವ್ರಾಜಕ ಪರಂಪರೆಯಲ್ಲಿ ಅನೇಕ ಪೀಠಾಧಿಪತಿಗಳು ತಮ್ಮ ಕೃತಿ ಕಲಶಗಳಿಂದ ವೇದಾಂತ ಸೌಧಗಳನ್ನು ಮಂಗಲತರಂಗವನ್ನಾಗಿ ಮಾಡಿದ್ದಾರೆ.

ಶ್ರೀ ಮಧ್ವಾಚಾರ್ಯರ ಕರಾರ್ಚಿತವಾದ ಶ್ರೀ ರಾಮ ವೇದವ್ಯಾಸರನ್ನು ಪೂಜಿಸುತ್ತ ಬಂದ ಈ ಪರಂಪರೆಯಲ್ಲಿ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು ಕಳಪುರುಷರಾಗಿ ಅಧ್ಯಾತ್ಮ ಪ್ರಪಂಚವನ್ನೆಲ್ಲ ಬೆಳಗಿದ್ದರಿಂದ ಈ ಪರಂಪರೆಗೆ ಮುಂದೆ ಶ್ರೀ ರಾಘವೇಂದ್ರ ಸ್ವಾಮಿಗಳ ಮಠವೆಂದು ಹೆಸರು ಬಂದಿತು.

ಶ್ರೀ ವಿಬುಧೇಂದ್ರ ತೀರ್ಥರಿಂದ ಈ ಮಹಾ ಸಂಸ್ಥಾನವನ್ನು ಆಳಿ ಬಾಳಿದ ಮಹಾ ಮಹಿಮರ ನಾಮಾವಳಿ ಇಂತಿದೆ.

## ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಪದ್ಮನಾಭ ತೀರ್ಥರು
೩ ನರಹರಿ ,,
೪ ಮಾಧವ ,,
೫ ಅಕ್ಷೋಭ್ಯ ,,
೬ ಜಯ ತೀರ್ಥರು
೭ ವಿದ್ಯಾಧಿರಾಜ ,,
೮ ಕವೀಂದ್ರ ,,
೯ ವಾಗೀಶ ,,
೧೦ ರಾಮಚಂದ್ರ ,,
೧೧ ವಿಬುಧೇಂದ್ರ ,,
೧೨ ಜಿತಾಮಿತ್ರ ,,
೧೩ ರಘುನಂದನ ,,
೧೪ ಸುರೇಂದ್ರ ,,
೧೫ ವಿಜಯೀಂದ್ರ ,,
೧೬ ಸುಧೀಂದ್ರ ,,
೧೭ ರಾಘವೇಂದ್ರ ,, (ಯಾದವೇಂದ್ರ)
೧೮ ಯೋಗೀಂದ್ರ ,,
೧೯ ಸೂರೀಂದ್ರ ತೀರ್ಥರು
೨೦ ಸುಮತೀಂದ್ರ ,,
೨೧ ಉಪೇಂದ್ರ ,,
೨೨ ವಾದೀಂದ್ರ ,,
೨೩ ವಸುಧೇಂದ್ರ ,,
೨೪ ವರದೇಂದ್ರ ,, (ಧೀರೇಂದ್ರ)
೨೫ ಭುವನೇಂದ್ರ ,,
೨೬ ಸುಬೋಧೇಂದ್ರ ,,
೨೭ ಸುಜನೇಂದ್ರ ,,
೨೮ ಸುಜ್ಞಾನೇಂದ್ರ ,,
೨೯ ಸುಧರ್ಮೇಂದ್ರ ,,
೩೦ ಸುಗುಣೇಂದ್ರ ,,
೩೧ ಸುಪ್ರಜ್ಞೇಂದ್ರ ,,
೩೨ ಸುಕೃತೀಂದ್ರ ,,
೩೩ ಸುಶೀಲೇಂದ್ರ ,,
೩೩ ಸುವ್ರತೀಂದ್ರ ,,
೩೫ ಸುಯಮೀಂದ್ರ ,,
೩೬ ಸುಜಯೀಂದ್ರ ,, (ಈಗಿದ್ದವರು)

# ಶ್ರೀ ೧೧೦ಲ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು



ಪ್ರಕೃತ ಶ್ರೀ ರಾಘವೇಂದ್ರ ಮಠಾಧೀಶರಾದ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ವಿದ್ಯಾ ಪಕ್ಷಪಾತಿಗಳು. ಅವರು ಸ್ವಯಂ ಪಂಡಿತರಾದುದರಿಂದ ವಿದ್ವತ್ತಿಗೆ ಯಾವ ತರಹದ ಗೌರವವನ್ನು ನೀಡಬೇಕೆಂಬುದು ಅವರಿಗೆ ಗೊತ್ತಿದೆ. ಪಂಡಿತರ ಕಷ್ಟ-ನಷ್ಟಗಳು ಅವರಿಗೆ ಚನ್ನಾಗಿ ಅರ್ಥವಾಗಿವೆ. ಆದುದರಿಂದ ಅವರು ತಮ್ಮ ಕೈಯಿಂದ ಸಾಧ್ಯವಾದಷ್ಟು ಪ್ರಯತ್ನಗಳನ್ನು ಮಾಡಿ ವಿದ್ವಾಂಸರಿಗೆ ಸಹಾಯ ಮಾಡುತ್ತಾರೆ.

ಆದಕ್ಕಾಗಿಯೇ ವರ್ಷದಲ್ಲಿ ಒಂದಲ್ಲದಂತೆ ಎರಡು ವಿದ್ವತ್ ಸಭೆಗಳನ್ನು ಮಾಡಿ ಅವರು ತ್ರಿಮತಸ್ಥ ಪಂಡಿತರನ್ನೂ ಸನ್ಮಾನಿಸಿ ಕೈತುಂಬ ದಕ್ಷಿಣೆ ಇತ್ತು ಅನುಗ್ರಹಿಸುತ್ತಾರೆ.

ಶ್ರೀ ಎಲ್ಲತ್ತೂರ ಕೃಷ್ಣಾಚಾರ್ಯರಲ್ಲಿ ತರ್ಕ ಶಾಸ್ತ್ರಾಧ್ಯಯನವನ್ನು ಮಾಡಿದ ಶ್ರೀಗಳವರ ಶಾಸ್ತ್ರಶಾಣೋಲ್ಲೀಢವಾದ ಬುದ್ಧಿಯು ವಾದದಲ್ಲಿ ಪ್ರಖರವಿದೆ. ವಾಕ್ಯಾರ್ಥದಲ್ಲಿ ಅವರ ವಾಣಿಯು ಧೀರಮುಖರವಿದೆ. ಮಹಾ ಮಹಾ ಪಂಡಿತರು ವಾದಿಸುವಾಗ ಅದರಲ್ಲಿಯ ತಪ್ಪು ಒಪ್ಪುಗಳನ್ನು ಗುರುತಿಸಿ ನ್ಯಾಯ ನಿರ್ಣಯವನ್ನು ನೀಡುವ ಅವರ ನಯ ನೈಪುಣಿಯು ಎಲ್ಲ ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದೆ.

ಶ್ರೀಗಳವರ ಅಂತಃಕರಣ ಕೋಮಲ. ಶ್ರೀ ಗುರು ಸಾರ್ವಭೌಮರ ದರ್ಶನಕ್ಕಾಗಿ ಬರುವ ಲಕ್ಷಾವಧಿ ಯಾತ್ರಿಕರ ಸುಖ ಸೌಕರ್ಯಗಳ ಕಡೆಗೆ ಅವರ ಲಕ್ಷವು ಯಾವಾಗಲೂ ವೇಧಿಸಿರುತ್ತದೆ. ಇವರ ಪ್ರಯತ್ನದಿಂದ ಇಂದು ಮಂತ್ರಾಲಯವು ಎಲ್ಲ ಮತೀಯರ ಯಾತ್ರಾ ಸ್ಥಾನವಾಗಿದೆ.

ಶ್ರೀಗಳವರು ಮಾಧ್ವ ಸಮಾಜದ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಹಾಗೂ ಶ್ರೀ ರಾಯರ ಭಕ್ತರಿಗೂ ಅನೇಕ ಮುಖದಿಂದ ಉನ್ನತಿ, ಉತ್ಕರ್ಷಗಳನ್ನು ಸಾಧಿಸಲಿಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸುತ್ತಲಿದ್ದಾರೆ. ಸಮಾಜದ ಕಲ್ಯಾಣಾಕಾಂಕ್ಷಿಗಳಾದ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ಕಂಡರಿಸುವ ಕನಸುಗಳಲ್ಲಿ ನಮ್ಮ ಸಮಾಜಕ್ಕೆ ಭವ್ಯ ಭವಿಷ್ಯವು ಕಾದಿದೆ. ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರು ಸಮಾಜಕ್ಕೆ ಮಾಡುವ ಯೋಚನೆಗಳೆಲ್ಲ ಯೋಜನೆಗಳಾಗಿ ಅವುಗಳ ಪ್ರಯೋಜನಗಳ ಸಮೀಚೀನ ಫಲವನ್ನು ಸಮಾಜವು ಬೇಗನೆ ಪಡೆಯುವಂತೆ ಶ್ರೀಗುರು ಸಾರ್ವಭೌಮರು ಬೇಗನೇ ಅನುಗ್ರಹಿಸಲಿ.





ಶ್ರೀ ರಾಘವೇಂದ್ರ ಸ್ವಾಮಿಗಳ ಮಠಾಧೀಶರಾದ
ಶ್ರೀ ೧೦೮ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರು
ರಿತ್ತಿಯಲ್ಲಿ ನಡೆಯಿಸಿದ ವಿದ್ವತ್ಸಭೆ.
ಶ್ರೀಗಳು ಪಂಡಿತರ ಮಧ್ಯದಲ್ಲಿ ವಿರಾಜಮಾನರಾಗಿದ್ದಾರೆ.

# ಶ್ರೀ ಸೋದೆ ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ವಿಷ್ಣು ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ಸೋದೆ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಶ್ರೀಮನ್ಮಧ್ವಾಚಾಯರ ಪೂರ್ವಾಶ್ರಮದ ಸಹೋದರರಾದ ಶ್ರೀ ವಿಷ್ಣು ತೀರ್ಥಾಚಾರ್ಯರೇ ಈ ಪರಂಪರೆಯ ಮೂಲ ಪುರುಷರು.

" ತೇಷು ಮುಖ್ಯೌ ವಿಷ್ಣುತೀರ್ಥ ಪದ್ಮನಾಭಾಖ್ಯ ಯೋಗಿನೌ "

ಶ್ರೀಮನ್ಮಧ್ವಾಚಾರ್ಯರ ೯ ಜನ ಪ್ರಧಾನ ಶಿಷ್ಯರಲ್ಲಿ ಶ್ರೀ ವಿಷ್ಣುತೀರ್ಥರೂ ಹಾಗೂ ಶ್ರೀ ಪದ್ಮನಾಭ ತೀರ್ಥರೂ ಪರಮ ಶ್ರೇಷ್ಠರೆಂದೂ ಶ್ರೀ ವಾದಿರಾಜ ಶ್ರೀಪಾದಂಗಳವರು ಹೇಳಿದ್ದಾರೆ.

ಶ್ರೀ ವಿಷ್ಣು ತೀರ್ಥರು ಮಹಾ ತಪಸ್ವಿಗಳೂ ಅತ್ಯಂತ ವಿರಕ್ತರೂ ಶ್ರೀಮಧ್ವಾ-ಚಾರ್ಯರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು. ಹರಿಶ್ಚಂದ್ರ ಗಿರಿಯಲ್ಲಿ ಅತ್ಯದ್ಭುತ ವಾದ ತಪಸ್ಸುಗೈದು ಅವರು ಸಾಕ್ಷಾದ್ ಭಗವದಪರೋಕ್ಷವನ್ನು ಹೊಂದಿದರು.

ಮನುಷ್ಯಮಾನದಿಂದ ಕಲಿಯುಗದ ೩೬ ಸಹಸ್ರ ವರ್ಷಗಳು ಕಳೆದ ಬಳಿಕ ಸೇತುತಿಲದಲ್ಲಿಟ್ಟಿಸ್ತ ಶ್ರೀಮದಾನಂದ ತೀರ್ಥರ ಎಲ್ಲ ಗ್ರಂಥಗಳನ್ನು ಹೊರತೆಗೆದು ದ್ವೈತ ತತ್ವವನ್ನು ಮತ್ತೆ ಭೂಮಂಡಲದಲ್ಲಿ ಪ್ರಚಾರ ಮಾಡಲಿಕ್ಕಾಗಿ ತಮ್ಮ ಸಹೋದರ ವಿಷ್ಣು ತೀರ್ಥರನ್ನು ಆಜ್ಞೆ ಗೈದು ಚಿರಂಜೀವಿಯಾಗಿ ಇರುವಂತೆ ಆಶೀರ್ವದಿಸಿದರೆಂದು ಐತಿಹ್ಯವಿದೆ.

ಭಗವತ್ಪಾದರು ಈ ಮಠಕ್ಕೆ ಭೂವರಾಹ ಮತ್ತು ಹಯಗ್ರೀವ ದೇವರನ್ನು ತಾವು ಪೂಜಿಸಿ ಅನುಗ್ರಹಿಸಿದ್ದಾರೆ.

ಈ ಗುರು ಮಧ್ವ ಪರಂಪರೆಯಲ್ಲಿ ಶ್ರೀ ೧೧ನೇ ಶ್ರೀ ವಾದಿರಾಜ ತೀರ್ಥ ಶ್ರೀಪಾದಂಗಳವರು ಅನೇಕ ಗ್ರಂಥಗಳನ್ನು ಬರೆದು ತಮ್ಮ ತಪಶ್ಶಕ್ತಿಯಿಂದ ಅನೇಕ ಪುಣ್ಯ ಪವಾಡಗಳನ್ನು ಮೆರೆದು ಅಸಾಧಾರಣವಾದ ಮನುಷ್ಯ ಮಾಡಲಿಕ್ಕೆ ಅಶಕ್ಯ ವಾದ ಅನೇಕ ದೈವೀ ಕಾರ್ಯಗಳನ್ನು ಮಾಡಿ ಲೋಕೋದ್ಧಾರ ಗೈದ ಪಾವನ ಜೀವಿಗಳು ಇವರು.

ಈ ಸರ್ವಜ್ಞ ಸಂಸ್ಥಾನದಲ್ಲಿ ಇವರಗಿಂತ ಮೊದಲು, ನಂತರ— ಶ್ರೀ ವಿಶ್ವವಂದ್ಯ ತೀರ್ಥ, ವೇದಾಂಗ ತೀರ್ಥ, ವಾಗೀಶ ತೀರ್ಥ, ವೇದನಿಧಿ, ವಿಬುಧವರ್ಯ, ವಿಶ್ವಪ್ರಿಯ, ವಿದ್ಯಾಧೀಶ, ವಿಶ್ವೇಂದ್ರ ತೀರ್ಥ ಮೊದಲಾಗಿ ಅನೇಕ ಸನ್ಯಾಸಿ ಧುರೀಣರು ಆಗಿ ಹೋಗಿದ್ದಾರೆ.

## ಶ್ರೀ ಸೋದೇ ಮಠದ ಶ್ರೀ ಗುರು ಪರಂಪರಾ

೧ ಶ್ರೀ ಮಧ್ವಾಚಾರ್ಯರು
೨ ವಿಷ್ಣು ತೀರ್ಥರು
೩ ವ್ಯಾಸ ,,
೪ ವೇದ್ಯ ,,
೫ ವೇದಗರ್ಭ ,,
೬ ವರೇಶ ,,
೭ ವಾಮನ ,,
೮ ವಾಸುದೇವ ,,
೯ ವೇದವ್ಯಾಸ ,,
೧೦ ವರಾಹ ,,
೧೧ ವೇದಾತ್ಮ ,,
೧೨ ವಿಶ್ವವಂದ್ಯ ,,
(ರತ್ನಗರ್ಭ) ,,
೧೩ ವೇದಾಂಗ ,,
೧೪ ವಿದ್ಯಾಪತಿ ,,
೧೫ ವಿಶ್ವವಂದ್ಯ ,,
೧೬ ವಿಶ್ವ ,,
೧೭ ವಿಶ್ವೇಶ ,,
೧೮ ವರದರಾಜ ,,
೧೯ ವಾಗೀಶ ,,
೨೦ ವಾದಿರಾಜಯತಿವರರು
೨೧ ವೇದವೇದ್ಯ ತೀರ್ಥರು
(ವಿದ್ಯಾನಿಧಿ) ,,
೨೨ ವೇದನಿಧಿ ,,
೨೩ ವರದರಾಜ ,,
೨೪ ವಿಶ್ವಾಧಿರಾಜ ,,
೨೫ ವಾದಿವಂದ್ಯ ,,
೨೬ ವಿಶ್ವವೇದ ,,
೨೭ ವಿಬುಧವರ್ಯ ,,
೨೮ ವಿಶ್ವನಿಧಿ ,,
೨೯ ವಿಶ್ವಾಧೀಶ ,,
೩೦ ವಿಶ್ವೇಶ ,,
೩೧ ವಿಶ್ವಪ್ರಿಯ ,,
೩೨ ವಿಶ್ವಾಧೀಶ ,,
೩೩ ವಿಶ್ವೇಂದ್ರ ,,
೩೪ ವಿಶ್ವೋತ್ತಮ ,,
(ಈಗಿನವರು)

# ಶ್ರೀ ೧೦೮ ಶ್ರೀ ವಿಶ್ವೋತ್ತಮ ತೀರ್ಥರು



ಪ್ರಕೃತ ಈ ಗುರುರಾಜರ ಸಂಸ್ಥಾನವನ್ನು ಶ್ರೀ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದಂಗಳವರು ಆಡಳಿತ ಮಾಡಿದ್ದಾರೆ.

ಇವರು ಸಾಹಿತ್ಯ ಹಾಗೂ ವೇದಾಂತ ಶಾಸ್ತ್ರಗಳನ್ನು ಓದಿದ್ದಲ್ಲದೆ ಸ್ವಯಂ ಸುಧಾ ಪಾಠವನ್ನು ಹೇಳಿ ಮಂಗಲವನ್ನು ಕೂಡ ಮಾಡಿದ್ದಾರೆ.

ಇವರು ಅತ್ಯಂತ ಸಾತ್ವಿಕರೂ, ತಪಸ್ವಿಗಳೂ ಶ್ರೀ ವಾದಿರಾಜರ ಪರಮ ಭಕ್ತರೂ ಆಗಿದ್ದಾರೆ.

ಇವರು ಈಗ ತಮ್ಮ ಎರಡು ಪರ್ಯಾಯಗಳನ್ನು ಬಹು ವೈಭವದಿಂದ ನೆರವೇರಿಸಿದ್ದಾರೆ.

ಅನೇಕ ಶಾಲೆ, ಕಾಲೇಜುಗಳಿಗೆ ಉದಾರ ಹಸ್ತದಿಂದ ಸಹಾಯ ಮಾಡಿದ್ದಾರೆ.

ಸೋದೆಯಲ್ಲಿಯ ಶ್ರೀ ವಾದಿರಾಜರ ಮಠದ ಪುನಃ ನಿರ್ಮಾಣ ಕಾರ್ಯವನ್ನು ಕೈಕೊಂಡಿದ್ದಾರೆ. ಸೋದಾ ಕ್ಷೇತ್ರಕ್ಕೆ ಯಾತ್ರೆಗೆ ಬರುವ ಗುರುರಾಜರ ಭಕ್ತರಿಗೂ ಮತ್ತು ರಾಜರ ವೃಂದಾವನದ ಸೇವೆ ಸೂತ್ರಗಳಿಗಾಗಿ ಅಲ್ಲಿಯೇ ಇರುವ ಭಕ್ತಾದಿಗಳಿಗೂ ಶ್ರೀ ಶ್ರೀ ಪಾದಂಗಳವರು ಸಕಲ ವಿಧವಾದ ಸೌಕರ್ಯ ಸಾವದೋಪಚಾರದ ಆತ್ಮೀಯ ಆತಿಥ್ಯ ಹಾಗೂ ಸೇವಾ ಕಾರ್ಯಗಳನ್ನು ಏರ್ಪಡಿಸಿರುವರು.

ಶ್ರೀ ರಾಜರ ಆರಾಧನಾ ಮಹೋತ್ಸವ ಹಾಗೂ ಶ್ರೀ ತ್ರಿವಿಕ್ರಮ ದೇವರ ಉತ್ಸವಾದಿಗಳಲ್ಲಿ ಶ್ರೀ ಶ್ರೀ ಪಾದಂಗಳವರು ಸ್ವಯಂ ಸನ್ನಿಹಿತರಾಗಿ ಅನೂಚಾನ ವಾಗಿ ಸಂಪ್ರದಾಯ ಕ್ರಮದಂತೆ ಉತ್ಸವದ ಎಲ್ಲ ವಿಧಿವಿಧಾನಗಳು ಸಾಂಗವಾಗಿ ನೆರವೇರುವಂತೆ ಮಾಡುತ್ತಾರೆ.

ಸ್ವಯಂ ವಿದ್ಯಾಪಕ್ಷಪಾತಿಗಳಾದ ಶ್ರೀ ವಿಶ್ವೋತ್ತಮ ತೀರ್ಥ ಶ್ರೀ ಪಾದಂಗಳ ವರು ಗುರು ಸಾರ್ವಭೌಮರ ಎಲ್ಲ ಗ್ರಂಥಗಳನ್ನು ಶೋಧಿಸಿ, ಅನುವಾದಿಸಿ ಮೂಲ ಮತ್ತು ವ್ಯಾಖ್ಯಾನಗಳೊಂದಿಗೆ ಪ್ರಕಟಿಸುವ ಸಂಕಲ್ಪ ಗೈದು ಈಗಾಗಲೇ ಅನೇಕ ರಾಜರ ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಸರ್ವಜ್ಞ ಸಿದ್ಧಾಂತಬದ್ಧರಾದ ಈ ಶ್ರೀಪಾದಂಗಳವರು ಸರ್ವದಾಪಿ ಸಚ್ಛಾಸ್ತ್ರಾವಲೋಕನ, ಪೂಜಾ, ಪಾಠ, ಪ್ರವಚನಗಳಲ್ಲಿ ನಿರತರಾಗಿ ಪ್ರಸಿದ್ಧಿ ಪರಾಙ್ಮುಖರಾಗಿ ತಮ್ಮ ದಿವ್ಯ ಜೀವನವನ್ನು ಸಾರ್ಥಕ ಮಾಡಿಕೊಂಡು ಆಧ್ಯಾತ್ಮಿಕ ಸಾಧನ ಮಾರ್ಗದಲ್ಲಿ ಮುಂದುವರೆಯುತ್ತಲಿದ್ದಾರೆ.



ಶ್ರೀ ಹಯಗ್ರೀವ ದೇವರು

# ಶ್ರೀ ಉತ್ತರಾದಿ ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ರಾಮಚಂದ್ರ ತೀರ್ಥರಿಂದ ಶ್ರೀ ವಿದ್ಯಾನಿಧಿ ತೀರ್ಥರೇ ಮೊದಲಾಗಿ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಉತ್ತರಾದಿ ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಈ ಸರ್ವಜ್ಞ ಪರಂಪರೆಯಲ್ಲಿ ಶ್ರೀ ರಘುವರ್ಯ ತೀರ್ಥರೂ, ಶ್ರೀ ರಘೂತ್ತಮ ತೀರ್ಥರೂ, ಶ್ರೀ ವೇದವ್ಯಾಸ ತೀರ್ಥರೂ, ಶ್ರೀ ವಿದ್ಯಾಧೀಶ ತೀರ್ಥರೂ, ಶ್ರೀ ಸತ್ಯನಾಥರೂ, ಶ್ರೀ ಕೃಷ್ಣದ್ವೈಪಾಯನರೂ, ಶ್ರೀ ವೇದೇಶ ತೀರ್ಥರೂ, ಶ್ರೀ ಸತ್ಯಬೋಧ ತೀರ್ಥರೂ, ಶ್ರೀ ಸತ್ಯಧರ್ಮ ತೀರ್ಥರೂ, ಶ್ರೀ ಸತ್ಯಪರಾಕ್ರಮ ತೀರ್ಥರೂ, ಶ್ರೀ ಸತ್ಯಜ್ಞಾನ ತೀರ್ಥರೂ, ಶ್ರೀ ಸತ್ಯಧ್ಯಾನ ತೀರ್ಥರೂ ಮೊದಲಾದ ಶಕ ಪುರುಷರೂ, ವಿಭೂತಿ ಪುರುಷರೂ, ಜನಿಸಿ ಲೋಕೋಪಕಾರ ಮಾಡಿದರು.

ಈ ಸಂಸ್ಥಾನದಲ್ಲಿ ಸರ್ವಜ್ಞ ಕರಾರ್ಚಿತ ಶ್ರೀ ರಾಮ ಸೀತಾ, ದಿಗ್ವಿಜಯ ರಾಮ, ವಂಶರಾಮ, ವ್ಯಾಸಮುಷ್ಟಿ ಮೊದಲಾದ ೩೦ ಪೂಜನೀಯ ದೇವತಾ ಪ್ರತಿಮೆಗಳು ಇರುತ್ತವೆ.

ಶ್ರೀ ಪುರಂದರ ದಾಸರೇ ಮೊದಲಾದ ಅಪರೋಕ್ಷ ಜ್ಞಾನಿಗಳು ಶ್ರೀ ಮಠದ ಪೂಜಾಕ್ರಮವನ್ನು ಬಣ್ಣಿಸಿದ್ದಾರೆ.

ಈ ಸಂಸ್ಥಾನದಲ್ಲಿ ಶ್ರೀ ರಾಮಚಂದ್ರ ತೀರ್ಥರಿಂದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳ ವರೆಗೆ ವೇದಾಂತ ಸಾಮ್ರಾಜ್ಯವನ್ನು ಆಳಿ ಬಾಳಿ ಬೆಳಗಿದ ವಾಗ್ವಿಭೂತಿಗಳ ನಾಮಾವಳಿ ಇಂತಿವೆ.

## ಶ್ರೀ ಉತ್ತರಾದಿ ಮಠದ ಶ್ರೀ ಗುರು ಪರಂಪರೆ

ಶ್ರೀ ಮಧ್ವಾಚಾರ್ಯರು
೧ ಪದ್ಮನಾಭ ತೀರ್ಥರು
೨ ನರಹರಿ ,,
೩ ಮಾಧವ ,,
೪ ಅಕ್ಷೋಭ್ಯ ,,
೫ ಜಯತೀರ್ಥರು
೬ ವಿದ್ಯಾಧಿರಾಜರು
೭ ಕವೀಂದ್ರರು
೮ ವಾಗೀಶರು
೯ ರಾಮಚಂದ್ರ ತೀರ್ಥರು
೧೦ ವಿದ್ಯಾನಿಧಿ ,,
೧೧ ರಘುನಾಥ ,,
೧೨ ರಘುವರ್ಯ ,,
೧೩ ರಘೂತ್ತಮ ,,
೧೪ ವೇದವ್ಯಾಸ ,,
೧೫ ವಿದ್ಯಾಧೀಶ ,,
೧೬ ವೇದನಿಧಿ ,,
೧೭ ಸತ್ಯವ್ರತ ,,
೧೮ ಸತ್ಯನಿಧಿ ,,
೧೯ ಸತ್ಯನಾಥ ,,
೨೦ ಸತ್ಯಾಭಿನವ ,,
೨೧ ಸತ್ಯಪೂರ್ಣ ,,
೨೨ ಸತ್ಯವಿಜಯ ,,
೨೩ ಸತ್ಯಪ್ರಿಯ ,,
೨೪ ಸತ್ಯಬೋಧ ,,
೨೫ ಸತ್ಯಸಂಧ ,,
೨೬ ಸತ್ಯವರ ,,
೨೭ ಸತ್ಯಧರ್ಮ ,,
೨೮ ಸತ್ಯಸಂಕಲ್ಪ ,,
೨೯ ಸತ್ಯಸಂತುಷ್ಟ ,,
೩೦ ಸತ್ಯಪರಾಯಣ ,,
೩೧ ಸತ್ಯಕಾಮ ,,
೩೨ ಸತ್ಯೇಷ್ಟ ,,
೩೩ ಸತ್ಯಪರಾಕ್ರಮ ,,
೩೪ ಸತ್ಯವೀರ ,,
೩೫ ಸತ್ಯಧೀರ ,,
೩೬ ಸತ್ಯಜ್ಞಾನ ,,
೩೭ ಸತ್ಯಧ್ಯಾನ ,,
೩೮ ಸತ್ಯಪ್ರಜ್ಞ ,,
೩೯ ಸತ್ಯಾಭಿಜ್ಞ ,,
೪೦ ಸತ್ಯಪ್ರಮೋದ ,,
(ಈಗಿನವರು)

# ಶ್ರೀ ೧೦೮ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಪರಮಹಂಸ ಪೀಠದಲ್ಲಿ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಪಂಡಿತ ಮಂಡಲಕ್ಕೆ ಅಖಂಡಲರೂ, ಪರಮ ವಿರಕ್ತರೂ, ಮಹಾ ತಪಸ್ವಿಗಳೂ ಆಗಿದ್ದಾರೆ.

ಇವರು ಬಾಲ್ಯದಲ್ಲಿ ಉಡುಪಿ, ತಿರುಪತಿ, ಮೈಸೂರು ಹಾಗೂ ಉತ್ತರಾದಿ ಮಠಗಳಲ್ಲಿ ಪೂರ್ವಾಶ್ರಮದಲ್ಲಿ ಅಧ್ಯಯನವನ್ನು ಮಾಡಿ ಚತುರಸ್ರ ಪಂಡಿತರಾದರು. ವಿದ್ವಾನ್ ಶಿರೋಮಣಿ ಮುಂತಾದ ಪರೀಕ್ಷೆಗಳಲ್ಲೆಲ್ಲ ಉತ್ತಮ ಶ್ರೇಣಿಯಲ್ಲಿ ಉತ್ತಮೋತ್ತಮರಾಗಿ ಉತ್ತೀರ್ಣರಾದ ಶ್ರೀ ಗುತ್ತಲ ಗುರಾಚಾರ್ಯರು ನವ್ಯ ನ್ಯಾಯದಲ್ಲಿ ದಿವ್ಯ ಪಾಂಡಿತ್ಯವನ್ನೂ, ವೇದಾಂತದಲ್ಲಿ ಪ್ರಭುತ್ವವನ್ನೂ, ವ್ಯಾಕರಣದಲ್ಲಿ ಪಟುತ್ವವನ್ನೂ ಪಡೆದರು.

ಶ್ರೀ ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರಲ್ಲಿ ಶಾಸ್ತ್ರೀಯ ಉದ್ಗ್ರಂಥಗಳ ಪರಾಮರ್ಶೆ ಮಾಡಿದ ಈ ಗುತ್ತಲ ಆಚಾರ್ಯರ ಶಾಸ್ತ್ರೀಯ ವ್ಯುತ್ಪತ್ತಿ, ಸಚ್ಛಾಸ್ತ್ರಗಳ ಉಚ್ಚಕೋಟಿ ಗ್ರಂಥಗಳ ಪಾಠ ಪ್ರವಚನ ಪರ್ಯಾಪ್ತವಾದ ಪಟಿಮೆ, ಪಾಂಡಿತ್ಯ, ಪ್ರೌಢಿಮೆಗಳನ್ನು ಕಂಡು ಪ್ರೀತ ಪ್ರಸನ್ನರಾದ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದರು ಮೈಸೂರಿನ ಉತ್ತರಾದಿ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಶ್ರೀ ಮಠದ ಪಂಡಿತರೆಂದು ಅಧ್ಯಾಪನ ಕಾರ್ಯಕ್ಕಾಗಿ ನೇಮಿಸಿದರು.

ಶ್ರೀ ಗುತ್ತಲ ಗುರಾಚಾರ್ಯರಿಗೆ ಮೊದಲಿನಿಂದಲೂ ವೈರಾಗ್ಯವತ್ತ ಒಲವು. ಇವರ ವೈರಾಗ್ಯ, ಧೀಶಕ್ತಿ, ತಪಶ್ಶಕ್ತಿಗಳನ್ನು ಕಂಡು ಶ್ರೀ ಸತ್ಯಾಭಿಜ್ಞ ತೀರ್ಥ

ಶ್ರೀಪಾದಂಗಳವರು ತಮ್ಮ ನಂತರ ಇವರಿಗೆ ಆಶ್ರಮವಿತ್ತು ಶ್ರೀ ಸತ್ಯಪ್ರಮೋದ ತೀರ್ಥರೆಂದು ನಾಮಕರಣ ಮಾಡಿ ಸರ್ವಜ್ಞ ಪೀಠದಲ್ಲಿ ಪಟ್ಟಾಭಿಷೇಕ ಗೈದರು.

ಅಂದಿನಿಂದ ಇಂದಿನ ವರೆಗೆ ಅಖಂಡ ಇಪ್ಪತ್ತು ವರ್ಷಗಳ ಕಾಲ ಶ್ರೀಗಳವರು ಸುಧಾ, ವ್ಯಾಸತ್ರಯಾದಿ ಗ್ರಂಥಗಳನ್ನು ನಿರಂತರವೂ ಪಾಠ ಪ್ರವಚನ ಮಾಡುತ್ತ ಬಂದಿದ್ದಾರೆ.

ಅನೇಕ ಬಾರಿ ಟೀಕಾಕೃತ್ಪಾದರ ಸನ್ನಿಧಾನದಲ್ಲಿ ಸುಧಾ ಗ್ರಂಥವನ್ನು ನೂರಾರು ಜನ ಶಿಷ್ಯರಿಗೆ ಪಾಠ ಹೇಳಿ ಮಂಗಳ ಮಾಡಿ ಜಯತೀರ್ಥರ ಅನನ್ಯ ಸಾಮಾನ್ಯವಾದ ಸೇವೆಯನ್ನು ಮಾಡಿದ್ದಾರೆ.

ಶ್ರೀಗಳವರ ಅಸಾಧಾರಣ ವೈಶಿಷ್ಟ್ಯವೆಂದರೆ ಸುಧಾ, ಚಂದ್ರಿಕಾದಿ ಗ್ರಂಥಗಳ ಮಂಗಳ ಪ್ರಸಂಗಗಳಲ್ಲಿ ಎಂಟು ಹತ್ತು ಗಂಟೆಗಳ ವರೆಗೆ ಅವಿಚ್ಛಿನ್ನವಾಗಿ ಪುಸ್ತಕಾ ವಲೋಕನವನ್ನು ಮಾಡದೆ ನಿರಾಯಾಸವಾಗಿ ಅನುವಾದ ಮಾಡುವದು.

ಅವರು ಮಳಖೇಡ, ಅಮ್ಮಿನಭಾವಿ ಮುಂತಾದ ಕಡೆಗಳಲ್ಲಿ ಸುಧಾದಲ್ಲಿಯ ಕಠಿಣವಾದ ಪ್ರಘಟ್ಟಗಳನ್ನು ಎತ್ತಿಕೊಂಡು ಅಸ್ಖಲಿತವಾಗಿ ಅನುವಾದ ಮಾಡಿದ್ದನ್ನು ಕಂಡು ದಿ. ನರಸಿಂಹಾಚಾರ್ಯ ವರಖೇಡ, ಯಜ್ಞವಿಠ್ಠಲಾಚಾರ್ಯ, ದಿ. ಕೂರ್ಮಾ ಚಾರ್ಯ, ಶ್ರೀ ಮಳಗಿ ವೇದವ್ಯಾಸಾಚಾರ್ಯ, ಶ್ರೀ ಚಿಂಚೋಳಿ ಕೃಷ್ಣಾಚಾರ್ಯ ಮುಂತಾದ ಪಂಡಿತರು ಆಶ್ಚರ್ಯಚಕಿತರಾದರು.

ಇಂಥ ಗ್ರಂಥ ಕ್ಲಪ್ತಿ, ಟೀಕಾ ಟಿಪ್ಪಣಿಗಳಲ್ಲಿಯ ಸರ್ವ ವಿಷಯ ಉಪಸ್ಥಿತಿ, ಘನತರವಾದ ವ್ಯುತ್ಪತ್ತಿ, ದುರ್ಬೋಧವಾದ ಕ್ಲಿಷ್ಟ ಪದ ಪಂಕ್ತಿಗಳ ಸಮುಚಿತ ಸಂಯೋಜನ ಶಕ್ತಿ ಮುಂತಾದ ವಿಶಿಷ್ಟ ಗುಣಗಳನ್ನು ಕಂಡದ್ದು ಈ ಮತದ ಶ್ರೀಗಳವರಲ್ಲಿಯೇ ಎಂದು ಎಲ್ಲ ಪಂಡಿತರು ಸಾನಂದೋದ್ಗಾರ ತೆಗೆದರು.

ಶ್ರೀಗಳವರ ದ್ವೈತ ದೀಕ್ಷೆಯು ಅಸಾಧಾರಣವಾಗಿದೆ. ಅವರು ದ್ವೈತ ತತ್ತ್ವ ಪ್ರಚಾರ ಮತ್ತು ಪರವಾದಿ ನಿಗ್ರಹಕ್ಕಾಗಿ ಆಸೇತುಹಿಮಾಚಲ ಸಂಚರಿಸಿ ಮಧ್ವ ಮತ ಡಿಂಡಿಮವನ್ನು ಹೊಡೆದಿದ್ದಾರೆ.

ಕಾಶಿಯಲ್ಲಿ ವಿದ್ವತ್ ಸಭೆಯನ್ನು ಮಾಡಿ ಶ್ರೀ ರಾಜರಾಜೇಶ್ವರಿ ಶಾಸ್ತ್ರಿ ನೀಲಮೇಘಶ್ಯಾಮಾಚಾರ್, ಶ್ರೀ ಹರೀರಾಮ ಶುಕ್ಲ, ದೇವನಾಯಕಾಚಾರ್ಯ ಮುಂತಾದ ಮಹಾ ವಿದ್ವಾಂಸರನ್ನು ಕರೆಯಿಸಿ ವಾಕ್ಯಾರ್ಥ ಗೋಷ್ಠಿಯನ್ನು ನಡೆ ಯಿಸಿದರು. ಆ ವಿದ್ವದ್ಗೋಷ್ಠಿಯಲ್ಲಿ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳ

ವರು ಶ್ರೀ ಮನ್ಮಧ್ವಮತವೇ ಸರ್ವ ಶ್ರೇಷ್ಠವಾದ ವೈದಿಕ ಮತವೆಂದು ಘಂಟಾ ಘೋಷವಾಗಿ ಸಾರಿ ವಿಷ್ಣುಸರ್ವೋತ್ತಮತ್ವ, ಜಗತ್ಸತ್ಯತ್ವ, ಪಂಚಭೇದ, ತಾರತಮ್ಯ ಮುಂತಾದ ದ್ವೈತಮತದ ತತ್ವಗಳೆಲ್ಲ ಪ್ರಮಾಣಸಿದ್ಧವಾಗಿವೆಯೆಂದು ಪ್ರತಿ ಪಾದಿಸಿದರು.

ಕಾಶಿಯ ಎಲ್ಲ ವಿದ್ವಾಂಸರು ತಮ್ಮ ಹಸ್ತಾಕ್ಷರಗಳನ್ನು ಮಾಡಿ ಮಾನಪತ್ರ ವನ್ನೂ ಸನ್ಮಾನ ಪತ್ರವನ್ನೂ ಸಮರ್ಪಿಸಿ ತಮ್ಮ ಪಾಂಡಿತ್ಯ ಶ್ರದ್ಧೆಯನ್ನು ಪ್ರದರ್ಶಿಸಿದರು.

ಅನಂತಕೃಷ್ಣಶಾಸ್ತ್ರಿಗಳು ಬರೆದ ಸುಧಾಖಂಡನಾಭಾಸ ಗ್ರಂಥಕ್ಕೆ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಉತ್ತರ ರೂಪವಾಗಿ ಬರೆದ ಸುಧಾ ಮಂಡನ ಎಂಬ ಪ್ರಗಲ್ಭ ಗ್ರಂಥವನ್ನು ಕಂಡು ಶ್ರೀಪಂಡಿತ ಪರಿವ್ರಾಜಕ ಸೀತಾಧಿ ಪತಿಗಳೊಬ್ಬರು ಈಗ ನೂರಿನ್ನೂರು ವರ್ಷಗಳಲ್ಲಿ ಇಂಥ ಉಚ್ಚ ಮಟ್ಟದ ಶಾಸ್ತ್ರೀಯ ಗ್ರಂಥವು ನಿರ್ಮಾಣಗೊಂಡಿಲ್ಲ ಎಂದು ಉದ್ಗಾರ ತೆಗೆದರು. ದ್ವೈತ ಪ್ರಪಂಚದಲ್ಲಿ ಈ ಸುಧಾ ಮಂಡನ ಗ್ರಂಥವೊಂದು ಮೈಲುಗಲ್ಲಾಗಿದ್ದು ಮಾಧ್ವ ವಾಙ್ಮಯ ಭಾಂಡಾರಕ್ಕೆ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದರ್ಗಳವರು ನೀಡಿದ ಅನರ್ಘ್ಯ ಕಾಣಿಕೆಯನ್ನು ವೈಷ್ಣವ ಸಮಾಜವು ಎಂದೂ ಮರೆಯಲಾರದು.

ಶ್ರೀಪಾದಂಗಳವರಲ್ಲಿ ಅನೇಕ ಜನ ಶಿಷ್ಯರು ಸುಧಾದಿ ಗ್ರಂಥಗಳನ್ನು ಓದಿ ಪಂಡಿತರಾಗಿದ್ದಾರೆ. ತಮ್ಮಲ್ಲಿ ಓದಿ ಪಂಡಿತರಾದ ಅನೇಕ ವಿದ್ಯಾರ್ಥಿಗಳಿಗೆ ಐದು ಸಾವಿರ ರೂಪಾಯಿ ಪಾರಿತೋಷಿಕ, ಬೆಳ್ಳಿ ತಂಬಿಗೆ, ಶಾಲುಗಳನ್ನು ಅನುಗ್ರಹಿಸಿದ್ದಾರೆ

ಶ್ರೀಗಳವರ ಅಸಾಧಾರಣವಾದ ಪಾಂಡಿತ್ಯ ಮತ್ತು ತಪಶ್ಶಕ್ತಿಗಳನ್ನು ಕಂಡು ಕೂಡ್ಲಿ ಆರ್ಯ ಅಕ್ಷೋಭ್ಯಮಠದ ಶ್ರೀ ರಾಮಧ್ಯಾನ ತೀರ್ಥ ಶ್ರೀಪಾದಂಗಳವರೂ ಹಾಗೂ ಮೈಸೂರಿನ ದೇವೇಂದ್ರತೀರ್ಥ ಸ್ವಾಮಿಗಳು ಇವರಲ್ಲಿ ಸುಧಾದಿ ಪಾಠಗಳನ್ನು ಓದಿ ಧನ್ಯರಾಗಿದ್ದಾರೆ.

ಪ್ರತಿ ವರ್ಷವೂ ಶ್ರೀಗಳವರು ವಿದ್ವತ್ಸಭೆ, ಜ್ಞಾನಸತ್ರ ಮುಂತಾದವುಗಳನ್ನು ಮಾಡಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಾರೆ. ಪಂಡಿತರನ್ನು ಗೌರವಿಸುತ್ತಾರೆ. ದೂರ ದೇಶ ಪಂಡಿತರಿಗೆ - ದಕ್ಷಿಣೆಯನ್ನು ಕಳಿಸಿಕೊಡುತ್ತಾರೆ. ಅಲ್ಲಲ್ಲಿ ಪಾಠಶಾಲೆ ಗಳನ್ನು ಪ್ರಾರಂಭಿಸಿ ವಿದ್ವಾಂಸರನ್ನು ನೇಮಿಸಿ ಮಾಧ್ವಗ್ರಂಥಗಳ ಪಾಠ-ಪ್ರವಚನ ಮುಂದುವರೆಯುವಂತೆ ಮಾಡಿದ್ದಾರೆ.

ಈ ಶತಮಾನದ ವಿಭೂತಿ ಪುರುಷರಾದ ಶ್ರೀ ಸತ್ಯಧ್ಯಾನತೀರ್ಥರ ಸ್ಮರಣಾರ್ಥ ವಾಗಿ ಸತ್ಯಧ್ಯಾನ ಪೀಠವೊಂದನ್ನು ಸ್ಥಾಪಿಸಿ ಅದರ ಮುಖಾಂತರ ಅನೇಕ ಪ್ರಾಚೀನ ಗ್ರಂಥಗಳನ್ನು ಪ್ರಕಾಶನಪಡಿಸಿದ್ದಾರೆ.

ಬಾಗಲಕೋಟೆ, ಬೆಳಗಾವಿಗಳಲ್ಲಿ ಉಚಿತ ಪ್ರಸಾದ ನಿಲಯಗಳನ್ನು ತೆರೆದು ಉಪಗಾರ ಗೈದಿದ್ದಾರೆ.

ಶ್ರೀ ಜಯತೀರ್ಥರ ೬ ನೇ ಶತಮಾನೋತ್ಸವವನ್ನು ಒಳ್ಳೇ ವೈಭವದಿಂದ ನೆರವೇರಿಸಬೇಕೆಂಬ ಘನತರವಾದ ಉದ್ದೇಶದಿಂದ ಜ್ಞಾನ ಸತ್ರಗಳನ್ನು ಪ್ರಾರಂಭಿಸಿದ್ದಾರೆ. ಮಳಖೇಡದಲ್ಲಿ ದಿವ್ಯ ಭವ್ಯವಾದ ಜಯತೀರ್ಥ ಮಂದಿರ ಒಂದನ್ನು ನಿರ್ಮಿಸುವ ಯೋಜನೆಯೊಂದನ್ನು ಮಾಡಿ ಅದಕ್ಕಾಗಿ ಸ್ವಂತ ಶ್ರೀಮಠದಿಂದ ೭೫ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಾರೆ.



ಮಹಿಷಿ ಕ್ಷೇತ್ರದಲ್ಲಿರುವ ಶ್ರೀ ಉತ್ತರಾದಿಮಠದ ಶ್ರೀ ಸತ್ಯಸಂಧತೀರ್ಥರ ವೃಂದಾವನ

# ಶ್ರೀ ಅದಮಾರು ಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ನರಸಿಂಹ ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ಅದಮಾರು ಮಠವೆಂದು ಎಂದಿನಿಂದಲೂ ಪ್ರಸಿದ್ಧವಾಗಿದೆ.

ಶ್ರೀ ಅದಮಾರು ಮಠದ ಮೂಲ ಪುರುಷರಾದ ಶ್ರೀ ನರಸಿಂಹ ತೀರ್ಥರು ಶ್ರೀಮದಾನಂದ ತೀರ್ಥರ ನಚ್ಚಿನ ಶಿಷ್ಯರಾಗಿದ್ದರು. ಆಚಾರ್ಯರು ಇವರ ವಿರಕ್ತಿ, ದೇವಭಕ್ತಿ, ತಪಶ್ಶಕ್ತಿ ಮುಂತಾದ ಗುಣಗಳನ್ನು ಕಂಡು ಪ್ರೀತರಾಗಿ ಅವರಿಗೆ ತಾವು ಪೂಜಿಸಿದ ಕಾಲಿಯಾಮರ್ದನ ಕೃಷ್ಣ ಪ್ರತಿಮೆಯನ್ನು ಕೊಟ್ಟು ಕರುಣಿಸಿದರು.

ಈ ಪರಂಪರೆಯಲ್ಲಿ ಅನೇಕ ಜನ ವಿದ್ವಾಂಸರೂ, ತಪೋ ವಿಭೂತಿಗಳೂ ಆದ ಯತಿವರೇಣ್ಯರು ಬೆಳಗಿ ಮಾಧ್ವ ಮತವನ್ನು ಪ್ರಚಾರ ಮಾಡಿದರು.

ಈ ಮಠದಲ್ಲಿ ಶ್ರೀಮಧ್ವಾಚಾರ್ಯರಿಂದ ೩೦ ನೆಯವರಾದ ಶ್ರೀ ವಿಬುಧಪ್ರಿಯ ತೀರ್ಥ ಶ್ರೀಪಾದಂಗಳವರು ಪಾಂಡಿತ್ಯ, ವ್ಯವಹಾರ ಕೌಶಲ್ಯ, ಪಾಠ ಪ್ರವಚನ ಪ್ರಾವಣ್ಯ, ವಾದನೈಪುಣ್ಯ ಮುಂತಾದ ಅನೇಕ ಗುಣಗಳಿಂದ ಲೋಕೋತ್ತರವಾದ ಖ್ಯಾತಿ ಕೀರ್ತಿಯನ್ನು ಗಳಿಸಿದರು.

ಈ ಮಠದ ಹಿಂದಿನ ಎಲ್ಲ ಕರ್ಮಂದಿಗಳ ಶುಭಾಭಿಧಾನಗಳು ಇಂತಿವೆ.

## ಶ್ರೀ ಅದಮಾರು ಮಠದ ಶ್ರೀ ಗುರು ಪರಂಪರೆ

ಶ್ರೀಮಧ್ವಾಚಾರ್ಯರು
೧ ನರಸಿಂಹ ತೀರ್ಥರು
೨ ಕಮಲೇಕ್ಷಣ ,,
೩ ರಾಮಚಂದ್ರ ,,
೪ ವಿದ್ಯಾಧೀಶ ,,
೫ ವಿಶ್ವಪತಿ ,,
೬ ವಿಶ್ವೇಶ ,,
೭ ವೇದನಿಧಿ ,,
೮ ವೇದರಾಜ ,,
೯ ವಿದ್ಯಾಮೂರ್ತಿ ,,
೧೦ ವೈಕುಂಠರಾಜ ,,
೧೧ ವೇದಗರ್ಭ ,,
೧೨ ಹಿರಣ್ಯಗರ್ಭ ,,
೧೩ ವಿದ್ಯಾಧೀಶ ,,
೧೪ ವಿಶ್ವವಲ್ಲಭ ,,
೧೫ ವಿಶ್ವೇಂದ್ರ ,,
೧೬ ವೇದನಿಧಿ ತೀರ್ಥರು
೧೭ ವಾದೀಂದ್ರ ,,
೧೮ ವಿದ್ಯಾಪತಿ ,,
೧೯ ವಿಬುಧಪತಿ ,,
೨೦ ವೇದವಲ್ಲಭ ,,
೨೧ ವೇದ[illegible]ದ್ಯ ,,
೨೨ ವಿದ್ಯೇ[illegible] ,,
೨೩ ವಿಬುಧವಲ್ಲಭ ,,
೨೪ ವಿಬುಧವಂದ್ಯ ,,
೨೫ ವಿಬುಧವರ್ಯ ,,
೨೬ ವಿಬುಧೇಂದ್ರ ,,
೨೭ ವಿಬುಧಾಧಿರಾಜ,,
೨೮ ವಿಬುಧಪ್ರಿಯ ,,
೨೯ ವಿಬುಧಮಾನ್ಯ ,,
೩೦ ವಿಬುಧೇಶತೀರ್ಥರು (ಈಗಿನವರು)

# ಶ್ರೀ ೧೧೦ಲ ಶ್ರೀ ವಿಬುಧೇಶ ತೀರ್ಥರು



ಪ್ರಕೃತ ಈ ಸಂಸ್ಥಾನವನ್ನು ಶ್ರೀಶ್ರೀ ವಿಬುಧೇಶತೀರ್ಥ ಶ್ರೀಪಾದಂಗಳವರು ಅಲಂಕರಿಸಿದ್ದಾರೆ. ಶ್ರೀ ವಿಬುಧೇಶ ತೀರ್ಥ ಶ್ರೀಪಾದಂಗಳವರು ಮಹಾ ಪ್ರತಿಭಾ ಶಾಲಿಗಳು. ಪಂಡಿತ ಪಡಮನ್ನೂರ ನಾರಾಯಣಾಚಾರ್ಯರ ಸಹಾಯದಿಂದ ತರ್ಕ, ವೇದಾಂತ ಶಾಸ್ತ್ರಗಳಲ್ಲಿ ಚನ್ನಾಗಿ ವ್ಯುತ್ಪತ್ತಿ, ವೈದುಷ್ಯಗಳನ್ನು ಪಡೆದ ಶ್ರೀಗಳವರು ಸಚ್ಛಾಸ್ತ್ರಗಳ ಪಾಠ ಪ್ರವಚನ ಪರಿಪಾಟಿಯಲ್ಲಿ ಪಟೀಯಾಂಸರಾದ ವಿದ್ವಾಂಸರಾಗಿದ್ದಾರೆ. ಶಾಸ್ತ್ರಾರ್ಥ ವಾಕ್ಯಾರ್ಥ ವಿಚಾರಗಳೆಂದರೆ ಅವರ ಉತ್ಸಾಹಕ್ಕೆ ಉಕ್ಕು ಬರುತ್ತದೆ. ನವ್ಯ ನ್ಯಾಯವಾದದ ಗ್ರಂಥಗಳಲ್ಲಿ ಅವರು ಬಹು ಸಮರ್ಥ ರೀತಿಯಿಂದ ವಾದ ವೇದಿಕೆಯಲ್ಲಿ ಖಂಡನ ಮಂಡನದ ಲೀಲೆಯಾಡುತ್ತ ಗೆಲುವಿನ ಗುರಿಯನ್ನು ತಲುಪಬಲ್ಲ ಬುದ್ಧಿ ವೈಶದ್ಯ, ವಾದ ಚಾತುರ್ಯ, ಶಾಸ್ತ್ರ ಪಾಂಡಿತ್ಯಗಳು ಅವರಲ್ಲಿ ಜಾಗರೂಕವಾಗಿವೆ.

ಶ್ರೀ ಶ್ರೀಗಳವರು ಸುಧಾದಿ ಗ್ರಂಥಗಳ ಪಾಠ ಹೇಳಿ ಮಂಗಳ ಮಾಡಿದ್ದಾರೆ.

ಶ್ರೀ ಅದಮಾರು ಮಠದ ಶ್ರೀಪಾದಂಗಳವರ ವೇದವಿದ್ಯಾಭಿರುಚಿ, ಮಧ್ವ ಸಿದ್ಧಾಂತದ ಉನ್ನಿಮೇಷುಗಳು ಅತ್ಯುತ್ಕಟವಾಗಿವೆ. ಈ ಕಾಲದಲ್ಲಿ ವೇದವಿದ್ಯೆಯು ಹ್ರಾಸವಾಗಿ, ನಾಶವಾಗಿ— ಎಲ್ಲ ಕಡೆಗೂ ಹುಟ್ಟಿದಾಗ ಹೆಸರಿಡಿಸುವವರು, ಸತ್ತಾಗ ಶ್ರಾದ್ಧ ಮಾಡಿಸುವವರು, ಉಳಿದ ಯಾಜ್ಞಿಕ ಮಾಡಿಸುವವರು, ಇಲ್ಲದಂತಾದ ಪರಿಸ್ಥಿತಿಯನ್ನು ಕಂಡು ಈ ತೇಜಸ್ವೀ ಮನಸ್ವೀ ಸ್ವಾಮಿಗಳಿಗೆ ಕರುಳು ಕರಗಿತು. ಉತ್ಸಾಹವು ಜಾಗ್ರತವಾಯಿತು.

ಈ ವೈದಿಕರ ಕೊರತೆಯನ್ನು ದೂರ ಮಾಡಲಿಕ್ಕಾಗಿ ಅವರು ಕಳೆದ ಸಲ ತಮ್ಮ ಪರ್ಯಾಯ ಸಮಯದಲ್ಲಿ ಅದಮಾರು ಮಠ ವೇದ ವಿದ್ಯಾಪೀಠವನ್ನು ಪ್ರಾರಂಭಿಸಿ ಅದರಲ್ಲಿ ನೂರಿನ್ನೂರು ವಿದ್ಯಾರ್ಥಿಗಳಿಗೆ ವೇದಾಧ್ಯಯನದ ಸಕಲ ಸೌಕರ್ಯಗಳನ್ನೂ ಮಾಡಿಕೊಟ್ಟರು. ಆ ಕಾಲದಲ್ಲಿ ಉಡುಪಿಯಲ್ಲಿ ಎಲ್ಲ ಕಡೆಗೂ ಕೇಳಬರುತ್ತಲಿರುವ ವೇದ ಮಂತ್ರಗಳ ಮಧುರ ಮಂಜುಳ ಮಂದ್ರನಾದವು ಪ್ರಾಚೀನ ಪುಣ್ಯಾರಣ್ಯಗಳ ಋಷ್ಯಾಶ್ರಮಗಳ ನೆನಪು ತರುತ್ತಲಿತ್ತು.

ಈ ವಿದ್ಯಾಪೀಠದಿಂದ ನೂರಾರು ಜನ ಋಗ್ವೇದ, ಯಜುರ್ವೇದ ಸಂಹಿತಾ ಸ್ವಾಧ್ಯಾಯ ಕೋವಿದರೂ, ಪೂರ್ವಾಪರ ಯಾಜ್ಞಿಕ ಕ್ರಿಯಾಕಲಾಪ ತಂತ್ರಮಂತ್ರಾಭಿಜ್ಞರೂ ಆದ ವೇದ ಮೂರ್ತಿಗಳ ಒಂದು ತಂಡವೇ ತಯಾರ ಆಯಿತು. ಆದರಿಂದ ಮತ್ತೆ ಒಂದು ಶತಮಾನದ ವರೆಗೆ ವೇದ ವಿದ್ಯೆಯು ಉಸಿರಾಡಿಸುವಂತಾಗಿದೆ.

ಶ್ರೀ ವಿಬುಧೇಶ ತೀರ್ಥರ ಕರ್ತೃತ್ವ ಶಕ್ತಿಯು ವಿಸ್ಮಯನೀಯವೂ, ವಿಶ್ವಸನೀಯವೂ ಆಗಿದೆ. ಅವರು ಯಾವದಾದರೂ ಮಹತ್ಕಾರ್ಯವನ್ನು ಸಂಕಲ್ಪಿಸಿದರೆ ಸಿದ್ಧಿಯು ಅವರನ್ನು ಇದ್ದಲ್ಲಿ ಹುಡುಕಿಕೊಂಡು ಬಂದು ಯಶಸ್ಸಿನ ಕಿರೀಟವಿಟ್ಟು ಹೋಗುತ್ತದೆ.

ಉಡುಪಿಯ ಶ್ರೀ ಕೃಷ್ಣನಿಗೆ ಬೆಳ್ಳಿಯ ರಥವನ್ನು ಶತಾಯುಷಿ ಸುಧೀಂದ್ರ ತೀರ್ಥ ಶ್ರೀಪಾದಂಗಳವರ ಶತಮಾನೋತ್ಸವದ ಉಪಲಕ್ಷ್ಯದಲ್ಲಿ ಮಾಡಿಸಬೇಕೆಂದು ವಿಚಾರಿಸಿದರು. ಕೂಡಲೇ ದಿಗ್ದೇಶಗಳಿಂದ ಜನರ ಸಕ್ರಿಯ ಸಹಾಯ ಸಹಕಾರ ಸಹಾನುಭೂತಿಗಳು ಹರಿದು ಬಂದು ರಜತ ಪೀಠದಲ್ಲಿ ರಜತ ರಥವು ಸಿದ್ಧವಾಗಿ ಶ್ರೀ ಕೃಷ್ಣನು ಅವರಲ್ಲಿ ವಿರಾಜಿತನಾದನು. ಆ ಭಗವಂತನನ್ನು ಬೆಳ್ಳಿಯ ತೇರಿನಲ್ಲಿ ಭಕ್ತರೊಂದಿಗೆ ಎಳೆದ ಶ್ರೀಗಳವರು ಶತಾಯುಷಿಗಳ ಗುರುಗಳ ಪ್ರೀತಿ ಪೂಜೆಯನ್ನು ಮಾಡಿದರು.

ಉಡುಪಿಯ ಯಾತ್ರೆಗೆ ಬರುವ ಲೌಕಿಕ ಜನರಿಗೆ ಇಳಿದುಕೊಳ್ಳಲಿಕ್ಕೂ, ಉಳಿದುಕೊಳ್ಳಲಿಕ್ಕೂ ತೊಂದರೆಯಾಗುತ್ತಿರುವದನ್ನು ಗಮನಿಸಿ, ಶ್ರೀಗಳವರು— ಮುಂಬೈ, ಬೆಂಗಳೂರು ಮಂಗಳೂರು, ಮದ್ರಾಸ ಎಲ್ಲ ಕಡೆಗಳ ಭಕ್ತರ ನೆರವಿನಿಂದ ಸಕಲ ವಿಧವಾದ ಒಂದು ಸುಖಾವಾಸ, ಸೌವಿಧ್ಯ, ಸೌಕರ್ಯಗಳಿಂದ ಒಡಗೂಡಿದ ದಿವ್ಯವಾದ ಒಂದು ಛತ್ರವನ್ನು ತಮ್ಮ ಶ್ರೀ ಮಠದ ಪಕ್ಕದಲ್ಲಿಯೇ ಕಟ್ಟಿಸಿದರು.

ಕರ್ನಾಟಕದ ಶೈಕ್ಷಣಿಕ ಇತಿಹಾಸದಲ್ಲಿ ಆದಮಾರು ಮಠದ ಅಧ್ಯಾಯ ಎಂದು ಒಂದು ಸ್ವತಂತ್ರ ಪ್ರಕರಣವನ್ನೇ ಬರೆಯುವಷ್ಟು ವಿವಿಧವೂ, ವಿಶಿಷ್ಟವೂ ಆಗಿದೆ ಶ್ರೀ ವಿಬುಧೇಶ ತೀರ್ಥರು ವಿದ್ಯಾ ಕ್ಷೇತ್ರದಲ್ಲಿ ಮಾಡಿದ ಕಾರ್ಯ. ದಕ್ಷಿಣ ಕನ್ನಡ ದ್ರಾವಿಡ ಬ್ರಾಹ್ಮಣ ಸಂಘವೊಂದನ್ನು ಸ್ಥಾಪಿಸಿ ಶ್ರೀಗಳವರು ಅನೇಕ ವಿದ್ಯಾಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ಪ್ರಾಥಮಿಕ ಶಾಲೆ, ಹಾಯಸ್ಕೂಲು, ಕಾಲೇಜು, ಸಂಸ್ಕೃತ ಕಲಾಶಾಲೆ, ವಿದ್ಯಾಪೀಠ ಮುಂತಾದ ಶೈಕ್ಷಣಿಕ ಸಂಸ್ಥೆಗಳು ಶ್ರೀಗಳವರ ಜ್ಞಾನ ವಿಜ್ಞಾನ ತತ್ವಜ್ಞಾನಗಳ ಪ್ರಸೀರ್ಪೆಯ ಹೆಗ್ಗುರುತುಗಳಾಗಿ ಅಲ್ಲಲ್ಲಿ ತಲೆ ಎತ್ತಿನಿಂತಿವೆ. ಯಶಸ್ವಿಯಾಗಿ ನಡೆಯುತ್ತಿವೆ.



# ಶ್ರೀ ಕುಂದಾಪುರ ವ್ಯಾಸರಾಜಮಠ

ಶ್ರೀ ಮನ್ಮಧ್ವಾಚಾರ್ಯರ ಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ರಾಜೇಂದ್ರ ತೀರ್ಥರಿಂದ ಮುಂದುವರೆದ ಈ ಸರ್ವಜ್ಞ ಸಂಸ್ಥಾನವು ಶ್ರೀ ವ್ಯಾಸರಾಜಮಠವೆಂದು ಪ್ರಸಿದ್ಧವಾಗಿದೆ.

ಈ ರಾಜೇಂದ್ರರ ಸರ್ವಜ್ಞ ಪರಂಪರೆಯಲ್ಲಿ— ಶ್ರೀ ಬ್ರಹ್ಮಣ್ಯತೀರ್ಥರು, ಶ್ರೀ ಚಂದ್ರಿಕಾಚಾರ್ಯರಂಥ ಮಹಾ ಯೋಗಿಗಳು ಅವತಾರ ಮಾಡಿ ದ್ವೈತಮತವನ್ನು ಸುಪ್ರತಿಷ್ಠಿತಗೊಳಿಸಿದರು.

ಶ್ರೀ ಚಂದ್ರಿಕಾಚಾರ್ಯರಿಗೆ ಶ್ರೀನಿವಾಸತೀರ್ಥರೆಂಬ ಓರ್ವ ಶಿಷ್ಯರಿದ್ದು ಅವರು "ವ್ಯಾಸ ವಿಜಯ"ವೆಂಬ ಕಾವ್ಯವನ್ನು ಕೂಡ ಬರೆದಿದ್ದಾರೆ. ಶ್ರೀ ಶ್ರೀನಿವಾಸತೀರ್ಥರ ದಿವ್ಯ ತಪೋದೀಪ್ತಿಯಿಂದ ಪ್ರಭಾವಿತನಾದ ರಾಜನೊಬ್ಬನು ಅವರಿಗೆ ಕುಂದಾಪುರ ಮೊದಲಾದ ಕೆಲವು ಗ್ರಾಮಗಳನ್ನು ದಾನ ಕೊಟ್ಟನು. ಅಂದಿನಿಂದ ವ್ಯಾಸರಾಜರಿಂದ ಕವಲೊಡೆದ ಈ ಸಂಸ್ಥಾನಕ್ಕೆ 'ಕುಂದಾಪುರಮಠ' ಎಂದು ಹೆಸರಾಯಿತು.

ಅನಂತರ ಈ ಸಂಸ್ಥಾನದಲ್ಲಿ ಲಕ್ಷ್ಮೀಶ್ರೀನಿವಾಸತೀರ್ಥರು, ಲಕ್ಷ್ಮೀಶ್ರೀಪ್ರಿಯತೀರ್ಥರು, ಲಕ್ಷ್ಮೀಶ್ರೀರಮಣತೀರ್ಥರು, ಲಕ್ಷ್ಮೀಶ್ರೀಕಾಂತತೀರ್ಥರು, ಶ್ರೀಧರತೀರ್ಥರು, ಮತ್ತು ಲಕ್ಷ್ಮೀಶ್ರೀಮನೋಜ್ಞತೀರ್ಥರು ಮೊದಲಾಗಿ ಅನೇಕ ತಾಪಸ ಶಿರೋಮಣಿಗಳಾದ ಪ್ರಭಾವಶಾಲಿ ಪರಿವ್ರಾಜಕಾಚಾರ್ಯರು ಆಗಿಹೋದರು.

## ಶ್ರೀ ೧೦೮ ಶ್ರೀ ಲಕ್ಷ್ಮೀಶ್ರೀಶತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಕುಂದಾಪುರಮಠದ ಅಧೀಶ್ವರರಾದ ಶ್ರೀ ೧೦೮ ಶ್ರೀ ಲಕ್ಷ್ಮೀಶ್ರೀಶತೀರ್ಥ ಶ್ರೀಪಾದಂಗಳವರು ತಪಸ್ವಿಗಳೂ, ವಿದ್ಯಾವಂತರೂ ಆಗಿದ್ದಾರೆ.

ಇವರು ಪೂರ್ವಾಶ್ರಮದಲ್ಲಿ B. A. ದ ವರೆಗೆ ಆಂಗ್ಲ ವಿದ್ಯೆಯನ್ನೂ, ಬೆಂಗಳೂರಿನ ಚಿಂಚೋಳಿ ವೆಂಕಣ್ಣಾಚಾರ್ಯರಲ್ಲಿ ಸಾಹಿತ್ಯ ವೇದಾಂತ ಅಭ್ಯಾಸ ಮಾಡಿದರು. ಮುಂದೆ ಕುಂದಾಪುರ ಮಠಕ್ಕೆ ಆಶ್ರಮವಾದ ಬಳಿಕ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಲ್ಲಿ ಐದು ವರ್ಷ ಕಾಲ ಇದ್ದು— ಚಂದ್ರಿಕಾ, ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು.

ಮುಂದೆ ಇವರು ಸ್ವತಂತ್ರವಾಗಿ ಸಂಚಾರ ಮಾಡಿ ತಮ್ಮ ಅಮೋಘವಾದ ವಕ್ತೃತ್ವಶಕ್ತಿಯಿಂದ ಜನರ ಮನಸ್ಸಿನ ಮೇಲೆ ಒಳ್ಳೆ ಪರಿಣಾಮವನ್ನುಂಟು ಮಾಡಿ ಎಲ್ಲ ಕಡೆಗೂ ಧರ್ಮ ಜಾಗ್ರತಿಯನ್ನು ನಿರ್ಮಾಣ ಮಾಡಿದ್ದಾರೆ. ಶ್ರೀ ಶ್ರೀಗಳವರ ಉಪನ್ಯಾಸವೆಂದರೆ ಕೇಳುಗರಿಗೆ ಒಂದು ಹಬ್ಬ. ಪ್ರಭಾವೀ ವಕ್ತೃತ್ವದಿಂದ ಎಷ್ಟೋ ನಾಸ್ತಿಕರು ಆಸ್ತಿಕರಾಗಿದ್ದಾರೆ. ಸುಧಾರಕರು ಸನಾತನಿಗಳಾಗಿದ್ದಾರೆ. ಎಷ್ಟೋ ಧರ್ಮ ದ್ವೇಷಿಗಳು, ದೇವ ದ್ರೋಹಿಗಳು ಆದ ಆಂಗ್ಲ ಪದವೀಧರರು ಇವರ ಧರ್ಮಪ್ರವಚನವನ್ನು ಕೇಳಿ ಮನಃ ಪರಿವರ್ತನವಾಗಿ ಈಗ ಪ್ರತಿ ನಿತ್ಯವೂ ಸಂಧ್ಯಾವಂದನೆ ದೇವತಾರ್ಚನೆಗಳನ್ನು ಮಾಡುತ್ತಲಿರುವದು ಎಲ್ಲರಿಗೂ ಕಂಡ ವಿಷಯ.

ಶ್ರೀ ಸತ್ಯಧ್ಯಾನ ತೀರ್ಥರ ಪರಮಾನುಗ್ರಹಕ್ಕೆ ಪಾತ್ರರಾದ ಇವರು ತಮ್ಮ ಶ್ರೀಮಠದಲ್ಲಿ ಪಂಡಿತ ಜಾಲಿಹಾಳ ಶ್ರೀನಿವಾಸಾಚಾರ್ಯರೆಂಬ ವಿದ್ವಾಂಸರನ್ನು ಇಟ್ಟು ಕೊಂಡು ನಿರಂತರವೂ ಸಚ್ಛಾಸ್ತ್ರ ಪಾಠವನ್ನು ಹೇಳುತ್ತ ಇರುತ್ತಾರೆ.

ಇವರ ಇನ್ನೊಂದು ವೈಶಿಷ್ಟ್ಯವೆಂದರೆ— ವೇದಾಂತ ಗ್ರಂಥಗಳನ್ನು ಬರೆದ ಸ್ವಾಮಿಗಳ ವೃಂದಾವನದ ಎದುರು ಕುಳಿತು ಪಾಠ ಹೇಳಿ ಮಂಗಳ ಮಾಡಿದ್ದು.

ಮಳಖೇಡದಲ್ಲಿ— ಸುಧಾಮಂಗಳ, ನವವೃಂದಾವನದಲ್ಲಿ— ನ್ಯಾಯಾಮೃತ, ಮಂತ್ರಾಲಯದಲ್ಲಿ—ಪರಿಮಳ, ಸೋದೆಯಲ್ಲಿ—ಯುಕ್ತಿಮಲ್ಲಿಕಾ, ಶ್ರೀರಂಗದಲ್ಲಿ—ಚಂದ್ರಿಕಾ, ಅನಂತಶಯನದಲ್ಲಿ—ತರ್ಕತಾಂಡವ, ಅಬ್ಬೂರಿನಲ್ಲಿ—ಗೀತಾ ಮುಂತಾದ ಗ್ರಂಥಗಳ ಮಂಗಳ ಮಾಡಿದ್ದಾರೆ.

ಈಗ ಮೂರು ವರ್ಷಗಳಿಂದ ಬೆಂಗಳೂರಿನಲ್ಲಿ ಮಲ್ಲೇಶ್ವರ ಮಾಧ್ವ ಸಂಘದಲ್ಲಿ ಪ್ರತಿ ದಿನ ಸಾಯಂಕಾಲ ಉಪನ್ಯಾಸವನ್ನು ಹೇಳುತ್ತಲಿದ್ದು, ಸಾವಿರಾರು ಜನರು ಅವರ ವಾಗ್ಝರಿಯನ್ನು ಕೇಳಿ ಪುನೀತರಾಗಿದ್ದಾರೆ.

( ಶ್ರೀ ಶ್ರೀ ಮಠದಿಂದ ಬರೆದುಬಂದ ಪ್ರಕಾರ ಪ್ರಸಿದ್ಧಿಸಲಾಗಿದೆ )
—ಸಂಪಾದಕರು



# ಶ್ರೀ ಭಂಡಾರಕೇರಿ ಮಠ

ಶ್ರೀಮಧ್ವಾಚಾರ್ಯರ ಅಚ್ಚುಮೆಚ್ಚಿನ ಶಿಷ್ಯರಾದ ಶ್ರೀ ಸತ್ಯತೀರ್ಥ ಸ್ವಾಮಿಗಳವರೇ ಈ ಮಠಕ್ಕೆ ಆದ್ಯ ಪ್ರವರ್ತಕರು. ಶ್ರೀಭಗವತ್‌ಪಾದರು ಶ್ರೀ ಸತ್ಯತೀರ್ಥರಿಗೆ ಮೂರು ಬಾರಿ ಪಾಠ ಹೇಳಿ ಐತರೇಯ ವಿದ್ಯೆಯ ರಹಸ್ಯವನ್ನು ಅನುಗ್ರಹಿಸಿದರು. ಬದರಿಗೆ ಹೋಗುವಾಗ ತಮ್ಮನ್ನು ಬೆಂಬಲಿಸಿ ಬಂದ ಈ ಪ್ರಿಯ ಶಿಷ್ಯನನ್ನು ಬೆರಳು ಬೀಸಿ ಅದರ ಗಾಳಿಗೆ ಸುರಕ್ಷಿತವಾಗಿ ಅನಂತ ಮಠದಲ್ಲಿ ತಂದು ಇಳಿಸಿದರು. ಬದರಿಯ ದಾರಿಯಲ್ಲಿ ಇವರನ್ನು ಹುಲಿಯು ಹಿಡಿಯ ಬಂದಾಗ ಗುರು ಮಧ್ವರು ಅದನ್ನು ತಮ್ಮ ಕೈಯಿಂದಲೇ ಹೊಡೆದೋಡಿಸಿ ಈ ಪ್ರಿಯ ಶಿಷ್ಯನನ್ನು ಉಳಿಸಿಕೊಂಡರು.

ಆಚಾರ್ಯರ ಮುಖ ಕಮಲದಿಂದ ಮೂಡಿ ಬಂದ ಭಾಷ್ಯ ಗ್ರಂಥವನ್ನು ಇಡಿಕಿಡಿಯಾಗಿ ವರ್ಣಪಂಕ್ತಿಗಳಲ್ಲಿ ಹಿಡಿದಿರಿಸಿ ಸಮಗ್ರ ಮಾಧ್ವ ಜನಾಂಗಕ್ಕೆಲ್ಲ ಪರಮೋಪಕಾರ ಮಾಡಿದ ಪುಣ್ಯಾತ್ಮರೆಂದರೆ ಶ್ರೀ ಸತ್ಯತೀರ್ಥರೇ.

ಅವರ ಈ ಸೇವೆ ಸದ್ಭಾವಗಳಿಂದ ಸುಪ್ರೀತರಾದ ಸಮೀರಣಾ ಗುರುಗಳು ಅವರನ್ನು ತಾವು ಆರೋಹಣ ಮಾಡಿದ ಸನಕಾದಿ ಪರಂಪರಾ ಪ್ರಾಪ್ತವಾದ ಪರಮಹಂಸ ಪೀಠದಲ್ಲಿ ಕುಳ್ಳಿರಿಸಿ ತಾವು ಪೂಜೆ ಮಾಡಿದ ಸೀತಾ ರಾಮ ಲಕ್ಷ್ಮಣ ಪ್ರತಿಮೆಗಳನ್ನು ಕರುಣಿಸಿದರು.

ಈ ಅಚ್ಯುತಪ್ರೇಕ್ಷಾಚಾರ್ಯರ ಸಂಸ್ಥಾನದಲ್ಲಿ ಆಗಿ ಹೋದ ಮಹಾ ಯೋಗಿಪುಂಗವರ ನಾಮ ನಿರ್ದೇಶನವು ಇಲ್ಲದೆ. ಶ್ರೀ ೧೦ನೇ ಶ್ರೀ ವಾದಿರಾಜ ಶ್ರೀಪಾದಂಗಳವರ ಪೂರ್ವಾಶ್ರಮ ಸಹೋದರರೂ ಯುಕ್ತಿಮಲ್ಲಿಕಾ ಗ್ರಂಥದ ಟೀಕಾಕಾರರೂ ಆದ ಶ್ರೀ ಸುರೋತ್ತಮ ತೀರ್ಥರೇ ಮೊದಲಾದ ಅನೇಕ ತಪಸ್ವಿ, ಯತಿಪುಂಗವರು ಈ ಸಂಸ್ಥಾನವನ್ನು ಬೆಳಗಿದ್ದಾರೆ.

## ಶ್ರೀ ಭಂಡಾರಕೇರಿ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಅಚ್ಯುತಪ್ರೇಕ್ಷರು
೨ ಶ್ರೀ ಶ್ರೀಮದಾನಂದತೀರ್ಥರು
೩ ಸತ್ಯತೀರ್ಥರು
೪ ವಿದ್ಯಾಧೀಶ ತೀರ್ಥರು
೫ ವಿಶ್ವಮೂರ್ತಿ ,,
೬ ವಿದ್ಯಾಧರ ,,
೭ ವೇದಾಂತ ,,
೮ ರಘುವೇಂದ್ರ ,,
೯ ರಘುನಾಥ ,,
೧೦ ಹಿರಣ್ಯನಾಭ ,,
೧೧ ರಘುರಾಮ ,,
೧೨ ದಾಮೋದರ ,,
೧೩ ರಘುವಲ್ಲಭ ,,
೧೪ ಸುರೋತ್ತಮ ,,
೧೫ ವಿಶ್ವೋತ್ತಮ ,,
೧೬ ರಾಜಾಧಿರಾಜ ,,
೧೭ ರಾಘವೇಂದ್ರ ,,
೧೮ ರಘುಭೂಷಣ ತೀರ್ಥರು
೧೯ ರಘುವರ್ಯ ,,
೨೦ ರಘುಪುಂಗವ ,,
೨೧ ರಘೂತ್ತಮ ,,
೨೨ ರಾಮಚಂದ್ರ ,,
೨೩ ರಘುಪತಿ ,,
೨೪ ರಾಜವರ್ಯ ,,
೨೫ ರಘುರಾಜೇಂದ್ರ ,,
೨೬ ರಾಜವಂದ್ಯ ,,
೨೭ ವಿದ್ಯಾರಾಜೇಂದ್ರ ,,
೨೮ ವಿದ್ಯಾಧಿರಾಜ ,,
೨೯ ವಿದ್ಯಾಸಾಗರ ,,
೩೦ ವಿದ್ಯಾನಿಧಿ ,,
೩೧ ವಿದ್ಯಾಸಮುದ್ರ ,,
೩೨ ವಿದ್ಯಾವಾರಿನಿಧಿ ,,
೩೩ ವಿದ್ಯಾರ್ಣವ ,,
೩೪ ವಿದ್ಯಾಮಾನ್ಯತೀರ್ಥ
(ಈಗಿನವರು)

## ಶ್ರೀ ೧೦೮ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಭಂಡಾರಕೇರಿ ಮಠಾಧೀಶ್ವರರಾದ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರು ಶ್ರೀ ಶ್ರೀ ಸತ್ಯಧ್ಯಾನ ತೀರ್ಥ ಶ್ರೀ ಪಾದಂಗಳವರ ವಿದ್ವತ್ ಶಿಷ್ಯ ಯತಿವರೇಣ್ಯರಾಗಿದ್ದಾರೆ. ಆ ಪ್ರಾಜ್ಞಪುಂಗವರ ಜ್ಞಾನ ಭಾಂಡಾರವನ್ನು ತಾವು ಪಡೆದು ಭಂಡಾರಕೇರಿ ಎಂಬ ಹೆಸರನ್ನು ಸಾರ್ಥಕಗೊಳಿಸಿದ್ದಾರೆ.

ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ಮಾಧ್ವ ಸಮಾಜಕ್ಕೆ ನೀಡಿದ ಚಿರ ಸ್ಮರಣೀಯವಾದ ಮಹಾರ್ಘ್ಯ ಕಾಣಿಕೆಯೆಂದರೆ ಶ್ರೀ ಶ್ರೀ ೧೦೮ ಪೇಜಾವರ ಶ್ರೀ ಪಾದಂಗಳವರು.

ಶ್ರೀ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರಲ್ಲಿ ನಾಲ್ಕಾರು ವರುಷ ಸುಧಾ, ವ್ಯಾಸತ್ರಯ ಮುಂತಾದ ಗ್ರಂಥಗಳನ್ನು ಶ್ರೀ ಶ್ರೀಗಳವರು ಬಹು ಶ್ರದ್ಧೆಯಿಂದ ಅಧ್ಯಯನ ಮಾಡಿ ವೇದಾಂತ ಶಾಸ್ತ್ರದಲ್ಲಿ ವಿಜಾತೀಯವಾದ ವ್ಯುತ್ಪತ್ತಿ ವೈದಗ್ಧ್ಯಗಳನ್ನು ಪಡೆದರು. ಇವರ ಜ್ಞಾನ ಲಾಲಸೆ ಜಿಜ್ಞಾಸಾವೃತ್ತಿ ಸ್ವಾಧ್ಯಾಯಪ್ರಾವಣ್ಯಗಳನ್ನು ಕಂಡು ಪರಮ ಪ್ರೀತರಾದ ಇವರ ಗುರುಗಳು ಎಲ್ಲ ಶಿಷ್ಯರಂತೆ ಇವರಿಗೆ ಬರೀ ಪಾಠ ಹೇಳಿ ಬಿಟ್ಟು ಬಿಡದೆ ತಮ್ಮ ಎದುರೇ ಕುಳ್ಳಿರಿಸಿಕೊಂಡು ಇವರ ಕಡೆಯಿಂದ ಅನೇಕ ಶಿಷ್ಯರಿಗೆ ಸುಧಾದಿ ಗ್ರಂಥಗಳನ್ನು ಮಂಗಳ ಮಾಡಿಸಿದರು.

ಅಧ್ಯಯನವನ್ನು ಮುಗಿಸಿಕೊಂಡು ತಮ್ಮ ಸ್ವಗ್ರಾಮವಾದ ಭಂಡಾರಕೇರಿಗೆ ಬಂದ ಶ್ರೀಪಾದಂಗಳವರು ಅಲ್ಲಿ ಒಂದು ವೇದಾಂತ ಮಹಾ ವಿದ್ಯಾಲಯವನ್ನೇ ಪ್ರಾರಂಭಿಸಿದರು. ದೂರ ದೂರ ದೇಶಗಳಿಂದ ನೂರಾರು ಜನ ಜ್ಞಾನಾರ್ಥಿ ವಿದ್ಯಾರ್ಥಿ

ಗಳು ಅಲ್ಲಿಗೆ ಬಂದು ಈ ಜ್ಞಾನಮೇರುವಿನ ಪಾದದಡಿಯಲ್ಲಿ ನಿಂದು ನ್ಯಾಯ ವೇದಾಂತಾದಿ ಗ್ರಂಥಗಳನ್ನು ಓದತೊಡಗಿದರು.

ಈ ವೇದಾಂತ ಗರಡಿಯಲ್ಲಿ ಓದಿ ತಯಾರಾದ ಅನೇಕ ಜನ ವಿದ್ವತ್ತಲ್ಲಜರು ದೇಶದಲ್ಲಿ ಅಲ್ಲಲ್ಲಿ ನಿಂತು ಬಡವ ಬಲ್ಲಿದರೆಲ್ಲರಿಗೂ ಸುಧಾದಿ ಗ್ರಂಥಗಳನ್ನು ಈಗಲೂ ಪಾಠ ಹೇಳುತ್ತಿದ್ದಾರೆ.

ಪ್ರೇಕ್ಷಾವತ್ ಪರಮಹಂಸ ಪುಂಗವರಾದ ಶ್ರೀ ಪೇಜಾವರ ಶ್ರೀಪಾದಂಗಳವರೂ ಕೂಡ ಶ್ರೀ ಭಂಡಾರಕೇರಿ ಶ್ರೀ ಪಾದಂಗಳವರ ಈ ವಿದ್ವನ್ನಿರ್ಮಾಣ ಕೇಂದ್ರದಲ್ಲಿ ಸಿದ್ಧರಾದ ಪ್ರಸಿದ್ಧ ಪ್ರಾಜ್ಞ ಪರಿವೃಢರಾಗಿದ್ದಾರೆ.



ಪ್ರಾತಃಸ್ಮರಣೀಯ ಶ್ರೀ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ
ಶ್ರೀ ಶ್ರೀ ಭಂಡಾರಕೇರಿ ಮಠಾಧೀಶರ ಸುಧಾಪಾಠ

ಶ್ರೀ ಭಂಡಾರಕೇರಿ ಶ್ರೀಪಾದಂಗಳವರು [illegible] ವರ್ಷಗಳ ಕಾಲ ಊರು ಬಿಟ್ಟು ಪದ ಚಲನ ಮಾಡದೆ ಭಂಡಾರಕೇರಿಯಲ್ಲಿಯೇ ಇದ್ದು ವ್ಯಾಸರ ವಾರ್ಷಿಕ ಜ್ಞಾನಸತ್ರವನ್ನು ಅವಿಚ್ಛಿನ್ನವಾಗಿ ನೆರವೇರಿಸಿ ನೂರಾರು ಜನ ವಿದ್ವಾಂಸರನ್ನು ತಯಾರ ಮಾಡಿ ಅನೇಕ ಜನ ಪೀಠಾಧಿಪತಿಗಳಿಗೆ ಪಾಠ ಹೇಳಿ ಅನಂತರ ದೇಶ ದಿಗ್ವಿಜಯಕ್ಕಾಗಿ ಹೊರಟರು. ಕಾಶಿಯಿಂದ ರಾಮೇಶ್ವರದ ವರೆಗೆ ಎಲ್ಲ ಕಡೆಗೂ ಸಂಚರಿಸಿ ಅದ್ವೈತ



ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ೧೦೮ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಗಳವರು
ಶ್ರೀ ಪೇಜಾವರ ಮಠಾಧೀಶರಾದ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥರಿಗೆ ಪಾಠ ಹೇಳುವದು

ವಿದ್ವಾಂಸರು ಇದ್ದಲ್ಲಿ ಹೋಗಿ ಅವರ ಜೊತೆಗೆ ವಾದ ಮಾಡಿ ಗೆದ್ದು ಮಧ್ವ ಮತದ ಜಯಧ್ವಜವನ್ನು ಎತ್ತಿ ಮೆರೆಸಿದ್ದಾರೆ. ಕಾಶಿ, ಕಂಚಿ, ದಿಲ್ಲಿ, ಹೃಷೀಕೇಶ, ಮದ್ರಾಸ, ಮೊದಲಾದ ಕಡೆಗಳಲ್ಲಿ ಅದ್ವೈತ ಪಂಡಿತರ ಹಾಗೂ ಪೀಠಾಧಿಪತಿಗಳ ಗುಂಪು ಹಾಗೂ ಗುರುಗಳಿದ್ದಲ್ಲಿಗೆ ಹೋಗಿ ಆ ಮತದ ಅವೈದಿಕತೆಯನ್ನೂ ಅಬದ್ಧತೆಯನ್ನೂ ಅಶುದ್ಧತೆಯನ್ನೂ ಅಸಿದ್ಧತೆಯನ್ನೂ ಸಿದ್ಧಮಾಡಿ ತೋರಿಸಿಬಂದಿದ್ದಾರೆ.



ದಿಲ್ಲಿ ವಿದ್ವತ್ಸಭೆಯಲ್ಲಿ ಶ್ರೀ ಶ್ರೀ ಭಂಡಾರಕೇರಿ ಮಠಾಧೀಶರು

ಶ್ರೀ ಕಂಚಿ ಕಾಮಕೋಟಿ ಪೀಠಾಧೀಶ್ವರ ಶ್ರೀ ಶಂಕರಾಚಾರ್ಯ, ಕೂಡ್ಲಿ ಶ್ರಿಂಗೇರಿ ಶಂಕರಾಚಾರ್ಯ, ಕರಪಾತ್ರಿ ಸ್ವಾಮಿ, ಅನಂತಕೃಷ್ಣ ಶಾಸ್ತ್ರಿ, ರಾಜರಾಜೇಶ್ವರ ಶಾಸ್ತ್ರಿ, ಸುಬ್ರಹ್ಮಣ್ಯ ಶಾಸ್ತ್ರಿ, ಪಟ್ಟಾಭಿರಾಮ ಶಾಸ್ತ್ರಿ ಮೊದಲಾದ ಅನೇಕ ಅದ್ವೈತ ಪಂಡಿತ ಪೀಠಾಧಿಪತಿಗಳ ಜೊತೆಗೆ ವಾದ ಹೂಡಿ ವಾಕ್ಯಾರ್ಥ ಮಾಡಿ ದ್ವೈತ ಮತದ ಪ್ರಮಾಣ ಪ್ರಮಿತತೆಯನ್ನು ಸರ್ವರಿಗೂ ಮನಗಾಣಿಸಿಕೊಟ್ಟಿದ್ದಾರೆ.

ಶ್ರೀಪಾದಂಗಳವರಿಗೆ ಮಧ್ವ ಸಿದ್ಧಾಂತವನ್ನು ಸರ್ವತ್ರಾಪಿ ಪ್ರಸಾರಮಾಡಬೇಕೆಂಬ ಅತ್ಯುತ್ಕಟವಾದ ಅಪೇಕ್ಷೆ ಇರುವುದರಿಂದ ಅವರು ೨೫ ವರ್ಷಗಳ ಹಿಂದೆ ಮಾಧ್ವ ರಾದ್ಧಾಂತ ಸಂವರ್ಧಿನೀ ಸಭೆ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಪ್ರತಿ ವರ್ಷವೂ ಮಧ್ವ ನವಮಿ ಕಾಲದಲ್ಲಿ ದೇಶ ವಿದೇಶಗಳಿಂದ ಪಂಡಿತರನ್ನೂ, ವಿದ್ಯಾರ್ಥಿಗಳನ್ನೂ ಬರಮಾಡಿಕೊಂಡು ಪರೀಕ್ಷೆ ಮಾಡಿ ವಿಪುಲವಾಗಿ ದಾನ ದಕ್ಷಿಣೆಗಳನ್ನು ಕೊಟ್ಟು ಗೌರವಿಸುತ್ತಲಿದ್ದಾರೆ. ಪ್ರತಿ ವರ್ಷವೂ ೫೦ ಸಾವಿರ ರೂಪಾಯಿ ವೆಚ್ಚ ಮಾಡಿ ನೆರವೇರಿಸುತ್ತಲಿರುವ ಈ ವಿದ್ವತ್ ಸಭೆಯು ಮುಖಾಂತರ ಅಲ್ಲಲ್ಲಿ ಪಾಠ ಶಾಲೆಗಳನ್ನಿಟ್ಟು ವಿದ್ವಾಂಸರನ್ನು ನಿಯಮಿಸಿ ಅವರಿಗೆ ಮಾಸಾಶನ, ವರ್ಷಾಶನಗಳ ಸ್ಥಿತ್ತು ವೇದಾಂತ ವಿದ್ಯೆಯ ಸರ್ವತೋಮುಖ ಪ್ರಸಾರಕ್ಕೆ ಸರ್ವ ವಿಧದಿಂದಲೂ ಪ್ರೋತ್ಸಾಹನೆಯನ್ನು ನೀಡುತ್ತಲಿದ್ದಾರೆ.

ಕೆಲವು ವರ್ಷ ಭಾಂಡಾರಕೇರಿಯಲ್ಲಿಯೇ ನಡೆಯುತ್ತಲಿದ್ದ ಆ ಸಭೆಯನ್ನು ಈಗ ಬೆಂಗಳೂರ, ಮದ್ರಾಸ, ಹುಬ್ಬಳ್ಳಿಕಟ್ಟಿ, ವೇಣೀಸೋಮಪುರ, ಉಡುಪಿ, ಚೀಕಲಪರ್ವಿ ಮುಂತಾದ ಬೇರೆ ಬೇರೆ ಸ್ಥಾನಗಳಲ್ಲಿ ನೆರವೇರಿಸಿ ವಿದ್ವಾಂಸರಿಗೆ ವಿಪುಲ ದಕ್ಷಿಣೆ ಹಾಗೂ ರಜತಪಾತ್ರೆಗಳನ್ನಿತ್ತು ಗೌರವಿಸಿದ್ದಾರೆ.

ಇತ್ತೀಚೆಗೆ ಶ್ರೀ ಭಂಡಾರಕೇರಿ ಮಠದ ಈ ಮಧ್ವನವಮಿ ಸಭೆಗೆ ಶ್ರೀ ಸತ್ಯಧ್ಯಾನತೀರ್ಥರ ಹಿಂದಿನ ಕಾಲದ ಮಹಾ ಸಮಾರಾಧನೆ ಸಭೆಗಳ ಸ್ವರೂಪವು ಪ್ರಾಪ್ತವಾಗುತ್ತಲಿದೆ. ಅದರಿಂದ ಜನರಲ್ಲಿ ಒಂದು ವಿಲಕ್ಷಣವಾದ ಧರ್ಮಜಾಗ್ರತಿ ಹಾಗೂ ದ್ವೈತಶ್ರದ್ಧೆಗಳು ನಿರ್ಮಾಣಗೊಳ್ಳುತ್ತಲಿವೆ.

ಶ್ರೀಗಳವರು ಅನಂತಕೃಷ್ಣ ಶಾಸ್ತ್ರಿಯು ಬರೆದ ನ್ಯಾಯಸುಧಾ ಖಂಡನಾಭಾಸಕ್ಕೆ ಖಂಡನವನ್ನು ಬರೆದು ಸ್ವತಃ ಶಾಸ್ತ್ರಿಗಳನ್ನು ಸಮಕ್ಷ ಕರೆಯಿಸಿ ಅವರ ಗ್ರಂಥವಲ್ಲಿಯ ವಿಧಾನಗಳನ್ನೆಲ್ಲ ಅಕ್ಷರಶಃ ಖಂಡಿಸಿ ಹಾಕಿದ್ದಾರೆ. ಅವರ ಈ ಗ್ರಂಥವು ಸಕಲ ವಿದ್ವನ್ಮಾನ್ಯತೆಯನ್ನು ಪಡೆದು ಮಧ್ವ ಶಾಸ್ತ್ರದ ಮೇಲ್ಮೆಯನ್ನು ಎತ್ತಿ ಹಿಡಿದು ವೈಷ್ಣವ ವಾಙ್ಮಯಕ್ಕೆ ಅಲಂಕಾರ ಪ್ರಾಯವಾಗಿದೆ.

ಮೈಸೂರು, ಮದ್ರಾಸ, ಜಯಪೂರ ಕಲಕತ್ತಾ, ಮುಂಬೈ ಮುಂತಾದೆಡೆಗಳಲ್ಲಿ ಶ್ರೀ ಶ್ರೀಗಳವರು ಚಾತುರ್ಮಾಸ್ಯ ಸಂಕಲ್ಪಗೈದು, ಅಲ್ಲಿ ವಿದ್ವತ್ಸಭೆಗಳನ್ನು ನೆರವೇರಿಸಿ ಅದ್ವೈತಖಂಡನ ದ್ವೈತಮಂಡನ ಮಹಾ ಕಾರ್ಯವನ್ನು ಜರುಗಿಸಿದ್ದಾರೆ.



ಜಯಪುರದ ಪಂಡಿತರ ಮಧ್ಯದಲ್ಲಿ ಶ್ರೀ ಶ್ರೀ ಭಂಡಾರಕೇರಿ ಶ್ರೀಗಳವರು

ಗದುಗಿನಲ್ಲಿ ನಡೆದ

ಶ್ರೀ ಭಂಡಾರಕೇರಿ ಶ್ರೀ ಪೇಜಾವರ ಶ್ರೀಗಳವರ

ಸುವರ್ಣೋತ್ಸವ ರಜತೋತ್ಸವ

ಮೆರವಣಿಗೆಯ ದೃಶ್ಯ



ಇದಲ್ಲದೇ ಈಶಾವಾಸ್ಯೋಪನಿಷತ್, ಗಾಯಿತ್ರೀ ಗಾಂಭೀರ್ಯ ಮುಂತಾದ ಚಿಕ್ಕ-ಚಿಕ್ಕ ಗ್ರಂಥಗಳನ್ನು ಬರೆದು ಪ್ರಕಾಶಿಸಿ, ವೇದ-ಶಾಸ್ತ್ರಗಳ ತಿರುಳನ್ನು ತಿಳಿಯಾದ ಭಾಷೆಯಲ್ಲಿ ಪಾಮರರಿಗೆಲ್ಲ ಬೋಧವಾಗುವಂತೆ ಮಾಡುತ್ತಲಿದ್ದಾರೆ.

ಮಾಧ್ವ ಮಹಾ ಮಂಡಲದ ಪ್ರತಿಯೊಂದು ಸಭಾ-ಸಮ್ಮೇಲನ-ಶಿಬಿರಗಳಲ್ಲಿ ಸ್ವಯಂ ಉಪಸ್ಥಿತರಿದ್ದು ಮಾರ್ಗದರ್ಶನ ಮಾಡಿಸುತ್ತಾರೆ. ಪೂರ್ಣಪ್ರಜ್ಞ ವಿದ್ಯಾಪೀಠದ ಆಧಾರಸ್ತಂಭರಾಗಿ ಪ್ರತಿವರ್ಷ ಅಲ್ಲಿಯೂ ಕೆಲಕಾಲ ನಿಂತು ಪಾಠಪ್ರವಚನ ಮಾಡಿಸುತ್ತಲಿದ್ದಾರೆ.

ಈಗ ದಶಪ್ರಕರಣ, ಸರ್ವಮೂಲ ಮುಂತಾದ ಗ್ರಂಥಗಳ ಸಂಶೋಧನ, ಪ್ರಕಾಶನ ಕಾರ್ಯಗಳನ್ನು ಮಾಡಿಸುತ್ತಲಿದ್ದಾರೆ.

ಮಾಧ್ವ ಮಹಾ ಮಂಡಲದ ಸತ್ವಪರೀಕ್ಷೆಯ ಪ್ರಸಂಗದಲ್ಲಿ ಅದರ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿ— ಸಮಾಜದಲ್ಲಿ, ಮಠ-ಮಠಗಳಲ್ಲಿ, ಮಂಡಲ ಹಾಗೂ ಪೀಠಾಧಿಪತಿಗಳಲ್ಲಿ ಸ್ನೇಹ-ಸೌಹಾರ್ದ-ಸಾಮರಸ್ಯ ಸಂಬಂಧ ಸ್ಥಾಪನಗೆ ಕಾರಣ ಪುರುಷರಾಗಿದ್ದಾರೆ.

ಶ್ರೀ ಶ್ರೀಗಳವರ ಪಾಂಡಿತ್ಯ, ಪ್ರತಿಭೆ, ವೈಷ್ಣವದೀಕ್ಷೆ, ಮಧ್ವಪ್ರಸಾರಾಕಾಂಕ್ಷೆ, ಪಂಡಿತ ಪಕ್ಷಪಾತ, ವಿದ್ಯಾರ್ಥಿ ವಾತ್ಸಲ್ಯ, ಧರ್ಮನಿಷ್ಠೆ, ಕರ್ಮಠಕರ್ಮಂದಿತೆ, ಕಾರುಣ್ಯ, ಸೌಜನ್ಯ, ಸಹೃದಯತೆ, ಶಿಷ್ಯ ಜನರ ಉದ್ಧಿಧೀರ್ಷೆ ಮುಂತಾದ ಗುಣಗಳು ಒಂದೊಂದೂ ಅಸಾಮಾನ್ಯವಾಗಿವೆ. ಅತಏವ ಜಗನ್ಮಾನ್ಯವೂ ಆಗಿವೆ. ಇವರ ಒಂದೊಂದು ಗುಣಗಳ ಮೇಲೆಯೂ ಒಂದೊಂದು ಪುಸ್ತಕ ಬರೆಯುವಷ್ಟು ಗುಣಗಣ ಗಣಿಯಾಗಿದ್ದಾರೆ ಈ ಗುರೂತ್ತಮರು.

ಸಂಸ್ಕೃತ ಪಂಡಿತರಿಗೆಲ್ಲ ಶ್ರೀ ಭೋಜ ವಿಕ್ರಮರಾಜರಂತೆ ಉದಾರಾಶ್ರಯವಿತ್ತು ಅವರ ಯೋಗಕ್ಷೇಮ ಚಿಂತನೆಯನ್ನು ಮಾಡುತ್ತಲಿರುವ ಶ್ರೀ ಶ್ರೀಗಳವರು ವಿದ್ಯಾಮಾನ್ಯರೂ ಆಗಿದ್ದಾರೆ. ವಿದ್ವನ್ಮಾನ್ಯರೂ ಆಗಿದ್ದಾರೆ.



# ಶ್ರೀ ಕಾಣಿಯೂರ ಮಠ

ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಶ್ರೀ ಕಾಣಯೂರ ಮಠದ ಮೂಲ ಪುರುಷರು ಶ್ರೀಮದಾನಂದ ತೀರ್ಥರ ಪಟ್ಟ ಶಿಷ್ಯರಾದ ಶ್ರೀ ರಾಮ ತೀರ್ಥರು ಇವರ ಭಕ್ತಿ ವಿರಕ್ತಿ ಮುಕ್ತಿ ಯೋಗ್ಯತೆಗಳನ್ನು ಕಂಡು ಸಂತುಷ್ಟರಾದ ಶ್ರೀಮಧ್ವಾಚಾರ್ಯರು ಇವರಿಗೆ ತಾವು ಅರ್ಚಿಸುವ ಶ್ರೀ ನೃಸಿಂಹ ದೇವರನ್ನು ಸಂಸ್ಥಾನದ ಪ್ರತಿಮೆಯನ್ನಾಗಿ ಕೊಟ್ಟು ಅನುಗ್ರಹಿಸಿದರು.

ಈ ಸಂಸ್ಥಾನದಲ್ಲಿ ಶ್ರೀ ವಾರಿಜಾಕ್ಷ ತೀರ್ಥರು, ವಿದ್ಯಾಸಾಗರ ತೀರ್ಥರು, ವಾಸುದೇವ ತೀರ್ಥರು, ವಿದ್ಯಾಪತಿ ತೀರ್ಥರು, ವಾಮನ ತೀರ್ಥರು, ವಿದ್ಯಾನಿಧಿ ತೀರ್ಥರು, ವಿದ್ಯಾಸಮುದ್ರ ತೀರ್ಥರು, ಮೊದಲಾದ ಅನೇಕ ವೀತರಾಗ ಪೂತಾತ್ಮರು ಆಗಿ ಶ್ರೀ ಕೃಷ್ಣನ ಪೂಜೆ ಮಾಡಿ ಆತ್ಮೋದ್ಧಾರ ಮಾಡಿಕೊಂಡರು.

ಈ ಪೀಠ ಪರಂಪರೆಯ ಯತಿವರರ ಶುಭನಾಮಧ್ಯೇಯಗಳನ್ನು ಕಾಲಕ್ರಮಾನುಸಾರವಾಗಿ ಕೆಳಗೆ ಕೊಡಲಾಗಿದೆ.

### ಶ್ರೀ ಕಾಣಿಯೂರ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಶ್ರೀರಾಮ ತೀರ್ಥರು
೩ ರಘುನಾಥ ,,
೪ ರಘುಪತಿ ,,
೫ ರಘುನಂದನ ,,
೬ ಯದುನಂದನ ,,
೭ ವಿಶ್ವಾತ್ಮ ,,
೮ ವಿಶ್ವನಾಥ ,,
೯ ವೇದಗರ್ಭ ,,
೧೦ ವಾಗೀಶ ,,
೧೧ ವರದಪತಿ ,,
೧೨ ವಿಶ್ವಪತಿ ,,
೧೩ ವಿಶ್ವಮೂರ್ತಿ ,,
೧೪ ವೇದಪತಿ ,,
೧೫ ವೇದರಾಜ ,,
೧೬ ವಿದ್ಯಾಧೀಶ ,,
೧೭ ವಿಬುಧೇಶ ,,
೧೮ ವಾರಿಜಾಕ್ಷ ,,
೧೯ ವಿಶ್ವೇಂದ್ರ ,,
೨೦ ವಿಬುಧವಂದ್ಯ ,,
೨೧ ವಿದ್ಯಾಧಿರಾಜ ,,
೨೨ ವಿದ್ಯಾರಾಜ ,,
೨೩ ವಿವಿಧಪ್ರಿಯ ,,
೨೪ ವಿದ್ಯಾಸಾಗರ ,,
೨೫ ವಾಸುದೇವ ,,
೨೬ ವಿದ್ಯಾಪತಿ ,,
೨೭ ವಾಮನ ,,
೨೮ ವಿದ್ಯಾನಿಧಿ ,,
೨೯ ವಿದ್ಯಾಸಮುದ್ರತೀರ್ಥರು
೩೦ ವಿದ್ಯಾವಾರಿನಿಧಿತೀರ್ಥರು
(ಈಗಿನವರು)



ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಶ್ರೀ ಶ್ರೀ ಸುಶೀಲೇಂದ್ರತೀರ್ಥ ಶ್ರೀಪಾದಂಗಳವರು ಉಡುಪಿಗೆ ದಯಮಾಡಿಸಿದಾಗ (ಬಲದಿಂದ ಎಡಕ್ಕೆ) ಶ್ರೀ ಶ್ರೀ ಸುಶೀಲೇಂದ್ರರು, ಶ್ರೀ ಶ್ರೀ ಹಿಂದಿನ ಅದಮಾರು ಮಠಾಧೀಶರು, ಶ್ರೀ ಹಿಂದಿನ ಸೋದಾ ಮಠಾಧೀಶರು, ಹಿಂದಿನ ಶ್ರೀ ಕಾಣಿಯೂರು ಮಠಾಧೀಶರು, ಹಿಂದಿನ ಶ್ರೀ ಪೇಜಾವರ ಮಠಾಧೀಶರು, ಹಿಂದಿನ ಶ್ರೀ ಫಲಿಮಾರು ಮಠಾಧೀಶರು.

# ಶ್ರೀ ೧೦೮ ಶ್ರೀ ವಿದ್ಯಾವಾರಿನಿಧಿ ತೀರ್ಥರು



ಸಾಂಪ್ರತ ಈ ಕಾಣಿಯೂರ ಮಠದ ಗುರು ಪೀಠದಲ್ಲಿ ಶ್ರೀ ವಿದ್ಯಾವಾರಿನಿಧಿ ತೀರ್ಥರು ವಿರಾಜಮಾನರಾಗಿದ್ದಾರೆ. ಬಾಲ್ಯದಲ್ಲಿಯೇ ವಿದ್ಯೆಯ ಸಮುದ್ರವಂತೆಯೇ ಇರುವ ಶ್ರೀ ವಿದ್ಯಾಸಮುದ್ರ ತೀರ್ಥ ಶ್ರೀಪಾದಂಗಳವರಿಂದಲೇ ಶಾಸ್ತ್ರ ಸಾಹಿತ್ಯ ಜ್ಞಾನವನ್ನೂ ಸಂಪ್ರದಾಯ ಪದ್ಧತಿಯನ್ನೂ ಚನ್ನಾಗಿ ಪರಿಚಯ ಮಾಡಿಕೊಂಡ ಶ್ರೀ ಶ್ರೀಗಳವರು ಈಗ ಸ್ವಯಂ ತಾವೇ ಸಂಪ್ರದಾಯ ಆಚಾರ್ಯರಾಗಿದ್ದಾರೆ. ಪ್ರತಿ ನಿತ್ಯವೂ ಅತ್ಯಂತ ಭಕ್ತಿಯಿಂದ ಶ್ರೀ ಕೃಷ್ಣನ ಪೂಜೆಯನ್ನು ತಪ್ಪದೆ ಮಾಡುತ್ತಲಿದ್ದಾರೆ. ಅವರು ಮೊನ್ನೆ ಮೊನ್ನೆ ಮಾಡಿ ಮುಗಿಸಿದ ಶ್ರೀ ಕೃಷ್ಣ ಪರ್ಯಾಯ ಮಹೋತ್ಸವವನ್ನು ಎಲ್ಲರೂ ಪ್ರಶಂಸಿಸುತ್ತಾರೆ.

ಸುಧಾ ತತ್ವಪ್ರಕಾಶಿಕಾ ಮುಂತಾದ ಗ್ರಂಥಗಳನ್ನು ಕ್ರಮ ಪ್ರಕಾರವಾಗಿ ವ್ಯಾಸಂಗ ಮಾಡಿ ದಿವ್ಯ ಜ್ಞಾನವನ್ನು ಪಡೆದ ಶ್ರೀ ಶ್ರೀಗಳವರ ದ್ವೈತ ದೀಕ್ಷೆ, ಸಿದ್ಧಾಂತ ಪ್ರೇಮ, ಪಂಡಿತ ಪಕ್ಷಪಾತ, ಮಧ್ವಶ್ರದ್ಧೆ, ಸದ್ವಿದ್ಯಾ ಪ್ರೋತ್ಸಾಹನ, ಸತ್ಕರ್ಮಾನುಷ್ಠಾನ, ಸತ್ಕಾರ್ಯ ಆಚರಣ ಮುಂತಾದ ಸದ್ಗುಣಗಳು ಅನ್ಯಾದೃಶವಾಗಿವೆ.

ತರುಣರೂ ತೇಜಸ್ವಿಗಳೂ ಉತ್ಸಾಹಿಗಳೂ ಆದ ಶ್ರೀ ವಿದ್ಯಾವಾರಿನಿಧಿ ತೀರ್ಥ ಶ್ರೀಪಾದಂಗಳವರು ಈಗ ಮೂರು ವರುಷಗಳಿಂದ ಮಧ್ವ ನವಮಿ ಸಮಯದಲ್ಲಿ ತಾವೂ ಒಂದು ವಿದ್ವತ್ ಸಭೆಯನ್ನು ನಡಸಿ ವಿದ್ವಾಂಸರಿಗೂ ವಿದ್ಯಾರ್ಥಿಗಳಿಗೂ ಪ್ರೋತ್ಸಾಹನೆಯನ್ನು ನೀಡುತ್ತಲಿದ್ದಾರೆ.



# ಶ್ರೀ ಶಿರೂರ ಮಠ

ಶ್ರೀ ಪೂರ್ಣಪ್ರಜ್ಞರ ಇಷ್ಟಪ್ರೇಷ್ಠ ಯತಿ ಶ್ರೇಷ್ಠರಾದ ಶ್ರೀ ವಾಮನ ತೀರ್ಥರು ಈ ಸಂಸ್ಥಾನದ ಆದ್ಯ ಪ್ರವರ್ತಕ ಆಚಾರ್ಯ ಪುರುಷರು. ಶ್ರೀ ವಾಮನ ತೀರ್ಥರ ಅಂತಃಕರಣಶುದ್ಧಿ, ಪ್ರಬುದ್ಧ ಬುದ್ಧಿ, ತಪಃ ಸಿದ್ದಿಗಳನ್ನು ಗಮನಿಸಿ ಋಷಿಪುಂಗವರಾದ ಭಗವತ್‌ಪಾದರು ಅವರಿಗೆ ತಾವು ನಿತ್ಯವೂ ಅರ್ಚಿಸುವ ಶ್ರೀ ಪಾಂಡುರಂಗ ವಿಠ್ಠಲನ ಪ್ರತಿಮೆಯನ್ನು ಕೊಟ್ಟು ಕರುಣಿಸಿದರು.

ಈ ಸರ್ವಜ್ಞ ಪೀಠದಲ್ಲಿ ಶ್ರೀ ವೇದವ್ಯಾಸ ತೀರ್ಥರು, ಶ್ರೀ ಲಕ್ಷ್ಮೀಪತಿ ತೀರ್ಥರು, ಶ್ರೀ ಲಕ್ಷ್ಮೀರಮಣ ತೀರ್ಥರು, ಶ್ರೀ ಲಕ್ಷ್ಮೀವಲ್ಲಭ ತೀರ್ಥರು, ಶ್ರೀ ಲಕ್ಷ್ಮೀಸಮುದ್ರ ತೀರ್ಥರು, ಶ್ರೀ ಲಕ್ಷ್ಮೀಂದ್ರ ತೀರ್ಥರು ಮೊದಲಾದ ಅನೇಕ ತ್ಯಾಗಿ, ವಿರಾಗಿ, ಯೋಗಿ, ಯತೀಶ್ವರರು ಆಗಿ ಹೋದರು.

## ಶ್ರೀ ಶಿರೂರ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ವಾಮನ ತೀರ್ಥರು
೩ ವಾಸುದೇವ ,,
೪ ಪುಣ್ಯಶ್ಲೋಕ ,,
೫ ವೇದಗಮ್ಯ ,,
೬ ವೇದವ್ಯಾಸ ,,
೭ ವೇದವೇದ್ಯ ,,
೮ ಮಹೇಶ ,,
೯ ಕೃಷ್ಣ ,,
೧೦ ರಾಘವ ,,
೧೧ ಸುರೇಶ ,,
೧೨ ವೇದಭೂಷಣ ,,
೧೩ ಶ್ರೀನಿವಾಸ ,,
೧೪ ವೇದನಿಧಿ ,,
೧೫ ಶ್ರೀಧರ ,,
೧೬ ಯಾದವೋತ್ತಮತೀರ್ಥರು
೧೭ ರಾಘವೋತ್ತಮತೀರ್ಥರು
೧೮ ಲಕ್ಷ್ಮೀನಾರಾಯಣ ,,
೧೯ ವಿಶ್ವಭೂಷಣ ,,
೨೦ ಲಕ್ಷ್ಮೀಕಾಂತ ,,
೨೧ ಲಕ್ಷ್ಮೀನಾರಾಯಣ ,,
೨೨ ಲಕ್ಷ್ಮೀಪತಿ ,,
೨೩ ಲಕ್ಷ್ಮೀಧರ ,,
೨೪ ಲಕ್ಷ್ಮೀರಮಣ ,,
೨೫ ಲಕ್ಷ್ಮೀಮನೋಹರ ,,
೨೬ ಲಕ್ಷ್ಮೀಪ್ರಿಯ ,,
೨೭ ಲಕ್ಷ್ಮೀವಲ್ಲಭ ,,
೨೮ ಲಕ್ಷ್ಮೀಸಮುದ್ರ ,,
೨೯ ಲಕ್ಷ್ಮೀಂದ್ರ ,,
೩೦ ಲಕ್ಷ್ಮೀಮನೋಜ್ಞ ತೀರ್ಥರು (ಈಗಿನವರು)

# ಶ್ರೀ ೧೧೦೮ ಲಕ್ಷ್ಮೀ ಮನೋಜ್ಞ ತೀರ್ಥರು



ಸಾಂಪ್ರತ ಶಿರೂರ ಮಠದ ಸರ್ವಜ್ಞ ಸಂಸ್ಥಾನವನ್ನು ಆರೋಹಣ ಮಾಡಿದ ಶ್ರೀ ಲಕ್ಷ್ಮೀಮನೋಜ್ಞತೀರ್ಥ ಶ್ರೀಪಾದಂಗಳವರು ಆಂಗ್ಲ ಭಾಷೆಯಲ್ಲಿ ವಿಶಾರದರಾಗಿದ್ದಾರೆ. ವೇದಾಂತ ಶಾಸ್ತ್ರದಲ್ಲಿಯೂ ಪರಿಶ್ರಮಪಟ್ಟಿದ್ದಾರೆ. ಶ್ರೀ ಸೋದೆಯ ಮಠದ ಗುರುರಾಜರ ಪೀಠವನ್ನು ಆರೋಹಣ ಮಾಡಿದ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದಂಗಳವರಲ್ಲಿ ಶ್ರೀಮನ್ನ್ಯಾಯಸುಧಾ ಗ್ರಂಥವನ್ನು ಪೂರ್ಣವಾಗಿ ಓದಿ ಮಂಗಳ ಮಾಡಿದ್ದಾರೆ. ಎಳೆವರೆಯದ ತೇಜಃಪುಂಜರಾದ ತಪಸ್ವಿಗಳಂತೆ ತೋರುವ ಶ್ರೀಪಾದರು ತಮ್ಮ ತರುಣ ವಯಸ್ಸಿನಲ್ಲಿಯೇ ಶ್ರೀ ಪೇಜಾವರ ಶ್ರೀಪಾದಂಗಳವರಂತೆ ಸಮಾಜ ಸೇವೆಯ ದೀಕ್ಷೆಯನ್ನು ಕೈಕೊಂಡು ಶ್ರೀ ಕೃಷ್ಣ ಮಠದ ಹಿಂದಿನ ಭಾಗದ ರಾಜಾಂಗಣದಲ್ಲಿ ದಿವ್ಯ ಭವ್ಯವಾದ ಒಂದು ದೊಡ್ಡ ಛತ್ರವನ್ನೂ ಅನೇಕ ಆಸ್ತಿಕ ಭಕ್ತರ ಮತ್ತು ಪೀಠಾಧಿಪತಿಗಳ ಸಹಾಯ ಸಹಕಾರಗಳಿಂದ ಕಟ್ಟಿಸಿ ಶ್ರೀ ಕೃಷ್ಣನಿಗೆ ಸಮರ್ಪಿಸಿದ್ದಾರೆ.

ಸಾಮಾಜಿಕ ದೃಷ್ಟಿ, ಸಮತೋಲ ವಿಚಾರ, ಸಮಾಜಕಲ್ಯಾಣಾಕಾಂಕ್ಷೆ, ಸತ್ ಸಿದ್ಧಾಂತ ಸಿಸೇವಿಷೆ ಮೊದಲಾದ ಸದ್ಗುಣಗಳಿಂದ ಈ ಶ್ರೀ ಶ್ರೀಗಳವರು ಅತ್ಯಲ್ಪ ಕಾಲದಲ್ಲಿಯೇ ಅತ್ಯಂತ ಜನಪ್ರಿಯರಾಗಿದ್ದಾರೆ.

ಮಧ್ವಮತ ಪ್ರಸಾರ, ಮಾಧ್ವ ಗ್ರಂಥ ಸಂಶೋಧನೆ, ವೈಷ್ಣವ ಸಮಾಜಕ್ಕೆ ಉತ್ತ್ಯುಪಯುಕ್ತವಾದ ವಿವಿಧ ಗ್ರಂಥಗಳ ಪ್ರಕಟಣೆಗಳು ಆಗಬೇಕೆಂದು ಶ್ರೀ ಶ್ರೀಗಳವರು ಮನಃಪೂರ್ವಕವಾಗಿ ಬಯಸುತ್ತಲಿದ್ದಾರೆ. ಅದಕ್ಕಾಗಿ ಅವರು ಕೈಕೊಳ್ಳಬೇಕೆಂಬ ಯೋಜನೆಗಳೆಲ್ಲ ಯಶಸ್ವಿಯಾಗಿ ಸಮಾಜೋದ್ಧಾರ ಲೋಕೋಪಕಾರಗಳಿಗೆ 'ಕಾರಣವಾಗಲಿ ಎಂದು ಹಾರೈಸುತ್ತೇವೆ.



ಶ್ರೀ ಶ್ರೀ ಶಿರೂರು ಮಠಾಧೀಶರಾದ ಶ್ರೀ ಲಕ್ಷ್ಮೀಮನೋಜ್ಞ ತೀರ್ಥರೂ
ಶ್ರೀ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ ತೀರ್ಥರೂ



ಹಿಂದಿನ ಶ್ರೀ ಶ್ರೀ ಶಿರೂರ ಮಠದ ಶ್ರೀ ಲಕ್ಷ್ಮೀಂದ್ರತೀರ್ಥರೂ ಶತಾಯುಷಿ ಹಿಂದಿನ ಪುತ್ತಿಗೆ ಮಠಾಧೀಶರೂ ಶ್ರೀ ಭಂಡಾರಕೇರಿ ಮತ್ತು ಶ್ರೀ ಪೇಜಾವರ ಮಠಾಧೀಶರುಗಳು

# ಶ್ರೀ ಪುತ್ತಿಗೆ ಮಠ

ಶ್ರೀ ಮೋದ ತೀರ್ಥರು ಶ್ರೀ ಪಾಂಡುರಂಗ ವಿಠ್ಠಲ ದೇವರನ್ನು ತಾವು ಪೂಜಿಸಿ ಕೊಟ್ಟು ಕರುಣಿಸಿದ ಶ್ರೀ ಉಪೇಂದ್ರ ತೀರ್ಥರಿಂದ ಶ್ರೀ ಪುತ್ತಿಗೆ ಮಠದ ಪರಂಪರೆಯು ಪ್ರಾರಂಭವಾಯಿತು. ಶ್ರೀ ಉಪೇಂದ್ರ ತೀರ್ಥರು ಶ್ರೀ ಭಗವತ್ಪಾದರಿಗೆ ಆಪ್ತತಮ ರಾದ ಸಚ್ಛಿಷ್ಯರಾಗಿದ್ದರೆಂಬುವದು ಪಂಡಿತಾಚಾರ್ಯರ ಶ್ರೀ ಸುಮಧ್ವ ವಿಜಯವನ್ನೂ ಅವರದೇ ಆದ ಭಾವಪ್ರಕಾಶಿಕಾ ಟೀಕೆಯನ್ನು ನೋಡಿದರೆ ಸ್ಪಷ್ಟವಾಗಿ ತಿಳಿದುಬರು ವದು. ಆಚಾರ್ಯರ ಸನ್ನೆ ಸಂಕೇತಗಳಿಂದಲೇ ಅವರ ಈಪ್ಸಿತವನ್ನು ಅರಿತು, ಇಂಗಿತವನ್ನು ಗುರುತಿಸಿ ಎಂಥ ಗಂಡಾಂತರ ಬಂದರೂ ಗುರ್ವಾಜ್ಞೆಯನ್ನು ಪರಿ ಪಾಲಿಸುವ ಶ್ರೀ ಉಪೇಂದ್ರ ತೀರ್ಥರು ಆ ವೀರ ಹನುಮನ ಧೀರ ಶಿಷ್ಯರಾಗಿದ್ದರು.

ಈ ಪುತ್ತಿಗೆ ಮಠದ ಪರಂಪರೆಯಲ್ಲಿ ಸುಧಾ ವ್ಯಾಖ್ಯಾನವನ್ನು ಬರೆದ ಶ್ರೀ ನಿಧಿ ತೀರ್ಥರೂ, ಭುವನೇಂದ್ರ ತೀರ್ಥರೂ ಶ್ರೀ ಸುಧೀಂದ್ರ ತೀರ್ಥರೂ ಮೊದಲಾದ ಜ್ಞಾನ ಯೋಗಿ ಕರ್ಮಯೋಗಿ ಭಕ್ತಿಯೋಗಿ ಶ್ರೀಪಾದಂಗಳವರಂತೆ ತೇಜಃಪುಂಜ ನಕ್ಷತ್ರ ಗಳಂತೆ ಮಿನುಗಿ ಹೋಗಿದ್ದಾರೆ. ಅವರೆಲ್ಲರ ನಾಮೋಲ್ಲೇಖವು ಇಲ್ಲಿದೆ.

## ಶ್ರೀ ಪುತ್ತಿಗೆ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಉಪೇಂದ್ರ ತೀರ್ಥರು
೩ ಕವೀಂದ್ರರು ,,
೪ ಹಂಸೇಂದ್ರ ,,
೫ ಯಾದವೇಂದ್ರ ,,
೬ ಧರಣೀಧರ ,,
೭ ದಾಮೋದರ ,,
೮ ರಘುನಾಥ ,,
೯ ಶ್ರೀವತ್ಸಾಂಕ ,,
೧೦ ಗೋಪೀನಾಥ ,,
೧೧ ರಂಗನಾಥ ,,
೧೨ ಲೋಕನಾಥ ,,
೧೩ ರಮಾನಾಥ ,,
೧೪ ಶ್ರೀವಲ್ಲಭ ,,
೧೫ ಶ್ರೀನಿವಾಸ ,,
೧೬ ಶ್ರೀನಿಧಿ ,,
೧೭ ಗುಣನಿಧಿ ,,
೧೮ ಆನಂದನಿಧಿ ,,
೧೯ ತಪೋನಿಧಿ ,,
೨೦ ಯಾದವೇಂದ್ರ ,,
೨೧ ಕವೀಂದ್ರ ,,
೨೨ ರಾಘವೇಂದ್ರ ,,
೨೩ ವಿಬುಧೇಂದ್ರ ,,
೨೪ ಸುರೇಂದ್ರ ,,
೨೫ ಭುವನೇಂದ್ರ ,,
೨೬ ದಾಮೋದರ ,,
೨೭ ಸುಮತೀಂದ್ರ ,,
೨೮ ಸುಧೀಂದ್ರ ,,
೨೯ ಸುಜ್ಞಾನೇಂದ್ರತೀರ್ಥರು (ಈಗಿನವರು)

# ಶ್ರೀ ೧೦೮ ಶ್ರೀ ಸುಜ್ಞಾನೇಂದ್ರ ತೀರ್ಥ ಶ್ರೀಪಾದಂಗಳವರು



ಈಗ ಪುತ್ತಿಗೆ ಮಠದ ಪೀಠವನ್ನು ಶ್ರೀ ಸುಜ್ಞಾನೇಂದ್ರ ತೀರ್ಥ ಶ್ರೀಗಳವರು ಆರೋಹಣ ಮಾಡಿದ್ದಾರೆ. ಜಾತ್ಯಾ ಸುಸ್ವಭಾವಿಗಳು ಮತ್ತ್ಯಾ ಬುದ್ಧಿವಂತರೂ ಪ್ರಕೃತ್ಯಾ ಸಹೃದಯರು ಆದ ಶ್ರೀ ಸುಜ್ಞಾನೇಂದ್ರ ತೀರ್ಥರು ಬಾಲ್ಯದಲ್ಲಿ ಶ್ರೀ ಎಲತ್ತೂರು ಕೃಷ್ಣಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿ ಮಹಾ ಮೇಧಾವಿಗಳಾದರು. ಅನಂತರ ಅವರು ಬೇರೆ ಬೇರೆ ಪಂಡಿತರಿಂದ ನ್ಯಾಯವೇದಾಂತ ಶಾಸ್ತ್ರಗಳನ್ನು ಪರಾಮರ್ಶ ಮಾಡಿ ವೇದವೇದಾಂತಗಳ ರಹಸ್ಯವನ್ನು ಅರಿತರು.

ತಮ್ಮ ಗುರುಗಳಾದ ಶತಾಯುಷಿ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರು ಬದುಕಿ ಇದ್ದಾಗಲೇ ಕರ್ನಾಟಕ, ಆಂಧ್ರ ಮುಂತಾದ ದೇಶಗಳಲ್ಲಿ ಸಂಚಾರ ಮಾಡಿ ಧರ್ಮಜಾಗ್ರತಿಯನ್ನು ಉಂಟು ಮಾಡಿದರು. ಶ್ರೀಗಳವರಿಗೆ ಆಯುರ್ವೇದದಲ್ಲಿಯೂ ಪರಿಶ್ರಮವಿದ್ದುದರಿಂದ, ದೇಶದಲ್ಲಿಯ ಅನೇಕ ಜನರಿಗೆ ಇವರಿಂದ ಈ ದಿಶೆಯಲ್ಲಿಯೂ ಉಪಕಾರವಾಯಿತು.

ಶ್ರೀ ಪುತ್ತಿಗೆಯ ಸ್ವಾಮಿಗಳ ಉಪನ್ಯಾಸವೆಂದರೆ ಜನರು ಮುಕುರಿ ಬಿದ್ದು ಬರುತ್ತಿದ್ದ ಕಾಲ ಒಂದಿತ್ತು. ಅವರ ತೇಜಸ್ವಿ ಮುಖಮಂಡಲ, ಓಜಸ್ವಿ ಭಾಷಣ ಪ್ರೇಮಪೂರ್ಣವಾದ ವ್ಯವಹಾರ, ಬಿಚ್ಚು ಮನಸ್ಸಿನ ಮಾತು ಕತೆ ಮುಂತಾದ ಗುಣಗಳಿಂದ ಆಕರ್ಷಿತರಾಗದ ಜನರೇ ಇರಲಿಲ್ಲ.

ಶ್ರೀ ಶ್ರೀಗಳವರ ವಿವಿಧ ವಿದ್ಯಾ ವೈಶಾರದ್ಯವನ್ನು ಕಂಡು ಆಂಧ್ರ ವಿಶ್ವವಿದ್ಯಾಲಯದವರು ಅವರಿಗೆ "ವಿದ್ಯಾವಲ್ಲಭ" ಎಂಬ ಪ್ರಶಸ್ತಿಯನ್ನು ಇತ್ತು ಗೌರವಿಸಿದ್ದಾರೆ. ಈಗ ಅವರ ಆರೋಗ್ಯವು ಅಷ್ಟು ಉತ್ತಮವಿಲ್ಲದ್ದರಿಂದ ಸಂಚಾರ ಕಾರ್ಯಕ್ರಮವನ್ನು ಬಿಟ್ಟು ಉಡುಪಿಯಲ್ಲಿಯೇ ಇದ್ದು ಶ್ರೀ ಕೃಷ್ಣನ ಸೇವಾತತ್ಪರರಾಗಿದ್ದಾರೆ.



# ಶ್ರೀ ಕೃಷ್ಣಾಪುರ ಮಠ

ಶ್ರೀ ಮದಾನಂದ ತೀರ್ಥರ ಸಾಕ್ಷಾತ್ ಶಿಷ್ಯರಾದ ಅಷ್ಟ ಮಠಾಧೀಶರಲ್ಲಿ ಅನ್ಯತಮರೂ ಗುರು ಮಧ್ವರ ವಿಶೇಷಾನುಗ್ರಹದಿಂದ ಧನ್ಯತಮರೂ ಆದ ಶ್ರೀ ಜನಾರ್ದನ ತೀರ್ಥರು ಅಧ್ಯಾತ್ಮ ಪ್ರಪಂಚದಲ್ಲಿ ಅಂದು ಅತ್ಯಂತ ಮಾನ್ಯತಮರಾಗಿದ್ದರು. ವೈರಾಗ್ಯವೇ ಇವರ ಭಾಗ್ಯವಾಗಿದ್ದಿತು. ಸಿದ್ಧಾಂತ ಜ್ಞಾನವೇ ಇವರ ಸಂಪತ್ತಾಗಿದ್ದಿತು. ಇಂದ್ರಿಯ ನಿಗ್ರಹವೇ ಇವರ ಐಶ್ವರ್ಯವಾಗಿದ್ದಿತು. ಇವರ ಜ್ಞಾನ ಭಕ್ತ್ಯಾದಿಗಳಿಂದ ಪ್ರೀತರಾದ ಸರ್ವಜ್ಞ ಮುನಿಗಳು ತಾವು ಪೂಜಿಸುವ ದ್ವಿಭುಜ ಕಾಲೀಯ ಮರ್ದನ ಶ್ರೀ ಕೃಷ್ಣನ ಪ್ರತಿಮೆಯನ್ನು ಕೊಟ್ಟು ಕರುಣೆದೋರಿದರು. ಆ ಆಚಾರ್ಯರಿಂದ ಪ್ರವರ್ತ್ತವಾದ ಶ್ರೀ ನೃಸಿಂಹ ದೇವರನ್ನು ಪೂಜಿಸುವ ಭಾಗ್ಯವು ಇವರದಾಗಿದೆ. ಇವರೇ ಶ್ರೀ ಕೃಷ್ಣಾಪುರ ಮಠದ ಮೂಲ ಪುರುಷರು.

ಈ ಮಠದಲ್ಲಿ ಮುಂದೆ ಶ್ರೀವತ್ಸಾಂಕ ತೀರ್ಥರು, ಲೋಕನಾಥ, ಲೋಕಪೂಜ್ಯ, ವಿಶ್ವರಾಜ, ಸುರೇಶ್ವರ, ವಿದ್ಯೇಂದ್ರ, ವಿದ್ಯಾಸಮುದ್ರ, ಶ್ರೀ ವಿದ್ಯಾಧೀಶ ತೀರ್ಥರೇ ಮೊದಲಾಗಿ ಅನೇಕ ಪಂಡಿತ ಕುಲಮಂಡನ ಮಣಿಗಳಾದ ದಂಡಿ ಧುರೀಣರು ಅವತರಿಸಿ ಲೋಕವನ್ನು ಉಪಕರಿಸಿ ಶ್ರೀ ಕೃಷ್ಣ ಹಾಗೂ ಮಧ್ವ ಸಿದ್ಧಾಂತದ ಸೇವೆಗೈದರು.

## ಶ್ರೀ ಕೃಷ್ಣಾಪುರ ಮಠದ ಶ್ರೀ ಗುರು ಪರಂಪರೆ

| | | | | | |
|---|---|---|---|---|---|
| ೧ | ಶ್ರೀ ಮಧ್ವಾಚಾರ್ಯರು | | ೧೯ | ಜಗನ್ನಾಥ | ,, |
| ೨ | ಜನಾರ್ದನತೀರ್ಥರು | | ೨೦ | ಸುರೇಶ | ,, |
| ೩ | ಶ್ರೀವತ್ಸಾಂಕ | ,, | ೨೧ | ವಿಶ್ವಪುಂಗವ | ,, |
| ೪ | ವಾಗೀಶ | ,, | ೨೨ | ವಿಶ್ವವಲ್ಲಭ | ,, |
| ೫ | ಲೋಕೇಶ | ,, | ೨೩ | ವಿಶ್ವಭೂಷಣ | ,, |
| ೬ | ಲೋಕನಾಥ | ,, | ೨೪ | ಯಾದವೇಂದ್ರ | ,, |
| ೭ | ಲೋಕಪೂಜ್ಯ | ,, | ೨೫ | ಪ್ರಜ್ಞಾನಮೂರ್ತಿ | ,, |
| ೮ | ವಿದ್ಯಾರಾಜ | ,, | ೨೬ | ವಿದ್ಯಾಧಿರಾಜ | ,, |
| ೯ | ವಿಶ್ವಾಧಿರಾಜ | ,, | ೨೭ | ವಿದ್ಯಾಮೂರ್ತಿ | ,, |
| ೧೦ | ವಿಶ್ವಾಧೀಶ | ,, | ೨೮ | ವಿದ್ಯಾವಲ್ಲಭ | ,, |
| ೧೧ | ವಿಶ್ವೇಶ | ,, | ೨೯ | ವಿದ್ಯೇಂದ್ರ | ,, |
| ೧೨ | ವಿಶ್ವವಂದ್ಯ | ,, | ೩೦ | ವಿದ್ಯಾನಿಧಿ | ,, |
| ೧೩ | ವಿಶ್ವರಾಜ | ,, | ೩೧ | ವಿದ್ಯಾಸಮುದ್ರ | ,, |
| ೧೪ | ಧರಣೀಧರ | ,, | | (ವಿದ್ಯಾಪತಿ) | ,, |
| ೧೫ | ಧರಾಧರ | ,, | ೩೨ | ವಿದ್ಯಾಧೀಶ | ,, |
| ೧೬ | ಪ್ರಜ್ಞಾನಮೂರ್ತಿ | | ೩೩ | ವಿದ್ಯಾಪೂರ್ಣ | ,, |
| ೧೭ | ತಪೋಮೂರ್ತಿ | ,, | ೩೪ | ವಿದ್ಯಾರತ್ನತೀರ್ಥರು | |
| ೧೮ | ಸುರೇಶ್ವರ | ,, | | (ಈಗಿನವರು) | |

# ಶ್ರೀ ೧೨ಲ ಶ್ರೀ ವಿದ್ಯಾರತ್ನತೀರ್ಥ ಶ್ರೀಪಾದಂಗಳವರು



ಶ್ರೀ ಕೃಷ್ಣಾಪುರ ಮಠದ ಶ್ರೀ ವಿದ್ಯಾರತ್ನ ಶ್ರೀಪಾದಂಗಳವರು ಪುತ್ತಿಗೆ ಮಠದ ವೈರಾಗ್ಯನಿಧಿ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರಿಂದ ಯತ್ಯಾಶ್ರಮವನ್ನು ಪಡೆದರು. ಅನಂತರ ಇವರು ಗುರುಗಳಿಂದ ಆಶ್ರಮೋಚಿತವಾದ ಶಿಕ್ಷಣವನ್ನು ಹೊಂದಿ ಶಾಸ್ತ್ರ ವ್ಯಾಸಂಗಕ್ಕಾಗಿ ಕಾಶಿಗೆ ಹೋಗಿ ಅಧ್ಯಯನ ಮಾಡಿ ಬಂದರು. ಬದರೀ ಯಾತ್ರೆಯನ್ನು ಮಾಡಿ ಉಡುಪಿಗೆ ಬಂದು ತಮ್ಮ ಪರ್ಯಾಯವನ್ನು ಯಶಸ್ವಿಯಾಗಿ ನೆರವೇರಿಸಿದರು.

ಶ್ರೀಗಳವರು ವಿದ್ಯಾವಂತರೂ ಕಲಾಭಿಮಾನಿಗಳೂ ಸಾಹಿತ್ಯ ಪ್ರೇಮಿಗಳೂ ಆಗಿರುತ್ತಾರೆ. ತಮ್ಮ ಪರ್ಯಾಯ ಕಾಲದಲ್ಲಿ ಪ್ರಕಾಶಿನೀ ಎಂಬ ಮಾಸ ಪತ್ರಿಕೆಯನ್ನು ಪ್ರಕಾಶಿಸಲು ಮೊದಲು ಮಾಡಿ ಈ ವರೆಗೂ ನಡೆಯಿಸಿಕೊಂಡು ಬಂದಿದ್ದಾರೆ. ತಮ್ಮ ಮಠದ ಗುರು ಪರಂಪರೆಯನ್ನು ಪುಸ್ತಕ ರೂಪವಾಗಿ ಪ್ರಕಟಿಸಿ ಉಚಿತವಾಗಿ ವಿತರಣ ಮಾಡುತ್ತಲಿದ್ದಾರೆ.



# ಶ್ರೀ ಆರ್ಯ ಅಕ್ಷೋಭ್ಯತೀರ್ಥ ಮಠ (ಬಾಳಿಗಾರು)

ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಅಕ್ಷೋಭ್ಯ ತೀರ್ಥರೇ ಈ ಮಠದ ಮೂಲ ಪುರುಷರು. ಅವರು ತಾವು ಸರ್ವಜ್ಞ ಪೀಠವನ್ನು ಆರೋಹಣ ಮಾಡುವಾಗ ಶ್ರೀ ತ್ರೈಲೋಕ್ಯಭೂಷಣ ತೀರ್ಥರೆಂಬವರಿಗೆ ತಮ್ಮ ಪೂರ್ವ ಪರಂಪರೆಯನ್ನು ಮುಂದುವರಿಸಬೇಕೆಂದು ಆಜ್ಞೆ ಮಾಡಿದರು. ಸರ್ವಜ್ಞಾಚಾರ್ಯರು ತಮಗೆ ಸನ್ಯಾಸಾಶ್ರಮವನ್ನು ಕೊಡುವಾಗ ಅನುಗ್ರಹಿಸಿ ಕೊಟ್ಟ ತಮ್ಮ ಕರಾರ್ಚಿತವಾದ ಶ್ರೀ ಸೀತಾ ಲಕ್ಷ್ಮಣ ಸಮೇತ ಶ್ರೀ ರಾಮ ವಿಗ್ರಹವನ್ನು ಸಂಸ್ಥಾನದ ಅಧಿಕಾರದೊಂದಿಗೆ ಅವರಿಗೆ ಕೊಟ್ಟು ಕರುಣಿಸಿದರು.

ಶ್ರೀ ತ್ರೈಲೋಕ್ಯಭೂಷಣರು ಮಹಾ ತಪಸ್ವಿಗಳೂ ಅತ್ಯಂತ ಪ್ರಾಮಾಣಿಕರೂ ಸತ್ಯಸಂಧರೂ ಆಗಿದ್ದರು. ಶ್ರೀಮದಕ್ಷೋಭ್ಯ ತೀರ್ಥರು ಶ್ರೀ ಜಯತೀರ್ಥರಿಗೆ ಆಶ್ರಮವಿತ್ತು ಅವರನ್ನು ದಿಗ್ವಿಜಯಕ್ಕೆ ಕೊಟ್ಟು ಕಳಿಸಿದ್ದರು. ಗುರುಗಳಾಜ್ಞೆಯಂತೆ ಜಯತೀರ್ಥರು ಪರವಾದಿ ನಿಗ್ರಹನ್ನು ಮಾಡುತ್ತ ದೂರ ದೇಶಕ್ಕೆ ಹೋದಾಗ ಶ್ರೀ ಅಕ್ಷೋಭ್ಯ ತೀರ್ಥರಿಗೆ ಒಮ್ಮೆಲೆ ದೇಹಾಲಸ್ಯವಾಯಿತು. ಆಗ ಅವರು ತಮ್ಮ ಹತ್ತಿರ ಸೇವೆ ಮಾಡಿಕೊಂಡು ಇದ್ದ ಶ್ರೀ ತ್ರೈಲೋಕ್ಯಭೂಷಣರ ಕೈಯಲ್ಲಿ ಸರ್ವಜ್ಞ ಸಂಸ್ಥಾನದ ೩೮ ಪೂಜನೀಯ ಪ್ರತಿಮಾ ಸಾಲಿಗ್ರಾಮಾದಿಗಳಿಂದ ಸಮೇತ ಮೂಲ ರಾಮನ ಪೆಟ್ಟಿಗೆಯನ್ನು ಕೊಟ್ಟು ಶ್ರೀ ಜಯತೀರ್ಥರಿಗೆ ಮುಟ್ಟಿಸಬೇಕೆಂದು ಹೇಳಿ ವೃಂದಾವನಸ್ಥರಾದರು.

ಮಹಾ ಪ್ರಾಮಾಣಿಕರಾದ ಶ್ರೀ ತ್ರೈಲೋಕ್ಯಭೂಷಣ ತೀರ್ಥರು ಸರ್ವಜ್ಞ ಸಂಸ್ಥಾನದ ಆ ದೇವ ಮಂಜೂಷಿಕೆಯನ್ನು ಸಕಲಾವಿಕಲವಾಗಿ ಶ್ರೀ ಜಯತೀರ್ಥರಿಗೆ ತಂದು ಒಪ್ಪಿಸಿದರು. ಅದನ್ನು ಕಂಡು ಪರಮ ಸಂತುಷ್ಟರಾದ ಶ್ರೀ ಜಯತೀರ್ಥರು ಅವರ ಸತ್ಯಂಥತೆಗೆ ಮೆಚ್ಚಿ "ಆರ್ಯ" ಎಂಬ ಬಿರುದನ್ನಿತ್ತರು. ಹಾಗೂ ಅವರ ಚಿಕ್ಕ ಸಂಸ್ಥಾನದ ಸರ್ವಜ್ಞ ಕರಾರ್ಚಿತ ಶ್ರೀ ರಾಮ ಲಕ್ಷ್ಮಣ ಸೀತಾದಿ ಪ್ರತಿಮೆಗಳನ್ನು ಪೂಜಿಸಿ ಅವರಿಗೆ ತಿರುಗಿ ಕೊಟ್ಟರು.

ಈ ತ್ರೈಲೋಕ್ಯಭೂಷಣ ತೀರ್ಥರಿಂದ ಮುಂದೆ ಈ ಪರಂಪರೆಯಲ್ಲಿ ಸುಲಭ ತೀರ್ಥರು, ಲೋಕಪೂಜ್ಯರು, ಶ್ರೀ ರಘುನಾಥ ತೀರ್ಥರು, ಶ್ರೀ ರಾಮಚಂದ್ರತೀರ್ಥರು, ರಘುಪ್ರಜ್ಞ ತೀರ್ಥರು, ರಘುಪೂರ್ಣ ತೀರ್ಥರು ಮುಂತಾದ ಅನೇಕ ತಪಸ್ವಿ ಮಹನೀಯರು ಈ ಸಂಸ್ಥಾನವನ್ನು ಆಳಿದ್ದಾರೆ.

## ಶ್ರೀ ಆರ್ಯ ಅಕ್ಷೋಭ್ಯ ತೀರ್ಥ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಪದ್ಮನಾಭ ತೀರ್ಥರು
೩ ನರಹರಿ ,,
೪ ಮಾಧವ ,,
೫ ಅಕ್ಷೋಭ್ಯ ,,
೬ ತ್ರೈಲೋಕ್ಯಭೂಷಣರು
೭ ಸುಲಭ ತೀರ್ಥರು
೮ ಲೋಕಪೂಜ್ಯರು
೯ ಪುಣ್ಯಕೀರ್ತಿಗಳು
೧೦ ಶ್ರೀದೀಶ ತೀರ್ಥರು
೧೧ ಸತ್ಯಕೀರ್ತಿಗಳು
೧೨ ರಾಘವ ತೀರ್ಥರು
೧೩ ರಘುನಾಥ ,,
೧೪ ಯದುಪತಿ ,,
೧೫ ರಘುನಂದನ ,,
೧೬ ರಘುವರ್ಯ ,,
೧೭ ರಘುಪತಿ ,,
೧೮ ರಘುರಾಜ ,,
೧೯ ಅಕ್ಷೋಭ್ಯರಾಮತೀರ್ಥರು
೨೦ ಅಕ್ಷೋಭ್ಯರಾಮಚಂದ್ರರು
೨೧ ಅಕ್ಷೋಭ್ಯರಘುವಲ್ಲಭರು
೨೨ ರಘುಪ್ರಿಯರು
೨೩ ರಘುಪೂರ್ಣರು
೨೪ ರಘುಪ್ರಜ್ಞರು
೨೫ ರಘುಮಾನ್ಯರು
(ಈಗಿನವರು)

( ಶ್ರೀ ಮಠದಿಂದ ಬರೆದು ಬಂದ ಪ್ರಕಾರ ಪ್ರಸಿದ್ಧಿಸಲಾಗಿದೆ —ಸಂಪಾದಕರು )



ಬೆಂಗಳೂರಿನಲ್ಲಿ ಶ್ರೀ ಬಾಳಿಗಾರು ಆರ್ಯ ಅಕ್ಷೋಭ್ಯತೀರ್ಥ ಮಠದ
ಶ್ರೀ ಶ್ರೀ ರಘುಮಾನ್ಯತೀರ್ಥರು ನೂತನ ವಟುಗಳು ಮತ್ತು ಪಂಡಿತರೊಂದಿಗೆ

# ಶ್ರೀ ೧೦ಲ ಶ್ರೀ ರಘುಮಾನ್ಯ ತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಬಾಳಿಗಾರು ಆರ್ಯ ಅಕ್ಷೋಭ್ಯ ತೀರ್ಥ ಪೀಠವನ್ನು ಅಲಂಕರಿಸಿದ ಶ್ರೀ ರಘುಮಾನ್ಯ ತೀರ್ಥ ಶ್ರೀಪಾದಂಗಳವರು ಮಹಾ ತಪಸ್ವಿಗಳು, ಶಾಪಾನುಗ್ರಹ ಶಕ್ತರು, ಅತ್ಯಂತ ವಿರಕ್ತರು, ಶ್ರೀ ರಾಮ ಭಕ್ತರು. ವೈರಾಗ್ಯಯುಕ್ತರು.

ಶ್ರೀ ಪುತ್ತಿಗೆ ಮಠದ ಶತಾಯುಷಿ ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರಿಂದ ಇವರಿಗೆ ಆಶ್ರಮವಾಯಿತು. ಪ್ರಾತಃ ಸ್ಮರಣೀಯರಾದ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಮುಂದೆ ಶ್ರೀ ಸತ್ಯಧ್ಯಾನ ತೀರ್ಥರ ಶಿಷ್ಯರಾದ ಶ್ರೀ ಶಿರೂರು ಮಠದ ಲಕ್ಷ್ಮೀಂದ್ರ ತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ಪಾಠವನ್ನು ಓದಿ ಮಂಗಳ ಮಾಡಿದರು.

ಶ್ರೀ ಶ್ರೀಗಳವರಿಗೆ ಮಂತ್ರ ಸಿದ್ಧಿ, ವಾಕ್‌ಸಿದ್ಧಿ ಎರಡೂ ಇದ್ದದ್ದು ಅನೇಕ ಜನರ ಅನುಭವಸಿದ್ಧ ವಿಷಯವಾಗಿದೆ. ಎಲ್ಲ ದೇಶದಲ್ಲಿ ಸಂಚಾರ ಮಾಡಿ ಅವರು ಎಷ್ಟೋ ಜನರ ರೋಗ ರುಜಿನಗಳನ್ನು ಕಳೆದಿದ್ದಾರೆ. ಭೂತ, ಪ್ರೇತ, ಪಿಶಾಚ ಬಾಧೆಗಳನ್ನು ನಿವಾರಿಸಿದ್ದಾರೆ. ಸಂತಾನ ಸಂಪದಗಳನ್ನು ಕರುಣಿಸಿದ್ದಾರೆ. ಮಹಾ ಸಾತ್ವಿಕರೂ, ಕರ್ಮಠ ಕರ್ಮಂದಿಗಳೂ ಆದ ಶ್ರೀಪಾದಂಗಳವರು ತಮ್ಮ ಗುರುಗಳ ಆರಾಧನಾ ಕಾಲದಲ್ಲಿ ವಿದ್ವತ್ಸಭೆಯನ್ನು ಮಾಡಿ ಪಂಡಿತರನ್ನು ಕರೆಯಿಸಿ ಪ್ರೋತ್ಸಾಹಿಸುತ್ತಾರೆ.

ಇವರು ಮಾಧ್ವ ಮಹಾ ಮಂಡಲದ ಸಭಾ ಸಮ್ಮೇಲನಗಳಲ್ಲಿ ಉಪಸ್ಥಿತರಿದ್ದು ತಮ್ಮ ಉಪದೇಶ, ಉಪನ್ಯಾಸಗಳಿಂದ ಸಭಿಕರನ್ನು ಅನುಗ್ರಹಿಸುತ್ತಾರೆ. ಇವರು ಹೋದಲ್ಲೆಲ್ಲ ತಮ್ಮ ಉಪದೇಶ, ತಪೋ ಮಹಿಮೆಗಳಿಂದ ಜನರಲ್ಲಿ ಧರ್ಮ ಪ್ರವೃತ್ತಿಗಳನ್ನು ಕುಮರಿಸಿ ಸರ್ವಜ್ಞ ಶಾಸ್ತ್ರದಲ್ಲಿ ಶ್ರದ್ಧಾ ಗೌರವಗಳನ್ನು ಅಭಿವೃದ್ಧಿಗೊಳಿಸುತ್ತಾರೆ.



# ಶ್ರೀ ಭೀಮನಕಟ್ಟೆ ಮಠ

## ( ಭೀಮಸೇತು ಮುನಿವೃಂದ ಸಂಸ್ಥಾನ )

ಶ್ರೀಮನ್ಮಧ್ವಾಚಾರ್ಯರ ಆಶ್ರಮ ಗುರುಗಳಾದ ಶ್ರೀ ಅಚ್ಯುತಪ್ರೇಕ್ಷಾಚಾರ್ಯರ ಸಂಸ್ಥಾನವೇ ಶ್ರೀ ಭೀಮನಕಟ್ಟೆ ಮತ್ತು ಶ್ರೀ ಭಂಡಾರಕೇರಿ ಮಠಗಳೆಂದು ಕವಲೊಡೆದು ದ್ವಂದ್ವ ಮಠಗಳಾಗಿವೆ.

ಶ್ರೀ ಅಚ್ಯುತಪ್ರೇಕ್ಷಾಚಾರ್ಯರು ಮಹಾಭಗವದ್ಭಕ್ತರು. ಪೂರ್ವ ಜನ್ಮದಲ್ಲಿ ಶ್ರೀ ಭಾರತೀದೇವಿಯರ ಕೈಯಿಂದ ಶ್ರೀ ಹರಿ ನೈವೇದ್ಯ ಸ್ವೀಕರಿಸಿ ಊಟ ಮಾಡಿ ಪೂತಾವಧೂತರಾದ ವೀತರಾಗ ಪುಣ್ಯಾತ್ಮರು. ಕಾಲ ಪ್ರಭಾವದಿಂದ ಅವರ ಮನಸ್ಸಿನ ಮೇಲೆ ತುಸು ಅದ್ವೈತ ಸಂಸ್ಕಾರವಾಗಿದ್ದರೂ ತಮ್ಮ ಶಿಷ್ಯರಾದ ಶ್ರೀ ಮಧ್ವರ ಗ್ರಂಥ ಶ್ರವಣ ಮಾಡಿ ಒಮ್ಮೆಲೆ ತಮ್ಮ ತಪ್ಪನ್ನು ತಿದ್ದಿಕೊಂಡು ಶ್ರೀ ಹರಿಯ ನಿರ್ಗುಣೋಪಾಸನೆಯನ್ನು ಬಿಟ್ಟು ಗುಣಪರಿಪೂರ್ಣತ್ವ ಉಪಾಸನೆಯನ್ನು ಮಾಡಿ ಧನ್ಯರಾದ ಸನ್ಯಾಸಿವರೇಣ್ಯರು.

ಸಾಕ್ಷಾತ್ ವಾಯು ಅವತಾರಿಗಳಾದ ಶ್ರೀ ಮಧ್ವಾಚಾರ್ಯರಿಗೆ ಚತುರ್ಥಾಶ್ರಮವನ್ನು ಕೊಡಬೇಕಾದರೆ ಅವರ ಯೋಗ್ಯತೆ ಎಂಥದಿರಬೇಡ! ಶ್ರೀ ಮನ್ಮಧ್ವಮುನಿಗಳು ಸನಕಾದಿ ಪರಂಪರಾಪ್ರಾಪ್ತವಾದ ಈ ಸರ್ವಜ್ಞ ಪೀಠಕ್ಕೆ ತಮ್ಮ ಅತ್ಯಂತ ಪ್ರೀತಿಯ ಶಿಷ್ಯರಾದ ಶ್ರೀ ಸತ್ಯತೀರ್ಥರನ್ನು ಕೊಟ್ಟು ತಾವು ಪೂಜಿಸುತ್ತಲಿರುವ ಶ್ರೀ ರಾಮಲಕ್ಷ್ಮಣ ಪ್ರತಿಮೆಗಳನ್ನೂ, ಶ್ರೀ ದಾಮೋದರ ಸಾಲಿಗ್ರಾಮವನ್ನೂ ಕರುಣಿಸಿದರು.

ಸನಕಾದಿ ಪರಂಪರಾ ಪ್ರಾಪ್ತವಾದ ಈ ಪರಮಹಂಸ ಪೀಠಾಧಿಪತಿಗಳಿಗೆ ಶ್ರೀ ಜನಮೇಜಯ ಮಹಾರಾಜನು ಕೊಟ್ಟ ತಾಮ್ರ ಶಾಸನವು ಈ ಮಠದಲ್ಲಿ ಸುರಕ್ಷಿತವಾಗಿರುತ್ತದೆ.

## ಶ್ರೀ ಭೀಮನಕಟ್ಟಿ ಮಠದ ಗುರುಪರಂಪರಾ

೧ ಶ್ರೀ ಮಧ್ವಾಚಾರ್ಯರು
೨ ಸತ್ಯತೀರ್ಥರು
೩ ಸತ್ಯವ್ರತ ತೀರ್ಥರು
೪ ವಿಶ್ವಾಧೀಶ ,,
೫ ವಿದ್ಯಾಧೀಶ ,,
೬ ವಿಶ್ವಮೂರ್ತಿ ,,
೭ ವಿಶ್ವಪತಿ ,,
೮ ವಿಬುಧೇಶ ,,
೯ ವಾಸುದೇವ ,,
೧೦ ದೇವಗರ್ಭ ,,
೧೧ ವಿಶ್ವಪೂಜಕ ,,
೧೨ ವಿಷ್ಣೋತ್ತಮ ,,
೧೩ ವಿಜ್ಞಾನಾಧೀಶ ,,
೧೪ ರಾಜಾಧಿರಾಜ ,,
೧೫ ರಾಘವೇಂದ್ರ ,,
೧೬ ಗದಾಧರ ,,
೧೭ ಶ್ರೀನಿಧಿ ,,
೧೮ ಚಕ್ರಪಾಣಿ ,,
೧೯ ಅನಿರುದ್ಧ ,,
೨೦ ಪ್ರದ್ಯುಮ್ನ ,,
೨೧ ಪುರಂದರ ,,
೨೨ ಪುಂಡರೀಕಾಕ್ಷ ,,
೨೩ ಅಚ್ಯುತ ,,
೨೪ ದಾಮೋದರ ,,
೨೫ ರಘುವರ್ಯ ,,
೨೬ ತ್ರಿವಿಕ್ರಮ ,,
೨೭ ರಘುಪತಿ ,,
೨೮ ರಘುವಲ್ಲಭ ,,
೨೯ ವೇದಗರ್ಭ ,,
೩೦ ರಘುಪುಂಗವ ,,
೩೧ ರಾಮಚಂದ್ರ ,,
೩೨ ರಾಘವೇಂದ್ರ ,,
೩೩ ರಘುರಾಜ ,,
೩೪ ರಘೂತ್ತಮ ,,
೩೫ ರಘುವರ್ಯ ,,
೩೬ ರಘುಪ್ರಿಯ ,,
೩೭ ರಘುನಾಥ ,,
೩೮ ರಘುಪ್ರವೀರ ,,
೩೯ ರಘುಭೂಷಣ ,,
೪೦ ರಘುತಿಲಕ ತೀರ್ಥರು (ಈಗಿನವರು)

# ಶ್ರೀ ೧೦ಲ ಶ್ರೀ ರಘುತಿಲಕ ತೀರ್ಥ ಶ್ರೀಪಾದಂಗಳವರು



ಈ ಭೀಮನಕಟ್ಟೆ (ಭೀಮಸೇತು ಮುನಿವೃಂದ) ಮಠದಲ್ಲಿ ಶ್ರೀ ರಘುತಿಲಕ ತೀರ್ಥ ಶ್ರೀಪಾದಂಗಳವರು ವಿರಾಜಮಾನರಾಗಿರುವರು. ಇವರು ಬಾಲ್ಯದಲ್ಲಿಯೇ ಸಾಹಿತ್ಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ ಈ ಶ್ರೀಪಾದಂಗಳರು ಕೆಲವು ದಿನ ಬೆಂಗಳೂರಿನಲ್ಲಿದ್ದು ತಮ್ಮ ವ್ಯಾಸಂಗವನ್ನು ಮುಂದುವರಿಸಿದರು. ತಮ್ಮ ಶ್ರೀ ಮಠದಲ್ಲಿಯೂ ನ್ಯಾಯ ವೇದಾಂತ ವಿದ್ವಾಂಸರನ್ನು ಇಟ್ಟುಕೊಂಡು ಗ್ರಂಥ ಗಳನ್ನು ಪರಾಮರ್ಶ ಮಾಡಿ ಶಾಸ್ತ್ರೀಯ ವ್ಯುತ್ಪತ್ತಿಯನ್ನು ಸಂಪಾದನ ಮಾಡಿದರು.

ಶ್ರೀ ಭೀಮನಕಟ್ಟೆಮಠಾಧೀಶರದು ಬಹಳ ಅಂತಃಕರಣದ ಸ್ವಭಾವ. ಉಡುಪಿಗೆ ಹೋಗುವ ಬರುವ ವಿದ್ವಾಂಸರನ್ನೆಲ್ಲ ತಮ್ಮಲ್ಲಿಗೆ ಕರೆದು, ಆದರದ ಆತಿಥ್ಯ ನೀಡಿ, ಪ್ರೇಮ ಪೂರ್ಣವಾದ ಉಪಚಾರವನ್ನು ಮಾಡಿ, ದಾನವಿತ್ತು, ದಕ್ಷಿಣೆ ಕೊಟ್ಟು, ಅನುಗ್ರಹಿಸಿ ಕಳಿಸುತ್ತಾರೆ.

ಶ್ರೀ ಶ್ರೀಗಳವರು ಅನೇಕ ಸಂಘ ಸಂಸ್ಥೆಗಳಿಗೆ ದಾನವನ್ನು ಕೊಟ್ಟಿದ್ದಾರೆ. ಯಾರು ಬಂದರೂ ಇಲ್ಲವೆಂದು ಹೇಳಿ ನಿರಾಶರನ್ನಾಗಿ ಕಳಿಸದೆ ಬಯಸಿದ್ದನ್ನು ಯಥಾ ಯೋಗ್ಯ ಕೊಟ್ಟು ಹರಸಿ ಕಳಿಸುವ ಉದಾರ ಸ್ವಭಾವ ಅವರದು.

ಉಡುಪಿಯಲ್ಲಿದ್ದ ತಮ್ಮ ಮಠವನ್ನು ಜೀರ್ಣೋದ್ಧಾರ ಮಾಡುತ್ತಲಿದ್ದಾರೆ.

ಮಾಧ್ವ ಮಹಾ ಮಂಡಲದ ಸಭಾ ಸಮ್ಮೇಲನಗಳಿಗೆ ಬಂದು ಭಾಗವಹಿಸಿ ಅನುಗ್ರಹ ಭಾಷಣ ಮಾಡಿ ಆಶೀರ್ವದಿಸುತ್ತಾರೆ.



# ಶ್ರೀ ಶ್ರೀಪಾದರಾಜರ ಮಠ

ಮುಳುಬಾಗಿಲು ಶ್ರೀಪಾದರಾಜರ ಮಠಕ್ಕೆ ಶ್ರೀ ಪದ್ಮನಾಭ ತೀರ್ಥ ಶುಭ ಸಂಪ್ರದಾಯಾಗತ ಮುಳುಬಾಗಿಲು ಶ್ರೀಪಾದರಾಜರ ಮಠವೆಂದು ಪೂರ್ಣ ಹೆಸರು.

ಶ್ರೀಮಧ್ವಾಚಾರ್ಯರು ಶ್ರೀಪದ್ಮನಾಭ ತೀರ್ಥ–ನರಹರಿ–ಮಾಧವ–ಅಕ್ಷೋಭ್ಯ ತೀರ್ಥರಿಗೆ ಸನ್ಯಾಸ ದೀಕ್ಷೆಯನ್ನಿತ್ತು ಈ ಸನ್ಯಾಸಿ ಶಿಷ್ಯರಿಂದಲೂ ಇತರ ಅನೇಕ ಶಿಷ್ಯರಿಂದಲೂ ಸತ್ಸಿದ್ಧಾಂತ ಪ್ರಚಾರ ಮಾಡುತ್ತ ನಿಖಿಳ ದೇಶ ಸಂಚಾರ ಮಾಡಿದರು. ಶಿಷ್ಯರಿಗೆ ಆಶ್ರಮ ದೀಕ್ಷೆಯನ್ನಿತ್ತು ಶ್ರೀ ಪದ್ಮನಾಭ ತೀರ್ಥರಿಗೆ ಶ್ರೀ ಗೋಪೀನಾಥ ದೇವರನ್ನೂ ಶ್ರೀ ನರಹರಿ ತೀರ್ಥರಿಗೆ ಜಯರಾಮ ದೇವರನ್ನೂ ಶ್ರೀ ಮಾಧವತೀರ್ಥರಿಗೆ ವೀರ ರಾಮದೇವರನ್ನೂ ಮತ್ತು ಶ್ರೀ ಅಕ್ಷೋಭ್ಯ ತೀರ್ಥರಿಗೆ ರಾಮ ಸೀತಾ ಲಕ್ಷ್ಮಣ ದೇವರನ್ನೂ ಕೊಟ್ಟರು. ಈ ಮೂರ್ತಿಗಳನ್ನು ಪೂಜಿಸುತ್ತ ನಾಲ್ಕೂ ಜನ ಶಿಷ್ಯರು ಸಿದ್ಧಾಂತ ಪ್ರಚಾರ ಮಾಡುತ್ತಿದ್ದರು. ಶ್ರೀಮದಾಚಾರ್ಯರು ದಿಗ್ವಿಜಯ ನಂತರ ತಾವು ಶ್ರೀ ಬದರಿಕಾಶ್ರಮಕ್ಕೆ ತೆರಳುವಾಗ ತಮ್ಮ ಸಾಕ್ಷಾತ್ ಪೀಠದಲ್ಲಿ ಶ್ರೀ ಪದ್ಮನಾಭ ತೀರ್ಥರಿಗೇನೇ ಪಟ್ಟಾಭಿಷೇಕ ಮಾಡಿ ಶ್ರೀ ಮಧ್ವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂದು ಕರೆದು ಮಾನ್ಯ ಮಾಡಿದರು.

ಆಗ ಶ್ರೀ ಪದ್ಮನಾಭ ತೀರ್ಥರು ಜ್ಞಾನಿಮಾನ್ಯರಾದ ಒಬ್ಬಾನೊಬ್ಬ ತಮ್ಮ ಶಿಷ್ಯರಿಗೆ ಚತುರ್ಥಾಶ್ರಮ ದೀಕ್ಷೆಯನ್ನಿತ್ತು ಶ್ರೀ ಲಕ್ಷ್ಮೀಧರ ತೀರ್ಥರೆಂದು ನಾಮ ಕರಣ ಮಾಡಿ ಶ್ರೀಮದಾಚಾರ್ಯರು ಅವರಿಗೆ ತುರೀಯಾಶ್ರಮ ಕೊಟ್ಟಾಗ ಅನುಗ್ರಹಿಸಿದ್ದ ಶ್ರೀ ಗೋಪೀನಾಥ ದೇವರನ್ನು ಮತ್ತು ತಮ್ಮ ಚಿಕ್ಕ ಸಂಸ್ಥಾನದ ಎಲ್ಲ ಸಾಮಗ್ರಿಯನ್ನು ಕೊಟ್ಟು, ಆ ಪರಂಪರೆಯನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗುವುದಾಗಿ ಅಪ್ಪಣೆಯಿತ್ತರು. ಶ್ರೀಲಕ್ಷ್ಮೀಧರ ತೀರ್ಥರಿಂದ ಆರನೆಯವರಾದ ಸ್ವರ್ಣವರ್ಣ ತೀರ್ಥರು ಬಹಳ ದೈವಶಾಲಿಗಳು. ಅವರಿಗೆ ಶ್ರೀ ಧ್ರುವಾಂಶಸಂಭೂತರಾದ ಶ್ರೀ ಲಕ್ಷ್ಮೀನಾರಾಯಣ ಮುನಿಗಳೆಂಬ ಶಿಷ್ಯರು ದೊರಕಿದರು. ಇವರೇ ಶ್ರೀ ವಿಬುಧೇಂದ್ರ ತೀರ್ಥರಲ್ಲಿ ವ್ಯಾಸಂಗ ಮಾಡಿ; ಶ್ರೀ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೮ ಶ್ರೀ ರಘುನಾಥ ತೀರ್ಥರಿಗೆ ಪರಮ ಸಮ್ಮತವಾಗುವಂತೆ ಶ್ರೀ ಮನ್ನ್ಯಾಯಸುಧಾ ಅನುವಾದ ಮಾಡಿದ್ದರಿಂದ ಅವರಿಗೆ ಶ್ರೀ ರಘುನಾಥ ತೀರ್ಥರು ಪ್ರಸನ್ನರಾಗಿ ಶ್ರೀಪಾದರಾಜರೆಂಬ ಪ್ರಶಸ್ತಿಯನ್ನಿತ್ತರು. ಅಂದಿನಿಂದ ಈ ಸಂಸ್ಥಾನಕ್ಕೆ ಶ್ರೀಪಾದರಾಜರ ಮಠವೆಂದು ಪ್ರತೀತಿಯಾಯಿತು. ಶ್ರೀ ಲಕ್ಷ್ಮೀಧರ ತೀರ್ಥರಿಂದ ಮೂವತ್ತು ಜನ ಯತೀಶ್ವರರಾದ ನಂತರ ಶ್ರೀ ಸುಧೀನಿಧಿ ತೀರ್ಥರು, ಶ್ರೀ ಮೇಧಾವಿತೀರ್ಥರೇ ಮುಂತಾದವರು ಇಲ್ಲಿ ಪ್ರಸಿದ್ಧ ಯತಿಪುಂಗವರು ಆಗಿದ್ದರು. ಪ್ರಕೃತ ಶ್ರೀ ಸಂಸ್ಥಾನವನ್ನು ಶ್ರೀಮತ್ಪರಮಹಂಸೇತ್ಯಾದಿ ಶ್ರೀ ೧೦೮ ಶ್ರೀ ಸತ್ಯಸಿಧಿ ತೀರ್ಥ ಶ್ರೀಪಾದಂಗಳವರು ಪರಿಪಾಲಿಸುತ್ತಿರುವರು.

## ಶ್ರೀ ಶ್ರೀಪಾದರಾಜರ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ಪದ್ಮನಾಭ ತೀರ್ಥರು
೩ ಲಕ್ಷ್ಮೀಧರ ,,
೪ ಸಂಕರ್ಷಣ ,,
೫ ಪರಶುರಾಮ ,,
೬ ಆದಿರಾಜ ,,
೭ ಸತ್ಯವ್ರತ ,,
೮ ಸ್ವರ್ಣವರ್ಣ ,,
೯ ಲಕ್ಷ್ಮೀನಾರಾಯಣ (ಶ್ರೀಪಾದರಾಜ)
೧೦ ಹಯಗ್ರೀವ ತೀರ್ಥರು
೧೧ ಶ್ರೀಪತಿ ,,
೧೨ ಶ್ರೀಧರ ,,
೧೩ ಗೋಪಾಲಸ್ವಾಮಿ
೧೪ ರಾಮಚಂದ್ರ ,,
೧೫ ರಘುನಾಥ ,,
೧೬ ಲಕ್ಷ್ಮೀಮನೋಹರ ತೀರ್ಥರು
೧೭ ಲಕ್ಷ್ಮೀಪತಿ ತೀರ್ಥರು
೧೮ ಲಕ್ಷ್ಮೀಕಾಂತ ,,
೧೯ ಲಕ್ಷ್ಮೀನಾಥ ,,
೨೦ ಲಕ್ಷ್ಮೀನಿಧಿ ,,
೨೧ ಶ್ರೀಕಾಂತ ,,
೨೨ ಶ್ರೀನಿಧಿ ,,
೨೩ ತೇಜೋನಿಧಿ ,,
೨೪ ತಪೋನಿಧಿ ,,
೨೫ ಯಶೋನಿಧಿ ,,
೨೬ ಸುಗುಣನಿಧಿ ,,
೨೭ ವಿದ್ಯಾನಿಧಿ ,,
೨೮ ಜ್ಞಾನನಿಧಿ ,,
೨೯ ಗುಣಸಾರ ,,
೩೦ ಪ್ರಜ್ಞಾಸಾರ ,,
೩೧ ಸುಬೋಧನಿಧಿ ,,
೩೨ ವೈರಾಗ್ಯನಿಧಿ ,,
೩೩ ಸುಜನಜ್ಞಾನನಿಧಿ
೩೪ ಸುಗುಣ ,,
೩೫ ಸುಧಿನಿಧಿ ,,
೩೬ ಮೇಧಾನಿಧಿ ,,
೩೭ ದಯಾನಿಧಿ ,,
೩೮ ಸತ್ಯನಿಧಿ ,, (ಈಗಿದ್ದವರು)

## ಶ್ರೀ ೧೦ಲ ಶ್ರೀ ಸತ್ಯನಿಧಿ ತೀರ್ಥ ಶ್ರೀಪಾದಂಗಳವರು



ಇವರು ಮಹಾ ಪಂಡಿತರೂ ವೈರಾಗ್ಯಶಾಲಿಗಳೂ ಆಗಿದ್ದು ದಕ್ಷಿಣ ದೇಶ ಮತ್ತು ಮೈಸೂರು ಪ್ರಾಂತಗಳಲ್ಲಿ ಸಂಚಾರ ಮಾಡಿ ಶ್ರೀಮಧ್ವಾಚಾರ್ಯರ ಮತವನ್ನು ಪ್ರಚಾರ ಮಾಡಿದ್ದಾರೆ.

ಮುಳಬಾಗಿಲಿನ ತಮ್ಮ ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ನಡಿಸುತ್ತಲಿರುವರು. ಇಲ್ಲಿ ಅನೇಕ ಪಂಡಿತರನ್ನು ನಿಯಮಿಸಿ ವಿದ್ಯಾರ್ಥಿಗಳಿಗೆ ಪಾಠಗಳು ನಡೆಯುವಂತೆ ಮಾಡಿರುವರು. ಶ್ರೀಗಳವರೂ ನಿತ್ಯ ಪಾಠ ಪ್ರವಚನಗಳನ್ನು ಮಾಡಿ ಭಕ್ತರಿಗೆ ಮಾರ್ಗ ದರ್ಶನ ಮಾಡುತ್ತಲಿರುವರು.

ಬೆಂಗಳೂರಿನ ರಾಘವೇಂದ್ರ ಕಾಲೊನಿಯಲ್ಲಿ ಒಂದು ಮಠವನ್ನು ಕೊಂಡು ಕೊಂಡು ಶ್ರೀ ರಾಘವೇಂದ್ರ ಸ್ವಾಮಿಗಳ ವೃಂದಾವನ ಪೂಜಾದಿಗಳು ನಡೆಯುವಂತೆ ಮಾಡಿ ಹಿಂದಿನ ಶ್ರೀಗಳವರ ಪುತ್ರರೂ ಮಹಾ ಪಂಡಿತರೂ ಆದ ಶ್ರೀ ಗೋಪಿನಾಥಾಚಾರ್ಯರೆಂಬುವರನ್ನು ಅಲ್ಲಿ ಇಟ್ಟು ಪಾಠ ಪ್ರವಚನ ನಡೆಯುವಂತೆ ಮಾಡಿರುವರು.





ಶ್ರೀ ಶ್ರೀ ಶ್ರೀಪಾದರಾಜರ ಮಠದ ಹರಿಪದವನ್ನೈದ ಶ್ರೀ ಮೇಧಾನಿಧಿ ತೀರ್ಥರೂ
ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಹರಿಪದವನ್ನೈದ ಶ್ರೀ ಸುಶೀಲೇಂದ್ರ ತೀರ್ಥರೂ



ಮುಳಬಾಗಿಲಿನ ನರಸಿಂಹತೀರ್ಥದಲ್ಲಿರುವ ಪುಷ್ಪಾಲಂಕೃತ ಶ್ರೀಪಾದರಾಜರ
ವಂದಾವನದಬಳಿ ಶ್ರೀ ಶ್ರೀ ಸತ್ಯಸಿಧ ಶ್ರೀಗಳು

# ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯ ತೀರ್ಥ ಮಠ

ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಅಕ್ಷೋಭ್ಯ ತೀರ್ಥರು ತಾವು ಸರ್ವಜ್ಞ ಸಿಂಹಾಸನಾರೋಹಣ ಮಾಡುವಾಗ ತಾವು ಇಷ್ಟು ದಿನ ಪೂಜೆ ಮಾಡಿದ ಶ್ರೀಮದಾಚಾರ್ಯ ಕರಾರ್ಚಿತ ಶ್ರೀ ದಿಗ್ವಿಜಯ ರಾಮ ಪ್ರತಿಮೆಯನ್ನೂ ಶ್ರೀ ರಾಮ ಲಕ್ಷ್ಮಣ ಸೀತಾ ಪ್ರತಿಮೆಗಳನ್ನೂ ತಮ್ಮ ಶಿಷ್ಯರಾದ ಶ್ರೀ ಕೇಶವಾಚಾರ್ಯರೆಂಬವರಿಗೆ ಸನ್ಯಾಸಾಶ್ರಮವನ್ನು ಕೊಟ್ಟು " ತ್ರೈಲೋಕ್ಯಭೂಷಣ ತೀರ್ಥ " ರೆಂದು ನಾಮಕರಣ ಮಾಡಿದರು.

ಮುಂದೆ ಈ ಚಿಕ್ಕ ಸಂಸ್ಥಾನವನ್ನು ನಡೆಯಿಸಿಕೊಂಡು ಹೋಗಬೇಕೆಂದು ಆಜ್ಞೆ ಮಾಡಿ ಅನುಗ್ರಹಿಸಿದರು. ಶ್ರೀ ತ್ರೈಲೋಕ್ಯಭೂಷಣರು ಕೂಡ್ಲಿ ಕ್ಷೇತ್ರಕ್ಕೆ ಆಗಮಿಸಿ ನೆಲೆಸಿದ್ದರಿಂದ ಅದೇ ಈಗ ಆರ್ಯ ಅಕ್ಷೋಭ್ಯ ತೀರ್ಥ ಕೂಡ್ಲಿ ಮಠವೆಂದು ಪ್ರಸಿದ್ಧವಾಗಿದೆ.

ಮುಂದೆ ವಿಜಯ ನಗರದ ಕೃಷ್ಣದೇವರಾಯ ಮಹಾರಾಜರು ತಾಮ್ರ ಶಾಸನಗಳ ಮೂಲಕ ಈ ಮಠವನ್ನು ಕೂಡಲಾರ್ಯ ಮಠವೆಂದೇ ವ್ಯವಹರಿಸಿದ್ದಾರೆ. ಇದೇ ಪರಂಪರೆಯಲ್ಲಿ ೨೭ ಜನ ವಿದ್ವಾಂಸರೂ ಜ್ಞಾನಿಗಳೂ ಮಹಾ ತಪಸ್ವಿಗಳೂ ಸಂಸ್ಥಾನವನ್ನು ಪಾಲಿಸಿ ವೃಂದಾವನ ಪ್ರವೇಶ ಮಾಡಿರುತ್ತಾರೆ.

## ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯ ತೀರ್ಥ ಮಠದ ಶ್ರೀ ಗುರು ಪರಂಪರೆ

| | | | |
|---|---|---|---|
| ೧ | ಶ್ರೀ ಮಧ್ವಾಚಾರ್ಯರು | ೧೫ | ರಾಮಚಂದ್ರ ,, |
| ೨ | ಅಕ್ಷೋಭ್ಯ ತೀರ್ಥರು | ೧೬ | ರಘುರಾಜ ,, |
| ೩ | ತ್ರೈಲೋಕ್ಯಭೂಷಣರು | ೧೭ | ರಾಮಚಂದ್ರ ,, |
| ೪ | ಲೋಕವಂದಿತ | ೧೮ | ರಘುವರ್ಯ ,, |
| ೫ | ಸುಲಭ ತೀರ್ಥರು | ೧೯ | ರಘುವಲ್ಲಭ ,, |
| ೬ | ರಘುಪುಂಗವ ,, | ೨೦ | ರಘುಪ್ರಿಯ ,, |
| ೭ | ರಘುನಾಥ ,, | ೨೧ | ರಘುವರ ,, |
| ೮ | ರಘುವರ್ಯ ,, | ೨೨ | ರಘೂತ್ತಮ ,, |
| ೯ | ರಘುನಂದನ ,, | ೨೩ | ರಘುಶಾಂತ ,, |
| ೧೦ | ವಿದ್ಯಾನಿಧಿ ,, | ೨೪ | ರಘುಕಾಂತ ,, |
| ೧೧ | ರಘುಪತಿ ,, | ೨೫ | ರಘುದಾಂತ ,, |
| ೧೨ | ನಾರಾಯಣ ,, | ೨೬ | ರಘುಪ್ರಿಯ ,, |
| ೧೩ | ಮುಕುಂದ ,, | ೨೭ | ರಾಮಧ್ಯಾನತೀರ್ಥರು (ಈಗಿದ್ದವರು) |
| ೧೪ | ರಘುಪತಿ ,, | | |

### ಶ್ರೀ ೧೦೮ ಶ್ರೀ ರಾಮಧ್ಯಾನ ತೀರ್ಥ ಶ್ರೀಪಾದಂಗಳವರು

ಪ್ರಕೃತ ಭಾಗವತ ಶಿರೋಮಣಿಗಳಾದ ಶ್ರೀ ಶ್ರೀ ರಾಮಧ್ಯಾನ ತೀರ್ಥ ಶ್ರೀಪಾದಂಗಳವರು ಈ ಪೀಠವನ್ನಲಂಕರಿಸಿದ್ದಾರೆ. ಇವರು ಪಂಡಿತರೂ, ವಿರಾಗ ಯೋಗಿಗಳೂ ಆಗಿರುವರು.

ಶ್ರೀ ೧೦೮ ಶ್ರೀ ಉತ್ತರಾದಿ ಮಠದ ಶ್ರೀ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ಓದಿ ಮಂಗಳ ಮಾಡಿದ್ದಾರೆ. ಇವರು ದೇಶದಲ್ಲಿ ಸಂಚಾರ ಮಾಡುತ್ತ ದ್ವೈತ ದುಂದುಭಿಯನ್ನು ಮೊಳಗಿಸುತ್ತಲಿರುವರು.



# ಶ್ರೀ ಮಾಧವ ತೀರ್ಥರ ಮಠ

ಶ್ರೀ ಮಾಧವತೀರ್ಥ ಶ್ರೀಪಾದಂಗಳವರು ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಲ್ಲಿ ಮೂರನೆಯವರು. ಶ್ರೀ ನರಹರಿ ತೀರ್ಥರ ನಂತರ ಮೂಲ ಸಂಸ್ಥಾನದ ಸಿಂಹಾಸನವನ್ನು ಪಾಲಿಸಿದವರು. ಅವರಿಗೆ ಶ್ರೀ ಮಧ್ವಾಚಾರ್ಯರು ಮೊಟ್ಟಮೊದಲು ಆಶ್ರಮ ಕೊಡುವಾಗ ಶ್ರೀ ವೀರ ರಾಮ ದೇವರನ್ನು ಕೊಟ್ಟರು. ಶ್ರೀ ಪದ್ಮನಾಭ ತೀರ್ಥರಂತೆ ತಾವೂ ಕೂಡ ಒಬ್ಬ ಪಂಡಿತ ಶಿಷ್ಯರಿಗೆ ತುರೀಯ ಆಶ್ರಮವಿತ್ತು ಅವರಿಗೆ 'ಶ್ರೀ ಮಧುಹರಿ ತೀರ್ಥ'ರೆಂದು ನಾಮಕರಣ ಮಾಡಿ ಆ ಚಿಕ್ಕ ಸಂಸ್ಥಾನ ಪರಂಪರೆಯನ್ನು ಹಾಗೆಯೇ ನಡೆಸಿಕೊಂಡು ಹೋಗಿರೆಂದು ಅಪ್ಪಣೆ ಇತ್ತರು. ಮೈಸೂರು ಸೀಮೆಯಲ್ಲಿರುವ ಮಜ್ಜಿಗಿ ಹಳ್ಳಿಯನ್ನೇ ವಾಸಸ್ಥಾನವಾಗಿ ಇವರು ಆರಿಸಿಕೊಂಡರು. ಆ ಮಧುಹರಿ ತೀರ್ಥರು ಮಜ್ಜಿಗಿ ಹಳ್ಳಿಯಲ್ಲಿ ವಾಸವಾಗಿದ್ದುದರಿಂದ ಅವಕ್ಕೆ ಮಜ್ಜಗಿಹಳ್ಳಿ ಮಾಧವ ತೀರ್ಥರ ಮಠವೆಂಬ ಹೆಸರಾಯಿತು. ಅದು ಪ್ರಕೃತ ಮುಳುಬಾಗಿಲಿಗೆ ೧೦ ಮೈಲಿ ದೂರದಲ್ಲಿರುವ ತಂಬೆಹಳ್ಳಿಯಲ್ಲಿ ವಿರಾಜಮಾನವಾಗಿದೆ.

## ಶ್ರೀ ಮಾಧವ ತೀರ್ಥ ಮಠದ ಶ್ರೀ ಗುರು ಪರಂಪರೆ

| | | | |
|---|---|---|---|
| ೧ | ಶ್ರೀ ಮಧ್ವಾಚಾರ್ಯರು | ೧೨ | ರಘುಪತಿ ,, |
| ೨ | ಮಾಧವ ತೀರ್ಥರು | ೧೩ | ರಾಮಮಾಧವ ,, |
| ೩ | ಮಧುಹರಿ ,, | ೧೪ | ಕೇಶವಮಾಧವ ,, |
| ೪ | ನಾರಾಯಣ ,, | ೧೫ | ಪ್ರಜ್ಞಾಮಾಧವ ,, |
| ೫ | ಪರಂಜ್ಯೋತಿ ,, | ೧೬ | ಧೀರಮಾಧವ ,, |
| ೬ | ಜಗನ್ನಾಥ ,, | ೧೭ | ಯೋಗಿಮಾಧವ,, |
| ೭ | ರಘುಪತಿ ,, | ೧೮ | ವಾಸುದೇವಮಾಧವ ತೀರ್ಥರು |
| ೮ | ಹಯಗ್ರೀವ ,, | ೧೯ | ಶ್ರೀನಿವಾಸಮಾಧವ ,, |
| ೯ | ರಘುಪುಂಗವ ,, | ೨೦ | ವೀರಮಾಧವ ,, |
| ೧೦ | ರಘುವರ್ಯ ,, | ೨೧ | ಸತ್ಯಮಾಧವ ತೀರ್ಥರು |
| ೧೧ | ರಘುನಂದನ ,, | | (ಈಗಿರುವರು) |

# ಶ್ರೀ ೧೦ಲ ಶ್ರೀ ಸತ್ಯಮಾಧವ ತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಪೀಠದಲ್ಲಿ ವಿರಾಜಮಾನರಾದವರು ಶ್ರೀ ಶ್ರೀ ಸತ್ಯಮಾಧವ ತೀರ್ಥರು. ಇವರು ಶಮದಮಾದಿ ಗುಣಸಂಪನ್ನರೂ ಮಹಾ ಸಾತ್ವಿಕರೂ ಉದಾರಿಗಳೂ ಆಗಿರುವರು.

ಪ್ರತಿ ವರ್ಷ ತಮ್ಮ ಗುರುಗಳ ಆರಾಧನೆಯನ್ನು ವಿಜೃಂಭಣೆಯಿಂದ ಮಾಡುತ್ತ ವಿದ್ವತ್ ಸಭೆಯನ್ನು ನಡೆಯಿಸಿ ಪಂಡಿತರಿಗೆ ಸಂಭಾವನಾದಿಗಳನ್ನು ಕೊಟ್ಟು ಗೌರವಿಸುತ್ತಾರೆ.

ಈ ಮಠದ ಆಸ್ತಿಗಳು ಹೋಗಿ ಪರಹಸ್ತಗತವಾದವುಗಳನ್ನು ಈ ಶ್ರೀಗಳವರು ಈಗ ಪುನಃ ಮಠದ ಸ್ವಾಧೀನಕ್ಕೆ ಬರುವಂತೆ ಮಾಡಿದ್ದಾರೆ.

ಮಠದ ಕಟ್ಟಡದ ಜೀರ್ಣೋದ್ಧಾರವನ್ನು ನಡೆಸಿರುವರು. ಹಿಂದಕ್ಕೆ ಮಠದಲ್ಲಿ ಕಳವಾಗಿ ಮಠದ ಸಂಪತ್ತೆಲ್ಲವೂ ಹೋಗಿದ್ದರೂ ಶ್ರೀ ಶ್ರೀಗಳವರು ಪುನಃ ಸಂಗ್ರಹ ಮಾಡುತ್ತಲಿರುವರು.

ಈಗ ಶ್ರೀಗಳವರು ಮುಳಬಾಗಿಲಿನಿಂದ ಹತ್ತು ಮೈಲು ದೂರವಿರುವ ತಂಬಿಹಳ್ಳಿಯ ತಮ್ಮ ಮಠದಲ್ಲಿ ಪೂಜಾನುಷ್ಠಾನಾದಿಗಳನ್ನು ಮಾಡಿಕೊಂಡು ಭಗವತ್ಸ್ಮರಣೆಯಲ್ಲಿ ತಲ್ಲೀನರಾಗಿರುತ್ತಾರೆ.



# ಮಾಧ್ವಗೌಡೀಯ ಶ್ರೀ ಚೈತನ್ಯಮತ

## ಬಂಗಾಲದಲ್ಲಿ ಮಾಧ್ವ ಮಠಗಳು

ಉತ್ತರ ಹಿಂದುಸ್ಥಾನದಲ್ಲಿ ವಿಶೇಷವಾಗಿ ಬಂಗಾಲ ಪ್ರಾಂತದಲ್ಲಿ ವೈಷ್ಣವ ಮತವು ಸಾರ್ವತ್ರಿಕ ಪ್ರಸಾರವನ್ನು ಹೊಂದಿದೆ. ಉತ್ತರಾಪಥದ ಪ್ರತಿ ಗ್ರಾಮ ಧಾಮಗಳಲ್ಲಿ ಶ್ರೀ ರಾಧಾಮಾಧವರ ನಾಮಘೋಷದಿಂದ ದುಮ್‌ದುಮಿಸಿ ಪ್ರತಿಧ್ವನಿತವಾಗಲು ಕೃಷ್ಣಭಕ್ತರಾದ ಚೈತನ್ಯಪ್ರಭುಗಳ ಹರಿಶ್ರದ್ಧೆಯೇ ಮೂಲ ಕಾರಣವಾಗಿದೆ.



ಈ ಚೈತನ್ಯರು ಶ್ರೀಮನ್ ಮಧ್ವಾಚಾರ್ಯರ ಶಿಷ್ಯ ಪರಂಪರೆಗೆ ಸೇರಿದವರು. ಚೈತನ್ಯಮತೀಯರ ಗುರು:ಪರಂಪರೆಯು ಶ್ರೀ ಮಧ್ವಾಚಾರ್ಯರಿಂದಲೇ ಪ್ರಾರಂಭವಾಗುತ್ತವೆ. ಇದು ಅವರ ಚೈತನ್ಯಮತೀಯರ ಗುರು ಪರಂಪರೆಯನ್ನು ನೋಡಿದರೆ ಯಾರಿಗಾದರೂ ತಿಳಿಯಬಹುದು.

| | |
|---|---|
| ಶ್ರೀಮನ್ ನಾರಾಯಣ | ಶ್ರೀ ರಾಜೇಂದ್ರ ,, |
| ಚತುರ್ಮುಖ ಬ್ರಹ್ಮ | ಶ್ರೀ ಜಯಧ್ವಜ ,, |
| ನಾರದ | ಶ್ರೀ ಪುರುಷೋತ್ತಮ ,, |
| ಶ್ರೀ ವೇದವ್ಯಾಸ | ಶ್ರೀ ಬ್ರಹ್ಮಣ್ಯ ,, |
| **ಶ್ರೀ ಮಧ್ವಾಚಾರ್ಯರು** | ಶ್ರೀ ವ್ಯಾಸತೀರ್ಥ (ಚಂದ್ರಿಕಾಚಾರ್ಯ |
| ಶ್ರೀ ಪದ್ಮನಾಭ ತೀರ್ಥರು | ಶ್ರೀ ಲಕ್ಷ್ಮೀಪತಿ ತೀರ್ಥ |
| ಶ್ರೀ ನರಹರಿ ,, | ಶ್ರೀ ನಿತ್ಯಾನಂದ ,, |
| ಶ್ರೀ ಮಾಧವ ,, | ಶ್ರೀ ಅದ್ವೈತಾನಂದ ,, |
| ಶ್ರೀ ಅಕ್ಷೋಭ್ಯ ,, | ಶ್ರೀ ಈಶ್ವರಪುರಿ ,, |
| ಶ್ರೀ ಜಯತೀರ್ಥ | ಶ್ರೀ ಕೃಷ್ಣಚೈತನ್ಯ ,, |
| ಶ್ರೀ ವಿದ್ಯಾಧಿರಾಜ ತೀರ್ಥ | |

ಈ ಪರಂಪರೆಯನ್ನು ನೋಡಿದರೆ ಬಂಗಾಲದ ಚೈತನ್ಯ ಮತೀಯರೆಲ್ಲರೂ ಮಾಧ್ವಮತಕ್ಕೆ ಸೇರಿದವರೆಂದು ಗೊತ್ತಾಗುತ್ತದೆ.

ಶ್ರೀ ವ್ಯಾಸರಾಜ ಮಠದ ಪ್ರವರ್ತಕರಾದ— ಶ್ರೀ ರಾಜೇಂದ್ರತೀರ್ಥರು ಅವರ ಅನಂತರದ ಶ್ರೀ ಜಯಧ್ವಜತೀರ್ಥರು ಉತ್ತರ ಹಿಂದುಸ್ಥಾನಕ್ಕೆ ಹೋಗಿ ಅಲ್ಲಿ ಮಧ್ವ ಮತವನ್ನು ಪ್ರಸಾರ ಮಾಡಿ ಬಂದರು. ಅನಂತರ ಶ್ರೀ ವ್ಯಾಸರಾಜತೀರ್ಥರೂ ಬಂಗಾಲದಲ್ಲಿ ಮಧ್ವ ಮತವನ್ನು ಪ್ರಸಾರ ಮಾಡಿ ಆ ದೇಶದ ಒಬ್ಬರಿಗೆ ಸನ್ಯಾಸಾಶ್ರಮವನ್ನಿತ್ತು ಮಧ್ವಮತ ಸಂಪ್ರದಾಯವನ್ನು ಆ ದೇಶದಲ್ಲೆಲ್ಲ ಪ್ರಚುರಪಡಿಸಬೇಕೆಂದು ಅಪ್ಪಣೆ ಇತ್ತರು.

ವಂಗ ಮಂಡಲದಲ್ಲಿ ಶ್ರೀ ಚಂದ್ರಿಕಾಚಾರ್ಯರಿಂದ ಸನ್ಯಾಸಾಶ್ರಮವನ್ನು ಪಡೆದ ಮೊಟ್ಟಮೊದಲನೆಯ ಬಂಗಾಲದೇಶದ ಯತಿವರೇಣ್ಯರೆಂದರೆ ಶ್ರೀ ಲಕ್ಷ್ಮೀಕಾಂತ ತೀರ್ಥರು. ಆ ಲಕ್ಷ್ಮೀಕಾಂತತೀರ್ಥರಿಂದ ಮುಂದೆ ಬೆಳೆದು ಬಂದ ಯತಿಪರಂಪರೆಯಲ್ಲಿಯೇ ಈಶ್ವರಪುರೀ ಎಂಬುವವರಿಂದ ಶ್ರೀಕೃಷ್ಣಚೈತನ್ಯರು* ಸನ್ಯಾಸಾಶ್ರಮವನ್ನು ಸ್ವೀಕರಿಸಿದರು.

ಬಂಗಾಲದ ಇತ್ತೀಚಿನ ವಿದ್ವಾಂಸರೆಲ್ಲರೂ ಈ ಮಾತನ್ನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ.

ಶ್ರೀ ವಿವೇಕಾನಂದರಂತೂ ಚೈತನ್ಯರು ಶ್ರೀ ಮಧ್ವಾಚಾರ್ಯರ ಅನುಯಾಯಿಗಳಾಗಿದ್ದು ಮಧ್ವತತ್ವವನ್ನೇ ಬಂಗಾಲದ ತುಂಬ ಉಪದೇಶ ಮಾಡಿದ್ದಾರೆ ಎಂದು ಸ್ಪಷ್ಟವಾಗಿ ಈ ಕೆಳಗಿನ ಪಂಕ್ತಿಗಳಲ್ಲಿ ಸಾರಿದ್ದಾರೆ.

"There has been the great southern Preacher Madhwamuni and following him our great Chaitanya of Bengal taking up the philosophy of the Madhwas preaching it on Bengal.

ಶ್ರೀ-ವಿವೇಕಾನಂದರು ಬೇರೆ ಒಂದು ಪುಸ್ತಕದಲ್ಲಿ ಹೀಗೆ ನುಡಿದಿದ್ದಾರೆ.

The great Madhwa whose leadership was recognised even by the followers of the only northern prophet whose power has been felt over the length and breadth of India Shri Krishna Chaitanya.

ಶ್ರೀ ಮಧ್ವಾಚಾರ್ಯರ ಶಿಷ್ಯ ಪ್ರಶಿಷ್ಯರಾದ ಶ್ರೀ ಚೈತನ್ಯರು ೧೫ನೇ ಶತಮಾನದಲ್ಲಿ ಬಂಗಾಲದ ನದಿಯಾ ಪ್ರಾಂತದಲ್ಲಿ ಜನಿಸಿ ಉತ್ತರ ಭಾರತದ ತುಂಬ

* Please see " Chaitanya and his life by Dineshchandra Sen ".

ಮಧ್ವ ಮತವನ್ನು ಪ್ರಸಾರ ಮಾಡಿದರು. ಶ್ರೀ ಚೈತನ್ಯರಿಗೆ ಶ್ರೀ ರಘುನಾಥದಾಸ, ಶ್ರೀ ರೂಪಗೋಸ್ವಾಮಿ, ಶ್ರೀ ಸನಾತನ ಗೋಸ್ವಾಮಿ, ಶ್ರೀ ರಘುನಾಥ ಭಟ್ಟ, ಶ್ರೀ ಜೀವಗೋಸ್ವಾಮಿ, ಶ್ರೀ ಸನಾತನ ಶ್ರೀರೂಪ ಮುಂತಾದ ಅನೇಕ ಪಂಡಿತೋತ್ತಮ ಶಿಷ್ಯ ಪ್ರಶಿಷ್ಯರು ಆಗಿಹೋದರು.

ಶ್ರೀಮನ್ ಮಧ್ವಾಚಾರ್ಯರ ಶಿಷ್ಯತ್ವವನ್ನೂ ಮತ್ತು ತಮ್ಮ ನಿರಂತರ ಮಧ್ವಾನುಯಾಯಿತವನ್ನೂ ಪ್ರತಿ ಕ್ಷಣದಲ್ಲಿಯೂ ಸ್ಮರಣ ಮಾಡಿ ಧ್ಯಾನ ಮಾಡಲು ಅನುಕೂಲವಾಗಲಿ ಎಂದು ಆ ಸಂಪ್ರದಾಯದವರು ತಮ್ಮ ಮಠಗಳ ಮೂಲ ಹೆಸರುಗಳಲ್ಲಿಯೇ ಶ್ರೀ ಮಧ್ವಾಚಾರ್ಯರ ಶುಭ ನಾಮವನ್ನು ಸೇರಿಸಿ "ಮಾಧ್ವಗೌಡೀಯ ಮಠ" ಎಂದು ಕರೆದುಕೊಳ್ಳುತ್ತಾರೆ. ಇದರ ಮೇಲಿಂದಲೇ ಅವರ ಮಧ್ವ ನಿಷ್ಠೆ, ಮಧ್ವ ಭಕ್ತಿ, ಮಾಧ್ವ ದೀಕ್ಷೆಗಳು ಎಷ್ಟು ಉತ್ಕಟವಾಗಿರುವವು ಎಂಬುವದು ತಿಳಿದು ಬರಲಿಕ್ಕೆ ಸಾಕು.

ಶ್ರೀ ಚೈತನ್ಯ ಮತೀಯರ ಈ ಮಾಧ್ವ ಗೌಡೀಯ ಸಂಪ್ರದಾಯದಲ್ಲಿ ಅನೇಕ ವಿಷ್ಣುಭಕ್ತರಾದ ಸ್ವಾಮಿಗಳೂ ಸಂಪ್ರದಾಯಾಚಾರ್ಯರೂ ಆಗಿದ್ದಾರೆ. ಅವರು ಬರೆದ ಮಾಧ್ವ ಗ್ರಂಥಗಳಿಗೂ ಲೆಕ್ಕವಿಲ್ಲ.

ಈ ಚೈತನ್ಯ ಸಂಪ್ರದಾಯದಲ್ಲಿ—

೧) ಶ್ರೀ ಬಲದೇವ ವಿದ್ಯಾಭೂಷಣ
೨) ,, ವಿಶ್ವನಾಥ ಚಕ್ರವರ್ತಿ
೩) ,, ಕೃಷ್ಣದಾಸ ಕವಿರಾಜ
೪) ,, ಭಕ್ತಿ ವಿನೋದ ಠಾಕೂರ
೫) ,, ರಾಧಾ ವಿನೋದ ಗೋಸ್ವಾಮಿ
೬) ,, ಅತುಲಕೃಷ್ಣ ಗೋಸ್ವಾಮಿ
೭) ,, ರಸಿಕ ಮೋಹನ ವಿದ್ಯಾಭೂಷಣ
೮) ಶ್ರೀಮದ್ ಭಕ್ತಿ ಸಿದ್ಧಾಂತ ಸರಸ್ವತಿ ಪ್ರಭುಪಾದ
೯) ಶ್ರೀ ಗೋಸ್ವಾಮಿ ದಾಮೋದರಾಚಾರ್ಯ

ಮುಂತಾದ ಅನೇಕಾನೇಕ ಪೀಠಾಧಿಪತಿಗಳು ಆಗಿ ಹೋಗಿ ದಕ್ಷಿಣೋತ್ತರ ಭಾರತದ ಪ್ರಾಂತ ಪರಿಸರಗಳನ್ನೆಲ್ಲ ವಿಷ್ಣು ಭಕ್ತಿಯ ಭಾಗೀರಥಿಯ ಪ್ರವಾಹವನ್ನು ಮನೆಮನೆಗೂ ತರಂಗಿಸಿ ಪಾವನಗೈದರು.

ಈಗಲೂ ಈ ಚೈತನ್ಯ ಸಂಪ್ರದಾಯದಲ್ಲಿ ತ್ರಿದಂಡಿ ಸ್ವಾಮಿ, ಶ್ರೀಮದ್ ಭಕ್ತಿ ವಿಲಾಸತೀರ್ಥ ಮಹಾರಾಜ ಮತ್ತು ತ್ರಿದಂಡಿಸ್ವಾಮಿ ೧೦೮ ಶ್ರೀ ಭಕ್ತಿ ಕೇವಲ ಔತ ಲೋಮಿ ಮಹಾರಾಜ ಮುಂತಾದ ಮಠಾಚಾರ್ಯರು ಮಧ್ವ ಚೈತನ್ಯಸಂಪ್ರದಾಯವನ್ನು ಮುಂದುವರಿಸಿಕೊಂಡು ಬರುತ್ತಲಿದ್ದಾರೆ.



# ಶ್ರೀ ಚಿತ್ರಾಪುರಮಠ

ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಪೇಜಾವರ ಮಠದ ಮೂಲ ಶಿಷ್ಯರಾದ ಅಧೋಕ್ಷಜ ತೀರ್ಥರ ಸಂಪ್ರದಾಯದಲ್ಲಿ ವಿರಾಜಮಾನರಾದ, ಭಾಗವತಕ್ಕೆ ಜಗನ್ಮಾನ್ಯವಾದ "ಪದರತ್ನಾವಲೀ" ಎಂಬ ವ್ಯಾಖ್ಯಾನವನ್ನು ಬರೆದ, ಜ್ಞಾನಮೇರು ಗಳಾದ ಶ್ರೀ ವಿಜಯಧ್ವಜ ತೀರ್ಥರಿಂದ ಪ್ರವರ್ತಿತವಾದದ್ದು ಈ ಚಿತ್ರಾಪುರಮಠವು.

ಈ ಚಿತ್ರಾಪುರ ಮಠ ಮತ್ತು ದುರ್ಗಾ ದೇವಾಲಯಗಳು ಉಡುಪಿ ಮಂಗಳೂರು ಮಧ್ಯದಲ್ಲಿ ವಿರಾಜಮಾನವಾಗಿವೆ.

ಶ್ರೀ ಚಿತ್ರಾಪುರ ಮಠವು ಮೊದಲು ಭಾಟ್ಟ ಸಂಪ್ರದಾಯಮಠವಿದ್ದಾಗ ಶ್ರೀ ವಿಜಯಧ್ವಜ ತೀರ್ಥರು ಅಲ್ಲಿದ್ದ ಆಗಿನ ಶ್ರೀಗಳವರನ್ನು ಪರಾಜಯಗೊಳಿಸಿ ಮಾಧ್ವರನ್ನಾಗಿ ಮಾಡಿ ಆ ಮಠದಲ್ಲಿ ಶ್ರೀಮದಾಚಾರ್ಯರ ಶುದ್ಧ ಸಂಪ್ರದಾಯ ನಡೆಯುವಂತೆ ಮಾಡಿದರು. ಶ್ರೀ ಆಚಾರ್ಯ ಕರಾರ್ಚಿತ ರುಕ್ಮಿಣಿ ಸತ್ಯಭಾಮಾ ಸಮೇತ ಕಾಲಿಯಾ ಮರ್ದನ ಕೃಷ್ಣ ವಿಗ್ರಹಗಳನ್ನು ಅನುಗ್ರಹಿಸಿದರು. ಅಂದಿನಿಂದ ಈ ಮಠವು ಶ್ರೀ ವಿಜಯಧ್ವಜಾಚಾರ್ಯರ ಸತ್ ಸಂಪ್ರದಾಯ ಪ್ರವರ್ತಕ ಪೀಠವಾಗಿದೆ.

ಈ ಮಠದ ಪರಂಪರೆಯಲ್ಲಿ ಶ್ರೀ ವರದೇಂದ್ರರೆಂಬ ಯತಿಗಳು ಬಹಳ ಪ್ರಸಿದ್ಧರು. ಇವರು ೧೫೪೮ ನೇ ಇಸ್ವಿಯಲ್ಲಿ ಇದ್ದರೆನ್ನಲಿಕ್ಕೆ ಶಿಲಾ ಶಾಸನಗಳ ಆಧಾರವಿದೆ.

ಈ ಪೀಳಿಗೆಯಲ್ಲಿ ೧೮ ಜನ ಶ್ರೀಪಾದಂಗಳವರು ಮಾತ್ರ ಹೆಸರುಗೊಂಡಿದ್ದಾರೆ. ಇವರಲ್ಲಿ ಶ್ರೀ ವಿಶ್ವೇಂದ್ರ ತೀರ್ಥರೆಂಬುವರು ಶ್ರೀ ದುರ್ಗಾಷ್ಟಕವೆಂಬುದನ್ನು ಬರೆದಿದ್ದಾರೆ. ಶ್ರೀವಿದ್ಯಾಧಿರಾಜರ ವೃಂದಾವನವು ತಿರುಪತಿಯಲ್ಲಿದೆ. ಚಿತ್ರಾಪುರದಲ್ಲಿ ೧೧ ಜನರ ವೃಂದಾವನಗಳಿವೆ. ಉಳಿದ ಏಳು ಜನರ ವೃಂದಾವನಗಳು ಎಲ್ಲಿ ಇವೆ ಎಂಬುದು ತಿಳಿದಿಲ್ಲ. ಇತ್ತೀಚಿನವರಲ್ಲಿ ಶ್ರೀವಿದ್ಯಾಸಾಗರತೀರ್ಥರೂ, ಶ್ರೀವಿದ್ಯಾಪೂರ್ಣತೀರ್ಥರೂ ಪ್ರಸಿದ್ಧರು.

## ಶ್ರೀ ಚಿತ್ರಾಪುರ ಮಠದ ಶ್ರೀ ಗುರು ಪರಂಪರೆ

| | | | | | |
|---|---|---|---|---|---|
| ೧ | ಶ್ರೀ ಮಧ್ವಾಚಾರ್ಯರು | | ೧೧ | ವಿಶ್ವೇಶ | ,, |
| ೨ | ವಿಜಯಧ್ವಜರು | | ೧೨ | ವೇದಗರ್ಭ | ,, |
| ೩ | ವಿದ್ಯಾಧಿರಾಜರು | | ೧೩ | ವಿಶ್ವಾಧೀಶ | ,, |
| ೪ | ವಿದ್ಯಾನಿಧಿ ತೀರ್ಥರು | | ೧೪ | ವಿಶ್ವೇಂದ್ರ | ,, |
| ೫ | ವಿದ್ಯೇಶ | ,, | ೧೫ | ವಿಶ್ವನಿಧಿ | ,, |
| ೬ | ವರದೇಂದ್ರ | ,, | ೧೬ | ವಿದ್ಯಾರಾಜ | ,, |
| ೭ | ವಿಶ್ವಪ್ರಮೋದ | ,, | ೧೭ | ವಿದ್ಯಾಸಾಗರ | ,, |
| ೮ | ವಿಶ್ವಾನಂದ | ,, | ೧೮ | ವಿಬುಧಪ್ರಿಯ | ,, |
| ೯ | ವಿದ್ಯಾಸಮುದ್ರ | ,, | ೧೯ | ವಿದ್ಯಾಪೂರ್ಣ | ,, |
| ೧೦ | ವಿಬುಧೇಶ | ,, | ೨೦ | ವಿದ್ಯಾವಲ್ಲಭತೀರ್ಥರು (ಈಗಿದ್ದವರು) | |

## ಶ್ರೀ ೧೦೮ ಶ್ರೀ ವಿದ್ಯಾವಲ್ಲಭ ತೀರ್ಥ ಶ್ರೀಪಾದಂಗಳವರು



ಪ್ರಕೃತ ಈ ಪೀಠದಲ್ಲಿ ಶ್ರೀ ವಿದ್ಯಾವಲ್ಲಭ ತೀರ್ಥ ಶ್ರೀಪಾದಂಗಳವರು ವಿರಾಜಮಾನರಾಗಿರುವರು. ೧೯೫೩ ರಲ್ಲಿಯೇ ಇವರ ಗುರುಗಳಾದ ಶ್ರೀ ವಿದ್ಯಾಪೂರ್ಣ ತೀರ್ಥರು ಇವರಿಗೆಯತ್ಯಾಶ್ರಮವನ್ನು ನೀಡಿ ಪ್ರಣವೋಪದೇಶ ಮಾಡಿ ಈ ಸರ್ವಜ್ಞ ಸಿಂಹಾಸನದಲ್ಲಿ ಪಟ್ಟಗಟ್ಟಿದರು.

ಇವರು ಚಿಕ್ಕವರಿದ್ದಾಗಲೇ ಶ್ರೀ ವಿದ್ಯಾಪೂರ್ಣರಲ್ಲಿ ವ್ಯಾಸಂಗ ಮಾಡಿದರು. ಮುಂದೆ ಮಹಾ ಮಂಡಲದ ಪರವಾಗಿ ಶ್ರೀ ಪೇಜಾವರ ಶ್ರೀಪಾದಂಗಳವರಿಂದ ಸ್ಥಾಪಿತವಾದ ಬೆಂಗಳೂರಿನ ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ೧೦ ವರ್ಷಗಳಿಂದ ನ್ಯಾಯ ವೇದಾಂತಗಳನ್ನು ಅಧ್ಯಯನ ಮಾಡುತ್ತ ಈಗ ಉಡುಪಿಯಲ್ಲಿ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರಲ್ಲಿ ಸುಧಾ ಪಾಠ ನಡೆಯಿಸಿರುವರು. ಶ್ರೀ ಜ್ಞಾನಮೇರುವಾದ ಶ್ರೀ ಶ್ರೀ ಸತ್ಯಧ್ಯಾನ ತೀರ್ಥರಿಂದ ಜ್ಞಾನ ಗಂಗೆಯು ಶ್ರೀ ಶ್ರೀ ಭಂಡಾರಕೇರಿ ಶ್ರೀಗಳವರಿಂದ ಶ್ರೀ ಶ್ರೀ ಪೇಜಾವರ ಶ್ರೀಗಳಿಗೆ ಶ್ರೀ ಶ್ರೀ ಪೇಜಾವರ ಸ್ವಾಮಿಗಳಿಂದ ಶ್ರೀ ಶ್ರೀ ಚಿತ್ರಾಪುರ ಮಠಾಧೀಶವರೆಗೆ ಹೇಗೆ ಅವಿಚ್ಛಿನ್ನವಾಗಿ ಹರಿದು ಬಂದಿರುವದು ಗಮನಾರ್ಹವಾಗಿದೆ.

ಇವರು ಮೇಧಾವಿಗಳೂ, ವಾಗ್ಮಿಗಳೂ ಆಗಿದ್ದು ಅಖಿಲ ಭಾರತ ಮಾಧ್ವ ಮಹಾ ಮಂಡಲದ ಸಭೆ, ಸಮ್ಮೇಲನ, ಶಿಬಿರಗಳಲ್ಲಿ ಭಾಗವಹಿಸಿ ಪ್ರವಚನ, ಉಪನ್ಯಾಸಾದಿಗಳಿಂದ ಅನುಗ್ರಹಿಸುತ್ತಲಿರುವರು.



# ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ

ಶ್ರೀ ಮಧ್ವಾಚಾರ್ಯರ ಪಾದ ಧೂಳಿಯಿಂದ ಪವಿತ್ರವಾದ ಗೋವೆಯಲ್ಲಿ ಶ್ರೀಮದಾಚಾರ್ಯರ ಶುಭಾಗಮನದ ಕುರುಹು ಎನ್ನುವಂತೆ ಗೌಡ ಸಾರಸ್ವತ ವೈಷ್ಣವ ಬ್ರಾಹ್ಮಣರ ಶ್ರೀ ಸಂಸ್ಥಾನ ಪರ್ತಗಾಳಿ ಜೀವೋತ್ತಮ ಮಠವು ಪರ್ತಗಾಳಿಯಲ್ಲಿ ಆಚಾರ್ಯರ ದ್ವೈತ ತತ್ವ ಜ್ಞಾನವನ್ನು ಪ್ರತಿಪಾದಿಸಿ ಪ್ರಚಾರ ಮಾಡುತ್ತ ಮಾಧ್ವ ಧ್ವಜವನ್ನು ಎತ್ತಿ ನಿಂತಿದೆ.

ಈ ಮಠವುಳ್ಳ ಪರ್ತಗಾಳಿ ಎಂಬ ಪ್ರದೇಶವು ಗೋವೆಯ ದಕ್ಷಿಣ ಭಾಗದ ಕಾಣಕೋಣ ವಲಯದಲ್ಲಿದೆ. ಇದರ ಸುತ್ತು ಮುತ್ತಲು ಅರಣ್ಯಗಳಿರುವದರಿಂದ "ಪರ್ವತ ಕಾನನ"ವೆಂಬ ಹೆಸರು ಬಂದಿದೆ. ಕುಶಾವತೀ ನದೀ ತೀರದಲ್ಲಿರುವ ಭವ್ಯ ವಾದ ಈ ಮಠವು ನಿಸರ್ಗ ರಮಣೀಯವಾಗಿ ತಪೋನುಷ್ಠಾನಕ್ಕೆ ಬಹಳ ಯೋಗ್ಯ ವಾಗಿದೆ.

ಈ ಮಠದ ಆದ್ಯ ಗುರುಗಳು ಶ್ರೀ ನಾರಾಯಣ ತೀರ್ಥ ಶ್ರೀಪಾದಂಗಳವರು ಜಗದ್ಗುರು ಶ್ರೀ ಮಧ್ವಾಚಾರ್ಯ ಗುರುಗಳ ಪರಂಪರೆಯಲ್ಲಿ ಶ್ರೀ ರಾಮ ದೇವರ ಮೂರ್ತಿಯನ್ನೂ, ದಂಡದೀಕ್ಷೆ, ಮಂತ್ರೋಪದೇಶ, ತಪ್ತ ಮುದ್ರಾಧಾರಣೆಯ ಅಧಿಕಾರ ವನ್ನು ಪಡೆದು ಸಾಸಷ್ಟಿ ಪ್ರಾಂತದ ಮುಖ್ಯ ಪಟ್ಟಣವಾದ ಮಡಗಾವಿನಲ್ಲಿ (ಮಠ ಗ್ರಾಮ) ವೈಷ್ಣವ ಮಠವನ್ನು ನಿರ್ಮಿಸಿದರು.

ಮುಂದೆ ಈ ಮಠವು ಪೋರ್ತಗೀಜರ ಹಾವಳಿಯಿಂದ ನಾಶವಾದ್ದರಿಂದ ಭಟಕಳ ದಲ್ಲಿ ಮಠವನ್ನು ಸ್ಥಾಪಿಸಿದರು.

ಶ್ರೀ ನಾರಾಯಣ ತೀರ್ಥರು ಮಹಾ ಮಹಿಮಾಶಾಲಿಗಳು. ಇವರು ಸಂಚಾರ ಮಾಡುತ್ತ ಕೆಳದಿಗೆ ಬಂದರು. ಅಲ್ಲಿಯ ಸಿದ್ದಣ್ಣ ನಾಯಕನು ಇವರ ಮಹಿಮೆಗೆ ಮಾರು ಹೋಗಿ ಮಠ, ಮಾನ್ಯಗಳನ್ನೂ "ಶ್ರೀಪಾದ ಒಡೆಯರು"ಎಂಬ ಬಿರುದನ್ನೂ ಕೊಟ್ಟನು.

ಅಂದಿನಿಂದ ಶ್ರೀ ಮಠದ ಶ್ರೀಗಳವರಿಗೆ ಶ್ರೀಪಾದ ಒಡೆಯರೆಂದೇ ಕರೆಯುವ ಪರಿಪಾಠ ಬಂದಿದೆ. ಹೀಗೆ ಈ ಮಠದಲ್ಲಿ ಶ್ರೀ ಜೀವೋತ್ತಮ ತೀರ್ಥರು, ಶ್ರೀ ಇಂದಿರಾ ಕಾಂತ ತೀರ್ಥರೇ ಮೊದಲಾದ ಯತೀಶ್ವರರು ಆಳಿದ್ದಾರೆ. ಈ ಪರಂಪರೆಯಲ್ಲಿಯ ಶ್ರೀಗಳವರು ಮಹಾ ಮಹಿಮಾಶಾಲಿಗಳೂ, ವಿರಾಗಿಯೋಗಿಗಳೂ ವಿದ್ವದ್ವರೇಣ್ಯರೂ ಗ್ರಂಥಕಾರರೂ ಆಗಿ ಬೆಳಗಿ ಕೀರ್ತಿಶಾಲಿಗಳಾಗಿದ್ದಾರೆ.

## ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ನಾರಾಯಣ ತೀರ್ಥರು
೩ ವಾಸುದೇವ ,,
೪ ಜೀವೋತ್ತಮ ,,
೫ ಪುರುಷೋತ್ತಮ ,,
೬ ಅಣುಜೀವೋತ್ತಮ ತೀರ್ಥರು
೭ ರಾಮಚಂದ್ರ ,,
೮ ದಿಗ್ವಿಜಯರಾಮಚಂದ್ರ ,,
೯ ಲಕ್ಷ್ಮೀಕಾಂತ ,,
೧೦ ರಮಾಕಾಂತ ,,
೧೧ ಕಮಲಾಕಾಂತ ,,
೧೨ ಶ್ರೀಕಾಂತ ,,
೧೩ ಭೂವಿಜಯರಾಮಚಂದ್ರ
೧೪ ರಮಾನಾಥ ,,
೧೫ ಲಕ್ಷ್ಮೀನಾಥ ,,
೧೬ ಪೂರ್ಣಪ್ರಜ್ಞ ,,
೧೭ ಪದ್ಮನಾಭ ,,
೧೮ ಇಂದಿರಾಕಾಂತ ,,
೧೯ ಕಮಲಾನಾಥ ,,
೨೦ ದ್ವಾರಕಾನಾಥತೀರ್ಥರು (ಈಗಿದ್ದವರು)
ವಿದ್ಯಾಧಿರಾಜತೀರ್ಥರು (ಚಿಕ್ಕಪಟ್ಟ)



(ಎಡದಿಂದ ಬಲಕ್ಕೆ) ಶ್ರೀ ಗೋಕರ್ಣ ಶ್ರೀ ಪರ್ತಗಾಳಿ ಮಠಾಧೀಶರು ಶ್ರೀ ಶ್ರೀ ಭಂಡಾರಕೇರಿ ಮಠಾಧೀಶರು, ಶ್ರೀ ಶ್ರೀ ಪೇಜಾವರ ಶ್ರೀಗಳು

## ಶ್ರೀ ೧೦೮ ಶ್ರೀ ದ್ವಾರಕಾನಾಥ ತೀರ್ಥ ಶ್ರೀಪಾದ ಒಡೆಯರು



ಪ್ರಕೃತ ಈ ಪೀಠದಲ್ಲಿ ಇಪ್ಪತ್ತೆರಡನೆಯವರಾದ ಶ್ರೀ ದ್ವಾರಕಾನಾಥ ಶ್ರೀಪಾದ ಒಡೆಯರು ವಿರಾಜಮಾನರಾಗಿರುವರು. ಇವರು ಪೂರ್ವಾಶ್ರಮದಲ್ಲಿ ಮಂಗಳೂರ ಜಿಲ್ಲೆ ಬಸರೂರವರು. ಇವರ ಮಾತಾಪಿತೃಗಳು ಇವರಿಗೆ ಗೋವಿಂದಾಚಾರ್ಯರೆಂದು ಕರೆದರು.

ಇವರು ಬಹು ಚಿಕ್ಕವಯಸ್ಸಿನಲ್ಲಿ ಶಕೆ ೧೮೬೪ ರಲ್ಲಿ ಶ್ರೀ ಕಮಲಾನಾಥ ಶ್ರೀಪಾದ ಒಡೆಯರಿಂದ ಆಶ್ರಮ ಸ್ವೀಕರಿಸಿ ಪ್ರಣವೋಪದೇಶಪಡೆದು ಶ್ರೀ ದ್ವಾರಕಾನಾಥತೀರ್ಥರೆಂದು ವೇದಾಂತ ಸಿಂಹಾಸನಾರೋಹಣಮಾಡಿದರು.

ಶ್ರೀ ಶ್ರೀಗಳವರು ಮಹಾ ತೇಜಸ್ವಿಗಳೂ, ಒಳ್ಳೇ ಪ್ರತಿಭಾ ಶಾಲಿಗಳೂ, ಘನ ವಿದ್ವಾಂಸರೂ, ವಾಕ್ಚತುರರೂ, ಅತ್ಯಂತ ನಿಷ್ಠರೂ ಶ್ರೀಮದಾಚಾರ್ಯರ ಸಿದ್ಧಾಂತ ಪ್ರಚಾರದಲ್ಲಿ ದೀಕ್ಷಾಬದ್ಧರೂ ಆಗಿರುವರು.

ಶ್ರೀಗಳವರು ವಿದ್ಯಾಪಕ್ಷಪಾತಿಗಳಾದ್ದರಿಂದ ಗೋವೆಯಲ್ಲಿ "ಶ್ರೀ ಕಮಲಾನಾಥ ಮರಾಠಿ ವಿದ್ಯಾಲಯ" "ಇಂದಿರಾಕಾಂತ ಸಂಸ್ಕೃತ ಪಾಠಶಾಲೆ" "ಇಂದಿರಾಕಾಂತ ಪುಸ್ತಕ ಭಾಂಡಾರ" ಮುಂತಾದವುಗಳನ್ನು ಪ್ರಾರಂಭಿಸಿದ್ದಾರೆ.

ಶ್ರೀಗಳವರು ಮಠದಿಂದ "ದ್ವೈತಾರ್ಥ ಮಂಜರಿ" "ಶ್ರೀಮಜ್ಜಯತೀರ್ಥ ವಿಜಯ" "ದ್ವೈತಮಂಡನೆ" ಎಂಬ ಗ್ರಂಥಗಳನ್ನು ಪ್ರಸಿದ್ಧಿಸಿದ್ದಾರೆ.

ಪರ್ತಗಾಳಿಯಲ್ಲಿ ಇವರ ಮಠದಲ್ಲಿ ದೊಡ್ಡ ಗೋಶಾಲೆ ಇದ್ದು, ನೂರಾರು ಗೋವುಗಳು ಸಂರಕ್ಷಿತವಾಗುತ್ತಲಿವೆ.

ಮುಂಬೈ ವಡಾಲಾದಲ್ಲಿ ದ್ವಾರಕಾನಾಥಭವನ, ರಾಮ ಮಂದಿರಗಳನ್ನು ಭವ್ಯವಾಗಿ ನಿರ್ಮಿಸಿ ಭಕ್ತರ ಉಪಯೋಗಕ್ಕೆ ಬಿಟ್ಟಿದ್ದಾರೆ.

ಇದು ಮುಂಬೈಯಲ್ಲಿ ಹಿಂದೂ ಸಮಾಜದ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಉನ್ನತಿಯ ಕೇಂದ್ರವಾಗಿದೆ. "ಸಂಸ್ಕೃತ ಶಿಕ್ಷಣ ಪ್ರಸಾರ ಸಮಿತಿ'' ಎಂಬ ಸಂಸ್ಥೆಯನ್ನು ಸ್ಥಾಪಿಸಿ "ಶ್ರೀ ಪೂರ್ಣಪ್ರಜ್ಞ ಸಂಸ್ಕೃತ ಪಾಠಶಾಲೆ"ಯೊಂದನ್ನು ನಡೆಸುತ್ತಲಿದ್ದಾರೆ.

ಬೆಂಗಳೂರಿನ ಬಸವನಗುಡಿಯಲ್ಲಿ "ದ್ವಾರಕಾನಾಥ ಭವನ" ಎಂಬ ದೊಡ್ಡ ಕಟ್ಟಡವನ್ನು ನಿರ್ಮಿಸಿ ಸಮಾಜದ ಧಾರ್ಮಿಕ ಕಾರ್ಯಗಳಿಗಾಗಿ ಕೊಟ್ಟಿರುವರು.

ಅನೇಕ ಕಡೆಗಳಲ್ಲಿ ಮಠ-ಮಂದಿರಗಳನ್ನು ಕಟ್ಟಿಸಿ ಧರ್ಮ ಜಾಗ್ರುತಿಯನ್ನು ಮಾಡುತ್ತಲಿದ್ದಾರೆ.

ಈಗ ಗೋವೆಯಲ್ಲಿ ತಮ್ಮ ಪರ್ತಗಾಳಿ ಪರಿಸರದಲ್ಲಿ ಒಂದು ಮಹಾ ವಿಶ್ವವಿದ್ಯಾಲಯವನ್ನೇ ನಿರ್ಮಿಸಬೇಕೆಂಬ ಬೃಹದ್ಯೋಜನೆಯನ್ನು ರೂಪಿಸಿರುವರು. ಈ ಯೋಜನೆ ರೂಪಗೊಂಡಲ್ಲಿ ಮಾಧ್ವರ ಭಾಗ್ಯದ ಬಾಗಿಲವೇ ತೆರೆದಂತಾಗುವದು.

ಶ್ರೀಗಳವರು ಪ್ರಾರಂಭದಿಂದಲೂ ಮಾಧ್ವ ಮಹಾ ಮಂಡಲದ ಮೇಲೆ ಅನುಗ್ರಹ ಮಾಡುತ್ತ, ಅನೇಕ ಸಭೆ-ಸಮ್ಮೇಲನಗಳಲ್ಲಿ ಭಾಗವಹಿಸಿ ಅನುಗ್ರಹ ಭಾಷಣ, ಉಪದೇಶಗಳನ್ನು ನೀಡುತ್ತಲಿರುವರು.

ಹಿಂದಿನ ರಾಷ್ಟ್ರಾಧ್ಯಕ್ಷರಾದ ಡಿ. ರಾಜೇಂದ್ರಪ್ರಸಾದ, ಡಿ. ಬಿ. ಜಿ. ಖೇರ, ಗವ್ಹರ್ನರ ಶಿವಶಂಕರ ಮೊದಲಾದವರು ಶ್ರೀಗಳವರಲ್ಲಿ ಬಂದು ಶ್ರೀಗಳವರಿಂದ ಉಪದೇಶ, ತೀರ್ಥ-ಪ್ರಸಾದಗಳನ್ನು ಪಡೆದು ಧನ್ಯರಾಗಿ ಶ್ರೀಗಳವರ ನಾನಾ ಮುಖ ಸೇವೆಯನ್ನು ಕಂಡು ಸಂತೋಷಪಟ್ಟು ಹೋಗಿದ್ದಾರೆ.



ಶ್ರೀ ಗೋಕರ್ಣ ಪರ್ತಗಾಳಿ ಮಠಾಧೀಶರು ಮತ್ತು ಶ್ರೀ ಪೇಜಾವರ ಮಠಾಧೀಶರು

# ಶ್ರೀ ಸುಬ್ರಹ್ಮಣ್ಯ ಮಠ

ಈ ಮಠವು ಶ್ರೀಮದಾಚಾರ್ಯರ ಅಚ್ಚುಮೆಚ್ಚಿನ ಸಾಕ್ಷಾತ್ ಶ್ರೀ ಶಿಷ್ಯರಾದ ಶ್ರೀ ವಿಷ್ಣು ತೀರ್ಥರ ಪರಂಪರೆಗೆ ಸೇರಿದ್ದು. ಶ್ರೀ ಸುಬ್ರಹ್ಮಣ್ಯ ಮಠಕ್ಕೆ ಮಾಧ್ವ ಮಠಗಳ ಚರಿತ್ರೆಯಲ್ಲಿ ಒಂದು ವಿಶಿಷ್ಟ ಸ್ಥಾನವುಂಟು.

ಶ್ರೀಮದಾಚಾರ್ಯರೇ ವಿಷ್ಣು ತೀರ್ಥರನ್ನು ಸುಬ್ರಹ್ಮಣ್ಯ ಮಠಕ್ಕೆ ನೇಮಿಸಿದರು. ಉಡುಪಿಯ ಅಷ್ಟ ಮಠಗಳಲ್ಲಿ ಒಂದಾದ ಶ್ರೀ ಸೋದೆ ಮಠಕ್ಕೂ ಶ್ರೀ ವಿಷ್ಣು ತೀರ್ಥರೇ ಮೂಲ ಪುರುಷರು.

ಶ್ರೀ ವಿಷ್ಣು ತೀರ್ಥರಿಗೆ ಶ್ರೀ ವೇದವ್ಯಾಸ ತೀರ್ಥರೂ, ಶ್ರೀ ಅನಿರುದ್ಧ ತೀರ್ಥರೂ ಎಂಬ ಇಬ್ಬರು ಶಿಷ್ಯರಿದ್ದರು. ಶ್ರೀ ಅನಿರುದ್ಧ ತೀರ್ಥರನ್ನು ಶ್ರೀ ಸುಬ್ರಹ್ಮಣ್ಯ ಮಠಕ್ಕೆ ನೇಮಿಸಿದರು ಶ್ರೀ ವಿಷ್ಣು ತೀರ್ಥರು.

ಶ್ರೀ ಸುಬ್ರಹ್ಮಣ್ಯದಲ್ಲಿದ್ದ ಹಿಂದಿನ ಭಟ್ಟಾಚಾರ್ಯ ಸಂಪ್ರದಾಯದ ನರಸಿಂಹ ತೀರ್ಥರೆಂಬುವರನ್ನು ಶ್ರೀ ಮಧ್ವಾಚಾರ್ಯರು ವಾದದಲ್ಲಿ ಗೆದ್ದರು. ಆಗ ಅಲ್ಲಿದ್ದ ಈ ಮಠವನ್ನು ಅವರು ಆಚಾರ್ಯರಿಗೆ ಒಪ್ಪಿಸಿದ ಮೇಲೆ ಶ್ರೀಮದಾನಂದ ತೀರ್ಥರು ಪರಶುರಾಮಾರ್ಚಿತವಾದ ನರಸಿಂಹ ಮೂರ್ತಿಯನ್ನು ತಮ್ಮ ಬಳಿಯಲ್ಲಿಟ್ಟುಕೊಂಡು ತಮ್ಮಲ್ಲಿದ್ದ ಪಾಂಡುರಂಗ ವಿಠ್ಠಲ ವಿಗ್ರಹ ಮತ್ತು ವ್ಯಾಸ ಸಂಪುಟವನ್ನು ಮಠದಲ್ಲಿಟ್ಟು ಪ್ರತಿ ದಿನವೂ ಕ್ರಮವಾಗಿ ಬೆಳಿಗ್ಗೆ ಸುಬ್ರಹ್ಮಣ್ಯದಲ್ಲಿಯೂ ಸಂಜೆಗೆ ಉಡುಪಿಯಲ್ಲಿಯೂ ಪೂಜಿಸುತ್ತಿದ್ದರು.

ಮುಂದೆ ವಿಷ್ಣು ತೀರ್ಥರು ಇವುಗಳನ್ನು ಪೂಜಿಸುತ್ತಿದ್ದರು. ವಿಷ್ಣು ತೀರ್ಥರ ಕುಮಾರ ಪರ್ವತದಲ್ಲಿ ತಪಸ್ಸಿಗೆ ಕುಳಿತರು. ಶ್ರೀ ವಿಷ್ಣು ತೀರ್ಥರು ಕುಮಾರ ಪರ್ವತಕ್ಕೆ ಹೋಗುವ ಮೊದಲು ಶ್ರೀ ಅನಿರುದ್ಧ ತೀರ್ಥರಿಗೆ ವ್ಯಾಸಮುಷ್ಟಿ, ನರಸಿಂಹ ವಿಠ್ಠಲ ಮೂರ್ತಿಗಳನ್ನು ಕೊಟ್ಟು ಸುಬ್ರಹ್ಮಣ್ಯದಲ್ಲಿಟ್ಟರು.

ಶ್ರೀ ಅನಿರುದ್ಧ ತೀರ್ಥರು ಸಂಪುಟ ಪೂಜಾ ಮಾಡುವ ಅಭಿಲಾಷೆಯಿಂದ ಸಂಪುಟ ಪ್ರಾಪ್ತಿಯಾಗಬೇಕೆಂದು ಚಿಂತಿಸುತ್ತಿರಲು ಶ್ರೀ ವಿಷ್ಣು ತೀರ್ಥರು ಸ್ವಪ್ನದಲ್ಲಿ ಬಂದು ಅನಿರುದ್ಧ ತೀರ್ಥರಿಗೆ ಆದೇಶ ನೀಡಿದರು.

ಶ್ರೀ ವಿಷ್ಣು ತೀರ್ಥರ ಆದೇಶಾನುಸಾರವಾಗಿ ಬೆಳಿಗ್ಗೆ ಶ್ರೀ ಅನಿರುದ್ಧ ತೀರ್ಥರು ತಮ್ಮ ಆಹ್ನಿಕಾದಿಗಳನ್ನು ತೀರಿಸಿಕೊಂಡು ಕುಮಾರಧಾರಾ ಪ್ರವಾಹದಲ್ಲಿ ದಾರಿ ನೋಡುತ್ತಿರಲು ಅಭೀಷ್ಟ ಸಂಪುಟ, ಅಕ್ಷಯ ಪಾತ್ರೆ, ದರ್ಪಣಗಳು ಪ್ರವಾಹದಲ್ಲಿ ತೇಲಿ ಬಂದವು.

ಶ್ರೀಗಳವರು ಆ ಸಂಪುಟಾದಿಗಳನ್ನು ತಕ್ಕೊಂಡು ಮಠದಲ್ಲಿಟ್ಟು ಪೂಜಿಸ ತೊಡಗಿದರು. ಅಕ್ಷಯಪಾತ್ರೆ, ದರ್ಪಣವನ್ನು ದೇವಸ್ಥಾನಕ್ಕೆ ಕೊಟ್ಟರು.

ಆ ದೇಶದ ಅರಸನಾದ ಬಲ್ಲಾಳ ರಾಜನು ಆ ಸಂಪುಟದಲ್ಲಿ ಏನಿದೆಂದು ಕೇಳಿದನು. ಶ್ರೀಗಳವರು ಅದಕ್ಕೆ ಆ ಸಂಪುಟದಲ್ಲಿ ೧೨ ಕ್ಷೇತ್ರ ಲಕ್ಷ್ಮೀ ನರಸಿಂಹ ಶಾಲಿ ಗ್ರಾಮಗಳಿವೆಯೆಂದೂ ಹಾಗೂ ಆ ಸಂಪುಟವು ಅಭೇದ್ಯವಾಗಿದೆಂದೂ ಹೇಳಿದರು.

ರಾಜನಿಗೆ ಶ್ರೀಗಳವರ ಮಾತು ನಿಜವೆಂದು ತೋರದೆ ಆ ಸಂಪುಟಗಳನ್ನು ಚಾಣಗಳಿಂದ ಒಡೆಯಲು ಪ್ರಯತ್ನಿಸಿದನು. ಆದರೂ ಅದು ಒಡೆಯಲಿಲ್ಲ. ಆ ಸಂಪುಟದ ಮೇಲೆ ಆ ಚಾಣದ ಕಲೆಗಳು ಇಂದಿಗೂ ಇವೆ.

ಮುಂದೆ ರಾಜನು ಆ ಸಂಪುಟವನ್ನು ಆನೆ ಕಾಲಿಗೆ ಕೊಟ್ಟು ಒಡೆಯಬೇಕೆಂದು ಎಷ್ಟು ಪ್ರಯತ್ನ ಪಟ್ಟರೂ ಅದು ಅಭೇದ್ಯವಾಗಿಯೇ ಉಳಿಯಿತು. ಆ ಸಂಪುಟವನ್ನು ತುಳಿದ ಆನೆಯು ಸಂಕಟಪಡುತ್ತ ಒದರುತ್ತ ದರ್ಪಣ ತೀರ್ಥದಲ್ಲಿ-ಬಿದ್ದು ಸತ್ತಿತು.

ಆ ರಾಜನಿಗೆ ಗುರು ದ್ರೋಹದಿಂದ ಮೈಯಲ್ಲಿ ಉರಿಯು ಪ್ರಾರಂಭವಾಯಿತು. ಏನು ಮಾಡಿದರೂ ರಾಜನಿಗೆ ಸಂಕಟ ಕಡಿಮೆಯಾಗಲಿಲ್ಲ. ಆಗ ರಾಜನು ಶ್ರೀ ಅನಿರುದ್ಧ ತೀರ್ಥರಲ್ಲಿ ಬಂದು ಬೇಡಿಕೊಳ್ಳಲು ಶ್ರೀಗಳವರು ಅನುಗ್ರಹ ಮಾಡಿ ದೇವರಿಗೆ ಅರ್ಪಿತವಾದ ಬೆಣ್ಣೆ, ಹತ್ತಿ ಮುಂತಾದ್ದನ್ನು ಅವನಿಗೆ ಹಚ್ಚಿದರೆ ಕಡಿಮೆಯಾಗುತ್ತದೆಂದು ಹೇಳಿದರು. ಆ ಪ್ರಕಾರ ಮಾಡಲು ರಾಜನ ದಾಹವು ಶಮನವಾಯಿತು.

ಕೂಡಲೇ ರಾಜನು ಸುಬ್ರಹ್ಮಣ್ಯ ದೇವಸ್ಥಾನದ ಸರ್ವಾಧಿಕಾರವನ್ನು ಶ್ರೀಗಳವರಿಗೆ ಅರ್ಪಿಸಿದನು. ಮಯೂರಾಂಕಿತ ಮುದ್ರೆ ಹಾಗೂ ಆ ಸಂಪುಟಕ್ಕೆ ಸುವರ್ಣಾಲಂಕಾರಗಳನ್ನು ಮಾಡಿಸಿಕೊಟ್ಟನು. ಸುಬ್ರಹ್ಮಣ್ಯ ಮಠದಲ್ಲಿ ಆ ಸಂಪುಟಕ್ಕೆ ನಿತ್ಯವೂ ಮಠದ ಶ್ರೀಗಳವರಿಂದಲೇ ಪೂಜೆ ನಡೆಯುತ್ತಿದೆ.

ಈ ಪೀಠದಲ್ಲಿ ಅನೇಕ ಯತಿ ಪುಂಗವರು ಆಗಿ ಹೋಗಿದ್ದಾರೆ. ಇವರೆಲ್ಲರೂ ಮಹಾ ತಪಸ್ವಿಗಳೂ ವೈರಾಗ್ಯ ಮೂರ್ತಿಗಳೂ ಆಗಿ ಬೆಳಗಿ ಬಾಳಿದರು. ಇಲ್ಲಿಯವರೆಗೆ ಈ ಪರಂಪರೆಯಲ್ಲಿ ೩೫ ಜನ ಯತಿ ಪತಿಗಳು ಈ ಪೀಠವನ್ನಲಂಕರಿಸಿರುವರು.

ಈ ಪರಂಪರೆಯಲ್ಲಿ ೧೪ನೇಯವರಾದ ಶ್ರೀ ವಿಬುಧೇಶ ತೀರ್ಥರು ಮಹಾ ಪ್ರಸಿದ್ಧರು. ೧೬ನೇಯವರಾದ ಶ್ರೀವೇದಪೂಜ್ಯ ತೀರ್ಥರು ಮಹಾತಪಸ್ವಿಗಳು. ೧೯ನೇಯವರಾದ ಶ್ರೀ ವರದರಾಜ ತೀರ್ಥರ (೧೫೪೧ನೇ ಇಸ್ವಿ) ಕಾಲದಲ್ಲಿ ಬೇಲೂರ ಪಾಳೆಯಗಾರನಾದ ರಂಗರಾಯನು (೧೫೪೬ನೇ ಇಸ್ವಿಯಲ್ಲಿ) ಹಲಸೂರು, ಹೆಗ್ಗೋವೆ ಎಂಬ ಗ್ರಾಮಗಳನ್ನು ಶ್ರೀಗಳವರಿಗೆ ತಾಮ್ರಶಾಸನ ಮೂಲಕ ಇನಾಮಾಗಿ ಹಾಕಿಕೊಟ್ಟಿದ್ದಾನೆ.

೩೫ನೇಯವರಾದ ಶ್ರೀ ವಿಶ್ವಜ್ಞ ತೀರ್ಥರು ಮಠವನ್ನು ಜೀರ್ಣೋದ್ಧಾರ ಮಾಡಿ ಭವ್ಯವಾಗಿ ಕಟ್ಟಿಸಿದ್ದಾರಲ್ಲದೆ ಮಠಕ್ಕೆ ಆದಾಯ ಬರುವಂತೆಯೂ ಮಾಡಿದ್ದಾರೆ.

ಈ ಮಠದಲ್ಲಿ-ಇಬ್ಬರು ಶ್ರೀಗಳವರು ಇರುವದು ಸಂಪ್ರದಾಯ. ಒಬ್ಬರು ಸಂಚಾರ ಮಾಡಿ ಆಚಾರ್ಯ ಸಿದ್ಧಾಂತವನ್ನು ಪ್ರಚಾರ ಮಾಡುವದೂ, ಇನ್ನೊಬ್ಬರು ಮಠದಲ್ಲಿಯೇ ಇದ್ದು ಶ್ರೀ ಸಂಪುಟ ನರಸಿಂಹ ದೇವರನ್ನು ಪೂಜಿಸುವದು.

## ಶ್ರೀ ಸುಬ್ರಹ್ಮಣ್ಯ ಮಠದ ಶ್ರೀ ಗುರು ಪರಂಪರೆ

೧ ಶ್ರೀ ಮಧ್ವಾಚಾರ್ಯರು
೨ ವಿಷ್ಣು ತೀರ್ಥರು
೩ ಅನಿರುದ್ಧ ,,
೪ ವರಾಹಮುನಿ ತೀರ್ಥರು
೫ ವಾಗೀಶ ,,
೬ ವಿಶ್ವೇಶ ,,
೭ ವೆಂಕಟೇಶ ,,
೮ ವಾಕ್ಪತಿ ,,
೯ ವಿದ್ಯಾಪತಿ ,,
೧೦ ವಾಸುದೇವ ,,
೧೧ ವಾಮನ ,,
೧೨ ವೇದವ್ಯಾಸ ,,
೧೩ ವೈಕುಂಠವಲ್ಲಭ ,,
೧೪ ವಿಜ್ಞಾನ ,,
೧೫ ವಿಮಲಾಮೃತ ,,
೧೬ ವಿಬುಧೇಶ ,,
೧೭ ವೇದಗರ್ಭ ,,
೧೮ ವೇದಪೂಜ್ಯ ,,
೧೯ ವೇದೇಶ ,,
೨೦ ವಿದ್ಯಾಧಿರಾಜ ,,
೨೧ ವರದೇಶ ,,
೨೨ ವಿದ್ಯಾನಿಧಿ ,,
೨೩ ವೇದಾಂತನಿಧಿ ,,
೨೪ ವಿದ್ಯಾಪತಿ ,,
೨೫ ವಿಶ್ವಪೂಜ್ಯ ,,
೨೬ ವಿಶ್ವವಂದ್ಯ ,,
೨೭ ವಿಶ್ವಾಧಿಪತಿ ,,
೨೮ ವಿಶ್ವಪತಿ ,,
೨೯ ವಿಶ್ವಾಧೀಶ ,,
೩೦ ವಿದ್ಯಾಧೀಶ ,,
೩೧ ವಿದ್ಯಾವಲ್ಲಭ ,,
೩೨ ವೇದರಾಜ ,,
೩೩ ವೇದವ್ಯಾಸ ,,
೩೪ ವಿದ್ಯಾರಾಜ ,,
೩೫ ವಿದ್ಯಾಪೂರ್ಣ ,,
೩೬ ವ್ಯಾಸ ,,
೩೭ ವಿಶ್ವಜ್ಞ ,,
೩೮ ವಿದ್ಯಾಸಿಂಧು ತೀರ್ಥರು
(ಈಗಿದ್ದವರು)

ಶ್ರೀ ವಿದ್ಯಾಭೂಷಣರು ಚಿಕ್ಕಪಟ್ಟ



ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠಕ್ಕೆ ಶ್ರೀ ಶ್ರೀ ವಿಶ್ವಜ್ಞತೀರ್ಥರು ಆಗಮಿಸಿದಾಗ

## ಶ್ರೀ ೧೦೮ ಶ್ರೀ ವಿದ್ಯಾಸಿಂಧು ತೀರ್ಥ ಶ್ರೀಪಾದಂಗಳವರು



ಪ್ರಕೃತ ಈಗ ಪೀಠದಲ್ಲಿ ವಿರಾಜಮಾನರಾಗಿರುವ ಶ್ರೀ ವಿದ್ಯಾಸಿಂಧುತೀರ್ಥ ಶ್ರೀಪಾದಂಗಳವರು—ಪ್ರಾತಃಸ್ಮರಣೀಯ ಉತ್ತರಾದಿಮಠದ ಶ್ರೀ ಸತ್ಯಧ್ಯಾನತೀರ್ಥ ರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗಮಾಡಿ ಪಂಡಿತರಾಗಿದ್ದಾರೆ.

ಇವರು ದೇಶ ಸಂಚಾರ ಮಾಡಿ ಶ್ರೀಮದಾಚಾರ್ಯರ ಸತ್‌ಸಿದ್ಧಾಂತ, ಸತ್ ಸಂಪ್ರದಾಯಗಳನ್ನು ಪ್ರಚಾರ ಮಾಡಿರುವರು.

ಇವರು ಈಗ ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ನಡೆಯಿಸಿಕೊಂಡು ವಿದ್ಯಾರ್ಥಿಗಳಿಗೆ ಪಾಠ-ಪ್ರವಚನ ನಡೆಯಿಸುತ್ತಿರುವರು.

ಇವರು ಶ್ರೀ ವಿದ್ಯಾಭೂಷಣತೀರ್ಥರೆಂಬವರಿಗೆ ಆಶ್ರಮಕೊಟ್ಟು, ಶ್ರೀಮಠ ದಲ್ಲಿಯೇ ಅವರಿಗೆ ವಿದ್ಯಾವ್ಯಾಸಂಗ ಪಂಡಿತರಿಂದ ಮಾಡಿಸುತ್ತಲಿದ್ದಾರೆ. ಶ್ರೀ ವಿದ್ಯಾ ಭೂಷಣ ತೀರ್ಥರು ಆಂಗ್ಲಭಾಷಾ ಅಧ್ಯಯನ ಮಾಡಿದವರಿದ್ದು ಮಹಾ ಮೇಧಾವಿ ಗಳಾಗಿರುವರು.



# ಶ್ರೀ ಮಾಧ್ವ ಕಾಣ್ವಮಠ

ಈ ಕಾಣ್ವಪೀಠವು ಶ್ರೀಮದಾಚಾರ್ಯರ ಶುಭಸಂಪ್ರದಾಯ ಪ್ರವರ್ತಕ ಮಠವಾಗಿದೆ. ಕಳೆದ ಶತಮಾನದಲ್ಲಿ ಶ್ರೀಮಾಧವತೀರ್ಥರೆಂಬ ಯತಿವರೇಣ್ಯರು ಈ ಪೀಠವನ್ನು ಸಂಸ್ಥಾಪಿಸಿದರು.

ಇವರು ಒಳ್ಳೇ ಪಂಡಿತರೂ, ಸಂಘಟನಾ ಚತುರರೂ, ಮಹಿಮಾಶಾಲಿಗಳೂ ಆಗಿದ್ದರು. ನೈಝಾಮ ಕರ್ನಾಟಕದಲ್ಲಿಯೂ, ಬಳ್ಳಾರಿ, ಉತ್ತರ ಕರ್ನಾಟಕದಲ್ಲಿಯೂ ಇವರ ಪ್ರಭಾವದಿಂದ ಕಣ್ವ ಶಾಖೆಯಲ್ಲಿ ಅನೇಕ ಮನೆತನಗಳು ತಪ್ತ ಮುದ್ರಾ ಧಾರಣಾದಿಗಳನ್ನು ಶ್ರೀ ಮಾಧವತೀರ್ಥರಿಂದ ಪಡೆದು ಮಾಧ್ವರಾಗಿರುವರು.

ಈ ಪೀಠದಲ್ಲಿ ೧೦ ಜನ ಯತಿಪುಂಗವರು ಬೆಳಗಿ ಹೋಗಿದ್ದಾರೆ.

## ಶ್ರೀ ೧೦೮ ಶ್ರೀ ವಿದ್ಯಾತಪೋನಿಧಿತೀರ್ಥ ಶ್ರೀಪಾದಂಗಳವರು



ಪ್ರಕೃತ ಪೀಠಾರೋಹಣ ಮಾಡಿದ ಶ್ರೀ ವಿದ್ಯಾತಪೋನಿಧಿ ತೀರ್ಥರು ಶ್ರೀ ವಿದ್ಯಾಮನೋಹರತೀರ್ಥರಿಂದ ಆಶ್ರಮ ಪಡೆದಿದ್ದಾರೆ. ಇವರು ಪೂರ್ವಾಶ್ರಮದಲ್ಲಿ ರಾಯಚೂರ ಜಿಲ್ಹೆಯ ದೇವಮುಗ್ಗಾದವರು.

ಇವರು ಪಂಡಿತರೂ, ವೈರಾಗ್ಯಶಾಲಿಗಳೂ ಆಗಿರುವರು. ಹೋದ ವರ್ಷ ಶ್ರೀ ಶ್ರೀ ಪೇಜಾವರ ಶ್ರೀಗಳವರ ಪರ್ಯಾಯ ಮಹೋತ್ಸವಕ್ಕಾಗಿ ಉಡುಪಿಗೆ ಶ್ರೀಗಳವರು ಆಗಮಿಸಿ ತಮ್ಮ ಉಪನ್ಯಾಸಾದಿಗಳಿಂದ ಜನರನ್ನು ಅನುಗ್ರಹಿಸಿದರು.



# ಶ್ರೀ ಕಾಶೀಮಠ

ಈ ಕಾಶೀ ಪೀಠವು ಶ್ರೀ ಮಧ್ವಾಚಾರ್ಯರ ಶುಭ ಸಂಪ್ರದಾಯ ಪ್ರವರ್ತಕ ಮಠವಾಗಿದೆ. ಈ ಪೀಠದ ಮೂಲ ಪುರುಷರು ಕುಂಭಕೋಣದಲ್ಲಿ ಶ್ರೀ ಶ್ರೀ ವಿಜಯೀಂದ್ರ ತೀರ್ಥ ಶ್ರೀಪಾದಂಗಳವರಿಂದ ಆಶ್ರಮವನ್ನು ಪಡೆದರೆಂದು ಆ ಮಠದ ಇತಿಹಾಸದಿಂದ ತಿಳಿದುಬರುತ್ತದೆ.

ಅದಕ್ಕಾಗಿಯೇ ಶ್ರೀ ರಾಘವೇಂದ್ರ ಮಹಾ ಸ್ವಾಮಿಗಳ ಮಠದ ಸಂಪ್ರದಾಯದಂತೆ ಈ ಕಾಶೀ ಮಠದ ಶ್ರೀಪಾದಂಗಳವರು ತಮ್ಮ ಹೆಸರಿನ ಮುಂದೆ “ ಇಂದ್ರ ” ಎಂಬ ಪದವಿಯನ್ನು ಸೇರಿಸಿಕೊಳ್ಳುವ ಪರಿಪಾಠವಿದೆ. ಈ ಮಠದ ಆರಾಧ್ಯ ದೇವರು ವ್ಯಾಸ ವಿಠ್ಠಲ ರಘುಪತಿ.

ಈ ಪೀಠಕ್ಕೆ ವಾರಣಾಸಿಯಲ್ಲಿ ವಿಶಾಲವಾದ ಮಠವಿದೆ. ಉತ್ತರ ಹಿಂದುಸ್ಥಾನದಲ್ಲಿ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಪ್ರಚಾರ ಮಾಡಿದ ಕೀರ್ತಿ ಈ ಮಠಕ್ಕಿದೆ. ಈ ಮಠಕ್ಕೆ ಗೌಡ ಸಾರಸ್ವತ ಬ್ರಾಹ್ಮಣರು ಶಿಷ್ಯರಾಗಿದ್ದಾರೆ. ಶ್ರೀ ಮಠದ ಶಿಷ್ಯರು ತ್ರಾವಣಕೋರ, ಕೋಚೀನ, ಮಂಗಳೂರು, ಬೆಂಗಳೂರು, ಗೋವಾ, ಮುಂಬೈ ಕಡೆಗಳಲ್ಲಿ ವಾಸವಾಗಿರುವರು.

ಈ ಪೀಠದಲ್ಲಿ ಶ್ರೀ ಭುವನೇಂದ್ರರು ಶ್ರೀ ವರದೇಂದ್ರರಂಥ ವಾಗ್ವಿಭೂತಿಗಳೂ, ತಪಸ್ವಿಗಳೂ, ಮಹಿಮಾಶಾಲಿಗಳೂ ಆಗಿಹೋಗಿರುವರು.

## ಶ್ರೀ ೧೦ಂಲ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು



ಈಗ ಈ ಪೀಠದಲ್ಲಿ ವಿರಾಜಮಾನವಾಗಿರುವವರು ಶ್ರೀ ಸುಧೀಂದ್ರ ತೀರ್ಥ ಶ್ರೀಪಾದಂಗಳವರು. ಪೂರ್ವಾಶ್ರಮದಲ್ಲಿ ಇವರು ಕೋಚೀನದವರು. ಇಂಗ್ಲೀಷು ಮರಾಠಿ, ಕನ್ನಡ, ಸಂಸ್ಕೃತ, ಹಿಂದಿ ಭಾಷೆಗಳ ಮೇಲೆ ಇವರಿಗೆ ಒಳ್ಳೇ ಪ್ರಭುತ್ವವಿದೆ. ಇವರು ಪಂಡಿತರೂ, ಚತುರ ವಾಗ್ಮಿಗಳೂ ಆಗಿರುವರು.

ಇವರು ಅನೇಕ ಸಂಸ್ಕೃತ ಪಾಠ ಶಾಲೆಗಳನ್ನೂ ಇಂಗ್ಲೀಷ ಶಾಲೆ ಕಾಲೇಜುಗಳನ್ನೂ ನಡೆಯಿಸುತ್ತಲಿರುವರು. ಮುಂಬೈ ಬಾಣಗಂಗಾದಲ್ಲಿರುವ ಶ್ರೀಮಠದಲ್ಲಿ ಸಂಸ್ಕೃತ ಪಾಠಶಾಲೆ, ಪುರಾಣ, ಪ್ರವಚನ ನಿತ್ಯ ನಡೆಯುವಂತೆ ಮಾಡಿದ್ದಾರೆ. ಕಾರ್ಕಳದಲ್ಲಿಯ ಭುವನೇಂದ್ರ ಸಂಸ್ಕೃತ ಮಹಾ ಪಾಠಶಾಲೆಯು ಶ್ರೀಮಠದ ಆಶ್ರಯದಿಂದ ನಡೆಯುತ್ತಲಿದೆ. ಈಗ ಭುವನೇಂದ್ರ ಸಾಯಿನ್ಸ ಮತ್ತು ಆರ್ಟ್ಸ ಕಾಲೇಜಗಳು ಕಾರ್ಕಳದಲ್ಲಿ ಪ್ರಾರಂಭವಾದದ್ದು ಇವರ ಪ್ರೋತ್ಸಾಹನೆ, ಆಶೀರ್ವಾದಗಳಿಂದಲೇ ಎಂದರೆ ಅತಿಶಯೋಕ್ತಿಯಾಗಲಾರದು.

ಶ್ರೀಗಳವರು ಸಂಚಾರದಲ್ಲಿ ಯಾವಾಗಲೂ ಶ್ರೀಮಧ್ವಾಚಾರ್ಯರ ಸಿದ್ಧಾಂತ ಸಂಪ್ರದಾಯಗಳನ್ನು ಪ್ರಚಾರ ಮಾಡುತ್ತಿರುತ್ತಾರೆ.

ಮಾಧ್ವ ಮಹಾ ಮಂಡಳಕ್ಕೆ ಶ್ರೀಗಳವರು ಮೊದಲಿನಿಂದಲೂ ಅನುಗ್ರಹ ಮಾಡುತ್ತ ಬಂದಿರುವರು.



# ಶ್ರೀ ಸಾಗರಕಟ್ಟೆ ಮಠ

## ಶ್ರೀ ೧೦೮ ಶ್ರೀ ಪ್ರದ್ಯುಮ್ನತೀರ್ಥ ಶ್ರೀಪಾದಂಗಳವರು



ಮೈಸೂರು ನಗರಕ್ಕೆ ಸುಮಾರು ಹದಿನೈದು ಮೈಲುಗಳ ದೂರದಲ್ಲಿರುವ ಸಾಗರಕಟ್ಟೆಯಲ್ಲಿ ಶ್ರೀ ಪ್ರದ್ಯುಮ್ನತೀರ್ಥ ಶ್ರೀಪಾದಂಗಳವರ ಮಹಾ ಪ್ರಯತ್ನದಿಂದ ಸಾಗರಕಟ್ಟೆಮಠವು ಸ್ಥಾಪಿತವಾಗಿರುವದು.

ಈ ಸಾಗರಕಟ್ಟೆಯು ಪಾವನವಾದ ಕಾವೇರಿ ಪರಿಸರದಲ್ಲಿದ್ದ ರಮಣೀಯಸ್ಥಾನ. ಈ ಸ್ಥಳವು ಗೋಪಾಲಕೃಷ್ಣಸ್ವಾಮಿ, ಶ್ರೀ ಪ್ರಾಣದೇವರು, ಶ್ರೀ ಚಂದ್ರಮೌಳೀಶ್ವರ ದೇವರ ಸಾನಿಧ್ಯದಿಂದ ಪಾವನ ಕ್ಷೇತ್ರವಾಗಿದೆ.

ಶ್ರೀ ಪ್ರದ್ಯುಮ್ನತೀರ್ಥರ ತಪೋಭೂಮಿಯಾದ್ದರಿಂದ ಇದಕ್ಕೆ ಒಂದು ಹೆಚ್ಚಿನ ಆಧ್ಯಾತ್ಮಿಕ ವಾತಾವರಣ ಉಂಟಾಗಿದೆ.

ಶ್ರೀ ಪ್ರದ್ಯುಮ್ನತೀರ್ಥರು ಇಲ್ಲಿ ಬಹುಕಾಲ ತಪಸ್ಸು ಮಾಡಿ ತಮ್ಮ ಮಠವನ್ನು ಸ್ಥಾಪಿಸಿದ್ದರಿಂದ ಇವರಿಗೆ ಸಾಗರಕಟ್ಟೆ ಸ್ವಾಮಿಗಳೆಂದೇ ಹೆಸರಾಗಿದೆ.

ಶ್ರೀ ಸಾಗರಕಟ್ಟೆ ಸ್ವಾಮಿಗಳೆಂದು ಪ್ರಸಿದ್ಧರಾದ ಶ್ರೀ ಪ್ರದ್ಯುಮ್ನತೀರ್ಥರು ಮಾಧ್ವರ ಇತ್ತೀಚಿನ ಆಧ್ಯಾತ್ಮರಂಗದ ಇತಿಹಾಸದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಶ್ರೀಗಳವರು ತಮ್ಮ ತಪಸ್ಸು ವೈರಾಗ್ಯ, ಪಾಂಡಿತ್ಯ, ಪ್ರಮೇಯಜ್ಞತೆಗಳಿಂದ ಅನೇಕ ಮಹಾ ಮೇಧಾವಿಗಳಿಗೆ ಮಾಧ್ವ ತತ್ವಜ್ಞಾನದ ಮಹಾಪ್ರಾಣವನ್ನು ತೋರಿ ಜುಪ್ಯಾದವ ರೀತಿಯನ್ನು ತೋರಿಸ್ದಾರೆ.

ಒಳ್ಳೇ ಮೇಧಾವಿಗಳೆಂದು ಹೆಸರಾದ ಶ್ರೀ ಹೆಚ್. ಸುಬ್ಬರಾಯರಂಥವರಿಗೆ ಸನ್ಮಾರ್ಗದರ್ಶಿ ಮಹರ್ಷಿಗಳಾಗಿದ್ದಾರೆ.

ಶ್ರೀ ಪ್ರದ್ಯುಮ್ನತೀರ್ಥರು ಪೂರ್ವಾಶ್ರಮದಲ್ಲಿ ಧಾರವಾಡ ಜಿಲ್ಹೆಯ ಬಂಕಾಪುರ ಗ್ರಾಮಕ್ಕೆ ಸೇರಿದವರು. ಇವರು ಇದೇ ಗ್ರಾಮದಲ್ಲಿ ೧೮೯೦ ನೇ ಇಸ್ವಿಯಲ್ಲಿ ಜನಿಸಿದರು. ಇವರ ತಂದೆ ಶ್ರೀ ವೆಂಕಟರಮಣಾಚಾರ್ಯರು. ಇವರೂ ಒಳ್ಳೇ ಸಾತ್ವಿಕರೂ, ಪ್ರಸಿದ್ಧ ಪುರಾಣಿಕರೂ ಅತ್ಯಂತ ವೈರಾಗ್ಯಶಾಲಿಗಳೂ ಆಗಿದ್ದರು. ಅವರೂ ಕೊನೆಗೆ ಸನ್ಯಾಸಾಶ್ರಮವನ್ನು ಕೈಕೊಂಡಿದ್ದರು.

ಶ್ರೀ ಪ್ರದ್ಯುಮ್ನ ತೀರ್ಥರಿಗೆ ವೈರಾಗ್ಯ ರಕ್ತಗತವಾಗಿಯೇ ಬಂದಿದೆ. ಶ್ರೀ ಪ್ರದ್ಯುಮ್ನ ತೀರ್ಥರ ಪೂರ್ವಾಶ್ರಮದ ಹೆಸರು ವ್ಯಾಸರಾಯಾಚಾರ್ಯರು. ಮನೆಯಲ್ಲಿ ವ್ಯಾಸಂಗವನ್ನುಮಾಡಿ ಮುಂದೆ ಮುಳಬಾಗಿಲು ಮಠದ ಶ್ರೀ ಮೇಧಾನಿಧಿ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಅಭ್ಯಾಸಮಾಡಿದರು.

ಆಗಿನ ಕಾಲಕ್ಕೆ ತಕ್ಕಂತೆ ಚಿಕ್ಕ ವಯಸ್ಸಿನಲ್ಲಿ ವಿವಾಹ ಮಾಡಿಕೊಂಡು ಕೆಲವು ಕಾಲ ಗಾರ್ಹಸ್ಥ ಧರ್ಮವನ್ನು ಪರಿಪಾಲನೆ ಮಾಡಿ ಮುಂದೆ ಸಂಸಾರದಲ್ಲಿ ಜುಗುಪ್ಸೆಗೊಂಡು ಮನಸ್ಸಿನಲ್ಲಿ ಶಾಂತಿ ಇಲ್ಲದೆ ಕಾತರರಾಗಿ ಶ್ರೀ ಮಂತ್ರಾಲಯಕ್ಕೆ ಶ್ರೀ ರಾಯರ ಸೇವೆಗೆ ಬಂದರು. ಅಲ್ಲಿ ಕೆಲ ದಿನ ಸೇವೆ ಮಾಡಿದರು.

ಒಂದು ದಿನ ಸ್ವಪ್ನದಲ್ಲಿ ಇವರಿಗೆ ಶ್ರೀ ರಾಯರು ಸನ್ಯಾಸ ತಕ್ಕೊಳ್ಳಲಿಕ್ಕೆ ಆಜ್ಞೆ ಮಾಡಿದಂತಾಯಿತು.

ಮಂತ್ರಾಲಯದಿಂದ ಇವರು ನೇರವಾಗಿ ಕುಂದಾಪುರ ವ್ಯಾಸರಾಜ ಮಠಾಧೀಶರಾದ ಶ್ರೀ ಶ್ರೀ ಲಕ್ಷ್ಮೀಪ್ರಿಯ ತೀರ್ಥರಲ್ಲಿ ವಿಧ್ಯುಕ್ತವಾಗಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ಶ್ರೀ ಲಕ್ಷ್ಮೀಪ್ರಿಯತೀರ್ಥರು ಶ್ರೀ ಪದ್ಯುಮ್ನ ತೀರ್ಥರೆಂದು ನಾಮಕರಣ ಮಾಡಿ ಪ್ರಣವೋಪದೇಶ ನೀಡಿ " 'ಪ್ರಜ್ಞಾಪೀಠ' ಎಂಬ ಹೆಸರಿನಿಂದ ಸಂಸ್ಥಾನವನ್ನು ಸ್ಥಾಪಿಸಿ ನಿರಂತರ ನಡೆಯುವಂತೆ ಮಾಡಿರಿ " ಎಂದು ಆದೇಶ ಕೊಟ್ಟರು.

ಮುಂದೆ ಶ್ರೀ ಪ್ರದ್ಯುಮ್ನ ತೀರ್ಥರು ದೇಶ ಸಂಚಾರ ಮಾಡುತ್ತ ೧೯೩೦ ನೇ ಇಸ್ವಿ ಸುಮಾರಕ್ಕೆ ಕಾವೇರಿ ತೀರವಾದ ಸಾಗರಕಟ್ಟೆಗೆ ಬಂದು ಅಲ್ಲಿ ಚಾತುರ್ಮಾಸ್ಯಕ್ಕೆ ನಿಂತರು.

ಇಲ್ಲಿಯೇ ಸಾಗರಕಟ್ಟೆಯಲ್ಲಿ ಬಹುಕಾಲ ಇದ್ದರು. ಈಗ ಮಠವಿರುವಸ್ಥಳವನ್ನು ಒಬ್ಬ ತಮಿಳನಾಡಿನ ಸದ್ಗೃಸ್ಥನೊಬ್ಬನು ಶ್ರೀಗಳವರ ಮಹಿಮೆಯ ಪ್ರಭಾವದಿಂದ ಆ ಸ್ಥಳವನ್ನು ಇವರಿಗೆ ದಾನವಾಗಿ ಕೊಟ್ಟನು.

ಆ ಸ್ಥಳದಲ್ಲಿ ಶ್ರೀಗಳವರು ಶ್ರೀ ಗೋಪಾಲಸ್ವಾಮಿ, ಶ್ರೀ ಪ್ರಾಣದೇವರು, ಶ್ರೀ ಚಂದ್ರಮೌಳೀಶ್ವರ ದೇವಸ್ಥಾನಗಳನ್ನೂ ಮಠವನ್ನೂ ಭಕ್ತರ ಸಹಾಯದಿಂದ ಕಟ್ಟಿಸಿರುವರು.

ಸಾಗರಕಟ್ಟೆಯು ಬರುಬರುತ್ತ ಆಧ್ಯಾತ್ಮಿಕ ಕೇಂದ್ರವಾಗಿ ತತ್ವಬುಭುತ್ಸುಗಳ ಯಾತ್ರಾ ಸ್ಥಳವಾಯಿತು.

ಶ್ರೀ ಜಯಸಿಂಹಾಚಾರ್ಯರು ( ಈಗಿನ ಕುಂದಾಪುರ ಶ್ರೀಗಳು ) ಶ್ರೀ ಹೆಚ್. ಸುಬ್ಬರಾಯರು, ಶ್ರೀದೇಶಿಕಾಚಾರ್ಯರು (ಅಕ್ಷೋಭ್ಯತೀರ್ಥಾಚಾರ್ಯರು) ಮುಂತಾದ ಆಂಗ್ಲ ಭಾಷಾ ಪದವೀಧರರು ಶ್ರೀಗಳವರಲ್ಲಿ ಮಾಧ್ವ ತತ್ವಜ್ಞಾನದ ಪ್ರಾಥಮಿಕ ಪಾಠಗಳನ್ನು ಓದಿದರು.

ಶ್ರೀಗಳವರು ಈಗ ಮೈಸೂರಿನ ಕೃಷ್ಣರಾಜಪುರದಲ್ಲಿ ತಮ್ಮ ಸ್ವಂತ ಮಠದಲ್ಲಿ ಪಾಠ-ಪ್ರವಚನ, ಉಪನ್ಯಾಸ, ಉಪದೇಶ ಮಾಡುತ್ತ ಶ್ರೀಮದಾಚಾರ್ಯರ ತತ್ವಜ್ಞಾನದ ನಂದಾ ದೀಪವನ್ನು ಬೆಳಗಿಸುತ್ತಲಿರುವರು.



# ಶ್ರೀ ಶ್ರೀ ದೇವೇಂದ್ರ ತೀರ್ಥ ಶ್ರೀಪಾದಂಗಳವರು



ಶ್ರೀ ದೇವೇಂದ್ರ ತೀರ್ಥ ಶ್ರೀಪಾದಂಗಳವರು ಶಾಸ್ತ್ರಜ್ಞರೂ, ವಿದ್ವಾಂಸರೂ, ತ್ಯಾಗಿ, ವಿರಾಗಿಗಳೂ ಆಗಿದ್ದಾರೆ.

ಇವರು ಶ್ರೀ ಉತ್ತರಾದಿ ಮಠದ ೧೦೮ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ಪಾಠ ಓದಿ ಮಂಗಳ ಮಾಡಿದ್ದಾರೆ.

ಮೈಸೂರಿನಲ್ಲಿ ನಿತ್ಯವೂ ಪಾಠ ಪ್ರವಚನ, ಪುರಾಣಾದಿಗಳಿಂದ ಭಗವಂತನ ಸೇವೆ ಮಾಡುತ್ತ ವಾಸವಾಗಿರುವರು.

ಶ್ರೀಗಳವರ ಸಾತ್ವಿಕತೆ, ವೈರಾಗ್ಯಾದಿಗಳನ್ನು ಕಂಡು ತಿಳಿದ ಭಕ್ತ ಮಹಾಜನರು ಹಳೇ ಅಗ್ರಹಾರದ ಉತ್ತರಾದಿ ಮಠದ ಹತ್ತಿರ ಶ್ರೀ ದೇವೇಂದ್ರ ತೀರ್ಥರಿಗೆ ಒಂದು ಸ್ವಂತ ಮಠವನ್ನು ಕಟ್ಟಿಸಿಕೊಟ್ಟಿರುತ್ತಾರೆ.



### ಅಭಿನವ ಚಂದ್ರಿಕಾಚಾರ್ಯರಾದ

## ಶ್ರೀ ಸತ್ಯನಾಥ ತೀರ್ಥ ಶ್ರೀಪಾದಂಗಳವರು

ಇವರ ಪೂರ್ವಾಶ್ರಮದ ಹೆಸರು ರಘುನಾಥಾಚಾರ್ಯರು. ಮೊದಲೊಮ್ಮೆ ಉತ್ತರಾದಿ ಚಿಕ್ಕಸಂಸ್ಥಾನದಿಂದ ಇವರು ಆಶ್ರಮವನ್ನು ತೆಗೆದುಕೊಂಡು ಶ್ರೀ ವಿದ್ಯಾನಾಥರೆಂದು ಕರೆಯಿಸಿಕೊಂಡಿದ್ದರು. ಮುಂದೆ ದಂಡ ವ್ಯತ್ಯಾಸದಿಂದ ಶ್ರೀ ವೇದನಿಧಿ ತೀರ್ಥರು ಇವರನ್ನು ಶ್ರೀ ರಂಗನಾಥತೀರ್ಥರೆಂದು ಕರೆದರು. ಆ ಮೇಲೆ ಇವರಿಗೆ ಶ್ರೀ ಸತ್ಯನಿಧಿಗಳಿಂದ ಶ್ರೀ ಉತ್ತರಾದಿಮಠದ ಸರ್ವಜ್ಞ ಸಿಂಹಾಸನವು ದೊರೆಯಿತು.

ಇವರು ಪಂಡಿತಾಗ್ರೇಸರರು. ಪ್ರತಿವಾದಿ ಭಯಂಕರರು. ದಿಗ್‌ದೇಶಗಳಲ್ಲಿ ಸಂಚಾರ ಮಾಡಿ ವಾದಿಗಳನ್ನು ಗೆದ್ದು ವೈಷ್ಣವ ದೀಕ್ಷೆಯನ್ನು ಕೊಟ್ಟವರು. ಇವರ ಗ್ರಂಥಗಳಿಗೆ ಮಾಧ್ವ ವಾಙ್ಮಯದಲ್ಲಿ ವಿಶಿಷ್ಟ ಸ್ಥಾನವಿದೆ. ಮಧ್ವಸಿದ್ಧಾಂತ ಸಾಹಿತ್ಯದಲ್ಲಿ ಇವರ ಗ್ರಂಥಗಳು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿವೆ. ಇವರ ಅಭಿನವ ಚಂದ್ರಿಕಾ, ಅಭಿನವಾಮೃತ, ಅಭಿನವ ಗದಾ ಗ್ರಂಥಗಳು ಮಧ್ವಸಿದ್ಧಾಂತಾಕಾಶದಲ್ಲಿ ಧ್ರುವನಕ್ಷತ್ರದಂತೆ ದಾರಿದೀಪವಾಗಿ ಮಿನುಗುತ್ತಲಿವೆ.

ಇವರು ಮಹಾ ತಪಸ್ವಿಗಳೂ, ಶಾಪಾನುಗ್ರಹ ಶಕ್ತಿಯುಳ್ಳವರೂ ಆಗಿದ್ದರು. ಶ್ರೀ ಧರ್ಮಪುರಿ ಕ್ಷೇತ್ರದಲ್ಲಿ ಅನೇಕ ಪಂಡಿತಶಿಷ್ಯರಿಗೆ ಮಧ್ವಭಾಷ್ಯ ಪಾಠವನ್ನು ಅಪೂರ್ವ ರೀತಿಯಲ್ಲಿ ಹೇಳಿದರು.

ಆ ಕಾಲದಲ್ಲಿ ಶ್ರೀ ಭಲಾರಿ ನರಸಿಂಹಾಚಾರ್ಯರೆಂಬ ಘನ ವಿದ್ವಾಂಸರು ಶ್ರೀಗಳವರೊಡನೆ ವಾಕ್ಯಾರ್ಥ ಮಾಡಿ ಪರಾಜಿತರಾಗಿ ಶ್ರೀಗಳವರ ಪಾಂಡಿತ್ಯಕ್ಕೆ ಶರಣಾಗತರಾದರು.

ಶ್ರೀಗಳವರ ಗುರುಗಳ ಆರಾಧನೆಯ ಸಮಯದಲ್ಲಿ ಶ್ರೀ ಭಲಾರಿ ನರಸಿಂಹಾಚಾರ್ಯರಿಗೆ ಸರ್ಪದಂಶವಾಗಿ ಮೃತಪಟ್ಟರು. ಶ್ರೀಗಳವರು ತಮ್ಮ ತಪಃ ಪ್ರಭಾವದಿಂದ ಆಚಾರ್ಯರನ್ನು ಬದುಕಿಸಿಕೊಂಡರು. ಆಚಾರ್ಯರು ಶ್ರೀಗಳವರ ಈ ಅನುಗ್ರಹಕ್ಕಾಗಿ ತಾವು ಜೀವಿಸುವವರೆಗೂ ಶ್ರೀಗಳವರ ಸೇವೆಯನ್ನು ಮಾಡುತ್ತ ಶ್ರೀಮಠದಲ್ಲಿಯೇ ವಾಸವಾಗಿದ್ದರು.

ಶ್ರೀಗಳವರು ಕರ್ಮನಿರ್ಣಯ ಟಿಪ್ಪಣಿ, ವಿಜಯ ಮಾಲಾ, ಅಭಿನವಚಂದ್ರಿಕಾ, ಅಭಿನವಾಮೃತ, ಅಭಿನವಗದಾ, ಪರಶು ಎಂಬ ಗ್ರಂಥಗಳನ್ನು ರಚಿಸಿದರು.

ಇವರು ಉತ್ತರ ಕರ್ನಾಟಕದವರಾದ ಶ್ರೀ ಕೇಶವಾಚಾರ್ಯರೆಂಬವರಿಗೆ ಆಶ್ರಮವನ್ನಿತ್ತು ಶ್ರೀ ಸತ್ಯಾಭಿನವತೀರ್ಥರೆಂದು ನಾಮಕರಣ ಮಾಡಿ ಸರ್ವಜ್ಞ ಸಿಂಹಾಸನಕ್ಕೆ ಪಟ್ಟಗಟ್ಟಿದರು.

ಮುಂದೆ ಶ್ರೀಗಳವರು ಅರುಣಾಚಲದಲ್ಲಿ ೧೮೫೯ ನೇ ಪ್ರಮಾಥಿ ಸಂವತ್ಸರ ಮಾರ್ಗಶಿರ ಶುದ್ಧ ೧೧ ರಂದು ವೃಂದಾವನಸ್ಥರಾದರು.

## ಶ್ರೀ ಟೀಕಾಚಾರ್ಯರ ಸಾಕ್ಷಾತ್ ಶಿಷ್ಯರಾದ

# ಶ್ರೀ ವ್ಯಾಸತೀರ್ಥರು

ಇವರು ಶ್ರೀ ಜಯತೀರ್ಥರ ಸಾಕ್ಷಾತ್ ಶಿಷ್ಯರು. ಇವರು ಮಹಾ ವಿದ್ವಾಂಸರೂ, ವಿರಕ್ತರೂ ಆಗಿದ್ದರು.

ಇವರು ತಮ್ಮ ಗುರುಗಳ ಅಪ್ಪಣೆಯಂತೆ ಅನೇಕ ಗ್ರಂಥಗಳಿಗೆ ವ್ಯಾಖ್ಯಾನ ವನ್ನು ಬರೆದಿರುವರು.

### ಶ್ರೀ ವ್ಯಾಸತೀರ್ಥರು ರಚಿಸಿದ ಗ್ರಂಥಗಳು

(೧) ತಲವಕಾರೋಪನಿಷತ್ ಭಾಷ್ಯ ಟೀಕಾ
(೨) ಆಥವರ್ಣೋಪನಿಷತ್ ಭಾಷ್ಯ ಟೀಕಾ
(೩) ತೈತ್ತರೀಯೋಪನಿಷತ್ ಭಾಷ್ಯ ಟೀಕಾ
(೪) ಬೃಹದಾರಣ್ಯಕೋಪನಿಷತ್ ಭಾಷ್ಯ ಟೀಕಾ
(೫) ಕಾಠಕೋಪನಿಷತ್ ಭಾಷ್ಯ ಟೀಕಾ
(೬) ಮಾಂಡೂಕ್ಯ ಉಪನಿಷತ್ ಭಾಷ್ಯ ಟೀಕಾ
(೭) ಐತರೇಯ ಉಪನಿಷತ್ ಭಾಷ್ಯ ಟೀಕಾ
(೮) ಛಾಂದೋಗ್ಯ ಉಪನಿಷತ್ ಭಾಷ್ಯ ಟೀಕಾ
(೯) ಶ್ರೀ ಜಯತೀರ್ಥ ವಿಜಯ



# ಶ್ರೀ ಸಂಕರ್ಷಣ ಒಡೆಯರು

ಮಧ್ವ ಸಿದ್ಧಾಂತ ಪ್ರಮೇಯ ರತ್ನಗಳ ಕನ್ನಡ ವಿಶ್ವಕೋಶದಂತಿರುವ ಹರಿಕಥಾಮೃತಸಾರಕ್ಕೆ ಶ್ರೀಷ್ಠ ಟೀಕೆಯನ್ನು ಬರೆದ ಸಂಕರ್ಷಣ ಒಡೆಯರು ಕನ್ನಡಿಗರಿಗೆಲ್ಲ ಪರಮೋಪಕಾರಕ ವ್ಯಕ್ತಿಗಳಾಗಿದ್ದಾರೆ.

ಗುರ್ಲಹೊಸೂರ ಗ್ರಾಮದಿಂದ ಧಾರವಾಡಕ್ಕೆ ಬಂದು ನೆಲೆಸಿದ ನಾಯಕ ದಂಪತಿಗಳಿಗೆ ಶ್ರೀ ಸತ್ಯಧರ್ಮ ತೀರ್ಥ ಶ್ರೀಪಾದಂಗಳವರ ಸೇವೆಯ ಫಲವಾಗಿ ರಾಮಣ್ಣ ತಮ್ಮಣ್ಣ ಎಂದು ಇಬ್ಬರು ಮಕ್ಕಳು ಹುಟ್ಟಿದರು. ಕಿರಿಯವರಾದ ತಮ್ಮಣ್ಣ ನಾಯಕರೇ ಮುಂದೆ ಶ್ರೀಸಂಕರ್ಷಣ ತೀರ್ಥರಾದರು.

ತಮ್ಮಣ್ಣನಾಯಕರು ಭೀಮವರಾಹ ಆಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿದರು. ಅವರು ಮದುವೆ ಮಾಡಿಕೊಂಡು ಇಬ್ಬರು ಮಕ್ಕಳನ್ನು ಹೆತ್ತ ಬಳಿಕ ನವ ತಾರುಣ್ಯದಲ್ಲಿಯೇ ಪತ್ನಿ ವಿಯೋಗವಾಯಿತು. ಆದರೂ ಅವರು ಎರಡನೆಯ ಮದುವೆಯನ್ನು ಮಾಡಿಕೊಳ್ಳದೇ ವಿರಕ್ತರಾಗಿ ಉಡುಪಿಗೆ ಹೋಗಿ ಶ್ರೀ ಸೋದೆ ಮಠದ ಶ್ರೀ ವೃಂದಾವನಾಚಾರ್ಯರಲ್ಲಿ ಸರ್ವಜ್ಞ ಶಾಸ್ತ್ರವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದರು.

ಆ ಪೂರ್ವದಲ್ಲಿ ಶ್ರೀ ಉತ್ತರಾದಿ ಮಠದ ಶ್ರೀ ಸತ್ಯ ಸಂತುಷ್ಟ ಸ್ವಾಮಿಗಳು ಒಂದು ದೊಡ್ಡ ವಿದ್ವತ್ ಸಭೆಯನ್ನು ಮಾಡಿದರು. ಆ ಕಾಲದಲ್ಲಿ ದೇಶದಲ್ಲಿಯ ಎಲ್ಲ ಮಾಧ್ವ ಪಂಡಿತರಿಗೂ ದಾರಿದ್ರ್ಯ ವಿಚ್ಛೇದವಾಗುವಂತೆ ವಿಪುಲವಾಗಿ ದಕ್ಷಿಣೆ ಕೊಡಬೇಕೆಂದು ಶ್ರೀಮಠದ ವಜ್ರದ ಮಂಟಪ ಬಂಗಾರದ ಕೊಳಗಗಳನ್ನು ರಾಮಣ್ಣ ನಾಯಕರಲ್ಲಿ ಅಡವಿಟ್ಟು ೪೦ ಸಾವಿರ ರೂಪಾಯಿ ಸಾಲ ತೆಗೆದುಕೊಂಡು ವಿದ್ವಾಂಸರಿಗೆಲ್ಲ ಹಂಚಿದರು. ಆ ಕಾಲದ ಮಾಧ್ವ ಪಂಡಿತರೆಲ್ಲರ ಜನ್ಮ ದಾರಿದ್ರ್ಯವೇ ಇದರಿಂದ ಇಂಗಿ ಹೋಯಿತು. ಆದರೆ ಶ್ರೀ ಮಠದ ಸಾಲವು ಮಾತ್ರ ಬಡ್ಡಿಗೆ ಬಡ್ಡಿ ಕೂಡಿ ಬೆಳೆಯುತ್ತ ನಡೆಯಿತು.

ಶ್ರೀ ಸತ್ಯ ಸಂತುಷ್ಟರ ಅನಂತರ ಪೀಠಾರೋಹಣ ಮಾಡಿದ ಶ್ರೀ ಸತ್ಯಪರಾಯಣ ತೀರ್ಥರು ಧಾರವಾಡಕ್ಕೆ ಬಂದಾಗ ಶ್ರೀ ಮಠದ ಶಿಷ್ಯರಾದ ರಾಮಣ್ಣ ನಾಯಕರು ವಜ್ರ ಮಂಟಪವಿಲ್ಲದೇ ಶ್ರೀ ಮೂಲ ರಾಮ ದೇವರ ಪೂಜೆಯಾಗುತ್ತಿರುವದನ್ನು ಕಂಡು, ಖಿನ್ನರಾಗಿ ಆ ವಜ್ರ ಮಂಟಪ ಮತ್ತು ಕನಕ ಕೊಳಗಗಳನ್ನು

ಶ್ರೀಗಳವರಿಗೆ ತಂದು ಒಪ್ಪಿಸಿ "ತಮಗೆ ಅನುಕೂಲವಾದಂತೆ ಹಣವನ್ನು ಕೊಡಬಹುದು" ಎಂದು ಬಿನ್ನವಿಸಿದರು. ಅದನ್ನು ನೋಡಿ ಸಂತುಷ್ಟರಾದ ಶ್ರೀ ಸತ್ಯಪರಾಯಣ ತೀರ್ಥರು ನಿಮ್ಮ ಓರ್ವ ವಿಶ್ವಾಸಿಕ ಮನುಷ್ಯನನ್ನು ನಮ್ಮ ಜೊತೆಗೆ ಕಳಿಸಿರಿ ನಾವು ದಿನದಿನವು ನಿಮ್ಮ ಸಾಲವನ್ನು ಮುಟ್ಟಿಸುತ್ತ ಹೋಗುತ್ತೇವೆ" ಎಂದು ಹೇಳಿದರು.

ಶ್ರೀಗಳವರ ಆದೇಶದಂತೆ ಶ್ರೀ ರಾಮಣ್ಣ ನಾಯಕರು ಸಾಲ ವಸೂಲ ಮಾಡಲಿಕ್ಕೆಂದು ತಮ್ಮ ಸಹೋದರ ತಮ್ಮಣ್ಣ ನಾಯಕರನ್ನು ಶ್ರೀಮಠದ ಜೊತೆಗೆ ಕಳುಹಿಸಿಕೊಟ್ಟರು.

ಶ್ರೀಗಳವರು ತಮ್ಮ ವಚನದಂತೆ ತಮ್ಮ ಭಿಕ್ಷೆ ಸಾದ ಪೂಜೆ ಹಣವನ್ನು ತಮ್ಮಣ್ಣನಾಯಕರಿಗೆ ತೆಗೆದುಕೊಳ್ಳಲು ಹೇಳಿದರು. ಕೆಲವೇ ದಿನಗಳಲ್ಲಿ ನಾಯಕರ ಸಾಲದ ಹಣವೆಲ್ಲವೂ ಸಂದಾಯವಾಯಿತು. ಶಾಸ್ತ್ರಜ್ಞರಾದ ತಮ್ಮಣ್ಣನಾಯಕರಿಗೆ ಶ್ರೀ ಸತ್ಯಪರಾಯಣ ತೀರ್ಥರ ಸುಧಾ ಪಾಠದ ರುಚಿಯು ತೆಗೆದುಕೊಂಡಿತ್ತು. ಶ್ರೀಗಳವರ ಅದ್ಭುತವಾದ ಪಾಠ ಪ್ರವಚನ ಪಟಿಯಸ್ತ್ವಗಳನ್ನು ಕೇಳಿ, ಮುಗ್ಧರಾದ ತಮ್ಮಣ್ಣಾಚಾರ್ಯರು ಶ್ರೀಗಳವರಲ್ಲಿ ಶ್ರೀಮನ್ನ್ಯಾಯ ಸುಧಾ ಗ್ರಂಥವನ್ನು ಓದಿ ಮಂಗಳ ಮಾಡಿದರು–ಮಂಗಳದ ದಿನ ತಮ್ಮಣ್ಣ ನಾಯಕರು ಶ್ರೀಮಠದಿಂದ ತಮಗೆ ಸಂದಾಯವಾದ ಸಾಲದ ಹಣ ೪೦ ಸಾವಿರ ರೂಪಾಯಿಗಳನ್ನು ಗುರುದಕ್ಷಿಣೆಯಾಗಿ ತಂದಿಟ್ಟು ಕೃಷ್ಣಾರ್ಪಣ ಎಂದು ಕೈಮುಗಿದರು. ಅದನ್ನು ನೋಡಿ ಶ್ರೀಪಾದಂಗಳವರು "ಇದು ನಾವು ಸಾಲ ಮಾಡಿದ್ದನ್ನು ಸಂದಾಯ ಮಾಡಿ ಕೊಟ್ಟ ಹಣ. ಇದನ್ನು ನಾನು ವಾಪಸ ತೆಗೆದುಕೊಳ್ಳಲಾರೆ" ಎಂದು ಹೇಳಿದರು. ಅದಕ್ಕೆ ತಮ್ಮಣ್ಣ ನಾಯಕರು "ಸ್ವಾಮಿ ಇದು ಸಾಲದ ಹಣವಲ್ಲ. ಇದು ಈ ಬಡ ಶಿಷ್ಯನ ಅತ್ಯಲ್ಪ ಗುರುದಕ್ಷಿಣೆ ಸ್ವೀಕರಿಸಿ ಅನುಗ್ರಹಿಸಬೇಕು" ಎಂದು ಬಿನ್ನವಿಸಿದರು.

ಆಗ ನಿರುಪಾಯರಾದ ಶ್ರೀ ಸತ್ಯಪರಾಯಣ ತೀರ್ಥರು ಸಾಹುಕಾರ ರಾಮಣ್ಣ ನಾಯಕರನ್ನು ಕರೆಸಿ ೪೦ ಸಾವಿರ ರೂಪಾಯಿಗಳನ್ನು ಬಡ್ಡಿ ಸಹಿತವಾಗಿ ಕೊಟ್ಟರು. ಆಗ ರಾಮಣ್ಣ ನಾಯಕರು ಕೈಯಿಂದ ಮತ್ತೆ ೧೦೦೧ ರೂಪಾಯಿಗಳನ್ನು ಕೊಟ್ಟು ಮೇಲೆ ಸಾಲ ಪತ್ರಗಳನ್ನೆಲ್ಲ ಹರಿದು ಇಟ್ಟು ಅಣ್ಣ–ತಮ್ಮಂದಿರೆಲ್ಲರೂ ಕೈಜೋಡಿಸಿ "ಸ್ವಾಮಿ ನಮ್ಮ ಋಣವನ್ನೇನೊ ಸರ್ವ ಸಮರ್ಥರಾದ ತಾವು ಮುಟ್ಟಿಸಿದ್ದೀರಿ. ಆದರೆ ನಮ್ಮ ಜನ್ಮೋದ್ಧಾರಕ ಗುರುಗಳಾದ ತಮ್ಮ ಋಣವನ್ನು ನಾವೆಂತು ಮುಟ್ಟಿಸಬಲ್ಲೆವು! ದಯಮಾಡಿ ಶ್ರೀಗಳವರು ಈ ಹಣವನ್ನು ಶ್ರೀ ಮೂಲ ರಾಮ ದೇವರ ಸೇವೆಗೆ ತೆಗೆದುಕೊಂಡು ನಮ್ಮನ್ನು ಅನುಗ್ರಹಿಸಬೇಕು" ಎಂದು ಕೇಳಿಕೊಂಡರು.

ಹೀಗೆ ತಮ್ಮಣ್ಣ ನಾಯಕರು ಶ್ರೀ ಸತ್ಯಪರಾಯಣ ತೀರ್ಥರ ಜ್ಞಾನ ಭಕ್ತಿ ವೈರಾಗ್ಯಗಳಿಂದ ಮುಗ್ಧರಾಗಿ ಅವರ ಶಿಷ್ಯರಾಗಿ ಸೇವೆ ಮಾಡಿಕೊಂಡು ಇದ್ದರು.

ತಮ್ಮಣ್ಣನಾಯಕರಿಗೆ ಸಂಸಾರವಲ್ಲಿ ಸಂಪೂರ್ಣ ವೈರಾಗ್ಯ ಹುಟ್ಟಿ ಸರ್ವಸಂಗ ಪರಿತ್ಯಾಗ ಮಾಡಿ ಯತ್ಯಾಶ್ರಮವನ್ನು ಕೊಡಬೇಕೆಂದು ಗುರುಗಳನ್ನು ಪ್ರಾರ್ಥಿಸಿದರು.

ಶ್ರೀ ಸತ್ಯಪರಾಯಣತೀರ್ಥರು ತಮ್ಮಣ್ಣನಾಯಕರನ್ನು ಬಗೆ-ಬಗೆಯಿಂದ ಪರೀಕ್ಷಿಸಿ ಯೋಗ್ಯರೆಂದು ನಿಶ್ಚಯವಾದ ಬಳಿಕ ಅವರಿಗೆ ಸನ್ಯಾಸ ಆಶ್ರಮವನ್ನಿತ್ತು ಶ್ರೀ ಸಂಕರ್ಷಣ ತೀರ್ಥರೆಂದು ನಾಮಕರಣ ಮಾಡಿದರು. ಅವರಿಗೆ ಪೂಜೆ ಮಾಡಲು ತಮ್ಮ ಕರ ಪೂಜಿತವಾದ ವೇಣು ಗೋಪಾಲ ಪ್ರತಿಮೆಯನ್ನು ಅನುಗ್ರಹಿಸಿದರು.

ಅನಂತರ ಶ್ರೀ ಸಂಕರ್ಷಣ ತೀರ್ಥರು ಹೊಳೆನರಸಿಂಹಪೂರ, ತಿರುಪತಿ, ಘಟಿಕಾಚಲ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿ ನಿಂತು ಶ್ರೀಹರಿವಾಯುಗಳ ಸೇವೆಮಾಡಿ ತಪಂಗೈದರು.

ಆರಣಿ ಹನಮಂತರಾವ, ಶ್ಯಾಮರಾವ, ಮಧ್ವರಾವ, ಮುಂತಾದವರು ಅವರನ್ನು ಭಕ್ತಿಯಿಂದ ಚಿತ್ತೂರಿನ ಹತ್ತಿರದ ಗಿರಿಪೇಟೆಗೆ ಕರೆದುಕೊಂಡು ಹೋಗಿ ಶಾಂತಿ ಹಾಕಿ ಸಚ್ಛಾಸ್ತ್ರವನ್ನು ಅಧ್ಯಯನವನ್ನು ಮಾಡಿದರು. ಶ್ರೀ ಹರಿಕಥಾ ಶ್ರವಣವನ್ನು ಮಾಡಿದರು.

ಕರವುಂಡೀ ಗ್ರಾಮದ ಬಾಹುಲ ನದೀ ತೀರದ ಸಂಪದ್ಗಿರಿ ನರಸಿಂಹ ದೇವರ ಪರ್ವತ ಬಳಿ ಅಶ್ವತ್ಥ ವೃಕ್ಷದ ಸಮೀಪದಲ್ಲಿ ಬ್ರಹ್ಮಸಮುದ್ರದ ಮಧ್ವರಾಯರು ಶ್ರೀಗಳವರಿಗೆ ಇರಲು ಒಂದು ಮಠವನ್ನು ಕಟ್ಟಿಸಿಕೊಟ್ಟರು.

ಶ್ರೀ ಸಂಕರ್ಷಣ ತೀರ್ಥರು ನಡುವೆ ಒಮ್ಮೆ ಧಾರವಾಡಕ್ಕೆ ಬಂದು ಅಲ್ಲಿಯ ವಿಠ್ಠಲ ಮಂದಿರದಲ್ಲಿ ಕೆಲವು ಕಾಲ ವಾಸವಾಗಿದ್ದರು. ಧಾರವಾಡದ ಈ ವಿಠ್ಠಲ ಮಂದಿರದಲ್ಲಿ ಕುಳಿತೇ ಶ್ರೀ ಹರಿಕಥಾಮೃತಸಾರಕ್ಕೆ ಒಂದು ಪ್ರೌಢವಾದ ಟೀಕೆಯನ್ನು ಬರೆದರು ಎಂದು ಐತಿಹ್ಯವಿದೆ. ಇವರ ಟೀಕೆಯನ್ನು ನೋಡಿದರೆ ಶ್ರೀ ಸಂಕರ್ಷಣ ತೀರ್ಥರ ಅಗಾಧ ವಿದ್ವತ್ತೆ, ವಿರಾಟ ಪ್ರತಿಭೆ, ಸರ್ವಂಕಷ ಬುದ್ಧಿಮತ್ತೆ, ಸರ್ವಶಾಸ್ತ್ರ ಪರಿಣತಿ, ಪ್ರೇಯಾಭಿಜ್ಞತೆ, ಸರ್ವಪುರಾಣ ಪಾರದರ್ಶಿತ್ವ, ಸೂಕ್ಷ್ಮಪ್ರಜ್ಞೆ, ವಿವೇಚನ ವೈಚಕ್ಷಣ್ಯ ಮುಂತಾದ ಅನೇಕ ಸದ್ಗುಣಗಳು ಸುವಿದಿತವಾಗಿವೆ.

ಇವರು ಮದ್ರಾಸ ಪ್ರಾಂತದ ಆರ್ಕಾಟ ಜಿಲ್ಲೆಯ ಕರಂಪುಡಿ ಗ್ರಾಮದ ತಮ್ಮ ಮಠದಲ್ಲಿಯೇ ೧೮೬೩ ನೇ ಇಸ್ವಿಯಲ್ಲಿ ವೃಂದಾವನಸ್ಥರಾದರು.



# ಪ್ರಕರಣ ೫

# ಮಾಧ್ವ ಪ್ರಾಚೀನ ಪಂಡಿತರು

## ಅಗರಖೇಡದ ನೈಯಾಯಿಕರು

ಉತ್ತರದಲ್ಲಿ ಕಾಶಿ, ದಕ್ಷಿಣದಲ್ಲಿ ಕುಂಭಕೋಣ, ಕರ್ನಾಟಕದಲ್ಲಿ ಅಗರಖೇಡ ಈ ಮೂರು ಊರುಗಳು ಸಂಸ್ಕೃತ ಪ್ರಪಂಚದಲ್ಲಿ ಪಂಡಿತರ ಕೇಂದ್ರಗಳೆನಿಸಿವೆ. ಶಾರದೆಯ ತ್ರಿಸ್ಥಳೀ ಕ್ಷೇತ್ರಗಳೆಂದೂ ಸಂಸ್ಕೃತ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖನೀಯವಾಗಿವೆ.

ಕರ್ನಾಟಕದ ಶ್ರೇಷ್ಠ ವಿದ್ವತ್ ಕುಟುಂಬವೆನಿಸಿದ ಆದ್ಯ ಮನೆತನದ ಮೂಲ ಸ್ಥಳವಾದ ಅಗರಖೇಡವು ಈಗ ೬೦೦ ವರ್ಷಗಳಿಂದ ಈ ಪಂಡಿತ ಪರಂಪರೆಯನ್ನು ಮೊನ್ನೆ ಮೊನ್ನಿನವರೆಗೆ ಕಾಯ್ದುಕೊಂಡು ಬಂದಿತು. ಅಂಥ ಶಾರದೆಯ ಪೀಠವಾದ ಅಗರಖೇಡದಲ್ಲಿ ಇಂದು ಒಬ್ಬನೂ ಹೇಳಿಕೊಳ್ಳುವಂಥ ನೈಯಾಯಿಕನು ಇಲ್ಲದಿರುವದು ಶೋಚನೀಯವಾಗಿದೆ.

ಉತ್ತರಾದಿ ಮಠದ ಶ್ರೀ ರಘೂತ್ತಮತೀರ್ಥ ಶ್ರೀಪಾದಂಗಳವರಂಥ ವಾಗ್ವಿಭೂತಿಗಳಿಗೆ ವಿದ್ಯಾದಾನಮಾಡಿದ ಈ ಅಗರಖೇಡ ಗ್ರಾಮಕ್ಕೆ ಆ ಕಾಲದಲ್ಲಿ ಪಂಡಿತವರೇಣ್ಯರು ಬರಲಿಕ್ಕೆ ಹೆದರುತ್ತಿದ್ದರು. ಬಂದವರೆಲ್ಲರೂ ಸೋತು ಜಯಪತ್ರ ಕೊಟ್ಟು ಹೋಗುತ್ತಿದ್ದರು. ಇದರಿಂದ ಜ್ಞಾನದ ಮಟ್ಟವು ಸಾಮಾನ್ಯವಾಗಿರುವ ಸ್ವಾಮಿಗಳೂ ಮಠಾಧಿಪತಿಗಳೂ ಖೇಡಕ್ಕೆ ಬರಲು ಹೆದರಿ ಹಿಂಜರಿಯುತ್ತಿದ್ದರು.

ಶ್ರೀ ಉತ್ತರಾದಿ ಮಠದ ಪಂಡಿತ ಪರಿವ್ರಾಟ್ ಸಮ್ರಾಟರಾದ ಶ್ರೀ ಸತ್ಯಪರಾಕ್ರಮತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ಒಂದು ಚಮತ್ಕಾರ ಘಟನೆ ನಡೆಯಿತಂತೆ.

ಶ್ರೀಮಠದಲ್ಲಿರುವ ಉದ್ದಾಮ ವಿದ್ವಾಂಸರು ವಾದ ಕುತೂಹಲದಿಂದ ಅಗರ ಖೇಡ ವಿದ್ವಾಂಸರಿಗೆಲ್ಲ ರಾಯಸಪತ್ರದೊಡನೆ ಒಂದು ಸೂಚನಾಪತ್ರವನ್ನೂ ಇಟ್ಟಿದ್ದ ರಂತೆ "ಅಗರಖೇಡದ ವಿದ್ವಾಂಸರೇ! ನಿಮ್ಮ ಎದುರಾಳಿ ಪಂಡಿತರ ಕ್ರೋಢಪತ್ರಗಳು ಆನೆ, ಒಂಟೆಗಳ ಮೇಲೆ ಬರುತ್ತಿವೆ ಎಚ್ಚರ!" ಆದಕ್ಕೆ ಖೇಡದ ವಿದ್ವಾಂಸರು ಅದೇ ಪತ್ರದ ಹಿಂದೆಯೇ— "ಒಂಟೆಯ ಮೇಲಿನ ವಿದ್ವಾಂಸರೇ, ನಿಮ್ಮ ಆನೆಯ ಮೇಲಿನ ಕ್ರೋಢಪತ್ರಗಳಿಗೆಲ್ಲ ಅಗರಖೇಡದ ಅಗಸಿಯ ಬಾಗಿಲಿನಲ್ಲಿಯೇ ಕಸಬರಿಗೆಯ ಸೇವೆ ಕಾದಿದೆ. ಈ ಪೊರಕೆ ಪೂಜೆಯನ್ನು ಸ್ವೀಕರಿಸಲು ಸದಾ ಸಿದ್ಧರಾಗಿ ಬನ್ನಿರಿ." ಎಂದು ಬರೆದು ಕಳಿಸಿದರಂತೆ.

ಶ್ರೀಮಠದ ಅನೇಕ ಪಂಡಿತರೂ, ಖೇಡದ ವಿದ್ವಾಂಸರ ಜೊತೆಗೆ ವಾಕ್ಯಾರ್ಥ ವಿನೋದವಾಡಿ ಪರಸ್ಪರ ಕೋಟಿಕ್ರಮ, ವಿಕ್ರಮ, ವಾದಕ್ರಮಗಳನ್ನು ಅರಿತು ಸ್ನೇಹ ಪೂರ್ಣವಾಗಿ ಪರಸ್ಪರ ಗೌರವಿಸಿದರಂತೆ.

ಇಂಥ ವಿದ್ವದ್ಗ್ರಾಮದ ಪಂಡಿತರೆಲ್ಲರ ಪರಿಚಯವನ್ನು ಕೊಡುವದು ಈ ಗ್ರಂಥದ ಗಾತ್ರ ಪರಿಮಿತಿಗೆ ಮೀರಿದ ಮಾತು. ಆದರೂ ಸ್ಥಾಲೀಪುಲಾಕನ್ಯಾಯದಿಂದ ಕೆಲವೊಂದು ವಿಶಿಷ್ಟ ವಿದ್ವಾಂಸರ ನಮಗೆ ಉಪಲಬ್ಧವಿದ್ದ ಪರಿಚಯಾತ್ಮಕ ಚರಿತ್ರೆ ಯನ್ನು ಸಂಕ್ಷಿಪ್ತವಾಗಿ ಇಲ್ಲಿ ದಿಗ್ದರ್ಶನಮಾಡಲಾಗಿದೆ.

## ೧ ಶ್ರೀ ವರದರಾಜಾಚಾರ್ಯ ಆದ್ಯ

ಇವರು ಆದ್ಯ ಮನೆತನದ ಮೂಲ ಪುರುಷರು. ಉತ್ತರಾದಿ ಮಠದ ಶ್ರೀ ರಘುನಾಥ ಶ್ರೀಪಾದಂಗಳವರಲ್ಲಿ ಚತುಃಶಾಸ್ತ್ರಗಳನ್ನು ಓದಿ ಇವರು ಮಹಾ ಪಂಡಿತರಾದರು. ಇವರಿಗೆ ನೂರಾರು ಜನ ಪಂಡಿತ ಶಿಷ್ಯರು. ಶ್ರೀಗಳವರಂತೆ ದಿಗ್ವಿ ಜಯ ಮಾಡುತ್ತ ಪ್ರವಚನಾಚಾರ್ಯರಾಗಿ ಇವರು ಎಲ್ಲ ದೇಶಗಳಲ್ಲಿ ಸಂಚಾರ ಮಾಡುತ್ತಿದ್ದರು.

ಇವರು ಒಂದು ಸಲ ಉತ್ತರಾದಿ ಮಠದಲ್ಲಿದ್ದಾಗ ಶ್ರೀ ಚಂದ್ರಿಕಾಚಾರ್ಯರ ಶುಭಾಗಮನವಾಯಿತು. ಶ್ರೀ ರಘುನಾಥ ತೀರ್ಥರು ತಮ್ಮ ಶಿಷ್ಯ ವರದರಾಜರಿಗೆ ವ್ಯಾಸತ್ರಯಕಾರರ ಮುಂದೆ ಶಾಸ್ತ್ರಾರ್ಥ ವಿಚಾರವನ್ನು ಪ್ರಾರಂಭಿಸಲು ಅಪ್ಪಣೆ ನೀಡಿದರು. ಅಂದು ವರದಾಚಾರ್ಯರು ಮಾಡಿದ ಉಚ್ಚ ಮಟ್ಟದ ಶಾಸ್ತ್ರೀಯ ವಾಕ್ಯಾರ್ಥವನ್ನು ಕೇಳಿ ಅವರ ಪಾಂಡಿತ್ಯ ನಿರರ್ಗಳ ಅನುವಾದ ಶಕ್ತಿ, ಮತ್ತು ವಿಷಯ ವಿವೇಚನ ವೈಖರಿಗೆ ಶ್ರೀ ಚಂದ್ರಿಕಾಚಾರ್ಯರು ತಲೆದೂಗಿದರು, ಶ್ರೀ ರಘುನಾಥ ತೀರ್ಥರಿಗಂತೂ ಪರಮಾನಂದವಾಯಿತು.

ಶ್ರೀಗಳವರು ಅಂದಿನಿಂದ ವರದಾಚಾರ್ಯರನ್ನು "ಆದ್ಯ"ಎಂಬ ಬಹುಮಾನದ ಹೆಸರಿನಿಂದ ಕರೆಯತೊಡಗಿದರು. ಅಂದಿನಿಂದ ಉತ್ತರಾದಿ ಶ್ರೀಮಠದಲ್ಲಿ ಆದ್ಯ ಮನೆ ತನದವರಿಗೆ ಪ್ರಥಮ ಬಹುಮಾನದ ಪ್ರಥೆಯು ಪ್ರಾರಂಭವಾಯಿತು. ಇವರು ಶ್ರೀಮಧ್ವಾಚಾರ್ಯರ ಮಹಾ ಭಾರತ ತಾತ್ಪರ್ಯ ನಿರ್ಣಯಕ್ಕೆ "ವರದರಾಜೀಯ" ಎಂಬ ಟೀಕೆಯನ್ನು ಬರೆದಿದ್ದಾರೆ. ತಾತ್ಪರ್ಯ ನಿರ್ಣಯದ ಅಭಿಪ್ರಾಯವನ್ನು ಸರಿ ಯಾಗಿ ತಿಳಿದುಕೊಳ್ಳಲಿಕ್ಕೆ ಈ ವರದ ರಾಜೀಯ ಟೀಕೆಯು ಅತ್ಯಂತ ಉಪಯು ಕ್ತವೂ, ಸರಳವೂ, ಸರಸವೂ ಆಗಿರುತ್ತದೆ.

## ೨ ನರಹರಿ ಆಚಾರ್ಯ ಆದ್ಯ

ವರದರಾಜಾಚಾರ್ಯರಿಗೆ ನರಹರಿಆಚಾರ್ಯ, ಗುರುರಾಜಾಚಾರ್ಯ, ಆನಂದ ತೀರ್ಥಾಚಾರ್ಯ, ಕೇಶವಾಚಾರ್ಯ ಎಂದು ನಾಲ್ಕು ಜನ ಮಕ್ಕಳು. ಈ ಚತುಃ ಪುತ್ರರರೂ ಚತುಃಶಾಸ್ತ್ರಚತುರರಾದ ಮಹಾ ಮೇಧಾವಿಗಳೇ ಆಗಿದ್ದರು. ನರಹರಿ ಆಚಾರ್ಯರು ೧) ಭಾಗವತ ತಾತ್ಪರ್ಯ ಟಿಪ್ಪಣಿ ೨) ವಿಷ್ಣು ಪುರಾಣ ಟಿಪ್ಪಣಿ ೩) ಸ್ಮೃತಿ ಕೌಸ್ತುಭ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

## ೩ ಎರಡನೇ ವರದಾರಾಜಾಚಾರ್ಯರು

ಇವರು ಕುಂಭಕೋಣದಲ್ಲಿ ಶಾಸ್ತ್ರೀಯ ಉದ್ಗ್ರಂಥಗಳನ್ನು ಅಧ್ಯಯನಮಾಡಿ ಪಂಡಿತ ಪ್ರವರರಾದರು. ಇವರು ಕುಂಭಕೋಣದಲ್ಲಿ ಅಧ್ಯಯನಮಾಡುತ್ತಿರುವಾಗಲೇ ಮೈಸೂರು ಕಡೆಯಿಂದ ಸದಾಶಿವಶಾಸ್ತ್ರಿ ಎಂಬ ಮಹಾ ಪಂಡಿತನು ಆಗಮಿಸಿದನು. ಆವನು ಅಲ್ಲಿಯ ರಾಜ ದರ್ಬಾರದಲ್ಲಿ ಇರುವ ಎಲ್ಲ ವಿದ್ವಾಂಸರನ್ನು ಕರೆದು ಒಬ್ಬೊಬ್ಬರನ್ನಾಗಿ ಸೋಲಿಸಿ ಕುಂಭಕೋಣದಲ್ಲಿ ತನ್ನ ಗೆಲುವಿನ ಕಂಬವನ್ನು ನೆಡು ತ್ತೇನೆಂದು ಘೋಷಿಸಿದನಂತೆ. ಆಗ ವಿದ್ಯಾರ್ಥಿಗಳ ವೃಂದದಲ್ಲಿ ಕುಳಿತುಕೊಂಡು ಇವನ್ನೆಲ್ಲ ನೋಡುತ್ತಲಿದ್ದ ವರದರಾಜಾಚಾರ್ಯರು " ಅತ್ರೇದಂ ಸಮಾಧಾನಂ " ಎಂದು ಅನ್ನುತ್ತ ಮುಂದೆ ಬಂದು ಸದಾಶಿವಶಾಸ್ತ್ರಿಯ ಪೂರ್ವಪಕ್ಷಗಳಿಗೆಲ್ಲ ಸಮಂಜಸ ವಾದ ಉತ್ತರವನ್ನು ಹೇಳಿದರು.

ಶಾಸ್ತ್ರಿಯು ತನ್ನ ಪೂರ್ವಪಕ್ಷಗಳಿಗೆಲ್ಲ ಉತ್ತರ ಬಂದಿತೆಂದು ಒಪ್ಪಿದ ಬಳಿಕ ಆವನ ಮೇಲೆ ವರದಾಚಾರ್ಯರು ಮತ್ತೆ ತಾವು ಕೆಲವು ಕೋಟಿಗಳನ್ನು ಎರಿಸಿದರು. ಶಾಸ್ತ್ರಿಯು ನಿರುತ್ತರನಾದ. ತಾನು ಇದುವರೆಗೆ ಗೆದ್ದುಕೊಂಡು ಬಂದ ಜಯಪತ್ರಗಳನ್ನೆಲ್ಲ ಆಚಾರ್ಯರಿಗೆ ಒಪ್ಪಿಸಿದ.

ಇದನ್ನು ಕಂಡು ಕುಂಭಕೋಣದ ಮರ್ಯಾದೆಯನ್ನು ಉಳಿಸಿದ ಆಚಾರ್ಯ ರೆಂದು ವರದರಾಜಾಚಾರ್ಯರಿಗೆ ಅಲ್ಲಿಯ ರಾಜನು ಬಹುಮಾನ, ಧನ, ವಸ್ತ್ರಾದಿ ಗಳನ್ನು ಅರ್ಪಿಸಿದನು. ಅವರ ಗುರುಗಳು ಕೂಡ— "ನಿಮ್ಮಂಥ ಮಹಾ ಪಂಡಿತರಿಗೆ ನಾನೇನು ಪಾಠ ಹೇಳಲಿ, ನೀವೇ ಇನ್ನು ಮೇಲೆ ಸ್ವಯಂ ಪಾಠಪ್ರವಚನ ಮಾಡಿರಿ" ಎಂದು ಹೇಳಿಕಳಿಸಿದರು.

ಅಲ್ಲಿಂದ ಆಚಾರ್ಯರು ಮಣೂರಿಗೆ ದಯಮಾಡಿಸಿ "ಸುಬೋಧ ಚಂದ್ರಿಕಾ" ಎಂಬ ತತ್ವ ಪ್ರಕಾಶಿಕೆಯ ಟಿಪ್ಪಣಿಯನ್ನು ರಚಿಸಿದರು.

ಇವರು ಸಾತಾರೆಯ ಶಾಹು ಛತ್ರಪತಿಯ ಸಭೆಗೆ ಹೋಗಿ ಅಲ್ಲಿ ವಜ್ರಟಂಕ ರೆಂಬ ಪಂಡಿತರನ್ನು ಸೋಲಿಸಿ ಛತ್ರಪತಿಯಿಂದ ರಾಜಗೌರವವನ್ನು ಪಡೆದರು. ಭೂಯಾರ, ದಿಗಸಂಗಿ, ಜಂಗಲಿಗಿ, ಪಡಗಾನೂರು ಮುಂತಾದ ಜಹಗೀರಗಳನ್ನು ಇವರೇ ಸಂಪಾದನ ಮಾಡಿದರು.

ಇವರು ಒಮ್ಮೆ ಉತ್ತರಕ್ಕೆ ದಿಗ್ವಿಜಯಕ್ಕಾಗಿ ಹೋದಾಗ ದೇಹಾಲಸ್ಯವಾಗಿ ಅಲ್ಲಿಯೇ ಕಾಲವಾದರು.

### ೪ ಕೃಷ್ಣದ್ವೈಪಾಯನಾಚಾರ್ಯ ಆದ್ಯ

ಇವರು ತಮ್ಮ ಅಣ್ಣಂದಿರಾದ ಎರಡನೇ ವರದರಾಜಾಚಾರ್ಯರಲ್ಲಿ ವಿದ್ಯಾ ಧ್ಯಯನ ಮಾಡಿ ಸರ್ವಶಾಸ್ತ್ರ ನದೀಷ್ಣರಾದರು. ಇವರು ಪುಣೆಯ ಪೇಶ್ವೇರ ಸಭೆಗೆ ಹೋಗಿ ವಾಕ್ಯಾರ್ಥವನ್ನು ಮಾಡಿ ವೈಷ್ಣವ ಸಮಾಜಕ್ಕೆ ಗೌರವವನ್ನು ತಂದಿ ದ್ದಾರೆ. ನಾನಾ ಸಾಹೇಬ ಪೇಶ್ವೆಯಿಂದ ಅಗರಖೇಡ ಜಹಗೀರನ್ನು ಸಂಪಾದನ ಮಾಡಿದರು. ಇವರು ಪಂಡಿತ ಪ್ರಪಂಚದ ಪ್ರಚಂಡ ಪುಂಡರೀಕರಾಗಿದ್ದರು.

ಇವರು ಸಾಮಾನ್ಯವಾದ ಮತ್ತು ಪ್ರಮಾಣಪದ್ಧತಿ ವ್ಯಾಖ್ಯಾನ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾರೆ.

### ೫ ಶೇಷದಾಸಾಚಾರ್ಯ ಆದ್ಯ

ಇವರು ತಮ್ಮ ಕಕ್ಕಂದಿರಾದ ಕೃಷ್ಣದ್ವೈಪಾಯನಾಚಾರ್ಯರಲ್ಲಿ ಅಧ್ಯಯನ ಮಾಡಿ ಮಹಾ ಪಂಡಿತರಾದರು. ಇವರು ಚಂದ್ರಿಕಾ ಗ್ರಂಥದ ಮೇಲೆ ಕೆಲವು ವಿಚಾರಾತ್ಮಕ ಟಿಪ್ಪಣಿಗಳನ್ನೂ, ಜಗನ್ಮಿಥ್ಯಾತ್ವ ನಿರಾಕರಣ ಪರವಾದ ಒಂದು ದೀರ್ಘ ಪ್ರಬಂಧವನ್ನು ಬರೆದಿದ್ದಾರೆ.

ಇವರು ಹಲಸಂಗಿ, ಕಲಕುರ್ಗಾ, ಯಾತಗಿರಿ ಮುಂತಾದ ಗ್ರಾಮುಗಳನ್ನು ಸಂಪಾದಿಸಿದರು.

## ೬ ರಾಯಕೇಶವಾಚಾರ್ಯ ಆದ್ಯ

ಕೃಷ್ಣದ್ವೈಪಾಯನಾಚಾರ್ಯರ ಐದು ಜನ ಮಕ್ಕಳಲ್ಲಿ ಮೂರನೇಯವರಾದ ರಾಯ ಕೇಶವಾಚಾರ್ಯರು ಮಹಾ ಪಂಡಿತರಾಗಿದ್ದರು. ಇವರು ಆದ್ಯ ವಂಶ ಪ್ರದೀಪ, ಕೃಷ್ಣಾಷ್ಟಮಿ ನಿರ್ಣಯ, ಗ್ರಸ್ತಾಸ್ತನಿರ್ಣಯ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

ಈ ಮನೆತನದಲ್ಲಿ ವರದರಾಜಾಚಾರ್ಯರೆಂಬ ಪಂಡಿತರು ಮಧ್ವಾಚಾರ್ಯರ ಗೀತಾಭಾಷ್ಯ, ಗೀತಾ ತಾತ್ಪರ್ಯಗಳಿಗನುಸರಿಸಿ ಶ್ರೀ ಭಗವದ್ಗೀತೆಗೆ ಬಹು ಪೂರ್ವ ಕಾಲದಲ್ಲಿಯೇ ಕನ್ನಡ ಭಾಷೆಯಲ್ಲಿ ಒಂದು ಟೀಕೆಯನ್ನು ಬರೆದಿದ್ದಾರೆ.

## ೭ ಗುರುನಾಯಿಕ ರಂಗಾಚಾರ್ಯ ಆದ್ಯ

ಅಗರಖೇಡದಿಂದ ೩ ಮೈಲು ದೂರದಲ್ಲಿರುವ ಭೂಯ್ಯಾರದಲ್ಲಿ ಅನೇಕ ಜನ ವಿದ್ವಾಂಸರಿದ್ದರು. ಅವರಲ್ಲಿ ಗುರುನಾಯಿಕ ರಂಗಾಚಾರ್ಯರು ವ್ಯಾಕರಣ ವಿದ್ವಾಂಸ ರಾಗಿದ್ದರು. ಇವರು ಮನೆಯಲ್ಲಿ ನಿರಂತರವೂ ೨೦–೨೫ ಜನ ವಿದ್ಯಾರ್ಥಿಗಳನ್ನಿಟ್ಟು ಕೊಂಡು ಮಹಾಭಾಷ್ಯಾಂತ ಪಾಠ ಹೇಳುತ್ತಿದ್ದರು.

## ೮ ಅಣ್ಣಾಚಾರ್ಯ ಆದ್ಯ

ಇವರು ಬಹಳ ದೊಡ್ಡ ನೈಯಾಯಿಕರು ಸ್ವಯಂ ಕ್ರೋಡ ಪತ್ರಗಳನ್ನು ತಕ್ಷಣದಲ್ಲಿಯೇ ರಚಿಸಿ ವಾದಸಂಗರದಲ್ಲಿ ಮುಖೋದ್ಗತವಾಗಿ ಹೇಳಿ ಪ್ರತಿವಾದಿ ಗಳನ್ನು ದಿಗ್ಭ್ರಮೆಗೊಳಿಸುತ್ತಿದ್ದರು.

## ೯ ಸೀತಾರಾಮಾಚಾರ್ಯ ಆದ್ಯ

ನ್ಯಾಯ ಶಾಸ್ತ್ರದಲ್ಲಿ ಪ್ರಚಂಡ ಪಂಡಿತರು. ಇವರ ತರ್ಕ ಶಾಸ್ತ್ರದ ಬೋಧ ಶಕ್ತಿಯು ಅಸಾಧಾರಣವಾಗಿತ್ತು. ನೂರು ಜನ ವಿದ್ಯಾರ್ಥಿಗಳು ಇವರ ಮನೆಯ ಲ್ಲಿದ್ದು ವ್ಯಾಪ್ತಿವಾದ, ಉತ್ತರವಾದಗಳನ್ನು ಓದುತ್ತಲಿದ್ದರು. ಹಗಲು ರಾತ್ರಿ ಬಿಡು ವಿಲ್ಲದೇ ಶಾಸ್ತ್ರಪಾಠವು ಸಾಗುತ್ತಲಿತ್ತು.

ಆಚಾರ್ಯರು ಮನೆಯಿಂದ ಸಿರಿವಂತರಾಗಿದ್ದರೂ ಪ್ರತಿ ನಿತ್ಯ ನೂರಾರು ಜನ ಶಿಷ್ಯರಿಗೆ ಎರಡು ಹೊತ್ತು ಊಟ, ಉಪಹಾರಗಳನ್ನು ಸಮೀಚೀನವಾಗಿ ಮಾಡುತ್ತ ಲಿದ್ದುದರಿಂದ ಅವರ ಜಹಗೀರೀ ಹಣವು, ಶಿಷ್ಯರು ಕೊಟ್ಟ ದಾನ ದಕ್ಷಿಣಾದಿ ದ್ರವ್ಯವು ಸಾಲದೇಹೋಯಿತು.

ಆದರೂ ಆಚಾರ್ಯರ ಪಾಠ ಪ್ರವಚನ ದೀಕ್ಷೆಯು ಅಸಾಧಾರಣವಾಗಿದ್ದಿತು. ಎಷ್ಟೇ ಸಾಲವಾದರೂ ತಮ್ಮಲ್ಲಿ ಓದಲು ಬಂದ ಆ ಯಾವ ವಿದ್ಯಾರ್ಥಿಗೂ ಅವರು ಪಾಠ ಹೇಳಲಿಕ್ಕೆ ಆಗುವದಿಲ್ಲವೆಂದು ಅನ್ನಲಿಲ್ಲ. ಊಟ ಹಾಕಲಿಕ್ಕೆ ಆಗುವದಿಲ್ಲವೆಂದು ಎಂದೂ ಹೇಳಲಿಲ್ಲ. ಇಷ್ಟು ಜನರಿಗೆಲ್ಲ ಅವರ ಧರ್ಮಪತ್ನಿಯವರೇ ಅಡಿಗೆ ಮಾಡಿ ಹಾಕುತ್ತಿದ್ದರು.

ಇದರಿಂದ ಸೀತಾರಾಮಾಚಾರ್ಯರಿಗೆ ಕೆಲವೇ ದಿನಗಳಲ್ಲಿ ೨೫ ಸಾವಿರ ರೂ. ಸಾಲವಾಯಿತು. ಆಗಿನ ಕಾಲದಲ್ಲಿ ೨೫ ಸಾವಿರವೆಂದರೆ ಬಹಳ ದೊಡ್ಡ ಮೊತ್ತವೆನಿಸುತ್ತಿತ್ತು- ಅವರ ಆಪ್ತೇಷ್ಟರೆಲ್ಲರೂ ಗಾಬರಿಯಾದರು. ಆದರೂ ಆಚಾರ್ಯರು ಸ್ಥಿತಪ್ರಜ್ಞನಂತೆ ನಿಶ್ಚಿಂತೆಯಿಂದ ಪಾಠಪ್ರವಚನವನ್ನು ಮಾಡಿಸುತ್ತಲೇ ಇದ್ದರು.

ಇವರ ಕಾಲದಲ್ಲಿ ಅಗರಖೇಡ ಊರಿನತುಂಬ ವಿದ್ಯಾರ್ಥಿಗಳು ಕುಳಿತು ಸಂಸ್ಕೃತದಲ್ಲಿ ಚಿಂತನೆ ಮಾಡುತ್ತಿದ್ದುದರಿಂದ ಇಡೀ ಗ್ರಾಮವೆಲ್ಲವೂ ಅವಚ್ಛೇದಕ, ಅವಚ್ಛಿನ್ನ ಪಕ್ಷತಾ, ಸಾಧ್ಯ, ಹೇತು ಮುಂತಾದ ಶಬ್ದ ಹಾಗೂ ಪರಿಷ್ಕಾರ, ಅನುಗಮ ಪ್ರಕಾರಗಳಿಂದ ದುಂದುಮಿಸಿ ಹೋಗುತ್ತಲಿತ್ತು.

ಶ್ರೀ ಸತ್ಯಧ್ಯಾನತೀರ್ಥರ ಪೂರ್ವಾಶ್ರಮದ ತರ್ಕ ಗುರುಗಳಾದ ರಂಗಂಪೇಟ ರಾಮಾಚಾರ್ಯರು ಈ ಸೀತಾರಾಮಾಚಾರ್ಯರ ಶಿಷ್ಯರಲ್ಲಿ ಶತೇಷು ಏಕರಾಗಿದ್ದರು.

೨೫ ಸಾವಿರ ರೂಪಾಯಿ ಸಾಲದಿಂದ ಆಚಾರ್ಯರಿಗೆ ಮುಂದೆ ಸಾಲ ಹುಟ್ಟದಂತಾಗಿ ಆರ್ಥಿಕ ಮುಗ್ಗಟ್ಟಿನಿಂದ ಪಾಠಶಾಲೆಯನ್ನು ನಡೆಸುವದು ತೀರ ಅಶಕ್ಯವಾದಾಗ ಗುಲಬುರ್ಗಾದ ದೇಶಮುಖರೇ ಮೊದಲಾದ ಅನೇಕ ಗೃಹಸ್ಥರು ಆಚಾರ್ಯರಲ್ಲಿ ಬಂದು ತಮ್ಮಲ್ಲಿಗೆ ಬಂದು ಅಲ್ಲಿಯ ಶಿಷ್ಯರಿಗೂ ಪಾಠ ಹೇಳಬೇಕೆಂದು ಬಿನ್ನವಿಸಿದರು. ಆ ಗೃಹಸ್ಥ ಶಿಷ್ಯರ ಕೇಳಿಕೆಯಂತೆ ಆದ್ಯ ಆಚಾರ್ಯರು ಗುಲಬುರ್ಗಾಕ್ಕೆ ಹೋಗಿ ತಮ್ಮ ಪಾಠಶಾಲೆಯನ್ನು ಅಲ್ಲಿಯೇ ಮುಂದುವರಿಸಿ ಅಲ್ಲಿಯೂ ಅನೇಕ ಶಿಷ್ಯರಿಗೆ ಜ್ಞಾನದಾನವನ್ನು ಮಾಡಿದರು.

ಸೀತಾರಾಮಾಚಾರ್ಯರ ಪಾಠಶಾಲೆಯು ಕಲಬುರ್ಗಿಯಲ್ಲಿಯೂ ಶತಾಧಿಕ ಲೌಕಿಕ, ವೈದಿಕ ಶಿಷ್ಯರಿಂದ ವೈಭವಪೂರ್ಣವಾಗಿಯೇ ನಡೆಯಿತು.

ಸೊಲ್ಲಾಪುರ, ಬೀದರ, ಹೈದರಾಬಾದ, ವಿಜಾಪುರ ಮೊದಲಾದ ಕಡೆಗಳಿಂದ ಶ್ರೀಮಂತ ಗೃಹಸ್ಥರು ಆಚಾರ್ಯರ ಜ್ಞಾನಪ್ರಸಾರ ಕಾರ್ಯಕ್ಕೆ ಸಹಾಯ ಮಾಡಿದರು. ಕೆಲವೇ ದಿನಗಳಲ್ಲಿ ಆಚಾರ್ಯರ ಸಾಲವೆಲ್ಲವೂ ಸಂದಾಯವಾಯಿತು. ಸಾಲದಲ್ಲಿ ಒತ್ತಿ ಹಾಕಿದ ಹೊಲ-ಮನೆಗಳೆಲ್ಲವೂ ಮರಳಿ ಕೈಗೆ ಬಂದವು. ಕೊನೆಗಾಲ

ದಲ್ಲಿ ಅವರು ನಿಶ್ಚಿಂತೆಯಿಂದ ಅಗರಖೇಡಕ್ಕೆ ಬಂದು ಅಲ್ಲಿಯೂ ಪಾಠಪ್ರವಚನ ಮಾಡುತ್ತ ಇಹಲೋಕ ಯಾತ್ರೆಯನ್ನು ಮುಗಿಸಿದರು.

ಶ್ರೀ ಸೀತಾರಾಮಾಚಾರ್ಯರಲ್ಲಿ ಓದಿ ಪಂಡಿತರಾದ ಶಿಷ್ಯರಲ್ಲಿ ಯಜುರ್ವೇದಿ ನರಸಿಂಹಾಚಾರ್ಯ, ಚಕ್ರಪಾಣಿ ಕೃಷ್ಣಾಚಾರ್ಯ, ಸಂಗಲಗಿ ಬಾಬಾಚಾರ್ಯ, ಗಲಗಲಿ ಶ್ರೀಪತ್ಯಾಚಾರ್ಯ, ರಂಗಂ–ಪೇಟ ರಾಮಾಚಾರ್ಯ ಮುಂತಾದವರು ಓದಿ ವಾಕ್ಯಾರ್ಥಪಟುಗಳೆಂದು ವಿಖ್ಯಾತರಾಗಿದ್ದರು.

## ೧೦ ದಾದಾಚಾರ್ಯ ಅದ್ಯ

ಇವರು ನವ್ಯ ನ್ಯಾಯದಲ್ಲಿ ದಿವ್ಯಪಂಡಿತರಾಗಿದ್ದರು. ವಾಕ್ಯಾರ್ಥದಲ್ಲಿ ಬಹಳ ಗಟ್ಟಿಗರು. ಪುಣೆ ಪೇಶ್ವೆ ಮನೆತನದಲ್ಲಿ ಇವರಿಗೆ ಆಸ್ಥಾನ ವಿದ್ವಾಂಸರೆಂದು ವಿಶೇಷ ಗೌರವವಿದ್ದಿತು.

## ೧೧ ಶ್ಯಾಮಣ್ಣಾಚಾರ್ಯ ಅದ್ಯ

ಇವರು ಕುಂಭಕೋಣದ ವ್ಯಾಸರಾಯ ಅಗ್ರಹಾರದಲ್ಲಿ ವಾಸವಾಗಿದ್ದರು. ಇವರು ಆದ್ಯ ಮನೆತನದ ವರದರಾಜಾಚಾರ್ಯರ ವಂಶದವರು. ಇವರು 'ಆರ್ಯಾಭಾಗವತಂ' ಎಂಬ ಕಾವ್ಯವನ್ನು ಸಂಸ್ಕೃತ ಆರ್ಯಾವೃತ್ತದಲ್ಲಿ ಬರೆದಿದ್ದಾರೆ. ಮಹಾಭಾರತ ಶಾಂತಿ ಪರ್ವವನ್ನು ತಮಿಳಿನಲ್ಲಿ ಭಾಷಾಂತರಿಸಿ ಪ್ರಕಟಿಸಿದ್ದಾರೆ.

ಇವರು ಮಹಾಭಾರತವನ್ನು ಸರಸಸುಂದರವಾಗಿಯೂ ಪಂಡಿತ–ಪಾಮರರಿಗೆ ರಂಜಕವಾಗಿಯೂ ಹೇಳುತ್ತಿದ್ದರು.

## ೧೨ ಬಾಬಾಚಾರ್ಯ ಅದ್ಯ

ಇವರೂ ಒಳ್ಳೇ ನೈಯಾಯಿಕರೆಂದು ಆ ಕಾಲದ ವಿದ್ವತ್ ಪ್ರಪಂಚದಲ್ಲಿ ಪರಿಗಣಿತರಾಗಿದ್ದರು. ಇವರು ಕಾಶಿಯಲ್ಲಿ ತರ್ಕ ಶಾಸ್ತ್ರವನ್ನೋದಿ ಉತ್ತರ ದೇಶದ ಪರಿಷ್ಕಾರ ಪದ್ಧತಿಯನ್ನು ತಿಳಿದುಕೊಂಡು ಬಂದರು. ಸಾಹಿತ್ಯ ವೇದಾಂತದಲ್ಲಿಯೂ ಇವರಿಗೆ ಚನ್ನಾಗಿ ಗತಿ ಇದ್ದಿತು. ಲೋಕಮಾನ್ಯ ಟಿಳಕರು ಗೀತಾ ರಹಸ್ಯ ಗ್ರಂಥವನ್ನು ಬರೆಯುವಾಗ ಬಾಬಾಚಾರ್ಯರಿಂದ ತುಂಬ ಸಹಾಯವನ್ನು ಪಡೆದುಕೊಂಡರು. ಟಿಳಕರ ಗೀತಾರಹಸ್ಯ ಗ್ರಂಥದಲ್ಲಿಯ ಉಚ್ಚ ಮಟ್ಟದ ಶಾಸ್ತ್ರೀಯ ವಿವೇಚನೆ ಹಾಗೂ ವಿಮರ್ಶಾತ್ಮಕ ವಿಚಾರಗಳಲ್ಲಿ ಶ್ರೀಬಾಬಾಚಾರ್ಯರ ಶಾಸ್ತ್ರಸುಸಂಸ್ಕೃತವಾದ ಪ್ರತಿಭೆಯ ಕೈವಾಡವನ್ನು ನಾವು ಈಗಲೂ ಕಾಣಬಹುದು.

ಇವರಲ್ಲಿ ಮಂತ್ರಾಲಯದ ವೇದವ್ಯಾಸಾಚಾರ್ಯ ಅರ್ಚಕ, ಮುಂಜೆ ರಘುನಾಥಾಚಾರ್ಯ, ಅನಂತಾಚಾರ್ಯ ಆದ್ಯ ಮುಂತಾದವರು ಓದಿದ ಶಿಷ್ಯರು.

ಲೋಕಮಾನ್ಯ ಟಿಳಕರಲ್ಲಿ ಮತ್ತು ಬಾಬಾಚಾರ್ಯರಲ್ಲಿಯೂ ನಿರಂತರ ಪತ್ರ ವ್ಯವಹಾರ ನಡದೇ ಇರುತ್ತಿತ್ತು. ಟಿಳಕರ ಹಸ್ತಾಕ್ಷರದ ಅನೇಕ ಪತ್ರಗಳು ಈಗಲೂ ಅವರ ಮನೆಯಲ್ಲಿರುತ್ತವೆ.

## ೧೩ ರಾಮಾಚಾರ್ಯ ಆದ್ಯ

ಇವರು ದೊಡ್ಡ ನೈಯಾಯಿಕರು. ಕ್ರೋಡ ಪತ್ರ ಪದ್ಧತಿಯ ಸರ್ವ ಗ್ರಂಥಗಳು ಮುಖೋದ್ಗತ ಉಪಸ್ಥಿತಿ ಇದ್ದ ಖೇಡದ ನೈಯಾಯಿಕರಲ್ಲಿ ರಾಮಾಚಾರ್ಯರು ಖ್ಯಾತಿಯನ್ನು ಪಡೆದಿದ್ದರು.

ಇವರ ಮೊಮ್ಮಕ್ಕಳಾದ ದಿ. ಆರ್. ಎ. ಜಹಗಿರದಾರರು ಮುಂಬೈ ಹಾಯ ಕೋರ್ಟಿನ ನ್ಯಾಯಾಧೀಶರಾಗಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಪ್ರಥಮ ಉಪ ಕುಲಪತಿಗಳಾಗಿದ್ದರು.

## ೧೪ ರಾಮಚಂದ್ರಾಚಾರ್ಯ ಆದ್ಯ

ಇವರು ಗುರುನಾಯಿಕ ರಂಗಾಚಾರ್ಯರಲ್ಲಿ ವ್ಯಾಕರಣವನ್ನೂ ಶ್ರೀಸತ್ಯಧ್ಯಾನ ತೀರ್ಥರಲ್ಲಿ ಪೂರ್ವಾಶ್ರಮದಲ್ಲಿ ವೇದಾಂತವನ್ನೂ ಓದಿ ಮಹಾ ಪಂಡಿತರಾದರು. ಖೇಡದಲ್ಲಿ ಯಾವಾಗಲೂ ೧೦ ಜನ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ವ್ಯಾಕರಣ, ವೇದಾಂತ ಪಾಠಗಳನ್ನು ಹೇಳುತ್ತಿದ್ದರು.

ಮಕ್ಥೇಲಿಯಲ್ಲಿ ಶ್ರೀ ಸತ್ಯಜ್ಞಾನ ತೀರ್ಥರು ಸ್ಥಾಪಿಸಿದ ವೇದಾಂತ ವರ್ಧಿನಿ ಪಾಠಶಾಲೆಯಲ್ಲಿ ೧೦ ವರ್ಷಗಳ ವರೆಗೆ ಅಧ್ಯಾಪಕರಾಗಿ ಅನೇಕ ಶಿಷ್ಯರಿಗೆ ಪಾಠ ಹೇಳಿದರು.

ಕೌಲಗಿ ಜಯಾಚಾರ್ಯರು ಇವರಲ್ಲಿ ಓದಿ ವಿದ್ವಾಂಸರಾದರು.

## ೧೫ ಅಪ್ಪಾಚಾರ್ಯ ಆದ್ಯ

ಇವರು ವೇದಾಂತದಲ್ಲಿ ಪಂಡಿತರಾಗಿದ್ದರು. ಪಡಗಾನೂರ ಅಣ್ಣಾಚಾರ್ಯ ಜಹಗಿರದಾರ ಇವರೂ ಕೂಡ ವೇದಾಂತ ಪಂಡಿತರಾಗಿದ್ದರು.

## ೧೬ ಶೇಷದಾಸಾಚಾರ್ಯ ಆದ್ಯ

ಇವರು ವ್ಯಾಕರಣ, ಸಾಹಿತ್ಯ, ಧರ್ಮ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು.

# ಪಾಂಡುರಂಗಿ ಆಚಾರ್ಯರು

## ೧೭ ಆನಂದಭಟ್ಟಾಚಾರ್ಯ ಪಾಂಡುರಂಗಿ

ಪಾಂಡುರಂಗೀ ಮನೆತನದ ಮೂಲಸ್ಥಳವು ಅಹಮ್ಮದನಗರ ಜಿಲ್ಹೆಯ ಪುಣ ತಾಂಬಾ. ಆನಂದ ಭಟ್ಟಾರಕರು ಮಹಾ ದೇವೀ ಭಕ್ತರು. ಅವರು ಕೊಲ್ಹಾಪುರ ಮಹಾ ಲಕ್ಷ್ಮಿಯ ಸೇವೆಯನ್ನು ೧೨ ವರ್ಷಗಳ ಕಾಲಮಾಡಿ ಅವಳ ಪರಮಾನುಗ್ರಹ ಪಡೆದರು. ಮಹಾಲಕ್ಷ್ಮಿಯು ಸರ್ಪ ರೂಪದಿಂದ ಬಂದು ಆಚಾರ್ಯರಿಗೆ ದರ್ಶನ ಕೊಟ್ಟಳಂತೆ. ಆ ಮಹಾತಾಯಿಯ ಸ್ವಪ್ನ ಸೂಚನೆಯಂತೆ ಅವರು ಆ ಸರ್ಪವನ್ನು ಮುಟ್ಟಿದಕೂಡಲೇ ಅವರ ಬುದ್ಧಿಯು ಬೆಳಗತೊಡಗಿತು.

ಕೊಲ್ಹಾಪುರದಿಂದ ಅವರು ಉತ್ತರಾದಿ ಮಠದ ಪಂಡಿತೋತ್ತಮ ಪೀಠಾಧಿಪತಿ ಗಳಾದ ಶ್ರೀ ರಘೂತ್ತಮತೀರ್ಥ ಶ್ರೀಪಾದಂಗಳವರಲ್ಲಿ ಸರ್ವ ಶಾಸ್ತ್ರಾಭ್ಯಾಸ ಮಾಡಿ ದರು. ತರಂಗಿಣೀ ರಾಮಾಚಾರ್ಯರೂ ಇವರೂ ಸಹಾಧ್ಯಾಯಿಗಳು.

ಆ ಕಾಲದಲ್ಲಿ ಶ್ರೀ ವ್ಯಾಸರಾಜರು ಬರೆದ ನ್ಯಾಯಾಮೃತ ಗ್ರಂಥಕ್ಕೆ ಕಾಶಿಯ ಮಹಾ ಪಂಡಿತನಾದ ಮಧುಸೂದನ ಸರಸ್ವತಿಯು "ಅದ್ವೈತಸಿದ್ಧಿ" ಎಂಬ ಖಂಡ ನಾತ್ಮಕವಾದ ಗ್ರಂಥವನ್ನು ಬರೆದಿದ್ದಾನೆಂದು ದಕ್ಷಿಣ ದೇಶಕ್ಕೆ ಸುದ್ದಿ ಬಂದಿತು. ಆಗ ಶ್ರೀ ಚಂದ್ರಿಕಾಚಾರ್ಯರಿಗೆ ವಾರ್ಧಕ್ಯದ ಕಾಲ. ಅದ್ವೈತಸಿದ್ಧಿಯ ಖಂಡನವಾಗ ಬೇಕೆಂದೂ ಅದನ್ನು ತಾವು ನೋಡಬೇಕೆಂದೂ ಅವರಿಗೆ ಉತ್ಕಟವಾದ ಇಚ್ಛೆ.

ಇದನ್ನು ತಿಳಿದ ಶ್ರೀ ರಘೂತ್ತಮ ಶ್ರೀಪಾದಂಗಳವರ ಶಿಷ್ಯರಾದ ಶ್ರೀ ಆನಂದ ಭಟ್ಟಾರಕರೂ, ಶ್ರೀ ತರಂಗಿಣಿ ರಾಮಾಚಾರ್ಯರೂ ಕೂಡಿಯೇ ಕಾಶಿಗೆ ಹೋದರು. ಸ್ಮಾರ್ತರ ವೇಷವನ್ನು ಹಾಕಿಕೊಂಡು ಮಧುಸೂದನ ಸರಸ್ವತಿಯಲ್ಲಿ ಅವನ ಅದ್ವೈತ ಸಿದ್ಧಿ ಗ್ರಂಥವನ್ನು ಓದತೊಡಗಿದರು. ಪ್ರತಿನಿತ್ಯವೂ ಪಾಠ ಮುಗಿಸಿಕೊಂಡು ಬಂದ ಕೂಡಲೇ ತಮ್ಮ-ತಮ್ಮ ಮನೆಗಳಲ್ಲಿ ಕುಳಿತು ಅಂದೇ ಪಾಠ ಕೇಳಿದ ಅದ್ವೈತಸಿದ್ಧಿ ಗ್ರಂಥಕ್ಕೆ ಖಂಡನವನ್ನು ಬರೆದುಬಿಡುತ್ತಿದ್ದರು.

ಅದೇ ಕಾಲದಲ್ಲಿ ಕಾಶಿಯ ಇತರ ನ್ಯಾಯ, ವ್ಯಾಕರಣ, ಮೀಮಾಂಸಾದಿ ಶಾಸ್ತ್ರಗಳ ಘನಪಂಡಿತರ ಸ್ನೇಹ ಸಂಪರ್ಕವನ್ನು ಬೆಳೆಸಿಕೊಂಡು ಅಲ್ಲಿಯ ಕೋಟಿ ಕ್ರಮ, ವಾದಕ್ರಮಪದ್ಧತಿಯನ್ನು ಕರವಶಮಾಡಿಕೊಂಡರು.

ಅದ್ವೈತಸಿದ್ಧಿ ಪಾಠಪೂರ್ತಿಯಾದ ಬಳಿಕ ಇವರು ಮಧುಸೂದನ ಸರಸ್ವತಿಯ ನಿರೂಪ ತೆಗೆದುಕೊಂಡು ಬರಲು ಅವನ ಮನೆಗೆ ಹೋಗಿದ್ದರು. ಆಗ ಮಧುಸೂದನ ಸರಸ್ವತಿಯು ಇವರು ಬರೆದ ಖಂಡನ ಗ್ರಂಥಗಳ ಸಮಾಚಾರವನ್ನು ಹೇಗೋ ತಿಳಿದು ಗುರು ದಕ್ಷಿಣಾರೂಪವಾಗಿ ಎರಡೂ ಖಂಡನ ಗ್ರಂಥಗಳನ್ನು ತನಗೆ ಕೊಟ್ಟು ಬಿಡ ಬೇಕೆಂದು ಕೇಳಿದನು. ಅವನಲ್ಲಿ ಓದುವ ನೆವ ಮಾಡಿದ ತಪ್ಪಿಗಾಗಿ ನಿರ್ವಾಹವಿಲ್ಲದೆ ಈ ಎರಡೂ ಗ್ರಂಥಗಳನ್ನು ಅವನಿಗೆ ಒಪ್ಪಿಸಿಬಿಟ್ಟರು.

ಮಧುಸೂದನ ಸರಸ್ವತಿಯು ತನ್ನ ಅದ್ವೈತಸಿದ್ಧಿ ಗ್ರಂಥಕ್ಕೆ ರಾಮಾಚಾರ್ಯರು ಬರೆದ "ತರಂಗಿಣಿ" ಗ್ರಂಥವನ್ನೂ ಆನಂದಭಟ್ಟಾರಕರು ಬರೆದ "ಕಂಟಕೋದ್ಧಾರ" ಎಂಬ ಗ್ರಂಥವನ್ನೂ ಆಮೂಲಾಗ್ರವಾಗಿ ಓದಿ ನೋಡಿದನು. ತನ್ನ ಗ್ರಂಥದ ಮೇಲೆ ಆ ಇಬ್ಬರೂ ಪಂಡಿತರು ಮಾಡಿದ ಆಕ್ಷೇಪಗಳೂ, ಪ್ರತಿಕ್ಷೇಪಗಳೂ ದುರ್ಧರ ವಾಗಿದ್ದವು.

"ಅಬ್ಬಾ! ಈ ಗ್ರಂಥಗಳು ಬೆಳಕಿಗೆ ಬಂದರೆ ನನ್ನ ಅದ್ವೈತಸಿದ್ಧಿಯೇ ಅಪದ್ಧ ವೆಂದು ಸಿದ್ಧವಾಗುವದು. ಇವುಗಳನ್ನು ನಾನು ಗುರುದಕ್ಷಿಣಾರೂಪವಾಗಿ ಪಡೆದದ್ದು ಬಹಳ ನೆಟ್ಟಗಾಯಿತು." ಎಂದು ಉದ್ಗರಿಸಿ ಅವೆರಡೂ ಗ್ರಂಥಗಳನ್ನೂ ಗಂಗೆಯಲ್ಲಿ ಹಾಕಿಸಿ ಬಿಟ್ಟು "ಓಹ ! ಅಂತೂ ನನ್ನ ಗ್ರಂಥವು ಪಾರಾಯಿತು." ಎಂದು ಸಂತಸದ ನಿಟ್ಟುಸಿರು ಎಳೆದನು.

ಏನಾದರೂ ಅವನ ಯೋಜನೆ ವಿಫಲವಾಯಿತು. ಈ ಮೊದಲೇ ಇವರಿಬ್ಬರೂ ತಮ್ಮ-ತಮ್ಮ ಗ್ರಂಥಗಳನ್ನು ಒಂದು ಪ್ರತಿಮಾಡಿ ಚಂದ್ರಿಕಾಚಾರ್ಯರ ಬಳಿಗೆ ಕಳಿಸಿಬಿಟ್ಟಿದ್ದರು. ಅವು ದೇಶದಲ್ಲಿ ಆಗಲೇ ಪ್ರಸಿದ್ಧವಾಗಿ ಬಿಟ್ಟಿದ್ದವು. ಅದನ್ನು ತಿಳಿದ ಅದ್ವೈತ ಸಿದ್ಧಿಕಾರನಿಗೆ ಬಹಳ ಕಳವಳವಾಯಿತಂತೆ.

ಚಂದ್ರಿಕಾಚಾರ್ಯರು ತಮ್ಮ ಕೊನೆಗಾಲದಲ್ಲಿ ನ್ಯಾಯಾಮೃತ ಮಂಡನ ಪರ ವಾದ ಎರಡು ದಿವ್ಯ ಗ್ರಂಥಗಳು ಅದ್ವೈತ ಸಿದ್ಧಿಯನ್ನು ಅಕ್ಷರಶಃ ಖಂಡನ ಮಾಡಿ ಬರೆಯಲ್ಪಟ್ಟಿದ್ದನ್ನು ಕಂಡು ಬಹಳ ಆನಂದಪಟ್ಟರಂತೆ.

ಶ್ರೀ ಆನಂದ ಭಟ್ಟಾರಕರ ಕಂಟಕೋದ್ಧಾರ ಗ್ರಂಥವು ನಿಜವಾಗಿಯೂ ಅದ್ವೈತ ಮತದ ಕಣ್ಣಿನಲ್ಲಿ ಚಿರ ಕಂಟಕವಾಗಿ ಚುಚ್ಚುತ್ತಲೇ ಇದೆ. ಇವರ ಗ್ರಂಥ ವಿಲೇಖ ನದ ಪ್ರೌಢ ಸರಣಿ, ಪ್ರತಿ ಪಕ್ಷ ಖಂಡನದ ವಿಲಕ್ಷಣ ಮಾದರಿ, ವಿಶಿಷ್ಟವಾದ ಯುಕ್ತಿ ವಿನ್ಯಾಸದ ವೈಖರಿ ಎಲ್ಲವೂ ಅತ್ಯಪೂರ್ವವಾಗಿವೆ.

ಅವರು ಉತ್ತರ ಹಿಂದುಸ್ಥಾನದಲ್ಲೆಲ್ಲ ದಿಗ್ವಿಜಯ ಮಾಡಿಕೊಂಡು ಊರಿಗೆ ಹೊರಟಾಗ ದಾರಿಯಲ್ಲಿ ಓರ್ವ ಅದ್ವೈತ ಪಂಡಿತನು ಭೇಟಿಯಾದನು. ಅವನ ಬಳಿಯಲ್ಲಿ ಶ್ರೀ ವಾದಿರಾಜ ಶ್ರೀಪಾದಂಗಳವರು ಬರೆದು ಕೊಟ್ಟ ಜಯಪತ್ರವಿದ್ದಿತಂತೆ.

ಶ್ರೀ ವಾದಿರಾಜ ಶ್ರೀಪಾದಂಗಳವರು ಒಳ್ಳೇ ಅವಸರದಿಂದ ತಮ್ಮ ಪರ್ಯಾಯ ಕಾಲಕ್ಕೆ ಒದಗಬೇಕೆಂದು ಉಡುಪಿಗೆ ಹೊರಟಿದ್ದರು. 'ಶ್ರೀಗಳವರು ಏನಾದರೂ ತಮ್ಮ ಪರ್ಯಾಯ ಕಾಲ ತಪ್ಪಿಸುವಂತಿಲ್ಲ' ಎಂದು ನಿಶ್ಚಿತವಾಗಿ ತಿಳಿದ ಆ ವಿದ್ವಾಂಸನು ರಾಜರನ್ನು ತಡೆದು 'ನನ್ನ ಜೊತೆಗೆ ವಾಕ್ಯಾರ್ಥ ಮಾಡಬೇಕು ಇಲ್ಲವೇ ಆಗುವದಿಲ್ಲವೆಂದು ಪತ್ರ ಬರೆದುಕೊಡಬೇಕು' ಎಂದು ಹೇಳಿದನು. ರಾಜರು ಅತಿ ತ್ವರೆಯಲ್ಲಿ ಇದ್ದುದರಿಂದಲೂ ಪರ್ಯಾಯ ಕಾಲವು ಅತಿ ಸನ್ನಿಹಿತವಾದುದರಿಂದಲೂ 'ಈಗ ವಾಕ್ಯಾರ್ಥ ಮಾಡಲು ಸಾಧ್ಯವಿಲ್ಲ ಎಂದು ಬರೆದು ಕೊಟ್ಟು ಮುಂದೆ ಸಾಗಿದ್ದರು. ಆ ಪಂಡಿತನು ಅದನ್ನೇ ಜಯಪತ್ರವೆಂದು ಜನರಿಗೆಲ್ಲ ತೋರಿಸುತ್ತ ನಡೆದಿದ್ದನಂತೆ.

ಇದನ್ನು ತಿಳಿದು ಆನಂದ ಭಟ್ಟಾರಕರು ಆ ಪಂಡಿತನಿಗೆ "ಶ್ರೀ ವಾದಿರಾಜ ಸ್ವಾಮಿಗಳು ನಮ್ಮ ಗುರುಗಳು. ಅವರ ಶಿಷ್ಯನಾದ ನನ್ನ ಜೊತೆಗೆ ವಾಕ್ಯಾರ್ಥ ಮಾಡಿ ಗೆದ್ದ ಬಳಿಕ ನಿನಗೆ ನಮ್ಮ ಗುರುಗಳ ಎದುರು ನಿಲ್ಲುವ ಅಧಿಕಾರ ಬರುವದು" ಎಂದು ಹೇಳಿ ಮೂರು ಗಳಿಗೆಯಲ್ಲಿ ಆ ಮಹಾ ವಿದ್ವಾಂಸನ ಮುಖ ಭಂಗವನ್ನು ಮಾಡಿದರು. ಮೂಕೀಕೃತನಾದ ಆ ಪಂಡಿತನು ಕೊನೆಗೆ ತನ್ನ ಸೋಲನ್ನು ಒಪ್ಪಿಕೊಂಡನು. ಆಗ ಆನಂದ ಭಟ್ಟಾರಕರು ಮಧ್ಯಸ್ಥರ ಮುಖಾಂತರ ವಾದಿರಾಜ ಶ್ರೀಪಾದಂಗಳವರು ಬರೆದುಕೊಟ್ಟ ಕಾಗದವನ್ನೂ ಇಸಿದುಕೊಂಡು ಅವನು ತಮಗೆ ಬರೆದುಕೊಟ್ಟ ಜಯಪತ್ರವನ್ನೂ ತೆಗೆದುಕೊಂಡು ಉಡುಪಿಗೆ ಬಂದರಂತೆ.

ಪರ್ಯಾಯದ ಸಂಭ್ರಮದಲ್ಲಿ ಶ್ರೀ ಗುರುರಾಜರು ತಾವು ಬರೆದು ಕೊಟ್ಟ ಕಾಗದವನ್ನು ಮರಳಿ ತಂದದ್ದನ್ನು ನೋಡಿ ಬಹಳ ಸಂತೋಷ ಪಟ್ಟು ಆನಂದ ಭಟ್ಟಾರಕರನ್ನು ಬಹು ವಿಧವಾಗಿ ಗೌರವಿಸಿದರಂತೆ.

ಭಕ್ತಿಯಿಂದ ತಮ್ಮ ಪಾದಾರವಿಂದಗಳಿಗೆ ನಮಸ್ಕರಿಸಿದ ಆನಂದ ಭಟ್ಟಾರಕರನ್ನು ಎತ್ತಿ ಹಿಡಿದು ಹರ್ಷಗದ್ಗದಿತರಾಗಿ "ನೀವು ಮಾಡಿದ ಈ ಸರ್ವಜ್ಞ ಪೀಠದ ಸೇವೆಗಾಗಿ ನಿಮಗೆ ಶ್ರೀ ಮಧ್ವಪತಿ ಗೋಪಾಲ ಕೃಷ್ಣನ ಅನುಗ್ರಹದಿಂದ ನನ್ನಂತೆಯೇ ಮಹಾ ವಿದ್ವಾಂಸನೂ ಸರ್ವಜ್ಞ ಪೀಠದ ಉತ್ತರಾಧಿಕಾರಿಯಾದ ಮಗನು ಜನಿಸುವನು" ಎಂದು ಹೃದಯ ತುಂಬಿ ಹರಸಿದರಂತೆ.

ಆ ಗುರುರಾಜರ ಆಶೀರ್ವಾದ ಬಲದಿಂದಲೇ ಆನಂದ ಭಟ್ಟಾರಕರಿಗೆ ನರಸಿಂಹಾಚಾರ್ಯ ಎಂಬ ಮಗನು ಹುಟ್ಟಿದನು. ಅವರೇ ಮುಂದೆ ವಿದ್ಯಾಧೀಶತೀರ್ಥರು

ಎಂಬ ಹೆಸರಿನಿಂದ ಶ್ರೀ ಉತ್ತರಾದಿ ಮಠದ ಸರ್ವಜ್ಞ ಪೀಠವನ್ನು ಆರೋಹಣ ಮಾಡಿದರು.

ಈ ಮನೆತನದವರು ಮುಂದೆ ಪಾಂಡುರಂಗ ಕ್ಷೇತ್ರದಲ್ಲಿ ಬಹು ಕಾಲ ವಾಸ ವಾಗಿದ್ದರಿಂದ ಇವರಿಗೆ ಪಾಂಡುರಂಗಿ ಆಚಾರ್ಯರೆಂದು ಹೆಸರು ಬಂದಿತು.

### ೧೮ ಶ್ರೀನಿವಾಸಾಚಾರ್ಯ ಪಾಂಡುರಂಗಿ

ಇವರು ಆನಂದ ಭಟ್ಟಾರಕರ ಹಿರಿಯ ಮಕ್ಕಳು. ತತ್ವಪ್ರಕಾಶಿಕೆಗೆ ಟಿಪ್ಪಣಿ ಯನ್ನು ಬರೆದಿದ್ದಾರಲ್ಲದೆ ಸೃಷ್ಟಿಲಯ ಎಂಬ ವಿಷಯವನ್ನು ಕುರಿತು ಒಂದು ಸೂಕ್ಷ್ಮ ಪ್ರಮೇಯ ವಿವೇಚನಾತ್ಮಕವಾದ ಗ್ರಂಥವನ್ನೂ ಬರೆದಿರುವರು.

### ೧೯ ನರಸಿಂಹಾಚಾರ್ಯ ಪಾಂಡುರಂಗಿ

ಇವರು ಆನಂದ ಭಟ್ಟಾರಕರ ೨ನೇ ಮಕ್ಕಳು. ಇವರು ಮುಂದೆ ಉತ್ತರಾದಿ ಮಠದ ಸರ್ವಜ್ಞ ಸಿಂಹಾಸನದಲ್ಲಿ ಮಂಡಿತರಾಗಿ ವಿದ್ಯಾಧೀಶರೆಂದು ಪ್ರಸಿದ್ಧರಾಗಿರು ವರು. (ವಿದ್ಯಾಧೀಶ ತೀರ್ಥರು ಎಂಬ ಲೇಖವನ್ನು ಇದೇ ಗ್ರಂಥದಲ್ಲಿ ಬೇರೆ ಕಡೆಗೆ ಕೊಟ್ಟಿದೆ, ನೋಡಿರಿ.) ಇವರು ವಾಕ್ಯಾರ್ಥ ಚಂದ್ರಿಕಾ ಮುಂತಾದ ಪ್ರೌಢ ಗ್ರಂಥ ಗಳನ್ನು ಬರೆದಿದ್ದಾರೆ.

### ೨೦ ಕೇಶವಾಚಾರ್ಯ ಪಾಂಡುರಂಗಿ (ಗುರುರಾಜರು)

ಆನಂದಭಟ್ಟಾರಕರಿಗೆ ತ್ರಿವಿಕ್ರಮಾಚಾರ್ಯರೆಂಬ ಒಬ್ಬ ಹಿರಿಯ ಸಹೋದರ ರಿದ್ದರು. ತ್ರಿವಿಕ್ರಮಾಚಾರ್ಯರಿಗೆ ನಾಲ್ಕು ಜನ ಗಂಡು ಮಕ್ಕಳು. ಆನಂದಭಟ್ಟಾರಕ ರಿಗೆ ಶ್ರೀನಿವಾಸಾಚಾರ್ಯರು, ನರಸಿಂಹಾಚಾರ್ಯರು ಎಂಬ ಇಬ್ಬರು ಮಕ್ಕಳು.

ಇವರಿಬ್ಬರೂ ಅಣ್ಣತಮ್ಮಂದಿರು ಪಾಲುವಾಗುವಾಗ ಮನೆತನದ ಎಲ್ಲ ಆಸ್ತಿ ಯನ್ನು ಸರಿಯಾಗಿಯೇ ವಿಭಾಗ ಮಾಡಿ ಆನಂದ ಭಟ್ಟಾರಕರಿಗೆ ಸಮಪಾಲನ್ನೇ ಕೊಟ್ಟಿದ್ದರು. ಆದರೂ ಆನಂದ ಭಟ್ಟಾರಕರು ಏಕೋ ಖಿನ್ನರಾಗಿರುವದನ್ನು ಗುರುತಿಸಿ "ಮತ್ತೇನು ನಿನಗೆ ವಿಷಾದಕ್ಕೆ ಕಾರಣ?" ಎಂದು ಕೇಳಿದರು. ಅದಕ್ಕೆ ಆನಂದಭಟ್ಟಾರಕರು ಸಂಕೋಚದಿಂದಲೇ— "ಅಣ್ಣಾ! ಉಳಿದುದೆಲ್ಲ ಸಮನಾಗಿ ಪಾಲಾಗಿದೆ. ಆದರೆ.... ನಿಮಗೆ ನಾಲ್ಕು ಜನ ಮಕ್ಕಳು, ಆದರೆ ನನಗೆ ಮಾತ್ರ ಇಬ್ಬರೇ ಇದು ವಿಷಮ ವಾಗಲಿಲ್ಲವೇ?" ಎಂದು ಶಂಕಾತಂಕದಿಂದಲೇ ಕಿಂಕರಿಸಿದರಂತೆ.

ಆಗ ತ್ರಿವಿಕ್ರಮಾಚಾರ್ಯರು ಮುಗುಳು ನಕ್ಕು "ಹಾಗಾದರೆ ನನ್ನ ಈ ಕೊನೆಯ ಮಗನಾದ ಕೇಶವನನ್ನು ನಿನಗೇ ಕೊಟ್ಟಿದ್ದೇನೆ. ಇಂದಿನಿಂದ ಇವನು ನಿನ್ನ

ಮಗ, ಈಗ ನನಗೂ ಮೂವರು ಮಕ್ಕಳು ನಿನಗೂ ಮೂವರು ಮಕ್ಕಳು ಪಾಲವು ಸರಿಯಾಯಿತಷ್ಟೆ !'' ಎಂದು ನುಡಿದು ತಮ್ಮ ಕೊನೆಯ ಮಗುವನ್ನು ಆನಂದಭಟ್ಟರ ಉಡಿಯಲ್ಲಿ ಹಾಕಿದರಂತೆ.

ಆನಂದಭಟ್ಟಾರಕರು ಕೇಶವಭಟ್ಟಾರಕರನ್ನು ತಮ್ಮ ಹೊಟ್ಟೆಯ ಮಕ್ಕಳಿಗಿಂತ ಹೆಚ್ಚು ಪ್ರೀತಿಯಿಂದ ಜೋಪಾನ ಮಾಡಿ ಅಂತ್ಯಕಾಲದಲ್ಲಿ ಆ ಗುರುರಾಜರನ್ನು ವಿದ್ಯಾಧೀಶರ ಕೈಯಲ್ಲಿ ಒಪ್ಪಿಸಿ "ಇವನ ಯೋಗಕ್ಷೇಮ ನಿನಗೆ ಸೇರಿದ್ದು. ನಿನ್ನಂತೆ ಇವನನ್ನು ಅಪ್ರತಿಮ ಪಂಡಿತನನ್ನಾಗಿ ಮಾಡು" ಎಂದು ಹೇಳಿದರಂತೆ.

ಶ್ರೀ ವಿದ್ಯಾಧೀಶರು ತಂದೆಯ ಆಜ್ಞೆಯಂತೆ ಕೇಶವ ಭಟ್ಟಾರಕರನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ವಿದ್ಯಾಭ್ಯಾಸ ಮಾಡಿಸಿ ಕಟೆದು ಪಾಂಡಿತ್ಯದ ಮಹಾ ಮೂರುತಿಯನ್ನಾಗಿ ಮಾಡಿದರು. ಈ ವೃತ್ತಾಂತವನ್ನೆಲ್ಲ ಶ್ರೀಗುರುರಾಜರ ಮಕ್ಕಳಾದ ಶ್ರೀ ನರಸಿಂಹಾಚಾರ್ಯರು ತಮ್ಮ " ವಾಕ್ಯಾರ್ಥ ರತ್ನಮಾಲಾ " ಎಂಬ ಗ್ರಂಥದ ಪ್ರಾರಂಭದಲ್ಲಿ ಹೇಳಿರುವರು.

ಗುರುರಾಜರ ಪಾಂಡಿತ್ಯವು ಗುರುತರವಾದುದು. ಅವರ ಅಣ್ಣಂದಿರಾದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಪಂಚಾಧಿಕರಣೀ ಸುಧಾಕ್ಕೆ ಮಾತ್ರ "ವಾಕ್ಯಾರ್ಥ ಚಂದ್ರಿಕಾ" ಎಂಬ ಟಿಪ್ಪಣಿಯನ್ನು ಬರೆದಿದ್ದರು. ಸರ್ವಜ್ಞ ಸಂಸ್ಥಾನದ ಕಾರ್ಯ ಭಾರದ ವೈಯಗ್ರಿಯಲ್ಲಿ ತಮ್ಮ ಟಿಪ್ಪಣಿಯನ್ನು ಮುಂದುವರಿಸಲು ಅವರಿಗೆ ಆಗಲಿಲ್ಲ. ಆದ್ದರಿಂದ ಪಂಡಿತ ಪ್ರಪಂಚವೆಲ್ಲವೂ ದಿವ್ಯಜ್ಞಾನದ ಖಣಿಯಿಂದ ವಂಚಿತವಾಗಿತ್ತು. ಆಗ ಗುರುರಾಜರು ಮುಂದೆ ಬಂದು ತಮ್ಮ ಸಹೋದರರು ಬರೆದ ವಾಕ್ಯಾರ್ಥ ಚಂದ್ರಿಕಾ ಎಂಬ ಗ್ರಂಥದ ಮುಂದಿನ ಭಾಗವನ್ನು " ಶೇಷ ವಾಕ್ಯಾರ್ಥ ಚಂದ್ರಿಕಾ " ಎಂಬ ಹೆಸರಿನಿಂದ ಬರೆದು ವೇದಾಂತ ಪ್ರಪಂಚದ ಕೊರತೆಯನ್ನು ದೂರ ಮಾಡಿದರು. ಸುಧಾ ಓದುವವರ ಚಿಂತೆಯನ್ನು ಪರಿಹರಿಸಿದರು.

ಇದಲ್ಲದೆ ಗುರುರಾಜರು ಆಚಾರ್ಯರ ದಶಪ್ರಕರಣಗಳಿಗೆಲ್ಲ ಅತಿ ಸುಂದರವಾದ ಟಿಪ್ಪಣಿಯನ್ನು ಬರೆದು ಶ್ರೀ ಜಯತೀರ್ಥರ ಟೀಕೆಯ ಮುಖಾಂತರ ಮಧ್ವ ಗ್ರಂಥ ಗಳ ಭಾವವನ್ನು ಬಯಲಿಗಿಟ್ಟರು. ಮತ್ತು ತತ್ವ ಪ್ರಕಾಶಿಕಾ, ಭಾಷ್ಯ, ವಾಕ್ಯಾರ್ಥ ಮಂಜರಿ, ಚಂದ್ರಿಕಾ ವ್ಯಾಖ್ಯಾನ, ಪ್ರಮೇಯ ದೀಪಿಕಾ ವ್ಯಾಖ್ಯಾನ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

ಇವರು ಶ್ರೀ ಯಾದವಾರ್ಯರ ಸಮಕಾಲೀನರು. ಭಗವದ್ಭಕ್ತರಾದ ಯಾದ ವಾರ್ಯರು ಶ್ರೀ ಗುರುರಾಜರಿಗೆ— "ಮೇಲಿಂದ ಮೇಲೆ ಭಾಗವತ ನೋಡಿರಿ, ಭಾಗವತ ನೋಡಿರಿ" ಎಂದು ಸಲಹೆ ಮಾಡುತ್ತಿದ್ದರಂತೆ. ಸ್ವಯಂ ಮಹಾ ಜ್ಞಾನಿ ಗಳಾದ ಗುರುರಾಜರಿಗೆ ಶ್ರೀ ಭಾಗವತ ಗ್ರಂಥವನ್ನು ನೋಡಿದ ಬಳಿಕ ಅವರ ಹೃದಯದಲ್ಲಿ ಭಕ್ತಿ ಭಾಗೀರಥಿಯೇ ತುಳುಕಿದಂತಾಯಿತು.

## ೨೧ ಬಾಳಾಚಾರ್ಯ ಪಾಂಡುರಂಗಿ

ಇವರು ಮಹಾ ಪಂಡಿತರು. ಇವರು ಸತ್ಯಪೂರ್ಣತೀರ್ಥ ಶ್ರೀಪಾದಂಗಳವರಲ್ಲಿ ಆಸ್ಥಾನ ವಿದ್ವಾಂಸರಾಗಿದ್ದರು. ಶ್ರೀ ಸತ್ಯಪೂರ್ಣತೀರ್ಥರು ವೃಂದಾವನಸ್ಥರಾಗುವ ಕಾಲಕ್ಕೆ ಅವರಿಂದ ಈ ಮೊದಲೇ ಆಶ್ರಮವನ್ನು ಪಡೆದ ಶ್ರೀ ಸತ್ಯಪ್ರಿಯತೀರ್ಥರು ಸಕಾಲದಲ್ಲಿ ಬಾರದೇ ಇದ್ದುದರಿಂದ ತಮ್ಮ ಬಳಿಯಲ್ಲಿಯೇ ಇರುವ ಶ್ರೀ ಪಾಂಡುರಂಗಿ ಬಾಳಾಚಾರ್ಯರಿಗೆ ಆಶ್ರಮವಿತ್ತು ಶ್ರೀಗಳವರು ಸತ್ಯವಿಜಯತೀರ್ಥರೆಂದು ನಾಮ ಕರಣ ಮಾಡಿದರು.

ಮುಂದೆ ಸತ್ಯಪ್ರಿಯತೀರ್ಥರು ಅಲ್ಲಿಗೆ ಬಂದ ಬಳಿಕವೂ ತಾವು ಆಶ್ರಮಜ್ಯೇಷ್ಠ ರಾಗಿದ್ದರೂ ವಯೋವೃದ್ಧ, ಜ್ಞಾನವೃದ್ಧರಾದ ಸತ್ಯವಿಜಯತೀರ್ಥರ ವಾರ್ಧಕ್ಯವನ್ನು ಅನುಲಕ್ಷಿಸಿ ಅವರಿಗೇ ಎಲ್ಲ ದೇವರ ಪಟ್ಟಗೆಯನ್ನೂ ಮಠದ ಸರ್ವಾಧಿಕಾರವನ್ನೂ ಸ್ವ-ಸಂತೋಷದಿಂದ ಒಪ್ಪಿಸಿದರು.

ಅನಂತರ ಶ್ರೀ ಸತ್ಯವಿಜಯತೀರ್ಥರು ಎಲ್ಲಕಡೆಗೆ ದಿಗ್ವಿಜಯ ಮಾಡಿ ಆರಣಿಗೆ ಬಂದು ಅಲ್ಲಿಯ ಮಹಾರಾಜನಿಂದ ಕೆಲವು ಗ್ರಾಮಗಳನ್ನು ಸಂಪಾದಿಸಿ ಕೌಂಡಿಣ್ಯಾ ನದೀ ತೀರದಲ್ಲಿ ವೃಂದಾವನಸ್ಥರಾದರು. ಈಗ ಅಲ್ಲಿ ಸತ್ಯವಿಜಯನಗರ ಎಂಬ ಪಟ್ಟ ಣವು ತಲೆ ಎತ್ತಿದೆ.

ಈ ಕಾಲದಲ್ಲಯೇ ಕೆಲವು ಪಾಂಡುರಂಗೀ ಮನೆತನಗಳು ದಕ್ಷಿಣ ದೇಶದಲ್ಲಿ ನೆಲಿಸಿದವು.

## ೨೨ ಕೃಷ್ಣಾಚಾರ್ಯ ಪಾಂಡುರಂಗಿ

ಈ ಕೃಷ್ಣಾಚಾರ್ಯರು ಉತ್ತರಾದಿ ಮಠದಲ್ಲಿ ಶ್ರೀ ಸತ್ಯಧ್ಯಾನರ ಕಾಲದಲ್ಲಿ ಆಸ್ಥಾನ ವಿದ್ವಾಂಸರಾಗಿದ್ದರು. ಇವರು ೧೮೮೬ ನೇ ಇಸ್ವಿಯಲ್ಲಿ ಕಡಕೋಳ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಶ್ರೀ ರಂಗಾಚಾರ್ಯರು ಬಹುಶ್ರುತರೂ, ಧರ್ಮಶಾಸ್ತ್ರ ಪಂಡಿತರೂ ಆಗಿದ್ದರು.

ಅವರ ಮಕ್ಕಳಾದ ಕೃಷ್ಣಾಚಾರ್ಯರು ಕೊರ್ಲಹಳ್ಳಿ ಸೇತು ರಾಮಾಚಾರ್ಯ (ಶ್ರೀ ಸತ್ಯಧ್ಯಾನ ತೀರ್ಥರು) ರಲ್ಲಿ ನ್ಯಾಯ, ವೇದಾಂತಗಳನ್ನು ಅಧ್ಯಯನ ಮಾಡಿ ದರು. ಮುಂದೆ ಇವರು ತಿರುಪತಿಯಲ್ಲಿ ೮ ವರ್ಷಗಳ ಕಾಲ ಮನೆ ಮಾಡಿಕೊಂಡು ನಿಂತು ಪಂಡಿತ ಚಕ್ರವರ್ತಿ ಕಪಿಸ್ಥಲಂ ದೇಶಿಕಾಚಾರ್ಯರಲ್ಲಿ ನ್ಯಾಯ ಶಾಸ್ತ್ರದ ಪಂಚವಾದ, ಉತ್ತರವಾದಗಳನ್ನೂ, ಅಲಂಕಾರ ಶಾಸ್ತ್ರವನ್ನೂ ಓದಿ ಪರೀಕ್ಷೆ ಕೊಟ್ಟು ಪ್ರಥಮ ಶ್ರೇಣಿಯಲ್ಲಿ ಪ್ರಪ್ರಥಮರಾಗಿ ಉತ್ತೀರ್ಣರಾದರು.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಮತ್ತೆ ಬಂದು ಸುಧಾಂತ ವೇದಾಂತವನ್ನು ಆಮೂಲಾಗ್ರ ಓದಿದರು.

ಅನಂತರ ಉತ್ತರಾದಿ ಮಠದಲ್ಲಿಯೇ ಆಸ್ಥಾನ ಪಂಡಿತರಾಗಿ ೩೦ ವರ್ಷಗಳ ಕಾಲ ಅಖಂಡ ಪಾಠ ಪ್ರವಚನ ಮಾಡಿಸುತ್ತ ಸಂಸ್ಥಾನದ ಜೊತೆಗೇ ಇರುತ್ತಿದ್ದರು.

ಆಚಾರ್ಯರಿಗೆ ನ್ಯಾಯ ಶಾಸ್ತ್ರದ ಪೂರ್ವೋತ್ತರವಾದಗಳೆಲ್ಲವೂ ಮುಖೋದ್ಗತ ವಾಗಿದ್ದವು. ಅವರು ಪಾಠ ಹೇಳುವಾಗ ಎಂದೂ ಪುಸ್ತಕ ಹಿಡಿಯುತ್ತಿದ್ದಿಲ್ಲ. ಎಲ್ಲ ಗ್ರಂಥಗಳ ವಿಷಯಗಳೂ ಅವರ ತುದಿ ನಾಲಿಗೆಯ ಮೇಲೆ ಇರುತ್ತಿದ್ದವು. ಇವರು ಇರುವ ವರೆಗೆ ಶ್ರೀ ಮಠದಲ್ಲಿ ಪಾಠ ಪ್ರವಚನದ ನಂದಾ ದೀಪವನ್ನೇ ಇರಿಸಿ ದಂತಾಗಿತ್ತು.

ಪಾಠ ಹೇಳುವದರಲ್ಲಿ ಅವರಿಗೆ ಎಂದೂ ಬೇಸರವಿಲ್ಲ. ನೂರಾರು ಜನ ವಿದ್ಯಾರ್ಥಿ ಗಳಿಗೆ ಪಾಠ ಹೇಳಿ ಪಂಡಿತರ ತಂಡವನ್ನೇ ತಯಾರು ಮಾಡಿದ್ದಾರೆ. ಅವರ ಶಿಷ್ಯ ರಲ್ಲಿ ಶ್ರೀ ಮಳಗಿ ವೇದವ್ಯಾಸಾಚಾರ್ಯ, ವರಖೇಡಿ ನರಸಿಂಹಾಚಾರ್ಯ, ಚಿಂಚೋಳಿ ಕೃಷ್ಣಾಚಾರ್ಯ, ಪಾಂಡುರಂಗಿ ಜಯಾಚಾರ್ಯ, ಕಲ್ಲಾಪುರ ರಂಗಾಚಾರ್ಯ, ಗುಂಟೂರ ಪದ್ಮನಾಭಾಚಾರ್ಯ, ಜಾಲೀಹಾಳ ಶ್ರೀನಿವಾಸಾಚಾರ್ಯ, ಮಾಹುಲಿ ಗೋಪಾಲಾಚಾರ್ಯ, ಮುಂಡರಗಿ ಮಧ್ವಾಚಾರ್ಯ ಮೊದಲಾದ ಅನೇಕ ವಿದ್ವಾಂ ಸರು ಪ್ರಸಿದ್ಧರಾಗಿದ್ದಾರೆ.

ಇವರು ಸಾಹಿತ್ಯ ಅಲಂಕಾರ ಶಾಸ್ತ್ರಗಳಲ್ಲಿಯೂ ಒಳ್ಳೇ ಪರಿಣತರಿದ್ದುದರಿಂದ ಕಾಶಿ, ಪುಣೆ, ಬಡೋದಾ, ಮೈಸೂರು, ರಾಜಮಹೇಂದ್ರಿ ಮುಂತಾದ ಕಡೆಗಳಲ್ಲಿ ಸಂಸ್ಕೃತದಲ್ಲಿ ಉಪನ್ಯಾಸ ಮಾಡಿ ಪಂಡಿತರನ್ನೆಲ್ಲ ಬೆರಗುಗೊಳಿಸುತ್ತಿದ್ದರು.

ಪುಣೆ, ಬಡೋದಾ, ತಿರುಪತಿ ಮೊದಲಾದ ಕಡೆಗಳಲ್ಲಿ ನಡೆಯುವ ಶಾಸ್ತ್ರೀಯ ಪರೀಕ್ಷೆಗಳಿಗೆ ಧರ್ಮಾಧಿಕಾರಿಗಳಾಗಿ ಹೋಗುತ್ತಿದ್ದರು.

ಶ್ರೀ ಸತ್ಯಧ್ಯಾನರ ಜೊತೆಗೆ ಇದ್ದಾಗ ಇವರಿಗೆ ಊರೂರಿಗೆ ವಾಕ್ಯಾರ್ಥ ಮಾಡುವ ಪ್ರಸಂಗ ಬರುತ್ತಿತ್ತು. ಕಾಶೀ, ಕುಂಭಕೋಣಂ ಕಡೆಗಳಲ್ಲಿ ಇವರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ವಾಕ್ಯಾರ್ಥ ಮಾಡಿ ಸರ್ವ ದೇಶದ ವಿದ್ವಾಂಸ ರಿಗೆಲ್ಲ ಮಾನನೀಯವಾದ ಪೂಜ್ಯ ವ್ಯಕ್ತಿಗಳಾಗಿದ್ದರು.

## ೨೪ ವೆಂಕಟರಮಣಾಚಾರ್ಯ (ಮನ್ನಾರಿ) ಪಾಂಡುರಂಗಿ

ಇವರು ಮಹಾ ಮೇಧಾವಿ ಪಂಡಿತರಾಗಿದ್ದರು. ಇವರು ಚಿಕ್ಕವರಿರುವಾಗಲೇ ಮೈಸೂರಿಗೆ ಹೋಗಿ ಕಸ್ತೂರಿ ರಂಗಾಚಾರ್ಯರಲ್ಲಿ ಸಂಪೂರ್ಣ ನ್ಯಾಯ ಸಾಸ್ತ್ರ

ವನ್ನು ಓದಿದರು. ಅಲ್ಲಿಯ ವಿದ್ವತ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮ ರಾಗಿ ಉತ್ತೀರ್ಣರಾಗಿ ಮಹಾರಾಜರಿಂದ ಸುವರ್ಣ ಪದಕ, ೫೦೦ ರೂಪಾಯಿ ಪಾರಿತೋಷಿಕ, ಶಾಲು ಜೋಡಿಗಳನ್ನೂ ಪಡೆದಿದ್ದರು.

ಮೈಸೂರು ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರ ಸಭೆಯಲ್ಲಿ ಮತ್ತು ತಿರುಪತಿ ಸಭೆಗಳಲ್ಲಿ ನಡೆಯುವ ವಾಕ್ಯಾರ್ಥಗಳಲ್ಲಿ ಶ್ರೀ ವೆಂಕಟರಮಣಾಚಾರ್ಯರು ಪ್ರಾಮುಖ್ಯವಾಗಿ ಭಾಗವಹಿಸುತ್ತಿದ್ದರು. ತರ್ಕ ಶಾಸ್ತ್ರದ ಕೋಟಿ ಕ್ರಮದಲ್ಲಿ ಇವರು ಎತ್ತಿದ ಕೈ. ಎಂಥೆಂಥ ಮಹಾ ಪಂಡಿತರು ಬಂದರೂ ಆಚಾರ್ಯರ ನಿರರ್ಗಳ ಸಂಸ್ಕೃತ ಶೈಲಿಯಲ್ಲಿ ಕೋಟಿ ಕ್ರಮದ ಗೋಪುರ ಗಳನ್ನು ನಿರ್ಮಿಸುವದನ್ನು ಕಂಡು ಬೆರಗಾಗುತ್ತಿದ್ದರು.

### ೨೪ ಪಾಂಡುರಂಗಿ ವ್ಯಾಸಾಚಾರ್ಯರು

ಇವರು ನ್ಯಾಯ ಶಾಸ್ತ್ರದಲ್ಲಿಯೂ, ವೇದಾಂತದಲ್ಲಿಯೂ ಪಂಡಿತರಾಗಿದ್ದರು. ಇವರು ಕುಂಭಕೋಣದಲ್ಲಿದ್ದರು.

### ೨೫ ಪಾಂಡುರಂಗಿ ಕೇಶವಾಚಾರ್ಯ

ಇವರು ಸಂಸ್ಕೃತ ಮತ್ತು ಆಂಗ್ಲ ಉಭಯ ಭಾಷಾ ವಿಶಾರದರಾಗಿದ್ದರು. ಸಂಸ್ಕೃತ ವಿಷಯ ತೆಗೆದುಕೊಂಡು ಎಂ. ಎ. ಪದವಿ ಪಡೆದುಕೊಂಡ ಕೇಶವಾಚಾರ್ಯರು ವೇದಾಂತದಲ್ಲಿಯೂ ಪರಿಶ್ರಮಪಟ್ಟು ವ್ಯುತ್ಪತ್ತಿಯನ್ನು ಸಂಪಾದಿಸಿದ್ದರು. ಇವರು ಇಂಗ್ಲೀಷ ಕಾಲೇಜದಲ್ಲಿ ಪ್ರೊಫೆಸರರಾಗಿ ಕೆಲಸ ಮಾಡಿದರು.

### ೨೬ ಪಾಂಡುರಂಗಿ ಅನಂತಾಚಾರ್ಯ

ಇವರು ವೇದಾಂತ ವಿದ್ವಾಂಸರಾಗಿದ್ದರು.

### ೨೭ ಪಾಂಡುರಂಗಿ ರಂಗಾಚಾರ್ಯ

ಇವರು ಕುತ್ತಾಲಮ್ಮದಲ್ಲಿ ಇದ್ದ ಹವಾಯಿ ವಾಸುದೇವಾಚಾರರಲ್ಲಿ ಅಧ್ಯಯನ ಮಾಡಿ ವೇದಾಂತ ಶಾಸ್ತ್ರವನ್ನು ಕರಗತಮಾಡಿಕೊಂಡಿದ್ದರು.

### ೨೮ ಪಾಂಡುರಂಗಿ ಸತ್ಯವಿಜಯಾಚಾರ್ಯ

ಇವರೂ ಹವಾಯಿ ವಾಸುದೇವಾಚಾರ್ಯರಲ್ಲಿ ವೇದಾಂತ ಶಾಸ್ತ್ರವನ್ನು ಓದಿ ಪಂಡಿತರಾದರು.

## ೨೯ ಪಾಂಡುರಂಗಿ ಬೋಧರಾಜಾಚಾರ್ಯರು

ಇವರು ವೇದಾಂತ ಶಾಸ್ತ್ರದಲ್ಲಿ ಪರಿನಿಷ್ಠಿತ ಪಂಡಿತರಾಗಿ ಪಾಠ-ಪ್ರವಚನ ಮಾಡಿಕೊಂಡು ಇದ್ದರು.

## ೩೦ ಕಳಸದ ಹಣಮಂತಾಚಾರ್ಯರು ಪಾಂಡುರಂಗಿ

ದ್ವೈತ ವೇದಾಂತದಲ್ಲಿ ಹಣಮಂತಾಚಾರ್ಯರು ಸಂಪ್ರತಿಪನ್ನ ವಿದ್ವಾಂಸರೆನಿಸಿದ್ದರು. ಇವರು ತುಮ್ಮಿನಕಟ್ಟಿಯ ಪಾಂಡುರಂಗಿ ಮನೆತನದ ಶ್ರೀ ಹುಚ್ಚಾಚಾರ್ಯರಲ್ಲಿ ವೇದವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು. ಇವರ ಪಾಠಕ್ರಮವು ಬೋಧಪ್ರದವಾಗಿದ್ದಿತು. ಇವರು ಧಾರವಾಡದ ಮಾಧ್ವ ಪಾಠ ಶಾಲೆಯಲ್ಲಿ ಪಾಠ ಪ್ರವಚನ ಮಾಡಿಕೊಂಡು ಅಧ್ಯಾಪಕರಾಗಿ ಇದ್ದರು

## ೩೧ ಕುರಬಗಟ್ಟಿ ಬಾಬಾಚಾರ್ಯರು ಪಾಂಡುರಂಗಿ

ಇವರು ಮಾಧ್ವ ವೇದಾಂತದಲ್ಲಿ ನಿಸ್ಸೀಮ ಪಂಡಿತರಾಗಿದ್ದರು. ಕುರುಬಗಟ್ಟಿ ಊರಲ್ಲಿಯೇ ಇವರು ಇದ್ದುಕೊಂಡು ಅನೇಕ ಶಿಷ್ಯರಿಗೆ ಪ್ರತಿ ನಿತ್ಯವೂ ಸಚ್ಛಾಸ್ತ್ರ ಪಾಠವನ್ನು ಹೇಳುತ್ತಿದ್ದರು. ಬೇರೆ-ಬೇರೆ ಗ್ರಾಮದ ವಿದ್ಯಾರ್ಥಿಗಳು ಆಚಾರ್ಯರ ಮನೆಯಲ್ಲಿಯೇ ಇದ್ದುಕೊಂಡು ಸುಧಾಂತ ವೇದಾಂತವನ್ನು ಓದಿ ವಿದ್ವಾಂಸರಾಗಿ ಹೋಗುತ್ತಿದ್ದರು. ಇವರ ಶಿಷ್ಯರಲ್ಲಿ— ತಿರುಪತಿಯಲ್ಲಿದ್ದ ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರೂ, ಶ್ರೀ ತುಮ್ಮಿನಕಟ್ಟಿ ಹುಚ್ಚಾಚಾರ್ಯರೂ ಪ್ರಮುಖರಾಗಿದ್ದಾರೆ.

## ೩೨ ಪಾಂಡುರಂಗಿ ಹುಚ್ಚಾಚಾರ್ಯರು

ಶಿವಮೊಗ್ಗಾ ಜಿಲ್ಹೆಯ ಶಿಕಾರಪುರದ ಬಳಿಯ ಭದ್ರಾಪೂರ ಗ್ರಾಮದಲ್ಲಿ ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರು ಜನ್ಮತಾಳಿದರು. ಪಾಂಡುರಂಗಿ ಬಾಬಾಚಾರ್ಯರು ಇವರ ಸಹೋದರರು.

ಇವರು ಬಾಲ್ಯದಲ್ಲಿ ತಮ್ಮ ತಂದೆಯವರಲ್ಲಿಯೇ ಕಾವ್ಯ, ವ್ಯಾಕರಣ, ಶಾಸ್ತ್ರಗಳ ಪ್ರಾಥಮಿಕ ಪರಿಚಯವನ್ನು ಮಾಡಿಕೊಂಡಿದ್ದರು. ಕನ್ನಡ ಹಾಗೂ ಇಂಗ್ಲೀಷ ಭಾಷೆಯ ಪರಿಚಯವೂ ಅವರಿಗೆ ಚನ್ನಾಗಿ ಇದ್ದಿತು. ಮುಂದೆ ಅವರಿಗೆ ಆಂಗ್ಲ ಭಾಷೆಯಲ್ಲಿ ವಿಶೇಷ ಪರಿಶ್ರಮವನ್ನು ಮಾಡಬೇಕೆಂದು ಅಭಿಲಾಷೆಯಾಯಿತು. ಶಿಕಾರಪುರದಲ್ಲಿ ಇಂಗ್ಲಿಷ ಅಧ್ಯಯನವನ್ನು ಮುಗಿಸಿದ ಅವರು ತಮ್ಮ ಆಂಗ್ಲ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂಬ ಅಪೇಕ್ಷೆಯಿಂದ ಶಿವಮೊಗ್ಗಾಕ್ಕೆ ಬಂದರು.

ಕೈಯಲ್ಲಿ ಕಾಸಿಲ್ಲ. ಹಣವಿಲ್ಲದೆ ಇಂಗ್ಲೀಷ ವಿದ್ಯೆಯನ್ನು ಮುಂದೆ ಕಲಿಯಲು ಶಕ್ಯವಿಲ್ಲ. ಆದುದರಿಂದ ಶಿವಮೊಗ್ಗಾದಲ್ಲಿ ಸಂಚಾರ ಮಾಡಿ ದ್ರವ್ಯವನ್ನು ಕೂಡಿಸಿ ಕೊಂಡು ಇಂಗ್ಲೀಷ ಕಲಿತು ಪದವೀಧರರಾಗಬೇಕೆಂದು ಅವರು ಯೋಚನೆ ಮಾಡಿದರು.

ಶಿವಮೊಗ್ಗಾದಲ್ಲಿ ಪಾಂಡುರಂಗಿ ಮನೆತನದ ಶಿಷ್ಯರಾದ ಮಾಸೂರವರು ವಾಸ ವಾಗಿದ್ದರು. ಹುಚ್ಚಾಚಾರ್ಯರು ಮಾಸೂರ ನಾಯಕರಿಗೆ ತಮ್ಮ ಮುಂದಿನ ಕಾರ್ಯ ಕ್ರಮಗಳನ್ನು ತಿಳಿಸಿದರು. ಆದರೆ ಪಾಂಡುರಂಗಿ ಮನೆತನದ ಮೇಲೆ ಶ್ರದ್ಧೆಯುಳ್ಳ ನಾಯಕರು ಹುಚ್ಚಾಚಾರ್ಯರ ಕೈಯಲ್ಲಿ ನೂರು ರೂಪಾಯಿ ಕೂಡಿಸಿಕೊಟ್ಟು ನಮಸ್ಕರಿಸಿ ಬಿನ್ನವಿಸಿದರು—

"ಆಚಾರ್ಯರೇ ತಮ್ಮ ಮನೆತನ ದೊಡ್ಡ ಮನೆತನ. ತಾವು ಇಂಗ್ಲೀಷ ಭಾಷೆ ಯನ್ನು ಕಲಿತು ಪದವೀಧರರಾಗುವದಕ್ಕಿಂತ ವೇದಾಂತವನ್ನು ಅಧ್ಯಯನಮಾಡಿ ಮಹಾ ಪಂಡಿತರಾಗಿ ದೇವತಾನುಗ್ರಹಕ್ಕೆ ಪಾತ್ರರಾಗಿ ನಿಮ್ಮ ತಪಃಶಕ್ತಿಯಿಂದ ನಮ್ಮಂಥ ಶಿಷ್ಯರನ್ನು ಉದ್ಧರಿಸಬೇಕು. ನಿಮ್ಮ ಸಂಚಾರವೂ ಸಾಕು, ಆಂಗ್ಲ ವಿದ್ಯಾ ಧ್ಯಯನವೂ ಸಾಕು.''

ಆಚಾರ್ಯರಿಗೆ ಮನಃಪರಿವರ್ತನೆಯಾಯಿತು. ಮನೆತನದ ಪರಂಪರಾ ಪ್ರಾಪ್ತವಾದ ಸಂಸ್ಕೃತ ವಿದ್ಯೆಯನ್ನೇ ಅಧ್ಯಯನ ಮಾಡುವದೆಂದು ಅವರು ನಿರ್ಧರಿ ಸಿದರು. ಮಾಸೂರವರು ಕೊಟ್ಟ ಅದೇ ನೂರು ರೂಪಾಯಿಗಳನ್ನು ತೆಗೆದುಕೊಂಡು ಅವರು ನೇರವಾಗಿ ಕೊಲ್ಹಾಪುರಕ್ಕೆ ಬಂದರು.

ಕೊಲ್ಹಾಪುರದಲ್ಲಿ ಮಹಾಲಕ್ಷ್ಮಿಯ ಸೇವೆಯನ್ನು ಅವಿಚಲವಾದ ಮನಸ್ಸಿ ನಿಂದ ಮಾಡತೊಡಗಿದರು. ಇವರ ಸಾತ್ವಿಕ ವೃತ್ತಿ ಹಾಗೂ ದೇವೀ ಭಕ್ತಿಗಳನ್ನು ಕಂಡು ಆಕೃಷ್ಟರಾದ ಕೊಲ್ಹಾಪುರದ ವೈಯ್ಯಾಕರಣ ವಿದ್ವಾಂಸರೊಬ್ಬರು ಇವರನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಪಾಠ ಹೇಳತೊಡಗಿದರು. ಹುಚ್ಚಾಚಾರ್ಯ ರಿಗೆ ಕೊಲ್ಹಾಪುರದಲ್ಲಿ ಹೀಗೆ ನಾಲ್ಕಾರು ವರ್ಷ ವ್ಯಾಕರಣ ಪಾಠವು ನಡೆಯಿತು.

ಕೊಲ್ಹಾಪುರದ ಜಗದಂಬೆಯು ಆಚಾರ್ಯರ ನಾಕು ವರ್ಷದ ಸೇವೆಗೆ ಪ್ರಸನ್ನ ಳಾಗಿ ಅನುಗ್ರಹ ಗೈದಳು.

ಅಲ್ಲಿಂದ ಅವರು ವಿಜಾಪೂರ ಜಿಲ್ಹೆಯ ಬದಾಮಿ ತಾಲೂಕಿನ ಜಾಲೀಹಾಳ ಗ್ರಾಮಕ್ಕೆ ಬಂದರು. ಜಾಲಿಹಾಳದಲ್ಲಿ ತಮ್ಮ ಸೋದರ ಮಾವನ ಮನೆಯಲ್ಲಿ ಇದ್ದು ಈಗಿನ ಶ್ರೀ ಗಂಗೂರ ರಾಮಾಚಾರ್ಯರ ಅಜ್ಜಂದಿರಾದ ಪಂಡಿತ ರಾಮಾಚಾರ್ಯರಲ್ಲಿ ನ್ಯಾಯ ವೇದಾಂತ ಅಧ್ಯಯನವನ್ನು ಮಾಡಿದರು.

ಅನಂತರ ಹುಚ್ಚಾಚಾರ್ಯರು ಕುರುಬಗಟ್ಟಿಗೆ ಬಂದು ತಮ್ಮ ಮನೆತನದವರೇ ಆದ ಶ್ರೀ ಪಾಂಡುರಂಗೀ ಬಾಬಾಚಾರ್ಯರಲ್ಲಿ ಶ್ರೀಮನ್ನ್ಯಾಯಸುಧಾ, ಚಂದ್ರಿಕಾ ಮುಂತಾದ ಗ್ರಂಥಗಳನ್ನೆಲ್ಲ ಅಧ್ಯಯನವನ್ನು ಮಾಡಿದರು. ಆರು ವರ್ಷಕಾಲ ಅವರು ಕುರುಬಗಟ್ಟಿ ಬಾಬಾರ್ಯರಲ್ಲಿ ಮಾಧ್ವ ವಾಙ್ಮಯವನ್ನೆಲ್ಲ ಅಧ್ಯಯನ ಮಾಡಿ ದಿವ್ಯ ಜ್ಞಾನವನ್ನು ಪಡೆದರು.

ಆಚಾರ್ಯರ ಪಾಂಡಿತ್ಯ ಹಾಗೂ ತಪಃಶ್ಶಕ್ತಿಗಳನ್ನು ಕಂಡು ರಾಣೆಬೆನ್ನೂರಿನ ಸಣ್ಣಪ್ಪ ನಾಯಕ ಮೊದಲಾದವರು ತಮ್ಮಲ್ಲಿ ಬಂದು ಇರಬೇಕೆಂದು ಅವರನ್ನು ಪ್ರಾರ್ಥಿಸಿಕೊಂಡರು.

ತಮ್ಮ ಶಿಷ್ಯರ ಪ್ರಾರ್ಥನೆಯಂತೆ ಆಚಾರ್ಯರು ರಾಣೆಬೆನ್ನೂರಿಗೆ ಬಂದು ಅಲ್ಲಿಯ ನರಸಿಂಹ ದೇವರ ಗುಡಿಯಲ್ಲಿ ಇದ್ದು ಪಾಠ ಪ್ರವಚನ ಮಾಡತೊಡಗಿದರು. ಅವರ ಈ ಸ್ವಾಧ್ಯಾಯ ಜ್ಞಾನ ಸತ್ರವು ರಾಣೆಬೆನ್ನೂರಿನಲ್ಲಿ ೧೦ ವರ್ಷಗಳ ಕಾಲ ಸಾಗಿತು.

ಅಲ್ಲಿಂದ ಅವರು ನರಸಿಂಹ ಕ್ಷೇತ್ರವಾದ ಮುಗುಟಖಾನ ಹುಬ್ಬಳ್ಳಿಗೆ ಹೋಗಿ ಅಲ್ಲಿ ಶ್ರೀ ನರಸಿಂಹ ದೇವರ ಸನ್ನಿಧಾನದಲ್ಲಿ ನಿಂತು ತಪಸ್ಸು ಮಾಡಿದರು. ೧೨ವರ್ಷ ಗಳ ಕಾಲ ಅವರ ಈ ನರಸಿಂಹ ದೇವರ ಸೇವಾರೂಪವಾದ ತಪಸ್ಸು ನಿರ್ವಿಘ್ನವಾಗಿ ನಡೆಯಿತು.

ಮುಂದೆ ಒಂದು ದಿನ ಅವರು ಸೀತೀಮನಿ ಹತ್ತಿರದ ಆಲೂರಲ್ಲಿ ತುಮ್ಮಿನಕಟ್ಟಿ ಹುಚ್ಚಾಚಾರ್ಯರು ಮಾಡಿದ ಭಾಷ್ಯ ಮಂಗಳಕ್ಕೆ ಬಂದಿದ್ದರು. ಆಗ ಅಲ್ಲಿಗೆ ಬಂದ ಬಾಗಲಕೋಟೆಯ ಅನೇಕ ಗ್ರಹಸ್ಥರು ತಮ್ಮಲ್ಲಿ ಬಂದು ತಮಗೆ ಪಾಠ ಹೇಳಿ ಅನು ಗ್ರಹಿಸಬೇಕೆಂದು ಕೇಳಿಕೊಂಡರು.

ಅನಂತರ ಆಚಾರ್ಯರು ಬಾಗಿಲಕೋಟೆಗೆ ಬಂದು ಕೆಲ ದಿನಗಳ ವರೆಗೆ ಅಲ್ಲಿ ಇದ್ದು ಬಹು ಜನ ಗೃಹಸ್ಥರಿಗೆ ವೇದಾಂತ ಪಾಠವನ್ನು ಹೇಳಿದರು.

ಶ್ರೀ ಹುಚ್ಚಾಚಾರ್ಯರು ಬಾಗಲಕೋಟೆಯಿಂದ ತಿರುಪತಿ ಕ್ಷೇತ್ರಕ್ಕೆ ಬಂದರು. ಬೆಟ್ಟದ ಮೇಲೆಯೇ ಒಂದು ಮನೆ ಮಾಡಿ ಶ್ರೀನಿವಾಸ ದೇವರ ಸೇವೆ ಮಾಡುತ್ತ ನಿರಂತರವಾಗಿ ನೆಲಸಿಬಿಟ್ಟರು.

ಬೆಟ್ಟದ ಮೇಲೆ ಇದ್ದಾಗ ಪಾಂಡುರಂಗಿ ಆಚಾರ್ಯರ ಮನೆಯು ತಿರುಪತಿಗೆ ಬರುವ ಯಾತ್ರಿಕರಿಗೆಲ್ಲ ಒಂದು ಉಚಿತ ಧರ್ಮಛತ್ರವಾಗಿದ್ದಿತು. ಪ್ರತಿ ದಿನವೂ ವೆಂಕಪ್ಪನ ದರ್ಶನಕ್ಕಾಗಿ ಬರುವ ೩೦೦–೪೦೦ ಜನರಿಗೆ ಆಚಾರ್ಯರಲ್ಲಿಯೇ ಊಟ

ವಾಗುತ್ತಿತ್ತು. ವಿದ್ವಾಂಸರನ್ನೂ, ಶಿಷ್ಯಬ್ರಾಹ್ಮಣರನ್ನೂ ಆಚಾರ್ಯರು ಸ್ವತಃ ಹೋಗಿ ಕರೆದುಕೊಂಡು ಬಂದು ಊಟಕ್ಕೆ ಹಾಕುತ್ತಿದ್ದರು. ನಿತ್ಯವೂ ಮನೆಯಲ್ಲಿ ಪ್ರವಚನ, ಪೂಜೆ, ಪಾರಾಯಣಗಳು ನಡೆಯುತ್ತಲೇ ಇದ್ದವು.

ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರು ಮಹಾ ತಪಸ್ವಿಗಳೂ, ವಾಕ್‌ಸಿದ್ಧಿಯುಳ್ಳವರೂ ಎಂದು ಪ್ರಸಿದ್ಧರಾಗಿದ್ದರು. ಅವರ ಸೇವೆಯಿಂದ ಅವರ ಉಪದೇಶದಂತೆ ಜಪ ಪಾರಾಯಣ ದೇವರ ಸೇವೆಯನ್ನು ಮಾಡಿದವರಿಗೆ ಕಷ್ಟಾನಿಷ್ಟಗಳು ಪರಿಹಾರವಾಗಿ ಇಷ್ಟ ಪ್ರಾಪ್ತಿಯಾದ ಉದಾಹರಣೆಗಳು ಹೇರಳವಾಗಿ ಉಂಟು.

ಇಂದಿಗೂ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ದೇಶಗಳಲ್ಲಿ ಶ್ರೀ ಹುಚ್ಚಾಚಾರ್ಯರ ಭಕ್ತ ಜನರು ಬಹು ಸಂಖ್ಯೆಯಲ್ಲಿ ಇರುತ್ತಾರೆ.

ತಿರುಪತಿಯಲ್ಲಿ ಅವರ ಈ ಜ್ಞಾನಸತ್ರ, ಅನ್ನಛತ್ರಗಳು ಅಖಂಡ ೩೫ ವರ್ಷಗಳ ಕಾಲ ನಿರಾತಂಕವಾಗಿ ನಡೆದವು. ತಿರುಪತಿಯ ವೆಂಕಟೇಶ್ವರ ದೇವಸ್ಥಾನದ ಮುಖ್ಯಾಧಿಕಾರಿಯಾದ ಮಹಾಂತನು ಇವರ ಶಿಷ್ಯನಾಗಿ ಇವರು ಹೇಳಿದಂತೆ ಕೇಳುತ್ತಿದ್ದನು.

ದೇವಸ್ಥಾನದ ಮಹಾಂತನ ಸಹಾಯ ಸಹಕಾರಗಳಿಂದ ಶ್ರೀ ಹುಚ್ಚಾಚಾರ್ಯರು ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಜ್ಞಾನ ತೀರ್ಥರ ಮಹಾ ಸಮಾರಾಧನೆಯನ್ನು ಬೆಟ್ಟದ ಮೇಲೆಯೇ ಒಳ್ಳೇ ವೈಭವ ವಿಜೃಂಭಣೆಯಿಂದ ನೆರವೇರುವಂತೆ ಮಾಡಿದರು.

ಶ್ರೀ ಹುಚ್ಚಾಚಾರ್ಯರು ಶಾಪಾನುಗ್ರಹ ಸಮರ್ಥರೆಂದು ಜನರಲ್ಲಿ ಪ್ರತೀತಿ ಇದ್ದಿತು. ಅವರು ಆಡಿದ ಮಾತು ಹುಸಿ ಹೋಗಲಿಲ್ಲ. ಮಾಡಿದ ಕಾರ್ಯ ವ್ಯರ್ಥವಾಗಲಿಲ್ಲ.

ಆಚಾರ್ಯರು ತಪಸ್ವಿಗಳಿದ್ದಂತೆ ಮಹಾ ಪಂಡಿತರೂ ಆಗಿದ್ದರು. ಕನ್ನಡ, ಸಂಸ್ಕೃತ ಎರಡರಲ್ಲಿಯೂ ಸರಸ ಸುಂದರ ಕೃತಿಗಳನ್ನೂ ಪ್ರೌಢ ಪ್ರಬಂಧಗಳನ್ನೂ ನಿರ್ಮಿಸುವ ನೈಪುಣ್ಯೆಯು ಅವರಿಗೆ ಸ್ವಾಧೀನವಾಗಿದ್ದಿತು. ಅವರು ಕನ್ನಡದಲ್ಲಿ ಅನೇಕ ದೇವರ ನಾಮುಗಳನ್ನು ಬರೆದಿದ್ದಾರೆ. ಭಾಗವತವನ್ನು ಕನ್ನಡ ಪದ್ಯಬದ್ಧವಾಗಿ ಭಾಷಾಂತರಿಸಿದ್ದಾರೆ.

ಸಂಸ್ಕೃತದಲ್ಲಿಯೂ ಕೃತ ಆಚಾರ್ಯರು

೧ ತಂತ್ರ ಸಾರೋಕ್ತ ಪೂಜಾ ಪದ್ಧತಿ

೨ ಬ್ರಹ್ಮಸೂತ್ರ ಪ್ರಮೇಯ ಮಾಲಾ

೩ ಸರ್ವ ಮೂಲ ಟಿಪ್ಪಣಿ

೪ ಜಯತೀರ್ಥರ ಟೀಕಾಪುಂಜ ಟಿಪ್ಪಣಿ

ಮುಂತಾಗಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಕೊನೆಯ ಎರಡು ಗ್ರಂಥಗಳಲ್ಲಿ ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರು ತಮ್ಮದೇ ಆದ ಒಂದು ವಿಶಿಷ್ಟವಾದ ಕ್ರಮವನ್ನು ಅನುಸರಿಸಿದ್ದಾರೆ.

ಶ್ರೀ ಮಧ್ವಾಚಾರ್ಯರ ಹಾಗೂ ಜಯತೀರ್ಥರ ಗ್ರಂಥಗಳ ಮೇಲೆ ಈ ವರೆಗೆ ಆಗಿಹೋದ ಎಲ್ಲ ಟೀಕಾ ಟಿಪ್ಪಣಿಯ ವಿಷಯಗಳನ್ನು ಕ್ರೋಡೀಕರಿಸಿ ಮೂಲಾನುಗುಣವಾಗಿ ಯೋಜನೆ ಮಾಡುತ್ತಾರೆ. ಶ್ರೀ ಮಂತ್ರಾಲಯ ಮಠದ ಶ್ರೀ ೧೦೮ ಶ್ರೀ ಸುಮತೀಂದ್ರತೀರ್ಥ ಶ್ರೀಪಾದಂಗಳವರು ಭಾವರತ್ನ ಕೋಶದ Digest ಮಾದರಿಯ ವಿಷಯ ಸಂಕಲನಾತ್ಮಕ ಪದ್ಧತಿಯನ್ನು ಆಚಾರ್ಯರು ಪುನರುಜ್ಜೀವನಗೊಳಿಸಿದ್ದಾರೆ.

ಈ ಗ್ರಂಥಗಳು ಅವರ ಮನೆತನದವರಲ್ಲಿ ಈಗಲೂ ಸುರಕ್ಷಿತವಾಗಿದ್ದು ಅವುಗಳ ಮುದ್ರಣ ಪ್ರಕಾಶನ ಪ್ರಚಾರಣಗಳನ್ನು ಮಾಡುವದು ಇಂದಿನ ಕಾಲದಲ್ಲಿ ಅತ್ಯಾವಶ್ಯ.

## ೩೩ ತುಮ್ಮಿನಕಟ್ಟಿ ಹುಚ್ಚಾಚಾರ್ಯ ಪಾಂಡುರಂಗಿ

ಇವರು ಕುರುಬಗಟ್ಟಿ ಬಾಬಾಚಾರ್ಯರಲ್ಲಿ ವೇದಾಂತ ಅಧ್ಯಯನ ಮಾಡಿ ಶಾಸ್ತ್ರ ಪಂಡಿತರಾದರು. ಕಳಸದ ಪಾಂಡುರಂಗಿ ಹಣಮಂತಾಚಾರ್ಯರು, ಶಿಗ್ಗಾವಿ ವೆಂಕಟರಮಣಾಚಾರ್ಯರು, ಕಿತ್ತೂರ ಹುಚ್ಚಾಚಾರರು ಇವರಲ್ಲಿ ಓದಿ ವಿದ್ವಾಂಸರಾದರು.

ಇವರು ಆ ಪ್ರಾಂತದಲ್ಲಿ ಪಾಠಪ್ರವಚನಾಚಾರ್ಯರೆಂದು ಸುಪ್ರಥಿತರಾಗಿದ್ದರು. ಹಲಗೇರಿ, ದೇವಗೇರಿ, ಚಿಕ್ಕೇರೂರು ಮುಂತಾದ ಊರುಗಳ ನಾಯಕ ಮನೆತನದ ಶ್ರೀಮಂತ ಸುಪ್ರತಿಷ್ಠಿತ ಗೃಹಸ್ಥರು ಈ ಹುಚ್ಚಾಚಾರ್ಯರಲ್ಲಿ ಶಾಂತಿ ಹಾಕಿ ಶಿಷ್ಯರಾದರು.

ಇವರು ಶಿಗ್ಗಾವಿ ಹತ್ತಿರ ಗಂಜಿಗಟ್ಟಿ ಎಂಬ ಗ್ರಾಮದಲ್ಲಿ ಪ್ರಾಣದೇವರ ಉತ್ಸವವನ್ನು ಪ್ರತಿ ವರ್ಷ ಮಧ್ವ ನವಮಿಯ ಕಾಲದಲ್ಲಿ ಮಾಡುತ್ತಿದ್ದರು. ಅದೇ ಸಂದರ್ಭದಲ್ಲಿ ಒಂದು ಪಂಡಿತ ಸಭೆಯನ್ನು ಕರೆದು ಅನೇಕ ಜನ ವಿದ್ವಾಂಸರಿಗೆ ದಾನ-ದಕ್ಷಿಣಾದಿಗಳನ್ನು ಇತ್ತು ಸತ್ಕರಿಸುತ್ತಿದ್ದರು.

## ೩೪ ಪಾಂಡುರಂಗಿ ರಂಗಾಚಾರ್ಯರು

ಇವರು ಉತ್ತರಾದಿ ಮಠದ ಸುಪ್ರಸಿದ್ಧ ಪಂಡಿತರೂ ಆಸ್ಥಾನ ವಿದ್ವಾಂಸರೂ, ದಿವಾನರೂ ಆದ ಪಾಂಡುರಂಗಿ ಕೃಷ್ಣಾಚಾರ್ಯ, ಜಯಾಚಾರ್ಯರ ತಂದೆಯವರು. ಇವರಿಗೆ ವೇದಾಂತ ಹಾಗೂ ಧರ್ಮಶಾಸ್ತ್ರಗಳಲ್ಲಿ ಗತಿ ಹಾಗೂ ಸನ್ಮತಿಗಳಿದ್ದವು.

## ೩೫ ಶ್ರೀ ಪಾಂಡುರಂಗಿ ಜಯಾಚಾರ್ಯರು

## (ಶ್ರೀ ಸತ್ಯಪ್ರಜ್ಞತೀರ್ಥರು)

ಶ್ರೀ ಪಾಂಡುರಂಗಿ ಜಯಾಚಾರ್ಯರು ಶ್ರೀ ಸತ್ಯಧ್ಯಾನರ ಕಾಲದಲ್ಲಿ ಕೊನೆಯ ವರೆಗೂ ಉತ್ತರಾದಿಮಠದ ದಿವಾನರೂ, ಆಸ್ಥಾನ ವಿದ್ವಾಂಸರೂ ಆಗಿದ್ದರು. ಇವರು ತಮ್ಮ ಅಣ್ಣಂದಿರಾದ ಶ್ರೀ ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿ, ಶ್ರೀ ಮಳಿಗಿ ವೇದ ವ್ಯಾಸಾಚಾರ್ಯ ಮತ್ತು ವರಖೇಡಿ ನರಸಿಂಹಾಚಾರ್ಯ ಇವರೊಡನೆ ಸಂಪೂರ್ಣ ನ್ಯಾಯ ಶಾಸ್ತ್ರವನ್ನು ಓದಿದರು. ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾ ವ್ಯಾಸತ್ರಯಾದಿ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದರು.

ಅನಂತರ ಶ್ರೀ ಉತ್ತರಾದಿ ಮಠದ ದಿವಾನರಾಗಿ ಬಹು ದಕ್ಷತೆಯಿಂದಲೂ, ಜಾಣ್ಮೆಯಿಂದಲೂ ಸಂಸ್ಥಾನದ ವ್ಯವಹಾರವನ್ನೆಲ್ಲ ನೋಡಿಕೊಳ್ಳ ತೊಡಗಿದರು.

ಆ ಮಹಾ ಸಂಸ್ಥಾನದ ದಿವಾನಗಿರಿಯ ಕಾರ್ಯ ಕಲಾಪಗಳೇ ಅವರಿಗೆ ಮೈ ತುಂಬ ಇದ್ದರೂ ಅವರು ಎಂದೂ ತಮ್ಮ ಅಧ್ಯಾಪನ ಕಾರ್ಯಗಳನ್ನು ನಿಲ್ಲಿಸುತ್ತಿದ್ದಿಲ್ಲ. ನಿತ್ಯವೂ ತಪ್ಪದೆ ಏಳೆಂಟು ಗಂಟೆಗಳ ಕಾಲ ನ್ಯಾಯ, ವೇದಾಂತಾದಿ ಶಾಸ್ತ್ರಪಾಠ ವನ್ನು ನಿಯತವಾಗಿ ಹೇಳುತ್ತಲಿದ್ದರು.

ಅವರಲ್ಲಿ ಅಧ್ಯಯನಮಾಡಿ ಪಂಡಿತರಾದವರಲ್ಲಿ ಶ್ರೀ ಕಲ್ಲಾಪೂರ ರಂಗಾಚಾರ್ಯ, ಗುಂಟೂರ ಪದ್ಮನಾಭಾಚಾರ್ಯ, ಮುಂಡರಗಿ ಬೋಧರಾಚಾರ್ಯ, ಶೀರನಹಳ್ಳಿ ಬೋಧ ರಾಚಾರ್ಯ, ಮುಂಡರಗಿ ಮಧ್ವಾಚಾರ್ಯ, ಮಹುಲಿ ಗೋಪಾಲಾಚಾರ್ಯ, ಜೋಶಿ ರಾಮಾ ಚಾರ್ಯ, ಕೂಸನೂರ ವೆಂಕಣ್ಣಾಚಾರ್ಯ, ಗಲಗಲಿ ಬಾಬಾಚಾರ್ಯ, ಶುಕಾಚಾರ್ಯ, ನಾರಾಯಣಾಚಾರ್ಯ, ಮುಂಡರಗಿ ರಂಗನಾಥಾಚಾರ್ಯ ಮುಂತಾದವರು ಪ್ರಮುಖ ರಾಗಿದ್ದಾರೆ.

ಮುಂದೆ ಈ ಪಾಂಡುರಂಗಿ ಜಯಾಚಾರ್ಯರು ಪಂಢರಪುರದಲ್ಲಿ ಶ್ರೀ ಸತ್ಯ ಧ್ಯಾನ ತೀರ್ಥರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀ ಸತ್ಯಪ್ರಜ್ಞ ತೀರ್ಥರೆಂದು ಹೆಸರಾದರು.

ಆಶ್ರಮವಾದ ಬಳಿಕವೂ ಅವರು ತಮ್ಮ ಪಾಠಪ್ರವಚನ ಕಾರ್ಯವನ್ನು ಇಮ್ಮಡಿಸಿ ಸುಧಾ, ಚಂದ್ರಿಕಾದಿ ಗ್ರಂಥಗಳನ್ನು ಪಾಠ ಹೇಳಿ ಮಂಗಳ ಮಾಡಿದರು.

ಶ್ರೀ ಸತ್ಯಪ್ರಜ್ಞತೀರ್ಥರು ಕೆಲವೇ ವರ್ಷ ಉತ್ತರಾದಿ ಮಠದ ಸಂಸ್ಥಾನವನ್ನು ಆಳಿ ಕೃಷ್ಣಾತೀರವಾದ ಆತ್ಮಕೂರು ಗ್ರಾಮದಲ್ಲಿ ವೃಂದಾವನಸ್ಥರಾದರು.



ಶ್ರೀ ಉತ್ತರಾದಿ ಮಠದ ಪ್ರಾತಃಸ್ಮರಣೀಯ ಶ್ರೀ ಸತ್ಯಧ್ಯಾನ ತೀರ್ಥರು ಶ್ರೀ ಭಂಡಾರಕೇರಿ ಮಠಾಧೀಶ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥರಿಗೂ ಶ್ರೀ ಕುಂದಾಪುರ ಮಠಾಧೀಶ ಶ್ರೀ ಶ್ರೀ ಲಕ್ಷ್ಮೀಶತೀರ್ಥರಿಗೂ ಸುಧಾ ಪಾಠ ಹೇಳುವ ದೃಶ್ಯ

# ಗುರ್ಜಾರಿ ಆಚಾರ್ಯರು

## ೩೬ ಗುರ್ಜಾರ ಸುಬ್ರಹ್ಮಣ್ಯಾಚಾರ್ಯರು

ಶ್ರೀ ಯಾದವಾರ್ಯರ ಶಿಷ್ಯ ಮನೆತನಕ್ಕೆ ಸೇರಿದ ಈ ಗುರ್ಜಾರ ಆಚಾರ್ಯರು ಶ್ರೀ ಟೀಕಾ ಕೃತ್‌ಪಾದರ ಅನುಗ್ರಹ ವಿಶೇಷಕ್ಕೆ ತರುಣ ನಿದರ್ಶನರಾಗಿದ್ದರು. ಪುಣೆಯ ಪೇಶ್ವೇಯವರ ವಿದ್ವತ್ ಸಭೆಯಲ್ಲಿ ಕಿರೀಟ ವೆಂಕಟರಮಣಾಚಾರ್ಯನೆಂಬ ರಾಮಾನುಜ ಪಂಡಿತನು ಪ್ರತಿ ವರುಷವೂ ವಾಕ್ಯಾರ್ಥದಲ್ಲಿ ಜಯವನ್ನು ಪಡೆದು ತನ್ನ ಗೆಲುವಿನ ಬಾವುಟವನ್ನು ಎತ್ತಿ ಮೆರೆಯುತ್ತಿದ್ದನು. ಅವನನ್ನು ಎದುರಿಸುವ ಪಂಡಿತರು ಆ ಕಾಲದಲ್ಲಿ ಯಾರೂ ಇರಲಿಲ್ಲ. ಆ ಪಂಡಿತನಿಗೆ ಆರು ಶಾಸ್ತ್ರಗಳೆಲ್ಲವೂ ಕರತಲಾಮಲಕವಾದದ್ದರಿಂದ ಯಾರು ಬಂದರೂ ಯಾವ ಶಾಸ್ತ್ರದಲ್ಲಿ ವಿಷಯ ತೆಗೆದರೂ ವೆಂಕಟರಮಣಾಚಾರ್ಯನು ಮುಂದೆ ಬಂದು ತನ್ನ ವಾದಾಟೋಪದಿಂದ ಪ್ರತಿವಾದಿ ಪಂಡಿತರಿಗೆಲ್ಲ ಬಾಯಿಗೆ ಬೀಗ ಹಾಕಿ ಬಿಡುತ್ತಿದ್ದನು.

ಮಳಖೇಡದಲ್ಲಿರುವ ಸುಬ್ರಹ್ಮಣ್ಯಾಚಾರ್ಯರಿಗೆ ಈ ಸಮಾಚಾರವು ತಿಳಿದು ಬಹಳ ದುಃಖವಾಯಿತು. ಹೇಗಾದರೂ ಮಾಡಿ ಆ ಪಂಡಿತನನ್ನು ವಾದದಲ್ಲಿ ಗೆದ್ದು ಮಾಧ್ವರ ವಿಜಯ ಧ್ವಜವನ್ನು ಮಹಾರಾಷ್ಟ್ರದ ರಾಜಧಾನಿಯಲ್ಲಿ ಮೆರೆಯಿಸಬೇಕೆಂಬ ಹಂಬಲವು ಅವರಿಗೆ ಉಂಟಾಯಿತು.

ಅದಕ್ಕಾಗಿ ಅವರು ಟೀಕಾಚಾರ್ಯರಿಗೆ ಮೊರೆ ಹೊಕ್ಕರು. ಅವರು ಅನಿಚ್ಛಿನ್ನವಾಗಿ ವೃಂದಾವನದ ಸೇವೆ ಮಾಡಿದರು. ಸುಧಾ ಪಾರಾಯಣವನ್ನು ಮಾಡುತ್ತಲೇ ಶ್ರೀ ಟೀಕಾ ರಾಯರ ಪ್ರದಕ್ಷಿಣೆ, ನಮಸ್ಕಾರವನ್ನು ನಿರಂತರ ನಡೆಯಿಸಿದರು. ಅವರ ಸೇವೆಗೆ ಪ್ರಸನ್ನರಾಗಿ ಶ್ರೀ ಜಯತೀರ್ಥರು ಸ್ವಪ್ನದಲ್ಲಿ ಬಂದು ತಲೆಯ ಮೇಲೆ ಕೈ ಇರಿಸಿದರು.

ಕೂಡಲೇ ಅವರ ಮಿದುಳಿನ ಮೈದಾನದಲ್ಲಿ ತಿಳಿವಿನ ತಡಸಲವೇ ಧುಮುಕಿದಂತಾಯಿತು. ಸರ್ವಶಾಸ್ತ್ರಾರ್ಥಗಳ ರಹಸ್ಯವು ಅವರಿಗೆ ಅವಗತವಾಗಿ ದಿವ್ಯ ಜ್ಞಾನೋದಯವಾಯಿತು.

ಕೂಡಲೇ ಅವರು ಪುಣೆ ಪಟ್ಟಣಕ್ಕೆ ಹೋಗಿ ಕಿರೀಟ ವೆಂಕಟರಮಣಾಚಾರ್ಯರ ಜೊತೆಗೆ ವಾದಕ್ಕಿಳಿದರು. ಇವರಿಬ್ಬರ ವಾಕ್ಯಾರ್ಥ ವಿಚಾರಕ್ಕೆ ಬಂಗಾಲದ ಭವದೇವ ಮಿಶ್ರ ಎಂಬ ಮಹಾ ಪಂಡಿತನು ಅಧ್ಯಕ್ಷನಾಗಿದ್ದನು. ಶ್ರೀ ಟೀಕಾಚಾರ್ಯರ ಅನುಗ್ರಹದಿಂದ ಆಚಾರ್ಯರ ಬಾಯಿಂದ ಪುಂಖಾನುಪುಂಖವಾಗಿ ಸಿಡಿದು

ಸೂಸಿ ಬರುತ್ತಲಿರುವ ವಾಚೋ ವೈಖರಿ ಯುಕ್ತಿ ಚಾತುರ್ಯಗಳಿಗೆ ಕಿರೀಟ ವೆಂಕಟರಮಣಾಚಾರ್ಯರ ಬಾಯಿ ಕಟ್ಟಿತು. ಅವರ ಗೌರವದ ಕಿರೀಟವು ಕೆಳಗಿಳಿಯಿತು. ಮಧ್ಯಸ್ಥರಾದ ಭವದೀಯ ಮಿಶ್ರರು ಸುಬ್ರಹ್ಮಣ್ಯಾಚಾರ್ಯರು ವಿಜಯಶಾಲಿಗಳಾದರು ಎಂದು ಘೋಷಿಸಿದರು.

ಆಗ ಪೇಶವೆಯವರ ಮುಖ್ಯ ಮಂತ್ರಿಯಾದ ನಾನಾಫಡನೀಸನು ತಮ್ಮ ಪ್ರಭುಗಳ ಆಜ್ಞೆಯಂತೆ ಆಚಾರ್ಯರಿಗೆ ಜಹಾಗೀರಿ ಮತ್ತು ರತ್ನ, ಹೊನ್ನು ಹಣಗಳನ್ನು ಕೊಡಲು ಮುಂದೆ ಬಂದನು. ಆಗ ಆಚಾರ್ಯರು ''ನನಗಾವುದೂ ಬೇಡ, ನಮ್ಮ ಗುರುಗಳ ಈ ಸುಧಾಗ್ರಂಥವನ್ನು ಮಾತ್ರ ಆನೆಯ ಮೇಲಿಟ್ಟು ಮೆರಿಸಿರಿ." ಎಂದು ಕೇಳಿದರು.

ಅವರ ಅಪೇಕ್ಷೆಯಂತೆ ಪೇಶವೆ ಮಂತ್ರಿಗಳು ಶ್ರೀಮನ್ನ್ಯಾಯ ಸುಧಾ ಗ್ರಂಥವನ್ನು ಆನೆಯ ಮೇಲೆ ಬಂಗಾರದ ಅಂಬಾರಿಯಲ್ಲಿಟ್ಟು ಮೆರಿಸಿದರು. ಅದರ ಮುಂದೆ ಗುರ್ಜಾರಿ ಸುಬ್ರಹ್ಮಣ್ಯಾಚಾರ್ಯರು ಚಾಮರ ಹಾಕುತ್ತ ಕುಳಿತು ಸುಧಾ ಗ್ರಂಥ ಜಯಘೋಷ ಮಾಡುತ್ತಿದ್ದರು. ಹೀಗೆ ಮಹಾರಾಷ್ಟ್ರದ ಮುಖ್ಯ ರಾಜಧಾನಿಯಲ್ಲಿ ಸುಧಾ ಗ್ರಂಥದ ಡಂಗುರ ಹೊಡೆದ ಧೀರ ಧೀಮಂತ ಧುರೀಣ ಆಚಾರ್ಯರೆಂದರೆ ಗುರ್ಜಾರಿ ಸುಬ್ರಹ್ಮಣ್ಯಾಚಾರ್ಯರು.

ಮುಂದೆ ಅವರು ತಮ್ಮ ಈ ವಿಜಯವನ್ನು ಅಂದಿನ ಉತ್ತರಾದಿ ಮಠದ ಪಂಡಿತ ಪೀಠಾಧಿಪತಿಗಳಾದ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಿಗೆ ಅರ್ಪಿಸಿ ಅವರ ಪರಮಾನುಗ್ರಹಕ್ಕೆ ಪಾತ್ರರಾದರು.

ಗುರ್ಜಾರಿ ಆಚಾರ್ಯರ ತಪಃ-ಪ್ರಭಾವದಿಂದ ಆಕರ್ಷಿತರಾಗಿ ಮೈಸೂರಿನ ಮುಖ್ಯ ಮಂತ್ರಿಯಾದ ಪೂರ್ಣಯ್ಯನವರೂ, ಹೈದರಾಬಾದದ ರಾಜಾ ರಘೂತ್ತಮರಾಯರೂ ಇವರ ಶಿಷ್ಯರಾದರು.

ಆಚಾರ್ಯರು ಪಲ್ಲಕ್ಕಿಯಲ್ಲಿ ಕುಳಿತು ವಾದಿಗಳನ್ನು ನಿಗ್ರಹಿಸಿ, ಶ್ರೀ ಸುಧಾ ಗ್ರಂಥದ ಹಿರಿಮೆಯನ್ನು ಎಲ್ಲ ಕಡೆಗೂ ಪ್ರಚುರಪಡಿಸಿದರು. ಕಾಶಿಗೆ ಹೋಗಿ ಒಂದು ದೊಡ್ಡ ವಿದ್ವತ್ ಸಭೆಯಲ್ಲಿ— ಯಜ್ಞಗಳಲ್ಲಿ ಪಶು ಹಿಂಸೆ ಮಾಡುವದು ಪ್ರಮಾಣ ವಿರುದ್ಧ ಎಂದು ತೋರಿಸಿದರು. ಆಚಾರ್ಯರ ಗ್ರಂಥಗಳಲ್ಲಿ ಉದಾಹರಿಸಿದ ಪ್ರಮಾಣ ವಚನಗಳನ್ನು ಆ-ಆ ಗ್ರಂಥಗಳನ್ನು ತೆಗೆದು ತೋರಿಸಿ ಅವೆಲ್ಲವೂ ಪ್ರಾಮಾಣಿಕ ಎಂದು ಸಿದ್ಧಮಾಡಿದರು.

ಇವರು ಚಂದ್ರಿಕಾ ಗ್ರಂಥಕ್ಕೆ ಒಂದು ಅತ್ಯುತ್ತಮವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಇವರ ಮನೆತನದಲ್ಲಿ ಅನೇಕ ಗ್ರಂಥಕಾರರೂ, ಮಹಾ ಪಂಡಿತರೂ ಆಗಿ ಹೋಗಿದ್ದಾರೆ. ಇವರು ೧೮೩೦ನೇ ಇಸ್ವಿ ಸುಮಾರಿನಲ್ಲಿ ಜಯಧ್ವಜವನ್ನು ಎತ್ತಿ ಹಿಡಿದ ಶ್ರೀ ಜಯತೀರ್ಥರ ಭಕ್ತರು.



ಶ್ರೀ ೧೦೮ ಶ್ರೀ ಸತ್ಯಧ್ಯಾನತೀರ್ಥರು ಉಡುಪಿಯ ಶ್ರೀ ೧೦೮ ಶ್ರೀ ಶಿರೂರ ಮಠಾಧೀಶ
ಶ್ರೀ ಶ್ರೀ ಲಕ್ಷ್ಮೀಂದ್ರ ತೀರ್ಥರಿಗೂ ಹಾಗೂ ಶ್ರೀ ೧೦೮ ಶ್ರೀ ಸುಬ್ರಹ್ಮಣ್ಯ ಮಠಾಧೀಶ
ಶ್ರೀ ಶ್ರೀ ವಿದ್ಯಾಸಿಂಧು ತೀರ್ಥರಿಗೂ ಸುಧಾ ಪಾಠ ಹೇಳುವ ದೃಶ್ಯ



ಉತ್ತರಾದಿ ಮಠಾಧೀಶ ಶ್ರೀ ೧೦೮ ಶ್ರೀ ಸತ್ಯ ಪ್ರಮೋದ ತೀರ್ಥ ಶ್ರೀ ಚರಣರು
ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಮಠದ ಶ್ರೀ ೧೦೮ ಶ್ರೀ ರಾಮಧ್ಯಾನ ತೀರ್ಥರಿಗೆ
ಸುಧಾ ಪಾಠ ಹೇಳುವ ದೃಶ್ಯ

# ಕುಂಡಲಗಿರಿ ಆಚಾರ್ಯರು

## ೩೬ ಕುಂಡಲಗಿರಿ ಆಚಾರ್ಯ

ಪುಟ್ಟಪರ್ತಿ ಎಂಬ ಪಟ್ಟಣದ ಸಮೀಪದ ಬೇಲೂರ ಗ್ರಾಮದಲ್ಲಿ ಕಂಡಿಭಟ್ಟರೆಂಬ ಮಹಾಪಂಡಿತರಿದ್ದರು. ಇವರ ಮಕ್ಕಳಾದ ಕುಂಡಲಗಿರಿ ಆಚಾರ್ಯರು ಕಾಶಿಗೆ ಹೋಗಿ ಶಾಸ್ತ್ರಾಧ್ಯಯನ ಮಾಡಿ ಅದ್ವಿತೀಯ ಪಂಡಿತರಾದರು.

ಆ ಕಾಲದಲ್ಲಿ ಕಾಶಿಯಲ್ಲಿ ಬಾಲ ಮನೋರಮಾ ಮೊದಲಾದ ಗ್ರಂಥಗಳನ್ನು ಬರೆದ ಭಟ್ಟೋಜೀ ದೀಕ್ಷಿತ ಎಂಬ ಪಂಡಿತನು "ದ್ವೈತ ಕೌಸ್ತುಭ ಖಂಡನ" ಎಂಬ ಗ್ರಂಥವನ್ನು ಬರೆದಿದ್ದನು. ಅದರಲ್ಲಿ ಮಧ್ವಾಚಾರ್ಯರು ಮಾಡಿದ ಅನೇಕ ಪ್ರಯೋಗಗಳು ವ್ಯಾಕರಣ ವಿರುದ್ಧವಾಗಿವೆ ಎಂದು ಆಪಾದಿಸಿದ್ದನು.

ಮಹಾಪಂಡಿತರಾದ ಕುಂಡಲಗಿರಿ ಆಚಾರ್ಯರಿಗೆ ಶ್ರೀಮದಾಚಾರ್ಯರ ಮೇಲಿನ ಈ ದೋಷಗಳನ್ನು ಸಹನ ಮಾಡುವದಾಗಲಿಲ್ಲ. ಕೂಡಲೆ ಅವರು "ಭಟ್ಟೋಜಿ ಕುಟ್ಟನ" ಎಂಬ ಗ್ರಂಥವನ್ನು ಬರೆದು ದೀಕ್ಷಿತರ ಗ್ರಂಥವನ್ನು ಅಕ್ಷರಶಃ ಖಂಡಿಸಿ, ಸರ್ವಜ್ಞಮುನಿಗಳು ಮಾಡಿದ ಎಲ್ಲ ಪ್ರಯೋಗಗಳೂ ಶುದ್ಧವೂ, ವ್ಯಾಕರಣ ನಿಯಮ ಸಿದ್ಧವೂ, ಶಬ್ದಶಾಸ್ತ್ರ ಅವಿರುದ್ಧವೂ ಆಗಿವೆ ಎಂದು ಸಿದ್ಧಮಾಡಿ ತೋರಿಸಿದರು.

ಕೆಲ ದಿನಗಳ ಮೇಲೆ ಕಾಶಿಗೆ ಶ್ರೀ ವ್ಯಾಸರಾಜ ಮಠದ ಶ್ರೀ ಲಕ್ಷ್ಮೀನಾರಾಯಣ ತೀರ್ಥರು ದಯಮಾಡಿಸಿದ್ದರು. ಅವರು ಕುಂಡಲಗಿರಿ ಆಚಾರ್ಯರ ಉದ್ದಂಡ ಪಾಂಡಿತ್ಯ ಪ್ರಚಂಡವಾದ ವೈದುಷ್ಯಗಳನ್ನು ಕಂಡು ಆನಂದ ಪಟ್ಟು ಅವರ ಮೇಲೆ ವಿಶೇಷ ಅನುಗ್ರಹವನ್ನು ಮಾಡಿದರು. ನ್ಯಾಯ ವೇದಾಂತಾದಿ ಪರಕೀಯ ಶಾಸ್ತ್ರಗಳಲ್ಲಿಯೇ ಪರಿಶ್ರಮಪಟ್ಟು ಪ್ರಖರ ಪಾಂಡಿತ್ಯವನ್ನು ಪಡೆದ ಆಚಾರ್ಯರಿಗೆ ಮಧ್ವಶಾಸ್ತ್ರದ ಮಹಾ ಮಹಿಮೆಯನ್ನು ತಿಳಿಸಿ ಹೇಳಿ ವೇದಾಂತದ ಮೇಲೆ ಪ್ರೀತ್ಯಾದರಗಳನ್ನು ಹುಟ್ಟಿಸಿದರು. ಅಂದಿನಿಂದ ಕುಂಡಲಗಿರಿ ಆಚಾರ್ಯರು ಆ ಸ್ವಾಮಿಗಳ ಶಿಷ್ಯರಾಗಿ ಅವರೊಡನೆಯೇ ದೇಶ-ದೇಶಗಳಲ್ಲಿ ದಿಗ್ವಿಜಯವನ್ನು ಮಾಡುತ್ತ ಸ್ವದೇಶಕ್ಕೆ ಮರಳಿದರು.

ಇವರು ತಮ್ಮ ಆಯುಷ್ಯದ ಉತ್ತರಾರ್ಧದಲ್ಲಿ ಕಾವೇರಿ ತೀರದ ಶ್ರೀರಂಗ ಕ್ಷೇತ್ರದಲ್ಲಿ ಇದ್ದು, ನೂರಾರು ಜನ ಶಿಷ್ಯರಿಗೆ ಪಾಠ ಹೇಳುತ್ತಿದ್ದರು. ಇವರ ಉಪಾಸ್ಯ ದೇವತೆ— ಹಯಗ್ರೀವ.

ಇವರು ಕ್ರಮಕೂಟ ಎಂಬ ತೀರ್ಥದಲ್ಲಿ ಪ್ರಾಣದೇವರ ಪ್ರತಿಷ್ಠೆ ಮಾಡಿ ಅಲ್ಲಿಯ ಕ್ಷೇತ್ರವಾಸಿಗಳಿಗೆ ಪ್ರಾಣದೇವರ ಪೂಜೆಗಾಗಿ ಆ ಕ್ಷೇತ್ರವನ್ನೇ ದತ್ತಿಹಾಕಿ ಕೊಟ್ಟರು. ಈ ತೀರ್ಥಸ್ಥರೇ ಮುಂದೆ ಶ್ರೀ ಮುಷ್ಣಸಂಪ್ರದಾಯದ ಕರ್ತರಾದರು.

ಶ್ರೀ ಕುಂಡಲಗಿರಿ ಆಚಾರ್ಯರು ನ್ಯಾಯಾಮೃತ ಟಿಪ್ಪಣಿ, ಪಂಚಾಧಿಕರಣ ಸುಧಾ ಟಿಪ್ಪಣಿ, ಭಟ್ಟೋಜಿ ಕುಟ್ಟನ, ಪ್ರಭಾತ ಪಂಚಕ ಸ್ತೋತ್ರ, ಅದ್ವೈತಾಮೃತ ಭಂಗ, ತತ್ವ ಪ್ರಕಾಶಿಕಾ ಟಿಪ್ಪಣಿ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

### ೩೭ ಬ್ರಹ್ಮಾಚಾರ್ಯರು

ಕುಂಡಲಗಿರಿ ಆಚಾರ್ಯರ ಮಕ್ಕಳಾದ ಇವರು ಒಳ್ಳೆ ವಿದ್ವಾಂಸರಾಗಿದ್ದರು. ''ಇವರು ಅನ್ಹಿಕ ಪದ್ಧತಿ'' ಎಂಬ ಗ್ರಂಥವನ್ನು ಬರೆದಿದ್ದಾರೆ.

## ಶ್ರೀ ಗಜೇಂದ್ರಗಡ ಆಚಾರ್ಯರು

ಧಾರವಾಡ ಜಿಲ್ಲೆಯ ರೋಣ ತಾಲೂಕಿನಲ್ಲಿ ಗಜೇಂದ್ರಗಡವು ಒಂದಾನೊಂದು ಕಾಲದಲ್ಲಿ ವಿದ್ವತ್ಕೇಂದ್ರವಾಗಿದ್ದಿತು. ಸಂಸ್ಕೃತ ಟೀಕಾಕಾರನಾದ ಮಲ್ಲಿನಾಥನೂ, ರಾಮ ದುರ್ಗ ಆಚಾರ್ಯರೂ, ಸಾತಾರಾ ಆಚಾರ್ಯರೂ ಮೂಲತಃ ಗಜೇಂದ್ರಗಢದವರು.

### ೩೮ ಗಜೇಂದ್ರಗಡದ ರಾಘವೇಂದ್ರಾಚಾರ್ಯರು

ಬಾಲ್ಯದಲ್ಲಿಯೇ ತಮ್ಮ ಕಕ್ಕಂದಿರಲ್ಲಿಯೇ ವೇದಾಂತ ಸಾಹಿತ್ಯಗಳನ್ನು ಓದಿ ಹೆಚ್ಚಿನ ಜ್ಞಾನ ಲಾಲಸೆಯಿಂದ ಪಂಢರಪುರದ ವಿಠ್ಠಲೋಪಾಧ್ಯಾಯರ ಬಳಿಗೆ ಹೋದರು. ಹುಲಿಗಿ ಶ್ರಿಯಃಪತ್ಯಾಚಾರ್ಯರೂ, ಪಂಢರಪುರ ಕೃಷ್ಣಾಚಾರ್ಯರೂ, ವಿಠ್ಠಲೋಪಾಧ್ಯಾಯರಲ್ಲಿ ಆಗ ಓದುತ್ತಲಿದ್ದರು.

ನ್ಯಾಯ ಶಾಸ್ತ್ರದ ವಾದ ಗ್ರಂಥಗಳಿಗೆಲ್ಲ ಟೀಕೆ ಬರೆದ ಕೃಷ್ಣಂಭಟ್ಟನಲ್ಲಿ ನವ್ಯ ನ್ಯಾಯವನ್ನು ಅಧ್ಯಯನ ಮಾಡಿ ಉದ್ದಂಡ ಪಂಡಿತರಾದ ಶ್ರೀ ವಿಠ್ಠಲೋಪಾಧ್ಯಾಯರನ್ನು ಶಾಹು ಛತ್ರಪತಿಯು ಪಂಢರಪುರದಲ್ಲಿ ನ್ಯಾಯಾಧೀಶರನ್ನಾಗಿ ನೇಮಿಸಿದನು.

ಲೌಕಿಕ ಕಾರ್ಯ ಕಲಾಪಗಳು ಅತಿಯಾಗಿ ಬೆಳೆದು ಪಾಠವು ಕುಂಠಿತವಾಗ ತೊಡಗಲು ಗಜೇಂದ್ರಗಡ ರಾಘವೇಂದ್ರಾಚಾರ್ಯರು ಧತ್ತೆ ನೀಲಕಂಠ ಶಾಸ್ತ್ರಿಗಳವರಲ್ಲಿ ತಮ್ಮ ಅಧ್ಯಯನವನ್ನು ಮುಂದುವರಿಸಿದರು.

ವಿಠ್ಠಲೋಪಾಧ್ಯಾಯರಲ್ಲಿ ತರ್ಕ ಶಾಸ್ತ್ರವನ್ನೂ ಛತ್ರೆ ಶಾಸ್ತ್ರಿಯಲ್ಲಿ ವ್ಯಾಕರಣ ವನ್ನೂ ಓದಿದ ಆಚಾರ್ಯರು ಉಭಯ ಶಾಸ್ತ್ರಗಳಲ್ಲಿಯೂ ಪ್ರಕಾಂಡ ಪಂಡಿತರಾದರು.

ಸಾತಾರೆಯ ಮುಖ್ಯ ಮಂತ್ರಿ ಬಾಳಾಜಿ ಪಂತನು ಇವರ ಪಾಂಡಿತ್ಯಕ್ಕೆ ಮುಗ್ಧನಾಗಿ ಇವರನ್ನು ಸಾತಾರಾದಲ್ಲಿಯೇ ಛತ್ರಪತಿ ಆಶ್ರಯದಲ್ಲಿರಿಸಿಕೊಂಡನು.

ಆಚಾರ್ಯರ ಪಾಂಡಿತ್ಯವು ಲೋಕವಿಲಕ್ಷಣವಾಗಿದ್ದಿತು. ಇವರು ಶಬ್ದೇಂದು ಶೇಖರದ ಮೇಲೆ "ವಿಷಮಪದ ವಿವೃತ್ತಿ" ಎಂಬ ವ್ಯಾಖ್ಯಾನವನ್ನೂ, ಶಬ್ದ ಕೌಸ್ತುಭ ಗ್ರಂಥಕ್ಕೆ "ಪ್ರಭಾ", ಪರಿಭಾಷೇಂದು ಶೇಖರಕ್ಕೆ "ತ್ರಿಪಥಗಾ", ಶಬ್ದ ರತ್ನ ಗ್ರಂಥಕ್ಕೆ "ಪ್ರಭಾ" ಮುಂತಾದ ವ್ಯಾಕರಣ ಗ್ರಂಥಗಳನ್ನು ಬರೆದಿದ್ದಾರೆ.

ಸಾತಾರಾ ಆ ಚಾ ಯ ರ ರಿ ಗೆ ವ್ಯಾಕರಣದಂತೆ ವೇದಾಂತದಲ್ಲಿಯೂ ಮಹಾ ಪಾಂಡಿತ್ಯವಿದ್ದಿತು. ಅವರು ವೇದಾಂತದಲ್ಲಿ ಉಪಾಧಿ ಖಂಡನ, ಗೀತಾ, ವಿಷ್ಣುಸಹಸ್ರ ನಾಮ, ನಾರಾಯಣೋಪನಿಷತ್, ರಾಮ ತಾಪಿನೀ ಉಪನಿಷತ್, ನರಸಿಂಹ ತಾಪಿನೀ ಉಪನಿಷತ್ ಮುಂತಾದ ಅನೇಕ ಗ್ರಂಥಗಳಿಗೆ ಟೀಕಾ ಟಿಪ್ಪಣಿಗಳನ್ನು ಬರೆದಿದ್ದಾರೆ.

ಶ್ರೀ ರಾಘವೇಂದ್ರಾಚಾರ್ಯರಿಗೆ ಆರು ಜನ ಮಕ್ಕಳು. ಎಲ್ಲರೂ ಪಂಡಿತ ಪ್ರವರರೇ. ಶ್ರೀ ರಾಘವೇಂದ್ರಾಚಾರ್ಯರ ಪಾಂಡಿತ್ಯದ ಕೀರ್ತಿಯನ್ನು ಕೇಳಿದ ಗ್ವಾಲ್ಹೇರ ಮಹಾರಾಜನು ಅವರನ್ನು ತನ್ನಲ್ಲಿಗೆ ಕರೆಯಿಸಿಕೊಂಡು ತನ್ನ ಅರ ಮನೆಯ ಧರ್ಮಾಧಿಕಾರಿಗಳನ್ನಾಗಿ ಮಾಡಿಕೊಂಡಿದ್ದನು. ರೇವಾ ಮಹಾರಾಜನು ಅವರ ಶಿಷ್ಯನಾಗಿದ್ದನು. ಎರಡನೇ ಬಾಜೀರಾಯನು ಮುಪ್ಪಿನ ಕಾಲದಲ್ಲಿ ಆಚಾರ್ಯ ರಿಗೆ ಆಶ್ರಯವನ್ನಿತ್ತಿದ್ದನು. ಅವರು ಬದರಿ ಯಾತ್ರೆಯನ್ನು ಮಾಡಿಕೊಂಡು ಬಂದು ೧೭೫೨ ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

### ೪೯ ನಾರಾಯಣಾಚಾರ್ಯರು

ಶ್ರೀ ರಾಘವೇಂದ್ರಾಚಾರ್ಯರ ಮಕ್ಕಳಲ್ಲಿ ನಾರಾಯಣಾಚಾರ್ಯರು ತಂದೆ ಗಿಂತ ಉದ್ದಾಮ ವಿದ್ವಾಂಸರಾಗಿದ್ದರು. ಅವರ ಇನ್ನೊಬ್ಬ ಮಕ್ಕಳಾದ ರಾಮಾಚಾ ರ್ಯರು ವ್ಯಾಕರಣ ಶಾಸ್ತ್ರದಲ್ಲಿ ಅಪ್ರತಿಮ ಪಂಡಿತರಾಗಿದ್ದರು. ತಮ್ಮ ತಂದೆಯ "ತ್ರಿಪಥಗಾ" ಗ್ರಂಥಕ್ಕೆ ಕಾಶೀ ಪಂಡಿತರೊಬ್ಬರು ಖಂಡನ ಬರೆದು "ವೈಷ್ಣವೀ" ಎಂಬ ಹೆಸರನ್ನಿಟ್ಟಿದ್ದರು. ಆ ವೈಷ್ಣವೀ ಗ್ರಂಥವನ್ನು ರಾಮಾಚಾರ್ಯರು "ರಡೋದ್ಭೇದಿನೀ" ಎಂಬ ಮತ್ತೊಂದು ಪುಸ್ತಕ ಬರೆದು ಖಂಡಿಸಿ ತಮ್ಮ ತಂದೆಯವರ ಗ್ರಂಥವನ್ನು ಮಂಡನ ಮಾಡಿದರು.

ನಾರಾಯಣಾಚಾರ್ಯರ ಮಗ ಅನಂತಾಚಾರ್ಯರು ಮಹಾ ಪಂಡಿತರಾಗಿ ದ್ದರು. ಅವರು ಶಬ್ದೇಂದು ಶೇಖರದ "ತಿಜಂತ" ವ್ಯಾಖ್ಯಾನ ಬರೆದು ಪ್ರಸಿದ್ಧರಾದರು

ಉತ್ತರಾದಿ ಮಠದ ಶ್ರೀ ಸತ್ಯವೀರ ಶ್ರೀಪಾದಂಗಳವರ ಮದ್ರಾಸಿನ ಪುನರ್ವಿವಾಹ ಸಭೆಗೆ ಹೋಗಿ ತಮ್ಮ ಪಾಂಡಿತ್ಯ ಹಾಗೂ ವ್ಯಾಖ್ಯಾನಗಳಿಂದ ಶ್ರೀಗಳವರ ಹಾಗೂ ಸಭಿಕರ ಮೆಚ್ಚುಗೆಯನ್ನು ಪಡೆದರು.

## ೪೦ ಬಾಳಾಚಾರ್ಯರು

ಶ್ರೀ ನಾರಾಯಣಾಚಾರ್ಯರ ಮಕ್ಕಳಾದ ಬಾಳಾಚಾರ್ಯರು ಮಹಾ ಪಂಡಿತ ರಾಗಿದ್ದು ನೂರಾರು ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಹೇಳುತ್ತಿದ್ದರು. ಕರ್ನಾಟಕ, ಮಹಾರಾಷ್ಟ್ರ ದೇಶದ ಅನೇಕ ವಿದ್ಯಾರ್ಥಿಗಳು ಅವರಲ್ಲಿ ಓದಿ ವಿದ್ವಾಂಸ ರಾದರು. ಆದ್ಯ ಅನಂತಾಚಾರ್ಯ, ಬುರ್ಲಿ ಶ್ರೀನಿವಾಸಾಚಾರ್ಯ, ಖೊಬ್ಬಾಚಾರ್ಯ, ಗಲಗಲಿ ಪಾಂಡುರಂಗಾಚಾರ್ಯ ಮೊದಲಾದ ಅನೇಕ ಕರ್ನಾಟಕದ ಛಾತ್ರರು ಅವರಲ್ಲಿ ಓದಿ ಮುಂದೆ ಬಂದರು.

ಶ್ರೀ ಬಾಳಾಚಾರ್ಯರ ಮಕ್ಕಳಾದ ಶ್ರೀ ಸೇತು ಮಾಧವಾಚಾರ್ಯ, ಅಶ್ವ ತ್ಥಾಮಾಚಾರ್ಯ, ಪ್ರಲ್ಹಾದಾಚಾರ್ಯ, ಮುಂತಾದವರು ಜಗತ್ತಿನಲ್ಲಿ ಪ್ರಸಿದ್ಧ ರಾಗಿದ್ದಾರೆ.

## ೪೧ ಸೇತು ಮಾಧವಾಚಾರ್ಯರು

ಹಿರಿಯರಾದ ಸೇತು ಮಾಧವಾಚಾರ್ಯರು ತಂದೆಯವರಲ್ಲಿ ಸಾಹಿತ್ಯ ಮತ್ತು ವ್ಯಾಕರಣ ಅಧ್ಯಯನ ಮಾಡಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿ ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದರು. ಇವರು ಅನೇಕ ಸಂಸ್ಕೃತ ಕಾವ್ಯ ನಾಟಕಗಳಿಗೆ ಸಂಸ್ಕೃತ ಟೀಕೆ, ಟಿಪ್ಪಣಿ ಬರೆದಿದ್ದಾರೆ. ಅವರು ಸಂಸ್ಕೃತ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಸರಳ ಸುಂದರವಾಗಿ ನಿರ ರ್ಗಳವಾಗಿ ಭಾಷಣ ಮಾಡುತ್ತಿದ್ದರು.

## ೪೨ ಅಶ್ವತ್ಥಾಮಾಚಾರ್ಯರು

ಸಾತಾರಾ ಆಚಾರ್ಯರ ಇನ್ನೊಬ್ಬ ಮಕ್ಕಳಾದ ಅಶ್ವತ್ಥಾಮಾಚಾರ್ಯರು ಎಂ. ಎ. ಪದವೀಧರರಾಗಿ ಮುಂಬೈ ಎಲ್ಫಿನ್‌ಸ್ಟನ್ ಕಾಲೇಜ, ಕರ್ನಾಟಕ ಕಾಲೇಜ ಮುಂತಾದ ಕಡೆಗಳಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದರು. ಅವರು ಶಾಕುಂತಲ, ವೇಣೀ ಸಂಹಾರ, ಭಾಮಿನೀ ವಿಲಾಸ ಮುಂತಾದ ಸಂಸ್ಕೃತ ಸಾಹಿತ್ಯ ಗ್ರಂಥಗಳಿಗೆ ಇಂಗ್ಲೀಷಿ ನಲ್ಲಿ ಟಿಪ್ಪಣಿ, ಭಾಷಾಂತರ, ವಿಮರ್ಶೆಗಳನ್ನು ಬರೆದಿದ್ದಾರೆ.

# ಉಮರ್ಜಿ ಆಚಾರ್ಯರು

## ೪೩ ಉಮ್ಮರ್ಜಿ ತಿರುಮಲಾಚಾರ್ಯ

ಯಾದವಾರ್ಯರ ಶಿಷ್ಯ ಮನೆತನದ ಉಮರ್ಜಿ ಆಚಾರ್ಯರ ಮೂಲ ಪುರುಷರು ತಿರುಮಲಾಚಾರ್ಯರು. ಪಂಢರಪುರದ ಬಳಿಯ ಭೀಮಾ ತೀರದ ಉಮರ್ಜಿ ಗ್ರಾಮವು ಇವರ ಮೂಲ ಸ್ಥಳ.

ತಿರುಮಲಾಚಾರ್ಯರು ಚತುಃಶಾಸ್ತ್ರ ಚತುರಮತಿಗಳು. ಉತ್ತರಾದಿ ಮಠದ ಶ್ರೀ ಸತ್ಯಾಭಿನವ ಶ್ರೀಪಾದಂಗಳವರ ಪ್ರೇಷ್ಠಪ್ರೇಷ್ಠರಾದ ಶಿಷ್ಯ ಶ್ರೇಷ್ಠರು.

ಇವರು ದಿಗ್ವಿಜಯವನ್ನು ಮಾಡುತ್ತ ಕಾಶಿಗೆ ಹೋಗಿ ಅಲ್ಲಿಯ ಎಲ್ಲ ಪಂಡಿತರನ್ನೂ ಎಲ್ಲ ಶಾಸ್ತ್ರಗಳಲ್ಲಿಯೂ ಸೋಲಿಸಿ ಜಯಪತ್ರ, ಮಾನ ಪತ್ರಗಳನ್ನು ತೆಗೆದುಕೊಂಡು ಬಂದರು. ಇವರು ಬರೆದ ''ತರ್ಕ ದೀಪಾವಲಿ'' ಗ್ರಂಥವು ಇವರ ನಿಶಿತ ಪ್ರತಿಭೆಗೂ ಶಾಸ್ತ್ರನದೀಷ್ಣತೆಗೂ ಸಾಕ್ಷ್ಯವನ್ನು ಒದಗಿಸುತ್ತದೆ.

ಇವರ ಅದ್ಭುತವಾದ ಪಾಂಡಿತ್ಯಕ್ಕೆ ಮೆಚ್ಚಿ ಪ್ರೀತರಾದ ಶ್ರೀ ಸತ್ಯಾಭಿನವ ತೀರ್ಥರು ಇವರನ್ನು ತಮ್ಮ ಮಠದಲ್ಲಿ ಆಸ್ಥಾನ ವಿದ್ವಾಂಸರನ್ನಾಗಿ ಇಟ್ಟುಕೊಂಡರು.

ಶ್ರೀಗಳವರು ಒಮ್ಮೆ ಉತ್ತರ ದೇಶದ ಸಂಚಾರದಲ್ಲಿದ್ದಾಗ ಆಚಾರ್ಯರು ಗಂಗಾ ಸ್ನಾನಕ್ಕೆ ಹೋಗಿ ದಂಡೆಯ ಮೇಲಿನ ಒಂದು ಮಣ್ಣಿನ ದಂಡೆಗೆ ಆತು ಆನ್ಹಿಕ ಮಾಡುತ್ತ ಕುಳಿತಿದ್ದರು. ಆಗ ಒಮ್ಮೆಲೆ ದೊಡ್ಡ ಗುಡ್ಡದಂತಿರುವ ಮಣ್ಣಿನ ಒಂದು ಕಡಿದು ತಿರುಮಲಾಚಾರ್ಯರ ಮೇಲೆ ಬಿದ್ದು ಅವರು ಅದರಲ್ಲಿ ಹೂತು ಹೋದರು. ಇದನ್ನು ತಿಳಿದ ಶ್ರೀಗಳವರು ಗಾಬರಿಯಾಗಿ ಮಣ್ಣನ್ನು ತೆಗೆಯಿಸುವ ಏರ್ಪಾಡು ಮಾಡಿದರು. ರಾಶಿ-ರಾಶಿಯಾಗಿ ಬಂದ ಆ ಮಣ್ಣಿನ ಗುಡ್ಡವನ್ನು ತೆಗೆಯಲು ಏಳೆಂಟು ಗಂಟೆಯಷ್ಟು ಹೊತ್ತು ಹಿಡಿಯಿತು. ಮಣ್ಣನ್ನೆಲ್ಲ ಸರಿಸಿ ಕೆಳಗೆ ನೋಡಿದಾಗ ತಿರುಮಲಾಚಾರ್ಯರು ಧ್ಯಾನಾರೂಢರಾಗಿ ಕಣ್ಣು ಮುಚ್ಚಿಕೊಂಡು ಜಪ ಮಾಲೆಯನ್ನು ತಿರಿಗಿಸುತ್ತಲೇ ಕುಳಿತಿದ್ದರು. ಅದನ್ನು ಕಂಡು ಹರ್ಷಗೊಂಡ ಶ್ರೀಗಳವರು "ಶ್ರೀ ಕೃಷ್ಣ ಪರಮಾತ್ಮನು ಪ್ರಲ್ಹಾದನನ್ನು ಸಂರಕ್ಷಿಸಿದಂತೆ ನಿಮ್ಮನ್ನು

ಕಾಪಾಡಿದ್ದಾನೆ. ಕಾರಣ ನಿಮಗೆ "ಪ್ರಲ್ಹಾದ ಕೃಷ್ಣಾಚಾರ್ಯ"ರೆಂಬ ಹೆಸರು ಇಂದಿನಿಂದ ಆಗಲಿ" ಎಂದು ಗದ್ಗದ ಕಂಠದಿಂದ ಉದ್ಗರಿಸಿದರು.

ಮುಕುಂದಿ, ಭೋಸರೇ, ಪಡಸಲಗಿ, ಕಾಖಂಡಕಿ, ಸಗರ ಮತ್ತು ಫಲಾಹಾರದವರು ಮುಂತಾದ ಮನೆತನದವರು ಇವರ ಶಿಷ್ಯರಾಗಿದ್ದರು.

೧೭೦೦ ನೇ ಶತಕದಲ್ಲಿ ಇದ್ದ ಇವರು ತಮ್ಮ ೭೬ ನೇ ವಯಸ್ಸಿನಲ್ಲಿ ವಿಜಯನಗರದಲ್ಲಿ ಕಾಲವಾದರು.

ಈ ಮನೆತನದವರು ಈಗ ಕೃಷ್ಣಾತೀರದ ಕೊಲ್ಹಾರ, ಕಿತ್ತೂರುಗಳಲ್ಲಿ ವಾಸ ಮಾಡಿದ್ದಾರೆ.

ಇವರು ಅನೇಕ ವೇದಾಂತ ಗ್ರಂಥಗಳನ್ನು ಬರೆದಿದ್ದಾರೆ.

## ೪೪ ಉಮರ್ಜಿ ವ್ಯಾಸರಾಯಾಚಾರ್ಯರು

ಕೃಷ್ಣಾ ತೀರವಾದ ಕೊಲ್ಹಾರದಲ್ಲಿದ್ದ ಉಮರ್ಜಿ ಮನೆತನದ ವ್ಯಾಸಾಚಾರ್ಯರು ಮಹಾ ಸಾತ್ವಿಕರೂ, ತಪಸ್ವಿಗಳೂ ಎಂದು ಆ ನಾಡಿನಲ್ಲೆಲ್ಲ ಪ್ರಸಿದ್ಧರಾಗಿದ್ದರು.

ಪ್ರತಿದಿನವೂ ಕೃಷ್ಣಾಸ್ನಾನ, ಶ್ರುತಿಮಾರ್ಚನೆ, ೭೨ ಮಹಾ ಮಂತ್ರಗಳ ಜಪ, ಭಾಗವತ ಪುರಾಣ ಮುಂತಾದ ಸತ್ಕಾರ್ಯಾನುಷ್ಠಾನ ತತ್ಪರರಾದ ಆಚಾರ್ಯರ ಕರಸ್ಪರ್ಶ ಮಾತ್ರದಿಂದಲೇ ಭೂತ-ಪ್ರೇತ ಬಾಧೆಗಳು ಬಿಟ್ಟು ಹೋಗುತ್ತಿದ್ದವು.

ಅವರು ತಾಯಿತವನ್ನು ಮಂತ್ರಿಸಿ ಕಟ್ಟಿದರೆ ರೋಗ-ರುಜಿನಗಳು ದೂರಾಗುತ್ತಿದ್ದವು. ಮನೆಯಲ್ಲಿದ್ದರೂ ಮುನಿಯಂತಿದ್ದರು. ಪ್ರಪಂಚದಲ್ಲಿದ್ದರೂ ಪರಮಾರ್ಥಿಕ ದೃಷ್ಟಿಯುಳ್ಳವರಾಗಿದ್ದರು. ಅವರಿಗೆ ಧರ್ಮಶಾಸ್ತ್ರ, ವೇದಾಂತ ಶಾಸ್ತ್ರಗಳಲ್ಲಿ ಒಳ್ಳೆ ಗತಿ ಇದ್ದಿತು.

ಅವರು ಪಾದಾಚಾರಿಗಳಾಗಿ ಬದರೀ ಕಾಶೀ ಯಾತ್ರೆಗಳನ್ನು ಮಾಡಿ ಬಂದರು.

## ಯದುಪತ್ಯಾಚಾರ್ಯ

ಆಚಾರ್ಯರ ಮಕ್ಕಳಾದ ಯದುಪತ್ಯಾಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿ, ಒಳ್ಳೇ ಪುರಾಣವನ್ನು ಹೇಳುತ್ತಿದ್ದರು.

# ಶ್ರೀ ವಾಯಿೀ ಆಚಾರ್ಯರು

ಸಾತಾರಾ ಜಿಲ್ಲೆಯ ವಾಯೀ ಕ್ಷೇತ್ರದಲ್ಲಿ ಈ ಮನೆತನದವರು ಸಾಮಗರು ಎಂದು ಪ್ರಸಿದ್ಧರಾಗಿದ್ದರು.

## ೪೬ ಶ್ರೀ ವಿಠ್ಠಲಾಚಾರ್ಯರು

ವಿಠ್ಠಲಾಚಾರ್ಯರೆಂಬುವರು ಮಹಾ ವಿದ್ವಾಂಸರಾಗಿದ್ದರು. ಅವರಿಗೆ ರಾಜಧಾನಿ ವಿಠ್ಠಲಾಚಾರ್ಯರೆಂದು ಕರೆಯುತ್ತಿದ್ದರು.

ಈ ವಿಠ್ಠಲಾಚಾರ್ಯರಿಗೆ ಜನಾರ್ದನಾಚಾಯರೆಂಬ ಮಕ್ಕಳಿದ್ದರು. ಜನಾರ್ದನಾಚಾರ್ಯರ ಮಕ್ಕಳಾದ ಪಾಂಡುರಂಗಾಚಾರ್ಯರು ವೇದಾಂತದಲ್ಲಿ ಮಹಾ ಪಂಡಿತರಾಗಿದ್ದರು. ಶ್ರೀ ಪಾಂಡುರಂಗಾಚಾರ್ಯರ ಮಕ್ಕಳೇ ಬಾಳಾರ್ಯರು.

## ೪೭ ಶ್ರೀ ಬಾಳಾರ್ಯರು

ಶ್ರೀ ಬಾಳಾರ್ಯರು ಶಾಸ್ತ್ರ ಪ್ರಪಂಚದ ಸೀಮಾ ಪುರುಷರಾಗಿದ್ದರು. ನೂರಾರು ಜನ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಪ್ರವಚನ ಮಾಡಿಸುತ್ತಿದ್ದರು. ಇವರಲ್ಲಿ ಸೊರಟೂರ ಶ್ರೀನಿವಾಸಾಚಾರ್ಯರೂ, ಹುನಗುಂದ ನರಸಿಂಹಾಚಾರ್ಯರೂ ಓದಿ ಮಹಾ ಪಂಡಿತೋತ್ತಮರಾದರು.

ಶ್ರೀ ಬಾಳಾರ್ಯರ ಲೋಕ ವಿಲಕ್ಷಣವಾದ ಪಾಂಡಿತ್ಯ, ಅನ್ನದಾನ, ವಿದ್ಯಾದಾನ, ತಪಃಪ್ರಭಾವಗಳನ್ನು ಕಂಡು ಆಕರ್ಷಿತನಾದ ಮದ್ರಾಸ ಗವ್ಹರ್ನರ ಸರ್ ಥಾಮಸ್ ಮನ್ರೋ ಸಾಹೇಬನು ಅವರಿಗೆ ಮರಡೂರು ಎಂಬ ಊರನ್ನು ಜಹಗೀರ ಹಾಕಿಕೊಟ್ಟನು. ಬಾಳಾರ್ಯರಿಗೆ ಹಯಗ್ರೀವಾಚಾರ್ಯ ಮತ್ತು ವೆಂಕಟೇಶಾಚಾರ್ಯರೆಂಬ ಇಬ್ಬರು ಪಂಡಿತ ಪ್ರವರರಾದ ಪುತ್ರರಿದ್ದರು.

ಶ್ರೀ ವೆಂಕಟೇಶಾಚಾರ್ಯರಿಗೆ ಜಯರಾಮಾಚಾರ್ಯ, ವಾಸುದೇವಾಚಾರ್ಯ ಮತ್ತು ಶ್ರೀನಿವಾಸಾಚಾರ್ಯರೆಂಬ ಪುತ್ರರಿದ್ದರು. ಇವರು ಮೂವರೂ ಮಹಾ ಪಂಡಿತರಾಗಿದ್ದರು.

## ೪೮ ಶ್ರೀ ಶ್ರೀನಿವಾಸಾಚಾರ್ಯರು

ಇವರಲ್ಲಿ ಶ್ರೀನಿವಾಸಾಚಾರ್ಯರು ಮಹಾ ಪಂಡಿತರಾಗಿದ್ದು ಮುಂದೆ ಉತ್ತರಾದಿ ಮಠದ ಸಂಸ್ಥಾನಾಧಿಪತಿಗಳಾಗಿ ಶ್ರೀ ಸತ್ಯಪರಾಕ್ರಮತೀರ್ಥರೆಂದು ಲೋಕ ಪೂಜ್ಯರಾದರು.

ಇವರು ಪೂರ್ವಾಶ್ರಮದಲ್ಲಿ ೧೬ ನೇ ವರ್ಷದಲ್ಲಿಯೇ ತಮ್ಮ ಅತ್ಯದ್ಭುತವಾದ ಶಾಸ್ತ್ರ ಪಾಂಡಿತ್ಯದಿಂದಲೇ ದೇಶ ದಿಗ್ವಿಜಯ ಮಾಡಿ ಅನೇಕ ಪರವಾದಿಗಳನ್ನು ಗೆದ್ದು ರಾಜ ಮಹಾರಾಜರಿಂದ ಸನ್ಮಾನಿತರಾದರು. ಬಿರುದು–ಬಾವಲಿಗಳು ಅವರ ಪಾದದ ಹುಡಿಯಲ್ಲಿ ಹೊರಳಾಡಿದವು. ಅಸಂಖ್ಯ ಮಾನಪತ್ರಗಳು, ಪರವಾದಿಗಳನ್ನು ಗೆದ್ದು ಬಂದ ಜಯಪತ್ರಗಳು ಅವರ ವಿಜಯ ಪತಾಕಿಗಳಾಗಿ ಹಾರಾಡಿದವು.

ಅವರು ತಮ್ಮ ಪಾಂಡಿತ್ಯ ಪ್ರಭಾವದಿಂದ ಚಿತ್ತಾಪುರ ಎಂಬ ಗ್ರಾಮವನ್ನು ಜಹಗೀರಿಯಾಗಿ ಪಡೆದರು.

ಆಚಾರ್ಯರು ಅನೇಕ ಜನರಿಗೆ ಪಾಠ ಹೇಳಿದರು. ನ್ಯಾಯ, ವೇದಾಂತಾದಿ ಗ್ರಂಥಗಳಿಗೆ, ಕ್ರೋಡ ಪತ್ರಗಳನ್ನೂ ಟೀಕೆ–ಟಿಪ್ಪಣಿಗಳನ್ನೂ ವ್ಯಾಖ್ಯಾನ ವಿವರಣಗಳನ್ನೂ ಬರೆದಿದ್ದಾರೆ. ಅವು ಈಗಲೂ ಅವರ ಮನೆತನದ ಚಿತ್ತಾಪುರ ಆಚಾರ್ಯರಲ್ಲಿರುತ್ತವೆ.

ಈಗ ಉಪಲಬ್ಧವಿದ್ದ ಗ್ರಂಥಗಳಲ್ಲಿ "ಸುಧಾ ಫಕ್ಕಿಕಾ" ಎಂಬ ಸುಧಾ ಟಿಪ್ಪಣಿ ಪ್ರಮೇಯಮಾಲಾ, ನ್ಯಾಯಶಾಸ್ತ್ರ ಪೂರ್ವೋತ್ತರವಾದದ ಕ್ರೋಡ ಪತ್ರಗಳು ಇರುತ್ತವೆ..

ಅವರು ಚಿಕ್ಕ ವಯಸ್ಸಿನಲ್ಲಿ ತಮ್ಮ ಮಹಾ ಪಾಂಡಿತ್ಯ, ವಿಲಕ್ಷಣ ವರ್ಚಸ್ಸು, ವ್ಯವಹಾರ ಕೌಶಲ್ಯ ಮುಂತಾದ ಗುಣಗಳಿಂದ ಎಲ್ಲ ಶಿಷ್ಯ ಸಾಮಾಜಿಕರಿಂದಲೂ, ಸಾಹುಕಾರ, ಸಂಸ್ಥಾನಿಕರಿಂದಲೂ ಮಾನಿತ ಪೂಜಿತರಾಗಿ, ಪಾಲಕಿಪದಾರೂಢರಾಗಿ ಮೆರೆದರು.

ಇವರ ಅಸಾಧಾರಣ ಯೋಗ್ಯತೆಯನ್ನು ತಿಳಿದ ಉತ್ತರಾದಿ ಮಠದ ಶ್ರೀ ಸತ್ಯೇಷ್ಟ ತೀರ್ಥ ಶ್ರೀಪಾದಂಗಳವರು ಇವರನ್ನು ಕರೆಯಿಸಿಕೊಂಡು ಆಶ್ರಮವನ್ನಿತ್ತು ಶ್ರೀ ಸತ್ಯಪರಾಕ್ರಮತೀರ್ಥರೆಂದು ನಾಮಕರಣ ಮಾಡಿದರು.

ಆಶ್ರಮವಾದ ಬಳಿಕ ಇವರಲ್ಲಿ ಕೊರ್ಲಹಳ್ಳಿ, ಬೋಧರಾಜಾಚಾರ್ಯ, ಕನಕಬಂಡಿ ಕೃಷ್ಣಾಚಾರ್ಯ, ಭೀಮಾಚಾರ್ಯ ನಾಸಗಲ್ಲ, ಭೀಮಬಾಲಾಚಾರ್ಯ, ವಿಠೋಬಾ

ಚಾರ್ಯ, ಕೃಷ್ಣಾಚಾರ್ಯ ಮೊದಲಾದವರು ಓದಿ ಪ್ರಕಾಂಡ ಪಂಡಿತರಾದರು. ಶ್ರೀ ಸತ್ಯಪರಾಕ್ರಮ ತೀರ್ಥರ ಚರಿತ್ರೆಯು ಪ್ರಸಿದ್ಧವಿದೆ.

ವಾಯೀ ಆಚಾರ್ಯರ ಮತ್ತೊಂದು ಮನೆತನದಲ್ಲಿ ನರಸಿಂಹಾಚಾರ್ಯ, ಅಣ್ಣೈಚಾರ್ಯರು ಎಂಬ ಪಂಡಿತರು ಆಗಿಹೋದರು. ಅಣ್ಣೈಯಾಚಾರ್ಯರು ವೇದಾಂತ, ವ್ಯಾಕರಣ ಶಾಸ್ತ್ರಗಳಲ್ಲಿ ಒಳ್ಳೆ ಪಂಡಿತರಾಗಿದ್ದರು. ಅವರು ಪಿಷ್ಟ ಪಶು ಮೀಮಾಂಸಾ ಎಂಬ ಗ್ರಂಥವನ್ನು ಬರೆದಿದ್ದರು. ಅವರು ಹುಬ್ಬಳ್ಳಿಯಲ್ಲಿ ವಾಸವಾಗಿದ್ದರು.

## ೪೯ ಶ್ರೀ ವಾಸುದೇವಾಚಾರ್ಯರು

ವಾಸುದೇವಾಚಾರ್ಯರು ನಾಮಾಂಕಿತ ಪಂಡಿತರಾಗಿದ್ದರು. ಶ್ರೀವಿದ್ಯಾಧೀಶ ಶ್ರೀಪಾದಂಗಳವರಿಗೆ ಗುರುರಾಜರೆಂದು ಪ್ರಸಿದ್ಧರಾದ ಕೇಶವಭಟ್ಟಾರಕರಿದ್ದಂತೆ ಶ್ರೀ ವಾಸುದೇವಾಚಾರ್ಯರು ಶ್ರೀ ಸತ್ಯಪರಾಕ್ರಮ ತೀರ್ಥರ ದಿಗ್ವಿಜಯ ಕಾರ್ಯದಲ್ಲಿ ಗ್ರಂಥ ರಚನೆಯಲ್ಲಿ ಸಹಾಯಕರಾಗಿದ್ದರು.

ಪುಣೆಗೆ ಉತ್ತರಾದಿಮಠ ಸಂಸ್ಥಾನವು ದಯಮಾಡಿಸಿದಾಗ ಮೈಸೂರು ಸಂಸ್ಥಾನದ ಧರ್ಮಾಧಿಕಾರಿಗಳಾದ ರಾಮಗಿರಿ ಶ್ಯಾಮಾಚಾರ್ಯರು ವಾದಿಸಿಂಹರಾದ ವಿದ್ವದ್ವರಿಷ್ಠರೆಂದು ವಾಸುದೇವಾಚಾರ್ಯರಿಗೆ ತಿಳಿಯಿತು.

ಆಗ ವಾಸುದೇವಾಚಾರ್ಯರು ಶ್ರೀಗಳವರನ್ನು ಪ್ರಾರ್ಥಿಸಿ ಮಹಾಮಹೋಪಾಧ್ಯಾಯ ದತ್ತೋಪಂತ, ಜನಾರ್ದನಾಚಾರ್ಯ, ಭಿಕ್ಕಾಚಾರ್ಯ, ಶಾಮಶಾಸ್ತ್ರಿ ಮೊದಲಾದವರ ಸಮ್ಮುಖದಲ್ಲಿ ಅವರು ಕೂಡ ಶಾಸ್ತ್ರಾರ್ಥವನ್ನು ಪ್ರಾರಂಭ ಮಾಡಿದರು. ೧೪ ದಿನಗಳ ವರೆಗೆ ವಾಕ್ಯಾರ್ಥವು ಒಳ್ಳೆ ತುರುಸಿನಿಂದ ನಡೆಯಿತು. ವಾಯಿ ವಾಸುದೇವಾಚಾರ್ಯರ ಪ್ರಚಂಡ ಪಾಂಡಿತ್ಯಕ್ಕೆ ಕರ್ನಾಟಕ, ಮಹಾರಾಷ್ಟ್ರದ ಪಂಡಿತರೆಲ್ಲ ತಲೆ ಮೂಗಿದರು.

## ೫೦ ಶ್ರೀ ಭೀಮಬಾಳಾಚಾರ್ಯರು

ಶ್ರೀ ಸತ್ಯಪರಾಕ್ರಮ ಸ್ವಾಮಿಗಳವರ ಪೂರ್ವಾಶ್ರಮದ ಪುತ್ರರಾದ ಶ್ರೀ ಭೀಮಬಾಳಾಚಾರ್ಯರು ಘನ ಪಂಡಿತರಾಗಿದ್ದರು. ಸಿಂಹದ ಮರಿಯು ಸಿಂಹವೇ ಆಗಿರುತ್ತದೆಂಬ ಜಾಣ್ಣುಡಿಗೆ ಅವರು ನಿದರ್ಶನರಾಗಿದ್ದರು. ಅವರ ಶಾಸ್ತ್ರೀಯ ವ್ಯುತ್ಪತ್ತಿ ಮತ್ತು ಗ್ರಂಥ ಕ್ಲಪ್ತಿ ಹಾಗೂ ಪ್ರವಚನ ಪಾಂಡಿತ್ಯಗಳು ಮೇಲ್ಮಟ್ಟದ್ದವು ಇದ್ದವು. ಸಾತ್ವಿಕ ಶಿಖಾಮಣಿಗಳೂ ಕರ್ಮಠ ಗುರುಭಕ್ತರೂ ಆದ ಅವರು ಕೃಷ್ಣಾತೀರವಾದ ಚಿತ್ತಾಪುರ ಗ್ರಾಮದಲ್ಲಿ ಶ್ರೀ ಸತ್ಯಪರಾಕ್ರಮ ತೀರ್ಥರ ಸೇವೆಯನ್ನು ಮಾಡುತ್ತ ಪಾಠ ಪ್ರವಚನ ಮಾಡುತ್ತ ವಾಸವಾಗಿದ್ದರು.

## ೫೧ ಶ್ರೀ ಶ್ರೀನಿವಾಸಾಚಾರ್ಯ

ಭೀಮಬಾಳಾಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರು ಪ್ರಮಿತ ಪಂಡಿತರು. ತಮ್ಮ ತಂದೆಯವರಲ್ಲಿ ನ್ಯಾಯ ವೇದಾಂತ ಅಧ್ಯಯನವನ್ನು ಮಾಡಿದ ಆಚಾರ್ಯರು ಸದಾಚಾರ ಸಂಪನ್ನರಾಗಿ ಬಂದ ಜನರಿಗೆ ಅನ್ನೋದಕವನ್ನು ಕೊಡುತ್ತ ಚಿತ್ರಾಪುರದಲ್ಲಿಯೇ ವಾಸವಾಗಿದ್ದರು.

ತಮ್ಮ ಪರಮಗುರು ಶ್ರೀ ಸತ್ಯಪರಾಕ್ರಮ ತೀರ್ಥರ ವೃಂದಾವನ ಬಳಿ ಕುಳಿತು ಶಾಸ್ತ್ರಾವಲೋಕನವನ್ನು ಮಾಡುತ್ತ ಬಂದ ಜನರಿಗೆ ಪಾಠ ಹೇಳಿ ಪ್ರಮೆಯ ವಿಷಯ ತಿಳಿಸಿಕೊಡುತ್ತಿದ್ದರು.

## ೫೨ ಶ್ರೀ ನಾರಾಯಣಾಚಾರ್ಯರು

ಶ್ರೀ ಸತ್ಯಪರಾಕ್ರಮರ ಸಹೋದರರಾದ ಶ್ರೀ ಜಯಾಚಾರ್ಯರು ವಿದ್ವಾಂಸರಾಗಿದ್ದರು. ಅವರ ಚಿರಂಜೀವರಾದ ನಾರಾಯಣಾಚಾರ್ಯರು ಶ್ರೀ ಸತ್ಯಪರಾಕ್ರಮ ತೀರ್ಥರಲ್ಲಿ ನ್ಯಾಯ ವೇದಾಂತಗಳನ್ನು ಓದಿ ಶಾಸ್ತ್ರಪರಿಣತರಾದರು.

ಅವರು ತಮ್ಮ ಮನೆಯ ಪರಂಪರೆಯಂತೆ ಅನೇಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಹೇಳುತ್ತಿದ್ದರು. ನಿಂಬರಗಿ ಮಧ್ವಾಚಾರ್ಯ, ಕೊಪ್ಪಳ ಭೀಮಾಚಾರ್ಯ, ಫಲಾಹಾರದ ನರಸಿಂಹಾಚಾರ್ಯ, ಅಬ್ದುಲ್‌ಪುರಕರ ಗೋವಿಂದಾಚಾರ್ಯ, ಹರಿಭಟ್ಟ ರಾಮಾಚಾರ್ಯ, ರಾಮನಾಥಪುರದ ಆರಣಿ ಬಾಳಾಚಾರ್ಯ, ಮಾಣಿಕ ಶಾಸ್ತ್ರಿ, ತತ್ವ ವೆಂಕಪ್ಪಾಚಾರ್ಯ ಮುಂತಾದವರು ಇವರಲ್ಲಿ ಓದಿ ವಿದ್ವಾಂಸರಾದರು.

ಇವರು— ಶ್ರೀ ಸತ್ಯಧ್ಯಾನತೀರ್ಥರು, ಶ್ರೀ ವಿದ್ಯಾರತ್ನಾಕರ ತೀರ್ಥರ ಕಾಲದಲ್ಲಿ ಅವರ ಸಭೆಗಳಿಗೆ ಹೋಗಿ ವಿದ್ವದ್ವಾಕ್ಯಾರ್ಥಗಳಲ್ಲಿ ಭಾಗವಹಿಸಿ ಶ್ರೀಪಾದಂಗಳ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದರು.

ಇವರು ಎಲತ್ತೂರ ಕೃಷ್ಣಾಚಾರ್ಯ, ಕಂಚಿ ಅಪ್ಪಲಯಂಗಾರ ಮುಂತಾದವರೊಂದಿಗೆ ವಾಕ್ಯಾರ್ಥ ಮಾಡಿದರು.

ಇವರು ಪುಣೆ, ಮದ್ರಾಸ, ಕೊಚ್ಚಿ, ತ್ರಾವಣಕೋರ, ಮೈಸೂರ, ಸಾಂಗ್ಲಿ, ಹೈದರಾಬಾದ ಮುಂತಾದ ಕಡೆಗಳಲ್ಲಿ ಸಂಚರಿಸಿ ತಮ್ಮ ಅಸ್ಖಲಿತವಾದ ಸಂಸ್ಕೃತ ಉಪನ್ಯಾಸ ಚಾತುರಿಯಿಂದ ಲೌಕಿಕ, ವೈದಿಕ ಜನರನ್ನು ಮೆಚ್ಚಿಸಿ, ಅಧಿಕಾರಿಗಳನ್ನು ಸಂತೋಷಗೊಳಿಸಿ ವಿಪುಲ ದಾನ-ದಕ್ಷಿಣೆ, ಪದವಿ-ಪ್ರಶಸ್ತಿ ಪತ್ರಗಳನ್ನು ಪಡೆದುಕೊಂಡು ಬಂದಿದ್ದರು.



ವಿಜಯವಾಡದಲ್ಲಿ ೬ನೇ ಮಾಧ್ವ ತತ್ತ್ವಜ್ಞಾನ ಸಮ್ಮೇಲನ ಸಭಾ ದೃಶ್ಯ

# ಶ್ರೀ ಹುಲಿಗಿ ಆಚಾರ್ಯರು

## ೫೬ ಶ್ರೀ ನಾಥಾಚಾರ್ಯರು

ಹುಲಗಿ ಶ್ರೀ ನಾಥಾಚಾರ್ಯರು ಪಂಢರಪುರದ ಸುಪ್ರಸಿದ್ಧ ಶ್ರೀ ವಿಠ್ಠಲ ಮಹೋಪಾಧ್ಯಾಯರಲ್ಲಿ ನ್ಯಾಯ ಶಾಸ್ತ್ರವನ್ನು ಪೂರ್ಣವಾಗಿ ಓದಿದರು. ಶ್ರೀರಾಯರ ಮಠದ ಶ್ರೀ ೧೦೮ ಶ್ರೀ ಸುಜನೇಂದ್ರ ತೀರ್ಥರು ಮತ್ತು ಶ್ರೀ ಸಾತಾರಾ ಆಚಾರ್ಯರು ಆಗ ಅವರ ಸಹಾಧ್ಯಾಯಿಗಳಾಗಿದ್ದರು.

ಶ್ರೀನಾಥಾಚಾರ್ಯರು ದ್ವೈತದ್ಯುಮಣಿ ಎಂಬ ಗ್ರಂಥರಾಜವನ್ನು ರಚಿಸಿರುವರು. ಅದು ತತ್ತ್ವೋದ್ಯೋತಕ್ಕೆ ಟಿಪ್ಪಣಿಯಾಗಿದೆ ಹಾಗೂ ಅದ್ವೈತಸಿದ್ಧಿ, ಬ್ರಹ್ಮಾನಂದೀ ಮುಂತಾದ ಕುತರ್ಕಪ್ರಚುರ ಗ್ರಂಥಗಳ ಖಂಡನರೂಪವೂ ಆಗಿದೆ.

"ಯನ್ಮಂತ್ರಾಕ್ಷತಮಾಹಾತ್ಮ್ಯಾತ್ ಗ್ರಂಥೋಽಯಂ ಪೂರ್ಣತಾಂ ಗತಃ
ತಾನ್ ವಂದೇ ಸತ್ಯಸಂಕಲ್ಪಾನ್ ಅನ್ವರ್ಥಾಭಿಧಯಾಯುತಾನ್"

ಎಂದು ಶ್ರೀ ಆಚಾರ್ಯರು ಶ್ರೀ ೧೦೮ ಶ್ರೀ ಸತ್ಯಸಂಕಲ್ಪ ತೀರ್ಥರಿಗೆ ವಂದಿಸಿ ಅವರ ಮಂತ್ರಾಕ್ಷತೆಯ ಮಹಿಮೆಯಿಂದ ಗ್ರಂಥವು ಪೂರ್ಣವಾಯಿತೆಂದು ತಮ್ಮ ಅಪಾರ ಗುರುಭಕ್ತಿಯನ್ನು ತೋರಿದ್ದಾರೆ.

ಶ್ರೀ ಭೇದೋಜ್ಜೀವನಕ್ಕೆ ಭೇದ ಸಂಜೀವನೀ ಎಂಬ ವ್ಯಾಖ್ಯಾನವನ್ನೂ, ಶ್ರೀ ರಮಾ ರಾಮ ಸ್ತುತಿಯನ್ನೂ, ಸುಧಾ, ಭಾಗವತಗಳಿಗೆ ಅಲ್ಲಲ್ಲಿ ಟಿಪ್ಪಣಿಗಳನ್ನು ಬರೆದಿದ್ದಾರೆ. ಅವು ಹಸ್ತಲಿಪಿರೂಪವಾಗಿವೆ ಹಾಗು ಈಗಲೂ ಕೊಪ್ಪಳದಲ್ಲಿರುವ ಅವರ ವಂಶಜರಾದ ಪೂಜ್ಯ ಹುಲಿಗಿ ಆಚಾರ್ಯರ ಮನೆಯಲ್ಲಿ ನೋಡಸಿಗುವವು.

ಶ್ರೀ ನಾಥಾಚಾರ್ಯರು ಆಗ ಪೇಶ್ವೆಯ ಆಹ್ವಾನದ ಮೇರೆಗೆ ಪುಣೆಗೆ ಹೊರಡಲು ಸನ್ನದ್ಧರಾದರು. ಒಂದು ದಿನ ಅವರು ತುಂಗಭದ್ರಾ ಸ್ನಾನ ಮಾಡುವಾಗ "ಶ್ರೀಗಣೇಶ" ಹಿಂದಿನ ದಿನ ಸ್ವಪ್ನದಲ್ಲಿ ಬಂದು ಸೂಚಿಸಿದಂತೆ, ಪ್ರತಿ ರೂಪನಾಗಿ ಬಂದ. ಆತನು ನಿರ್ವಿಘ್ನಪ್ರದನಾಗಿ, ಇಂದೂ ಅವರ ಮನೆಯಲ್ಲಿ ಪೂಜೆಗೊಳ್ಳುತ್ತಲಿರುವನು. ಪುಣೆಯಲ್ಲಿ ಆಚಾರ್ಯರು ಬಂದುದನ್ನು ಕೇಳಿ, ಅಲ್ಲಿಯ ಆಸ್ಥಾನ ಪಂಡಿತರಾದ ಶ್ರೀ ತ್ರ್ಯಂಬಕ ಶಾಸ್ತ್ರಿಗಳು ಪರೀಕ್ಷೆಗೆಂಬಂತೆ—

"ಯಸ್ಮಿನ್ ಗರ್ಜತಿ ನಿರ್ಜಿತ ಪ್ರತಿಭಟೇ ಮತ್ತೇಭಕುಂಭಾವಲೀ–
ಕೂಟೋತ್ಪಾಟನ ತುಲ್ಯಕಾಲಮಭಿತಃ ಶಾರ್ದೂಲಶಾಠ್ಯಚ್ಛಿದಿ,
ದಿಗ್ದಂತಾವಲಿ ಪಂಕ್ತಯೋಽಪಿ ಚಕಿತಾಃ ತೇನಾಧುನಾ ಸ್ಪರ್ಧಿತುಂ
ಕೋಲಾಃ ಕೇಸರಿಣೋತ್ಸಹಂತಿ–ತದಿದಂ ಚಿತ್ರಂ ವಚಃ ಶ್ರೂಯತೇ"

ಎಂಬ ಸಿಂಹವನ್ನು ಕೆಣಕಲು ಹಂದಿಯು ಬಂದಂತಿದೆ ಎನ್ನುವ ಅರ್ಥವುಳ್ಳ ಪದ್ಯವನ್ನು ಆಚಾರ್ಯರಲ್ಲಿಗೆ ಕಳಿಸಿದರು. ಶಾರ್ದೂಲ ವೃತ್ತದ ಪದ್ಯಕ್ಕೆ ಸಿದ್ಧವಿತ್ತು ಆಚಾರ್ಯರ ಶಾರ್ದೂಲ ವೃತ್ತದ ಪದ್ಯ[illegible]—

"ಅಂಗ್ಯೈರಂಜನಮೇಚಕ್ಯೈರವಿಕಿರನ್ ಅಚಾರ್ಫಂಭವಿಂ ಭಾಸ್ವತೀಂ
ಸಚ್ಚಕ್ರೇ ಚಕಿತೇ ಚಿರಂಪರಿಚಯಾತ್ ರೋಽರೂಯಸೇ ಧಾವಸಿ ॥
ಪ್ರತ್ಯಧ್ವಂ ಪ್ರತಿಮಂದಿರಂ ಕಲುಷಯನ್ ತೀರ್ಥಂ ಹರಿಂ ವೇದಿಲಾಂ,
ಪುಣ್ಯಾಗ್ರಾಮ ಮವಾಪ್ಯ ಪುಣ್ಯವಿಭವೈಃ ಸಿಂಹೋಽಸಿ ಮಾನ್ಯೋಽಸಿಚ"

ಎಂಬ ಸಿಂಹವ್ರೋ, ಪುಣೆ ಗ್ರಾಮ ಸಿಂಹವ್ರೋ ಎಂದು ಅರ್ಥವುಳ್ಳ ಪದ್ಯದಿಂದ ಶಾಸ್ತ್ರಿಗಳು ಆಶ್ಚರ್ಯಚಕಿತರಾದರು.

ಮುಂದೆ ವಾದದಲ್ಲಿ ಶಾಸ್ತ್ರಿಗಳಿಗೆ ಸೋಲಾಗಿ, ಶ್ರೀ ಮಧ್ವ ಸಿದ್ಧಾಂತಕ್ಕೆ ಜಯ ಧ್ವಜವನ್ನೆತ್ತಿ, ಪೇಶ್ವೆಯವರ ರೂ. ೧೨೦೦ ಯ ಶ್ರೀಷ್ಮ ಸಂಭಾವನೆಯನ್ನು ಪಡೆದ ಕೀರ್ತಿ ಆಚಾರ್ಯರದಾಯಿತು.

## ೫೪ ನರಸಪ್ಪಾಚಾರ್ಯರು

ಶ್ರೀ ನರಸಪ್ಪಾಚಾರ್ಯರು ಪ್ರಮಾಣ ಪದ್ಧತಿಗೆ "ಆದರ್ಶ" ಎಂಬ ಟಿಪ್ಪಣಿಯನ್ನು, ತತ್ತ್ವಪೇಟಿಕಾ ಎಂಬ ಉದ್ಗ್ರಂಥವನ್ನೂ ರಚಿಸಿದ್ದಾರೆ.

## ೫೫ ಶೀನಪ್ಪಾಚಾರ್ಯರು

ಶ್ರೀ ಶೀನಪ್ಪಾಚಾರ್ಯರು "ಲಘುರಾಮಾಯಣ" ಮತ್ತು ಪದ್ಮಾವತೀ ಪರಿಣಯ ನಾಟಕ"ಗಳನ್ನು ರಚಿಸಿರುವರು.

## ೫೬ ಅಣ್ಣಯ್ಯಾಚಾರ್ಯರು

ಶ್ರೀ ನಾಥಾಚಾರ್ಯರ ಮಕ್ಕಳಾದ ಶ್ರೀ ಹನುಮಂತಾಚಾರ್ಯರ ಪುತ್ರರು ಶ್ರೀ ಅಣ್ಣಯ್ಯಾಚಾರ್ಯರು. ಇವರು ಸತ್ಯವೀರತೀರ್ಥ ಶ್ರೀಪಾದಾನುಗ್ರಹ ವಿಶೇಷಾನವರ ಪಾತ್ರರಾಗಿದ್ದರು. ಶ್ರೀ ಬಾಳಗಾರು ಮಠದ ಹಿಂದಿನ ಶ್ರೀಗಳನ್ನು ಮನೆಯಲ್ಲಿಟ್ಟುಕೊಂಡು ೧೨ ವರ್ಷ ಸುಧಾಂತ ಪಾಠ ಹೇಳಿಕೊಟ್ಟರು. ಇವರು ಪ್ರತಿಗ್ರಹ

ವಿಮುಖರಾಗಿದ್ದ ಮಹಾನುಭಾವರು. ದ್ವೈತದ್ಯುಮಣ್ಯದ್ಧೃತ ಭಾಗವನ್ನು, ಲಘು ರಾಮಾಯಣಕ್ಕೆ ಟಿಪ್ಪಣಿಯನ್ನು ರಚಿಸಿದ ಶ್ರೀ ಗಂಗೂರು ಗುರಾಚಾರ್ಯರು, ಶ್ರೀ ಕುಂಡಲಗಿರಿ ಆಚಾರ್ಯರು, ಜ್ಯೋತಿರ್ವಿದ್ವಾನ್ ಶ್ರೀ ದೇವೇಂದ್ರ ಕೃಷ್ಣಾಚಾರ್ಯರು ಮುಂತಾದವರು ಶ್ರೀ ಅಣ್ಣಯಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನೋದಿದ ಪಂಡಿತ ಶಿಷ್ಯರು.

## ಸುರಪುರದ ಎಳವೇಲಿ ಆಚಾರ್ಯರು

### ೫೭ ಎಳವೇಲಿ ಹಯಗ್ರೀವಾಚಾರ್ಯರು

ಇವರು ಮೂಲತಃ ವಿಜಾಪುರ ಜಿಲ್ಲೆಯಲ್ಲಿ ಸಿಂದಗಿ ತಾಲೂಕಿನ ಯಳವೇಲಿ ಗ್ರಾಮದವರು. ಪಂಢರಪುರ ಕೃಷ್ಣಾಚಾರ್ಯರಲ್ಲಿ ನ್ಯಾಯ, ವ್ಯಾಕರಣ, ಶಾಸ್ತ್ರ ಗಳನ್ನು ಓದಿ ಪಂಡಿತ ಸಾರ್ವಭೌಮರಾದರು.

ವ್ಯಾಕರಣ ಶಾಸ್ತ್ರದಲ್ಲಿ ಆಚಾರ್ಯರು ಪ್ರತಿ ಪಾಣಿನಿಯಂತೆ ಅಪ್ರತಿಮಲ್ಲ ವಿದ್ವಾಂಸರಾಗಿದ್ದರು. ಇವರು ಶಿಷ್ಯರೊಂದಿಗೆ ಎಲ್ಲ ಕಡೆಗೂ ಸಂಚಾರ ಮಾಡುತ್ತ ಧರ್ಮಜಾಗ್ರತಿಯನ್ನು ಮಾಡುತ್ತಿದ್ದರು.

ಗದ್ವಾಲ ಸಂಸ್ಥಾನದ ವಿದ್ವತ್ಸಭೆಯಲ್ಲಿ ನೆರೆದ ಎಲ್ಲ ವಿದ್ವಾಂಸರನ್ನೂ ಆಚಾರ್ಯರು ತಮ್ಮ ವಾದ-ವೈದುಷ್ಯದಿಂದ ಚಕಿತಗೊಳಿಸಿದರು. ಇವರ ಲೋಕೋತ್ತ ಪಾಂಡಿತ್ಯ ಮತ್ತು ಪುಣ್ಯ ಪ್ರಭಾವದಿಂದ ಪ್ರಭಾವಿತರಾದ ಸುರಪುರ ಸಂಸ್ಥಾನಿಕರು ತಮ್ಮಲ್ಲಿರಬೇಕೆಂದು ಆಚಾರ್ಯರನ್ನು ಬಿನ್ನವಿಸಿದರು.

ಅಂದಿನಿಂದ ಆಚಾರ್ಯರು ಸುರಪುರದಲ್ಲಿದ್ದು ಪಾಠಪ್ರವಚನವನ್ನು ಪ್ರಾರಂಭ ಮಾಡಿದರು. ಎಲ್ಲ ಕಡೆಯಿಂದಲೂ ನೂರಾರು ಜನ ವಿದ್ಯಾರ್ಥಿಗಳು ಬಂದು ಶಿಷ್ಯ ರಾಗಿ ವ್ಯಾಕರಣ ಪಂಡಿತರಾದರು.

ಶ್ರೀಮುಷ್ಣಂ ಸಂಪ್ರದಾಯ ಪ್ರವರ್ತಕರಾದ ಶ್ರೀ ಮಹಾಮಹೋಪಾಧ್ಯಾಯ ಸುಬ್ಬರಾಯಾಚಾರ್ಯರೇ ಮೊದಲಾದವರು ಅವರ ಶಿಷ್ಯರಲ್ಲಿ ಪ್ರಮುಖರಾಗಿದ್ದಾರೆ.

ಇವರು ವ್ಯಾಕರಣ ಶಾಸ್ತ್ರದಲ್ಲಿ ಅನೇಕ ಉದ್ಗ್ರಂಥಗಳನ್ನು ಬರೆದು ಮಾಧ್ವರ ವ್ಯಾಕರಣ ಪಾಂಡಿತ್ಯಕ್ಕೆ ಹೆಮ್ಮೆಯ ನಿದರ್ಶನರಾಗಿದ್ದಾರೆ. ಮತ್ತು ಅನೇಕ ಪ್ರತಿಷ್ಠಿತ ರಾದ ಲೌಕಿಕ ಶಿಷ್ಯರಿಂದಲೂ, ಅನೇಕ ಸಂಸ್ಥಾನಿಕರಿಂದಲೂ ಮಾನಿತರಾಗಿ ಜಹಗೀರಿ ಭೂಮಿ ಕಾಣಿಕೆಗಳನ್ನೂ ದಾನ-ದತ್ತಿಗಳನ್ನೂ ಸಂಪಾದಿಸಿದ್ದರು.

ಲೌಕಿಕ, ವೈದಿಕ ಉಭಯ ವಿಧವಾದ ಇವರ ಶಿಷ್ಯ ಪರಿವಾರವು ನಿಜಾಮ ರಾಜ್ಯದಲ್ಲಿಯೂ, ಇತರ ಸ್ಥಳಗಳಲ್ಲಿಯೂ ವಿಶೇಷ ಸಂಖ್ಯೆಯಲ್ಲಿದ್ದಿತು.

## ೫೮ ವಿಠ್ಠಲಾಚಾರ್ಯರು



ಹಯಗ್ರೀವಾಚಾರ್ಯರ ಪಂಡಿತೋತ್ತಮ ಪುತ್ರರಾದ ಶ್ರೀ ವಿಠ್ಠಲಾಚಾರ್ಯರು ತಂದೆಯಂತೆಯೇ ವ್ಯಾಕರಣ ನ್ಯಾಯ, ಸಾಹಿತ್ಯ, ವೇದಾಂತ ಮುಂತಾಗಿ ಚತುಃಶಾಸ್ತ್ರಗಳಲ್ಲಿಯೂ ಗಣ್ಯ ವಿದ್ವಾಂಸರಾಗಿದ್ದರು. ಇವರು ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ಅಧ್ಯಯನ ಮಾಡಿದರು. ತಮ್ಮ ತಂದೆಯವರು ನಡೆಸಿದ ವ್ಯಾಕರಣ ಪಾಠಶಾಲೆಯನ್ನು ತಾವೂ ಮುಂದುವರಿಸಿ ಅನೇಕ ಶಿಷ್ಯರಿಗೆ ಅನ್ನದಾನ, ವಿದ್ಯಾದಾನಮಾಡಿ ಉಪಕರಿಸಿದರು.

ವೈಷ್ಣವರಲ್ಲಿ ವ್ಯಾಕರಣ ವಿದ್ಯೆಯು ವಿಶೇಷವಾಗಿ ಪ್ರಸಾರ ಹೊಂದಿದ್ದು ಶ್ರೀ ಎಳಮೇಲಿ ಆಚಾರ್ಯರ ಪುಣ್ಯ. ಅವರಲ್ಲಿ ವ್ಯಾಕರಣ, ವೇದಾಂತ ಶಾಸ್ತ್ರಗಳನ್ನು ಓದಿ ವಿದ್ವಾಂಸರಾದ ಅನೇಕ ಜನ ಆಚಾರ್ಯ ಪುರುಷರು ಕರ್ನಾಟಕ, ಮಹಾರಾಷ್ಟ್ರ, ತೆಲಂಗಾಣ ದೇಶದಲ್ಲಿ ಇದ್ದು ಈಗಲೂ ಈ ಆಚಾರ್ಯರು ನೀಡಿದ ಜ್ಞಾನದೀಪದ ಬೆಳಕನ್ನು ಎಲ್ಲ ಕಡೆಗೂ ಪ್ರಸಾರ ಮಾಡುತ್ತಲಿದ್ದಾರೆ.

ಶ್ರೀ ಮಣೂರ ಮಧ್ವಾಚಾರ್ಯ, ಮಣೂರ ಹುಚ್ಚಾಚಾರ್ಯ, ಹನುಮೇಶಾಚಾರ್ಯ, ಸಂಗಮ ಹಯಗ್ರೀವಾಚಾರ್ಯ, ಹಣಮಸಾಗರದ ಆಚಾರ್ಯರು, ಜಗನ್ನಾಥಾಚಾರ್ಯ, ಅವಧಾನಿ ಆಚಾರ್ಯ ಮುಂತಾದ ಅನೇಕ ಜನರು ಅವರಲ್ಲಿ ಓದಿ ಪಂಡಿತರಾಗಿ ದೇಶದಲ್ಲಿ ಪ್ರಭಾವಶಾಲಿಗಳಾಗಿ ಬಾಳಿದ್ದಾರೆ.

ಶ್ರೀ ಎಳಮೇಲಿ ಆಚಾರ್ಯರ ಲೌಕಿಕ ಶಿಷ್ಯರಿಗಂತೂ ಮಿತಿಯೇ ಇಲ್ಲ. ಆ ಕಾಲದ ಪ್ರತಿಷ್ಠಿತ ಲೌಕಿಕ ವ್ಯಕ್ತಿಗಳೆಲ್ಲ ಶ್ರೀ ಎಳೆಮೇಲಿ ಆಚಾರ್ಯರ ಶಿಷ್ಯರೆಂದು ಹೇಳಲಿಕ್ಕೆ ಹೆಮ್ಮೆ ಪಡುತ್ತಿದ್ದರು. ನಿಜಾಮ ರಾಜ್ಯದಲ್ಲಿ ಇಂದಿಗೂ ಮನೆ ಮನೆಗೂ ಆಚಾರ್ಯರ ಫೋಟೋಗಳು ದೇವರ ಜಗಲಿಯ ಬಳಿಯಲ್ಲಿ ಶೋಭಿಸುತ್ತಲಿವೆ.

ಶ್ರೀ ೧೦೮ ಶ್ರೀ ಸತ್ಯಧ್ಯಾನ ತೀರ್ಥರು ಎಳಮೇಲಿ ವಿಠ್ಠಲಾಚಾರ್ಯರನ್ನು ವಿಶೇಷವಾಗಿ ಪುರಸ್ಕರಿಸುತ್ತಲಿದ್ದರು.

ಮಳಖೇಡದಲ್ಲಿ ಶ್ರೀ ಸತ್ಯಧ್ಯಾನತೀರ್ಥರು ಮಹಾಸಮಾರಾಧನೆ ಮಾಡಿದಾಗ ನೆರೆದ ವಿದ್ವತ್ಸಭೆಗೆ ಶ್ರೀ ವಿಠ್ಠಲಾಚಾರ್ಯರು ತಮ್ಮ ಅಸಂಖ್ಯ ಶಿಷ್ಯ ಪರಿವಾರ ದೊಂದಿಗೆ ಹೋಗಿದ್ದರು. ಆ ಸಭೆಯಲ್ಲಿ ಪುಣೆಯ ಮಹಾಮಹೋಪಾಧ್ಯಾಯ ವಾಸುದೇವ ಶಾಸ್ತ್ರಿ ಅಭ್ಯಂಕರ ಎಂಬ ದಿಗ್ಗಜ ಪಂಡಿತರನ್ನು ವಾದದಲ್ಲಿ ಎದುರಿಸಿದ ಏಕಮಾತ್ರ ವೈಷ್ಣವ ಪಂಡಿತರೆಂದರೆ ಶ್ರೀ ವಿಠ್ಠಲಾಚಾರ್ಯರೊಬ್ಬರೇ. ಅಂಥ ಉದ್ದಾಮ ವಿದ್ವಾಂಸರೊಡನೆ ವ್ಯಾಕರಣದ ಸೂಕ್ಷ್ಮ ವಿಷಯದಲ್ಲಿ ವಿಚಾರ ವಿಮರ್ಶೆ ಮಾಡಿ ತಮ್ಮ ವಾಚೋ ವಿಲಾಸವನ್ನು ವ್ಯಕ್ತಿಸಿದ ಆಚಾರ್ಯರ ಪಾಂಡಿತ್ಯ-ಪ್ರತಿಭೆಗಳನ್ನು ಕಂಡು ನೆರೆದ ಪಂಡಿತ ಪಾಮರರೆಲ್ಲ ತಲೆದೂಗಿದರು.

## ಶ್ರೀ ಲಿಂಗೇರಿ ಆಚಾರ್ಯರು

### ೫೯ ಶ್ರೀನಿವಾಸಾಚಾರ್ಯರು

ಹೈದರಾಬಾದ ರಾಜ್ಯದ ಲಿಂಗೇರಿ ಎಂಬ ಹಳ್ಳಿಯಲ್ಲಿ ರುಕ್ಮಿಣೀಶಾಚಾರ್ಯ ಎಂಬ ಸದಾಚಾರ ಸಂಪನ್ನರಾದ ಶ್ರೋತ್ರೀಯ ಬ್ರಾಹ್ಮಣರಿದ್ದರು. ಅವರ ಮಕ್ಕಳಾದ ಶ್ರೀನಿವಾಸಾಚಾರ್ಯರು ಅನೇಕ ಗ್ರಂಥಗಳನ್ನು ರಚಿಸಿದ ಉದ್ದಾಮ ವಿದ್ವಾಂಸರು.

ಇವರು ತಮ್ಮ ತಾರುಣ್ಯದಲ್ಲಿ ಕಾಶಿಗೆ ಹೋಗಿ ನ್ಯಾಯ ವ್ಯಾಕರಣಾದಿ ಶಾಸ್ತ್ರ ಗಳನ್ನು ಓದಿ ತಮ್ಮ ತಲೆಯಲ್ಲಿ ಜ್ಞಾನ ಭಾಂಡಾರವನ್ನೇ ಶೇಖರಿಸಿಕೊಂಡು ಬಂದರು. ಅಪರೋಕ್ಷ ಜ್ಞಾನಿಗಳಾದ ಯಾದವಾರ್ಯರ ಬಳಿಯಲ್ಲಿ ವೇದಾಂತ ಶಾಸ್ತ್ರವನ್ನು ಓದಿದರು. ಕನ್ನೋಲಿ ವ್ಯಾಸಾಚಾರ್ಯರ ಬಳಿಯಲ್ಲಿಯೂ ಕೆಲವು ಗ್ರಂಥಗಳನ್ನು ಓದಿದರಂತೆ.

ಇವರು ಶ್ರೀ ರಾಘವೇಂದ್ರ ಸ್ವಾಮಿಗಳ ಮಠದವರಾಗಿದ್ದು ಸ್ವತಃ ಶ್ರೀ ಮಂತ್ರಾ ಲಯ ಪ್ರಭುಗಳಲ್ಲಿಯೂ ಕೆಲವು ಗ್ರಂಥಗಳನ್ನು ಓದಿ ಧನ್ಯರಾದರು. ಮುಂದೆ ಶ್ರೀ ಯೋಗೀಂದ್ರರ ಕಾಲದಲ್ಲಿ ಶ್ರೀ ಮಠದಿಂದ ಇವರಿಗೆ ವಿಶೇಷ ಮಾನ ಮನ್ನಣೆಗಳು ದೊರೆಯುತ್ತಿದ್ದವು.

ಇವರು ಪಂಡಿತಪ್ರವರರಾಗಿದ್ದು ಸಾಹಿತ್ಯ ವೇದಾಂತ ಪುರಾಣ ಧರ್ಮಶಾಸ್ತ್ರ ಮುಂತಾದ ವಿವಿಧ ವಿಷಯಗಳಲ್ಲಿ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ.

ಇವರು ಮಾಡುತ್ತಲಿರುವ ತಮ್ಮ ವಾಙ್ಮಯೀನ ವ್ಯಾಸೋಪಾಸನೆಯನ್ನು ಕಂಡು ಸುಪ್ರಸನ್ನರಾದ ಶ್ರೀ ಯಾದವಾರ್ಯರು ಇವರಿಗೆ ತಾವೇ ತಮ್ಮ ಸ್ವಂತ ಕೈಯಿಂದ ನಿರ್ಮಿಸಿದ ಶ್ರೀ ವೇದವ್ಯಾಸ ದೇವರ ಪ್ರತಿಮೆಯನ್ನು ಕೊಟ್ಟು ಕರುಣಿಸಿದರು.

ಆಚಾರ್ಯರ ಮಹಾ ಪಾಂಡಿತ್ಯದಿಂದ ಸಂತುಷ್ಟರಾದ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಶ್ರೀಪಾದಂಗಳವರು ತಮ್ಮ ಈ ಪ್ರಿಯ ಶಿಷ್ಯರಿಗೆ ವರ್ಷಾಶನ ಹಾಗೂ ಹೊಲಗಳನ್ನು ಅನುಗ್ರಹಪೂರ್ವಕವಾಗಿ ಕೊಟ್ಟಿದ್ದು ಶ್ರೀಮಠದ ಕಾಗದ ಪತ್ರದಿಂದ ತಿಳಿದುಬರುತ್ತದೆ.

### ೬೦ ವ್ಯಾಸಾಚಾರ್ಯರು

ಶ್ರೀನಿವಾಸಾಚಾರ್ಯರ ಮಕ್ಕಳಾದ ಶ್ರೀ ವ್ಯಾಸಾಚಾರ್ಯರು ಒಳ್ಳೆ ವಿದ್ವಾಂಸರಿದ್ದರು. ಅವರು "ವೃಂದಾವನ ವ್ಯಾಖ್ಯಾನ" ಎಂಬ ಗ್ರಂಥವನ್ನು ಬರೆದಿದ್ದಾರೆ.

### ೬೧ ರಾಮಾಚಾರ್ಯರು

ಶ್ರೀ ವ್ಯಾಸಾಚಾರ್ಯರಿಂದ ನಾಲ್ಕನೇ ತಲೆಯವರಾದ ಶ್ರೀ ರಾಮಾಚಾರ್ಯರು ತಪಸ್ವಿಗಳೂ, ಪಂಡಿತರೂ, ಶ್ರೀ ರಾಘವೇಂದ್ರ ಸ್ವಾಮಿಗಳ ಭಕ್ತರೂ ಆಗಿದ್ದರು.

ಶ್ರೀ ರಾಮಾಚಾರ್ಯರಿಗೆ ಒಂದು ದಿನ ರಾಯರು ಕನಸಿನಲ್ಲಿ ಬಂದು— "ಧರ್ಮಾನದಿಯ ತೀರದಲ್ಲಿ ನನ್ನದೊಂದು ವೃಂದಾವನವಿದೆ ಅದನ್ನು ನೀನು ತಂದು ಪೂಜಿಸು" ಎಂದು ಆಜ್ಞೆ ಮಾಡಿದರಂತೆ. ಅದರಂತೆ ಮರುದಿನ ರಾಮಾಚಾರ್ಯರು ಧರ್ಮಾನದಿಯ ದಂಡೆಗೆ ಹೋಗಿ ಶ್ರೀ ರಾಯರ ವೃಂದಾವನವನ್ನು ತೆಗೆದುಕೊಂಡು ಬಂದು ತಮ್ಮ ಮನೆಯಲ್ಲಿ ಇಟ್ಟು ಭಕ್ತಿಯಿಂದ ಪೂಜಿಸಿದರು. ಆ ವೃಂದಾವನವು ಈಗಲೂ ಆ ಮನೆತನದಲ್ಲಿ ಇರುತ್ತದೆ.

ಶ್ರೀ ರಾಯರ ಭಕ್ತರಾದ ರಾಮಾಚಾರ್ಯರು "ಗುರುಗುಣ ಸ್ತವನ" ಎಂಬ ಗ್ರಂಥವನ್ನು ರಚಿಸಿದ್ದಾರೆ.

### ೬೨ ಸ್ವಾಮಿರಾಯಾಚಾರ್ಯರು

ಶ್ರೀ ರಾಮಚಂದ್ರಾಚಾರ್ಯರ ಮಕ್ಕಳಾದ ಸ್ವಾಮಿರಾಯಾಚಾರ್ಯರು ಮಹಾ ಪಂಡಿತರಾಗಿದ್ದರು. ಅವರಲ್ಲಿ ಓದಿ ಅನೇಕ ವಿದ್ಯಾರ್ಥಿಗಳು ವಿದ್ವಾಂಸರಾಗಿದ್ದಾರೆ. ಸ್ವಾಮಿರಾಯಾಚಾರ್ಯರು ಅನುವ್ಯಾಖ್ಯಾನದೀಪಿಕಾ, ದ್ವಿತ್ವವಾದಾರ್ಥ, ತರ್ಕದೀಪಿಕಾ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಕಾಲವಾಗಿ ೧೨೦ ವರ್ಷಗಳಾದವು. ಈ ಮನೆತದವರು ಈಗ ಹಾನಗಲ್ಲಿನಲ್ಲಿ ಇರುತ್ತಾರೆ.

# ಶ್ರೀ ಆಯಿೊ ಆಚಾರ್ಯರು

## ೬೩ ಶ್ರೀ ಹಿರಣ್ಯಾಚಾರ್ಯರು

ಅಪರೋಕ್ಷ ಜ್ಞಾನಿಗಳಾದ ಶ್ರೀ ಯಾದವಾರ್ಯರ ಅಷ್ಟಪ್ರಧಾನ ಶಿಷ್ಯ ಮನೆತನಗಳಲ್ಲಿ ಶ್ರೀ ಆಯಿೊಯವರು ಒಬ್ಬರು. ಇವರ ಮೂಲ ಪುರುಷರು ಹಿರಣ್ಯಾಚಾರ್ಯರು ಇವರು ಪಂಡಿತಾಗ್ರಣಿಗಳು.

ಈ ಮನೆತನವಲ್ಲಿ ನರಹರಿ ಆಚಾರ್ಯ, ಸತ್ಯನಾಥಾಚಾರ್ಯ, ನರಸಿಂಹಾಚಾರ್ಯ ಈ ಮೂವರು ಗ್ರಂಥಕಾರರಾದರು.

## ೬೪ ಶ್ರೀ ನರಹರಿ ಆಚಾರ್ಯರು

ಶ್ರೀ ನರಹರಿ ಆಚಾರ್ಯರು ಶ್ರೀ ಮಂತ್ರಾಲಯ ಸ್ವಾಮಿಗಳವರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು.

ಈ ಆಯಿೊ ಮನೆತನದವರ ಬಗ್ಗೆ ಹೆಚ್ಚಿನ ವಿವರಗಳು ತಿಳಿದಿಲ್ಲ.

# ಶ್ರೀ ಕಲ್ಲಾಪೂರ ಆಚಾರ್ಯರು

## ೬೫ ಕಲ್ಲಾಪುರ ಶ್ರೀನಿವಾಸಾಚಾರ್ಯರು

ಈ ಮನೆತನವಲ್ಲಿ ಶ್ರೀ ಕಲ್ಲಾಪುರ ಶ್ರೀನಿವಾಸಾಚಾರ್ಯರು ಲೋಕೋತ್ತರ ಪಂಡಿತರಾಗಿದ್ದರು. ಚತುಃಶಾಸ್ತ್ರಗಳು ಅವರಿಗೆ ಕರತಲಾಮಲಕವಾಗಿದ್ದವು. ನವರತ್ನ ಪುರುಷೋತ್ತಮಾಚಾರ್ಯರು ಈ ಕಲ್ಲಾಪುರ ಆಚಾರ್ಯರಲ್ಲಿ ನ್ಯಾಯ-ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ದಿಗ್ಗಜ ಪಂಡಿತರಾದರು.

ಶ್ರೀ ನವರತ್ನ ಆಚಾರ್ಯರ ಸರ್ವಶಾಸ್ತ್ರ ಸರ್ವಂಕಷ ಪ್ರತಿಭಾ ಪ್ರಾಗಲ್ಭ್ಯವನ್ನು ಕಂಡು, ಶ್ರೀ ಉತ್ತರಾದಿ ಮಠದ ಶ್ರೀ ಸತ್ಯವರತೀರ್ಥ ಶ್ರೀಪಾದಂಗಳವರು ಇವರನ್ನು ತಮ್ಮ ಶ್ರೀ ಮಠದ ಆಸ್ಥಾನ ವಿದ್ವಾಂಸರನ್ನಾಗಿ ಮಾಡಿಕೊಂಡರು. ಮುಂದೆ ಅವರಿಗೇ ಆಶ್ರಮವನ್ನಿತ್ತು ಶ್ರೀ ಸತ್ಯಧರ್ಮತೀರ್ಥರೆಂದು ನಾಮಕರಣ ಮಾಡಿದರು.

## ೬೬ ವೆಂಕಟರಮಣಾಚಾರ್ಯ

ಶ್ರೀನಿವಾಸಾಚಾರ್ಯರ ಮಕ್ಕಳಾದ ಶ್ರೀ ವೆಂಕಟರಮಣಾಚಾರ್ಯರು ಉದ್ದಾಮ ವಿದ್ವಾಂಸರಾಗಿದ್ದರು. ಶಾಸ್ತ್ರಾರ್ಥ ಸಾಗರದಲ್ಲಿ ಮೀನದಂತೆ ಈಸ ಬಲ್ಲ ಮಹಾ ಪ್ರತಿಭಾಶಾಲಿಗಳವರು. ಇವರು ಶ್ರೀಪಾದ ಪುತ್ರರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು.

## ೬೭ ರಾಮಚಂದ್ರಾಚಾರ್ಯ

ಇವರು ನ್ಯಾಯ ವೇದಾಂತ ಶಾಸ್ತ್ರದಲ್ಲಿ ಪ್ರಗಲ್ಭ ಪಂಡಿತರಾಗಿದ್ದರು. ಇವರು ಉತ್ತರಾದಿ ಮಠದ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಆಸ್ಥಾನ ವಿದ್ವಾಂಸ ರಾಗಿ ಶ್ರೀ ಮಠದ ಮನ್ನಣೆಗೆ ಪಾತ್ರರಾಗಿದ್ದರು.

ಶ್ರೀ ಸತ್ಯಧರ್ಮತೀರ್ಥರಲ್ಲಿ ದಿವಾನ ಪೂರ್ಣಯ್ಯನವರು ಶಾಂತಿ ಪಾಕಿ ಶ್ರೀಮದಾನಂದತೀರ್ಥರ ಸರ್ವಮೂಲದ ೩೭ ಗ್ರಂಥಗಳನ್ನು ಓದಿ ಮಂಗಳ ಮಾಡಿ ದಾಗ ಆಸ್ಥಾನ ವಿದ್ವಾಂಸರಾದ ಕಾಶೀ ತಿಮ್ಮಣ್ಣಾಚಾರ್ಯ, ಕೌಲಗಿ ಬಾಳಾಚಾರ್ಯ, ಗಾರ್ಲವಾಡ ಕೃಷ್ಣಾಚಾರ್ಯ ಜೊತೆಗೆ ಶ್ರೀ ಕಲ್ಲಾಪೂರ ರಾಮಚಂದ್ರಾಚಾರ್ಯರಿಗೂ ಬೆಳ್ಳಿಯ ತಂಬಿಗೆ, ಬಂಗಾರದ ಸರ, ಶಾಲು ಜೋಡಿಗಳನ್ನಿತ್ತು ಸತ್ಕರಿಸಿದರು.

ಇವರು ಶ್ರೀ ಸತ್ಯಧರ್ಮತೀರ್ಥರ ಪೂರ್ವಾಶ್ರಮದ ಅಳಿಯಂದರಾಗಿದ್ದು, ಗ್ರಂಥ ಲೇಖನದಲ್ಲಿಯೂ ಇವರಿಗೆ ಪಾಂಡಿತ್ಯವಿದ್ದಿತು. ಪ್ರಮಾಣ ಲಕ್ಷಣ ಟೀಕೆಗೆ ಇವರು ಒಂದು ಪ್ರೌಢ ಟಿಪ್ಪಣಿಯನ್ನು ಬರೆದಿದ್ದಾರೆ. ಮತ್ತು ಗುರುಚಂದ್ರ ಕಲೋದಯ ಎಂಬ ಸುರಸ ಸುಂದರವೂ, ಭಾವ–ಬಂಧುರವೂ ಆದ ದಿವ್ಯ ಕಾವ್ಯವನ್ನು ರಚಿಸಿದ್ದಾರೆ.

ಶಾಸ್ತ್ರ, ಸಾಹಿತ್ಯ ಎರಡರಲ್ಲಿಯೂ ಇವರಿಗೆ ಸಮಾನವಾದ ಪಾಂಡಿತ್ಯ ಪ್ರಭುತ್ವ ಪ್ರಾವೀಣ್ಯಗಳಿದ್ದವು.

## ೬೮ ಭೀಮವರಾಹ ಆಚಾರ್ಯ

ವೆಂಕಟರಮಣಾಚಾರ್ಯರಿಗೆ ಸತ್ಯಸಂಧಾಚಾರ್ಯ, ಶುಕಾಚಾರ್ಯ, ಭೀಮ ವರಾಹಾಚಾರ್ಯ ಮುಂತಾಗಿ ಪಂಡಿತ ಪ್ರಕಾಂಡರಾದ ಪಂಚ ಪುತ್ರರಿದ್ದರು. ಅವರಲ್ಲಿ ಭೀಮವರಾಹಆಚಾರ್ಯರು ದಿಗ್ಗಜ ಪಂಡಿತರಾಗಿದ್ದರು.

## ೬೯ ಗುರಾಚಾರ್ಯ

ದಶಪ್ರಕರಣ ತತ್ತ್ವಪ್ರಕಾಶಿಕಾದಿ ಗ್ರಂಥಗಳನ್ನು ಓದಿದ್ದರು ಪ್ರಮೇಯಜ್ಞರು.

## ೭೦ ಜಯಾಚಾರ್ಯ

ಇವರು ಶ್ರೀ ಕಸ್ತೂರಿ ರಂಗಾಚಾರ್ಯರಲ್ಲಿ ನ್ಯಾಯಶಾಸ್ತ್ರವನ್ನೂ, ಶ್ರೀ ಸತ್ಯ ಧ್ಯಾನರಲ್ಲಿ ವೇದಾಂತವನ್ನೂ ಓದಿದ್ದರು. ಶ್ರೀಮನ್ನ್ಯಾಯಸುಧಾ ಗ್ರಂಥದ ಬಹು ಭಾಗ ವನ್ನು ಮುಖೋದ್ಗತವನ್ನು ಮಾಡಿದ್ದರು.

ಶ್ರೀ ಸತ್ಯಧ್ಯಾನ ತೀರ್ಥರ ಕಾಲದಲ್ಲಿ ಮೊದಲು ಇವರು ಶ್ರೀ ಉತ್ತರಾದಿ ಮಠದ ಮಹಾ ಪ್ರಭಾವಶಾಲಿಯಾದ ದಿವಾನರಾಗಿದ್ದರು. ಇವರು ದಿವಾನರಿದ್ದಾಗ

ಯಾವದಾವದೂ ಊರಿಗೆ ಬಂದರೆ ಸ್ವಾಮಿಗಳಂತೆಯೇ ವೈಭವದಿಂದ ಬಂದು ಮಂಟಪ ಹಾಕಿ ಪೂಜೆ ಮಾಡಿ ವಿದ್ವಾಂಸರನ್ನು, ವಿದ್ಯಾರ್ಥಿಗಳನ್ನು ಕರೆದು ದಾನ ದಕ್ಷಿಣೆಗಳನ್ನು ಕೊಡುತ್ತಿದ್ದರು. ಗೃಹಸ್ಥರೆಲ್ಲರೂ ಬಂದು ಕೈಕಟ್ಟಿಕೊಂಡು ನಿಲ್ಲುತ್ತಿದ್ದರು. ಶ್ರೀ ಸತ್ಯಧ್ಯಾನರಂಥ ಮಹಾ ಮಹಿಮರಾದ ಸ್ವಾಮಿಗಳವರಿಗೆ ಇವರು ತಕ್ಕ ದಿವಾನರೆನಿಸಿದ್ದರು.

## ೭೧ ಕಲ್ಲಾಪುರ ಗೋಪಾಲಕೃಷ್ಣಾಚಾರ್ಯ

ಇವರು ಮೈಸೂರಿನ ಕಸ್ತೂರಿ ರಂಗಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿ ಮಹಾ ಪಂಡಿತರಾಗಿದ್ದರು. ನವ್ಯ ನ್ಯಾಯದ ಪೂರ್ವೋತ್ತರ ವಾದಗಳಲ್ಲಿ ಶ್ರೀ ಕಲ್ಲಾಪುರ ಗೋಪಾಲಕೃಷ್ಣಾಚಾರ್ಯರಿಗೆ ಸರಿದೊರೆಯಾಗಿ ನಿಲ್ಲಬಲ್ಲ ನೈಯಾಯಿಕ ವಿದ್ವಾಂಸರು ಅತ್ಯಂತ ವಿರಳರಾಗಿದ್ದರು.

ಅವರು ತಮ್ಮ ಮನೆಯಲ್ಲಿ ಅನೇಕ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ಪಾಠ ಹೇಳಿ ತಕ್ಕ ವಿದ್ವಾಂಸರನ್ನು ತಯಾರ ಮಾಡಿದರು. ಕೊರ್ಲಹಳ್ಳಿ ಪಾಂಡುರಂಗಾಚಾರ್ಯ, ಪಾಂಘ್ರಿ ತಾತಾಚಾರ್ಯ, ಕೊರ್ಲಹಳ್ಳಿ ಕೃಷ್ಣಾಚಾರ್ಯ, ಮೂಗೂರ ಕೃಷ್ಣಾಚಾರ್ಯ, ಗಲಗಲಿ ರಾಮಾಚಾರ್ಯ, ಕನಕಗಿರಿ ನಾರಾಯಣಾಚಾರ್ಯ ಮುಂತಾದ ಅನೇಕ ಮನೆತನಸ್ಥ ಆಚಾರ್ಯ ಪುತ್ರರು ಗೋಪಾಲ ಕೃಷ್ಣಾಚಾರ್ಯರ ಮನೆಯಲ್ಲಿ ಇದ್ದು ಪಾಠ ಓದಿ ಪಂಡಿತರಾದರು.

ಆಚಾರ್ಯರಿಗೆ ಪಾಠಪಾಟವವಿದ್ದಂತೆ ವಾಕ್ಯಾರ್ಥ ವೈದಗ್ಧ್ಯವು ಅಸಾಧಾರಣವಾಗಿದ್ದಿತು. ಅವರು ಧಾರವಾಡ, ಮಳಖೇಡ, ಆತಕೂರ ಮುಂತಾದ ಕಡೆಗಳಲ್ಲಿ ನಡೆದ ವಿದ್ವತ್ ಸಭೆಗಳಲ್ಲಿ ಶ್ರೀ ಎಲ್ಲತ್ತೂರ ಕೃಷ್ಣಾಚಾರ್ಯ, ರಂಗಂಪೇಟ ರಾಮಾಚಾರ್ಯ, ಕೊರ್ಲಹಳ್ಳಿ ಶೇತುರಾಮಾಚಾರ್ಯ ಮುಂತಾದ ಘಟಾನುಘಟಿಕ ಪಂಡಿತ ಪ್ರಕಾಂಡರೊಡನೆ ವಾದರಂಗಕ್ಕಿಳಿದು ತಮ್ಮ ಕಂಚಿನ ಕಂಠದಿಂದ ಪುಂಖಾನುಪುಂಖವಾಗಿ ಕೋಟಿಗಳನ್ನು ಎಸೆಯುತ್ತ ಗಂಟೆಗಟ್ಲೆ ವಾಕ್ಯಾರ್ಥ ಮಾಡಿ ಶ್ರೀ ಶ್ರೀಪಾದರನ್ನು, ಶ್ರೀ ಸಾಮಾನ್ಯರನ್ನು ಸಂತೋಷಗೊಳಿಸಿದರು.

# ಶ್ರೀಮುಷ್ಣ ಆಚಾರ್ಯರು

## ೭೨ ನರಸಿಂಹಾಚಾರ್ಯ

ಹೈದರಾಬಾದ ಚೇಟ ಎಂಬ ಹಳ್ಳಿಯಲ್ಲಿ ಈ ಮನೆತನದವರು ಹಿಂದೆ ಜಹಾಗಿರದಾರರಾಗಿದ್ದರು. ಈ ಮನೆತನದ ಮೂಲ ಪುರುಷರಾದ ಶ್ರೀ ನರಸಿಂಹಾಚಾರ್ಯರು ಮಹಾ ಪಂಡಿತರಾಗಿದ್ದರು. ವರ್ಷಕ್ಕೆ ೧೦-೧೨ ಸಾವಿರ ರೂಪಾಯಿಯ ಆದಾಯವು ಬರುವ ಒಂದು ಚಿಕ್ಕ ಜಹಾಗೀರಿ ಇವರ ಮನೆತನದ ಸೊತ್ತಾಗಿತ್ತು.

ಅತ್ಯಂತ ಉದಾರ ಸ್ವಭಾವದವರೂ, ಸ್ವಯಂ ಶೂರರೂ ಆದ ನರಸಿಂಹಾಚಾರ್ಯರು ತಮ್ಮ ಮನೆತನದ ಆಸ್ತಿಯನ್ನೆಲ್ಲ ತಮ್ಮ ಅಣ್ಣ–ತಮ್ಮಂದಿರಗೆ ಬಿಟ್ಟುಕೊಟ್ಟು, ತಾವು ದೇಶ ಸಂಚಾರಕ್ಕೆ ಹೊರಟರು. ದಕ್ಷಿಣದ ಭಾರತದಲ್ಲಿ ಇವರ ಪಾಂಡಿತ್ಯದ ಪ್ರಭಾವವು ಜನರ ಮನಸ್ಸಿನ ಮೇಲೆ ವಿಶೇಷವಾಗಿ ಬಿದ್ದು, ಹೋದ–ಹೋದಲ್ಲೆಲ್ಲ ಇವರಿಗೆ ಗೌರವಾದರ ಸತ್ಕಾರಗಳು ದೊರಕಿದವು. ಅನೇಕ ಜನರು ಶಿಷ್ಯರಾದರು.

ಕಾವೇರಿ ತೀರದ ಶ್ರೀರಂಗ ಕ್ಷೇತ್ರದಲ್ಲಿ ಇವರು ಕೆಲಕಾಲ ನಿಂತು, ಅನೇಕ ಶಿಷ್ಯರಿಗೆ ಶಾಸ್ತ್ರ ಪಾಠವನ್ನು ಹೇಳಿದರು. ಆ ಕಾಲದಲ್ಲಿ ಪ್ರಸಿದ್ಧರಾದ ಅನೇಕ ಲೌಕಿಕ, ವೈದಿಕ, ಪ್ರತಿಷ್ಠಿತ ಗ್ರಹಸ್ಥರೆಲ್ಲರೂ ಆಚಾರ್ಯರಲ್ಲಿ ಶಾಂತಿ ಹಾಕಿ ಮಂತ್ರೋಪದೇಶವನ್ನು ಪಡೆದು ಶಿಷ್ಯರಾದರು. ದಕ್ಷಿಣ ದೇಶದಲ್ಲಿ ಆಚಾರ ಪ್ರವರ್ತಕ ಆಚಾರ್ಯರೆಂದು ಇವರು ಪ್ರಸಿದ್ಧಿಯಾಯಿತು.

ಮುಂದೆ ಈ ನರಸಿಂಹಾಚಾರ್ಯರು ಸಂಚಾರ ಮಾಡುತ್ತ ಕುಂಭಕೋಣಕ್ಕೆ ಬಂದರು. ಅಲ್ಲಿರುವ ಅನೇಕ ಅದ್ವೈತ ಪಂಡಿತರ ಜೊತೆಗೆ ವಾಕ್ಯಾರ್ಥ ಮಾಡಿ ಗೆದ್ದು ಶ್ರೀಮುಷ್ಣ ಕ್ಷೇತ್ರಕ್ಕೆ ದಯಮಾಡಿಸಿದರು.

ಚಿದಂಬರಂ ತಾಲೂಕಿನಲ್ಲಿರುವ ಶ್ರೀಮುಷ್ಣವು ಶ್ರೀ ವರಾಹ ಕ್ಷೇತ್ರವಾಗಿದ್ದು, ಶ್ರೀಮದಾಚಾರ್ಯರ ಕಾಲದಿಂದಲೂ ಪ್ರಸಿದ್ಧವಾಗಿರುತ್ತದೆ. ಇಲ್ಲಿಯ ಶ್ರೀ ದಂಡ ತೀರ್ಥದ ಬಳಿಯಲ್ಲಿ ಶ್ರೀ ನರಸಿಂಹಾಚಾರ್ಯರಿಗೆ ಶ್ರೀ ಮಧ್ವಾಚಾರ್ಯರ ವಿಶೇಷ ಅನುಗ್ರಹವಾಯಿತು.

ಇವರು ಇಲ್ಲಿ ಬಹುಕಾಲ ಪರ್ಯಂತರ ಪಾಠಪ್ರವಚನ ಮಾಡಿಕೊಂಡು ಇದ್ದರು. ಇವರು ತಪಃಪೂತ ಜೀವನದಿಂದ ಪ್ರಭಾವಿತರಾಗಿ ಗಂಗಮ್ಮ ಎಂಬ ಜಹಗೀರದಾರಳು ಇವರಿಗೆ ಅನೇಕ ಭೂಮಿ ಕಾಣಿಕೆಗಳನ್ನು ಕೊಟ್ಟು ಕೃತಾರ್ಥಳಾದಳು.

ಶ್ರೀ ನರಸಿಂಹಾಚಾರ್ಯರಿಗೆ ಪೂರ್ಣಬೋಧಾಚಾರ್ಯ, ಗುಹಾವಾಸೀ ಕೃಷ್ಣಾಚಾರ್ಯ, ಗೋಪಾಲಾಚಾರ್ಯ, ಅನಂತಾಚಾರ್ಯ ಎಂಬ ನಾಲ್ಕು ಜನ ಮಕ್ಕಳಿದ್ದರು. ಅವರ ಈ ಪುತ್ರ ಚತುಷ್ಟಯವು ಚತುಃಶಾಸ್ತ್ರ ಚತುರರಾಗಿದ್ದರು. ಇವರ ಮಕ್ಕಳಲ್ಲಿ ಅನಂತಾಚಾರ್ಯರು ಅನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ.

## ೭೩ ವಾಸುದೇವಾಚಾರ್ಯ

ಶ್ರೀ ಪೂರ್ಣಬೋಧಾಚಾರ್ಯರ ಮಕ್ಕಳಾದ ವಾಸುದೇವಾಚಾರ್ಯರು ಟಿಪ್ಪಣಿಕಾರರಾಗಿದ್ದರು. ಆರಣಿಯ ಜಹಾಗಿರದಾರ ಸುಭಾನುರಾಯನೊಡನೆ ವಾಕ್ಯಾರ್ಥ ಮಾಡಿ ಅವನಿಂದ ವಿಶಿಷ್ಟ ಮಾನ ಮನ್ನಣೆಗಳನ್ನು ಹೊಂದಿದರು.

## ೭೪ ಆರ್ಯಾಚಾರ್ಯ

ಶ್ರೀಮುಷ್ಣಂ ಕ್ಷೇತ್ರದಲ್ಲಿ ಈ ಆಚಾರ್ಯರ ಮನೆತನದಲ್ಲಿ ಆರ್ಯಾಚಾರ್ಯರು ಸಂಪ್ರದಾಯ ಪ್ರವರ್ತಕ ಆಚಾರ್ಯರೆಂದು ಹೆಸರಾದರು. ಇವರ ತಪಶ್ಶಕ್ತಿ ಮಹಾ ಮಹಿಮೆಗಳು ಅಸಾಧಾರಣವಾಗಿದ್ದಿವು. ಅವರು "ಶ್ರೀಮುಷ್ಣಂ ಸಂಪ್ರದಾಯ" ಎಂಬ ಗ್ರಂಥವನ್ನು ಬರೆದು ಅಲ್ಲಿಯ ಕ್ಷೇತ್ರಮೂರ್ತಿ ವರಾಹ ಸ್ವಾಮಿಯ ಆಗಮೋಕ್ತ ಪೂಜಾ ಕೈಂಕರ್ಯಾದಿ ಪದ್ಧತಿಯನ್ನು ಸದ್ವೈಷ್ಣವ ಸಂಪ್ರದಾಯಾನುಸಾರವಾಗಿ ನಡೆಯುವಂತೆ ಮಾಡಿದರು. ಇಂದಿಗೂ ಶ್ರೀಮುಷ್ಣಂ ಕ್ಷೇತ್ರದ ವರಾಹ ದೇವರ ಪೂಜಾರಿಗಳು ಶ್ರೀವೈಷ್ಣವರಿದ್ದರೂ ಪೂಜಾಪದ್ಧತಿಯು ಮಾಧ್ವರ ತಂತ್ರಸಾರೋಕ್ತ ಪದ್ಧತಿಯಿಂದಲೇ ನಡೆಯುತ್ತಿರುವದು ವೈಶಿಷ್ಟ್ಯಪೂರ್ಣವಾಗಿದೆ. ಶ್ರೀ ಮಧ್ವಾಚಾರ್ಯರು ಇಲ್ಲಿಗೆ ಬಂದು ವರಾಹದೇವರನ್ನು ಪೂಜೆಮಾಡಿ ಹೋದಂದಿನಿಂದ ಇಲ್ಲಿ ಈ ಮಾಧ್ವ ಸಂಪ್ರದಾಯಾನುಸಾರಿ ಪೂಜಾ ಪದ್ಧತಿಯು ನಡೆದು ಬಂದಿದೆ. ಇಂದಿಗೂ ಇಲ್ಲಿಯ ಪೂಜಾರಿಗಳು ವರಾಹದೇವರ ನೈವೇದ್ಯ ಕಾಲದಲ್ಲಿ ದ್ವಾದಶ ಸ್ತೋತ್ರವನ್ನು ಪಠನ ಮಾಡುತ್ತಾರೆ. ಮಾಧ್ವರೇ ಇಲ್ಲಿಯ ದೇವಸ್ಥಾನದಲ್ಲಿ ನಿತ್ಯ ಪುರಾಣವನ್ನೂ ಹೇಳುತ್ತಾರೆ. ಆರ್ಯಾಚಾರ್ಯರು ಶ್ರೀ ಮಧ್ವಾಚಾರ್ಯರಿಂದ ಪ್ರಾಪ್ತವಾದ ಈ ವೈಷ್ಣವೀಯ ಪೂಜಾ ಪದ್ಧತಿಯನ್ನು ತಮ್ಮ "ಶ್ರೀಮುಷ್ಣಂ ಸಂಪ್ರದಾಯ" ಎಂಬ ಗ್ರಂಥದಿಂದ ಶಾಸನಬದ್ಧವನ್ನಾಗಿ ಮಾಡಿಬಿಟ್ಟಿದ್ದಾರೆ.

ಈ ಆರ್ಯಾಚಾರ್ಯರು ಮಹಾ ಪಂಡಿತರಲ್ಲದೆ ಮಹಾ ಭಗವದ್ಭಕ್ತರೂ ಅನುಭಾವಿಗಳೂ ಆಗಿದ್ದರು. ಹಿಂದೊಮ್ಮೆ ವರಾಹ ದೇವರ ರಥೋತ್ಸವ ಕಾಲದಲ್ಲಿ ರಥವು ಬೀದಿಯಲ್ಲಿ ನಿಂತು ಬಿಟ್ಟಿತು. ಸಾವಿರಾರು ಜನ ಬಂದು ಹಾರಿ–ಹಗ್ಗ ಹಾಕಿ ಹಿಂದು–ಮುಂದು ಜಗ್ಗಿದರೂ ತೇರು ಹರಿದಾಡಲಿಲ್ಲ. ಪೂಜಾರಿಗಳೂ, ಭಕ್ತಾದಿಗಳೂ ಮುಂದೇನು ಮಾಡಬೇಕೆಂದು ಚಿಂತಾಗ್ರಸ್ತರಾಗಿ ನಿಂತುಕೊಂಡರು.

ಮೂರನೆಯದಿನ ಅರುಣೋದಯ ಕಾಲದಲ್ಲಿ ವರಾಹದೇವನು ಆಚಾರ್ಯರ ಸ್ವಪ್ನದಲ್ಲಿ ಕಾಣಿಸಿಕೊಂಡು ತನ್ನ ತೇರನ್ನು ಎಳೆಯಲಿಕ್ಕೆ ಅವರಿಗೆ ಅಪ್ಪಣೆಯಿತ್ತನು. ಭಗವಂತನ ಆಜ್ಞೆಯಂತೆ ಮರುದಿನ ಆಚಾರ್ಯರು ವರಾಹ ಸ್ತೋತ್ರವನ್ನು ಉಚ್ಚ

ಕಂಠದಿಂದ ಪಠಿಸುತ್ತ ದೇವರ ತೇರಿನ ಮುಂಭಾಗದಲ್ಲಿ ನಿಂತು ಹಗ್ಗ ಜಗ್ಗಿದರು. ಕೂಡಲೇ ರಥವು ಉರುಳಿ ಮುಂದುವರಿಯಹತ್ತಿತು. ನೆರೆದ ಜನರೆಲ್ಲರೂ ಆರ್ಯಾಚಾರ್ಯರ ತಪಃ ಸಾಮರ್ಥ್ಯವನ್ನು ಕಂಡು ಕೌತುಕಬಟ್ಟು ಕೈ ಮುಗಿದರು. ಅಂದಿನಿಂದ ಪೂಜಾರಿಗಳೂ, ದೇವಸ್ಥಾನದ ವ್ಯವಸ್ಥಾಪಕರೂ ಆರ್ಯಾಚಾರ್ಯರ ಮನೆತನದವರಿಗೆ ವರಾಹದೇವನ ರಥೋತ್ಸವ ಕಾಲದಲ್ಲಿ ವಿಶಿಷ್ಟಮಾನ ಹಾಗೂ ಅಗ್ರಪೂಜೆಯನ್ನು ಪ್ರಾರಂಭಿಸಿದರು. ಅದು ಇಂದಿಗೂ ವ್ಯಾಕರಣಾಚಾರ್ಯರ ಮನೆತನಕ್ಕೆ ನಡೆದುಬರುತ್ತಲಿದೆ. ಅವರಿಲ್ಲದಾಗ ಅವರು ನಿಯಮಿಸಿದ ಪ್ರತಿನಿಧಿಗೆ ಆ ಮರ್ಯಾದೆಯನ್ನು ಮಾಡುತ್ತಾರೆ.

## ೭೫ ಮಹಾ ಮಹೋಪಾಧ್ಯಾಯ ಸುಬ್ಬರಾಯಾಚಾರ್ಯರು



ಶ್ರೀ ನಾಯರಂಣಾಚಾರ್ಯ ಅಂಬುಜಮ್ಮ ದಂಪತಿಗಳಿಂದ ೧೮೩೮ನೇ ಇಸ್ವಿಯಲ್ಲಿ ಜನಿಸಿದ ಸುಬ್ಬರಾಯ ಆಚಾರ್ಯರು ತಿರುವಾಯೂರಿನಲ್ಲಿ ಬಾಲ್ಯದಲ್ಲಿಯೇ ವೇದಾಧ್ಯಯನವನ್ನು ಮಾಡಿದರು. ಅನಂತರ ರಾಜಮನ್ನಾರಗುಡಿಯಲ್ಲಿ ಸಾಹಿತ್ಯ ಮತ್ತು ವ್ಯಾಕರಣದ ಪರಿಚಯವನ್ನು ಮಾಡಿಕೊಂಡು ನೈಜಾಮ ರಾಜ್ಯದ ಸುರಪುರ ಗ್ರಾಮಕ್ಕೆ ಬಂದರು.

ಅಲ್ಲಿ ಯಳಮೇಲಿ ಹಯಗ್ರೀವಾಚಾರ್ಯರೆಂಬ ಸುಪ್ರಸಿದ್ಧ ವೈಯಾಕರಣ ಪಂಡಿತರಲ್ಲಿ ಮಹಾಭಾಷ್ಯಾಂತ ವ್ಯಾಕರಣ ಓದಿದರು. ಅನಂತರ ಯಳಮೇಲಿ ಆಚಾರ್ಯರ ಆದೇಶದಂತೆ ಪಂಢರಪುರ ಕೃಷ್ಣಾಚಾರ್ಯರಲ್ಲಿ ಹಾಗೂ ಕೊಲ್ಲಾಪೂರದ ಭಿಕ್ಕುಶಾಸ್ತ್ರಿಗಳಲ್ಲಿ ನ್ಯಾಯ ಹಾಗೂ ವ್ಯಾಕರಣದ ಉದ್ಗ್ರಂಥಗಳನ್ನು ಅಧ್ಯಯನ ಮಾಡಿದರು.

ಪುದುಕೋಟ್ಟಾದ ಪುಟ್ಟಸ್ವಾಮಿ ಶಾಸ್ತ್ರಿಗಳಲ್ಲಿ ಮೀಮಾಂಸಾ ಶಾಸ್ತ್ರವನ್ನೂ, ಉಡುಪಿಯ ಶ್ರೀ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನೂ ಅಧ್ಯಯನಮಾಡಿದರು.

ಹೀಗೆ ಚತುಃಶಾಸ್ತ್ರ ಪಂಡಿತ ಎಂಬ ಹೆಸರು ಶ್ರೀ ಸುಬ್ಬರಾಯ ಆಚಾರ್ಯರಲ್ಲಿ ಅಕ್ಷರಶಃ ಯಥಾರ್ಥವಾಗಿದ್ದಿತು. ನ್ಯಾಯ ಶಾಸ್ತ್ರದ ಪಂಚವಾದಗಳಿಗೆ ನ್ಯಾಯರತ್ನ ಎಂಬ ಟೀಕೆ ಬರೆದ ರಘುನಾಥ ತಾರ್ಕಿಕರೊಡನೆ ನ್ಯಾಯಶಾಸ್ತ್ರದಲ್ಲಿ ವಾಖ್ಯಾರ್ಥ ಮಾಡಿ ವಿಜಯಶಾಲಿಗಳಾದರು. ತ್ರಾವಣಕೋರ ಸಂಸ್ಥಾನದ ಆಸ್ಥಾನ ವಿದ್ವಾನ್ ಕುಪ್ಪಸ್ವಾಮಿ ಅಯ್ಯಂಗಾರ ಜೊತೆಗೆ ವ್ಯುತ್ಪತ್ತಿ ವಾದದಲ್ಲಿಯೂ, ಶ್ರೀ ಸತ್ಯಧ್ಯಾನ ತೀರ್ಥರ ಶೂರ್ಪಾಲಯ ಕ್ಷೇತ್ರದಲ್ಲಿ ನೆರೆದ ವಿದ್ವತ್ ಸಭೆಯಲ್ಲಿ ಯಲತ್ತೂರ ಶ್ರೀ ಕೃಷ್ಣಾಚಾರ್ಯರ ಜೊತೆಗೂ ವಾಖ್ಯಾರ್ಥವನ್ನು ಮಾಡಿ ಕೀರ್ತಿಗಳಿಸಿದರು.

ಸುಬ್ಬರಾಯಾಚಾರ್ಯರಲ್ಲಿ ಗ್ರಂಥ ಕರ್ತೃತ್ವ ಶಕ್ತಿಯು ಅಸಾಧಾರಣವಾಗಿತ್ತು. ಅವರು—

೧) ಪರಿಭಾಷೇಂದು ಶೇಖರ ವ್ಯಾಖ್ಯಾ

೨) ಶಬ್ದೇಂದು ಶೇಖರ ವ್ಯಾಖ್ಯಾ

೩) ಬ್ರಹ್ಮಸೂತ್ರ ಭಾಷ್ಯ ವ್ಯಾಖ್ಯಾ

೪) ಗೀತಾ ಭಾಷ್ಯ ವ್ಯಾಖ್ಯಾ

೫) ತಂತ್ರ ಸಾರ ವ್ಯಾಖ್ಯಾ

ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಇವರ ಅಸಾಧಾರಣವಾದ ಪಾಂಡಿತ್ಯಕ್ಕೆ ಮೆಚ್ಚಿ, ಇಂಗ್ಲಂಡದ ಎಡ್‌ವರ್ಡ್ ಚಕ್ರವರ್ತಿಯು ಇವರಿಗೆ "ಮಹಾಮಹೋಪಾಧ್ಯಾಯ" ಎಂಬ ಬಿರುದನ್ನು ಕೊಟ್ಟರು.

ಕಾಶಿಯ ಪಂಡಿತ ಮಂಡಲಿಯವರು ಇವರನ್ನು ಕರೆಯಿಸಿಕೊಂಡು ವಾಕ್ಯಾರ್ಥ ಮಾಡಿ "ವ್ಯಾಕರಣ ಕೇಸರಿ" ಎಂಬ ಬಿರುದನ್ನು ಇತ್ತು ಗೌರವಿಸಿದರು.

ಇವರಲ್ಲಿ ಮಹಾಮಹೋಪಾಧ್ಯಾಯ ಕೃಷ್ಣಮೂರ್ತಿ ಶಾಸ್ತ್ರಿ, ದಂಡಪಾಣಿ ದೀಕ್ಷಿತ, ಶತಾವಧಾನಿ ಲಕ್ಷ್ಮಣಾಚಾರ್ಯ, ಝಳಕೀಕರ ವಾಮನಾಚಾರ್ಯ, ಆರ್. ವ್ಹಿ. ಕೃಷ್ಣಮಾಚಾರ್ಯ, ನದೀತೀರ ಸೇತುಮಾಧವಾಚಾರ್ಯ ಮುಂತಾವ ಅನೇಕ ಜನ ಮಹಾಮಹೋಪಾಧ್ಯಾಯರೂ, ಪ್ರಾಧ್ಯಾಪಕರೂ ಅಧ್ಯಯನ ಮಾಡಿ ವಿದ್ವಾಂಸರಾಗಿದ್ದರು.

## ೭೬ ಸೇತುಮಾಧವಾಚಾರ್ಯ



ಸುಬ್ಬರಾಯಾಚಾರ್ಯರ ಏಕಮಾತ್ರ ಪುತ್ರರಾದ ಶ್ರೀ ಸೇತುಮಾಧವಾಚಾರ್ಯರು ತಂದೆಯಂತೆಯೇ ವ್ಯಾಕರಣ ಶಾಸ್ತ್ರದಲ್ಲಿ ಮಹಾ ವಿದ್ವಾಂಸರಾಗಿದ್ದರು. ಇವರು ಬಾಲ್ಯದಿಂದ ಶ್ರೀ ಸುಬ್ಬರಾಯಾಚಾರ್ಯರಲ್ಲಿಯೇ ಸಾಹಿತ್ಯ, ವ್ಯಾಕರಣಾದಿ ಶಾಸ್ತ್ರಗಳನ್ನು ಓದಿ ಮಹಾ ಪಂಡಿತರಾದರು. ಅವರು ತಮ್ಮ ವಯಸ್ಸಿನ ೨೪ನೇ ವರುಷದಲ್ಲಿಯೇ ಪ್ರಬುದ್ಧ ಪಂಡಿತರಾಗಿ ಪುದಕೊಟ್ಟೆ, ಮನ್ನಾರಗುಡಿ, ತಂಜಾವೂರ, ಮದ್ರಾಸ, ತಿರುಪತಿ ಮುಂತಾದ ಪಂಡಿತ ಸಭೆಗಳಿಗೆ ಹೋಗಿ ವ್ಯಾಕರಣ ಶಾಸ್ತ್ರದಲ್ಲಿ ವಾಕ್ಯಾರ್ಥ ಮಾಡಿ ವಿದ್ವದ್ ಜನರ ಮನ್ನಣೆಗೆ ಪಾತ್ರರಾದರು. ಅವರು ಅವರು ೧೯೪೭ನೇ ಇಸ್ವಿ ತಿರುಪತಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣಾಧ್ಯಾಪಕರಾಗಿ ನಿಯುಕ್ತರಾಗಿ ಕೊನೆಗೆ ಅಲ್ಲಿಯ ಪ್ರಿನ್ಸಿಪಾಲರಾಗಿ ನಿವೃತ್ತರಾದರು.

ದಕ್ಷಿಣ ದೇಶದ ತುಂಬ ಈಗ ಅಲ್ಲಲ್ಲಿ ಕಾಣುವ ವ್ಯಾಕರಣ ಪಂಡಿತರಲ್ಲಿ ಬಹು ಜನರು ಶ್ರೀ ಸೇತು ಮಾಧವಾಚಾರ್ಯರ ಶಿಷ್ಯರೇ ಪ್ರಾಯಃ ಹೆಚ್ಚಾಗಿದ್ದಾರೆ.

ಶ್ರೀ ಸೇತುಮಾಧವಾಚಾರ್ಯರಿಗೆ ಸಾಹಿತ್ಯ ಮತ್ತು ವ್ಯಾಕರಣ ಶಾಸ್ತ್ರಗಳಂತೆ ವೇದಾಂತದಲ್ಲಿಯೂ ಒಳ್ಳೆ ಗತಿಯಿದ್ದಿತು. ಅವರು—

೧) ವ್ಯಾಸ ಪಾಣಿನಿ ಭಾವ ನಿರ್ಣಯ

೨) ತತ್ವ ಕೌಸ್ತುಭ ಕುಲಿಶಂ

೩) ಋಗ್‌ಭಾಷ್ಯ ಟೀಕಾ ವ್ಯಾಖ್ಯಾನ

೪) ತಿಥಿ ನಿರ್ಣಯ

೫) ಪುರುಷ ಸೂಕ್ತ ವ್ಯಾಖ್ಯಾನ

ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಈ ಗ್ರಂಥಗಳನ್ನು ಪರಾಮರ್ಶೆ ಮಾಡಿದರೆ ಶ್ರೀ ಸೇತುಮಾಧವಾಚಾರ್ಯರ ವ್ಯಾಕರಣ ವೇದಾಂತ ಪಾಂಡಿತ್ಯವು ಎಷ್ಟು ಎತ್ತರ ಮಟ್ಟದ್ದು ಇದ್ದಿತು ಎಂದು ತಿಳಿದು ಬರುತ್ತದೆ.

೧೯೫೫ ನೇ ಇಸ್ವಿಯಲ್ಲಿ ತಿರುಪತಿಯ S. M. S. O. ಸಭೆಯವರು ಆಚಾರ್ಯರ ೮೪ ನೇ ವರ್ಧಂತೀ ಮಹೋತ್ಸವವನ್ನು ವೈಭವದಿಂದ ಆಚರಿಸಿ ಅವರಿಗೆ ಕನಕಾಭಿಷೇಕವನ್ನು ಮಾಡಿದರು.

ಶ್ರೀ ಸೇತುಮಾಧವಾಚಾರ್ಯರು ತಮ್ಮ ವೇದಾಂತ ಗುರುಗಳಾದ ಶ್ರೀ ಸತ್ಯ ಧ್ಯಾನತೀರ್ಥರ ಪ್ರೇರಣೆಯಂತೆ ಅಭಿನವ ಚಂದ್ರಿಕಾ ಎಂಬ ಗ್ರಂಥವನ್ನು ಸಂಶೋಧಿಸಿ ಪ್ರಕಟಗೊಳಿಸಿದರು.

ಇವರೂ ಮಹಾ ಮಹೋಪಾಧ್ಯಾಯ ಎಂಬ ಬಿರುವನ್ನು ಪಡೆದಿದ್ದರು.

ಇವರು ೧೯೫೭ ನೇ ಇಸ್ವಿಯಲ್ಲಿ ತಿರುಪತಿಯಲ್ಲಿ ಕಾಲವಾದರು.



## ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರು

ಇವರ ಸವಿವರವಾದ ಚರಿತ್ರೆಯನ್ನು ಇದೇ ಗ್ರಂಥದ ೫೫೬ ನೇ ಪುಟದಲ್ಲಿ ಮುದ್ರಿತ ಕ್ರಮಾಂಕ ೩೭ ನೇದ್ದರ ಪರಿಚಯ ನೋಡಿರಿ.

# ಕುಂಭಕೋಣದ ಪಂಡಿತ ಮಂಡಲಿ

ದಕ್ಷಿಣ ಭಾರತದಲ್ಲಿ ಎಂದಿನಿಂದಲೂ ವಿದ್ವತ್ ಕೇಂದ್ರವೆಂದು ಸುಪ್ರಸಿದ್ಧವಾದ ಕುಂಭಕೋಣ ಕ್ಷೇತ್ರವು ಈಗ ೫೦ ವರುಷಗಳ ಹಿಂದೆ ವಿದ್ಯೆಯ ಆಗರವಾಗಿದ್ದಿತು. ನ್ಯಾಯ ವೇದಾಂತ ;ವ್ಯಾಕರಣ ಮೀಮಾಂಸಾ ಶಾಸ್ತ್ರಗಳಲ್ಲಿ ಪರಿಣತರಾದ ಪಂಡಿತೋತ್ತಮರು ಶತಾಧಿಕ ಸಂಖ್ಯೆಯಲ್ಲಿ ಅಲ್ಲಿ ಇರುತ್ತಿದ್ದರು. ಈ ಮೊದಲು ಸುಮಾರು ೧೦೦ ವರ್ಷಗಳಲ್ಲಿ ಕುಂಭಕೋಣದಲ್ಲಿ ಆಗಿ ಹೋದ ಪಂಡಿತರು ಎಣಿಸಲಿಕ್ಕೆ ಬಾರದಷ್ಟು ವಿಪುಲ ಪ್ರಮಾಣದಲ್ಲಿದ್ದರು. ಇಲ್ಲಿ ಅವರೆಲ್ಲರ ವಿಸ್ತಾರವಾದ ಜೀವನ ಚರಿತ್ರ ಪರಿಚಯಾದಿಗಳನ್ನು ಪ್ರಕಟಿಸಲು ಅವಕಾಶವಿಲ್ಲದ್ದರಿಂದ ಸಂಕ್ಷಿಪ್ತವಾಗಿ ನಾಮನಿರ್ದೇಶನವನ್ನು ಮಾಡಲಾಗಿದೆ.

### ೭೭ ನದೀತೀರದ ಶಾಮಾಚಾರ್ಯ

ಶಾಮಾಚಾರ್ಯರಿಗೆ ತರ್ಕ ಶಾಸ್ತ್ರದಲ್ಲಿ ಅನನ್ಯ ಸಾಮಾನ್ಯವಾದ ಮಹಾ ಪಾಂಡಿತ್ಯವಿದ್ದಿತು. ವೇದಾಂತದಲ್ಲಿಯಂತೂ ಅವರ ಕೈ ಹಿಡಿಯುವವರೇ ಇರಲಿಲ್ಲ. ಅವರಲ್ಲಿ ಓದಿ ಪಂಡಿತರಾದ ಶಿಷ್ಯರೂ ಕೂಡ ವೇದಾಂತ ವಾಚಸ್ಪತಿಗಳೆಂದು ವಿಖ್ಯಾತರಾಗಿದ್ದಾರೆ. ಮೈಸೂರ ಮಹಾರಾಜಾ ಕಾಲೇಜಿನಲ್ಲಿ ವೇದಾಂತ ಪ್ರಾಧ್ಯಾಪಕರಾಗಿ ಬಹು ಜನರಿಗೆ ಪಾಠ ಹೇಳಿದ ಪೆರಿಕುಳಂ ರಾಮಚಂದ್ರಾಚಾರ್ಯರು ನದೀತೀರ ಶಾಮಾಚಾರ್ಯರಲ್ಲಿ ಅಧ್ಯಯನ ಮಾಡಿದರು. ಆಚಾರ್ಯರ ಮನೆಯಲ್ಲಿ ಯಾವಾಗಲೂ ೨೦-೨೫ ಜನ ವಿದ್ಯಾರ್ಥಿಗಳು ಶಾಸ್ತ್ರ ಓದಲಿಕ್ಕಾಗಿ ಇರುತ್ತಿದ್ದರು. ಶಾಮಾಚಾರ್ಯರ ಮನೆಯೇ ಆ ಕಾಲದಲ್ಲಿ ಒಂದು ದೊಡ್ಡ ಗುರುಕುಲವೆನಿಸಿತ್ತು. ಇವರು ಶ್ರೀ ಸತ್ಯಧ್ಯಾನ ತೀರ್ಥರಿಗೆ ಪರಮಪ್ರಿಯರಾಗಿದ್ದರು.

### ೭೮ ಕೌಲಗಿ ವ್ಯಾಸರಾಯಾಚಾರ್ಯ

ಇವರು ದ್ವೈತ ವೇದಾಂತದಲ್ಲಿ ಒಳ್ಳೆ ಪರಿನಿಷ್ಠಿತ ಪಂಡಿತರಾಗಿದ್ದರು. ಸುಧಾ ವ್ಯಾಸತ್ರಯ ಮುಂತಾದ ಗ್ರಂಥಗಳನ್ನು ಮುಖೋದ್ಗತವಾಗಿ ಪಾಠ ಹೇಳುತ್ತಿದ್ದರು. ೫೦-೬೦ ಜನ ಛಾತ್ರರು ಇವರಲ್ಲಿ ಓದಿ ವೇದಾಂತ ಜ್ಞಾನವನ್ನು ಪಡೆದರು.

### ೭೯ ಅಪಶಂಕರ ರಾಮಾಚಾರ್ಯ

ಸಾಹಿತ್ಯ ವೇದಾಂತ ಶಾಸ್ತ್ರಗಳಲ್ಲಿ ಮಹಾ ಪಂಡಿತರು.

## ೮೦ ಕೊರವಿ ಶಾಮಣ್ಣಾಚಾರ್ಯ

ನ್ಯಾಯ ಶಾಸ್ತ್ರದಲ್ಲಿ ನಿಪುಣರು. ವೇದಾಂತದಲ್ಲಿಯೂ ವಿದ್ವಾಂಸರು.

## ೮೧ ಮಹಾಮಹೋಪಾಧ್ಯಾಯ ಖಾಹೆ ರಾಮಚಂದ್ರಾಚಾರ್ಯ

ಇವರು ಸಾಹಿತ್ಯದಲ್ಲಿ ಪರಿಣತರು. ವೇದಾಂತದಲ್ಲಿ ನಿಷ್ಕಲ್ಮಷ ಜ್ಞಾನವುಳ್ಳವರು. ಸಂಪ್ರದಾಯ ಶುದ್ಧವಾಗಿ ವಾದಗ್ರಂಥ ಹಾಗೂ ಪ್ರಮೇಯ ಗ್ರಂಥಗಳನ್ನು ಪಾಠ ಹೇಳುತ್ತಿದ್ದರು.

ಇವರ ಮಕ್ಕಳಾದ ಡಾ|| ನಾಗರಾಜ ಶರ್ಮಾರವರು ಇವರಲ್ಲಿ ಅಧ್ಯಯನ ಮಾಡಿ ವೇದಾಂತ ಪಂಡಿತರಾದರು.

"ಮಹಾಮಹೋಪಾಧ್ಯಾಯ" ಎಂಬ ಬಿರುದನ್ನು ಬ್ರಿಟಿಶ ಸರಕಾರವು ಅವರಿಗೆ ಕೊಡಮಾಡಿತು. ಇವರು ಮಹಾಭಾರತ ಪುರಾಣವನ್ನು ಬಹು ಸುಂದರವಾಗಿ ಹೇಳುತ್ತಿದ್ದರು. ಇವರಿಗೆ "ಭಾರತ ಸಿಂಹ" ಎಂಬ ಪದವಿ ಇದ್ದಿತು.

## ೮೨ ಅಪಶಂಕರ ಪ್ರಯಾಗಾಚಾರ್ಯ

ಇವರು ಸಾಹಿತ್ಯ ಮತ್ತು ವ್ಯಾಕರಣ ಶಾಸ್ತ್ರಗಳಲ್ಲಿ ಒಳ್ಳೇ ವಿದ್ವಾಂಸರು. ತಂಜಾವೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣಾಧ್ಯಾಪಕರಾಗಿ ಬಹು ಕಾಲ ಪಾಠ ಹೇಳಿದರು.

## ೮೩ ಕೂಟಾಕುಳಂ ಬಾಬಾಚಾರ್ಯ

ಇವರು ಉತ್ತರಾದಿ ಮಠದಲ್ಲಿ ಇದ್ದು ಶ್ರೀ ಸತ್ಯಧ್ಯಾನತೀರ್ಥರಲ್ಲಿ ಅಧ್ಯಯನ ಮಾಡಿ ವೇದಾಂತ ಪಂಡಿತರಾದರು.

## ೮೪ ಅಪಶಂಕರ ಶ್ರೀನಿವಾಸಾಚಾರ್ಯ

ಇವರಿಗೆ ನ್ಯಾಯ ಶಾಸ್ತ್ರವು ಕರತಲಾಮಲಕವಾಗಿದ್ದಿತು. ವೇದಾಂತವಲ್ಲಿ ಪ್ರಗಾಢ ಪಾಂಡಿತ್ಯವಿದ್ದಿತು.

## ೮೫ ವರಖೇಡಿ ರಂಗಾಚಾರ್ಯ

ಇವರು ವೇದಾಂತ ಶಾಸ್ತ್ರವಲ್ಲಿ ಒಳ್ಳೇ ವ್ಯುತ್ಪನ್ನರಾಗಿದ್ದರು.

## ೮೬ ಖಾಪೆ ವಾಸುದೇವಾಚಾರ್ಯ

ಇವರು ವೇದಾಂತ ಶಾಸ್ತ್ರದಲ್ಲಿ ಚನ್ನಾಗಿ ಪರಿಶ್ರಮಪಟ್ಟಿದ್ದರು. ಕರ್ಮಕಾಂಡ ಶ್ರೌತ ವಿಭಾಗದಲ್ಲಿಯೂ ಇವರು ಒಳ್ಳೆ ಪರಿಣತರಾಗಿದ್ದರು. ಇವರು ಸ್ವಯಂ ಅಗ್ನಿ ಹೋತ್ರವನ್ನು ಇಟ್ಟಿದ್ದರು.

## ೮೭ ವಟ್ಟಂಗಾಡ ಗೋಪಾಲಾಚಾರ್ಯ

ಕುತ್ತಾಲಂ ಊರಿನ ಹವಾಯಿ ವಾಸುದೇವಾಚಾರ್ಯರಲ್ಲಿ ಅಧ್ಯಯನ ಮಾಡಿದರು. ಇವರಿಗೆ ವೇದಾಂತದಲ್ಲಿ ಒಳ್ಳೇ ಅಭಿನಿವೇಶನವಿದ್ದಿತು. ಪ್ರಮೇಯ ಭಾಗದಲ್ಲಿ ಇವರಿಗೆ ವಿಶೇಷ ಅಭಿಜ್ಞತೆಯಿದ್ದಿತು.

## ೮೮ ವರಖೇಡಿ ಶ್ರೀನಿವಾಸಾಚಾರ್ಯ

ಇವರು ತಮ್ಮ ತಂದೆಯಾದ ವರಖೇಡಿ ರಂಗಾಚಾರ್ಯರಲ್ಲಿ ಓದಿ ವೇದಾಂತ ವಿದ್ವಾಂಸರಾದರು.

## ೮೯ ಕೂಟಾಕುಳಂ ರಾಮಾಚಾರ್ಯ

ಇವರಿಗೆ ಎಲ್ಲ ಶಾಸ್ತ್ರಗಳಲ್ಲಿಯೂ ಪ್ರವೇಶವಿದ್ದಿತು. ಶಾಸ್ತ್ರಪಂಡಿತರಾದ ಇವರು ಸಾಹಿತ್ಯ ಪಾಠವನ್ನು ಸರ್ವಜನ ಆಕರ್ಷಕ ರೀತಿಯಲ್ಲಿ ಹೇಳುತ್ತಿದ್ದರು.

## ೯೦ ಮಧುರಿಯ ವೆಂಕಟರಮಣಾಚಾರ್ಯ

ಇವರು ಶ್ರೀರಂಗ ಭೀಮಾಚಾರ್ಯರ ಕನಿಷ್ಟ ಬಂಧುಗಳು. ಅಣ್ಣನು ನ್ಯಾಯ ಶಾಸ್ತ್ರದಲ್ಲಿ ಪಂಡಿತನಾದರೆ ಈ ತಮ್ಮನು ವ್ಯಾಕರಣ ಶಾಸ್ತ್ರದಲ್ಲಿ ವಿದ್ವಾಂಸನಾಗಿದ್ದನು. ಇವರ ವ್ಯಾಕರಣ ಪಾಂಡಿತ್ಯವನ್ನು ಕಂಡು ಮೈಸೂರಿನ ಮಹಾರಾಜರು ಇವರನ್ನು ತಮ್ಮ ಚಾಮರಾಜಾ ಸಂಸ್ಕೃತ ಕಾಲೇಜಿನ ವ್ಯಾಕರಣಾಧ್ಯಾಪಕರನ್ನಾಗಿ ನೇಮಿಸಿದರು. ಇವರು ಮೈಸೂರಿನಲ್ಲಿದ್ದಾಗ ಅನೇಕ ಶಿಷ್ಯರಿಗೆ ಪಾಠ ಹೇಳಿ ವ್ಯಾಕರಣ ವಿದ್ವಾಂಸರನ್ನಾಗಿ ಮಾಡಿದರು.

## ೯೧ ವಟ್ಟಂಗಾಡ ರಾಮಾಚಾರ್ಯ

ಇವರು ಶ್ರೀರಂಗ ಭೀಮಾಚಾರ್ಯರ ಶಿಷ್ಯರು. ಉಭಯ ಶಾಸ್ತ್ರಗಳಲ್ಲಿಯೂ ಇವರಿಗೆ ಘನತರ ಪಾಂಡಿತ್ಯ, ಗುರುತರ ವ್ಯುತ್ಪತ್ತಿ. ಇವರ ಪ್ರವಚನ ಪಟುತ್ವವು ಅನ್ಯಾದೃಶವಾಗಿತ್ತು. ಇವರಲ್ಲಿ— ವಟ್ಟಂಗಾಡ ರಾಮಾಚಾರ್ಯ, ನಾರಾಯಣಾಚಾರ್ಯ,

ರಘುನಾಥಾಚಾರ್ಯ, ಭೀಮಾಚಾರ್ಯ ಹಾಗೂ ಚತುರ್ವೇದಿ ಗುರುನಾಥಾಚಾರ್ಯ, ಪಾಂಡುರಂಗಿ ಶ್ರೀನಿವಾಸಾಚಾರ್ಯ ಮುಂತಾಗಿ ಹತ್ತಿಪ್ಪತ್ತು ಶಿಷ್ಯರು ಓದಿ ಶಾಸ್ತ್ರ ಪಂಡಿತರಾದರು.

### ೯೨ ಮೂರ್ಟಿ ಕೃಷ್ಣಸ್ವಾಮಿರಾಯಾಚಾರ್ಯ

ಶ್ರೀರಂಗ ಕ್ಷೇತ್ರದಲ್ಲಿ ಸ್ವಾಮಿರಾಯಾಚಾರ್ಯರು ಉಚ್ಚಕೋಟಿ ನೈಯಾಯಿಕ ರೆಂದು ಪ್ರಖ್ಯಾತರಾಗಿದ್ದರು. ಪ್ರಾಚೀನ ನ್ಯಾಯ, ನವೀನ ನ್ಯಾಯ ಎರಡರಲ್ಲಿಯೂ ಇವರಿಗೆ ಸಮಾನವಾದ ಪಾಂಡಿತ್ಯವಿದ್ದಿತು. ಆ ಕಾಲದಲ್ಲಿ ಇವರಿಗೆ ಹೊಯ್‌ಕೈಯಾಗಿ ನಿಲ್ಲಬಲ್ಲ ನೈಯಾಯಿಕರು ಬೆರಳ ಮೇಲೆ ಎಣಿಸುವಷ್ಟು ವಿರಳವಾಗಿದ್ದರು.

### ೯೩ ತಿರುಪತಿ ಶ್ರೀನಿವಾಸಾಚಾರ್ಯ

ಇವರು ಕಸ್ತೂರಿ ರಂಗಾಚಾರ್ಯರಲ್ಲಿ ತರ್ಕಶಾಸ್ತ್ರ ಓದಿ ಪ್ರಸಿದ್ಧ ನೈಯಾಯಿಕ ಎನಿಸಿದ್ದರು. ಇವರು ಮೈಸೂರಿನಲ್ಲಿದ್ದು ಅನೇಕ ಜನರಿಗೆ ಪಾಠಹೇಳಿ ಪಂಡಿತರನ್ನಾಗಿ ಮಾಡಿದರು.

### ೯೪ ಸೇತುಮಾಧವಾಚಾರ್ಯ ಕುಂಭಕೋಣ

ಇವರು ವ್ಯಾಕರಣದಲ್ಲಿ ಒಳ್ಳೆ ವಿದ್ವಾಂಸರಾಗಿದ್ದರು. ರಾಜಾ ವೇದ ಪಾಠ ಶಾಲೆಯ ಪ್ರಧಾನ ಅಧ್ಯಾಪಕರಾಗಿ ಮತತ್ರಯದ ವಿದ್ಯಾರ್ಥಿಗಳಿಗೂ ಪಾಠ ಹೇಳಿ ದರು. ಶ್ರೀ ವ್ಯಾಸರಾಯ ಮಠದ ಶಿಷ್ಯರಾದ ಇವರು ಶತಾವಧಾನಿ ಲಕ್ಷ್ಮಣಾಚಾ ರ್ಯರ ಶಿಷ್ಯರಾಗಿದ್ದರು.

### ೯೫ ವಟ್ಟಿಂಗಾಡ ಗೋಪಾಲಾಚಾರ್ಯ

ಇವರು ದ್ವೈತವೇದಾಂತದಲ್ಲಿ ಘನ ವಿದ್ವಾಂಸರಾಗಿದ್ದರು. ಇವರನ್ನು ಶ್ರೀ ಸತ್ಯ ಧ್ಯಾನ ತೀರ್ಥರು ತಮ್ಮ ಉತ್ತರಾದಿ ಮಠದಲ್ಲಿ ಇಟ್ಟು ದ್ವೈತ ವೇದಾಂತ ಪಾಠಶಾಲೆ ಯನ್ನು ನಡೆಯಿಸಿದರು. ಅವರಲ್ಲಿ ಅನೇಕ ಜನರು ಮಾಧ್ವ ಗ್ರಂಥಗಳನ್ನು ಅಧ್ಯ ಯನ ಮಾಡಿದರು.

### ೯೬ ಕೂಟುಕುಲಂ ಮಾಧವಾಚಾರ್ಯ

ಇವರು ವಟ್ಟಿಂಗಾಡ ಗೋಪಾಲಾಚಾರ್ಯರಲ್ಲಿ ಸುಧಾ ನ್ಯಾಯತ್ರಯ, ಗ್ರಂಥಗಳನ್ನು ಓದಿ ವಿದ್ವಾಂಸರಾದರು. ಇವರು ಬಹು ಕಾಲ ಶ್ರೀ ಸತ್ಯಧ್ಯಾನ ತೀರ್ಥ ರಲ್ಲಿ ವೇದಾಂತ ಪಾಠ ಓದಿ ಶಿಷ್ಯರಾಗಿ ಅವರ ಅನುಗ್ರಹಕ್ಕೆ ಪಾತ್ರರಾದರು. ಮಾಧವಾಚಾರ್ಯರಿಗೆ ವ್ಯಾಕರಣ ಶಾಸ್ತ್ರದಲ್ಲಿಯೂ ವೇದಾಂತ ಶಾಸ್ತ್ರದಲ್ಲಿಯೂ ಪಾಂಡಿತ್ಯವಿದ್ದಿತು.

## ೯೭ ಕಂಬಾಲು ರಾಘವೇಂದ್ರಾಚಾರ್ಯ

ಶ್ರೀ ಕಂಬಾಲು ಶ್ರೀ ರಾಮಚಂದ್ರ ತೀರ್ಥರ ಪೂರ್ವಾಶ್ರಮದ ವಂಶದವರಾದ ಶ್ರೀ ರಾಘವೇಂದ್ರಾಚಾರ್ಯರು ಸಾಹಿತ್ಯ ವೇದಾಂತ ಶಾಸ್ತ್ರಗಳಲ್ಲಿ ವ್ಯುತ್ಪನ್ನರಾಗಿದ್ದರು. ತಿರುಪತಿಯ ಸಭೆಗೆ ಪ್ರತಿ ವರುಷ ಧರ್ಮಾಧಿಕಾರಿಗಳಾಗಿ ಹೋಗುತ್ತಲಿದ್ದರು

## ೯೮ ಡಂಬಳ ವೆಂಕಟಾಚಾರ್ಯ

ಇವರು ನ್ಯಾಯ, ವೇದಾಂತ ಶಾಸ್ತ್ರಗಳಲ್ಲಿ ಘನಪಂಡಿತರಾಗಿದ್ದರು. ಇವರು ಪುದುಕೋಟ್ಟಾ ಸಂಸ್ಥಾನದ ನವರಾತ್ರಿ ವಿದ್ವತ್ ಸಭೆಯ ಧರ್ಮಾಧಿಕಾರಿಗಳಾಗಿ ಬಹಳ ವರುಷಗಳವರೆಗೆ ಕೆಲಸಮಾಡಿದರು.

## ೯೯ ಮೂರು ಇಟ್ಟಿಗೆ ಸೇತುಮಾಧವಾಚಾರ್ಯರು

ಶ್ರೀ ವ್ಯಾಸರಾಯ ಮಠದ ಆರುವೇಲ ಮನೆತನದಲ್ಲಿ ಜನಿಸಿದ ಸೇತುಮಾಧವಾಚಾರ್ಯರು ವ್ಯಾಕರಣ ಶಾಸ್ತ್ರದಲ್ಲಿ ಮಹಾ ಪಂಡಿತರಾಗಿದ್ದರು. ವೇದಾಂತದಲ್ಲಿಯೂ ಅವರಿಗೆ ಗತಿ–ಮತಿಗಳಿದ್ದವು. ಪುದುಕೋಟ್ಟೆಯ ಸಂಸ್ಥಾನದಲ್ಲಿ ಇವರು ವ್ಯಾಕರಣಾಚಾರ್ಯರೆಂದು ಮಾನಿತರಾಗಿದ್ದರು.

## ೧೦೦ ರಾಘವೇಂದ್ರಾಚಾರ್ಯ

ಆರುವೇಲ ಮನೆತನದ ರಾಘವೇಂದ್ರಾಚಾರ್ಯರು ಸಾಹಿತ್ಯದಲ್ಲಿ ಸಿದ್ಧಹಸ್ತರೂ ವೇದಾಂತದಲ್ಲಿ ಅಭಿಜ್ಞರೂ ಆಗಿದ್ದರು.

## ೧೦೧ ಗುಂಡು ಕುಪ್ಪಾಚಾರ್ಯ

ಆರುವೇಲ ಮನೆತನದ ಗುಂಡು ಕುಪ್ಪಾಚಾರ್ಯರು ನ್ಯಾಯ ಶಾಸ್ತ್ರದಲ್ಲಿ ಒಳ್ಳೆ ವಿದ್ವಾಂಸರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತ ಓದಿ ಅವರಿಗೆ ಅತ್ಯಂತ ಪ್ರೀತ್ಯಾಸ್ಪದವಾಗಿದ್ದರು.

## ೧೦೨ ಕೋಯಿಮುತ್ತೂರ ವಿಜಯೀಂದ್ರಾಚಾರ್ಯ

ಆರುವೇಲ ಮನೆತನದ ಶ್ರೀ ವಿಜಯೀಂದ್ರಾಚಾರ್ಯರು ನ್ಯಾಯದಲ್ಲಿ ನಿಪುಣರು. ವೇದಾಂತದಲ್ಲಿ ವಿದ್ವಾಂಸರು. ಸಾಹಿತ್ಯದಲ್ಲಿ ಸಿದ್ಧಹಸ್ತರು. ಪಾಠ–ಪ್ರವಚನದಲ್ಲಿ ಬದ್ಧದೀಕ್ಷರು ಆಗಿದ್ದರು.

## ೧೦೩ ಮಧುರೆಯ ಶ್ರೀರಂಗಭೀಮಾಚಾರ್ಯ

ಇವರು ಪ್ರಚಂಡ ನೈಯಾಯಿಕರು. ಭೀಮಾಚಾರ್ಯರು ಸಭೆಯಲ್ಲಿದ್ದಾರೆಂದು ತಿಳಿದರೆ ಯಾವ ಪಂಡಿತನಿಗೂ ವಾಕ್ಯಾರ್ಥ ಮಾಡುವ ಧೈರ್ಯವಾಗುತ್ತಿದ್ದಿಲ್ಲ. ಅವರ ಹೆಸರು ಕೇಳಿದರೆ ವಾದಿಗಳು ನಡುಗಿ ಹೋಗುತ್ತಿದ್ದರು.

ಇವರು ಪಂಡಕಲ್ ರಾಮರಾಯರ ತಿರುಪತಿ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ಮೂರೂ ಮತದ ವಿದ್ಯಾರ್ಥಿಗಳು ಇವರಲ್ಲಿ ಓದಿ ಅಗ್ರಗಣ್ಯ ವಿದ್ವಾಂಸರಾಗಿದ್ದಾರೆ.

ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಆಚಾರ್ಯರಿಗೆ ನಿರತಿಶಯ ವಿಶ್ವಾಸ. ಇವರು ಒಮ್ಮೆ ಶ್ರೀ ಮಠಕ್ಕೆ ಬಂದಾಗ ಶ್ರೀ ಪಾಂಡುರಂಗೀ ಕೃಷ್ಣಾಚಾರ್ಯರು ಕಂಚಿಯ ಪಟ್ಟಣ್ಣಾಚಾರ್ಯರನ್ನು ಕರೆದುಕೊಂಡು ಬಂದರು. ಶ್ರೀ ಯಲತ್ತೂರ ಕೃಷ್ಣಾಚಾರ್ಯರ ಸಹಾಧ್ಯಾಯಿಗಳೂ, ಗುರುಬಂಧುಗಳೂ, ಆದ ಪಟ್ಟಣ್ಣಾಚಾರ್ಯರು ಕಂಚೀ ಪಟ್ಟಣದ ಸುಪ್ರಸಿದ್ಧ ವಿದ್ವಾಂಸರಾದ ಶೃಂಖಲಾಚಾರ್ಯರ ಮಕ್ಕಳು. ತಂದೆಯಂತೆಯೇ ಕೋಟಿ ಕ್ರಮ ಪದ್ಧತಿಯ ವಾಕ್ಯಾರ್ಥದಲ್ಲಿ ನಿಸ್ಸೀಮರು.

ಶ್ರೀಪಾದಂಗಳವರ ಸಮಕ್ಷ ಪಟ್ಟಣ್ಣಾಚಾರ್ಯರಿಗೂ ಶ್ರೀರಂಗಭೀಮಾಚಾರ್ಯರಿಗೂ ಸತ್‌ಪ್ರತಿಪಕ್ಷದಲ್ಲಿ ಒಳ್ಳೆ ತುರುಸಿನ ವಾದ ವಿವಾದವಾಯಿತು. ಇಬ್ಬರೂ ಶಿಖರ ಪಂಡಿತರು. ತರ್ಕ ಶಾಸ್ತ್ರದ ತಳ ತುದಿಗಳನ್ನು ತಳಕಾಡಿ ತತ್ತ್ವಾರ್ಥವನ್ನು ಸೋಸಿ ಬಂದವರು. ಅನೇಕ ವಾದ ಪ್ರವಾಹಗಳಲ್ಲಿ ಈಸಿ ಬಂದವರು. ಅವರಿಬ್ಬರ ತಾರ್ಕಿಕ ತಾಕಲಾಟವು ನಿಜವಾಗಿಯೂ ಪ್ರೇಕ್ಷಣೀಯವಾಗಿತ್ತು. ಎಂಟು ಗಂಟೆಯ ವರೆಗೆ ವಾಕ್ಯಾರ್ಥವು ನಡೆದು ಪಟ್ಟಣ್ಣಾಚಾರ್ಯರು ಪರಾಭೂತರಾದರು. ಶ್ರೀರಂಗಭೀಮಾಚಾರ್ಯರು ವಿಜಯ ಶ್ರೀಯಿಂದ ವಿಶಿಷ್ಟ ಗೌರವವನ್ನು ಪಡೆದು ವಿಜೃಂಭಿಸಿದರು.

ಆ ಕಾಲದಲ್ಲಿ ದಕ್ಷಿಣ ದೇಶದಲ್ಲಿ ಶ್ರೀರಂಗಭೀಮಾಚಾರ್ಯರೆಂದರೆ ಶಾಸ್ತ್ರೀಯ ಸಂಸಾರದ ಅನಭಿಷಿಕ್ತ ಪಂಡಿತ ಚಕ್ರವರ್ತಿಗಳು ಎಂದು ಮೆರೆದರು.

## ೧೦೪ ಹುತ್ತಪಟ್ಟಿ ಕೃಷ್ಣಾಚಾರ್ಯ

ಇವರು ಚತುರ್ದಶ ವಿದ್ಯಾಚಕ್ರವರ್ತಿ ಎಂದು ಪ್ರಖ್ಯಾತರಾದ ಅಚ್ಚಣ್ಣಾಚಾರ್ಯರ ಚಿರಂಜೀವರು. ಇವರು ಸಾಹಿತ್ಯ, ಅಲಂಕಾರ ಶಾಸ್ತ್ರಗಳಲ್ಲಿ ಅದ್ಭುತ ಪಾಂಡಿತ್ಯವನ್ನು ಪಡೆದಿದ್ದರು. ವ್ಯಾಕರಣ ಶಾಸ್ತ್ರದಲ್ಲಿಯೂ ಅವರಿಗೆ ಒಳ್ಳೆ ವ್ಯುತ್ಪತ್ತಿ ಇದ್ದಿತು. ವೇದಾಂತದಲ್ಲಿಯೂ ಅವರು ಪರಿಯಾಪ್ತವಾದ ಜ್ಞಾನವನ್ನು ಸಂಪಾದಿಸಿದ್ದರು.

ಉತ್ತರಾದಿ ಮಠದ ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ಇವರು ಆ ಮಠದ ಆಸ್ಥಾನ ವಿದ್ವಾಂಸರೆಂದು ಗೌರವಿತರಾಗಿದ್ದರು.

ಇವರ ಆಶುಕವಿತ್ವ, ಕಲ್ಪನಾ ಕೌಶಲ, ಗದ್ಯ-ಪದ್ಯ ಪ್ರಬಂಧಗಳ ಸದ್ಯಃ ಪ್ರಣಯನ ಪಟುತ್ವ, ಲೋಕಂಪೃಣವಾದ ಮಧುರ ಶ್ಲೋಕ ನಿರ್ಮಾಣ ನೈಪುಣಿ ಮುಂತಾದ ಗುಣಗಳನ್ನು ಕಂಡು ಶ್ರೀ ಸತ್ಯವೀರ ಶ್ರೀಪಾದಂಗಳವರು ಅವರಿಗೆ—

"ಸರಸಕವಿ ಸಾರ್ವಭೌಮ" ಎಂಬ ಬಿರುದನ್ನು ದಯಪಾಲಿಸಿದ್ದರು. ಇವರು ಯಾವಾಗಲೂ ಶ್ರೀಮಠದೊಂದಿಗೆ ಸಂಚಾರ ಮಾಡುತ್ತಿದ್ದರು. ಪ್ರತಿ ಊರಿನಲ್ಲಿಯೂ ತುತ್ತು ಪಟ್ಟೆ ಆಚಾರ್ಯರ ಉಪನ್ಯಾಸವು ಜರುಗುತ್ತಲಿದ್ದವು. ಇವರ ಭಾಷಣವನ್ನು ಕೇಳಲು ಜನರು ಆಸಕ್ತಿಯಿಂದ ಮುಕುರುತ್ತಿದ್ದರು.

ಇವರು "ಮಧ್ವ ಸಿದ್ಧಾಂತ ನಾಟಕ" ಎಂಬ ಸುಂದರವಾದ ನಾಟ್ಯ ಪ್ರಬಂಧವನ್ನೂ "ಸತ್ಯ ಪರಾಕ್ರಮ ವಿಜಯ" ಎಂಬ ಒಂದು ಸರಸ ಸುಂದರ ಕಾವ್ಯವನ್ನೂ ಬರೆದಿದ್ದಾರೆ.

## ೧೦೫ ಚಿಕ್ಕಬಳ್ಳಾಪುರ ಶಾಮಾಚಾರ್ಯ

ಇವರು ಗೌಡಗಿರಿ ವೆಂಕಟನರಸಿಂಹಾಚಾರ್ಯರ ಸಹೋದರರು. ನ್ಯಾಯ ಶಾಸ್ತ್ರದಲ್ಲಿ ಮಹಾ ಪಂಡಿತರು. ವೇದಾಂತದಲ್ಲಿ ವಿಶಾರದರು. ಶ್ಯಾಮಕೃತ ಅನ್ವಿತಾಭಿಧಾನ ಎಂಬ ಪ್ರೌಢ ಗ್ರಂಥವನ್ನು ಬರೆದು ಪ್ರಸಿದ್ಧರಾಗಿದ್ದಾರೆ.

## ೧೦೬ ಹೊಳವನಹಳ್ಳಿ ಶೇಷಾಚಾರ್ಯ

ಇವರು ತರ್ಕ ಶಾಸ್ತ್ರದಲ್ಲಿ ತಲಸ್ಪರ್ಶಿ ಪಾಂಡಿತ್ಯವನ್ನು ಪಡೆದಿದ್ದರು. ವೇದಾಂತ ವಿದ್ಯೆಯಲ್ಲಿಯೂ ಇವರು ಅಸಾಮಾನ್ಯವಾದ ವಿದ್ವತ್ತೆಯನ್ನು ಬೆಳೆಸಿಕೊಂಡಿದ್ದರು. ಮುಳಬಾಗಿಲದ ಶ್ರೀ ಹರಿಯಪ್ಪಾಚಾರ್ಯರು (ಶ್ರೀಪಾದರಾಜ ಮಠದ ಶ್ರೀಸುಧೀನಿಧಿ ತೀರ್ಥರು) ಈ ಹೊಳೆವನಹಳ್ಳಿ ಆಚಾರ್ಯರಲ್ಲಿ ಅಧ್ಯಯನ ಮಾಡಿ ಸರ್ವಮಾನ್ಯ ಪಂಡಿತರಾಗಿದ್ದರು. ಈ ಶೇಷಾಚಾರ್ಯರು ಪೌರಾಣಿಕರತ್ನ ಹೊಳವನಹಳ್ಳಿ ಶೇಷಾಚಾರ್ಯರ ಅಜ್ಜಂದಿರು.

## ೧೦೭ ಗೋಪಾಲಕೃಷ್ಣಾಚಾರ್ಯ

ಇವರು ನಿಗಮಾಂತ ನಿಷ್ಣಾತ ಶ್ರೀಮುಷ್ಣಮನೆತನದವರು. ವೇದಾಂತ ಶಾಸ್ತ್ರದಲ್ಲಿ ಮಹಾ ವಿದ್ವಾಂಸರು. ಶ್ರೀ ಶತಾವಧಾನಿ ಲಕ್ಷ್ಮಣಾಚಾರ್ಯರಿಗೆ ಪಾಠ ಹೇಳಿದ ಮಹಾ ಪಂಡಿತರು.

ಈ ಗೋಪಾಲ ಕೃಷ್ಣಾಚಾರ್ಯರು ಬಹು ಕಾಲ ಬೆಂಗಳೂರಿನಲ್ಲಿ ಇದ್ದು, ವೇದಾಂತ ಪಾಠ ಹೇಳುತ್ತಲಿದ್ದರು.

ದಿವಾನ ವ್ಹಿ. ಪಿ. ಮಾಧವರಾಯರು ಈ ಆಚಾರ್ಯರಲ್ಲಿ ಅನೇಕ ಅದ್ವೈತ ಗ್ರಂಥಗಳ ಪಾಠ ಕೇಳಿದರು.

ಶ್ರೀ ಗೋಪಾಲ ಕೃಷ್ಣಾಚಾರ್ಯರು ವ್ಯಾಸರಾಜ ಮಠದ ಶ್ರೀ ಜಗನ್ನಾಥ ತೀರ್ಥ ಯತಿಗಳ ಭಾಷ್ಯದೀಪಿಕಾ ಗ್ರಂಥವನ್ನು ಸಂಶೋಧಿಸಿ ಮೊಟ್ಟಮೊದಲು ಅಚ್ಚುಹಾಕಿಸಿ ಪ್ರಕಟಗೊಳಿಸಿದರು.

ಶ್ರೀ ೧೮೮ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರು ಸುಧಾ ಪಾಠ ಹೇಳುವ ದೃಶ್ಯ

ಎಡದಿಂದ ೧) ಶ್ರೀ ಕೇಶಾಚಾರ್ಯ ಬಾಯರಿ ೨) ಶ್ರೀ ಡಿ. ಪ್ರಲ್ಹಾದಾಚಾರ್ಯ ೩) ಶ್ರೀ ಶ್ರೀ ಪೇಜಾವರಶ್ರೀಗಳು ೪) ಶ್ರೀ ಶೇಷಗಿರಿರಾವ
೫) ಶ್ರೀ ಹಯವದನ ಪುರಾಣಿಕ ೬) ಶ್ರೀ ಪುಂಡರೀಕಾಕ್ಷಾಚಾರ್ಯ

## ೧೦೮. ಶ್ರೀ ಯಾದವಾರ್ಯರು

ಗೃಹಸ್ಥಾಶ್ರಮಿಗಳಾದರೂ ಪೀಠಾಧಿಪತಿಗಳಿಗಿಂತ ಹೆಚ್ಚಿನ ಮಾನ-ಮನ್ನಣೆಗಳನ್ನು ಸಮಾಜದಲ್ಲಿ ಪಡೆದ ಕೆಲವೇ ಪುಣ್ಯಾತ್ಮರಲ್ಲಿ ಶ್ರೀ ಯಾದವಾರ್ಯರು ಅಗ್ರಗಣ್ಯರಾಗಿದ್ದಾರೆ. ಅವರು ಜ್ಞಾನ, ಕರ್ಮ, ಭಕ್ತಿಗಳ ಸುಂದರ ಸಮನ್ವಯದ ಸುಪ್ರತೀಕರಾಗಿದ್ದಾರೆ. ಆದುದರಿಂದ ಅವರಿಗೆ ಅನೇಕ ಮನೆತನಸ್ಥ ಆಚಾರ್ಯರು ಶಿಷ್ಯರಾಗಿ ಇಂದಿಗೂ ಅವರನ್ನು ತಮ್ಮ ಕುಲ-ಗುರುಗಳೆಂದು ಆರಾಧಿಸುತ್ತಿದ್ದಾರೆ.

ಕರ್ನಾಟಕದಲ್ಲಿ ಸುಪ್ರಸಿದ್ಧವಾದ— ಉಮರ್ಜಿ, ಲಿಂಗೇರಿ, ಕಲ್ಲಾಪುರ, ಬಂಕಾಪುರ, ಗುರ್ಜಾರಿ, ಬಿದರಹಳ್ಳಿ, ಶರ್ಕರಾ, ಕಾಡಣೆ, ಆಯಿ ಮುಂತಾದ ಮಹಾ-ಮಹಾ ಜ್ಞಾನಿಗಳೂ, ತಪಸ್ವಿಗಳೂ ಜನಿಸಿದ ದೊಡ್ಡ-ದೊಡ್ಡ ಮನೆತನದವರು ಶ್ರೀ ಯಾದವಾರ್ಯರ ಶಿಷ್ಯತ್ವ ಸೌಭಾಗ್ಯವನ್ನು ಪಡೆದು ಮೆರೆದಿದ್ದಾರೆ.

ಉತ್ತರಾದಿ ಮಠದ ಶ್ರೀ ೧೦೮ ಶ್ರೀ ವಿದ್ಯಾಧೀಶ ಶ್ರೀಗಳವರ ಪೂರ್ವಾಶ್ರಮದ ತಮ್ಮಂದಿರೂ, ಪ್ರಚಂಡ ಪಂಡಿತರೂ, ಗ್ರಂಥಕಾರರೂ ಆದ ಪಾಂಡುರಂಗಿ ಕೇಶವಾಚಾರ್ಯರು (ಗುರುರಾಜರು) ಭಾಗವತದ ಕಡೆಗೆ ಲಕ್ಷ್ಯ ಕೊಟ್ಟಿದ್ದಿಲ್ಲ. ಆದರೆ ಕೊನೆಗೆ ಶ್ರೀ ಯಾದವಾರ್ಯರ ಪ್ರಭಾವದಿಂದ ಭಾಗವತದ ಹುರುಳು-ಹಿರಿಮೆಗಳನ್ನು ಅರಿತುಕೊಂಡು, ಅದರ ಸ್ವಾರಸ್ಯವನ್ನು ತಿಳಿದು ಭಕ್ತಿ-ಭಾವೋದ್ರೇಕವನ್ನು ಹೊಂದಿ ಭಗವಂತನನ್ನು ಆರಾಧಿಸಿದರೆಂದು ಐತಿಹ್ಯವಿದೆ.

ಇದರಂತೆ ಯಾದವಾರ್ಯರು ಗಲಗಲಿ ಆಚಾರ್ಯರ ಮೂಲ ಪುರುಷರಾದ ಶ್ರೀಪತ್ಯಾಚಾರ್ಯರಿಗೆ ವೇದಾಂತೋಪದೇಶದಿಂದ ಮನಃ ಪರಿವರ್ತನೆ ಮಾಡಿ ಸಂಗ್ರಾಮಕ್ಕೆ ಹೊರಟವರು ಸುಧಾ ಪಾಠಕ್ಕೆ ಕೂಡುವಂತೆ ಮಾಡಿದರು.

ಹೀಗೆ ಕರ್ನಾಟಕ, ಮಹಾರಾಷ್ಟ್ರ ದೇಶದ ಅನೇಕಾನೇಕ ಮನೆತನದವರು ಶ್ರೀ ಯಾದವಾರ್ಯರ ಕೃಪಾಕಟಾಕ್ಷದಿಂದ ಮಾಧ್ವರಾಗಿ ಉಳಿದಿದ್ದಾರೆ. ವಿದ್ವಾಂಸರಾಗಿ ಬೆಳೆದಿದ್ದಾರೆ.

ಶ್ರೀ ಪುರಂದರದಾಸರಂತೆ ಯಾದವಾರ್ಯರೂ ಕೂಡ ಮೊದಲು ದುಡ್ಡಿಗೆ ದುಡ್ಡು ಕೂಡಿಟ್ಟು ಬಡ್ಡಿಯ ಗಂಟು ಬೆಳೆಸುವ ಜಿಬುಟ ಚಿನಿವಾಲರೇ ಆಗಿದ್ದರು.

ಯಾದಪ್ಪ ನಾಯಕರು ಜಿಪುಣರಾದರೂ ಆಸ್ತಿಕರು. ಪ್ರಯಾಣಕ್ಕೆ ದುಡ್ಡು ತೆಗೆದುಕೊಂಡು ಹೊರಟಾಗ ಅವರಿಗೆ ದೇವರ ನೆನಪಾಗುತ್ತಿತ್ತು.

"ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿ ನಂದನಃ ।
ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮ ಲಕ್ಷ್ಮಣೌ ॥

ಎಂಬ ಮಂತ್ರವನ್ನು ಅನ್ನುತ್ತಲೇ ಹೋಗುತ್ತಿದ್ದರಂತೆ.

" ವಿಪ್ರವಾಕ್ಯೋ ಜನಾರ್ದನಃ ಎಂಬಂತೆ ತನ್ನ ಈ ಭಕ್ತನ ನುಡಿ" ಯನ್ನು ನಿಜ ಮಾಡಲಿಕ್ಕಾಗಿ ಭಗವಂತನು ಪ್ರಯಾಣದಲ್ಲಿ ಮುಂದೆ ನರಸಿಂಹ, ಹಿಂದೆ ಶ್ರೀ ಕೃಷ್ಣ, ಎಡ ಬಲದಲ್ಲಿ ರಾಮ ಲಕ್ಷ್ಮಣ ರೂಪದಿಂದ ನಿಂತು ಅವರನ್ನು ರಕ್ಷಿಸುತ್ತಿದ್ದನಂತೆ.

ಒಮ್ಮೆ ಕಳ್ಳರು ಸಮೀಪದ ಶಹರಿನಲ್ಲಿ ಒಳ್ಳೇ ವ್ಯಾಪಾರ ಮಾಡಿ ವಿಪುಲ ದ್ರವ್ಯವನ್ನು ಗಳಿಸಿ ತನ್ನ ಊರಿಗೆ ತೆಗೆದುಕೊಂಡು ಹೊರಟ ಯಾದಪ್ಪನಾಯಕನನ್ನು ಅಂದು ಸುಲಿಯಬೇಕೆಂದು ಹೊಂಚು ಹಾಕಿ ಬೆನ್ನಟ್ಟಿ ಬಂದರಂತೆ. ಆದರೆ ಇದೇನು ಆಶ್ಚರ್ಯ ! ಯಾದಪ್ಪ ನಾಯಕನ ಮುಂದೆ ಒಂದು ಸಿಂಹ, ಹಿಂದೆ ಬಡಿಗೆ ಹಿಡಿದು ಕೊಂಡ ಒಬ್ಬ ತುರುಗಾಹಿ, ಎಡಬಲಗಳಲ್ಲಿಯಂತೂ ಬಿಲ್ಲಿನಲ್ಲಿ ಬಾಣವನ್ನು ಹೆದೆ ಯೇರಿಸಿ ಖಡ್ಗ ಪಾಣಿಗಳಾದ ಇಬ್ಬರು ಶೂರ ಸೈನಿಕರು ನಿಂತಿದ್ದರು.

ಅದನ್ನು ಕಂಡು ಆಶ್ಚರ್ಯ ಚಕಿತರಾದ ಆ ಚೋರರು ಯಾದಪ್ಪ ನಾಯಕರ ಹತ್ತಿರ ಬಂದು "ಸ್ವಾಮಿ ನಾಯಕರೇ ! ಇಷ್ಟು ಜನ ಸೇವಕರನ್ನು ನಿಮ್ಮ ಬೆಂಗಾ ವಲಿಗೆ ಎಂದಿನಿಂದ ನಿಯಮಿಸಿಗೊಂಡಿರಿ?" ಎಂದು ಕೇಳಿದರು.

ಅದಕ್ಕೆ ನಾಯಕರು "ಅಯ್ಯಾ, ನಾನಾರನ್ನೂ ನಿಯಮಿಸಿಲ್ಲವಲ್ಲ ! ನಾನೇ ಶಹ ರದ ಸಂತೆಯಲ್ಲಿ ವ್ಯಾಪಾರಮಾಡಿ ತಂದ ಗಂಟನ್ನು ಸುರಕ್ಷಿತ ಮನೆಗೆ ಹೇಗೆ ಒಯ್ದೇ ನೆಂದು ಚಿಂತೆಯಲ್ಲಿದ್ದಾಗ ನಿಮ್ಮನ್ನು ಕಂಡು ಕೈಕಾಲೇ ಹೋಗಿದ್ದವು. ಆದರೆ ಈಗ ನೀವೇನು ಹೇಳುತ್ತಿರುವಿರಿ ! ನನ್ನ ಹಿಂದೆ ಮುಂದೆ ಯಾರಾದರೂ ಕಾವಲಾಗಿರು ವರೇ ! ನೀವು ಕಂಡಿದ್ದೀರಾ ? " ಎಂದು ಕೇಳಿದರು.

ಅದಕ್ಕೆ ಆ ಕಳ್ಳರು ಇದೀಗ ತಾವು ನಿಜವಾಗಿ ಕಂಡುದನ್ನು ಹೇಳಿದರು. ಅದನ್ನು ಕೇಳಿದ ಕೂಡಲೇ ಯಾಗವಾರ್ಯರಿಗೆ ಮೈ ಜುಮ್ಮೆಂದಿತು. ನಿಜವಾಗಿಯೂ ನಾನು ಆ 'ಅಗ್ರತೋನಾರಸಿಂಹಶ್ಚ' ಎಂಬ ಮಂತ್ರವನ್ನು ಹೇಳಿದ್ದರಿಂದ ಸ್ವಾಮಿ ಶ್ರೀ ಹರಿಯು ನನ್ನ ಹಿಂದೆ ಮುಂದೆ ರಾಮ ಕೃಷ್ಣ ನರಸಿಂಹಾದಿ ರೂಪಗಳಿಂದ ನಿಂತು ರಕ್ಷಣೆ ಮಾಡುತ್ತಲಿದ್ದಾನೆ. ಆದರೆ ನನಗೆ ಆ ಭಗವಂತನ ದರ್ಶನವಾಗಲಿಲ್ಲ. ಆ ರೂಪಗಳನ್ನು ಕಂಡ ಈ ಕಳ್ಳರೇ ಪುಣ್ಯವಂತರು ಎಂದು ಅವರನ್ನು ಅಭಿನಂದಿಸಿ ತಾವು ತಂದ ದುಡ್ಡನ್ನೆಲ್ಲ ಆ ಕಳ್ಳರಿಗೆ ಒಪ್ಪಿಸಿ ಊರಿಗೆ ಬಂದರು.

ಇಪ್ಪು ವರ್ಷ ಸಂಪಾದಿಸಿದ ಅಪಾರ ಐಶ್ವರ್ಯವನ್ನೆಲ್ಲ ದಾನ ಮಾಡಿ ವಿದ್ಯಾಭ್ಯಾಸ ಮಾಡಲಿಕ್ಕಾಗಿ ಕಾಶಿಗೆ ಹೊರಟರು. ಕಾಶಿಯಲ್ಲಿ ಕಾವ್ಯ, ವ್ಯಾಕರಣ, ಮೀಮಾಂಸಾ, ನ್ಯಾಯ ಶಾಸ್ತ್ರವನ್ನು ಓದಿ ಚತುಃಶಾಸ್ತ್ರಗಳಲ್ಲಿ ಮಹಾ ಪಂಡಿತರಾದರು.

ಆದರೂ ನಾಯಕರಿಗೆ ಈ ಪರಶಾಸ್ತ್ರ ಪಾಂಡಿತ್ಯದಿಂದ ತೃಪ್ತಿ ಇದ್ದಿಲ್ಲ. ಶ್ರೀ ಮಧ್ವ ಶಾಸ್ತ್ರವನ್ನು ಓದಿ ಜನ್ಮ ಸಾರ್ಥಕ ಮಾಡಿಕೊಳ್ಳುವದು ಅವರ ಗುರಿಯಾಗಿದ್ದಿತು.

ಇವರು ಕಾಶಿಯಿಂದ ಊರಿಗೆ ಬಂದಾಗ ಸುದೈವದಿಂದ ಅವರ ಅಣ್ಣಂದಿರಾದ ರಾಮಪ್ಪಯ್ಯನವರು ಶ್ರೀ ಉತ್ತರಾದಿ ಮಠಾಧೀಶರಾದ ಶ್ರೀ ವೇದವ್ಯಾಸ ತೀರ್ಥರಿಂದ ಆಶ್ರಮ ಸ್ವೀಕರಿಸಿ ಸನ್ಯಾಸಿಗಳಾಗಿ ಶ್ರೀ ವೇದೇಶ ತೀರ್ಥರೆಂದು ಪ್ರಸಿದ್ಧರಾಗಿದ್ದರು. ಯಾದವಾರ್ಯರು ಶ್ರೀ ವೇದೇಶ ತೀರ್ಥರಲ್ಲಿಯೇ ಸಮಗ್ರ ವೇದಾಂತ ಶಾಸ್ತ್ರವನ್ನು ಅಧ್ಯಯನ ಮಾಡಿದರು.

ಸುಧಾ ವ್ಯಾಸತ್ರಯಾದಿ ಗ್ರಂಥಗಳೆಲ್ಲವೂ ಅವರಿಗೆ ಕರತಲಾಮಲಕವಾದವು. ಆ ದಿವ್ಯ ಗ್ರಂಥಗಳ ಸ್ವಾರಸ್ಯವನ್ನು ಜನರಿಗೆ ತಿಳಿಸಿಕೊಡಬೇಕೆಂದು ಬುದ್ಧಿ ಉದಯಿಸಿ ಅನೇಕ ಜಯತೀರ್ಥರ ಟೀಕಾ ಗ್ರಂಥಗಳಿಗೆ ಸುಂದರವಾದ ಟಿಪ್ಪಣಿಗಳನ್ನು ರಚಿಸಿದರು.

ಶ್ರೀಮನ್ನ್ಯಾಯಸುಧೆಗೆ ಯಾದವಾರ್ಯರು ರಚಿಸಿದ ಟಿಪ್ಪಣಿಯು ಅತ್ಯಪೂರ್ವವಾಗಿದೆ. ಟೀಕಾ ಪಂಕ್ತಿಗಳಲ್ಲಿ ಮಧ್ವಾಚಾರ್ಯರ ಹೃದ್ಗತ ಭಾವಬೋಧವು ಸಮ್ಯಕ್ತಯಾ ಆಗಬೇಕಾದರೆ ಯಾದುಪತ್ಯ ಟಿಪ್ಪಣಿಯನ್ನು ನೋಡಬೇಕು.

ಇದರಂತೆ ಇವರು ತತ್ವಸಂಖ್ಯಾನ, ಯಮಕಭಾರತ, ಭಾಗವತ ತಾತ್ಪರ್ಯ ಮುಂತಾದವುಗಳಿಗೆ ಟಿಪ್ಪಣಿ ಬರೆದು ಮಹೋಪಕಾರ ಮಾಡಿದ್ದಾರೆ.

## ೧೧೯. ಶ್ರೀನಿವಾಸ ತೀರ್ಥರು

ಟಿಪ್ಪಣ್ಯಾಚಾರ್ಯರೆಂದು ಸುಪ್ರಸಿದ್ಧರಾದ ಬಿದರಹಳ್ಳಿ ಶ್ರೀನಿವಾಸಾಚಾರ್ಯರು ಭಗವದ್ಭಕ್ತರಾದ ಯಾದವಾರ್ಯರ ಶಿಷ್ಯರು. ಹಾಗೂ ಅವರ ತಮ್ಮನ ಮಕ್ಕಳು. ಇವರ ವಿದ್ಯಾಭ್ಯಾಸವೆಲ್ಲವೂ ಶ್ರೀ ಯಾದವಾರ್ಯರ ಬಳಿಯಲ್ಲಿಯೇ ಆಯಿತು.

ಯಾದವಾರ್ಯರಿಗೆ ಭಗವಾನ್ ಬಾದರಾಯಣ ದೇವರೇ ಪ್ರಸನ್ನರಾಗಿದ್ದರು. ಅವರ ಅನುಗ್ರಹದಿಂದ ಶ್ರೀನಿವಾಸಾಚಾರ್ಯರಿಗೂ ಸರ್ವ ಶಾಸ್ತ್ರಗಳು ಕರತಲಾಮಲಕ ವಾದವು.

ಗೌತಮ ಗೋತ್ರದ ಕೃಷ್ಣಾಚಾರ್ಯ ಹಾಗೂ ತಿರುಮಲಾಂಬಾ ದಂಪತಿಗಳು ಸತ್ಸಂತಾನವನ್ನು ಪಡೆಯಬೇಕೆಂದು ತಿರುಪತಿಯ ಶ್ರೀನಿವಾಸನ ಸೇವೆಯನ್ನು ಬಹು ಕಾಲ ಮಾಡಿದರು. ಕೊನೆಗೆ ಅವನ ಅನುಗ್ರಹದಿಂದ ಹುಟ್ಟಿದ ಮಗುವಿಗೆ ಶ್ರೀನಿವಾಸ ಎಂದೇ ನಾಮಕರಣ ಮಾಡಿದರು. ಯಾದವಾರ್ಯರಲ್ಲಿ ಅಧ್ಯಯನಕ್ಕಾಗಿ ಇಟ್ಟರು.

ತೈಲಬುದ್ಧಿಯ ಶ್ರೀನಿವಾಸ— ಸಾಹಿತ್ಯರಸರತ್ನಾಕರದಲ್ಲಿ ಈಸಾಡಿದ. ಶಾಸ್ತ್ರ ಗಳನ್ನು ತಲಕಾಡಿದ. ವೇದಾಂತ ಸಾಮ್ರಾಜ್ಯದ ತುದಿ ಮೊದಲುಗಳನ್ನೆಲ್ಲ ಸೂರಾಡಿದ. ವಿದ್ವತ್ ಪ್ರಪಂಚದಲ್ಲಿ ಪ್ರಚಂಡ ಪಂಚಾನನಂತೆ ಗುಡುಗಾಡಿದ.

ಆಚಾರ್ಯರು ನ್ಯಾಯ, ವ್ಯಾಕರಣ, ಮೀಮಾಂಸಾ, ವೇದಾಂತಾದಿ ಶಾಸ್ತ್ರ ಗಳಲ್ಲಿ ಪರವಾದಿಗಳನ್ನು ಗೆದ್ದು, ಜಯಧ್ವಜವನ್ನು ಮೆರೆಯಿಸಿದರು. ದೇಶ–ದೇಶಗಳಲ್ಲಿ ದಿಗ್ವಿಜಯ ಮಾಡಿ, ಜಯಪತ್ರ ಮಾನಪತ್ರಗಳನ್ನು ತಂದರು. ಸಿರಿ–ಸಂಪದಗಳೂ ಇವರ ಬೆಂಬತ್ತಿ ಬಂದವು.

ಇದೇ ಸಂದರ್ಭದಲ್ಲಿ ಶ್ರೀ ಯಾದವಾರ್ಯರ ಭೆಟ್ಟಿಯಾಯಿತು. ಶಿಷ್ಯನ ಈ ಕ್ಷುದ್ರವಾದ ಸಾಂಸಾರಿಕ ಸುಖೋಪಭೋಗದ ಲಾಂಪಟ್ಯಗಳನ್ನು ಕಂಡು ಅವರಿಗೆ ಕೆಡುಕೆನಿಸಿತು. ಶಿಷ್ಯನಿಗೆ ಎರಡೇ ಮಾತುಗಳನ್ನು ಹೇಳಿದರು—

"ಬ್ರಾಹ್ಮಣಸ್ಯಚ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೆ ।
ದುರ್ಲಭೋ ಮಾನುಷೋ ದೇಹಃ ತತ್ರಾಪಿ ದುರ್ಲಭಂ ಮನ್ಯೆ
ವೈಕುಂಠ ಪ್ರಿಯದರ್ಶನಂ ॥"

ಈ ಎರಡೇ ಮಾತುಗಳಿಂದ ಶ್ರೀ ಶ್ರೀನಿವಾಸಾಚಾರ್ಯರ ಮನಸ್ಸು ಪರಿವರ್ತನ ವಾಯಿತು. ಶ್ರೀನಿವಾಸಾಚಾರ್ಯರು ಅಂದೇ— ಧನ, ದೌಲತ್, ಮಾನ, ಮಾನಿನೀ ಮೋಹ, ವಿಜಯ–ವಿಲಾಸಗಳಿಂದ ಶಕ್ಷಣ ದೂರ ಸರಿದರು.

ಯಾದವಾರ್ಯರ ಆದೇಶದಂತೆ ಸರ್ವಜ್ಞಾಚಾರ್ಯರ ಸೇವೆಗೆ ಟೊಂಕಕಟ್ಟಿದರು. ಗುರುಗಳು "ಜಯತೀರ್ಥರ ಟೀಕಾಗ್ರಂಥಗಳಿಗೆ ಟಿಪ್ಪಣಿ ಬರೆ" ಎಂದು ಆಜ್ಞಾಪಿಸಿದರು.

ಮಾಧ್ವ ಸಮಾಜದ ಭಾಗ್ಯೋದಯದ ಸರ್ವಕಾಲವೇ ಬಂದಂತಾಯಿತು. ಮಧ್ವಮುನಿ, ಜಯತೀರ್ಥರ ಗಹನ ಗ್ರಂಥಗಳ ದುರ್ಬೋಧ ವಿಷಯಗಳಿಗೆಲ್ಲ ಈ

ಟಿಪ್ಪಣಿ ದರ್ಪಣವಲ್ಲಿ ಮೂಡಿ ಜನರ ಹೃದಯದಲ್ಲಿ ಪ್ರತಿಫಲಿಸ ಹತ್ತಿದವು. ಈ ಟಿಪ್ಪಣಿ ಗ್ರಂಥಗಳ ಬೆಳಕಿನಲ್ಲಿ ವೇದಾಂತ ಗಹ್ವರದಲ್ಲಿ ಹರವಿದ ರತ್ನಗಳನ್ನೆಲ್ಲ ಕಾಣುವಂತಾಯಿತು.

ಒಮ್ಮೆ ಗುರುಸಾರ್ವಭೌಮರಾದ ಶ್ರೀ ರಾಘವೇಂದ್ರ ಸ್ವಾಮಿಗಳು ಬಿದರಹಳ್ಳಿಗೆ ಆಗಮಿಸಿದಾಗ ಶ್ರೀನಿವಾಸಾಚಾರ್ಯರು ತಮ್ಮ ಟಿಪ್ಪಣಿಗಳನ್ನೆಲ್ಲ ತಂದು ಶ್ರೀ ರಾಯರಿಗೆ ತೋರಿಸಿದರು.

ಶ್ರೀ ರಾಯರು ಆ ಟಿಪ್ಪಣಿಗಳನ್ನೆಲ್ಲ ನೋಡಿ ಆನಂದಭರಿತರಾಗಿ ತುಂಬಿದ ಹೃದಯದಿಂದ ಅವರಿಗೆ "ತೀರ್ಥ" ಎಂಬ ಪದವಿಯನ್ನು ದಯಪಾಲಿಸಿ—"ಇಂದಿನಿಂದ ನೀವು ಗೃಹಸ್ಥರಾದರೂ ಸ್ವಾಮಿಗಳಿಗೆ ಸಮಾನರಂತೆಯೇ ಸರಿ." ಎಂದು ಹೇಳಿ, 'ಶ್ರೀನಿವಾಸತೀರ್ಥ'ರೆಂದು ಕರೆದರಂತೆ.

ಅಂದಿನಿಂದ ಶ್ರೀನಿವಾಸಾಚಾರ್ಯರು 'ಶ್ರೀನಿವಾಸತೀರ್ಥ'ರೆಂದೇ ಹೆಸರಾದರು.

ಒಮ್ಮೆ ಶ್ರೀನಿವಾಸ ತೀರ್ಥರು ಮಂತ್ರಾಲಯದಲ್ಲಿ ವ್ರತದ ದಿನಗಳಲ್ಲಿದ್ದಾಗ ತಮ್ಮ ಉತ್ತರಾದಿ ಮಠದ ಸಂಪ್ರದಾಯದಂತೆ ಅಲ್ಲಿ ಬಡಿಸಿದ ಕೆಲವು ಪದಾರ್ಥಗಳನ್ನು ಮುಟ್ಟಲಿಲ್ಲ. ಅಲ್ಲಿಂದ ಶ್ರೀನಿವಾಸ ತೀರ್ಥರು ಯಕ್ಕುಂಡಿಗೆ ಬಂದಾಗ ಅವರ ಕೈಯಲ್ಲಿಯ ಮಂತ್ರಾಕ್ಷತೆಗಳು ಕೂಡ ಕಪ್ಪಾದವಂತೆ. ಆಗ ಪರಮ ಜ್ಞಾನಿಗಳಾದ ಯಾದವಾರ್ಯರು ಮಂತ್ರಾಲಯ ರಾಯರಲ್ಲಿದ್ದು ಅವರ ಸಂಪ್ರದಾಯಕ್ಕೆ ವ್ಯತ್ಯಾಸವಾಗಿ ನಡೆದದ್ದು ಅಪಚಾರವಾಗಿದೆ. ಅಲ್ಲಿಯೇ ಹೋಗಿ ಬನ್ನಿ ಎಂದು ಕಳಿಸಿದರಂತೆ. ಆಗ ತೀರ್ಥರು ತಿರುಗಿ ಬಂದು ಶ್ರೀ ರಾಯರ ಸಂಪ್ರದಾಯದಂತೆಯೇ ಅವರ ಸನ್ನಿಧಿಯಲ್ಲಿ ವ್ರತ ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾದರೆಂದು ಐತಿಹ್ಯವುಂಟು.

ಅವರು ಅನೇಕ ಟಿಪ್ಪಣಿ ಗ್ರಂಥಗಳನ್ನು ಬರೆದಿದ್ದಾರೆ. ಸ್ವತಂತ್ರವಾಗಿ ಬರೆಯುವ ಧೀಶಕ್ತಿ, ಲೇಖನ ಶೈಲಿ ಅವರಲ್ಲಿ ಅತ್ಯುತ್ತಮವಾಗಿದ್ದರೂ ಅವರ ಗುರುಭಕ್ತಿಯು ಮೌಲಿಕ ಗ್ರಂಥ ಲೇಖನಕ್ಕೆ ಒಪ್ಪಲಿಲ್ಲ. ಗುರು ಗ್ರಂಥಗಳಿಗೆ ಟಿಪ್ಪಣಿ ಬರೆಯುವದರಲ್ಲಿಯೇ ಅವರು ತಮ್ಮ ಮತಿವೈಶದ್ಯಕ್ಕೆ ಸಾರ್ಥಕ್ಯವನ್ನು ಕಂಡುಕೊಂಡರು.

ಈ ರೀತಿ ಕೀರ್ತಿಯನ್ನು ಪಡೆದ ತೀರ್ಥರು ಹೊನ್ನಾಳಿಯಲ್ಲಿ ವೈಕುಂಠವಾಸಿಗಳಾದರು. ಇವರ ವಂಶಜರು ಈಗ ಆ ಊರಲ್ಲಿಯೇ ಇರುತ್ತಾರೆ.

## ಶ್ರೀನಿವಾಸತೀರ್ಥರು ಟೀಕಾಗ್ರಂಥಗಳಿಗೆ ಬರೆದ

## ೨೯ ಟಿಪ್ಪಣಿಗ್ರಂಥಗಳು

ಮಾಯಾವಾದ ಖಂಡನ
ಟೀಕೆಯ ಟಿಪ್ಪಣಿ
ಉಪಾಧಿ ಖಂಡನ ,, ,,
ಪ್ರಪಂಚಮಿಥ್ಯಾತ್ವಾ
ನುಮಾನಖಂಡನ ,, ,,
ಪ್ರಮಾಣ ಲಕ್ಷಣ ,, ,,
ತತ್ವವಿವೇಕ ,, ,,
ತತ್ವಸಂಖ್ಯಾನ ,, ,,
ತತ್ವನಿರ್ಣಯ ,, ,,
ತತ್ತ್ವೋದ್ಯೋತ ,, ,,
ಕರ್ಮನಿರ್ಣಯ ,, ,,
ಗೀತಾಭಾಷ್ಯ ಟೀಕಾ
ಪ್ರಮೇಯ ದೀಪಿಕಾ ,, ,,
ಗೀತಾ ತಾತ್ಪರ್ಯ ಟೀಕಾ
ನ್ಯಾಯ ದೀಪಿಕಾ ,, ,,
ನ್ಯಾಯಾಮೃತ ಟಿಪ್ಪಣಿ ,, ,,
ಸುಧಾ ತ್ಯಕ್ತ ಶ್ರೀನಿವಾಸ
ತೀರ್ಥೀಯ ,, ,,
ಅಣುಭಾಷ್ಯ ಟೀಕಾ ,, ,,
ತತ್ವಪ್ರಕಾಶ ,, ,,
ವಾದಾವಲಿ ,, ,,
ಭೇದೋಜ್ಜೀವನ ,, ,,
ಸದಾಚಾರಸ್ಮೃತಿ ಆಹ್ನಿಕ
ಕೌಸ್ತುಭ ,, ,,
ಪುರುಷಸೂಕ್ತಾರ್ಥ ,, ,,
ವಾಯುಸ್ತುತಿ ವ್ಯಾಖ್ಯಾನ ,, ,,
ಮಂತ್ರೋದ್ಧಾರ
(ತಂತ್ರಸಾರಕ್ಕೆ) ,, ,,
ಭಾಗವತ ಏಕಾದಶ ಸ್ಕಂಧಕ್ಕೆ
ವ್ಯಾಖ್ಯಾನ ,, ,,
ಅಧಿಕರಣಾರ್ಥ ಸಂಗ್ರಹ ,, ,,
ಹನುಮದ್ಘದ್ಯ ,, ,,
ಮಾಂಡೂಕ್ಯೋಪನಿಷತ್
ಭಾಷ್ಯ ,, ,,
ಈಶಾವಾಸ್ಯ ,, ,,
ಅಥರ್ವಣ ,, ,,
ಷಟ್‌ಪ್ರಶ್ನ ,, ,,
ಋಗ್‌ಭಾಷ್ಯ ,, ,,

# ಶ್ರೀ ಗಲಗಲಿ ಆಚಾರ್ಯರು

ಶ್ರೀ ಕೃಷ್ಣಾ ತೀರದ ಗಾಲವ ಋಷಿಗಳು ತಪಸ್ಸು ಮಾಡಿದ ಗಲಗಲಿ ಕ್ಷೇತ್ರವೇ ಗಲಗಲಿ ಆಚಾರ್ಯರ ಮೂಲ ಸ್ಥಳ. ಹತ್ತು ತಲೆಮಾರುಗಳಿಂದ ಎಲ್ಲಿಯೂ ವಿಚ್ಛೇದ ವಾಗದಂತೆ ಪಾಠ-ಪ್ರವಚನ ಧರ್ಮೋಪದೇಶ ಹಾಗೂ ಮಧ್ವಮತ ಪ್ರಚಾರವನ್ನು ಮಾಡುತ್ತ ಬಂದುದು ಈ ಆಚಾರ್ಯ ಮನೆತನದ ವೈಶಿಷ್ಟ್ಯವಾಗಿದೆ.

ಈ ಮನೆತನದಲ್ಲಿ ಅನೇಕ ಗ್ರಂಥಕಾರರಾಗಿದ್ದಾರೆ. ಈ ಮನೆತನದವರು ಅನೇಕ ಶಿಷ್ಯರನ್ನು ಕರೆದುಕೊಂಡು ಪ್ರತಿ ಸ್ವಾಮಿಗಳಂತೆ ದೇಶ-ದೇಶ ಸಂಚಾರಮಾಡಿ ಧರ್ಮ ಜಾಗ್ರತಿಯನ್ನು ಉಂಟು ಮಾಡಿದ್ದರಿಂದ ಬಿಳಿ ಶಾಟಿಯ ಸ್ವಾಮಿಗಳೆಂದು ಹಿಂದಿನವರು ಪ್ರಸಿದ್ಧರಾದರು.

ಈ ಮನೆತನದ ಮೂಲ ಪುರುಷರಾದ ಕೂರ್ಮತೀರ್ಥರು ಮಹಾ ವಿರಕ್ತರಾಗಿ ಮನೆ-ಮಾರುಗಳನ್ನು ತೊರೆದು ಪರಮಹಂಸಾಶ್ರಮವನ್ನು ಸ್ವೀಕರಿಸಿ ಮಹಾ ಯೋಗೀಶ್ವರರೆಂದು ಪ್ರಸಿದ್ಧರಾದರು.

## ೧೧೦ ಶ್ರೀ ೧೦೮ ಶ್ರೀ ಕೂರ್ಮತೀರ್ಥರು

ಶ್ರೀ ಕೂರ್ಮತೀರ್ಥರು ವೇದಾಂತ ಶಾಸ್ತ್ರದಲ್ಲಿ ವಾಚಸ್ಪತಿ ಪ್ರತಿಮರಾಗಿದ್ದರು. ಅವಧೂತ ಶಿಖಾಮಣಿಗಳಾದ ಅವರು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಸಂಚಾರ ಮಾಡಿ ಮಧ್ವಮತವನ್ನು ಪ್ರಸಾರ ಮಾಡಿ ಅಲ್ಲಲ್ಲಿ ಅದ್ವೈತ ವಿದ್ವಾಂಸ ರನ್ನು ಗೆದ್ದು ಜಯಪತ್ರಗಳನ್ನು ಸಂಪಾದಿಸುತ್ತಿದ್ದರು. ಆ ಜಯಪತ್ರದ ಕಟ್ಟುಗಳ ನ್ನೆಲ್ಲ ತೆಳಗಿಟ್ಟು ಅದರ ಮೇಲೆ ಸರ್ವಮೂಲ ಗ್ರಂಥಗಳನ್ನಿಟ್ಟು ಶ್ರೀ ವೇದವ್ಯಾಸ ದೇವರನ್ನು ಪೂಜಿಸುತ್ತಿದ್ದರು.

ಉತ್ತರ ಹಿಂದುಸ್ಥಾನದಲ್ಲಿ ಎಲ್ಲ ಕಡೆಗೂ ವೈಷ್ಣವ ಮತವನ್ನು ಪ್ರಸಾರ ಮಾಡಬೇಕೆಂದು ವೀರ ಸಂಕಲ್ಪಗೈದ ಶ್ರೀ ಕೂರ್ಮ ಯೋಗಿಗಳು ಶ್ರೀ ರಾಜೇಂದ್ರ, ಶ್ರೀ ಜಯಧ್ವಜರಂತೆ ಗಂಗಾ ತೀರದಲ್ಲಿ ತಮ್ಮ ಮಠವನ್ನು ಸ್ಥಾಪಿಸಿ ಅಲ್ಲಿಯೇ ವಾಸ ಮಾಡಿದರು.

ಪಾದಚಾರಿಗಳಾಗಿ ಬದರೀ ಯಾತ್ರೆಯನ್ನು ಮಾಡಿ ಬಂದು ಅಲ್ಲಲ್ಲಿ ವೈಷ್ಣವ ಕೇಂದ್ರಗಳನ್ನು ಸ್ಥಾಪಿಸುತ್ತ ಅವರು ಏಕಚಕ್ರ ನಗರಕ್ಕೆ ಬಂದಾಗ ಅಲ್ಲಿಯೇ ಕಾಲ ವಾದರು. ಅವರ ವೃಂದಾವನವು ಈಗಲೂ ಏಕಚಕ್ರ ನಗರದಲ್ಲಿಯೇ ಇರುತ್ತದೆ.

## ೧೧೧ ಶ್ರೀಪತ್ಯಾಚಾರ್ಯ ಮತ್ತು ನರಸಿಂಹಾಚಾರ್ಯ

ಈ ಮನೆತನದಲ್ಲಿ ಶ್ರೀಪತ್ಯಾಚಾರ್ಯ ಮತ್ತು ನರಸಿಂಹಾಚಾರ್ಯ ಎಂಬ ಅಣ್ಣ ತಮ್ಮಂದಿರು ರಾಜಕಾರಣದಲ್ಲಿ ಧುರಂಧರರಾಗಿ ಗಂಗಾಖೇಡ ಎಂಬ ಜಹಗೀರಿಯನ್ನು ಸಂಪಾದಿಸಿದ್ದರು. ಅವರು ತಮ್ಮಲ್ಲಿ ಒಂದು ದೊಡ್ಡ ಸೇನಾಪಥಕವನ್ನಿಟ್ಟುಕೊಂಡು ಆ ಕಾಲದ ರಾಜರಿಗೆ ಪ್ರಾಪ್ತಿಯಲ್ಲಿ ಪಾಲನ್ನು ಕೊಡುವ ಕರಾರಿನಿಂದ ಯುದ್ಧದಲ್ಲಿ ಸಹಾಯವನ್ನು ಮಾಡುತ್ತಿದ್ದರು.

ಒಮ್ಮೆ ವಿಜಾಪುರದ ಅಲ್ಲಿ ಆದಿಲಶಹನು ಅವರ ಸಹಾಯವನ್ನು ಯಾಚಿಸಿದ್ದರಿಂದ ಆ ಇಬ್ಬರೂ ಸಹೋದರರು ಅವನ ಸಹಾಯಕ್ಕಾಗಿ ತಮ್ಮ ದಂಡನ್ನು ತೆಗೆದುಕೊಂಡು ಹೊರಟಿದ್ದರು. ದಾರಿಯಲ್ಲಿ ಮಲಪ್ರಭಾ ನದೀ ತೀರದ ಯಕ್ಕುಂಡಿ ಹತ್ತಿರ ಬಂದಾಗ ಒಂದು ಅಶ್ವತ್ಥ ವೃಕ್ಷದ ಕೆಳಗೆ ಶಿಷ್ಯರಿಗೆ ಪಾಠ ಹೇಳುತ್ತ ಕುಳಿತ ಶ್ರೀ ಯಾದವಾರ್ಯರ ದರ್ಶನವಾಯಿತು.

### ಶ್ರೀ ಯಾದವಾರ್ಯರ ಧರ್ಮೋಪದೇಶ

ಜಾತ್ಯಾ ವೈಷ್ಣವರಾದ ಅವರಿಗೆ ಶ್ರೀ ಯಾದವಾಚಾರ್ಯರನ್ನು ಕಂಡು ಭಕ್ತಿಯು ಉತ್ಪನ್ನವಾಗಿ ತಮ್ಮ ಯುದ್ಧ ವೇಷದಲ್ಲಿಯೇ ಅಲ್ಲಿಗೆ ಬಂದು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಯಾದವಾರ್ಯರು ಅವರು ಮೈಯಲ್ಲಿ ಹಾಕಿಕೊಂಡ ಕಬ್ಬಿಣದ ಅಂಗಿಯಂತಿದ್ದ ಚಿಲಖತ್ತನ್ನು ನೋಡಿ ನಿಮ್ಮ ಈ ದಿವ್ಯ ದೇಹಕ್ಕೆ ಲೋಹ ಲಾಂಛನವೇಕೆ ಎಂದು ಕೇಳಿದರು. ಅದಕ್ಕೆ ಅವರು "ಯುದ್ಧದಲ್ಲಿ ವೈರಿಗಳ ಶಸ್ತ್ರಾಸ್ತ್ರಗಳಿಂದ ಅಪಾಯವಾಗಬಾರದೆಂದು ನಾವು ಈ ಕಬ್ಬಿಣದ ಕವಚವನ್ನು ತೊಟ್ಟಿದ್ದೇವೆ." ಎಂದು ಹೇಳಿದರು.

ಅದನ್ನು ಕೇಳಿ ಶ್ರೀ ಯಾದವಾರ್ಯರು "ಹಾಗಾದರೆ ಯಮದೇವರ ಮೃತ್ಯುದಂಡದಿಂದ ಪಾರಾಗಲು ನಿಮ್ಮಲ್ಲಿ ಏನಾದರೂ ಭದ್ರ ಕವಚವಿರುವದೋ?" ಎಂದು ಪ್ರಶ್ನೆ ಹಾಕಿದರು.

"ಆರ್ಯರ ಪ್ರಶ್ನೆಯು ಆ ಇಬ್ಬರೂ ಸಹೋದರರ ಮೈ ಮನಗಳನ್ನು ಜುಮುಗಟ್ಟಿಸಿತು. ತತ್‌ಕ್ಷಣದಲ್ಲಿ ಅವರಿಗೆ ವಿವೇಕೋದಯವಾಯಿತು. ಶ್ರೀ ಯಾದವಾರ್ಯರು ಅವರನ್ನು ಹತ್ತರ ಕೂಡಿಸಿಕೊಂಡು ಅಂತಃಕರಣದಿಂದ ಉಪದೇಶವನ್ನು ಮಾಡಿದರು.

ಶ್ರೀ ಕೂರ್ಮತೀರ್ಥರಂಥ ಅಪರೋಕ್ಷ ಜ್ಞಾನಿಗಳ ವಂಶದಲ್ಲಿ ಹುಟ್ಟಿದ ನೀವು ಇಂಥ ಲೌಕಿಕ ಕಾರ್ಯದಲ್ಲಿಯೇ ಬಾಳನ್ನು ತೇಯುತ್ತಲಿರುವದು ಶೋಚನೀಯ.

ಮಧ್ವಮತದ ಆಧಾರ ಸ್ತಂಭದಂತಿದ್ದ ನೀವು ಈ ಹೊರಗಿನ ವೈರಿಗಳಿಗಿಂತ ಒಳಗಿರುವ ಕಾಮ, ಕ್ರೋಧ, ರಾಗ ದ್ವೇಷಾದಿ ವೈರಿಗಳನ್ನು ಗೆದ್ದು ಅಧ್ಯಾತ್ಮ ಪ್ರಪಂಚದ ಅಧ್ವರ್ಯುಗಳಾಗಿ ಮಧ್ವ ಮತದ ಸಿದ್ಧಾಂತವನ್ನು ಪ್ರಚಾರ ಮಾಡುವ ವಿದ್ವದ್ವೀರರಾಗಿ ಲೋಕೋದ್ಧಾರ ಮಾಡುತ್ತಲೇ ಆತ್ಮೋದ್ಧಾರವನ್ನು ಸಾಧಿಸಿಕೊಳ್ಳಿರಿ."

ಶ್ರೀ ಯಾದವಾರ್ಯರ ಈ ಮಾರ್ಮಿಕ ಉಪದೇಶದಿಂದ ಆ ಇಬ್ಬರೂ ಅಣ್ಣ-ತಮ್ಮಂದಿರ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮವಾಗಿ ವೈರಾಗ್ಯ ಹುಟ್ಟಿ ಅವರು ತತ್‌ಕ್ಷಣವೇ ತಮ್ಮ ಸೈನಿಕ ವೇಷದ ಖಡ್ಗ, ಢಾಲು, ಚಿಲಖತ್ತು, ಶಸ್ತ್ರಾಸ್ತ್ರ ಸಾಮಗ್ರಿಗಳನ್ನೆಲ್ಲ ಮಲಪ್ರಭೆಯ ಪ್ರವಾಹದಲ್ಲಿ ಎಸೆದು ಬಿಟ್ಟರು. ಸೈನಿಕರಿಗೆಲ್ಲ ಸಂಬಳ ಕೊಟ್ಟು ಮನೆಗೆ ಕಳಿಸಿದರು. ಆ ಕಾಲದಲ್ಲಿ ಅರ್ಧಲಕ್ಷದಷ್ಟು ವಾರ್ಷಿಕ ವರಮಾನವಿರುವ ತಮ್ಮ ಗಂಗಾಖೇಡ ಸಂಸ್ಥಾನವನ್ನು ಬಿಟ್ಟು-ಬಿಟ್ಟರು. ತಮ್ಮ ರಾಜೈಶ್ವರ್ಯ, ಧನ-ಕನಕ, ಮುತ್ತು-ರತ್ನ, ಹೊಲ-ಮನೆಗಳನ್ನೆಲ್ಲ ಬ್ರಾಹ್ಮಣರಿಗೆ ದಾನ ಕೊಟ್ಟು ಕೃಷ್ಣಾರ್ಪಣವೆಂದು ಕೈಮುಗಿದರು.

ಅನಂತರ ವಿನೀತ ವೈದಿಕ ವೇಷದಿಂದ ಶ್ರೀ ಯಾದವಾರ್ಯರ ಬಳಿಗೆ ಬಂದು ಮಂತ್ರೋಪದೇಶ ಮಾಡಬೇಕೆಂದು ಬಿನ್ನವಿಸಿಕೊಂಡರು.

ಅವಕ್ಕೆ ಶ್ರೀ ಯಾದವಾರ್ಯರು—"ನಿಮ್ಮಂಥ ದೊಡ್ಡ ಮನೆತನದ ಆಚಾರ್ಯರಿಗೆ ನಮ್ಮ ನಿಮ್ಮ ಮತ್ತು ಮಧ್ವ ಸಮಾಜದ ಗುರುಗಳಾದ ಶ್ರೀಮದುತ್ತರಾದಿ ಮಠದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರೇ ಮಂತ್ರೋಪದೇಶವನ್ನು ಮಾಡಲು ಸಮರ್ಥರಿದ್ದಾರೆ. ನೀವು ಅವರ ಬಳಿಗೇ ಹೋಗಿರಿ" ಎಂದು ಸಲಹೆ ಮಾಡಿದರು.

ಅವರ ಆಜ್ಞೆಯಂತೆ ಶ್ರೀಪತ್ಯಾಚಾರ್ಯ, ಶ್ರೀ ನರಸಿಂಹಾಚಾರ್ಯರಿಬ್ಬರೂ ಉತ್ತರಾದಿಮಠದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಇದ್ದ ಶೂರ್ಪಾಲಯ ಕ್ಷೇತ್ರಕ್ಕೆ ಬಂದರು.

## ೧೧೨ ಗೋವಿಂದಾಚಾರ್ಯ

ಶ್ರೀ ವಿದ್ಯಾಧೀಶ ಶ್ರೀಪಾದಂಗಳವರು ಐವತ್ತು ಸಾವಿರ ರೂಪಾಯಿ ವಾರ್ಷಿಕ ಆದಾಯವಿರುವ ಜಹಾಗೀರಿ, ರಾಜೈಶ್ವರ್ಯ, ಸುಖವಿಲಾಸಗಳಿಗೆಲ್ಲ ತಿಲಾಂಜಲಿ ಇತ್ತು ವಿರಕ್ತರಾಗಿ ತಮ್ಮಲ್ಲಿ ಓದಲಿಕ್ಕೆ ಬಂದ ಆ ಇಬ್ಬರೂ ಸಹೋದರರನ್ನು ಶ್ರೀಮಠದಲ್ಲಿ ಆದರದಿಂದ ಇಟ್ಟುಕೊಂಡು ವೇದಾಂತ ಪಾಠ ಹೇಳಿದರು. ಶ್ರೀ ಶ್ರೀಗಳವರಲ್ಲಿ ಶಾಂತಿ ಹಾಕಿ ಮಂತ್ರೋಪದೇಶವನ್ನು ಪಡೆದು ಧನ್ಯರಾದ ಶ್ರೀಪತ್ಯಾಚಾರ್ಯರು ತಮ್ಮ ಪುತ್ರರಾದ ಗೋವಿಂದಾಚಾರ್ಯರನ್ನು ಶ್ರೀ ಮಠದಲ್ಲಿ ಓದಲಿಕ್ಕೆ ಇಟ್ಟರು.

ಶ್ರೀ ಗೋವಿಂದಾಚಾರ್ಯರು ಶ್ರೀ ವಿದ್ಯಾಧೀಶ ಶ್ರೀಪಾದಂಗಳವರಲ್ಲಿ ಶಾಸ್ತ್ರಾಧ್ಯಯನ ಮಾಡಿ ಮಹಾ ಪಂಡಿತೋತ್ತಮರಾದರು. ಶ್ರೀ ಶ್ರೀಗಳವರಲ್ಲಿ ಸುಧಾ ಗ್ರಂಥವನ್ನು ಪೂರ್ಣ ಓದಿ ಮಂಗಳ ಮಾಡಿ ಸ್ವಾಮಿಗಳವರ ಅಪ್ಪಣೆಯಂತೆ ಗಾಲವ ಕ್ಷೇತ್ರದಲ್ಲಿ ವಾಸಿಸಬೇಕೆಂದು ಹೊರಟರು. ಅವರು ಬರುವಾಗ ಶೂರ್ಪಾಲಯದ ಅಶ್ವತ್ಥ ನರಸಿಂಹ ದೇವರಿಗೆ ಪ್ರದಕ್ಷಿಣೆ ಹಾಕುವಾಗ ಆ ಗಿಡದ ದೊಡ್ಡ ಟೊಂಗೆಯು ಇವರ ಎದುರು ಬಿದ್ದಿತು.

ಅದನ್ನು ಕಂಡು ಶ್ರೀ ಶ್ರೀಗಳವರು "ಶೂರ್ಪಾಲಯದ ನರಸಿಂಹ ದೇವರು ನಿಮ್ಮನ್ನು ಅನುಗ್ರಹಿಸಬೇಕೆಂದು ಭಕ್ತರಿದ್ದಲ್ಲಿಗೇ ಬರಬೇಕೆಂದು ಬಯಸಿದ್ದಾನೆ. ನೀವು ಇದನ್ನು ತೆಗೆದುಕೊಂಡು ಗಲಗಲಿಯಲ್ಲಿ ನೆಟ್ಟು ನೀರೆರೆಯಿರಿ"ಎಂದು ಅಪ್ಪಣೆಯಿತ್ತರು.

ಶ್ರೀ ಶ್ರೀಗಳವರ ವಚನವು ಅಮೋಘವಾದದ್ದು. ಶ್ರೀ ಗೋವಿಂದಾಚಾರ್ಯರು ಗುರುಗಳ ಅಪ್ಪಣೆಯಂತೆ ಆ ಒಣಗಿದ ಅಶ್ವತ್ಥ ಶಾಖೆಯನ್ನು ತಂದು ಗಲಗಲಿಯ ಕೃಷ್ಣಾ ತೀರದಲ್ಲಿ ಊರಿದರು. ಅದೇ ಚಿಗಿತು ಹೆಮ್ಮರವಾಯಿತು. ಆ ಅಶ್ವತ್ಥದಲ್ಲಿಯೇ ಶ್ರೀ ಶೂರ್ಪಾಲಯ ನರಸಿಂಹ ದೇವರು ಸನ್ನಿಹಿತನಾದನು. ಅಂದಿನಿಂದ ಪ್ರತಿ ವರ್ಷ ವೈಶಾಖ ಮಾಸದಲ್ಲಿ ನರಸಿಂಹ ಜಯಂತಿಯ ಸಂದರ್ಭದಲ್ಲಿ ದಶಮಿಯಿಂದ ಪೌರ್ಣಿಮೆಯ ವರೆಗೆ ಶೂರ್ಪಾಲಯದಂತೆಯೇ ಇಲ್ಲಿಯೂ ಆಗಮೋಕ್ತ ತಂತ್ರದಿಂದ ನರಸಿಂಹ ದೇವರ ಉತ್ಸವವು ಜರುಗತೊಡಗಿತು. ಈಗಲೂ ನಡೆಯುತ್ತಲಿದೆ.

ಗೋವಿಂದಾಚಾರ್ಯರು ಗಲಗಲಿಯಲ್ಲಿ ನಿಂತು ಅನೇಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ನಿರಂತರ ಸಚ್ಛಾಸ್ತ್ರ ಪಾಠ ಪ್ರವಚನವನ್ನು ಮಾಡುತ್ತಲಿದ್ದರು.

ಅವರು ಶ್ರೀಮನ್ನ್ಯಾಯ ಸುಧಾ ಗ್ರಂಥಕ್ಕೆ ಪಂಚರತ್ನಸ್ತಬಕ ಎಂಬ ಅಪೂರ್ವವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಇದರಲ್ಲಿ—

"ನಶಬ್ದಾಬ್ಧೌ ಗಾಢಾ ನಚ ನಿಗಮ ಚರ್ಚಾಸು ಚತುರಾಃ"

ಎಂದು ಮುಂತಾಗಿ ಸುಧಾಗ್ರಂಥದ ಪ್ರಾರಂಭದಲ್ಲಿ ಹೇಳಿದ್ದು ಅವರ ವಿನಯಾತಿಶಯ ದ್ಯೋತಕ ಎಂದು ಹೇಳಿ ಸುಧಾದ ಪ್ರತ್ಯಧಿಕರಣದಲ್ಲಿಯೂ ವೇದ ವೇದಾಂತ, ತರ್ಕ, ಮೀಮಾಂಸಾ, ವ್ಯಾಕರಣ ಮುಂತಾದ ಐಯ್ದು ವಿದ್ಯೆಗಳಲ್ಲಿಯೂ ಶ್ರೀ ಜಯತೀರ್ಥರ ಎಂಥ ಅತ್ಯದ್ಭುತವಾದ ಪ್ರಭುತ್ವ, ಪಾಂಡಿತ್ಯಗಳು ಸುವ್ಯಕ್ತವಾಗುತ್ತವೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಶ್ರೀ ಗೋವಿಂದಾಚಾರ್ಯರಿಗೆ ಬಾಳಾಚಾರ್ಯ, ಮುದ್ಗಲಾಚಾರ್ಯ ಮುಂತಾಗಿ ಐಯ್ದು ಜನ ವಿದ್ವಾಂಸ ಪುತ್ರರಿದ್ದರು.

## ೧೧೩ ಶ್ರೀ ಮುದ್ಗಲಾಚಾರ್ಯರು



ತಮ್ಮ ತಂದೆಯವರಾದ ಶ್ರೀ ಗೋವಿಂದಾರ್ಯರಲ್ಲಿಯೇ ವೇದಾಂತ ಮೀಮಾಂಸಾದಿ ಶಾಸ್ತ್ರಗಳನ್ನು ಓದಿದ ಶ್ರೀ ಮುದ್ಗಲಾಚಾರ್ಯರು ಪಂಡಿತ ಕುಲ ಮಂಡನ ಮಣಿಗಳು. ಸರ್ವಶಾಸ್ತ್ರಗಳ ಆಳ-ಅಗಲಗಳನ್ನು ಅಳೆದು ತಿಳಿದು ತೂಗಿ ನೋಡುವ ವಿಲಕ್ಷಣ ವೈದುಷ್ಯವು ಅವರಿಗೆ ಸ್ವಾಧೀನವಾಗಿದ್ದಿತು.

ಅವರು ದೇಶ ದಿಗ್ವಿಜಯಕ್ಕೆ ಹೊರಟರೆ ನೂರಾರು ಜನ ಶಿಷ್ಯರಿಗೆ ಪಾಠ ಹೇಳುತ್ತಲೇ ಊರೂರಿಗೆ ಹೋಗಿ ಪರವಾದಿಗಳನ್ನು ನಿಗ್ರಹಿಸಿ ದ್ವೈತ ತತ್ವಗಳನ್ನು ಬೋಧಿಸುತ್ತಿದ್ದರು.

ಅವರು ಶ್ರೀ ವಾದಿರಾಜ ಶ್ರೀಪಾದಂಗಳವರ ಪರ್ಯಾಯ ಕಾಲದಲ್ಲಿ ತಮ್ಮ ಮುನ್ನೂರು ಜನ ವಿದ್ವತ್ ಶಿಷ್ಯರೊಡನೆ ಉಡುಪಿಗೆ ಬಂದು ಗುರುರಾಜರ ಪರಮಾನುಗ್ರಹಕ್ಕೆ ಪಾತ್ರರಾದರು. ಇವರ ಹರಿಭಕ್ತಿ, ತಪಶ್ಶಕ್ತಿ, ಶಾಸ್ತ್ರ ಪಾಂಡಿತ್ಯ, ಪ್ರವಚನ ಪಟಿಮೆಗಳನ್ನು ಕಂಡು ಸುಪ್ರೀತರಾದ ಗುರುರಾಜರು ತಾವು ಪೂಜಿಸುತ್ತಿದ್ದ ಶ್ರೀ ರುಕ್ಮಿಣೀ-ಸತ್ಯಭಾಮಾ ಸಮೇತ ಗೋಪಾಲಕೃಷ್ಣ ಪ್ರತಿಮೆಯನ್ನು ಕೊಟ್ಟು ಕರುಣಿಸಿದರು.

ಈಗ ಸಾಗರಕಟ್ಟೆ ಸ್ವಾಮಿಗಳು ಅವುಗಳನ್ನು ಗಲಗಲಿ ಮನೆತನದವರಿಂದ ಪಡೆದು ಅವುಗಳನ್ನು ತಮ್ಮ ಸಂಸ್ಥಾನದ ಮುಖ್ಯ ಪ್ರತಿಮೆಗಳನ್ನಾಗಿ ಮಾಡಿಕೊಂಡು ಪ್ರತಿದಿನವೂ ಪೂಜಿಸುತ್ತಾರೆ. ಪೂಜೆಯ ಕೊನೆಗೆ "ಗುರುರಾಜಾನುಗೃಹೀತ, ಶ್ರೀ

ಗಲಗಲಿ ಮುದ್ಗಲಾಚಾರ್ಯ ಕರಾರ್ಚಿತ ಗೋಪಾಲ ಕೃಷ್ಣ ದೇವರು" ಎಂದು ಕೂಗಿ ಹೇಳುತ್ತಾರೆ.

ಇಂದಿಗೂ ಸಾಗರಕಟ್ಟೆ ಮಠದ ಸ್ವಾಮಿಗಳ ಪೀಠದಲ್ಲಿ ಮೇಲಿನ ಮೊದಲಿನ ಸಾಲಿನಲ್ಲಿ ಆ ರುಕ್ಮಿಣೀ, ಸತ್ಯಭಾಮಾ ಹಾಗೂ ಗೋಪಾಲ ಕೃಷ್ಣ ಪ್ರತಿಮೆಗಳನ್ನು ಕಾಣಬಹುದು.

ಇವರ ಅಣ್ಣಂದಿರಾದ ಬಾಳಾಚಾರ್ಯರೂ ದಿಗ್ಗಜ ಪಂಡಿತರಾಗಿದ್ದರು. ಈ ಇಬ್ಬರು ಸಹೋದರರಿಗೆ ಸೋತು ಶರಣಾಗತರಾಗಿ ಜಯಪತ್ರಗಳನ್ನು ಬರೆದುಕೊಟ್ಟ ಪಂಡಿತರಿಗೆ ಲೆಕ್ಕವಿಲ್ಲ.

ಉತ್ತರಾದಿ ಮಠದ ಶ್ರೀ ಸತ್ಯಪೂರ್ಣ ತೀರ್ಥ ಶ್ರೀಪಾದಂಗಳವರು ಆಸ್ಥಾನ ವಿದ್ವಾಂಸರೆಂದು ಶ್ರೀ ಗಲಗಲಿ ಮುದ್ಗಲಾಚಾರ್ಯರಿಗೆ ವಿಶೇಷ ಪುರಸ್ಕಾರ ಮಾಡಿ ಅನುಗ್ರಹಿಸುತ್ತಿದ್ದರು.

## ಆರಣಿ ಸುಬ್ಬರಾಯನನ್ನು ಸೋಲಿಸಿದ್ದು

ಶ್ರೀ ಸತ್ಯಪೂರ್ಣ ಶ್ರೀಪಾದಂಗಳವರ ಕಾಲದಲ್ಲಿ ಮಹಾ ಪಂಡಿತನೆಂದು ಮದದಿಂದ ಮೆರೆತು ನಿಂತ ಆರಣಿ ಸುಬ್ಬರಾಯನೆಂಬ ದಿಗ್ದಂತಿ ಪಂಡಿತನಿದ್ದನು. ತಮ್ಮ ಗುರುವರ್ಯರ ಅಪ್ಪಣೆಯಂತೆ ಮುದ್ಗಲಾಚಾರ್ಯರು ಆರಣಿ ಸುಬ್ಬರಾಯನೊಡನೆ ಹದಿನೆಂಟು ದಿನ ವಾಕ್ಯಾರ್ಥ ಮಾಡಿ :ಅವನನ್ನು ಗೆದ್ದು ಅವನಿಂದ ಜಯ ಪತ್ರವನ್ನು ಪಡೆದು ಶ್ರೀ ಶ್ರೀ ಸತ್ಯಪೂರ್ಣ ತೀರ್ಥ ಶ್ರೀಪಾದಂಗಳವರ ಪಾದ ಪೀಠಕ್ಕೆ ಕಟ್ಟಿದರು. ಆದರಿಂದ ಸುಪ್ರಸನ್ನರಾದ ಶ್ರೀ ಶ್ರೀಗಳವರು ಆಚಾರ್ಯರಿಗೆ ಶ್ರೀ ಮಠದಿಂದ ವಿಶೇಷ ಪುರಸ್ಕಾರ ಮಾಡಿದರು. ಅವರಿಗೆ ಪಲ್ಲಕ್ಕಿ ಹಗಲು ದೀವಟಿಗೆ ಜೆನ್ನುಮಣೆ ಕರದೀಪ ಪದವೀ ಪ್ರಶಸ್ತಿಗಳನ್ನಿಟ್ಟು ಅನುಗ್ರಹಿಸಿದರು.

ಶ್ರೀ ಸತ್ಯಪೂರ್ಣ ತೀರ್ಥರೇ ಮೊದಲಾದ ಪರಮಹಂಸ ಪರಿವ್ರಾಜಕಾಚಾರ್ಯರು ಮುದ್ಗಲಾಚಾರ್ಯರಿಗೆ ಅತ್ಯಂತ ಆತ್ಮೀಯತಾದ್ಯೋತಕವಾದ ಪತ್ರಗಳನ್ನು ಬರೆದಿದ್ದು ಅವುಗಳನ್ನು ಆ ಮನೆತನದವರು ತಮ್ಮ ವಂಶದವರ ಮೇಲೆ ಶ್ರೀಮಠದ ಕರುಣಾವಿಶೇಷವೆಷ್ಟಿತ್ತೆಂಬುದಕ್ಕೆ ಸಾಕ್ಷಿಯಾಗಿ ತೋರಿಸುತ್ತಾರೆ.

ಶ್ರೀ ಮುದ್ಗಲಾಚಾರ್ಯರನ್ನು ಒಂದು ಒಂದು ಪತ್ರದಲ್ಲಿ "ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ" ಎಂಬ ಬಿರುದಿನಿಂದ ಸಂಬೋಧಿಸಲಾಗಿದೆ. ಗ್ರಂಥ ಲೇಖನದಲ್ಲಿಯೂ ಅವರಿಗೆ ಅತ್ಯದ್ಭುತವಾದ ಪಾಂಡಿತ್ಯವಿತ್ತು.

ಅವರು ಬರೆದ "ಅದ್ವೈತ ಕುಠಾರ" ಎಂಬ ಗ್ರಂಥ ರತ್ನವು ಭಾಮತೀ, ಅದ್ವೈತಸಿದ್ಧಿ, ಬ್ರಹ್ಮಾನಂದೀ ಮುಂತಾದ ಗ್ರಂಥಗಳ ಖಂಡನ ರೂಪವಾದ ಸರ್ವ ಶ್ರೇಷ್ಠವಾದ ಕೃತಿಯಾಗಿದೆ. ಇದಲ್ಲದೇ ಅವರು "ನ್ಯಾಯ ವಿಲಾಸ" ಎಂಬ ಗ್ರಂಥ ವನ್ನು ಬರೆದಿದ್ದಾರೆ.

ಇಪ್ಪತ್ತೊಂದು ಸಲ ಆಚಾರ್ಯರು ಶಿಷ್ಯರಿಗೆ ಸುಧಾ ಪಾಠ ಹೇಳಿದರು. ಉತ್ತ ರಾದಿ ಮಠದ ಶ್ರೀಪಾದಂಗಳವರು ಅವರಿಗೆ ಕರದೀಪ, ಬೆನ್ನುಮಣಿ ಗೌರವವನ್ನು ಕೊಟ್ಟಿದ್ದರು. ಆ ಮಣಿಯನ್ನು ಇಟ್ಟುಕೊಂಡೇ ಅವರು ೨೧ ಸಾಲ ಸುಧಾ ಮಂಗಳವನ್ನು ಮಾಡಿದ್ದರು. ಅವರ ಆ ಬೆನ್ನು ಮಣಿಗೆ ಶಂಖ ಚಕ್ರ ಮೂಡಿವೆ. ಅದರ ಚಿತ್ರವನ್ನು ಇವರ ಚರಿತ್ರ ಪ್ರಾರಂಭದಲ್ಲಿ ಕೊಡಲಾಗಿದೆ.

ಈ ಮನೆತನದಲ್ಲಿ ಇನ್ನೂ ಒಬ್ಬ ಮುದ್ಗಲಾಚಾರ್ಯರು ಮಹಾ ಪಂಡಿತ ರಾಗಿದ್ದರು. ಶ್ರೀ ಸತ್ಯಬೋಧ ವಿಜಯದಲ್ಲಿ ಇವರ ಉಲ್ಲೇಖವು ಬರುತ್ತದೆ. ಇವರೂ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಮೊದಲಿನ ಮುದ್ಗಲಾಚಾರ್ಯರಿಗೆ ಆರು ಜನ ಮಕ್ಕಳು. ಇವರೆಲ್ಲರೂ ಪಂಡಿ ತೋತ್ತಮರೇ ಆಗಿದ್ದರು. ಇವರ ಲೋಕೋತ್ತರವಾದ ಶಾಸ್ತ್ರ ಪಾಂಡಿತ್ಯವನ್ನು ಕಂಡು ಜನರು ಇವರನ್ನು "ಸರ್ವಜ್ಞ ಸದೃಶ ಪಟ್ಕ" ಎಂದು ಕರೆಯುತ್ತಿದ್ದರು. ಗಲಗಲಿ ಮನೆ ತನದಲ್ಲಿ ಈ ಪಟ್ಕರ ವಂಶದವರಿಗೆ ವಿಶೇಷ ಪ್ರಾಶಸ್ತ್ಯವಿದೆ.

ಶ್ರೀ ಮುದ್ಗಲಾಚಾರ್ಯರು ಇಪ್ಪತ್ತೊಂದು ಸಲ ಸುಧಾಮಂಗಳವನ್ನು ಮಾಡಿ ದರು. ಪಾಠ ಹೇಳುವ ಕಾಲಕ್ಕೆ ಅವರು ಬೆನ್ನು ಹಿಂದೆ ಇಟ್ಟುಕೊಂಡ ಮಣಿಗೆ ಶಂಖ ಚಕ್ರ ಮೂಡಿವೆ. ಅದರಲ್ಲಿಯೇ ಮುದ್ಗಲಾರ್ಯರು ಸನ್ನಿಹಿತರಾಗಿದ್ದಾರೆಂದು ಆ ಮನೆತನದವರು 'ಅಪ್ಪನವರೆಂ'ದು ಅವರನ್ನು ಈಗಲೂ ಪೂಜಿಸುತ್ತಾರೆ.

## ೧೧೪ ಗಲಗಲಿ ಪಟ್ಕ

ಶ್ರೀ ಮುದ್ಗಲಾರ್ಯರ ಆರು ಜನ ಮಕ್ಕಳು ಮಾತ್ರವಲ್ಲದೇ ಅವರ ಮನೆಯ ಹೆಣ್ಣುಮಕ್ಕಳು, ಅಡಿಗೆ ನೀರಿನವರಿಗೂ ಕೂಡ ನ್ಯಾಯ ವ್ಯಾಕರಣ ಸಾಹಿತ್ಯಗಳಲ್ಲಿ ಪಾಂಡಿತ್ಯವಿದ್ದಿತು. ಪ್ರಮೇಯ ಜ್ಞಾನವಿದ್ದಿತು.

ಗಲಗಲಿ "ಪಟ್ಕ" ಆಚಾರ್ಯರು ಪುಣೆ, ಗದ್ವಾಲ, ಬರೋಡಾ, ಮೈಸೂರ ಮುಂತಾದ ಕಡೆಗೆ ಪಂಡಿತ ಸಭೆಗಳಿಗೆ ಹೋಗಿ ವಾಕ್ಯಾರ್ಥ ಮಾಡಿ ಬರುತ್ತಿದ್ದರು.

ಒಮ್ಮೆ ಪುಣೆಯ ಪೇಶ್ವೆಯವರ ಶ್ರಾವಣ ಮಾಸದ ಸಭೆಯಲ್ಲಿ— ಕಾಶೀ, ನವ ದ್ವೀಪ, ಮಿಥಿಲಾ ಮುಂತಾದ ಉತ್ತರ ದೇಶದ ಪಂಡಿತರಿಗೂ ದಕ್ಷಿಣದ ವಿದ್ವಾಂಸರಿಗೂ ನ್ಯಾಯ ಶಾಸ್ತ್ರದಲ್ಲಿ ವಾಕ್ಯಾರ್ಥ ನಡೆಯಿತು. ಎಲ್ಲ ಪಂಡಿತರೂ ಸೋತು ಹಿಂಜರಿದ ಬಳಿಕ ಗಲಗಲಿ ಆಚಾರ್ಯರು ವಿಷಯವನ್ನು ಎತ್ತಿಕೊಂಡರು.

ಕೋಟಿಕ್ರಮದ ವಾಕ್ಯಾರ್ಥ ಕ್ರಮದಲ್ಲಿ ವಿಕ್ರಮವನ್ನು ಸ್ಥಾಪಿಸಿದ ಔತ್ತರೇಯ ಪಂಡಿತರೆಲ್ಲರೂ ಒಟ್ಟಾಗಿ ಆಚಾರ್ಯರೊಡನೆ ವಾದಿಸತೊಡಗಿದರು.

ಪೇಶ್ವೆ ಪ್ರಭುಗಳು ದಕ್ಷಿಣದ ಗೌರವಕ್ಕೆ ಎಲ್ಲಿ ಧಕ್ಕೆ ಬರುವದೋ ಎಂದು ಸಚಿಂತರಾಗಿ ಕುಳಿತಿದ್ದರು.

ಗಲಗಲಿ ಆಚಾರ್ಯರು ಮಹತ್ತರವಾದ ತಮ್ಮ ಮಿಂಚಿನ ಪ್ರತಿಭೆಯಿಂದ ಉತ್ತರ ದೇಶದ ಪಂಡಿತರ ಕೋಟಿ ಕ್ರಮದ ಕೋಟಿ ಕೊತ್ತಳಗಳನ್ನೆಲ್ಲ ಒಂದಾದ ಮೇಲೆ ಒಂದರಂತೆ ಪುಡಿಗೈಯುತ್ತಿದ್ದರು. ಒಬ್ಬರಾದ ಮೇಲೆ ಒಬ್ಬರು ಔತ್ತರೇಯ ಪಂಡಿತರು ಅವರೊಡನೆ ವಾದಕ್ಕೆ ಇಳಿದು ಅವರ ಪಾಂಡಿತ್ಯದ ಎತ್ತರಕ್ಕೆ ಹತ್ತಲಾರದೆ ತತ್ತರಿಸಿ ಬೀಳುತ್ತಿದ್ದರು.

ಆದರೆ ಈ ವಾದ ಪ್ರಸಂಗದಲ್ಲಿ ಒಮ್ಮೆ ಮಾತ್ರ ಆಚಾರ್ಯರ ಬುದ್ಧಿಯೂ ಕೂಡ ಒಂದು ಕಡೆ ತುಸು ಕುಂಟುವ ಪ್ರಸಂಗವು ಬಂದಂತಾಯಿತು. ಕೂಡಲೇ ಪಟ್ಟರಲ್ಲಿಯ ಒಬ್ಬರು ಎದ್ದು ಹೋಗಿ ಅಟ್ಟದ ಮೇಲೆ ಶ್ರೀಮಂತರ ಹೆಣ್ಣುಮಕ್ಕಳ ಜೊತೆಗೆ ಈ ವಾದ ಕಥೆಯನ್ನು ಕೇಳುತ್ತ ಕುಳಿತ ತಮ್ಮ ತಾಯಿಯ ಬಳಿಗೆ ಹೋಗಿ ನಮಸ್ಕಾರ ಮಾಡಿದರು. "ಪಂಡಿತಾ ಚ ಪತಿವ್ರತಾ"ಎಂಬಂತಿರುವ ಅವರ ತಾಯಿಯು ತಮ್ಮ ಮಕ್ಕಳ ಮಾತು ಮುಗ್ಗರಿಸ ಬಂದ ಅಂಶವನ್ನು ಚನ್ನಾಗಿ ವಿವರಿಸಿ ಅಲ್ಲಿಯ ಶಂಕಾ ಸಮಸ್ಯೆಗಳಿಗೆಲ್ಲ ಸರಿಯಾಗಿ ಸಮಾಧಾನವನ್ನು ಹೇಳಿದರು. ಮತ್ತು ಅದರ ಮುಂದೆ ಮೂಡಬಹುದಾದ ಮೂರು ವಿಧವಾದ ಕೋಟಿಗಳಿಗೆ ಸಮಂಜಸವಾದ ಪ್ರತಿ ಕೋಟಿಗಳನ್ನು ಹೇಳಿ ಕಳಿಸಿದರು.

ಆ ತಾಯಿಯ ತರ್ಕ ಬದ್ಧವಾದ ಸಲಹೆ ಕೋಟಿಗಳು ಅಂದಿನ ವಾದದಲ್ಲಿ ಗಾಲವ ಪಟ್ಟಕರಿಗೆ ತಾರಕಮಂತ್ರವಾಗಿ ಪರಿಣಮಿಸಿದವು. ಜಯಮಾಲೆಯು ಅವರನ್ನು ಅಲಂಕರಿಸಿತು. ದಕ್ಷಿಣ ದೇಶಕ್ಕೆ ವಿಜಯಶ್ರೀಯನ್ನು ತಂದು ಕೊಟ್ಟ ಶ್ರೇಯಸ್ಸು ಅವರದಾಗಿತ್ತು.

ತಮ್ಮ ಮನೆಯ ಹೆಣ್ಣುಮಕ್ಕಳಿಂದ ಗಲಗಲಿ ಆಚಾರ್ಯರ ತಾಯಿಯವರ ಅದ್ಭುತ ಶಾಸ್ತ್ರಾರ್ಥ ವೈದುಷ್ಯವನ್ನು ತಿಳಿದ ಪೇಶ್ವೆ ಶ್ರೀಮಂತರು ಅವ್ವನವರ ಹೆಸರಿನಿಂದ ೩೬೦ ರೂಪಾಯಿಯ ವರ್ಷಾಶನವನ್ನು ಹಾಕಿಕೊಟ್ಟರು. ಅದು ಮೊನ್ನೆ ಮೊನ್ನಿನ ವರೆಗೂ ನಡೆಯುತ್ತಲಿದ್ದು ಈಗ ೩ ವರ್ಷದ ಹಿಂದೆ ಒಟ್ಟು ಪರಿಹಾರ ಧನವನ್ನು ಒಮ್ಮೆಲೇ ಕೊಟ್ಟು ಈಗಿನ ಮೈಸೂರ ಸರಕಾರದವರು ಅದನ್ನು ನಿಲ್ಲಿಸಿದ್ದಾರೆ.

ತಮ್ಮ ಮಕ್ಕಳಾದ ಪಟ್ಟರೊಡನೆ ಅವ್ವನವರು ಮೈಸೂರಿಗೆ ಹೋಗಿ ಮಹಾರಾಜರು ಮಹಾಜನರಿಂದ ಅಲ್ಲಿಯೂ ಮನ್ನಣೆ ಹೊಂದಿದ ಉಲ್ಲೇಖಗಳಿವೆ. ಈ ಅವ್ವ

ನವರು ಮುಯ್ಯದ ಹಾಡು ತಾರತಮ್ಯ ಸ್ತೋತ್ರ ಮತ್ತು ಅನೇಕ ದೇವರ ನಾಮ ಗಳನ್ನು ರಚಿಸಿದ್ದಾರೆ. ಅವರ ಶಿಷ್ಯಳಾದ ಪ್ರಯಾಗ ಬಾಯಿಯು ಭಾಗವತ ೩ನೇ ಸ್ಕಂದವನ್ನು ಕನ್ನಡ ಪದ್ಯರೂಪವಾಗಿ ರಚಿಸಿದ್ದಾಳೆ.

ಈ ಮನೆತನದಲ್ಲಿ ಮುಂದೆ ಏಳೆಂಟು ತಲೆಗಳವರೆಗೆ ಮಹಾ ಪಂಡಿತರೇ ಜನಿಸಿ ಸಚ್ಛಾಸ್ತ್ರ ಪಾಠ-ಪ್ರವಚನ ಪರಂಪರೆಯನ್ನು ಅವಿಚ್ಛಿನ್ನವಾಗಿ ನಡಿಸಿಕೊಂಡು ಬಂದಿದ್ದಾರೆ.

## ೧೧೫ ಗಲಗಲಿ ಶ್ರೀರಂಗಾಚಾರ್ಯರು

ಇವರು ಜಗದ್ವಿಲಕ್ಷಣ ಪಂಡಿತರಾಗಿದ್ದರು. ಚತುಃಶ್ಶಾಸ್ತ್ರಗಳಲ್ಲಿ ವಾದಪಾಂಡಿತ್ಯ, ಬೋಧ ಪಾಂಡಿತ್ಯ ಬರಬೇಕಾದರೆ ಶ್ರೀರಂಗಾಚಾರ್ಯರ ಶಿಷ್ಯರಾದರೆ ಮಾತ್ರಸಾಧ್ಯ ಎಂದು ತಿಳಿದು ನೂರಾರು ಜನರು ಅವರಲ್ಲಿ ಬಂದು ಪಾಠ ಓದುತ್ತಲಿದ್ದರು.

"ಚತುಶ್ಶಾಸ್ತ್ರೇಷು ಚತುರಃ ಶ್ರೀರಂಗಃ ಶಾಸ್ತ್ರಪಾರದೃಕ್"

ಎಂದು ಅವರನ್ನು ಹೊಗಳುತ್ತಲಿದ್ದರು. ಅವರು ಇದ್ದ ಮನೆಯನ್ನು ಪಾಠದ ಆಚಾರ್ಯರ ಮನೆಯೆಂದು ಈಗಲೂ ಕರೆಯುತ್ತಾರೆ. ೬೦-೭೦ ಜನ ಶಿಷ್ಯರನ್ನು ಇಟ್ಟುಕೊಂಡು ಊಟ ಹಾಕಿ, ಪಾಠ ಹೇಳಿ ಪಂಡಿತರನ್ನಾಗಿ ಮಾಡಿ ಕಳಸುತ್ತಿದ್ದರು.

## ೧೧೬ ಬಾಬಾಚಾರ್ಯರು



ಗಲಗಲಿ ಶ್ರೀರಂಗಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ, ತಮ್ಮ ತಂದೆ ೩ ನೇ ಮುದ್ಗಲಾ ಚಾರ್ಯರಲ್ಲಿ ವೇದಾಂತವನ್ನೂ ಓದಿದ ಬಾಬಾ ಚಾರ್ಯರು ಮಹಾ ತಪಸ್ವಿಗಳೂ, ಲೋಕೋತ್ತರ ಪಂಡಿತರೂ ಶಾಪಾನುಗ್ರಹ ಸಮರ್ಥರೂ ಆಗಿದ್ದರು. ಅವರು ದೇಶದಲ್ಲಿ ಅನೇಕ ಕಡೆ ಸಂಚಾರ ಮಾಡಿ ತಮ್ಮ ತಪಃ-ಶಕ್ತಿಯಿಂದ ಜನರ ಕಷ್ಟನಷ್ಟಗಳನ್ನು ದೂರಮಾಡುತ್ತಿದ್ದರು. ಇವರಲ್ಲಿ ಓದಿ ಅನೇಕ ಜನರು ಪಂಡಿತರಾಗಿ— ಗದ್ವಾಲ, ವನಪರ್ತಿ, ಬರೋಡಾ, ಇಂದೂರು, ಗ್ವಾಲ್ಹೇರದವರೆಗೆ ಹೋಗಿ ವಾಕ್ಯಾರ್ಥ ಮಾಡಿ ಗುರುಗಳಿಗೆ ಗೌರವವನ್ನು ತರುತ್ತಿದ್ದರು. ಇವರಲ್ಲಿ ಓದಿ ಪಂಡಿತೋತ್ತಮರಾದ ಶಿಷ್ಯರಲ್ಲಿ ಅವರ ತಮ್ಮ ಶ್ರೀ ಮಧ್ವಾಚಾರ್ಯರು ಅಗ್ರಗಣ್ಯರಾಗಿದ್ದರು.

## ೧೧೭ ಮಧ್ವಾಚಾರ್ಯ



ಅಣ್ಣ ಬಾಬಾಚಾರ್ಯರಲ್ಲಿ ಓದಿ ಉದ್ದಾಮ ವಿದ್ವಾಂಸರಾದ ಶ್ರೀ ಮಧ್ವಾಚಾರ್ಯರು ಗಲಗಲಿ, ಶೂರ್ಪಾಲಿ ಮುಂತಾದ ಕಡೆಗಳಲ್ಲಿ ಇದ್ದು ಅನೇಕ ಜನರಿಗೆ ಪಾಠ ಹೇಳಿದರು. ಆ ಕಾಲದಲ್ಲಿ ಶ್ರೀ ಮಧ್ವಾಚಾರ್ಯರು ಕೆಲವೇ ಮಾಧ್ವ ಪಂಡಿತಾ ಗ್ರಗಣ್ಯರಲ್ಲಿ ಗೌರವದಿಂದ ಗಣ್ಯರಾಗಿದ್ದರು.

ಶ್ರೀ ಸತ್ಯಪರಾಕ್ರಮತೀರ್ಥ ಶ್ರೀಪಾದಂಗಳವರು ವೇದಾಂತ ವಿಚಾರದಲ್ಲಿ ಶ್ರೀ ಮಧ್ವಾಚಾರ್ಯರ ವಿಚಾರಕ್ಕೆ ಬೆಲೆ ಕೊಡುತ್ತಿದ್ದರು.

ಶ್ರೀ ಮಂಗಸೂಳಿ ವೆಂಕಟರಮಣಾಚಾರ್ಯರ ಗುರುಗಳಾದ ಶ್ರೀ ರಾಘವೇಂದ್ರಾಚಾರ್ಯರು, ಗಲಗಲಿ ಶ್ರೀ ಮಧ್ವಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನು ಓದಿ ಮಹಾ ಪಂಡಿತರಾದರು.

ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರು ಮದರಾಸಿನಲ್ಲಿ ವಿಧವಾ ವಿವಾಹ ಖಂಡನ ಮಾಡಲಿಕ್ಕೆ ಕರೆದ ಪಂಡಿತ ಸಭೆಗೆ ಈ ಮಧ್ವಾಚಾರ್ಯರು ಮಧ್ಯಸ್ಥರಾಗಿದ್ದರು.

## ೧೧೮ ನರಸಿಂಹಾಚಾರ್ಯರು



ಶ್ರೀ ನರಸಿಂಹಾಚಾರ್ಯರ ಹೆಸರನ್ನು ಕೇಳದವರೇ ಕರ್ನಾಟಕದಲ್ಲಿ ಇಲ್ಲವೆಂದು ಹೇಳಬಹುದು. ಶ್ರೀ ಮಂತ್ರಾಲಯ ರಾಯರಂತೆ ಅವರ ಪರಮಾನುಗ್ರಹಕ್ಕೆ ಪಾತ್ರರಾದ ಇವರ ಮಹಿಮೆಗಳು ಅಸಂಖ್ಯವಾಗಿವೆ. ಮಹಾರಾಷ್ಟ್ರದ ಭಿಕ್ಕು ಶಾಸ್ತ್ರಿಯವರಲ್ಲಿ ನ್ಯಾಯ ಶಾಸ್ತ್ರವನ್ನೂ ತಮ್ಮ ಕಕ್ಕಂದಿರಾದ ಶ್ರೀ ಮಧ್ವಾಚಾರ್ಯರಲ್ಲಿ ವೇದಾಂತವನ್ನೂ ಓದಿದ ಆಚಾರ್ಯರು ಉಭಯ ಶಾಸ್ತ್ರ ಪ್ರಭುಗಳಾದರು.

ಶ್ರೀ ಗೋಸಾವಿ ಪದ್ಮನಾಭಾಚಾರ್ಯ, ಶಾಮಾಚಾರ್ಯ, ಅನಂತ ರಂಗಾಚಾರ್ಯ, ಮುಂತಾದವರು ಅವರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ಘನ ವಿದ್ವಾಂಸರಾದರು. ಅವರು ಪ್ರತಿನಿತ್ಯವೂ ಸಂಧ್ಯಾ ಬ್ರಹ್ಮಯಜ್ಞಗಳಂತೆ ಸಚ್ಛಾಸ್ತ್ರ ಪಾಠವನ್ನೂ ತಮ್ಮ ನಿತ್ಯಾಹ್ನಿಕ ಎಂದು ಇಟ್ಟುಕೊಂಡಿದ್ದರು.

ಶ್ರೀ ನರಸಿಂಹಾಚಾರ್ಯರು ಮಹಾ ಸಾತ್ವಿಕರೂ, ಪರಮ ತಪಸ್ವಿಗಳೂ, ಅತ್ಯಂತ ಕರ್ಮಠರೂ ಆಗಿದ್ದರು. ಅವರು ಪ್ರತಿ ನಿತ್ಯ ೩೦೮ ಕೊಡ ನೀರು ಸ್ನಾನ ಮಾಡುತ್ತಿದ್ದರು. ಅವರು ಸ್ನಾನ ಮಾಡಿದ ನೀರಿನಲ್ಲಿ ಮೈ ತೊಳೆದರೆ ಕುಷ್ಠಾದಿ ರೋಗಗಳು ಕೂಡ ಪರಿಹಾರವಾಗುತ್ತಿದ್ದವು. ಜಟಾಮಂಡಲವನ್ನು ಧರಿಸಿದ ಅವರನ್ನು ನೋಡಿದರೆ ಪ್ರಾಚೀನ ಕಾಲದ ಋಷಿಗಳನ್ನು ನೋಡಿದಂತಾಗುತ್ತಿತ್ತು.

ಸ್ವಾಮಿಗಳಂತೆ ಅವರು ಯಾವಾಗಲೂ ನೂರಾರು ಜನ ಶಿಷ್ಯರನ್ನು ಕರೆದುಕೊಂಡು ದೇಶ ದೇಶಗಳಲ್ಲಿ ಸಂಚಾರ ಮಾಡುತ್ತಿದ್ದರು. ಪೀಠಾಧಿಪತಿಗಳಂತೆ ಮಂಟಪ ಹಾಕಿ ಪೀಠವಲ್ಲಿ ದೇವರ ಪ್ರತಿಮೆಗಳನ್ನು ಕೂಡಿಸಿ ವೈಭವದಿಂದ ಪೂಜೆ ಮಾಡುತ್ತಿದ್ದರು. ತಾವಿದ್ದ ಊರಿನಲ್ಲಿ ಪ್ರತಿಯೊಂದು ಬ್ರಾಹ್ಮಣರ ಮನೆಗೆ ಹೋಗಿ ಅವರ ಮನೆಯ ದೇವರಿಗೆ ನಮಸ್ಕಾರ ಮಾಡಿ ಬರುತ್ತಿದ್ದರು.

ಪ್ರತಿ ದಿನ ಪ್ರಾತಃಕಾಲ ನಾಲ್ಕು ಘಂಟೆಗೆ ಎದ್ದು ಸ್ನಾನ ಮಾಡಿ ಮಧ್ಯಾಹ್ನ ೧೨ ಘಂಟೆಯ ವರೆಗೆ ಏಕಾಸನದಲ್ಲಿ ಕುಳಿತು ೭೨ ಮಹಾ ಮಂತ್ರಗಳನ್ನು ಜಪ ಮಾಡುತ್ತಿದ್ದರು. ಅನಂತರ ಮನೆ ಮನೆಗೆ ದೇವರಿಗೆ ಹೋಗಿ ಬಂದು ಸುಧಾ ವ್ಯಾಸತ್ರಯಾದಿ ಪಾಠಗಳನ್ನು ಹೇಳುತ್ತಿದ್ದರು. ಅನಂತರ ೩೦೮ ಕೊಡ ಸ್ನಾನ, ಆ ಮೇಲೆ ಪೂಜೆ, ನಂತರ ಬಂದ ಜನರಿಗೆಲ್ಲ ತೀರ್ಥವಿತ್ತು ಆಚಾರ್ಯರು ಊಟಕ್ಕೆ ಕೂಡ ಬೇಕಾದರೆ ರಾತ್ರಿ ೯ ಘಂಟೆ ಆಗುತ್ತಿತ್ತು.

ಅವರು ಇದ್ದಲ್ಲಿ ಎಲ್ಲ ಬ್ರಾಹ್ಮಣರೂ ಉತ್ತರಾದಿ ಮಠದಂತೆ ತೀರ್ಥ ಪ್ರಸಾದಕ್ಕೆ ಬರುತ್ತಿದ್ದರು. ಸ್ವಗ್ರಾಮವಾದ ಗಲಗಲಿಯಲ್ಲಿದ್ದಾಗಲೂ ಅವರಿರುವ ವರೆಗೆ ನಿತ್ಯವೂ ಕ್ಷೇತ್ರ ಭೋಜನ. ಶ್ರೀ ನರಸಿಂಹಾಚಾರ್ಯರು ಬದುಕಿರುವ ವರೆಗೆ ಒಬ್ಬ ಬ್ರಾಹ್ಮಣನೂ ತನ್ನ ಮನೆಯಲ್ಲಿ ಒಲೆ ಹೊತ್ತಿಸಲಿಲ್ಲ. ಅಡಿಗೆ ಮಾಡಲಿಲ್ಲ.

ಹೈದರಾಬಾದ, ಮುಂಬಯಿ, ಮಹಾರಾಷ್ಟ್ರ ದೇಶಗಳಲ್ಲಿ ಅವರ ಅನುಗ್ರಹದಿಂದ ರೋಗ ರುಜಿನಗಳನ್ನು ಕಳೆದುಕೊಂಡು ಸಂತಾನ ಸೌಭಾಗ್ಯ ಪಡೆದು ಸುಖ ಸಂಪದಗಳನ್ನು ಹೊಂದಿ ಧನ್ಯರಾದ ಅನೇಕ ಜನರು ಇನ್ನೂ ಅವರ ಫೋಟೋ ಪ್ರತಿಕೃತಿಗಳನ್ನು ಇಟ್ಟುಕೊಂಡು ಪೂಜಿಸುತ್ತಿದ್ದಾರೆ. ಅವರು ಮಾಡಿದ ವೈಶ್ವ ದೇವದ ಬೂದಿಯನ್ನೂ ಅವರು ಸ್ನಾನ ಮಾಡಿದ ಸ್ಥಳದಲ್ಲಿಯ ಮೃತ್ತಿಕೆಯನ್ನೂ ಇನ್ನೂ ಅನೇಕ ಮನೆತನದವರು ತಮ್ಮ ಮನೆಯಲ್ಲಿ ಜತನದಿಂದ ಕಾಯ್ದುಕೊಂಡು ಹಾವು ಚೇಳು ಕಡಿದಾಗ, ಬೇನೆ ಬೇಸರಿಕೆ ಬಂದಾಗ, ಸಾವು ಸಂಕಟಗಳು, ಪ್ರಾಪ್ತವಾದಾಗ ಭಯಾ

ಪಾಯಗಳು ಎದುರಾದಾಗ ಭೂತ ಪ್ರೇತಗಳ ಬಾಧೆಯಾದಾಗ ಅದನ್ನು ನೈಗೆ ಹಚ್ಚಿಕೊಂಡು ಅನೇಕ ಕುತ್ತು ವಿಪತ್ತುಗಳಿಂದ ಪಾರಾಗುತ್ತಲಿರುವದು ಇಂದಿಗೂ ಪ್ರತ್ಯಕ್ಷ ಕಂಡ ವಿಷಯವಾಗಿದೆ. ಇವರ ಐದು ಜನ ಮಕ್ಕಳೂ ಶ್ರೀ ಸತ್ಯಧ್ಯಾನರ ಶಿಷ್ಯರಾಗಿ ಮಹಾ ವಿದ್ವಾಂಸರಾಗಿ ಜಗತ್ಪ್ರಸಿದ್ಧರಾಗಿದ್ದಾರೆ.

### ೧೧೯ ಅಣ್ಣಾಚಾರ್ಯರು

ಗಲಗಲಿ ನರಸಿಂಹಾಚಾರ್ಯರ ಜೇಷ್ಠಪುತ್ರರಾದ ಅಣ್ಣಾಚಾರ್ಯರು ಕಂಚಿಗೆ ಹೋಗಿ ಶ್ರೀ ವೈಷ್ಣವ ಪಂಡಿತರಾದ ಶೃಂಖಲಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿ ಮಹಾಪಂಡಿತರಾದರು. ತಂದೆಯವರಲ್ಲಿ ವೇದಾಂತವನ್ನು ಓದಿದರು. ಆಚಾರ್ಯರ ತರ್ಕ ಶಾಣೋಲ್ಲೀಢವಾದ ಬುದ್ಧಿಯು ಹರಿತವಾಗಿತ್ತು. ಕೋಟಿಕ್ರಮ ಪದ್ಧತಿಯಲ್ಲಿ ಅವರದು ಎತ್ತಿದ ಕೈ. ಶಂಕರಾಚಾರ್ಯ ಪೀಠಾಧಿಪತಿಗಳೊಬ್ಬರೊಡನೆ ವಾದಕ್ಕಿಳಿದು ಅವರನ್ನು ಮೂಕ-ಮೂಢರನ್ನು ಮಾಡಿದರು.

ಬಾಗಿಲಕೋಟೆಯ ಕೆರೂರ ಸ್ವಾಮಿರಾಚಾರ್ಯರ ಜೊತೆಗೆ ನ್ಯಾಯ ಶಾಸ್ತ್ರದಲ್ಲಿ ಕ್ರೊಡಪತ್ರ ಪದ್ಧತಿಯಿಂದ ವಾಕ್ಯಾರ್ಥವನ್ನು ವೈಖರಿಸಿ ಅವರಿಂದ ಬಹುಮಾನಿತರಾದರು.

ಆಚಾರ್ಯರು ಅಲ್ಪ ವಯಸ್ಸಿನಲ್ಲಿಯೇ ಕಾಲವಾದರು.

### ೧೨೦ ಸುಬ್ಬಣಾಚಾರ್ಯರು



ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನೂ, ಶ್ರೀ ಸತ್ಯ ಧ್ಯಾನತೀರ್ಥರಲ್ಲಿ ವೇದಾಂತವನ್ನೂ ಓದಿದ ಶ್ರೀ ಸುಬ್ಬಣಾಚಾರ್ಯರು ಪರಮ

ಸಾತ್ವಿಕರಾಗಿದ್ದರು. ಶ್ರೀ ಸತ್ಯಜ್ಞಾನತೀರ್ಥ ಶ್ರೀಪಾದಂಗಳವರು ಪೂರ್ವಾಶ್ರಮದಲ್ಲಿ ಇವರ ಸಹಾಧ್ಯಾಯಿಗಳಾಗಿದ್ದರು. ಇವರು ಸಿದ್ಧಾಂತ ಕೌಮುದಿಯನ್ನು ಮುಖೋ-ದ್ಗತವಾಗಿ ಪಾಠ ಹೇಳುತ್ತಿದ್ದರು. ಗಲಗಲಿ ವೆಂಕಣ್ಣಾಚಾರ್ಯ, ಕೇಶವ ಶರ್ಮಾ ಗಲಗಲಿ, ಅಂಬೇಕರ ಪ್ರಲ್ಹಾದಾಚಾರ್ಯ ಮುಂತಾದವರು ಇವರಲ್ಲಿ ವ್ಯಾಕರಣ ಶಾಸ್ತ್ರವನ್ನು ಓದಿದರು.

ತಮ್ಮ ತಂದೆಯವರಾದ ಶ್ರೀ ನರಸಿಂಹಾಚಾರ್ಯರಲ್ಲಿ ಶಕ್ತಿವಾದ, ವ್ಯುತ್ಪತ್ತಿ ವಾದ ಗಳನ್ನು ಓದಿದ ಆಚಾರ್ಯರು ಧರ್ಮಶಾಸ್ತ್ರದಲ್ಲಿಯೂ ಅಭಿಜ್ಞರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರೂ ಶ್ರೀ ಸತ್ಯಜ್ಞಾನ ತೀರ್ಥರೂ ಶ್ರೀ ಸತ್ಯಪ್ರಜ್ಞ ತೀರ್ಥರೂ ಶ್ರೀ ಸುಬ್ಬಣ್ಣಾಚಾರ್ಯರಲ್ಲಿ ವಿಶೇಷ ಪ್ರೇಮಾನುಗ್ರಹಗಳನ್ನು ಮಾಡಿದ್ದರು.

## ೧೨೧ ಕೂರ್ಮಾಚಾರ್ಯರು



ಶ್ರೀ ಸತ್ಯಧ್ಯಾನರ ಪ್ರೀತಿಯ ಶಿಷ್ಯರಲ್ಲಿ ಕೂರ್ಮಾಚಾರ್ಯರೂ ಒಬ್ಬರಾಗಿ ದ್ದಾರೆ. ಕರ್ನಾಟಕದಲ್ಲಿ ಕೂರ್ಮಾಚಾರ್ಯರನ್ನು ಅರಿಯದವರೇ ವಿರಳ.

ಅವರೂ ತಂದೆಯವರಂತೆ ೧೦೮ ಕೊಡ ಪ್ರತಿ ನಿತ್ಯ ಸ್ನಾನ ಮಾಡುತ್ತಿದ್ದರು. ಉತ್ತರ ಕರ್ನಾಟಕದಲ್ಲಿ " ಕೂರ್ಮಾಚಾರ್ಯರ ಸ್ನಾನ " ಎಂಬುದು ಗಾದಿಯ ಮಾತಾಗಿದೆ.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿದ ಆಚಾರ್ಯರು ತಿರುಪತಿಯಲ್ಲಿ ಕೆಲವು ವರ್ಷವಿದ್ದು ಕಪಿಸ್ಥಳ ದೇಶಿಕಾಚಾರ್ಯರಲ್ಲಿ ತರ್ಕ, ಮೀಮಾಂಸಾ, ಅಲಂಕಾರ ಶಾಸ್ತ್ರಗಳನ್ನು ಓದಿದರು. ಉಡುಪಿಯ ಶಿರೂರ ಸ್ವಾಮಿಗಳೊಡನೆ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾ ಓದಿ ಮಂಗಳ ಮಾಡಿದರು.

ತಮ್ಮ ಮನೆತನದ ಸಂಪ್ರದಾಯದಂತೆ ಅವರೂ ಜಟಾಧಾರಿಗಳಾಗಿ ಶಿಷ್ಯರಿಗೆ ಧರ್ಮೋಪದೇಶ ಮಾಡುತ್ತ ಸ್ವಾಮಿಗಳಂತೆ ದೇಶ ಸಂಚಾರ ಮಾಡುತ್ತಿದ್ದರು. ಬೆಳ್ಳಿಯ ಮಂಟಪ ಪೀಠಗಳನ್ನು ಹಾಕಿ ವೈಭವದಿಂದ ಶಿಷ್ಯರ ಮನೆಗಳಲ್ಲಿ ಭಿಕ್ಷೆ ಸ್ವೀಕರಿಸಿ ಪೂಜೆ, ತೊಟ್ಟಿಲ ಪೂಜೆಗಳನ್ನು ಮಾಡುತ್ತಿದ್ದರು.

ಗಲಗಲಿಯಲ್ಲಿ ನಾಗೇಶಭಟ್ಟರೆಂಬವರು ಅವರಲ್ಲಿ ನ್ಯಾಯಶಾಸ್ತ್ರವನ್ನೂ, ಮೀಮಾಂಸಾ ಗ್ರಂಥಗಳನ್ನೂ ಮತ್ತು ನ್ಯಾಯಾಮೃತ ಅದ್ವೈತಸಿದ್ಧಿ ಮುಂತಾದ ಗ್ರಂಥಗಳನ್ನೂ ಓದಿ ವಿದ್ವಾಂಸರಾಗಿದ್ದರು. ಶ್ರೀ ಸತ್ಯಧ್ಯಾನತೀರ್ಥರು ಗಲಗಲಿಗೆ ಬಂದಾಗಲೆಲ್ಲ ಈ ನಾಗೇಶಭಟ್ಟರನ್ನು ಕರೆಯಿಸಿಗೊಂಡು— ನ್ಯಾಯ, ಮೀಮಾಂಸಾ ಶಾಸ್ತ್ರಗಳಲ್ಲಿ ವಿಚಾರ–ವಿಮರ್ಶ ಮಾಡಿ ಅನೇಕ ವಿಷಯಗಳನ್ನು ತಿಳಿಸುತ್ತಿದ್ದರು.

ಸೊಲ್ಲಾಪುರದಲ್ಲಿ ಮುರಲೀಧರಬುವಾ ಅಬ್ದುಲಪುರಕರ ಎಂಬ ಅದ್ವೈತ ವಿದ್ವಾಂಸರೊಡನೆ ಲೇಖಬದ್ಧ ಶಾಸ್ತ್ರಾರ್ಥ ಮಾಡಿ, ಅದ್ವೈತ ಮತದ ಪ್ರಮಾಣ ವಿರುದ್ಧತೆಯನ್ನೂ ದ್ವೈತಮತದ ಸರ್ವೋತ್ಕೃಷ್ಟತೆಯನ್ನೂ ಸಿದ್ಧಮಾಡಿದರು.

ಇವರು ಒಳ್ಳೇ ವಾಗ್ಮಿಗಳಾಗಿದ್ದರು. ಧಾರವಾಡ, ವಿಜಾಪೂರ, ಬೆಳಗಾಂವ ಮುಂತಾದ ಕಡೆಗಳಲ್ಲಿ ಹಿಂದಕ್ಕೆ ತಿಂಗಳಾನುಗಟ್ಲೆ ಅವರ ಉಪನ್ಯಾಸಗಳನ್ನು ಕೇಳಲಿಕ್ಕೆ ಸಾವಿರಾರು ಜನರು ಸೇರುತ್ತಿದ್ದುದು ಎಲ್ಲರಿಗೂ ವಿದಿತವೇ ಇದೆ. ಶ್ರೀ ಗಲಗಲಿ ಕೂರ್ಮಾಚಾರ್ಯರು ನವಯುಗದ ಮಹರ್ಷಿಗಳೆಂದು ಪ್ರಸಿದ್ಧರಾಗಿದ್ದರು.

## ೧೨೨ ಮುದ್ದು ವಿಠ್ಠಲಾಚಾರ್ಯ ಗಲಗಲಿ



ಶ್ರೀಮತ್ ಪೂಜ್ಯ ಗಲಗಲಿ ನರಸಿಂಹಾಚಾರ್ಯರ ಮಕ್ಕಳಾದ ಮುದ್ದು ವಿಠ್ಠಲಾಚಾರ್ಯರು ಶ್ರೀ ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣವನ್ನೂ ರಂಗಂಪೇಟ ರಾಮಾಚಾರ್ಯ ಮತ್ತು ಎಲತ್ತೂರ ಕೃಷ್ಣಾಚಾರ್ಯರಲ್ಲಿ ನ್ಯಾಯ

ಶಾಸ್ತ್ರವನ್ನೂ ವ್ಯಾಸಂಗ ಮಾಡಿದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತಾದಿ ಗ್ರಂಥಗಳನ್ನು ಓದಿ ಪಂಡಿತರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರು ಇವರನ್ನು ವರದಾ ತೀರವಾದ ಕರ್ಜಗಿಯಲ್ಲಿ ಒಂದು ಸಂಸ್ಕೃತ ಪಾಠ ಶಾಲೆಯನ್ನು ಸ್ಥಾಪಿಸಿ ಇವರನ್ನು ಅಧ್ಯಾಪಕರನ್ನಾಗಿ ನಿಯಮಿಸಿದರು. ಶ್ರೀ ಗಲಗಲಿ ಆನಂದ ತೀರ್ಥಾಚಾರ್ಯ ಮುಂತಾದವರು ನ್ಯಾಯಾಮೃತಾದಿ ಗ್ರಂಥಗಳನ್ನು ಇವರಲ್ಲಿ ಓದಿ ಶ್ರೀಗಳವರಲ್ಲಿ ಪರೀಕ್ಷೆ ಕೊಟ್ಟರು. ಆಚಾರ್ಯರು ಭಾಗವತಾದಿ ಪುರಾಣಗಳನ್ನೂ ಗೀತಾ ಪ್ರವಚನವನ್ನೂ ಪ್ರೌಢ ಮನೋಹರವಾದ ಶೈಲಿಯಲ್ಲಿ ಹೇಳಿ ಪಂಡಿತ ಪಾಮರರನ್ನು ರಂಜಿಸುತ್ತಿದ್ದರು.

## ೧೨೩ ಶ್ರೀಪತ್ಯಾಚಾರ್ಯ

ಇವರು ಶ್ರೀ ಗಲಗಲಿ ಮಧ್ವಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ಮಹಾ ಪಂಡಿತರಾಗಿದ್ದರು. ಬರೋಡಾ, ಗದ್ವಾಲ, ಪುಣೆ, ಸಾಂಗಲಿ ಮುಂತಾದ ಸಭೆಗಳಲ್ಲಿ ಹೋಗಿ ವಾಕ್ಯಾರ್ಥ ಮಾಡಿ ಗೌರವ ಸಂಭಾವನೆ ದಕ್ಷಿಣಾದಿಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅವರಿಗೆ ಧರ್ಮಶಾಸ್ತ್ರದಲ್ಲಿಯೂ ಪಾಂಡಿತ್ಯವಿದ್ದಿತು. ಅವರು ಅಯಾಚಿತ ವೃತ್ತಿಯಿಂದ ಗಾಲವ ಕ್ಷೇತ್ರದಲ್ಲಿಯೇ ಇದ್ದು ಕೊನೆಯವರೆಗೂ ಶಾಸ್ತ್ರ ವಿಮರ್ಶನವನ್ನು ಮಾಡುತ್ತಲಿದ್ದರು. ಇವರು ಅಗರಖೇಡದಲ್ಲಿದ್ದು ಆದ್ಯಸೀತಾರಾಮಾಚಾರ್ಯರಲ್ಲಿಯೂ ನ್ಯಾಯಶಾಸ್ತ್ರವನ್ನು ಓದಿದ್ದರು.

## ೧೨೪ ಗಲಗಲಿ ಭೀಮಾಚಾರ್ಯ (ಕಟ್ಟಿ)

ಮುಧೋಳ ಸಂಸ್ಥಾನದಲ್ಲಿ ಕಟ್ಟಿಯವರೆಂದು ಪ್ರಸಿದ್ಧವಾದ ಗಲಗಲಿಯ ವಂಶದಲ್ಲಿ ಭೀಮಾಚಾರ್ಯರು ವ್ಯಾಕರಣ ವೇದಾಂತಗಳಲ್ಲಿ ಮಹಾ ವಿದ್ವಾಂಸರಾಗಿದ್ದರು. ಇವರು ಮುಧೋಳದಲ್ಲಿ ಸಂಸ್ಕೃತ ಪಾಠ ಶಾಲೆಯನ್ನು ಸ್ಥಾಪಿಸಿ ಅನೇಕ ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಂಡು ಅನ್ನ ಹಾಕಿ ಪಾಠ ಹೇಳುತ್ತಿದ್ದರು. ರಾಮದುರ್ಗದ ಮಾಧವೇಶಾಚಾರ್ಯರ ತಂದೆಯವರಾದ ಪ್ರಸಿದ್ಧ ವ್ಯಾಕರಣ ಪಂಡಿತ ಶ್ರೀನಿವಾಸಾಚಾರ್ಯರು ಸಂಪೂರ್ಣ ವ್ಯಾಕರಣವನ್ನು ಈ ಗಲಗಲಿ ಭೀಮಾಚಾರ್ಯರಲ್ಲಿಯೇ ಓದಿ ಮಹಾ ಪಂಡಿತರಾಗಿ ರಾಮದುರ್ಗದಲ್ಲಿ ಪಾಠ ಶಾಲೆ ಇಟ್ಟು ನೂರಾರು ಜನ ವಿದ್ಯಾರ್ಥಿಗಳನ್ನು ಪಂಡಿತರನ್ನಾಗಿ ಮಾಡಿದರು.

## ೧೨೫ ಗಲಗಲಿ ವೆಂಕಟರಮಣಾಚಾರ್ಯ

ಇವರು ಈ ಶತಮಾನದ ಆದಿಯಲ್ಲಿ ಧಾರವಾಡದಲ್ಲಿ ಇರುತ್ತಿದ್ದರು. ವೇದಾಂತದಲ್ಲಿ ಪಾರಂಗತರಾಗಿದ್ದರು.

೧೮೯೫ ನೇ ಇಸ್ವಿಯಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಶ್ರೀ ಮಧ್ವಸಿದ್ಧಾಂತ ಉತ್ತೇಜಕ ಸಭೆಯ ಸತ್ಯಧೀರ ಪಾಠ ಶಾಲೆಯಲ್ಲಿ ಪ್ರಾರಂಭದಿಂದಲೇ ವೇದಾಂತ ಅಧ್ಯಾಪಕರಾಗಿದ್ದರು. ಆಗ ಪಾಠಶಾಲೆಯಲ್ಲಿ— ಶೂರ್ಪಾಲಿಯ ಶ್ರೀನಿವಾಸಾಚಾರ್ಯ ಬಾದರಾಯಣಾಚಾರ್ಯ ಮತ್ತು ಶ್ರೀ ರಾಮಾಚಾರ್ಯ ಪಾಂಡುರಂಗಿ ಇವರಲ್ಲಿ ಓದು ತ್ತಿದ್ದರು. ಇವರಲ್ಲದೇ ಅನೇಕ ಜನರು ಇವರಲ್ಲಿ ಅಧ್ಯಯನ ಮಾಡುತ್ತಿದ್ದರು.

ಇವರು ಶಕೆ ೧೮೩೯ ರಲ್ಲಿ ವೈಕುಂಠವಾಸಿಗಳಾದರು.

## ೧೨೬ ಗಲಗಲಿ ಪಾಂಡುರಂಗಾಚಾರ್ಯ



ಗಲಗಲಿ ಮನೆತನದ ಕಟ್ಟೀ ಶಾಖೆಯಲ್ಲಿ ಮುಧೋಳದಲ್ಲಿ ಜನಿಸಿದ ಇವರು ಸಾತಾರಾದ ಶ್ರೀ ಗಜೇಂದ್ರಗಡ ಬಾಳಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣಗಳನ್ನು ಓದಿದರು.

ಅನಂತರ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿದರು.

ಶ್ರೀ ಪಾಂಡುರಂಗಾಚಾರ್ಯರು ಒಂದು ಸಭೆಯಲ್ಲಿ ಎಲತ್ತೂರ ಕೃಷ್ಣಾಚಾರ್ಯ, ಗೌಡಗಿರಿ ವೆಂಕಟರಮಣಾಚಾರ್ಯ, ಕಲ್ಲಾಪುರ ಗೋಪಾಳಕೃಷ್ಣಾಚಾರ್ಯ, ಮುಂತಾದ ಮಹಾ ಪಂಡಿತರೆದುರು ಮುಖೋದ್ಗತವಾಗಿ ನ್ಯಾಯಾಮೃತ ಪರೀಕ್ಷೆ ಯನ್ನು ಕೊಟ್ಟರು. ಅದಕ್ಕೆ ಮೆಚ್ಚಿದ ಶ್ರೀ ಸತ್ಯಧ್ಯಾನತೀರ್ಥರು ಅವರ ಕೈಯಲ್ಲಿ ಬಂಗಾರದ ಕಡಗವನ್ನು ಹಾಕಿ ಮೇಲೆ ೫೦೦ ರೂಪಾಯಿಗಳ ಪಾರಿತೋಷಿಕ ಕೊಟ್ಟರು. ಅಂದಿನಿಂದ ಇವರಿಗೆ ನ್ಯಾಯಾಮೃತ ಪಾಂಡುರಂಗಾಚಾರ್ಯರೆಂದು ಹೆಸರಾಯಿತು.

ಇವರು ಸಂಸ್ಕೃತದಲ್ಲಿ ಒಳ್ಳೆ ಸರಸ ಕವಿಗಳಾಗಿದ್ದರು. 'ವಾರಣಾಸೀ ಸ್ವಯಂವರ' ಎಂಬ ಮಧುರ ಮನೋಹರ ದಿವ್ಯ ಕಾವ್ಯವನ್ನು ಬರೆದಿದ್ದರು. ಇವರು ರಚಿಸಿದ ಅನೇಕ ಚಾಟು ಶ್ಲೋಕಗಳನ್ನೂ, ವಿನೋದ ಪದ್ಯಗಳನ್ನೂ, ಪರಿಹಾಸ ಪದ್ಯಗಳನ್ನೂ ವಿದ್ವಾಂಸರು ಈಗಲೂ ನೆನೆದು, ನಕ್ಕು-ನಲಿಯುತ್ತಾರೆ. ಇವರ ಸ್ಮರಣ ಶಕ್ತಿಯು ಅಗಾಧವಾಗಿತ್ತು.

ಬಾಣಭಟ್ಟನ ಕಾದಂಬರಿಯನ್ನು ಮುಖೋದ್ಗತವಾಗಿ ಹೇಳುತ್ತಿದ್ದರು. ಕೇಸರೀ ವೃತ್ತ ಪತ್ರದ ಅಗ್ರ ಲೇಖಗಳನ್ನು ಒಂದು ಸಲ ಓದಿ ಮುಂದೆ ಕಂಠ ಪಾಠವಾಗಿ ಒಪ್ಪಿಸುತ್ತಿದ್ದರು.

## ೧೨೭ ಗಲಗಲಿ ಜಯಾಚಾರ್ಯ

ಇವರು ಅಗರಖೇಡದಲ್ಲಿ ಆದ್ಯ ಮನೆತನದ ಅಳಿಯಂದಿರಾಗಿ ಮಹಾ ಪಂಡಿತ ರಾಗಿದ್ದರು. ನ್ಯಾಯ ಶಾಸ್ತ್ರದಲ್ಲಿ ಅಭಿನವ ಗದಾಧರ ಭಟ್ಟಾಚಾರ್ಯರೆಂದು ಇವರಿಗೆ ಖ್ಯಾತಿ ಇದ್ದಿತು. ಇವರು ಉತ್ತರ ಭಾರತದ ಕಾಶಿ, ನದಿಯಾ ಮುಂತಾದ ವಿದ್ವತ್ಕೇಂದ್ರಗಳಿಗೆ ಹೋಗಿ ನವೀನನ್ಯಾಯದಲ್ಲಿ ತಮ್ಮ ಅಪೂರ್ವವಾದ ಅಗರಖೇಡದ ಕ್ರೋಡಪತ್ರ ಪದ್ಧತಿಯಿಂದ ವಾದ ಮಾಡಿ ವಿದ್ವಾಂಸರನ್ನು ಸೋಲಿಸಿದರು. ಹೊರೆ ಹೊರೆಯಾಗಿ ಜಯಪತ್ರ, ಮಾನಪತ್ರಗಳನ್ನು ತಂದರು.

ಇವರ ಅದ್ಭುತವಾದ ಪ್ರತಿಭಾ, ಪಾಂಡಿತ್ಯ, ತರ್ಕ ಪ್ರಭುತ್ವಗಳನ್ನು ಕಂಡು ಉತ್ತರ ದೇಶದ ಅನೇಕ ವಿದ್ಯಾರ್ಥಿಗಳು ಅಗರಖೇಡಕ್ಕೆ ಬಂದು ಇವರ ಶಿಷ್ಯರಾಗಿ ಅಧ್ಯಯನ ಮಾಡಿದರು. ಉತ್ತರ ದೇಶದ ಬದರೀನಾಥಶಾಸ್ತ್ರಿ ಎಂಬ ವಿದ್ಯಾರ್ಥಿಯು ಇವರಲ್ಲಿ ಓದಿ ಮಹಾ ಪಂಡಿತನಾಗಿ ಬರೋಡಾ ವಿದ್ವತ್ಸಭೆಯಲ್ಲಿ ತನ್ನ ವಾಕ್ಯಾರ್ಥ ಕೌಶಲ್ಯದಿಂದ ಎಲ್ಲ ಪಂಡಿತರನ್ನೂ ನಿರುತ್ತರಗೊಳಿಸಿದನು. ಅದನ್ನು ನೋಡಿ ಬರೋಡಾ ಮಹಾರಾಜನು ಬದರೀನಾಥ ಶಾಸ್ತ್ರಿಯನ್ನು ತನ್ನ ಆಸ್ಥಾನ ವಿದ್ವಾಂಸ ರನ್ನಾಗಿ ನೇಮಿಸಿಕೊಂಡನು. ಆದರಿಂದ ಶಾಸ್ತ್ರಿಗೆ ವಿಪುಲವಾಗಿ ಧನ, ಕೀರ್ತಿ, ಮನ್ನಣೆ ಗಳು ಪ್ರಾಪ್ತವಾದವು.

ಇದೆಲ್ಲವೂ ತನಗೆ ಪಾಠ ಹೇಳಿ ಪಂಡಿತನನ್ನಾಗಿ ಮಾಡಿದ ಗಲಗಲಿ ಜಯಾ ಚಾರ್ಯರ ಪುಣ್ಯವೆಂದು ಬಗೆದ ಬದರೀನಾಥ ಶಾಸ್ತ್ರಿಯು ಅಗರಖೇಡದ ವರೆಗೆ ಬಂದು ಆಚಾರ್ಯರಿಗೆ ೧೦ ಸಾವಿರ ರೂಪಾಯಿ ಗುರು ದಕ್ಷಿಣೆಯನ್ನು ಕೊಟ್ಟು ಹೋದನು.

ಇವರಲ್ಲಿ ಅನೇಕ ಶಿಷ್ಯರು ಪಾಠ ಓದಿ, ಪಂಡಿತರಾದರು. ಗಲಗಲಿ ಕೂರ್ಮಾ ಚಾರ್ಯರು ಇವರಲ್ಲಿ ಕೆಲವು ದಿನವಿದ್ದು, ಸಾಮಾನ್ಯನಿರುಕ್ತಿ ಮೊದಲಾದ ನ್ಯಾಯ ಶಾಸ್ತ್ರದ ಹೇತ್ವಾಭಾಸಗ್ರಂಥಗಳನ್ನು ಓದಿದರು.

## ೧೨೮ ಮಧ್ವಾಚಾರ್ಯ ಗಲಗಲಿ

ಕರ್ಜಗಿಯ ಗಲಗಲಿ ಮನೆತನದವರಾದ ಶ್ರೀ ಮಧ್ವಾಚಾರ್ಯರು ವೇದಾಂತ ವಲ್ಲಿ ಒಳ್ಳೇ ಪಂಡಿತರಾಗಿದ್ದರು. ಅವರು ಧಾರವಾಡದಲ್ಲಿ ಬಂದು ನೆಲಿಸಿ ಶ್ರೀ ಸತ್ಯ

ಧೀರ ವೇದಾಂತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ ಅಖಂಡ ೩೦–೪೦ ವರ್ಷಗಳ ವರೆಗೆ ಪಾಠ–ಪ್ರವಚನ ಮಾಡಿಸುತ್ತಲಿದ್ದರು. ಸತ್ಯಧ್ಯಾನತೀರ್ಥರ ವೇದಾಂತ ಶಿಷ್ಯರಾದ ಆಚಾರ್ಯರು ಭಾಷ್ಯ, ತತ್ವಪ್ರಕಾಶಿಕಾ ಗ್ರಂಥಗಳನ್ನು ಮುಖೋದ್ಗತ ವಾಗಿ ಅನುವಾದ ಮಾಡುತ್ತಿದ್ದರು.

ಈಗಿನ ಉತ್ತರಾದಿ ಮಠದ ಶ್ರೀಪಾದಂಗಳವರ ತಂದೆಯವರಾದ ಶ್ರೀ ಗುತ್ತಲ ರಂಗಾಚಾರ್ಯರು ಈ ಗಲಗಲಿ ಮಧ್ವಾಚಾರ್ಯರಲ್ಲಿಯೇ ಅಧ್ಯಯನ ಮಾಡಿ ವೇದಾಂತ ಪಂಡಿತರಾಗಿದ್ದರು. ಇವರಲ್ಲದೆ ಇನ್ನೂ ಅನೇಕ ಶಿಷ್ಯರು ಸುಧಾದಿ ಗ್ರಂಥ ಗಳನ್ನು ಓದಿ ಮಂಗಳ ಮಾಡಿದ್ದಾರೆ.

## ೧೨೯ ಗಲಗಲಿ ಮಧ್ವಾಚಾರ್ಯ (ಶೂರ್ಪಾಲಿ)

ಶೂರ್ಪಾಲಯದಲ್ಲಿದ್ದ ಮಧ್ವಾಚಾರ್ಯರು ವೇದಾಂತ ವ್ಯಾಕರಣ ಧರ್ಮ ಶಾಸ್ತ್ರ ಅಧ್ಯಯನ ಮಾಡಿದ್ದರು.

## ೧೩೦ ಗಲಗಲಿ ಕೃಷ್ಣಾಚಾರ್ಯ (ಶೂರ್ಪಾಲಿ)

ಇವರು ಸುಧಾಂತ ವೇದಾಂತ ಭಾಷ್ಯಾಂತ ವ್ಯಾಕರಣ ಪಂಡಿತರಾಗಿ ಶೂರ್ಪಾ ಲಯ ಕ್ಷೇತ್ರದಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದರು.

## ೧೩೧ ಮಧ್ವಮುನಿ ಆಚಾರ್ಯ

ವೇದಾಂತದಲ್ಲಿ ಪರಿಶ್ರಮ ಬಟ್ಟು ಬಹುಶ್ರುತರೆನಿಸಿದ್ದರು.

## ೧೩೨ ಗಲಗಲಿ (ಕರ್ಜಗಿ) ಗೋಪಾಲ ಕೃಷ್ಣಾಚಾರ್ಯ

ಇವರು ಅದ್ಭುತ ಪಂಡಿತರು. ಮಹಾತಪಸ್ವಿಗಳು. ಅತ್ಯಂತ ಪ್ರಭಾವಶಾಲಿಗಳಾದ ಕಲಿಯುಗದ ಬ್ರಹ್ಮರ್ಷಿಗಳು. ಅವರ ಸೇವಾ ಶುಶ್ರೂಷೆಗಳಿಂದ ಜನರಿಗೆ ಈಗಲೂ ಇಷ್ಟಾರ್ಥ ಪೂರ್ತಿಯಾಗುವದು.

## ೧೩೩ ಗಲಗಲಿ ಬಾಬಾಚಾರ್ಯ ಅಣ್ಣಿಗೇರಿ

ಇವರು ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಇವರು ಪರವಾದಿಗಳನ್ನು ನಿಗ್ರಹ ಮಾಡಿ ದ್ವೈತ ವೇದಾಂತವನ್ನು ದೇಶದಲ್ಲಿ ಪ್ರಚಾರ ಮಾಡಿದ್ದರು. ಇವರು ಪಾಲಕೀ ಪದಸ್ಥರಾಗಿ ಮೆರೆದರು. ಅಪ್ಪನವರು ಎಂದು ಎಲ್ಲ ಜನರೂ ಅವರಿಗೆ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಪೇಶ್ವೆಯವರು ಇವರಿಗೆ ಕೊಟ್ಟ ವರ್ಷಾಶನವು ೧೯೫೮ ರ ವರೆಗೂ ಈ ಮನೆತನದವರಿಗೆ ಸಿಕ್ಕುತಿತ್ತು.

## ೧೩೪ ಗಲಗಲಿ ಶ್ರೀನಿವಾಸಾಚಾರ್ಯ

ಇವರು ಪಂಡಿತಮಂಡಲೀ ಮಣಿ ಮುಕುಟರೆಂದು ಪ್ರಖ್ಯಾತರಾಗಿದ್ದರು. ಇವರಲ್ಲಿ ಪಾಠ ಓದಿದ ಅನೇಕರು ಟೀಕಾ-ಟಿಪ್ಪಣಿ ಗ್ರಂಥಕಾರರಾಗಿದ್ದಾರೆ. ಶ್ರೀಮನ್ನ್ಯಾಯ ಸುಧಾ ಗ್ರಂಥಕ್ಕೆ ಚಷಕ ಎಂಬ ಟಿಪ್ಪಣಿಯನ್ನು ಬರೆದ ಗಾರ್ಲಪಾಡ ಆಚಾರ್ಯರು ಇವರಲ್ಲಿ ಪಾಠ ಓದಿ ಮಹಾ ಪಂಡಿತರಾಗಿದ್ದರು. ಶ್ರೀಮನ್ನ್ಯಾಯಾಮೃತ ಗ್ರಂಥದ ಮೇಲೆ ಮಾಧುರೀ ಎಂಬ ಗ್ರಂಥ ಬರೆದ ಆಚಾರ್ಯರೂ ಈ ಶ್ರೀ ಗಲಗಲಿ ಆಚಾರ್ಯರಲ್ಲಿ ಓದಿಯೇ ಮಹಾ ಪಂಡಿತೋತ್ತಮರಾಗಿದ್ದರು.

## ೧೩೫ ಕರ್ಜಗಿ ನರಸಿಂಹಾಚಾರ್ಯ ಗಲಗಲಿ

ಇವರು ಶ್ರೀ ಸತ್ಯಜ್ಞಾನತೀರ್ಥರಲ್ಲಿ ವೇದಾಂತ ಓದಿ, ಆಯುರ್ವೇದದಲ್ಲಿಯೂ ಪರಿಶ್ರಮಬಟ್ಟಿದ್ದರು.

## ೧೩೬ ಕರ್ಜಗಿ ಪಾಂಡುರಂಗಾಚಾರ್ಯ ಗಲಗಲಿ

ಶ್ರೀಮದುತ್ತರಾದಿ ಮಠದಲ್ಲಿದ್ದು ವೇದಾಂತ ಶ್ರವಣ ಮಾಡಿ ಸದಾಚಾರಿಗಳಾಗಿ ಬೆಂಗಳೂರಲ್ಲಿ ವಾಸವಾಗಿದ್ದರು.

## ೧೩೭ ಗಲಗಲಿ ಗೋಪಾಲಕೃಷ್ಣಾಚಾರ್ಯ (ಸವದತ್ತಿ)

ಸವದತ್ತಿಯ ಗಲಗಲಿ ಶಾಖೆಯಲ್ಲಿ ಗೋಪಾಲಕೃಷ್ಣಾಚಾರ್ಯರು ವೇದಾಂತ ವ್ಯಾಕರಣ ಶಾಸ್ತ್ರಗಳಲ್ಲಿ ನಿಸ್ಸೀಮ ಪಂಡಿತರಾಗಿದ್ದರು. ಇವರಿಗೆ ಉತ್ತರಾದಿ ಮಠದ ಶ್ರೀಗಳವರಿಂದ ಹಗಲು ದೀವಟಿಗೆಯ ಮರ್ಯಾದೆ ಇದ್ದಿತು. ಇವರು ಸವದತ್ತಿಯಲ್ಲಿಯೇ ಅನೇಕ ಶಿಷ್ಯರಿಗೆ ಪಾಠ ಪ್ರವಚನ ಮಾಡಿಕೊಂಡಿದ್ದರು. ಇವರಲ್ಲಿ ಸುಧಾದಿ ಗ್ರಂಥಗಳನ್ನು ಓದಿದ ಎಷ್ಟೋ ಮಹಾ ಪಂಡಿತರು ದೇಶದಲ್ಲಿ ಪಾಠಪ್ರವಚನಾಚಾರ್ಯರಾಗಿ ಮೆರೆದಿದ್ದಾರೆ. ಆಚಾರ್ಯರಲ್ಲಿ ಶಿಷ್ಯತ್ವ ವಹಿಸಿ ಸುಧಾದಿ ಗ್ರಂಥಗಳನ್ನು ಓದಿದ ಕೊಣ್ಣೂರ ಕುಲಕರ್ಣಿ ಭೀಮರಾಯರು (ಕುಂಬಾರಗೇರಿ) ಶ್ರೀಮನ್ನ್ಯಾಯ ಸುಧಾ ಗ್ರಂಥಕ್ಕೆ ಟಿಪ್ಪಣಿ ಬರೆದಿದ್ದಾರೆ. ಅವರು ತಮ್ಮ ಗ್ರಂಥ ಪ್ರಾರಂಭದಲ್ಲಿ ತಮ್ಮ ಗುರು ಗಳಾದ ಶ್ರೀ ಗಲಗಲಿ ಗೋಪಾಲಕೃಷ್ಣಾಚಾರ್ಯರಿಗೆ ನಮಸ್ಕಾರ ಮಾಡಿದ್ದಾರೆ.

## ೧೩೮ ಅನಂತಾಚಾರ್ಯ ಗಲಗಲಿ ಸೊಂಡೂರ

ಇವರು ಅತ್ಯದ್ಭುತ ಪಂಡಿತರಾಗಿ "ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ" ಎಂಬ ಬಿರುದು, ರಾಜ ಗೌರವವನ್ನು ಸಂಪಾದಿಸಿದರು.

ಇವರ ಲೋಕೋತ್ತರವಾದ ಚತುಶ್ಶಾಸ್ತ್ರ ಪಾಂಡಿತ್ಯ, ವಾಕ್ಯಾರ್ಥ ವೈದಗ್ಧ್ಯ, ತಪಃಶಕ್ತಿಗಳನ್ನು ನೋಡಿ ಆ ಕಾಲದ ರಾಜರು ಅವರಿಗೆ ಸೊಂಡೂರ ಸಂಸ್ಥಾನ ದಲ್ಲಿಯ ಕೆಲವು ಗ್ರಾಮಗಳನ್ನು ಜಹಾಗೀರ ಹಾಕಿ ಕೊಟ್ಟಿದ್ದರು.

ಅನಂತಾಚಾರ್ಯರು ಚಂದ್ರಿಕಾ ಗ್ರಂಥಕ್ಕೆ "ಪ್ರಭಾಪ್ರಸರ" ಎಂಬ ಟಿಪ್ಪಣಿ ಯನ್ನು ಬರೆದಿದ್ದಾರೆ. ಅವರಲ್ಲಿ ಓದಿ ಪಂಡಿತರಾದ ಅವರ ಶಿಷ್ಯರೊಬ್ಬರು—

"ಅಧಿಕಂತು ಅಸ್ಮದ್ ಗುರು ಗ್ರಂಥೇ ದೃಷ್ಟವ್ಯಂ"

ಎಂದು ಬರೆಯುತ್ತಾರೆ. ಇದರ ಮೇಲಿಂದ ಅನಂತಾಚಾರ್ಯರು ಇನ್ನೂ ಬೇರೆ ಟಿಪ್ಪಣಿಗಳನ್ನು ಬರೆದಿರಬಹುದೆಂದು ಊಹಿಸಬಹುದಾದರೂ, ನಿಶ್ಚಿತವಾಗಿ ಈವರೆಗೆ ಅವರ ಇತರ ಯಾವ ಗ್ರಂಥಗಳೂ ದೊರಕಿಲ್ಲ.

ಮುಧೋಳ, ಅಗರಖೇಡ, ಕರ್ಜಗಿ, ಮೈಸೂರ, ಧಾರವಾಡ, ಸವದತ್ತಿ, ಗಲಗಲಿ, ಶೂರ್ಪಾಲಯ, ಅಣ್ಣಿಗೇರಿ, ನವಲಗುಂದ, ಬೆಳಗಾವಿ ಮುಂತಾದ ಅನೇಕ ಕಡೆಗಳಲ್ಲಿ ನೆಲಸಿದ ಈ ಮನೆತನದಲ್ಲಿ ಅಲ್ಲಲ್ಲಿ ಅನೇಕ ಪಂಡಿತರೂ, ಪೂಜ್ಯ ತಪಸ್ವಿ ಗಳೂ, ಪ್ರಭಾವಶಾಲಿಗಳೂ ಆಗಿ ಹೋಗಿದ್ದರೂ ನಮಗೆ ಎಲ್ಲ ಕಡೆಗೂ ಹೋಗಿ ಪೂರ್ಣ ವಿವರವನ್ನು ಸಂಗ್ರಹಿಸಲಿಕ್ಕಾಗದ್ದರಿಂದ ಎಲ್ಲ ಶಾಖೆಗಳ ವಿದ್ವಾಂಸರ ಮಾಹಿತಿಯನ್ನು ಇಲ್ಲಿ ಕೊಟ್ಟಿಲ್ಲ. ನಮಗೆ ಉಪಲಬ್ಧವಿದ್ದ ಕೆಲವು ಮನೆತನಗಳ ಮಹಾ ಪುರುಷರ ಚರಿತ್ರಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

## ೧೩೮ ರಾಯಚೂರ ಕೃಷ್ಣಾಚಾರ್ಯರು

ಇವರು ಉತ್ತರಾದಿ ಮಠದ ವಿಖ್ಯಾತ ಪೀಠಾಧೀಶರಾದ ಶ್ರೀ ಸತ್ಯಬೋಧ ತೀರ್ಥರ ಪೂರ್ವಾಶ್ರಮದ ಹಿರೇ ಮಗನ ಮಕ್ಕಳು. ತಂದೆಯ ಹೆಸರು ವರಾಹಾ ಚಾರ್ಯ. ರಾಯಚೂರಿನಿಂದ ಬಂದದ್ದರಿಂದ ಇವರಿಗೆ ರಾಯಚೂರ ಆಚಾರ್ಯ ರೆಂತಲೇ ಕರೆಯುತ್ತಾರೆ.

ಶ್ರೀ ಸತ್ಯಬೋಧ ತೀರ್ಥರಿಗೆ ಪೂರ್ವಾಶ್ರಮದಲ್ಲಿ ಇಬ್ಬರು ಮಕ್ಕಳು. ವರಾ ಹಾಚಾರ್ಯ, ಸೇತುನಾರಾಯಣಾಚಾರ್ಯರೆಂದು. ವರಾಹಾಚಾರ್ಯರ ಮಕ್ಕಳೇ ಕೃಷ್ಣಾಚಾರ್ಯರು. ಸೇತು ನಾರಾಯಣಾಚಾರ್ಯರ ಮಕ್ಕಳೂ ಕೃಷ್ಣಾಚಾರ್ಯ ರೆಂದೇ ಪ್ರಸಿದ್ಧಿ.

ಈ ಸೇತು ನಾರಾಯಣಾಚಾರ್ಯರ ಮಕ್ಕಳಾದ ಕೃಷ್ಣಾಚಾರ್ಯರಿಗೆ ಸತ್ಯ ಬೋಧ ಮಠದ ಪರ್ಯಾಯ ಪ್ರಾಪ್ತವಾದ್ದರಿಂದ ಇವರ ವಂಶಸ್ಥರೇ ಈಗಿನ ಪರ್ಯಾಯಸ್ಥ ರಾಯಚೂರ ಆಚಾರ್ಯರು.

ಈ ಕೃಷ್ಣಾಚಾರ್ಯರು ಮೈಸೂರು ಮುಮ್ಮಡಿ ಕೃಷ್ಣರಾಜರ ಕಾಲಕ್ಕೆ ಆಸ್ಥಾನ್ ವಿದ್ವಾಂಸರಾಗಿದ್ದರು. ಹಾಗೂ ಸತ್ಯಬೋಧರ ವೃಂದಾವನ ಪೂಜಾ ನೈವೇದ್ಯಕ್ಕೆ ಹೊನ್ನಾಳಿ ತಾಲೂಕಿನ ಹುಣಸಗಟ್ಟಿ ಗ್ರಾಮವನ್ನು ಇನಾಮಾಗಿ ದೊರಕಿಸಿದರು. ಅದು ಈಗಲೂ ನಡೆಯುತ್ತದೆ.

ಆದರೆ ಈ ನಮ್ಮ ಕೃಷ್ಣಾಚಾರ್ಯರಿಗೆ ಸತ್ಯಬೋಧ ಸ್ವಾಮಿಗಳ ಮಠದ ಪರ್ಯಾಯದ ಹಕ್ಕು ದೊರೆಯದ್ದರಿಂದ ಇವರು ಸವಣೂರ ಬಿಟ್ಟು ವಿಜಾಪೂರ ಜಿಲ್ಲೆ ಅಗರಖೇಡ ಕಡೆಗೆ ಹೋದರು. ಇವರು ಘನ ವಿದ್ವಾಂಸರೂ ಚತುಃಶಾಸ್ತ್ರ ಪಂಡಿತರೂ ಆಗಿದ್ದರಲ್ಲದೆ ಮಹಾ ತಪಸ್ವಿಗಳೂ ಆಗಿದ್ದರು.

ಶ್ರೀ ಸತ್ಯಧರ್ಮರ ಕಾಲದಲ್ಲಿ ಇವರಿಗೆ ಮಠದಲ್ಲಿ ಬಹಳ ಗೌರವವಿದ್ದಿತು. ಇವರು ತಮ್ಮ ನಿತ್ಯ ಅನುಷ್ಠಾನವನ್ನು ಏನಾದರೂ ತಪ್ಪಿಸುತ್ತಿದ್ದಿಲ್ಲ. ದಿನಾಲೂ ೭೨ ಮಹಾ ಮಂತ್ರಗಳನ್ನೂ ಪ್ರತಿಮಾರ್ಚನೆಯನ್ನೂ ಮಾಡಿಕೊಂಡ ಮೇಲೆಯೇ ಭೋಜನಾದಿಗಳು ಆಗಬೇಕು.

ಇವರು ಒಮ್ಮೆ ಹುನಗುಂದ ತಾಲೂಕಿನ ಅಡಿಹಾಳ ಎಂಬ ಕೃಷ್ಣಾ ತೀರದ ಹಳ್ಳಿಗೆ ಆಗಮಿಸಿದ್ದರು. ಒಂದು ದಿನ ಆಹ್ನಿಕಕ್ಕೆ ಕೃಷ್ಣಾ ನದಿಯ ಮಧ್ಯದಲ್ಲಿರುವ ಬಂಡೆಗಲ್ಲಿನ ಮೇಲೆ ಹೋಗಿ ಆಹ್ನಿಕ ಮಾಡುತ್ತ ಕುಳಿತಿದ್ದರು.

ಅಕಸ್ಮಾತ್ ಕೃಷ್ಣಾನದಿಯ ಮಹಾಪೂರ ಬರಹತ್ತಿತು. ಜನರು ಕೂಗಿ ಇವರಿಗೆ "ದಂಡಿಗೆ ಬನ್ನಿರಿ, ಇಲ್ಲದಿದ್ದಲ್ಲಿ ಮುಳುಗಿ ಹೋಗುವಿರಿ" ಎಂದು ಹೇಳಿದರು. ಆಚಾರ್ಯರು ಅನುಷ್ಠಾನದಲ್ಲಿ ಮಗ್ನರಾಗಿ ಸಮಾಧಿಸ್ಥರಾಗಿದ್ದರು. ಕೊನೆಗೆ ಹೊಳೆಯೇ ಇಬ್ಭಾಗವಾಗಿ ಆ ಬಂಡೆಗಲ್ಲನ್ನು ಸುತ್ತುವರಿದು ಹೋಯಿತು. ಹೀಗೆ ಏಳು ದಿನ ಆಚಾರ್ಯರು ಅಲ್ಲಿಯೇ ಪೂಜಾ ನಿರತರಾಗಿದ್ದರು.

ಏಳು ದಿನಗಳ ನಂತರ ಊರವರು ಇವರನ್ನು ಮೆರವಣಿಗೆ ಮಾಡಿಕೊಂಡು ಊರಿಗೆ ಕರೆದುಕೊಂಡು ಬಂದರು. ಈ ಸುದ್ದಿ ಪೇಶ್ವೆಗೆ ತಿಳಿದದ್ದರಿಂದ ಆ ಅಡಿಹಾಳ ಗ್ರಾಮವನ್ನು ಇವರಿಗೆ ಇನಾಮು ಆಗಿ ಕೊಟ್ಟನು.

ಮುಂದೆ ಆಚಾರ್ಯರು ಸವದತ್ತಿಗೆ ಬಂದು, ಅಲ್ಲಿ ಶಿಷ್ಯರಿಗೆ ಪಾಠ-ಪ್ರವಚನವನ್ನು ಮಾಡಿಸುತ್ತ ಒಂದು ನಾರಾಯಣದೇವಸ್ಥಾನವನ್ನು ಕಟ್ಟಿಸಿದರು. ನಿತ್ಯ

ಪೂಜಾ ಉತ್ಸವಾದಿಗಳು ನಿರಂತರವಾಗಿ ನಡೆಯುವಂತೆ ಅನೇಕ ಭೂಮಿ ಸೀಮೆ ಗಳನ್ನು ದಾನವಾಗಿ ದೊರಕಿಸಿದರು.

ಆಗಿನ ಧಾರವಾಡದ ಜಿಲ್ಲಾ ನ್ಯಾಯಾಧೀಶರಾದ ತಿರುಮಲರಾಯರಿಗೆ ಸಂತತಿ ಇದ್ದಿಲ್ಲ. ಯಾರೋ ಒಬ್ಬರು— "ಶ್ರೀ ಕೃಷ್ಣಾಚಾರ್ಯ ರಾಯಚೂರವರ ಸೇವೆ ಯನ್ನು ಮಾಡಿದರೆ ಸಂತತಿಯಾಗುತ್ತದೆಂದು" ಹೇಳಿದರು.

ಶ್ರೀ ತಿರುಮಲರಾಯರು ಆಚಾರ್ಯರನ್ನು ಧಾರವಾಡಕ್ಕೆ ತಮ್ಮಲ್ಲಿಯೇ ಕರೆ ಯಿಸಿಕೊಂಡು ಸೇವೆ ಮಾಡಿದ್ದಕ್ಕಾಗಿ ಆಚಾರ್ಯರ ಅನುಗ್ರಹದಿಂದ ತಿರುಮಲರಾಯ ರಿಗೆ ಮಕ್ಕಳಾದರು. ಹಿರಿಯಮಗನಿಗೆ "ಜಯಬೋಧರಾಯ" ಎಂದು ಹೆಸರನ್ನಿಟ್ಟರು. ಇನ್ನೊಬ್ಬರಿಗೆ "ವೆಂಕಟರಾವ" ಎಂದು ನಾಮಕರಣ ಮಾಡಿದರು.

ತಿರುಮಲರಾಯರು ಶ್ರೀ ಆಚಾರ್ಯರಿಗೆ ತಮ್ಮ ಮನೆಯ ಹತ್ತರವೇ ಹೊಸ ಮನೆ ಮತ್ತು ಭೂಮಿಗಳನ್ನು ದಾನವಾಗಿ ಕೊಟ್ಟು ಕೃತಾರ್ಥರಾದರು.

ಈಗಲೂ ಈ ಜಡ್ಡಿಯವರ ಮನೆಯಲ್ಲಿ ಆಚಾರ್ಯರು ಹಿಡಿದಿದ್ದ ಕೋಲು ಇದ್ದು ಅದನ್ನು ದಿನಾಲೂ ಪೂಜಿಸುತ್ತಾರೆ. ಮನೆಯಲ್ಲಿ ಯಾರಿಗಾದರೂ ಜ್ವರ ಮುಂತಾದ ರೋಗ-ರುಜಿನಗಳು ಬಂದರೆ— ರೋಗಿಗಳ ಮುಖದ ಮೇಲೆ ಆಡಿಸಿದರೆ ಜ್ವರಾದಿಗಳು ಹೋಗುತ್ತವೆಂದು ಹೇಳುತ್ತಾರೆ.

ಈ ಕೃಷ್ಣಾಚಾರ್ಯರ ಮಹಿಮೆಯನ್ನು ಕಣ್ಣಾರೆ ಕಂಡ ಸುರಪುರದ ಆನಂದ ದಾಸರು (ಶ್ರೀ ಕಮಲೇಶ ವಿಠ್ಠಲದಾಸರು) ಆಚಾರ್ಯರ ಮಹಿಮೆಯನ್ನು ಹೀಗೆ ಹೊಗಳಿರುವರು—

"ಕಲಿಯೊಳು ಕಲಿಕೃತ ಕಲ್ಮಷ ಕಳೆವ
ರಾಯಚೂರ ಕೃಷ್ಣಾಚಾರ್ಯರ ಪಾದಾರವಿಂದಕೇ।
ಮಾಡಿರೋ ಸಾಷ್ಟಾಂಗದಿಧೀರ ಕಮಲೇಶ ವಿಠ್ಠಲ
ಒಲಿದು ತನ್ನ ಸಾರೂಪ್ಯವ ಕೊಟ್ಟು ಸಲಹುವ ಸಂತತ"

## ಶ್ರೀ ಪಾಂಢ್ರಿ ಆಚಾರ್ಯರು

### ೧೪೯ ಶ್ರೀನಿವಾಸಾಚಾರ್ಯರು

ಈ ಮನೆತನವು ಮೂಲತಃ ನಾಂದೇಡದಿಂದ ಬಂದದ್ದು. ಇವರ ಮೂಲ ಪುರು ಷರು ಜಮದಗ್ನಿ ಗೋತ್ರದ ಶ್ರೀ ಭೀಮಾಚಾರ್ಯರೆಂಬುವರು. ಇವರು ಹಲವು ಗ್ರಂಥಗಳನ್ನು ಬರೆದಿರುವರೆಂದು ಉಲ್ಲೇಖವಿದೆ.

ಇವರ ಪುತ್ರರಾದ ಶ್ರೀನಿವಾಸಾಚಾರ್ಯರೆಂಬುವರು ಮಹಾ ತಪಸ್ವಿಗಳೂ ಪರಿನಿಷ್ಠಿತ ಪಂಡಿತರೂ ಆಗಿದ್ದರು.

ಇವರು ಒಮ್ಮೆ ಗೋದಾವರೀ ತೀರದಲ್ಲಿರುವ ತಮ್ಮ ಕುಲದೇವತೆ ರಾಹೇರ ಶ್ರೀ ನರಸಿಂಹ ಕ್ಷೇತ್ರಕ್ಕೆ ತಾಯಿಯ ಆಜ್ಞೆಯ ಪ್ರಕಾರ ಬಂದು ಅಲ್ಲಿ ೪೦ ದಿವಸ ಉಗ್ರ ತಪಸ್ಸನ್ನು ಮಾಡಿದರು. ಶಕೆ ೧೭೨೬ ರಕ್ತಾಕ್ಷಿ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿ ದಿನ ಅರುಣೋದಯ ಸಮಯದಲ್ಲಿ ದೇವರ್ಷಿ ನಾರದರು ಆಕಾಶ ಮಾರ್ಗ ದಿಂದ ದಿವ್ಯವಾದ ವೀಣಾ ವಾದನ ಮಾಡುತ್ತ ಬಂದು ಆಚಾರ್ಯರಿಗೆ ದರ್ಶನವಿತ್ತು ಶ್ರೀ ನರಸಿಂಹ ಪಂಚಾಕ್ಷರೀ ಮಂತ್ರವನ್ನು ಉಪದೇಶ ಮಾಡಿ ಹೋದರು. ಶ್ರೀನಿವಾ ಸಾಚಾರ್ಯರು ಆಕಾಶ ಮಾರ್ಗದಲ್ಲಿ ಹೋಗುತ್ತಿರುವ ನಾರದರಿಗೆ ನಮಸ್ಕಾರ ಮಾಡಿದರು. ಶ್ರೀ ಆಚಾರ್ಯರು ಮೊದಲಿಗಿಂತ ವಿಶೇಷ ತೇಜಃಪುಂಜರಾಗಿ ನಾಂದೇ ಡಕ್ಕೆ ಆಗಮಿಸಿದರು.

ಶ್ರೀನಿವಾಸಾಚಾರ್ಯರು ಗೋದಾವರೀ ತೀರದ ಶ್ರೀ ಪುರುಷೋತ್ತಮಾಚಾರ್ಯ ರೆಂಬವರಲ್ಲಿ ಕೆಲವು ವರ್ಷ ನ್ಯಾಯ ವೇದಾಂತಗಳನ್ನೂ ಕೊನೆಗೆ ಸುಧಾ, ವ್ಯಾಸ ತ್ರಯಗಳನ್ನೂ ಓದಿ ಘನ ಪಂಡಿತರಾದರು. ಇವರು ಅಗ್ನಿಹೋತ್ರವನ್ನೂ ಇಟ್ಟಿದ್ದರು.

ಮುಂದೆ ಇವರು ಬಾರ್ಶಿ ತಾಲೂಕ ಪಾಂಘ್ರಿ ಎಂಬ ಊರಿಗೆ ಬಂದು ಅಲ್ಲಿ ಬೇವಿನ ಎಲೆಗಳನ್ನು ತಿಂದು ಉಗ್ರ ತಪಸ್ಸನ್ನು ಆಚರಿಸಿ ಶ್ರೀ ಮಹಾದೇವರನ್ನು ಮೆಚ್ಚಿಸುತ್ತಾರೆ. ಆ ಊರ ದೇಶಪಾಂಡೆಯವರು ಪಾಂಘ್ರಿಯಲ್ಲಿ ಆಚಾರ್ಯರಿಗೆ ಮನೆ ಮಾಡಿಕೊಡುತ್ತಾರೆ. ಅಂದಿನಿಂದ ಈ ಮನೆತನದವರಿಗೆ ಪಾಂಘ್ರಿ ಎಂಬ ಹೆಸರು ಪ್ರಸಿದ್ಧವಾಯಿತು.

ಇವರು ಸಕಲ ತೀರ್ಥಯಾತ್ರೆಗಳನ್ನು ಪಾದಚಾರಿಯಾಗಿ ಮಾಡಿದರು.

ಶ್ರೀ ಶ್ರೀನಿವಾಸಾಚಾರ್ಯರು ೩೨ ಗ್ರಂಥಗಳನ್ನು ರಚಿಸಿದ್ದಾರೆ—

೧ ಸಂಧ್ಯಾ ಭಾಷ್ಯ
೨ ವಿಷ್ಣುಸಹಸ್ರ ನಾಮ ಭಾಷ್ಯ
೩ ಭೇದ ಬೀಜ
೪ ತತ್ತ್ವಬೋಧ
೫ ಆಹ್ನಿಕ ಪದ್ಧತಿ
೬ ಸದಾಚಾರ ಸ್ಮೃತಿ (ಪದ್ಯಾನುಸಾರ ಅವುಗಳಲ್ಲಿಯ ಮಂತ್ರಗಳ ವ್ಯಾಖ್ಯಾನ ಸಹಿತ)
೭ ಆಹ್ನಿಕ ಚಂದ್ರಿಕಾ
೮ ನಾರದ ಸ್ತವ (ಟೀಕಾ ಸಹಿತ)
೯ ಸತ್ಸಾರ ಸಂಗ್ರಹಣ
೧೦ ಶಿಕ್ಷಾ ರಾಮಾಯಣ
೧೧ ಗೀತಾ ತ್ರಿವಿಧಾರ್ಥ ವಿವೃತ್ತಿ
೧೨ ವಿಷ್ಣು ಪಂಚಕ ನಿರ್ಣಯ
೧೩ ಶಾಂಡಿಲ್ಯ ತತ್ತ್ವ ಟೀಕಾ
೧೪ ಭಾಗವತ ವಿರೋಧ ಉದ್ಧಾರ

೧೫ ದ್ವಾದಶ ಸ್ತೋತ್ರ ಟೀಕಾ
೧೬ ಜೈಮಿನಿ ಅಶ್ವಮೇಧ ಟೀಕಾ
೧೭ ಆರ್ಯ ಸಿದ್ಧಾಂತ ಸಂಗ್ರಹ
೧೮ ಬ್ರಹ್ಮ ಸೂತ್ರ ನಾಮಾವಳಿ
೧೯ ಸೂತ್ರ ಭಾಷ್ಯಾರ್ಥ
೨೦ ಮಾನಸ ಪೂಜಾ ಪದ್ಧತಿ
೨೧ ಗೀತಾದಿ ದಶ ರೂಪ ನಿರ್ಣಯ
(ಮುಂತಾದ ಗ್ರಂಥಗಳಿವೆ)

ಇವರು ಮಹಿಮಾಶಾಲಿಗಳಾಗಿದ್ದರು. ಕ್ರಿ. ಶ. ೧೮೨೫ ರಲ್ಲಿ ಶ್ರೀ ಕೃಷ್ಣರಾವ ಹಚ್ಚೊಳ್ಳಿ ಎಂಬ ನ್ಯಾಯಾಧೀಶರು ತಮ್ಮ ಕುಲದೇವರಾದ ಭೋಗಾಪುರ ಪ್ರಾಣ ದೇವರು ಭಿನ್ನವಾದಾಗ ಅದನ್ನು ಪುನಃ ಪ್ರತಿಷ್ಠೆ ಮಾಡಬೇಕೆಂದು ಇವರನ್ನು ಪ್ರಾರ್ಥಿಸಿಕೊಂಡರು. ಆಗ ಆಚಾರ್ಯರು ೧೦ ದಿನಗಳವರೆಗೆ ಬಾಗಿಲ ಹಾಕಿಕೊಂಡು ವಾಯು ದೇವರ ಪುನಶ್ಚರಣ ಮಾಡಿ ಆ ಶಕಲಗಳನ್ನು ಪುನಃ ಕೂಡುವಂತೆ ಮಾಡಿದರು.

ವಿಜಾಪುರ ಜಿಲ್ಲಾ ಬಲಕುಂದಿ ಎಂಬ ಗ್ರಾಮದಲ್ಲಿ ಅಲ್ಲಿಯ ಜಹಗೀರದಾರರ ಪ್ರಾರ್ಥನೆಯ ಮೇರೆಗೆ ಶ್ರೀ ಲಕ್ಷ್ಮೀ-ನಾರಾಯಣ ದೇವರನ್ನು ಪ್ರತಿಷ್ಠಾಪಿಸಿದರು. ಚಿಕ್ಕೋಡಿಯಲ್ಲಿದ್ದು ಸೋಮಯಾಗ ಮಾಡಿದರು.

ಮುಂದೆ ಹಲಸಗೀ ಗ್ರಾಮಕ್ಕೆ ಬಂದು ವಾಸವಾಗಿ, ಅಲ್ಲಿಯೇ ಶಕೆ ೧೭೮೩ ರಲ್ಲಿ ವೈಕುಂಠವಾಸಿಗಳಾದರು.

## ೧೪೦ ಪ್ರಾಣನಾಥಾಚಾರ್ಯ

ಇವರು ಶ್ರೀನಿವಾಸಾಚಾರ್ಯರ ಕೊನೆಯ ಪುತ್ರರು. ಇವರು ಮಹಾ ಪಂಡಿತರೂ ತಪಸ್ವಿಗಳೂ ಆಗಿದ್ದರು. ಇವರು ಹಲಸಗಿ ಗ್ರಾಮದಲ್ಲಿಯೇ ಇದ್ದು ೫೦-೬೦ ಜನ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಪ್ರವಚನ ಮಾಡುತ್ತಿದ್ದರು. ಹಲಸಗಿ ಗ್ರಾಮದ ಗುಹೆಯಲ್ಲಿ ಕುಳಿತು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದಿದ್ದರು.

## ೧೪೧ ಸಮೀರಣಾಚಾರ್ಯರು

ಇವರು ಶ್ರೀ ಪ್ರಾಣನಾಥಾಚಾರ್ಯರ ಮಕ್ಕಳು. ಇವರು ಘನ ವಿದ್ವಾಂಸರೂ ತಪೋನಿಧಿಗಳೂ ಆಗಿದ್ದರು.

ಇವರು ಹಲಸಗಿಯಲ್ಲಿಯೇ ಇದ್ದು ೪೦ ೫೦ ಜನ ವಿದ್ಯಾರ್ಥಿಗಳನ್ನಿಟ್ಟು ಕೊಂಡು ಊಟಕ್ಕೆ ಹಾಕಿ ಪಾಠ ಪ್ರವಚನ ಮಾಡಿಸುತ್ತಿದ್ದರು.

ಹಲಸಗಿಯಲ್ಲಿ ವ್ಯಾಸ ದೇವಾಲಯವನ್ನು ಶಿಲಾಮಯವನ್ನಾಗಿ ಮಾಡಿದ್ದಾರೆ. ಹಾಗೂ ಇಲ್ಲಿಯೇ ಪ್ರಾಣ ದೇವರ ದೇವಸ್ಥಾನವನ್ನು ಕಟ್ಟಿಸಿ ಪ್ರಾಣದೇವರನ್ನು ಪ್ರತಿಷ್ಠಿಸಿದ್ದಾರೆ.

ಇವರಲ್ಲಿ ರಂಗಾಚಾರ್ಯ ಗಲಗಲಿ, ಮಧ್ವಾಚಾರ್ಯ ಗಲಗಲಿ, ಮಧ್ವಮುನಿ ಆಚಾರ್ಯ, ಕಟ್ಟಿ ನರಸಿಂಹಾಚಾರ್ಯ, ವಾಳ್ವೇಕರ ವೆಂಕಣ್ಣಾಚಾರ್ಯ, ಅಗಳಗಟ್ಟಿ ವೆಂಕಣ್ಣಾಚಾರ್ಯ, ಗೋವಿಂದಭಟ್ಟಕಿಂಜವಡೇಕರ ಮೊದಲಾದವರು ಓದುತ್ತಿದ್ದರು.

ಇವರಲ್ಲಿ ಅನೇಕರು ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ, ಸುಧಾ ಅಧ್ಯಯನ ಮಾಡಿ ಪದ್ಮಸರೋವರಾದಿ ಸಭೆಗಳಲ್ಲಿ ಪರೀಕ್ಷೆ ಕೊಟ್ಟು ಪ್ರಶಸ್ತಿಪತ್ರ ಸಂಭಾವನಾದಿ ಗಳನ್ನು ಪಡೆದುಕೊಂಡಿದ್ದಾರೆ. ಇವರಿಗೆ ಅನೇಕ ಜನ ಶಿಷ್ಯರೂ ಇದ್ದರು. ಇವರು ೧೯೧೨ರಲ್ಲಿ ನಿರ್ಯಾಣ ಹೊಂದಿದರು.

### ೧೪೨ ಪ್ರಾಣನಾಥಾಚಾರ್ಯ

ಇವರು ಸಮೀರಣಾಚಾರ್ಯರ ಹಿರಿಯ ಮಕ್ಕಳು. ತಮ್ಮ ತಂದೆಯವರಲ್ಲಿಯೇ ಓದಿ ವಿದ್ವಾಂಸರಾಗಿ ಪುರಾಣ, ಪ್ರವಚನಾದಿಗಳನ್ನು ಮಾಡುತ್ತಿದ್ದರು.

### ೧೪೦ ಶ್ರೀನಿವಾಸಾಚಾರ್ಯ

ಶ್ರೀನಿವಾಸಾಚಾರ್ಯರು ಸಮೀರಣಾಚಾರ್ಯರ ಎರಡನೇ ಪುತ್ರರು. ಇವರೂ ತಮ್ಮ ತಂದೆಯವರಲ್ಲಿಯೇ ವ್ಯಾಸಂಗ ಮಾಡಿ ಪುರಾಣಾದಿಗಳನ್ನು ಹೇಳುತ್ತಿದ್ದರು.

### ಬಾಗಲಕೋಟೆಯ ಪಂಡಿತರು

## ಬುರ್ಲಿ ಆಚಾರ್ಯರು

ಬಾಗಲಕೋಟೆಯಲ್ಲಿ ಬುರ್ಲಿ ಆಚಾರ್ಯರ ಮನೆತನವು ವೇದ ಪುರಾಣ ಪಾಂಡಿತ್ಯಕ್ಕೆ ಹೆಸರಾಗಿದೆ.

### ೧೪೪ ವಾಸುದೇವಾಚಾರ್ಯ ಬುರ್ಲಿ

ಬಾಗಲಕೋಟೆಯ ಹತ್ತಿರ ಹೊದಲೂರಿನಲ್ಲಿ ಜನಿಸಿದ ವಾಸುದೇವಾಚಾರ್ಯರು ಸಾಂಗಲಿ ಸಂಸ್ಥಾನದ ವೇದ ಪಾಠ ಶಾಲೆಯಲ್ಲಿ ಋಗ್ವೇದ ಮತ್ತು ಯಜುರ್ವೇದ ಎರಡನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಿದರು. ಸ್ಮಾರ್ತ ಯಾಜ್ಞಿಕ ಭಾಗ ವನ್ನೂ ಕೂಡ ಚನ್ನಾಗಿ ಅಭ್ಯಾಸ ಮಾಡಿದರು. ಅನಂತರ ಬಾಗಲಕೋಟೆಗೆ ಬಂದು ಶ್ರೌತ ಭಾಗವನ್ನು ಚನ್ನಾಗಿ ಅಭ್ಯಾಸ ಮಾಡಿ ಸ್ವಾಧೀನಪಡಿಸಿಕೊಂಡರು.

ತಮ್ಮ ಮನೆಯಲ್ಲಿಯೇ ವೇದ ಪಾಠ ಶಾಲೆಯುನ್ನು ಪ್ರಾರಂಭಿಸಿ ಅನೇಕ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ವೇದ ಪಾಠ ಹೇಳಿದರು. ಅವರಲ್ಲಿ ರಾಮಾಚಾರ್ಯ ಮನಗೋಳಿ, ರಾಮಚಂದ್ರಾಚಾರ್ಯ ಗದ್ದನಕೇರಿ, ಬಿಂದಾಚಾರ್ಯ ಜಮದಗ್ನಿ, ಗುರಾಚಾರ್ಯ ಪಂಢರಿ, ರಾಘವೇಂದ್ರಾಚಾರ್ಯ ಪುರೋಹಿತ ಮುಂತಾದ ಅನೇಕ ಶಿಷ್ಯರು ಓದಿ ವೇದ ಕೋವಿದರಾದರು.

ಧಾರವಾಡದ ಮಧ್ವ ಸಿದ್ಧಾಂತೋತ್ತೇಜಕ ಸಭೆಯ ಧರ್ಮಾಧಿಕಾರಿಗಳಾಗಿ ಕಾರ್ಯ ಮಾಡಿದರು. ಇವರು ೧೯೧೦ ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

## ೧೪೫ ಗೋಪಾಲಾಚಾರ್ಯ ಬುರ್ಲಿ

ಇವರು ತಮ್ಮ ತಂದೆಯವರಾದ ವಾಸುದೇವಾಚಾರ್ಯರಲ್ಲಿಯೇ ವೇದಾಧ್ಯಯನ ಮಾಡಿದರು. ಶ್ರೌತ ಸ್ಮಾರ್ತ ಭಾಗಗಳೆರಡೂ ಇವರಿಗೆ ಪರಿಚಿತವಾಗಿದ್ದವು. ಇವರು ಪುರಾಣವನ್ನು ಹೇಳುತ್ತಿದ್ದರು. ಸೋಮಾಂತ ಅಧ್ವರ್ಯು ಕಾರ್ಯವನ್ನು ಲೀಲಾಜಾಲವಾಗಿ ಮಾಡುತ್ತಿದ್ದರು. ಇವರು ತಮ್ಮ ಕಂಚಿನ ಕಂಠದಿಂದ ಸುಸ್ವರವಾಗಿ ವೇದ–ಮಂತ್ರಗಳನ್ನು ಹೇಳುತ್ತಿದ್ದುದರಿಂದ ಜನಪ್ರಿಯರಾಗಿದ್ದರು. ಇವರಲ್ಲಿ ಕೊತ್ತಲಾಚಾರ್ಯ ತಾಳೀಕೋಟಿ, ಬಿಂದುಚಾರ್ಯ ಕಡಿವಾಲ, ಹನಮಂತಾಚಾರ್ಯ ತಾಳೀಕೋಟಿ, ಶ್ರೀನಿವಾಸಾಚಾರ್ಯ ಯಳಮೇಲಿ, ಬಂಡಾಚಾರ್ಯ ಜಮದಗ್ನಿ, ಕೃಷ್ಣಾಚಾರ್ಯ ರಾಜಾಪುರ, ಕೃಷ್ಣಾಚಾರ್ಯ ಕಿರೆಸೂರ, ಕೃಷ್ಣಾಚಾರ್ಯ ತಳಗೇರಿ ಮುಂತಾವ ೩೦–೪೦ ವಿದ್ಯಾರ್ಥಿಗಳು ಪೂರ್ವಾಪರ ಯಾಜ್ಞಿಕ ಓದಿದರು.

## ೧೪೬ ಶ್ರೀನಿವಾಸಾಚಾರ್ಯ ಬುರ್ಲಿ



ಬಾಗಲಕೋಟೆಯ ಪ್ರಸಿದ್ಧ ವೇದ ಪಂಡಿತರಾದ ಶ್ರೀ ವಾಸುದೇವ ಆಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರು ತಮ್ಮ ತಂದೆಯವರಲ್ಲಿ ಪ್ರಾಥಮಿಕ ಸಂಸ್ಕೃತ ಅಭ್ಯಾಸ ಮಾಡಿದರು.

ಅನಂತರ ಸಾತಾರಕ್ಕೆ ಹೋಗಿ ಗಜೇಂದ್ರಗಡ ಬಾಳಾಚಾರ್ಯರ ಮನೆಯಲ್ಲಿದ್ದು ಸಾಹಿತ್ಯ, ವ್ಯಾಕರಣ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಕೊನೆಗೆ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತ ವ್ಯಾಸಂಗ ಮಾಡಿದರು.

ಶ್ರೀನಿವಾಸಾಚಾರ್ಯರಿಗೆ ಬಾಲ್ಯದಿಂದಲೂ ಸಂಸ್ಕೃತ ಸಾಹಿತ್ಯ ಪ್ರಸಾರದಲ್ಲಿ ವಿಶೇಷ ಉತ್ಸಾಹವಿದ್ದಿತು. ಸಂಸ್ಕೃತ ಪತ್ರಿಕೆಗಳಿಗೆ ಗದ್ಯ, ಪದ್ಯಗಳನ್ನು ಬರೆದು ಕಳಿಸುತ್ತಿದ್ದರು. ಪ್ರತಿ ವರ್ಷ ವಿದ್ವತ್ ಸಭೆಗಳನ್ನು ಮಾಡಿ ವಿದ್ವಾಂಸರನ್ನು ಕರೆಯಿಸಿ, ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. "ಶ್ರೀ ಕೃಷ್ಣ ಸಂದೇಶ" ಎಂಬ ಕನ್ನಡ ಧಾರ್ಮಿಕ ಪತ್ರಿಕೆಯನ್ನು ಪ್ರಕಟಿಸಿ ಧರ್ಮ ಜಾಗೃತಿಯನ್ನು ಉಂಟುಮಾಡಿದರು.

ಮುಂದೆ ಬೆಳಗಾವಿಯಲ್ಲಿ ಬಂದು ನೆಲಸಿ, ಪಂಡಿತ ಗಲಗಲಿ ರಾಮಾಚಾರ್ಯರ ಸಹಕಾರದಿಂದ "ಮಧುರವಾಣಿ" ಎಂಬ ಸಂಸ್ಕೃತ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. ಅದರಲ್ಲಿ ಇವರು ಸರಳವಾದ ಗದ್ಯಶೈಲಿಯಲ್ಲಿ— ಪ್ರಭಾಸುಂದರಿ, ವೀರಕುಮಾರಿ ತಾರಾ, ವನಮಾಲಾ, ವೀರಬಾಲಾ, ಮೋಹಿನೀ, ಸಾಧ್ವೀ, ಗೌರೀ, ಮುಂತಾದ ಅನೇಕ ಚಿಕ್ಕ-ಚಿಕ್ಕ ಕಥೆಗಳನ್ನು ರೋಚಕವಾದ ಸರಳ ಸುಂದರ ಭಾಷೆಯಲ್ಲಿ ಬರೆದರು. ಪುಣೆಯ ಕೇಸರಿ ಪತ್ರಿಕೆಯವರು ತಮ್ಮ ಮೆಚ್ಚಿಗೆಯನ್ನು ವ್ಯಕ್ತಮಾಡಿ ಒಂದು ಉಪಾಗ್ರಲೇಖ ಬರೆದು ೧೯೩೫ ನೇ ಇಸ್ವಿಯ ತಮ್ಮ ಕೇಸರಿ ಸಂಚಿಕೆಯಲ್ಲಿ ಆಚಾರ್ಯರ ಲಲಿತ ಲೇಖನ ಶೈಲಿಯನ್ನೂ, ಕಥಾ ನಿರೂಪಣೆಯ ಕೌಶಲವನ್ನೂ ಹೊಗಳಿ ಸುಂದರವಾಗಿ ವಿಮರ್ಶೆ ಮಾಡಿದ್ದರು.

ಆಚಾರ್ಯರ ಪ್ರಯತ್ನದಿಂದ ಮಧುರವಾಣಿ ಪತ್ರಿಕೆಯು ಸಮಗ್ರ ಭರತಖಂಡದಲ್ಲಿ ಅತ್ಯಂತ ಶ್ರೇಷ್ಠ ಮಟ್ಟದ ಸಂಸ್ಕೃತ ಪತ್ರಿಕೆಯೆಂದು ಹೆಸರು ಗಳಿಸಿತು. ಶ್ರೀ ಮದನಮೋಹನ ಮಾಲವೀಯವರು, ಶ್ರೀ ಕೆ. ಎಮ್. ಮುನಶಿಯವರು ಆಚಾರ್ಯರನ್ನು ಕರೆಯಿಸಿಕೊಂಡು ಮಧುರವಾಣಿಯನ್ನು ತಮ್ಮಲ್ಲಿಯೇ ನಡೆಸಬೇಕೆಂದು ಹೇಳಿದರು. ಕರ್ನಾಟಕದ ಅಭಿಮಾನದಿಂದ ಆಚಾರ್ಯರು ಬೆಳಗಾವಿಯಲ್ಲಿಯೆ ನಿಂತು ತಾವಿರುವ ವರೆಗೆ ಮಧುರವಾಣಿಯನ್ನು ಅತ್ಯುತ್ತಮ ರೀತಿಯಿಂದ ನಡೆಸಿದರು. ಶ್ರೀನಿವಾಸಾಚಾರ್ಯರು ಮಹಾ ಪ್ರಯತ್ನವಾದಿಗಳು. ಅಖಿಲ ದಕ್ಷಿಣ ಭಾರತ ಸಂಸ್ಕೃತ ಸಾಹಿತ್ಯ ಸಮ್ಮೇಲನವನ್ನು ಬೆಳಗಾವಿಯಲ್ಲಿ ಕರೆದು ಅತ್ಯಂತ ಯಶಸ್ವಿಯಾಗಿ ಮಾಡಿ ತೋರಿಸಿದರು. ಇವರ ಸಂಸ್ಕೃತ ಸೇವೆಯನ್ನು ಮೆಚ್ಚಿ ಮೇಲುಕೋಟೆಯ ಸಂಸ್ಕೃತ ಸಾಹಿತ್ಯ ಸಮ್ಮೇಲನಕ್ಕೆ ಇವರನ್ನೆ ಅಧ್ಯಕ್ಷರನ್ನಾಗಿ ಆರಿಸಲಾಗಿತ್ತು. ವಾರಣಾಸಿಯ ಭಾರತಧರ್ಮ ಮಹಾಮಂಡಲದವರು ಇವರಿಗೆ ಸಾಹಿತ್ಯಭೂಷಣ ಎಂಬ ಪದವಿಯನ್ನು ಇತ್ತು ಗೌರವಿಸಿದರು. ಇವರು ವಿಜಾಪುರ,

ಸೊಲ್ಲಾಪುರ ಮುಂತಾದ ಕಡೆಗಳಲ್ಲಿ ಸಂಸ್ಕೃತ ಸಮ್ಮೇಲನಗಳು ಜರುಗುವಂತೆ ಪರಿಶ್ರಮಿಸಿದರು. ಇವರು ಸಂಸ್ಕೃತವಲ್ಲಿ ಎಲ್ಲರಿಗೂ ತಿಳಿಯುವಂತೆ ಅಸ್ಖಲಿತವಾಗಿ ಸರಳ ಶೈಲಿಯಲ್ಲಿ ಮಾತನಾಡುತ್ತಿದ್ದರು. ಇವರ ಪ್ರಯತ್ನದಿಂದ ಕರ್ನಾಟಕ, ಮಹಾರಾಷ್ಟ್ರ ದೇಶಗಳಲ್ಲಿ ಸಂಸ್ಕೃತದ ಬಗ್ಗೆ ಜಾಗ್ರತಿಯು ಉಂಟಾಗಿದ್ದಿತು.

## ೧೪೬ ಕೆರೂರ ಸ್ವಾಮಿರಾಯಾಚಾರ್ಯರು

ಕಳೆದ ಶತಮಾನದಲ್ಲಿ ಮಾಧ್ವರೆಲ್ಲರೂ ಹೆಮ್ಮೆಯಿಂದ ಹೇಳಿಕೊಳ್ಳಬಹುದಾದಂತಹ ಪಂಡಿತಾಗ್ರೇಸರರೆಂದರೆ ಬಾಗಲಕೋಟೆಯ ಕೆರೂರ ಸ್ವಾಮಿರಾಯಾಚಾರ್ಯರು ಬಾಗಲಕೋಟೆಯ ಜನ ಕಾಶಿಗೆ ಹೋದರೆ ಈಗಲೂ ಅಲ್ಲಿಯ ಪಂಡಿತರು " ನೀವು ಕೆರೂರ ಸ್ವಾಮಿರಾಯಾಚಾರ್ಯರ ಊರಿನವರೆ ?" ಎಂದು ಕೇಳುತ್ತಾರೆ. ನ್ಯಾಯ ಶಾಸ್ತ್ರದಲ್ಲಿ ಸ್ವಾಮಿರಾಯಾಚಾರ್ಯರ ಎದುರು ನಿಂತು ವಾಕ್ಯಾರ್ಥ ಮಾಡುವ ಎಂಟೆದೆಯ ಬಂಟನು ಆ ಶತಮಾನದಲ್ಲಿಯೇ ಹುಟ್ಟಲಿಲ್ಲ. ಬಾಗಲಕೋಟೆಯ ಆಚಾರ್ಯರೆಂದರೆ ನ್ಯಾಯ ಶಾಸ್ತ್ರದಲ್ಲಿ ೧ ಕೋಟಿ ಕೋಟಿಗಳನ್ನು ಹೇಳುವವರು ಎಂದು ಆ ಕಾಲದಲ್ಲಿ ಪ್ರಸಿದ್ಧಿಯಾಗಿದ್ದಿತು. ದಕ್ಷಿಣದ ವಿದ್ವಾಂಸರು ಆಚಾರ್ಯರೊಡನೆ ಸತ್‌ಪ್ರತಿಪಕ್ಷ ಗ್ರಂಥದಲ್ಲಿ ವಾಕ್ಯಾರ್ಥ ಮಾಡಿ ಶತಕೋಟಿ ಗ್ರಂಥದಲ್ಲಿಯ ಅನೇಕ ಪೂರ್ವ ಪಕ್ಷಗಳನ್ನು ಮಾಡಿದರು. ತರ್ಕಕರ್ಕಶ ತೀಕ್ಷ್ಣತರ ಮೇಧಾ ಚತುರರಾದ ಸ್ವಾಮಿರಾಯಾಚಾರ್ಯರು ಆ ಪೂರ್ವಪಕ್ಷಗಳಿಗೆಲ್ಲ ಸಮಂಜಸವಾದ ಸಮಾಧಾನ ಹೇಳಿ " ಶತಕೋಟಿಯ ಮೇಲೆ ಇಕೋ ನಮ್ಮ ಬಾಗಲಕೋಟೆ " ಎಂದು ಹೊಸಕೋಟಿಯೊಂದನ್ನು ಹೇಳಿದರಂತೆ. ನಿರುತ್ತರರಾದ ಆ ವಿದ್ವಾಂಸರು ಮೂಕರಾಗಿ ಸ್ವಾಮಿರಾಯಾಚಾರ್ಯರ ವಿಜಯಕ್ಕೆ ತಮ್ಮ ಮೌನ ಸಮ್ಮತಿಯನ್ನು ಇತ್ತರು.

ಇವರು ಬಾಗಲಕೋಟೆಯ ಸಮೀಪದ ಕೆರೂರ ಗ್ರಾಮದವರು. ಇವರ ತಂದೆ ಯಲಗುರ್ದಾಚಾರ್ಯರು ಬಾಗಲಕೋಟೆಯಲ್ಲಿಯೇ ಮನೆ ಮಾಡಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರು. ಯಲಗುರ್ದಾಚಾರ್ಯರ ತಂದೆ ಹಾಗೂ ಕಕ್ಕಂದಿರು ಶ್ರೀ ರಾಘವೇಂದ್ರ ಸ್ವಾಮಿ ಮಠದ ಶ್ರೀ ಧೀರೇಂದ್ರ ತೀರ್ಥರಲ್ಲಿ ಶಾಸ್ತ್ರಾಧ್ಯಯನ ಮಾಡಿ ಪಂಡಿತರಾಗಿದ್ದರು. ಶ್ರೀ ಯಲಗುರ್ದಾಚಾರ್ಯರೂ ಶಾಸ್ತ್ರಾಧ್ಯಯನ ಮಾಡಿದ್ದರು. ಅವರ ೯ ಜನ ಮಕ್ಕಳು ಎಲ್ಲರೂ ಸಂಸ್ಕೃತಜ್ಞರಾಗಿದ್ದು ಸ್ವಾಮಿರಾಯಾಚಾರ್ಯರು ಮಾತ್ರ ತಮ್ಮ ಅಗಾಧ ವಿದ್ವತ್ತೆಯಿಂದ ಶಾಸ್ತ್ರ ಪ್ರಪಂಚದ ಸೀಮಾಪುರುಷರೆನಿಸಿದ್ದರು.

ಇವರು ಶಾಸ್ತ್ರವಿದ್ಯೆಯ ತವರೂರು ಎನಿಸಿದ ಕಾಶಿ ಸ್ವಾಲ್ಹೇರಗಳಿಗೆ ಹೋಗಿ ತರ್ಕಶಾಸ್ತ್ರವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿ ಅಪ್ರತಿಮ ವಿದ್ವಾಂಸರಾದರು. ಕಾಶಿ

ಯಲ್ಲಿದ್ದ ಚಿಕ್ಕೇರೂರ ಭಾದ್ರಿ ಹಣಮಂತಾಚಾರ್ಯರ ಸಂಸ್ಕೃತ ಪಾಠ ಶಾಲೆಯಲ್ಲಿ ೬ ವರ್ಷಗಳ ಕಾಲ ಇದ್ದು ಬೇರೆ ಬೇರೆ ಪಂಡಿತರಲ್ಲಿ ಪ್ರಾಚೀನ ತರ್ಕ, ನವೀನ ತರ್ಕ, ಎರಡನ್ನೂ ಅಧ್ಯಯನ ಮಾಡಿ ಎಲ್ಲ ಪಂಡಿತರ ಪಾಠಕ್ರಮ, ವಾದಕ್ರಮ, ಕೋಟಿಕ್ರಮ ಪದ್ಧತಿ ಪ್ರಣಾಲಿಕೆಗಳನ್ನೆಲ್ಲ ಓದಿ, ಕೇಳಿ, ಚರ್ಚಿಸಿ, ಚಿಂತಿಸಿ, ಮಂಡಿಸಿ, ಅರಿತು, ಅರಗಿಸಿ, ಆತ್ಮಸಾತ್ ಮಾಡಿಕೊಂಡು ಅದ್ಭುತ ವಿದ್ವಾಂಸ ರೆನಿಸಿದರು. ಇವರ ಸಹಾಧ್ಯಾಯಿಯಾಗಿ ಚಿಕ್ಕೇರೂರು ಸ್ವಾಮಿರಾಯಾಚಾರ್ಯರೂ ಕಾಶಿಯಲ್ಲಿ ಓದಿ ಎಲ್ಲ ಕಾಶಿಯ ಆಗಿನ ಕಾಲದ ಪಂಡಿತರ ಜೊತೆಗೆ ಅವರ ಮಂತ್ರ ವನ್ನೇ ಅವರಿಗೆ ತಿರುಗಿ ಹಚ್ಚಿ ವಾಕ್ಯಾರ್ಥ ಮಾಡಿ ಕಾಶಿಯ ಪಂಡಿತ ಮಂಡಲಿ ಯಲ್ಲಿ ವಿದ್ವದ್ಗ್ರೇಸರರು ಎನಿಸಿದರು.

ಅಲ್ಲಿಂದ ಅವರು ಬಾಗಲಕೋಟೆಗೆ ಬಂದು ನೆಲೆಸಿದರು. ಸಭಾ–ಸಮ್ಮೇಲನ ಪಂಡಿತ ಗೋಷ್ಠಿಗಳಲ್ಲಿ ಭಾಗವಹಿಸಿ ತಮ್ಮ ಕೌಶಲ್ಯದಿಂದ ಗೆಲುವಿನ ಗೋಪುರ ಕಟ್ಟಿ ಮೆರೆಯುತ್ತಿದ್ದರು.

ಇವರು ಉತ್ತರಾದಿಮಠದ ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರು ಮದ್ರಾಸಿನಲ್ಲಿ ಪುನರ್ವಿವಾಹ ಖಂಡನಕ್ಕಾಗಿ ಮಹಾ ಸಭೆಯನ್ನು ಮಾಡಿದಾಗ ತಮ್ಮ ಧರ್ಮ ಶಾಸ್ತ್ರಪಾಂಡಿತ್ಯ, ಪ್ರವಚನಚಾತುರ್ಯ, ವಾದಕೌಶಲ್ಯಗಳಿಂದ ಅಲ್ಲಿ ನೆರೆದ ಪಂಡಿತ–ಪಾಮರರೆಲ್ಲರ ಲಕ್ಷವನ್ನು ಸೆಳೆದು ಆ ಮಹಾಸಭೆಯ ಕೇಂದ್ರ ವ್ಯಕ್ತಿ ಎನಿಸಿದರು.

### ಬಾಗಲಕೋಟೆಯ ಪಂಡಿತರು

## ಶ್ರೀ ಮಳಿಗಿ ಆಚಾರ್ಯರು

### ೧೪೪ ಮಳಿಗಿ ಭೀಮಸೇನಾಚಾರ್ಯ

ಮೂಲತಃ ಬಾಗಲಕೋಟೆಯವರಾದ ಶ್ರೀ ಭೀಮಸೇನಾಚಾರ್ಯರು ಬಲ ಕುಂದಿಯ ಜಹಗಿರ್ದಾರರ ಪ್ರಾರ್ಥನೆಯಂತೆ ಬಲಕುಂದಿಗೆ ಹೋಗಿ ಅಲ್ಲಿ ಪುರಾಣ ಪಾಠ ಹೇಳಿಕೊಂಡಿದ್ದರು. ಇವರು ಪುರಾಣ, ವೇದಾಂತಗಳಲ್ಲಿ ಒಳ್ಳೇ ಪಂಡಿತರಿದ್ದರು. ಶ್ರೀ ಸತ್ಯಧೀರತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ಉತ್ತರಾದಿ ಮಠದಲ್ಲಿದ್ದು, ವಿದ್ಯಾರ್ಥಿಗಳಿಗೆ ಸಾಹಿತ್ಯ ವೇದಾಂತ ಪಾಠ ಹೇಳುತ್ತಿದ್ದರು. ಮತ್ತು ನಿತ್ಯ ಶ್ರೀಗಳವರ ಎದುರು ಭಾಗವತ ಪುರಾಣ ಹೇಳುತ್ತಿದ್ದರು.

## ೧೪೯ ಮಳಿಗಿ ಹಣಮಂತಾಚಾರ್ಯ

ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ಅಧ್ಯಯನ ಮಾಡಿ ಸಾಹಿತ್ಯ, ವ್ಯಾಕರಣದಲ್ಲಿ ಆಚಾರ್ಯರು ಪಂಡಿತರಾಗಿದ್ದರು. ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತ ಶಾಸ್ತ್ರವನ್ನೂ ಕಲಿತರು. ಧರ್ಮ ಶಾಸ್ತ್ರದಲ್ಲಿಯೂ ಅವರಿಗೆ ಒಳ್ಳೇ ಅವಗತಿಯಿದ್ದಿತು.

## ೧೫೦ ಮಳಿಗಿ ಕೃಷ್ಣಾಚಾರ್ಯ

ಶ್ರೀ ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣ ಓದಿದ ಕೃಷ್ಣಾಚಾರ್ಯರು ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾಂತ ವೇದಾಂತ ಓದಿ ಪಂಡಿತರಾದರು.

ಇವರು ಭಾಗವತ ಪುರಾಣ ಹೇಳಿದರೆ ಸಾವಿರಾರು ಜನರು ಮುಗ್ಧರಾಗಿ ಕೂಡುತ್ತಿದ್ದರು. ಜ್ಯೋತಿಷ್ಯದಲ್ಲಿಯೂ ಇವರಿಗೆ ದಿವ್ಯಜ್ಞಾನವಿದ್ದಿತು. ಸಂಗೀತದಲ್ಲಿ ಚೆನ್ನಾಗಿ ಪರಿಶ್ರಮವಿದ್ದಿತು. ತಾಳ–ತಂಬೂರಿ, ಸಂಗೀತ–ಸಾಹಿತ್ಯದೊಂದಿಗೆ ವೇದಾಂತ ಸಾಹಿತ್ಯ ಎರಡರ ಮಧುರ ಮೇಲನಕ್ಕೆ ಸಂಗೀತದ ಸ್ವಾರಸ್ಯವನ್ನೂ ಸೇರಿಸಿ ಹೇಳುವ ಇವರ ಪುರಾಣವನ್ನು ಇಂದಿಗೂ ಜನರು ನೆನೆಸುತ್ತಾರೆ.

ಬೆಂಗಳೂರಿನ ರಾಮಕೃಷ್ಣಸ್ಪದ್ವೈತ ವೇದಾಂತ ಉಪನ್ಯಾಸಮಾಲೆಯಲ್ಲಿ ಪ್ರಕೃತ್ಯಧಿಕರಣ ಸುಧಾ ಅನುವಾದ ಮಾಡಿ ಜನರನ್ನು ಮುಗ್ಧಗೊಳಿಸಿದರು. ಒಂದೇ ಮಾತಿನಲ್ಲಿ— ಸರ್ವ ವಿದ್ಯಾ ಪ್ರವೀಣ ಪಂಡಿತರಾಗಿದ್ದರು.

## ೧೫೧ ರಾಘವೇಂದ್ರಾಚಾರ್ಯ ಪುರೋಹಿತ (ಮೂಲಿಮನಿ)

ಇವರು ವೇದಾಂತ ಸಾಹಿತ್ಯಗಳನ್ನು ಓದಿ ಪಂಡಿತರಾಗಿದ್ದರು. ಶ್ರೀಮದ್ಭಾಗವತವನ್ನು ಎಲ್ಲ ಜನರಿಗೂ ಮೆಚ್ಚುಗೆಯಾಗುವಂತೆ ಪುರಾಣ ಪಾಠ ಹೇಳುತ್ತಿದ್ದರು. ಶ್ರೀ ಡಂಬಳ ಅನಂತಶಯನಾಚಾರ್ಯರೇ ಮುಂತಾಗಿ ಅನೇಕ ಜನರು ಇವರಲ್ಲಿ ಸಾಹಿತ್ಯವನ್ನೋದಿ ಕಾವ್ಯದಲ್ಲಿ ವ್ಯುತ್ಪತ್ತಿಯನ್ನು ಪಡೆದರು.

## ೧೫೨ ಅಥಣಿ ಗುರಾಚಾರ್ಯ

ನಾಟಕಾಂತ ಸಾಹಿತ್ಯದಲ್ಲಿ ವ್ಯುತ್ಪನ್ನರಾಗಿದ್ದರು. ಬಾಗಿಲುಕೋಟೆಯ ಸಂಸ್ಕೃತ ಪಾಠ ಶಾಲೆಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು.

## ೧೫೩ ಹುಂಡೇಕಾರ ರಾಘುವೇಂದ್ರಾಚಾರ್ಯ

ಇವರು ವೇದವಿದ್ಯಾವಿಶಾರದರಾಗಿದ್ದರು. ವೇದ ಪಾಠ ಶಾಲೆಯನ್ನು ಪ್ರಾರಂಭಿಸಿ ನೂರಾರು ಜನ ವಿದ್ಯಾರ್ಥಿಗಳಿಗೆ ವೇದಯಾಜ್ಞಿಕ ಪಾಠ ಹೇಳಿದರು. ಹಿಂದಿನ ತಲೆ ಮಾರಿನ ಅನೇಕ ಜನ ಪಂಡಿತರಿಗೂ ವೇದಯಾಜ್ಞಿಕ ಹಾಗೂ ಪಾಮರರಿಗೂ ಪೂಜಾದಿ ಮಂತ್ರಗಳನ್ನು ಕಲಿಸಿದರು.

## ೧೫೪ ನಾಗಸಂಪಗಿ ರಾಮಾಚಾರ್ಯ

ಇವರು ಅಗ್ನಿಹೋತ್ರಿಗಳು. ನಿತ್ಯ ಭಾಗವತ ಪುರಾಣ ಹೇಳುತ್ತಿದ್ದರು. ಅನೇಕ ಯಜ್ಞ ಯಾಗಗಳನ್ನು ಮಾಡಿದರು.

## ೧೫೫ ಮಳಿಗಿ ವೆಂಕಣ್ಣಾಚಾರ್ಯ

ಮಳಿಗಿ ಕೃಷ್ಣಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣವನ್ನು ಓದಿದ ವೆಂಕಣ್ಣಾ ಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾಂತ ವೇದಾಂತವನ್ನು ಓದಿದರು.

ಇವರು ೩೦ ವರ್ಷಗಳ ವರೆಗೆ, ಬಾಗಿಲುಕೋಟೆಯಲ್ಲಿ ಪ್ರತಿ ವರ್ಷವೂ ಭಾಗವತ ಪುರಾಣ ಹೇಳಿ ಪ್ರೋಷ್ಠಪದಿ ಮಂಗಳ ಮಾಡುತ್ತಿದ್ದರು. ಇವರು ಒಳ್ಳೆ ಸರಸ ಕವಿಗಳು. 'ಶ್ರೀನಿವಾಸತೀರ್ಥ ವಿಜಯ' ಎಂಬ ಕಾವ್ಯವನ್ನು ಬರೆದಿದ್ದಾರೆ.

## ೧೫೬ ಡಂಬಳ ಅನಂತಶಯನಾಚಾರ್ಯ

ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಸಂಧತೀರ್ಥರ ವಂಶದವರಾದ ಅನಂತ ಶಯನಾಚಾರ್ಯರು ಬಾಲ್ಯದಲ್ಲಿ ವೇದ ಸಾಹಿತ್ಯ ಅಧ್ಯಯನ ಮಾಡಿ, ಹೆರಕಲ್ ಗುಂಡಾಚಾರ್ಯರಲ್ಲಿ ವ್ಯಾಕರಣವನ್ನು ಓದಿದರು. ಪುರಾಣವನ್ನು ಸರಸ ಸುಂದರವಾಗಿ ಹೇಳುತ್ತಿದ್ದರು.

ನಂತರ ಅಕ್ಷೋಭ್ಯತೀರ್ಥಮಠದ ಶ್ರೀ ಕೋಡಂಗಲ್ ಸ್ವಾಮಿಗಳಲ್ಲಿ ಕೆಲವು ಪ್ರಮೇಯ ಗ್ರಂಥಗಳನ್ನೂ, ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾದಿ ವೇದಾಂತ ಶಾಸ್ತ್ರ ವನ್ನೂ ಓದಿ ಪಂಡಿತರಾದರು. ಉತ್ತರಾದಿ ಮಠದಲ್ಲಿದ್ದಾಗ ಅನೇಕ ವಿದ್ಯಾರ್ಥಿಗಳಿಗೆ ಚಿಂತನೆ ಹೇಳುತ್ತಿದ್ದರು.

ಲೌಕಿಕ ಕಾರ್ಯದಲ್ಲಿಯೂ ಇವರು ನಿಪುಣರಾಗಿದ್ದರು. ಶ್ರೀಮಠದ ಅನೇಕ ಕಾರ್ಯಗಳನ್ನು ಇವರು ನಿರ್ವಾಹ ಮಾಡಿದ್ದುಂಟು. ಧರ್ಮ ಶಾಸ್ತ್ರದಲ್ಲಿ ಇವರಿಗೆ ವಿಶೇಷ ಜ್ಞಾನವಿದ್ದಿತು. ಬಾಗಿಲುಕೋಟೆಯಲ್ಲಿ ಕವತೇಕರ ರಾಮ ದೀಕ್ಷಿತರು ಯಜ್ಞ ಮಾಡಿದಾಗ ಯಜ್ಞದಲ್ಲಿ ಪಶು ಹಿಂಸೆಯು ಶಾಸ್ತ್ರ ವಿರುದ್ಧವೆಂದು ಶ್ರೀ ಮಳಗಿ ವೇದ ವ್ಯಾಸಾಚಾರ್ಯರೊಂದಿಗೆ ಕೂಡಿಕೊಂಡು ಶ್ರೀ ವಿರೂಪಾಕ್ಷ ಶಾಸ್ತ್ರಿ, ನಾಗೇಶ ಶಾಸ್ತ್ರಿ

ಮುಂತಾದ ಪಂಡಿತರೊಡನೆ ವಾದಿಸಿದರು. ಸಭೆಯಲ್ಲಿ ಯುಕ್ತಿ–ಯುಕ್ತವಾಗಿ ಸಾಧಿಸಿದರು. ಇವರು "ಪಿಷ್ಟ ಪಶು ಮೀಮಾಂಸಾ" ಎಂಬ ಸಂಸ್ಕೃತ ಗ್ರಂಥವನ್ನು ಬರೆದಿದ್ದಾರೆ.

ವಿಜಾಪುರದಲ್ಲಿ ಮಹಾತ್ಮಾ ಗಾಂಧೀಜಿಯವರನ್ನು ಭೆಟ್ಟಿಯಾಗಿ ಅಸ್ಪೃಶ್ಯೋದ್ಧಾರವು ಶಾಸ್ತ್ರ, ವೇದ ವಿರುದ್ಧವಾಗಿದೆ ಎಂಬುವದನ್ನು ಮನಗಾಣಿಸಿ ಕೊಟ್ಟರು.

ಆಚಾರ್ಯರು "ಮಾಯಾವಾದ ಖಂಡನ"ವನ್ನು ಸರಳಾ ಎಂಬ ಚಿಕ್ಕ ಪುಸ್ತಿಕೆಯಲ್ಲಿ ಸರಳ ಸಂಸ್ಕೃತದಲ್ಲಿ ಚಿಂತನೆ ಮಾಡಿದ್ದಾರೆ. ಸ್ಫೋಟವಾದದ ಬಗೆಗೆ ಕರ್ನಾಟಕ ವೈಭವದಲ್ಲಿ ಕನ್ನಡದಲ್ಲಿ ಒಂದು ಲೇಖನವನ್ನು ಬರೆದರು. ಜ್ಯೋತಿಷ್ಯ ಶಾಸ್ತ್ರದಲ್ಲಿಯೂ ಕೆಲವು ಲೇಖನಗಳನ್ನು ಬರೆದಿದ್ದಾರೆ.

ಹೀಗೆ ಸಾಹಿತ್ಯ, ವೇದಾಂತ, ಪುರಾಣ, ಧರ್ಮ ಶಾಸ್ತ್ರ, ಜೋತಿಷ್ಯ, ಮೀಮಾಂಸಾ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಗತಿಯುಳ್ಳ ಅನಂತಶಯನಾಚಾರ್ಯರು ಲೌಕಿಕ, ವೈದಿಕ ಉಭಯ ಪಾರಂಗತರಾಗಿದ್ದರು.

## ೧೫೭ ಮಳಗಿ ಸುಬ್ಬಣ್ಣಾಚಾರ್ಯ

ಇವರು ಭಾಗವತ ಸಪ್ತಾಹ ಮಾಡುವವರಲ್ಲಿ ಬಹಳ ಪ್ರಸಿದ್ಧರು. ಇವರು ಬೆಂಗಳೂರು, ಮೈಸೂರು, ಮುಂಬೈ ಮುಂತಾದ ಅನೇಕ ಕಡೆಗಳಲ್ಲಿ ಭಾಗವತ ಸಪ್ತಾಹ ಮಾಡಿದರು. ಇವರಿಗೆ ಭಾಗವತದಲ್ಲಿ ಕ್ಲಪ್ತಿ ಬಹಳವಾಗಿತ್ತು. ಇವರು ಪುಸ್ತಕಾನಪೇಕ್ಷಯಾ ಭಾಗವತ ಹೇಳುತ್ತಿದ್ದರು.

ಇವರು ವಿಜಾಪುರ ನಗರ ಸಭೆಯ ಚೀಫ ಆಫೀಸರರಾಗಿ ಕೆಲಸ ಮಾಡಿದರು. ಕನ್ನಡ, ಇಂಗ್ಲೀಷ ಭಾಷೆಗಳಲ್ಲಿ ಪರಿಣಾಮಕಾರಿಯಾಗಿ ಭಾಷಣಮಾಡುತ್ತಿದ್ದರು.

ಮಾಧ್ವ ಮಹಾ ಮಂಡಳದ ನಿಷ್ಠಾವಂತ ಕಾರ್ಯಕರ್ತರಾಗಿದ್ದರು.

## ೧೫೮ ಬೃಹತ್ತರ್ಕ ವಿದ್ವಾನ್ ಯಲತ್ತೂರ ಕೃಷ್ಣಾಚಾರ್ಯ



ಕುಂಭಕೋಣದ ಹತ್ತಿರ ಯಲತ್ತೂರ ಎಂಬ ಗ್ರಾಮದಲ್ಲಿ ಜನಿಸಿದ ಕೃಷ್ಣಾಚಾರ್ಯರು ಪಂಡಿತ ಪ್ರಪಂಚದ ಚಕ್ರವರ್ತಿಗಳೆಂದು ಎಲ್ಲರಿಗೂ ಗೊತ್ತಿದ್ದ ವಿಷಯ.

ಇವರು ಬಾಲ್ಯದಲ್ಲಿ ತಮ್ಮ ಕಕ್ಕಂದಿರಾದ ಯಲತ್ತೂರ ಗುರಾಚಾರ್ಯರಲ್ಲಿ ಸಾಹಿತ್ಯ ವ್ಯಾಕರಣ ವೇದಾಂತಾದಿ ಶಾಸ್ತ್ರಗಳನ್ನು ಓದಿದರು. ಅನಂತರ ವಿದ್ವತ್ ಕೇಂದ್ರವಾದ ಕಂಚೀ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ದಿಗ್ದಂತಿ ಪಂಡಿತರಾದ ಶೃಂಖಲಾಚಾರ್ಯ ಎಂಬ ಶ್ರೀ ವೈಷ್ಣವ ಪಂಡಿತರಲ್ಲಿ ನ್ಯಾಯ ಶಾಸ್ತ್ರವನ್ನು ಓದಿದರು. ಅನಂತರ ವ್ಯಾಕರಣ, ಮೀಮಾಂಸಾ, ವೇದಾಂತ, ಜೋತಿಷ್ಯ ಮುಂತಾದ ಶಾಸ್ತ್ರಗಳನ್ನು ಸ್ವಯಂ ಚಿಂತನೆ ಮಾಡಿ ನಾಲ್ಕು ಶಾಸ್ತ್ರಗಳಲ್ಲಿಯೂ ಅನನ್ಯ ಸಾಮಾನ್ಯವಾದ ಅದ್ಭುತ ಪಾಂಡಿತ್ಯವನ್ನು ಸಂಪಾದನೆ ಮಾಡಿದರು.

ಶ್ರೀಮದುತ್ತರಾದಿ ಮಠದ ಶ್ರೀ ಸತ್ಯಜ್ಞಾನತೀರ್ಥ ಶ್ರೀಪಾದಂಗಳವರಲ್ಲಿ ಕೃಷ್ಣಾಚಾರ್ಯರಿಗೆ ಬಹಳ ಭಕ್ತಿ ಶ್ರದ್ಧೆಗಳಿದ್ದವು. ಉತ್ತರಾದಿ ಮಠದ ಸಭಾ ಸಮ್ಮೇಲನಗಳಲ್ಲಿ ಪ್ರಾಮುಖ್ಯವಾಗಿ ಭಾಗವಹಿಸಿ ವಾಕ್ಯಾರ್ಥ ವಿಚಾರ ಮಾಡುತ್ತಿದ್ದರು.

ಮೈಸೂರಿನ ಸಂಸ್ಕೃತ ಕಾಲೇಜಿನಲ್ಲಿ ಕೆಲವು ಕಾಲ ತರ್ಕಾಧ್ಯಾಪಕರಾಗಿ ಕೆಲಸ ಮಾಡಿದರು. ಶ್ರೀ ರಾಘವೇಂದ್ರ ಸ್ವಾಮಿಗಳ ಮಠಾಧೀಶ ಶ್ರೀ ಸುಶೀಲೇಂದ್ರ ತೀರ್ಥರ ಆಶ್ರಯದಲ್ಲಿದ್ದು ಅವರಿಂದ ಉಡುಪಿ, ಮಂತ್ರಾಲಯ ಮುಂತಾದ ಕಡೆಗಳಲ್ಲಿ ನಡೆಯಿಸಲ್ಪಟ್ಟ ವಿದ್ವತ್ಸಭೆಗಳಲ್ಲಿ ತಮ್ಮ ಲೋಕೋತ್ತರವಾದ ವಾದಚಾತುರ್ಯದಿಂದ ಪಂಡಿತರನ್ನು ಚಕಿತಗೋಳಿಸಿದರು. ಪೀಠಾಧಿಪತಿಗಳನ್ನು ಪ್ರಸನ್ನಗೊಳಿಸಿದರು. ಪ್ರಕೃತ ರಾಘವೇಂದ್ರ ಮಠಾಧೀಶರಾಗಿರುವ ಶ್ರೀ ಸುಜಯೀಂದ್ರ ತೀರ್ಥರಿಗೆ ಪೂರ್ವಾಶ್ರಮದಲ್ಲಿ ತರ್ಕ ಪಾಠ ಹೇಳಿದರು. ಉಡುಪಿ ಕ್ಷೇತ್ರದಲ್ಲಿಯೂ ಬಹು ಕಾಲ ಇದ್ದು ಶ್ರೀ ಪುತ್ತಿಗೆ ಮಠದ ಶ್ರೀ ಸುಜ್ಞಾನೇಂದ್ರ ತೀರ್ಥರೇ ಮುಂತಾದ ಅನೇಕ ಸ್ವಾಮಿಗಳಿಗೂ ಗೃಹಸ್ಥಾಶ್ರಮಿಗಳಿಗೂ ನ್ಯಾಯ ಶಾಸ್ತ್ರ ಪಾಠ ಹೇಳಿದರು.

ವಿಜಾಪುರ ಜಿಲ್ಹೆಯಲ್ಲಿ ಸ್ವಾತಂತ್ರ್ಯಾಂದೋಲನವನ್ನು ಪ್ರಾರಂಭಿಸಿದರು. ಸ್ವರಾಜ್ಯ, ಸ್ವದೇಶೀ ವಸ್ತ್ರ, ಪರದೇಶೀ ವಸ್ತು ಬಹಿಷ್ಕಾರ ಮುಂತಾದ ಕಾರ್ಯಗಳಲ್ಲಿ ಪ್ರೇರಕ ಶಕ್ತಿಯಾಗಿ ಅವುಗಳ ಮೇಲೆ ಅನೇಕ ಸಂಸ್ಕೃತ ಪುಸ್ತಕಗಳನು ರಚಿಸಿದ್ದರು.

ಗಲಗಲಿಯಲ್ಲಿ ನಾಲ್ಕು ವರ್ಷವಿದ್ದು :ಗಲಗಲಿ ಕೂರ್ಮಾಚಾರ್ಯ, ಮುದ್ದು ವಿಠಲಾಚಾರ್ಯ, ರಾಮಾಚಾರ್ಯ ಮುಂತಾದವರಿಗೆ ನ್ಯಾಯ ಶಾಸ್ತ್ರ ಪಾಠ ಹೇಳಿದರು. ಶ್ರೀ ೧೦೮ ಶ್ರೀಸತ್ಯಧ್ಯಾನ ತೀರ್ಥರ ಜೊತೆಗೆ ಕಾಶಿಗೆ ಹೋಗಿ ಉತ್ತರಾಪಥದ ಪಂಡಿತ ಸಾರ್ವಭೌಮರಾದ ಶ್ರೀ ವಾಮಾಚರಣ ಭಟ್ಟಾಚಾರ್ಯರ ಜೊತೆಗೆ ನ್ಯಾಯ ಶಾಸ್ತ್ರದಲ್ಲಿ ವಾಕ್ಯಾರ್ಥ ಮಾಡಿ ಕಾಶಿಯ ವಿದ್ವಾನ್ ಮಂಡಲವನ್ನೆಲ್ಲ ಆಶ್ಚರ್ಯಚಕಿತಗೊಳಿಸಿದರು. "ನಾವು ಕೋಟಿಗಳನ್ನೆಲ್ಲ ಹಿಂದಿನವರು ಬರೆದಿಟ್ಟದ್ದನ್ನು ಕಲಿತು ಪಾಠ ಮಾಡಿ ಹೇಳುತ್ತಲಿದ್ದೇವೆ. ಆದರೆ ಈ ಆಚಾರ್ಯರು ಮಾತ್ರ

ಸ್ವಯಂ ಕಲ್ಪನಾ ಶಕ್ತಿಯಿಂದ ಹೊಸ ಹೊಸ ಕೋಟಿಗಳನ್ನು ಇದೀಗಲೇ ರಚಿಸಿ ಹೇಳುತ್ತಿದ್ದಾರೆ. ಇಂಥ ಪ್ರತಿಭಾಶಾಲಿ ಪಂಡಿತರನ್ನೇ ನಾವು ಕಾಣಲಿಲ್ಲ." ಎಂದು ಆಶ್ಚರ್ಯೋದ್ಗಾರವನ್ನು ತೆಗೆದರು ಕಾಶೀ ಪಂಡಿತರು.

ಇದಕ್ಕೂ ಮೊದಲು ಶ್ರೀ ಶ್ರೀಗಳವರು ಗಯಾ ಕ್ಷೇತ್ರಕ್ಕೆ ದಿಗ್ವಿಜಯ ಮಾಡಿದಾಗ ಪಂಡಿತ ಸಭೆ ನಡೆಯಿತು. ಅದರಲ್ಲಿ ಓರ್ವ ಅದ್ವೈತ ಪಂಡಿತನು "ಮಧ್ವಾಚಾರ್ಯರು ಕೃತಕ ಪ್ರಮಾಣಗಳನ್ನು ಉದಾಹರಿಸುತ್ತಾರೆ. "ತಚ್ಚೋಕ್ತಂ ಸ್ಕಾಂದೇ" ಎಂದು ತಮ್ಮ ಭಾಷ್ಯ ಪ್ರಾರಂಭದಲ್ಲಿ ಉದಾಹರಿಸಿದ ಸ್ಕಂದ ಪುರಾಣದ ಪದ್ಯಗಳು ಆ ಪುರಾಣದಲ್ಲಿ ಇರುವದಿಲ್ಲ." ಎಂದು ಹೇಳಿ ಕೆಲವು ಸ್ಕಂದ ಪುರಾಣ ಪುಸ್ತಕಗಳನ್ನು ತಂದು ತೆರೆದು ತೋರಿಸಿದನು. ಒಂದರಲ್ಲಿಯೂ ಮಧ್ವಾಚಾರ್ಯರು ಉದಾಹರಿಸಿದ ಪದ್ಯಗಳಿರಲಿಲ್ಲ. ಎಲ್ಲ ಪಂಡಿತರೂ ಒಬ್ಬರಿಗೊಬ್ಬರು ಮುಖ ನೋಡಹತ್ತಿದರು. ಆಗ ಕೃಷ್ಣಾಚಾರ್ಯರು ಮುಂದೆ ಬಂದು "ಈ ಪದ್ಯಗಳನ್ನು ಶ್ರೀರಾಮಾನುಜಮತೀಯರು ಶ್ರೀ ಮಧ್ವಾಚಾರ್ಯರಿಗಿಂತ ನೂರಾರು ವರ್ಷ ಮೊದಲೇ ತಮ್ಮ ಗ್ರಂಥದಲ್ಲಿ ಉದಾಹರಿಸಿದ್ದಾರೆಂದು" ಹೇಳಿ ಆ ಮತೀಯ ಗ್ರಂಥವನ್ನು ತೆಗೆದು ತೋರಿಸಿದರು. ಆದರಿಂದ ಆ ಪಂಡಿತನು ನನ್ನ ಆಕ್ಷೇಪವನ್ನು ಮರಳಿ ತೆಗೆದುಕೊಳ್ಳಬೇಕಾಯಿತು.

ಹೀಗೆ ಹೋದಲ್ಲೆಲ್ಲ ಗೆಲವು ಗೌರವಗಳೆಲ್ಲ ಆಚಾರ್ಯರ ಪಾದ ಪೀಠವನ್ನು ಅಲಂಕರಿಸುತ್ತಿದ್ದವು.

ನ್ಯಾಯದಲ್ಲಿ ಆ ಕಾಲದಲ್ಲಿ ಶ್ರೀ ಎಲ್ಲತ್ತೂರ ಆಚಾರ್ಯರಿಗೆ ದಕ್ಷಿಣ ದೇಶದಲ್ಲಿ ಸಮಾನರೆಂದರೆ ಎಲತ್ತೂರ ಆಚಾರ್ಯರೇ ಸರಿ.

ಶೂರ್ಪಾಲಯ ಮಹಾ ಸಮಾರಾಧನೆಯ ಕಾಲದಲ್ಲಿ ಅವರು ವ್ಯಾಕರಣ ಸುಬ್ಬರಾಯಾಚಾರ್ಯರಂಥ ಮಹಾಮಹೋಪಾಧ್ಯಾಯರ ಜೊತೆಗೆ ವ್ಯಾಕರಣದಲ್ಲಿಯೇ ವಾಕ್ಯಾರ್ಥ ಮಾಡಿದರು.

ಅವರ ಭಾಷಣ ಪಾಂಡಿತ್ಯವೂ ಅಸಾಧಾರಣವಾಗಿದ್ದಿತು. ಮೈಸೂರಿನ ಟೌನ ಹಾಲಿನಲ್ಲಿ ನಡೆದ ಇವರ ಉಪನ್ಯಾಸಗಳನ್ನು ಇಂದಿಗೂ ಜನರು ನೆನೆಸುತ್ತಿದ್ದಾರೆ.

ಕೋಚೀನ ಸಂಸ್ಥಾನದ ತರ್ಕ ವಿದ್ವಾಂಸರಾದ ಮಹಾರಾಜರು ಆಚಾರ್ಯರ ಪ್ರಗಲ್ಭ ಪಾಂಡಿತ್ಯದ ಮಾನ್ಯಾಸಾಮಾನ್ಯ ಮಟ್ಟ ಮಾದರಿ, ವಾದ ಚಾತುರಿ, ವಾಚೋ ವೈಖರಿಗಳನ್ನು ಕಂಡು ವಿಸ್ಮಯೋತ್ಫುಲ್ಲಚೇತಸ್ಕರಾಗಿ ಅವರಿಗೆ "ಬ್ರಹ್ಮ ತರ್ಕ ವಿದ್ವಾನ" ಎಂಬ ಪದವಿಯನ್ನಿತ್ತು ಗೌರವಿಸಿದರು.

ಅವರಲ್ಲಿ ತೋಲೂರ ರಾಘವೇಂದ್ರಾಚಾರ್ಯ, ಆರಣಿ ವಾಸುದೇವಾಚಾರ್ಯ, ವಿಜಯೀಂದ್ರಾಚಾರ್ಯ, ಕೃಷ್ಣಮೂರ್ತ್ಯಾಚಾರ್ಯ, ಕೂರ್ಮಾಚಾರ್ಯ, ಸೀತಾ ರಾಮಾಚಾರ್ಯ ಮುಂತಾದ ಅನೇಕ ಪಂಡಿತರು ಓದಿದ್ದಾರೆ.

ಅವರು ದಕ್ಷಿಣ ದೇಶದ ಮಾಯಾವತೀ ದೇವಿ ಎಂಬ ಹೆಣ್ಣುಮಗಳಿಗೂ ತರ್ಕ ಪಾಠ ಹೇಳಿ ಅವಳನ್ನು ವಿದುಷಿಯನ್ನಾಗಿ ಮಾಡಿದ್ದರು. ಅವಳು ತರ್ಕ ಸಂಗ್ರಹಕ್ಕೆ ಒಂದು ಟೀಕೆಯನ್ನೂ ಅದ್ವೈತ ಪರಿಭಾಷಾ ಎಂಬ ಗ್ರಂಥವನ್ನೂ ಬರೆದಿದ್ದಾಳೆ.

ಆಚಾರ್ಯರ ಕವಿತಾ ಶಕ್ತಿಯೂ ಅದ್ಭುತವಾಗಿದ್ದಿತು.

ಒಮ್ಮೆ ಆವರು ತಮ್ಮ ಗುರು ಮಠವಾದ ಉತ್ತರಾದಿ ಮಠದಲ್ಲಿ ಶ್ರೀ ಸತ್ಯ ಜ್ಞಾನತೀರ್ಥರ ಆದೇಶದಂತೆ ಅವರು ನಾಮಧಾರಣ ಮಾಡಿಕೊಳ್ಳುವಷ್ಟರಲ್ಲಿ ಕಾಲಿಯ ಮರ್ದನ ಕೃಷ್ಣನ ಮೇಲೆ ತಕ್ಷಣ ಒಂದು ಪದ್ಯವನ್ನು ರಚಿಸಿದರು.

ಇಂಥ ಚತುರಸ್ರ ಮತಿಗಳೂ, ಚತುಶ್ಶಾಸ್ತ್ರ ಪಂಡಿತರೂ ಆದ ಆಚಾರ್ಯರು ಉತ್ತರಾದಿ ಮಠ, ರಾಯರ ಮಠ ಹಾಗೂ ಉಡುಪಿ ಮಠ, ಮೈಸೂರ ಸಂಸ್ಥಾನ ಮುಂತಾದ ಎಲ್ಲ ಲೌಕಿಕ, ವೈದಿಕ, ಮಠ, ರಾಜಾಸ್ಥಾನಗಳಲ್ಲಿ ಮಾನಿತ–ಪೂಜಿತ ರಾಗಿ ವೈಷ್ಣವ ಸಮಾಜದ "ಕೌಸ್ತುಭರತ್ನ" ಎನಿಸಿದರು.

## ೧೫೫ ಭೀಮಸೇನಾಚಾರ್ಯ ಚಿತ್ರದುರ್ಗ

ಶಿವಮೊಗ್ಗೆಯಲ್ಲಿ ಗಾಜನೂರ ಶ್ರೀನಿವಾಸಾಚಾರ್ಯರ ಮಕ್ಕಳಾಗಿ ಹುಟ್ಟಿದ ಭೀಮಸೇನಾಚಾರ್ಯರು ತಂದೆಯವರಲ್ಲಿ ಸಾಹಿತ್ಯ ವ್ಯಾಕರಣ ಅಧ್ಯಯನ ಮಾಡಿ ಮೈಸೂರಿನಲ್ಲಿ ಶಾಸ್ತ್ರಾಭ್ಯಾಸ ಮಾಡಿದರು.

ಅನಂತರ ಹೊಳೆನರಸೀಪುರ ಸಂಸ್ಕೃತ ಪಾಠ ಶಾಲೆಯಲ್ಲಿಯೂ ಚಿತ್ರದುರ್ಗ, ಬೆಂಗಳೂರ ಹೈಸ್ಕೂಲಗಳಲ್ಲಿಯೂ ಸಂಸ್ಕೃತ ಅಧ್ಯಾಪಕರಾಗಿ ಕೆಲಸ ಮಾಡಿದರು. ದಿವಾನ ಮಿರ್ಜಾ ಇಸ್ಮಾಯಿಲರ ಕಾಲದಲ್ಲಿ ಮೈಸೂರ ಅರಮನೆಯ ಪಂಡಿತರಾಗಿ ಮಹಾನ್ ವಿದ್ವಾನ್ ಎಂಬ ಬಿರುದನ್ನು ಪಡೆದರು. ಹಿಂದಿನ ಶ್ರೀ ರಾಘವೇಂದ್ರ ಮಠದ ಶ್ರೀಪಾದಂಗಳವರು ಇವರಿಗೆ 'ಉಪನ್ಯಾಸವಿಶಾರದ' ಎಂಬ ಬಿರುದನ್ನು ಕೊಟ್ಟಿದ್ದರು. ಇವರು ಒಳ್ಳೇ ಪುರಾಣಿಕರಾಗಿದ್ದರು.

# ಶ್ರೀ ಗಂಗೂರ ಆಚಾರ್ಯರು ಜಾಲೀಹಾಳ

## ೧೬೦ ರಾಘವೇಂದ್ರಾಚಾರ್ಯ

ಶ್ರೀ ರಾಘವೇಂದ್ರಾಚಾರ್ಯ ಜೀವಬಾಳಪ್ಪಾಚಾರ್ಯ ಗಂಗೂರ ಇವರು ವಸಿಷ್ಠ ಗೋತ್ರದವರು. ಶ್ರೀ ಹುಲಗಿ ಶ್ರೀಸತ್ಯಾಚಾರ್ಯರ ಕಾಲದವರು ಹಾಗೂ ಅವರೊಡನೆ ತೀರ ನಿಕಟ ಹಾಗೂ ಅಭಿಮಾನದಿಂದ ಇದ್ದವರು. ಶ್ರೀ ಸತ್ಯ ಪರಾಕ್ರಮ ತೀರ್ಥರೊಡನೆ ವಾಕ್ಯಾರ್ಥ ವಿಚಾರ ಮಾಡಿ ಅಸದೃಶ ಪಂಡಿತರೆಂದು ಖ್ಯಾತಿ ಪಡೆದವರು. ಗದ್ವಾಲ ಮುಂತಾದ ಸಭೆಗಳಲ್ಲ ಇವರ ವಾಕ್ಯಾರ್ಥಗಳು ಪ್ರಸಿದ್ಧವಾಗಿವೆ.

## ೧೬೧ ಗಂಗೂರ ರಾಮಾಚಾರ್ಯ

ರಾಮಾಚಾರ್ಯ ಗಂಗೂರ ಇವರು ರಾಘವೇಂದ್ರಾಚಾರ್ಯರ ಮಕ್ಕಳು. ಇವರೂ ಚತುಃಶಾಸ್ತ್ರದಲ್ಲಿ ತಂದೆಯಂತೆ ಅಗಾಧ ಪಂಡಿತರು. ಬಾಗಲಕೋಟೆ ಸ್ವಾಮಿ ರಾಯಾಚಾರ್ಯ ಕೆರೂರ ಇವರೊಡನೆ ಮಾದಿನೂರನಲ್ಲಿ ನಡೆದ ಯಜ್ಞದಲ್ಲಿ ವಾಕ್ಯಾರ್ಥ ಮಾಡಿ ಅವರನ್ನು ಸ್ತಂಭನಗೊಳಿಸಿದರೆಂದು ಪ್ರಸಿದ್ಧವಾಗಿದೆ.

ರಾಮಾಚಾರ್ಯರು ಪ್ರಾಣ ದೇವರ ಪರಮೋಪಾಸಕರಿದ್ದು ಪ್ರಾಣದೇವರನ್ನು ಜಾಲೀಹಾಳದಲ್ಲಿ ಪ್ರತಿಷ್ಠಿಸಿದ್ದಾರೆ. ಈಗಲೂ ಸೇವಾ ಸೂತ್ರಗಳು ನಡೆಯುತ್ತವೆ. ಬದಾಮಿಯಲ್ಲಿ ಸುಪ್ರಸಿದ್ಧ ವಕೀಲರಾದ ಹನಮಂತಾಚಾರ್ಯ ಕಟ್ಟಿ ಇವರಿಗೆ ಭಾಷ್ಯಾಂತ ವೇದಾಂತವನ್ನು ಉಪದೇಶಿಸಿ ಸನ್ಮಾರ್ಗಕ್ಕೆ ಹಚ್ಚಿದವರು. ಇವರು ಅನೇಕ ಸಭೆಗಳಲ್ಲಿ ಭಾಗವಹಿಸಿ ವಾಕ್ಯಾರ್ಥ ಮಾಡಿದ್ದರು. ಚಿಂತಾಮಣಿ ರಾಘವೇಂದ್ರಾಚಾರ್ಯರು ಗಂಗೂರ ವೆಂಕಟರಮಣಾಚಾರ್ಯರು ಇತ್ಯಾದಿ ಅನೇಕ ಶಿಷ್ಯರಿಗೆ ಪಾಠ ಹೇಳಿದವರು. ಬೆಟ್ಟದ ಶ್ರೀ ಪಾಂಡುರಂಗಿ ಹುಚ್ಚಾಚಾರ್ಯರೂ ಇವರಲ್ಲಿ ಓದಲಿಕ್ಕೆ ಬಂದಿದ್ದರೆಂದು ಪ್ರತೀತಿ.

ಇವರ ಮಕ್ಕಳು ಭೀಮಸೇನಾಚಾರ್ಯರು. ಇವರೂ ನ್ಯಾಯ ವೇದಾಂತ ಗಳಲ್ಲಿ ಮಹಾ ಪಂಡಿತರಾಗಿದ್ದರು. ಹನುಮಂತಾಚಾರ್ಯರಿಗೆ ಇವರು ಪಾಠ ಹೇಳಿದವರು.

ಇವರು ತತ್ಕಾಲೀನ ಕೃಷ್ಣಾವಧೂತರೊಡನೆ ಲೇಖನದಿಂದ ವಾದ ವಿವಾದ ಮಾಡಿ ಅವರಿಂದ ಪ್ರಶಸ್ತಿ ಪತ್ರ ಪಡೆದಿದ್ದಾರೆ. ಅಲ್ಲದೆ ನವಲಗುಂದದ ಗೋಪಾಲ ಕೃಷ್ಣಾಚಾರ್ಯ (ಸೂಳಿಭಾವಿ) ಮೊದಲಾದವರಿಗೆ ಪಾಠ ಹೇಳಿದವರು ತಮ್ಮ ಉನೇ ವಯಸ್ಸಿನಲ್ಲಿಯೇ ಪಂಚತ್ವವನ್ನೈದಿದರು.

ಇವರಿಗೆ ವಾದಿರಾಜಾರ್ಯರು ಹಾಗೂ ರಾಮಾಚಾರ್ಯರೆಂದು ಇಬ್ಬರು ಮಕ್ಕಳು.

### ೧೬೨ ವಾದಿರಾಜಾಚಾರ್ಯ ಗಂಗೂರ

ಇವರು ವೇದಾಂತದಲ್ಲಿ ಒಳ್ಳೆ ಪಂಡಿತರಾಗಿದ್ದರು. ನಿಷ್ಠಾವಂತರೂ, ವ್ಯವಹಾರ ಕುಶಲರೂ ಆಗಿದ್ದರು. ಶ್ರೀ ಸತ್ಯಜ್ಞಾನತೀರ್ಥರಲ್ಲಿ ವೇದಾಂತವನ್ನು ವ್ಯಾಸಂಗ ಮಾಡಿದ್ದರು. ೧೯೬೪ ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

### ೧೬೩ ಚಿಂತಾಮಣಿ ರಾಘವೇಂದ್ರಾಚಾರ್ಯ

ಇವರು ಜಾಲೀಹಾಳದ ಗಂಗೂರ ರಾಮಾಚಾರ್ಯರಲ್ಲಿ ವೇದಾಂತವನ್ನೂ, ನ್ಯಾಯಶಾಸ್ತ್ರವನ್ನೂ ಅಭ್ಯಾಸ ಮಾಡಿದ್ದರು. ಇವರು ಧರ್ಮಶಾಸ್ತ್ರದಲ್ಲಿಯೂ ಪಂಡಿತರಾಗಿ ೮೫ ವರ್ಷಗಳ ಕಾಲ ಜಪತಪೋನುಷ್ಠಾನಗಳನ್ನು ಮಾಡಿದರು. ಇವರು ಮಹಾ ಸಾತ್ತ್ವಿಕರೂ, ತಪಸ್ವಿಗಳೂ ಆಗಿದ್ದರು.

## ಹುನಗುಂದ ಜಾಲೀಹಾಳ ಪಂಡಿತರು

### ೧೬೪ ಅನಂತಭಟ್ಟ

ಗೋದಾ ತೀರದ ಪೈಠಣ ಗ್ರಾಮದ ಕೌಶಿಕ ಗೋತ್ರದ ಇವರು ಈ ಮನೆತನಕ್ಕೆ ಮೂಲ ಪುರುಷರಿದ್ದು. ಪ್ರಸಿದ್ಧ ವಿದ್ವಾಂಸರಾಗಿದ್ದರು.

ಇವರು ನ್ಯಾಯಸುಧಾಕ್ಕೆ ಅನಂತ ಭಟ್ಟೀಯ ಎಂಬ ಟಿಪ್ಪಣಿಯನ್ನು ಬರೆದರು. ಅಲ್ಲದೇ ಶ್ರೀ ಸತ್ಯಾಭಿನವತೀರ್ಥರ ಅಭಿನವ ಚಂದ್ರಿಕಾ ಗ್ರಂಥಕ್ಕೆ ಅಭಿನವ ಚಂದ್ರಿಕಾ ವಿಲಾಸ ಎಂಬ ಟಿಪ್ಪಣಿಯನ್ನು ಬರೆದರಲ್ಲದೇ ಇನ್ನೂ ಅನೇಕ ಟಿಪ್ಪಣಿಗಳನ್ನು ಬರೆದಿದ್ದಾರೆ.

ಇವರ ವಂಶದಲ್ಲಿಯೇ ಎಷ್ಟೋ ದಿನಗಳ ನಂತರ ಕೃಷ್ಣಾಚಾರ್ಯ ಹುನಗುಂದ ಎಂಬವರು ಪ್ರಸಿದ್ಧರಾದರು.

### ೧೬೫ ಹುನಗುಂದ ಗುಂಡಾಚಾರ್ಯ

ಇವರು ಹುನಗುಂದ ಕೃಷ್ಣಾಚಾರ್ಯರ ಮಕ್ಕಳು ಹಾಗೂ ಜಾಲೀಹಾಳ ಗಂಗೂರ ರಾಮಾಚಾರ್ಯರ ಅಳಿಯಂದಿರು.

ಇವರು ವೇದಾಂತ, ಪುರಾಣ, ಜ್ಯೋತಿಷ್ಯಗಳಲ್ಲಿ ಅನುಸ್ಯೂತವಾದ ಸಾಂಪ್ರದಾಯಿಕ ಪಂಡಿತರೂ, ಪರಮ ಸಾತ್ವಿಕರೂ ಆಗಿದ್ದರು. ಇವರು ತಮ್ಮ ೫೦ ನೇ ವಯಸ್ಸಿನಲ್ಲಿ ವೈಕುಂಠವಾಸಿಗಳಾದರು.

## ೧೬೬ ಗುರಾಚಾರ್ಯ ಜಾಲೀಹಾಳ

ಹುನಗುಂದ ಗುಂಡಾಚಾರ್ಯರ ಮಕ್ಕಳಾದ ಇವರು ಜಾಲೀಹಾಳದಲ್ಲಿ ತಮ್ಮ ಸೋದರ ಮಾವಂದಿರಾದ ಭೀಮಸೇನಾಚಾರ್ಯ ಗಂಗೂರ ಇವರಲ್ಲಿ ಕಾವ್ಯಾದಿ ನಾಟಕಾಂತ ಸಾಹಿತ್ಯವನ್ನು ಅಭ್ಯಾಸ ಮಾಡಿದರು. ಹಾಗೂ ಶ್ರೀ ಸತ್ಯಪರಾಕ್ರಮತೀರ್ಥರ ಪೂರ್ವಾಶ್ರಮದ ಮಕ್ಕಳಾದ ಶ್ರೀ ಭೀಮಬಾಳಾಚಾರ್ಯರಲ್ಲಿ ವೇದಾಂತದ ಕೆಲವು ಪ್ರಕರಣಗಳನ್ನೂ, ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣ ಗ್ರಂಥಗಳನ್ನೂ ಓದಿ, ಭೀಮಬಾಳಾಚಾರ್ಯರ ನಿರೂಪದಂತೆ ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಜ್ಞಾನತೀರ್ಥ ಶ್ರೀಪಾದಂಗಳವರಲ್ಲಿ ಯಾವತ್ತೂ ದಶ ಪ್ರಕರಣಗಳನ್ನೂ ತತ್ವಪ್ರಕಾಶಿಕಾ, ಸುಧಾ, ಗೀತಾ ಭಾಷ್ಯಾದಿ ಗ್ರಂಥಗಳನ್ನೂ ಓದಿದರು. ಹಾಗೂ ಗುರುಗಳ ಅನುಗ್ರಹಕ್ಕೆ ಪೂರ್ಣ ಪಾತ್ರರಾದರು.

ಇವರ ಸ್ವಭಾವಕ್ಕೆ ಮೆಚ್ಚಿ ಗುರುಗಳು ಇವರಿಗೆ "ಸಾತ್ವಿಕ" ಎಂದು ಸಭೆಯಲ್ಲಿ ಕರೆದರು. ಅಂತೆಯೇ ಇವರು ಅಂದಿನಿಂದ ಸಾತ್ವಿಕ ಗುರಾಚಾರ್ಯರೆಂದು ಪ್ರಸಿದ್ಧರಾದರು.

ವಿಶೇಷತಃ ಮಂತ್ರಾಲಯ ಶ್ರೀಗಳವರ ಭಕ್ತರಿದ್ದು, ಅವರ ಅನುಗ್ರಹದಿಂದ ವಾಕ್‌ಸಿದ್ಧಿ, ತಪಃ ಸಾಮರ್ಥ್ಯವುಳ್ಳವರಿದ್ದರು. ಆಗಿನ ಕಾಲದ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಶ್ರೀ ಸುಶೀಲೇಂದ್ರ ತೀರ್ಥ ಶ್ರೀಪಾದಂಗಳವರೂ, ಇತ್ತೀಚಿನ ಶ್ರೀ ಸುಯಮೀಂದ್ರತೀರ್ಥ ಶ್ರೀಗಳವರೂ ಇವರನ್ನು ಅತಿಶಯವಾಗಿ ಗೌರವಿಸುತ್ತಿದ್ದರು.

## ೧೬೭ ಕಟ್ಟಿ ಗುರಾಚಾರ್ಯರು

ಇವರು ಮೊದಲು ಹುಲಗಿ ಅಣ್ಣಯ್ಯಾಚಾರ್ಯರಲ್ಲಿ ತುಸು ಓದಿದರು. ನಂತರ ಶ್ರೀ ಸತ್ಯಧ್ಯಾನರಲ್ಲಿ ವೇದಾಂತ ಓದಿ ಪಂಡಿತರಾಗಿ ಮಂತ್ರಾಲಯ ಮಠದಲ್ಲಿ ವಾಕ್ಯಾರ್ಥ ಮಾಡಿ ಪ್ರಸಿದ್ಧಿಗೆ ಬಂದರು. ಒಮ್ಮೆ ಕುಂಭಕೋಣೆಯ ಸಭೆಯಲ್ಲಿ ಶ್ರೀ ಸುವ್ರತೀಂದ್ರ ತೀರ್ಥರ ಕಾಲದಲ್ಲಿ ಶೈವ ಸರ್ವಸ್ವ ಖಂಡನದ ಮೇಲೆ ವಾಕ್ಯಾರ್ಥ ನಡೆದಾಗ ಅದ್ವೈತಿಗಳನ್ನು ಸೋಲಿಸಿ ಸಭೆಗೆ ಕಳೆ ತಂದು ಕೊಟ್ಟರು. ಇವರು ತೀರಿಕೊಂಡು ೮-೧೦ ವರ್ಷಗಳಾದವು. ಇವರು ಕೊಪ್ಪಳದಲ್ಲಿ ವಾಸವಾಗಿದ್ದರು.

## ೧೬೪ ಗಂಗೂರ ಗುರಾಚಾರ್ಯರು

ಇವರು ಹುಲಗಿ ಅಣ್ಣಯ್ಯಾಚಾರ್ಯರಲ್ಲಿ ಓದಿ :ಪಂಡಿತರಾಗಿ ಸತ್ಯಜ್ಞಾನರ ಕಾಲದಲ್ಲಿ ಕಿನ್ನಾಳ ಪಾಠ ಶಾಲೆಯಲ್ಲಿ ವೇದಾಂತ ಪ್ರಾಧ್ಯಾಪಕರಾಗಿ ಕೆಲಸ ಮಾಡಿದವರು. ಇವರಲ್ಲಿ ಓದಿದವರು ಗುಬ್ಬಿ ರಾಮಾಚಾರ್ಯ ಮೊದಲಾದವರು ಇವರು ಭಾಗವತದಲ್ಲಿ ಬಹಳ ವಿಮರ್ಶೆ ಮಾಡಿದವರು. ಗುಬ್ಬಿ ರಾಮಾಚಾರ್ಯರಿಗೆ ಕಾವ್ಯ ಮತ್ತು ಸಾಹಿತ್ಯ ೧೨ ಸ್ಕಂದ ಭಾಗವತವನ್ನು ಹೇಳಿ ತಯಾರ ಮಾಡಿದವರು. ಇದರಂತೆ ಎಷ್ಟೋ ವಿದ್ವಾಂಸರನ್ನು ತಯಾರ ಮಾಡಿದರು.

ಇವರು ಹುಲಿಗಿ ಅಣ್ಣಯ್ಯಾಚಾರ್ಯರು ಬರೆದ ಕೆಳಗೆ ತೋರಿಸಿದ ಗ್ರಂಥಗಳಿಗೆ ಟಿಪ್ಪಣಿ ಬರೆದಿದ್ದಾರೆ.

೧) ಪ್ರಾಣ ಪಂಚಕ.
೨) ಪದ್ಮಾವತೀ ಪರಿಣಯ
೩) ದ್ವೈತದ್ಯುಮಣಿಯ ಸಾರ.

ಇವು ಗಂಗೂರ ಹುಚ್ಚಾಚಾರ್ಯರ ಮನೆಯಲ್ಲಿವೆ.

## ೧೬೫ ಅಗ್ನಿಹೋತ್ರಿ ಶ್ರೀ ಯಜ್ಞವಿಠ್ಠಲಾಚಾರ್ಯರು

ಕಡಪಾ ತಾಲೂಕ ಕುಂಪಣೀಪುರ ಅಗ್ರಹಾರದಲ್ಲಿದ್ದ ಯಜ್ಞಕೃಷ್ಣಾಚಾರ್ಯರು ಮತ್ತು ಸೌ. ಬುಸ್ಸಮ್ಮ ಎಂಬ ದಂಪತಿಗಳೇ ಇವರ ತಂದೆ ತಾಯಿಗಳು.

ಪುಣ್ಯಶ್ಲೋಕರಾದ ಶ್ರೀ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರು ತಮ್ಮ ಪೂರ್ವಾಶ್ರಮದಲ್ಲೊಮ್ಮೆ ಕಡಪೆಗೆ ಆಗಮಿಸಿದಾಗ್ಗೆ ಒಂದು ದಿನ ಪೂಜಾ ವೇಳೆಯಲ್ಲಿ ಬಾಲಕ ಯಜ್ಞವಿಠ್ಠಲಾಚಾರ್ಯರು ಶ್ರೀ ಹರಿ ಪ್ರೇರಿತರಾಗಿ ಶ್ರೀ ಮಧ್ವ ವಿಜಯ ಪಾರಾಯಣಕ್ಕೆ ಪ್ರಾರಂಭಿಸಿದರಂತೆ! ಸ್ಫುಟ ವಾಣಿಯಿಂದ ಅರ್ಥವತ್ತಾಗಿ ಆ ಬಾಲಕನ ಮುಖದಿಂದ ಹೊರಡುತ್ತಿದ್ದ ಶ್ಲೋಕ ಪರಂಪರೆಗಳನ್ನು ಕೇಳಿ ಆಕರ್ಷಿತರಾದ ಅವರು ಪರಮ ಸಂತೋಷ ಪಟ್ಟು ಅವನ ಸ್ಥಿತಿಗತಿಗಳನ್ನು ವಿಚಾರಿಸಲು ಅವನು ಕೇವಲ ಅನಾಥನೆಂದು ಹೊರಪಟ್ಟಿತು. ಅವರ ತಾಯಿಯವರಿಗೆ ಪ್ರತಿ ತಿಂಗಳೂ ಜೀವನೋಪಾಯಕ್ಕೆ ಮಠದಿಂದಲೇ ಸಹಾಯ ದ್ರವ್ಯ ಕಳುಹಿಸುತ್ತ ಬಹು ಪ್ರಯತ್ನದಿಂದ ಹುಡುಗನನ್ನು ತಮ್ಮೊಂದಿಗೆ ಕಳುಹಿಸುವಂತೆ ಆಕೆಯನ್ನೊಪ್ಪಿಸಿ, ಅಂದಿನಿಂದ ಆ ಬಾಲಕನ ಸಂಪೂರ್ಣ ಪೋಷಣೆ, ವಿದ್ಯಾಭ್ಯಾಸ ಇತ್ಯಾದಿ ಸಕಲ ಹೊಣೆಗಾರಿಕೆಯನ್ನು ಶ್ರೀ ಶ್ರೀಗಳವರೇ ವಹಿಸಿದರು.

ಹೀಗೆ ಯಜ್ಞವಿಠ್ಠಲಾಚಾರ್ಯರ ಎಂಟನೇ ವಯಸ್ಸಿನಿಂದ ಹದಿನೆಂಟನೇ ವಯಸ್ಸಿನ ವರೆಗೆ ಶಾಸ್ತ್ರ ವ್ಯಾಸಂಗ ಶ್ರೀ ಶ್ರೀಗಳವರಲ್ಲೇ ನಡೆಯಿತು. ಕ್ರಮವಾಗಿ ಸಾಹಿತ್ಯ, ವ್ಯಾಕರಣ, ವೇದಾಂತ ಮುಂತಾದ ಎಲ್ಲ ಪಾಠಗಳಾದವು. ಸುಧಾ, ಚಂದ್ರಿಕಾ, ನ್ಯಾಯಾಮೃತಾದಿಗಳ ಅಧ್ಯಯನವೆಲ್ಲ ಮುಗಿದು ಯಜ್ಞವಿಠ್ಠಲಾ ಚಾರ್ಯರು ಶ್ರೀ ಶ್ರೀಗಳವರ ವಿಶೇಷ ಕೃಪಾಪಾತ್ರರಾದರು. ವಿದ್ವತ್ಸಭೆ ನಡೆದಾಗಲೆಲ್ಲ ಶ್ರೀ ಶ್ರೀಗಳವರು ಇವರನ್ನೇ ಮುಂದೆ ಬಿಟ್ಟು ಅವರ ವಾದ ಸಾಮರ್ಥ್ಯಕ್ಕೆ ಮೆಚ್ಚಿ ವಿಶೇಷ ಬಹುಮಾನ ಮಾಡುತ್ತಿದ್ದುದುಂಟು. ಆಚಾರ್ಯರಿಗೂ ಕೊಚ್ಚಿಯ ಮಹಾ ರಾಜರಿಗೂ ತರ್ಕ ಶಾಸ್ತ್ರದಲ್ಲಿ ವಾದ ನಡೆದಾಗ ಮಹಾರಾಜರು ಮೆಚ್ಚಿಕೊಂಡು ಅವ ರಿಗೆ 'ಪಂಡಿತರಾಜ' ಎಂಬ ಬಿರುದನ್ನಿತ್ತು ಜೋಡಿ ಶಾಲು, ತೋಡಾ ಮುಂತಾದ ಬಹುಮಾನ ಮಾಡಿ ಸತ್ಕರಿಸಿದರು. ಅವರು ಗದ್ವಾಲ್, ವನಪರ್ತಿ, ಆತ್ಮಕೂರು, ಪುದುಕೋಟೆ ಮುಂತಾದ ರಾಜಾಸ್ಥಾನಗಳಲ್ಲಿ ಧರ್ಮಾಧಿಕಾರಿಗಳಾಗಿದ್ದರು. ಕರ್ಪೂರ ಶ್ರೀನಿವಾಸರಾಯರು, ಡಿ. ಶ್ರೀನಿವಾಸರಾಯರು, ಕೈವಾರ ವೆಂಕಟರಾಯರು ಮುಂತಾದ ಸನ್ಮಾನ್ಯ ಗೃಹಸ್ಥರಿಗೆ ಸುಧಾ, ಚಂದ್ರಿಕಾ, ನ್ಯಾಯಾಮೃತಾದಿಗಳನ್ನು ಪಾಠ ಹೇಳಿದರು.

ಕಾಶಿಯಲ್ಲಿ ನಡೆದ ಪಂಡಿತ ಸಭೆಗಳಲ್ಲಿ, ಇವರೂ ವರಖೇಡಿ ನರಸಿಂಹಾಚಾ ರ್ಯರೂ, ಚಿಂಚೋಳಿ ವೆಂಕಣ್ಣಾಚಾರ್ಯರೂ, ಮಳಗಿ ಆಚಾರ್ಯರೂ, ಪಾಂಡು ರಂಗಿ ಕೃಷ್ಣಾಚಾರ್ಯರೂ, ಶ್ರೀ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರೊಂದಿಗೆ ಭಾಗವಹಿಸಿ ಜಯಭೇರಿ ಹೊಡೆಸಿದ್ದಾರೆ.

ಅನಂತಕೃಷ್ಣಶಾಸ್ತ್ರಿಗಳು, ರಾಮಸುಬ್ಬಾಶಾಸ್ತ್ರಿಗಳೊಂದಿಗೆ ಅದ್ವೈತ ಖಂಡನಾ ವಾಕ್ಯಾರ್ಥದಲ್ಲಿ ಭಾಗವಹಿಸಿದ್ದರು.

ಶ್ರೀಮನ್ನ್ಯಾಯ ಸುಧಾ ನ್ಯಾಯಾಮೃತ ಗ್ರಂಥಗಳಲ್ಲಿ ವಾಚೋವಿಧೇಯ ಪರೀಕ್ಷೆ ಕೊಟ್ಟು ಶ್ರೀ ಶ್ರೀಗಳವರಿಂದ ಬಂಗಾರದ ಕಡಗಗಳಿಂದ ಸನ್ಮಾನಿತರಾದ ಪಂಡಿತಾಗ್ರೇಸರರಿವರು.

ಶ್ರೀಮನ್ಮೈಸೂರು ಮಹಾರಾಜರವರ ಆಸ್ಥಾನ ಮಹಾ ವಿದ್ವಾನ್ ಎಂದು ವಿಶೇಷ ರೀತಿಯಿಂದ ಸನ್ಮಾನಿತರಾದರು. ಆಚಾರ್ಯರು ಉಪನ್ಯಾಸ ವೈಖರಿ, ಅಸ್ಖ ಲಿತ ವಾಣಿ, ಹಾಸ್ಯರಸ ಮಿಶ್ರಿತ ಶೈಲಿಯಿಂದ ಅತಿ ಜಟಿಲ ಸಮಸ್ಯೆಗಳನ್ನೂ ಸುಲಲಿತ ವಾಗಿ ಬಿಡಿಸಿ ಶ್ರೋತೃಗಳನ್ನು ಮೆಚ್ಚಿಸುತ್ತಿದ್ದರು. ಶ್ರೀ ಯಜ್ಞವಿಠ್ಠಲಾಚಾರ್ಯರ ಭಾಷಣಗಳನ್ನು ಬೆಂಗಳೂರಿನ ಹಿರಿಯ ಜನರು ಇಂದಿಗೂ ನೆನೆಸಿಕೊಳ್ಳುತ್ತಿರುವರು.

ಶ್ರೀ ಸತ್ಯಧ್ಯಾನತೀರ್ಥ ಶ್ರೀಗಳ ಕೃಪಾಂತಃಕರಣದಿಂದಲೇ ವಿವಾಹಿತರಾಗಿ ಮಕ್ಕಳುಮರಿಗಳನ್ನು ಪಡೆದು ಶ್ರೀ ಉತ್ತರಾದಿಮಠದ ಆಶ್ರಯದಲ್ಲಿ ನಡೆಯುತ್ತಿದ್ದ ಪಾಠ ಶಾಲೆಗೆ ಪ್ರಧಾನಾಧ್ಯಾಪಕರಾಗಿದ್ದರು. ಬೆಂಗಳೂರು ನಗರದಲ್ಲಿ ದ್ವೈತ ವೇದಾಂತಕ್ಕೆ ಆಧಾರಸ್ಥಂಭರಂತಿದ್ದು ೧೯೬೦ ನೇ ಜುಲೈ ೨೫ ರಂದು ಪರಗತಿಗೆ ಸಂದ ಪಂಡಿತರಾಜ ಶ್ರೀ ಯಜ್ಞವಿಠ್ಠಲಾಚಾರ್ಯರು ಚಿರಸ್ಮರಣೀಯರಾಗಿದ್ದಾರೆ.

## ೧೬೦ ಶತಾವಧಾನಿ ತಿರುವಾದಿ ಲಕ್ಷ್ಮಣಾಚಾರ್ಯರು

ಕಾವೇರಿ ತೀರದ ತಿರುವಾದಿಯಲ್ಲಿ ಜನಿಸಿದ ಲಕ್ಷ್ಮಣಾಚಾರ್ಯರು ಬಾಲ್ಯದಲ್ಲಿಯೇ ವೇದಾಧ್ಯಯನ ಮಾಡಿ ಘನಪಾಠಿ ಎಂದು ಪ್ರಸಿದ್ಧರಾಗಿದ್ದರು. ೧೩ ವರ್ಷದೊಳಗಾಗಿ ಇವರು ಘನಾಂತ ವೇದವನ್ನೋದಿ ಪುದುಕೋಟೆಯ ಸಂಸ್ಥಾನದ ನವರಾತ್ರಿ ಮಹೋತ್ಸವದಲ್ಲಿ ತಮ್ಮ ಸುಸ್ವರವಾದ ವೇದ ಪಾಠದಿಂದ ಅಲ್ಲಿಯ ರಾಜ–ರಾಣಿಯರನ್ನು ಪಂಡಿತ–ಪಾಮರರನ್ನೂ ಸಂತೋಷಗೊಳಿಸಿದರು.

ಇವರು ಮಹಾಮಹೋಪಾಧ್ಯಾಯ ಶ್ರೀಮುಷ್ಣ ಸುಬ್ಬರಾಯಾಚಾರ್ಯರಲ್ಲಿ ವ್ಯಾಕರಣವನ್ನು ಸಮಗ್ರವಾಗಿ ಅಧ್ಯಯನ ಮಾಡಿದರು. ನಾಟಕಾಂತ ಸಾಹಿತ್ಯ ದಲ್ಲಿಯೂ ಅವರು ಸ್ವಯಂ ಪರಿಶ್ರಮಪಟ್ಟರು. ಸಂಸ್ಕೃತದಲ್ಲಿ ಗದ್ಯ–ಪದ್ಯರಚನೆಯನ್ನೂ ಸುಂದರವಾಗಿ ಮಾಡುತ್ತಿದ್ದರು.

ಇವರು ತಿರುವಾಯೂರು ಸಂಸ್ಕೃತ ಕಾಲೇಜದಲ್ಲಿ ಪ್ರಿನ್ಸಿಪಾಲರಾಗಿದ್ದರು. ಇವರಿಗೆ ಶಾಸ್ತ್ರ, ವೇದ, ವ್ಯಾಕರಣ, ವೇದಾಂತ ಮುಂತಾದ ವಿವಿಧ ವಿಷಯಗಳ ಪರಿಜ್ಞಾನ ವಿದ್ದಂತೆ ಸಾಹಿತ್ಯ, ಸಂಗೀತಗಳಲ್ಲಿಯೂ ಗತಿ–ಪ್ರಗತಿಗಳಿದ್ದವು.

ಇವರು ಒಳ್ಳೆ ಹರಿಕಥಾ ಪ್ರವೀಣರಾಗಿದ್ದರು. ಒಮ್ಮೆ ಮದರಾಸಿಗೆ ಶ್ರೀ ಸತ್ಯಧ್ಯಾನತೀರ್ಥರು ಬಂದಾಗ್ಗೆ— ಏಕಾದಶಿ ರಾತ್ರಿ ೯ ಗಂಟೆಗೆ ಪ್ರಾರಂಭವಾದ ಶ್ರೀ ಲಕ್ಷ್ಮಣಾಚಾರ್ಯರ ಹರಿಕಥೆಯು ಬೆಳಗಿನ ೪ ಗಂಟೆಗೆ ಮುಕ್ತಾಯವಾಯಿತು. ೭–೮ಗಂಟೆಗಳ ವರೆಗೆ ಶ್ರೀ ಶ್ರೀಗಳವರು ಕದಲದೆ ಇವರ ಹರಿಕಥೆಯನ್ನು ಕೇಳುತ್ತ ಕುಳಿತುಕೊಂಡಿದ್ದರು.

ಶ್ರೀ ಲಕ್ಷ್ಮಣಾಚಾರ್ಯರ ಸ್ಮರಣ ಶಕ್ತಿಯು ಲೋಕ ವಿಲಕ್ಷಣವಾಗಿದ್ದಿತು. ಇವರು ಅಷ್ಟಾವಧಾನ, ಶತಾವಧಾನಗಳನ್ನು ಲೀಲಾಜಾಲವಾಗಿ ಮಾಡಿ ಜನರನ್ನೆಲ್ಲ ಚಕಿತಗೊಳಿಸುತ್ತಿದ್ದರು.

ಉತ್ತರಾದಿ ಮಠದ ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರೆದುರು ಇವರು ಶತಾವಧಾನವನ್ನು ಮಾಡಿದರು. ನೂರು ಜನ ಪಂಡಿತರ ಬೇರೆಬೇರೆ ಭಾಷೆಗಳಲ್ಲಿಯ ಗದ್ಯ, ಪದ್ಯ, ವೃತ್ತಪತ್ರಗಳ ಅಗ್ರಲೇಖ, ಭಾಷಣ ಮುಂತಾದವುಗಳನ್ನು ಸಾಲಾಗಿ ಹೇಳಿದ ಬಳಿಕ ಅದೆಲ್ಲವನ್ನೂ ಸ್ಮರಣ ಶಕ್ತಿಯಿಂದ ನೆನಪಿಟ್ಟುಕೊಂಡು ಅನಂತರ ತಾವು ಮುಖದಿಂದ ಇಡಿಕಿಡಿಯಾಗಿ, ಒಂದು ಶಬ್ದವೂ ವ್ಯತ್ಯಾಸವಾಗದಂತೆ ಆನು ಪೂರ್ವಿ ಅಂದು ತೋರಿಸಿದರು. ಆದುದರಿಂದಲೇ ಇವರಿಗೆ— "ಶತಾವಧಾನಿ" ಎಂಬ ಬಿರುದು ಬಂದಿತು.

ಇದರಂತೆ ಇವರಿಗೆ "ಘನಪಾಠಿ" ಎಂಬ ಬಿರುದು ಕೂಡ ಸಾರ್ಥಕವಾಗಿದ್ದಿತು. ಇವರು ೧೩ ವರ್ಷದವರಿದ್ದಾಗಲೇ ತಲೆಯ ಮೇಲೆ ಲಿಂಬೆ ಹಣ್ಣು ಇಟ್ಟುಕೊಂಡು, ಅದು ಅಲುಗಾಡದಂತೆ ವೇದ-ಮಂತ್ರಗಳನ್ನು ಪದ, ಕ್ರಮ, ಜಟಾ, ಘನಾಂತವಾಗಿ ಅಂದು ತೋರಿಸುತ್ತಿದ್ದರು.

ಆಚಾರ್ಯರಿಗೆ ಪ್ರವಚನ ಪಾಂಡಿತ್ಯವಿದ್ದಂತೆ ಗ್ರಂಥ ಲೇಖನ ಸಾಮರ್ಥ್ಯವೂ ಅನನ್ಯಸಾಮಾನ್ಯವಾಗಿದ್ದಿತು. ಅವರು ಭಗವದ್ಗೀತೆಯ ಮೇಲೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮೂರು ಮತಗಳ ಅಭಿಪ್ರಾಯದೊಂದಿಗೆ ತಮ್ಮ ಬುದ್ಧಿ ಚಾತುರ್ಯ ಕಲ್ಪಿತವಾದ ಅನೇಕ ಅರ್ಥಗಳನ್ನು ಪ್ರದರ್ಶಿಸಿ "ಶ್ರೀಮದ್ಭಗವದ್ಗೀತಾ ದರ್ಪಣ" ಎಂಬ ಅತ್ಯಪೂರ್ವವಾದ ಗ್ರಂಥವನ್ನು ರಚಿಸಿದ್ದಾರೆ.

ಇವರು ಮದರಾಸಿನಲ್ಲಿ, ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರು ವಿಧವಾ ವಿವಾಹ ಖಂಡನಕ್ಕೆ ಏರ್ಪಡಿಸಿದ ಮಹಾಸಭೆಯಲ್ಲಿ ಪ್ರಾಮುಖ್ಯೇನ ಪಾತ್ರವಹಿಸಿದರು. ವೇದ, ಪುರಾಣ, ಶಾಸ್ತ್ರ ವಚನಗಳನ್ನು ಪುಂಖಾನುಪುಂಖವಾಗಿ ಉದ್ಧರಿಸಿ ಉದಾ ಹರಿಸಿ, ಪ್ರತಿವಾದಿಗಳ ಬಾಯಿಕಟ್ಟಿ ವಿಧವಾ ವಿವಾಹವು ಶ್ರುತಿ, ಸ್ಮೃತಿ ವಿರುದ್ಧ ವೆಂದು ಸಿದ್ಧಮಾಡಿದರು. ಇವರು ವಿಲಕ್ಷಣ ಪಾಂಡಿತ್ಯಕ್ಕೆ ಶ್ರೀಗಳವರೂ, ಶ್ರೀ ಸಾಮಾನ್ಯರೂ ಚಕಿತ ಮುದಿತರಾದರು.

ಇವರಿಗೆ ರಾಜ-ಮಹಾರಾಜರಿಂದಲೂ, ಅನೇಕ ಮಠಾಧೀಶ, ಮನೀಷಿ ಗಳಿಂದಲೂ— ಶತಾವಧಾನಿ, ಘನಪಾಠಿ, ವಿದ್ವನ್ಮಣಿ, ಭಾಗವತಾಚಾರ್ಯ, ಗೀತೋಪನ್ಯಾಸ ವಿದ್ವಾನ್, ಹರಿಕಥಾ ಸಿಂಹ, ಸಂಗೀತ ವಿದ್ವಾನ್, ವಿದ್ಯಾವಾರಿಧಿ ಮುಂತಾಗಿ ಅನೇಕ ಬಿರುದು-ಬಾವಲಿಗಳು ಬಂದಿದ್ದವು.

ಇವರ ಶತಾವಧಾನಿ ಪಾಂಡಿತ್ಯವನ್ನು ನೋಡಿ, ಮಹಾಜನರು ಮದರಾಸಿನಲ್ಲಿ ದಿವಾಣ ಬಹಾದ್ದೂರ ರಘುನಾಥರಾಯರ ಅಧ್ಯಕ್ಷತೆಯಲ್ಲಿ ನವರತ್ನ ಖಚಿತವಾದ ಒಂದು ತೋಡಾ ಮತ್ತು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಗೌರವಿಸಿದರು. ಇವರು ೧೯೩೦ನೇ ಇಸ್ವಿಯಲ್ಲಿ ಮದರಾಸಿನ ತಮ್ಮ ಮನೆಯಲ್ಲಿ ನಿರ್ಯಾಣಹೊಂದಿದರು.

# ಅಪೂರ್ವ ಮಿಲನ



ಶ್ರೀ ಉತ್ತರಾದಿಮಠದ ಶ್ರೀ ೧೦೮ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಹಾಗೂ
ಶ್ರೀ ವ್ಯಾಸರಾಯ ಮಠದ ಶ್ರೀ ೧೦೮ ಶ್ರೀ ವಿದ್ಯಾಪ್ರಸನ್ನ ತೀರ್ಥ ಶ್ರೀ ಚರಣರ ಆತ್ಮೀಯ ಸಂಭಾಷಣೆ
ಶ್ರೀ ರಾಯರ ಮಠದ ಶ್ರೀ ೧೦೮ ಶ್ರೀ ಹರಿಪದವನ್ನೈದ ಶ್ರೀ ಸುಯಮೀಂದ್ರ ತೀರ್ಥ ಶ್ರೀಗಳವರು ನೋಡುತ್ತಿರುವರು

# ದೊಡ್ಡಬಳ್ಳಾಪುರದ ಆಚಾರ್ಯರು

## ೧೭೧ ಶ್ರೀ ಗೋವಿಂದ ಕೃಷ್ಣಾಚಾರ್ಯರು

೧೯೦೧ ನೇ ಇಸ್ವಿಯಲ್ಲಿ ತಮ್ಮ ಕೇವಲ ೩೧ ನೇ ವಯಸ್ಸಿನಲ್ಲಿಯೇ ದಿವಂಗತರಾದ ಶ್ರೀ ಗೋವಿಂದಕೃಷ್ಣಾಚಾರ್ಯರು ಪ್ರಾಚೀನ ಪರಂಪರೆಯ ಪ್ರತಿಭಾಶಾಲಿ ಪಂಡಿತರು. ಇವರು ರಚಿಸಿದ ''ಸಾಧನದೀಪಿಕಾ'' ''ಪ್ರತಿಬಿಂಬವಿಚಾರ" "ದ್ವಿತ್ವವಾದಾರ್ಥ" ಮುಂತಾದ ಗ್ರಂಥಗಳು ಉನ್ನತಶೈಲಿನಾಗಿ ಮಧ್ವಸಿದ್ಧಾಂತದಲ್ಲಿ ಅಚಲ ನಿಷ್ಠೆಯನ್ನು ತೋರ್ಪಡಿಸುವ ಕೈಗನ್ನಡಿಗಳಾಗಿವೆ.

ದೊಡ್ಡಬಳ್ಳಾಪುರದಲ್ಲಿ ಜನಿಸಿದ ಆಚಾರ್ಯರು, ಪಲ್ಲಕ್ಕಿ ವೆಂಕಟರಮಣಾಚಾರ್ಯರಲ್ಲಿ ಶಾಸ್ತ್ರಾಧ್ಯಯನವನ್ನು ಮಾಡಿ ಘನ ವಿದ್ವಾಂಸರಾದರು.

ಇವರು ತಮ್ಮ ೧೯ ನೇ ವಯಸ್ಸಿನಲ್ಲಿಯೇ ತಿರುಪತಿ ಮಧ್ವಸಿದ್ಧಾಂತ ಉನ್ನಾಹಿನೀ ಸಭೆಯಲ್ಲಿ ಶ್ರೀಮನ್ನ್ಯಾಯಸುಧಾ ಗ್ರಂಥವನ್ನು ಮುಖೋದ್ಗತವಾಗಿ ಪರೀಕ್ಷೆ ಕೊಟ್ಟು ಸಿಂಹ ಲಲಾಟ ಬಂಗಾರ ಕಡಗವನ್ನೂ, ಕಾಶ್ಮೀರ ದೇಶದ ಶಾಲು ಜೋಡಿಯನ್ನೂ ಪಾರಿತೋಷಿಕವಾಗಿ ಪಡೆದರು.

ಇವರ ಪಾಂಡಿತ್ಯಕ್ಕೆ ಮೆಚ್ಚಿದ ಉತ್ತರಾದಿ ಮಠದ ಶ್ರೀ ಸತ್ಯಧೀರತೀರ್ಥ ಶ್ರೀಪಾದಂಗಳವರು ಇವರನ್ನು ತಮ್ಮ ಮಠದಲ್ಲಿ ಆಸ್ಥಾನ ವಿದ್ವಾಂಸರೆಂದು ತಂದು ಇಟ್ಟುಕೊಂಡರು.

ಶ್ರೀಪಾದ ಪುತ್ರರಾದ ಶ್ರೀ ಸೇತುರಾಮಾಚಾರ್ಯರು (ಶ್ರೀ ಸತ್ಯಧ್ಯಾನರು) ಅನೇಕ ಶಾಸ್ತ್ರೀಯ ಸೂಕ್ಷ್ಮ ವಿಷಯಗಳನ್ನು ಶ್ರೀ ಗೋವಿಂದಕೃಷ್ಣಾಚಾರ್ಯರ ಜೊತೆಗೆ ಚರ್ಚೆ ಮಾಡುತ್ತಿದ್ದರು.

ಶ್ರೀಮಠದ ಸಭಾ, ವಿದ್ವದ್ಗೋಷ್ಠಿಗಳಲ್ಲಿ ಶ್ರೀ ಗೋವಿಂದ ಕೃಷ್ಣಾಚಾರ್ಯರು ಭಾಗವಹಿಸಿ, ಎಲ್ಲ ಪಂಡಿತರ ಹಾಗೂ ಪೀಠಾಧಿಪತಿಗಳ ಮೆಚ್ಚಿಕೆ-ನೆಚ್ಚಿಕೆಗಳಿಗೆ ಪಾತ್ರರಾಗಿದ್ದರು.

# ೧೭೨ ದೊಡ್ಡ ಬಳ್ಳಾಪುರದ ವಾಸುದೇವಾಚಾರ್ಯರು



ಶ್ರೀ ವಾಸುದೇವಾಚಾರ್ಯರು ೧೮[illegible]ರಲ್ಲಿ ದೊಡ್ಡಬಳ್ಳಾಪುರದಲ್ಲಿ ಜನಿಸಿದರು. ಇವರ ತಂದೆ ಆಗಿನ ಕಾಲದ ಮಹಾ ಪಂಡಿತರಾದ ಗೋವಿಂದ ಕೃಷ್ಣಾಚಾರ್ಯರು. ಚಿಕ್ಕ ವಯಸ್ಸಿನಲ್ಲಿಯೇ ತಂದೆ ತೀರಿಕೊಂಡದ್ದರಿಂದ ಆಚಾರ್ಯರ ಬಾಲ್ಯ ಶಿಕ್ಷಣ ಕೆಲವು ದಿನ ಚಿಂಚೋಳಿ ವೆಂಕಣ್ಣಾಚಾರ್ಯರಲ್ಲಿ ನಡೆಯಿತು.

ಮುಂದೆ ಮೈಸೂರಿನಲ್ಲಿ ಧರ್ಮಾಧಿಕಾರಿಗಳಾಗಿದ್ದ ಪುಂಗನೂರ ರಾಘವೇಂದ್ರಾಚಾರ್ಯರಲ್ಲಿ ವ್ಯಾಸಂಗವನ್ನು ಮುಂದುವರಿಸಿ ಇವರು ಮದನಪಲ್ಲಿಯಲ್ಲಿದ್ದ ಕಾಶೀ ರಾಘವೇಂದ್ರಾಚಾರ್ಯರಲ್ಲಿಯೂ ವ್ಯಾಸಂಗ ಮಾಡಿದರು.

ಕೆಲವು ದಿನ ವೀರಚೋಳಪುರದ ರಾಘವೇಂದ್ರಾಚಾರ್ಯರಲ್ಲಿ ನ್ಯಾಯಶಾಸ್ತ್ರದ ಅಪೂರ್ವವಾದ ಗ್ರಂಥಗಳನ್ನು ಓದಿ ಸಂಸ್ಕೃತ ಮಹಾರಾಜಾ ಪಾಠ ಶಾಲೆಯಲ್ಲಿ ಸೇರಿ ಆತ್ಮಕೂರ ರಂಗಾಚಾರ್ಯರಲ್ಲಿಯೂ, ಎಲತ್ತೂರ ಕೃಷ್ಣಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನು ಪೂರ್ಣಗೊಳಿಸಿದರು. ಪುಂಗನೂರ ರಾಘವೇಂದ್ರಾಚಾರ್ಯರಲ್ಲಿ ಮತ್ತೆ ವೇದಾಂತವನ್ನೂ ಓದಿ ಪೂರ್ಣಗೊಳಿಸಿ ನ್ಯಾಯವೇದಾಂತಗಳ ವಿದ್ವತ್‌ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಉತ್ತೀರ್ಣರಾದರು.

ನಂತರ ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ತರ್ಕ ಅಧ್ಯಾಪಕರಾಗಿಯೂ ನಂತರ ಆಚಾರ್ಯರು ದ್ವೈತ ವೇದಾಂತ ಪ್ರಧಾನ ಅಧ್ಯಾಪಕರಾಗಿ ನಿವೃತ್ತರಾಗುವ ವರೆಗೂ ಪಾಠ ಪ್ರವಚನ ಮಾಡಿಸಿದರು.

ಮೈಸೂರು ಮಹಾರಾಜರು ಇವರಿಗೆ 'ಪಂಡಿತರತ್ನ' ಎಂಬ ಬಿರುದನ್ನು ದಯ ಪಾಲಿಸಿ ಗೌರವಿಸಿದರು.

ಇವರು ದ್ವೈತ ಪ್ರದೀಪ ಮತ್ತು ತತ್ವಶಿಕ್ಷೆ, ಗೀತಾಭಾವ, ನಾರದೀಯ ಪುರಾಣ (ಅನುವಾದ), ನಾ[illegible] ಶಿಕ್ಷಾ, ವಿದ್ಯಾವಿನಿರ್ಣಯ, ಶ್ರೀಮನ್ಮಧ್ವಾಚಾರ್ಯರು, ಶ್ರೀವ್ಯಾಸರಾಜರೂ [illegible]ಂತರ್ಯಾ, ಭಾಗವತ, ಉಪನಿಷತ್ ಖಂಡಾರ್ಥ (ಕನ್ನಡದಲ್ಲಿ) ಮೀಮಾಂಸಾ ಪೀ[illegible]ದಿ ಅನೇಕ ಪ್ರಕಟಿತ, ಅಪ್ರಕಟಿತ ಗ್ರಂಥಗಳನ್ನು ಬರೆದಿದ್ದಾರೆ. ಇ[illegible] ಮೈಸೂರಲ್ಲಿ ವೈಕುಂಠವಾಸಿಗಳಾದರು.

## ೧೭೩ [illegible]ಹಳ್ಳಿ ಶೇಷಾಚಾರ್ಯರ್

ತುಮಕೂರ ಜಿಲ್ಲೆಯ [illegible]ಹಳ್ಳಿ ಗ್ರಾಮದಲ್ಲಿ ಜನಿಸಿದ ಶ್ರೀ ಶೇಷಾಚಾರ್ಯರು ಬಾಲ್ಯದಲ್ಲಿ ತಮ್ಮ [illegible] ಬಿ. ವೆಂಕಟೇಶಾಚಾರ್ಯರಲ್ಲಿ ಸಾಹಿತ್ಯ ಅಧ್ಯಯನವನ್ನು ಮಾಡಿ[illegible] ಅನಂತರ ಮೈಸೂರಲ್ಲಿ ಘನಪಂಡಿತರೆಂದು ಪ್ರಖ್ಯಾತರಾದ ನಾಮಗೊಂಡಲು ಶ್ಯಾಮಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ, ನಂಜನಗೂಡಿನ ಶ್ರೀ ರಾಘವೇಂದ್ರ ಮಠಾಧೀಶ[illegible] ಸುಪ್ರಜ್ಞಾನೇಂದ್ರತೀರ್ಥರಲ್ಲಿ ವೇದಾಂತವನ್ನೂ ವ್ಯಾಸಂಗಮಾಡಿ, ದ್ವೈತ ವೇದಾಂತ ವಿದ್ವತ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು.

ಇವರು ಅತ್ಯುತ್ತಮ ಪುರಾಣಿಕರಾಗಿದ್ದರು. ಇವರ ಅಪೂರ್ವ ಪುರಾಣ ಪ್ರವಚನ ಖ್ಯಾತಿಯನ್ನು [illegible] ಮೈಸೂರಿನ ದಿವಾಣರಾದ ಸರ್ ಪಿ. ಎನ್. ಕೃಷ್ಣ ಮೂರ್ತಿಗಳು ಆಚಾರ್ಯರನ್ನು ಆಹ್ವಾನಿಸಿ ಅವರಿಂದ ಭಾಗವತ ಶ್ರವಣವನ್ನು ಮಾಡಿದರು.

ಮುಂದೆ ಇವರು ಅರಮನೆಯ ಆಸ್ಥಾನ ವಿದ್ವಾಂಸರಾಗಿ, ಅರಮನೆಯಲ್ಲಿ ಮಹಾರಾಣಿಯವರೆದುರು [illegible] ಪುರಾಣವನ್ನು ಹೇಳುತ್ತಿದ್ದರು. ಮೈಸೂರಿನ ರಾಜಾಸ್ಥಾನದಿಂದ ಇವರಿಗೆ "[illegible]ರಾಣಿಕ ರತ್ನ" ಎಂಬ ಬಿರುದು ದೊರೆಯಿತು.

ಶೇಷಾಚಾರ್ಯರ ಘನಪಾಂಡಿತ್ಯ, ಅಪೂರ್ವ ತೇಜಸ್ಸು ಇವುಗಳನ್ನು ಮೆಚ್ಚಿಕೊಂಡು ಶ್ರೀಮನ್ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರು ಇವರನ್ನು ತಮ್ಮ ಅರಮನೆಯ ಧರ್ಮಾಧಿಕಾರಿಗಳನ್ನಾಗಿ ಮಾಡಿಕೊಂಡರು.

ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು ಕಾಶೀ ಕ್ಷೇತ್ರದಲ್ಲಿ ವಿದ್ವತ್ ಸಭೆಗೆ ಇವರನ್ನು ಬರಮಾಡಿಕೊಂಡಿದ್ದರು.

ಎಚ್. ಎಸ್. ರಾಘವೇಂದ್ರಾಚಾರ್ಯ, ಎಸ್. ವಿ. ಪದ್ಮನಾಭಾಚಾರ್ಯ ಮೊದಲಾದವರು ಇವರಲ್ಲಿ ಓದಿ ಪಂಡಿತರಾದರು.

## ೧೭೪ ತಿರಮುಕೂಡ್ಲು ನರಸೀಪುರದ ಸುಬ್ರಹ್ಮಣ್ಯಾಚಾರ್ಯ

ಇವರು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಅರಮನೆಯಲ್ಲಿ ಭಾಗ ವತ ಪುರಾಣವನ್ನು ಹೇಳಿ ಮಹಾರಾಜರಿಂದ ನವರತ್ನಮಾಲಾ, ಶಾಲು ಜೋಡಿ ಮುಂತಾದ ಗೌರವವನ್ನು ಪಡೆದರು.

ಇವರು ಆ ಕಾಲದಲ್ಲಿ ಶಾಸ್ತ್ರಾನುಸಾರಿಯಾದ ಪಾಂಡಿತ್ಯಪೂರ್ಣವಾದ ಪುರಾಣ ವನ್ನು ಹೇಳಿ ಎಲ್ಲ ಪಂಡಿತ ಪಾಮರರ ಗೌರವಾದರಗಳಿಗೆ ಪಾತ್ರರಾಗಿದ್ದರು.

## ೧೭೫ ತಿರುಮುಕೂಡ್ಲ ನರಸಿಂಹಮೂರ್ತಿ ಆಚಾರ್ಯ

ಶ್ರೀ ಸುಬ್ರಹ್ಮಣ್ಯಾಚಾರ್ಯರ ದೌಹಿತ್ರರಾದ ಶ್ರೀ ನರಸಿಂಹಮೂರ್ತಿ ಆಚಾ ರ್ಯರೂ ಮಹಾ ಪುರಾಣ ಪಂಡಿತರಾಗಿದ್ದರು. ಇವರಿಗೆ ಸಮಗ್ರ ಭಾಗವತ ಗ್ರಂಥ ವೆಲ್ಲವೂ ಮುಖೋದ್ಗತವಾಗಿ ಬರುತ್ತಿತ್ತು. ತಾತ್ಪರ್ಯ, ಟೀಕೆ, ಟಿಪ್ಪಣಿ ವಿಷಯ ಗಳನ್ನೆಲ್ಲ ಅಲ್ಲಲ್ಲಿ ಪುಸ್ತಕಾನಪೇಕ್ಷವಾಗಿ ಹೇಳಿ ವಿದ್ವದ್ರಂಜನೆಯನ್ನು ಮಾಡುತ್ತಿದ್ದರು.

ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಶ್ರೀ ಶ್ರೀ ಸುಯಮೀಂದ್ರ ತೀರ್ಥ ಶ್ರೀಪಾದಂಗಳವರು ಇವರನ್ನು ೯ ವರ್ಷ ತಮ್ಮಲ್ಲಿ ಇಟ್ಟುಕೊಂಡು ಗುರು ಸಾರ್ವ ಭೌಮರ ಸನ್ನಿಧಾನದಲ್ಲಿ ಇವರಿಂದ ನಿತ್ಯ ಪುರಾಣ ಹೇಳಿಸುತ್ತಿದ್ದರು.

## ೧೭೬ ಗುನ್ನಾಳ ವೆಂಕೋಬಾಚಾರ್ಯ

ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಆಸ್ಥಾನ ವಿದ್ವಾಂಸರಾಗಿದ್ದ ಶ್ರೀ ವೆಂಕೋ ಬಾಚಾರ್ಯರು ಮಂತ್ರಾಲಯದಲ್ಲಿ ಕಾವ್ಯಾಧ್ಯಯನ ಮಾಡಿ ಬಾಗಲಕೋಟೆಗೆ ಬಂದರು. ಶ್ರೀ ಮಳಿಗಿ ವೇದವ್ಯಾಸಾಚಾರ್ಯರ ವಾಣೀ ವಿಲಾಸ ಸಂಸ್ಕೃತ ಪಾಠ ಶಾಲೆಯಲ್ಲಿ ಬಾಧಾಂತ ನ್ಯಾಯ ಶಾಸ್ತ್ರವನ್ನು ಓದಿದರು. ಈ ಶಿಷ್ಯನ ತೈಲ ಬುದ್ಧಿ ಶ್ರಮ ಸಹಿಷ್ಣುತೆಗಳಿಗೆ ಮೆಚ್ಚಿದ ಶ್ರೀ ವೇದವ್ಯಾಸಾಚಾರ್ಯರು ಇವರಿಗೆ ಬಹಳ ಪ್ರೀತಿಯಿಂದ ಪಾಠ ಹೇಳಿ ಪೂರ್ವೋತ್ತರವಾದಗಳನ್ನೆಲ್ಲ ಪಾಠ ಮಾಡಿಸಿ ಶಾಸ್ತ್ರದಲ್ಲಿ ವ್ಯುತ್ಪತ್ತಿಯನ್ನು ಹುಟ್ಟಿಸಿ ಕೊಟ್ಟರು.

ಅನಂತರ ಇವರು ಮೈಸೂರಿಗೆ ಹೋಗಿ ವಿರಾಜಮಂಗಲ ಕೃಷ್ಣಮೂರ್ತಿ ಆಚಾರ್ಯರಲ್ಲಿ ವೇದಾಂತ ಮೀಮಾಂಸಾದಿ ಶಾಸ್ತ್ರಗಳನ್ನು ಓದಿ ವಿದ್ವಾನ್ ಶಿರೋ ಮಣಿ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು.

ಅನಂತರ ಎಲತ್ತೂರ ಕೃಷ್ಣಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರದ ಕೆಲವು ಗ್ರಂಥಗಳನ್ನು ಅಧ್ಯಯನ ಮಾಡಿದರು.

ಆ ಮೇಲೆ ಇವರು ಸ್ವಗ್ರಾಮವಾದ ಮಂತ್ರಾಲಯಕ್ಕೆ ಬಂದು ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಆಸ್ಥಾನ ವಿದ್ವಾಂಸರಾದರು. ಮಂತ್ರಾಲಯದಲ್ಲಿ ಶ್ರೀ ಮಠದಿಂದ ಚಾಲಿತವಾದ ಸಂಸ್ಕೃತ ಪಾಠ ಶಾಲೆಯಲ್ಲಿ ಪ್ರಾಧ್ಯಾಪಕರಾಗಿ ಕೊನೆಯ ವರೆಗೂ ಪಾಠ ಹೇಳಿದರು.

ಇವರು ಶಿರೋಮಣಿ ಹಾಗೂ ಮೈಸೂರಿನ ವಿದ್ವತ್ ಪರೀಕ್ಷೆಗಳಿಗೆ ಪರೀಕ್ಷಕರಾಗಿದ್ದರು. ಮಂತ್ರಾಲಯದಲ್ಲಿ ಇವರಲ್ಲಿ ಅಧ್ಯಯನ ಮಾಡಿ ಅನೇಕ ವಿದ್ಯಾರ್ಥಿಗಳು ಶಿರೋಮಣಿ, ವಿದ್ವತ್ ಪರೀಕ್ಷೆಗಳಿಗೆ ಕಟ್ಟಿ ಉತ್ತೀರ್ಣರಾಗಿದ್ದಾರೆ.

ಆಚಾರ್ಯರಲ್ಲಿ ಪಾಠ ಪ್ರವಚನ ಪಾಂಡಿತ್ಯವಿದ್ದಂತೆ ಶಾಸ್ತ್ರಾರ್ಥ, ವಾಕ್ಯಾರ್ಥ ಕೌಶಲವೂ ಅಸಾಧಾರಣವಾಗಿದ್ದಿತು.

ಶ್ರೀ ಮಂತ್ರಾಲಯ ಸಭೆಯಲ್ಲಿ ಪ್ರತಿ ವರ್ಷವೂ ಅವರು ನ್ಯಾಯ, ವೇದಾಂತ, ಮೀಮಾಂಸಾದಿ ಶಾಸ್ತ್ರಗಳಲ್ಲಿ ಸಮಾನಾಧಿಕರಣ ವಾಕ್ಯಾರ್ಥ ಮಾಡಿ ಶ್ರೀಗಳವರ ಹಾಗೂ ಪಂಡಿತ ಪಾಮರರೆಲ್ಲರ ಶ್ಲಾಘಾಕಂಪನಕ್ಕೆ ಕಾರಣರಾಗುತ್ತಿದ್ದರು.

ಶ್ರೀ ವೆಂಕೋಬಾಚಾರ್ಯರಲ್ಲಿ ಪಾಠಪಾಂಡಿತ್ಯ, ಪ್ರವಚನಪಟುತ್ವ, ವಾದ ಕೌಶಲಗಳಿದ್ದಂತೆ ಗ್ರಂಥ ವಿಲೇಖನ ನೈಪುಣ್ಯವೂ ಸುಸ್ಪಷ್ಟವಾಗಿದ್ದಿತು.

ಕಲಕತ್ತೆಯ ಮಹಾ ಮಹೋಪಾಧ್ಯಾಯ ಶ್ರೀ ಅನಂತಕೃಷ್ಣ ಶಾಸ್ತ್ರಿ ಶ್ರೀಮನ್ನ್ಯಾಯಸುಧಾ ಖಂಡನಾಭಾಸ ಗ್ರಂಥವನ್ನು ಬರೆದು ಪ್ರಕಟಿಸಿದಾಗ ಆಚಾರ್ಯರು ಸಿಡಿದೆದ್ದು ಕೂಡಲೇ ಅದಕ್ಕೊಂದು ಖಂಡನವನ್ನು ಬರೆದು ಕಳಿಸಿದರು.

## ೧೭೭ ಹೊಸಳ್ಳಿ ನಾರಾಯಣಾಚಾರ್ಯ

ಇವರು ಭೀಮಾಚಾರ್ಯರ ಮಕ್ಕಳು. ಒಳ್ಳೇ ವಿದ್ವಾಂಸರು. ರಾಮ: ಶಬ್ದದಿಂದ ಶ್ರೀ ಸತ್ಯಧ್ಯಾನತೀರ್ಥರಲ್ಲಿ ತರ್ಕ ವೇದಾಂತದವರೆಗೆ ಸಂಪೂರ್ಣ ಓದಿದರು. ಅಲ್ಲೇ ಪಾಠ ಶಾಲೆಯಲ್ಲಿ ಎಷ್ಟೋ ವಿದ್ಯಾರ್ಥಿಗಳಿಗೆ ಓದು ಹೇಳಿ ವಿದ್ವಾಂಸರನ್ನಾಗಿ ಮಾಡಿದರು.

ಪದ್ಮಸರೋವರ ಸಭೆಯಲ್ಲಿ ವೇದಾಂತ ವಿಷಯದಲ್ಲಿ ವಾಕ್ಯಾರ್ಥ ಮಾಡಿದರು. ಮೈಸೂರ ವೇದಾಂತ ವಿದ್ವಾನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಶಾಲು ಜೋಡಿಯನ್ನು ಪಡೆದರು.

ಒಮ್ಮೆ ವಾಕ್ಯಾರ್ಥದಲ್ಲಿ ಇವರ ಪಾಂಡಿತ್ಯವನ್ನು ನೋಡಿ ಶ್ರೀ ಸತ್ಯಧ್ಯಾನರು ಇವರ ಕೈಯಲ್ಲಿ ಬಂಗಾರದ ಖಡೆ ಹಾಕಿ, ಅನುಗ್ರಹಿಸಿ ಮೆರೆಸಿದರು.

ಕೆಲವು ದಿನಗಳ ನಂತರ, ಇವರು ಹನುಮಸಾಗರಕ್ಕೆ ಬಂದು ಅಲ್ಲಿ ಎಷ್ಟೋ ವಿದ್ಯಾರ್ಥಿಗಳಿಗೆ ಪಾಠ ಹೇಳಿದರು. ಬಂಡಿ ರಾಘವೇಂದ್ರಾಚಾರ್ಯರು, ಪುರೋಹಿತ ಹನುಮಂತಾಚಾರ್ಯರು ಅವರಲ್ಲಿ ವೇದಾಂತ ಸಂಪೂರ್ಣ ಓದಿ ವಿದ್ವಾಂಸರಾದರು.

# ಗದಗ (ಕ್ರತುಪುರ) ಪಂಡಿತ ಮಂಡಲಿ





ಶ್ರೀ ವೀರನಾರಾಯಣನ ಕ್ಷೇತ್ರವಾದ ಗದಗು ಕ್ರತುಪುರವೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಜನಮೇಜಯ ಮಹಾರಾಜನು ಇಲ್ಲಿ ಯಜ್ಞಮಾಡಿ, ಇಲ್ಲಿಯ ಶ್ರೋತ್ರಿಯ ಬ್ರಾಹ್ಮಣರಿಗೆ ದಾನ-ದತ್ತಿಗಳನ್ನು ಕೊಟ್ಟಿದ್ದನೆಂದು ಶಿಲಾಶಾಸನಗಳು ಸಾರುತ್ತವೆ. ಆದುದರಿಂದಲೇ ಇದಕ್ಕೆ ಕ್ರತುಪುರವೆಂದು ಹೆಸರು.

ಬದರಿನಾರಾಯಣನು ಗದುಗಿನ ಸಮೀಪದಲ್ಲಿರುವ ನಾಗಾಸುರನನ್ನು ಸಂಹಾರ ಮಾಡುವದಕ್ಕಾಗಿ ತನ್ನ ಯೋಗಿನಾರಾಯಣ ರೂಪವನ್ನು ಗದುಗಿನ ಹತ್ತರದಲ್ಲಿರುವ ಹೊಂಬಳದಲ್ಲಿ ಬಿಟ್ಟು ವೀರನಾರಾಯಣ ರೂಪವನ್ನು ತೊಟ್ಟು ಆ ನಾಗಾಸುರನನ್ನು ಸಂಹರಿಸಿ ಗದುಗಿನಲ್ಲಿ ನಿಂತುಕೊಂಡಿದ್ದಾನೆ.

ಕುಮಾರವ್ಯಾಸನು ಈ ವೀರನಾರಾಯಣನ ಅನುಗ್ರಹದಿಂದಲೇ ಗದುಗಿನ ಭಾರತವನ್ನು ಬರೆದು ಕನ್ನಡಕ್ಕೆ ನೀಡಿದನು.

ಶ್ರೀ ಸತ್ಯಧ್ಯಾನ ತೀರ್ಥರು ಎರಡು ಸಲ ಇಲ್ಲಿ ಮಹಾ ಸಮಾರಾಧನೆ, ವಿದ್ವತ್ ಸಭೆಗಳನ್ನು ನಡೆಯಿಸಿದರು.

ಇಲ್ಲಿ ಅನೇಕ ಪಂಡಿತರು ಆಗಿ ಹೋಗಿದ್ದಾರೆ.

## ೧೭೮ ಶ್ರೀನಿವಾಸಾಚಾರ್ಯ ಸೊರಟೂರ

ಇವರು ಸುಪ್ರಸಿದ್ಧ ವಾಯಿ ಮನೆತನದ ಮಹಾಪಂಡಿತೋತ್ತಮರಾದ ಬಾಳಾಚಾರ್ಯರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನೋದಿ ಪಂಡಿತಪುಂಗವರಾದರು.

ಇವರು ಶಂಕರಪಾದ ಭೂಷಣ ದೂಷಣಂ ಅಥವಾ ದ್ವೈತ ಭೂಷಣಂ ಎಂಬ ಗ್ರಂಥ ಬರೆದರು. ಇವರ ಅಸಾಧಾರಣವಾದ ಶಾಸ್ತ್ರ ಪಾಂಡಿತ್ಯ, ಹಾಗೂ ಪ್ರೌಢ ಶಾಸ್ತ್ರೀಯ ಗ್ರಂಥ ಪ್ರಣಯನ ಪ್ರಗಲ್ಭ ಶೈಲಿ, ಮತ್ತು ಸಭಾ ಚಾತುರ್ಯ, ವಾದ ವೈಖರ್ಯ ಮೊದಲಾದ ಗುಣಗಳು ಅಂದಿನ ವಿದ್ವತ್ ಪ್ರಪಂಚವನ್ನು ಬೆರಗುಗೊಳಿಸಿದ್ದವು.

## ೧೭೯ ಭೀಮಸೇನಾಚಾರ್ಯ ಸೊರಟೂರ

ಶ್ರೀನಿವಾಸಾಚಾರ್ಯರ ಚಿರಂಜೀವರಾದ ಶ್ರೀ ಭೀಮಸೇನಾಚಾರ್ಯರು ನ್ಯಾಯಶಾಸ್ತ್ರದ ಕ್ರೋಡಪತ್ರ ಪಂಡಿತರಾಗಿದ್ದರು. ತಮ್ಮ ತಂದೆಯವರಲ್ಲಿಯೇ ಓದಿ, ವಾಯಿ ಆಚಾರ್ಯರ ಮನೆತನದವರು ರಚಿಸಿ ಬೆಳಸಿದ ದಾಕ್ಷಿಣಾತ್ಯ ತರ್ಕ ಕ್ರೋಡಪತ್ರಗಳ ಕೋಟಿಕ್ರಮ ಗ್ರಂಥಗಳನ್ನೆಲ್ಲ ಮುಖೋದ್ಗತ ಮಾಡಿ ಒಂದೊಂದು ಮೈಲುದ್ದ ಪರಿಷ್ಕಾರವನ್ನು ಹೇಳುತ್ತಿದ್ದರು.

ಇವರ ಪೂರ್ವಪಕ್ಷ ಕೋಟಿಕ್ರಮಗಳ ನಿರರ್ಗಳ ಅನುವಾದವನ್ನು ಕೇಳಿ ಶ್ರೀ ಎಲತ್ತೂರ ಕೃಷ್ಣಾಚಾರ್ಯರೂ, ಕಪಿಸ್ಥಳಂ ದೇಶಿಕಾಚಾರ್ಯರೂ ಆಶ್ಚರ್ಯ ಚಕಿತರಾಗಿ ನಿಲ್ಲುತ್ತಿದ್ದರಂತೆ.

೧೯೧೬ ನೇ ಇಸ್ವಿಯಲ್ಲಿ, ಶ್ರೀ ಸತ್ಯಧ್ಯಾನತೀರ್ಥರು ಗದುಗಿನಲ್ಲಿ ಮಾಡಿದ ಮಹಾ ಸಮಾರಾಧನೆಯ ಕಾಲದಲ್ಲಿ ಶ್ರೀ ಭೀಮಸೇನಾಚಾರ್ಯರ ಪಾಂಡಿತ್ಯದಿಂದ ಪ್ರೀತರಾಗಿ— ಇವರ ಉಡಿಯಲ್ಲಿ ರೂಪಾಯಿ ತುಂಬಿದ ದೊಡ್ಡ ಬೆಳ್ಳಿಯ ತಟ್ಟೆಯನ್ನೇ ಹಾಕಿದರಂತೆ.

ಇವರು ಶ್ರೀ ಸತ್ಯಧ್ಯಾನ ತೀರ್ಥರ ಜೊತೆಗೆ ಕಾಶಿಗೆ ಹೋಗಿದ್ದರು. ಅಲ್ಲಿಯ ವಿದ್ವತ್ ಸಭೆಯಲ್ಲಿ ಶ್ರೀ ವಾಮಾಚರಣ ಭಟ್ಟಾಚಾರ್ಯರಂಥ ಹೆಬ್ಬುಲಿಗಳ ಜೊತೆಗೆ ಧೈರ್ಯದಿಂದ ತರ್ಕದಲ್ಲಿ ವಾದ ಕಣಕ್ಕೆ ಇಳಿದ ಧೀರ ದಾಕ್ಷಿಣಾತ್ಯ ಧೀಮಂತರೆಂದರೆ ಶ್ರೀ. ಸೊರಟೂರ ಭೀಮಸೇನಾಚಾರ್ಯರೊಬ್ಬರೇ !

ಬೆಳಧಡಿ, ವೆಂಕಟಾಪುರ ಕ್ಷೇತ್ರಗಳ ಸ್ಥಾಪನೆ, ಹಾಗೂ ಪ್ರಸಿದ್ಧಿಗೆ ಕಾರಣರಾಗಿ ಶ್ರೀ ರಾಮಭಕ್ತರೂ, ಸಾಧು-ಸಂತರೂ ಎಂದು ಪ್ರಖ್ಯಾತರಾದ ಶ್ರೀ ಬ್ರಹ್ಮಾನಂದರು ಶ್ರೀ ಸೊರಟೂರ ಭೀಮಸೇನಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದ್ದರು. ಇದಲ್ಲದೆ ಇವರಿಗೆ ಅನೇಕ ಲೌಕಿಕ, ವೈದಿಕ ಶಿಷ್ಯರಿದ್ದರು.

## ೧೮೦ ಯೋಗಿ ನಾರಾಯಣಾಚಾರ್ಯ

ಇವರು ಕರ್ನಾಟಕದ ಮಹರ್ಷಿಗಳೆಂದು ಪ್ರಖ್ಯಾತರಾದ ಇಭರಾಮಪುರ ಕೃಷ್ಣಾಚಾರ್ಯರ (ಅಪ್ಪಾ ಅವರ) ಶಿಷ್ಯರು. ಯೋಗಾಭ್ಯಾಸವನ್ನು ಮಾಡಿ ಭಕ್ತಿ ಯೋಗದಿಂದ ಶ್ರೀ ನಾರಾಯಣನನ್ನು ಧ್ಯಾನ ಮಾಡಿ ಯೋಗಿ ನಾರಾಯಣರೆಂದು ಪ್ರಸಿದ್ಧರಾಗಿದ್ದರು.

ಇವರು ಶ್ರೀ ಮಂತ್ರಾಲಯ ಸ್ವಾಮಿಗಳ ನಿಷ್ಠಾವಂತ ಭಕ್ತರಾಗಿದ್ದರು. ವೀರ ನಾರಾಯಣನಗಿಂತ ಗದುಗಿನ ಪ್ರಾಚೀನ ಕ್ಷೇತ್ರದೇವತೆಯಾದ ಶ್ರೀ ಲಕ್ಷ್ಮೀನರಸಿಂಹ ದೇವರ ಎದುರು ಶ್ರೀ ಮಂತ್ರಾಲಯ ಸ್ವಾಮಿಗಳ ವೃಂದಾವನವನ್ನು ಪ್ರತಿಷ್ಠೆ ಮಾಡ ಬೇಕೆಂದು ಬಯಸಿದರು.

ಮಂತ್ರಾಲಯಕ್ಕೆ ಪಾದಚಾರಿಗಳಾಗಿ ಹೋಗಿ ಮೂಲ ಮೃತ್ತಿಕೆಯನ್ನು ತಂದರು. ತಮ್ಮ ಕೈಯಿಂದಲೇ ಮಸೃಣವಾದ ಕರಿಶಿಲೆಯೊಂದರಲ್ಲಿ ತಮ್ಮ ಕೈ ಯಿಂದಲೇ ಮಡಿಯಿಂದ ರಾಯರ ವೃಂದಾವನವನ್ನು ಕಟೆದು ಮೂಲ ಮೃತ್ತಿಕೆ ಯನ್ನಿಟ್ಟು ಶ್ರೀ ನರಸಿಂಹದೇವರೆದುರು ಪ್ರತಿಷ್ಠೆ ಮಾಡಿದರು.



ಈ ವೃಂದಾವನವು ಅತ್ಯಂತ ಸುಂದರವಾಗಿದ್ದು ಮಧ್ಯದಲ್ಲಿ ಒಂದು ಚಿಕ್ಕ ವೃಂದಾ ವನವಿದೆ. ಅದರಲ್ಲಿ ದೈತ್ಯದಮನ ದಕ್ಷರಾದ ಚತುರ್ಭುಜ ಪ್ರಾಣ ದೇವರ ದಿವ್ಯ

ಮೂರ್ತಿಯನ್ನು ಕೊರೆಯಲಾಗಿದೆ. ಪ್ರತಿ ವರ್ಷವೂ ಶ್ರಾವಣ ಮಾಸದಲ್ಲಿ ಆರಾಧನೆಯು ವಿಜೃಂಭಣೆಯಿಂದ ನಡೆದು ರಥೋತ್ಸವ, ಸಹಸ್ರಾರು ಜನ ಬ್ರಾಹ್ಮಣ ಸಂತರ್ಪಣೆ ನಡೆಯುತ್ತಿದೆ.

## ೧೮೧ ಹುಯಿಲಗೋಳ ರಾಘವೇಂದ್ರಾಚಾರ್ಯ

ಇವರು ಗದುಗಿನಲ್ಲಿ ಒಳ್ಳೇ ಪುರಾಣಿಕರೆಂದು ಪ್ರಖ್ಯಾತರಾಗಿದ್ದರು. ಪ್ರಮೇಯ ವಿಷಯಗಳೆಲ್ಲವೂ ಅವರಿಗೆ ಚನ್ನಾಗಿ ಅವಗತವಾಗಿದ್ದವು.

## ೧೮೨ ಹುಯಿಲಗೋಳ ರಾಮಾಚಾರ್ಯ

ಇವರು ವೇದ, ಪುರಾಣ, ಸಾಹಿತ್ಯ, ವೇದಾಂತಗಳಲ್ಲಿ ಪ್ರವೀಣರಾಗಿದ್ದರು. ಶ್ರೀ ಪಾಂಘ್ರಿ ಸಮೀರಣಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದರು. ಋಗ್ವೇದ ಸಂಹಿತೆಯನ್ನು ಸಂಪೂರ್ಣವಾಗಿ ಸ್ವಾಧೀನ ಮಾಡಿಕೊಂಡಿದ್ದರು.

ಇವರು ಪರಮ ಸಾತ್ವಿಕರಾಗಿದ್ದು, ಊರಲ್ಲಿಯ ಎಲ್ಲ ಮಾಧ್ವ ವಿದ್ಯಾರ್ಥಿಗಳಿಗೂ ಮಂತ್ರ, ಸ್ತೋತ್ರ, ಕಾವ್ಯ, ಯಾಜ್ಞಿಕ, ವೇದಾಂತಗಳನ್ನು ಅಧ್ಯಯನ ಮಾಡಿಸುತ್ತಲಿದ್ದರು. ಹಾಗೂ ಪ್ರತಿ ನಿತ್ಯ ತಮ್ಮ ಮನೆಯಲ್ಲಿ ಶ್ರೀಮದ್ಭಾಗವತ ಪುರಾಣವನ್ನು ತಾತ್ಪರ್ಯಾನುಸಾರವಾಗಿ ಎಲ್ಲ ಟೀಕೆ, ಟಿಪ್ಪಣಿ ವಿಷಯಗಳೊಂದಿಗೆ ಜನರಿಗೆ ಬೋಧಪ್ರದವಾಗುವಂತೆ ಹೇಳುತ್ತಿದ್ದರು.

## ೧೮೩ ರಾಮಾಚಾರ್ಯ ಪುರಾಣಿಕ

ಇವರು ಪ್ರತಿ ನಿತ್ಯ ಗದುಗಿನಲ್ಲಿ ಭಾಗವತ ಪುರಾಣವನ್ನು ಹೇಳುತ್ತಿದ್ದರು. ಪರಮ ಸಾತ್ವಿಕರಾಗಿದ್ದರು.

## ೧೮೪ ಕೌಲಗಿ ಮಾಮಲೇದಾರರು

ಇವರು ಸುಪ್ರಸಿದ್ಧ ಕೌಲಗಿ ಮನೆತನದವರು. ಆಂಗ್ಲ ಪದವೀಧರರಾಗಿ ಮಾಮಲೇದಾರ (ತಹಶೀಲದಾರ) ರಾಗಿದ್ದರು. ಆದರೂ ತಮ್ಮ ಮನೆತನದ ಪರಂಪರೆಯನ್ನು ಬಿಡದೆ ಸಂಸ್ಕೃತ ವಿದ್ಯಾಭ್ಯಾಸವನ್ನು ಮಾಡಿದ್ದರು. ಸಾಹಿತ್ಯದಲ್ಲಿ ಚನ್ನಾಗಿ ವ್ಯುತ್ಪತ್ತಿಯನ್ನು ಸಂಪಾದನೆ ಮಾಡಿಕೊಂಡು ಪ್ರಮಿತ ಪಂಡಿತರಲ್ಲಿ ಸರ್ವಜ್ಞಶಾಸ್ತ್ರವನ್ನು ಓದಿ ತಿಳಿದುಕೊಂಡಿದ್ದರು.

ಇವರು ನಿವೃತ್ತರಾದ ಬಳಿಕ ಗದುಗಿನಲ್ಲಿಯೇ ಇದ್ದು ನಿತ್ಯವೂ ಮನೆಯಲ್ಲಿ ಭಾಗವತಾದಿ ಪುರಾಣಗಳನ್ನು ಹೇಳುತ್ತಿದ್ದರು.

## ೧೮೫ ಪುರಾಣಿಕ ಭೀಮಾಚಾರ್ಯ ಜೋಶಿ (ಹೊಂಬಳ)



೧೮೭೨ ನೇ ಇಸ್ವಿಯಲ್ಲಿ ಹೊಂಬಳ ಗ್ರಾಮದಲ್ಲಿ ಜನಿಸಿದ ಶ್ರೀ ಭೀಮಾಚಾರ್ಯರು ತಮ್ಮ ಕಕ್ಕ ಜೋಶಿ ಗುರಾಚಾರ್ಯರಲ್ಲಿ ಜ್ಯೋತಿಷ್ಯ ಮತ್ತು ಸಾಹಿತ್ಯಗಳನ್ನು ಅಧ್ಯಯನ ಮಾಡಿದರು. ಸುಪ್ರಸಿದ್ಧ ನೈಯಾಯಿಕರಾದ ಶ್ರೀ ಸೊರಟೂರ ಭೀಮಸೇನಾಚಾರ್ಯರಲ್ಲಿ ಶಾಸ್ತ್ರಾಧ್ಯಯನವನ್ನು ಮಾಡಿದರು. ಇವರಿಗೆ ರಾಗ ಜ್ಞಾನವು ತಕ್ಕಮಟ್ಟಿಗೆ ಇದ್ದುದರಿಂದ ತಂಬೂರಿ ಇಟ್ಟುಕೊಂಡು ಮಧುರ ಕಂಠದಿಂದ ಇಂಪಾಗಿ ಶ್ರೋತೃಗಳ ಮನರಂಜನೆಯಾಗುವಂತೆ ಪುರಾಣಗಳನ್ನು ಹೇಳುತ್ತಿದ್ದರು.

## ೧೮೬ ಅಗ್ನಿಹೋತ್ರಿ ಪಾಂಡುರಂಗಾಚಾರ್ಯ ಜೋಶಿ



೧೮೯೦ ನೇ ಇಸ್ವಿಯಲ್ಲಿ ಜನಿಸಿದ ಜೋಶಿ ಗುರಾಚಾರ್ಯರ ಮಕ್ಕಳಾದ ಪಾಂಡುರಂಗಾಚಾರ್ಯರು ತಮ್ಮ ಅಣ್ಣ ಭೀಮಾಚಾರ್ಯರಲ್ಲಿ ಕಾವ್ಯ

ಜ್ಯೋತಿಷ್ಯಗಳನ್ನು ಓದಿದರು. ಅನಂತರ ಕೊಪ್ಪದಲ್ಲಿ ಪಂಚಮುಖಿ ಆಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನವನ್ನು ಮಾಡಿದರು.

ಇವರು ಮಧುರ ಮೋಹಕವಾದ ಶೈಲಿಯಲ್ಲಿ ಸಿದ್ಧಾಂತಕ್ಕೆ ಅನುಸಾರವಾಗಿ ಪುರಾಣ ಹೇಳುತ್ತಿದ್ದರು. ಇವರ ಸುಂದರವಾದ ಪುರಾಣ ಪ್ರವಚನಗಳಿಗೆ ಮುಗ್ಧರಾಗಿ ಕರ್ಪೂರ ಶ್ರೀನಿವಾಸರಾಯರು ಇವರನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡು ಇವರ ಬಾಯಿಂದ ಭಾಗವತ ಶ್ರವಣ ಮಾಡಿ ಗೌರವಿಸಿ ಕಳಿಸಿದರು. ಇವರು ಬಹು ಕರ್ಮಠರು. ಅಗ್ನಿಹೋತ್ರವನ್ನು ಇಟ್ಟುಕೊಂಡಿದ್ದರು. ಪ್ರಮೇಯಜ್ಞರೂ ಆಗಿದ್ದರು.

## ೧೮೭ ಶಿರಹಟ್ಟಿ ನಾರಾಯಣಾಚಾರ್ಯ

೧೦೦ ವರ್ಷಗಳ ಹಿಂದೆ ಗದುಗಿನ ಶಿರಹಟ್ಟಿ ಭೀಮಾಚಾರ್ಯರಿಗೆ ಇಬ್ರಾಹಿಮಪುರದ ಅಪ್ಪಾ ಅವರ ಅನುಗ್ರಹದಿಂದ ಜನಿಸಿದ ಮಗನೇ ನಾರಾಯಣಾಚಾರ್ಯರು ಬಾಲ್ಯದಲ್ಲಿ ಮ್ಯಾಟ್ರಿಕ್‌ದ ವರೆಗೆ ಆಂಗ್ಲ ವಿದ್ಯೆಯನ್ನು ಓದಿದ ಶ್ರೀ ನಾರಾಯಣಾರ್ಯರು ತಮ್ಮ ತಂದೆಯವರಲ್ಲಿಯೇ ಸಂಸ್ಕೃತವನ್ನು ಓದಿ ಅವರ ಅಂತಿಮ ಆದೇಶದಂತೆ ಭಾಗವತ ಪುರಾಣವನ್ನು ಹೇಳಲು ಪ್ರಾರಂಭಿಸಿದರು.

ಅಖಂಡ ೫೦ ವರುಷಗಳ ವರೆಗೆ ಅವರು ಶ್ರೀಮದ್ ಭಾಗವತ ಪುರಾಣವನ್ನು ಭಕ್ತಿಯಿಂದ ಹೇಳಿದರು. ಅದರಂತೆ ಆಚರಣೆಯನ್ನೂ ಮಾಡಿದರು.

ಗದುಗಿನ ವೀರ ನಾರಾಯಣನ ದೇವಸ್ಥಾನದಲ್ಲಿ ಅವರು ಭಾಗವತ ಸಪ್ತಾಹ ಮಾಡುವಾಗ ಬೆಳಗಿನ ೬ ಗಂಟೆಯಿಂದ ಸಂಜೆಯ ೬ ಗಂಟೆಯ ವರೆಗೆ ಏಕಾಸನದಲ್ಲಿ ಕುಳಿತು ಭಾಗವತ ಅನುವಾದ ಮಾಡುತ್ತಿದ್ದರು. ಅನಂತರ ಕೇಳಲಿಕ್ಕೆ ಬಂದ ಜನರಿಗೆಲ್ಲ ಆಚಾರ್ಯರ ಮನೆಯಲ್ಲಿಯೇ ಊಟವಾಗುತ್ತಿತ್ತು. ಮಂಗಳದ ದಿನ ಕ್ಷೇತ್ರ ಭೋಜನವಾಗುತ್ತಿತ್ತು.

ಅವರು ಕಾಶೀ ಯಾತ್ರೆ ಮಾಡಿಕೊಂಡು ಬಂದು ಶ್ರೀ ವೀರನಾರಾಯಣ ದೇವರಿಗೆ ಗೋಕುಲಾಷ್ಟಮಿಯ ದಿನ ಗಂಗಾ ಜಲದಿಂದ ಅಭಿಷೇಕ ಮಾಡಿದರು. ಗದುಗಿನ ವೀರ ನಾರಾಯಣ ದೇವಸ್ಥಾನದಲ್ಲಿ ಇರುವ ಶ್ರೀ ಮಂತ್ರಾಲಯ ಸ್ವಾಮಿಗಳವರ ವೃಂದಾವನದ ಶ್ರಾವಣಮಾಸ ಆರಾಧನೆಯಲ್ಲಿ ರಥೋತ್ಸವ ಮತ್ತು ಅನ್ನ ಸಂತರ್ಪಣೆಯನ್ನು ಶ್ರೀ ನಾರಾಯಣಾಚಾರ್ಯರೇ ಪ್ರಾರಂಭಿಸಿದರು. ಇದು ಈಗಲೂ ನಡೆಯುತ್ತಲಿದೆ. ತಮ್ಮ ಮನೆಯಲ್ಲಿ ಪ್ರತಿ ನಿತ್ಯವೂ ಬಂದ ವಿದ್ಯಾರ್ಥಿಗಳಿಗೆಲ್ಲ ಪುಕ್ಕಟೆಯಾಗಿ ಸಂಸ್ಕೃತ ಪಾಠ ಹೇಳುತ್ತಿದ್ದರು.

# ೧೮೮ ಮಾರ್ಕರ್ಪುರಂ ವೆಂಕಟರಾಯಾಚಾರ್ಯ

ಮಿರಜಿಯ ಸದ್ವೈಷ್ಣವ ಮನೆತನದ ವೆಂಕಟರಾಯಾಚಾರ್ಯರೆಂಬವರು ಅಸಾಧಾರಣವಾದ ಪಾಂಡಿತ್ಯವನ್ನು ಪಡೆದು ಬರಲು ಕಾಶಿಗೆ ಹೋಗಿದ್ದರು. ಅಲ್ಲಿ ವಿಠಲೋಪಾಧ್ಯಾಯರಲ್ಲಿ ತರ್ಕ ಶಾಸ್ತ್ರ ಓದಿ ಮಹಾ ಪಂಡಿತರಾದರು.

ಕಾಶಿಯಲ್ಲಿ ಆಚಾರ್ಯರು ಇದ್ದಾಗ ಮೈಥಿಲೀ ಪಂಡಿತರು ಹಾಗೂ ನವ ದ್ವೀಪದ ನೈಯಾಯಿಕರೊಡನೆ ಸಂಪರ್ಕ ಬೆಳಿಸಿ ನವ್ಯ ನ್ಯಾಯದ ಭಿನ್ನ-ಭಿನ್ನ ವಿವೇಚನಾ ವೈಖರಿಗಳನ್ನೂ ಪರಿಷ್ಕಾರದ ಪ್ರಣಾಲಿಕೆಗಳನ್ನೂ ಅರಿತು ಅಪ್ರತಿಮ ಪಂಡಿತರೆಂದು ಪ್ರಖ್ಯಾತರೆನಿಸಿದರು.

ಒಮ್ಮೆ ಉಡುಪಿಯ ಸರ್ವಜ್ಞ ಕಲ್ಪರಾದ ಶ್ರೀ ವಾದಿರಾಜ ಶ್ರೀಪಾದಂಗಳವರು ಕಾಶಿಗೆ ದಿಗ್ವಿಜಯ ಮಾಡಿಸಿದ್ದರು. ಅದ್ವೈತ ಮತದ ಕೇಂದ್ರ ಸ್ಥಳವಾದ ಕಾಶಿಯಲ್ಲಿ ಶ್ರೀಗಳವರು ಒಂದು ದೊಡ್ಡ ವಿದ್ವತ್ ಸಭೆಯನ್ನು ಕರೆದಿದ್ದರು. ಈ ಸಭೆಗೆ ದ್ವೈತಾದ್ವೈತ, ವಿಶಿಷ್ಟಾದ್ವೈತ ಮತದ ಮಹಾ ಮಹಾ ಪಂಡಿತರೆಲ್ಲರೂ ಆಗಮಿಸಿದ್ದರು.

ವಾಕ್ಯಾರ್ಥದಲ್ಲಿ ರಾಜರ ದೈವೀ ಪ್ರತಿಭೆಯ ಎದುರು ಎಲ್ಲ ಎದುರಾಳಿಗಳು ಶರಣಾಗತರಾಗಿ ಜಯಪತ್ರಗಳನ್ನು ಕೊಟ್ಟರು.

ವಾಕ್ಯಾರ್ಥ ನಡೆದ ಎಲ್ಲ ದಿನಗಳಲ್ಲಿಯೂ, ಎಲ್ಲ ಶಾಸ್ತ್ರಗಳಲ್ಲಿಯೂ ತಮ್ಮ ಸರ್ವಂಕಷವಾದ ಬುದ್ಧಿಯಿಂದ ವಿದ್ವತ್‌ವೃಂದವೆಲ್ಲ ತಲೆದೂಗುವಂತೆ ವಾಕ್ಯಾರ್ಥ ಮಾಡಿದ ಪಂಡಿತ ಪ್ರಕಾಂಡರೆಂದರೆ ಶ್ರೀ ವೆಂಕಟರಾಯಾಚಾರ್ಯರೊಬ್ಬರೇ.

ಶ್ರೀ ವೆಂಕಟರಾಯಾಚಾರ್ಯರಂಥ ಪಂಡಿತವರೇಣ್ಯರು ಶ್ರೀ ಶ್ರೀಗಳವರ ಪಾಂಡಿತ್ಯ, ದೈವೀ ಪ್ರತಿಭೆಗೆ ಮಾರುಹೋಗಿ ಅವರ ಚರಣಕ್ಕೆ ಶರಣರಾದರು.

ಶ್ರೀ ವಾದಿರಾಜ ಶ್ರೀಪಾದಂಗಳವರು ವೆಂಕಟರಾಯಾಚಾರ್ಯರ ಮಹಾ ಪಾಂಡಿತ್ಯಕ್ಕೆ ಸುಪ್ರೀತರಾಗಿದ್ದರು.

ಶ್ರೀ ವೆಂಕಟರಾಯಾಚಾರ್ಯರ ಪ್ರಾರ್ಥನೆಯಂತೆ ಶ್ರೀ ರಾಜರು ಅವರನ್ನು ತಮ್ಮಲ್ಲಿಟ್ಟುಕೊಂಡು ಸರ್ವಜ್ಞ ಶಾಸ್ತ್ರದ ಮಹಾ ಮಹಾ ರಹಸ್ಯಗಳನ್ನು ಹೇಳಿ, ಉಪದೇಶ ಮಾಡಿ ಆಚಾರ್ಯರನ್ನು ಸರ್ವಶಾಸ್ತ್ರನದೀಷ್ಣರನ್ನಾಗಿ ಮಾಡಿದರು.

ಶ್ರೀ ವಾದಿರಾಜ ಶ್ರೀ ಚರಣರು ಅವರನ್ನು ತಮ್ಮ ಸಂಗಡ ದಕ್ಷಿಣ ದೇಶಕ್ಕೆ ಕರೆದುಕೊಂಡು ಬಂದು, ಅವರ ಗುರು ಭಕ್ತಿ, ವೈಷ್ಣವ ದೀಕ್ಷೆಗೆ ಮೆಚ್ಚಿ ತಮ್ಮ ಕರಾರ್ಚಿತ ವಾದ ಶ್ರೀ ಹಯಗ್ರೀವ ಶಾಲಿಗ್ರಾಮವನ್ನೂ ಒಂದು ಮುಖ್ಯ ಪ್ರಾಣದೇವರ ಪ್ರತಿಮೆ ಯನ್ನೂ ಕೊಟ್ಟು ಅನುಗ್ರಹಿಸಿ— "ಒಂಬತ್ತು ತಲೆಗಳ ವರೆಗೆ ನಿಮ್ಮ ಮನೆಯಲ್ಲಿ ವಿದ್ವಾಂಸರೇ ಜನಿಸುವರೆಂದು" ಆಶೀರ್ವಾದ ಮಾಡಿದರು.

ಶ್ರೀ ವೆಂಕಟರಾಯಾಚಾರ್ಯರು ಉತ್ತರಾದಿ ಮಠದ ಶಿಷ್ಯರಾದ್ದರಿಂದ ಉತ್ತ ರಾದಿ ಮಠಕ್ಕೆ ಬಂದು ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾದರು.

ಉತ್ತರಾದಿಮಠದ ಆಗಿನ ಶ್ರೀಗಳವರು ಇವರ ಪಾಂಡಿತ್ಯ, ಪ್ರತಿಭೆಗಳಿಗೆ ಸಂತುಷ್ಟರಾಗಿ ಇವರಿಗೆ ಕರದೀಪ, ಬೆನ್ನುಮಣೆ, ಪಾಲಕಿ ಮುಂತಾದ ಗೌರವಗಳ ನ್ನಿತ್ತು ಅನುಗ್ರಹಿಸಿದರು.

ಮುಂದೆ ವೆಂಕಟರಾಯಾಚಾರ್ಯರು ಆಂಧ್ರದೇಶದ ಮಾರ್ಕಾಪುರಂ ಎಂಬಲ್ಲಿಗೆ ಹೋಗಿ ನೆಲಿಸಿದರು.

ಶ್ರೀ ವಾದಿರಾಜರ ಮಾತು ಸುಳ್ಳಾಗದೇ ಇವರ ವಂಶದಲ್ಲಿ ಒಂಬತ್ತು ತಲೆ ಮಾರುಗಳಿಂದ ಪಂಡಿತ ಪುಂಡರೀಕರು ಉದಯಿಸುತ್ತ ಬಂದಿದ್ದಾರೆ.

ಇದೇ ವಂಶಜರಾದ ಗುಂಟೂರ ಪದ್ಮನಾಭಾಚಾರ್ಯ, ಶ್ರೀನಿವಾಸಾಚಾರ್ಯರ ಮನೆಯಲ್ಲಿ ಈಗಲೂ ಶ್ರೀ ವಾದಿರಾಜ ಗುರು ಸಾರ್ವಭೌಮರು ಕರುಣಿಸಿ ಕೊಟ್ಟ ಶಾಲಿಗ್ರಾಮ ಮತ್ತು ಪ್ರಾಣದೇವರನ್ನು ನೋಡಬಹುದು.

## ೧೮೪ ವರಖೇಡಿ ತಿಮ್ಮಣ್ಣಾಚಾರ್ಯ

ಉತ್ತರಾದಿ ಮಠದ ಶ್ರೀ ಸತ್ಯವಿಜಯ ತೀರ್ಥ ಸ್ವಾಮಿಗಳವರ ಶಿಷ್ಯರಾದ ತಿಮ್ಮಣ್ಣಾಚಾರ್ಯರು ತಂಜಾವೂರಿನ ಸಮೀಪದ ರಾಜಮನ್ನಾರಗುಡಿ ಎಂಬ ಊರ ವರು ಎಂದು ತಿಳಿದುಬರುತ್ತದೆ.

ಇವರು ವೇದಾಂತದಲ್ಲಿ ಮಹಾ ಪಂಡಿತರಾಗಿದ್ದರು. ಮೀಮಾಂಸಾ ಶಾಸ್ತ್ರದಲ್ಲಿ ಅಸಾಧಾರಣವಾದ ವೈದುಷ್ಯವು ಇವರಿಗೆ ಕರತಲಾಮಲಕವಾಗಿದ್ದಿತು. ನ್ಯಾಯ ಶಾಸ್ತ್ರದಲ್ಲಿ ಇವರಿಗೆ ಅನನ್ಯ ಸಾಮಾನ್ಯವಾದ ಪ್ರಭುತ್ವವಿದ್ದಿತು. ವ್ಯಾಕರಣದಲ್ಲಿ ಯಂತೂ ಇವರು ಸಿದ್ಧಹಸ್ತರು. ಧರ್ಮ ಶಾಸ್ತ್ರವಲ್ಲಿಯಂತೂ ಇವರಿಗೆ ಲೋಕೋ ತ್ತರ ಪಾಂಡಿತ್ಯವಿದ್ದಿತು.

ವರಖೇಡಿ ತಿಮ್ಮಣ್ಣಾಚಾರ್ಯರಿಗೆ ತಮ್ಮ ಗುರುಗಳಾದ ಶ್ರೀ ಸತ್ಯ ವಿಜಯ ತೀರ್ಥ ಶ್ರೀಪಾದಂಗಳವರಲ್ಲಿ ಅನ್ಯಾದೃಶವಾದ ಭಕ್ತಿ ಶ್ರದ್ಧೆಗಳಿದ್ದವು. ಪಾಂಡುರಂಗಿ ಮನೆತನದ ಪಂಡಿತ ಪ್ರಕಾಂಡ ಪೀಠಾಧಿಪತಿಗಳಾದ ಶ್ರೀ ಸತ್ಯವಿಜಯತೀರ್ಥ ಶ್ರೀ ಪಾದಂಗಳವರಲ್ಲಿಯೇ ತಿಮ್ಮಣ್ಣಾಚಾರ್ಯರು ಷಟ್‌ಶಾಸ್ತ್ರಗಳನ್ನೆಲ್ಲ ಓದಿ ಪಾಂಡಿತ್ಯದ ಪ್ರತೀಕರಾಗಿದ್ದರು. ಆದುದರಿಂದಲೇ ಅವರು ತಮ್ಮ ಪ್ರತಿ ಗ್ರಂಥದ ಪ್ರಾರಂಭದಲ್ಲಿ " ಶ್ರೀ ಸತ್ಯ ವಿಜಯ ತೀರ್ಥ ಶ್ರೀಮಚ್ಚರಣಾನಾಂ ನಿಜ ಶಿಷ್ಯೇನ " ಎಂದು ಮುಂತಾಗಿ ಬರೆದು ಹೆಜ್ಜೆ ಹೆಜ್ಜೆಗೂ ತಮ್ಮ ಎಲ್ಲ ಗ್ರಂಥಗಳಲ್ಲಿ "ಸತ್ಯಜೈತ್ರಂ ಜಗದ್ಗುರುಂ" ಎಂದು ಬಣ್ಣನೆಯನ್ನು ಮಾಡುತ್ತಾರೆ.

ಗುರುಗಳಾದ ಶ್ರೀಗಳವರಿಗೆ ಅತ್ಯದ್ಭುತವಾದ ತಮಗಿಂತ ಬಹಳವಾದ ಪಾಂಡಿತ್ಯವಿತ್ತೆಂಬುದನ್ನು ತಮ್ಮ ಗ್ರಂಥಗಳಲ್ಲಿ ಅವರು

> "ನವೀನ ಶೈಲೀ ವಿನ್ಯಾಸೇನ ಚ ಈದೃಶ ಸಿದ್ಧಾಂತ ವ್ಯವಸ್ಥಾಪನಾದೌ ಪಾಂಡಿತ್ಯ ಮಸ್ಮದ್ ಗುರೂಣಮೇವ। ಮಮತು ತದುನಗ್ರಹೇಣ ನೈವ ಕಿಂಚಿದಪಿ ತತ್

ಎಂದು ಹೇಳಿದ್ದಾರೆ.

ಶ್ರೀ ವರಖೇಡಿ ಆಚಾರ್ಯರಿಗೆ ಪಾಠ ಪ್ರವಚನ ಪಾಂಡಿತ್ಯವಿದ್ದಂತೆ ಪ್ರೌಢ ಶಾಸ್ತ್ರೀಯ ಗ್ರಂಥ ರಚನೆಯಲ್ಲಿಯೂ ಸರ್ವ ಶ್ಲಾಘ್ಯವಾದ ಮಹಾ ವೈಚಕ್ಷಣ್ಯವಿದ್ದಿತು.

ತಂಜಾವೂರಿನ ಸಂಸ್ಕೃತ ಪ್ರಾಚೀನ ಗ್ರಂಥಾಲಯದ ಸೂಚೀ ಪತ್ರದಿಂದ ಅವರು ಬರೆದ ಅನೇಕ ಗ್ರಂಥಗಳು ಬೆಳಕಿಗೆ ಬಂದಿವೆ.

ಶ್ರೀ ವರಖೇಡಿ ತಿಮ್ಮಣ್ಣಾಚಾರ್ಯರ ಗ್ರಂಥಗಳು :

೧) ತಾತ್ಪರ್ಯ ಚಂದ್ರಿಕಾ ನ್ಯಾಯ ವಿವರಣಂ
೨) ವಿಷ್ಣು ತತ್ವ ದೀಪಿಕಾ
೩) ಗಜ ಪಂಚಾನನ
೪) ಸುಧಾನಾದರಣೀಯ ಖಂಡನಂ
೫) ಏಕಾದಶೀ ನಿರ್ಣಯಃ
೬) ತಿಥಿ ನಿರ್ಣಯಃ
೭) ಅಣ್ವಾಕ್ಷೇಪ ಸಾರಃ
೮) ಕಾಣ್ವ ಮೀಮಾಂಸಾ
೯) ಜಯಂತೀ ನಿರ್ಣಯ ಟೀಕಾ
೧೦) ಶಿಷ್ಟಾಚಾರ ಮೀಮಾಂಸಾ
೧೧) ಸಾಧನ ದ್ವಾದಶೀ ಮೀಮಾಂಸಾ
೧೨) ಬೃಹದಾಕ್ಷೇಪ ಸಾರ
೧೩) ಸನ್ಯಾಸ ಮೀಮಾಂಸಾ

ಮುಂತಾಗಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

# ಕೊಯಿಮುತ್ತೂರಿನ ಪಂಡಿತರು

ದಕ್ಷಿಣ ದೇಶದ ಕೊಯಿಮುತ್ತೂರಿನಲ್ಲಿ ಅನೇಕ ಜನ ತಪಸ್ವಿಗಳೂ, ಮಾಧ್ವ ಪಂಡಿತರೂ, ಪ್ರವಚನಾಚಾರ್ಯರೂ, ಗ್ರಂಥಕಾರರೂ ಬಾಳಿಬೆಳಗಿ ವೇದಾಂತ ಪ್ರಪಂಚಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅಲ್ಲಿಯ ಎಲ್ಲ ಪ್ರಾಚೀನ ಪಂಡಿತರ ವೃತ್ತ ಪರಿಚಯಗಳು ನಮಗೆ ದೊರಕಲಿಲ್ಲ. ಕೆಲವು ನಮಗೆ ವಿದಿತವಾದ ವಿಶಿಷ್ಟ ವಿದ್ವಾಂಸರ ಸಂಕ್ಷಿಪ್ತ ಪರಿಚಯವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

## ೧೯೦ ಶ್ರೀಮಧ್ವನಾಥ ಶ್ರೀಪಾದಂಗಳವರು

### ( ಶ್ರೀ ಮಧ್ವರಾಯಾಚಾರ್ಯರು )



ತಾಮ್ರಪರ್ಣಿ ಮನೆತನದ ಇವರು ಪೂರ್ವಾಶ್ರಮದಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳಲ್ಲಿ ಘನಪಂಡಿತರಾಗಿದ್ದರು. ಇವರು "ನ್ಯಾಯಾಮೃತ ಕಲಾಧರ" ಎಂಬ ಗ್ರಂಥವನ್ನು ಬರೆದು, ಅದ್ವೈತ ಮತದ "ಬ್ರಹ್ಮಾನಂದೀ" ಎಂಬ ಪ್ರಚಂಡ ಗ್ರಂಥವನ್ನು ಖಂಡಿಸಿದ್ದಾರೆ. ಬ್ರಹ್ಮಾನಂದೀ ಗ್ರಂಥದ ಶೈಲಿ ಬಹಳ ಒರಟು. ನಾರಿಕೇಲ

ಪಾಕ. ಸಾಮಾನ್ಯರಿಗೆ ಅರ್ಥವಾಗುವದೇ ಕಷ್ಟ. ಅಂಥ ಗ್ರಂಥದ ಹುಳುಕು–ಹುಸಿ–ಟೊಳ್ಳು–ತಪ್ಪುಗಳನ್ನೆಲ್ಲ ಹುಡುಕಿ, ಬಯಲಿಗೆಳೆದು ಅದರ ಮೇಲೆ ತಮ್ಮ ಮಿಂಚಿನ ಬುದ್ಧಿಯಿಂದ ಕತ್ತರಿಯಾಡಿಸಬೇಕಾದರೆ ಶ್ರೀ ಮಧ್ವನಾಥ ಶ್ರೀಗಳವರು ಎಂಥ ಘನ ಪಂಡಿತರಿದ್ದರೆಂಬುವದನ್ನು ವಾಚಕರೇ ಊಹಿಸಬೇಕು.

ಇವರ ಪೂರ್ವಾಶ್ರಮದ ಪುತ್ರರೇ ಶ್ರೀ ಸಿ. ಎಂ. ಪದ್ಮನಾಭಾಚಾರ್ಯರು.

## ೧೯೧ C. M. ಪದ್ಮನಾಭಾಚಾರ್ಯ

ಶಾಸ್ತ್ರಸಿಂಹ ಎಂದು ಹೆಸರಾದ ಇವರು ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಓದಿ ಮಹಾ ಪಂಡಿತರೆನಿಸಿದರು.

ಇವರು ಇಂಗ್ಲೀಷಿನಲ್ಲಿಯೂ B A., L. L. B. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ವಕೀಲಿ ವ್ಯವಸಾಯವನ್ನು ಮಾಡಿದರು. ಕೆಲವು ದಿನ ಕೊಯಿಮುತ್ತೂರಿನಲ್ಲಿಯೇ ಪ್ರಾಕ್ಟೀಸ ಮಾಡಿ, ಅನಂತರ ಇವರು ಮದ್ರಾಸಿಗೆ ಬಂದು, ಮದ್ರಾಸ ಹೈಕೋರ್ಟಿನಲ್ಲಿ ವಕೀಲಿಯನ್ನು ಮಾಡಿದರು. ಇವರು ಮಹಾ ಪ್ರತಿಭಾಶಾಲಿಗಳಾದುದರಿಂದ ಮದ್ರಾಸ ಹೈಕೋರ್ಟಿನಲ್ಲಿ ನಾಮಾಂಕಿತ ವಕೀಲರಾಗಿ, ವಿಪುಲವಾಗಿ ಹಣ ಸಂಪಾದಿಸಿದರು. ಇವರು ಇಂಗ್ಲೀಷಿನಲ್ಲಿ ಅನೇಕ ಕಾಯಿದೆ ಗ್ರಂಥಗಳನ್ನು ಬರೆದಿದ್ದಾರೆ.

ಪಿತೃ ಪರಂಪರಾ ಪ್ರಾಪ್ತವಾದ ಶಾಸ್ತ್ರ ಪಾಂಡಿತ್ಯವೂ, ಗ್ರಂಥ ಪ್ರಣಯನ ಪ್ರಾವೀಣ್ಯವೂ ಇವರಲ್ಲಿ ಅನನ್ಯ ಸಾಮಾನ್ಯವಾಗಿದ್ದವು. ಇವರು ಭಗವದ್ ಗೀತೆಯ ಮೇಲೆ ಸಂಸ್ಕೃತ ಮತ್ತು ಇಂಗ್ಲೀಷ ಎರಡೂ ಭಾಷೆಗಳಲ್ಲಿ ಬರೆದ ಗೀತಾಭಾವ ಚಂದ್ರಿಕಾ ಎಂಬ ಗ್ರಂಥವು ಸರ್ವ ವಿದ್ವನ್ಮಾನ್ಯವಾಗಿದೆ.

ಶ್ರೀ ಪದ್ಮನಾಭಾಚಾರ್ಯರ ತಂದೆಗಳಾದ ಶ್ರೀ ಮಧ್ವನಾಥರು ಬರೆದ ನ್ಯಾಯಾಮೃತ ಕಲಾಧರ ಎಂಬ ಗ್ರಂಥವು ವೇದಾಂತ ಕ್ಷೇತ್ರದಲ್ಲಿ ಕ್ರೋಢ ಪತ್ರ ಪದ್ಧತಿಯಿಂದ ಶೃಂಖಲಾಬದ್ಧವಾಗಿ ವಿಚಾರ ವೀಜಿಗಳನ್ನು ವೈಖರಿಸಿ ಹೊಸ ಪದ್ಧತಿಯನ್ನೇ ಪ್ರಾರಂಭಿಸಿದೆ.

ಪದ್ಮನಾಭಾಚಾರ್ಯರಿಗೆ ನ್ಯಾಯ ವೇದಾಂತಗಳಲ್ಲಿ ಇದ್ದಂತೆ ನಾಟಕಾಂತ ಸಾಹಿತ್ಯಗಳಲ್ಲಿಯೂ ಸಂಪೂರ್ಣ ಪ್ರಭುತ್ವ ಇದ್ದಿತು. ಕಾವ್ಯ, ನಾಟಕ, ಗದ್ಯ, ಪದ್ಯ, ಲೇಖ ವಿಲೇಖನ ಕೌಶಲ್ಯವು ಅವರಿಗೆ ಬಾಲ್ಯದಿಂದಲೇ ಕರಗತವಾಗಿದ್ದಿತು. ಅವರು ಬರೆದ ಧ್ರುವ ಚರಿತ್ರೆ ಎಂಬ ಸಂಸ್ಕೃತ ನಾಟಕವು ವಿದ್ವದ್ರಂಜಕವೂ, ರಸೋತ್ಕಟವೂ, ಸನ್ನಿವೇಶ ಸುಂದರವೂ ಆಗಿದೆ. ಅವರು ಕನ್ನಡದಲ್ಲಿ ಮಧ್ವಾಚಾರ್ಯರ ಚರಿತ್ರೆ ಎಂಬ ಗ್ರಂಥವನ್ನೂ ಇಂಗ್ಲೀಷಿನಲ್ಲಿ 'ಲೈಫ್ ಆ್ಯಂಡ ಟೀಚಿಂಗ್ಸ ಆಫ್ ಮಧ್ವ' ಎಂಬ ಪ್ರೌಢ ಗ್ರಂಥವನ್ನೂ ಬರೆದು ಸುಪ್ರಸಿದ್ಧರಾಗಿದ್ದಾರೆ.

## ೧೯೨ ಸಿ. ಆರ್. ಕೃಷ್ಣರಾವ್



ಕೋಯಿಮತ್ತೂರಿನ ಸಿ. ಆರ್. ಕೃಷ್ಣರಾಯರು ಉಡುಪಿಯ ಮಧ್ವ ಮುನಿ ಸೇವಾ ಸಂಘದ ಮುಖಾಂತರ ವೈಷ್ಣವರಿಗೆಲ್ಲ ಚಿರಪರಿಚಿತರಾಗಿದ್ದಾರೆ. ಇವರು ಮಂಗಳೂರಿನಲ್ಲಿ ಮುನಸೀಫ್‌ರಿದ್ದಾಗ ಉಡುಪಿಯ ಅಷ್ಟ ಮಠಾಧೀಶರ, ಮತ್ತು ಉಳಿದ ಸ್ವಾಮಿಗಳ ಹಾಗೂ ಗೃಹಸ್ಥರ ಸಹಾಯದಿಂದ "ಮಧ್ವಮುನಿ ಸೇವಾ ಸಂಘ" ಎಂಬ ಸಂಸ್ಥೆಯನ್ನು ಪ್ರಾರಂಭಿಸಿ ಆದರ ಮುಖಾಂತರ ಶ್ರೀಮನ್ ಮಧ್ವಾಚಾರ್ಯರ ೩೭ ಗ್ರಂಥಗಳು ಕನ್ನಡದಲ್ಲಿ ಭಾಷಾಂತರವಾಗುವಂತೆ ಮಾಡಿದ್ದಾರೆ. ಈ ಗ್ರಂಥಗಳಲ್ಲಿ ಕೆಲವಕ್ಕೆ ಸಿ. ಆರ್. ಕೃಷ್ಣರಾಯರು ಸ್ವಂತ ಬರೆದ ಮುನ್ನುಡಿ ಹಾಗೂ ಗ್ರಂಥ ಸಾರಾಂಶವನ್ನು ಮಧ್ವಶಾಸ್ತ್ರದ ಪರಿಚಾಯಕ ಪ್ರಬಂಧಗಳನ್ನೂ ಓದಿದವರೆ ಸರ್ವಜ್ಞ ಶಾಸ್ತ್ರದಲ್ಲಿ ಅವರಿಗೆ ಎಂಥ ನಿಷ್ಕಲ್ಮಷವಾದ ಪರಿಶುದ್ಧ ಜ್ಞಾನವು ಇದ್ದಿತು ಎಂಬುದು ಸ್ಪಷ್ಟವಾಗುತ್ತದೆ. ಕೃಷ್ಣರಾಯರು ಎಲ್ಲಿದ್ದರೂ ಪ್ರತಿ ನಿತ್ಯವೂ ನಾಲ್ಕಾರು ಗಂಟೆ ಹೊತ್ತು ಸರ್ವಜ್ಞಾಚಾರ್ಯರ ಗ್ರಂಥಗಳನ್ನು ಅಭ್ಯಾಸಪೂರ್ಣವಾಗಿ ಓದುತ್ತಿದ್ದರು.

ಕೃಷ್ಣರಾಯರ ದ್ವೈತ ದೀಕ್ಷೆಯು ಅಸಾಧಾರಣವಾಗಿದ್ದಿತು. ಒಮ್ಮೆ ಕಂಚೀ ಕಾಮಕೋಟಿ ಸ್ವಾಮಿಗಳು ರೇಡಿಯೋದಲ್ಲಿ ಭಾಷಣ ಮಾಡಿ " ಇಂದಿನ ವಿಜ್ಞಾನದ ಒರೆಗಲ್ಲಿಗೆ ಪೂರ್ಣವಾಗಿ ಇಳಿದು ಪ್ರಮಾಣಸಿದ್ಧವಾದ ಜಗತ್ತಿನ ಏಕೈಕ ಮತವೆಂದರೆ ಅದ್ವೈತ ಮತ " ಎಂದು ಪ್ರತಿಪಾದಿಸಿದ್ದರು.

ಅದನ್ನು ಕೇಳಿ ಕೃಷ್ಣರಾಯರು ಕೂಡಲೇ ಸಿಡಿದೆದ್ದು ವೃತ್ತಪತ್ರಿಕೆಗಳ ಮುಖಾಂತರ ಶಂಕರಾಚಾರ್ಯರ ರೇಡಿಯೋ ಭಾಷಣವನ್ನು ಆಹ್ವಾನಿಸಿದರು. ಅವರು ಹೇಳಿದ ವಿಧಾನಗಳನ್ನೆಲ್ಲ ಖಂಡಿಸಿ "ಅದ್ವೈತ ಮತವು ವಿಜ್ಞಾನ, ತತ್ವಜ್ಞಾನ ಎರಡಕ್ಕೂ ವಿಸಂಗತವಾಗಿದೆ ಎಂಬುವನ್ನು ಸಿದ್ಧಮಾಡಿ ತೋರಿಸಿ ಮಧ್ವ ಮತವೇ ನಿಜವಾದ ವೈದಿಕ ವೈಜ್ಞಾನಿಕ ಮತ ಎಂದು ಸಾಧಿಸಿದರು. ಜಗತ್ತಿನಲ್ಲಿಯ ಎಲ್ಲ

ದೊಡ್ಡ ದೊಡ್ಡ ವಿಜ್ಞಾನಿಗಳ, ನೋಬೆಲ್ ಪಾರಿತೋಷಿಕ ಪಡೆದ ಅನೇಕ ಪಾಶ್ಚಾತ್ಯ ಭೌತ ಶಾಸ್ತ್ರ ಪಂಡಿತರ ವಚನಗಳನ್ನೂ ವಿಧಾನಗಳನ್ನೂ ಉದಾಹರಿಸಿ ಮಧ್ವ ಶಾಸ್ತ್ರವು ಮಾತ್ರ ಎಲ್ಲ ವೈಜ್ಞಾನಿಕ, ವೈಚಾರಿಕ, ತಾತ್ವಿಕ ಒರೆಗಲ್ಲಿಗೆ ನಿಲ್ಲಬಲ್ಲ ಏಕಮಾತ್ರ ಸನ್ಮತವಾಗಿದೆ ಎಂದು ಸಿದ್ಧಮಾಡಿ ತೋರಿಸಿದರು.

ಶ್ರೀಕೃಷ್ಣರಾಯರು "ಮಧ್ವಾಚಾರ್ಯರ ಬ್ರಹ್ಮತರ್ಕ"ಎಂಬ ವಿವೇಚನಾ ಪ್ರಚುರವಾದ ಗ್ರಂಥವೊಂದನ್ನು ಬರೆದು ಮಧ್ವಾಚಾರ್ಯರನ್ನು ಟೀಕಿಸುವವರ ಮುಖಬಂಧನ ಮಾಡಿದ್ದಾರೆ.

ಜಿಲ್ಹಾ ನ್ಯಾಯಾಧೀಶರಾಗಿ ವಿಶ್ರಾಂತರಾದ ಬಳಿಕ ಮದ್ರಾಸಿನಲ್ಲಿ ನೆಲೆಸಿದ ಕೃಷ್ಣರಾಯರು ಕೊನೆಯ ವರೆಗೂ ಮಾಧ್ವ ವಾಙ್ಮಯದ ಏಳಿಗೆಗೆ ಪ್ರಯತ್ನ ಮಾಡುತ್ತಲೇ ಇದ್ದರು.

## ೧೯೩ ಕೊಯಿಮತ್ತೂರ ಶ್ರೀನಿವಾಸಾಚಾರ್ಯ

ಶ್ರೀನಿವಾಸಾಚಾರ್ಯರಿಗೆ ಅವರ ದಿವ್ಯಜ್ಞಾನದ ಅಭಿವೃದ್ಧಿಯನ್ನು ಕಂಡು, ಅವರನ್ನು ಎಲ್ಲರೂ ವೃದ್ಧಾಚಾರ್ಯ ಎಂದು ಕರೆಯುತ್ತಿದ್ದರು. ಮಹಾ ಪಂಡಿತೋತ್ತಮರಾದ ವೃದ್ಧಾಚಾರ್ಯರು ಭಾಷ್ಯದೀಪಿಕಾ ಗ್ರಂಥವನ್ನು ಬರೆದ ಶ್ರೀ ವ್ಯಾಸರಾಜ ಮಠದ ಶ್ರೀ ಜಗನ್ನಾಥತೀರ್ಥ ಸ್ವಾಮಿಗಳವರ ಸಮಕಾಲೀನರು. ಶ್ರೀ ಶ್ರೀಗಳವರು ವೃದ್ಧಾಚಾರ್ಯರ ಜ್ಞಾನವೃದ್ಧಿ, ದಿವ್ಯ ಬುದ್ಧಿ, ಪಾಂಡಿತ್ಯ ಸಿದ್ಧಿ, ಪ್ರವಚನ ಪಟುತ್ವ ಮುಂತಾದ ಸದ್ಗುಣಗಳನ್ನು ಕಂಡು ಅವರಿಗೆ ವಿಶಿಷ್ಟ ಮಾನ-ಮರ್ಯಾದೆಗಳನ್ನೂ ಪದವಿ-ಪ್ರಶಸ್ತಿಗಳನ್ನೂ ಇತ್ತು ಅನುಗ್ರಹಿಸಿದರು.

## ೧೯೪ ಕೊಟ್ಟಿ ರಂಗಪ್ಪಾಚಾರ್ಯ



ಕೊಯಿಮುತ್ತೂರಿನ ವೃದ್ಧಾಚಾರ್ಯರ ಮನೆತನದಲ್ಲಿಯೇ ರಂಗಪ್ಪಾಚಾರ್ಯರು ಜನಿಸಿ ತಮ್ಮ ಮನೆತನದ ವಿದ್ವತ್ ಪರಂಪರೆಯನ್ನು ಎತ್ತಿ ಹಿಡಿದರು.

ಇವರು ಬಾಲ್ಯದಲ್ಲಿಯೇ ಮನೆ ಬಿಟ್ಟು ಮೈಸೂರಿಗೆ ಹೋಗಿ, ಶತಕೋಟಿ ರಾಮಶಾಸ್ತ್ರಿಗಳಲ್ಲಿ ೧೨ ವರ್ಷ ನ್ಯಾಯ ಶಾಸ್ತ್ರವನ್ನು ಅಧ್ಯಯನಮಾಡಿ ಘನ ಪಂಡಿತರಾದರು. ಅನಂತರ ಅವರು ಉಡುಪಿಗೆ ಹೋಗಿ ಸೋದೆ ಮಠದ ವೃಂದಾವನಾಚಾರ್ಯರಲ್ಲಿ ಸುಧಾಂತ ವೇದಾಂತವನ್ನು ಓದಿದರು.

ಇವರು ೨೦ ವರ್ಷದವರಿದ್ದಾಗ—ಕೋಚೀನ ಸಂಸ್ಥಾನದ ತಿರುಪ್ಪನಿಟ್ಟೂರಿನ ಆಸ್ಥಾನದಲ್ಲಿ ಪಂಡಿತ ಸಭೆಯಲ್ಲಿ ನೆರೆದ ವಿದ್ವಾಂಸರನ್ನೆಲ್ಲ ತಮ್ಮ ಹರಿತ ಬುದ್ಧಿ, ಮಿಂಚಿನ ಪ್ರತಿಭೆ ಮತ್ತು ವಾದ ಕೌಶಲ್ಯದಿಂದ ಚಕಿತ ಗೊಳಿಸಿದರು.

ಇವರ ಅಪ್ರತಿಮ ಪ್ರತಿಭಾ ಪಾಂಡಿತ್ಯ ಮತ್ತು ವಾಕ್ಯಾರ್ಥ ವಿಕ್ರಮಗಳನ್ನು ಕಂಡು ಮುಗ್ಧರಾದ ಕೋಚೀನದ ಮಹಾರಾಜರು ಆಚಾರ್ಯರಿಗೆ ತಮ್ಮಲ್ಲಿಯೇ ಇರಬೇಕೆಂದು ಪ್ರಾರ್ಥಿಸಿಕೊಂಡರು.

ಅಂದಿನಿಂದ ರಂಗಪ್ಪಾಚಾರ್ಯರು ಕೊಚ್ಚಿ ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿ ಅಲ್ಲಿಯೇ ನೆಲಿಸಿದರು. ಅವರು ಕೋಚೀನದ ದರ್ಬಾರಿನಲ್ಲಿ ರಾಜ ಗುರುಗಳಾಗಿ ಧರ್ಮದರ್ಶಿಗಳಾಗಿ ಇದ್ದು ಅಲ್ಲಿ ಪ್ರತಿವರ್ಷ ನಡೆಯುವ ವಿದ್ವತ್ ಸಭೆಗೆ ದೂರ–ದೂರ ದೇಶಗಳಿಂದ ಬಂದ ಪಂಡಿತರಿಗೆಲ್ಲ ಪ್ರೋತ್ಸಾಹನೆ ನೀಡುತ್ತಿದ್ದರು.

ಮಹಾರಾಷ್ಟ್ರದ ರಘುನಾಥಶಾಸ್ತ್ರಿ ಪರ್ವತೆ ಎಂಬ ಪಂಡಿತನು ಶ್ರೀ ವ್ಯಾಸರಾಜರ ಚಂದ್ರಿಕಾ ಗ್ರಂಥವನ್ನು ಖಂಡಿಸಿ, "ಶಂಕರಪಾದ ಭೂಷಣಂ" ಎಂಬ ಗ್ರಂಥವನ್ನು ಬರೆದಿದ್ದನು. ಇದನ್ನು ತಿಳಿದು ಶ್ರೀ ರಂಗಪ್ಪಾಚಾರ್ಯರು ಉಡುಪಿಗೆ ಹೋಗಿ ತಮ್ಮ ವಿದ್ಯಾ ಗುರುಗಳಾದ ಶ್ರೀ ವೃಂದಾವನಾಚಾರ್ಯರ ಚರಣ ಸನ್ನಿಧಿಯಲ್ಲಿ ಕುಳಿತು, ಶಂಕರಪಾದ ಭೂಷಣದ ಖಂಡನೆ ಮಾಡಿ "ಚಂದ್ರಿಕಾ ಭೂಷಣಂ" ಎಂಬ ಗ್ರಂಥವನ್ನು ಬರೆದರು.

೧೯೦೫ ರಲ್ಲಿ ಈ ಗ್ರಂಥದ ಜಿಜ್ಞಾಸಾಧಿಕರಣವು ಮಾತ್ರ ಮುದ್ರಿತವಾಗಿದೆ. ಅದರ ಪೂರ್ಣ ಪ್ರತಿಯು ಡಾ|| ಬಿ. ಎನ್. ಕೆ. ಶರ್ಮಾರವರಲ್ಲಿ ಇವೆ.

ಇದಲ್ಲದೆ ರಂಗಪ್ಪಾಚಾರ್ಯರು ನ್ಯಾಯಮಾಲಿಕಾ ಎಂಬ ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ಬ್ರಹ್ಮ ಸೂತ್ರದ ಅಧಿಕರಣಾರ್ಥಗಳನ್ನೆಲ್ಲ ಮಧ್ವಭಾಷ್ಯಾನುಸಾರವಾಗಿ ಸ್ರಗ್ಧರಾ ವೃತ್ತದಲ್ಲಿ ಮನಂಬುಗುವ ಸುಂದರ ಶೈಲಿಯಲ್ಲಿ ಛಂದೋಬದ್ಧವಾಗಿ ನಿರೂಪಿಸಲಾಗಿವೆ.

ಇವರು "ವಿಶ್ವಪ್ರಿಯ ವಿಲಾಸ" ಎಂಬ ಏಳು ಸರ್ಗದ ಕಾವ್ಯದಲ್ಲಿ ತಮ್ಮ ಗುರುಗಳಾದ ವೃಂದಾವನಾಚಾರ್ಯರ ಜೀವನ ಚರಿತ್ರವನ್ನು ಭಾವಬಂಧುರ

ವಾಗಿಯೂ ಅರ್ಥಸುಂದರವಾಗಿಯೂ ಚಿತ್ರಿಸಿದ್ದಾರೆ. ಇದರಲ್ಲಿ ಕೋಚೀನ ರಾಜ ಮನೆತನದವರು ವೃಂದಾವನಾಚಾರ್ಯರ ಪರಮ ಗುರುಗಳಾದ ಶ್ರೀ ವಿಶ್ವಾಧೀಶ ತೀರ್ಥ ಶ್ರೀಪಾದಂಗಳವರಿಂದ ವೈಷ್ಣವ ದೀಕ್ಷೆಯನ್ನು ಪಡೆದು ಮಾಧ್ವರಾದ ಸತ್ಯ ವೃತ್ತಾಂತವನ್ನು ಮಧುರ ಮನೋಹರವಾಗಿ ಬಣ್ಣಿಸಲಾಗಿದೆ. ಅನಂತರ ಶ್ರೀವೃಂದಾ ವನಾಚಾರ್ಯರು ರಂಗಪ್ಪಾಚಾರ್ಯರ ಪ್ರಾರ್ಥನೆಯಂತೆ ಕೋಚೀನಕ್ಕೆ ಬಂದಾಗ ಮತ್ತೆ ಅನೇಕ ರಾಜ ಕುಟುಂಬದವರು ಮಾಧ್ವರಾದದ್ದರ ವೃತ್ತಾಂತವನ್ನೂ ವೃಂದಾವನಾಚಾರ್ಯರ ಮಹಾಮಹಿಮೆಯನ್ನೂ ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಇವಲ್ಲದೆ ಅವರು ಗುರ್ವಷ್ಟಕ, ವಾದಿರಾಜಾಷ್ಟಕ, ಋಜುತ್ವಚಂದ್ರೋದಯ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಇವರಲ್ಲಿ ಉಡುಪಿ ಮೊದಲಾದ ದೂರ ಊರುಗಳಿಂದ ನೂರಾರು ಜನ ಮಾಧ್ವ ಛಾತ್ರರೂ ಮತ್ತು ನಂಬುದ್ರಿ, ನಾಯರ ಮತದ ವಿದ್ಯಾರ್ಥಿಗಳೂ ವಿಪುಲ ಸಂಖ್ಯೆ ಯಲ್ಲಿ ಬಂದು ಶಿಷ್ಯರಾಗಿ ತರ್ಕ ವೇದಾಂತಾದಿ ಶಾಸ್ತ್ರಗಳನ್ನು ಓದಿ ಪಂಡಿತರಾದರು.

ಇವರು ೧೮೨೦ ರಿಂದ ೧೮೯೧ ನೇ ಇಸ್ವಿಯ ವರೆಗೆ ಜೀವಿಸಿದ್ದರು.

## ೧೯೫ ಕೊಚ್ಚಿ ಮಧ್ವರಾಯಾಚಾರ್ಯ

ರಂಗಪ್ಪಾಚಾರ್ಯರ ಜೇಷ್ಠ ಪುತ್ರರಾದ ಮಧ್ವರಾಯಾಚಾರ್ಯರು ಶ್ರೀ ವೃಂದಾ ವನಾಚಾರ್ಯರಿಂದ ಬ್ರಹ್ಮೋಪದೇಶವನ್ನು ಪಡೆದು, ತಮ್ಮ ತಂದೆಯವರಲ್ಲಿಯೇ ನ್ಯಾಯ–ವೇದಾಂತಾದಿ ಶಾಸ್ತ್ರಗಳನ್ನು ಓದಿ ವಿದ್ವಾಂಸರಾದರು.

ತಮ್ಮ ತಂದೆಯ ಅನಂತರ ಇವರು ಕೊಚ್ಚಿ ಸಂಸ್ಥಾನದ ರಾಜ ಗುರುಗಳೂ, ಆಸ್ಥಾನ ವಿದ್ವಾಂಸರೂ ಆಗಿ ಕೋಚೀನದಲ್ಲಿಯೇ ನೆಲಸಿದರು. ಇವರು ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ನಿರಂತರವೂ ಅನೇಕ ಜನರಿಗೆ ಪಾಠ ಹೇಳುತ್ತಿದ್ದರು.

ಮಧ್ವರಾಯಾಚಾರ್ಯರು ಅನೇಕ ನ್ಯಾಯ ಶಾಸ್ತ್ರದ ಕ್ರೋಡ ಪತ್ರಗಳನ್ನು ಬರೆದಿದ್ದು ತಮ್ಮ ತಂದೆಯವರ ನ್ಯಾಯಮಾಲಿಕಾ ಗ್ರಂಥಕ್ಕೆ ಒಂದು ಟಿಪ್ಪಣಿ ಯನ್ನು ಬರೆದಿದ್ದಾರೆ.

ಅವರು ವಿಶ್ರಾಂತಿ ಪಡೆದ ಬಳಿಕ ಕೋಯಿಮತ್ತೂರಿನ ನಲ್ಲನ್ ಶ್ರೀಶೈಲ ಚಕ್ರವರ್ತಿ ಅಯ್ಯಂಗಾರರಿಗೆ ಗದಾಧರಿ, ಶಿತಿಕಂಠೀಯ ಮತ್ತು ಬೇರೆ ಶಾಸ್ತ್ರೀಯ ಉದ್ಗ್ರಂಥಗಳನ್ನು ಪಾಠ ಹೇಳಿದರು.

ಶ್ರೀ ಭಂಡಾರಕೇರಿ ಮಠದ ಈಗಿನ ಶ್ರೀಪಾದಂಗಳವರ ಪೂರ್ವಾಶ್ರಮದ ತಂದೆಯವರಾದ ಶ್ರೀ ಕುಪ್ಪಣ್ಣ ತಂತ್ರಿಗಳು ಶ್ರೀ ಮಧ್ವರಾಯಾಚಾರ್ಯರಲ್ಲಿಯೇ ಅಧ್ಯಯನ ಮಾಡಿದ್ದರು. ಡಾ. ಬಿ. ಎನ್. ಕೆ. ಶರ್ಮಾರವರು ಕೂಡ ಇವರಲ್ಲಿ ಬಾಲ್ಯದಲ್ಲಿ ಕಾವ್ಯ ಹಾಗೂ ಆಚಾರ್ಯರ ಕೆಲವು ಪ್ರಕರಣ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಇವರು ೧೮೫೭ರಿಂದ ೧೯೩೧ರ ವರೆಗೆ ಜೀವಿಸಿದ್ದರು.

## ೧೯೬ ವಾಯೂರ ಶ್ರೀನಿವಾಸಾಚಾರ್ಯ

ಇವರು ವ್ಯಾಕರಣ ಮತ್ತು ದ್ವೈತ ವೇದಾಂತದಲ್ಲಿ ಮಹಾ ಪಂಡಿತರಾಗಿದ್ದರು. ಇವರು ತಮ್ಮ ೩೦ ನೇ ವಯಸ್ಸಿನಲ್ಲಿ ಮದ್ರಾಸಿಗೆ ಹೋಗಿ ನೆಲಸಿ ಸುಧಾದಿ ಗ್ರಂಥಗಳನ್ನು ಕೊನೆಯವರೆಗೂ ಪಾಠ ಹೇಳುತ್ತಿದ್ದರು.

ಅವರಲ್ಲಿ ಸುಧಾ ಪಾಠವನ್ನು ಓದಿದವರಲ್ಲಿ— ಶ್ರೀನಿವಾಸರಾವ, P. M. G. ಮದ್ರಾಸ, ಮೂರ್ತಿರಾವ, ಡಾ॥ ಶರ್ಮಾ ಮುಂತಾದವರು ಪ್ರಮುಖರಾಗಿದ್ದಾರೆ. ಮೂರ್ತಿರಾಯರು ಅನಂತರ ಸನ್ಯಾಸಿಗಳಾಗಿದ್ದರು.

ಶ್ರೀನಿವಾಸಾಚಾರ್ಯರನ್ನು ವ್ಯಾಸರಾಯ ಮಠಾಧೀಶರಾದ ಶ್ರೀ ವಿದ್ಯಾವಾರಿಧಿ ತೀರ್ಥ ಶ್ರೀಪಾದಂಗಳವರು ತಮ್ಮ ಮಠದಲ್ಲಿಟ್ಟುಕೊಂಡು ವೇದಾಂತ ಪರಾಮರ್ಶ ಮಾಡಿದರು.

## ೧೯೭ ಆದ್ಯ ಹನುಮಂತಾಚಾರ್ಯ

ಉತ್ತರ ಕರ್ನಾಟಕದ ಆದ್ಯ ಮನೆತನದ ಒಂದು ಶಾಖೆಯು ಕುಂಭಕೋಣದಲ್ಲಿಯೇ ನೆಲಸಿದೆ. ಆ ಮನೆತನದಲ್ಲಿ ಜನಿಸಿದ ಇವರು ವೇದಾಂತ ಮತ್ತು ಪುರಾಣಗಳಲ್ಲಿ ಪ್ರಸಿದ್ಧ ಪಂಡಿತರಾದರು.

## ೧೯೮ ಭಾಗವತ ಶಾಮಣ್ಣಾಚಾರ್ಯ ಆದ್ಯ

ಇವರು ಭಾಗವತ ಪುರಾಣವನ್ನು ಅತ್ಯುತ್ತಮವಾಗಿ, ಪಾಂಡಿತ್ಯಪೂರ್ಣವಾಗಿ ಹೇಳುತ್ತಿದ್ದುದರಿಂದ ಇವರಿಗೆ ಭಾಗವತ ಶಾಮಣ್ಣಾಚಾರ್ಯ ಎಂದು ಹೆಸರಿದ್ದಿತು. ಇವರು ವೇದಾಂತ, ವ್ಯಾಕರಣ, ಸಾಹಿತ್ಯ ಮುಂತಾದ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು.

ಇವರ ಪುರಾಣಕ್ಕೆ ೫-೬ ಸಾವಿರ ಜನರು ಸೇರುತ್ತಿದ್ದರು.

## ೧೯೯ ಟೋಣಿಪಿ ಕೃಷ್ಣಾಚಾರ್ಯ

T. R. ಕೃಷ್ಣಾಚಾರ್ಯರ ಉಪಕಾರವನ್ನು ಮಾಧ್ವ ಸಮಾಜವು ಎಂದೂ ಮರೆಯಲಾರದು. ಸುಧಾ, ಚಂದ್ರಿಕಾ, ನ್ಯಾಯಾಮೃತ, ಸರ್ವಮೂಲ ಮತ್ತು ಅದರ ಟೀಕೆ–ಟಿಪ್ಪಣಿಗಳನ್ನು ಮೊಟ್ಟ–ಮೊದಲು ಮುದ್ರಿಸಿ, ಮಾಧ್ವ ತತ್ವಜ್ಞಾನದ ಸಾರ್ವತ್ರಿಕ ಪ್ರಸಾರಕ್ಕೆ ಶ್ರೀಕಾರ ಹಾಕಿದ ಮಹನೀಯರೆಂದರೆ— ಕುಂಭಕೋಣದ T. R. ಕೃಷ್ಣಾಚಾರ್ಯರು.

ಸ್ವಯಂ ಶಾಸ್ತ್ರ, ಸಾಹಿತ್ಯಗಳಲ್ಲಿ ಪಂಡಿತರಾದ ಆಚಾರ್ಯರು ಓದಲು ಪುಸ್ತಕ ಸಿಗದೆ ತೊಂದರೆಪಡುತ್ತಿರುವ ಮಾಧ್ವ ವಿದ್ಯಾರ್ಥಿಗಳನ್ನು ಕಂಡು ಉಪಲಬ್ಧವಿದ್ದ ಎಲ್ಲ ಮಾಧ್ವ ಗ್ರಂಥಗಳನ್ನು ಅಚ್ಚು ಮಾಡಿಸಬೇಕೆಂದು ನಿರ್ಧರಿಸಿದರು.

ದೇಶ–ದೇಶಗಳಲ್ಲಿ ತಿರುಗಿ ಅನೇಕ ಪ್ರಾಚೀನ ತಾಳವಾಲೆ ಗ್ರಂಥಗಳನ್ನು ಸಂಗ್ರಹಿಸಿ, ಶೋಧಿಸಿ, ಮಾಧ್ವ ಗ್ರಂಥಗಳ ಪರಿಶುದ್ಧವಾದ ಪ್ರತಿಗಳನ್ನು ಶುದ್ಧಪಡಿಸಿ ಮುಂಬಯಿಯ ನಿರ್ಣಯಸಾಗರ ಪ್ರೆಸ್ಸಿನಲ್ಲಿ ಉತ್ತಮ ಕಾಗದಗಳ ಮೇಲೆ ಅಂದವಾಗಿ ಮುದ್ರಿಸಿ ಮಹೋಪಕಾರವನ್ನು ಮಾಡಿದ್ದಾರೆ.

ಇವಲ್ಲದೆ— ಮಹಾಭಾರತ, ರಾಮಾಯಣ ಮತ್ತು ಭಾಗವತಾದಿ ಗ್ರಂಥಗಳನ್ನು ಕೂಡ ದಾಕ್ಷಿಣಾತ್ಯ ಪಾಠಾನುಸಾರವಾಗಿ ಮುದ್ರಿಸಿ ಪ್ರಕಟಿಸಿದ್ದಾರೆ.

# ಶ್ರೀ ಗಂಡೀ ಆಚಾರ್ಯರು

## ೨೦೦ ಗಂಡೀ ವಾಸುದೇವಾಚಾರ್ಯ

ಧಾರವಾಡ ಪ್ರಾಂತದಲ್ಲಿ ಉದ್ಗಾವಿ ಎಂಬ ಗ್ರಾಮದಲ್ಲಿ ಶ್ರೀ ವಾಸುದೇವಾಚಾರ್ಯರೆಂಬ ಮಹಾ ವಿದ್ವಾಂಸರಿದ್ದರು. ಇವರು ತಮ್ಮ ಊರಲ್ಲಿ ಅನೇಕ ಶಿಷ್ಯರಿಗೆ ಸಚ್ಛಾಸ್ತ್ರ ಪಾಠ ಪ್ರವಚನ ಮಾಡುತ್ತ ಸ್ವಾಧ್ಯಾಯ ತಪೋನುಷ್ಠಾನ ನಿರತರಾಗಿದ್ದರು.

## ೨೦೧ ಗಂಡೀ ನರಸಿಂಹಾಚಾರ್ಯ

ಇವರು ಶ್ರೀ ವಾಸುದೇವಾಚಾರ್ಯರ ಚಿರಂಜೀವರು. ಅಪರೋಕ್ಷ ಜ್ಞಾನಿಗಳಾದ ಶ್ರೀ ಯಾದವಾರ್ಯರಲ್ಲಿ ಚತುಃಶಾಸ್ತ್ರಗಳನ್ನು ಅಧ್ಯಯನ ಮಾಡಿ ಪ್ರಗಾಢ ಪಂಡಿತರಾದರು. ಶ್ರೀ ಖಾದ್ರಿ ನರಸಿಂಹ ದೇವರ ಸಂಕೇತದಂತೆ ಕಡಪಾ ಜಿಲ್ಲೆಯ ಗಂಡೀ ಕ್ಷೇತ್ರದಲ್ಲಿ ಹೋಗಿ ನೆಲಿಸಿದರು.

ಇವರು ಗಂಡೀ ಕ್ಷೇತ್ರದಲ್ಲಿ ತಮ್ಮ ಸ್ವಾಧ್ಯಾಯ ಜ್ಞಾನ ಯಜ್ಞವನ್ನು ಅವಿಚ್ಛಿನ್ನವಾಗಿ ನಡಿಸಿದರು. ಇವರಲ್ಲಿ ಮಹಾ ಮೇಧಾವಿಗಳಾದ ಅನೇಕ ಛಾತ್ರರು ಶಾಸ್ತ್ರ ವ್ಯಾಸಂಗ ಮಾಡಿ ಪಂಡಿತ ಪುಂಡರೀಕರೆಂದು ಸುಪ್ರಸಿದ್ಧರಾದರು. ಶ್ರೀ ಶ್ರೀಮದುತ್ತರಾದಿ ಮಠದ ಶ್ರೀ ೧೧೦ರ ಶ್ರೀ ಸತ್ಯನಾಥ ತೀರ್ಥರು ಪೂರ್ವಾಶ್ರಮದಲ್ಲಿ ಇವರಲ್ಲಿ ಶಾಸ್ತ್ರ ಪರಾಮರ್ಶ ಮಾಡಿದ್ದರು.

ಶ್ರೀ ೧೧೦ರ ಶ್ರೀ ವ್ಯಾಸತತ್ವಜ್ಞರೆಂದು ಹೆಸರಾದ ಐ. ಜಿ. ವೆಂಕಟಚಾರ್ಯರು ಗಂಡೀ ನರಸಿಂಹಾಚಾರ್ಯರಿಂದ ತಿರುಪತಿಯ ವೆಂಕಟೇಶ ದೇವರ ಸಂಕೇತದಂತೆ ದೌಹಿತ್ರ ಸಂತತಿಯನ್ನು ಪಡೆದರೆಂದು ಐತಿಹ್ಯವುಂಟು. ಶ್ರೀ ವೆಂಕಟ ನರಸಿಂಹಾಚಾರ್ಯರು, ಗಂಡೀ ನರಸಿಂಹಾಚಾರ್ಯರು ಶ್ರೀ ಯಾದವಾರ್ಯರಲ್ಲಿ ಅಧ್ಯಯನ ಮಾಡಿ ಸತೀರ್ಥರೂ, ಪರಮ ಮಿತ್ರರೂ ಆಗಿದ್ದರು. ಶ್ರೀ ವೆಂಕಟ ರಾಮಾಚಾರ್ಯರೂ ಶ್ರೀ ರಾಯರ ಮಠದ ಶ್ರೀ ಭುವನೇಂದ್ರರಿಂದ ಆಶ್ರಮ ಸ್ವೀಕರಿಸಿ ಶ್ರೀ ವ್ಯಾಸ ತತ್ವಜ್ಞರಾದ ಬಳಿಕ ಗಂಡೀ ಆಚಾರ್ಯರು ವೇಣೀ ಸೋಮಪುರಕ್ಕೆ ಬಂದು ಪ್ರಾಯಃ ಶ್ರೀಗಳವರ ಸನ್ನಿಧಾನವಲ್ಲಿಯೇ ಇರುತ್ತಿದ್ದರು. ಕೊನೆಗೆ ವೇಣೀ ಸೋಮಪುರದಲ್ಲಿಯೇ ಅವರ ಅವಸಾನವಾಯಿತು.

### ೨೦೨ ಐಕೂರ ನರಸಿಂಹಾಚಾರ್ಯ

ನಿಜಾಮ ರಾಜ್ಯದ ಐಕೂರ ಗ್ರಾಮದಲ್ಲಿ ಶಕೆ ೧೮೦೫ ರಲ್ಲಿ ಜನಿಸಿದ ನೃಸಿಂಹಾಚಾರ್ಯರು ಶ್ರೀ ಎಳಮೇಲಿ ವಿಠಲಾಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿದರು. ಅನಂತರ ನಾಯಕಲ್ಲ ರಾಮಾಚಾರ್ಯರನ್ನು ತಮ್ಮ ಮನೆಯಲ್ಲಿಯೇ ಇರಿಸಿಕೊಂಡು ಇವರಿಂದ ವೇದಾಂತವನ್ನು ಓದಿದರು. ಇವರಿಗೆ ವ್ಯಾಸ ಸಾಹಿತ್ಯದಲ್ಲಿಯೂ, ದಾಸ ಸಾಹಿತ್ಯದಲ್ಲಿಯೂ ಗತಿ ಇದ್ದಿತು. ಭಕ್ತಿಭಾವ ಭರಿತರಾಗಿ ಇವರು ಹೇಳುವ ಪುರಾಣ, ಪ್ರವಚನ, ಗದ್ಯ, ಪದ್ಯ, ಹರಿಕಥಾ ನಿರೂಪಣೆಯನ್ನು ಜನರು ಏಕಚಿತ್ತರಾಗಿ ಕೇಳುತ್ತಿದ್ದರು. ಇವರು ಮಹಾ ಕರ್ಮಠರೂ ಅನುಭಾವಿಗಳೂ ಆಗಿದ್ದರು.

### ೨೦೩ ಕೊಲೂರ ರಾಘವೇಂದ್ರಾಚಾರ್ಯ

ಮಹಾ ವಿದ್ವಾನ್ ಯಲತ್ತೂರ ಕೃಷ್ಣಾಚಾರ್ಯರಲ್ಲಿ ಅಧ್ಯಯನ ಮಾಡಿದ ತರ್ಕ ಪಂಡಿತರು. ಅನಂತಶಯನಂ ಸಂಸ್ಕೃತ ಕಾಲೇಜದಲ್ಲಿ ತರ್ಕಾಧ್ಯಾಪಕರಾಗಿ ಕೆಲಸ ಮಾಡಿದರು. ವೀರಚೋಳಪುರದವರಾದ ಇವರು ಪದ್ಮ ಸರೋವರದಲ್ಲಿ ಪೇ. ರಾಮರಾಯರ ಪಾಠಶಾಲೆಯಲ್ಲಿ ತರ್ಕಾಧ್ಯಾಪಕರಾಗಿದ್ದು ಅನಂತರ ತ್ರಿವೇಂದ್ರಂ ಸಂಸ್ಕೃತ ಕಾಲೇಜದಲ್ಲಿ ಅನೇಕ ಜನರಿಗೆ ತರ್ಕಪಾಠವನ್ನು ಹೇಳಿದರು.

### ೨೦೪ ವೀರಚೋಳಪುರ ಕೃಷ್ಣಮಾಚಾರ್ಯ

ಶ್ರೀ ಸತ್ಯಧ್ಯಾನ ತೀರ್ಥರ ಶಿಷ್ಯರು ಅವರ ಆಪ್ತ ಕಾರ್ಯದರ್ಶಿಗಳೂ ಆಹುದು. ಘಾರಾಪುರಂ ಊರಿನಲ್ಲಿ ಇದ್ದು ಅನೇಕ ಜನರಿಗೆ ಪಾಠ ಹೇಳಿದರು. ಎಲತ್ತೂರ ಕೃಷ್ಣಾಚಾರ್ಯರಲ್ಲಿ ತರ್ಕ, ಶ್ರೀ ಸತ್ಯಧ್ಯಾನರಲ್ಲಿ ವೇದಾಂತ ಓದಿದ್ದರು.

### ೨೦೫ ಭೀಮಾಚಾರ್ಯ ಸಿದ್ಧಾಂತಿ

೫೦ ವರ್ಷಗಳ ಹಿಂದೆ ಇವರು ಧಾರವಾಡದಲ್ಲಿ ಇದ್ದು ಒಳ್ಳೇ ಪುರಾಣ ಹೇಳುತ್ತಿದ್ದರು. ವೇದಾಂತ ವ್ಯಾಕರಣಗಳಲ್ಲಿಯೂ ಇವರಿಗೆ ಗತಿ ಇದ್ದುದರಿಂದ ಶ್ರೀ ಸತ್ಯಧ್ಯಾನ ತೀರ್ಥರು ಇವರ ಮೇಲೆ ಬಹಳ ಅಭಿಮಾನ ಮಾಡುತ್ತಿದ್ದರು.

## ೨೦೬ ಉಮಾಪುರಂ ವೆಂಕಟಗಿರಿ ಆಚಾರ್ಯ

೧೮೬೯ ನೇ ಇಸ್ವಿಯಲ್ಲಿ ಉಮಾಪುರದಲ್ಲಿ ಜನಿಸಿದ ವೆಂಕಟಗಿರಿ ಆಚಾರ್ಯರು ಮುಸಿರಿ ಪರಮೇಶ್ವರ ಶಾಸ್ತ್ರಿಗಳಲ್ಲಿ ವೇದ ಮತ್ತು ಸಾಹಿತ್ಯಗಳನ್ನೂ, ಧರ್ಮಶಾಸ್ತ್ರ ಹಾಗೂ ಪೌರೋಹಿತ್ಯವನ್ನೂ ಅಧ್ಯಯನ ಮಾಡಿದರು. ಆತೂರ ಕೃಷ್ಣಾಚಾರ ಎಂಬ ಪಂಡಿತರನ್ನು ಮನೆಯಲ್ಲಿಟ್ಟುಕೊಂಡು ವೇದಾಂತ ವ್ಯಾಸಂಗ ಮಾಡಿದರು.

ಅನಂತರ ಶ್ರೀ ಸತ್ಯಧ್ಯಾನತೀರ್ಥರಲ್ಲಿ ಶಾಂತಿ ಹಾಕಿ, ಸುಧಾ ಮಂಗಳ ಮಾಡಿದರು. ಅವರು ಪ್ರತಿ ವರ್ಷ ತಿರುಪತಿ ಸಭೆಗೆ ಹೋಗಿ, ಶ್ರೀ ಸತ್ಯಧ್ಯಾನ ತೀರ್ಥರ ಸಭೆಯಲ್ಲಿ ಭಾಗವಹಿಸುತ್ತಿದ್ದರು.

## ಸಂಗಮಕ್ಷೇತ್ರದ ಆಚಾರ್ಯರು

### ೨೦೭ ಸಂಗಮದ ಶ್ರೀನಿವಾಸಾಚಾರ್ಯ

ಇವರು ಗಲಗಲಿ ಕೂರ್ಮಾಚಾರ್ಯರ ವಂಶದ ಮೂಲ ಪುರುಷರಾದ ಶ್ರೀ ಮುದ್ಗಲಾಚಾರ್ಯರ ಪಟ್ಟ ಶಿಷ್ಯರು.

ವೇದ-ವೇದಾಂಗ ವೇದಾಂತಾದಿ ಶಾಸ್ತ್ರಗಳಲ್ಲದೆ, ನ್ಯಾಯ-ಮೀಮಾಂಸಾದಿ ಶಾಸ್ತ್ರಗಳಲ್ಲಿಯೂ ಶ್ರೀ ಮುದ್ಗಲಾರ್ಯರ ಅನುಗ್ರಹದಿಂದ ಪರಿನಿಷ್ಠಿತ ಪಂಡಿತರಾಗಿದ್ದರು.

ಈ ಸಂಗಮದ ಶ್ರೀನಿವಾಸಾಚಾರ್ಯರು ಬಾಲ್ಯದಲ್ಲಿಯೇ ಗಲಗಲಿಗೆ ಹೋಗಿ ಶ್ರೀ ಮುದ್ಗಲಾಚಾರ್ಯರಲ್ಲಿ ಚತುಃಶಾಸ್ತ್ರಗಳನ್ನು ಓದಿದರು. ಗುರುಗಳು ಅವರಿಗೆ ತಾವೇ ಮದುವೆ ಮಾಡಿ ಕೃಷ್ಣಾ-ಮಲಾಪಾಹಾರಿ ಸಂಗಮ ಕ್ಷೇತ್ರದಲ್ಲಿ ನೆಲಿಸಬೇಕೆಂದು ಅಪ್ಪಣೆ ಮಾಡಿದರು.

ಇವರು ಮಹಾ ತಪಸ್ವಿಗಳೂ, ವೈರಾಗ್ಯ ನಿಧಿಗಳೂ ಆಗಿದ್ದರು. ಅವರು ಪ್ರತಿ ನಿತ್ಯವೂ ಕೃಷ್ಣಾ ಸ್ನಾನವನ್ನು ಮಾಡಿ ನದಿಯಲ್ಲಿರುವ ಒಂದು ಬಂಡೆಗಲ್ಲಿನ ಮೇಲೆ ತಮ್ಮ ಪೂಜಾ ಆನ್ಹಿಕಗಳನ್ನು ಮಾಡುತ್ತ ಕೂಡುತ್ತಿದ್ದರು.

ಒಮ್ಮೆ ಇವರು ಜಪ ಮಾಡುತ್ತ ಕುಳಿತಾಗ ಒಮ್ಮೆಲೇ ಕೃಷ್ಣಾನದಿಗೆ ಮಹಾಪೂರ ಬಂದು, ಆಚಾರ್ಯರು ಜಪ ಮಾಡುತ್ತ ಕುಳಿತ ಬಂಡೆಯ ಮೇಲೆ ಆನೆ ಎತ್ತರ ನೀರು ಬಂದಿತು. ಆದರೂ ಆಚಾರ್ಯರು ಕದಲದೆ ಜಪ ಮಾಡುತ್ತ ಕುಳಿತಿದ್ದರು. ನೆರೆ ಇಳಿದ ಬಳಿಕ— ಜನರೆಲ್ಲರೂ ಆಚಾರ್ಯರು ಎಲ್ಲಿಯಾದರೂ ತೇಲಿಕೊಂಡು ಹೋಗಿರಬಹುದೆಂದು ಗಾಬರಿಯಾಗಿ ಬಂದು ನೋಡಲು ಆ ಬಂಡೆಯ ಮೇಲೆ ಸುರಕ್ಷಿತರಾಗಿ ಜಪಮಾಲೆಯನ್ನು ತಿರುಗಿಸುತ್ತ ಶ್ರೀನಿವಾಸಾಚಾರ್ಯರು ಹಾಗೇ ಕುಳಿತಿದ್ದರು. ಅಂದಿನಿಂದ ಆ ಹೆಬ್ಬಂಡೆಗೆ ಆಚಾರ್ಯರ ಬಂಡೆ ಎಂದು ಹೆಸರಾಯಿತು. ಅದನ್ನು ಈಗಲೂ ಸಂಗಮಕ್ಷೇತ್ರದಲ್ಲಿ ಜನರು ತೋರಿಸುತ್ತಾರೆ.

ಇವರು ಸಂಗಮಕ್ಕೆ ಬಂದು ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದರು. ೧೮ ಸಲ ಶ್ರೀಮನ್ನ್ಯಾಯ ಸುಧಾ ಮಂಗಳ ಮಾಡಿದರು.

ಸಂಗಮದ ಶ್ರೀನಿವಾಸಾಚಾರ್ಯರು ನೂರಾರು ಜನ ಶಿಷ್ಯರೊಂದಿಗೆ ಸ್ವಾಮಿಗಳಂತೆ ಗಲಗಲಿ ಆಚಾರ್ಯರ ಶಿಷ್ಯರೆಂದು ಹೇಳಿ ದೇಶದಲ್ಲಿ ಎಲ್ಲ ಕಡೆಗೂ ಸಂಚಾರ ಮಾಡಿ ಶಿಷ್ಯರನ್ನು ಉದ್ಧರಿಸುತ್ತಿದ್ದರು.

ಆಚಾರ್ಯರು ಒಮ್ಮೆ ಮೊಗಲಾಯಿಯಲ್ಲಿ ಸಂಚಾರ ಮಾಡುತ್ತಲಿದ್ದಾಗ— ಉತ್ತರಾದಿಮಠದ ಸ್ವಾಮಿಗಳಾದ ಶ್ರೀ ಸತ್ಯಪೂರ್ಣತೀರ್ಥ ಶ್ರೀಪಾದಂಗಳವರ ಸನ್ನಿಧಾನವು ಸಮೀಪದಲ್ಲಿಯೇ ಅದೆ ಎಂದು ತಿಳಿಯಿತು. ಕೂಡಲೇ ಆಚಾರ್ಯರು ಶ್ರೀ ಶ್ರೀಗಳವರ ದರ್ಶನಕ್ಕೆ ಹೋದರು. ಅಲ್ಲಿ ಅದ್ವೈತಮತದ ಓರ್ವ ವಿದ್ವಾಂಸನು ವಾಕ್ಯಾರ್ಥಕ್ಕೆ ಬಂದಿದ್ದನು.

ಅದನ್ನು ತಿಳಿದು ಆಚಾರ್ಯರು ಆ ಅದ್ವೈತ ಪಂಡಿತನೊಂದಿಗೆ ವಾಕ್ಯಾರ್ಥ ಮಾಡಿ ಅವನನ್ನು ಸೋಲಿಸಿದರು. ನಿರುತ್ತರನಾದ ಆ ಪಂಡಿತನು ಜಯಪತ್ರವನ್ನು ಕೊಡಲು ಬಂದಾಗ ಆಚಾರ್ಯರು ವಿನಯದಿಂದ ಆ ಜಯ ಪತ್ರವನ್ನು ನನ್ನಂಥ

ನೂರಾರು ಜನ ಶಿಷ್ಯರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದ ಶ್ರೀ ಸತ್ಯಪೂರ್ಣ ತೀರ್ಥ ಶ್ರೀಪಾದಂಗಳವರ ಪಾದ ಪೀಠಕ್ಕೆ ಅರ್ಪಿಸು ಎಂದು ಹೇಳಿದರಂತೆ.

"ಯತೋ ವಿದ್ಯಾವತಾಂ ಮಧ್ಯೇಽ
ಧೀಶೋಯಃ ಶ್ರೀನಿವಾಸಕಃ ||
ವಿದ್ಯಾಧೀಶ ಮಿತಿ ಪ್ರಾಹುಃ
ಶ್ರೀವಾಸಂ ಮತೇ ಜನಃ ||

ಹೀಗೆ ಆಶೀರ್ವದಿಸಿ ಶ್ರೀ ಶ್ರೀಪಾದಂಗಳವರು ಸಂಗಮದ ಆಚಾರ್ಯರಿಗೆ ಬೆನ್ನು ಮಣೆ, ಹಗಲು ದೀವಟಿಗೆ, ಕರವಸ್ತ್ರಗಳ ಅಧಿಕಾರವನ್ನು ದಯಪಾಲಿಸಿದರು. ಉತ್ತರಾದಿ ಮಠದ ಶ್ರೀ ಶ್ರೀಪಾದಂಗಳವರಾದ ಶ್ರೀ ಸತ್ಯಪೂರ್ಣ ತೀರ್ಥ ಶ್ರೀಪಾದಂಗಳವರು ಅನುಗ್ರಹಿಸಿಕೊಟ್ಟ ಆ ಬೆನ್ನುಮಣೆಯಲ್ಲಿ ಶಂಖ ಚಕ್ರ ಚಿನ್ಹಗಳು ಅಂಕಿತವಾಗಿರುತ್ತವೆ. ಆ ಮನೆತನದವರು ಈಗಲೂ ಆ ಬೆನ್ನುಮಣೆಗೆ ಅತ್ಯಂತ ಭಕ್ತಿಯಿಂದ ಪೂಜೆ ಪುರಸ್ಕಾರಗಳನ್ನು ಸಲ್ಲಿಸುತ್ತಾರೆ.

ಶ್ರೀ ಗಲಗಲಿಯ ಮುದ್ಗಲಾಚಾರ್ಯರಿಗೆ ಆ ನಾಡಿನ ಜನರೆಲ್ಲರೂ ಭಕ್ತಿಯಿಂದ ಅಪ್ಪನವರು ಎಂದು ಕರೆಯುತ್ತಿದ್ದರು. ಅವರು ೨೧ ಸಲ ತಮ್ಮ ಬೆನ್ನುಮಣೆಯನ್ನು ಇಟ್ಟುಕೊಂಡು ಸುಧಾ ಮಂಗಳ ಮಾಡಿದ್ದರಿಂದ ಆ ಬೆನ್ನು ಮಣೆಗೆ ಶಂಖ ಚಕ್ರಗಳು ಮೂಡಿರುತ್ತವೆ.

ಆ ಅಪ್ಪನವರ ಪಟ್ಟ ಶಿಷ್ಯರಾದ ಶ್ರೀನಿವಾಸಾಚಾರ್ಯರಿಗೂ ಈ ನಾಡಿನ ಜನ ಅಪ್ಪನವರು ಎಂದೇ ಕರೆಯುತ್ತಿದ್ದರು. ಅವರಂತೆ ಇವರ ಬೆನ್ನು ಮಣೆಗೂ ಶಂಖ ಚಕ್ರಗಳು ಮೂಡಿದ್ದವು. ಅಪ್ಪನವರು ಗಲಗಲಿಯ ಕೃಷ್ಣಾ ಪ್ರವಾಹದಲ್ಲಿ ತಮ್ಮ ದೇವರನ್ನು ಒರಿಸುವ ಕರವಸ್ತ್ರವನ್ನು ತೇಲಿ ಬಿಟ್ಟರೆ ಈ ಅಪ್ಪನವರು ಸಂಗಮದ ಕೃಷ್ಣಾ ಪ್ರವಾಹದಲ್ಲಿ ಆ ದೇವರ ವಸ್ತ್ರವನ್ನು ಎದುರು ನೋಡುತ್ತ ನಿಂತು ಪ್ರವಾಹದಲ್ಲಿ ಅದು ತೇಲಿ ಬಂದ ಕೂಡಲೇ ತೆಗೆದು ನಮಸ್ಕರಿಸುತ್ತಿದ್ದರು. ಇದೊಂದು ಅಪೂರ್ವವಾದ ಗುರು ಶಿಷ್ಯ ದ್ವಂದ್ವವಾಗಿದ್ದಿತು.

ಶ್ರೀಮುದ್ಗಲಾಚಾರ್ಯ ಸುಪಾದ ಜುಷ್ಟಂ |
ಸತ್ ಸಂಗಮ ಕ್ಷೇತ್ರ ವರ ಪ್ರತಿಷ್ಠಂ ||
ಶ್ರೀಮಧ್ವ ಶಾಸ್ತ್ರಾರ್ಥ ದೃಢೈಕ ನಿಷ್ಠಂ |
ಶ್ರೀ ಶ್ರೀನಿವಾಸಂ ಪ್ರಣಮಾಮಿ ಶಿಷ್ಟಂ ||

ಈ ಸಂಗಮದ ಅಪ್ಪನವರ ಮೇಲೆ ಅನೇಕ ಭಕ್ತರು ಸ್ತೋತ್ರ ಅಷ್ಟಕಗಳನ್ನು ರಚಿಸಿದ್ದಾರೆ.

ಶ್ರೀ ಅಪ್ಪನವರ ಪಾಂಡಿತ್ಯ ಹಾಗು ತಪಃ ಶಕ್ತಿಯಿಂದ ಪ್ರಭಾವಿತರಾಗಿ ಅನೇಕ ಅದ್ವೈತಿಗಳು ವಿಷ್ಣು ದೀಕ್ಷೆಯನ್ನು ಹೊಂದಿದರು. ಅವರಲ್ಲಿ ಧನ್ನೂರ ಗುಮಾಸ್ತೆ, ನಾಡಗೌಡರು, ತಂಗಡಿಗಿಯ ಹರಿಮಂದಿರ ದೀಕ್ಷಿತರು ಪ್ರಮುಖರಾಗಿದ್ದಾರೆ.

## ೨೦೮ ಸಂಗಮದ ರಾಮಚಂದ್ರಾಚಾರ್ಯ

ಸಂಗಮದ ಅಪ್ಪನವರ ವಂಶದಲ್ಲಿ ಹುಟ್ಟಿದ ರಾಮಚಂದ್ರಾಚಾರ್ಯರು ಘನ ಪಂಡಿತರಾಗಿದ್ದರು. ಇವರು ಗಲಗಲಿಗೆ ಹೋಗಿ ಅಲ್ಲಿಯ ಸುಪ್ರಸಿದ್ಧ ಪಂಡಿತರಾದ ಗಲಗಲಿ ಶ್ರೀ ರಂಗಾಚಾರ್ಯರಲ್ಲಿ ನ್ಯಾಯ, ವೇದಾಂತಗಳನ್ನು ಓದಿ ಶಾಸ್ತ್ರ ಪಾರಂಗತ ರಾದರು. ಇವರು ಪ್ರತಿವಾದಿ ನಿಗ್ರಹದಲ್ಲಿ ಅಪ್ರತಿಮ ಪಾಂಡಿತ್ಯವುಳ್ಳವರು.

ಇವರು ಪುಣೆಕ್ಕೆ ಹೋಗಿ ಪೇಶ್ವೇ ರಾಜಮನೆತನದ ಆಸ್ಥಾನ ವಿದ್ವಾಂಸರಾದ ಶಾಮಜೀ ದೀಕ್ಷಿತ ಎಂಬವರೊಡನೆ ವಾಕ್ಯಾರ್ಥ ಮಾಡಿ ಜಯಪತ್ರವನ್ನು ತಂದು ತಮ್ಮ ಗುರುಗಳಾದ ಶ್ರೀ ರಂಗಾಚಾರ್ಯರಿಗೆ ಒಪ್ಪಿಸಿದರು.

ಇವರ ಪಾಂಡಿತ್ಯಕ್ಕೆ ಮೆಚ್ಚಿ, ಪೇಶ್ವೆಯವರು ಕೆಲವು ಜಮೀನುಗಳನ್ನು ದಾನ ವಿತ್ತರು. ಇವರಿಂದ ಪ್ರಭಾವಿತರಾದ ಆ ಕಾಲದ ಅನೇಕ ಸಂಸ್ಥಾನಿಕರು ಇವರಿಗೆ ವಿಪುಲವಾಗಿ ಧನ–ಕನಕ, ಮುತ್ತು–ರತ್ನಗಳನ್ನು ಕೊಟ್ಟರು. ವಿಂಚೂರಕರ ಮಹಾ ರಾಜರು ಇವರಿಗೆ ಸುವರ್ಣ ಮಂಜೂಷಿಕೆಯಲ್ಲಿ ಮಹಾಭಾರತ ಪುಸ್ತಕವನ್ನು ದಾನ ಕೊಟ್ಟರು.

ಪರಮ ವೈರಾಗ್ಯ ಶಾಲಿಗಳೂ, ಗುರುಭಕ್ತರೂ ಆದ ಸಂಗಮದ ರಾಮಚಂದ್ರಾ ಚಾರ್ಯರು ತಮ್ಮ ಪ್ರತಿಭಾ–ಪಾಂಡಿತ್ಯಗಳಿಗೆ ಒಲಿದು ಬಂದ ಸಿರಿ–ಸಂಪದಗಳನ್ನೂ ಮಾನಪತ್ರ, ಜಯಪತ್ರಗಳನ್ನೂ ತಂದು ತಮ್ಮ ಗುರುಗಳ ಪಾದಕ್ಕೆ ಅರ್ಪಿಸಿದರು.

ಆಗ ಶ್ರೀ ರಂಗಾಚಾರ್ಯರು ಹೃದಯತುಂಬಿ— "ನನಗೆ ಇವಾವದೂ ಬೇಡ. ನೀನೆ ತೆಗೆದುಕೊಂಡು ಹೋಗು. ನಿನ್ನ ಗೆಲವು–ಗೌರವಗಳೇ ನನಗೆ ಗುರುದಕ್ಷಿಣೆ" ಎಂದು ಹೇಳಿದರಂತೆ.

ಆದರೆ ವಿರಕ್ತ ಶಿಖಾಮಣಿಗಳಾದ ರಾಮಚಂದ್ರಾಚಾರ್ಯರು ಅವಾವುದನ್ನೂ ತಾವು ತೆಗೆದುಕೊಳ್ಳದೇ ಗುರುಗಳ ಅಪ್ಪಣೆಯನ್ನು ಮೀರಬಾರದೆಂದು ಮಹಾಭಾರತ ಪುಸ್ತಕವೊಂದನ್ನು ಮಾತ್ರ ತಾವು ತೆಗೆದುಕೊಂಡು, ತಾವು ಸಂಪಾದಿಸಿ ತಂದ ಎಲ್ಲ ಐಶ್ವರ್ಯ ಹಾಗೂ ಹೊಲಗಳನ್ನು ಕೂಡ ಆಚಾರ್ಯರಿಗೇ ಅರ್ಪಿಸಿ ಬಿಟ್ಟರಂತೆ.

# ಶ್ರೀ ಗೌಡಗಿರಿ ಆಚಾರ್ಯರು

### ೨೦೯ ವೆಂಕಟನರಸಿಂಹಾಚಾರ್ಯ

ಗೌಡಗಿರಿ ವೆಂಕಟನರಸಿಂಹಾಚಾರ್ಯರೂ ಮಹಾ ಪಂಡಿತರು. ಅವರ ಮಕ್ಕಳಾದ ವಾಸುದೇವಾಚಾರ್ಯರು ಉದ್ದಾಮ ವಿದ್ವಾಂಸರು.

### ೨೧೦ ವಾಸುದೇವಾಚಾರ್ಯ

ವಾಸುದೇವಾಚಾರ್ಯರು ಚತುಃಶ್ಶಾಸ್ತ್ರ ಪಂಡಿತರಾಗಿದ್ದರು. ವಾಸುದೇವಾಚಾರ್ಯರಿಗೆ ಗುಂಡಾಚಾರ್ಯ, ವೆಂಕಟನರಸಿಂಹಾಚಾರ್ಯ, ರಾಘವೇಂದ್ರಾಚಾರ್ಯ, ವೆಂಕಟರಮಣಾಚಾರ್ಯ ಎಂಬ ನಾಲ್ಕು ಜನ ಮಕ್ಕಳಿದ್ದು ನಾಲ್ವರೂ ಪಂಡಿತರೇ ಆಗಿದ್ದರು.

### ೨೧೧ ರಾಘವೇಂದ್ರಾಚಾರ್ಯ

ಇವರು ನ್ಯಾಯ ವೇದಾಂತದಲ್ಲ ನಿಃಸೀಮ ಪಂಡಿತರು.

### ೨೧೨ ಗುಂಡಾಚಾರ್ಯ

ವ್ಯಾಕರಣದಲ್ಲಿ ಮಹಾಭಾಷ್ಯಾಂತ ಗ್ರಂಥಗಳನ್ನು ಪಾಠ ಹೇಳುವಷ್ಟು ಪ್ರಗಲ್ಭ ಪಾಂಡಿತ್ಯ. ಸಾಹಿತ್ಯದಲ್ಲಿ ಇವರಿಗೆ ಒಳ್ಳೇ ಪ್ರಾವೀಣ್ಯವಿದ್ದಿತು.

### ೨೧೩ ವೆಂಕಟರಮಣಾಚಾರ್ಯ

ಅಣ್ಣ ರಾಘವೇಂದ್ರಾಚಾರ್ಯರಲ್ಲಿ ಓದಿ ನ್ಯಾಯ ವೇದಾಂತ ವಿದ್ವಾಂಸರಾಗಿದ್ದರು.

### ೨೧೪ ವೆಂಕಟನರಸಿಂಹಾಚಾರ್ಯ

ಇವರು ದ್ವೈತ ವೇದಾಂತ ಶಾಸ್ತ್ರದಲ್ಲಿ ನಿಸ್ಸೀಮ ಪಂಡಿತರು.

ನಾಲ್ವರೂ ಅಣ್ಣ-ತಮ್ಮಂದಿರು ಶಾಸ್ತ್ರ ಪಂಡಿತರಾಗಿದ್ದು, ತಿರುಪತಿಯ ಕಂಚೀ ಸಬ್ಬರಾಯರ ಸಭೆಯಲ್ಲಿ ಧರ್ಮಾಧಿಕಾರಿಗಳಾಗಿರುತ್ತಿದ್ದರು.

### ೨೧೫ ವೆಂಕಟರಮಣಾಚಾರ್ಯ



ಇವರು ತಮ್ಮ ಅಣ್ಣಂದಿರಲ್ಲಿ ಶಾಸ್ತ್ರಾಧ್ಯಯನ ಮಾಡಿ ಶ್ರೀ ಸತ್ಯಧ್ಯಾನರ ಕಾಲದಲ್ಲಿ ಉತ್ತಮ ಶ್ರೇಣಿಯ ಪಂಡಿತರಲ್ಲಿ ಪರಿಗಣಿತರಾಗಿದ್ದರು. ಶ್ರೀಮನ್ಯಾಯ

ಸುಧಾ, ಚಂದ್ರಿಕಾ, ನ್ಯಾಯಾಮೃತ ಮೊದಲಾದ ವೇದಾಂತದ ಉದ್ಗ್ರಂಥಗಳೆಲ್ಲವೂ ಆಚಾರ್ಯರಿಗೆ ಕರತಲಾಮಲಕವಾಗಿದ್ದವು.

ಇವರ ಪಾಂಡಿತ್ಯಕ್ಕೆ ಮೆಚ್ಚಿ ಶ್ರೀ ಸತ್ಯಧ್ಯಾನ ತೀರ್ಥರು ಇವರನ್ನು ತಮ್ಮಲ್ಲಿಯ ಪ್ರತಿಯೊಂದು ಮಹಾ ಸಮಾರಾಧನೆ, ಸಭೆ, ವಿದ್ವದ್ಗೋಷ್ಠಿಗಳಿಗೆ ಅಹ್ವಾನಿಸುತ್ತಿದ್ದರು. ತಾವು ಕಾಶಿಗೆ ಹೋಗುವಾಗ ಗೌಡಗಿರಿ ಆಚಾರ್ಯರನ್ನೂ ಶ್ರೀ ಸತ್ಯಧ್ಯಾನ ತೀರ್ಥರು ಕರೆದುಕೊಂಡು ಹೋಗಿದ್ದರು. ಆಚಾರ್ಯರ ಪಾಂಡಿತ್ಯವನ್ನು ಕಂಡು ಕಾಶಿಯ ಪಂಡಿತರು ಕೌತುಕಗೊಂಡರು. ಉತ್ತರಾದಿ ಮಠದ ಶ್ರೀಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರೂ ಗೌಡಗಿರಿ ಆಚಾರ್ಯರ ಮೇಲೆ ವಿಶೇಷ ಅಭಿಮಾನ ಮಾಡುತ್ತಿದ್ದರು.

ರಾಮಸುಬ್ಬಾಶಾಸ್ತ್ರಿಯು ಬರೆದ ಚಂದ್ರಿಕಾ ಖಂಡನಾಭಾಸ ಗ್ರಂಥಕ್ಕೆ ಗೌಡಗಿರಿ ಆಚಾರ್ಯರು ಪ್ರತಿ ಖಂಡನೆಯನ್ನು ಬರೆದು ಚಂದ್ರಿಕಾ ಮಂಡನೆಯನ್ನು ಮಾಡಿದರು. ಅವರ ಈ ಗ್ರಂಥವು ವೆಂಕಟರಮಣಾಚಾರ್ಯರ ಪ್ರಾಮಾಣಿಕ ಪಾಂಡಿತ್ಯ, ತತ್ತ್ವ ವಿಮರ್ಶನ ವೈದಗ್ಧ್ಯ, ವೇದಾಂತ ಶಾಸ್ತ್ರದಲ್ಲಿ ಅವರಿಗಿರುವ ತಲಸ್ಪರ್ಶಿ ಜ್ಞಾನಗಳಿಗೆ ಕನ್ನಡಿ ಹಿಡಿಯುತ್ತದೆ.

ಇವರು ಇನ್ನೂ ಅನೇಕ ಪ್ರೌಢ ಶಾಸ್ತ್ರೀಯ ಗ್ರಂಥಗಳನ್ನು ಬರೆದಿದ್ದಾರೆ.

ಇವರು ಬರೆದ ಗ್ರಂಥಗಳು—

೧) ತಾತ್ಪರ್ಯ ಚಂದ್ರಿಕಾ ಪ್ರಕಾಶ ಪ್ರಸರ
೨) ಅದ್ವೈತ ದೀಪಿಕಾ ವಾತಾಗಮ
೩) ಜೀವ ಕರ್ತೃತ್ವ ವಿಚಾರ

## ೨೧೬ ಗೌಡಗಿರಿ ವಾಸುದೇವಾಚಾರ್ಯ

ಇವರು ಶ್ಯಾಮ ಪುರದಲ್ಲಿ ಇದ್ದು ಅನೇಕ ಜನ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ನ್ಯಾಯ ವೇದಾಂತಾದಿ ಗ್ರಂಥಗಳನ್ನು ಪಾಠ ಹೇಳುತ್ತಿದ್ದರು. ಇವರಲ್ಲಿ ತುಮಕೂರಿನ ಪಲ್ಲಕ್ಕಿ ವೆಂಕಟರಮಣಾಚಾರ್ಯರು ಓದಿ ಮಹಾ ಪಂಡಿತರಾದರು. "ಸಾಗರದ ಗಾಂಭೀರ್ಯವನ್ನೂ ಗೌಡಗಿರಿ ವಾಸುದೇವಾಚಾರ್ಯರ ಪಾಂಡಿತ್ಯವನ್ನು ಯಾರೂ ಅಳೆಯಲಾರರು, ಯಾರೂ ತಿಳಿಯಲಾರರು ಎಂಬ ಜಾಣ್ನುಡಿ ಅಂದಿನ ವಿದ್ವತ್ ಪ್ರಂಪಚದಲ್ಲಿ ಪ್ರಚಲಿತವಾಗಿದ್ದಿತು.

## ೨೧೭ ಇಭರಾಮಪುರ ಕೃಷ್ಣಾಚಾರ್ಯ
(ಅಪ್ಪಾ ಅವರು)



ನಮ್ಮ ಕರ್ನಾಟಕ ಪುಣ್ಯ ಭೂಮಿಯಲ್ಲಿ ಅವತರಿಸಿದ ಮಹಾ ಮಹಿಮಾ ಪುರುಷರಲ್ಲಿ ಶ್ರೀ ಇಭರಾಮಪುರ ಕೃಷ್ಣಾಚಾರ್ಯರು (ಅಪ್ಪಾಅವರು) ಒಬ್ಬರು. ಇವರು ಜನ್ಮಜಾತ ಸಿದ್ಧ ಪುರುಷರು. ಇವರು ಅನೇಕ ಮಹಿಮೆಗಳನ್ನು ತೋರಿ ಭಕ್ತ ಜನರನ್ನು ಉದ್ಧರಿಸಿರುವರು. ಭಕ್ತ ಜನರಿಗೆ ಬಂದ ಆಪತ್ತುಗಳನ್ನು ಪರಿಹರಿಸಿ ಹರಿ ಮತವನ್ನು ತೋರಿ ಕಾಪಾಡುತ್ತಿದ್ದುದರಿಂದ ಜನರು ಇವರನ್ನು 'ಅಪ್ಪಾಅವರು' ಎಂದೇ ಭಕ್ತಿಯಿಂದ ಕರೆಯುತ್ತಿದ್ದರು. ಮುಂದೆ ಇವರು ಅಪ್ಪಾ ಅವರೆಂದೇ ಪ್ರಸಿದ್ಧರಾದರು.

ಇವರು ೧೭೮೩ ನೇ ಇಸ್ವಿಯಲ್ಲಿ ಮಂತ್ರಾಲಯದ ಹತ್ತಿರವಿರುವ ಇಭರಾಮಪುರ ದಲ್ಲಿ ಜನಿಸಿದರು. ತಂದೆ ಅಹೋಬಲಾಚಾರ್ಯರು. ತಾಯಿ ಕೃಷ್ಣಮ್ಮ.

ಅಪ್ಪಾ ಅವರು ಶ್ರೀ ರಾಘವೇಂದ್ರ ಸ್ವಾಮಿಗಳ ಆತ್ಯಂತಿಕ ಭಕ್ತರು. ಪಂಚ ಮುಖಿ ಪ್ರಾಣದೇವರ ಉಪಾಸಕರು.

ಶ್ರೀಮದ್ ರಾಯರ ಮಠದ ಸುಧರ್ಮೇಂದ್ರ ತೀರ್ಥರು, ಸುರಪುರದ ಆನಂದ ದಾಸರು, ಹುಲಗಿ ನರಸಪ್ಪಾಚಾರ್ಯರು, ರಾಯಚೂರ ಕೃಷ್ಣಾಚಾರ್ಯರು, ಯೋಗಿ ನಾರಾಯಣಾಚಾರ್ಯರು,ಮೊದಲಕಲ್ಲ ಶೇಷದಾಸರು ಮೊದಲಾದವರು ಇವರ ಸಮಕಾಲೀನರು.

ಶ್ರೀ ಯೋಗಿ ನಾರಾಯಣಾಚಾರ್ಯರು ಇವರ ಶಿಷ್ಯರು.

ಅಪ್ಪಾ ಅವರು ಮೈಸೂರು ಪ್ರಾಂತ, ನೈಋತ್ಯ ಕರ್ನಾಟಕ, ಉತ್ತರ ಕರ್ನಾಟಕಗಳಲ್ಲಿ ಸಂಚರಿಸಿ ಅನೇಕ ಮಹಿಮೆಗಳನ್ನು ತೋರಿದ್ದಾರೆ.

ಮೈಸೂರಿನ ಸರಮಿನ ಆಫೀಸಿನ ಶ್ರೀ ರಾಮರಾಯರು ಅಪ್ಪಾಅವರ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿದ್ದರು. ಇವರ ಶಿಷ್ಯ ಅಟ್ಟಾಜಿ ವೆಂಕಟರಾಯರು. ಮೈಸೂರಿನ ಕಟ್ಟೆ ಮನೆಯಲ್ಲಿ ಇಂದಿಗೂ ಅಪ್ಪಾ ಅವರ ಪೂಜೆ ನಡೆಯುತ್ತಿದೆ. ಅಪ್ಪಾ ಅವರು ೧೮೬೯ ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

## ೨೧೮ ಕಾಶೀ ತಿಮ್ಮಣ್ಣಾಚಾರ್ಯ

ಇವರು ಮೂಲತಃ ಈಗಿನ ಆಂಧ್ರ ಪ್ರದೇಶದ ಪೆನಗೊಂಡಿಯವರು.

ಇವರ ತಂದೆ ವರಾಹಮೂರ್ತಿ ಆಚಾರ್ಯರು. ಇವರು ಚಿಕ್ಕವರಿದ್ದಾಗ ತಂದೆಯವರ ಹತ್ತಿರವೇ ಅಧ್ಯಯನ ಮಾಡಿ ಮುಂದೆ ಕಾಶಿಗೆ ಹೋಗಿ ನ್ಯಾಯ, ವ್ಯಾಕರಣ, ಮೀಮಾಂಸಾದಿ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿ ಬಂದರು.

ಉತ್ತರಾದಿ ಮಠದ ಶ್ರೀ ಸತ್ಯಧರ್ಮತೀರ್ಥರಲ್ಲಿ ಸುಧಾದಿ ಗ್ರಂಥಗಳನ್ನು ಓದಿ ವೇದಾಂತದಲ್ಲಿ ಮಹಾ ಪಂಡಿತರಾದರು.

ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸ ರಾಗಿದ್ದರು. ಇವರು ಮಹಾ ತಪಸ್ವಿಗಳೂ ಆಗಿದ್ದರು.

ಇವರು ಬರೆದ ಸುಧಾ ಟಿಪ್ಪಣಿಯು ಬಹು ಪ್ರೌಢವೂ, ಬಹು ವಿಷಯೋಪ ಬ್ರಂಹಿತವೂ ಆಗಿದೆ. ಇವರ ಭೇದೋಜ್ಜೀವಿನಿ ಟಿಪ್ಪಣಿಯೂ ಅಷ್ಟೇ ಪಾಂಡಿತ್ಯ ಪೂರ್ಣವಾಗಿದೆ.

ಇವರಲ್ಲಿ ಕಾವೇರಿ ಶೀನಪ್ಪಾಚಾರ್ಯರೂ, ಸೌಧೆ ಶ್ರೀನಿವಾಸಾಚಾರ್ಯರೂ ಓದಿ ಪ್ರಖ್ಯಾತರಾಗಿದ್ದಾರೆ.

## ೨೧೯ ಕಾಶೀ ಪ್ರಾಣೇಶಾಚಾರ್ಯರು

ಇವರು ಸುಪ್ರಸಿದ್ಧ ಸುಧಾ ಟಿಪ್ಪಣಿಕಾರರಾದ ಕಾಶೀ ತಿಮ್ಮಣ್ಣಾಚಾರ್ಯರ ಮರಿಮಕ್ಕಳು.

ಇವರು ಆತ್ಮಕೂರ ರಂಗಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ, ಪುಂಗನೂರ ರಾಘವೇಂದ್ರಾಚಾರ್ಯರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದರು.

ಮೈಸೂರಿನ ಸಂಸ್ಕೃತ ಮಹಾರಾಜಾ ಕಾಲೇಜಿನಲ್ಲಿ ತರ್ಕಾಧ್ಯಾಪಕರಾಗಿ ಅನೇಕ ವಿದ್ಯಾರ್ಥಿಗಳಿಗೆ ಪಾಠಹೇಳಿದರು. ಇವರು "ಪೂರ್ಣಬೋಧ" ಎಂಬ ಕನ್ನಡ ಮಾಸ ಪತ್ರಿಕೆಯನ್ನು ಪ್ರಕಟಿಸಿ, ಮಧ್ವಮತವನ್ನು ಪ್ರಚಾರ ಮಾಡಿದರು.

ಇವರಿಗೆ ಬಂಗಾಲಿ ಭಾಷೆಯಲ್ಲಿ ಒಳ್ಳೆ ಪ್ರಭುತ್ವನಿದ್ದಿತು. ಎಷ್ಟೋ ಬಂಗಾಲಿ ಪುಸ್ತಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿರುವರು.

ಇವರು ಅತ್ಯಂತ ಸದಾಚಾರಿಗಳೂ, ಪಾಠ–ಪ್ರವಚನದಲ್ಲಿ ದೀಕ್ಷೆಯುಳ್ಳವರೂ ಆಗಿದ್ದರು. ಮದ್ರಾಸಿನ ಪಂಡಿತವರೇಣ್ಯರಾದ— ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು ಇವರಲ್ಲಿ ವೇದಾಂತವನ್ನು ಅಧ್ಯಯನಮಾಡಿದರು.

## ೨೨೦ ಕಾಶೀ ಕೃಷ್ಣಾಚಾರ್ಯ



ಇವರು ಪ್ರಸಿದ್ಧ ಕಾಶೀ ಪಂಡಿತ ಮನೆತನಕ್ಕೆ ಸೇರಿದವರು. ಇವರು ಗುಂಟೂರಿನಲ್ಲಿ ವಾಸವಾಗಿದ್ದರು. ಆಂಧ್ರ ದೇಶದಲ್ಲಿ ಶ್ರೀ ಮಧ್ವಾಚಾರ್ಯರ ಸತ್‌ಸಂಪ್ರದಾಯಗಳನ್ನು ಬೆಳಗಿಸುತ್ತ ಗೀರ್ವಾಣ ಭಾಷೆಯ ಉತ್ಥಾನಕ್ಕಾಗಿ ದುಡಿದವರಲ್ಲಿ ಶ್ರೀ ಕೃಷ್ಣಾಚಾರ್ಯರು ಅಗ್ರೇಸರರು.

ಕೃಷ್ಣಾಚಾರ್ಯರು ೧೮೭೩ನೇ ಇಸ್ವಿಯಲ್ಲಿ ಜನಿಸಿದರು. ತಂದೆ ಲಕ್ಷ್ಮೀ ನರಸಿಂಹಾಚಾರ್ಯರು. ನ್ಯಾಯ ವೇದಾಂತಗಳಲ್ಲಿ ಶ್ರೇಷ್ಠ ಪಂಡಿತರಾಗಿದ್ದರಲ್ಲದೆ ಶತಾವಧಾನಿಗಳೂ ವಾಗ್ಮಿಗಳೂ ಆಗಿದ್ದರು.

ಸಂಗೀತ, ತಂತುವಾದ್ಯ, ನಾಗಸ್ವರ, ಘಟವಾದ್ಯ ಮುಂತಾದವುಗಳಲ್ಲಿಯೂ ಇವರಿಗೆ ಚತುರಿಮೆ ಇತ್ತು.

ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

"ಕ್ರಿಯಾದರ್ಶನ, ಸಂಸ್ಕೃತ ಸಾಮ್ರಾಜ್ಯ, ವಾಲ್ಮೀಕಿ ಸಂವಾದ" ಮುಂತಾದ ಗ್ರಂಥಗಳನ್ನು ರಚಿಸಿರುವರು.

೧೯೬೧ ರಲ್ಲಿ ಇವರಿಗೆ ಆಂಧ್ರ ರಾಜ್ಯದ ಪರವಾಗಿ ರತ್ನ ಖಚಿತ ಸುವರ್ಣ ಕಿರೀಟವನ್ನು ಅರ್ಪಿಸಲಾಯಿತು.

೧೯೬೦ರಲ್ಲಿ ೧೫ ಆಗಸ್ಟರಂದು ರಾಷ್ಟ್ರಾಧ್ಯಕ್ಷ ಡಿ. ಬಾಬು ರಾಜೇಂದ್ರ ಪ್ರಸಾದರು ಇವರನ್ನು ದಿಲ್ಲಿಯಲ್ಲಿ ಗೌರವಿಸಿ ಪ್ರಶಸ್ತಿ, ಗೌರವ ಧನ, ಮಾಶಾಸನವನ್ನಿತ್ತು ಗೌರವಿಸಿದರು.

ಉತ್ತರಾದಿ ಮಠದ ಪಂಡಿತ ಪರಿವ್ರಾಜಕರಾದ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿದ್ದರು.

ಇವರು ತಮ್ಮ ೯೩ನೇ ವಯಸ್ಸಿನಲ್ಲಿ ವೈಕುಂಠವಾಸಿಗಳಾದರು.

# ವರಖೇಡಿ (ಮಿತ್ರಿಕೋಟಿ) ಆಚಾರ್ಯರು

## ೨೨೧ ನರಸಿಂಹಾಚಾರ್ಯ ವರಖೇಡಿ (ಮಿತ್ರಿಕೋಟಿ)

ಹುಬ್ಬಳ್ಳಿಯ ಸಮೀಪದ ಮಿತ್ರಿಕೋಟೆಯಲ್ಲಿ ೧೮೨೧ ನೇ ಇಸ್ವಿಯಲ್ಲಿ ಜನಿಸಿದ ನರಸಿಂಹಾಚಾರ್ಯರು ಸಂಸ್ಕೃತದಲ್ಲಿ ವ್ಯುತ್ಪನ್ನರು. ಒಳ್ಳೇ ಪುರಾಣಿಕರು. ಸಂಗೀತ ವಿಶಾರದರು. ಇವರ ಸ್ಮರಣಶಕ್ತಿಯು ಅಸಾಧಾರಣವಾಗಿದ್ದಿತು. ಅಷ್ಟಾವಧಾನಗಳನ್ನು ಮಾಡುತ್ತಿದ್ದರು.

ಗದುಗಿನ ವೀರನಾರಾಯಣ ದೇವರ ಗುಡಿಯಲ್ಲಿ ಭಾಗವತ ಸಪ್ತಾಹ ಪುರಾಣ ಹೇಳಿ ಸಾವಿರಾರು ಜನರ ಸಂತರ್ಪಣೆಯನ್ನು ನೆರವೇರಿಸಿದರು.

ಇವರು "ಪುರಾಣ ಪದ್ಧತಿ", "ನರಸಿಂಹ ಕರಾವಲಂಬನ ಸ್ತೋತ್ರ" ಮುಂತಾದ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ.

## ೨೨೨ ವೇದವ್ಯಾಸಾಚಾರ್ಯ ವರಖೇಡಿ



ಇವರು ಹೊಂಬಳ ಗುರಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿ ಪುರಾಣ, ಸಾಹಿತ್ಯ, ಪೌರೋಹಿತ್ಯದಲ್ಲಿ ಪಾಂಡಿತ್ಯವನ್ನು ಪಡೆದರು. ಇವರಿಗೆ ಕನ್ನಡ, ಸಂಸ್ಕೃತ ಎರಡೂ ಭಾಷೆಗಳ ಮೇಲೆ ಪ್ರಭುತ್ವವಿದ್ದು, ಸಂಗೀತದಲ್ಲಿಯೂ ಇವರು ಪರಿಣತಿಯನ್ನು ಪಡೆದಿದ್ದರು. ಇವರು ಸಹಸ್ರಾರು ಜನರ ಮನರಂಜನೆಯಾಗುವಂತೆ ಸಂಗೀತ–ಸಾಹಿತ್ಯ ಪರಿಕರಗಳೊಂದಿಗೆ ಉತ್ತಮ ರೀತಿಯಿಂದ ಹರಿಕಥೆಯನ್ನು ಮಾಡುತ್ತಿದ್ದರು.

ಸ್ವಾದಿ, ಉಡುಪಿ, ಮಂತ್ರಾಲಯ, ಹುಬ್ಬಳ್ಳಿ, ಬೆಳಗಾವಿ, ವಿಜಾಪುರ ಮೊದಲಾದ ಕಡೆಗಳಲ್ಲಿ ತಮ್ಮ ಅಮೋಘವಾದ ಕೀರ್ತನ ಕಲಾ–ಕೌಶಲದಿಂದ ಅನೇಕ

ಪೀಠಾಧಿಪತಿಗಳನ್ನೂ, ಪಾಮರರನ್ನೂ ರಂಜಿಸಿ–ತಣಿಸಿ–ಕುಣಿಸಿ–ಸಂತೋಷಪಡಿಸಿ, ಎಷ್ಟೋ ಬಿರುದು–ಬಾವಲಿಗಳನ್ನೂ ಸುವರ್ಣ ಪದಕಗಳನ್ನೂ ಸಂಪಾದಿಸಿದರು.

೧೯೨೮ ನೇ ಇಸ್ವಿಯಲ್ಲಿ ಬೆಂಗಳೂರಲ್ಲಿ ಜರಗಿದ ಅಖಿಲ ಕರ್ನಾಟಕದ ಕೀರ್ತನಕಾರರ ಸಮ್ಮೇಲನದಲ್ಲಿ ಸುವರ್ಣ ಪದಕವನ್ನೂ ಕೀರ್ತನಮುಕುಟ, ಕೀರ್ತನಾಲಂಕಾರ ಎಂಬ ಬಿರುದನ್ನೂ ಪಡೆದರು.

### ೨೨೪ ವರಖೇಡಿ ಶ್ರೀನಿವಾಸಾಚಾರ್ಯ

ವೇದಾಂತದಲ್ಲಿ ಮಹಾ ಪಂಡಿತರು. ಪುದುಕೊಟ್ಟಾ ಸಂಸ್ಥಾನದ ಮಹಾರಾಜಾ ಕಾಲೇಜದಲ್ಲಿ ಅಧ್ಯಾಪಕರಾಗಿದ್ದರು ಹಾಗೂ ಅರಮನೆಯ ಧರ್ಮಾಧಿಕಾರಿಗಳಾಗಿದ್ದರು.

### ೨೨೫ ವರಖೇಡಿ ರಂಗನಾಥಾಚಾರ್ಯ

ಶ್ರೀ ವರಖೇಡಿ ರಂಗನಾಥಾಚಾರ್ಯ ಇವರು ವ್ಯಾಕರಣದಲ್ಲಿ ಮಹಾ ಪಂಡಿತರು. ತಿರುವಾದಿ ಸಂಸ್ಕೃತ ಕಾಲೇಜದಲ್ಲಿ ಇವರು ಅಧ್ಯಾಪಕರಾಗಿದ್ದರು.

### ೨೨೬ ಪ್ರದ್ಯುಮ್ನಾಚಾರ್ಯ ವರಖೇಡಿ



ಈ ವರಖೇಡಿ ಪ್ರದ್ಯುಮ್ನಾಚಾರ್ಯ ಮತ್ತು ನರಸಿಂಹಾಚಾರ್ಯ ಬಂಧುಗಳು ಅದ್ವೈತ ಭೂಯಿಷ್ಠವಾದ ಮಹಾರಾಷ್ಟ್ರದ ಗಂಡುಮೆಟ್ಟಿನಲ್ಲಿ ನಿಂತು ಭೀಮಾರ್ಜುನರಂತೆ ಎಲ್ಲೆಡೆಗೆ ಸಂಚರಿಸಿ ದ್ವೈತ ದುಂದುಭಿಯನ್ನು ಕರ್ನಾಟಕ, ಮಹಾರಾಷ್ಟ್ರ, ಮಧ್ಯಪ್ರದೇಶ, ಉತ್ತರ ಪ್ರದೇಶಗಳಲ್ಲಿ ಮೊಳಗಿಸಿದರು.

ಮಹಾರಾಷ್ಟ್ರವು ಅವರ ಕಾರ್ಯಕ್ಷೇತ್ರವಾದರೆ ಕಾಶಿ, ಗಯಾಗಳು ಅವರ ವ್ಯಾಸಪೀಠಗಳಾಗಿದ್ದವು.

ಶ್ರೀ ಶ್ರೀ ಸತ್ಯಧ್ಯಾನ ತೀರ್ಥರು ಗಯಾ ಸಂಚಾರಕ್ಕೆ ಹೋದಾಗ ಪಂಡಿತೋತ್ತಮರಾದ ಶ್ರೀ ಪ್ರದ್ಯುಮ್ನಾಚಾರ್ಯರಿಗೆ ಗಯಾದಲ್ಲಿ ಸಂಸ್ಕೃತ ಪಾಠ ಶಾಲೆ

ಯನ್ನು ತೆರೆದು ಅಲ್ಲಿ ಅಧ್ಯಾಪಕರನ್ನಾಗಿ ಇಟ್ಟರು. ಪ್ರದ್ಯುಮ್ನಾಚಾರ್ಯರ ಪ್ರಭಾವ ದಿಂದ ಗಯಾ ಇಂದಿಗೂ ವೈಷ್ಣವ ಸಿದ್ಧಾಂತದ ಕೇಂದ್ರವಾಗಿದೆ. ಶ್ರೀ ವಿಷ್ಣುಪಾದ ದೇವಸ್ಥಾನದಲ್ಲಿ ಪ್ರದ್ಯುಮ್ನಾಚಾರ್ಯರ ದೊಡ್ಡ ಭಾವ ಚಿತ್ರ ಕಂಗೊಳಿಸುತ್ತಲಿದೆ.

ಶ್ರೀ ಪ್ರದ್ಯುಮ್ನಾಚಾರ್ಯರು ತಮ್ಮ ಸೋದರ ಮಾವಂದಿರಾದ ಏರಿ ರಾಘ ವಾಚಾರ್ಯರಲ್ಲಿ ಕಾವ್ಯ ನಾಟಕ ಸಾಹಿತ್ಯಗಳನ್ನು ಓದಿ ಮುಂದೆ ಬಡೋದೆಯ ಭೀಷ್ಮಾಚಾರ್ಯ ಏನಾಪುರೆ ಎಂಬುವರಲ್ಲಿ ಮನೋರಮಾ ಪರಿಭಾಷೇಂದು ಶೇಖರ ಮುಂತಾದ ವ್ಯಾಕರಣ ಗ್ರಂಥಗಳನ್ನು ಓದಿದರು.

ನಂತರ ಉತ್ತರಾದಿ ಮಠಕ್ಕೆ ಬಂದು ಶ್ರೀ ಸೇತುರಾಮಾಚಾರ್ಯರ (ಶ್ರೀ ಸತ್ಯ ಧ್ಯಾನರು) ಲ್ಲಿ ನ್ಯಾಯ ವೇದಾಂತಗಳ ಪಾಠಗಳನ್ನು ಮುಗಿಸಿ ಮಹಾ ಪಂಡಿತ ರಾದರು.

ಮುಂದೆ ಇಬ್ಬರೂ ಬಂಧುಗಳು ಪಂಢರಪುರದಲ್ಲಿ ಪೂರ್ಣಪ್ರಜ್ಞ ಸಂಸ್ಕೃತ ಪಾಠ ಶಾಲೆಯನ್ನು ತೆರೆದು ಅನೇಕ ಜನ ಪಂಡಿತರನ್ನು ಸಿದ್ಧಗೊಳಿಸಿದರು.

ಪ್ರದ್ಯುಮ್ನಾಚಾರ್ಯರು ಅಗ್ನಿಹೋತ್ರವನ್ನು ಇಟ್ಟುಕೊಂಡು ಅನೇಕ ಯಾಗ, ಯಜ್ಞಗಳನ್ನು ಮಾಡಿದರು.

ಇವರು ಸಾತ್ವಿಕ ವೃತ್ತಿಯ ಸಾಕಾರ ರೂಪವೇ ಆಗಿದ್ದರು.

### ೨೨೬ ವರಖೇಡಿ ನರಸಿಂಹಾಚಾರ್ಯ



ಶ್ರೀ ಸತ್ಯಧ್ಯಾನರ ಗರಡಿಯಲ್ಲಿ ತಯಾರಾದ ಪಂಡಿತ ಜಗಜಟ್ಟಿಗಳಲ್ಲಿ ಪಂಡಿತ ನರಸಿಂಹಾಚಾರ್ಯರು ನಿಜವಾಗಿ ಸಿಂಹರೇ ಆಗಿದ್ದರು. ಅವರ ನ್ಯಾಯ ಪರಿಷ್ಕೃತ ವಾದ ವಾದವೈದುಷ್ಯ ಮತ್ತು ಯುಕ್ತಿ ಯುಕ್ತ ವಾದ ಉಕ್ತಿ ವೈಖರಿ, ಚರ್ಚಾ ಚಾತುರಿಯನ್ನು ಕಂಡು ಕೇಳಿದ ಪ್ರತಿವಾದಿ ಪಂಡಿತರು ಅಪ್ರತಿಭರಾಗುತ್ತಿದ್ದರು.

ಪ್ರದ್ಯುಮ್ನಾಚಾರ್ಯ ಬಂಧುಗಳ ಮನೆತನದ ಮೂಲ ಈ ಸ್ಥಳ ಅಹಮ್ಮದನಗರ ಜಿಲ್ಹೆಯ ಗೋದಾವರೀ ತೀರದ ವರಖೇಡ ಗ್ರಾಮ.

ಮುಂದೆ ಈ ಮನೆತನದ ಕೆಲವು ಮಹನೀಯರು ವರದಾ ತೀರದ ಕರ್ಜಗಿಗೆ ಬಂದು ನೆಲಸಿದರು. ಅವರಲ್ಲಿ ಮಾಧವಾಚಾರ್ಯ ಕರ್ಜಗಿ ಎಂಬವರು ಕರ್ಹಾಡ ಗೋಪಾಲಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದರು.

ಪ್ರದ್ಯುಮ್ನಾಚಾರ್ಯ, ನರಸಿಂಹಾಚಾರ್ಯರ ತಂದೆ ಕೇಶವಾಚಾರ್ಯರು.

ಶ್ರೀ ನರಸಿಂಹಾಚಾರ್ಯರು ಚಿಕ್ಕಂದಿನಿಂದಲೇ ಉತ್ತರಾದಿ ಮಠಕ್ಕೆ ಬಂದು, ಶ್ರೀ ಕೃಷ್ಣಾಚಾರ್ಯ ಪಾಂಡುರಂಗಿ ಮತ್ತು ಶ್ರೀ ಶ್ರೀ ಸತ್ಯಧ್ಯಾನತೀರ್ಥರಲ್ಲಿ ನ್ಯಾಯ, ವೇದಾಂತಾದಿಗಳನ್ನು ಓದಿ ಮಹಾ ಪಂಡಿತರಾದರು.

ಇವರ ವಿದ್ಯಾ ವೈದುಷ್ಯ, ವಾಕ್ಯಾರ್ಥ ಚಾತುರಿ, ಮುಂತಾದ ಸದ್ಗುಣಗಳಿಗೆ ಮೆಚ್ಚಿ, ಶ್ರೀ ಸತ್ಯಧ್ಯಾನತೀರ್ಥರು ಚಿನ್ನದ ಕಡಗ ಮುಂತಾದವುಗಳನ್ನು ಕೊಟ್ಟು, ಕಾಶಿಯಂಥ ವಿಮತೀಯ, ವಿದ್ವದ್ಭೂಯಿಷ್ಠವಾದ ವಿದ್ಯಾಕೇಂದ್ರದಲ್ಲಿ ದ್ವೈತದುಂದುಭಿಯನ್ನು ಮೊಳಗಿಸಲಿಕ್ಕೆಂದು ನರಸಿಂಹಾಚಾರ್ಯರನ್ನು ಸಂಬಳ ಕೊಟ್ಟು ಇಟ್ಟಿದ್ದರು.

ಆಗಲೇ ಆಚಾರ್ಯರು ಕಾಶಿಯಲ್ಲಿ "ಅಮರ ಭಾರತಿ" ಎಂಬ ಉಚ್ಚಮಟ್ಟದ ಸಂಸ್ಕೃತ ಪತ್ರಿಕೆಯನ್ನು ಹೊರಡಿಸಿದರು.

ಇವರು ಬರೆದ ಅದ್ವೈತ ಭ್ರಾಂತಿ ಪ್ರಕಾಶ, ಅದ್ವೈತ ಕಪೋಲಚಪೇಟಿಕಾ, ಅಣು ಭಾಷ್ಯಾರ್ಥ ಸಂಗ್ರಹ, ಪರಾಪರ ವಿವೇಕ, ವಿಷ್ಣು ಸರ್ವೋತ್ತಮತ್ವ ಮೊದಲಾದ ಸಂಸ್ಕೃತ ಶಾಸ್ತ್ರೀಯ ಗ್ರಂಥಗಳು ವೈಷ್ಣವ ಸಿದ್ಧಾಂತಕ್ಕೆ ಅಪೂರ್ವ ನಿಧಿಗಳಂತಿವೆ.

ಅ. ಭಾ. ವೈಷ್ಣವ ದರ್ಶನ ಸಮ್ಮೇಲನದ ಅಧ್ಯಕ್ಷರೂ ಆಗಿದ್ದರು.

ಪಂಡಿತ ಜಾಲೀಹಾಳ ಶ್ರೀನಿವಾಸಾಚಾರ್ಯ, ಉಮರ್ಜಿ ನರಸಿಂಹಾಚಾರ್ಯ ಮುಂತಾದ ಅನೇಕರು ಇವರಲ್ಲಿ ಓದಿ ಪಂಡಿತ ಪ್ರಕಾಂಡರಾಗಿದ್ದಾರೆ.

## ಚಿಕ್ಕೇರೂರ ಆಚಾರ್ಯರು

### ೨೨೭ ಚಿಕ್ಕೇರೂರು ಹನುಮಂತಾಚಾರ್ಯ

ಚಿಕ್ಕೇರೂರಿನ ಭಾದ್ರಿ ವಂಶಕ್ಕೆ ಸೇರಿದವರಾದ ಚಿಕ್ಕೇರೂರು ಶ್ರೀ ಹನಮಂತಾಚಾರ್ಯರು ಚಿಕ್ಕವರಿದ್ದಾಗ ವಿದ್ಯಾಭ್ಯಾಸಕ್ಕೆ ಕಾಶೀ ನವದ್ವೀಪಕ್ಕೆ ಹೋದರು. ಜಗತ್ಪಂಡಿತರಾಗಿ ಕಾಶೀ ಸಂಸ್ಥಾನ, ಗ್ವಾಲ್ಹೇರ ಸಂಸ್ಥಾನಗಳಲ್ಲಿ ಆಸ್ಥಾನ ಪಂಡಿತರಾಗಿ, ಕಾಶಿಯಲ್ಲಿಯೇ ಸಂಸಾರ ಸಮೇತರಾಗಿ ವಾಸವಾಗಿದ್ದರು.

ಇವರು ತರ್ಕ ಸಂಗ್ರಹಕ್ಕೆ ಹನುಮದೀಯವೆಂಬ ಟಿಪ್ಪಣಿಯನ್ನು ಬರೆದು "ಭಟ್ಟಾಚಾರ್ಯ"ರೆಂಬ ಪ್ರಶಸ್ತಿಯನ್ನು ಪಡೆದಿದ್ದರು.

ಬಾಗಲಕೋಟೆಯ ಶ್ರೀ ಕೆರೂರು ಸ್ವಾಮಿರಾಚಾರ್ಯರೂ, ಚಿಕ್ಕೇರೂರು ಶ್ರೀ ಸ್ವಾಮಿರಾಯಾಚಾರ್ಯರೂ ಇವರಲ್ಲಿ ಓದಿ ಪ್ರಖ್ಯಾತರಾದ ಪಂಡಿತರು.

## ೨೨೮ ಚಿಕ್ಕೇರೂರ ಸ್ವಾಮಿರಾಯಾಚಾರ್ಯ



ಇವರು ಸಾತೇನ ಹಳ್ಳಿಯಲ್ಲಿ ೧೮೩೩ರಲ್ಲಿ ಜನಿಸಿದರು. ಇವರ ತಂದೆ ನಾರಾಯಣಾಚಾರ್ಯರು. ಇವರು ಚಿಕ್ಕವರಿದ್ದಾಗ ಒಬ್ಬ ಬೈರಾಗಿಯ ಕೂಡ ಕಾಶಿಗೆ ಹೋಗಿ ಅಲ್ಲಿ ಚಿಕ್ಕೇರೂರಿನ ಭಾದ್ರಿ ಹನುಮಂತಾಚಾರ್ಯರಲ್ಲಿ ನ್ಯಾಯ ವೇದಾಂತಗಳನ್ನು ಓದಿ ಪ್ರಸಿದ್ಧ ಪಂಡಿತರಾದರು. ಬಾಗಲಕೋಟೆಯ ಕೆರೂರು ಸ್ವಾಮಿರಾಯಾಚಾರ್ಯರು ಇವರ ಸಹಾಧ್ಯಾಯಿಗಳು.

ಚಿಕ್ಕೇರೂರು ಸ್ವಾಮಿರಾಯಾಚಾರ್ಯರು ಕಾಶಿ, ಗ್ವಾಲ್ಹೇರ ಸಂಸ್ಥಾನಗಳಲ್ಲಿ ಆಸ್ಥಾನ ವಿದ್ವಾಂಸರಾಗಿದ್ದರು. ೧೮೫೦ ನೇ ಇಸ್ವಿಯಲ್ಲಿ ಕರ್ನಾಟಕಕ್ಕೆ ಬಂದು ಹರಪನಹಳ್ಳಿಯಲ್ಲಿ ವಾಸವಾಗಿದ್ದರು.

ಹರಪನಹಳ್ಳಿಯಲ್ಲಿ ನೂರಾರು ಜನರಿಗೆ ನ್ಯಾಯ ವೇದಾಂತಗಳ ಪಾಠ ಹೇಳಿದರು. ಆಚಾರ್ಯರಲ್ಲಿ ಓದಿ ಪ್ರಸಿದ್ಧರಾದವರು:—ಗಲಗಲಿ ವೆಂಕಟರಮಣಾಚಾರ್ಯರು, ಗಲಗಲಿ ದಾದಾಚಾರ್ಯರು, ಹಾನಗಲ್ಲ ವಿರುಪಾಕ್ಷ ಶಾಸ್ತ್ರಿಗಳು, (ಮುಂದೆ ಇವರು ಮಹಾ ಮಹೋಪಾಧ್ಯಾಯರಾಗಿ ಕೂಡ್ಲಿ ಶೃಂಗೇರಿ ಪೀಠಕ್ಕೆ ಸ್ವಾಮಿಗಳಾದರು) ದಾವಣಗೇರಿ ಗುರಾಚಾರ್ಯರು, ತಾಮ್ರಪರ್ಣಿ ರಾಮಾಚಾರ್ಯರು, ಮಾಯಕೊಂಡ ಕೃಷ್ಣಾಚಾರ್ಯರು, ವಾಸುದೇವಶಾಸ್ತ್ರಿ, ಗಣೇಶಶಾಸ್ತ್ರಿ, ಕಂಚಿ ವೆಂಕಟಕೋಳಪ್ಪಾಚಾರ್ಯರು.

ಆಚಾರ್ಯರು ಬಡೋದಾ, ಹೈದ್ರಾಬಾದ, ಗದ್ವಾಲ, ಅನಂತಶಯನಂ, ಪದ್ಮಸರೋವರ ಸಭೆಗಳಿಗೆ ಹೋಗಿ ಅನೇಕ ಬಹುಮಾನ, ಪದವಿ, ಪ್ರಶಸ್ತಿಗಳನ್ನು ಪಡೆದರು.

ಉತ್ತರಾದಿ ಮಠದಲ್ಲಿ ಸತ್ಯವೀರ ತೀರ್ಥರ ಕಾಲದಲ್ಲಿ ಮದ್ರಾಸಿನ ಪುನರ್ವಿವಾಹ ಖಂಡನ ಸಭೆಯಲ್ಲಿ ಭಾಗವಹಿಸಿ ಉಪನ್ಯಾಸ ಮಾಡಿ ಶ್ರೀಗಳವರಿಂದ ಅನುಗ್ರಹೀತರಾದರು.

ಇವರು ೧೯೦೩ ರಲ್ಲಿ ವೈಕುಂಠವಾಸಿಗಳಾದರು.

# ೨೭೯ ಚತುರ್ವೇದಿ ರಾಮಚಂದ್ರಾಚಾರ್ಯರು



ಚತುರ್ವೇದಿ ರಾಮಚಂದ್ರಾಚಾರ್ಯರು ಚತುರಸ್ರ ಪಾಂಡಿತ್ಯವುಳ್ಳವರಾಗಿದ್ದರು. ಇವರು ತಮ್ಮ ತಂದೆಯವರಲ್ಲಿ ವೇದ-ವೇದಾಂತಗಳನ್ನು ಅಧ್ಯಯನ ಮಾಡಿ ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರಲ್ಲಿ ನ್ಯಾಯ, ವೇದಾಂತ ಉದ್ಗ್ರಂಥಗಳ ವ್ಯಾಸಂಗ ಮಾಡಿ ವಿದ್ವತ್ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತಮೋತ್ತಮರಾಗಿ ತೇರ್ಗಡೆ ಹೊಂದಿದರು. ಮೀಮಾಂಸಾ ಶಾಸ್ತ್ರವನ್ನು ಸುಬ್ರಹ್ಮಣ್ಯ ಶಾಸ್ತ್ರಿಗಳಲ್ಲಿ ಓದಿವರು.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾದಿ ಗ್ರಂಥಗಳನ್ನು ಓದಿ, ಅವರ ವಿಶೇಷ ಅನುಗ್ರಹಕ್ಕೆ ಪಾತ್ರರಾಗಿದ್ದರು.

ಇವರು ವೇದಾಂತ, ಮೀಮಾಂಸಾ, ತರ್ಕ, ವ್ಯಾಕರಣದಲ್ಲಿಯೂ ಅಪ್ರತಿಮ ಪಂಡಿತರಾಗಿದ್ದರು.

ಇನರು ಮೈಸೂರು ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ಮೀಮಾಂಸಾ ಪ್ರಾಧ್ಯಾಪಕರಾಗಿದ್ದರು.

ಮದ್ರಾಸ ವಿಶ್ವ ವಿದ್ಯಾಲಯದಿಂದ ಪ್ರಾಚೀನ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ.

ಕೇವಲ ಶಾಸ್ತ್ರ ಪಂಡಿತರಲ್ಲದೆ, ಇವರು ವೇದಕೋವಿದರೂ ಆಗಿದ್ದರು. ಶ್ರೌತ, ಸ್ಮಾರ್ತ, ಕರ್ಮಕಾಂಡಗಳಲ್ಲಿ ಘನವಾದ ಪಾಂಡಿತ್ಯ ಮತ್ತು ಯಜ್ಞ-ಯಾಗಾದಿಗಳನ್ನು ಮಾಡಿಸುವ ಅಧ್ವರ್ಯುಗಳೂ ಆಗಿದ್ದರು.

ಇವರಿಗೆ ಮಾಧ್ವ ಮಠಗಳಲ್ಲಿ ಮನ್ನಣೆಯಿದ್ದಂತೆ ಶ್ರೀವೈಷ್ಣವ ಪರಕಾಲ ಮಠದಲ್ಲಿಯೂ, ಶೃಂಗೇರಿ ಶಾರದಾ ಪೀಠದಲ್ಲಿಯೂ ಅಷ್ಟೆ ಗೌರವವಿದ್ದಿತು.

ಹಿಂದಿನ ಪರಕಾಲ ಮಠದ ಅಭಿನವ ಶ್ರೀರಂಗನಾಥ ಬ್ರಹ್ಮತಂತ್ರ ಸ್ವಾಮಿಗಳು ಇವರಿಗೆ ಸುವರ್ಣ ಪದಕ ಪ್ರಶಸ್ತಿಗಳನ್ನಿತ್ತು ಗೌರವಿಸಿದ್ದರು. ೩೦ ವರ್ಷಗಳ ಕಾಲ ಮೈಸೂರಿನ ಮಹಾ ಪಾಠ ಶಾಲೆಯಲ್ಲಿ ನೂರಾರು ಜನ ವಿದ್ಯಾರ್ಥಿಗಳನ್ನು ಸಿದ್ಧಗೊಳಿಸಿದರು.

ಶ್ರೀ ೧೦೮ ಶ್ರೀ ಸತ್ಯಪ್ರಮೋದ ತೀರ್ಥರಿಗೂ ಪ್ರೀತಿಪಾತ್ರರಾಗಿದ್ದರು. ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಜೊತೆಗೆ ಕಾಶಿಗೆ ಹೋಗಿ ಇವರು ಮೀಮಾಂಸಾ ಶಾಸ್ತ್ರಗಳಲ್ಲಿ ವಾಕ್ಯಾರ್ಥ ಮಾಡಿ— ಶ್ರೀ ಶ್ರೀಗಳವರ ಅನುಗ್ರಹಕ್ಕೂ, ಅಲ್ಲಿಯ ಪಂಡಿತರ ಮೆಚ್ಚುಗೆಗೂ ಪಾತ್ರರಾಗಿದ್ದರು.

ಆಚಾರ್ಯರು ೧೯೬೮ ನೇ ಇಸ್ವಿಯಲ್ಲಿ ಮೈಸೂರಲ್ಲಿ ವೈಕುಂಠವಾಸಿಗಳಾದರು.

## ೨೩೦ ಪಂಚಮುಖಿ ವೆಂಕಟಾಚಾರ್ಯ

ಈ ಪಂಚಮುಖಿ ವೆಂಕಟಾಚಾರ್ಯರು ಕ್ರಿ.ಶ. (೧೭೮೦–೧೮೮೫)೧೮–೧೯ನೇ ಶತಮಾನದಲ್ಲಿ ಬಾಳಿದ ಪ್ರಸಿದ್ಧ ಪಂಡಿತರು. " ಬೋಧಿಬೋಧ್ಯ ಶ್ರೀಸುಧಾದ್ಯಗಾಧ ಶಾಸ್ತ್ರಬೋಧಕ " ರೆಂದು ಇವರ ಪ್ರಸಿದ್ಧಿ.

ಇವರು ಶ್ರೀ ರಾಯರ ಮಠದ ಶ್ರೀ ಸುಬೋಧೇಂದ್ರ ತೀರ್ಥ, ಶ್ರೀ ಸುಜನೇಂದ್ರ ತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ವಾಕ್ಯಾರ್ಥ ಮಾಡಿ ಪರವಾದಿಗಳನ್ನು ಗೆದ್ದು ಶ್ರೀ ಮಠಕ್ಕೆ ಗೌರವವನ್ನು, ಕೀರ್ತಿಯನ್ನು ತಂದ ಮಹಾ ವಿದ್ವಾಂಸರು.

ಇದಕ್ಕಾಗಿ ಇವರಿಗೆ ಪಲ್ಲಕ್ಕಿ, ಘಂಟೆ, ಹಗಲು ದೀವಟಿಗೆ ಮುಂತಾದ ಗೌರವಗಳನ್ನು ಶ್ರೀ ರಾಯರ ಮಠದವರು ದಯಪಾಲಿಸಿದ್ದರು.

ಇವರ ಚರಿತ್ರೆಯನ್ನು ನವಲಗುಂದದ (ಸೂಳಿಭಾವಿ) ಭೀಮಸೇನಾಚಾರ್ಯರು ಎಂಟು ಶ್ಲೋಕಗಳಲ್ಲಿ ರಚಿಸಿರುವರು.

ಇವರು ಪಂಡಿತರಿದ್ದಂತೆ ಮಹಾ ತಪಸ್ವಿಗಳೂ ಆಗಿದ್ದರು. ಶ್ರೀ ಪಂಚಮುಖೀ ಪ್ರಾಣ ದೇವರ ಉಪಾಸಕರಾಗಿ ಸಿದ್ಧಿಯನ್ನು ಪಡೆದವರಾಗಿದ್ದರು.

ಇವರು ಪೇಶ್ವೆಯವರ ಕಾಲದಲ್ಲಿ ಶ್ರೀ ರಾಯರ ಮಠಕ್ಕೆ ಲುಪ್ತವಾದ ಆಸ್ತಿ, ಜಹಗೀರುಗಳನ್ನು ಪುನಃ ಸಂಪಾದಿಸಿಕೊಟ್ಟಿರುವರು.

ಇವರು ಭಕ್ಕರಿ ಮನೆತನದ ರಂಗಾಚಾರ್ಯರಲ್ಲಿ ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಶ್ರೀ ರಾಯರ ಮಠದ ಶ್ರೀ ಭುವನೇಂದ್ರ ತೀರ್ಥರಲ್ಲಿ ವೇದಾಂತವನ್ನೋದಿ ಪಂಡಿತರಾದವರು.

ಶ್ರೀ ಮೈಸೂರಿನ ಮುಮ್ಮಡಿ ಕೃಷ್ಣರಾಜರ ದರ್ಬಾರಕ್ಕೆ ಪುಣೆಯ ತ್ರಯಂಬಕ ಶಾಸ್ತ್ರಿ ಎಂಬ ಒಬ್ಬ ಘನ ವಿದ್ವಾಂಸನು ಆಗಮಿಸಿದನು. ಶಾಸ್ತ್ರಿಯು ಎಲ್ಲ ಸಂಸ್ಥಾನ ಗಳಲ್ಲಿಯ ಪಂಡಿತರನ್ನು ಗೆದ್ದು ಜಯ ಪತ್ರಗಳನ್ನು ಪಡೆದಿದ್ದನು. ಅದರಂತೆ ಮೈಸೂ ರಿಗೆ ಬಂದಿದ್ದನು. ಇವನ ಸಂಗಡ ವಾದ ಮಾಡಲಿಕ್ಕೆ ಎಲ್ಲ ಪಂಡಿತರು ಅಂಜಿ ಹಿಂಜರಿದದ್ದರಿಂದ ಮಹಾರಾಜನು ನಂಜನಗೂಡಿನಲ್ಲಿಷ್ಟ ಶ್ರೀ ಸುಜನೇಂದ್ರ ತೀರ್ಥ ಶ್ರೀಪಾದಂಗಳವರಿಗೆ ಮೊರೆಹೊಕ್ಕನು.

ಶ್ರೀಗಳವರು ಸಭೆಗೆ ಆಗಮಿಸಿ ಶಾಸ್ತ್ರಿಗಳ ಕೂಡ ವಾಕ್ಯಾರ್ಥ ನಡೆಯಿಸಿದರು. ಈ ವಾಕ್ಯಾರ್ಥದಲ್ಲಿ ಶ್ರೀ ಪಂಚಮುಖಿ ವೆಂಕಟಾಚಾರ್ಯರು ಪ್ರಮುಖ ಭಾಗ ವಹಿಸಿ ಶಾಸ್ತ್ರಿಗಳ ಪೂರ್ವ ಪಕ್ಷಗಳನ್ನೆಲ್ಲ ಖಂಡಿಸಿ ತಮ್ಮ ಕೋಟಿಗಳನ್ನು ಏರಿಸಿ ಅವನನ್ನು ನಿರುತ್ತರನನ್ನಾಗಿ ಮಾಡಿ ಅವನಿಂದ ಜಯಪತ್ರ ಸಂಪಾದಿಸಿ ಮೈಸೂರು ಸಂಸ್ಥಾನಕ್ಕೂ ಶ್ರೀ ಮಠಕ್ಕೂ ಗೌರವ ತಂದರು.

ಇವರು "ಅಧಿಕರಣರತ್ನಮಾಲಾ" ಎಂಬ ಗ್ರಂಥವನ್ನೂ ಮತ್ತು ಹನುಮತ್ಕ ವಚ, ಶ್ರೀ ಹನುಮತ್ಪಂಚರತ್ನ ಎಂಬ ಕೃತಿಗಳನ್ನು ರಚಿಸಿದ್ದಾರೆ. ಇವು ಉಪಲಬ್ಧವಿವೆ.

ಆಚಾರ್ಯಕೊಪ್ಪ ಎಂಬ ಪ್ರಸಿದ್ಧವಾದ ಗ್ರಾಮವು ಇವರಿಗೆ ಜಹಗೀರಾಗಿ ದೊರಕಿರುತ್ತದೆ.

ಶ್ರೀ ರಾಯರ ಮಠದ ಮನೆತನಸ್ಥ ಕುಟುಂಬಗಳಲ್ಲಿ ಪಂಚಮುಖಿಯವರ ಮನೆತನವು ಪ್ರಸಿದ್ಧವಾಗಿದೆ.

## ೨೪೧ ವಾಸುದೇವಾಚಾರ್ಯ ಬಾಗೇವಾಡಿಕರ

ಇವರು ಸೊಲ್ಲಾಪುರದವರು. ವೇದಾಂತ, ಸಾಹಿತ್ಯಗಳಲ್ಲಿ ದೊಡ್ಡ ವಿದ್ವಾಂಸರು. ಸಂಸ್ಕೃತದಲ್ಲಿ ಅನೇಕ ಚರಿತ್ರ ಗ್ರಂಥಗಳನ್ನು ಬರೆದಿದ್ದಾರೆ. ಲೌಕಿಕದಲ್ಲಿ ಒಳ್ಳೇ ಪ್ರತಿ ಷ್ಠಿತರಾಗಿದ್ದರು. ೧೯೬೭ ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

## ೨೪೨ ಕೃಷ್ಣಾಚಾರ್ಯ ಜೋಶಿ

ಇವರು ಹೈದರಾಬಾದಿನ ಪ್ರಸಿದ್ಧ ವಕೀಲರು. ಇವರು ಸರ್ವಜ್ಞ ಶಾಸ್ತ್ರವನ್ನು ಚನ್ನಾಗಿ ಅಭ್ಯಾಸ ಮಾಡಿದ್ದರು. ಇವರು ಇಂಗ್ಲೀಷ, ಹಿಂದಿ, ಕನ್ನಡದಲ್ಲಿ ಆಚಾ ರ್ಯರ ಸಿದ್ಧಾಂತದ ಬಗ್ಗೆ ಪುಸ್ತಕಗಳನ್ನು ಬರೆದಿದ್ದಾರೆ. !ಇವರು ಹೈದರಾಬಾದಿನಲ್ಲಿ ನೆರೆದ ಅಖಿಲ ಭಾರತ ಮಾಧ್ವ ೩ನೇ ತತ್ವಜ್ಞಾನ ಸಮ್ಮೇಲನದ ಸ್ವಾಗತಾಧ್ಯಕ್ಷ ರಾಗಿದ್ದರು.

## ೨೩೩ ಕುಷ್ಟಗಿ ಪ್ರಲ್ಹಾದಾಚಾರ್ಯರ



ಇವರು ಶ್ರೀನಿವಾಸಾಚಾರ್ಯ ಕುಷ್ಟಗಿಯವರ ಪುತ್ರರು. ಇವರು ಇಂಗ್ಲೀಷ ಅಧ್ಯಯನವನ್ನು ಮಾಡಿ ಸರಕಾರಿ ಕೆಲಸದಲ್ಲಿದ್ದರು. ಸರ್ವಜ್ಞ ಶಾಸ್ತ್ರವನ್ನು ಓದ ಬೇಕೆಂದು ಮಾಡಿ ಅದಕ್ಕೆ ರಾಜೀನಾಮೆ ಇತ್ತರು.

ಧಾರವಾಡದ ಕೊರ್ಲಹಳ್ಳಿ ಭೀಮಸೇನಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದರು- ಸಂಸ್ಕೃತ ಮಹಾರಾಜಾ ಕಾಲೇಜಿನಲ್ಲಿ ನ್ಯಾಯ ವೇದಾಂತದ ಉದ್ಗ್ರಂಥಗಳನ್ನು ಓದಿ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ಸುಧಾ, ಚಂದ್ರಿಕಾದಿ ಗ್ರಂಥಗಳನ್ನು ವಿಶೇಷವಾಗಿ ವ್ಯಾಸಂಗಮಾಡಿ ಒಳ್ಳೆ ವಿದ್ವಾಂಸರಾದರು.

ಧಾರವಾಡದಲ್ಲಿಯೂ, ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿಯೂ ಪಾಠ-ಪ್ರವಚನ ಮಾಡಿಸುತ್ತಿದ್ದರು.

ಇವರು ಒಳ್ಳೆ ಸದಾಚಾರಿಗಳೂ, ತ್ಯಾಗಿ–ವಿರಾಗಿಗಳೂ ಆಗಿದ್ದರು.

## ೨೩೪ ಹಂಡೇ ಶ್ರೀಪಾದದಾಸರು

ಇವರು ಮೂಲತಃ ಶಿವಮೊಗ್ಗೆಯವರು. ಮುಂದೆ ಉಡುಪಿಯಲ್ಲಿ ನೆಲಿಸಿ ಅಷ್ಟ ಮಠದ ಯತಿಗಳಿಗೆ ಬೇಕಾದವರಾಗಿ, ವಿಶೇಷವಾಗಿ— ಪುತ್ತಿಗೆ ಮಠದ ಶತಾಯುಷಿ ಶ್ರೀಪಾದಂಗಳವರ ಹಾಗೂ ಶ್ರೀ ವಿಬುಧಪ್ರಿಯತೀರ್ಥರ ಅನುಗ್ರಹಕ್ಕೆ ಪಾತ್ರರಾದರು.

ಇವರು ೫೦ ವರ್ಷಗಳಗಿಂತ ಹೆಚ್ಚು ಕಾಲ ಕೀರ್ತನ ಪ್ರಪಂಚದಲ್ಲಿ ಬೆಳಗಿದರು. ಹರಿಕಥಾ ಪ್ರಸಂಗಕ್ಕೆ ಬೇಕಾದ ಉಪಯುಕ್ತ ಗ್ರಂಥಗಳನ್ನು ರಚಿಸಿರುವರು.

## ೨೩೫ ಆಲೂರ ವೆಂಕಟರಾಯರು

ಕರ್ನಾಟಕದ ಕುಲಪುರೋಹಿತರೆಂದು ಪ್ರಸಿದ್ಧರಾದ ಆಲೂರ ವೆಂಕಟರಾಯರು ಇಂಗ್ಲೀಷ ಪದವೀಧರರಾಗಿ ನಾಮಾಂಕಿತ ವಕೀಲರಿದ್ದರು. ಶ್ರೀಮದಾಚಾರ್ಯರ ಸಿದ್ಧಾಂತವನ್ನು ಆಳವಾಗಿ ಓದಿದ್ದರು. ಶ್ರೀಮದಾಚಾರ್ಯರ ತತ್ವಜ್ಞಾನದಲ್ಲಿ ನಿಷ್ಠೆಯುಳ್ಳವರಾಗಿದ್ದರು.

ಶ್ರೀ ವೆಂಕಟರಮಣಾಚಾರ್ಯ ಹುಯಿಲಗೋಳವರಲ್ಲಿ ಶಾಂತಿಪಾಠ ಪೂರ್ವಕ ಭಾಷ್ಯಾದಿಗಳನ್ನು ಅಧ್ಯಯನ ಮಾಡಿದರು.

ಗೀತೆಯ ಮೇಲೆ ಅನೇಕ ಪುಸ್ತಕಗಳನ್ನು ಮಾಧ್ವ ತತ್ವಕ್ಕನುಸಾರವಾಗಿ ಬರೆದಿದ್ದಾರಲ್ಲದೆ ಪೂರ್ಣ ಬ್ರಹ್ಮವಾದವೆಂಬ ಪುಸ್ತಕವನ್ನು ಇಂಗ್ಲೀಷಿನಲ್ಲಿ ಬರೆದಿದ್ದಾರೆ.

## ೨೩೬ ಶ್ರೀ ವ್ಯಾಸರಾಯಶಾಸ್ತ್ರಿಗಳು

ಇವರು ಉಡುಪಿಯವರಿದ್ದು ಮದ್ರಾಸಿನಲ್ಲಿ ನೆಲಿಸಿದ್ದರು.

ಸಾಹಿತ್ಯ, ವೇದಾಂತಗಳಲ್ಲಿ ಒಳ್ಳೇ ವಿದ್ವಾಂಸರಾಗಿದ್ದರು. ಇವರು ಸಂಸ್ಕೃತದಲ್ಲಿ ಕಾವ್ಯ, ಅನೇಕ ನಾಟಕಗಳನ್ನು ರಚಿಸಿರುವರು.

ಇವರ "ಮಧ್ವಾನಂದಲಹರಿ" ಎಂಬ ಖಂಡ ಕಾವ್ಯವು ಶ್ರೀ ಮಧ್ವಾಚಾರ್ಯರ ಮಹಿಮೆಯನ್ನು ಮನೋಜ್ಞವಾಗಿ ಬಣ್ಣಿಸುತ್ತದೆ.

ಇವರು ಸಂಸ್ಕೃತ ಪಠ್ಯ ಪುಸ್ತಕಗಳನ್ನೂ ಸಹ ಬರೆದಿದ್ದಾರೆ.

## ೨೩೭ ಮತಮುನಗರ ಭೀಮಾಚಾರ್ಯ

ಇವರು ಮದ್ರಾಸಿನಲ್ಲಿ ವಾಸವಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿದ್ದರು. ಸರಕಾರದಿಂದ ನಿವೃತ್ತರಾದ ಮೇಲೆ ಮದ್ರಾಸಿನಲ್ಲಿ ಸುಧಾ, ತತ್ವಪ್ರಕಾಶಿಕಾ, ಭಾಷ್ಯಾದಿ ಗ್ರಂಥಗಳ ಪಾಠವನ್ನು ಅನೇಕ ಶಿಷ್ಯರಿಗೆ ಹೇಳುತ್ತಿದ್ದರು.

## ೨೩೮ ಚಿಕ್ಕೋಡಿ ಭಗವಂತರಾಯರು

ಶ್ರೀ ಚಿಕ್ಕೋಡಿ ಭಗವಂತರಾಯರು ೧೭೭೩ ನೇ ಇಸ್ವಿಯಲ್ಲಿ ಬಳ್ಳಾರಿಯಲ್ಲಿ ಜನಿಸಿದರು. ಇವರ ತಂದೆ ನಾಗೇಶರಾಯರು. ಇವರು ಚಿಕ್ಕಂದಿನಲ್ಲಿ ಸಂಸ್ಕೃತ,

ಇಂಗ್ಲಿಷ್, ಫಾರ್ಶಿ ಭಾಷೆಗಳನ್ನು ಕಲಿತರು. ಇವರು ಒಳ್ಳೇ ಸದಾಚಾರಿಗಳಾಗಿ ನಿತ್ಯ ಕರ್ಮಾನುಷ್ಠಾನಗಳನ್ನು ಮಾಡುತ್ತಿದ್ದರು. ಇವರು ಮೊದಲು ಗುತ್ತಿ, ರಾಯದುರ್ಗ ಗಳಲ್ಲಿ ತಹಶೀಲದಾರರಾಗಿ ಕೆಲಸ ಮಾಡಿದರು.

ದಾಸವರ್ಯರಾದ ಶ್ರೀ ಜಗನ್ನಾಥ ದಾಸರು ಇವರಿಗೆ ಸಂದರ್ಶನವನ್ನಿತ್ತು 'ಪ್ರಾಣನಾಥ ವಿಠ್ಠಲ' ಎಂಬ ಅಂಕಿತ ಪ್ರದಾನ ಮಾಡಿದರು. ಮುಂದೆ ಇವರು ದಾಸ ರಾಯರ ಸಂದರ್ಶನದಿಂದ ಪರಿವರ್ತನ ಹೊಂದಿ ಸರ್ವಜ್ಞ ಶಾಸ್ತ್ರವನ್ನು ಓದಲು ಪ್ರಾರಂಭ ಮಾಡಿದರು. ಇವರು ಹರಪನಹಳ್ಳಿಯ ಭಕ್ರಿ ವರಾಹಾಚಾರ್ಯರೆಂಬುವ ರನ್ನು ತಮ್ಮಲ್ಲಿಯೇ ಇಟ್ಟುಕೊಂಡು ಶಾಂತಿಪಾಠಪೂರ್ವಕ ಸರ್ವಜ್ಞ ಶಾಸ್ತ್ರವನ್ನು ಆಳವಾಗಿ ವ್ಯಾಸಂಗ ಮಾಡಿದರು.

ಹೂವಿನ ಹಡಗಲೀ ತಾಲೂಕ ಮಾಮಲೇದಾರರಾಗಿ ೫ ವರ್ಷ ಕೆಲಸ ಮಾಡಿ ನಿವೃತ್ತರಾದರು. ಹೂವಿನಹಡಗಲಿಯಲ್ಲಿದ್ದಾಗ ನಿತ್ಯವೂ ೫೦–೬೦ ಜನ ಪಂಡಿತ ಬ್ರಾಹ್ಮಣರ ಭೋಜನ ಸರ್ವಜ್ಞ ಶಾಸ್ತ್ರಗಳ ಪಾಠ ಪ್ರವಚನ, ಚಿಂತನ ನಿರಂತರವಾಗಿ ನಡೆಯುತ್ತಿತ್ತು.

ಶ್ರೀಭಗವಂತರಾಯರ ಶಿಷ್ಯರಲ್ಲಿ ಮುಖ್ಯರಾದವರೆಂದರೆ ಸರ್ವಶ್ರೀ ಗೋವೇಕರ ವೆಂಕಟರಾವ, ದ್ಯಾವಪ್ಪ ಬೆಟಿದೂರ, ಶೀನಪ್ಪ ಮಾನ್ವಿ, ಕೌತಾಳ ಶ್ರೀನಿವಾಸರಾವ, ಕಂದಿ ಸುಬ್ಬರಾವ, ರೊಟ್ಟಿ ವೆಂಕಟಾಚಾರ್ಯರು.

ಇವರು ಬರೆದ ಗ್ರಂಥಗಳು :

೧) ತತ್ವಸಂಖ್ಯಾನ ಟಿಪ್ಪಣಿ ೨) ಶಬ್ದಪರಂಪರೋತ್ಪಾದವಾದ ೩) ಭೇದೋ ಜ್ಜೀವಿನಿ ಟಿಪ್ಪಣಿ ೪) ಪವನಮಾನ ಸೂಕ್ತ ವ್ಯಾಖ್ಯಾನ ೫) ನರಸಿಂಹ ಸ್ತುತಿ ವ್ಯಾಖ್ಯಾನ ೬) ಬ್ರಹ್ಮಸೂತ್ರ ಪೂರ್ವಪಕ್ಷ ಸಿದ್ಧಾಂತ (ಯುಕ್ತಿ ಸಂಗ್ರಹ ೭) ಬ್ರಹ್ಮಸೂತ್ರ ಪಂಚಿಕಾ ೮) ವಿಷ್ಣು ಪಂಚಕ ನಿರ್ಣಯ ೯) ಭಾಗವತ ತಾತ್ಪರ್ಯ ಭಾವದೀಪ ೧೦) ಬ್ರಹ್ಮಸೂತ್ರ ಭಾಷ್ಯ ಭಾವ ಪ್ರದೀಪ ೧೧) ಹರಿವಾಯು ಸ್ತುತಿ ೧೨) ಯಮಕ ಭಾರತ ಟಿಪ್ಪಣಿ ೧೩) ಐತರೇಯ ಖಂಡಾರ್ಥ ೧೪) ಬೃಹತೀ ಸಹಸ್ರ ೧೫) ಬ್ರಹ್ಮಸೂತ್ರಾರ್ಥ ಸಂಗ್ರಹ ೧೬) ಗುರು ಪರಂಪರಾ ಸ್ತೋತ್ರ.

ಇವರು ಮುಖ್ಯವಾಗಿ ಬ್ರಹ್ಮಸೂತ್ರ ಭಾಷ್ಯಕ್ಕೆ ಸರಳವಾದ ಟಿಪ್ಪಣಿ ಬರೆದು ಚಿರಸ್ಮರಣೀಯರಾಗಿದ್ದಾರೆ. ಇವರು ೧೮೯೫ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದರು.

### ೨೩೯ ರಾಮದುರ್ಗ ಶ್ರೀನಿವಾಸಾಚಾರ್ಯ

ರಾಮದುರ್ಗ ಶ್ರೀನಿವಾಸಾಚಾರ್ಯರು ೧೮೫೦ ನೇ ಇಸ್ವಿಯಲ್ಲಿ ನರಗುಂದದಲ್ಲಿ ಜನಿಸಿದರು. ಇವರ ತಂದೆ ಸ್ವಾಮಿರಾಯಾಚಾರ್ಯರು. ಸ್ವಾಮಿರಾಯಾಚಾರ್ಯರ ತಂದೆ ಲಕ್ಷ್ಮೀಕಾಂತಾಚಾರ್ಯರು ಸಿದ್ಧಪುರುಷರಾಗಿದ್ದರು.

ಇವರು ಮೂಲತಃ ಗಜೇಂದ್ರಗಡದವರು. ನರಗುಂದ ದೊರೆ ಬಾಬಾಸಾಹೇಬರಿಗೆ ದೊಡ್ಡ ರೋಗ ಬಂದು ಎಲ್ಲಿಯೂ ಪರಿಹಾರವಾಗದೆ ಶ್ರೀ ಲಕ್ಷ್ಮೀಕಾಂತಾಚಾರ್ಯರ ಅನುಗ್ರಹದಿಂದ ಪರಿಹಾರವಾದದ್ದಕ್ಕೆ ಬಾಬಾಸಾಹೇಬನು ಅವರನ್ನು ನರಗುಂದಕ್ಕೆ ಕರೆದುಕೊಂಡು ಬಂದು ಹೊಲ-ಮನೆಗಳನ್ನು ಕೊಟ್ಟು ಇಟ್ಟುಕೊಂಡಿದ್ದರು.

ಲಕ್ಷ್ಮೀಕಾಂತಾಚಾರ್ಯರ ಮಕ್ಕಳಾದ ಸ್ವಾಮಿರಾಯಾಚಾರ್ಯರು ಪಂಡಿತರಿದ್ದು ಅರಮನೆಯಲ್ಲಿ ಪುರಾಣ ಹೇಳುತ್ತಿದ್ದರು. ನರಗುಂದ ಬಂಡಾಯವಾಗುವದಕ್ಕೆ ಮುಂಚೆ ತಮ್ಮ ಆಶ್ರಿತ ವೈದಿಕ ಮಂಡಲಿಗೆ ತೊಂದರೆಯಾಗಬಾರದೆಂದು ತಿಳಿದು, ಬಾಬಾಸಾಹೇಬನು ಈ ಸ್ವಾಮಿರಾಯಾಚಾರ್ಯ ಮುಂತಾದವರನ್ನು ತನ್ನ ತಮ್ಮನ ಸಂಸ್ಥಾನವಾದ ರಾಮದುರ್ಗಕ್ಕೆ ಕಳಿಸಿಕೊಟ್ಟನು.

ಅಲ್ಲಿಯ ಸಂಸ್ಥಾನಿಕರು ಇವರಿಗೆ ಹೊಲ-ಮನೆಗಳನ್ನು ಕೊಟ್ಟು ರಾಮದುರ್ಗದಲ್ಲಿಟ್ಟುಕೊಂಡಿದ್ದರು. ಹೀಗೆ ಇವರು ಗಜೇಂದ್ರಗಡದಿಂದ—ನರಗುಂದ, ನರಗುಂದದಿಂದ—ರಾಮದುರ್ಗಕ್ಕೆ ಬಂದರು. ಮುಂದೆ ಇವರಿಗೆ ರಾಮದುರ್ಗ ಆಚಾರ್ಯರೆಂದೇ ಹೆಸರಾಯಿತು.

ಶ್ರೀನಿವಾಸಾಚಾರ್ಯ ರಾಮದುರ್ಗ ಇವರು ಮುಧೋಳದ ಪ್ರಸಿದ್ಧ ಪಂಡಿತರಾದ ಗಲಗಲಿ ಕಟ್ಟಿ ಭೀಮಾಚಾರ್ಯರಲ್ಲಿ ವ್ಯಾಕರಣ, ವೇದಾಂತಗಳನ್ನು ಅಧ್ಯಯನ ಮಾಡಿದರು.

ಇವರು ೧೮೮೦ ರಲ್ಲಿ ರಾಮದುರ್ಗದಲ್ಲಿ ತಮ್ಮ ಪಾಠ ಶಾಲೆಯನ್ನು ಪ್ರಾರಂಭ ಮಾಡಿದರು. ೨೫-೩೦ ಜನರಿಗೆ ಮನೆಯಲ್ಲಿ ಊಟ, ವಸತಿ ಕೊಟ್ಟು ಪಾಠ ಹೇಳುತ್ತಿದ್ದರು. ಇವರ ಪಾಠಶಾಲೆಯಲ್ಲಿ ನೂರಾರು ಜನ ವಿದ್ಯಾರ್ಥಿಗಳು ಓದುತ್ತಿದ್ದರು. ವ್ಯಾಕರಣ, ವೇದಾಂತಗಳನ್ನು ಹೇಳುತ್ತಿದ್ದರು. ಮಹಾರಾಜರ ಆಶ್ರಯವೂ ಇತ್ತು.

ಇವರ ಶಿಷ್ಯ ಮಂಡಲಿಯಲ್ಲಿ ಈಗಿನ ಸಂಕೇಶ್ವರ ಪೀಠಾಧಿಪತಿಗಳಾದ ಶ್ರೀ ಜೇರೆ ಶಾಸ್ತ್ರಿಗಳು, ಸುರಪುರದ ಯಳಮೇಲಿ ವಿಠ್ಠಲಾಚಾರ್ಯರು, ಬೆಳ್ಳುಬ್ಬಿ ಅಣ್ಣಾಚಾರ್ಯರು, ಮಳಗಿ ಕೃಷ್ಣಾಚಾರ್ಯರು, ಕೃಷ್ಣ ಶಾಸ್ತ್ರಿ ಗೋಡಖಿಂಡಿ, ತಿಪ್ಪಣ್ಣಶಾಸ್ತ್ರಿ, ವಾಡೀಕರ ಶಾಸ್ತ್ರಿ, ಅರ್ಚಕ ವೇದವ್ಯಾಸಾಚಾರ್ಯರು, ಗದುಗಿನ ಹುಯಿಲಗೋಳ ವೆಂಕಟರಮಣಾಚಾರ್ಯರು, ಮುಧೋಳದ ಸಾತೆ ಬಿಂದಾಚಾರ್ಯರು, ಮಳಗಿ ಹನಮಂತಾಚಾರ್ಯರು, ನಾಗಸಂಪಗಿ ಕೃಷ್ಣಾಚಾರ್ಯರು, ಕಂಚಿ ಗುರಾಚಾರ್ಯರು, ಅಥಣಿ ಗುರಾಚಾರ್ಯರು, ಮುರಡಿ ಗೋವಿಂದಾಚಾರ್ಯರು ಮುಂತಾದವರು ಪ್ರಖ್ಯಾತರಾದರು.

ಇವರು ಸಾತ್ವಿಕರೂ, ಅವಧೂತ ಶಿರೋಮಣಿಗಳು ಆಗಿದ್ದರು. ಅಗ್ನಿಹೋತ್ರ ವಸ್ನಿಟ್ಟುಕೊಂಡು ಕಾಶೀ—ರಾಮೇಶ್ವರ ಯಾತ್ರೆಯನ್ನು ಮಾಡಿದ್ದರು.

# ಉಡುಪಿಯ ಪಂಡಿತರು



ಶ್ರೀ ಮಧ್ವಾಚಾರ್ಯರ ಜನ್ಮ ಭೂಮಿಯೂ ಕರ್ಮ ಭೂಮಿಯೂ ಆದ ಉಡುಪಿಯಲ್ಲಿ ಆಗಿ ಹೋದ ಪಂಡಿತರು ಅಸಂಖ್ಯರಾಗಿದ್ದಾರೆ. ಅಷ್ಟ ಮಠಗಳ ಆಶ್ರಯದಲ್ಲಿ ಅನೇಕಾನೇಕ ವಿದ್ವಾಂಸರು ಪಾಠ ಪ್ರವಚನ ಪರಾಯಣರಾಗಿ ಮಾಧ್ವ ವಾಙ್ಮಯದ ಪ್ರಚುರ ಪ್ರಚಾರಕ್ಕೆ ಕಾರಣರಾಗಿದ್ದಾರೆ. ಅಲ್ಲಿಯ ಸಂಸ್ಕೃತ ಪಾಠಶಾಲೆ ಕಾಲೇಜುಗಳಲ್ಲಿಯೂ ಅಧ್ಯಯನ ಅಧ್ಯಾಪನ ಮಾಡಿದ ವಿದ್ವಾನ್ ಶಿರೋಮಣಿಗಳಿಗಂತೂ ಲೆಕ್ಕವಿಲ್ಲ. ಉಡುಪಿಯ ಪರಿಸರದ ಗ್ರಾಮ ಧಾಮಗಳಲ್ಲಿ ಗಣ್ಯ ಪಂಡಿತರೂ ರಸಿಕರೂ ಮಧ್ವ ಮತದ ಆಧಾರಸ್ತಂಭಗಳಾಗಿ ಮಿನುಗಿದ್ದಾರೆ. ಅವರಲ್ಲಿ ನಮಗೆ ಉಪಲಬ್ಧವಿದ್ದ ಪಂಡಿತರ ಅಲ್ಪ ಪರಿಚಯವನ್ನು ಇಲ್ಲಿ ಕೊಡಲಾಗಿದೆ.

## ಪೂ ವಾ ೯ ಲ ಯ ಃ

ರಜತಪೀಠಪುರದಲ್ಲಿ ಪ್ರಾಮುಖ್ಯವಾದ ಎರಡು ಬೀದುಗಳಲ್ಲಿ ಒಂದು ನಿಡಂಬೂರು ಬೀದು. ಎರಡನೆಯದು ಚಿಟ್ಪಾಡಿ ಬೀದು. ವಿಶೇಷವಾಗಿ ಶ್ರೀಮದಾಚಾರ್ಯರ ಕಾಲದಿಂದಲೂ ಪ್ರಸಿದ್ಧಿ ಪಡೆದದ್ದು ಪೂರ್ವಾಲಯ.

ಈ ಮನೆತನಕ್ಕೆ ಸೇರಿದವರು ಪಂಡಿತರೂ, ನಿಷ್ಪಕ್ಷಪಾತಿಗಳೂ, ಧರ್ಮನಿರ್ಣಾಯಕರೂ, ಧನಿಕರೂ ಆಗಿದ್ದುಕೊಂಡು ಆ ಗ್ರಾಮದ ಅಧಿಪತಿಗಳೂ ಆಗಿದ್ದರು. ಇದೇ ಮನೆತನದ ಒಬ್ಬರು ಅತಿ ಬಡವರಾದ ಮಧ್ಯಗೇಹ ಭಟ್ಟರಿಗೆ, ಬಾಲಕ ವಾಸುದೇವನ ಪೋಷಣೆಗಾಗಿ ಉತ್ತಮ ಹಾಲುಳ್ಳ ದನವನ್ನು ದಾನವಾಗಿ ಕೊಟ್ಟರು. ಕೆಲವು ಕಾಲದ ನಂತರ ಸತ್ಪಾತ್ರದಲ್ಲಿ ಗೋದಾನ ಮಾಡಿದ ಫಲವಾಗಿ ಇವರು

ತನ್ನ ಮಗನಿಗೆ ಮಗನಾಗಿ ಹುಟ್ಟಿ, ಶ್ರೀಮದಾಚಾರ್ಯರ ಶಿಷ್ಯರಾಗಿ, ವೈರಾಗ್ಯ ಶಿಖಾಮಣಿಗಳಾಗಿ ಪರಮಾತ್ಮ ವಿದ್ಯೆಯನ್ನು ಸರಿಯಾಗಿ ಪಡೆದು, ಆಚಾರ್ಯರ ಪರಮಾನುಗ್ರಹಕ್ಕೆ ಪಾತ್ರರಾದರು.

ಹಿಂದಿನಿಂದಲೂ ಉಡುಪಿಯಲ್ಲಿ ಯಾವ ಧರ್ಮ ನಿರ್ಣಯವನ್ನು ಮಾಡುವುದಾದರೂ, ಈ ಪೂರ್ವಾಲಯ ಮತ್ತು ಪಶ್ಚಿಮಾಲಯದ ಪಕ್ಷನಾಥರೂ ಸೇರಿಯೇ ಶ್ರೀಮದನಂತೇಶ್ವರ ದೇವಾಲಯದಲ್ಲಿ ಸಭೆಯನ್ನು ಕರೆದು ನಿರ್ಣಯಿಸುತ್ತಿದ್ದರು. ಶ್ರೀಮದಾಚಾರ್ಯರ ಕಾಲದಲ್ಲಿಯೂ ನ್ಯಾಯ ಧರ್ಮದ ತೀರ್ಮಾನಕ್ಕೆ ಇವರನ್ನು ಕರೆದದ್ದು ಮಧ್ವವಿಜಯ ಒಂಬತ್ತನೇ ಸರ್ಗದಿಂದ ತಿಳಿಯುತ್ತದೆ.

ಈ ಪೂರ್ವಾಲಯದ ಬಳ್ಳಾಳರಿಗೆ ಶ್ರೀಮದಾಚಾರ್ಯರು ತಾನು ಅರ್ಚಿಸಿ ಸನ್ನಿಧಾನ ವಿಶೇಷವುಳ್ಳ ಶ್ರೀ ಲಕ್ಷ್ಮೀನಾರಾಯಣ ಮೂರ್ತಿಯನ್ನು ಕೊಟ್ಟು ಅನುಗ್ರಹಿಸಿರುವರು. ಅಂದಿನಿಂದ ಈ ವರೆಗೂ ಈ ಮನೆತನದವರು ಮಠ ಸಂಪ್ರದಾಯವಂತೆ ತಮ್ಮಲ್ಲಿಯ ಆರಾಧನೆ, ಪೂಜೆ, ವಿನಿಯೋಗಗಳನ್ನು ನಡೆಸುತ್ತ ಬಂದಿರುತ್ತಾರೆ.

ಶ್ರೀವಾದಿರಾಜ ಗುರು ಸಾರ್ವಭೌಮರು ಇಲ್ಲಿಗೆ ಬಂದು ವಿಶೇಷವಾಗಿ ಅನುಗ್ರಹಿಸಿರುತ್ತಾರೆ. ಈ ಅನುಗ್ರಹ ವಿಶೇಷದಿಂದ, ಈ ಪೂರ್ವಾಲಯಕ್ಕೆ ಎಲ್ಲ ಮಠದವರಿಂದಲೂ ಉಚಿತ ಮರ್ಯಾದೆಗಳು ನಡೆಯಲ್ಪಡುತ್ತಿವೆ.

ಶ್ರೀ ಅಷ್ಟ ಮಠದವರೂ ತಮ್ಮ ತಮ್ಮ ಪರ್ಯಾಯಪೂರ್ವಭಾವಿಯಾಗಿ ಈ ಪೂರ್ವಾಲಯಕ್ಕೆ ಬಂದು, ಇಲ್ಲಿರುವ ಆಚಾರ್ಯ ಕರಾರ್ಚಿತ ಲಕ್ಷ್ಮೀನಾರಾಯಣನನ್ನು ಸಂದರ್ಶಿಸುವುದು ಸಂಪ್ರದಾಯವಾಗಿದೆ.

## ಪ ಶ್ಚಿ ಮಾ ಲ ಯ ಃ

ಪಶ್ಚಿಮಾಲಯವೆಂದು ಪ್ರಸಿದ್ಧವಾಗಿರುವ, ಈ ನಿಡಂಬೂರು ಬಳ್ಳಾಳ ಮನೆತನದವರು ಸುಮಾರು ೭ ಶತಕಗಳ ಹಿಂದೆ, ಉಡುಪಿಯ ಹತ್ತಿರವಿರುವ ಕಂದಾವರದವರು.

ಇವರ ಕುಲಸ್ವಾಮಿಯಾಗಿದ್ದ ಕಂದಾವರದಲ್ಲಿದ್ದ ಶ್ರೀಲಕ್ಷ್ಮೀಜನಾರ್ದನ ಮೂರ್ತಿಯನ್ನೇ, ಇವರ ಮನೆತನದ ಹಿರಿಯರಾದ ಶ್ರೀಧರ ನಿಡಂಬಾಯರು ನಿಡಂಬೂರು ಗ್ರಾಮದ ತಮ್ಮ ಮನೆಯ ಪಕ್ಕದಲ್ಲೇ ತಂದು ಪ್ರತಿಷ್ಠಿಸಿದರು. ಇಲ್ಲಿಯೇ ಶ್ರೀಮಹಾಕಾಳಿಯ ಪ್ರಾಚೀನ ದೇವಾಲಯವಿದೆ. ಈ ದುರ್ಗೆಯು ಭಕ್ತರ ಅಭೀಷ್ಟದಾಯಕಳಾಗಿದ್ದಾಳೆ. ಅಮ್ಮನಪಾಡಿ=( ಕಾಡು ) ದುರ್ಗಾ ಸನ್ನಿಧಾನದಿಂದ ಇರುವ ಈ ಅಮ್ಮನಪಾಡಿಯೇ ಅಂಬಲಪಾಡಿಯಾಗಿ ಪ್ರಸಿದ್ಧವಾಗಿದೆ. ಈ ಎರಡೂ ದೇವತೆಗಳನ್ನು ಶ್ರೀ ಬಳ್ಳಾಳರು ತಮ್ಮ ಮನೆತನದ ಅಧಿಷ್ಠಾತೃ ದೇವತೆಗಳೆಂದು ಆರಾ

ಧಿಸಿಕೊಂಡು ಬಂದರು. ಈ ಎರಡೂ ದೇವಾಲಯಗಳ ಪೂಜೆ, ಅಧಿಕಾರ ಎಲ್ಲವೂ ಈ ಬಳ್ಳಾಳರ ಒಡೆತನಕ್ಕೆ ಸಂಪೂರ್ಣ ಮೊಸಲಾಗಿದೆ.

ಈ ಮನೆತನದ ಮೇಲೆ ಕರುಣಾಕಟಾಕ್ಷವನ್ನು ಅನುಗ್ರಹಿಸಿದ ಶ್ರೀ ಶ್ರೀ ಭಾವಿ ಸಮೀರ ವಾದಿರಾಜ ಯತಿವರೇಣ್ಯರು ಈ ಸ್ಥಳವನ್ನು ಸಂದರ್ಶಿಸಿ, ಬೀಡಿನ ಈ ಮನೆಯ ಸಮೀಪವೇ ಹನುಮ, ಭೀಮ, ಮಧ್ವ ಚಿಹ್ನಾಂಕಿತ ಮುಖ್ಯ ಪ್ರಾಣ ನನ್ನು ಪ್ರತಿಷ್ಠಾಪಿಸಿದರು ಮತ್ತು ಮನೆಯಲ್ಲಿ ಪೂಜೆಗಾಗಿ ಶ್ರೀ ವರಾಹ ವಿಗ್ರಹ ವನ್ನೂ ಪರಶುರಾಮ ಮೂರ್ತಿಯನ್ನೂ ಕೊಟ್ಟು ಅನುಗ್ರಹಿಸಿ, ಈ ಸಿಡಂಬೂರು ಪರಿಸರವನ್ನೇ ಪಾವನಗೊಳಿಸಿದರು. ಈ ಮನೆತನದ ಪರಂಪರೆಯಲ್ಲಿ ಬಂದಿರತಕ್ಕ ಈ ವಿಗ್ರಹಗಳು ಉತ್ತಮವಾಗಿದ್ದು ಆರಾಧ್ಯ ಮೂರ್ತಿಯಾಗಿವೆ.

ಪೂಜ್ಯ ಶ್ರೀ ವಾದಿರಾಜ ತೀರ್ಥರವರ ಕಾಲದಿಂದಲೂ, ಅಷ್ಟ ಮಠಾಧಿಪತಿ ಗಳೂ ತಮ್ಮ ತಮ್ಮ ಪರ್ಯಾಯದ ಪೂರ್ವಭಾವಿಯಾಗಿ ಈ ಸ್ಥಳಕ್ಕೆ ಬಂದು ಅನುಗ್ರಹಿಸಿ ಹೋಗುವ ಪದ್ಧತಿಯಾಗಿದೆ.

## ೨೪೦ ಬಳ್ಳಾಳ ಅನಂತಾಚಾರ್ಯ

ಈ ಪಶ್ಚಿಮಾಲಯದ ಪರಂಪರೆಯವರಾದ, ಬಳ್ಳಾಳ ಅನಂತಾಚಾರ್ಯರೆಂಬವ ರಿಗೆ ಮೈಸೂರು ಸಂಸ್ಥಾನದ ಹಿಂದೆ ದಿವಾನರಾಗಿದ್ದ ಶ್ರೀಮಂತ ಪೂರ್ಣಯ್ಯನವರು, ವರ್ಣಾಶ್ರಮದ ರಕ್ಷಣೆ, ಧರ್ಮದ ಪರಿಪಾಲನೆ, ಈ ಉದ್ದೇಶದಿಂದ ಬರೆದಿರುವ ರಾಯಸವು, ಈ ಪರಿಸರದ ಧರ್ಮ ನಿರ್ಣಾಯಕರೆಂದು ಇವರನ್ನು ನಿಶ್ಚಯಿಸ ಬಹುದಾಗಿದೆ.

## ೨೪೧ ಬಳ್ಳಾಳ ನಾರಾಯಣಾಚಾರ್ಯ

ಈ ಪರಂಪರೆಯಲ್ಲಿ ಒಂದು ಖ್ಯಾತವೆತ್ತ ಬಳ್ಳಾಳ ನಾರಾಯಣಾಚಾರ್ಯ ರೆಂಬವರು ಪ್ರಾಮಾಣಿಕ ಜ್ಯೋತಿಷ್ಕರೂ, ಶ್ರೇಷ್ಠ ಮಂತ್ರವಾದಿಗಳೂ, ಸಿದ್ಧಾಂತ ದಲ್ಲಿ ಪಂಡಿತರೂ ಆಗಿದ್ದರು. ಇವರು ತನ್ನ ಮನೆಯಲ್ಲಿ ಬಹು ಮಂದಿ ಶಿಷ್ಯರಿಗೆ ಅನ್ನ ವಸ್ತ್ರಾದಿ ಕೊಟ್ಟು ಪಾಠ ಪ್ರವಚನ ಮೂಲಕ ಜ್ಞಾನದಾನ ಮಾಡಿದ್ದರು.

ಇತ್ತೀಚೆಗೆ ದಿವಂಗತರಾದ ಸದಾಚಾರ ಸಂಪನ್ನ ನಾರಾಯಣ ಬಳ್ಳಾಳರು ಧರ್ಮ ಶಾಸ್ತ್ರದಲ್ಲಿ ವಿದ್ವಾಂಸರಾಗಿದ್ದರು. ಇವರು " ಅಶೌಚ ವಿಚಾರ ಸಂಗ್ರಹ "ವೆಂಬ ಧರ್ಮ ನಿರ್ಣಯ ಗ್ರಂಥವನ್ನು ಬರೆದು ಪ್ರಕಟಿಸಿದ್ದಾರೆ.

ಅಂಬಲಪಾಡಿಯ ಧರ್ಮಾಧಿಕಾರಿಗಳಾಗಿದ್ದ ಇವರು ಧರ್ಮಶಾಸ್ತ್ರದಲ್ಲಿ ಪರಿನಿಷ್ಠಿತ ಪಂಡಿತೋತ್ತಮರು. ಶ್ರೀಮದಾಚಾರ್ಯರ "ಶ್ರೀಸದಾಚಾರಸ್ಮೃತಿ"ಗೆ ವಿಸ್ತೃತವಾದ ವ್ಯಾಖ್ಯಾನ ಬರೆದಿರುವರು. ಈ ವ್ಯಾಖ್ಯಾನವು ಧರ್ಮಶಾಸ್ತ್ರದ ಎಲ್ಲ ರಹಸ್ಯಗಳ- ನ್ನೊಳಗೊಂಡು ತುಂಬ ಮನನೀಯವಾಗಿದೆ.

## ೨೪೨ ಕರಂಬಳ್ಳಿ ಪದ್ಮನಾಭಾಚಾರ್ಯ



ಮುಖ್ಯಪ್ರಾಣಾಚಾರ್ಯರ ಮಗನಾದ ಇವರು ಬಾಲ್ಯದಿಂದಲೇ ವಿಶಿಷ್ಟತರದ ತೀಕ್ಷ್ಣಬುದ್ಧಿಯನ್ನು ಹೊಂದಿದ್ದರು. ಉಡುಪಿ ಅದಮಾರು ಮಠದ ಶ್ರೀ ವಿಬುಧಾಧಿರಾಜತೀರ್ಥರ ನೆರವಿನಿಂದ ಬಾಲ್ಯ ವಿದ್ಯಾಭ್ಯಾಸವನ್ನೂ, ಪೇಜಾವರ ಮಠದ ಶ್ರೀ ವಿಶ್ವರಾಜತೀರ್ಥರಿಂದ ಸಕಲ ಪ್ರೌಢ ವೇದಾಂತ ವಿದ್ಯಾಭ್ಯಾಸವನ್ನು ಮಾಡಿ ಉತ್ತಮ ಪಂಡಿತರಾದರು.

ಉತ್ತರಾದಿಮಠದ ಶ್ರೀ ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಸಭೆಯ ಧರ್ಮಾಧಿಕಾರಿಗಳೂ, ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯ ವೇದಾಂತ ಅಧ್ಯಾಪಕರೂ ಆಗಿದ್ದು, ಬಹುವರ್ಷಕಾಲ ಸೇವೆ ಸಲ್ಲಿಸಿದ್ದಾರೆ. ಮೈಸೂರ ಸರ್ಕಾರದ ಸಂಸ್ಕೃತ ಪರೀಕ್ಷಾ ವಿಭಾಗದ ಪರೀಕ್ಷಕ–ಪರಿಶೋಧಕರೂ ಆಗಿದ್ದರು.

## ೨೪೩ ಉಡುಪಿ ಲಕ್ಷ್ಮೀನಾರಾಯಣಾಚಾರ್ಯ

ಇವರು ಪಂಡಿತ ರಾಮಕೃಷ್ಣಾಚಾರ್ಯರ ಪುತ್ರರು. ಎಚ್ಚಣ್ಣಾಚಾರ್ಯರೆಂಬ ನಾಮದಿಂದ ಪ್ರಸಿದ್ಧರಾಗಿದ್ದರು. ಶ್ರೀ ಸೋದೇ ಮಠದ ಶ್ರೀ ವಿದ್ಯಾಧೀಶತೀರ್ಥರಿಂದ ಸಮಗ್ರ ಶಾಸ್ತ್ರವನ್ನು ಓದಿದವರು. ಅಲಂಕಾರ ಶಾಸ್ತ್ರದಲ್ಲಿ ಪಂಡಿತರು 'ಸುಭದ್ರಾಹರಣ' ಎಂಬ ಕಾವ್ಯಕ್ಕೆ ಸುಲಲಿತ ಸರಳ ವ್ಯಾಖ್ಯಾನ ಬರೆದಿದ್ದಾರೆ.

## ೨೪೪ ಕುಪ್ಪಣ್ಣಾಚಾರ್ಯ

ಪಡಮನ್ನೂರು ಅನಂತಾಚಾರ್ಯರ ಮಗ. ಶ್ರೀನಿವಾಸಾಚಾರ್ಯರೆಂದು ನಿಜ ನಾಮಧೇಯ. ಧರ್ಮಶಾಸ್ತ್ರದಲ್ಲಿ ಪಂಡಿತರಾದ ಇವರು ಪಲಿಮಾರುಮಠದ ಆಸ್ಥಾನ ಪಂಡಿತರಾಗಿದ್ದರು. ಅದಮಾರು ಮಠದ ಶ್ರೀ ವಿಬುಧಪ್ರಿಯತೀರ್ಥರಿಂದ ಸುಧಾದಿ ವೇದಾಂತ ಅಭ್ಯಾಸ ಮಾಡಿ ಪ್ರವೀಣರಾಗಿದ್ದರು. ಉಡುಪಿಯ ಪಂಡಿತೋತ್ತಮ ಪಡಮನ್ನೂರು ನಾರಾಯಣಾಚಾರ್ಯರ ಜ್ಯೇಷ್ಠ ಸಹೋದರರು.

## ೨೪೫ ಬೀಯಾರು ಶ್ರೀನಿವಾಸಭಟ್ಟರು



ಇವರು ಅಲಂಕಾರ ಶಾಸ್ತ್ರದಲ್ಲಿ ಪ್ರಸಿದ್ಧ ವಿದ್ವಾಂಸರು. ಉಡುಪಿ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಾಹಿತ್ಯಾಧ್ಯಾಪಕರಾಗಿ ಬಹುಕಾಲ ಸೇವೆ ಸಲ್ಲಿಸಿದ್ದಾರೆ. ಬಹುಮಂದಿ ವಿದ್ಯಾರ್ಥಿಗಳನ್ನು ರಸಾಭಿಜ್ಞರನಾಗಿ ಮಾಡಿ ಅವರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು.

ಇವರು ಬಲರಾಮ ಪ್ರತಾಪ, ಶ್ರೀಮತಿ ಕಲ್ಯಾಣ, ಚೈತ್ರಾಭರಣ ನಾಟಕ, ಜಯಸಿಂಹ ಚರಿತ ಕಾವ್ಯ, ಭಜಗುರುರಾಜ ಸ್ತುತಿ, ವಾದಿರಾಜರ ಚರಿತೆ, ವಿದ್ಯಾಪೂರ್ಣ ಚರಿತೆ, ಸುಧೀಂದ್ರತೀರ್ಥ ಚರಿತೆ, ಉಡುಪಿ ಕ್ಷೇತ್ರ ಮಹಿಮೆ, ಆಹ್ನಿಕ ಮಂಜರೀ ಮೊದಲಾದ ಸಂಸ್ಕೃತ, ಕನ್ನಡ ಗ್ರಂಥಗಳನ್ನು ಬರೆದಿದ್ದಾರೆ.

## ೨೪೬ ಉಡುಪಿ ರಾಮಕೃಷ್ಣಾಚಾರ್ಯ

ಪಂಡಿತ ಲಕ್ಷ್ಮೀನಾರಾಯಣಾಚಾರ್ಯರ ಪುತ್ರರಾದ ಇವರು ತಂದೆಯಂತೆಯೇ ಅಲಂಕಾರ ಶಾಸ್ತ್ರದಲ್ಲೂ ವಿದ್ವಾಂಸರಾಗಿದ್ದರು. ದ್ವೈತ ಸಿದ್ಧಾಂತವನ್ನು ಚೆನ್ನಾಗಿ ಅಧ್ಯಯನ ಮಾಡಿ, ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಬಹುವರ್ಷಕಾಲ ಸೇವೆ ಮಾಡಿ ತುಂಬ ಪಂಡಿತರನ್ನು ನಿರ್ಮಿಸಿದ್ದಾರೆ.

## ೨೪೭ ಪಡುಪೇಟೆ ಸುಬ್ಬಣ್ಣಾಚಾರ್ಯ

ದ್ವೈತ ಸಿದ್ಧಾಂತದಲ್ಲಿ ಶೋಧಿತ ಪಂಡಿತರು. ಇವರು ಇಂದೂರು ಆಚಾರ್ಯರ ಬಳಿ ಓದಿದರು. ಇವರು ತಮ್ಮ ಇಡೀ ಜೀವಮಾನದಲ್ಲೂ— ತುಂಬ ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು ಪಾಠ ಹೇಳಿ ಪಂಡಿತರನ್ನಾಗಿ ಮಾಡಿದ್ದಾರೆ. ಇವರ ಮನೆಯೇ ಒಂದು ಪಾಠಶಾಲೆಯಾಗಿತ್ತು.

## ೨೪೮ ಕಟ್ಟೆ ಶ್ರೀನಿವಾಸಾಚಾರ್ಯ



ಉತ್ತರಾದಿ ಮಠದ ಜ್ಞಾನಿಶ್ರೇಷ್ಠರಾದ ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯರಾಗಿ ವ್ಯಾಸತ್ರಯ, ಸುಧಾಂತ ಗ್ರಂಥಗಳನ್ನು ಓದಿ ಶೋಧಿತ ಪಂಡಿತರಾಗಿದ್ದರು. ಉಡುಪಿಯಲ್ಲಿ "ಶ್ರೀ ಚಂದ್ರಿಕಾಪಾಠಶಾಲೆ"ಯನ್ನು ಸ್ಥಾಪಿಸಿ, ಬಹುಮಂದಿ ಶಿಷ್ಯರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ಎಲ್ಲ ಪೀಠಾಧಿಪತಿಗಳಿಂದಲೂ ಮಾನ್ಯರಾದ ಇವರು "ವೇದಾಂತ ಕೇಸರಿ" ಎಂಬ ಬಿರುದನ್ನು ಪಡೆದಿದ್ದರು.

## ೨೪೯ ಪಡುಪೇಟೆ ಅನಂತಕೃಷ್ಣಾಚಾರ್ಯ

ಇವರು ಸೋದೆಮಠದ ವಿಶ್ವಾಧೀಶರಿಂದ ಎಲ್ಲ ಶಾಸ್ತ್ರವನ್ನು ಅಭ್ಯಾಸಮಾಡಿ ವಿದ್ವಾಂಸರಾದರು. ಸದಾಚಾರ ನಿರತರೂ, ಮಧ್ವಶಾಸ್ತ್ರದಲ್ಲಿ ನಿಶ್ಚಲವಾದ ಶ್ರದ್ಧೆಯುಳ್ಳವರಾಗಿದ್ದರು. ಬಹುಮಂದಿ ಶಿಷ್ಯರನ್ನು ಪಾಠ ಹೇಳಿ ಬೆಳಗಿದ್ದಾರೆ.

## ೨೫೦ ಅಡ್ಡೆ ಮುಖ್ಯಪ್ರಾಣಾಚಾರ್ಯ

ಇವರು ಬಾಲ್ಯದಲ್ಲಿಯೇ ಕಾಶಿಗೆ ಹೋಗಿ ೧೨ ವರ್ಷಕಾಲ ತರ್ಕಶಾಸ್ತ್ರ ಅಭ್ಯಾಸ ಮಾಡಿ ಶ್ರೇಷ್ಠ ನೈಯಾಯಿಕರಾಗಿ ಊರಿಗೆ ಬಂದರು. ಸೋದೆಮಠದ ಶ್ರೀ ವಿಶ್ವಾಧೀಶ ತೀರ್ಥರಿಂದ ವೇದಾಂತ ಓದಿ ವಿದ್ವಾಂಸರಾದರು. ಅದಮಾರು ಮಠದ ಶ್ರೀ ವಿಬುಧಪ್ರಿಯ ತೀರ್ಥರ ಸಹಾಧ್ಯಾಯಿಗಳಾಗಿದ್ದು ಅವರ ಉದಾರಾಶ್ರಯದಿಂದ ಪಾಠಪ್ರವಚನ ನಿರತರಾಗಿದ್ದರು.

## ೨೫೧ ಅಡ್ಡೆ ಸುಬ್ರಹ್ಮಣ್ಯಾಚಾರ್ಯ

ಬಾಲ್ಯದಲ್ಲಿಯೇ ಬುದ್ಧಿವಂತರಾದ ಇವರು ವಿದ್ವನ್ಮಣಿಗಳಾದ ಕರಂಬಳ್ಳಿ ಪದ್ಮನಾಭಾಚಾರ್ಯರ ಹತ್ತಿರ ಓದಿ ಪಂಡಿತರಾದರು. ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಜ್ಯೋತಿಷ್ಯ ಪ್ರಾಧ್ಯಾಪಕರಾಗಿದ್ದರು. ವೇದಾಂತ, ವ್ಯಾಕರಣಗಳಲ್ಲಿ ಪಂಡಿತರಾಗಿದ್ದರು.

## ೨೫೨ ಗುರಗುಂಡಿ ರಾಮಾಚಾರ್ಯ



ಉಡುಪಿ ಅದಮಾರು ಮಠದ ಪಂಡಿತ ಪ್ರಕಾಂಡರಾದ ಶ್ರೀ ವಿಬುಧಪ್ರಿಯ ತೀರ್ಥರ ಶಿಷ್ಯರಾಗಿ ಚಿನ್ನದ ಕಡಗದ್ವಯ ಬಹುಮಾನವನ್ನು ಪಡೆದರು. ಅವರಲ್ಲಿ ಸುಧಾಂತ ವೇದಾಂತ ಹಾಗೂ ನ್ಯಾಯಶಾಸ್ತ್ರವನ್ನು ಆಮೂಲಾಗ್ರವಾಗಿ ಓದಿ ಪಂಡಿತರಾದರು. ಶ್ರೀ ವಾದಿರಾಜರ "ಯುಕ್ತಿಮಲ್ಲಿಕಾ" ವೆಂಬ ೬ ಸಾವಿರ ಪದ್ಯಕ್ಕಿಂತಲೂ ಹೆಚ್ಚಾಗಿರುವ ಗ್ರಂಥವು ಇವರ ಕಂಠಗತವಾಗಿತ್ತು. ಪುಸ್ತಕನಿರಪೇಕ್ಷವಾಗಿ ಶಿಷ್ಯರಿಗೆ ಪಾಠ ಹೇಳುತ್ತಿದ್ದರು.

ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ೨೦ ವರ್ಷಕಾಲ ವೇದಾಂತ ಪ್ರಾಧ್ಯಾಪಕರಾಗಿ ಶ್ರೀ ಸರ್ವಜ್ಞರ ಸೇವೆ ಸಲ್ಲಿಸಿದ್ದಾರೆ. ಎಂಥ ಕ್ಲಿಷ್ಟ ಪ್ರಮೇಯವನ್ನೂ ಲೀಲಾಜಾಲವಾಗಿ ಮತ್ತು ಸುಲಲಿತವಾಗಿ ಹೇಳುವ ಇವರ ಬೋಧಕ ಶಕ್ತಿ ಅದ್ಭುತವಾಗಿತ್ತು. ಎಲ್ಲ ಪೀಠಾಧಿಪತಿಗಳಿಗೂ ಪರಮ ಪ್ರೀತ್ಯಾಸ್ಪದರೂ, ಅವರಿಂದ ಮಾನ್ಯರೂ ಆಗಿದ್ದರು.

## ೨೫೩ ಉಡುಪಿ ರಾಮಕೃಷ್ಣಾಚಾರ್ಯ

ಇವರು ವ್ಯಾಕರಣ ಶಾಸ್ತ್ರದಲ್ಲಿ ಮಹಾ ಪಂಡಿತರು. ಅನೇಕ ಜನ ಶಿಷ್ಯರಿಗೆ ವ್ಯಾಕರಣ ಪಾಠ ಹೇಳಿದರು.

## ೨೫೪ ರಾಮಕೃಷ್ಣ (ಕುಪ್ಪಣ್ಣ) ತಂತ್ರಿಗಳು



ಇವರು ಚಿಕ್ಕ ವಯಸ್ಸಿನಲ್ಲಿಯೇ ತಿರುವಾಂಕೂರು, ಕೊಚ್ಚಿಗೆ ಹೋಗಿ ಕೊಚ್ಚಿ ಮಧ್ವರಾಯಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿ ತಂತ್ರಸಾರ ಪ್ರವೀಣರಾಗಿದ್ದರು. ಉಡುಪಿಯಲ್ಲಿ ವೇದಾಂತವನ್ನು ಓದಿ ಶ್ರೀ ಅದಮಾರು ಮಠದ ಆಸ್ಥಾನ ಪುರೋಹಿತರಾಗಿದ್ದರು.

ಇವರು ಶ್ರೋತ್ರಿಯರೂ, ಮಹಾ ಕರ್ಮಠರೂ, ನಿಷ್ಕಾಂಚನವೃತ್ತಿಯವರೂ ಆಗಿದ್ದರು. ಕರ್ಮಕಾಂಡ ಧರ್ಮಶಾಸ್ತ್ರಗಳಲ್ಲಿ ಇವರಿಗೆ ಒಳ್ಳೆ ಪರಿಣತಿ ಇದ್ದಿತು. ಇವರು ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪಿತೃಪಾದರು.

## ೨೫೫ ಇನ್ನ ವಾಸುದೇವಾಚಾರ್ಯ

ಇವರು ನ್ಯಾಯ ವೇದಾಂತಗಳಲ್ಲ ಘನ ವಿದ್ವಾಂಸರಾಗಿದ್ದರು. ಮಹಾ ಆಚಾರಶೀಲರಾಗಿದ್ದು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದರು. ಶ್ರೀ ಶ್ರೀ ಭಂಡಾರಕೇರಿ ಶ್ರೀವಿದ್ಯಾಮಾನ್ಯ ತೀರ್ಥರು ಇವರಲ್ಲಿ ಕೆಲವು ವೇದಾಂತ ಗ್ರಂಥಗಳನ್ನು ಬಾಲ್ಯದಲ್ಲಿ ಪಾಠಮಾಡಿದ್ದರು.

## ೨೫೬ ಎಂ. ನಾರಾಯಣಾಚಾರ್ಯ



ಇವರು ರಾಮಕುಂಜ ಗ್ರಾಮದವರು. ಇವರು ಚಿಕ್ಕವರಿರುವಾಗಲೇ ವೇದ ಶಾಸ್ತ್ರಗಳನ್ನು ಓದಿ ಪಂಡಿತರಾಗಿದ್ದರು. ಇವರು ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥ ಶ್ರೀಗಳವರ ಪೂರ್ವಾಶ್ರಮದ ತಂದೆಗಳು.

## ೨೫೭ ಉಡಿಪಿ ಸೀತಾರಾಮಾಚಾರ್ಯ



ಶ್ರೀ ಪೇಜಾವರ ಮಠದ ಆಶ್ರಿತರಾದ ಸೀತಾರಾಮಾಚಾರ್ಯರು ಮೈಸೂರಿನ ಮಹಾ ಪಾಠ ಶಾಲೆಯಲ್ಲಿ ಕಾವ್ಯ ಜ್ಯೋತಿಷ್ಯ ಆಯುರ್ವೇದಗಳನ್ನು ಅಭ್ಯಾಸ ಮಾಡಿ ಮಂಗಳೂರಿನ ಸರಕಾರೀ ಶಾಲೆಯಲ್ಲಿ ಕನ್ನಡ ಪಂಡಿತರಾದರು. ಅನಂತರ ಅನಂತಪುರದಲ್ಲಿ ಕೆಲವು ದಿನ ಇದ್ದು ಬಳಿಕ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜದಲ್ಲಿಯೂ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ ಕನ್ನಡ ಅಧ್ಯಾಪಕರಾಗಿದ್ದರು.

ಕನ್ನಡ ಸಂಸ್ಕೃತ ಉಭಯ ಭಾಷಾಭಿಜ್ಞರಾದ ಸೀತಾರಾಮಾಚಾರ್ಯರು ಅನೇಕ ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆದಿದ್ದಾರೆ. ಶ್ರೀ ಪೇಜಾವರ ಸ್ವಾಮಿಗಳವರೇ ಮೊದಲಾದ ಉಡುಪಿಯ ಎಲ್ಲ ಸ್ವಾಮಿಗಳ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು.

## ೨೫೮ ಉಳಿಯಾರು ಶ್ರೀನಿವಾಸಾಚಾರ್ಯ



ಉಡುಪಿಯ ಹತ್ತಿರವಿರುವ ಉಳಿಯಾರು ಗ್ರಾಮದವರು. ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ವೇದವೇದಾಂತ ಪಂಡಿತರಾಗಿ ಬಹುಕಾಲ ಪಾಠಪ್ರವಚನ ಮಾಡಿದರು. ಧರ್ಮಶಾಸ್ತ್ರದಲ್ಲಿ ಉತ್ತಮ ಪಂಡಿತರು. ಆದ್ದರಿಂದಲೇ ಆಗಿನ ಎಲ್ಲ ಪೀಠಾಧಿಪತಿಗಳೂ ಇವರಿಗೆ "ಧರ್ಮ ವಿಚಕ್ಷಣ" ಎಂಬ ಬಿರುದುಕೊಟ್ಟು ಸನ್ಮಾನಿಸಿದ್ದಾರೆ. ಇವರು ಅನೇಕ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಗೊಳಿಸಿದ್ದಾರೆ.

## ೨೫೯ ಶಿಬರೂರ ಕೃಷ್ಣ ತಂತ್ರಿಗಳು

ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸಿದ್ಧ ವೈದಿಕರಾಗಿದ್ದರು. ಇವರು ಅಲ್ಲಿಯ ಹಲವಾರು ದೇವಾಲಯಗಳ ತಂತ್ರಜ್ಞರೂ, ಆಗಿದ್ದರು ಪೌರೋಹಿತ್ಯ ಪಾರಂಗತರಾಗಿದ್ದರಲ್ಲದೆ ಇವರು ನಿಗಮಾಗಮಗಳ ತಜ್ಞರೂ ಆಗಿದ್ದರು.

## ೨೬೦ ಧಂ. ಸುಬ್ರಹ್ಮಣ್ಯಾಚಾರ್ಯ

ಇವರ ಮನೆತನವೇ ಪುರಾಣಿಕ ಮನೆತನ. ಇವರ ಪುರಾಣ ವಾಚನ ಪ್ರೌಢಿಮೆಯು ಶ್ರೋತೃವರ್ಗಕ್ಕೆ ಆಕರ್ಷಕವಾಗಿತ್ತು. ಶಿರೂರಮಠದ ಲಕ್ಷ್ಮೀಸಮುದ್ರ ತೀರ್ಥರಿಂದ ಮಧ್ವಸಿದ್ಧಾಂತ ವ್ಯಾಸಂಗ ಮಾಡಿದರು.

ಇವರು ಶ್ರೀ ಪೇಜಾವರ ಮಠದ ವಿಶ್ವಜ್ಞತೀರ್ಥರ ಜೊತೆಗೆ ಸಂಚಾರಕ್ಕೆ ಹೋದಾಗ ಮದ್ರಾಸಿನ ಚಾತುರ್ಮಾಸ್ಯ ಕಾಲದಲ್ಲಿ ಪುರಾಣ ಪ್ರವಚನ ಮಾಡಿ ಸಕಲ ನಾಗರಿಕರಿಂದ ಗೌರವಿಸಿಕೊಂಡು, ಸುವರ್ಣ ಪಾತ್ರೆಸಹಿತ ಸನ್ಮಾನಿತರಾದರು. ಇನ್ನೊಮ್ಮೆ ತ್ರಿವೇಂಡ್ರಂನ ಬ್ರಹ್ಮಸ್ವ ಮಠದಲ್ಲಿ ಶ್ರೀ ಭಾಗವತ ಪುರಾಣ ಹೇಳಿ ಮಂಗಳ ಮಾಡಿದಾಗ ಸುವರ್ಣಪದಕಸಹಿತ ಮಾನಪತ್ರಗಳಿಂದ ಮಾನಿತರಾಗಿದ್ದರು.

## ೨೬೧ ನಾರಾಯಣಾಚಾರ್ಯ

ಇವರು ಚಿತ್ರಾಪುರ ಮಠದ ಆಸ್ಥಾನ ವಿದ್ವಾಂಸರಾಗಿ ಸದಾಚಾರಿಗಳೂ ಪಂಡಿತರೂ ಆಗಿದ್ದರು.

## ೨೬೨ ಸಗರಿ ರಾಮದಾಸ ಐತಾಳ

ಇವರು ಉಡುಪಿ ಅನಂತೇಶ್ವರ ದೇವರ ಅರ್ಚನೆಯನ್ನು ಬಹು ಕಾಲ ಮಾಡಿದರು. ಇವರು ಧರ್ಮಶಾಸ್ತ್ರದಲ್ಲಿ ಒಳ್ಳೇ ಪಂಡಿತರಾಗಿದ್ದರು.

## ೨೬೩ ಸಗರಿ ನಾರಾಯಣಾಚಾರ್ಯ

ಇವರು ಉಡುಪಿಯವರು. ವೇದಾಂತದಲ್ಲಿ ಒಳ್ಳೆ ಪಂಡಿತರು. ಉಡುಪಿ ಕಟ್ಟೆ ಶ್ರೀನಿವಾಸಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದ್ದರು.

## ೨೬೪ ಪುರೋಹಿತ ಅಣ್ಣಾಭಟ್ಟ

೧೦೦ ವರ್ಷಗಳ ಹಿಂದೆ ಕಾರವಾರ ಜಿಲ್ಲೆಯ ಶಿರಶಿಯಲ್ಲಿ ಕರ್ಮಠ ವೈದಿಕರಾದ ಅಣ್ಣಾಭಟ್ಟರು ಮಹಾ ಜ್ಯೋತಿಷಿಗಳೆಂದು ಪ್ರಸಿದ್ಧರಾಗಿದ್ದರು. ಇವರು ವೇದ, ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಪ್ರಸಿದ್ಧರಾಗಿದ್ದರು. ಜ್ಯೋತಿರ್ಗಣಿತದಲ್ಲಿಯೂ ಇವರು ಪಂಡಿತರಾಗಿದ್ದರು.

## ೨೬೫ ಸುಬ್ಬಣ್ಣಾ ಭಟ್ಟ



ಅಣ್ಣಾಭಟ್ಟರ ಮಕ್ಕಳಾದ ಸುಬ್ಬಣ್ಣಾ ಭಟ್ಟರು ತಮ್ಮ ತಂದೆಯವರಲ್ಲಿ ವೇದ, ಸಾಹಿತ್ಯ, ಜೋತಿಷ್ಯ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಅನಂತರ ಕಾಸ

ಗಲ್ಲಿಗೆ ಹೋಗಿ ಕಲ್ಲಾಪೂರ ಆಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಬಂದರು. ಮನೆತನದ ವಿದ್ಯೆಯಾದ ಜ್ಯೋತಿಷ್ಯ ಮತ್ತು ಪೌರೋಹಿತ್ಯಗಳಲ್ಲಿ ಪ್ರವೀಣರಾಗಿ ಪ್ರತಿ ನಿತ್ಯವೂ ಪುರಾಣ-ಪ್ರವಚನವನ್ನು ಮಾಡುತ್ತಲಿದ್ದರು. ಆರ್ಯ ಧರ್ಮ ಪ್ರಕಾಶ ಎಂಬ ಸ್ವಂತ ಮುದ್ರಣಾಲಯವನ್ನು ಸ್ಥಾಪಿಸಿ, ಸ್ವಂತ ಪಂಚಾಂಗವನ್ನು ಮಾಡಿ ಮುದ್ರಿಸಿ ಪ್ರಕಟಿಸುತ್ತಿದ್ದರು.

ಕೋರಾ ಪಂಡಿತ ಎಂಬ ಮಲಯಾಳಿ ಜ್ಯೋತಿಷಿಗಳಿಗೆ 'ವರಾಹ ಮಿಹಿರನ, "ಬೃಹಜ್ಜಾತಕ" ಗ್ರಂಥವನ್ನು ಪಾಠ ಹೇಳಿ ಅವರಿಂದ ಮಲಿಯಾಳಿ ಭಾಷೆಯನ್ನು ಅಭ್ಯಾಸ ಮಾಡಿ ಪ್ರಶ್ನೆ ಮಾರ್ಗ ಎಂಬ ಕೇರಳ ಪಂಡಿತರ ಫಲ ಜ್ಯೋತಿಷ್ಯ ಗ್ರಂಥವನ್ನು ತಾವು ಹೇಳಿಸಿಕೊಂಡು ಮಲಯಾಳಿ ಲಿಪಿಯಲ್ಲಿದ್ದ ಅದನ್ನು ದೇವನಾಗರಿ ಲಿಪಿಯಲ್ಲಿ ಬರೆದಿಟ್ಟಿರುವರು.

ಹಣಮಂತರಾವ ತಾಳಪೊದಟೂರ ಅವರು ಬರೆದ "ದ್ವೈತಮಂಡನ" ಎಂಬ ಕನ್ನಡ ಗ್ರಂಥವನ್ನು ಶ್ರೀ ಮಹಾಲೆಯವರಿಂದ ಮರಾಠಿಯಲ್ಲಿ ಭಾಷಾಂತರ ಮಾಡಿಸಿ ಪ್ರಕಟಿಸಿದರು. ಅದೇ ಹಣಮಂತರಾಯರ "ದ್ವೈತಾರ್ಥ ಮಂಜರಿ" ಎಂಬ ಪುಸ್ತಕದ ನಾಲ್ಕು ಭಾಗಗಳನ್ನು ಪುಣೆ ಚಿತ್ರಶಾಲಾ ಪ್ರೆಸ್ಸಿನಲ್ಲಿ ಮುದ್ರಿಸಿ ಪ್ರಕಟಿಸಿದರು. ಜಯತೀರ್ಥ ವಿಜಯ, ಶ್ರುತ್ಯರ್ಥವಿಚಾರ, ರಾಮ ಚಾರಿತ್ರ್ಯಮಂಜರಿ, ಕೃಷ್ಣ ಚಾರಿತ್ರ್ಯ ಮಂಜರಿ ಮುಂತಾದ ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ಪ್ರಕಟಿಸಿದರು.

### ೨೬೬ ಕುಂಬಾರಗೇರಿ ಕೃಷ್ಣಾಚಾರ್ಯ ಹಾಗೂ ಇವರ ಮಕ್ಕಳಾದ ಮಾಧವಾಚಾರ್ಯ

ಈ ತಂದೆ ಮಕ್ಕಳಿಬ್ಬರೂ ಒಳ್ಳೆ ಪುರಾಣಿಕರಾಗಿದ್ದರು. ಇಬ್ಬರಿಗೂ ಭಾಗವತ ಗ್ರಂಥವು ಕ್ಲಪ್ತವಿದ್ದಿತು. ಮಾಧವಾಚಾರ್ಯರು ಚಿಕ್ಕೇರೂರ ಬಂಡಾಚಾರ್ಯರ ಶಿಷ್ಯರಾಗಿದ್ದರು.

### ೨೬೭ ಮದನಂತ ಭೀಮಾಚಾರ್ಯ

ಇವರು ಚಿಕ್ಕೇರೂರ ಸ್ವಾಮಿರಾಯಾಚಾರ್ಯರ ಶಿಷ್ಯರು. ಸಾಹಿತ್ಯ ವೇದಾಂತಗಳಲ್ಲಿ ವ್ಯುತ್ಪನ್ನರು. ಪ್ರತಿ ನಿತ್ಯವೂ ಹೊಸಹಳ್ಳಿ ಪ್ರಾಣದೇವರ ಸಮ್ಮುಖದಲ್ಲಿ ಭಾಗವತ ಪುರಾಣ ಹೇಳುತ್ತಿದ್ದರು.

### ೨೬೮ ಉಪನಿಷತ್ ಭೀಮರಾವ

ಹೊಳೇನರಸೀಪುರದಲ್ಲಿ ೧೯..೮ ರಲ್ಲಿ ಜನಿಸಿದ ಭೀಮರಾಯರಿಗೆ ಬಾಲ್ಯದಿಂದಲೂ ದಾಸಕೂಟದ ಕಡೆಗೆ ಒಲವು. ಇವರು B. A. B L. ಪರೀಕ್ಷೆ ಪಾಸಾಗಿ ಮದ್ರಾಸಿನಲ್ಲಿ ಸರ್. ಅಲ್ಲಾಡಿ ಕೃಷ್ಣಸ್ವಾಮಿಯವರ ಜೊತೆಗೆ ವಕೀಲಿ ವೃತ್ತಿಯನ್ನು ನಡೆಸಿದರು.

ವಕೀಲಿ ವೃತ್ತಿಯಲ್ಲಿ ಪ್ರತಿತಿಂಗಳೂ ಕೈತುಂಬ ಹಣವು ಬರತೊಡಗಿ ಬಂಗಲೆ, ಕಾರು, ನೌಕರ-ಚಾಕರ ವರ್ಗ, ಊರಲ್ಲಿ ಪ್ರತಿಷ್ಠೆ ಹೀಗೆ ವ್ಯವಸಾಯವು ಒಳ್ಳೇ ಭರ-ಭರಾಟಿಯಲ್ಲಿ ಇದ್ದಾಗಲೇ ಭೀಮರಾಯರಗೆ— ಒಂದು ಖೂನಿ ಕೇಸಿನಲ್ಲಿ ಸುಳ್ಳು ಮಾತನಾಡಿ ಹಣವನ್ನು ತೆಗೆದುಕೊಂಡದ್ದರಿಂದ ಪಶ್ಚಾತ್ತಾಪವಾಗಿ ಉಪರತಿಯು ಹುಟ್ಟಿತು. ಕೂಡಲೇ ಅವರು ತಮ್ಮ ಅತ್ಯಂತ ಲಾಭದಾಯಕವಾದ ವಕೀಲಿವೃತ್ತಿಗೆ ತಿಲಾಂಜಲಿಯನ್ನಿತ್ತು ಪಶ್ಚಾತ್ತಾಪದಿಂದ ಮಳಖೇಡಕ್ಕೆ ಬಂದರು.

ಇವರು ಮಳಖೇಡದಲ್ಲಿ ಶ್ರೀ ಜಯತೀರ್ಥರ ನಿರಂತರ ಸೇವೆಯನ್ನು ಮಾಡಿ "ಜಯತೀರ್ಥ ವಾಯ್ವಂತರ್ಗತ ಕೃಷ್ಣ" ಎಂಬ ಅಂಕಿತವನ್ನು ಪಡೆದು, ಹರಿದಾಸ ರಾದರು. ಮತ್ತು ಶ್ರೀ ಟೀಕಾಕೃತ್ಪಾದರ ಸಂಕೇತದಂತೆ ಅಲ್ಲಿಯ ಅರ್ಚಕರಿಂದ ಇವರಿಗೆ ಜಯತೀರ್ಥರ ಒಂದು ತಾಮ್ರದ ವೃಂದಾವನವು ದೊರಕಿತು.

ಅಲ್ಲಿಂದ ಇವರು ಬೆಂಗಳೂರಿಗೆ ಬಂದು ದಾಸ-ದೀಕ್ಷಾಬದ್ಧರಾಗಿ ಸಾವಿರಾರು ಅರ್ಥಗರ್ಭಿತವಾದ, ಭಕ್ತಿ-ರಸಭರಿತವಾದ ದೇವರನಾಮ ಸುಳಾದಿಗಳನ್ನು ರಚಿಸಿದ್ದಾರೆ.

ಶ್ರೀ ವಾದಿರಾಜ ಸ್ವಾಮಿಗಳ ಸ್ವಪ್ನ ಸಂದೇಶದಂತೆ ಉಪನಿಷತ್ತುಗಳನ್ನು ಕನ್ನಡ ದಲ್ಲಿ ಭಾಷಾಂತರ ಮಾಡಿದರು. ಅವರು ರಚಿಸಿದ ಶ್ರೀ ಕೃಷ್ಣಕಥಾಮೃತಸಾರ ಎಂಬ ಗ್ರಂಥವು ಮುದ್ರಿತವಾಗಿದೆ.

### ೨೬೯ ಜಮಖಂಡೀ ವಾದಿರಾಜಾಚಾರ್ಯ



ಧಾರವಾಡ ಜಿಲ್ಲೆಯ ಹಾನಗಲ್ಲಿನಲ್ಲಿ ಜಮಖಂಡೀ ಶ್ರೀನಿವಾಸಾಚಾರ್ಯರು ಉಡುಪಿಯ ಶ್ರೀ ವೃಂದಾವನಾಚಾರ್ಯರ ಶಿಷ್ಯರಾಗಿದ್ದರು. ಅವರಿಗೆ ಸ್ವಾದಿಯ ಶ್ರೀ ವಾದಿರಾಜ ಶ್ರೀಪಾದಂಗಳವರ ಸೇವೆಯಿಂದ ಜನಿಸಿದ ಸತ್ಪುತ್ರರೇ ಜಮಖಂಡಿ ವಾದಿರಾಜಾಚಾರ್ಯರು.

ಬಾಲಕ ವಾದಿರಾಜಾಚಾರ್ಯನಿಗೆ ತಂದೆಯು ಮನೆಯಲ್ಲಿ ಅಧ್ಯಯನ ಮಾಡಿಸಿ ಚಿತ್ತಾಪುರದಲ್ಲಿದ್ದ ವಾಯಿ ಶ್ರೀ ನಿವಾಸಾಚಾರ್ಯರ (ಶ್ರೀಸತ್ಯಪರಾಕ್ರಮ ತೀರ್ಥರು) ಹತ್ತಿರ ವಿದ್ಯಾಭ್ಯಾಸಕ್ಕೆ ಕಳಿಸಿಕೊಟ್ಟರು. ಆಗ ಕೊರ್ಲಹಳ್ಳಿ ಸತ್ಯ ಬೋಧಾಚಾರ್ಯರು (ಶ್ರೀ ಸತ್ಯವೀರ ತೀರ್ಥ ಸ್ವಾಮಿಗಳವರು) ಇವರ ಸಹಾಧ್ಯಾಯಿ ಗಳಾಗಿದ್ದರು

ವಾದಿರಾಜಾಚಾರ್ಯ ಅವರ ಮನೆಯಲ್ಲಿ ೮ ವರ್ಷಗಳ ವರೆಗೆ ಇದ್ದು, ನ್ಯಾಯ ವೇದಾಂತ ಶಾಸ್ತ್ರವನ್ನು ಆಮೂಲಾಗ್ರವಾಗಿ ವ್ಯಾಸಂಗ ಮಾಡಿ ಅನಂತರ ಉಡು ಪಿಗೆ ಬಂದು ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ವ್ಯಾಸಂಗ ಮಾಡಿದರು.

ಆಚಾರ್ಯರಿಗೆ ಶ್ರೀ ಸೋದೆಯ ಶ್ರೀ ವಾದಿರಾಜ ತೀರ್ಥ ಶ್ರೀಪಾದಂಗಳವರಲ್ಲಿ ನಿರತಿಶಯವಾದ ಶ್ರದ್ಧೆಯಿದ್ದಿತು. ಅವರು ಬಳ್ಳಾರಿ ಜಿಲ್ಲೆಯ ಶಿರಗುಪ್ಪಿ ಬೆಳಗಾವಿಯ ಸಮೀಪದ ಶಹಪೂರ ಮುಂತಾದ ಕಡೆಗಳಲ್ಲಿ ಶ್ರೀ ವಾದಿರಾಜರ ವೃಂದಾವನಗಳನ್ನು ಪ್ರತಿಷ್ಠಾಪಿಸಿದರು.

ಉತ್ತರಾದಿಮಠದ ಶ್ರೀ ಸತ್ಯವೀರತೀರ್ಥ ಶ್ರೀಪಾದಂಗಳವರು ಇವರ ಮೇಲೆ ತುಂಬ ಅಭಿಮಾನ ಪಡುತ್ತಿದ್ದರು. ಶ್ರೀ ಶ್ರೀಗಳವರು ಮದ್ರಾಸಿನಲ್ಲಿ ದಿವಾನಬಹಾದ್ದೂರ ರಘುನಾಥರಾವ್‌ರ "ಪುನರ್ವಿವಾಹವು ಶಾಸ್ತ್ರ ಸಮ್ಮತ" ಎಂಬ ಗ್ರಂಥವನ್ನೂ ವಾದವನ್ನೂ ಖಂಡಿಸಲಿಕ್ಕಾಗಿ ಪ್ರಚಂಡ ಸಭೆಯನ್ನು ಕರೆದಿದ್ದರು. ಆ ಸಭೆಗೆ ಶ್ರೀಗಳು ವಾದಿರಾಜಾಚಾರ್ಯರನ್ನು ಬರಮಾಡಿಕೊಂಡು, ವಿಶೇಷವಾಗಿ ಅನುಗ್ರಹಿಸಿದರು.

ಆಚಾರ್ಯರಿಗೆ ದಾಸ ಸಾಹಿತ್ಯದಲ್ಲಿಯೂ ಒಳ್ಳೇ ದೀಕ್ಷೆಯಿದ್ದಿತು. ಇವರು ಯಾವಾಗಲೂ ಶ್ರೀ ಹರಿಕಥಾಮೃತಸಾರ ಗ್ರಂಥವನ್ನು ಅವಲೋಕನ ಮಾಡುತ್ತ ಲಿದ್ದರು. ಸುಧಾದಿ ಗ್ರಂಥಗಳಂತೆ ಹರಿಕಥಾಮೃತ ಸಾರವು ಯಥಾ ಯೋಗ್ಯವಾಗಿ ಬೃಹತ್ತ್ವಾರ್ಥ ಗರ್ಭಿತವಾಗಿದೆ ಎಂದು ಅವರಿಗೆ ತೋರಿತು. ಅದಕ್ಕೆ ಅವರು 'ಭಾವಸೂಚನ,' 'ಶ್ರೀ ವ್ಯಾಸ ಸಿದ್ಧಾಂತ ಕೌಮುದಿ' ಎಂಬ ಹೆಸರಿನ ಎರಡು ಟಿಪ್ಪಣಿಗಗನ್ನು ಬರೆದರು.

ಕನ್ನಡದ "ಹರಿಕಥಾಮೃತಸಾರ" ಗ್ರಂಥಕ್ಕೆ ಸಂಸ್ಕೃತದಲ್ಲಿ ಪ್ರೌಢ ಮನೋಹರ ವಾದ ಜಮಖಂಡೀ ಆಚಾರ್ಯರ ಎರಡು ಟಿಪ್ಪಣಿಗಳು, ವ್ಯಾಖ್ಯಾನಗಳು ಅವರ ಸರ್ವತೋಮುಖ ಪಾಂಡಿತ್ಯ, ಸಕಲ ಶಾಸ್ತ್ರ ಪಾರಿದರ್ಶಿತ್ವ, ಬಹುಶ್ರುತತ್ವ ಮುಂತಾದ ಅವರ ವೈದುಷ್ಯದ ವಿವಿಧ ಮುಖಗಳಿಗೆ ಕನ್ನಡಿ ಹಿಡಿಯುತ್ತವೆ.

ಇಭವರದ ವಿಠಲಾಂಕಿತ ಆಚಾರ್ಯರು ಸುಧಾದಿಗ್ರಂಥಗಳನ್ನು ಓದಿ, ವ್ಯಾಸ ಕೂಟದಲ್ಲಿ ಅಧ್ವರ್ಯುಗಳಾಗಿದ್ದರು. ದಾಸಕೂಟದ ಬಗ್ಗೆಯೂ ಅಷ್ಟೇ ನಿಷ್ಠೆ, ಪರಿನಿಷ್ಠೆಗಳನ್ನು ಹೊಂದಿ ಅಲ್ಲಿಯ ಶ್ರೇಷ್ಠ ಗ್ರಂಥ ರತ್ನಕ್ಕೆ ವಿಶ್ವಮಾನ್ಯವಾದ ವ್ಯಾಖ್ಯಾನ ಬರೆದು ವ್ಯಾಸಕೂಟ—ದಾಸಕೂಟ ಎರಡರಲ್ಲಿಯೂ ಅಜರಾಮರಾಗಿದ್ದಾರೆ.

ಇವರು ಶ್ರೀ ವಾದಿರಾಜರ ಋಜುತ್ವವಾದಿಗಳಾಗಿದ್ದು, ಈ ವಿಷಯದಲ್ಲಿ ಇವರು ಕೆಲವು ಗ್ರಂಥಗಳನ್ನು ಕೂಡ ಬರೆದಿದ್ದಾರೆ.

## ೨೭೦ ರಾಮಾಚಾರ್ಯ ಕಟ್ಟಿ (ಗಲಗಲಿ)

ಇವರು ಕಾಶಿಗೆ ಹೋಗಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ಅಸಾಧಾರಣ ಪಂಡಿತರಾದರು. ಕಾಶಿಯಲ್ಲಿ ಓದಿ ಗುರುವಿನ ಮಂತ್ರವನ್ನು ಗುರುವಿಗೇ ತಿರುಗಿ ಹಚ್ಚಿ ಅಲ್ಲಿಯ ಎಲ್ಲ ಪಂಡಿತರನ್ನು ಗೆದ್ದು ಪಂಡಿತ ಸಾರ್ವಭೌಮ ಎನಿಸಿದರು. ಇವರ ಅತ್ಯದ್ಭುತವಾದ ಶಾಸ್ತ್ರ ಪಾಂಡಿತ್ಯವನ್ನು ಕಂಡು

"ಕಾಶ್ಯಾಮೇಕಃ ಪಂಡಿತೋ ಕಟ್ಟಿರಾಮಃ"

ಎಂಬ ನಾಣ್ಣುಡಿಯು ರೂಢಿಯಲ್ಲಿ ಬಂದಿತಂತೆ.

## ೨೭೧ ಅಚ್ಚಣ್ಣಾಚಾರ್ಯ

ನಾರ್ಥ ಆರ್ಕಾಟ ಜಿಲ್ಲೆಯಲ್ಲಿ ಗುಡಿಯಾತಂ ಎಂಬ ಗ್ರಾಮದಲ್ಲಿ ವೆಂಕಟರಮಣಾಚಾರ್ಯರೆಂಬ ವಿದ್ವಾಂಸರಿದ್ದರು. ಅವರ ಮಕ್ಕಳಾದ ಅಚ್ಚಣ್ಣಾಚಾರ್ಯರು ಚತುರ್ದಶ ವಿದ್ಯಾ ಚಕ್ರವರ್ತಿಗಳೆಂದು ಬಿರುದನ್ನು ಪಡೆದು ಸರ್ವವಿದ್ವನ್ಮಾನ್ಯರಾಗಿದ್ದರು. ಇವರು ಬಾಲ್ಯದಲ್ಲಿಯೇ ಉತ್ತರ ಭಾರತಕ್ಕೆ ಹೋಗಿ ಕಾಶಿ, ನವದ್ವೀಪ ಮುಂತಾದ ಕಡೆಗಳಲ್ಲಿ ನ್ಯಾಯ ವೇದಾಂತ ವ್ಯಾಕರಣ ಮೀಮಾಂಸಾದಿ ಶಾಸ್ತ್ರಗಳನ್ನು ಓದಿ ವಿದ್ವದ್ವರಿಷ್ಠರಾದರು.

ಉತ್ತರ ಭಾರತದ ವಿದ್ವನ್ಮಂಡಲಗಳಿಂದ ಬಹುಮಾನಿತರಾಗಿ ಆಚಾರ್ಯರು ಸ್ವಗ್ರಾಮಕ್ಕೆ ಮರಳಿ ಬಂದು ಸ್ವಾಧ್ಯಾಯ ಪ್ರವಚನ ಪ್ರವೀಣರಾದರು.

ಶ್ರೀ ಅಚ್ಚಣ್ಣಾಚಾರ್ಯರಿಗೆ ಸಾಹಿತ್ಯದಲ್ಲಿ ಸರಸ ಸುಂದರವಾದ ಕಾವ್ಯ ಪ್ರಬಂಧಗಳನ್ನು ರಚಿಸುವಷ್ಟು ಪ್ರಭುತ್ವವಿತ್ತು. ಅವರು ಆರ್ಯಾಭಾರತ, ಆರ್ಯಾ ರಾಮಾಯಣ ಎಂಬ ಮಧುರ ಕಾವ್ಯಗಳನ್ನು ಬರೆದು ಕವಿಕೋಕಿಲರೆಂದು ಪ್ರಸಿದ್ಧರಾಗಿದ್ದಾರೆ.

ಅವರಿಗೆ ಭಾರತೀಯ ಗಣಿತ ಶಾಸ್ತ್ರದಲ್ಲಿ ಒಳ್ಳೆ ಪ್ರಶಂಸನೀಯವಾದ ಪಾಂಡಿತ್ಯ ವಿದ್ದಿತು. ಮತ್ತು ಋಷಿಪ್ರಣೀತವಾದ ಖಗೋಲ ಶಾಸ್ತ್ರ ಮತ್ತು ಭೂಗೋಲ ಶಾಸ್ತ್ರ ಗಳನ್ನು ಕುರಿತು ಸಂಸ್ಕೃತದಲ್ಲಿ ಅನೇಕ ಪ್ರೌಢ ಗ್ರಂಥಗಳನ್ನು ಬರೆದಿದ್ದಾರೆ.

ಅಚ್ಚಣ್ಣಾಚಾರ್ಯರು ರಚಿಸಿದ— ಭೂಮಿತಿ, ಖಗೋಲ, ಭೂಗೋಲ, ನಕ್ಷತ್ರ ವಿಜ್ಞಾನ, ಜ್ಯೋತಿರ್ಗಣಿತ ಮುಂತಾದ ವಿವಿಧ ವಿಷಯಕ ವೈಜ್ಞಾನಿಕ ಗ್ರಂಥಗಳನ್ನು ಮೈಸೂರ ಅರಮನೆಯಿಂದ ಪ್ರಕಟಿಸಲಾಗಿದೆ.

ಮೈಸೂರಿನ ಮುಮ್ಮುಡಿ ಕೃಷ್ಣರಾಜ ಒಡೆಯರು ಇವರಿಗೆ ಆಸ್ಥಾನ ವಿದ್ವಾಂಸ ರೆಂದು ಗೌರವಿಸಿ "ಚತುರ್ದಶ ವಿದ್ಯಾಚಕ್ರವರ್ತಿ'' ಎಂಬ ಬಹುಮಾನದ ಪದವಿಯ ನ್ನಿತ್ತು ಸತ್ಕರಿಸಿದರು.

### ೨೭೦ ನಾಮಗೊಂಡ್ಲು ವಾಸುದೇವಾಚಾರ್ಯ

ಶ್ಯಾಮಾಚಾರ್ಯರ ಮಕ್ಕಳಾದ ವಾಸುದೇವಾಚಾರ್ಯರು ಸಾಹಿತ್ಯ ಹಾಗೂ ವೇದಾಂತದಲ್ಲಿ ಪಂಡಿತರಾಗಿದ್ದರು. ಕ್ರಿ. ಶ. ೧೯೦೭ ರಿಂದ ೧೯೧೪ ರ ವರೆಗೆ ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು.

### ೨೭೩ ಸರೋವರ ಕೃಷ್ಣಾಚಾರ್ಯ (ಹೊಳವನಹಳ್ಳಿ)

ಇವರು ವೇದಾಂತ ಶಾಸ್ತ್ರದಲ್ಲಿ ಪಂಡಿತರಾಗಿ ಸ್ವಗ್ರಾಮದಲ್ಲಿ ವಾಸವಾಗಿದ್ದರು.

### ೨೭೪ ಹೊಳವನಹಳ್ಳಿ ಕೃಷ್ಣಾಚಾರ್ಯ

ಇವರು ವೇದಾಂತ ಪ್ರವೀಣರಾಗಿ ಜನರಂಜನವಾಗುವಂತೆ ಪುರಾಣವನ್ನು ಹೇಳುತ್ತಿದ್ದರು.

### ೨೭೫ ತೆಗ್ಗಿನಮನಿ ರಾಮಾಚಾರ್ಯ (ಹಾನಗಲ್ಲ)

ಇವರು ಶ್ರೀ ರಾಘವೇಂದ್ರ ಸ್ವಾಮಿ ಮಠದ ಪಂಡಿತ ಪ್ರಪಂಚ ಸಾರ್ವ ಭೌಮರಾದ ಶ್ರೀ ಸುಮತೀಂದ್ರ ತೀರ್ಥ ಶ್ರೀಪಾದಂಗಳವರ ಶಿಷ್ಯರಾಗಿ ಶಾಸ್ತ್ರಾಧ್ಯ ಯನ ಮಾಡಿ ತರ್ಕ ವೇದಾಂತಗಳಲ್ಲಿ ಅಪ್ರತಿಮ ಪಂಡಿತರಾದರು. ಶ್ರೀ ಶ್ರೀಗಳ ವರು ತಮ್ಮ ಶಿಷ್ಯನ ಪ್ರಚಂಡ ಪಾಂಡಿತ್ಯಕ್ಕೆ ಮೆಚ್ಚಿ ಅವರಿಗೆ ಪಲ್ಲಕ್ಕಿಯ ಮರ್ಯಾದೆ ಯನ್ನು ಕರುಣಿಸಿದರು. ಇವರಲ್ಲಿ ಅನೇಕ ಜನ ಛಾತ್ರರು ಹಾನಗಲ್ಲಿಗೆ ಬಂದು ಪಾಠ ಓದಿ ಮಹಾ ಪಂಡಿತರಾದರು.

### ೨೭೬ ಕಿರಣೀ ಕೃಷ್ಣಾಚಾರ್ಯ

ಶ್ರೀ ಸುಮತೀಂದ್ರ ತೀರ್ಥ ಶ್ರೀಪಾದಂಗಳವರ ಸಾಕ್ಷಾತ್ ಶಿಷ್ಯರಾದ ತೆಗ್ಗಿನ ಮನಿ ರಾಮಾಚಾರ್ಯರಲ್ಲಿ ನ್ಯಾಯ ವೇದಾಂತಗಳನ್ನು ಅಧ್ಯಯನ ಮಾಡಿದರು. ಇವರು ಅನೇಕಾನೇಕ ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡು ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ಇವರಲ್ಲಿ ಓದಿ ವಿದ್ವಾಂಸರಾದ ಛಾತ್ರರಲ್ಲಿ ಮಹಾ ಮಹೋಪಾಧ್ಯಾಯ ವಿರುಪಾಕ್ಷಶಾಸ್ತ್ರಿಗಳು ( ಕೂಡಲೀ ಶೃಂಗೇರಿ ಶಂಕರಾಚಾರ್ಯ ) ಮೊದಲಾದವರು ಪ್ರಧಾನರಾಗಿದ್ದರು.

### ೨೭೭ ಮನ್ನಾರಗುಡಿ ರಾಮಚಂದ್ರಾಚಾರ್ಯ

ಇವರು ದಕ್ಷಿಣ ದೇಶದ ಭಟ್ಟಾಚಾರ್ಯರೆಂದು ಪ್ರಸಿದ್ಧರಾಗಿದ್ದರು. ಮನ್ನಾರ ಗುಡಿ ಯಲ್ಲಿ "ತರ್ಕ ಮಹಾ ವಿದ್ಯಾಲಯ"ವನ್ನು ಸ್ಥಾಪಿಸಿ ಕೇವಲ ನ್ಯಾಯ ಶಾಸ್ತ್ರದ ಉದ್ಗ್ರಂಥಗಳನ್ನು ಮಾತ್ರ ಪ್ರೌಢ ಪಂಡಿತರಿಗೆ ಪಾಠ ಹೇಳುತ್ತಿದ್ದರು. ಇವರ ತರ್ಕ ವಿದ್ವತ್ತಿಗೆ ಸಮಾಧಿಕ ಸುಧೀಶೇಖರರು ಆ ಪ್ರಾಂತದಲ್ಲಿಯೂ, ಆ ಕಾಲದಲ್ಲಿಯೂ ಯಾರೂ ಇರಲಿಲ್ಲ.

### ೨೭೮ ಪಾಂಡುರಂಗಿ ನಾರಾಯಣಾಚಾರ್ಯ

ಸಾಹಿತ್ಯ, ವೇದಾಂತಗಳಲ್ಲಿ ವಿದ್ವಾಂಸರಾಗಿದ್ದರು. ಇವರು ಮನ್ನಾರಗುಡಿಯಲ್ಲಿದ್ದು ಅನೇಕ ಲೌಕಿಕ ವೈದಿಕರಿಗೆ ಪಾಠಹೇಳಿದರು.

### ೨೭೯ ಸುಮತಿ ನರಸಿಂಹಾಚಾರ್ಯ

ಮನ್ನಾರ ಗುಡಿಯಲ್ಲಿದ್ದ ನರಸಿಂಹಾಚಾರ್ಯರಿಗೆ ವ್ಯಾಕರಣವು ಅಂಗೈಯಲ್ಲಿಯ ನೆಲ್ಲಿಕಾಯಿಯಾಗಿದ್ದಿತು. ವೇದಾಂತದಲ್ಲಿಯೂ ಅವರಿಗೆ ಚನ್ನಾಗಿ ಗತಿ ಇದ್ದಿತು.

## ಪುದುಕೋಟೆ ಪಂಡಿತರು

ಪುದುಕೋಟೆಯು ಸಂಸ್ಥಾನವಾಗಿದ್ದು ಅಲ್ಲಿಯ ರಾಜರು ಎಂದಿನಿಂದಲೂ ಸಂಸ್ಕೃತ ವಿದ್ಯಾ ಪಕ್ಷಪಾತಿಗಳಾಗಿದ್ದರು. ತಮ್ಮ ಸಂಸ್ಥಾನದಲ್ಲಿ ಒಂದು ಸಂಸ್ಕೃತ ಕಾಲೇಜನ್ನು ತೆಗೆದು ಅನೇಕ ವಿದ್ವಾಂಸರಿಗೆ ಆಶ್ರಯ ಕೊಟ್ಟಿದ್ದಲ್ಲದೆ, ಪ್ರತಿವರ್ಷವೂ ಪಂಡಿತ ಸಭೆ ಯನ್ನು ಕರೆದು ದೇಶದ ಅನೇಕ ವಿದ್ವಾಂಸರನ್ನು ಬರಮಾಡಿಕೊಂಡು ಬೇರೆ-ಬೇರೆ ಶಾಸ್ತ್ರಗಳಲ್ಲಿ ವಿದ್ಯಾರ್ಥಿಗಳನ್ನು ಪರೀಕ್ಷಿಸಿ ಉಪನ್ಯಾಸ ಹೇಳಿಸಿ ದಾನ-ದಕ್ಷಿಣೆ, ಶಾಲು ಜೋಡಿ ಗಳನ್ನಿತ್ತು ಸತ್ಕರಿಸಿ ಪ್ರೋತ್ಸಾಹಿಸುತ್ತಿದ್ದರು.

ಅಲ್ಲಿಯ ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾದ ಹಾಗೂ ಅರಮನೆಯ ಧರ್ಮಾಧಿಕಾರಿಗಳಾದ ಕೆಲವು ಪಂಡಿತರ ಪರಿಚಯವಿಲ್ಲಿದೆ. ಹಾಗೂ ಇದೇ ಪುಸ್ತಕದಲ್ಲಿ ಬೇರೆ ಕಡೆಗೂ ಇವೆ.

### ೨೮೦ ಪಾಂಡುರಂಗಿ ವೇದವ್ಯಾಸಾಚಾರ್ಯ

ಇವರು ಒಳ್ಳೇ ವೇದಾಂತಿಗಳು. ಪುದುಕೋಟೆಯ ಅರಮನೆಯಲ್ಲಿ ಧರ್ಮಾಧಿಕಾರಿಗಳಾಗಿದ್ದರು. ಹಾಗೂ ಸಂಸ್ಕೃತ ಕಾಲೇಜದಲ್ಲಿ ವೇದಾಂತ ಅಧ್ಯಾಪಕರೂ ಆಗಿದ್ದರು. ಇವರು ನ್ಯಾಯ ಘಟಿತವಾದ ಸಾಂಪ್ರದಾಯಕ ಶುದ್ಧ ವೇದಾಂತ ಶಾಸ್ತ್ರದಲ್ಲಿ ಪರಿಣತ ಪ್ರಜ್ಞರಾಗಿದ್ದರು.

### ೨೮೧ ದಾದಾಚಾರ್ಯ ಕಾಳೆ (ಹೈದರಾಬಾದ)

ಇವರು ಮಾಣಿಕ ಶಾಸ್ತ್ರಿ ಎಂಬ ಮಹಾ ಪಂಡಿತರಲ್ಲಿ ಭಾಷ್ಯಾಂತ ವ್ಯಾಕರಣವನ್ನು ಓದಿ ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತ ಓದಿದರು. ಒಳ್ಳೆ ಪ್ರಭಾವಶಾಲಿಯಾದ ಭಾಷಣಕಾರರು.

### ೨೮೨ ರಾಘವೇಂದ್ರಾಚಾರ್ಯ ಜೋಶಿ (ಐನಾಪೂರ)

ಇವರು ಗಲಗಲಿ ಮನೆತನದ ಪಂಡಿತ ಮಂಡಲ ಸಾರ್ವಭೌಮರೆನಿಸಿದ ಶ್ರೀ ಮಧ್ವಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳ ಉದ್ಗ್ರಂಥಗಳನ್ನು ಓದಿ ಪಂಡಿತ ಪ್ರವರರಾಗಿದ್ದರು.

### ೨೮೩ ಮಂಗಸೂಳೀ ವೆಂಕಟಾಚಾರ್ಯ

ಇವರು ಶ್ರೀ ರಾಘವೇಂದ್ರಾಚಾರ್ಯ ಜೋಶಿಯವರಲ್ಲಿ ಓದಿ ಮಹಾ ವಿದ್ವಾಂಸರಾಗಿದ್ದರು. ಇವರು ವೇದಾಂತದಲ್ಲಿ ಮಹಾ ಪಂಡಿತರಾಗಿದ್ದು ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದರು. ಪರಮ ಸಾತ್ವಿಕರಾದ ಆಚಾರ್ಯರಲ್ಲಿ ಆ ದೇಶದ ಜನರಿಗೆಲ್ಲ ಅತ್ಯಂತ ಪೂಜ್ಯ ಬುದ್ಧಿ ಇದ್ದಿತು.

### ೨೮೪ ಗರಣಿ ಕೃಷ್ಣಾಚಾರ್ಯ (ಬೆಂಗಳೂರ)

ಇವರು ಸಾಹಿತ್ಯ ವ್ಯಾಕರಣದಲ್ಲಿ ಪಂಡಿತಾಗ್ರೇಸರರಾಗಿದ್ದರು. ವ್ಯಾಕರಣದಲ್ಲಿ ಕೃಷ್ಣಾಚಾರ್ಯರ ಮಾತು ನಿರ್ಣಯಾತ್ಮಕವಾಗಿ ಕೊನೆಯದಾಗಿರುತ್ತಿತ್ತು. ಕನ್ನಡದ ಪಾಣಿನಿ ಎಂದು ಆ ಕಾಲದ ವಿದ್ವತ್ ಸಮಾಜದಲ್ಲಿ ಅವರಿಗೆ ಮನ್ನಣೆಯಿದ್ದಿತು.

## ೨೮೫ ಸೊನ್ನಿ ಗೋವಿಂದಾಚಾರ್ಯ
## ಸೊನ್ನಿ ಗುಂಡಾಚಾರ್ಯ
## ಸೊನ್ನಿ ಹನಮಂತಾಚಾರ್ಯ

ಇವರು ಮೂವರೂ ಗೋದಾತೀರದ ಸೊನ್ನಿ ಕ್ಷೇತ್ರದವರಾಗಿದ್ದರು. ಇವರು ಪ್ರಮೇಯ, ಪ್ರಮಾಣ, ಪರಿಬ್ರಂಹಿತವಾಗಿ ಪುರಾಣಗಳನ್ನು ಹೇಳುವದರಲ್ಲಿ ಮೂವರೂ ಪರಿಣತರಾಗಿದ್ದರು.

## ೨೮೬ ತಂಗೊಳ್ಳಿಯ ವರವಣಿ ಆಚಾರ್ಯರು

ಇವರು ಇಬ್ಬರೂ ಅಣ್ಣತಮ್ಮಂದಿರು ಚತುಃಶಾಸ್ತ್ರದಲ್ಲಿ ಅದ್ವಿತೀಯ ಪಂಡಿತ ರಾಗಿದ್ದರು. ಕಿರಿಯವರೇ ಭಾಷ್ಯದೀಪಿಕಾಕಾರರು. ಅವರು ಮುಂದೆ ಶ್ರೀ ವ್ಯಾಸರಾಜ ಮಠದ ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡಿದರು. ಅವರು ಸ್ವಾಮಿಗಳಾದ ಬಳಿಕ ಇವರ ಅಣ್ಣಂದಿರಾದ ಹಿರಿಯ ವರವಣಿ ಆಚಾರ್ಯರು ತಮ್ಮನ ಭೇಟಿಗೆಂದು ಬಂದರು.

ಶ್ರೀಗಳವರು ತಮ್ಮ ಭಾಷ್ಯದೀಪಿಕಾ ಗ್ರಂಥವನ್ನು ಬರೆದು ಮುಗಿಸಿ ಅದನ್ನು ಹಾಗೇ ಇಟ್ಟು ಸ್ನಾನಕ್ಕೆ ಹೋಗಿದ್ದರು. ಆಗ ಅಣ್ಣಂದಿರು ಆ ಪುಸ್ತಕವನ್ನು ಓದಿ ನೋಡಿ "ಚನ್ನಾಗಿ ಬರೆದಿದ್ದಾನೆ ಇವನಿಗೆ ಶಾಸ್ತ್ರದಲ್ಲಿ ಒಳ್ಳೇ ವ್ಯುತ್ಪತ್ತಿ ಇದೆ" ಎಂದು ನುಡಿದರು. ಅದನ್ನು ಕೇಳಿ ಅಂದು ಶ್ರೀಗಳವರಿಗೆ ಭಿಕ್ಷೆ ಮಾಡಿಸಿದ ಗೃಹಸ್ಥನಿಗೆ ಬಹಳ ಕೋಪ ಬಂದಿತು. ನಮ್ಮ ಸ್ವಾಮಿಗಳನ್ನು ಏಕ ವಚನದಲ್ಲಿ ಪ್ರಯೋಗಿಸಿದ ಈ ಮೂರ್ಖನು ನಮ್ಮ ಮನೆಯಲ್ಲಿ ಇಂದು ಊಟಕ್ಕೆ ಬರುವದು ಬೇಡವೆಂದು ಶ್ರೀಗಳ ವರಲ್ಲಿ ಹೋಗಿ ದೂರಿಟ್ಟನಂತೆ. ಅದನ್ನು ಕೇಳಿ ಸ್ವಾಮಿಗಳವರಿಗೆ ಪರಮಾನಂದವಾಗಿ ತಮ್ಮ ಅಣ್ಣನಂಥ ಮಹಾ ಪಂಡಿತರು ಮೆಚ್ಚಿದ ಬಳಿಕ ತಮ್ಮ ಕೃತಿಯು ಅತ್ಯುತ್ತಮ ವಾಗಿರಲೇಬೇಕು. ಎಂದು ಭರವಸೆ ಮೂಡಿ ಆನಂದ ತುಂದಿಲರಾದರಂತೆ.

## ೨೮೭ ಶ್ಯಾಮಪುರದ ಆಚಾರ್ಯರು

ಗೌಡಗಿರಿಯ ಹತ್ತರ ಶ್ಯಾಮಪುರದಲ್ಲಿ ೪೦ ಮನೆಗಳಲ್ಲಿ ಅವಿಚ್ಛಿನ್ನವಾಗಿ ಸುಧಾ ಪಾಠ ನಡೆಯುತ್ತಿತ್ತು. ಶ್ಯಾಮಪುರದ ೪೦ ಮನೆಗಳಲ್ಲಿ ಗೌಡಗಿರಿಯ ಆಚಾ ರ್ಯರ ಮನೆತನವು-ವ್ಯಾಸರಾಯ ಮಠದ್ದಾಗಿದ್ದು, ಉಳಿದ ೩೯ ಮನೆತನಗಳು ಉತ್ತರಾದಿಮಠದವಿದ್ದವು. ಎಲ್ಲ ಕಡೆಗೂ ನಿತ್ಯ ನಿರಂತರವೂ ನ್ಯಾಯ, ವ್ಯಾಕರಣ ವೇದಾಂತ, ಮೀಮಾಂಸಾದಿ ಶಾಸ್ತ್ರಗಳ ಪಾಠ-ಪ್ರವಚನವು ನಡೆಯುತ್ತಿತ್ತು.

ಶಾಮುಪುರ, ಗೌಡಗಿರಿ, ನಾಮುಗೊಂಡಲು ಮಂಚೇನಹಳ್ಳಿ, ವರವಣಿ ಈ ಪಂಚ ಗ್ರಾಮಗಳಲ್ಲಿ ಒಂದಾನೊಂದು ಕಾಲಕ್ಕೆ ಪಂಚ ವಿಶ್ವವಿದ್ಯಾಲಯಗಳೇ ನಡೆಯುತ್ತಿದ್ದವು. ಉತ್ತರ ದೇಶದ ಅನೇಕ ಛಾತ್ರರು ಪಿನಾಕೀ ನದೀ ತೀರವಾದ ಶ್ಯಾಮುಪುರ ಮೊದಲಾದ ಊರುಗಳಲ್ಲಿ ಬಂದು ಶಾಸ್ತ್ರ ಪಾರೀಣರಾಗಿ ಹೋಗುತ್ತಿದ್ದರು.

### ೨೮೮ ಪಲ್ಲಕ್ಕಿ ವೆಂಕಟರಮಣಾಚಾರ್ಯ (ತುಮಕೂರ)

ತಮ್ಮ ಪಾಂಡಿತ್ಯದ ಪ್ರಭಾವದಿಂದ ಪ್ರಾಯದ ವಯಸ್ಸಿನಲ್ಲಿಯೇ ಪಾಲಕೀ ಪದಸ್ಥರಾಗಿ ಬೆಳಗಿದ್ದರು. ಪಲ್ಲಕ್ಕಿ ವೆಂಕಟರಮಣಾಚಾರ್ಯರೆಂದು ಇವರು ಹೆಸರಾದರು. ಇವರು ದಕ್ಷಿಣ ದೇಶದ ಮಹಾ ಪಂಡಿತರಾದ ಗೌಡಗಿರಿ ವಾಸುದೇವಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಂಡಿತಪ್ರವರರಾದರು. ಇವರಲ್ಲಿ ಅಧ್ಯಯನ ಮಾಡಿ ಅನೇಕ ಶಿಷ್ಯರು ಮಹಾ ವಿದ್ವಾಂಸರಾಗಿ ಪಾಠ–ಪ್ರವಚನಾಚಾರ್ಯರೆಂದು ಲೋಕದಲ್ಲಿ ಖ್ಯಾತಿಯನ್ನೂ ಕೀರ್ತಿಯನ್ನೂ ಗಳಿಸಿದರು. ದೊಡ್ಡಬಳ್ಳಾಪುರದ ವಿದ್ವನ್ಮಾನ್ಯ ವಿದ್ವಾಂಸರಾದ ಗೋವಿಂದ ಕೃಷ್ಣಾಚಾರ್ಯರು ಇವರಲ್ಲಿ ಓದಿ ನಿಶಿತ ಮತಿಗಳಾದ ಮಹಾ ಮೇಧಾವಿ ಮನೀಷಿಗಳೆಂದು ಖ್ಯಾತಾಭಿಗೀತರಾದರು.

### ೨೮೯ ಕಟ್ಟಿ ನರಸಿಂಹಾಚಾರ್ಯ (ಅನಂತಪುರ)

ಕಟ್ಟೀ ನರಸಿಂಹಾಚಾರ್ಯರು ಮಹಾ ಗೌರವ ಶಾಲಿಗಳಾಗಿ ಶಾಸ್ತ್ರ ಪಂಡಿತರೆಂದೂ, ಪ್ರವಚನಾಚಾರ್ಯರೆಂದೂ ಎಲ್ಲ ಕಡೆಗೂ ಪೂಜ್ಯರಾಗಿದ್ದರು. ಗೌಡಗಿರಿ ವಾಸುದೇವಾಚಾರ್ಯರಲ್ಲ ಶಾಸ್ತ್ರಾಧ್ಯಯನ ಮಾಡಿದ ನರಸಿಂಹಾಚಾರ್ಯರು ಉತ್ತರಾದಿಮಠದ ಶ್ರೀ ಸತ್ಯಪರಾಕ್ರಮತೀರ್ಥ ಸ್ವಾಮಿಗಳವರಲ್ಲಿ ನ್ಯಾಯ ಶಾಸ್ತ್ರದ ಕ್ರೋಡ ಪತ್ರಗಳನ್ನೂ ವೇದಾಂತದ ಸುಧಾ ವ್ಯಾಸತ್ರಯಾದಿ ಉದ್ಗ್ರಂಥಗಳನ್ನೂ ವ್ಯಾಸಂಗ ಮಾಡಿ ಮಹೋನ್ನತ ಪಂಡಿತರೆನಿಸಿದರು.

ಪಂಡಿತ ಪಕ್ಷಪಾತಿಗಳಾದ ಶ್ರೀ ಸತ್ಯಪರಾಕ್ರಮ ತೀರ್ಥರು ಕಟ್ಟಿಯ ಆಚಾರ್ಯರ ಶಾಸ್ತ್ರಾನುವಾದ ಚಾತುರ್ಯವನ್ನೂ ವಾದ ಕೌಶಲ್ಯವನ್ನೂ ನೋಡಿ ಅವರಿಗೆ ಪಲ್ಲಕ್ಕಿಯ ಗೌರವವನ್ನು ಕೊಟ್ಟು ಕರುಣಿಸಿದರು.

ಈ ಕಟ್ಟಿ ಆಚಾರ್ಯರಲ್ಲಿ ಪಾಠ ಕೇಳಿ ಪಂಡಿತರಾದ ಜನರು ಅನೇಕರಿರುವರು ಅವರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾದ ಪುಂಗನೂರ ರಾಘವೇಂದ್ರಾಚಾರ್ಯರು ಪ್ರಮುಖರಾಗಿದ್ದರು.

## ೨೯೦ ದೊಡ್ಡಬೆಲೆ ವೆಂಕಟೇಶಾಚಾರ್ಯ (ಶ್ಯಾಮಪೂರ)

ಇವರು ಮೈಸೂರಿನ ಕುಂಡಲಗಿರಿ ಆಚಾರ್ಯರಲ್ಲಿಯೂ ಮತ್ತು ಕರಗಿರಿ ಆಚಾರ್ಯರಲ್ಲಿಯೂ ವ್ಯಾಕರಣ ವೇದಾಂತಾದಿ ಶಾಸ್ತ್ರಗಳನ್ನು ಓದಿ ಪಂಡಿತರಾದರು. ಅನೇಕ ಶಿಷ್ಯರಿಗೆ ಪಾಠಹೇಳಿದರು. ಶಾಮಪುರ ಮಾಧವಾಚಾರ್ಯರೇ ಮೊದಲಾದವರು ಅವರಲ್ಲಿ ಓದಿ ಪಂಡಿತರಾದರು.

## ೨೯೧ ಧಾರವಾಡ ಶ್ರೀನಿವಾಸಾಚಾರ್ಯ

ಇವರು ವೇದಾಂತ ಪ್ರಮೇಯ ಭಾಗದಲ್ಲಿ ಮಹಾ ಪಂಡಿತರಾಗಿದ್ದರು. ದಿವಾನ ಕೃಷ್ಣಮೂರ್ತಿಗಳು ಇವರಲ್ಲಿ ವೇದಾಂತ ಪಾಠವನ್ನು ಓದಿದರು. ಅವರಲ್ಲದೆ ಮೂರ್ತಿರಾಯರು, ಗುರುರಾಯರು, ರಾಮಚಂದ್ರರಾಯರು, ಕೇಶವಮೂರ್ತಿರಾಯರು ಮೊದಲಾದ ಅನೇಕ ಗೃಹಸ್ಥರು ಅವರಲ್ಲಿ ಸಚ್ಛಾಸ್ತ್ರವನ್ನು ಓದಲಿಕ್ಕೆ ಬರುತ್ತಿದ್ದರು.

ಶ್ರೀನಿವಾಸಾಚಾರ್ಯರು ಉದಾರರಾಗಿದ್ದು ಮೈಸೂರಿನ ಕೃಷ್ಣಮೂರ್ತಿ ಪುರದಲ್ಲಿ ಒಂದು ಗುಡಿ ಕಟ್ಟಿಸಿ ಶ್ರೀರಾಮಚಂದ್ರ ದೇವರ ಪ್ರತಿಷ್ಠೆ ಗೈದಿದ್ದಾರೆ. ಆ ಗುಡಿಯನ್ನು ಮಾನ್ವಿ ನರಸಿಂಹ ಮೂರ್ತಿ ಆಚಾರ್ಯರು ಈಗ ಸಾಗರ ಕಟ್ಟೆ ಸ್ವಾಮಿಗಳಿಗೆ ದಾನ ಕೊಟ್ಟಿದ್ದಾರೆ. ಆ ಸ್ವಾಮಿಗಳು ಇದೇ ರಾಮಚಂದ್ರ ದೇವರ ಮಂದಿರದಲ್ಲಿ ಈಗ ವಾಸವಾಗಿದ್ದಾರೆ.

## ೨೯೨ ನಾಮಗೊಂಡಲು ಶ್ಯಾಮಾಚಾರ್ಯ

ಮಹಾ ಪಂಡಿತ ಪ್ರಕಾಂಡರಾದ ಶ್ಯಾಮಾಚಾರ್ಯರಿಗೆ ಸಾಮಾನ್ಯನಿರುಕಿ ಶಾಮಾಚಾರ್ಯರೆಂದೂ ಅನುವಾದ ಭಟ್ಟಾಚಾರ್ಯರೆಂದೂ ಕರೆಯುತ್ತಿದ್ದರು. ಪಾಂಡಿತ್ಯ ಲಬ್ಧವಾದ ಈ ಪದವಿ ಪ್ರಶಸ್ತಿಗಳಿಂದಲೇ ಅವರ ಶಾಸ್ತ್ರ ವೈದಗ್ಧ್ಯ ಅನುವಾದ ಪಟೀಯತ್ವ ನ್ಯಾಯ ನಿಪುಣಿಮೆಗಳು ಯಾವ ಮಟ್ಟದ ವಿದ್ದವು ಎಂಬುವದನ್ನು ತಿಳಿಯಬಹುದು. ಅವರ ಮನೆಯಲ್ಲಿ ೪೦-೫೦ ಜನ ವಿದ್ಯಾರ್ಥಿಗಳಿಗೆ ನಿರಂತರವೂ ನ್ಯಾಯ ಶಾಸ್ತ್ರ ಪಾಠವು ನಡೆಯುತ್ತಲಿತ್ತು.

ಕೋಲಾರ ಜಿಲ್ಹೆಯ ಗೌರೀಬಿದನೂರ ತಾಲೂಕಿನ ನಾಮಗೊಂಡಲು ಗ್ರಾಮದಲ್ಲಿ ಜನಿಸಿದ ಶ್ಯಾಮಾಚಾರ್ಯರು ಬಾಲ್ಯದಲ್ಲಿಯೇ ತಮ್ಮ ಜ್ಞಾನದ ಹಸಿವನ್ನು ಹಿಂಗಿಸಲಿಕ್ಕಾಗಿ ಮೈಸೂರಿಗೆ ಬಂದರು. ಮೈಸೂರಲ್ಲಿ ನವ್ಯನ್ಯಾಯದ ಉದ್ದಾಮ ವಿದ್ವಾಂಸರಾದ ರಾಮಗಿರಿ ಶ್ಯಾಮಾಚಾರ್ಯರಲ್ಲಿ ಸಂಪೂರ್ಣ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿ ತರ್ಕ ಶಾಸ್ತ್ರದಲ್ಲಿ ತುಲನೆ ಇಲ್ಲದ ತೀಕ್ಷ್ಣ ಪಾಂಡಿತ್ಯ ವನ್ನು ಸಂಪಾದನ ಮಾಡಿದರು.

ಮೈಸೂರಲ್ಲಿ ನ್ಯಾಯ ಶಾಸ್ತ್ರ ಅಧ್ಯಯನವನ್ನು ಮುಗಿಸಿ ಅನಂತರ ಆ ಕಾಲದ ವೇದಾಂತ ವಾಚಸ್ಪತಿಗಳೆಂದು ಸುಪ್ರಸಿದ್ಧರಾದ ಮುಳಬಾಗಿಲಿನ ಶ್ರೀ ಹರಿಯಪ್ಪಾಚಾರ್ಯ ರಲ್ಲಿ ವೇದಾಂತವನ್ನು ಸುಮಗ್ರವಾಗಿ ಓದಿದರು. ನ್ಯಾಯ ವೇದಾಂತ ಎರಡು ಶಾಸ್ತ್ರಗಳಲ್ಲಿ ನಿಸ್ಸೀಮ ಪಂಡಿತರೆಂದು ಆಚಾರ್ಯರು ಆ ಕಾಲದಲ್ಲಿ ಸರ್ವ ಮಾನ್ಯರಾಗಿದ್ದರು.

ಇವರು ಮುಂದೆ ಮೈಸೂರ ಅರಮನೆಯ ಆಸ್ಥಾನ ವಿದ್ವಾಂಸರೆಂದೂ ಸಂಸ್ಕೃತ ಕಾಲೇಜಿನ ತರ್ಕಾಧ್ಯಾಪಕರೆಂದೂ ನೇಮಕಗೊಂಡರು.

ಶೃಂಗೇರಿಯ ಶಂಕರಾಚಾರ್ಯ ಪೀಠದ ಸ್ವಾಮಿಗಳಾದ ಶ್ರೀ ನರಸಿಂಹಭಾರತಿ ಸ್ವಾಮಿಗಳು ಶ್ಯಾಮಾಚಾರ್ಯರನ್ನು ತಮ್ಮಲ್ಲಿ ಇಟ್ಟುಕೊಂಡು ನ್ಯಾಯ ವೇದಾಂತ ಗ್ರಂಥಗಳನ್ನು ಪರಾಮರ್ಶ ಮಾಡುತ್ತಿದ್ದರು.

ಇವರು ೧೯೦೭ ನೇ ಇಸ್ವಿಯಲ್ಲಿ ಶೃಂಗೇರಿಯಲ್ಲಿಯೇ ಕಾಲವಾದರು.

## ೨೯೩ ಕೀರಣೇ ಶ್ರೀನಿವಾಸಾಚಾರ್ಯ

ಇವರು ತಮ್ಮ ಅಣ್ಣಂದಿರಾದ ಕೃಷ್ಣಾಚಾರ್ಯರಲ್ಲಿ ನ್ಯಾಯ, ವೇದಾಂತ ಶಾಸ್ತ್ರವನ್ನು ಓದಿ ವೈಯ್ಯಾಕರಣ ಶ್ರೀನಿವಾಸಾಚಾರ್ಯರೆಂದು ಪ್ರಸಿದ್ಧರಾದರು.

## ೨೯೪ ಲಿಂಗೇರಿ ಶ್ರೀನಿವಾಸಾಚಾರ್ಯ

ಪ್ರಸಿದ್ಧ ಟಿಪ್ಪಣಿಕಾರರ ಮನೆತನವಾದ ಲಿಂಗೇರಿ ವಂಶದಲ್ಲಿ ಹುಟ್ಟಿದ ಶ್ರೀನಿವಾಸಾಚಾರ್ಯರು ಕಿರಣೇ ಕೃಷ್ಣಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಮಹಾ ಪಂಡಿತರಾದರು.

## ೨೯೫ ಬಂಕಾಪುರದ ವೆಂಕಟರಮಣಾಚಾರ್ಯ

ಇವರು ಕಿರಣೇ ಕೃಷ್ಣಾಚಾರ್ಯರಲ್ಲಿ ವೇದಾಂತವನ್ನು ಓದಿದರು. ಮೊದಲಿನಿಂದಲೂ ವಿರಕ್ತರಾದ ಇವರು ಶ್ರೀ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ವೃಂದಾವನದ ಎದುರು ಸನ್ಯಾಸಾಶ್ರಮವನ್ನು ಸ್ವೀಕಾರ ಮಾಡಿ ವಾಸುದೇವ ತೀರ್ಥರು ಎಂದು ಪ್ರಸಿದ್ಧರಾದರು. ಇವರು ದಾಸ ಸಾಹಿತ್ಯವನ್ನು ವಿಶೇಷ ಅಧ್ಯಯನ ಮಾಡಿ ತಾರತಮ್ಯಾನುಸಾರವಾಗಿ ದಾಸರ ಪದಗಳನ್ನು ಹಾಡಿ ಪ್ರತಿ ನಿತ್ಯವೂ ದೇವರ ಭಜನೆಯನ್ನು ಮಾಡುತ್ತಲಿದ್ದರು. ಮತ್ತು ಕಾಲಲ್ಲಿ ಗೆಜ್ಜೆ ಕಟ್ಟಿಕೊಂಡು ಭಕ್ತಿ ಪರವಶರಾಗಿ ಕುಣಿಯುತ್ತಿದ್ದರು. ಇವರು ಶ್ರೀ ಸಾಗರಕಟ್ಟೆ ಶ್ರೀಗಳವರ ಪೂರ್ವಾಶ್ರಮದ ತಂದೆಯವರು.

## ೨೯೬ ಶ್ರೀರಾಮಣ್ಣಾಚಾರ್ಯ ಸ್ವಾಮಿಗಳು

ಇವರು ನ್ಯಾಯ, ವೇದಾಂತ ಶಾಸ್ತ್ರಗಳಲ್ಲಿ ಘನ ಪಂಡಿತರು. ಅನೇಕ ಜನ ಶಿಷ್ಯರಿಗೆ ಪಾಠ ಹೇಳಿ ಶಾಸ್ತ್ರ ಪರಿಣತರನ್ನಾಗಿ ಮಾಡಿದರು. ಅನಂತರ ಇವರು ಸನ್ಯಾಸಾಶ್ರಮವನ್ನು ಸ್ವೀಕರಿಸಿ ಪ್ರೇಕ್ಷಾನಿಧಿ ತೀರ್ಥರೆಂದು ಪ್ರಸಿದ್ಧರಾದರು.

## ೨೯೭ ದ್ವೈಪಾಯನಾಚಾರ್ಯ (ಶ್ರೀ ವಿದ್ಯಾನಿಧಿತೀರ್ಥರು)

ಮುಳಬಾಗಲದಲ್ಲಿ ಸಾವಿರಾರು ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆದು ಬಂದ ಪ್ರಚಂಡ ಪಂಡಿತ ಪರಂಪರೆಯ ಕೊನೆಯ ಕೊಂಡಿ ಎಂದರೆ ಶ್ರೀ ದ್ವೈಪಾಯನಾಚಾರ್ಯರು. ಬಾಲ್ಯದಿಂದ ನಿದ್ವತ್‌ಚಕ್ರಚೂಡಾಮಣಿ ಎನಿಸಿದ ಶ್ರೀ ಹರಿಯಪ್ಪಾಚಾರ್ಯ ಸ್ವಾಮಿಗಳಲ್ಲಿ ಅಧ್ಯಯನ ಮಾಡಿ ಶಾಸ್ತ್ರ ಪ್ರಪಂಚದಲ್ಲಿ ಅಭಿಜಾತ ಪಾಂಡಿತ್ಯವನ್ನು, ಪ್ರಗಾಢ ವ್ಯುತ್ಪತ್ತಿಯನ್ನು, ಶಾಸ್ತ್ರೀಯ ಉತ್‌ಸ್ಫೂರ್ತಿಯನ್ನು ಪಡೆದ ಶ್ರೀ ದ್ವೈಪಾಯನಾಚಾರ್ಯರು ಸಂಪ್ರದಾಯ ಶುದ್ಧವಾದ ಅದ್ಭುತ ವೈದಗ್ಧ್ಯದ ಅಚಲ ಮೇರುವಿನಂತಿದ್ದರು. ಶ್ರೀಪಾದರಾಜ ಮಠದ ಶಾಸ್ತ್ರ ವೈದುಷ್ಯದ ವಿಜಯ ಧ್ವಜವನ್ನು ಎತ್ತಿ ಹಿಡಿದು ಅನೇಕ ಜನ ಶಿಷ್ಯರಿಗೆ ಪಾಠ ಹೇಳಿ ಇವರು ಅಜರಾಮರವಾಗಿರುವರು.

## ೨೯೮ ಗೋಪಿನಾಥ ಆಚಾರ್ಯ ಕುಂಜವೇಡು

ಮಾಯಾವರ ಸಮೀಪದ ಕುಂಜವೇಡು ಗ್ರಾಮದ ಇವರು ಯಲತ್ತೂರು ಕೃಷ್ಣಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿ ಪಂಡಿತರಾಗಿದ್ದರು.

## ೨೯೯ ದೇವಾಚಾರ್ಯ ಕುಂಜವೇಡು

ಇವರು ತಮ್ಮ ಸಹೋದರರಾದ ಗೋಪಿನಾಥಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತದ ಗ್ರಂಥಗಳನ್ನು ಅಧ್ಯಯನ ಮಾಡಿದ್ದರು.

## ೩೦೦ ಪದ್ಮನಾಭಶಾಸ್ತ್ರಿ ಉಡುಪಿ

ಇವರು ಯಲತ್ತೂರ ಕೃಷ್ಣಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿ ಅನಂತಶಯನ ಸಂಸ್ಕೃತ ಕಾಲೇಜಿನಲ್ಲಿ ತರ್ಕ ಅಧ್ಯಾಪಕರಾಗಿದ್ದರು.

### ೩೦೧ ಶೀನಪ್ಪಾಚಾರ್ಯ ಉಡುಪಿ

ಇವರು ಯಲತ್ತೂರ ಕೃಷ್ಣಾಚಾರ್ಯರ ಶಿಷ್ಯ ತೋಲೂರ ರಾಘವೇಂದ್ರಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿದರು.

ಶ್ರೀ ಅಧಮಾರು ಮಠದ ಪಂಡಿತ ಪರಿವ್ರಾಜಕರಾದ ಶ್ರೀ ವಿಬುಧಪ್ರಿಯ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಓದಿದರು.

### ೩೦೨ ಕಡೇಕೊಪ್ಪಲ ವೆಂಕಟಾಚಾರ್ಯ

ಇವರು ತಮ್ಮ ಅಣ್ಣ ಶೀನಪ್ಪಾಚಾರ್ಯರಲ್ಲಿ ನ್ಯಾಯ ವೇದಾಂತವನ್ನು ಅಧ್ಯಯನ ಮಾಡಿದರು. ಅನಂತರ ಹಿಂದಿನ ಕೃಷ್ಣಾಪುರ ಮಠದ ಸ್ವಾಮಿಗಳವರಲ್ಲಿ ವೇದಾಂತ ಪರಾಮರ್ಶ ಮಾಡಿದರು.

### ೩೦೩ ಚತುರ್ವೇದಿ ರಾಮಚಂದ್ರಾಚಾರ್ಯ

ಇವರು ವ್ಯಾಕರಣ ಶಾಸ್ತ್ರದಲ್ಲಿ ವಿದ್ವಾಂಸರಾಗಿದ್ದರು. ತಿರುವಾಡಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣ ಅಧ್ಯಾಪಕರೆಂದು ಕೆಲಸ ಮಾಡಿದರು.

### ೩೦೪ ಚೀಮನಹಳ್ಳಿ ಕೃಷ್ಣಾಚಾರ್ಯ

ಇವರು ದ್ವೈತ ವೇದಾಂತದಲ್ಲಿ ಅದ್ವಿತೀಯರು. ಪ್ರಮೇಯ ಜ್ಞಾನದಲ್ಲಿ ಅಸಾಧಾರಣ ಪಂಡಿತರು. ಉಪನಿಷತ್ ಪ್ರಸ್ಥಾನದಲ್ಲಿ ಅಧಿಕಾರಯುಕ್ತ ವಾಣಿಯಿಂದ ಮಾತನಾಡುವ ಜಾಣ್ಮೆ, ವಿಷಯ ಕ್ಲಪ್ತಿ ಇವರಿಗೆ ಇದ್ದವು.

### ೩೦೫ ಗರಣಿ ತಿಮ್ಮಣ್ಣಾಚಾರ್ಯ

ಇವರು ಸಾಹಿತ್ಯ ವ್ಯಾಕರಣಾಗಳಲ್ಲಿ ಅಪ್ರತಿಮರಾಗಿದ್ದರು. ಇವರ ವ್ಯಾಕರಣ ವೈದುಷ್ಯಕ್ಕೆ ಒಲಿದು ಬಂದ ಪದವಿಯಿಂದ ವೈಯಾಕರಣಿ ತಿಮ್ಮಣ್ಣಾಚಾರ್ಯ ಎಂದು ಇವರು ಪ್ರಖ್ಯಾತರಾದರು. ಇವರಿಂದ ಮುಂದೆ ವೈಯಾಕರಣಿ ಎಂಬ ವಿಶೇಷಣವು ಇವರ ಕುಲನಾಮವೇ ಆಯಿತು. ಇವರ ಮಕ್ಕಳಾದ ವೈಯಾಕರಣಿ ಕೃಷ್ಣಾಚಾರ್ಯರು ಶಬ್ದ ಶಾಸ್ತ್ರದಲ್ಲಿ ಲಬ್ಧವೈದಗ್ಧ್ಯರಾಗಿದ್ದರು.

### ೩೦೬ ಗರಣಿ ಕೃಷ್ಣಾಚಾರ್ಯ

ಇವರು ತಮ್ಮ ತಂದೆಯವರಲ್ಲಿ ಸಾಹಿತ್ಯ, ವ್ಯಾಕರಣ ಶಾಸ್ತ್ರಗಳನ್ನು ಓದಿ ಪಂಡಿತರಾದರು. ಬೆಂಗಳೂರಿನ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳಲ್ಲಿ ಹಳಗನ್ನಡ,

ವ್ಯಾಕರಣ ಹಾಗೂ ಛಂದಶ್ಶಾಸ್ತ್ರಗಳನ್ನು ಓದಿ ಉಭಯ ಭಾಷಾ ಪಾರಂಗತ ರಾದರು.

ಇವರು ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿಯೂ ಕನ್ನಡ ಪಂಡಿತರಾಗಿರಾಗಿದ್ದರು.

ಇವರು ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಸಾಹಿತ್ಯ, ವ್ಯಾಕರಣ, ಧರ್ಮಶಾಸ್ತ್ರ, ಆರೋಗ್ಯ, ಈ ನಾಲ್ಕು ವಿಷಯಗಳಲ್ಲಿ ಅವರು ಅನೇಕ ಗ್ರಂಥಗಳನ್ನು, ಕೃತಿಗಳನ್ನು ರಚಿಸಿದ್ದಾರೆ.

ಅವರು ೧೯೧೮ ನೇ ಇಸ್ವಿಯಲ್ಲಿ ಕಾಲಾಧೀನರಾದರು.

## ೩೦೭ ದುರ್ಗ ಭೀಮಾಚಾರ್ಯ

ಇವರು ತಮ್ಮ ತಂದೆ ಹಣಮಂತಾಚಾರ್ಯರಲ್ಲಿ ಸಮಗ್ರ ವೇದಾಂತವನ್ನು ಅಧ್ಯಯನ ಮಾಡಿದರು. ಇವರು ಶ್ರೀ ರಾಘವೇಂದ್ರ ಸ್ವಾಮಿ ಮಠದ ಆಸ್ಥಾನ ವಿದ್ವಾಂಸರಾಗಿ ಉಪನ್ಯಾಸ, ಪ್ರವಚನಗಳಿಂದ ಜನರಿಗೆ ಮಧ್ವಮತದ ತತ್ವಗಳನ್ನು ತಿಳಿಸಿಕೊಡುತ್ತಿದ್ದರು.

## ೩೦೮ ಭಾಗವತ ರಂಗನಾಥಾಚಾರ್ಯ

ಇವರು ಭಾಗವತ ಶ್ಯಾಮಣ್ಣಾಚಾರ್ಯರ ಮಕ್ಕಳು. ಇವರು ಸಾಹಿತ್ಯ, ವೇದಾಂತಗಳ ಪರಿಚಯಮಾಡಿಕೊಂಡು "ಮಾಧ್ವಮಿತ್ರನ್" ಎಂಬ ತಮಿಳು ಪತ್ರಿಕೆ ಯನ್ನು ೩೦ ವರ್ಷಗಳ ಕಾಲ ನಡೆಸಿದರು

## ೩೦೯ ಪಂಡಿತರಾಜ ದೀಕ್ಷಿತಾಚಾರ್ಯ

ಕುಂಭ ಕೋಣದ ಇವರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಕೊಚಿನ ಮಹಾರಾಜರ ಆಸ್ಥಾನ ವಿದ್ವಾಂಸರಾಗಿ ಅಲ್ಲಿಯೇ ಬಹುಕಾಲ ಪಾಠ–ಪ್ರವಚನ ನಡೆಸಿದರು. ತಿರುಪತಿಯ ಕಂಚಿ ಸುಬ್ಬರಾಯರ ಸಭೆಗೂ, ಶ್ರೀ ಸತ್ಯಧ್ಯಾನತೀರ್ಥರ ಮಧ್ವಸಿದ್ಧಾಂತಾಭಿವೃದ್ಧಿಕಾರಿಣಿ ಸಭೆಗೂ, ಧರ್ಮಾಧಿ ಕಾರಿಗಳಾಗಿ ಬಂದ ವಿದ್ಯಾರ್ಥಿಗಳನ್ನೂ ಪರೀಕ್ಷಿಸಿ ವಾಕ್ಯಾರ್ಥ ವಿಚಾರಗಳಲ್ಲಿ ಭಾಗ ವಹಿಸುತ್ತಿದ್ದರು. ಕೊಚೀನ ಹಾರಾಜರು ಇವರ ನ್ಯಾಯ, ಮೀಮಾಂಸಾ ಶಾಸ್ತ್ರ ಗಳಲ್ಲಿಯ ಪ್ರಕೃಷ್ಟ ಪಾಂಡಿತ್ಯಕ್ಕೆ ಮೆಚ್ಚಿ ಪಂಡಿತರಾಜ ಎಂಬ ಬಿರುದನ್ನು ಕೊಟ್ಟಿದ್ದರು.

## ೩೧೦ ಗುತ್ತಲ ರಂಗಾಚಾರ್ಯ

ಧಾರವಾಡ ಜಿಲ್ಲೆಯ ಕರ್ಜಗಿ ಗ್ರಾಮದ ಈ ರಂಗಾಚಾರ್ಯರು ವಿದ್ವಾಂಸರೂ, ವಿನಯ ಶಾಲಿಗಳೂ, ಸದಾಚಾರ ಸಂಪನ್ನರೂ ಆಗಿದ್ದರು. ಇವರು B. A. ಪದವೀಧರರಾಗಿದ್ದು ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಸಂಸ್ಕೃತ ಶಿಕ್ಷಕರಾಗಿ ಅನೇಕ ವಿದ್ಯಾರ್ಥಿಗಳಿಗೆ ದೇವ ಭಾಷೆಯಲ್ಲಿ ವ್ಯುತ್ಪತ್ತಿಯನ್ನು ಹುಟ್ಟಿಸಿದರು. ಸ್ವಾತಂತ್ರ್ಯ ಆಂದೋಲನದಲ್ಲಿ ದೇಶಭಕ್ತಿ ಪ್ರೇರಿತರಾಗಿ ತಮ್ಮ ಉದ್ಯೋಗವನ್ನು ಬಿಟ್ಟು ಆಶ್ರಮವನ್ನು ಕಟ್ಟಿಕೊಂಡು ಮಕ್ಕಳಿಗೆ ಉಚಿತವಾಗಿ ವಿದ್ಯಾದಾನ ಮಾಡುತ್ತಲಿದ್ದರು.

ಶ್ರೀ ಗಲಗಲಿ ಮಧ್ವಾಚಾರ್ಯರಲ್ಲಿ ಮಧ್ವ ಶಾಸ್ತ್ರವನ್ನು ಶ್ರದ್ಧೆಯಿಂದ ಓದಿದ ಶ್ರೀ ರಂಗಾಚಾರ್ಯರು ವೈರಾಗ್ಯದ ಮೂರ್ತಿಗಳಾಗಿದ್ದರು. ಇವರಲ್ಲಿ ಸಂಸ್ಕೃತ ಪಾಠವನ್ನು ಓದಿದ ವಿದ್ಯಾರ್ಥಿಗಳು ಈಗಲೂ ಅವರ ಅಂತಃಕರಣ ಪೂರ್ವಕ ವಾದ ಪಾಠವನ್ನು ನೆನೆಸುತ್ತಾರೆ.

ಜ್ಞಾನಲಾಲಸೆಯುಳ್ಳ ರಂಗಾಚಾರ್ಯರು ಮುಂದೆ ಉಡುಪಿಗೆ ಹೋಗಿ ನೆಲೆಸಿದರು. ಅಲ್ಲಿ ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾದ ಕಟ್ಟಿ ಶ್ರೀನಿವಾಸಾಚಾರ್ಯರಲ್ಲಿ ಸುಧಾದಿ ಉದ್ಗ್ರಂಥಗಳನ್ನು ಅತ್ಯಂತ ಆಸ್ಥೆಯಿಂದ ಕ್ರಮಪ್ರಕಾರ ಓದಿ ದ್ವೈತ ವೇದಾಂತದಲ್ಲಿ ಪರಿಣತಪ್ರಜ್ಞರಾದ ಪಂಡಿತರೆನಿಸಿದರು.

ಶ್ರೀ ರಂಗಾಚಾರ್ಯರ ಜ್ಯೇಷ್ಠ ಪುತ್ರರಾದ ನ್ಯಾಯಶಿರೋಮಣಿ ವೇದಾಂತ ವಿದ್ವಾನ್ ಶ್ರೀ ಗುತ್ತಲ ಗುರಾಚಾರ್ಯರು ತಂದೆಯವರ ಅಪೇಕ್ಷೆಯಂತೆ ಸಕಲ ಶಾಸ್ತ್ರ ಪಾರಂಗತರಾಗಿ ಶ್ರೀ ಉತ್ತರಾದಿ ಮಠದ ಸಿಂಹಾಸನವನ್ನು ಆರೋಹಣ ಮಾಡಿ ಶ್ರೀ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಗಳವರು ಎಂದು ಪ್ರಸಿದ್ಧರಾಗಿದ್ದಾರೆ.

## ೩೧೧ ಯಲತ್ತೂರ ನರಸಿಂಹಾಚಾರ್ಯ

ಇವರು ಯಲತ್ತೂರಿನ ಪಂಡಿತ ಮನೆತನಕ್ಕೆ ಸಂಬಂಧಿಸಿದವರು. ಯಲತ್ತೂರ ಕೃಷ್ಣಾಚಾರ್ಯರಂತೆ ನ್ಯಾಯನಿಪುಣರು. ವೇದಾಂತ ವಿದ್ವಾಂಸರು. ಇವರು ಮದ್ರಾಸಿನಲ್ಲಿ ಇದ್ದು ಅನೇಕ ಜನರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳಿ ಜನರಲ್ಲಿ ಮಧ್ವ ಮತ ದೀಕ್ಷೆಯು ಉಂಟಾಗುವಂತೆ ಮಾಡಿದರು. ಇವರು ಕಳೆದ ವರ್ಷ ಕಾಲವಾದರು.

## ೩೧೨ ಎಚ್. ಎನ್. ರಾಘವೇಂದ್ರಾಚಾರ್ಯ ಮೈಸೂರ



ತುಮಕೂರ ಜಿಲ್ಲೆಯ ಹೊಳವನ ಹಳ್ಳಿಯಲ್ಲಿ ೧೮೭೫ನೇ ಇಸ್ವಿಯಲ್ಲಿ ಜನಿಸಿದ ರಾಘವೇಂದ್ರಾಚಾರ್ಯರು ತಮ್ಮ ತಂದೆಯವರಾದ ನಾರಾಯಣಾಚಾರ್ಯರಲ್ಲಿ ವೇದ, ಸಾಹಿತ್ಯ, ವ್ಯಾಕರಣ, ಜ್ಯೋತಿಷ್ಯ ಮುಂತಾದ ಶಾಸ್ತ್ರಗಳ ಪರಿಚಯ ಮಾಡಿ ಕೊಂಡರು. ಅನಂತರ ಶ್ರೀ ಹೊಳವನಹಳ್ಳಿ ಶೇಷಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ತಮ್ಮ ೨೦ನೇ ವಯಸ್ಸಿನಲ್ಲಿ ಮೈಸೂರಿನ ದ್ವೈತ ವೇದಾಂತ ಪರೀಕ್ಷೆ ಕಟ್ಟಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಆಂಗ್ಲ ಭಾಷೆಯಲ್ಲಿಯೂ ಇವರು ಎಂ. ಎ. ಪದವಿಯನ್ನು ಪಡೆದು ಪೌರ್ವಾತ್ಯ ಮತ್ತು ಪಾಶ್ಚಾತ್ಯ ತತ್ವ ಶಾಸ್ತ್ರಗಳಲ್ಲಿ ತಮಗಿರುವ ಪ್ರಭುತ್ವವನ್ನು ವ್ಯಕ್ತಪಡಿಸಿದರು. "ಭಾರತೀಯ ತತ್ವ ಶಾಸ್ತ್ರ ಸಂಗ್ರಹ" ಎಂಬ ಕನ್ನಡ ಪುಸ್ತಕವನ್ನು ಬರೆದು ಕನ್ನಡದಲ್ಲಿಯ ತಾತ್ವಿಕ ಗ್ರಂಥಗಳ ಕೊರತೆಯನ್ನು ಹೋಗಲಾಡಿಸಿದರು. ಇವರ ವೇದಾಂತ ಜ್ಞಾನವನ್ನು ಕಂಡು ಮೈಸೂರು ಶಿಕ್ಷಣ ಶಾಖೆಯವರು ಇವರನ್ನು ಮಹಾರಾಜ ಕಾಲೇಜಿನಲ್ಲಿ ಭಾರತೀಯ ತತ್ವಶಾಸ್ತ್ರಾಧ್ಯಾಪಕ ಎಂದು ನೇಮಿಸಿದರು.

ಶ್ರೀ ರಾಘವೇಂದ್ರಾಚಾರ್ಯರು 'ದ್ವೈತ ತತ್ವ ಜ್ಞಾನವೂ ಮತ್ತು ವೇದಾಂತ ವಲ್ಲಿ ಅದರ ಸ್ಥಾನವೂ' ಎಂಬ ಗ್ರಂಥವನ್ನು ಬರೆದರು. ಕಾಶಿಯ ಭಾರತ ಧರ್ಮ ಮಹಾ ಮಂಡಲ ಸಂಸ್ಥೆಯವರು ಇವರಿಗೆ ಪಿ. ಎಚ್. ಡಿ. ಪದವಿಯನ್ನು ಕೊಟ್ಟು ಗೌರವಿಸಿದರು.

ಇವರು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ಬಳಿಕ "ಇಂಡಾಲಜಿ ಡಿಪಾರ್ಟಮೆಂಟಿನ" ಡೈರೆಕ್ಟರರಾಗಿ ಎರಡು ವರ್ಷ ಕೆಲಸ ಮಾಡಿದರು. ಮೈಸೂರ ಮಹಾರಾಜರು ಇವರನ್ನು ಅರಮನೆ ಧರ್ಮಾಧಿಕಾರಿಗಳನ್ನಾಗಿ ನಿಯಮಿಸಿಕೊಂಡರು.

ಇವರು ತಮ್ಮ ಮನೆಯಲ್ಲಿ ಸುಧಾದಿ ಗ್ರಂಥಗಳನ್ನು ಅನೇಕ ಜನರಿಗೆ ಪಾಠ ಹೇಳಿದರು.

ಇವರು ಬರೆದ ತತ್ತ್ವ ಪ್ರಕಾಶಿಕಾ ಗ್ರಂಥದ ಇಂಗ್ಲೀಷ ಭಾಷಾಂತರದ ಎರಡು ಭಾಗಗಳನ್ನು ಮೈಸೂರ ವಿಶ್ವವಿದ್ಯಾಲಯವು ಪ್ರಕಟಿಸಿದೆ.

ಇವರು ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ, ಇಂಗ್ಲೀಷಿನಲ್ಲಿಯೂ ಗ್ರಂಥಗಳನ್ನು ಬರೆದಿದ್ದಾರೆ.

೧) ಬ್ರಹ್ಮ ಮೀಮಾಂಸಾ ೧ ಮತ್ತು ೨ ಭಾಗ
೨) ಶ್ರೀಕರ ತತ್ತ್ವದೃಷ್ಟಿ ವಾದ
೩) ಸಂಸ್ಕೃತ ಸಾಹಿತ್ಯದಲ್ಲಿಯ ರಸ
೪) ಭಾರತೀಯ ತತ್ತ್ವ ಶಾಸ್ತ್ರ ಸಂಗ್ರಹ
೫) ದ್ವೈತ ವೇದಾಂತ
೬) ಮಧ್ವ ಸಿದ್ಧಾಂತ
೭) ಈಶಾವಾಸ್ಯೋಪನಿಷತ್
೮) ತಲವಕಾರೋಪನಿಷತ್
೯) ವೇದಾಂತದಲ್ಲಿ ದ್ವೈತ ತತ್ತ್ವಜ್ಞಾನದ ಸ್ಥಾನ

ಮುಂತಾದ ಅನೇಕ ಗ್ರಂಥಗಳನ್ನೂ, ಅಸಂಖ್ಯ ವಿಚಾರ ಪ್ರಚುರವಾದ ದಾರ್ಶನಿಕ ಪ್ರಬಂಧಗಳನ್ನು ಬರೆದಿದ್ದಾರೆ.

### ೩೧೪ ಸಾಬಾಜಿ ರಾಜಾಚಾರ್ಯರು
### ಗೋಪಾಲಾಚಾರ್ಯರು
### ಶ್ರೀನಿವಾಸಾಚಾರ್ಯರು

ಇವರು ಉಡುಪಿಯ ಅಷ್ಟ ಮಠದ ಶ್ರೀಗಳವರಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಅಷ್ಟ ಮಠಾಧೀಶ್ವರರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಮೊದಲಿನ ಇಬ್ಬರು ಪಂಡಿತರನ್ನು ಶ್ರೀ ಸೋದೆ ಮಠ ಮತ್ತು ಶ್ರೀ ಅದಮಾರು ಮಠದ ಆಗಿನ ಶ್ರೀಗಳವರು ಆಶ್ರಯವಿತ್ತು ಕಾಪಾಡಿದರು.

ಇವರ ತಮ್ಮ ಶ್ರೀನಿವಾಸಾಚಾರ್ಯರು ದ್ವೈತ ವೇದಾಂತದಲ್ಲಿ ವಿದ್ವಾಂಸರಾಗಿದ್ದರು. ಮದ್ರಾಸ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದುಕೊಂಡು ಅನೇಕ ಜನರಿಗೆ ಪಾಠ ಹೇಳಿದರು. ರಾಮಾಯಣ, ಭಾಗವತ, ಭಾರತಗಳನ್ನು ಕನ್ನಡಿಸಿದ ಆಳಸಿಂಗರಾಚಾರ್ಯರಿಗೆ ಸಹಾಯಕರಾಗಿದ್ದರು. ಹಂಡೆ ದಾಸರಿಬ್ಬರು ಇವರಲ್ಲಿ ವೇದಾಂತವನ್ನು ಓದಿದರು.

## ೪೧೫ ಮಧ್ವರಮಣಾಚಾರ್ಯ ಉಡುಪಿ

೯೦ ವರ್ಷಗಳ ಹಿಂದೆ ಕುಂದಾಪೂರ ತಾಲೂಕಿನ ಬಿಜಾಡಿ ಗ್ರಾಮದಲ್ಲಿ ಜನಿಸಿದ ಮಧ್ವರಮಣಾಚಾರ್ಯರು ಉಡುಪಿ, ಮೈಸೂರುಗಳಲ್ಲಿ ಅಧ್ಯಯನ ಮಾಡಿ ವೇದಾಂತ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ತಿರುವಾಂಕೂರಿನ ಪಂಡಿತ ಸಭೆಯಲ್ಲಿ ವೇದ ಪರೀಕ್ಷೆ ಕೊಟ್ಟು ಗೌರವಿತರಾದರು.

ಶ್ರೀ ಸತ್ಯಧ್ಯಾನ ತೀರ್ಥರ ಸಭೆಗೆ ತಮ್ಮ ಶಿಷ್ಯರನ್ನು ಕರೆದುಕೊಂಡು ಹೋಗಿ ಪರೀಕ್ಷೆ ಕೊಡಿಸಿ ಅವರ ಪ್ರೀತಿಗೆ ಪಾತ್ರರಾದರು. ಹಿಂದಿನ ಶ್ರೀ ಸೋದೆ ಸ್ವಾಮಿಗಳ ಪ್ರೋತ್ಸಾಹನದಿಂದ ಆನೇಗುಡ್ಡೆ ದೇವಾಲಯದಲ್ಲಿ ಪಾಠಶಾಲೆಯನ್ನು ನಡೆಸಿದರು.

ಶ್ರೀ ಕೋಟೇಶ್ವರ ನರಸಿಂಹಾಚಾರ್ಯ, ಗೋಪಾಡಿ ಕೃಷ್ಣ ಉಪಾಧ್ಯಾಯ ಮೊದಲಾದವರು ಇವರ ಶಿಷ್ಯರಾಗಿದ್ದಾರೆ.

ಇತ್ತೀಚಿಗೆ ಅವರ ಸುಪುತ್ರರಾದ ಭದ್ರಾವತಿಯ ಶ್ರೀ ಬಿ. ಮಾಧವಾಚಾರ್ಯರು "ಮಧ್ವರಮಣಾಚಾರ್ಯ ಪಾರಿತೋಷಿಕ ನಿಧಿ" ಎಂಬ ದತ್ತಿಯನ್ನು ನಿರ್ಮಾಣ ಮಾಡಿ ದ್ವೈತ ವೇದಾಂತದಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ಪಂಡಿತರಿಗೆ ಬಹುಮಾನ ದೊರೆಯುವ ಏರ್ಪಾಡನ್ನು ಮಾಡಿರುವರು.

## ೪೧೬ ಕೋಟಿ ನಾರಾಯಣಾಚಾರ್ಯ

ಕಮಲಾಪೂರದ ಕೋಟಿ ನಾರಾಯಣಾಚಾರ್ಯರು ಹಂಪಿಯ ಯಂತ್ರೋದ್ಧಾರ ಪ್ರಾಣ ದೇವರ ಗುಡಿಯಲ್ಲಿ ಶ್ರೀ ಮಧ್ವ ಮೂರ್ತಿಯನ್ನು ಪ್ರತಿಷ್ಠೆಗೈದ ಹುಲಿಗಿ ಅಣ್ಣಯ್ಯಾಚಾರ್ಯರಲ್ಲಿ ವ್ಯಾಕರಣ, ವೇದಾಂತ ಓದಿ ಪಂಡಿತರಾದರು. ಶ್ರೀ ಸುಶೀಲೇಂದ್ರ ತೀರ್ಥರ ಕಾಲದಲ್ಲ ಇವರಿಗೆ ವಿಶೇಷ ಮನ್ನಣೆ ಇತ್ತು. ಇವರು ಬಳ್ಳಾರಿಯಲ್ಲಿ ನೆಲಸಿ ಅನೇಕ ಜನ ವಿದ್ಯಾರ್ಥಿಗಳಿಗೂ ಗೃಹಸ್ಥರಿಗೂ ಪಾಠ ಹೇಳಿದರು.

## ೪೧೭ ರಾಯಚೂರ ವಿಜಯೀಂದ್ರಾಚಾರ್ಯ

ದಕ್ಷಿಣ ದೇಶದ ನಾಚಿಯಾರ ಕೋಯಿಲ್ ಗ್ರಾಮದಲ್ಲಿ ಜನಿಸಿದ ವಿಜಯೀಂದ್ರಾಚಾರ್ಯರು ನದೀತೀರ ಶ್ಯಾಮಾಚಾರ್ಯರಲ್ಲಿಯೂ (ಕುಂಭಕೋಣ), ಗುಂಡು ಕುಪ್ಪಾಚಾರ್ಯರಲ್ಲಿಯೂ ಸಾಹಿತ್ಯ, ವ್ಯಾಕರಣಗಳನ್ನು ಅಧ್ಯಯನ ಮಾಡಿದರು. ಶ್ರೀ ನದೀತೀರ ಸೇತು ಮಾಧವಾಚಾರ್ಯರಲ್ಲಿ ವೇದಾಂತ ಓದಿ ಶ್ರೀ ೧೦೮ ಸತ್ಯಧ್ಯಾನ ತೀರ್ಥರಲ್ಲಿ ಶಾಂತಿ ಹಾಕಿ ಸುಧಾ ಮಂಗಳ ಮಾಡಿದರು.

## ೩೧೮ ಭಕ್ರಿ ವರದಾಚಾರ್ಯ

ಸುಧಾದಿ ಗ್ರಂಥಗಳಿಗೆ ಟಿಪ್ಪಣಿ ಬರೆದ ಪ್ರಸಿದ್ಧವಾದ ಭಕ್ರಿ ಮನೆತನದಲ್ಲಿ ಜನಿಸಿದ ವರದಾಚಾರ್ಯರು ಮಹಾ ಪಂಡಿತರಾಗಿದ್ದರು. ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅವರಿಗೆ ಒಳ್ಳೆ ನಿಷ್ಕೃಷ್ಟ ಜ್ಞಾನವಿದ್ದಿತು. ಶ್ರೀ ವರದಾಚಾರ್ಯರಲ್ಲಿ ಅಧ್ಯಯನ ಮಾಡಿ ಅನೇಕ ಜನರು ವಿದ್ವಾಂಸರಾಗಿದ್ದರು. ಅವರಲ್ಲಿ ಓದಿ ಪಂಡಿತ ರಾದ ಶಿಷ್ಯರಲ್ಲಿ ಬ್ರಹ್ಮಸೂತ್ರ ಭಾಷ್ಯಕ್ಕೆ ಟಿಪ್ಪಣಿ ಬರೆದ ಚಿಕ್ಕೋಡಿ ಭಗವಂತ ರಾಯರು ಪ್ರಮುಖರಾಗಿದ್ದಾರೆ.

## ೩೧೯ ಭಕ್ರಿ ವೆಂಕೋಬಾಚಾರ್ಯ

ಶ್ರೀ ವರದಾಚಾರ್ಯರು ತಾವು ನಿರ್ಯಾಣ ಹೊಂದುವಾಗ ತಮ್ಮ ಮಕ್ಕ ಳಾದ ವೆಂಕೋಬಾಚಾರ್ಯರನ್ನು ತಮ್ಮ ಶಿಷ್ಯ ಚಿಕ್ಕೋಡಿ ಭಗವಂತರಾಯರಿಗೆ ಒಪ್ಪಿಸಿದರು. ಗುರುಭಕ್ತರಾದ ಭಗವಂತರಾಯರು ತಮ್ಮ ಈ ಗುರು ಪುತ್ರರನ್ನು ಉಚ್ಚಾಸನದ ಮೇಲೆ ಕೂಡಿಸಿ ತಾವು ಕೆಳಗೆ ಕುಳಿತು ಪಾಠ ಹೇಳಿ ವೇದಾಂತ ಪಂಡಿತರನ್ನಾಗಿ ಮಾಡಿದರು. ಇವರು ಆ ಕಾಲದಲ್ಲಿ ಹರಪನಹಳ್ಳಿಯಲ್ಲಿ ಕಂದಿ ವೆಂಕೋಬರಾಯರೇ ಮೊದಲಾದ ೩೦-೪೦ ಜನ ಶಿಷ್ಯರಿಗೆ ವೇದಾಂತ ಪಾಠ ಹೇಳಿ ದರು. ಇವರು ಚಿಕ್ಕೇರೂರು ಸ್ವಾಮಿರಾಯಾಚಾರ್ಯರ ಸಮಾನಕಕ್ಷ್ಯ ಪಂಡಿತರು ಎಂದು ಪ್ರಖ್ಯಾತರಾಗಿದ್ದರು. ಇವರಲ್ಲಿ ಬ್ರಹ್ಮಸೂತ್ರ ಭಾಷ್ಯವನ್ನು ತಹಸೀಲ್ದಾರ ಕೌಕೂರ ಗುರುರಾವ, ಮಠಂ ಭೀಮಾಚಾರ್ಯ, ತಾಮ್ರಂ ವೆಂಕಣ್ಣಾಚಾರ್ಯ, ವರಾಹಾಚಾರ್ಯ, ವೈದ್ಯ ಅನಂತಾಚಾರ್ಯ, ನರಹರೀಆಚಾರ್ಯ, ಬಾಳಾಚಾರ್ಯ ಮುಂತಾದವರು ಅಧ್ಯಯನ ಮಾಡಿದರು. ಇವರು ೧೯೧೬ನೇ ಇಸ್ವಿಯಲ್ಲಿ ಕಾಲ ವಾದರು.

## ೩೨೦ ಭಕ್ರಿ ಶ್ರೀನಿವಾಸಾಚಾರ್ಯ

ಇವರು ವೆಂಕೋಬಾಚಾರ್ಯರ ೨ನೆಯ ಮಕ್ಕಳು. ತಮ್ಮ ತಂದೆಯವರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥರ ಸಭೆಗಳಿಗೂ ಶ್ರೀ ರಾಯರ ಮಠದ ಶ್ರೀ ಸುಶೀಲೇಂದ್ರ ತೀರ್ಥರ ಸಭೆ ಗಳಿಗೂ ಹೋಗಿ ಭಾಗವಹಿಸುತ್ತಿದ್ದರು.

## ೩೨೧ ಮಾಗೀಕೆರೆ ಶೇಷಗಿರಿರಾವ

ಪೆನಿಗೊಂಡ ಊರಿನ ಶೇಷಗಿರಿರಾಯರು ಮುನಸುಫ ಕೋರ್ಟಿನಲ್ಲಿ ನಾಝರ ರಾಗಿದ್ದರು. ಇವರು ಗುತ್ತಿಯಲ್ಲಿ ನೌಕರಿ ಮಾಡುತ್ತಲಿದ್ದಾಗ ಗಂಡಿಕೋಟೆ ರಾಘ ವೇಂದ್ರಾಚಾರ್ಯರಲ್ಲಿ ಪುರಾಣ ಹಾಗೂ ವೇದಾಂತಗಳನ್ನು ಅಧ್ಯಯನ ಮಾಡಿದರು.

ಇವರು ಉದ್ಯೋಗದಿಂದ ನಿವೃತ್ತರಾದ ಬಳಿಕ ಬಳ್ಳಾರಿಯಲ್ಲಿ ಇದ್ದು ಭಾಗವತ. ಪುರಾಣವನ್ನು, ಗೀತಾ–ಉಪನಿಷತ್ ಮುಂತಾದ ಗ್ರಂಥ ಪಾಠವನ್ನು ಹೇಳುತ್ತಿದ್ದರು. ಇವರು ಸ್ವಾದಿ ವಾದಿರಾಜರ ಸೇವೆಯನ್ನು ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾದರು. ರಾಯಸಂ ತಿರುಮಲರಾವ, ಕಂಪ್ಲಿ ರಾಘವೇಂದ್ರರಾವ, ದಂಡಿನ ರಾಮರಾವ ಮುಂತಾದ ಗೃಹಸ್ಥರಿಗೆ ಪಾಠ ಹೇಳಿದರು.

ಇವರು ೧೯೨೧ ರಲ್ಲಿ ಬಳ್ಳಾರಿಯಲ್ಲಿ ಕಾಲವಾದರು.

## ಚಿಂಚೋಳಿ ಆಚಾರ್ಯರು

ನಿಜಾಮ ರಾಜ್ಯದ ಗುಲಬುರ್ಗಾ ಜಿಲ್ಹೆಯಲ್ಲಿಯ ಚಿಂಚೋಳಿ ಗ್ರಾಮದಲ್ಲಿ ಅನೇಕ ಜನ ಪಂಡಿತರಿದ್ದರು. ಈಗಲೂ ಅಲ್ಲಿ ವೇದ ಶಾಸ್ತ್ರ ಪಂಡಿತರ ಪರಂಪರೆಯು ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡು ಬಂದಿದೆ.

### ೬೨೬ ಅಪ್ಪಾರಾಯರಾಚಾರ್ಯ ಚಿಂಚೋಳಿ

ಇವರು ವೇದ–ವೇದಾಂತಗಳಲ್ಲಿ ನಿಸ್ಸೀಮ ಪಂಡಿತರಾಗಿದ್ದರು.

### ೬೨೮ ರಂಗಣ್ಣಾಚಾರ್ಯ ಚಿಂಚೋಳಿ

ಇವರು ಸಾಹಿತ್ಯದಲ್ಲಿ ಪರಿಣತರು. ವೇದಾಂತದಲ್ಲಿ ವಿದ್ವಾಂಸರು.

### ೬೨೫ ವೆಂಕಣ್ಣಾಚಾರ್ಯ ಚಿಂಚೋಳಿ

ತಮ್ಮ ತಂದೆಯವರಲ್ಲಿಯೂ, ಶ್ರೀ ಸತ್ಯಧ್ಯಾನತೀರ್ಥರಲ್ಲಿಯೂ ಅಧ್ಯಯನ ಮಾಡಿ ಸಾಹಿತ್ಯ, ವೇದಾಂತಗಳಲ್ಲಿ ಪರಿನಿಷ್ಠಿತರಾಗಿದ್ದರು. ಇವರು ಒಳ್ಳೆ ವಾಗ್ಮಿಗಳೂ ಪ್ರವಚನ ಪಟುಗಳೂ ಆಗಿ ಶ್ರೀ ಸತ್ಯಧ್ಯಾನತೀರ್ಥರ ಆಪ್ತ ಕಾರ್ಯದರ್ಶಿಯಾಗಿದ್ದರು. ಇವರು ಮೈಸೂರ ಓರಿಯಂಟಲ್ ಲಾಯಬ್ರರಿಯಲ್ಲಿಯ ಅಧಿಕಾರಿಗಳಾಗಿದ್ದರು.

### ೬೨೬ ಚಿಂಚೋಳಿ ನರಸಿಂಹಾಚಾರ್ಯ

ರಾಯಚೂರಲ್ಲಿರುವ ಪಂಢರಪುರ ವೆಂಕಟರಮಣಾಚಾರ್ಯರಲ್ಲಿ ಅಧ್ಯಯನ ಮಾಡಿ ವೇದಾಂತ ವಿದ್ವಾಂಸರಾಗಿದ್ದರು. ಮೀಮಾಂಸಾ ಶಾಸ್ತ್ರದಲ್ಲಿಯೂ ಇವರಿಗೆ ಗತಿಯಿದ್ದಿತು.

### ೬೨೭ ಸೊಂಡೂರ ಹಣಮಂತಾಚಾರ್ಯ

ವೇದಾಂತದಲ್ಲಿ ವಿದ್ವಾಂಸರು. ಶ್ರೌತಭಾಗದಲ್ಲಿಯೂ ಪರಿಶ್ರಮವಿದ್ದಿತು. ಬಾಲ್ಯದಲ್ಲಿಯೇ ವೇದಾಧ್ಯಯನ ಮಾಡಿದ್ದರು

### ೩೨೮ ಘುಬಾಡಿ ವೇದ ವ್ಯಾಸಾಚಾರ್ಯ

ವೇದಾಂತ ಹಾಗೂ ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಘನ ಪಂಡಿತರು. ವ್ಯಾಕರಣ ಶಾಸ್ತ್ರಗಳಲ್ಲಿಯೂ ಇವರಿಗ ಚನ್ನಾಗಿ ಜ್ಞಾನವಿದ್ದಿತು.

### ೩೨೯ ಗದ್ವಾಲ ಶ್ರೀನಿವಾಸಾಚಾರ್ಯ

ವೇದಾಂತ ವಿದ್ವಾಂಸರು. ಧರ್ಮ ಶಾಸ್ತ್ರದಲ್ಲಿಯೂ ಪಳಗಿದವರು. ಸಾಹಿತ್ಯ ದಲ್ಲಿ ವ್ಯುತ್ಪನ್ನರು. ಪುರಾಣವನ್ನು ಚನ್ನಾಗಿ ಹೇಳುತ್ತಿದ್ದರು. ಅದಕ್ಕೆ ಬೇಕಾಗು ವಷ್ಟು ವೇದಾಂತವನ್ನು ಅವಗತ ಮಾಡಿಕೊಂಡಿದ್ದರು.

### ೩೩೦ ಓಂಕಾರ ರಾಮಾಚಾರ್ಯ

ಪುರಾಣ ಪಂಡಿತರು. ಸಾಹಿತ್ಯದಲ್ಲಿಯೂ ಸಿದ್ಧಹಸ್ತರು. ವೇದಾಂತದಲ್ಲಿಯೂ ಇವರಿಗೆ ಚನ್ನಾಗಿ ಪ್ರವೇಶವಿದ್ದಿತು.

### ೩೩೧ ಸೊಂಡೂರ ವೇಣುಗೋಪಾಲಾಚಾರ್ಯ

ವೇದಾಂತ ಪಂಡಿತರು. ಶ್ರೌತ ಭಾಗದಲ್ಲಿಯೂ ಅಭಿಜ್ಞರಾಗಿದ್ದರು. ಮೀಮಾಂಸಾ ಶಾಸ್ತ್ರದ ಪರಿಚಯವೂ ಇವರಿಗೆ ಪ್ರಾಪ್ತವಾಗಿದ್ದಿತು.

### ೩೩೨ ನರಸಿಂಹಾಚಾರ್ಯ ಪುಣೇಕರ (ಕಾವ್ಯಾನಂದ)

ಇವರು ಕಿತ್ತೂರಿನವರು. ಧಾರವಾಡದಲ್ಲಿ ನೆಲೆಸಿದ್ದರು. ಒಳ್ಳೆ ಪಂಡಿತರೂ ಸರಸ ಕವಿಗಳೂ ಆಗಿ ಅನೇಕ ಸಂಸ್ಕೃತ, ಕನ್ನಡ, ಪ್ರಬಂಧಗಳನ್ನು ಬರೆದಿದ್ದಾರೆ. ರಸಿ ಕರೂ ಸಹೃದಯರೂ ಆಗಿದ್ದರು.

### ೩೩೩ ಓಂಕಾರ ವೆಂಕಟರಮಣಾಚಾರ್ಯ

ವೇದಾಂತದಲ್ಲಿ ಪರಿಣತರು. ಬಹುಶ್ರುತರು. ಪ್ರಮೇಯಜ್ಞರು.

### ೩೩೪ ಕಾಳಗಿ ಶ್ರೀನಿವಾಸಾಚಾರ್ಯ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನಮಾಡಿ ವಿದ್ವಾಂಸ ರಾಗಿದ್ದರು.

## ೩೩೫ ಕಿತ್ತೂರ ಹುಚ್ಚಾಚಾರ್ಯ (ಧಾರವಾಡ)

ಶಾವ್ಯಾನಂದರೆಂದು ಹೆಸರಾದ ನರಸಿಂಹಾಚಾರ್ಯ ಪುಣೇಕರ ಇವರಲ್ಲಿ ಸಾಹಿತ್ಯ ವನ್ನೂ, ತುಮ್ಮಿನಕಟ್ಟಿ ಹುಚ್ಚಾಚಾರ್ಯರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದರು. ಇವರು ಒಳ್ಳೆ ರಸವತ್ತಾಗಿ ಪುರಾಣ ಹೇಳುತ್ತಿದ್ದರು. ಇವರ ಭಾ ಗ ವ ತ ಪುರಾಣಗಳಿಗೆ ಸಾವಿರಾರು ಜನರು ತಲೆದೂಗುತ್ತ ಕೂಡುತ್ತಿದ್ದರು.

## ೩೩೬ ಮಾನ್ವಿ ಕೃಷ್ಣಮೂರ್ತಿ ಆಚಾರ್ಯ (ಮೈಸೂರ)

ಉತ್ತರಾದಿ ಮಠದ ಶ್ರೀ ವೇದವ್ಯಾಸತೀರ್ಥರ ಪೂರ್ವಾಶ್ರಮ ವಂಶದವರು. ಇವರು ಸಾಹಿತ್ಯ, ವ್ಯಾಕರಣಗಳನ್ನು ಚನ್ನಾಗಿ ಅಧ್ಯಯನ ಮಾಡಿದ್ದರು. ಒಳ್ಳೆ ಸರಸ ಕವಿಗಳು. ಶ್ರೀ ಸತ್ಯಧ್ಯಾನ ತೀರ್ಥರು ಇವರ ಕವಿತಾ ಶಕ್ತಿಗೆ ಮೆಚ್ಚಿ "ಕವಿ ಭೂಷಣ" ಎಂಬ ಪದವಿಯನ್ನು ಕೊಟ್ಟಿದ್ದರು.

ಇವರು ರಚಿಸಿದ "ರಘುಭೂಷಣೀಯ" ಎಂಬ ಪ್ರಬಂಧವು ಭಾರತ ಚಂಪೂ, ನಲಚಂಪೂ, ರಾಮಾಯಣ ಚಂಪೂ ಮುಂತಾದ ಪ್ರಾಚೀನ ಚಂಪೂ ಪ್ರಬಂಧಗಳಿಗೆ ಸರಿಸಮಾನವಾಗಿ ನಿಲ್ಲಬಲ್ಲ ಅಂತಸ್ಸತ್ವವುಳ್ಳದ್ದಾಗಿದೆ.

ಇವರ "ಸ್ಮೃತಿ ಮುಕ್ತಾವಲಿ" ಎಂಬ ಸ್ತೋತ್ರ ಪ್ರಬಂಧವು ಶ್ಲೇಷ ಉಪಮಾ ಉತ್ಪ್ರೇಕ್ಷೆ ಮುಂತಾದ ಅಲಂಕಾರ ಝೇಂಕಾರದಿಂದ ಒಡಗೂಡಿದ್ದು ಇದರಲ್ಲಿ ಪ್ರತಿ ಯೊಂದು ಪದ್ಯವೂ ಎರಡು–ಮೂರು ಅರ್ಥವುಳ್ಳದ್ದಾಗಿದೆ. ಇವರ "ಗುರು ಮಹಿಮಾ" ಚಂಪು ಪ್ರಬಂಧವು ಲಲಿತ ಮನೋಹರವಾದ ಕಮನೀಯ ಕವಿಕೃತಿಯಾಗಿದೆ. ಇವರು ಅನೇಕ ಸುಂದರವಾದ ಸ್ಫುಟ ಪದ್ಯಗಳನ್ನೂ ಹೃದ್ಯಗದ್ಯಗಳನ್ನೂ ರಚಿಸಿದ್ದಾರೆ.

## ೩೩೭ ಅಯ್ನಾಜಿ ಗುಂಡಾಚಾರ್ಯ

ಇವರು ಶಾನಭೋಗರ ಮನೆತನದವರು. ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾಂತ ವೇದಾಂತವನ್ನು ಓದಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

## ೩೩೮ ನೆರೂರ ಕೃಷ್ಣಾಚಾರ್ಯ

ಕೊಯಿಮುತ್ತೂರ ಜಿಲ್ಲೆಯ ಸ್ವಗ್ರಾಮವಾದ ನೆರೂರಿಂದ ಬಂದು ಕಾಶೀ ಆಚಾರ್ಯರ ಮನೆಯಲ್ಲಿ ಇದ್ದು, ಮಧುರೆಯ ವೆಂಕಟರಮಣಾಚಾರ್ಯರಲ್ಲಿ ಮಹಾ ಭಾಷ್ಯಾಂತ ವ್ಯಾಕರಣವನ್ನು ಓದಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಅನಂತರ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲಾ ಬೆಂಗಳೂರ, ಮಹಾರಾಜಾ ಸಂಸ್ಕೃತ ಕಾಲೇಜ ಮೈಸೂರ ಎರಡರಲ್ಲಿಯೂ ಅನೇಕ ವಿದ್ಯಾರ್ಥಿಗಳಿಗೆ ವ್ಯಾಕರಣ ಪಾಠ ಹೇಳಿದರು. ಮಹಾಭಾಷ್ಯ, ಶಬ್ದೇಂದುಶೇಖರ. ಪರಿಭಾಷೇಂದುಶೇಖರ ಮುಂತಾದ ಗ್ರಂಥಗಳನ್ನು ಆಚಾರ್ಯರು ಲೀಲಾಜಾಲವಾಗಿ ಪಾಠ ಹೇಳುತ್ತಿದ್ದರು. ಸಭಾ, ಸಮ್ಮೇಲನ, ವಿದ್ವದ್‌ಗೋಷ್ಠಿಗಳಲ್ಲಿ ಸರ್ವ ಸಮಂಜಸವಾಗಿ ಸಮಾನಾಧಿಕರಣ ವಾಕ್ಯಾರ್ಥ ಮಾಡಿ ಎದುರಾಳಿಗಳ ಮನಸ್ಸನ್ನು ಕೂಡ ಗೆದ್ದುಕೊಳ್ಳುತ್ತಿದ್ದರು. ಈಗಲೂ ದೇಶದಲ್ಲಿ ನೆರೂರ ಕೃಷ್ಣಾಚಾರ್ಯರಲ್ಲಿ ಓದಿ ಅನೇಕ ವಿದ್ವಾಂಸರು ಅಲ್ಲಲ್ಲಿ ವ್ಯಾಕರಣ ಪಾಠ ಹೇಳುತ್ತಿದ್ದಾರೆ. ಅವರ ಉದ್ದಾಮ ವಿದ್ವತ್ತೆಗೆ ಒಲಿದು ಬಂದ 'ಪಂಡಿತರತ್ನ' ಎಂಬ ಬಿರುದು ಅವರಿಗೆ ಸರ್ವಥಾ ಅನ್ವರ್ಥಕವಾಗಿದ್ದಿತು.

## ೩೯೯ ನೆರೂರ ವೇದವ್ಯಾಸಾಚಾರ್ಯ

ಇವರು ತಮ್ಮ ಸಹೋದರ ಕೃಷ್ಣಾಚಾರ್ಯರಂತೆ ವ್ಯಾಕರಣದಲ್ಲಿ ಮಹಾ ಪಂಡಿತರಾಗಿದ್ದರು. ವೇದಾಂತದಲ್ಲಿಯೂ ಇವರಿಗೆ ಪ್ರವೇಶ ಅಭಿನಿವೇಶಗಳು ಇದ್ದವು.

## ೪೦೦ ಪೆರಿಯಾಕುಳಂ ರಾಮಚಂದ್ರಾಚಾರ್ಯ

ಮುಳಬಾಗಿಲದ ಮಹಾ ವಿದ್ವಾಂಸರಾದ ಹರಿಯಪ್ಪಾಚಾರ್ಯರಲ್ಲಿ ವೇದಾಂತವನ್ನೂ ತಮ್ಮ ಮಾವಂದಿರಾದ ವೆಂಕಟರಮಣಾಚಾರ್ಯರಲ್ಲಿ ವೇದಾಂತವನ್ನೂ ಓದಿ ರಾಮಚಂದ್ರಾಚಾರ್ಯರು ಸರ್ವಸಂಪ್ರತಿಪನ್ನರಾದ ಪಂಡಿತರಾಗಿದ್ದರು. ದ್ವೈತ ವೇದಾಂತದ ಪ್ರಮಾಣ ಭಾಗದಲ್ಲಿಯೂ ಪ್ರಮೇಯ ಭಾಗದಲ್ಲಿಯೂ ಪರಿನಿಷ್ಠಿತ ಪಾಂಡಿತ್ಯವುಳ್ಳ ಇಂಥ ವಿದ್ವದ್ ವ್ಯಕ್ತಿಗಳು ಸಿಕ್ಕುವದು ಅಪರೂಪ. ಅವರ ವೇದಾಂತ ಪಾಠವು ವಿವಿಧ ಅಪೂರ್ವ ವಿಷಯೋಪಬ್ರಂಹಿತವಾಗಿ ವಿದ್ವದ್ವರೇಣ್ಯರಿಗೂ ಕೂಡ ಶ್ರವಣೀಯವೂ ಬೋಧಜನಕವೂ ಆಗಿರುತ್ತಿತ್ತು. ಇವರು ಪ್ರತಿ ವರ್ಷವೂ ಶ್ರೀಸತ್ಯ ಧ್ಯಾನ ತೀರ್ಥರ ಸಭೆಗೆ ಬಂದು ಧರ್ಮಾಧಿಕಾರಿಗಳಾಗಿ ವಾಕ್ಯಾರ್ಥ ವಿಚಾರದಲ್ಲಿ ಭಾಗವಹಿಸಿ ಶ್ರೀ ಶ್ರೀಗಳವರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು.

ಇವರು ಮೈಸೂರ ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ವೇದಾಂತ ಅಧ್ಯಾಪಕರಾಗಿ ಅನೇಕ ವಿದ್ಯಾರ್ಥಿಗಳಿಗೆ ಪಾಠ ಹೇಳಿ ವೇದಾಂತ ಪಂಡಿತರನ್ನಾಗಿ ಮಾಡಿದರು. 'ವೇದಾಂತ ವಿದ್ವದ್ ರತ್ನಂ' ಎಂಬ ಅವರ ಬಿರುದು ಮಧ್ವ ಶಾಸ್ತ್ರದಲ್ಲಿ ಇರುವ ಅವರ ನಿಷ್ಕಲ್ಮಷ ವೈದುಷ್ಯವನ್ನು ಸೂತ್ರರೂಪವಾಗಿ ಸಾರಿ ಯಥಾರ್ಥ ಕೃತಾರ್ಥವಾಗಿದ್ದಿತು.

ಇವರ ಪರಿಶುದ್ಧ ಜ್ಞಾನದ ಘನತೆ ಗಂಭೀರತೆಗಳನ್ನು ಮನಗಂಡು ಮೈಸೂರ ಮಹಾರಾಜರು ಇವರನ್ನು ತಮ್ಮ ಅರಮನೆಯ ಧರ್ಮಾಧಿಕಾರಿಗಳನ್ನಾಗಿ ನಿಯಮಿಸಿಕೊಂಡಿದ್ದರು.

ಆಚಾರ್ಯರ ಶಿಷ್ಯ ಪರಿವಾರವು ದೊಡ್ಡದಾಗಿದೆ. ಇವರಲ್ಲಿ ಓದಿ ವೇದಾಂತ ವಿದ್ಯಾ ವಿಶಾರದರಾದ ವಿಶಿಷ್ಯ ಶಿಷ್ಯರಲ್ಲಿ ಶ್ರೀ ನೆರೂರ ವೇದವ್ಯಾಸಾಚಾರ್ಯ, ಬೇಲೂರ ಭೀಮಾಚಾರ್ಯ, ಸೇಲಂ ಡಂಬಳ ರಂಗಾಚಾರ್ಯ, ಮಧುರೆಯ ಶ್ರೀನಿವಾಸಾಚಾರ್ಯ, ಅಯ್ಯಾಜಿ ಗುಂಡಾಚಾರ್ಯ ಮೊದಲಾದವರು ಪ್ರಮುಖ ರಾಗಿದ್ದಾರೆ.

## ೩೪೧ ಆನೇಕಲ್ಲ ಶ್ರೀನಿವಾಸಾಚಾರ್ಯ

ಇವರು ಮುಳಬಾಗಿಲದ ಹರಿಯಪ್ಪಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದರು. ಇವರು ಅನಂತರ ಮೈಸೂರಿಗೆ ಬಂದು ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ಧರ್ಮ ಶಾಸ್ತ್ರದ ಪ್ರೊಫೆಸರರಾಗಿದ್ದರು. ಆಚಾರ್ಯರಿಗೆ ವೇದಾಂತದಲ್ಲಿ ಸರ್ವಂಕಷ ಪಾಂಡಿತ್ಯವಿದ್ದಿತು. ಧರ್ಮಶಾಸ್ತ್ರದಲ್ಲಿಯಂತೂ ಅವರು ಎತ್ತಿದ ಕೈ. ಸೂತ್ರಕಾಲದಿಂದ ಆರಂಭಿಸಿ ಧರ್ಮಸಿಂಧು ಗ್ರಂಥಗಳವರೆಗೆ ಎಲ್ಲ ಧರ್ಮ ಶಾಸ್ತ್ರಗ್ರಂಥಗಳನ್ನು ಆಚೂಲ ಮೂಲವಾಗಿ ಪರಿಶೀಲಿಸಿ, ಪೂರ್ವಾಪರ ವಿಮರ್ಶಿಸಿ, ಮೀಮಾಂಸಾ ಶಾಸ್ತ್ರಕ್ಕೆ ಅನುಸಾರವಾಗಿ ಪರ್ಯಾಲೋಚನೆಗೈದು ಧರ್ಮ ಶಾಸ್ತ್ರದಲ್ಲಿ ನಿಷ್ಕೃಷ್ಟ ಜ್ಞಾನವನ್ನು ಸಂಪಾದನೆ ಮಾಡಿದ್ದರು.

## ೩೪೨ ವಿ. ಶ್ಯಾಮಾಚಾರ್ಯ

ಇವರು ಮುಳಬಾಗಿಲದಲ್ಲಿ ಶಾಸ್ತ್ರ ವ್ಯಾಸಂಗ ಮಾಡಿ, ಶಾಸನ ವಿಭಾಗದ ಪ್ರಾಚ್ಯ ಕೋಶಾಗಾರ ಗ್ರಂಥಾಲಯದಲ್ಲಿ ಪಂಡಿತರಾಗಿದ್ದರು. ಇವರು ಸಾಹಿತ್ಯ, ವೇದಾಂತ, ವ್ಯಾಕರಣ, ಕನ್ನಡ, ಸಂಸ್ಕೃತ ಮೊದಲಾದ ವಿಷಯಗಳಲ್ಲಿ ತೌಲನಿಕ ದೃಷ್ಟಿಯಿಂದ ಅಭ್ಯಾಸ ಮಾಡಿ ಅನೇಕ ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆದಿದ್ದಾರೆ.

"ಕುಮಾರವ್ಯಾಸ ಭಾರತ"ದ ಅನೇಕ ಪ್ರತಿಗಳನ್ನು ಸಂಶೋಧಿಸಿ ಪರಿಶುದ್ಧವಾದ ಸಂಸ್ಕರಣವನ್ನು ಮೊಟ್ಟ ಮೊದಲು ಮುದ್ರಿಸಿದ ಶ್ರೇಯಸ್ಸು ಶ್ರೀ ಶ್ಯಾಮಾಚಾರ್ಯರಿಗೆ ಸಲ್ಲುತ್ತದೆ.

## ೩೪೩ ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯ

ಇವರು ಇಪ್ಪತ್ತನೇ ಶತಮಾನದ ಮಹಾ ಪಂಡಿತರ ಪಂಕ್ತಿಯಲ್ಲಿ ಸೇರಲು ಅರ್ಹರಾದ ಪಂಡಿತವರೇಣ್ಯರು. ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾ ನಾಲ್ಕೂ ಶಾಸ್ತ್ರಗಳಲ್ಲಿ ಆಚಾರ್ಯರಿಗೆ ವಾದ ಶಕ್ತಿ-ಬೋಧ ಶಕ್ತಿ ಎರಡೂ ಇದ್ದವು. ಇವರು ಕಾಲವಾದ ಬಳಿಕ ಮೈಸೂರು ತನ್ನ ತರ್ಕ ಗೌರವದ ಗರಿಮೆ ಹಿರಿಮೆ ಹೆಮ್ಮೆಗಳನ್ನೇ ಕಳೆದುಕೊಂಡಿದೆ.

ಶ್ರೀ ಕೃಷ್ಣಮೂರ್ತಿ ಆಚಾರ್ಯರು ತಮ್ಮ ಮಾವಂದಿರಲ್ಲಿ ವ್ಯಾಕರಣವನ್ನೂ ಆತ್ಮಕೂರ ರಂಗಾಚಾರ್ಯರಲ್ಲಿಯೂ ಎಲತ್ತೂರ ಕೃಷ್ಣಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನೂ, ಪೆರಿಕುಳಂ ರಾಮಚಂದ್ರಾಚಾರ್ಯರಲ್ಲಿ ವೇದಾಂತವನ್ನೂ, ಪ್ರಾತಃ ಸ್ಮರಣೀಯರಾದ ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾ ವ್ಯಾಸತ್ರಯಾದಿ ಗ್ರಂಥಗಳನ್ನೂ ಅಧ್ಯಯನ ಮಾಡಿ ದಿಗ್ಗಜಪಂಡಿತರಾದರು.

ಇವರ ಪಾಂಡಿತ್ಯ ಪ್ರತಿಭೆಯ ಬಿತ್ತರ ಎತ್ತರ ಹಾಗೂ ಉತ್ತಮಿಕೆ ತಕ್ಕುದಾದ ಮೈಸೂರ ಮಹಾರಾಜಾ ಸಂಸ್ಕೃತ ಕಾಲೇಜದ ತರ್ಕಪ್ರಾಧ್ಯಾಪಕ ಪದವಿಯು ಇವರಿಗೆ ತಾನಾಗಿಯೇ ಒಲಿದು ಬಂದಿತು. ಅಲ್ಲಿ ಇವರು ಸುಮಾರು ೨೫ ವರ್ಷಗಳ ಕಾಲ ಅವಿಚ್ಛಿನ್ನವಾಗಿ ನ್ಯಾಯಶಾಸ್ತ್ರ ಪಾಠವನ್ನು ಹೇಳಿ ಅನೇಕ ನವ್ಯ ನ್ಯಾಯ ನಿಪುಣರನ್ನು ಸಿದ್ಧಗೊಳಿಸಿದರು.

ಇವರಲ್ಲಿ ಓದಿ ಘನ ಪಂಡಿತರಾದ ವಿದ್ವಾಂಸರಲ್ಲಿ ಶ್ರೀ ಚತುರ್ವೇದೀ ರಾಮಚಂದ್ರಾಚಾರ್ಯರೂ ಮಂತ್ರಾಲಯದ ಆಸ್ಥಾನ ವಿದ್ವಾನ್ ಗುನ್ನಾಳ ವೆಂಕೋಬಾಚಾರ್ಯರೂ ಪ್ರಧಾನರಾಗಿದ್ದರು.

ಉತ್ತರಾದಿ ಮಠದ ಈಗಿನ ಪಂಡಿತ ಪೀಠಾಧಿಪತಿಗಳಾದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರೂ ಮಂತ್ರಾಲಯ ಮಠದ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರೂ ಪೂರ್ವಾಶ್ರಮದಲ್ಲಿ ಶ್ರೀಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರ ದಿವ್ಯ ಜ್ಞಾನದ ಉಪಯೋಗವನ್ನು ಪಡೆದು ಪಾಂಡಿತ್ಯ ಪ್ರಪಂಚದ ಸುಧೀ ಶೇಖರರಾಗಿ ಬೆಳಗುತ್ತಲಿದ್ದಾರೆ.

### ೩೪೪ ದುರ್ಗ ಹನುಮಂತಾಚಾರ್ಯ

ಇವರು ವೇದಾಂತ ಶಾಸ್ತ್ರದಲ್ಲಿ ಅಪ್ರತಿಮ ಪಂಡಿತರು. ಸಾಂಪ್ರದಾಯಿಕವಾದ ಪ್ರಮೇಯ ಜ್ಞಾನವೂ ಪ್ರಮಾಣ ಗ್ರಂಥಗಳಲ್ಲಿ ಪ್ರಗಲ್ಭ ಪಾಂಡಿತ್ಯವೂ ಶ್ರೀ ಹನುಮಂತಾಚಾರ್ಯರ ಹಸ್ತಗತವಾಗಿದ್ದವು.

### ೩೪೫ ದುರ್ಗ ಕೃಷ್ಣಾಚಾರ್ಯ

ಇವರು ಸಾಹಿತ್ಯ, ವ್ಯಾಕರಣಗಳಲ್ಲಿ ನಿಷ್ಣಾತರು. ವೇದಾಂತದಲ್ಲಿಯೂ ಘನ ಪಂಡಿತರು. ಶ್ರೀ ರಾಘವೇಂದ್ರ ಸ್ವಾಮಿ ಮಠದ ಶ್ರೀ ಸುಶೀಲೇಂದ್ರ ತೀರ್ಥ ಶ್ರೀಪಾದಂಗಳವರು ಇವರಲ್ಲಿ ವೇದಾಂತ ವ್ಯಾಸಂಗ ಮಾಡಿದ್ದರು.

### ೩೪೬ ಮುನವಳ್ಳಿ ಗೋವಿಂದಾಚಾರ್ಯ

ಇವರು ವೇದದಲ್ಲಿ ಮಹಾ ಪಂಡಿತರು. ಧರ್ಮಶಾಸ್ತ್ರದಲ್ಲಿ ಸಂದೇಹಾನಾಸ್ಕಂದಿತವಾದ ಶುದ್ಧ ಜ್ಞಾನವಿದ್ದವರು. ಜ್ಯೋತಿಃಶಾಸ್ತ್ರದಲ್ಲಿಯೂ ಒಳ್ಳೇ ಪರಿಣತಿ. ಇವರು ಕೊಲ್ಲಾಪುರದಲ್ಲಿದ್ದು ಅನೇಕ ಜನರಿಗೆ ವೇದ ಹಾಗೂ ಜ್ಯೋತಿಷ್ಯ ಪಾಠ ಹೇಳಿದರು.

## ೩೪೭ ಪ್ರಾಕ್ಪೂರ ಭೀಮಾಚಾರ್ಯ

ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ವಿದ್ವಾಂಸರಾದ ಶಿಷ್ಯರಲ್ಲಿ ಪ್ರಾಕ್ಪೂರ ಭೀಮಾಚಾರ್ಯರು ಅಗ್ರೇಸರರಾಗಿದ್ದರು. ಅವರು ತಿರುಪತಿಯ ಸಂಸ್ಕೃತ ಕಾಲೇಜದಲ್ಲಿ ತರ್ಕಾಧ್ಯಾಪಕರಾಗಿದ್ದರು. ಕೊನೆಗೆ ತಮ್ಮ ಸ್ವಗ್ರಾಮಕ್ಕೆ ಬಂದು ಮನೆಯಲ್ಲಿ ಅನೇಕ ಛಾತ್ರರನ್ನು ಇಟ್ಟುಕೊಂಡು ಪಾಠ ಹೇಳಿದರು. ಬುರ್ಲಿ ವೆಂಕೋಬಾಚಾರ್ಯ, ಮಳಖೇಡ ಜಯವೆಂಕಟಾಚಾರ್ಯ, ಕೋಟಗುಂಡಿ ಗೋವಿಂದಾಚಾರ್ಯ ಅವರಲ್ಲಿ ಅಧ್ಯಯನ ಮಾಡಿದರು.

## ೩೪೮ ಗಾರ್ಲಪಾಡ ಕೃಷ್ಣಾಚಾರ್ಯ

ಇವರು ಶ್ರೀ ಯಳಮೇಲಿ ವಿಠಲಾಚಾರ್ಯರಲ್ಲಿ ವ್ಯಾಕರಣವನ್ನೂ ಶ್ರೀಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನೂ ಓದಿ ವಿದ್ವಾಂಸರಾಗಿದ್ದರು.

## ೩೪೯ ಬಾಳಾಚಾರ್ಯ ಅವಧಾನಿ ಅಕ್ಕಲಕೋಟಿ

ಇವರು ವೇದಾಂತದಲ್ಲಿ ಪಂಡಿತರಾಗಿದ್ದರು.

## ೩೫೦ ರಾಜಾಚಾರ್ಯ ಜಮಖಂಡಿ

ಇವರು ಮಂಗಸೂಳಿ ವೆಂಕಟರಮಣಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣ ಅಧ್ಯಯನ ಮಾಡಿ ನಿತ್ಯ ಪುರಾಣವನ್ನು ಜಮಖಂಡಿಯಲ್ಲಿ ಹೇಳುತ್ತಿದ್ದರು.

## ೩೫೧ ಕಂಜಾಳ್ಕಾಚಾರ್ಯ ಜಮಖಂಡಿ

ಇವರು ಪುರಾಣ ಹೇಳುತ್ತಿದ್ದರು. ಪುರಾಣ ಹೇಳಲಿಕ್ಕೆ ಬೇಕಾದಷ್ಟು ಸಾಹಿತ್ಯ ವೇದಾಂತಗಳನ್ನು ಬೀಡ ರಾಮಾಚಾರ್ಯರಲ್ಲಿ ವ್ಯಾಸಂಗ ಮಾಡಿದ್ದರು.

## ೩೫೨ ಹಯಗ್ರೀವಾಚಾರ್ಯ ಜಂಬಿಗಿ ಅಥಣಿ

ಇವರು ದಿವ್ಯ ಪುರಾಣಿಕರು. ವೇದಾಂತದ ಬೆಂಬಲವಿದ್ದುದರಿಂದ ಇವರ ಪುರಾಣವು ಪಂಡಿತರಿಗೆ ರಂಜಕವೂ, ಪಾಮರರಿಗೆ ರೋಚಕವೂ ಆಗಿರುತ್ತಿತ್ತು.

## ೩೫೩ ಗೋವಿಂದಾಚಾರ್ಯ ಜಂಬಿಗಿ ಅಥಣಿ

ಇವರು ವೇದಾಂತ ವ್ಯಾಸಂಗವನ್ನು ಮಾಡಿ ಅಥಣಿಯಲ್ಲಿ ಬಹು ಕಾಲ ಪುರಾಣವನ್ನು ಹೇಳುತ್ತಿದ್ದರು. ಇವರು ಪ್ರಮೇಯಜ್ಞರು. ಭಾಗವತ ತಜ್ಞರು.

### ೩೫೪ ಪಂಡಿತರಾವ ಕೊಲ್ಹಾಪುರ

ಸಾಹಿತ್ಯದಲ್ಲಿ ಪರಿಣತರು. ಬಹುಶ್ರುತರು. ದ್ವೈತ ವೇದಾಂತಗಳಲ್ಲಿ ನಿಷ್ಠೆಯುಳ್ಳವರು. ವಿದ್ವಾಂಸರಿಗೆ ಆಶ್ರಯ ಕೊಡುತ್ತಿದ್ದರು.

### ೩೫೫ ನಾರಾಯಣಾಚಾರ್ಯ ಕೊಲ್ಹಾಪುರ

ಪಂಡಿತರಾವರ ಚಿರಂಜೀವರಾದ ನಾರಾಯಣಾಚಾರ್ಯರು— ವೆಂಕಟಾಚಾರ್ಯ ಮಂಗಸೂಳಿಯವರಲ್ಲಿ ಸಾಹಿತ್ಯ, ವೇದಾಂತ, ವ್ಯಾಸಂಗ ಮಾಡಿದರು. ದ್ವೈತ ವೇದಾಂತದ ತತ್ವ ಮಹತ್ವಗಳನ್ನು ಚನ್ನಾಗಿ ಅರಿತಿದ್ದರು.

### ೩೫೬ ವೇಣೀ ಮಾಧವಾಚಾರ್ಯ

ಪಂಢರಪುರದಲ್ಲಿ ಇದ್ದ ವೇಣೀ ಮಾಧವಚಾರ್ಯರು ಮಂಗಸೂಳಿ ವೆಂಕಟರಮಣಾಚಾರ್ಯರಲ್ಲಿ ವ್ಯಾಕರಣ, ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಂಡಿತರಾಗಿದ್ದರು.

### ೩೫೭ ಲೋಳಕರಶಾಸ್ತ್ರಿ ಕೊಲ್ಹಾಪುರ

ವೇದಾಂತವನ್ನು ಅಧ್ಯಯನ ಮಾಡಿದ್ದರು. ಗಲಗಲಿ ಕೂರ್ಮಾಚಾರ್ಯರಲ್ಲಿ ನ್ಯಾಯಾಮೃತ ಪ್ರಥಮ ಪರಿಚ್ಛೇದವನ್ನು ಓದಿದರು.

### ೩೫೮ ಕಟ್ಟಿ ಶ್ರೀನಿವಾಸಾಚಾರ್ಯ ಐನಾಪುರ

ಇವರು ವೆಂಕಟರಮಣಾಚಾರ್ಯರಲ್ಲಿ ವೇದಾಂತ ವ್ಯಾಕರಣವನ್ನು ಅಧ್ಯಯನ ಮಾಡಿ ಐನಾಪುರದಲ್ಲಿದ್ದು ಪಾಠ-ಪ್ರವಚನ ಮಾಡುತ್ತಿದ್ದರು. ಹೈಕೋರ್ಟಿನ ನ್ಯಾಯಾಧೀಶರಾದ ಶ್ರೀ ಲೋಕೂರ ನಾರಾಯಣರಾಯರು ಇವರಲ್ಲಿ ಪಾಠ ಓದಿದ್ದರು.

### ೩೫೯ ಲೋಕೂರ ನಾರಾಯಣರಾವ

ಕಟ್ಟಿ ಶ್ರೀನಿವಾಸಾಚಾರ್ಯರಲ್ಲಿ ಕಾವ್ಯ ವ್ಯಾಕರಣಗಳನ್ನು ಅಧ್ಯಯನ ಮಾಡಿದ ಶ್ರೀ ನಾರಾಯಣರಾಯರು ಸಂಸ್ಕೃತ ಸಾಹಿತ್ಯದಲ್ಲಿ ವ್ಯುತ್ಪನ್ನರಾಗಿದ್ದರು. ಸಂಸ್ಕೃತವು ಅವರ ಮನೆಯ ಭಾಷೆಯಾಗಿದ್ದಿತು. ನಾರಾಯಣರಾಯರು ವಕೀಲರಾಗಿ ನ್ಯಾಯಾಧೀಶರಾಗಿ ಮುಂಬಯಿ ಹೈಕೋರ್ಟಿನ ನ್ಯಾಯಮೂರ್ತಿಗಳಾಗಿ ಮದ್ರಾಸ ರೇಲ್ವೆ ಟ್ರಿಬ್ಯುನಲ್‌ದ ಸರ್ವೋಚ್ಚ ಅಧಿಕಾರಿಗಳಾಗಿ ಕೆಲಸ ಮಾಡಿದರು.

ಇವರು ವಿಜಾಪುರದ ಸಂಸ್ಕೃತ ಸಾಹಿತ್ಯ ಸಮ್ಮೇಲನದ ಉದ್ಘಾಟಕರಾಗಿ ಸಂಸ್ಕೃತದಲ್ಲಿಯೇ ಭಾಷಣ ಮಾಡಿದರು.

ಕೊಯಿಮತ್ತೂರಿನಲ್ಲಿ ನಡೆದ ಅಖಿಲ ಭಾರತ ಮಾಧ್ವ ಎರಡನೇ ತತ್ವಜ್ಞಾನ ಸಮ್ಮೇಲನದ ಅಧ್ಯಕ್ಷರಾಗಿ ಮನನೀಯ ಭಾಷಣ ಮಾಡಿದರು.

## ೪೬೦ ಕೊರ್ಲಹಳ್ಳಿ ಕೃಷ್ಣಾಚಾರ್ಯ

ಶ್ರೀ ಸತ್ಯಧ್ಯಾನತೀರ್ಥರಲ್ಲಿ ಶಾಸ್ತ್ರಾಧ್ಯಯನ ಮಾಡಿ ಪಂಡಿತರಾದ ಕೃಷ್ಣಾಚಾರ್ಯರು ಪುರಾಣ ಪ್ರವಚನದಲ್ಲಿ ಪರಿಣತರಾಗಿದ್ದರು. ಅವರು ದಾವಣಗೇರಿಯಲ್ಲಿದ್ದು ಶ್ರೀ ಬಿ. ಭೀಮರಾವ ಮುಂತಾದ ಅನೇಕ ಜನರಿಗೆ ಸಚ್ಛಾಸ್ತ್ರ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ಶ್ರೀ ಸತ್ಯಧ್ಯಾನರಂಥ ವಿದ್ವದ್ವಿಭೂತಿಗಳಲ್ಲಿ ಸುಧಾಂತ ವೇದಾಂತ ಗ್ರಂಥಗಳನ್ನೆಲ್ಲ ಕ್ರಮ ಪ್ರಕಾರವಾಗಿ ಓದಿ ಮಧ್ವ ಸಿದ್ಧಾಂತದ ಅರಿತ-ನುರಿತ ಅಭಿಜಾತ ಪಂಡಿತರಾದ ಶ್ರೀ ಕೃಷ್ಣಾಚಾರ್ಯರ ಶಾಸ್ತ್ರ ಪಾಠವೂ ಕೂಡ ಪುರಾಣದಂತೆ ಸರಸ ಸುಂದರವಾಗಿರುತ್ತಿತು.

ಪ್ರಮಾಣ ಭಾಗ, ಪ್ರಮೇಯ ಭಾಗ ಎರಡರಲ್ಲಿಯೂ ಪರಿನಿಷ್ಠಿತವಾದ ಪಾಂಡಿತ್ಯವುಳ್ಳ ಆಚಾರ್ಯರ ಪುರಾಣವು ಕೂಡ ಅವರ ಶಾಸ್ತ್ರ ಪ್ರವಚನದಂತೆ ಪ್ರೌಢ ಮನೋಹರವೂ, ವಿದ್ವದ್ರಂಜಕವೂ ಆಗಿರುತ್ತಿತ್ತು.

ದಾವಣಗೇರಿಯ ಸರ್ವಜ್ಞ ಸೇವಾ ಸಂಘ, ಮಧ್ವ ನವಮಿ ಉತ್ಸವ, ಗ್ರಂಥ ಪ್ರಕಾಶನ, ಪಾಠ-ಪ್ರವಚನ ಮುಂತಾದ ಜ್ಞಾನ ಪ್ರಯೋಜಕ ವ್ಯಾಪಾರಗಳಿಗೆಲ್ಲ ಶ್ರೀ ಕೊರ್ಲಹಳ್ಳಿ ಕೃಷ್ಣಾಚಾರ್ಯರು ಪ್ರೇರಕ ಶಕ್ತಿಯಾಗಿದ್ದರು. ಪ್ರೋತ್ಸಾಹಕ ವ್ಯಕ್ತಿಯಾಗಿದ್ದರು. ಅವರ ಮಧುರ ಕಂಠದಿಂದ ಭಾಗವತದ ಭಾವ ಬಂಧುರವೂ ತತ್ವಾರ್ಥ ಸುಂದರವೂ ಆದ ಗದ್ಯಪದ್ಯಗಳನ್ನು ಕೇಳುವದೇ ಒಂದು ಸೊಗಸು.

## ೪೬೧ ಗುರುರಾಜಾಚಾರ್ಯ ಕುಂಭಕೋಣಂ

ವೇದಾಂತದಲ್ಲಿ ಪಂಡಿತರಾದ ಗುರುರಾಜಾಚಾರ್ಯರು ವ್ರತ ಕಥೆ, ವ್ರತಕಲ್ಪ, ದೇವತಾರ್ಚನ ಮುಂತಾದ ಅನೇಕ ಗ್ರಂಥಗಳನ್ನು ಮುದ್ರಿಸಿ ಬಹು ಜನರಿಗೆ ಉಪಕಾರ ಮಾಡಿದ್ದರು.

## ೪೬೨ ಶ್ರೀಮುಷ್ಣ ಕೃಷ್ಣಾಚಾರ್ಯ

ಉತ್ತರ ಅರ್ಕಾಟ ಜಿಲ್ಹೆಯ ಸತ್ಯವಿಜಯ ನಗರದಲ್ಲಿ ವಾಸ ಮಾಡಿದ ಕೃಷ್ಣಾಚಾರ್ಯರು ವೇದಾಂತದಲ್ಲಿ ವಿದ್ವಾಂಸರಾಗಿದ್ದರು. ಪೂರಸೇಕುಪ್ಪ ಶಾಮಾಚಾರ್ಯರ ಸಹೋದರರಾದ ಇವರು ಆರಣಿ ಮತ್ತು ಸತ್ಯವಿಜಯನಗರದಲ್ಲಿರುವ ಅನೇಕ ಮಾಧ್ವರಿಗೆ ಪಾಠ ಹೇಳಿದರು.

### ೩೬೩ ವೇದವ್ಯಾಸಾಚಾರ್ಯ ನೆರೂರ

ಶ್ರೀ ವ್ಯಾಕರಣ ಸುಬ್ರಾಯಾಚಾರ್ಯರಲ್ಲಿ ಶಬ್ದಶಾಸ್ತ್ರ ಹಾಗೂ ವೇದಾಂತಗಳನ್ನು ಓದಿದ ವೇದವ್ಯಾಸಾಚಾರ್ಯರು ತ್ರಿಚನಾಪಲ್ಲಿ ಜಿಲ್ಲೆಯ ನೆರೂರ ಗ್ರಾಮದಲ್ಲಿ ಇದ್ದು ಅನೇಕ ಜನ ಶಿಷ್ಯರಿಗೆ ವ್ಯಾಕರಣ ವೇದಾಂತ ಪಾಠ ಹೇಳಿದರು.

### ೩೬೪ ಗಂಗೂರ ಹನುಮಂತಾಚಾರ್ಯ

ಇವರು ಉತ್ತರಾದಿ ಮಠದ ತಪೋಧನ ಸ್ವಾಮಿಗಳಾದ ಶ್ರೀ ಸತ್ಯಜ್ಞಾನ ತೀರ್ಥರ ಪೂರ್ವಾಶ್ರಮ ಪುತ್ರರು. ಬಾಲ್ಯದಲ್ಲಿ ಆಚಾರ್ಯರು ಶ್ರೀ ವರಖೇಡಿ ಪ್ರದ್ಯುಮ್ನಾಚಾರ್ಯರಲ್ಲಿ ಸಾಹಿತ್ಯ ವ್ಯಾಕರಣ ಮತ್ತು ವೇದಾಂತದ ಪ್ರಕರಣ ಗ್ರಂಥಗಳನ್ನು ಅಧ್ಯಯನ ಮಾಡಿದರು. ತಮ್ಮ ತಂದೆಯವರಾದ ಶ್ರೀ ಕಿನ್ನಾಳ ಜಯಾಚಾರ್ಯರಲ್ಲಿಯೂ ಶಾಸ್ತ್ರಾಧ್ಯಯನವಾಯಿತು. ಕೊನೆಗೆ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾದಿ ಗ್ರಂಥಗಳನ್ನು ಪಾಠ ಓದಿ ಮಂಗಳ ಮಾಡಿದರು.

ಅನಂತರ ಆಚಾರ್ಯರು ತಮ್ಮ ಸ್ವಗ್ರಾಮವಾದ ಕಿನ್ನಾಳದಲ್ಲಿಯೇ ಅನೇಕ ಶಿಷ್ಯರನ್ನು ಮನೆಯಲ್ಲಿ ಇಟ್ಟುಕೊಂಡು ಅನ್ನವಿತ್ತು ಪಾಠ ಪ್ರವಚನ ಮಾಡುತ್ತಿದ್ದರು. ಇವರು ಪರಮ ಸಾತ್ವಿಕರೂ ಶ್ರದ್ಧಾಳುಗಳೂ ಸತ್ ಸಿದ್ಧಾಂತದಲ್ಲಿ ದೀಕ್ಷೆಯುಳ್ಳವರೂ ಆಗಿದ್ದರು.

### ೩೬೫ ಮುಂಡರಗಿ ರಾಮಾಚಾರ್ಯ

ಮುಂಡರಗಿ ಊರವರಾದ ಆಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದರು.

### ೩೬೬ ಆಲೂರ ಬಾಳಾಚಾರ್ಯ

ಇವರು ಉತ್ತರಾದಿ ಮಠದ ಶ್ರೀ ಸತ್ಯಜ್ಞಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಶಾಸ್ತ್ರ ಪಂಡಿತರಾಗಿದ್ದರು.

### ೩೬೭ ಎಳಮೇಲಿ ಶ್ರೀನಿವಾಸಾಚಾರ್ಯ ( ಸುರಪುರ )

ಇವರು ಎಳಮೇಲಿ ವಿಠಲಾಚಾರ್ಯರಲ್ಲಿ ವ್ಯಾಕರಣವನ್ನು ಓದಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿದರು.

### ೩೬೮ ಆಮೂರ ಆಚಾರ್ಯ

ಇವರು ಪ್ರಸಿದ್ಧ ಪಂಡಿತರಾಗಿದ್ದರು. ಸಂಸ್ಕೃತದಲ್ಲಿ ಅನೇಕ ಸುಭಾಷಿತಗಳನ್ನು ರಚಿಸಿರುವರು.

### ೩೭೯ ರಾಜಾಚಾರ್ಯ ಉಡುಪಿ

ಇವರು ವೇದಾಂತದಲ್ಲಿ ಪಂಡಿತರಾಗಿದ್ದರು. ವ್ಯಾಕರಣ ಸಾಹಿತ್ಯಗಳಲ್ಲಿಯೂ ಇವರಿಗೆ ಒಳ್ಳೇ ಪರಿಣತಿ ಇದ್ದಿತು.

### ೩೭೦ ಗಲಗಲಿ ಸುಬ್ರಹ್ಮಣ್ಯಾಚಾರ್ಯ (ಕರ್ಜಗಿ)

ಕರ್ಜಗಿಯಲ್ಲಿರುವ ಗಲಗಲಿ ಮನೆತನದಲ್ಲಿ ಜನಿಸಿದ ಇವರು ನ್ಯಾಯ-ವೇದಾಂತ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು. ಪ್ರಮೇಯ ಭಾಗದಲ್ಲಿಯೂ ಧರ್ಮ ಶಾಸ್ತ್ರದಲ್ಲಿಯೂ ಇವರು ಪ್ರಾಜ್ಞರು ಎನಿಸಿದ್ದರು.

### ೩೭೧ ಸಾಂಗಲಿ ನಾರಾಯಣಾಚಾರ್ಯ

ಗೋಕಾಕದಲ್ಲಿರುವ ನಾರಾಯಣಾಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ, ವೇದಾಂತ ಶಾಸ್ತ್ರಗಳನ್ನು ಓದಿ ವಿದ್ವಾಂಸರಾಗಿದ್ದರು.

### ೩೭೨ ರಡ್ಡಿ ರಂಗಾಚಾರ್ಯ

ಶ್ರೀ ಸಾತಾರಾ ಬಾಳಾಚಾರ್ಯರಲ್ಲಿ ವ್ಯಾಕರಣವನ್ನೂ, ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಕೆಲವು ವೇದಾಂತದ ಉದ್ಗ್ರಂಥಗಳನ್ನೂ ಅಧ್ಯಯನ ಮಾಡಿದ್ದರು. ಇವರು ಮಧ್ವ ಸಿದ್ಧಾಂತ ಸುಧಾಕರ ಎಂಬ ಮರಾಠಿ ಮಾಸ ಪತ್ರಿಕೆಯನ್ನು ಹೊರ ಡಿಸಿ ಮಹಾರಾಷ್ಟ್ರ ದೇಶದಲ್ಲಿ ಮಧ್ವ ತತ್ವ ಜ್ಞಾನದ ಬಗ್ಗೆ ಜಾಗೃತಿಯನ್ನೂ, ತಿಳುವಳಿಕೆಯನ್ನೂ ಜನರಲ್ಲಿ ಹುಟ್ಟಿಸಿದರು. ಸಂಸ್ಕೃತ ಮತ್ತು ಮರಾಠಿ ಭಾಷೆಗಳಲ್ಲಿ ದ್ವೈತ ಸಿದ್ಧಾಂತದ ಬಗ್ಗೆ ಪಂಡಿತ-ಪಾಮರ ರಂಜನವಾಗುವಂತೆ ಉಪನ್ಯಾಸಗಳನ್ನು ಕೊಡುತ್ತಿದ್ದರು. ಇವರು ಶ್ರೀ ಮಧ್ವಾಚಾರ್ಯರ ಭಾಷ್ಯ ಮತ್ತು ತತ್ವಪ್ರಕಾಶಿಕಾ ಗ್ರಂಥಗಳನ್ನು ಸುಂದರವಾಗಿ ಮರಾಠಿ ಭಾಷೆಗೆ ಅನುವಾದ ಮಾಡಿದ್ದಾರೆ. ಪತ್ರಿಕಾ, ಪುಸ್ತಕ ಮತ್ತು ಗ್ರಂಥ ರೂಪದಿಂದ ಆಚಾರ್ಯರು ಮಧ್ವ ಸಿದ್ಧಾಂತಕ್ಕೆ ಸಲ್ಲಿಸಿದ ಸೇವೆಯು ಚಿರಸ್ಮರಣೀಯವಾಗಿದೆ. ಅವರು ಕಾಲೇಜದಲ್ಲಿ ಪ್ರಾಧ್ಯಾಪಕರಾಗಿ, ಶಿಕ್ಷಣಾಧಿಕಾರಿಗಳಾಗಿ ಸಂಸ್ಕೃತ ಸಾಹಿತ್ಯದ ಪ್ರಚಾರಕ್ಕಾಗಿ ದುಡಿದರು.

### ೩೭೩ ಗಂಗೂರ ಜಯಾಚಾರ್ಯ

ಕಿನ್ನಾಳ ಗ್ರಾಮದ ಜಯಾಚಾರ್ಯರು ಕೊರ್ಲಹಳ್ಳಿ ಸೇತುರಾಮಾಚಾರ್ಯ (ಸತ್ಯಧ್ಯಾನ ತೀರ್ಥ)ರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ಪಂಡಿತ ಪ್ರಪಂಚದ ಸಾರ್ವಭೌಮರಾದರು. ಇವರ ಅಗಾಧವಾದ ಪಾಂಡಿತ್ಯ, ಪಾಠ ಪ್ರವಚನ ದೀಕ್ಷಾದಾಕ್ಷ್ಯ, ಘನತರವಾದ ಶಾಸ್ತ್ರೀಯ ವ್ಯುತ್ಪತ್ತಿ, ವಿಷಯ ವೈರಾಗ್ಯ, ಭಗವನ್ನಿಷ್ಠೆ,

ತಪಃಸಿದ್ಧಿ, ಸಿದ್ಧಾಂತ ಪ್ರಸಿಸೀರ್ಷೆ, ಮಧ್ವ ಸಿದ್ಧಾಂತದ ಉನ್ನಿನೀಷ್ಮೆ, ಮಾಧ್ವ ಸಮಾಜದ ಉದ್ದಿಧೀರ್ಷೆ, ಮುಂತಾದ ಗುಣಗಳು ಲೋಕೋತ್ತರವಾಗಿದ್ದವು. ಅವರ ಈ ಗುಣಗಣ ಗರಿಷ್ಠತೆಯನ್ನೂ ವಿದ್ಯಾ ವರಿಷ್ಠತೆಯನ್ನೂ ತಪೋಮಹಿಷ್ಠತೆಯನ್ನೂ ಕಂಡು ಉತ್ತರಾದಿ ಮಠದ ಶ್ರೀ ಸತ್ಯಧೀರ ತೀರ್ಥ ಶ್ರೀಪಾದಂಗಳವರು ಅವರಿಗೆ ಉತ್ತರಾದಿ ಮಠದ ಮಹಾ ಸಂಸ್ಥಾನವನ್ನು ಒಪ್ಪಿಸಿ ಸನ್ಯಾಸಾಶ್ರಮವನ್ನಿತ್ತು ಶ್ರೀ ಸತ್ಯಜ್ಞಾನ ತೀರ್ಥರು ಎಂದು ನಾಮಕರಣ ಮಾಡಿದರು. ಆಶ್ರಮವಾದ ನಂತರವೂ ಒಂದು ಕ್ಷಣವನ್ನೂ ವ್ಯರ್ಥ ಕಳೆಯದೆ ಯಾವಜ್ಜೀವ ಸುಧಾದಿ ಗ್ರಂಥಗಳನ್ನು ಅವಿರತವಾಗಿ ಪಾಠ ಹೇಳಿದರು.

## ೩೭೪ ಕೊಪ್ಪಳ ಜಯಾಚಾರ್ಯ

ಇವರು ವೇದಾಂತದಲ್ಲಿ ಪಂಡಿತರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಶಾಸ್ತ್ರಾಧ್ಯಯನ ಮಾಡಿ ವಿದ್ವಾಂಸರಾಗಿದ್ದರು.

## ೩೭೫ ಪೂರಸೇಕುಪ್ಪ ಶಾಮಾಚಾರ್ಯ

ಇವರು ವೇದಾಂತ ಶಾಸ್ತ್ರದಲ್ಲಿ ಪಂಡಿತರಾಗಿದ್ದರು. ಒಳ್ಳೆ ಕರ್ಮಠರಾದ ಶಾಮಾಚಾರ್ಯರು ಆರ್ಯಾಚಾರ್ಯ ಪರಂಪರೆಯಿಂದ ಪ್ರಾಪ್ತವಾದ ಶ್ರೀ ವಿಠ್ಠಲ ದೇವರ ಪ್ರತಿಮೆಯನ್ನು ಪೂಜೆ ಮಾಡುತ್ತ ಇದ್ದರು.

## ೩೭೬ ಪೂರಸೇಕುಪ್ಪ ಕುಪ್ಪಾಚಾರ್ಯ

ಇವರು ಧರ್ಮ ಕರ್ಮ ದೀಕ್ಷಿತರು. ಶಾಸ್ತ್ರಜ್ಞರು. ಭಗವದ್ಭಕ್ತರು. ದಕ್ಷಿಣ ಆರ್ಕಾಟ ಜಿಲ್ಲೆಯಲ್ಲಿ ಹಿಂದೆ ಭೀಕರವಾದ ಬರಗಾಲವು ತಲೆದೋರಿತ್ತು. ಆ ಕ್ಷಾಮ ನಿವಾರಣೆಗಾಗಿ ಕುಪ್ಪಾಚಾರ್ಯರು ಒಂದು ಮಂಡಲಕಾಲ (೪೦ ದಿವಸ) ದ ವರೆಗೆ ಅಲವಣ ವ್ರತದಿಂದ ವರುಣ ಜಪ ಮಾಡಿ ಮಳೆ ತರಿಸಿದರು. ಇದರಿಂದ ಭಾರತ ಸರಕಾರದವರು ಅವರಿಗೆ ಕೆಲವು ಭೂಮಿಯನ್ನು ಅವರ ಉಪಜೀವನಕ್ಕಾಗಿ ದತ್ತಿ ಹಾಕಿಕೊಟ್ಟು ಒಂದು ಭವ್ಯವಾದ ಮನೆಯನ್ನೂ ಕಟ್ಟಿಸಿ ಕೊಟ್ಟಿದ್ದಾರೆ. ಪುರಸೇಕುಪ್ಪ ಗ್ರಾಮದಲ್ಲಿ ಇರುವ ಆ ಭವ್ಯ ಭವನದ ಬಾಗಿಲದ ಬಳಿಯಲ್ಲಿ ಈ ವಿಷಯವನ್ನು ಕೊರಿಸಿದ್ದು ಈಗಲೂ ಕಾಣಬಹುದು.

## ೩೭೭ ಪೂರಸೇಕೊಪ್ಪ ರಂಗಾಚಾರ್ಯರು

ಇವರು ತಮ್ಮ ಹಿರಿಯ ಅಣ್ಣ ಶ್ಯಾಮಾಚಾರ್ಯರಲ್ಲಿ ಸಾಹಿತ್ಯ ವೇದಾಂತ ವ್ಯಾಸಂಗ ಮಾಡಿದರು. ತರ್ಕ ಶಾಸ್ತ್ರದಲ್ಲಿಯೂ ಇವರಿಗೆ ಅಭಿಜ್ಞತೆ ಇದ್ದಿತು. ಇವರ ಶಿಷ್ಯ ಸಂಖ್ಯೆಯು ಬಹಳ. ಪುಮಕೋಟೆ ಮುಂತಾದ ಸಂಸ್ಥಾನದ ಸಭೆಗಳಲ್ಲಿ ಪ್ರಧಾನ ಪರೀಕ್ಷಕರಾಗಿ ಗೌರವವನ್ನು ಪಡೆದರು.

## ೩೭೮ ಬಾಳೀಗಡ್ಡೆ ಗಿರಿಧರಾಚಾರ್ಯ

ಇವರು ಬಾಲ್ಯದಲ್ಲಿ ಕಾಂಚೀಪುರದಲ್ಲಿ ಸಾಹಿತ್ಯ, ವ್ಯಾಕರಣಾದಿಗಳನ್ನು ಅಧ್ಯಯನ ಮಾಡಿದರು. ಅನಂತರ ಆರ್ಯಾಚಾರ್ಯ ವಂಶದ ಗೋಪಾಲ ಕೃಷ್ಣಾಚಾರ್ಯರಲ್ಲಿ ಸಂಪೂರ್ಣ ವೇದಾಂತವನ್ನೂ ಶ್ರೀ ಮುಷ್ಣಂ ಸುಬ್ಬರಾಯಾಚಾರ್ಯರಲ್ಲಿಯೂ ಕೆಲವು ಗ್ರಂಥಗಳನ್ನು ಅಧ್ಯಯನ ಮಾಡಿದರು.

ಅನಂತರ ತಿರುಪತಿಯ ಸಂಸ್ಕೃತ ಕಾಲೇಜದಲ್ಲಿ ೨೬ ವರ್ಷ ಸಾಹಿತ್ಯ ಪ್ರಧಾನ ಅಧ್ಯಾಪಕರಾಗಿ ಕೆಲಸ ಮಾಡಿದರು. ಇವರು ಆಶುಕವಿಗಳಾಗಿ ಅನೇಕ ಸಂಸ್ಕೃತ ಗದ್ಯ-ಪದ್ಯಗಳನ್ನು ರಚಿಸಿದ್ದಾರೆ. ಇವರು ನಿವೃತ್ತರಾದ ಬಳಿಕ ಮದರಾಸಿನಲ್ಲಿ ಇದ್ದು ಪಾಠ-ಪ್ರವಚನ ಮಾಡುತ್ತಿದ್ದರು.

## ೩೭೯ ಕೌಲಗಿ ಯದುನಾಥಾಚಾರ್ಯ (ಕುಂಭಕೋಣ)

ಇವರು ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತವನ್ನು ಓದಿ ಪಂಡಿತರಾಗಿದ್ದರು. ಧರ್ಮ ಶಾಸ್ತ್ರದಲ್ಲಿಯೂ ಆಚಾರ್ಯರಿಗೆ ಒಳ್ಳೆ ಪಾಂಡಿತ್ಯವಿದ್ದಿತು. ಇವರು ಕೆಲವು ವರ್ಷಗಳ ಕಾಲ ಕುಂಭಕೋಣದಲ್ಲಿ ಇದ್ದು ಪಾಠ-ಪ್ರವಚನ ಮಾಡಿಸಿ ಅನಂತರ ಮದ್ರಾಸಕ್ಕೆ ಬಂದು ಅಲ್ಲಿ ಕೊನೆಯ ವರೆಗೂ ಪಾಠ-ಪ್ರವಚನ ಮಾಡಿಸುತ್ತಲಿದ್ದರು.

## ೩೮೦ ದೇವಳೀ ಶ್ರೀನಿವಾಸಾಚಾರ್ಯ ( ಕುಂಭಕೋಣ )

ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿ ಮದ್ರಾಸಿನಲ್ಲಿ ಸ್ವಾಧ್ಯಾಯ ನಿರತರಾಗಿದ್ದರು. ಧರ್ಮ ಶಾಸ್ತ್ರದಲ್ಲಿಯೂ ಇವರಿಗೆ ಒಳ್ಳೇ ಪರಿಣತಿ ಇದ್ದಿತು.

## ೩೮೧ ಸೇಲಂ ಸುಬ್ಬರಾವ

ಸೇಲಂ ನಗರದ ಸುಬ್ಬರಾಯುರು M. A. L. T., ಪದವೀಧರರಾಗಿದ್ದರು. ಇವರು ವ್ಯಾಕರಣ, ವೇದಾಂತ, ಸಾಹಿತ್ಯ, ಆಯುರ್ವೇದ, ಜ್ಯೋತಿಷ್ಯ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಪರಿಚಯ ಪಾಂಡಿತ್ಯ ಪ್ರಭುತ್ವಗಳನ್ನು ಪಡೆದಿದ್ದರು.

ಇವರು ಸೇಲಂದಲ್ಲಿ ಹೈಸ್ಕೂಲ ಹೆಡ್‌ಮಾಸ್ತರರಾಗಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿ, ತಿರುಪತಿಯ ಸಂಸ್ಕೃತ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದರು. ಕೊನೆಗೆ ಪದ್ಮ ಸರೋವರದ ದ್ವೈತ ವೇದಾಂತ ಪಾಠಶಾಲೆಯಲ್ಲಿಯೂ ಪ್ರಿನ್ಸಿಪಾಲರಾಗಿದ್ದರು.

ಆಯುರ್ವೇದ ಔಷಧಗಳನ್ನು ಇವರು ಸ್ವಂತ ಮನೆಯಲ್ಲಿಯೇ ತಯಾರಿಸಿ ಕೊಡುತ್ತಿದ್ದರು. ಸಂಸ್ಕೃತ ಗದ್ಯ ಪದ್ಯ ರಚನೆಯಲ್ಲಿಯೂ ಇವರು ಸಿದ್ಧಹಸ್ತರಾಗಿದ್ದರು, ಸಂಸ್ಕೃತ ಇಂಗ್ಲೀಷ ಎರಡರಲ್ಲಿಯೂ ಗ್ರಂಥ ಲೇಖನ ಮಾಡಲು ಪರ್ಯಾಪ್ತವಾದ ಉಭಯ ಭಾಷಾ ಪಾಂಡಿತ್ಯವು ಅವರಿಗಿದ್ದಿತು.

ಇವರು ಇಂಗ್ಲೀಷಿನಲ್ಲಿ ೧) ಪೂರ್ಣಪ್ರಜ್ಞ ದರ್ಶನ, ೨) ಬ್ರಹ್ಮಸೂತ್ರ ಭಾಷ್ಯ ವ್ಯಾಖ್ಯಾನ ೩) ಗೀತಾಭಾಷ್ಯ ವ್ಯಾಖ್ಯಾನ ೪) ಉಪನಿಷದ್ ಭಾಷ್ಯ ವ್ಯಾಖ್ಯಾನ ೮) ಶ್ರೀಮದ್ ಭಾಗವತ ಇಂಗ್ಲೀಷ ಅನುವಾದ ಮುಂತಾದ ಅನೇಕ ಗ್ರಂಥಗಳನ್ನು ರಚಿಸಿ ಇಂಗ್ಲೀಷ ಓದಿದ ಸಂಸ್ಕೃತ ಬಾರದ ಜನರಿಗೆಲ್ಲ ಮಧ್ವ ಸಿದ್ಧಾಂತದ ಪರಿಚಯ ಪರಿಜ್ಞಾನಗಳು ಉಂಟಾಗುವಂತೆ ಮಾಡಿ ಲೋಕೋಪಕಾರ ಗೈದಿದ್ದಾರೆ.

## ೩೮೨ ಕೊಪ್ಪಳ ಮಧ್ವಾಚಾರ್ಯ

ಮುಂಡರಗಿಯ ಊರವರಾದ ಮಧ್ವಾಚಾರ್ಯರು ಬಾಲ್ಯದಲ್ಲಿಯೇ ಉತ್ತರಾದಿ ಮಠಕ್ಕೆ ಹೋಗಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ವಿನಯಶೀಲರೂ, ಸಾತ್ವಿಕರೂ ಆದ ಮಧ್ವಾಚಾರ್ಯರಿಗೆ ಗುರುಗಳು ಬಹಳ. ಶ್ರೀ ಪಾಂಡುರಂಗಿ ಜಯಾಚಾರ್ಯ, ಶ್ರೀ ಪಾಂಡುರಂಗಿ ಕೃಷ್ಣಾಚಾರ್ಯ, ಶ್ರೀ ಮಳಗಿ ವೇದವ್ಯಾಸಾಚಾರ್ಯ, ವೈಯಾಕರಣಿ ಸೇತೂ ಮಾಧವಾಚಾರ್ಯ, ಶ್ರೀ ಸತ್ಯಧ್ಯಾನ ತೀರ್ಥರು ಮುಂತಾದ ಅನೇಕ ಗುರುಗಳಲ್ಲಿ ನ್ಯಾಯ, ವೇದಾಂತಗಳನ್ನು ಓದಿ ಅವರು ಶಾಸ್ತ್ರ ಪಾರಂಗತರಾದರು. ಉತ್ತರಾದಿ ಮಠದಲ್ಲಿ ಎಲ್ಲ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ, ಶ್ರೀಗಳವರಿಗೂ ಪ್ರೀತ್ಯಾಸ್ಪದರಾದ ಶ್ರೀ ಮಧ್ವಾಚಾರ್ಯರು ಅನೇಕವರ್ಷ ಉತ್ತರಾದಿ ಮಠದಲ್ಲಿ ಇದ್ದು, ಸೇವಾ, ಅಧ್ಯಯನಾದಿಗಳನ್ನು ಮಾಡಿ ಕೊನೆಗೆ ಚಿತ್ತಾಪುರದಲ್ಲಿ ಇದ್ದು ವಾಯಿ ಆಚಾರ್ಯರ ಮಕ್ಕಳಿಗೆ ಶಾಸ್ತ್ರ ಪಾಠಗಳನ್ನು ಹೇಳುತ್ತಿದ್ದರು.

ಇವರು ಅಖಿಲ ಭಾರತ ಮಾಧ್ವ ಮಹಾ ಮಂಡಲದ ಕೇಂದ್ರ ಸಮಿತಿಯ ಸದಸ್ಯರಾಗಿದ್ದರು. ಹೈದರಾಬಾದ ತತ್ವಜ್ಞಾನ ಸಮ್ಮೇಲನದಲ್ಲಿ ಉತ್ಸಾಹದಿಂದ ಭಾಗವಹಿಸಿದ್ದರು.

## ೩೮೩ ಹಯಗ್ರೀವಾಚಾರ್ಯ ಮುಂಡರಗಿ

ಇವರು ಉತ್ತರಾದಿ ಮಠದಲ್ಲಿ ಅಧ್ಯಯನ ಮಾಡಿ ಪಂಡಿತರಾಗಿ ಮುಂಡರಗಿಯಲ್ಲಿ ಪುರಾಣ ಹೇಳುತ್ತಿದ್ದರು.

### ೩೮೪ ಜಕ್ಲ್ಯಾರಿ ಬೋಧರಾಚಾರ್ಯ (ಮುಂಡರಗಿ)

ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಜ್ಞತೀರ್ಥರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು. ಮುಂಡರಗಿಯಲ್ಲಿ ಪುರಾಣ ಹೇಳುತ್ತಿದ್ದರು.

### ೩೮೫ ಗಂಗೂರ ಸೀತಾರಾಮಾಚಾರ್ಯ

ಶ್ರೀ ಸತ್ಯಜ್ಞಾನ ತೀರ್ಥರ ಪೂರ್ವಾಶ್ರಮ ಸಹೋದರರಾದ ಸೀತಾರಾಮಾಚಾರ್ಯರು ಶ್ರೀ ಸತ್ಯಜ್ಞಾನ ತೀರ್ಥರಲ್ಲಿಯೂ, ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ ವೇದಾಂತವನ್ನು ಅಧ್ಯಯನ ಮಾಡಿದ್ದರು.

### ೩೮೬ ಡಾ. ಆರ್. ನಾಗರಾಜ ಶರ್ಮಾ, ಎಂ.ಎ.,ಪಿ.ಎಚ್.ಡಿ.ಡಿ.ಲಿಟ್.



ಭಾರತ ಸಿಂಹ ಮಹಾಮಹೋಪಾಧ್ಯಾಯ ಖಾಪೆ ರಾಮಚಂದ್ರಾಚಾರ್ಯರ ಚಿರಂಜೀವರಾದ ನಾಗರಾಜ ಶರ್ಮರು ಸ್ವಗ್ರಾಮವಾದ ಕುಂಭಕೋಣದಲ್ಲಿ ತಮ್ಮ ತಂದೆಯವರ ಬಳಿಯಲ್ಲಿ ಸಾಹಿತ್ಯ ವೇದಾಂತಗಳನ್ನು ಅಧ್ಯಯನ ಮಾಡಿದರು. ಮತ್ತು ಹೈಸ್ಕೂಲ ಶಿಕ್ಷಣವನ್ನು ಕುಂಭಕೋಣದಲ್ಲಿಯೇ ಮುಗಿಸಿ ಮದ್ರಾಸಿನಲ್ಲಿ ತತ್ವಜ್ಞಾನ ವಿಷಯವನ್ನು ತೆಗೆದುಕೊಂಡು ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜದಲ್ಲಿ ತತ್ವಜ್ಞಾನದ ಪ್ರಾಧ್ಯಾಪಕರಾಗಿ ನಿಯುಕ್ತರಾದರು. ಇವರು ಯಲ್ಲತ್ತೂರ ಕೃಷ್ಣಾಚಾರ್ಯ, ಹರಿಹರ ಶಾಸ್ತ್ರಿ, ಶ್ರೀ ಸತ್ಯಧ್ಯಾನ ತೀರ್ಥ ಸ್ವಾಮಿಗಳವರು ಮುಂತಾದ ಅನೇಕ ವಿದ್ವದ್ವರೇಣ್ಯರಲ್ಲಿ ಅನುಕೂಲವಾದಾಗೆಲ್ಲ ಶಾಸ್ತ್ರೀಯ ಉದ್ಗ್ರಂಥಗಳನ್ನೆಲ್ಲ ಓದಿ ಶಾಸ್ತ್ರ ಪರಿಣತರಾದರು.

ಬಾಲ್ಯದಿಂದಲೂ ಸಂಸ್ಕೃತ ಸಾಹಿತ್ಯದಲ್ಲಿ ಆಸ್ಥೆ ಅಭಿರುಚಿವುಳ್ಳ ಡಾ. ಶರ್ಮ ರವರು 'ಜಿಜ್ಞಾಸಾ' ಎಂಬ ಹೆಸರಿನ ಸಂಸ್ಕೃತ ಪತ್ರಿಕೆಯಲ್ಲಿ ತಮ್ಮ ಅನೇಕ ಲೇಖ, ಗದ್ಯಪದ್ಯಗಳನ್ನು ದೇವ ಭಾಷೆಯಲ್ಲಿ ಬರೆದು ಪ್ರಕಟಿಸಿದರು.

" Reign of Realism in Indian Philosophy " ಎಂಬ ಅವರ ಇಂಗ್ಲೀಷ ಗ್ರಂಥವನ್ನು ಮೆಚ್ಚಿ ಮದ್ರಾಸ ಸರಕಾರದವರು ಅವರಿಗೆ P.H.D. ಡಿಗ್ರಿಯನ್ನು ಕೊಟ್ಟು ಗೌರವಿಸಿದರು. ಇದರಲ್ಲಿ ಶ್ರೀಮದಾನಂದ ತೀರ್ಥ ಭಗವತ್ಪಾದರ ದಶ ಪ್ರಕರಣ ಎಂಬ ಹತ್ತು ಗ್ರಂಥಗಳ ಸುಂದರವಾದ ತೌಲನಿಕ ವಿಮರ್ಶನವಿದೆ.

ಅವರು ಬರೆದ Studies in Nyaya-Sudha ಎಂಬ ಸುಧಾ ಚಿಂತನ ರೂಪವಾದ ಗ್ರಂಥವನ್ನು ವೃಂದಾವನದ ವೈಷ್ಣವ ವಿಶ್ವವಿದ್ಯಾಲಯದವರು ಪ್ರಕಟಿಸಿ ಇವರಿಗೆ ಡಿ.ಲಿಟ್. ಪದವಿಯನ್ನು ಕೊಟ್ಟರು. ಇವರು ಹಿಂದೂ ಪತ್ರಿಕೆಯ ವಿಮರ್ಶಾ ವಿಭಾಗ ಹಾಗೂ ಪತ್ರ ವಿಭಾಗ, ತಾತ್ವಿಕ ವಿಭಾಗಗಳ ಪರ್ಯವೀಕ್ಷಕ ರಾಗಿ ೩೦ ವರ್ಷಗಳ ಕಾಲ ಅನೇಕ ಲೇಖಗಳನ್ನು ಬರೆದಿದ್ದಾರೆ. ಮತ್ತು ಅವರು ಹಿಂದೂ ಪತ್ರಿಕೆಯಲ್ಲಿ ಶ್ರೀ ವಿಜಯೀಂದ್ರ ತೀರ್ಥ ಶ್ರೀಪಾದಂಗಳವರ ಅಪ್ರಕಾಶಿತ ವಾದ ಎಷ್ಟೋ ಗ್ರಂಥಗಳ ಮೇಲೆ ಪರಿಚಯಾತ್ಮಕ, ವಿವೇಚನಾತ್ಮಕ ಪ್ರಬಂಧ ಗಳನ್ನು ಧಾರಾವಾಹಿಯಾಗಿ ಬರೆದು ಪ್ರಕಟಿಸಿದರು.

ಡಾ. ಶರ್ಮಾರವರು ಶ್ರೀ ಸತ್ಯಧ್ಯಾನ ತೀರ್ಥರ ನೆಚ್ಚಿನ ಶಿಷ್ಯರೂ, ಭಕ್ತರೂ ಆಗಿದ್ದರು. ವಿಶ್ವವಿದ್ಯಾಲಯ ಮಟ್ಟದಲ್ಲಿ ಮಾಧ್ವ ತತ್ವಜ್ಞಾನಕ್ಕೆ ಮನ್ನಣೆಯನ್ನು ತಂದುಕೊಟ್ಟವರೆಂದರೆ ಡಾ. ಶರ್ಮಾರವರೇ.

ಮದ್ರಾಸ ಯುನಿವ್ಹರ್ಸಿಟಿಯಿಂದ ದ್ವೈತ ವೇದಾಂತದಲ್ಲಿ ಡಾಕ್ಟರೇಟ ಪದವಿ ಯನ್ನು ತೆಗೆದುಕೊಂಡವರಲ್ಲಿ ಡಾ. ಶರ್ಮಾರವರೇ ಮೊದಲಿಗರು.

ಸಾಹಿತ್ಯ, ವೇದಾಂತಗಳಂತೆ ಡಾ. ನಾಗರಾಜ ಶರ್ಮಾರವರಿಗೆ ಜ್ಯೋತಿಷ್ಯ ಶಾಸ್ತ್ರದಲ್ಲಿಯೂ ಒಳ್ಳೆ ಪ್ರಗತಿ, ಪರಿಣತಿ ಪಾಂಡಿತ್ಯಗಳು ಇದ್ದವು. ಬೆಂಗಳೂರಿನ ಶ್ರೀ ಬಿ. ವ್ಹಿ. ರಾಮನ್‌ರವರು ಡಾ. ಶರ್ಮಾರವರ ಸಂಪೂರ್ಣ ಜೀವನ ಚರಿತ್ರವನ್ನು ಬರೆದು ಪ್ರಕಟಿಸಿದ್ದಾರೆ.

ಇವರು ಕುಂಭಕೋಣದಲ್ಲಿ ೧೯೫೫. ರಲ್ಲಿ ವೈಕುಂಠವಾಸಿಗಳಾದರು.

## ೩೮೭ ಬೆಳ್ಳುಬ್ಬಿ ಅಣ್ಣಾಚಾರ್ಯ

ಶ್ರೀ ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣವನ್ನೂ, ಶ್ರೀ ಸತ್ಯ ಧ್ಯಾನ ತೀರ್ಥರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿ ಪಂಡಿತ ಪ್ರವರನೆನಿಸಿದ

ಶ್ರೀ ಬೆಳ್ಳುಬ್ಬಿ ಅಣ್ಣಾಚಾರ್ಯರು ವಿಜಾಪುರದಲ್ಲಿ ಇದ್ದು ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದರು. ಪರಮ ಸಾತ್ವಿಕರೂ, ಪಾಠಪ್ರವಚನ ದೀಕ್ಷಾಬದ್ಧರೂ ಸದಾಚಾರ ಸಂಪನ್ನರೂ ಆದ ಶ್ರೀ ಬೆಳ್ಳುಬ್ಬಿ ಆಚಾರ್ಯರಲ್ಲಿ ಅಧ್ಯಯನ ಮಾಡಿದ ಶಿಷ್ಯರಲ್ಲಿ ಶ್ರೀ ನಾಗರಳ್ಳಿ ರಾಮಾಚಾರ್ಯ, ಕಟ್ಟಿ ವಾಸುದೇವಾಚಾರ್ಯ, ಗೊರ್ನಾಳ ರಾಮಾಚಾರ್ಯ ಮಠದ ಕೃಷ್ಣಾಚಾರ್ಯ ಮುಂತಾದವರು ಪ್ರಮುಖರಾಗಿದ್ದಾರೆ.

## ೩೮೮ ಶಿವಣಗಿ ವಿಠ್ಠಲಾಚಾರ್ಯ

ಸಾ ತಾ ರಾ ದ ಗಜೇಂದ್ರಗಡಕರ ಬಾಳಾಚಾರ್ಯರಲ್ಲಿ ಇವರು ಸಾಹಿತ್ಯ, ವ್ಯಾಕರಣ ಶಾಸ್ತ್ರಗಳನ್ನೂ, ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದರು. ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಸಂಸ್ಕೃತ ಶಾಸ್ತ್ರಗಳೆಂದು ಅವರು ಕೆಲವು ವರ್ಷ ಅಧ್ಯಾಪನ ಕಾರ್ಯವನ್ನು ನಡಿಸಿದರು. "ಸ್ಫೋಟವಾದ" ಎಂಬ ಚಿಕ್ಕ ಪುಸ್ತಿಕೆಯನ್ನು ಅವರು ಬರೆದು ಪ್ರಕಟಿಸಿದರು.

## ೩೮೯ ವ್ಯಾಸಾಚಾರ್ಯ ಧಾರಾಪುರ

ಧಾರಾಪುರದ ನಿವಾಸಿಗಳಾದ ವ್ಯಾಸಾಚಾರ್ಯರು ವ್ಯಾಕರಣದಲ್ಲಿ ಹುಲಿ, ವೇದಾಂತದಲ್ಲಿ ಸಿಂಹ ಎಂದು ಪ್ರಸಿದ್ಧರಾಗಿದ್ದರು. ಮೈಸೂರ ಮಹಾರಾಜಾ ಕಾಲೇಜದಲ್ಲಿ ತರ್ಕ ಪ್ರಾಧ್ಯಾಪಕರಾದ ಧಾರಾಪೂರ ಕೃಷ್ಣಮೂರ್ತಿ ಆಚಾರ್ಯರು ತಮ್ಮ ಮಾವಂದಿರಾದ ಈ ವ್ಯಾಸಾಚಾರ್ಯರಲ್ಲಿಯೇ ಶೇಖರಾಂತ ವ್ಯಾಕರಣವನ್ನು ಓದಿದರು. ಇವರಂತೆ ಇನ್ನೂ ಅನೇಕ ಜನರು ವ್ಯಾಸಾಚಾರ್ಯರಲ್ಲಿ ಅಧ್ಯಯನ ಮಾಡಿ ವ್ಯಾಕರಣ ವೇದಾಂತ ವಿದ್ವಾಂಸರಾದರು.

## ೩೯೦ ನರಶಿಂಹಾಚಾರ್ಯ ಕಟ್ಟಿ, ಉಗಾರ

ಇವರು ಮಂಗಸೂಳಿ ವೆಂಕಟರಮಣಾಚಾರ್ಯರಲ್ಲಿ ವೇದಾಂತ ವ್ಯಾಕರಣ ಅಧ್ಯಯನಮಾಡಿ ದಿವ್ಯ ಪುರಾಣ ಹೇಳುತ್ತಿದ್ದರು.

## ೩೯೧ ಭಟ್ಟಾಚಾರ್ಯ ಪುರೋಹಿತ ಶೂರ್ಪಾಲಿ

ವ್ಯಾಕರಣ ವೇದಾಂತ ಎರಡರಲ್ಲಿಯೂ ಪರಿಶ್ರಮವುಳ್ಳ ಭಟ್ಟಾಚಾರ್ಯರು ಶೂರ್ಪಾಲಿಯಲ್ಲಿ ಕ್ಷೇತ್ರಪಂಡಿತರಾಗಿ ವಾಸವಾಗಿದ್ದರು.

## ೩೯೨ ವೆಂಕಣ್ಣಾಚಾರ್ಯ ವಾಳವೇಕರ ಬೆಳಗಾಂವ

ಇವರು ಪ್ರಾಂಳ್ರ ಸಮೀರಣಾಚಾರ್ಯರಲ್ಲಿಯೂ ಜಂಬುಖಂಡಿ ವಾದಿರಾಜಾಚಾರ್ಯರಲ್ಲಿಯೂ ವೇದಾಂತವನ್ನು ಅಧ್ಯಯನಮಾಡಿದ್ದರು. ಮಹಾಕರ್ಮಠರು.

ಶ್ರೀ ವಾದಿರಾಜ ಶ್ರೀಪಾದಂಗಳವರ ಏಕ ನಿಷ್ಠ ಭಕ್ತರು. ಬೆಳಗಾವಿಯಲ್ಲಿ ವೀಣಾಪಾಣಿ ಹನುಮಂತದೇವರ ಮಂದಿರವನ್ನು ಸ್ಥಾಪಿಸಿ ಶ್ರೀ ರಾಜರ ಹಾಗೂ ರಾಯರ ಆರಾಧನೆ ಗಳನ್ನು ವೈಭವದಿಂದ ಮಾಡುತ್ತಲಿದ್ದರು. ಪ್ರತಿನಿತ್ಯವೂ ಪುರಾಣ ಪಾಠ ಪ್ರವಚನ ಗಳನ್ನು ಹೇಳುತ್ತಿದ್ದರು. ಮಹಾ ತಪಸ್ವಿಗಳೂ ಪರಮ ಶಾಂತರೂ ಹರಿ ಗುರು ಭಕ್ತರೂ ಆದ ಪೂಜ್ಯ ವೆಂಕಣ್ಣಾಚಾರ್ಯರು ಬೆಳಗಾವಿಯ ಧಾರ್ಮಿಕ ಚಟುವಟಿಕೆಗಳಿಗೆಲ್ಲ ಕೇಂದ್ರವಾಗಿದ್ದರು.

### ೩೯೩ ಅನಂತಭಟ್ಟ ಉಡುಪೀಕರ

ಗೌಡಸಾರಸ್ವತ ಸಮಾಜದ ಅನಂತಭಟ್ಟರು ಉಡುಪಿಯಲ್ಲಿ ಜನಿಸಿ, ಕಾಶೀ ಮಠದ ಶ್ರೀ ಭುವನೇಂದ್ರ ತೀರ್ಥ ಶ್ರೀಪಾದಂಗಳವರಲ್ಲಿ ಕಾವ್ಯ, ವ್ಯಾಕರಣ, ಮಾಧ್ವ ವೇದಾಂತ ಅಧ್ಯಯನ ಮಾಡಿದರು. ಶ್ರೀ ಗೋಕರ್ಣ ಪರ್ತಗಾಳಿ ಮಠದ ಶ್ರೀ ಪೂರ್ಣಪ್ರಜ್ಞ ತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ಗ್ರಂಥವನ್ನು ಓದಿ ಮಂಗಳ ಮಾಡಿದರು.

ಅಲ್ಲಿಂದ ಕಾಶಿಗೆ ಹೋಗಿ ನ್ಯಾಯ, ವ್ಯಾಕರಣ, ಮೀಮಾಂಸಾ, ಜ್ಯೋತಿ ಶ್ಶಾಸ್ತ್ರಗಳನ್ನು ಚನ್ನಾಗಿ ಅಧ್ಯಯನ ಮಾಡಿ ಶಾಸ್ತ್ರಿ, ಆಚಾರ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು.

ಇವರು ಮುಂದೆ ಕಾಶಿಯಲ್ಲಿಯೇ ವಾಸ ಮಾಡಿ ಕ್ಷೇತ್ರ ಪೌರೋಹಿತ್ಯ ಮತ್ತು ರತ್ನದ ವ್ಯಾಪಾರವನ್ನು ಮಾಡುತ್ತಿದ್ದರು.

### ೩೯೪ ಗೋಕರ್ಣ ಮಾಧವ ಭಟ್ಟರು



ಗೋಕರ್ಣದ ಶ್ರೀ ಜೀವೋತ್ತಮ ಮಠದಲ್ಲಿ ಸ್ಥಾಪಿತವಾದ ಶ್ರೀ ಭೂವಿಜಯ ವಿಠ್ಠಲ ದೇವರ ಅರ್ಚಕರಾದ ಭಟ್ಟರ ಕುಟುಂಬದಲ್ಲಿ ಮಹುತ್ತ ಭಟ್ಟರ ಮಕ್ಕಳಾದ

ಮಾಧವ ಭಟ್ಟರು ೧೮೭೧ ರಲ್ಲಿ ಜನಿಸಿದರು. ಇವರು ತಮ್ಮ ತಂದೆ ಮರತ್ತ್ರಭಟ್ಟ ಮತ್ತು ದೊಡ್ಡಪ್ಪ ಉಪೇಂದ್ರ ಭಟ್ಟರಿಂದ ಋಗ್‌ವೇದ ಸಾಹಿತ್ಯವನ್ನು ಅಧ್ಯಯನ ಮಾಡಿ ಗೋಕರ್ಣ ಮಠದ ಶ್ರೀ ಇಂದಿರಾಕಾಂತ ಶ್ರೀಗಳವರಲ್ಲಿ ಶ್ರೀಮನ್ನ್ಯಾಯ ಸುಧಾ ಗ್ರಂಥವನ್ನು ಸಂಪೂರ್ಣವಾಗಿ ಓದಿ ಮಂಗಳ ಮಾಡಿದರು.

ಇವರು ಅನೇಕ ದೇಶಗಳಲ್ಲಿ ಸಂಚಾರ ಮಾಡಿ ಭಾಗವತ ಭಾರತ ರಾಮಾಯಣ ಗ್ರಂಥಗಳನ್ನು ಅನೇಕ ಕಡೆ ಪಾಠ-ಪ್ರವಚನ ಮಾಡಿದರು. ಇವರ ಗೀತಾ ಪ್ರವಚನವನ್ನು ಕೇಳಿ ಸಂತುಷ್ಟರಾದ ಶ್ರೀ ಲೋಕಮಾನ್ಯ ಟಿಳಕರು ಇವರನ್ನು ತಮ್ಮ ಮನೆಗೆ ಕರೆಸಿಕೊಂಡು ಸನ್ಮಾನಿಸಿದರು. ಮಿರಜ ಸಂಸ್ಕೃತ ವಿದ್ಯಾಪೀಠದಲ್ಲಿ ಇವರನ್ನು ಸತ್ಕರಿಸಲಾಯಿತು. ದಕ್ಷಿಣ ಕನ್ನಡದ ಮಂಗಳೂರಿನ ಶ್ರೀ ವೆಂಕಟರಮಣ ದೇವಸ್ಥಾನದಲ್ಲಿ ಇವರ ಮಹಾಭಾರತ ಪ್ರವಚನವು ನಡೆದು ಕೊನೆಗೆ ಮಂಗಳೂರಿನ ನಾಗರಿಕರೆಲ್ಲರ ಪರವಾಗಿ ಇವರಿಗೆ ಮಾನಪತ್ರವನ್ನು ಕೊಡಲಾಯಿತು.

ಇವರ ಜೀವನದ ಮುಖ್ಯವಾದ ಘಟನೆಯೆಂದರೆ— ಶ್ರೀ ಕಾಶೀ ಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಿಗೆ ಶ್ರೀಮನ್ನ್ಯಾಯ ಸುಧಾ ಪಾಠ ಹೇಳಿ ಮಂಗಳ ಮಾಡಿದರು. ಬಂಟವಾಳದ ಕಾಶೀ ಮಠದಲ್ಲಿ ನಡೆದ ಸುಧಾ ಮಂಗಳ ಮಹೋತ್ಸವದಲ್ಲಿ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ಮಾಧವ ಭಟ್ಟರಿಗೆ ಬಹಳವಾಗಿ ಸನ್ಮಾನವನ್ನು ಮಾಡಿದರು.

### ೩೯೫ ಪದ್ಮನಾಭಾಚಾರ್ಯ ಬೆಳಗುಂದಿ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿದರು. ವೇದಾಂತ ಶಾಸ್ತ್ರದಲ್ಲಿ ಒಳ್ಳೆ ಪಂಡಿತರಾಗಿದ್ದರು.

### ೩೯೬ ಕೊಪ್ಪಳ ಹನುಮಂತಾಚಾರ್ಯ ಅಗ್ನಿಹೋತ್ರಿ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ಶಾಸ್ತ್ರವನ್ನು ಓದಿದರು. ವೇದಾಂತವನ್ನು ಅಧ್ಯಯನ ಮಾಡಿದರು. ಶ್ರೀಮನ್ ನ್ಯಾಯ ಸುಧಾ ಗ್ರಂಥವನ್ನು ಟೀಕೆ ಟಿಪ್ಪಣಿ ಸಹಿತ ಮಯೋದ್ಗತವನ್ನಾಗಿ ಮಾಡಿದ್ದರು. ದ್ವೈತ ವೇದಾಂತದಲ್ಲಿ ಅಪ್ರತಿಮ ಪಂಡಿತರು.

### ೩೯೭ ಕೊಪ್ಪಳ ಶ್ರೀನಿವಾಸಾಚಾರ್ಯ ಅಗ್ನಿಹೋತ್ರಿ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು. ವೇದಾಂತದಲ್ಲಿ ಒಳ್ಳೇ ವ್ಯುತ್ಪನ್ನರು.

## ೩೯೮ ಗಂಗೂರ ವೆಂಕೋಬಾಚಾರ್ಯ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಕಲಿತು ಪಂಡಿತರಾಗಿದ್ದರು. ಅನೇಕ ಜನ ಶಿಷ್ಯರನ್ನು ಮನೆಯಲ್ಲಿ ಇಟ್ಟುಕೊಂಡು ಪಾಠ ಹೇಳುತ್ತಿದ್ದರು. ದ್ವೈತ ವೇದಾಂತದಲ್ಲಿ ಸಂದೇಹಾನಾಸ್ಕಂದಿತವಾದ ದಿವ್ಯ ಜ್ಞಾನವು ಶಾಸ್ತ್ರಾಧ್ಯಯನದಿಂದ ಆಚಾರ್ಯರ ಮಿದುಳಿನಲ್ಲಿ ಅರಳಿ ಸರ್ವತ್ರ ಸೌರಭದಿಂದ ಘಮಘಮಿಸುತ್ತಿತ್ತು.

## ೩೯೯ ನಾರಾಯಣಾಚಾರ್ಯ ಪಂಢರಪುರ

ನ್ಯಾಯ ವೇದಾಂತದಲ್ಲಿ ಪಂಡಿತರು. ರಾಯಚೂರಲ್ಲಿ ಪಾಠ ಶಾಲೆ ಇಟ್ಟು ಅನೇಕ ಜನ ವಿದ್ಯಾರ್ಥಿಗಳಿಗೆ ಅನ್ನ ದಾನ ಜ್ಞಾನ ದಾನ ಮಾಡಿದರು.

## ೪೦೦ ಕೊಳ್ಳಿ ಕೃಷ್ಣಾಚಾರ್ಯ (ರಾಯಚೂರ)

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ರಾಯಚೂರಲ್ಲಿ ಪಾಠಶಾಲೆ ಇಟ್ಟಿದ್ದರು. ಅನೇಕ ಜನ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು.

## ೪೦೧ ಸರಪಳಿ ಕೃಷ್ಣಾಚಾರ್ಯ (ಬಳ್ಳಾರಿ)

ವೇದಾಂತದಲ್ಲಿ ಘನ ಪಂಡಿತರು. ಅನೇಕ ಜನ ಲೌಕಿಕರಿಗೂ, ವೈದಿಕರಿಗೂ ಪಾಠ ಹೇಳಿ ಪ್ರವಚನಾಚಾರ್ಯರು ಎನಿಸಿದರು. ಮಧ್ವ ಸಿದ್ಧಾಂತವನ್ನು ಪ್ರಚುರ ಪಡಿಸಿದರು. ಶ್ರೀ ಗುಂಡೂದಾಸ ಮೊದಲಾದವರು ಅವರಲ್ಲಿ ಓದಿ ಪಾಠ ಪಟುಗಳಾದರು.

## ೪೦೨ ರಾಮಾಚಾರ್ಯ ಕೊಳ್ಳಿ

ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ, ಶ್ರೀ ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿಯೂ ಶಾಸ್ತ್ರಾಧ್ಯಯನ ಮಾಡಿದರು. ಇವರು ಪ್ರತಿವರ್ಷವೂ ಒಂದು ಪಂಡಿತ ಸಭೆಯನ್ನು ಮಾಡಿ ದೇಶದ ಎಲ್ಲ ಕಡೆಯಿಂದ ಅನೇಕ ಪಂಡಿತರನ್ನೂ, ವಿದ್ಯಾರ್ಥಿಗಳನ್ನೂ ಕರೆಸಿ ಪರೀಕ್ಷಾ, ವಾಕ್ಯಾರ್ಥ ಉಪನ್ಯಾಸಗಳನ್ನು ಮಾಡಿಸಿ, ಸಂಭಾವನೆಗಳನ್ನು ಕೊಟ್ಟು ಕಳಿಸುತ್ತಿದ್ದರು.

## ೪೦೩ ಶ್ರೀರಂಗ ಕೃಷ್ಣಾಚಾರ್ಯ ವಟ್ಟಂಗಾರ

ಇವರು ನ್ಯಾಯ ಶಾಸ್ತ್ರದಲ್ಲಿ ನಿಪುಣಮತಿಗಳಾಗಿದ್ದರು. ಕುಂಭಕೋಣ ಮತ್ತು ಶ್ರೀರಂಗಕ್ಷೇತ್ರಗಳಲ್ಲಿ ಇದ್ದು ಅನೇಕರಿಗೆ ನ್ಯಾಯ ಪಾಠ ಹೇಳಿದರು.

## ೪೦೩ ವಾಸುದೇವಾಚಾರ್ಯ ಕರ್ಹಾಡಕರ

ಸಾತಾರಾ ಜಿಲ್ಹೆಯ ಕರಹಾಡದಲ್ಲಿ ವಾಸುದೇವಾಚಾರ್ಯರು ವೇದದಲ್ಲಿಯೂ ವೇದಾಂತದಲ್ಲಿಯೂ ಪಾರಂಗತರಾಗಿದ್ದರು. ಇವರ ವೇದ–ಶಾಸ್ತ್ರ ಪಾಂಡಿತ್ಯಕ್ಕೆ ಮೆಚ್ಚಿ ಪುಣೆಯ ಪೇಶ್ವೇ ಶ್ರೀಮಂತರು ಅವರನ್ನು ತಮ್ಮಲ್ಲಿ ಒಯ್ದು ಇಟ್ಟುಕೊಂಡಿದ್ದರು.

## ೪೦೫ ನಾರಾಯಣಾಚಾರ್ಯ ಕರ್ಹಾಡ

ಇವರು ವೇದಾಂತದಲ್ಲಿ ಪರಿಣತರಾಗಿದ್ದರು. ಬಹಳ ಸುಂದರವಾಗಿ ಪುರಾಣವನ್ನು ಹೇಳುತ್ತಿದ್ದರು. ಇವರ ಪುರಾಣ ಪ್ರವಚನದ ಮೋಹಿನೀ ಸರಣಿಗೆ ಮುಗ್ಧನಾದ ಕೊನೆಯ ಪೇಶ್ವೇ ಬಾಜೀರಾಯನು ಇವರನ್ನು ತನ್ನ ಜೊತೆಗೆ ಕರೆದುಕೊಂಡು ಹೋಗಿ ಬ್ರಹ್ಮಾವರ್ತದಲ್ಲಿ ಇಟ್ಟುಕೊಂಡಿದ್ದನು. ಇವರು ಅಲ್ಲಿಯೇ ಕಾಲವಾದರು.

## ೪೦೬ ಗೋಪಾಲಾಚಾರ್ಯ ಕರ್ಹಾಡಕರ

ನಾರಾಯಣಾಚಾರ್ಯರ ಮಕ್ಕಳಾದ ಗೋಪಾಲಾಚಾರ್ಯರು ತಮ್ಮ ಅಜ್ಜ ವಾಸುದೇವಾಚಾರ್ಯರಲ್ಲಿ ಸಾಹಿತ್ಯ ವ್ಯಾಕರಣಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಅನಂತರ ಇವರು ಕಾಶಿಗೆ ಹೋಗಿ ಗೋವಿಂದಾಚಾರ್ಯ ಅಷ್ಟಪುತ್ರೆ, ಚಿಂತಾಮಣಿ ಶಾಸ್ತ್ರಿ ಬುವಾ ಮುಂತಾದ ಘನ ಪಂಡಿತರಲ್ಲಿ ಮಹಾ ಭಾಷ್ಯಾಂತ ವ್ಯಾಕರಣವನ್ನು ಅಧ್ಯಯನ ಮಾಡಿ ಕಾಶಿಯಲ್ಲಿಯೇ ತಮ್ಮ ಕೀರ್ತಿಯ ಕಳಸವನ್ನು ಎತ್ತಿದರು.

ಮರಳಿ ಪುಣೆಗೆ ಬಂದ ಬಳಿಕ ವಿಶ್ರಾಮಬಾಗ ಪಾಠಶಾಲೆಯಲ್ಲಿ ಪ್ರಧಾನಾಧ್ಯಾಪಕರಾದರು. ಅದೇ ಕಾಲದಲ್ಲಿ ತಮ್ಮ ಅಜ್ಜ ವಾಸುದೇವಾಚಾರ್ಯರಲ್ಲಿ ಅಲಂಕಾರ ಶಾಸ್ತ್ರ, ಧರ್ಮ ಶಾಸ್ತ್ರಗಳನ್ನು ಚನ್ನಾಗಿ ಅಧ್ಯಯನ ಮಾಡಿದರು. ವ್ಯಾಕರಣ, ಮೀಮಾಂಸಾ, ಧರ್ಮ ಶಾಸ್ತ್ರ, ಅಲಂಕಾರಶಾಸ್ತ್ರ ಈ ನಾಲ್ಕು ಶಾಸ್ತ್ರಗಳು ಗೋಪಾಲಾಚಾರ್ಯರಿಗೆ ಕರತಲಾಮಲಕವಾದವು.

೧೮೭೬ ನೇ ಇಸ್ವಿಯಲ್ಲಿ ರಾಮಾನುಜ ಮಠದ ಪರಕಾಲ ಸ್ವಾಮಿಗಳು ಪುಣೆಗೆ ಬಂದಾಗ್ಗೆ ಗೋಪಾಲಾಚಾರ್ಯರ ಅದ್ಭುತ ಪಾಂಡಿತ್ಯವನ್ನು ಕಂಡು ಕೌತುಕಗೊಂಡು ಇವರಿಗೆ ಶಾಲು ಜೋಡಿ ಮರ್ಯಾದೆಯನ್ನು ಮಾಡಿದರು.

ಗ್ವಾಲ್ಹೇರ ಸಂಸ್ಥಾನಿಕರ ಅಪೇಕ್ಷೆಯಂತೆ ಅಲ್ಲಿಗೆ ಬಂದು ರಾಜಕುಟುಂಬದವರನ್ನೂ ಅಲ್ಲಿಯ ಆಸ್ಥಾನ ವಿದ್ವಾಂಸರನ್ನು ತಮ್ಮ ವಾಕ್ಯಾರ್ಥ ಕೌಶಲ್ಯದಿಂದ ಚಕಿತ ಮುದಿತಗೊಳಿಸಿದರು. ಗ್ವಾಲ್ಹೇರದಲ್ಲಿ ಇವರು ಇದ್ದಾಗ ಸಗೋತ್ರ ವಿವಾಹದ

ಚರ್ಚೆ ನಡೆದು ಶ್ರೀ ಪಂಡಿತರ ಸಭೆಯಲ್ಲಿ ಸಗೋತ್ರ ವಿವಾಹವು ಶಾಸ್ತ್ರನಿಷಿದ್ಧ ವಾಗಿದೆ ಎಂದು ಆಚಾರ್ಯರು ಸಿದ್ಧಮಾಡಿ ತೋರಿಸಿದರು. ಮುಂದೆ ಸಿಂಧೆ ಸರ ಕಾರದ ಪ್ರತಿನಿಧಿಗಳಾಗಿ ಪುಣೆಯಲ್ಲಿ ನಡೆದ ವಿಧವಾ ಪುನರ್ವಿವಾಹ ಚರ್ಚೆಯ ಮಹಾ ಸಭೆಗೆ ಸರಪಂಚರಾಗಿ ಅದು ಶಾಸ್ತ್ರ ವಿರುದ್ಧ ಎಂದು ನಿರ್ಣಯಿಸಿದರು. ಇವರ ಪಾಂಡಿತ್ಯಕ್ಕೆ ಮೆಚ್ಚಿ ಇಂಗ್ಲಂಡದ ವಿಕ್ಟೋರಿಯಾ ಮಹಾರಾಣಿಯು ಇವರಿಗೆ "ಮಹಾಮಹೋಪಾಧ್ಯಾಯ'' ಪದವಿಯನ್ನು ಕೊಟ್ಟಳು.

ಇವರು— ೧) ಶೇಖರ ಭೂಷಣ
೨) ಭಾಗವತ ಭೂಷಣ
೩) ವಿಠ್ಠಲ ಭೂಷಣ
೪) ವೆಂಕಟೇಶ ಸಹಸ್ರನಾಮ ಭೂಷಣ

ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಆಚಾರ್ಯರಲ್ಲಿ ಓದಿದ ಪಂಡಿತೋತ್ತಮ ಶಿಷ್ಯರಲ್ಲಿ ಭಿಕ್ಕಾಚಾರ್ಯ ಐನಾಪುರ, ವೆಂಕಟರಮಣಾಚಾರ್ಯ ಶಿರಹಟ್ಟಿ, ಭಾಲಚಂದ್ರ ಶಾಸ್ತ್ರಿ ಗೋಳವಲಕರ, ಪುರುಷೋತ್ತಮ ಶಾಸ್ತ್ರಿ ಸಾಠೆ, ವಾಮನಾಚಾರ್ಯ ಕ್ಷೀರಸಾಗರ, ದತ್ತಾತ್ರಯ ಶಾಸ್ತ್ರಿ ನಿಗೂಡಕರ ಮುಂತಾದವರು ಪ್ರಮುಖರಾಗಿದ್ದಾರೆ.

### ೪೦೭ ಗುರುರಾವ ದಾತಾರ ವಕೀಲ, ಬಿಜಾಪುರ

ಇವರು ವಿಜಾಪುರದಲ್ಲಿ ವಕೀಲರಾಗಿದ್ದು, ಮಾಧ್ವ ವೇದಾಂತವನ್ನು ಶ್ರವಣ ಮಾಡಿದ್ದರು. ಇವರು ಒಳ್ಳೆ ಕವಿಗಳು ಆಗಿದ್ದು, ಸಂಸ್ಕೃತದಲ್ಲಿ ಅನೇಕ ಕಾವ್ಯಗಳನ್ನು ಬರೆದಿದ್ದಾರೆ.

ಇವರ ಕಾವ್ಯ ಕೌಶಲ್ಯಕ್ಕೆ ನಿದರ್ಶನವಾಗಿ ಶಾರದಾ ಸ್ತವನ ರೂಪವಾದ ಈ ಪದ್ಯವನ್ನು ಕೇಳಿರಿ—

ಅಯೇ ವಾಚಾಂ ದೇವಿ ಪ್ರಣತಜನಕಲ್ಪದ್ರುಮಲತೆ।
ಜಗತ್ಪ್ರಾಣ ತ್ರಾಣ ಪ್ರವಣ ಹೃದಯೆ ಬೋಧನಪರೆ॥
ತ್ವಮೇತಾ ಗೋವಿಂದಾತ್ಮಜನಿಗದಿತಾಃ ಸ್ತೋತ್ರ ನಿಚಿತಾಃ।
ಪ್ರಸನ್ನೇ ಭಕ್ತಾನಾಂ ಭಗವತಿ ಸಮಾಕರ್ಣಯ ಗಿರಃ॥

ಇವರ ಮಕ್ಕಳಾದ ಕಾಂತರಾವ ದಾತಾರವರು ಮುಂಬೈ ಹಾಯಕೋರ್ಟ ಜಜ್ಜರಾಗಿ ಈಗ ನಿವೃತ್ತರಾಗಿ ಮುಂಬೈಯಲ್ಲಿದ್ದಾರೆ.

## ೪೦೮ ಮಠದ ಕೃಷ್ಣಾಚಾರ್ಯ ವಿಜಾಪುರ

ಬೆಳ್ಳುಬ್ಬಿ ಅಣ್ಣಯ್ಯಾಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿ ಮಠಾಧಿಕಾರಿಗಳಾಗಿದ್ದರು.

## ೪೦೯ ಶ್ಯಾಮರಾವ ದಾತಾರ

ಇವರು ಬಾಗಲಕೋಟೆಯ ಸುಪ್ರಸಿದ್ಧ ವಕೀಲರು. ಸಂಸ್ಕೃತದಲ್ಲಿ ಒಳ್ಳೆ ವ್ಯುತ್ಪನ್ನರಾಗಿ ಮಧ್ವಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಭಾಗವತದಲ್ಲಿ ಇವರಿಗೆ ಬಹಳ ಕ್ಲಪ್ತಿ ಇತ್ತು. ಇವರು ಮಹಾಸಾತ್ವಿಕರೂ, ಸದಾಚಾರಿಗಳೂ ಆಗಿದ್ದರು.

## ೪೧೦ ಹನುಮಂತರಾವ ಛಬ್ಬಿ

ಇವರು ಬಾಗಲಕೋಟೆಯ ಪ್ರಸಿದ್ಧ ಛಬ್ಬಿ ಮನೆತನಕ್ಕೆ ಸೇರಿದವರು. ಶ್ರೇಷ್ಠ ವಕೀಲರಾಗಿದ್ದರು. ಸರ್ವಜ್ಞ ಶಾಸ್ತ್ರವನ್ನು ಚನ್ನಾಗಿ ಅಭ್ಯಾಸ ಮಾಡಿದ್ದರು ಭಾಗವತಕ್ಕೆ ಕನ್ನಡದಲ್ಲಿ ಯಾವತ್ತೂ ಟೀಕೆ–ಟಿಪ್ಪಣಿಗಳೊಂದಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ.

## ೪೧೧ ಅಶ್ವತ್ಥಾಚಾರ್ಯ ಕಟ್ಟಿ

ಹುನಗುಂದದ ಆಚಾರ್ಯರಲ್ಲಿ ಓದಿದ ಈ ಆಚಾರ್ಯರು ಒಳ್ಳೆ ವ್ಯುತ್ಪನ್ನ ಪುರಾಣಿಕರಾಗಿದ್ದರು. ವೇದಾಂತದಲ್ಲಿಯೂ ಗತಿಯಿದ್ದಿತು. ಇವರು ಅನೇಕ ಟೀಕೆ–ಟಿಪ್ಪಣಿ ವಿಷಯೋಪಬೃಂಹಿತವಾಗಿ ಸರಸವಾಗಿ ಪುರಾಣ ಹೇಳುತ್ತಿದ್ದರು. ಶ್ರೀ ಸುಶೀಲೇಂದ್ರತೀರ್ಥರ ಕಾಲದಲ್ಲಿ ರಾಯರ ಮಠದಲ್ಲಿ ಇವರಿಗೆ ಗೌರವವಿದ್ದಿತು.

## ೪೧೨ ಪ್ರಲ್ಹಾದಾಚಾರ್ಯ ಕಟ್ಟಿ

ಹುನಗುಂದದಲ್ಲಿ ಇವರು ಭಾಗವತ, ಭಾರತಾದಿ ಪುರಾಣಗಳನ್ನು ಹೇಳುತ್ತಿದ್ದರು.

## ೪೧೩ ಕೌಜಲಗಿ ಕೃಷ್ಣಾಚಾರ್ಯ

ಇವರು ವ್ಯಾಕರಣದಲ್ಲಿ ಪಂಡಿತರು. ವೇದಾಂತದಲ್ಲಿ ಗತಿ ಇದ್ದಿತು.

## ೪೧೪ ವೆಂಕಟರಮಣಾಚಾರ್ಯ ಬೆಳಗಾವಿ

ಇವರು ವ್ಯಾಕರಣ ವೇದಾಂತದಲ್ಲಿ ವಿದ್ವಾಂಸರು.

## ೪೧೫ ಅಣ್ಣಾಸಾಹೇಬ ಪರಮಾನಟ್ಟಿ ( ಗಲಗಲಿ )

ಇವರು ಮಹಾ ನೈಯ್ಯಾಯಿಕರು. ಕ್ರೋಡ ಪತ್ರ ಪದ್ಧತಿಯ ವಾಕ್ಯಾರ್ಥದಲ್ಲಿ ಇವರು ಬಹಳ ಗಟ್ಟಿಗರಾಗಿದ್ದರು.

## ೪೧೬ ಕಾಂತಾಚಾರ್ಯರು ಕೊಲ್ಹಾಪುರ

ಕೊಲ್ಹಾಪುರದ ಪಂಡಿತರಾವ ಮನೆತನಕ್ಕೆ ಸೇರಿದ ಕಾಂತಾಚಾರ್ಯರು ವ್ಯಾಕರಣದಲ್ಲಿ ವಿದ್ವಾಂಸರಾಗಿದ್ದರು.

## ೪೧೭ ರಾಯಚೂರ ದ್ವೈಪಾಯನ ಭೀಮಾಚಾರ್ಯರು ಅಗರಖೇಡ

ನವ್ಯ ನ್ಯಾಯದಲ್ಲಿ ಇವರಿಗೆ ಪೂರ್ಣ ಪ್ರಭುತ್ವವಿದ್ದಿತು. ಪ್ರಾಚೀನ ನ್ಯಾಯದಲ್ಲಿ ಇವರಿಗೆ ಗುರುತರ ಪಾಂಡಿತ್ಯವಿದ್ದಿತು. ಈ ರಾಯಚೂರ ಆಚಾರ್ಯರ ಹೆಸರನ್ನು ಕೇಳಿದರೇ ಪಂಡಿತವೇತಂಡಗಳೆಲ್ಲ ಗಾಳಿ ಗರವಾಗಿ " ದಿಗಂತೇ ಶ್ರೂಯಂತೆ " ಆಗುತ್ತಿದ್ದರು. ಆಂಧ್ರ ಮಹಾರಾಷ್ಟ್ರ ದೇಶಗಳಲ್ಲಿ ಸಂಚರಿಸಿ ಇವರು ವಾದ ವಿಜಯವನ್ನು ಮಾಡಿಕೊಂಡು ಬರುತ್ತಿದ್ದರು. ಅದ್ವೈತ ಮತದ ಸಂಗಮೇಶ್ವರ ಶಾಸ್ತ್ರಿಗಳು ಇವರಲ್ಲಿ ಓದಿ ಘನ ಪಂಡಿತರಾದರು.

## ೪೧೮ ನರಸಿಂಹಾಚಾರ್ಯರು ಯಜುರ್ವೇದಿ ಅಗರಖೇಡ

ಕ್ರೋಡಪತ್ರ ಪದ್ಧತಿಯ ನ್ಯಾಯ ಶಾಸ್ತ್ರ ಪಾಂಡಿತ್ಯದಲ್ಲಿ ನರಸಿಂಹಾಚಾರ್ಯರು ಉದ್ದಂಡರೂ ಪ್ರಚಂಡರೂ ಆಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರು ಗದುಗಿನಲ್ಲಿ ಮೊದಲನೇ ಮಹಾ ಸಮಾರಾಧನೆ ಮಾಡಿದಾಗ ನರಸಿಂಹಾಚಾರ್ಯರು ಅವಚ್ಛೇದಕತಾನಿರುಕ್ತಿ ಗ್ರಂಥದಲ್ಲಿ ಅಪೂರ್ವವಾದ ಪೂರ್ವ ಪಕ್ಷಗಳನ್ನು ಮಾಡಿ ಶ್ರೀ ಯಲತ್ತೂರ ಕೃಷ್ಣಾಚಾರ್ಯ, ದೇಶಿಕಾಚಾರ್ಯ ಮುಂತಾದ ವಿದ್ವದ್ವ್ಯಾಘ್ರಭಟರನ್ನೆಲ್ಲ ತಮ್ಮ ಕೋಟಿ ಕ್ರಮಗಳ ಜಡೆ ಮಳೆಯಿಂದ ಬಾಯಿ ಕಟ್ಟಿ ಕೂಡಿಸಿದರು.

## ೪೧೯ ಚಕ್ರಪಾಣಿ ಆಚಾರ್ಯರು ಅಗರಖೇಡ

ಪ್ರಚಂಡ ನೈಯ್ಯಾಯಿಕರು. ವಾಕ್ಯಾರ್ಥ ಶಾಸ್ತ್ರಾರ್ಥ ಎಂದರೆ ಈ ಖೇಡದ ನೈಯ್ಯಾಯಿಕರಿಗೆ ದೊಡ್ಡ ಹಬ್ಬ. ಭಾರೀ ಉಬ್ಬು. ಪ್ರತಿವಾದಿ ಪಂಡಿತರ ಕೊಬ್ಬನ್ನೆಲ್ಲ ಕರಗಿಸಿ ಕಳುಹಿಸುತ್ತಿದ್ದರು.

## ೪೨೦ ನಾಗರಹಳ್ಳಿ ಭೀಮಾಚಾರ್ಯರು

ಅಗರಖೇಡದ ನ್ಯಾಯಪಂಚಾನನರಾದ ಆದ್ಯ ಸೀತಾರಾಮಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿ ಪಂಡಿತರಾಗಿದ್ದರು.

## ೪೨೧ ರಾಯಚೂರ ಅಣ್ಣಯ್ಯಾಚಾರ್ಯ ಅಗರಖೇಡ

ನ್ಯಾಯ ಶಾಸ್ತ್ರದಲ್ಲಿ ಮಹಾ ಪಂಡಿತರು. ವಾಕ್ಯಾರ್ಥದಲ್ಲಿ ಮಹಾ ವಿದ್ವಾಂಸರು. ಶಾಸ್ತ್ರಾರ್ಥದಲ್ಲಿ ಅಪ್ರತಿಮಲ್ಲರು. ಅವರಲ್ಲಿ ಲಕ್ಷ್ಮೀ-ಸರಸ್ವತಿಯರ ಸಂಗಮವು ಹೃದಯಂಗಮವಾಗಿದ್ದಿತು. ಅವರು ಧೀಮಂತರಿದ್ದಷ್ಟೇ ಶ್ರೀಮಂತರಾಗಿದ್ದರು. ಹಣವಂತರಿದ್ದಷ್ಟೇ ಗುಣವಂತರಾಗಿದ್ದರು. ಅಂತೆಯೇ ಸರ್ವಮಾನ್ಯರಾಗಿದ್ದರು.

## ೪೨೨ ವೆಂಕಟರಮಣಾಚಾರ್ಯ ಶಿರಹಟ್ಟಿ

ಕಪ್ರಾಡ ಗೋಪಾಳಾಚಾರ್ಯರಲ್ಲಿ ಭಾಷ್ಯ ಶೇಖರ ಗ್ರಂಥಗಳನ್ನು ಓದಿ ಇವರು ಮಹಾ ಪಂಡಿತರಾಗಿದ್ದರು. ''ಶಬ್ದಾಬ್ದಿ ಲಬ್ಧ ವೈದಗ್ಧ್ಯೋ ವೆಂಕಟಃ ಪಾಣಿನಿಃ ಪರಃ'' ''ಪಾಣಿನಿಯ ಅಪರಾವತಾರ'' ಎಂದು ಮುಂತಾಗಿ ಜನರು ಇವರನ್ನು ಹೊಗಳುತ್ತಿದ್ದರು. ಪಂಡಿತರು ವಾದ ವಾಕ್ಯಾರ್ಥಗಳಲ್ಲಿ ಸಂಕಟ ಬಂದಾಗ "ವೆಂಕಟ ರಮಣ ನೀನೆ ಶರಣ" ಎಂದು ಇವರ ಬಳಿಗೆ ಬರುತ್ತಿದ್ದರು.

ಇವರು ವ್ಯಾಕರಣ ಶಾಸ್ತ್ರದಲ್ಲಿ ಅದ್ವಿತೀಯ ಪಂಡಿತರಾಗಿದ್ದರು.

ಸಾಂಗಲಿಯ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ ಅನೇಕ ಜನರಿಗೆ ಪಾಠಹೇಳಿದರು. ಶೇಖರಾಂತ ವ್ಯಾಕರಣವನ್ನು ನಿರರ್ಗಳವಾಗಿ ಪಾಠ–ಪ್ರವಚನ ಮಾಡಬಲ್ಲ ಮಹಾ ವಿದ್ವಾಂಸರಲ್ಲಿ ಇವರು ಅಗ್ರಗಣ್ಯರಾಗಿದ್ದರು.

ರಾಮದುರ್ಗದ ಶ್ರೀನಿವಾಸಾಚಾರ್ಯರು ಇವರಲ್ಲಿ ಅಧ್ಯಯನ ಮಾಡಿದ್ದರು. ಇವರಲ್ಲಿ ಓದಿದ ಅನೇಕಾನೇಕ ಶಿಷ್ಯರು ವ್ಯಾಕರಣಾಚಾರ್ಯರಾಗಿ ಮೆರೆದಿದ್ದಾರೆ.

ಇವರು ವಾದದಲ್ಲಿ ಪಳಗಿದವರು. ಬೋಧದಲ್ಲಿ ನುರಿತವರು. ರಹಸ್ಯಾರ್ಥಗಳ ನ್ನೆಲ್ಲ ಅರಿತವರು. ಭಾಷ್ಯ ವಾರ್ತಿಕ ಫಕ್ಕಿಕಾದಿ ವಿಷಯಗಳನ್ನೆಲ್ಲ ಆಲೋಚನ ಗೈದು ನಿರ್ಗಳಿತಾರ್ಥವನ್ನೂ ನಿರರ್ಗಳವಾಗಿ ಹೇಳುವ ಪಾಂಡಿತ್ಯ ಪ್ರಭುತ್ವವುಳ್ಳವರು.

## ೪೨೩ ರಾಮಾಚಾರ್ಯ ಬೀಡ

ಇವರು ಮಂಗಸೂಳಿ ವೆಂಕಟರಮಣಾಚಾರ್ಯರಲ್ಲಿ ವ್ಯಾಕರಣ ಮತ್ತು ವೇದಾಂತವನ್ನು ಓದಿ ಸಂಪ್ರತಿಪನ್ನ ಪಂಡಿತರೆನಿಸಿದ್ದರು. ಇವರು ಅಥಣಿಯಲ್ಲಿದ್ದು ಪುರಾಣವನ್ನು ಹೇಳಿ ಜನರಲ್ಲಿ ಧರ್ಮ ಜಾಗ್ರತಿಯನ್ನು ಉಂಟು ಮಾಡಿದರು. ಶ್ರೀ ಬೀಳೂರ ಗೋಪಾಲಾಚಾರ್ಯ ಮೊದಲಾದವರು ಅವರಲ್ಲಿ ಅಧ್ಯಯನ ಮಾಡಿದ್ದಾರೆ.

## ೪೨೪ ಭೀಮಾಚಾರ್ಯ ಮಾಹುಲಿ ವಿಜಾಪುರ

ಇವರು ವೇದ ಕೋವಿದರು. ಋಗ್ಯಜುಸ್ಸಂಹಿತೆಗಳನ್ನು ಮುಖೋದ್ಗತ ವಾಗಿ ಹೇಳುತ್ತಿದ್ದರು. ವೈಷ್ಣವರಲ್ಲಿ ಇಂಥ ವೇದ ಘನ ಪಂಡಿತರು ಬಹಳ ಅಪ ರೂಪ. ವ್ಯಾಕರಣದಲ್ಲಿಯೂ ಭೀಮಾಚಾರ್ಯರಿಗೆ ಪರಿಶ್ರಮವಿದ್ದಿತು.

### ೪೨೫ ಹುನಗುಂದ ನರಸಿಂಹಾರ್ಯ

ವಾಯಿ ಮನೆತನದ ಜ್ಞಾನಸಿಂಧು ಎನಿಸಿದ ಬಾಳಾಚಾರ್ಯರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿದ ನರಸಿಂಹಾಚಾರ್ಯರು ಮಹಾ ಪಂಡಿತರಾಗಿದ್ದರು. ಹುನಗುಂದದಲ್ಲಿದ್ದು ಪ್ರತಿಮಾರ್ಚನ ಪಾಠ ಪ್ರವಚನ ಮಾಡುತ್ತ ಪ್ರಭಾವಶಾಲಿ ಯಾದ ಪೂಜ್ಯ ಪಂಡಿತರೆಂದು ಗೌರವಿತರಾಗಿದ್ದರು.

### ೪೨೬ ಹುನಗುಂದ ರಾಘವೇಂದ್ರಾಚಾರ್ಯ

ಇವರು ತಮ್ಮ ತಂದೆಯಲ್ಲಿಯೂ ವಾಯಿ ಆಚಾರ್ಯರಲ್ಲಿಯೂ ಶಾಸ್ತ್ರಾಧ್ಯಯನ ಮಾಡಿ ಮಹಾ ಪಂಡಿತರಾಗಿದ್ದರು.

### ೪೨೭ ಶ್ರೀನಿವಾಸಾಚಾರ್ಯ ಹುನಗುಂದ

ವಾಯಿ ಆಚಾರ್ಯರಲ್ಲಿ ನ್ಯಾಯ ವೇದಾಂತ ಓದಿ ಸಂಪ್ರತಿಪನ್ನ ಪಂಡಿತರೆಂದು ಪ್ರಖ್ಯಾತರಾಗಿದ್ದರು.

### ೪೨೮ ಕಂಚೀ ಕೃಷ್ಣಾಚಾರ್ಯ

ಶ್ರೀ ಸತ್ಯಬೋಧ ಶ್ರೀಪಾದಂಗಳವರಲ್ಲಿ ನ್ಯಾಯ ವೇದಾಂತ ಓದಿದ ಕೃಷ್ಣಾಚಾರ್ಯರು ಮಹಾ ಪಂಡಿತರಾಗಿದ್ದರು. ಅವರು ಸತ್ಯಬೋಧ ಶ್ರೀಪಾದಂಗಳವರ ಮೇಲೆ ಒಂದು ಮಹಾಕಾವ್ಯವನ್ನು ಬರೆದಿದ್ದಾರೆ. ಇವರು ವ್ಯಾಕರಣದಲ್ಲಿಯೂ ಅಪ್ರತಿಮ ಪಂಡಿತರಾಗಿದ್ದರು. ಗುರು ಭಕ್ತರೂ ಭಗವನ್ನಿಷ್ಠರೂ ಆದ ಕೃಷ್ಣಾಚಾರ್ಯರು ತಪೋಧನ ಪ್ರೇಕ್ಷಾವಂತರೆಂದು ಲೋಕಪೂಜ್ಯರಾಗಿದ್ದರು.

### ೪೨೯ ಕಟ್ಟಿ ಹಣಮಂತಾಚಾರ್ಯ ಬಾಗಲಕೋಟ

ವ್ಯಾಕರಣ ವೇದಾಂತ ಪಂಡಿತರಾದ ಇವರು ಆನುವಂಶಿಕವಾಗಿ ಯಲಗುರ್ದ ಪ್ರಾಣದೇವರ ಅಚ್ಛಿನ್ನಭಕ್ತರಾಗಿದ್ದರು. ವೈದ್ಯಕೀಯ ವೃತ್ತಿಯಿಂದಲೂ ಇವರು ಜನ ಸೇವೆ ಮಾಡಿದರು.

### ೪೩೦ ಮನಗೂಳಿ ರಾಘವೇಂದ್ರಾಚಾರ್ಯ ಬಾಗಲಕೋಟ

ಇವರು ವೇದ ವಿದ್ವಾಂಸರಾಗಿದ್ದರು. ಇವರಿಗೆ ಘನಾಂತ ಋಗ್ವೇದ ಸಂಹಿತೆಯ ಸ್ಫೂರ್ತಿ ಸ್ಫೂರ್ತಿ ಪಾಠವಿದ್ದಿತು. ಅನೇಕರಿಗೆ ಪಾಠ ಹೇಳಿದರು.

### ೪೩೧ ಗದ್ದನಕೇರಿ ರಾಮಚಂದ್ರಾಚಾರ್ಯ ಯಲಗೂರ

ವೇದ ಸಂಹಿತಾ ಅಧ್ಯಯನ ಮಾಡಿ, ಯಜ್ಞ–ಯಾಗಾದಿಗಳನ್ನು ಮಾಡಿಸುತ್ತಿದ್ದರು. ಯಲಗೂರಪ್ಪನ ಭಕ್ತರಾಗಿ ಬಂದ ಅತಿಥಿ ಅಭ್ಯಾಗತರಿಗೆ ಪ್ರಾಣದೇವರ ಸೇವೆಗೆ ಅನುಕೂಲ ಮಾಡುತ್ತಿದ್ದರು.

### ೪೩೨ ಬಂಡಾಚಾರ್ಯ ಗುಡಿ

ಋಗ್ವೇದ ಸಂಹಿತಾ ಪೂರ್ತಿ ಮುಖೋದ್ಗತವಾಗಿ ಪಾಠ ಹೇಳುತ್ತಿದ್ದರು. ವೇದ ಪಾಠಶಾಲೆಯನ್ನು ತೆರೆದು ಅನೇಕ ಜನ ವಿದ್ಯಾರ್ಥಿಗಳಿಗೆ ಯಾಜ್ಞಿಕ ಪಾಠ ಹೇಳಿದರು.

### ೪೩೩ ಕೆರೂರ ವಾಸುದೇವಾಚಾರ್ಯ

ಕೆರೂರ ಸ್ವಾಮಿರಾಚಾರ್ಯರ ಹತ್ತಿರದ ಸಂಬಂಧಿಗಳಾದ ವಾಸುದೇವಾಚಾರ್ಯರು ಸಂಸ್ಕೃತ, ಕನ್ನಡ ಎರಡೂ ಸಾಹಿತ್ಯದಲ್ಲಿ ನಿಪುಣರಿದ್ದರು.

"ಶುಭೋದಯ" ಎಂಬ ಮೊಟ್ಟ ಮೊದಲನೆಯ ಕನ್ನಡ ವರ್ತಮಾನ ಪತ್ರಿಕೆಯನ್ನು ತೆರೆದರು. ಕನ್ನಡ ಸಣ್ಣ ಕಥೆ-ಕಾದಂಬರಿಗಳ ಜನಕರೆನಿಸಿದರು. ಅವರ— ಇಂದಿರೆ, ಯದು ಮಹಾರಾಜ, ಔರಂಗಜೇಬ ಮುಂತಾದ ಕಾದಂಬರಿಗಳೂ, ನಳ ದಮಯಂತಿ, ವಸಂತ ಯಾಮಿನೀ ಸ್ವಪ್ನ ಚಮತ್ಕಾರ ಮುಂತಾದ ನಾಟಕಗಳೂ, ಸಣ್ಣಕತೆ ಪ್ರಬಂಧ ಲೇಖಗಳೂ ಜನಪ್ರಿಯವಾಗಿವೆ.

### ೪೩೪ ಕಂಚೀ ಗುಂಡಾಚಾರ್ಯ ಬಾಗಲಕೋಟೆ

ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣ ಓದಿದ ಆಚಾರ್ಯರು ಬಾಗಲಕೋಟೆಯಲ್ಲಿ ಆಚಾರ್ಯ ಪುರುಷರೆನಿಸಿದ್ದರು.

### ೪೩೫ ಮಳಿಗಿ ಬಂಡಾಚಾರ್ಯ ಬಾಗಲಕೋಟೆ

ಇವರು ಸುಶ್ರಾವ್ಯವಾಗಿ ಭಾಗವತಾದಿ ಗ್ರಂಥಗಳನ್ನು ಪುರಾಣ ಹೇಳುತ್ತಿದ್ದರು. ಯಾಜ್ಞಿಕ ವೇದ ವೇದಾಂತಗಳಲ್ಲಿಯೂ ಆಚಾರ್ಯರಿಗೆ ಪರಿಶ್ರಮವಿದ್ದಿತು.

### ೪೩೬ ಝಳಕಿಕರ ಭಟ್ಟ ವಾಮನಾಚಾರ್ಯ ಮಹಾಮಹೋಪಾಧ್ಯಾಯ

ಶ್ರೀಮುಷ್ಣದ ಸುಬ್ಬರಾಯಾಚಾರ್ಯರಲ್ಲಿ ವ್ಯಾಕರಣ ವೇದಾಂತಗಳನ್ನು ಓದಿದ ಝಳಕೀಕರ ವಾಮನಾಚಾರ್ಯರು ನ್ಯಾಯ ಶಾಸ್ತ್ರದ ಪಂಚವಾದಗಳಿಗೆ ನ್ಯಾಯ ರತ್ನ ಎಂಬ ಟೀಕೆ ಬರೆದ ರಘುನಾಥ ಶಾಸ್ತ್ರಿಯವರಲ್ಲಿ ನ್ಯಾಯ ಶಾಸ್ತ್ರ

ವನ್ನೂ ಓದಿ ಮಹಾ ಪಂಡಿತರಾದರು. ಇವರು ಕಾವ್ಯಪ್ರಕಾಶಕ್ಕೆ ಬಹಳ ಮನೋಹರವೂ ವಿದ್ವನ್ಮಾನ್ಯವೂ ಆದ ವ್ಯಾಖ್ಯಾನವನ್ನು ಬರೆದಿದ್ದಾರೆ. ಇವರು ಪುಣೆಯಲ್ಲಿ ಡೆಕ್ಕನ್ ಕಾಲೇಜದಲ್ಲಿ ಸಂಸ್ಕೃತ ಶಾಸ್ತ್ರಿಗಳಾಗಿ ಅನೇಕ ಜನರಿಗೆಪಾಠ ಹೇಳಿದರು. ಇವರ ಪಾಂಡಿತ್ಯಕ್ಕೆ ಮೆಚ್ಚಿ ಭಾರತ ಸರಕಾರವು ಇವರಿಗೆ ಮಹಾಮಹೋಪಾಧ್ಯಾಯ ಬಿರುದನ್ನಿತ್ತು ಗೌರವಿಸಿತು.

ಇವರು ವಿಜಾಪೂರ ಜಿಲ್ಹೆಯ ಝಳಕಿ ಊರಿನ ರಾಮಚಂದ್ರಾಚಾರ್ಯರ ಮಕ್ಕಳಾಗಿದ್ದರು.

### ೪೩೭ ಝಳಕಿ ಭೀಮಾಚಾರ್ಯ

ವಾಮನಾಚಾರ್ಯರ ಸಹೋದರರಾದ ಇವರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಮಹಾ ಪಂಡಿತರಾಗಿದ್ದರು. ಧರ್ಮ ಶಾಸ್ತ್ರದಲ್ಲಿ ಭೀಮಾಚಾರ್ಯರು ಪಾರಂಗತರಾಗಿ ಅನೇಕ ನಿರ್ಣಾಯಕ ಲೇಖಗಳನ್ನು ವೃತ್ತಪತ್ರಗಳಲ್ಲಿ ಬರೆದು ಸನಾತನ ಧರ್ಮದ ಸುಸ್ಥಿರತೆಯನ್ನು ಪ್ರಕಾಶಪಡಿಸಿದರು.

ನ್ಯಾಯಶಾಸ್ತ್ರದ ಎಲ್ಲ ಪಾರಿಭಾಷಿಕ ಶಬ್ದಗಳನ್ನು ಶೋಧಿಸಿ "ನ್ಯಾಯಕೋಶ" ಎಂಬ ಅಪೂರ್ವ ಗ್ರಂಥವನ್ನು ಇವರು ಬರೆದಿದ್ದಾರೆ. ಇವರು ಮುಂಬೈ ಎಲ್‌ಫಿನ್‌ಸ್ಟನ್ ಕಾಲೇಜಿನಲ್ಲಿ ದರ್ಶನಾಧ್ಯಾಪಕರಾಗಿದ್ದರು. ಇವರ ಪಾಂಡಿತ್ಯವನ್ನು ಕಂಡ ಡಾ. ಶೀಲಹಾರ್ನ ಮತ್ತು ಬುಹ್ಲರರು ಇವರ ಕಡೆಯಿಂದ ನ್ಯಾಯಕೋಶವನ್ನು ಬರೆಯಿಸಿ ಮುಂಬೈ ಸರಕಾರದ ವತಿಯಿಂದ ಅದನ್ನು ಪ್ರಕಾಶ ಪಡಿಸಿದರು.

## ಮುಳಬಾಗಿಲದ ಪಂಡಿತರು

ಶ್ರೀಪಾದರಾಜ ಮಠದ ಮೂಲ ಸ್ಥಳವಾದ ಮುಳಬಾಗಿಲವು ಎಂದಿನಿಂದಲೂ ಪಾಂಡಿತ್ಯದ ಕಮ್ಮಟ ಎನಿಸಿದೆ. ಶ್ರೀ ೧೧೦ಲ ಶ್ರೀಪಾದರಾಜರಿಂದ ದ್ವೈಪಾಯನಾಚಾರ್ಯ ಸ್ವಾಮಿಗಳವರೆಗೆ ಪಾಂಡಿತ್ಯದ ಪರಂಪರೆಯು ಅವಿಚ್ಛಿನ್ನವಾಗಿ ನಡೆದು ಬಂದಿದೆ. ಶ್ರೀ ಅಕ್ಷೋಭ್ಯತೀರ್ಥರು ಪ್ರತಿಷ್ಠಿಸಿದ ಶ್ರೀ ಯೋಗಾ ನರಸಿಂಹದೇವರ ಈ ಪವಿತ್ರ ಕ್ಷೇತ್ರದಲ್ಲಿ ಶ್ರೀಪಾದರಾಯರ ವೃಂದಾವನವಿರುವದು.

ಶ್ರೀ ಅಕ್ಷೋಭ್ಯ ತೀರ್ಥರು ವಿದ್ಯಾರಣ್ಯರನ್ನು "ತತ್ವಮಸಿ" ವಾಕ್ಯಾರ್ಥದಲ್ಲಿ ಸೋಲಿಸಿ ಮುಳಬಾಗಿಲ ಸಮೀಪದ ಬೆಟ್ಟದ ಮೇಲೆ ಗೆಲವು ಗಂಬವನ್ನು ನಿಲ್ಲಿಸಿದ್ದಾರೆ.

ಪಂಡಿತ ಪ್ರಕಾಂಡರ ಜನ್ಮಭೂಮಿ ಎನಿಸಿದ ಮುಳಬಾಗಿಲದಲ್ಲಿ ಅವರೂರು ಆಚಾರ್ಯರು ಕಟ್ಟೆಯ ಆಚಾರ್ಯರು ಹೆಬ್ಬಣಿ ಆಚಾರ್ಯರು ಮುಂತಾದ ಅನೇಕ ವಿದ್ವದ್ವಂಶಗಳು ಈ ವರೆಗೆ ನೂರಾರು ಜನ ಪಂಡಿತರನ್ನು ನಾಡಿಗೆ ನೀಡಿವೆ.

**೪೩೮ ಅವರೂರ ಕೃಷ್ಣದ್ವೈಪಾಯನಾಚಾರ್ಯ** ( ಕ್ರಿ.ಶ. ೧೮೧೬–೧೯೦೮ )

ಈ ಮಹಾನುಭಾವರು ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ವೇದಾಂತಗಳಲ್ಲಿ ನಿಸ್ಸೀಮ ಪಂಡಿತರು. ವೇದಾಂತ, ನ್ಯಾಯ, ತರ್ಕ, ಸಾಂಖ್ಯ, ಯೋಗ, ಮೀಮಾಂಸಾ, ವ್ಯಾಕರಣಗಳಲ್ಲಿ ಮಹಾ ವಿದ್ವಾಂಸರು. ಆಗಿನ ಮೈಸೂರು, ಆಂಧ್ರ, ತಮಿಳನಾಡು, ಮಹಾರಾಷ್ಟ್ರದ ಅನೇಕ ವೈದಿಕರೂ ಮತ್ತು ಲೌಕಿಕರೂ ಇವರ ಶಿಷ್ಯತ್ವವನ್ನು ವಹಿಸಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದರು. ಇವರ ಮನೆಯು ಒಂದು ದೊಡ್ಡ ಗುರುಕುಲದಂತಿದ್ದಿತು. ಇವರು ಪ್ರತಿ ವರ್ಷವೂ ಆಗ ತಿರುಪತಿಯಲ್ಲಿ ನಡೆಯುತ್ತಿದ್ದ ಶ್ರೀಮನ್ಮಧ್ವಸಿದ್ಧಾಂತೋನ್ನಾಹಿನೀ ಸಭೆಯನ್ನಲಂಕರಿಸಿ ಉಪನ್ಯಾಸಾದಿಗಳಿಂದ ಸಚ್ಛಾಸ್ತ್ರ ಬೋಧೆ ಮಾಡುತ್ತಿದ್ದರಲ್ಲದೆ ಆ ಸಭೆಗೆ ದ್ವೈತ ಶಾಸ್ತ್ರದಲ್ಲಿ ಅನೇಕ ಜನ ಶಿಷ್ಯರನ್ನು ತಯಾರು ಮಾಡಿ ಪರೀಕ್ಷೆಗೆ ಸಿದ್ಧಪಡಿಸುತ್ತಿದ್ದರು.

**೪೩೯ ಅವರೂರ ಪೂರ್ಣಪ್ರಜ್ಞಾಚಾರ್ಯರು**

ಇವರು ತಮ್ಮ ಅಣ್ಣ ಕೃಷ್ಣದ್ವೈಪಾಯನಾಚಾರ್ಯರಂತೆ ಮಹಾ ಪಂಡಿತರು. ಪ್ರವಚನ ಪಟುಗಳು, ವಾದ ಕುಶಲರು.

**೪೪೦ ಅವರೂರ ನರಹರಿ ಆಚಾರ್ಯರು**

ನ್ಯಾಯ ವೇದಾಂತಗಳಲ್ಲಿ ವಿದ್ವಾಂಸರು. ಮನೆಯಲ್ಲಿ ಅನೇಕ ವಿದ್ಯಾರ್ಥಿಗಳನ್ನು ಇರಿಸಿಗೊಂಡು ಪಾಠ ಹೇಳುತ್ತಿದ್ದರು. ದೇಶ ಸಂಚಾರ ಮಾಡಿ ಮಧ್ವಮತವನ್ನು ಮೆರೆಯಿಸುತ್ತಿದ್ದರು.

**೪೪೧ ಅವರೂರ ರಾಘವೇಂದ್ರಾಚಾರ್ಯ**

ನ್ಯಾಯ ವೇದಾಂತ ಧರ್ಮ ಶಾಸ್ತ್ರಗಳಲ್ಲಿ ಪರಿಣತರು. ವಾದದಲ್ಲಿ ಗಟ್ಟಿಗರು. ದೇಶದ ಎಲ್ಲ ಕಡೆಗೂ ಸಂಚರಿಸಿ ಮಧ್ವ ಮತವನ್ನು ಪ್ರಸಾರ ಮಾಡಿದರು. ಊರಲ್ಲಿದ್ದಾಗ ಪಾಠ ಹೇಳುತ್ತಿದ್ದರು. ಹೊರಗೆ ಹೋದಾಗ ದಿಗ್ವಿಜಯ ಮಾಡುತ್ತಿದ್ದರು.

**೪೪೨ ಅವರೂರ ನರಸಿಂಹಾಚಾರ್ಯ**

ಇವರು ಮಹಾ ಮೇಧಾವಿಗಳು, ಶಾಸ್ತ್ರ ಪಂಡಿತರು. ಸಾಹಿತ್ಯದಲ್ಲಿಯೂ ಇವರಿಗೆ ಒಳ್ಳೇ ಗತಿ ಇದ್ದಿತು. ಇವರಿಗೆ ಪಾಠ ಪ್ರವಚನಗಳಲ್ಲಿ ದೀಕ್ಷೆ ಬಹಳ. ಮನೆ ಮನೆಗೆ ಬಂದು ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಿ ಪಾಠ ಹೇಳುತ್ತಿದ್ದರು.

# ಶ್ರೀ ಹರಿಯಪ್ಪಾಚಾರ್ಯರು (ಮುಳಬಾಗಿಲ)

## ೪೪೩ ಸುಧೀನಿಧಿ ತೀರ್ಥ ಶ್ರೀಪಾದಂಗಳವರು

ಶ್ರೀ ಹರಿಯಪ್ಪಾಚಾರ್ಯರಲ್ಲಿ ಸರ್ವ ಶಾಸ್ತ್ರ ಪಾಂಡಿತ್ಯಗಳೂ ಊಳಿಗಕ್ಕೆ ನಿಂತಿದ್ದವು ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇವರಿಗೆ ಬಾರದ ಶಾಸ್ತ್ರವಿಲ್ಲ. ತೋರದ ವಿಷಯವಿದ್ದಿಲ್ಲ. ಪಾಠ ಹೇಳದ ಶಾಸ್ತ್ರವಿದ್ದಿಲ್ಲ. ಇವರಲ್ಲಿ ಅಧ್ಯಯನ ಮಾಡಿ ಪ್ರಕಾಂಡ ಪಂಡಿತರಾದ ವಿದ್ವನ್ ಮಂಡಲದ ಪರಿಸಂಖ್ಯಾನ ಮಾಡಿದರೆ ಶತ ಸಂಖ್ಯೆಯು ಮಿಕ್ಕಬಹುದು.

ಬಾಲ್ಯದಲ್ಲಿ ಹೊಳವನಹಳ್ಳಿ ಶೇಷಾಚಾರ್ಯ ಎಂಬ ಘನ ವಿದ್ವಾಂಸರಲ್ಲಿ ನ್ಯಾಯ ವ್ಯಾಕರಣಾದಿ ಗ್ರಂಥಗಳನ್ನು ಓದಿದ ಹರಿಯಪ್ಪಾಚಾರ್ಯರು ಮುಂದೆ ಕುಂಭಕೋಣಕ್ಕೆ ಹೋಗಿ ಅಲ್ಲಿ ಪಂಡಿತ ಪುನ್ನಾಗ ಎಂದು ಪ್ರಸಿದ್ಧರಾದ ಶೇಷಾಚಾರ್ಯರಲ್ಲಿ ಉದ್ಗ್ರಂಥಗಳನ್ನು ವ್ಯಾಸಂಗ ಮಾಡಿದರು. ಸರ್ವ ಶಾಸ್ತ್ರ ನದೀಷ್ಣತೆಯೂ, ಕಠಿಣ ಗ್ರಂಥಗಳನ್ನು ಬೋಧಪ್ರದವಾಗುವಂತೆ ಪ್ರವಚನ ಮಾಡುವ ಚಾತುರ್ಯವೂ, ಪ್ರಗಲ್ಭ ವಾಖ್ಯಾರ್ಥದಲ್ಲಿ ನಿಸ್ತುಲ ನಿಪುಣಿಮೆಯೂ ೨೫ ರ ಪ್ರಾಯದಲ್ಲಿಯೇ ಆಚಾರ್ಯರ ಕೈವಶವಾದವು. ಶ್ರೀಪಾದರಾಜ ಮಠದ ವಿದ್ಯಾ ಸಿಂಹಾಸನವನ್ನು ಆರೋಹಣ ಮಾಡಿದ ಬಳಿಕಂತೂ ತಮ್ಮ ಜ್ಞಾನಗಂಗೆಯ ವೈದುಷ್ಯದ ತರಂಗಗಳನ್ನು ಅನೇಕ ಜನರ ಅಂತರಂಗದ ದಂಡೆಗೆ ತುಳುಕಿಸಿ ಜ್ಞಾನದಾನ ಮಾಡುವ ಸೌಭಾಗ್ಯವೂ ಸೌಕರ್ಯವೂ ಅವರಿಗೆ ತಾನಾಗಿ ಒದಗಿ ಬಂದಿತು.

ಪ್ರಾಯಃ ಇಂದು ದಕ್ಷಿಣ ದೇಶದಲ್ಲಿ ಕಾಣುವ ಪಂಡಿತರೆಲ್ಲರೂ ಅವರ ಶಿಷ್ಯ ಪ್ರಶಿಷ್ಯರೇ ಆಗಿದ್ದಾರೆ. ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರಂತೆ ಪಂಡಿತರ ತಂಡವನ್ನು ನಿರ್ಮಿಸಿದ ಶ್ರೇಯಸ್ಸು ಶ್ರೀ ಹರಿಯಪ್ಪಾಚಾರ್ಯರದಾಗಿದೆ. ಶ್ರೀ ಹರಿಯಪ್ಪಾಚಾರ್ಯರಲ್ಲಿ ಓದಿ ಪಂಡಿತರಾವ ಶಿಷ್ಯರಲ್ಲಿ ಶ್ರೀ ಪುಂಗನೂರ ರಾಘವೇಂದ್ರಾಚಾರ್ಯ, ಪೆರೆಯಾಕುಳಂ ರಾಮಚಂದ್ರಾಚಾರ್ಯ, ಆನೇಕಲ್ ಶ್ರೀನಿವಾಸಾಚಾರ್ಯ ನಾಮಗೊಂಡಲು ವಾಸುದೇವಾಚಾರ್ಯ ಮುಂತಾದವರು ಪ್ರಧಾನರಾಗಿದ್ದರು.

## ೪೪೪ ವೆಂಕಣ್ಣಾಚಾರ್ಯ ಅಡೂರ

ಇವರು ನ್ಯಾಯ ಶಾಸ್ತ್ರದಲ್ಲಿ ಮಹೋನ್ನತ ಪಂಡಿತೋತ್ತಮರಾಗಿದ್ದರು. ಶ್ರೀಸತ್ಯವೀರ ಸ್ವಾಮಿಗಳವರ ಕಾಲದಲ್ಲಿ ಯಲತ್ತೂರ ಕೃಷ್ಣಾಚಾರ್ಯರ ಗುರುಗಳಾದ ಕಂಚಿಯ ಶೃಂಖಲಾಚಾರ್ಯರಿಗೂ ಬಾಗಲಕೋಟೆಯ ಸ್ವಾಮಿರಾಯಾಚಾರ್ಯರಿಗೂ ನ್ಯಾಯ ಶಾಸ್ತ್ರದಲ್ಲಿ ಸಭಾಸಂಘರ್ಷವು ನಡೆಯಿತು. ಇತಿಹಾಸ ಪ್ರಸಿದ್ಧವಾದ ಈ

ವಾದ ಸಭೆಗೆ ಆಡೂರು ವೆಂಕಟರಮಣಾರ್ಯರು ಉಭಯಸಮ್ಮತರಾದ ಮಧ್ಯಸ್ಥರಾಗಿದ್ದರು. ಆ ಇಬ್ಬರೂ ಶಿಖರ ಪಂಡಿತರು ಶಾಸ್ತ್ರೀಯ ಜ್ಞಾನದ ಉತ್ತುಂಗ ಶೃಂಗಾಂಗಣದಲ್ಲಿ ಕೋಟಿ ಕ್ರಮಗಳ ಏಣಿ–ಶ್ರೇಣಿಗಳನ್ನು ಏರಿಸುತ್ತ ಕೌಶಲ್ಯದ ಪರಾಕಾಷ್ಠೆಯಲ್ಲಿ ವಾದ ಮಾಡುತ್ತಿದ್ದರು. ಆಡೂರು ವೆಂಕಣ್ಣಾಚಾರ್ಯರು ಆ ಇಬ್ಬರು ಘನ ಪಂಡಿತರ ಮೈಲುದ್ದ, ಹರದಾರಿಯುದ್ದ ಕೋಟಿ ಕ್ರಮಗಳನ್ನೆಲ್ಲ ಕ್ರೋಢೀಕರಿಸಿ, ಅನುವಾದಿಸಿ ಒಬ್ಬರಿಗೊಬ್ಬರಿಗೆ ತಿಳಿಸಿ ಹೇಳುತ್ತಿದ್ದರು. ಕೊನೆಗೆ ಶೃಂಖಲಾಚಾರ್ಯರ ಮಾತು ಸೋತು ಕೋಟಿ ನಿಂತಾಗ ಮಧ್ಯಸ್ಥರಾದ ವೆಂಕಣ್ಣಾಚಾರ್ಯರು ಕೆರೂರ ಸ್ವಾಮಿರಾಯಾಚಾರ್ಯರು ವಿಜಯಶಾಲಿಗಳಾದರೆಂದು ಘೋಷಿಸಿದರು.

### ೬೬೫ ಬಾಳಯ್ಯಾಚಾರ್ಯ ಪಾಂಡುರಂಗಿ

ಉತ್ತರಾದಿ ಮಠದ ಶಕ ಪುರುಷರಾದ ಶ್ರೀ ಸತ್ಯಬೋಧ ತೀರ್ಥ ಶ್ರೀಪಾದಂಗಳ ವರ ಸಾಕ್ಷಾತ್ ಶಿಷ್ಯರಾದ ಬಾಳಯ್ಯಾಚಾರ್ಯರು ನಾಲ್ಕು ಶಾಸ್ತ್ರಗಳಲ್ಲಿಯೂ ನಿಸ್ಸೀಮ ಪಂಡಿತರಾಗಿದ್ದರು.

ಗಲಗಲಿ ಮುದ್ಗಲಾಚಾರ್ಯರು ಅನೇಕ ವರ್ಷ ಪಾಠ ಪ್ರವಚನವನ್ನು ಮಾಡಿ ವೃದ್ಧರಾದ ಬಳಿಕ ಕಣ್ಣು ಕಾಣದಂತಾದಾಗ ತಮ್ಮ ಶಿಷ್ಯರಾದ ಆಲೂರ ವೆಂಕಟಾಚಾರ್ಯರನ್ನು ತಮ್ಮ ಸರಿ ಸಮಾನ ಪಂಡಿತರೆಂದು ತಿಳಿದು ಪಾಂಡುರಂಗಿ ಬಾಳಯ್ಯಾಚಾರ್ಯರಲ್ಲಿ ಓದಲಿಕ್ಕೆ ಕಳುಹಿಸಿದರಂತೆ. ಬಾಳಯ್ಯಾಚಾರ್ಯರು ವೆಂಕಟಾಚಾರ್ಯರಿಗೆ ಶಾಸ್ತ್ರ ಪಾಠ ಹೇಳಿ ಪಂಡಿತರನ್ನಾಗಿ ಮಾಡಿ ಹೊಲ ಮನೆಗಳನ್ನು ಅನುಗ್ರಹಿಸಿ ಕೊಟ್ಟು ಮದುವೆ ಮಾಡಿಸಿ ತಮ್ಮ ಅಗ್ನಿಹೋತ್ರವನ್ನು ಅವರಿಗೆ ಒಪ್ಪಿಸಿದರು.

ಬಾಳಯ್ಯಾಚಾರ್ಯರ ಮೂರ್ತಿಯು ಈಗಲೂ ಆಲೂರಿನ ಹನುಮಂತಾಚಾರ್ಯರ ಮನೆಯಲ್ಲಿ ಇರುತ್ತದೆ.

ಬಾಳಯ್ಯಾಚಾರ್ಯರ ಮನೆಯಲ್ಲಿ ನಿರಂತರವೂ ೫೦–೬೦ ಶಿಷ್ಯರು ಪಾಠ ಹೇಳಿಸಿಕೊಳ್ಳಲು ಇರುತ್ತಿದ್ದರು.

ಶ್ರೀ ವಿದ್ಯಾಧೀಶ ಸ್ವಾಮಿಗಳವರ ಮೂರ್ತಿಯನ್ನು ಬಾಳಯ್ಯಾಚಾರ್ಯರು ತಂದು ಮಾಸೂರಲ್ಲಿ ಇರಿಸಿಕೊಂಡಿದ್ದರು. ಅದು ಈಗ ರಾಣೇಬೆನ್ನೂರಿನಲ್ಲಿ ಪ್ರತಿಷ್ಠಿತವಾಗಿ ಪೂಜೆಗೊಳ್ಳುತ್ತಲಿದೆ. ಮಾಸೂರಿನಲ್ಲಿ ಕುಮುದ್ವತೀ ನದಿ ದಂಡೆಯ ಮೇಲೆ ಬಾಳಯ್ಯಾಚಾರ್ಯರ ವೃಕ್ಷವು ಈಗಲೂ ಇರುತ್ತದೆ.

ಬಾಳಯ್ಯಾಚಾರ್ಯರು ಮಹಾ ತಪಸ್ವಿಗಳಾಗಿದ್ದರು. ಬಾಲ್ಯದಲ್ಲಿ ರಾತ್ರಿ ಮನೆಗೆ ಕಳ್ಳರು ಬಂದಾಗ ಇವರು ದುರ್ಗಾ ಸ್ತೋತ್ರವನ್ನು ಪಠಿಸಿದ ಕೂಡಲೆ ಅವರು ಓಡಿ ಹೋದರು. ಕುಂಟನ ಮೇಲೆ ಕೈಯ್ಯಾಡಿಸಿದಾಗ ಅವನಿಗೆ ಕಾಲುಗಳು ಬಂದವು. ಬೇಸಗೆಯಲ್ಲಿ ಶಿಷ್ಯನು ದೇವರ ಪೂಜೆಗೆ ತುಳಸಿಯು ಎಲ್ಲಿಯೂ ದೊರಕಲಿಲ್ಲ ಎಂದು ಹೇಳಿದಾಗ ಆಚಾರ್ಯರು ತಮ್ಮ ತಪಸ್ಸಿನ ಶಕ್ತಿಯಿಂದ ಒಂದು ದೊಡ್ಡ ತುಳಸೀ ಬನವನ್ನೇ ನಿರ್ಮಿಸಿ ಭಗವಂತನಿಗೆ ಲಕ್ಷ ತುಳಸೀ ಅರ್ಚನವನ್ನು ಮಾಡಿದರಂತೆ.

## ೪೪೬ ಸತ್ಯಾಧೀಶಾಚಾರ್ಯ ಪಾಚ್ಛಾಪೂರ

ಇವರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಘನ ಪಂಡಿತರಾಗಿದ್ದರು. ಇವರು ಉತ್ತರಾದಿ ಮಠದ ಶ್ರೀ ಸತ್ಯಕಾಮ ತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರು. ಇವರು ತಮ್ಮ ತಂದೆಯವರಲ್ಲಿ ವೇದಾಂತವನ್ನೂ, ಆದ್ಯ ಅಗರಖೇಡದ ಸೀತಾರಾಮಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ ಓದಿ ಉಭಯ ಶಾಸ್ತ್ರ ಪಾರಂಗತ ರಾದರು. ಶ್ರೀಪಾದ ಪುತ್ರರ ಶಾಸ್ತ್ರ ಪಾಂಡಿತ್ಯಕ್ಕೆ ಮೆಚ್ಚಿದ ಸೀತಾರಾಮಾಚಾರ್ಯರು ಅವರಿಗೆ ತಮ್ಮ ಮಗಳನ್ನು ಕೊಟ್ಟು ಅಳಿಯಂದಿರನ್ನಾಗಿ ಮಾಡಿ ಕೊಂಡರು.

## ೪೪೭ ಶ್ರೀ ವಡ್ಡೀಗೇರಿ ವೆಂಕಪ್ಪಾಚಾರ್ಯ

ಬಳ್ಳಾರಿ ಜಿಲ್ಲೆಯ ಆಲೂರಿನಲ್ಲಿದ್ದ ವೆಂಕಪ್ಪಾಚಾರ್ಯರು ನ್ಯಾಯವೇದಾಂತ ವಿದ್ವಾಂಸರಾಗಿದ್ದರು. ಅವರು ನಿರಂತರ ಪಾಠ ಪ್ರವಚನ ಮಾಡಿಸುತ್ತಿದ್ದರು.

## ೪೪೮ ಕೊಟೂರ ವೆಂಕಪ್ಪಾಚಾರ್ಯ

ರಾಯರ ಮಠದ ಶಿಷ್ಯರಾದ ವೆಂಕಪ್ಪಾಚಾರ್ಯರು ವೇದಾಂತದಲ್ಲಿ ಪಂಡಿತ ರಾಗಿದ್ದರು.

## ೪೪೯ ವಡ್ಡಿಗೇರಿ ನರಸಿಂಹಾಚಾರ್ಯ

ವೇದಾಂತದಲ್ಲಿ ಪಂಡಿತರು. ಪ್ರವಚನದಲ್ಲಿ ಪಳಗಿದವರು. ಪುರಾಣದಲ್ಲಿ ಪ್ರವೀಣರು.

## ೪೫೦ ಮುದ್ದು ಭೀಮಾಚಾರ್ಯ – ಮಂತ್ರಾಲಯ

ಇವರು ದ್ವೈತ ವೇದಾಂತ ಶಾಸ್ತ್ರದಲ್ಲಿ ಮಹಾ ಪಂಡಿತರಾಗಿದ್ದರು. ಶ್ರೀ ರಾಘ ವೇಂದ್ರ ಸ್ವಾಮಿ ಮಠದ ಶ್ರೀ ಸುಧರ್ಮೇಂದ್ರ ತೀರ್ಥ ಶ್ರೀ ಪಾದಂಗಳವರ ಕಾಲದಲ್ಲಿ ಇವರು ಆಸ್ಥಾನ ವಿದ್ವಾಂಸರು. ಶ್ರೀ ಮಠದ ದಿವಾನರೂ ಆಗಿದ್ದರು. ಇವರು ಯಾವಾಗಲೂ ಮಠದಲ್ಲಿ ಸಚ್ಛಾಸ್ತ್ರ ಪಾಠವನ್ನು ಹೇಳುತ್ತಲಿದ್ದರು.

## ೪೫೧ ವ್ಯಾಸರಾಯ ಮಠದ ಅಪ್ಪಣ್ಣಾಚಾರ್ಯ

ಇವರು ಮಹಾ ಪಂಡಿತ ಪ್ರಕಾಂಡರಾಗಿದ್ದರು. ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಇವರಿಗೆ ಪ್ರಖರ ಪಾಂಡಿತ್ಯವಿದ್ದಿತು.

## ೪೫೨ ಬೊಜ್ಜಿ ಶ್ರೀನಿವಾಸಾಚಾರ್ಯ

ಇವರು ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾದ ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿ ನ್ಯಾಯ ವೇದಾಂತ ಶಾಸ್ತ್ರವನ್ನು ಓದಿ ಪಂಡಿತರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಶಾಂತಿ ಹಾಕಿ ಸುಧಾ ಗ್ರಂಥವನ್ನು ಓದಿ ಮಂಗಳ ಮಾಡಿದರು.

## ೪೫೩ ಕಲ್ಲಾಪೂರ ಶ್ರೀನಿವಾಸಾಚಾರ್ಯ

ಇವರು ಪಂಡಿತ ಶಿರೋಮಣಿ ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿದ್ದರು.

## ೪೫೪ ಪುಂಗನೂರ ರಾಘವೇದ್ರಾಚಾರ್ಯ

ರಾಯಪಾಳ್ಯಂ ರಾಘವೇಂದ್ರಾಚಾರ್ಯರು ಚಿತ್ತೂರ ಜಿಲ್ಲೆಯ ಪಲಮನೇರ ಗ್ರಾಮದಲ್ಲಿ ಜನಿಸಿ ಮುಳಬಾಗಿಲ ಅವರೂರು ನರಹರಿ ಆಚಾರ್ಯರಲ್ಲಿಯೂ ಶ್ರೀ ಹರಿಯಪ್ಪಾಚಾರ್ಯರಲ್ಲಿಯೂ ವೇದಾಂತ ಓದಿ ಮಹಾ ಪಂಡಿತರಾದರು. ಬೆಂಗಳೂರಿನಲ್ಲಿ ಶಾಸನ ಇಲಾಖೆಯಲ್ಲಿ ರೈಯಸ ಸಾಹೇಬರ ಕೋರಿಕೆಯಂತೆ ಉದ್ಯೋಗಕ್ಕೆ ಸೇರಿ ಗ್ರಂಥ ಸಂಶೋಧನ ಪ್ರಕಟನ ವಿಭಾಗದಲ್ಲಿ ಸೇವೆ ಸಲ್ಲಿಸಿದರು. ಕೊನೆಗೆ ಮೈಸೂರಿನ ಪ್ರಾಚ್ಯ ಕೋಶಾಗಾರ (ಓರಿಯಂಟಲ್ ಲಾಯಬ್ರರಿ) ಅಧಿಕಾರಿ ಆಗಿ ಚಂದ್ರಿಕಾ ಗ್ರಂಥವನ್ನು ಪ್ರಕಟಿಸಿದರು.

ತಂತ್ರದೀಪಿಕಾದಿ ಗ್ರಂಥಗಳನ್ನು ಟಿಪ್ಪಣಿಯೊಡನೆ ಜಯಾಲಯ ಎಂಬ ಮುದ್ರಣಾಲಯವನ್ನು ಸ್ವಂತ ಮಾಡಿಕೊಂಡು ಪ್ರಕಟಿಸಿದರು. ಸುಮಧ್ವ ವಿಜಯಕ್ಕೆ ಕನ್ನಡ ಟೀಕೆ, ವಾಯುಸ್ತುತಿ ಉಪನಿಷತ್ತುಗಳಿಗೆ ಕನ್ನಡ ಟೀಕೆಗಳನ್ನು ಬರೆದು ಜನಪ್ರಿಯರಾದರು.

ಅನೇಕ ಜನರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ವೇದಾಂತದ ಪ್ರಮಾಣ ಗ್ರಂಥ, ಪ್ರಮೇಯ ಗ್ರಂಥ, ವಾದ ಗ್ರಂಥಗಳೆಲ್ಲವೂ ರಾಘವೇಂದ್ರಾಚಾರ್ಯರಿಗೆ ಬುದ್ಧಿಸ್ಥವೂ, ಕಂಠಸ್ಥವೂ ಆಗಿದ್ದವು. ಪಾಠ–ಪ್ರವಚನ, ವಕ್ತೃತ್ವ, ಗ್ರಂಥ ಪ್ರಣೇತೃತ್ವ, ವಾದ ಜೇತೃತ್ವ ಈ ನಾಲ್ಕು ಗುಣಗಳು ಆಚಾರ್ಯರಲ್ಲಿ ಅಪರೂಪವಾಗಿ ಸಮ್ಮಿಲಿತವಾಗಿದ್ದವು.

ಶ್ರೀ ಸತ್ಯಧ್ಯಾನತೀರ್ಥರಲ್ಲಿ ಮುದ್ರಾಧಾರಣೆ ಮಾಡಿಕೊಂಡರು. ಅರಮನೆಯ ಧರ್ಮಾಧಿಕಾರಿಗಳಾದರು. ಕಾಶೀ ಪ್ರಾಣೇಶಾಚಾರ್ಯರು, ದೊಡ್ಡ ಬಳ್ಳಾಪುರ ವಾಸುದೇವಾಚಾರ್ಯರು ಇವರಲ್ಲಿ ಕೆಲವು ವೇದಾಂತ ಗ್ರಂಥಗಳನ್ನು ಪರಾಮರ್ಶ ಮಾಡಿಕೊಂಡರು.

ಇವರು ವೇದಾಂತದಲ್ಲಿ ಅಪ್ರತಿಮ ಪಂಡಿತರಾಗಿದ್ದರು. ರಾಮಸುಬ್ಬಾಶಾಸ್ತ್ರಿ, ಅನಂತಕೃಷ್ಣ ಶಾಸ್ತ್ರಿಗಳು ಬರೆದ ಚಂದ್ರಿಕಾ, ನ್ಯಾಯಾಮೃತಾದಿ ಗ್ರಂಥಾಭಾಸಗಳಿಗೆ ಸರಿಯಾಗಿ ಉತ್ತರ ಬರೆದ ಶ್ರೇಯಸ್ಸು ಶ್ರೀ ಪುಂಗನೂರ ರಾಘವೇಂದ್ರಾಚಾರ್ಯರಿಗೆ ಸಲ್ಲುತ್ತದೆ.

ಇವರ ಗ್ರಂಥ ಲೇಖನದ ಪ್ರೌಢ ಶೈಲಿ ಮತ್ತು ಶಾಸ್ತ್ರೀಯ ಸರಣಿಯನ್ನು ನೋಡಿದರೆ ಇವರು ಪ್ರಾಚೀನ ಟೀಕಾ–ಟಿಪ್ಪಣಿಕಾರರ ಸಜಾತೀಯ ವೇದಾಂತ ಪಾಂಡಿತ್ಯವುಳ್ಳ ಮೇಧಾವಿ ಮೂರ್ಧನ್ಯರೆಂದು ವಿದ್ವಾಂಸರಿಗೆ ಎನಿಸುತ್ತದೆ.

ಅನಂತಕೃಷ್ಣಶಾಸ್ತ್ರಿಯ ಗ್ರಂಥಕ್ಕೆ ಮತ್ತೆ ಮುಂದೆ ಖಂಡನ ಬರೆಯಬೇಕೆಂದು ಪ್ರವೃತ್ತರಾದ ಶ್ರೀ ಸತ್ಯಧ್ಯಾನತೀರ್ಥರು ರಾಘವೇಂದ್ರಾಚಾರ್ಯರ ಪುಸ್ತಕವನ್ನು ಕಂಡು— "ನಾನು ಬರೆಯಬೇಕೆಂದಿರುವ ವಿಷಯಗಳು ಇವರಲ್ಲಿ ಬಂದಿರುವದರಿಂದ ನಾನು ಬೇರೆ ಬರೆಯುವದಿಲ್ಲ" ಎಂದು ಹೇಳಿದರಂತೆ.

### ೪೫೫ ಕೌಲಗಿ ನಾರಾಯಣಾಚಾರ್ಯ

ಇವರು ಸುಪ್ರಸಿದ್ಧ ವ್ಯಾಕರಣ ವಿದ್ವಾಂಸರಾದ ನೆರೂರ ಕೃಷ್ಣಾಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನು ಓದಿದರು. ಅನಂತರ ಮೈಸೂರ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಸಾಹಿತ್ಯಾಧ್ಯಾಪಕರಾಗಿ ಕೆಲಸ ಮಾಡಿದರು.

### ೪೫೬ ಗುಂಡಾಚಾರ್ಯ ಅವಧಾನಿ ಮಣ್ಣೂರ

ಇವರು ವೇದಾಂತ ಶಾಸ್ತ್ರವನ್ನು ಚನ್ನಾಗಿ ವ್ಯಾಸಂಗ ಮಾಡಿದ್ದರು. ಸದಾಚಾರಿಗಳಾಗಿದ್ದರು.

### ೪೫೭ ರಾಮಾಚಾರ್ಯ ಮಾಹುಲಿ ಐನಾಪೂರ

ಋಗ್ವೇದ ಸಂಹಿತಾ ಬ್ರಾಹ್ಮಣ ಪೂರ್ಣ ಅಧ್ಯಯನ ಮಾಡಿದ್ದರು. ಮತ್ತು ಯಾಜ್ಞಿಕವನ್ನು ಉತ್ತಮ ರೀತಿಯಿಂದ ಮಾಡಿಸುತ್ತಿದ್ದರು. ಅತಿಥಿ ಪೂಜೆಯು ಅವರಿಗೆ ಪರಮ ಧರ್ಮವಾಗಿತ್ತು. ಊರಿಗೆ ಬಂದ ಆಚಾರ್ಯರ, ಸ್ವಾಮಿಗಳ, ಕೀರ್ತನಕಾರರ, ಉಪನ್ಯಾಸಕರ, ಪೌರಾಣಿಕರ ಸೇವೆ ಮಾಡುವದೆಂದರೆ ಅವರಿಗೆ ಅತ್ಯಂತ

ಹ. ಪ್ರಸಿದ್ಧ ಸಾಮಗ ವಂಶದ ರಾಮಾಚಾರ್ಯರು ವೇದಮಂತ್ರಗಳನ್ನೂ ಬ್ರಾಹ್ಮಣ ಭಾಗಗಳನ್ನೂ ಶಾಸ್ತ್ರ ಶುದ್ಧವಾಗಿ ತಮ್ಮ ಕಂಚಿನ ಕಂಠದಿಂದ ಶ್ರೋತೃಗಳಿಗೆ ವೇದದಲ್ಲಿ ಭಕ್ತಿ ಹುಟ್ಟುವಂತೆ ಹೇಳುತ್ತಿದ್ದರು. ನಿಸ್ಪೃಹ ವೃತ್ತಿ ನಿರ್ಮಲ ಮನಸ್ಸು ಪರೋಪಕಾರ ಸ್ವಭಾವ ಮುಂತಾದ ಗುಣಗಳಿಂದ ಅವರು ಜನಪ್ರಿಯರಾಗಿದ್ದರು.

### ೪೫೮ ಮಧುರೆ ಮಧ್ವಾಚಾರ್ಯ

ಇವರು ವ್ಯಾಕರಣದಲ್ಲಿ ಪಂಡಿತರಾಗಿದ್ದರು. ವೇದಾಂತವಲ್ಲಿ ಪರಿಣಿತರಾಗಿದ್ದರು. ಮೈಸೂರಿನ ಓರಿಯಂಟಲ್ ಲಾಯಬ್ರರಿಯಲ್ಲಿ ಕೆಲಸ ಮಾಡಿದರು.

### ೪೫೯ ಮಧುರೆ ಶ್ರೀನಿವಾಸಾಚಾರ್ಯ

ವೇದಾಂತದಲ್ಲಿ ವಿದ್ವಾಂಸರಾದ ಶ್ರೀನಿವಾಸಾಚಾರ್ಯರು ಅರಮನೆಯ ಧರ್ಮಾಧಿಕಾರಿಗಳಾಗಿದ್ದರು. ದಶೋಪನಿಷತ್ತುಗಳು ಭಾಷ್ಯಖಂಡಾರ್ಥ ಸಹಿತವಾಗಿ ಇವರಿಗೆ ಮುಖೋದ್ಗತವಾಗಿ ಬರುತ್ತಿದ್ದವು. ತಮ್ಮ ಮನೆಯಲ್ಲಿ ಅನೇಕ ಜನ ಶಿಷ್ಯರಿಗೆ ಪಾಠವನ್ನು ಹೇಳುತ್ತಿದ್ದರು.

### ೪೬೦ ನಾಗರಹಳ್ಳಿ ಶ್ರೀನಿವಾಸಾಚಾರ್ಯ

ಶ್ರೀ ಯಳಮೇಲಿ ವಿಠ್ಠಲಾಚಾರ್ಯರಲ್ಲಿ ವ್ಯಾಕರಣ ಓದಿ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಓದಿದರು. ಶ್ರೀಗಳವರಲ್ಲಿ ಸಂಪೂರ್ಣ ನ್ಯಾಯಾಮೃತವನ್ನು ಓದಿ ಉದ್ದಾಮ ಪಂಡಿತರೆದುರು ಪರೀಕ್ಷೆಕೊಟ್ಟು ಸಭಿಕರನ್ನೆಲ್ಲ ಚಕಿತಗೊಳಿಸಿದರು.

ನ್ಯಾಯಾಮೃತದ ಟೀಕೆ-ಟಿಪ್ಪಣಿ, ಖಂಡನ-ಮಂಡನದ ವಿಷಯಗಳನ್ನೆಲ್ಲ ಮುಖೋದ್ಗತವಾಗಿ ಸ್ಫೂರ್ತಿಯಿಂದ ಹೇಳಿ ಪಂಡಿತ ಮಾರ್ತಂಡರು ಮಾಡಿದ ಆಕ್ಷೇಪಗಳನ್ನೆಲ್ಲ ಸಮಂಜಸವಾಗಿ ಪರಿಹರಿಸಿ ಚಂದ್ರಿಕಾಚಾರ್ಯರ ಭಾವವನ್ನು ಸಮರ್ಥ ರೀತಿಯಿಂದ ಶ್ರೀ ಸತ್ಯಧ್ಯಾನ ತೀರ್ಥರ ಮಹಾ ಸಭೆಯಲ್ಲಿ: ಮಂಡಿಸಿದರು. ಇದರಿಂದ ಸಂಪ್ರೀತರಾದ ಶ್ರೀಪಾದಂಗಳವರು ಇವರಿಗೆ ಬಂಗಾರದ ಕಡಗವನ್ನು ಹಾಕಿ ಪ್ರೋತ್ಸಾಹಿಸಿದರು.

### ೪೬೧ ಸುರಪುರದ ಹನುಮೇಶಾಚಾರ್ಯ

ಶ್ರೀ ಯಳಮೇಲಿ ಆಚಾರ್ಯರಲ್ಲಿ ವ್ಯಾಕರಣ ವೇದಾಂತವನ್ನು ಓದಿದ ಹನುಮೇಶಾಚಾರ್ಯರು ಮಹಾ ಪಂಡಿತರಾಗಿದ್ದರು. ಅವರು ಗದ್ವಾಲ ಮುಂತಾದ ಸಭೆ

ಗಳಿಗೆ ಹೋಗಿ ಧರ್ಮಾಧಿಕಾರಿಗಳಾಗಿ ವಾಕ್ಯಾರ್ಥ ವಿಚಾರ ಮಾಡಿ ರಾಜ-ಮಹಾರಾಜರ ಮತ್ತು ಪಂಡಿತ-ಪಾಮರರ ದಾನ, ದಕ್ಷಿಣೆ, ಗೌರವಾದರಗಳಿಗೆ ಪಾತ್ರರಾಗುತ್ತಿದ್ದರು.

### ೪೬೨ ಬಾಳಯ್ಯಾಚಾರ್ಯ ಆಲೂರ

ಉತ್ತರಾದಿಮಠದ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದರು.

### ೪೬೩ ಹನುಮಂತಾಚಾರ್ಯ ಆಲೂರ

ಬಾಳಯ್ಯಾಚಾರ್ಯರಲ್ಲಿ ವೇದಾಂತವನ್ನೂ, ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣವನ್ನೂ ಓದಿದ್ದರು. ಆಲೂರಲ್ಲಿ ನಿತ್ಯವೂ ಪುರಾಣ ಹೇಳುತ್ತಿದ್ದರು.

### ೪೬೪ ಕೇಶವಾಚಾರ್ಯ ವರಖೇಡಿ

ಮಹಾರಾಷ್ಟ್ರ ದೇಶದ ಸುಪ್ರಸಿದ್ಧ ಪಂಡಿತರಾದ ವರಖೇಡಿ ಕೇಶವಾಚಾರ್ಯರು ಏರಿ ರಾಮಾಚಾರ್ಯರಲ್ಲಿ ಸಾಹಿತ್ಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು. ಇವರ ಮಕ್ಕಳೇ ವರಖೇಡ ಪ್ರದ್ಯುಮ್ನಾಚಾರ್ಯ, ನರಸಿಂಹಾಚಾರ್ಯ ಎಂಬ ಪಂಡಿತ ಸಹೋದರರು ಮಹಾರಾಷ್ಟ್ರ ದೇಶದಲ್ಲೆಲ್ಲ ದ್ವೈತ ಜಾಗ್ರತಿಯನ್ನು ಉಂಟು ಮಾಡಿದರು.

### ೪೬೫ ಪಾಣಿನಿ ಕೃಷ್ಣಾಚಾರ್ಯ ಕೌಲಗಿ

ಇವರು ಮಹಾರಾಷ್ಟ್ರದ ಪಂಡಿತ ರತ್ನ ವಿಠಲೋಪಾಧ್ಯಾಯರಲ್ಲಿ ಶಾಸ್ತ್ರಾಭ್ಯಾಸ ಮಾಡಿದರು. ಹುಲಿಗಿ ಶ್ರಿಯಃ ಪತ್ಯಾಚಾರ್ಯರು ಇವರ ಸಹಾಧ್ಯಾಯಿಗಳಾಗಿದ್ದರು. ಇವರ ವ್ಯಾಕರಣ ಶಾಸ್ತ್ರದಲ್ಲಿಯ ಅನಿತರ ಸಾಧಾರಣವಾದ ಪಾಂಡಿತ್ಯದಿಂದ ಇವರಿಗೆ ಪಾಣಿನಿ ಕೃಷ್ಣಾಚಾರ್ಯ ಎಂದು ಹೆಸರಾಗಿದ್ದಿತು.

### ೪೬೬ ಚತುರ್ವೇದಿ ಭೀಮಾಚಾರ್ಯ ( ಕುಂಭಕೋಣಂ )

ವೇದವಿದುತ್ತಮರಾದ ಭೀಮಾಚಾರ್ಯರು ಘನಾಂತ ವೇದವನ್ನು ಅಧ್ಯಯನ ಮಾಡಿ ಮಹಾ ಪಂಡಿತರಾಗಿದ್ದರು.

### ೪೬೭ ಪಾಂಡುರಂಗೀ ಶ್ರೀನಿವಾಸಾಚಾರ್ಯ

ತಿರುಪತಿಯ ತಪೋನಿಧಿಗಳಾದ ಪಾಂಡುರಂಗಿ ಹುಚ್ಚಾಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರು ವಿರುಪಾಕ್ಷ ಶಾಸ್ತ್ರಿಗಳಲ್ಲಿ ನ್ಯಾಯವನ್ನೂ ತುಮ್ಮಿನ

ಕಟ್ಟಿ ಹುಚ್ಚಾಚಾರ್ಯರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದರು. ಧಾರವಾಡದ ದ್ವೈತ ವೇದಾಂತ ಪಾಠ ಶಾಲೆಯಲ್ಲಿ ಅನೇಕ ವರ್ಷಗಳ ಕಾಲ ಪಾಠ ಪ್ರವಚನ ಮಾಡಿಸಿದರು.

### ೪೬೮ ಹುಚ್ಚಾಚಾರ್ಯ ರಿತ್ತಿ ಮೈಸೂರ

ತುಮ್ಮಿನಕಟ್ಟಿ ಹುಚ್ಚಾಚಾರ್ಯರಲ್ಲಿ ವೇದಾಂತ ಓದಿ ಎಳೆಮೇಲಿ ವಿಠಲಾಚಾರ್ಯರಲ್ಲಿ ಸಂಪೂರ್ಣ ಭಾಗವತವನ್ನು ಟೀಕಾ ಟಿಪ್ಪಣಿ ಸಹಿತವಾಗಿ ಅಧ್ಯಯನ ಮಾಡಿ ಪುರಾಣ ಪಂಡಿತರಾದ ಹುಚ್ಚಾಚಾರ್ಯರು ಮೊದಲು ಧಾರವಾಡದಲ್ಲಿ ಅನೇಕ ವರ್ಷಗಳ ಕಾಲ ವಾಸವಾಗಿದ್ದರು.

ಮುಂದೆ ಇವರು ತಾತ್ಪರ್ಯಾನುಸಾರವಾಗಿ ಪುರಾಣವನ್ನು ಅಲ್ಲಲ್ಲಿ ಹೇಳುತ್ತ ಮೈಸೂರಿಗೆ ಹೋದರು. ಇವರ ರಾಗಬದ್ಧವಾದ ಪುರಾಣದ ರೀತಿಗೆ ಅರಮನೆಯ ರಾಜಪರಿವಾರದವರೆಲ್ಲರೂ ಮೆಚ್ಚಿ ಮೈಸೂರಿನಲ್ಲಿಯೇ ಮಹಾರಾಜರು ಆಶ್ರಯವಿತ್ತರು. ಕೊನೆಗೆ ಇವರು ಬೆಂಗಳೂರಿಗೆ ಬಂದು ಎಷ್ಟೋ ದಿವಸ ಪುರಾಣ ಹೇಳಿದರು.

### ೪೬೯ ಹಯಗ್ರೀವಾಚಾರ್ಯ ಸಂಗಮ (ಗಲಗಲಿ)

ಇವರು ಎಳೆಮೇಲಿ ಹಯಗ್ರೀವಾಚಾರ್ಯರಲ್ಲಿ ವ್ಯಾಕರಣವನ್ನೂ, ಗಲಗಲಿ ನರಸಿಂಹಾಚಾರ್ಯರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದ್ದರು.

### ೪೭೦ ಬಿಂದಾಚಾರ್ಯ ಹುಬ್ಬಳ್ಳಿ (ಗಲಗಲಿ)

ಇವರು ಗಲಗಲಿಯ ಶ್ರೀರಂಗಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿ ಘನವಿದ್ವಾಂಸರಾಗಿದ್ದರು. ಕ್ರೋಡಪತ್ರ ಪದ್ಧತಿಯ ಕೋಟಿ ಕ್ರಮ ವಾಕ್ಯಾರ್ಥವಲ್ಲಿ ಇವರು ಅಪ್ರತಿಮ ಪಂಡಿತರಾಗಿದ್ದರು. ಗದ್ವಾಲ, ವನಪರ್ತಿ, ಬಡೋದ, ಪುದುಕೋಟೆ, ತಿರುಪತಿ ಮುಂತಾದ ಸಂಸ್ಥಾನಗಳ ರಾಜಾಶ್ರಯದಲ್ಲಿ ನಡೆಯುವ ಪಂಡಿತ ಸಭೆಗಳಿಗೆ ಹೋಗಿ ತಮ್ಮ ಪ್ರಖರ ಪಾಂಡಿತ್ಯದ ಮುಖರ ವೈಖರಿಯಿಂದ ನೆರೆದ ವಿದ್ವಾಂಸರನ್ನೆಲ್ಲ ಚಕಿತಗೊಳಿಸಿ ಸಂಭಾವನೆಯನ್ನು ಪಡೆದುಕೊಂಡು ಬರುತ್ತಿದ್ದರು.

### ೪೭೧ ರಾಮಚಂದ್ರಾಚಾರ್ಯ ಹುಬ್ಬಳ್ಳಿ (ಗಲಗಲಿ)

ಇವರು ಗಲಗಲಿ ಬಾಬಾಚಾರ್ಯರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ವಿಪಶ್ಚಿದಪಶ್ಚಿಮರಾಗಿದ್ದರು. ಶಾಸ್ತ್ರ ಗ್ರಂಥಗಳ ಕಠಿಣ ಸ್ಥಳಗಳನ್ನೆಲ್ಲ ಗುರುತಿಸಿ, ನ್ಯಾಯ–ವೇದಾಂತ ಶಾಸ್ತ್ರಗಳ ಕಠಿಣತರ ಪ್ರಘಟ್ಟಗಳನ್ನೆಲ್ಲ ಬಿಡಿಸಿ

ವಿವರಿಸಿ ಪೃಥಕ್ಕರಿಸಿ ಸರಳಗೊಳಿಸಿ "ಗ್ರಂಥಗ್ರಂಥಿ" ಎಂಬ ಪುಸ್ತಕವನ್ನು ಬರೆದರು. ಪಾಠ ಓದುವ ವಿದ್ಯಾರ್ಥಿಗಳು ದೊರೆಯದ್ದರಿಂದಇವರು ಪ್ರತಿದಿನವೂ ತಾವೇ ಎರಡು ಪ್ರಹರ ಕಾಲ ಗ್ರಂಥ ಚಿಂತನೆಮಾಡಿ ಎಲ್ಲ ವಿಷಯುಗಳನ್ನು ದೇವರಿಗೆ ಸಮರ್ಪಣ ಮಾಡುತ್ತಿದ್ದರು.

### ೪೭೨ ಮಂಗಲಗಿ ಉಡುಪಾಚಾರ್ಯ ಬಾಗಲಕೋಟೆ

ವೇದಾಂತ ಅಧ್ಯಯನ ಮಾಡಿ ಪುರಾಣವನ್ನು ಚೆನ್ನಾಗಿ ಹೇಳುತ್ತಿದ್ದರು. ಯಾಜ್ಞಿಕ ಭಾಗದಲ್ಲಿಯೂ ಪರಿಣತರಿದ್ದರು.

### ೪೭೩ ಪಂಢರಿ ಶೇಷಾಚಾರ್ಯ ಬಾಗಲಕೋಟೆ

ವೇದಾಂತವನ್ನು ಚೆನ್ನಾಗಿ ಪರಿಚಯ ಮಾಡಿಕೊಂಡು ಸುಶ್ರಾವ್ಯವಾಗಿ ಭಾಗವತಾದಿ ಪುರಾಣ ಹೇಳುತ್ತಿದ್ದರು.

### ೪೭೪ ವೆಂಕಣ್ಣಾಚಾರ್ಯ ಬುರ್ಲಿ ಬಾಗಲಕೋಟೆ

ಶ್ರೌತ ಸ್ಮಾರ್ತ ಯಾಜ್ಞಿಕ ಪ್ರಕ್ರಿಯೆಯಲ್ಲಿ ಪಂಡಿತರಾಗಿದ್ದು ಬಾಗಲಕೋಟೆಯಲ್ಲಿ ಪುರಾಣ ಹೇಳುತ್ತಿದ್ದರು.

### ೪೭೫ ಸೂಳಿಭಾವಿ ಭೀಮಾಚಾರ್ಯ ಬಾಗಲಕೋಟೆ

ಋಗ್ವೇದ ಸಂಹಿತೆಯನ್ನು ಘನ ಕ್ರಮ ಪರ್ಯಂತ ಅಧ್ಯಯನ ಮಾಡಿ ವೇದ ವಿದ್ವಾಂಸರೆನಿಸಿದ್ದರು.

### ೪೭೬ ಗುಡಿ ಶ್ರೀನಿವಾಸಾಚಾರ್ಯ ಬಾಗಲಕೋಟೆ

ಋಗ್ವೇದವನ್ನು ಕ್ರಮಾಂತ ಅಧ್ಯಯನ ಮಾಡಿ ವೇದ ಕೋವಿದರಾಗಿದ್ದರು.

### ೪೭ ನಾಗಸಂಪಿಗಿ ಆಡಿವೀ ಅಚಾರ್ಯ ಯಲಗೂರ

ಸಿದ್ಧಾಂತ ಗ್ರಂಥಗಳನ್ನು ಓದಿಕೊಂಡು ಯಲಗೂರದಲ್ಲಿದ್ದು ಅನೇಕ ಯಜ್ಞ ಯಾಗಗಳನ್ನು ಮಾಡುತ್ತ ಅಗ್ನಿಹೋತ್ರಿಗಳಾಗಿದ್ದರು.

### ೪೭೮ ಶ್ರೀರಂಗ ಮಾಧವಚಾರ್ಯ

ಇವರು ಕುತ್ತಾಲಂ ವಾಸುದೇವಾಚಾರ್ಯರ ಶಿಷ್ಯರಾದ ಶ್ರೀರಂಗ ರಾಮಾಚಾರ್ಯರಲ್ಲಿ ವೇದಾಂತವನ್ನು ಓದಿ ಮಹಾ ಪಂಡಿತರಾದರು. ದ್ವೈತ ವೇದಾಂತದ

ಪ್ರಮಾಣ ಚಂದ್ರಿಕೆಯಿಂದ ಆರಂಭಿಸಿ ತಾತ್ಪರ್ಯ ಚಂದ್ರಿಕೆಯ ವರೆಗೆ ಸರ್ವ ಗ್ರಂಥ ಗಳೂ ಇವರ ನಾಲಿಗೆಯ ತುದಿಯ ಮೇಲೆ ನಲಿದಾಡುತ್ತಿದ್ದವು. ಇವರ ತಂದೆ ಶ್ರೀರಂಗ ರಾಮಾಚಾರ್ಯರಂತೆ ಮಾಧವಾಚಾರ್ಯರೂ ಕೂಡ ಪಾಠ–ಪ್ರವಚನ ಪಟೀಯಾಂಸರಾದ ವಿದ್ವಾಂಸರಾಗಿದ್ದರು.

ಇವರು ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯರಾಗಿ ಅವರು ನಡೆಯಿಸುವ ಸಭೆಗಳಲ್ಲಿ ಧರ್ಮಾಧಿಕಾರಿಗಳಾಗಿರುತ್ತಿದ್ದರು. ಇವರ ಪ್ರವಚನ ಪಾಂಡಿತ್ಯಕ್ಕೆ ಮೆಚ್ಚಿದ ಶ್ರೀಪಾದಂಗಳವರು ಇವರನ್ನು ಬೆಂಗಳೂರಿನ ಉತ್ತರಾದಿ ಮಠದ ಪಾಠಶಾಲೆಯಲ್ಲಿ ವೇದಾಂತ ಅಧ್ಯಾಪಕರನ್ನಾಗಿ ನಿಯಮಿಸಿದ್ದರು. ಇವರಲ್ಲಿ ಅನೇಕ ಜನರು ವೇದಾಂತವನ್ನು ಓದಿ ಮಹಾ ಪಂಡಿತರಾದರು.

### ೪೭೯ ಶ್ರೀರಂಗ ನಾರಾಯಣಾಚಾರ್ಯ

ಪ್ರಕಾಂಡ ಪಂಡಿತರಾದ ಶ್ರೀರಂಗ ರಾಮಾಚಾರ್ಯರ ಮಕ್ಕಳಾದ ನಾರಾಯಣಾಚಾರ್ಯರು ನ್ಯಾಯ ವೇದಾಂತ ಶಾಸ್ತ್ರದಲ್ಲಿ ಪಾರಂಗತರಾಗಿದ್ದರು. ಶ್ರೀರಂಗದಲ್ಲಿಯೇ ಪಾಠ-ಪ್ರವಚನ ಮಾಡಿಕೊಂಡಿದ್ದರು.

### ೪೮೦ ಶ್ರೀರಂಗ ರಾಮಚಂದ್ರಾಚಾರ್ಯ

ವ್ಯಾಕರಣ ಶಾಸ್ತ್ರದಲ್ಲಿ ಹೆಸರಾಂತ ಪಂಡಿತರು. ವೇದಾಂತದಲ್ಲಿಯೂ ಪ್ರವೇಶ ವಿದ್ದಿತು.

### ೪೮೧ ಏರಿ ರಾಮಾಚಾರ್ಯ

ಇವರು ವೇದಾಂತದಲ್ಲಿ ಒಳ್ಳೇ ಪಂಡಿತರಾಗಿದ್ದರು. ಅನೇಕ ಜನರಿಗೆ ಪಾಠ ಹೇಳಿದರು.

### ೪೮೨ ರಂಗಂಪೇಟಿ ರಾಮಾಚಾರ್ಯ

ಅಗರಖೇಡದ ಸೀತಾರಾಮಾಚಾರ್ಯ ಆದ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿದ ರಾಮಾಚಾರ್ಯರು ನ್ಯಾಯ ಶಾಸ್ತ್ರದಲ್ಲಿ ಉದ್ದಾಮ ವಿದ್ವಾಂಸರಾಗಿದ್ದರು. ಕ್ರೋಢ ಪತ್ರ ಪದ್ಧತಿಯ ಇವರ ಪರಿಷ್ಕಾರ ಅನುಗಮದ ವಾಗ್ವೈಖರಿಯನ್ನು ಕೇಳಿ ಮಹಾ ಮಹಾ ಪಂಡಿತರೂ ನಿಬ್ಬೆರಗಾಗುತ್ತಿದ್ದರು. ಇವರ ಪ್ರತಿಭಾ ಪಾಂಡಿತ್ಯಗಳನ್ನು ನೋಡಿ ಶ್ರೀ ಸತ್ಯಧ್ಯಾನ ತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಇವರನ್ನು ತಮ್ಮ ಉತ್ತರಾದಿ ಮಠದಲ್ಲಿಯೇ ಇಟ್ಟುಕೊಂಡು ಸಮಗ್ರ ತರ್ಕ ಶಾಸ್ತ್ರವನ್ನೆಲ್ಲ ಇವರಲ್ಲಿಯೇ ಅಧ್ಯಯನ ಮಾಡಿದರು. ಉತ್ತರಾದಿ ಮಠದ ಎಲ್ಲ ಸಭಾ ಸಮ್ಮೇಲನಗಳಲ್ಲಿ ವಾಕ್ಯಾರ್ಥ ವಿಚಾರಗಳಲ್ಲಿ ಅವರು ಭಾಗವಹಿಸಿ ತಮ್ಮ ಕೋಟಿಕ್ರಮಗಳಿಂದ ಎಲ್ಲರ ಮೆಚ್ಚುಗೆ ಮನ್ನಣೆಗಳಿಗೆ ಪಾತ್ರರಾಗುತ್ತಿದ್ದರು.

## ೪೮೩ ಪದ್ಮನಾಭಾಚಾರ್ಯ ವರಖೇಡಿ

ಇವರು ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಅಧ್ಯಯನವನ್ನು ಮಾಡಿ ಪಂಡಿತರಾಗಿದ್ದರು.

## ೪೮೪ ಕೃಷ್ಣಾಚಾರ್ಯ ವರಖೇಡಿ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದರು. ಪುಣೆಯಲ್ಲಿ ಪಾಠ ಪ್ರವಚನ ಮಾಡಿಕೊಂಡು ವಾಸವಾಗಿದ್ದರು.

## ೪೮೫ ಭಾವೂ ಆಚಾರ್ಯ ಟೋಣಪಿ ಕಾಶಿ

ಇವರು ವೇದದಲ್ಲಿ ವಿದ್ವಾಂಸರಾಗಿದ್ದರು. ಯಾಜ್ಞಿಕದಲ್ಲಿಯೂ ಪರಿಣತರಾಗಿದ್ದರು. ಕಾಶಿಯಲ್ಲಿದ್ದು ಬಂದ ಯಾತ್ರಿಕರಿಗೆ ಸಕಲ ವಿಧವಾದ ಸೌಕರ್ಯಗಳನ್ನು ಕಲ್ಪಿಸಿಕೊಡುತ್ತಿದ್ದರು. ಇವರ ಮಕ್ಕಳಾದ ಟೋಣಪಿ ಗೋಪಾಲಾಚಾರ್ಯರು ಈಗ ಕಾಶಿಯಲ್ಲಿದ್ದು ತೀರ್ಥ ಕ್ಷೇತ್ರ ಯಾತ್ರಾ ಸೌಕರ್ಯವನ್ನು ಬಂದವರಿಗೆಲ್ಲ ಕಲ್ಪಿಸಿಕೊಡುತ್ತಿದ್ದಾರೆ.

## ೪೮೬ ಚಿಪ್ಪಗಿರಿ ರಾಘವೇಂದ್ರಾಚಾರ್ಯ

ಉಡುಪಿಯ ಶ್ರೀ ರಾಘವೇಂದ್ರ ಸ್ವಾಮಿ ಮಠದಲ್ಲಿ ವೃಂದಾವನದ ಅರ್ಚಕರಾಗಿದ್ದ ರಾಘವೇಂದ್ರಾಚಾರ್ಯರು ತೀರ್ಥಹಳ್ಳಿಯ ಬೀಗಮುದ್ರೆ ಮರಿಯಾಚಾರ್ಯರಲ್ಲಿ ಸಾಹಿತ್ಯ ವ್ಯಾಕರಣಗಳನ್ನೂ ಸೋದಾಮಠದ ಶ್ರೀ ವಿಶ್ವಾಧೀಶ ತೀರ್ಥರಲ್ಲಿ ವೇದಾಂತವನ್ನೂ ಶ್ರೀ ಅದಮಾರು ಮಠದ ವಿಬುಧಪ್ರಿಯ ತೀರ್ಥರಲ್ಲಿ ಸುಧಾ ಗ್ರಂಥವನ್ನೂ ಅಧ್ಯಯನ ಮಾಡಿ ಶಾಸ್ತ್ರ ಪಾರಂಗತರಾದರು. ಇವರ ಬುದ್ಧಿ ಮತ್ತೆಗೆ ಮೆಚ್ಚಿದ ಶ್ರೀ ವಿಬುಧಪ್ರಿಯ ತೀರ್ಥರು ಇವರಿಗೆ ಬಂಗಾರದ ಜೋಡು ಕಡಗಗಳನ್ನು ಹಾಕಿ ಗೌರವಿಸಿದರು. ಶ್ರೀ ರಾಘವೇಂದ್ರ ಸ್ವಾಮಿ ಮಠದ ಶ್ರೀಗಳವರೂ ಇವರನ್ನು ಗೌರವಿಸುತ್ತಿದ್ದರು.

## ೪೮೭ ದೇವೇಂದ್ರ ಕೃಷ್ಣಾಚಾರ್ಯ

ಇವರು ಪೂಜ್ಯ ಹುಲಿಗಿ ಅಣ್ಣಯ್ಯಾಚಾರ್ಯರಲ್ಲಿ ನ್ಯಾಯ, ವೇದಾಂತ, ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿ ಮಹಾ ಪಂಡಿತರಾಗಿದ್ದರು. ವಾಕ್ಯಾರ್ಥದಲ್ಲಿಯೂ ವಿದ್ವಾಂಸರಾಗಿದ್ದರು. ಶ್ರೀ ಸತ್ಯಧ್ಯಾನ ತೀರ್ಥರ ಕಾಲದಲ್ಲಿ ಉತ್ತರಾದಿ ಮಠಕ್ಕೆ ಬಂದು ಅಲ್ಲಿಯ ವಿದ್ವತ್ ಸಭೆಗಳಲ್ಲಿ ಭಾಗವಹಿಸುತ್ತಿದ್ದರು.

ಇವರಿಗೆ ಜ್ಯೋತಿಷ್ಯ ಶಾಸ್ತ್ರದಲ್ಲಿಯೂ ಮಹಾ ಪಾಂಡಿತ್ಯವಿದ್ದಿತು. ಇವರು ವಿಷ್ಣು ಪಂಚಕ ನಿರ್ಣಯ, ನರಹರಿ ಸ್ತುತಿ, ರಾಘವೇಂದ್ರ ಮಂಗಳಾಷ್ಟಕ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

## ೪೪೩ ಶ್ರೀ ವ್ಯಾಸರಾಯರಾಚಾರ್ಯ ಶ್ರೀಪತಿ ಮಹಿಷಿ



ಶ್ರೀ ಗೋಪಾಲಾಚಾರ್ಯರ ಚಿರಂಜೀವರೂ ಮಹಿಷಿ ಕ್ಷೇತ್ರದವರೂ ಆದ ಶ್ರೀವ್ಯಾಸರಾಯಾಚಾರ್ಯರು ತೀರ್ಥಹಳ್ಳಿಯ ಮರಿಯಾಚಾರ್ಯ ಎಂಬ ಪಂಡಿತರಲ್ಲಿ ವೇದಾಂತವನ್ನೂ ಅದಕ್ಕೆ ಉಪಯುಕ್ತವಾದ ತರ್ಕ ವ್ಯಾಕರಣಗಳನ್ನೂ ಓದಿದರು. ಕೂಡ್ಲಿ ಅಕ್ಷೋಭ್ಯ ಮಠದ ಶ್ರೀ ಟಂಕಸಾಲಿ ಸ್ವಾಮಿಗಳಲ್ಲಿ ಸುಧಾ ಓದಿ ಮಂಗಳ ಮಾಡಿದರು. ಮಹಿಷಿಯಲ್ಲಿ ವೆಂಕಣ್ಣಾಚಾರ್ಯ ಮುಂತಾದ ಅನೇಕ ಜನರಿಗೆ ನಿರಂತರ ಪಾಠ ಹೇಳುತ್ತಿದ್ದರು. ತತ್ವಪ್ರಕಾಶಿಕೆಯನ್ನು ಎಲ್ಲ ಟೀಕಾ ಟಿಪ್ಪಣಿ ವಿಷಯಗಳ ಸಾರೋದ್ಧಾರ ಮಾಡಿ ಒಂದು ಸುಸಂಸ್ಕೃತದಲ್ಲಿ ಅನುವಾದ ಗ್ರಂಥವನ್ನು ಬರೆದಿದ್ದಾರೆ. ಶ್ರೀ ಭಂಡಾರಕೇರೆ ಶ್ರೀ ಪೇಜಾವರ ಶ್ರೀಭೀಮನಕಟ್ಟೆ ಶ್ರೀಗಳವರ ಸಮಕ್ಷ ಮಹಿಷಿಯ ಅಧ್ಯಾತ್ಮ ಶಿಬಿರದ ಸಮಯದಲ್ಲಿ ತತ್ವಪ್ರಕಾಶಿಕೆಯ ಮುಖ್ಯ ಮುಖ್ಯ ಘಟ್ಟಗಳನ್ನು ಎತ್ತಿ ಮೂರು ಗಂಟೆ ಹೊತ್ತು ಅನುವಾದ ಮಾಡಿ ಮಂಗಳ ಮಾಡಿದರು. ಮೂವರು ಶ್ರೀಗಳವರೂ, ನೆರೆದ ಪಂಡಿತ ಪಾಮರರೂ ತಲೆದೂಗಿದರು. ಶ್ರೀ ಭೀಮನಕಟ್ಟೆ ಶ್ರೀಗಳವರು ಆ ಗ್ರಂಥ ಪ್ರಕಾಶನಕ್ಕೆ ಬಂದಷ್ಟು ವೆಚ್ಚವನ್ನು ಕೊಡುವದಾಗಿ ಆಶ್ವಾಸನೆಯಿತ್ತು ಅನುಗ್ರಹಿಸಿದರು. ಉಭಯ ಶ್ರೀಗಳವರೂ ಅವರ ಕೃತಿಯನ್ನು ಮೆಚ್ಚಿ ಆಶೀರ್ವದಿಸಿದ್ದಾರೆ. ಲೌಕಿಕದಲ್ಲಿಯೂ ಅವರು ಹೆಸರುವಾಸಿಗಳಾದರು. ಮಲೆನಾಡಿನಲ್ಲಿ ಮಹರ್ಷಿಗಳೆಂದೂ, ಹಳೆ ಹುಲಿಯೆಂದೂ ಅವರು ಖ್ಯಾತರಾಗಿದ್ದರು.

ಇವರು ಇದೇ ಕೀಲಕ ಭಾ. ಶು. ೧೧ ರಂದು ನಿಧನರಾದರು.

## ೪೮೯ ಶ್ರೀನಿವಾಸಾಚಾರ್ಯ ಪಂಚಮುಖಿ

ಮಲಪ್ರಭಾ ತೀರವಾದ ಹೊಳೆ-ಆಲೂರಿನ ಹತ್ತಿರ ಆಚಾರ್ಯಕೊಪ್ಪ ಎಂಬ ಊರು ಪಂಡಿತರ ಬೀಡು ಎಂದು ಪ್ರಸಿದ್ಧವಾಗಿದ್ದಿತು. ಕರ್ನಾಟಕದ ವಿದ್ವದ್ವಂಶವೆಂದು ಪ್ರಖ್ಯಾತವಾದ ಪಂಚಮುಖಿ ಆಚಾರ್ಯರು ಇಲ್ಲಿ ನೆಲಿಸಿದ್ದರಿಂದ ಈ ಊರು "ಆಚಾರ್ಯ ಕೊಪ್ಪ" ಎಂದು ಹೆಸರಾಯಿತು.

ಈ ಮನೆತನದಲ್ಲಿ ಅನೇಕ ಜನ ಪಂಡಿತರಾಗಿದ್ದು ಇತ್ತೀಚೆಗೆ ಪಂಚ ಮುಖಿ ಶ್ರೀನಿವಾಸಾಚಾರ್ಯರು ವೇದಾಂತ, ವ್ಯಾಕರಣ ಶಾಸ್ತ್ರಗಳಲ್ಲಿ ಮಹಾಪಂಡಿತರಾಗಿದ್ದರು. ಅನೇಕ ಜನ ಶಿಷ್ಯರನ್ನು ಮನೆಯಲ್ಲಿ ಇಟ್ಟುಕೊಂಡು ಪಾಠ-ಪ್ರವಚನ ಮಾಡುತ್ತಿದ್ದರು. ಇವರು ಶ್ರೀ ಗುರು ಸಾರ್ವಭೌಮರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು.

ಗದುಗಿನ ಹತ್ತಿರದ ಹೊಂಬಳದ ಜೋಶಿ ಪಾಂಡುರಂಗಾಚಾರ್ಯರು ಇವರಲ್ಲಿ ವ್ಯಾಕರಣ, ವೇದಾಂತ ಓದಿದ್ದರು.

## ೪೯೦ ರಘುವೀರ ವ್ಯಾಸರಾಯಾಚಾರ್ಯರು

ಇವರು ಕಾರವಾರ ತಾಲೂಕಿನ ಸುಂಕೇರಿ ಗ್ರಾಮದಲ್ಲಿ ವಾಸವಾಗಿದ್ದರು. ಗೌಡ ಸಾರಸ್ವತ ಸಮಾಜದಲ್ಲಿ ಪ್ರಮುಖರಾಗಿದ್ದು, ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿ ಪುರಾಣ ಹೇಳುತ್ತಿದ್ದರು.

## ೪೯೧ ಅಪ್ಪಾಭಟ್ಟ ಯಾನೆ ಶ್ರೀನಿವಾಸ ನರಸಿಂಹಭಟ್ಟ

ಇವರು ಜ್ಯೋತಿಷ್ಯ, ವೇದಾಂತ, ವೇದಸಂಹಿತೆಗಳನ್ನು ಅಧ್ಯಯನ ಮಾಡಿದ್ದರು. ಒಳ್ಳೆ ಪ್ರಸಿದ್ಧ ಯಾಜ್ಞಿಕರೂ ಆಗಿದ್ದರು. ದೇವಪೂಜಾಪದ್ಧತಿ, ಅಗ್ನಿಮುಖ, ಸಂಧಿ ಶಾಂತಿ ಮುಂತಾದ ಗ್ರಂಥಗಳನ್ನು ಬರೆದು ಪ್ರಸಿದ್ಧಿಸಿದ್ದಾರೆ.

## ೪೯೨ ಶ್ರೀ ದಾಮೋದರ ರಾಮಾಚಾರ್ಯರು

ಇವರು ಮಾಧ್ವ ತತ್ವಜ್ಞಾನದಲ್ಲಿ ನಿಷ್ಣಾತ ಪಂಡಿತರಾಗಿದ್ದು ಪ್ರಸಿದ್ಧ ಪುರಾಣಿಕರಾಗಿದ್ದರು. ಉತ್ತರ ಕನ್ನಡ ಜಿಲ್ಲಾ ಹೊಸಾಡದಲ್ಲಿದ್ದರು.

## ೪೯೩ ಪಾಂಡುರಂಗ ಕೃಷ್ಣಭಟ್ಟರು

ಇವರು ಅಂಕೋಲಾದಲ್ಲಿ ಇದ್ದರು. ಇವರು ವೇದ ಕೋವಿದರಾಗಿದ್ದು ಯಾಜ್ಞಿಕ ನಿಪುಣರಾಗಿದ್ದರು ಸಂಸ್ಕೃತದಲ್ಲಿ ಒಳ್ಳೆ ವ್ಯುತ್ಪನ್ನ ವಿದ್ವಾಂಸರಾಗಿದ್ದರು.

## ೪೯೪ ತಮ್ಮಣ್ಣಾಚಾರ್ಯ ಗೋವಿಂದಾಚಾರ್ಯ ಅಣ್ಣಿಗೇರಿ

ಇವರು ಮೂಲತಃ ಅಣ್ಣಿಗೇರಿಯವರು. ಇವರು ಧಾರವಾಡದಲ್ಲಿ ಈ ಶತಮಾನದ ಆದಿಯಲ್ಲಿದ್ದರು.

ಇವರು ಪುಣೆಯ ಭಿಕ್ಕು ಶಾಸ್ತ್ರಿಗಳಲ್ಲಿ ನ್ಯಾಯ ಶಾಸ್ತ್ರವನ್ನು ಓದಿದರು. ಆಗಿನ ಕಾಲದಲ್ಲಿ ನ್ಯಾಯ ಶಾಸ್ತ್ರದಲ್ಲಿ ಇವರ ಸರಿ ಯಾರೂ ಇದ್ದಿಲ್ಲವೆಂದು ಹೇಳಿಕೆ ಇತ್ತು. ಇವರು ನಂತರ ಉಡುಪಿಯಲ್ಲಿ ಶ್ರೀ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶರಲ್ಲಿ ವೇದಾಂತವನ್ನು ಓದಿದ್ದರು.

ಇವರು ಮೊದಲು ಧಾರವಾಡದ ಶ್ರೀ ಶಂಕರಾಚಾರ್ಯ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ನಂತರ ಧಾರವಾಡದ ಶ್ರೀ ಸತ್ಯಧೀರ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ ವೇದಾಂತ ಹೇಳುತ್ತಿದ್ದರು. ೧೯೧೫ ರಲ್ಲಿ ನಿವೃತ್ತರಾದರು.

ಇವರಲ್ಲಿ ಗದುಗಿನ ವೆಂಕಟರಮಣಾಚಾರ್ಯ ಹುಯಿಲಗೋಳ, ರಾಮಾಚಾರ್ಯ ಪಾಂಡುರಂಗಿ, ಶ್ರೀನಿವಾಸಾಚಾರ್ಯ ಬಾದರಾಯಣ, ಕೂಸನೂರ ತಮ್ಮಣ್ಣಾಚಾರ್ಯ, ಸೊಂಡೂರ ಪಾಂಡುರಂಗರಾಯರು, ಭೀಮರಾವ ಕಾಮಲಾಪುರ ಮುಂತಾದವರು ವೇದಾಂತ ಓದುತ್ತಿದ್ದರು, ಇವರಲ್ಲದೆ ವಿಜಾಪುರದ ಶ್ರೀ ಆದ್ಯ ಅನಂತಾಚಾರ್ಯರು ಅಲಂಕಾರ ಶಾಸ್ತ್ರವನ್ನು ಓದುತ್ತಿದ್ದರು.

ಇವರು ನಿವೃತ್ತರಾದ ಒಂದು ವರ್ಷದಲ್ಲಿ ವೈಕುಂಠವಾಸಿಗಳಾದರು.

ಇವರ ಮನೆಯಲ್ಲಿ ೧೮೯೦ ರಿಂದಾ ಆಹಿತಾಗ್ನಿ ಇದ್ದ ಕಾರಣ ಇವರಿಗೆ ಅಗ್ನಿಹೋತ್ರಿ ತಮ್ಮಣ್ಣಾಚಾರ್ಯರೆಂದು ಕರೆಯುತ್ತಿದ್ದರು. ಇವರು ಅಳಪುಡಿಯವರು ಎಂದೂ ಪ್ರಸಿದ್ಧರಾಗಿದ್ದರು. ಇವರು ೮೫ ವರ್ಷ ಬಾಳಿದರು.

## ೪೯೪ ಕೂಸನೂರ ತಮ್ಮಣ್ಣಾಚಾರ್ಯರು (ಶ್ರೀನಿವಾಸಾಚಾರ್ಯರು)

ಇವರು ವೇದಾಂತ ವಿಷಯವನ್ನು ವೆಂಕಟರಮಣಾಚಾರ್ಯ ಗಲಗಲಿಯವರಲ್ಲಿ ಅಧ್ಯಯನ ಮಾಡಿದ್ದರು. ಧಾರವಾಡದಲ್ಲಿ ನಿತ್ಯವೂ ಭಾಗವತ ಪುರಾಣ ಹೇಳುತ್ತಿದ್ದರು. ಇವರು ಆಹಿತಾಗ್ನಿಯನ್ನು ಇಟ್ಟಿದ್ದರು. ಗುರುಡಚೈಯನ ಮುಂತಾದ ಯಾಗಗಳನ್ನು ಮಾಡಿದರು.

## ೪೯[illegible] ವಾಸುದೇವಾಚಾರ್ಯ ಅವಧಾನಿ

ಇವರು ಪುರಾಣಿಕ ಮನೆತನದವರು. ಇವರ ತಂದೆಯವರಾವ ಅಣ್ಣಯ್ಯಾಚಾರ್ಯರು ಧಾರವಾಡದಲ್ಲಿ ಗುರ್ಲಹೊಸೂರ ನಾಯಿಕ ಮನೆತನದವರು ಕಟ್ಟಿಸಿದ

ವಿಠ್ಠಲ ಮಂದಿರದಲ್ಲಿ ಪುರಾಣ ಹೇಳುತ್ತಿದ್ದರು. ವಾಸುದೇವಾಚಾರ್ಯರೂ ಬೆಳಿಗ್ಗೆ ಭಾಗವತ, ಸಂಜೆ ಭಾರತ ಪುರಾಣ ಹೇಳುತ್ತಿದ್ದರು. ಗಲಗಲಿ ವೆಂಕಟರಮಣಾಚಾರ್ಯರಲ್ಲಿ ಅಧ್ಯಯನ ಮಾಡಿ ಪಂಡಿತರಾಗಿದ್ದರು. ಇವರು ೧೯೭೬ ರಲ್ಲಿ ವೈಕುಂಠವಾಸಿಗಳಾದರು.

## ೪೯೬ ಷಡ್ದರ್ಶನವಲ್ಲಭ ವಿಷ್ಣುದಾಸಾಚಾರ್ಯ

ಇವರು ವ್ಯಾಸರಾಜ ಮಠದ ಶ್ರೀ ಶ್ರೀ ರಾಜೇಂದ್ರ ತೀರ್ಥರ ಶಿಷ್ಯರು. ಶ್ರೀ ಶ್ರೀ ವ್ಯಾಸರಾಜರಕಿಂತಲೂ ಪ್ರಾಚೀನರು. ಇವರು ಚತುರಸ್ರ ಪಂಡಿತರು. ವಾದರತ್ನಾವಲೀ ಎಂಬ ಪ್ರಸಿದ್ಧವಾದ ವಾದ ಗ್ರಂಥವನ್ನು ಬರೆದಿದ್ದಾರೆ. ಹೋದ ವರ್ಷ ಶ್ರೀ ಪಡಮುನ್ನೂರ ನಾರಾಯಣಾಚಾರ್ಯರ ಸತ್ಕಾರ ಸಮಿತಿಯವರು ಈ ಗ್ರಂಥವನ್ನು ಪ್ರಕಾಶನಗೊಳಿಸಿದ್ದಾರೆ.

## ೪೯೭ ತರಂಗಿಣಿ ರಾಮಾಚಾರ್ಯ

ರಾಮಾಚಾರ್ಯರು ಪುಣತುಂಬಾ ಗ್ರಾಮದವರು. ಉಪಮನ್ಯು ಗೋತ್ರದವರು. ಇವರ ತಂದೆ ವಿಶ್ವನಾಥಾಚಾರ್ಯ (ವ್ಯಾಸಾಚಾರ್ಯ) ರು. ಇವರ ಪಿತಾಮಹರು ಮುರಾರಿ ಆಚಾರ್ಯರು. ಇವರು ಶ್ರೀಮದಾಚಾರ್ಯ ಕೃತ ಸದಾಚಾರ ಸ್ಮೃತಿಗೆ ವ್ಯಾಖ್ಯಾನ ಬರೆದಿದ್ದಾರೆ. ರಾಮಾಚಾರ್ಯರ ಅಣ್ಣ ನಾರಾಯಣಾಚಾರ್ಯರು ನ್ಯಾಯ, ವ್ಯಾಕರಣ, ಮೀಮಾಂಸಾ, ವೇದಾಂತ, ನಾಲ್ಕು ಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತರಾಗಿದ್ದರು.

ಶ್ರೀ ರಾಮಾಚಾರ್ಯರು ನ್ಯಾಯ ವ್ಯಾಕರಣಗಳನ್ನು ತಮ್ಮ ಅಣ್ಣಂದಿರಲ್ಲಿಯೇ ಅಧ್ಯಯನ ಮಾಡಿ ವೇದಾಂತವನ್ನು ತಮ್ಮ ಗುರುಗಳಾದ ಉತ್ತರಾದಿ ಮಠದ ಪಂಡಿತ ಪರಿವ್ರಾಜಕರಾದ ಶ್ರೀ ರಘೂತ್ತಮ ತೀರ್ಥ ಶ್ರೀಪಾದಂಗಳವರಲ್ಲಿ ವ್ಯಾಸಂಗ ಮಾಡಿದರು.

ರಾಮಾಚಾರ್ಯರು ಮಧುಸೂದನ ಸರಸ್ವತಿ ಬರೆದ ಅದ್ವೈತಸಿದ್ಧಿ ಖಂಡನರೂಪವಾದ ತರಂಗಿಣಿ ಎಂಬ ಗ್ರಂಥವನ್ನು ಬರೆದಿದ್ದರಿಂದ ಇವರಿಗೆ ತರಂಗಿಣಿ ರಾಮಾಚಾರ್ಯರೆಂಮ ಹೆಸರಾಯಿತು.

ಶ್ರೀ ಶ್ರೀ ವ್ಯಾಸರಾಜ ಸ್ವಾಮಿಗಳು ಬರೆದ ನ್ಯಾಯಾಮೃತ ಎಂಬ ಅದ್ವೈತಮತ ಖಂಡನ ರೂಪವಾದ ಗ್ರಂಥವನ್ನು ಕಾಶಿಯ ಮಧುಸೂದನ ಸರಸ್ವತಿ ಎಂಬ

ಪ್ರಸಿದ್ಧ ಅದ್ವೈತ ಪಂಡಿತನು ನ್ಯಾಯಾಮೃತಕ್ಕೆ ಖಂಡನಾಭಾಸ ರೂಪವಾಗಿ ಅದ್ವೈತ ಸಿದ್ಧಿ ಎಂಬ ಗ್ರಂಥವನ್ನು ಬರೆದಿದ್ದನು. ರಾಮಾಚಾರ್ಯರು ಕಾಶಿಗೆ ಹೋಗಿ ಅದ್ವೈತಿಗಳ ವೇಷ ಹಾಕಿಕೊಂಡು ಮಧುಸೂದನ ಸರಸ್ವತಿಯಲ್ಲಿಯೇ ಶಿಷ್ಯತ್ವ ವನ್ನು ವಹಿಸಿಕೊಂಡಂತೆ ಮಾಡಿ ಅದ್ವೈತ ಸಿದ್ಧಿಯ ಪ್ರತಿಪದ ಪ್ರತ್ಯಕ್ಷರವನ್ನೂ ಖಂಡಿಸಿ ತರಂಗಿಣಿ ಎಂಬ ಗ್ರಂಥವನ್ನು ಬರೆದರು.

ಮಧುಸೂದನ ಸರಸ್ವತಿಗೆ ರಾಮಾಚಾರ್ಯರು ತಮ್ಮ ಗ್ರಂಥವನ್ನು ಖಂಡನ ಮಾಡಿದ್ದಾರೆಂದು ತಿಳಿದು ಗುರುದಕ್ಷಿಣಾರೂಪವಾಗಿ ಅವರ ಗ್ರಂಥವನ್ನು ಪಡೆದು ಗಂಗೆಯಲ್ಲಿ ಎಸೆದರಂತೆ. ಆದರೆ ರಾಮಾಚಾರ್ಯರು ತಾವು ಬರೆದ ಖಂಡನ ಗ್ರಂಥದ ಎರಡು ಪ್ರತಿಗಳನ್ನು ಮಾಡಿ ಒಂದನ್ನು ದಕ್ಷಿಣ ದೇಶಕ್ಕೆ ಕಳಿಸಿದ್ದರು.

ಆ ಖಂಡನ ಗ್ರಂಥವನ್ನು ನದಿಯಲ್ಲಿ ಹಾಕಿದ್ದರಿಂದ ಅದಕ್ಕೆ ತರಂಗಿಣಿ ಎಂಬ ಹೆಸರು ಬಂದಿತಂತೆ.

ಈ ತರಂಗಿಣಿ ಎಂಬ ಗ್ರಂಥವು ಮಾಧ್ವ ವಾಙ್ಮಯ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿದೆ.

## ೪೯೮ ಶರ್ಕರಾ ಶ್ರೀನಿವಾಸಾಚಾರ್ಯ

ಇವರು ಯಾದವಾರ್ಯರ ಶಿಷ್ಯರು. ಇವರು ಒಟ್ಟು ನಾಲ್ಕು ಗ್ರಂಥಗಳನ್ನು ಬರೆದಿದ್ದು ಅವು ಉಪಲಬ್ಧವಿವೆ. ಅವುಗಳಲ್ಲಿ ತತ್ತ್ವಪ್ರಕಾಶಿಕೆಗೆ ವಾಕ್ಯಾರ್ಥಮಂಜರೀ ಎಂಬ ಇವರ ಟಿಪ್ಪಣಿಯು ಶರ್ಕರಾ ಟಿಪ್ಪಣೀ ಎಂದು ಪ್ರಸಿದ್ಧವಾಗಿದೆ. ಇದರಂತೆ ಭೇದೋಜ್ಜೀವನಿ, ಸದಾಚಾರಸ್ಮೃತಿ, ತಂತ್ರಸಾರಗಳಿಗೆ ಇವರ ವ್ಯಾಖ್ಯಾನಗಳಿದ್ದು ಅವೆಲ್ಲವೂ ಸರಳ ದ್ರಾಕ್ಷಾ ಪಾಕದಲ್ಲಿದ್ದು ಜನರಿಗೆ ಅತ್ಯುಪಯುಕ್ತವಾಗಿವೆ.

## ೪೯೯ ರಾಜಾಚಾರ್ಯ ಹಾವನೂರ (ಶಿಕಾರಪೂರ)

ಇವರು ವೇದಾಂತದಲ್ಲಿ ಮಹಾ ಪಂಡಿತರಾಗಿದ್ದರು. ಹತ್ತೆಂಟು ಶಿಷ್ಯರನ್ನು ನಿರಂತರವೂ ಮನೆಯಲ್ಲಿ ಇಟ್ಟುಕೊಂಡು ಪಾಠ ಹೇಳುತ್ತಿದ್ದರು.

## ೫೦೦ ವಿಠ್ಠಲಮೂರ್ತಿ ಆಚಾರ್ಯ ಹಾವನೂರ

ಇವರು ತಮ್ಮ ತಂದೆ ರಾಜಾಚಾರ್ಯರಲ್ಲಿ ವೇದಾಂತ ವ್ಯಾಸಂಗ ಮಾಡಿ ಮಹಾ ಪಂಡಿತರಾಗಿದ್ದರು. ಇವರು ಶಿಕಾರಪೂರ, ಬಂಕಾಪೂರ ಮುಂತಾದ ಕಡೆ ಗಳಲ್ಲಿ ಇದ್ದು ಅನೇಕ ಜನರಿಗೆ ಪಾಠ ಪ್ರವಚನ ಮಾಡಿಸಿದರು. ಇವರಲ್ಲಿ ರಾಘ

ವೇಂದ್ರಾಚಾರ್ಯ, ರಂಗ ವಿಠ್ಠಲಾಚಾರ್ಯರು ಓದಿ ಪಂಡಿತರಾದರು. ಇವರು ಸತ್ಯಧ್ಯಾನ ತೀರ್ಥರ ಸಭೆಗೆ ಹೋಗಿ ವೇದಾಂತದಲ್ಲಿ ವಾಕ್ಯಾರ್ಥ ಮಾಡುತ್ತಿದ್ದರು.

### ೫೦೧ ಬಿಂದಾಚಾರ್ಯ ಹಾವನೂರ (ನವಲಗುಂದ)

ಇವರು ಉತ್ತರಾದಿ ಮಠದ ಶ್ರೀ ಸತ್ಯಪರಾಕ್ರಮ ತೀರ್ಥ ಶ್ರೀಪಾದಂಗಳವರಲ್ಲಿ ಅಧ್ಯಯನ ಮಾಡಿ ಮಹಾ ಪಂಡಿತರಾಗಿದ್ದರು. ನ್ಯಾಯ ಶಾಸ್ತ್ರದಲ್ಲಿ ಇವರಿಗೆ ಅಸಾಮಾನ್ಯವಾದ ವೈದುಷ್ಯವಿದ್ದಿತು. ವೇದಾಂತದಲ್ಲಿಯೂ ಇವರು ಪಾಠ ಪ್ರವಚನ ಪರಾಯಣರಾಗಿದ್ದರು.

### ೫೦೨ ಭೀಮಸೇನಾಚಾರ್ಯ ಸೂಳಿಭಾವಿ (ನವಲಗುಂದ)

ಇವರು ಪಂಚಮುಖಿ ಶ್ರೀ ವೆಂಕಟಾಚಾರ್ಯರ ಶಿಷ್ಯರಾಗಿ ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಪ್ರವಚನ ಪಾಂಡಿತ್ಯವನ್ನು ಪಡೆದಿದ್ದರು. ಇವರ ದಿವ್ಯ ಜ್ಞಾನವನ್ನು ತಪೋಬಲವನ್ನು ಕಂಡು ಶಿರಸಂಗಿಯ ಸಂಸ್ಥಾನಿಕರು ಇವರನ್ನು ತಮ್ಮ ಆಸ್ಥಾನ ವಿದ್ವಾಂಸರನ್ನಾಗಿ ಮಾಡಿಕೊಂಡಿದ್ದರು. ಹೊಲ-ಮನೆಗಳನ್ನಿತ್ತು ಸತ್ಕರಿಸಿದ್ದರು. ಇವರಿಗೆ ಹಗಲು ದೀವಟಿಗೆ ಮರ್ಯಾದೆ ಇದ್ದಿತು.

### ೫೦೩ ಗೋಪಾಲಕೃಷ್ಣಾಚಾರ್ಯ ಸೂಳಿಭಾವಿ (ನವಲಗುಂದ)

ಇವರು ಜಾಲೀಹಾಳ ಗಂಗೂರ ಭೀಮಸೇನಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದ್ದರು. ಇವರಿಗೆ ವೇದಾಂತದಲ್ಲಿ ಚನ್ನಾಗಿ ಗತಿ ಇದ್ದಿತು. ಕಾವ್ಯದಲ್ಲಿ ವಿಶೇಷ ಪ್ರಗತಿಯಿದ್ದಿತು.

### ೫೦೪ ಕರ್ಜಗಿ ದಾಸಾಚಾರ್ಯ (ಧಾರವಾಡ)

ಇವರು ಗಲಗಲಿ ಮಧ್ವಾಚಾರ್ಯರಲ್ಲಿ ಸುಧಾದಿ ವೇದಾಂತ ಗ್ರಂಥಗಳನ್ನು ಓದಿ ಶಿಕ್ಷಣ ಶಾಖೆಯಲ್ಲಿ ಕೆಲಸ ಮಾಡಿದರು.

### ೫೦೫ ನಾಗರಳ್ಳಿ ಭೀಮಾಚಾರ್ಯ

ಇವರು ಯಳಮೇಲಿ ಆಚಾರ್ಯರಲ್ಲಿ ವೇದಾಂತ ವ್ಯಾಕರಣಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರು.

### ೫೦೬ ದಾದಾಚಾರ್ಯ ಗಲಗಲಿ ( ಧಾರವಾಡ )

ಇವರು ವೇದಾಂತ ಶಾಸ್ತ್ರದಲ್ಲಿ ಮಹಾ ಪಂಡಿತರಾಗಿದ್ದರು. ಗಲಗಲಿ ಮಧ್ವಾಚಾರ್ಯರು ಇವರಲ್ಲಿಯೇ ವೇದಾಂತವನ್ನು ಅಧ್ಯಯನ ಮಾಡಿದರು.

### ೫೦೭ ಕರ್ಜಗಿ ಭೀಮಸೇನಾಚಾರ್ಯ

ವೇದಾಂತವನ್ನು ಚನ್ನಾಗಿ ಅಧ್ಯಯನ ಮಾಡಿದ್ದರು.

### ೫೦೮ ಕೇಶವಾಚಾರ್ಯ ಹುಬ್ಬಳ್ಳಿ (ಗಲಗಲಿ)

ಇವರು ಗಲಗಲಿ ಶ್ರೀ ರಂಗಾಚಾರ್ಯರಲ್ಲಿ ಅಧ್ಯಯನ ಮಾಡಿ ತರ್ಕಶಾಸ್ತ್ರದಲ್ಲಿ ಅಪ್ರತಿಮ ಪಂಡಿತರಾಗಿದ್ದರು. ಇವರ ನ್ಯಾಯ ಶಾಸ್ತ್ರ ಪ್ರಭುತ್ವ ಪಾಂಡಿತ್ಯವನ್ನು ಕಂಡು ಗದ್ವಾಲ ಸಂಸ್ಥಾನಿಕರು ಇವರಿಗೆ ನ್ಯಾಯ ಭಟ್ಟಾರಕ ಎಂದು ಬಿರುದನ್ನು ಕೊಟ್ಟಿದ್ದರು. ಶ್ರೀ ಸತ್ಯಪರಾಕ್ರಮ ತೀರ್ಥರ ಸಮಕಾಲೀನರಾದ ಶ್ರೀ ಗಲಗಲಿ ಮಧ್ವಾಚಾರ್ಯರು ಇವರಲ್ಲಿಯೇ ಸಂಪೂರ್ಣ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿದ್ದರು.

### ೫೦೯ ರಾಮಕೇಶವಾಚಾರ್ಯ ಗಲಗಲಿ (ಶೂರಪಾಲಿ)

ಇವರು ಸಾಹಿತ್ಯ ವೇದಾಂತಾದಿ ಶಾಸ್ತ್ರಗಳಲ್ಲಿ ನಿಪುಣರಾಗಿದ್ದರು. ಕೃಷ್ಣಾತೀರವಾದ ಶೂರಪಾಲಿ ಕ್ಷೇತ್ರದಲ್ಲಿ ಪಾಠ ಪ್ರವಚನ ಮಾಡುತ್ತ ಬಂದ ಅತಿಥಿ ಅಭ್ಯಾಗತರನ್ನು ಸ್ವಾಗತ ಸತ್ಕಾರ ಪೂರ್ವಕವಾಗಿ ಉಪಚರಿಸುತ್ತ ವಾಸವಾಗಿದ್ದರು.

### ೫೧೦ ಶ್ರೀನಿವಾಸಾಚಾರ್ಯ ಗಲಗಲಿ

ಇವರು ನಾಲವರ ಷಟ್ಕರ ಪೈಕಿ ಅನ್ಯತಮರಾಗಿದ್ದು ಸ್ವನಾಮಧನ್ಯತಮರು ಆದ ಮೇಧಾವಿ ವಿದ್ವಾಂಸರಾಗಿದ್ದರು. ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅತ್ಯದ್ಭುತವಾದ ಪ್ರಚಂಡ ಪಾಂಡಿತ್ಯದಿಂದ ಮನ್ನಿತರಾದ ಈ ಮಹಾ ಪಂಡಿತರು ಬಹುಕಾಲ ಪರ್ಯಂತ ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾಗಿದ್ದರು.

## ೫೧೧ ಕೃಷ್ಣಾವಧೂತ ಪಂಡಿತರು

ಇವರು ೧೮೩೫ ರಲ್ಲಿ ನಾರಾಯಣದೇವರಕೆರೆ ಎಂಬ ಹಳ್ಳಿಯಲ್ಲಿ ಹುಟ್ಟಿದರು. ಇದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿ ಇದೆ. (ಈಗ ಈ ನಾರಾಯಣ ದೇವರಕೆರೆ ತುಂಗಭದ್ರಾ ಯೋಜನೆಯಿಂದಾಗಿ ನೀರಲ್ಲಿ ಮುಳುಗಿದೆ.)

ಇವರು ಶಾಂಡಿಲ್ಯ ಗೋತ್ರದವರು. ಇವರ ತಂದೆ ವೆಂಕಟರಮಣಾಚಾರ್ಯ, ತಾಯಿ ತ್ರಿವೇಣಿಬಾಯಿ. ಇವರು ಮೂರು ತಿಂಗಳು ಕೂಸು ಇದ್ದಾಗ ಸೊಂಡೂರಿನ ಕುತ್ಸಸ ಗೋತ್ರದ ಭೀಮಸೇನ ಎಂಬವರು ಇವರನ್ನು ದತ್ತಕ ತೆಗೆದುಕೊಂಡರು. ನಂತರ ಇವರಿಗೆ ಅಲ್ಲಿ ಮಾಧವನೆಂದು ಹೆಸರಿಡಲಾಯಿತು. ಆಗ ಮಾಧವಕೃಷ್ಣ ನೆಂದು ಕರೆಯತೊಡಗಿದರು. "ಮುದ್ದುಕೃಷ್ಣ" ನೆಂದೂ ಕರೆದರು.

ರಾಧಾ ಎಂಬವಳೊಡನೆ ಅವರು ತಮ್ಮ ೭ನೇ ವಯಸ್ಸಿನಲ್ಲಿ ಲಗ್ನವಾದರು. ತಮ್ಮ ಹನ್ನೊಂದನೆಯ ವಯಸ್ಸಿನಲ್ಲಿ ತಾಯಿಯನ್ನೂ ಹದಿನೈದನೆಯ ವಯಸ್ಸಿನಲ್ಲಿ ತಂದೆಯನ್ನೂ ಕಳೆದುಕೊಂಡರು.

ತಂದೆ ತಾಯಿಗಳು ಸತ್ತ ಮೇಲೆ ಮನೆಯಲ್ಲಿ ಅವರ ತಂಗಿ ಸರಸ್ವತಿ ಬಾಯಿ ಯವರ ಒಳಸಂಚಿನಿಂದಾಗಿ ಕೃಷ್ಣ ಮತ್ತು ಅವರ ಹೆಂಡತಿಯ ನಡುವೆ ಪರಸ್ಪರ ತಪ್ಪು ಕಲ್ಪನೆ ಹುಟ್ಟುವಂತೆ ವಾತಾವರಣ ಉಂಟಾಯಿತು. ಕೃಷ್ಣನನ್ನು ವಿಷ ಹಾಕಿ ಕೊಲ್ಲಲು ಪ್ರಯತ್ನಗಳು ಸಹ ನಡೆದವು. ಇದರಿಂದ ಇವರು ಬೇಸತ್ತು ಮನೆ ಬಿಟ್ಟು ಮೈಸೂರಿಗೆ ಹೋದರು.

ಅಂದಿನಿಂದ ಅವರ ನಿಜವಾದ ಅಭ್ಯಾಸ ಪ್ರಾರಂಭವಾದಂತಾಯಿತು. ಅನೇಕ ಜಟಿಲ ವಿಷಯಗಳ ಮೇಲೆ ಪ್ರಭುತ್ವ ಪಡೆದರು. ದಕ್ಷಿಣ ಭಾರತದ ಅನೇಕ ಮಹ ತ್ವದ ಶೈಕ್ಷಣಿಕ ವಿದ್ಯಾಕೇಂದ್ರಗಳಿಗೆ ಭೆಟ್ಟಿಕೊಟ್ಟರು.

ತಿವೇಂದ್ರಂದಲ್ಲಿ ನೂರು ಶ್ಲೋಕಗಳನ್ನು ಕೇವಲ ೨೦ ನಿಮಿಷಗಳಲ್ಲಿ ರಚಿಸಿ " ಘಟಿಕಾಶತಕವಿ " ಎಂಬ ಬಿರುದನ್ನೂ ಬಂಗಾರದ ಕಂಠ ( ಬರೆಯುವ ಲೇಖನಿ ) ಯನ್ನೂ ಪಡೆದರು. ನಂತರ ಕಂಚಿ, ಆರಣಿ, ತಿರುಪತಿ, ಕಾಳಹಸ್ತಿ ಮುಂತಾದ ವಿದ್ಯಾ ಕೇಂದ್ರಗಳಿಗೆ ಭೆಟ್ಟಿಕೊಟ್ಟರು.

ಇದೆಲ್ಲ ಮುಗಿದ ನಂತರ ಸರಸ್ವತಿ ಬಾಯಿಯು ಇವರನ್ನು ಮನೆಗೆ ಬರಲು ಪ್ರಯತ್ನಿಸಿದರು. ಆಗ ಮನೆಗೆ ಬಂದರು. ಬಳಿಕ ರುಕ್ಮಿಣಿ ಎನ್ನುವವಳನ್ನು ಲಗ್ನವಾ ದರು. ಇದು ಇವರ ಜೀವನದಲ್ಲಿ ಎರಡನೆಯ ಲಗ್ನ. ನಂತರ ಇವರು ಹೊಸಪೇಟೆಯಲ್ಲಿ ವಾಸವಾಗಿದ್ದರು.

ಹೀಗೆ ಸುಮಾರು ೩೨ ವರ್ಷಗಳ ವರೆಗೆ ಕೇವಲ ಲೌಕಿಕ ಜೀವನದಲ್ಲಿಯೇ ತಾವು ಕಾಲವನ್ನು ವ್ಯಯ ಮಾಡಿದುದಾಗಿ ಕೃಷ್ಣಾವಧೂತರೇ ತಮ್ಮ 'ರಾಘವೇಂದ್ರ ತಂತ್ರಮ್' ದಲ್ಲಿ ಹೇಳಿಕೊಂಡಿದ್ದಾರೆ. ( ದ್ವಾತ್ರಿಂಶದ್ವರ್ಷಪರ್ಯಂತಂ ದುರಾಚಾರ-ರತಸ್ತದಾ । ) ಸುಮಾರು ೪೫ನೇ ವರ್ಷದಲ್ಲಿ ಅವರಿಗೆ ಕಾಲರಾ ಆಯಿತು. ಇದರಿಂದ ಅವರ ಜೀವನದಲ್ಲಿ ಮಹತ್ತರ ಬದಲಾವಣೆಯುಂಟಾಯಿತು. ೧೯೦೯ ರಲ್ಲಿ ( ತಮ್ಮ ೭೫ ನೇ ವರ್ಷದಲ್ಲಿ ) ಅವರು ಮರಣ ಹೊಂದಿದರು. ಆಗ ಅವರು ತಮ್ಮ ಹಿಂದೆ ೪ ಜನ ಗಂಡು ಹಾಗೂ ಇಬ್ಬರು ಹೆಣ್ಣುಮಕ್ಕಳನ್ನು ಬಿಟ್ಟು ಹೋದರು.

## ಸಾಹಿತ್ಯಕ ಚರಿತ್ರಾಂಶಗಳು

ಇವರ ಚರಿತ್ರೆಯನ್ನು ಗುರುದಾಸ ಎನ್ನುವವರು ಸರಳ ಸುಂದರ ಸಂಸ್ಕೃತದಲ್ಲಿ ಹನ್ನೊಂದು ಪ್ರಕರಣಗಳಲ್ಲಿ ಬರೆದಿದ್ದಾರೆ. [ಗುರುದಾಸನೆಂಬ ಹೆಸರಿನಿಂದ ಕೃಷ್ಣಾವಧೂತರೇ ಈ ಪುಸ್ತಕ ( ಆತ್ಮಚರಿತ್ರ ) ವನ್ನು ಬರೆದಿರಬೇಕೆಂದು ಊಹಿಸಲಾಗಿದೆ. ಇದರ ಕೈಬರಹದ ಪ್ರತಿ ಶ್ರೀ ಎಸ್. ಸಿ. ಮಣಿ (ಇವರ ಮೊಮ್ಮಗ)ಇವರಲ್ಲಿ ಇದೆ.]

ಇವರೇ ಬರೆದಿರುವ ತಮ್ಮ ಈಹಾಮೃಗಿ(Ihamragi)ಮತ್ತು 'ರಾಘವೇಂದ್ರ ತಂತ್ರಮ್ ' ಗಳಲ್ಲಿ ಕೆಲವು ವೈಯಕ್ತಿಕ ವಿಚಾರಗಳು ದೊರೆಯುತ್ತವೆ. ತಮ್ಮ ೩೨ ನೇ ವಯಸ್ಸಿನಲ್ಲಿಯೇ ಎರಡು ಚಂಪೂಕಾವ್ಯಗಳನ್ನು ಬರೆದರು. ಅವರು ಒಟ್ಟು ೩೨ ಪುಸ್ತಕಗಳನ್ನು ಬರೆದಿದ್ದಾರೆಂದು ಹೇಳಲಾಗುತ್ತದೆ. ಇವರು ವ್ಯಾಕರಣ, ಸಾಹಿತ್ಯ, ಅಲಂಕಾರ, ನ್ಯಾಯ ಹಾಗೂ ವೇದಾಂತ ಮುಂತಾದ ವಿಷಯಗಳ ಬಗ್ಗೆ ಅಭ್ಯಾಸ ಪೂರ್ಣವಾಗಿ ಬರೆದಿದ್ದಾರೆ

ಈ ವರೆಗೆ ದೊರಕಿರುವ ಅವರ ಪುಸ್ತಕಗಳು ಇಂತಿವೆ

ವ್ಯಾಕರಣ— ಸುಲಭ ಸಾಧ್ಯ ವ್ಯಾಕರಣಮ್

ಸಾಹಿತ್ಯ— ಈಹಾಮೃಗೀ (Ihamragi), ಪಾಂಡುರಂಗ ವಿಲಾಸ ಚಂಪೂ, ಕೃಷ್ಣಾವಧೂತ ನಟನ ತಂತ್ರಮ್).

ಅಲಂಕಾರ— ಕಾವ್ಯ ಲಕ್ಷಣ ತಂತ್ರಮ್, ಸಾರಸ್ವತಾಲಂಕಾರ ಸೂತ್ರ ಮತ್ತು ಭಾಷ್ಯಮ್.

ನ್ಯಾಯ— ತರ್ಕನವನೀತಮ್, ಪದಾರ್ಥ ಸಂಗ್ರಹ (Padartha Sangraha). ತರ್ಕ ಸಂಗ್ರಹ ವಾಕ್ಯಾರ್ಥ ವಿವೃತ್ತಿ.

ವೇದಾಂತ— ದ್ವೈತ— ಮಧ್ವಮತ ಸರ್ವಸ್ವಮ್, ಮಧ್ವತತ್ವ ಸೂತ್ರಾಣಿ, ಸೂತ್ರ ರತ್ನಾಮೃತ ಲಹರಿ, ಅಧ್ಯಾತ್ಮ ನವನೀತಮ್.

ಅದ್ವೈತ— ಅದ್ವೈತ ನವನೀತಮ್.

ಸಿಹಿಷ್ಟಾ ದ್ವೈತ - ಸಿಹಿಷ್ಟಾ ದ್ವೈತ ನವನೀತಮ್
ಇತರ— ರಾಘವೇಂದ್ರ ತಂತ್ರಮ್, ವ್ಯಾಸಸ್ತವರಾಜ.

ಇನ್ನುಳಿದ ಈ ವರೆಗೂ ದೊರಕದೇ ಇರುವ ಕೃತಿಗಳು (ಇವುಗಳ ಹೆಸರು ಅವರ ಚರಿತ್ರೆಯಲ್ಲಿ ಸೂಚಿತವಾಗಿವೆ.)

**ಈ ಕೆಳಗಿನ ಸಾಲುಗಳು ಸಂಸ್ಕೃತದಲ್ಲಿವೆ** (ಪುಸ್ತಕಗಳ ಹೆಸರುಗಳು)

ಪುತ್ರದಾಯ ನಿಬಂಧಶ್ಚ ಲಘುರಾಮಾಯಣಸ್ತಥಾ ।
ರಾಧಾವಿಲಾಸೋದಯಶ್ಚ ವಾಸುದೇವೋದಯಸ್ತಥಾ ।
ಹನುಮದ್ವಿಜಯಶ್ಚೋನ್ಮಾದಾ ವಿಭ್ರಾಂತ ವಿಲಾಪನಮ್ ।
ದರ್ಶೋಪ ನಿಷದಾಂ ದ್ವೇಧಾ ಬೃಹಲ್ಲಘುಪರಪ್ರಭಾ ।
ಅನುವಾಖ್ಯಾ ಪದಾರ್ಥಾನಾಂ ವಿಪ್ಪತಿಶ್ಯಾಬ್ದಸಾಗರಃ
ಛಂದಃ ಪ್ರಭಾ ಸ್ತುತಿವ್ಯೂಹೋ ಪ್ಯಾಲಂಕಾರಿಕ ಜೀವನಮ್ ।
ಸುಶ್ಲೇಷ ಮಣಿ ಮಂಜೂಷಾ ಸಪಾಂಚಾಲೀ ಸ್ವಯಂವರಂ ।
ತಥಾವಧೂತ ತಂತ್ರಂಚ ಸುಧರ್ಮೇಂದ್ರ ಮಹೋದಯಃ ।
ತರ್ಕಸಂಗ್ರಹ ವಾಕ್ಯಾರ್ಥ ಯೋಜನಾ ಬುಧಮೋದದಾ ।
ರಸಮಂಜರಿ ಕಾವ್ಯಾಖ್ಯಾ ನಾಮ್ನಾ ಭಾವಾನುರಂಜಿನೀ ।
ಸೂತ್ರವ್ಯಾಖ್ಯಾ ಬ್ರಹ್ಮಸೂತ್ರ ಶ್ರೀಭಾಷ್ಯಾರ್ಥಸ್ಯ ಸಂಗ್ರಹಃ
ಕೃಷ್ಣಗೀತಾ ತ್ರಿಭಾಷ್ಯಾರ್ಥ ಸಂಗ್ರಹಾ ಚಿತ್ರಪದ್ಧತಿಃ ।
ಪ್ರತಾಪರುದ್ರೀಯ ವ್ಯಾಖ್ಯಾ ಭೈಷಜ್ಯರಂಜನಂ ।
ಶ್ರೀ ರಾಘವೇಂದ್ರ ತಂತ್ರಂ ಚ ಮಂತ್ರರತ್ನಾಕರ ।
ಕೃಷ್ಣಾವಧೂತ ನಟನ ತಂತ್ರಮಾಥರ್ವಣಾತ್ಮಕಮ್ ॥

ಕೃಷ್ಣಾವಧೂತರ ಮಗನು (Adyar Library) ಗೆ ಕೊಟ್ಟ ಕೆಲವು ಕೈಬರಹದ ಪ್ರತಿಗಳಿಂದ ಇವರು ಬರೆದ ಇನ್ನೂ ಕೆಲವು ಹೆಚ್ಚಿನ ಪುಸ್ತಕಗಳು ದೊರಕಿವೆ. ಇವುಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಇವರು ಬರೆದ ಒಟ್ಟು ಪುಸ್ತಕಗಳ ಸಂಖ್ಯೆ ಇಂಕ್ಕೆ ಏರುತ್ತದೆ.

(Adyrr Library) ಯಲ್ಲಿಯ ಕೈಬರೆಹದ ಪ್ರತಿಗಳ ಆಧಾರದ ಮೇಲೆ ಇವು ಸಿಕ್ಕಿವೆ.

೧) ರುಕ್ಮಿಣೀ ಕಲ್ಯಾಣ ಚರಿತಂ
೨) ಪಾರ್ವತೀ ಕಲ್ಯಾಣ ನಾಟಕಂ
೩) ವೇದಾಂತಕಾರಿಕಾವಲೀ

೪) ವೇದಾಂತ ರತ್ನಮಾಲಾ
೫) ಆನಂದ ರಸಸಾಗರ
೬) ಸುಭಾಷಿತ ರತ್ನಮಂಜರೀ

ಶೈಲಿ— ಇವರು ಶ್ರೇಷ್ಠ ಕವಿ ಹಾಗೂ ತರ್ಕಶಾಸ್ತ್ರಜ್ಞರು. ವಿವಿಧ ರೀತಿಯ ಛಂದಸ್ಸುಗಳನ್ನು ಉಪಯೋಗಿಸುತ್ತಾರೆ. ಶೈಲಿ ಅಲಂಕಾರಿಕ ಆದರೆ ಕೃತ್ರಿಮವಲ್ಲ. ಕೆಲವು ಪುಸ್ತಕಗಳಲ್ಲಿ ಬಹಳ ಸರಳ ಹಾಗೂ ಹೃದಯಕ್ಕೆ ನೇರವಾಗಿ ಮುಟ್ಟುವಂತೆ ಬರೆಯುತ್ತಾರೆ. ಇಂಥ ಚತುರಸ್ರ ಪಾಂಡಿತ್ಯವುಳ್ಳ ವಿದ್ವಾಂಸರೂ, ಕವಿರ್ಮನಿಷಿಗಳೂ ಕಳೆದ ನೂರಿನ್ನೂರು ವರ್ಷಗಳ ಮಾಧ್ವ ಸಾಹಿತ್ಯದಲ್ಲಿ ದೊರಕುವದು ದುರ್ಮಿಳ.

## ೫೧೨ ದತ್ತಾತ್ರೇಯ ಶಾಸ್ತ್ರಿ ನಿಗೂಢಕರ (ರಾಜಾಪೂರ)

ಇವರು ಗೋಪಾಲಾಚಾರ್ಯ ಕರಾಹಾಡಕರ ಇವರ ಮುಖ್ಯ ಶಿಷ್ಯರಾಗಿದ್ದು ನ್ಯಾಯ ವೇದಾಂತ ವ್ಯಾಕರಣಾದಿ ಶಾಸ್ತ್ರಗಳಲ್ಲಿ ಪರಿನಿಷ್ಠಿತ ಪಂಡಿತರಾಗಿದ್ದರು. ಇವರು ಸ್ಮಾರ್ತ ಕೊಂಕಣಸ್ಥ ಬ್ರಾಹ್ಮಣರಾದರೂ ಇವರಿಗೆ ತಮ್ಮ ಅದ್ವೈತ ಮತವು ಅಪಪ್ಥ ಮತ್ತು ಪ್ರಮಾಣ ವಿರುದ್ಧ ಎಂದು ತೋರಿತು. ಸ್ವಯಂ ಮಹಾಪಂಡಿತ ರಾದ ಇವರು ವೇದಾಂತದ ವಿವಿಧ ಶಾಖೆಗಳನ್ನು ತುಲನಾತ್ಮಕ ದೃಷ್ಟಿಯಿಂದ ಓದಿ ಅಧ್ಯಯನ ಮಾಡಿ ಮಧ್ವಾಚಾರ್ಯರ ದ್ವೈತ ಸಿದ್ಧಾಂತವೇ ಸರ್ವ ಶ್ರೇಷ್ಠವಾದ ಸಿದ್ಧಾಂತ ಎಂಬ ನಿರ್ಧಾರಕ್ಕೆ ಬಂದು ವೈಷ್ಣವ ದೀಕ್ಷೆಯನ್ನು ಪಡೆದರು. ಇವರ ಊರಾದ ರಾಜಾಪೂರದಲ್ಲಿ ಎಲ್ಲರೂ ಸ್ಮಾರ್ತ ಅದ್ವೈತ ಮತದವರಾಗಿದ್ದರೂ ಇವ ರೊಬ್ಬರೇ ಕಟ್ಟರ ವೈಷ್ಣವರಾಗಿ ದ್ವೈತ ಸಿದ್ಧಾಂತದ ಧ್ವಜವನ್ನು ಎತ್ತಿ ದ್ವಾದಶ ನಾಮಗಳನ್ನು ಅಂಗಾರ ಅಕ್ಷತೆಗಳನ್ನು ಹಚ್ಚಿ ಹೆಮ್ಮೆಯಿಂದ ತಿರುಗಾಡುತ್ತಿದ್ದರು. ಶ್ರೀ ಸತ್ಯಧ್ಯಾನ ತೀರ್ಥರು ಇವರ ಮೇಲೆ ಅತ್ಯಂತ ಪ್ರೇಮ ಮಾಡುತ್ತಿದ್ದರು. ಇವರು ಉತ್ತರಾದಿ ಮಠದ ಸಭೆಗಳಿಗೆ ಶ್ರೀಗಳವರ ಅಪ್ಪಣೆ ಮೇರೆಗೆ ತಪ್ಪದೇ ಬರುತ್ತಿದ್ದರು.



ಡಂಬಳ ಅನಂತಶಯನಾಚಾರ್ಯರು

ಇವರ ಚರಿತ್ರೆಯನ್ನು ಇದೇ ಗ್ರಂಥದ ೬೩೩ ನೇ ಪುಟದ ಪಂಡಿತ ಕ್ರಮಾಂಕ ೧೫೭ ರಲ್ಲಿ ನೋಡಿರಿ.

### ೫೧೩ ಹಣಮಂತರಾವ ಧಾರವಾಡಕರ (ಗುಲಬುರ್ಗಾ)

ಇವರು ತಮ್ಮ ಪೂರ್ಣ ಆಯುಷ್ಯವನ್ನು ಮಾಧ್ವತತ್ವಜ್ಞಾನ ಪ್ರಸಾರದಲ್ಲಿಯೇ ಸವೆಯಿಸಿದರು. ಇವರು ಮಾಯಾವಾದ ಖಂಡನ, ಮಿಥ್ಯಾತ್ವಾನುಮಾನ ಖಂಡನ, ಉಪಾದಿ ಖಂಡನ, ಭಾರತತಾತ್ಪರ್ಯನಿರ್ಣಯ ದ್ವೈತ ಸಿದ್ಧಾಂತ ವಿಚಾರ, ಸದಾಚಾರಸ್ಮೃತಿ ಕೃಷ್ಣಾಮೃತ ಮಹಾ ವರ್ಣನ ಮುಂತಾದ ಅನೇಕ ಗ್ರಂಥ ಗಳನ್ನು ಮರಾಠಿಯಲ್ಲಿ ಭಾಷಾಂತರ ಮಾಡಿದ್ದಾರೆ. ಇವರು ಕಲಬುರ್ಗಿಯಲ್ಲಿ ವಾಸ ವಾಗಿದ್ದರು.

### ೫೧೪ ಪ್ರಾಣಾಚಾರ್ಯ ಲವುಳಕರ ಸೊಲ್ಲಾಪುರ

ಇವರು ಸೊಲ್ಲಾಪುರದಲ್ಲಿ ವಾಸಮಾಡುತ್ತಿದ್ದರು. ವ್ಯಾಕರಣ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು. ಸೊಲ್ಲಾಪುರದಲ್ಲಿ ಇವರು ಮಾಧ್ವ ಉತ್ಸವ ಮಂಡಳ ಎಂಬ ಸಂಸ್ಥೆಯನ್ನು ಸ್ಥಾಪಸನ ಮಾಡಲಿಕ್ಕೆ ಕಾರಣರಾದರು. ದಾಸಾಚಾರ್ಯ ಧಾಮ ಣಕರಲ್ಲಿ ನ್ಯಾಯ ಮುಂತಾದವುಗಳನ್ನು ಓದಿದರು.

### ೫೧೫ ದಾಸಾಚಾರ್ಯ ಧಾಮಣಕರ

ಇವರು ಅವಧಾನಿ ಬಾಳಾಚಾರ್ಯರಲ್ಲಿ ಅಧ್ಯಯನ ಮಾಡಿ ವೇದಾಂತ ವ್ಯಾಕ ರಣ ಶಾಸ್ತ್ರಗಳಲ್ಲಿ ನಿಷ್ಣಾತ ಪಂಡಿತರಾಗಿದ್ದರು. ಇವರು ನಾಗಪುರದ ಹತ್ತಿರ ಏರಣಿ ಎಂಬಲ್ಲಿ ಪಾಠಶಾಲೆಯನ್ನು ಸ್ಥಾಪಿಸಿ ವೇದಾಂತ ಪಾಠ ಹೇಳುತ್ತಿದ್ದರು. ವರ್ಧಾಡದಲ್ಲಿ ಈಗಲೂ ಇವರ ಅನೇಕ ಶಿಷ್ಯರು ಇರುತ್ತಾರೆ.

### ೫೧೬ ನಾನಾಚಾರ್ಯ ಜಹಗಿರ್ದಾರ (ನೀಲಂಗಾ)

ನೀಲಂಗಾ ಆಚಾರ್ಯರ ಮನೆತನವು ೩೦೦ ವರ್ಷಗಳಿಂದ ಮಹಾರಾಷ್ಟ್ರದಲ್ಲಿ ಮಾಧ್ವ ತತ್ವ ಜ್ಞಾನದ ದೀಪವನ್ನು ಅಖಂಡವಾಗಿ ಬೆಳಗಿಸುತ್ತಲಿದೆ. ನಾನಾಚಾರ್ಯ ಜಹಗಿರ್ದಾರ ಎಂಬುವವರು ಮಹಾ ಪಂಡಿತರಾಗಿ ಅನೇಕ ಜನರಿಗೆ ಶಾಸ್ತ್ರಪಾಠ ವನ್ನು ಹೇಳಿದರು. ಮಹಾರಾಷ್ಟ್ರದಲ್ಲಿ ಬಹಳ ಕಡೆಗೆ ಇವರ ಶಿಷ್ಯ ಶಾಖೆಗಳು ಪ್ರಸಾರ ಹೊಂದಿರುತ್ತವೆ.

### ೫೧೭ ಶ್ರೀಧರಾಚಾರ್ಯ ಅಷಸಂಗಿ (ನೀಲಂಗಾ)

ವೇದಾಂತ ಶಾಸ್ತ್ರದಲ್ಲಿ ಮಹಾ ಪಂಡಿತರಾದ ಶ್ರೀಧರಾಚಾರ್ಯರು ತಮ್ಮ ಸ್ವಗ್ರಾಮವಾದ ನೀಲಂಗಾದಲ್ಲಿದ್ದು ಪಾಠ ಪ್ರವಚನ ಮಾಡಿಸುತ್ತಿದ್ದರು. ಈ ಮನೆ ತನದ ಆಚಾರ್ಯ ಪುರುಷರ ಮೇಲೆ ನರಸಿಂಹ ದೇವರ ವಿಶೇಷ ಅನುಗ್ರಹ ಇದ್ದದ್ದು

ಮಹಾರಾಷ್ಟ್ರದಲ್ಲಿ ಎಲ್ಲ ಕಡೆಗೂ ಪ್ರಸಿದ್ಧವಿರುತ್ತದೆ. ಈ ಮನೆತನದಲ್ಲಿ ಅನೇಕ ಗ್ರಂಥಕಾರರೂ, ಮಹಾ ಪಂಡಿತರೂ ಆಗಿಹೋಗಿದ್ದಾರೆ. ಅವರು ತತ್ವಪ್ರಕಾಶಿಕಾಸಾರ, ಪಾಣಿನಿಮತನಿರ್ಣಯ ಎಂಬ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

## ೫೧೮ ಶ್ರೀಧರಾಚಾರ್ಯ ತಡವಳಕರ (ತಡವಳ)

ಇವರು ಆಬಾಚಾರ್ಯ ಅಂಬೇಕರ ಇವರಲ್ಲಿ ಸುಧಾ, ನ್ಯಾಸತ್ರಯ ಅಧ್ಯಯನ ಮಾಡಿದ್ದರು. ಇವರು ಶ್ರೀ ಸತ್ಯಧ್ಯಾನ ತೀರ್ಥರ ಸಭೆಗೆ ಬಂದು ವಾಕ್ಯಾರ್ಥ ವಿಚಾರಗಳಲ್ಲಿ ಭಾಗವಹಿಸುತ್ತಿದ್ದರು.

## ೫೧೯ ವಾಮನಾಚಾರ್ಯ ಸಂದೀಕರ (ಲೋಹಾರ)

ಇವರು ವೇದಾಂತ ಶಾಸ್ತ್ರದಲ್ಲಿ ಅತ್ಯಂತ ಪ್ರವೀಣರಿದ್ದರು. ಆಬಾಚಾರ್ಯ ಅಂಬೇಕರ ಇವರಲ್ಲಿ ಅಧ್ಯಯನ ಮಾಡಿ ಅಗ್ನಿಹೋತ್ರವನ್ನು ಇಟ್ಟಿದ್ದರು ಮತ್ತು ಮನೆಯಲ್ಲಿಯೇ ಪಾಠ ಪ್ರವಚನ ಮಾಡುತ್ತಿದ್ದರು.

## ೫೨೦ ಜಯರಾಮಾಚಾರ್ಯ ಜವಳೀಕರ (ತುಳಜಾಪುರ)

ಆವಾಚಾರ್ಯ ಅಂಬೇಕರರ ಶಿಷ್ಯರಾದ ಜಯರಾಮಾಚಾರ್ಯರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಇವರು ಯಾವಾಗಲೂ ಪಾಠ ಪ್ರವಚನ ಮಾಡಿಸುತ್ತಲಿದ್ದರು.

## ೫೨೧ ಆಬಾಚಾರ್ಯ ಅಂಬೇಕರ (ಅಂಬೆ)

ಮಹಾರಾಷ್ಟ್ರ ದೇಶದಲ್ಲಿ ವಂಶ ಪರಂಪರೆಯಿಂದ ಪಾಠ ಪ್ರವಚನವನ್ನು ಮಾಡಿಸುತ್ತ ಬಂದ ದೊಡ್ಡ ಮನೆತನವೆಂದರೆ ಅಂಬೇಕರ ಮನೆತನ. ಈ ಮನೆತನದಲ್ಲಿಯ ಆಬಾಚಾರ್ಯರು ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಅಸಾಧಾರಣ ಪಂಡಿತರಾಗಿದ್ದರು. ಮನೆಯಲ್ಲಿ ನಿರಂತರವೂ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಇವರ ಶಿಷ್ಯರು ಮಹಾರಾಷ್ಟ್ರ ದೇಶದ ತುಂಬ ಪ್ರಖ್ಯಾತ ಪಂಡಿತರಾಗಿ ಪಾಠ ಪ್ರವಚನ ಮಾಡಿಸುತ್ತಿದ್ದರು. ಇವರು ಉತ್ತರಾದಿ ಮಠದ ಶ್ರೀ ಸತ್ಯಪರಾಕ್ರಮತೀರ್ಥ ಸ್ವಾಮಿಗಳವರ ವಿದ್ವತ್ ಸಭೆಗೆ ಬಂದು ಭಾಗವಹಿಸುತ್ತಿದ್ದರು. ಈಗ ಈ ಮನೆತನದವರಿಗೆ ಕರ್ಹಾಡೆ ಎಂಬ ಅಡ್ಡ ಹೆಸರಿನಿಂದ ಕರೆಯುತ್ತಾರೆ.

## ೫೨೨ ನಾರಾಯಣಾಚಾರ್ಯ ಬನಹಟ್ಟಿ (ಮಿರಜ)

ಇವರು ವ್ಯಾಕರಣ ವೇದಾಂತ ಶಾಸ್ತ್ರಗಳಲ್ಲಿ ಘನ ಪಂಡಿತರಾಗಿದ್ದರು. ಪುಣೆಯ ವೇದಶಾಸ್ತ್ರೋತ್ತೇಜಕ ಸಭೆಯ ಮುಖ್ಯ ಕಾರ್ಯದರ್ಶಿ ಆಗಿದ್ದರು.

## ೫೨೩ ವೆಂಕಟೇಶರಾವ ಪುಣೆ

ಇವರು ಪುಣೆ ನಗರದಲ್ಲಿ ವಕೀಲಿ ಮಾಡುತ್ತ ಅನೇಕ ಪಂಡಿತರಿಗೆ ಆಶ್ರಯವನ್ನು ಕೊಟ್ಟಿದ್ದರು. ಇವರು ದಶೋಪನಿಷತ್ತುಗಳನ್ನು ಮತ್ತು ಶ್ವೇತಾಶ್ವೇತರೋಪನಿಷದ್ ನಾರಾಯಣೋಪನಿಷದ್ ಮೊದಲಾದ ಉಪನಿಷತ್ತುಗಳನ್ನು ದ್ವೈತ ಸಿದ್ಧಾಂತಕ್ಕೆ ಅನುಸಾರವಾಗಿ ಮರಾಠಿ ಭಾಷೆಯಲ್ಲಿ ಭಾಷಾಂತರ ಮಾಡಿದ್ದಾರೆ. ಮತ್ತು ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವನ್ನು ಮರಾಠಿ ಭಾಷೆಯಲ್ಲಿ ಅನುವಾದಿಸಿದರು. ಈ ಎಲ್ಲ ತಮ್ಮ ಗ್ರಂಥಗಳಿಗೆ ಅವರು ಬರೆದ ಮುನ್ನುಡಿಗಳು ಅತ್ಯಂತ ವಿಸ್ತಾರವಾಗಿಷ್ಟು ಅವೆಲ್ಲವೂ ದ್ವೈತ ಶಾಸ್ತ್ರದ ಮೇಲಿನ ಸುವಿಸ್ತೃತವಾದ ಪ್ರಮಾಣಬದ್ಧ ಮಹಾ ಪ್ರಬಂಧಿಗಳಂತಿರುತ್ತವೆ.

## ೫೨೪ ಅಪ್ಪಾಸಾಹೇಬ ನಳದುರ್ಗಕರ

ಇವರು ಯಳಮೇಲಿ ವಿಠ್ಠಲಾಚಾರ್ಯರಲ್ಲಿ ದ್ವೈತ ವೇದಾಂತವನ್ನು ಅಧ್ಯಯನ ಮಾಡಿದರು. ಇವರು ಸರಕಾರಿ ನೌಕರಿಯಲ್ಲಿದ್ದರೂ. ಹಲವಾರು ಬಗೆಯಿಂದ ದ್ವೈತತತ್ವಜ್ಞಾನದ ಪ್ರಸಾರವನ್ನು ಮಾಡಿದ್ದಾರೆ. ಜಗನ್ನಾಥ ದಾಸರ ಹರಿಕಥಾಮೃತಸಾರ ಎಂಬ ಕನ್ನಡ ವೇದಾಂತ ಗ್ರಂಥವನ್ನು ಮರಾಠಿಯಲ್ಲಿ ಪದ್ಯಮಯವಾಗಿ ಅನುವಾದಿಸಿದ್ದಾರೆ. ಭಗವದ್ಗೀತೆಯ ಮೇಲೆ ದ್ವೈತ ಬೋಧಿನಿ ಎಂಬ ಪದ್ಯಾತ್ಮಕವಾದ ಮರಾಠಿ ಟೀಕೆಯನ್ನು ರಚಿಸಿದ್ದಾರೆ. ಸಮಗ್ರ ಮಧ್ವ ವಿಜಯದ ೧೬ ಸರ್ಗಗಳ ಪದ್ಯಮಯ ಅನುವಾದವನ್ನು ಗುರು ಚರಿತ್ರೆ ಎಂಬ ಹೆಸರಿನಿಂದ ಪ್ರಕಾಶ ಮಾಡಿ ಪ್ರಕಟಿಸಿದರು. ಇದಲ್ಲದೇ ಹರಿವಿಜಯ, ರಾಮವಿಜಯ ಮುಂತಾದ ಪದ್ಯಮಯವಾದ ಮರಾಠಿ ಗ್ರಂಥಗಳನ್ನು ಪ್ರಕಟಿಸಿದ್ದಾರೆ.

## ೫೨೫ ಕೃಷ್ಣಾಬಾಯಿ ಕರ್ಹಾಡ

ಬಾಲ್ಯದಲ್ಲಿಯೇ ವೈಧವ್ಯವು ಬಂದದ್ದರಿಂದ ವೈರಾಗ್ಯದತ್ತ ಒಲಿದ ಕೃಷ್ಣಾಬಾಯಿಯು ತನ್ನ ಶೇಷಾಯುಷ್ಯವನ್ನೆಲ್ಲ ಈಶ ಚಿಂತನದಲ್ಲಿಯೇ ಕಳೆದಳು. ಇವರು ಮರಾಠಿಯಲ್ಲಿ ತಾರತಮ್ಯ ಸ್ತೋತ್ರ, ಅಣುಭಾಷ್ಯ ಮುಂತಾದ ಪದ್ಯಮಯ ಗ್ರಂಥಗಳನ್ನು ಬರೆದಿದ್ದಾರೆ. ಇವರ ಮರಾಠಿ ತಾರತಮ್ಯ ಸ್ತೋತ್ರವು ದ್ವೈತ ಸಿದ್ಧಾಂತ ಕೇಸರಿ ಪತ್ರಿಕೆಯಲ್ಲಿ ಈ ಮೊದಲೇ ಪ್ರಸಿದ್ಧವಾಗಿರುತ್ತದೆ. ಅವರ ೨ ನೇ ಕೃತಿಯಾದ ಅಣುಭಾಷ್ಯದ ಮರಾಠಿ ಅನುವಾದವೂ ಕೂಡ ಬೇಗನೆ ಪ್ರಕಟವಾಗಲಿದೆ.

## ೫೨೬ ಡಾ. ಹುಲಿ ವೇದವ್ಯಾಸಾಚಾರ್ಯ

ಶ್ರೀ ರಾಘವೇಂದ್ರ ಸ್ವಾಮಿ ಮಠದ ಸುವೃತೀಂದ್ರ ತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರಾದ ಡಾ ಹುಲಿ ವೇದವ್ಯಾಸಾಚಾರ್ಯರು ವಾಸು

ದೇವಾಚಾರ್ಯ, ದುರ್ಗ ಭೀಮಾಚಾರ್ಯ ಮುಂತಾದವರಲ್ಲಿ ಸಾಹಿತ್ಯ, ವೇದಾಂತ ವನ್ನು ಓದಿ ಪಂಡಿತರಾಗಿದ್ದರು. ಎಂ. ಎ. ಪದವೀಧರರಾದ ಅವರು ಕರ್ನಾಟಕದ ಹರಿದಾಸರು ಎಂಬ ಗ್ರಂಥವನ್ನು ಬರೆದು ಪಿ. ಎಚ್. ಡಿ. ಆಗಿದ್ದರು. ಬಂಗಾಲಿ ಭಾಷೆಯನ್ನು ಇವರು ಚನ್ನಾಗಿ ಕಲಿತು ಶರಶ್ಚಂದ್ರರ ಅನೇಕ ಕಾದಂಬರಿಗಳನ್ನು ಕನ್ನಡಿಸಿದರು. ಗುರು ಚರಿತೆ ಎಂಬ ಗ್ರಂಥವನ್ನು ಬರೆದು ಶ್ರೀ ರಾಯರ ಮಠದ ಮೇಲ್ಮೆಯನ್ನು ಎತ್ತಿಹಿಡಿದರು. ಸಂಶೋಧನ ವಿಭಾಗದಲ್ಲಿ ಅಭಿರುಚಿ ಇದ್ದ ಈ ಡಾಕ್ಟರರು ಪರಿಮಳ ಪ್ರಿಂಟಿಂಗ ಪ್ರೆಸ್, ಪರಿಮಳ ಸಂಶೋಧನ ಮಂದಿರಗಳನ್ನು ಪ್ರಾರಂಭಿಸಿ ಪರಿಮಳ ಎಂಬ ಕನ್ನಡ ಪತ್ರಿಕೆಯನ್ನು ಸುರು ಮಾಡಿದರು. ಇವರು ಅಲ್ಪ ವಯಸ್ಸಿನಲ್ಲಿಯೇ ಕಾಲವಾದರು.

### ೫೨೭ ಅಳವಂಡಿ ಸ್ವಾಮಿರಾಯಾಚಾರ್ಯ

ಇವರು ಸಾಹಿತ್ಯ ವ್ಯಾಕರಣ ಪಂಡಿತರಾಗಿದ್ದರು. ಅನೇಕ ವಿದ್ಯಾರ್ಥಿಗಳಿಗೆ ಪಾಠ ಹೇಳಿದರು,

### ೫೨೮ ಅಳವಂಡಿ ಬಿಂದಾಚಾರ್ಯ

ಇವರು ಮಳಖೇಡದ ವ್ಯಾಸಾಚಾರ್ಯರಲ್ಲಿ ಮತ್ತು ಪಾಂಡುರಂಗಿ ಜಯಾ ಚಾರ್ಯರಲ್ಲಿ ನ್ಯಾಯ ವೇದಾಂತ ಅಧ್ಯಯನ ಮಾಡಿದ್ದರು.

### ೫೨೯ ಗುತ್ತಲ ರಾಮಾಚಾರ್ಯ

ಇವರು ಗಲಗಲಿ ಮಧ್ವಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಪ್ರಮೇಯಜ್ಞರಾಗಿದ್ದರು. ಇವರು ಲೌಕಿಕದಲ್ಲಿಯೂ ನಿಪುಣರಾಗಿದ್ದರು.

### ೫೩೦ ಗುತ್ತಲ ಗೋವಿಂದಾಚಾರ್ಯ

ಧಾರವಾಡದಲ್ಲಿ ವಕೀಲಿ ವ್ಯವಸಾಯವನ್ನು ಮಾಡುತ್ತಿದ್ದ ಗೋವಿಂದಾ ಚಾರ್ಯರು ಶ್ರೀ ಗಲಗಲಿ ಮಧ್ವಾಚಾರ್ಯರಲ್ಲಿ ವೇದಾಂತ ಗ್ರಂಥಗಳನ್ನು ಅಧ್ಯ ಯನ ಮಾಡಿದ್ದರು.

### ೫೩೧ ವೆಂಕಟರಮಣಾಚಾರ್ಯ ಹುಯಿಲಗೋಳ

ಇವರು ಮೂಲತಃ ಗದಗ ಹತ್ತಿರ ಹುಯಿಲಗೋಳದವರು. ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣವನ್ನು ಆಮೂಲಾಗ್ರ ಅಧ್ಯಯನ ಮಾಡಿದ್ದರು.

ಅಣ್ಣಿಗೇರಿ ತಮಣಾಚಾರ್ಯರಲ್ಲಿ ವೇದಾಂತವನ್ನು ಓದಿದರು. ಧಾರವಾಡದ ಶ್ರೀ ಶಂಕರಾಚಾರ್ಯ ಪಾಠಶಾಲೆಯಲ್ಲಿ ಸಾಹಿತ್ಯ, ವ್ಯಾಕರಣ ಅಧ್ಯಾಪಕರಾಗಿದ್ದರು. ಮನೆಯಲ್ಲಿ ವೇದಾಂತ ಪಾಠ ಹೇಳುತ್ತಿದ್ದರು.

ಆಲೂರ ವೆಂಕಟರಾಯರು ಇವರಲ್ಲಿ ಶಾಂತಿ ಪಾಠ ಪೂರ್ವಕ ಆಚಾರ್ಯರ ಗ್ರಂಥಗಳನ್ನೆಲ್ಲ ಅಭ್ಯಾಸ ಮಾಡಿದರು.

ಆಚಾರ್ಯರು ಮಹಾ ಸಾತ್ವಿಕರೂ, ಆಚಾರನಿಷ್ಠರೂ ಆಗಿದ್ದರು.

### ೫೩೨ ಕೀರ್ತನ ಕೇಸರಿ ಜಯರಾಮಾಚಾರ್ಯ ಕೊಪ್ಪಳ

ಪ್ರಸಿದ್ಧ ರಾಷ್ಟ್ರೀಯ ಕೀರ್ತನಕಾರರಾದ ಕೊಪ್ಪಳ ಜಯರಾಮಾಚಾರ್ಯರು " ವಕ್ತಾ ದಶ ಸಹಸ್ರೇಷು " ಎಂಬ ಮಾತಿಗೆ ನಿದರ್ಶನರಾಗಿದ್ದರು. ರೇಲ್ವೆ ವಿಭಾಗ ದಲ್ಲಿ ನೌಕರರಾಗಿ ಕೆಲಸ ಮಾಡುತ್ತಲಿದ್ದ ಜಯರಾಮಾಚಾರ್ಯರು ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿ ಸ್ಫೂರ್ತಿದಾಯಕವಾದ ತಮ್ಮ ಹರಿ ಕಥೆಗಳಿಂದ ಜನ ರಲ್ಲಿ ಸ್ವಾತಂತ್ರ್ಯ ಸ್ವಾಭಿಮಾನದ ಭಾವನೆಯನ್ನು ಬಡಿದೆಬ್ಬಿಸಿದರು. ಇವರು ತಮ್ಮ ಕೀರ್ತನೆ ನಡೆದ ಕಾಲದಲ್ಲಿಯೇ ಮಧುರ ಸುಂದರವಾದ ಅನೇಕ ವಚನ ರಚನೆ ಹೃದ್ಯ ಗದ್ಯ ಪದ್ಯಗಳನ್ನು ತತ್ಕಾಲದಲ್ಲಿಯೇ ಸದ್ಯಃ ಸ್ಫೂರ್ತಿಯಿಂದ ಕಟ್ಟಿ ಜನರಂಜನೆಯನ್ನು ಮಾಡುತ್ತಲಿದ್ದರು.

ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರು ತಿಂಗಳಾನು ಗಟ್ಟಲೆ ಇವರ ಹರಿಕಥಾ ಕೀರ್ತನಗಳನ್ನು ಕೇಳಿ ಸಂತೋಷಪಟ್ಟು ಅವರಿಗೆ ಕೀರ್ತನ ಕೇಸರಿ ಎಂಬ ಬಿರುದನ್ನು ಇತ್ತು ಶಾಲು ಜೋಡಿ ಸಂಭಾವನೆಗಳನ್ನು ಅನುಗ್ರಹಿಸಿದರು.

### ೫೩೩ ಹನುಮೇಶ ವಿಠ್ಠಲ ಗುತ್ತಲ

ಹಾವೇರಿ ತಾಲೂಕಿನ ಗುತ್ತಲ ಗ್ರಾಮದ ಹನುಮಂತ ರಾಯರಿಗೆ ಬಾಲ್ಯ ದಿಂದಲೇ ಅಧ್ಯಾತ್ಮದತ್ತ ಒಲವು ಇದ್ದಿತು. ಮೊದಲಿನಿಂದಲೂ ಸಂಗೀತದ ನಾದವಿದ್ದ ಇವರು ಮೈಸೂರಿನ ನಾರಾಯಣಸ್ವಾಮಿ ಬೆಟ್ಟದಪುರ ಇವರಲ್ಲಿ ಸಂಗೀತದ ಅಧ್ಯಯನ ಮಾಡಿದರು. ಇವರು ಹಾವೇರಿ ಕೋರ್ಟಿನಲ್ಲಿ ನಾಝರರಾಗಿ ಕೆಲಸ ಮಾಡಿ ನಿವೃತ್ತರಾದರು. ಸುಂದರಕಾಂಡ ರಾಮಾಯಣ, ಪ್ರಲ್ಹಾದ ಚರಿತ್ರ, ಸುಧಾ ವ್ಯಾಖ್ಯಾನ, ವೆಂಕಟೇಶ ಮಹಾತ್ಮೆ ಮತ್ತು ಅನೇಕ ಅಧ್ಯಾತ್ಮಿಕ ತತ್ವಗಳನ್ನು ಹನುಮೇಶ ವಿಠ್ಠಲ ಎಂಬ ಮುದ್ರಿಕೆಯಿಂದ ರಚಿಸಿದ್ದಾರೆ. ಈ ಹನುಮೇಶ ವಿಠ್ಠಲರ

ತಂಬೂರಿಯನ್ನು ತೆಗೆದುಕೊಂಡು ಅವರ ಮೊಮ್ಮಗ ವೆಂಕಟೇಶ ಬುರ್ಲಿಯವರು ಮಹಾರಾಷ್ಟ್ರ ಕರ್ನಾಟಕಗಳಲ್ಲಿ ನಾಮಾಂಕಿತ ಗಾಯಕರಾಗಿ ಸಂಗೀತ ಕಚೇರಿಗಳನ್ನು ಮಾಡುತ್ತಲಿದ್ದಾರೆ. ಸುಧಾರಂಗ ಎಂಬ ಮುದ್ರಿಕೆಯಿಂದ ಹಿಂದಿಯಲ್ಲಿಯೂ ರಚನೆಗಳನ್ನು ಮಾಡಿದ್ದಾರೆ.

## ೫೩೪ ನಾರಾಯಣರಾವ ಕಲಮದಾನಿ

೧೮೮೩ ನೇ ಇಸ್ವಿಯಲ್ಲಿ ಗದುಗಿನಲ್ಲಿ ಜನಿಸಿದ ನಾರಾಯಣರಾಯರು ಬಾಲ್ಯದಿಂದ ಅಧ್ಯಾತ್ಮ ಪ್ರವೃತ್ತಿಯವರು. ರೇಲ್ವೆ ಖಾತೆಯಲ್ಲಿಯ ತಮ್ಮ ನೌಕರಿಗೆ ರಾಜಿನಾಮೆ ಇತ್ತು ಕರ್ಜಗಿಯಲ್ಲಿರುವ ಏರಿ ನಾರಾಯಣಾಚಾರ್ಯರಲ್ಲಿ ಶಾಂತಿ ಹಾಕಿ ಉಪದೇಶ ಪಡೆದು ಸಿರಿ ವಿಠ್ಠಲ ಎಂಬ ಅಂಕಿತವನ್ನು ಪಡೆದರು.

ಮುಂದೆ ಇವರು ಫಾರೆಸ್ಟ ಖಾತೆಯಲ್ಲಿ ನೌಕರಿ ಹಿಡಿದರೂ ದಾಸ ಸಾಹಿತ್ಯದಲ್ಲಿಯೇ ಆಜನ್ಮ ಪರಿಶ್ರಮ ಪಡುತ್ತಲಿದ್ದರು. ಶ್ರೀ ನರಹರಿ ತೀರ್ಥರಿಂದ ಆರಂಭಿಸಿ ಕರ್ಜಗಿ ಶ್ರೀ ಸೀದ ವಿಠ್ಠಲ ದಾಸರ ವರೆಗಿನ ಅನೇಕ ದಾಸರ ಪದ, ಪದ್ಯ, ಸುಳಾದಿ ಉಗಾ ಭೋಗಗಳನ್ನು ಸಂಗ್ರಹಿಸಿ ಸಂಶೋಧಿಸಿ ಪ್ರೆಸ್ ಕಾಪಿಯನ್ನು ಸಿದ್ಧಪಡಿಸಿ, ಉಡುಪಿಯ ಪಾವಂಜೆ ಗುರುರಾಯರಿಗೆ ಮುದ್ರಣಕ್ಕಾಗಿ ಕಳಿಸಿಕೊಟ್ಟರು. ಏಕಾದಶಿ ಮಹಾತ್ಮೆ, ಜಗನ್ನಾಥ ದಾಸರ ಚರಿತ್ರೆ, ಮಧ್ವನಾಮ ಮುಂತಾದ ಪುಸ್ತಕಗಳನ್ನು ಬರೆದು ತಾವೆ ಪ್ರಕಟಿಸಿದರು.

ಮುಂದೆ ಅವರು ತಮ್ಮ ಉದ್ಯೋಗದಿಂದ ನಿವೃತ್ತರಾಗಿ ಭಾಗವತ ಸಾರೋದ್ಧಾರ, ಸುಮಧ್ವ ವಿಜಯ ಸಾರ ಸಂಗ್ರಹ ಮುಂತಾದ ಇಪ್ಪತ್ತು ಗ್ರಂಥಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. ಐದು ನೂರು ಪದಗಳನ್ನು ಸಿರಿ ವಿಠ್ಠಲ ಎಂಬ ಅಂಕಿತದಿಂದ ಬರೆದಿದ್ದಾರೆ. ಪ್ರತಿ ನಿತ್ಯವೂ ಕರ್ಮಠ ವೃತ್ತಿಯಲ್ಲಿದ್ದ ಅವರು ದಾಸರ ಪದ್ಯಗಳನ್ನು ಸುಸ್ವರ ಕಂಠದಿಂದ ಹಾಡಿ ಭಗವಂತನನ್ನು ಪೂಜಿಸುತ್ತಿದ್ದರು. ಅವರು ೧೯೬೦ ನೇ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ ಕಾಲವಾದರು.

## ೫೩೫ ಅಚ್ಯುತರಾವ ಹುಯಿಲಗೋಳ

ಅಚ್ಯುತರಾವ ಕೃಷ್ಣರಾವ ಹುಯಿಲಗೋಳರವರು ಆಗರ್ಭ ಶ್ರೀಮಂತರು. ಪ್ರಸಿದ್ಧ ಹುಯಿಲಗೋಳ ಜಹಗೀರದಾರರ ಕುಟುಂಬಕ್ಕೆ ಸೇರಿದವರಾಗಿದ್ದರು. ಗದುಗಿನಲ್ಲಿ ವಾಸವಾಗಿದ್ದರು. ಇವರು ಮಹಾ ಸಾತ್ವಿಕರೂ, ಸಾಹಿತಿಗಳೂ ಆಗಿದ್ದರು. ಅನೇಕ ಪೌರಾಣಿಕ ನಾಟಕಗಳನ್ನು ಬರೆದಿದ್ದಾರೆ. ಭಗವದ್ಗೀತಾ, ಭಾಗವತ ಸಾರೋದ್ಧಾರವನ್ನು ಕನ್ನಡ ಪದ್ಯಗಳಲ್ಲಿ ಬರೆದಿದ್ದಾರೆ.

## ೫೪೬ ರಾಮದಾಸ

ರಾಯಚೂರ ಜಿಲ್ಹೆಯಲ್ಲಿ ದೇವದುರ್ಗ ತಾಲೂಕಿನ ಜೋಳದ ಹೆಡಿಗಿ ಎಂಬ ಊರಲ್ಲಿ ೧೮೯೦ ನೇ ಇಸ್ವಿಯಲ್ಲಿ ಜನಿಸಿದ ಶ್ರೀ ರಾಮದಾಸರು ರಾಯಚೂರ ಜಿಲ್ಹೆಯ ಹರಿದಾಸ ಪರಂಪರೆಯನ್ನು ಈ ಶತಮಾನದಲ್ಲಿ ಮತ್ತೆ ಎತ್ತಿಹಿಡಿದಿದ್ದಾರೆ. ಜಾತಿಯಿಂದ ಸಿಂಜಾರನಾದ ರಾಮದಾಸನಿಗೆ ಗೋನವಾಡದ ವೆಂಕಟ ಭೀಮಾಚಾರ್ಯ, ಹನುಮಂತಾಚಾರ್ಯರೆಂಬ ಕೀರ್ತನಕಾರರ ಸಂಪರ್ಕದಿಂದ ದಾಸ ಸಾಹಿತ್ಯದಲ್ಲಿ ಅಭಿರುಚಿ ಅಭಿಜ್ಞತೆಗಳು ಉಂಟಾದವು. ಗೋನವಾರದಲ್ಲಿ ಶಿಕ್ಷಕ ವೃತ್ತಿಯಲ್ಲಿ ಇದ್ದು ಸಂಗೀತವನ್ನು ಕಲಿತು ರಾಮಾಯಣಾದಿ ಮಹಾ ಭಾರತಾದಿ ನಾಟಕಗಳಲ್ಲಿ ಪಾತ್ರವಾಡಿದ ರಾಮದಾಸನಿಗೆ ಒಮ್ಮೆಲೇ ವೈರಾಗ್ಯವು ಜನಿಸಿ ಮನೆ ಮಾರುಗಳನ್ನು ತೊರೆದು ಹೊರಗೆ ಬಂದನು. ಹಂಪಿಯಲ್ಲಿ ಇರುವ ವೇದವೇದಾಂತ ಪಾರಂಗತರಾದ ರಾಮಾವಧೂತ ಎಂಬ ಸಾಧು ಪುರುಷರ ಶಿಷ್ಯನಾಗಿ ದಾಸ ಸಾಹಿತ್ಯದ ಒಳ ಮರ್ಮವನ್ನೆಲ್ಲ ತಿಳಿದುಕೊಂಡನು. ಅವರಿಂದ ರಾಮದಾಸ ಎಂಬ ಅಂಕಿತ ಪಡೆದು ಸಾವಿರಾರು ದೇವರ ನಾಮುಗಳನ್ನೂ, ಸಂಪೂರ್ಣ ವಾಲ್ಮೀಕಿ ರಾಮಾಯಣವನ್ನೂ, ಆಂಜನೇಯ ಶತಾಷ್ಟಕ, ವಿಠ್ಠಲ ಶತಾಷ್ಟಕ, ಗೋವಿಂದ ಶತಾಷ್ಟಕ ಮುಂತಾದ ಅನೇಕ ಕೃತಿಗಳನ್ನು ರಚಿಸಿದರು. ಅವರ ಕೃತಿಗಳಲ್ಲಿ ಶ್ರೀ ಹರಿ ಮಹಾ ಮಹಿಮೆಯನ್ನು ನಿರೂಪಿಸಲಾಗಿದೆ.

## ೫೪೭ ಭೀಮದಾಸ

ಅನೇಕ ವರ್ಷ ನಾಟಕ ಕಂಪನಿಯಲ್ಲಿದ್ದು ಸಂಗೀತ, ಸಾಹಿತ್ಯ, ಅಭಿನಯ ಕಲೆಗಳಲ್ಲಿ ಪಳಗಿದವರಾದ ಹೂಗಾರ ಭೀಮರಾಯರಿಗೆ ಒಮ್ಮೆಲೇ ವೈರಾಗ್ಯ ಹುಟ್ಟಿ ಭೀಮದಾಸರಾದರು. ಅಥಣಿಯಲ್ಲಿ ಶ್ರೀ ರಾಯರ ಗುಡಿ ಕಟ್ಟಿಸಿ ಶ್ರೀ ರಾಮದುರ್ಗ ಮಾಧವೇಶಾಚಾರ್ಯರಿಂದ ವೃಂದಾವನವನ್ನು ಪ್ರತಿಷ್ಠೆ ಮಾಡಿಸಿದರು. ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಿಂದ ಹುಬ್ಬಳ್ಳಿ ಕಟ್ಟಿಯ ಮಹಾ ಸಮಾರಾಧನೆಯ ಕಾಲದಲ್ಲಿ ತಪ್ತ ಮುದ್ರೆಯನ್ನು ಸ್ವೀಕರಿಸಿ ವೈಷ್ಣವ ದೀಕ್ಷೆಯನ್ನು ಪಡೆದರು. ದೇಶದಲ್ಲಿ ಎಲ್ಲ ಕಡೆಗೂ ಸಂಚರಿಸಿ ದಾಸರ ಪದಗಳ ಭಕ್ತಿಯುಕ್ತವಾದ ಭಜನೆ ನಾಮ ಸಂಕೀರ್ತನೆಗಳನ್ನು ಮಾಡಿ ಜನರಲ್ಲಿ ಹರಿಗುರು ಭಕ್ತಿಯನ್ನು ಅಭಿವೃದ್ಧಿಗೊಳಿಸಿದರು.

## ಉತ್ತರ ಭಾರತದಲ್ಲಿ ಶ್ರೀ ಮಧ್ವಾಚಾರ್ಯರ

## ಮುಖ್ಯ ಅನುಯಾಯಿಗಳಾದ

# ಚೈತನ್ಯ ಸಂಪ್ರದಾಯದ ಪಂಡಿತರು

### ೫೩೮ ಚೈತನ್ಯ ಮಹಾಪ್ರಭು

೧೪೮೬ ನೇ ಇಸ್ವಿಯಲ್ಲಿ ಬಂಗಾಲದ ನದಿಯಾ ಪ್ರಾಂತದಲ್ಲಿ ಅವತರಿಸಿದ ಶ್ರೀ ಕೃಷ್ಣಭಕ್ತ ಚೈತನ್ಯರು ಭಕ್ತಿ ಸಂಪ್ರದಾಯದ ದೊಡ್ಡ ವಿಭೂತಿ ಪುರುಷರಾಗಿದ್ದರು. ಅವರು ಗೃಹಸ್ಥಾಶ್ರಮಿಗಳಾಗಿ ೨೪ ವರ್ಷ ಗಾರ್ಹಸ್ಥ್ಯ ಜೀವನವನ್ನು ನಡೆಸಿ ಅನಂತರ ಅವರು ಸನ್ಯಾಸ ಆಶ್ರಮವನ್ನು ಶ್ರೀ ವ್ಯಾಸರಾಯ ಮಠದ ಶಿಷ್ಯ ಪರಂಪರೆಗೆ ಸೇರಿದ ಈಶ್ವರಪುರಿಯೆಂಬುವವರಿಂದ ಸ್ವೀಕರಿಸಿದರು. ಆಶ್ರಮವಾದ ಬಳಿಕ ಅವರು ಜಗನ್ನಾಥ, ರಾಮೇಶ್ವರ, ಉಡುಪಿ ಮುಂತಾದ ದಕ್ಷಿಣೋತ್ತರ ದೇಶಗಳ ತೀರ್ಥ ಯಾತ್ರೆಯನ್ನು ೬ ವರ್ಷಗಳ ಕಾಲ ಮಾಡಿದರು. ಅನಂತರ ಶ್ರೀ ಕೃಷ್ಣನು ಸಂಚರಿಸಿದ ವೃಂದಾವನದ ಪುಣ್ಯ ಭೂಮಿಯಲ್ಲಿ ಕೆಲವು ದಿನ ವಾಸ ಮಾಡಿ ಅನಂತರ ಜಗನ್ನಾಥ ಪುರಿಗೆ ಹೋಗಿ ೧೮ ವರ್ಷಗಳ ಕಾಲ ಅಲ್ಲಿಯೇ ವಾಸ ಮಾಡಿದರು. ಚೈತನ್ಯರು ಶ್ರೀಮನ್ ಮಧ್ವಾಚಾರ್ಯರು ಹೇಳಿದ ವಿಷ್ಣು ಸರ್ವೋತ್ತಮತ್ವ ಪ್ರಪಂಚ ಸತ್ಯತ್ವ ಮುಂತಾದ ವೈಷ್ಣವ ತತ್ವಗಳನ್ನೇ ತಾವಿರುವ ವರೆಗೆ ಪ್ರಚಾರ ಮಾಡಿದರು. ಉತ್ತರ ಭಾರತವಲ್ಲೆಲ್ಲ ರಾಧಾಕೃಷ್ಣರ ಭಕ್ತಿ ಸಂಪ್ರದಾಯವು ಇಷ್ಟು ಉತ್ಕರ್ಷವನ್ನು ಹೊಂದಲಿಕ್ಕೆ ಶ್ರೀ ಚೈತನ್ಯ ಮಹಾ ಪ್ರಭುಗಳ ಉಪದೇಶವೇ ಕಾರಣ. ಈ ಸಂಪ್ರದಾಯದಲ್ಲಿ ಅನೇಕ ಪಂಡಿತರೂ, ಗ್ರಂಥಕಾರರೂ, ಭಕ್ತಶ್ರೇಷ್ಠರೂ ಆಗಿಹೋಗಿದ್ದಾರೆ. ಶ್ರೀ ಚೈತನ್ಯರ ಸಾಕ್ಷಾತ್ ಶಿಷ್ಯರಲ್ಲಿ ಶ್ರೀ ರಘುನಾಥಭಟ್ಟ, ರೂಪಗೋಸ್ವಾಮಿ, ಜೀವಗೋಸ್ವಾಮಿ, ರಘುನಾಥದಾಸ, ಗೋಪಾಲಭಟ್ಟ, ಸನಾತನ ಗೋಸ್ವಾಮಿ ಎಂಬ ಆರು ಜನರು ಪ್ರಮುಖರಾಗಿದ್ದಾರೆ.

### ೫೩೯ ರೂಪ ಗೋಸ್ವಾಮಿ

ಇವರು ಕರ್ನಾಟಕ ದೇಶದವರು. ಕನ್ನಡಿಗರಾದ ರೂಪಗೋಸ್ವಾಮಿಯವರು ಉತ್ತರ ಭಾರತಕ್ಕೆ ಹೋಗಿ ಚೈತನ್ಯ ಪ್ರಭುಗಳ ಶಿಷ್ಯರಾಗಿ ದೇಶದಲ್ಲೆಲ್ಲ ತಮ್ಮ ಪ್ರಭಾವವನ್ನು ಬೀರಿದರು ಇವರ ತಂದೆಯಾದ ಕುಮಾರ ದೇವನು

ಭರದ್ವಾಜ ಗೋತ್ರದ ಬ್ರಾಹ್ಮಣನಾಗಿದ್ದನು. ಆ ಕಾಲದಲ್ಲಿ ಗೌಡ ದೇಶದ ಅಧಿಪತಿಯಾದ ಹುಶೇನ ಶಹನ ಪ್ರಧಾನ ಮಂತ್ರಿಗಳಾಗಿದ್ದರು. ಅವನ ಮಕ್ಕಳಾದ ರೂಪ ಗೋಸ್ವಾಮಿಯವರು ೧೪೧೫ ಶಕ ಸಂವತ್ಸರದಲ್ಲಿ ಜನಿಸಿ ಶ್ರೀ ಚೈತನ್ಯರ ಶಿಷ್ಯರಾಗಿ ಭಕ್ತಿ ಸಂಘವನ್ನು ಪ್ರಸಾರ ಮಾಡಿದರು. ಶ್ರೀ ರೂಪ ಗೋಸ್ವಾಮಿಯವರು ಮಹಾ ಪಂಡಿತರಾಗಿದ್ದು ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

೧) ಹಂಸ ದೂತ ಕಾವ್ಯಂ
೨) ಉದ್ಧವ ಸಂದೇಶ
೩) ಉಜ್ವಲ ನೀಲಮಣಿ
೪) ಸಂಕ್ಷೇಪ ಭಾಗವತಾಮೃತಮ್
೫) ಉಪದೇಶಾಮೃತಮ್
೬) ವಿದಗ್ಧ ಮಾಧವ ನಾಟಕಂ
೭) ಲಲಿತ ಮಾಧವ ನಾಟಕಂ
೮) ದಾನ ಕೇಲಿ ಕೌಮುದಿ
೯) ಶ್ರೀ ಕೃಷ್ಣ ಜನ್ಮ ತಿಥಿ ವಿಧಿಃ
೧೦) ಬೃಹದ್ಗಣೋದ್ದೇಶ ದೀಪಿಕಾ
೧೧) ಲಘು ಗಣೋದ್ದೇಶ ದೀಪಿಕಾ
೧೨) ಭಕ್ತಿರಸಾಮೃತ ಸಿಂಧು
೧೩) ಶ್ರೀಸ್ತವಮಾಲಾ
೧೪) ಪದ್ಯಾವಲಿ
೧೫) ಮಥುರಾ ಮಹಾತ್ಮ್ಯಂ

ಮುಂತಾಗಿ ಕಾವ್ಯ ನಾಟಕ ಶಾಸ್ತ್ರ ಪುರಾಣ ವೇದಾಂತ ವಿಷಯಕವಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

## ೩೪೦ ಜೀವ ಗೋಸ್ವಾಮಿ

ಶ್ರೀ ರೂಪ ಗೋಸ್ವಾಮಿಯವರ ಸಹೋದರರಾದ ಶ್ರೀ ವಲ್ಲಭರ ಸತ್ಪುತ್ರನೇ ಶ್ರೀ ಜೀವ ಗೋಸ್ವಾಮಿ. ೧೪೪೫ ನೇ ಶಕ ಸಂವತ್ಸರದಲ್ಲಿ ಜನಿಸಿದ ಶ್ರೀ ಜೀವ ಗೋಸ್ವಾಮಿಯವರು ಶ್ರೀ ಚೈತನ್ಯರ ಶಿಷ್ಯರಾಗಿ ಉತ್ತರ ದೇಶದಲ್ಲಿ ಕೃಷ್ಣ ಭಕ್ತಿಯನ್ನು ಪ್ರಸಾರ ಮಾಡಿದರು. ಶ್ರೀ ಜೀವ ಗೋಸ್ವಾಮಿಯವರು ಮಹಾ ಹರಿ ಭಕ್ತರಾದಂತೆ ಪಂಡಿತ ಶ್ರೇಷ್ಠರೂ ಆಗಿದ್ದರು. ವ್ಯಾಕರಣ, ಸಾಹಿತ್ಯ, ವೇದಾಂತಾದಿ ಶಾಸ್ತ್ರಗಳಲ್ಲಿ ಅಧಿಕಾರಯುಕ್ತ ವಾಣಿಯಿಂದ ಪ್ರವಚನವನ್ನು ಮಾಡಲು ಸಮರ್ಥರಾದ ಶ್ರೀ ಜೀವ ಗೋಸ್ವಾಮಿಯವರು ಅನೇಕ ಗ್ರಂಥ ಬರೆದಿದ್ದಾರೆ. ಅವರ ಗ್ರಂಥಗಳ ಯಾದಿಯನ್ನು ಇಲ್ಲಿ ಕೊಡಲಾಗಿದೆ.

೧) ಷಟ್ ಸಂದರ್ಭ
೯) ಶ್ರೀ ರಾಧಾ ಕೃಷ್ಣ
೨) ಗೋಪಾಲ ಚಂಪು
೧೦) ಭಕ್ತಿ ರಸಾಮೃತ ಸಿಂಧು ಟೀಕಾ
೩) ಗೋವಿಂದ ಬಿರುದಾವಲಿ
೧೧) ವೈಷ್ಣವ ತೋಷಿಣೀ
೪) ಹರಿನಾಮಾಮೃತ ವ್ಯಾಕರಣಂ
೧೨) ಭಾಗವತಸ್ಯ ಟೀಕಾ
೫) ಧಾತು ಸೂತ್ರ ಮಾಲಿಕಾ
೧೩) ಗೋಪಾಲ ತಾಪಿನೀ ಟೀಕಾ

೬) ಮಾಧವ ಮಹೋತ್ಸವ
೭) ಸಂಕಲ್ಪ ಕಲ್ಪ ಭೃಂಗ ಗ್ರಂಥ
೮) ಉಜ್ವಲ ನೀಲ ಮಣಿ ಟೀಕಾ
೧೪) ಅಗ್ನಿಪುರಾಣೀಯ ಗಾಯತ್ರಿ ಭಾಷ್ಯಮಂ
೧೫) ಬ್ರಹ್ಮಸಂಹಿತೋಪನಿಷತ್ ಟೀಕಾ

**೫೪೧ ರಘುನಾಥ ದಾಸ ಗೋಸ್ವಾಮಿ ವೃಂದಾವನ**

ಬಂಗಾಲ ದೇಶದ ಗೋವರ್ಧನ ಮುಜುಮದಾರರ ಮಗನಾಗಿ ೧೪೨೦ ನೇ ಶಕ ಸಂವತ್ಸರದಲ್ಲಿ ಶ್ರೀ ರಘುನಾಥ ಗೋಸ್ವಾಮಿಯವರು ಜನಿಸಿದರು. ಮುಂದೆ ಅವರು ಚೈತನ್ಯ ಮಹಾ ಪ್ರಭುಗಳ ಶಿಷ್ಯರಾಗಿ ಗೋಸ್ವಾಮಿ ಷಟ್ಕರಲ್ಲಿ ಪರಿಗಣಿತ ರಾದರು. ಶ್ರೀ ಕೃಷ್ಣನ ಮೇಲಿನ ಭಕ್ತಿಯಿಂದ ಅವರು ತಮ್ಮ ಆಯುಷ್ಯವನ್ನೆಲ್ಲ ವೃಂದಾವನದಲ್ಲಿಯೇ ಕಳೆದರು. ಇವರು ದಾನಚರಿತ, ಮುಕ್ತ ಚರಿತ, ಸ್ತವಾವಲಿ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ.

**೫೪೨ ಗೋಪಾಲಭಟ್ಟ ಗೋಸ್ವಾಮಿ**

ಶ್ರೀ ವೆಂಕಟ ಭಟ್ಟರ ಚಿರಂಜೀವರಾದ ಗೋಪಾಲಭಟ್ಟರು ಚೈತನ್ಯರ ಪ್ರಭಾವ ದಿಂದ ಆಕರ್ಷಿತರಾಗಿ ಅವರು ದಕ್ಷಿಣ ದೇಶದ ತೀರ್ಥ ಯಾತ್ರೆಗೆ ಬಂದಾಗ ಶ್ರೀ ಚೈತನ್ಯರ ಶಿಷ್ಯರಾಗಿ ಅವರ ಅನುಯಾಯಿಗಳಾದರು. ದಕ್ಷಿಣೋತ್ತರ ದೇಶಗಳಲ್ಲಿ ಸಂಚರಿಸಿ ರಾಧಾ ಕೃಷ್ಣ ಭಕ್ತಿಯನ್ನು ಎಲ್ಲ ಕಡೆಗೂ ಹರಡಿದರು. ಅವರು ಷಟ್ ಸಂದರ್ಭ ಕಾರಿಕಾ, ಸತ್‌ಕ್ರಿಯಾದೀಪಿಕಾ, ಹರಿಭಕ್ತಿ ವಿಲಾಸ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

**೫೪೩ ಕೃಷ್ಣದಾಸ ಕವಿರಾಜ**

ಶ್ರೀ ಜೀವ ಗೋಸ್ವಾಮಿಯವರ ಶಿಷ್ಯರಾದ ಕೃಷ್ಣದಾಸ ಕವಿರಾಜರು ಚೈತನ್ಯ ಮಹಾ ಪ್ರಭುಗಳಿಗೆ ಅತ್ಯಂತ ಪ್ರೀತ್ಯಾಸ್ಪದರಾಗಿದ್ದರು. ಮಹಾ ಪಂಡಿತರಾದ ಇವರು
೧) ಚೈತನ್ಯ ಚರಿತಾಮೃತ ೨) ಗೋವಿಂದ ಲೀಲಾಮೃತ
೩) ಶ್ರೀ ಕೃಷ್ಣ ಕರ್ಣಾಮೃತ ಗ್ರಂಥಕ್ಕೆ ಸಾರಂಗ ರಂಗದಾ ಎಂಬ ಟೀಕೆ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ೧೪೫೩ ನೇ ಶಕ ಸಂವತ್ಸರದಲ್ಲಿ ಜನಿಸಿದ ಕೃಷ್ಣರಾಜ ಕವಿರಾಜರು ಮಹಾ ಪ್ರಭಾವಶಾಲಿಗಳಾದ ಪಂಡಿತ ಲೇಖಕ ಗ್ರಂಥಕಾರ ರಾಗಿದ್ದರು.

**೫೪೪ ವಿಶ್ವನಾಥ ಚಕ್ರವರ್ತಿ**

ಮಾಧ್ವ ಗೌಡೀಯ ಸಂಪ್ರದಾಯದ ಮಹಾ ಪೀಠದ ಪ್ರಧಾನ ಆಚಾರ್ಯ ರಾದ ವಿಶ್ವನಾಥ ಚಕ್ರವರ್ತಿಗಳು ೧೬೬೦ನೇ ಶಕ ಸಂವತ್ಸರದಲ್ಲಿ ಜನಿಸಿ ಉತ್ತರ

ದೇಶದಲ್ಲಿ ಎಲ್ಲ ಕಡೆಗೂ ಸಂಚರಿಸಿ ಮಧ್ವ ತತ್ವ ಜ್ಞಾನದ ಪ್ರಯೇಯಗಳನ್ನೆಲ್ಲ ತಿಳಿಸಿ ಹೇಳಿದರು. ಪಂಡಿತ ಪ್ರವರರಾದ ಇವರು ಅನೇಕ ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾರೆ.

## ಗ್ರಂಥಗಳ ನಾಮಾವಳಿ

೧) ಶ್ರೀ ಕೃಷ್ಣ ಭಾವನಾಮೃತಂ
೨) ಸ್ತವಾಮೃತಲಹರಿ
೩) ರಾಗವರ್ತ್ಮ ಚಂದ್ರಿಕಾ
೪) ಸಿಂಧು ಬಿಂದು ಕಣಃ
೫) ಕ್ಷಣದಾ ಗೀತ ಚಿಂತಾಮಣಿಃ
೬) ನಿಕುಂಜ ಕೇಲಿ ಬಿರುದಾವಲಿ
೭) ಪ್ರೇಮ ಸಂಪುಟ
೮) ಸಂಕಲ್ಪ ಕಲ್ಪದ್ರುಮ
೯) ವ್ರಜ ರೀತಿ ಚಿಂತಾಮಣಿ
೧೦) ಲಲಿತ ಮಾಧವ ಟೀಕಾ
೧೧) ವಿದಗ್ಧ ಮಾಧವ ಟೀಕಾ
೧೨) ಬ್ರಹ್ಮ ಸಂಹಿತಾ ಟೀಕಾ
೧೩) ಶ್ರೀ ಭಾಗವತ ಟೀಕಾ (ಸಾರಾರ್ಥ ದರ್ಶಿನೀ)
೧೪) ಭಗವದ್ಗೀತಾ ಟೀಕಾ (ಸಾರಾರ್ಥ ವರ್ಶಿಣೀ)
೧೫) ಆನಂದ ಚಂದ್ರಿಕಾ (ಉಜ್ವಲ ನೀಲಮಣಿ ಟೀಕಾ)
೧೬) ಭಕ್ತಿಸಾರ ಪ್ರದರ್ಶಿನೀ (ಭಕ್ತಿರಸಾಮೃತ ಸಿಂಧು ಟೀಕಾ)
೧೭) ಭಕ್ತಿಹರ್ಷಿಣೀ (ಗೋಪಾಲ ತಾಪಿನೀ ಉಪನಿಷದ್ ಟೀಕಾ)
೧೮) ಸುಖ ವರ್ಧಿನೀ (ಆನಂದ ವೃಂದಾವನ ಟೀಕಾ)
೧೯) ಸುಬೋಧಿನೀ (ಅಲಂಕಾರ ಕೌಸ್ತುಭ ಟೀಕಾ)
೨೦) ಐಶ್ವರ್ಯ ಕಾದಂಬಿನೀ

## ೫೪೫ ಬಲದೇವ ವಿದ್ಯಾಭೂಷಣ

ಇವರು ಮಾಧ್ವ ಗೌಡೀಯ ಸಂಪ್ರದಾಯದಲ್ಲಿ ಮಹಾನ್ ಆಚಾರ್ಯರೆಂದೂ ದಾರ್ಶನಿಕ ಸಾರ್ವಭೌಮರೆಂದೂ ಪ್ರಖ್ಯಾತರಾಗಿದ್ದರು. ಉತ್ಕಲ ಪ್ರಾಂತದಲ್ಲಿ ರೇಮುನಾ ಗ್ರಾಮದಲ್ಲಿ ಜನಿಸಿದ ಶ್ರೀ ಬಲದೇವ ವಿದ್ಯಾಭೂಷಣರು ಮಾಧ್ವ ಸಂಪ್ರದಾಯ ಪ್ರವರ್ತಕ ಆಚಾರ್ಯರಾದ ಶ್ರೀ ವಿಶ್ವನಾಥ ಚಕ್ರವರ್ತಿಗಳಲ್ಲಿ ಶಾಸ್ತ್ರಾಧ್ಯಯನ ಮಾಡಿ ಪಂಡಿತ ಪ್ರಕಾಂಡರಾದರು. ಶ್ರೀ ಬಲದೇವ ವಿದ್ಯಾ ಭೂಷಣರ ಗ್ರಂಥಗಳು ಜಗನ್ಮಾನ್ಯವಾದ ಶಾಸ್ತ್ರೀಯ ಗ್ರಂಥಗಳು ಎನಿಸಿವೆ.

೧) ಗೋವಿಂದ ಭಾಷ್ಯ
೨) ಸಿದ್ಧಾಂತ ರತ್ನ
೩) ವೇದಾಂತ ಶಮಂತಕ
೪) ಪ್ರಮೇಯ ರತ್ನಾವಲಿ
೧೦) ಲಘು ಭಾಗವತಾಮೃತ ಟೀಕಾ
೧೧) ಶಾಮಾನಂದ ಶತಕ ಟೀಕಾ
೧೨) ನಾಟಕ ಚಂದ್ರಿಕಾ ಗ್ರಂಥ ಟೀಕಾ
೧೩) ಸಂಪೂರ್ಣ ಭಾಗವತ ಟೀಕಾ

೫) ಸಿದ್ಧಾಂತ ದರ್ಪಣ
೬) ಸಾಹಿತ್ಯ ಕೌಮುದಿ
೭) ಛಂದಃ ಕೌಸ್ತುಭ
೮) ಕಾವ್ಯ ಕೌಸ್ತುಭ
೯) ಷಟ್ ಸಂದರ್ಭ ಟೀಕಾ
೧೪) ಗೋಪಾಲ ತಾಪಿನೀ ಉಪನಿಷತ್ ಟೀಕಾ
೧೫) ಸುಸ್ತಯೋಗ ಗ್ರಂಥ ಟೀಕಾ
೧೬) ಗೀತಾಭಾಷ್ಯ

## ೫೪೬ ಭಕ್ತಿ ವಿನೋದ ಠಕ್ಕುರ

೧೫೩೫ ನೇ ಇಸ್ವಿಯಲ್ಲಿ ಬಂಗಾಲದ ನದಿಯಾ ಪ್ರಾಂತದಲ್ಲಿ ಜನಿಸಿದ ಶ್ರೀ ಭಕ್ತಿ ವಿನೋದ ಠಕ್ಕುರರು ಮಧ್ವ ಸಂಪ್ರದಾಯದ ಪರಮಾಚಾರರೆಂದು ಪ್ರಸಿದ್ಧ ರಾಗಿದ್ದರು. ಚೈತನ್ಯ ಗೌಡೀಯ ಮಠದ ಆಚಾರ್ಯ ಪೀಠವನ್ನು ಆರೋಹಣ ಮಾಡಿದ ಇವರು ಬಂಗಾಲ ಪ್ರಾಂತದಲ್ಲಿ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದರು. ಮಹಾ ಪಂಡಿತರಾದ ಇವರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

೧) ದತ್ತ ಕೌಸ್ತುಭ
೨) ಶಿಕ್ಷಾಷ್ಟಕ ಟೀಕಾ
೫) ಜೀವಧರ್ಮಃ
೭) ಶ್ರೀ ಚೈತನ್ಯ ಶಿಕ್ಷಾಮೃತ
೩) ಶ್ರೀ ದಶಮೂಲ
೪) ಉಪದೇಶಾಮೃತ ಟೀಕಾ
೬) ಗೌರಾಂಗ ಸ್ಮರಣ ಮಂಗಲ ಸ್ತೋತ್ರ

## ೫೪೭ ರಾಧಾ ವಿನೋದ ಗೋಸ್ವಾಮಿ

ಇವರು ಬಂಗಾಲ ಪ್ರಾಂತದಲ್ಲಿ ಮಧ್ವಮತಾನುಸಾರಿಯಾಗಿ ಭಕ್ತಿ ಪಂಥ ವನ್ನು ವಿಸ್ತರಿಸಿದರು. ೧೮ ನೇಯ ಶತಮಾನದಲ್ಲಿ ವಂಗ ದೇಶದಲ್ಲಿ ಜನಿಸಿದ ಇವರು ಬಂಗಾಲೀ ಭಾಷೆಯಲ್ಲಿ ದ್ವೈತ ಸಿದ್ಧಾಂತದ ಬಗೆಗೆ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ.

## ೫೪೮ ಅತುಲ ಕೃಷ್ಣ ಗೋಸ್ವಾಮಿ

ಮಾಧ್ವ ಗೌಡೀಯ ಸಂಪ್ರದಾಯದ ಪರಂಪರಾಗತ ಆಚಾರ್ಯ ಪೀಠವಲ್ಲಿ ಮಂಡಿಸಿದ ಅತುಲ ಕೃಷ್ಣ ಗೋಸ್ವಾಮಿಯವರು ೧೮ ನೇಯ ಶತಮಾನದಲ್ಲಿ ವೃಂದಾವನ, ಗೋಕುಲ, ಮಥುರಾದಿ ಪ್ರಾಂತಗಳಲ್ಲಿಯೂ, ಬಂಗಾಲ, ಬಿಹಾರ ಗಳಲ್ಲಿಯೂ ಸಂಚಾರ ಮಾಡಿ ವೈಷ್ಣವ ಭಕ್ತಿ ಪಂಥದ ಸರ್ವತೋಮುಖ ಏಳಿಗೆಗಾಗಿ ಪ್ರಯತ್ನ ಪಟ್ಟರು.

## ೫೯೯ ರಸಿಕ ಮೋಹನ ವಿದ್ಯಾಭೂಷಣ

೧೮ ನೇ ಶತಮಾನದ ವಂಗದೇಶೀಯ ವಿದ್ವಾಂಸರಾದ ಶ್ರೀ ರಸಿಕ ಮೋಹನರು ಮಹಾ ಪಂಡಿತರಾಗಿದ್ದರು. ಪ್ರವಚನಾಚಾರ್ಯರೆಂದೂ ಎನಿಸಿದ್ದರು. ಗ್ರಂಥಕಾರರೆಂದು ಪ್ರಖ್ಯಾತರಾಗಿದ್ದರು. ಮಾಧ್ವ ಗೌಡೀಯ ಮಠದ ಉಚ್ಚ ಪೀಠವಲ್ಲಿ ಪ್ರತಿಷ್ಠಿತರಾದ ಈ ರಸಿಕ ಮೋಹನ ವಿದ್ಯಾಭೂಷಣರು ವಂಗ ಭಾಷೆಯಲ್ಲಿ ಅನೇಕ ಗ್ರಂಥಗಳನ್ನು ಬರೆದು, ಮಧ್ವ ಸಿದ್ಧಾಂತ ಪ್ರಮೇಯಗಳನ್ನೆಲ್ಲ ವಂಗ ವಾಸಿಗಳಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

## ೫೫೦ ಭಕ್ತಿ ಸಿದ್ಧಾಂತ ಸರಸ್ವತೀ ಪ್ರಭುಪಾದ

ಮಾಧ್ವ ಗೌಡೀಯ ಸಂಪ್ರದಾಯದ ಮಹಾನ್ ಆಚಾರ್ಯರಾದ ಇವರು ದ್ವೈತ ದೀಕ್ಷಾ ದುರಂಧರರಾಗಿದ್ದರು. ೧೮೭೮ ನೇ ಇಸ್ವಿಯಲ್ಲಿ ಉತ್ಕಲ ಪ್ರಾಂತವಲ್ಲಿ ಜನಿಸಿದ ಇವರು ದ್ವೈತ ಸಿದ್ಧಾಂತದ ಪ್ರಸಾರಕ್ಕಾಗಿ ಭರತ ಖಂಡದಲ್ಲಿ ೭೫ ಮಠಗಳನ್ನು ಸ್ಥಾಪನೆ ಮಾಡಿದರು. ಮಾಧ್ವ ಗೌಡೀಯ ಸಂಪ್ರದಾಯದ ಉಪಲಬ್ಧವಿದ್ದ ಎಲ್ಲ ಗ್ರಂಥಗಳನ್ನೂ ಸಂಶೋಧಿಸಿ, ಮುದ್ರಿಸಿ, ಪ್ರಕಾಶ ಪಡಿಸಿದರು. ಅಮೇರಿಕಾ, ಜರ್ಮನಿ, ಫ್ರಾನ್ಸ್, ಲಂಡನ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿಯೂ ಕೂಡ ಅನೇಕ ಮಠಗಳನ್ನು ಸ್ಥಾಪಿಸಿ, ವೈಷ್ಣವ ಧರ್ಮವನ್ನು ಪ್ರಸಾರ ಮಾಡಿದರು. ಇವರು ಹೋದಲ್ಲೆಲ್ಲ ಚೈತನ್ಯ ಮಠ, ಮಾಧ್ವಗೌಡೀಯ ಮಠ, ಬ್ರಹ್ಮ ಮಾಧ್ವ ಮಠ ಮುಂತಾದ ಅನೇಕ ಮಠಗಳನ್ನು ದ್ವೈತ ಮತ ಪ್ರಸಾರಕ ವಿದ್ಯಾ ಪೀಠಗಳನ್ನು ಸ್ಥಾಪಿಸಿ, ಮಧ್ವ ಸಂಪ್ರದಾಯಾನುಸಾರಿಯಾದ ಚೈತನ್ಯ ಮತದ ಸಾರ್ವತ್ರಿಕ ಪ್ರಸಾರಕ್ಕೆ ಹೆಣಗಾಡಿದರು.

## ೫೫೮ ಶ್ರೀ ಮಹಾಮಹೋಪಾಧ್ಯಾಯ ಗೋಸ್ವಾಮಿ ದಾಮೋದರಶಾಸ್ತ್ರಿ

ಇವರ ಷಟ್ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ನೂರಾರು ಜನರು ಕಾಶಿಯಲ್ಲಿ ಇವರ ಪಾಠವನ್ನು ಕೇಳಲಿಕ್ಕೆ ಬರುತ್ತಿದ್ದರು. ದ್ವೈತ ವೇದಾಂತದಲ್ಲಿ ಇವರು ವ್ಯಾಸತ್ರಯ ಪಾಠ ಹೇಳುತ್ತಿದ್ದರು.

## ೫೫೯ ಕಟಗೇರಿ ರಾಮಾಚಾರ್ಯರು

ಇವರು ಬಿ ಎ. ಪದವೀಧರರಾಗಿ ರೆವ್ಹಿನ್ಯೂ ಖಾತೆಯಲ್ಲಿ ಕೆಲಸ ಮಾಡುತ್ತ ಮಾಧ್ವ ಶಾಸ್ತ್ರವನ್ನು ಚನ್ನಾಗಿ ಅಭ್ಯಾಸ ಮಾಡಿ ಸರಕಾರಿ ಕೆಲಸಕ್ಕೆ ರಾಜಿನಾಮೆ ಇತ್ತು, ಮಧ್ವ ಶಾಸ್ತ್ರ ಪ್ರಸಾರ ಮಾಡುವದನ್ನು ಕೈಕೊಂಡರು.

ಇವರು ಇಂಗ್ಲೀಷ ಮತ್ತು ಕನ್ನಡದಲ್ಲಿ ಆಚಾರ್ಯರ ತತ್ವ ಜ್ಞಾನದ ಬಗ್ಗೆ ಪ್ರೌಢ ಲೇಖನಗಳನ್ನು ಬರೆದು ಪ್ರಸಿದ್ಧಿಪಿದರು. "ದ್ವೈತ ದುಂದುಭಿ" ಎಂಬ ಮಾಸಿಕವನ್ನು ಪ್ರಾರಂಭಿಸಿ ಅದರ ಸಂಪಾದಕರಾಗಿ ಕೆಲಸ ಮಾಡಿದರು.



**ಹನುಮೇಶ ವಿಠ್ಠಲ ಗುತ್ತಲ**

೭೭೫ ನೇ ಪುಟ

ಪಂಡಿತ ಕ್ರಮಾಂಕ ೫೩೩ ನೇದ್ದರಲ್ಲಿ

ಇವರ ಚರಿತ್ರೆ

ನೋಡಿರಿ.



**ಚಿಪ್ಪಗಿರಿ ರಾಘವೇಂದ್ರಾಚಾರ್ಯರು**

ಇವರ ಚರಿತ್ರೆಯನ್ನು

೭೫೯ ನೇ ಪುಟ

ಪಂಡಿತ ಕ್ರಮಾಂಕ

೪೮೭ ನೇದ್ದರಲ್ಲಿ

ನೋಡಿರಿ.

### ೫೬೦ ಪಂಡಿತ ಭೀಮಸೇನಾಚಾರ್ಯ ಚಿತ್ರದುರ್ಗ

ಇವರು ಹುಲಿ ಹನುಮಂತಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿ ಪಂಡಿತತ್ವ ಪ್ರಕಾರಕ ಪ್ರಮಿತಿ ವಿಷಯರಾಗಿದ್ದರು.

### ೫೬೧ ವ್ಯಾಸ ಕೃಷ್ಣಾಚಾರ್ಯರು

ಇವರು ನ್ಯಾಯ ವೇದಾಂತಾದಿ ಶಾಸ್ತ್ರಗಳಲ್ಲಿ ಪಾರಂಗತರಾಗಿ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಮೈಸೂರಿನ ಅರಮನೆಯ ಆಸ್ಥಾನ ವಿದ್ವಾಂಸರಾಗಿದ್ದರು.

### ೫೬೨ ಕಾಳೂರ ಮಹಿದಾಸಾಚಾರ್ಯರು, ಕೋಲಾರ

ನ್ಯಾಯ ಮತ್ತು ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. 'ಬ್ರಹ್ಮಸೂತ್ರಾರ್ಥಕೌಮುದೀ' ಎಂಬ ವೇದಾಂತ ಗ್ರಂಥವನ್ನು ರಚಿಸಿದ್ದಾರೆ.

### ೫೬೩ ಕಾಳೂರು ಗುಂಡಾಚಾರ್ಯ ಕೋಲಾರ

ಮಹಿದಾಸಾಚಾರ್ಯರ ಮಕ್ಕಳಾದ ಗುಂಡಾಚಾರ್ಯರು ವೇದಾಂತ ಶಾಸ್ತ್ರದಲ್ಲಿ ಪರಿಣತ ಪ್ರಜ್ಞರಾಗಿದ್ದರು.

### ೫೬೪ ವೆಂಕಟರಮಣಾಚಾರ್ಯ ಉಪಾಧ್ಯಾಯ

ಇವರು ಸಾತಾರಾ ಆಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನು ಓದಿದ ಮಹಾ ವಿದ್ವಾಂಸರು. ಬಡೋದಾ ಸಂಸ್ಥಾನದಲ್ಲಿ ಧರ್ಮಾಧಿಕಾರಿಗಳಾಗಿ ಬಹುದಿನ ಬಡೋದೆಯಲ್ಲಿಯೇ ವಾಸವಾಗಿದ್ದರು.

ಇವರು ವೇದಾಂತದಲ್ಲಿಯೂ ಪರಿಣತರಾಗಿದ್ದರು. ಶ್ರೀ ಶ್ರೀ ಸತ್ಯಧ್ಯಾನತೀರ್ಥರ ಸಭೆಗಳಿಗೆ ಆಗಮಿಸಿ ವಾಕ್ಯಾರ್ಥಗಳಲ್ಲಿ ಭಾಗವಹಿಸುತ್ತಿದ್ದರು.



## ಪ್ರಕರಣ ೬

# ವಿದ್ಯಮಾನ ವಿದ್ವಾಂಸರು

### ೧ ಪಡಮುನ್ನೂರ ನಾರಾಯಣಾಚಾರ್ಯ



ಇವರು ಹಾನಗಲ್ ವಿರುಪಾಕ್ಷ ಶಾಸ್ತ್ರಿಗಳಲ್ಲಿ ನ್ಯಾಯಶಾಸ್ತ್ರವನ್ನು ಅಧ್ಯಯನ ಮಾಡಿ ಉಡುಪಿಯ ಸಂಸ್ಕೃತ ಕಾಲೇಜಿನ ತರ್ಕಾಧ್ಯಾಪಕರಾಗಿ ಕೆಲಸ ಮಾಡಿದರು. ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಘನತರ ಪಾಂಡಿತ್ಯ, ಗುರುತರ ವ್ಯುತ್ಪತ್ತಿ, ವಾದ ಕೌಶಲ್ಯ, ಬೋಧ ಚಾತುರ್ಯ, ಪಾಠಪ್ರವಚನ ದೀಕ್ಷಾದಾಕ್ಷ್ಯಗಳುಳ್ಳ ನಾರಾಯಣಾಚಾರ್ಯರು ನೂರಾರು ಜನ ಶಿಷ್ಯರಿಗೆ ಪಾಠ ಹೇಳಿ ಈ ಕಾಲದ ನಾರಾಯಣ ಪಂಡಿತಾಚಾರ್ಯರೆಂದು ಸುಪ್ರಸಿದ್ಧರಾಗಿದ್ದಾರೆ. "ಸರ್ವೇ ಶಿಷ್ಯಾಃ ಸತ್ಯವತೀ ಸುತಸ್ಯ" ಎಂಬ ಮಾತಿನಂತೆ ಶ್ರೀ ವೇದವ್ಯಾಸ ದೇವರ ಪರಮಾನುಗ್ರಹಕ್ಕೆ ಪಾತ್ರರಾದ ನಾರಾಯಣಾಚಾರ್ಯರಲ್ಲಿ ಗೃಹಸ್ಥಾಶ್ರಮಿಗಳಷ್ಟೇ ಪೀಠಾಧಿಪತಿಗಳೂ ಪಾಠ ಓದಿ ಪಂಡಿತರಾಗಿದ್ದಾರೆ. ಈಗ ಉಡುಪಿ ಮತ್ತು ಬೇರೆ-ಬೇರೆ ವಿದ್ಯಾ ಕೇಂದ್ರಗಳಲ್ಲಿ ಶಾಸ್ತ್ರಾಧ್ಯಾಪನವನ್ನು ಮಾಡುತ್ತಲಿರುವ ಪಂಡಿತರೆಲ್ಲರೂ ನಾರಾಯಣಾಚಾರ್ಯರ ಶಿಷ್ಯಪ್ರಶಿಷ್ಯರೇ ಆಗಿದ್ದಾರೆ. ದಕ್ಷಿಣ ಕನ್ನಡದ ದ್ರೋಣಾಚಾರ್ಯರೆಂದು ಪ್ರಸಿದ್ಧಿ ಪಡೆದ ಅವರಲ್ಲಿ ಬನ್ನಂಜೆ ಅನಂತ ಕೃಷ್ಣೋಪಾಧ್ಯಾಯ, ಸುಬ್ಬರಾಯ ಪುರಾಣಿಕ,

ಉಡುಪಿ ಸೀತಾರಾಮಾಚಾರ್ಯ ಮುಂತಾದ ಅನೇಕ ವಿದ್ವಾಂಸರೂ, ಶ್ರೀ ಅದಮಾರು ಮಠಾಧೀಶರೇ ಮೊದಲಾದ ಉಡುಪಿಯ ಅನೇಕ ಪೀಠಾಧಿಪತಿಗಳೂ ತರ್ಕ ವೇದಾಂತ ಮೀಮಾಂಸಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಉದ್ದಾಮ ವಿದ್ವಾಂಸರಾಗಿದ್ದಾರೆ.

ಆಚಾರ್ಯರಲ್ಲಿ ಅಸಾಧಾರಣವಾದ ಪಾಠಪ್ರವಚನ ಪಾಟವ ಇದ್ದಂತೆ ಶಾಸ್ತ್ರೀಯ ಗ್ರಂಥ ಲೇಖನ ಚಾತುರ್ಯವು ಅನ್ಯಾದೃಶ್ಯವಾಗಿದೆ. ಅವರು ಬರೆದ ನ್ಯಾಯಾಮೃತ ಕುಲ್ಯಾ, ತರ್ಕ ಸಂಗ್ರಹ ಟೀಕಾ, ಮುಂತಾದ ಪ್ರೌಢ ಶಾಸ್ತ್ರೀಯ ಪ್ರಬಂಧಗಳು ಅವರ ಚತುರಸ್ರ ಪಾಂಡಿತ್ಯಕ್ಕೂ ವಿಲಕ್ಷಣ ಶಾಸ್ತ್ರ ವೈಚಕ್ಷಣ್ಯಕ್ಕೂ ಕನ್ನಡಿ ಹಿಡಿಯುತ್ತವೆ. ೭೫ ರ ಅಂಚಿನಲ್ಲಿದ್ದ ಆಚಾರ್ಯರಿಗೆ ಕಳೆದ ವರ್ಷ ಉಡುಪಿಯ ಜನತೆಯು ದೊಡ್ಡ ಸತ್ಕಾರ ಸಮಾರಂಭವನ್ನೊಂದು ಏರ್ಪಡಿಸಿ ನಿಧಿ ಸಮರ್ಪಣೆ ಗೈದು ಗೌರವಿಸಿತು. ಶ್ರೀ ಭಂಡಾರಕೇರಿ ಶ್ರೀಪಾದಂಗಳವರೂ, ಶ್ರೀ ಪೇಜಾವರ ಶ್ರೀಪಾದಂಗಳವರೂ "ಶಾಸ್ತ್ರನಿಧಿ" ಮುಂತಾದ ಅನೇಕ ಪದವೀ ಪ್ರಶಸ್ತಿ ಇತ್ತು ಸತ್ಕರಿಸಿದ್ದಾರೆ.

ಕೀಲಕನಾಮ ಸಂವತ್ಸರದಲ್ಲಿ ನಡೆದ ೭ ನೇ ಅಖಿಲ ಭಾರತ ಮಾಧ್ವ ತತ್ವಜ್ಞಾನ ಸಮ್ಮೇಲನ ಮತ್ತು ಮಾಧ್ವರಾದ್ಧಾಂತ ಸಭೆಯ ರಜತೋತ್ಸವ ಸಂದರ್ಭದಲ್ಲಿ ಸಭೆಯ ಪರವಾಗಿ ಆಚಾರ್ಯರಿಗೆ "ಪಂಡಿತಸಿಂಹ" ಎಂಬ ಪ್ರಶಸ್ತಿ, ಎರಡು ಸಹಸ್ರ ರೂಪಾಯಿಗಳು, ಜರೀ-ರೇಶ್ಮೆ ಮಡಿ ಹೊದಿಸಿ ಸತ್ಕರಿಸಲಾಯಿತು.

## ೨. ಬಿ. ವೆಂಕಟೇಶಾಚಾರ್ಯ



ಹಿಂದೆ ಶಂಕರಾಚಾರ್ಯರು ಮಾಹಿಷ್ಮತಿಯಲ್ಲಿ ಮಂಡನ ಮಿಶ್ರರ ಮನೆ ಯಾವದೆಂದು ಕೇಳಿದಾಗ ಆ ಊರಿನ ಓರ್ವ ಮುತ್ತೈದೆಯು ಇಂತು ಉತ್ತರಿಸಿದಳಂತೆ

"ಯಾರ ಮನೆಯ ಬಾಗಿಲ ಬಳಿ ಪಂಜರದಲ್ಲಿಯ ಗಿಳಿಗಳು ಜಗತ್ತು ಸತ್ಯವೋ ಮಿಥ್ಯೆಯೋ ಎಂದು ಮುಂತಾಗಿ ವಿಚಾರ ಮಾಡುತ್ತಿರುವವೋ ಅದೇ ಮಂಡನ ಮಿಶ್ರರ ಮಂದಿರವೆಂದು ತಿಳಿಯಿರಿ."

ಅದರಂತೆ ಇಂದು ಬೆಂಗಳೂರಿನಲ್ಲಿ— "ಯಾರ ಮನೆಯಲ್ಲಿ ಪ್ರತಿ ನಿತ್ಯ ಪ್ರಾತಃಕಾಲ ಸುಧಾದಿ ಗ್ರಂಥಗಳ ಪಾಠಪ್ರವಚನ ನಡೆದಿರುವದೋ ಅದೇ ಶ್ರೀ ಬಿ.

ವೆಂಕಟೇಶಾಚಾರ್ಯರ ಮನೆಯೆಂದು ತಿಳಿಯಿರಿ" ಎಂದು ರಾವಬಹಾದ್ದೂರ ವೆಂಕಟೇಶಾಚಾರ್ಯರ ಮನೆಯ ಗುರುತನ್ನು ಮಾಡಿಕೊಟ್ಟರೆ ಅತ್ಯುಕ್ತಿಯಾಗದೇ ಸತ್ಯೋಕ್ತಿಯೇ ಎನಿಸೀತು.

ಸುಮಾರು ಅರ್ಧ ಶತಮಾನದಿಂದ ಅಧ್ಯಯನ, ಅಧ್ಯಾಪನಾದಿ ಕಾರ್ಯವನ್ನು ಅವಿಚ್ಛಿನ್ನವಾಗಿ ನಡೆಸುತ್ತ ಬಂದ ಆಚಾರ್ಯರು ಸವ್ಯಸಾಚಿ ಪಂಡಿತರು.

ಅವರಿಗೆ ಭೌತಶಾಸ್ತ್ರದಲ್ಲಿ ಪ್ರಭುತ್ವವಿದ್ದಂತೆ ಅಧ್ಯಾತ್ಮ ಶಾಸ್ತ್ರದಲ್ಲಿ ಪಾಂಡಿತ್ಯವಿದೆ. ಸಂಸ್ಕೃತದಲ್ಲಿ ಪರಿಶ್ರಮವಿದ್ದಂತೆ ಆಂಗ್ಲಭಾಷೆಯ ಮೇಲೆಯೂ ಒಳ್ಳೇ ಹಿಡಿತವಿದೆ. ಇವರು ತಮ್ಮ ಎಳೆವರೆಯದಲ್ಲಿಯೇ ಫಿಜಿಕ್ಸ ವಿಷಯದಲ್ಲಿ ಬಿ. ಎ., ಎಮ್. ಎ. ಪರೀಕ್ಷೆಗಳಲ್ಲಿ ಮದ್ರಾಸ ವಿಶ್ವವಿದ್ಯಾನಿಲಯದಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಉತ್ತೀರ್ಣರಾದರು.

ಕೇವಲ ಇಪ್ಪತ್ತೊಂದನೆಯ ವಯಸ್ಸಿನಲ್ಲಿಯೇ ಪದಾರ್ಥವಿಜ್ಞಾನ, ಭೌತಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತ್ಯ ಬೋಧನ ಸಾಮರ್ಥ್ಯ ಮತ್ತು ಆಂಗ್ಲ ಭಾಷಾ ಪ್ರಭುತ್ವಗಳಿಂದ ವಿದ್ಯಾಧಿಕಾರಿಗಳ ಮನ ಮೆಚ್ಚಿಸಿದ ಇವರು ೧೯೦೦ ನೇ ಇಸ್ವಿಯಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು.

ಅನಂತರ ಅದೇ ಕಾಲೇಜಿನ ಪ್ರಿನ್ಸಿಪಾಲರಾಗಿ ಬಹು ವರ್ಷ ಜ್ಞಾನದಾನ ಮಾಡಿದರು. ಮೈಸೂರು ಸಂಸ್ಥಾನದ ಈ ಹಿಂದಿನ ತಲೆಮಾರಿನಲ್ಲಿದ್ದ ಅನೇಕ ಅಧಿಕಾರಿಗಳು, ವಿಜ್ಞಾನಿಗಳು ಇವರ ಶಿಷ್ಯಕೋಟಿಗೆ ಸೇರಿದ್ದಾರೆ. ಇವರ ದಕ್ಷ ಆಡಳಿತಕ್ಕೆ ಮೆಚ್ಚಿದ ಸರಕಾರ ಇವರಿಗೆ "ರಾವಬಹಾದ್ದೂರ" ಬಿರುದನ್ನಿತ್ತು ಸತ್ಕರಿಸಿತು.

ಅನಂತರ ಇವರು "ಇಂಡಿಯನ್ ಇನ್‌ಸ್ಟಿಟ್ಯೂಟ ಆಫ್ ಸಾಯನ್ಸ" ಎಂಬ ಶಾತಾ ವಿಜ್ಞಾನ ಮಂದಿರದಲ್ಲಿ ಸಂಶೋಧನಾ ಕಾರ್ಯದ ಡಾಯರೆಕ್ಟರರಾಗಿಯೂ ಸೇವೆ ಸಲ್ಲಿಸಿದರು.

ಲೌಕಿಕ ವಿದ್ಯೆಯಲ್ಲಿ ಉಚ್ಚಸ್ಥಾನವನ್ನು ಪಡೆದಂತೆ ಶ್ರೀ ವೆಂಕಟೇಶಾಚಾರ್ಯರು ವೈದಿಕ ಪ್ರಪಂಚದಲ್ಲಿಯೂ ಸಚ್ಛಾಸ್ತ್ರ ಪ್ರವಚನ ರತ್ನರಾಗಿದ್ದಾರೆ. ಮಾಧ್ವಭೂಷಣರಾಗಿದ್ದಾರೆ. ಶಾಸ್ತ್ರ ಪಾಂಡಿತ್ಯವು ಅವರ ಪೈತೃಕ ಆಸ್ತಿ. ಚಿಕ್ಕಬಳ್ಳಾಪುರ ಬಾಚೇನಹಳ್ಳಿ ಗ್ರಾಮದ ಇವರ ಮನೆತನದಲ್ಲಿ ಇವರ ತಾತಂದಿರಾದ ಶ್ರೀ ಲಕ್ಷ್ಮಣಾಚಾರ್ಯರು ಅಸಾಧಾರಣ ಪಂಡಿತರಾಗಿದ್ದರು. ಇವರ ಚಿಕ್ಕಂದಿರು "ಸರಸ ಕವಿ ಸಾರ್ವಭೌಮ"ರು. ಇವರ ತಂದೆ ಶ್ರೀ ವ್ಯಾಸರಾಯಾಚಾರ್ಯರು ಚಿಕ್ಕಬಳ್ಳಾಪುರದಲ್ಲಿ ಸುಪ್ರಸಿದ್ಧ ವಕೀಲರು.

ಇಂಥ ಸುಸಂಸ್ಕೃತ ವಾತಾವರಣದಲ್ಲಿ ೧೮೭೯ ನೇ ಇಸ್ವಿಯಲ್ಲಿ ಜನಿಸಿದ ಶ್ರೀ ವೆಂಕಟೇಶಾಚಾರ್ಯರು ಬಾಲ್ಯದಲ್ಲಿಯೇ ತಮ್ಮ ಚಿಕ್ಕಂದಿರಲ್ಲಿ ಸಂಸ್ಕೃತ ಅಭ್ಯಾಸ ಮಾಡಿದರು. ಮುಂದೆ ತಮ್ಮ ಉದ್ಯೋಗಾವಧಿಯಲ್ಲಿ ಪುಣ್ಯಶ್ಲೋಕರಾದ ಶ್ರೀ ಸತ್ಯ

ಧ್ಯಾನ ಶ್ರೀಪಾದಂಗಳವರಲ್ಲಿಯೂ, ಶ್ರೀ ಡಿ. ಎಂ. ರಾಮಚಂದ್ರರಾಯರಲ್ಲಿಯೂ ಸಚ್ಛಾಸ್ತ್ರ ವ್ಯಾಸಂಗ ಮಾಡಿದರು.

ಅನಂತರ ಇಂದಿನವರೆಗೆ ಸಂಧ್ಯಾವಂದನೆ, ದೇವಪೂಜೆಗಳಂತೆ ತಪ್ಪದೇ ಮಧ್ವ ಶಾಸ್ತ್ರದ ಪಾಠವನ್ನು ಹೇಳುತ್ತಲೇ ಬಂದಿದ್ದಾರೆ. ಶ್ರೀ ವಾದಿರಾಜ ಶ್ರೀಚರಣರ ಸರಸ ಭಾರತಿ ವಿಲಾಸವನ್ನು ಕನ್ನಡಿಸಿ ಪ್ರಸಿದ್ಧಿಸಿದ್ದಲ್ಲದೆ ಶ್ರೀ ಮಧ್ವಾಚಾರ್ಯರ ತತ್ವಜ್ಞಾನದ ಬಗ್ಗೆ ಇಂಗ್ಲೀಷ, ಕನ್ನಡದಲ್ಲಿ ಪ್ರೌಢ ಪ್ರಬಂಧಗಳನ್ನು ಬರೆದಿದ್ದಾರೆ.

ಬೆಂಗಳೂರಿನಂಥ ಆಧುನಿಕಯಾಂತ್ರಿಕನಗರದಲ್ಲಿ ವೈಷ್ಣವರಿಗೆಲ್ಲ ವೇದಾಂತ ದಲ್ಲಿ ಒಲವುಹುಟ್ಟಿಸಿ ಆಧ್ಯಾತ್ಮವಾತಾವರಣವನ್ನು ನಿರ್ಮಿಸಿದ ಪುಣ್ಯ ಪುರುಷರೆಂದರೆ ಶ್ರೀ ವೆಂಕಟೇಶಾಚಾರ್ಯರು. ಅವರೊಬ್ಬ ಗೃಹಾಶ್ರಮ ಮುನಿಗಳು.

ಅಖಿಲ ಭಾರತ ಮಾಧ್ವ ಮಹಾ ಮಂಡಲದ ಪ್ರಥಮ ತತ್ವಜ್ಞಾನ ಸಮ್ಮೇಲನದ ಪ್ರಥಮ ಅಧ್ಯಕ್ಷರಾಗಿಯೂ, ಮುಂದೆ ಮಂಡಲದ ಆಧಾರಸ್ತಂಭರಾಗಿಯೂ, ಪೂರ್ಣ ಪ್ರಜ್ಞ ವಿದ್ಯಾಪೀಠದ ಪರ್ಯವೇಕ್ಷಕರಾಗಿಯೂ, ತತ್ವವಾದ ಪತ್ರಿಕೆಯ ಸಂಪಾದಕ ರಾಗಿಯೂ ಮಾಧ್ವ ಸಮಾಜದ ಸರ್ವತೋಮುಖ ಏಳ್ಗೆಗೆ ದುಡಿದಿದ್ದಾರೆ.

ರಾಮಕೃಷ್ಣಪ್ಪಾ ದ್ವೈತ ವೇದಾಂತ ಪಾಠ ಶಾಲೆಯ ಅಧ್ಯಕ್ಷರಾಗಿಯೂ, ಅನೇಕ ಸಂಘ-ಸಂಸ್ಥೆಗಳ ಸಂಚಾಲಕರಾಗಿಯೂ ಕಾರ್ಯಮಾಡುತ್ತಲಿದ್ದಾರೆ.

ಶ್ರೀ ಶ್ರೀ ವ್ಯಾಸರಾಜ ಮಠಾಧೀಶರು, ಶ್ರೀ ಶ್ರೀ ಭಂಡಾರಕೇರಿಮಠಾಧೀಶರು, ಅಖಿಲ ಭಾರತ ಮಾಧ್ವ ಮಹಾ ಮಂಡಲದವರು ಇವರಿಗೆ— ಸಚ್ಛಾಸ್ತ್ರ ಪ್ರವಚನ ರತ್ನ, ಮಾಧ್ವಭೂಷಣ, ಶಾಸ್ತ್ರನಿಧಿ ಮುಂತಾದ ಬಿರುದು ಪ್ರಶಸ್ತಿಗಳನ್ನಿತ್ತು ಗೌರವಿಸಿರುವರು.

**೩ ಮಳಿಗಿ ವೇದವ್ಯಾಸಾಚಾರ್ಯರು**



ದಕ್ಷಿಣದ ದ್ರೋಣಾಚಾರ್ಯರೆಂದು ಖ್ಯಾತಿಪಡೆದ ಶ್ರೀ ವೇದವ್ಯಾಸಾಚಾರ್ಯರು ಉತ್ತರಾದಿ ಮಠಾಧೀಶ ಶ್ರೀ ೧೦೮ ಶ್ರೀ ಸತ್ಯಧ್ಯಾನತೀರ್ಥರ ಜ್ಞಾನ ಸಂಪತ್ತಿಗೆ ಉತ್ತರಾಧಿಕಾರಿಗಳಾದ ಉತ್ತಮ ಶಿಷ್ಯರು. ಶ್ರೀ ಪಾಂಡುರಂಗಿ ಕೃಷ್ಣಾಚಾರ್ಯ, ಎಲತ್ತೂರ ಕೃಷ್ಣಾಚಾರ್ಯ, ಕಪಿಸ್ಥಲಂ ದೇಶಿಕಾಚಾರ್ಯ, ಮತ್ತು ಕೊರ್ಲಹಳ್ಳಿ ಸೇತುರಾಮಾ

ಚಾರ್ಯರಲ್ಲಿ ತರ್ಕಶಾಸ್ತ್ರದ ಪೂರ್ವೋತ್ತರ ವಾದಗಳನ್ನೆಲ್ಲ ಓದಿದ ಆಚಾರ್ಯರು ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾಂತ ವೇದಾಂತ ಓದಿ ಮಹಾ ಪಂಡಿತರಾದರು.

ಆ ಕಾಲದ ವಿದ್ವದ್ವರೇಣ್ಯರೆಲ್ಲರೂ ಕೂಡಿ ನಡೆಸಿದ ಪಂಡಿತ ಪರೀಕ್ಷೆಯಲ್ಲಿ ನ್ಯಾಯ, ವೇದಾಂತ ಎರಡೂ ಶಾಸ್ತ್ರಗಳಲ್ಲಿ ಉದ್ಗ್ರಂಥಗಳ ಪಾಠ–ಪಾಟವ, ವಾಕ್ಯಾರ್ಥ ವೈದುಷ್ಯ, ವ್ಯುತ್ಪತ್ತಿ ವೈಶದ್ಯ, ನಿರೂಪಣ ನೈಪುಣ್ಯ ಮುಂತಾಗಿ ಎಲ್ಲ ದೃಷ್ಟಿಗಳಿಂದ ಮಳಿಗಿ ಆಚಾರ್ಯರದೇ ಮೇಲುಗೈಯೆಂದು ಸರ್ವಾನುಮತದಿಂದ ನಿರ್ಧಾರವಾದಾಗ ಶ್ರೀ ಸತ್ಯಧ್ಯಾನತೀರ್ಥರು ತಮ್ಮ ಈ ಮೆಚ್ಚಿನ ಶಿಷ್ಯನನ್ನು ಬಂಗಾರದ ಕಡಗ ಹಾಕಿ ಮೆರಿಸಿದರು.

ಆಚಾರ್ಯರು ಬಾಗಲಕೋಟೆಯಲ್ಲಿ ವಾಣೀವಿಲಾಸ ಸಂಸ್ಕೃತ ಪಾಠಶಾಲೆ ಯನ್ನು ನಡೆಯಿಸಿ ಅರ್ಧಶತಮಾನದಷ್ಟು ಕಾಲ ಅನ್ನ ವಸತಿ ಕೊಟ್ಟು ಪಾಠಹೇಳಿ ೨೦—೩೦ ಜನ ನ್ಯಾಯ ವೇದಾಂತ ವಿದ್ವಾಂಸರನ್ನು ಸಿದ್ಧಪಡಿಸಿದ್ದಾರೆ. ಅವರ ತಂದೆ ಸಿದ್ಧಾಚಾರ್ಯರು ಉತ್ತರಾದಿ ಮಠದಲ್ಲಿಯೇ ಇದ್ದರು. ಅವರ ಮಗ— "ಸಿದ್ಧಪುತ್ರಃ ಪ್ರಸಿದ್ಧಃ" ಎನ್ನುವಂತಾಗಿದೆ.

ಎಪ್ಪತ್ತೈದು ವರ್ಷಗಳ ತುಂಬು ಜೀವನದಲ್ಲಿ ಅನೇಕಾನೇಕ ಶಿಷ್ಯರಿಗೆ ನಿರಂತರ ಸಚ್ಛಾಸ್ತ್ರ ಪಾಠ–ಪ್ರವಚನ ಮಾಡಿ ಸ್ವಾಧ್ಯಾಯ ತಪಸ್ಸನ್ನು ಆಚರಿಸಿದ ಆಚಾರ್ಯರು ಈಗ ಬಾಗಿಲುಕೋಟೆಯ ಶ್ರೀ ಸತ್ಯಬೋಧತೀರ್ಥರ ಸನ್ನಿಧಾನದಲ್ಲಿ (ಗೀತಾಭಾಷ್ಯ, ಪ್ರಮೇಯ ದೀಪಿಕಾ ಉಪನಿಷದ್ ಭಾಷ್ಯ, ಮಧ್ವಸಿದ್ಧಾಂತ ಸಾರ ಮುಂತಾದ ಪ್ರಮೇಯ ಗ್ರಂಥಗಳನ್ನು ಹಗಲಿರುಳೂ ಅವಲೋಕನ ಮಾಡುತ್ತಲಿರುತ್ತಾರೆ) ಅವರಲ್ಲಿ ಓದಿ ಪಂಡಿತರಾದ ಅನೇಕ ಜನ ಶಿಷ್ಯರು ಕರ್ನಾಟಕವ ತುಂಬ ಆಚಾರ್ಯರ ಜ್ಞಾನಪ್ರಭೆಯನ್ನು ಬೆಳಗಿಸುತ್ತಲಿದ್ದಾರೆ.

ನಿರಾಡಂಬರ ವೃತ್ತಿ, ವೈದುಷ್ಯ, ವಿನಯ, ವೈರಾಗ್ಯ, ವೈಷ್ಣವ ದೀಕ್ಷೆ, ಪರೋಪಕಾರ, ಗುರುಭಕ್ತಿ, ಪಾಠಪ್ರವಚನ ಪಾಂಡಿತ್ಯ, ಅನ್ನದಾನ ಮುಂತಾದ ಅಸಂಖ್ಯ ಸದ್ಗುಣಗಳ ಸಂಗಮದ ರಂಗಸ್ಥಳದಂತಿರುವ ಶ್ರೀ ವೇದವ್ಯಾಸಾಚಾರ್ಯರು ಯಾವಜ್ಜನ್ಮ ತಾವು ನಡೆಸಿದ ನಿರಂತರ ಜ್ಞಾನಸತ್ರದಿಂದ "ವೇದವ್ಯಾಸ" ಎಂಬ ತಮ್ಮ ಹೆಸರನ್ನು ಸಾರ್ಥಕಗೊಳಿಸಿಕೊಂಡಿದ್ದಾರೆ.

ಜನೇವರಿ ೧೯೬೧ ನೇ ಇಸ್ವಿ, ಕೀಲಕನಾಮ ಸಂವತ್ಸರದಲ್ಲಿ ಉಡುಪಿಯಲ್ಲಿ ನಡೆದ ೭ ನೇ ಅಖಿಲ ಭಾರತ ಮಾಧ್ವ ತತ್ವಜ್ಞಾನ ಸಮ್ಮೇಳನ, ಮಾಧ್ವ ರಾದ್ಧಾಂತ ಸಂವರ್ಧಿನೀ ಸಭೆಯ ರಜತೋತ್ಸವ ಕಾಲದಲ್ಲಿ ಸಭೆಯ ಪರವಾಗಿ ಅನೇಕ ಶ್ರೀಗಳವರ ಸಮ್ಮುಖದಲ್ಲಿ ಆಚಾರ್ಯರಿಗೆ "ಪಂಡಿತ–ಸಿಂಹ" ಎಂಬ ಪ್ರಶಸ್ತಿ, ಎರಡು ಸಹಸ್ರ ರೂಪಾಯಿಗಳು, ಜರೀ ರೇಶ್ಮೆ ಶಾಲು ಸಹಿತವಾಗಿ ಕೊಟ್ಟು ಪುರಸ್ಕರಿಸಲಾಯಿತು.

## ೪ ಗಲಗಲಿ ರಾಮಾಚಾರ್ಯರು



ವೈಷ್ಣವರಿಗೆ ಸಂಸ್ಕೃತ ಸಾಹಿತ್ಯದಲ್ಲಿ ಗತಿ ಇಲ್ಲ. ಅಲಂಕಾರ ಶಾಸ್ತ್ರಗಳಲ್ಲಿ ಮತಿ ಇಲ್ಲ ಎಂಬ ಪಿಮತೀಯರ ಉಪಹಾಸಗರ್ಭವಚನಗಳನ್ನು ಸುಳ್ಳು ಮಾಡಿದ ಸರಸಕವಿಗಳೆಂದರೆ— ಗಲಗಲಿ ರಾಮಾಚಾರ್ಯರು.

ಜಯಪುರದ ಮಹಾಮಹೋಪಾಧ್ಯಾಯ ಭಟ್ಟ ಶ್ರೀ ಮಥುರಾನಾಥಶಾಸ್ತ್ರಿಗಳು ಶ್ರೀ ರಾಮಾಚಾರ್ಯರ ವಿಷಯದಲ್ಲಿ ಬರೆಯುತ್ತ— "ವಾಗ್ದೇವಿಯು ಜಯದೇವ, ಜಗನ್ನಾಥ ಪಂಡಿತರ ಅನಂತರ ೫೦೦ ವರ್ಷಗಳ ತಪಸ್ಸು ಮಾಡಿ ಶ್ರೀ ರಾಮಾಚಾರ್ಯರಂಥ ವರಕವಿಗಳನ್ನು ಪಡೆದಿದ್ದಾಳೆ." ಎಂದು ಬಣ್ಣಿಸಿದ್ದಾರೆ.

ಅವರ ಗೈರ್ವಾಣಿ ನಿರ್ವೇದ, ಸ್ವರಾಜ್ಯಲಹರಿ, ದೇವೀ ವಾಸಂತೀ, ಅಶ್ವಥಾಟೀ ಕಾವ್ಯ. ಮುಕುಂದ ಮುರಲೀ, ಕಂದುಕಾಕ್ರಂದನ, ಅಭಿಷಂಗಾಸ್ಪದ ಪ್ರಸಂಗ, ವಿಕ್ರಮ ಸ್ತುತಿ ಮುಂತಾದ ಕಾವ್ಯ ,ನಾಟಕ, ಕಾದಂಬರೀ, ಪ್ರಬಂಧ, ಚಾಟೂಕ್ತಿ, ಸ್ತೋತ್ರ ಮಾಲಾ ಮುಂತಾದ ಚಿಕ್ಕ ದೊಡ್ಡಕೃತಿಗಳು ಅವರ ಸರಸ ಕವಿತ್ವ, ಕಲ್ಪನಾ ಕೌಶಲ್ಯ, ಸದ್ಯಃಸ್ಫೂರ್ತಿ, ಪ್ರತಿಭಾ ವಿಲಾಸ ಮುಂತಾದ ಸದ್ಗುಣಗಳಿಗೆ ಸಾಕ್ಷಿಯಾಗಿರುತ್ತವೆ.

ಅವರು ಬಾಲ್ಯದಲ್ಲಿ "ಸಹೃದಯಾ", "ಸಂಸ್ಕೃತ ಚಂದ್ರಿಕಾ" ಮುಂತಾದ ಪತ್ರಿಕೆಗಳಿಗೆ ಲೇಖ ಶ್ಲೋಕಗಳನ್ನು ಬರೆದು ಆ ಕಾಲದ ವಿದ್ವತ್ ಪ್ರಸಂಶವನ್ನೆಲ್ಲ ಬೆರಗುಗೊಳಿಸಿದ್ದರು.

ಸಣ್ಣ ವಯಸ್ಸಿನಲ್ಲಿಯೇ "ಸೌದಾಮಿನೀ" ಎಂಬ ಪತ್ರಿಕೆಯನ್ನು ಹೊರಡಿಸಿ ತಮ್ಮ ಬಾಣಭಟ್ಟನಂಥ ಪ್ರೌಢ ಸುಂದರವಾದ ಗದ್ಯ ಶೈಲಿಯಿಂದಲೂ ಕಾಲಿದಾಸ, ಜಯದೇವ, ಜಗನ್ನಾಥರಂಥ ಲಲಿತ ಕೋಮಲಕಾಂತ ಕಾವ್ಯಸರಣಿಯಿಂದಲೂ, ಎಲ್ಲ ಸಂಸ್ಕೃತ ಸಹೃದಯರ ಹೃದಯರಂಜನವನ್ನುಂಟು ಮಾಡಿದರು.

ಮುಂದೆ ಗಲಗಲಿಯಿಂದ ಬೆಳಗಾವಿಗೆ ಬಂದು ಅಲ್ಲಿ "ಮಧುರವಾಣಿ" ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ೩೦ ವರ್ಷಗಳ ಕಾಲ ನಡೆಯಿಸುತ್ತ ಬಂದಿದ್ದಾರೆ.

ಶ್ರೀ ಗಲಗಲಿ ನರಸಿಂಹಾಚಾರ್ಯರ ನಾಲ್ಕನೆಯ ಚಿರಂಜೀವರಾದ ಶ್ರೀ ರಾಮಾಚಾರ್ಯರು— ಶ್ರೀ ಎಲತ್ತೂರ ಕೃಷ್ಣಾಚಾರ್ಯರಲ್ಲಿಯೂ, ಶ್ರೀ ಕಲ್ಲಾಪುರ ಗೋಪಾಳಕೃಷ್ಣಾಚಾರ್ಯರಲ್ಲಿಯೂ ನ್ಯಾಯಶಾಸ್ತ್ರವನ್ನೂ, ಶ್ರೀ ಸತ್ಯಧ್ಯಾನತೀರ್ಥ ರಲ್ಲಿ ಸುಧಾಂತ ವೇದಾಂತವನ್ನೂ ಓದಿ ಬೆಳಗಾವಿಯಲ್ಲಿ ಈಗ ೪೦ ವರ್ಷಗಳಿಂದ ಸಚ್ಛಾಸ್ತ್ರ ಪಾಠಪ್ರವಚನವನ್ನು ಮಾಡಿಸುತ್ತಲಿದ್ದಾರೆ.

ಶ್ರೀ ಸತ್ಯಧ್ಯಾನತೀರ್ಥ ವಿದ್ಯಾಪೀಠದ ವತಿಯಿಂದ ಅನೇಕ ಪ್ರಾಚೀನ ಮಾಧ್ವ ವೇದಾಂತ ಸಾಹಿತ್ಯ ಗ್ರಂಥಗಳನ್ನು ಸಂಶೋಧನ ಮಾಡಿ ಪ್ರಕಟಪಡಿಸಿದ್ದಾರೆ. ೧೦ ಜನ ವಿದ್ವಾಂಸರು ಕೂಡಿ ಮಾಡುವ ಶಾಸ್ತ್ರಗ್ರಂಥಗಳ ಶೋಧನ, ಮುದ್ರಣಾದಿ ಕಾರ್ಯಗಳನ್ನು ಆಚಾರ್ಯರು ಏಕೈಕ ವೀರರಾಗಿ ತಮ್ಮ ಆಯುಷ್ಯದ ಉತ್ತರಾರ್ಧ ದಲ್ಲಿಯೂ ಮಾಡುತ್ತಲಿದ್ದಾರೆ.

೧೯೬೮ ನೇ ಇಸ್ವಿಯಲ್ಲಿ ಅವರ ಶಾಸ್ತ್ರಪಾಂಡಿತ್ಯ, ಅವರ ಸರಸ ಕವಿತ್ವ ಹಾಗೂ ಅವರು ಸಂಶೋಧಿಸಿ ಪ್ರಕಟಿಸಿದ ಸಾಹಿತ್ಯ, ವೇದಾಂತ ಗ್ರಂಥಗಳನ್ನು ನೋಡಿ ದಿಲ್ಲಿ ಕೇಂದ್ರ ಸರಕಾರವು ಅವರಿಗೆ ರಾಷ್ಟ್ರಪತಿ ಪ್ರಶಸ್ತಿಯನ್ನೂ, ಐದು ಸಾವಿರ ರೂಪಾಯಿ ಬಹುಮಾನವನ್ನೂ ಮಾಸಾಶನವನ್ನೂ ಕೊಡಮಾಡಿದ್ದು ಮಾಧ್ವ ಸಮಾಜಕ್ಕೆ ಹೆಮ್ಮೆಯ ಮಾತಾಗಿದೆ.

ಮೈಸೂರು ರಾಜ್ಯದಲ್ಲಿ ಸಂಸ್ಕೃತ ವಿಷಯದಲ್ಲಿ ರಾಷ್ಟ್ರಪತಿ ಪ್ರಶಸ್ತಿಪಡೆದ ವಿದ್ವಾಂಸರೆಂದರೆ ಶ್ರೀ ಗಲಗಲಿ ರಾಮಾಚಾರ್ಯರೊಬ್ಬರೇ.

೭೫ ವರ್ಷದ ತಮ್ಮ ತುಂಬು ಜೀವನದಲ್ಲಿ ಸಾಹಿತ್ಯ, ವೇದಾಂತಗಳ ಸೇವೆ ಯನ್ನು ಮಾಡುತ್ತಲಿರುವ ಶ್ರೀ ರಾಮಾಚಾರ್ಯರನ್ನು, ಬೆಂಗಳೂರಿನಲ್ಲಿ ಸೇರಿದ ಕರ್ನಾಟಕ ಕವಿ ಸಮ್ಮೇಲನದಲ್ಲಿ ಶ್ರೀ ಮೈಸೂರ ರಾಜ್ಯಪಾಲರ ಸಮ್ಮುಖದಲ್ಲಿ ಸತ್ಕರಿಸ ಲಾಯಿತು.

ಕಾಶಿಯ ಭಾರತ ಧರ್ಮ ಮಂಡಲದವರು ಮತ್ತು ಪುಣೆಯ ವೇದ ಶಾಸ್ತ್ರೋ ತ್ತೇಜಕ ಸಭೆಯವರೂ, ಜಯಪುರದ ಸಂಸ್ಕೃತ ಸಾಹಿತ್ಯಪರಿಷತ್ತಿನವರೂ ಆಚಾರ್ಯರ ಕವಿತ್ವಕ್ಕೆ ಮೆಚ್ಚಿ ತಮ್ಮಲ್ಲಿ ಕರೆಯಿಸಿಕೊಂಡು "ಸಾಹಿತ್ಯ ರತ್ನ" "ಅಭಿನವ ಕಾಳಿ ದಾಸ" "ಅಭಿನವಭಟ್ಟಬಾಣ" ಮುಂತಾದ ಬಿರುದುಗಳನ್ನೂ ಶಾಲು ಜೋಡಿ ಸಂಭಾವ ನಾದಿಗಳನ್ನು ಇತ್ತು ಗೌರವಿಸಿದರು.

ಕೀಲಕನಾಮ ಸಂವತ್ಸರದ ಮಾಧ್ವ ರಾದ್ಧಾಂತ ಸಭೆಯ ರಜತೋತ್ಸವ, ಅಖಿಲ ಭಾರತ ಮಾಧ್ವ ೭ ನೇ ತತ್ವಜ್ಞಾನ ಸಮ್ಮೇಲನ, ಶ್ರೀ ಜಯತೀರ್ಥರ ೬ ನೇ ಶತಮಾನೋತ್ಸವ ಸಂದರ್ಭದಲ್ಲಿ "ಕವಿಕಂಠೀರವ" ಎಂಬ ಪ್ರಶಸ್ತಿ, ಒಂದು ಸಾವಿರ ರೂಪಾಯಿ ಹಾಗೂ ಜರೀ ಶಾಲು ಹೊದಿಸಿ ಸತ್ಕರಿಸಲಾಯಿತು.

## ೫ ಮಾಹುಲಿ ಗೋಪಾಲಾಚಾರ್ಯ



ಗೋಪಾಲಾಚಾರ್ಯರು ಜನಿಸಿದ್ದು ಐನಾಪುರದಲ್ಲಿ. ಓದಿದ್ದು ಸಾಂಗಲಿ. ಶಾಸ್ತ್ರಾಧ್ಯಯನ ಸತ್ಯಧ್ಯಾನರಲ್ಲಿ. ಪಾಠಶಾಲೆ ಮುಂಬೈಯಲ್ಲಿ. ಕೀರ್ತಿ ಭಾರತವನ್ನು ವ್ಯಾಪಿಸಿ ಪಾಶ್ಚಾತ್ಯ ದೇಶಗಳಿಗೂ ಹಾಟಿದೆ.

ಎಮ್. ಎ ಪದವಿಯನ್ನು ಪಡೆದ ಇವರು ಮಂಗಸೂಳಿ ರಾಮಾಚಾರ್ಯ, ಪಾಂಡುರಂಗೀ ಜಯಾಚಾರ್ಯ, ಪಾಂಡುರಂಗೀ ಕೃಷ್ಣಾಚಾರ್ಯ, ಮಳಿಗಿ ವೇದ ವ್ಯಾಸಾಚಾರ್ಯ ಕೊನೆಗೆ ಶ್ರೀ ಸತ್ಯಧ್ಯಾನತೀರ್ಥರವರೆಗೆ ಅನೇಕ ಗುರುಗಳನ್ನು ಮಾಡಿಕೊಂಡು ನ್ಯಾಯ, ವೇದಾಂತ, ವ್ಯಾಕರಣ, ವೇದ, ಸಾಹಿತ್ಯ, ಜ್ಯೋತಿಷ್ಯ ಮುಂತಾದ ಎಲ್ಲ ವಿದ್ಯೆಗಳನ್ನೂ ಕರತಲಾಮಲಕವಾಗಿ ಮಾಡಿಕೊಂಡಿದ್ದಾರೆ. ಸುಧಾ ನ್ಯಾಯತ್ರಯಗಳಲ್ಲಿ ಅವರಿಗೆ ಪ್ರಗಲ್ಭ ಪಾಂಡಿತ್ಯವಿದೆ.

ಈ ಸವ್ಯಸಾಚಿ ಶಿಷ್ಯನ ಪ್ರತಿಭಾ ಚಾಕಚಕ್ಯತೆಗೆ ಮೆಚ್ಚಿದ ಶ್ರೀ ಸತ್ಯಧ್ಯಾನ ತೀರ್ಥರು ಪರಮಾನುಗ್ರಹ ಮಾಡಿ ವೇದಾಂತ ಶಾಸ್ತ್ರದ ತಿರುಳನ್ನೆಲ್ಲ ತಿಳಿಸಿ ಹೇಳಿರು ವರು. ಇವರಿಗೆ ಎಮ್. ಎ. ಪರೀಕ್ಷೆಗೆ ಸಹಾಯಮಾಡಿದರು. ಮುಂಬೈಯಲ್ಲಿ ಪಾಠ ಶಾಲೆಯನ್ನಿಟ್ಟು ಪಾಠಪ್ರವಚನ ಮಾಡಿ ಧರ್ಮ ಜಾಗೃತಿಯನ್ನುಂಟು ಮಾಡಲಿಕ್ಕೆ ಆಜ್ಞೆಯಿತ್ತರು.

ಮುಂಬೈಯಲ್ಲಿ ಆ ಪಾಠಶಾಲೆಯಲ್ಲಿ ಈಗಲೂ ಹತ್ತೆಂಟು ಶಿಷ್ಯರು ಶಾಸ್ತ್ರ ಪಾಠ ಓದುತ್ತಲಿದ್ದು ಅವರ ವಾಣೀವಿಹಾರ ಸಂಸ್ಕೃತ ಪಾಠಶಾಲೆಯು ಮುಂಬೈ ಯಂಥ ಆಧುನಿಕ ಯಾಂತ್ರಿಕ ನಗರದಲ್ಲಿ ಅಧ್ಯಾತ್ಮ ಕೇಂದ್ರವೆನಿಸಿದೆ. ಅವರು ಈಗಿನ ಉತ್ತರಾದಿ ಮಠದ ಪೀಠಾಧಿಪತಿಗಳಾದ ಶ್ರೀ ೧೦೮ ಶ್ರೀ ಸತ್ಯಪ್ರಮೋದ ತೀರ್ಥರ ಸಹಾಯ, ಪ್ರೇರಣೆಗಳಿಂದ "ಸತ್ಯಧ್ಯಾನ ವಿದ್ಯಾಪೀಠ" ಎಂಬ ಸಂಸ್ಥೆಯನ್ನು ಸ್ಥಾಪನೆ ಮಾಡಿ ಅದರಿಂದ ಅನೇಕ ಗ್ರಂಥಗಳ ಸಂಶೋಧನೆ, ಪ್ರಕಟನೆ, ಜ್ಞಾನ ಸತ್ರ, ಪಂಡಿತ ಪೋಷಣೆ ಮುಂತಾದ ಕಾರ್ಯಗಳನ್ನು ಮಾಡುತ್ತಲಿದ್ದಾರೆ.

ಅವರು ಪ್ರಕಟಿಸಿದ ಮಾಯಾವಾದ ಖಂಡನ ಪರಶು ಟಿಪ್ಪಣಿ ಸಂಹಿತ, ಸಂಧ್ಯಾ ರಹಸ್ಯ ಮುಂತಾದ ಪುಸ್ತಕಗಳು ಅತ್ಯುಪಯುಕ್ತವಾಗಿವೆ. ಮುಂಬೈಯಲ್ಲಿ ಅವರ ಮಾರ್ಗದರ್ಶನದಲ್ಲಿ ಅನೇಕ ವಿದ್ಯಾರ್ಥಿಗಳು ಪಿ. ಎಚ್. ಡಿ. ಆಗಿ ಡಾಕ್ಟರೇಟ ಪದವಿಗಳನ್ನು ಪಡೆದಿದ್ದಾರೆ. ಸಮುದ್ರದ ಆಚೆಗೂ ಅವರ ಶಿಷ್ಯರು ಅನೇಕರಿದ್ದಾರೆ.

ಮುಂಬೈಯಲ್ಲಿ ಇವರ ಪ್ರತಿ ರವಿವಾರವೂ ನಡೆಯುವ ಇಂಗ್ಲೀಷ ಭಾಗವತ ಪ್ರವಚನವು ಅನೇಕ ಸುಶಿಕ್ಷಿತರ ಮನಸ್ಸನ್ನು ಸೆಳೆದಿದೆ. ಅವರು ಆಗಾಗ ದಿಲ್ಲಿ, ಕಲ ಕತ್ತಾ, ಕಾಶಿ, ಮದ್ರಾಸ, ಬೆಂಗಳೂರ, ಅಲಹಾಬಾದ ಮುಂತಾದ ಕಡೆಗಳಲ್ಲಿ ಹೋಗಿ ವೇದಾಂತ ಪ್ರವಚನವನ್ನು ಮಾಡಿ ಬರುತ್ತಾರೆ. ಅವರ ಮನೆ ಒಂದು ಅನ್ನ ಛತ್ರ ವಿದ್ದಂತೆ. ಅನ್ನದಾನ, ವಿದ್ಯಾದಾನಗಳಲ್ಲದೇ ಎಲ್ಲ ರೀತಿಯಿಂದಲೂ ಜನರಿಗೆ ಪರೋಪ ಕಾರ ಮಾಡುವ ಅವರು ಎಲ್ಲ ಪೀಠಾಧಿಪತಿಗಳಿಗೂ ಪಾಮರರಿಗೂ ಪ್ರಿಯರಾಗಿದ್ದಾರೆ.

ಇವರ ಮಾರ್ಗದರ್ಶನದಲ್ಲಿ ಅನೇಕ ಜನರು ಪದವ್ಯುತ್ತರ ಪರೀಕ್ಷೆಗಳಲ್ಲಿ ಅಧ್ಯಯನ ಮಾಡಿ ಝಾಲಾ ವೇದಾಂತ ಪಾರಿತೋಷಿಕ, ಭಗವಾನ್‌ದಾಸ ಪಾರಿ ತೋಷಿಕ ಪಡೆದಿದ್ದಾರೆ. ಇವರು ಇಂಗ್ಲೀಷದಲ್ಲಿ ಭಾಗವತ ಮತ್ತು ವೇದಗಳ ಮೇಲೆ ಅಧಿಕೃತ ಗ್ರಂಥವನ್ನು ಬರೆಯುತ್ತಲಿದ್ದಾರೆ.

ಕನ್ನಡ ಶಾಲೆಯನ್ನು ಮನೆಯಲ್ಲಿ ಪ್ರಾರಂಭಿಸಿ, ಮುಂಬೈಯಲ್ಲಿ ಕನ್ನಡ ಜಾಗೃತಿಗೆ ಕಾರಣರಾಗಿದ್ದಾರೆ. ಕನ್ನಡ ಸಂಘ, ಶಾಸ್ತ್ರ ಸಾಹಿತ್ಯ ಪ್ರಚಾರ, ಕನ್ನಡ ರಾಷ್ಟ್ರೀಯ ಶಾಲಾ ಸ್ಥಾಪನೆ, ದಾಸ ಸಾಹಿತ್ಯ, ಅಖಿಲ ಭಾರತ ಕೀರ್ತನ ಶಾಲೆ, ಪ್ರೋಗ್ರೆಸೀವ್ ಎಜ್ಯುಕೇಶನ್ ಸೊಸಾಯಿಟಿ ಮುಂತಾದ ನೂರಾರು ಸಂಘ-ಸಂಸ್ಥೆ ಗಳ ಅಧ್ಯಕ್ಷರಾಗಿಯೂ, ಕಾರ್ಯಕರ್ತರಾಗಿಯೂ ಬೆಳೆಸಿಕೊಂಡು ಬಂದಿದ್ದಾರೆ.

ಮಹಾರಾಷ್ಟ್ರ ಮುಖ್ಯ ಮಂತ್ರಿ ನಾಯಿಕ ಇವರ ಅಧ್ಯಕ್ಷತೆಯಲ್ಲಿ ರಚಿತವಾದ "ಆಲ್ ಇಂಡಿಯಾ ನ್ಯಾಶನಲ್ ಇಂಟರಗ್ರೇಶನ್ ಸಮಿತಿ ( ಸ್ಟೇಟಲೆವ್ಹಲ್ )" ಈ ಸಂಸ್ಥೆಯಲ್ಲಿ ಆಚಾರ್ಯರು ಸದಸ್ಯರಾಗಿದ್ದಾರೆ.

ಇವರ ಪ್ರಯತ್ನದಿಂದ ಕನ್ನಡ ಶಾಲೆಗಳು ನೂರಾರು ತಲೆಯೆತ್ತಿವೆ. ವೇದ ಸಾಹಿತ್ಯ, ನ್ಯಾಯ, ವೇದಾಂತ, ವ್ಯಾಕರಣ ಮುಂತಾದ ಪರೀಕ್ಷೆಗಳಿಗೆ ಈ ಪಾಠ ಶಾಲೆಯಲ್ಲಿ ಅಧ್ಯಯನ ಮಾಡುತ್ತಾರೆ. ಶ್ರೀಮಠಸ್ಥ ಪಂಡಿತರ ಶತದೂಷಣೀ ಭಾಮತೀ ಮುಂತಾದ ಪಾಠ ೩೦ ವರ್ಷಗಳಿಂದ ನಡೆದಿವೆ.

ಜ್ಞಾನೇಶ್ವರ ಮಠದ ಸನ್ಯಾಸಿ ಸ್ವಾಮಿ ನಾರಾಯಣ ಸಂಪ್ರದಾಯದ ಸನ್ಯಾಸಿ ಗಳು, ಪದವೀಧರರು ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಾರೆ ಇವರಲ್ಲಿ.

ಆಚಾರ್ಯರು ಸೋಮಯ್ಯ ವಿದ್ಯಾವಿಹಾರ ನಗರದ ಸುರಭಾರತೀ ಸಂಸ್ಥೆಯಲ್ಲಿ ಸಂಸ್ಕೃತ ಭಾಷೆಯ ಪ್ರಸಾರ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ.

ಡಾ. ನೀಹಾರಚಂದ್ರರ ನೇತೃತ್ವದಲ್ಲಿ ಕಲಕತ್ತೆಯ ಜಿಜ್ಞಾಸಾ ಕೂಟದವರು ಆಚಾರ್ಯರ ಉಪನ್ಯಾಸದಿಂದ ಪ್ರಭಾವಿತರಾಗಿ ಆಸ್ತಿಕರಾಗಿದ್ದಾರೆ.

ಇವರ ನಿರಲಸ ನಿರಂತರ ಸಾಂಸ್ಕೃತಿಕ ಹಾಗೂ ಆಧ್ಯಾತ್ಮ ಪ್ರಚಾರ ಪ್ರಯತ್ನಗಳಿಂದ ಮುಂಬೈ ಪಟ್ಟಣವು ಸಾಂಸ್ಕೃತಿಕ ಪುನರ್ಜನ್ಮ ಪಡೆದಿದೆ ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ.

ಇವರು ೧೯೬೯ ರಲ್ಲಿ ಉಡುಪಿಯಲ್ಲಿ ಅಖಿಲ ಭಾರತ ಮಾಧ್ವ ೬ ನೇ ತತ್ವಜ್ಞಾನ ಸಮ್ಮೇಲನದ ಅಧ್ಯಕ್ಷರಾಗಿ ಮನನೀಯ ಭಾಷಣ ಮಾಡಿದರು.

## ೬ ಇನ್ನ ಕೃಷ್ಣಾಚಾರ್ಯರು

ಪೂಜ್ಯ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರ ಶಿಷ್ಯಕೋಟಿ ಪ್ರವಿಷ್ಟರಾದವರು ಶ್ರೀ ಇನ್ನಕೃಷ್ಣಾಚಾರ್ಯರು. ೧೯೦೩ ನೇ ಇಸ್ವಿಯಲ್ಲಿ ಜನಿಸಿ, ಸುಬ್ರಹ್ಮಣ್ಯಭಟ್ಟರಲ್ಲಿ ಋಗ್ವೇದವನ್ನೂ, ತಮ್ಮ ತೀರ್ಥರೂಪ ನಡ್ಡಂತಿಲ್ಲಾಯ ಶ್ರೀನಿವಾಸಭಟ್ಟರಲ್ಲಿ ಯಜುರ್ವೇದವನ್ನೂ ಅಧ್ಯಯನ ಮಾಡಿದರು.

ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ನಾಲ್ಕು ವರ್ಷ ಕಾವ್ಯ, ವ್ಯಾಕರಣಗಳನ್ನು ಅಧ್ಯಯನ ಮಾಡಿ ತಿರುಪತಿಯ ವೆಂಕಟೇಶ್ವರ ಪಾಠ ಶಾಲೆಗೆ ಸೇರಿ ಎಂಟ್ರನ್ಸ ಪರೀಕ್ಷೆಯಯನ್ನು ಮುಗಿಸಿದರು. ಅನಂತರ ಶ್ರೀ ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರಲ್ಲಿ ತರ್ಕವನ್ನೂ, ಶ್ರೀಮುಷ್ಣಂ ಸೇತುಮಾಧವಾಚಾರ್ಯರಲ್ಲಿ ವ್ಯಾಕರಣವನ್ನೂ, ವೆಂಕಟೇಶ್ವರ ದೀಕ್ಷಿತರಲ್ಲಿ ಮೀಮಾಂಸಾ ಶಾಸ್ತ್ರವನ್ನೂ ಓದಿದರು.

ಅನಂತರ ಅನಂತಶಯನದ ದಂಡತೀರ್ಥ ತಮ್ಮೂ ಜೋಯಿಸರಿಂದ ಜ್ಯೋತಿಷ್ಯ ಶಾಸ್ತ್ರವನ್ನೂ ಅಭ್ಯಾಸ ಮಾಡಿದರು.

ಶ್ರೀ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರಲ್ಲಿ, ಶ್ರೀ ಶ್ರೀ ಶಿರೂರು ಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರ ಸಹಾಧ್ಯಾಯಿಗಳಾಗಿ ಸುಧಾ, ವ್ಯಾಸತ್ರಯ ಗ್ರಂಥಗಳನ್ನು ಆಮೂಲಾಗ್ರ ಓದಿ ಪಂಡಿತರಾದರು.

ಶ್ರೀ ಸತ್ಯಧ್ಯಾನ ಶ್ರೀಗಳವರು ಇವರಿಗೆ ಎರಡು ವರ್ಷ ಸುಧಾಪಾಠ ಹೇಳಿ, ಪಂಢರಪುರದಲ್ಲಿ ಮಂಗಳ ಮಾಡಿದರು. ೧೦ ವರ್ಷಗಳ ವರೆಗೆ ಶ್ರೀಗಳವರ ಜೊತೆಗೆ ಇದ್ದು ಅವರ ಪ್ರೀತಿಗೆ ಪಾತ್ರರಾದರು.

ಅನಂತರ ಶ್ರೀ ಸತ್ಯಧ್ಯಾನತೀರ್ಥರು ಅವರನ್ನು ಬೆಂಗಳೂರಿನ ತಮ್ಮ ಉತ್ತರಾದಿಮಠದ ಪಾಠಶಾಲೆಯಲ್ಲಿ ಅಧ್ಯಾಪಕರನ್ನಾಗಿ ನೇಮಿಸಿದರು. ವೇದಾಂತ, ವ್ಯಾಕರಣ ಶಿರೋಮಣಿ ಮತ್ತು ವೇದಾಂತ ವಿದ್ವತ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಆಚಾರ್ಯರು ಅನೇಕ ಛಾತ್ರರನ್ನು ವ್ಯಾಕರಣ, ವೇದಾಂತ ಶಿರೋಮಣಿ ಪರೀಕ್ಷೆಗಳಿಗೆ ತರಬೇತಿ ಮಾಡಿದರು.

ಅನಂತರ ೧೦ ವರ್ಷ ರಾಮಕೃಷ್ಣ ದ್ವೈತ ವೇದಾಂತ ಪಾಠಶಾಲೆ ಬೆಂಗಳೂರಿನಲ್ಲಿ ಅಧ್ಯಾಪಕರಾಗಿದ್ದರು. ಇವರು ಎಷ್ಟೋ ವರ್ಷ ಬೆಂಗಳೂರಿನ ಉತ್ತರಾದಿ ಮಠದ ವ್ಯವಸ್ಥಾಪಕರಾಗಿಯೂ, ಅಧ್ಯಾಪಕರಾಗಿಯೂ ಗುರುಗಳ ಸೇವೆಯನ್ನು ಮಾಡಿದರು.

ಈಗ ಬೆಂಗಳೂರಿನ ಗುಂಡೋ ಪಂತ ಛತ್ರದ ಆವರಣದಲ್ಲಿ ಶ್ರೀ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ವೃಂದಾವನ ಸಮೀಪದಲ್ಲಿ ಉಡುಪಿ ಶ್ರೀ ಕೃಷ್ಣ ಮಂದಿರವನ್ನು ಸ್ಥಾಪನಮಾಡಿ, ಶ್ರೀ ವೇದವ್ಯಾಸ ಸಂಸ್ಕೃತ ಪಾಠಶಾಲೆಯನ್ನು ನಡೆಯಿಸುತ್ತಿದ್ದಾರೆ.

ಇವರು ಉತ್ತರಾದಿ ಮಠಾಧೀಶ ಶ್ರೀಪಾದಂಗಳವರಿಗೂ ಮತ್ತು ಉಡುಪಿಯ ಎಲ್ಲ ಮಠಾಧೀಶರಿಗೂ ಅತ್ಯಂತ ಪ್ರಿಯರಾದ ಶಿಷ್ಯರಾಗಿದ್ದಾರೆ.

## ೨ ಬನ್ನಂಜೆ ಅನಂತಕೃಷ್ಣ ಉಪಾಧ್ಯಾಯ



ನ್ಯಾಯ ವೇದಾಂತ ವಿದ್ವಾಂಸರಾದ ಶ್ರೀ ಅನಂತಕೃಷ್ಣ ಉಪಾಧ್ಯಾಯರು ಉಡುಪಿಯ ಮಧ್ವ ಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ

ಅನೇಕವರ್ಷ ಪಾಠ-ಪ್ರವಚನ ಮಾಡಿದ್ದಾರೆ. ಆಚಾರ್ಯರಿಗೆ ಅನೇಕ ಜನ್ಮ ವಿದ್ವಾನ್ ಶಿರೋಮಣಿ ಶಿಷ್ಯರಿದ್ದು ಇವರ ಪಾಠಕ್ರಮವನ್ನು ಬಣ್ಣಿಸುತ್ತಾರೆ. ಬೋಧ ಶಕ್ತಿ, ವಾದ ಶಕ್ತಿ ಎರಡೂ ಇದ್ದ ಕೆಲವೇ ಸಂಸ್ಕೃತ ಪಂಡಿತರಲ್ಲಿ ಉಪಾಧ್ಯಾಯರೊಬ್ಬರು.

ಇವರ ಜನ್ಮ ಭೂಮಿಯು ಕಾಳಿಗೂಡು ದೇವಸ್ಥಾನದ ಸಮೀಪದಲ್ಲಿ ಬನ್ನಂಜೆ ಎಂಬ ಹಳ್ಳಿ. ಇವರ ಪೂರ್ವ ಪುರುಷರು ಸೋದೆಮಠವನ್ನು ಆಶ್ರಯಿಸಿಕೊಂಡಿದ್ದರು. ಇವರ ಕಕ್ಕಂದಿರು ಒಬ್ಬರು ತಿರುವಾಂಕೂರಿನಲ್ಲಿ ಅನಂತಶಯನ ಮಹಾರಾಜರ ಸಭೆಯಲ್ಲಿ ಮೂರೂ ವೇದಗಳನ್ನು ಮುಖೋದ್ಗತ ಪರೀಕ್ಷೆ ಕೊಟ್ಟಿದ್ದರಂತೆ.

ಇವರ ತಂದೆಯಾದ ಯೋಗೀಂದ್ರ ಉಪಾಧ್ಯಾಯರೂ ವೇದಾಧ್ಯಾಯಿಗಳು. ಈ ವೈದಿಕ ವಂಶದಲ್ಲಿ ಉದಯಿಸಿದ ಅನಂತ ಕೃಷ್ಣ ಉಪಾಧ್ಯಾಯರು ಉಡುಪಿಯ ಚಂದ್ರಮೌಳೀಶ್ವರ ದೇವಸ್ಥಾನದ ಪಾಠಶಾಲೆಯಲ್ಲಿ ಎರಡು ವರ್ಷ ವೇದಾಧ್ಯಯನ ಮಾಡಿ ಅನಂತರ ಸಂಸ್ಕೃತ ಪಾಠಶಾಲೆಗೆ ಸೇರಿದರು. ಅಲ್ಲಿ ಪಡಬನ್ನೂರ ನಾರಾಯಣಾಚಾರ್ಯರಲ್ಲಿ ನ್ಯಾಯಶಾಸ್ತ್ರದ ಪಂಚವಾದ, ಉತ್ತರ ವಾದಗಳನ್ನು ಓದಿ ಮದ್ರಾಸ ವಿಶ್ವವಿದ್ಯಾನಿಲಯದ ಶಿರೋಮಣಿ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಪ್ರಥಮರಾಗಿ ಉತ್ತೀರ್ಣರಾದರು. ಆ ವರ್ಷ ಇವರಿಗೆ ಎರಡು ಸುವರ್ಣ ಪದಕಗಳು ದೊರೆತವು.

ಅದೇ ವೇಳೆಯಲ್ಲಿಯೇ ಶ್ರೀ ಗುರುಗುಂಡಿ ರಾಮಾಚಾರ್ಯ, ಪಿ. ನಾರಾಯಣಾಚಾರ್ಯರಲ್ಲಿ ದ್ವೈತ ವೇದಾಂತ ಅಧ್ಯಯನ ಮಾಡಿ ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿಯೂ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ೧೯೩೭ ನೇ ಇಸ್ವಿಯಲ್ಲಿ ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾಗಿ ಸೇರಿದರು.

ಕಾಲೇಜದಲ್ಲಿದ್ದಾಗ ಇವರು ಕೊಯಿಮತ್ತೂರ ವಾದಿರಾಜಾಚಾರ್ಯರೇ ಮೊದಲಾದ ಅನೇಕ ಜಾಣ ವಿದ್ಯಾರ್ಥಿಗಳಿಗೆ ವ್ಯುತ್ಪತ್ತ್ಯಾಧಾಯಕವಾಗುವಂತೆ ಪಾಠಹೇಳಿ ಪಂಡಿತರನ್ನಾಗಿ ಮಾಡಿ ಈಗ ವಿಶ್ರಾಂತರಾಗಿದ್ದಾರೆ.

ಆಚಾರ್ಯರಿಗೆ ನ್ಯಾಯ ವೇದಾಂತಗಳಂತೆ ಧರ್ಮ ಶಾಸ್ತ್ರಗಳಲ್ಲಿಯೂ ವಿಶೇಷ ಆಸಕ್ತಿ, ಅಭಿನಿವೇಶ, ಪಾಂಡಿತ್ಯ, ಪ್ರಾವಣ್ಯ, ಪ್ರಾವೀಣ್ಯಗಳು ಉಂಟು.

ಇವರು ಪಾಠಶಾಲೆಯಿಂದ ನಿವೃತ್ತರಾದಬಳಿಕ ನಿಷ್ಕ್ರಿಯರಾಗಿ ಕೂಡಲಿಲ್ಲ. ಧಾರ್ಮಿಕ ಗ್ರಂಥ ಶೋಧನ, ಗ್ರಂಥ ಲೇಖನ ಮುಂತಾದ ಕಾರ್ಯಗಳನ್ನು ಮಾಡುತ್ತಲಿದ್ದಾರೆ.

"ಸದಾಚಾರ ಸಂಗ್ರಹ" ಎಂಬ ಅವರು ಸ್ವತಃ ಬರೆದು ಮುದ್ರಿಸಿದ ಗ್ರಂಥವು ಎಲ್ಲ ಲೌಕಿಕರಿಗೂ, ವೈದಿಕರಿಗೂ ಆಚಾರ ಕಾಂಡವನ್ನು ತಿಳಿಯಲು ಅನುಕೂಲ

ವಾಗಿದೆ. ಅವರು ಸಂಶೋಧನ ಮಾಡಿಟ್ಟ ಗ್ರಂಥಗಳಲ್ಲಿ "ಮಾಧ್ವ ಶಬ್ದಕೋಶ"ವು ಕಲಶ ಕೃತಿಯಾಗಿದೆ. ಇದರಲ್ಲಿ ಆಚಾರ್ಯರು ಬಹು ಪರಿಶ್ರಮಬಟ್ಟು ಶ್ರೀಮದಾನಂದತೀರ್ಥರ ಸರ್ವ ಮೂಲದಲ್ಲಿ ಬಂದ ಸರ್ವಶಬ್ದಗಳ ನಿರುಕ್ತಿ, ನಿರ್ವಚನಪೂರ್ವಕವಾಗಿ ಸಂಗ್ರಹವನ್ನು ಮಾಡಿಕೊಡಲಾಗಿದೆ. ಇದು ಮುದ್ರಣದ ದಾರಿ ಕಾಯುತ್ತ ಆಚಾರ್ಯರ ಮನೆಯಲ್ಲಿ ಕೂತಿದೆ. ಸರ್ವಮೂಲ ಗ್ರಂಥದಲ್ಲಿಯ ಋಗ್ಭಾಷ್ಯದ ಋಕ್ಕುಗಳಲ್ಲದೆ ಇತರ ಋಗ್ವೇದದ ಋಕ್ಕುಗಳ ಅರ್ಥವನ್ನೂ ಕೂಡ ಸಂಗ್ರಹಿಸಿ "ಋಗರ್ಥಸಂಗ್ರಹ" ಎಂಬ ಬೇರೊಂದು ಗ್ರಂಥವನ್ನೂ ಅವರು ಸಿದ್ಧಪಡಿಸಿದ್ದಾರೆ.

ಇವಲ್ಲದೆ "ತಂತ್ರದೀಪಿಕಾರ್ಥ ಸಂಗ್ರಹ" ಎಂಬ ಹೆಸರಿನ ಪುಸ್ತಕದಲ್ಲಿ ಕನ್ನಡದಲ್ಲಿ ಬ್ರಹ್ಮ ಸೂತ್ರಾರ್ಥವನ್ನು ಸಂಗ್ರಹಿಸುತ್ತಲಿದ್ದಾರೆ. ಹಾಗೂ ಬ್ರಹ್ಮಾನಂದೀ ಖಂಡನವನ್ನು ಬರೆಯಲು ಪ್ರಾರಂಭಿಸಿದ್ದು ಅದು ಚತುರ್ಥ ಭಂಗದವರೆಗೆ ಬಂದು ನಿಂತಿರುತ್ತದೆ.

ಶ್ರೀ ಉಪಾಧ್ಯಾಯರಲ್ಲಿ ಶಾಸ್ತ್ರ ಪಾಂಡಿತ್ಯವಿದೆ. ಸಂಶೋಧಕ ದೃಷ್ಟಿಯಿದೆ. ಪಾಠ ಪರಿಪಾಟಿಯಿದೆ. ಲೇಖನ ಶಕ್ತಿ ಇದೆ. ತೌಲನಿಕ ದೃಷ್ಟಿಯಿಂದ ಶಾಸ್ತ್ರೀಯ ಗ್ರಂಥಗಳನ್ನೂ ಅಭ್ಯಾಸ ಮಾಡುವ ಪ್ರವೃತ್ತಿ ಪಾಟವಗಳಿವೆ. ಬರೆಯುವ ಹವ್ಯಾಸ ಇದೆ. ಬರೆಯುತ್ತ ಕೂಡುವ ದಾರ್ಢ್ಯ, ದಾಕ್ಷ್ಯಗಳೂ ಇವೆ. ಆದರೆ ಅವರಿಗೆ ಸಮಾಜದಿಂದ ಪ್ರೋತ್ಸಾಹನವಿಲ್ಲ, ಸರಕಾರದಿಂದ ಸಹಾಯವಿಲ್ಲ, ಸಿರಿವಂತರಿಂದ ಸಹಕಾರವಿಲ್ಲ. ಹೀಗಾಗಿ ಅವರ ಪ್ರಯತ್ನವೆಲ್ಲವೂ ಬೆಳಕಿಗೆ ಬರುತ್ತಲಿಲ್ಲ. ಇನ್ನಾದರೂ ಜನರು ಅವರ ಪರಿಶ್ರಮವು ಸಫಲವಾಗುವಂತೆ ಮಾಡಬೇಕು.

### ೮ ಬಿ. ವಾದಿರಾಜಾಚಾರ್ಯ

ಉಡುಪಿಯ ಹತ್ತರ ಬನ್ನಂಜೆ ಗ್ರಾಮದವರಾದ ಶ್ರೀ ವಾದಿರಾಜಾಚಾರ್ಯರು ಮಧ್ವಸಿದ್ಧಾಂತ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ನ್ಯಾಯಶಿರೋಮಣಿ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣರಾದರು.

ಇವರು ಬನ್ನಂಜೆ ಅನಂತಕೃಷ್ಣ ಉಪಾಧ್ಯಾಯರಲ್ಲಿ ನ್ಯಾಯ ವೇದಾಂತ ಗ್ರಂಥಗಳನ್ನು ಓದಿ ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು.

ಇವರು ಉತ್ತರಾದಿ ಮಠದಲ್ಲಿ ಕೆಲವು ದಿವಸ ಇದ್ದು ಶ್ರೀ ಪಾಂಡುರಂಗೀ ಜಯಾಚಾರ್ಯರಲ್ಲಿ ನ್ಯಾಯಾಮೃತವನ್ನು ಓದಿದರು. ಶ್ರೀ ಸತ್ಯಧ್ಯಾನತೀರ್ಥರಲ್ಲಿಯೂ ಇವರಿಗೆ ಕೆಲವು ದಿನ ಪಾಠವಾಯಿತು. ಇವರ ಶಾಸ್ತ್ರವ್ಯುತ್ಪತ್ತಿ, ಸಾತ್ವಿಕತೆ, ಸದಾಚಾರ

ಗಳನ್ನು ಕಂಡ ಶ್ರೀ ಸತ್ಯಧ್ಯಾನತೀರ್ಥರು ಇವರ ಮೇಲೆ ಬಹಳ ಪ್ರೀತಿ ಮಾಡುತ್ತಿದ್ದರು. ಇವರ ಸಂಸಾರಕ್ಕೆ ಹಣ ಬೇಕೆಂದಾಗ ಸಹಾಯ ಮಾಡುತ್ತಿದ್ದರು. ಶ್ರೀ ಸತ್ಯಧ್ಯಾನತೀರ್ಥರೇ ಇವರಿಗೆ ದುಡ್ಡು ಕೊಟ್ಟು ಮದುವೆ ಮಾಡಿಸಿದರು.

ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ಶ್ರೀ ಸತ್ಯಧ್ಯಾನತೀರ್ಥರ ಬಳಿಯಲ್ಲಿ ತಾವು ಓದಲಿಕ್ಕೆ ಇರುವಾಗಲೇ ಶ್ರೀ ವಾದಿರಾಜಾಚಾರ್ಯರೇ ಮೊದಲಾದ ಶಿಷ್ಯರಿಗೆ ಸಮಗ್ರ ಸುಧಾ ಗ್ರಂಥವನ್ನು ಪಾಠ ಹೇಳಿ ಆ ಗುರುಗಳ ಸನ್ನಿಧಾನದಲ್ಲಿಯೇ ಸುಧಾ ಮಂಗಳವನ್ನು ನೆರವೇರಿಸಿದರು.

ಅನಂತರ ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ಕೆಲದಿನಗಳ ಬಳಿಕ ಕೋಯಿಮತ್ತೂರಿಗೆ ಬಂದಾಗ ಅಲ್ಲಿಯ ಜನರ ಅಪೇಕ್ಷೆಯಂತೆ "ವಿದ್ಯಾಮಾನ್ಯತೀರ್ಥ ಪಾಠಶಾಲೆ"ಯನ್ನು ಸ್ಥಾಪಿಸಿ, ತಮ್ಮಲ್ಲಿ ಸುಧಾ, ಚಂದ್ರಿಕಾದಿ ಗ್ರಂಥಗಳನ್ನು ಓದಿದ ಪಂಡಿತ ವಾದಿರಾಜಾಚಾರ್ಯರನ್ನೇ ಅಧ್ಯಾಪಕರನ್ನಾಗಿ ನೇಮಿಸಿದರು.

ಅಂದಿನಿಂದ ಇಂದಿನವರೆಗೆ ಶ್ರೀ ವಾದಿರಾಜಾಚಾರ್ಯರು ಸುಧಾದಿ ಗ್ರಂಥಗಳ ಪಾಠ ಹೇಳುತ್ತ ಇರುತ್ತಾರೆ.

ಇವರಲ್ಲಿ ಶ್ರೀ ಎಸ್. ಕೆ. ವೆಂಕಟರಮಣರಾವ್, ಡಿ. ವ್ಹಿ. ಸುಬ್ಬಾಚಾರ್ಯ ಮೊದಲಾದ ಅನೇಕ ಲೌಕಿಕ, ವೈದಿಕ ಜನರು ನ್ಯಾಯ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿರುವರು. ಇನ್ನೂ ಅನೇಕರು ಮಾಡುತ್ತಲಿರುವರು.

ಇವರು ಈಗಾಗಲೇ ೯ ಸಲ ಸುಧಾಪಾಠವನ್ನು ಹೇಳಿರುವರು. ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ಆದೇಶದಂತೆ ಬ್ರಹ್ಮಾನಂದೀ ಗ್ರಂಥಕ್ಕೆ ಖಂಡನೆಯನ್ನು ಬರೆಯುತ್ತಲಿದ್ದಾರೆ. ವಾಯುಸ್ತುತಿಗೆ ಕನ್ನಡದಲ್ಲಿ ಅರ್ಥವನ್ನು ಬರೆದಿದ್ದಾರೆ.

## ೯ ಬಾಳಿಬೈಲು ಪದ್ಮನಾಭಾಚಾರ್ಯ

ದಕ್ಷಿಣ ಕನ್ನಡದವರಾದ ಬಾಳೆಬೈಲು ಪದ್ಮನಾಭಾಚಾರ್ಯರು ಜ್ಞಾನಿಗಳಾಗಿದ್ದಂತೆ ಕರ್ಮಯೋಗಿಗಳೂ ಆಗಿದ್ದಾರೆ. ಮಹಾ ಕರ್ಮಠರಾದ ಇವರು ಮಹಾ ಪಂಡಿತರಾದರೂ "ಅರತಿರ್ಜನಸಂಸದಿ" ಎಂಬ ವೃತ್ತಿಯವರು. ಇವರ ಮಿದುಳಿನಲ್ಲಿ ಶಾಸ್ತ್ರ ಪಾಂಡಿತ್ಯ ಉಕ್ಕುತ್ತಲಿದ್ದರೂ ಅದರ ಮೇಲೆ ವಿನಯದ ಗುರುತರವಾದ ಗೌಪಣಿಕೆಯನ್ನು ಹೊದಿಸಿದ್ದರಿಂದ ಎಷ್ಟೋ ಜನರಿಗೆ ಅವರ ಜ್ಞಾನಾಕಾರದ ಪರಿಚಯವೇ ಇರಲಿಕ್ಕಿಲ್ಲ.

ಬಾಲ್ಯದಲ್ಲಿಯೇ ಜ್ಞಾನದ ಹಸಿವನ್ನು ಹೊತ್ತು ವಿದ್ಯಾಕೇಂದ್ರವಾದ ಮೈಸೂರಿಗೆ ಬಂದ ಈ ಬಾಳೆಬೈಲದ ಬಾಲನು ಆನೆಕಲ್ಲ ಶ್ರೀನಿವಾಸಾಚಾರ್ಯರಲ್ಲಿ ಸಮಗ್ರ ಧರ್ಮ ಶಾಸ್ತ್ರವನ್ನು ಓದಿದನು. ಆಗ ಅಧ್ಯಯನ ಮಾಡಿದ ಭಾರತೀಯ ಧರ್ಮಶಾಸ್ತ್ರವು ಇವರ ಸಮಗ್ರ ಜೀವನವನ್ನು ಧಾರ್ಮಿಕ ಕಾರ್ಮಿಕತೆಯತ್ತ ಒಲಿಸಲು ಮೂಲ ಅಸ್ತಿವಾರವಾಯಿತು.

ಅನಂತರ ಇವರು ಪರಕಾಲಮಠದ ಸ್ವಾಮಿಗಳಾದ ಶ್ರೀ ಆತ್ಮಕೂರು ರಂಗಾ ಚಾರ್ಯರಲ್ಲಿ ನವ್ಯ ನ್ಯಾಯದ ಪೂರ್ವ ಭಾಗವನ್ನೂ ಶ್ರೀ ವಿರೂಪಾಕ್ಷ ಶಾಸ್ತ್ರಿಗಳಲ್ಲಿ ಉತ್ತರ ಭಾಗವನ್ನೂ ಅಧ್ಯಯನಮಾಡಿ ತರ್ಕ ವಿದ್ವಾಂಸರಾದರು.

ಅನಂತರ ಪೆರಿಕೊಳಂ ರಾಮಚಂದ್ರಾಚಾರ್ಯರಲ್ಲಿ ಮಾಧ್ವ ವೇದಾಂತವನ್ನು ಓದಿದರು.

ಇಷ್ಟಾದರೂ ಆಚಾರ್ಯರ ವಿದ್ಯಾಧ್ಯಯನದ ಹಸಿವು ಹಿಂಗಲಿಲ್ಲ. ಅವರು ಮೈಸೂರಿನ ಮಹಾ ವಿದ್ವಾಂಸರಾದ ಮಹಾ ಮಹೋಪಾಧ್ಯಾಯ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಲ್ಲಿ ಪ್ರಾಚೀನ ನ್ಯಾಯವನ್ನು ಕೂಲಂಕಷವಾಗಿ ಅಭ್ಯಸಿಸಿದರು. ಶ್ರೀ ನರಸಿಂಹಾಚಾರ್ಯರಲ್ಲಿ ಮೀಮಾಂಸಾ ಶಾಸ್ತ್ರವನ್ನು ಕಲಿತರು.

ಹೀಗೆ ವಿದ್ಯಾರ್ಥಿ ಜೀವನದಲ್ಲಿ ಅನೇಕ ಗುರುಗಳ ಜ್ಞಾನ ಕೋಶಗಳಿಂದ ವಿದ್ಯೆ ಯನ್ನು ಸಂಪಾದಿಸಿ ತಲೆಯಲ್ಲಿ ದೊಡ್ಡದಾದ ಜ್ಞಾನದ ರಾಶಿಯನ್ನೇ ತುಂಬಿಕೊಂಡ ಶ್ರೀ ಪದ್ಮನಾಭಾಚಾರ್ಯರು ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ತರ್ಕ ಅಧ್ಯಾಪಕರಾದರು.

ಬೆಂಗಳೂರಿನ ಚಾಮರಾಜ ಸಂಸ್ಕೃತ ಕಾಲೇಜದಲ್ಲಿಯೂ ಬಹುಕಾಲ ಅವರು ಅಧ್ಯಾಪನಕಾರ್ಯವನ್ನು ನಡೆಸಿದರು. ಅನೇಕ ಜನ ಪಂಡಿತ ಶಿಷ್ಯರನ್ನು ತಯಾರು ಮಾಡಿದರು. ಶ್ರೀ ಮಾಗಡಿ ರಂಗನಾಥಾಚಾರ್ಯರೂ, ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರೂ ಇವರಲ್ಲಿ ಓದಿ ಪಂಡಿತರಾದವರಲ್ಲಿ ಗಣ್ಯರಾಗಿದ್ದಾರೆ.

ಪಂಡಿತ ಸಭೆಗಳಲ್ಲಿ ಸಮಾನಾಧಿಕರಣ ವಾಕ್ಯಾರ್ಥ ನಡೆದಾಗ, ನ್ಯಾಯ ವೇದಾಂತ ಶಾಸ್ತ್ರಗಳ ಸೂಕ್ಷ್ಮ ಪ್ರಘಟ್ಟಗಳನ್ನು ನೀರು ನೀರಾಗಿ ಹಿಂಜಿ ಹೇಳುವ ಹದ ಹವನು, ಅನುವಾದ ಚಾತುರ್ಯಗಳು ಆಚಾರ್ಯರಿಗೆ ಕರಗತವಾಗಿವೆ ಅದನ್ನು ಕೇಳಿಯೇ ತಿಳಿಯಬೇಕು, ತಿಳಿದೇ ಆನಂದಿಸಬೇಕು.

## ೧೦ ಪಿ. ಪಿ. ಲಕ್ಷ್ಮೀನಾರಾಯಣೋಪಾಧ್ಯಾಯ, ಮದ್ರಾಸ



ಉಡುಪಿಯ ಮುಖ್ಯಪ್ರಾಣ ಉಪಾಧ್ಯಾಯರ ಮಕ್ಕಳಾದ ಲಕ್ಷ್ಮೀನಾರಾಯಣ ಉಪಾಧ್ಯಾಯರು ಹುಟ್ಟಿದ್ದು ಉಡುಪಿಯಲ್ಲಿ. ಕಲಿತದ್ದು ಕಾಶಿಯಲ್ಲಿ. ಓದಿದ್ದು ಮೈಸೂರಿನಲ್ಲಿ. ಶಿಷ್ಯತ್ವವನ್ನು ಸ್ವೀಕರಿಸಿದ್ದು ಶ್ರೀ ಸತ್ಯಧ್ಯಾನರಲ್ಲಿ. ಅಧ್ಯಾಪನ ಮಾಡಿಸಿದ್ದು ಸಾಂಗಲಿಯಲ್ಲಿ. ವಾಸವಾಗಿದ್ದುದು ಮದ್ರಾಸಿನಲ್ಲಿ. ಪುರಸ್ಕಾರಪಡೆದದ್ದು ದಿಲ್ಲಿಯಲ್ಲಿ. ಕೀರ್ತಿಯನ್ನು ಪಡೆದದ್ದು ಇಡೀ ದೇಶದಲ್ಲಿ.

ಇಂಥ ಅನಂತ ಮುಖ ಜೀವನವುಳ್ಳ ಉಪಾಧ್ಯಾಯರು ನ್ಯಾಯ, ವೇದಾಂತ ಜ್ಯೋತಿಷ್ಯ, ಸಾಹಿತ್ಯ ಮೊದಲಾದ ಶಾಸ್ತ್ರಗಳಲ್ಲಿ ನಾಮಾಂಕಿತ ಪಂಡಿತರಾಗಿದ್ದಾರೆ. ಸಮಗ್ರ ಭರತಖಂಡದಲ್ಲಿ ಯಾವ-ಯಾವ ಶಾಸ್ತ್ರದಲ್ಲಿ ಯಾರು-ಯಾರು ನಿಸ್ಸೀಮ ಪಂಡಿತರೋ ಅಲ್ಲಿ ಅಲ್ಲಿ ಹೋಗಿ ಆ ಆಜ್ಞಾನಭಾಂಡಾರವನ್ನು ಬಗ್ಗಿಸಿ ತಮ್ಮ ಅರಿವಿನ ಕೋಶವನ್ನು ಹಿಗ್ಗಿಸಿಕೊಂಡು ಬಂದಿದ್ದಾರೆ.

ಮೈಸೂರಿಗೆ ಬಂದು ೬ ವರ್ಷ ದಿ. ಕಾಶೀಪ್ರಾಣೇಶಾಚಾರ್ಯ, ಶ್ರೀ ಬಾಳೇಬೈಲು ಪದ್ಮನಾಭಾಚಾರ್ಯ ಮುಂತಾದ ಪಂಡಿತರಲ್ಲಿ ಶಾಸ್ತ್ರಾಧ್ಯಯನವನ್ನು ಮಾಡಿದರು

ಅನಂತರ ಶ್ರೀ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಧ್ಯಾನತೀರ್ಥರ ಶಿಷ್ಯರಾಗಿ ಶ್ರೀಮಠದ ಪಂಚಾಂಗ ನಿರ್ಮಾಣದ ಕಾರ್ಯವನ್ನು ಕೈಕೊಂಡರು.

ಸಾಂಗ್ಲಿ ಸಂಸ್ಕೃತ ಪಾಠಶಾಲೆಯಲ್ಲಿ ಕೆಲವು ಕಾಲ ಪ್ರಧಾನ ಅಧ್ಯಾಪಕರಾಗಿ ಪಾಠ ಹೇಳಿದರು. ಅನಂತರ ಶ್ರೀ ಸತ್ಯಧ್ಯಾನತೀರ್ಥರೊಡನೆ ಮದ್ರಾಸಕ್ಕೆ ಬಂದು ಆ ಗುರುಗಳ ಅಪ್ಪಣೆ ಪ್ರಕಾರ ತಿರುವೇಣಿಕೇಳಿ ಉತ್ತರಾದಿ ಮಠದಲ್ಲಿ ಸಂಸ್ಕೃತ ಅಧ್ಯಾಪಕರೆಂದು ೧೯೩೩ ರಲ್ಲಿ ನಿಯುಕ್ತರಾದರು.

ಮುಂದೆ ೧೯೪೬ ನೇ ಇಸ್ವಿಯಲ್ಲಿ ಸ್ವತಂತ್ರವಾಗಿ ಮದ್ರಾಸಿನ ಆಸ್ತಿಕ ಜನರ ಸಹಾಯ ಸಹಕಾರಗಳಿಂದ ಶ್ರೀ ಕೃಷ್ಣಮಂದಿರವನ್ನು ಟ್ರಿಪ್ಲಿಕೇನದಲ್ಲಿ ಸ್ಥಾಪಿಸಿದರು. ಶ್ರೀ ವಾದಿರಾಜ ವಿದ್ವತ್ ಸಭೆಯನ್ನು ಪ್ರಾರಂಭಿಸಿದರು. ಸಂಸ್ಕೃತ ಪಾಠಶಾಲೆಯನ್ನು ಸುರುಮಾಡಿದರು. ಜ್ಯೋತಿಷ್ಯ, ತರ್ಕ, ವೇದಾಂತ ಮುಂತಾದ ಶಾಸ್ತ್ರಗಳಲ್ಲಿ ವಿದ್ವಾನ್ ಶಿರೋಮಣಿ ಮುಂತಾದ ಪರೀಕ್ಷೆಗಳಿಗೆ ಕಟ್ಟಿ ಉತ್ತೀರ್ಣರಾದ ಉಪಾಧ್ಯಾಯರು ೧೯೪೨ ರಲ್ಲಿ ಮೈಸೂರಿನ ಆಸ್ಥಾನ ವಿದ್ವಾಂಸರಾದರು. ಶ್ರೀ ರಾಘವೇಂದ್ರಸ್ವಾಮಿಗಳ ಮಠದಿಂದ "ಪಂಡಿತ ಭೂಷಣ" ಪದವಿಯನ್ನು ಪಡೆದರು.

೧೯೫೮ ರಲ್ಲಿ ಜ್ಯೋತಿಷ್ಯಶಾಸ್ತ್ರ ವಿಷಯಕ ಅಪೂರ್ವ ಗ್ರಂಥವನ್ನು ಸಂಶೋಧಿಸಿ, ಸಂಸ್ಕೃತದಲ್ಲಿ ಬರೆದು ಕೇಂದ್ರ ಸರಕಾರದಿಂದ ಮಾಸಿಕ ವೇತನವನ್ನು ಪಡೆದರು.

ಆನುವಂಶಿಕವಾಗಿ ಶ್ರೀ ಪೇಜಾವರ ಮಠದ ಶಿಷ್ಯರೂ, ಶ್ರೀ ಕೃಷ್ಣ ಮಠದ ದೈವಜ್ಞರೂ ಆದ ಶ್ರೀ ಪಿ. ಪಿ. ಲಕ್ಷ್ಮೀನಾರಾಯಣ ಉಪಾಧ್ಯಾಯರು ಪ್ರಕೃತದಲ್ಲಿ ಮದ್ರಾಸ ಸಂಸ್ಕೃತ ಕಾಲೇಜದಲ್ಲಿ ಜ್ಯೋತಿಷ್ಯ ಪ್ರಧಾನ ಅಧ್ಯಾಪಕರಾಗಿದ್ದಾರೆ.

ಮದ್ರಾಸಿನಲ್ಲಿ ಅನೇಕ ಲೌಕಿಕ ವೈದಿಕರಿಗೆ ಸಚ್ಛಾಸ್ತ್ರ ಪಾಠ ಹೇಳಿ, ಪ್ರವಚನ ಮಾಡಿ ತಮ್ಮ ಗುರುಗಳಾದ ಶ್ರೀ ಸತ್ಯಧ್ಯಾನ ತೀರ್ಥರನ್ನು ಸ್ಮರಿಸುತ್ತ, ಧರ್ಮ ಜಾಗ್ರತಿಯನ್ನು ಉಂಟುಮಾಡುತ್ತ ಎಲ್ಲ ವಿದ್ವತ್ ಸಭೆಗಳಲ್ಲಿ ಭಾಗವಹಿಸುತ್ತಲಿದ್ದಾರೆ.

## ೧೧ ಪಾಡಿಗಾರು ಕೇಶವಾಚಾರ್ಯರು



ಉಡುಪಿಯ ಪಾಡಿಗಾರು ಗ್ರಾಮದ ಶ್ರೀ ಕೇಶವಾಚಾರ್ಯರು ಕಾಶೀ ಪಂಡಿತರು. ಇವರು ಬಾಲ್ಯದಲ್ಲಿಯೇ ಪ್ರಯಾಣ ಸೌಕರ್ಯ–ವಿಶೇಷವಿಲ್ಲದ ಆ ಕಾಲದಲ್ಲಿ ಜ್ಞಾನ ಸಂಪಾದನೆಯ ತವಕದಿಂದ ಕಾಶಿಗೆ ಹೋದರು.

ಕಾಶಿಯಲ್ಲಿ ಮಹಾಮಹೋಪಾಧ್ಯಾಯ ವಾಮಾಚರಣ ಭಟ್ಟಾಚಾರ್ಯರೆಂದರೆ ವಿದ್ವತ್ ಪ್ರಪಂಚದ ಅನಭಿಷಕ್ತ ಸಾರ್ವಭೌಮರು. ಆ ಭಟ್ಟಾಚಾರ್ಯರ ಬಳಿಯಲ್ಲಿ ತರ್ಕಶಾಸ್ತ್ರದ— "ಕೇಶವ-ನಾರಾಯಣ" ಪ್ರಾರಂಭವಾಯಿತು ಈ ಕೇಶವಾಚಾರ್ಯರಿಗೆ. ೮ ವರ್ಷಗಳ ವರೆಗೆ ಆ ಜ್ಞಾನ ಮೇರುವಿನ ಬಳಿಯಲ್ಲಿ ನಿಂತುಕೊಂಡು ತರ್ಕಶಾಸ್ತ್ರದ ಪಾಂಡಿತ್ಯ, ಪ್ರಭುತ್ವಗಳನ್ನು ಈ ಉಡುಪಿಯ ಕೇಶವಮೂರ್ತಿಗಳು ಸಂಪಾದನ ಮಾಡಿದರು. ಕಾಶೀ ಪಂಡಿತರ ತರ್ಕಶಾಸ್ತ್ರದ ತಿಪ್ಪರಲಾಗದ ಹೇಚು–ಪೇಚುಗಳೆಲ್ಲವೂ ಅವರಿಗೆ ತಿಳಿದವು. ಕೋಟಿ ಕ್ರಮ, ವಾಕ್ಯಾರ್ಥ ಪದ್ಧತಿಯ ಕ್ರಮ–ವಿಕ್ರಮ–ವ್ಯುತ್ಕ್ರಮ–ಪರಾಕ್ರಮಗಳೆಲ್ಲವೂ ಚಿರಪರಿಚಿತವಾದವು.

ಕಾಶೀ ವಿದ್ಯಾಪೀಠದಲ್ಲಿ ನ್ಯಾಯಾಚಾರ್ಯ ಪರೀಕ್ಷೆಗೆ ಮಿದುಳು ಸವೆಸಿ ಶ್ರೀ ಪಾಡಿಗಾರು ಕೇಶವಾಚಾರ್ಯರು ಮೈಸೂರಿಗೆ ಬಂದರು. ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾಗಳನ್ನು ಅಧ್ಯಯನ ಮಾಡಿದರು.

ಸಾಹಿತ್ಯ, ವ್ಯಾಕರಣಗಳನ್ನಂತೂ ಬಾಲ್ಯದಲ್ಲಿಯೇ ಉಡುಪಿಯಲ್ಲಿ ಓದಿ ಪರ್ಯಾಪ್ತಜ್ಞಾನವನ್ನು ಸಂಪಾದನ ಮಾಡಿದ್ದರು.

ಹೀಗೆ ಬೇರೆ–ಬೇರೆ ಶಾಸ್ತ್ರಗಳಲ್ಲಿ ಸಾಕಷ್ಟು ಪರಿಚಯ ಪಾಂಡಿತ್ಯಗಳನ್ನು ಪಡೆದ ಈ ಪಾಡಿಗಾರು ಆಚಾರ್ಯರು ಶ್ರೀ ಸತ್ಯಧ್ಯಾನತೀರ್ಥರ ಕಾಲದಲ್ಲಿ ವಿದ್ವತ್ ಸಭೆಗಳಲ್ಲಿ ಭಾಗವಹಿಸುತ್ತಿದ್ದರು.

ಈಗಲೂ ಅವರು ಶ್ರೀ ಭಂಡಾರಕೇರಿಮಠ, ಶ್ರೀ ಮಂತ್ರಾಲಯ ಮಠದ ಸಭೆ, ಶ್ರೀ ಪೇಜಾವರ ಶ್ರೀಗಳವರು ನಡೆಯಿಸುವ ವಾಕ್ಯಾರ್ಥ ಗೋಷ್ಠಿಗಳಲ್ಲಿ ಭಾಗವಹಿಸುತ್ತಲಿದ್ದಾರೆ.

ಇವರು ಹಿಂದಿನ ಶ್ರೀ ಕೃಷ್ಣಾಪುರ ಮಠದ ಶ್ರೀಪಾದಂಗಳವರಿಗೂ, ಇಂದಿನ ಗೋಕರ್ಣ ಪರ್ತಗಾಳಿ ಮಠಾಧೀಶರಿಗೂ, ಈಗಿನ ಶ್ರೀ ಭೀಮನಕಟ್ಟೆ ಶ್ರೀಪಾದಂಗಳವರಿಗೂ ನ್ಯಾಯ, ವೇದಾಂತ ಪಾಠಗಳನ್ನು ಹೇಳಿದ್ದರಲ್ಲದೆ ಶ್ರೀ ಭಂಡಾರಕೇರಿ ಮಠದ ಹಾಗೂ ಅದಮಾರು ಮಠದ ಪಾಠಶಾಲೆಗಳಲ್ಲಿ ತರ್ಕಾಧ್ಯಾಪಕರಾಗಿ ಪಾಠ ಪ್ರವಚನಗಳನ್ನು ಮಾಡಿದ್ದಾರೆ.

## ೧೨ ಮಾಗಡಿ ರಂಗನಾಥಾಚಾರ್ಯ

ಭಂಡಾರಕೇರಿ ಶ್ರೀಗಳವರ ಸಭೆ, ಮಂತ್ರಾಲಯ ವಿದ್ವತ್ ಸಭೆ, ವ್ಯಾಸರಾಯ ಮಠದ ಸಭೆ, ಮಾಧ್ವ ಮಹಾ ಮಂಡಲ ಪಂಡಿತ ಸಭೆ ಮುಂತಾದ ಎಲ್ಲ

ವಿದ್ವದ್‌ಗೋಷ್ಠಿಗಳಲ್ಲಿ ಎದ್ದು ಕಾಣುವ ವ್ಯಕ್ತಿಯೆಂದರೆ ಶ್ರೀ ಮಾಗಡಿ ರಂಗನಾಥಾ ಚಾರ್ಯರು.

ಐವತ್ತು ನಾಲ್ಕು ವರ್ಷಗಳ ಹಿಂದೆ ಮಾಗಡಿಯ ಶಾನಭೋಗರ ಶೇಷಗಿರಿ ರಾಯರ ಹೊಟ್ಟೆಯಲ್ಲಿ ಹುಟ್ಟಿದ ರಂಗನಾಥಾಚಾರ್ಯರಿಗೆ ನಾಲ್ಕು ಶಾಸ್ತ್ರಗಳಲ್ಲಿಯೂ ಗತಿಯುಂಟು. ಅವರು ಪೆರಿಯಕೋಳಂ ರಾಮಚಂದ್ರಾಚಾರ್ಯ ಮತ್ತು ದೊಡ್ಡ ಬಳ್ಳಾಪೂರ ವಾಸುದೇವಾಚಾರ್ಯರಲ್ಲಿ ವೇದಾಂತವನ್ನೂ, ಬಾಳೇಬೈಲು ಪದ್ಮನಾಭಾ ಚಾರ್ಯ ನುಗ್ಗೆಹಳ್ಳಿ ತಿರುನಾರಾಯಣ ಅಯ್ಯಂಗಾರರಲ್ಲಿ ತರ್ಕ ವ್ಯಾಕರಣಗಳನ್ನೂ ರಾಮನಾಥಪುರಂ ದೇಶಿಕಾಚಾರ್ಯ ಮತ್ತು ಶ್ರೀ ಕೃಷ್ಣಮೂರ್ತಿ ಶಾಸ್ತ್ರಿಗಳಲ್ಲಿ ಅಲಂಕಾರ ಶಾಸ್ತ್ರವನ್ನೂ ಅಧ್ಯಯನ ಮಾಡಿ ಮಹಾ ಪಂಡಿತರಾದರು.

ಮಹಾರಾಜಾ ಸಂಸ್ಕೃತ ಕಾಲೇಜ ಮೈಸೂರು ಮತ್ತು ಗವರ್ನ್ಮೆಂಟ ಟ್ರೇನಿಂಗ ಕಾಲೇಜ ಮೈಸೂರು ಈ ವಿದ್ಯಾ ಶಾಲೆಗಳಲ್ಲಿ ಕೆಲವು ದಿನ ಅಧ್ಯಾಪನ ಕಾರ್ಯವನ್ನು ಮಾಡಿಸಿ ಈಗ ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ತರ್ಕ ಪ್ರಧಾನ ಅಧ್ಯಾಪಕರಾಗಿದ್ದಾರೆ. ಮತ್ತು ರಾಮಕೃಷ್ಣಪ್ಪ ದ್ವೈತ ವೇದಾಂತ ಪಾಠಶಾಲೆಯಲ್ಲಿಯೂ ಮಾಧ್ವ ವೇದಾಂತವನ್ನೂ ಪಾಠ ಹೇಳುತ್ತಾರೆ.

ತರ್ಕ-ಸಾಹಿತ್ಯ-ವೇದಾಂತ ವಿದ್ವಾನ್ ಶ್ರೀ ರಂಗನಾಥಾಚಾರ್ಯರ ಶಿಷ್ಯ ಪರಿವಾರದಲ್ಲಿ ವೈದಿಕರು ಅನೇಕ ಜನರಿರುತ್ತಾರೆ. ಲೌಕಿಕರೂ ಅಷ್ಟೇ ಸಂಖ್ಯೆಯಲ್ಲಿ ಇವರ ಜ್ಞಾನದ ಲಾಭವನ್ನೂ ಪಡೆದಿದ್ದಾರೆ.

ಎನ್. ವ್ಹಿ. ಪದ್ಮನಾಭಾಚಾರ್ಯ, ರಿತ್ತಿ ವೆಂಕಣ್ಣಾಚಾರ್ಯ, ಸಿ. ಎನ್. ಅನಂತಾಚಾರ್ಯ, ಎಳಮೇಲಿ ವಾಸುದೇವಾಚಾರ್ಯ, ಅರ್ಚಕ ಕೃಷ್ಣಾಚಾರ್ಯರು, ಸಿ. ಅನಂತಾಚಾರ್ಯ, ಜಿ. ಶೇಷಯ್ಯ, ಹೊನ್ನಾಳಿ ಗುರುರಾಜಾಚಾರ್ಯರು ಇವ ರೆಲ್ಲರೂ ಇವರ ಪ್ರಥಮ ವರ್ಗದ ಶಿಷ್ಯರು.

ಶ್ರೀ ಸಿ. ಪಿ. ಕೃಷ್ಣಮೂರ್ತಿ, ಸಿ. ಪಿ. ಪದ್ಮನಾಭಾಚಾರ್ಯ ಕೊಯಿಮತ್ತೂರ, ಪಿ. ರಾಮಚಂದ್ರರಾಯರು, ವಿಠ್ಠಲರಾವ ನವಲಗುಂದ ಧಾರವಾಡ, ಪಿ. ವಿಷ್ಣುತೀರ್ಥ ನವವೃಂದಾವನ, ಡಿ. ಹರಿಹರರಾಯ, ಗೌಡಗೇರಿ ಗುಂಡಾಚಾರ್ಯ, ಎ. ಸತ್ಯೇಶಾ ಚಾರ್ಯ, ಎನ್. ಕೆ. ವೆಂಕಟೇಶಮೂರ್ತಿ, ಶ್ರೀನಿವಾಸರಾಯರು ಕೊಳ್ಳೇಗಾಲ ಇವರುಗಳೆಲ್ಲ ಇವರ ಗೃಹಸ್ಥ ಶಿಷ್ಯ ಮಂಡಲಿ.

ಶ್ರೀ ರಂಗನಾಥಾಚಾರ್ಯರ ವಾಕ್ಯಾರ್ಥದ ಕೌಶಲ್ಯವನ್ನು ಕಂಡು ದಿವಂಗತ ಶ್ರೀ ಕರ್ಪೂರ ಶ್ರೀನಿವಾಸರಾಯರು ಇವರಿಗೆ ಬಹುಮಾನವಿತ್ತು ಗೌರವಿಸಿದರಂತೆ.

ಇವರು ಈಗಾಗಲೇ ಮೂರು ಸಾರೆ ಸುಧಾ ಮಂಗಳ ಮಾಡಿದ್ದಾರೆ. ೬ ಉಪ ನ್ಯಾಸಗಳಲ್ಲಿ ಸುಧಾ ಜಿಜ್ಞಾಸಾಧಿಕರಣವನ್ನು ಪ್ರವಚನಗೈದಿದ್ದಾರೆ.

## ೧೬. ನಂದಗುಡಿ ಕೃಷ್ಣಮೂರ್ತಿ ಆಚಾರ್ಯರ

ಶ್ರೀ ಸತ್ಯಧ್ಯಾನತೀರ್ಥರಿಂದ ಸ್ಥಾಪಿತವಾಗಿ, ಶ್ರೀ ಸತ್ಯಪ್ರಮೋದತೀರ್ಥರಿಂದ ಊರ್ಜಿತಗೊಳಿಸಲ್ಪಟ್ಟ ಬೆಂಗಳೂರ ಉತ್ತರಾದಿ ಮಠದ ಗ್ರಂಥ ಭಾಂಡಾರದ ವ್ಯವಸ್ಥಾಪಕರಾದ ನಂದಗುಡಿ ಕೃಷ್ಣಮೂರ್ತಿಗಳವರು ಲೌಕಿಕ, ವೈದಿಕ ಎರಡರಲ್ಲಿಯೂ ವಿದ್ವಾಂಸರಾಗಿದ್ದಾರೆ.

ಇವರ ವಂಶದ ಪೂರ್ವಿಕರ ಉದ್ದಾಮ ಪಾಂಡಿತ್ಯವನ್ನು ಕಂಡು ದಿವಾನ್ ಪೂರ್ಣಯ್ಯನವರು ಜೋಡೀ ಗ್ರಾಮವನ್ನಿತ್ತು ಸತ್ಕರಿಸಿದ್ದರಂತೆ. ಈ ಪಾರಂಪರಿಕ ಸಂಸ್ಕೃತದ ಹಿನ್ನೆಲೆಯಲ್ಲಿ ಶ್ರೀ ಕೃಷ್ಣಮೂರ್ತಿಗಳು ಮದ್ರಾಸ ವಿಶ್ವ ವಿದ್ಯಾಲಯದ ವಿದ್ವತ್ ಪರೀಕ್ಷೆ, B. O. L. ಪರೀಕ್ಷೆ ಮತ್ತು M. A. ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಆದರಂತೆ ಬಾಳೇಬೈಲು ಪದ್ಮನಾಭಾಚಾರ್ಯರಲ್ಲಿ ನ್ಯಾಯ-ವೇದಾಂತ, ತಿರುನಾರಾಯಣ ಅಯ್ಯಂಗಾರ ಸ್ವಾಮಿಗಳಲ್ಲಿ ವ್ಯಾಕರಣ, ರಾಮನಾಥಪುರ ದೇಶಿಕಾಚಾರ್ಯರಲ್ಲಿ ಅಲಂಕಾರ, ಕಾಶೀ ಪ್ರಾಣೇಶಾಚಾರ್ಯರಲ್ಲಿ ನ್ಯಾಯ-ಭಾಷ್ಯ, ಅಕ್ಷೋಭ್ಯತೀರ್ಥ ಮಠದ ಶ್ರೀ ರಘುವೀರತೀರ್ಥರಲ್ಲಿ ವೇದಾಂತ, ಶ್ರೀ ಯಜ್ಞ ವಿಠಲಾಚಾರ್ಯರಲ್ಲಿ ವೇದಾಂತ ಉದ್ಗ್ರಂಥಗಳನ್ನು ಓದಿದರು.

ಇವರು ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದದ್ದಲ್ಲದೆ ಕರ್ಪೂರ ಶ್ರೀನಿವಾಸ ರಾಯರು ಏರ್ಪಡಿಸಿದ ತರ್ಕಶಾಸ್ತ್ರ ಬಹುಮಾನವನ್ನೂ ಪಡೆದರು.

ಪ್ರಕೃತ ಶ್ರೀ ಕೃಷ್ಣಮೂರ್ತಿ ಆಚಾರ್ಯರು ಮೈಸೂರ ಸರಕಾರದಲ್ಲಿ M. A. ಪದವೀಧರರಿಗೆ ಭಾರತೀಯ ದರ್ಶನಗಳು ಮತ್ತು ಅವುಗಳಲ್ಲಿ ಅಡಕವಾಗಿರುವ ಮನಸ್ಸತತ್ವ ನಿರೂಪಣವೆಂಬ ಕಾರ್ಯದಲ್ಲಿ ನಿರತರಾಗಿದ್ದಾರೆ. ಅಲ್ಲದೆ ಈಗ ಬೆಂಗಳೂರಲ್ಲಿ ಪ್ರಕಟವಾಗುತ್ತಿರುವ ಸರ್ವಮೂಲ ಗ್ರಂಥ ಸಂಪಾದಕರಾಗಿಯೂ ಮತ್ತು ಕನ್ನಡದಲ್ಲಿ ಶ್ರೀಮದ್ಭಾಗವತ ಭಾಷಾಂತರವನ್ನೂ, ವಿಜಯಧ್ವಜೀಯ ತಾತ್ಪರ್ಯ ಇತರ ಟೀಕೆ ಟಿಪ್ಪಣಿಗಳೊಂದಿಗೆ ಪ್ರತಿಪದಾರ್ಥ ವಿಶೇಷಾರ್ಥ ಸಹಿತವಾಗಿ ಬರೆದು ಉತ್ತರಾದಿ ಮಠದ ಕೃಪಾ ಪೋಷಿತವಾದ ಶ್ರೀ ಸುಧಾ ಎಂಬ ಕನ್ನಡ ಮಾಸ ಪತ್ರಿಕೆಯ ಮುಖಾಂತರ ಪ್ರಕಟಿಸುತ್ತಲಿದ್ದಾರೆ.

## ೧೪ ಓಂಕಾರ ಚಿಂಚೋಳಿ ಕೃಷ್ಣಾಚಾರ್ಯ

ಗುಲಬುರ್ಗಾ ಜಿಲ್ಹೆಯ ಚಿಂಚೋಳೀ ಗ್ರಾಮದಲ್ಲಿ ಮೊದಲು ಅನೇಕ ಪಂಡಿತ ರಿದ್ದರು. ಅಂಥ ವಿದ್ವತ್ ಕುಟುಂಬಗಳಲ್ಲಿ ಓಂಕಾರ ಆಚಾರ್ಯರ ಮನೆತನವೂ ಗಣ್ಯ ವಾಗಿದ್ದಿತು. ಅಂಥ ವಿದ್ವತ್ ಕುಟುಂಬಗಳಲ್ಲಿ ಓಂಕಾರ ಆಚಾರ್ಯರ ಮನೆತನವೂ ಗಣ್ಯವಾಗಿದ್ದಿತು. ಅಂಥ ಸುಸಂಸ್ಕೃತ ಕಾಲದ ಕೃಷ್ಣಾಚಾರ್ಯರು ಬಾಲ್ಯದಿಂದ ಶ್ರೀ ಸತ್ಯಧ್ಯಾನತೀರ್ಥ ಶ್ರೀ ಶ್ರೀಗಳವರ ಶಿಷ್ಯರಾಗಿ ಮಠದಲ್ಲಿ ಓದಿ ಪಂಡಿತರಾದವರಲ್ಲಿ ಪ್ರಮುಖರಾಗಿದ್ದಾರೆ.

ಉತ್ತರಾದಿಮಠದ ಆಸ್ಥಾನ ವಿದ್ವಾಂಸರಾದ ಶ್ರೀ ಪಾಂಡುರಂಗೀ ಕೃಷ್ಣಾಚಾರ್ಯರಲ್ಲಿ, ಮಳಗಿ ವೇದವ್ಯಾಸಾಚಾರ್ಯ, ವರಖೇಡ ನರಸಿಂಹಾಚಾರ್ಯ, ಪಾಂಡುರಂಗೀ ಜಯಾಚಾರ್ಯರ ಜೊತೆಗೆ ನ್ಯಾಯಶಾಸ್ತ್ರದ ವ್ಯಾಪ್ತಿವಾದ, ಉತ್ತರ ವಾದಗಳನ್ನು ಓದಿದ ಆಚಾರ್ಯರು ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಬಳಿಯಲ್ಲಿ ಸುಧಾಂತ ವೇದಾಂತವನ್ನು ಓದಿ ಉಭಯ ಶಾಸ್ತ್ರ ಪಾರಾಂಗತರಾದರು.

ಚಿಂಚೋಳಿ ಆಚಾರ್ಯರು ಒಳ್ಳೇ ವಾಗ್ಮಿಗಳು. ಶ್ರೀ ಸತ್ಯಧ್ಯಾನತೀರ್ಥರಿರುವ ವರೆಗೆ ಶ್ರೀ ಮಠದಲ್ಲಿಯೇ ಅವರ ಆಪ್ತ ಕಾರ್ಯದರ್ಶಿಯಂತೆ ಕೆಲಸ ಮಾಡುತ್ತಲೇ ಇದ್ದರು. ಪ್ರತಿ ಊರಿನಲ್ಲಿಯೂ ಅವರ ಉಪನ್ಯಾಸಗಳು ಜರಗುತ್ತಿದ್ದವು. ಗುರುಗಳಿಗೆ ಅತ್ಯಂತ ಪ್ರೀತ್ಯಾಸ್ಪದರಾಗಿದ್ದರು. ಶ್ರೀ ಸತ್ಯಧ್ಯಾನರ ಹೃದಯಕ್ಕೆ ಚಿಂಚೋಳಿ ಆಚಾರ್ಯರು ಮುಖರಾಗಿ ಉಪನ್ಯಾಸ ಮಾಡುತ್ತಿದ್ದರು.

## ೧೫ ಬೊಜ್ಜಿ ಕೃಷ್ಣಮೂರ್ತ್ಯಾಚಾರ್ಯ

ಶ್ರೀ ಸತ್ಯಧ್ಯಾನತೀರ್ಥರಲ್ಲಿ ಓದಿ ಪಂಡಿತರಾದ ಶಿಷ್ಯರಲ್ಲಿ ಶ್ರೀ ಕೃಷ್ಣಮೂರ್ತ್ಯಾಚಾರ್ಯರು ಉಲ್ಲೇಖನೀಯ ವ್ಯಕ್ತಿಯಾಗಿದ್ದಾರೆ.

ಬಾಲ್ಯದಲ್ಲಿ ತಮ್ಮ ತಂದೆಯವರಲ್ಲಿ ಕಾವ್ಯ ಸಾಹಿತ್ಯಾಧ್ಯಾಯನ ಮಾಡಿದ ಕೃಷ್ಣಮೂರ್ತಿಗಳು ಶ್ರೀ ಸತ್ಯಧ್ಯಾನತೀರ್ಥರಲ್ಲಿ ನ್ಯಾಯ, ವೇದಾಂತ ಶಾಸ್ತ್ರಗಳನ್ನು ಓದಿ ಪಾಠಪ್ರವಚನ ಪಟುಮತಿಗಳಾದರು.

ಅನಂತರ ಅವರು ಆಯುರ್ವೇದವನ್ನೂ ಕೂಡ ಚೆನ್ನಾಗಿ ಅಧ್ಯಯನ ಮಾಡಿ ಸರಕಾರೀ ವೈದ್ಯರಾಗಿ ಮೂವತ್ತು ವರ್ಷ ಲೋಕೋಪಕಾರ ಕಾರ್ಯ ಗೈದು ಈಗ ವಿಶ್ರಾಂತಿಯನ್ನು ಹೊಂದಿ ಬಳ್ಳಾರಿಯಲ್ಲಿದ್ದಾರೆ.

ವೈದ್ಯಕ ವ್ಯವಸಾಯದಂತೆ ಬಿಡುವಿಲ್ಲದ ವೃತ್ತಿಯನ್ನು ಅಂಗೀಕರಿಸಿದ್ದರೂ ಆಚಾರ್ಯರ ಶಾಸ್ತ್ರಜ್ಞಾನವು ಮಲಿನವಾಗದೆ ಸಾಣೆ ಹಿಡಿದ ಮಣಿಯಂತೆ ನಿರಂತರ ಚಿಂತನದಿಂದ ಉಜ್ವಲವಾಗಿಯೇ ಇದೆ. ದೇವ ಪಿತೃಕಾರ್ಯದಂತೆ ಸ್ವಾಧ್ಯಾಯವೂ ಆಚಾರ್ಯರ ನಿತ್ಯ ಕರ್ಮದಲ್ಲಿಯೇ ನೆಲಸಿದ್ದರಿಂದ ಗ್ರಂಥಕ್ಲಿಷ್ಟತೆಯು ಇನ್ನೂ ಉಳಿದು ಶಾಸ್ತ್ರೀಯ ವ್ಯುತ್ಪತ್ತಿಯು ಗಾಢವಾಗಿದೆ. ವಾದ ಶಕ್ತಿಯು ಪ್ರೌಢವಾಗಿದೆ.

## ೧೬ ಸಗರಿ ಹಯಗ್ರೀವಾಚಾರ್ಯ, ಉಡುಪಿ



ಇವರು ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಯಲತ್ತೂರ ಕೃಷ್ಣಾಚಾರ್ಯ, ಆತ್ಮಕೂರ ರಂಗಾಚಾರ್ಯ, ದೂಸಿ ನರಸಿಂಹಾಚಾರ್ಯ ಮುಂತಾದವರಲ್ಲಿ ನ್ಯಾಯ, ವ್ಯಾಕರಣ ಮೀಮಾಂಸಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ತರ್ಕ ವಿದ್ವಾನ್ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತಮರಾದರು. ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾ ಪೀಠದಲ್ಲಿಯೂ ತರ್ಕಾಧ್ಯಾಪಕರಾಗಿ ನೂರಾರು ಜನ ಶಿಷ್ಯರಿಗೆ ಪಾಠ ಹೇಳಿದ್ದಾರೆ.

ನ್ಯಾಯ ವಿದ್ವಾನ್, ಪಂಡಿತ ರತ್ನ, ಪಂಡಿತ ಭೂಷಣ, ತರ್ಕವಾಚಸ್ಪತಿ ಮುಂತಾದ ಅನೇಕ ಪದವಿಗಳು ಇವರಿಗೆ ಬಂದಿರುತ್ತವೆ.

ಕೊಚ್ಚಿ, ಅನಂತಶಯನಂ, ಆತ್ಮಕೂರ, ಮಂತ್ರಾಲಯ, ತಿರುಪತಿ, ದಿಲ್ಲಿ ಮುಂತಾದ ಕಡೆಗಳಲ್ಲಿ ನಡೆದ ವಿದ್ವತ್ ಸಭೆಗಳಲ್ಲಿ ಭಾಗವಹಿಸಿ ತಮ್ಮ ವಾದ ಕೌಶಲ್ಯದಿಂದ ಪಂಡಿತರನ್ನೂ, ಪೀಠಾಧಿಪತಿಗಳನ್ನೂ ಮೆಚ್ಚಿಸಿದ್ದಾರೆ. ದಿಲ್ಲಿಯಲ್ಲಿ ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ನಡೆಸಿದ ವಿಶ್ವಕಲ್ಯಾಣ ಯಾಗದಲ್ಲಿ ಸತ್ ಪ್ರತಿಪಕ್ಷಗ್ರಂಥದ ಮೇಲೆ ನಡೆದ ವಾಕ್ಯಾರ್ಥದಲ್ಲಿ ಕಾಶಿಯ ಪಂಡಿತರನ್ನೆಲ್ಲ ಸೋಲಿಸಿ ಗೆಲುವಿನ ಬಾವುಟವನ್ನು ಹಾರಿಸಿದ್ದಾರೆ.

## ೧೭ ಅಗ್ರಹಾರ ನಾರಾಯಣ ತಂತ್ರಿಗಳು



ಕರಂಬಳ್ಳಿ ಪದ್ಮನಾಭಾಚಾರ್ಯ, ಪಡಮುನ್ನೂರ ನಾರಾಯಣಾಚಾರ್ಯ, ಉಡುಪಿ ರಾಮಕೃಷ್ಣಾಚಾರ್ಯ ಮುಂತಾದ ಗುರುಗಳಲ್ಲಿ ಅಧ್ಯಯನಮಾಡಿ ವೇದಾಂತ ಶಿರೋಮಣಿ ವೇದಾಂತ ವಿದ್ವಾನ್ ಪರೀಕ್ಷೆಗಳಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ನಾರಾಯಣ ತಂತ್ರಿಗಳು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ವೇದಾಂತ ಅಧ್ಯಾಪಕರಾಗಿದ್ದರು.

ಇವರು ಮಾಡಿದ ಮಹಾಕಾರ್ಯವೆಂದರೆ— ಶ್ರೀ ಮಧ್ವಾಚಾರ್ಯರ ಸರ್ವಮೂಲದ ೩೭ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದ ಮಾಡಿ ಮಧ್ವ ಮುನಿ ಸೇವಾ ಸಂಘ ಎಂಬ ಸಂಸ್ಥೆಯದ್ವಾರಾ ಪ್ರಕಟಿಸಿದ್ದಾರೆ. ಇವರ ಶಾಸ್ತ್ರ ಸೇವೆಯನ್ನು ಮೆಚ್ಚಿ ಕೇಂದ್ರ ಸರಕಾರದವರು ಮಾಸಾಶನವನ್ನು ಕೊಡುತ್ತಲಿದ್ದಾರೆ.

ಇವರು ಮಧ್ವ ಸಿದ್ಧಾಂತ ಸಾರ, ನವರತ್ನ, ಉಡುಪಿ ಕ್ಷೇತ್ರ ಮಹಾತ್ಮ್ಯ, ತೀರ್ಥ ಪ್ರಬಂಧ ಅರ್ಥಾನುವಾದ, ವಾದಿರಾಜರ ಋಜುತ್ವ ನಿರೂಪಣ ಮುಂತಾದ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ.

ಮತ್ತು ವಾದಿರಾಜೀಯ ಗ್ರಂಥ ಪ್ರಕಾಶನ ಸೇವಾ ಸಮಿತಿಯ ಕಾರ್ಯದರ್ಶಿಗಳಾಗಿ ಮಹಾಭಾರತ ತಾತ್ಪರ್ಯ ನಿರ್ಣಯ, ಸುಧಾ, ಗುರುವರ್ಥದೀಪಿಕಾ, ತತ್ತ್ವಪ್ರಕಾಶಿಕಾ, ಉಪನ್ಯಾಸ ರತ್ನಮಾಲಾ, ವಿವರಣ ವಿವರಣಂ, ಕಲ್ಪಲತಾ, ಉಪಪನಿಷತ್ ಟಿಪ್ಪಣಿ ಮುಂತಾದ ಅನೇಕ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಗೊಳಿಸಿದ್ದಾರೆ.

## ೧೮ ಶ್ರೀನಿವಾಸಾಚಾರ್ಯ ಜಾಲಿಹಾಳ, ಧಾರವಾಡ



ಇವರು ತಮ್ಮ ತಂದೆ ಜಾಲಿಹಾಳ ಗುರಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣ ಅಧ್ಯಯನ ಮಾಡಿ, ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿಯೂ ವರಖೇಡಿ ನರಸಿಂಹಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿದರು. ಅನಂತರ ಕಾಶಿಗೆ ಹೋಗಿ ಬಾಳಾ ಕೃಷ್ಣಮಿಶ್ರ ಎಂಬ ಪಂಡಿತರಲ್ಲಿ ನ್ಯಾಯ ಶಾಸ್ತ್ರದ ಉತ್ತರವಾದ, ಕೋಟಿಕ್ರಮ, ಮೀಮಾಂಸಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು. ಅನಂತರ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾ, ವ್ಯಾಸತ್ರಯ, ದ್ವೈತದ್ಯುಮಣಿ ಮುಂತಾದ ಗ್ರಂಥಗಳನ್ನು ಓದಿ ಶಾಸ್ತ್ರಪಾರಂಗತರಾದರು.

ಇವರು ಗದುಗಿನಲ್ಲಿ ಅನೇಕ ವರ್ಷಗಳ ಕಾಲ ಪಾಠ ಪ್ರವಚನ ಮಾಡಿ ಅನಂತರ ಕುಂದಾಪುರ ಮಠದ ಸ್ವಾಮಿಗಳವರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳಿದ್ದಾರೆ ಅನಂತಕೃಷ್ಣ ಶಾಸ್ತ್ರಿಯ ನ್ಯಾಯಾಮೃತ ಸೌಗಂಧ ಮಿಶ್ರ ಎಂಬ ಗ್ರಂಥಕ್ಕೂ ಮತ್ತು ನ್ಯಾಯ ಸುಧಾ ಸಮೀಕ್ಷಾ ಎಂಬ ಗ್ರಂಥಕ್ಕೂ ಖಂಡನವನ್ನು ಬರೆದು ಪ್ರಕಟಿಸಿದ್ದಾರೆ. ವಿಪ್ರಸಂದೇಶ ಮುಂತಾದ ಅನೇಕ ಕಾವ್ಯ, ಹಾಗೂ ಸ್ತೋತ್ರ ಟೀಕೆ, ಟಿಪ್ಪಣಿ, ಕ್ರೋಡಪತ್ರಗಳನ್ನು ಬರೆದಿಟ್ಟಿದ್ದಾರೆ.

ಇವರು ಚತುಶ್ಶಾಸ್ತ್ರಗಳಲ್ಲಿ ಘನ ಪಂಡಿತರಾಗಿದ್ದು, ವಾದ ಶಕ್ತಿ, ಬೋಧ ಶಕ್ತಿ, ವಕ್ತೃತ್ವ, ಗ್ರಂಥ ಕರ್ತೃತ್ವ, ಪ್ರವಚನ ಪಾಂಡಿತ್ಯ, ಸಂಗೀತ–ಸಾಹಿತ್ಯ, ಆಶುಕವಿತ್ವ, ಮುಂತಾದ ಅನೇಕ ಸದ್ಗುಣಗಳಿಂದ ಹೃದಯಂಗಮವಾದ ಸಂಗಮದ ರಂಗಸ್ಥಳವಾಗಿದ್ದಾರೆ.

ಇವರು ಕನ್ನಡ, ಸಂಸ್ಕೃತ ಉಭಯ ಭಾಷೆಗಳಲ್ಲಿ ಮಹಾ ಪಂಡಿತರಾಗಿದ್ದು ತಮ್ಮ ನಿರರ್ಗಳವಾದ ವಾಗ್ವೈಖರಿಯಿಂದ ಸಭಿಕರನ್ನೆಲ್ಲ ತಣಿಸಿ, ಕುಣಿಸಿ, ನಲಿಸಿ ಬಿಡುತ್ತಾರೆ. ಇವರಲ್ಲಿ ಶ್ರೀ ಕೇಶವಾಚಾರ್ಯ ಜಾಲಿಹಾಳ, ಭೀಮಸೇನಾಚಾರ್ಯ ಸಂತೀ ಬೆನ್ನೂರ, ಸ್ವಾಮಿರಾಯಾಚಾರ್ಯ ಯಲಬುರ್ಗಿ, ನರಸಿಂಹಾಚಾರ್ಯ ತಿರಹಟ್ಟಿ,

ಶ್ರೀವಿಕ್ರಮಾಚಾರ್ಯ ಉಮರ್ಜಿ, ಶ್ರೀನಿವಾಸಾಚಾರ್ಯ ಬಾಳಿಗಾರು ಮುಂತಾದ ಅನೇಕ ಜನರು ಅಧ್ಯಯನ ಮಾಡಿ ಪಂಡಿತರಾಗಿದ್ದಾರೆ.

## ೧೯ ಕೇಶವಾಚಾರ್ಯ ಜಾಲೀಹಾಳ, ಗದಗ



ಇವರು ತಮ್ಮ ಅಣ್ಣಂದಿರಲ್ಲಿ ಸಾಹಿತ್ಯ, ನ್ಯಾಯ ಶಾಸ್ತ್ರದ ಗ್ರಂಥಗಳನ್ನು ಅಧ್ಯಯನ ಮಾಡಿ ಕಾಶಿಗೆ ಹೋಗಿ ೭ನೇ ವಾಮಾಚರಣ ಭಟ್ಟಾಚಾರ್ಯರಲ್ಲಿ ನ್ಯಾಯ ಶಾಸ್ತ್ರ ಉದ್ಗ್ರಂಥಗಳನ್ನು ಓದಿ ಮತ್ತೆ ಅಣ್ಣಂದಿರಲ್ಲಿ ನ್ಯಾಯ, ವೇದಾಂತ ಶಾಸ್ತ್ರಗಳನ್ನು ಪೂರ್ಣ ಅಧ್ಯಯನ ಮಾಡಿವರು.

ಶ್ರೀಮನ್ ನ್ಯಾಯ ಸುಧಾ ಗ್ರಂಥವನ್ನು ಟೀಕಾ ಟಿಪ್ಪಣಿ ಅರ್ಥ ಸಹಿತವಾಗಿ ಕನ್ನಡದಲ್ಲಿ ಭಾಷಾಂತರಿಸಿ ಈಗಾಗಲೆ ೫ ಭಾಗಗಳನ್ನು ಪ್ರಕಟಪಡಿಸಿದ್ದಾರೆ. ಹರಿಕಥಾಮೃತಸಾರ ಗ್ರಂಥವನ್ನು ತಾಮ್ರಪರ್ಣಿ ಜಮಖಂಡಿ, ಮೊದಲಾದ ಸಂಸ್ಕೃತ ಕನ್ನಡ ಟಿಪ್ಪಣಿಗಳೊಂದಿಗೆ ಭಾಷಾಂತರ ಮಾಡಿದ್ದು ಲಿಂಗಸೂಗುರು ವಂದೇಂದ್ರ, ಸಾಹಿತ್ಯ ಮಂಡಲದವರು ೫ ಭಾಗಗಳಲ್ಲಿ ಪ್ರಸಿದ್ಧಿಸಿದ್ದಾರೆ.

ಕೇಂದ್ರ ಸರಕಾರದ ಧನಸಹಾಯ ಪಡೆದು ಶ್ರೀ ಸತ್ಯನಾಥತೀರ್ಥರ ಅಭಿನವ ತಾಂಡವ ಎಂಬ ಗ್ರಂಥವನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ. ಇನ್ನೂ ಅನೇಕ ಪ್ರಾಚೀನ ಟೀಕೆ-ಟಿಪ್ಪಣಿಗಳನ್ನು ಸಂಗ್ರಹಿಸಿ ಸಂಶೋಧಿಸಿ ಇಟ್ಟಿದ್ದಾರೆ.

ಈಗ ಗದುಗಿನಲ್ಲಿ ಪುರಾಣ, ಪಾಠ ಪ್ರವಚನ, ಉಪನ್ಯಾಸಗಳನ್ನು ಹೇಳುತ್ತ ಧರ್ಮಜಾಗೃತಿಯನ್ನು ಮಾಡುತ್ತಲಿದ್ದಾರೆ. ಆಚಾರ್ಯರ ಪ್ರಯತ್ನದಿಂದ ಕನ್ನಡ, ಸಂಸ್ಕೃತ ವಾಙ್ಮಯ ಭಾಂಡಾರಗಳು ಸಂಪನ್ನವಾಗುತ್ತಲಿವೆ. ಮಹಾ ಪಂಡಿತರಾದ ಇವರು ಸಂಸ್ಕೃತ ಭಾಷೆಯಲ್ಲಿರುವ ಕಠಿಣವಾದ ವೇದಾಂತ ಗ್ರಂಥದ್ವಾರಾ ಆಸ್ತಿಕ ರಾದ ಮಾಧ್ವ ಸಮಾಜಕ್ಕೆಲ್ಲ ಪರೋಪಕಾರಗೈಯುತ್ತಿದ್ದಾರೆ.



## ೨೦ ಭೀಮಸೇನಾಚಾರ್ಯ ಗಂಗೂರ

ಇವರು ತಮ್ಮ ತಂದೆ ರಾಮಾಚಾರ್ಯರಲ್ಲಿ ವೇದಾಂತ ವ್ಯಾಸಂಗ ಮಾಡಿ ಜಾಲೀಹಾಳದಲ್ಲಿದ್ದಾರೆ.



## ೨೧ ಶ್ರೀನಿವಾಸಾಚಾರ್ಯ ಗಂಗೂರ

ಇವರು ತಮ್ಮ ತಂದೆ ರಾಮಾಚಾರ್ಯರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರೀಯ ಉದ್ಗ್ರಂಥಗಳನ್ನು ಓದುತ್ತ ಜಾಲಿಹಾಳದಲ್ಲಿರುವರು.



## ೨೨ ರಂಗಾಚಾರ್ಯ ಗುತ್ತಲ

ಇವರು ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರಾಗಿದ್ದು, ಒಳ್ಳೆ ಬುದ್ಧಿವಂತರಾಗಿದ್ದಾರೆ. ಶ್ರೀ ತಿರುವಾದಿ ವಿಜಯೀಂದ್ರಾಚಾರ್ಯ, ಶ್ರೀ ವರಖೇಡಿ ನರಸಿಂಹಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿದರು.

ಇವರು ಈಗ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತ ವ್ಯಾಸಂಗ ಮಾಡುತ್ತಲಿದ್ದಾರೆ ಪ್ರತಿ ನಿತ್ಯವೂ ಶ್ರೀಗಳವರಲ್ಲಿ ಶ್ರೀಮನ್ನ್ಯಾಯಸುಧಾ ಗ್ರಂಥವನ್ನು ಟೀಕೆ ಟಿಪ್ಪಣಿಗಳೊಂದಿಗೆ ಅಧ್ಯಯನ ಮಾಡುತ್ತಲಿದ್ದು, ಕಠಿಣವಾದ ಶಾಸ್ತ್ರೀಯ ವಿಷಯಗಳನ್ನು ಅಸ್ಖಲಿತವಾಗಿ ಅನುವಾದ ಮಾಡುತ್ತಲಿದ್ದಾರೆ.

ಶ್ರೀಪಾದಪುತ್ರರಿಗೆ ಪಾಠಪ್ರವಚನದಲ್ಲಿಯೂ ಮಧ್ವಸಿದ್ಧಾಂತ ಪ್ರಸಾರದಲ್ಲಿಯೂ ಒಳ್ಳೆ ದೀಕ್ಷಾದಾಕ್ಷ್ಯಗಳು ಇರುವದರಿಂದ ಅವರಿಂದ ಮುಂದೆ ವಿಶೇಷವಾಗಿ ಸಿದ್ಧಾಂತ ಪ್ರಸಾರ, ಮಧ್ವಮತ ಪ್ರಚಾರವು ಆಗುವದೆಂದು ಸಮಾಜವು ನಿರೀಕ್ಷಿಸುತ್ತಲಿದೆ.

### ೨೩ ಕೊರ್ಲಹಳ್ಳಿ ರಂಗಾಚಾರ್ಯ, ಶೀರನಹಳ್ಳಿ



ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸಂಪೂರ್ಣ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಓದಿ ಮಹಾಪಂಡಿತರಾಗಿದ್ದಾರೆ.

ಇವರು ಧಾರವಾಡದ ದ್ವೈತವೇದಾಂತ ಪಾಠಶಾಲೆಯಲ್ಲಿಯೂ, ಕಂಪ್ಲಿ, ಗಂಗಾವತಿ, ಕೊರ್ಲಹಳ್ಳಿ ಮುಂತಾದ ಕಡೆಗಳಲ್ಲಿ ಇದ್ದು ಅನೇಕ ಜನರಿಗೆ ನ್ಯಾಯ, ವೇದಾಂತಾದಿ ಗ್ರಂಥ ಪಾಠಗಳನ್ನು ಹೇಳಿದ್ದಾರೆ. ತೆರಗುಂಡಿ ಗೋಪಾಲಕೃಷ್ಣಾಚಾರ್ಯ ಮುಂತಾದವರು ಇವರಲ್ಲಿ ಅಧ್ಯಯನ ಮಾಡಿದ್ದಾರೆ.

ಪರಮ ಸಾತ್ವಿಕರೂ, ಸದಾಚಾರ ಸಂಪನ್ನರೂ ಆದ ರಂಗಾಚಾರ್ಯರು ಶ್ರೀ ಸತ್ಯಧ್ಯಾನತೀರ್ಥರಿಗೆ ಅತ್ಯಂತ ಪ್ರೀತ್ಯಾಸ್ಪದರಾದ ಶಿಷ್ಯರಾಗಿದ್ದರು.

ಇವರು ಈಗ ಕೊರ್ಲಹಳ್ಳಿಯಲ್ಲಿ ವಾಸವಾಗಿದ್ದಾರೆ.

### ೨೪ ಲಕ್ಷ್ಮಣಾಚಾರ್ಯ ಮುಂಜಿ, ಕರ್ನೂಲ

ಶ್ರೀ ಸತ್ಯಧ್ಯಾನತೀರ್ಥರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಸಂಪೂರ್ಣ ಅಧ್ಯಯನ ಮಾಡಿದ್ದಾರೆ. ಈಗ ಕರ್ನೂಲಲ್ಲಿ ಪಾಠ-ಪ್ರವಚನ ಮಾಡಿಕೊಂಡು ಜನಪ್ರಿಯರಾಗಿ ಇರುತ್ತಾರೆ.

### ೨೫ ಹುಚ್ಚಾಚಾರ್ಯ ಹುಲಗಿ, ಕೊಪ್ಪಳ

ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ಕೊಪ್ಪಳದಲ್ಲಿ ಸಂಸ್ಕೃತ ಪಾಠ ಶಾಲೆ ಇಟ್ಟು ಅನ್ನ, ವಸ್ತ್ರಗಳನ್ನು ಕೊಟ್ಟು ಅನೇಕ ಜನ ವಿದ್ಯಾರ್ಥಿಗಳಿಗೆ ಪಾಠ ಹೇಳಿದ್ದಾರೆ. ತಮ್ಮ ನಿರಂತರ ಪಾಠ ಪ್ರವಚನದಿಂದ ಆಚಾರ್ಯರು ತಮ್ಮ ಹುಲಗಿ ಮನೆತನದ ಪರಂಪರಾ ಪ್ರಾಪ್ತವಾದ ಪಾಂಡಿತ್ಯದ ಪತಾಕೆಯನ್ನು ಎತ್ತಿ ಹಿಡಿದಿದ್ದಾರೆ.



ಶ್ರೀ ಸತ್ಯಧ್ಯಾನತೀರ್ಥರಿಗೆ ಅತ್ಯಂತ ಪ್ರೀತ್ಯಾಸ್ಪದರಾದ ಇವರು ಕೆಲವು ದಿನ ಬಳ್ಳಾರಿಯಲ್ಲಿದ್ದು ಅಲ್ಲಿಯ ಅನೇಕ ಜನ ವೈದಿಕರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳಿ ಶ್ರೀ ಚಂದ್ರಿಕಾಚಾರ್ಯರ ಸನ್ನಿಧಾನದಲ್ಲಿ ಮಂಗಳ ಮಾಡಿದರು. ಅವರ ಶಿಷ್ಯರಲ್ಲಿ ಭೀಮಸೇನಾಚಾರ್ಯ ಕೊರ್ಲಹಳ್ಳಿ, ಕೃಷ್ಣಮೂರ್ತಿ ಆಚಾರ್ಯ ಘೂಳಿ, ಭೀಮ ಸೇನಾಚಾರ್ಯ ಸಂತೆಬೆನ್ನೂರ, ಜಯತೀರ್ಥ ರಾಜಪುರೋಹಿತ, ಶಿರಹಟ್ಟಿ ವಾದಿರಾಜಾ ಚಾರ್ಯ ಮೊದಲಾದವರು ಗಣ್ಯರಾಗಿದ್ದಾರೆ.

## ೨೬ ಗಲಗಲಿ ನಾರಾಯಣಾಚಾರ್ಯ ಗುಲಬುರ್ಗಾ



ಧಾರವಾಡದ ಗಲಗಲಿ ಮಧ್ವಾಚಾರ್ಯರ ಮಕ್ಕಳಾದ ನಾರಾಯಣಾಚಾರ್ಯರು ತಮ್ಮ ತಂದೆಯವರಲ್ಲಿ ಸುಧಾ, ತತ್ವಪ್ರಕಾಶಿ ಕಾದಿ ಗ್ರಂಥಗಳನ್ನು ಅಧ್ಯಯನಮಾಡಿದ ಇವರು ಸರಕಾರಿ ಉದ್ಯೋಗದಲ್ಲಿದ್ದರೂ ಹೋದ ಕ್ಷೆಲ್ಲ ಭಾಷ್ಯ, ತತ್ವಪ್ರಕಾಶಿಕಾ, ಸುಧಾದಿಗ್ರಂಥ ಗಳನ್ನು ನಿರರ್ಗಳವಾಗಿ ಪಾಠ ಹೇಳುತ್ತಿದ್ದಾರೆ.



## ೨೭ ಶಾಮಣ್ಣದಾಸ ಬಳ್ಳಾರಿ

ಸರಸ-ಸುಂದರವಾಗಿ ಭಾಗವತ ಪುರಾಣ ಗಳನ್ನು ಹೇಳುವ ಶಾಮಣ್ಣದಾಸರು ವೇದಾಂತ ದಲ್ಲಿಯೂ ಚನ್ನಾಗಿ ಪರಿಶ್ರಮ ಪಟ್ಟಿದ್ದಾರೆ. ಲೌಕಿಕ ಉದ್ಯೋಗದಲ್ಲಿದ್ದರೂ ಸತತವೂ ಶಾಸ್ತ್ರ ಪುರಾಣ ಪ್ರವಚನವನ್ನು ಮಾಡುತ್ತಬಂದ್ದಾರೆ.

## ೨೮ ಪ್ರೊಫೆಸರ ಎಸ್. ಜಿ. ಮುದಗಲ್ಲ, M. A.

ಮುಂಬೈಯಲ್ಲಿ ತತ್ವಜ್ಞಾನ ಪ್ರೊಫೆಸರರಾಗಿ ಕೆಲಸ ಮಾಡುತ್ತಿರುವ ಬಾಗಲ ಕೋಟೆಯ ಶ್ರೀ ಮುದಗಲ್‌ರವರು ದ್ವೈತ ತತ್ವಜ್ಞಾನದ ಪ್ರದ್ಧಾಳು ಅಭ್ಯಾಸಿಗ ರಾಗಿದ್ದಾರೆ. ಇವರು ದ್ವೈತ ವೇದಾಂತದ ಮೇಲೆ ಸಂಶೋಧನೆಯನ್ನು ಮಾಡಿ P. H. D. ಗೆ ಪ್ರಬಂಧವನ್ನು ಇಂಗ್ಲೀಷಿನಲ್ಲಿ ಬರೆಯುತ್ತಲಿರುವರು.

## ೨೯ ಎನ್. ವ್ಹಿ. ಪದ್ಮನಾಭಾಚಾರ್ಯ, ಮೈಸೂರು



ಇವರು ಮೈಸೂರಿನ ಮಹಾರಾಜಾ ಸಂಸ್ಕೃತ ಪಾಠ ಶಾಲೆಯಲ್ಲಿ ಹೊಳವನಹಳ್ಳಿ ಶೇಷಾಚಾರ್ಯ, ಮಾಗಡಿ ರಂಗನಾಥಾಚಾರ್ಯ ಮುಂತಾದವರಲ್ಲಿ ಅಧ್ಯಯನಮಾಡಿ ವೇದಾಂತ ಅಲಂಕಾರಶಾಸ್ತ್ರ, ವಿದ್ವತ್ ಪರೀಕ್ಷೆಗಳಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದಾರೆ. ಕನ್ನಡ ಪಂಡಿತ ಪರೀಕ್ಷಾ, ಇಂಗ್ಲೀಷ S. S. L. C ಪರೀಕ್ಷಗಳಲ್ಲಿಯೂ ಉತ್ತೀರ್ಣರಾದರು.

ಮೈಸೂರಿನ ವಿದ್ಯಾಭ್ಯಾಸದ ಇಲಾಖೆಯಲ್ಲಿ ಸಿನೀಯರ ಪಂಡಿತರಾಗಿ ಈಗ ನಿವೃತ್ತರಾಗಿದ್ದಾರೆ.

ಶ್ರೀ ವಿಷ್ಣು ಮಹಾಪುರಾಣವನ್ನು ಬರೆದಿಟ್ಟಿದ್ದಾರೆ. ಮೈಸೂರ ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿದ್ದ ಪದ್ಮನಾಭಾಚಾರ್ಯರಿಗೆ ದ್ವಾರಕಾ ಪೀಠದ ಶಂಕರಾಚಾರ್ಯರು, ಶ್ರೀ ರಾಘವೇಂದ್ರಮಠದ ಸುಜಯೀಂದ್ರತೀರ್ಥರು, ವ್ಯಾಸರಾಜ ಮಠದ ವಿದ್ಯಾಪ್ರಸನ್ನತೀರ್ಥ ಸ್ವಾಮಿಗಳವರೂ— ಪಂಡಿತ ಭಾಸ್ಕರ, ವೇದಾಂತ ರತ್ನ, ಪಂಡಿತ ಭೂಷಣ ಮುಂತಾದ ಪದವಿಗಳನ್ನು ಕೊಟ್ಟು ಗೌರವಿಸಿದ್ದಾರೆ.

## ೩೦ ಎಳಮೇಲಿ ವಾಸುದೇವಾಚಾರ್ಯ, ಬೆಂಗಳೂರ



ಶ್ರೀ ಸತ್ಯಧ್ಯಾನರ ಪ್ರಸಿದ್ಧ ಶಿಷ್ಯರಾದ ಶ್ರೀ ಯಜ್ಞ ವಿಠಲಾಚಾರ್ಯರಲ್ಲಿ, ಜಂಜೋಳಿ ವೆಂಕಣ್ಣಾಚಾರ್ಯರಲ್ಲಿಯೂ ಹಾಗೂ ಕೆಲದಿನ ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ ನ್ಯಾಯ, ವೇದಾಂತ ಓದಿದ ಎಳಮೇಲಿ ಆಚಾರ್ಯರು ಈಗ ಬೆಂಗಳೂರಲ್ಲಿ ವಾಸವಾಗಿದ್ದಾರೆ.

ಅನೇಕ ಜನ ಶಿಷ್ಯರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳುತ್ತಿದ್ದಾರೆ. ಅವರ ಶಿಷ್ಯರು ಜಿಜ್ಞಾಸಾಧಿಕರಣವನ್ನು ಚನ್ನಾಗಿ ಅನುವಾದ ಮಾಡುತ್ತಲಿರುವದು ಹೆಮ್ಮೆಯ ವಿಷಯ.

## ೩೧ ಡಾ|| ಬಿ. ಎನ್. ಕೆ. ಶರ್ಮಾ



ತಮ್ಮ ತಂದೆಯವರಾದ ಕೊಚ್ಚಿ ಮಾಘವಾಚಾರ್ಯರಲ್ಲಿಯೂ, ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥರಲ್ಲಿಯೂ ಅಧ್ಯಯನ ಮಾಡಿ ದ್ವೈತ ವೇದಾಂತದ ತಿರುಳು ಹುರುಗಳನ್ನೆಲ್ಲ ಅರಿತು, ನುರಿತು ಮಹಾ ಪಂಡಿತರಾದ ಶ್ರೀ ಬಿ. ಎನ್. ಕೆ. ಶರ್ಮಾರವರು ವೈಷ್ಣವ ಸಿದ್ಧಾಂತವನ್ನು ಪ್ರಪಂಚಕ್ಕೆ ಪರಿಚಯ ಮಾಡಿಕೊಟ್ಟ ಪುಣ್ಯಾತ್ಮರಾಗಿದ್ದಾರೆ.

ದ್ವೈತ ವೇದಾಂತದ ಮೇಲೆ ಇಂಗ್ಲೀಷಿನಲ್ಲಿ ಅವರು ಬರದ ಅಭ್ಯಾಸ ಪೂರ್ಣವಾದ ಸಂಶೋಧನಾತ್ಮಕ ತೌಲನಿಕ ಮಹಾ ಪ್ರಬಂಧಕ್ಕೆ ರಾಷ್ಟ್ರ ಪ್ರಶಸ್ತಿ ದೊರೆತದ್ದು ವೈಷ್ಣವರಿಗೆಲ್ಲ ಹೆಮ್ಮೆಯ ಮಾತಾಗಿದೆ.

ಅಣ್ಣಾಮಲೈ ಯುನಿವರ್ಸಿಟಿಯಲ್ಲಿ ಅಧ್ಯಾಪಕರೂ ಸಂಶೋಧಕರೂ ಆಗಿ ಕೆಲಸ ಮಾಡಿದ ಡಾ. ಶರ್ಮಾರವರು ಮದ್ರಾಸಿನ ಕುಪ್ಪುಸ್ವಾಮಿ ಶಾಸ್ತ್ರಿಯವರಿಂದ ಪ್ರಭಾವಿತರಾಗಿ ಸಂಶೋಧನ ಕಾರ್ಯದಲ್ಲಿ ತಮ್ಮ ಕರ್ತವ್ಯದ ಹೊಸ ಕ್ಷಿತಿಜವನ್ನು ಕಂಡುಕೊಂಡರು.

ಇವರು ತ್ರಿವಿಕ್ರಮ ಪಂಡಿತಾಚಾರ್ಯರ ತತ್ತ್ವಪ್ರದೀಪದ ಪಂಚಾಧಿಕರಣ ಮೊಟ್ಟಮೊದಲು ಪ್ರಕಟಿಸಿದರು. ಶ್ರೀ ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವನ್ನು ಎರಡು ಅಪೂರ್ವ ಟಿಪ್ಪಣಿಗಳೊಂದಿಗೆ ಪ್ರಕಟಿಸಿದರು.

೧೯೪೩ ರಲ್ಲಿ ತಿರುವಾಡಿ ಊರಿನ ಸರಪ್ರೋಜಿ ಮಹಾರಾಜರ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ನಿವೃತ್ತರಾದರು. ಅನಂತರ ಪಂಜಾಬ ಯುನಿವರ್ಸಿಟಿಯ ವೇದ ಸಂಶೋಧನ ವಿಭಾಗದ ಕಾರ್ಯ ಮಾಡಿದರು. ನಂತರ ಅದಮಾರು ಮಠದ ಸ್ವಾಮಿಗಳವರ ಆದೇಶದಂತೆ ಉಡುಪಿಯ ಮಧ್ವ ಸಿದ್ಧಾಂತ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಕುಮಟಾ, ಧಾರವಾಡ ಮುಂತಾದ ಕಡೆಗಳಲ್ಲಿ ತತ್ವಜ್ಞಾನ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಈಗ ಮುಂಬೈ ರೂಪರೇಲಾ ಕಾಲೇಜದಲ್ಲ ಸಂಸ್ಕೃತ ವಿಭಾಗದ ಮುಖ್ಯಸ್ಥರಾಗಿ ಕೆಲಸಮಾಡುತ್ತಿದ್ದಾರೆ.

ಮುಂಬೈಗೆ ಬಂದ ಬಳಿಕ ಡಾ. ಶರ್ಮಾರವರು ಪದವ್ಯುತ್ತರ ಪರೀಕ್ಷೆಗಳಿಗಾಗಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಮಧ್ವಭಾಷ್ಯ ಹಾಗೂ ಜಯತೀರ್ಥರ ಟೀಕೆಗಳನ್ನು ಹೃದಯಂಗಮವಾಗಿ ಅದರ ಘನತೆ ಗಾಂಭೀರ್ಯಕ್ಕೆ ಒಪ್ಪುವಂತೆ ಪ್ರೌಢ, ಪರಿಷ್ಕೃತವಾದ ಪದ್ಧತಿಯಲ್ಲಿ ಪಾಠಹೇಳುತ್ತಿದ್ದಾರೆ.

ಮುಂಬೈಗೆ ಬಂದಬಳಿಕ— "ದ್ವೈತ ವೇದಾಂತದ ಇತಿಹಾಸ ಮತ್ತು ಸಾಹಿತ್ಯ ಭಾಗ-೨" "ಮಧ್ವಾಚಾರ್ಯರ ತತ್ವಜ್ಞಾನ" "ಮಧ್ವಾಚಾರ್ಯರ ಶಬ್ದಗಳಲ್ಲಿಯೇ ಉಪದೇಶ" ಹೀಗೆ ೪ ಪುಸ್ತಕಗಳನ್ನು ಪ್ರೌಢ ಮನೋಹರವಾದ ಇಂಗ್ಲೀಷ ಭಾಷೆಯಲ್ಲಿ ಬರೆದು ಪ್ರಪಂಚದ ಮಹಾ-ಮಹಾ ಮೇಧಾವಿಗಳ ಲಕ್ಷ್ಯವೆಲ್ಲವೂ ಮಧ್ವಸಿದ್ಧಾಂತದತ್ತ ವೇಧಿಸುವಂತೆ ಮಾಡಿದ್ದಾರೆ ಡಾ. ಶರ್ಮಾರವರು.

ಇವರ ಈ ಬೃಹದ್ ಗ್ರಂಥಗಳ ಮಹದ್ ಯೋಗ್ಯತೆಯನ್ನು ಗುರುತಿಸಿದ ಕೇಂದ್ರ ಸರಕಾರದ ಸಾಹಿತ್ಯ ಅಕೇಡೆಮಿಯವರು ಇವರಿಗೆ ೫,೦೦೦ ರೂಪಾಯಿಯ ರಾಷ್ಟ್ರೀಯ ಬಹುಮಾನವಿತ್ತು ಗೌರವಿಸಿದರು.

ಡಾ. ಶರ್ಮಾರವರ ವೇದಾಂತ ವೈದುಷ್ಯದ ಈ ಗೆಲುವಿನ ಗೌರವವನ್ನು ಗುರುತಿಸಿ— "ಅಮೇರಿಕನ್ ಇನಸ್ಟಿಟ್ಯೂಟ ಆಫ್ ಇಂಡಿಯನ್ ಸ್ಟಡೀಸ್" ಎಂಬ ಸಂಸ್ಥೆಯವರು ಭಾರತೀಯ ತತ್ವಜ್ಞಾನಗಳ ವಿಶ್ವಕೋಶದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸಲು ಅನುವು ಮಾಡಿಕೊಡಬೇಕೆಂದು ಇವರಿಗೆ ಆಮಂತ್ರಣವಿತ್ತಿದ್ದಾರೆ.

ಮುಂಬೈ ಯುನಿವರ್ಸಿಟಿಯಲ್ಲಿ P. H. D. ಪದವಿಗೆ ಮಾರ್ಗದರ್ಶಕರಾದ ಡಾ. ಶರ್ಮಾರವರ ನೇತೃತ್ವದಲ್ಲಿ ಇಬ್ಬರು M. A. ವಿದ್ಯಾರ್ಥಿಗಳು ನ್ಯಾಯಾಮೃತ ಮತ್ತು ಗೀತಾಭಾಷ್ಯ ಗ್ರಂಥಗಳ ಮೇಲೆ ಇಂಗ್ಲೀಷಿನಲ್ಲಿ P. H. D. ಪ್ರಬಂಧವನ್ನು ಬರೆದಿದ್ದಾರೆ.

ಡಾ. ಶರ್ಮಾರವರು ನೂರಾರು ಸಂಶೋಧನಾತ್ಮಕ ಲೇಖಗಳನ್ನು ಬರೆದು ಪ್ರಾಚ್ಯ ವಿದ್ಯಾ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾ ಪೀಠದವರು ಹಾಗೂ ವ್ಯಾಸರಾಜ ಮಠದ ಶ್ರೀ ವಿದ್ಯಾಪ್ರಸನ್ನತೀರ್ಥರೂ ಡಾ. ಶರ್ಮಾ ಇವರಿಗೆ "ಶಾಸ್ತ್ರನಿಧಿ" ದ್ವೈತ ವೇದಾಂತ ರಸಜ್ಞ" ಎಂಬ ಪದವಿಗಳನ್ನು ಕೊಟ್ಟಿದ್ದಾರೆ.

ಇದೇ ೧೯೬೮ ನೇ ಡಿಶೆಂಬರ ತಿಂಗಳಲ್ಲಿ ಮುಂಬೈ ಯುನಿವ್ಹರ್ಸಿಟಿಯವರು— "ಫಿಲೋಸೋಫಿ ಆಫ್ ಶ್ರೀ ಮಧ್ವಾಚಾರ್ಯ" ಶ್ರೀ ಮಧ್ವಾಚಾರ್ಯರ ತತ್ವಜ್ಞಾನ ಎಂಬ ಇಂಗ್ಲೀಷ ಪ್ರಬಂಧವನ್ನು ಮೆಚ್ಚಿ ಡಿ. ಲೀಟ್ ಪದವಿಯನ್ನು ಕೊಟ್ಟಿದ್ದಾರೆ. ಡಾ. ಶರ್ಮಾರವರ ಈ ಎಲ್ಲ ಪ್ರಬಂಧಗಳು ಮುಂಬೈ ಯುನಿವ್ಹರ್ಸಿಟಿಯ ಪಠ್ಯ ಪುಸ್ತಕಗಳು ಆಗಿರುತ್ತವೆ.

ಡಾ. ಶರ್ಮಾರವರು— ಮಧ್ವಮುನಿ ಸೇವಾ ಸಂಘ, ಪೂರ್ಣಪ್ರಜ್ಞ ವಿದ್ಯಾ ಪೀಠ, ಪರಿಮಳ ಪ್ರಕಾಶನ ಮಂದಿರ ಮುಂತಾದ ಅನೇಕ ಸಂಘ–ಸಂಸ್ಥೆಗಳು ಪ್ರಕಟಿಸಿದ ವೇದಾಂತ ಗ್ರಂಥಗಳಿಗೆ ವಿದ್ವತ್ಪೂರ್ಣವಾದ ಮುನ್ನುಡಿ, ವಿಮರ್ಶೆಗಳನ್ನು ಬರೆದಿದ್ದಾರೆ.

ಇದೇ ವರ್ಷ ತಮ್ಮ ೬೦ ನೇ ವಯಸ್ಸಿನಲ್ಲಿ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾಗಲಿರುವ ಇವರಿಂದ ಹೆಚ್ಚಿನ ಸೇವೆಯನ್ನು ಮಾಧ್ವ ಸಮಾಜವು ನಿರೀಕ್ಷಿಸುತ್ತದೆ.

ಡಾ. ಶರ್ಮಾರವರು ಎಲ್ಲ ಮಾಧ್ವ ಪೀಠಾಧೀಶರ, ಪಂಡಿತರ, ಶ್ರೀಸಾಮಾನ್ಯರ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ. ಇವರು ಇಂಗ್ಲೀಷಿನಂತೆ—ಕನ್ನಡದಲ್ಲಿಯೂ, ಕನ್ನಡದಂತೆ—ಸಂಸ್ಕೃತದಲ್ಲಿಯೂ, ಸಂಸ್ಕೃತದಂತೆ—ತಮಿಳಿನಲ್ಲಿಯೂ ಲೀಲಾಜಾಲವಾಗಿ ವೈದುಷ್ಯಪೂರ್ಣವಾಗಿ ವಿಷಯ ಗಾಂಭೀರ್ಯದಿಂದ ಒಡಗೂಡಿ ಭಾಷಣವನ್ನು ಮಾಡಬಲ್ಲರು. ಭಾಷಣಕ್ಕಿಂತ ಹೆಚ್ಚು ಗಾಂಭೀರ್ಯ, ಚಾತುರ್ಯ, ಮಾಧುರ್ಯ, ಪ್ರಾಚುರ್ಯವುಳ್ಳ ಗ್ರಂಥಗಳನ್ನು ಬರೆಯಬಲ್ಲರು. ಅದಕ್ಕಿಂತ ಹೆಚ್ಚು ಸಮರ್ಥರೀತಿಯಿಂದ ವಿವಿಧ ಗ್ರಂಥ ಟೀಕಾ ಟಿಪ್ಪಣಿ ವಿಷಯಾಪ್ಪಷ್ಟಂಭನ ಪೂರ್ವಕವಾಗಿ ಮಧ್ವ ಶಾಸ್ತ್ರವನ್ನು ವಿದ್ಯಾರ್ಥಿಗಳಿಗೆ ಅವುಗಳ ಮರ್ಮಸ್ಥಳ, ರಹಸ್ಯಾರ್ಥಗಳನ್ನು ಬೋಧಿಸುತ್ತ ಪ್ರವಚನ ಮಾಡಬಲ್ಲರು.

### ೩೨ ಎಂ. ರಾಮರಾವ್, ಕುಂಭಕೋಣಂ

ಇವರು ನದೀ ತೀರ ಶ್ಯಾಮಾಚಾರ್ಯರಲ್ಲಿಯೂ, ವಟ್ಟಂಗಾಡ ಗೋಪಾಲಾಚಾರ್ಯರಲ್ಲಿಯೂ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಪರಿಚಯಮಾಡಿಕೊಂಡಿದ್ದಾರೆ. B. A. L. T. ಪದವೀಧರರಾದ ಇವರು ಕುಂಭಕೋಣದ ಟೌನ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು ನಿವೃತ್ತರಾದ ಬಳಿಕ ಭಾಗವತ, ಭಾರತಾದಿ ಗ್ರಂಥಗಳ ಮೇಲೆ ಉಪನ್ಯಾಸಗಳನ್ನು ಕೊಡುತ್ತಾರೆ.

## ೩೩ ಪ್ರೊಫೆಸರ ಕೆ. ಟಿ. ಪಾಂಡುರಂಗಿ



ಸಾಂಪ್ರದಾಯಿಕವಾದ ಸಂಸ್ಕೃತ ಶಾಸ್ತ್ರ ಪಾಂಡಿತ್ಯದೊಂದಿಗೆ ಆಂಗ್ಲ ಭಾಷೆಯ ಮೇಲೆಯೂ ಅಷ್ಟೇ ಪಾಂಡಿತ್ಯ ಪ್ರಭುತ್ವಗಳನ್ನು ಸಂಪಾದಿಸಿದ ಶ್ರೀ ಕೃಷ್ಣಾಚಾರ್ಯ ಪಾಂಡುರಂಗಿಯವರು ಮಾಧ್ವ ಸಮಾಜದ ಅಧ್ವರ್ಯುಗಳಾಗಿದ್ದಾರೆ.

ಬಾಲ್ಯದಲ್ಲಿಯೇ ಸಂಸ್ಕೃತ ಗದ್ಯ-ಪದ್ಯ ನಿರ್ಮಾಣ ಕಲೆಯಲ್ಲಿ ಕೋವಿದರಾದ ಪಾಂಡುರಂಗಿಯವರು ಮಧುರವಾಣಿ, ಉದ್ಯಾನ ಪತ್ರಿಕಾ, ಸಂಸ್ಕೃತಂ, ಮುಂತಾದ ಪತ್ರಿಕೆಗಳಿಗೆ ಲೇಖನ ಬರೆಯುತ್ತಿದ್ದರು.

ಇವರು ಧಾರವಾಡದಲ್ಲಿ ಪ್ರಾಥಮಿಕ ವಿದ್ಯಾಧ್ಯಯನ ಮಾಡಿ ಮುಂದೆ ಸಾಂಗಲಿ, ಮೈಸೂರ, ಅನ್ನಾಮಲೆ ಮುಂತಾದ ಕಡೆಗಳಲ್ಲಿ ಎಣ್ಣೆ ಬುದ್ಧಿಯ ಕೃಷ್ಣಾಚಾರ್ಯರು ನ್ಯಾಯ, ವೇದಾಂತ, ಮೀಮಾಂಸಾದಿ ಶಾಸ್ತ್ರಗಳನ್ನು ಕ್ರಮಪ್ರಕಾರ ಅಧ್ಯಯನ ಮಾಡಿ ಎಲ್ಲ ಶಾಸ್ತ್ರಗಳಲ್ಲಿಯೂ ಪ್ರವಚನ ಪಟುತೆಯನ್ನು ಹೊಂದಿದರು. ಶಿರೋಮಣಿ, ವಿದ್ವಾನ್, ಬಿ. ಓ. ಎಲ್., ಎಮ್. ಎ. ಮುಂತಾದ ಅನೇಕ ಸಂಸ್ಕೃತ ಇಂಗ್ಲೀಷ ಪರೀಕ್ಷೆಗಳನ್ನೆಲ್ಲ ಆಡಾಡುತ್ತ ಮಾಡಿ ಮುಗಿಸಿದರು.

"ನಕಶ್ಚಿತ್ ಧೀಮತಾಂ ಅವಿಷಯೋನಾಮ" ಎಂಬ ಕಾಲಿದಾಸನ ವಚನಕ್ಕೆ ಈ ಪಾಂಡುರಂಗಿ ಆಚಾರ್ಯರು ತರುಣ ನಿದರ್ಶನರಾಗಿದ್ದಾರೆ.

"ಸಂಕ್ರಾಂತಿರನ್ಯಸ್ಯ ವಿಶೇಷ ಯುಕ್ತಾ" ಎಂಬಂತೆ ಕಠಿಣವಾದ ಶಾಸ್ತ್ರೀಯ ವಿಷಯಗಳನ್ನು ಸಂಸ್ಕೃತ, ಕನ್ನಡ, ಇಂಗ್ಲೀಷ ಈ ಮೂರೂ ಭಾಷೆಗಳಲ್ಲಿ ಸುಲಭವಾಗಿ ತಿಳಿಸಿಕೊಡುವ ಜಾಣ್ಮೆ ನಿಪುಣಿಮೆಗಳು ಶ್ರೀ ಪಾಂಡುರಂಗಿಯವರ ಸೊತ್ತಾಗಿವೆ.

ಧಾರವಾಡದ ಕೆ. ಈ. ಬೋರ್ಡ ಕಾಲೇಜ, ಕರ್ನಾಟಕ ಕಾಲೇಜ, ಕರ್ನಾಟಕ ಯುನಿವ್ಹರ್ಸಿಟಿ, ಬೆಂಗಳೂರ ಯುನಿವ್ಹರ್ಸಿಟಿ, ಮುಂತಾದ ಅನೇಕ ವಿದ್ಯಾ

ಕೇಂದ್ರಗಳಲ್ಲಿ ಅಧ್ಯಾಪನ ಕಾರ್ಯ ಮಾಡಿ ನೂರಾರು ಸಂಸ್ಕೃತ ಪಂಡಿತ ಶಿಷ್ಯರನ್ನು ತಯಾರು ಮಾಡಿದ ಶ್ರೀ ಪಾಂಡುರಂಗಿಯವರು ಅನೇಕ ಗ್ರಂಥಗಳನ್ನೂ ಕನ್ನಡ, ಇಂಗ್ಲೀಷ, ಸಂಸ್ಕೃತ ಭಾಷೆಗಳಲ್ಲಿ ಬರೆದಿದ್ದಾರೆ. ಕಾವ್ಯ ಶಾಸ್ತ್ರ ವಿನೋದ, ಉಪ ನಿಷದ್ ದರ್ಶನ, ಸಂಸ್ಕೃತ ಕವಿಯಿತ್ರಿಯರು, ಡಿಸ್ಕ್ರಿಪ್ಟಿವ್ ಕ್ಯಾಟಲಾಗ ಆಫ್ ಸಂಸ್ಕೃತ ಮ್ಯಾನುಸ್ಕ್ರಿಪ್ಟ್ಸ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಮಾಧ್ವ ಗ್ರಂಥಗಳು ಅಲ್ಲಲ್ಲಿ ಬಿದ್ದು ಚುರಮುರಿ, ಪುಠಾಣಿ ಕಟ್ಟುವ ಕಾಗದ ಪುಡಿಕೆಗಳಾಗಿ ಹಾಳಾಗುತ್ತಿರುವದನ್ನು ಕಂಡು ಮನನೊಂದ ಅವರು ಮಾಧ್ವರ ಮನೆ ಮನೆಗೆ ಹೋಗಿ ಪ್ರಾಚೀನ ವೇದಾಂತ ಸಾಹಿತ್ಯ ಪುರಾಣ ಗ್ರಂಥಗಳನ್ನು ತಂದು ಶೇಖರಿಸಿ 'ವಿದ್ಯಾಧೀಶ ಲಾಯಬ್ರರಿ' ಎಂಬ ಗ್ರಂಥ ಭಾಂಡಾರವನ್ನು ಸ್ಥಾಪನೆಗೈದಿ ದ್ದಾರೆ. ಅತ್ಯುಪಯುಕ್ತವಾದ ಮಾಧ್ವ ಗ್ರಂಥಗಳನ್ನೆಲ್ಲ ಕೂಡಿಸಿ, ಸಂಗ್ರಹಿಸಿ ಅವುಗಳ ವಿವರಣಾತ್ಮಕವಾದ ಸೂಚೀ ಪತ್ರಿಕೆಯೊಂದನ್ನು ಸಿದ್ಧಪಡಿಸಿದ್ದಾರೆ.

ಅನುವ್ಯಾಖ್ಯಾನದ ಇಂಗ್ಲೀಷ ಅನುವಾದವನ್ನೂ, ಕೃಷ್ಣಾವಧೂತ ಪಂಡಿತರ ಬಗೆಗೆ ಸಂಶೋಧನ ಪ್ರಬಂಧವನ್ನೂ ಅವರು ಬರೆಯುತ್ತಲಿದ್ದಾರೆ. ಬೆಂಗಳೂರಲ್ಲಿ ಅವರ ಶಾಸ್ತ್ರೀಯ ಪ್ರವಚನದಿಂದ ಪ್ರಭಾವಿತರಾಗಿ ಬಹು ಜನರು ಮಾಧ್ವವಾಙ್ಮಯ ದಲ್ಲಿ ಅಭಿರುಚಿಯನ್ನು ಬೆಳೆಸಿಕೊಂಡಿದ್ದಾರೆ.

ಅವರು ಮಾಧ್ವ ಮಹಾ ಮಂಡಲದ ಸಭಾ, ಶ್ರೀ ರಾಘವೇಂದ್ರ ಮಠೀಯ ಸಮ್ಮೇಲನಗಳಲ್ಲಿ ಭಾಗವಹಿಸುವದಲ್ಲದೇ, ಮಂಡಲದ ವತಿಯಿಂದ ನಡೆಯುವ ಸಂಶೋಧನ, ಪ್ರಕಾಶನಾದಿ ಕಾರ್ಯಗಳಲ್ಲಿ ತುಂಬ ಪರಿಶ್ರಮವಹಿಸಿ ಎಲ್ಲ ಹಿನ್ನೆಲೆಯ ಕಾರ್ಯವನ್ನು ನಿರ್ವಹಿಸುತ್ತಲಿದ್ದಾರೆ.

### ೩೪ ಕಾಶೀ ಕೃಷ್ಣಮೂರ್ತಿ ಆಚಾರ್ಯ

ಕಾಶಿ ಪ್ರಾಣೇಶಾಚಾರ್ಯರ ಮಕ್ಕಳಾದ ಕೃಷ್ಣಮೂರ್ತಿ ಆಚಾರ್ಯರು ಸಾಹಿತ್ಯ ವೇದಾಂತ ಅಧ್ಯಯನ ಮಾಡಿದ್ದಾರೆ.

### ೩೫ ರಾಘವಾಚಾರ್ಯ ಜೆವಳಿಕರ (ವೊಹಾರ)

ಇವರು ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರಲ್ಲಿಯೂ ಬಾಳಾಚಾರ್ಯ ಅವಧಾನಿಯವರಲ್ಲಿಯೂ ತಡಸಳಕರ, ಶ್ರೀಧರಾಚಾರ್ಯರಲ್ಲಿಯೂ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಅನಂತರ ಬಹು ವರ್ಷ ಉತ್ತ ರಾದಿ ಮಠದಲ್ಲಿಯೇ ಇದ್ದು ಪಂಡಿತರಾಗಿ ಈ ವೊಹಾರದಲ್ಲಿಯೇ ಪಾಠ ಪ್ರವಚನ ಮಾಡುತ್ತಲಿದ್ದಾರೆ.

## ೩೬ ಶ್ರೀನಿವಾಸಾಚಾರ್ಯ ಜಾಳಗಾರು, ಶಿವಮೊಗ್ಗಾ



ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಓದಿದ ಶ್ರೀನಿವಾಸಾಚಾರ್ಯರು ಈಗ ಪಂಡಿತ ಜಾಲಿಹಾಳ ಶ್ರೀನಿವಾಸಾಚಾರ್ಯರಲ್ಲಿ ತರ್ಕ ಶಾಸ್ತ್ರದ ಉದ್ಗ್ರಂಥಗಳನ್ನು, ಶ್ರೀಮನ್ಯಾಯ ಸುಧಾದಿ ವೇದಾಂತ ಗ್ರಂಥಗಳನ್ನು ಓದುತ್ತಿದ್ದಾರೆ.

## ೩೭ ಮಹಾಮಹೋಪಾಧ್ಯಾಯ ಬಾಳಾಚಾರ್ಯ ಕುಪೇರಕರ ಕೊಲ್ಹಾಪುರ

ವ್ಯಾಕರಣ ಸಾಹಿತ್ಯ ವೇದಾಂತಗಳಲ್ಲಿ ಪಂಡಿತರಾದ ಬಾಳಾಚಾರ್ಯರು ಜ್ಞಾನವೃದ್ಧರೂ ವಯೋವೃದ್ಧರೂ ಆಗಿದ್ದಾರೆ. ಧರ್ಮಶಾಸ್ತ್ರ ವಿಷಯದಲ್ಲಿ ಇವರು ಸಂಸ್ಕೃತ ಮರಾಠಿ ಮಾಸ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಮರಾಠಿಯಲ್ಲಿ ಪೂರ್ಣಪ್ರಜ್ಞ ದರ್ಶನ ಎಂಬ ಉದ್ಗ್ರಂಥವನ್ನು ಬರೆದು ಮಹಾರಾಷ್ಟ್ರ ದೇಶದವರಿಗೆಲ್ಲ ಆಸ್ತಿಕರಿಗೆಲ್ಲ ಶ್ರೀ ಮಧ್ವಮತದ ತತ್ವ ಸತ್ವ ಮಹತ್ವಗಳನ್ನು ಸೂಕ್ಷ್ಮ ಪ್ರಮೇಯಗಳನ್ನು ವಿಶದ ವಿವರವಾಗಿ ತಿಳಿಸಿ ಮಹೋಪಕಾರಗೈದಿದ್ದಾರೆ. ವನಮಾಲಿ ಮಿಶ್ರರ ಬ್ರಹ್ಮಸೂತ್ರಸಿದ್ಧಾಂತಮುಕ್ತಾವಲಿ ಎಂಬ ಗ್ರಂಥವನ್ನು ಮೊಟ್ಟ ಮೊದಲು ಬಾಳಾಚಾರ್ಯರೆ ಸಂಪಾದಿಸಿ ಸಂಶೋಧಿಸಿ ಪ್ರಕಟಿಸಿದ್ದಾರೆ. ಈಗ ಅವರು ನ್ಯಾಯಾಮೃತ ಸೌರಭ ಗ್ರಂಥವನ್ನು ಶೋಧಿಸುತ್ತಲಿದ್ದಾರೆ. ಅವರಿಗೆ ಈಗ ೮೨ ವರ್ಷಗಳಾಗಿದ್ದರೂ ಅವರ ಶೋಧನ ಬೋಧನ ರೂಪನಾದ ವಾಙ್ಮಯ ತಪಸ್ಸಾಧನೆಯು ನಡೆಯುತ್ತಲಿದೆ.

## ೩೮ ಗುತ್ತಲ ಸ್ವಾಮಿರಾಯಾಚಾರ್ಯ



ಅಂಗ್ಲ ಪದವೀಧರರಿಗೆ ಶಿಕ್ಷಕರಾಗಿ ಕೆಲಸ ಮಾಡಿದ ಸ್ವಾಮಿರಾಯಾಚಾರ್ಯರು ಗಲಗಲಿ ಮಧ್ವಾಚಾರ್ಯರಲ್ಲಿಯೂ, ತಮ್ಮ ಅಣ್ಣ ಗುತ್ತಲ ರಂಗಾಚಾರ್ಯರಲ್ಲಿಯೂ ಅಧ್ಯಯನಮಾಡಿ ಸಾಹಿತ್ಯದಲ್ಲಿಯೂ ಅಧ್ಯಯನ ಮಾಡಿದ್ದಾರೆ.

## ೩೯ ಎಚ್. ಸುಬ್ಬರಾಯರು



ಶ್ರೀ ಸತ್ಯಧ್ಯಾನತೀರ್ಥರ ಪ್ರಿಯ ಶಿಷ್ಯರಾದ ಎಚ್. ಸುಬ್ಬರಾಯರು ಪೆರಿಕುಳಂ ರಾಮಚಂದ್ರಾಚಾರ್ಯರಲ್ಲಿಯೂ, ಶ್ರೀ ಸತ್ಯಧ್ಯಾನತೀರ್ಥರಲ್ಲಿಯೂ ವೇದಾಂತವನ್ನು ಅಧ್ಯಯನ ಮಾಡಿದರು. ಇಂಗ್ಲೀಷ ವಿಷಯ ತೆಗೆದುಕೊಂಡು ಮೈಸೂರ ವಿಶ್ವವಿದ್ಯಾಲಯಕ್ಕೆ ಪ್ರಥಮ ವರ್ಗದಲ್ಲಿ ಪ್ರಥಮ ಪ್ರಥಮರಾಗಿ ಉತ್ತೀರ್ಣರಾದರು.

ಮೊದಲು ಸ್ಮಾರ್ತರಾದ ಸುಬ್ಬರಾಯರು ಶ್ರೀ ಸಾಗರಕಟ್ಟೆ ಸ್ವಾಮಿಗಳವರ ಪ್ರಭಾವಕ್ಕೆ ಒಳಗಾಗಿ ವೈಷ್ಣವ ದೀಕ್ಷೆಯನ್ನು ಪಡೆದರು. ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತದ ಉದ್ಗ್ರಂಥಗಳನ್ನು ಅಧ್ಯಯನ ಮಾಡಿ ಅವರ ಬಲಗೈಯಂತಿದ್ದು ಅವರ ಸಭಾಸಾರ ಸಂಗ್ರಹ, ಗೀತೋಪನ್ಯಾಸಗಳು ಮುಂತಾದ ಗ್ರಂಥಗಳ ಲಿಪಿಕಾರರೂ ಆಗಿದ್ದಾರೆ.

ಮೈಸೂರಿನ ಸರಕಾರಿ ಆರ್ಟ್ಸ್ ಕಾಲೇಜದಲ್ಲಿ, ಶಾರದಾ ವಿಲಾಸ ಕಾಲೇಜಿನಲ್ಲಿಯೂ ಆಂಗ್ಲ ಭಾಷಾ ಅಧ್ಯಾಪಕರಾಗಿ ಕೆಲಸ ಮಾಡಿ ನಿವೃತ್ತರಾದ ಬಳಿಕ ತುಮಕೂರ, ಗುಲಬುರ್ಗಾ ಮುಂತಾದ ಕಡೆಗಳಲ್ಲಿ ಪಾಠಪ್ರವಚನ ಮಾಡುತ್ತಿದ್ದಾರೆ.

ಶ್ರೀ ಸತ್ಯಧ್ಯಾನತೀರ್ಥರು ಇವರ ದ್ವೈತ ದೀಕ್ಷೆ ಪ್ರಮೇಯಾಭಿಜ್ಞತೆಗಳಿಗಾಗಿ ಮೆಚ್ಚಿ ಇವರಿಗೆ ನಿತ್ಯವೂ ಪೂಜಿಸಲು ಒಂದು ಪ್ರಾಣದೇವರ ಮೂರ್ತಿಯನ್ನು ಕೊಟ್ಟಿದ್ದಾರೆ. ಇವರು ಇಂಗ್ಲೀಷ ಭಾಷೆಯಲ್ಲಿ ದ್ವೈತ ವೇದಾಂತದ ಮೇಲೆ ಅನೇಕ ಲೇಖಗಳನ್ನು, ಗ್ರಂಥಗಳನ್ನು ಬರೆದಿದ್ದಾರೆ.

## ೪೦ ಶೇಷಾಚಾರ್ಯ ಕೌಲಗಿ ಹುಬ್ಬಳ್ಳಿ



ಕೊರ್ಲಹಳ್ಳಿ ಭೀಮಸೇನಾಚಾರ್ಯರಲ್ಲಿ ಇವರು ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಈಗ ಹುಬ್ಬಳ್ಳಿಯಲ್ಲಿ ಪುರಾಣ, ಪಾಠ ಪ್ರವಚನಗಳನ್ನು ಮಾಡುತ್ತಲಿದ್ದಾರೆ. ಇವರು ಒಳ್ಳೆ ವಾಗ್ಮಿಗಳಾಗಿದ್ದು, ಹಾಸ್ಯ ರಸಭರಿತವಾಗಿ ಮಾತನಾಡುತ್ತಾರೆ.



## ೪೧ ಕೇಶವಾಚಾರ್ಯ ಕಟ್ಟಿ

ಬದಾಮಿಯ ಕಟ್ಟಿಮನೆತನದ ಕೇಶವಾಚಾರ್ಯರು ಶ್ರೀ ಮಳಿಗಿ ವೇದವ್ಯಾಸಾಚಾರ್ಯರಲ್ಲಿ ಸುಧಾಂತ ವೇದಾಂತವನ್ನು ಓದಿ ಪಂಡಿತರಾಗಿದ್ದಾರೆ. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಪ್ರಮಾಣ ಚಂದ್ರಿಕೆಯಿಂದ ತಾತ್ಪರ್ಯ ಚಂದ್ರಿಕೆಯ ವರೆಗೆ ಎಲ್ಲ ಗ್ರಂಥಗಳನ್ನು ಮುಖೋದ್ಗತವಾಗಿ ಪರೀಕ್ಷೆ ಕೊಟ್ಟು ಅವರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದರು.

ಇಂಜಿನಿಯಿರಿಂಗ B. E. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬಾಗಲಕೋಟೆಯ ಮುನಸಿಪಾಲಿಟಿಯ ಚೀಫ ಆಫೀಸರಾಗಿ ಕೆಲಸಮಾಡುತ್ತಿದ್ದಾರೆ. ಗುರುತರ ಹೊಣೆಗಾರಿಕೆಯ ಇಂಥ ಸ್ಥಾನದಲ್ಲಿ ಇದ್ದು, ಲೌಕಿಕ ಕಾರ್ಯ ಕಲಾಪಗಳಲ್ಲಿ ವ್ಯಗ್ರರಾಗಿದ್ದರೂ ಪ್ರತಿ ನಿತ್ಯವೂ ಸ್ವಾಧ್ಯಾಯ ಪಾಠ ಪ್ರವಚನ, ಪುರಾಣ, ಪೂಜಾ-ಪಾರಾಯಣಗಳಲ್ಲಿ ಅನವರತವೂ ನಿರತರಾಗಿರುತ್ತಾರೆ.

ಶ್ರೀ ಸತ್ಯಧ್ಯಾನತೀರ್ಥರ ಮೇಲೆ— ಸಂಸ್ಕೃತವಲ್ಲಿಯೂ, ಕನ್ನಡವಲ್ಲಿಯೂ ಮಧುರವಾದ ಕಾವ್ಯ ಪ್ರಬಂಧಗಳನ್ನು ನಿರ್ಮಿಸಿದ್ದಾರೆ. ಅನಂತಕೃಷ್ಣಶಾಸ್ತ್ರಿಯು ಬರೆದ ಸುಧಾ ಖಂಡನಾಭಾಸ ಗ್ರಂಥಕ್ಕೆ ಪ್ರತಿ ಖಂಡನ ಬರೆದು ತಮ್ಮ ಗುರುಗ್ರಂಥವನ್ನು ಮಂಡನ ಮಾಡಿದ್ದಾರೆ.

## ೪೨ ಗುನ್ನಾಳ ನರಸಿಂಹಾಚಾರ್ಯ ದಾವಣಗೇರಿ



ಯಜ್ಞ ವಿಠಲಾಚಾರ್ಯರಲ್ಲಿಯೂ ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನು ಓದಿದ ಇವರು ಈಗ ದಾವಣಗೇರಿ ಹೈಸ್ಕೂಲದಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೪೩ ರಾಘವಾಚಾರ್ಯ ಸಾಂಗಲಿ, ಮುಂಬಯಿ

ಇವರು ಮುಂಬೈಯಲ್ಲಿ ಶ್ರೀ ಮಾಹುಲಿ ಗೋಪಾಲಾಚಾರ್ಯರಲ್ಲಿ ಅಧ್ಯಯನ ಮಾಡಿ ಸಾಹಿತ್ಯತೀರ್ಥ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಈಗ ಮುಂಬೈಯಲ್ಲಿ ಶಿಕ್ಷಕರಾಗಿ ಕೆಲಸಮಾಡುತ್ತಲಿದ್ದಾರೆ.

### ೪೪ ರಂಗನಾಥಾಚಾರ್ಯ ಮುಂಡರಗಿ, ಶಿರಶಿ

ಉತ್ತರಾದಿ ಮಠದ ಶ್ರೀ ಸತ್ಯಪ್ರಜ್ಞತೀರ್ಥ ಶ್ರೀಪಾದಂಗಳವರಲ್ಲಿ, ವರಖೇಡಿ ನರಸಿಂಹಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನು ಚನ್ನಾಗಿ ಅಧ್ಯಯನ ಮಾಡಿ, ಪೂನಾ, ಬರೋಡಾ ಪರೀಕ್ಷೆಗಳಲ್ಲಿ ಇವರು ಉತ್ತೀರ್ಣರಾಗಿದ್ದಾರೆ. ಹಿಂದೀ ಭಾಷೆ ಯಲ್ಲಿಯೂ ಪ್ರಭುತ್ವವನ್ನು ಸಂಪಾದಿಸಿ ಈಗ ಶಿರಸಿ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದಾರೆ.



### ೪೫ ಹರ್ಶಿ ವೆಂಕೋಬಾಚಾರ್ಯ

ಕುಂದಾಪುರ ಮಠದ ದಿವಾನರಾದ ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರ. ಈಗ ಬೆಂಗಳೂರಲ್ಲಿ ವಾಸವಾಗಿದ್ದಾರೆ.

### ೪೬ ಅಕ್ಷೋಭ್ಯಾಚಾರ್ಯ

ಕುಂದಾಪುರ ಮಠದ ಎಜಂಟರಾದ ಶ್ರೀ ಅಕ್ಷೋಭ್ಯಾಚಾರ್ಯರು ಈಗಿನ ಕುಂದಾಪುರ ಮಠವ ಶ್ರೀಪಾದಂಗಳವರ ಉಪದೇಶದಿಂದ ಪ್ರಭಾವಿತರಾಗಿ ಮಧ್ವ ಮತದಲ್ಲಿ ದೀಕ್ಷೆ ತೊಟ್ಟರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸಮಗ್ರ ವೇದಾಂತವನ್ನು ಅಧ್ಯಯನ ಮಾಡಿದರು. ಈಗ ಅಪ್ಪಟ ಮಾಧ್ವರಾದ ಇವರು ಆ ಶ್ರೀಗಳವರ ಜೊತೆಗೆ ಯಾವಾಗಲೂ ಸಚ್ಛಾಸ್ತ್ರ ಪರಾಮರ್ಶವನ್ನು ಮಾಡುತ್ತಲಿದ್ದಾರೆ.

ಇವರು ಮೊದಲಿಗೆ ಶ್ರೀ ವೈಷ್ಣವರಾಗಿದ್ದು ದೇಶಿಕಾಚಾರ್ಯರೆಂದು ಪ್ರಸಿದ್ಧ ರಾಗಿದ್ದರು. ಇವರು ಎಂ. ಎ. ಪದವೀಧರರಾಗಿರುವರು.



### ೪೭ ರಾಮಾಚಾರ್ಯ ಕೂಸನೂರ

ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯ ಶಾಸ್ತ್ರದ ಪ್ರಾಥಮಿಕ ಅಧ್ಯಯನ ಮಾಡಿದ ಶ್ರೀ ರಾಮಾಚಾರ್ಯರು ಈಗಿನ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥರಲ್ಲಿ ಸುಧಾಂತ ವೇದಾಂತವನ್ನು ಓದಿದರು.

### ೪೮ ರಾಮಾಚಾರ್ಯ ಮಂಗಸೂಳಿ ಐನಾಪೂರ



ಇವರು ತಮ್ಮ ತಂದೆಯವರಾದ ವೆಂಕಟರಮಣಾಚಾರ್ಯರಲ್ಲಿ ವ್ಯಾಕರಣ ಹಾಗೂ ವೇದಾಂತಗಳನ್ನು ಅಧ್ಯಯನ ಮಾಡಿದರು. ಬಹು ವರ್ಷಗಳಿಂದ ಸಾಂಗಲಿ ಕೊಲ್ಲಾಪುರ ಸಂಸ್ಕೃತ ಪಾಠ ಶಾಲೆಗಳಲ್ಲಿ ಅಧ್ಯಾಪನ ಕಾರ್ಯ ಮಾಡಿ ಈಗ ಸ್ವಗ್ರಾಮದಲ್ಲಿ ಮಾಡಿಸುತ್ತಲಿದ್ದಾರೆ

### ೪೯ ಕೃಷ್ಣಾಚಾರ್ಯ ಗಲಗಲಿ ಶೂರಪಾಲಿ



ಇವರು ಮಂಗಸೂಳಿ ವೆಂಕಟರಮಣಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ನರಸಿಂಹ ಕ್ಷೇತ್ರವಾದ ಶೂರಪಾಲಯದಲ್ಲಿ ಪುರಾಣವನ್ನು ಹೇಳುತ್ತಲಿದ್ದಾರೆ. ಅತಿಥಿ ಸತ್ಕಾರದಲ್ಲಿ ನಿರತರಾದ ಇವರು ಒಳ್ಳೆ ವಾಗ್ಮಿಗಳೂ, ಪರೋಪಕಾರಿಗಳೂ ಆಗಿದ್ದಾರೆ.

### ೫೦ ಗೋಪಾಲಾಚಾರ್ಯ ಬೀಳೂರ ಅಥಣಿ



ಬೀಡ ರಾಮಾಚಾರ್ಯರಲ್ಲಿ ಅಧ್ಯಯನ ಮಾಡಿದ ಗೋಪಾಲಾಚಾರ್ಯರು ಸಾಹಿತ್ಯ, ವೇದಾಂತ, ಜ್ಯೋತಿಷ್ಯ ಮೂರರಲ್ಲಿಯೂ ಪಂಡಿತರಾಗಿದ್ದಾರೆ. ಅಥಣಿಯಲ್ಲಿದ್ದು ಪುರಾಣ, ಪೂರ್ವಾಪರ ಯಾಜ್ಞಿಕ ಪಾಠ–ಪ್ರವಚನ ಮುಂತಾದ ವಿವಿಧ ಧಾರ್ಮಿಕ ಕಾರ್ಯಗಳನ್ನು ಕೈಕೊಂಡಿದ್ದಾರೆ.

### ೫೧ ರಾಮಾಚಾರ್ಯ ಕುಂದರಗಿ

ಗಲಗಲಿ ಊರವರಾದ ರಾಮಾಚಾರ್ಯರು ಮುಂಬೈ ಮಾಧವ ವಿದ್ಯಾ ಪಾಠಶಾಲೆಯಲ್ಲಿ ಇದ್ದು, ಮಾತುಲಿ ಗೋಪಾಲಾಚಾರ್ಯರಲ್ಲಿ ಸಾಹಿತ್ಯ, ವೇದಾಂತ ಗ್ರಂಥಗಳ ಅಭ್ಯಾಸ ಮಾಡಿದರು. ಅನೇಕ ಹಿಂದಿ ಮತ್ತು ಸಂಸ್ಕೃತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಈಗ ಮುಂಬೈಯಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಅಧ್ಯಾಪನ ಕಾರ್ಯವನ್ನು ಮಾಡುತ್ತಲಿದ್ದಾರೆ.

## ೫೩ ಜಯಾಚಾರ್ಯರು ಅರಕೇರಿ, ಚಿತ್ರದುರ್ಗ



ಇವರು ಮುಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನಮಾಡಿದ್ದಾರೆ. ಶ್ರೀಮನ್ ಮಧ್ವಾಚಾರ್ಯರ ತಾತ್ಪರ್ಯ ನಿರ್ಣಯ ಗ್ರಂಥದ ಪ್ರವಚನದಲ್ಲಿ ಸಿದ್ಧಹಸ್ತರು. ರುಕ್ಷ ಕಿಷ್ಟವಾದ ಪೌರಾಣಿಕ ಶಾಸ್ತ್ರೀಯ ವಿಷಯಗಳನ್ನು ಪಂಡಿತ, ಪಾಮರ ರಂಜನವಾಗುವಂತೆ ರೋಮಾಂಚಕ ಶೈಲಿಯಲ್ಲಿ ವಿವರಿಸಿ ಹೇಳುವದು ಇವರ ಜಾಣ್ಮೆಯಾಗಿದೆ.

ಹಾಸ್ಯದ ಚಟಾಕಿಗಳನ್ನು ಹಾರಿಸುತ್ತ, ಆಡುಮಾತಿನಲ್ಲಿಯೇ ಮೂಲ ಟಿಪ್ಪಣಿಗಳ ಗೂಢ ಭಾವಗಳನ್ನೆಲ್ಲ ಬೈಲಿಗೆಳೆದು ಜಟಿಲ–ಕುಟಿಲವಾದ ಪ್ರಮೇಯಗಳನ್ನೆಲ್ಲ ವಿಶದೀಕರಿಸಿ, ನೀರು–ನೀರಾಗಿ, ಹಿಂಜಿ–ಬಿಡಿಸಿ ಹೇಳುವ ಹದ–ಹವಣಗಳು ಆಚಾರ್ಯರ ಕರಗತವಾಗಿವೆ.

## ೫೪ ರಾಮಾಚಾರ್ಯರು ಗಂಗೂರ, ಜಾಲೀಹಾಳ

ಶ್ರೀ ಮುಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದ ರಾಮಾಚಾರ್ಯರು ಉಭಯ ಶಾಸ್ತ್ರ ಪಾರಂಗತರಾಗಿದ್ದಾರೆ. ನ್ಯಾಯಾಮೃತಾದಿ ಗ್ರಂಥಗಳನ್ನು ಮುಖೋದ್ಗತವಾಗಿ ಪರೀಕ್ಷೆ ಕೊಟ್ಟು ಶ್ರೀ ಸತ್ಯಧ್ಯಾನತೀರ್ಥರಿಂದ ಬಂಗಾರದ ಕಡಗವನ್ನು ಪಡೆದರು.

ಜಾಲಿಹಾಳದಲ್ಲಿ ಇವರು ಸಂಸ್ಕೃತ ಪಾಠಶಾಲೆಯನ್ನು ತೆಗೆದು ಅನೇಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ ಹೇಳಿದ್ದಾರೆ. ಅತ್ಯಂತ ಕರ್ಮಠರೂ, ಸದಾಚಾರ ಸಂಪನ್ನರೂ ತಪಸ್ವಿಗಳೂ ಆದ ರಾಮಾಚಾರ್ಯರು ತಮ್ಮ ನಿಸ್ಪೃಹ ವೃತ್ತಿ, ಸದಾಚಾರ ದೀಕ್ಷೆ, ಶೀಲ ಸಚ್ಚಾರಿತ್ರ್ಯಗಳಿಂದ ಉತ್ತರ ಕರ್ನಾಟಕದಲ್ಲಿ ಪೂಜ್ಯ ಪುರುಷರು ಎನಿಸಿದ್ದಾರೆ.

## ೫೫ ರಾಘವೇಂದ್ರಾಚಾರ್ಯರು ಗಂಗೂರ ಜಾಲಿಹಾಳ



ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ವೇದಾಂತ ವ್ಯಾಸಂಗ ಮಾಡಿದ ಇವರು ಅಲ್ಲಲ್ಲಿ ಸಂಚಾರ ಮಾಡಿ ವೇದಾಂತ ಪ್ರವಚನದಿಂದ ಧರ್ಮಜಾಗೃತಿಯನ್ನು ಮಾಡುತ್ತಿದ್ದಾರೆ.

**೫೬ ವಡವೀ ಮಾಧವಾಚಾರ್ಯ ಧಾರವಾಡ**



ಮಳಗಿ ವೇದವ್ಯಾಸಾಚಾರ್ಯ, ಪಾಂಡುರಂಗಿ ಕೃಷ್ಣಾ ಚಾರ್ಯ ಹಾಗೂ ಶ್ರೀ ಸತ್ಯಪ್ರಜ್ಞ ಶ್ರೀಪಾದಂಗಳವರಲ್ಲಿ ಇವರು ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯ ಯನ ಮಾಡಿದ್ದಾರೆ.

ಮಾನಾಮಧುರೆಯಲ್ಲಿ ಕೆಲಕಾಲ ವೇದಾಂತ ಪಾಠ–ಪ್ರವಚನ ಮಾಡಿದರು.

**೫೭ ಕೃಷ್ಣಾಚಾರ್ಯ ಪಾಚ್ಛಾಪುರ**



ಇವರು ತಮ್ಮ ಮಾವಂದಿರಾದ ಮಾಹುಲಿ ಗೋಪಾಲಾಚಾರ್ಯರಲ್ಲಿ ನ್ಯಾಯವೇದಾಂ ತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ಹಿಂದಿಯ ಎಲ್ಲ ಪರೀಕ್ಷೆಗಳಲ್ಲಿಯೂ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದ ಕೃಷ್ಣಾಚಾರ್ಯರು ಹಿಂದಿಯು ಮಾತೃಭಾಷೆಯಾಗುಳ್ಳ ಜನರು ಕೂಡ ಬೆರಳು ಕಚ್ಚುವಂತೆ ಹಿಂದೀ ಭಾಷೆಯಲ್ಲಿ ಭಾಷಣ ಮಾಡುತ್ತಾರೆ. ಲೇಖನಗಳನ್ನು ಬರೆ ಯುತ್ತಾರೆ. ಸಂಸ್ಕೃತ ಹಿಂದೀ ಭಾಷೆಯ ಪರೀಕ್ಷಾ ಪಾರಿತೋಷಿಕಗಳೂ, ಅನೇಕ ಪದವಿ ಪ್ರಶಸ್ತಿಗಳೂ ಅವರ ಪದರಿನಲ್ಲಿ ಬಿದ್ದಿರುತ್ತವೆ. ಇವರು ಒಳ್ಳೆಯ ಪ್ರವಚನಪಟು ಗಳಾಗಿದ್ದಾರೆ.

**೫೮ ಡಿ. ಪ್ರಲ್ಹಾದಾಚಾರ್ಯ**



ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾ ಪೀಠದಲ್ಲಿ ೧೨ ವರ್ಷ ಶಾಸ್ತ್ರಾಧ್ಯಯನ ಮಾಡಿ ತರ್ಕ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ.ಪ್ರಕೃತ ಚಾಮರಾಜ ಸಂಸ್ಕೃತ ಕಾಲೇಜದಲ್ಲಿ ತರ್ಕಾಧ್ಯಾಪಕ ರಾಗಿದ್ದಾರೆ.

## ೫೯ ಉಮರ್ಜಿ ನರಸಿಂಹಾಚಾರ್ಯರು



ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯಶಾಸ್ತ್ರದ ಪ್ರಕರಣ ಹಾಗೂ ಖಂಡವಾದ ಗಳನ್ನು ಓದಿದ ಶ್ರೀ ನರಸಿಂಹಾಚಾರ್ಯರು ಮುಂದೆ ಕಾಶಿಗೆ ಹೋಗಿ ತಮ್ಮ ಮಾವಂದಿರಾದ ವರಖೇಡಿ ನರಸಿಂಹಾಚಾರ್ಯರಲ್ಲಿ ನ್ಯಾಯ ವೇದಾಂತ ಶಾಸ್ತ್ರವನ್ನು ಪೂರ್ತಿಯಾಗಿ ಓದಿ ದರು. ಕಾಶಿಯ ಹಿಂದೂ ವಿಶ್ವವಿದ್ಯಾಲಯದಲ್ಲಿ ಪ್ರಧಾನ ನ್ಯಾಯಾಧ್ಯಾಪಕರಾದ ಶ್ರೀ ಬಾಳ ಕೃಷ್ಣಮಿಶ್ರ ಪಂಡಿತರಲ್ಲಿ ತರ್ಕಶಾಸ್ತ್ರದ ಉದ್ಗ್ರಂಥಗಳನ್ನು ಓದಿ ಬಂಗಾಲದ ತರ್ಕ ತೀರ್ಥ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಈಗ ಅವರು ಸೊಲ್ಲಾಪುರದಲ್ಲಿ ಹಿಂದೀ ಮರಾಠಿ, ಕನ್ನಡ ಮುಂತಾದ ವಿವಿಧ ಭಾಷೆಗಳಲ್ಲಿ ಪುರಾಣ ಹೇಳುತ್ತ ಪಾಠ ಪ್ರವಚನ ಮಾಡುತ್ತ ಇದ್ದಾರೆ

## ೬೦ ನರಸಿಂಹಾಚಾರ್ಯ ಬಂಡ್ಯಾಳ ನವಲಗುಂದ

ಇವರು ಮಳಗಿ ವೇದವ್ಯಾಸಾಚಾರ್ಯರಲ್ಲಿಯೂ ಜಾಲಿಹಾಳ ಶ್ರೀನಿವಾಸಾ ಚಾರ್ಯರಲ್ಲಿಯೂ ಅಧ್ಯಯನ ಮಾಡಿ ನವಲಗುಂದದಲ್ಲಿ ಪುರಾಣ ಹೇಳುತ್ತಿದ್ದಾರೆ.

## ೬೧ ಕೇಶವಾಚಾರ್ಯರು ಬೀಳಯರಿ



ಇವರು ಪೂರ್ಣಪ್ರಜ್ಞ ವಿದ್ಯಾ ಪೀಠ ದಲ್ಲಿ ಅಧ್ಯಯನ ಮಾಡಿ ನ್ಯಾಯವೇದಾಂತ ಪಂಡಿತರಾಗಿದ್ದಾರೆ.

ಈಗ ಇವರು ಪೂರ್ಣಪ್ರಜ್ಞ ವಿದ್ಯಾ ಪೀಠದಲ್ಲಿ ಶಾಸ್ತ್ರ ಪಾಠ ಹೇಳುತ್ತಿದ್ದಾರೆ.

## ೬೨ ಹನುಮಂತಾಚಾರ್ಯರು ಅಳವಂಡಿ ಹೊಸಪೇಟೆ

ಇವರು ಮಳಗಿ ವೇದವ್ಯಾಸಾಚಾರ್ಯರಲ್ಲಿ, ತಮ್ಮ ತಂದೆ ಸ್ವಾಮಿರಾಯಾ ಚಾರ್ಯರಲ್ಲಿಯೂ ಸಾಹಿತ್ಯ ವೇದಾಂತ ಅಧ್ಯಯನ ಮಾಡಿ ಈಗ ಹೊಸಪೇಟೆಯಲ್ಲಿ ಭಾಗವತಾದಿ ಪುರಾಣ ಹೇಳುತ್ತಿದ್ದಾರೆ.

## ೬೩
## ಹಯವದನಾಚಾರ್ಯ ಪುರಾಣಿಕ



ಶ್ರೀ ಪೇಜಾವರ ಶ್ರೀ ಪಾದಂಗಳವರ ಪ್ರಯತ್ನದಿಂದ ರೂಪಗೊಂಡ ಪೂರ್ಣ ಪ್ರಜ್ಞ ವಿದ್ಯಾಪೀಠದಲ್ಲಿ ಸಂಪೂರ್ಣ ನ್ಯಾಯ ವೇದಾಂತ ಅಧ್ಯಯನ ಮಾಡಿ ಪಂಡಿತರಾಗಿದ್ದಾರೆ. ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾಗಿದ್ದಾರೆ.

## ೬೪ ಶೇಷಗಿರಿರಾವ ಬೆಂಗಳೂರ



ಇವರು ಮಾಧ್ವ ಮಹಾ ಮಂಡಲದ ಹೆಮ್ಮೆಯ ಸಾಧನವಾದ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಓದಿ ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದಾರೆ. ಇವರು ಬಿ. ಎಸ್. ಸಿ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣರಾಗಿ ಸರ್ವಜ್ಞಶಾಸ್ತ್ರದ ಮೇಲಿನ ಭಕ್ತಿಯಿಂದ ಸಚ್ಛಾಸ್ತ್ರವನ್ನು ಅಧ್ಯಯನ ಮಾಡಿ ಪರಿಣತರಾಗಿದ್ದಾರೆ. ಈಗ ಪೂರ್ಣಪ್ರಜ್ಞ ವಿದ್ಯಾಪೀಠವ ಮುಖ್ಯಾಧ್ಯಾಪಕರಾಗಿ ಪಾಠ ಪ್ರವಚನ ಮಾಡುತ್ತಿದ್ದಾರೆ.

## ೬೫ ಪುಂಡರೀಕಾಕ್ಷಾಚಾರ್ಯ



ಪ್ರಾಚೀನ ಗುರುಕುಲ ಪದ್ಧತಿಯಿಂದ ಶಾಸ್ತ್ರ ಪಂಡಿತರನ್ನು ಸಿದ್ಧಗೊಳಿಸುವ ಕಮ್ಮಟದಂತಿರುವ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ದಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಸಂಪೂರ್ಣ ಅಧ್ಯಯನ ಮಾಡಿ ಪಂಡಿತರಾಗಿದ್ದಾರೆ. ಈಗ ಅಲ್ಲಿಯೇ ಶಾಸ್ತ್ರ ಪಾಠವನ್ನು ಹೇಳುತ್ತಿದ್ದಾರೆ.

## ೬೬ ಗುರುರಾಜಾಚಾರ್ಯ ಜೋಶಿ ಗದಗ



ಇಂಗ್ಲೀಷದಲ್ಲಿ M. A. ಪದವೀಧರರಾದ ಶ್ರೀ G. B. ಜೋಶಿಯವರು ವರಖೇಡ ಪದ್ಮನಾಭಾಚಾರ್ಯ, ಮಳಗೀ ವೇದ ವ್ಯಾಸಾಚಾರ್ಯ, ವರಖೇಡ ನರಸಿಂಹಾಚಾರ್ಯ ಮುಂತಾದ ಮಹಾಪಂಡಿತರಲ್ಲಿ ವ್ಯಾಕರಣ ವೇದಾಂತಾದಿ ಸಾಹಿತ್ಯಗಳನ್ನು ಅಧ್ಯಯನ ಮಾಡಿದ್ದಾರೆ. ದಶಪ್ರಕರಣ ಪರಿಚಯ ಎಂಬ ಚಿಕ್ಕ ಗ್ರಂಥವನ್ನು ಬರೆದು ಮಧ್ವಾಚಾರ್ಯರ ದಶಪ್ರಕರಣಗಳ ಸಂಕ್ಷಿಪ್ತ ಪರಿಚಯವನ್ನು ಕನ್ನಡಿಗರಿಗೆಲ್ಲ ಮಾಡಿಕೊಟ್ಟಿದ್ದಾರೆ. ಮಾಧ್ವ ಮಹಾಮಂಡಲದ ಇಂಗ್ಲೀಷ ತತ್ವವಾದ ಪತ್ರಿಕೆಗೆ ಪ್ರಧಾನ ಸಂಪಾದಕರಾಗಿ ಅನೇಕ ವರುಷಗಳಿಂದ ಕೆಲಸ ಮಾಡುತ್ತಿದ್ದಾರೆ. ಇಂಗ್ಲೀಷಿನಲ್ಲಿಯೂ ಕನ್ನಡದಲ್ಲಿಯೂ ನಿರರ್ಗಳವಾಗಿ ಭಾಷಣಮಾಡಿ ತಮ್ಮ ಉಪನ್ಯಾಸ ಕೌಶಲದಿಂದ ಸರ್ವಜನರ ಮನಸ್ಸನ್ನು ಸೂರಿಗೊಳ್ಳುತ್ತಾರೆ. ಶ್ರೀ ರಾಘವೇಂದ್ರ ಸ್ವಾಮಿಗಳ ಮಹಿಮೆಯನ್ನು ಬಣ್ಣಿಸುವ ರಾಘವೇಂದ್ರ ವಿಜಯ ಎಂಬ ಸಂಸ್ಕೃತ ಮಹಾಕಾವ್ಯವನ್ನು ಇಂಗ್ಲೀಷಿನಲ್ಲಿ ಭಾಷಾಂತರ ಮಾಡಿ ಶ್ರೀ ರಾಘವೇಂದ್ರ ಮಠಾಧೀಶ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞೆಯಂತೆ ಪ್ರಕಟಗೊಳಿಸಿದ್ದಾರೆ. ಮಾಧ್ವ ಮಹಾ ಮಂಡಳದ ಪ್ರತಿಯೊಂದು ಅಧಿವೇಶನದಲ್ಲಿ ಭಾಗವಹಿಸುತ್ತಾರೆ. ಕನ್ನಡ ಸಂಸ್ಕೃತ ಕೋಶವನ್ನು ತಯಾರಿಸಿ ಕೇಂದ್ರ ಹಾಗೂ ಪ್ರಾಂತೀಯ ಸರಕಾರದಿಂದ ಮನ್ನಣೆ ಪಡೆದರು.

## ೬೭ ಮಳಗಿ ಹಣಮಂತಾಚಾರ್ಯ, ಬಾಗಲಕೋಟೆ



ತಮ್ಮ ಅಣ್ಣಂದಿರಾದ ಶ್ರೀ ವೇದವ್ಯಾಸಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಸಂಪೂರ್ಣ ಅಧ್ಯಯನ ಮಾಡಿದ ಹಣಮಂತಾಚಾರ್ಯರು ಒಳ್ಳೇ ಪುರಾಣಿಕರಾಗಿದ್ದಾರೆ.

ತಾತ್ಪರ್ಯ, ವಿಜಯಧ್ವಜೀಯ ಗ್ರಂಥಗಳಿಗೆ ಅನುಸಾರವಾಗಿ ಶಾಸ್ತ್ರೀಯ ವಿವೇಚನೆಯೊಂದಿಗೆ ವಿದ್ವದ್‌ರಂಜನವಾಗುವಂತೆ ಪುರಾಣ ಹೇಳುತ್ತಾರೆ.

## ೧೮ ಬನ್ನಿಗೋಳ ವೆಂಕಣ್ಣಾಚಾರ್ಯ ಹೊಸಪೇಟೆ



ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ಪೂರ್ವೋತ್ತರ ತರ್ಕವಾದಗಳನ್ನೆಲ್ಲ ಅಧ್ಯಯನ ಮಾಡಿ ವೆಂಕಣ್ಣಾಚಾರ್ಯರು ಹೆಚ್ಚಿನ ವ್ಯಾಸಂಗಕ್ಕಾಗಿ ಕಾಶಿಗೆ ಹೋದರು. ಕಾಶಿಯಲ್ಲಿ ಶ್ರೀ ಬಾಳಕೃಷ್ಣ ಮಿಶ್ರರಲ್ಲಿ ನ್ಯಾಯ ಶಾಸ್ತ್ರದ ಉದ್ಗ್ರಂಥಗಳನ್ನು ಬಹು ಶ್ರದ್ಧೆಯಿಂದ ಅಧ್ಯಯನ ಮಾಡಿದರು. ಮತ್ತು ವ್ಯಾಕರಣ ಮೀಮಾಂಸಾದಿ ಶಾಸ್ತ್ರಗಳನ್ನು ಕಾಶಿಯ ಮಹಾ ಪಂಡಿತರಲ್ಲಿ ವ್ಯಾಸಂಗ ಮಾಡಿ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಪ್ರಜ್ಞತೀರ್ಥ ಶ್ರೀಪಾದಂಗಳವರಲ್ಲಿ ಶಾಂತಿ ಹಾಕಿ ಶ್ರೀಮನ್ ನ್ಯಾಯ ಸುಧಾ ಗ್ರಂಥವನ್ನು ಓದಿದರು. ಇವರು ಅನೇಕ ವರ್ಷ ಕಂಪ್ಲಿಯಲ್ಲಿ ಪಾಠ ಪ್ರವಚನ ಮಾಡಿಕೊಂಡಿದ್ದು ಈಗ ಹೊಸಪೇಟೆಯ ಉತ್ತರಾದಿ ಮಠದಲ್ಲಿ ೧೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಆಜ್ಞೆಯಂತೆ ಪಾಠ ಪ್ರವಚನ ಮಾಡುತ್ತಲಿದ್ದಾರೆ. ಇವರಿಗೆ ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾ ಈ ನಾಲ್ಕೂ ಶಾಸ್ತ್ರಗಳಲ್ಲಿ ಪಾಂಡಿತ್ಯವಿದೆ.

## ೧೯ ಗಲಗಲಿ ಶುಕಾಚಾರ್ಯ ಜಮಖಂಡಿ



ಜಾಲೀಹಾಳ ರಾಮಾಚಾರ್ಯ, ಮಳಗಿ ವೇದವ್ಯಾಸಾಚಾರ್ಯ, ಗಲಗಲಿ ರಾಮಾಚಾರ್ಯರಲ್ಲಿ ಶ್ರೀ ವೇದಾಂತ ಸಾಹಿತ್ಯವನ್ನು ಅಧ್ಯಯನ ಮಾಡಿದ ಶುಕಾಚಾರ್ಯರು ಶ್ರೀ ಸತ್ಯಧ್ಯಾನತೀರ್ಥರ ಹಾಗೂ ಶ್ರೀ ಸತ್ಯಪ್ರಜ್ಞತೀರ್ಥರ ಕಾಲದಲ್ಲಿಯೂ ಶ್ರೀ ಮಠದಲ್ಲಿಯೇ ಇದ್ದುಕೊಂಡು ಅವಶಿಷ್ಟ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದರು.

ಈಗ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಆಜ್ಞೆಯ ಮೇರೆಗೆ ಜಮಖಂಡಿಯಲ್ಲಿ ಸಂಸ್ಕೃತ ಪಾಠ ಶಾಲೆಯ ಅಧ್ಯಾಪಕರಾಗಿ ನಿತ್ಯ ಪಾಠ-ಪ್ರವಚನಗಳನ್ನು ಮಾಡುತ್ತಿದ್ದಾರೆ.

## ೨೦ ಬ್ರಾಬಾಚಾರ್ಯ ಗಲಗಲಿ ಬಾಗಲಕೋಟೆ

ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಶ್ರೀ ಸತ್ಯಪ್ರಜ್ಞತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಓದಿದ್ದಾರೆ.

## ೭೧ ಆದ್ಯ ಅನಂತಾಚಾರ್ಯ ವಿಜಾಪುರ



ವಿಜಾಪುರದ ಸುಪ್ರಸಿದ್ಧ ವೈದ್ಯರಾದ ಆದ್ಯ ಅನಂತಾಚಾರ್ಯರು ಮಹಾ ಸಂಸ್ಕೃತ ಪಂಡಿತರಾಗಿದ್ದಾರೆ. ಕರ್ನಾಟಕದ ವಿದ್ವದ್ವಂಶವೆನಿಸಿದ ಅಗರಖೇಡದ ಆದ್ಯ ಮನೆತನದಲ್ಲಿ ಜನಿಸಿದ ಅನಂತಾಚಾರ್ಯರು ಅಗರಖೇಡದ ಆದ್ಯ ಬಾಬಾಚಾರ್ಯರಲ್ಲಿ ನ್ಯಾಯವನ್ನೂ ಸಾತಾರಾದ ಗಜೇಂದ್ರ ಗಡಕರ ಬಾಳಾಚಾರ್ಯರಲ್ಲಿ ಸಾಹಿತ್ಯ ಹಾಗೂ ವ್ಯಾಕರಣ ಶಾಸ್ತ್ರಗಳನ್ನೂ ಅಧ್ಯಯನ ಮಾಡಿದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಕೆಲವು ದಿನ ವೇದಾಂತವನ್ನು ವ್ಯಾಸಂಗ ಮಾಡಿದರು. ಅನಂತರ ಆಯುರ್ವೇದವನ್ನು ಅಧ್ಯಯನ ಮಾಡಿ ಅವರಲ್ಲಿಯೂ ಮಹಾ ಪಂಡಿತರಾದರು. ಚರಕ, ಸುಶ್ರುತ, ಅಷ್ಟಾಂಗ ಹೃದಯ ಮುಂತಾದ ಅನೇಕ ಸಂಸ್ಕೃತ ವೈದ್ಯಕೀಯ ಗ್ರಂಥಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರು. ಧನ್ವಂತರೀ ಎಂಬ ಮಾಸ ಪತ್ರಿಕೆಯನ್ನು ಹೊರಡಿಸಿ ಆಯುರ್ವೇದದ ಪ್ರಸಾರಕ್ಕಾಗಿ ಪ್ರಯತ್ನವನ್ನು ಮಾಡಿದರು. ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನದ ಅಧ್ಯಕ್ಷರಾಗಿದ್ದರು. ಸಂಸ್ಕೃತದಲ್ಲಿಯೂ ಇವರು ಸುಂದರವಾದ ಗದ್ಯ-ಪದ್ಯಗಳನ್ನು ರಚಿಸಿರುವರು ಇವರ ಮಕ್ಕಳಾದ ಸರ್ವಶ್ರೀ ವರದರಾಜ ಆದ್ಯ ರಾಘವೇಂದ್ರಾಚಾರ್ಯ ಜಹಗಿರ್ದಾರ ಮುಂತಾದವರು ಒಳ್ಳೇ ಸ್ಥಿತಿಯಲ್ಲಿದ್ದು ವಿಜಾಪುರದಲ್ಲಿ ಮಾಧ್ವ ಮಹಾ ಮಂಡಲದ ವಿದ್ಯಾರ್ಥಿ ನಿಲಯದ ಕಟ್ಟಡಕ್ಕಾಗಿ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳ ವರೆಗೆ ಕೂಡಿಸಿಕೊಟ್ಟಿದ್ದಾರೆ.



## ೭೨ ನಾರಾಯಣಾಚಾರ್ಯ ಗಲಗಲಿ

ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ ನಾರಾಯಣಾಚಾರ್ಯರು ಈಗ ಬಾಗಲಕೋಟೆಯಲ್ಲಿ ಇದ್ದು ಭಾಗವತಾದಿ ಪುರಾಣ ಹೇಳುತ್ತಲಿದ್ದಾರೆ.

## ೭೩ ಉಮರ್ಜಿ ತ್ರಿವಿಕ್ರಮಾಚಾರ್ಯ ವಿಜಾಪೂರ



ವರಖೇಡಿ ನರಸಿಂಹಾಚಾರ್ಯ, ಪದ್ಮನಾಭಾಚಾರ್ಯ ಉಮರ್ಜಿ ವರಖೇಡ ನರಸಿಂಹಾಚಾರ್ಯ ಮುಂತಾದವರಲ್ಲಿ ವ್ಯಾಕರಣ,ವೇದಾಂತ ಓದಿದ ತ್ರಿವಿಕ್ರಮಾಚಾರ್ಯರು ಈಗ ವಿಜಾಪುರದಲ್ಲಿದ್ದು ಪುರಾಣ ಪಾಠ-ಪ್ರವಚನ ಮಾಡುತ್ತಲಿದ್ದಾರೆ.

## ೭೪ ಗಲಗಲಿ ವೆಂಕಣ್ಣಾಚಾರ್ಯ

ಗಲಗಲಿ ಸುಬ್ಬಣ್ಣಾಚಾರ್ಯರಲ್ಲಿ ವ್ಯಾಕರಣವನ್ನೂ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿದ ವೆಂಕಣ್ಣಾಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರ ನೆರಳಿನಂತಿದ್ದರು. ಯಾವಜ್ಜನ್ಮ ಉತ್ತರಾದಿ ಮಠದ ಆಶ್ರಿತ ಪಂಡಿತರಾಗಿದ್ದ ಇವರು ವೇದಾಂತ ಧರ್ಮಶಾಸ್ತ್ರಗಳಲ್ಲಿ ಒಳ್ಳೇ ಪರಿಣತರಾಗಿದ್ದಾರೆ.

## ೭೫ ಅಣ್ಣಾಚಾರ್ಯ ಗಲಗಲಿ (ಬಾಗಲಕೋಟೆ)



ಗಲಗಲಿ ಕೂರ್ಮಾಚಾರ್ಯರ ಮಕ್ಕಳಾದ ಇವರು ಶ್ರೀ ಮಳಿಗಿ ವೇದವ್ಯಾಸಾಚಾರ್ಯರಲ್ಲಿ ಸಂಪೂರ್ಣ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಭಾಷ್ಯ ಟೀಕಾ ತಾಕಿ ಸುಧಾ ಗ್ರಂಥವನ್ನು ವ್ಯಾಸಂಗ ಮಾಡಿದರು. ತಮ್ಮ ತಂದೆ ಶ್ರೀ ಕೂರ್ಮಾಚಾರ್ಯರಲ್ಲಿ ಕೆಲವು ಮೀಮಾಂಸಾ ಗ್ರಂಥಗಳನ್ನು ಓದಿ ಸರ್ವ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದಾರೆ. ತರ್ಕಚೂಡಾಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಇವರು ಪುಣೆಯ ವೇದಶಾಸ್ತ್ರೋತ್ತೇಜಕ ಸಭೆಯ ಪರೀಕ್ಷಕ ಧರ್ಮಾಧಿಕಾರಿಗಳಾಗಿ ಕೆಲಸ ಮಾಡಿದ್ದಾರೆ.

ಇವರು ಅನೇಕರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳುತ್ತಿದ್ದಾರೆ. ಶ್ರೀ ಸುಧಾ ವ್ಯಾಸತ್ರಯಾದಿಗಳನ್ನು ಅನಾಯಾಸವಾಗಿ ಪಾಠ ಹೇಳುವ ಗುರುತರವಾದ ಶಾಸ್ತ್ರೀಯ ವ್ಯುತ್ಪತ್ತಿ ಇವರಿಗೆ ಇರುತ್ತದೆ.

## ೭೬ ಯದುಪತಿ ಆಚಾರ್ಯ ಹೊನ್ನಾಳಿ ಜಿ. ಶಿವಮೊಗ್ಗಾ.



ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗವರಲ್ಲಿ ಸಚ್ಛಾಸ್ತ್ರವನ್ನು ಅಧ್ಯಯನ ಮಾಡಿದ್ದಾರೆ. ಉತ್ತಮ ರೀತಿಯಿಂದ ಸುಧಾ ಪರೀಕ್ಷೆಯನ್ನು ಕೊಟ್ಟು ಶ್ರೀಗಳವರಿಂದ ಐದು ಸಾವಿರ ರೂಪಾಯಿ ಬಹುಮಾನ ಪಡೆದಿದ್ದಾರೆ.

## ೭೭ ಬಿಂದಾಚಾರ್ಯ ಉಮರ್ಜಿ ಕಿತ್ತೂರ, ಜಿ. ಬೆಳಗಾಂವ.



ಇವರು ಪಂಢರಪುರದಲ್ಲಿ ಶ್ರೀ ವರಖೇಡಿ ಪ್ರದ್ಯುಮ್ನಾಚಾರ್ಯರ ಬಳಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಜನರಂಜನಯಾಗುವಂತೆ ಪುರಾಣವನ್ನು ಹೇಳುತ್ತಾರೆ. ೧೦೮ ಸಲ ಭಾಗವತ ಪುರಾಣವನ್ನು ಹೇಳಿ ಮಂಗಲ ಮಾಡಿದ್ದಾರೆ.

## ೭೮ ಹನುಮಂತಾಚಾರ್ಯ ಶಿಗ್ಗಾಂವಿ



ಪಾಂಡುರಂಗೀ ರಾಮಾಚಾರ್ಯರಲ್ಲಿಯೂ, ಶ್ರೀ ಕೂಡ್ಲಿ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರಲ್ಲಿಯೂ ವೇದಾಂತವನ್ನು ಅಧ್ಯಯನ ಮಾಡಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಪರೀಕ್ಷೆ ಕೊಟ್ಟಿದ್ದಾರೆ. ಇವರು ಅನೇಕ ವರ್ಷ ಧಾರವಾಡದಲ್ಲಿ ಪುರಾಣವನ್ನು ಹೇಳಿ ಈಗ ಬೆಂಗಳೂರಿನ ಉತ್ತರಾದಿ ಮಠದಲ್ಲಿ ಭಾಗವತಾದಿ ಪುರಾಣವನ್ನು ಹೇಳುತ್ತಾರೆ. ತಾತ್ಪರ್ಯಾನುಸಾರವಾಗಿ ಮಧುರ ಕಂಠದಿಂದ ಟೀಕೆ, ಟಿಪ್ಪಣಿಗಳ ಭಾವಾಭಿವ್ಯಂಜನವಾಗುವಂತೆ ಹೇಳುವ ಇವರ ಪುರಾಣ ಪ್ರವಚನ ಶೈಲಿಯಿಂದ ಆಕೃಷ್ಟರಾಗಿ ನಿತ್ಯವೂ ನೂರಾರು ಜನರು ಇವರ ಪುರಾಣಕ್ಕೆ ಬರುತ್ತಾರೆ.

## ೭೯ ನಾರಾಯಣಾಚಾರ್ಯ ಗಲಗಲಿ



ಶ್ರೀ ಗಲಗಲಿ ರಾಮಾಚಾರ್ಯರಲ್ಲಿ ಸಾಹಿತ್ಯವನ್ನು ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ವೇದಾಂತ ಗ್ರಂಥಗಳನ್ನು ಓದಿದ ಸುಬ್ಬಣ್ಣಾಚಾರ್ಯರ ಮಕ್ಕಳಾದ ನಾರಾಯಣಾಚಾರ್ಯರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾ ಚಂದ್ರಿಕಾ ಗ್ರಂಥಗಳನ್ನು ಓದಿ ಮಂಗಳ ಮಾಡಿದರು. ಇವರ ಸಾತ್ವಿಕ ವೃತ್ತಿ ಸದಾಚಾರ ಸಂಪನ್ನತೆಗಳಿಗೆ ಮೆಚ್ಚಿದ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥರು ಹಾಗೂ ಶ್ರೀ ಸತ್ಯಪ್ರಜ್ಞ ತೀರ್ಥ ಶ್ರೀಪಾದಂಗಳವರು ತಮ್ಮ ಶ್ರೀಮಠದಲ್ಲಿಯೇ ಇಟ್ಟುಕೊಂಡು ಶ್ರೀ ಸುಧಾದಿ ಗ್ರಂಥಗಳನ್ನು ಪಾಠ ಹೇಳಿದರು. ಇವರು ತುಮ್ಮಿನಕಟ್ಟೆಯಲ್ಲಿ ಕೆಲವು ದಿನ ಪಾಠ ಪ್ರವಚನ ಮಾಡಿಕೊಂಡಿದ್ದರು. ಈಗ ಉತ್ತರಾದಿ ಮಠದ ೧೦೮ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಕೃಪಾಪೋಷಿತರಾಗಿ ಗಲಗಲಿಯಲ್ಲಿ ವಾಸವಾಗಿದ್ದಾರೆ. ತತ್ವಪ್ರಕಾಶಿಕಾ ಚಂದ್ರಿಕಾದಿ ಗ್ರಂಥಗಳನ್ನು ಕ್ಲಪ್ತ ಮಾಡಿದ್ದಾರೆ. ಚಂದ್ರಿಕಾ ಗ್ರಂಥದ ಕೆಲವು ಭಾಗವನ್ನು ಸರಳ ಸಂಸ್ಕೃತ ಪದ್ಯಗಳಲ್ಲಿ ಅನುವಾದ ಮಾಡಿದ್ದಾರೆ.

## ೮೦ ರಾಮಾಚಾರ್ಯ ಪಾಡುರಂಗಿ ಧಾರವಾಡ



ಇವರು ತಮ್ಮ ತಂದೆಯವರಲ್ಲಿಯೇ ಸಾಹಿತ್ಯ ವೇದಾಂತ ಅಧ್ಯಯನ ಮಾಡಿದ್ದಾರೆ. ಧರ್ಮಶಾಸ್ತ್ರದಲ್ಲಿಯೂ ಇವರಿಗೆ ಅಭಿನಿವೇಶವಿದೆ.

## ೮೧ ಪದ್ಮನಾಭಾಚಾರ್ಯ ಗುಂಟೂರ ಹೈದರಾಬಾದ

ಇವರು ಉತ್ತರಾದಿ ಮಠದ ದಿವಾನರಾದ ಪಾಂಡುರಂಗಿ ಜಯಾಚಾರ್ಯ ಪಾಂಡುರಂಗಿ ಕೃಷ್ಣಾಚಾರ್ಯ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯವೇದಾಂತ ಶಾಸ್ತ್ರಗಳ ಅಧ್ಯಯನ ಮಾಡಿದ್ದಾರೆ. ಹಿಂದೆ ಉತ್ತರಾದಿ ಮಠದಲ್ಲಿ ಹತ್ತು ವರ್ಷ ಶಾಸ್ತ್ರಾಧ್ಯಾಪಕರೆಂದು ಕೆಲಸ ಮಾಡಿದ್ದಾರೆ. ಈಗ ಹೈದರಾಬಾದಿನಲ್ಲಿ ಪಾಠ ಪ್ರವಚನಮಾಡಿಕೊಂಡು ಇರುತ್ತಾರೆ.

## ೮೨ ರಾಘವೇಂದ್ರಾಚಾರ್ಯ ಬುರ್ಲಿ, ಗದಗ



ಇವರು ತಮ್ಮ ಅಣ್ಣ ಗೋಪಾಲಾಚಾರ್ಯರಲ್ಲಿ ವೇದಾಧ್ಯಯನಮಾಡಿ ಅನಂತರ ಬೇಗಳೂರು ಮೈಸೂರು, ಕಾಶಿ ಮುಂತಾದಕಡೆಗೆ ಹೋಗಿ ಇದ್ದು ಋಗ್ವೇದ ಸಂಹಿತೆ ಮತ್ತು ಯಜುರ್ವೇದ ಸಂಹಿತೆಯನ್ನು ಪೂರ್ತಿಯಾಗಿ ಅಧ್ಯಯನ ಮಾಡಿ ವೇದವಿದಾಂ ಅಗ್ರೇಸರರಾವರು. ಪೂವಾಗಿಪರ ಯಾಜ್ಞಿಕ ಹಾಗೂ ಶ್ರೌತವಿಭಾಗದಲ್ಲಿಯೂ ವೇದವಿದ್ಯೆಯಲ್ಲಿಯೂ ಆಚಾರ್ಯರಿಗೆ ಪರಿನಿಷ್ಠಿತ ಪಾಂಡಿತ್ಯವುಂಟು

ಇವರು ಸ್ವಗ್ರಾಮವಾದ ಬಾಗಲಕೋಟೆಯಲ್ಲಿಯೂ ಬೆಳಗಾವಿ, ದೇವರಶೀಗಿಹಳ್ಳಿ ಮುಂತಾದ ಊರುಗಳಲ್ಲಿ ಆನಂದತೀರ್ಥ ಪಾಠಶಾಲೆ, ಅಶ್ವತ್ಥ ನರಸಿಂಹ ಪಾಠಶಾಲೆ ಎಂಬ ಹೆಸರುಗಳಿಂದ ವೇದಪಾಠಶಾಲೆಗಳನ್ನು ಪ್ರಾರಂಭಿಸಿ ಅನೇಕ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಯಾಜ್ಞಿಕ ಭಾಗದಲ್ಲಿ ಪರಿಣತನ್ನಾಗಿ ಮಾಡಿದ್ದಾರೆ.

ಬಾಗಲಕೋಟೆಯ ಇವರ ಆನಂದತೀರ್ಥ ಪಾಠ ಶಾಲೆಯಲ್ಲಿ ಓದಿ ೫೦–೬೦ ಜನವಿದ್ಯಾರ್ಥಿಗಳು ವೇದಸಂಹಿತೆ ಹಾಗೂ ಪೂರ್ವಾಪರ ಯಾಜ್ಞಿಕದಲ್ಲಿ ಪರಿಣತಿಯನ್ನು ಪಡೆದ್ದಾರೆ.

ಈಗ ಗದುಗಿನಲ್ಲಿದ್ದು ವೈದಿಕ ಗ್ರಂಥ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿ ವಾಸ್ತುಪದ್ಧತಿ ದಶಮಸ್ಕಂದಭಾಗವತ ಸ್ವಾತಾಕಾರ, ಆಹ್ನಿಕಪದ್ಧತಿ ಋಗ್ ಯಜುರ್ವೇದ ಶ್ರಾದ್ಧಪದ್ಧತಿ ಮುಂತಾದ ಅನೇಕ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಿದ್ದಾರೆ.



## ೮೩ ಭೀಮಸೇನಾಚಾರ್ಯ ಸಂತೆಬೆನ್ನೂರ ಬಳ್ಳಾರಿ

ಶ್ರೀ ಹುಲಿಗಿ ಹುಚ್ಚಾಚಾರ್ಯರಲ್ಲಿಯೂ, ಶ್ರೀ ಜಾಲಿಹಾಳ ಶ್ರೀನಿವಾಸಾಚಾರ್ಯರಲ್ಲಿಯೂ ಅಧ್ಯಯನ ಮಾಡಿದ ಭೀಮಸೇನಾಚಾರ್ಯರು ಈಗ ಬಳ್ಳಾರಿಯಲ್ಲಿದ್ದು ಸರಸ ಪುರಾಣವನ್ನು ನರಸಿಂಹ ದೇವಸ್ಥಾನದಲ್ಲಿ ಹೇಳುತ್ತಾರೆ.

## ೮೪ ರಾಮಾಚಾರ್ಯ ಉಮ್ಮರ್ಜಿ, ಕಿತ್ತೂರ



ಇವರು ಶ್ರೀ ನರಸಿಂಹಾಚಾರ್ಯ ವರ ಖೇಡಿಯವರಲ್ಲಿ ಪೂರ್ಣ ವೇದಾಂತವನ್ನು ಅಧ್ಯಯನ ಮಾಡಿ ಪಂಡಿತರಾಗಿದ್ದಾರೆ.

ಅಲ್ಲಲ್ಲಿ ಸಚ್ಛಾಸ್ತ್ರ ಪಾಠ–ಪ್ರವಚನ ಮಾಡುತ್ತಲಿದ್ದಾರೆ. ಭಾಗವತ ಪುರಾಣವನ್ನು ಕ್ಲಪ್ತ ಮಾಡಿ ಎಲ್ಲ ಟೀಕಾ ಟಿಪ್ಪಣಿ ವಿಷಯ ಗಳನ್ನೂ ಪುರಾಣ ಪ್ರಮೇಯಗಳಿಗೆ ಸಂಬಂಧಿ ಸಿದ ಸುಧಾ, ಚಂದ್ರಿಕಾದಿ ವಿಷಯಗಳನ್ನೂ ಮುಖೋದ್ಗತವಾಗಿ ಹೇಳುತ್ತಾರೆ.

ಇಷ್ಟು ಅಭ್ಯಾಸಪೂರ್ಣವಾಗಿ ವಿವಿಧ ವಿಷಯೋಪಬ್ಬೃಂಹಿತವಾದ ಭಾಗವತ ಪುರಾಣವನ್ನು ಹೇಳುವವರು ಈ ಕಾಲದಲ್ಲಿ ರಾಮಾಚಾರ್ಯರೊಬ್ಬರೇ ಆಗಿದ್ದಾರೆ. ಅವರೊಂದು ಭಾಗವತದ ಜಂಗಮ ಜ್ಞಾನಕೋಶದಂತಿದ್ದಾರೆ.

## ೮೫ ಸುಬ್ರಾಯ ಪುರಾಣಿಕ ಉಡುಪಿ



ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿದ ಪುರಾಣಿಕರು ಕರಂಬಳ್ಳಿ, ಪದ್ಮನಾಭಾಚಾರ್ಯ ಗುರು ರಾಜ ತಂತ್ರಿ ಗುದಿಗುಂಡಿ ರಾಮಾಚಾರ್ಯ ಪಡ ಮನ್ನೂರ ನಾರಾಯಣಚಾರ್ಯ ಮುಂತಾದ ಗುರು ಗಳಲ್ಲಿ ನ್ಯಾಯವೇದ ವೇದಾಂತಗಳನ್ನು ಅಧ್ಯ ಯನಮಾಡಿ ವೇದಾಂತ ಶಿರೋಮಣಿ ಮತ್ತು ವಿದ್ವತ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ.

ಉಡುಪಿಯ ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾ ಪಾಠಶಾಲೆ ಯಲ್ಲಿ ಅಧ್ಯಾಪಕರಾಗಿ ಸುಮಾರು ೨೫ ವರ್ಷಗಳಕಾಲ ನೂರಾರು ವಿದ್ಯಾರ್ಥಿಗಳಿಗೆ ಶಾಸ್ತ್ರಪಾಠ ಹೇಳಿದ್ದಾರೆ. ಮದ್ರಾಸಿನ ಮಧ್ವನವಮಿ ಮಹಾಸಭೆಯಲ್ಲಿ ಸುಧಾಸ್ಪ ರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿದ್ದಾರೆ. ಉಡುಪಿಯ ಅಷ್ಟಮಠ ಹಾಗೂ ಭಂಡಾರಕೇರಿ ಮಠದ ಆಸ್ಥಾನ ವಿದ್ವಾಂಸರಾಗಿದ್ದಾರೆ.

## ೮೬ ಮಾಧವಾಚಾರ್ಯ ಕಟ್ಟಿ ಧಾರವಾಡ



ಇವರು ತಮ್ಮ ಅಣ್ಣಂದಿರಾದ ಕಟ್ಟಿ ಕೇಶವಾಚಾರ್ಯರಲ್ಲಿ ಸಮಗ್ರ ವೇದಾಂತವನ್ನು ಅಧ್ಯಯನ, ಮಾಡಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಪರೀಕ್ಷೆ ಕೊಟ್ಟಿದ್ದಾರೆ. ಎಂ.ಎಸ್‌ಸಿ. ಪದವೀಧರರಾದ ಇವರು ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಭೌತಶಾಸ್ತ್ರಾಧ್ಯಾಪಕರಾಗಿದ್ದರೂ ನಿತ್ಯ ನಿರಂತರ ಸ್ವಾಧ್ಯಾಯ ಪಾಠಪ್ರವಚನ ತಪ್ಪದೇ ಮಾಡುತ್ತಾರೆ.

## ೮೭ ಬಾಳಾಚಾರ್ಯ ಮಂಗಳವೇಢೆ ಹುಬ್ಬಳ್ಳಿ



ಇವರು ಪಂಢರಪುರದಲ್ಲಿ ವರಖೇಡಿ ಪ್ರದ್ಯುಮ್ನಾಚಾರ್ಯ, ನರಸಿಂಹಾಚಾರ್ಯರಲ್ಲಿ ನ್ಯಾಯ ವೇದಾಂತ ಅಧ್ಯಯನ ಮಾಡಿ ಹುಬ್ಬಳ್ಳಿಯಲ್ಲಿ ಪುರಾಣ ಪಾಠ ಪ್ರವಚನ ಮಾಡುತ್ತಲಿದ್ದಾರೆ. ಪ್ರತಾಪ ಚಂಪು ಎಂಬ ಸಂಸ್ಕೃತ ಪ್ರಬಂಧವನ್ನು ಬರೆದಿದ್ದಾರೆ. ಹುಬ್ಬಳ್ಳಿಯ ಮಾಧ್ವ ವಿದ್ಯಾರ್ಥಿ ನಿಲಯದಲ್ಲಿ ಅಧ್ಯಾಪನ ಮಾಡುತ್ತಾರೆ.

## ೮೮ ಕಾಪು ಹಯಗ್ರೀವಾಚಾರ್ಯ ಉಡುಪಿ



ಇವರು ಶ್ರೀ ಭಂಡಾರಕೆರೆ ಶ್ರೀಪಾದಂಗಳವರಲ್ಲಿ ೧೨ ವರ್ಷ ನ್ಯಾಯವೇದಾಂತ ಅಧ್ಯಯನ ಮಾಡಿ ಪಂಡಿತರಾದವರು. ಧರ್ಮಶಾಸ್ತ್ರದಲ್ಲಿ ಇವರಿಗೆ ಪರಿಶ್ರಮ ಉಂಟು. ಪಾಠಪ್ರವಚನದಲ್ಲಿ ಪ್ರವೀಣರು. ವಾದದಲ್ಲಿ ಸಮರ್ಥರು. ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ೧೨ ವರ್ಷ ಅಧ್ಯಾಪನಕಾರ್ಯವನ್ನೂ ಮಾಡಿ ಈಗ ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾಗಿದ್ದಾರೆ.

## ೮೯ ಗೋಪಾಲಾಚಾರ್ಯ ಗಂಗೂರ, ರಾಜಗೋಪಾಳಪುರಂ



ಇವರು ಕೊಪ್ಪಳದ ಪ್ರಸಿದ್ಧ ಪಂಡಿತರಾದ ಗಂಗೂರ ವೆಂಕೋಬಾಚಾರ್ಯರ ಚಿರಂಜೀವರು. ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಶ್ರೀ ಸತ್ಯಪ್ರಜ್ಞತೀರ್ಥರ ಕಾಲದಲ್ಲಿಯೂ ಶ್ರೀ ಸತ್ಯಾಭಿಜ್ಞತೀರ್ಥ ಶ್ರೀಪಾದಂಗಳವರ ಕಾಲದಲ್ಲಿಯೂ ಶ್ರೀಮದುತ್ತರಾದಿ ಮಠದ ದಿವಾನರಾಗಿ ಕಾರ್ಯಮಾಡಿದರು.

ಶ್ರೀ ಸತ್ಯಧ್ಯಾನರಿಂದ ಶ್ರೀ ಸತ್ಯಪ್ರಮೋದತೀರ್ಥರವರೆಗೆ ಎಲ್ಲ ಉತ್ತರಾದಿ ಮಠದ ಶ್ರೀಪಾದಂಗಳವರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದಾರೆ.

ಈಗ ಉತ್ತರಾದಿ ಮಠದ ಜಹಗೀರಿ ಗ್ರಾಮಗಳಾದ ತೆಂಬ್ರಿ ಮತ್ತು ರಾಜಗೋಪಾಲಪುರಗಳ ವ್ಯವಸ್ಥಾಪಕರಾಗಿ ಅಲ್ಲಿಯೇ ಇರುತ್ತಾರೆ.

## ೯೦ ಮಹಿಷಿ ವೆಂಕಣ್ಣಾಚಾರ್ಯ ಮೈಸೂರು



ಇವರು ಶ್ರೀ ಭಂಡಾರಕೆರೆ ಶ್ರೀಗಳು, ಪೇಜಾವರ ಸ್ವಾಮಿಗಳವರಲ್ಲಿಯೂ ಬಾಳೆಬೈಲು ಪದ್ಮನಾಭಾಚಾರ್ಯರಲ್ಲಿಯೂ ಮಹಿಷಿ ವ್ಯಾಸರಾಯಾಚಾರ್ಯರಲ್ಲಿಯೂ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಈಗ ಮೈಸೂರ ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ತರ್ಕಾಧ್ಯಾಪಕರಾಗಿದ್ದಾರೆ.

## ೯೧ ಕರ್ಜಗಿ ರಾಮಾಚಾರ್ಯ, ಮಂತ್ರಾಲಯ

ಇವರು ಮೊದಲು ಕೊಪ್ಪಳ ಕಟ್ಟಿ ಗುರಾಚಾರ್ಯರಲ್ಲಿ ಕಾವ್ಯ ವೇದಾಂತ ಓದಿದರು. ಅನಂತರ (ಶ್ರೀ ಸತ್ಯಪ್ರಜ್ಞರ ಪೂರ್ವಾಶ್ರಮ) ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿ ತರ್ಕ ಓದಿದರು. ಆ ಮೇಲೆ ಶೀನಹಳ್ಳಿ ರಂಗಾಚಾರ್ಯರಲ್ಲಿ ವೇದಾಂತ ಓದಿ ಘನ ಪಂಡಿತರಾದರು.

ಇವರು ಈಗ ಮಂತ್ರಾಲಯ ಶ್ರೀಗುರು ಸಾರ್ವಭೌಮರ ಮಹಾಪಾಠಶಾಲೆಯಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಲಿದ್ದಾರೆ.

## ೯೨ ಹುಲಿಕುಂಟಿ ಶ್ರೀನಿವಾಸಾಚಾರ್ಯ



ಚತುಃಶಾಸ್ತ್ರ ಪಂಡಿತರಾದ ದುರ್ಗದ ಹುಲಿ ಹನುಮಂತಾಚಾರ್ಯರ ಮೊಮ್ಮಕ್ಕಳಾದ ಶ್ರೀನಿವಾಸಾಚಾರ್ಯರು ಶ್ರೀ ೧೦೮ ಶ್ರೀ ಸುವೃತೀಂದ್ರ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರು. ಇವರು ವಿಜಯೀಂದ್ರಾಚಾರ್ಯ, ದೀಕ್ಷಾಚಾರ್ಯ, ಡಿ. ವಾಸುದೇವಾಚಾರ್ಯ, ದುರ್ಗ ಭೀಮಾಚಾರ್ಯ, ಮುಂತಾದವರಲ್ಲಿ ಅಧ್ಯಯನ ಮಾಡಿ ನ್ಯಾಯಶಿರೋಮಣಿ, ಸಾಹಿತ್ಯ, ವೇದಾಂತ, ವಿದ್ವತ್ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಮೈಸೂರಿನ ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ದ್ವೈತ ವೇದಾಂತದ ಮುಖ್ಯ ಪ್ರಾಧ್ಯಾಪಕರಾಗಿದ್ದಾರೆ. ಅರಮನೆಯ ಧರ್ಮಾಧಿಕಾರಿಗಳೂ ಆಗಿದ್ದಾರೆ.

## ೯೩ ಪಾಂಡುರಂಗಿ ಶ್ರೀನಾಥಾಚಾರ್ಯ

### ಮೈಸೂರು



ಡಿ. ಕೃಷ್ಣಮೂರ್ತಿ ಆಚಾರ್ಯ, ಪಿ. ರಾಮಚಂದ್ರಾಚಾರ್ಯ, ಮುಂತಾದವರಲ್ಲಿ ಅಧ್ಯಯನ ಮಾಡಿ ನ್ಯಾಯ ವೇದಾಂತ ಮೀಮಾಂಸಾ, ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ತರ್ಕ ಪ್ರಾಧ್ಯಾಪಕರಾಗಿದ್ದಾರೆ.

## ೯೪ ನರಸಿಂಹಾಚಾರ್ಯ ಮಾದಿನೂರ, ಮಂತ್ರಾಲಯ

ಇವರು ಮೊದಲು ಕಿನ್ನಾಳ ಆಚಾರ್ಯರಲ್ಲಿ ಪ್ರಕರಣಗಳನ್ನು ಓದಿ ಆ ಮೇಲೆ ಮಂತ್ರಾಲಯ ಗುನ್ನಾಳ ಶ್ರೀ ವೆಂಕೋಬಾಚಾರ್ಯರಲ್ಲಿ ಓದಿದರು. ಮೈಸೂರಲ್ಲಿ ದೊಡ್ಡಬಳ್ಳಾಪುರ ವಾಸುದೇವಾಚಾರ್ಯರಲ್ಲಿ ವೇದಾಂತ ಓದಿ, ಮೈಸೂರ ವೇದಾಂತ ವಿದ್ವಾನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು.

ಇವರು ಈಗ ಮಂತ್ರಾಲಯ ಪಾಠ ಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ೯೫ ಅಲೆವೂರ ಸುಬ್ರಾಯಾಚಾರ್ಯ



ಇವರು ಬನ್ನಂಜೆ ನಾರಾಯಣಚಾರ್ಯ ಗುರುಗುಂಡಿ ರಾಮಾಚಾರ್ಯ ಕಟ್ಟೆ ಶ್ರೀನಿವಾಸಾಚಾರ್ಯ ಮುಂತಾದವರಲ್ಲಿ ಅಧ್ಯಯನ ಮಾಡಿ ವೇದಾಂತ ಶಿರೋಮಣಿ ವಿದ್ವಾನ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಧರ್ಮಪುರಿ ಸೇಲಂ ಮುಂತಾದ ಕಡೆಗಳಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದು ಈಗ ಮೈಸೂರಿನಲ್ಲಿ ವೈ. ವಾ. K. ಸೀತಾರಾಮರಾಯರು ನಿರ್ಮಿಸಿದ ಶ್ರೀ ಕೃಷ್ಣಮಂದಿರದ ಅರ್ಚಕರಾಗಿದ್ದು ಪುರಾಣ ಪಾಠ ಪ್ರವಚನಗಳನ್ನು ಮಾಡುತ್ತಿದ್ದಾರೆ.



## ೯೬ ಶೇಷಾಚಾರ್ಯ ರಾಜಪುರೋಹಿತ ಕನಕಗಿರಿ

ಇವರು ಮೊದಲು ಟಂಕಸಾಲಿ ಶ್ರೀಗಳವರಲ್ಲಿ ಓದಿ ಆಮೇಲೆ ಬೆಳ್ಳುಬ್ಬಿ ಅಣ್ಣಯ್ಯಾಚಾರ್ಯ ವಿಜಾಪುರ ಇವರಲ್ಲಿ ಓದಿದರು. ಈಗ ಉಪನ್ಯಾಸ ಮತ್ತು ಭಾಗವತ ಪುರಾಣದಲ್ಲಿ ಧುರೀಣರಾಗಿ ಈವತ್ತಿಗೂ ಶ್ರೀ ಕನಕಾಚಲ ದೇವಸ್ಥಾನದಲ್ಲಿ ರಾಜಪುರೋಹಿತರಾಗಿ ಪ್ರಸಿದ್ಧರಿದ್ದಾರೆ.

## ೯೭ ಮಾಹುಲಿ ಅಶ್ವತ್ಥಾಮಾಚಾರ್ಯ ಮುಂಬೈ



ಅಣ್ಣ ಶ್ರೀ ಗೋಪಾಲಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣ ವೇದಾಂತಗಳನ್ನು ಓದಿದ ಅಶ್ವತ್ಥಾಮಾಚಾರ್ಯರು ಹಿಂದಿಯಲ್ಲಿ ಅಸಾಧಾರಣ ವಿದ್ವತ್ತೆಯನ್ನು ಸಂಪಾದಿಸಿದ್ದಾರೆ. ಎಲ್ಲ ಹಿಂದೀ, ಸಂಸ್ಕೃತ, ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಸುಧಾದಿ ಗ್ರಂಥಗಳನ್ನು ಅನುವಾದ ಮಾಡುವಷ್ಟು ವೇದಾಂತದಲ್ಲಿಯೂ ಚನ್ನಾಗಿ ಪರಿಶ್ರಮ ಮಾಡಿದ್ದಾರೆ.

## ೯೦ ಹಯಗ್ರೀವಾಚಾರ್ಯ ಕುತ್ತೆತ್ತೂರ



ಭಕ್ತ ಗೋವಿಂದ ದಾಸರ ಪುತ್ರರೂ, ಕೆ. ಸೀತಾರಾಮರಾಯರ ಅಣ್ಣಂದಿರೂ ಆದ ಹಯಗ್ರೀವಾಚಾರ್ಯರು ತಂದೆ ಗೋವಿಂದ ದಾಸರಿಂದ ಬಾಲ್ಯದಲ್ಲಿಯೇ ದಾಸ ದೀಕ್ಷೆಯನ್ನು ಪಡೆದು ಶ್ರೀ ಪೇಜಾವರ ಮಠದ ವಿಶ್ವಜ್ಞ ತೀರ್ಥ ಶ್ರೀಪಾದಂಗಳವರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿ ಅವರ ಜೊತೆಗೇ ಆಸೇತು ಹಿಮಾಚಲ ಪರ್ಯಂತ ಪಾದಚಾರಿಗಳಾಗಿ ಯಾತ್ರೆ ಮಾಡಿದರು. ಗುರುಗಳೊಂದಿಗೆ ಬದರೀ ಯಾತ್ರೆಯನುನ್ನು ಮಾಡಿ ಬಂದ ಬಳಿಕ ವಿಜಯನಗರ ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ೯ ವರ್ಷ ಅಧ್ಯಯನ ಮಾಡಿ "ವ್ಯಾಕರಣ ಶಿರೋಮಣಿ" ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅನಂತರ ಅವರು ಸ್ವಗ್ರಾಮನಾದ ಕುತ್ತೆತ್ತೂರಿನಲ್ಲಿಯೇ ತಮ್ಮ ತಂದೆ ಗೋವಿಂದ ದಾಸರ ಸಮ್ಮುಖದಲ್ಲಿ ಭಾರತ ಭಾಗವತ ರಾಮಾಯಣಾದಿ ಪುರಾಣಗಳನ್ನು ಹೇಳುತ್ತ ಅವರ ಸೇವೆ ಮಾಡಿಕೊಂಡಿದ್ದರು.

ಉಡುಪಿಯ ಫಲಿಮಾರು ಮಠದ ಹಿಂದಿನ ಶ್ರೀ ರಘುಮಾನ್ಯ ತೀರ್ಥ ಶ್ರೀಪಾದಂಗಳವರು ಸದಾಚಾರ ಸಂಪನ್ನರೂ ಕರ್ಮಠರೂ ಆದ ಈ ಹಯಗ್ರೀವಾಚಾರ್ಯರನ್ನು ತಮ್ಮ ಸ್ವಗ್ರಾಮವಾದ ಫಲಿಮಾರು ಕ್ಷೇತ್ರಕ್ಕೆ ಕರೆಯಿಸಿ ಇಟ್ಟುಕೊಂಡಿದ್ದರು. ಅಲ್ಲಿ ಶ್ರೀ ಸೀತಾ ಲಕ್ಷ್ಮಣ ಕೋದಂಡ ರಾಮದೇವರ ಪ್ರತಿಮೆಗಳನ್ನು ಪೂಜೆ ಮಾಡಿಕೊಂಡು ಬಹುಕಾಲ ವಾಸವಾಗಿದ್ದರು. ಶ್ರೀ ಭಕ್ತ ಗೋವಿಂದ ದಾಸರಿಗೆ ದೇಹದಲ್ಲಿ ಅಶಕ್ತಿ ಆದಾಗ ಈ ಹಯಗ್ರೀವಾಚಾರ್ಯರನ್ನು ಕರೆಯಿಸಿಕೊಂಡು ತಮ್ಮ ದೇವರ ನಾಮದ ಪುಸ್ತಕಗಳೆಲ್ಲವನ್ನು ಇವರ ಕೈಗೆ ಒಪ್ಪಿಸಿ " ಇವು ನಮ್ಮ ಮನೆತನದ ರಕ್ಷಾಕವಚ. ದಾಸ ಸಂತರ ವೇದದಂತಿರುವ ಇವುಗಳನ್ನು ನೀವೆಲ್ಲ ಬಂಧುಗಳು ಪುತ್ರರು ಪ್ರತಿನಿತ್ಯವೂ ಭಕ್ತಿಯಿಂದ ಪಾರಾಯಣ ಮಾಡಿರಿ " ಎಂದು ಒಪ್ಪಿಸಿದರು. ಅದರಂತೆ ಆ ಭಕ್ತ ಗೋವಿಂದ ದಾಸರ ಅಮೂಲ್ಯ ನಿಧಿಯನ್ನು ಅವರ ಮಕ್ಕಳಾದ ಧರ್ಮಭೂಷಣ ಪಿತೃಭಕ್ತಿ ಪರಾಯಣ ಶ್ರೀ ಕೆ. ಸೀತಾರಾಮರಾಯರೇ ಮೊದಲಾದ ಮಕ್ಕಳು ಮೊಮ್ಮಕ್ಕಳು ಪ್ರತಿ ನಿತ್ಯವೂ ಪಾರಾಯಣ ಭಜನ ಮಾಡಿ ತಮ್ಮ ಪೂಜ್ಯ ಗೋವಿಂದ ದಾಸರ ಆಜ್ಞೆಯನ್ನು ಪರಿಪಾಲಿಸಿ ಉತ್ತರೋತ್ತರ ಉತ್ಕರ್ಷ ಹೊಂದುತ್ತಲಿದ್ದಾರೆ. ಇವರು ಮದ್ರಾಸಿನಲ್ಲಿ ತಮ್ಮ ಸಹೋದರ ಸೀತಾರಾಮರಾಯರ ನೇತೃತ್ವದಲ್ಲಿ ಶತಾಯುಷಿಯಾದ ತಮ್ಮ ತಾಯಿ ಮಾತೋಶ್ರೀ

ಗಂಗಾಬಾಯಿಯವರ ಶತಮಾನೋತ್ಸವವನ್ನು ಬಂಧು ಬಾಂಧವರೊಂದಿಗೆ ಅನೇಕ ಸಾವಿರಾರು ಪಂಡಿತರನ್ನು ಪೀಠಾಧಿಪತಿಗಳನ್ನು ಕರೆಯಿಸಿಕೊಂಡು ಅತ್ಯಂತ ವಿಜೃಂಭಣೆ ಯಿಂದ ಅಭೂತಪೂರ್ವವಾಗಿ ನೆರವೇರಿಸಿದರು. ಕೆ. ಸೀತಾರಾಮರಾಯರ ಜೊತೆಗೆ ಅವರ ಅಂತ್ಯಕಾಲದ ಬದರೀ ಯಾತ್ರೆಯಲ್ಲಿ ಭಾಗಿಗಳಾಗಿ ತಮ್ಮ ತಾಯಿಯವ ರೊಂದಿಗೆ ಬದರೀ ನಾರಾಯಣನ ದರ್ಶನವನ್ನು ಮಾಡಿಕೊಂಡು ಬಂದರು.

ವ್ಯಾಸಕೂಟ ದಾಸಕೂಟ ಎರಡರಲ್ಲಿಯೂ ಪರಿಶ್ರಮ ಪಟ್ಟ ಶ್ರೀ ಹಯಗ್ರೀವಾ ಚಾರ್ಯರು ಕುತ್ತೆತ್ತೂರಿನ ತಮ್ಮ ಗೋವಿಂದ ಭವನದಲ್ಲಿ ಶ್ರೀ ಲಕ್ಷ್ಮೀನಾರಾಯಣ ರನ್ನು ಒಲಿಸಿಕೊಂಡು ಸ್ವವಿಹಿತ ಕರ್ಮಾನುಷ್ಠಾನ ಮಾಡಿಕೊಂಡು ಇದ್ದಾರೆ.

## ೯೯ ತೆರಗುಂಡಿ ಗೋಪಾಲಕೃಷ್ಣಾಚಾರ್ಯ



ಕೊರ್ಲಹಳ್ಳಿಯ ರಂಗಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಗ್ರಂಥಗಳನ್ನು ಅಧ್ಯ ಯನ ಮಾಡಿದ ಇವರು ಶ್ರೀ ಭಂಡಾರಗಿರಿ ಶ್ರೀಪಾದಂಗಳವರಲ್ಲಿ ಸಂಪೂರ್ಣ ಸುಧಾ ಗ್ರಂಥವನ್ನು ವ್ಯಾಸಂಗ ಮಾಡಿದ್ದಾರೆ. ಅಖಿಲ ಭಾರತ ಮಾಧ್ವ ಮಹಾ ಮಂಡಲದ ಪ್ರಮುಖ ಕಾರ್ಯಕರ್ತರಾಗಿದ್ದಾರೆ. ದ್ವಾದಶ ಸ್ತೋತ್ರ, ವಾಯುಸ್ತುತಿ, ಮಧ್ವ ವಿಜಯ ಮುಂತಾದ ಗ್ರಂಥಗಳನ್ನು ಕನ್ನಡದಲ್ಲಿ ಗದ್ಯ ರೂಪದಿಂದಲೂ ಪದ್ಯ ರೂಪದಿಂದಲೂ ಅನುವಾದ ಮಾಡಿ ಪ್ರಕಟಿಸಿದ್ದಾರೆ.

## ೧೦೦ ಐತಾಳ ವೆಂಕಟರಮಣಾಚಾರ್ಯ



ಐತಾಳ ಆಚಾರ್ಯರು ಬಾಲ್ಯದಿಂದಲೇ ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ನ್ಯಾಯ, ವೇದಾಂತ ಶಾಸ್ತ್ರಗಳನ್ನು ಓದಿದರು. ಶ್ರೀ ಪೇಜಾವರ ಶ್ರೀಗಳವರ ಸಹಾಧ್ಯಾಯಿಗಳಾದ ಅವರು ತಮ್ಮ ಅಧ್ಯಯನದ ನಂತರ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಲಿದ್ದಾರೆ. ಈಗ ಅವರು ಶ್ರೀ ಭಂಡಾರಕೆರೆ ಹಾಗೂ ಶ್ರೀ ಪೇಜಾವರ ಶ್ರೀಪಾದಂಗಳವರು ಕೈಕೊಂಡಿರುವ ಮಾಧ್ವ ಗ್ರಂಥ ಗಳ ಸಂಶೋಧನೆ ಹಾಗೂ ಪ್ರಕಾಶನ ಕಾರ್ಯದಲ್ಲಿ ದಿಕ್ಷಾದಾಕ್ಷ್ಯಲಕ್ಷ ಪುರಸ್ಸರವಾಗಿ ಅನವರತ ಕಾರ್ಯ ಮಾಡುತ್ತಲಿದ್ದಾರೆ.

## ೧೦೧ ಆದ್ಯ ತಾತಾಚಾರ್ಯ



ಸುಪ್ರಸಿದ್ಧ ಆದ್ಯ ಮನೆತನದವರಾದ ತಾತಾಚಾರ್ಯರು ತಮ್ಮ ತಂದೆಯವರಲ್ಲಿ ಕಾವ್ಯ ವ್ಯಾಕರಣ ಓದಿ ಉತ್ತರಾದಿ ಮಠಕ್ಕೆ ಬಂದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದರು. ಅನಂತರ ಭಾಗವತವನ್ನು ವಿಜಯ ಧ್ವಜೀಯ ಮುಂತಾದ ಟಿಪ್ಪಣಿ ಹಾಗೂ ಆಚಾರ್ಯರ ತಾತ್ಪರ್ಯದೊಂದಿಗೆ ಹರಿಕಥಾಮೃತಸಾರ ಮುಂತಾದ ದಾಸ ಸಾಹಿತ್ಯಕ್ಕೆ ಮೇಳಮಾಡಿ ಹೇಳತೊಡಗಿದರು. ಈಗಾಗಲೇ ಅವರು ನೂರಾರು ಸಲ ಭಾಗವತ ಮಂಗಳವನ್ನು ಮಾಡಿದ್ದಾರೆ.

ಈಗ ಅವರು ಬೆಂಗಳೂರಿಗೆ ಬಂದು ವಾಸವಾಗಿದ್ದಾರೆ. ಅಲ್ಲಿ ಅನೇಕ ಶಿಷ್ಯರಿಗೆ ವೇದಾಂತ ಗ್ರಂಥಗಳ ಪಾಠಪ್ರವಚನ ಮಾಡುತ್ತಲಿರುತ್ತಾರೆ. ನಿತ್ಯ ಪಾಠ ಪುರಾಣದಿಂದ ಬೆಂಗಳೂರಿನಲ್ಲಿ ಧರ್ಮಜಾಗ್ರತಿಯನ್ನು ಉಂಟುಮಾಡಿದ್ದಾರೆ. ಪ್ರಾಯಃ ಕರ್ನಾಟಕದ ಎಲ್ಲ ಕಡೆಗೂ ಅವರು ಸಂಚರಿಸಿ ತಮ್ಮದೇ ಆದ ವಿಶಿಷ್ಟ ಶೈಲಿಯಿಂದ ದಾಸ ಸಾಹಿತ್ಯ ವ್ಯಾಸ ಸಾಹಿತ್ಯಗಳನ್ನು ಸಮನ್ವಯ ಮಾಡಿ ಭಾಗವತ ಧರ್ಮ ಪ್ರಸಾರಕ್ಕೆ ಕಾರಣರಾಗಿದ್ದಾರೆ.

## ೧೦೨ ಶೇಡ ಚಂದ್ರಹಾಸಾಚಾರ್ಯ



ಶ್ರೀ ಚಂದ್ರಹಾಸಾಚಾರ್ಯರು ವೈ. ವಾ. ಯಜ್ಞವಿಠಲಾಚಾರ್ಯರಲ್ಲಿಯೂ ಮುಳಬಾಗಲದ ವೈ. ವಾ. ಶ್ರೀ ರಾಮಕೃಷ್ಣಾಚಾರ್ಯ ಸ್ವಾಮಿಗಳಲ್ಲಿಯೂ ನ್ಯಾಯ ವೇದಾಂತಗಳನ್ನು ಅಧ್ಯಯನ ಮಾಡಿದ್ದಾರೆ. ಈಗ ಬೆಂಗಳೂರಲ್ಲಿ ಉತ್ತರಾದಿ ಮಠದ ಆವರಣದಲ್ಲಿ ಇದ್ದು ಪಾಠ ಪ್ರವಚನ ಮಾಡುತ್ತಿದ್ದಾರೆ.

## ೧೦೩. ತಾತಾಚಾರ್ಯ ಪಾಂಘ್ರಿ



ಪ್ರಸಿದ್ಧ ಪಾಂಘ್ರಿಯವರ ಪಂಡಿತ ಕುಟುಂಬದಲ್ಲಿ ಜನಿಸಿದ ಶ್ರೀ ತಾತಾಚಾರ್ಯರು ವೇದಶಾಸ್ತ್ರ ವಿದ್ವಾಂಸರು. ಅವರ ತಂದೆ ಸಮೀರಣಾಚಾರ್ಯರಲ್ಲಿ ಕಾವ್ಯ ಸಾಹಿತ್ಯ ಓದಿದ ಆಚಾರ್ಯರು ಎಳೆ ವರೆಯದಲ್ಲಿಯೇ ಕಾಶಿ ನವದ್ವೀಪಗಳಿಗೆ ಹೋಗಿ ನವ್ಯನ್ಯಾಯದ ವಾದ ಗ್ರಂಥಗಳನ್ನು ಓದಿಬಂದರು.

ಅನಂತರ ಉತ್ತರಾದಿಮಠಕ್ಕೆ ಬಂದು ಸುಧಾಂತ ವೇದಾಂತ ಶ್ರೀಸತ್ಯಧ್ಯಾನರಲ್ಲಿ ಓದಿದರು. ಶೂರ್ಪಾಲಿ ಮುಂತಾದ ಕ್ಷೇತ್ರಗಳಲ್ಲಿ ಅನೇಕ ಜ್ಞಾನಸತ್ರಗಳನ್ನು ಮಾಡಿದ್ದಾರೆ.

ಅವರು ಸಮಗ್ರ ಋಗ್ವೇದಕ್ಕೆಲ್ಲ ಶ್ರೀ ಮಧ್ವಾಚಾರ್ಯರು ಋಗ್ಭಾಷ್ಯದಲ್ಲಿ ತೋರಿಸಿದ ಅಧ್ಯಾತ್ಮಪರವಾದ ದಿಶೆಯಲ್ಲಿಯೇ ಅರ್ಥಮಾಡಿ ಕನ್ನಡದಲ್ಲಿ ಬರೆದಿಟ್ಟಿದ್ದಾರೆ. ಪವಮಾನ ಮಂಡಲಕ್ಕೆ ಅವರು ಈಗ ಅವತಾರತ್ರಯ ಪರತಯಾ ಅರ್ಥ ಬರೆದು ಒಂದು ಭಾಗವನ್ನು 'ಪವಮಾನ ಮಂಡಲ' ಎಂಬ ಹೆಸರಿನಿಂದ ಪ್ರಕಾಶನಗೊಳಿಸಿದ್ದಾರೆ.

ಬೃಹತೀ ಸಹಸ್ರದ ಸಾವಿರ ಋಕ್ಕುಗಳಿಗೆಲ್ಲ ದ್ವೈತತತ್ವಕ್ಕೆ ಅನುಸಾರವಾಗಿ ವಿಷ್ಣು ಪಾರಮ್ಯಪರವಾದ ಅರ್ಥವನ್ನು ಬರೆದು ಪ್ರಕಟಗೊಳಿಸಿದ್ದಾರೆ.

ಅವರು ಮಾಧ್ವ ವೈದಿಕ ಕೋಶವನ್ನು ಬರೆದಿಟ್ಟಿದ್ದಾರೆ. ಅದಕ್ಕಾಗಿ ನಲವತ್ತು ವರ್ಷ ಪರಿಶ್ರಮಪಟ್ಟಿದ್ದಾರೆ. ಅವರ ಇಷ್ಟು ದೀರ್ಘಕಾಲೀನ ಗ್ರಂಥ ಚಿಂತನ ಪರಿಶೀಲನ ಪರಿಶ್ರಮದ ಫಲವಾಗಿ ನಿರ್ಮಿತವಾದ 'ಮಾಧ್ವ ಶಬ್ದಕೋಶ' ಮತ್ತು ಅವರು ಸಂಸ್ಕೃತದಲ್ಲಿ ಬರೆದ ಋಗ್ವೇದದ ಸಮಗ್ರ ಅರ್ಥ ಮುಂತಾದ ಅಮೂಲ್ಯ ಗ್ರಂಥಗಳನ್ನು ನೋಡುವವರು ದಿಕ್ಕಿಲ್ಲದಂತಾಗಿದೆ. ಈಗ ಇವರು ಬೆಳಗಾವಿಯಲ್ಲಿರುವರು.

ಅವರಿಗೆ ವಯಸ್ಸಾಗಿದ್ದು ತಾವಿರುವವರೊಳಗಾಗಿ ತಮ್ಮ ಗ್ರಂಥಗಳು ಪ್ರಕಾಶಿತವಾಗಬೇಕೆಂದು ಅವರ ಮನೀಷೆ ಇದೆ. ಸಮಾಜದವರೂ ಸರಕಾರದವರೂ ಮಠಾಧಿಪತಿಗಳೂ ತುಸು ಲಕ್ಷ್ಯಗೊಟ್ಟು ಒಂದು ತುಂಬು ಜೀವನದ ಪಾಂಡಿತ್ಯದ ಪರಿಪಾಕವಂತೆರುವ ಉಪಯುಕ್ತ ಗ್ರಂಥಗಳ ಪ್ರಕಾಶನ ಮತ್ತು ಅವುಗಳ ಯಥಾರ್ಥ ಯೋಗ್ಯತೆಯನ್ನು ಗುರುತಿಸಿ ಗೌರವಿಸುವ ಕಾರ್ಯಕ್ಕೆ ಮುಂದಾಗಲಿ ಎಂದು ಸೂಚಿಸುವೆವು.

## ೧೦೪ ಕುಂಜಾರು ವಿಠಲೋಪಾಧ್ಯಾಯ ಮೈಸೂರ



ಶ್ರೀ ಪೇಜಾವರ ಶ್ರೀ ಪಾದಂಗಳವರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನಮಾಡಿ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿಠಲೋಪಾಧ್ಯಾಯರು ಮೈಸೂರಿನಲ್ಲಿರುವ ಮಾಧ್ವ ಮಹಾಮಂಡಲದ ವಿದ್ಯಾರ್ಥಿನಿಲಯದ ಸಂಚಾಲಕರಾಗಿದ್ದಾರೆ. ಈ ನಿಲಯವು ಆದರ್ಶ ಸಂಸ್ಥೆಯಾಗುವಂತೆ ತನು ಮನ ಧನದಿಂದ ದುಡಿದು ಹೊಸ ಪೀಳಿಗೆಯ ಹುಡುಗರಲ್ಲಿ ಧಾರ್ಮಿಕ ಭಾವನೆಯನ್ನು ಕುದುರಿಸುತ್ತಲಿದ್ದಾರೆ. ಸುಧಾದಿ ಗ್ರಂಥ ಪಾಠಗಳನ್ನು ಹೇಳಬಲ್ಲ ಇವರು ಈಗ ಪೇಜಾವರ ಮಠದ ಪರ್ಯಾಯ ಪೀಠದ ಆಸ್ಥಾನ ವಿದ್ವಾಂಸರಾಗಿದ್ದಾರೆ.

## ೧೦೫ ಕಡಿಯಾಳಿ ಲಕ್ಷ್ಮೀನಾರಾಯಣೋಪಾಧ್ಯಾಯ



ಕಡಿಯಾಳಿಯ ಮಹಿಷಮರ್ದಿನೀ ದೇವಸ್ಥಾನದ ಅರ್ಚಕರಾದ ಲಕ್ಷ್ಮೀನಾರಾಯಣೋಪಾಧ್ಯಾಯರು ಬೆಳ್ಳೆ ಶ್ರೀನಿವಾಸ ಉಪಾಧ್ಯಾಯರಲ್ಲಿ ಋಗ್ವೇದವನ್ನೂ ಶ್ರೀಅಧಮಾರುಮಠದ ಶ್ರೀ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರಲ್ಲಿ ಸುಧಾಂತ ವೇದಾಂತವನ್ನೂ ವ್ಯಾಸಾಂಗ ಮಾಡಿದರು. ಕರ್ಮಕಾಂಡದಲ್ಲಿ ನಿಪುಣರಾದ ಇವರು ಅನೇಕ ಕಡೆಗಳಲ್ಲಿ ಶ್ರೀ ಕೃಷ್ಣ ಮಂದಿರಾದಿ ಪ್ರತಿಷ್ಠಾಪನವೇ ಮುಂತಾದ ಧರ್ಮಕಾರ್ಯಗಳಲ್ಲಿ ಪ್ರಧಾನ ಯಾಜ್ಞಿಕರಾಗಿ ಕಾರ್ಯ ಮಾಡಿಸಿದ್ದಾರೆ.

## ೧೦೬ ಅನಂತಾಚಾರ್ಯ ಭೀಮಾಚಾರ್ಯ ಇಟಗಿ, ಮಾನ್ವಿ

ಅನಂತಾಚಾರ್ಯರು ತಮ್ಮ ತಂದೆಯವರಾದ ಭೀಮಸೇನಾಚಾರ್ಯರಲ್ಲಿ ಋಗ್ವೇದ ಸಂಹಿತ ಎಂಟು ಅಷ್ಟಕ, ಮತ್ತು ಪೂರ್ವಾಪರ ಯಾಜ್ಞಿಕ, ಅಲ್ಲದೆ ಪುರಾಣಗಳನ್ನು ವ್ಯಾಸಂಗ ಮಾಡಿರುತ್ತಾರೆ. ಇವರ ತಂದೆ ತಾತಂದಿರು ವ್ಯಾಕರಣ, ವೇದಾಂತಗಳಲ್ಲಿ ಮಹಾ ವಿದ್ವಾಂಸರಾಗಿದ್ದರು.

## ೧೦೭ ಪಾಂಡುರಂಗಿ ಗುರುರಾಜಾಚಾರ್ಯ, ಅಶೋಕನಗರ ಹುಬ್ಬಳ್ಳಿ



ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾದ ಪಾಂಡುರಂಗಿ ಕೃಷ್ಣಾಚಾರ್ಯರ ಮಕ್ಕಳಾದ ಶ್ರೀ ಗುರಾಚಾರ್ಯರು ಮಹಾ ಪ್ರತಿಭಾಶಾಲಿಯಾದ ಪಂಡಿತರು. ಪಾಠ ಪ್ರವಚನ ದೀಕ್ಷಿತರು. ವಾಕ್ಯಾರ್ಥ ಪಟುಗಳು. ಸಾಮಾಜಿಕ ಕಾರ್ಯಕರ್ತರು. ಮಾಧ್ವ ಮಹಾಮಂಡಳದ ಆಧಾರಸ್ತಂಭರು. ದ್ವೈತ ವೇದಾಂತದಲ್ಲಿ ನಿಷ್ಣಾತರು. ಸರಸ ಸಂಸ್ಕೃತ ಕವಿಗಳು. ವ್ಯವಹಾರದಲ್ಲಿಯೂ ಕುಶಲರು. ಇವರು ತಮ್ಮ ತಂದೆ ಕೃಷ್ಣಾಚಾರ್ಯರಲ್ಲಿ ನ್ಯಾಯ ಸಿದ್ಧಾಂತ ಕಾವ್ಯವನ್ನೂ, ಸೇತುಮಾಧವಾಚಾರ್ಯ ಕೂಡ್ಲಿ ಅಕ್ಷೋಭ್ಯತೀರ್ಥ ಸ್ವಾಮಿಗಳಲ್ಲಿ ವ್ಯಾಕರಣವನ್ನೂ ಹಾಗೂ ಕಕ್ಕಂದಿರಾದ, ಜಯಾಚಾರ್ಯ ಮತ್ತು ಯಜ್ಞ ವಿಠ್ಠಲಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ ಅಧ್ಯಯನ ಮಾಡಿ ಶ್ರೀಸತ್ಯಧ್ಯಾನ ತೀರ್ಥರಲ್ಲಿ ಸುಧಾ ವ್ಯಾಸತ್ರಯಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿದರು. ಬಾಲ್ಯದಿಂದಲೂ ಮಹಾ ಮೇಧಾವಿಗಳಾದ ಇವರು ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಕರತಲಾಮಲಕ ಮಾಡಿಕೊಂಡು ಧಾರವಾಡ, ವಿಜಾಪುರ ಮುಂತಾದ ಊರುಗಳಲ್ಲಿದ್ದು ಅನೇಕ ಜನರಿಗೆ ಸಚ್ಛಾಸ್ತ್ರಪಾಠ ಹೇಳಿದ್ದಾರೆ.

ಸಂಸ್ಕೃತ ಸಾಹಿತ್ಯದಲ್ಲಿ ಸರಸ ಕವಿಗಳಾಗಿದ್ದಾರೆ. 'ಮಧುರವಾಣಿ' ಸಂಸ್ಕೃತ ಪತ್ರಿಕೆಯಲ್ಲಿ ಇವರ ಕೆಲವು ಕವಿತೆಗಳು ಪ್ರಕಟವಾಗಿರುತ್ತವೆ. ವಿಜಾಪುರದಲ್ಲಿ ಸರ್ವಶ್ರೀ ಅಸುಂಡಿ ಕಂಕಣವಾಡಿ,ಮಂಗಳವೇಢೆ,ಸತ್ತಿ ಮಧ್ವಾಚಾರ್ಯ ಮುಂತಾದವರು ಇವರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಇವರು ಅಖಿಲ ಭಾರತ ಮಾಧ್ವ ಮಂಡಲದ ಪ್ರಧಾನ ಕಾರ್ಯದರ್ಶಿ, ಉಪಾಧ್ಯಕ್ಷರಾಗಿ ಕೆಲಸ ಮಾಡಿರುವರು.

## ೧೦೮ ರಾಮಮೂರ್ತಿ ಆಚಾರ್ಯರು, ತಿರುಪತಿ

ಇವರು ಮಹಾಮಹೋಪಾಧ್ಯಾಯ ಶ್ರೀ ಸೇತೂಮಾಧವಾಚಾರ್ಯರ ಅಳಿಯಂದಿರು. ತಮ್ಮ ಮಾವನವರಲ್ಲಿಯೇ ಸಾಹಿತ್ಯ, ವ್ಯಾಕರಣ, ವೇದಾಂತ ಶಿರೋಮಣಿ ಪರೀಕ್ಷೆ ಪಾಸು ಮಾಡಿದರು ಈಗ ತಿರುಪತಿಯ ಕಾಲೇಜವಲ್ಲಿ ಅಧ್ಯಾಪಕರಾಗಿರುವರು.

## ೧೮೯ ಉಡುಪಿಯ ಸೀತಾರಾಮಾಚಾರ್ಯರು



ಪ್ರಾತಃ ಸ್ಮರಣೀಯರಾದ ಶ್ರೀ ಸತ್ಯಧ್ಯಾನ ತೀರ್ಥರಿಗೆ ಘಟ್ಟದ ಮೇಲೆ ಇದ್ದಷ್ಟೇ ಶಿಷ್ಯರು ಘಟ್ಟದ ಕೆಳಗೂ ಇದ್ದರು. ಉಡುಪಿಯ ಅನೇಕ ಸ್ವಾಮಿಗಳಂತೆ ಅಸಂಖ್ಯ ಗೃಹಾಶ್ರಮಿಗಳೂ ಆ ಜ್ಞಾನಸಿಂಧುವಿನಿಂದ ಜ್ಞಾನಾಮೃತವನ್ನು ತಮ್ಮ ತಲೆಯ ಕಲಶಗಳಲ್ಲಿ ತುಂಬಿಕೊಂಡು ಧನ್ಯರಾದರು. ಅಂಥ ಧ್ಯಾನ ತೀರ್ಥರ ಜ್ಞಾನ ಲಾಭವನ್ನು ಪಡೆದ ಪರಶುರಾಮ ಕ್ಷೇತ್ರದ ಪುಣ್ಯಾತ್ಮರಲ್ಲಿ ಶ್ರೀ ಉಡುಪಿ ಸೀತಾರಾಮಾಚಾರ್ಯರೊಬ್ಬರು.

ಉಡುಪಿಯ ಸಂಸ್ಕೃತ ಪಾಠ ಶಾಲೆಯಲ್ಲಿಯೂ, ಮೈಸೂರಿನಲ್ಲಿಯೂ, ವೇದ, ತರ್ಕ, ವ್ಯಾಕರಣ, ಮೀಮಾಂಸಾದಿ ಶಾಸ್ತ್ರಗಳನ್ನು ಓದಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ಶ್ರೀ ಸೀತಾರಾಮಾಚಾರ್ಯರು ಶ್ರೀ ಸತ್ಯಧ್ಯಾನರಲ್ಲಿಯೂ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿ ಮಹಾ ಪಂಡಿತರಾದರು. ಇವರಿಗೆ ಪಾಠ ಹೇಳಿದ ಗುರುಗಳೆಲ್ಲರೂ ಮಹಾ ಮಹಾ ಪಂಡಿತರೇ ಆಗಿದ್ದಾರೆ. ಎಲ್ಲತ್ತೂರ ಕೃಷ್ಣಾಚಾರ್ಯ, ಶ್ರೀ ಪಿ. ನಾರಾಯಣಾಚಾರ್ಯ, ಶ್ರೀ ಶ್ರೀ ಸತ್ಯಧ್ಯಾನ ತೀರ್ಥರು. ಒಬ್ಬರಿಗಿಂತ ಒಬ್ಬರು ಮಿಗಿಲು. ಆ ಎಲ್ಲ ಗುರುಗಳಿಂದ ಕಣ-ಕಣಗಳನ್ನು ಕೂಡಿಸಿ ಜ್ಞಾನದ ರಾಶಿ ಮಾಡಿಕೊಂಡ ಪಂಡಿತರೇ ಶ್ರೀ ಉಡುಪರು.

ಶ್ರೀ ಸೀತಾರಾಮಾಚಾರ್ಯರ ಜ್ಞಾನಾಕಾರವು ವಿಚಿತ್ರವಾದುದು. ಅವರೊಂದು ಜಂಗಮ ಜ್ಞಾನಕೋಶವಿದ್ದಂತೆ. ಅವರ ಬತ್ತಳಿಕೆಯಲ್ಲಿ ಇಲ್ಲದ ಬಾಣವೇ ಇಲ್ಲ. ಅವರ ಮಿದುಳಿಗೆ ಹತ್ತದ ವಿಷಯವೇ ಇಲ್ಲ.

ಉತ್ತರ ಕರ್ನಾಟಕದಲ್ಲಿ ಶ್ರೀ ಸತ್ಯಧ್ಯಾನ ತೀರ್ಥರು ಸಂಚರಿಸುತ್ತಿದ್ದಾಗ ವ್ಯಾಸನ ತೋಳಿನ ಖಟ್ಲೆಯು ಎಲ್ಲ ಬ್ರಾಹ್ಮಣರ ಮನಸ್ಸನ್ನು ಕೆರಳಿಸಿತ್ತು. ಇಲ್ಲಿಯ ಕೆಲವು ವೀರಶೈವ ಮುಖಂಡರು ಊರೂರಿಗೆ ವ್ಯಾಸನ ತೋಳಿನ ಮೆರವಣಿಗೆಯನ್ನು ಮಾಡುತ್ತಲಿದ್ದರು.

ಶ್ರೀ ವೇದವ್ಯಾಸ ದೇವರು ತಮ್ಮ ಪುರಾಣಗಳಲ್ಲೆಲ್ಲ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸಿ ಶಿವನಿಗೆ ವಿಷ್ಣುವಿನಿಗಿಂತ ನೈಚ್ಯಾನ್ಯಪಕರ್ಷವನ್ನು ಹೇಳಿದ್ದರಿಂದ ಸಿಟ್ಟಾಗಿ ಒಂದು ಹೊಸ ಕಟ್ಟು ಕಥೆಯನ್ನು ಕಲ್ಪಿಸಿದರು. ಶಿವನಿಗೆ ಅಪಕರ್ಷಾಧಾಯಕ

ವಾದ ಸೂತ್ರ, ಭಾರತ ಪುರಾಣಗಳನ್ನು ಬರೆದ ವ್ಯಾಸರ ಕೈಯನ್ನು ವೀರಭದ್ರನು ಕಡಿದು ಹಾಕಿದನಂತೆ. ವೀರಭದ್ರನು ಕಡಿದ ಆ ವ್ಯಾಸನ ತೋಳನ್ನು ಊರೂರಿಗೆ ಮೆರಿಸಿ ಕುಣಿದಾಡುವದು ಆ ಸಮಾಜದ ಸಂಪ್ರದಾಯವಾಗಿತ್ತು. ಅದರಿಂದ ಮನ ನೊಂದ ಅನೇಕ ವೈದಿಕ, ಲೌಕಿಕ ಜನರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಬಿನ್ನವಿಸಿ ಕೊಂಡರು. ಅವರ ಪ್ರೇರಣೆಯಂತೆ ವಿಜಾಪುರ ಜಿಲ್ಲೆಯ ಕೆಲವು ಪ್ರತಿಷ್ಠಿತ ವಕೀಲರು ವ್ಯಾಸನ ತೋಳಿನ ಮೆರವಣಿಗೆಗೆ ವಿರುದ್ಧ ಕಾಯ್ದೆ ಕ್ರಮವನ್ನು ಕೈಕೊಂಡರು.

ಅದರಲ್ಲಿ ಬ್ರಾಹ್ಮಣರ ಪರವಾಗಿ ಶ್ರೀ ವೇದವ್ಯಾಸರ ನಿಷ್ಪಕ್ಷಪಾತವಾದ ನಿರ್ದುಷ್ಟ ಧೋರಣೆ, ವಿರಾಡ್ ವ್ಯಕ್ತಿತ್ವವನ್ನು ಸರಿಯಾಗಿ ಪ್ರಮಾಣವಚನಪೂರ್ವಕ ವಾಗಿ ತೋರಿಸಬಲ್ಲ ಬಹುಶ್ರುತರೂ, ಮೇಧಾವಿಗಳೂ, ಪ್ರತ್ಯುತ್ಪನ್ನಮತಿಗಳೂ, ವೇದಶಾಸ್ತ್ರ ಪುರಾಣಗಳ ವಿಷಯಗಳನ್ನೆಲ್ಲ ಬೇಕಾದಾಗ ಬೇಕಾದುದನ್ನು ಉದಾ ಹರಿಸಬಲ್ಲವರೂ ಆದ ಒಬ್ಬ ವಿದ್ವಾಂಸರು ಬೇಕಾಗಿದ್ದರು. ಆ ಕಾರ್ಯಕ್ಕೆ ಶ್ರೀ ಸತ್ಯ ಧ್ಯಾನ ತೀರ್ಥರು ಶ್ರೀ ಉಡುಪಿ ಸೀತಾರಾಮಾಚಾರ್ಯರನ್ನು ನೇಮಿಸಿದರು.

ಆಚಾರ್ಯರು ತಮ್ಮ ನಿರಂತರ ಗ್ರಂಥಾವಲೋಕನ, ವೇದಾರ್ಥ ಪರಿಜ್ಞಾನ, ಪುರಾಣಗಳ ತುಲನಾತ್ಮಕ ಅಭ್ಯಾಸ, ಸರ್ವ ಸಂಪ್ರದಾಯಗಳ ಮೂಲ ಮೀಮಾಂಸಾ ಪಟುತ್ವ ಮುಂತಾದ ಗುಣಗಳಿಂದ ಆ ಮೊಕದ್ದಮೆಯಲ್ಲಿ ಎಲ್ಲ ಎದುರು ಸಾಕ್ಷಿಗಳನ್ನು ತೆಪ್ಪಗೆ ಕೂಡಿಸಿ ಪ್ರತಿವಾದಿ ವಕೀಲರ ಬಾಯಿಗೆ ಬೀಗಹಾಕಿ ಬೆರಗುಗೊಳಿಸಿದರು.

ಸುವ್ಯವಸ್ಥಿತವಾಗಿ ತರ್ಕಶಾಸ್ತ್ರದ ವಾದ ಪದ್ಧತಿಯಿಂದ ಅಸಂಖ್ಯ ಪ್ರಮಾಣ ವಚನಗಳಿಂದ ವಿಷಯಗಳನ್ನು ಮಂಡಿಸುವ ಆಚಾರ್ಯರ ಕೌಶಲ್ಯಪೂರ್ಣವಾದ ಸಾಕ್ಷಿಯನ್ನು ಕೇಳಿ ನ್ಯಾಯಮೂರ್ತಿಗಳು ಕೂಡ ಬೆರಗಾದರು. ಕೊನೆಗೆ ಆ ವ್ಯಾಸನ ತೋಳಿನ ಮೆರವಣಿಗೆಯನ್ನು ಮಾಡುವದು ಕಾಯದೇ ಕ್ರಮದಿಂದಲೇ ತಡೆಹಿಡಿಯ ಲ್ಪಟ್ಟಿತು.

ಇವೇ ಮೊದಲಾದ ಅನೇಕ ಕಾರ್ಯಗಳಿಂದ ತಮ್ಮಲ್ಲಿ ಸಮಗ್ರ ವೇದಾಂತ ವನ್ನು ಓದಿದ ಶಿಷ್ಯನ ಮೇಲೆ ವಿಚಿತ್ರ ಪ್ರೇಮಾಭಿಮಾನಿಗಳು ತುಳುಕಿದ್ದವು ಶ್ರೀ ಸತ್ಯ ಧ್ಯಾನರಲ್ಲಿ.

ಶ್ರೀ ಸೀತಾರಾಮಾಚಾರ್ಯರಿಗೂ ತಮ್ಮ ಗುರುಗಳ ಬಗ್ಗೆ ಅಗಾಧ ಶ್ರದ್ಧೆ ಇದೆ. ಸೀತಾರಾಮಾಚಾರ್ಯರಿಗೆ ಒಂದು ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾಗಬೇಕೆಂದು ಸರಕಾರದ ವಿದ್ಯಾ ಇಲಾಖೆಯಿಂದ ತಂತೀ ಮೂಲಕವಾಗಿ ಆದೇಶ ಬಂದಿತ್ತು. ಅವರು ಅದನ್ನು ಹಿಡಿದುಕೊಂಡು ಶ್ರೀ ಸತ್ಯಧ್ಯಾನರ ಕಡೆಗೆ ಹೋಗಿ ಅದನ್ನು ತೋರಿಸಿ 'ಏನು ಮಾಡಲಿ' ಎಂದು ಕೇಳಿದರು.

ಅದಕ್ಕೆ ಧ್ಯಾನತೀರ್ಥರು ನನ್ನಲ್ಲಿ ಓದಿದ ಶಾಸ್ತ್ರ ಪಂಡಿತರು ಸಂಬಳ ತೆಗೆದು ಕೊಂಡು ಪಾಠ ಹೇಳುವದು ವಿದ್ಯೆಯನ್ನು ಮಾರಿಕೊಳ್ಳುವದು ನನಗಂತೂ ಮನಸ್ಸಿಗೆ ಬರುವದಿಲ್ಲ ಎಂದು ನುಡಿದರು.

ಅದನ್ನು ಕೇಳಿ ಕೂಡಲೇ ಸೀತಾರಾಮಾಚಾರ್ಯರು ತಮಗೆ ಆಗುವದಿಲ್ಲವೆಂದು ಮರಳಿ ತಂತೀ ಕೊಟ್ಟು ಆ ಉದ್ಯೋಗವನ್ನು ಬಿಟ್ಟುಬಿಟ್ಟರು. ಇದರಿಂದ ಶ್ರೀ ಧ್ಯಾನ ತೀರ್ಥರು ಪರಮ ಪ್ರೀತರಾಗಿ ಅವರನ್ನು ವಿಜಾಪುರದಲ್ಲಿ ಒಂದು ಪಾಠ ಶಾಲೆಯನ್ನು ಮಾಡಿ ಅಧ್ಯಾಪಕರೆಂದು ನೇಮಿಸಿದರು.

ಆಚಾರ್ಯರು ಮದುವೆಮಾಡಿಕೊಳ್ಳಬೇಕೆಂದು ಸಿದ್ಧರಾಗಿ ಸತ್ಯಧ್ಯಾನತೀರ್ಥರ ಅಪ್ಪಣೆ ತೆಗೆದುಕೊಳ್ಳಲಿಕ್ಕೆ ನಮಸ್ಕಾರ ಮಾಡಿದಾಗ ಆ ಗುರುಗಳು ಈ ಮದುಮಗನ ಉಡಿಯಲ್ಲಿಹಾಕಿದ್ದು ಬರೀ ಮಂತ್ರಾಕ್ಷತೆ ಕಾಳುಗಳಲ್ಲ ೩೫ತೊಲಿ ಸುವರ್ಣ ನಾಣ್ಯಗಳು.

"ಸಂಸ್ಕೃತ ಪಂಡಿತರ ಕುಟುಂಬಗಳು ಭಿಕ್ಷುಕ ಬ್ರಾಹ್ಮಣರಂತೆ ಬಾಳಬಾರದು. ಸಮಾಜದಲ್ಲಿ ಸಂಪನ್ನರಾಗಿ ಬಾಳಬೇಕು. ತಲೆ ಎತ್ತಿ ನಿಲ್ಲಬೇಕು. ಈ ಬಂಗಾರವನ್ನು ನಿನ್ನ ಹೆಂಡತಿಯ ಮೇಲೆ ಇಟ್ಟು ವೈಭವದಿಂದ ಮದುವೆಯನ್ನು ಮಾಡಿಕೊಂಡು ಸಂಸಾರ ಮಾಡು" ಎಂದು ಹೇಳಿ ಒಂದು ಸಾವಿರ ರೂಪಾಯಿ ಮದುವೆಯ ಮೇಲಿನ ಖರ್ಚಿಗೆ ಕೊಟ್ಟು ಕಳುಹಿದರಂತೆ. ಈ ಸುದ್ದಿಯನ್ನು ಹೇಳುವಾಗ ಆಚಾರ್ಯರಿಗೆ ಆ ಗುರುವಿನ ಕರುಣೆಯನ್ನು ನೆನೆದು ಕಣ್ಣು ನೆನೆದು ಹೋಗುತ್ತದೆ. ಮೈಮೇಲೆ ಹಿಗ್ಗಿನ ಮುಳ್ಳು ಎದ್ದು ನಿಲ್ಲುತ್ತದೆ.

ಮತ್ತೊಂದು ಸಂದರ್ಭದಲ್ಲಿ ಶ್ರೀಗಳವರು ಯಾವ ಸ್ವಾಮಿಗಳದೂ, ಯಾವ ಗ್ರಹಸ್ಥರದೂ ಹಂಗು ಇಲ್ಲದಂತೆ ನೀನು ಸ್ವತಂತ್ರನಾಗಿ ಬದುಕುವಂತಾಗಲಿ ಎಂದು ಹೇಳಿ ಉಡುಪಿಯಲ್ಲಿಯೇ ತುಂಬು ಜೀವನಕ್ಕೆ ಸಾಕಾಗಬಹುದಾದಷ್ಟು ಭತ್ತದ ಗದ್ದೆಯನ್ನು ಕೊಂಡು ಕೊಟ್ಟು, ಮನೆಯನ್ನೂ ಕಟ್ಟಿಸಿ ಕೊಟ್ಟರು. ಮಠದ ಭೂಮಿ ಯನ್ನೂ ಅವರಿಗೆ ಮಾಡಲಿಕ್ಕೆ ಬಿಟ್ಟರು.

ಈಗ ಆಚಾರ್ಯರು ಆ ಮನೆಯಲ್ಲಿದ್ದು ಅವರು ಕೊಟ್ಟ ಹೊಲದಿಂದಲೇ ಜೀವಿ ಸುತ್ತಲಿದ್ದಾರೆ.

### ೧೧೧ ಶ್ರೀ ಬಿ. ಕೃಷ್ಣಾಚಾರ್ಯ ತಿರುಪತಿ

ಮಹಾಮಹೋಪಾಧ್ಯಾಯ ಶ್ರೀ ಸೇತೂಮಾಧವಾಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿದ ಕೃಷ್ಣಾಚಾರ್ಯರು ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತವನ್ನು ಓದಿದರು. ಈಗ ಉತ್ತರಾದಿ ಮಠಾಧಿಕಾರಿಗಳಾಗಿ ತಿರುಪತಿಯಲ್ಲಿ ಶ್ರೀ ಮಠದ ಆಶ್ರಯದಲ್ಲಿ ಇರುತ್ತಾರೆ.

## ೧೧೧ ಪುತ್ತೂರು ಸುಬ್ರಹ್ಮಣ್ಯ ತಂತ್ರಿಗಳು



ಶ್ರೀ ಪುತ್ತೂರು ಸುಬ್ರಹ್ಮಣ್ಯ ತಂತ್ರಿಗಳು ಬೋಧಾಯನ ಪೌರೋಹಿತ್ಯದಲ್ಲಿ ಶ್ರೇಷ್ಠರೆನಿಸಿಕೊಂಡು ದ್ವೈತ ವೇದಾಂತ ಪಂಡಿತರೂ ಆಗಿದ್ದಾರೆ. ಉಡುಪಿಯಲ್ಲಿ ಇವರನ್ನು ಅರಿಯದವರು ವಿರಳ. ಇವರ ತಂದೆ ಪುತ್ತೂರು ಕೃಷ್ಣ ತಂತ್ರಿಗಳು. ಶ್ರೀಸುಬ್ರಹ್ಮಣ್ಯ ತಂತ್ರಿಗಳು ಉಡುಪಿಯ ಮಧ್ವ ಸಿದ್ಧಾಂತ ಪ್ರಬೋಧಿನಿ ಸಂಸ್ಕೃತ ಪಾಠ ಶಾಲೆಯಲ್ಲಿ ಯಜುರ್ವೇದ ಸಂಸ್ಕೃತ ವಿದ್ಯಾಭ್ಯಾಸವನ್ನು ಮುಗಿಸಿ ೧೯೩೦ ರಲ್ಲಿ ಮದ್ರಾಸ ವಿಶ್ವವಿದ್ಯಾಲಯದ ದ್ವೈತ ವೇದಾಂತ ಶಿರೋಮಣಿ ಪದವೀಧರರಾದರು. ೧೯೩೫ ರಲ್ಲಿ ಮೈಸೂರಿನ ಮಹಾರಾಜರಿಂದ ವಿಶೇಷ ಸಂಭಾವನೆ ಮತ್ತು ಮಾನ ಪತ್ರಗಳ ಮೂಲಕ ಸನ್ಮಾನಿತರಾಗಿದ್ದಾರೆ. ಹರಿಪದವನ್ನೈದ ಉಡುಪಿ ಶಿರೂರ ಮಠದ ಶ್ರೀ ಲಕ್ಷ್ಮೀಂದ್ರ ತೀರ್ಥ ಶ್ರೀ ಚರಣರಲ್ಲಿ ನ್ಯಾಯಸುಧಾವನ್ನು ವ್ಯಾಸಂಗ ಮಾಡಿ ಗುರುಗಳ ಅನುಗ್ರಹಕ್ಕೆ ಪಾತ್ರರಾದರು. ಶ್ರೀಉತ್ತರಾದಿ ಮಠದ ಸತ್ಯಧ್ಯಾನ ತೀರ್ಥರು ನಡೆಸುತ್ತಿದ್ದ ತಿರುಪತಿ ಪದ್ಮ ಸರೋವರದ ಮಧ್ವಸಿದ್ಧಾಂತೊ ನ್ನಾಹಿನಿ ಸಭೆಯಲ್ಲಿಯೂ ಶ್ರೀ ಶ್ರೀ ಭಂಡಾರಕೇರಿ ಶ್ರೀಗಳವರ ಸಭೆಗಳಲ್ಲಿಯೂ ಭಾಗವಹಿಸಿ ವಿದ್ವತ್ ಗೋಷ್ಠಿಗಳಲ್ಲಿ ದ್ವೈತ ಸಿದ್ಧಾಂತದಲ್ಲಿ ವಾಕ್ಯಾರ್ಥ ನಡೆಸಿ ಸಫಲರಾಗಿದ್ದಾರೆ.

ಇಂದಿಗೆ ೭೪ ವರ್ಷದವರಾದರು. ಪಾಂಡಿತ್ಯಪೂರ್ಣ ಪೌರೋಹಿತ್ಯ, ಪಾಠ ಪ್ರವಚನ ಕ್ರಮವಾಗಿ ನಡೆಯುತ್ತಲಿವೆ.

## ೧೧೨ ವಿಜಯಿಂದ್ರ ರಾಘವೇಂದ್ರಾಚಾರ್ಯ ಪುರಾಣಿಕ ತುಮಕೂರ

ಶ್ರೀ ಆಚಾರ್ಯರು ಮಹಾ ತಪಸ್ವಿಗಳೆಂದು ಪ್ರಸಿದ್ಧರಾಗಿದ್ದ ಕೃಷ್ಣಾಚಾರ್ಯರ ಮಕ್ಕಳು. ಶ್ರೀ ರಾಘವೇಂದ್ರಾಚಾರ್ಯರು ಬಾಲ್ಯದಲ್ಲಿ ರಾಮಣ್ಣಾಚಾರ್ಯರಲ್ಲಿ ಕೆಲವು ಕಾಲ ವ್ಯಾಸಂಗ ಮಾಡಿ ನಂತರ ಹೊಳವನಹಳ್ಳಿ ಶ್ರೀ ಮುತ್ಯಾ ಶ್ರೀ ಭೀಮಾಚಾರ್ಯರಲ್ಲಿ ಶಾಂತಿ ಪಾಠ ಪೂರ್ವಕವಾಗಿ ಅಧ್ಯಯನ ಮಾಡಿದರು. ಆಚಾರ್ಯರು ಧರ್ಮ ಶಾಸ್ತ್ರ ಪುರಾಣಗಳಲ್ಲಿ ವಿಶೇಷ ವ್ಯಾಸಂಗ ಮಾಡಿರುವರು.

ಭಾಗವತ ಪುರಾಣವನ್ನು ಹೇಳುವದರಲ್ಲಿ ಶ್ರೀ ಆಚಾರ್ಯರು ಪ್ರಸಿದ್ಧರು. ಈಗ ೮೦ ರ ವಯಸ್ಸಾಗಿದ್ದರೂ ಪುರಾಣ ಪ್ರವಚನ ಮಾಡುತ್ತಿರುತ್ತಾರೆ. ಅನೇಕ ಪೀಠಾಧಿಪತಿಗಳು ಇವರ ಪುರಾಣವನ್ನು ಕೇಳಿ, ಸಂತೋಷಪಟ್ಟು ಅನುಗ್ರಹಿಸಿದರು.

## ೧೧೩ ವಿದ್ವಾನ್ ಅರ್ಚಕ ರಾಘವೇಂದ್ರಾಚಾರ್ಯರು

ಶ್ರೀ ಅರ್ಚಕ ರಾಘವೇಂದ್ರಾಚಾರ್ಯರು ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ವೃಂದಾವನ ಪೂಜೆಯನ್ನು ಮಾಡುವ ಸೌಭಾಗ್ಯವನ್ನು ವಂಶ ಪರಂಪರೆಯಾಗಿ ಪಡೆದ ಪುಣ್ಯಾತ್ಮರು.



ಶ್ರೀ ರಾಘವೇಂದ್ರಾಚಾರ್ಯರು ಸಂಸ್ಕೃತ ಮಹಾ ಪಾಠಶಾಲಾ ಮೈಸೂರಿನಲ್ಲಿ ತರ್ಕ, ವೇದಾಂತ, ಸಾಹಿತ್ಯ ಮತ್ತು ವೇದಾಧ್ಯಯನಗಳನ್ನು ಪಡೆದು ಪಂಡಿತ ರಾಗಿರುವರು.

ಈಗ ಮಂತ್ರಾಲಯದ ಶ್ರೀಗುರು ಸಾರ್ವಭೌಮ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಾರೆ. ೪೦–೫೦ ವಿದ್ಯಾರ್ಥಿಗಳನ್ನು ಮೈಸೂರ ವಿದ್ವತ್ ಪರೀಕ್ಷೆಗೂ ಮತ್ತು ಮದ್ರಾಸ ಎಂಟ್ರನ್ಸ ಪರೀಕ್ಷೆಗೂ ಕಳಿಸಿದ್ದು ಅವರೆಲ್ಲರೂ ಉತ್ತೀರ್ಣರಾಗಿರುವರು. ತತ್ವಪ್ರಕಾಶಿಕಾ, ಅನುವ್ಯಾಖ್ಯಾನ ಮುಂತಾದ ಗ್ರಂಥಗಳ ಪಾಠಗಳು ಈಗ ನಡೆಯುತ್ತಲಿವೆ. ಸಮೀರ ಸಮಯ ಸಂವರ್ಧಿನೀ ಸಭಾ, ಮಾಧ್ವರಾದ್ಧಾಂತ ಸಂವರ್ಧಿನಿ ಸಭೆಗಳಲ್ಲಿ ಭಾಗವಹಿಸುತ್ತಿರುವರು. ಈಗ ಇವರಿಗೆ ೬೬ ವರ್ಷಗಳಾಗಿವೆ. ಉತ್ತಮವಾಗಿ ಪುರಾಣವನ್ನೂ ಪ್ರವಚನಗಳನ್ನೂ ಅಲ್ಲಲ್ಲಿ ಮಾಡುತ್ತಿರುತ್ತಾರೆ.

ಶ್ರೀಗುರು ಸಾರ್ವಭೌಮರಾದ ಶ್ರೀ ರಾಘವೇದ್ರಸ್ವಾಮಿಗಳೇ ಗದುಗಿನಲ್ಲಿದ್ದ ಇವರ ಪೂರ್ವೀಕರಾದ ತಿಮ್ಮಣ್ಣಾಚಾರ್ಯರೆಂಬುವರನ್ನು ಮಂತ್ರಾಲಯಕ್ಕೆ ಕರೆಯಿಸಿ ಕೊಂಡು ಮುಂದೆ ತಮ್ಮ ವೃಂದಾವನ ಪೂಜೆಯನ್ನು ವಂಶಪಾರಂಪರ್ಯವಾಗಿ ಮಾಡ ಬೇಕೆಂದು ಆಜ್ಞಾಪಿಸಿ ದಾನ ಪತ್ರ ಬರೆದುಕೊಟ್ಟು ತಮ್ಮ ಪಾದಸ್ಪರ್ಶವಾದ ಪಾದುಕೆ ಗಳನ್ನು ಅನುಗ್ರಹಿಸಿ ಆಶೀರ್ವದಿಸಿರುವರು.

ಈಗಲೂ ಈ ಪಾದುಕೆಗಳು ಶ್ರೀ ಆಚಾರ್ಯರ ಮನೆಯಲ್ಲಿ ಪೂಜೆಗೊಳ್ಳುತ್ತಲಿದ್ದು ಶ್ರೀಗಳವರ ವೃಂದಾವನ ಸೇವೆಯಿಂದಲೇ ಉಪಜೀವಿಸುತ್ತಲಿರುವರು.

## ೧೧೪ ತೊರವಿ ಕೃಷ್ಣಮೂರ್ತಿ ಆಚಾರ್ಯ

ಶ್ರೀ ಧಾರಾಪೂರ ಕೃಷ್ಣಮೂರ್ತಿ ಆಚಾರ್ಯರಲ್ಲಿ ನವೀನ ನ್ಯಾಯವನ್ನು ಓದಿ ತರ್ಕ ಶಿರೋಮಣಿ ಪರೀಕ್ಷೆಯಲ್ಲಿ ಪಾಸಾದರು. ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ತಿರುಪತಿ ಪಾಠ ಶಾಲೆಯಲ್ಲಿ ಕೆಲವು ದಿನ ಪ್ರಿನ್ಸಿಪಾಲರಾಗಿದ್ದರು. ಪ್ರಾರಂಭದಲ್ಲಿ ಶ್ರೀ ಗುತ್ತಲ ಗುರಾಚಾರ್ಯ ಮೊದಲಾದವರಿಗೆ ತರ್ಕ ಪಾಠವನ್ನು ಹೇಳಿದ್ದಾರೆ. ಈಗ ಮದ್ರಾಸಿನಲ್ಲಿ ವಾಸಮಾಡಿದ್ದಾರೆ.

## ೧೧೫ ಉಡುಪಿ ಅನಂತ ಪದ್ಮನಾಭ ತಂತ್ರಿಗಳು



ಶ್ರೀ ಅನಂತ ಪದ್ಮನಾಭ ತಂತ್ರಿಗಳು ಉಡುಪಿ ಚಂದ್ರ ಮೌಳೀಶ್ವರ ದೇವಸ್ಥಾನದ ಪ್ರಧಾನ ಅರ್ಚಕರಾದ ಸೀತಾರಾಮ ತಂತ್ರಿಗಳ ಮಕ್ಕಳು. ಉಡುಪಿಯ ಸಂಸ್ಕೃತ ಪ್ರೌಢ ಶಾಲೆಯಲ್ಲಿ ವ್ಯಾಸಂಗ ಮಾಡಿ ದ್ವೈತ ವೇದಾಂತ ಶಿರೋಮಣಿಯಲ್ಲಿ ಉತ್ತೀರ್ಣರಾದರು.

ಶ್ರೀ ಶಿರೂರ ಮಠದ ಶಿಷ್ಯರಾದ ಇವರು ಶ್ರೀ ಪಡನುನ್ನೂರ ನಾರಾಯಣಾಚಾರ್ಯ ಮತ್ತು ಅಗ್ರಹಾರ ನಾರಾಯಣ ತಂತ್ರಿಗಳು ಇವರಲ್ಲಿ ದ್ವೈತ ಸಿದ್ಧಾಂತದ ಪ್ರಮೇಯ ಗ್ರಂಥ ತತ್ವ ಪ್ರಕಾಶಿಕಾ, ಸುಧಾದಿಗಳನ್ನು ವ್ಯಾಸಂಗ ಮಾಡಿದ್ದಾರೆ. ಅಲ್ಲದೆ ಯಜುರ್ವೇದ, ಪೌರೋಹಿತ್ಯ, ತಾಂತ್ರಿಕ ಹವನಾದಿಗಳನ್ನೂ, ದೇವಸ್ಥಾನಕ್ಕೆ ಸಂಬಂಧಿಸಿದ ಆಗಮಗಳನ್ನೂ ಅಧ್ಯಯನ ಮಾಡಿ ಪ್ರಸಿದ್ಧರಾಗಿದ್ದಾರೆ.

ಶ್ರೀ ಭಂಡಾರಕೇರಿ ಮಠದ ಸಭೆ, ಉತ್ತರಾದಿ ಮಠದ ಸಭೆ, ತಿರುಪತಿ ಪದ್ಮ ಸರೋವರದ ಸಭೆಗಳಲ್ಲಿ ಭಾಗ ವಹಿಸಿ ಸಫಲರಾಗಿದ್ದಾರೆ.

೪೦ ವರ್ಷದ ಇವರು ವಿದ್ಯಾರ್ಥಿಗಳಿಗೆ ವೇದ ಮತ್ತು ಶಾಸ್ತ್ರಗಳ ಪಾಠ ಹೇಳುತ್ತ, ದೇವಸ್ಥಾನದಲ್ಲಿ ಅರ್ಚಕ, ಮತ್ತು ತಾಂತ್ರಿಕ ಕೆಲಸಗಳನ್ನು ಮಾಡುತ್ತಿರುತ್ತಾರೆ.

## ೧೧೬ ಸಿ. ಎಚ್. ನರಸಿಂಹಾಚಾರ್ಯರು

ಶ್ರೀ ನರಸಿಂಹಾಚಾರ್ಯರು ಉಡುಪಿಯ ಎಸ್. ಎಂ. ಎಸ್. ಪಿ. ಸಂಸ್ಕೃತ ಮಹಾ ಪಾಠಶಾಲಾದಲ್ಲಿ ಅಧ್ಯಯನ ಮಾಡಿ ದ್ವೈತ ವೇದಾಂತ ಶಿರೋಮಣಿ ಪರೀಕ್ಷೆಯನ್ನು ಉತ್ತೀರ್ಣರಾಗಿರುವರು. ಶ್ರೀ ಪಡಮುನ್ನೂರ ನಾರಾಯಣಾಚಾರ್ಯರು ಶ್ರೀ ಗುರಗುಂಡಿ ರಾಮಾಚಾರ್ಯರು ಇವರ ಗುರುಗಳು.

ಶ್ರೀಮನ್ನ್ಯಾಯಸುಧಾ, ನ್ಯಾಯಾಮೃತ ತರಂಗಿಣೆ ಮುಂತಾದ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿರುವರು. ಶ್ರೀ ಕಾಣಿಯೂರ ಮಠದ ಶ್ರೀ ಶ್ರೀ ವಿದ್ಯಾಸಮುದ್ರತೀರ್ಥರಲ್ಲಿ ಸಮಗ್ರ ಸುಧಾ ಪಾಠವಾಗಿರುವದು. ಇವರ ತಂದೆಯ ಹೆಸರು ಗುರುರಾಜ ಉಪಾಧ್ಯಾಯರು. ವಯಸ್ಸು ೫೪. ಶ್ರೀ ಕಾಣಿಯೂರ ಮಠದಲ್ಲಿ ಪಾರಾಯಣ ಮಾಡುವದು ಪಾಠ ಹೇಳುವದು ಇವರ ವೃತ್ತಿಯಾಗಿದೆ.

## ೧೧೭ ಬಿ. ಶ್ರೀನಿವಾಸ ಸಾಮಗರು



ಶ್ರೀ ಬಿ. ಶ್ರೀನಿವಾಸ ಸಾಮಗರು ಉಡುಪಿ ಶ್ರೀಕೃಷ್ಣಮಠದ ವಾದಿರಾಜ ಪ್ರತಿಷ್ಠಿತ ಸುಬ್ರಹ್ಮಣ್ಯ ದೇವರ ಅರ್ಚಕರು. ಇವರ ತಂದೆಯವರು ದಾಸಪ್ಪ ಸಾಮಗರು. ಶ್ರೀನಿವಾಸ ಸಾಮಗರು ತಂದೆಯವರಿಂದ ಸಾಮವೇದವನ್ನು ಕಲಿತು ಉಡುಪಿಯ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ದ್ವೈತ ಸಿದ್ಧಾಂತವನ್ನು ವ್ಯಾಸಂಗ ಮಾಡಿ ಮದ್ರಾಸ ವಿಶ್ವವಿದ್ಯಾಲಯದ ದ್ವೈತ ವೇದಾಂತ ಶಿರೋಮಣಿ ಪದವೀಧರರಾದರು.

ಮೈಸೂರಿನ ವೇದಾಂತ ವಿದ್ವತ್ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಶ್ರೀ ಮೈಸೂರ ಮಹಾರಾಜರವರಿಂದ ಸಂಭಾವನೆ ಶಾಲು ಜೋಡಿಗಳಿಂದ ಸನ್ಮಾನಿತರಾದರು. ಉಡುಪಿ ಅದಮಾರು ಮಠದ ಶ್ರೀ ವಿಬುಧಪ್ರಿಯ ತೀರ್ಥ ಶ್ರೀಗಳವರಲ್ಲಿ ಶ್ರೀಮನ್ ನ್ಯಾಯ ಸುಧಾ ಅಧ್ಯಯನ ನಡೆಯಿಸಿ ಮಂಗಳ ಕಾಲದಲ್ಲಿ ಶ್ರೀಗಳವರಿಂದ ಚಿನ್ನದ ಕಡಗದ್ವಯದಿಂದ ಸನ್ಮಾನಿತರಾದರು. ಉಡುಪಿಯ ಕಾಣಿಯೂರ ಮಠದ ವಿದ್ಯಾಸಮುದ್ರತೀರ್ಥ ಶ್ರೀಗಳವರು ಇವರ ಸಹಾಧ್ಯಾಯಿಗಳು.

ಶ್ರೀ ಭೀಮನಕಟ್ಟೀ ಮಠದ ಪ್ರಕೃತ ಪೀಠಾಧಿಪತಿಗಳಾದ ಶ್ರೀ ರಘುತಿಲಕತೀರ್ಥ ಶ್ರೀಗಳವರಿಗೆ ಪಾಠ ಪ್ರವಚನವನ್ನು ಮಾಡಿಸಿರುವರು. ಭೀಮನಕಟ್ಟೆಯಲ್ಲಿಯ ಸಂಸ್ಕೃತ ಪಾಠಶಾಲೆಯಲ್ಲಿ ಕೆಲಸ ಮಾಡುತ್ತ ಆ ಮಠದ ಮಹಾ ವಿದ್ವಾಂಸರಾಗಿದ್ದಾರೆ.

ಶ್ರೀ ರಾಘವೇಂದ್ರ ಮಠದ ಶ್ರೀ ಸುಶೀಲೇಂದ್ರತೀರ್ಥ ಶ್ರೀಪಾದಂಗಳವರಿಂದ ವಿಶೇಷವಾಗಿ ಪುರಸ್ಕೃತರಾಗಿದ್ದಾರೆ. ಅಲ್ಲದೆ ತಿರುಪತಿ ಉನ್ಹಾಹಿನಿ ಸಭಾ, ಮಧ್ವ ಸಿದ್ಧಾಂತ ಅಭಿವೃದ್ಧಿಕಾರಿಣಿ ಸಭಾ, ಭಂಡಾರಕೇರಿ ಮಠದ ಸಭಾ, ಮುಂತಾದವುಗಳಲ್ಲಿ ಭಾಗವಹಿಸಿರುವರು. ಈಗಿನ ತಮ್ಮ ೬೮ನೇ ವರ್ಷದಲ್ಲಿಯೂ ಪಾಠ ಪ್ರವಚನ ನಿರತರಾಗಿ, ಸದಾಚಾರ ಸಂಪನ್ನರಾಗಿ, ಜೀವನ ನಡೆಸುತ್ತ ಇದ್ದಾರೆ.

## ೧೧೮ ವೈ. ಲಕ್ಷ್ಮೀನಾರಾಯಣಭಟ್ಟ

ಇವರು ಋಗ್ವೇದ ಪೌರೋಹಿತ್ಯ ಆಶ್ವಲಾಯನ ಪೂರ್ವಾಪರಗಳನ್ನು ಅಧ್ಯಯನ ಮಾಡಿ ವೇದಾಂತದ ಕೆಲವು ಪ್ರಾಚೀನ ಗ್ರಂಥಗಳನ್ನು ಓದಿರುತ್ತಾರೆ.

## ೧೧೯ ಕಾಶೀ ಹರಿದಾಸಾಚಾರ್ಯರು

ಉಡುಪಿಯಲ್ಲಿ ಕಾವ್ಯ ಸಾಹಿತ್ಯ ಅಧ್ಯಯನವನ್ನು ಮಾಡಿದ ಶ್ರೀ ಹರಿದಾಸಾಚಾರ್ಯರು ಮುಂದೆ ಕಾಶಿಗೆ ಹೋಗಿ ಅಲ್ಲಿಯೇ ನ್ಯಾಯಶಾಸ್ತ್ರವನ್ನು ಅಧ್ಯಯನ ಮಾಡಿದರು. ವಾರಣಾಸಿಯ ಪ್ರಸಿದ್ಧ ನೈಯಾಯಿಕರಾದ ಶ್ರೀಹರೇರಾಮ ಶುಕ್ಲ ಅವರಲ್ಲಿ ಇದ್ದು ನವ್ಯನ್ಯಾಯದ ಪೂರ್ವೋತ್ತರವಾದಗಳನ್ನೆಲ್ಲ ಓದಿದರು. ಈಗ ಮಹಾ ಮಂಡಲದಿಂದ ಪ್ರಚಾಲಿತವಾದ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಲಿದ್ದಾರೆ.

## ೧೨೦ ಕಳತ್ತೂರ ವೆಂಕಟಕೃಷ್ಣ ಉಪಾಧ್ಯಾಯ ಬೆಟ್ಟಮನೆ ತೆಂಕು ಕಳತ್ತೂರ ಗ್ರಾಮ

ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಓದಿ ನ್ಯಾಯ ಶಿರೋಮಣಿಯಾಗಿದ್ದಾರೆ. ಶ್ರೀ ವಿಬುಧಪ್ರಿಯತೀರ್ಥರಲ್ಲಿ ಸುಧಾಂತ ವೇದಾಂತ ಅಧ್ಯಯನವಾಗಿದೆ. ಋಗ್ವೇದ ಸಂಪೂರ್ಣ ಓದಿದ್ದಾರೆ. ಎಲ್ಲೂರಿನ ವಿದ್ಯಾಬ್ಧಿ ಚಂದ್ರಿಕಾ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ೧೨೧ ಶ್ರೀ ಕೃಷ್ಣಾಚಾರ್ಯ ನಾಗಸಂಪಿಗಿ

ವ್ಯಾಕರಣ ವೇದಾಂತ ಸಾಹಿತ್ಯ ಶಾಸ್ತ್ರಗಳಲ್ಲಿ ಪಂಡಿತರಾದ ಕೃಷ್ಣಾಚಾರ್ಯರು ರಾಮದುರ್ಗದ ಶ್ರೀನಿವಾಸಾಚಾರ್ಯರಲ್ಲಿ ಅಧ್ಯಯನಮಾಡಿ ಸ್ವಗ್ರಾಮವಾದ ಬಾಗಲು ಕೋಟೆಯಲ್ಲಿ ವಾಸವಾಗಿದ್ದಾರೆ. ೩೦–೪೦ ವರ್ಷಗಳಿಂದ ಅವರು ಭಾಗವತಾದಿ ಪುರಾಣಗಳನ್ನು ಹೇಳುತ್ತ ನಗರದಲ್ಲಿ ಧಾರ್ಮಿಕ ವಾತಾವರಣವನ್ನು ನಿರ್ಮಿಸಿದ್ದಾರೆ. ಸಂಸ್ಕೃತದಲ್ಲಿ ಗದ್ಯ ಪದ್ಯಗಳನ್ನು ರಚಿಸುವ ಸಾಮರ್ಥ್ಯವೂ ಆಚಾರ್ಯರಿಗೆ ಇದೆ.

ಈಗ ಅವರು ಬಾಗಲುಕೋಟೆಯಲ್ಲಿ ಶ್ರೀ ಮಂತ್ರಾಲಯ ಸ್ವಾಮಿಗಳ ವೃಂದಾವನವನ್ನು ಕಟ್ಟಿಸಿ ಅಲ್ಲಿ ಭಕ್ತಿ ಜ್ಞಾನ ಕಾರ್ಯಗಳೆರಡೂ ಆಗುವಂತೆ ಪರಿಶ್ರಮಿಸುತ್ತಿದ್ದಾರೆ. ಆಯುಷ್ಯದ ಉತ್ತರಾರ್ಧದಲ್ಲಿ ವೃದ್ಧಾಪ್ಯಕ್ಕೆ ವಾಲುತ್ತಲಿದ್ದರೂ ಅವರು ತಮ್ಮ ಭಾಗವತ ಪುರಾಣ, ಪಾಠ ಪ್ರವಚನ, ಹರಿಪೂಜೆ, ಗುರುಪೂಜೆಗಳನ್ನು ಬಿಡದೆ ನಡೆಸುತ್ತಲಿದ್ದಾರೆ.

## ೧೨೨ ಭಂಡಾರಕೆರೆ ನಾರಾಯಣಾಚಾರ್ಯ



ಉತ್ತರಾದಿ ಮಠದ ಶ್ರೀ ಪಾಂಡುರಂಗಿ ಕೃಷ್ಣಾಚಾರ್ಯರಲ್ಲಿಯೂ ಶಿರೂರ ಮಠದ ಶ್ರೀ ಲಕ್ಷ್ಮೀಶ ತೀರ್ಥ ಶ್ರೀಪಾದಂಗಳವರ ಲ್ಲಿಯೂ ನ್ಯಾಯ ವೇದಾಂತದ ಕೆಲವು ಗ್ರಂಥ ಗಳನ್ನು ಅಧ್ಯಯನ ಮಾಡಿದ ಭಂಡಾರಕೆರೆ ನಾರಾಯಣಾಚಾರ್ಯರು ಒಳ್ಳೇ ಪುರಾಣಿಕ ರಾಗಿದ್ದಾರೆ. ಅವರು ಈಗ ಉಡುಪಿಯಲ್ಲಿ ಉತ್ತರಾದಿ ಮಠದ ಪಂಡಿತರಾಗಿ ಕೆಲಸ ಮಾಡು ತ್ತಾರೆ. ಇವರು ೧೮ ಸಲ ಭಾಗವತ ಸಪ್ತಾಹ ವನ್ನು ಮಾಡಿದ್ದಾರೆ ಮದ್ರಾಸಿನ ಕೆ. ಕೃಷ್ಣಭಟ್ಟ ರಾಯರಲ್ಲಿಯೂ ಕೆ. ಸೀತಾರಾಮರಾಯ ರಲ್ಲಿಯೂ ಪುರಾಣವಾಚಸ್ಪತಿ ಎಂಬ ಬಿರುದನ್ನೂ ಸುವರ್ಣ ಪದಕವನ್ನೂ ಪಡೆದಿದ್ದಾರೆ. ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾ ಜಿಜ್ಞಾಸಾಧಿಕರಣವನ್ನೂ ಮುಖೋದ್ಗತವಾಗಿ ಪರೀಕ್ಷೆ ಕೊಟ್ಟು ಅವರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಈಗ ಶ್ರೀ ಕಾಣೂರ ಮಠದ ಶ್ರೀಪಾದಂಗಳವರ ಸನ್ನಿಧಾನದಲ್ಲಿ ನಿತ್ಯ ಪುರಾಣ ಹೇಳುತ್ತಾರೆ.

## ೧೨೩ ಪ್ರಲ್ಹಾದಾಚಾರ್ಯ ಅಂಬೇಕರ ಗಲಗಲಿ

ಶ್ರೀ ಗಲಗಲಿ ಆಚಾರ್ಯ ಮನೆತನದ ಕುಲಪುರೋಹಿತರಾದ ಶ್ರೀ ಪ್ರಲ್ಹಾದಾ ಚಾರ್ಯರು ಶ್ರೀ ಕೂರ್ಮಾಚಾರ್ಯರ ಆದೇಶದ ಮೇರೆಗೆ ಆಂಗ್ಲ ವಿದ್ಯಾಭ್ಯಾಸ ವನ್ನು ಬಿಟ್ಟು ತಮ್ಮ ಮನೆತನದ ವಿದ್ಯೆಯಾದ ವೇದಾಭ್ಯಾಸವನ್ನು ಮಾಡಿದರು. ಮುಧೋಳದಲ್ಲಿ ಶ್ರೀ ಸಾತೆ ಬಿಂದಾಚಾರ್ಯರ ಹತ್ತರ ೧೦-೧೨ ವರ್ಷ ಇದ್ದು ಪೂರ್ವಾಪರ ಯಾಜ್ಞಿಕ ಹಾಗೂ ಸಿದ್ಧಾಂತ ಕೌಮುದಿಯನ್ನು ಅಧ್ಯಯನ ಮಾಡಿ ದರು. ಸ್ವಗ್ರಾಮವಾದ ಗಲಗಲಿಯಲ್ಲಿ ನಾಗೇಶ ಭಟ್ಟರೆಂಬ ಶ್ರೌತ ಸ್ಮಾರ್ತ ಪಂಡಿತ ರಿಗೆ ಋಗ್ವೇದ ಸಂಹಿತೆಯನ್ನು ಪೂರ್ಣ ಪಾಠ ಹೇಳಿದರು.

ಈಗ ಅವರು ಗಲಗಲಿಯಲ್ಲಿ ಪೌರೋಹಿತ್ಯ ಹಾಗೂ ಕೃಷಿ ವ್ಯವಸಾಯವನ್ನು ಮಾಡುತ್ತಲಿದ್ದಾರೆ. ಬ್ರಾಹ್ಮಣರು ಮನಸ್ಸು ಮಾಡಿದರೆ ಬೇಸಾಯ ವ್ಯವಸಾಯ ದಲ್ಲಿಯೂ ಸ್ಪೃಹಣೀಯವಾದ ಪ್ರಗತಿಯನ್ನು ಸಾಧಿಸಬಹುದೆಂಬುದನ್ನು ತಮ್ಮ ಯಶಸ್ವಿಯಾದ ಕೃಷಿವಿದ್ಯಾಪ್ರಯೋಗದಿಂದ ತೋರಿಸಿಕೊಟ್ಟಿದ್ದಾರೆ.

### ೧೨೪ K. ನಾರಾಯಣಾಚಾರ್ಯ ಹುಮಚ ಜಿಲ್ಲಾ ಶಿವಮೊಗ್ಗಾ



ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನಮಾಡಿ ವೇದಾಂತ ಶಿರೋಮಣಿ ಕನ್ನಡ ವಿದ್ವಾಂಸರಾಗಿ ಪದ್ಮಾಂಬಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಸೋದೇ ಶ್ರೀಗಳವರ ಬಂಗಾರ ಪದಕ, ಕರ್ಪೂರ ಶ್ರೀನಿವಾಸರಾಯರ ಪಾರಿತೋಷಿಕಗಳು ದೊರತಿವೆ. ಕನ್ನಡದಲ್ಲಿಯೂ ಕಥೆ ಕಾದಂಬರಿ ಕವಿತೆಗಳನ್ನು ಬರೆಯುತ್ತಾರೆ.

### ೧೨೫ ವೈ ಶ್ರೀಪತಿಭಟ್ಟ ಹೆದ್ದಾರಿಮನೆ

ಉಡುಪಿಯ ಕಾಲೇಜಿನಲ್ಲಿ ಓದಿ ಜ್ಯೋತಿಷ್ಯ ಶಿರೋಮಣಿ ಕನ್ನಡ ವಿದ್ವಾನ್ ಹಿಂದೀ ರತ್ನ ಪರೀಕ್ಷೆಗಳ ಅಧ್ಯಯನ ಮಾಡಿ ಈಗ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ಇದ್ದಾರೆ.

### ೧೨೬ ಅನಂತ ಪದ್ಮನಾಭ ಐತಾಳ ಸಗ್ರಿ ಉಡುಪಿ



ಜ್ಯೋತಿಷ್ಯ ಶಿರೋಮಣಿ ಕನ್ನಡ ವಿದ್ವಾನ್ ಹಿಂದೀ ರತ್ನ S. S. L. C. ಮುಂತಾದ ಪರೀಕ್ಷೆಯಲ್ಲಿ ಉತ್ತೀರ್ಣರಾದ ಇವರು ಪರ್ಕಾಳ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

### ೧೨೭ ಕೆ. ವಿ. ರಾಮನರಸಿಂಹಾಚಾರ ಮೈಸೂರು

ಅಲಂಕಾರ ಶಾಸ್ತ್ರ ದ್ವೈತ ವೇದಾಂತ ಮತ್ತು ಪಂಚರಾತ್ರಾಗಮ ವಿದ್ವಾನ್ ಆಗಿ ಮೈಸೂರಿನ ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ತಂತ್ರಸಾರಾಗಮ ಪ್ರಾಧ್ಯಾಪಕರಾಗಿದ್ದಾರೆ.

## ೧೨೮ ಮಹಿಷಿ ಭಾಗವತ ವೆಂಕಟರಮಣಾಚಾರ್ಯ ಕಸಗಾರ

ಇವರು ತಮ್ಮ ತಂದೆ ಭಾಗವತ ಗುಂಡಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿ ಪೌರೋಹಿತ್ಯ, ಜ್ಯೋತಿಷ್ಯ, ಪುರಾಣ ಉಪನ್ಯಾಸಗಳಲ್ಲಿ ಪಳಗಿದವರಾಗಿದ್ದಾರೆ. ಇವರಲ್ಲಿ ಅನೇಕ ಜನರು ಅಧ್ಯಯನ ಮಾಡಿದ್ದಾರೆ.



## ೧೨೯ ಚಿತ್ರಾಪುರ ವ್ಯಾಸ ಕೃಷ್ಣಾಚಾರ್ಯ

ಸಾಹಿತ್ಯ ಶಿರೋಮಣಿ ಕನ್ನಡ ವಿದ್ವಾನ್ ಪರೀಕ್ಷೆಗಳಲ್ಲಿ ತೇರ್ಗಡೆ ಆದ ಇವರು ಹರಿಹರ ಸಂಸ್ಕೃತ ಪಾಠಶಾಲಾ, ಸುರತ್ಕಲ್ ವಿದ್ಯಾದಾಯಿನಿ ಹೈಸ್ಕೂಲಿನಲ್ಲಿ ಸಂಸ್ಕೃತ ಪಂಡಿತರಾಗಿ ಕೆಲಸ ಮಾಡಿದ್ದಾರೆ.

## ೧೩೦ ಎಚ್. ರಘುಪತಿ ಅಡಿಗ

ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಋಗ್ವೇದ, ಸಾಹಿತ್ಯ, ಮೀಮಾಂಸಾ ವ್ಯಾಕರಣ, ನ್ಯಾಯ, ವೇದಾಂತ ಮುಂತಾದ ಶಾಸ್ತ್ರಗಳನ್ನು ಅಧ್ಯಯನ ಮಾಡಿ ನ್ಯಾಯಶಿರೋಮಣೀ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಮತ್ತು S. S. L. C. ಹಿಂದೀ ರತ್ನ, ಕನ್ನಡ ಪಂಡಿತ ಮುಂತಾದ ಪರೀಕ್ಷೆಗಳಲ್ಲಿಯೂ ಉತ್ತೀರ್ಣರಾಗಿ ಈಗ ಬಸರೂರ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.



## ೧೩೧ ವಾಮನಾಚಾರ್ಯ ಕಟ್ಟಿ, ಬದಾಮಿ

ಇವರು ಜಾಲೀಹಾಳ ರಾಮಾಚಾರ್ಯರಲ್ಲಿಯೂ ವರಖೇಡ ನರಸಿಂಹಾಚಾರ್ಯರಲ್ಲಿಯೂ ಶಾಸ್ತ್ರ ಸಾಹಿತ್ಯಗಳ ಪರಿಚಯ ಮಾಡಿಕೊಂಡು ಶ್ರೀ ಸತ್ಯಪ್ರಮೋದ ತೀರ್ಥ-ಶ್ರೀಪಾದಂಗಳವರಲ್ಲಿ ಸುಧಾ ಅಧ್ಯಯನ ಮಾಡಿದ್ದಾರೆ.

### ೧೩೨ ಮರಕೂರ ಕೃಷ್ಣಾಚಾರ್ಯ ಶಿರೋಮಣಿ

ಇವರು ತಮ್ಮ ತಂದೆ ವಿಷ್ಣು ಆಚಾರ್ಯರಲ್ಲಿ ವೇದಾಭ್ಯಾಸ ಮಾಡಿ ಸಂಸ್ಕೃತ ಕಾಲೇಜಿನಲ್ಲಿ ಓದಿ ಶಿರೋಮಣಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಶ್ರೀ ಪೇಜಾವರ ಶ್ರೀಗಳವರ ಅಧ್ಯಕ್ಷತೆಯಲ್ಲಿ ನಡೆಯುವ ರಾಮಕುಂಜೇಶ್ವರ ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.



### ೧೩೩ ಕೆ. ಗೋವಿಂದ ಉಪಾಧ್ಯಾಯ ಕುಂಭಾಸಿ

ಉಡುಪಿಯ ಕಾಲೇಜಿನಲ್ಲಿ ವೇದ ವೇದಾಂತ ಜೋತಿಷ್ಯ ಅಧ್ಯಯನ ಮಾಡಿ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

### ೧೩೪ ಎಸ್. ಎನ್. ನಾಗರಾಜಾಚಾರ್ಯ ಮೈಸೂರು

ಕಾವ್ಯ ವೇದಗಳಲ್ಲಿ ಪ್ರವೇಶವಿರುವ ನಾಗರಾಜಾಚಾರ್ಯರು ಪತ್ರಿಕಾ ವ್ಯವಸಾಯ ದಲ್ಲಿದ್ದು ಮೈಸೂರಿನ ಉಡುಪಿ ಶ್ರೀಕೃಷ್ಣ ಮಂದಿರದ ಕಾರ್ಯದರ್ಶಿಗಳಾಗಿದ್ದಾರೆ.



### ೧೩೫ ವಿ. ವೆಂಕಟದಾಸ ಬಾಯರಿ

ಋಗ್ವೇದ, ಸಾಹಿತ್ಯ, ಜ್ಯೋತಿಷ್ಯ ಪೌರೋಹಿತ್ಯ ಮುಂತಾದ ವಿದ್ಯೆಗಳಲ್ಲಿ ಪರಿಣತರಾಗಿ ಪ್ರಕೃತ ಕುಂದಾಪುರದಲ್ಲಿ ಜಗದೀಶ್ವರೀ ಜ್ಯೋತಿಷ್ಯಾಲಯವನ್ನು ಸ್ಥಾಪಿಸಿರುತ್ತಾರೆ. "ಜ್ಯೋತಿಷ್ಯ ಶಾಸ್ತ್ರ ಸುಧಾ" ಎಂಬ ಗ್ರಂಥವನ್ನು ಬರೆದಿಟ್ಟಿದ್ದಾರೆ.



**೧೪೬ ಜಿ. ಕೃಷ್ಣ ಉಪಾಧ್ಯಾಯ**

**ಕುಂಭಾಸಿ**

ಋಗ್ವೇದ, ಪೌರೋಹಿತ್ಯ, ಜ್ಯೋತಿಷ್ಯ, ಪುರಾಣ, ಪ್ರವಚನ, ಹರಿ ಕಥೆ, ಯಕ್ಷಗಾನ ಇವುಗಳಲ್ಲಿ ಪಳಗಿದ್ದಾರೆ. ೩೦ ವರ್ಷಗಳಿಂದ ಪಂಚಾಂಗ ಗಣಿತ ಮಾಡಿ ಪ್ರಕಟಿಸುತ್ತಾರೆ.

**೧೪೭ ಕೆ. ಗೋಪಾಲಕೃಷ್ಣಾಚಾರ್ಯ ಕೋಣಂದೂರ**

ಇವರು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ವ್ಯಾಸಂಗ ಮಾಡಿ ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕೋಣಂದೂರಿನಲ್ಲಿ ಶಾಲಾಧ್ಯಾಪಕರಾಗಿದ್ದಾರೆ. ಮತ್ತು ಶ್ರೀ ಭಂಡಾರಕೆರೆ ಪೇಜಾವರ ಶಿರೂರ ಮಠದ ಸ್ವಾಮಿಗಳವರಲ್ಲಿ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿ ಉತ್ತರಾದಿ ಮಠದ ಸಭೆಗಳಲ್ಲಿ ಸುಧಾ ಪರೀಕ್ಷೆಯನ್ನು ಕೊಟ್ಟಿದ್ದಾರೆ.



**೧೪೮ ಬಳ್ಳಾರಿ ಕೃಷ್ಣಾಚಾರ್ಯ ಕಂಪ್ಲಿ**

ವೇದ ಕಾವ್ಯ ವೇದಾಂತಗಳ ಪರಿಚಯ ಮಾಡಿಕೊಂಡು ಕಂಪ್ಲಿಯಲ್ಲಿ ಉಪಾಧ್ಯಾಯರಾಗಿದ್ದಾರೆ.

**೧೪೯ ಕೆ. ಆರ್. ಜಯುನರಸಿಂಹಾಚಾರ್ಯ ಹರಿದಾಸ ಟ್ರಿಪ್ಲಿಕೇನ ಮದ್ರಾಸ**

ಇವರು ಹರಿಕಥೆ ಮಾಡಿ ಉಪಜೀವನ ಸಾಗಿಸುತ್ತಿರುವರು.

## ೧೪೦ ಎಂ. ಎಸ್. ಅನಂತಕೃಷ್ಣಾಚಾರ್ಯ ಉಡುಪಿ

ಬಿ.ಎ.,ಬಿ.ಟಿ. ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಅನಂತಕೃಷ್ಣಾಚಾರ್ಯರು ಉಡುಪಿ, ಮೈಸೂರು, ಮದ್ರಾಸ ಮುಂತಾದ ಕಡೆಗಳಲ್ಲಿ ವೇದ ವೇದಾಂತ ನ್ಯಾಯ ಶಾಸ್ತ್ರ ಮತ್ತು ಇಂಗ್ಲೀಷ ಅಧ್ಯಯನಮಾಡಿ ಎಸ್. ಎಂ. ಎಸ್. ಎ. ಸಂಸ್ಕೃತ ಕಾಲೇಜ ಹೈಸ್ಕೂಲಿನ ಪ್ರಧಾನ ಅಧ್ಯಾಪಕರಾಗಿ ಕೆಲಸ ಮಾಡುತ್ತಲಿದ್ದಾರೆ. ಇವರು ಕಾಶೀ ಪ್ರಾಣೇಶಾಚಾರ್ಯ, ದೊಡ್ಡ ಬಳ್ಳಾಪೂರ ವಾಸುದೇವಾಚಾರ್ಯ ಮುಂತಾದ ಮಹಾ ಪಂಡಿತರಲ್ಲಿ ಶಾಸ್ತ್ರಾಧ್ಯಯನ ಮಾಡಿದ್ದಾರೆ ಇವರು ಅನೇಕ ಶಿಷ್ಯರಿಗೆ ಪಾಠ ಹೇಳಿದ್ದಾರೆ.





## ೧೪೧ ಕೆ. ಟಿ. ಅನಂತ ಐತಾಳ ಕುಂದಾಪುರ

ಇವರು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಫಲಭಾಗ,ಗಣಿತ ಭಾಗ ಜ್ಯೋತಿಷ್ಯವನ್ನು ಅಧ್ಯಯನ ಮಾಡಿ ಶಿರೋಮಣಿ ಪರೀಕ್ಷೆ ಉತ್ತೀರ್ಣರಾದರು. ಈಗ ಕುಂದಾಪೂರ ತಾಲೂಕಿನ ಒಡೆಯರ ಹೋಬಳಿ ಗ್ರಾಮದಲ್ಲಿ ವ್ಯಾಸ ರಾಯ ಮಠದಲ್ಲಿ ಅರ್ಚಕರಾಗಿದ್ದಾರೆ.

## ೧೪೨ ಪ್ರದ್ಯುಮ್ನಾಚಾರ್ಯ ಸಾಗರ

ಕೂಡ್ಲಿ ಅಕ್ಷೋಭ್ಯತೀರ್ಥ ಸ್ವಾಮಿಗಳವರಲ್ಲಿ ವೇದವನ್ನೂ ಸುರಪುರದ ಗುರುರಾಜ ಪಾಠ ಶಾಲೆಯಲ್ಲಿ ಯಾಜ್ಞಿಕ, ಜ್ಯೋತಿಷ್ಯವನ್ನು ಅಧ್ಯಯನ ಮಾಡಿದ್ದಾರೆ. ಪ್ರಕೃತ ಇವರು ಕಹಾಪೂರದಲ್ಲಿ ಪಾಠ, ಪುರಾಣ, ಪೌರೋಹಿತ್ಯ ಮಾಡಿಕೊಂಡು ಅಧ್ಯಾಪಕ ವೃತ್ತಿಯಲ್ಲಿ ಇರುತ್ತಾರೆ.

## ೧೪೩ ಆರ್ ಅಪ್ಪಣ್ಣಾಚಾರ್ಯ



ಕುಂಭಕೋಣದ ಎಂ. ರಾಮರಾಯರಲ್ಲಿ ಸೂತ್ರಭಾಷ್ಯ, ತತ್ವಪ್ರಕಾಶಿಕಾ ವ್ಯಾಸಂಗ ಮಾಡಿ ಈಗ ಶ್ರೀಮನ್ಯಾಯಸುಧಾ ವ್ಯಾಸಂಗ ಮಾಡುತ್ತಿದ್ದಾರೆ. ಇವರು ಭಾಗವತ ಭಾರತ ರಾಮಾಯಣಾದಿ ಪುರಾಣಗಳನ್ನು ಶ್ರೀಮಧ್ವಾಚಾರ್ಯರ ತಾತ್ಪರ್ಯಾನುಸಾರವಾಗಿ ಸರಸ ಸುಂದರವಾಗಿ ಹೇಳುತ್ತಾರೆ. ಇವರು ಸುಂದರ ಕಾಂಡ ರಾಮಾಯಣವನ್ನು ತಮಿಳಿನಲ್ಲಿ ಸರಳವಾಗಿ ಭಾಷಾಂತರಿಸಿದ್ದಾರೆ. ಮಹಾಭಾರತ ತಾತ್ಪರ್ಯ ನಿರ್ಣಯವನ್ನು ತಮಿಳಿನಲ್ಲಿಯೇ ಅನುವಾದ ಮಾಡಿ ಪ್ರಸಿದ್ಧಿಸಿದ್ದಾರೆ. ಅಲ್ಲದೆ ಅಣುಭಾಷ್ಯ ದ್ವಾದಶಸ್ತೋತ್ರಗಳನ್ನು ತಮಿಳಿನಲ್ಲಿ ಮುದ್ರಿಸಿ ಸುಲಭ ಬೆಲೆಯಲ್ಲಿ ದೊರಕುವಂತೆ ಮಾಡಿದ್ದಾರೆ.

## ೧೪೪ ಕಟ್ಟೆ ಗೋಪಾಲಕೃಷ್ಣಾಚಾರ್ಯ

ಉಡುಪಿ ಕಟ್ಟೆ ಶ್ರೀನಿವಾಸಾಚಾರ್ಯರ ಜ್ಯೇಷ್ಠ ಪುತ್ರರಾದ ಇವರು ಇನ್. ವಾಸುದೇವಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿ ನ್ಯಾಯ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ತಮ್ಮ ತಂದೆಯವರಲ್ಲಿಯೂ ಶ್ರೀ ಭಂಡಾರಕೆರೆ ಶ್ರೀಪಾದಂಗಳವರಲ್ಲಿಯೂ ವೇದಾಂತವನ್ನು ಅಧ್ಯಯನ ಮಾಡಿ ಭಟಕಳದ ಅಂಜುಮನ್ ಕಾಲೇಜಿನಲ್ಲಿ ಸಂಸ್ಕೃತ ಪ್ರೊಫೆಸರರಾಗಿ ಕೆಲಸಮಾಡುತ್ತಿದ್ದಾರೆ.

## ೧೪೫ ಡಿ. ಶ್ರೀನಿವಾಸಾಚಾರ್ಯ ಬೆಂಗಳೂರ

ಇವರು ದ್ವೈತ ವೇದಾಂತದ ನಾಮಾಂಕಿತ ಪಂಡಿತರಾದ ಗೌಡಗಿರಿ ವೆಂಕಟರಮಣಾಚಾರ್ಯರ ಮಕ್ಕಳು. ತಮ್ಮ ತಂದೆಯವರಲ್ಲಿಯೇ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿ ಪಂಡಿತರಾಗಿದ್ದಾರೆ. ಆಂಗ್ಲ ವಿದ್ಯೆಯಲ್ಲಿಯೂ ಪದವೀಧರರಾಗಿ ಮೈಸೂರಿನ ಸರ್ಕಾರಿ ಕಾಲೇಜದಲ್ಲಿ ಪ್ರಾಧ್ಯಾಪಕರಾಗಿ ಅನಂತರ ಮೈಸೂರಿನ ಓರಿಯಂಟಲ್ ಲೈಬ್ರರಿ ಕ್ಯೂರೇಟರರಾಗಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಬಹುಶ್ರುತರೂ ಪ್ರಮೇಯಜ್ಞರೂ ಆದ ಗೌಡಗಿರಿ ವೆಂಕಟರಮಣಾಚಾರ್ಯರು ಬರೆದ ಅದ್ವೈತ ದೀಪಿಕಾ ವಾತಾಗಮ, ಚಂದ್ರಿಕಾ ಪ್ರಕಾಶ ಪ್ರಸರ, ಜೀವ ಕರ್ತೃತ್ವ, ವಿಚಾರ ಮುಂತಾದ ಗ್ರಂಥಗಳನ್ನು ಪ್ರಕಾಶಪಡಿಸಿದ್ದಾರೆ.

## ೧೪೬ ಎಚ್. ಜಿತೇಂದ್ರಿಯಾಚಾರ್ಯ

ವೃಂದಾವನಸ್ಥರಾದ ಶ್ರೀ ಚಿತ್ರಾಪುರ ಮಠಾಧೀಶ ಶ್ರೀ ಶ್ರೀ ವಿದ್ಯಾಪೂರ್ಣ ತೀರ್ಥ ಶ್ರೀಪಾದಂಗಳವರ ಅಚ್ಚುಮೆಚ್ಚಿನ ಶಿಷ್ಯರಲ್ಲಿ ಜಿತೇಂದ್ರಿಯಾಚಾರ್ಯರು ಒಬ್ಬರು. ದಿ. ವೇದಮೂರ್ತಿ ವಾದಿರಾಜಾಚಾರ್ಯ ಮತ್ತು ಮಹಾಲಕ್ಷ್ಮಿಅಮ್ಮನವರ ಪುತ್ರರಾಗಿ ೧೯೧೧ ರಲ್ಲಿ ಜನ್ಮವೆತ್ತಿದ ಇವರು ಕುಚೇಲ ದಾರಿದ್ರ್ಯದಿಂದ ಶಾಲೆಯಲ್ಲಿ ಎರಡನೇ ತರಗತಿ ವರೆಗೆ ಓದಿ, ವೇದಮೂರ್ತಿ ಕೃಷ್ಣಾಚಾರ್ಯ ದ್ವಿವೇದಿ ಇವರ ಗರುಡಿಯಲ್ಲಿ ಋಗ್ವೇದ ಪೂರ್ಣ ಪಾಠ ಹೇಳಿಸಿಕೊಂಡರು. ಶ್ರೀ ಶ್ರೀಗಳಿಂದಲೇ ಸಂಸ್ಕೃತ ಕೇಳುತ್ತಿದ್ದ ಇವರ ಸೂಕ್ಷ್ಮ ಬುದ್ಧಿಗೆ ಸೋತ ಕೋಟೇಶ್ವರದ ಮಧ್ವ ರಮಣಾಚಾರ್ಯರು ತನ್ನ ಜೊತೆಗೆ ಬರಲೇಬೇಕೆಂದು ಕರೆದೊಯ್ದರು. ಅಲ್ಲಿಂದ ಬೆಂಗಳೂರು ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ೪ ವರ್ಷ ಅಭ್ಯಾಸ ಮಾಡಿದ ಆಚಾರ್ಯರಿಗೆ ವಿದ್ಯಾ ಕೇಂದ್ರವಾದ ಕಾಶಿಗೆ ಹೋಗಿ ಜ್ಞಾನ ದಾಹವನ್ನು ತಣಿಸ ಬೇಕೆಂಬ ಪ್ರಬಲೇಚ್ಛೆಯುಂಟಾಯಿತು. ಕಾಶಿಗೆ ಹೋಗಲು ದ್ರವ್ಯಾನುಕೂಲವಿಲ್ಲದ ಪರಿಸ್ಥಿತಿಯಲ್ಲಿ ಮದ್ರಾಸು, ಅನಂತಪುರಗಳಲ್ಲಿ ಸ್ವಲ್ಪ ಕಾಲ ಉದ್ಯೋಗಿಯಾಗಿದ್ದು ಗಳಿಸಿದ ಹಣದಿಂದ ೧೯೩೧ ರಲ್ಲಿ ಕಾಶಿಗೆ ತಲುಪಿದರು.

ಕಾಶಿಯಲ್ಲಿ ಚತುಶ್ಶಾಸ್ತ್ರ ಪಂಡಿತರಾಗಿದ್ದ ಗೋಸ್ವಾಮಿ ದಾಮೋದರ ಶಾಸ್ತ್ರಿಗಳಿಂದ ಪಾಠ ಹೇಳಿಸಿಕೊಂಡರು. ಕೀರ್ತಿಶೇಷ, ಪ್ರಾತಃಸ್ಮರಣೀಯ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು ಕಾಶಿಗೆ ದಯಮಾಡಿಸಿ, ಪಂಡಿತ ಸಭೆ ಸೇರಿಸಿ ಶಾಸ್ತ್ರಾರ್ಥ ವಿಚಾರ ನಡೆಸಿದಾಗ ಜಿತೇಂದ್ರಿಯಾಚಾರ್ಯರು ಅವರ ಅನುವರ್ತಿಯಾಗಿ ಶ್ರೀಗಳ ಅನುಗ್ರಹಕ್ಕೆ ಪಾತ್ರರಾದರು.

೩೭ ವರ್ಷಗಳಿಂದ ಪುಣ್ಯಕ್ಷೇತ್ರವಾದ ಕಾಶಿಯಲ್ಲೇ ನೆಲಿಸಿರುವ ಆಚಾರ್ಯರು ಅಂಬಿಕಾತನಯದತ್ತ ವ್ಯಾಸಕೃತ "ಶಿವರಾಜವಿಜಯ" ಎಂಬ ಕಾವ್ಯದ ಸಂಶೋಧಕ ಸಂಪಾದಕರಾಗಿ ದುಡಿದಿದ್ದಾರೆ. ಇವರ ಈ ಕೃತಿಗೆ ವಿದ್ಯಾ ಇಲಾಖೆಯ ಮಾನ್ಯತೆ ದೊರೆತು, ೧೦ ಸಾರಿ ಮುದ್ರಣ ಹೊಂದುವ ಅವಕಾಶ ದೊರೆಯಿತೆನ್ನುವುದು ಉಲ್ಲೇಖ ನೀಯ.

ವಿನೋಬಾಜೀಯವರ "ಗೀತಾಪ್ರವಚನ"ದ ಸಂಸ್ಕೃತಾನುವಾದ ಕಾರ್ಯದಲ್ಲಿ ಇವರು ಪ್ರಮುಖ ಪಾತ್ರವಹಿಸಿದ್ದಾರೆ. "ದ್ವೈತ ಸೈವ ಅಪೂರ್ವತಾ" ಮೊದಲಾದ ಅಲ್ಪ ಪ್ರಮಾಣದಲ್ಲಿ ಚಿಕ್ಕಪುಟ್ಟದಾದ ಕೃತಿಗಳನ್ನೂ ರಚಿಸಿದ್ದಾರೆ.

"ಭಾರತೀಯ ಸಂಸ್ಕೃತಿ ಆಧಾರ" ಎಂಬ ಚಿಕ್ಕ ಪುಸ್ತಕವನ್ನು ಇವರು ಹಿಂದಿಯಲ್ಲಿ ಬರೆದಿರುತ್ತಾರೆ. ಇವರ ನಿರರ್ಗಳ ಸಂಸ್ಕೃತ ವಾಣಿ, ಪಾಂಡಿತ್ಯಗಳು ವಿದ್ವಜ್ಜನ

ಮಾನ್ಯವಾಗಿವೆ. ಶ್ರೀ ಭಂಡಾರಕೇರಿ ಶ್ರೀಗಳು, ಶ್ರೀ ಪೇಜಾವರ ಶ್ರೀಗಳವರ ಉತ್ತರ ಭಾರತದ ಯಾತ್ರೆಯ ಸಂದರ್ಭದಲ್ಲಿ ಹರಿದ್ವಾರ, ಪ್ರಯಾಗಗಳಲ್ಲಿ ನಡೆದ ಶಾಸ್ತ್ರಾರ್ಥ ಕಾಲದಲ್ಲಿ ಹಿಂದೀ ಭಾಷಾ ಪರಿಣಿತರಾದ ಜಿತೇಂದ್ರಿಯಾಚಾರ್ಯರ ನೆರವು ಅನಿವಾರ್ಯವಾಗಿತ್ತು.

ಇಂಗ್ಲಿಷ ಭಾಷೆಯನ್ನು ಸ್ವಪ್ರಯತ್ನದಿಂದ ಸಾಕಷ್ಟು ಆಳವಾಗಿ ಅಭ್ಯಾಸ ಮಾಡಿದ ಆಚಾರ್ಯರು ಕಾಶಿಗೆ ಹಿಂದೂ ಸಂಸ್ಕೃತಿಯ ಅಭ್ಯಾಸಕ್ಕಾಗಿ ಬರುವ ಪಾಶ್ಚಾತ್ಯರಿಗೆ ಭಾಷಾಂತರದ ಮೂಲಕ ಪಾಠ ಹೇಳಿದವರಿದ್ದಾರೆ. ಲಕ್ಷ್ಮೀ ಕಟಾಕ್ಷ ವಿಲ್ಲದಿದ್ದರೂ ಸರಸ್ವತಿಯಿಂದ ಅನುಗ್ರಹೀತರಾದ ಇವರು ಗಂಗಾಮಾತೆಯ ದಿವ್ಯ ಸನ್ನಿಧಾನವೇ ಶಾಂತಿಪ್ರದವೆಂದು ನಂಬಿದ್ದಾರೆ.



### ೧೪೭ ಪಿ. ಆರ್. ನಾಗರಾಜರಾವ
### ಮದ್ರಾಸ

ಸಂಸ್ಕೃತ ಕಾವ್ಯ ಅಧ್ಯಯನ ಮಾಡಿ ಅಲ್ಲಲ್ಲಿ ರಾಮಾಯಣ ಮಹಾಭಾರತಾದಿ ವಿಷಯಗಳಮೇಲೆ ಉಪನ್ಯಾಸ ಮಾಡಿದ್ದಾರೆ.

### ೧೪೮ ಪಿ. ವಿ. ಗುರುರಾಜಾಚಾರ್ಯ ಬೇಂಗ್ರೆ

ಇವರು ಋಗ್ವೇದವನ್ನು ಅಧ್ಯಯನ ಮಾಡಿ ಉಡುಪಿ ಸಂಸ್ಕೃತ ಕಾಲೇಜು ಮೈಸೂರ ಸಂಸ್ಕೃತ ಕಾಲೇಜಗಳಲ್ಲಿ ಓದಿ ವೇದಾಂತ ಶಿರೋಮಣಿ ವಿದ್ವಾನ್ ಆಗಿದ್ದಾರೆ. ಪೌರೋಹಿತ್ಯ ಜ್ಯೋತಿಷ್ಯ ಅಧ್ಯಾಪನಾದಿ ಕಾರ್ಯಗಳನ್ನು ಮಾಡುತ್ತಿದ್ದಾರೆ.

### ೧೪೯ ಬೋಧರಾಜಾಚಾರ್ಯ ಶೀರನಹಳ್ಳಿ

ಇವರು ಉತ್ತರಾದಿ ಮಠದ ದಿವಾನರಾದ ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿಯೂ ಕೊರ್ಲಹಳ್ಳಿ ರಂಗಾಚಾರ್ಯರಲ್ಲಿಯೂ ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ ನ್ಯಾಯ ವೇದಾಂತಾದಿ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

## ೧೫೦ ಅಡ್ಡೇ ವೇದವ್ಯಾಸಾಚಾರ್ಯ ಉಡುಪಿ

ಇವರು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಎಂಟ್ರನ್ಸ ಪರೀಕ್ಷೆಯ ವರೆಗೆ ಅಧ್ಯಯನ ಮಾಡಿ ಉಳಿಯಾರು ಶ್ರೀನಿವಾಸಾಚಾರ್ಯ, ಕಟ್ಟೆ ಶ್ರೀನಿವಾಸಾಚಾರ್ಯ ಗುರಗುಂಡಿ ರಾಮಾಚಾರ್ಯ ಅಧಮಾರು ಮಠದ ವಿಬುಧಪ್ರಿಯತೀರ್ಥ ಸ್ವಾಮಿಗಳೇ ಮುಂತಾದ ಗುರುಗಳಲ್ಲಿ ವೇದಾಂತ ಅಧ್ಯಯನ ಮಾಡಿ ಈಗ ಪೇಜಾವರ ಮಠದ ಗ್ರಂಥ ಭಾಂಡಾರದಲ್ಲಿ ಸಂಶೋಧಕರಾಗಿ ಕೆಲಸ ಮಾಡುತ್ತಲಿದ್ದಾರೆ. ಇವರು "ಶ್ರೀಮದಾನಂದತೀರ್ಥ ಭಗವತ್ಪಾದರು, ಶ್ರೀಮದ್ವಾದಿರಾಜ ಗುರು ಸಾರ್ವಭೌಮರು" ಮುಂತಾದ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ.



## ೧೫೧ ಶ್ರೀ ಕುಂಭಕೋಣಂ ನದೀತೀರ ಶ್ರೀನಿವಾಸಾಚಾರ್ಯ ಮಧುರಾ

ಇವರು ತಮ್ಮ ತಂದೆಯಾದ ನದೀತೀರ ಶ್ಯಾಮಾಚಾರ್ಯರಲ್ಲಿ ಸಾಹಿತ್ಯ ವೇದಾಂತ ಅಧ್ಯಯನ ಮಾಡಿ ಸಾಹಿತ್ಯ ಶಿರೋಮಣಿ, ವೇದಾಂತ ಶಿರೋಮಣಿ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ತಿರುಪತಿಯ ಪಾಠಶಾಲೆಯಲ್ಲಿ ಸಾಹಿತ್ಯಾಧ್ಯಾಪಕ ರಾಗಿದ್ದರು. ಈಗ ಮಧುರೆಯ ಸಂಸ್ಕೃತ ಕಾಲೇಜದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ನಿವೃತ್ತರಾಗಿದ್ದಾರೆ.

## ೧೫೨ ಕುಟ್ಟಾಕುಲಂ ಪಾಂಡುರಂಗೀ ಕೃಷ್ಣಮೂರ್ತಿ ಆಚಾರ್ಯ

ಇವರು ಯಲ್ಲತ್ತೂರ ಕೃಷ್ಣಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಕುಂಭಕೋಣದ ನದೀ ತೀರ ಸೇತೂಮಾಧವಾಚಾರ್ಯರಲ್ಲಿ ವ್ಯಾಕರಣವನ್ನು ಅಗ್ನಿಹೋತ್ರ ತಾತಾ ಚಾರ್ಯರಲ್ಲಿ ಮೀಮಾಂಸವನ್ನೂ, ಒಟ್ಟಂಗಾರ ಗೋಪಾಲಾಚಾರ್ಯರಲ್ಲಿ ವೇದಾಂತವನ್ನೂ ಓದಿ ಶ್ರೀ ಸತ್ಯಧ್ಯಾನರಲ್ಲಿ ಪರೀಕ್ಷೆ ಕೊಟ್ಟು ಅವರ ಅನುಗ್ರಹಕ್ಕೆ ಪಾತ್ರರಾದರು. ಅವರು ಋಗ್ವೇದ ಯಜುರ್ವೇದ ಪೌರೋಹಿತ್ಯದಲ್ಲಿಯೂ ಮತ್ತು ಧರ್ಮಶಾಸ್ತ್ರದಲ್ಲಿಯೂ ಪರಿಣಿತರಿದ್ದು ಅನೇಕ ಜನ ಶಿಷ್ಯರಿಗೆ ಪಾಠ ಹೇಳಿದ್ದಾರೆ. ಅವರು ಶ್ರೀ ಮಂತ್ರಾಲಯದ ಶ್ರೀ ೧೦೮ ಶ್ರೀ ಸುಯಿಮೀಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಶ್ರೀಗಳವರ ಆಜ್ಞೆಯಂತೆ ಹೊಸಪೇಟೆಯಲ್ಲಿ ವೇಣುಗೋಪಾಲ ಮಂದಿರದ ಮತ್ತು ಮಧುರೆಯಲ್ಲಿ ಶ್ರೀ ಮಂತ್ರಾಲಯ ಸ್ವಾಮಿಗಳ ವೃಂದಾವನಗಳ ಪ್ರತಿಷ್ಠಾ ಮಹೋತ್ಸವವನ್ನು ನೆರವೇರಿಸಿದರು. ಇವರು ಈಗಲೂ ಸುಧಾದಿ ಗ್ರಂಥಗಳನ್ನು ಪಾಠ ಹೇಳುತ್ತಲಿದ್ದಾರೆ.

## ೧೫೩ ಸ್ವಾಮಿರಾಯಾಚಾರ್ಯ ಅಧ್ಯಾಪಕ



ಇವರು ಹಣಮಸಾಗರವ ಹಯಗ್ರೀವಾಚಾರ್ಯರಲ್ಲಿಯೂ ಮಂತ್ರಾಲಯದ ವೆಂಕೋಬಾಚಾರ್ಯರಲ್ಲಿಯೂ ಜಾಲಿಹಾಳ ಶ್ರೀನಿವಾಸಾಚಾರ್ಯರಲ್ಲಿಯೂ ಕಾವ್ಯ ವೇದಾಂತ ಮತ್ತು ಶೇಖರಾಂತ ವ್ಯಾಕರಣ ಶಾಸ್ತ್ರವನ್ನು ಅಧ್ಯಯನ ಮಾಡಿ ಕಲಕತ್ತೆಯ ವ್ಯಾಕರಣ ತೀರ್ಥ ಪರೀಕ್ಷೆಯಾಗಿದ್ದಾರೆ. ಯಾಜ್ಞಿಕ ಪುರಾಣಗಳಲ್ಲಿ ಪರಿಣಿತರಾಗಿದ್ದಾರೆ. ಹಿಂದೀ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ೧೫೪ ಡಿ. ವ್ಹಿ. ಸುಬ್ಬಾಚಾರ್ಯ

ಕೋಯಿಮತ್ತೂರಿನ ಚಾರ್ಟರ್ಡ್ ಅಕೌಂಟಂಟ ಡಿ. ವ್ಹಿ. ಸುಬ್ಬಾಚಾರ್ಯರು ಪಂಡಿತರೂ, ಪ್ರತಿಷ್ಠಿತರೂ, ಗ್ರಂಥಕಾರರೂ, ಗುರುಭಕ್ತರೂ, ಮತಾಭಿಮಾನಿಗಳೂ, ಸದ್ವೈಷ್ಣವ ದೀಕ್ಷಾದಕ್ಷರೂ, ಕಚ್ಚೆದೆಯ ಮಾಧ್ವಮತಾಭಿಮಾನಿಗಳೂ ಆಗಿದ್ದಾರೆ. ದಕ್ಷಿಣ ಭಾರತದ ಸುಪ್ರಸಿದ್ಧ ಮಾಧ್ವ ಮನೆತನವಾದ ತಾಮ್ರಪರಣೀ ವಂಶದಲ್ಲಿ ಜನಿಸಿದ ಸುಬ್ಬಾಚಾರ್ಯರು ಲೌಕಿಕ ವ್ಯವಹಾರದಲ್ಲಿದ್ದರೂ ಬಾಲ್ಯದಿಂದಲೂ ಮಧ್ವ ಶಾಸ್ತ್ರದಲ್ಲಿ ಜಿಜ್ಞಾಸಾವೃತ್ತಿವುಳ್ಳವರಾಗಿದ್ದರು. ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ಶಿಷ್ಯರಾದ ವಾದಿರಾಜಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ನಂತರ ಸ್ವಯಂ ಪರಿಶ್ರಮಪಟ್ಟು ಶಾಸ್ತ್ರದಲ್ಲಿ ವಿಜಾತೀಯವಾದ ವ್ಯುತ್ಪತ್ತಿಯನ್ನು ಸಂಪಾದನ ಮಾಡಿಕೊಂಡರು. ಎಲ್ಲ ಪ್ರಮೇಯ ಗ್ರಂಥಗಳನ್ನು ಪ್ರಮಾಣ ಗ್ರಂಥಗಳನ್ನು ಪರಿಶೀಲನ ಮಾಡಿ ದ್ವೈತ ವೇದಾಂತದಲ್ಲಿ ಪರಿನಿಷ್ಠಿತ ಪಂಡಿತರಾದರು. ಅವರು ಬರೆದ ದ್ವಿತೀಯವಾದಾರ್ಥ ಎಂಬ ಗ್ರಂಥವು ಇವರ ಪ್ರಗಲ್ಭ ಪಾಂಡಿತ್ಯ ಅಪೂರ್ವವಾದ ಶಾಸ್ತ್ರೀಯ ಉದ್ಗ್ರಂಥ ಲೇಖನ ಶೈಲಿ, ವಿಷಯ ವಿಶೇಷಣಗಳ ಪರಿಷ್ಕರಣ, ಉಪಬೃಹಣ, ತರ್ಕ ಕೌಶಲ್ಯ, ಪ್ರಾತಿಭ ತೀಕ್ಷ್ಣತೆ ಮುಂತಾದ ಗುಣಗಳಿಗೆ ಕನ್ನಡಿ ಹಿಡಿಯುತ್ತವೆ.

## ೧೫೫ ವೆಂಕಟಾಚಾರ್ಯ ಮಳಖೇಡ

ಇವರು ಉತ್ತರಾದಿ ಮಠದಲ್ಲಿ ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿಯೂ, ಪ್ರಾಕ್ಟೂರ ಭೀಮಾಚಾರ್ಯರಲ್ಲಿಯೂ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ಈಗ ಅವರು ಮಳಖೇಡದಲ್ಲಿ ಜಯತೀರ್ಥರ ವೃಂದಾವನದ ಸೇವೆಯನ್ನು ಮಾಡಿಕೊಂಡು ಇರುತ್ತಾರೆ.

## ೧೫೬ ಬಿದರಳ್ಳಿ ಶ್ರೀನಿವಾಸಾಚಾರ್ಯ, ಹೊನ್ನಾಳಿ



ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿ ಸಂಪೂರ್ಣ ವೇದಾಂತ ವ್ಯಾಸಂಗ ಮಾಡಿದ ಶ್ರೀನಿವಾಸಾಚಾರ್ಯರು ಸ್ವಾಧ್ಯಾಯ ಪ್ರವಚನದಲ್ಲಿ ದೀಕ್ಷೆಯುಳ್ಳವರಾಗಿದ್ದಾರೆ. ಬಿದರಳ್ಳಿ ಶ್ರೀನಿವಾಸತೀರ್ಥರ ವಂಶಜರಾದ ಇವರು ಮಹಾ ಕರ್ಮಠರೂ, ಸದಾಚಾರ ಸಂಪನ್ನರೂ ಆಗಿದ್ದು ಬೆಂಗ ಳೂರಿನ ಪೂರ್ಣಪ್ರಜ್ಞ ವಿದ್ಯಾ ಪೀಠದಲ್ಲಿ ಕೆಲವು ವರುಷ ಸಾಹಿತ್ಯ ವೇದಾಂತ ಅಧ್ಯಾಪಕರೆಂದು ಕೆಲಸ ಮಾಡಿ ದ್ದಾರೆ.

## ೧೫೭ ಡಾ॥ ಕೆ. ಜಿ. ಮಂಗಳವೇಢೆಕರ ವಿಜಾಪುರ

ಇವರು ಉಡುಪಿ ಸೀತಾರಾಮಾಚಾರ್ಯ ಪಾಂಡುರಂಗಿ ಗುರಾಚಾರ್ಯ ಮತ್ತು ಶ್ರೀ ಆದವಾನಿ ಸ್ವಾಮಿಗಳವರಲ್ಲಿ ವೇದಾಂತವನ್ನು ಓದಿದ್ದಾರೆ. ದ್ವಾದಶ ಸ್ತೋತ್ರ, ಅರ್ಥ ಸಂಗ್ರಹ ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ.

## ೧೫೮ ಎಸ್. ಹಯಗ್ರೀವ ತಂತ್ರಿ ಶಿಬರೂರಮಠ



ಇವರು ಶ್ರೀ ಪೇಜಾವರ ವಿಶ್ವೇಶ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಉಡುಪಿಯ ಸಂಸ್ಕೃತ ಮಹಾ ಪಾಠಶಾಲೆ ಯಲ್ಲಿ ಸಾಹಿತ್ಯ, ವೇದಾಂತ, ಋಗ್ವೇದ, ತಂತ್ರಶಾಸ್ತ್ರ ಪೌರೋಹಿತ್ಯ, ಜ್ಯೋತಿಷ್ಯ ಶಾಸ್ತ್ರ, ಧರ್ಮಶಾಸ್ತ್ರ, ಮುಂತಾದವುಗಳನ್ನು ಅಧ್ಯಯನ ಮಾಡಿದರು. ಇವರು ಶಿರೋ ಮಣಿ ಪರೀಕ್ಷೆಯಾಗಿದ್ದು ವಾತುಲಾಗಮ ಪ್ರತಿಷ್ಠಾವಿಧಿ ಲಘುಕಾರಿಕಾ, ಲಕ್ಷಣ ಸಂಹಿತಾ, ಅಪರಾಷೋಡಶ ಮುಂತಾದ ಅನೇಕ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಬಪ್ಪನಾಡು ದೇವಾಲಯಗಳಲ್ಲಿ ಬ್ರಹ್ಮಕಲಶಾದಿಗಳನ್ನು ನೆರವೇರಿಸಿದ್ದಕ್ಕಾಗಿ ಇವರಿಂಗೆ ನಿಧಿ ಸಮರ್ಪಣೆ ಮಾಡಿ ವಿಶೇಷ ರೀತಿಯಿಂದ ಪುರಸ್ಕರಿಸಿದ್ದಾರೆ. ಉಡುಪಿಯ ಕಲಾವೃಂದದಲ್ಲಿ ಉಪಾಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ.

## ೧೫೯ ಬನ್ನಂಜೆ ಗೋವಿಂದಾಚಾರ್ಯ



ಇವರು ತಮ್ಮ ತಂದೆಯವರಲ್ಲಿಯೂ ಶ್ರೀ ಭಂಡಾರ ಕೇರಿ ಶ್ರೀಪಾದಂಗಳವರಲ್ಲಿಯೂ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿ ಪಂಡಿತರಾದ ಗೋವಿಂದಾಚಾರ್ಯರು ಸರ್ವಂಕಷ ಶೇಮುಷೀಕರು. ಸಾಹಿತ್ಯದಲ್ಲಿ ಪ್ರೌಢ ಸುಂದರವಾದ ಹೃದ್ಯ ಗದ್ಯ ಪದ್ಯ ರಚನಾ ವಿದ್ಯಾ ವೈಶಾರದ್ಯಗಳು ಅವರಿಗೆ ಕರಗತವಾಗಿವೆ. ಕನ್ನಡದಲ್ಲಿಯೂ ಲಲಿತ ಕೋಮಲವಾದ ಮಧುರ ಶೈಲಿಯಲ್ಲಿ ಕವಿತೆಗಳನ್ನು ಹೆಣೆಯಬಲ್ಲರು. ಕಥೆಗಳನ್ನು ಕಟ್ಟಬಲ್ಲರು. ಕಾದಂಬರಿಗಳನ್ನು ಬರೆಯಬಲ್ಲರು. ನವ್ಯದ ಜಾಡಿನಲ್ಲಿಯೂ ಚಾತ್ಮೆಯಿಂದ ಕವನಿಸಬಲ್ಲರು. ವಿಮರ್ಶಾತ್ಮಕ ಪ್ರಬಂಧ ಪ್ರಣಯನ ದಲ್ಲಿಯೂ ಇವರದು ಎತ್ತಿದ ಕೈ. ಸಂಶೋಧನ ಕ್ಷೇತ್ರದಲ್ಲಿ ಗೋವಿಂದಾಚಾರ್ಯರು ತಮ್ಮದೇ ಆದ ಒಂದು ವಿದ್ವದ್ವರ್ತುಲ ನಿರ್ಮಿಸಿಕೊಂಡು ಅತ್ಯಪೂರ್ವವಾದ ಅನೇಕ ಗ್ರಂಥಗಳನ್ನು ಗುರುತಿಸಿದ್ದಾರೆ. ಸಂಗ್ರಹಿಸಿದ್ದಾರೆ. ಸಂಶೋಧಿಸಿದ್ದಾರೆ. ಟೀಕಿಸಿದ್ದಾರೆ. ವಿಮರ್ಶಿಸಿದ್ದಾರೆ. ಪ್ರಕಟಿಸಿದ್ದಾರೆ.

ಶ್ರೀ ಕೆ. ನಾರಾಯಣರಾಯರ ಆರ್ಥಿಕ ನೆರವಿನಿಂದ ಮಾಧ್ವ ಮಹಾ ಮಂಡಲದವರು ಕೈಕೊಂಡ ಶ್ರೀಮದಾನಂದತೀರ್ಥರ ಸರ್ವಮೂಲ ಗ್ರಂಥದ ಹೃಷೀಕೇಶತೀರ್ಥೀಯ ಪರಿಶೋಧನ ಪರಿಷ್ಕರಣ ಕಾರ್ಯಗಳನ್ನೆಲ್ಲ ಶ್ರೀ ಗೋವಿಂದಾ ಚಾರ್ಯರೆ ಸಮರ್ಥ ರೀತಿಯಿಂದ ನಿರ್ವಹಿಸುತ್ತಿದ್ದಾರೆ. ತಮ್ಮ ತಂದೆ ಪಡಬನ್ನೂರ ನಾರಾಯಣಾಚಾರ್ಯರ ಸತ್ಕಾರ ಸಮಾರಂಭದ ಸಮಯದಲ್ಲಿ ಶ್ರೀ ವಿಷ್ಣುದಾಸಾ ಚಾರ್ಯರ 'ವಾದರತ್ನಾವಳಿ' ಎಂಬ ಮಹಾ ಗ್ರಂಥವನ್ನು ಸಂಶೋಧಿಸಿ ಪ್ರಕಟಿಸಿ ದ್ದಾರೆ. ಆಚಾರ್ಯರ ತಂತ್ರಸಾರ ಗ್ರಂಥವನ್ನು ಭಾಷಾಂತರ ಮುನ್ನುಡಿ ಪರಿಶಿಷ್ಟ ದೊಡನೆ ಪ್ರಕಟಿಸಿದ್ದು ಸರ್ವಜನ ಉಪಯುಕ್ತವಾಗಿದೆ. ವಿಷ್ಣು ಪುರಾಣದ ಪ್ರಥ ಮಾಂಶವನ್ನೂ ಬಾಣ ಕಾದಂಬರಿಯನ್ನೂ ಸಂಗ್ರಹರಾಮಾಯಣ, ಮಧ್ವ ರಾಮಾಯಣ ಮುಂತಾದ ಅನೇಕ ಗ್ರಂಥಗಳನ್ನು ತಮ್ಮದೇ ಆದ ಲಲಿತ ಮೋಹಕ ಸರಣಿಯಲ್ಲಿ ಕನ್ನಡಿಸಿ ಆಸ್ತಿಕ ಜನತೆಗೆ ಉಪಯೋಗವಾಗುವಂತೆ ಮಾಡಿದ್ದಾರೆ.

## ೧೬೦ ಎಂ. ಹರಿದಾಸಭಟ್ಟ ಮುಂಜರಬೆಟ್ಟು ಯಲ್ಲೂರ ಪೋಸ್ಟ (ಎಸ್. ಕೆ.)

ಋಗ್ವೇದ ಪೌರೋಹಿತ್ಯದಲ್ಲಿ ಪರಿಣತರಾದ ಇವರು ವೈದಿಕ ವೃತ್ತಿಯಲ್ಲಿ ಇರುತ್ತಾರೆ.

## ೧೬೧ ಕಾಶಿ ಶ್ರೀಪಾದಾಚಾರ್ಯ, ಬೆಂಗಳೂರ



ಸಂಸ್ಕೃತ ವಿಷಯದಲ್ಲಿ ಮದ್ರಾಸ ವಿಶ್ವವಿದ್ಯಾಲಯದ ಎಮ್. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಶ್ರೀಪಾದಾಚಾರ್ಯರು ದ್ವೈತ ವೇದಾಂತ ವಿದ್ವತ್ ಪರೀಕ್ಷೆಯಲ್ಲಿಯೂ ಪ್ರಥಮ ಶ್ರೇಣಿಯಲ್ಲಿ ಬಂದರು.

ತಮ್ಮ ತಂದೆಯವರಲ್ಲಿ ಸಾಹಿತ್ಯ, ವೆಂಕಟರಮಣ ಶಾಸ್ತ್ರಿಗಳವರಲ್ಲಿ ವ್ಯಾಕರಣ, ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿದ ಇವರು ಉಭಯ ಭಾಷಾ ವಿಶಾರದರಾಗಿ ಸುವಿಖ್ಯಾತ ಪಂಡಿತರೆನಿಸಿದ್ದಾರೆ.

ಮೈಸೂರ ಸರಕಾರದ ಜಿಲ್ಹಾ ವಿದ್ಯಾಧಿಕಾರಿಗಳಾಗಿ ಕೆಲಸ ಮಾಡಿ ನಿವೃತ್ತರಾದ ಬಳಿಕ ಈಗ ಬೆಂಗಳೂರಿನಲ್ಲಿ ಇದ್ದು ಪಾಠಪ್ರವಚನ ಮಾಡುತ್ತಲಿದ್ದಾರೆ.

ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಅಧ್ಯಯನ ಮಾಡುವಾಗ ಉಡುಪಿಯ ಶಿರೂರ ಮಠದ ಸ್ವಾಮಿಗಳವರೂ, ಹುಲಗಿ ಹುಚ್ಚಾಚಾರ್ಯರೂ ಇವರ ಸಹಾಧ್ಯಾಯಿಗಳಾಗಿದ್ದರು. ಪ್ರತಿ ನಿತ್ಯವೂ ಈಗ ಬೆಂಗಳೂರಲ್ಲಿ ವೇದಾಂತ ಗ್ರಂಥಗಳನ್ನು ಪಾಠ ಹೇಳುತ್ತಿರುವ ಆಚಾರ್ಯರ ಮನೆಯು ಸುಧಾ ಪ್ರವಚನ ಮಂದಿರ ಆಗಿದೆ.

## ೧೬೨ ಬಾಳಾಚಾರ್ಯ ಘಳಸಾಸಿ ನಿಪ್ಪಾಣಿ

ಇವರು ಮಂಗಸೂಳಿ ರಾಮಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

## ೧೬೩ ಅಥವಾರು ವಿಠಲಾಚಾರ್ಯ

ಇವರು ಉಡುಪಿಯ ಮಧ್ವಸಿದ್ಧಾಂತ ಪ್ರಬೋಧಿನಿ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಕರಣತರ್ಕ ವೇದಾಂತಾದಿ ಗ್ರಂಥಗಳನ್ನೂ ಓದಿ ಅಥಮಾರು ಮಠದ ಶ್ರೀ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು. ಇವರು ಸಿದ್ಧಾಂತ ಸರಸ್ವತಿ ದಿಗ್ವಿಜಯ, ಸರ್ವಮೂಲ ಸಾರ ಸಂಗ್ರಹ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಕಲಕತ್ತಾ, ನವದ್ವೀಪ ಮುಂತಾದ ಕಡೆಗಳಲ್ಲಿ ಹೋಗಿ ಅಲ್ಲಿಯ ಚೈತನ್ಯಮತೀಯ ಜನರಿಗೆ ಮಾಧ್ವ ಗ್ರಂಥಗಳನ್ನು ಪಾಠ ಹೇಳಿ ಬಂದಿದ್ದಾರೆ. ಇವರಿಗೆ ನವದ್ವೀಪದ ವೈಷ್ಣವ ರಾಜ ಸಭೆಯಲ್ಲಿ ವೇದಾಂತ ವಾಚಸ್ಪತಿ ಎಂದೂ ಮೈಸೂರು ವಿದ್ವತ್ ಸಭೆಯಲ್ಲಿ ವೇದಾಂತ ವಿದ್ವಾನ್ ಎಂಬ ಪದವಿಗಳು ದೊರಕಿರುತ್ತವೆ.

## ೧೬೪ ತಾಮ್ರಂ ರಘೂತ್ತಮಾಚಾರ್ಯ, ಮದ್ರಾಸ



ನ್ಯಾಯ ಶಾಸ್ತ್ರವನ್ನು ಅಧ್ಯಯನ ಮಾಡಿದ ಕುಂಭಕೋಣದ ರಘೂತ್ತಮಾಚಾರ್ಯರು ಪ್ರಖ್ಯಾತ ಉಪನ್ಯಾಸಕರಾಗಿದ್ದಾರೆ. ಕನ್ನಡ, ತಮಿಳು ಭಾಷೆಗಳಲ್ಲಿ ಸಹಸ್ರಾರು ಜನರು ತಲೆದೂಗುವಂತೆ ಉಪನ್ಯಾಸ ಮಾಡುತ್ತಾರೆ.

ಈಗ ಇವರು ಮದ್ರಾಸ ಯುನಿವ್ಹರ್ಸಿಟಿಯಲ್ಲಿ ವೇದಾಂತ ವಿಮರ್ಶಕರಾಗಿದ್ದಾರೆ.

## ೧೬೫ ಪಂಚಮುಖಿ ರಾಘವೇಂದ್ರಾಚಾರ್ಯ, ಧಾರವಾಡ

ವ್ಯಾಕರಣ, ವೇದಾಂತ, ಸಾಹಿತ್ಯ ಮುಂತಾದ ಶಾಸ್ತ್ರಗಳಲ್ಲಿ ನಿಷ್ಣಾತ ಪಂಡಿತರಾದ ರಾಘವೇಂದ್ರಾಚಾರ್ಯರು ಎಂ. ಎ. ಪದವೀಧರರಾಗಿ ಪ್ರಾಚ್ಯ ವಿದ್ಯಾ ಸಂಶೋಧನ ಶಾಖೆಯ ಕನ್ನಡ ರಿಸರ್ಚ ಇನ್‌ಸ್ಟಿಟ್ಯೂಟ್ ಡಾಯರೆಕ್ಟರರಾಗಿ ನಿವೃತ್ತರಾಗಿದ್ದಾರೆ. ಇವರು ಕರ್ನಾಟಕದ ಇತಿಹಾಸ ಸಾಹಿತ್ಯ, ಪುರಂದರ ದಾಸರು ಮತ್ತು ಕರ್ನಾಟಕದ ಇತಿಹಾಸ ಮುಂತಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ನೂರಾರು ಗ್ರಂಥಗಳನ್ನು ಇವರು ಸಂಶೋಧನ ಮಾಡಿ ಪ್ರಕಟಿಸಿದ್ದಾರೆ. ವೇದಾಂತಾದಿ ಶಾಸ್ತ್ರಗಳಲ್ಲಿ ಇವರಿಗೆ ಅಭಿಜಾತ ಪಾಂಡಿತ್ಯವಿದ್ದಂತೆ ಸಾಹಿತ್ಯದಲ್ಲಿಯೂ ಇವರಿಗೆ ರಸಸಿದ್ಧಿ ಉಂಟು. ಸದ್ಯ ಸ್ಫೂರ್ತಿಯಿಂದ ಬೇಕಾದ ವಿಷಯದ ಮೇಲೆ ಆಶು ಕವಿತೆಗಳನ್ನು ರಚಿಸಬಲ್ಲರು. ಇವರು ತಮ್ಮ ಮೂವರು ಮಕ್ಕಳಿಗೂ ಮನೆಯಲ್ಲಿ ಕಾವ್ಯ ವ್ಯಾಕರಣ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿಸಿದ್ದಾರೆ. ಅವರೆಲ್ಲರೂ ಜಗನ್ನಾಥ ಶಂಕರಶೇಟ ಸಂಸ್ಕೃತ ಸ್ಕಾಲರಶಿಪ್ಪನ್ನು ತೆಗೆದುಕೊಂಡು ಬೇರೆ ವಿಷಯಗಳಲ್ಲಿ ಎಂ. ಎ. ಪದವೀಧರರಾಗಿದ್ದಾರೆ. ಇವರ ಸಂಶೋಧನ, ಗ್ರಂಥಲೇಖನ, ಶಾಸ್ತ್ರಪಾಂಡಿತ್ಯ, ಇತಿಹಾಸ ಲೇಖನ ಪಾಂಡಿತ್ಯ, ವೇದಾಂತ ವಿದ್ವತ್ತೆ, ಐತಿಹಾಸಿಕ ಪ್ರಜ್ಞೆಗಳಿಗೆ ಮಾರುಹೋದ ಮಹಾಮಹೋಪಾಧ್ಯಾಯ ಮೊದಲಾದ ಪ್ರೋದ್ದಾರ ಮಹಾರಾಷ್ಟ್ರದ ಮುಖಂಡರೆಲ್ಲರೂ ಸೇರಿ ಪುಣೆಯಲ್ಲಿ ಇವರಿಗೆ ಭವ್ಯ ಸತ್ಕಾರ ಮಾಡಿದರು. ಕಾಶಿಯ ಭಾರತ ಮಹಾ ಮಂಡಲದವರು ಇವರಿಗೆ ವಿದ್ಯಾರತ್ನ ಎಂಬ ಪದವಿಯನ್ನು ಕೊಟ್ಟಿದ್ದಾರೆ. ಈಗಾಗಲೆ ಇವರು ಬರೆದ ಸಂಶೋಧಿಸಿದ ಪ್ರಕಟಿಸಿದ ಗ್ರಂಥಗಳ ಸಂಖ್ಯೆಯು ೧೫೦ ಕ್ಕೆ ಮಿಕ್ಕುತ್ತವೆ. ಈಗ ಇವರು ಕರ್ನಾಟಕದ ಇತಿಹಾಸ ಎಂಬ ಗ್ರಂಥವನ್ನು ಬರೆದು ಧಾರವಾಡದ ಇತಿಹಾಸ ಸಂಶೋಧನ ಮಂಡಲದ ಮುಖಾಂತರ ಪ್ರಕಟಿಸುತ್ತಲಿದ್ದಾರೆ.

## ೧೬೫ ಎಸ್. ಕೆ. ವೆಂಕಟರಮಣಾಚಾರ್ಯ ಶ್ರೀಮುಷ್ಣ

ಶ್ರೀಮುಷ್ಣದ ಆರ್ಯಾಚಾರ್ಯ ಮನೆತನದವರಾದ ವೆಂಕಟರಮಣಾಚಾರ್ಯರು ಚಿದಂಬರಂ ಪಾಠಶಾಲೆಯಲ್ಲಿ ಹರಿಹರ ಶಾಸ್ತ್ರಿಗಳಲ್ಲಿ ವ್ಯಾಕರಣ ಅಲಂಕಾರ ಶಾಸ್ತ್ರ ಗಳನ್ನು ಓದಿದರು. ಅನಂತರ ಉತ್ತರಾದಿ ಮಠಕ್ಕೆ ಬಂದು ಪಾಂಡುರಂಗೀ ಕೃಷ್ಣಾ ಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ ಶ್ರೀ ಸತ್ಯಧ್ಯಾನತೀರ್ಥರಲ್ಲಿ ವೇದಾಂತವನ್ನೂ ಅಧ್ಯಯನ ಮಾಡಿದರು.

ವೆಂಕಟರಮಣಾಚಾರ್ಯರು ಯೂ. ಪಿ. ಸಂಸ್ಥಾನದ ಆಸ್ಥಾನ ವಿದ್ವಾಂಸರಾಗಿ ಎಲ್ಲ ಕಡೆ ಸಂಚರಿಸಿ ಧರ್ಮ ಜಾಗ್ರತಿಯನ್ನು ಮಾಡಿದರು. ಇವರು ಈಗ ಮದ್ರಾಸಿನ ಟ್ರಿಪಲೀಕೆನ್‌ದಲ್ಲಿ ವೇದಾಂತ ಪಾಠವನ್ನೂ ಹೇಳುತ್ತ ವಾಸವಾಗಿದ್ದಾರೆ.

## ೧೬೬ ವ್ಹಿ. ನಾರಾಯಣಾಚಾರ್ಯ, ತಿರುವಾದಿ



ಇವರು ಸುಪ್ರಸಿದ್ಧ ನೈಯಾಯಿಕರಾದ ವಿಜಯೀಂದ್ರಾ ಚಾರ್ಯರ ಮಕ್ಕಳು. ತರ್ಕ ಮೀಮಾಂಸಾ ಶಿರೋಮಣಿ ಗಳು.

ಪ್ರಕೃತ ತಿರುವಾದಿ ಸಂಸ್ಕೃತ ಕಾಲೇಜಿನಲ್ಲಿ ನ್ಯಾಯ ಶಾಸ್ತ್ರದ ಪ್ರಧಾನ ಅಧ್ಯಾಪಕರಾಗಿದ್ದಾರೆ.

## ೧೬೭ ವೇದವ್ಯಾಸಾಚಾರ್ಯ ಅರ್ಚಕ, ಮಂತ್ರಾಲಯ

ಮಂತ್ರಾಲಯದಲ್ಲಿಯ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ವೃಂದಾವನದ ಅರ್ಚಕರಾದ ವೇದವ್ಯಾಸಾಚಾರ್ಯರು ಅಗರಖೇಡದ ನೈಯಾಯಿಕರಾದ ಬಾಬಾ ಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನೂ, ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿದ್ದಾರೆ.

## ೧೬೮ ಪಿ. ಲಕ್ಷ್ಮೀನಾರಾಯಣ ಅಡಿಗ

ಇವರು ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನ ಮಾಡಿ ಜ್ಯೋತಿಷ್ಯ ಶಿರೋಮಣಿ ವಿದ್ವಾನ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಾರೆ. ಈಗ ಶಾಲಾಧ್ಯಾಪಕರಾಗಿ ಪಂಚಾಂಗ ವೈದಿಕವೃತ್ತಿ ಕೃಷಿಕಾರ್ಯಗಳಲ್ಲಿ ವ್ಯಾಪೃತರಾಗಿದ್ದಾರೆ.

## ೧೬೯ ನಾಗಾಚಾರ್ಯ ನರಸಿಂಹಪೂರ ಪುಣೆ

ಇವರು ಒಳ್ಳೇ ಪುರಾಣಿಕರಾಗಿದ್ದು ಯಾಜ್ಞಿಕದಲ್ಲಿಯೂ ಪಳಗಿದವರಾಗಿದ್ದಾರೆ.

## ೧೭೦ ಉಡುಪಿ ಗೋಪಾಲ ಉಪಾಧ್ಯಾಯರು ಬೆಂಗಳೂರ



ಇವರು ಬೆಂಗಳೂರ ಸಂಸ್ಕೃತ ಕಾಲೇಜ ದಲ್ಲಿಯೂ ಮತ್ತು ಯಜ್ಞ ವಿಠಲಾಚಾರ್ಯ, ಮಾಗಡಿ ರಂಗನಾಥಾಚಾರ್ಯ ಮತ್ತು ಶ್ರೀ ಜಗನ್ನಾಥ ಸ್ವಾಮಿ ಗಳವರಲ್ಲಿ ಓದಿ ಅಲಂಕಾರ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮೈಸೂರ ಆಸ್ಥಾನ ವಿದ್ವಾನ್ ಆಗಿ ಸಂಭಾವನೆ ಶಾಲು ಜೋಡಿ ಗೌರವವನ್ನು ಪಡೆದರು. ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜದಲ್ಲಿ ಅಲಂಕಾರ ಆಧ್ಯಾಪಕರಾಗಿ ಕೆಲವು ಕಾಲ ಸೇವೆ ಗೈದು ಈಗ ಬೆಂಗಳೂರಿನ ಆಚಾರ್ಯ ಪಾಠಶಾಲೆ ಯಲ್ಲಿ ಸಂಸ್ಕೃತ ಆಧ್ಯಾಪಕರಾಗಿ ಪಾಠ ಪ್ರವಚನಾದಿಗಳನ್ನು ಮಾಡುತ್ತಿದ್ದಾರೆ. ಬೆಂಗಳೂರಿನ ಕಣ್ಣ ಆಸ್ಪತ್ರೆಯ ಎದುರ ಇರುವ ಮುಖ್ಯಪ್ರಾಣ ದೇವಾಲಯವನ್ನು ಇವರ ತಂದೆಯ ನಂತರ ಅಭಿವೃದ್ಧಿಗೆ ತಂದಿದ್ದಾರೆ. ಪೌರೋಹಿತ್ಯವನ್ನು ಮಾಡುತ್ತಾರೆ.

## ೧೭೧ ಎಮ್. ಪದ್ಮನಾಭ ಮುಂಗೇರಾಯ

ಋಗ್ವೇದವನ್ನು ಪೂರ್ತಿ ಆಧ್ಯಯನ ಮಾಡಿ ಸಾಹಿತ್ಯದಲ್ಲಿಯೂ ಪ್ರವೇಶವನ್ನು ಪಡೆದಿದ್ದಾನೆ.

## ೧೭೨ ಇನ್. ಲಕ್ಷ್ಮೀನಾರಾಯಣಾಚಾರ್ಯ

ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ ಪಾಂಡುರಂಗಿ ಕೃಷ್ಣಾಚಾರ್ಯ ರಲ್ಲಿಯೂ ಅಧ್ಯಯನ ಮಾಡಿ ಶಾಸ್ತ್ರ ಪಂಡಿತರಾದ ಇವರು ಈಗ ಭಂಡಾರಕೆರೆಯಲ್ಲಿ ಶಾಲಾಧ್ಯಾಪಕರಾಗಿದ್ದಾರೆ.

## ೧೭೩ ಗುರಗುಂಡಿ ಶ್ರೀನಿವಾಸಾಚಾರ್ಯ

ಇವರು ವಾಸು ಉಪಾಧ್ಯಾಯರಲ್ಲಿ ಯಜುರ್ವೇದವನ್ನು ಯಲ್ಲುತ್ತೂರ ಕೃಷ್ಣಾ ಚಾರ್ಯರಲ್ಲಿಯೂ ಶ್ರೀ ವಿಬುಧಪ್ರಿಯ ತೀರ್ಥ ಶ್ರೀಪಾದಂಗಳವರಲ್ಲಿಯೂ ನ್ಯಾಯವೇದಾಂತಾದಿ ಗ್ರಂಥಗಳ ಅಧ್ಯಯನ ಮಾಡಿ ಸುವರ್ಣ ಕಂಕಣದಿಂದ ಸನ್ಮಾನಿತರಾದರು. ಈಗ ಉಡುಪಿಯ ಅನೇಕ ಮಠಗಳ ಆಸ್ಥಾನ ಪಂಡಿತರಾಗಿ ಪಾಠ ಪ್ರವಚನ ಮಾಡುತ್ತಲಿದ್ದಾರೆ.

## ೧೭೪ ಉಡುಪಿ ವಾಸುದೇವ ಉಪಾಧ್ಯಾಯ



ಇವರು ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ತರ್ಕ ಅಲಂಕಾರ ಪರೀಕ್ಷೆಯಲ್ಲಿ ಉತ್ತೀರ್ಣ ರಾಗಿ ಆಚಾರ್ಯ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ಪಾಠ ಪ್ರವಚನ ವನ್ನು ಮಾಡುತ್ತಿದ್ದಾರೆ. ಶ್ರೀಮನ್ ನ್ಯಾಯ ರತ್ನಾವಲಿ ಮೊದಲಾದ ಮಧ್ವ ಸಿದ್ಧಾಂತ ಗ್ರಂಥಗಳನ್ನು ಪ್ರಕಟಿಸಿದ ಉಡುಪಿಯ ಓಣಿ ದಾಸಉಪಾಧ್ಯಾಯರ ಪುತ್ರರಾದ ವಾಸು ದೇವ ಉಪಾಧ್ಯಾಯರು ಬೆಂಗಳೂರಿನ ಟೀಪೂ ಸುಲ್ತಾನನ ಕೋಟೆಯ ಸಮೀಪದಲ್ಲಿರುವ ಪ್ರಾಣದೇವರ ದೇವಸ್ಥಾನವನ್ನು ಇವರ ತಂದೆಯವರು ಜೀರ್ಣೋದ್ಧಾರ ಮಾಡಿದ ಬಳಿಕ ಈಗ ಅದರ ವ್ಯವಸ್ಥೆ ಹಾಗೂ ಸೇವಾದಿಗಳನ್ನು ಮಾಡಿಕೊಂಡು ಇರುತ್ತಾರೆ.

## ೧೭೫ ಭಾಸ್ಕರ ನಾಗರಾಜಾಚಾರ್ಯ, ಮದ್ರಾಸ

ಇವರು ಸಾಹಿತ್ಯ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ತಿರುಪತಿಯ ಸಂಸ್ಕೃತ ಕಾಲೇಜದಲ್ಲಿ ಅಭ್ಯಾಸ ಮಾಡಿದ ಇವರು ಪ್ರಕೃತ ಮದ್ರಾಸ ಕೇಸರಿ ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೧೭೬ ಶ್ರೀ ವಟ್ಟಂಗಾರ ರಂಗನಾಥಾಚಾರ್ಯ

ಇವರು ಉತ್ತರಾದಿ ಮಠದ ದಿವಾನರಾದ ಪಾಂಡುರಂಗಿ ಜಯಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿ ಪಂಡಿತರಾಗಿದ್ದಾರೆ. ಇವರು ಈಗ ತಿರುಕೋಯಲೂರಿನಲ್ಲಿ ಇರುವ ಗುರುಸಾರ್ವಭೌಮರಾದ ಶ್ರೀ ರಘೂತ್ತಮ ತೀರ್ಥ ಶ್ರೀಪಾದಂಗಳವರ ವೃಂದಾವನದ ವ್ಯವಸ್ಥಾಪಕರೆಂದು ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಿಂದ ನಿಯೋಜಿತರಾಗಿದ್ದಾರೆ.

## ೧೭೭ ಪೂರಸೇಕುಪ್ಪ ಶ್ರೀರಾಜಗೋಪಾಲಾಚಾರ್ಯ

ಇವರು ಸೇತುಮಾಧವಾಚಾರ್ಯರಲ್ಲಿ ಅಧ್ಯಯನ ಮಾಡಿ ವ್ಯಾಕರಣ ಮತ್ತು ವೇದಾಂತ ಶಿರೋಮಣಿಗಳಾಗಿ ಚೈಯೂರು ಗ್ರಾಮ (ಮದ್ರಾಸ) ದ ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೧೭೯ ಚಿಕ್ಕೇರೂರ ಗೋವಿಂದಾಚಾರ್ಯ ಹರಪನಹಳ್ಳಿ

ಇವರು ಚಿಕ್ಕೇರೂರ ಬಂಡಾಚಾರ್ಯರಲ್ಲಿ ಸಾಹಿತ್ಯ ವೇದಾಂತ ಅಧ್ಯಯನ ಮಾಡಿದರು. ಸರಕಾರೀ ನೌಕರಿಯಿಂದ ನಿವೃತ್ತರಾದ ಬಳಿಕ ಕೂಡಲೀ ಆರ್ಯ ಅಕ್ಷೋಭ್ಯತೀರ್ಥ ಮಠದ ದಿವಾನರಾಗಿದ್ದಾರೆ. ಇವರು ಪುರಾಣ ಹೇಳುವದರಲ್ಲಿ ಪ್ರವೀಣರೂ ಸಂಶೋಧಕರೂ ಲೇಖಕರೂ ಆಗಿರುತ್ತಾರೆ. ರಾಯಸಂ ತಿರುಮಲರಾವ ಮೊದಲಾದ ಅನೇಕ ಶಿಷ್ಯರಿಗೆ ಪಾಠ ಹೇಳುತ್ತಲಿದ್ದಾರೆ. ಶ್ರೀ ಜಯತೀರ್ಥ ಚರಿತ್ರೆ ಯಾದವಾಚಾರ್ಯರ ಚರಿತ್ರೆ ಶ್ರೀ ಭಾವಬೋಧಕಾರರ ಚರಿತ್ರೆ ಮುಂತಾದ ಅನೇಕ ಚಾರಿತ್ರಿಕ ಲೇಖನಗಳನ್ನು ಪುಸ್ತಕಗಳನ್ನು ಬರೆದಿದ್ದಾರೆ.

## ೧೮೦ ಸರಪಳಿ ಶ್ರೀನಿವಾಸಾಚಾರ್ಯ

ಇವರು ಪಾಂಡುರಂಗಿ ಶ್ರೀನಿವಾಸಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಇವರು ಧಾರವಾಡದ ಹೈಸ್ಕೂಲದಲ್ಲಿ ಅಧ್ಯಾಪಕರಾಗಿದ್ದಾರೆ.

## ೧೮೧ ಪಟ್ಟಂಗಾರ ಹಯಗ್ರೀವಾಚಾರ್ಯ

ಶ್ರೀರಂಗನಾಥಾಚಾರ್ಯರ ಮಕ್ಕಳಾದ ಹಯಗ್ರೀವಾಚಾರ್ಯರು ಚತುರ್ವೇದಿ ರಾಮಚಂದ್ರಾಚಾರ್ಯರಲ್ಲಿ ನ್ಯಾಯ ವೇದಾಂತ ಅಧ್ಯಯನ ಮಾಡಿ ಮೀಮಾಂಸಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಈಗ ಮುಳಬಾಗಿಲದ (ಶ್ರೀಪಾದರಾಯರ ಮಠದಲ್ಲಿ) ಪಾಠಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೧೮೨ ಪುರಸೆಕುಪ್ಪ ರಾಮಮೂರ್ತಿ ಆಚಾರ್ಯ

ಶ್ರೀಮುಷ್ಣ ಸೇತೂಮಾಧವಾಚಾರ್ಯರ ಅಳಿಯಂದಿರಾದ ಇವರು ತಮ್ಮ ಮಾವನವರಲ್ಲಿ ಅಧ್ಯಯನ ಮಾಡಿ ವ್ಯಾಕರಣ ಶಿರೋಮಣಿಗಳಾದರು ಅನಂತರ ತಿರುಪತಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣ ಪ್ರಧಾನ ಅಧ್ಯಾಪಕರಾಗಿ ಮೂವತ್ತೈದು ವರ್ಷಗಳಿಂದ ಕೆಲಸ ಮಾಡುತ್ತಲಿದ್ದಾರೆ.

## ೧೮೩ ಶ್ರೀರಂಗ ಭೀಮಾಚಾರ್ಯ

ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಇವರು ಶ್ರೀರಂಗದಲ್ಲಿಯೇ ವಾಸವಾಗಿದ್ದಾರೆ. ಇವರು ಒಳ್ಳೇ ಉಪನ್ಯಾಸಕರಾಗಿದ್ದಾರೆ.

## ೧೮೪ ರಂಗಾಚಾರ್ಯ ಮೂಂಡವಗಣೆ ನಾಶಿಕ

ಇವರು ವೇದ ಸಂಹಿತೆಯಲ್ಲಿ ಪಂಡಿತರು. ಪೂರ್ವಾಪರ ಯಾಜ್ಞಿಕದಲ್ಲಿ ಪಳಗಿದವರಾಗಿದ್ದಾರೆ.

## ೧೮೫ ಕಲ್ಮಂಜೆ ವೆಂಕಟರಮಣೋಪಾಧ್ಯಾಯ

ವೇದವೇದಾಂತ ಯಾಜ್ಞಿಕ ಅಧ್ಯಯನ ಮಾಡಿ ಉತ್ತರಾದಿ ಮಠದ ಸಭೆಯಲ್ಲಿಯೂ ಭಂಡಾರಕೆರೆ ಮಠದಲ್ಲಿಯೂ ಪರೀಕ್ಷೆ ಕೊಟ್ಟಿದ್ದಾರೆ.



## ೧೮೬ ಕೆ. ಆರ್. ಅನಂತ ಪುರಾಣಿಕ

ಭಂಡಾರಕೆರೆ ಮಠ, ಶಿರೂರ ಮಠ, ಉಡುಪಿ ಸಂಸ್ಕೃತ ಕಾಲೇಜಗಳಲ್ಲಿ ಅಧ್ಯಯನ ಮಾಡಿ ವೇದಾಂತ ಶಿರೋಮಣಿ ಪರೀಕ್ಷೆಯಾಗಿದ್ದಾರೆ. ಉತ್ತರಾದಿ ಮಠ ಭಂಡಾರಕೆರೆ ಮಠಗಳಲ್ಲಿ ಪರೀಕ್ಷೆ ಕೊಟ್ಟಿದ್ದಾರೆ. ಕಾಟಪಾಡಿಯಲ್ಲಿ ಹೈಸ್ಕೂಲ ಅಧ್ಯಾಪಕರಾಗಿದ್ದಾರೆ

## ೧೮೭ ಪುರಸೆಕುಪ್ಪ ಕುಪ್ಪಾಚಾರ್ಯರು

ಸಾಹಿತ್ಯ ವೇದಾಂತದಲ್ಲಿ ಪಂಡಿತರಾಗಿದ್ದಾರೆ. ಭಾರತ ಸರಕಾರವು ಇವರಿಗೆ ಪ್ರತಿ ತಿಂಗಳೂ ೧೫೦ ರೂ. ಮಾಸಾಶನವನ್ನು ಕೊಡುತ್ತಲಿದ್ದಾರೆ. ಈಗ ಇವರು ಶ್ರೀರಂಗವಲ್ಲಿ ವಾಸವಾಗಿದ್ದಾರೆ.

## ೧೮೮ ಕಟ್ಟಿ ವಾದಿರಾಜಾಚಾರ್ಯ ಕುಂಜಬೆಟ್ಟು ಉಡುಪಿ

ಉಡುಪಿ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನ ಮಾಡಿ ಮದ್ರಾಸ ವಿಶ್ವವಿದ್ಯಾಲಯದ ನ್ಯಾಯಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ತಮ್ಮ ತಂದೆ ಕಟ್ಟಿ ಶ್ರೀನಿವಾಸಾಚಾರ್ಯರಲ್ಲಿ ನ್ಯಾಯಾಮೃತಾದಿ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿ ಪೇಜಾವರ ಶ್ರೀಗಳವರ ಪ್ರಥಮ ಪರ್ಯಾಯ ಕಾಲದಲ್ಲಿ ಅವರಲ್ಲಿ ಸುಧಾ ಓದಿ ಮಂಗಳ ಮಾಡಿದ್ದಾರೆ. ಶ್ರೀ ಉತ್ತರಾದಿ ಮಠದ ಮಧ್ವ ಸಿದ್ಧಾಂತ ಅಭಿವೃದ್ಧಿ ಕಾರಿಣೀ ಸಭೆಯಲ್ಲಿ ಶ್ರೀ ಭಂಡಾರಕೇರಿ ಸ್ವಾಮಿಗಳ ಸಭೆಯಲ್ಲಿ ಪರೀಕ್ಷೆ ಕೊಟ್ಟಿದ್ದಾರೆ. ಕನ್ನಡ ವಿದ್ವಾನರಾಗಿ ಆಲೆಊರಿನಲ್ಲಿ ಅಧ್ಯಾಪಕರಾಗಿದ್ದಾರೆ.

## ೧೮೯ ವೈ. ಸುಬ್ರಾಯ ಭಟ್ಟ

ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ಋಗ್ವೇದ ಪೌರೋಹಿತ್ಯ ಸಾಹಿತ್ಯ ವೇದಾಂತ ಅಧ್ಯಯನ ಮಾಡಿದ್ದಾರೆ.

## ೧೯೦ ಗುರುಗೋವಿಂದ ವಿಠಲದಾಸರು

ಲೋಕೋಪಯೋಗೀ ಶಾಖೆಯ ಸಬ್ ಓವ್ಹರಶೀಯರ ಕೆಲಸದಲ್ಲಿದ್ದು ಈ ಎಂ. ಆರ್. ಗೋವಿಂದರಾಯರು ಚಿಕ್ಕೇರಹಳ್ಳಿ ಮಧ್ವೇಶ ದಾಸರಲ್ಲಿ ಸರ್ವಮೂಲ ಶಾಂತಿ ಹಾಕಿದರು. ವೈರಾಗ್ಯನಿಧಿ ಸುಬ್ರಾಯ ದಾಸರಿಂದ ಶ್ರೀ ಗುರುಗೋವಿಂದ ವಿಠ್ಠಲದಾಸ ಎಂದು ಅಂಕಿತ ಪಡೆದರು. ನಂದಗುಡಿ ನರಸಿಂಹ ಮೂರ್ತಿ ರಾಯರಿಂದ ಪುರಾಣ ವೇದಾಂತ ಅಧ್ಯಯನ ಮಾಡಿದರು. ಗುರು ಕೃಪಾ ಗ್ರಂಥಮಾಲಾ ಎಂಬ ಪ್ರಕಾಶನ ಸಂಸ್ಥೆಯ ಮುಖಾಂತರ ಮಹೈತರೇಯೋಪನಿಷತ್ ಮುಂತಾದ ಒಂಭತ್ತು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇನ್ನೂ ಹದಿನೈದು ಪುಸ್ತಕಗಳನ್ನು ಪ್ರಕಟಿಸುವವರಿದ್ದಾರೆ.



## ೧೯೧ ಮಧ್ವಾಚಾರ್ಯ ಆದ್ಯ, ಕಾಶಿ

ಅಗರಖೇಡದ ಆದ್ಯ ಮನೆತನದ ಶ್ರೀ ಮಧ್ವಾಚಾರ್ಯರು ಕಾಶಿಯಲ್ಲಿ ಶ್ರೀ ವರಖೇಡಿ ನರಸಿಂಹಾಚಾರ್ಯರಲ್ಲಿಯೂ, ಬಾಳಕೃಷ್ಣ ಮಿಶ್ರ ಪಂಡಿತರಲ್ಲಿಯೂ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ಗಯಾದಲ್ಲಿ ವಿಷ್ಣುಪಾದ ಸಂಸ್ಕೃತ ಪಾಠ ಶಾಲೆಯಲ್ಲಿ ಅನೇಕ ವರ್ಷಗಳ ಕಾಲ ಇದ್ದು ಸಚ್ಛಾಸ್ತ್ರ ಪಾಠ ಪ್ರವಚನ ಮಾಡಿದ್ದಾರೆ.

ಈಗ ಇವರು ಕಾಶಿಯಲ್ಲಿ ಕಾಶಿರಾಜ ಟ್ರಸ್ಟಿನ ವತಿಯಿಂದ ನಡೆಯುತ್ತಿರುವ ಪುರಾಣ ಸಂಶೋಧನ ಮಂದಿರದಲ್ಲಿ ಕೆಲಸ ಮಾಡುತ್ತಲಿದ್ದಾರೆ.

## ೧೯೨ ಸಗರಿ ಅನಂತರಾಮಾಚಾರ್ಯ

ಉಡುಪಿ ಸಂಸ್ಕೃತ ಪಾಠಶಾಲೆಯಲ್ಲಿಯೂ ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿಯೂ ವೇದಾಂತಾದಿ ಶಾಸ್ತ್ರಾಧ್ಯಯನ ಮಾಡಿದ್ದಾರೆ. ಉತ್ತರಾದಿ ಮಠದ ಸಭೆಯಲ್ಲಿಯೂ ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ಸಭೆಯಲ್ಲಿಯೂ ವೇದಾಂತ ಪರೀಕ್ಷೆಯನ್ನು ಕೊಟ್ಟಿದ್ದಾರೆ.

## ೧೯೩ ವ್ಹಿ. ನಾಗರಾಜಾಚಾರ್ಯ

ಕೌಲಗಿ ಯದುನಾಥಾಚಾರ್ಯರ ದೌಹಿತ್ರರಾದ ನಾಗರಾಜಾಚಾರ್ಯರು ಮೀಮಾಂಸಾ ಶಿರೋಮಣಿಗಳಾಗಿದ್ದಾರೆ. ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಈಗ ಮದ್ರಾಸ ವಿಶ್ವವಿದ್ಯಾನಿಲಯದಲ್ಲಿ ವಿಮರ್ಶಕರಾಗಿದ್ದಾರೆ.

## ೧೯೪ ಸುಸ್ವರ ಗೋಪಾಲ ಕೃಷ್ಣಾಚಾರ್ಯ



ವೆಂಕಟೇಶ್ವರ ಸಂಸ್ಕೃತ ಮಹಾ ವಿದ್ಯಾಲಯದಲ್ಲಿ ಅಧ್ಯಯನ ಮಾಡಿ ಸಾಹಿತ್ಯ ಶಿರೋಮಣಿ ವೇದಾಂತ ವಿದ್ವಾನ್ ಆಗಿ ಅದೇ ತಿರುಪತಿಯ ಸಂಸ್ಕೃತ ಕಾಲೇಜದಲ್ಲಿ ಸಾಹಿಥ್ಯಾಧ್ಯಾಪಕರಾಗಿದ್ದರು. ಮೈಸೂರಿನ ಆಸ್ಥಾನ ವಿದ್ವಾಂಸರಾಗಿ ೧೯೬೫ ನೇ ಇಸ್ವಿಯಲ್ಲಿ ನಿಯುಕ್ತರಾಗಿದ್ದರು. ಈಗ ಉದ್ಯೋಗದಿಂದ ನಿವೃತ್ತರಾದ ಇವರು ತಿರುಪತಿಯಲ್ಲಿಯೇ ಇದ್ದುಕೊಂಡು ಪ್ರತಿ ವರ್ಷ ಮಾಘ ಮಾಸದಲ್ಲಿ ವೇದವ್ಯಾಸ ದೇವರ ಉತ್ಸವವನ್ನು ಮಾಡಿ ಸಭೆಗಳನ್ನೂ ಉಪನ್ಯಾಸಗಳನ್ನೂ ಏರ್ಪಡಿಸುತ್ತಾರೆ.

## ೧೯೫ ಮಧ್ವಾಚಾರ್ಯ ಅಂಬೂರ

ಸಾಹಿತ್ಯ ಶಿರೋಮಣಿ ಪರೀಕ್ಷೆಯಾದ ಇವರು ಅಂಬೂರು ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ. ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ.

## ೧೯೬ ರಾಮ ಶರ್ಮಾ ವೃದ್ಧಾಚಲ

ಇವರು ತಿರುಪತಿ ಕಾಲೇಜಿನಲ್ಲಿ ಅಧ್ಯಯನ ಮಾಡಿ ಸಾಹಿತ್ಯ ಶಿರೋಮಣಿಗಳಾದರು. ಪ್ರಕೃತ ವೃದ್ಧಾಚಲದಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೧೯೭ ಬಿ. ಎ. ಕೃಷ್ಣಸ್ವಾಮಿರಾವ, ಚಿಕ್ಕಬಳ್ಳಾಪುರ

ಇವರು ಯಜ್ಞವಿಠಲಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದರು. M. Sc. ಪದವೀಧರರಾದ ಕೃಷ್ಣಸ್ವಾಮಿರಾಯರು ಮೈಸೂರ ಯುನಿವರ್ಸಿಟಿಯಲ್ಲಿ ಫಿಜಿಕ್ಸ್ ಪ್ರೊಫೆಸರರೆಂದು ಕೆಲಸ ಮಾಡಿ ನಿವೃತ್ತರಾದ ಬಳಿಕ ಈಗ ಚಿಕ್ಕಬಳ್ಳಾಪುರದ ಮುನಿಸಿಪಲ್ ಕಾಲೇಜದ ಪ್ರಿನ್ಸಿಪಾಲರಾಗಿ ಕೆಲಸ ಮಾಡುತ್ತಲಿದ್ದಾರೆ.

ಇವರು "Out Tines of The Philosophy of Shri Madhawacharya" ಶ್ರೀ ಮಧ್ವಾಚಾರ್ಯರ ತತ್ತ್ವಜ್ಞಾನದ ರೂಪರೇಷೆಗಳು ಎಂಬ ಗ್ರಂಥವನ್ನು ಇಂಗ್ಲೀಷದಲ್ಲಿ ಬರೆದು ಪ್ರಕಟಿಸಿದ್ದಾರೆ. ಇವರು ಇಂಗ್ಲೀಷ ಕನ್ನಡ ಭಾಷೆಯಲ್ಲಿ ಮಧ್ವಸಿದ್ಧಾಂತದ ಬಗ್ಗೆ ಅನೇಕ ಲೇಖಗಳನ್ನು ಬರೆದು ಉಪನ್ಯಾಸಗಳನ್ನಿತ್ತು ತತ್ತ್ವ ಪ್ರಸಾರ ಮಾಡುತ್ತಲಿದ್ದಾರೆ.

## ೧೯೮ ರಿತ್ತಿ ವೆಂಕಣ್ಣಾಚಾರ್ಯ, ಮೈಸೂರು



ಶ್ರೀ ರಿತ್ತಿ ಸ್ವಾಮಿಗಳವರ ಹಾಗೂ ರಾಘವೇಂದ್ರ ಮಠಾಧೀಶ ಶ್ರೀ ಸುಜನೇಂದ್ರ ತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಮನೆತನದವರಾದ ಇವರು ದುರ್ಗಂ ಗುಂಡಾಚಾರ್ಯ, ದಕ್ಷಿಣಾಮೂರ್ತಿ ಶಾಸ್ತ್ರಿ, ದುರ್ಗ ಭೀಮಾಚಾರ್ಯ, ವೆಂಕೋಬಾಚಾರ್ಯ, ಡಿ. ವಾಸುದೇವಾಚಾರ್ಯ ಮುಂತಾದ ಪಂಡಿತರಲ್ಲಿ ವ್ಯಾಸಂಗ ಮಾಡಿ ದ್ವೈತ ವೇದಾಂತ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಈಗ ಮೈಸೂರಿನಲ್ಲಿ ಶಾಲಾ ಪಂಡಿತರಾಗಿ ಪರಿಮಳ ಪತ್ರಿಕೆಯಲ್ಲಿ ಸಂಶೋಧನಾತ್ಮಕ ಲೇಖಗಳನ್ನು ಬರೆಯುತ್ತಿದ್ದಾರೆ. ಶ್ರೀ ವಿಜಯೀಂದ್ರತೀರ್ಥ ಸ್ವಾಮಿಗಳವರ ಶೈವ ಸರ್ವಸ್ವ ಖಂಡನ ಎಂಬ ಗ್ರಂಥವನ್ನು, ತತ್ವ ಸಂಖ್ಯಾನ ಟೀಕಾ ಮುಂತಾದ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸಿದ್ದಾರೆ.

## ೧೯೯ ಡಾಯು. ಕೆ. ರಘುನಾಥರಾವ ಮೈಸೂರು

ಇವರು ಆಂಗ್ಲ ಪದವೀಧರರಾಗಿದ್ದರೂ ವೇದಾಂತ ಶಾಸ್ತ್ರವನ್ನು ಅಧ್ಯಯನ ಮಾಡಿದ್ದಾರೆ. ಪೌರಸ್ತ್ಯ ಪಾಶ್ಚಾತ್ಯ ತತ್ವಜ್ಞಾನಿಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಧ್ಯಯನ ಮಾಡಿ ವಿಜ್ಞಾನದ ಒರೆಗಲ್ಲಿಗೆ ಇಳಿಯಬಹುದಾದ ತತ್ವಜ್ಞಾನವೆಂದರೆ ಮಾಧ್ವ ತತ್ವಜ್ಞಾನ ಒಂದೇ ಎಂದು ಇಂಗ್ಲೀಷಿನಲ್ಲಿ ಅನೇಕ ಲೇಖನ ಮತ್ತು ಪುಸ್ತಿಕೆಗಳನ್ನು ಬರೆದಿದ್ದಾರೆ. ಇವರು ಇಂಗ್ಲೀಷಿನಲ್ಲಿ ಉಪನಿಷತ್ತುಗಳು ಎಂಬ ಗ್ರಂಥವನ್ನು ಬರೆದಿರುವರು.

## ೨೦೦ ವಟ್ಟಂಗಾರ ಕೃಷ್ಣಾಚಾರ್ಯ

ಇವರು ಸಾಹಿತ್ಯ ಶಿರೋಮಣಿಗಳಾಗಿದ್ದು ಮದ್ರಾಸಿನ ಉತ್ತರಾದಿ ಮಠದ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ೨೦೧ ಗುರಾಚಾರ್ಯ ಚಿತ್ರದುರ್ಗ, ಬೆಂಗಳೂರು

ಪ್ರಾಣೇಶಾಚಾರ್ಯರ ಮಕ್ಕಳಾದ ಇವರು ಇನ್ನ ಕೃಷ್ಣಾಚಾರ್ಯರಲ್ಲಿ ವೇದಾಂತ ವ್ಯಾಸಂಗ ಮಾಡಿ ಪುರಾಣ ಉಪನ್ಯಾಸ ಮಾಡುತ್ತಾರೆ.

## ೨೦೨ ಪಿ. ಕೆ. ಹರಿದಾಸಾಚಾರ್ಯ, ಉಡುಪಿ



ಶ್ರೀ ಭಂಡಾರಕೆರೆ ಶ್ರೀಪಾದಂಗಳವರಲ್ಲಿ ಮತ್ತು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ನ್ಯಾಯ ವೇದಾಂತ ಅಧ್ಯಯನ ಮಾಡಿ ಪೇಜಾವರ ಮಠದ ಲಾಯಬ್ರರಿಯಲ್ಲಿ ಸಂಶೋಧನ ಕೆಲಸವನ್ನು ಮಾಡುತ್ತಲಿದ್ದಾರೆ.

ಇವರು ಸರಸ ಸುಂದರವಾಗಿ ಪುರಾಣ ಹೇಳುತ್ತಾರೆ. ಭಾಗವತ, ವಿಜಯಧ್ವಜೀಯ ಶುದ್ಧ ಪಾಠವನ್ನು ಸಂಶೋಧಿಸಿ ಬರೆದಿದ್ದಾರೆ.

## ೨೦೩ ಎಮ್. ರಾಜಗೋಪಾಲಾಚಾರ್ಯ, ಉಡುಪಿ

ಇವರು ಉಡುಪಿ ಕಾಲೇಜಿನಲ್ಲಿ ಅಧ್ಯಯನ ಮಾಡಿ ಸಾಹಿತ್ಯ ಶಿರೋಮಣಿ, ವಿದ್ವಾನ್, M. A., B. O. L., ಡಿಪ್ಲೋಮಾ ಇನ್ ಇಂಡಿಯನ್ ಮ್ಯೂಜಿಕ್ ಮುಂತಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಉಡುಪಿಯ ಪೂರ್ಣಪ್ರಜ್ಞ ಕಾಲೇಜದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ.

ಇವರಿಗೆ ವ್ಯಾಕರಣ ಮತ್ತು ಜ್ಯೋತಿಷ್ಯ, ಕನ್ನಡ ಸಾಹಿತ್ಯ, ಸಾಮವೇದ ಸಂಹಿತೆ ದಕ್ಷಿಣಾದಿ ಸಂಗೀತ, ದಾಸ ಸಾಹಿತ್ಯ, ಶಿಲಾಲಿಪಿಶಾಸ್ತ್ರ ಮುಂತಾದ ಅನೇಕ ವಿಷಯಗಳಲ್ಲಿ ಪರಿಣತಿ ಉಂಟು.

ಇವರು ಕಾಳಿದಾಸನ ಉಪಮೆಗಳು, ಶಾಕುಂತಲದಲ್ಲಿ ಅದೃಷ್ಟ, ದಾಸರ ಕೀರ್ತನೆಗಳು (ಭಾಗ ೨) ಮುಂತಾದ ಗ್ರಂಥಗಳನ್ನು ಮತ್ತು ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ವಿಮರ್ಶಾತ್ಮಕ, ಸಂಶೋಧನಾತ್ಮಕ ಲೇಖನಗಳನ್ನೂ, ಗದ್ಯ-ಪದ್ಯಗಳನ್ನೂ ಬರೆದಿದ್ದಾರೆ.

## ೨೦೪ ಶ್ಯಾಮಾಚಾರ್ಯ ಕೋಯಿಮತ್ತೂರ

ಇವರು ಯಜುರ್ವೇದವನ್ನು ಸಂಪೂರ್ಣ ಅಧ್ಯಯನ ಮಾಡಿ ಅನಂತರ ವ್ಯಾಕರಣವನ್ನು ಓದಿದರು. ವ್ಯಾಕರಣ ಶಿರೋಮಣಿ ಪರೀಕ್ಷೆಯಾದ ಬಳಿಕ ಕೊಯಿಮತ್ತೂರಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೨೦೫ ತಿರುವಾದಿ ಕೃಷ್ಣಮೂರ್ತಿ ಆಚಾರ್ಯ

ಸಾಹಿತ್ಯ ಶಿರೋಮಣಿಗಳಾದ ಇವರು ಈಗ ಮದ್ರಾಸಿನಲ್ಲಿದ್ದು ಪುರಾಣ ಹೇಳುತ್ತಾರೆ. ಯಾಜ್ಞಿಕದಲ್ಲಿಯೂ ಪಳಗಿದವರಾಗಿದ್ದಾರೆ.

## ೨೦೬ ಸ್ವಾಮಿರಾಚಾರ್ಯ ಮುತ್ತಿಗಿ, ಆದವಾನಿ



ಇವರು ಶ್ರೀ ರಾಘವೇಂದ್ರ ತೀರ್ಥರು ಎಂದು ಹೆಸರಾದ ಆದವಾನಿ ಶ್ರೀಗಳವರ ಪೂರ್ವಾಶ್ರಮದ ಪುತ್ರರಾಗಿದ್ದು ತಮ್ಮ ತಂದೆಯವರಲ್ಲಿಯೇ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ತಮ್ಮ ತೀರ್ಥರೂಪರ ಜೀವನ ಚರಿತ್ರೆಯನ್ನು, ತತ್ವಸುವಾಲಿ, ಲಕ್ಷ್ಮೀನಾರಾಯಣ—ವಾಯು—ಸರಸ್ವತಿ ಮುಂತಾದ ದೇವತಾ ಸ್ತೋತ್ರವನ್ನು ತಾರತಮ್ಯಾನುಸಾರವಾಗಿ ಕನ್ನಡ ಪದ್ಯ ರೂಪದಲ್ಲಿ ರಚಿಸಿದ್ದಾರೆ.

## ೨೦೭ ಮಧ್ವಾಚಾರ್ಯ ಮಣ್ಣೂರ ಹೈದ್ರಾಬಾದ

ಇವರು ಯಳಮೇಲಿ ವಿಠ್ಠಲಾಚಾರ್ಯರಲ್ಲಿ ಅಧ್ಯಯನ ಮಾಡಿ ವ್ಯಾಕರಣ ವೇದಾಂತ ಶಾಸ್ತ್ರಗಳಲ್ಲಿ ಪಂಡಿತರಾದರು. ಇವರು ವ್ಯಾಸ ಸಾಹಿತ್ಯ ದಾಸ ಸಾಹಿತ್ಯ ಎರಡರಲ್ಲಿಯೂ ನಿಷ್ಣಾತ ಪಂಡಿತರಾಗಿದ್ದಾರೆ. ಪರಮ ಸಾತ್ವಿಕರೂ ಮಹಾ ತಪಸ್ವಿಗಳೂ ಆದ ಮಧ್ವಾಚಾರ್ಯರು ತಮ್ಮ ಪಾಠ ಪ್ರವಚನ ಉಪದೇಶಗಳಿಂದ ಅನೇಕ ಲೌಕಿಕ ಗೃಹಸ್ಥರನ್ನು ಆಸ್ತಿಕರನ್ನಾಗಿ ಮಾಡಿ ಹರಿವಾಯುಗಳ ಭಕ್ತರನ್ನಾಗಿ ಮಾಡಿದ್ದಾರೆ. ಇವರು ಈಗ ಹೈದ್ರಾಬಾದಿನ ಫೌಜದಾರ ಡಾಕ್ಟರರ ಮನೆಯಲ್ಲಿ ಅಲ್ಲಿಯ ಜನರಿಗೆ ತತ್ವೋಪದೇಶ ಮಾಡುತ್ತ ವಾಸವಾಗಿದ್ದಾರೆ.

## ೨೦೮ ಆರಣಿ ವಾಸುದೇವಾಚಾರ್ಯ ತುಮಕೂರು

ಶ್ರೀ ಯಲತ್ತೂರ ಕೃಷ್ಣಾಚಾರ್ಯರಲ್ಲಿ ತರ್ಕ ಶಾಸ್ತ್ರವನ್ನು ಅಭ್ಯಾಸ ಮಾಡಿದ ಆರಣಿ ವಾಸುದೇವಾಚಾರ್ಯರು ನ್ಯಾಯ ಶಾಸ್ತ್ರದಲ್ಲಿ ಮಹಾ ಪಂಡಿತರು. ಏಕ ಪಾಠಿಗಳು. ತುಮಕೂರಿನ ಸಮೀಪದ ಕ್ಯಾತಸಾಂದ್ರಾದಲ್ಲಿ ಸಿದ್ಧಗಂಗಾ ಕಾಲೇಜನಲ್ಲಿ ತರ್ಕಾಧ್ಯಾಪಕರಾಗಿದ್ದಾರೆ. ಪಾಠ ಪ್ರವಚನದಲ್ಲಿ ಇವರು ಸಮರ್ಥರು. ವಾದದಲ್ಲಿಯೂ ನಿಪುಣರು. ಕಾವ್ಯಕಲಾ ಕುಶಲರು.

## ೨೦೯ ಚಿಕ್ಕೆರೂರ ಸ್ವಾಮಿರಾಚಾರ್ಯ

ಇವರು ತಮ್ಮ ತಂದೆ ಬಂಡಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದ್ದಾರೆ. ಮಂತ್ರಾಲಯದಲ್ಲಿ ತತ್ವಪ್ರಕಾಶಿಕಾ ವ್ಯಾಖ್ಯಾನ ಮಾಡಿ ಈಗಿನ ಶ್ರೀ ರಾಘವೇಂದ್ರ ಸ್ವಾಮಿ ಮಠಾಧೀಶರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದಾರೆ.

## ೨೧೦ ಶ್ರೀರಂಗ ಭೀಮಾಚಾರ್ಯ ಬೆಂಗಳೂರು

ಇವರು ಪ್ರಾಚೀನ ಶ್ರೀರಂಗ ಭೀಮಾಚಾರ್ಯರಲ್ಲಿ ಹಾಗೂ ಯಲತ್ತೂರ ಕೃಷ್ಣಾಚಾರ್ಯರಲ್ಲಿ ನ್ಯಾಯಶಾಸ್ತ್ರವನ್ನು ಓದಿ ಮಹಾ ಪಂಡಿತರಾದರು. ಮುಂಬೆ ನಿರ್ಣಯ ಸಾಗರ ಪ್ರೆಸ್ಸಿನಲ್ಲಿ ಅನೇಕ ವರ್ಷಗಳ ಕಾಲ ಇದ್ದು ಎಷ್ಟೋ ಗ್ರಂಥ ಗಳನ್ನು ಸಂಶೋಧನ ಮಾಡಿ ಪ್ರಕಾಶನಕ್ಕೆ ಅಣಿ ಮಾಡಿಕೊಟ್ಟಿದ್ದಾರೆ. ಇವರು ವಾಕ್ಯಾರ್ಥದಲ್ಲಿ ಕುಶಲರು. ನವೀನ ತರ್ಕದ ಕೋಟಿ ಕ್ರಮಗಳನ್ನು ಪರಿಷ್ಕರಿಸುವಲ್ಲಿ ನಿಪುಣರು. ಇವರಿಗೆ ಕೇಂದ್ರ ಸರಕಾರದಿಂದ ಪ್ರತಿ ತಿಂಗಳವೂ ೧೫೦ ರೂ. ಮಾಸಾ ಶನ ದೊರಕುತ್ತದೆ. ಈಗ ಇವರು ಬೆಂಗಳೂರಿನ ಚಿಕ್ಕಪೇಟೆಯಲ್ಲಿದ್ದ ಉತ್ತರಾದಿ ಮಠದಲ್ಲಿ ವಾಸವಾಗಿ ಪಾಠ ಪ್ರವಚನವನ್ನು ಮಾಡುತ್ತಲಿದ್ದಾರೆ.

## ೨೧೧ ನಿಜಗಲ್ ನರಸಿಂಹಮೂರ್ತಿ ಆಚಾರ್ಯ, ಬೆಂಗಳೂರು

ಇವರು ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾದ ಯಜ್ಞ ವಿಠಲಾಚಾರ್ಯ ರಲ್ಲಿಯೂ, ಇನ್ನ ಕೃಷ್ಣಾಚಾರ್ಯರಲ್ಲಿಯೂ ವೇದಾಂತ ವ್ಯಾಸಂಗ ಮಾಡಿ ಶಾಸ್ತ್ರ ಪ್ರವಚನ ಮಾಡುತ್ತಾರೆ.

## ೨೧೨ ಪ್ರಾಣೇಶಾಚಾರ್ಯ ಚಿತ್ರದುರ್ಗ, ಬೆಂಗಳೂರು

ಇವರು ಉತ್ತರಾದಿ ಮಠದ ಮಹಾ ಪಂಡಿತರಾದ ಶ್ರೀರಂಗ ರಾಮಾಚಾರ್ಯ ರಲ್ಲಿಯೂ, ಯಜ್ಞ ವಿಠಲಾಚಾರ್ಯರಲ್ಲಿಯೂ ವೇದಾಂತ ವ್ಯಾಸಂಗ ಮಾಡಿ ಈಗ ಪುರಾಣ ಪ್ರವಚನ ಮಾಡುತ್ತಿದ್ದಾರೆ.

## ೨೧೩ ಮುಳಬಾಗಿಲದ ರಂಗನಾಥಾಚಾರ್ಯ

ಪದ್ಮ ಸರೋವರದ ದ್ವೈತ ವೇದಾಂತ ಪಾಠ ಶಾಲೆಯಲ್ಲಿ ಅಧ್ಯಯನ ಮಾಡಿ ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಶ್ರೀ ರಂಗನಾಥಾಚಾರ್ಯರು ಮುಳಬಾಗಿಲದಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ. ಮತ್ತು ಶ್ರೀಸುಧಾ ಎಂಬ ಉತ್ತರಾದಿ ಮಠದ ಕೃಪಾಶ್ರಯದಲ್ಲಿ ನಡೆಯುವ ಧಾರ್ಮಿಕ ಪತ್ರಿಕೆಯ ಸಂಪಾದಕ ರಾಗಿದ್ದಾರೆ.

## ೨೧೪ ವೈಯೂರು ವೆಂಕಟೇಶಾಚಾರ್ಯ ತಿರುಕೋಯಿಲೂರು

ವೈಯೂರು ಶ್ರೀನಿವಾಸಾಚಾರ್ಯರ ದತ್ತು ಪುತ್ರರಾದ ಇವರು ಸಾಹಿತ್ಯ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ತಿರುಕೋಯಿಲೂರಿನ ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೨೧೫ ಗುರುಗುಂಡಿ ನಾರಾಯಣಾಚಾರ್ಯ

ಇವರು ಫಲಿಮಾರು ಮಠದ ಆಸ್ಥಾನ ವಿದ್ವಾಂಸರಾದ ಗುರುಗುಂಡಿ ದಾಸಾಚಾರ್ಯರ ಮಕ್ಕಳಾಗಿದ್ದು ತಮ್ಮ ತೀರ್ಥರೂಪರಲ್ಲಿಯೇ ಯಜುರ್ವೇದ ಅಧ್ಯಯನ ಮಾಡಿ ವೇದ ಪಂಡಿತರಾದರು.

ಅನಂತಶಯನ ಮತ್ತು ಕೊಚ್ಚಿ ಮಹಾರಾಜರ ಆಸ್ಥಾನದಲ್ಲಿ ಘನಾಂತ ವೇದ ಪರೀಕ್ಷೆ ಕೊಟ್ಟು "ವೇದಮೂರ್ತಿ" ಎಂಬ ಬಿರುದು, ಸಂಭಾವನೆಗಳನ್ನು ಪಡೆದರು. ಈಗ ಇವರು ಸ್ವಗ್ರಹವಾದ ಗುರುಗುಂಡಿಯಲ್ಲಿ ವೇದ ಪಾಠ ಹೇಳುತ್ತಿದ್ದಾರೆ.



## ೨೧೬ ಕಂಪ್ಲಿ ಬೋಧರಾಚಾರ್ಯ, ಕಂಪ್ಲಿ

ಇವರು ದಿಗ್ಗಾವಿ ಕಮಲನಾಭಾಚಾರ್ಯರಲ್ಲಿಯೂ, ಜಾಲೀಹಾಳ, ಕೊರ್ಲಹಳ್ಳಿ, ಬನ್ನಿಗೋಳ ಆಚಾರ್ಯರಲ್ಲಿಯೂ ಸಾಹಿತ್ಯ, ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

## ೨೧೭ ಕೆ. ಅನಂತಪದ್ಮನಾಭಭಟ್ಟ ಕಿನ್ನಿಮೂಲ್ಕಿ, ಉಡುಪಿ

ಇವರು ಕರಂಬಳ್ಳಿ ಪದ್ಮನಾಭಾಚಾರ್ಯರಲ್ಲಿ ಅಧ್ಯಯನ ಮಾಡಿ ಪೌರೋಹಿತ್ಯ, ಪುರಾಣ, ಹರಿಕಥೆ ಮಾಡುತ್ತಲಿದ್ದಾರೆ ಇವರು ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ.

## ೨೧೮ ಬೀಡಿ ಭೀಮಸೇನಾಚಾರ್ಯ, ಧಾರವಾಡ

ಮುಳಬಾಗಿಲದ ರಾಮಣ್ಣಾಚಾರ್ಯ ಸ್ವಾಮಿಗಳವರಲ್ಲಿಯೂ ಶ್ರೀ ಭಂಡಾರಕೆರೆ ಶ್ರೀಪಾದಂಗಳವರಲ್ಲಿಯೂ ವ್ಯಾಕರಣ, ವೇದಾಂತ ಶಾಸ್ತ್ರಗಳನ್ನು ಓದಿದ ಭೀಮಸೇನಾಚಾರ್ಯರು ಈಗ ಧಾರವಾಡದಲ್ಲಿ ಸಂಸ್ಕೃತ ಪಾಠಶಾಲೆಯನ್ನು ನಡೆಯುಸುತ್ತಿದ್ದಾರೆ.

## ೨೧೯ ರೊಟ್ಟಿ ಸೇತುಮಾಧವಾಚಾರ್ಯ ಬೆಂಗಳೂರು

ಇವರು ಗೌಡಗಿರಿ ವೆಂಕಟರಮಣಾಚಾರ್ಯರಲ್ಲಿ ವೇದಾಂತ ಓದಿದ್ದಾರೆ. ಪ್ರಕೃತ ಬೆಂಗಳೂರಿನ ಉತ್ತರಾದಿ ಮಠದಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದಾರೆ.

## ೨೨೦ ಕಲ್ಲಾಪುರ ರಂಗಾಚಾರ್ಯ

ವಿದ್ವಾಂಸರೇ ದಿವಾನರಾಗಿರುವದು ಶ್ರೀಮದುತ್ತರಾದಿ ಮಠದ ವೈಶಿಷ್ಟ್ಯವನ್ನು ಶ್ರೀ ಕಲ್ಲಾಪುರ ರಂಗಾಚಾರ್ಯರು ಈಗಲೂ ಕಾಯ್ದುಕೊಂಡು ಬಂದಿದ್ದಾರೆ. ಇವರ ಕಕ್ಕ ಕಲ್ಲಾಪುರ ಜಯಾಚಾರ್ಯರೂ ಶ್ರೀಸತ್ಯಧ್ಯಾನರ ಕಾಲದಲ್ಲಿ ಉತ್ತರಾದಿ ಮಠದ ಜನಪ್ರಿಯ ದಿವಾನರಾಗಿದ್ದರು. ಶ್ರೀ ರಂಗಾಚಾರ್ಯರ ತಂದೆ ಶ್ರೀಗೋಪಾಲ ಕೃಷ್ಣಾಚಾರ್ಯರು ಅತ್ಯುತ್ತಮ ಪಂಡಿತರ ಶ್ರೇಣಿಗೆ ಸೇರಿದವರು. ಅವರಲ್ಲಿಯೇ ಬಾಲ್ಯದಲ್ಲಿ ಪ್ರಾಥಮಿಕ ಅಧ್ಯಯನ ಮಾಡಿದ ಶ್ರೀರಂಗಾಚಾರ್ಯರು ಮುಂದೆ ಉತ್ತರಾದಿ ಮಠಕ್ಕೆ ಬಂದು ಶ್ರೀ ಪಾಂಡುರಂಗೀ ಕೃಷ್ಣಾಚಾರ್ಯ ಹಾಗೂ ಜಯಾಚಾರ್ಯರಲ್ಲಿ ನ್ಯಾಯಶಾಸ್ತ್ರ ಅಧ್ಯಯನ ಮಾಡಿ ತರ್ಕ ಪಂಡಿತರಾದರು. ಶ್ರೀಸತ್ಯಧ್ಯಾನ ತೀರ್ಥರಲ್ಲಿ ಕಲ್ಲಾಪುರ ಆಚಾರ್ಯರಿಗೆ ತತ್ವಪ್ರಕಾಶಿಕಾ ಸುಧಾದಿ ವೇದಾಂತ ಗ್ರಂಥಗಳ ಪಾಠವಾಯಿತು.

ಶ್ರೀ ಸತ್ಯಧ್ಯಾನ ತೀರ್ಥರು ಸುಧಾದಿ ಗ್ರಂಥಗಳಲ್ಲಿ ಅಲ್ಲಲ್ಲಿ ವಿವೇಚನೀಯ ಘಟ್ಟಗಳಲ್ಲಿ ಹೇಳಿದ ವಿಶೇಷ ವಾಕ್ಯಾರ್ಥಗಳನ್ನು ಈಗಲೂ ಆಚಾರ್ಯರು ಅದೇ ಆನುಪೂರ್ವಿಯಲ್ಲಿ ಹೇಳಬಲ್ಲರು. ಜಿಜ್ಞಾಸಾಧಿಕರಣಸುಧಾ ತತ್ವಪ್ರಕಾಶಿಕೆಗಳಿಗೆ ಶ್ರೀ ಸತ್ಯಧ್ಯಾನರ ಪಾಠಪರಿಪಾಟಿಯ ಟೇಪರಿಕಾರ್ಡನ್ನು ಕೇಳಬೇಕೆಂದಿದ್ದರೆ ರಂಗಾಚಾರ್ಯರ ಹತ್ತರ ಬಂದರೆ ಸಾಕು. ಅವರ ಇಚ್ಛಾಪೂರ್ತಿಯಾಗಲಿಕ್ಕೆ ಸಾಕು. ಶ್ರೀ ಮಠದ ಸಂಪ್ರದಾಯ ವೈಷ್ಣವ ಸಿದ್ಧಾಂತ ರಹಸ್ಯವನ್ನು ಅನೂಚಾನವಾಗಿ ತಿಳಿದ ಶಿಷ್ಟವಿಶಿಷ್ಟ ಪಂಡಿತರಾದ ಶ್ರೀರಂಗಾಚಾರ್ಯರು ವಿನಯ ಸಹೃದಯತೆ ಸಜ್ಜನಿಕೆಯ ಸಮನ್ವಯ ಸ್ವರೂಪರಾಗಿದ್ದಾರೆ. ಉತ್ತರಾದಿ ಮಠದ ದಿವಾನ ಸ್ಥಾನಕ್ಕೆ ಅವರು ಸುಯೋಗ್ಯ ವ್ಯಕ್ತಿಯಾಗಿದ್ದಾರೆ. ಶ್ರೀ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಪರಮ ಪ್ರೀತ್ಯಾಸ್ಪದ ಪಂಡಿತರಾಗಿದ್ದಾರೆ.

## ೨೨೦ ಕಲಮಂಜೆ ವಾಸುದೇವ ಉಪಾಧ್ಯಾಯ

ಇವರು ಶ್ರೀ ಯರ್ಮಾಳು ಕುಪ್ಪಣ್ಣ ತಂತ್ರಿಯವರಲ್ಲಿ ಯಜುರ್ವೇದ ಮತ್ತು ಪೌರೋಹಿತ್ಯವನ್ನು, ಶ್ರೀ ವಿಬುಧಪ್ರಿಯತೀರ್ಥ ಹಾಗೂ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಧರ್ಮ ಶಾಸ್ತ್ರದಲ್ಲಿಯೂ ಇವರಿಗೆ ಪರಿಣತಿ ಉಂಟು.

## ೨೨೨ ಎನ್. ಕೃಷ್ಣಮೂರ್ತಿ ಬೆಂಗಳೂರು

ಬಾಳೇಬೈಲು ಪದ್ಮನಾಭಾಚಾರ್ಯರಲ್ಲಿ ಇವರು ವೇದಾಂತವನ್ನು ಓದಿ ಶಾಸ್ತ್ರದಲ್ಲಿ ಪಂಡಿತರ ವಾಗ್ಮಿಗಳೂ ಆಗಿದ್ದಾರೆ.

## ೨೨೩ ಗುರುಗುಂಡಿ ವಾಸುದೇವಾಚಾರ್ಯ



ಉಡುಪಿಯ ಗುರುಗುಂಡಿ ರಾಮಾಚಾರ್ಯರ ಜೇಷ್ಠ ಪುತ್ರರಾದ ಇವರು ಶ್ರೀ ಪೇಜಾವರ ಶ್ರೀಪಾದಂಗಳವರಲ್ಲಿ ಶ್ರೀಮನ್ ನ್ಯಾಯ ಸುಧಾ ಗ್ರಂಥವನ್ನು ಪೂರ್ಣ ಅಧ್ಯಯನ ಮಾಡಿ ಅವರ ಪ್ರಥಮ ಪರ್ಯಾಯ ಕಾಲದಲ್ಲಿ ಸುಧಾ ಮಂಗಳವನ್ನು ಮಾಡಿದರು.

ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನಮಾಡಿ ದ್ವೈತ ವೇದಾಂತ ಶಿರೋಮಣಿ ಹಾಗೂ ವಿದ್ವತ್ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿ ವಿಶೇಷ ಬಹುಮಾನ ಪಡೆದಿದ್ದಾರೆ.

ಇವರು ಉಡುಪಿಯ ಸಂಸ್ಕೃತ ಮಹಾ ಪಾಠ ಶಾಲೆಯಲ್ಲಿಯೂ, ಮಾಧ್ವ ಮಹಾ ಮಂಡಲದ ಉಡುಪಿಯ ಶಾಖೆಯ ವತಿಯಿಂದ ನಡೆಯಿಸಲ್ಪಡುವ ಸಂಸ್ಕೃತ ತರಗತಿಯಲ್ಲಿಯೂ ಅಧ್ಯಾಪನ ಕಾರ್ಯ ಮಾಡುತ್ತಿದ್ದಾರೆ.

## ೨೨೪ ವಿಜಯೀಂದ್ರಮೂರ್ತಿ, ಮೈಸೂರು

ಇವರು ವಾಲ್ಮಿಕಿ ಗೋಪಾಲಾಚಾರ್ಯರಲ್ಲಿಯೂ, ಕಾಶಿ ಪ್ರಾಣೇಶಾಚಾರ್ಯ ಮಹಿಷಿ ವ್ಯಾಸರಾಯಾಚಾರ್ಯ ಮುಂತಾದವರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಉಡುಪಿಯ ಆಯುರ್ವೇದ ಕಾಲೇಜದ ಪ್ರಿನ್ಸಿಪಾಲರಾಗಿದ್ದರು.

ಈಗ ಇವರು ಮೈಸೂರಿನ ಆಯುರ್ವೇದ ಕಾಲೇಜಿನಲ್ಲಿ ಪ್ರೊಫೆಸರರಾಗಿ ಕೆಲಸ ಮಾಡುತ್ತಿದ್ದಾರೆ.

## ೨೨೫ ಸಿಂಗನಮಲ್ಲಿ ಬಿಂದಾಚಾರ್ಯ ಬೆಂಗಳೂರು

ಇವರು ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾದ ಶ್ರೀರಂಗ ರಾಮಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಈಗ ಸರಕಾರೀ ಹೈಸ್ಕೂಲಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

## ೨೨೬ ಮುಳಬಾಗಿಲದ ಗೋಪಿನಾಥಾಚಾರ್ಯ ಬೆಂಗಳೂರು

ಇವರು ಮುಳಬಾಗಿಲದ ಶ್ರೀಪಾದರಾಜ ಮಠದ ಪಂಡಿತ ಪೀಠಾಧಿಪತಿಗಳಾದ ಶ್ರೀ ದಯಾನಿಧಿ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತ ಶಾಸ್ತ್ರವನ್ನು ಚನ್ನಾಗಿ ವ್ಯಾಸಂಗ ಮಾಡಿದ್ದಾರೆ.

### ೨೨೭ ಭೂವರಾಹಾಚಾರ್ಯ ಕುಂಭಕೋಣ

ಇವರು ವೇದಾಂತದಲ್ಲಿ ವಿದ್ವಾಂಸರು. ಸಾಹಿತ್ಯದಲ್ಲಿ ಪಂಡಿತರು. ಪುರಾಣ ಪ್ರವಚನಗಳಲ್ಲಿ ಪ್ರವೀಣರು. ಉಪನ್ಯಾಸ ಚತುರರು.

### ೨೨೮ ಅವಧಾನಿ ಹುಚ್ಚಾಚಾರ್ಯ ಮಣ್ಣೂರು

ಯಳಮೇಲಿ ವಿಠ್ಠಲಾಚಾರ್ಯರಲ್ಲಿ ವ್ಯಾಕರಣವನ್ನು ವೇದಾಂತವನ್ನು ಅಧ್ಯಯನ ಮಾಡಿ ಮಹಾ ಪಂಡಿತರಾಗಿದ್ದಾರೆ. ಈಗ ಮಣ್ಣೂರಲ್ಲಿ ಸುಧಾದಿ ಗ್ರಂಥಗಳನ್ನು ಪಾಠ ಹೇಳುತ್ತ ವಾಸವಾಗಿದ್ದಾರೆ.

### ೨೨೯ ಕೌಲಗಿ ಶೇಷಾಚಾರ್ಯ ಉಡುಪಿ

ಮೈಸೂರಲ್ಲಿದ್ದು ಶಾಸ್ತ್ರಾಧ್ಯಯನ ಮಾಡಿ ಸಂಸ್ಕೃತ ಆಂಗ್ಲ ಪದವೀಧರರಾದ ಶೇಷಾಚಾರ್ಯರು ಉಡುಪಿಯ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಇವರಿಗೆ ವೇದಾಂತ ಹಾಗೂ ಅಲಂಕಾರ ಶಾಸ್ತ್ರಗಳಲ್ಲಿ ಒಳ್ಳೆ ಅಭಿನಿವೇಶ ಅಭಿಜ್ಞತೆಗಳು ಉಂಟು. ಅವರು ಕನ್ನಡದಲ್ಲಿ ಅಲಂಕಾರ ಶಾಸ್ತ್ರದ ಮೇಲೆ ಪ್ರಬಂಧವನ್ನು ಬರೆದಿದ್ದಾರೆ.

### ೨೩೦ ಅವಧಾನಿ ವಿಠ್ಠಲಾಚಾರ್ಯ ಶ್ರೀರಂಗ

ಮನ್ನಾರುಗುಡಿ ಆಚಾರ್ಯರ ಮನೆತನದವರಾದ ವಿಠ್ಠಲಾಚಾರ್ಯರು ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಪ್ರಕೃತ ಶ್ರೀರಂಗದಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದಾರೆ.

### ೨೩೧ ವಟ್ಟಂಗಾರು ಹರಿಯಾಚಾರ್ಯ ಶ್ರೀರಂಗ

ಶ್ರೀರಂಗ ರಾಮಾಚಾರ್ಯರ ಮಕ್ಕಳಾದ ಹರಿಯಾಚಾರ್ಯರು ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಈಗ ಶ್ರೀರಂಗ ಪಟ್ಟಣದಲ್ಲಿದ್ದು ಪುರಾಣ, ಪಾಠ, ಪ್ರವಚನವನ್ನು ಮಾಡುತ್ತಲಿದ್ದಾರೆ.

### ೨೩೨ ಗೋಪಾಲಕೃಷ್ಣಾಚಾರ್ಯ ಉಡುಪಿ ಬೆಂಗಳೂರು

ಇವರು ಉಡುಪಿಯಲ್ಲಿ ಯಜುರ್ವೇದ ಸಂಹಿತೆಯನ್ನೂ ಸಾಹಿತ್ಯ, ವೇದಾಂತದ ಕೆಲವು ಗ್ರಂಥಗಳನ್ನೂ ಅಧ್ಯಯನ ಮಾಡಿ ಹರಿದಾಸ ವೃತ್ತಿಯನ್ನು ಕೈಕೊಂಡಿದ್ದಾರೆ. ಸ್ವಂತ ಸಂಗೀತ ಶಾಲೆಯನ್ನು ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ಸಂಗೀತ ಪಾಠ ಹೇಳುತ್ತಾರೆ.

## ೨೩೩ ಕೆ. ರಾಮಚಂದ್ರಾಚಾರ್ಯರ್ ಕೋಲಾರ



ಮೈಸೂರ ಸಂಸ್ಕೃತ ಕಾಲೇಜದಲ್ಲಿಯೂ ಪದ್ಮ ಸರೋವರದ ವೇದಾಂತ ಪಾಠಶಾಲೆಯಲ್ಲಿಯೂ ಶ್ರೀಸತ್ಯಧ್ಯಾನ ತೀರ್ಥರಲ್ಲಿಯೂ ಅಧ್ಯಯನ ಮಾಡಿ ದ್ವೈತ ವೇದಾಂತ ಮತ್ತು ಧರ್ಮ ಶಾಸ್ತ್ರದಲ್ಲಿ ವಿದ್ವಾನ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಮಧ್ವ ಸಿದ್ಧಾಂತ ಉನ್ನಾಹಿನಿ ಸಭೆಯಲ್ಲಿ ಪ್ರತಿ ವರ್ಷವೂ ಧರ್ಮಾಧಾರಿಗಳಾಗಿರುತ್ತಾರೆ.

ಇವರು ವಾಯುಜೀವೋತ್ತಮತ್ವ ಸಮರ್ಥನ ಅವತಾರತ್ರಯಾಮೃತ ಬಿಂದು; ಚಂಪೂ, ಕನ್ನಡ ವಿಶ್ವಕೋಶ, ಸಂಸ್ಕೃತ ಗದ್ಯಾತ್ಮಕ ಅನೇಕ ಗ್ರಂಥಗಳನ್ನು ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಬರೆದಿದ್ದಾರೆ. ಇವರ ಕನ್ನಡ ವಿಶ್ವಕೋಶದ "ಅ" ಕಾರದ ಒಂದು ಭಾಗವು ಸುಬೋಧ ಮುದ್ರಣಾಲಯದಲ್ಲಿ ಅಚ್ಚಾಗಿರುತ್ತದೆ.

ರಾಮಚಂದ್ರಾಚಾರ್ಯರಿಗೆ ಧರ್ಮಶಾಸ್ತ್ರ, ತರ್ಕಶಾಸ್ತ್ರಗಳಲ್ಲಿಯೂ ಪಾಂಡಿತ್ಯ ಪರಿಣತಿಗಳುಂಟು. ಪೆರಿಯಾಕುಳಂ ರಾಮಚಂದ್ರಾಚಾರ್ಯ, ಯಲತ್ತೂರ ಕೃಷ್ಣಾಚಾರ್ಯ, ಪುಂಗನೂರ ರಾಘವೇಂದ್ರಾಚಾರ್ಯ, ಮುಂತಾದ ದಿಗ್ಗಜ ಪಂಡಿತರಲ್ಲಿ ಶಾಸ್ತ್ರಾಧ್ಯಯನ ಮಾಡಿದ ರಾಮಚಂದ್ರಾಚಾರ್ಯರು ಅನೇಕ ಜನರಿಗೆ ಸುಧಾದಿ ಗ್ರಂಥಗಳನ್ನು ಪಾಠ ಹೇಳಿದ್ದಾರೆ. ಇವರು ಮೈಸೂರಿನ ಅರಮನೆಯ ಧರ್ಮಾಧಿಕಾರಿಗಳಾಗಿದ್ದು ತಮ್ಮ ಸಹಾಧ್ಯಾಯಿಗಳಾಗಿದ್ದ ಕಾಶಿಯ ಪ್ರಾಣೇಶಾಚಾರ್ಯರೊಂದಿಗೆ "ಪೂರ್ಣ ಬೋಧ", 'ಪುರಾಣ ಪತ್ರಿಕೆ' ಮುಂತಾದ ಮಾಸ ಪತ್ರಿಕೆಗಳಿಗೆ ಸಹ ಸಂಪಾದಕರಾಗಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

ಇವರ ಸಂಸ್ಕೃತ ಕವಿತಾ ಕೌಶಲ್ಯಕ್ಕೆ ಮೆಚ್ಚಿ ಅಯೋಧ್ಯೆಯ "ಸಂಸ್ಕೃತಂ" ಪತ್ರಿಕೆಯ ಸಂಪಾದಕರು ಇವರಿಗೆ ವಿದ್ಯಾಭೂಷಣ ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದಾರೆ. ಕೋಲಾರದ ರಜಿಸ್ಟರ್ಡ ಮಾಧ್ವ ಸಂಘ ಮತ್ತು ಶ್ರೀರಾಘವೇಂದ್ರ ಸ್ವಾಮಿಗಳ ಮಠಗಳಿಗೆ ಇವರೇ ಅಧ್ಯಕ್ಷರಾಗಿದ್ದಾರೆ. ಕೋಲಾರದಲ್ಲಿ ಸಂಸ್ಕೃತ ಸಂರಕ್ಷಣಾ ಸಂಸ್ಥಾ ಎಂಬ ಹೆಸರಿನ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ನಿತ್ಯವೂ ಅನೇಕ ಶಿಷ್ಯರಿಗೆ ಪಾಠ ಪ್ರವಚನ ಮಾಡುತ್ತಲಿದ್ದಾರೆ. ಈಗಲೂ ಅಲ್ಲಿ ೧೦-೧೫ ಜನ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಲಿದ್ದಾರೆ.

ಮೈಸೂರಿನ ಸಂಸ್ಕೃತ ವಿದ್ವತ್ ಪರೀಕ್ಷಾ ಬೋರ್ಡಿನಲ್ಲಿ ಇವರು ೪೫ ವರ್ಷ ಕೆಲಸ ಮಾಡಿದ್ದಾರೆ. ಇವರು ತಮ್ಮ ಮನೆಗೆ ತಮ್ಮ ಗುರುಗಳ ಸ್ಮರಣಾರ್ಥವಾಗಿ ಶ್ರೀ ಸತ್ಯಧ್ಯಾನ ಭವನವೆಂದು ಹೆಸರಿಟ್ಟಿದ್ದಾರೆ.

## ೨೪೪ ಲಕ್ಷ್ಮಣಾಚಾರ್ಯ ಪಾಂಘ್ರಿ, ಐನಾಪುರ



ಶ್ರೀ ಘಾಂಘ್ರಿ ತಾತಾಚಾರ್ಯರ ಮಕ್ಕಳಾದ ಲಕ್ಷ್ಮಣಾಚಾರ್ಯರು ಶ್ರೀ ಮಾಹುಲಿ ಗೋಪಾಲಾಚಾರ್ಯರಲ್ಲಿ ಸಾಹಿತ್ಯ ವೇದಾಂತಗಳನ್ನು ಅಧ್ಯಯನ ಮಾಡಿದರು.

ಈಗ ಇವರು ಐನಾಪುರದಲ್ಲಿದ್ದು ಪಾಠ ಪ್ರವಚನ ಮಾಡುತ್ತಲಿದ್ದಾರೆ.

## ೨೪೫ ವೆಂಕಟರಮಣಾಚಾರ್ಯ ಉಡುಪಿ

ಇವರು ಸಾಹಿತ್ಯ ವೇದಾಂತಗಳಲ್ಲಿ ಪರಿಣತರಿದ್ದು ಶಿರೋಮಣಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಇವರು ಧರ್ಮಬೋಧ ಎಂಬ ಕನ್ನಡ ಮಾಸ ಪತ್ರಿಕೆಯನ್ನು ತೆಗೆಯುತ್ತಿದ್ದರು. ಇವರ ಲೇಖನಿಯು ಒಳ್ಳೇ ಹರಿತ. ನಾಸ್ತಿಕರನ್ನೂ ಧರ್ಮದ್ರೋಹಿಗಳನ್ನೂ ಅಧಾರ್ಮಿಕ ಅಭಿಪ್ರಾಯಗಳನ್ನೂ ನ್ಯಾಯನಿಷ್ಠುರವಾದ ಉಗ್ರ ಭಾಷೆಯಲ್ಲಿ ಟೀಕಿಸಿ ಆರ್ಯ ಸನಾತನ ವೈದಿಕ ಧರ್ಮದ ರಹಸ್ಯವನ್ನೆಲ್ಲ ಜನರಿಗೆ ತಿಳಿಯಪಡಿಸುತ್ತಿದ್ದರು. ಈಗ ಉಡುಪಿಯಲ್ಲಿದ್ದಾರೆ.

## ೨೪೬ ಮಧ್ವಾಚಾರ್ಯ ಸತ್ತಿ ವಿಜಾಪುರ

ಇವರು ಗಲಗಲಿ ವೆಂಕಣ್ಣಾಚಾರ್ಯರಲ್ಲಿ ಸಾಹಿತ್ಯ ವೇದಾಂತಗಳನ್ನು ಅಧ್ಯಯನ ಮಾಡಿ ವಿಜಾಪುರದಲ್ಲಿದ್ದು ಭಾಗವತಾದಿ ಪುರಾಣ ಹೇಳುತ್ತಾರೆ. ಪಾಂಡುರಂಗಿ ಗುರಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿದ್ದಾರೆ.

## ೨೪೭ ವಿಠ್ಠಲಾಚಾರ್ಯ ಆದ್ಯ, ಮುಂಬಯಿ

ಮುಂಬೈ ವಾಣಿ ವಿಹಾರ ಸಂಸ್ಕೃತ ಪಾಠ ಶಾಲೆಯಲ್ಲಿ ಶ್ರೀ ಮಾಹುಲಿ ಗೋಪಾಲಾಚಾರ್ಯರ ಬಳಿಯಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿ ಈಗ ಮುಂಬೈಯಲ್ಲಿ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

## ೨೪೮ ಕೆ. ವೆಂಕಟಸುಬ್ರಾಯಭಟ್ಟ, ಉಡುಪಿ



ಇವರು ವೇದ, ಸಾಹಿತ್ಯ, ಜ್ಯೋತಿಷ್ಯ, ಪೌರೋಹಿತ್ಯ, ಮಂತ್ರ–ತಂತ್ರ ಮುಂತಾದವು ಗಳಲ್ಲಿ ಪರಿಣತರಾಗಿದ್ದಾರೆ.

ಇವರು ಪುತ್ತಿಗೆ ಮಠದ ಪುರೋಹಿತ ರಾಗಿದ್ದು "ಮಂತ್ರ ವಿಶಾರದ" ಎಂಬ ಬಿರುದನ್ನು ಪಡೆದಿದ್ದಾರೆ.

ಮಾರಿಗೊಂಡು ಸುಬ್ರಹ್ಮಣ್ಯ ದೇವಾಲಯ ವನ್ನು ಜೀರ್ಣೋದ್ಧಾರ ಮಾಡಿಸಿ, ಮಾರಿ ಗೊಂಡು ಶ್ರೀ ಷಣ್ಮುಖ ಮಹಾತ್ಮ್ಯ ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದ್ದಾರೆ.

ಇವರು "ಋಗ್ವೇದಿಯ ಪೂರ್ವಾಪರ ಷೋಡಶ ಕರ್ಮಗಳು", "ಮಂತ್ರವಾದ ಸಂಗ್ರಹ" ಎಂಬ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಅನೇಕ ಜನ ವಿದ್ಯಾರ್ಥಿಗಳಿಗೆ ಜ್ಯೋತಿಷ್ಯ, ಪೌರೋಹಿತ್ಯ ಪಾಠ ಹೇಳಿದ್ದಾರೆ.

## ೨೪೯ ಭೋಜಾಚಾರ್ಯ ವಾಲುಕೊಂಡ

ಇವರು ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಅಧ್ಯಯನ ಮಾಡಿ ವೇದಾಂತ ಪಂಡಿತರಾಗಿದ್ದಾರೆ.

## ೨೫೦ ಜಿ. ಕೆ. ತಿಮ್ಮಣ್ಣಾಚಾರ್ಯ

ಗರಣಿ ವೈಯ್ಯಾಕರಣಿ ಕೃಷ್ಣಾಚಾರ್ಯರ ಪುತ್ರರಾದ ತಿಮ್ಮಣ್ಣಾಚಾರ್ಯರು ಎಂ.ಎ.,ಬಿ.ಟಿ. ಪದವೀಧರರಾಗಿ ಮೈಸೂರಿನ ವಿದ್ಯಾಖಾತೆಯಲ್ಲಿ ಕೆಲಸ ಮಾಡಿ ದ್ದಾರೆ. ಸಂಸ್ಕೃತ ಸಾಹಿತ್ಯ ಮತ್ತು ವೇದಾಂತದಲ್ಲಿ ಪರಿಜ್ಞಾನವುಳ್ಳ ಆಚಾರ್ಯರು ಹೈಸ್ಕೂಲ ಸಂಸ್ಕೃತ ವ್ಯಾಕರಣ, ಸಟೀಕ ಅಮರಕೋಶದ ಇಂಗ್ಲೀಷ ಕನ್ನಡ ಟಿಪ್ಪಣಿ, ಅನುವಾದ ಮುಕ್ತಾವಳಿ ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ. ಇವರು ನಿವೃತ್ತರಾದ ಬಳಿಕ ಮದ್ರಾಸಿನ ಸಮಾಜಭೂಷಣ ಕೆ. ಸೀತಾರಾಮರಾಯರ ಧರ್ಮಪ್ರಕಾಶ ಎಂಬ ಸಂಸ್ಥೆಯಲ್ಲಿ ಕಾರ್ಯ ಮಾಡಿ ಈಗ ಮೈಸೂರಿನಲ್ಲಿರುವರು.

## ೨೫೧ ರಂಗಾಚಾರ್ಯ ಗಲಗಲಿ, ಅಗರಖೇಡ

ಇವರು ಮುಂಬೈಯ ಮಹಾಮನೀಷಿಗಳಾದ ಮಾಹುಲಿ ಗೋಪಾಲಾಚಾರ್ಯರಲ್ಲಿ ಸುಧಾದ ವರೆಗೆ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

## ೨೫೨ ವಲ್ಲಾಕೊಂಡ ನರಸಿಂಹಾಚಾರ್ಯ

ಇವರು ತಮ್ಮ ಅಜ್ಜಂದಿರಲ್ಲಿ ಸಾಹಿತ್ಯ ವೇದಾಂತ ಅಧ್ಯಯನ ಮಾಡಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ಸುಧಾ ವ್ಯಾಸತ್ರಯಗಳನ್ನು ಅಧ್ಯಯನ ಮಾಡಿದರು. ವೇದಾಂತದಲ್ಲಿ ಪರಿನಿಷ್ಠಿತ ಪಂಡಿತರಾದ ನರಸಿಂಹಾಚಾರ್ಯರು ಶ್ರೀ ಶ್ರೀ ಭಂಡಾರ ಕೆರೆ ಶ್ರೀಪಾದಂಗಳವರ ಸಹಾಧ್ಯಾಯಿಗಳಾಗಿದ್ದು ಅವರ ಜೊತೆಗೆ ಉತ್ತರಾದಿ ಮಠ ದಲ್ಲಿ ಶ್ರೀ ಸತ್ಯಧ್ಯಾನ ತೀರ್ಥರಲ್ಲಿ ದ್ವೈತಾದ್ವೈತ ವೇದಾಂತ, ಪೂರ್ವ ಮೀಮಾಂ ಸಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು. ಆಚಾರ್ಯರಿಗೆ ಧರ್ಮಶಾಸ್ತ್ರ ದಲ್ಲಿಯೂ ಪ್ರಭುತ್ವವಿದೆ ಎನ್ನುವಷ್ಟು ಪಾಂಡಿತ್ಯವಿದೆ. ಈಗ ಅವರು ಹೈದ್ರಾಬಾದಿ ನಲ್ಲಿದ್ದು ಅನೇಕ ಲೌಕಿಕ ವೈದಿಕ ಜನರಿಗೆ ಶಾಸ್ತ್ರಾರ್ಥ ಪಾಠಗಳನ್ನು ಹೇಳುತ್ತಿದ್ದಾರೆ.

## ೨೫೩ ಎನ್. ಕೆ. ವೆಂಕಟರಮಣ ಬಲ್ಲಾಳ, ಅಂಬಲಪಾಡಿ



ಇವರು ಉಡುಪಿಯ ಸಂಸ್ಕೃತ ಪಾಠ ಶಾಲೆಯಲ್ಲಿಯೂ, ಬೆಂಗಳೂರಿನ ಉತ್ತರಾದಿ ಮಠದಲ್ಲಿಯೂ, ಕೋಚೀನ ಮಹಾರಾಜರ ಪಾಠಶಾಲೆಯಲ್ಲಿಯೂ, ತ್ರಿವೇಂದ್ರಂ ಪಾಠಶಾಲೆ ಯಲ್ಲಿಯೂ ಸಾಹಿತ್ಯ, ಜ್ಯೋತಿಷ್ಯ, ಪೌರೋ ಹಿತ್ಯ, ಮುಂತಾದ ವಿದ್ಯೆಗಳನ್ನು ಅಧ್ಯಯನ ಮಾಡಿದ್ದಾರೆ.

ಪಾಶ್ಚಾತ್ಯ ಜ್ಯೋತಿಷ್ಯ ಫಲ ಪ್ರದೀಪಿಕಾ ಎಂಬ ಪುಸ್ತಕವನ್ನು ಬರೆದಿದ್ದಾರೆ. ಇವರಲ್ಲಿ ಅನೇಕ ವಿದ್ಯಾರ್ಥಿಗಳು ಜ್ಯೋತಿಷ್ಯ ಶಾಸ್ತ್ರ ವನ್ನು ಅಧ್ಯಯನ ಮಾಡುತ್ತಿದ್ದಾರೆ.

## ೨೫೪ ಕೆ. ನರಸಿಂಹ ಉಪಾಧ್ಯಾಯ, ಉಡುಪಿ

ಇವರು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಜ್ಯೋತಿಷ್ಯ ಶಾಸ್ತ್ರವನ್ನೂ, ವೈದ್ಯ ಶಾಸ್ತ್ರವನ್ನೂ ಅಧ್ಯಯನ ಮಾಡಿ ಅದೇ ಪಾಠ ಶಾಲೆಯಲ್ಲಿ ಜ್ಯೋತಿಷ್ಯ ಪ್ರಧಾನಾಧ್ಯಾಪಕರಾಗಿದ್ದಾರೆ.

ಇವರು ಜ್ಯೋತಿಷ್ಯ ಶಿರೋಮಣಿ, ಜ್ಯೋತಿರ್ಭೂಷಣ ಮುಂತಾದ ಪದವಿಗಳನ್ನು ಪಡೆದಿದ್ದಾರೆ. ಪಾಠ ಶಾಲೆಯ ನೂರಾರು ವಿದ್ಯಾರ್ಥಿಗಳಿಗೆ ಗಣಿತ ಶಾಸ್ತ್ರ, ಫಲ ಜ್ಯೋತಿಷ ಪಾಠ ಹೇಳಿದ್ದಾರೆ.

### ೨೫೫ ಆನಂದತೀರ್ಥಾಚಾರ್ಯ ಗಲಗಲಿ



ಈಗಿನ ಉತ್ತರಾದಿ ಮಠದ ದಿವಾನರಾದ ಆನಂದ ತೀರ್ಥಾಚಾರ್ಯರು ಗಲಗಲಿ ಮಧ್ವಾಚಾರ್ಯರಲ್ಲಿಯೂ ಕಲ್ಲಾಪುರ ರಂಗಾಚಾರ್ಯರಲ್ಲಿಯೂ ಗಲಗಲಿ ಮುದ್ದಾಚಾರ್ಯರಲ್ಲಿಯೂ ನ್ಯಾಯ ವೇದಾಂತಾದಿ ಗ್ರಂಥಗಳನ್ನು ಅಧ್ಯಯನ ಮಾಡಿ ಮಹಾ ಪಂಡಿತರಾಗಿದ್ದಾರೆ. ಉತ್ತರಾದಿ ಮಠದ ಆಸ್ಥಾನ ವಿದ್ವಾಂಸರಾಗಿ ಶ್ರೀ ಸತ್ಯ ಪ್ರಮೋದ ತೀರ್ಥ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ.

### ೨೫೬ ಎನ್. ಜೆ. ಸ್ವಾಮಿರಾಯಾಚಾರ್ಯ, ತಿರುಪತಿ



ಇವರು ಬಳ್ಳಾರಿಯ ಹತ್ತಿರ ನಾಗಲಾಪುರದ ಜ್ಯೋತಿಷಿಗಳು. ಬಳ್ಳಾರಿಯಲ್ಲಿ ಸಂಸ್ಕೃತ, ಯಾಜ್ಞಿಕ ಜ್ಯೋತಿಷವನ್ನು ಅಭ್ಯಾಸ ಮಾಡಿದ್ದಾರೆ.

ಈಗ ತಿರುಪತಿಯ ಬೆಟ್ಟದ ಮೇಲೆ ವಾಸವಾಗಿದ್ದಾರೆ. ಯಾಜ್ಞಿಕವನ್ನು ಮಾಡಿಸುವದು, ಜ್ಯೋತಿಷವನ್ನು ಹೇಳುವದು ಇವರ ವೃತ್ತಿಯಾಗಿದೆ. ಇವರು ಒಳ್ಳೆ ವಾಗ್ಮಿಗಳು ಆಗಿದ್ದಾರೆ.

### ೨೫೭ ಪ್ರಲ್ಹಾದಾಚಾರ್ಯ ಪಾಚ್ಛಾಪುರ, ಕೊಲ್ಹಾರ (ವಿಜಾಪುರ ಜಿಲ್ಹಾ)



ಪಂಢರಪುರದ ಪೂರ್ಣಪ್ರಜ್ಞ ಪಾಠಶಾಲೆಯಲ್ಲಿ ಪೂಜ್ಯ ಪ್ರದ್ಯುಮ್ನಾಚಾರ್ಯರಲ್ಲಿ ಸಾಹಿತ್ಯ, ವೇದಾಂತವನ್ನು ಅಧ್ಯಯನ ಮಾಡಿದರು. ಈಗ ಇವರು ಊರೂರಿಗೆ ಭಾಗವತಾದಿ ಪುರಾಣಗಳನ್ನು ಭಾಗವತ ಧರ್ಮಗಳನ್ನು ಪ್ರಸಾರ ಮಾಡುತ್ತಾರೆ. ನೂರಾರು ಸಲ ಭಾಗವತ ಸಪ್ತಾಹವನ್ನು ಮಾಡಿದ್ದಾರೆ.

## ೨೫೮ ರಾಮಾಚಾರ್ಯ ನರೇಗಲ್ಲ, ಗದಗ

ಇವರು ಋಗ್ವೇದ, ಯಜುರ್ವೇದ ಸಂಹಿತಾ, ಬ್ರಾಹ್ಮಣ ಉಪನಿಷತ್ತುಗಳನ್ನು ಕಾವ್ಯಗಳನ್ನು ಅಧ್ಯಯನ ಮಾಡಿದ್ದಾರೆ. ಯಾಜ್ಞಿಕ ಮಾಡಿಸುತ್ತಾರೆ.



ಉತ್ತರಾದಿ ಮಠದ ಶ್ರೀ ಸತ್ಯಾಭಿಜ್ಞ ತೀರ್ಥರು ಇವರನ್ನು ಕೆಲವು ದಿವಸ ಕೂಸನೂರಲ್ಲಿ ಇಟ್ಟು ವಿದ್ಯಾರ್ಥಿಗಳಿಗೆ ಪಾಠ ಹೇಳಿಸಿದರು. ಅನಂತರ ಇವರು ಬಮ್ಮನಹಳ್ಳಿ, ಹಾವೇರಿ, ಹಾನಗಲ್, ಆಲದಕಟ್ಟಿ ಮುಂತಾದ ಕಡೆಗಳಲ್ಲಿ ಇದ್ದು ಮಕ್ಕಳಿಗೆ ಮಂತ್ರ, ಸ್ತೋತ್ರ ಪಾಠಹೇಳಿ ಈಗ ಶ್ರೀ ಪೇಜಾವರ, ಭಂಡಾರಕೇರಿ ಶ್ರೀಗಳವರ ಆದೇಶದಂತೆ ಗದುಗಿನಲ್ಲಿ ಮಕ್ಕಳಿಗೆ ಪಾಠ ಹೇಳುತ್ತಿದ್ದಾರೆ.

## ೨೫೯ ಶ್ಯಾಮಾಚಾರ್ಯ ಕೃಷ್ಣಾಚಾರ್ಯ ವರಪ್ಪ, ರಾಯಚೂರ



ಇವರು ರಾಯಚೂರಿನಲ್ಲಿ ಪೂರ್ವಾಪರ ಯಾಜ್ಞಿಕ ಮಾಡಿಸುವದಲ್ಲದೆ, ಪುರಾಣವನ್ನೂ ಹೇಳುತ್ತಾರೆ.

೬೮ ವಯಸ್ಸಿನ ಇವರು ಈಗ ರಾಯಚೂರಿನ ಕೋಟೆರಾಯರ ಗುಡಿ ಅರ್ಚಕರಾಗಿರುವರು



## ೨೬೦ ವಸಂತಾಚಾರ್ಯ ಮಳಿಗಿ ಬಾಗಲಕೋಟೆ

ಇವರು ತಮ್ಮ ತಂದೆ ಶ್ರೀ ವೇದವ್ಯಾಸಾಚಾರ್ಯರಲ್ಲಿ ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನಮಾಡಿದ್ದಾರೆ. ಶ್ರೀ ಸತ್ಯಧ್ಯಾನತೀರ್ಥರಲ್ಲಿ ಶಾಸ್ತ್ರ ಗ್ರಂಥಗಳನ್ನು ಮುಯೋಗ್ಯತವಾಗಿ ಪರೀಕ್ಷೆ ಕೊಟ್ಟಿದ್ದಾರೆ.

## ೨೬೧ ಅಣ್ಣಯ್ಯಾಚಾರ್ಯ ಶೂರ್ಪಾಲಿ, ಬಾಗಲಕೋಟಿ



ಶ್ರೀ ಬುರ್ಲಿ ರಾಘವೇಂದ್ರಾಚಾರ್ಯರಲ್ಲಿ ಸಂಪೂರ್ಣ ಋಗ್ವೇದ ಸಂಹಿತೆಯನ್ನು ಅಧ್ಯಯನ ಮಾಡಿದ ಅಣ್ಣಾಚಾರ್ಯರು ಪೂರ್ವಾಪರ ಯಾಜ್ಞಿಕದಲ್ಲಿಯೂ ಪಳಗಿದವರಾಗಿದ್ದಾರೆ.

ಅನೇಕ ಕಡೆಗಳಲ್ಲಿ ಸಂಹಿತಾ, ಸ್ವಾಹಾಕಾರದಲ್ಲಿ ಉತ್ಸಾಹದಿಂದ ಭಾಗವಹಿಸುತ್ತಾರೆ.

## ೨೬೧ ಘೂಳೀ ಕೃಷ್ಣಮೂರ್ತಿ ಆಚಾರ್ಯ, ಬಳ್ಳಾರಿ

ಉತ್ತರಾದಿ ಮಠದ ಶ್ರೀ ಸತ್ಯಸಂತುಷ್ಟ ತೀರ್ಥರ ಪೂರ್ವಾಶ್ರಮ ವಂಶದವರಾದ ಆಚಾರ್ಯರು ಶ್ರೀ ಹುಲಿಗಿ ಹುಚ್ಚಾಚಾರ್ಯರಲ್ಲಿ ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿದರು. ಬಳ್ಳಾರಿಯಲ್ಲಿ: ಕಲ್ಲಾಚಾರ್ಯ, ವಿಷ್ಣುತೀರ್ಥಾಚಾರ್ಯ, ಪ್ರಲ್ಹಾದ ಆಚಾರ್ಯ, ಸೇತೂ ರಾಮಾಚಾರ್ಯ, ಕೋನೇರಿ ಆಚಾರ್ಯ ಮುಂತಾದ ಅನೇಕ ಜನರಿಗೆ ತತ್ವಪ್ರಕಾಶಿಕಾದಿ ಗ್ರಂಥಗಳನ್ನು ಪಾಠ ಹೇಳಿದ್ದಾರೆ. ನೂರಾರು ಸಲ ಭಾಗವತ ಪುರಾಣವನ್ನು ಹೇಳಿ ಮಂಗಳ ಮಾಡಿದ್ದಾರೆ. ಭಾಗವತವನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಿದ್ದಾರೆ.



## ೨೬೨ ನಾಗಪ್ಪ ಪುರಾಣಿಕ ಕುಂಭಾಸಿ

ಇವರು ಋಗ್ವೇದ, ಪೌರೋಹಿತ್ಯ, ಕಾವ್ಯ, ಧರ್ಮಶಾಸ್ತ್ರ ಮುಂತಾದ ವಿಷಯಗಳಲ್ಲಿ ಪರಿಶ್ರಮ ಪಟ್ಟಿದ್ದಾರೆ.

## ೨೬೩ ಹನುಮಂತಾಚಾರ್ಯ ವಾಲುಕೊಂಡ

ಇವರು ವಾಲುಕೊಂಡ ನರಸಿಂಹಾಚಾರ್ಯರಲ್ಲಿ ವೇದಾಂತವನ್ನು ವ್ಯಾಸಂಗ ಮಾಡಿ ಈಗ ಭಾಗವತಾದಿ ಪುರಾಣವನ್ನು ಹೇಳುತ್ತಲಿದ್ದಾರೆ.

## ೨೬೪ ಕೆ. ಟಿ. ಜೋಶಿ, ಬಾಗಲಕೋಟೆ

ಇವರು ಗಲಗಲಿ, ಧಾರವಾಡ ಮತ್ತು ಮೈಸೂರ ಮುಂತಾದ ಸ್ಥಳಗಳಲ್ಲಿ ಅಭ್ಯಾಸ ಮಾಡಿ ಶಿರೋಮಣಿ ಹಾಗೂ ವಿದ್ವತ್ ಪರೀಕ್ಷೆಗಳಲ್ಲಿ ತೇರ್ಗಡೆಯಾದರು. ಈಗ ಬಾಗಲಕೋಟೆಯಲ್ಲಿ ಹೈಸ್ಕೂಲಿನಲ್ಲಿ ಹಿಂದೀ ಶಿಕ್ಷಕರಾಗಿದ್ದಾರೆ.

## ೨೬೫ ಕೆ. ಲಕ್ಷ್ಮೀನಾರಾಯಣ ಪುರಾಣಿಕ, ಕುಂಭಾಸಿ



ಇವರು ಕುಂಭಾಸಿಯಲ್ಲಿ ವಾಸವಾಗಿರುವರು. ಶ್ರೀ ಮಧ್ವರಮಣಾಚಾರ್ಯರಲ್ಲಿ ಜ್ಯೋತಿಷ್ಯ ಮತ್ತು ಪೂರ್ವಾಪರ ಯಾಜ್ಞಿಕವನ್ನು ಅಧ್ಯಯನ ಮಾಡಿದ್ದಾರೆ. ಇವರು ಒಳ್ಳೆ ಪ್ರಸಿದ್ಧ ಯಾಜ್ಞಿಕರಾಗಿದ್ದಾರೆ.

## ೨೬೬ ಭೀಮಾಚಾರ್ಯ ಪಂಚಮುಖಿ, ಬಾಗಲಕೋಟೆ

ಇವರು ತಮ್ಮ ಅಣ್ಣ ರಾಘವೇಂದ್ರಾಚಾರ್ಯರಲ್ಲಿಯೂ, ಮಳಗಿ ವೇದವ್ಯಾಸಾಚಾರ್ಯರಲ್ಲಿಯೂ ಸಾಹಿತ್ಯ, ವೇದಾಂತ ಅಧ್ಯಯನ ಮಾಡಿದ್ದಾರೆ. ಭಾಗವತ ಪುರಾಣವನ್ನು ಹೇಳುತ್ತಾರೆ.

## ೨೬೭ ಗುರುರಾಜ ಉಡುಪ, ವಿಜಾಪುರ

ಇವರು ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿಯೂ, ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ ನ್ಯಾಯ ವೇದಾಂತಗಳನ್ನು ಓದಿ ವಿದ್ವಾನ್ ಮತ್ತು ಶಿರೋಮಣಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ.

## ೨೬೮ ಬಿ. ವೆಂಕಟೇಶಾಚಾರ್ಯ, ಮದ್ರಾಸ

ಇವರ ಊರು ಪುಂಗನೂರು. ತಂದೆಯ ಹೆಸರು ಭೂವರಾಹಮೂರ್ತಿಯವರು. ೧೯ ವಯಸ್ಸಿನವರಿದ್ದು ಯಾಜ್ಞಿಕ, ಪೌರೋಹಿತ್ಯವನ್ನು ಮಾಡುತ್ತಿರುವರು.

ಇವರು ಶ್ರೀಮುಷ್ಣಂ ಎಸ್. ಕೃಷ್ಣಮೂರ್ತಿ ಆಚಾರ್ಯರಲ್ಲಿ ಅಧ್ಯಯನ ಮಾಡಿರುತ್ತಾರೆ.

## ೨೮೯ ಆಯಾಚಿತ ರಾಘವೇಂದ್ರಾಚಾರ್ಯ, ಮದ್ರಾಸ

ಶ್ರೀ ಆಯಾಚಿತ ರಾಘವೇಂದ್ರಾಚಾರ್ಯರು ಮದ್ರಾಸಿನ ತಿರುವೆಣ್ಣಕೇಲಿ ವ್ಯಾಸರಾಜ ಮಠದಲ್ಲಿರುವರು.

ಇವರು ಪೌರೋಹಿತ್ಯವನ್ನು ಮಾಡಿಸುತ್ತ ಪುರಾಣಾದಿಗಳನ್ನು ಹೇಳುವರು.



## ೨೭೦ ಕೃಷ್ಣಾಚಾರ್ಯ ಮುಧೋಳ, ರಾಮದುರ್ಗ

ಇವರು ರಾಮದುರ್ಗದ ಘನಪಾಠಿ ಗಣೇಶ ಭಟ್ಟರಲ್ಲಿ ವೇದ ಹಾಗೂ ಪೌರೋಹಿತ್ಯವನ್ನು ಚನ್ನಾಗಿ ಅಧ್ಯಯನ ಮಾಡಿದ್ದಾರೆ.

## ೨೭೧ ಜಯವೆಂಕಟಾಚಾರ್ಯ ನಾರಾಯಣಪೇಟ

ಇವರು ತೆಂಗಳೀ ವೆಂಕೋಬಾಚಾರ್ಯರಲ್ಲಿ ಸಾಹಿತ್ಯ ವೇದಾಂತ ಓದಿದ್ದಾರೆ.

## ೨೭೨ ಕಾರ್ಕಳ ವಾಸುದೇವಭಟ್ಟ, ಕೃಷ್ಣಗಿರಿ



ಇವರು ಕಾರ್ಕಳ ಮತ್ತು ಉಡುಪಿಯ ಪಾಠ ಶಾಲೆಗಳಲ್ಲಿ ಅಧ್ಯಯನ ಮಾಡಿ ಯಜುರ್ವೇದ, ಆಯುರ್ವೇದ, ಸಾಹಿತ್ಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಭಂಡಾರಕೇರಿ ಶ್ರೀಪಾದಂಗಳವರಲ್ಲಿ ಸುಧಾದಿ ಗ್ರಂಥಗಳನ್ನು ಓದಿ ಕೃಷ್ಣಗಿರಿಯಲ್ಲಿ ಪಾಠ ಪ್ರವಚನ ಮಾಡುತ್ತಲಿದ್ದಾರೆ.

## ೨೭೩ ನಾರಾಯಣಾಚಾರ್ಯ ಕಡಪಾ

ಇವರು ಸಾಹಿತ್ಯ ವೇದಾಂತ ಅಧ್ಯಯನ ಮಾಡಿದ್ದಾರೆ.

## ೨೭೪ ವಾಸುದೇವಾಚಾರ್ಯ ಸಂಗನಾಳ, ಕಿನ್ನಾಳ

ಪಂಢರಪುರದ ಶ್ರೀ ವರಖೇಡಿ ನರಸಿಂಹಾಚಾರ್ಯರಲ್ಲಿ ಅಧ್ಯಯನ ಮಾಡಿದ ಸಂಗನಾಳ ವಾಸುದೇವಾಚಾರ್ಯರಿಗೆ ನ್ಯಾಯ, ವೇದಾಂತ ಉಭಯ ಶಾಸ್ತ್ರಗಳಲ್ಲಿ ಪಾಂಡಿತ್ಯವಿದೆ.



## ೨೭೫ ಕಾಡೂರ ಹಣಮಂತಾಚಾರ್ಯ ಬಳ್ಳಾರಿ

ಇವರು ವೈದಿಕ ಷೋಡಶ ಕರ್ಮಗಳನ್ನು ಅಧ್ಯಯನ ಮಾಡಿ ಪೌರೋಹಿತ್ಯ ವೃತ್ತಿಯಲ್ಲಿ ಇರುವರು,



## ೨೭೬ ರಾಮಕೃಷ್ಣ ಅನಂತಭಟ್ಟ ಕಾಶೀಕರ, ಹೊನ್ನಾವರ

ಇವರು ಕನ್ನಡ ಹಿಂದೀ ಸಂಸ್ಕೃತ ಮೂರೂ ಭಾಷೆಗಳಲ್ಲಿಯೂ ಪರಿಣತರು. ಅನೇಕ ಪತ್ರಿಕೆಗಳಲ್ಲಿ ಇವರು ವಿವಿಧ ವಿಷಯಗಳ ಮೇಲೆ ವಿಚಾರಪೂರ್ಣವಾದ ಲೇಖನಗಳನ್ನು ಬರೆಯುತ್ತಲೇ ಇರುತ್ತಾರೆ. ಇವರ ಈ ವಾಙ್ಮಯೀನ ವಿಸ್ತೃತ ಸೇವೆಗೆಲ್ಲ ಅವರ ಧರ್ಮಶ್ರದ್ಧೆಯೇ ಪ್ರೇರಕ ಶಕ್ತಿಯಾಗಿದೆ.

ಪರ್ತಗಾಳಿ ಜೀವೋತ್ತಮ ಮಠದ ಶ್ರೀಪಾದಂಗಳವರ ಪ್ರಿಯ ಶಿಷ್ಯ ಪ್ರಭಾವಳಿಯಲ್ಲಿ ಪ್ರಭಾವಶಾಲಿ ಲೇಖಕರೆಂದು ಹೆಸರಾಂತ ರಾ. ಅ. ಭಟ್ಟರು ಮಧ್ವ ಸಿದ್ಧಾಂತದಲ್ಲಿ ತಮಗಿರುವ ದೀಕ್ಷಾದಾಕ್ಷ್ಯಗಳಿಂದ ಅಖಿಲ ಮಾಧ್ವರಿಗೂ ಅತ್ಯಂತ ಹತ್ತಿರದ ಆಪ್ತರಾಗಿದ್ದಾರೆ. ಶ್ರೀಗುರು ಮಧ್ವರಲ್ಲಿಯೂ ಹಾಗೂ ಅವರ ಶುದ್ಧ ಸದ್ವೈಷ್ಣವ ಸಿದ್ಧಾಂತದಲ್ಲಿಯೂ ಅವ್ಯಭಿಚರಿತವಾದ ಭಕ್ತಿಶ್ರದ್ಧೆಗಳೇ ಅಪ್ಪಟ ಮಾಧ್ವರಾದ ಸಾರಸ್ವತ ಸಮಾಜದ ತಾರಕ ಶಕ್ತಿಯೆಂಬುದನ್ನು ಅವರು ಖಚಿತಪಡಿಸಿಕೊಂಡಿದ್ದಾರೆ.

## ೨೭೭ ನರಸಿಂಹಾಚಾರ್ಯ ಕೊಪ್ಪರ

ಇವರು ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಓದಿ ಉತ್ತಮರೀತಿಯಿಂದ ನ್ಯಾಯಸುಧಾ ಪರೀಕ್ಷೆಯನ್ನುಕೊಟ್ಟು ೫,೦೦೦ ರೂ. ಬಹುಮಾನವನ್ನು ಪಡೆದಿದ್ದಾರೆ. ದ್ವೈತ ವೇದಾಂತದಲ್ಲಿ ಒಳ್ಳೆ ವ್ಯುತ್ಪತ್ತಿವುಳ್ಳ ಇವರು ಈಗ ನರಸಿಂಹ ಕ್ಷೇತ್ರವಾದ ಕೊಪ್ಪರದಲ್ಲಿ ಅರ್ಚಕರಾಗಿ ಇದ್ದು ವೇದಾಂತ ಪ್ರವಚನ ಮಾಡುತ್ತಲಿದ್ದಾರೆ.



## ೨೭೮ ಕೃಷ್ಣಾಚಾರ್ಯ ನಿಪ್ಪಾಣಿ, ಶಹಾಪುರ-ಬೆಳಗಾಂವ

ಪೌರೋಹಿತ್ಯ, ಕಾವ್ಯ, ಪುರಾಣ ಪರಿಚಯ ಮಾಡಿಕೊಂಡ ಕೃಷ್ಣಾಚಾರ್ಯರು ವಾದಿರಾಜರ ವೃಂದಾವನದ ಸೇವೆಯನ್ನು ಮಾಡಿಕೊಂಡು ಇರುತ್ತಾರೆ.

## ೨೭೯ ಹಯಗ್ರೀವಾಚಾರ್ಯ ಗುತ್ತಲ, ಪುಣೆ



ಇವರು ಮುಂಬಯಿಯ ಶ್ರೀ ಮಾಹುಲಿ ಗೋಪಾಲಾಚಾರ್ಯರಲ್ಲಿ ವ್ಯಾಕರಣ, ವೇದಾಂತವನ್ನು ಅಧ್ಯಯನ ಮಾಡಿ ಉತ್ತರಾದಿಮಠದ ಶ್ರೀ ಸತ್ಯಪ್ರಜ್ಞತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ವ್ಯಾಸಂಗಮಾಡಿದರು. ಈಗಿನ ಉತ್ತರಾದಿ ಮಠಾಧೀಶರಾದ ೧೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಸುಧಾ ನ್ಯಾಸತ್ರಯಾದಿ ಗ್ರಂಥಗಳನ್ನು ಓದಿ ಮಂಗಳ ಮಾಡಿದ್ದಾರೆ.

ಪುಣೆಯ ಭಾಂಡಾರಕರ ಸಂಶೋಧನೆಯ ಶಾಖೆಯಲ್ಲಿ ಭಾಷಾಕೋಶ ನಿರ್ಮಾಣ ವಿಭಾಗದಲ್ಲಿ ಅನೇಕ ವರ್ಷಗಳಿಂದ ಕಾರ್ಯ ಮಾಡುತ್ತಲಿದ್ದಾರೆ. ಇವರು ಅನೇಕ ವೇದಾಂತ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಗೊಳಿಸಿದ್ದಾರೆ.

### ೨೮೦ ಕಾಪೂ ವಿಠ್ಠಲ ತಂತ್ರಿ ಕಲ್ಯ

ಇವರು ವೇದಾಂತ ಶಿರೋಮಣಿ, ಹಿಂದೀ ರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಈಗ ಸೂರತ್ಕಲ್ಲಿನಲ್ಲಿ ಶಾಲಾಧ್ಯಾಪಕರಾಗಿದ್ದಾರೆ.



### ೨೮೧ ಎಚ್. ವಾಸುದೇವ ವರ್ಣ, ಹಂಗಾರ ಗ್ರಾಮ

ಇವರು ವೇದ, ಕಾವ್ಯ, ಜ್ಯೋತಿಷ್ಯ ಶಾಸ್ತ್ರಗಳನ್ನು ಪರಿಚಯ ಮಾಡಿಕೊಂಡು ಪೌರೋಹಿತ್ಯ ಮಾಡುತ್ತಲಿದ್ದಾರೆ.

### ೨೮೨ ಪದ್ಮನಾಭಾಚಾರ್ಯ ವೈದ್ಯ, ಆತ್ಮಕೂರು

ಇವರು ಸಾಹಿತ್ಯ ವ್ಯಾಕರಣದಲ್ಲಿ ಕುಶಲರಾಗಿದ್ದಾರೆ. ಸಂಸ್ಕೃತ ಕಾವ್ಯ ರಚನೆಯಲ್ಲಿಯೂ ಇವರು ಪರಿಣಿತರಾಗಿದ್ದಾರೆ.

### ೨೮೩ ಬಿ. ಸೀತಾರಾಮ ಉಪಾಧ್ಯಾಯ ಬಿಜಾಡಿಗ್ರಾಮ

ಇವರು ವೇದ, ಕಾವ್ಯ ಅಧ್ಯಯನ ಮಾಡಿ ಪೌರೋಹಿತ್ಯವನ್ನು ಮಾಡಿಸುತ್ತಲಿದ್ದಾರೆ.



### ೨೮೪ ವರದಾಚಾರ್ಯ ಚಿಟಿಗುಬ್ಬಿ, ಸಿಕಂದರಾಬಾದ

ವರಖೇಡಿ ನರಸಿಂಹಾಚಾರ್ಯರಲ್ಲಿ ನ್ಯಾಯ, ವೇದಾಂತ ಓದಿ ಇವರು ಶಾಸ್ತ್ರೀಯ ವ್ಯುತ್ಪತ್ತಿಯನ್ನು ಸಂಪಾದಿಸಿದ್ದಾರೆ.

### ೨೮೫ ಮಾಧವೇಶಾಚಾರ್ಯ ನರಗುಂದ, ಅಥಣಿ

ಇವರು ತಮ್ಮ ತಂದೆಯವರಾದ ರಾಮದುರ್ಗ ಶ್ರೀನಿವಾಸಾಚಾರ್ಯರಲ್ಲಿ ಸಾಹಿತ್ಯ, ವ್ಯಾಕರಣ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು.

ಅನಂತರ ಇವರು ಅಕ್ಕಲಕೋಟ, ಈಚಲಕರಂಜಿ ಮುಂತಾದ ಕಡೆಗಳಲ್ಲಿ ಹೋಗಿ ಸಂಗೀತವನ್ನು ಶಾಸ್ತ್ರೀಯ ಪದ್ಧತಿಯಿಂದ ಅಭ್ಯಾಸ ಮಾಡಿ ಗಾಯನದಲ್ಲಿಯೂ ಪಂಡಿತರಾದರು. ಮದ್ರಾಸ, ತಂಜಾವೂರ ಮುಂತಾದ ಆಂಧ್ರ ದೇಶದಲ್ಲಿ ತಮ್ಮ ಸಂಗೀತ ಕಚೇರಿಗಳನ್ನು ಮಾಡಿ ಎಲ್ಲ ಜನರ ಮೆಚ್ಚುಗೆಯನ್ನು ಪಡೆದರು.

ಅನಂತರ ದೇಶದಲ್ಲಿ ಎಲ್ಲ ಕಡೆಗೂ ಹರಿಕಥೆ, ಭಜನೆ, ನಾಮಸ್ಮರಣ ಮುಂತಾದವುಗಳನ್ನು ಮಾಡುತ್ತ ಜನರಲ್ಲಿ ಧರ್ಮ ಜಾಗೃತಿಯನ್ನು ಉಂಟುಮಾಡಿದರು. ಇವರು ಹೋದಲ್ಲೆಲ್ಲ ಕೋಟಿ ರಾಮನಾಮ ಜಪ, ಕೋಟಿ ತುಳಸೀ ಅರ್ಚನೆ, ನಿರಂತರ ಭಜನೆ, ಪ್ರವಚನ ಮುಂತಾದ ವಿವಿಧ ಧಾರ್ಮಿಕ ಚಟುವಟಿಕೆಗಳಿಂದ ನಾಡಿನಲ್ಲೆಲ್ಲ ಹರಿ-ಗುರುಗಳಲ್ಲಿ ಸದ್‌ಭಕ್ತಿಯನ್ನು ಕುದುರಿಸಿದ್ದಾರೆ.

ನಿಸ್ಪೃಹವೃತ್ತಿ, ವೈರಾಗ್ಯ ಪ್ರವೃತ್ತಿ, ಹರಿಭಕ್ತಿ ಮುಂತಾದ ಗುಣಗಳಿಂದ ಅವಧೂತರಂತಿದ್ದ ಮಾಧವಾಚಾರ್ಯರು ರಾಯಚೂರಿನ ಹತ್ತರ ಕೃಷ್ಣಾ ಸ್ಟೇಶನ್‌ದಲ್ಲಿ ಒಂದು ಮುಮುಕ್ಷು ಆಶ್ರಮವನ್ನು ಸ್ಥಾಪಿಸಿ ಅನೇಕ ಸಾಧಕ ಜೀವಿಗಳೊಂದಿಗೆ ವಾನಪ್ರಸ್ಥಾಶ್ರಮದ ಜೀವನವನ್ನು ಸಾಗಿಸಿದರು. ಅಥಣಿಯಲ್ಲಿ ಮಂತ್ರಾಲಯ ಸ್ವಾಮಿಗಳ ವೃಂದಾನವನ್ನು ಪ್ರತಿಷ್ಠೆ ಮಾಡಿ ಅದರ ವ್ಯವಸ್ಥೆಯನ್ನು ನೋಡುತ್ತಲಿದ್ದಾರೆ. ಇವರು ಮಂತ್ರಾಲಯದಲ್ಲಿಯೂ ಒಂದು ಆಶ್ರಮವನ್ನು ಕಟ್ಟಿಕೊಂಡು ರಾಯರ ಸೇವೆಯನ್ನು ಮಾಡುತ್ತಲಿದ್ದಾರೆ.

ಇವರು ಮಹಾ ಭಗವದ್-ಭಕ್ತರೂ, ಶ್ರೀ ಹರಿ ಭಕ್ತಿಯ ಮತ್ತು ವೇದಾಂತ ಮಾರ್ಗದ ಉಪದೇಷ್ಟಾರರೂ ಮಹಾ ತಪಸ್ವಿಗಳೂ ಆಗಿದ್ದು, ಇಪ್ಪತ್ತನೇ ಶತಮಾನದ ಸತ್‌ಪುರುಷರೆಂದು ಲೋಕ ಪೂಜ್ಯರಾಗಿದ್ದಾರೆ.

### ೨೮೬ ನರಸಿಂಹಾಚಾರ್ಯ ಆದವಾನಿ

ಇವರು ಜೋಜ್ಜಿ ಶ್ರೀನಿವಾಸಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

### ೨೮೭ ಆದವಾನಿ ರಾಘವೇಂದ್ರಾಚಾರ್ಯ, ಬೆಂಗಳೂರು

ಇವರು ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ಅಧ್ಯಯನ ಮಾಡಿ ಸಾಹಿತ್ಯ, ವೇದಾಂತ ಉಭಯ ವಿದ್ವಾನ್ ಆದರು. ಸರಕಾರಿ ಹೈಸ್ಕೂಲಿನಲ್ಲಿ ಈಗ ಸಂಸ್ಕೃತ ಅಧ್ಯಾಪಕರಾಗಿ ಕೆಲಸ ಮಾಡುತ್ತಲಿದ್ದಾರೆ.

## ೨೮೮ ಎಸ್. ವ್ಹಿ. ಭೀಮಭಟ್ಟ, ಬೆಂಗಳೂರು



ದಕ್ಷಿಣ ಕನ್ನಡ ಜಿಲ್ಹೆಯ ಸಾಣೂರ ಗ್ರಾಮದಲ್ಲಿ ಜನಿಸಿದ ಭೀಮಭಟ್ಟರು ಮೈಸೂರಿನ ಧಾರಾಪುರಂ ಕೃಷ್ಣ ಮೂರ್ತಿ ಆಚಾರ್ಯರಲ್ಲಿ ತರ್ಕ ಶಾಸ್ತ್ರವನ್ನು, ದೊಡ್ಡ ಬಳ್ಳಾಪುರ ವಾಸುದೇವಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ನ್ಯಾಯ, ವೇದಾಂತ, ಅಲಂಕಾರ, ಪ್ರಾಚೀನ ತರ್ಕ ಈ ನಾಲ್ಕು ವಿಷಯಗಳಲ್ಲಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಈಗ ಇವರು ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ತರ್ಕಾಧ್ಯಾಪಕರಾಗಿದ್ದಾರೆ.

ಇವರು ಶ್ರೀ ವಾದಿರಾಜ ಸ್ವಾಮಿಗಳ ತೀರ್ಥಪ್ರಬಂಧ ಕಾವ್ಯವನ್ನು ಕನ್ನಡದಲ್ಲಿ ಭಾಷಾಂತರಿಸಿದ್ದಾರೆ. ದಶಕುಮಾರ ಚರಿತ್ರೆ ಎಂಬ ಸಂಸ್ಕೃತ ಗದ್ಯ ಪ್ರಬಂಧವನ್ನು ಕನ್ನಡಕ್ಕೆ ಇಳಿಸಿದ್ದಾರೆ. "ಸಂಸ್ಕೃತ ಸಂವರ್ಧಿನಿ ಸಭಾ" ಎಂಬ ಹೆಸರಿನ ಚಿಕ್ಕ ಸಂಸ್ಥೆಯನ್ನು ಸ್ಥಾಪಿಸಿ, ಸಂಸ್ಕೃತ ಓದುವ ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿ ವಿದ್ಯಾದಾನವನ್ನು ಮಾಡುತ್ತಲಿದ್ದಾರೆ.

## ೨೮೯ ಸಿ. ಕೃಷ್ಣಸ್ವಾಮಿರಾವ, ಬೆಂಗಳೂರು

ಇವರು ಬೆಂಗಳೂರಿನಲ್ಲಿ ವಾಸವಾಗಿರುವರು. ಇವರು ಒಳ್ಳೇ ಉಪನ್ಯಾಸಕರು. ಹರಿಕಥಾಮೃತಸಾರ ಗ್ರಂಥವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಕೋಯು ಮತ್ತೂರಿನ ದಿ. ಸಿ. ಎಂ. ಪದ್ಮನಾಭಾಚಾರ್ಯರಿಂದ ಆಹ್ವಾನಿತರಾಗಿ ಹೋಗಿ ೧೮ ಉಪನ್ಯಾಸಗಳನ್ನು ಹರಿಕಥಾಮೃತಸಾರದ ಬಗ್ಗೆ ಹೇಳಿದರು. ಇದಲ್ಲದೆ ದಾವಣ ಗೇರಿ, ಚಿಕ್ಕಮಗಳೂರು, ಮುಂಬೈ ಕಲಕತ್ತಾ, ದಿಲ್ಲಿ ಮುಂತಾದ ಕಡೆಗಳಲ್ಲಿ ಅನೇಕ ಪ್ರಮೇಯಗಳನ್ನು ಕುರಿತು ಭಾಷಣ ಮಾಡಿರುವರು.

ಇವರು ಮುಂಬೈಯಲ್ಲಿಯ ಪ್ರಸಿದ್ಧ ಪಂಡಿತರಾದ ಶ್ರೀ ಮಾಹುಲಿ ಗೋಪಾಲಾ ಚಾರ್ಯರಲ್ಲಿ ಸುಧಾ ಚಂದ್ರಿಕಾಗಳನ್ನೂ, ತತ್ವ ಪ್ರಕಾಶಿಕಾ ದಿ. ಯಜ್ಞವಿಠಲಾ ಚಾರ್ಯರಲ್ಲಿ ಭಾಷ್ಯವನ್ನು ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರಲ್ಲಿಯೂ ಅಧ್ಯಯನ ಮಾಡಿದ್ದಾರೆ.

ಇವರು ೮೦ ನೇ ಇಳಿವಯಸ್ಸಿನಲ್ಲಿಯೂ ಬೆಂಗಳೂರಿನ ತಮ್ಮ ಮನೆಯಲ್ಲಿ ಅನೇಕರಿಗೆ ಪಾಠಪ್ರವಚನ ಮಾಡಿಸುತ್ತ ಸತ್ಕಾಲಕ್ಷೇಪಮಾಡುತ್ತಲಿರುವರು.

## ೨೯೦ ರಾಮಾಚಾರ್ಯ ಅವಧಾನಿ, ಪುಣೆ

ಮೂಲ ಅಕ್ಕಲಕೋಟೆಯ ಗ್ರಾಮದವರಾದ ರಾಮಾಚಾರ್ಯರು ಈಗ ೪೦ ವರ್ಷಗಳಿಂದ ಪೂಣೆ ಪಟ್ಟಣದಲ್ಲಿ ನೆಲಿಸಿ ದ್ವೈತ ವೇದಾಂತವನ್ನು ಪ್ರಚಾರ ಮಾಡುತ್ತಿದ್ದಾರೆ.

ಇವರು "ಶ್ರೀ ಮಧ್ವಾಚಾರ್ಯ ಮತ್ತು ಅವರ ತತ್ವಜ್ಞಾನ" ಎಂಬ ಪುಸ್ತಕವನ್ನು ಮರಾಠಿ ಭಾಷೆಯಲ್ಲಿ ಬರೆದು, ಶ್ರೀ ಮಧ್ವಾಚಾರ್ಯರ ಚರಿತ್ರೆ ಮತ್ತು ತತ್ವಜ್ಞಾನದ ಪರಿಚಯವನ್ನು ಮಧ್ವ ಮತದ ಸಂದೇಶವನ್ನು ಮಹಾರಾಷ್ಟ್ರದ ಜನತೆಗೆ ತಿಳಿಸಿಕೊಟ್ಟಿದ್ದಾರೆ. ಇದಲ್ಲದೆ ಅಣುಭಾಷ್ಯ, ತಲವಕಾರೋಪನಿಷತ್, ವಾಜಸನಿಯೋಪನಿಷತ್ ಮುಂತಾದ ಚಿಕ್ಕ-ಪುಟ್ಟ ವೇದಾಂತ ಗ್ರಂಥಗಳನ್ನು ಮರಾಠಿಯಲ್ಲಿ ಭಾಷಾಂತರ ಮಾಡಿ ಪ್ರಕಟಿಸಿದ್ದಾರೆ.

ಈಗ ೨೨ ವರ್ಷಗಳಿಂದ "ದ್ವೈತ ವೇದಾಂತ ಕೇಸರಿ" ಎಂಬ ಮರಾಠಿ ಮಾಸ ಪತ್ರಿಕೆಯನ್ನು ಪ್ರಕಟಿಸುತ್ತಿದ್ದಾರೆ. ಶ್ರೀ ಸತ್ಯಧ್ಯಾನ ಚರಿತ್ರೆಯನ್ನು ಬರೆದು ಪ್ರಕಟಿಸಿದ್ದಾರೆ. ರಾಮಾಚಾರ್ಯರಿಗೆ ಪುರಾಣ, ಪೌರೋಹಿತ್ಯ, ಲೇಖನ, ಭಾಷಣ ಮುಂತಾದ ವಿದ್ಯೆಗಳಲ್ಲಿ ಪರಿಣತಿ ಉಂಟು. ಇವರು ಕಾಲು ಶತಮಾನದಿಂದ ಮಹಾರಾಷ್ಟ್ರ ದೇಶದಲ್ಲಿ ಮಧ್ವ ಸಿದ್ಧಾಂತ ಪ್ರಸಾರಕ್ಕಾಗಿ ಎಲ್ಲ ರೀತಿಯಿಂದಲೂ ಪ್ರಯತ್ನಿಸುತ್ತಿದ್ದಾರೆ.



## ೨೯೧ ಜಿ. ವಸಂತಾಚಾರ್ಯ ಕರ್ನೂಲ

ಉತ್ತರಾದಿ ಮಠದಲ್ಲಿ ವೇದಾಂತದ ದಶ ಪ್ರಕರಣ ಹಾಗೂ ತತ್ವಪ್ರಕಾಶಿಕಾದಿ ಗ್ರಂಥಗಳನ್ನು ಓದಿ ಈಗ ಶ್ರೀಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿ ವ್ಯಾಸಂಗ ಮಾಡುತ್ತಲಿದ್ದಾರೆ.

## ೨೯೨ ಕೃಷ್ಣಾಚಾರ್ಯ ಪುರೋಹಿತ, ಚಿಮ್ಮಲಗಿ

ಇವರು ಪಾಂಡುರಂಗಿ ಹುಚ್ಚಾಚಾರ್ಯರಲ್ಲಿ ಅಧ್ಯಯನ ಮಾಡಿದರು. ಇವರು ಯಾಜ್ಞಿಕವಲ್ಲಿ ಪರಿಣತರಾಗಿದ್ದಾರೆ.

## ೨೯೩ ರಾಯಚೂರ ಗೋಪಾಲಾಚಾರ್ಯ ಹೊನ್ನಾಳಿ



ಶ್ರೀವರಖೇಡಿ ನರಸಿಂಹಾಚಾರ್ಯರಲ್ಲಿಯೂ ಶ್ರೀ ವಿಜಯೀಂದ್ರಾಚಾರ್ಯರಲ್ಲಿಯೂ ನ್ಯಾಯ ಶಾಸ್ತ್ರವನ್ನು ಓದಿದ ಗೋಪಾಲಾಚಾರ್ಯರು ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತ ಗ್ರಂಥಗಳನ್ನೆಲ್ಲ ಓದಿ ಈಗ ಸುಧಾ ವ್ಯಾಸಂಗ ಮಾಡುತ್ತಲಿದ್ದಾರೆ.

## ೨೯೪ ನಾರಾಯಣಾಚಾರ್ಯ ಗೋಟೂರ, ಹುಬ್ಬಳ್ಳಿ

ಇವರು ಪೂರ್ವಾಪರ ಯಾಜ್ಞಿಕದಲ್ಲಿ ಪ್ರವೀಣರಾಗಿದ್ದು ಹುಬ್ಬಳ್ಳಿಯಲ್ಲಿ ಉತ್ತರಾದಿ ಮಠಾಧಿಕಾರಿಗಳಾಗಿದ್ದಾರೆ. ಅನೇಕ ಹುಡುಗರಿಗೆ ಮಂತ್ರ ಪಾಠವನ್ನು ಹೇಳುತ್ತಾರೆ.

## ೨೯೫ ಕೃಷ್ಣಾಚಾರ್ಯ ಖೇಡ



ತಿರುವಾದಿ ವಿಜಯೀಂದ್ರಾಚಾರ್ಯರಲ್ಲಿ ನ್ಯಾಯಶಾಸ್ತ್ರವನ್ನು ಅಧ್ಯಯನ ಮಾಡಿದ ಕೃಷ್ಣಾಚಾರ್ಯರು ಈಗ ಉತ್ತರಾದಿ ಮಠದಲ್ಲಿ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಶ್ರೀಮನ್ ನ್ಯಾಯಸುಧಾ ಗ್ರಂಥವನ್ನು ವ್ಯಾಸಂಗ ಮಾಡುತ್ತಲಿದ್ದಾರೆ. ಶ್ರೀಪಾದಂಗಳವರ ಪ್ರತಿಭಾಶಾಲಿಯಾದ ಶಿಷ್ಯರಾದ ಕೃಷ್ಣಾಚಾರ್ಯರಿಗೆ ವೇದಾಂತಗ್ರಂಥಗಳು ಕ್ಲಪ್ತವಾಗಿವೆ.

## ೨೯೬ ನಾಗರಾಜಾಚಾರ್ಯ ಕೌಲಗಿ ಮದ್ರಾಸ

ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಇವರು ಸುಧಾಂತ ವೇದಾಂತವನ್ನು ವ್ಯಾಸಂಗ ಮಾಡಿದ್ದಾರೆ. ಈಗ ಮದ್ರಾಸಿನಲ್ಲಿ ಪುರಾಣ ಪ್ರವಚನ ಗೈಯುತ್ತ ವಾಸವಾಗಿದ್ದಾರೆ.

## ೨೯೭ ವೇದವ್ಯಾಸಾಚಾರ್ಯ ಕರ್ನೂಲ

ಉತ್ತರಾದಿ ಮಠದ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಎಲ್ಲ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿ ಈಗ ಹೆಚ್ಚಿನ ವ್ಯಾಸಂಗ ಮಾಡುತ್ತಲಿದ್ದಾರೆ.

## ೨೯೮ ಬಾಳಾಚಾರ್ಯ ವರಖೇಡಿ ಪಂಢರಪುರ



ವರಖೇಡಿ ಪದ್ಮನಾಭಾಚಾರ್ಯರ ಮಕ್ಕಳಾದ ಬಾಳಾಚಾರ್ಯರು ತಮ್ಮ ತಂದೆಯವರಲ್ಲಿಯೂ ಕಕ್ಕಂದಿರಾದ ಶ್ರೀ ನರಸಿಂಹಾಚಾರ್ಯರಲ್ಲಿಯೂ ಶಾಸ್ತ್ರಾಧ್ಯಯನ ಮಾಡಿ ಕಾಶಿ ಹಾಗೂ ಕಲಕತ್ತೆಯ ಶಾಸ್ತ್ರಿ ಹಾಗೂ ತೀರ್ಥ ಮುಂತಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ಅಖಿಲ ಭಾರತ ರಾಮರಾಜ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಶ್ರೀ ಕರಪಾತ್ರಿ ಸ್ವಾಮಿಯವರ ಜೊತೆಗೆ ಭಾರತವ ತುಂಬ ತಿರುಗಾಡಿ ಧರ್ಮ ಜಾಗ್ರತೆಯನ್ನು ಮಾಡಿದರು. ಪುಣೆಯ ಭಾಂಡಾರಕರ ಸಂಶೋಧನಾ ಮಂದಿರದಲ್ಲಿ ಭಾಷಾಕೋಶ ನಿರ್ಮಾಣ ಸಂಸ್ಥೆಯಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿ ಈಗ ಪಂಢರಪುರದಲ್ಲಿ ತಮ್ಮ ತಂದೆಯವರ ಪೂರ್ಣಪ್ರಜ್ಞ ಸಂಸ್ಕೃತ ಪಾಠಶಾಲೆಯನ್ನು ನಡೆಸುತ್ತಿದ್ದಾರೆ. ಅಗ್ನಿಹೋತ್ರವನ್ನಿಟ್ಟು ಶ್ರೀ ಸತ್ಯಧ್ಯಾನ ತೀರ್ಥರ ವೃಂದಾವನದ ಪೂಜಾದಿ ವ್ಯವಸ್ಥಾಪಕರಾಗಿ ಪಾಠ ಪ್ರವಚನ ಮಾಡುತ್ತಲಿದ್ದಾರೆ. ಶ್ರೌತ ಭಾಗದಲ್ಲಿಯೂ ಪರಿಶ್ರಮ ಪಟ್ಟ ಬಾಳಾಚಾರ್ಯರು ತಮ್ಮ ತಂದೆಯವರು ಮಾಡಿದ ಅನೇಕ ಯಜ್ಞ ಯಾಗಗಳಲ್ಲಿ ಪ್ರಮುಖ ಪಾತ್ರವಹಿಸಿ ಸರ್ವ ನಿರ್ವಾಹಕರಾಗಿದ್ದರು.

## ೨೯೯ ರಾಮಾಚಾರ್ಯ ನಾಗರಳ್ಳಿ ವಿಜಾಪುರ

ಬೆಳ್ಳುಬ್ಬಿ ಅಣ್ಣಾಚಾರ್ಯರಲ್ಲಿ ಮಹಾಭಾಷ್ಯಾಂತ ವ್ಯಾಕರಣವನ್ನು ಓದಿದ ರಾಮಾಚಾರ್ಯರು ಬಡೋದಾ, ಪುಣೆ ಮುಂತಾದ ಸಭೆಗಳಲ್ಲಿ ಪರಿಭಾಷೇಂದುಶೇಖರ ಗ್ರಂಥದಲ್ಲಿ ಪರೀಕ್ಷೆ ಕೊಟ್ಟು ಪ್ರಥಮ ಬಹುಮಾನ ಪಡೆದಿದ್ದಾರೆ. ಅನಂತರ ಇವರು ಮುಂಬಯಿ ವಾಣಿ ವಿಹಾರ ಸಂಸ್ಕೃತ ಪಾಠಶಾಲೆಯಲ್ಲಿದ್ದು ಶ್ರೀ ಮಾಹುಲಿ ಗೋಪಾಲಾಚಾರ್ಯರಲ್ಲಿ ವೇದಾಂತ ವ್ಯಾಸಂಗ ಮಾಡಿದ್ದಾರೆ. ಈಗ ಇವರು ವಿಜಾಪುರದ ಪಿ. ಡಿ. ಜೆ. ಹೈಸ್ಕೂಲದಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಕೆಲಸಮಾಡುತ್ತಲಿದ್ದಾರೆ.

## ೩೦೦ ಕಟ್ಟಿ ವಾಸುದೇವಾಚಾರ್ಯ ವಿಜಾಪುರ

ಶ್ರೀ ಬೆಳ್ಳುಬ್ಬಿ ಅಣ್ಣಾಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನು ಓದಿ ಇವರು ಪುಣೆ, ಬಡೋದಾ, ತಿರುಪತಿ ಮುಂತಾದ ಕಡೆಗಳಲ್ಲಿ ವ್ಯಾಕರಣ ಪರೀಕ್ಷೆ ಕೊಟ್ಟು ಪದವಿ ಪ್ರಶಸ್ತಿ ಬಹುಮಾನಗಳನ್ನು ಪಡೆದಿದ್ದಾರೆ. ಈಗ ಇವರು ವಿಜಾಪುರದ ದರ್ಬಾರ ಹೈಸ್ಕೂಲದಲ್ಲಿ ಸಂಸ್ಕೃತ ಪಂಡಿತರಾಗಿ ಕೆಲಸ ಮಾಡುತ್ತಲಿದ್ದಾರೆ.

## ೩೦೧ ಉರ್ಮರ್ಜಿ ದಾಮೋದರಾಚಾರ್ಯ ಬೆಳಗಾಂವಿ



ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ನ್ಯಾಯ ಶಾಸ್ತ್ರದ ಪೂರ್ವ ಭಾಗವನ್ನು ತಮ್ಮ ಅಣ್ಣ ನರಸಿಂಹಾಚಾರ್ಯರಲ್ಲಿ ಕೆಲವು ನ್ಯಾಯ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ ದಾಮೋದರಾಚಾರ್ಯರು ಉತ್ತರಾದಿ ಮಠದ ಸತ್ಯಾಭಿಜ್ಞತೀರ್ಥ ಶ್ರೀಪಾದಂಗಳವರಲ್ಲಿ ಸುಧಾದಿ ಗ್ರಂಥಗಳನ್ನು ಓದಿದರು. ಈಗ ಅವರು ಬೆಳಗಾವಿಯಲ್ಲಿ ಸರಕಾರೀ ಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ. ಸತ್ಯಬೋಧ ವಿಜಯ ಎಂಬ ಮಹಾ ಕಾವ್ಯವನ್ನು ಸಂಶೋಧಿಸಿ ಮುದ್ರಿಸಿದ್ದಾರೆ.

## ೩೦೨ ಕೊರ್ಲಹಳ್ಳಿ ಭೀಮಸೇನಾಚಾರ್ಯ

ಕೊಪ್ಪಳದ ಶ್ರೀ ಹುಲಗಿ ಹುಚ್ಚಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿದ ಭೀಮಸೇನಾಚಾರ್ಯರು ನ್ಯಾಯ ಶಾಸ್ತ್ರದಲ್ಲಿ ವ್ಯುತ್ಪನ್ನರಾಗಿದ್ದಾರೆ. ವೇದಾಂತದಲ್ಲಿ ಪಂಡಿತರಾಗಿದ್ದಾರೆ. ಧಾರವಾಡದಲ್ಲಿ ಇದ್ದು ಅನೇಕ ಲೌಕಿಕ ವೈದಿಕ ಶಿಷ್ಯರಿಗೆ ಪಾಠ ಹೇಳಿದ್ದಾರೆ. ಇವರು ಒಳ್ಳೆಯ ವಾಗ್ಮಿಗಳಾಗಿದ್ದು ಗೀತಾ, ಯುಕ್ತಿಮಲ್ಲಿಕಾ, ಸೂತ್ರ ಭಾಷ್ಯಾದಿ ಗ್ರಂಥಗಳನ್ನು ಎಲ್ಲರಿಗೂ ತಿಳಿಯುವಂತೆ ಪಾಂಡಿತ್ಯಪೂರ್ಣವಾಗಿ ಪ್ರವಚನ ಮಾಡುತ್ತಾರೆ. ಕೇಂದ್ರ ಸರಕಾರದವರು ಇವರ ಶಾಸ್ತ್ರ ಪಾಂಡಿತ್ಯಕ್ಕೆ ಮೆಚ್ಚಿ ಮಾಸಾಶನವನ್ನು ಕೊಡಮಾಡಿದ್ದಾರೆ.

## ೩೦೩ ಗೋಪಾಡಿ ವಿಷ್ಣುಮೂರ್ತಿ ಉಪಾಧ್ಯಾಯ ಗೋಪಾಡಿಗ್ರಾಮ, ಕೋಟೇಶ್ವರ

ಮಂತ್ರ ಸೂಕ್ತ ಹಾಗೂ ಕಾವ್ಯ, ಪೌರೋಹಿತ್ಯ ಮುಂತಾದವುಗಳಲ್ಲಿ ಉಪಾಧ್ಯಾಯರಿಗೆ ಕಿಂಚಿತ್ ಪ್ರವೇಶವಿರುತ್ತದೆ.

## ೩೦೪ ಬಿ. ಪದ್ಮನಾಭಭಟ್ಟ, ಮಾಕೋಡು ಕೊಡಗು

ಕನ್ನಡ ವಿದ್ವಾನ್, ಹಿಂದಿ ರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಪದ್ಮನಾಭ ಭಟ್ಟರು ಉಡುಪಿಯ ಸಂಸ್ಕೃತ ಪಾಠ ಶಾಲೆಯಲ್ಲಿ ವೇದ, ನ್ಯಾಯ, ವೇದಾಂತ ಸಾಹಿತ್ಯಾದಿ ಶಾಸ್ತ್ರಗಳ ಅಧ್ಯಯನ ಮಾಡಿಕೊಂಡು ಈಗ ಪ್ರಾಥಮಿಕ ಶಾಲಾ ಮತ್ತು ಮಾಧ್ಯಮಿಕ ಶಾಲಾಗಳ ಅಧ್ಯಾಪಕರಾಗಿದ್ದಾರೆ.

## ೩೦೫ ರಾಮಾಚಾರ್ಯ ಜೋಶಿ ರಾಯಚೂರ



ಉತ್ತರಾದಿ ಮಠದ ದಿವಾನರೂ ಆಸ್ಥಾನ ಪಂಡಿತರೂ ಆದ ಶ್ರೀ ಪಾಂಡುರಂಗಿ ಜಯಾಚಾರ್ಯರಲ್ಲಿ ನ್ಯಾಯ ವೇದಾಂತ ಶಾಸ್ತ್ರಗಳನ್ನು ಓದಿದ ರಾಮಾಚಾರ್ಯರು ಶ್ರೀ ಮಠದಲ್ಲಿ ಒಳ್ಳೇ ಪ್ರತಿಭಾಶಾಲಿಯಾದ ವಿದ್ಯಾರ್ಥಿಯೆಂದು ಹೆಸರಾಗಿದ್ದರು. ಅನೇಕ ವಿದ್ಯಾರ್ಥಿಗಳಿಗೆ ಶಾಸ್ತ್ರ ಗ್ರಂಥಗಳನ್ನು ಚಿಂತನೆ ಹೇಳುತ್ತಿದ್ದರು. ಈಗ ಇವರು ರಾಯಚೂರಲ್ಲಿ ಪುರಾಣ ಪ್ರವಚನ ಮಾಡುತ್ತಲಿದ್ದಾರೆ. ರಾಮಾಚಾರ್ಯರಿಗೆ ಜ್ಯೋತಿಷ್ಯದಲ್ಲಿಯೂ ಚನ್ನಾಗಿ ಗತಿ ಅನಗತಿ ಅಭಿಜ್ಞತೆಗಳಿದ್ದು ಅವರು ಅನೇಕ ವರ್ಷಗಳಿಂದ ಉತ್ತರಾದಿ ಮಠದ ಪಂಚಾಂಗಗಳನ್ನು ಮಾಡುತ್ತಲಿದ್ದಾರೆ.

## ೩೦೬ ಕೆ. ಲಕ್ಷ್ಮೀನಾರಾಯಣ ಪುರಾಣಿಕ, ಕುಕ್ಕೇಹಳ್ಳಿ

ಇವರು ಉಡುಪಿ ಸಂಸ್ಕೃತ ಕಾಲೇಜದಿಂದ ಸಂಸ್ಕೃತ ಶಿರೋಮಣಿ, ಜ್ಯೋತಿಷ ಶಿರೋಮಣಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವರಲ್ಲದೆ, ಹಿಂದಿ ರತ್ನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಾರೆ. ದ್ವೈತ ಶಾಸ್ತ್ರದ ಪ್ರಾಥಮಿಕ ಗ್ರಂಥಗಳ ಪರಿಚಯ ಮಾಡಿ ಕೊಂಡಿದ್ದಾರೆ. ಈಗ ಅಧ್ಯಾಪಕರಾಗಿರುವರು.

## ೩೦೭ ಎಂ. ಎಸ್. ಗೋವಿಂದಾಚಾರ್ಯ, ಮುದರಂಗಡಿ



ಉಡುಪಿಯ ಮಧ್ವ ಸಿದ್ಧಾಂತ ಪ್ರಬೋಧಿನಿ ಪಾಠ ಶಾಲೆಯಲ್ಲಿ ಅಧ್ಯಯನ ಮಾಡಿ ದ್ವೈತ ಶಿರೋಮಣಿ, ಸಂಸ್ಕೃತ, ಕನ್ನಡ ವಿದ್ವಾನ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಇವರು ಪಿ. ನಾರಾಯಣಾಚಾರ್ಯ, ಅಗ್ರಹಾರ ನಾರಾಯಣ ತಂತ್ರಿಗಳು ಮೊದಲಾದವರಲ್ಲಿ ಅನುವ್ಯಾಖ್ಯಾನ, ಸುಧಾ, ತತ್ವ ಪ್ರಕಾಶಿಕಾ ಮೊದಲಾದ ವೇದಾಂತ ಗ್ರಂಥಗಳನ್ನಲ್ಲದೆ ವ್ಯಾಕರಣ, ಮೀಮಾಂಸಾ ಶಾಸ್ತ್ರಗಳ ಪರಿಚಯವನ್ನು ಮಾಡಿಕೊಂಡಿದ್ದಾರೆ. ಈಗ ಇವರು ಸೆಂಟ ಫ್ರಾನ್ಸಿಸ್ ಶಾಲೆಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡುತ್ತಾರೆ.

### ೩೦೮ ಗೊರ್ನಾಳ ರಾಮಾಚಾರ್ಯ ವಿಜಾಪುರ

ಬೆಳ್ಳುಬ್ಬಿ ಅಣ್ಣಾಚಾರ್ಯರಲ್ಲಿ ವ್ಯಾಕರಣ ಓದಿ ಯಾಜ್ಞಿಕದಲ್ಲಿಯೂ ನಿಪುಣರಾಗಿದ್ದಾರೆ. ಸಾಹಿತ್ಯದಲ್ಲಿಯೂ ಇವರಿಗೆ ಚನ್ನಾಗಿ ಗತಿ ಇದೆ.

### ೩೦೯ ಸುಬ್ರಹ್ಮಣ್ಯಾಚಾರ್ಯ ಮುಂಡರಗಿ ರಾಯಚೂರ

ಉತ್ತರಾದಿ ಮಠದ ಶ್ರೀ ಪಾಂಡುರಂಗೀ ಜಯಾಚಾರ್ಯರಲ್ಲಿ ನ್ಯಾಯ ವೇದಾಂತಾದಿ ಶಾಸ್ತ್ರಗಳನ್ನು ಓದಿದ ಇವರು ಈಗ ರಾಯಚೂರಲ್ಲಿ ಆಂಗ್ಲ ಕಲಾ ಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದಾರೆ.

### ೩೧೦ ಜಿ. ಕೃಷ್ಣ ಭಟ್ಟ ಗೋಪಾಡಿ ಗ್ರಾಮ ಕೋಟೇಶ್ವರ



ಇವರು ಮಧ್ವಸಿದ್ಧಾಂತ ಪ್ರಬೋಧಿನಿ ಪಾಠಶಾಲೆಯಲ್ಲಿ ಕಾವ್ಯ, ಸಂಹಿತಾ ವ್ಯಾಸಂಗ ಮಾಡಿದ್ದಾರೆ.

ಈಗ ಇವರು ಗೋಪಾಡಿ ಗ್ರಾಮದಲ್ಲಿ ಪೌರೋಹಿತ್ಯವನ್ನು ಮಾಡಿಕೊಂಡು ವಾಸವಾಗಿದ್ದಾರೆ.

### ೩೧೧ ದ್ವೈಪಾಯನ ಶ್ರೀನಿವಾಸಾಚಾರ್ಯ ರಾಯಚೂರ

ಬಾಗಲಕೋಟೆಯ ಶ್ರೀ ಮಳಗಿ ವೇದವ್ಯಾಸಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿ ನ್ಯಾಯ ವೇದಾಂತಗಳಲ್ಲಿ ವ್ಯುತ್ಪನ್ನರಾದರು. ಈಗ ಇವರು ರಾಯಚೂರಲ್ಲಿ ವಾಸವಾಗಿದ್ದಾರೆ.

### ೩೧೨ ಅಗ್ನಿಹೋತ್ರಿ ಜಯಾಚಾರ್ಯ, ಕೊಪ್ಪಳ

ಶ್ರೀ ಸತ್ಯಧ್ಯಾನತೀರ್ಥರಲ್ಲಿ ಇವರು ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಹಾಗೂ B A., B. T. ಪದವೀಧರರೂ ಆಗಿದ್ದಾರೆ.

### ೩೧೩ ಮಾಧವಾಚಾರ್ಯ ಲಾತೂರ

ಸಾಹಿತ್ಯ, ವೇದಾಂತ ಅಧ್ಯಯನ ಮಾಡಿದ್ದಾರೆ. ಸಂಸ್ಕೃತ ಭಾಷೆಯಲ್ಲಿ ಸುಂದರವಾದ ಕವಿತೆಗಳನ್ನು ರಚಿಸುತ್ತಾರೆ

## ೩೧೪ ಡಾ. ಶ್ರೀನಿವಾಸ ಹಾವನೂರ

ಇವರು ಹರಿದಾಸ ಸಾಹಿತ್ಯದ ವಿಶೇಷ ಅಧ್ಯಯನ ಮಾಡಿದ್ದಾರೆ. ಹಾಗೂ ಅದರ ಬಗ್ಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಜರ್ಮನ ಭಾಷೆಯಲ್ಲಿ ಅನುವಾದ ಮಾಡಲ್ಪಟ್ಟ ಹರಿದಾಸ ಪದ್ಯಗಳ ಬಗ್ಗೆ ಲೇಖ ಬರೆದಿದ್ದಾರೆ.



## ೩೧೫ ಭೀಮಾಚಾರ್ಯ ಜೋಶಿ, ದೇವದುರ್ಗ

ಜ್ಯೋತಿಷ್ಯ ಮತ್ತು ಯಾಜ್ಞಿಕ ವಿದ್ಯೆಗಳನ್ನು ಅಧ್ಯಯನ ಮಾಡಿದ ಶ್ರೀ ಭೀಮಾಚಾರ್ಯರು ಈಗ ಪೌರೋಹಿತ್ಯ ವೃತ್ತಿಯಿಂದ ಇರುತ್ತಾರೆ.

## ೩೧೬ ಎರಡೆತ್ತು ಅಳಗಿರೀಶಾಚಾರ್ಯ, ವ್ಯಾಸರಾಜಪುರ

ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜವಲ್ಲಿ, ಮಧುರೆಯ ಶ್ರೀನಿವಾಸಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿ ಕನ್ನಡ ಪಂಡಿತ ಪರೀಕ್ಷೆಯಲ್ಲಿಯೂ, ಮದ್ರಾಸಿನ ವಿದ್ವಾನ್ ಪರೀಕ್ಷೆಯಲ್ಲಿಯೂ ಇವರು ಉತ್ತೀರ್ಣರಾದರು.

ಇವರು ವ್ಯಾಸರಾಜ ಮಠದ ಗುರುಕುಲದಲ್ಲಿ ಪಂಡಿತರಾಗಿರುತ್ತಾರೆ. "ಭಾಗವತ ಕಥಾಸಾರ" ಎಂಬ ಪದ್ಯ ಗ್ರಂಥವನ್ನು ಬರೆದಿದ್ದಾರೆ.

## ೩೧೭ ಮುದ್ರಾಡಿ ರಾಮಕೃಷ್ಣಾಚಾರ್ಯ, ಉಡುಪಿ

ವೇದಾಂತ ಶಿರೋಮಣಿ ಕನ್ನಡ ವಿದ್ವತ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ರಾಮಕೃಷ್ಣಾಚಾರ್ಯರು ಈಗ ಉಡುಪಿಯ ಸಂಸ್ಕೃತ ಕಾಲೇಜ, ಹಾಯಸ್ಕೂಲಿನಲ್ಲಿ ಸಂಸ್ಕೃತ ಕನ್ನಡ ಅಧ್ಯಾಪಕರಾಗಿದ್ದಾರೆ.

ವ್ಯಾಕರಣ, ಮೀಮಾಂಸಾ, ವೇದಾಂತಾದಿ ಶಾಸ್ತ್ರಗಳಂತೆ ಶ್ರೀ ರಾಮಕೃಷ್ಣಾಚಾರ್ಯರಿಗೆ ಕನ್ನಡ, ಸಾಹಿತ್ಯ ಮತ್ತು ವ್ಯಾಕರಣ, ಅಲಂಕಾರ ಶಾಸ್ತ್ರಗಳಲ್ಲಿಯೂ ಪರಿಶ್ರಮವಿದೆ.

### ೩೧೮ ಪಾಂಡುರಂಗಾಚಾರ್ಯ ಕೊರ್ಲಹಳ್ಳಿ

ಇವರು ಕಲ್ಲಾಪುರ ಗೋಪಾಲಕೃಷ್ಣಾಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಿ ಒಳ್ಳೆ ನೈಯಾಯಿಕರು ಎಂದು ಪ್ರಸಿದ್ಧರಾಗಿದ್ದಾರೆ.

### ೩೧೯ ಬಡಾಕೆರೆ ಕೃಷ್ಣ ವರ್ಣ, ಕೋಟೇಶರ್ವ ( ದ. ಕ. )

ವೇದ, ವೇದಾಂತ ಸಾಹಿತ್ಯಗಳಲ್ಲಿ ಪ್ರಾಥಮಿಕ ಪರಿಚಯವನ್ನು ಮಾಡಿಕೊಂಡ ಶ್ರೀ ಕೃಷ್ಣವರ್ಣರು ಜ್ಯೋತಿಷ್ಯ ಮತ್ತು ಪೌರೋಹಿತ್ಯದಲ್ಲಿ ವಿಶೇಷವಾಗಿ ಕೃಷಿ ಮಾಡಿದ್ದಾರೆ. ಕೃಷಿ ಮತ್ತು ಪೌರೋಹಿತ್ಯಗಳು ಈಗ ಅವರ ವೃತ್ತಿ ಮತ್ತು ಪ್ರವೃತ್ತಿ ಆಗಿವೆ.

### ೩೨೦ ಡಾ. ವೆಂಕಟರಾಯ ಆನಂದ ಶಿಕ್ಕೆ ಮುಂಬೈ

ಇವರು ವಿಜ್ಞಾನಿಗಳಾದರೂ ಈಗಾಗಲೇ ಹರಿದಾಸ ಸಾಹಿತ್ಯ ಬಗ್ಗೆ ನಾಲು ಪುಸ್ತಕಗಳನ್ನು ಬರೆದು ಮುದ್ರಿಸಿದ್ದಾರೆ. ಕನಕದಾಸರು, ಪುರಂದರದಾಸರ ಬಗ್ಗೆ ಪುಸ್ತಕ ಬರೆದಿದ್ದಾರೆ.

### ೩೨೧ ಕೆ. ಸೀತಾರಾಮಾಚಾರ್ಯ, ಉಡುಪಿ

ಸಾಹಿತ್ಯ ಶಿರೋಮಣಿ, ಕನ್ನಡ ವಿದ್ವಾನ್, ಹಿಂದಿ ರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಸೀತಾರಾಮಾಚಾರ್ಯರು ವ್ಯಾಕರಣ, ವೇದಾಂತ, ಮೀ-ಮಾಂಸಾ, ತರ್ಕ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ.

ಈಗ ಇವರು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಅಧ್ಯಾಪಕರಾಗಿ ಪಾಠ ಹೇಳುತ್ತಲಿದ್ದಾರೆ.

### ೩೨೨ ಕೋಟಿಗುಂಡಿ ಗೋವಿಂದಾಚಾರ್ಯ

ಇವರು ಪ್ರಾಕ್ಕೂರ ಭೀಮಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

### ೩೨೩ ಕೃಷ್ಣ ಕೊಲ್ಹಾರ ಕುಲಕರ್ಣಿ ಮುಂಬೈ

ಶ್ರೀ ಮಹಿಪತಿದಾಸರು, ಪ್ರಸನ್ನ ವೆಂಕಟದಾಸರ ಬಗ್ಗೆ ಅನೇಕ ಸಂಶೋಧನೆ ಮಾಡಿ ಕಾಲನಿರ್ಣಯಾದಿಗಳನ್ನು ಮಾಡಿದ್ದಾರೆ ಹಾಗೂ ಇವರು ಅನೇಕ ಲೇಖಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ "ಮಾಧ್ವ ಸಾಹಿತ್ಯ" ವೆಂಬ ಪುಸ್ತಕ ಬರೆದಿದ್ದಾರೆ.



### ೩೨೪ ಎಸ್. ನಾರಾಯಣರಾವ, ಮೂಡಗಿರೆ

ಇವರು ಕಾಶೀ ಶ್ರೀಪಾದಾಚಾರ್ಯರಲ್ಲಿ ಎಳಮೇಲಿ ವಾಸುದೇವಾಚಾರ್ಯರಲ್ಲಿ ವೇದಾಂತ ಅಧ್ಯಯನ ಮಾಡಿದ್ದಾರೆ. ವೇದ, ಶಾಸ್ತ್ರ, ಸಾಹಿತ್ಯಗಳ ಪ್ರಾಥಮಿಕ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

ಈಗ ಇವರು ಮೂಡಗಿರೆಯಲ್ಲಿ ಪೋಸ್ಟ ಖಾತೆಯಲ್ಲಿ ಕೆಲಸ ಮಾಡುತ್ತ ಇದ್ದಾರೆ.

### ೩೨೫ ಯು. ವೆಂಕಟಕೃಷ್ಣರಾವ

ಮದ್ರಾಸಿನ ಕ್ರಿಶ್ಚನ್ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾದ ಉಡುಪಿ ವೆಂಕಟಕೃಷ್ಣರಾಯರು ಒಳ್ಳೇ ಸಂಶೋಧಕರಾಗಿದ್ದಾರೆ ಅವರಿಗೆ ಕನ್ನಡ, ಸಂಸ್ಕೃತ, ಇಂಗ್ಲೀಷು ಮುಂತಾದ ವಿವಿಧ ಭಾಷೆಗಳ ಗಾಢ ಪರಿಚಯವಿದೆ.

ಸಂಶೋಧನ ಕ್ಷೇತ್ರದಲ್ಲಿ ಪ್ರೌಢ ಪಾಂಡಿತ್ಯವೂ ಇದೆ. ಆಚಾರ್ಯರ ಶಾಸ್ತ್ರದಲ್ಲಿ ಅಚಲ ನಿಷ್ಠೆಯುಳ್ಳ ರಾಯರು ಅನೇಕ ಪತ್ರಿಕೆಗಳಲ್ಲಿ ವಿವಿಧ ಸಂಶೋಧನಾತ್ಮಕ ಲೇಖಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ.

ಮಾಧ್ವವರ ಸಂಶೋಧಕ ದೃಷ್ಟಿ ಸೃಷ್ಟಿಗಳ ಕೊರತೆಯನ್ನು ಬಹುಮಟ್ಟಿಗೆ ಹೋಗಲಾಡಿಸಿದ್ದಾರೆ.

### ೩೨೬ ಕೊರ್ಲಹಳ್ಳಿ ಸತ್ಯವೀರಾಚಾರ್ಯ ಹುಬ್ಬಳ್ಳಿ

ಇವರು ಪೂಜ್ಯ ಗುತ್ತಲ ರಂಗಾಚಾರ್ಯರಲ್ಲಿಯೂ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿಯೂ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಈಗ ಹುಬ್ಬಳ್ಳಿಯಲ್ಲಿದ್ದು ಭಾಗವತಾದಿ ಪುರಾಣಗಳನ್ನು ಹೇಳುತ್ತಲಿದ್ದಾರೆ.

### ೪೨೭ ಶ್ರೀನಿವಾಚಾರ್ಯ ಸೊನ್ನಿ ಜಹಗಿರದಾರ ಹೈದರಾಬಾದ

ಶ್ರೀ ಯಳಮೇಲಿ ವಿಠ್ಠಲಾಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನು ಅಧ್ಯಯನ ಮಾಡಿದ ಶ್ರೀನಿವಾಸಾಚಾರ್ಯರು ಉತ್ತರಾದಿ ಮಠಕ್ಕೆ ಹೋಗಿ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದರು. ಈಗ ಅವರು ಹೈದರಾಬಾದದಲ್ಲಿ ವಾಸವಾಗಿದ್ದಾರೆ.

### ೪೨೮ ಪಿ. ಎಸ್. ಗೋಪಾಲಕೃಷ್ಣ ಆಚಾರ್ಯ, ಪಾದುಬೆಟ್ಟು – ಪಡುಬಿದ್ರೆ



ಇವರು ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ಶಾಸ್ತ್ರ, ಸಾಹಿತ್ಯ, ವೇದ, ಜ್ಯೋತಿಷ್ಯ ಮುಂತಾದ ಶಾಸ್ತ್ರಗಳ ಕೆಲವು ಗ್ರಂಥಗಳ ಅಧ್ಯಯನ ಮಾಡಿ ಪಡುಬಿದ್ರಿ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ, ನಿವೃತ್ತರಾಗಿದ್ದಾರೆ.

ಈಗ ಇವರು ಪೌರೋಹಿತ್ಯ ವೃತ್ತಿಯಲ್ಲಿ ತೊಡಗಿದ್ದಾರೆ.

### ೪೨೯ ತೊಲೂರ ಮಾಧವಾಚಾರ್ಯ ವೀರಚೋಳಪುರ

ಪ್ರಸಿದ್ಧ ನೈಯಾಯಿಕ ತೊಲೂರ ರಾಘವೇಂದ್ರಾಚಾರ್ಯರ ಮಕ್ಕಳಾದ ಇವರು ತಿರುಪತಿಯ ಮಹಾಮಹೋಪಾಧ್ಯಾಯ ಸೇತುಮಾಧವಾಚಾರ್ಯರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿದ್ದಾರೆ. ಈಗ ವೀರಚೋಳಪುರದಲ್ಲಿ ಇದ್ದು ಶೇಖರಾಂತ ವ್ಯಾಕರಣವನ್ನು ಪಾಠ ಹೇಳುತ್ತಲಿದ್ದಾರೆ.

### ೪೩೦ ಬೋಧರಾಯಾಚಾರ್ಯ ಹುನಗುಂದ ಧಾರವಾಡ

ಹುನಗುಂದ ಆಚಾರ್ಯರ ಮನೆತನದವರಾದ ಶ್ರೀ ಬೋಧರಾಯಾಚಾರ್ಯರು ನಿಷ್ಠಾವಂತ ಪುರಾಣಿಕರಾಗಿದ್ದಾರೆ. ಭಾಗವತ ಗ್ರಂಥದಲ್ಲಿ ಪರಿಶ್ರಮ ಪಟ್ಟಿದ್ದಾರೆ. ಪುರಾಣಕ್ಕೆ ಉಪಯುಕ್ತವಾಗುವಂತೆ ವೇದಾಂತವನ್ನೂ ಅಧ್ಯಯನ ಮಾಡಿದ್ದಾರೆ. ಪ್ರತಿ ನಿತ್ಯವೂ ಸಂಧ್ಯಾ ದೇವತಾರ್ಚನೆಯಂತೆ ತಪ್ಪದೇ ದೇವರ ಎದುರು 'ಶ್ಲೋಕಾರ್ಧಂ ಶ್ಲೋಕಪಾದಂ ವಾ' ಪುರಾಣ ಸೇವೆಯನ್ನು ಸಲ್ಲಿಸಿಯೇ ಭೋಜನ ಮಾಡುತ್ತಾರೆ.

## ೩೩೧ ಕೃಷ್ಣಾಚಾರ್ಯ ರಾಜಪುರೋಹಿತ ಅರಕೇರಿ



ಕುಕನೂರಿನ ಗುರುಕುಲ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ ಇವರು ಯಾಜ್ಞಿಕ ಮತ್ತು ಜ್ಯೋತಿಷ್ಯಗಳಲ್ಲಿ ಅಭಿನಿವೇಶನವನ್ನು ಪಡೆದಿದ್ದಾರೆ. ಕುಕನೂರಿನ ಜ್ಯೋತಿರ್ವಿದ್ವಾನ್ ನಾಗೇಶ ಶಾಸ್ತ್ರಿಗಳಲ್ಲಿ ಜ್ಯೋತಿಶ್ಶಾಸ್ತ್ರವನ್ನು ಪೂರ್ತಿ ಅಧ್ಯಯನ ಮಾಡಿ ಅದರಿಂದಲೇ ಉಪಜೀವಿಸುವ ಶ್ರೀ ಕೃಷ್ಣಾಚಾರ್ಯರು ವೆಂಕಣ್ಣಾಚಾರ್ಯ ಜೋಶಿ ಹನುಮಂತಾಚಾರ್ಯ ಜಾನೇವಾಡಿ, ಗುಂಡಾಚಾರ್ಯ ಪುರೋಹಿತ, ರಾಮಾಚಾರ್ಯ ಉಪಾಧ್ಯಾಯ ಮುಂತಾದ ಅನೇಕ ಶಿಷ್ಯರಿಗೆ ಜ್ಯೋತಿಷ್ಯ, ಯಾಜ್ಞಿಕ ಪಾಠ ಹೇಳಿದ್ದಾರೆ.

## ೩೩೨ ಬಂಡೇರಾವ ಕೌಜಲಗಿ, ಧಾರವಾಡ

ಇವರು ಪಾಂಡುರಂಗಿ ಆಚಾರ್ಯರಲ್ಲಿಯೂ, ಗಲಗಲಿ ಆಚಾರ್ಯರಲ್ಲಿಯೂ ಸಾಹಿತ್ಯ ವೇದಾಂತಗಳನ್ನು ಅಧ್ಯಯನ ಮಾಡಿ ಪುರಾಣ ಹೇಳುತ್ತಾರೆ. ಪ್ರಸನ್ನ ವೆಂಕಟರ ಕನ್ನಡ ದಶಮ ಸ್ಕಂದ ಭಾಗವತ, ತಾರತಮ್ಯ ಅನುಸಾರಿ ಭಜನಾ ಪದ್ಧತಿ ಮುಂತಾದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

## ೩೩೩ ಮಂಜುನಾಥ ಭಟ್ಟ ಅಡಿಗ, ಗದಗ



ಇವರು ತಮ್ಮ ತಂದೆಯವರಲ್ಲಿಯೇ ಋಗ್ವೇದ, ಯಜುರ್ವೇದ, ಪೂರ್ವಾಪರ ಯಾಜ್ಞಿಕ ಅಭ್ಯಾಸ ಮಾಡಿರುವರು.

ಇವರು ದಕ್ಷಿಣ ಕನ್ನಡ ಜಿಲ್ಹೆಯಿಂದ ಇಲ್ಲಿಗೆ ಆಗಮಿಸಿ, ಇಲ್ಲಿ ಪೌರೋಹಿತ್ಯ ಮತ್ತು ವ್ಯಾಪಾರವನ್ನು ಮಾಡುತ್ತ, ದೈವ ಭಕ್ತರಾಗಿ ಬಹುಜನರಿಗೆ ಬೇಕಾದವರಾಗಿದ್ದು ಗದುಗಿನಲ್ಲಿ ವಾಸವಾಗಿದ್ದಾರೆ.

## ೩೩೪ ಪದ್ಮನಾಭಭಟ್ಟ ಸಾಲಿಗ್ರಾಮ (ದ. ಕ.)



ಇವರು ದ್ವೈತ ವೇದಾಂತ ಶಿರೋಮಣಿ, ಸಂಸ್ಕೃತ ಸಾಹಿತ್ಯ ಶಿರೋಮಣಿ, ಕನ್ನಡ ವಿದ್ವಾನ್, ಹಿಂದಿ ರತ್ನ ಮುಂತಾದ ಪರೀಕ್ಷೆಗಳಲ್ಲಿ ತೇರ್ಗಡೆಯಾದರು.

ಇವರು ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ಕೆಲವು ವರ್ಷ ಅಧ್ಯಾಪನ ಕಾರ್ಯ ಮಾಡಿದರು.

ಈಗ ಇವರು ೧೪ ವರ್ಷಗಳಿಂದ ಸಾಲಿಗ್ರಾಮದ ಮಾಧ್ಯಮಿಕ ಶಾಲೆಯಲ್ಲಿ ಪಂಡಿತರಾಗಿ ಕೆಲಸ ಮಾಡುತ್ತಲಿದ್ದಾರೆ.

ಶಾಸ್ತ್ರ, ಸಾಹಿತ್ಯಗಳಲ್ಲಿ ಪರಿಯಾಪ್ತ ಜ್ಞಾನವನ್ನು ಪಡೆದ ಭಟ್ಟರು ಮಂಜುನಾಥನ್‌ರವರಿಂದ ಸಂಗೀತ ವಿದ್ಯೆಯನ್ನು ಕೂಡ ಚನ್ನಾಗಿ ಅಭ್ಯಾಸ ಮಾಡಿದ್ದಾರೆ.

ಇವರು "ಬಾಲ ಸಂಗೀತ ಪ್ರಕಾಶ" ಎಂಬ ಸಂಸ್ಕೃತ ಗ್ರಂಥವನ್ನೂ ಮತ್ತು ಹಾಯಸ್ಕೂಲ ವಿದ್ಯಾರ್ಥಿಗಳಿಗಾಗಿ "ಕನ್ನಡ ವ್ಯಾಕರಣ ಸಂಗ್ರಹ" ಎಂಬ ಪುಸ್ತಕವನ್ನೂ ಬರೆದಿದ್ದಾರೆ.

ಇದಲ್ಲದೆ ಶ್ರೀ ಪದ್ಮನಾಭ ಭಟ್ಟರು ಸಂಸ್ಕೃತದಲ್ಲಿ ಸುರಸ ಸುಂದರವಾದ ಕವಿತೆಗಳನ್ನು ಮಧುರ ಕೋಮಲವಾದ ಶೈಲಿಯಲ್ಲಿ ರಚಿಸಬಲ್ಲರು. "ವಿದ್ಯಾಮಾನ್ಯ ಗುಣ ರತ್ನಮಾಲಾ" ಹಾಗೂ "ಗುಣ ಮಣಿ ಮಾಲಾ" ಮುಂತಾದ ಇವರ ಸಂಸ್ಕೃತ ಕವಿತೆಗಳು ಅವರ ಕಾವ್ಯ ಚಾತುರ್ಯಕ್ಕೂ, ಕಲ್ಪನಾ ಕೌಶಲ್ಯಕ್ಕೂ, ಸರಸ ಪಾಂಡಿತ್ಯಕ್ಕೂ ಕನ್ನಡಿ ಹಿಡಿಯುತ್ತವೆ.

## ೩೩೫ ಕೆ. ನರಸಿಂಹಾಚಾರ್ಯ, ಬೆಂಗಳೂರು.

ಇವರು ಸಾಹಿತ್ಯ, ವೇದಾಂತಗಳಲ್ಲಿ ಪರಿಣಿತರಾಗಿದ್ದು ಸುಮಧ್ವ ವಿಜಯವನ್ನು ಪ್ರತಿಪದಾರ್ಥ ಹಾಗೂ ಭಾವಾರ್ಥಗಳೊಂದಿಗೆ ಕನ್ನಡದಲ್ಲಿ ಪ್ರಕಟಿಸುತ್ತಲಿದ್ದಾರೆ. ಈಗ ಎರಡು ಭಾಗಗಳು ಮುದ್ರಿತವಾಗಿವೆ

## ೩೩೬ ಮಧ್ವಾಚಾರ್ಯ ಮೂಗೂರು

ಇವರು ಶ್ರೀ ಭಂಡಾರಕೆರೆ ಶ್ರೀಪಾದಂಗಳವರಲ್ಲಿ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

## ೩೩೭ ಕೆ. ಶ್ರೀನಿವಾಸಭಟ್ಟ ಶಿರವ (ದ. ಕ.)



ಉಡುಪಿಯ ಮಧ್ವ ಸಿದ್ಧಾಂತ ಪ್ರಬೋಧಿನಿ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ದ್ವೈತ ವೇದಾಂತ ಶಿರೋಮಣಿ, ಕನ್ನಡ ವಿದ್ವಾನ್, ಹಿಂದೀ ಪ್ರವೀಣ ಮುಂತಾದ ಪದವೀಧರರಾದ ಇವರು ಹಾಯ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

ವೃಂದಾವನಸ್ಥ ಶ್ರೀ ಲಕ್ಷ್ಮೀಂದ್ರ ತೀರ್ಥ ಶ್ರೀಪಾದಂಗಳವರಲ್ಲಿ ಶ್ರೀ ಮನ್ನ್ಯಾಯ ಸುಧಾ ಶ್ರೀ ಪಿ. ನಾರಾಯಣಾಚಾರ್ಯರಲ್ಲಿ ನ್ಯಾಯಾಮೃತಾದಿ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

## ೩೩೮ ರಾಮಾಚಾರ್ಯ ಹುಯಿಲಗೋಳ, ಗದಗ

ಇವರು ಸೇತುಮಾಧವಾಚಾರ್ಯ ಗಜೇಂದ್ರಗಡರವರಲ್ಲಿ ವ್ಯಾಕರಣವನ್ನು ಅಧ್ಯಯನ ಮಾಡಿ, ಈಗ ಗದುಗಿನಲ್ಲಿ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರ ಆಜ್ಞೆಯಿಂದ ಸಂಸ್ಕೃತ ಪಾಠಶಾಲೆಯ ಅಧ್ಯಾಪಕರಾಗಿದ್ದಾರೆ.

## ೩೩೯ ಗಡಚಿಂತಿ ರಾಮಾಚಾರ್ಯ

ಮೊದಲು ಲೌಕಿಕ ಉದ್ಯೋಗದಲ್ಲಿ ಇದ್ದ ಇವರು ಒಮ್ಮೆಲೇ ವಿರಕ್ತರಾಗಿ ಶ್ರೀ ಭಂಡಾರಕೆರೆ ಶ್ರೀಪಾದಂಗಳವರ ಶಿಷ್ಯರಾಗಿದ್ದಾರೆ. ಪ್ರತಿ ವರ್ಷವೂ ಕಾಶಿ, ಬದರಿ ಯಾತ್ರೆ ಮಾಡುತ್ತಾರೆ. ಭಂಡಾರಕೆರೆ ಶ್ರೀಪಾದಂಗಳವರಲ್ಲಿ ವೇದಾಂತ ಉದ್ಗ್ರಂಥಗಳನ್ನು ಓದುತ್ತಲಿದ್ದಾರೆ.

## ೩೪೦ ಚಿಪ್ಪಗಿರಿ ಗೋಪಾಲಕೃಷ್ಣಾಚಾರ್ಯ ಉಡುಪಿ

ಮಧ್ವ ಸಿದ್ಧಾಂತ ಪ್ರಬೋಧಿನಿ ಪಾಠಶಾಲೆಯಲ್ಲಿ ಪಂಡಿತ ಪಿ. ನಾರಾಯಣಾಚಾರ್ಯರೇ ಮುಂತಾದ ಮುಂತಾದ ಗುರುಗಳಲ್ಲಿ ಅಧ್ಯಯನ ಮಾಡಿ ವೇದಾಂತ ಶಿರೋಮಣಿ, ಕನ್ನಡವಿದ್ವಾನ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಗೋಪಾಲಕೃಷ್ಣಾಚಾರ್ಯರು ಈಗ ಉಡುಪಿಯಲ್ಲಿಯ ಕ್ರಿಶ್ಚನ್ ಹಾಯಸ್ಕೂಲಿನಲ್ಲಿ ಸಂಸ್ಕೃತ ಮತ್ತು ಕನ್ನಡ ಪಂಡಿತರೆಂದು ಕೆಲಸ ಮಾಡುತ್ತಲಿದ್ದಾರೆ.

### ೩೪೧ ಮಠದ ಗುಂಡಾಚಾರ್ಯ ಶಿವಮೊಗ್ಗಾ

ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಮಠದ ವೈ. ವಾ. ಶ್ರೀರಘುದಾಂತತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತವನ್ನು ಶ್ರವಣ ಮಾಡಿದ ಶ್ರೀ ಗುಂಡಾಚಾರ್ಯರು ಯಾಜ್ಞಿಕದಲ್ಲಿಯೂ ಪರಿಶ್ರಮಪಟ್ಟಿದ್ದಾರೆ. ಶಿವಮೊಗ್ಗೆಯಲ್ಲಿರುವ ಶ್ರೀರಾಘವೇಂದ್ರ ಮಠದ ಪರ್ಯಾಯಸ್ಥರಾದ ಇವರು ಶ್ರೀ ಸಂಜೀವ ಆಂಜನೇಯ ದೇವಸ್ಥಾನದ ಆನಂದತೀರ್ಥ ಪಾಠಶಾಲೆಯಲ್ಲಿ ಮಕ್ಕಳಿಗೆ ಸಂಧ್ಯಾವಂದನಾ, ಸ್ತೋತ್ರ, ಪಾಠ ಹೇಳುತ್ತಾರೆ.

### ೩೪೨ ಮಟಪಾಡಿ ನರಸಿಂಹಾಚಾರ್ಯ ಮಟಪಾಡಿ ಬ್ರಹ್ಮಾವರ



ವೇದ, ಜ್ಯೋತಿಷ್ಯ, ಗ್ರಹಗಣಿತ, ಧರ್ಮಶಾಸ್ತ್ರ, ಮಂತ್ರವಾದ, ಆಗಮ ಮುಂತಾದ ಅನೇಕ ನಿಗಮಾಗಮ ಭಾಗಗಳಲ್ಲಿ ಪಳಗಿ ಪಂಡಿತರಾದ ಶ್ರೀ ಮಟಪಾಡಿ ನರಸಿಂಹಾಚಾರ್ಯರು ಉಡುಪಿ, ಉಪ್ಪೂರು ಹಾಗೂ ಕೇರಳ ಮುಂತಾದ ಬೇರೆ ಬೇರೆ ಸ್ಥಾನಗಳಲ್ಲಿ ನಿಂತು ಬೇರೆ ಬೇರೆ ಗುರುಗಳಿಂದ ತಮ್ಮ ಜ್ಞಾನಕೋಶವನ್ನು ಪೂರ್ಣ ಮಾಡಿಕೊಂಡಿದ್ದಾರೆ. ಸಾಮವೇದ ಸಂಹಿತೆ ಹಾಗೂ ಸಾಮವೇದೀಯ ಪೂರ್ವಾಪರ ಪ್ರಯೋಗ, ಆರಣ್ಯಕ, ರಹಸ್ಯ ಶುಕ್ರಿಯಾಂತ ವೇದ ಭಾಗಗಳಲ್ಲಿ ವಿಶೇಷ ಪರಿಶ್ರಮ ಪಟ್ಟು ಪಾಂಡಿತ್ಯವನ್ನು ಪಡೆದ ಈ ಆಚಾರ್ಯರು ಈಗ ಪೌರೋಹಿತ್ಯ ಮಾಡಿಸುತ್ತಲಿದ್ದಾರೆ.

ಅದಮಾರು ಮಠದ ವೇದಪಾಠಶಾಲೆಯಲ್ಲಿ ಅನೇಕ ವಿದ್ಯಾರ್ಥಿಗಳಿಗೆ ವೇದಾಧ್ಯಾಪನವನ್ನು ಮಾಡಿಸಿದ್ದಾರೆ.

ಜ್ಯೋತಿಶ್ಶಾಸ್ತ್ರದಲ್ಲಿ ಇವರು ಆಯುರ್ದಾಯ ಗಣಿತ ಎಂಬ ಗ್ರಂಥವನ್ನು ರಚಿಸಿದ್ದಾರೆ.

### ೩೪೩ ನರಸಿಂಹಾಚಾರ್ಯ ಶಿರಹಟ್ಟಿ, ಗದಗ

ಇವರು ಯಾಜ್ಞಿಕವನ್ನೆಲ್ಲ ಪೂರ್ಣ ಅಧ್ಯಯನ ಮಾಡಿ ಜಾಲಿಹಾಳ ಶ್ರೀನಿವಾಸಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

## ೩೪೪ ಶ್ರೀ ರಾಮಕೃಷ್ಣ ತಂತ್ರಿ ಉಡುಪಿ



ವೇದಾಂತ ಶಿರೋಮಣಿ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಪ್ರಥಮರಾಗಿ ಉತ್ತೀರ್ಣರಾಗಿ ಸುವರ್ಣ ಪದಕವನ್ನು ಪಡೆದರಾಮಕೃಷ್ಣ ತಂತ್ರಿಗಳು ವ್ಯಾಕರಣ, ಧರ್ಮಶಾಸ್ತ್ರ, ಪೌರೋಹಿತ್ಯ, ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಪರಿಣತರಾಗಿದ್ದಾರೆ.

ಮೈಸೂರಿನ ವೇದಾಂತ ವಿದ್ವತ್ ಪರೀಕ್ಷೆಯಲ್ಲಿಯೂ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಚಿನ್ನದ ಸರ, ಹಾಗೂ ವಿಶೇಷ ಸಂಭಾವನೆಯನ್ನು ಪಡೆದಿದ್ದಾರೆ ಮತ್ತು ಶ್ರೀ ಸೋದಾ ಮಠದ ಹಿಂದಿನ ಶ್ರೀಗಳವರು ಇವರ ಪಾಂಡಿತ್ಯಕ್ಕೆ ಮೆಚ್ಚಿ ಸುವರ್ಣ ಪದಕವನ್ನಿತ್ತು ಅನುಗ್ರಹಿಸಿದ್ದರು.

ಕರಂಬಳ್ಳಿ ಪದ್ಮನಾಭಾಚಾರ್ಯ, ಗುರು ಗುಂಡಿರಾಮಾಚಾರ್ಯ ಮುಂತಾದವರಲ್ಲಿ ಅಧ್ಯಯನ ಮಾಡಿ ಶಾಸ್ತ್ರ ಪಾಂಡಿತ್ಯವನ್ನು ಪಡೆದ ಶ್ರೀ ರಾಮಕೃಷ್ಣ ತಂತ್ರಿಗಳು ಈಗ ಉಡುಪಿಯ ಸಂಸ್ಕೃತ ಕಾಲೇಜದಲ್ಲಿ ವೇದಾಂತ ಅಧ್ಯಾಪಕರಾಗಿದ್ದಾರೆ.

## ೩೪೫ ಪ್ರಾಣನಾಥಾಚಾರ್ಯ ಗಲಗಲಿ, ಬನಹಟ್ಟಿ



ಇವರು ತಮ್ಮ ತಂದೆ ಕೂರ್ಮಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಇವರು ಒಳ್ಳೆ ಸಂಶೋಧಕರಾಗಿದ್ದು, ಶಾಸ್ತ್ರ ಗ್ರಂಥಗಳನ್ನೆಲ್ಲ ತೌಲನಿಕ ದೃಷ್ಟಿಯಿಂದ ಅಧ್ಯಯನ ಮಾಡಿ ತತ್ವವಾದ ಮುಂತಾದ ಪತ್ರಿಕೆಗಳಿಗೆ ವಿಮರ್ಶಾತ್ಮಕ ಲೇಖನಗಳನ್ನು ಬರೆಯುತ್ತಾರೆ. ಈಗ ಇವರು ಬನಹಟ್ಟಿಯಲ್ಲಿ ಹೈಸ್ಕೂಲ ಶಿಕ್ಷಕರಾಗಿದ್ದಾರೆ.

## ೩೪೬ ದಯಾನಂದ ಶಾನಭಾಗ M.A., P.H.D. ಧಾರವಾಡ

ಇವರು ಡಾ॥ ಬಿ. ಎನ್. ಕೆ. ಶರ್ಮಾ ಹಾಗೂ ಕೆ. ಟಿ. ಪಾಂಡುರಂಗಿ ಮುಂತಾದವರಲ್ಲಿ ಅಧ್ಯಯನ ಮಾಡಿ ದ್ವೈತ ವೇದಾಂತದಲ್ಲಿ ನಿಷ್ಣಾತರಾಗಿದ್ದಾರೆ. ಈಗ ಇವರು ಕರ್ನಾಟಕ ಕಾಲೇಜ, ಧಾರವಾಡದಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದಾರೆ.

## ೩೪೭ ಬಿ. ನಾಗೇಶರಾಯರು ಬಳ್ಳಾರಿ

ಎಂ. ಎ. ಪದವೀಧರರಾಗಿ ಆಂಗ್ಲ ಭಾಷೆಯ ಮೇಲೆ ಪೂರ್ಣ ಪ್ರಭುತ್ವವನ್ನು ಪಡೆದ ಶ್ರೀ ನಾಗೇಶರಾಯರು ಸಂಸ್ಕೃತ ಸಾಹಿತ್ಯ, ತತ್ವಜ್ಞಾನ ಕ್ಷೇತ್ರಗಳಲ್ಲಿಯೂ ಅಷ್ಟೇ ಅಧಿಕಾರಯುಕ್ತ ವಾಣಿಯಲ್ಲಿ ಮಾತಾಡಬಲ್ಲರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆಂಗ್ಲ ಭಾಷೆಯ ಪ್ರಾಚಾರರೆಂದು ಕೆಲಸ ಮಾಡಿದ ನಾಗೇಶರಾಯರು ಮುಳಬಾಗಿಲು ಶ್ರೀಪಾದರಾಜ ಮಠದ ವಿದ್ವದ್ವರೇಣ್ಯ ಯತಿಗಳಾದ ಶ್ರೀ ದ್ವೈಪಾಯನಾಚಾರ್ಯರಲ್ಲಿ ದ್ವೈತ ಶಾಸ್ತ್ರವನ್ನು ಚನ್ನಾಗಿ ಅಧ್ಯಯನ ಮಾಡಿದರು.

ವಿಶೇಷವಾಗಿ ಇವರು ವೈದಿಕ ವಾಙ್ಮಯವನ್ನು ಶ್ರೀ ಮಧ್ವಾಚಾರ್ಯರು ಶ್ರೀ ಋಗ್ಭಾಷ್ಯದಲ್ಲಿ ತೋರಿದ ಹೊಸ ಬೆಳಕಿನಲ್ಲಿ ಪರಿಶೀಲಿಸಿ, ಅಧ್ಯಾತ್ಮ ಪರವಾಗಿ ಅರ್ಥಾಪಿಸುವ ಕ್ರಮದಿಂದ "ವೇದ ಋಷಿಗಳ ವೀರ ಮತ'' ಎಂಬ ಮೊದಲಾದ ಲೇಖ, ಕೃತಿಗಳನ್ನು ರಚಿಸಿದ್ದಾರೆ.

## ೩೪೮ ಬಿ. ನಾರಾಯಣಾಚಾರ್ಯ ಬೈಲೂರ ದ ಕ



ನ್ಯಾಯಶಿರೋಮಣಿ, ಕನ್ನಡ ವಿದ್ವಾನ್ ಆದ ನಾರಾಯಣಾಚಾರ್ಯರು ಹಿರಿಯಡ್ಕ ಹಾಯರ ಸೆಕಂಡರಿಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ಕೆಲಸ ಮಾಡುತ್ತಲಿದ್ದಾರೆ.

## ೩೪೯ ತೆಕ್ಕಟ್ಟೆ ರಾಜಗೋಪಾಲಭಟ್ಟ ತೆಕ್ಕಟ್ಟೆ (ದ.ಕ.)

ಜ್ಯೋತಿಷ್ಯಶಿರೋಮಣಿ ಪರೀಕ್ಷೆ ತೇರ್ಗಡೆಯಾದ ಶ್ರೀ ರಾಜಗೋಪಾಲಭಟ್ಟರಿಗೆ ಸಾಹಿತ್ಯದಲ್ಲಿಯೂ ಅಭಿನಿವೇಶವಿದೆ. ವೇದಾಂತದಲ್ಲಿ ಪ್ರವೇಶವಿದೆ. ಪೌರೋಹಿತ್ಯದಲ್ಲಿ ಪಾಂಡಿತ್ಯವಿದೆ. ಇವರು ಮಂಜುನಾಥ ಹತ್ವಾರ, ಸೀತಾರಾಮ ಉಪಾಧ್ಯಾಯ ಪದ್ಮನಾಭ ಅಡಿಗ, ಮಾಧವ ಪುರಾಣಿಕ ರಾಮಚಂದ್ರ ಹತ್ವಾರ ಮುಂತಾದ ಅನೇಕ ವಿದ್ಯಾರ್ಥಿಗಳಿಗೆ ಯಾಜ್ಞಿಕ, ಕಾವ್ಯಾದಿ ಪಾಠ ಹೇಳಿದ್ದಾರೆ.

## ೩೫೦ ರಾಜಾ ಎಸ್. ಗುರುರಾಜಾಚಾರ್ಯ, ಮೈಸೂರು



ಶ್ರೀ ರಾಯರ ಮಠದ ಹಿಂದಿನ ಶ್ರೀ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರಾದ ಶ್ರೀ ಗುರಾಚಾರ್ಯರು ಪತ್ರಿಕಾ ಪ್ರಕಾಶಕರೂ, ಗ್ರಂಥ ಪ್ರಕಾಶಕರೂ, ಸಂಸ್ಥಾ ಸಂಚಾಲಕರೂ ಆಗಿದ್ದಾರೆ.

ಪರಿಮಳ ಪತ್ರಿಕೆಯ ಮುಖಾಂತರ ಅನೇಕ ವರ್ಷಗಳಿಂದ ಕನ್ನಡ ನಾಡಿನಲ್ಲಿ ಧರ್ಮ ಜಾಗೃತಿಯನ್ನು ಮಾಡುತ್ತಲಿದ್ದಾರೆ.

ಪರಿಮಳ ಪ್ರಕಾಶನ ಸಂಶೋಧನ ಮಂದಿರ ಎಂಬ ಸಂಸ್ಥೆಯ ಮೂಲಕ ಅಧ್ಯಾತ್ಮ ಪ್ರಪಂಚಕ್ಕೂ, ಕನ್ನಡ ಸಾಹಿತ್ಯಕ್ಕೂ ಅವರು ಸಲ್ಲಿಸಿದ ಸೇವೆಯು ಚಿರಸ್ಮರಣೀಯವಾಗಿದೆ.

ಶ್ರೀ ವಿಜಯೀಂದ್ರತೀರ್ಥ, ಶ್ರೀ ರಾಘವೇಂದ್ರತೀರ್ಥ ಸ್ವಾಮಿಗಳವರ ದುರ್ಮಿಳ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಿದ್ದಲ್ಲದೇ ಸನಾತನ ಧರ್ಮ ಪ್ರದೀಪ, ಕರ್ನಾಟಕ ಹರಿದಾಸರು, ಸತ್ತತ್ತ್ವ ರತ್ನಾವಳಿ, ಸನತ್ಸು ಜಾತೀಯಂ (ಶ್ರೀ ವಾದಿರಾಜ ವ್ಯಾಖ್ಯಾನ ಸಹಿತ). ನಾರದೀಯ ಶಿಕ್ಷಾ, ಮಾಧ್ವ ತತ್ತ್ವವಾದ ಮುಂತಾದ ಅನೇಕ ಗ್ರಂಥಗಳನ್ನು ಬೆಳಕಿಗೆ ತಂದಿದ್ದಾರೆ, ತರುತ್ತಲೂ ಇದ್ದಾರೆ.

ಇವರು "ಕಮಲೇಶ" ಎಂಬ ಅಂಕಿತ ನಾಮದಿಂದ ಅನೇಕ ಕೀರ್ತನಗಳನ್ನು ರಚಿಸಿದ್ದು ಅವು ಆಕಾಶವಾಣಿ, ಗ್ರಾಮಫೋನೋ ಮುಖಾಂತರ ಎಲ್ಲ ಕಡೆಗೂ ಪ್ರಸಾರವಾಗಿವೆ.

ಇವರು ಒಳ್ಳೇ ಸಂಶೋಧಕರೂ, ಲೇಖಕರೂ, ಕವಿಗಳೂ, ವಾಗ್ಮಿಗಳೂ, ಗಮಕಿಗಳೂ, ಗುರುರಾಜ ಭಕ್ತರೂ ಆಗಿದ್ದು ಅನೇಕ ಕನ್ನಡ, ಸಂಸ್ಕೃತ ಕೃತಿಗಳನ್ನು ರಚಿಸಿದ್ದಾರೆ. ಮೂಲ ಕೃತಿಗಳ ಅನುವಾದವನ್ನೂ ಮಾಡಿದ್ದಾರೆ.

ಮೈಸೂರಿನಲ್ಲಿ ಸ್ವತಂತ್ರ ಮುದ್ರಣಾಲಯದಲ್ಲಿ ಇವರು ಇನ್ನೂ ಅನೇಕ ಮಾಧ್ವ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸುವ ಸಾಹಸವನ್ನು ಕೈಕೊಂಡಿದ್ದಾರೆ. ಈಗಾಗಲೇ ಅವರು ಮುದ್ರಿಸಿ ಪ್ರಕಟಿಸಿದ ಗ್ರಂಥಗಳು ೩೦ ಕ್ಕೆ ಮೇಲ್ಪಟ್ಟಿವೆ. ಇನ್ನೂ ೪೦ ಗ್ರಂಥಗಳು ಮುದ್ರಣಕ್ಕೆ ಅಣಿಯಾಗಿರುತ್ತವೆ.

### ೪೫೧ ರಾಮಾಚಾರ್ಯ ಉಡಿಪಿ, ಬೆಳಗಾಂವಿ

ಇವರು ವಾಳವೇಕರ ವೆಂಕಟರಮಣಾಚಾರ್ಯರಲ್ಲಿಯೂ, ಗಲಗಲಿ ರಾಮಾಚಾರ್ಯರಲ್ಲಿಯೂ ಸಾಹಿತ್ಯ ವೇದಾಂತಗಳನ್ನು ಅಧ್ಯಯನ ಮಾಡಿ ಈಗ ಬೆಳಗಾವಿ ವೀಣಾವಾಣಿ ಮಂದಿರದ ವ್ಯವಸ್ಥಾಪಕರಾಗಿದ್ದಾರೆ. ಪ್ರತಿ ನಿತ್ಯ ಪುರಾಣ ಹೇಳುತ್ತಾರೆ.



### ೪೫೨ ಜನಾರ್ದನ ಉಪಾಧ್ಯಾಯ ಇಂದ್ರಾಣಿ ದೇವಸ್ಥಾನ ಕುಂಜುಬೆಟ್ಟು ಉಡುಪಿ

ಜ್ಯೋತಿಷ್ಯ ಶಿರೋಮಣಿಗಳಾದ ಉಪಾಧ್ಯಾಯರು ಯಜುರ್ವೇದ ಹಾಗೂ ಸಂಸ್ಕೃತ ಸಾಹಿತ್ಯಗಳನ್ನು ಅಧ್ಯಯನ ಮಾಡಿ ಪೌರೋಹಿತ್ಯದಲ್ಲಿಯೂ ಪರಿಣತರಾದರು. ಈಗ ಇವರು ಪೂಜೆ, ಪೌರೋಹಿತ್ಯ, ಜ್ಯೋತಿಷ್ಯ ಮುಂತಾದವುಗಳಿಂದ ಉಪಜೀವಿಸುತ್ತಲಿದ್ದಾರೆ.



### ೪೫೩ ಕೆ. ವೆಂಕಟ ಕೃಷ್ಣವರ್ಣ ಕೋಟೇಶ್ವರ ದ. ಕ.

ಧಾರಾಪುರ ಕೃಷ್ಣಮೂರ್ತಿ ಆಚಾರ್ಯರಲ್ಲಿ ತಿರುಪತಿ ಸಂಸ್ಕೃತ ಕಾಲೇಜದಲ್ಲಿ ಶಾಸ್ತ್ರಾಧ್ಯಯನ ಮಾಡಿ ನ್ಯಾಯ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ಶ್ರೀಕೃಷ್ಣವರ್ಣರು ಕನ್ನಡ ವಿದ್ವಾನ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಅನಂತರ ಕೋಟೇಶ್ವರ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿ ಪಂಡಿತ ಸಭೆಗಳಲ್ಲಿ ಭಾಗವಹಿಸುತ್ತಿದ್ದಾರೆ.

### ೪೫೪ ನಾನಾ ಡಾಕ್ತರ, ಐನಾಪುರ

ಇವರು ತಮ್ಮ ತಂದೆಯವರಲ್ಲಿ ವೇದಾಂತವನ್ನು ಚನ್ನಾಗಿ ಅಧ್ಯಯನ ಮಾಡಿದ್ದಾರೆ. ದ್ವೈತ ವೇದಾಂತದ ಮರ್ಮವನ್ನು ಸರಿಯಾಗಿ ಅರಿತಿದ್ದಾರೆ.

### ೩೫೫ ಶ್ರೀನಿವಾಸರಾವ ವೈದ್ಯ, ಐನಾಪುರ

ಇವರು ಮಂಗಸೂಳಿ ರಾಮಾಚಾರ್ಯರಲ್ಲಿ ವೇದಾಂತವನ್ನು ಚನ್ನಾಗಿ ಅಧ್ಯಯನ ಮಾಡಿದ್ದಾರೆ. ತತ್ವ ಪ್ರಕಾಶಿಕಾ, ಭಾಷ್ಯ ಗ್ರಂಥಗಳನ್ನು ಚನ್ನಾಗಿ ಅನುವಾದ ಮಾಡುತ್ತಾರೆ.



### ೩೫೬ ಎನ್. ನಾರಾಯಣಾಚಾರ್ಯ ಬಡಾಕೆರೆ ಕೋಟೇಶ್ವರ ದ.ಕ.

ಶ್ರೀ ಪಿ. ನಾರಾಯಣಾಚಾರ್ಯ, ಕಟ್ಟೆ ಶ್ರೀನಿವಾಸಾಚಾರ್ಯರಲ್ಲಿ ಕೆಲವು ನ್ಯಾಯ ವೇದಾಂತ ಗ್ರಂಥಗಳನ್ನು ಓದಿದ ಈ ನೆರಂಬಳ್ಳಿ ನಾರಾಯಣಾಚಾರ್ಯರು ಕುಂದಾಪುರ ಬೋರ್ಡ ಹಾಯಸ್ಕೂಲಿನಲ್ಲಿ ಪಂಡಿತರಾಗಿ ಕೆಲಸಮಾಡಿ ಈಗ ನಿವೃತ್ತರಾಗಿದ್ದಾರೆ.

### ೩೫೭ ಶಿಂಗನಮಲ್ಲಿ ಆಚಾರ್ಯ, ಧಾರವಾಡ

ಇವರು ಸಾಹಿತ್ಯ, ವೇದಾಂತ ಅಧ್ಯಯನ ಮಾಡಿದ್ದು, ಪ್ರತಿ ನಿತ್ಯ ಭಾಗವತ ಪುರಾಣ ಹೇಳುತ್ತಾರೆ.

### ೩೫೮ ಪಿ. ವೆಂಕಟರಮಣ ತಂತ್ರಿ ಉಡುಪಿ

ದ್ವೈತ ವೇದಾಂತ ಮತ್ತು ಸಾಹಿತ್ಯ ಹಾಗೂ ಯಜುರ್ವೇದ ವಿಶೇಷತಃ ಪೌರೋಹಿತ್ಯವನ್ನು ಅಧ್ಯಯನ ಮಾಡಿದ ಶ್ರೀ ವೆಂಕಟರಮಣ ತಂತ್ರಿಗಳು ಶ್ರೀ ಸೋದೆವಾದಿರಾಜ ಮಠದ ಆಶ್ರಿತರಾಗಿ ಉಡುಪಿಯಲ್ಲಿ ವೈದಿಕ ವೃತ್ತಿಯಿಂದ ಇರುತ್ತಾರೆ.

### ೩೫೯ ಮುಕುಂದಾಚಾರ್ಯ ಜಹಗಿರ್ದಾರ, ಹೈದರಾಬಾದ

ವರಖೇಡ ಪದ್ಮನಾಭಾಚಾರ್ಯರಲ್ಲಿ ಇವರು ವೇದಾಂತವನ್ನು ಓದಿದ್ದಾರೆ. ನೀಲಂಗಾ ಆಚಾರ್ಯರ ಮನೆತನದವರಾದ ಮುಕುಂದಾಚಾರ್ಯರು ವೈದ್ಯ ಶಾಸ್ತ್ರದಲ್ಲಿ ವಿಶಾರದರಾಗಿದ್ದಾರೆ.

## ೩೬೦ ಪಿ. ಹರಿದಾಸಾಚಾರ್ಯ, ಪಡುಬಿದ್ರಿ (ದ. ಕ.)



ಉಡುಪಿಯ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಸಾಹಿತ್ಯ ಶಿರೋಮಣಿಯಾಗಿ ಶಾಸ್ತ್ರ, ವೇದಾಂತ, ವ್ಯಾಕರಣ, ಪೌರೋಹಿತ್ಯ (ಆಶ್ವಲಾಯನ, ಬೋಧಾಯನ) ಕನ್ನಡ ವಿದ್ವಾನ್, ಹಿಂದೀ ರತ್ನ ಆದ ಶ್ರೀ ಹರಿದಾಸಾಚಾರ್ಯರು ಜ್ಯೋತಿಷ್ಯವನ್ನು ಅಭ್ಯಾಸಮಾಡಿದ್ದಾರೆ.

ಈಗ ಕಾಪು ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ. ಪೌರೋಹಿತ್ಯವನ್ನೂ ಮಾಡಿಸುತ್ತಾರಲ್ಲದೆ ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠ ಹೇಳುತ್ತಾರೆ.

## ೩೬೧ ಎ. ಆರ್. ಶ್ರೀಪಾದಾಚಾರ್ಯ, ಬೆಂಗಳೂರು

ಎಸ್. ಎಸ್. ಎಲ್. ಸಿ. ಆಗಿ ಋಗ್ವೇದ, ಪೂರ್ವಾಪರ ಯಾಜ್ಞಿಕ, ಭಾಷ್ಯ ಗ್ರಂಥಗಳ ಅಭ್ಯಾಸವನ್ನು ಮುಳಬಾಗಿಲ ಪಾಠ ಶಾಲೆಯಲ್ಲಿ ಮಾಡಿದ ಶ್ರೀಪಾದಾಚಾರ್ಯರು ಅಧ್ಯಾಪಕರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿ ಪೌರೋಹಿತ್ಯವನ್ನು ಮಾಡಿಸುತ್ತಾರೆ. ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.



## ೩೬೨ ಕೆ. ಕೃಷ್ಣಾಚಾರ್ಯ ಐಜಿ

ಋಗ್ವೇದ, ಯಜುರ್ವೇದ, ಪೂರ್ವಾಪರ ಯಾಜ್ಞಿಕವನ್ನು ತಮ್ಮ ತಂದೆ ಭೀಮಾಚಾರ್ಯರಲ್ಲಿ ಅಧ್ಯಯನ ಮಾಡಿದ ಶ್ರೀಕೃಷ್ಣಾಚಾರ್ಯರು ಈಗ ಪೌರೋಹಿತ್ಯ ವೃತ್ತಿಯಲ್ಲಿದ್ದು ನಾಲ್ಕೈದು ಜನ ವಿದ್ಯಾರ್ಥಿಗಳಿಗೆ ಯಾಜ್ಞಿಕ ಪಾಠ ಹೇಳಿದ್ದಾರೆ.

## ೩೬೩ ಮುದ್ಗಲಾಚಾರ್ಯ ವರಖೇಡ

ಇವರು ವರಖೇಡ ಪದ್ಮನಾಭಾಚಾರ್ಯರಲ್ಲಿ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ.

## ೩೬೪ ಬಾಬಾಚಾರ್ಯ ಅಪಶಂಕರ, ನೀಲಂಗಾ

ಇವರು ವೇದಾಂತದಲ್ಲಿ ಪಂಡಿತರಾಗಿದ್ದಾರೆ. ಪುರಾಣದಲ್ಲಿಯೂ ಪರಿಣಿತರಾಗಿದ್ದಾರೆ. ಸಮಗ್ರ ಭಾಗವತವನ್ನು ಮುಯೋದ್ಗತವಾಗಿ ಹೇಳುತ್ತಾರೆ.



## ೩೬೫ ಕೆ. ವೆಂಕಟಾಚಾರ್ಯ ರಾಯಚೂರು

ಐಜಿಯಲ್ಲಿ ತಮ್ಮ ತಂದೆ ಭೀಮಾಚಾರ್ಯರಲ್ಲಿಯೇ ವೇದ ಮತ್ತು ಜ್ಯೋತಿಷ್ಯ ಹಾಗೂ ಯಾಜ್ಞಿಕವನ್ನು ಅಧ್ಯಯನ ಮಾಡಿದ ಶ್ರೀ ವೆಂಕಟಾಚಾರ್ಯರು ಕೆಲವು ವಿದ್ಯಾರ್ಥಿಗಳಿಗೆ ಪಾಠ ಹೇಳಿರುತ್ತಾರೆ.

## ೩೬೬ ರಾಮಚಂದ್ರಭಟ್ಟ ಯಲ್ಲೂರ ದ. ಕ.

ಇವರು ಸಾಹಿತ್ಯ ಶಿರೋಮಣಿ, ಕನ್ನಡ ವಿದ್ವಾನ್, ಹಿಂದೀರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ. ಕೆಲವು ವೇದಾಂತ ಗ್ರಂಥಗಳನ್ನು ಶ್ರೀ ಪೇಜಾವರ, ಶ್ರೀ ಭಂಡಾರಕೇರಿ ಶ್ರೀಗಳಪರಲ್ಲಿ ಅಧ್ಯಯನ ಮಾಡಿದ್ದಾರೆ. ಎರ್ಮಾಳ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು ಈಗ ನಿವೃತ್ತರಾಗಿ ಎಲ್ಲೂರಲ್ಲಿರುವರು.



## ೩೬೭ ಅನಂತಾಚಾರ್ಯ ಉದಯಗಿರಿ

ವರಖೇಡಿ ನರಸಿಂಹಾಚಾರ್ಯರ ಶಿಷ್ಯರಾದ ಅನಂತಾಚಾರ್ಯರು ಸಾಹಿತ್ಯ, ವೇದಾಂತ ವಿದ್ಯೆಗಳನ್ನು ಅಧ್ಯಯನ ಮಾಡಿದ್ದಾರೆ. ಇವರು ಸಂಸ್ಕೃತ, ಹಿಂದೀ, ಮರಾಠೀ ಭಾಷೆಗಳಲ್ಲಿ ಜನ ಮನೋರಂಜನವಾಗುವಂತೆ ಉತ್ಕೃಷ್ಟದ ರೀತಿಯಿಂದ ಪುರಾಣ ಪ್ರವಚನ ಮಾಡುತ್ತಾರೆ.

## ೩೭೮ ಶ್ರೀಧರಾಚಾರ್ಯ ವರಖೇಡ

ಶ್ರೀ ಸತ್ಯಧ್ಯಾನ ತೀರ್ಥರಲ್ಲಿಯೂ, ಶ್ರೀ ವರಖೇಡ ಪದ್ಮನಾಭಾಚಾರ್ಯರಲ್ಲಿ ವೇದಾಂತ ಅಧ್ಯಯನ ಮಾಡಿದ್ದಾರೆ.

## ೩೭೯ ಬಿ. ಮಾಧವ ವರ್ಣ
## ಕೋಟೇಶ್ವರ ದ. ಕ.



ಗೋಪಾಲ ವರ್ಣಕರ ಮಕ್ಕಳಾದ ಶ್ರೀ ಬಿ. ಮಾಧವ ವರ್ಣರು ಕೋಟೇಶ್ವರ ಸಂಸ್ಕೃತ ಪಾಠಶಾಲೆಯಲ್ಲಿ ಶ್ರೀ ವೆಂಕಟಕೃಷ್ಣ ವರ್ಣರಲ್ಲಿ ಕಾವ್ಯ, ವೇದ, ಪೌರೋಹಿತ್ಯಗಳನ್ನು ವ್ಯಾಸಂಗ ಮಾಡಿಕೊಂಡು ಕೋಟೇಶ್ವರದಲ್ಲಿ ಪೌರೋಹಿತ್ಯ ಮತ್ತು ಕೃಷಿ ಮಾಡಿಕೊಂಡು ವಾಸವಾಗಿದ್ದಾರೆ.



## ೩೭೦
## ಮುಂಗ್ಲಿ ರಾಘವೇಂದ್ರಾಚಾರ್ಯ
## ರಾಯಚೂರ

ಜೋಶಿ ಶ್ರೀನಿವಾಸಾಚಾರ್ಯರಲ್ಲಿ ಋಗ್ವೇದ ಅಧ್ಯಯನ ಮಾಡಿದ ಶ್ರೀ ರಾಘವೇಂದ್ರಾಚಾರ್ಯರು ಪೂರ್ವಾಪರ ಯಾಜ್ಞಿಕದಲ್ಲಿ ಪರಿಣತರಾಗಿರುತ್ತಾರೆ.

## ೩೭೧ ಬದರೀನಾರಾಯಣಾಚಾರ್ಯ, ರಾಯಚೂರು

ರಾಯಚೂರಿನಲ್ಲಿ ಶ್ರೀ ರಾಘವೇಂದ್ರಸ್ವಾಮಿ ಮಠಾಧಿಕಾರಿಗಳಾದ ಶ್ರೀ ಬದರಿನಾರಾಯಣಾಚಾರ್ಯರು ಕುಷ್ಟಗಿ ಪಾಠಶಾಲೆಯಲ್ಲಿ ವೇದಾಧ್ಯಯನ, ಯಾಜ್ಞಿಕ, ಪುರಾಣಗಳ ಅಧ್ಯಯನ ಮಾಡಿದ್ದಾರೆ.

ಪ್ರಕೃತ ರಾಯಚೂರಿನಲ್ಲಿ ಪೌರೋಹಿತ್ಯವನ್ನು ಮಾಡಿಸಿ, ಪುರಾಣ ಹೇಳಿ ಮಠಾಧಿಕಾರದಿಂದ ಉಪಜೀವಿಸುತ್ತಾರೆ. ಪರೋಪಕಾರಿಗಳೂ, ಹರಿ-ಗುರು ಭಕ್ತರೂ ಆಗಿ ಎಲ್ಲ ಮಠಾಧೀಶರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ.



## ೩೭೨ ಧೀರೇಂದ್ರ ಶ್ರೀನಿವಾಚಾರ್ಯ ಗೊಗ್ಗಿ ಹೊಸರಿತ್ತಿ

ಗೊಗ್ಗಿ ಶ್ರೀನಿವಾಸಾಚಾರ್ಯರ ಪುತ್ರರಾದ ಧೀರೇಂದ್ರಾಚಾರ್ಯರು ಯಾಜ್ಞಿಕ, ಕಾವ್ಯ, ವ್ಯಾಸಂಗ ಮಾಡಿ ಹೊಸರಿತ್ತಿಯಲ್ಲಿ ಪೌರೋಹಿತ್ಯವನ್ನು ಮಾಡಿ ಕೊಂಡು ಇರುವರು.

## ೩೭೩ ನರಹರಿ ಕೃಷ್ಣಾಚಾರ್ಯ, ಸುಂಕೇರಿ

ಇವರು ಪುರಾಣ ಹೇಳುವದರಲ್ಲಿ ನಿಷ್ಣಾತರು. ಶಾಸ್ತ್ರ ಸಾಹಿತ್ಯಗಳಲ್ಲಿ ಗತಿಯುಂಟು. ಕಾರವಾರ ಜಿಲ್ಹಾ ಸುಂಕೇರಿಯಲ್ಲಿ ಪುರಾಣ ಪ್ರವಚನ ಮಾಡುತ್ತ ವಾಸವಾಗಿರುವರು.

## ೩೭೪ ಗಣಪತಿ ಶರ್ಮಾ, ಕುಂದಾಪುರ

ಪುರಾಣ, ಜ್ಯೋತಿಷ್ಯ, ವೈದ್ಯಶಾಸ್ತ್ರಗಳಲ್ಲಿ ನಿಪುಣರಾದ ಶ್ರೀ ಗಣಪತಿ ಶರ್ಮರು ಅನೇಕ ಸ್ತುತಿ-ಸ್ತೋತ್ರಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ.

## ೩೭೫ ಪುರುಷೋತ್ತಮ ನಾರಾಯಣಭಟ್ಟ, ಇಡಗುಂಜಿ

ಇವರು ಶಾಸ್ತ್ರದಲ್ಲಿ ಪಂಡಿತರು, ಯಾಜ್ಞಿಕದಲ್ಲಿ ನಿಷ್ಣಾತರು. ಆಗಮ ಶಾಸ್ತ್ರ ಬಲ್ಲವರು. ಕಾರವಾರ ಜಿಲ್ಲಾ ಕೂಡ್ಲಮನೆ ವಿಷ್ಣು ದೇವಸ್ಥಾನದಲ್ಲಿರುವರು.

## ೩೭೬ ನರಸಿಂಹ ಹರಿ ಪುರಾಣಿಕ, ಭಟಕಳ

ಮಾಧ್ವ ತತ್ವ ಜ್ಞಾನವನ್ನು ಚನ್ನಾಗಿ ಬಲ್ಲವರಾದ ಶ್ರೀ ನರಸಿಂಹ ಪುರಾಣಿಕರು ಅಭಿಜಾತ ಪುರಾಣಿಕರಾಗಿದ್ದಾರೆ. ಲ೦ ವರ್ಷದವರಾಗಿದ್ದರೂ ನಿತ್ಯ ಕರ್ಮಾನುಸ್ಠಾನ ಮಾಡಿಕೊಂಡು ಪ್ರವಚನ ಮಾಡುತ್ತಲಿದ್ದಾರೆ.

## ೩೭೭ ಅಪ್ಪುಮಾಸ್ತರ ಜೇರೆ, ಅಥಣಿ

ಇವರು ಜ್ಯೋತಿಷ್ಯ ಶಾಸ್ತ್ರದಲ್ಲಿ ಅಪ್ರತಿಮ ಪಂಡಿತರಾಗಿದ್ದಾರೆ. ವೇದಾಂತ ದಲ್ಲಿಯೂ ಚನ್ನಾಗಿ ಗತಿಯುಂಟು. ಬಹು ವರ್ಷಗಳಿಂದ ಉತ್ತರಾದಿ ಮಠದ ಪಂಚಾಂಗವು ಇವರ ಪರ್ಯವೇಕ್ಷಕತ್ವದಲ್ಲಿಯೇ ಹೊರಡುತ್ತಲಿರುವದು.

## ೩೭೮ ಜಿ. ಪದ್ಮನಾಭ ಉಪಾಧ್ಯಾಯ ಗೋಪಾಡಿಗ್ರಾಮ

ಶ್ರೀ ಭಂಡಾರಕೇರಿಮಠ ಮತ್ತು ಕುಂಭಾಸಿ ಸಂಸ್ಕೃತ ಪಾಠಶಾಲೆಯಲ್ಲಿ ಋಗ್ವೇದ, ನಾಟಕಾಂತ ಸಾಹಿತ್ಯ, ದ್ವೈತ ವೇದಾಂತದ ಕೆಲವು ಗ್ರಂಥಗಳು, ಯಾಜ್ಞಿಕಗಳನ್ನು ಅಧ್ಯಯನ ಮಾಡಿದ ಪದ್ಮನಾಭ ಉಪಾಧ್ಯಾಯರು ಈಗ ಗೋಪಾಡಿ ಗ್ರಾಮದಲ್ಲಿ ಪೌರೋಹಿತ್ಯ, ಕೃಷಿ ಮಾಡಿಕೊಂಡಿರುವರು.

## ೩೭೯ ಚಿತ್ರಹಳ್ಳಿ ಶ್ರೀನಿವಾಸಾಚಾರ್ಯ ಬೆಂಗಳೂರ



ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜ, ಬೆಂಗಳೂರು ಚಾಮರಾಜೇಂದ್ರ ಕಾಲೇಜುಗಳಲ್ಲಿ ದ್ವೈತ ವೇದಾಂತ ವಿದ್ವತ್ ಮತ್ತು ಅಲಂಕಾರ ಶಾಸ್ತ್ರ, ವಿದ್ವತ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಶ್ರೀನಿವಾಸಾಚಾರ್ಯರು ಸರಕಾರಿ ಪ್ರೌಢ ಶಾಲೆಗಳಲ್ಲಿ ಪಂಡಿತರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಬೆಂಗಳೂರು ಚಾಮರಾಜ ಪೇಟೆ ರಾಘವೇಂದ್ರ ಕಾಲನಿಯಲ್ಲಿಯ ತಮ್ಮ ಮನೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿರುವರು.

## ೩೮೦ ಅಗ್ರಹಾರ ವೆಂಕಟರಮಣ ತಂತ್ರಿ ಕುಂಜಬೆಟ್ಟು ಉಡುಪಿ

ಉಡುಪಿ ಸಂಸ್ಕೃತ ಪಾಠ ಶಾಲೆಯಲ್ಲಿ ಓದಿ ಮದ್ರಾಸ ವಿಶ್ವವಿದ್ಯಾನಿಲಯದ ವೇದಾಂತ ಶಿರೋಮಣಿ, ಮೈಸೂರಿನ ವಿದ್ವಾನ್ ಪರೀಕ್ಷೆಗಳಲ್ಲಿ ತೇರ್ಗಡೆಯಾದ ಶ್ರೀ ವೆಂಕಟರಮಣ ತಂತ್ರಿಗಳು ಉಡುಪಿ ಅಗ್ರಹಾರ ನಾರಾಯಣ ತಂತ್ರಿಗಳ ಮಕ್ಕಳು. ಯಜುರ್ವೇದ, ಸಿದ್ಧಾಂತಕೌಮುದಿ, ನ್ಯಾಯ, ಮೀಮಾಂಸಾ ಶಾಸ್ತ್ರಗಳಲ್ಲಿ ಪ್ರವೇಶ ಪಡೆದು ಸುಧಾದಿ ಗ್ರಂಥಗಳನ್ನು ಅಧ್ಯಯನ ಮಾಡಿರುವರು.

ಈಗ ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯ ಮುಖ್ಯೋಪಾಧ್ಯಾಯರಾಗಿರುವರು.

## ೩೮೧ ಶ್ರೀಧರ ಅನಂತಭಟ್ಟ ಹಳದೀಪುರ, ಹುಬ್ಬಳ್ಳಿ

ಇವರು ಪಂಡಿತರಿದ್ದು ಆಗಮ, ತಾಂತ್ರಿಕ ಶಾಸ್ತ್ರಗಳಲ್ಲಿ ನಿಷ್ಣಾತರು. ಹುಬ್ಬಳ್ಳಿಯಲ್ಲಿ ಗೌಡ ಸಾರಸ್ವತ ಸಮಾಜದಲ್ಲಿ ಯಾಜ್ಞಿಕವನ್ನು ಮಾಡಿಸುತ್ತಾರೆ.

## ೩೮೨ ನಾರಾಯಣಾಚಾರ್ಯ ರಾಜಪುರೋಹಿತ ತೆಕ್ಕಲಕೋಟೆ ಜಿ. ಬಳ್ಳಾರಿ

ಮಂತ್ರಾಲಯದ ಸಂಸ್ಕೃತ ಪಾಠಶಾಲೆಯಲ್ಲಿ ವೇದ, ಜ್ಯೋತಿಷ್ಯ, ಪೂರ್ವಾಪರ ಯಾಜ್ಞಿಕ, ನಾಟಕಾಂತ ಸಾಹಿತ್ಯ ಕೆಲವು ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ ಶ್ರೀ ನಾರಾಯಣಾಚಾರ್ಯರು ಈಗ ತೆಕ್ಕಲಕೋಟೆಯಲ್ಲಿ ಪೌರೋಹಿತ್ಯವನ್ನು ಮಾಡಿಕೊಂಡು ಇರುವರು.

## ೩೮೩ ಅಡ್ಡೆ ರಾಮಕೃಷ್ಣಾಚಾರ್ಯ ತೆಂಕಪೇಟೆ ಉಡುಪಿ

ನಾಟಕಾಂತ ಸಾಹಿತ್ಯ, ಅಲಂಕಾರ ಶಾಸ್ತ್ರಗಳಲ್ಲಿ ಶಿರೋಮಣಿಯಾದ ಶ್ರೀ ಅಡ್ಡೆ ರಾಮಕೃಷ್ಣಾಚಾರ್ಯರಿಗೆ ವ್ಯಾಕರಣ, ವೇದಾಂತ, ಧರ್ಮಶಾಸ್ತ್ರಗಳಲ್ಲಿಯೂ ಪ್ರವೇಶವುಂಟು.

ಉಡುಪಿ ಸಂಸ್ಕೃತ ಕಾಲೇಜದಲ್ಲಿ ಸಾಹಿತ್ಯ ಅಧ್ಯಾಪಕರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿ ವಿದ್ಯಾರ್ಥಿಗಳಿಗೆ ಮನೆಯಲ್ಲಿ ಪಾಠ ಹೇಳುತ್ತಾರೆ.



## ೩೮೪ ಗುಂಡಾಚಾರ್ಯ

### ಶ್ರೀನಿವಾಸಾಚಾರ್ಯ ಜೋಶಿ

ಜ್ಯೋತಿಷ್ಯ, ವ್ಯಾಕರಣ ಯಾಜ್ಞಿಕಗಳಲ್ಲಿ ಪಳಗಿದವರಾದ ಶ್ರೀ ಗುಂಡಾಚಾರ್ಯರು ಪುರಾಣಿಕರೂ ಆಗಿದ್ದಾರೆ. ಮಳಗಿ ವೆಂಕಣ್ಣಾಚಾರ್ಯ, ಬೆಳ್ಳುಬ್ಬಿ ಅಣ್ಣೈಯಾಚಾರ್ಯರಲ್ಲಿ ಓದಿದ್ದಾರೆ. ಇವರು ಗ್ವಾತಿಗಿಯಲ್ಲಿ ಪೌರೋಹಿತ್ಯವನ್ನು ಮಾಡಿಕೊಂಡು ಇರುವರು. ನಿತ್ಯವೂ ವಿದ್ಯಾರ್ಥಿಗಳಿಗೆ ವೇದ, ಕಾವ್ಯಾದಿಗಳ ಪಾಠ ಹೇಳುತ್ತಲಿರುವರು.

## ೩೮೫ ಯಲವಟ್ಟಿ ಕೃಷ್ಣಾಚಾರ್ಯ ಬೆಂಗಳೂರ

ತೀರ್ಥಹಳ್ಳಿ ವೇದಾಂತ ಪಾಠಶಾಲೆಯಲ್ಲಿ ಋಗ್ವೇದ, ಯಜುರ್ವೇದ, ಪೌರೋಹಿತ್ಯ ಪುರಾಣಾದಿಗಳನ್ನು ಅಭ್ಯಾಸ ಮಾಡಿದ ಶ್ರೀ ಕೃಷ್ಣಾಚಾರ್ಯರು ಈಗ ಬೆಂಗಳೂರ ತ್ಯಾಗರಾಜ ನಗರದಲ್ಲಿ ಪೌರೋಹಿತ್ಯ, ಯಾಜ್ಞಿಕ ಮಾಡಿಕೊಂಡು ಇರುವರು.

ಈಗ ವಿದ್ಯಾರ್ಥಿಗಳಿಗೆ ನಿತ್ಯವೂ ಸಂಧ್ಯಾ, ಸ್ತೋತ್ರ, ಮಂತ್ರಪಾಠ ಹೇಳುತ್ತಲಿರುವರು.

## ೩೮೬ ಎ. ವ್ಹಿ. ಆಚಾರ್ಯ ಹುಬ್ಬಳ್ಳಿ

ಉಡುಪಿ ಸಂಸ್ಕೃತ ಪಾಠಶಾಲೆಯಿಂದ ಎಂಟ್ರನ್ಸ ಆದ ಶ್ರೀ ಪದ್ಮನಾಭಾಚಾರ್ಯರು ಜ್ಯೋತಿಷ್ಯ, ಯಾಜ್ಞಿಕಗಳಲ್ಲಿ ಪರಿಣತರಾಗಿರುವರು. ಹುಬ್ಬಳ್ಳಿಯಲ್ಲಿ ಜ್ಯೋತಿಷ್ಯ ಮತ್ತು ಪೌರೋಹಿತ್ಯ ಮಾಡಿಕೊಂಡು ಪ್ರತಿಷ್ಠಿತರಾಗಿದ್ದಾರೆ.

## ೩೭೮ ಡಿ. ವೇಣುಗೋಪಾಲಾಚಾರ್ಯ ಮದ್ರಾಸ



ಧರ್ಮಾವರ ವೇಣುಗೋಪಾಲಾಚಾರ್ಯರು ಕಾವ್ಯ, ಯಾಜ್ಞಿಕ, ಪುರಾಣಗಳನ್ನು ನೋಡಿಕೊಂಡು ಮದ್ರಾಸದಲ್ಲಿ ವೈದಿಕವೃತ್ತಿಯಿಂದ ಉಪಜೀವಿಸುತ್ತಿರುವರು.



## ೩೮೮ ಕೇಶವ ಕಾಮತ

ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ತಿರೋಮಣಿಯಾದ ಶ್ರೀ ಕೇಶವ ಕಾಮತರು ಸಂಸ್ಕೃತ ಸಾಹಿತ್ಯ, ಋಗ್ವೇದಗಳ ಅಭ್ಯಾಸ ಮಾಡಿ ಹಿಂದಿ ರತ್ನ ಪರೀಕ್ಷೆ ಉತ್ತೀರ್ಣರಾಗಿ ಈಗ ಕಾರ್ಕಳದಲ್ಲಿ ವಾಸವಾಗಿದ್ದಾರೆ.

## ೩೮೯ ಕರಿಬೆಳಗಲ್ಲ ಹನುಮಂತಾಚಾರ್ಯ ಆದವಾನಿ

ಆದವಾನಿ ಗುರುಕುಲದಲ್ಲಿ ಯಾಜ್ಞಿಕ, ವೇದ, ಕಾವ್ಯ, ಪುರಾಣಾದಿಗಳನ್ನು ಅಧ್ಯಯನ ಮಾಡಿದ ಶ್ರೀ ಹನುಮಂತಾಚಾರ್ಯರು ಆದವಾನಿಯಲ್ಲಿ ಪೌರೋಹಿತ್ಯವನ್ನು ಮಾಡಿಕೊಂಡು ವಾಸವಾಗಿರುವರು.



### ೩೯೦ ಮುರಲೀಧರಾಚಾರ್ಯ ಗಲಗಲ

ಇವರು ತಮ್ಮ ತಂದೆ ಕೂರ್ಮಾಚಾರ್ಯರಲ್ಲಿಯೂ ಅಣ್ಣಂದಿರಲ್ಲಿಯೂ ವೇದಾಂತವನ್ನು ಓದಿದ್ದಾರೆ. ಬಿ.ಎ. ಪದವೀಧರರಾಗಿ ಹೈಸ್ಕೂಲಿನಲ್ಲಿ ಶಿಕ್ಷಕರಾಗಿರುವರು.

### ೩೯೧ ಕೆ. ಪದ್ಮನಾಭ ಉಡುಪ ಗೋಪೇನಹಳ್ಳಿ



ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿ ಶಿರೋಮಣಿ, ದ್ವೈತವೇದಾಂತ ವಿದ್ವತ್, ಕನ್ನಡ ವಿದ್ವಾನ್, ಹಿಂದೀ ರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಪದ್ಮನಾಭ ಉಡುಪರು ಸುಧಾ, ತತ್ವಪ್ರಕಾಶಿಕಾ ಮುಂತಾದವುಗಳನ್ನು ಅಧ್ಯಯನ ಮಾಡಿದ್ದಾರೆ. ಋಗ್ವೇದ ಸಂಪೂರ್ಣ ಅಭ್ಯಾಸ ಮಾಡಿರುವರು. ಈಗ ಉಪಾಧ್ಯಾಯರಾಗಿದ್ದಾರೆ.

### ೩೯೨ ವಿ. ರಾಮಕೃಷ್ಣಭಟ್ಟ ಹಂದಾಡಿಗ್ರಾಮ



ನ್ಯಾಯಶಿರೋಮಣಿ, ವೇದಾಂತ ವಿದ್ವಾನ್, ಕನ್ನಡ ವಿದ್ವಾನ್ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀರಾಮಕೃಷ್ಣಭಟ್ಟರು ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ಮತ್ತು ಶ್ರೀಪಡಮನ್ನೂರ ನಾರಾಯಣಾಚಾರ್ಯರಲ್ಲಿ ನ್ಯಾಯ, ವೇದಾಂತವನ್ನು ಓದಿರುವರು

ಋಗ್ವೇದ, ಜ್ಯೋತಿಷ್ಯ, ಹಿಂದಿ, ಇಂಗ್ಲೀಷು ಗಳಲ್ಲಿಯೂ ಪರಿಣತರಾಗಿರುವರು. ಮಿಲಾಗ್ರೆಸ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿದ್ದಾರೆ.

## ೪೯೩ ಗೋವರ್ಧನಾಚಾರ್ಯ ಗಲಗಲಿ ಧಾರವಾಡ



ಗಲಗಲಿ ಸುಬ್ಬಣ್ಣಾಚಾರ್ಯರ ಮಕ್ಕಳಾದ ಶ್ರೀ ಗೋವರ್ಧನಾಚಾರ್ಯರು ಇಂಗ್ಲೀಷ ಪದವೀಧರರಾಗಿ ವಿದ್ಯಾ ಇಲಾಖೆಯಲ್ಲಿ ಕೆಲಸಮಾಡಿ ನಿವೃತ್ತರಾಗಿದ್ದಾರೆ.

ಸಂಸ್ಕೃತದಲ್ಲಿ ಒಳ್ಳೆ ವ್ಯುತ್ಪತ್ತಿ ಇದ್ದು ಸಂಸ್ಕೃತ ಕನ್ನಡಗಳಲ್ಲಿ ಗದ್ಯಪದ್ಯಗಳನ್ನು ರಚಿಸುತ್ತಾರೆ.

## ೪೯೪ ಟೊಣಪಿ ಗೋಪಾಲಾಚಾರ್ಯ ಕಾಶಿ



ಟೊಣಪಿ ಭಾವು ಆಚಾರ್ಯರ ಪುತ್ರರಾದ ಶ್ರೀ ಗೋಪಾಲಾಚಾರ್ಯರು ವೇದ, ಯಾಜ್ಞಿಕ, ಸಂಸ್ಕೃತ, ಹಿಂದಿ, ಇಂಗ್ಲೀಷ ಅಭ್ಯಾಸ ಮಾಡಿರುವರು. ಆಯುರ್ವೇದ ಹೋಮಿಯೋಪಥಿಗಳಲ್ಲಿ ತಜ್ಞರಾಗಿರುವರು.

ಕಾಶಿಯ ಉತ್ತರಾದಿ ಮಠದಲ್ಲಿ ಇದ್ದು ದಕ್ಷಿಣ ದೇಶದಿಂದ ಬಂದ ಯಾತ್ರಾರ್ಥಿಗಳಿಗೆ ಎಲ್ಲ ಸೌಕರ್ಯಗಳನ್ನು ಒದಗಿಸಿ ಕೊಟ್ಟು ಧಾರ್ಮಿಕ ಭಾವನೆಯನ್ನು ಜಾಗ್ರತಗೊಳಿಸುತ್ತಲಿದ್ದಾರೆ.

ಇವರು ಕಾಶಿ ನಗರ ಸಭೆಯ ಸದಸ್ಯರೂ ಅನೇಕ ಸಂಘ ಸಂಸ್ಥೆಗಳ ಚಾಲಕರೂ ಆಗಿ ಪ್ರತಿಷ್ಠಿತರಾಗಿದ್ದಾರೆ.

## ೪೯೫ ರಾಮಮೂರ್ತಿ ಆಚಾರ್ಯ ತುಮಕೂರ

ಎಚ್. ಸುಬ್ಬರಾಯರಲ್ಲಿ ವೇದಾಂತವನ್ನು ವ್ಯಾಸಂಗ ಮಾಡಿದ ಶ್ರೀ ರಾಮಮೂರ್ತಿ ಆಚಾರ್ಯರು ತುಮಕೂರಿನಲ್ಲಿ ವ್ಯಾಸರಾಜ ಮಠದ ಮಠಾಧಿಕಾರಿಗಳಾಗಿದ್ದಾರೆ.



ತುಮಕೂರಿನಲ್ಲಿಯ ಮಾಧ್ವ ಮಹಾ ಮಂಡಳದ ಪ್ರಮುಖ ಕಾರ್ಯಕರ್ತರೂ ಆಗಿರುವರು.

ತುಮಕೂರಿನ ವ್ಯಾಸರಾಜ ಮಠದಲ್ಲಿ ಪಾಠಶಾಲೆಯನ್ನು ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ನಿತ್ಯವೂ ಮಂತ್ರ ಸ್ತೋತ್ರ, ಸಂಸ್ಕೃತ ಪಾಠ ಹೇಳುತ್ತಲಿರುವರು.

## ೩೯೬ ಕೃಷ್ಣಾಚಾರ್ಯ ವರಖೇಡಿ ಹೈದರಾಬಾದ



ತಮ್ಮ ತಂದೆ ಮತ್ತು ಕಕ್ಕಂದಿರಾದ ನರಸಿಂಹಾಚಾರ್ಯ ಮತ್ತು ಪ್ರದ್ಯುಮ್ನಾಚಾರ್ಯರಲ್ಲಿ ನ್ಯಾಯ, ವೇದಾಂತ ಅಭ್ಯಾಸ ಮಾಡಿದ್ದಾರೆ. ಹೆಚ್ಚಿನ ಅಭ್ಯಾಸವನ್ನು ಕಾಶಿಯಲ್ಲಿಯೂ ಮಾಡಿದ ಶ್ರೀಕೃಷ್ಣಾಚಾರ್ಯರು ಹೈದರಾಬಾದಿನಲ್ಲಿ ವಾಸವಾಗಿರುವರು.

ಇವರು ಎಂ. ಎ. ಪದವೀಧರರಾಗಿದ್ದು ಕಾಲೇಜದಲ್ಲಿ ಪ್ರಾಧ್ಯಾಪಕರಾಗಿರುವರು. ಮನೆಯಲ್ಲಿ ಲೌಕಿಕರಿಗೆ ಪಾಠ ಹೇಳುತ್ತಲಿರುವರು.

## ೩೯೭ ಕೃಷ್ಣಾಚಾರ್ಯ ಪಾಂಡುರಂಗಿ ಚಿಕ್ಕೇರೂರು



ಇವರು ತಮ್ಮ ತಂದೆ ವೆಂಕಟರಮಣಾಚಾರ್ಯರಲ್ಲಿ ನ್ಯಾಯ ವೇದಾಂತಗಳನ್ನು ಅಭ್ಯಾಸ ಮಾಡಿ ತಿರುಪತಿ ಸಂಸ್ಕೃತ ಕಾಲೇಜವಲ್ಲಿ ನ್ಯಾಯ ಶಾಸ್ತ್ರದಲ್ಲಿ ಹೆಚ್ಚಿನ ವ್ಯಾಸಂಗ ಮಾಡಿಕೊಂಡು ಸ್ವಗ್ರಾಮವಾದ ಚಿಕ್ಕೇರೂರನಲ್ಲಿ ವಾಸವಾಗಿರುವರು.



## ೩೯೮ ಕರಂಬಳ್ಳಿ ರಾಮಚಂದ್ರ ಐತಾಳ ಉಡುಪಿ

ಉಡುಪಿ ಅನಂತೇಶ್ವರ ಪಾಠಶಾಲೆಯಲ್ಲಿ ವೇದ, ಜ್ಯೋತಿಷ್ಯ, ಪೂರ್ವಾಪರ ಯಾಜ್ಞಿಕಗಳನ್ನು ಅಧ್ಯಯನ ಮಾಡಿದ ಶ್ರೀಕರಂಬಳ್ಳಿ ರಾಮಚಂದ್ರ ಐತಾಳರು ಈಗ ತಂತ್ರಯೋಗ ಕರ್ಮಬಂಧನ, ಪ್ರಾಯಶ್ಚಿತ್ತ ಹೋಮಾದಿಗಳನ್ನು ಮಾಡಿಸುತ್ತ ಪೌರೋಹಿತ್ಯ ವೃತ್ತಿಯನ್ನು ಮಾಡಿಕೊಂಡು ಇರುವರು.

## ೩೯೯ ಕೆ. ವಿಶ್ವಂಭರ ಉಪಾಧ್ಯಾಯ ಕುಂಭಾಸಿ



ಪಡುಬಿದ್ರೆ ಸಂಸ್ಕೃತ ಪಾಠಶಾಲೆಯಿಂದ ಸಂಸ್ಕೃತ ಎಂಟ್ರನ್ಸ್ ಆಗಿ ಕನ್ನಡ ವಿದ್ವಾನರಾದ ಶ್ರೀ ವಿಶ್ವಂಭರ ಉಪಾಧ್ಯಾಯರು ಋಗ್ವೇದ ಅಭ್ಯಾಸ ಮಾಡಿರುವರು. ಶ್ರೀ ಭಂಡಾರಕೇರಿ, ಶ್ರೀ ಪೇಜಾವರ ಶ್ರೀಗಳವರಲ್ಲಿ ಪ್ರಾಥಮಿಕ ವೇದಾಂತ ಗ್ರಂಥಗಳನ್ನು ವ್ಯಾಸಂಗ ಮಾಡಿದ್ದಾರೆ. ಕುಂಭಾಸಿಕೋಟಿ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಪಂಡಿತರಾಗಿದ್ದಾರೆ. ಕನ್ನಡದಲ್ಲಿ ಸಂಸ್ಕೃತಿ, ಧರ್ಮಗಳ ಬಗ್ಗೆ ಗ್ರಂಥಗಳನ್ನು ಬರೆದಿರುವರು. ಪ್ರಕಾಶನಗೊಂಡಿಲ್ಲ.

## ೪೦೦ ಗಿರಿ ಆಚಾರ್ಯರು ಮಂತ್ರಾಲಯ

ಶ್ರೀ ರಾಘವೇಂದ್ರ ಸ್ವಾಮಿ ಮಠ ಸದ್ಯದ ಪೀಠಾಧಿಪತಿಗಳಾದ ಶ್ರೀ ೧೦೮ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರ ಪೂರ್ವಾಶ್ರಮದ ಪುತ್ರರಾದ ಶ್ರೀ ಗಿರಿ ಆಚಾರ್ಯರು ಉಡುಪಿಯ ಸಗ್ರಿ ಹಯಗ್ರೀವಾಚಾರ್ಯರಲ್ಲಿ ನ್ಯಾಯ ಶಾಸ್ತ್ರದ ಗ್ರಂಥಗಳನ್ನು ಅಧ್ಯಯನ ಮಾಡಿ ವೇದಾಂತವನ್ನು ಶ್ರೀ ಶ್ರೀಗಳವರಲ್ಲಿ ಓದುತ್ತಲಿರುವರು.

ಇವರು ಒಳ್ಳೇ ತೈಲ ಬುದ್ಧಿಯವರಾಗಿದ್ದು ವ್ಯವಹಾರ ಕುಶಲರೂ, ವಾಗ್ಮಿಗಳೂ ಆಗಿರುವರು. ಇವರಿಗೆ ಭವ್ಯ ಭವಿಷ್ಯತ್ತು ಕಾದಿದೆ.

## ೪೦೧ ರಾಘವೇಂದ್ರಾಚಾರ್ಯ ಜ್ಯೋತಿ ಗುಡೇಬಲ್ಲೂರ



ಜ್ಯೋತಿಷ್ಯ, ಕಾವ್ಯಾದಿಗಳನ್ನು ಅಭ್ಯಾಸ ಮಾಡಿದ ಶ್ರೀ ರಾಘವೇಂದ್ರಾಚಾರ್ಯರು ಗುಡೇಬಲ್ಲೂರಿನಲ್ಲಿ ಜ್ಯೋತಿಷ್ಯ ಮತ್ತು ಕೃಷಿಯಿಂದ ಉಪಜೀವನ ಮಾಡುತ್ತಾರೆ.

ಇವರು ಕನ್ನಡದಲ್ಲಿ ರುಕ್ಮಿಣೀಶ ವಿಜಯ, ವೆಂಕಟೇಶ್ವರ ಶತಕಗಳನ್ನು ರಚಿಸಿರುತ್ತಾರೆ.

### ೪೦೨ ಗೋವಿಂದಾಚಾರ್ಯ ಬುರ್ಲಿ
### ಬಾಗಲಕೋಟ



ತಮ್ಮ ತಂದೆ ಗೋಪಾಲಾಚಾರ್ಯ ಮತ್ತು ಬುರ್ಲಿ ರಾಘವೇಂದ್ರಾಚಾರ್ಯರಲ್ಲಿ ವೇದ ಮತ್ತು ಪೂರ್ವಾಪರ ಯಾಜ್ಞಿಕವನ್ನು ಅಧ್ಯಯನ ಮಾಡಿದ ಶ್ರೀಗೋವಿಂದಾಚಾರ್ಯರು ಸ್ವಗ್ರಾಮವಾದ ಬಾಗಲಕೋಟೆಯಲ್ಲಿ ಪೌರೋಹಿತ್ಯ ಮಾಡಿಕೊಂಡಿದ್ದಾರೆ.

### ೪೦೩ ಹನುಮಂತಾಚಾರ್ಯ ಜೋಶಿ ಹುನಗುಂದ

ಹುನಗುಂದದ ಪ್ರಸಿದ್ಧ ಜೋಯಿಸರ ವಂಶದಲ್ಲಿ ಜನಿಸಿದ ಶ್ರೀ ಹನುಮಂತಾಚಾರ್ಯರು ಜ್ಯೋತಿಷ್ಯ, ಧರ್ಮಶಾಸ್ತ್ರಗಳಲ್ಲಿ ಗತಿಯುಳ್ಳವರಾಗಿದ್ದಾರೆ. ವೇದಾಂತದಲ್ಲಿ ಪ್ರವೇಶವುಳ್ಳ ಇವರು ಪುರಾಣ ಪ್ರವಚನಾದಿಗಳನ್ನು ಮಾಡುತ್ತ ಸ್ವಗ್ರಾಮದಲ್ಲಿ ವಾಸವಾಗಿದ್ದಾರೆ.

### ೪೦೪ ಬಿ. ಭೀಮರಾವ ದಾವಣಗೇರಿ



ಕೊರ್ಲಳ್ಳಿ ಕೃಷ್ಣಾಚಾರ್ಯರಲ್ಲಿ ಸಮಗ್ರ ವೇದಾಂತವನ್ನು ಅಧ್ಯಯನ ಮಾಡಿದ ಶ್ರೀ ಭೀಮರಾಯರು ಮಧ್ವ ಶಾಸ್ತ್ರದಲ್ಲಿ ಪಳಗಿದವರಾಗಿರುವರು. ಇವರು ಪದವೀಧರ ನಾಮಾಂಕಿತ ವಕೀಲರಾಗಿದ್ದರೂ ಬಿಡುವು ಮಾಡಿಕೊಂಡು ಶಾಸ್ತ್ರಾಧ್ಯಯನ ಮಾಡಿದ್ದು ಅಭಿಮಾನದ ಸಂಗತಿ.

ಶ್ರೀ ಭೀಮರಾಯರು ದಾವಣಗೇರಿಯಲ್ಲಿ ಸರ್ವಜ್ಞ ಮಂದಿರವೆಂಬ ಸಂಸ್ಥೆಯನ್ನು ಸ್ಥಾಪಿಸಿ ೩೦–೩೫ ವರ್ಷಗಳಿಂದ ಪಾಠ ಪ್ರವಚನ, ಉಪನ್ಯಾಸ, ಪುಸ್ತಕ ಪ್ರಕಾಶನಾದಿಗಳಿಂದ ಸತ್ ಸಿದ್ಧಾಂತ ಪ್ರಚಾರ ಮಾಡುತ್ತಲಿರುವರು.

ರಾಯರು ಕೃಷ್ಣಾರ್ಜುನ ಸಂವಾದ, ನಾಸ್ತಿಕ್ಯನಿರಾಕರಣ, ವೇದ ಪ್ರಾಮಾಣ್ಯ ಮುಂತಾದ ಶಾಸ್ತ್ರೀಯ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿರುವರು. ಶ್ರೀಜಗನ್ನಾಥ ರಾಯರ ತತ್ವ ಸುವ್ವಾಲಿಗಳಿಗೆ ಪ್ರೌಢ ಟೀಕೆಯನ್ನು ಬರೆದಿದ್ದಾರೆ. ಇವರ ಬಹುಮುಖ ಸೇವೆಗೆ ಮೆಚ್ಚಿ ಅ. ಭಾ. ಮಾ. ಮಹಾ ಮಂಡಳದವರು ಇವರಿಗೆ 'ಸಮಾಜ ಭೂಷಣ'ವೆಂಬ ಪ್ರಶಸ್ತಿಯನ್ನಿತ್ತಿದ್ದಾರೆ.

**೪೦೫ ಮಧ್ವ ಮೊಕಾಶಿ ಮುಂಬೈ**

ಮುಂಬೈಯಲ್ಲಿ ಇವರು ಶ್ರೀ ಮಾಹುಲಿ ಗೋಪಾಲಾಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದುತ್ತಲಿದ್ದಾರೆ.

**೪೦೬ ರಂಗಾಚಾರ್ಯ ಕರ್ನೂಲ ಮುಂಬೈ**

ಇವರು ಮಾಹುಲಿ ಗೋಪಾಲಾಚಾರ್ಯರಲ್ಲಿ ಎಲ್ಲ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ.

**೪೦೭ ಬಂಡಾಚಾರ್ಯ ಜಮದಗ್ನಿ ಮುಂಬೈ**

ಇವರು ಮೂಲತಃ ಬಾಗಲಕೋಟೆಯಲ್ಲಿದ್ದು ವೇದಾಧ್ಯಯನ ಮಾಡಿ ಈಗ ಮುಂಬೈಯಲ್ಲಿ ಪೌರೋಹಿತ್ಯ ಮಾಡಿಸುತ್ತಲಿರುವರು.

**೪೦೮ ಅನಂತಾಚಾರ್ಯ ಬಾಜೀಕರ ದೇವರಶೀಗೀಹಳ್ಳಿ**

ಬುರ್ಲಿ ರಾಘವೇಂದ್ರಾಚಾರ್ಯರಲ್ಲಿ ಅಧ್ಯಯನ ಮಾಡಿ ಶ್ರೀ ಅನಂತಾ ಚಾರ್ಯರು ಈಗ ಯಾಜ್ಞಿಕ ಮಾಡಿಸುತ್ತಲಿರುವರು.

**೪೦೯ ಎಚ್. ಸುಬ್ರಾಯಭಟ್ಟ ಉಡುಪಿ**



ಶ್ರೀ ಸುಬ್ರಾಯಭಟ್ಟರು ಜ್ಯೋತಿಷ್ಯ, ಯಾಜ್ಞಿಕ, ಕಾವ್ಯಾದಿಗಳನ್ನು ಅಧ್ಯಯನ ಮಾಡಿ ಈಗ ಶ್ರೀ ಪೇಜಾವರ ಮಠದಲ್ಲಿ ಪಾರಪತ್ಯದಾರರಾಗಿರುವರು.

ಇವರು ಪಂಚಾಂಗವನ್ನು ಸಿದ್ಧಮಾಡಿ ಪ್ರಸಿದ್ಧಿಸುತ್ತಾರೆ.



**೪೧೦ ಭಂಡಾರಕೇರಿ ಗುಂಡಾಚಾರ್ಯರು**

ವೇದ, ಯಾಜ್ಞಿಕಗಳನ್ನು ಅಭ್ಯಾಸ ಮಾಡಿದ ಶ್ರೀ ಗುಂಡಾಚಾರ್ಯರು ಶ್ರೀ ಪೇಜಾವರ ಮಠದಲ್ಲಿರುವರು.

## ೪೧೧ ಕೆ. ಲಕ್ಷ್ಮೀನಾರಾಯಣ ಸಾಮಗ ಕಲ್ಯಾಣಪುರ



ಉಡುಪಿ ಸಂಸ್ಕೃತ ಕಾಲೇಜದಿಂದ ಶಿರೋಮಣಿಯಾದ ಶ್ರೀಲಕ್ಷ್ಮೀನಾರಾಯಣ ಸಾಮಗರು ಉಡುಪಿ ಚಂದ್ರಿಕಾ ಪಾಠಶಾಲೆಯಲ್ಲಿ ಸುಧಾದಿ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ್ದಲ್ಲದೆ ಜ್ಯೋತಿಷ್ಯ, ಆಯುರ್ವೇದ, ನಾಗಮಂಡಲ ಯಾಜ್ಞಿಕ ಭಾಗಗಳನ್ನು ಅವಗತ ಮಾಡಿಕೊಂಡಿದ್ದಾರೆ.

ಕಮಲಬಾಂಧವ ಜ್ಯೋತಿಷ್ಯ ಪಾಠಶಾಲೆಯಲ್ಲಿ ಜ್ಯೋತಿಷ್ಯಪಾಠ ಹೇಳುತ್ತಾರೆ.

## ೪೧೨ ಪುತ್ತಿಗೆ ಶ್ರೀನಿವಾಸಭಟ್ಟ ಕಡೂರ



ಉಡುಪಿ ಸಂಸ್ಕೃತ ಕಾಲೇಜದಲ್ಲಿ ಅಧ್ಯಯನ ಮಾಡಿ ಸಂಸ್ಕೃತ ನ್ಯಾಯಶಿರೋಮಣಿ, ಕನ್ನಡ ವಿದ್ವಾನ್, ಹಿಂದೀರತ್ನ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಶ್ರೀನಿವಾಸಭಟ್ಟರು ಶ್ರೀ ಪೇಜಾವರ ಶ್ರೀಗಳವರಲ್ಲಿ ನ್ಯಾಯಶಾಸ್ತ್ರದ ಪ್ರೌಢ ಗ್ರಂಥಗಳು ಹಾಗೂ ಸುಧಾ ವ್ಯಾಸಂಗ ಮಾಡುತ್ತಲಿದ್ದಾರೆ. ಈಗ ಕಡೂರ ಉನ್ನತ ಪ್ರೌಢ ಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

## ೪೧೩ ತ್ರಿವಿಕ್ರಮ ಕೃಷ್ಣಾಚಾರ್ಯರು ಆದವಾನಿ



ತ್ರಿವಿಕ್ರಮ ವಿದ್ವದ್ವಂಶದಲ್ಲಿ ಜನಿಸಿದ ಶ್ರೀ ಕೃಷ್ಣಾಚಾರ್ಯರು ವೇದಾಂತವನ್ನು ಓದಿ ಸದಾಚಾರ ಸಂಪನ್ನರಾಗಿ ಆದವಾನಿಯಲ್ಲಿ ವಾಸವಾಗಿರುವರು.

### ೪೧೪ ಮಾಧವ ಉಪಾಧ್ಯಾಯ ಮದ್ರಾಸ



ವೇದ, ಸಾಹಿತ್ಯ ಯಾಜ್ಞಿಕ, ಜ್ಯೋತಿಷ್ಯಗಳನ್ನು ಅಭ್ಯಾಸಮಾಡಿದ ಮಾಧವಉಪಾಧ್ಯಾಯರು ದೇವತಾ ಪ್ರತಿಷ್ಠೆ, ಮುಂತಾದವುಗಳನ್ನು ಮಾಡಿಸುವದರಲ್ಲಿ ಪಳಗಿದವರಾಗಿದ್ದಾರೆ.

ಧರ್ಮಭೂಷಣ ಕೆ. ಸೀತಾರಾಮರಾಯರ ಮನೆಯ ಪುರೋಹಿತರಾಗಿ 'ರಾಜಪುರೋಹಿತ 'ರೆಂಬ ಪ್ರಶಸ್ತಿ ಪಡೆದಿದ್ದಾರೆ.

### ೪೧೫ ಲಕ್ಷ್ಮೀನಾರಾಯಣಾಚಾರ್ಯ ಸಗರಿ



ಶ್ರೀ ಲಕ್ಷ್ಮೀನಾರಾಯಣಾಚಾರ್ಯರು ಉಡುಪಿ ಸಂಸ್ಕೃತ ಪಾಠಶಾಲೆಯಿಂದ ಶಿರೋಮಣಿಯಾಗಿ ಶ್ರೀ ಶ್ರೀಭಂಡಾರಕೇರಿ ಶ್ರೀಪಾದಂಗಳವರಲ್ಲಿ ವೇದಾಂತ ಅಧ್ಯಯನ ಮಾಡಿರುವರು.

ಈಗ ಶ್ರೀ ಭಂಡಾರಕೇರಿ ಮಠದ ಮಾಧ್ವ ರಾದ್ಧಾಂತ ಸಭೆಯ ಪ್ರಚಾರಕರಾಗಿ ದೇಶದಲ್ಲಿ ಸಂಚಾರಮಾಡಿ ಸಭೆಗೆ ಹಣ ಸಂಗ್ರಹಿಸುತ್ತಲಿದ್ದಾರೆ.

### ೪೧೬ ಹುಣಸಗೀ ಪಾಂಡುರಂಗಾಚಾರ್ಯರು ಮೈಸೂರು



ಜ್ಯೋತಿಷ್ಯ, ಸಾಹಿತ್ಯಗಳನ್ನು ಅಭ್ಯಾಸ ಮಾಡಿದ ಶ್ರೀ ಪಾಂಡುರಂಗಾಚಾರ್ಯರಿಗೆ ವೇದಾಂತದಲ್ಲಿ ಪ್ರವೇಶವಿದೆ.

ಈಗ ಮೈಸೂರಿನ ಅರಮನೆ ಆಸ್ಥಾನ ವಿದ್ವಾಂಸರಾಗಿ ಒಳ್ಳೇ ಜ್ಯೋತಿಷಿಗಳೆಂದು ಪ್ರಸಿದ್ಧರಾಗಿದ್ದಾರೆ.

### ೪೧೭ ಡಾ. ಕೆ. ಎಂ. ಕೃಷ್ಣರಾವ ಬೆಂಗಳೂರು

ಕ್ಯಾಲಕೊಂಡದ ಶ್ರೀ ಕೃಷ್ಣರಾಯರು ಎಂ. ಎ. ಪದವೀಧರರಾಗಿದ್ದು ಮಾಧ್ವ ವೇದಾಂತವನ್ನು ಅವಗತ ಮಾಡಿಕೊಂಡಿದ್ದಾರೆ. ದಾಸ ಸಾಹಿತ್ಯದಲ್ಲಿ ಗತಿ ಪ್ರಗತಿ ಗಳಿವೆ. ಶ್ರೀ ಜಗನ್ನಾಥ ದಾಸರನ್ನು ಕುರಿತು ಗ್ರಂಥವನ್ನು ಬರೆದು ಪಿ. ಎಚ್. ಡಿ. ಪದವಿಯನ್ನು ಪಡೆದಿದ್ದಾರೆ.

## ೪೧೮ ಜಯತೀರ್ಥಾಚಾರ್ಯರು ಬೆಂಗಳೂರು



ಪುರಾಣ ಹೇಳುವ ಕೌಶಲವು ಶ್ರೀ ಜಯತೀರ್ಥಾಚಾರ್ಯರಿಗೆ ಆನುವಂಶಿಕ ಬಳುವಳಿಯಾಗಿ ಬಂದಿದೆ. ಇವರ ತಂದೆ ನರಸಿಂಹಾಚಾರ್ಯರೂ ಪ್ರಸಿದ್ಧ ಪುರಾಣಿಕರಾಗಿದ್ದರು.

ಶ್ರೀ ಜಯತೀರ್ಥಾಚಾರ್ಯರ ಭಾಗವತ ಪ್ರವಚನ ಕೇಳುವದೇ ಒಂದು ಸೊಗಸು.

ಇಡೀ ಭಾಗವತವನ್ನು ವಿಜಯಧ್ವಜೀಯ ಮುಂತಾದ ಅನೇಕ ಟೀಕಾ, ಟಿಪ್ಪಣಿ ಸಹಿತವಾಗಿ ಮುಖೋದ್ಗತವಾಗಿ ಹೇಳುವದು ಆಚಾರ್ಯರ ವೈಶಿಷ್ಟ್ಯ.

ಮಾತೃ ಭಾಷೆ ಕನ್ನಡದಂತೆ ತೆಲಗು, ತಮಿಳು, ಮಲಿಯಾಳ, ಸಂಸ್ಕೃತ, ಹಿಂದಿ ಮುಂತಾದ ಭಾಷೆಗಳಲ್ಲಿ ನಿರರ್ಗಳವಾಗಿ ಗಂಟೆಗಟ್ಲೆ ಉಪನ್ಯಾಸ ಮಾಡಬಲ್ಲರು.

ಇವರು ದಕ್ಷಿಣೋತ್ತರ ಭಾರತ ದೇಶದಲ್ಲಿ ಸಂಚಾರ ಮಾಡಿ ಭಾಗವತ ಧರ್ಮ ಪ್ರಚಾರ ಮಾಡಿದ್ದಾರೆ. ಅನೇಕ ರಾಜಮಹಾರಾಜರು, ಮಠಮಾನ್ಯಗಳು, ಲೌಕಿಕ, ವೈದಿಕ ಪಂಡಿತರುಗಳಿಂದ ಉಪನ್ಯಾಸ ರತ್ನಾಕರ ಮುಂತಾದ ಬಿರುದು, ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಇವರು ತಮ್ಮ ಎಲ್ಲ ಮಕ್ಕಳಿಗೆ ಸಂಸ್ಕೃತವನ್ನು ಮನೆಯಲ್ಲಿಯೇ ಅಭ್ಯಾಸ ಮಾಡಿಸಿದ್ದಾರೆ.



## ೪೧೯ ಹನುಮಂತಾಚಾರ್ಯ ಜಂಬಿಗಿ ಅಥಣಿ

ಹನುಮಂತಾಚಾರ್ಯರು ಪುರಾಣ ಪ್ರವಚನಾದಿಗಳಿಂದ ಯಾವಾಗಲೂ ಸಂಚಾರ ಮಾಡುತ್ತ ಭಾಗವತ ಧರ್ಮವನ್ನು ಪ್ರಚಾರ ಮಾಡುತ್ತಿರುವರು.

## ೪೨೦ ಚೀಮನಹಳ್ಳಿ ರಘುನಾಥಾಚಾರ್ಯ ಬೆಂಗಳೂರು



ತಮ್ಮ ತಂದೆ ಕೃಷ್ಣಾಚಾರ್ಯರಲ್ಲಿ ವೇದಾಂತವನ್ನು ಅಭ್ಯಾಸ ಮಾಡಿದ ಶ್ರೀ ರಘುನಾಥಾಚಾರ್ಯರು ಬಿ. ಎ ಪದವೀಧರರಾಗಿ ಸರಕಾರಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ.

'ಸರ್ವಜ್ಞ ಸಂದೇಶ' ಎಂಬ ಮಾಸಿಕ ಪತ್ರಿಕೆಯ ಮುಖಾಂತರ ಬಹಳ ವರ್ಷ ಶ್ರೀ ಮಧ್ವಾಚಾರ್ಯರ ಸಿದ್ಧಾಂತ ಪ್ರಚಾರ ಮಾಡಿದರು. ಇವರು ಸರಸ ಉಪನ್ಯಾಸಕರು. ಇವರು ವೇದಾಂತದಲ್ಲಿಯ ಅನೇಕ ಪುಸ್ತಕಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. ಇವರು ಬರೆದ ಪೌರಾಣಿಕ ಗ್ರಂಥಗಳು ಜನಪ್ರಿಯವಾಗಿವೆ. ಮನೆಯಲ್ಲಿ ನಿತ್ಯವೂ ಶಿಷ್ಯರಿಗೆ ವೇದಾಂತ ಪಾಠ ಹೇಳುತ್ತ ನಿರಂತರ ಶ್ರೀ ಮಧ್ವಾಚಾರ್ಯರ ಸೇವೆಯನ್ನು ಮಾಡುತ್ತ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

## ೪೨೧ ಕೆ. ಕೃಷ್ಣ ಉಡುಪ ಕೋಟೇಶ್ವರ



ಇವರು ಕಾರ್ಕಳ ಭುವನೇಂದ್ರ ಸಂಸ್ಕೃತ ಕಾಲೇಜ, ಉಡುಪಿ ಸಂಸ್ಕೃತ ಕಾಲೇಜಗಳಿಂದ ಎಂಟ್ರನ್ಸ, ಜ್ಯೋತಿಷ್ಯ ಶಿರೋಮಣಿಗಳಲ್ಲಿ ಉತ್ತೀರ್ಣರಾಗಿರುವರಲ್ಲದೆ ಕನ್ನಡ ವಿದ್ವಾನ್ ಎಸ್. ಎಸ್. ಎಲ್. ಸಿ. ಗಳಲ್ಲಿಯೂ ತೇರ್ಗಡೆಯಾಗಿರುವರು. ಪ್ರಾಥಮಿಕ ದ್ವೈತವೇದಾಂತ ಗ್ರಂಥಗಳ ಅಭ್ಯಾಸ ಮಾಡಿದ್ದಾರೆ. ಈಗ ಕೋಟೇಶ್ವರ ಬೋರ್ಡ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ. ಮನೆಯಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠ ಹೇಳುತ್ತಲಿದ್ದಾರೆ.

## ೪೨೨ ಶ್ರೀನಿವಾಸಾಚಾರ್ಯ ನಾಗರಳ್ಳಿ ಮುಂಬೈ

ಇವರು ಮಾಹುಲಿ ಗೋಪಾಲಾಚಾರ್ಯರಲ್ಲಿ ಸುಧಾ ವ್ಯಾಸಂಗ ಮಾಡುತ್ತಲಿದ್ದು ಕಲಕತ್ತೆಯ ಸಂಸ್ಕೃತ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವರು. ಹಿಂದಿಯಲ್ಲಿಯೂ ಪಳಗಿದವರಾಗಿದ್ದಾರೆ.

# ಮಾಧ್ವ ಗೌಡೀಯ ಸಂಪ್ರದಾಯಾಚಾರ್ಯರೂ ಹಾಗೂ ಪಂಡಿತರು

### ೪೨೩ ತ್ರಿದಂಡಿಸ್ವಾಮಿ ಭಕ್ತಕೇವಲ ಜೌಡಲೋಮಿ ಮಹಾರಾಜ ನದಿಯಾ

ನದಿಯಾದ ಮಾಧ್ವ ಗೌಡೀಯ ಸಂಪ್ರದಾಯದ ಆಚಾರ್ಯರಿದ್ದು ಮಹಾ ಪಂಡಿತರಾಗಿದ್ದಾರೆ.

### ೪೨೪ ತ್ರಿದಂಡಿಸ್ವಾಮಿ ಭಕ್ತಿವಿಲಾಸತೀರ್ಥ ಮಹಾರಾಜ ಮಾಯಾಪುರ (ನದಿಯಾ)

ಶ್ರೀ ಚೈತನ್ಯ ಸಂಪ್ರದಾಯದ ಮಾಧ್ವ ಗೌಡೀಯ ಮಠದ ಸದ್ಯದ ಪೀಠಾಧಿಪತಿಗಳಾದ ಶ್ರೀ ಭಕ್ತಿವಿಲಾಸ ತೀರ್ಥರು ಪ್ರತಿಭಾಸಂಪನ್ನ ಮಹಾ ವಿದ್ವಾಂಸರಾಗಿರುವರು. ಈಗ ಬಹಳ ವೃದ್ಧರಾಗಿರುವರು.

### ೪೨೫ ರಾಧಾಗೋವಿಂದನಾಥ ಕಲಕತ್ತಾ

ಇವರು ಎಂ. ಎ. ಪಿ.ಎಚ್.ಡಿ. ಡಿಲಿಟ್ ಪದವೀಧರರಾಗಿ ಕಾವ್ಯ. ವ್ಯಾಕರಣ ಪುರಾಣ ತೀರ್ಥ, ಭಾಗವತ ಶಾಸ್ತ್ರಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. ಅನೇಕ ಚೈತನ್ಯ ಸಂಪ್ರದಾಯದ ಗ್ರಂಥಗಳ ಹಾಗೂ ಪತ್ರಿಕೆಗಳ ಸಂಪಾದಕರೂ, ಪ್ರಕಾಶಕರೂ ಆಗಿರುವರು.

### ೪೨೬ ಮಹಾಮಹೋಪಾಧ್ಯಾಯ ಗೋಪೀನಾಥ ಕವಿರಾಜ ವಾರಣಾಸಿ

ವಾರಣಾಸಿಯ ಗವರ್ನಮೆಂಟ ಸಂಸ್ಕೃತ ಕಾಲೇಜದ ಪ್ರಿನ್ಸಿಪಾಲರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿರುವರು. ಇವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಪಾಠ–ಪ್ರವಚನ ಮಾಡುತ್ತ ವಾಸವಾಗಿದ್ದಾರೆ.

### ೪೨೭ ಮಹಾಮಹೋಪಾಧ್ಯಾಯ ಗೋಸ್ವಾಮಿ ದಾಮೋದರಾಚಾರ್ಯ ವೃಂದಾವನ

ಕಾಶಿಯಲ್ಲಿ ಮಹಾ ಪಂಡಿತರೆಂದು ಪ್ರಸಿದ್ಧರಾಗಿ ನೂರಾರು ಜನರಿಗೆ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದ ಶ್ರೀದಾಮೋದರಾಚಾರ್ಯರು ಷಡ್ದರ್ಶನಾಧ್ಯಾಪಕರಾಗಿ ಕೆಲಸ ಮಾಡಿ ನಿವೃತ್ತರಾಗಿ ವೃಂದಾವನದಲ್ಲಿ ವಾಸವಾಗಿದ್ದಾರೆ. ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

## ೪೨೮ ಪ್ರಾಣಕಿಶೋರ ಗೋಸ್ವಾಮಿ ನವದ್ವೀಪ

ಶ್ರೀ ಭಾಗವತಕ್ಕೆ ಟೀಕೆಯನ್ನು ಬರೆದ ಶ್ರೀ ಪ್ರಾಣಕಿಶೋರ ಗೋಸ್ವಾಮಿಗಳು ಎಂ. ಎ. ಪದವೀಧರರಾಗಿದ್ದಾರೆ.

## ೪೨೯ ಹರಿದಾಸಜಿ ಮಹಾರಾಜ ವೃಂದಾವನ

ಇವರು ನ್ಯಾಯ, ವ್ಯಾಕರಣ, ಮೀಮಾಂಸಾ, ವೇದಾಂತ ವಿಷಯಗಳಲ್ಲಿ ಪರಿಣತರಾಗಿ ಆಚಾರ್ಯ ಪದವಿಯನ್ನು ಪಡೆದಿದ್ದಾರೆ.

ಈಗ ವೃಂದಾವನದಲ್ಲಿ ಪಾಠ ಪ್ರವಚನ ಮಾಡುತ್ತ ವಾಸವಾಗಿದ್ದಾರೆ.

## ೪೩೦ ದಾಮೋದರದಾಸ ಟಾಟೀವಾಲೆ ಜಯಪುರ

ಮಾಧ್ವ ಗೌಡೀಯ ಸಂಪ್ರದಾಯದ ಅನೇಕ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ. ಇವರು ಪಂಡಿತರಾಗಿದ್ದು ಜಯಪುರದ ರಾಧಾ ದಾಮೋದರ ಮಂದಿರದಲ್ಲಿ ವಾಸವಾಗಿರುವರು.

## ೪೩೧ ನಾರಾಯಣಾಚಾರ್ಯ ಕಿತ್ತೂರ

ಬೆಳಗಾವಿಯಲ್ಲಿ ಪೌರೋಹಿತ್ಯವನ್ನು ಮಾಡಿಸುತ್ತಲಿರುವ ಶ್ರೀ ನಾರಾಯಣಾಚಾರ್ಯರು ಬುರ್ಲಿ ಆಚಾರ್ಯರಲ್ಲಿ ಅಧ್ಯಯನ ಮಾಡಿದ್ದಾರೆ.

## ೪೩೨ ರಾಮಾಚಾರ್ಯ ಕಟ್ಟಿ ಯಮಕನಮರಡಿ

ಶ್ರೀ ನರಸಿಂಹ ಪಾಠಶಾಲೆಯಲ್ಲಿ ಅಧ್ಯಯನ 'ಮಾಡಿದ ಶ್ರೀ ರಾಮಾಚಾರ್ಯರು ಬೆಳಗಾವಿ ಜಿಲ್ಲೆಯ ಯಮಕನ ಮರಡಿಯಲ್ಲಿ ಪುರೋಹಿತರಾಗಿರುವರು.

## ೪೩೩ ನರಸಿಂಹಾಚಾರ್ಯ ಅಣ್ಣಿಗೇರಿ ಹುಬ್ಬಳ್ಳಿ

ಶ್ರೀಮುಗಟಖಾನ ಹುಬ್ಬಳ್ಳಿ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿದ ಶ್ರೀ ನರಸಿಂಹಾಚಾರ್ಯರು ಹುಬ್ಬಳ್ಳಿಯಲ್ಲಿ ಯಾಜ್ಞಿಕರಾಗಿದ್ದಾರೆ.

## ೪೩೪ ಪ್ರಲ್ಹಾದಾಚಾರ್ಯ ಪೂಜಾರ ಮುಗಟಖಾನ ಹುಬ್ಬಳ್ಳಿ

ಹುಬ್ಬಳ್ಳಿ ಕಟ್ಟಿಯ ಶ್ರೀ ನರಸಿಂಹ ದೇವರ ಅರ್ಚಕರಾದ ಪ್ರಲ್ಹಾದಾಚಾರ್ಯರು ಬುರ್ಲಿ ಆಚಾರ್ಯರಲ್ಲಿ ಯಾಜ್ಞಿಕ ಅಧ್ಯಯನ ಮಾಡಿ ಸ್ವಗ್ರಾಮದಲ್ಲಿ ವಾಸಿಸುತ್ತಿದ್ದಾರೆ.

**೪೩೫ ಹಾವನೂರ ಬಿಂದಾಚಾರ್ಯ**
**ಧಾರವಾಡ**



ಮೈಸೂರು ಸಂಸ್ಕೃತ ಪಾಠಶಾಲೆಯಲ್ಲಿಯೂ ವೈ. ವಾ. ಗಲಗಲಿ ಮಧ್ವಾಚಾರ್ಯರಲ್ಲಿಯೂ ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದ ತೀರ್ಥ ಶ್ರೀಪಾದಂಗಳವರಲ್ಲಿಯೂ ಇವರು ಸಾಹಿತ್ಯ, ವೇದಾಂತ ಅಧ್ಯಯನ ಮಾಡಿ ಸುಧಾದಿ ಗ್ರಂಥ ಮಂಗಳ ಮಾಡಿದ್ದಾರೆ.

**೪೩೬ ಜಯತೀರ್ಥಾಚಾರ್ಯ ಅಡವಿ**
**ಕೂಸನೂರ**



ಇವರು ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ವೇದಾಂತ ಅಧ್ಯಯನ ಮಾಡಿ ಈಗ ಸುಧಾ ಗ್ರಂಥ ಓದುತ್ತಲಿದ್ದಾರೆ.

**೪೩೭ ರಾಮಾಚಾರ್ಯ ಉಪಾಧ್ಯಾಯ ಕೂಸನೂರು**



ಕೂಸನೂರಿನವರಾದ ಶ್ರೀ ರಾಮಾಚಾರ್ಯರು ಪ್ರಾಥಮಿಕ ಕಾವ್ಯಾದಿ ವ್ಯಾಸಂಗ ಮಾಡಿಕೊಂಡು ಉತ್ತರಾದಿ ಮಠಕ್ಕೆ ಹೋಗಿ ಅಲ್ಲಿ ತಮ್ಮ ಅಧ್ಯಯನವನ್ನು ಮುಂದುವರಿಸಿದರು. ಪ್ರಕೃತ ಇವರು ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಲ್ಲಿ ಶ್ರೀಮನ್ನ್ಯಾಯಸುಧಾ ಓದುತ್ತಲಿದ್ದಾರೆ.

**೪೩೮ ವಿದ್ವಾನ್. ಎಸ್. ಎನ್. ರಾಮಚಂದ್ರಾಚಾರ್ಯ ಮೈಸೂರು**



ಮೈಸೂರಿನ ಸಂಸ್ಕೃತ ಮಹಾರಾಜಾ ಕಾಲೇಜದಲ್ಲಿ ಆಗಮ ಅಧ್ಯಾಪಕರಾಗಿ ಕೆಲಸ ಮಾಡುತ್ತಲಿರುವ ಶ್ರೀರಾಮಚಂದ್ರಾಚಾರ್ಯರು ಸಾಹಿತ್ಯ, ದ್ವೈತ ವೇದಾಂತಗಳನ್ನು ಅವಗತ ಮಾಡಿಕೊಂಡು ಆಗಮ ವಾಙ್ಮಯದಲ್ಲಿ ವಿಶೇಷ ಪರಿಶ್ರಮಪಟ್ಟಿದ್ದಾರೆ.

ಆಗಮತ್ರಯ ವಿದ್ವಾಂಸರಾದ ಇವರು ಅನೇಕ ವಿದ್ಯಾರ್ಥಿಗಳಿಗೆ ಪಂಚರಾತ್ರಾದ್ಯಾಮಗಳ ಮಂತ್ರ, ತಂತ್ರ, ವಿಧಿ, ವಿಧಾನ, ರಹಸ್ಯ, ಸ್ವಾರಸ್ಯಗಳನ್ನು ತಿಳಿಸಿಕೊಡುತ್ತಾರೆ.

**೪೩೯ ಕಾಪು ಕೃಷ್ಣಾಚಾರ್ಯರು**



ಕಾಶಿಯಲ್ಲಿ ಸಾಹಿತ್ಯ, ಜ್ಯೋತಿಷ್ಯಗಳನ್ನು ಅಧ್ಯಯನ ಮಾಡಿದ ಶ್ರೀಕೃಷ್ಣಾಚಾರ್ಯರಿಗೆ ವೇದಾಂತದಲ್ಲಿಯೂ ಪರಿಚಯವಿದೆ. ಪಂಚಾಂಗವನ್ನು ಕೆಲವು ವರ್ಷ ಮಾಡುತ್ತಿದ್ದರು.

ಈಗ ಶ್ರೀ ಪೇಜಾವರ ಮಠದ ಸಂಚಾರಿ ದಿವಾಣರಾಗಿರುವರು.

**೪೪೦ ಶ್ರೀನಿವಾಸಾಚಾರ್ಯ**
**ಕೋದಂಡಿ ಕೂಸನೂರು**



ಮೈಸೂರು ಮಹಾರಾಜಾ ಪಾಠಶಾಲೆಯಲ್ಲಿ ಇವರು ತರ್ಕ ವೇದಾಂತವನ್ನು ಅಧ್ಯಯನ ಮಾಡಿದ್ದಾರೆ. ಶ್ರೀಸತ್ಯಧ್ಯಾನ ತೀರ್ಥರಲ್ಲಿ ವೇದಾಂತದ ಉದ್ಗ್ರಂಥಗಳನ್ನು ಓದಿದ ಇವರು ಉತ್ತರಾದಿ ಮಠಾಧೀಶರ ಕೃಪಾಪಾತ್ರರಾಗಿ ಸದಾಚಾರದಿಂದ ಕೂಸನೂರಲ್ಲಿ ವಾಸವಾಗಿದ್ದಾರೆ.

### ೪೪೧ ಗೋಪಾಲಕೃಷ್ಣಾಚಾರ್ಯ ಅಡವಿ ಕೂಸನೂರ



ಸುಪ್ರಸಿದ್ಧ ಅಡವಿಸ್ವಾಮಿಗಳ ಮನೆತನದವರಾದ ಶ್ರೀಗೋಪಾಲಕೃಷ್ಣಾಚಾರ್ಯರು ಪಂಡಿತೋತ್ತಮ ಪರಿವ್ರಾಟ್ ಪರಿವೃಢರಾದ ಪರಮಪೂಜ್ಯ ಶ್ರೀ ಸತ್ಯಧ್ಯಾನರಲ್ಲಿ ವೇದಾಂತ ವ್ಯಾಸಂಗವನ್ನು ಮಾಡಿದ್ದಾರೆ. ತಮ್ಮ ಮನೆತನದ ಸಂಪ್ರದಾಯದಂತೆ ಸದಾಚಾರಸಂಪನ್ನರಾಗಿ ವೈರಾಗ್ಯದಿಂದ ಇರುವ ಇವರು ಮಾದನೂರಿನ ಶ್ರೀ ಅಡವೀವಿಷ್ಣುತೀರ್ಥ ಶ್ರೀಗಳ ಆರಾಧನೆ ಮಾಡುತ್ತ ಆ ಕಾಲಕ್ಕೆ ಬಂದ ಅತಿಥಿ ಅಭ್ಯಾಗತರಿಗೆ ಸಕಲ ವಿಧ ಸೌಕರ್ಯವನ್ನು ಕಲ್ಪಿಸಿಕೊಡುತ್ತಾರೆ.

### ೪೪೨ ಶ್ರೀನಿವಾಸಾಚಾರ್ಯ ತಾಸಗಾವಿ ಸೀತಿಮನಿ

ಸೀತಿಮನೆಯಲ್ಲಿ ಪೌರೋಹಿತ್ಯವನ್ನು ಮಾಡಿಸುತ್ತಲಿರುವ ಶ್ರೀನಿವಾಸಾಚಾರ್ಯರು ಬಾಗಲಕೋಟ ಆನಂದತೀರ್ಥ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

### ೪೪೩ ರಾಯಸಂ ತಿರುಮಲರಾವ ಹರಪನಹಳ್ಳಿ

ಹರಪನಹಳ್ಳಿಯಲ್ಲಿರುವ ಶ್ರೀ ರಾಯಸಂ ತಿರುಮಲರಾಯರು ಲೌಕಿಕದಲ್ಲಿ ಮಾಮಲೇದಾರ (ತಹಸೀಲ) ದಾರರಾಗಿ ಕೆಲಸ ಮಾಡಿದರೂ ಬಾಲ್ಯದಿಂದ ವೇದಾಂತ ಅಭಿರುಚಿ ಹಾಗೂ ಶಾಸ್ತ್ರಾಭಿನಿವೇಶಗಳು ಅವರ ಬೆನ್ನು ಬಿಟ್ಟಿಲ್ಲ. ವೃತ್ತ್ಯರ್ಥವಾಗಿ ಸರಕಾರದ ಉನ್ನತ ಹುದ್ದೆಯಲ್ಲಿದ್ದರೂ ಅವರು ತಮ್ಮ ಸಂಪ್ರದಾಯಕ್ಕೆ ಅನುಗುಣವಾಗಿ ಶಾಸ್ತ್ರಜ್ಞಾನದ ಹಂಬಲವನ್ನು ಹೊತ್ತು ಶ್ರೀ ಚಿಕ್ಕೇರೂರ ಗೋವಿಂದಾಚಾರ್ಯರೇ ಮೊದಲಾದವರಲ್ಲಿ ಪ್ರಮಾಣ, ಪ್ರಮೇಯ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಇವರು ನಿವೃತ್ತರಾದ ಬಳಿಕವೂ ತಮ್ಮ ವ್ಯಾಸಂಗವನ್ನು ಮುಂದುವರಿಸಿ ಕನ್ನಡ ಮತ್ತು ಇಂಗ್ಲೀಷಿನಲ್ಲಿ ಅನೇಕ ಉಪಯುಕ್ತ ತಾತ್ವಿಕ ಲೇಖಗಳನ್ನು ಬರೆಯುತ್ತಾರೆ.

### ೪೪೪ ರಾಮಾಚಾರ್ಯ ಬಾಜೀಕರ ಬೆಳಗಾವಿ

ಬುಲಿ ರಾಘವೇಂದ್ರಾಚಾರ್ಯರಲ್ಲಿ ಅಧ್ಯಯನ ಮಾಡಿ ಶ್ರೀರಾಮಾಚಾರ್ಯರು ಬೆಳಗಾವಿಯಲ್ಲಿ ಪೌರೋಹಿತ್ಯ ಮಾಡಿಸುತ್ತಾರೆ.

## ೪೪೫ ಶ್ಯಾಮರಾವ ಮನೋಳಿ ಬೆಳಗಾವಿ

ಬೆಳಗಾವಿಯಲ್ಲಿ ಬಿ. ಎ. ಎಲ್. ಎಲ್. ಬಿ. ವಕೀಲರಾಗಿ ವ್ಯವಹಾರ ಮಾಡುತ್ತಲಿರುವ ಶ್ರೀ ಶ್ಯಾಮರಾವ ಮನೋಳಿಯವರು ಶ್ರೀ ಗಲಗಲಿ ರಾಮಾಚಾರ್ಯರಲ್ಲಿ ವೇದಾಂತ ವ್ಯಾಸಂಗ ಮಾಡಿದ್ದಾರೆ. ಸೈದ್ಧಾಂತಿಕ ವಿಷಯಗಳನ್ನು ಅಧಿಕರಿಸಿ ಅನೇಕ ಲೇಖಗಳನ್ನು ಬರೆಯುತ್ತಿದ್ದಾರೆ.

## ೪೪೬ ಶೇಷಾಚಾರ್ಯ ಕಟ್ಟಿ ಬೆಳಗಾವಿ

ವಕೀಲಿ ವ್ಯವಸಾಯದಲ್ಲಿದ್ದರೂ ಶ್ರೀ ಶೇಷಾಚಾರ್ಯ ಕಟ್ಟಿಯವರು ಗಲಗಲಿ ರಾಮಾಚಾರ್ಯರಲ್ಲಿ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಶ್ರೀ ಕಟ್ಟಿಯವರಿಗೆ ವಿಶೇಷ ಗತಿ ಪ್ರಗತಿ ಪ್ರಮತಿಗಳುಂಟು. ಇವರು ‘ ಕನಕದಾಸರು ’ ಎಂಬ ಸಂಶೋಧನಾತ್ಮಕವಾದ ಪ್ರಬಂಧವನ್ನು ಬರೆದಿದ್ದು ಅದು ದಾಸ ಸಾಹಿತ್ಯದಲ್ಲಿ ಹೆಚ್ಚಿನ ಅಧ್ಯಯನ ಮಾಡುವವರಿಗೆ ಮಾರ್ಗದರ್ಶಕವಾದ ಕೈದೀವಿಗೆಯಾಗಿದೆ.

## ೪೪೭ ವಾಯಿ ಕೃಷ್ಣಾಚಾರ್ಯ ಬೆಂಗಳೂರು

ಪಂಡಿತ ವಾಯಿ ನಾರಾಯಣಾಚಾರ್ಯರ ಮಕ್ಕಳಾದ ವಾಯಿ ಕೃಷ್ಣಾಚಾರ್ಯರು ಸಾಹಿತ್ಯದಲ್ಲಿ ನಿಷ್ಣಾತರು. ವೇದಾಂತದಲ್ಲಿ ಅಭಿಜ್ಞರು. ಪುರಾಣದಲ್ಲಿ ಪಂಡಿತರು. ಪ್ರಮೇಯದಲ್ಲಿ ಪಾರಂಗತರು. ಲೌಕಿಕದಲ್ಲಿ ಪಳಗಿದವರು. ದಾಸಸಾಹಿತ್ಯದಲ್ಲಿಯೂ ವಿಶೇಷ ಆಸ್ಥೆ, ಅಭಿನಿವೇಶ ಮತ್ತು ಪ್ರಭುತ್ವವುಳ್ಳವರು. ಈ ಎಲ್ಲ ವಿವಿಧ ಶಾಸ್ತ್ರ ಕ್ಷೇತ್ರ ಪಾಂಡಿತ್ಯ ಸಾಹಿತ್ಯದಿಂದ ಉಪ್ರೋಜ್ವಲಿತವಾದ ಅವರ ಪುರಾಣ ಪ್ರವಚನಗಳು ಉತ್ತರ ಕರ್ನಾಟಕದಲ್ಲಿಯೂ ಮೈಸೂರ ಪ್ರಾಂತದಲ್ಲಿಯೂ ಒಳ್ಳೇ ಹೆಸರನ್ನೂ ಹಣವನ್ನೂ ಹಿಂದೆ ಒಂದು ಕಾಲಕ್ಕೆ ತಂದುಕೊಟ್ಟವು. ವಾಯಿ ಆಚಾರ್ಯರ ಪುರಾಣವೆಂದರೆ ಸಹಸ್ರಸಹಸ್ರ ಜನ ಮುಕುರುವ ಕಾಲ ಒಮ್ಮೆ ಇದ್ದಿತು. ಬೆಂಗಳೂರಿನ ಚಾಮರಾಜ ಪೇಟೆಯಲ್ಲಿ ಅವರು ತಮ್ಮ ಜನಪ್ರಿಯತೆಯಿಂದ ಶ್ರೀ ರಾಘವೇಂದ್ರ ಸ್ವಾಮಿಗಳ ವೃಂದಾವನವನ್ನು ಪ್ರತಿಷ್ಠಿಸಿ ಒಂದು ಸುಂದರ ಮಂದಿರವನ್ನು ನಿರ್ಮಿಸಿದರು. ಅದನ್ನು ತಾವು ಕೆಲವು ದಿನ ನಡೆಯಿಸಿ ಅದು ಇನ್ನೂ ಹೆಚ್ಚಿನ ಅಭಿವೃದ್ಧಿಗೆ ಬರಬೇಕೆಂದು ಮುಳಬಾಗಿಲ ಶ್ರೀಪಾದರಾಜ ಮಠದ ಶ್ರೀಗಳವರಿಗೆ ಒಪ್ಪಿಸಿಕೊಟ್ಟಿದ್ದಾರೆ. ಪುರಾಣ ಪುರುಷರೆಂದು ಪ್ರಸಿದ್ಧರಾದ ಶ್ರೀ ಕೃಷ್ಣಾಚಾರ್ಯರ ವ್ಯಾಸ ಸಾಹಿತ್ಯಕ್ಕೆ ದಾಸ ಸಾಹಿತ್ಯವನ್ನು ಸೇರಿಸಿ ತಾತ್ಪರ್ಯಾನುಸಾರಿಯಾಗಿ ಪ್ರಮೇಯಪುಂಜ ವಿವರಣ ಪೂರ್ವಕವಾಗಿ ಪುರಾಣ ಹೇಳುವ ವಿಶಿಷ್ಟ ಪ್ರವಚನ ಪ್ರಣಾಡಿಕೆಯನ್ನು ಅನುಸರಿಸಿ ಎಷ್ಟೋ ತರುಣ ಪುರಾಣ ಪಂಡಿತರು ಈಗ ಪ್ರಸಿದ್ಧ ಪೌರಾಣಿಕರಾಗಿದ್ದಾರೆ.

೪೪೪ ಮಧ್ವರಾವ ಬುದ್ಧಿಕೋಟಿ ಬೆಳಗಾವಿ

ಭಾರತ ಸರಕಾರದ ದೊಡ್ಡ ಅಧಿಕಾರಸ್ಥಾನದಲ್ಲಿದ್ದರೂ ಶ್ರೀ ಬುದ್ಧಿಕೋಟಿ ಯವರು ತಮ್ಮ ಹಾಗೂ ತಮ್ಮ ಹಿರಿಯರ ಹೆಸರಿಗೆ ಅನುಗುಣವಾಗಿ ವೇದಾಂತ ವ್ಯಾಸಂಗದ ಹಂಬಲವನ್ನು ಹೊತ್ತುಕೊಂಡೇ ಮುಂದೆ ಬಂದಿದ್ದಾರೆ. ಶ್ರೀ ಪಂಡಿತ ಗಲಗಲಿ ರಾಮಾಚಾರ್ಯರಲ್ಲಿ ಸುಧಾಂತ ವೇದಾಂತವನ್ನು ಅಧ್ಯಯನ ಮಾಡಿ ದ್ದಾರೆ. ಈಗಲೂ ಮಾಡುತ್ತಲಿದ್ದಾರೆ.

೪೪೯ ವೇಣೀ ಮಾಧವಾಚಾರ್ಯ ದೇವಳೆ ಬೆಂಗಳೂರ

ಮುಧೋಳ ಗ್ರಾಮದವರಾದ ಶ್ರೀ ವೇಣೀಮಾಧವಾಚಾರ್ಯರು ಸರಕಾರಿ ಉದ್ಯೋಗಕ್ಕಾಗಿ ಬೆಳಗಾವಿಯಲ್ಲಿ ಬಹು ದಿನ ವಾಸವಾಗಿದ್ದರು. ಪಂಡಿತ ಗಲಗಲಿ ರಾಮಾಚಾರ್ಯರಲ್ಲಿ ಮಧ್ವ ಭಾಷ್ಯ ತತ್ವಪ್ರಕಾಶಿಕಾದಿ ಎಲ್ಲ ವೇದಾಂತ ಗ್ರಂಥ ಗಳನ್ನು ಚನ್ನಾಗಿ ಅಧ್ಯಯನ ಮಾಡಿದರು. ಅವರು ಉದ್ಯೋಗದಿಂದ ನಿವೃತ್ತ ರಾದ ಬಳಿಕ ಬೆಂಗಳೂರಿನ ರಾಜಾಜಿ ನಗರದ ತಮ್ಮ ಮಕ್ಕಳ ಮನೆಯಲ್ಲಿದ್ದು ಅನೇಕ ಜನ ಲೌಕಿಕ ಗೃಹಸ್ಥರಿಗೆ ವೇದಾಂತ ಗ್ರಂಥಗಳನ್ನು ಪಾಠ ಹೇಳುತ್ತ ಲಿದ್ದಾರೆ. ಶ್ರೀ ಗಲಗಲಿ ರಾಮಾಚಾರ್ಯರಿಗೆ ಕಳೆದ ವರ್ಷ ಬೆಂಗಳೂರಿನಲ್ಲಿ ಸತ್ಕಾರ ಸಮಾರಂಭ ನಡೆದಾಗ ತಮ್ಮ ಶಿಷ್ಯಪರಿವಾರವನ್ನೆಲ್ಲ ತೋರಿಸಿ ಅವರಿಂದ ಸತ್ಕಾರವನ್ನು ಮಾಡಿಸಿ ಗುರುದಕ್ಷಿಣೆಯನ್ನಿತ್ತರು.

೪೫೦ ನಾರಾಯಣಾಚಾರ್ಯ ಕಟ್ಟಿ ಶೂರ್ಪಾಲಿ

ವೇದ, ಯಾಜ್ಞಿಕಗಳನ್ನು ಅಧ್ಯಯನ ಮಾಡಿ ಶ್ರೀ ನಾರಾಯಣಾಚಾರ್ಯರು ಶ್ರೀ ಕ್ಷೇತ್ರ ಶೂರ್ಪಾಲಿಯಲ್ಲಿ ಪೌರೋಹಿತ್ಯದ ವೃತ್ತಿಯಿಂದ ವಾಸವಾಗಿದ್ದಾರೆ.

೪೫೧ ಮಾಹುಲಿ ಶ್ರೀನಿವಾಸಾಚಾರ್ಯ ಅಥಣಿ

ಶ್ರೀನಿವಾಸಾಚಾರ್ಯರು ಗಲಗಲಿಯ ಅಂಬೇಕರ ಕೃಷ್ಣಾಚಾರ್ಯರಲ್ಲಿ ಓದಿ ಪಳಗಿದ ಪುರೋಹಿತರಾಗಿದ್ದು ಅಥಣಿಯಲ್ಲಿ ವಾಸವಾಗಿರುವರು.

೪೫೨ ಅನಂತಾಚಾರ್ಯ ಪರಳೀಕರ ಸೊಲ್ಲಾಪುರ

ವೇದ, ವೇದಾಂಗ, ಯಾಜ್ಞಿಕ ಭಾಗಗಳನ್ನು ಅಭ್ಯಸಿಸಿದ ಶ್ರೀ ಅನಂತಾಚಾರ್ಯರು ಸೊಲ್ಲಾಪುರದಲ್ಲಿ ಯಾಜ್ಞಿಕ ವೃತ್ತಿಯಿಂದ ವಾಸವಾಗಿರುವರು. ಸಂಸ್ಕೃತವೇ ಇವರ ಮನೆತನದ ಮಾತೃಭಾಷೆಯಾಗಿದೆ. ಮಡದಿ ಮಕ್ಕಳು ಎಲ್ಲರೂ ಸಂಸ್ಕೃತದಲ್ಲಿಯೇ ವ್ಯವಹಾರ ಮಾಡುವದು ಇವರ ಕುಟುಂಬದ ವೈಶಿಷ್ಟ್ಯವಾಗಿದೆ.

೪೫೩ ರಾಮಭಾವು ಉಪಾಧ್ಯಾಯ ಸೊಲ್ಲಾಪುರ

ಶ್ರೀ ರಾಮಭಾವು ಉಪಾಧ್ಯಾಯರು ಋಗ್ವೇದ, ಯಾಜ್ಞಿಕಗಳನ್ನು ವ್ಯಾಸಂಗ ಮಾಡಿದ್ದಾರೆ. ಸೊಲ್ಲಾಪುರದಲ್ಲಿ ಯಾಜ್ಞಿಕ ವೃತ್ತಿಯಿಂದ ಜೀವಿಸುತ್ತಾರೆ.

**೪೫೪ ಶ್ರೀನಿವಾಸಾಚಾರ್ಯ ಮಂಕಣಿ ಬಾಗಲಕೋಟಿ**

ಆನಂದ ತೀರ್ಥ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ ಶ್ರೀ ಶ್ರೀನಿವಾಸಾಚಾರ್ಯರು ಬಾಗಲಕೋಟೆಯಲ್ಲಿ ಯಾಜ್ಞಿಕರಾಗಿದ್ದಾರೆ.

**೪೫೫ ಹಣಮಂತಾಚಾರ್ಯ ಗದ್ದನಕೇರಿ ಯಲಗುರ**

ತಮ್ಮ ತಂದೆಯವರಲ್ಲಿಯೇ ಅಧ್ಯಯನ ಮಾಡಿದ ಶ್ರೀ ಹನುಮಂತಾಚಾರ್ಯರು ಶ್ರೀ ಯಲಗುರದ ಕ್ಷೇತ್ರವಲ್ಲಿ ಪುರೋಹಿತರಾಗಿದ್ದಾರೆ.

**೪೫೬ ಯಲಗುರದಾಚಾರ್ಯ ಹಿಪ್ಪರಗಿ ಯಲಗುರ**

ಇವರು ಪೂರ್ವಾಪರ ಯಾಜ್ಞಿಕದಲ್ಲಿ ಪಳಗಿದವರಾಗಿದ್ದು ಯಲಗುರದಲ್ಲಿ ಪೌರೋಹಿತ್ಯ ಮಾಡಿಸುತ್ತಲಿದ್ದಾರೆ.

**೪೫೭ ಧೀರಾಚಾರ್ಯ ಸವದಿ**

ಆನಂದತೀರ್ಥ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ ಶ್ರೀ ಧೀರಾಚಾರ್ಯರು ಶಿಕ್ಷಕರೂ ಪುರೋಹಿತರೂ ಆಗಿರುವರು.

**೪೫೮ ಅಣ್ಣಾಚಾರ್ಯ ಮೊಖಾಸಿ ಬಾಗಲಕೋಟಿ**

ಇವರು ಬಾಗಲಕೋಟ ಆನಂದತೀರ್ಥ ವೇದ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ಈಗ ಪೌರೋಹಿತ್ಯವನ್ನು ಮಾಡಿಸುತ್ತಲಿದ್ದಾರೆ.

**೪೫೯ ಧೀರಾಚಾರ್ಯ ಕೆರಕಲಮಟ್ಟಿ ಬಾಗಲಕೋಟಿ**

ಧೀರಾಚಾರ್ಯರು ಪೂರ್ವಾಪರ ಯಾಜ್ಞಿಕದಲ್ಲಿ ಪಳಗಿದವರಾಗಿದ್ದು ಬಾಗಲಕೋಟೆಯಲ್ಲಿ ವಾಸವಾಗಿದ್ದಾರೆ.

**೪೬೦ ಭೀಮಸೇನಾಚಾರ್ಯ ಜಾಲವಾದಿ**

ಬಾಗಲಕೋಟ ಆನಂದತೀರ್ಥ ಪಾಠಶಾಲೆಯಲ್ಲಿ ಓದಿದ ಶ್ರೀ ಭೀಮಸೇನಾಚಾರ್ಯರು ಪೌರೋಹಿತ್ಯ ಮಾಡಿಕೊಂಡು ಇರುವರು.

**೪೬೧ ಶ್ರೀನಿವಾಸಾಚಾರ್ಯ ಹಳ್ಳೂರ**

ಬಾಗಲಕೋಟ ಬುರ್ಲಿ ಆಚಾರ್ಯರಲ್ಲಿ ಅಧ್ಯಯನ ಮಾಡಿ ಶ್ರೀ ಶ್ರೀನಿವಾಸಾಚಾರ್ಯರು ಪೌರೋಹಿತ್ಯ ಮಾಡಿಸುತ್ತ ಸರಕಾರಿ ಕೆಲಸದಲ್ಲಿಯೂ ಇರುವರು.

### ೪೬೨ ಕೃಷ್ಣಾಚಾರ್ಯ ಅಂಕಲಗಿ

ವೇದಾಧ್ಯಯನ ಮಾಡಿದ ಶ್ರೀ ಕೃಷ್ಣಾಚಾರ್ಯರು ವಿಜಾಪುರದಲ್ಲಿ ಯಾಜ್ಞಿಕರಾಗಿದ್ದಾರೆ.

### ೪೬೩ ಭೀಮಸೇನಾಚಾರ್ಯ ಕಟ್ಟಿ ಹಾವೇರಿ

ಆನಂದ ತೀರ್ಥ ಪಾಠಶಾಲೆಯಲ್ಲಿ ಅಧ್ಯಯನ ಮಾಡಿದ ಇವರು ಹಾವೇರಿ ಯಲ್ಲಿ ಪೌರೋಹಿತ್ಯ ಮಾಡುತ್ತಲಿದ್ದಾರೆ.

### ೪೬೪ ಬಿಂದುಮಾಧವಾಚಾರ್ಯ ಜಹಗಿರದಾರ ಹೊನ್ನಿಗನೂರು ಧಾರವಾಡ



ವೇದ, ಯಾಜ್ಞಿಕ ಅಭ್ಯಾಸ ಮಾಡಿದ ಶ್ರೀ ಬಿಂದಾಚಾರ್ಯರು ಪೌರೋಹಿತ್ಯ ಮಾಡಿಕೊಂಡಿದ್ದಾರೆ. ಬ್ರಾಹ್ಮಣ ಸಮಾಜದಲ್ಲಿ ಒಂದು ದೊಡ್ಡ ಕೊರತೆ ಎನಿಸಿದ ವರಸಂಶೋಧನದ ಕಾರ್ಯವನ್ನು ತಮ್ಮ ಕೈಲಾದಮಟ್ಟಿಗೆ ಕಡಿಮೆ ಮಾಡಬೇಕೆಂದು ಸಂಕಲ್ಪಿಸಿ ಶ್ರೀ ಬಿಂದಾಚಾರ್ಯರು ' ವರ ಸಂಶೋಧನ ಮಂಡಲ ' ಎಂಬದೊಂದು ಸಂಸ್ಥೆಯನ್ನು ಮಾಡಿಕೊಂಡು ಸುವ್ಯವಸ್ಥಿತವಾಗಿ ಕೆಲಸ ಮಾಡುತ್ತಲಿದ್ದಾರೆ. ಧಾರವಾಡದ ಮಾಧ್ವ ಮಂಡಲದ ಪಾಠಶಾಲೆಯಲ್ಲಿ ಇವರು ಬಹುವರ್ಷ ಅಧ್ಯಾಪಕರಾಗಿದ್ದರು.

### ೪೬೫ ಅಯಾಚಿತ ವೆಂಕಣ್ಣಾಚಾರ್ಯರು ಶೂರ್ಪಾಲಿ

ಶೂರ್ಪಾಲಯಕ್ಷೇತ್ರದಲ್ಲಿ ಶ್ರೀ ವೆಂಕಣ್ಣಾಚಾರ್ಯರು ಪೌರೋಹಿತ್ಯದಿಂದ ಜೀವನ ನಡೆಸಿದ್ದಾರೆ.

### ೪೬೬ ಅನಂತಾಚಾರ್ಯ ಬಾಗಲಕೋಟಿ ಧಾರವಾಡ

ಧಾರವಾಡದಲ್ಲಿ ಯಾಜ್ಞಿಕ ಪುರಾಣ ಪೌರೋಹಿತ್ಯವನ್ನು ಮಾಡಿಕೊಂಡು ಶ್ರೀ ಅನಂತಾಚಾರ್ಯರು ವಾಸವಾಗಿದ್ದಾರೆ.

### ೪೬೭ ಮನಗೂಳಿ ಆಚಾರ್ಯರು ವಿಜಾಪುರ

ಶ್ರೀ ನರಸಿಂಹಾಚಾರ್ಯ ಮನಗೂಳಿ, ಶ್ರೀ ಮಧ್ವಾಚಾರ್ಯ ಮನಗೂಳಿ, ಶ್ರೀ ರಾಘವಾಚಾರ್ಯ ಮನಗೂಳಿ ಈ ಮೂವರೂ ವಿಜಾಪುರದಲ್ಲಿ ಯಾಜ್ಞಿಕವನ್ನು ಮಾಡಿಸುತ್ತಾರೆ.

**೪೬೮ ನಾರಾಯಣಾಚಾರ್ಯ ಹಾವನೂರ ಧಾರವಾಡ**

ಕಾವ್ಯ, ವೇದ, ಯಾಜ್ಞಿಕಾದಿಗಳನ್ನು ಅಧ್ಯಯನ ಮಾಡಿದ ನಾರಾಯಣಾಚಾರ್ಯರು ಪೌರೋಹಿತ್ಯವನ್ನು ಮಾಡಿಸುತ್ತಾರೆ.

ಧಾರವಾಡ ಶುಕ್ರವಾರ ಪೇಟೆಯಲ್ಲಿ ಗುರುಸಾರ್ವಭೌಮ ಸಂಸ್ಕೃತ ಪಾಠಶಾಲೆಯೊಂದನ್ನು ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ವೇದ, ಸಂಸ್ಕೃತ, ಮಂತ್ರ, ತಂತ್ರ, ಸ್ತೋತ್ರಾದಿಗಳ ಪಾಠ ಹೇಳುತ್ತಲಿದ್ದಾರೆ. ಈ ಪಾಠಶಾಲೆಯು ಆಚಾರ್ಯರ ಸತತ ಪರಿಶ್ರಮದಿಂದ ಸುವ್ಯವಸ್ಥಿತವಾಗಿ ನಡೆಯುತ್ತಲಿದೆ. ೨೫-೩೦ ಜನ ವಿದ್ಯಾರ್ಥಿಗಳು ನಿತ್ಯವೂ ಪಾಠ ಹೇಳಿಸಿಕೊಳ್ಳುತ್ತಲಿದ್ದಾರೆ.

**೪೬೯ ಕೃಷ್ಣಾಚಾರ್ಯ ಪಾಚ್ಛಾಪುರ ಧಾರವಾಡ**

ಯಾಜ್ಞಿಕ ಕೆಲ ಭಾಗಗಳನ್ನು ಅಭ್ಯಸಿಸಿದ ಶ್ರೀ ಕೃಷ್ಣಾಚಾರ್ಯರು ಧಾರವಾಡದಲ್ಲಿ ಪೌರೋಹಿತ್ಯ ಮಾಡಿಕೊಂಡು ಇರುವರು.

**೪೭೦ ಹುಚ್ಚಾಚಾರ್ಯ ವಡವಿ ಧಾರವಾಡ**

ವೇದಾಧ್ಯಯನ ಮಾಡಿದ ಶ್ರೀ ಹುಚ್ಚಾಚಾರ್ಯರು ಧಾರವಾಡದಲ್ಲಿ ಯಾಜ್ಞಿಕರಾಗಿರುವರು.

**೪೭೧ ಕಿರೇಸೂರ ವೆಂಕಣ್ಣಾಚಾರ್ಯರು ಬಾಗಲಕೋಟೆ**

ಶ್ರೀ ವೆಂಕಣ್ಣಾಚಾರ್ಯರು ಬಾಗಲಕೋಟೆಯಲ್ಲಿ ಪುರಾಣ ಮತ್ತು ಯಾಜ್ಞಿಕದಿಂದ ಉಪಜೀವನ ನಡೆಸಿದ್ದಾರೆ.

**೪೭೨ ಗೋಟೂರ ಕೃಷ್ಣಾಚಾರ್ಯ ಬಾಗಲಕೋಟೆ**

ಈ ಆಚಾರ್ಯರು ಬಾಗಲಕೋಟೆಯಲ್ಲಿಯೇ ಪೌರೋಹಿತ್ಯವನ್ನು ಮಾಡಿಕೊಂಡಿದ್ದಾರೆ.

**೪೭೩ ಭೀಮಾಚಾರ್ಯ ಮುನವಳ್ಳಿ ಧಾರವಾಡ**

ಈ ಆಚಾರ್ಯರು ಧಾರವಾಡದಲ್ಲಿ ಯಾಜ್ಞಿಕ, ಪೌರೋಹಿತ್ಯ ಮಾಡಿಕೊಂಡು ಇರುವರು.

**೪೭೪ ಸುಬ್ಬಣ್ಣಾಚಾರ್ಯ ಶೇಷಗಿರಿ ಧಾರವಾಡ**

ಸುಬ್ಬಣ್ಣಾಚಾರ್ಯರು ವೇದಾಧ್ಯಯನ ಮಾಡಿ ಧಾರವಾಡದಲ್ಲಿ ಪೌರೋಹಿತ್ಯ ವೃತ್ತಿಯಿಂದಿರುವರು.

**೪೭೫ ಭೀಮಸೇನಾಚಾರ್ಯ ಮುದ್ದಾಪುರ ಧಾರವಾಡ**

ಶ್ರೀ ಭೀಮಸೇನಾಚಾರ್ಯರು ಧಾರವಾಡದಲ್ಲಿ ಯಾಜ್ಞಿಕವನ್ನು ವೃತ್ತಿಯಾಗಿ ಮಾಡಿಕೊಂಡಿರುವರು.

**೪೭೬ ನಾರಾಯಣಾಚಾರ್ಯ ಪಾಮಡಿ**

ವೇದಾಧ್ಯಯನ ಯಾಜ್ಞಿಕ ಭಾಗಗಳನ್ನು ಅಧ್ಯಯನ ಮಾಡಿದ ಶ್ರೀ ಪಾಮಡಿ ಆಚಾರ್ಯರು ಪೌರೋಹಿತ್ಯವನ್ನು ಮಾಡುತ್ತಲಿರುವರು.

**೪೭೭ ಭೀಮಸೇನಾಚಾರ್ಯ ಪುರೋಹಿತ ಸಂಗಮ**

ಕೃಷ್ಣಾತೀರದ ಸಂಗಮ ಕ್ಷೇತ್ರದಲ್ಲಿ ಶ್ರೀ ಭೀಮಸೇನಾಚಾರ್ಯರು ಪೌರೋಹಿತ್ಯ ಮಾಡಿಕೊಂಡು ಇರುವರು.

**೪೭೮ ವೆಂಕಣ್ಣಾಚಾರ್ಯ ಮಂಗಲಗಿ ಸಂಗಮ**

ವೇದಾಧ್ಯಯನ ಮಾಡಿದ ಶ್ರೀ ವೆಂಕಣ್ಣಾಚಾರ್ಯರು ಸಂಗಮದಲ್ಲಿ ಯಾಜ್ಞಿಕರಾಗಿದ್ದಾರೆ.

**೪೭೯ ಅಣ್ಣಾಚಾರ್ಯ ಕಾಖಂಡಕಿ ಬಾಗಲಕೋಟಿ**

ಈಗ ಇವರು ಬಾಗಲಕೋಟಿಯಲ್ಲಿ ಪುರಾಣ ಹೇಳಿಕೊಂಡು ಇರುವರು.

**೪೮೦ ರಾಘವೇಂದ್ರಾಚಾರ್ಯ ಹೆರಕಲ್ಲ ಕೊಲ್ಹಾರ**

ಶ್ರೀ ಬುರ್ಲಿ ರಾಘವೇಂದ್ರಾಚಾರ್ಯರಲ್ಲಿ ಅಧ್ಯಯನ ಮಾಡಿದ ಶ್ರೀ ರಾಘವೇಂದ್ರಾಚಾರ್ಯರು ವಿಜಾಪುರ ಜಿಲ್ಲ ಕೊಲ್ಹಾರದಲ್ಲಿ ಯಾಜ್ಞಿಕ ವೃತ್ತಿಯಿಂದ ಇದ್ದಾರೆ.

**೪೮೧ ಶ್ರೀನಿವಾಸಾಚಾರ್ಯ ಹೊಂಬಾಳಿ ಗದಗ**

ಕಾವ್ಯ, ವ್ಯಾಕರಣಾದಿಗಳನ್ನು ದಿ. ಸೇತುಮಾಧವಾಚಾರ್ಯ ಗಜೇಂದ್ರಗಡಕರರಲ್ಲಿ ಕೆಲವು ಕಾಲ ವ್ಯಾಸಂಗ ಮಾಡಿ ಮುಂದೆ ಯಾಜ್ಞಿಕ ಅಧ್ಯಯನ ಮಾಡಿಕೊಂಡು ಈಗ ಶ್ರೀನಿವಾಸಾಚಾರ್ಯರು ಗದುಗಿನಲ್ಲಿ ವ್ಯವಹಾರ, ಯಾಜ್ಞಿಕವನ್ನು ಮಾಡಿಸುತ್ತ ಪ್ರತಿಷ್ಠಿತರಾಗಿರುವರು.

**೪೮೨ ರಾಘವಾಚಾರ್ಯ ಸಾಂಗಲಿ ಮುಂಬೈ**

ಪಂಡಿತರಾಜ ಮಾಹುಲಿ ಗೋಪಾಲಾಚಾರ್ಯರ ವಾಣಿ ವಿಹಾರ ಪಾಠಶಾಲೆಯಲ್ಲಿ ಸಾಹಿತ್ಯ, ವೇದ, ಯಾಜ್ಞಿಕಗಳನ್ನು ಅಧ್ಯಯನ ಮಾಡಿದ ಶ್ರೀ ರಾಘವಾಚಾರ್ಯರಿಗೆ ವೇದಾಂತದಲ್ಲಿಯೂ ಕಿಂಚಿತ್ ಪ್ರವೇಶವಿದೆ. ಈಗ ಇವರು ಮುಂಬೈಯಲ್ಲಿ ಯಾಜ್ಞಿಕ ಮಾಡಿಸುತ್ತ ಸ್ಕೂಲ ಅಧ್ಯಾಪಕರಾಗಿ ಇರುವರು.

### ೪೪೩. ಕೆ. ವೆಂಕಟರಾಯಾಚಾರ್ಯ ಸುರತ್ಕಲ್ಲ

ಚಿತ್ರಾಪುರ ಮಠಾಧೀಶ ವೈ. ವಾ. ಶ್ರೀ ಶ್ರೀ ವಿದ್ಯಾಪೂರ್ಣ ತೀರ್ಥರಲ್ಲಿ ಸಾಹಿತ್ಯಾದಿಗಳನ್ನು ಅಭ್ಯಾಸ ಮಾಡಿದ ಶ್ರೀ ವೆಂಕಟರಾಯಾಚಾರ್ಯರು ಶ್ರೀ ವಿದ್ಯಾಪೂರ್ಣತೀರ್ಥರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದಾರೆ.

ಶ್ರೀ ವೆಂಕಟರಾಯಾಚಾರ್ಯರು ಖ್ಯಾತ ಸಂಶೋಧಕರೂ, ನುರಿತ ಲೇಖಕರೂ, ಗ್ರಂಥಕಾರರೂ, ಪ್ರಾಚೀನ ಗ್ರಂಥ ಸಂಪಾದಕರೂ ಆಗಿರುವರು.

ಇವರು ಬರೆದ ಸಂಶೋಧನಾತ್ಮಕ ಲೇಖ–ಪ್ರಬಂಧಗಳು ವಿದ್ವನ್ಮಾನ್ಯವಾಗಿದ್ದು ಅದಕ್ಕಾಗಿ ಇವರು ಮೈಸೂರ ಸರಕಾರದಿಂದ ಪ್ರಶಸ್ತಿ ಪಡೆದಿದ್ದಾರೆ.

ಆದಿತ್ಯಪುರಾಣವೆಂಬ ಪ್ರಾಚೀನ ಕಾವ್ಯವನ್ನು ಸಂಶೋಧಿಸಿ ಸಂಪಾದನ ಮಾಡಿದ್ದಾರೆ. ಮೈಸೂರು ರಾಜ್ಯದ ಸಾಹಿತ್ಯ ಅಕಾಡಮಿಯು ಈ ಸಲ ಈ ಆದಿತ್ಯ ಪುರಾಣಕ್ಕೆ ಪ್ರಶಸ್ತಿ ಬಹುಮಾನ ನೀಡಿದೆ.

### ೪೪೪ ರಾಘವೇಂದ್ರಾಚಾರ್ಯ ಮುಂಡರಗಿ

ರಾಘವೇಂದ್ರಾಚಾರ್ಯರು ತಮ್ಮ ತಂದೆಯವರಲ್ಲಿಯೂ ಶ್ರೀ ಉತ್ತರಾದಿ ಮಠದಲ್ಲಿಯೂ ಕೆಲವು ಕಾಲ ವ್ಯಾಸಂಗ ಮಾಡಿಕೊಂಡು ಈಗ ಮುಂಡರಗಿಯಲ್ಲಿ ಪುರಾಣ ಪ್ರವಚನ ಮಾಡುತ್ತಲಿದ್ದಾರೆ.

### ೪೪೫ ನರಹರಿ ಆಚಾರ್ಯ ಕಟ್ಟಿ ವಿಜಾಪುರ

ಹುನಗುಂದ ಗ್ರಾಮದವರಾದ ಇವರು ಬಿ. ಎ. ದ ವರೆಗೆ ಓದಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಾಲೇಜಕ್ಕೆ ಶರಣು ಹೊಡೆದು ವೇದಾಂತ ಅಧ್ಯಯನ ಮಾಡಿಕೊಂಡು ಸದಾಚಾರ ಸಂಪನ್ನರಾಗಿ ವಿಜಾಪುರದಲ್ಲಿ ವಿಧ್ಯಾರ್ಥಿಗಳಿಗೆ ಲೌಕಿಕ ಪಾಠ ಹೇಳತ್ತಲಿದ್ದಾರೆ.

### ೪೪೬ ಸುಶೀಲೇಂದ್ರಾಚಾರ್ಯ ಪುರೋಹಿತ ಸಂಗಮ

ಇವರು ಸಂಗಮದಲ್ಲಿ ಕ್ಷೇತ್ರ ಪುರೋಹಿತರಾಗಿದ್ದಾರೆ.

### ೪೪೭ ಬಂಡಾಚಾರ್ಯ ಗುಡ್ಡದ ಇಲಕಲ್

ಹುನಗುಂದದಲ್ಲಿ ಅಧ್ಯಯನ ಮಾಡಿದ ಶ್ರೀ ಬಂಡಾಚಾರ್ಯರು ಇಲಕಲ್ಲಿನಲ್ಲಿ ಪೌರೋಹಿತ್ಯ ಮಾಡಿಕೊಂಡಿದ್ದಾರೆ.

### ೪೪೮ ರಾಮಾಚಾರ್ಯ ಮನಗೂಳಿ ಜಮಖಂಡಿ

ಶ್ರೀ ರಾಮಾಚಾರ್ಯರು ಜಮಖಂಡಿಯಲ್ಲಿ ಪೌರೋಹಿತ್ಯ ಮಾಡಿಕೊಂಡು ಇರುವರು.

# ಕೀರ್ತನಕಾರರು

## ೪೮೯ ಟಿ. ವ್ಹಿ. ಗುರುರಾಜದಾಸರು



ಟಿ. ಕೆ. ವೇಣುಗೋಪಾಲದಾಸರ ಪುತ್ರರಾದ ಗುರುರಾಜದಾಸರು ತಮ್ಮ ತಂದೆಯವರಲ್ಲಿ ಅಧ್ಯಯನ ಮಾಡಿ ಈಗ ಮೂವತ್ತು ವರ್ಷಗಳಿಂದ ಹರಿಕಥೆಯನ್ನು ಮಾಡುತ್ತಲಿದ್ದಾರೆ. ದಕ್ಷಿಣೋತ್ತರ ಭಾರತದ ಎಲ್ಲ ಪ್ರಮುಖ ಸ್ಥಳಗಳಲ್ಲಿ ತಮ್ಮ ನಾದ ಮಾಧುರಿ ಮತ್ತು ನಿರೂಪಣೆಯ ಚಾತುರಿ ಮತ್ತು ದಕ್ಷಿಣೋತ್ತರ ಸಂಗೀತ ಕೌಶಲ್ಯ ಮತ್ತು ದಾಸ ಸಾಹಿತ್ಯ ತಜ್ಞತೆಗಳಿಂದ ಜನರಮನಸ್ಸನ್ನು ಸೂರೆಗೊಳ್ಳುತ್ತಲಿದ್ದಾರೆ.

## ೪೯೦ ಟಿ. ವಿ. ಗೋಪೀನಾಥ ದಾಸರು ಬೆಂಗಳೂರ

ಶ್ರೀ ಗೋಪಿನಾಥ ದಾಸರ ವಿದ್ವಾವೈಖರಿ ಬೆಂಗಳೂರಿನ ಕೀರ್ತನ ಪ್ರೇಮಿಗಳಿಗೆ ಮನೆಮಾತಾಗಿದೆ. ಸಂಗೀತ, ಸಾಹಿತ್ಯ, ಸಂಸ್ಕೃತಿಯ ಅಪೂರ್ವ ಮಿಲನದ ಇವರ ಹರಿಕಥೆಗಳು ಜನರನ್ನು ಮುಗ್ಧಗೊಳಿಸುತ್ತವೆ. ಇವರು ಅನೇಕ ಸಂಘ ಸಂಸ್ಥೆಗಳನ್ನು ನಡೆಸುವರು. ಇವರು ಉತ್ತಮ ಲೇಖಕರು, ನಾಟಕಕಾರರು ಜೊತೆಗೆ ನಿಷ್ಠಾವಂತ ಆಚಾರ ಸಂಪನ್ನರು. ಅನೇಕ ಧರ್ಮಪೀಠಗಳು, ವಿದ್ವಾಂಸ ಮಂಡಳಗಳು ಇವರನ್ನು ಸನ್ಮಾನಿಸಿವೆ. ಇವರ ತಂದೆಯವರಾದ ಶ್ರೀ ವೆಂಕಣ್ಣದಾಸರು ಆ ಕಾಲದ ದೊಡ್ಡ ಕೀರ್ತನಕಾರರು.

## ೪೯೧ ತಂಗೋಡ ದಾಸಾಚಾರ್ಯರು ಸುರಪುರ

ಶ್ರೀ ತಂಗೋಡ ದಾಸಾಚಾರ್ಯರು ಕರ್ನಾಟಕಸ್ಥರಿಗೆಲ್ಲ ಸುಪರಿಚಿತ ಕೀರ್ತನಕಾರರು. ಈಗ ೨೦ ವರ್ಷಗಳ ಕಾಲ ಸಂತತವಾಗಿ ಹರಿಕಥಾ ಕಾಲಕ್ಷೇಪ ಮಾಡುತ್ತ ಪರಮಾತ್ಮನ ಸೇವೆಯನ್ನು ಮಾಡುತ್ತಲಿದ್ದಾರೆ. ಕರ್ನಾಟಕ, ಆಂಧ್ರ ಮಹಾರಾಷ್ಟ್ರ ದೇಶಗಳಲ್ಲಿ ಹರಿಕಥೆಗಳನ್ನು ಮಾಡಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಒಳ್ಳೇ ಆಚಾರಶೀಲರು. ಇವರ ಕೀರ್ತನಗಳೆಂದರೆ ಜನ ಮುಕುರುತ್ತಾರೆ.

## ೪೯೨ ಮುಂಡರಗಿ ಹರಿಸರ್ವೋತ್ತಮದಾಸ



ಶ್ರೀ ಹರಿಸರ್ವೋತ್ತಮದಾಸರ ಹರಿಕಥಾ ಪ್ರಸಂಗವನ್ನು ಕರ್ನಾಟಕದಲ್ಲಿ ಕೇಳದವರು ಅಪರೂಪ. ಬೀದರದಿಂದ ಭಾಗಮಂಡಲದವರೆಗೂ, ಗೋವಾದಿಂದ ವಾಲ್ಟೇರದ ವರೆಗೂ, ಮದ್ರಾಸದಿಂದ ಮುಂಬೈವರೆಗೂ ದಾಸರ ಹರಿಕಥೆಗಳು ಹರಿದಾಡಿವೆ. ಹರಿಕಥಾ ಪ್ರೇಮಿಗಳಿಗೆ ದಾಸರ ಹರಿಕಥೆಗಳೆಂದರೆ ಅಚ್ಚುಮೆಚ್ಚು.

ಭಾರತ, ಭಾಗವತ, ರಾಮಾಯಣಾದಿಗಳನ್ನು ಸರಸ ಸುಂದರವಾಗಿ, ಪಂಡಿತ ಪಾಮರ ರಂಜನೆಯಾಗುವಂತೆ ಹೇಳುವದು ಇವರ ವೈಶಿಷ್ಟ್ಯ.

ಇವರು ಅರಮನೆ-ಗುರುಮನೆಗಳಿಂದ ಅನೇಕ ಬಿರುದು, ಪ್ರಶಸ್ತಿ ಸುವರ್ಣ ಪದಕಗಳನ್ನು ಪಡೆದಿದ್ದಾರೆ. ಉಡುಪಿಯ ಅಷ್ಟ ಮಠಾಧೀಶರು ಇವರಿಗೆ ಬಂಗಾರದ ಕಡಗ, ಮಾನ ಪತ್ರ, ಪದವಿ–ಪ್ರಶಸ್ತಿಗಳನ್ನಿತ್ತು ಗೌರವಿಸಿದ್ದಾರೆ. "ಸತ್ಕೀರ್ತನಾಚಾರ್ಯ" ಎಂದೂ, "ಕೀರ್ತನ ಕಂಠೀರವ", "ರಾಮಾಯಣಾಚಾರ್ಯ" "ಕೀರ್ತನ ಭೂಷಣ" ಮುಂತಾದ ಬಿರುದುಗಳನ್ನು ಪಡೆದು ಮನ್ನಣೆ ಹೊಂದಿದ್ದಾರೆ.

ಮೈಸೂರು ಮಹಾರಾಜರು ಇವರಿಗೆ ಉದಾರಾಶ್ರಯವಿತ್ತು ತಮ್ಮ ಅರಮನೆಯ ಕೀರ್ತನಕಾರರೆಂದು ಗೌರವಿಸಿ, ಮನೆಕೊಟ್ಟು ಇಟ್ಟುಕೊಂಡಿದ್ದಾರೆ.

ಇವರು ಧಾರವಾಡ ಜಿಲ್ಹಾ ಮುಂಡರಗಿ ಊರಿನವರು. ಈಗ ಸುಮಾರಾಗಿ ೪೦ ವರ್ಷಗಳಿಂದ ಹರಿಕಥೆಗಳನ್ನು ಮಾಡುತ್ತಲಿದ್ದಾರೆ.

## ೪೯೩ ಶ್ರೀಹರಿಕಥಾಮೃತಸಾರ ಎನ್. ನಾಗರಾಜರಾವ

ಇವರು ಶ್ರೀಮದಾಚಾರ್ಯರ ತತ್ವಸಿದ್ಧಾಂತವನ್ನು ಹರಿಕಥಾರೂಪದಲ್ಲಿ ಪ್ರಸಂಗ ಮಾಡುತ್ತ ಮಧ್ವ ಸಿದ್ಧಾಂತವನ್ನು ಪ್ರಚಾರ ಮಾಡುತ್ತಿರುವರು.

ಇವರು ಒಳ್ಳೇ ಸರಸ ಹರಿಕಥಾ ವಿದ್ವಾನರಾಗಿದ್ದಾರೆ. ಎಸ್. ಎಸ್. ಎಲ್. ಸಿ ಯಲ್ಲಿ ಉತ್ತೀರ್ಣರಾದ ಇವರು ಪೋಸ್ಟಲ್ ಆಡಿಟ್ ಶಾಖೆಯಲ್ಲಿ ಕೆಲಸ ಮಾಡುತ್ತ ಹರಿಕಥಾ ಪ್ರಸಂಗ ಮಾಡುತ್ತಾರೆ.

**೪೯೪ ಎಂ. ವಿ. ಶ್ಯಾಮಾಚಾರ್ಯರು ಚಿಂತಾಮಣಿ**



ಇವರು ಸುಶ್ರಾವ್ಯವಾಗಿ ಹರಿಕಥಾ ಕಾಲಕ್ಷೇಪ ಮಾಡುತ್ತಾರೆ. ದಾಸಕೂಟ ಧುರೀಣರ ದಿವ್ಯ ಚರಿತ್ರೆಗಳನ್ನು ಹರಿಕಥಾರೂಪದಿಂದ ಹೇಳುವುದು ಇವರ ವೈಶಿಷ್ಟ್ಯವಾಗಿದೆ. ಅನೇಕ ಸಂಘ-ಸಂಸ್ಥೆ ಮತ್ತು ಮಾಧ್ವಪೀಠಾಧಿಪತಿಗಳ ಸಮ್ಮುಖದಲ್ಲಿ ಹರಿಕಥೆಗಳನ್ನು ಮಾಡಿ ಅವರ ಪ್ರೀತ್ಯಾದರ, ಅನುಗ್ರಹ, ಸಂಭಾವನಾ ಮರ್ಯಾದಾದಿಗಳಿಗೆ ಪಾತ್ರರಾಗಿದ್ದಾರೆ.

ಇವರು ಕನ್ನಡ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರೂ ಆಗಿದ್ದಾರೆ.

**೪೯೫ ಚತುರ್ವೇದಿ ನರಸಿಂಹಮೂರ್ತಿ ದಾಸ ಗೋಕರ್ಣ**

ಇವರು ತಮ್ಮ ತಂದೆಯವರಲ್ಲಿ ಓದಿ ಆಕಾಶವಾಣಿ ಕೇಂದ್ರದಲ್ಲಿಯೂ ಸಭಾ ಸಮ್ಮೇಲನಗಳಲ್ಲಿಯೂ ಹರಿಕಥಾ ಮಾಡುತ್ತಾರೆ. ಅಖಿಲ ಭಾರತ ಕೀರ್ತನಕಾರರ ಸಮ್ಮೇಲನದಲ್ಲಿ ಭಾಗವಹಿಸಿ ಕೀರ್ತನ ಚತುರ ಎಂಬ ಪದವಿಯನ್ನು ಗಳಿಸಿದ್ದಾರೆ.

**೪೯೬ ವಾದಿರಾಜ ಭಾಗವತರ್ ಬಿ.ಎ. ಕುಂಭಕೋಣ ಮದ್ರಾಸ**

ಇವರು ನಾಲ್ಕಾರು ಭಾಷೆಗಳಲ್ಲಿ ಕೀರ್ತನೆ ಮಾಡಬಲ್ಲರು. ಕಳೆದ ಮೂರು ನಾಲ್ಕು ದಶಕಗಳಿಂದಲೂ ಕೀರ್ತನ ಸೇವೆ ನಡೆಯಿಸಿದ ಭಗವದ್ಭಕ್ತರು. ಪಂಡಿತರಾದ ಇವರಿಗೆ "ಲಲಿತಕಲಾ ವಲ್ಲಭ" ಮತ್ತು "ಚತುರ್ಭಾಷಿ" ಎಂಬ ಬಿರುದುಗಳಿವೆ.

**೪೯೭ ಯು. ಕೆ. ವ್ಯಾಸದಾಸರು ಉಡುಪಿ ದ.ಕ.**

ಶ್ರೀ ಯು. ಕೆ. ವ್ಯಾಸದಾಸರು ಉಡುಪಿಯವರು. ಇವರ ಪೂರ್ವೀಕರು ಉಡುಪಿಯ ಶ್ರೀಕೃಷ್ಣನ ಮುಂದೆ ಭಾಗವತ ಸೇವೆಯನ್ನು ಮಾಡಿಕೊಂಡಿದ್ದರು. ಇವರೂ ಅದೇ ಪಂಥದಿಂದ ಮುಂದುವರಿದವರು. ಈಗ ವಯಸ್ಸು ೬೪ ಆದರೂ ಹರಿಭಜನೆ ಮಾಡುತ್ತ, ನರ್ತಿಸುತ್ತ ಕೀರ್ತನ ಪ್ರಚಾರ ಮಾಡುತ್ತಿರುವರು.

**೪೯೮ ಸೇತೂಮಾಧವದಾಸರು ಬೆಂಗಳೂರ**

ಕೀರ್ತನ ಪ್ರಪಂಚದಲ್ಲಿ ಇವರ ಹೆಸರು ಅರಿಯದವರಿಲ್ಲ. ಭಕ್ತಿಪರ ಕೀರ್ತನೆ ಮಾಡುವದರಲ್ಲಿ ಇವರು ಅಪ್ರತಿಮರು. ಶ್ರೀಯುತರು ಅನೇಕ ಪ್ರಶಸ್ತಿಗಳನ್ನು ಪಡೆದಿರುವರು.

## ೪೯೯ ಶ್ರೀಧರಾಚಾರ್ಯ ಸುರತ್ಕಲ್



ಇವರು ಚಿತ್ರಾಪುರ ಮಠಾಧೀಶ ಶ್ರೀ ವಿದ್ಯಾ ಪೂರ್ಣ ತೀರ್ಥ ಶ್ರೀಪಾದಂಗಳವರಲ್ಲಿ ಸಾಹಿತ್ಯಾಭ್ಯಾಸವನ್ನು ಮಾಡಿ ಮನೆಯಲ್ಲಿಯೇ ಕನ್ನಡ ಸಾಹಿತ್ಯ ಮತ್ತು ಹರಿದಾಸ ಸಾಹಿತ್ಯಗಳನ್ನು ಅಧ್ಯಯನ ಮಾಡಿದರು. ಅನಂತರ ಸಂಗೀತವನ್ನು ಅಭ್ಯಾಸ ಮಾಡಿ ತಮ್ಮ ಸಿದ್ಧಾಂತಾನುಸಾರಿಯಾಗಿ ಜನಪ್ರಿಯರಾಗಿ ಹರಿಕತೆ ಮಾಡಿದ್ದಾರೆ. ಕೀರ್ತನ ಕೇಸರಿ, ಹರಿದಾಸ ರತ್ನ, ಕೀರ್ತನಾಲಂಕಾರ ಮುಂತಾದ ಬಿರುದು ಮನ್ನಣೆಗಳನ್ನು ಪಡೆದು ಶ್ರೀಧರಾಚಾರ್ಯರು ಮದ್ರಾಸದ ಶ್ರೀ ಕೆ. ಸೀತಾರಾಮರಾಯರ ಧರ್ಮಪ್ರಕಾಶ ದಾಸಪ್ರಕಾಶ ಸಂಸ್ಥೆಗಳಲ್ಲಿಯೂ ಶ್ರೀಪೇಜಾವರ ಭಂಡಾರಕೆರೆ ಶ್ರೀಗಳವರ ಸನ್ನಿಧಾನದಲ್ಲಿಯೂ, ಗದಗ ಹುಬ್ಬಳ್ಳಿ ಮುಂತಾದ ಅನೇಕ ಸ್ಥಳಗಳಲ್ಲಿಯೂ ಹರಿಕಥೆಗಳನ್ನುಮಾಡಿ ಎಲ್ಲರ ಮೆಚ್ಚುಗೆ ಪಡೆದಿದ್ದಾರೆ. ಇವರಿಗೆ ಪೌರೋಹಿತ್ಯ, ಸಂಗೀತ, ಯಕ್ಷಗಾನವಿದ್ಯೆಗಳಲ್ಲಿಯೂ ಗತಿಮತಿಗಳುಂಟು.

## ೫೦೦ ಪಿ. ಆರ್. ನಾರಾಯಣರಾವು

ಇವರು ಮದ್ರಾಸಿನಲ್ಲಿದ್ದು ಹರಿಕಥಾ ಪ್ರಸಂಗವನ್ನು ಮಾಡುತ್ತಲಿರುತ್ತಾರೆ. ಇವರು ಚೀಮನಹಳ್ಳಿ ಶ್ರೀ ರಘುನಾಥಾಚಾರ್ಯರಲ್ಲಿ ಕೆಲವು ಆಚಾರ್ಯರ ಗ್ರಂಥಗಳನ್ನು ಅಭ್ಯಾಸ ಮಾಡಿರುವರು.

ಎಸ್. ಎಸ್. ಎಲ್. ಸಿ. ಯಲ್ಲಿ ಉತ್ತೀರ್ಣರಾಗಿದ್ದಾರೆ. ಸಂಗೀತವನ್ನು ಶ್ರೀ ತೋಳೂರ ಶ್ರೀನಿವಾಸಾಚಾರ್ಯರಲ್ಲಿ ಅಭ್ಯಾಸಮಾಡಿದ್ದಾರೆ.

ಪುರಂದರದಾಸರೇ ಮೊದಲಾದ ಹರಿದಾಸರುಗಳ ಕೀರ್ತನೆಗಳಿಂದ ಹರಿಕಥೆಯನ್ನು ಮಾಡುತ್ತಿರುವರು. ಇವರು ರೇಲ್ವೆಯಲ್ಲಿ ಗುಮಾಸ್ತರಾಗಿಯೂ ಈ ಕಾರ್ಯವನ್ನು ಮಾಡುತ್ತಿರುವರು.

## ೫೦೧ ಗುರುರಾಜದಾಸರು ಮಂಡ್ಯ

ಶ್ರೀ ಗುರುರಾಜದಾಸರು ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ಹಿರಿಯರು. ಕೀರ್ತನಕಲೆ ಇವರಿಗೆ ಸಹಜವಾಗಿ ಮೈಗೂಡಿ ಬಂದಿದೆ. ಇನ್ನೂ ತರುಣರೂ ಉತ್ಸಾಹಿಗಳೂ ಆಗಿರುವದರಿಂದ ಇವರಿಗೆ ಭವ್ಯ ಭವಿಷ್ಯ ಕಾದಿದೆ.

## ೫೦೨ ಭದ್ರಗಿರಿ ಕೇಶವದಾಸರು ಬೆಂಗಳೂರು

ಶ್ರೀ ಭದ್ರಗಿರಿ ಕೇಶವದಾಸರ ಹೆಸರು ಕೀರ್ತನ ಪ್ರಪಂಚದಲ್ಲಿ ಧ್ರುವತಾರೆಯಾಗಿದೆ. ಇವರು ಕನ್ನಡ, ಹಿಂದೀ, ಮರಾಠಿ, ಇಂಗ್ಲೀಷ ಭಾಷೆಗಳಲ್ಲಿ ಸಮರ್ಥ ರೀತಿಯಿಂದ ಕೀರ್ತನ ಮಾಡಬಲ್ಲವರು. ಅಂತರ್ರಾಷ್ಟ್ರೀಯ ಪಟ್ಟಣಗಳೆನಿಸಿದ ಮುಂಬೈ, ದಿಲ್ಲಿ, ಹೈದ್ರಾಬಾದ, ಮದ್ರಾಸಗಳಲ್ಲಿ ಕನ್ನಡ, ಹಿಂದೀ, ಇಂಗ್ಲೀಷುಗಳಲ್ಲಿ ಕೀರ್ತನ ಮಾಡಿ ಪ್ರಶಸ್ತಿ ಪಡೆದು ಕನ್ನಡ ನಾಡಿಗೆ ಕೀರ್ತಿ ತಂದಿದ್ದಾರೆ.

ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಳನಕ್ಕೆ ಕಾರಣಕರ್ತರಾದರು. ಬೆಂಗಳೂರಿನಲ್ಲಿ ದಾಸಾಶ್ರಮ, ಪುರಂದರ ಮಂದಿರ, ದಾಸವಾಣಿ, ಕೀರ್ತನ ಕಾಲೇಜಗಳ ಸಂಸ್ಥಾಪಕರು. ಇಷ್ಟೇ ಅಲ್ಲದೆ ಪಾಶ್ಚಾತ್ಯ ದೇಶಗಳಲ್ಲಿಯೂ ಈ ಕೀರ್ತನ ಸಂಪ್ರದಾಯವನ್ನು ಪ್ರಚಾರಗೊಳಿಸುತ್ತಿದ್ದಾರೆ.

## ೫೦೩ ಆರ್. ಶ್ರೀಶದಾಸರು ಉಡುಪಿ



ಇವರು ಉಡುಪಿ ಕುಂಜುಬೆಟ್ಟದಲ್ಲಿ ವಾಸವಾಗಿರುವರು. ಇವರ ತಂದೆಯ ಹೆಸರು ರಾಮಕೃಷ್ಣ ಭಟ್ಟರು.

ತಂದೆಯವರಲ್ಲಿ ವೇದಾಧ್ಯಯನ ಮಾಡಿ ಉಡುಪಿ ಸಂಸ್ಕೃತ ಪಾಠಶಾಲೆಯಲ್ಲಿ ಎಂಟ್ರನ್ಸ ವರೆಗೆ ಅಧ್ಯಯನ ಮಾಡಿ ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಲ್ಲಿ ವೇದಾಂತವನ್ನು ಸ್ವಲ್ಪಭಾಗ ಓದಿರುವರು.

ಇವರಿಗೆ ಸಂಗೀತ ಮೃದಂಗ ವಾದನಗಳಲ್ಲಿ ಗತಿ ಇದೆ. ಮುಂದೆ ಇವರು ಕರ್ನಾಟಕದ ಮೂಲೆ-ಮೂಲೆಗಳಲ್ಲಿ ಹರಿಕಥೆಗಳನ್ನು ಮಾಡಿ ಸುಪ್ರಸಿದ್ಧರಾಗಿರುವರು.

ಕೆಲವು ವರ್ಷಗಳ ಹಿಂದೆ ಉಡುಪಿಯ ವಸಂತ ಮಹಲಿನಲ್ಲಿ ರಾಮಾಯಣ, ಭಾಗವತ, ಭಾರತಾದಿಗಳನ್ನು ಹರಿಕಥಾ ರೂಪದಲ್ಲಿ ಹೇಳಿ ಕಾರ್ಯಕ್ರಮಗಳನ್ನು ನಡೆಯಿಸಿದರು.

ಇವರು "ಕೀರ್ತನಾಲಂಕಾರ", "ಹರಿಕಥಾ ವಿಶಾರದ", "ಕೀರ್ತನ ಚತುರ" ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದಾರೆ.

## ೫೦೪ ಗೋಪಾಲದಾಸರು ಬೆಂಗಳೂರು

ಮಧ್ವ ಸಿದ್ಧಾಂತ ವಿಚಾರಗಳನ್ನು ಸರಳವಾದ ರೀತಿಯಲ್ಲಿ ಪಂಡಿತ–ಪಾಮರ ರಂಜನೆಯಾಗುವಂತೆ ಹರಿಕಥಾ ರೂಪದಲ್ಲಿ ಹೇಳುವದು ಇವರ ವೈಶಿಷ್ಟ್ಯ. ಶ್ರೀ ದಾಸರು ಕಳೆದ ೩೦ ವರ್ಷಗಳಿಂದ ಹರಿಕಥಾ ಕಾರ್ಯ ಮಾಡುತ್ತಿರುವದು ಅಖಿಲ ಕರ್ನಾಟಕವೇ ಅರಿತಿದೆ.

ಸಂಸ್ಕೃತ ಸಾಹಿತ್ಯದಲ್ಲಿ ನಿಪುಣರಾಗಿ, ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡಿ, ಪ್ರಮೇಯ ಭಾಗವನ್ನೆಲ್ಲ ಚೆನ್ನಾಗಿ ಅರಿತ ದಾಸರ ಹರಿಕತೆಗೆ ಸಾಹಿತ್ಯ, ಸಂಗೀತದ ಮಾಧುರ್ಯದೊಂದಿಗೆ ವೇದಾಂತದ ಗಾಂಭೀರ್ಯವೂ ಸೇರಿ ಪಂಡಿತ ರಂಜನೆಯೂ ಆಗುತ್ತದೆ. ಪಾಮರ ಪ್ರೀಣನವೂ ಆಗುತ್ತದೆ.

ದಾಸ ಸಾಹಿತ್ಯ, ವ್ಯಾಸ ಸಾಹಿತ್ಯ ಎರಡರದೂ ಪರಿಚಯ–ಪಾಂಡಿತ್ಯಗಳುಳ್ಳ ಗೋಪಾಲದಾಸರು "ಹರಿದಾಸ ಭಾರತೀ" ಎಂಬ ದಾಸ ಸಾಹಿತ್ಯದ ಮಾಸ ಪತ್ರಿಕೆಯನ್ನು ಅನೇಕ ವರ್ಷಕಾಲ ನಡೆಯಿಸಿ, ಅಪ್ರಕಾಶಿತವಾದ ದಾಸ ವಾಙ್ಮಯವನ್ನು ಪ್ರಕಟಗೊಳಿಸಿ, ದಾಸ ಸಾಹಿತ್ಯದ ಅನೇಕ ಸೂಕ್ಷ್ಮ ರಹಸ್ಯಾರ್ಥಗಳನ್ನು ಜನರಿಗೆ ತಿಳಿಸಿಕೊಟ್ಟಿದ್ದಾರೆ. ಉಪಯುಕ್ತವಾದ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಹೀಗೆ ಕಾಯೇನ, ವಾಚಾ, ಮನಸಾ ತ್ರಿಕರಣದಿಂದ ಹರಿದಾಸ ಸಾಹಿತ್ಯದ ಮೇಲ್ಮೆಗಾಗಿ ದಾಸರು ದುಡಿಯುತ್ತಿದ್ದಾರೆ.

## ೫೦೫ ಸೋಸಲೆ ನಾರಾಯಣದಾಸರು, ಬೆಂಗಳೂರು

ಇವರು ಸುಪ್ರಸಿದ್ಧ ಕೀರ್ತನಕಾರರು. ಇವರ ತಂದೆಯವರಾದ ದಿವಂಗತ ತಾಳ ಬ್ರಹ್ಮರು ಎನಿಸಿದ ಸೋಸಲೆ ರಾಮದಾಸರು ಕೀರ್ತನ ಪ್ರಪಂಚಕ್ಕೆ ಮುಕುಟ ಪ್ರಾಯರಾಗಿದ್ದರು.

ಶ್ರೀ ನಾರಾಯಣದಾಸರ ಕೀರ್ತನದಲ್ಲಿ ಸಂಗೀತದ ಬೆಡಗು, ಸಾಹಿತ್ಯದ ಸೊಬಗು ಎರಡನ್ನೂ ಕಾಣಬಹುದು. ಇವರ ಕೀರ್ತನವೆಂದರೆ ಕೀರ್ತನ ಪ್ರೇಮಿಗಳಿಗೆ ಪಂಚ ಪ್ರಾಣ. ಇವರ ತಂದೆ ಕೀರ್ತನಕಾರರು. ಇವರ ಮಗ ಕೀರ್ತನಕಾರ. ಕೀರ್ತನ ಕಲೆ ಇವರ ಮನೆತನಕ್ಕೆ ಬಳುವಳಿಯಾಗಿ ಬಂದಿದೆ.

## ೫೦೬ ಭದ್ರಗಿರಿ ಸರ್ವೋತ್ತಮದಾಸ

ಶ್ರೀಯುತರು ಭದ್ರಗಿರಿ ಸಹೋದರರಲ್ಲಿ ಮೂರನೆಯವರು. ದಾಸಾಶ್ರಮದ ಎಲ್ಲ ಪ್ರಕಟಣೆಗಳ ಹಾಗೂ ಪತ್ರಿಕೆಗಳ ಪ್ರಕಾಶಕರು, ಪದವೀಧರರು. ಉತ್ತಮ ಕೀರ್ತನಕಾರರೂ, ವಾಗ್ಮಿಗಳೂ, ನಾಟಕಕಲೆಯಲ್ಲಿ ನಿಷ್ಣಾತರೂ ಆಗಿರುವರು. ಆಂಗ್ಲ ಭಾಷೆಯಲ್ಲಿ ಅದ್ಭುತ ಪ್ರೌಢಿಮೆ ಉಳ್ಳವರು.

## ೫೦೭ ಭದ್ರಗಿರಿ ಅಚ್ಯುತದಾಸರು, ಬೆಂಗಳೂರು

ಭದ್ರಗಿರಿ ಸಹೋದರರಲ್ಲಿ ಹಿರಿಯವರಾದ ಇವರು ದಾಸಾಶ್ರಮ, ಪುರಂದರ ವಿಠ್ಠಲ ಮಂದಿರ, ದಾಸ ಕೀರ್ತನ ಕಾಲೇಜು ಮುಂತಾದ ಸಂಸ್ಥೆಗಳ ಅಧ್ಯಕ್ಷರು. ಭಕ್ತಿ ಸಂಪನ್ನರಾದ ಇವರು ಕನ್ನಡ, ಹಿಂದಿ, ಮರಾಠಿಗಳಲ್ಲಿ ಕೀರ್ತನ ಮಾಡುತ್ತಾರೆ. ಉತ್ತರ ಭಾರತದಲ್ಲಿ ವಿಶೇಷ ಪರಿಚಿತರಾಗಿರುತ್ತಾರೆ.

## ೫೦೮ ರಾಮಚಂದ್ರರಾವ ಮೂರಟಿಗೆ ದಾವಣಗೆರೆ

ಶ್ರೀಯುತರು ಪ್ರತಿಭಾಸಂಪನ್ನರು, ಪಂಡಿತರು, ಸುಸಂಸ್ಕೃತಜ್ಞರು, ಇವರು ದಾಸಸಾಹಿತ್ಯ, ವೈದಿಕ ಸಾಹಿತ್ಯದಲ್ಲಿ ಪ್ರಾಜ್ಞರು. ಕೀರ್ತನ ಕಲೆಗೆ ಇವರು ಕಲಶಪ್ರಾಯರು. ವಿದ್ಯೆ, ವಿನಯ, ಕೌಶಲ್ಯವೇ ಇವರ ಕೀರ್ತನೆಗೆ ಮೆರಗನ್ನು ತಂದಿವೆ.

## ೫೦೯ ಸೇತುಮಾಧವಾಚಾರ್ಯ, ಬೆಂಗಳೂರು

ಶ್ರೀ ಸೇತುಮಾಧವಾಚಾರ್ಯರು ಒಳ್ಳೇ ಕೀರ್ತನಕಾರರು. ಕೀರ್ತನೆಯಲ್ಲಿ ಪಾಂಡಿತ್ಯ ಪ್ರದರ್ಶನಕ್ಕಿಂತ ಭಕ್ತಿಯೇ ಮುಖ್ಯವೆಂದು ತಿಳಿದವರಲ್ಲಿ ಇವರೊಬ್ಬರು. ಭಕ್ತಿಯು ಜನತೆಯ ಹೃದಯವನ್ನು ಮುಟ್ಟಿ ಅವರನ್ನು ಸಂಸ್ಕರಿಸುತ್ತದೆಂದು ಹೇಳುತ್ತಾರೆ ಇವರು.

ಶ್ರೀ ಸೇತುಮಾಧವಾಚಾರ್ಯರು ತಮ್ಮ ಕೀರ್ತನದಲ್ಲಿ ಭಕ್ತಿ ಮಾರ್ಗವನ್ನು ಪರಿಣಾಮಕಾರಿಯಾಗಿ ನಿರೂಪಿಸಬಲ್ಲರು. ನಿಷ್ಠಾವಂತರೂ, ವಿದ್ಯಾವಿನಯ ಸಂಪನ್ನರೂ ಆದ ಇವರು ಕರ್ನಾಟಕದಲ್ಲೆಲ್ಲ ಚಿರಪರಿಚಿತರು.

## ೫೧೦ ಹಂಡೆ ಗುರುವೇದವ್ಯಾಸದಾಸರು, ಬೆಂಗಳೂರು

ಇವರು ಶ್ರೇಷ್ಠ ಕೀರ್ತನಕಾರರು. ಕೀರ್ತನ ಕಲೆಯು ಇವರಿಗೆ ಹುಟ್ಟಿನಿಂದ ಮೈಗೂಡಿ ಬಂದಿದೆ. ಇವರ ತಂದೆ ದಿ. ಹಂಡೆ ಶ್ರೀಪಾದದಾಸರು ಕೀರ್ತನ ಕಲೆಗೆ ಆಚಾರ್ಯಪುರುಷರು. ಹರಿದಾಸ ವಿಜಯ ಪ್ರಕಾಶನಾದಿ ಗ್ರಂಥ ಮಾಲೆ ಪ್ರಕಟಿಸಿದ್ದಾರೆ. ಮದ್ರಾಸ, ಮುಂಬೈ, ಆಂಧ್ರ, ಕರ್ನಾಟಕಗಳಲ್ಲಿ ಕೀರ್ತನಗಳನ್ನು ಮಾಡಿ ಧರ್ಮ ಪ್ರಚಾರ ಮಾಡುತ್ತಲಿದ್ದಾರೆ. ಇವರು ಸಂಗೀತದಲ್ಲಿ ಸವ್ಯಸಾಚಿಗಳು. ಔತ್ತರೇಯ, ದಾಕ್ಷಣಾತ್ಯ ಸಂಗೀತ ಎರಡರಲ್ಲಿಯೂ ಪ್ರವೀಣರು.

ಇವರು ಕೀರ್ತನಕ್ಕೆ ಉಪಯುಕ್ತ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಅನೇಕ ಶಿಷ್ಯ-ಶಿಷ್ಯೆಯರನ್ನು ಪಡೆದಿದ್ದಾರೆ. ಅನೇಕ ಬಿರುದು ಪ್ರಶಸ್ತಿಗಳನ್ನು ಮಠಮಾನ್ಯರಿಂದ ಪಡೆದಿರುವರು. ಇವರು ಕೀರ್ತನ ಪ್ರಪಂಚದಲ್ಲಿ ಕ್ರಾಂತಿಯನ್ನೇ ಮಾಡಿದ್ದಾರೆ.

ಈಗ ಇವರು ಅಖಿಲ ಭಾರತ ಮಾಧ್ವ ಮಹಾ ಮಂಡಳದ ಪ್ರಚಾರಕರಾಗಿ ಹರಿ-ಗುರುಗಳ ಸೇವೆ ಮಾಡುತ್ತಲಿರುವರು.

### ೫೧೧ ಟಿ. ಕೆ. ವೇಣುಗೋಪಾಲದಾಸ, ಬೆಂಗಳೂರ

ಹರಿಕಥಾಂಬುದಿ ಚಂದ್ರರಾದ ಶ್ರೀ ವೇಣುಗೋಪಾಲದಾಸರು ಕರ್ನಾಟಕದ ಹಿರಿಯ ಕೀರ್ತನಕಾರರು. ಕೀರ್ತನ ಪ್ರೇಮಿಗಳಿಗೆ ಚಿರಪರಿಚಿತರು. ಘನ ಪಂಡಿತರು. ಜೊತೆಗೆ ಜ್ಞಾನಭಕ್ತಿ ಸಂಪನ್ನರು. ಬೆಂಗಳೂರಿನಲ್ಲೂ ಹೊರ ಕರ್ನಾಟಕದಲ್ಲೂ ಬಹಳ ಪ್ರಸಿದ್ಧರು. ಇವರು ಅನೇಕ ಬಿರುದು ಪ್ರಶಸ್ತಿ ಪತ್ರ ಪಡೆದಿರುವರು. ದಾಸ ಸಾಹಿತ್ಯದಲ್ಲಿ ಸಂಶೋಧನೆ ನಡೆಸಿರುವ ಇವರು ಹರಿದಾಸ ವಾಙ್ಮಯ ಪ್ರಚಾರ ಸಭೆಯ ಉಪಾಧ್ಯಕ್ಷರಾಗಿದ್ದಾರೆ.

### ೫೧೨ ಶ್ರೀನಿವಾಸದಾಸರು, ಶಿವಮೊಗ್ಗಾ

ಶ್ರೀನಿವಾಸದಾಸರ ಹೆಸರು ಕೀರ್ತನ ಪ್ರಪಂಚದಲ್ಲಿ ಚಿರಪರಿಚಿತ. ಇವರು ಕಳೆದ ೨೫ ವರ್ಷಗಳಿಗಿಂತ ಹೆಚ್ಚು ಕಾಲ ಹರಿಕಥಾ ಕಾಲಕ್ಷೇಪವನ್ನು ಮಾಡುತ್ತ ಜನರಲ್ಲಿ ಭಕ್ತಿಯನ್ನುಂಟು ಮಾಡುತ್ತಲಿರುವರು. ಇವರ ಕೀರ್ತನಗಳೆಂದರೆ ಭಕ್ತರಿಗೆ ರಸದೌತಣ. ಕರ್ನಾಟಕ, ಮದ್ರಾಸ, ಮುಂಬೈ ಪ್ರಾಂತಗಳಲ್ಲಿ ಕೀರ್ತನೆ ಮಾಡಿ ಮಠಮಾನ್ಯಗಳಿಂದಲೂ, ಮಹಾಜನರಿಂದಲೂ ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡಿರುತ್ತಾರೆ.

### ೫೧೩ ಟಿ. ವ್ಹಿ. ಜಯಸಿಂಹದಾಸ, ಬೆಂಗಳೂರು

ಉತ್ತಮ ಕೀರ್ತನ ಮಾಡಬಲ್ಲ ಕೆಲವೇ ಕೀರ್ತನಕಾರರಲ್ಲಿ ಇವರೊಬ್ಬರು. ಇವರು ಶ್ರೇಷ್ಠ ಶಿಕ್ಷಕರೂ ಆಗಿದ್ದಾರೆ. ಕೀರ್ತನದ ರೀತಿ ವೈಶಿಷ್ಟ್ಯಗಳನ್ನು ಚನ್ನಾಗಿ ನಿರೂಪಿಸಿ ಉತ್ತಮ ಕೀರ್ತನಕಾರರನ್ನು ತಯಾರಿಸಬಲ್ಲರು. "ಹರಿಕಥಾಸಿಂಹ" ಎಂಬ ಬಿರುದನ್ನು ಪಡೆದಿರುವರು. ಆನುವಂಶಿಕವಾಗಿ ಕೀರ್ತನ ಕಲೆ ಇವರಿಗೆ ಬಳುವಳಿಯಾಗಿ ಬಂದಿದೆ. ಇವರು ಶ್ರೀ ಗೋಪಿನಾಥದಾಸರ ಸಹೋದರರು.

ಪ್ರಭಾತ ಶಿಶುವಿಹಾರ, ಪ್ರಭಾತ ಕಲಾವಿದ ಸಂಘ ಮುಂತಾದ ಸಂಘ-ಸಂಸ್ಥೆಗಳಲ್ಲಿ ಇವರ ಪ್ರಮುಖ ಹೊಣೆಯಿದೆ.

### ೫೧೪ ದಾಸಪ್ಪದಾಸ, ಲಕ್ಷ್ಮಣದಾಸ, ನಾಗೇಂದ್ರದಾಸ ಬೆಂಗಳೂರ

ಇವರು ದಾಸಕೀರ್ತನ ಕಾಲೇಜಿನ ವಿದ್ಯಾರ್ಥಿಗಳು ನಿಸ್ಪೃಹ ವೃತ್ತಿಯಿಂದ ದಾಸಾಶ್ರಮದ ಅಭ್ಯುದಯಕ್ಕೆ ದುಡಿಯುವವರು. ನಿಷ್ಠಾವಂತರಾದ ಇವರ ನಿಷ್ಕಾಮ ಸೇವೆ ಆದರ್ಶವಾದುದು.

### ೫೧೫ ಎನ್. ಅನಂತ ಕಾಮತ ಬೆಂಗಳೂರ

ಶ್ರೀಯುತರು ದಾಸರ ಕೀರ್ತನೆಗಳನ್ನು ಚೆನ್ನಾಗಿ ಹಾಡಬಲ್ಲರು. ಅನೇಕ ಹರಿದಾಸರ ಸೇವೆ ಸಲ್ಲಿಸಿದವರು. ಇವರು ದಾಸಾಶ್ರಮದ ಕಾಲೇಜಿನ ವಿದ್ಯಾರ್ಥಿಗಳಿಗೆ ಸಲಹೆಗಾರರು.

# ದಾಸ ಸಾಹಿತ್ಯ

ದಾಸ ಸಾಹಿತ್ಯದ ಮೂಲ ಬೇರುಗಳನ್ನು ನಾವು ಋಗ್ವೇದದ ಮೂಲ ಮಂತ್ರ ಗಳಲ್ಲಿಯೇ ಕಾಣಬಹುದು. ಋಗ್ವೇದದ ಋಷಿಗಳು ಸೃಷ್ಟಿಯ ಆಗು ಹೋಗು ಗಳಲ್ಲಿಯೂ ಪ್ರಕೃತಿಯ ಪಟಪರಿವರ್ತನೆಯಲ್ಲಿಯೂ ಮಾನವೀಯ ಜೀವನದ ಪತನ, ಪುನರುತ್ಥಾನಗಳಲ್ಲಿಯೂ ಪರಶಕ್ತಿಯ ಕೈವಾಡವನ್ನು ಕಂಡು ಹೃದಯ ತುಂಬಿ ಬಾಯಿ ತುಂಬಿ ಕೊಂಡಾಡಿದ್ದಾರೆ. ಋಗ್ವೇದದ ವಿಷ್ಣುಸೂಕ್ತ, ಇಂದ್ರಸೂಕ್ತ, ಅಗ್ನಿ ಸೂಕ್ತಗಳಲ್ಲಿ ಆ ದೇವದೇವನನ್ನು ಕುರಿತು ಭಕ್ತಿಭಾವಭರಿತರಾಗಿ ಪ್ರಾಗೈತಿ ಹಾಸಿಕಕಾಲದ ಆ ಆದಿ ಮುನಿಗಳು ದಾಸ್ಯಭಾವದಿಂದ ಆತ್ಮನಿವೇದನ ಮಾಡಿದ್ದು ಕಂಡುಬರುತ್ತಿದೆ.

ಮುಂದೆ ಉಪನಿಷತ್ಕಾಲದಲ್ಲಿ ಈ ದಾಸ್ಯ ಭಾವನೆಯು ಇನ್ನೂ ಅಭಿವೃದ್ಧಿ ಹೊಂದಿ ಪುರಾಣಗಳಲ್ಲಿ ಪರಿಪೂರ್ಣತೆಯನ್ನು ಕಂಡಿದೆ. ಶ್ರೀ ಮದ್ಭಾಗವತದಲ್ಲಿ ಯಂತೂ ಪ್ರಲ್ಹಾದರಾಜರು ಭಕ್ತಿಯೋಗದ ಒಂಬತ್ತು ಅಂಗಗಳಲ್ಲಿ ದಾಸ್ಯವನ್ನೂ ಪರಿಗಣಿಸಿದ್ದಾರೆ.

ಶ್ರೀಮದಾನಂದ ತೀರ್ಥರು ಬಹು ಕಾಲದಿಂದ ರೂಢವಾಗಿ ಬಂದ "ಸೋऽಹಂ" ಭಾವವನ್ನು ಖಂಡಿಸಿ "ದಾಸೋऽಹಂ" ಭಾವನೆ ಈಶಸೇವನೆಗಳಿಂದಲೇ ಮುಕ್ತಿ ಎಂದು ಯುಕ್ತಿಯುಕ್ತವಾಗಿ ಸಾಧಿಸಿ ತೋರಿಸಿದರು.

ಗುರುಮಧ್ವರ ಪ್ರಥಮ ಅವತಾರವಾದ ಹನುಮದ್ರೂಪದಲ್ಲಿ ರಾವಣನ ಆಸ್ಥಾನಕ್ಕೆ ಹೋದಾಗ

"ದಾಸೋऽಹಂ ಕೋಸಲೇಂದ್ರಸ್ಯ ರಾಮಸ್ಯ ಹಿ ಮಹಾತ್ಮನಃ"

ಎಂದು ನಿಸ್ಸಂಕೋಚವಾಗಿ ನುಡಿದು ಆ ಪ್ರಾಣದೇವರೇ ಶ್ರೀಕಾರ ಹಾಕಿ ದ್ದಾರೆ. ಶ್ರೀ ಶ್ರೀ ದಾಸ ಸಾಹಿತ್ಯಕ್ಕೆ ಶ್ರೀ ಮದಾನಂದತೀರ್ಥರು ತಮ್ಮ ಗ್ರಂಥಗಳಲ್ಲಿ ಈ ಭಗವದ್ದಾಸ್ಯಭಾವಕ್ಕೆ ಪುಷ್ಟಿ ವೈಶಿಷ್ಟ್ಯಗಳನ್ನು ತಂದು ತೋರಿಸುವ ಅನೇಕ ಪದ್ಯ ಗಳನ್ನು ಶ್ರುತಿ, ಸ್ಮೃತಿ ಪುರಾಣಗಳಿಂದ ಎತ್ತಿತೋರಿಸಿ ಸಂಗ್ರಹಿಸಿ ಕೃಷ್ಣಾಮೃತ ಮಹಾರ್ಣವಾದಿ ಗ್ರಂಥಗಳಲ್ಲಿ ಕೂಡಿಸಿ ಇಟ್ಟಿದ್ದಾರೆ.

"ತ್ವಯೋಪಭುಕ್ತ ಸ್ರಗ್ಗಂಧ ವಾಸೋಲಂಕಾರಚರ್ಚಿತಾಃ
ಉಚ್ಛಿಷ್ಟ ಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ"

ಮುಂತಾದ ಅಭಿಯುಕ್ತೋಕ್ತಿಗಳನ್ನು ಉದಾಹರಿಸಿ ದಾಸ್ಯ ಭಾವದ ಮೇಲ್ಮೆ, ಮಹಿಮೆ ಮುಂತಾದ ಗುಣಗಳನ್ನು ಪ್ರಖ್ಯಾಪಿಸಿದ್ದಾರೆ.

ಪಂಚರಾತ್ರಾಗಮದಲ್ಲಿ ಸ್ವಯಂ ಬ್ರಹ್ಮದೇವರು ಭಗವಂತನನ್ನು ಕುರಿತು—

'ತವ ದಾಸ್ಯೈಕ ಭಾವೇಸ್ಯಾತ್ ಸದಾ ಸರ್ವತ್ರ ಮೇ ರತಿಃ'

'ನಿತ್ಯಂ ಕಿಂಕರ ಭಾವೇನ ಪರಿ ಗೃಹ್ಣೀಷ್ವಮಾಂ ವಿಭೋ'

'ಕಿಂಕರೋಽಸ್ಮಿ ಹೃಷೀಕೇಶ ಭೂಯೋಭೂಯೋಽಸ್ಮಿ ಕಿಂಕರಃ'

'ಚರೇಯಂ ಭಗವತ್ಪಾದ ಪರಿಚರ್ಯಾ ಸುವೃತ್ತಿಷು'

'ತವದಾಸೋಽಸ್ಮಿ ಕೇವಲಂ'

ಮುಂತಾದ ಅನೇಕ ವಚನಗಳಿಂದ ತಮ್ಮ ದಾಸ್ಯ ಭಾವವನ್ನು ನಿವೇದನ ಮಾಡಿದ್ದಾರೆ.

ಶ್ರೀ ಮಧ್ವಾಚಾರ್ಯರು ರಚಿಸಿದ ಶ್ರೀಮದ್ವಾದಶ ಸ್ತೋತ್ರವು ದಾಸ್ಯ ಭಾವದ ಅತ್ಯುತ್ತಮವಾದ ಇತ್ತೀಚಿನ ಯುಗದ ಪ್ರಥಮಾವಿಷ್ಕಾರವಾಗಿದೆ. ಈ ದ್ವಾದಶ ಸ್ತೋತ್ರದ ಉದ್ದಕ್ಕೂ

"ಭವ ಮಮ ಶರಣಂ"

"ಕರುಣಾಪೂರ್ಣ ವರಪ್ರದಚರಿತಂ ಜ್ಞಾಪಯ ಮೇ ತೆ"

"ಪ್ರೀಣಯಾಮೋ ವಾಸುದೇವಂ" ಎಂಬ ಮುಂತಾದ ಪಾದಪಲ್ಲವಿಗಳಲ್ಲಿ ದಾಸ್ಯ ಭಾವದ ಆತ್ಮಾರ್ಪಣೆಯ ಆರ್ತಭಾವನೆಯು ಅನುರಣಿಸುತ್ತದೆ.

ಶಾಸ್ತ್ರ ಸಂಸ್ಕಾರದಿಂದ ಹದಗೊಂಡ ಹೃದಯದಲ್ಲಿ ಉಕ್ಕುವ ಭಗವದ್ಭಕ್ತಿಗೆ ಗೀತರೀತಿಯಲ್ಲಿ ಅಭಿವ್ಯಕ್ತಿಗೆ ಅನುವು ಮಾಡಿ ಆಚಾರ್ಯರು ದಾಸಸಾಹಿತ್ಯಕ್ಕೆ ಆದ್ಯ ದ್ರಷ್ಟಾರರಾದ ಮಹಾ ಪುರುಷರಾಗಿದ್ದಾರೆ. ಪ್ರಥಮಾವತಾರದಲ್ಲಿ ವ್ಯಕ್ತ ಪಡೆದ ದಾಸ್ಯಭಾವದ ಸಮ್ಯಗಭಿವ್ಯಕ್ತಿಗೆ ಈ ತೃತೀಯಾವತಾರದಲ್ಲಿ ಸರಸ ಸುಂದರ ವಾದ ಸಾಹಿತ್ಯಕ ಸುವರ್ಣ ಮಾಧ್ಯಮವನ್ನು ಗೊತ್ತುಪಡಿಸಿದ ಶ್ರೇಯಸ್ಸು ಶ್ರೀ ಮಧ್ವಾಚಾರ್ಯರಿಗೆ ಸಲ್ಲುತ್ತದೆ.

ಇದಕ್ಕಿಂತ ಪೂರ್ವದಲ್ಲಿ ಶಂಕರ, ರಾಮಾನುಜ, ವೇದಾಂತದೇಶಿಕ ಮುಂತಾದವರ ಕೃತಿ ಮಾತುಗಳಲ್ಲಿ ಭಕ್ತಿ ಭಾವವು ಹೂತು ನಿಂತಂತೆ ತೋರಿದರೂ ಅವುಗಳ ಅಂತರಂಗದಲ್ಲಿ ಅಡಗಿದ ಆತ್ಮೈಕ್ಯ ಭಾವನೆಯ ಬಿರುಸಿಡಿಲಿನಿಂದ ಅಲ್ಲಿ ಶುದ್ಧ ಶ್ರದ್ಧೆಯ ಶ್ರಾದ್ಧವಾಗಿ ನಿಜವಾದ ದಾಸ್ಯಭಾವವು ಹೂತು (ಹೂಳಿ) ಹೋಗಿವೆ. ಹೂಳಿಹೋಗಿವೆ.

ನಿಜವಾದ ಭಗವದ್ಭಕ್ತಿಗೆ ಮಧ್ವ ಮತದಲ್ಲಿ ಮಾತ್ರ ಇಂಬು ದೊರೆತದ್ದರಿಂದ ಮಾಧ್ವ ಸಂಪ್ರದಾಯದ ಮುನಿ ಮಹಾನುಭಾವ ಮನುಜ ಮಾನ್ಯ ಸಾಮಾನ್ಯರ ಹೃದಯ ಕ್ಷೇತ್ರಗಳಲ್ಲಿ ಭಕ್ತಿ ಭಾಗೀರಥಿಯು ತುಂಬಿಹರಿದಿದ್ದಾಳೆ. ಶತಕಾನುಶತಕಗಳಿಂದ ವಿಜೃಂಭಿಸಿ ಮೆರೆದಿದ್ದಾಳೆ.

ಇದನ್ನು ಅನುಲಕ್ಷಿಸಿಯೇ ಪದ್ಮಪುರಾಣದಲ್ಲಿ ಸಾಕ್ಷಾತ್ ಭಕ್ತಿದೇವಿಯು ತನ್ನ ಸ್ಥಿತಿ ಗತಿ ಪ್ರಗತಿಗಳನ್ನು ತಿಳಿಸುತ್ತ

" ವೃದ್ಧಿಂ ಕರ್ನಾಟಕೇ ಗತಾ "

ಎಂಬ ಕರ್ನಾಟಕದಲ್ಲಿಯೇ ಹುಟ್ಟಿ ಬೆಳೆದು ಬೆಳಗಿದ ಭಕ್ತಿ ಸಂಪ್ರದಾಯದ ಶುದ್ಧಿ ಸಿದ್ಧಿಗಳನ್ನು ಎತ್ತಿ ಹೇಳಿದ್ದಾಳೆ.

ಕರ್ನಾಟಕದಲ್ಲಿಯಾಗಲೀ ಅಥವಾ ಸಮಗ್ರ ಭರತಖಂಡದಲ್ಲಿಯಾಗಲೀ ಇಂಥ ಶಾಸ್ತ್ರಶುದ್ಧವಾದ, ಪ್ರಮಾಣಬದ್ಧವಾದ, ವಿರೋಧ ವ್ಯಾಹತಿ ವಿಸಂಗತಿಗಳಿಂದ ಮುಕ್ತವಾದ ಸುಭದ್ರ ಬುನಾದಿಯ ಮೇಲೆ ಭಕ್ತಿ ತತ್ವದ ಭವ್ಯ ಕಟ್ಟಡವನ್ನು ನಿರ್ಮಿಸಿದ ಇಂಥ ದಿವ್ಯ ದೇಶಿಕರು ಬೇರೊಬ್ಬರಿಲ್ಲ ಎಂದು ಎದೆತಟ್ಟಿ ಹೇಳಬಹುದು. ಆದುದರಿಂದಲೇ ದಾಸ ಸಾಹಿತ್ಯ ಎಂದರೆ ಮಾಧ್ವ ಸಂಪ್ರದಾಯದ ಹರಿದಾಸ ಸಾಹಿತ್ಯ ಎಂದೇ ಸಮೀಕರಣ ಮಾಡುವಂತಾಗಿದೆ.

# ದಾಸಕೂಟದ ಧುರೀಣರು

## ೧ ಶ್ರೀ ನರಹರಿತೀರ್ಥರು

ಶ್ರೀಮದಾನಂದ ತೀರ್ಥರಿಂದ ಪ್ರಾರಂಭವಾದ ಈ ದಾಸ ಸಾಹಿತ್ಯದ ಭಕ್ತಿ ಭಾಗೀರಥಿಯನ್ನು ದೇಶಭಾಷೆಯ ಕಿರು ಕಾಲುವೆಗಳಲ್ಲಿ ಹರಿಯಿಸಿ ಜನಸಾಮಾನ್ಯರ ಹೃದಯದ ಹೊಲಗಳಿಗೆಲ್ಲ ನೀರನ್ನು ಉಣ್ಣಿಸಿ, ಮನಸ್ಸನ್ನು ತಣಿಸಿ ತೃಪ್ತಿಯನ್ನು ತಂದುಕೊಟ್ಟ ಪುಣ್ಯ ಪುರುಷರೆಂದರೆ ಶ್ರೀ ಮನ್ಮಧ್ವಾಚಾರ್ಯರ ಸರ್ವಜ್ಞ ಪೀಠವನ್ನು ಆರೋಹಣ ಮಾಡಿದ ಶ್ರೀ ನರಹರಿ ತೀರ್ಥರು.

ಗಜಪತಿಯ ಭಾಂಡಾರದಿಂದ ಶ್ರೀ ಮೂಲ ರಾಮದೇವರನ್ನು ತಂದು ಶ್ರೀ ಸರ್ವಜ್ಞಾಚಾರ್ಯರಿಗೆ ಕೊಟ್ಟು ಅವರಿಂದಲೇ ಸನ್ಯಾಸಾಶ್ರಮ ಪಡೆದ ಇವರು ಶ್ರೀ ಪದ್ಮನಾಭ ತೀರ್ಥರ ಅನಂತರ ಸರ್ವಜ್ಞ ಸಿಂಹಾಸನವನ್ನು ಆರೋಹಣ ಮಾಡಿದರು. ಸಂಸ್ಕೃತದಲ್ಲಿ ಅನೇಕ ಶಾಸ್ತ್ರೀಯ ಉದ್ಗ್ರಂಥಗಳನ್ನು ಬರೆದಂತೆ ಕನ್ನಡದಲ್ಲಿಯೂ ನೂರಾರು ಹರಿಕೀರ್ತನೆಗಳನ್ನು ಬರೆದು ಕನ್ನಡದ ದಾಸಕೂಟಕ್ಕೆ ಆದ್ಯ ಪ್ರವರ್ತಕ

ರಾದ ಮೂಲ ಮಹರ್ಷಿಗಳಾದರು. ಆಗಮಗಳಲ್ಲಿಯ ಮಂತ್ರಸ್ತೋತ್ರಗಳಿದ್ದಂತೆ ನರಹರಿತೀರ್ಥರ ಕನ್ನಡ ರಾಗ, ತಾಲಬದ್ಧವಾದ ಗೀತಾನುಗೀತಗಳಲ್ಲಿ ನೈಚ್ಯಾನುಸಂಧಾನಪೂರ್ವಕವಾದ ಭಗವತ್ಪ್ರಶಸ್ತಿಯು ಪ್ರಮುಖವಾಗಿ ದೃಗ್ಗೋಚರ ವಾಗುತ್ತದೆ.*

ಶ್ರೀಮನ್ಮಧ್ವಾಚಾರ್ಯರ ಮುಖ್ಯ ಮಹಾ ಸಂಸ್ಥಾನದ ಅಧೀಶ್ವರರೂ ರಾಜತೇಜ, ಬ್ರಹ್ಮತೇಜಗಳ ಯಶಸ್ವಿಮೇಲಾಪಕರೂ ಸರ್ವಶಾಸ್ತ್ರನದೀಷ್ಣರೂ ಆದ ಶ್ರೀ ನರಹರಿತೀರ್ಥರು ಭಕ್ತಿಭಾಗೀರಥಿಯನ್ನು ಸಂಸ್ಕೃತದ ಸುವರ್ಣಶಿಖರದಿಂದ ದೇಶ ಭಾಷೆಯ ಪಾತಳಿಗೆ ತಂದು ಸರ್ವರಿಗೂ ಗಮ್ಯವಾಗುವಂತೆ ಎಲ್ಲರಿಗೂ ರಮ್ಯವಾಗು ವಂತೆ ಗೇಯದ ಗತ್ತಿನಲ್ಲಿ ತಾಲದ ಸುತ್ತಿನಲ್ಲಿ ರಾಗಬದ್ಧವಾಗಿ ಬಿತ್ತರಿಸಿದ್ದರಿಂದ ಈ ಪದ್ಧತಿಯು ಕೂಡಲೇ ಜನಪ್ರಿಯವಾಯಿತು. ಮಧ್ವ ಸಂಸ್ಥಾನಾಧಿಪತಿಗಳೇ ಕನ್ನಡದಲ್ಲಿ ಪದ್ಯಗಳನ್ನು ಕಟ್ಟಿ ಹಾಡತೊಡಗಿದ್ದರಿಂದ ಸಂಸ್ಕೃತ ಪಂಡಿತರ ಭಾಷಿಕ ಮಡಿವಂತಿಕೆಯ ಭಾವದಲ್ಲಿ ಬದಲಾಗಿ ಪಂಡಿತಪಾಮರರೆಲ್ಲರೂ ಭಕ್ತಿಯುಕ್ತವಾದ ಕನ್ನಡ ಪದ್ಯಗಳನ್ನು ಮೈಚಳಿ ಬಿಟ್ಟು ಹಾಡುವಂತಾಯಿತು. ಇದರಿಂದ ಮುಂದೆ ಕನ್ನಡದಲ್ಲಿ ದಾಸಸಾಹಿತ್ಯದ ಪ್ರಸಾರಕ್ಕೆ ಹಾದಿಯಾಯಿತು. ಇದೇ ಮುಂದಿನ ವಿಶ್ವ ವಿಶಾಲವಾದ ದಾಸಕೂಟದ ವಿರಾಡ್ ವಾಙ್ಮಯೀನ ವೈಭವಕ್ಕೆ ಆದಿಯಾಯಿತು. ಇವರ ಅಂಕಿತ ನರಹರಿ.

## ೨ ಶ್ರೀ ಶ್ರೀಪಾದರಾಜರು

ದಾಸ ಸಾಹಿತ್ಯಕ್ಕೆ ಶ್ರೀನರಹರಿತೀರ್ಥರು ಸಿದ್ಧಪಡಿಸಿದ ಉಚ್ಚ ವೇದಿಕೆಯ ಮೇಲೆ ಸುಂದರವಾದ ನಕ್ಷೆಯನ್ನು ಚಿತ್ರಿಸಲು ಮೊದಲು ಮಾಡಿದ ಮಹನೀಯ ರೆಂದರೆ ಶ್ರೀ ಶ್ರೀಪಾದರಾಜರು.

ಕ್ರಿ. ಶ. ಹದಿನೈದನೇ ಶತಮಾನದಲ್ಲಿ ಶ್ರೀಪದ್ಮನಾಭತೀರ್ಥರಿಂದ ಎಂಟನೇ ತಲೆಯವರಾದ ಶ್ರೀ ಸ್ವರ್ಣವರ್ಣತೀರ್ಥರಿಂದ ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಶ್ರೀ ಲಕ್ಷ್ಮೀನಾರಾಯಣ ಯೋಗಿಗಳೇ ಮುಂದೆ ಶ್ರೀಮದುತ್ತರಾದಿ ಮಠದ ಶ್ರೀ ರಘು ನಾಥತೀರ್ಥ ಶ್ರೀಪಾದಂಗಳವರಿಂದ ಶ್ರೀಪಾದರಾಜರೆಂದು ಬಿರುದು ಪಡೆದು ಮುಂದೆ ಅದೇ ಹೆಸರಿನಿಂದ ಪ್ರಸಿದ್ಧರಾದರು.

---

* ಈ ಮಹಾನುಭಾವರ ವಿಶದ ವಿಸ್ತಾರವಾದ ಚರಿತ್ರೆಯನ್ನು ಇದೇ ಗ್ರಂಥದ ೧೪೯ ರಿಂದ ೧೫೪ ನೇ ಪುಟದಲ್ಲಿ ಓದಿಕೊಳ್ಳಬೇಕು.

ಶ್ರೀ ರಾಘವೇಂದ್ರ ಮಠದ ಮೂಲ ಪುರುಷರಾದ ಶ್ರೀ ವಿಬುಧೇಂದ್ರತೀರ್ಥರಲ್ಲಿ ವ್ಯಾಸಂಗ ಮಾಡಿ ಪಂಡಿತ ಪ್ರಕಾಂಡರಾದ ಶ್ರೀಪಾದರಾಜರು ವಾಗ್ವಜ್ರಹಾರ ಮುಂತಾದ ಉದ್ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ.

ಇವರು ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ ಒಂದು ವೇದಾಂತ ವಿದ್ಯಾಪೀಠವನ್ನು ಸ್ಥಾಪಿಸಿ ಶ್ರೀ ಚಂದ್ರಿಕಾಚಾರ್ಯರೇ ಮುಂತಾದ ಅನೇಕ ಯತಿಗಳಿಗೂ ಗೃಹಸ್ಥರಿಗೂ ಪಾಠ ಹೇಳಿ ಪಂಡಿತರ ಒಂದು ತಂಡವನ್ನೇ ನಿರ್ಮಿಸಿದರು.*

ಶ್ರೀಪಾದರಾಜರು ವಿಠ್ಠಲನ ಅವಿಚ್ಛಿನ್ನ ಭಕ್ತರು. ಶ್ರೀ ಕೃಷ್ಣಭಕ್ತಿಯ ಪರಿಪಾಕವು ಅವರನ್ನು ದಾಸಕೂಟಕ್ಕೆ ಎಳೆದು ಆ ಭಕ್ತಿಯ ಪ್ರವಾಹವು ಕನ್ನಡದ ಚೆನ್ನುಡಿಗಳಲ್ಲಿ ಚೆಲ್ವವರಿದು ಹರಿಯುವಂತೆ ಮಾಡಿತು. ಶ್ರೀ ಕೃಷ್ಣನ ಭಾಗವತ ಪ್ರೋಕ್ತವಾದ ಬಾಲ ಲೀಲೆಗಳನ್ನೂ ಗೋಪಾಂಗನೆಯರೊಂದಿಗೆ ಆ ಮುರಲೀಧರನ ಶೃಂಗಾರ ಲೀಲಾವಿಲಾಸಗಳನ್ನೂ ರಸಭರಿತವಾಗಿ ಅವರು ಹಾಡಿ ಕೊಂಡಾಡಿದರು.

ಶ್ರೀಪಾದರಾಜರು ಜನಸಾಮಾನ್ಯರು ಪರಮತೀಯರ ಆಡು ಭಾಷೆಯಲ್ಲಿಯ ವಚನ ರಚನೆಗಳ ಬೆಡಗಿನ ನಡೆಗೆ ಮನಸೋತು ಅತ್ತಕಡೆ ವಾಲುತ್ತಿರುವದನ್ನು ಕಂಡು ಕೂಡಲೇ ಆದಕ್ಕೆ ತಕ್ಕ ಉಪಾಯ ಮಾಡಿದರು.

ಪ್ರಾಚೀನ ಪುರಾಣಗಳಲ್ಲಿ ಚಿತ್ರಿಸಿದ ಭಗವಂತನ ಮಹಿಮೆಗಳನ್ನು ಸರಳಗನ್ನಡ ಅರಳು ನುಡಿಗಳಲ್ಲಿ ಬಿಡಿಸಿ ಸುಂದರವಾಗಿ ಹಾಡಿದರು.

ಪೂಜೆ, ಉತ್ಸವ, ಸಮಾರಂಭಗಳಲ್ಲಿ ಕನ್ನಡದಲ್ಲಿ ಕೃಷ್ಣಲೀಲೆಯನ್ನು ಹಾಡುವ ಭಾಗವತರ ಗುಂಪೊಂದನ್ನು ನಿರ್ಮಿಸಿ ಅವರ ಮುಖಾಂತರ ದೇಶದಲ್ಲಿ ಹರಿಭಕ್ತಿಯ ಪ್ರಚಾರವನ್ನು ಮಾಡಿದರು. ಪ್ರತಿ ನಿತ್ಯವೂ ದೇವರ ಪೂಜೆಯ ಸಮಯದಲ್ಲಿ ನಿಗಮಾಗಮಗಳ ಮಂತ್ರ ಸ್ತೋತ್ರಗಳ ಜೊತೆಗೆ ಕನ್ನಡ ಭಕ್ತಿ ಗೀತೆಗಳನ್ನೂ ದೇವರ ನಾಮಗಳನ್ನೂ ಹಾಡಿ ಪಾಡುವ ಹೊಸ ಸಂಪ್ರದಾಯವನ್ನು ಪ್ರಾರಂಭಿಸಿದರು.

ಇದರಿಂದ ಕನ್ನಡ ಪದ್ಯಗಳಿಗೆ ಸಂಸ್ಕೃತ ಮಂತ್ರಗಳ ಸ್ಥಾನಮಾನ ದೊರೆತು ಕನ್ನಡವನ್ನು ಅಸಡ್ಡೆಯಿಂದ ಕಾಣುವ ಪಂಡಿತ ಪ್ರವೃತ್ತಿಯು ಖಂಡಿತವಾಯಿತು.

ಶ್ರೀಪಾದರಾಜರು ರಚಿಸಿದ ಭ್ರಮರಗೀತೆ, ಗೋಪೀಗೀತೆ, ವೇಣುಗೀತೆಗಳು ಭಾಗವತದ ಶುಕವಾಣಿಯ ಸೊಗಸೆಲ್ಲವೂ ಕನ್ನಡದ ಚನ್ನುಡಿಯಲ್ಲಿ ಕೆನೆಗಟ್ಟಿ ನಿಲ್ಲುವಂತೆ ಮಾಡಿವೆ. ಶ್ರೀಪಾದರಾಜರ ಉಳಿದ ದೇವರ ನಾಮಗಳಲ್ಲಿಯೂ ಭಾಗವತದ

---

* ಇವರ ವಿವರವಾದ ಚರಿತ್ರೆಯನ್ನು ಇದೇ ಗ್ರಂಥದ ೩೦೩ ರಿಂದ ೩೦೮ನೇ ಪುಟದಲ್ಲಿ ಓದಿರಿ.

ಕೃಷ್ಣಕಥಾ ನಿರೂಪಕ ನುಡಿಗಟ್ಟುಗಳಲ್ಲಿಯೂ ನಾದ ಮಾಧುರಿಯೂ ಅರ್ಥ ಚಾತುರಿಯೂ ಪ್ರತಿ ಪದಗಳಲ್ಲಿಯೂ ಎದ್ದು ತೋರುತ್ತವೆ.

ಇವರ ಕನ್ನಡ ಶೈಲಿಯ ಸೊಬಗಿಗೆ ದೃಷ್ಟಾಂತವಾಗಿ ಒಂದೆರಡು ಪದ್ಯಗಳನ್ನು ಮಾತ್ರ ಉದಾಹರಿಸುತ್ತೇವೆ. ಅವರ ಮಧ್ವನಾಮದಲ್ಲಿಯ ಒಂದು ಪದ್ಯ

"ಕರಣಾಭಿಮಾನಿ ಸುರರು ದೇಹವ ಬಿಡಲು ।
ಕುರುಡ, ಕಿವುಡ, ಮೂಕನೆಂದಿನಿಸುವ ॥
ಪರಮ ಮುಖ್ಯ ಪ್ರಾಣ ತೊಲಗಲಾ ದೇಹವನು ।
ಅರಿತು ಪೆಣನೆಂದು ಪೇಳ್ವರ ಬುಧಜನ ॥
ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ ।
ಪರತರನೆನಿಸಿ ನೇಮಿಸಿ ನೆಲೆಸಿಹ ॥
ಹರಿಯನಲ್ಲದೆ ಬಗೆಯ ಅನ್ಯರನು ಲೋಕದಲಿ ।
ಗುರುಕುಲತಿಲಕ ಮುಖ್ಯ ಪವಮಾನನು ॥
ಜಯ ಜಯ ಜಗತ್ರಾಣ ಜಗದೊಳಗೆ ಸತ್ರಾಣ ।
ನಿಖಿಲಗುಣ ಸದ್ಧಾಮ ಮಧ್ವನಾಮ ॥

ಎಂದು ಮುಂತಾಗಿ ಮುಖ್ಯ ಪ್ರಾಣದೇವರ ಉಪನಿಷತ್ಪ್ರತಿಪಾದ್ಯವಾದ ಮಹಾ ಮಹಿಮೆಯನ್ನು ಛಂದೋಬಂಧದಲ್ಲಿ ಅಂದಚಂದಾಗಿ ಬಣ್ಣಿಸಿದ್ದಾರೆ.

ಅವರ ಈ ಮಧ್ವನಾಮವು ೩೭ ಪದ್ಯಗಳಲ್ಲಿ ಭಾವಪೂರ್ಣವಾಗಿ ಹರಿದಿದ್ದು ಶ್ರೀಮನ್ಮಧ್ವಾಚಾರ್ಯರ ಮೂರೂ ಅವತಾರಗಳ ಚಾರು ಚರಿತ್ರೆಯನ್ನು ಮನೋಜ್ಞವಾದ ಶೈಲಿಯಲ್ಲಿ ಬಿತ್ತರಿಸಿದ್ದಾರೆ. ಆದರ ಕೊನೆಯಲ್ಲಿ—

"ಜಯ ಜಯತು ದುರ್ವಾದಿಮತ ತಿಮಿರ ಮಾರ್ತಾಂಡ ।
ಜಯ ಜಯತು ವಾದಿಗಜ ಪಂಚಾನನ ॥
ಜಯ ಜಯತು ಚಾರ್ವಾಕ ಗರ್ವಪರ್ವತ ಕುಲಿಶ ।
ಜಯ ಜಯ ಜಗನ್ನಾಥ ಮಧ್ವನಾಥ ॥"
ತುಂಗಕುಲ ಗುರುವರನ ಹೃತ್ಕಮಲದಲಿ ನಿಲಿಸಿ ।
ಭಂಗವಿಲ್ಲದ ಸುಖ ಸುಜನರಿಗೆ ಎಲ್ಲ ॥
ಹಿಂಗದಲೆ ಕೊಡುವ ನಮ್ಮ ಮಧ್ವಾಂತರಂಗದಲಿ ನಿಂತ ।
ರಂಗ ವಿಠಲನೆಂದು ಸಾರಿರೋ ॥"

ಇವೇ ಮುಂತಾದ ಶ್ರೀಪಾದರಾಜರ ಪದ ಪದ್ಯಗಳಲ್ಲಿಯ ಪ್ರಾಸದಗೇಯತೆಯು ಅರ್ಥದ ಉಪಾದೇಯತೆಗೆ ಅನುವು ಮಾಡಿ ಕೊಡುತ್ತದೆ.

ಶ್ರೀಪಾದರಾಜರ ಕೃತಿಗಳ ವೈಶಿಷ್ಟ್ಯವೆಂದರೆ ಲಾಲಿತ್ಯ ಪೂರ್ಣವಾದ ಸಾಹಿತ್ಯ ಶೈಲಿ. ಇವುಗಳ ಶೃಂಗಾರದ ಸೊಗಸು ಕೂಡ ಭಕ್ತಿಯ ಸೊಬಗಿಗೆ ಮೆರಗು ಕೊಟ್ಟು ಸಾತ್ವಿಕ ಭಾವಗಳ ತಾತ್ವಿಕ ಪರಿಣತಿಗೆ ಕಾರಣವಾಗುತ್ತದೆ. ಇವುಗಳಲ್ಲಿಯ ಅಲಂಕಾರ ಝುಂಕಾರವೂ ಪ್ರಾಸ ವಿಲಾಸವೂ ಅರ್ಥ ಚಮತ್ಕೃತಿಯೂ ಅವರ ವಿದಗ್ಧ ಶಿರಃಪಿಂಡದಲ್ಲಿ ಮಂಜುಳ ನಾದದಿಂದ ಹರಿಯುವ ಕವಿತಾ ನಿರ್ಝರ ಣಿಯ ಕಿಂಕಿಣಿಸಿನಾದದ ಗುರುತು ತೋರುತ್ತವೆ. ಇವರ ಮುದ್ರಿಕೆಯು ರಂಗವಿಠ್ಠಲ ಎಂದು ಇರುತ್ತದೆ.

## ೩ ಶ್ರೀವ್ಯಾಸತೀರ್ಥರು (ಚಂದ್ರಿಕಾಚಾರ್ಯರು)

ವಿಜಯನಗರ ಸಾಮ್ರಾಜ್ಯದ ಪರಮೋತ್ಕರ್ಷಕ್ಕೆ ಮುಖ್ಯರಾದ ಕಾರಣ ಪುರುಷರೆಂದರೆ ಶ್ರೀ ಚಂದ್ರಿಕಾಚಾರ್ಯರು. ಅವರ ಆಧ್ಯಾತ್ಮಿಕ ತೇಜಸ್ಸಿನ ಪ್ರಭಾವ ದಿಂದ ಇಷ್ಟು ದಿನ ಒಂದು ಪ್ರಾದೇಶಿಕ ರಾಜ್ಯವೆಂದು ಪರಿಗಣಿತವಾದ ಕರ್ನಾಟಕ ಸಾಮ್ರಾಜ್ಯವು ಅಖಂಡ ಭರತ ಖಂಡವಲ್ಲಿಯೇ ಒಂದು ಪ್ರಚಂಡ ಶಕ್ತಿಯಾಗಿ ತಲೆ ಎತ್ತಿ ನಿಲ್ಲುವಂತಾಯಿತು.

ಇವರಂತೆ ವೇದಾಂತ ಪ್ರಪಂಚದಲ್ಲಿಯೂ ಅವರು ಸಾಧಿಸಿದ ಕಾರ್ಯ ಅಷ್ಟಿಷ್ಟಲ್ಲ.

ಮೈಸೂರು ದೇಶದ ಬನ್ನೂರ ಗ್ರಾಮದಲ್ಲಿ ಜನಿಸಿ ಶ್ರೀ ರಾಜೇಂದ್ರ ತೀರ್ಥರ ಪರಂಪರೆಯ ಶ್ರೀ ಬ್ರಹ್ಮಣ್ಯ ತೀರ್ಥರಿಂದ ಸನ್ಯಾಸಾಶ್ರಮ ಪಡೆದು ಶ್ರೀಪಾದರಾಜ ರಲ್ಲಿ ವಿದ್ಯಾವ್ಯಾಸಂಗ ಮಾಡಿ ಪಂಡಿತ ಪ್ರಪಂಚಕ್ಕೆ ಇವರು ಮಂಡನಮಣಿ ಗಳಾದರು. ಇವರು ರಚಿಸಿದ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಎಂಬ ಮೂರು ಗ್ರಂಥಗಳು ಸಾರಸ್ವತ ಪ್ರಪಂಚದ ಮೂರು ರತ್ನಗಳೆಂದು ವ್ಯಾಸತ್ರಯ ವೆಂದೂ ಪ್ರಸಿದ್ಧವಾಗಿವೆ.

ಇವರ ಅತ್ಯದ್ಭುತವಾದ ಪ್ರತಿಭೆ, ಪಾಂಡಿತ್ಯ, ತಪಸ್ಸು, ಸಿದ್ಧಿ, ಸರ್ವತೋ ಭದ್ರವಾದ ಬುದ್ಧಿಗಳನ್ನು ಕಂಡು ಕನ್ನಡರಾಜ್ಯ ರಮಾರಮಣನಾದ ವಿಜಯನಗರ ಸಮ್ರಾಟ ಕೃಷ್ಣರಾಜನು ಇವರ ಶಿಷ್ಯನಾದನು. ಇವರನ್ನು ಭಕ್ತಿಯಿಂದ ತನ್ನ ರಾಜಧಾನಿಗೆ ಕರತಂದು ಕನಕಾಭಿಷೇಕ ಮಾಡಿ ತನ್ನ ಕುಲಗುರುವನ್ನಾಗಿ ಮಾಡಿ ಇಟ್ಟುಕೊಂಡನು. ಶ್ರೀ ವ್ಯಾಸರಾಜರು ಕನ್ನಡ ಸಾಮ್ರಾಜ್ಯಕ್ಕೂ ಅದರ ಸಾರ್ವ ಭೌಮನಿಗೂ ಬಂದ ಎಲ್ಲ ತೊಂದರೆ ಸಂಕಟಗಳನ್ನೂ, ಕುಯೋಗ, ಕುಹುಯೋಗ ಗಳನ್ನೂ ಪರಿಹರಿಸಿ ಕಾಪಾಡಿದರು. ಕನ್ನಡದ ದೊರೆಯನ್ನು ಸಾವಿನಿಂದ ಪಾರು ಮಾಡಿದರು.

ಕನ್ನಡದ ರಾಜಧಾನಿಯಲ್ಲಿ ವೇದಾಂತ ವಿಶ್ವವಿದ್ಯಾಲಯವನ್ನು ತೆರೆದರು. ಕಾಶಿ, ಕಂಚಿ, ಕುಂಭಕೋಣ, ಉಡುಪಿ, ಬಂಗಾಲ, ಮುಂತಾದ ಬೇರೆ ಬೇರೆ ಪ್ರಾಂತಗಳಲ್ಲಿ ಈ ವಿಶ್ವವಿದ್ಯಾಲಯದ ಶಾಖಾ ವಿದ್ಯಾಪೀಠಗಳನ್ನು ಸ್ಥಾಪಿಸಿ ಮಹಾ ಪಂಡಿತೋತ್ತಮ ರನ್ನು ನೇಮಿಸಿ, ಮಧ್ವಸಿದ್ಧಾಂತದ ವಿಶ್ವವ್ಯಾಪಿ ಪ್ರಸಾರ ಕಾರ್ಯವನ್ನು ಕೈಕೊಂಡರು. ವಿಜಯೀಂದ್ರ, ವಾದಿರಾಜ, ಗೋವಿಂದ ಒಡೆಯರು ಮುಂತಾದ ಅಸಂಖ್ಯ ದಿಗ್ಗಜ ಪಂಡಿತರನ್ನು ನಿರ್ಮಾಣ ಮಾಡಿ ದ್ವೈತ ತತ್ವಜ್ಞಾನವು ಸರ್ವತ್ರ ಸುಪ್ರತಿಷ್ಠಿತವಾಗು ವಂತೆ ಏರ್ಪಡಿಸಿದರು.

ಇಷ್ಟು ಮಾತ್ರವಲ್ಲದೇ ಜನಸಾಮಾನ್ಯರಲ್ಲಿ ಮಧ್ವ ಸಿದ್ಧಾಂತದ ಬಗೆಗೆ ಅರಿವು ಮೂಡಿ ಅದರ ಹುಟ್ಟಿ ತತ್ವಪ್ರಸಾರ ಕಾರ್ಯವು ಭರದಿಂದ ಆಗಬೇಕು ಎಂದು ದೂರಾ ಲೋಚನೆ ಮಾಡಿ ಪುರಂದರದಾಸ, ವೈಕುಂಠದಾಸ, ಕನಕದಾಸರಂಥ ದಾಸಕೂಟ ಧುರೀಣರನ್ನು ತಮ್ಮ ವೇದಾಂತದ ಗರಡಿಯಲ್ಲಿ ತರಬೇತು ಗೊಳಿಸಿದರು. ಅವರಿಂದ ಕನ್ನಡದಲ್ಲಿ ಆಧ್ಯಾತ್ಮಿಕ ಗೀತಗಳನ್ನು ಬರೆಸಿದರು. ಊರು ಊರಿಗೆ ಹೋಗಿ, ಕೇರಿ ಕೇರಿಗೆ ತಿರುಗಿ, ಕನ್ನಡ ಪದ್ಯಗಳನ್ನು ಹಾಡಿ, ಜನಸಾಮಾನ್ಯರಿಗೆ ಮಧ್ವ ಸಂದೇಶ ವನ್ನು ನೀಡಲು ಆಣತಿ ಕೊಟ್ಟರು. ಮನೆ ಮನೆಗೆ ಹೋಗಿ ಮನಮನಕ್ಕೆ ಮುಟ್ಟು ವಂತೆ ಶ್ರೀ ಮಧ್ವ ಸಂದೇಶವು ಎಲ್ಲರ ಹೃದಯಕ್ಕೂ ತಟ್ಟುವಂತೆ ಹಾಡುಗಬ್ಬಗಳಿಂದ ಹಿರಿದಾದ ಕಾರ್ಯವನ್ನು ಮಾಡಿಸಿದ ಪ್ರೇರಣೆ ಕಾರಣ ಪುರುಷರೆಂದರೆ ಶ್ರೀ ವ್ಯಾಸರಾಜರು.

ಕನ್ನಡದಲ್ಲಿ ಹೊರೆ ಹೊರೆಯಾಗಿ ಕೃತಿಗಳನ್ನು ರಚಿಸಿದ ಪುರಂದರದಾಸರಿಗೂ, ಕನಕದಾಸರಿಗೂ ಪಂಡಿತ ಪ್ರಪಂಚದಲ್ಲಿ ಅಗ್ರಪೂಜೆ ಸಲ್ಲಿಸಿ ವ್ಯಾಸ ಸಾಹಿತ್ಯಕ್ಕೆ ಸರಿದೊರೆಯಾಗಿ ದಾಸ ಸಾಹಿತ್ಯವನ್ನು ತಂದು ನಿಲ್ಲಿಸಿ, ಮನ್ನಿಸಿ, ಗೌರವಿಸಿದ್ದ ಮೊದಲು ಮಹನೀಯರೆಂದರೆ ಶ್ರೀ ಚಂದ್ರಿಕಾಚಾರ್ಯರೇ.

ತಮ್ಮ ವ್ಯಾಸ ಪೀಠದಲ್ಲಿ ಚಂದ್ರಿಕಾದಿ ಗ್ರಂಥಗಳ ಜೊತೆಗೆ ಕನ್ನಡ ಕೃತಿ ಗಳನ್ನು ತಂದಿರಿಸಿದ ಎಂಟೆದೆಯ ಶ್ರೀಚರಣರೆಂದರೆ ಇವರೇ. ದಾಸಯ್ಯನ ಕೃತಿಗಳ ಕಟ್ಟಿಗೆ ಪುರಂದರೋಪನಿಷತ್ ಎಂದು ಹೆಸರು ಕೊಟ್ಟು ಭಕ್ತಿಪ್ರಧಾನವಾದ ಕನ್ನಡ ಭಾಷೆಯ ಆಧ್ಯಾತ್ಮಿಕ ಸಾಹಿತ್ಯಕ್ಕೆ ಔಪನಿಷದಿಕ ಮೇಲ್ಮೆ, ಮಹತಿಗಳನ್ನು ಸಲ್ಲಿಸಿದ ಬಲ್ಲಿದ ಅರಸರೆಂದರೆ ಶ್ರೀ ವ್ಯಾಸರಾಜರೇ.

ಹೀಗೆ ವ್ಯಾಸಕೂಟದ ಅಧ್ವರ್ಯುಗಳಾದ ಶ್ರೀವ್ಯಾಸರಾಜರು ದಾಸಕೂಟದ ಧುರೀಣರೂ ಆಗಿ ನಿಂತುಕೊಂಡು ಸವ್ಯಸಾಚಿ ಸ್ವಾಮಿಗಳೆಂದು ಕಥಿತಪ್ರಥಿತರಾದರು.

ಪುರಂದರ, ಕನಕದಾಸರಂಥ ದಾಸಶ್ರೇಷ್ಠರಿಂದ ಕೂಡಿಕೊಂಡು, ತಾಳ ಹಿಡಿದು, ಗೆಜ್ಜೆ ಕಟ್ಟಿಕೊಂಡು, ಕನ್ನಡ ಹಾಡು ಹಾಡಿ, ಪಾಡಿ, ಕುಣಿದು, ನಲಿದು, ನರ್ತಿಸಿ

ಜನಸಾಮಾನ್ಯರಲ್ಲಿ ಭಕ್ತಿಯನ್ನು ಬೆಳೆಸಿದರು. ದಾಸ ಸಾಹಿತ್ಯದ ಬಗೆಗೆ ಆದರಾತಿಶಯವನ್ನು ಇಮ್ಮಡಿಸಿದರು. ಜನರಲ್ಲಿ ಹರಿದಾಸರ ಬಗ್ಗೆ ಗೌರವ ಬುದ್ಧಿಯು ಉದಿಸುವಂತೆ ಮಾಡಿದರು.

ಹೀಗೆ ದಾಸರಿಗೂ, ದಾಸ ಸಾಹಿತ್ಯಕ್ಕೂ ಪ್ರೋತ್ಸಾಹನೆ ನೀಡುವದಲ್ಲದೆ ಚಂದ್ರಿಕಾದಿ ಗ್ರಂಥಗಳನ್ನು ಬರೆದ ಲೆಕ್ಕಣಿಕೆಯಿಂದ ಕನ್ನಡದಲ್ಲಿಯೂ ಪದ ಪದ್ಯ ಸುಳಾದಿ ಉಗಾಭೋಗಗಳನ್ನು ಬರೆದು ಕನ್ನಡಮ್ಮನ ಉಡಿ ತುಂಬಿದರು. ಆ ನುಡಿದೇವಿಯ ಮುಡಿಗೆ ಶೃಂಗಾರ ಮಾಡಿದರು. ಅವರ ಹರಿನಾಮ ಅಥವಾ ಹರಿಕೀರ್ತನೆಗಳಿಂದ ಆಬಾಲಗೋಪಾಲರೂ ಏನೂ ಅರಿಯದ ಹೆಣ್ಣುಮಕ್ಕಳೂ ಕನ್ನಡದಲ್ಲಿಯೇ ಮಧ್ವ ಮತವನ್ನು ತಿಳಿದು ಧನ್ಯರಾದರು.

ವ್ಯಾಸರಾಜರು ಅಸಂಖ್ಯ ದೇವರ ನಾಮಗಳನ್ನು ಬರೆದಿದ್ದಾರೆ. ಅವರ ಕೀರ್ತನೆಗಳೆಲ್ಲ ಈಗ ಲುಪ್ತವಾಗಿ ನೂರಾರು ಕೃತಿಗಳು ಮಾತ್ರ ಇಂದು ನಮಗೆ ಪ್ರಾಪ್ತವಾಗಿವೆ. ಇವರ ಪದ್ಯಗಳಲ್ಲಿ ಸಂಗೀತದ ಚಾತುರ್ಯ, ಭಕ್ತಿಯ ನೈರ್ಭರ್ಯಗಳ ಜೊತೆಗೆ ಸಾಮಾಜಿಕ ಪ್ರಜ್ಞೆಯೂ, ಲೋಕ ಜಾಗೃತಿಯ ಕಳಕಳಿಯೂ ಎದ್ದು ಕಾಣುತ್ತವೆ.

ತಾಳ–ರಾಗಗಳು ಅವರ ಗೀತ ಗಂಧಿ ಪದ್ಯಗಳ ಜೀವಾಳವಾಗಿದ್ದರೂ ಪ್ರಾಸ, ಅಲಂಕಾರ, ಲಾಲಿತ್ಯ, ಕಲ್ಪನಾ ಕೌಶಲ್ಯಗಳನ್ನೆಲ್ಲ ಎರಕು ಹಾಕಿ ಹೊಸದೊಂದು ರಸಸೃಷ್ಟಿಯೇ ಮೈದೋರುವಂತೆ ಮಾಡುತ್ತಾರೆ ಚಂದ್ರಿಕಾಚಾರ್ಯರು. ಅವರ ವಾಣಿಯು ಹೆಜ್ಜೆ ಇಟ್ಟಲ್ಲೆಲ್ಲ ಭಾಗವತ ಧರ್ಮದ ಭಕ್ತಿ ಭಾವವು ಗೆಜ್ಜೆ ಬಾರಿಸುತ್ತ ಹಿಮ್ಮೇಳವಲ್ಲಿ ಮೂಡಿಬರುತ್ತದೆ. ಲೋಕ ಶಿಕ್ಷಣವನ್ನೇ ಗುರಿಯಾಗಿಟ್ಟುಕೊಂಡು ರಸಪಾಕದಲ್ಲಿ ರಾಗಾಲಾಪನೆಯನ್ನು ಮಾಡುವ ವ್ಯಾಸರಾಜರ ಕಾವ್ಯ ಕನ್ನಿಕೆಯು ಸಂಸ್ಕೃತ ಲಾಕ್ಷಣಿಕ ಗ್ರಂಥಗಳ ಎಲ್ಲ ಅಲಂಕಾರಗಳನ್ನೂ ಸೂರೆಗೊಂಡಿದ್ದಾಳೆ. ಹಾಗೂ ಕನ್ನಡದ ಜಾಣ್ಣುಡಿ, ನಾಣ್ಣುಡಿಗಳ ಒನಪು, ಒಯ್ಯಾರ, ಧ್ವನಿ, ವ್ಯಂಗ್ಯ, ಕಾಕು, ಕೊಂಕು, ಬಿಂಕು, ಬೆಡಗು ಇವೆಲ್ಲವುಗಳನ್ನು ಉಳಿಸಿಗೊಂಡು ಬೆಳಸಿಕೊಂಡು ಜನ ಮನವನ್ನು ಮುದ್ದಾಗಿ ತಿದ್ದುವ ಕಾಂತಾ ಸಮ್ಮಿತಿಯ ಕಾರ್ಯದಲ್ಲಿ ಅತ್ಯಂತ ಯಶಸ್ವಿಯಾಗಿದ್ದಾಳೆ.

ಅವರ ಅನ್ಯಾದೃಶವಾದ ರಸಸಿಕ್ತವಾದ ಕನ್ನಡ ಸೂಕ್ತಿಗಳ ಮಾಧುರ್ಯದ ಒಂದು ಮಾದರಿಯನ್ನು ಇಲ್ಲಿ ಕಾಣಬಹುದು.

"ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟು ಕುರುಡನು।  
ಸಂತತ ಶ್ರೀ ಕೃಷ್ಣ ಚರಿತೆ ಕೇಳದವ। ಜಡಮತಿಕಿವುಡನೋ  
ಎಂದೆಂದಿಗೂ ॥

ಅಮರೇಶಗರ್ಪಿತವಲ್ಲದ ಕರ್ಮ। ಅಸತಿಯ ವ್ರತ ನೇಮವೊ।
ರಮೆಯರಸಗೆ ಪ್ರೀತಿಯಿಲ್ಲದ ವಿತರಣ। ರಂಡೆ ಕೊರಳ ಸೂತ್ರವೊ।
ಕಮಲನಾಭನ ಪಾಡಿ ಪೊಗಳದ ಸಂಗೀತ ಗಾರ್ದಭ ರೋದನವೊ।
ಮಮತೆಯಿಂದಲಿ ಕೇಶವನಿಗೆ ನಮಸ್ಕಾರ ಮಾಡದವನೇ ಮೃಗವೋ
ಎಂದೆಂದಿಗೂ ॥

ಸುರಧೇನು ವಿರಲಾಗಿ ಶ್ವಾನನ ಪಾಲು ಕರೆದು ಕುಡಿಯ ಬೇಡವೊ।
ಕರಿತುರಗವು ಇರಲಾಗಿ ಕೆಡಹುವಂಥ ಕತ್ತೆ ಏರಲಿ ಬೇಡವೋ।
ಜರೆ ಹುಟ್ಟು, ಮರಣವನು ತೊಡೆವ ಸುಧೆಯ ಬಿಟ್ಟು
ಸುರೆಯ ಸೇವಿಸ ಬೇಡವೊ।
ಪರಮ ಪದವೀವ ಸಿರಿಕೃಷ್ಣನಿರಲಾಗಿ ನರರ ಸೇವಿಸ ಬೇಡವೋ
ಎಂದೆಂದಿಗೂ ॥"

ಹೀಗೆ ವ್ಯಾಸರಾಜರ ಕೀರ್ತನೆಗಳಲ್ಲಿ ವ್ಯಂಗ್ಯೋಕ್ತಿ, ವಕ್ರೋಕ್ತಿಗಳು ಅಲಂಕಾರದ ಝುಂಕಾರವನ್ನು ಮಾಡುತ್ತವೆ. ಪ್ರಾಸದ ಕಟ್ಟಿನಲ್ಲಿ, ತತ್ವದ ಚೌಕಟ್ಟಿನಲ್ಲಿ ಸಂಗೀತದಮಟ್ಟುಗಳನ್ನೂ ಸಾಹಿತ್ಯದ ಮಟ್ಟವನ್ನೂ ಭಾವದ ತೂಕದಲ್ಲಿ ರಸದ ಪಾಕದಲ್ಲಿ ಕಾಯ್ದುಕೊಂಡು ಓದುಗರಿಗೆ ಸುಧಾಸ್ವಾದದ ಆಮೋದವನ್ನು ಒದಗಿಸುತ್ತವೆ.

ದಾಸ ಸಾಹಿತ್ಯದಲ್ಲಿ ಶ್ರೀ ವ್ಯಾಸರಾಜರು ಸಾಧಿಸಿದ ಹೆಚ್ಚಿನ ಕಾರ್ಯವೆಂದರೆ ವೃತ್ತನಾಮ ಪದ್ಧತಿಯನ್ನು ಪ್ರಚುರವಾಗಿಯೇ ಪ್ರಚಾರದಲ್ಲಿ ತಂದದ್ದು. ಈ ವೃತ್ತ, ನಾಮ ಪದ್ಧತಿಯನ್ನು ಇವರ ಗುರುಗಳಾದ ಶ್ರೀಪಾದರಾಜರೇ ಪ್ರಾರಂಭಿಸಿದ್ದರೂ ಅದನ್ನು ಎಲ್ಲೆಡೆಗೆ ಹೆಚ್ಚಾಗಿ ಬಿತ್ತರಿಸಿದ ಶ್ರೇಯಸ್ಸೂ, ಅದರ ಮೌಲ್ಯ ಮಹತಿಗಳನ್ನು ಉಚ್ಚಮಟ್ಟಕ್ಕೆ ಎತ್ತರಿಸಿದ ಶ್ರೇಯಸ್ಸೂ ಶ್ರೀ ವ್ಯಾಸರಾಜರಿಗೇ ಸಲ್ಲುತ್ತದೆ.

ಈ ವೃತ್ತನಾಮ ಪದ್ಧತಿ ಎಂದರೆ ಮೊದಲು ಒಂದು ಪದದ ಪಲ್ಲವಿಯನ್ನು ಬರೆಯುವದು. ತನಂತರ ಒಂದು ವೃತ್ತವನ್ನು ಬರೆಯುವದು. ತದನಂತರ ಚರಣವನ್ನು ಅರ್ಥಾತ್ ನುಡಿಯನ್ನು ಹಾಡುವದು. ಹೀಗೆ ಒಂದು ಪದದ ಪಲ್ಲವಿ, ಒಂದು ವೃತ್ತ. ಒಂದು ನುಡಿ ಹೀಗೆ ಪರ್ಯಾಯದಿಂದ ಬಂದು ನಾದವು ಗುವಿಗಟ್ಟಿ ಧ್ವನಿತರಂಗಗಳ ಗೋಪುರವೇ ಏರಿದಂತಾಗಿ ಗಾನದ ಅಲೆಗಳು ಮಂಡಲಾಕಾರವಾಗಿ ಮಿಶ್ರ ಮಾಧುರಿಯ ಅಭಿವ್ಯಕ್ತಿಗೆ ಸೊಂಪಿಂಪಗಳು ಸೂರೆಯಾಗುವಂತೆ ಮಾಡುತ್ತವೆ.

ಈ ತರಹದ ವೃತ್ತನಾಮ ಪದ್ಧತಿಯಿಂದಲೇ ಶ್ರೀ ವ್ಯಾಸರಾಜರು ಭಗವದ್ಗೀತೆಯನ್ನು ಸಾರೋದ್ಧಾರ ರೂಪವಾಗಿ ಕನ್ನಡಿಸಿದ್ದಾರೆ.

" ಕೇಳಯ್ಯಾ ಎನ್ನಮಾತ । ಪಾರ್ಥನೆ । ಗೀತಾದರ್ಥನೆ । ಪಲ್ಲವಿ । "

ಈ ವೃತ್ತನಾಮು ಪದ್ಧತಿಯಲ್ಲಿ ಪದಗಳು ಶ್ಲೋಕಗಳು ಒಂದರ ಹಿಂದೊಂದು ಬಂದು ಅಂತ್ಯಪ್ರಾಸದ ಹೆಜ್ಜೆಯಲ್ಲಿ ಭಾವದ ಒಜ್ಜೆ ಹಾಕಿ ಮಾತಿನ ಗುಮ್ಮಟದಲ್ಲಿಯೇ ಅರ್ಥವು. ಶಬ್ದದ ಗೋಡೆ ಗೋಡೆಗೂ ಅಪ್ಪಳಿಸಿ ಗೋಳಗುಮ್ಮಟದಂತೆ ಮತ್ತೆ ಮತ್ತೆ ಪ್ರತಿಧ್ವನಿಸುವಂತೆ ಮಾಡುತ್ತವೆ.

ಇದರ ಬೆಡಗಿನ ನಡಿಗೆಯುನ್ನೂ ಭಾವವಿನ್ಯಾಸದ ಸೊಬಗನ್ನೂ ಮುಂದಿನ ಪದ್ಯಗಳಲ್ಲಿ ನೋಡಿರಿ.

ಪದ

" ಕೇಳಿ ತಾ ಪಾರ್ಥನು ಕುರುದಂಡ ।
ರಣವಲಿ ಚಂಡ । ಗಾಂಡೀವ ಕರದಂಡ । "
ಅಚ್ಯುತ ಪಿಡಿ ರಥ ನಡೆ ಮುಂದ ।
ಬಹುತ್ವರದಿಂದ । ನೋಡುವೆ ನೇತ್ರದಿಂದ ।
ಗುರುಹಿರಿಯರ ಕೂಡ ಯಾಕೆಂದ । ಯುದ್ಧ
ಸಾಕೆಂದ । ಭಿಕ್ಷವೇ ಸುಖವೆಂದ ।
ಕುಂತಿಸುತ ಈ ಮಾತು ಉಚಿತಲ್ಲ ।
ನಿನಗಿದು ಸಲ್ಲ । ಪಿಡಿ ಗಾಂಡೀವ ಬಿಲ್ಲ ।

ಶ್ಲೋಕ

ಬಾಲ್ಯ ಯೌವನ ಮುಪ್ಪುತನ ದೇಹದಲ್ಲಿ ।
ಇಂಥ ದೇಹಕೆ ಮೋಹ ಮತ್ಯಾತಕಲ್ಲಿ ।
ಕಾಯ್ದು ಕೊಲ್ಲುವ ನಾನು ಇರುತಿರಲು ಇಲ್ಲಿ ।
ಬಿಲ್ಲು ಪಿಡಿದು ಕೀರ್ತಿ ಪಡೆ ಲೋಕದಲ್ಲಿ ॥

ಹೀಗೆ ಪದ, ಪದ್ಯ, ಪಲ್ಲವಿಗಳಲ್ಲಿ ಪ್ರಾಸ ಹಾಗೂ ಅರ್ಥ ವಿಲಾಸಗಳು ಮುಪ್ಪುರಿಗೊಂಡು ಬಂದು ರಸಿಕರಂಜನೆಯಾಗುವಂತೆ ಭಾವಾಭಿವ್ಯಂಜನೆಯನ್ನು ಮಂಜುಳ ಪದಪುಂಜಗಳಿಂದ ವಿದ್ವದ್ವೇದ್ಯವಾಗುವ ಹೃದ್ಯ ರೀತಿಯಲ್ಲಿ ಸಾಧಿಸಿ ತೋರಿಸುವವು.

ಶ್ರೀ ವ್ಯಾಸರಾಜರ ಕೀರ್ತನೆಗಳಲ್ಲಿ—

"ಗಾತ್ರವೇ ಮಂದಿರ, ಹೃದಯವೇ ಮಂಟಪ, ನೇತ್ರವೇ ಮಹಾ ದೀಪ"

ಎಂಬ ಮಾನಸ ಪೂಜೆಯ ರೂಪಕಗಳು ಅವರ ಕವಿ ಹೃದಯದ ಕಲ್ಪನಾ ಕೌಶಲ್ಯದ ಗರಿಗುರಿಗಳನ್ನು ತೋರಿಸುತ್ತವೆ.

"ದಾವಾನಲನ ತಪ್ಪಿಸಿ ಕಾಡಾನೆಯ ದೇವಗಂಗೆಗೆ ತಂದು ಹೊಗಿಸಿದಂತೆ"
"ಬಾವನ್ನವ ಸೇರಿದ ಬೇವು ಬಾವನ್ನವಲ್ಲದೆ ಬೇವಹುದೆ? "
ತನ್ನ ಶಿಶುವಿನ ತಪ್ಪಿಗೆ ಜನನಿ ಕೈ ಬಿಡುವಳೆ? "
"ಮೆಚ್ಚಿದೆನೋ ಕೃಷ್ಣ ಅಚ್ಚ ಕರುಣೆಯಿಂದು।
ಎಚ್ಚಂಗೆದೆಯ ನೊಪ್ಪಂಗೆ ಮುಕುತಿಯನಿತ್ತೇ॥ "

ಮುಂತಾದ ಅವರ ಅನೇಕ ಹಾಡು-ನುಡಿಗಳಲ್ಲಿ ಅವರ ಕಾವ್ಯ ಕಮ್ಮಂಡಲುವಿನಲ್ಲಿಯ ಕೆನೆ ಹನಿಗಳು ಬಿದ್ದು ಸೊದೆಯಾಗಿ ಸೂರೆಗೊಂಡದ್ದನ್ನು ನಾವು ಕಾಣಬಹುದು.

ಒಟ್ಟಾರೆ ವ್ಯಾಸರಾಜರು— ವ್ಯಾಸಕೂಟದ ಧ್ವಜವನ್ನೂ, ದಾಸಕೂಟದ ಬಾವುಟವನ್ನೂ ತಮ್ಮ ಎರಡೂ ಕೈಗಳಿಂದ ಎತ್ತಿ ಹಿಡಿದು ದ್ವೈತ ಸಿದ್ಧಾಂತದ ತತ್ವ, ಸತ್ವ, ಮಹತ್ವಗಳನ್ನು ಜಗತ್ತಿಗೆಲ್ಲ ಸಾರಿ ಹೇಳಿದರು. ಇವರ ಮುದ್ರಿಕೆ— ಶ್ರೀ ಕೃಷ್ಣ.

## ೪ ಶ್ರೀ ಪುರಂದರದಾಸರು



ವ್ಯಾಸರಾಜರ ಪಟ್ಟ ಶಿಷ್ಯರಾದ ಶ್ರೀ ಪುರಂದರ ದಾಸರು ದಾಸಶ್ರೇಷ್ಠರೆಂದು ಪ್ರಸಿದ್ಧರಾಗಿದ್ದಾರೆ.

ನಾರದಾಂಶಸಂಭೂತರೆಂದು ಪುರಾಣ ಪ್ರಥಿತರಾದ ಇವರು ಮೊದಲು ಜಿಪುಣ ನಾಯಕರಾಗಿ, ಮಡದಿಯ ಪುಣ್ಯದಿಂದ ಮುಂದೆ ನಿಪುಣ ದಾಸರಾದರು. ಶ್ರೀ ವ್ಯಾಸ ರಾಜರ ದಿವ್ಯ ವರ್ಚಸ್ಸಿನಿಂದ ಪ್ರಭಾವಿತರಾಗಿ ಪುರಂದರಗಡದ ಶೀನಪ್ಪನಾಯಕರು ವೈರಾಗ್ಯದೆಡೆಗೆ ಒಲಿದು ಪುರಂದರದಾಸರಾದರು.

ನವಕೋಟಿ ನಾರಾಯಣರಾದ ಇವರು ವೈರಾಗ್ಯ ಮೂಡಿದ ಚಣದಲ್ಲಿಯೇ ತಮ್ಮ ಅಪಾರ ಐಶ್ವರ್ಯವನ್ನೆಲ್ಲ ದಾನ ಮಾಡಿ ವಿರಕ್ತರಾಗಿ ಗುರುವ್ಯಾಸರಾಜರ ಬಳಿಗೆ ಬಂದರು. ಅವರಲ್ಲಿ ದ್ವೈತ ವೇದಾಂತವನ್ನೆಲ್ಲ ಅಧ್ಯಯನ ಮಾಡಿ ಅಂಕಿತ ಪಡೆದರು.

ಕನ್ನಡದಲ್ಲಿ ಪದ್ಯಗಳನ್ನು ಬರೆದು ಮಧ್ವ ಮತವನ್ನು ಪ್ರಸಾರ ಮಾಡಬೇಕೆಂದು ಅವರಿಗೆ ಅಪ್ಪಣೆ ಮಾಡಿದರು. ಪುರಂದರ ವಿಠಲ ಎಂಬ ಅಂಕಿತದಿಂದ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಪದ್ಯಗಳನ್ನು ಅವರು ಬರೆದಿದ್ದಾರೆಂದು ಅವರ ಗ್ರಂಥ ಗಳಿಂದಲೇ ತಿಳಿದುಬರುತ್ತದೆ.

ಆದರೆ ಇಂದು ನಮ್ಮ ಕೈಗೆ ದೊರಕಿರುವ ಪುರಂದರದಾಸರ ಕೀರ್ತನೆಗಳು ಅತ್ಯಲ್ಪ. "ಕಾಲಾಯ ತಸ್ಮೈನಮಃ"

ಆದರೆ ನಮಗೆ ಇಂದು ದೊರಕಿದ ದಾಸರ ಕೃತಿಗಳಲ್ಲಿ ಅವರ ವ್ಯಕ್ತಿತ್ವದ ಬಹು ಮುಖದ ದರ್ಶನವಾಗುತ್ತದೆ.

ಅವರ "ಭಾಗ್ಯದ ಲಕ್ಷ್ಮಿ ಬಾರಮ್ಮ" ಎಂಬ ಗೀತದಲ್ಲಿಯೂ

"ಗೆಜ್ಜೆಯ ಕಾಲ್ಗಳ ಧ್ವನಿಯ ತೋರುತ ।
ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ ।
ಸಜ್ಜನ ಸಾಧು ಪೂಜೆಯ ವೇಳೆಗೆ ।
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ।
' ಪಕ್ಷಿವಾಹನ ಲಕ್ಷ್ಮೀರಮಣ ।
ಲಕ್ಷ್ಮೀ ನಿನ್ನ ವಕ್ಷದಲ್ಲಿ ।
ರಕ್ಷಃ ಶಿಕ್ಷಣ ದಕ್ಷ ಪಾಂಡವ ।
ಪಕ್ಷರಕ್ಷಕ ಕಮಲಾಕ್ಷ ॥ '

ಮುಂತಾದ ಅವರ ಪದ್ಯಗಳಲ್ಲಿಯೂ ಪ್ರಾಸವು ಸಹಜ ವಿಲಾಸವಾಗಿ ಬಂದರೆ ಕೋಮಲ ಭಾವವು ಬೆಣ್ಣೆಯಂತೆ ತೇಲಿಬಂದಿದೆ.

ಪುರಂದರದಾಸರ ಅನುಪ್ರಾಸಗಳು ಲಲಿತ ಶಬ್ದಗಳಲ್ಲಿ ಅರಳಿ ಮರಳಿ ಬರುವದರಿಂದ ಭಾವ ಸಂಭ್ರಮವು ಅವುಗಳಲ್ಲಿ ಜೀಕವಾಡುವಂತೆ ತೋರುತ್ತದೆ.

" ರಂಗ ಬಾರೋ ಪಾಂಡುರಂಗ ಬಾರೋ ಶ್ರೀ ।
ರಂಗ ಬಾರೋ ನರಸಿಂಗ ಬಾರೋ ।
ಕಂದ ಬಾರೋ ಎನ್ನತಂದೆ ಬಾರೋ ।
ಇಂದಿರಾರಮಣ ಮುಕುಂದ ಬಾರೋ ॥"

ಇನ್ನು ಇವರ ಬಿಡಿ ನುಡಿಗಳಲ್ಲಿ ಮೂಡಿಬರುವ ಮಾತುಗಳ ಮಾರ್ಮಿಕತೆಯನ್ನು ಗಮನಿಸಿರಿ.

" ತಲೆ ಹುಳಕ ನಾಯಂತೆ ಬಯಲಾಶೆಗೆ ಶಿಲುಕಿದೆ । "

" ಅಟ್ಟ ಮೇಲೆ ಒಲೆ ಉರಿಯುನಂತೆ ಎನಗೀಗ ಕೆಟ್ಟ ಮೇಲೆ ಅರಿವು ಬಂದಿತಯ್ಯ "

" ಜಾಲೀ ಮರದಂತೆ ದುರ್ಜನರು "

" ಶುಕನ ಓದುಗಳಂತೆ ಎನ್ನ ಓದುಗಳಯ್ಯ "

" ಮಿಂದು ಮಿಂದು ಆನೆ ಹುಡಿ ಹೊಯ್ದು ಕೊಳ್ಳುವಂತೆ "

" ಹೆಳಲು ಹಾವಾದರೆ ಗೆಳೆಯ ರಿಪುವಾದರೆ"
"ಕಲಿಸಿಟ್ಟ ಅವಲಕ್ಕಿ ಕಲಪರಟಿ ನುಂಗಿದರೆ"
"ಕತ್ತಲೆಯು ಕರಡ್ಯಾಗಿ ಕಚ್ಚಿದರೆ"
"ಕಣ್ಣಿನೊಳಗೆ ಬೊಂಬೆ ಕಚ್ಚಾಡ ಬಂದರೆ "

"ಸಿಂಗನ ಪೆಗಲೇರಿದವಗೆ ಕರಿಭಂಗವೇಕೆ ಮತ್ತವಗೆ ।
ರಂಗನ ಕೃಪೆಯುಳ್ಳವಗೆ ಭವ-ಭಂಗಗಳೇತಕ್ಕವಗೆ ॥"

"ಕತ್ತೆ ಬಲ್ಲುದೆ ಹೊತ್ತ ವಸ್ತ್ರದಾ ಭೋಗವನು"

"ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ"

"ಮೀನು ಬಲ್ಲುದೆ ನೀರು ಸೌಳು ಸ್ವಾದೆಂಬುದು"

"ತೊಗಲ ಮೂಗ್ಗರಿದು ಚಿನ್ನದ ಮೂಗನಿತ್ತಂತೆ"

ಮುಂತಾದ ಅಸಂಖ್ಯ ನುಡಿಗಳಲ್ಲಿ ಭಾವದ ಕಿಡಿಗಳು ಸೂಸಿವೆ. ಸಂಸ್ಕೃತ ಸಾಹಿತ್ಯದ ಅಲಂಕಾರಗಳೆಲ್ಲವೂ ಪುರಂದರ ದಾಸರ ನುಡಿಗಟ್ಟುಗಳಲ್ಲಿ ಗೂಡುಗಟ್ಟಿವೆ.

ದಾಸರ ಪದ್ಯಗಳನ್ನು ಓದಿದರೆ ಅವರ ಲೋಕಾನುಭವವೂ ವೇದ ಶಾಸ್ತ್ರ ಪರಿಜ್ಞಾನವೂ ಎಷ್ಟು ವಿಶಾಲವಾಗಿದ್ದವೆಂಬುದು ಸ್ಪಷ್ಟವಾಗಿ ತಿಳಿಯ ಬರಲು ಸಾಕು.

"ಉದರ ವೈರಾಗ್ಯವಿದು" ನಮ್ಮ ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ"

''ಮಡಿ–ಮಡಿಯಂದು ಮೂರ ಮೊಳ ಹಾರುವಿ ಮಡಿ ಎಲ್ಲಿ ಬಂತೊ ಬಿಕನಾಶಿ''

"ಹೊಲೆಯ ಊರೊಳಗಿಲ್ಲ''

ಮುಂತಾದ ಪದ್ಯಗಳಲ್ಲಿ ಸಮಾಜದ ವಿಡಂಬನೆ ಇದ್ದು, ಜನರ ತಪ್ಪುಗಳನ್ನು ತಿದ್ದಿ ಬುದ್ಧಿ ಹೇಳುವ ಹಿರಿತನವು ಎದ್ದು ಕಾಣುತ್ತದೆ.

ಅವರ "ಹರಿಯೇ ಸರ್ವೋತ್ತಮ" "ಹಿಗ್ಗುವಿ ಯಾಕೊ" "ಲೊಳಲೊಟ್ಟೆ ಬದುಕು ಎಲ್ಲ ಲೊಳಲೊಟ್ಟೆ" "ಎಚ್ಚರಿಕೆ ಎಚ್ಚರಿಕೆ ಮನವೆ" ಮುಂತಾದ ಪದ್ಯಗಳು ಅವರ ವೇದಾಂತ ಶ್ರದ್ಧೆಗೂ ವೈರಾಗ್ಯಕ್ಕೂ ಸಮಾಜದ ಉದ್ಧಿಧೀರ್ಷೆಗೂ ಸಾಕ್ಷಿಯಾದರೆ "ಈಸಬೇಕು ಇದ್ದು ಜಯಿಸಬೇಕು" "ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿ ನೆನವೆಂಬ ಸೌಭಾಗ್ಯವಿರಲಿ"

ಮುಂತಾದ ಪದಗಳು ಸಾಂಸಾರಿಕ ಸಂಕಟಗಳಿಂದ ಸಂತ್ರಸ್ತವಾದ ಜೀವನಕ್ಕೆ ಬದುಕಿನಲ್ಲಿ ಭರವಸೆಯನ್ನು ಮೂಡಿಸುತ್ತವೆ.

ಪುರಂದರದಾಸರ ಕೃತಿಗಳಲ್ಲಿ ಅಧ್ಯಾತ್ಮನಿಷ್ಠತೆ, ಕವಿತಾಶಕ್ತಿ, ಹಾಸ್ಯ, ಸಮಾಜವಿಡಂಬನೆ, ಆಳವಾದ ಲೋಕಾನುಭವ, ಮಾನವೀಯ ಸ್ವಭಾವ ವಿಶ್ಲೇಷಣ ಮುಂತಾದ ಗುಣಗಳು ಪ್ರಮುಖವಾಗಿ ಎದ್ದು ಕಾಣುತ್ತವೆ. ಕೆಲವು ಕಡೆಗಳಲ್ಲಿ ಅವರ ವಾಣಿಯು ಬಾಣವಾಗಿ ನುಡಿಗಳೆಲ್ಲ ಕಿಡಿಗಳಾಗಿ, ಮಾತು ಮೊನಚಾಗಿ ಚಾಟೂಕ್ತಿಗಳ ನೆವದಿಂದ ಚಾವಟಿಯ ಏಟುಗಳನ್ನು ಹಾಕಿದಂತೆ ತೋರಿದರೂ ಅದರ ಹಿಂದೆ ಲೋಕಕಲ್ಯಾಣಾಕಾಂಕ್ಷೆಯ ಕಳಕಳಿ ಇದೆ. ಸಾಮಾಜಿಕ ಹೃದಯದ ಬಿರುಕುಗಳನ್ನು ಬೆಸೆಯುವ ಮರುಕವೂ ಹಾಳು ಹರಕುಗಳನ್ನು ಹೊಲೆಯುವ ಅವರ ಹೃದಯದ ಹಂಬಲವೂ ಒಳ ಹೊಕ್ಕು ಪರಿಕಿಸಿದರೆ ಗೋಚರವಾಗುವವು.

ಹೀಗೆ ವಿವಿಧ ಹಂತಗಳಲ್ಲಿ ನಾಡು, ನುಡಿ, ಸಿದ್ಧಾಂತ, ಸಮಾಜಗಳ ಸೇವೆಗೈಯ್ದ ಪುರಂದರದಾಸರು ಭಾರತ ದೇಶಕ್ಕೆ ಕೊಟ್ಟ ದೊಡ್ಡ ಕೊಡುಗೆ ಎಂದರೆ ಕರ್ನಾಟಕ ಸಂಗೀತ.

ಪುರಂದರದಾಸರು ಕರ್ನಾಟಕ ಸಂಗೀತದ ಮೂಲದೃಷ್ಟಾರರೆಂದು ಮಹಾಮಹರ್ಷಿಗಳೆಂದು ಇಂದು ಎಲ್ಲ ವಿಚಾರವಂತರೂ ಒಪ್ಪಿಕೊಂಡಿದ್ದಾರೆ. ಸರಸ ಸಾಹಿತ್ಯಕ್ಕೆ ಸುಂದರ ಸಂಗೀತದ ಮಾಧುರ್ಯವನ್ನು ಬೆರಸಿ, ಲಕ್ಷಣ ಶಾಸ್ತ್ರದ ಅಲಂಕಾರಗಳನ್ನು

ತೊಡಿಸಿ, ಅಧ್ಯಾತ್ಮದ ಒಪ್ಪವಿಟ್ಟು, ಜಗದೋದ್ಧಾರಕ್ಕಾಗಿ ಮೂಡಿ ಬಂದ ಪುರಂದರ ದಾಸರ ಹಾಡುಗಬ್ಬುಗಳು ಹಾಡುವವರಿಗೂ ಕೇಳುವವರಿಗೂ ಹೃದಯಕ್ಕೆ ಹಬ್ಬ ವಾಗಿ, ಕನ್ನಡ ವೇದಗಳಾಗಿ, ಬೋಧ, ಮೋದ, ವಿನೋದಗಳನ್ನು ಒದಗಿಸಿ ಆತ್ಮಶೋಧಕ್ಕೆ ದಾರಿ ತೋರಿಸುವ ಆತ್ಮಾನಂದದ ಆಸ್ವಾದಕ್ಕೆ ಮುತ್ತಿನ ಮಾಲೆಗಳಂತೆ ಇರುತ್ತವೆ.

## ೫ ಶ್ರೀ ಕನಕದಾಸರು



ಕನಕದಾಸರು ಧಾರವಾಡ ಜಿಲ್ಹೆಯ ಬಾಡ ಗ್ರಾಮದವರು. ಇವರ ಮೊದಲಿನ ಹೆಸರು ಬೀರಪ್ಪ. ಬೇಟೆ, ಬಿಲ್ಲಾಳುತನ. ಕತ್ತಿ–ವರಸೆ ಕಾಳಗಗಳಲ್ಲಿ ನುರಿತ ಬೀರಪ್ಪ ನಿಗೆ ಸುವರ್ಣ ನಿಧಿಯೊಂದು ದೊರಕಿದ್ದರಿಂದ ಕನಕನಾಯಕರಾದರು. ಐಶ್ವರ್ಯ ಬಂದಾಗ ಕನಕನಾಯಕರು ದೇವರನ್ನು ಮರೆಯಲಿಲ್ಲ. ತಮ್ಮ ಗ್ರಾಮದ ಬಳಿ ಕಾಗಿ ನೆಲೆಯಲ್ಲಿ ದೊಡ್ಡ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ಶ್ರೀ ಕೇಶವ ದೇವರನ್ನು ಪ್ರತಿಷ್ಠಾಪಿಸಿದರು. ತಿರುಪತಿಯ ದೇವಸ್ಥಾನದಂತೆ ಎಲ್ಲ ವಿಧವಾದ ಪೂಜಾ ಉತ್ಸವಾದಿಗಳ ವ್ಯವಸ್ಥೆಯನ್ನು ಮಾಡಿದರು.

ಒಮ್ಮೆ ಪರಚಕ್ರದಾಳಿಗೆ ತುತ್ತಾದಾಗ ಅವರಿಗೆ ವೈರಾಗ್ಯ ಉದಯವಾಯಿತು. ಆಗಲೇ ತನ್ನ ಧಣಾಯಕ ಪದವಿ, ಅಧಿಕಾರ, ಐಶ್ವರ್ಯಗಳಿಗೆಲ್ಲ ತಿಲಾಂಜಲಿಯಿತ್ತು ಹರಿದಾಸರಾದರು. ಕಾಲಿಗೆ ಗೆಜ್ಜೆ ಕಟ್ಟಿ, ಕೈಯಲ್ಲಿ ಏಕದಾರಿ ತಂಬೂರಿ, ಚಿಟಕಿಗಳನ್ನು ಹಿಡಿದು ತನ್ನ ಕುಲಸ್ವಾಮಿಯಾದ ಕಾಗಿ ನೆಲೆಯ ಆದಿ ಕೇಶವನನ್ನು ಕೊಂಡಾ ಡುತ್ತ ವಿಜಯನಗರಕ್ಕೆ ಶ್ರೀ ವ್ಯಾಸರಾಜರಿದ್ದಲ್ಲಿಗೆ ಬಂದರು.

ಶ್ರೀ ವ್ಯಾಸರಾಜರಿಂದ ದ್ವೈತಸಿದ್ಧಾಂತದ ದಿವ್ಯ ಜ್ಞಾನವನ್ನು ಪಡೆದು ಹರಿ ಭಕ್ತಿಯ ಹರಿಕಾರರಾಗಿ ಕನಕದಾಸರು ಅನೇಕಾನೇಕ ಕೀರ್ತನೆಗಳನ್ನೂ, ಷಟ್ಪದಿ, ಸಾಂಗತ್ಯ ಕಾವ್ಯಗಳನ್ನೂ ಮಧುರ ಮನೋಹರವಾದ ಸರಸ ಶೈಲಿಯಲ್ಲಿ ಕವನಿಸಿದರು.

ಕನಕದಾಸರ— ಹರಿಭಕ್ತಿಸಾರ, ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ನೃಸಿಂಹಸ್ತವ, ನಳ ಚರಿತ್ರೆ ಮುಂತಾದ ಖಂಡ ಕಾವ್ಯಗಳು ನವರಸಗಳ ಅಖಂಡ ಕಾರಂಜಿಗಳಂತೆ ರಸಿಕರಿಗೆ ಆನಂದವನ್ನುಂಟು ಮಾಡುತ್ತಲಿವೆ. ಇವುಗಳಲ್ಲಿ ೧೬ ನೇ ಶತಮಾನದ ಕನ್ನಡ ಸಾಹಿತ್ಯದ ಸೊಬಗು, ಸೊಗಸು, ಛಂದೋ ವೈವಿಧ್ಯ ಬಂಧದ ಬಿಗುವು, ಮಾತಿನ ಮೆರಗು, ಉಕ್ತಿ ವೈಚಿತ್ರ್ಯ, ಭಾವಾವಿಷ್ಕರಣದ, ನಯ–ನೈಪುಣಿ ಮುಂತಾದ ಗುಣಗಳು ಸ್ಫುಟವಾಗಿ, ಹೇರಳವಾಗಿ ಕಂಡುಬರುತ್ತವೆ.

ಅವರ ಹರಿಭಕ್ತಿ ಸಾರವು ಒಂದುನೂರಾಹತ್ತು ಪದ್ಯಗಳ ಒಂದು ಪುಟ್ಟ ಪ್ರಬಂಧವಾಗಿದೆ. ಇದರಲ್ಲಿ ಭಕ್ತಹೃದಯದಿಂದ ಉಕ್ಕಿ ಹರಿದ ಆರ್ತ ಭಾವದ ಕೊರೆತ, ಮೊರೆತಗಳು ಭಾಮಿನೀ ಷಟ್ಪದಿಯ ಮಂಜುಳ ಪ್ರವಾಹದಲ್ಲಿ ಹೊಮ್ಮಿ ಹರಿದಿವೆ. ಇದರಲ್ಲಿ ನಿರೂಪಿಸಿದ ತತ್ತ್ವಗಳು ಸೈದ್ಧಾಂತಿಕ ಸತ್ವವನ್ನೂ, ಸಾಹಿತ್ಯಕ ಮಹತ್ವವನ್ನೂ ಪಡೆದು ಮಿಶ್ರ ಮಾಧುರಿಯಿಂದ ರಸದೊರತೆಗಳಂತೆ ಭಕ್ತರಿಗೆ ಹೃದ್ಯ ವೆನಿಸುತ್ತವೆ.

ರಾಮಧಾನ್ಯ ಚರಿತ್ರೆಯು ಕನಕದಾಸರ ಕಲ್ಪನಾ ಕೌಶಲಕ್ಕೆ ಕನ್ನಡಿ ಹಿಡಿ ಯುತ್ತದೆ, ಇದರಲ್ಲಿ ರಾಗಿ ಮತ್ತು ಬತ್ತಗಳ ನಡುವೆ ವಾದವನ್ನು ಏರ್ಪಡಿಸಿ ಅದ ರಲ್ಲಿ ಭಗವಂತನು ಬಡವರ ಪಕ್ಷಪಾತಿ, ಭಕ್ತವತ್ಸಲನೆಂಬುದನ್ನು ಮನೋಹರವಾಗಿ ತೋರಿಸಿಕೊಟ್ಟಿದ್ದಾರೆ. ಈ ವಾದದಲ್ಲಿ ಬಡವರ ಅನ್ನವಾದ ರಾಗಿಯು ಗೆದ್ದುದರಿಂದ ಅದಕ್ಕೆ ರಾಮನು ತನ್ನ ರಾಘವ ಎಂಬ ಹೆಸರನ್ನು ಇತ್ತನು ಎಂಬ ಕನಕದಾಸರ ಕಲ್ಪನೆ ಅವರ ಭಾಗವತ ಮನೊಧರ್ಮವನ್ನೂ ಜನಾನುರಾಗವನ್ನೂ ಪ್ರಕಟಗೊಳಿ ಸುತ್ತದೆ.

ಕನಕದಾಸರು ನಳಚರಿತ್ರೆಯಲ್ಲಿ—ಪುರಾಣ ಪ್ರಸಿದ್ಧವಾದ ನಳದಮಯಂತಿಯರ ಜೀವನದ ಹಂದರದ ಮೇಲೆ ಸುಂದರವಾದ ಕಾವ್ಯದ ಬಳ್ಳಿಯನ್ನು ಹಬ್ಬಿಸಿದ್ದಾರೆ. ಇಲ್ಲಿಯ ಮಧುರ, ಕೋಮಲವಾದ ಕಾವ್ಯ ಶೈಲಿಯ ಕುಶಲ ಶೃಂಗಾರಿಕೆಯನ್ನು ಕಂಡಾಗ ಕುಮಾರವ್ಯಾಸ ಹಾಗೂ ಲಕ್ಷ್ಮೀಶರು ಕೂಡಿಯೇ ಈ ಹಾಡನ್ನು ಕಟ್ಟಿ ದ್ದಾರೆಯೋ ಏನೊ ಎನ್ನಿಸುವಂತಿದೆ.

ಒಟ್ಟು ಈ ನಳಚರಿತ್ರೆಯ ಸಂದೇಶವೆಂದರೆ— "ದೈವವ ನೆನೆವ ಭಕ್ತರಿಗುಂಟೆ ಭಯವೆ ನೃಪತಿ"

ಮೋಹನ ತರಂಗಿಣಿಯು— ಉಷಾ ಸ್ವಯಂವರದ ಕಥೆಯನ್ನು ಕನ್ನಡದ ಶುದ್ಧ ಛಂದಸ್ಸಾದ ಸಾಂಗತ್ಯದಲ್ಲಿ ಸಂಗಮನಗೊಳಿಸಿದ ಹೃದಯಂಗಮ ಕಾವ್ಯವಾಗಿದೆ. ಸಂಸ್ಕೃತ ಮಹಾ ಕಾವ್ಯಗಳ ವರ್ಣನಾ ಪ್ರೌಢಿಮೆ, ಕನ್ನಡ ಸಮಸಾಮಯಿಕ ಕಾವ್ಯ ಪ್ರಬಂಧಗಳ ನಿರೂಪಣದ ಚಾರಿಮೆ, ದ್ವೈತ ತತ್ತ್ವ ನಿಷ್ಠವಾದ, ಭಕ್ತಿಯ ಮಧುರಿಮೆ ಇವು ಮೂರೂ ಕನಕದಾಸರ ರಸಾಳಶೈಲಿಯಲ್ಲಿ ಮುಪ್ಪುರಿಗೊಂಡು ಮಹಾ ಕಾವ್ಯದ ಸರಸ ಅಭಿವ್ಯಕ್ತಿಗೆ ಈ ಕೃತಿಯಲ್ಲಿ ಶಕ್ತಿಯನ್ನು ಒದಗಿಸಿವೆ.

ಇವಲ್ಲದೆ ಕನಕದಾಸರ ಕೀರ್ತನೆಗಳಲ್ಲಿ ಭಕ್ತಿ ತರಂಗಿಣಿಯು ಸಹೃದಯರ ಅಂತರಂಗ ಗಂಗೆಯಾಗಿ ಭಾವ ಸಂಭ್ರಮದಿಂದ ಪ್ರವಹಿಸಿದೆ.

"ಹಲವು ಜನುಮದಿ ತಾಯಿ ಎನಗಿತ್ತ ಮೊಲೆ ಹಾಲು
ನಲಿದುಂಬಾಗ ಹನಿ ನೆಲಕೆ ಬಿದ್ದುದು ಕೂಡಿ
ಅಳೆಯೆ ಕ್ಷೀರಾಂಬುಧಿಗೆ ಇಮ್ಮಿಗಿಲೋ"

"ಪಂಚೇಂದ್ರಿಯಗಳೆಂಬ ಮಂಚಿಗೆಯ ಹಾಕಿರಯ್ಯ
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯಾ
ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ
ಆಯುಷ್ಯದ ರಾಶಿಯನ್ನು ಅಳೆಯಿರಯ್ಯಾ"

ಎಂದು ಮುಂತಾದ ಪದ್ಯ ಪದ್ಧತಿಯಲ್ಲಿ ಕನಕದಾಸರ ಕಲ್ಪನಾ ಕೌಶಲವು ಬಾನಗಲವಾಗಿ ಭೂಮಾನು ಭೂತಿಯಿಂದ ಮಹತೋ ಮಹೀಯವಾಗಿ ವಿಜೃಂಭಿಸುತ್ತದೆ.

ಕನಕದಾಸರು ತಮ್ಮ ನುಡಿಗನ್ನಡಿಯಲ್ಲಿ ಜನ ಜೀವನದ ಚಿತ್ರವನ್ನು ಸಮಾಜದ ಕುಂದು-ಕೊರತೆಗಳನ್ನು ಬಿಚ್ಚು ಮಾತಿನಲ್ಲಿ, ಒಮ್ಮೊಮ್ಮೆ ಚುಚ್ಚು ಮಾತಿನಲ್ಲಿ ಮತ್ತೊಮ್ಮೆ ಅಚ್ಚರಿಯ ನುಡಿಗಳಲ್ಲಿ ಬಿಡಿಸಿ ಹೇಳಿದ್ದಾರೆ. ಅಲ್ಲಲ್ಲಿ ಕಿಡಿ-ಕಿಡಿಯಾಗಿ ಸಿಡಿಯುವ ಬಿಡಿನುಡಿಗಳಲ್ಲಿ ದೀನ-ದಲಿತರ ಬಗೆಗೂ, ಸಮಾಜದ ಮೂಢ ರೂಢಿಗಳ ಬಗೆಗೂ ಅವರ ಕಳಕಳಿ, ಕಳವಳಗಳು ಚನ್ನಾಗಿ ವ್ಯಕ್ತವಾಗಿದ್ದುವೆ. ಅವರ ದೇಶಿಯ ತಿರುಳುಗನ್ನಡದಲ್ಲಿ ತತ್ವನಿಷ್ಠೆ, ಭಕ್ತಿನಿಷ್ಠೆ, ಕಾವ್ಯ ಪ್ರಜ್ಞೆಗಳು ಉಲ್ಲಾಸದ ಅರಳುಗಳಾಗಿ, ಸಂಸ್ಕೃತ ಸಾಹಿತ್ಯದ ಸೊಬಗಿನ ಎರಕದಲ್ಲಿ ಸೊಗಯಿಸುತ್ತವೆ.

ಹೀಗೆ ಸಾಮಾನ್ಯವಾಗಿ ಸರಳ ಸುಂದರವಾಗಿ ಹರಿಯುವ ಕನಕದಾಸರ ಕವಿತಾ ಕಲ್ಲೋಲಿನಿಯು ಒಮ್ಮೊಮ್ಮೆ ಎಂಥೆಂಥ ಪಂಡಿತರಿಗೂ ಅರ್ಥವಾಗದ ಗೂಢ

ಗುಂಭವಾಗಿ ಪಂಡಿತಂಮನ್ಯರ ಅಹಂಭಾವಕ್ಕೆ ಆಹ್ವಾನವೀಯುತ್ತವೆ. ಇಂಥ ಗೂಢಾರ್ಥದ ಗೀತೆಗಳು ''ಕನಕನ ಮುಂಡಿಗೆ" ಎಂದು ಹೆಸರಾಗಿರುತ್ತವೆ. ಬೆಡಗಿನ ವಚನಗಳಂತೆ ಈ ಕನಕನ ಮುಂಡಿಗೆಗಳು ಸಾಮಾನ್ಯಮಟ್ಟದ ಜನತೆಗೆ ಒಗಟುಗಳಂತೆ ಕಬ್ಬಿಣದ ಕಡಲೆಗಳಾಗಿದ್ದರೂ ಅರ್ಥ ಮಾಡಿಕೊಂಡು ಓದುವ ವಿದ್ವಾಂಸರಿಗೆ ಒಳ್ಳೆ ರಮ್ಯವೆನಿಸುತ್ತವೆ.

ಕನಕದಾಸರ ಮಾತುಗಳಲ್ಲಿ— ಮಾರ್ಮಿಕವಾದ ದೃಷ್ಟಾಂತಗಳಿಂದ, ಉಪಮೆ ಉತ್ಪ್ರೇಕ್ಷಾದಿ ಅಲಂಕಾರಗಳಿಂದ, ಸಂಸಾರದಲ್ಲಿ ವೈರಾಗ್ಯವನ್ನು ಹುಟ್ಟಿಸಿ, ಮುಕ್ತಿಗೂ ಅದಕ್ಕೆ ಸಾಧನವಾದ ಭಕ್ತಿಗೂ ಜನರನ್ನು ಅಭಿಮುಖಗೈಯುವ ಯುಕ್ತಿ ಇದೆ. ಅಂಥ ಶಕ್ತಿಯುಳ್ಳ ಕೆಲವು ಮಾರ್ಮಿಕ ಉಕ್ತಿಗಳನ್ನು ನಾವು ಕೆಳಗೆ ಕಾಣಬಹುದು.

"ಗಾಳಿಗೊಡ್ಡಿದ ಸೊಡರು ಈ ಸಂಸಾರ''

"ಒಡಲಿನಾಶೆಗೆ ಜೇನಿನೊಳಗೆ ತುಡುಕಿಬಿದ್ದ ನೊಣದಂತೆ''

''ಸೋರೆಯೊಳು ಸುರೆತುಂಬಿ ಮೇಲೆ ಹೂವಿನ ಹಾರ ಹಾಕಿ।
ಗೀರು ಗಂಧ, ಅಕ್ಷತೆ ಧರಿಸಿದಂತೆ। ನೀ ಮೆರಿಸಿದಂತೆ॥''

"ಭಾವವಿಲ್ಲದ ಭಕುತಿಯದು ಕುಹಕ ಯುಕತಿಯದು"

"ಸಂಸಾರವೆಂಬ ಸಾಗರವನುತ್ತಾರಿಸುವಡೆ।
ಕಂಸಾರಿ ನಾಮ ಒಂದೇ ಸಾಕು ಮನವೇ॥"

"ಬೆಲ್ಲವು ಕರದೊಳಗಿರುತಿರೆ ಕಾಡ ಕಲ್ಲನ್ನು ಕಡೆಯಲಿನ್ಯಾಕಯ್ಯಾ
ಬಲ್ಲಿದ ನೆಲಿಯಾದಿ ಕೇಶವನಿರುತಿರೆ ಚಿಲ್ಲರೆ ದೈವದ ಹಂಬಲ್ಯಾತಕಯ್ಯಾ"

ಮುಂತಾದ ಮಿಂಚಿನ ಮಾತುಗಳು ಕಾವ್ಯ ಶಕ್ತಿಯಿಂದಲೂ, ಜಾಣ್ಣುಡಿ, ನಾಣ್ಣುಡಿಗಳ ಸತ್ವ ಸಾರದಿಂದಲೂ, ಸುಪ್ತ ಸಮಾಜವನ್ನು ಬಡಿದೆಬ್ಬಿಸುವಲ್ಲಿ ನೀತಿ ಸೂತ್ರಗಳಂತೆ ಮಹತ್ವದ ಪಾತ್ರವನ್ನು ವಹಿಸಲು ಸಮರ್ಥವಾಗಿವೆ.

ಕನಕದಾಸರು ಪಂಢರಪುರ, ತಿರುಪತಿ, ಉಡುಪಿ ಮುಂತಾದ ಅನೇಕ ತೀರ್ಥ ಕ್ಷೇತ್ರ ಯಾತ್ರೆ ಮಾಡಿ ತಮ್ಮ ಅನುಭವದ ಕೋಶವನ್ನು ತುಂಬಿಕೊಂಡಿದ್ದರು. ಅವರ ಭಕ್ತಿಗೆ ಮೆಚ್ಚಿ ಉಡುಪಿಯ ಕೃಷ್ಣನು ಕನಕದಾಸನಿದ್ದ ದಿಕ್ಕಿಗೆ ಮುಖ ತಿರುವಿ ಅವನಿಗೆ ದರುಶನವಿತ್ತನು.

ವ್ಯಾಸರಾಜರ ವಿಜಯನಗರದ ನಿವಾಸದಲ್ಲಿ ಕನಕನಿಗೆ ಅಗ್ರಸ್ಥಾನವಿದ್ದುದು ಪುರಂದರದಾಸರ ಕೀರ್ತನೆಗಳಿಂದ ವ್ಯಕ್ತವಾಗುತ್ತದೆ. ಯಾರಿಲ್ಲದಲ್ಲಿ ತಿಂದು ಬಾ

ಎಂದು ವ್ಯಾಸರಾಜರು ಕೊಟ್ಟ ಫಲಗಳನ್ನು ತಿರುಗಿ ತಂದಿಟ್ಟು ಕನಕದಾಸರು ವೇದಾಂತವು ತಮ್ಮ ಜೀವನದ ಉಸಿರಾಗಿದೆಯೆಂಬದನ್ನು ಮನಗಾಣಿಸಿಕೊಟ್ಟರು.

ಹೀಗೆ ಜಾತಿಯಿಂದ ಕೀಳಾದರೂ ಗುಣದಿಂದ ಮೇಲಾಗಿ, ಭಕ್ತಿಯಿಂದ ಯುಕ್ತರಾಗಿ, ಸಂಸಾರಬಂಧದಿಂದ ಮುಕ್ತರಾಗಿ, ವಿರಕ್ತರಾಗಿ, ವ್ಯಾಸರಾಜ, ವಾದಿರಾಜ, ಪುರಂದರದಾಸ ಮುಂತಾದ ದಿವ್ಯ ರತ್ನಗಳ ವ್ಯಾಸ ಸಂಪುಟದಲ್ಲಿ ಒಳಿದು ಅಣು ಮಣಿಯಾಗಿ ಮಿಂಚುವ ಕನಕದಾಸರು ನಿಜವಾಗಿಯೂ ಬ್ರಾಹ್ಮಣೇತರ, ಮುಮುಕ್ಷು ಜೀವ ಎಂಬಲ್ಲಿ ಸಂಶಯವಿಲ್ಲ.

## ೬ ಶ್ರೀ ವಾದಿರಾಜರು

ಉಡುಪಿಯ ಅಷ್ಟಮಠಗಳಲ್ಲಿ ಶ್ರೀ ಮಧ್ವಾಚಾರ್ಯರ ನಂತರ ವಿಶೇಷವಾದ ಖ್ಯಾತಿ, ಜನಸ್ತುತಿ ಪಡೆದ ಪ್ರಭಾವಿ ಅನುಭಾವಿಗಳೆಂದರೆ ಶ್ರೀ ವಾದಿರಾಜತೀರ್ಥರು. ಅವರು ಎಲ್ಲ ದೃಷ್ಟಿಯಿಂದಲೂ ವೇದಾಂತ ಪ್ರಪಂಚದಲ್ಲಿ ಕ್ರಾಂತಿಯ ಅಗ್ರದೂತರಾಗಿ ಮೆರೆದಿದ್ದಾರೆ. ಉಡುಪಿಯ ಅಷ್ಟಮಠಗಳಲ್ಲಿ ಪ್ರಾಯಃ ಇವರೇ ಮೊಟ್ಟ ಮೊದಲು ಕನ್ನಡದ ಮಟ್ಟುಗಳಲ್ಲಿ ಕವನ ಕಟ್ಟಿ ಹಾಡಿದರು. ಗೆಜ್ಜೆ ಕಟ್ಟಿ ಭಕ್ತಿಯಿಂದ ಕುಣಿದರು. ಅವರು ತಮ್ಮ ನಾಡಿನ ತುಳು ಭಾಷೆಯಲ್ಲಿಯೂ ಪದ್ಯಗಳನ್ನು ಕಟ್ಟಿ ಹಾಡಿಪಾಡಿ ತಣಿದರು.

ಪರ್ಯಾಯದ ದೀರ್ಘಕ್ರಮವನ್ನು ಕಲ್ಪಿಸಿ ಸಿದ್ಧಾಂತ ಪ್ರಸಾರಕ್ಕೆ ಅಷ್ಟ ಮಠಾಧೀಶರಿಗೆ ಅನುವು ಮಾಡಿಕೊಟ್ಟರು. ಅಕ್ಕಸಾಲಿಗರಿಗೂ ವೈಷ್ಣವ ದೀಕ್ಷೆಯನ್ನಿತ್ತು ಬ್ರಾಹ್ಮಣೇತರರೂ ಮಧ್ವ ಸರೋವರದಲ್ಲಿ ಮಿಂದು ಉದ್ಧಾರ ಹೊಂದಬಹುದೆಂದು ಸಾರಿದರು. ಮಧ್ವಮತವು ವಿಶ್ವಧರ್ಮವಾಗಲು ಯೋಗ್ಯವಾಗಿದೆಂದು ಜಗತ್ತಿಗೆ ತೋರಿಸಿ ಕೊಟ್ಟರು. ತಾವು ಮಹಾ ಯತಿವರೇಣ್ಯರಾದರೂ ಸಾತ್ವಿಕ ಶೃಂಗಾರ ಪ್ರಧಾನವಾದ ರುಕ್ಮಿಣೀಶ ವಿಜಯವೆಂಬ ಕಾವ್ಯವನ್ನು ಬರೆದು ಸಾಹಿತ್ಯವನ್ನು ಶುದ್ಧೀಕರಿಸಿದರು. ಉಡುಪಿಯಿಂದ ಮೇಲೆ ಬೀಡು ಸೋಂದಾ ಕ್ಷೇತ್ರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ತಾವು ಸರ್ವ ಜನತೆಯ ಉದ್ಧಾರಕ್ಕಾಗಿ ಬದ್ಧಾಂಕರವುಳ್ಳ ಮಧ್ವ ಶಿಷ್ಯ ಸದ್ಗುರುಗಳೆಂದು ಸ್ಪಷ್ಟಪಡಿಸಿದರು.

ತಾವು ಉಡುಪಿಯ ಸರ್ವಜ್ಞಪೀಠಾಧಿಪತಿಗಳಾದರೂ ಘಟ್ಟದ ಮೇಲಿನ ಪದ್ಮನಾಭತೀರ್ಥ ಪರಂಪರೆಯ ಸ್ವಾಮಿಗಳಾದ ಶ್ರೀ ಜಯತೀರ್ಥರ ಗ್ರಂಥಗಳಿಗೆ ಟಿಪ್ಪಣಿ ಬರೆದು "ಗುಣಾಃ ಪೂಜಾ ಸ್ಥಾನಂ" ಎಂಬ ಮಾತಿನ ಸತ್ಯತೆಯನ್ನು ಎತ್ತಿ ತೋರಿ

ದರು. ಅದರಂತೆ ಮೇಲಿನ ಇನ್ನೊಂದು ಮಠವಾದ ಶ್ರೀರಾಜೇಂದ್ರ ಪರಂಪರೆಯ ಶ್ರೀ ವ್ಯಾಸರಾಜರಲ್ಲಿ ಶಾಸ್ತ್ರಾಧ್ಯಯನ ಮಾಡಿ ಜ್ಞಾನೋತ್ಕರ್ಷಕ್ಕೆ ತಲೆ ಬಾಗುವ ಹೊಸ ಸಂಪ್ರದಾಯವನ್ನು ಹಾಕಿಕೊಟ್ಟರು. ಸ್ವಯಂ ಸಂಸ್ಕೃತ ಪಂಡಿತರೂ, ಶಾಸ್ತ್ರ ಜ್ಞಾನಮಂಡಿತರೂ ಆದ ಯತಿಪುಂಗವರಾಗಿದ್ದರೂ ಕನ್ನಡದಲ್ಲಿ ಅನೇಕಾನೇಕ ಕೀರ್ತನೆಗಳನ್ನೂ, ಕೃತಿಗಳನ್ನೂ, ಸುಳಾದಿ, ಉಗಾಭೋಗಗಳನ್ನೂ ಬರೆದು ದೇಶ ಭಾಷೆಯ ಹಿರಿಮೆ, ಗರಿಮೆಗಳಿಗೆ ಗೌರವದ ಗದ್ದುಗೆಯನ್ನಿತ್ತರು.

ಶಾಸ್ತ್ರ ಪ್ರಪಂಚದಲ್ಲಿ ಸೀಮಾಪುರುಷರಾದ ಶ್ರೀ ವಾದಿರಾಜರು ಸಂಸ್ಕೃತದಲ್ಲಿ ಪ್ರೌಢ ಶಾಸ್ತ್ರೀಯ ಪದ್ಧತಿಯಲ್ಲಿ ಹದಿನಾರು ಗ್ರಂಥಗಳನ್ನು ರಚಿಸಿದ್ದಾರೆ. ಅದರಂತೆ ಕನ್ನಡದಲ್ಲಿಯೂ "ಹಯವದನ'' ಎಂಬ ತಮ್ಮ ಮುದ್ರಿಕೆಯಿಂದ ಅಸಂಖ್ಯ ಹಾಡುಗಳನ್ನು ರಚಿಸಿದ್ದಲ್ಲದೆ ವೈಕುಂಠವರ್ಣನೆ, ಲಕ್ಷ್ಮೀ ಶೋಭಾನೆ, ಗುಂಡಕ್ರಿಯೆ, ಸ್ವಪ್ನಗದ್ಯ, ಮಧ್ವಸುವಾಲಿ, ಭ್ರಮರಗೀತೆ, ಕೀಚಕವಧ ಮುಂತಾದ ಸರಸ ಕೃತಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ವೇದ, ಉಪನಿಷತ್ತು, ನಿಗಮಾಗಮ, ಸೂತ್ರ ಪುರಾಣಗಳಲ್ಲಿ ಪ್ರತಿಪಾದಿತವಾದ ಪ್ರಮೇಯಗಳನ್ನು ಸಾಹಿತ್ಯದ ಶೈಲಿಗೆ ಒಗ್ಗುವಂತೆ ಹಿಗ್ಗಿಸಿ, ಬಗ್ಗಿಸಿ, ಅಂದಚಂದವಾಗಿ ಹೆಣೆದು ಹೊಂದಾಣಿಕೆ ಮಾಡಿ ಹಾಡಿದ್ದಾರೆ.

ವೇದಾಂತದ ಮುದ್ರಾಧಾರಣ ಮಾಡಿದ ಇವರ ಕೃತಿಗಳಲ್ಲಿ ಶಾಸ್ತ್ರೀಯ ಸಾಹಿತ್ಯದ ಹೊಸ ಸೊಗಸು ಮೂಡಿ ಮೆರೆದಿದೆ.

## "ಸ್ವಪ್ನ ಪದ"

ಈ ಕೃತಿಯಲ್ಲಿ ಅವರ ಉಪಾಸ್ಯ ದೇವತೆಯಾದ ಹಯಗ್ರೀವ ದೇವರು ಒಂದು ದಿನ ವಾದಿರಾಜರ ಕನಸಿನಲ್ಲಿ ಬಂದು ತನ್ನ ಮಹಿಮೆಯನ್ನು ಗೈಮೆ–ಗರಿಮೆಗಳನ್ನು ತಿಳಿಸಿ ಹೇಳಿದನಂತೆ. ಹಯವದನನ ಆತ್ಮೋದ್ಗಾರವೇ ಈ ಪದ್ಯ ಪದ್ಧತಿಯಲ್ಲಿ ಹಾಡಾಗಿ ಹರಿದಿದೆ. ಕಾವ್ಯವಾಗಿ ಮೊರೆದಿದೆ. ರಸವತ್ ತಾತ್ವಿಕ ಕೃತಿಯಾಗಿ ಮೆರೆದಿದೆ.

ಇದರಲ್ಲಿ ೪೨ ಪದಗಳಿದ್ದು, ಆ ಪರಮಾತ್ಮನು— "ಎಲೋ ಮಾನವಾ ಕೇಳು, ನಾನು ಭಕ್ತ ಬಂಧು. ಕೃಪಾ ಸಿಂಧು. ನಂಬಿದವರನ್ನು ನಾನೆಂದಿಗೂ ಕೈ ಬಿಡೆ. ನನ್ನನ್ನು ಮೊರೆಹೊಕ್ಕ ಪ್ರಲ್ಹಾದ, ಗಜೇಂದ್ರ, ದ್ರೌಪದೀ, ಧನಂಜಯ ಮುಂತಾದವರನ್ನು ಪೊರೆದೆ. ರಮಾ, ಬ್ರಹ್ಮಾದಿಗಳು ನನ್ನ ದಾಸರು. ವೇದವೇದಾಂತಗಳು ನನ್ನ ವಂದಿ ಮಾಗಧರು. ಜೀವ ಪರಮಾತ್ಮರಿಗೆ ಎಂದೂ ಐಕ್ಯವಿಲ್ಲ. ಐಕ್ಯ ಭ್ರಾಂತಿಯನ್ನು ತೊರೆದು ಭಕ್ತಿಯಿಂದ ನನ್ನನ್ನು ಸೇವಿಸಿ ಮುಕ್ತಿ ಪಡೆ''

''ಎನ್ನ ಗುಣಗಳ ಪೊಗಳತಿರು''

''ಪೂರ್ಣಪ್ರಜ್ಞರ ಮತವೇ ಸುಮತ ಪ್ರ-
ಸನ್ನ ಸುಧೆ ಸಮ ಭವ ವಿಮುಕ್ತಿಯ ಪಥವೇ ಸತ್ಪಥವು''

" ಅನ್ಯಮತಗಳ ಜರಿದು ಈ ಸಂ—
ಪನ್ನ ಮರುತನ ಮತವ ಮನದಲ್ಲಿ
ಮನ್ನಿಸುತ ಮನನವನು ಮಾಳ್ಪರನಿನ್ನು ಸಲುಹುವೆನು "

ಎಂದು ಮುಂತಾಗಿ ಹಯಗ್ರೀವ ದೇವರು ಉಪದೇಶಿಸಿದ ಮಾತುಗಳನ್ನು ತಿರುಳು ಗನ್ನಡದ ಸರಳ ಪದ್ಯಗಳಲ್ಲಿ ಅರಳಿಸಿ ಇಟ್ಟಿದ್ದಾರೆ ಶ್ರೀ ಗುರುರಾಜರು.

" ಗುಂಡ ಕ್ರಿಯೆ "

೪೦ ನುಡಿಗಳ ಈ ಕಾವ್ಯ ಖಂಡದಲ್ಲಿ ರಾಜರು ಚಾರ್ವಾಕ, ಬೌದ್ಧ, ಜೈನ, ಮೀಮಾಂಸಕ, ಅದ್ವೈತಿ, ಮುಂತಾದ ದುರ್ವಾದಿಗಳ ಮತಗಳನ್ನು ಅಕ್ಷರಶಃ ಖಂಡಿಸಿ ಶ್ರೀ ಮಧ್ವಾಚಾರ್ಯರ ದ್ವೈತ ಸಿದ್ಧಾಂತವೇ ಸರ್ವರಿಗೂ ತಾರಕ ಮೋಕ್ಷದಾಯಕ ಎಂದು ಪ್ರತಿಪಾದಿಸಿದ್ದಾರೆ.

" ಹೊದ್ದದೆ ದುಗ್ಧವಾರಿಧಿ ಮಧ್ಯದಲ್ಲಿ
ಇದ್ದು ತನ್ನುದರದಲ್ಲಿಪ್ಪ
ಪದ್ಮಿಯ ಸಡ್ಡೆಗೊಳ್ಳದೆ ಕುವರನ ನಾಭಿ—
ಪದ್ಮದಿ ಪೆತ್ತ ಹಯವದನನೊಬ್ಬನೇ ಗೆದ್ದ ಸಿದ್ಧ ಕಾಣಿರೋ "

ಎಂದು ಮುಂತಾಗಿ ಹರಿತವಾಣಿಯಿಂದ ಕುವಾದಿಗಳ ಹೇಳಿಕೆಗಳನ್ನೆಲ್ಲ ಬಾಳಿಗೆ ಬಾರದ ಕಂತೆಗಳೆಂದು ಹರಿದು ತರಿದು ಹಾಕಿ ಮಧ್ವಮತದ ಮೇಲ್ಮೆಯನ್ನು ಸಿದ್ಧ ಪಡಿಸಿದ್ದಾರೆ.

"ಲಕ್ಷ್ಮೀಶೋಭಾನೆ"

ಇದಾದರೂ ಕೂಡ ಸ್ವಪ್ನ ಪದದಂತೆ ವಾದಿರಾಜರು ಕಂಡ ಒಂದು ಕನಸಿನ ಕಾವ್ಯವಾಗಿದೆ. ಈ ಕಾವ್ಯದ ಕೊನೆಗೆ—

" ಇಂತು ಸ್ವಪ್ನದಿ ಕೊಂಡಾಡಿಸಿಕೊಂಡ ಲಕ್ಷ್ಮೀ।
ಕಾಂತನ ಕಂಡನೆನಿಸುವ।

ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿ ।
ಪಂಗ್ಥರಿ ಪೇಳಿದ ಪದವಿದು ॥ "

ಎಂದು ಹೇಳಿದ ತಮ್ಮ ಸ್ವಪ್ನದಲ್ಲಿ ಶ್ರೀ ಹರಿಯು ಬಂದು ಆಡಿದ ಮಾತನ್ನೇ ಇಲ್ಲಿ ಹಾಡಿ ತೋರಿಸಿದ್ದಾರೆ.

ಒಂದು ನೂರಾ ಹದಿಮೂರು ಪದಗಳುಳ್ಳ ಈ ಕಾವ್ಯದಲ್ಲಿ ಅಚ್ಚಗನ್ನಡದ ಮೆಚ್ಚಿನ ಛಂದಸ್ಸಾದ ಸಾಂಗತ್ಯದ ಧಾಟಿಯಲ್ಲಿ ಲಕ್ಷ್ಮೀ ಸ್ವಯಂವರದ ಬೋಧಕ ಕಥೆಯು ಬಿತ್ತರಿಸಲ್ಪಟ್ಟಿದೆ.

" ಸಮುದ್ರ ಮಂಥನ ಕಾಲದಲ್ಲಿ ಕ್ಷೀರಸಾಗರದಿಂದ ಉದಿಸಿ ಬಂದ ಶ್ರೀದೇವಿಯು ಅಲ್ಲಿ ನೆರೆದ ಎಲ್ಲ ದೇವತೆಗಳಲ್ಲಿಯೂ ಒಂದಿಲ್ಲೊಂದು ಕುಂದುಕೊರತೆಗಳನ್ನು ಗಮನಿಸಿ ದೋಷಗಂಧವಿಲ್ಲದ ಒಂದೇ ಒಂದಾದ ಗುಣಸಿಂಧು ಶ್ರೀಹರಿಯನ್ನು ತಿಳಿದು ಒಲಿದು ವರಿಸಿದಳು. ಆಗ ಎಲ್ಲ ದೇವ ಗಂಧರ್ವ ಮುನಿ ಮನುಜರು ಸಂತಸಬಟ್ಟರು. ಮುತ್ತೈದೆಯರು ರಮಾರಾಮರನ್ನು ಹಸೆಗೆ ಕರೆದರು. ಮುತ್ತಿನ ಆರತಿಯನ್ನು ಎತ್ತಿದರು. "

ಎಂದು ಲಕ್ಷ್ಮೀ ವಿವಾಹದ ಈ ಮಂಗಲ ಪ್ರಸಂಗದ ನೆವದಿಂದ ರಾಜರು ವಿಷ್ಣುವು ಪರದೈವತ, ಸರ್ವ ದೇವತೆಗಳು ಅವನ ಕಿಂಕರರು, ಎಂದು ಶಾಸ್ತ್ರಗೂಢವಾದ ಸಿದ್ಧಾಂತವನ್ನು ಸಾಹಿತ್ಯಾರೂಢವಾಗುವಂತೆ, ಜನ ಹೃದಯ ನಿರೂಢವಾಗುವಂತೆ ಮಾಡಿದ್ದಾರೆ.

ಯಾವದೋ ಒಂದು ಲಗ್ನ ಮಂಟಪದಲ್ಲಿ ಆಕಸ್ಮಾತ್ತಾಗಿ ಹಾವು ಕಚ್ಚಿ ಮರಣ ಹೊಂದಿದ ವರನನ್ನು ಬದುಕಿಸಲಿಕ್ಕಾಗಿ ರಾಜರು ಈ ಹಾಡನ್ನು ಮಾಡಿದರು ಎಂದು ಐತಿಹ್ಯವುಂಟು.

## "ಶ್ರೀ ವೈಕುಂಠ ವರ್ಣನೆ"

ಇದರಲ್ಲಿ ನಾಲ್ಕು ಸಂಧಿಗಳಿರುತ್ತವೆ. ಮೊದಲನೆಯ ವೈಕುಂಠ ವರ್ಣನಾ ಸಂಧಿಯಲ್ಲಿ— ೧೪೦, ದ್ವಿತೀಯ ಲಯ ಸಂಧಿಯಲ್ಲಿ— ೪೯, ಸೊಬಗಿನ ಸೋನೆ ಎಂಬ ಮೂರನೇ ಸೃಷ್ಟಿ ಸಂಧಿಯಲ್ಲಿ— ೮೯, ನಾಲ್ಕನೆಯ ಸ್ಥಿತಿ ಸಂಧಿಯಲ್ಲಿ— ೯೩, ಮತ್ತು ಫಲಶ್ರುತಿಯ ಪದಗಳನ್ನು ಸೇರಿಸಿ ಒಟ್ಟು ೩೯೩ ಪದಗಳು ಇರುತ್ತವೆ. ಈ ಕಾವ್ಯದಲ್ಲಿ—

"ಕನ್ನಡಿಯಲಿಪ್ಪಂಥ ಪೂರ್ಣ ಪ್ರಜ್ಞರ ಮತದುನ್ನತ ತತ್ವಸಾರವನು
ಕನ್ನಡದಿ ಬಣ್ಣಿಸಿದ ಸಿರಿವಾದಿರಾಜ ಮುನಿಯ ಬಿನ್ನಪವೆಲ್ಲವನು"

ಎಂದು ಉಪೋದ್ಘಾತದಲ್ಲಿ ಹೇಳಿದಂತೆ ಶ್ರೀಮನ್ಮಧ್ವಾಚಾರ್ಯರ ದ್ವೈತ ಸಿದ್ಧಾಂತದ ಸಾರವನ್ನು ಪ್ರಮಾಣ ಪ್ರಮೇಯ ವಿವರಣದೊಂದಿಗೆ ಇಲ್ಲಿ ಕಾವ್ಯ ಶೈಲಿಯಲ್ಲಿ ಚಿತ್ರಿಸಲಾಗಿದೆ.

ಹೀಗೆ ಸಾಹಿತ್ಯದ ರಸಪಾಕದಲ್ಲಿ ವೇದಾಂತದ ಗಹನ ತತ್ವಗಳನ್ನು ಹೇಳಿ—ಗುಡಜಿಹ್ವಿಕಾನ್ಯಾಯದಿಂದ ಪಾಮರ ಜನರಿಗೆಲ್ಲ ಸಿದ್ಧಾಂತದ ಸ್ವಾರಸ್ಯವನ್ನು ಉಣಬಡಿಸುವ ರಾಜರ ಉದ್ದೇಶವು ಉದಾತ್ತವಾಗಿದೆ. ಪದ್ಯಗಳು ಹೃದ್ಯವಾಗಿವೆ. ಅವರ ಗೈಮೆ ತಾರಕವಾಗಿದೆ. ಅವರ ವೈಮೆ ಮೋಕ್ಷದಾಯಕವಾಗಿವೆ. ಇವರ ಮುದ್ರಿಕೆ ಹಯವದನ.

## ೭ ಶ್ರೀ ರಾಘವೇಂದ್ರತೀರ್ಥರು

ಶ್ರೀರಾಯರ ಮಹಿಮೆಯನ್ನು ಅರಿಯದವರಿಲ್ಲ. ಅವರು ಸಂಸ್ಕೃತ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯು ಅಪಾರವಾಗಿದೆ. ಶಾಸ್ತ್ರಪ್ರಪಂಚದಲ್ಲಿಯಂತೂ ಅವರ ಗ್ರಂಥಗಳು ಮಾರ್ಗದರ್ಶಕವಾಗಿ ಧ್ರುವ ದೀಪ್ತಿಯಿಂದ ಕಂಗೊಳಿಸುತ್ತವೆ.

ಶಾರದೆಯ ಅಪರಾವತಾರದಂತಿದ್ದ ಇಂಥ ಮೇಧಾವಿ ಮಂಡಲ ಮುಕುಟ ಮಣಿಗಳು ಕನ್ನಡದಲ್ಲಿಯೂ ಒಂದು ಪದ್ಯವನ್ನು ರಚಿಸಿದ್ದು ಭಕ್ತಿ ವಾಙ್ಮಯದಲ್ಲಿ ಗಂಧದ ಕಡ್ಡಿಯನ್ನು ಹಚ್ಚಿಟ್ಟಂತೆ ಪ್ರಪಂಚವೆಲ್ಲವೂ ಪರಿಮಳಿತವಾಗಿದೆ. ಕನ್ನಡ ಭಾಷೆಯು ಅವರ ಈ ಕೃತಿಯಿಂದ ಧನ್ಯಧನ್ಯವಾಗಿದೆ.

"ಇಂದು ಎನಗೆ ಗೋವಿಂದ ನಿನ್ನ ಪಾದಾರ-
ವಿಂದವ ತೋರೋ ಮುಕುಂದನೆ ||ಪಲ್ಲ||

ಮಂದರೋದ್ಧಾರನೇ ನಂದ ಗೋಪಿಯ ಕಂದ-
ಇಂದಿರಾರಮಣ ಗೋವಿಂದ ಗೋಕುಲಾನಂದ ||ಪ||

ನೊಂದೆನಯ್ಯಾ ಭವಬಂಧದೊಳು ಸಿಲುಕಿ
ಮುಂದೆ ದಾರಿಕಾಣದೆ ಕುಂದಿದೆ ಜಗದೊಳು
ಕಂದನೆಂತೆಂದೆನ್ನ ಕುಂದುಗಳೆಣಿಸದೆ
ತಂದೆ ನೀ ಕಾಯೋ ಕಂದರ್ಪ ಜನಕನೇ ||

ಎಂದು ಮುಂತಾಗಿ ಧೀರ ವೇಣುಗೋಪಾಲ ಎಂಬ ಮುದ್ರಿಕೆಯಿಂದ ಶ್ರೀ ಭಗವಂತನನ್ನು ತಮ್ಮ ಸುಂದರವಾದ ಛಂದೋಬದ್ಧ ಸರಸ ಶೈಲಿಯಲ್ಲಿ ಭಕ್ತಿ ಉದ್ರೇಕದಿಂದ ಹಾಡಿಪಾಡಿಕೊಂಡಾಡಿದ್ದಾರೆ ಶ್ರೀಗುರುರಾಜರು.

ಶ್ರೀ ಗುರುಸಾರ್ವಭೌಮರು ರಚಿಸಿದ ಕನ್ನಡ ಪದ್ಯಗಳು ಹೆಚ್ಚಿಗೆ ದೊರಕದಿದ್ದರೂ ಅವರ ಮೇಲೆ ಬೇರೆಬೇರೆ ಭಕ್ತರು, ದಾಸರು ರಚಿಸಿದ ಸುಂದರ ಪದ್ಯಗಳ ಮೊತ್ತವು ಕಾವ್ಯ ದೃಷ್ಟಿಯಿಂದಲೂ ಸಿದ್ಧಾಂತ ದೃಷ್ಟಿಯಿಂದಲೂ ಗಣನೀಯವೂ ಮನನೀಯವೂ ಮಾನನೀಯವೂ ಆಗಿದೆ.

## ೮ ಶ್ರೀ ಅಚಲಾನಂದದಾಸರು

ಅಚಲಾನಂದದಾಸರು ಬೆಂಗಳೂರು ಜಿಲ್ಲೆಯ ಹೈಗಣಪುರದವರು. ಇವರ ವಂಶದವರು ಈಗಲೂ ತುಮಕೂರು ಜಿಲ್ಲೆಯ ತುರವೇಕೆರೆಯಲ್ಲಿರುತ್ತಾರೆ. ಮೊದಲಿನಿಂದಲೂ ಶ್ರೀ ನರಸಿಂಹನ ಉಪಾಸಕರಾದ ಇವರಿಗೆ ನೃಸಿಂಹದಾಸರೆಂದು ಪೂರ್ವದಲ್ಲಿ ಹೆಸರಿದ್ದಿತು.

ದಾಸರು ತಮ್ಮ ಪ್ರಚಂಡವಾದ ಶಿಷ್ಯಪರಿವಾರದೊಡನೆ ಪಾದಚಾರಿಗಳಾಗಿ ಪಂಢರಪುರಕ್ಕೆ ಬಂದು ವಿಠ್ಠಲನ ಸೇವೆ ಮಾಡಿದರು. ಅದರಿಂದ ಪಾಂಡುರಂಗನು ಪ್ರಸನ್ನವಾಗಿ ದರ್ಶನವಿತ್ತನು. ಅವನ ದರ್ಶನದ ಆನಂದವು ಅಚಲವಾಗಿ ಉಳಿಯಲೆಂಬ ಹಿರಿಯಾಶೆಯಿಂದ ಇವರು ಅಚಲಾನಂದವಿಠಲ ಎಂದು ಅಂಕಿತವನ್ನಿಟ್ಟುಕೊಂಡು ಅನೇಕ ಕನ್ನಡ ಕೃತಿಗಳನ್ನು ರಚಿಸಿದರು.

ನೇಪಾಳದ ಮಹಾರಾಜನು, ಕರ್ನಾಟಕದ ರಾಷ್ಟ್ರಕೂಟ ವಂಶದ ಅರಸರು ಇವರ ಶಿಷ್ಯರಾದರು, ರಟ್ಟರಾಜರು ಇವರಿಗೆ ತುರವೇಕೆರೆ ಮುಂತಾದ ೧೮ ಗ್ರಾಮಗಳ ಜಹಗೀರಿಯನ್ನು ಹಾಕಿಕೊಟ್ಟರು. ಇವರ ವಂಶದಲ್ಲಿ ಮುಂದೆ ಮುದ್ದುವಿಠ್ಠಲ, ಗೋಪೀನಾಥ, ಹರಿದಾಸ, ತಿಮ್ಮಣ್ಣದಾಸ, ಪಾಂಡುರಂಗದಾಸ ಮುಂತಾದ ಅನೇಕ ದಾಸರು ಆಗಿಹೋದರು.

“ಅಚಲಾನಂದದಾಸರು, ಶ್ರೀಮಧ್ವಾಚಾರ್ಯರಿಗಿಂತ ೩೦೦–೪೦೦ ವರ್ಷ ಮೊದಲಿನ ಭಾಗವತ ಸಂಪ್ರದಾಯದ ಹರಿಭಕ್ತರು” ಎಂದು ಬೇಲೂರ ಕೇಶವದಾಸರು ಹೇಳಿದ ಮಾತು ವಿಸಂಗತವಾಗಿದೆ. ಪ್ರಮಾಣವಿರುದ್ಧವೂ ಆಗಿದೆ.

ದಿ. ಹುಲಗೂರ ಕೃಷ್ಣಾಚಾರ್ಯ ಕಿನ್ನರಿ ವಿದ್ವಾನ್ ಹುಬ್ಬಳ್ಳಿ ಇವರ ಸಂಗ್ರಹದಲ್ಲಿದ್ದ ಅಚಲಾನಂದದಾಸರ ಪದ್ಯ ಪುಸ್ತಕ ಒಂದರಲ್ಲಿ—

“ಕೇಳೋ ಜೀವನವೆ ನೀ ಮಧ್ವಮತವನನುಸರಿಸಿ।
ಶ್ರೀಲೋಲನಂಘ್ರಿಗಳ ನೆನೆದು ಸುಖಿಸೋ”

ಎಂದು ಒಂದು ಹಾಡಿನ ಮೊದಲಿನ ನುಡಿಯು ಇರುತ್ತದೆ. ಆದುದರಿಂದ ಇವರು ದಿ. ಕೇಶವದಾಸರ ಅಭಿಪ್ರಾಯದಂತೆ ೯ನೇ ಶತಮಾನದ ಭಾಗವತ ಸಂಪ್ರದಾಯದ ಹರಿದಾಸರಾಗದೇ ೧೨೮೧ ನೇ ಶಾಲಿವಾಹನ ಶಕದಲ್ಲಿ ಜೀವಿಸಿದ ಮಧ್ವಮತಾನುಯಾಯಿ ಹರಿದಾಸರೆಂದು ಸಿದ್ಧವಾಗುವದು. ಇವರ ಪದ್ಯದ ಮಾದರಿ–

"ಕೊಡಲಿಬೇಕು ಪಾಪದ ಬೇರ ಕಡಿವಡೆ
ಕೊಡಲಿಬೇಕು ಗುರುಹಿರಿಯರ ಕೈಯ್ಯಲಿ
ಕೊಡಲಿಬೇಕು ಸತ್ಪಾತ್ರರಿದ್ದೆಡೆಯಲಿ
ಕೊಡಲಿಲ್ಲ ಕೊಡಲಿಲ್ಲ ಕೊಡಲಿಲ್ಲಸವಗೆ
ಕೊಡಲಿಲ್ಲ ಎನ್ನವಡೆಯ
ಕೇಳೋ ಅಚಲಾನಂದ ವಿಠ್ಠಲ"

## ೯ ಶ್ರೀವೈಕುಂಠದಾಸರು

ಬೇಲೂರಿನವರಾದ ಶ್ರೀವೈಕುಂಠದಾಸರು ಹೆಬ್ಬಾರ ಎಂಬ ಶ್ರೀವೈಷ್ಣವ ಬ್ರಾಹ್ಮಣ ಕುಟುಂಬಕ್ಕೆ ಸೇರಿದವರು. ಪುರಂದರ, ಕನಕದಾಸರ ಸಮಕಾಲೀನರು. ಇವರು ಮದುವೆಯಾದ ಬಳಿಕ ಜಿತೇಂದ್ರಿಯರಾಗಿ ಅನನ್ಯ ಭಕ್ತಿಯಿಂದ ಧ್ಯಾನ ಮಾಡಿದರು. ಆದರಿಂದ ಸಾಕ್ಷಾತ್ ಕೇಶವನು ವೈಕುಂಠದಿಂದ ಬಂದು ಅವರಿಗೆ ದರ್ಶನವಿತ್ತು ಅನುಗ್ರಹಿಸಿದನು. ಅಂದಿನಿಂದ ಇವರು " ವೈಕುಂಠಕೇಶವ " ಎಂಬ ಮುದ್ರಿಕೆಯಿಂದ ಅನೇಕ ದೇವರ ನಾಮಗಳನ್ನು ರಚಿಸಿದರು. ಆರ್ತಭಾವವು ಇವರ ಶರಣಾಗತಿಯ ಪದಗಳಲ್ಲಿ ಸ್ಥಾಯಿಯಾಗಿ ಪ್ರಪತ್ತಿಯಲ್ಲಿ ಪರ್ಯವಸಾನಗೊಂಡಿದೆ.

## ೧೦ ಶ್ರೀವಿಜಯೀಂದ್ರತೀರ್ಥರು

ಮೊದಲು ವಿಷ್ಣುತೀರ್ಥರೆಂದು ಹೆಸರಾಗಿ ಶ್ರೀವ್ಯಾಸರಾಜರ ಪ್ರಮುಖ ಪಂಡಿತ ಪಟ್ಟ ಶಿಷ್ಯರಾದ ಇವರು ಶ್ರೀರಾಯರ ಮಠದ ಶ್ರೀಸುರೇಂದ್ರತೀರ್ಥರ ಅಪೇಕ್ಷೆಯಂತೆ ಆ ಮಠಕ್ಕೆ ಅಧಿಪತಿಗಳಾಗಿ ಬಂದರು.

ಶ್ರೀ ಸುರೇಂದ್ರರು ತಮ್ಮ ಈ ದ್ವ್ಯಾಮುಷ್ಯಾಯಣ ಶಿಷ್ಯನಿಗೆ ವಿಜಯೀಂದ್ರತೀರ್ಥ ಎಂದು ಹೆಸರಿಟ್ಟು ತಮ್ಮ ಅನಂತರ ಸರ್ವಜ್ಞಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಗೈದರು.

ಶ್ರೀ ವಿಜಯೀಂದ್ರರು ತಮ್ಮ ಹೆಸರಿಗೆ ತಕ್ಕಂತೆ ಕುಂಭಕೋಣದಲ್ಲಿ ನೆಲಿಸಿ ಅಪ್ಪಯ್ಯ ದೀಕ್ಷಿತರೇ ಮೊದಲಾದ ಶೈವವಾದಿಗಳನ್ನು ಗೆದ್ದರು. ೧೦೪ ಶಾಸ್ತ್ರೀಯ ಉಗ್ರ ಗ್ರಂಥಗಳನ್ನು ರಚಿಸಿದರು. ವಿಜಯನಗರ ರಾಜರಿಂದ ರತ್ನಾಭಿಷೇಕ ಮಾಡಿಸಿಕೊಂಡರು.

ಇವರು ಕನ್ನಡದಲ್ಲಿಯೂ ಅನೇಕ ಪದಪದ್ಯಗಳನ್ನು ರಚಿಸಿದರೆಂದು ಐತಿಹ್ಯವಿದೆ. ಆದರೆ ವಿಜಯೀಂದ್ರ ಎಂಬ ಮುದ್ರಿಕೆಯಿಂದ ನಮಗೆ ಇಂದು ದೊರೆತ ಅವರ ಕನ್ನಡ ಕೃತಿ ಒಂದು ಪದವು ಮಾತ್ರ. ಆನಂದ ಭೈರವಿ ರಾಗದ ಅಟ್ಟ ತಾಳದಲ್ಲಿ ಹರಿದಿರುವ ಒಂದು ಪದ್ಯವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಯೋಗಿವರ ವ್ಯಾಸರಾಯರೆಂಬ ।
ವಿಚಿತ್ರ ಮೇಘ ॥ಪ॥
ಬೇರೆ ವಿಷ್ಣು ಪದ ತೋರಿಸುತ್ತ ।
ಬಂದಿತಿಕೊ ॥ಅ॥
ಮಾಯಿಮತವೆಂಬ ತಾರಾಮಂಡಲವ ಮುಸುಕುತ್ತ ।
ವಾಯುಗತಿಯಂತೆ ಗಮಿಸುತ್ತಲೀ ।
ಹೇಯ ಕಾಮಾದಿಗಳೆಂಬ ರಜವನಡಗಿಸುತ್ತ ।
ನಾಯಕನುಪೇಂದ್ರನಾಜ್ಞೆಯ ಪಡೆದು ॥
ಅಂಗಜನಯ್ಯನೇ ಪರನೆಂದು ।
ಘುಡಿಘುಡಿಸುತ್ತ ।
ಕಂಗಳೆಂಬ ಮಿಂಚನೆ ನೆರಹಿ ಲೋಕದಿ ।
ಹಿಂಗದೆ ಪರಿವ ಅಜ್ಞಾನವೆಂಬ ಕತ್ತಲೆಯ ।
ಭಂಗಿಸಿ ಸುಪಥವ ತೋರಿಸುತ್ತ ॥೨॥
ಸಿರಿಯರಸನ ಸಮ್ಯಕ್ ಜ್ಞಾನವೆಂಬ ಪೈರಿಗೆ ।
ಬೇರು ಬೇರೆ ।
ಹರಿಕಥೆಯೆಂಬ ಮಳೆಗರೆದು ।
ಶಿಷ್ಯನ ಮನವೆಂಬ ಕೆರೆ ತುಂಬಿಸಿ ।
ಕಂಗಳೆಂಬ ಕೋಡಿವಾರಿಸುತ್ತ ವಿಜಯೀಂದ್ರನ ಗುರು ॥೩॥

ಗುರುಸ್ತೋತ್ರ ಪರವಾದ ಈ ಒಂದು ಗೀತದಲ್ಲಿಯೇ ಶ್ರೀವಿಜಯೀಂದ್ರತೀರ್ಥರ ಚಿತ್ರಕ ಶಕ್ತಿಯ ಪರಿಚಯ, ಪ್ರತಿಮಾ ವಿಧಾನದ ಚಾತುರ್ಯದ ಅರಿವು, ಅವರ ಕವಿತ್ವಕೌಶಲದ ಸಿದ್ಧಿಯ ಪರಿಜ್ಞಾನವೂ ಚನ್ನಾಗಿ ಸಹೃದಯರಿಗೆ ಮನವರಿಕೆಯಾಗಲಿಕ್ಕೆ ಸಾಕು.

# ೧೧ ಶ್ರೀ ಅಚ್ಯುತ ವಿಠ್ಠಲದಾಸರು

ಕ್ರಿ. ಶ. ೧೫೫೦ ರಲ್ಲಿ ಜೀವಿಸಿದ ಶ್ರೀ ಅಚ್ಯುತ ವಿಠ್ಠಲರು ಮೊದಲು ಸಂಸ್ಕೃತ ಸಾಹಿತ್ಯದಲ್ಲಿ ಮಹಾಶಾಸ್ತ್ರ ಪಂಡಿತರಾಗಿದ್ದರು. ಹೋದಲ್ಲೆಲ್ಲ ವಾದಿಗಳನ್ನು ಗೆದ್ದು ವಾಕ್ಯಾರ್ಥ ಮಾಡಿ ಜಯಪತ್ರ ತರುವ ಹುಚ್ಚು ಹಂಬಲವಾಗಿ ಅವರನ್ನು ಬೆಂಬತ್ತಿದ್ದಿತು.

ಒಮ್ಮೆ ಅವರು ಈ ವಿಜಿಗೀಷೆಯ ಭರದಲ್ಲಿ ವೃದ್ಧರಾದ ವೈಕುಂಠದಾಸರನ್ನು ವಾದಾಟೋಪದಲ್ಲಿ ಕೆಣಕಿ ಅವಮಾನಗೊಳಿಸಿದರು. ಆ ಹರಿಭಕ್ತರ ದ್ರೋಹದಿಂದ ಇವರ ಕಣ್ಣು, ನಾಲಿಗೆಗಳು ಉಡುಗಿ ಹೋದವು.

ಆಗ ಅವರಿಗೆ ಪಶ್ಚಾತ್ತಾಪವಾಗಿ ವೈಕುಂಠದಾಸರ ಅಡಿಹುಡಿಯಲ್ಲಿ ಬಿದ್ದು ತಮ್ಮ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡರು. ಮೃದು ಹೃದಯದ ಕರುಣಾಳುಗಳಾದ ವೈಕುಂಠದಾಸರು ಅಚ್ಯುತದಾಸರಿಗೆ ಕಣ್ಣು ನಾಲಿಗೆ ಬರಲಿ ಎಂದು ಭಗವಂತನಲ್ಲಿ ಮೊರೆಇಟ್ಟು ಬೇಡಿಕೊಂಡರು.

" ಪಾಲಿಸದು ನಯನಗಳ ನಾಲಿಗೆಯ ನೀಗ ।
ತ್ರಿಲೋಕ ಸಾರ್ವಭೌಮನೇ ॥
ನೀಲಮೇಘಶ್ಯಾಮ ವೇಲಾ ಪುರಾಧೀಶ ।
ಶೀಲ ಅಚ್ಯುತದಾಸಗೆ ಸ್ವಾಮಿ ॥ "

ಅವರ ಈ ಪ್ರಾರ್ಥನೆಯನ್ನು ಮನ್ನಿಸಿ ಭಗವಂತನು ಅಚ್ಯುತದಾಸರಿಗೆ ನಯನ ನಾಲಿಗೆಗಳನ್ನು ದಯಪಾಲಿಸಿದನು.

ಅಂದಿನಿಂದ ಅಚ್ಯುತ ಪಂಡಿತರು ತಮ್ಮ ವೈದುಷ್ಯದ ಹಮ್ಮು ಬಿಮ್ಮುಗಳನ್ನು ನೀಗಿ ವೈಕುಂಠದಾಸರ ಚರಣಗಳಿಗೆ ಶರಣು ಹೋಗಿ ಹರಿದಾಸರಾದರು. ಅಚ್ಯುತವಿಠ್ಠಲ ಅಂಕಿತದಿಂದ ಇವರು ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಇವರು ಬರೆದ ತುಲಸೀ ಮಹಾತ್ಮ್ಯೆ ಎಂಬ ಕಾವ್ಯವು ಭಾಮಿನೀಷಟ್ಪದಿಯಲ್ಲಿ ಇದ್ದು ದಾಸರ ಕವಿತಾಚಾತುರ್ಯ, ರಸಸಿದ್ಧಿ, ಭಾಷಾ ಪ್ರಭುತ್ವಗಳಿಗೆ ಜೀವಂತ ನಿದರ್ಶನವಾಗಿದೆ. ಅದರಲ್ಲಿ ದಾಸರು—

" ತುಲಸಿಯ ಖ್ಯಾತಿಯನು ಬಲ್ಲಂತೆ ಹೊಗಳಿದ ನಚ್ಯುತದಾಸ "

ಎಂಬುದಾಗಿ ತಮ್ಮನ್ನು ಅಚ್ಯುತದಾಸನೆಂದು ಕರೆದುಕೊಂಡಿದ್ದಾರೆ.

## ೧೨ ಶ್ರೀ ವರದ ಪುರಂದರ ವಿಠಲ

ಪುರಂದರದಾಸರ ಹಿರಿಯ ಮಕ್ಕಳಾದ ಇವರು ತಂದೆ ಪುರಂದರದಾಸರಿಂದಲೇ 'ವರದ ಪುರಂದರ ವಿಠಲ' ಎಂಬ ಅಂಕಿತವನ್ನು ಹೊಂದಿದರು. ಇವರ ಮೊದಲಿನ ಹೆಸರು ವರವಪ್ಪ ಎಂದೇ ಇದ್ದಿತು. ಇವರ ತಮ್ಮ ಗುರುಪುರಂದರ ದಾಸರು. ಇವರಿಬ್ಬರೂ ಅಣ್ಣತಮ್ಮಂದಿರನ್ನು ಕನಕದಾಸರು—

"ವರದಪ್ಪನೇ ಸೋಮ ಗುರುರಾಜ ದಿನಕರನು"

ಎಂದು ಸೂರ್ಯ ಚಂದ್ರರಿಗೆ ಹೋಲಿಸಿ ಬಣ್ಣಿಸಿದ್ದಾರೆ. ಇವರು ಅನೇಕ ಕೀರ್ತನೆಗಳನ್ನು ಮಾಡಿ ತಂದೆಗೆ ತಕ್ಕ ಮಕ್ಕಳಾಗಿ ಹರಿದಾಸ ಸರಂಪರೆಯನ್ನು ಮುಂದುವರಿಸಿದರು.

## ೧೩ ಶ್ರೀ ಗುರು ಪುರಂದರದಾಸ

ಪುರಂದರದಾಸರ ಎರಡನೇ ಮಕ್ಕಳಾದ ಗುರುರಾಯರು ತಮ್ಮ ತಂದೆಯಿಂದಲೇ ಅಂಕಿತವನ್ನು ಪಡೆದು ಉಪದೇಶವನ್ನು ಹೊಂದಿ ಪ್ರಸಿದ್ಧ ಹರಿದಾಸರಾದರು. ಅನೇಕ ದೇವರ ನಾಮಗಳನ್ನೂ, ಸುಳಾದಿ, ಉಗಾಭೋಗಗಳನ್ನು ರಸಭರಿತವಾಗಿ ಇವರು ಹೊಸೆದುಹಾಕಿದ್ದಾರೆ.

ರಾಯರ ಮಠದ ಶ್ರೀವಿಜಯೀಂದ್ರ ಸ್ವಾಮಿಗಳನ್ನೂ ಹಾಗೂ ಚಂದ್ರಿಕಾ ಚಾರ್ಯರನ್ನೂ ತಮ್ಮ ಕಾವ್ಯ ವಸ್ತುವನ್ನಾಗಿ ಮಾಡಿಕೊಂಡು ಇವರು ಕವನಿಸಿದ್ದಾರೆ

"ವಿಜಯೀಂದ್ರರೆಂಬೊ ಆಶ್ಚರ್ಯದ ।
ಗಜೇಂದ್ರ ಬಂದಿದೆ ಸುಜನರು ನೋಡ ಬನ್ನಿ ॥ಪ॥

ಎಂಬುದಾಗಿಯೂ, ಹಾಗೂ

"ವಾಸುದೇವನ ಚರಣವನಜ ವಂದಿತನೇ ಸ-
ನ್ಯಾಸರತ್ನಾಕರನೇ ವ್ಯಾಸಮುನಿರಾಯ"

ಎಂದು ಮುಂತಾಗಿ ಕೊಂಡಾಡಿದ್ದಾರೆ. ಹರಿಗುರುಭಕ್ತಿಯು ಇವರ ಪದ್ಯಗಳಲ್ಲಿ ಚನ್ನಾಗಿ ಅಭಿವ್ಯಕ್ತಿಯನ್ನು ಪಡೆದಿದೆ.

# ೧೪ ಶ್ರೀ ಅಭಿನವ ಪುರಂದರದಾಸ

ಪುರಂದರದಾಸರ ಮೂರನೇ ಮಕ್ಕಳಾದ ಇವರ ಮೊದಲಿನ ಹೆಸರು ಅಪ್ಪಣ್ಣ ಭಾಗವತ. ಇವರೂ ತಂದೆಯಿಂದಲೇ ಅಂಕಿತೋಪದೇಶ ಹೊಂದಿ ತಮ್ಮ ಮನೆತನದ ದಾಸ ಪರಂಪರೆಯ ನಂದಾದೀಪವು ನಂದದಂತೆ, ಎಂದೂ ಕುಂದದಂತೆ, ಇನಿತೂ ಕಂದದಂತೆ ಮುಂದುವರಿಸಿಕೊಂಡು ಬಂದರು.

ಇವರ ಪದ್ಯಗಳಲ್ಲಿ ಕವಿತ್ವದ ಜೊತೆಗೆ ಭಕ್ತಿಯ ಪ್ರಭಾವವು ಚನ್ನಾಗಿ ಮುದ್ರೆಯೊತ್ತಿದೆ. ಅಭಿನವ ಪುರಂದರದಾಸ ಎಂಬ ಮುದ್ರಿಕೆಯಿಂದ ಇವರು ರಚಿಸಿದ ಪದಗಳು ಭಾವಕೋಮಲತೆಯಿಂದಲೂ ಭಾಷಾಸೌಂದರ್ಯದಿಂದಲೂ ವಾಚನೀಯವೂ ರೋಚನೀಯವೂ ಆಗಿವೆ.

ಶ್ರೀವ್ಯಾಸರಾಯರನ್ನು ಹೊಗಳಿ ಹಾಡಿದ ಅವರ ಒಂದು ಪದ್ಯವನ್ನು ಕೇಳಿರಿ–

"ಎನ್ನ ಜನ್ಮ ಸಫಲವಾಯಿತು ।
ನೀವು ಕೇಳಿರಯ್ಯ ।
ಅನ್ಯರನಾಶ್ರಯಿಸಲ್ಯಾತಕೆ ।
ತನ್ನ ತಾನೇ ವ್ಯಾಸಮುನಿ ಎನ್ನ ಕೈಪಿಡಿದ ಮೇಲೆ ॥ಪ॥
ಛಂದದಿಂದ ಪೊರೆವ ಅಭಿನವ ।
ಪುರಂದರ ವಿಠಲನ ಭಜಿಪ ।
ತಂದು ತೋರಿದ ವೈಷ್ಣವ ಕುಮುದೇಂದು ।
ವ್ಯಾಸರಾಯರ ಕಂಡಮೇಲೆ ॥

ಈ ಅಪ್ಪಣ್ಣ ಭಾಗವತನು ಚಿಕ್ಕವನಿದ್ದಾಗ ಪುರಂದರದಾಸರು ಬ್ರಾಹ್ಮಣರ ಭೋಜನಕ್ಕಾಗಿ ತುಪ್ಪತರಲು ಕಳಿಸಿದ್ದರು. ಅಂಗಡಿಯಿಂದ ಅಪ್ಪಣ್ಣನು ಬೇಗಬಾರದಾಗ ದಾಸರು ಚಿಂತಾಕ್ರಾಂತರಾಗಿ ಕುಳಿತರು. ಆಗ ವಿಠ್ಠಲನೇ ಅಪ್ಪಣ್ಣನ ವೇಷದಿಂದ ತುಪ್ಪ ತೆಗೆದುಕೊಂಡು ಬಂದು ಬಡಿಸಿದನು. ಬಾಹ್ಮಣ ಭೋಜನವಾದ ಬಳಿಕ ನಿಜವಾದ ಅಪ್ಪಣ್ಣನು ತುಪ್ಪ ತೆಗೆದುಕೊಂಡು ಮನೆಗೆ ಬಂದಾಗ ದಾಸರಿಗೆ ದಿಗಿಲಾಯಿತು. ದಿವ್ಯ ದೃಷ್ಟಿಯಿಂದ ನೋಡಿದಾಗ ಪರಮಾನಂದವೂ ಆಯಿತು.

ಅವರ ಭಕ್ತಿಯು ಅಂತರಂಗದಿಂದ ಉಕ್ಕಿ ಕನ್ನಡದ ಕಾವ್ಯೋಕ್ತಿಯಾಗಿ ಹರಿಯಿತು.

" ಎಂದಪ್ಪಿಕೊಂಬೆ ರಂಗಯ್ಯನ ।
ಎಂದಪ್ಪಿಕೊಂಬೆನೊ ।
ಅಪ್ಪಣ್ಣ ಭಾಗವತ ರೂಪಾವು ತಾನಾಗಿ ।
ತುಪ್ಪದ ಬಿಂದಿಗಿ ತಂದ ಮುಕುಂದನ ॥ "

## ೧೫ ಶ್ರೀ ಗುರು ಮಧ್ವಪತಿ ಪುರಂದರ ವಿಠಲರು

ಇವರು ಪುರಂದರದಾಸರ ಕಡೆಯ ಮಕ್ಕಳು. ಈತನು ಹುಟ್ಟು ಮೂಕನಾಗಿದ್ದನೆಂದೂ ಶ್ರೀ ಚಂದ್ರಿಕಾಚಾರ್ಯರ ಅನುಗ್ರಹದಿಂದ ಆ ಮೂಕತೆಯು ಹೋಗಿ ವಾಕೋ ವೈದುಷ್ಯವು ಇವನಿಗೆ ಪ್ರಾಪ್ತವಾಯಿತೆಂದೂ ಐತಿಹ್ಯವಿದೆ.

ಇವನು ಚಿಕ್ಕವನಿದ್ದಾಗ ಪುರಂದರದಾಸರು ಒಂದು ದಿನ ಯಂತ್ರೋದ್ಧಾರ ಪ್ರಾಣದೇವರಿಗೆ ನೈವೇದ್ಯ ಮಾಡಿಕೊಂಡು ಬಾ ಎಂದು ಕರಿಗಡಬು, ಚಿತ್ರಾನ್ನದ ತಟ್ಟೆಯನ್ನು ಕೈಯಲ್ಲಿ ಕೊಟ್ಟು ಕಳಿಸಿದರು. ಇವನು ಪ್ರಾಣದೇವರ ಮುಂದೆ ತಟ್ಟೆಯನ್ನಿಟ್ಟು ತಿನ್ನಬೇಕೆಂದು ಬೇಡಿಕೊಂಡನು. ಕಲ್ಲು ಮೂರತಿಯು ಬಾಯಿ ಬಿಡದಾದಾಗ ಅವನ ಪಾದಕ್ಕೆ 'ತಲೆ ಒಡೆದುಕೊಂಡು ಅಸುನೀಗುವೆ' ಎಂದು ರಂಭಾಟ ರೋದಂತಿಗಳೊಂದಿಗೆ ಆಕ್ರಂದಿಸು ಅಂಗಲಾಚಿದನು. ಮಗುವಿನ ಈ ಭಕ್ತಿಯ ಮೊಂಡಾಟವನ್ನು ಕಂಡು ಕರುಳು ಕರಗಿದ ಹನುಮಂತದೇವರು ಬಾಯಿ ತೆರೆದರು.

ಮಧ್ವಪತಿಯು ಹನುಮಪ್ಪನಿಗೆ ಕಡುಬು ಕಲಸನ್ನವನ್ನು ಉಣ್ಣಿಸಿ ಖಾಲಿ ಪರಾತದೊಂದಿಗೆ ಮನೆಗೆ ಬಂದನು.

ಎರಡು ಮೂರು ದಿನ ಹೀಗೆ ನಡೆಯಲು ಇದನ್ನು ನಂಬಲಾರದ ದಾಸರು ನಾಲ್ಕನೇ ದಿನ ತಾವೇ ಮಗನೊಂದಿಗೆ ಗುಡಿಗೆ ಹೋದರು. ಬಂಡಿ ಅನ್ನವ ಉಂಡ ಕೂಸು ಮಗುವಿನ ಭಕ್ತಿಗೆ ಬಾಯಿ ತೆರೆದಿದ್ದನ್ನು ನೋಡಿ ಕೌತುಕ ಪಟ್ಟರು. ಆ ಮಗುವನ್ನು ಪ್ರೀತಿಯಿಂದ ಅಪ್ಪಿದರು.

ತಂದೆಯಿಂದ ಅಂಕಿತ ಪಡೆದು ಮುಂದೆ ಇವರು ಅನೇಕ ದೇವರ ನಾಮುಗಳನ್ನು ಬರೆದರು.

## ೧೬ ಶ್ರೀ ಪ್ರಸನ್ನ ವೆಂಕಟದಾಸರು

ಇವರು ಬಾಗಲಕೋಟೆಯಲ್ಲಿ ಕ್ರಿ. ಶ. ೧೬೮೦ ರಲ್ಲಿ ಜನಿಸಿದರು. ಇವರ ಮನೆತದ ಮೂಲಸ್ಥಲ ಕಾಖಂಡಕಿಯಾದುದರಿಂದ ಕಾಖಂಡಕಿ ವೆಂಕಪ್ಪಯ್ಯ ಎಂದು ಜನರು ಇವರನ್ನು ಕರೆಯುತ್ತಿದ್ದರು.

ಇವರಿಗೆ ಬಾಲ್ಯದಲ್ಲಿಯೇ ತಾಯಿ–ತಂದೆಗಳ ವಿಯೋಗವಾಯಿತು. ಮನೆಯಲ್ಲಿ ಅತ್ತಿಗೆಯ ಕಾಟಕ್ಕೆ ಬೇಸತ್ತು ತಿರುಪತಿಗೆ ಓಡಿ ಹೋದರು. ಅಲ್ಲಿ ಊಟ, ತಿಂಡಿ ಎಲ್ಲವನ್ನು ಬಿಟ್ಟು ಒದ್ದೆ ಬಟ್ಟೆಯಿಂದಲೇ ಶ್ರೀನಿವಾಸನನ್ನು ಧ್ಯಾನಮಾಡುತ್ತ ದೇವರ ಮುಂದೆ ಅಡ್ಡಬಿದ್ದರು. ಇವರ ಭಕ್ತಿಗೆ ಮೆಚ್ಚಿ ವೆಂಕಟೇಶನು ಇವರ ನಾಲಿಗೆಯ ಮೇಲೆ "ಪ್ರಸನ್ನವೆಂಕಟ'' ಎಂಬ ಬೀಜಾಕ್ಷರವನ್ನು ಬರೆದನು.

ಶ್ರೀ ವೆಂಕಟೇಶದೇವರ ಅನುಗ್ರಹ ಪಡೆದು ವೆಂಕಪ್ಪಯ್ಯನು ಊರಿಗೆ ಬಂದು ಮಧ್ವಶಾಸ್ತ್ರವನ್ನು ಅಧ್ಯಯನ ಮಾಡಬೇಕೆಂಬ ಲವಲವಿಕೆಯಿಂದ ಗಲಗಲಿಗೆ ತೆರಳಿದರು. ಅಲ್ಲಿಯ ಪ್ರಸಿದ್ಧ ಪಂಡಿತರೂ, ಅಪರೋಕ್ಷ ಜ್ಞಾನಿಗಳೂ ಆದ— ಶ್ರೀ ಗಲಗಲಿ ಮುದ್ಗಲಾಚಾರ್ಯರಲ್ಲಿ ೬ ವರ್ಷ ಶಾಸ್ತ್ರ ವ್ಯಾಸಂಗವನ್ನು ಮಾಡಿದರು.

ತಮ್ಮ ಗುರುಗಳಾದ ಶ್ರೀ ಮುದ್ಗಲಾಚಾರ್ಯರ ಮೇಲೆ ರಚಿಸಿದ ಕನ್ನಡ ಪದ್ಯಗಳನ್ನು ಎರಡೂ ಮನೆತನದವರು ಭಕ್ತಿಯಿಂದ ಈಗಲೂ ಹಾಡುತ್ತಾರೆ.

ಅನಂತರ ದಾಸರು ಪ್ರಸನ್ನವೆಂಕಟ ಎಂಬ ತಮ್ಮ ಮುದ್ರಿಕೆಯಿಂದ ಸಾವಿರಾರು ದೇವರ ನಾಮಗಳನ್ನು ರಚಿಸಿದ್ದಾರೆ. ಅವರ ಕಾವ್ಯಗಳಲ್ಲಿ— ಭಕ್ತಿಯ ಉತ್ಕಟತೆ, ಭಗವಲ್ಲೀಲಾ ವಿಲಾಸಗಳು, ನಿರೂಪಣೆಯ ನೈಜತೆಯೊಂದಿಗೆ ಬೆರೆತು ರಸಪ್ರತೀತಿಗೆ ಗೋಚರವಾಗುತ್ತವೆ.

ಪ್ರಸನ್ನ ವೆಂಕಟದಾಸರು ಹರಿಕೀರ್ತನೆಗಳನ್ನು ಮಾತ್ರವಲ್ಲದೆ— ನಾರದ ಕೊರವಂಜಿ, ಭ್ರಮರ ಗೀತೆ, ವೇಣುಗೀತೆ, ಸತ್ಯಭಾಮಾ ವಿಲಾಸ, ನಾರಾಯಣ ಪಂಜರ, ಶ್ರೀ ಹರಿನಾಮ ಷಟ್ಚರಣಪದ್ಯ ಮಾಲಾ ಮುಂತಾದ ಅನೇಕ ರಸವತ್ಕಾವ್ಯಗಳನ್ನು ಬರೆದಿದ್ದಾರೆ.

ಶ್ರೀಮದ್ಭಾಗವತ ದಶಮ ಸ್ಕಂದವನ್ನು ಇಡಿಯಾಗಿ ಕನ್ನಡದ ಕನ್ನಡಿಯಲ್ಲಿ ನಯವಾಗಿ ಮೂಡಿಸಿದ ಮೊದಲ ಶ್ರೇಯಸ್ಸು ಪ್ರಸನ್ನ ವೆಂಕಟದಾಸರಿಗೆ ಸಲ್ಲುತ್ತದೆ.

ಶುಕವಾಣಿಯ ಮೂಲಭಾಗವತದ ಮಾಧುರ್ಯವನ್ನು ಎಲ್ಲಿಯೂ ಬಸಿದು, ಒಸರಿ ಹೋಗದಂತೆ, ರಸದ ಒಂದು ಹನಿಯೂ ಕೆಳಗೆ ಬೀಳದಂತೆ, ಕನ್ನಡದ ಕುಂಭದಲ್ಲಿ ತಂದು ತುಂಬಿದ್ದಾರೆ ತುಂಬು ಜಾಣ್ಮೆಯಿಂದ ಪ್ರಸನ್ನ ವೆಂಕಟರು. "ಕಿಮಸಾಧ್ಯಂ ಭಗವತಿ ಪ್ರಸನ್ನೇ ಶ್ರೀ ನಿಕೇತನೇ"

ಪ್ರಸನ್ನ ವೆಂಕಟರ ಲಲಿತ ಬಂಧುರವಾದ ಸುಂದರ ಕೃತಿಗಳಲ್ಲಿ ಭಗವದಾಭಿಮುಖ್ಯವು ಮುಖ್ಯವಾಗಿದೆ. ಸರ್ವಾರ್ಪಣ ಸಿದ್ಧಿಯಿಂದ ಅವರ ಸಾಹಿತ್ಯವು ಕೃತಕೃತ್ಯವಾಗಿದೆ. ಆದರೂ ಜನಜೀವನದೆಡೆಗೆ ಅವರ ಕವಿ ವಾಣಿಯು ಉನ್ಮುಖವಾಗಿ ಚತುರ್ಮುಖ ಚಾತುರ್ಯದಿಂದ ಬದುಕನ್ನು ತಿದ್ದುವಲ್ಲಿಯೂ ಸಾಫಲ್ಯವನ್ನು ಕಂಡಿದೆ.

ವಿಷಯಕ್ಕೆ ಅನುಗುಣವಾದ ಅಭಿವ್ಯಕ್ತಿಯ ರೂಪವನ್ನು ಆಯ್ದುಕೊಂಡು ಸ್ವಯಂಪೂರ್ಣವಾದ ರಸೋಲ್ಲಾಸದಿಂದ ಅವರ ದೇವರ ನಾಮಗಳೆಲ್ಲವೂ ದಿವ್ಯ ಭಾವಗೀತದ ಸೊಬಗನಾಂತು ಸೊಗಯಿಸುತ್ತವೆ. ಅವರ ಸಾಹಿತ್ಯವಲ್ಲಿ ಬುದ್ಧಿ ಭಾವಗಳ ವಿದ್ಯುದಾಲಿಂಗನೆಯಾಗಿ ಹೊಸದಾದ ಒಂದು ರಸರಂಗವೇ ಏರ್ಪಡುವದು.

"ರಂಗ ಕೊಳಲನೂದಲಾಗಿ ।
ರಂಗಯ್ಯ ಕೊಳಲನೂದಲು ।
ಮಂಗಳಮಯವಾಯಿತು ಧರೆಯ ಜ-
ನಂಗಳು ಜೀವನ ಚೇತನ ಮರೆದು ।
ಶ್ರೀರಂಗಧ್ಯಾನಪರರಾದರೊ ॥ "

ಎಂದು ಕಾಖಂಡಕಿದಾಸರು ಹಾಡಿದಾಗ ವೃಂದಾವನದ ಬಾಲ ಮುಕುಂದನು ಗೋಪಾಂಗನೆಯರೊಂದಿಗೆ ರಾಸಕ್ರೀಡೆಯನ್ನಾಡುತ್ತ ಕಣ್ಣೆದುರೇ ಕೊಳಲನೂದಿದ ಅನುಭವವಾಗುತ್ತದೆ.

ಕೃಷ್ಣಸತ್ಯಭಾಮೆಯರ ಸಂವಾದದಲ್ಲಿ ವ್ಯಂಗ್ಯೋಕ್ತಿ, ವಕ್ರೋಕ್ತಿಗಳು ಕವಿಯ ಹಾಸ್ಯ, ಶೃಂಗಾರ ರಸಗಳ ಸಾಮರಸ್ಯದ ನೆಯ್ಗೆಯ ನೈಪುಣ್ಯವನ್ನು ಎತ್ತಿ ತೋರುತ್ತವೆ.

ಕೃಷ್ಣ— "ಬಂದೆ ಕೇಳೆ ಗೋವಿಂದ ನಾ ।
ಇಂದುಮುಖಿ ನಿದ್ರೆ ಬಿಟ್ಟು ।
ಬಂದು ನೀ ಬಾಗಿಲ ತೆರೆಯೇ ॥
ಭಾಮೆ— ಗೋವಿಂದ ನೀ ಗೋವೃಂದ ಕಾಯಲು ಹೋಗು ।
ಕೃಷ್ಣ— ಸೋಮಕಖಳನ ಕೊಂದು ನೇಮದಿ ವೇದವ ತಂದ ।
ಶ್ರೀಮತ್ಸ್ಯಾವತಾರ ಬಂದೆನೆ ।
ಭಾಮೆ— ಮತ್ಸ್ಯನಾದರೆ ಆ ಮಹಾಂಬುಧಿಗೆ ಹೋಗು ।
ಕೃಷ್ಣ— ಸಿಂಧು ಮಥನ ಕಾಲಕ್ಕೆ ।
ವೃಂದಾರಕಗೊಲಿ ದ।
ಸುಂದರಕೂರ್ಮ ಬಂದೇನೆ ।
ಭಾಮೆ— ಸುಂದರಕೂರ್ಮನಾಗಿ ಮಂದರ ಹೊರಲು ಹೋಗು । "

ಹೀಗೆ ಹನ್ನೊಂದು ನುಡಿಗಳ ಈ ಪದ್ಯದಲ್ಲಿ ಪ್ರಶ್ನೋತ್ತರದ ಚಾತುರ್ಯವು ವಿನೋದವೈಖರಿಯಿಂದಲೇ ಪ್ರಮೋದವನ್ನು ಉಂಟು ಮಾಡುತ್ತದೆ.

ಶ್ರೀಪ್ರಸನ್ನ ವೆಂಕಟದಾಸರು ಅನೇಕ ಪದಪದ್ಯಗಳನ್ನು ಕಾವ್ಯಕೀರ್ತನೆಗಳನ್ನು ರಚಿಸಿ ಜನರಲ್ಲಿ ಧರ್ಮಶ್ರದ್ಧೆಯನ್ನು ಕುದುರಿಸಿ, ಸಂಗೀತ, ಸಾಹಿತ್ಯ, ವೇದಾಂತ, ಗಮಕ ಮುಂತಾದ ವಿವಿಧ ಕಲೆಗಳ ಹೃದಯಂಗಮ ಸಂಗಮವನ್ನು ತಮ್ಮ ಕೃತಿಗಳಲ್ಲಿ ಸಾಧಿಸಿ ತೋರಿಸಿದ್ದಾರೆ. ಇವರು ಬಾಗಲಕೋಟೆಯ ಹತ್ತಿರದ ಬದಾಮಿಯ ಬಳಿಯಲ್ಲಿ ನಿರ್ಯಾಣವನ್ನು ಹೊಂದಿದರು.

ಬದಾಮಿ ಗ್ರಾಮದ ಪೂರ್ವದಿಕ್ಕಿನ ಗುಡ್ಡದ ಓರೆಯಲ್ಲಿರುವ ಒಂದು ಹೊಕ್ಕರಣಿಯ ದಂಡೆಯ ಮೇಲೆ ತಲೆ ಎತ್ತಿ ನಿಂತ ಅಶ್ವತ್ಥ ವೃಕ್ಷವು ಈ ಪುಣ್ಯ ಚೇತನದ ದಿವ್ಯ ಸ್ಮಾರಕವಾಗಿ ಕಂಗೊಳಿಸುತ್ತದೆ.

## ೧೭ ಶ್ರೀ ವಿಜಯದಾಸರು



ರಾಯಚೂರ ಜಿಲ್ಹೆಯ ಮಾನವಿಯ ಹತ್ತಿರ ಚೀಕಲಪರವಿ ಎಂಬ ಊರಿನಲ್ಲಿ ದಾಸ ಸಾಹಿತ್ಯದ ಶಕಪುರುಷರಾದ ಶ್ರೀ ವಿಜಯದಾಸರು ಜನ್ಮ ತಾಳಿದರು.

ಪುರಂದರದಾಸರ ನಂತರ ೧೭ ನೇ ಶತಮಾನದಲ್ಲಿ ನೂರಿನ್ನೂರು ವರ್ಷಗಳಿಂದ ಗುಪ್ತಸುಪ್ತವಾದ ದಾಸ ಸಾಹಿತ್ಯವನ್ನು ಒಮ್ಮೆಲೆ ಬೆಳಕಿನ ಬೆಟ್ಟದ ಮೇಲೆ ಕೂಡಿಸಿ ಜನಜಾಗೃತಿಯ ಘಂಟಾನಾದವನ್ನು ಮೊಳಗಿಸಿದ ಎಂಟೆದೆಯ ದಾಸರೆಂದರೆ ವಿಜಯದಾಸರು.

ವಿಜಯನಗರದ ತುಂಗಾ ತೀರದಲ್ಲಿ ವ್ಯಾಸರಾಜರಂಥ ವಿದ್ವದ್ವಿಭೂತಿಯ ಕೇಂದ್ರ ಬಿಂದುವಿನ ಸುತ್ತು ಪುರಂದರದಾಸ, ಕನಕದಾಸ, ವೈಕುಂಠದಾಸ, ವಾದಿರಾಜ, ವಿಜಯೀಂದ್ರ ಮುಂತಾದ ಜ್ಯೋತಿರ್ವಲಯಗಳು ಪರಿಭ್ರಮಿಸಿ ಜ್ಞಾನ ಮರೀಚಿಗಳನ್ನು ಎಲ್ಲೆಡೆಗೂ ಎರಚಿದ್ದವು.

ನೂರಿನ್ನೂರು ವರ್ಷಗಳ ಬಳಿಕ ಅದೇ ದಾಸ ಸಂಪ್ರದಾಯದ ಕಾವು, ಕೆಚ್ಚು, ಸತ್ವ, ಮಹತ್ವಗಳು-ಅದೇ ತುಂಗೆಯ ಪ್ರವಾಹದ ಗುಂಟ ಹರಿದು ಬಂದು ತುಂಗಾ ತೀರದ ಚೀಕಲಪರವಿಯಲ್ಲಿ ವಿಜಯದಾಸರಲ್ಲಿ ಒಟ್ಟೈಸಿ ಮತ್ತೊಮ್ಮೆ ದಾಸ ಪಂಥದ ವಿಜಯ ಪತಾಕೆಯನ್ನು ಮುಗಿಲಿಗೆತ್ತಿ ಜಗಜ್ಜಗಲಿಯ ಮೇಲೆ ಹಾರಿಸಿದರು.

ಆಗ ವಾದಿರಾಜ, ಪುರಂದರ, ಕನಕ ಮುಂತಾದ ಮಹನೀಯರ ಗುಂಪು ಭಕ್ತಿ ಗೀತಗಳ ಜಗಜ್ಝಾ ರಣದ ವೃಂದಗಾನಕ್ಕೆ ಕಂಪಿಂಪುಸೊಂಪುಗಳ್ನು ತಂದೊಗಿಸಿ ದಂತೆ ಈಗ ಗೋಪಾಲದಾಸ, ಮೋಹನದಾಸ, ಜಗನ್ನಾಥದಾಸ ಮುಂತಾದ ವಾಗ್ಗೇಯಕಾರರು ದ್ವೈತಗೀತಗಳನ್ನು ಉಗ್ಗಡಿಸಿದರು.

ಅಂದು ಭಾವನಾಪ್ರಧಾನವಾಗಿ ಹರಿದ ದಾಸವಾಙ್ಮಯವು ಇಂದು ಬುದ್ಧಿ ಪ್ರಧಾನವಾಗಿ ಪಾಂಡಿತ್ಯದ ಪರಿಣತಿಯಲ್ಲಿ ತನ್ನ ಪ್ರಚಾರ ಕಾರ್ಯದ ಕೃತಕೃತ್ಯತೆ ಯನ್ನು ಪಡೆಯಿತು.

ಯವನರ ಧರ್ಮದ್ವೇಷಿ, ವೇದವಿದ್ರೋಹಿ ಮೊಗಲಾಯಿ ವಾತಾವರಣದಲ್ಲಿ ಶ್ರೀ ವಿಜಯದಾಸರು ಅಂದು ಹಚ್ಚಿಟ್ಟ ಗಂಧದ ದೀಪದ ಪರಿಮಳದ ಅಲೆಗಳು ಇಂದಿಗೂ ಆ ರಾಯಚೂರು ಪ್ರದೇಶದ ಪರಿಸರವೆಲ್ಲವೂ ಪರಿಮಳಮಿಳಿತವಾಗಿ ದಾಸ ಸಾಹಿತ್ಯದ ಕಂಪನ್ನು ಕನವರಿಸುತ್ತ " ಗಂಧಾಢ್ಯಂ ಸುಮನೋಹರಂ " ಎಂದು ಆಗುವಂತೆ ಮಾಡಿವೆ.

ಶ್ರೀನಿವಾಸ ಮತ್ತು ಕೂಸಮ್ಮ ದಂಪತಿಗಳ ಸುಪುತ್ರನಾಗಿ ಜನಿಸಿದ ವಿಜಯ ದಾಸರು ಬಡತನವಲ್ಲಿ ಬೆಂದು, ಅವಮಾನದ ಉರಿಯಿಂದ ನೊಂದು ಕಾಶಿಗೆ ಹೋದರು. ಗಂಗೆಯನ್ನು ದಾಟಿ ವ್ಯಾಸ ಕಾಶಿಯನ್ನು ಸೇರಿದಾಗ ಪುರಂದರದಾಸರು ಸ್ವಪ್ನದಲ್ಲಿ ಬಂದು ವಿಜಯ ವಿಠ್ಠಲ ಎಂಬ ಅಂಕಿತ ಕೊಟ್ಟು ಗುರೂಪದೇಶ ಮಾಡಿದರು. ಇಷ್ಟು ದಿನ ಕೂಸಿಯ ಮಗ ದಾಸನು ಅಂದಿನಿಂದ ವಿಜಯದಾಸರಾದರು.

ದೊಡ್ಡವರ ಅನುಗ್ರಹವಾದ ಬಳಿಕ ಕೇಳುವದೇನು! ಸರ್ವ ವಿದ್ಯೆಗಳು ಮಿದುಳಿನಲ್ಲಿ ಕಡಲಾಡಿದವು. ನಾಲಿಗೆಯ ತುದಿಯಲ್ಲಿ ಶಾಸ್ತ್ರ ಸಾಹಿತ್ಯಗಳೆಲ್ಲ ನಲಿದಾಡಿದವು. ಅವರು ನುಡಿದದ್ದೆಲ್ಲ ಕಾವ್ಯವಾಯಿತು. ಹೇಳಿದ್ದೆಲ್ಲ ಹಾಡಾಯಿತು. ಉಸಿರಿದ್ದೆಲ್ಲ ಉಗಾಭೋಗವಾಯಿತು. ಬರೆದದ್ದೆಲ್ಲ ಸುಳಾದಿಯಾಯಿತು.

ಇಂಥ ರಸಸಿದ್ಧಿ, ವಾಕ್ ಶುದ್ಧಿ, ತಪಸ್ಸಮೃದ್ಧಿಗಳು ಅವರ ಸೊತ್ತಾಗಿ, ತೊತ್ತಾಗಿ ಬಂದ ಬಳಿಕ ಅವರ ಶಿಷ್ಯ ಪರಿವಾರವೆಲ್ಲವೂ ಬೆಳೆಯ ಹತ್ತಿತು. ಹೋದಲ್ಲೆಲ್ಲ ಸಾವಿರಾರು ಜನ ಬ್ರಾಹ್ಮಣ ಭೋಜನ, ಲಕ್ಷಾವಧಿ ಜನ ಭಕ್ತರ ದರ್ಶನ ಮುಂತಾದವುಗಳು ನಡೆಯತೊಡಗಿದವು. ಸಂಸ್ಥಾನಾಧಿಪತಿಗಳಂತೆ, ಸ್ವಾಮಿಗಳಂತೆ ವೈಭವದ ಜೀವನವು ಬಂದೊದಗಿದರೂ ವಿಜಯದಾಸರು ಮಾತ್ರ ತಾವರೆಯ ಮೇಲಿನ ತೋಯದ ಬಿಂದುವಿನಂತೆ ನಿರ್ಲಿಪ್ತರಾಗಿಯೇ ಇದ್ದರು. ತಮ್ಮ ಪ್ರಚಂಡ ಶಿಷ್ಯಪರಿವಾರದೊಂದಿಗೆ ಅವರು— ತಿರುಪತಿ, ಕಂಚಿ, ಶ್ರೀರಂಗ, ಕಾಶಿ,

ರಾಮೇಶ್ವರ, ಮಂತ್ರಾಲಯ, ಉಡುಪಿ ಮುಂತಾದ ದಕ್ಷಿಣೋತ್ತರ ದೇಶಗಳ ಎಲ್ಲ ತೀರ್ಥಕ್ಷೇತ್ರಯಾತ್ರೆಗಳನ್ನು ಮಾಡಿದರು.

ಶ್ರೀ ವಿಜಯದಾಸರು ೨೫ ಸಾವಿರ ಪದ ಸುಳಾದಿಗಳನ್ನು ರಚಿಸಿ ಮಧ್ವ ಮತದ ಹಿರಿಮೆ, ಶ್ರೀ ಹರಿಯ ಮಹಿಮೆಗಳನ್ನು ಕೊಂಡಾಡಿದ್ದಾರೆ. ಇವರ ಬಿಡಿನುಡಿಗಳಿಗಿಂತ ಪದಪದ್ಯಗಳು, ಪದಪದ್ಯಗಳಿಗಿಂತ ಉಗಾಭೋಗಗಳು, ಉಗಾಭೋಗಗಳಿಗಿಂತ ಸುಳಾದಿಗಳು ಒಂದಕ್ಕಿಂತ ಒಂದು ರಸಭರಿತವಾಗಿವೆ. ಇದೇ ಮಾತನ್ನು ಇನ್ನೊಂದು ದೃಷ್ಟಿಯಿಂದ ವಿಚಾರಿಸಿದಾಗ— ಆರೋಹಣ ಕ್ರಮಕ್ಕೆ ಸಂವಾದಿಯಾಗಿ ಅವರೋಹಣ ಕ್ರಮದಲ್ಲಿಯೂ "ಪೂರ್ವಂ ಪೂರ್ವಂ ಬಲೀಯಃ" ಎಂದೂ ಹೇಳಬಹುದಾಗಿದೆ.

ಒಟ್ಟಾರೆ ವಿಜಯದಾಸರು ಬಾಯಿ ತೆರೆದಲ್ಲೆಲ್ಲ ಮುತ್ತು ಸುರಿದಿವೆ. ತಂಬೂರಿ ಮೀಟಿದಲ್ಲೆಲ್ಲ ರಸಧ್ವನಿ ಹರಿದಿದೆ. ಚಿಟಕಿ ನುಡಿಸಿದಲ್ಲೆಲ್ಲ ಪ್ರಮೇಯದ ಅರಳು ಸೂರೆಯಾಗಿವೆ. ಇವರ ಅರಸು ಕೃತಿಗಳಂತಿದ್ದ ಸುಳಾದಿಗಳಲ್ಲಿ ನಿಗಮಾಗಮಗಳ ಶಾಸ್ತ್ರಾರ್ಥವೇ ತುಂಬಿರುತ್ತದೆ. ಇಲ್ಲಿ ವಿವರಿಸಲಾದ ಗೂಢ ಪ್ರಮೇಯಗಳಿಂದ ಇವು ಪ್ರೌಢ ಪ್ರಬಂಧಗಳಾಗಿ ಕಂಗೊಳಿಸುತ್ತವೆ.

ಮುಖ್ಯವಾಗಿ ಈ ಸುಳಾದಿಗಳಲ್ಲಿ ವಿಜಯದಾಸರು ಮಧ್ವ ಸಿದ್ಧಾಂತಾನುಸಾರಿಯಾದ ಪರಾಪರ ತತ್ವ ವಿವೇಚನೆ ಮಾಡಿ, ಹರಿವಾಯುಗಳ ಮಹಾ ಮಹಿಮೆಗಳನ್ನು ಹೇಳಿ, ತತ್ವಾಭಿಮಾನಿ ದೇವತೆಗಳ ಸ್ಥಾನ ಮಾನಗಳನ್ನು ನಿರ್ದೇಶಿಸಿ, ತೀರ್ಥಕ್ಷೇತ್ರಗಳ ಅಭಿಮಾನಿ, ಅಂತರ್ಯಾಮಿ ದೇವತೆಗಳನ್ನು ಸೂಚಿಸಿ, ಭಕ್ತಿಯ ಸ್ವರೂಪ, ಮುಕ್ತಿಯ ವೈಭವ, ಭಗವತ್ಪ್ರಸಾದದ ಮಹಿಮೆ ಮುಂತಾದ ಅನೇಕ ವಿಷಯಗಳನ್ನು ವೇದಶಾಸ್ತ್ರಾನುಸಾರವಾಗಿ ಲಲಿತ ಪದಗಳಿಂದ ರಸದ ಹಾಸಿನಲ್ಲಿ ಮನೋಜ್ಞವಾಗಿ ಸೂಸಿ ಚಿತ್ರಿಸಿದ್ದಾರೆ.

ಸರ್ವೇಂದ್ರಿಯಗಳಿಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ ಪ್ರೇರಕನಾಗಿ ಜೀವನ ಸರ್ವಕಾರ್ಯಗಳಿಗೂ ಆ ದೇವನೇ ಮುಖ್ಯಕಾರಕ. ಈ ಜೀವ ಅವನ ಪ್ರೇರಣೆಯಿಲ್ಲದೆ ಒಂದು ಕಾರ್ಯವನ್ನೂ ಮಾಡಲಾರ.

"ನುಡಿವನು ಪಾವಕ ಮೆಲ್ಲುವ ವರುಣನು
ಪಿಡಿವನು ದಕ್ಷನು ಕೇಳುವ ದಿಗ್ದೇವ
ನಡೆವನು ಜಯಂತ ನೋಡುವ ಸೂರ್ಯನು
ಬಿಡದೆ ಅಪ್ಪಿಕೊಂಬ ಆಹಂಕಾರಿಕ ಪ್ರಾಣ
ಒಡನೇ ಗುಹ್ಯಗಳಲಿ ಮನು ಮಿತ್ರ ಮನದಲ್ಲಿ
ಬಿಡದೆ ಇಂದ್ರನು ಇಪ್ಪ ಅಹಂಕಾರದಲ್ಲಿ ರುದ್ರ

ಆಡಿ ತೊಲಗದಲಿವರಿಂದಾಗುತಲಿದೆ
ಪೊಡವಿಯೊಳಗೆ ನಿನಿಗಾವದೋ ಅಧೀನ
ಕಡಲಶಾಯಿ ನಮ್ಮ ವಿಜಯವಿಠ್ಠಲನಲ್ಲಿ
ದೃಢಭಕ್ತಿಯ ಮಾಡು ಇದೇ ಸಾಧನಸಿದ್ಧ "

ಈ ಸುಳಾದಿಯಲ್ಲಿ ಜೀವನ ಯಾವ ಯಾವ ವ್ಯಾಪಾರದಲ್ಲಿ ಯಾವ ಯಾವ ತತ್ವೇಶರ ಕೈವಾಡವು ಇದೆ ಎಂಬುದನ್ನು ತೋರಿಸಿಕೊಟ್ಟು ಮಾನವನಿಗೆ ಕರ್ತೃತ್ವಾಭಿಮಾನವನ್ನು ಬಿಟ್ಟು ಬಿಡಲು ಬೋಧಿಸಿದ್ದಾರೆ ವಿಜಯದಾಸರು. ಇದನ್ನು ಓದಿದ ಯಾವನಿಗೆ ತಾನೇ 'ನಾನೇ ಕರ್ತ' ಎಂಬ ಅಭಿಮಾನ ಉಳಿದೀತು !

ದಾಸರ ಆತ್ಮಾರ್ಪಣೆಯ ಭಾವವು ಅನುಕರಣೀಯವಾಗಿದೆ—

"ಹರಿಯೇ ನಿನ್ನಾಧೀನ ಸಕಲ ಚೇತನವು
.............................................
ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ।
ಮಣಿಸಿದರೆ ಮಣಿವೆ ಅಳಿಸಿದರೆ ಅಳುವೆ।
ಉಣಿಸಿದರೆ ಉಣುವೆ ಉಡಿಸಿದರೆ ಉಡುವೆ॥"

ಎಂದು ಮುಂತಾಗಿ ಸರ್ವಾರ್ಪಣೆಯನ್ನು ಶ್ರೀ ಹರಿಯಲ್ಲಿ ಮಾಡಿದ್ದಾರೆ.

ಇಷ್ಟು ರೀತಿಯಿಂದ ಸರ್ವಸ್ವವನ್ನು ಭಗವಂತನಿಗೆ ಅರ್ಪಿಸಿದ ಬಳಿಕ ಬೇರೆ ಯಾವದಕ್ಕೂ, ಯಾರಿಗೂ ಬೆದರುವ–ಬೆಚ್ಚುವ ಕಾರಣವಿಲ್ಲ. ಎಂಬ ನಿರ್ಭಯ ವೃತ್ತಿಯ ನೆಚ್ಚಿಗೆಯನ್ನು ಮತ್ತೊಂದು ಸುಳಾದಿಯಲ್ಲಿ ತೋರ್ಪಡಿಸುತ್ತಾರೆ.

"ಹುಲಿ ಇಲಿಯಾಗುವದು ತೋಳ ಕೋಳಿಯಾಗುವದು।
ಕಲಿ ಬಂದು ಹಿತ್ತಲ ಕಸ ಬಳಿವ।
ಖಳ ಮಹಾ ಚೋರ ಚೊಚ್ಚಿಲ ಗೌಡಿ ಮಗನಾಹ।
ಜಲಜಾಕ್ಷನ ಕೃಪೆಯ ಪಡೆದ ದಾಸರಿಗೆ॥"

ಎಂಥ ರುಕ್ಷವಾದ ವೇದಾಂತ ಪ್ರಮೇಯಗಳನ್ನು ಹೇಳುವಾಗಲೂ ದಾಸರ ಸಾಹಿತ್ಯ ಪ್ರಜ್ಞೆಯು ಕಾಂತಾ ಸಮ್ಮಿತಿಯ ಕಾವ್ಯ ಶೈಲಿಯಿಂದ ದೂರವಾಗದೆ ತತ್ವಾರ್ಥಗಳನ್ನು ಕೂಡ ಅಲಂಕಾರದ ಎರಕದಲ್ಲಿಯೇ ಹೇಳಿ, ಕಮನೀಯತೆಯು ಮಿಂಚುವಂತೆ ಮಾಡುತ್ತದೆ. ವಾಯುದೇವರ ಕರುಣೆಯಿಲ್ಲದೆ ಉಳಿದಾವದೇ ದೇವತೆಗಳ ಅನುಗ್ರಹವೂ ಮೋಕ್ಷಕ್ಕೆ ಕಾರಣವಾಗಲಾರದು ಎಂಬ ಸಿದ್ಧಾಂತ ತತ್ವವನ್ನು ಎಂಥ ಸುಂದರವಾದ ಕಾವ್ಯಕಕ್ಷೆಯಲ್ಲಿ, ಕಲ್ಪನೆಯ ನಕ್ಷೆಯಲ್ಲಿ ಅರಳಿಸಿ ತೋರಿದ್ದಾರೆ ನೋಡಿರಿ—

"ನೀರು ಚಳಪಳಕಾಸಿ ಆರಲಿಟ್ಟು ಹೆಪ್ಪು ।
ನೀರಿನಿಂದಲಿ ಕೊಡಲು ಒಪ್ಪುದೇನೋ ।
ರುಚಿ ಬಪ್ಪುದೇನೋ । ಮಾರುತಿ ನಿನ್ನ ಕೃಪೆ
ಪಡೆಯದಲೆ ಉಳಿದವರ ಕಾರುಣ್ಯವಾಗಲು
ಮೋಕ್ಷಸಾಧನವಿಲ್ಲ ॥

"ಕರುಣವಾರಿಧಿ ನಮ್ಮ ವಿಜಯ ವಿಠ್ಠಲರೇಯ
ಗುರುವೆ ಪವಮಾನರೆಂಬ ಬಿರುದು ಡಂಗುರ ಹೊಯಿಸೋ ।
ಪವನಮತವಿಡಿದು ನಿನ್ನ ಶ್ರವಣ ಮಾ ।
ಡುವರ ಸಂಗ ಪಾಲಿಸು ವಿಜಯ ವಿಠ್ಠಲ ಒಲಿದು ॥

ಈ ಸುಳಾದಿಗಳಲ್ಲಿ ದಾಸರ ಗುರುಭಕ್ತಿಯು ಮುಸುಕು ತೆಗೆದು ಪ್ರಾಣದೇವರ ಯೋಗ್ಯತೆಯ ಅರಿವಿನ ನಸುಕು ಎಲ್ಲರಿಗೂ ಬೆಳಕು ಬೀರುವಂತೆ ಮಾಡಿದೆ.

ಮನಸ್ಸಿನ ವೇಗವನ್ನು ಸೂಚಿಸುವ ಇನ್ನೊಂದು ಅವರ ಸುಳಾದಿ—

"ಮುರಿದೋಡಿ ಬರುವ ರಣರಂಗ ನಿಲ್ಲಿಸಬಹುದು ।
ಹರಿಯುತಿಹ ನದಿಗಳ ತಿರುಗಿಸಲುಬಹುದು
..................................................
ಮಾರಿಗಳ ಮುಂಜೆರಗ ತುಡಿಕಿ ನಿಲ್ಲಿಸಬಹುದು
.....................................................
ಹರಿದೋಡುವ ಮನಸ್ಸು ನಿಲ್ಲಿಸಲಳವಲ್ಲ"

ಇಂಥ ಮನಸ್ಸಿನ ಚಾಂಚಲ್ಯ ವೇಗಗಳನ್ನು ಗುರುತಿಸಿ ದಾಸರು ಆ ಮನಸ್ಸಿಗೇ ಬೋಧನೆಯನ್ನು ಮಾಡುತ್ತಲಿದ್ದಾರೆ.

"ಬಿಂದು ಮಾತ್ರವೇ ಸುಖವು ದುಃಖ ಪರ್ವತದಷ್ಟು ।
ಸಂದೇಹವಿಲ್ಲ ಇದು ಶಾಸ್ತ್ರಸಿದ್ಧ ।
ಎಂದೆಂದು ಸಿರಿಯರಸ ವಿಜಯವಿಠ್ಠಲನಂಘ್ರಿ ।
ಕುಂದದೆ ಹೃದಯದೊಳು ನೆನೆಕಂಡೆ ಮನವೇ ॥"

ಹೀಗೆ ಮನಸ್ಸನ್ನು ವಶದಲ್ಲಿಟ್ಟುಕೊಂಡು ಶ್ರೀ ಹರಿಗೆ ಸರ್ವಾರ್ಪಣೆಯನ್ನು ಮಾಡಿದ ಬಳಿಕ ಮುಂದಿನ ಸಾಧನವು ಬಹು ಸುಲಭವೆನ್ನುತ್ತಾರೆ ಸಿದ್ಧಿ ಪಥದಲ್ಲಿ ಮುಂದೆ ಸಾಗಿದ ಅನುಭಾವಿ ಕವಿಗಳಾದ ವಿಜಯದಾಸರು. ಈ ಮುಂದಿನ ಸುಳಾದಿ ಯಿಂದ ಅವರು ಈ ಸಾಧನಾನುಷ್ಠಾನ ಕ್ರಮದಲ್ಲಿ ಯಾವ ಹಂತದಲ್ಲಿ ನಿಂತಿದ್ದಾರೆ

ಎನ್ನುವದು ತಿಳಿದುಬರುತ್ತದೆ. ಅಂಥ ಉಚ್ಚಮಟ್ಟದಲ್ಲಿ ನಿಂತು ಪದದ ಪ್ರಾರಂಭದಲ್ಲಿಯೇ ಗತಿಗಾಣದೆ ವ್ಯಥೆ ಪಡುವ ನಮ್ಮಂಥ ಜೀವಿಗಳ ತೊಳಲಾಟವನ್ನು ಕಂಡು ಸುಲಭವಾಗಿ ಆ ದಾರಿಯಿಂದ ಮುಂದುವರೆಯುವ ಉಪಾಯವನ್ನು ಹೇಳಿಕೊಡುತ್ತಾರೆ—

"ಸಾಧನಕೆ ಬಗೆಗಾಣನೆನ್ನಬಹುದೆ
ಸಾದರದಿ ಗುರುಕರುಣ ತಾ ಪಡಿದ ಬಳಿಕ
ಉಂಡು ಉಟ್ಟದ್ದೆಲ್ಲ ವಿಷ್ಣುಪೂಜೆ
ತಂಡ–ತಂಡದಾ ವಾರ್ತೆ ವಂರಿಜಾಕ್ಷನ ಕೀರ್ತಿ
ಹಿಂದು ಮಾತುಗಳೆಲ್ಲ ಹರಿಯ ನಾಮ
ವಾಗತ್ಯಪಡುವುದೇ ವಿಧಿ ನಿಷೇಧಾಚರಣೆ
ರೋಗಾನುಭವವೆಲ್ಲ ಉಗ್ರ ತಪವು
ಆಗದವರಾಡಿಕೊಂಬುದೇ ಆಶೀರ್ವಾದ
ಬೀಗರುಪಚಾರವೇ ಭೂತ ದಯವು"
ಮೈ ಮರೆತು ಮಲಗುವದೇ ಧರಣಿಗೆ ನಮಸ್ಕಾರ
ಕೈಮೀರಿ ಹೋದದ್ದೆ ಕೃಷ್ಣಾರ್ಪಣ
ಮೈ ಮನೋವೃತ್ತಿಗಳೇ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೇ ಹರಿಯ ವಿಹಾರ"

ಇಂತು ಭಾವಶುದ್ಧಿಯನಾಂತ ಶುದ್ಧಾಂತರಂಗದಿಂದ ಬಿಂಬಾಪರೋಕ್ಷದ ಬಗೆಯನ್ನು ತೋರಿಸಿಕೊಟ್ಟು ಮೋಕ್ಷದ ಮೆಟ್ಟಲಿನ ವರೆಗೆ ತಂದು ತಲುಪಿಸುತ್ತಾರೆ ದಾಸವರೇಣ್ಯರು. ಈ ಮಟ್ಟಕ್ಕೆ ಬಂದು ಮುಟ್ಟಿದ ಹರಿದಾಸರಿಗೆ—

" ವೈಕುಂಠವೆಂಬುದು ಅಲ್ಲೆ ಬರಿದೆ ಲೌಕಿಕ ತೊರೆದರೆ ಇಪ್ಪೊದೈ ಇಲ್ಲೆ "

ಎಂದು ಇದ್ದಲ್ಲಿಯೇ ಮೋಕ್ಷಸಿದ್ಧಿಯ ಮಾರ್ಗವನ್ನು ತೋರಿಸಿಕೊಟ್ಟಿದ್ದಾರೆ.

ವೈಕುಂಠಕ್ಕೆ ಸಾಹಿತ್ಯದ ಸೋಪಾನವನ್ನು ನಿರ್ಮಿಸಿದ ಸಮರ್ಥ ಕವಿರ್ಮನೀಷಿ ದಾಸಶ್ರೇಷ್ಠರೆಂದರೆ ವಿಜಯದಾಸರೆಂದು ಎದೆತಟ್ಟಿಹೇಳಬಹುದು.

## ೧೪ ಶ್ರೀ ಗೋಪಾಲದಾಸರು

ದಾಸ ವಾಙ್ಮಯದ ಚತುರ್ಮುಖ ಸೌಂದರ್ಯ ಕಂಡು ಬೆರಗಿ ಬಾಗದವರಿಲ್ಲ. ಭಕ್ತಿಯಿಂದ ತಲೆ ತಗ್ಗಿಸದವರಿಲ್ಲ. ದಾಸಕೂಟದ ಈ ಚತ್ವಾರಿ ಶೃಂಗಾ ಅರ್ಥಾತ್ ನಾಲ್ಕು ಶಿಖರಗಳೆಂದರೆ ಶ್ರೀ ಪುರಂದರದಾಸರು, ಶ್ರೀ ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸದು ಈ ನಾಲ್ವರು ದಾಸವರ್ಯರಾಗಿದ್ದಾರೆ.

ಈ ದಾಸ ಚತುಷ್ಟಯದಲ್ಲಿ ಒಬ್ಬರಾದ ಶ್ರೀ ಗೋಪಾಲದಾಸರು ಭಕ್ತಿಯಲಿ ಭಾಗಣ್ಣ ಎಂಬ ಉಕ್ತಿಗೆ ವಿಷಯರಾಗಿ ಶ್ರೀಮದಾಚಾರ್ಯರ ಸಂದೇಶವಾಹಕರಾಗಿ ಮೆರೆದಿದ್ದಾರೆ. ಶ್ರೀವಿಜಯದಾಸರ ಪ್ರಮುಖ ಶಿಷ್ಯರಲ್ಲಿ ಪ್ರಧಾನ ಪಟ್ಟವು ಶ್ರೀಗೋಪಾಲದಾಸರದು. ವಿಜಯದಾಸರಂಥ ಶ್ರೀಶಾಪರೋಕ್ಷಿಗಳು ಅವರ ಗುರು ಗ್ರಹದಲ್ಲಿದ್ದಂತೆ ಶಿಷ್ಯಸೌಭಾಗ್ಯವೂ ಸ್ಪೃಹಣೀಯವೇ ಆಗಿದೆ. ಜಗನ್ನಾಥ ದಾಸರಂಥ ಜ್ಞಾನಮೇರುವಿಗೆ ಆಯುಷ್ಯದಾನ ಮಾಡಿದ ತ್ಯಾಗಮೂರ್ತಿಗಳು ಶ್ರೀ ಗೋಪಾಲದಾಸರು.

ವೇದಾಂತ ಪ್ರಸಂಚದಲ್ಲಿಯೇ ಬಹು ಸೂಕ್ಷ್ಮವಾದ ಬಿಂಬೋಪಾಸನಾ ಕ್ರಮ ವನ್ನು ಚಿತ್ರಪಟದಲ್ಲಿ ಚಿತ್ರಿಸಿ, ಜನರ ಭಿತ್ತಿಯಲ್ಲಿಯೂ ನಿಚ್ಚಳವಾಗಿ ಮೂಡುವಂತೆ ಬಿಡಿಸಿಟ್ಟು, ಅನೇಕ ಸಜ್ಜೀವಿಗಳಿಗೆ ಬಿಂಬಾಪರೋಕ್ಷ ಭಾಗ್ಯವು ಒದಗುವಂತೆ ಮಾಡಿದ ಸತ್ಪುರುಷರೆಂದರೆ ಶ್ರೀ ಗೋಪಾಲದಾಸರು. ಅನೇಕಾನೇಕ ಪದ, ಸುಳಾದಿ, ಉಗಾ ಭೋಗ, ಚಕ್ರಾಬ್ಜ ಮಂಡಲ, ಕೀರ್ತನೆಗಳನ್ನು ರಚಿಸಿ ಕನ್ನಡ ನಾಡಿನ ಮೂಲೆ-ಮೂಲೆಗೂ ಪ್ರತಿಯೊಬ್ಬರ ಅಂತರಂಗದ ಅಂಚಿಗೆ ಭಕ್ತಿ ಭಾಗೀರಥಿಯ ತರಂಗಗಳು ತುಳುಕುವಂತೆ ಮಾಡಿದ ಮಹಾ ಭಗವದ್ಭಕ್ತ ಭಗೀರಥರೆಂದರೆ ಗೋಪಾಲದಾಸರು.

ರಾಯಚೂರ ಜಿಲ್ಹೆಯ ದೇವದುರ್ಗ ತಾಲೂಕಿನ ಮೊಸರುಕಲ್ ಗ್ರಾಮದಲ್ಲಿ ಹರೀತಸಗೋತ್ರದ ಮುರಾರಿರಾಯ-ವೆಂಕಮ್ಮ ದಂಪತಿಗಳ ಸತ್ಪುತ್ರನಾಗಿ ಕ್ರಿ. ಶ. ೧೭೨೨ ರಲ್ಲಿ ಗೋಪಾಲದಾಸರು ಅವತರಿಸಿದರು.

ಗೋಪಾಲದಾಸರ ಅನಂತರ ಮುರಾರಿರಾಯನಿಗೆ ಮತ್ತೆ ಮೂವರು ಗಂಡು ಮಕ್ಕಳು ಜನಿಸಿದರು. ಈ ನಾಲ್ವರು ಮಕ್ಕಳು ಚಿಕ್ಕವರಿದ್ದಾಗಲೇ ಮುರಾರಿರಾಯನು ಮರಣ ಹೊಂದಿದ್ದರಿಂದ ಆ ಬಡ ಕುಟುಂಬವು ಬಹಳ ಕಷ್ಟ-ನಷ್ಟ ಅನುಭವಿಸ ಬೇಕಾಯಿತು.

ತಾಯಿ ವೆಂಕಮ್ಮನು ಈ ಚಿಕ್ಕ-ಚಿಕ್ಕ ಮಕ್ಕಳನ್ನೆಲ್ಲ ದೊಡ್ಡವರನ್ನು ಮಾಡು ವಲ್ಲಿ ಬಟ್ಟ ಬವಣೆಗಳಿಗೆ, ಪಟ್ಟ ಕಷ್ಟಗಳಿಗೆ ಎಣೆಯಿಲ್ಲ.

ಹಿರಿಯ ಮಗನಾದ ಭಾಗಣ್ಣನು ತುಸು ದೊಡ್ಡವನಾದ ಬಳಿಕ ಶಾನಭೋಗ ಗುಂಡಪ್ಪನೆಂಬ ಪುಣ್ಯಾತ್ಮನ ಸಹಾಯದಿಂದ ಉಪನೀತನಾಗಿ ಗಾಯತ್ರೀ ಪುರಶ್ಚರಣ

ವನ್ನು ಮಾಡಿದನು. ಆದರಿಂದ ವೇದಮಾತೆಯು ಈ ಬಾಲ ವಟುವಿನ ದೃಢಭಕ್ತಿಗೆ ಹಾಗೂ ಮಂತ್ರಜಪಕ್ಕೆ ಪ್ರಸನ್ನಳಾಗಿ ಭಾಗಣ್ಣನ ನಾಲಿಗೆಯ ಮೇಲೆ ಬೀಜಾಕ್ಷರ ಗಳನ್ನು ಬರೆದು ಅದೃಶ್ಯಳಾದಳು. ಮಂತ್ರ ದೇವತೆಯೇ ಸುಪ್ರಸನ್ನಳಾಗಿ ನಾಲಿಗೆಯ ತುದಿಯಲ್ಲಿ ನಲಿದಬಳಿಕ ಕೇಳುವದೇನು !

ಭಾಗಣ್ಣನು ತತ್‌ಕ್ಷಣವೇ ಪ್ರತಿಭಾತ ಪರಾವಗನಾದನು. ವೇದಶಾಸ್ತ್ರಗಳೆಲ್ಲವೂ ಅವನ ಅಂಗೈಯಲ್ಲಿಯ ಬೋರೆಕಾಯಿಯಾದವು. ಕವಿತ್ವ, ವಕ್ತೃತ್ವ, ಕಲಾಕೌಶಲ್ಯ, ಮಂತ್ರ, ತಂತ್ರ, ಸಿದ್ಧಿಸಮೃದ್ಧಿಗಳೆಲ್ಲವೂ ಅವನ ಕಣ್ಣ ಸನ್ನೆಗೆ ಅನುಗುಣವಾಗಿ ಕುಣಿಯುವ ಅಧೀನ ವಿದ್ಯೆಗಳಾದವು. ಎಂತೆಂಥ ಪ್ರತಿವಾದಿ ಭಯಂಕರರೂ, ಪಂಡಿತ ಪ್ರಕಾಂಡರು ಬಂದರೂ ಭಾಗಣ್ಣನ ಮುಂದೆ ಮಾತನಾಡಿ ಸೋತು ತಾವು ತಂದ ಜಯಪತ್ರಗಳನ್ನೆಲ್ಲ ಒಪ್ಪಿಸಿ ಹೋಗುತ್ತಿದ್ದರು. ಅವರಿಗೆಲ್ಲ ಭಾಗಣ್ಣನು ಗೆಲವಿನ ಹಂಬಲವನ್ನು ಬಿಟ್ಟು ನಿಮ್ಮ ಪಾಂಡಿತ್ಯವನ್ನು ಭಗವಂತನ ಗುಣಾನುವಾದ ಮಾಡಿ ಸಾರ್ಥಕ ಮಾಡಿಕೊಳ್ಳಿರಿ ಎಂದು ಉಪದೇಶಮಾಡಿ ಕಳಿಸುತ್ತಿದ್ದ.

ಭಾಗಣ್ಣನ ಈ ಪಾಂಡಿತ್ಯ ಪ್ರಭಾವಗಳನ್ನು ಕೇಳಿ ಗದ್ವಾಲದ ರಾಜಾರಾಮ ಎಂಬ ಹೆಸರಿನ ಅರಸನು ಅವರ ದರ್ಶನಕ್ಕೆ ಬಂದು ಅವರಿಂದ ಅನುಗೃಹೀತನಾದನು. ಭೂಮಿಕಾಣಿಗಳನ್ನು ಭಾಗಣ್ಣನಿಗೆ ಭಕ್ತಿಯಿಂದ ಕೊಟ್ಟನು. ಹೀಗೆ ಭಾಗಣ್ಣನ ಮಂತ್ರಸಿದ್ಧಿ ವಾಕ್‌ಶಕ್ತಿಯ ಕೀರ್ತಿಯು ಎಲ್ಲೆಡೆಗೂ ಪಸರಿಸಿ ಜನರು ಅವರ ದರುಶನಕ್ಕೆ ತಂಡೋಪತಂಡವಾಗಿ ಹಿಂಡುಗಟ್ಟಿ ಬರುತ್ತಿದ್ದರು. ದೀರ್ಘದಂಡ ಹಾಕುತ್ತಿದ್ದರು. ತಮ್ಮ ಕಷ್ಟನಷ್ಟಗಳನ್ನೆಲ್ಲ ಅವರೆದುರು ತೋಡಿಕೊಳ್ಳುತ್ತಿದ್ದರು. ಅದಕ್ಕೆಲ್ಲ ಭಾಗಣ್ಣನು ಪರಿಹಾರವನ್ನು ಹೇಳುತ್ತಿದ್ದನು.

ಶ್ರೀ ವೆಂಕಟೇಶನನ್ನು ನೆನೆದು ಅವನು ಹೇಳಿದ ಒಂದು ಮಾತೂ ಹುಸಿ ಹೋಗುತ್ತಿದ್ದಿಲ್ಲ. ಆದರಿಂದ ಭಾಗಣ್ಣನ ದರ್ಶನಕ್ಕೆ ಬರುವ ಜನರ ಗುಂಪು ಇನ್ನೂ ಹೆಚ್ಚಾಯಿತು. ಆದರಿಂದ ಸಾಕಷ್ಟು ಆದಾಯವೂ ಆಗತೊಡಗಿತು. ಬಡತನದಲ್ಲಿ ಬೆಂದು ಬಳಲಿದ ಭಾಗಣ್ಣನ ಕುಟುಂಬಕ್ಕೆ ಭಾಗ್ಯದ ಬಾಗಿಲವೇ ತೆರೆದಂತಾಗಿ ಐಶ್ವರ್ಯವು ಅನಿರೀಕ್ಷಿತವಾಗಿ ಮನೆಯಲ್ಲಿ ಬಂದು ಬಿದ್ದಿತು. ಭಾಗಣ್ಣನು ದೇವರು ಕೊಟ್ಟ ಕಾಲಕ್ಕೆ ದಾನ ಮಾಡಿ, ಬ್ರಾಹ್ಮಣರ ಭೋಜನ ಮಾಡಿಸಿ, ಸ್ವಾಮಿ ಕೊಟ್ಟ ಸಿರಿಯನ್ನು ಸಾರ್ಥಕಮಾಡಿಕೊಂಡನು.

ಭಾಗಣ್ಣನ ಭೂತಕಥನವು ಯಥಾರ್ಥವಾಗಿರುತ್ತಿತ್ತು. ವರ್ತಮಾನ ವಚನವು ಸತ್ಯಕ್ಕೆ ಸುಸಂಗತವಾಗಿಯೇ ಇರುತ್ತಿತ್ತು. ಭವಿಷ್ಯವೂ ಕೂಡ ವರ್ತಮಾನಕ್ಕಿಂತ ನಿಶ್ಚಯವಾಗಿರುತ್ತಿತ್ತು. ಹೀಗೆ ತ್ರಿಕಾಲದರ್ಶಿಗಳಾದ ಭಾಗಣ್ಣನ ಮಾತು ಎಂದರೆ ವೇದವಚನವೆನಿಸಿ ಅನೇಕ ಸಿರಿವಂತರೂ, ಸಾಮಾನ್ಯರೂ, ಸಂಸ್ಥಾನಿಕರೂ ಅವನಿಂದ ತಮ್ಮ ಜೀವನ ಪುಸ್ತಕದ ಯಾವ ಪುಟದಲ್ಲಿ ಏನು ಏನು ಘಟನೆ, ವಿಘಟನೆಗಳು

ಕಾದಿವೆ ಎಂಬುದನ್ನು ತಿಳಿದು ತೃಪ್ತರಾಗುತ್ತಿದ್ದರು. ಆದರಿಂದ ಭಾಗಣ್ಣನಿಗೆ ಖ್ಯಾತಿ, ಐಶ್ವರ್ಯ, ಜನಾನುರಾಗ ಮುಂತಾದವುಗಳು ಹೊರಲಾರದಷ್ಟು ಹೊರೆಹೊರೆಯಾಗಿ ಬಂದು ಬಿದ್ದವು.

ಮುಂದೆ ಭಾಗಣ್ಣನು ಕಾಶೀ ಯಾತ್ರೆ ಮಾಡಬೇಕೆಂಬ ಉದ್ದೇಶದಿಂದ ವಾರಣಾಸಿಗೆ ಪ್ರಯಾಣ ಮಾಡಿದನು. ಕಾಶಿಯಲ್ಲಿ ವಿಜಯರಾಯರ ದರ್ಶನವಾಯಿತು. ಅಪರೋಕ್ಷಜ್ಞಾನಿಗಳ ಅನುಗ್ರಹವೂ ಆಯಿತು. ವಿಜಯದಾಸರು ಈ ದಿವ್ಯ ಚೇತನದ ಯೋಗ್ಯತೆಯನ್ನು ಗುರುತಿಸಿ ಈ ಭಾಗಣ್ಣನಿಗೆ "ಗೋಪಾಲವಿಠ್ಠಲ"ಎಂಬ ಅಂಕಿತವನ್ನು ಕೊಟ್ಟು ಕರುಣಿಸಿದರು. ಈ ಮುದ್ರಿಕೆಯಿಂದ ಅವರು ಅನೇಕ ಕೃತಿಗಳನ್ನು ರಚಿಸಿ ಗೋಪಾಲದಾಸ ಎಂದು ಸಿದ್ಧಿ ಪ್ರಸಿದ್ಧಿಯನ್ನು ಪಡೆದರು.

ಗೋಪಾಲದಾಸರ ಕೀರ್ತನೆ ಹಾಗೂ ಸುಳಾದಿಗಳಲ್ಲಿ ಅರ್ಥ ಗಾಂಭೀರ್ಯ ಮತ್ತು ನಾದಮಾಧುರ್ಯ ಎರಡು ಗುಣಗಳು ಅನನ್ಯಸಾಮಾನ್ಯವಾಗಿ ಕಂಡುಬರುತ್ತಿವೆ. ಜ್ಞಾನಗಂಧ ವಿಧುರರಾದ ಜಡಮತಿಗಳಿಗೆ ಅವರ ಕೀರ್ತನೆಗಳ ಸ್ವಾರಸ್ಯವು ಎಟಕುವ ದಿಲ್ಲ. ಎಂಥೆಂಥ ಪಂಡಿತರೂ ಒಮ್ಮೊಮ್ಮೆ ಗೋಪಾಲದಾಸರ ಗೀತ ರೀತಿಗಳ ಗೂಢಾರ್ಥ ವನ್ನು ತಿಳಿಯದೆ ಮೂಢ ಮಂಕರಾಗಿ ಕೂಡುವ ಪ್ರಸಂಗವು ಬರುವದು. ಶಬ್ದಗಳು ಸರಳವಾಗಿ, ಶಯ್ಯೆ ಸುಲಭವಾಗಿ ಇದ್ದರೂ ಅವರ ಭಾವದ ಔನ್ನತ್ಯಕ್ಕೆ ಹತ್ತಲಾರದೆ ಅಹಂಮನ್ಯ ಪಂಡಿತರೆಲ್ಲರೂ ತತ್ತರಿಸಿ ತಲೆ ತುರಿಸುವದುಂಟು.

ಅವರ ಕ್ಲಷ್ಟಶ್ಲಿಷ್ಟವಾದ ಒಂದು ದೇವರ ನಾಮವನ್ನು ನೋಡಿರಿ.

" ಒಗೆತನದಲ್ಲಿ ಸುಖವಿಲ್ಲ । ಆದ
ನೊಲ್ಲೆಂದರೆ ಬಿಡದಲ್ಲ ॥ ಪ ॥
ಹಗರಣವು ಜಗದೊಳು ಮಿಗಿಲಾಯಿತು ॥
ಪನ್ನಗನಗ ನಗರನಿವಾಸ ॥ ಅ.ಪ. ॥
ಮೂರು ಬಣ್ಣಿಗೆಯ ಮನೆಗೆ ।
ಮೂರೆರಡು ಭೂತಗಳು ।
ಮೂರು ನಾಲ್ಕು ಪ್ರಾಕಾರಕ್ಕೆ ।
ಮೂರಾರು ಛಿದ್ರಗಳು ॥
ಮೂರು ಅವಸ್ಥೆಯು ದಿನಕೆ ।
ಮೂರು ನೂರಾರು ಹತ್ತರಲಿ ।
ಮೂರು ವಿಧದನ್ನದಿಂದ ।
ಮೂರು ತಾಪಕ್ಕಾರಲಾರೆ ।

ಐಯ್ದು ಮಂದಿ ಭಾವನವರು।
ಐಯ್ದು ಮೈದುನರು ಕೂಡಿ।
ಐಯ್ದುಪರಿ ತಾನಾಗಿ ಮಾವ।
ನೈಯ್ದು ಕತ್ತಲೆಯ ಕೋಣೆ।
ಗೈಯ್ದುವಂತೆ ಮಾಡುವರು।
ಐಯ್ದು ತಂದು ಬೆಚ್ಚಿಸುವರು।
ಐಯ್ದನೇ ಬೊಕ್ಕಸದ ಕೋಣೆ।
ಗೈಯ್ದುವು ಪರಿ ನಾ ಕಾಣೆ॥
ಒಬ್ಬ ಬೆಳಕು ಮಾಡುವ ಮ।
ತ್ತೊಬ್ಬ ಕತ್ತಲೆಗೈಸುವ।
ಒಬ್ಬ ಎರಡೂ ಮಾಡುವ ಮ।
ತ್ತೊಬ್ಬ ನಿಂತು ನೋಡುವ।
ಒಬ್ಬ ಮೂವರ ಒಳಗೆ।
ಹಬ್ಬಿ ಕೊಂಡಿರಿಪ್ಪವರಂತೆ।
ಒಬ್ಬನ ಕಾಣದೆ ನಾ।
ತಬ್ಬಿಬ್ಬಗೊಳಗಾದೆನೊ॥
ಅತ್ತೆ ಅತ್ತಿಗೆಯರು ಎನ್ನ।
ಸುತ್ತಮುತ್ತ ಕಾದು ಕಟ್ಟಿ।
ಎತ್ತ ಹೋಗಲೀಸರೊ ನಿನ್ನ।
ವತ್ತ ತೋರಲೀಸರೊ।
ಅತ್ತ ಬಾರಲೀಸರೊ ಸರಿ।
ಯೊತ್ತಿಗೆ ಬಂದೊದಗಿದ ನೃಪನ।
ಭೃತ್ಯರು ಎಳೆದೊಯ್ಯುವಾಗ।
ಹೆತ್ತಯ್ಯ ನೀ ಬಿಡಿಸಲಿರಲು॥
ನಿನ್ನ ಹೊಂದಿ ಇಪ್ಪ ಭವಣೆ।
ಯನ್ನು ಬಡಲು ಈ ಜನರು।
ನಿನ್ನ ದೂರಿ ಜರೆವರೋ ನಾ।
ನಿನ್ನು ತಾಳಲಾರೆನೊ।
ಘನ್ನ ಕರುಣ ಸೌಭಾಗ್ಯ ಸಂ।
ಪನ್ನಗೋಪಾಲ ವಿಠ್ಠಲ।
ಬಿನ್ನಪವನ್ನು ಚಿತ್ತೈಯಿಸಿ।
ಮನ್ನಿಸಯ್ಯ ಮಹಾರಾಯಾ॥

ಇಂಥ ಅಂತರ್ಗೂಢವಾದ ತತ್ತ್ವಾರ್ಥಗಳಿಂದ ಜಟಿಲವಾದ ಅನೇಕ ಸಮಸ್ಯಾತ್ಮಕ ಕವಿತೆಗಳು ಗೋಪಾಲದಾಸರ ಪದ್ಯಗಳ ಪೋಥಿಗಳಲ್ಲಿ ಹೇರಳವಾಗಿ ದೊರಕುತ್ತವೆ.

ಆದರೆ ಇಂಥ ಕೂಟ ಪದ್ಯಗಳಿಗಿಂತ ಗೋಪಾಲದಾಸರ ಕೃತಿಗಳಲ್ಲಿ ಸರಸ ಸುಂದರವಾದ ಪ್ರಾಸಾದಿಕ ಪದ್ಯಗಳೇ ಹೆಚ್ಚು. ಸಂಸ್ಕೃತದ ಪಾಂಡಿತ್ಯವನ್ನು ಕನ್ನಡದ ತಳಿಗೆಯಲ್ಲಿ ಸಹಜ ಸುಂದರವಾದ ಸ್ವಾಭಾವಿಕತೆಯ ಪಾತಳಿಯಲ್ಲಿ ಹರಿಯಿಸಿ ಸರ್ವರಿಗೂ ರಸಾಭಿಷೇಕವನ್ನು ಮಾಡಿಸಿದ ಪುಣ್ಯವು ಗೋಪಾಲದಾಸರದಾಗಿದೆ.

ಹೊಸ ಕಲ್ಪನೆ, ಪ್ರವಾಹಿ ಶೈಲಿ, ಮಾರ್ಮಿಕ ದೃಷ್ಟಾಂತ, ಕಟುವ್ಯಂಗ್ಯ, ಭಾಷಾಸಾರಲ್ಯ, ಅರ್ಥಗಾಂಭೀರ್ಯಗಳು ಗೋಪಾಲದಾಸರ ಕವಿತೆಗಳಲ್ಲಿ ಎದ್ದುಕಾಣುವ ವಾಗ್ಗುಣಗಳಾಗಿವೆ. ಅವರು ತಮ್ಮ ಜಾತಿ ಬಾಂಧವರಲ್ಲಿ ಡಂಭಾಚಾರವನ್ನೂ ಮೂಢಮೂಢವಾದ ಆಚಾರ ಆಡಂಬರಗಳನ್ನೂ ಖಂಡತುಂಡಾಗಿ ಖಂಡಿಸಿ ಅಂತರಂಗ ಶುದ್ಧಿಗೆ ಪ್ರಾಶಸ್ತ್ಯವನ್ನು ಕೊಡುತ್ತಾರೆ.

"ಬುಡಗುಳಿಯಂತೆ ಬಂದು ಗುಡುಗುಡು ಗುಟ್ಟುತ
ನಡುವೆ ಮಂತ್ರಗಳ ಕಡುವೇಗ ನುಡಿದು ನಾಮ
ಬಡಿದು ಮುದ್ರೆಯ ಹಚ್ಚಿ ಜಡ ದೇಹ ತೊಳೆದು
ಅಡಿಗಡಿಗೆ ಕಾಮಕ್ರೋಧಗಳು ಮಲಮೂತ್ರ
ಝುಡಿತ ರಕ್ತ ಮಾಂಸ ಕಡುಘೋರ ಇಂದ್ರಿಯಗಳ
ಕೊಡದೊಳು ಮದ್ಯ ತುಂಬಿ ಮುಡಿಗೆ ಪೂಮಾಲೆ
ಸುತ್ತಿ ಕಡು ಪರಿಮಳ ದ್ರವ್ಯ ಸುಗಂಧ ಲೇಪಿಸಿ
ನಡುಬೀದಿಯೊಳಟ್ಟು ಬೆಡಗು ತೋರಿಸಿನ್ನು
ಮಡಿಮಾಡಿದರದು ಮಡಿಯಾಗಬಲ್ಲದೆ........

ಎಂದು ಸವಾಲು ಹಾಕುತ್ತಾರೆ.

ಗೋಪಾಲದಾಸರ ವೈರಾಗ್ಯದ ಒರೆಗಲ್ಲು ನಿಜವಾಗಿಯೂ ಉಚ್ಚಮಟ್ಟದ್ದಾಗಿದೆ. ಅವರ ದೃಷ್ಟಿಯಲ್ಲಿ— ತ್ಯಾಗ, ವಿರಾಗ, ಜ್ಞಾನ, ಕರ್ಮಗಳ ವ್ಯಾಖ್ಯೆಯೇ ಬೇರೆ. ನಿಜವಾದ ಅರ್ಥದಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಜೀವನದಲ್ಲಿ ಅರಗಿಸಿಕೊಂಡ ದಾಸರಾಯರು ಆ ಎಲ್ಲ ಶಬ್ದಗಳಿಗೆ ಕೊಡುವ ನಿರ್ವಚನವೇ ಬೇರೆ. ಅವುಗಳ ಆಪಾತಃ ತೋರುವ–ನಾವು–ನೀವು ತಿಳಿದುಕೊಂಡಿರುವ–ಸಾಮಾನ್ಯವಾದ ಅರ್ಥದಿಂದ ಆಗುವ ಅನರ್ಥವನ್ನು ತಿಳಿಸಿ ಅವುಗಳ ಶಾಸ್ತ್ರ ಶುದ್ಧವಾದ ಪರಮಾರ್ಥವನ್ನು ತಮ್ಮದೇ ಆದ ಬಿಚ್ಚು ಮಾತಿನ ಸ್ವಚ್ಛ ಸರಣಿಯಲ್ಲಿ ನಿಚ್ಚಳವಾಗಿ ತಿಳಿಸಿ ಹೇಳಿದ್ದಾರೆ.

"ಧನವ ಪರಿತ್ಯಾಗ ಮಾಡಿದರೆ ಆಯಿತೆ ?
ಘನವಾದ ವೈರಾಗ್ಯವಲ್ಲ ನೋಡಿ !
ಧನವಬಿಟ್ಟರವೆ ದನಗಳು ಅನುದಿನ
ಘನವೇನು ಇವಕೆ ಅವಕೆ ನೋಡು

ಮನೆಯ ಬಿಟ್ಟು ಏಕಾಂತದಲಿ ಕುಳಿತರಾಯಿತೆ ?
ಘನವಾದ ವೈರಾಗ್ಯವಲ್ಲ ನೋಡಿ
ಮನೆಯ ಬಿಟ್ಟ ಇರವೇ ಅನುದಿನ ಗೂಗೆಗಳು
ಘನವೆಂದು ಕರೆವರೆ ಜ್ಞಾನಿಗಳು

ತನುಮನದಭಿಮಾನಬಿಟ್ಟರಾಯಿತೆ ?
ಘನವಾದ ವೈರಾಗ್ಯವಲ್ಲ ನೋಡಿ
ತನುಮನದಭಿಮಾನವನು ಬಿಟ್ಟು ಕುನ್ನಿ ತಾ
ಮನೆ–ಮನೆ ತಿರುಗದೇ ಅನುಗಾಲವು
ಘನಮಹಿಮ ಚೆಲ್ವ ಗೋಪಾಲ ವಿಠಲನ
ನೆನೆದು ಏಕಾಂತದಲ್ಲಿ ನಿರ್ಮಲ ಮನನಾಗೊ

ಹೀಗೆ ಅಂತರಂಗದ ಆಳದಿಂದ ಎದ್ದು ಬಂದ ಮಾತುಗಳು ಕಾವ್ಯದ ಅಲಂಕಾರ ಪರಿವೇಷದಲ್ಲಿ ಮುದ್ದಾಗಿ ಮೂಡಿ ಬಂದು ಜನಮನವನ್ನು ತಿದ್ದಲಿಕ್ಕೂ ನಡೆನುಡಿಗಳನ್ನು ತೀಡಲಿಕ್ಕೂ ಒಳ್ಳೆ ಉಪಯುಕ್ತವಾಗುತ್ತವೆ.

ಶ್ರೀ ಗೋಪಾಲದಾಸರ ಗೀತರೀತಿಯ ಇಂಥ ಮಾರ್ಮಿಕ ಮಾತುಗಳನ್ನೊಳಗೊಂಡ ಸದ್ಗ್ರಂಥಗಳಿಂದ ಸ್ಫೂರ್ತಿಗೊಂಡು ವೆಂಕಟರಾಮಾಚಾರ್ಯರಂಥ ಮಹಾಜ್ಞಾನಿಗಳೂ ಜ್ಞಾನದ ಬೆಂಗಾಡಿನಲ್ಲಿ ತಿರುತಿರುಗಿ ಕಂಗೆಟ್ಟು ಕೊನೆಗೆ ದಾಸರ ರಸಬೀದಿಯಲ್ಲಿ ಹೆಜ್ಜೆ ಹಾಕಹತ್ತಿದರು. ಇವರ ದಿವ್ಯ ಮಾರ್ಗವನ್ನನುಸರಿಸಿ ಒಂದು ರೀತಿಯ ಛಲದಿಂದಲೂ ಅಧ್ಯಾತ್ಮದ ಬಲದಿಂದಲೂ ಸರಸಸಾಧನೆಯ ಪಥವಲ್ಲಿ ಮುಂಮುವರಿದು ವೆಂಕಟರಾಮಾಚಾರ್ಯರು ಕೊನೆಗೆ ಅಪರೋಕ್ಷ ಜ್ಞಾನಿಗಳ ಅಗ್ರಪಂಕ್ತಿಯಲ್ಲಿ ಸೇರಿದರು. ಅವರು ಮುಂದೆ ಶ್ರೀ ರಾಯರ ಮಠದ ಪೀಠಾರೋಹಣ ಮಾಡಿ ವ್ಯಾಸತತ್ವಜ್ಞರೆಂದು ಪ್ರಸಿದ್ಧರಾದರು.

ಶ್ರೀ ಗೋಪಾಲದಾಸರು ನೂರಾರು ಜನ ತಮ್ಮ ಶಿಷ್ಯರೊಂದಿಗೆ ಬದರಿಯಿಂದ ರಾಮೇಶ್ವರದ ವರೆಗೆ ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿದರು. ಅವರ ಯಾತ್ರಾ ಕ್ರಮದಲ್ಲಿ ಪಂಢರಪುರವೊಂದು ಉಳಿದುಕೊಂಡಾಗ ಪಾಂಡುರಂಗನು ವೇಷಾಂತರದಿಂದ

ಬಂದು ಕಪ್ಪು ಕುದುರೆ ಏರಿ— **"ಆಲೆ ನಾಹಿ"** ಎಂದು ಮರಾಠಿಯಲ್ಲಿ ಕೇಳಿ, ಕರೆದು ದರ್ಶನವಿತ್ತನಂತೆ.

"ನೀಲ ಕುದುರೆಯನೇರಿ ಶಾಲು ಟೊಂಕಕೆ ಸುತ್ತಿ
ಕಾಲು–ಕುಪ್ಪಸ ತೊಟ್ಟು ಮೇಲೆ ಮೋಹನ್ನ ಹಾಕಿ
............................... . .......................
**"ಆಲೆನಾಹಿ"** ಎಂದು ಕೇಳಿದನಾರವ್ವ ?
ವೇಳೆ ಸಾಲದಾಯಿತು ಕೇಳುವದಕ್ಕೆನೆಗೆ"

ಎಂದು ದಾಸರು ತಮಗಾದ ದಿವ್ಯಾನುಭವವನ್ನು ರಸಾಳವಾದ ಶೈಲಿಯಿಂದ ವಿವರಿಸಿದ್ದಾರೆ.

ಮಹಾನುಭಾವರಾದ ಗೋಪಾಲದಾಸರು ಮಾನ್ವಿ ಶ್ರೀನಿವಾಸಾಚಾರ್ಯರ ಉದರ ಶೂಲವನ್ನು ಪರಿಹರಿಸಿ ಮತ್ತು ತಿರುಪತಿ ಕ್ಷೇತ್ರದಲ್ಲಿ ಅವರಿಗೆ ಬಂದ ಅಪಮೃತ್ಯುವನ್ನು ದೂರಗೈದು ತಮ್ಮ ನಾಲ್ವತ್ತು ವರ್ಷದ ಆಯುಷ್ಯವನ್ನು ದಾನ ಮಾಡಿದ ಕತೆ ಸುಪ್ರಸಿದ್ಧವೇ ಇರುತ್ತದೆ.

ತಮ್ಮ ಆಯುಷ್ಯದಿಂದ ಬದುಕಿ ಉಳಿದ ಶ್ರೀನಿವಾಸಾಚಾರ್ಯರಲ್ಲಿ ಗೋಪಾಲ ದಾಸರೇ ನಿಂತು ಹರಿಕಥಾಮೃತಸಾರದಂಥ ಗ್ರಂಥ ಬರೆದು ಜಗದೋದ್ಧಾರ ಮಾಡಿ ಜಗನ್ನಾಥದಾಸರೆಂದು ಪ್ರಸಿದ್ಧರಾದರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಉತ್ತರಾದಿ ಮಠದ ಅಪರೋಕ್ಷಜ್ಞಾನಿ ಪೀಠಾಧಿಪತಿಗಳಾದ ಶ್ರೀಸತ್ಯಬೋಧ ಸ್ವಾಮಿಗಳು ಕೂಡ ಶ್ರೀಗೋಪಾಲದಾಸರ ದಿವ್ಯಜ್ಞಾನಭಕ್ತಿ ವೈರಾಗ್ಯಗಳನ್ನು ಕಂಡು ಅನುಗ್ರಹಾತಿಶಯವನ್ನು ಮಾಡಿದರೆಂದು ಐತಿಹ್ಯವಿದೆ.

ಮುಖ್ಯವಾಗಿ ಗೋಪಾಲದಾಸರು ಮಾಡಿದ ಇತರ ಅಸಾಧಾರಣ ಕಾರ್ಯ ವೆಂದರೆ ಶಾಸ್ತ್ರಪುರಾಣಗಳನ್ನೆಲ್ಲ ತಳಸೋಸಿ ಶೋಧಿಸಿ ಪ್ರಮಾಣಾನುಸಾರವಾಗಿ ಬ್ರಹ್ಮಾಂಡದ ಪಟವನ್ನು ಬರೆದದ್ದು. ಅವರ ಗುರುಗಳಾದ ವಿಜಯದಾಸರು ರಚಿಸಿದ ಕಂಕಣಾಕಾರ ಸುಳಾದಿಯನ್ನು ಚಕ್ರಾಬ್ಜದಲ್ಲಿಟ್ಟು ಬೀಜಾಕ್ಷರಗಳನ್ನು ತತ್‌ಸ್ಥಾನದಲ್ಲಿ ಗುರುತಿಸಿ ಉಪಾಸನೆಗೆ ಅನುಕೂಲ ಮಾಡಿಕೊಟ್ಟ ಮಹಾನುಭಾವರೆಂದರೆ ಗೋಪಾಲ ದಾಸರು. ಹದಿನೆಂಟು ಪುರಾಣಗಳನ್ನು ಹಾಗೂ ಉಳಿದೆಲ್ಲ ಗೀತೋಪನಿಷದಾದಿ ವೇದಾಂತ ಗ್ರಂಥಗಳನ್ನು ಹಾಗೂ ಎಲ್ಲ ಪ್ರಮೇಯದ ಅಂಶಗಳನ್ನೂ ಪರಿಶೀಲಿಸಿ, ಪರಿಶೋಧಿಸಿ ಭಗವಂತನ ವಿರಾಡ್ರೂಪವನ್ನೂ ಲೋಕಗಳ ಸ್ಥಾನವನ್ನೂ ತೋರಿಸಿ

ಬ್ರಹ್ಮಾಂಡದ ಪಟವನ್ನು ಮನನೀಯವಾಗುವಂತೆ ಸರ್ವ ಮಾನನೀಯವೂ ಆಗುವಂತೆ ಬರೆದು ಇಟ್ಟಿದ್ದಾರೆ. ಆ ಪಟಗಳನ್ನು ದಿ. ಗೋರೆಬಾಳ ಹನಮಂತರಾಯರು ಅವುಗಳ ಮೂಲ ವರ್ಣವೈವಿಧ್ಯಗಳಲ್ಲಿಯೇ ಅಚ್ಚು ಹಾಕಿಸಿ ತಮ್ಮ ಹರಿದಾಸ ಸಾಹಿತ್ಯದ ದ್ವೈಮಾಸಿಕದಲ್ಲಿ ಪ್ರಕಟಿಸಿ ಪರಮೋಪಕಾರ ಮಾಡಿದ್ದಾರೆ.

ಶ್ರೀಮದಾನಂದತೀರ್ಥರು ತಂತ್ರಸಾರದಲ್ಲಿ ಹೇಳಿದ ಮಹಾ ಮಂತ್ರಗಳ ಪ್ರತಿಪಾದ್ಯ ಭಗವನ್ಮೂರ್ತಿಗಳನ್ನೆಲ್ಲ ಶಿಲ್ಪ ಶಾಸ್ತ್ರಾನುಸಾರವಾಗಿ ಬರೆದು ಆ-ಆ ಮಂತ್ರಾಕ್ಷರಗಳನ್ನು ಸರ್ವಜ್ಞರಿಂದ ನಿರ್ದಿಷ್ಟವಾದ, ಸರಿಯಾದ ಸ್ಥಾನಗಳಲ್ಲಿ ಗುರುತಿಸಿ-ಇರಿಸಿ, ಆವಾಹನಾದಿ ಷೋಡಶೋಪಚಾರಗಳಿಂದ ಪೂಜಾ ಕಾಲದಲ್ಲಿ ಅರ್ಚಿಸುವದು ಗೋಪಾಲದಾಸರ ನಿತ್ಯ ಕಾರ್ಯಕ್ರಮವಾಗಿತ್ತು.

ದಾಸರು ಬರೆದ ಆ ಚಿತ್ರದಲ್ಲಿ ಒಂದು ಮೂರ್ತಿಯನ್ನು ಒಮ್ಮೆ ಬರೆದು ಆವಾಹಿನಿಸಿದರೆಂದರೆ ಆ ಚಿತ್ರದಲ್ಲಿ ಭಗವಂತನ ವಿಚಿತ್ರವಾದ ಸನ್ನಿಧಾನವು ಬಂದು ಬಿಡುತ್ತಿತ್ತು.

ರೋಗಗ್ರಸ್ತರೂ, ಭೂತ-ಪಿಶಾಚಾದಿ ಭಯತ್ರಸ್ತರೂ, ಸಂತಾನಾಪೇಕ್ಷಿಗಳೂ, ಸಂಕಟದಲ್ಲಿ ಸಿಲುಕಿದವವರೂ ದಾಸರ ಬಳಿಗೆ ಬಂದು ಏನಾದರೂ ಯಂತ್ರ-ಮಂತ್ರ ಮಾಡಿಕೊಡಿರೆಂದು ಕೇಳಿದಾಗ ಅವರಿಗೆಲ್ಲ ಗೋಪಾಲದಾಸರು ತಾವು ಬರೆದು ಆವ್ಹಾನಿಸಿ, ಪೂಜಿಸಿದ ಪಟಗಳನ್ನು ಕೊಡುತ್ತಿದ್ದರು. ಜನರು ಆ ಚಿತ್ರಗತ ಮೂರ್ತಿಯನ್ನು ಪೂಜಿಸಿ ತಮ್ಮ ಕಷ್ಟ-ನಷ್ಟಗಳನ್ನು ಪರಿಹರಿಸಿಕೊಂಡು ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು.

ಹೀಗೆ ಮಂತ್ರಸಿದ್ಧಿ, ವಾಕ್‌ಸಿದ್ಧಿ, ರಸಸಿದ್ಧಿ ಮೂರನ್ನೂ ಸಾಧಿಸಿಕೊಂಡು ಜನರಿಗೆಲ್ಲ ಆ ತ್ರಿವಿಧೋಪಾಯದಿಂದ ಮುಕುಂದನ ಮುಕ್ತಿಮಂದಿರಕ್ಕೆ ದಾರಿತೋರಿದ ಗೋಪಾಲದಾಸರು ದಾಸಕೂಟದ ಆಧ್ವರ್ಯಗಳಾಗಿದ್ದಾರೆ.

## ೧೯ ಶ್ರೀ ಜಗನ್ನಾಥದಾಸರು

ದಾಸ ಸಾಹಿತ್ಯದ ಪುರುಷಾರ್ಥ ಚತುಷ್ಟಯರೆಂದು ಪ್ರಸಿದ್ಧರಾದವರಲ್ಲಿ ಶ್ರೀ ಪುರಂದರದಾಸರು ಮೊದಲಿನವರಾದರೆ ಶ್ರೀ ಜಗನ್ನಾಥದಾಸರು ಕೊನೆಯವರಾಗಿದ್ದಾರೆ. ಕ್ರಿ. ಶ. ೧೭೨೮ ರಿಂದ ೧೮೦೯ ರ ವರೆಗೆ ಬಾಳಿ ಬದುಕಿದ ಜಗನ್ನಾಥದಾಸರು ದಾಸ ಸಾಹಿತ್ಯವನ್ನು ಪರಮೋತ್ಕರ್ಷದ ಉಚ್ಚಾಂಕ ಬಿಂದುವಿಗೆ ಏರಿಸಿ, ಅದರ ಕೀರ್ತಿಯ ಕಳಸವನ್ನು ಗಗನದೆತ್ತರಕ್ಕೆ ಎತ್ತಿ, ಧ್ರುವ ನಕ್ಷತ್ರದಂತೆ ಚಿರದೀಪ್ತಿಯಿಂದ ಈಗಲೂ ಬೆಳಗುತ್ತಲಿದ್ದಾರೆ.

ಇವರ ತಂದೆಗಳಾದ ನರಸಿಂಹಾಚಾರ್ಯರು ಪ್ರೊಂಗನಾಮದ ತಿಮ್ಮಣ್ಣದಾಸರಿಂದ ನರಸಿಂಹ ವಿಠ್ಠಲ ಎಂಬ ಅಂಕಿತ ಪಡೆದು ಹರಿದಾಸರಾಗಿದ್ದರು.

ಅವರ ಮಕ್ಕಳಾದ ಶ್ರೀನಿವಾಸಾಚಾರ್ಯರು ಶ್ರೀವರದೇಂದ್ರ ಸ್ವಾಮಿಗಳಲ್ಲಿ ವ್ಯಾಸಂಗ ಮಾಡಿ ಚತುಃಶಾಸ್ತ್ರಪಂಡಿತರಾಗಿ ಮಾನವಿಯಲ್ಲಿ ಪಾಠಪ್ರವಚನ ಮಾಡಿಕೊಂಡು ಇದ್ದರು. ಇವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಶ್ರೀವರದೇಂದ್ರ ಸ್ವಾಮಿಗಳಮೇಲೆ 'ವರದೇಂದ್ರ ಪಂಚರತ್ನ' ಎಂಬ ಕವಿತೆಯನ್ನು ಸಂಸ್ಕೃತದಲ್ಲಿ ಬರೆದು ತಮ್ಮ ಸ್ವಾಭಾವಿಕವಾದ ಕಾವ್ಯಶಕ್ತಿಯನ್ನು ತೋರ್ಪಡಿಸಿದ್ದರು.

ಒಮ್ಮೆ ಮಾನವಿಗೆ ಬಂದ ವಿಜಯದಾಸರನ್ನು ಪಾಂಡಿತ್ಯದ ಮದ ತುಂಬಿದ ಈ ಶ್ರೀನಿವಾಸಾಚಾರ್ಯರು ತೃಣೀಕರಿಸಿ ಅಪಚಾರ ಮಾಡಿದ್ದರಿಂದ ಇವರಿಗೆ ಉದರ ರೋಗವು ಪ್ರಾಪ್ತವಾಯಿತು. ಕೊನೆಗೆ ಅವರು ಚೀಕಲಪರವಿಗೆ ಹೋಗಿ ವಿಜಯ ದಾಸರಲ್ಲಿ ಕ್ಷಮೆ ಕೋರಿದರು.

ವಿಜಯದಾಸರು ಇವರನ್ನು ಗೋಪಾಲದಾಸರಲ್ಲಿಗೆ ಕೊಟ್ಟು ಕಳಿಸಿದರು. ಗೋಪಾಲದಾಸರು ಶ್ರೀನಿವಾಸಾಚಾರ್ಯರ ರೋಗವು ಮಹಾತ್ಮರ ದ್ರೋಹ ಮಾಡಿದ್ದಕ್ಕಾಗಿ ಬಂದಿದೆ ಎಂದು ಬಗೆದು ಒಂದು ರೊಟ್ಟಿಯನ್ನು ಅಭಿಮಂತ್ರಿಸಿ ಕೊಟ್ಟು ಅವರ ಉದರ ವ್ಯಾಧಿಯನ್ನು ಪರಿಹರಿಸಿದರು. ಮುಂದೆ ಗೋಪಾಲದಾಸರೊಂದಿಗೆ ಶ್ರೀನಿವಾಸಾಚಾರ್ಯರು ತಿರುಪತಿಗೆ ಹೋದಾಗ ಅಲ್ಲಿಯೇ ಅವರ ಮರಣ ಸನ್ನಿಹಿತವಾಯಿತು. ಆಗ ಗೋಪಾಲದಾಸರು ವಿಜಯದಾಸರ ಅಪ್ಪಣೆಯಂತೆ ತಮ್ಮ ಆಯುಷ್ಯದಲ್ಲಿಯ ನಾಲ್ವತ್ತು ವರುಷ ಆಯುಸ್ಯವನ್ನು ಶ್ರೀನಿವಾಸಾಚಾರ್ಯರಿಗೆ ದಾನವಿತ್ತು ಅನುಗ್ರಹಿಸಿದರು.

ಆದರಿಂದ ಮರಳಿ ಬದುಕಿದ ಶ್ರೀನಿವಾಸಾಚಾರ್ಯರು ಆ ದಾಸದ್ವಯದ ಉಪಕಾರವನ್ನು ಮನದಂದು ಶ್ರೀನಿವಾಸನ ದರ್ಶನ ಪಡೆದುಕೊಂಡು ಅಲ್ಲಿಂದ ಪಂಢರಪುರಕ್ಕೆ ಬಂದರು. ಅಲ್ಲಿ ಚಂದ್ರಭಾಗಾ ಪ್ರವಾಹದಲ್ಲಿ ಸ್ನಾನ ಮಾಡುವಾಗ "ಜಗನ್ನಾಥವಿಠ್ಠಲ" ಎಂಬ ಅಂಕಿತವುಳ್ಳ ಶಿಲಾಶಕಲವೊಂದು ಇವರಿಗೆ ದೊರಕಿತು. ಅದೇ ಅಂಕಿತದಿಂದಲೇ ಮುಂದೆ ಇವರು ಅನೇಕ ಕೀರ್ತನೆಗಳನ್ನೂ ಕಾವ್ಯಗಳನ್ನೂ ಬರೆದು ಜಗನ್ನಾಥದಾಸರೆಂದು ಪ್ರಸಿದ್ಧರಾದರು.

ಪಂಢರಪುರದ ವಿಠ್ಠಲನು ಜಗನ್ನಾಥದಾಸರ ಭಕ್ತಿಗೆ ಒಲಿದು ಇವರಿಗೆ ಉತ್ತಮವಾದ ಔತಣ ಮಾಡಿಸಿ ಅನುಗ್ರಹಿಸಿದನಂತೆ.

ಗೋಪಾಲದಾಸರು ಇತ್ತ ಆಯುರ್ದಾನದಿಂದ ಜಗನ್ನಾಥದಾಸರು ಎಂಬತ್ತೆರಡು ವರ್ಷಕಾಲ ಬದುಕಿ ಅನೇಕ ಪದ, ಪದ್ಯ, ಸುಳಾದಿ, ಕೀರ್ತನೆ, ಕಾವ್ಯ, ಸುವಾಲಿ ಮುಂತಾಗಿ ವಿಪುಲ ಸಾಹಿತ್ಯವನ್ನು ರಚಿಸಿದ್ದಾರೆ.

ಸಂಸ್ಕೃತ ಭೂಯಿಷ್ಠವಾದ ಜಗನ್ನಾಥದಾಸರ ಕಾವ್ಯಶೈಲಿಯು ಪಾಂಡಿತ್ಯದ ಪ್ರಖರತೆಯಿಂದ ಕ್ಲಿಷ್ಟಶಿಷ್ಟವೆಂದು ತೋರಿದರೂ ಪ್ರಾಸಾದಿಕತೆ, ಪ್ರಾಸೋಲ್ಲಾಸ, ರಸರಮಣೀಯತೆಗಳನ್ನೂ ಕೈಬಿಟ್ಟಿಲ್ಲ.

ಅವರ ಸುಂದರವಾದ ಕಾವ್ಯಶೈಲಿಯಲ್ಲಿ ಕನ್ನಡದ ಸಹಜಗುಣವಾದ ಮಾರ್ದವ ಮಾಧುರ್ಯ ಹಾಗೂ ಲಾಲಿತ್ಯಗಳು ಮೊದಲಿನಿಂದ ತುದಿಯ ವರೆಗೂ ತೂಗುಯ್ಯಾಲೆ ಆಡುತ್ತಲಿವೆ. ಅವರ—

"ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗ ಸುಖವನಿತ್ತು ಕಾಯೊ ಕರುಣಾಸಾಗರ ||
ಕಂಡಕಂಡಲ್ಲಿ ವಿಶ್ವರೂಪ ಕಾಂಬರು
ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರು
ಬಂಡುಣಿಯಂದದಿ ನಾಮಾಮೃತವನುಂಬರು
ಹೆಂಡಿರು ಮಕ್ಕಳು ನಿನ್ನ ತೊಂಡರೆಂಬರು
ನಗುವರೋ ರೋದಿಸುವರೋ ನಾಟ್ಯವಾಡೋರೋ
ಬಗೆಯರೋ ಬಡತನ ಭಾಗ್ಯ ಭಾಗವತರು
ತೆಗೆಯರೋ ನಿನ್ನಲ್ಲಿ ಮನ ಒಮ್ಮೆಯಾದರು
ಜಗನ್ನಾಥ ವಿಠ್ಠಲ ನಿನ್ನವರೇನು ಧನ್ಯರೊ"

ಇಂಥ ಪದಗಳಲ್ಲಿ ಯಾವ ತ್ರಾಸ, ಆಯಾಸವಿಲ್ಲದೆ ಭಾವಾನುಗುಣವಾಗಿ ತಾನಾಗಿಯೇ ಬಂದು ಅಂದವಾಗಿ ಹೊಂದಿಕೊಂಡು ಸೌಂದರ್ಯವನ್ನು ಸೂಸುವ ಸಹಜ ಪ್ರಾಸವು ಅಂತರಂಗದ ಆಶಯವನ್ನು ಹಂತ–ಹಂತವಾಗಿ ಏರಿಸುತ್ತ ಉತ್ಕಟ ಅವಸ್ಥೆಗೆ ತಲಿಪಿಸುತ್ತದೆ.

ಶ್ರೀ ಜಗನ್ನಾಥದಾಸರ ಕಲ್ಪನಾಶಕ್ತಿಯ ವಿರಾಡ್ ವೈಭವವನ್ನು ಅವರ ಕೆಲವು ಆಧ್ಯಾತ್ಮಿಕ ಗೀತಗಳಲ್ಲಿ ಕಾಣಬಹುದು.

ವ್ಯಾಪ್ತ್ಯೋಪಾಸಕರು ಬ್ರಹ್ಮಾಂಡವ್ಯಾಪಿಯಾದ ಭಗವದ್ರೂಪವನ್ನು ಚಿಂತಿಸುವಾಗ "ಜಗದಂಡ ಮಂಡಲವೆಲ್ಲ ಆ ಶ್ರೀ ಹರಿಯ ಪೂಜಾ ಮಂಟಪವೆಂದು ಭಾವಿಸಬೇಕು. ಭೂಮಂಡಲ ಆತನ ಪೀಠ, ರವಿಚಂದ್ರರು ದೀಪ, ಆಕಾಶವೇ ಛತ್ರಿ, ಮಳೆಯು ಅವನ ಅಭಿಷೇಕ, ಮಲಯ ಪರ್ವತದ ಚಂದನದ ಪರಿಮಳವೇ ಗಂಧಧೂಪ, ನೆಲದಲ್ಲಿ ಬೆಳೆದ ಧಾನ್ಯವೆಲ್ಲ ಅವನಿಗೆ ನೈವೇದ್ಯ, ಥಳಥಳಿಸುವ ಮಿಂಚಿನ ಮಾಲೆಯೇ ಮಂಗಳಾರತಿ, ಅಂತರಿಕ್ಷದಲ್ಲಿಯ ನಕ್ಷತ್ರ ಮಂಡಲವೇ ಅವನಿಗೆ ಅರ್ಪಿಸಿದ ಲಕ್ಷ ದೀಪೋತ್ಸವ, ಗುಡುಗು ಸಾಗರದ ಮೊರೆತಗಳೇ ಮಂಗಳವಾದ್ಯಗಳು"

ಅಬ್ಬ ಎಂಥ ವಿರಾಟ್ ಕಲ್ಪನೆಯು ಇಲ್ಲಿ ಗರಿಗೆದರಿದೆ!

ಅವರ ಪ್ರತಿಪದಗಳ ಪ್ರತಿ ಪದ್ಯದಲ್ಲಿಯೂ ಭಕ್ತಿಯ ಪ್ರವಾಹವು ಉಕ್ಕಿ ಉಕ್ಕಿ ಹರಿದಿದೆ. ಪಾಂಡಿತ್ಯದ ಪ್ರಖರತೆಗೆ ಕವಿತ್ವದ ಮಧುರ ಮುಖರತೆಯು ಸೇರಿ ಸತ್ವ ಸಂಪನ್ನವಾದ ತಾತ್ವಿಕ ಕಾವ್ಯ ಕೃತಿಗಳು ಹುಟ್ಟಿ ರಸಪೂರದಿಂದ ಹೊಮ್ಮಿ ಹರಿದಿವೆ.

ಇವರ ತತ್ವಸುವಾಲಿ ಎಂಬ ಗ್ರಂಥವನ್ನು ಬರೆದು ಸಾಂಗತ್ಯ ರೀತಿಯಲ್ಲಿ ಮಧುರಮುಕ್ತಕಗಳ ಒಂದು ಸುಂದರವಾದ ಗುಚ್ಛವನ್ನೇ ಕನ್ನಡಿಗರ ಕೈಯಲ್ಲಿಟ್ಟಿದ್ದಾರೆ. ಇವರಲ್ಲಿ ವಿನಾಯಕ, ಶಿವ, ವಾಯು, ನವಗ್ರಹ, ಅಗ್ನಿ ಮುಂತಾದ ಅನೇಕ ದೇವತಾ ಸ್ತೋತ್ರಗಳನ್ನು ಪ್ರಮೇಯ ಭೂಯಿಷ್ಠವಾಗಿ ನಿರೂಪಿಸಿದ್ದಾರೆ. ಬೆಂಗಳೂರಿನ ಶ್ರೀಗೋಪಾಲದಾಸರು ಇತ್ತೀಚೆಗೆ ಇದನ್ನು ಪರಿಷ್ಕರಿಸಿ ದಾವಣಗೇರಿಯ ಶ್ರೀ ಬಿ. ಭೀಮರಾಯರ ಟಿಪ್ಪಣಿಯೊಂದಿಗೆ ಪ್ರಕಟಗೊಳಿಸಿದ್ದಾರೆ.

ಇದಲ್ಲದೆ ಶ್ರೀ ಜಗನ್ನಾಥದಾಸರು ಶ್ರೀ ಕೃಷ್ಣ ಚರಿತ್ರ, ದಶಾವತಾರ ಸ್ತೋತ್ರ, ರುಕ್ಮಿಣೀವಿಲಾಸ, ಶ್ರೀನಿವಾಸಸ್ತೋತ್ರ ಮುಂತಾದ ಖಂಡಕಾವ್ಯಗಳನ್ನು ಅಖಂಡ ರಸಸ್ಯಂದಿಯಾಗುವಂತೆ ರಚಿಸಿದ್ದಾರೆ. ಇವುಗಳಲ್ಲಿ ಒಂದು ನೂರನಾಲ್ವತ್ತು ನುಡಿಗಳುಳ್ಳ ಶ್ರೀನಿವಾಸ ಸ್ತೋತ್ರವೇ ದೊಡ್ಡದಾಗಿದೆ. ಈ ಎಲ್ಲ ಕಿರುಕೃತಿಗಳಲ್ಲಿ ಕೃತಿಗೆ ತಕ್ಕ

ಭಾಷೆ, ಭಾವಕ್ಕೆ ಅನುಗುಣವಾದ ಶೈಲಿ, ಶೈಲಿಗೆ ಸರಿಹೋಗುವ ಭಾವಪುಷ್ಟಿ, ತುಂಬಿತುಳುಕಿವೆ. ಆ ಭಾವರತ್ನಕೋಶದ ಅದರುಪದರುಗಳನ್ನೆಲ್ಲ ಜನರ ಮನದಲ್ಲಿ ಮೂಡುವಂತೆ ಎತ್ತಿ ತೋರಿಸುವ ಮಂಜುಳ ಪದ ಪುಂಜಗಳು ಈ ಎಲ್ಲಗುಣಗಳನ್ನು ಒಮ್ಮೆಯ್ಯ ಹಮ್ಮುಗೆಯಲ್ಲಿ ಹಾಸಿ, ಹೊಂದಿಸಿ ತೋರಿಸುತ್ತವೆ. ಅಂದಚಂದವಾದ ಛಂದೋವೈವಿಧ್ಯದಲ್ಲಿ ಈ ಎಲ್ಲ ಗುಣಗಳು ಮೇಳೈಯಿಸಿ ಜಗನ್ನಾಥದಾಸರ ಕೃತಿಗಳಲ್ಲಿ ಕಾವ್ಯಸಿದ್ಧಿಯು ಸಮೃದ್ಧಿಯ ಸೀಮಾಚುಂಬಿಯಾಗಿ ಸಿದ್ಧಾಂತದ ಅಂತರ್ಭಾವನೆಯಿಂದ ಸಾರ್ಥಕ್ಯವನ್ನು ಪಡೆದು ಸೊಗಯಿಸುತ್ತದೆ.

## " ಹರಿಕಥಾಮೃತಸಾರ "

ದಾಸ ಸಾಹಿತ್ಯದ ಮೇರುಕೃತಿ ಎನಿಸಿದ ಹರಿಕಥಾಮೃತಸಾರವು ಜಗನ್ನಾಥ ದಾಸರ ಆಧ್ಯಾತ್ಮಿಕ ಕವಿತ್ವದ ಮಂಗಳ ಕಳಸವಾಗಿದೆ. ಇಂಥ ಮಧುರ, ಗಂಭೀರವಾದ ಸಾತ್ವಿಕ ಸಾಹಿತ್ಯಿಕ ಕೃತಿಯು ಹಿಂದಾಗಲಿಲ್ಲ. ಇಂದಿಲ್ಲ. ಮುಂದೆ ಆಗುವದಿಲ್ಲ ಎಂದು ಹೇಳಿದರೆ ಸತ್ಯಕ್ಕೆ ವ್ಯತ್ಯಾಸವಾಗಿ ನುಡಿದಂತಾಗಲಿಲ್ಲ.

ಇದೊಂದು ಪ್ರಮೇಯ ಪಾರಿಜಾತ. ಗುರು ಮಧ್ವರ ಸಿದ್ಧಾಂತವೆಲ್ಲವೂ ಇಲ್ಲಿಯ ಮುದ್ದು ಭಾಷೆಯಲ್ಲಿ ಮೂಡಿ ನಿಂತಿದೆ. ವೇದವೇದಾಂತದ ತಿರುಳೆಲ್ಲವೂ ಈ ಕಾವ್ಯದ ಹುರುಳಾಗಿ ಇಲ್ಲಿ ಅರಳಿದೆ. ವೈದಿಕ ದರ್ಶನದ ನೂರಾರು ಗ್ರಂಥಗಳಲ್ಲಿ ಹೇಳಿದ ತತ್ವಾರ್ಥಗಳನ್ನೂ ಪ್ರಮೇಯ ರಹಸ್ಯಗಳನ್ನೂ ಮಥಿಸಿ ಈ ತಮ್ಮ ಅನರ್ಘ್ಯ ವಾದ ಕೃತಿಯಲ್ಲಿ ಎರಕ ಹಾಕಿದ್ದಾರೆ. ಆಸ್ತಿಕ ದರ್ಶನಗಳನ್ನೆಲ್ಲ ಜಾಲಿಸಿ ಅವುಗಳ ತತ್ವಸಾರವಾದ ತತ್ವಗಳ ಕೆನೆಯನ್ನೆಲ್ಲ ಕಡೆದು ಅವುಗಳ ಅರ್ಕದಂತಿದ್ದ ಹೂ-ಬೆಣ್ಣೆ ಯನ್ನೇ ಇಲ್ಲಿ ತೇಲಿಸಿದ್ದಾರೆ.

ಸಾಹಿತ್ಯವು ಸಿದ್ಧಾಂತವನ್ನಪ್ಪಿ ಇಲ್ಲಿ ಸಾರ್ಥಕವಾಗಿದೆ. ಸಿದ್ಧಾಂತವು ಸಾಹಿತ್ಯದ ರಸಾಲಿಂಗನದಿಂದ ಮಧುರ ಮೋದಕವಾಗಿದೆ. ಇದನ್ನು ಓದಿದ ಜೀವಕ್ಕೆ ಆರೋಗ್ಯ, ಸೌಭಾಗ್ಯ, ರುಚಿ, ರಸ, ಲೌಕಿಕ ಆನಂದ, ಬ್ರಹ್ಮಾನಂದ, ಕಾವ್ಯಾರ್ಥ, ಪುರುಷಾರ್ಥ ಎಲ್ಲವು ದೊರಕಿ ಮಾನವೀಯ ಜೀವನವೇ ಪಾವನವಾಗುವದು.

ಈ ಹರಿಕಥಾಮೃತ ಸಾರದಲ್ಲಿ ೩೨ ಸಂಧಿಗಳಿದ್ದು, ಸುಮಾರು ಒಂದು ಸಹಸ್ರ ಪದ್ಯಗಳು ಸುಂದರವಾದ ಭಾಮಿನಿ ಷಟ್ಪದಿಯ ಛಂದಸ್ಸಿನಲ್ಲಿ ಸಮಗ್ರ ವೇದಾಂತ ಪ್ರಪಂಚಕ್ಕೆ ಕಂಕಣ ಪರಿಧಿಯನ್ನು ಕಟ್ಟಿ ರಸೋದಧಿಯನ್ನೇ ಒಟ್ಟೈಸಿವೆ.

ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿಯೇ—

"ಹರಿಕಥಾಮೃತ ಸಾರ ಗುರುಗಳ ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು"

ಎಂಮ ಅನುಬಂಧ ಚತುಷ್ಟಯವನ್ನು ಸುಂದರವಾಗಿ ಹೇಳಿ ತಮ್ಮ ಧ್ಯೇಯ ದರ್ಶನಗಳನ್ನು ಮತ್ತೆ ಮತ್ತೆ ಸಾರಿ ಹೇಳುತ್ತಾರೆ.

ಭಗವಂತನ ಸಾರ್ವತ್ರಿಕ ವ್ಯಾಪ್ತಿಯು ಸಾಮಾನ್ಯವಾಗಿ ತಿಳಿದುಕೊಳ್ಳಲು ಕಠಿಣ ವಾದರೂ ದೃಷ್ಟಾಂತ ಮುಖಾಂತರ ಸುಲಭ ಗಮ್ಯವಾಗುವಂತೆ ರಮ್ಯವಾಗಿ ಹೇಳು ತ್ತಾರೆ ಈ ಜಗನ್ನಾಥದಾಸರು.

" ಪರಿಮಳವು ಸುಮನದೊಳ ಗನಳನು–
ಮರಣೆಯಲ್ಲಿಪ್ಪಂತೆ ದಾಮೋ–
ದರನು ಬ್ರಹ್ಮಾದಿಗಳ ಮನದಲ್ಲಿ ತೋರಿ ತೋರದಲೆ
ಇರುತಿಹ ಜಗನ್ನಾಥ ವಿಠಲನ ಕರುಣ ಪಡೆವ ಮುಮುಕ್ಷು ಜೀವರು
ಪರಮ ಭಾಗವತರನು ಕೊಂಡಾಡುವಮ ಪ್ರತಿದಿನವು "

ಸಂಸ್ಕೃತದಲ್ಲಿ " ಉಪಮಾ ಕಾಳಿದಾಸಸ್ಯ " ಎಂಬ ವಚನವಿದ್ದಂತೆ " ಉಪಮಾ ಜಗನ್ನಾಥಸ್ಯ" ಎಂದೂ ಹೇಳಬೇಕೆನಿಸುತ್ತದೆ ಇವರ ಕೃತಿಗಳನ್ನು ಪರಾಮರ್ಶಿಸಿದ ರಸಚೇತನಕ್ಕೆ. ಭಕ್ತ–ಭಗವಂತರ ರಾಗಾನುರಾಗಗಳನ್ನೂ, ಪ್ರೀತಿ ವಾತ್ಸಲ್ಯಗಳನ್ನೂ, ಎಂಥ ಹೃದಯ ಸ್ಪರ್ಶಿಯಾದ ನಿದರ್ಶನದಿಂದ ಪ್ರದರ್ಶನ ಮಾಡಿದ್ದಾರೆ ದಾಸರು ! ನೋಡಿರಿ—

"ಜನನಿಯನು ಕಾಣದಿಹ ಬಾಲಕ
ನೆನೆದು ಹಲಬುತಿರೆ ಕತ್ತಲು
ಮನೆಯೊಳಗಿದ್ದವನ ನೋಡುತ ನಗುತ ಹರುಷದಲಿ
ತನಯನಂ ಬಿಗಿದಪ್ಪಿ ರಂಬಿಸಿ ಕನಲಿಕೆಯ ಕಳೆವಂತೆ ಮಧುಸೂ–
ದನನು ತನ್ನವರಿದ್ದಡೆಗೆ ಬಂದೊವಗಿ ಸಲುಹುವನು "

ಇದಕ್ಕೆ ಅನೇಕ ಸಾಕ್ಷಿಗಳನ್ನು ಹೇಳಿ ಆರ್ತತ್ರಾಣ ತತ್ಪರತೆಯನ್ನು ಸಿದ್ಧ ಮಾಡಿದ್ದಾರೆ.

ಮಹಾಭಾರತದ ವಿಷಯದಲ್ಲಿ

' ಯದಿಹಾಸ್ತಿತದನ್ಯತ್ರಯನ್ನೇಹಾಸ್ತಿ ನ ತತ್ ಕ್ವಚಿತ್ "

ಎಂದು ಹೇಳಿದಂತೆ ನ್ಯೂನಾರ್ಥದಲ್ಲಿ ಹರಿಕಥಾಮೃತಸಾರ ವಿಷಯದಲ್ಲಿಯೂ ಹಾಗೆ ಹೇಳಬಹುದಾಗಿದೆ. ಇದರಲ್ಲಿ ಬಾರದ ಪ್ರಮೇಯವಿಲ್ಲ. ತಿಳಿಸದ ತತ್ವವಿಲ್ಲ. ಬಣ್ಣಿಸದ ಭಗವನ್ಮಹಿಮೆ ಇಲ್ಲ. ಸರ್ವಸೈದ್ಧಾಂತಿಕ ಜ್ಞಾತವ್ಯಾಂಶಗಳ ಒಂದು ಮಂಜುಳ ಮಂಜೂಷಿಕೆಯಂತೆ ಕಂಗೊಳಿಸುತ್ತದೆ ಈ ಸತ್‌ಪ್ರಬಂಧ.

ಶ್ರೀ ಸಂಕರ್ಷಣ ಒಡೆಯರಂಥ ಸನ್ಯಾಸಿವರೇಣ್ಯರೂ ಇದಕ್ಕೆ ಟೀಕೆ ಬರೆಯ ಬೇಕಾದರೆ ಇದರ ಯೋಗ್ಯತೆ ಎಂಥದಿರಬೇಡ ! ಇದಕ್ಕೆ ಅನೇಕಾನೇಕ ಕನ್ನಡ, ಸಂಸ್ಕೃತ ಪಂಡಿತರ ಟೀಕೆ ಟಿಪ್ಪಣಿಗಳೂ, ಫಲಶ್ರುತಿಯ ಪದ್ಯಗಳೂ, ಸಂಧಿಸೂಚಕ ಶ್ಲೋಕಗಳೂ, ವ್ಯಾಖ್ಯಾನ ವಿವರಣಗಳೂ ಒಂದರಮೇಲೊಂದು ಅಂದಿನಿಂದ ಇಂದಿನ ವರಗೆ ಆಗುತ್ತಲೇ ಇದ್ದು ಅದರ ಉತ್ತಮೋತ್ತಮಿಕೆಯನ್ನು ಎತ್ತಿಸಾರುತ್ತವೆ.

ತಾಮ್ರಪರ್ಣಿ ಆಚಾರ್ಯರು, ಜಂಬುಖಂಡಿ ಆಚಾರ್ಯರು ಈ ಕನ್ನಡದ ಮಹತ್ಪ್ರಬಂಧಕ್ಕೆ ಸಂಸ್ಕೃತದಲ್ಲಿ ವೇದವೇದಾಂತ ನ್ಯಾಯ, ಮೀಮಾಂಸಾ ವ್ಯಾಕರಣ, ಸಾಹಿತ್ಯಾದಿ ಶಾಸ್ತ್ರೀಯ ವಿಷಯ ವಿವೇಚನಾಪ್ರಚುರವಾದ ಪ್ರಗಲ್ಭ ಟೀಕೆಗಳನ್ನು ಬರೆದದ್ದನ್ನು ನೋಡಿದರೆ ಈ ಗ್ರಂಥದ ಅಂತಸ್ಸತ್ವವು ವಾಸ್ತವಿಕ ಮಹತ್ವವೂ ಎಷ್ಟು ಘನತರವಾಗಿದೆ ಎಂಬುದು ಗೊತ್ತಾಗದೇ ಇರದು.

ಲಿಂಗಸುಗೂರಿನ ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲದವರು ಗುರುವಿಜಯವಿಠ್ಠಲ, ಗುರು ಶ್ರೀಶವಿಠ್ಠಲ, ಶ್ರೀ ದ್ರೌಪದೀಶಪತಿವಿಠ್ಠಲ ಈ ಮೂರು ದಾಸಕೂಟ ದೇಶಿಕರ ಕನ್ನಡ ಟಿಪ್ಪಣಿಗಳನ್ನೂ ಶ್ರೀ ತಾಮ್ರಪರ್ಣಿಯ ಮತ್ತು ಶ್ರೀಜಂಬುಖಂಡಿ ವಾದಿರಾಜಾಚಾರ್ಯರ ವ್ಯಾಸದಾಸಸಿದ್ಧಾಂತಕೌಮುದೀ ಹಾಗೂ ಭಾವಸೂಚನ ಹೀಗೆ ಮೂರು ಸಂಸ್ಕೃತ ಟೀಕೆಗಳನ್ನೂ ಸೇರಿಸಿ ಒಟ್ಟು ಆರು ವ್ಯಾಖ್ಯಾನಗಳಿಂದ ಒಡಗೂಡಿದ ಹರಿಕಥಾಮೃತಸಾರವನ್ನು ಪ್ರಕಟಿಸಿ ಪರಮೋಪಕಾರ ಮಾಡಿದ್ದಾರೆ. ಶ್ರೀ ಸಂಕರ್ಷಣ ಒಡೆಯರ ಟೀಕೆಯು ಕನ್ನಡ ಭಾಷೆ ಯಲ್ಲಿದ್ದರೂ ಅದರ ಲಿಪಿ ಮಾತ್ರ ದುರ್ದೈವದಿಂದ ತೆಲಗು ಲಿಪಿಯಾಗಿದೆ. ಇವಲ್ಲದೆ ಇನ್ನೂ ಅನೇಕ ಬೇರೆ ಬೇರೆ ಟೀಕೆ, ಟಿಪ್ಪಣಿಗಳು ಇದಕ್ಕೆ ಇದ್ದು ಅವುಗಳಲ್ಲಿ ಕೆಲವು ಪ್ರಕಟವಾಗಿವೆ. ಹಲುವು ಲುಪ್ತವಾಗಿವೆ. ಅವೆಲ್ಲವುಗಳನ್ನು ಕ್ರೋಡೀಕರಿಸಿ ಎಲ್ಲ ಟೀಕೆಗಳ ಸಾರೋದ್ಧಾರ ಮಾಡಿ ಪ್ರತಿಯೊಂದು ಟೀಕೆಯಲ್ಲಿಯ ಅಪೂರ್ವಾಂಶಗಳನ್ನು ಹೆಕ್ಕಿ ತೆಗೆದು ಭಾವರತ್ನ ಕೋಶ ದಂತಹ ಹೊಸ ವ್ಯಾಖ್ಯಾನವನ್ನು ನಿರ್ಮಿಸುವದು ಪ್ರಕಟಿಸುವದು ಅತ್ಯಾವಶ್ಯಕ ವಾಗಿದೆ.

ಈ ಹರಿಕಥಾಮೃತಸಾರಕ್ಕೆ ಕರ್ಜಗಿಯ ಶ್ರೀ ಶ್ರೀಶವಿಠ್ಠಲದಾಸರು, ಗುರು ಶ್ರೀಶ ವಿಠ್ಠಲದಾಸರೆಂದು ಪ್ರಸಿದ್ಧರಾದ ಕುಂಟೋಜಿದಾಸರು, ಮನೋಹರ ವಿಠ್ಠಲದಾಸರು,

ಫಲಶ್ರುತಿಯನ್ನು ಭಾಮಿನಿ ಷಟ್ಪದಿಯ ಹಲವಾರು ಪದ್ಯಗಳಲ್ಲಿ ಸುಂದರವಾಗಿ ಹೇಳಿ, ಹೊಗಳಿ ಹಾಡಿದ್ದಾರೆ. ಅದರಂತೆ ಭೀಮೇಶ ವಿಠ್ಠಲದಾಸರು ಸಂಧಿಮಾಲಾ ಸಂಧಿ ಎಂಬ ಪುಟ್ಟ ಪದ್ಯ ಪ್ರಬಂಧವನ್ನು ರಚಿಸಿ ಹರಿಕಥಾಮೃತಸಾರದ ೩೨ ಸಂಧಿಗಳಲ್ಲಿ ಪ್ರತಿಪಾದಿತವಾದ ವಿಷಯಗಳ ಛಂದೋಬದ್ಧವಾದ ದಿಗ್ದರ್ಶನವನ್ನು ಮಾಡಿದ್ದಾರೆ.

ಶ್ರೀಮನ್ನ್ಯಾಯಸುಧೆಯ ಪ್ರತೀಕದಂತಿರುವ ಈ ಹರಿಕಥಾಮೃತಸಾರ ಗ್ರಂಥದಿಂದ ಕನ್ನಡ ಸಾಹಿತ್ಯದ ಸ್ಥಾನವು ಉನ್ನತವಾಗಿದೆ. ಕನ್ನಡದ ಆಧ್ಯಾತ್ಮ ವಾಙ್ಮಯ ಭಾಂಡಾರವು ಸಿರಿಸಂಪನ್ನವಾಗುವಂತೆ ಮಾಡಿದೆ. ಇದರಿಂದ ಕನ್ನಡ ನಾಡು, ನುಡಿಗಳು ಪುನೀತವಾಗಿವೆ. ಮಾಧ್ವ ಪ್ರಪಂಚವೆಲ್ಲವೂ ಈ ವಿಶ್ವಮಾನ್ಯವಾದ ಕೃತಿಯಿಂದ ಧನ್ಯವಾಗಿದೆ.

## ೨೦ ಶ್ರೀ ವ್ಯಾಸತತ್ವಜ್ಞರು

ಸರ್ವಜ್ಞ ಪೀಠವನ್ನು ಆರೋಹಣ ಮಾಡಿದ ಯತಿಪುಂಗವರಾದರೂ ಕನ್ನಡದಲ್ಲಿ ಪದಗಳನ್ನು ರಚಿಸಿ ತಾಳ ಹಿಡಿದು ಸಂಸ್ಕೃತ ಪಾಂಡಿತ್ಯಕ್ಕೆ ಕನ್ನಡ ಕವಿತ್ವದ ಮೇಳ ಮಾಡಿದ ಕೆಲವೇ ವೈಷ್ಣವ ಸನ್ಯಾಸಿಗಳಲ್ಲಿ ವ್ಯಾಸತತ್ವಜ್ಞರು ಒಬ್ಬರು.

ಇವರ ಪೂರ್ವಾಶ್ರಮದ ಹೆಸರು ಐಜಿ ವೆಂಕಟರಾಮಾಚಾರ್ಯರು. ಇವರು ರಾಯರ ಮಠದ ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರಲ್ಲಿ ಶಾಸ್ತ್ರ ವ್ಯಾಸಂಗ ಮಾಡಿ ಪ್ರಕಾಂಡ ಪಂಡಿತರಾದರು. ಇವರ ಅತ್ಯದ್ಭುತವಾದ ಪ್ರಖರ ಪಾಂಡಿತ್ಯದ ಕಾವಿಗೆ ಬತ್ತಿ ಹೋಗಂತಾದ ವೈರಾಗ್ಯದ ಸೆಲೆಯು ಶ್ರೀ ಗೋಪಾಲದಾಸರಂಥ ದಿವ್ಯಾನುಭವಿಗಳ ಸ್ನೇಹಸಂಗದಿಂದ ಮತ್ತೆ ಝರಿ ಒಡೆದು ಕಾರಂಜಿಯಾಗಿ ಪುಟಿಯಿತು.

ಮುಂದೆ ಅವರು ಶ್ರೀ ರಾಯರ ಮಠದ ಶ್ರೀ ಭುವನೇಂದ್ರತೀರ್ಥರಿಂದ ಯತ್ಯಾಶ್ರಮ ಪಡೆದು ಪೀಠಾಧಿಪತಿಗಳಾದರು. ಆದರೆ ವೈರಾಗ್ಯವು ಅವರ ಅಂತರಂಗದ ಆಳದಲ್ಲಿ ಇಳಿದು ರೋಮ-ರೋಮಗಳಲ್ಲಿಯೂ ಭೇದಿಸಿ ಹೋಗಿದ್ದಿತು. ಆದುದರಿಂದ ಅವರು ಆ ಮಂತ್ರಾಲಯ ಮಠದ ಸಂಸ್ಥಾನವನ್ನು ತಮ್ಮ ನಿರತಿಶಯವಾದ ತ್ಯಾಗ ಬುದ್ಧಿಯಿಂದ ಬಿಟ್ಟುಕೊಟ್ಟರು.

ಇವರು ಶ್ರೀ ಮಧ್ವಾಚಾರ್ಯರ ತತ್ವನಿರ್ಣಯ ಗ್ರಂಥದ ಟೀಕೆಗೆ— ಲಘು ಪ್ರಭಾ, ಗುರುಪ್ರಭಾ, ಶ್ರೀ ರಾಘವೇಂದ್ರಸ್ವಾಮಿಗಳ ಪರಿಮಳ ಗ್ರಂಥಕ್ಕೆ— ದ್ರಾಕ್ಷಾ ಪಾಕ, ನ್ಯಾಯಾಮೃತದ ಖಂಡನೆಯಾದ ಮತ್ಪ್ರಿಕಾ ಗ್ರಂಥಕ್ಕೆ ಪ್ರತಿಖಂಡನಾತ್ಮಕವಾದ ವ್ಯಂಜನ, ಸುಧಾ ಟೀಕೆಗೆ— ರಸರಂಜನಿ, ಭಾಗವತಕ್ಕೆ— ಮಂದನಂದಿನಿ ಮುಂತಾದ ಅನೇಕ ಶಾಸ್ತ್ರೀಯ ಟಿಪ್ಪಣ್ಯಾತ್ಮಕ ಗ್ರಂಥಗಳನ್ನು ಬರೆದಿದ್ದಾರೆ.

ಈ ಮಹಾ ಗ್ರಂಥಗಳನ್ನು ನೋಡಿದಾಗ ಇವರ ವ್ಯಾಸತತ್ವಜ್ಞ ಎಂಬ ಹೆಸರು ಸಾರ್ಥಕವಾಗಿದ್ದಿತು. ಇವರು ಮಾನಸ ಪೂಜಾ ಪದ್ಧತಿ ಎಂಬ ಅಪೂರ್ವ ಗ್ರಂಥವನ್ನು ರಚಿಸಿದ್ದಾರೆ.

ಇದರಂತೆ ಕನ್ನಡದಲ್ಲಿಯಾದರೂ ವಾಸುದೇವ ವಿಠ್ಠಲ ಎಂಬ ಅಂಕಿತದಿಂದ ಅನೇಕ ಪದ, ಪದ್ಯ ಸುಳಾದಿಗಳನ್ನು ರಚಿಸಿ ದಾಸಾಗ್ರಣಿಗಳೆಂದೆನಿಸಿದ್ದಾರೆ. ಇವರ ಪದ್ಯಗಳ ಒಂದು ಸಂಗ್ರಹವನ್ನು ಗೋರೇಬಾಳ ಹನುಮಂತರಾಯರು ಶ್ರೀವರದೇಂದ್ರ ಸಾಹಿತ್ಯಮಂಡಲದಿಂದ ಪ್ರಕಟಿಸಿದ್ದಾರೆ.

ಶಾಸ್ತ್ರತತ್ವಜ್ಞರಾದ ಇವರ ಕನ್ನಡ ಕೃತಿಗಳಲ್ಲಿ ಪಾಂಡಿತ್ಯದ ಅಚ್ಚಿನಲ್ಲಿಯೇ ಕಾವ್ಯದ ಸತ್ವ ಸೊಗಸುಗಳು ಸುರುಳಿ ಬಿಚ್ಚಿದ್ದನ್ನು ಕಾಣಬಹುದು. ಇವರ ಪ್ರತಿಯೊಂದು ಪದ್ಯದಲ್ಲಿಯೂ ಸಿದ್ಧಾಂತಜ್ಞಾನಜನ್ಯವಾದ ಪರಿಶುದ್ಧ ಭಕ್ತಿಯು ಓತಪ್ರೋತವಾಗಿ ಹರಿದಿದೆ.

''ತಂಗಿ ನೋಡುವ ಬಾರೆ ಎನ್ನ ಮನೆಯೊಳಂ-
ಗಣದೊಳಗೊಬ್ಬ ಶ್ಯಾಮಲ ಪುರುಷ
ತಿಂಗಳಮೊಗದವ ಇಧಾನೆ ಸಾ-
ದಂಗಳಲ್ಲೆ ಎನ್ನ ಪ್ರಾಣ ಮುಖ್ಯ
ಅಂಗ ಸೋಕಲು ತಾಸಿತರ ವಿಷಯಂಗಳ
ಸಂಗವ ಬಿಡಿಸುವ ಎನ್ನ ಪುಣ್ಯ ಆ-
ತಂಗೆ ಸಮರ್ಪಿಸಿ ಸುಖಿಸುವ ನಮ್ಮನ್ನು
ಹ್ಯಾಂಗಾದರೂ ಮಾಡಲಿ ವಾಸುದೇವ ವಿಠ್ಠಲ ॥ ”

ಇವರನ್ನು ಶ್ರೀಗೋಪಾಲದಾಸರು ಪೂರ್ವಾಶ್ರಮದಲ್ಲಿ

“ಕಂಡೇನಾ ಕರುಣಿಗಳೊಳಗ್ರೇಸರರಾದ ಪಂಡಿತ ರಾಮಾಚಾರ್ಯರ”

ಎಂದೂ ಮತ್ತು ಜಗನ್ನಾಥದಾಸರು—

“ಕೃತಕೃತ್ಯನಾದೆನಾ ಇಂದಿನ ದಿನದೊಳು
ಕ್ಷಿತಿಸುರ ವೆಂಕಟರಾಯಾಚಾರ್ಯರನು ಕಂಡು
..........................................................
..........................................................
ಪುಣ್ಯಚರಿತರ ದಿವ್ಯ ಪಾದವನೆ ಕಂಡು”

ಎಂದು ಮುಂತಾಗಿ ಬಣ್ಣಿಸಿದ್ದಾರೆ. ಇದರಮೇಲಿಂದ ಶ್ರೀ ವ್ಯಾಸತತ್ವಜ್ಞರ ಯೋಗ್ಯತೆಯು ಎಂಥ ಘನತರವಾಗಿದ್ದಿತೆಂಬುದನ್ನು ಗುರುತಿಸಬಹುದು.

## ೨೧ ಶ್ರೀ ಪಂಗನಾಮದ ತಿಮ್ಮಣ್ಣದಾಸರು

ಇವರು ಆದವಾನಿ ನವಾಬನ ದಿವಾನರಾಗಿದ್ದರು. ಇವರ ಮಗನನ್ನು ಬಲಾತ್ಕಾರ ವಾಗಿ ರಾಜಕೀಯ ಅಧಿಕಾರಿಗಳು ಮುಸಲ್ಮಾನನ್ನಾಗಿ ಮಾಡಿದ್ದರಿಂದ ಇವರಿಗೆ ಜೀವನ ದಲ್ಲಿ ಜಿಗುಪ್ಸೆ ಮೂಡಿತು.

ವಿಜಯದಾಸರ ಬಳಿಗೆ ಬಂದು ಅವರ ಶಿಷ್ಯರಾಗಿ ದಾಸದೀಕ್ಷೆಯನ್ನು ಹೊಂದಿದರು ವೇಣುಗೋಪಾಲ ವಿಠ್ಠಲ ಎಂಬ ಅಂಕಿತವನ್ನು ಪಡೆದು ಅನೇಕ ದೇವರ ನಾಮಗಳನ್ನು ಇವರು ರಚಿಸಿದ್ದಾರೆ.

## ೨೨ ಶ್ರೀ ಹಯವದನ ವಿಠ್ಠಲದಾಸರು

ಹಯವದನ ವಿಠ್ಠಲ ಎಂಬ ಅಂಕಿತವುಳ್ಳ ಆನಂದತೀರ್ಥಪ್ಪನವರು ವಿಜಯ ದಾಸರ ಬೆನ್ನಿಗೆ ಬಿದ್ದ ತಮ್ಮಂದಿರು. ಇವರು ಅಣ್ಣನಿಂದಲೇ ದಾಸದೀಕ್ಷೆ ಪಡೆದು ಹಯವದನ ವಿಠ್ಠಲ ಎಂಬ ಅಂಕಿತದಿಂದ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಅಣ್ಣಂದಿರಾದ ಶ್ರೀ ವಿಜಯದಾಸರ ಸಮಗ್ರ ಇತಿಹಾಸವನ್ನು ಪದ್ಯ ರೂಪದಿಂದ ವಿರಚಿಸಿದ್ದಾರೆ.

## ೨೩ ಶ್ರೀ ಮೋಹನದಾಸರು

ಬಡತನದ ಬೇಗೆಯಲ್ಲಿ ಬೆಂದ ಓರ್ವ ಅನಾಥ ತಾಯಿಯು ತನ್ನ ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ತುಂಗೆಯ ಮಡುವಿಗೆ ಹಾರಹೊರಟಿದ್ದಳು. ಸುದೈವದಿಂದ ಅದು ವಿಜಯದಾಸರ ಕಣ್ಣಿಗೆ ಬಿದ್ದು ಅವರು ಧಾವಿಸಿ ಹೋಗಿ ಅದನ್ನು ತಡೆದರು.

ತುಂಗೆಯಲ್ಲಿ ಎಸೆಯ ಹೊರಟ ಅವಳನ್ನೂ, ಅವಳ ಮಗುವನ್ನೂ ತಡೆದು ಅವಳಿಂದ ಆ ಮಗುವನ್ನು ಪಡೆದರು. ಆ ಅನಾಥಳಿಗೆ ಆಶ್ರಯವಿತ್ತು ಕಾಪಾಡಿದರು. ಆ ಮಗುವನ್ನು ತೊಡೆಯ ಮೇಲೆ ಆಡಿಸಿ ಬೆಳಸಿ ದೊಡ್ಡವನನ್ನಾಗಿ ಮಾಡಿದರು.

"ಚಿರಂಜೀವಿಯಾಗೆಲೆವೊ ಚಿನ್ನ ನೀನು
ಪರಮ ಭಾಗವತರ ಪದಧೂಳಿ ಧರಿಸುತಲಿ"

ಎಂದು ಹಾಡಿ ಹರಸಿದರು.

ಆ ಮಹಾರಾಯರ ಹರಕೆ–ಆರೈಕೆಗಳಿಂದ ಬಡಕಲು ಮೈಯ ಆ ರೋಗಿಷ್ಟ ಕೂಸು ಒಳ್ಳೆ ಸುಂದರವಾದ ಮೋಹನಾಂಗದ ಮಗುವಾಗಿ ಬೆಳೆಯಿತು. ಅವನನ್ನು ಬೆಳಸಿ ವಿಜಯದಾಸರು ವಿದ್ಯಾದಾನವನ್ನು ಮಾಡಿ ಮೋಹನ ವಿಠ್ಠಲ ಎಂಬ ಅಂಕಿತ ವನ್ನಿತ್ತರು. ಇದೇ ಅಂಕಿತದಿಂದ ಮೋಹನದಾಸರು ಅನೇಕ ಹರಿಕೀರ್ತನೆಗಳನ್ನೂ, ಎರಡುನೂರಾ ಹದಿನೇಳು ನುಡಿಯ ಒಂದು ಕೋಲ ಹಾಡನ್ನೂ ರಚಿಸಿದ್ದಾರೆ.

ಈ ಕೋಲು ಹಾಡು— ರುಕ್ಮಿಣಿ– ಸುಭದ್ರಾ, ಶ್ರೀ ಕೃಷ್ಣ–ಅರ್ಜುನರ ನಡು ವಿನ ಸರಸ ಸಂಭಾಷಣಾ ರೂಪವಾಗಿದೆ. ಮೋಹನದಾಸರ ಲಲಿತ ಬಂಧುರವಾದ ಶೈಲಿಗೂ, ಯುಕ್ತಿ-ಯುಕ್ತವಾದ ಸಂವಾದ ಭಂಗಿಯ ಚಾತುರ್ಯಕ್ಕೂ ಇದು ಒಳ್ಳೆ ನಿದರ್ಶನವಾಗಿದೆ. ಇದರಿಂದಲೇ— "ಭಕ್ತಿಯಲಿ ಭಾಗಣ್ಣ, ಯುಕ್ತಿಯಲಿ ಮೋಹನ್ನ ಶಕ್ತಿಯಲಿ ತಿಮ್ಮಣ್ಣ'' ಎಂಬ ಉಕ್ತಿಯು ರೂಢಿಯಲ್ಲಿ ಬಂದಂತೆ ತೋರುತ್ತದೆ.

ಜಾನಪದದ ಗೀತಗಳ ಧಾಟಿ, ಥಾಟುಗಳನ್ನು ಸಾಹಿತ್ಯದ ಶೈಲಿಗೆ ಅಳವಡಿಸಿ ಸಿದ್ಧಾಂತಕ್ಕೆ ಅವಿರುದ್ಧವಾಗಿ ವಿನೋದ, ವ್ಯಂಗ್ಯ, ವಕ್ರೋಕ್ತಿಗಳನ್ನು ಧಾರಾಳವಾಗಿ ಉಪಯೋಗಿಸಿ ರಚಿಸಿದ ಈ ಕೋಲುಹಾಡು ಒಳ್ಳೇ ರಂಜಕವೂ ರಸಭರಿತವೂ, ಹಾಸ್ಯಪ್ರಚುರವೂ ಆಗಿದೆ.

ಸುಭದ್ರೆಯು ಅತ್ತಿಗೆ ರುಕ್ಮಿಣಿಯನ್ನು "ಒಡಿಬಂದು ನನ್ನ ಸೋದರ ಕೃಷ್ಣನನ್ನು ಕೂಡಿದ ನಿನಗೆ ಅಣ್ಣನ ಆದರ ಅತಿಯಾಗಿದೆ. ಆದುದರಿಂದ ಅವನ ಒಲುಮೆಯ ಗರ್ವದಿಂದ ನೀನು ನಮ್ಮ ಒಡನೆ ಮಾತನಾಡದೆ ಬಿಗುವಿನಿಂದ ಇರುವಿ" ಎಂದು ಮೂದಲಿಸುವಳು. ಅದಕ್ಕೆ ಪ್ರತಿಯಾಗಿ ರುಕ್ಮಿಣಿಯು "ನಾನೇನು ನಿನ್ನಂತೆ ಸನ್ಯಾಸಿ ಯನ್ನು ಕಾಮಿಸಿ ಓಡಿಬರಲಿಲ್ಲ.'' ಎಂದು ತಕ್ಕ ಉತ್ತರಕೊಡುತ್ತಾಳೆ.

ಇದರಂತೆ ಕೃಷ್ಣಾರ್ಜುನರಲ್ಲಿಯೂ ಒಳ್ಳೆ ಚುರುಕಾದ ವಾದವಿವಾದವು ಇದರಲ್ಲಿ ನಡೆಯುತ್ತದೆ. ಇಬ್ಬರೂ ಪರಸ್ಪರ ಶೀಲಚಾರಿತ್ರ್ಯದ ಮೂಲವನ್ನೇ ಕೆಣಕಿ ಕೊಂಕು ನುಡಿಗಳನ್ನಾಡುತ್ತಾರೆ. ವ್ಯಕ್ತಿಗತವಾದ ಮೂದಲಿಕೆ ಮಾತಿನ ಎಸೆದಾಟಗಳು, ಯುಕ್ತಿಯ ಮಸೆದಾಟಗಳು ಕೇಳುವವರಿಗೆ ಒಳ್ಳೆ ಆಪ್ಯಾಯವೆನಿಸುತ್ತವೆ.

ಕೃಷ್ಣನು ಪಾರ್ಥನಿಗೆ ''ಅರ್ಜುನ ನೀನೆಲ್ಲಿ ಸುಭದ್ರೆ ಎಲ್ಲಿ. ಆ ನನ್ನ ತಂಗಿ ಕನಕಾಂಗಿ, ಕಡು ಕಠೋರನಾದ ನೀನೋ ಕಬ್ಬಿಣ ರಂಗಿ'' ಎಂದು ಅಧಿಕ್ಷೇಪಿಸುತ್ತಾನೆ. ಅದಕ್ಕೆ ಅರ್ಜುನನು ಮರುಳನಂತೆ ತೆಪ್ಪಗೆ ಕೂಡುವದಿಲ್ಲ, ಮರಳಿ ಕೃಷ್ಣನಿಗೆ ತಿರುಗುಬಾಣ ಹೂಡುತ್ತಾನೆ,

"ಕೃಷ್ಣ ನಿನಗೆ ಸಮುದ್ರರಾಜ ಏಕೆ ಮಗಳನ್ನು ಕೊಟ್ಟ, ನೀನು ಆ ಲಕ್ಷ್ಮೀ ದೇವಿಗೆ ತಕ್ಕ ವರನಲ್ಲ, ದರಿದ್ರನಾರಾಯಣನಾದ ನೀನು ಮನೆ ಇಲ್ಲದ್ದಕ್ಕೆ ಅತ್ತೆಯ

ಮನೆ ಸೇರಿದೆ. ಹಾಲು ಮೊಸರು ಕಳವು ಮಾಡಿದೆ. ಮಳ್ಳ ಗೊಲ್ಲತಿಯರನ್ನು ನೀನು ಬಿಡಲಿಲ್ಲ. ಕರಡಿ ಮಗಳೊಡನೆ ಕೂಡಿದೆ. ನಿನಗೆ ಕೈಯಲ್ಲಿ ಕಾಸಿಲ್ಲ. ನೀರು ಮನೆಯೇ ನಿನಗೆ ತಾವು. ನಿನ್ನ ಹಾಸಿಗೆ ಹಾವು. ಹದ್ದಿನ ಮೇಲೆ ಕುಳಿತು ಹಾರುವಾಗ ಬಿದ್ದರೆ ಗತಿಏನು ? ಬೇಡತಿಯ ಎಂಜಲು ತಿಂದೆ. ಕುಬ್ಜೆಯ ಜೊತೆಗೆ ಸರಸಕ್ಕೆ ಇಳಿದೆ. ಈ ನಿನ್ನ ಖೋಡಿ ಕೃತ್ಯಾರ್ಥವನ್ನು ಕಂಡೆ ಭೃಗು ಮುನಿಯು ನಿನ್ನನ್ನು ಕಾಲಿನಿಂದ ಒದ್ದು ಹೋದನು" ಎಂದು ಆಕ್ಷೇಪಗಳ ಸುರಿಮಳೆಯನ್ನೇ ಮಾಡುವನು.

ಇದನ್ನು ಕೇಳಿ ಕೃಷ್ಣನು ಅರ್ಜುನನಿಗೆ ತಂಗಿಯನ್ನು ಕೊಟ್ಟು ನಿನ್ನ ಬಂಡಿ ಬೋವಿಯಾದುದಕ್ಕೆ ಒಳ್ಳೇ ಉಪಕಾರ ತೀರಿಸಿದಿ ಎಂದುದಕ್ಕೆ ಅರ್ಜುನನು ಬಾಗಿ

"ಸ್ವಾಮಿ ಭೃತ್ಯ ನ್ಯಾಯವರಿಯದೆ ನಾ ನಿನ್ನ ।
ಪಾಮರನಂತೆ ನುಡಿದೇನ ಕೋಲೆ ॥
ಪಾಮರನಂತೆ ನುಡಿದಪರಾಧವ ಶ್ರೀಮನೋಹರನೇ ಮನ್ನಿಸು ಕೋಲೆ ॥

ಎಂದು ಕ್ಷಮೆ ಬೇಡುತ್ತಾನೆ.

ಹೀಗೆ ಕೋಲಾಟದ ಗತ್ತಿನಲ್ಲಿಯೇ ಸಾಹಿತ್ಯದ ಲೀಲಾಟವು ನಡೆದು ಚಿತ್ತ ಚಮತ್ಕೃತಿಯನ್ನುಂಟು ಮಾಡುತ್ತದೆ. ಹೊಸ ಕಲ್ಪನೆಯ ಹೊಳವು ಹಾಕಿ ಹಳೆಯ ರೀತಿಯಲ್ಲಿಯೂ ಚಮತ್ಕಾರದ ಮಿಂಚು ಗುಡಿಗಟ್ಟಿ ಗೊಂಚಲಾಡುವಂತೆ ಮಾಡುವದು ಶ್ರೀ ಮೋಹನದಾಸರ ವೈಶಿಷ್ಟ್ಯವಾಗಿದೆ.

## ೨೪ ಶ್ರೀಮಹಿಪತಿದಾಸರು

ವಿಜಾಪುರ ಜಿಲ್ಲೆಯ ಕಾಖಂಡಕಿಯ ಮಹಿಪತಿದಾಸರು ವಿಜಾಪುರ ಬಾದಶಹನ ದಿವಾಣರಾಗಿದ್ದರು. ಸಾರವಾಡದ ಪ್ರಥಮ ಶಾಖೆಯ ಭಾಸ್ಕರ ಯೋಗಿಗಳ ಸಂಪರ್ಕದಿಂದ ಇವರ ಮನಸ್ಸು ವೈರಾಗ್ಯದತ್ತವಾಲಿತು. ಉತ್ತರಾದಿ ಮಠದ ಶ್ರೀಸತ್ಯವ್ರತ ತೀರ್ಥ ಶ್ರೀಪಾದಂಗಳವರ ಆಶೀರ್ವಾದದಿಂದ ಇವರು ವಿರಕ್ತರಾಗಿ ದಾಸ ಪಂಥವನ್ನು ಸ್ವೀಕರಿಸಿದರು. "ಮಹಿಪತಿದಾಸ" ಎಂಬ ಅಂಕಿತದಿಂದ ಇವರು ಅನೇಕ ಪದ ಪದ್ಯಗಳನ್ನು ಬರೆದಿದ್ದಾರೆ.

"ಇವರು ಮಧ್ವ ಮತಸ್ಥರಾದರೂ ಮಾಧ್ವ ತತ್ವಗಳನ್ನು ವಿಸ್ತರಿಸಿ ಪದಗಳನ್ನು ಹಾಡಿಲ್ಲ." ಎಂದು ಬೇಲೂರ ಕೇಶವದಾಸರ ಉದ್ಗಾರದಲ್ಲಿ ಹುರುಳಿಲ್ಲ. ಬಿ. ಕೇಶವದಾಸರು ಮಹಿಪತಿದಾಸರ ಅಸಂಖ್ಯ ದೇವರ ನಾಮಗಳನ್ನು ನೋಡದೇ ಹೀಗೇ ಅರ್ಥಮುಗ್ಧ ಅಪದ್ಧ ವಿಧಾನವನ್ನು ಮಾಡಿರಬಹುದು.

ಶ್ರೀ ಮಹಪತಿದಾಸರು ಅನೇಕ ಇತರ ಸಾಧುಸಂತರ ಸಹವಾಸದಿಂದ ಯೋಗಾಭ್ಯಸವನ್ನು ಮಾಡಿವರೂ ಇದರಿಂದ ಇವರಿಗೆ ಶಾಂತಿ ದೊರಕದೆ ಕೊನೆಗೆ ತಮ್ಮ ಕುಲುಗುರುಗಳಾದ ಕೊಲ್ಹಾರದ ಪೂಜ್ಯ ಶ್ರೀ ಉಮರ್ಜಿ ಆಚಾರ್ಯರ ಶಿಷ್ಯತ್ವವನ್ನು ವಹಿಸಿ ಮಧ್ವ ಶಾಸ್ತ್ರವನ್ನು ಅವರಲ್ಲಿ ಓದಿ ಶ್ರೀಮದಾಚಾರ್ಯರ ಸಿದ್ಧಾಂತವೇ ತಾರಕವೆಂದೂ ಅದೇ ಮೋಕ್ಷಕ್ಕೆ ಕರೆದೊಯ್ಯುವ ಸತ್‌ಪಥವೆಂದೂ ದೃಢವಾಗಿ ನಂಬಿದರು.

ಮುಂದೆ ತಮ್ಮ ಪದ ಪದ್ಯಗಳಲ್ಲಿ ಶ್ರೀಮದಾಚಾರ್ಯರ ತತ್ವಗಳನ್ನು ವಿವರಿಸಿ ಹಾಡಿದ್ದಾರೆ. ಅವರ ಈ ರೀತಿಯ ಪದ, ಪದ್ಯ ಕೀರ್ತನೆಗಳು ಅವರ ಮನೆತನದವರಲ್ಲಿಯೂ ಆ ಭಾಗದ ಜನರಲ್ಲಿಯೂ ಇಂದಿಗೂ ನಿತ್ಯ ಹಾಡುವ ಪರಿಪಾಠವಿದೆ.

ಇವರ ವೃಂದಾವನವಿರುವ ಕಾಖಂಡಕಿ ಗ್ರಾಮದಲ್ಲಿ ಅವರ ಆರಾಧನೆಯು ಬಹು ವಿಜೃಂಭಣೆಯಿಂದ ಮಾಧ್ವ ಸಾಂಪ್ರದಾಯದಂತೆ ನಡೆಯುತ್ತಿದೆ.

ಮಹಿಪತಿದಾಸರು ಬಹಿರಂಗ ಆಚರಣ ಆಡಂಬರಕ್ಕಿಂತ ಅಂತರಂಗಶುದ್ಧಿಗೂ, ಹೃದಯ ನೈರ್ಮಲ್ಯಕ್ಕೂ ಹೆಚ್ಚು ಮಹತ್ವವನ್ನು ಕೊಟ್ಟಿದ್ದಾರೆ. ಅವರ ಪದ್ಯಗಳಲ್ಲಿ ಅವರ ಸಾತ್ವಿಕ ಮನೋಧರ್ಮವು ಕವನಗಳ ಜೀವಾಳವಾಗಿ ರಸಾಳ ಶೈಲಿಯಲ್ಲಿ ಅಭಿವ್ಯಕ್ತಿಗೊಂಡಿದೆ.

" ವಾಸುದೇವನಾಶ್ರಯಸದ ಉಪಾಸನ್ಯಾತಕೆ ।
ಧ್ಯಾಸ ಬಲಿಯದಿಹ ಮಿಗಿಲಭ್ಯಾಸಯಾತಕೆ ।
ಹೃದಯ ಶುದ್ಧವಾಗದೆ ಉದಯ ಸ್ನಾನವೇತಕೆ ।
ಬದಿಯಲಿಹ ಸುವಸ್ತು ಕಾಣದ ಜ್ಞಾನಯ್ಯಾತಕೆ ।
ಉದರ ಕುದಿಯು ಶಾಂತಿ ಹೊಂದದ ಸಾಧನವ್ಯಾತಕೆ ।
ಬುಧರ ಸೇವೆಗೊದಗದ ಸ್ವಧನವ್ಯಾತಕೆ ।
ನೀತಿ ಮಾರ್ಗ ಅರಿಯದವನ ರೀತಿ ಎತಕೆ ।
ಮಾತಿನ ಮಿತಿಯಿಲ್ಲದವನ ಪ್ರೀತಿ ಎತಕೆ ।
ಜೋತಿ ತನ್ನೊಳರಿಯದ ಯತಿತ್ವ ಎತಕೆ ।
ಮನವು ಸ್ಥಿರಗೊಳದವನ ಶ್ರವಣ ಎತಕೆ ।
ನೆನವು ನೆಲೆಗೊಳ್ಳದಿದ್ದರೆ ಮನನ ಎತಕೆ ।
ತನುವಿನಲ್ಲಿ ಘನವ ಕಾಣದ ಅನುಭವವ್ಯಾತಕೆ ।
ದಾನಿ ಮಹಿಪತಿಸ್ವಾಮಿಯ ಕಾಣದ ಜನ್ಮವೇತಕೆ ।"

ಹೀಗೆ ಸಾಲುಸಾಲು ಸವಾಲುಗಳ ಮುಖಾಂತರ ದಾಸರು ಸಾಮಾಜಿಕರಿಗೆ ಆತ್ಮಶೋಧನೆಯನ್ನು ಮಾಡಿಕೊಂಡು ನಿಜವಾದ ಸಾಧನೆಯ ಪಥದಲ್ಲಿ ಮುಂದುವರೆಯಲು ಬೋಧಿಸಿದ್ದಾರೆ.

ಸೂಫಿ ಪಂಥದ ನುಂಗಾನುಂಗಿ ಎಂಬ ದಿಗಂಬರ ಸಂಪ್ರದಾಯದ ಸಾಧುಗಳು ಹಾಗೂ ಭಾಸ್ಕರಸ್ವಾಮಿಗಳು, ಸಿಂದಿಗಿ ಜಕ್ಕಪ್ಪಯ್ಯ, ರುಕ್ಮಿಣಿ ಪಂಡಿತ, ಮೊದಲಾದ ಅನೇಕ ಮತಪಂಥಗಳ ಸಾಧುಸಂತರ ಸ್ನೇಹವನ್ನು ಮಾಡಿಕೊಂಡು ಮಹಿಪತಿದಾಸರು ಅವರೆಲ್ಲರ ಅಧ್ಯಾತ್ಮ ಸಾಧನೆಯ ನೆಲೆಬೆಲೆಗಳನ್ನು ಅರಿತು ಕೊನೆಗೆ ಮಧ್ವಮತ ಒಂದೇ ಉದ್ಧಾರಕ್ಕಿರುವ ಏಕೈಕ ಮಾರ್ಗ ಎಂಬ ಸಿದ್ಧಾಂತಕ್ಕೆ ಬಂದು ಮುಟ್ಟಿದ್ದರು. ನಿಜವಾದ ಆತ್ಮಶಾಂತಿಯು ಹಠಯೋಗ, ಶಠಯೋಗ ರೀತಿಯಲ್ಲಿಲ್ಲದೆ ನಿಷ್ಕಪಟ, ನಿರುಪಾಯ ಉಪಾಯ ಬೋಧಿಸುವ ಮೋದತೀರ್ಥರ ಬೋಧಪಥದಲ್ಲಿಯೇ ಇದೇ ಎಂದು ಮನಗಂಡ ಮಹಿಪತಿದಾಸರು ತಮ್ಮ ಆಯುಷ್ಯದ ಉತ್ತರಾರ್ಧವನ್ನೆಲ್ಲ ದ್ವೈತೋಪಾಸನೆಯಲ್ಲಿಯೇ ಸವೆಯಿಸಿದರು. ಅವರ ಸಾಂಪ್ರದಾಯಿಕ ಸಿದ್ಧಾಂತ ಪಥಗಳ ಸಂಚರಣಪೂರ್ವಕ ಮಧ್ವಮತ ಪ್ರತಿನಿವರ್ತನ ಪರ್ಯಂತದ ಅವರ ಮಾನಸಿಕ ಸ್ಥಿತಿಗತಿ ಪ್ರಗತಿಗಳನ್ನು ಚಿತ್ತಚಂಕ್ರಮಣದ ಸ್ಪಷ್ಟ ಹೆಜ್ಜೆಗಳನ್ನು ಅವರ ಪದ್ಯಗಳಲ್ಲಿ ನಾವು ಹಂತಹಂತವಾಗಿ ಇಂದಿಗೂ ಗುರುತಿಸಬಹುದಾಗಿದೆ.

ಶ್ರೀಮಹಿಪತಿದಾಸರು ಕೃಷ್ಣಾತೀರದ ಕೊಲ್ಹಾರ ಗ್ರಾಮದಲ್ಲಿ ನಿರ್ಯಾಣವನ್ನು ಹೊಂದಿದರು. ಇವರ ವೃಂದಾವನವು ಮಾತ್ರ ಇವರ ಮನೆತನದ ಮೂಲ ಸ್ಥಳವಾದ ಕಾಖಂಡಕಿಯಲ್ಲಿ ಇದೆ. ಕಾರ್ತಿಕ ಅಮಾವಾಸ್ಯೆಯ ದಿನ ಇವರ ಆರಾಧನೆಯನ್ನು ಅವರ ವಂಶಜರೂ, ಭಕ್ತರೂ, ಭಾವುಕರೂ ಸೇರಿ ವಿಜೃಂಭಣೆಯಿಂದ ಆಚರಿಸುವರು. ಅವರ ಈ ಪದ್ಯಗಳನ್ನು ನೋಡಿರಿ.

"ಸರ್ವೋತ್ತಮ ಶ್ರೀ ಹರಿ ಸಾಕ್ಷಾತ್
ಪೂರ್ವಪರ ಪ್ರಖ್ಯಾತ"

"ಸಕಲವೆನಗೆ ನೀನೇ ಶ್ರೀ ಹರಿಯೇ
ಗುರು ಮಧ್ವ ಮುನಿ ರನ್ನ ಮೂರು ತೋರಿದೋರಿದೆ ಮುನ್ನ"

ಮತ್ತು

"ಹರಿರೇವ ಪರೋ ಹರಿರೇವ ಗುರೊ।
ಹರಿಯೇ ಗುರುವೆಂದರುಹಿರೊ।
" ಗುರುಮಧ್ವ ಪಥದಿಂದಲಿ ನಿಜಕೀಲು।
ಅರಿತುಕೊಂಬುವುದಿದೆ ಮೇಲು।
ಪರಮ ಭಕ್ತರನುಭವದಾ ಬಾಗಿಲು।
ಪರಗತಿ ಸಾಧನಕಿದ ಮಿಗಿಲು॥"

## ೨೫ ಶ್ರೀಗುರು ಮಹಿಪತಿದಾಸರು

ಮಹಿಪತಿದಾಸರ ಮಕ್ಕಳಾದ ಇವರು ತಂದೆಯಂತೆಯೇ ಹರಿದಾಸರಾಗಿದ್ದರು. 'ಗುರು ಮಹಿಪತಿ' ಎಂಬ ಅಂಕಿತದಿಂದ ಇವರಾದರೂ ಅನೇಕ ಕೀರ್ತನೆ, ಪದಗಳನ್ನು ರಚಿಸಿದ್ದಾರೆ.

ಈ ಕಾಖಂಡಕಿ ಮಹಿಪತಿದಾಸರ ಮನೆತನದಲ್ಲಿ ಈ ಹರಿದಾಸ ಪರಂಪರೆಯು ಬಹುಕಾಲ ಮುಂದೆವರೆದಿದ್ದಿತು. ಇತ್ತೀಚಿನ ಕಾಲದವರೆಗೂ ಈಗಲೂ ಕಾಖಂಡಿಕಿ ಮನೆತನದಲ್ಲಿ ಎಷ್ಟೋ ಜನ ಒಳ್ಳೊಳ್ಳೆ ಹರಿಕಥಾ ಪ್ರವೀಣರೂ, ಸಂಗೀತಗಾರರೂ, ದೇವರ ನಾಮಗಳನ್ನು ಸುಶ್ರಾವ್ಯವಾಗಿ ಹೇಳುವವರೂ, ಸಂಗೀತ ಬದ್ಧವಾಗಿ ಪುರಾಣವನ್ನು ಹೇಳುವವರೂ ಇರುತ್ತಾರೆ.

## ೨೬ ಶ್ರೀ ವ್ಯಾಸವಿಠ್ಠಲದಾಸರು (ಕಲ್ಲೂರ ಸುಬ್ಬಣ್ಣಾಚಾರ್ಯರು)

ಕಲ್ಲೂರ ಗ್ರಾಮದ ಸುಬ್ಬಣ್ಣಾಚಾರ್ಯರು ಶ್ರೀ ವಿಜಯದಾಸರಿಂದ ಹರಿದಾಸ ದೀಕ್ಷೆಯನ್ನೂ 'ವ್ಯಾಸ ವಿಠ್ಠಲ' ಎಂಬ ಅಂಕಿತವನ್ನು ಪಡೆದು ಅನೇಕ ಪದಪದ್ಯ ಸುಳಾದಿಗಳನ್ನು ರಚಿಸಿದರು.

ಇವರು ಮೊದಲು ಸುಧಾದಿ ಗ್ರಂಥಗಳನ್ನೆಲ್ಲ ಮುಖೋದ್ಗತವಾಗಿ ಪಾಠ ಹೇಳಬಲ್ಲ ಪಟುತಮ ಪಂಡಿತರಾಗಿದ್ದರು. ಅಪರೋಕ್ಷಜ್ಞಾನಿಗಳಾದ ಶ್ರೀ ವಿಜಯದಾಸರಲ್ಲಿ ಶಾಸ್ತ್ರಪಾಂಡಿತ್ಯವಿಲ್ಲವೆಂದು ಕಡೆಗಣಿಸಿ ನುಡಿಯುತ್ತಿದ್ದರು. ಕೂಸಿಮಗ ದಾಸನಿಗೆ ಸುಧಾಧಿಗ್ರಂಥಗಳ ಜ್ಞಾನವು ಎಲ್ಲಿ ಬಂದೀತು ಎಂದು ಹೀಯಾಳಿಸುತ್ತಿದ್ದರು.

ಸುಬ್ಬಣ್ಣಾಚಾರ್ಯರು ಒಮ್ಮೆ ಸುಧಾ ಮಂಗಲವನ್ನು ಮಾಡಿದಾಗ ಶ್ರೀ ವಿಜಯದಾಸರು ಅಡಿಗೆ ಮಾಡಿ ಬ್ರಾಹ್ಮಣರಿಗೆಲ್ಲ ದಿವ್ಯ ಮಂಡಿಗೆಗಳನ್ನು ತಮ್ಮ ಕೈಯಿಂದಲೇ ಮಾಡಿಬಡಿಸಿದರು. ಒಬ್ಬ ಅಡುಗೆಯವನ ಬಾಯಿಂದ ಕಠಿಣತರವಾದ ಸುಧಾದಲ್ಲಿಯ ಕ್ಲಿಷ್ಟ ಘಟ್ಟಗಳನ್ನು ನಿರರ್ಗಳವಾಗಿ ಅನುವಾದ ಮಾಡಿಸಿದರು. ವಿಜಯದಾಸರ ಹಸ್ತಸ್ಪರ್ಶಮಾತ್ರದಿಂದಲೇ ನಿರಕ್ಷರಕುಕ್ಷಿಯಾದ ಅಡುಗೆಯವನು ಸುಧಾನುವಾದವನು ಸಲೀಸಾಗಿ ಮಾಡಿದ್ದನ್ನೂ ಇಂಥ ಅಲೌಕಿಕ ತಪಸ್ಸಾಮರ್ಥ್ಯವಿದ್ದರೂ ತನ್ನ ಮನೆಯಲ್ಲಿ ಅಡಿಗೆ ಮಾಡಿ ಬಡಿಸದ ಅವರ ನಿರಹಂಕಾರ ವೃತ್ತಿಯನ್ನೂ ನೋಡಿ ಕಲ್ಲೂರ ಸುಬ್ಬಣ್ಣಾಚಾರ್ಯರು ದಿಗ್ಭ್ರಮೆಯಾದರು. ಕಲ್ಲೂರ ಆಚಾರ್ಯರ ಕಲ್ಲಿನಂಥ ಮನ ಮಾನಗಳು ಕರಗಿ ಹೋದವು.

ವಿಜಯದಾಸರ ಪಾದಗಳಿಗೆ ಪೊಡಮಟ್ಟು ಅವರ ಶಿಷ್ಯರಾದರು. ಸುಧಾ ಓದಿ ಪದ ಹೇಳಿದರು. ಅವರ ಸಂಸ್ಕೃತ ಪಾಂಡಿತ್ಯವು ಕನ್ನಡ ಸಾಹಿತ್ಯದಲ್ಲಿಯೂ ತನ್ನ ಕವಿತ್ವಶಕ್ತಿಯನ್ನು ಸೂಸಿತು. ಕನ್ನಡ ಪದಗಳಲ್ಲಿಯೂ ಸುಧಾಪಾಕವು ಅವಿಕಲವಾಗಿ ಇಳಿಯಿತು.

ಸ್ಮರಿಸಿ ಬದುಕಿರೊ ದಿವ್ಯ ಚರಣಕೆರಗಿರೊ
ದುರಿತದರಿದು ಪೊರೆವ ವಿಜಯಗುರುಗಳೆಂಬರ ||ಪ||

......................................................................

ಮೋದಭರಿತನ ಪಂಚ | ಭೇದವರಿತನ |
ಸಾಧುಚರಿತನ ಮನವಿ | ಷಾದ ಮರೆತನ |

......................................................................

ರಂಗನೆಂದನ ಭವವು ಹಿಂಗಿತೆಂದನ
ಮಂಗಳಾಂಗನ ಅಂತ | ರಂಗವರಿದನ |
ಕವನರೂಪದಿ ಹರಿಯಸ್ತವನ ಮಾಡಿದ |
ಭುವನ ಬೇಡಿದ ಮಾ | ಧವನ ನೋಡಿದ |
ಗಂಗೆ ಮಿಂದರೆ ಮಲವು ಹಿಂಗಿತಲ್ಲದೆ |
ರಂಗನೊಲಯನೊ ಭಕ್ತರ ಸಂಗ ದೊರಕದೆ |
ವೇದ ಓದಲೂ ಬರಿದೆ ವಾದ ಮಾಡಲು
ಹಾದಿಯಾಗದೊ | ಬುಧರ ಪಾದ ನಂಬದೆ |

............................................................

ಪಟಿ ಇದಲ್ಲವೊ ವ್ಯಾಸವಿಠಲ ಬಲ್ಲನೋ
ಪಠಿಸಬಹುದಿದು ಕೇಳಿ ಕುಟಿಲ ರಹಿತರು |

ಇವೇ ಮೊದಲಾದ ಪದ್ಯ ಪದ್ಧತಿಯನ್ನು ಪರಿಶೀಲಿಸಿದರೆ ಶಬ್ದಾರ್ಥಗಳೆಲ್ಲವೂ ಇವರ ಕಣ್ಣಾಪನ್ನೆಗೆ ಕವಾಯಿತು ಮಾಡುತ್ತವೆ. ಈ ತರಹದ ಶಬ್ದಗಳ ಅರ್ಥಾಭಿವ್ಯಂಜಕವಾದ ಲೀಲಾಲಾಸ್ಯವನ್ನು ನಾವು ಕನ್ನಡ ಸಾಹಿತ್ಯದಲ್ಲಿ ವಿರಳವಾಗಿ ಕಾಣುತ್ತೇವೆ.

## ೨೭ ಶ್ರೀವರದ ಗೋಪಾಲವಿಠ್ಠಲದಾಸರು

ಇವರು ಶ್ರೀ ಗೋಪಾಲದಾಸರ ಸಹೋದರರು. ತಮ್ಮ ಅಣ್ಣನಿಂದಲೇ "ವರದಗೋಪಾಲವಿಠ್ಠಲ" ಎಂದು ಅಂಕಿತವನ್ನು ಪಡೆದು ಇವರು ಎಷ್ಟೋ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ. ಇವರ ಮೊದಲಿನ ಹೆಸರು ಶೀನಪ್ಪ. ಇವರ ಪದಪದ್ಯಗಳಲ್ಲಿ ಪ್ರಾಸವು ಅಂತರಂಗದ ಆಳದಲ್ಲಿಯ ಭಕ್ತಿ ಉದ್ರೇಕಕ್ಕೆ ಪಾರದರ್ಶಕವಾಗಿ ಸೂಸಿ ಬಂದಿದೆ. ಅವರ ಅನುಭಾವದ ಪದ್ಯ ಒಂದನ್ನು ನೋಡಿರಿ.

"ತಂಗಿ ಹಬ್ಬವಾಯಿತೆ ಅವ್ವ ।
ಮಂಗಳ ಮಹಿಮ ಶ್ರೀರಂಗನ ಕಂಡೆನೆ ।
ಪೊಂಗೊಳಲೂದುತ್ತ ಪಾಡುತಲಿಹ ಪರಮ ।
ಮಂಗಳ ಪುರುಷನ್ನ ಕಂಗಳಿಂದ ಕಂಡೆ ।
ಹಿಂಗದೆ ವರದಗೋಪಾಲ ವಿಠ್ಠಲನ್ನ "॥

ಅವರ ಅನುಭಾವ ಆವಿಷ್ಕಾರದಲ್ಲಿ ಕಲಾತ್ಮಕತೆ, ಕಾವ್ಯಾತ್ಮಕತೆಗಳು ಅನುಭವದ ಭಟ್ಟಿಯಲ್ಲಿ ಸೋಸಿ ಬಂದಂತೆ ವೇದ್ಯವಾಗುತ್ತವೆ.

## ೨೮ ಶ್ರೀಗುರು ಗೋಪಾಲದಾಸರು

ಗೋಪಾಲದಾಸರ ತಮ್ಮಂದಿರಾದ ಇವರ ಮೊದಲ ಹೆಸರು ದಾಸಪ್ಪ. ಇವರಾದರೂ ಕೂಡ ತಮ್ಮ ಅಣ್ಣಂದಿರಲ್ಲಿಯೇ ಅಂಕಿತೋಪದೇಶ ಪಡೆದು ಎಷ್ಟೋ ದೇವರ ನಾಮಗಳನ್ನು ಬರೆದಿದ್ದಾರೆ. "ಗುರುಗೋಪಾಲ ವಿಠ್ಠಲ" ಎಂಬ ಅಂಕಿತದಿಂದ ಇವರ ಅನೇಕ ಪದ್ಯಗಳು ಉಪಲಬ್ಧವಾಗಿವೆ.

ಇವರ ಪದ್ಯಗಳು ಬೆಡಗಿನ ವಚನಗಳಂತೆ ಒಗಟ ಮುಗುಟ ಉಳ್ಳವುಗಳಾಗಿ ತೋರುತ್ತವೆ. ಐ.ಜಿ. ವೆಂಕಟರಮಣಾಚಾರ್ಯರಲ್ಲಿ ಅರ್ಥಾತ್ ಶ್ರೀವ್ಯಾಸ ತತ್ವಜ್ಞರಲ್ಲಿ ಶಾಸ್ತ್ರಾಧ್ಯಯನ ಮಾಡಿದ ಇವರ ಸಾಹಿತ್ಯವು ಪಾಂಡಿತ್ಯವನ್ನು ಬಿಗಿದಪ್ಪಿ ಕೊಂಡೇ ಬೆಳೆದಿದೆ.ಅವರ ಗೂಢಾರ್ಥವುಳ್ಳ ಒಂದು ಪ್ರೌಢ ಪದ್ಯ ಕೇಳಿರಿ—

" ಲಕ್ಷ್ಮಿ ಶ್ರೀಕಾಂತನೆ ಎನ್ನ ರಕ್ಷಿಸಯ್ಯಾ ।
ಅಕ್ಷಯಾಂಬರ ಧರೆಯು ಧವನ ದೌತ್ಯವ ಮಾಡಿದ ।
ಮಗಳ ಮದುವ್ಯಾಧಿ ಮಗಳ ಅತ್ರೆಯ ಕೂಡ್ದಿ ।
ಮಗಳ ಗಂಡಗೆ ಮಾವ ಅಳಿಯನಾದಿ ॥
ಮಗಳ ವೈರಿಯ ಪಿತನ ಹಗೆಯು ಭೂಷಣ ವೈರಿ ।
ಹೆಗಲ ಮೇಲೆ ಏರಿ ಜಗವಚರಿಪ ।' ››

## ೨೯ ಶ್ರೀ ತಂದೆ ಗೋಪಾಲ ವಿಠಲದಾಸರು

ಶ್ರೀ ಗೋಪಾಲದಾಸರ ಕೊನೆಯ ತಮ್ಮಂದಿರಾದ ಇವರ ಮೊದಲಿನ ಹೆಸರು ರಂಗಪ್ಪ. ಇವರಾದರೂ ಅಣ್ಣ ಗೋಪಾಲದಾಸರಿಂದಲೇ 'ತಂದೆ ಗೋಪಾಲ ವಿಠ್ಠಲ' ಎಂದು ಅಂಕಿತ ಪಡೆದು ಹರಿದಾಸರಾದರು. ಆದರೆ ಇವರ ಕೃತಿಗಳು ಹೆಚ್ಚಾಗಿ ಉಪಲಬ್ಧವಾದಂತೆ ತೋರುವದಿಲ್ಲ. ನಾಲ್ವರೂ ಸಹೋದರರಲ್ಲಿ ರಂಗಪ್ಪನ ವಂಶ ಒಂದೇ ಮುಂದೆ ಅಭಿವೃದ್ಧಿಯನ್ನು ಹೊಂದಿತು.

## ೩೦ ಶ್ರೀ ಪ್ರಾಣೇಶದಾಸರು

ಶ್ರೀ ಜಗನ್ನಾಥದಾಸರ ಶಿಷ್ಯರಲ್ಲಿ ಲಿಂಗಸೂಗೂರಿನ ಪ್ರಾಣೇಶದಾಸರು ಮುಖ್ಯರೂ, ಪ್ರಖ್ಯಾತರೂ ಆಗಿದ್ದಾರೆ. ಇವರ ಮೊದಲಿನ ಹೆಸರು ಯೋಗೀಂದ್ರಪ್ಪ. ಲಿಂಗಸೂಗೂರಿನ ಕುಲಕರ್ಣಿಗಳಾದ ಇವರು ಶ್ರೀ ಜಗನ್ನಾಥದಾಸರ ಸೇವೆ ಮಾಡಿ ಅವರಿಂದ "ಪ್ರಾಣೇಶ ವಿಠ್ಠಲ" ಎಂದು ಅಂಕಿತ ಪಡೆದು ವಿಪುಲವಾಗಿ ಸಾಹಿತ್ಯಸೃಷ್ಟಿ ಮಾಡಿದ್ದಾರೆ. ಇವರ ಮುದ್ರಿಕೆ— "ಪ್ರಾಣೇಶ ವಿಠ್ಠಲ".

ಲೌಕಿಕ ಉದ್ಯೋಗಕ್ಕಾಗಿ ಫಾರ್ಶಿ ಭಾಷೆಯನ್ನು ಅಧ್ಯಯನ ಮಾಡುತ್ತಿರುವ ಯೋಗೀಂದ್ರಪ್ಪನಿಗೆ ಶ್ರೀ ಜಗನ್ನಾಥದಾಸರು ಉಪದೇಶ ಮಾಡಿ ಮನಸ್ಸನ್ನು ತಿರುಗಿಸಿ ಶಾಸ್ತ್ರ ವ್ಯಾಸಂಗಕ್ಕೆ ಹಚ್ಚಿದರು. ಅಂದಿನಿಂದ ಇವರು ಶಾಸ್ತ್ರಾಧ್ಯಯನ ಮಾಡಿ ಪ್ರಗಾಢ ಪಂಡಿತರಾದರು.

ಇವರು ಕನ್ನಡದಲ್ಲಿ—ಬಡ್ಡಿಬ್ರಹ್ಮನ ಕಥೆ ಗಾಲವ ಚರಿತ್ರ, ಕಾಲಿಯಾ ಮರ್ದನ ಚರಿತ್ರೆ, ಗೋಪಿಕಾವಿಲಾಸ, ಸೀತಾ ಸ್ವಯಂವರ, ಹನುಮದ್ವಿಲಾಸ, ವಸಿಷ್ಠ ವಿಶ್ವಾಮಿತ್ರ ಆಖ್ಯಾನ, ವೀರಭದ್ರ ವಿಲಾಸ, ಉರ್ವ್ವ ಪುಂಡ್ರ ಮಾಹಾತ್ಮ್ಯ, ಪಾರ್ಥ ವಿಲಾಸ, ಕೀಚಕ ವಧೆ, ಭ್ರಮರ ಗೀತಾ, ಮುಯ್ಯದ ಪದ, ಕನ್ನಡ ಹರಿ ವಾಯು ಸ್ತುತಿ, ಕಾಲೀ ಸ್ವಯಂವರ, ತಿಥಿ ನಿರ್ಣಯ ಮುಂತಾದ ಅನೇಕ ರಸವತ್ ಕಾವ್ಯಗಳನ್ನೂ ಎಷ್ಟೋ ಪದ, ಪದ್ಯ, ೨೪೩ ಕೀರ್ತನೆ, ಸುಳಾದಿಗಳನ್ನೂ ರಚಿಸಿದ್ದಾರೆ.

ಈ ಕೃತಿಗಳನ್ನು ನೋಡಿದರೆ ಪ್ರಾಣೇಶದಾಸರಿಗೆ ಹಳೆಗನ್ನಡ, ಹೊಸಗನ್ನಡ, ಸಂಸ್ಕೃತ, ಶಾಸ್ತ್ರ, ಸಾಹಿತ್ಯ, ಪುರಾಣ, ಮಂತ್ರ, ತಂತ್ರ ಎಲ್ಲದರಲ್ಲಿಯೂ ಸರ್ವತೋಮುಖ ಪಾಂಡಿತ್ಯವೂ, ನವನವೋನ್ಮೇಷ ಶಾಲಿಯಾದ ಪ್ರತಿಭೆಯೂ ಉಜ್ವಲವಾಗಿದ್ದವೆಂದು ತಿಳಿದು ಬರುತ್ತದೆ. ಇವರ ಕವಿತೆಗಳಲ್ಲಿ ಭಾವದ ಎತ್ತರಕ್ಕೆ ಭಾಷೆಯೂ ಶೈಲಿಯೂ, ಉನ್ನತಗೊಂಡು ವಾಗರ್ಥ ಸಂಪೃಕ್ತಿಯಿಂದ ಸಂಪೂರ್ಣವಾದ ಸಾಹಿತ್ಯ ಶಕ್ತಿಯು ಅಭಿವ್ಯಕ್ತಿಯನ್ನು ಪಡೆಯುವಂತಾಗುತ್ತದೆ.

ಶ್ರೀ ಜಗನ್ನಾಥದಾಸರ ನಂತರ ಗಾತ್ರದಲ್ಲಿಯೂ, ಗುಣದಲ್ಲಿಯೂ, ಇಷ್ಟು ಸಮೃದ್ಧವಾದ ಸಾಹಿತ್ಯ ನಿರ್ಮಿತಿಯನ್ನು ಬೇರಾರೂ ಮಾಡಿದಂತಿಲ್ಲ.

ಶ್ರೀ ವರದೇಂದ್ರತೀರ್ಥರು ಶ್ರೀ ಪ್ರಾಣೇಶದಾಸರಿಂದ ಲಿಂಗಸೂಗೂರಿನ ಇವರ ಮನೆಯ ಹಿತ್ತಲಲ್ಲಿ ಸ್ಥಳವನ್ನು ಬೇಡಿ ಪಡೆದು ತಮ್ಮ ಕಾಲವಾದ ಬಳಿಕ ಸ್ವಪ್ನ ಸಂದೇಶದ ಮೂಲಕ ಇಲ್ಲಿಯೂ ಸನ್ನಿಹಿತರಾಗಿದ್ದಾರೆ. ಆ ಸ್ಥಳದಲ್ಲಿ ಈಗಲೂ ಶ್ರೀ ವರದೇಂದ್ರರ ವೃಂದಾವನವಿದ್ದು ನಿತ್ಯ ಪೂಜಾ ಹಸ್ತೋದಕಾದಿಗಳು ನಡೆಯುತ್ತವೆ. ಪ್ರತಿ ವರ್ಷ ಆರಾಧನೆಯು ನಡೆಯುತ್ತಿದೆ.

## ೩೧ ಶ್ರೀದ ವಿಠ್ಠಲದಾಸರು

ಧಾರವಾಡ ಜಿಲ್ಲೆಯ ವರದಾನದಿಯ ದಂಡೆಯಲ್ಲಿರುವ ಕರ್ಜಗಿ ಗ್ರಾಮವೇ ಶ್ರೀ ಶ್ರೀದವಿಠ್ಠಲರ ಜನ್ಮಸ್ಥಳ. ಇವರ ಮೊದಲಿನ ಹೆಸರು ದಾಸಪ್ಪ. ಅವನು ವೇದ ವೇದಾಂತಗಳಲ್ಲಿ ಪಂಡಿತ. ಶಾಸ್ತ್ರಗಳೆಲ್ಲವೂ ದಾಸಪ್ಪನಿಗೆ ಸುವಿದಿತ. ಆದರೆ ಆಚಾರ ಮಾತ್ರ ಅಷ್ಟಕ್ಕಷ್ಟೆ. ವಿಲಾಸಿ ಜೀವ. ಒಂದು ಅರ್ಥದಲ್ಲಿ— ರಸಿಕನೂ ಅಹುದು. ಹಲಕೆಲ ವ್ಯಸನಗಳ ಪರಿಚಯವೂ ಇದ್ದಿತು. ಒಂದು ದಿನ ಕರ್ಜಗಿಗೆ ಶ್ರೀಜಗನ್ನಾಥ ದಾಸರೂ ಶ್ರೀಪ್ರಾಣೇಶದಾಸರೂ ಕೂಡಿ ಬಂದರು. ಶ್ರೀ ಜಗನ್ನಾಥದಾಸರು ಅದೇ ತಮ್ಮ ಹರಿಕಥಾಮೃತಸಾರ ಮುಗಿಸಿ ಅದಕ್ಕೆ ಫಲಶ್ರುತಿಯನ್ನು ಬರೆಯಬಲ್ಲ ಬಲ್ಲಿದನೊಬ್ಬನನ್ನು ಶೋಧಿಸತೊಡಗಿದ್ದರು.

ಕರ್ಜಗಿ ಎಂದಿನಿಂದಲೂ ವಿದ್ವಜ್ಜನರ ತವರು ಮನೆ. ಶ್ರೀ ಜಗನ್ನಾಥದಾಸರು ಕರ್ಜಗಿಯಲ್ಲಿ ಒಂದು ದೊಡ್ಡ ಪಂಡಿತ ಪರಿಷತ್ತನ್ನು ಕರೆದು ನೆರೆದ ವಿದ್ವನ್ಮಂಡಲಿ ಎದುರು ೧೬ ಪ್ರಶ್ನೆಗಳನ್ನು ಇರಿಸಿದರು. ದಾಸರಾಯರಂಥ ವಿದ್ವನ್ಮಣಿಗಳ ಮಾರ್ಮಿಕ ಪ್ರಶ್ನೆಗಳಿಗೆ ಉತ್ತರಿಸುವ ಧೈರ್ಯ ಯಾರಿಗೂ ಆಗದೆ ಪಂಡಿತರೆಲ್ಲರೂ ಮೂಕ ಮಂಥರರಾದರು. ಆಗ ದಾಸಪ್ಪನು ನಾನು ಉತ್ತರ ಹೇಳುತ್ತೇನೆಂದು ಎದ್ದು ನಿಂತ. ೧೬ ಪ್ರಶ್ನೆಗಳಿಗೆ ಸರಿಯಾಗಿ ಉತ್ತರವಿತ್ತ. ಜಗನ್ನಾಥ ದಾಸರಿಗೆ ಪರಮಾನಂದ ವಾಯಿತು. ವಿಲಾಸಿ ವೇಷದಲ್ಲಿ ಅವಿತುಕೊಂಡ ಆ ವಿದ್ವತ್ ಚೇತನದ ಸ್ವರೂಪ ಯೋಗ್ಯತೆಯನ್ನು ಅವರು ಸರಿಯಾಗಿ ಅರಿತು ಗುರುತಿಸಿದರು.

"ದಾಸಪ್ಪ, ಈ ನಿನ್ನ ಜ್ಞಾನಕ್ಕೂ ಆಚಾರಕ್ಕೂ ತಾಳಮೇಳವಿಲ್ಲ. ಮೊದಲು ತಾಳ ಹಿಡಿ. ನಂತರ ನಿನ್ನ ಅಂತರಂಗ, ಬಹಿರಂಗಗಳಿಗೆ ಮೇಳ ಮಾಡು" ಎಂದು ಹೇಳಿದರು. ದೊಡ್ಡವರ ಮಾತು ದಾಸಪ್ಪನ ಹೃದಯದಲ್ಲಿ ವಿಲಕ್ಷಣ ಪರಿಣಾಮ ಮಾಡಿತು. ಕೂಡಲೇ ಅವನು ಮನೆಗೆ ಹೋಗಿ ವೇಷ ಕಳಚಿದ. ವರದಾ ನದಿಗೆ

ಹೋಗಿ ಸ್ನಾನ ಮಾಡಿ ಬಂದ. ದಾಸರಿಗೆ ಅಡ್ಡ ಬಿದ್ದ. ಜಗನ್ನಾಥದಾಸರು ತಮ್ಮ ವರದ ಹಸ್ತವನ್ನು ಅವನ ತಲೆಯಮೇಲೆ ಇಟ್ಟರು. ಶ್ರೀ ಶ್ರೀ ದವಿಠ್ಠಲ ಎಂಬ ಅಂಕಿತ ಕೊಟ್ಟರು.

ಇಷ್ಟು ದಿನ ಬರಿ ಹೆಸರಿನಿಂದ ದಾಸಪ್ಪನಾದ ಆ ಕರ್ಜಗಿಯ ಸೋಕಿ ಬ್ರಾಹ್ಮಣನು ನಿಜವಾದ ದಾಸಪ್ಪನಾಗಿ ವಿರಕ್ತನಾಗಿ ವೈರಾಗ್ಯದ ಭಾಗ್ಯವನ್ನು ಪಡೆದು ಶ್ರೀದವಿಠ್ಠಲದಾಸರು ಎನಿಸಿದರು.

ಇವರು ಶ್ರೀ ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಸುಂದರವಾದ ಫಲಶ್ರುತಿಸಂಧಿಯನ್ನು ಬರೆದು ಗುರುಚರಣಕ್ಕೆ ಸಮರ್ಪಣ ಗೈದರು.

ಮುಂದೆ ಇವರು ಅನೇಕಾನೇಕ ಹರಿ ಗುರು ಸ್ತೋತ್ರಪರವಾದ ಗೀತಗಾಥೆ ಗಳನ್ನು ಶ್ರೀದವಿಠ್ಠಲವೆಂಬ ಮುದ್ರಿಕೆಯಿಂದ ಬರೆದು ಪ್ರಚುರಪಡಿಸಿದರು. ಶ್ರೀರಾಘವೇಂದ್ರಸ್ವಾಮಿಗಳ ಮೇಲಿನ ಇವರ ಪದ್ಯಗಳು ಎಲ್ಲರ ಬಾಯಿಯಲ್ಲಿಯೂ ನಲಿದಾಡುತ್ತವೆ. ಅಂತಃಕರಣದ ಅಂತಸ್ಥಲದಿಂದಲೇ ಭಾವನೆಯ ಉದ್ರೇಕದಿಂದ ಉಕ್ಕಿ ಬರುವ ಇವರ ಪದ್ಯಗಳಲ್ಲಿ ನವ ವಿಧವಾದ ಭಕ್ತಿಯ ದ್ವಿವ ಧ್ವನಿಯು ಕೇಳಿಬರುತ್ತದೆ. ಸಾಹಿತ್ಯದ ನಿಕಷದಲ್ಲಿಯೂ ಶ್ರೀದವಿಠ್ಠಲರ ಕೀರ್ತನೆಗಳು ಅಪ್ಪಟ ಚಿನ್ನದ ಒರೆಗೆ ಇಳಿಯಬಲ್ಲವು. ಶುದ್ಧ ಸಾತ್ವಿಕ ಹಾಗೂ ತಾತ್ವಿಕ ತಥಾಪಿ ಸರಸ ಸುಂದರ ಪದ್ಯ ಗಳನ್ನು ಹೊಸೆಯುವಲ್ಲಿ ಕರ್ಜಗಿಯ ದಾಸರು ಸಿದ್ಧಹಸ್ತರು. ವರದೆಯ ಪ್ರವಾಹ, ಪ್ರಸಾದ, ಮಂಜುಳ ಗೀತಗುಂಜಾರವ, ಸ್ಫಟಿಕ ನಿರ್ಮಲತೆ, ಸಹಜ ಸುಂದರತೆ, ರಸಸ್ಯಂದಿತೆ ಮುಂತಾದ ಗುಣಗಳು ವರದಾತೀರದಲ್ಲಿದ್ದು ವರದೀ ವಿದ್ಯೆಯನ್ನು ಪಡೆದ ದಾಸರ ಪದ್ಯಗಳಲ್ಲಿ ಮೇಳವಿಸಿದ್ದನ್ನು ನಾವು ಹೇರಳವಾಗಿ ಕಾಣಬಹುದು.

## ೩೨ ಶ್ರೀ ವರಹ ತಿಮ್ಮಪ್ಪದಾಸರು

ಉಡುಪಿ ಮೊದಲಾದ ದಕ್ಷಿಣ ಕನ್ನಡ ದೇಶಗಳಲ್ಲಿ ಹರಿದಾಸರು ವಿಶೇಷವಾಗಿ ಹುಟ್ಟಲಿಲ್ಲ ಎಂಬ ಮಾತಿಗೆ ಅಪವಾದವಾಗಿದ್ದಾರೆ– ಶ್ರೀ ವರಹ ತಿಮ್ಮಪ್ಪದಾಸರು.

ಉಡುಪಿಯಿಂದ ಮೂರು ಮೈಲು ದೂರದ ಕರಂಪಳ್ಳಿ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ಹೆಸರು ಕೃಷ್ಣರಾಯ. ಇವರ ಮನೆತನದ ಹೆಸರು ನೆಕ್ಕಾರೆ. ಈ ಮಾತನ್ನು ಅವರೇ ತಮ್ಮ—

"ಮಕ್ಕಳ ಬಾಯೊಳು ಸಕ್ಕರೆಯನು ತಂದು ।
ಇಕ್ಕಿದಪರಿಯೊಳು ಸಿರಿಯರಸ ।
ಒಕ್ಕಣೆಯೆಲ್ಲವ ತಿದ್ದಿದ ಕಾರಣ ।
ನೆಕ್ಕರೆ ಕೃಷ್ಣದಾಸ ರಚಿಸಿದನು ॥"

ಎಂದು ಮುಂತಾಗಿ ಲಕ್ಷ್ಮೀಕಲ್ಯಾಣ ಎಂಬ ತಮ್ಮ ಕೀರ್ತನೆಯಲ್ಲಿ ಸ್ವನಾಮ ಕುಲನಾಮಗಳನ್ನು ಹೇಳಿದ್ದಾರೆ.

ಇವರು ತಿರುಪತಿಯಲ್ಲಿಯ ವರಾಹ ದೇವರು ಹಾಗೂ ತಿಮ್ಮಪ್ಪ ಇಬ್ಬರ ಹೆಸರನ್ನು ಕೂಡಿಸಿ ವರಾಹತಿಮ್ಮಪ್ಪ ಎಂದು ತಮ್ಮ ಅಂಕಿತವನ್ನಾಗಿ ಇಟ್ಟುಕೊಂಡು ಅನೇಕ ಕೀರ್ತನೆಗಳನ್ನು ರಚಿಸಿದರು. ಉಡುಪಿಯ ಶ್ರೀಕೃಷ್ಣಚರಿತ್ರೆ ಎಂಬ ನಾಲ್ಕು ಸಂಧಿಗಳುಳ್ಳ ಚಿಕ್ಕ ಕಾವ್ಯವನ್ನು ಸಾಂಗತ್ಯದಲ್ಲಿ ಬರೆದಿದ್ದಾರೆ.

ಇವರು ಉಡುಪಿ ಕೃಷ್ಣಾಪುರ ಮಠದ ೨೫ ನೇ ತಲೆಯ ಶ್ರೀ ವಿಬುಧೇಂದ್ರ ತೀರ್ಥರ ಶಿಷ್ಯರಾಗಿದ್ದರೆಂದು ಅವರ ಒಂದು ಕೀರ್ತನೆಯಿಂದ ತಿಳಿದುಬರುತ್ತದೆ.

"ಶುದ್ಧ ವೈಷ್ಣವರೆಲ್ಲ ಉಜ್ಜಿ ತೊಳೆವೀಚರಣ ।  
ಬದ್ಧಮುಕ್ತರಿಗೆಲ್ಲ ಸಿದ್ಧಿ ಈವ ಚರಣ ।  
ಮಧ್ವರಾಯರ ಮಠದಿ ಎದ್ದು ಮೆರಗುವ ಚರಣ ।  
ವಿದ್ಯನಿಧಿ ಗುರುರಾಯ ಪೊಗಳ್ದ ಚರಣ ।"

ವಿಬುಧೇಂದ್ರತೀರ್ಥರ ಉತ್ತರಾಧಿಕಾರಿಗಳೇ ಶ್ರೀವಿದ್ಯಾನಿಧಿಗಳು. ಈ ವಿದ್ಯಾನಿಧಿಗಳ ಗುರುಗಳೇ ಇವರ ವಿದ್ಯಾಗುರುಗಳಾಗಿರಬಹುದು.

ಇವರ ಕೀರ್ತನೆಗಳು ಪ್ರದೀರ್ಘವಾಗಿದ್ದು ಕಾವ್ಯದ ಅಂಚನ್ನೂ ವೇದಾಂತದ ಸೀಮೆಯನ್ನೂ ನಯವಾಗಿ ತೀಡಿ ಹಿತಮಿತವಾಗಿ ಹರಿದಿವೆ.

## ೩೩ ಶ್ರೀ ಕೇಶವ ವಿಠ್ಠಲದಾಸರು

ಶ್ರೀ ಗೋಪಾಲದಾಸರ ಶಿಷ್ಯರಾದ ಇವರು ಗದ್ವಾಲದವರು. ಸುಬ್ಬಣ್ಣದಾಸರೆಂದು ಇವರ ಹೆಸರು. ಕೇಶವವಿಠ್ಠಲ ಇವರ ಅಂಕಿತ. ಇವರ ಪದಗಳು ಸುಂದರ, ಭಾಷೆ ಬಂಧುರ. ಇವರ ಒಂದು ಕೀರ್ತನೆಯ ಕಿಂಚಿದುದಾಹರಣೆ—

"ಕೇಳಿರೀತನಗಾಥಚರಿತೆಯ । ಚಲ್ವ ।  
ಜಾಲಿಕಾಪುರದಿದ್ದ ಧೊರೆಯ ॥ಪ॥  
ಕಾಳಾಹಿವೇಣಿಯಳು ದ್ರುಪದಜೆ ।  
ಶಾಲೆ ಸೆಳೆಯುತ ಖೂಳಸಭೆಯೊಳು ।  
ಗೋಳಿಸಿದ ದುರ್ಯೋಧನನ ಕುಲ ।  
ಹಾಳು ಮಾಡಿದ ಬಹಳ ಬಗೆಯಲಿ ॥"

ಇವರ ಕೃತಿಗಳಲ್ಲಿ ಹಲಕೆಲವು ವ್ಯಾಕರಣದ ದೋಷಗಳು ನುಸುಳಿವೆ. ಭಾವದ ಉಬ್ಬರಕ್ಕಿಂತ ಭಾಷೆಯ ಅಬ್ಬರ ಎಷ್ಟು ಕಾಣುತ್ತದೆ. ಆದರೂ ಶೈಲಿಯು ಕಸುವುಳ್ಳದ್ದು ರಸವುಳ್ಳದ್ದು ಆಗಿದೆ.

## ೩೪ ಶ್ರೀ ಅನಿರುದ್ಧವಿಠ್ಠಲದಾಸರು

ಇವರು ಉತ್ತರಾದಿ ಮಠದ ಶ್ರೀಸತ್ಯಸಂಧತೀರ್ಥರ ಸಮಕಾಲೀನರು. ಅನಿರುದ್ಧ ವಿಠ್ಠಲ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಭಾಷೆಯು ಗಂಭೀರವಾಗಿದೆ. ಭಕ್ತಿಯ ಆರ್ತವೊರೆತವು ಹೃದಯದ ಹಾಡಾಗಿ ಹರಿದಿದೆ. ಮಾದರಿಗಾಗಿ ಅವರ ಒಂದು ಕೀರ್ತನೆ ನೋಡಬಹುದು.

"ಕಂಡೆಕಂಡೆ ಸ್ವಾಮಿಯ ।
ಕಂಡೆಕಂಡೆ ।
ಕಂಡೆಕಂಡೆ ಪ್ರಲ್ಹಾದವರದನ ।
ಕಂಡೆ ಶರಣಾಗತರ ಪೊರೆದನ ।
ಕಂಡೆ ಗರುಡಾದ್ರಿಯಲಿ ಮೆರೆದನ ।
ಕಂಡೆ ಲಕ್ಷ್ಮೀನಾರಸಿಂಹನ ॥
ಪೊಂಗೆಕೆಲಸರತ್ನಗಳಖಚಿತದ ಉಂಗುರುದ ಬೆರಳುಗಳ ಕಂಡೆನು ।
ಮುಂಗೈಲಿಟ್ಟಿಹ ಕಟಕದಾ ಮುದ್ದು ಹಸ್ತವ ನಾನು ಕಂಡೆನು ॥
ಮಂಗಳಮಯವಾದ ಕೌಸ್ತುಂಭಕೊಲೆಯೊಪ್ಪುವ ಉರುಗ ಕಂಡೆನು ॥
ರಂಗಧರಿಸಿಹ ಅರಿರಂಗಳು ರಾಜಿಸುವ ಭುಜಗಳ ಕಂಡೆನು ॥ "

ಇವರ ಕೃತಿಗಳಲ್ಲಿ ಭಾವದ ಕಾವು ಕಡಿಮೆಯಾಗಿದ್ದರೂ ಭಾಷೆಯ ಬೆಡಗಿನಿಂದ ಭಕ್ತಿಯ ಉತ್ಕಟತೆಯಿಂದ ಶೈಲಿಯು ಉಜ್ವಲತೆಯ ಓಜಸ್ಸಿನಿಂದ ಬೆಳಗಿದೆ.

## ೩೫ ಶ್ರೀ ಭೀಮದಾಸರು (ಹಿರೇ ಆಚಾರ್ಯರು)

ಇವರು ಉತ್ತರಾದಿಮಠದ ಶ್ರೀ ಸತ್ಯಬೋಧ ಸ್ವಾಮಿಗಳ ಸಮಕಾಲೀನರು. ಇವರು ಕದರಮಂಡಲಗಿ ಪ್ರಾಣದೇವರ ಭಕ್ತರು. ಇವರ ಹೆಸರು ಭೀಮಾಚಾರ್ಯರು. ಆದರೆ ಜನರು ಇವರನ್ನು ಹಿರೇ ಆಚಾರ್ಯರೆಂದೇ ಕರೆಯುತ್ತಿದ್ದರು.

ಇವರ ಪೂರ್ವಜರು ಭಾರದ್ವಾಜ ಗೋತ್ರದವರು. ಕಾಶಿಯ ಹನುಮಾನ ಘಾಟಿನ ಎದುರು ಓಣಿಯಲ್ಲಿವಾಸವಾಗಿದ್ದರು. ಪಾಂಡಿತ್ಯವೇ ಇವರ ಪೈತೃಕಾಸ್ತಿ. ಹರಿಯಾಚಾರ್ಯ ಎಂಬುವವರು ಕಾಶಿಯಿಂದ ಕರ್ನಾಟಕಕ್ಕೆ ಬಂದು ಹರಿಹರೇಶ್ವರನ ಸೇವೆ ಮಾಡಿ ದಾಸಾಚಾರ್ಯ ಎಂಬ ಮಗನನ್ನು ಹಡೆದರು. ದಾಸಾಚಾರ್ಯರು ಕದರಮಂಡಲಗಿ ಹನುಮಂತನ ಭಕ್ತನಾಗಿ ಅವನ ಸೇವೆ ಮಾಡುತ್ತ ಅಲ್ಲಿಯೇ ನಿಂತುಕೊಂಡರು. ಆ ದಾಸಾಚಾರ್ಯರ ಮಗನಾದ ಈ ಭೀಮಚಾರ್ಯರು ಪ್ರಾಣದೇವರ ಏಕನಿಷ್ಠ ಭಕ್ತರು.

ಆ ಹನುಮಂತದೇವರ ನಿರಂತರ ಸೇವೆಯಿಂದ ಭೀಮಾಚಾರ್ಯರಿಗೆ ದಿವ್ಯ ಜ್ಞಾನೋದಯವಾಯಿತು. "ಕದರಮಂಡಲಗಿ ಹನಮಯ್ಯ'' ಎಂಬ ಅಂಕಿತದಿಂದ ಅನೇಕ ದೇವರ ನಾಮುಗಳನ್ನು ರಚಿಸಿದರು. ಈ ಭೀಮಾಚಾರ್ಯರ ಮಂತ್ರಸಿದ್ಧಿ, ಹನುಮಂತದೇವರ ಅನುಗ್ರಹ, ಕೀರ್ತನ ಕವನ ಪಾಂಡಿತ್ಯ, ದಿವ್ಯ ವರ್ಚಸ್ಸು ಮೊದಲಾದವುಗಳಿಂದ ಆಕರ್ಷಿತರಾಗಿ ಜನರೆಲ್ಲರೂ ಹಿರೇ ಆಚಾರ್ಯರೆಂದು ಕರೆಯ ಹತ್ತಿದರು.

ಆಚಾರ್ಯರು ಅಪರೋಕ್ಷ ಜ್ಞಾನಿಗಳೆಂದು ಆ ದೇಶದಲ್ಲಿ ಪ್ರತೀತಿ. ಇವರ ತೇಜಃ ಪ್ರಕಾಶದಿಂದ ಹರ್ಷಿತಾಕರ್ಷಿತರಾಗಿ ಹಾವನೂರ ದೇಸಾಯಿ ಹನಮಂತ ಗೌಡರೇ ಮುಂತಾದವರು ಅನೇಕ ಭೂಮಿ ಕಾಣಿಗಳನ್ನು ದಾನವಾಗಿ ಕೊಟ್ಟದ್ದರ ಉಲ್ಲೇಖವಿದೆ.

ಶ್ರೀ ಸತ್ಯಬೋಧ ಶ್ರೀಪಾದಂಗಳವರು ಹಿರೇ ಆಚಾರ್ಯರಿಗೆ ಬಹಳ ಗೌರವ ವನ್ನು ತೋರಿಸುತ್ತಿದ್ದರಂತೆ. ಅದು ಕೆಲವು ಕುಹಕಿ, ದಿಂಡಿ–ಪಾಖಂಡಿಗಳಿಗೆ ಸಹನ ವಾಗದೇ ಗುಜು–ಗುಜು ಮಾತುಗಳು ಮಠದಲ್ಲಿ ನಡೆದವು. ಅದನ್ನು ತಿಳಿದ ಶ್ರೀಗಳು ಒಂದು ದಿನ ಮುಚ್ಚಿದ ಮುಷ್ಟಿಯನ್ನು ಪಂಡಿತ ಮಂಡಲಿ ಎದುರು ಹಿಡಿದು "ಇದರಲ್ಲಿ ಏನಿದೆ" ಎಂದು ಕೇಳಿದರು. ಕೆಲವರು ಗಂಧವೆಂದರೆ, ಹಲವರು ತುಳಸಿ ಎಂದರು. ಇತರರು ಖಾಲಿಮುಷ್ಟಿ ಎಂದು ಉಸುರಿದರು. ಶ್ರೀಗಳು ಹಿರೇಆಚಾರ್ಯರನ್ನು ಕೇಳಿದರು. ಆಚಾರ್ಯರು ತತ್‌ಕ್ಷಣವೇ ಸಾಷ್ಟಾಂಗ ನಮಸ್ಕಾರ ಹಾಕಿ ತೆರೆದ "ಬಾಯಿಯ ನರಸಿಂಹಶಾಲಿಗ್ರಾಮ ತಮ್ಮ ಮುಷ್ಟಿಯಲ್ಲಿದೆ. ನೀವು ಅವನನ್ನು ಕೈಯಲ್ಲಿ ಹಿಡಿದಿದ್ದೀರಿ. ಅವನು ನಿಮ್ಮ ಕೈಯ ಹಿಡಿದ್ದಾನೆ." ಎಂದು ಹೇಳಿದರು. ಶ್ರೀಗಳು ಮುಚ್ಚಿದ ಮುಷ್ಟಿಯನ್ನು ಬಿಚ್ಚಿದರು. ಪಂಡಿತರೆಲ್ಲರು ಆಶ್ಚರಿಯಿಂದ ಕಣ್ಣರಳಿಸಿ ನೋಡಿದರು. ಅದೊಂದು ವಿಶಾಲವದನದ ನರಸಿಂಹ ಶಾಲಿಗ್ರಾಮವಾಗಿತ್ತು. ಶ್ರೀಗಳವರು ಪುಲಕಿತರಾದರು. ಹಿರೇಆಚಾರ್ಯರು ಗದ್ಗದಿತರಾದರು. ಅವರ ಭಕ್ತಿ ಆನಂದ ಉದ್ರೇಕಗಳು ಗೀತವಾಗಿ ಕೂಡಲೇ ಹೊಮ್ಮಿ ಹರಿದವು.

"ಬಾಯಿ ತೆರೆದ ಬಗೆಯೇನೋ ದೇವರದೇವ।
ತೋಯದಳ ನೇತ್ರನೆ ॥
ನೀ ಎನಗಿದು ಪೇಳೋ ನಿಜವಾಗಿ ಲಕ್ಷ್ಮೀನಾ।
ರಾಯಣ ನರಸಿಂಹನೇ ॥
ಅಸುರನ ಉದರವ ಹಸನಾಗಿ ಬಗೆವಾಗ।
ಹಸಿದು ಬಾಯಿ ತೆರೆದಿಯೋ ॥
ಬಿಸಜಾಕ್ಷ ಭೂಮಂಡಲವು।

ಬಸುರೊಳಿದ್ದ ಉ |
ಬ್ಬಸಿಗೆ ಬಾಯಿ ತೆರೆದೆಯೋ ||
ಮಡದಿಯರೂಪಕ್ಕೆ ಮರುಳಾಗಿ ಆದರಿಂದ |
ಬಿಡದೇ ಬಾಯಿತೆರೆದೆಯಾ ||
ದೃಢದಿ ಪ್ರಲ್ಹಾದನ ಒಡೆಯ ರಕ್ಷಿಸೊ ಎಂಬೊ |
ನುಡಿಗೆ ಬಾಯಿ ತೆರೆದಿಯಾ |
ಗುರುಸತ್ಯಬೋಧರಾಯರ ನಿತ್ಯ ಭಜನೆಗೆ |
ಬೆರೆತು ಬಾಯಿ ತೆರೆದೆಯಾ ||
ವರ ಕದರಮಂಡಲಗಿ ಹನುಮಯ್ಯ ಒಡೆಯನೆ |
ಕರಮುಗಿವೆ ಬಾಯಿ ಮುಚ್ಚು ಕರುಣಿಸು || ”

ಇವರ ಕೀರ್ತನೆಗಳಲ್ಲಿ ಭಕ್ತಿಯು ಸಾಹಿತ್ಯದ ಸಾಂಗತ್ಯದಿಂದಲೂ ಶಾಸ್ತ್ರದ ಸಾಹಿತ್ಯದಿಂದಲೂ ಶುಚಿ, ರುಚಿಯಾದ ರಸವಾಹಿನಿಯಾಗಿ ಹರಿದು ಮೆರೆದಿದೆ.

ಆಚಾರ್ಯರು ಪ್ರಾಣದೇವರ ಗುಡಿಯಲ್ಲಿ ಕುಳಿತಾಗ ಮಹಾರಾಷ್ಟ್ರದ ಧೋಂಡೋಜಿ ವಾಘನು ಕದರಮಂಡಲಗಿಯನ್ನು ಸುಲಿಯಬೇಕೆಂದು ಸಾಗಿಬಂದನು. ಆದರೆ ಆಚಾರ್ಯರ ಮಹಿಮೆಯಿಂದ ಸ್ತಂಭಿತನಾಗಿ ತನ್ನ ಖಡ್ಗವನ್ನು ಕೂಡ ಹನುಮಂತ ದೇವರ ಮುಂದೆ ಇಟ್ಟು ಅಡ್ಡಬಿದ್ದನು. ದೇವಸ್ಥಾನಕ್ಕೆ ಅನೇಕ ಭೂಮಿ ಕಾಣಿಗಳನ್ನು ದಾನವಿತ್ತು ಹರಕೆ ಹೊತ್ತು ನಮಿಸಿ ಹೋದನು. ಅವನ ಕತ್ತಿಯನ್ನು ಈಗಲೂ ದೇವಸ್ಥಾನದಲ್ಲಿ ನೋಡಬಹುದು.

ಈ ಹಿರೇ ಆಚಾರ್ಯರು ಯಾವಜ್ಜೀವ ಈ ಪ್ರಾಣದೇವರ ಸೇವೆಯನ್ನು ಮಾಡುತ್ತ ಅಲ್ಲಿಯೇ ಇದ್ದರು.

ಊರ ಮುಂದೆ ಆಚಾರ್ಯರು ದೇಹ ಬಿಟ್ಟ ಸ್ಥಳದಲ್ಲಿ ಕಟ್ಟೆಯನ್ನು ಕಟ್ಟಿಸಿ ಅಶ್ವತ್ಥ ವೃಕ್ಷವನ್ನು ಬೆಳೆಯಿಸಲಾಗಿದೆ. ಈಗಲೂ ಇವರ ಮನೆತನದವರು ಕದರ ಮಂಡಲಗಿ ಹನುಮಂತದೇವರ ಸೇವೆಯನ್ನು ಮಾಡುತ್ತಲಿರುವರು. ಕದರಮಂಡಲಗಿ ದಾಸರೆಂದೂ ಇವರ ಪ್ರಸಿದ್ಧಿ ಇರುತ್ತದೆ.

## ೩೬ ಶ್ರೀ ಅಭಿನವ ಜನಾರ್ದನವಿಠ್ಠಲರು

ಇವರು ಶ್ರೀ ಜಗನ್ನಾಥದಾಸರ ಶಿಷ್ಯರು. ಇವರ ಹೆಸರು ಪ್ರೇಮದಾಸ. ಸೋಮಪುರದವರು. ಕಾಲ ಕ್ರಿ. ಶ. ೧೮೦೦. ಇವರು ಹುಟ್ಟಿನಿಂದ ಹೆಳವರಾಗಿದ್ದರಂತೆ. ಪಂಗು ಜೀವನದಲ್ಲಿಯ ಭಂಗಭವಣಿಗಳಿಗೆ ಬೇಸತ್ತು ಇವರು ರಾಘವೇಂದ್ರಸ್ವಾಮಿಗಳನ್ನು ಆರ್ತಭಕ್ತರಾಗಿ ದೀನದನಿಯಲ್ಲಿ ಸ್ತೋತ್ರ ಮಾಡತೊಡಗಿದರು. ಆಗ ರಾಯರು ಹಿಂದಿನಿಂದ ಬಂದು ಕೈಹಿಡಿದು ಎಬ್ಬಿಸಿದಂತಾಯಿತು. ತತ್‌ಕ್ಷಣವಲ್ಲಿಯೇ ಇವರಿಗೆ ಚನ್ನಾಗಿ ನಡೆಯಲಿಕ್ಕೆ ಬಂದಿತಂತೆ. ಆನಂದಭರಿತರಾದ ದಾಸರು ಗುರುಸಾರ್ವಭೌಮರನ್ನು ಹೃದಯದಲ್ಲಿ ಕೊಂಡಾಡುತ್ತ ನಡೆದರು.

ಗುರುವೇ ನೀ ಕರುಣಿಸದಿರಲು ।
ಉದ್ಧರಿಸುವ ದೊರೆಗಳು ಈ ಧರೆಯೊಳು ಉಂಟೆ ॥ಪ॥
ಕರುಣಸಾಗರ ಎನ್ನ ಕರೆದು ಕೈಪಿಡಿದು ನೀ ।
ಕರುಣಿಸು ಸುಧೀಂದ್ರಕರಜ ರಾಘವೇಂದ್ರ ॥
ತರುಣಿ ತರಳರು ಈ ಶರೀರ ಬಂಧುಗಳುಪ ।
ಕರಿಸಲಾದರಿಪರೆಲ್ಲ ॥ ಚರಣವಿಲ್ಲದ ಪಕ್ಕ ಮುರಿದು ।
ಬಿದ್ದ ಗುಬ್ಬಿ ಮರಿಯಂತೆ ಬಾಯ್ಬಿಡುವರೆಲ್ಲ ॥೧॥
ದಿನಕರಕುಲಜಾತರಾಮನಪಾದ ।
ವನಜಾರಾಧಕನೆನಿಪ ।
ಮುನಿಕುಲೋತ್ತಂಸ ಸಜ್ಜನ ಶಿಖಾಮಣಿಗುಣ ।
ಗಣ ಅಭಿನವ ಜನಾರ್ದನ ವಿಠಲನ ದೂತ ॥೨॥

ಇದಲ್ಲದೆ ಇವರು ರಚಿಸಿದ "ತುಂಗಾತೀರದ ನಿಂತ ಸುಯತಿವರನ್ಯಾರೇ ಪೇಳಮ್ಮಯ್ಯ" "ಬಂದದ್ದೆಲ್ಲ ಬರಲಿ ರಾಘವೇಂದ್ರನ ದಯವೊಂದಿರಲಿ" "ಮಂತ್ರಾಲಯ ಮಂದಿರ ಮಾಂ ಪಾಹಿ" "ಬಾಗಿ ಭಜಿಸಿರೊ ರಾಘವೇಂದ್ರ ಯತಿಯ ಕೊಡುವನು ಸನ್ಮತಿಯ" ಮುಂತಾದ ಅನೇಕ ಸುಂದರವಾದ ಗುರುಸ್ತೋತ್ರಗಳು, ದೇವರ ನಾಮಗಳು ಜನರ ಹೃದಯದ ಹಾಡಾಗಿ, ಎಲ್ಲರ ನಾಲಿಗೆ ನುಡಿಯಾಗಿ, ಅಂತರಂಗದ ಭಕ್ತಿಯ ಭಾಷೆಯಾಗಿ ನಿನದಿಸುತ್ತಲಿವೆ. ಇವರ ಕೃತಿಗಳಲ್ಲಿ ಭಾಷೆಯ ಶುದ್ಧಿ, ರಸದ ಸಮೃದ್ಧಿ, ಭಕ್ತಿಯ ಪ್ರಾಚುರ್ಯಗಳು ಪ್ರಾಧಾನ್ಯವಾಗಿ ಕಂಡುಬರುತ್ತಿವೆ. ಶಬ್ದಾರ್ಥಗಳು ಎರಡೂ ಈ ಅಭಿನವ ಜನಾರ್ದನ ವಿಠಲರ ಕಾವ್ಯಕೈಂಕರ್ಯಕ್ಕೆ ಕೈಕಟ್ಟಿಕೊಂಡು ನಿಂತಂತೆ ತೋರುತ್ತವೆ. ನಾದಮಾಧುರಿಯು ಇವರ ವಾಗ್ವೈಖರಿಯ ಜೀವಾಳವಾಗಿದೆ.

ನಮೋ ನಮೋ ರಾಮ ।
ದೇವೋತ್ತಮಾಂಜನೇಯ ಪ್ರೇಮ ॥ಪ॥
ಕ್ಷಮಾಪಾಶ್ರಿತ ಜನ ।
ಸಮೂಹಕಲ್ಪ ।
ದ್ರುಮಾಪರಾಧ ।
ಕ್ಷಮಾಪಣಂ ಕುರು ॥ಅ॥
ಅಯೋಧ್ಯಪುರನಿಲಯ ।
ನಿತ್ಯಾವಿಯೋಗಿನೀಪ್ರಿಯಾ ॥
ದಯಾಪರಾಸ್ಮ ।
ದ್ಭಯಾಪಹರ ಋಷಿ ।
ಸ್ವಯಾಗರಕ್ಷಕ ।
ತ್ರಯೀಮಯಾತ್ಮಾ ॥ ”

ಇದರಮೇಲಿಂದ ಸಂಸ್ಕೃತ ಸಾಹಿತ್ಯದ ಸೊಬಗನ್ನೆಲ್ಲ ವೇದಾಂತದ ವೈಭವ ದೊಂದಿಗೆ ಕನ್ನಡದ ಹಾಸಿನಲ್ಲಿ ಸೂಸಿ ರಸದೋಕುಳಿಯನ್ನು ಆಡಿದ ಉತ್ತರ ಕಾಲೀನ ದಾಸ ಕವಿಗಳಲ್ಲಿ ಅಭಿನವ ಜನಾರ್ದನ ವಿಠಲರು ಗಣ್ಯರಾಗಿದ್ದಾರೆಂಬುದು ಸ್ಪಷ್ಟವಾಗುವದು.

## ೩೭ ಶ್ರೀ ಅಷವೀ ರಾಮದಾಸರು

ಇವರು ಕದರ ಮಂಡಲಗಿ ಹನುಮಂತದೇವರ ಭಕ್ತರು. ಕಣ್ವಶಾಖೆಯವರು. ಇವರ ಆಚಾರ ಮಾತ್ರ ಅಷ್ಟಕಷ್ಟೆ. ಆದರೆ ವಿಚಾರ ಮಾತ್ರ ಸರ್ವದಾಪಿ ಭಗವನ್ನಿಷ್ಠೆ. ಪ್ರಾಣದೇವರೇ ಅವರ ಪಂಚಪ್ರಾಣ. ಅವರ ಭಕ್ತಿಯೇ ಇವರ ರಕ್ಷಾಕವಚ. ಹನುಮಂತದೇವರ ಗುಡಿಯಲ್ಲಿದ್ದಾಗ ದಿನಾಲೂ ರಾಮದಾಸರು ಚಟ್ನಿಯನ್ನು ಅರೆಯುತ್ತಿದ್ದ ದೊಡ್ಡ ಕಲ್ಲುಬಂಡೆಯನ್ನು ಈಗಲೂ ತೋರಿಸುತ್ತಾರೆ. ಏಕಾಂತ ಭಕ್ತಿಗೇ ಪ್ರಾಧಾನ್ಯವಿತ್ತ ಇವರು ಕರ್ಮಕಾಂಡದಲ್ಲಿ ತುಸು ಉದಾಸೀನರಾದಂತೆ ತೋರುತ್ತಿದ್ದರೂ ಜ್ಞಾನಕಾಂಡದಲ್ಲಿ ಮಾತ್ರ ಪ್ರಕಾಂಡ ಪಂಡಿತರಾಗಿದ್ದರು. ಘನಘನ ಪಂಡಿತರೆಲ್ಲರೂ ಇವರ ಜೊತೆಗೆ ವಾದ ಮಾಡಿ ಖಂಡಿತರಾಗಿ ಹೋಗುತ್ತಿದ್ದರು. ಜಯವೆಂಕಟಾಚಾರ್ಯರೆಂಬ ಘನ ವಿದ್ವಾಂಸರು ಕದರಮಂಡಲಿಗಿಗೆ ಬಂದು ರಾಮ ದಾಸರಿಂದ ಸೋತು ತಮ್ಮ ಜಯಪತ್ರಗಳನ್ನೆಲ್ಲ ಸುಟ್ಟುಹಾಕಿದರಂತೆ.

ರಾಮದಾಸರ ವೈಷ್ಣವ ಮತದ ದೀಕ್ಷೆಯು ಅನನ್ಯಸಾಮಾನ್ಯವಾಗಿದ್ದಿತು. ಅವರು ಒಮ್ಮೆ ಗದುಗಿಗೆ ಬಂದಾಗ ಶ್ರೀ ವೀರನಾರಾಯಣ ದೇವಸ್ಥಾನದ ಮಂದಿರದ ಮುಗಿಲೆತ್ತರವಾದ ಗೋಪುರದಿಂದ "ಹರಿರೇವ ಸರ್ವೋತ್ತಮಃ'' (ಹರಿಯೇ ಸರ್ವೋ

ತ್ತಮ) ಎಂದು ಹೇಳಿ ಧುಮುಕಿದರಂತೆ. ಅಷ್ಟು ಎತ್ತರದ ಮೇಲಿಂದ ಹಾರಿದರೂ ಅವರ ದೇಹಕ್ಕೆ ಏನೂ ಅಪಾಯವಾಗದೆ ಪುಟಚಂಡಿನಂತೆ ನೆಲದಮೇಲೆ ಜಿಗಿದು ನಿಂತು "ನ ಹರೇಃ ಪರಮಃ ನ ಹರೇಃ ಸದೃಶಃ '' ಎಂದು ಉಗ್ಗಡಿಸಿದರಂತೆ.

ಇವರು ಕನ್ನಡಕ್ಕಿಂತ ಸಂಸ್ಕೃತದ ನ್ಯಾಯ, ವೇದಾಂತ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ವಾದ ವೇದಿಕೆಯಲ್ಲಂತೂ ಪ್ರತಿವಾದಿ ಭಯಂಕರ ಎನಿಸಿದ್ದರು, ಕ್ರಿ. ಶ. ೧೭೭೭ ರಿಂದ ೧೮೩೦ ರ ವರೆಗೆ ಶ್ರೀಮದುತ್ತರಾದಿ ಮಠದ ಮಹಾಪೀಠವನ್ನಲಂಕರಿಸಿದ ಶ್ರೀಸತ್ಯಧರ್ಮತೀರ್ಥ ಶ್ರೀಪಾದಂಗಳವರ ಸಮಕಾಲೀನರಾಗಿರಬಹುದು ಎಂದು ತಿಳಿದುಬರುತ್ತದೆ. ಯಾಕಂದರೆ ಶ್ರೀ ಸತ್ಯಧರ್ಮ ತೀರ್ಥರ ಶಿಷ್ಯರಾದ ಗುರ್ಜಾಲ ಸುಬ್ರಹ್ಮಣ್ಯಾಚಾರ್ಯರನ್ನೂ ಮನ್ನಾರಿ ಆಚಾರ್ಯ ರನ್ನೂ ಪೇಶ್ವೆಯರ ಆಸ್ಥಾನವಿದ್ವಾನ್ ಪುಣೆಯ ತ್ರ್ಯಂಬಕ ಶಾಸ್ತ್ರಿಗಳನ್ನೂ ವಾದದಲ್ಲಿ ಸೋಲಿಸಿದ ಜಯವೆಂಕಟಾಚಾರ್ಯರನ್ನು ಗೆದ್ದು ಅವರ ಜಯಪತ್ರಗಳನ್ನೆಲ್ಲ ದಗ್ಧ ಗೊಳಿಸಿದ ಧೀರ ಧೀಮಂತರೆಂದರೆ ಈ ರಾಮದಾಸರು.

"ಸುಬ್ರಹ್ಮಣ್ಯಾಹಿಗರುಡಃ ಮನ್ನಾರೀಮಾನ ಮರ್ದನಃ
ತ್ರಯಂಬಕ ಬಕಧ್ವಂಸೀ ಭಾತಿ ಶ್ರೀಜಯವೆಂಕಟಃ"

ಇಂಥ ಜಯವೆಂಕಟನನ್ನು ವಾದಸಂಕಟಕ್ಕೊಳಪಡಿಸಿ ಗೆಲಿದು ನಲಿದ ರಾಮ ದಾಸರು ಮೈಸೂರಿನ ದಿವಾಣರಾದ ಪೂರ್ಣಯ್ಯನವರಿಂದಲೂ ವಿಶೇಷ ಮಾನ ಮನ್ನಣೆ ಪಡೆದಿದ್ದರಂತೆ.

ಇವರು ಕನ್ನಡದಲ್ಲಿ ನೂರಾರು ಲಲಿತ ಸುಂದರವಾದ ಕೀರ್ತನೆಗಳನ್ನು ರಚಿಸಿದ್ದು ಅವು ಯಾವವೂ ಇನ್ನೂ ವರೆಗೆ ಮುದ್ರಣದ ಮುಖ ಕಂಡಂತಿಲ್ಲ.

## ೩೮ ಶ್ರೀ ಶ್ಯಾಮಸುಂದರ ವಿಠ್ಠಲರು

ಇವರ ಕೃತಿಗಳು ಪರಮ ಸುಂದರವಾಗಿದ್ದರೂ ಹೆಚ್ಚಿನ ಮಾಹಿತಿ ಮಾತ್ರ ದೊರಕಿಲ್ಲ. ಶ್ರೀ ರಾಘವೇಂದ್ರ ಸ್ವಾಮಿಗಳನ್ನೂ, ರಂಗ ಒಲಿದ ದಾಸರಾದ ಶ್ರೀ ಜಗನ್ನಾಥದಾಸರನ್ನೂ ಶ್ರೀ ಗೋಪಾಲದಾಸರನ್ನೂ ತಮ್ಮದೇ ಆದ ವಕ್ರೋಕ್ತಿ ವೈಖರಿಯಿಂದ ಉಲ್ಲೇಖಿಸಿ ಸಲ್ಲಲಿತ ಶಬ್ದಗಳಿಂದ ಬಣ್ಣಿಸುತ್ತಾರೆ.

"ಜಿತಶಂಬರಾಂತಕ ಶಾತಕುಂಭತನಯ |
ಸತತ ಪಾಲಿಸು ಎನ್ನ ಯತಿರಾಘವೇಂದ್ರ | "
"ಮಂಗಳಕರಕುಲಿಶಾಂಗ ಮಹಾಂಬುಧಿ |
ತಿಂಗಳ ಮಾನವಶಿಂಗಾರ್ಯರಸುತ ರಂಗಒಲಿದ ದಾಸರಾಯ"

"ಧೇನುಪಾಲದಾಸಾರ್ಯರ ಪದಯುಗ ।
ಧ್ಯಾನಿತ ಮಾನಿತ ಮಾನವಿನಿಲಯ ।
ರಂಗ ಒಲಿದ ದಾಸರಾಯ ॥ "

ಈ ನುಡಿಗಳಲ್ಲಿಯ ಜಿತಶಂಬರಾಂತಕ=ಕಾಮನನ್ನು ಗೆದ್ದ, ಶಾತಕುಂಭ ಕಶ್ಯಪ ತನಯ=ಹಿರಣ್ಯ ಕಶಪುವಿನ ಮಗನಾದ ಪ್ರಲ್ಹಾದನ, ಅವತಾರರಾದ ಶ್ರೀ ರಾಘವೇಂದ್ರರೆಂದು ಅರ್ಥ. ಮಾನವ ಶಿಂಗಾರ್ಯರ ಸುತ=ನರಸಿಂಹ ವಿಠ್ಠಲರ ಮಕ್ಕಳಾದ ಶ್ರೀ ಜಗನ್ನಾಥದಾಸರು. ಧೇನುಪಾಲದಾಸಾರ್ಯರೆಂದರೆ=ಗೋಪಾಲದಾಸರು.

ಹೀಗೆ ವಕ್ರೋಕ್ತಿಗಳಲ್ಲಿ ವಿಕ್ರಮವನ್ನು ಸಾಧಿಸಿದ ಶಾಮಸುಂದರ ವಿಠ್ಠಲದಾಸರು ಸಹಜೋಕ್ತಿ ವಿಲಾಸದಲ್ಲಿಯೂ ಪ್ರಾಸಾದಿಕತೆ, ಹಾಗೂ ಸರಳ ಸುಂದರವಾದ ವೈದರ್ಭೀ ರೀತಿಯನ್ನು ಬಳಸಿ ಕಾವ್ಯಾಲಾಪದ ರಸಭಟ್ಟಿ ಇಳಿಸಿ ಹೇಳಬಲ್ಲರು.

" ಎಂದು ಕಾಂಬೆನೊ ನಂದಗೋಪನ ।
ಕಂದ ಶ್ರೀ ಗೋವಿಂದನ ।
ಮಂದಾರಾಚಲಧರನ ಯದು ।
ಕುಲಚಂದ್ರ ಗುಣಗಣ ಸಾಂದ್ರನ ॥
ಪಾಲುದಧಿ ನವನೀತ ಚೋರನ ಬಾಲಕೃಷ್ಣ ಗೋಪಾಲನ ।
ಶೈಲ ಬೆರಳಲಿ ತಾಳಿ ಗೋಕುಲ ।
ಪಾಲಿಸಿದ ಪರಮಾತ್ಮನ ।
ಭಾಮಿ ರುಕ್ಮಿಣಿ ರಮಣ ರಂಗನ ।
ಸಾಮಗಾನ ವಿಲೋಲನ ।
ಶ್ರೀಮದಾನಂದ ಮುನಿಕರಾರ್ಚಿತ ಶ್ಯಾಮ ಸುಂದರ ವಿಠಲನ ॥

ಇವರು ಕ್ರಿ. ಶ. ೧೮೬೫ ರಲ್ಲಿ ಇದ್ದಿರಬಹುದೆಂದು ಅವರ ಈ ಎಲ್ಲ ಚರಿತ್ರೆಯನ್ನು ಬರೆದ ಶ್ರೀ ಕಲಮದಾನಿಯವರು ಅಭಿಪ್ರಾಯಪಟ್ಟಿದ್ದಾರೆ.

## ೩೯ ಶ್ರೀ ಗುರುಪ್ರಾಣೇಶವಿಠ್ಠಲರು

ಶ್ರೀ ಪ್ರಾಣೇಶದಾಸರ ಮಕ್ಕಳಾದ ಇವರು ತಂದೆಯಿಂದಲೇ ಗುರು ಪ್ರಾಣೇಶ ವಿಠ್ಠಲ ಎಂಬ ಅಂಕಿತ ಪಡೆದರು. ಶ್ರೀ ಜಗನ್ನಾಥದಾಸರಲ್ಲಿಯೇ ೧೨ ವರ್ಷ ಕಾಲ ವ್ಯಾಸಂಗ ಮಾಡಿ ಸುಧಾ ಹೇಳುವದನ್ನೂ ಪದ ಮಾಡುವದನ್ನೂ ಕಲಿತರು. ಶ್ರೀ ಜಗನ್ನಾಥ ದಾಸರು ಇವರ ಜ್ಞಾನ ಭಕ್ತಿಗಳಿಗೆ ಮೆಚ್ಚಿ ದಾಸ ಪಂಥವನ್ನು ಮುಂದುವರಿಸಬೇಕೆಂದು ತಮ್ಮ ಕೈಯಲ್ಲಿಯ ತಂಬೂರಿಯನ್ನೇ ಕೊಟ್ಟರಂತೆ. ಇವರ ಮನೆತನದವರು ಅದನ್ನು ಈಗಲೂ ಪೂಜಿಸುತ್ತಿರುವರು.

ಇವರು ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಸವದತ್ತಿ ಲಂಗೋಟಿದಾಸರೂ ಶ್ರೀಶಪ್ರಾಣೇಶವಿಠ್ಠಲರೂ ಮೋದವಿಠ್ಠಲರೂ ಇವರ ಶಿಷ್ಯರಲ್ಲಿ ಮುಖ್ಯರಾಗಿದ್ದಾರೆ.

ಇವರ ಪರಮ ಮಿತ್ರರಾದ ಗಾರ್ಲಪಾಡ ಕೃಷ್ಣಾಚಾರ್ಯರು ಇವರು ಕೂಡುತ್ತಿದ್ದ ಕಂಬದ ಬುಡದಲ್ಲಿ ಅವರ ಕಟ್ಟೆಯನ್ನು ಕಟ್ಟಿ ನಿರಂತರ ಪೂಜೆ ನಡೆಯುವಂತೆ ಮಾಡಿದ್ದಾರೆ.

## ೪೦ ಶ್ರೀ ಮನೋಹರವಿಠ್ಠಲರು

ಶ್ರೀ ಜಗನ್ನಾಥ ದಾಸರ ಶಿಷ್ಯರಾದ ಇವರು ಮನೋಹರ ವಿಠ್ಠಲ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನೂ, ಕಿರು ಕಾವ್ಯಗಳನ್ನೂ, ಪ್ರಾಕೃತ ಸ್ತೋತ್ರಗಳನ್ನೂ ರಚಿಸಿದ್ದಾರೆ. ಇವರ ಮೊದಲಿನ ಹೆಸರು ಬುದ್ದಲದಿನ್ನಿ ನಾರಪ್ಪ. ಜಗನ್ನಾಥ ದಾಸರ ಹರಿಕಥಾಮೃತಸಾರಕ್ಕೆ ಸುಂದರವಾದ ಒಂದು ಫಲಶ್ರುತಿಯನ್ನು ಬರೆದಿದ್ದಾರೆ. ಇವರು ರಚಿಸಿದ ಮನ್ಮಥ ವಿಲಾಸವು ೧೯೭ ಪದ್ಯಗಳುಳ್ಳ ಷಟ್ಪದಿ ಕಾವ್ಯವಾಗಿದೆ. ಶ್ರೀ ಕೃಷ್ಣ ಜಯಂತಿ ಕಾವ್ಯದಲ್ಲಿ ವಾರ್ಧಿಕ ಷಟ್ಪದಿಯ ನೂರು ಪದ್ಯಗಳಿರುತ್ತವೆ. ಇವರ ಕಾವ್ಯದಲ್ಲಿ ಅರ್ಥಾನುಗುಣವಾದ ಪ್ರಾಸದ ಕಿಂಕಿಣಿ ನಾದವು ಹಿತಮಿತವಾಗಿ ಕಂಡುಬರುತ್ತದೆ. ಕಥಾವಸ್ತು ಹಳೇದಾದರೂ ಕವಿ ಪ್ರಜ್ಞೆಯು ಕಲ್ಪನೆಯ ವೈಚಿತ್ರ್ಯದಿಂದಹೊಸತನವನ್ನು ಸಾಧಿಸಿ ತೋರಿಸಿದೆ.

ಈ ಪುರಾಣ ಕಥೆಗಳಲ್ಲಿ ಕಲ್ಪನಾ ಕುಶಲವಾದ ಕವಿ ಪ್ರತಿಭೆಯು ಸ್ವಂತಿಕೆಯ ಧೀಮಂತಿಕೆಯಿಂದ ತನ್ನ ತನವನ್ನು ಮೆರೆದಿದೆ. ಕುಮಾರವ್ಯಾಸ, ಲಕ್ಷ್ಮೀಶರ ಶೈಲಿಯ ಬಿಣ್ಪು, ಕಾವ್ಯದ ಕೆಚ್ಚು ಎರಡೂ, ಇವರ ಶಬ್ದಶಯ್ಯೆಯಲ್ಲಿ ಜೀವನಾಡಿಗಳಾಗಿ ಮೂಡಿ ಮಿಂಚಿವೆ. ಇವರ ಶೈಲಿಯ ಶ್ರೀಮಂತಿಕೆಗೆ ಅವರ ಫಲಶ್ರುತಿಯ ಸಂಧಿಯಲ್ಲಿ ಒಂದು ಪದ್ಯವನ್ನು ಮಾದರಿಗಾಗಿ ಓದಿಕೊಳ್ಳಬಹುದು.

" ವಾದಿಗಳ ಎದೆಶೂಲ ಕುಮತವ |
ಭೇದಿಸುವ ಕರ ವಾಲ ಕಾಮ |
ಕೋಧತರಿದಾನಂದ ವೀವುದು ಹರಿಕಥಾಮೃತವು ||
ಪಾದ ಮಾತ್ರವ ಪಠಿಸುವಗೆ ಗಂಗಾದಿ ಸ್ನಾನಫಲವು ಬಹದುಮು |
ನ್ನೋದಿದವನೇ ಧನ್ಯತಮ ಪುಸ್ತಕ ಸಮಗ್ರವನು ||
ಇದು ಸುಧಾಮಣಿ ಚಿಂತಿಸುವಂ |
ಗಿದು ಅಭೀಷ್ಟವನೀವ ಸುರತರು |
ವಿದುಮನದ ಕಾಮಿತವ ಕರಕೊಂಬುದಕೆ ಸುರಧೇನು ||
ಇದು ಚತುರವಿಧದಾ ಪುರುಷಾ |
ರ್ಥದ ಸುಮಾರ್ಗವ ಭಕ್ತಿಯಿಂದಲಿ |
ಸದಮಲ ಶ್ರೀ ಹರಿಕಥಾಮೃತಸಾರ ಕೇಳ್ವರಿಗೆ || "

ಇತ್ತೀಚೆಗೆ ಮನೋಹರ ವಿಠ್ಠಲದಾಸರ ಅನಂತಕಥಾ ಎಂಬ ಕಾವ್ಯವನ್ನೂ ಶ್ರೀ ಗೋರೇಬಾಳ ಹಣಮಂತರಾಯರು ಶೋಧಿಸಿ ಪ್ರಕಟಿಸಿದ್ದಾರೆ. ಇವಲ್ಲದೇ ಅವರ ಗದಾಯುದ್ಧ, ಪಂಚಪರ್ವಭಾರತ, ಸಂಕೋಚಭಾರತ ಮುಂತಾದ ಕಾವ್ಯಗಳು ಅಮುದ್ರಿತವಾಗಿಯೇ ಉಳಿದಿವೆ. ಶ್ರೀಪ್ರಾಣೇಶವಿಠ್ಠಲರಂಥ ಮಹಾಜ್ಞಾನಿಗಳು ಸ್ವಯಂ ತಾವೇ ಇವರ ಕೃಷ್ಣ ಜಯಂತೀಕಥಾ ಮತ್ತು ಮನ್ಮಥವಿಲಾಸ ಕಾವ್ಯಗಳನ್ನು ತಮ್ಮ ಹಸ್ತಾಕ್ಷರಗಳಿಂದ ಬರೆದಿಟ್ಟಿದ್ದಾರೆ. ಇದರ ಮೇಲಿಂದ ಮನೋಹರ ವಿಠ್ಠಲರ ಕೃತಿಗಳು ಎಷ್ಟು ಮನೋಹರವಾಗಿರುವವು ಎಂಬ ಕಲ್ಪನೆ ಬರಲು ಸಾಕು.

ಇವರ ಕೃತಿಗಳಲ್ಲಿ ಅನಂತಕಥಾ ಕಾವ್ಯವು ಅರಸುಕೃತಿಯಾಗಿದೆ. ವಾರ್ಧಿಕ ಷಟ್ಪದಿಯ ವೃತ್ತದಲ್ಲಿ ಬರೆಯಲ್ಪಟ್ಟ ಈ ಕಾವ್ಯವು ಮಹಾ ಕಾವ್ಯದ ಮಹತಿಯನ್ನು ಮೆರೆದಿದೆ. ಕುಮಾರವ್ಯಾಸ, ಲಕ್ಷ್ಮೀಶ, ಕುಮಾರ ವಾಲ್ಮೀಕಿ ಮುಂತಾದವರ ಕೃತಿಗಳಿಗೆ ಹೊಯ್‌ಕೈಯ್ಯಾಗಿ ನಿಲ್ಲಬಲ್ಲ ಈ ಅನುಪಮ ಮಹಾ ಕಾವ್ಯದಲ್ಲಿ ವೈಷ್ಣವೀಯ ಪ್ರತಿಭೆಯ ಕಾವ್ಯಮುಖದ ದರ್ಶನವಾಗುತ್ತದೆ. ಇದರ ಕಥಾವಸ್ತು ಮಹಾಭಾರತಾದಿ ಪ್ರಾಚೀನ ಗ್ರಂಥಗಳಿಂದ ಎತ್ತಿಕೊಂಡಿದ್ದರೂ ಮನೋಹರ ವಿಠ್ಠಲರ ಪ್ರತಿಭೆಯ ಕಲಾ ಕುಂಚದ ಕೈವಾಡದಿಂದ ನಿರೂಪಣದ ನಾವೀನ್ಯವು ಮೌಲಿಕತೆಯ ಮೆರಗನಾಂತು ರಸದ ಹೊಸತನವನ್ನು ಸೊಗಯಿಸಿದೆ. ಇದರಲ್ಲಿ ಪ್ರಾಚೀನ ಕಥಾವಸ್ತುವಿನ ಅನುಸರಣವಿದ್ದರೂ ಅನುಕರಣವಿಲ್ಲ. ಕಾವ್ಯದ ಶಯ್ಯೆಯಲ್ಲಿ ನಾಟಕೀಯ ಸನ್ನಿವೇಶ ಗಳನ್ನು ಸೂಕ್ತವಾಗಿ ಅಳವಡಿಸಿದ್ದು ಕವಿಯ ಕಲಾವಂತಿಕೆಯನ್ನೂ ಸಾಹಿತ್ಯ ಪ್ರಜ್ಞೆಯನ್ನೂ ಎತ್ತಿತೋರುತ್ತದೆ.

ಇವರ ಶೈಲಿಯ ಬೆಡಗಿನ ನಡಿಗೆಗೆ ಒಂದೆರಡು ಪದ್ಯಗಳನ್ನು ನೋಡಿರಿ—

ಕಲಹಂಸ ಸಾರಸ ಚಕೋರದಿಂ ಕೀರದಿಂ ।
ಕಲಕಲ ಧ್ವನಿಯ ಕಾರಂಡದಿಂ ತಂಡದಿಂ ।
ಕಲೆತು ಚೆರಚೆರವ ಬಕ ಕೋಕಿಯಂ ಕೇಕಿಯಿಂಮಲಿವನೀರ್ವಕ್ಕಿಯಿಂದ ।
ಸುಳಿಸುಳಿವ ಜಲಚರ ಪ್ರಾಣಿಗಳ ಶ್ರೇಣಿಗಳ ।
ಚಲುವಿಕೆಯ ಕುಮುದ ಕಲ್ಹಾರದಿಂ ನಾರದಿಂ ।
ಬೆಳೆದಬ್ಜ ಕುಸುಮಗಳ ಜಾಲದಿಂ ಕೂಲದಿಂದ್ವಯ ಸರಸಿಗಳ್ಮೆರೆದವು ॥

ಮನೋಹರ ವಿಠಲರ ಗುರುರಾಘವೇಂದ್ರ ಸ್ತೋತ್ರವೂ ಇಷ್ಟೇ ಮನೋಹರ ವಾದ ಕಾವ್ಯವಾಗಿದೆ. ಒಟ್ಟಾರೆ ಮನೋಹರ ವಿಠ್ಠಲರೂ ಬರೀ ದೇವರ ನಾಮದ ದಾಸಯ್ಯರಾಗದೆ ದಾಸೋಲ್ಲಾಸಗೈಯ್ಯುವ ಕವಿಬ್ರಹ್ಮ ಎಂದು ಹೇಳಬಹುದು.

# ೪೧ ಶ್ರೀ ಸುರಪುರದ ಆನಂದದಾಸರು

ವಿಜಯ ದಾಸರ ತಪೋಭೂಮಿಯಾದ ಚೀಕಲಪರವಿಯ ಆನಂದದಾಸರು ಸುರಪುರದ ರಾಜಾಚಾರ್ಯರಲ್ಲಿ ಅಧ್ಯಯನಮಾಡಿ ಮಹಾ ಪಂಡಿತರಾದರು. ಶಾಸ್ತ್ರ ಪಾಂಡಿತ್ಯಕ್ಕೆ ಸಮಾನವಾಗಿಯೇ ಸಂಗೀತವಿದ್ಯೆಯಲ್ಲಿಯೂ ಅದ್ಭುತವಾದ ವೈದುಷ್ಯವು ಇವರಿಗೆ ಸ್ವಾಧೀನವಾಯಿತು.

ಗಾನವಿದ್ಯೆಯಲ್ಲಿಯ ಇವರ ಗಾಂಧರ್ವಪಾಂಡಿತ್ಯಕ್ಕೆ ಮೆಚ್ಚಿ ಆ ಕಾಲದ ಸುರುಪುರದ ಮಹಾರಾಜನು ಇವರಿಗೆ ಉದಾರಾಶ್ರಯವನ್ನಿತ್ತು ತನ್ನ ಅರಮನೆಯ ಸಂಗೀತ ವಿದ್ವಾಂಸರನ್ನಾಗಿ ನೇಮಿಸಿಕೊಂಡನು. ಅಂತಃಪುರದ ರಾಣೀವಾಸ ಹಾಗೂ ದಾಸೀ ವರ್ಗಕ್ಕೆಲ್ಲ ಆನಂದಾಚಾರ್ಯರಿಂದಲೇ ಸಂಗೀತ ಅಭ್ಯಾಸ ನಡೆಯಿತು. ಆನಂದಾ ಚಾರ್ಯರ ಬಡತನ ಹಿಂಗಿತು. ವೈಭವದ ಜೀವನ ವಿಲಾಸಲಾಲಸೆಗೂ ಎಳೆಸುವದರಲ್ಲಿತ್ತು.

ಅಷ್ಟರಲ್ಲಿ ಒಂದು ದಿನ ಅಲ್ಲಿಗೆ ಶ್ರೀಶವಿಠ್ಠಲಾಂಕಿತರಾದ ಶ್ರೀ ಹುಂಡೇಕಾರ ದಾಸರು ದಯಮಾಡಿಸಿದರು. ಸುರಪುರದ ರಾಜಾಸ್ಥಾನದಲ್ಲಿ ನಡೆದ ಅವರ ಕೀರ್ತನೆಗಳು ಆನಂದಾಚಾರ್ಯರ ಮನಸ್ಸಿನಲ್ಲಿ ಬಹಳ ಪರಿಣಾಮವನ್ನುಂಟು ಮಾಡಿದವು. ತತ್ಕ್ಷಣವೇ ಮನಃಪಲ್ಲಟವಾಗಿ ವಿಷಯಾನಂದದಲ್ಲಿ ಹಿಗ್ಗುತ್ತಿದ್ದ ಆನಂದನ ಮನಸ್ಸು ಬ್ರಹ್ಮಾನಂದ, ಆತ್ಮಾನಂದ ಎಂದು ಕರೆಯಿಸಿಕೊಳ್ಳಲ್ಪಡುವ ಭಗವನ್ನಾಮಾನಂದವನ್ನು ಹೊಂದುವದಕ್ಕೆ ಹಾತೊರೆಯತೊಡಗಿತು.

ಆನಂದನ ಭಕ್ತಿಗೆ ಅಭಿಮುಖವಾದ ಮನಃಪರಿಪಾಕವನ್ನು ಕಂಡು ಶ್ರೀಶದಾಸರು ಅವರಿಗೆ ಬ್ರಹ್ಮವಿದ್ಯೋಪದೇಶವನ್ನು ಮಾಡಿದರು. ವೈರಾಗ್ಯ ಹಾಗು ನಾಮ ಸ್ಮರಣೆಗಳ ಮಹತ್ವವನ್ನು ಬೋಧಿಸಿದರು. "ಕಮಲೇಶ ವಿಠ್ಠಲ"ಎಂಬ ಅಂಕಿತವನ್ನಿತ್ತು ಹರಿದಾಸ ಪದವಿಯಲ್ಲಿ ಪಟ್ಟಾಭಿಷೇಕ ಮಾಡಿದರು.

ಅಂದಿನಿಂದ ಈ ಗಾನ ಗಂಧರ್ವನ ಜೀವನದಲ್ಲಿ ಹೊಸ ಅಧ್ಯಾಯವೇ ಪ್ರಾರಂಭ ವಾಯಿತು. ವೈರಾಗ್ಯವೇ ಅವರ ಸೌಭಾಗ್ಯವಾಯಿತು. ಧ್ಯಾನವೇ ಅವರ ಗಾನ ವಾಯಿತು. ಸಂತತ ಹರಿಕಥಾ ಕೀರ್ತನವೇ ಅವರ ನಿತ್ಯ ಕರ್ತವ್ಯವಾಯಿತು.

ಸಂಗೀತದಲ್ಲಿ ಘನಪಂಡಿತರೂ ದ್ವೈತ ವೇದಾಂತದಲ್ಲಿ ಅಪ್ರತಿಮ ವಿದ್ವಾಂಸರೂ ಆದ ಆನಂದದಾಸರ ಬೋಧಪ್ರದವೂ ಭಾವಪೂರ್ಣವೂ ಭಕ್ತಿಭರಿತವೂ ಆದ ಹರಿಕಥೆ ಗಳಿಗೆ ಅವರ ಕಿನ್ನರ ಕಂಠದ ಮಧುರ ನಾದಶ್ರೀಯೂ ಸೇರಿ ಅದೊಂದು ನಾಟಕ

ದಂತೆ ಜನರಿಗೆ ರಂಜಕ ರೋಚಕವಾಗಿರುತ್ತಿತ್ತು. ಗದ್ವಾಲ, ವನಪರ್ತಿ, ಸುರಪುರ ಮುಂತಾದ ರಾಜದರ್ಬಾರುಗಳಲ್ಲಿ ಅವರ ಹರಿಕಥೆ, ತಾರತಮ್ಯಾನುಸಾರ ಭಜನೆ, ಹಾಗೂ ಸಂಗೀತ ಪ್ರವಚನಗಳು ರಾಜ ಮಹಾರಾಜರ, ಪಂಡಿತ ಪಾಮರರ, ಮಾನ್ಯ ಸಾಮಾನ್ಯರೆಲ್ಲರ ಮನಸ್ಸನ್ನು ಸೂರೆಗೊಂಡವು.

ಹಿಂದುಸ್ಥಾನೀ, ಕರ್ನಾಟಕೀ ಸಂಗೀತ ಪದ್ಧತಿಗಳ ಮಧುರ ಸಂಗಮವು, ಅವರ ಕೀರ್ತನೆಗಳನ್ನು ಹೃದಯಂಗಮವಾಗಿಸುತ್ತಿದ್ದವು. ಭರತ ನಾಟ್ಯಕ್ಕೆ ಅನುಕೂಲವಾದ ಅನೇಕ ಭಾವಾಭಿವ್ಯಂಜಕ ಮಟ್ಟು ಗುಟ್ಟುಗಳನ್ನು ಅವರು ತಮ್ಮ ವಿವಿಧ ಜಾವಡಿಗಳಲ್ಲಿ ಸಂಗ್ರಹಿಸಿದ್ದರು.

ಆನಂದದಾಸರ ಜಾವಡಿಗಳ ಜಾಡಿನಲ್ಲಿ ಹಾಡುವವರು ಮತ್ತು ಸರಿಯಾದ ಅಭಿನಯ ನೀಡುವವರು ಆ ಕಲೆಯೇ ಲುಪ್ತವಾಗಿ ಹೋಗಿರುವದರಿಂದ ಯಾರೂ ಈಗ ದೊರಕುವದಿಲ್ಲ.

ಇವರ ಈ ಕೀರ್ತನ ವೈಭವದ ಕೀರ್ತಿಯನ್ನು ಕೇಳಿ ಕೊಲ್ಹಾಪುರದ ಮಹಾರಾಜರು ಇವರನ್ನು ಕರೆಯಿಸಿ ಸತ್ಕರಿಸಿ ಕಳಿಸಿದರು.

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಅರಮನೆಯಲ್ಲಿ ಆನಂದದಾಸರ ಹರಿಕಥೆಗಳನ್ನು ಮಾಡಿಸಿ ಪರಮಾನಂದಪಟ್ಟರು. ಅವರ ಗಾನ, ಧ್ಯಾನ, ಭಕ್ತಿವಿಧಾನಗಳಿಗೆ ಮನಸೋತು ಆನಂದದಾಸರಿಗೆ ಸ್ವತಃ ಮಹಾರಾಜರು ಕನಕಾಭಿಷೇಕ ಮಾಡಿದರು.

ಮುಂದೆ ಸುರಪುರದ ಮಹಾರಾಜನು ಮೃತನಾದ ಬಳಿಕ ಅವನ ದತ್ತು ಪುತ್ರನಲ್ಲಿ ಆ ಗುರುಭಕ್ತಿ ಹರಿಶ್ರದ್ಧೆಗಳು ಉಳಿಯಲಿಲ್ಲ! ಹಿಂದಿನ ಮಹಾರಾಜನು ಭಕ್ತಿಯಿಂದ ಆನಂದದಾಸರಿಗೆ ಕೊಡುತ್ತಿದ್ದ ಪಡಿಭತ್ಯವನ್ನೂ, ಮಾಸಾಶನವನ್ನೂ ಹೊಸರಾಜನು ನಿಲ್ಲಿಸಿಬಿಟ್ಟನು.

ಹರಿಭಕ್ತರಿಗೆ ಸಲ್ಲುವ ಸಹಾಯವನ್ನು ನಿಲ್ಲಿಸಿದ ದಿನದಿಂದಲೇ ಆ ಸಂಸ್ಥಾನಕ್ಕೆ ಅಳಿಗಾಲವು ಪ್ರಾರಂಭವಾಯಿತು. ಸಂಸ್ಥಾನವನ್ನು ಬ್ರಿಟಿಶರು ಖಾಲಸಾ ಮಾಡಿದರು. "ವಿದ್ವಾನ್ ಸರ್ವತ್ರ ಪೂಜ್ಯತೇ" ಎಂಬಂತೆ ಆನಂದದಾಸರಿಗೆ ಹೋದಲ್ಲೆಲ್ಲ ಆದರ, ಬಂದಲ್ಲೆಲ್ಲ ಗೌರವ, ಬೇಕಾದಷ್ಟು ಧನ, ಕನಕ, ಮಾನ, ಮನ್ನಣೆ ಎಲ್ಲವೂ ಸಮೃದ್ಧವಾಗಿಯೇ ನಡೆಯಿತು.

ಆದರೆ ದಾಸರಿಗೆ ಈ ಎಲ್ಲ ಲೌಕಿಕ ಭೋಗಭಾಗ್ಯಗಳಲ್ಲಿ ಎಂದೋ ಉಪರತಿ ಹುಟ್ಟಿತ್ತು. ವೈರಾಗ್ಯವು ಭಗವನ್ನಿಷ್ಠೆಯೊಂದಿಗೆ ಅವರ ಅಂತರಂಗದ ಕದ ಕಟ್ಟಿತ್ತು.

ಎಲ್ಲ ಲೌಕಿಕ ವೈಭವ ಗೌರವಗಳನ್ನು ತೊರೆದು ಇಭರಾಮಪುರದ ಅಪ್ಪಾಅವರ ಸನ್ನಿಧಿಗೆ ಬಂದರು. ಆಚಾರ್ಯರು ದಾಸರಿಗೆ ಏಕಾಂತಭಕ್ತಿಯ ರಹಸ್ಯ ಮಾರ್ಗವನ್ನು ತಿಳಿಸಿಕೊಟ್ಟರು. ಇಬ್ಬರೂ ಕೂಡಿ ಮಂತ್ರಾಲಯಕ್ಕೆ ಬಂದು ಗುರುಸಾರ್ವಭೌಮರ ಸೇವೆ ಮಾಡಿದರು.

ಆ ಗುರುಗಳ ಕರುಣೆಯಿಂದ ಆನಂದದಾಸರಿಗೆ ದಿವ್ಯಾನುಭವವು ಉಂಟಾಯಿತು. ಇವರು ತಮ್ಮ ಒಂದು ಕೀರ್ತನೆಯಲ್ಲಿ ತಮ್ಮ ಸಮಕಾಲೀನರಾದ ಅನೇಕ ಮಾಧ್ವ ಮತದ ಮಹಾನುಭಾವರನ್ನು ವಂದಿಸಿದ್ದಾರೆ.

" ಅಲವಬೋಧ ಸತ್ಕುಲ ದೀಪರೆನಿಸಿದ ।
ಹುಲಿಗಿ ನರಸಪ್ಪ ಆಚಾರ್ಯರ, ಕಲಿಯೊಳು ।
ಕಲಿಕೃತ ಕಲ್ಮಷ ಕಳೆವನಿ ।
ಮಲ ರಾಯಚೂರ ಕೃಷ್ಣಾಚಾರ್ಯರ ।
ಇಳೆಯೊಳು ಚೌಷಷ್ಟಿ ಕಳದಿ ।
ನಿಪುಣರಾದ ಯಳಮೇಲಿ ಹಯಗ್ರೀವಾಚಾರ್ಯರ ।
ಹಲವು ಸಜ್ಜನರೊಳು ತಿಳಿಸಿಕೊಳ್ಳದಲಿಪ್ಪ ।
ಬಲವಂತಯೋಗಿ ನಾರಾಯಣಾಚಾರ್ಯರ ।...........
...............................................................
ಹರಿದಾಸರಿಗೆ ಮಂದಿರವಾದ ಇಭರಾಮಪುರದಲ್ಲಿ ।
ಮೆರೆವ ಕೃಷ್ಣಾಚಾರ್ಯರ ।.................... ...
ಸುರಪುರದ ನರಹರಿಯ ಪಾದಾಂಬುಜ ।
ಸಿರಿಯೊಳ್ ಮೆರೆವ ಅಸ್ಮದ್ ಗುರುರಾಜಾರ್ಯರ ॥ "

ಎಂದು ಮುಂತಾಗಿ ಉಲ್ಲೇಖಿಸಿದ್ದಾರೆ.

ಆನಂದದಾಸರ ಕೀರ್ತನೆಗಳಲ್ಲಿ ದೇವತಾ ವರ್ಣನೆಯು ಶ್ರೀ ಹರಿಯ ಮಹಾ ಮಹಿಮೆಯೊಡನೆ ಒಳ್ಳೆ ಕಲಾತ್ಮಕವಾಗಿ ಆವಿಷ್ಕಾರವನ್ನು ಪಡೆದಿದೆ. ಭಗವದ್ಗೀತೆಯ ೧೮ ಅಧ್ಯಾಯಗಳನ್ನೂ ಮೂರು ಷಟ್ಕವಾಗಿ ವಿಂಗಡಿಸಿ ಕೀರ್ತನಗೀತೆಯೆಂಬ ಹೆಸರಿನಿಂದ ಆನಂದದಾಸರು ಬರೆದಿಟ್ಟಿದ್ದಾರೆ. ಈ ಕೀರ್ತನ ಗೀತೆಯ ಕನ್ನಡೀಕರಣದ ಕ್ರಮವು ಕೂಡ ತೀರ ಹೊಸ ರೀತಿಯಲ್ಲಿ ಆಗಿದೆಯೆಂದು ಹೇಳಬಹುದು. ಸಂಸ್ಕೃತ ಭಗವದ್ಗೀತೆಯ ಪ್ರತಿ ಅಧ್ಯಾಯದ ಸಾರವನ್ನು ಮೊದಲು "ಎರಡು ಪದಗಳು ಅನಂತರ ಕೆಲವು ಆರ್ಯಾವೃತ್ತದ ಪದ್ಯಗಳು. ಅದಾದ ಬಳಿಕ ಉಳಿದ ಭಾಗಗಳಲ್ಲಿ ಕನ್ನಡದ ದೇಶಿ ಛಂದಸ್ಸಾದ ಷಟ್ಪದಿಗಳು." ಈ ಕ್ರಮದಿಂದ ಸುಂದರ ಬಂಧುರವಾಗಿ ನಿರೂಪಿಸುತ್ತ ಹೋಗುತ್ತಾರೆ. ಈ ಕೀರ್ತನೆಗಳಲ್ಲಿ ಬರುವ ಭಗವಂತನ ವಿಶ್ವರೂಪ ವರ್ಣನೆಯಂತೂ

ಪ್ರೌಢ ಕನ್ನಡದ ಲಲಿತ ದಂಡಕದಲ್ಲಿ ಶ್ರೀರಾಮಾನುಜಾಚಾರ್ಯರ ವೈಕುಂಠ ಗದ್ಯದಂತೆ ಪ್ರಸನ್ನಮನೋಹರವಾಗಿ ಮೊಳಗಿದೆ. ಇವರಲ್ಲಿ ದಾಸರ ನಾದಿಷ್ಠತೆ, ಛಾಂದಿಷ್ಠತೆ, ರಾಗಿಷ್ಠತೆಗಳು ಭಗವನ್ನಿಷ್ಠತೆಯೊಡನೆ ಬೆರೆತು ಮಿಶ್ರ ಮಾಧುರಿಯ ಅಪೂರ್ವ ಮಾದರಿಯನ್ನು ಒದಗಿಸಿವೆ.

ಅವರ ಬಿಡಿ ಪದ್ಯಗಳಲ್ಲಿಯೂ ಶಬ್ದಸ್ವಾಮಿತ್ವ ಭಾವಪ್ರಭುತ್ವಗಳು ಚನ್ನಾಗಿ ಗುರುತು ತೋರುತ್ತವೆ. ಸಮಯೋಚಿತವಾದ ಅನಾಸೋಪಸ್ಥಿತ ಪ್ರಾಸಗಳು ಅರ್ಥದ ಅಭಿವ್ಯಕ್ತಿಗೂ ಭಾವೋಡ್ಡಾಣಕ್ಕೂ ಅನುವನ್ನುಂಟು ಮಾಡಿಕೊಡುತ್ತವೆ.

"ರಮಾ ಸಮುದ್ರನ ಕುಮಾರಿ ನಿನ್ನಯ ಸಮಾನರ್ಯಾರಮ್ಮ ।
ಸುಮಾಸ್ತ್ರನಯ್ಯನ ಎದೆಯ ಮೇಲೆ ಸತತ ಬ ।
ಹುಮಾನದಲಿ ಮೆರೆವ ಮಹಾ ಮಹಿಮಳೆ ॥ಅ॥
ಕನಕಮುಕುಟಮಂಡಿತ ಕುಟಿಲಾಳಕಜಾತೆ ಶ್ರೀ ಚಂ ।
ದನ ಕುಂಕುಮ ಕಸ್ತೂರಿ ತಿಲಕಾಂಕಿತ ಫಾಲೆ ।
ಮಣಿಮಯ ಕುಂಡಲ ಶೋಭಿತ ಕರ್ಣಕಪೋಲೆ ।
ಚಂಪಕ ।
ನನೆನಾಸಾಗ್ರದೊಳೊಗುವ ಮೌಕ್ತಿಕಲೋಲೆ ।
..................................................

## ೪೨ ಶ್ರೀ ಅಣ್ಣಾವಧೂತರು

ಇವರಿಗೆ ಬಡ ಅಣ್ಣೈಯಾಚಾರ್ಯರೆಂದು ಹೆಸರು. ತುಂಗಾ ವರದಾ ನದಿಗಳ ಮಧ್ಯಪ್ರದೇಶದಲ್ಲಿ ತುಂಡು ಪಂಚೆ ಉಟ್ಟು ಧಾಬಳಿ ಹೊದ್ದು ಕೈಯಲ್ಲಿ ಟೆಂಗಿನ ಚಿಪ್ಪು ಹಿಡಿದು ಅಡ್ಡಾಡುವ ಅಣ್ಣೈಯಾಚಾರ್ಯರು ಅವಧೂತರೇ ಆಗಿದ್ದರು. ಕರತಲಭಿಕ್ಷೆ, ತರುತಲ ನಿವಾಸವೇ ಅವರ ಜೀವನಚರ್ಯೆ. ಇವರ ಹುಚ್ಚನ ವೇಷವನ್ನು ಕಂಡು ಹುಡುಗರು ಬೆನ್ನುಹತ್ತುತ್ತಿದ್ದರು. ಯಾರದಾದರೂ ಅಂಗಡಿಗೆ ನುಗ್ಗಿ ಹಿಡಿಹಿಡಿ ತಿನ್ನುವ ಸಾಮಾನುಗಳನ್ನು ನಿರ್ಭಯವಾಗಿ ತೆಗೆದುಕೊಂಡು ಹುಡುಗರಿಗೆಲ್ಲ ಹಂಚಿಬಿಡುತ್ತಿದ್ದರು. ಇವರ ಕೈ ಮುಟ್ಟಿದ ಅಂಗಡಿಗಳ ಏಳ್ಗೆ ಯಾಗುವದು ನಿತ್ಯಾನುಭವವಾಗಿದ್ದಿತು. ಹಾಗೆಂದು ಅಂಗಡಿಕಾರರು ಕರೆದರೂ ಬರುತ್ತಿದ್ದಿಲ್ಲ. ಬೇಡ ಅಂದರೆ ಬಿಡುತ್ತಿದ್ದಿಲ್ಲ.

ಒಮ್ಮೆ ಅಣ್ಣಾವಧೂತರು ಸವಣೂರ ನವಾಬನನ್ನು ತಲೆಗೊಂದು ಸಣಬಿನ ಹಗ್ಗವನ್ನು ಸುತ್ತಿಕೊಂಡು ಭೆಟ್ಟಿಯಾಗಿದ್ದರಂತೆ. ಅವರಿಂದ ಪ್ರಭಾವಿತನಾದ ನವಾಬನು

ವಿಪುಲವಾಗಿ ಮುತ್ತು, ರತ್ನ, ಧನ, ಕನಕಗಳನ್ನು ಹೊರಿಸಿ ಕಳಿಸಿದನಂತೆ. ಅದೆಲ್ಲವನ್ನೂ ಅರಮನೆಯ ಹೊರಗೆ ಬಂದಕೂಡಲೇ ಭಿಕ್ಷುಕರಿಗೂ, ಬಾಲಕರಿಗೂ ಹಂಚಿ "ಭವತಿ ಭಿಕ್ಷಾನ್ ದೇಹಿ" ಎನ್ನುತ್ತ ಮುಂದೆ ನಡೆದರಂತೆ.

ಇವರು ಸಂಸ್ಕೃತದಲ್ಲಿಯೂ ಉರ್ದು ಭಾಷೆಯಲ್ಲಿಯೂ ಕನ್ನಡದಲ್ಲಿಯೂ ಅನೇಕ ಪದಪದ್ಯಗಳನ್ನು ರಚಿಸಿದ್ದಾರೆ. ವಿಠ್ಠಲವ್ಯಾಸ ಅಂಕಿತದಿಂದ ಇವರು ರಚಿಸಿದ ಪದ್ಯಗಳು ಅತ್ಯಂತ ಹೃದ್ಯವಾಗಿವೆ. ಅವರ ಛಂದಸ್ಸಿನ ಸ್ವಚ್ಛಂದ ಗತ್ತುಗಳು ಭಕ್ತಿ ಉದ್ದೀಪನಕ್ಕೆ ಕಾರಣವಾಗುತ್ತವೆ.

"ದಾವಾಧಾರದ ದುರ್ವಿಷಯದಿನಿ ।
ಮುಳುಗಿ ಹರಿಯುತ್ತಿದ್ದಿ ।
ಕೋವಿದರನು ಕೇಳಿ ಜೀವಕೆ ಸುಖ ।
ವಾವಾವಾ ತೆರದಿ ।
ಕಾಲನುದೂತರ ಕರುಣುಳ್ಳವರೇ ಹಾಳಾಯಿತೆ ಯಮನೂರು ।
ಭಾಳ ದೂರ ಹೋಗ್ಯಾರೆ ಬಂದರೆ ನಾಳೆ ಹೇಳುವರ್ಯಾರು ।
ತಾಳೆಂದರೆ ತಾಳ್ವರೇ ರವಿಶಶಿಗಳು ಆಳುಗಳೆ ನಿನಗವರು ।
ಇಷ್ಟು ಭವಣಿ ಮುಂದಿಟ್ಟುಕೊಂಡು ।
ನೀನು ಕೆಟ್ಟು ಹೋಗಬೇಡ ।
ದೃಷ್ಟಿ ಒಬ್ಬನಲ್ಲಿಟ್ಟರೆ ಜಗದೊಳು ।
ಕಷ್ಟಾಹುದೆ ನೋಡಾ ।
ಥಟ್ಟನೆ ಈ ಭವನಷ್ಟಾಗುವಹಾಂ ।
ಗಿಷ್ಟು ಮಾಡು ಮೂಢ ।
ವಿಠ್ಠಲ ವೇದವ್ಯಾಸನ ನಿಜಪದ
ನಿಷ್ಠೆಯ ಬಿಡಬೇಡ ॥

ಅಣ್ಣಾವಧೂತರು ಜೀವನದಂತೆ ಸಾಹಿತ್ಯದಲ್ಲಿಯೂ ಅವಧೂತರೇಸರಿ. ಛಂದಸ್ಸಿನ ಬಂಧಗಳಾಗಲೀ ವ್ಯಾಕರಣದ ನಿರ್ಬಂಧಗಳಾಗಲೀ ಅವರ ಭಕ್ತಿಯ ಪ್ರವಾಹದ ಸ್ವಯಮುದ್ಗಾರವನ್ನು ತಡೆಯಲಾರವು.

## ೪೩ ಶ್ರೀ ಪಾಂಡುರಂಗವಿಠ್ಠಲರು

ಕಡಪಾ ಜಿಲ್ಲೆಯ ವಾಮನಪೇಟೆಯಲ್ಲಿರುವ ವೇದವ್ಯಾಸಾಚಾರ್ಯರೆಂಬವರಿಗೆ ನಾಗೇಶಾಚಾರ್ಯರೆಂಬ ಶಿಷ್ಯರಿದ್ದರು. ಆ ನಾಗೇಶಾಚಾರ್ಯರ ಶಿಷ್ಯರೇ ಪ್ರಕೃತ ಶ್ರೀ ಶ್ರೀ ಪಾಂಡುರಂಗವಿಠ್ಠಲದಾಸರು. ಇವರ ಮೊದಲಿನ ಹೆಸರು. ವೆಂಕಟರಮಣದಾಸರು. ಇವರಗ್ರಾಮ ಮಣಿಗೊಂಡ. ಇವರ ತಂದೆಯ ಹೆಸರು ಕೃಷ್ಣದಾಸರು. ಈ ವೆಂಕಟ ರಮಣದಾಸರು ಪಾಂಡುರಂಗವಿಠ್ಠಲರೆಂಬ ಹೆಸರಿನಿಂದ ಕೀರ್ತನೆಗಳನ್ನು ರಚಿಸಿದ್ದಾರೆ. ಮತ್ತು ನಿಗಮಕ್ಷೀರಾಬ್ಧಿಮಥನಕಥಾ ಎಂಬ ಆಧ್ಯಾತ್ಮಿಕ ಕಾವ್ಯವನ್ನು ಬರೆದಿದ್ದಾರೆ. ಇದರಲ್ಲಿ ನೂರಕ್ಕೂ ಮಿಕ್ಕಿ ಪದ್ಯಗಳಿರುತ್ತವೆ.

ಈ ಕಾವ್ಯದಕೊನೆಯ ಪದ್ಯದಲ್ಲಿ

" ಇಂತೆನುತ ಮಣಿಗೊಂಡ ವೆಂಕಟ ।
ರಮಣ ಕೃಷ್ಣಾಭಿದರಸುತಭ ।
ಕ್ತಿಂದ ಶ್ರೀ ಮೂಳಗಿರಿವಂವ ಶಾಂಬುನಿಧಿ ಶಶಿ ನಾಗೇಶಗುರುಶಿಷ್ಯ ॥
ಕಂತುಪಿತಪ್ರಸನ್ನ ಪಾಂಡುರಂಗ ವಿಠ್ಠಲಗೆ ವಾಯುಗುರುವಿಗೆ ।
ಎಂತೆ ಪ್ರೀತ್ಯರ್ಥವು ಗುರುಗಳಿಗರ್ಪಣೆಯ ಮಾಡಿದನು ಗ್ರಹಿಸುವದು ॥"

ಇವರ ಶೈಲಿಯು ಸಾಮಾನ್ಯ. ದಾಸ ಸಾಹಿತ್ಯದ ಉನ್ನತಿಯ ಕಾಲದ ಕೊನೆಯನ್ನು ಸೂಚಿಸುವ ಗುರುತುಗಳು ಮುಂದಿನ ಕೃತಿಗಳಲ್ಲಿ ಎದ್ದು ತೋರುತ್ತವೆ. ಬಂಧದಲ್ಲಿ ಶೈಥಿಲ್ಯ, ಪ್ರಾಸಲೋಲುಪ್ತಿ, ವ್ಯಾಕರಣ ನಿಯಮಗಳ ಉಲ್ಲಂಘನೆ, ಭಾಷಾಸಾಂಕರ್ಯಗಳು ದಾಸ ಸಾಹಿತ್ಯದ ಅವನತಿಯ ಕಾಲದಲ್ಲಿ ಕಂಡುಬರುವ ಕೆಲವು ಪ್ರಮುಖ ಕುಂದುಗಳಾಗಿರುತ್ತವೆ.

ಆದರೆ ಹರಿಭಕ್ತಿ, ಸಿದ್ಧಾಂತ ಶ್ರದ್ಧೆಗಳಿಗೆ ಮಾತ್ರ ಯಾವ ಕಾಲದಲ್ಲಿಯೂ ಚ್ಯುತಿ ಬಂದಿಲ್ಲ. ಈ ಒಂದು ಗುಣದಿಂದ ಜಗನ್ನಾಥೋತ್ತರ ಯುಗದ ದಾಸ ಸಾಹಿತ್ಯದಲ್ಲಿ ತಲೆದೋರುವ ತಪ್ಪುಗಳಿಗೆಲ್ಲ ಒಪ್ಪವಿಟ್ಟು ಅದೆಲ್ಲವೂ "ಭೂಷಣಂ ನ ತು ದೂಷಣಂ" ಎನ್ನುವಂತೆ ಮಾಡುತ್ತದೆ.

## ೪೪ ಶ್ರೀ ಕಮಲಾಪತಿ ವಿಠ್ಠಲದಾಸರು

ಇವರು ಸಂತೆಬೆನ್ನೂರ ಗ್ರಾಮದವರು. ಇವರ ಮೊದಲಿನ ಹೆಸರು ರಾಮದಾಸರು. ಇವರು ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಭಾವದರ್ಪಣ ಎಂಬ ಪ್ರಗಲ್ಭವಾದ ವ್ಯಾಖ್ಯಾನ ಒಂದನ್ನು ಬರೆದಿದ್ದಾರೆ. ಇವರು ಉಡುಪಿಯ ಕೃಷ್ಣಾಪುರ ಮಠದ ಶ್ರೀಗಳವರಲ್ಲಿ ಅಧ್ಯಯನ ಮಾಡಿದ್ದರೆಂದು ಭಾವದರ್ಪಣ ವ್ಯಾಖ್ಯಾನದ ಮಂಗಲಾಚರಣ ಪದ್ಯದಿಂದ ತಿಳಿದುಬರುತ್ತದೆ.

ಧೀರ ಕೃಷ್ಣಾಪುರ ಯತಿಗಳ ।
ಚಾರುಚರಣ ಸರೋಜಯುಗಳಕೆ ।
ಸ್ಥೈರ್ಯಮನದಿಂ ನಮಿಪೆ ಸಮ್ಯಗ್ಜ್ಞಾನಪ್ರದರೆಂದು ॥"

ಇದನ್ನು ಸಂತೆಬೆನ್ನೂರಿನ ಲಕ್ಷ್ಮಣಾಚಾರ್ಯ ಮತ್ತು ರಾಮಚಂದ್ರ ರಾಯರೆಂಬ ಪಂಡಿತರು ಶೋಧಿಸಿ ಮುದ್ರಿಸಿದ್ದಾರೆ. ಇವರ ಕಾವ್ಯದ ಶೈಲಿಯು ತಿಳಿಯಾಗಿದ್ದು ಸರಳತೆಯಲ್ಲಿಯೇ ಸಂಸತೆ ಹಾಗೂ ಪ್ರಾಸಾದಿಕೆಗಳು ಹುರಿಗೊಂಡು ಚಲುವು ಚಿಮ್ಮುವಂತೆ ಮಾಡಿದ್ದಾರೆ.

''ಸರಸ ಕಾವ್ಯಗಳ ಓದಿ ತಿಳಿಯದ ।
ಮರುತ ಶಾಸ್ತ್ರದ ಮರ್ಮವರಿಯದ ।
ಕರುಣಿ ಕಮಲಾಪತಿಯ ದಾಸನಕರಣದೊಳು ನಿಂತು ।
ಹರಿಕಥಾಮೃತಸಾರ ಗ್ರಂಥಕೆ ।
ಹರಿಯು ಬರೆಸಿದ ಭಾವದರ್ಪಣ ।
ವರಗುಣಾಢ್ಯರು ನೋಡಿ ।
ನಿರುತದಿಕರುಣ ಮಾಡುವದು ॥ "

ಈ ತರಹದ ಅವರ ಗೀತ ಕೃತಿಗಳಲ್ಲಿ ಸಹಜ ರಮ್ಯತೆಯು ಒಡಮೂಡಿ ನಿಂತಿದೆ.

ಮಾನವಿಯಲ್ಲಿ ತಮ್ಮ ಮನೆಯ ಕಂಬದಲ್ಲಿಯೇ ಶ್ರೀ ಜಗನ್ನಾಥದಾಸರು ಸನ್ನಿಹಿತರಾಗಿದ್ದಾರಷ್ಟೆ. ಆ ಸಂದರ್ಭವನ್ನು ತಮ್ಮ ಒಂದು ಪದ್ಯದಲ್ಲಿ ಉಲ್ಲೇಖಿಸಿ ಶ್ರೀ ಕಮಲಾಪತಿ ವಿಠ್ಠಲರು ಒಂದು ರಮಣೀಯವಾದ ಉತ್ಪ್ರೇಕ್ಷಾ ವಿಲಾಸಗೈಯ್ದಿದ್ದಾರೆ ನೋಡಿ—

" ಅಂಬುಜಾಕ್ಷಿ ಸ್ತಂಭದಿಹರ್‍ಯಾಕೆ । ಯಾರೆ । ಸಾರೆ ।
ಫುಲ್ಲಲೋಚನೆ ಬಲ್ಲೆಯಾ ಇವ । ರಲ್ಲಿರುವ ಕಾರಣವಿದೇನೇ ।
ಫುಲ್ಲನಾಭನ ಹುಡುಕಲಿ ।
ಪ್ರಲ್ಹಾದನನುಜ ಸಲ್ಹಾದರಿವರೇ ॥ "

ಪರಮಾತ್ಮನು ನರಸಿಂಹ ರೂಪದಲ್ಲಿ ಕಂಬದಲ್ಲಿಯೇ ಹೊರಬಿದ್ದು ಬಂದದರಿಂದ ಆ ಕಂಬದಲ್ಲಿ ಮತ್ತೊಮ್ಮೆ ನರಸಿಂಹನನ್ನು ಹುಡುಕಲಿಕ್ಕಾಗಿಯೋ ಏನೋ ಎಂಬುವಂತೆ ಪ್ರಲ್ಹಾದನ ತಮ್ಮ ಸಲ್ಹಾದಾಂಶರಾದ ಶ್ರೀ ಜಗನ್ನಾಥದಾಸರು ಕಂಬದಲ್ಲಿ ವಾಸವಾಗಿದ್ದಾರೆ. ಉತ್ಪ್ರೇಕ್ಷಾಲಂಕಾರದ ಸೊಗಸು ಕಾವ್ಯಮರ್ಮಜ್ಞರಿಗೆ ಹೃದ್ಯವಾಗಿ ವೇದ್ಯವಾಗುವವರಲ್ಲ ಸಂದೇಹವಿಲ್ಲ.

ಇವರಿಗೆ ಗುರುಕಮಲಾಪತಿ ವಿಠಲ, ರಮಾಪತಿ ವಿಠಲ, ಮಧ್ವೇಶ ವಿಠಲ, ಗಂಡೀಶ ವಿಠಲ, ಇಭವರದ ವಿಠಲ ಮುಂತಾದ ಅನೇಕ ಜನ ಶಿಷ್ಯರು ಇವರಿಂದ ಅಂಕಿತ ಪಡೆದು ಹರಿದಾಸರಾಗಿ ಕನ್ನಡಮ್ಮನ ಉಡಿಯನ್ನು ತುಂಬಿದ್ದಾರೆ.

## ೪೫ ತಂದೆ ಶ್ರೀಪತಿ ವಿಠಲರು

ಇವರ ಊರು ಗದ್ವಾಲ. ಮೊದಲಿನ ಹೆಸರು ವೆಂಕಟದಾಸರು. ಇವರು ಶ್ರೀಪತಿದಾಸರಿಂದ ಅಂಕಿತ ಪಡೆದು ಉಪದೇಶ ಹೊಂದಿ ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ.

"ನಂಬಲೋ ಪಾದ । ಪೊಂದೆಲೋ ಮನ ।
ದ್ದಂಬಲ ನೀಡುವ ಶ್ರೀಪತಿದಾಸರ ।
ಇಂದ್ರವಿಜಯಗೋಪಾಲಮೋಹನ ।
ವೇಣುಚಂದದಿ ಶ್ರೀವೇದವ್ಯಾಸ ರಾಘವೇಂದ್ರ
ದಾಸಾಚಾರ್ಯರಿಂದ ಪಾಲಿತ ।
ಎನ್ನ ತಂದೆ ಶ್ರೀಪತಿವಿಠ್ಠಲದಾಸಾರ್ಯ ॥"

ಇದರಲ್ಲಿ ತಮ್ಮ ಗುರುಗಳಾದ ಶ್ರೀಪತಿವಿಠ್ಠಲದಾಸರನ್ನು ಸ್ತುತಿಸಿದ್ದಾರೆ. ಇದರಲ್ಲಿ ಇಂದ್ರ ಎಂದರೆ ಪುರಂದರದಾಸರು ಮತ್ತು ವಿಜಯದಾಸರು, ಗೋಪಾಲ ದಾಸರು, ಮೋಹನದಾಸರು ವೇಣು ಅಂದರೆ ಪೊಂಗನಾಮದ ತಿಮ್ಮಣ್ಣದಾಸರು. ವೇದವ್ಯಾಸದಾಸರು ಮತ್ತು ದಾಸಾಚಾರ್ಯರೆಂದರೆ ಭೂವರಾಹವಿಠ್ಠಲದಾಸರು. ಮುಂತಾದವರಿಂದ ತಮ್ಮ ತಂದೆ ಶ್ರೀಪತಿವಿಠ್ಠಲದಾಸರು ಪಾಲಿತರಾಗಿದ್ದರೆಂದು ಸೂಚಿಸುತ್ತಾರೆ. ಇವರ ಕೃತಿಗಳು ನಮಗೆ ದೊರಕದ್ದರಿಂದ ಕಾವ್ಯಗುಣವನ್ನು ಹೇಳಲಿಕ್ಕೆ ಆಗಲಿಲ್ಲ. ಇವರ ಕಾಲ ೧೮೪೦ನೇ ಇಸ್ವಿಯೆಂದು ಕಲಮದಾನಿಯವರು ಹೇಳುತ್ತಾರೆ.

## ೪೬ ಶ್ರೀ ವಿಜಯರಾಮಚಂದ್ರ ವಿಠಲದಾಸರು

ಇಭರಾಮಪುರದ ಕೃಷ್ಣಾಚಾರ್ಯರು (ಅಪ್ಪಾ ಅವರ) ಭಕ್ತರಾದ ಇವರ ಮೂಲಸ್ಥಲವು ಮೈಸೂರು ಸಂಸ್ಥಾನದ ರಾಮನಾಥಪುರ. ಬಾಲ್ಯದಿಂದಲೇ ವಿರಕ್ತರಾದ ಇವರಿಗೆ ಕುಂಭಕೋಣದ ಪ್ರಸನ್ನ ವೆಂಕಟ ವಿಠಲದಾಸರು ವಿಜಯರಾಮಚಂದ್ರ ವಿಠಲ ಎಂದು ಅಂಕಿತವಿಟ್ಟು ದಾಸದೀಕ್ಷೆಯನ್ನು ಕೊಟ್ಟರು. ಇವರು ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಇವರ ಮಗಳಾದ ಚೇಚಮ್ಮನು ಪದ್ಯಗಳನ್ನು ರಚಿಸಿ ಹನುಮೇಶ ವಿಠಲ ಎಂಬ ಅಂಕಿತದಿಂದ ಪ್ರಸಿದ್ಧಳಾಗಿದ್ದಾಳೆ.

ಇವರ ಶಿಷ್ಯರಾದ ಗುರುವಿಜಯ ರಾಮಚಂದ್ರ ವಿಠಲರು ಈ ತಮ್ಮ ಗುರುಗಳ ಚರಿತ್ರೆಯನ್ನು ವಿಸ್ತಾರವಾಗಿ ಬರೆದಿಟ್ಟಿದ್ದಾರೆ.

## ೪೭ ಶ್ರೀ ದೀಪದ ಅಣ್ಣೈದಾಸರು

ಧಾರವಾಡದ ಊರವರಾದ ಶ್ರೀ ದೀಪದ ಅಣ್ಣೈದಾಸರು ಪ್ರತಿವರ್ಷ ಕಾಲು ನಡೆಗೆಯಿಂದ ತಿರುಪತಿಗೆ ಹೋಗಿ ಅಲ್ಲಿ ಬಂದ ಮಾಧ್ವರಿಗೆಲ್ಲ ಕರಿಗಡಬು ತುಪ್ಪ ಊಟಕ್ಕೆ ಹಾಕುತ್ತಿದ್ದರು. ಒಂದು ದಿನ ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡುವಾಗ ಶ್ರೀ ನಿವಾಸ ಸ್ವಪ್ನಸೂಚನೆಯಂತೆ ಚಂದನದ ವೆಂಕಟೇಶದೇವರು ದೊರೆತರು ಅದು ಈಗಲೂ ಇವರ ಮನೆಯಲ್ಲಿರುತ್ತದೆ. ಮುಂದೆ ಇವರ ವಾರ್ಧಕ್ಯದಲ್ಲಿ ತಿರುಪತಿಯ ವೆಂಕಪ್ಪನು ಅಣ್ಣೈದಾಸರಿಗೆ ಆ ಚಂದನದ ವೆಂಕಟೇಶ ಮೂರುತಿಯಲ್ಲಿಯೇ ಪ್ರಸನ್ನನ್ನಾಗಿ ದರುಶನವೀಯುತ್ತಿದ್ದ.

ಅಣ್ಣೈದಾಸರು ತಿರುಪತಿಯ ವೆಂಕಟೇಶನಿಗೆ ಒಮ್ಮೆ ಲಕ್ಷ ದೀಪೋತ್ಸವ ಮಾಡಿಸಿ ದೇವರ ಮುಂದಿನ ನಂದಾದೀಪದಿಂದಲೇ ಒಂದು ದೀಪವನ್ನು ಹೊತ್ತಿಸಿ ಕೊಂಡು ದಾರಿಯಲ್ಲಿ ಅದು ಎಲ್ಲಿಯೂ ಆರದಂತೆ ಊರಿಗೆ ತೆಗೆದುಕೊಂಡು ಬಂದು ಧಾರವಾಡದ ತಮ್ಮ ಮನೆಯ ದೇವರ ಮುಂದೆ ಇಟ್ಟರು. ಆ ದೀಪವು ಮೊನ್ನೆ ಮೊನ್ನೆಯ ವರೆಗೆ ಎಂದೂ ಆರದೆ ನಂದದೆ ನಿಜವಾದ ನಂದಾದೀಪ ಆಗಿರುತ್ತಿತ್ತು. ಇದೇ ಕಾರಣದಿಂದಲೇ ಅವರಿಗೆ ದೀಪದವರು ಎಂದು ಹೆಸರು ಬಂದಿದೆ.

ಈ ಅಣ್ಣೈದಾಸರು ಹರಪನಹಳ್ಳಿ ವೆಂಕಟದಾಸರಿಂದ ಶ್ರೀನಿಧಿವಿಠಲವೆಂಬ ಅಂಕಿತ ಪಡೆದು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಧಾರವಾಡದ ಅನೇಕ ಭಕ್ತ ಮಹಿಳೆಯರು ಈಗಲೂ ಈ ದೀಪದ ದಾಸರ ಪದಗಳನ್ನು ಹಾಡುತ್ತಾರೆ. ಸವದಿ ರಾಮಚಂದ್ರರಾಯರೆಂಬ ಶ್ರೀವರವಿಠಲರು ದೀಪದ ದಾಸರ ಶಿಷ್ಯರಾಗಿದ್ದರು. ಈ ಮನೆತನದಲ್ಲಿ ಮುಂದೆ ಗೋವಿಂದದಾಸರೆಂಬುವರು ಕೆಲವು ಕೀರ್ತನೆಗಳನ್ನು ರಚಿಸಿರುವರು ಇವರ ಕಾಲ ಕ್ರಿ. ಶ. ೧೮೫೦.

## ೪೮ ಶ್ರೀ ಶ್ರೀಶಪ್ರಾಣೇಶವಿಠಲದಾಸರು

ಇವರು ಶ್ರೀ ಪ್ರಾಣೇಶ ವಿಠಲದಾಸರ ಮೊಮ್ಮಕ್ಕಳು. ಶ್ರೀ ಜಗನ್ನಾಥದಾಸರ ಸೇವೆಯಿಂದ ಜನಿಸಿದ ಇವರ ಮೊದಲಿನ ಹೆಸರು ರಾಮದಾಸ. ಬಾಲ್ಯದಲ್ಲಿ ಹುಡುಗಾಟದಲ್ಲಿ ಮೈಮರೆತ ಇವರನ್ನು ಶ್ರೀಪ್ರಾಣೇಶವಿಠ್ಠಲದಾಸರು ಬೈಯಿದು ಬಡೆದು ದಾಸ ಪಂಥಕ್ಕೆ ಹಚ್ಚಿದರು. ಶ್ರೀ ಶ್ರೀಶಪ್ರಾಣೇಶ ವಿಠಲ ಎಂಬ ಅಂಕಿತವಿತ್ತು ಅನುಗ್ರಹಿಸಿದರು.

"ಗುರುಗಳ ಕರುಣ ಸುಸ್ಥಿರವಾಗಿದ್ದವರಲ್ಲೆ ।
ಹರಿ ನಿನ್ನನುಗ್ರಹವಾಗ್ವುದೊ ॥
ಶ್ರೀನಿವಾಸ ದಯಾನಿಧೆ ॥ "

ಎಂದು ಮುಂತಾಗಿ ಹಾಡಿದ್ದಾರೆ. ಇವರು ವಿರಕ್ತರೂ, ಜ್ಞಾನಿಗಳೂ ಆಗಿದ್ದರು. ಯಾರಾದರೂ ಧನಧಾನ್ಯಗಳನ್ನು ತಂದುಕೊಟ್ಟರೆ ಅಂದಿನ ದೇವರ ಸೇವೆಗೆ ಬೇಕಾಗುವಷ್ಟನ್ನು ಮಾತ್ರ ಸ್ವೀಕರಿಸಿ ಉಳಿದದ್ದನ್ನು ತಿರುಗಿ ಕೊಟ್ಟುಬಿಡುತ್ತಿದ್ದರು. ಮಂತ್ರಾಲಯ ಸ್ವಾಮಿಗಳ ಭಕ್ತರಾದ ಇವರಿಗೆ ಸುಂದರ ವಿಠಲ, ಸುಖನಿಧಿ ವಿಠಲ ಮುಂತಾದ ಅನೇಕ ಶಿಷ್ಯರಿದ್ದರು. ಇವರು ೧೮೭೨ನೇ ಇಸ್ವಿಯಲ್ಲಿ ಕಾಲವಾದರು.

## ೪೯ ಶ್ರೀವರವಿಠಲರು

ದೀಪದ ಅಣ್ಣೈದಾಸರ ಶಿಷ್ಯರಾದ ಇವರ ಮೊದಲಿನ ಹೆಸರು ಸವದಿ ರಾಮಚಂದ್ರರಾಯ. ಇವರು ಶ್ರೀವರವಿಠಲ ಎಂಬ ಅಂಕಿತದಿಂದ ಹಲವಾರು ಕೀರ್ತನೆಗಳನ್ನು ರಚಿಸಿದ್ದಾರೆ. ಇವರು ೧೮೭೩ ನೇ ಇಸ್ವಿಯಲ್ಲಿ ದೇಹವಿಟ್ಟರು.

## ೫೦ ಶ್ರೀ ಶ್ರೀನಿವಾಸದಾಸರು

ಇವರು ಕದರಮಂಡಲಗಿ ಶ್ರೀಪಾಂಡುರಂಗ ಎಂಬ ಅಂಕಿತದಿಂದ ಸಾವಿರಾರು ಪದ್ಯಗಳನ್ನೂ, ಹರಿನಾಮಗಳನ್ನೂ ರಚಿಸಿದ್ದಾರೆ. ಇವರ ಕೀರ್ತನೆಗಳೆಲ್ಲವೂ ಭಾವ ಸಂಭ್ರಮದಿಂದ ತುಂಬಿತುಳುಕುತ್ತಿದ್ದು ಮಧುರ ಮನೋಹರವಾದ ಮುಕ್ತಕಗಳಂತೆ ತೋರುತ್ತವೆ. ಕೊಪ್ಪಳ ತಾಲೂಕಿನ ಕಿನ್ನಾಳವು ಇವರ ಊರು. ಸಹವಾಸಿ ಎಂಬ ಬ್ರಾಹ್ಮಣ ಪಂಗಡಕ್ಕೆ ಸೇರಿದ ಇವರ ಮೊದಲಿನ ಹೆಸರು ಶ್ರೀನಿವಾಸ. ಇವನಿಗೆ ಬಾಲ್ಯದಲ್ಲಿ ಪಾಠಕ್ಕಿಂತ ಆಟದ ಕಡೆಗೆ ಒಲವು. ಇವನು ಹಳ್ಳಿಗಳಲ್ಲಿ ಗೊಂಬಿ ಆಟ ಗಳನ್ನು ಆಡಿಸುತ್ತಲಿದ್ದುದರಿಂದ ಇವರಿಗೆ ಗೊಂಬಿ ಸೀನಪ್ಪ ಎಂದು ಹೆಸರಾಗಿತ್ತು.

ಮುಂದೆ ಲೌಕಿಕದಲ್ಲಿ ವೈರಾಗ್ಯ ಉದಯಿಸಿದ ಶೀನಪ್ಪನು ವಿರಕ್ತನಾಗಿ ಕದರ ಮಂಡಲಗಿಗೆ ಬಂದು ಪ್ರಾಣ ದೇವರ ಸೇವೆಯನ್ನು ಮಾಡಿದನು. ಸೇವೆಯ ಫಲವಾಗಿ ಅವನಿಗೆ ಜ್ಞಾನೋದಯವಾಗಿ ಒಳ್ಳೇ ಕವಿತಾ ಶಕ್ತಿಯು ಬಂದಿತು.

ಇವರು ಉತ್ತರಾದಿ ಮಠದ ಶ್ರೀಸತ್ಯಪರಾಯಣ ಶ್ರೀಗಳವರ ಸಮಕಾಲೀನರು. ಶ್ರೀಗಳು ಒಮ್ಮೆ ಕಿನ್ನಾಳಕ್ಕೆ ಬಂದಾಗ್ಗೆ ದಾಸರನ್ನು ನೋಡಿ ದಾಸರಿಗೆ "ಹೊರೆ ಮೀಸೆ ಯಾಕೆ ? " ಎಂದು ಕೇಳಿದರಂತೆ ಅದಕ್ಕೆ ಶ್ರೀನಿವಾಸದಾಸರು ತಟ್ಟನೆ "ಬುದ್ಧಿ! ನವದ್ವಾರಕ್ಕೆ ಬಾಯಿ ಮಹಾದ್ವಾರ. ಆ ಮಹಾದ್ವಾರಕ್ಕೆ ಮಕರತೋರಣ ಕಟ್ಟಿಸಿದ್ದೇನೆ"

ಎಂದು ಉತ್ತರಿಸಿದರಂತೆ. ಅದನ್ನು ಕೇಳಿ ಶ್ರೀಗಳು ನಕ್ಕು ಒಂದು ಪದವನ್ನು ಹಾಡು ಎಂದು ಹೇಳಿದರಂತೆ ಆಗ ಶ್ರೀನಿವಾಸದಾಸರು ತತ್‌ಕ್ಷಣವೇ ಸದ್ಯಸ್ಫೂರ್ತಿಯಿಂದ—

" ನೋಡು ಮನವೇ ಸತ್ಯಪರಾಯಣರ ಪದಗಳ ।
ಬೇಡು ಬೇಡು ಬೇಡಿದಿಷ್ಟ ವೀವ ಯತಿಗಳ ।
ಮಾರುತಿಯ ಬಲದಿ ದಕ್ಷಿಣ ದೇಶವ ಜೈಸಿದ ।
ಸಾರ ಸಚ್ಛಾಸ್ತ್ರವನ್ನು ಸ್ಥಿರವಗೊಳಿಸಿದ ॥
ನಾರಾಯಣನೇ ಈ ಜಗತ್ಕಾರಣನೆನಿಸಿದ ।
ಧೀರ ಸತ್ಯಸಂತುಷ್ಟರ ಕುವರನೆನಿಸಿದ । "

ಇವರ ಕೀರ್ತನೆಗಳೆಲ್ಲವೂ ಸರಸ ಸುಂದರವಾಗಿದ್ದು ಅತ್ಯಂತ ತಿಟ್ಟಾಗಿರುವವು ಆದುದರಿಂದಲೇ 'ಕನಕದಾಸರ ಗುಟ್ಟು ಶ್ರೀನಿವಾಸದಾಸರ ತಿಟ್ಟು' ಎಂಬ ನಾಣ್ಣುಡಿಯು ದಾಸಸಂಘದಲ್ಲಿ ರೂಢವಾಗಿದೆ.

ಕದರಮಂಡಲಗಿಯ ತಳವಾರ ಗಿರಿಯಪ್ಪನು ಇವರ ಶಿಷ್ಯನಾಗಿ ಇವರೊಟ್ಟಿಗೇ ಎಲ್ಲ ದೇಶಸಂಚಾರ ಮಾಡಿದನು. ಗಿರಿಯಪ್ಪನು ಶ್ರೀನಿವಾಸದಾಸರ ನೂರಾರು ದೇವರ ನಾಮಗಳನ್ನು ಶ್ರವಣ ಮನಕಾನಂದವಾಗುವಂತೆ ಹಾಡುತ್ತಿದ್ದನು.

ಶ್ರೀ ಸತ್ಯಪರಾಯಣ ಸ್ವಾಮಿಗಳು ಶ್ರೀನಿವಾಸದಾಸರ ಪದ್ಯಗಳ ಮಾಧುರ್ಯಕ್ಕೆ ಮೆಚ್ಚಿ ಸೂರ್ಯವಾದ್ಯ ಚಂದ್ರವಾದ್ಯ ಎಂಬ ಎರಡು ಜಾಗಟೆಗಳನ್ನು ಕೊಟ್ಟಿದ್ದರಂತೆ. ಈ ದಾಸರ ಕಾಲವು ಕ್ರಿ. ಶ. ೧೮೬೦.

## ೫೧ ಏರಿ ಶೇಷದಾಸರು

ಮೈಸೂರು ಸಂಸ್ಥಾನದ ಕೋಲಾರ ಜಿಲ್ಲೆಯ ಚಿಂತಾಮಣಿ ಗ್ರಾಮವು ಶೇಷಾಚಾರ್ಯರ ಸ್ವಗ್ರಾಮವಾಗಿದ್ದಿತು. ಮೂಲತಃ ಕರ್ಜಗಿಯವರಾದ ಈ ಮನೆತನದ ಒಂದು ಶಾಖೆಯು ಬೆಂಗಳೂರಿನ ಹತ್ತಿರದ ಚಿಂತಾಮಣಿಯಲ್ಲಿ ನೆಲೆನಿಂತಿದೆ.

ಈ ಮನೆತನದ ಏರಿ ಶೇಷಾಚಾರ್ಯರು ಉತ್ತರಾದಿಮಠದ ಶ್ರೀ ಸತ್ಯಸಂಧ ಸ್ವಾಮಿಗಳ ಸಾಕ್ಷಾತ್ ಶಿಷ್ಯರಾಗಿದ್ದರು. ಇವರು ತಮ್ಮ ಗ್ರಂಥದ ಪ್ರಾರಂಭದಲ್ಲಿ "ಶ್ರೀಮದ್ರಾಮ ಸುಪೂಜನೈಕ ನಿರತಂ ಶ್ರೀ ಸತ್ಯಸಂಧಮಂ ಗುರುಂ" ಎಂದು ಗುರು ವಂದನೆಯನ್ನು ಮಾಡಿದ್ದಾರೆ.

ಕೃಷ್ಣಾಚಾರ್ಯ ಮತ್ತು ರುಕ್ಮಿಣಿ ಎಂಬ ತಾಯಿ ತಂದೆಗಳಿಂದ ಜನಿಸಿದ ಶ್ರೀ ಶೇಷಾಚಾರ್ಯರು ಏರಿ ವೆಂಕಟಾಚಾರ್ಯರೆಂಬವರಲ್ಲಿ ಅಧ್ಯಯನ ಮಾಡಿ

ಸಂಸ್ಕೃತ ಪಂಡಿತರಾಗಿದ್ದರು. ಕನ್ನಡ ಕವಿಗಳಾಗಿದ್ದರು. ಇವರು ಶ್ರೀನಿವಾಸಕಲ್ಯಾಣ ಎಂಬ ಪದ್ಯ ಪ್ರಬಂಧವೊಂದನ್ನು ರಚಿಸಿದ್ದಾರೆ. ಇದರಲ್ಲಿ ಕೆಲವು ಸಂಸ್ಕೃತ ಪದ್ಯಗಳೂ ಕೆಲವು ಕನ್ನಡ ಹಾಡುಗಳೂ ಮತ್ತು ಅನೇಕ ಮನೋಹರವಾದ ಗದ್ಯ ವಚನ ರಚನೆಗಳು ಕಂಡುಬರುತ್ತಿವೆ.

ಇದು ಗದ್ಯಪದ್ಯಾತ್ಮಕವಾದ ಉಭಯ ಭಾಷಾತ್ಮಕ ಚಂಪೂ ಕಾವ್ಯದಂತೆ ತೋರುತ್ತದೆ. ಗ್ರಂಥ ಪ್ರಾರಂಭದಲ್ಲಿಯ ಪದ್ಯಗಳು ಸಂಸ್ಕೃತದಲ್ಲಿ

"ಶ್ರೀಮದ್ವೆಂಕಟಮವ್ಯಯಂ ಕುಲಪತಿಂ ಪದ್ಮಾಸಮೇತಂ ತಥಾ ।
ನತ್ವಾ ಮಧ್ವನಯಾದಿ ಶಾಸ್ತ್ರನಿಪುಣಂ ಸದ್ಭಕ್ತ ಚಿಂತಾಮಣಿಂ
ಸಾಧ್ವೇರಿ ಶುಭನಾಮಕಂ ಮಮಗುರುಂ ಸದ್ಭಾಸುರಂ
ಸಾದರಂ ವಂದೇ ವೆಂಕಟಸೂರಿ ರಾಜಮಹಿಮ ।
ಜ್ಞಾನಾಂಧಕಾರಾಪಹಂ ॥ "

ಎಂದು ಇದ್ದು ಕೊನೆಯಲ್ಲಿ "ಮಹಾ ವೆಂಕಟಾರ್ಯ ಗುರುರಾಜ ಪೂಜ್ಯಪಾದಾರಾಧಕೇನ ಏರಿಶೇಷೇನಕೃತ ಶ್ರೀಮಟ್ಟಿ ್ರನಿವಾಸಕಲ್ಯಾಣಂ ಸಂಪೂರ್ಣಂ" ಎಂದು ಮುಕ್ತಾಯ ಮಾಡಿದ್ದಾರೆ.

ಮಧ್ಯದಲ್ಲಿ ಕನ್ನಡ ಗದ್ಯ ಪದ್ಯಗಳು ಹೇರಳವಾಗಿ ತುಂಬಿಕೊಂಡಿವೆ. ನವರಾತ್ರಿ ಕಾಲದಲ್ಲಿ ಕನಸಿನಲ್ಲಿ ಶ್ರೀವೆಂಕಟೇಶ ದೇವರು ಅಪ್ಪಣೆಗೈದಿದ್ದರಿಂದ ಇದನ್ನು ರಚಿಸಿದ್ದೇನೆಂದು ಶೇಷಾಚಾರ್ಯರು ಸೂಚಿಸಿದ್ದಾರೆ.

" ಮಾಡಿದರು ನವರಾತ್ರಿಯಲ್ಲಿ ಈ ಗ್ರಂಥ ।
ಮಾಡಿರಿಂದು ಹರಿಯಾಜ್ಞೆಗೆ ಸ್ವಪ್ನದಲಿ ॥
ಶ್ರೀನಿವಾಸ ಪದ್ಮನಿಯರ ಮದುವೆಯನು ।
ಗಾನರೂಪದ ಕಥೆಯ ರಚನೆ ನೀ ಮಾಡೋ ॥
ವಾಕುಕೊಡುವೆನು ಝುಟೆತಿ ಬರೆಯೋ ಕುವರನೇ ।
ಏಕಚಿತ್ತದಿ ಮಾಡಲಿ ಯೋಚನೆಯು ಬೇಡ ॥ "

ಎಂದು ಮುಂತಾಗಿ ದೇವರ ಆಣತಿಯನ್ನು ತಾವೇ ತಿಳಿಸಿದ್ದಾರೆ.

ಇವರ ಕಾವ್ಯದಲ್ಲಿ ಹೊಸ ಕಲ್ಪನೆ, ಶೈಲಿಯ ಸೊಬಗು ವಿಶೇಷವಾಗಿ ಇಲ್ಲದಿದ್ದರೂ ಸರಳತೆ ಸಹಜತೆಯಿಂದಾಗಿ ಈ ಕೃತಿಯು ಓದುವವರಿಗೆ ಮೋದ ತಂದುಕೊಡುತ್ತದೆ. ಇವರ ಮುದ್ರಿಕೆ ಏರಿ ವೆಂಕಟೇಶ. ಕಾಲ ೧೭೬೦ ನೇ ಇಸ್ವಿ. ಶ್ರೀನಿವಾಸ ಕಲ್ಯಾಣ ಹೊರತು ಬೇರೆ ಕೃತಿಕೀರ್ತನೆಗಳು ದೊರೆತಿಲ್ಲ. ಚಿಂತಾಮಣಿಯಲ್ಲಿ ಇವರ ಸ್ಮಾರಕವಾಗಿ ಆಚಾರ್ಯರ ಕಟ್ಟೆ ಎಂಬ ಸ್ಥಳವನ್ನು ತೋರಿಸುತ್ತಾರೆ. ಅವರ ಸುತ್ತಲೂ ಗೋಡೆಕಟ್ಟಿ ಚಿಕ್ಕ ದೇವಾಲಯದಂತೆ ಮಾಡಿದ್ದಾರೆ.

## ೫೨ ಶ್ರೀ ತೀರ್ಥಪಾದದಾಸರು

ಇವರು ಕರ್ಜಗಿಯವರು. ಕರ್ಜಗಿ ತೀರ್ಥಪ್ಪ ನಾಯಕ ಎಂದು ಇವರ ಹೆಸರು. ಹೊನ್ನಾಳಿ ವೆಂಕಟದಾಸರು ಇವರ ಗುರುಗಳು. 'ಸ್ಮರಿಸು ಮನವೆ ವೆಂಕಟಾರ್ಯರ' ಎಂದು ತಮ್ಮ ಗುರುಗಳನ್ನು ನೆನೆದಿದ್ದಾರೆ. ಇವರ ಕಾಲ ಕ್ರಿ. ಶ. ೧೮೭೫.

## ೫೩ ಶ್ರೀ ರಮಾಪತಿ ವಿಠ್ಠಲದಾಸರು

ಇವರ ಮೊದಲಿನ ಹೆಸರು ನರೇಗಲ್ಲ ರಾಮದಾಸರು. ಇವರು ಸರಕಾರಿ ಉದ್ಯೋಗದಲ್ಲಿದ್ದು ಹಾವೇರಿ, ರಾಣೆಬೆನ್ನೂರು, ಹಿರೇಕೆರೂರ ಮುಂತಾದ ಕಡೆಗಳಲ್ಲಿ ವಾಸವಾಗಿದ್ದರು. ಇವರು ಮೊದಲು ವೆಂಕಟ ಎಂಬ ಅಂಕಿತದಿಂದ ಹಲವಾರು ದೇವರ ನಾಮಗಳನ್ನು ರಚಿಸಿದರು.

ಮುಂದೆ ಕರ್ಜಗಿ ತೀರ್ಥಪಾದ ವಿಠ್ಠಲದಾಸರಿಂದ ಅಂಕಿತೋಪದೇಶ ಹೊಂದಿ ರಮಾಪತಿ ವಿಠಲ ಎಂಬ ಹೊಸ ಮುದ್ರಿಕೆಯಿಂದ ಮತ್ತೆ ಎಷ್ಟೋ ಕೀರ್ತನೆಗಳನ್ನು ರಚಿಸಿದರು. ಇವರು ಉತ್ತರಾದಿ ಮಠದ ಶ್ರೀ ಸತ್ಯಪರಾಕ್ರಮತೀರ್ಥ ಸ್ವಾಮಿಗಳನ್ನೂ ಶ್ರೀ ಸತ್ಯವೀರತೀರ್ಥ ಶ್ರೀಗಳವರನ್ನೂ, ಪ್ರಸನ್ನ ವೆಂಕಟವಿಠ್ಠಲರನ್ನೂ, ದೀಪದ ಅಣ್ಣೈದಾಸರನ್ನೂ ನಮಸ್ಕರಿಸಿದ್ದಾರೆ. ಇವರ ಕೀರ್ತನೆಗಳಲ್ಲಿ ರಸವು ಮಡುವು ಗಟ್ಟಿದೆ. ಭಕ್ತಿಯು ಕೋಡಿಗಟ್ಟಿ ಹರಿದಿದೆ. ತಿಳಿಯಾದ ಭಾಷೆ, ನಯವಾದ ಭಾವ, ಸವಿಯಾದ ಬಂಧದಿಂದ ಚಂದ ಚಲುವನಾಂತು ಇವರ ಪದ್ಯಗಳು ಚೇತೋಹಾರಿಯಾಗಿವೆ.

'ಕರುಣದೆನನ್ನು ಕಾಯಬೇಕಯ್ಯ ।
ಕದುರೂರರಾಯ ।
ಕರುಣದೆನನ್ನು ಕಾಯಬೇಕಯ್ಯಾ ।
ಕರುಣದೆನ್ನನ್ನು ಕಾಯಬೇಕಯ್ಯ ।
ಹರಸುರಾದಿಗಳಿಂದ ವಂದನೆ ।
ದುರಿತಪರಿಹರಿಸಿಹಪರಕೆ ನೀ ।
ಹರುಷದಲಿ ಸಾಧನವ ಮಾಡಿಸಿ ॥ ಪ ॥
ಅಂಜನಿಯ ಗರ್ಭದಲಿ ಜನಿಸಿದಿಯೊ ।
ಶ್ರೀರಾಮನಂಘ್ರಿ । ಕಂಜದಲ್ಲಿಯಹ ಭ್ರಮರನೆನಿಸಿದಿಯೋ ॥
ಅಂಜದಂಬುಧಿ ದಾಟಿ ಸೀತೆಯ ।
ನಂಜಿಸುವ ರಾವಣನ ಬಲಗಳ ।
ಭಂಜಿಸಿದ ತೇಜಃ । ಪುಂಜನಾಗಿಹ ಪ್ರಭುವೆ ಎನ್ನನು ॥ ೧ ॥

ಕುಂತಿ ಉದರದಿ ಜನಿಸಿದೆಯೊ ರಾಯಾ ।
ಶ್ರೀ । ಶಾಂತಿರಮಣನ ಅಂತರಂಗದಿ ಅರ್ಚಿಸುತಲಯ್ಯಾ ॥
ಅಂತ ತೋರದ ಅಖಿಲ ಕುರುಬಲ ।
ಅಂತಕನಿಗೊಪ್ಪಿಸಿದ ಜಗದಾ ।
ದ್ಯಂತ ಸುಜನರಿಗಿತ್ತಿ ಸಂತಸ ।
ಸಂತತೆನ್ನನು ಬಿಡದೆ ಪವನನೆ ॥ ೨ ॥
ಮಧ್ಯಮಂದಿರನಲ್ಲಿ ಪುಟ್ಟಿದೆಯೊ । ಸಚ್ಛಾಸ್ತ್ರ ಪಠಿಸಿ ಅ ।
ಸದ್ಧ ಮತದವರನ್ನು ಕುಟ್ಟಿದೆಯೊ ।
ಮಧ್ವನುತ ರಮಪತಿ ವಿಠ್ಠಲನ ಸದ್ಯ ಮನದಲಿ ತೋರಿಕೊಟ್ಟೆ ।
ನುದ್ಧರಿಸಿ ಕಡಲ ದಾಟಿಸೊ । ಮಧ್ವಮುನಿ ಸಜ್ಜನ ಜಗತ್ಪ್ರಸಿದ್ಧನೆ ॥''

ಇವರು ೧೮೯೦ ನೇ ಇಸ್ವಿಯಲ್ಲಿ ಕಾಲವಾದರು.

ಇವರೂ ಹಾಗೂ ಏರಿ ನಾರಾಯಣಾಚಾರ್ಯರೂ ಇಬ್ಬರೂ ಶ್ರೀದವಿಠ್ಠಲ (ಕರ್ಜಗಿ ದಾಸಪ್ಪ) ರ ತಂಗಿ ಮಕ್ಕಳು.

## ೫೪ ಶ್ರೀ ಶ್ರೀವತ್ಸಾಂಕಿತದಾಸರು

ಚಿಕ್ಕೋಡಿ ಆಚಾರ್ಯರೆಂದು ಪ್ರಸಿದ್ಧರಾದ ಇವರು ಉಡುಪಿ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶರಲ್ಲಿ ಶಾಸ್ತ್ರಾಭ್ಯಾಸ ಮಾಡಿದ್ದರು.

ಇವರು—

' ಅಗಣಿತ ಮಹಿಮನು । ತ್ರಿಗುಣ ವರ್ಜಿತನು ॥
ಸುಗಣೇಂದ್ರ ತೀರ್ಥರಿಂದ । ಬಗೆ ಬಗೆಯ ಪೂಜೆಗೊಂಬ ॥
ನೋಡಿರಯ್ಯಾ ಶ್ರೀರಾಮನಮೂರ್ತಿಯ । ಪಾಡಿರೋ ಮಹಿಮೆಯನು ॥'

ಎಂದು ರಾಯರ ಮಠದ ಸ್ವಾಮಿಗಳನ್ನೂ—

' ವಿದ್ಯಾಸಿಂಧುತೀರ್ಥ । ಶುದ್ಧ ಪದ್ಧತಿಯಿಂದ ॥
ಶ್ರದ್ಧಾಪೂರ್ವಕನಿನ್ನ । ಭಜಿಪೆನು ಅನುದಿನ ॥ '

ಎಂದೂ ವ್ಯಾಸರಾಜ ಮಠದ ಶ್ರೀ ವಿದ್ಯಾಸಿಂಧು ತೀರ್ಥರನ್ನೂ ಸ್ತುತಿಸಿರುವರು. ಇವರ ಪದ್ಯಗಳಲ್ಲಿ ಕಾವ್ಯದ ಗುಣಗಳನ್ನೆಲ್ಲ ಸಾಂಪ್ರದಾಯಿಕತೆಯು ಮರೆಮಾಡಿದೆ. ಬಳಸಿದ ಉಪಮೆ, ಸರ್ವಸಾಧಾರಣವಾದ ಹಳೆಯ ಪ್ರಾಸಗಳು, ಅಂಥ ಭಾವದಕಾವನ್ನಾಗಲೀ ಬೇರಾವ ರಸವನ್ನಾಗಲೀ ಹುಟ್ಟಿಸದೆ ಭಕ್ತಿ ಜನನದಲ್ಲಿ ಕೃತಕೃತ್ಯತೆಯನ್ನು ಕಂಡಿದೆ. ಆದರೂ ಅಲ್ಲಲ್ಲಿ ಪ್ರತಿಭೆ ಮಿಂಚಾಡದೆ ಇಲ್ಲ.

' ಮಂದಮತಿಯು ನಾನು । ಮಂದೋದ್ಧಾರಕನು ನೀನು ।
ಹಿಂದೆ ಪಾಲಿಸಿದಂತೆ ಮುಂದೂ ಸಲುಹು ನೀನು ॥ ೧ ॥
ಹಿರಿಯರು ಪೊರೆದಂತೆ ಮರೆಯದೆ
ನನ್ನನ್ನು ಕರುಣದಿಂದುದ್ಧರಿಸಯ್ಯಾ ।
ಗುರು ಜಗನ್ನಾಥರಾಯ । ನಿನ್ನ ಚರಣಕಮಲವನು
ಎನಗೆ ತೋರಯ್ಯಾ ॥ '

ಇವರು ೧೮೮೦ ನೇ ಇಸ್ವಿಯಲ್ಲಿ ಜೀವಿಸಿದ್ದರು.

## ೫೫ ಶ್ರೀ ಗುರುರಾಮ ವಿಠ್ಠಲದಾಸರು

ಮೈಸೂರ ಪ್ರಾಂತದ ಬಾಗೆಪಲ್ಲಿಯ ಸುಬ್ರಹ್ಮಣ್ಯದಾಸರೆಂದು ಹೆಸರಾದ ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಲ್ಲದೆ ಸೀತೂರಾಯರ ಕಥೆ, ಭೋಜನಕಾಲ ನಿರ್ಣಯ, ಕನಕದಾಸರ ಕಥೆ ಮುಂತಾದವುಗಳನ್ನು ಪದ್ಯರೂಪದಲ್ಲಿ ಬರೆದಿಟ್ಟಿದ್ದಾರೆ. ಗುರುರಾಮ ವಿಠ್ಠಲ ಇವರ ಅಂಕಿತವಾಗಿದ್ದಿತು. ಈ ಎಲ್ಲ ತಮ್ಮ ನಾಮಧಾಮಾದಿ ವಿಷಯಗಳನ್ನು ಅವರು ತಮ್ಮ ಭೋಜನ ಕಾಲ ನಿರ್ಣಯ ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ.

" ಧಾರುಣಿ ಮಂಡಲದೊಳಗೆ ಮಹಿ ।
ಶೂರ ದೇಶಕೆ ಸೇರಿರುವಕೊ ।
ಲಾರದ ಭಾಗದಲಿ ಬಾಗೇಪಲ್ಲಿಂತೆಂಬ ॥
ಚಾರುನಗರದವಾಸಿ ಎನಿಸುವ ।
ಸೂರ್ಯನಿಕರವಿಧೇಯ ಸುಬ್ಬನು ।
ತಾ ರಚನೆ ಗೈದಿರುವ ಗುರುರಾಮ ವಿಠಲಾಂಕಿತದಿ ॥ "

ಇವರು ಕನ್ನಡ ಪ್ರಾಚೀನ ಕಾವ್ಯಗಳನ್ನು ಹೆಚ್ಚಾಗಿ ಅಭ್ಯಾಸ ಮಾಡಿದಂತೆ ಕಾಣುತ್ತದೆ. ಶೈಲಿ ಸರಳವಾದರೂ ಲಕ್ಷ್ಮೀಶ, ಕುಮಾರವ್ಯಾಸರ ಅನುಕರಣ ಮಾಡಿದ್ದು ಅಲ್ಲಲ್ಲಿ ಕಂಡುಬರುತ್ತದೆ.

ಇವರ ಕಥನ ಕವನ ಸಂಕಲನವೊಂದು ೧೯೧೫ನೇ ಇಸ್ವಿಯಲ್ಲಿ ಅಚ್ಚಾಗಿದೆ. ಇವರು ೧೮೮೦ನೇ ಇಸ್ವಿಯಲ್ಲಿದ್ದರು.

## ೫೬ ಶ್ರೀ ವಿಜಯಮೋಹನ ವಿಠ್ಠಲದಾಸರು

ಇವರು ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಇವರು ರಾಯರ ಮಠದ ಸುಗುಣೇಂದ್ರ ತೀರ್ಥರನ್ನೂ ಉಡುಪಿ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶರನ್ನೂ ಸ್ತೋತ್ರಮಾಡಿದ್ದಾರೆ. ಇವರ ಭಾಷೆಯು ಓಜಸ್ವಿಯಾಗಿದೆ. ಇವರ ಕಾಲ ಕ್ರಿ.ಶ.೧೮೮೦.

## ೫೭ ಶ್ರೀ ಗುರು ಇಂದಿರೇಶದಾಸರು

ಶ್ರೀ ಸುಗಣೇಂದ್ರ ತೀರ್ಥರ ಸಮಕಾಲೀನರಾದ ಇವರು ಇಂದಿರೇಶ ವಿಠಲಾಂಕಿತ ರಾದ ಹರಪನಹಳ್ಳಿ ರಾಮಾಚಾರ್ಯರಿಂದ ದಾಸದೀಕ್ಷೆ ಪಡೆದರು. ಗುರುಇಂದಿರೇಶ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದರು. ಇವರು ಘಟಿಕಾಚಲ ಪ್ರಾಣದೇವರ ಭಕ್ತರು.

"ಪಟುತರಂಗನೆ ಕರಪುಟದಿ ನಮಿಸುವೆನು ಘಟಿಕಾಚಲನಿಲಯ।
ಕಟಕಟನೆ ಪಲ್ಗಡಿಯುತ ಸುರರ।
ಕಟಹತರಿದಾರ್ಭಟದಿ ಭಕುತರ।
ಪಟಲಪಾಲಿಪ ರಘುವರನ ಪ್ರಿಯ।
ಭಟನೆನಿಪ ಮರ್ಕಟ ಕುಲೋತ್ತಮ ॥"

ಇವರ ಭಾಷೆ ಸುಂದರವಾಗಿದೆ. ಶೈಲಿ ಓಜಸ್ವಿನಿಯಾಗಿದೆ. ಇವರ ಕಾಲ ಕ್ರಿ. ಶ. ೧೮೭೫.

## ೫೮ ಶ್ರೀ ಮುದ್ದುಮೋಹನ ವಿಠ್ಠಲದಾಸರು

ಮೈಸೂರು ಪ್ರಾಂತದ ದೊಡ್ಡಬಳ್ಳಾಪುರದ ಇವರ ಹೆಸರು ರಾಘವೇಂದ್ರದಾಸರು. ಇವರು ಕಾಶಿಯಲ್ಲಿ ೧೨ ವರ್ಷ ತಪಸ್ಸು ಮಾಡಿ ಸಿದ್ಧಿ ಪಡೆದ ಪುಣ್ಯಪುರುಷರು. ಜ್ಞಾನ, ಭಕ್ತಿ, ವೈರಾಗ್ಯಗಳು ಕರ್ಣನ ಕವಚ-ಕುಂಡಲಗಳಂತೆ ಇವರ ದೇಹಕ್ಕೆ ಹತ್ತಿ ಬಂದಿದ್ದವು.

ಇವರು ಗೃಹಸ್ಥರಾದರೂ, ಬ್ರಹ್ಮಚಾರಿಗಳು. ಊಟ ಮಾಡಿದರೂ ನಿತ್ಯೋಪ-ವಾಸಿಗಳು. ಪ್ರಪಂಚದಲ್ಲಿದ್ದರೂ, ಪರಮಾರ್ಥ ಜೀವಿಗಳು.

ಇವರು ಅನೇಕ ಜನ ಶಿಷ್ಯರಿಗೆ ದಾಸ ದೀಕ್ಷೆಯನ್ನಿತ್ತು ಭಕ್ತಿ ಪಂಥದ ಬೆಳವಣಿಗೆಗೆ ಮುಖ್ಯ ಕಾರಣರಾದರು. ತಮ್ಮ ಅನೇಕ ಶಿಷ್ಯರ ಸಹಾಯದಿಂದ ದೊಡ್ಡ ಬಳ್ಳಾಪುರದಲ್ಲಿ ವಿಜಯ ವಿಠ್ಠಲಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠೆಮಾಡಿ ಅವನಿಗೆ ತಮ್ಮ ಸರ್ವಾರ್ಪಣವನ್ನು ಮಾಡಿದರು. ವ್ಯಾಸರಾಯ ಮಠದ ಈ ರಾಘವೇಂದ್ರ ದಾಸರು ಶ್ರೀವರವಿಠ್ಠಲರಿಂದ ಮುದ್ದುಮೋಹನ ವಿಠ್ಠಲ ಎಂದು ಅಂಕಿತ ಪಡೆದು ಅನೇಕ ಪದ-ಪದ್ಯಗಳನ್ನು ರಚಿಸಿದ್ದಾರೆ. ಅಂಕಿತವಿತ್ತ ತಮ್ಮ ಗುರುಗಳ ಉಪಕಾರ ನೆನೆದದ್ದನ್ನು ಅವರ ಒಂದು ಕೀರ್ತನೆಯಲ್ಲಿ ಕಾಣಬಹುದು.

''ಶರಣು ಶರಣು ಗುರುವರ್ಯನೆ ಶಿರವರ ದಾಸಾರ್ಯಾ ।
ಮಧ್ವವಲ್ಲಭನಲ್ಲಿ ಎನಗೆ ।
ಶುದ್ಧ ಭಕುತಿಯನೆ ಕೊಟ್ಟು ।
ಉದ್ಧಾರ ಮಾಡಿದ್ಯೊ ಬೇಗ ಬಂದು ।
ಮುದ್ದುಮೋಹನ್ನ ವಿಠಲನ್ನ ತೋರಿ ॥ ''

ಇವರ ಪದ್ಯಗಳಲ್ಲಿ ವಿರಕ್ತ ಜೀವನದ ವೀತರಾಗದ ಭಾವವು ಸ್ಫುಟವಾಗಿ ಮೂಡಿದೆ. ಜ್ಞಾನ ಭಕ್ತಿ ವೈರಾಗ್ಯಗಳ ಕಾವ್ಯದ ಕನ್ನಡಿಯಲ್ಲಿ ಪೂರ್ಣ ಆತ್ಮಾ ವಿಷ್ಕಾರಕ್ಕೆ ಇಲ್ಲಿ ಒಳ್ಳೆ ಇಂಬು ದೊರಿತಂತಾಗಿದೆ. ಆರ್ತಭಾವದ ಸ್ಥಾಯಿಯಲ್ಲಿ ಭಕ್ತಿಯು ಉದ್ದೀಪನಗೊಂಡು ಒಳ್ಳೇ ರಸಪರಿಣತಿಯನ್ನು ಪಡೆದಿದೆ.

## ೫೯ ಶ್ರೀ ತಂದೆಮುದ್ದುಮೋಹನ ವಿಠ್ಠಲದಾಸರು

ಕರಿಗಿರಿ ಕ್ಷೇತ್ರದ ಸಮೀಪದ ನರಸೀಪುರಗ್ರಾಮದಲ್ಲಿ ಜನಿಸಿದ ಇವರ ಹೆಸರು ಸುಬ್ಬರಾಯರು. ಬೆಂಗಳೂರಿನ ಉತ್ತರಾದಿ ಮಠದ ಪಾಠಶಾಲೆಯಲ್ಲಿ ಅಧ್ಯಾಪಕ ರಾಗಿದ್ದ ಚಿಂಚೋಳಿ ವೆಂಕಣ್ಣಾಚಾರ್ಯರಲ್ಲಿ ಇವರು ಸಾಹಿತ್ಯ, ವೇದಾಂತ ಅಧ್ಯಯನ ಮಾಡಿದರು.

ಮುಂದೆ ಇವರು ದೊಡ್ಡ ಬಳ್ಳಾಪುರದಲ್ಲಿ ಶ್ರೀ ಮುದ್ದುಮೋಹನ ವಿಠಲದಾಸರಲ್ಲಿ ಆದೇಶ, ಉಪದೇಶ ಪಡೆದು ದಾಸ ದೀಕ್ಷೆ ತೊಟ್ಟರು. ತಂದೆ ಮುದ್ದು ಮೋಹನ ವಿಠಲ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ್ನು ರಚಿಸಿದರು. ಶ್ರೀ ಹರಿಯ ಧ್ಯಾನೋ ಪಾಸನೆಯಿಂದ ಸಿದ್ಧಿ ಪಡೆದ ಸತ್ಪುರುಷರೆಂದು ಇವರಲ್ಲಿ ಬಾಗೇಪಲ್ಲಿ ಶೇಷದಾಸರೇ ಮೊದಲಾದ ಸಾಧುಸಜ್ಜನರು ದಾಸದೀಕ್ಷೆ ಪಡೆದು ಧನ್ಯರಾದರು. ತಮ್ಮ ತಪ ಸ್ಸಾಮರ್ಥ್ಯದಿಂದ ಶಿಷ್ಯರ ಕಷ್ಟ-ನಷ್ಟಗಳನ್ನೆಲ್ಲ ಪರಿಹರಿಸಿ ಇಷ್ಟಾರ್ಥವಿಟ್ಟು ಕಾಯುತ್ತಿದ್ದರು.

ಅನೇಕ ಕಠಿಣವಾದ ಶಾಸ್ತ್ರೀಯ ವಿಷಯಗಳನ್ನು ಇವರು ತಮ್ಮ ಪ್ರವಚನ ಪಾಂಡಿತ್ಯದಿಂದ ಸರಳವಾಗಿ ತಿಳಿಸಿ ಹೇಳಿ ಜನರಿಗೆಲ್ಲ ತತ್ತ್ವಜ್ಞಾನವನ್ನುಂಟು ಮಾಡು ತ್ತಿದ್ದರು. ಒಮ್ಮೆ ಇವರ ಪ್ರಮೇಯ ಭಾಗ ಪ್ರವಚನವನ್ನು ಕೇಳಿ ತತ್ತ್ವ ಬೋಧಕ ವಾದ ಇವರ ವಾಗ್ವೈಭವದಿಂದ ಪರಿತುಷ್ಟರಾಗಿ ಪುತ್ತಿಗೆ ಮಠದ ಶ್ರೀಪಾದಂಗಳವರು ಇವರಿಗೆ "ಪರಮಪ್ರಿಯ" ಎಂಬ ಬಿರುದನ್ನಿತ್ತರು.

ಇವರು ದೇಶ ಸಂಚಾರ ಮಾಡಿ ತಮ್ಮ ವೇದಾಂತ ಪ್ರವಚನಗಳಿಂದಲೂ, ಶ್ರೀ ಮಧ್ವಮತದ ಸೇವೆಯನ್ನು ಮಾಡಿದ್ದಲ್ಲದೆ ಮಧ್ವಸಿದ್ಧಾಂತ ಮತ್ತು ದಾಸ

ಸಾಹಿತ್ಯದ ವಿಶೇಷ ಪ್ರಚಾರಕ್ಕಾಗಿ ಒಂದು ಆಧ್ಯಾತ್ಮಿಕ ಮಾಸ ಪತ್ರಿಕೆಯನ್ನು ತೆಗೆಯುತ್ತಿದ್ದರು.

ಹೀಗೆ ಅನೇಕ ಜನರಿಗೆ ದಾಸ ದೀಕ್ಷೆ ಇತ್ತು ದಾಸಸಂಘ ಪ್ರಚಾರಕ್ಕಾಗಿ ಜೀವನವನ್ನೇ ಮುಡಿಪಾಗಿಟ್ಟ ಶ್ರೀ ಸುಬ್ರಾಯದಾಸರು ೧೯೪೦ ನೇ ಇಸ್ವಿಯ ಚೈತ್ರ ಮಾಸದಲ್ಲಿ ಶ್ರೀ ರಾಮನವಮಿಯಂದು ನಿರ್ಯಾಣ ಹೊಂದಿದರು.

## ೭೦ ಶ್ರೀ ಗುರು ಶ್ರೀಶವಿಠ್ಠಲರು

ಮೊಗಲಾಯಿಯ ಕುಂಟೋಜಿ ಗ್ರಾಮದವರಾದ ಇವರು ನರಸಿಂಹದಾಸರೆಂದು ಪ್ರಸಿದ್ಧರಾಗಿದ್ದಾರೆ. ಕುಂಟೋಜಿಯಲ್ಲಿ ಈ ದಾಸರು ಜಪ-ತಪ, ಅನುಷ್ಠಾನ ಮಾಡಿದ ಕಟ್ಟೆಗೆ ಈಗಲೂ ದಾಸರ ಕಟ್ಟೆ ಎಂತಾ ಕರೆಯುತ್ತಾರೆ. ಆ ಕಟ್ಟೆಗೆ ಪ್ರದಕ್ಷಿಣೆ, ನಮಸ್ಕಾರ ಹಾಕಿ, ಸೇವಾ-ಶುಶ್ರೂಷಾ ಮಾಡಿ ಅನೇಕ ಭಕ್ತ ಜನರು ಇಷ್ಟಾರ್ಥ ಗಳನ್ನು ಪಡೆಯುತ್ತಿರುವರು.

ಈ ಕುಂಟೋಜಿ ನರಸಿಂಹದಾಸರು ೧೨ ವರ್ಷಗಳಕಾಲ ಶ್ರೀ ಜಗನ್ನಾಥ ದಾಸರ ಸೇವೆ ಮಾಡಿ ಅವರಿಂದ ದಾಸಪಂಥದ ದೀಕ್ಷೆಯನ್ನು ದ್ವೈತ ಶಾಸ್ತ್ರದ ಪ್ರೇಕ್ಷೆಯನ್ನು ಪಡೆದರು. ಇವರ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಕಂಡು ತೃಪ್ತಿ ಮುದಿತರಾದ ಶ್ರೀ ಜಗನ್ನಾಥದಾಸರು ಪ್ರಸನ್ನರಾಗಿ "ಗುರು ಶ್ರೀಶ ವಿಠ್ಠಲ" ಎಂಬ ಅಂಕಿತವಿಟ್ಟು ಅನುಗ್ರಹಿಸಿದರು.

ಆದೇ ಅಂಕಿತದಿಂದ ಇವರು ಅನೇಕ ಸುಳಾದಿಗಳನ್ನೂ, ಪದ್ಯ, ಕೀರ್ತನೆ ಗಳನ್ನೂ ರಚಿಸಿದ್ದಾರೆ. ಇವರು ಬರೆದ— "ಸ್ತುತಿ ರತ್ನಮಾಲಾ" ಎಂಬ ಗದ್ಯವು ೨೭ ನುಡಿಗಳದಿದ್ದು ಪ್ರಾತಃ ಸಂಕಲ್ಪಗದ್ಯದಂತೆ ಸೂಕ್ಷ್ಮಾರ್ಥ ಗರ್ಭಿತವಾಗಿರುತ್ತದೆ.

ಇವರು ಬರೆದ ಬಿಡಿ ಕವಿತೆಗಳಲ್ಲಿ "ಗುರುಮಧ್ವರಾಯರಿಗೆ ನಮೋ ನಮೋ" "ಗುರುಮಧ್ವಸಂತತಿಗೆ ನಮೋ ನಮೋ" ಹಾಗೂ "ಬಾರೋ ಗುರು ರಾಘವೇಂದ್ರ" ಮುಂತಾದವುಗಳು ಜನಪ್ರಿಯವಾಗಿವೆ. ಸರ್ವಜನಗೇಯವೂ ಆಗಿವೆ.

ಇವರ ಕೀರ್ತನೆಗಳಲ್ಲಿ ಪ್ರಪತ್ತಿಭಾವವು ಸರ್ವಾರ್ಪಣಭಾವದಿಂದ ಬೆರೆತು ಮಂತ್ರ ಶಕ್ತಿ ಹಾಗೂ ಕಾವ್ಯಸೌಂದರ್ಯ ಎರಡೂ ಕೃತಿ ಸನ್ನಿಹಿತವಾಗುವಂತೆ ಮಾಡುತ್ತವೆ. ಶ್ರೀ ಕುಂಟೋಜಿದಾಸರ ಕಲಶಕೃತಿ ಎಂದರೆ ಹರಿಕಥಾಮೃತಸಾರಕ್ಕೆ ಇವರು ಬರೆಯಿಸಿದ ಕನ್ನಡ ಟೀಕೆ. ಕುಂಟೋಜಿದಾಸರು ತಮ್ಮ ಗುರುಗಳಾದ ಶ್ರೀಜಗನ್ನಾಥದಾಸರ ಹರಿಕಥಾಮೃತಸಾರವನ್ನು ಅವರ ಬಾಯಿಂದಲೇ ಕೇಳಿ ಅದರ

ಭಾವಾರ್ಥಗಳನ್ನು ತಿಳಿದು ಅದನ್ನು ಅವಿಕಲವಾಗಿ ತಮ್ಮ ಒಬ್ಬ ಶಿಷ್ಯನ ಕಡೆಯಿಂದ ಬರೆಯಿಸಿ ಇಟ್ಟದ್ದು ಮೂಲಗ್ರಂಥದಷ್ಟೇ ಮೌಲಿಕವಾಗಿದೆ. ಈ ಗುರು ಶ್ರೀಶವಿಠ್ಠಲರ ಶಿಷ್ಯರು ಬರೆದ ಅಥವಾ ಕುಂಟೋಜಿದಾಸರು ಬರೆಯಿಸಿದ ಈ ಗ್ರಂಥ ಶ್ರೀಜಗನ್ನಾಥ ದಾಸರ ಹೃದಯಕ್ಕೆ ಹಿಡಿದ ಒಳ್ಳೆ ಕನ್ನಡಿ ಎಂದು ಹೇಳಬಹುದು.

ಕುಂಟೋಜಿದಾಸರಿಗೆ ಲಕ್ಷ್ಮೀಪತಿ ವಿಠ್ಠಲ, ವೆಂಕಟೇಶ ವಿಠ್ಠಲ ಮುಂತಾದ ಅನೇಕ ದಾಸಶಿಷ್ಯರಿದ್ದರು.

## ೬೧ ಶ್ರೀ ಗುರುಜಗನ್ನಾಥವಿಠ್ಠಲದಾಸರು

ಇವರ ಹೆಸರು ಕೋಸಗಿ ಸ್ವಾಮಿರಾಯಾಚಾರ್ಯರು. ಸಂಸ್ಕೃತದಲ್ಲಿ ಅಪ್ರತಿಮ ಪಂಡಿತರು. ಶಾಸ್ತ್ರ, ಸಾಹಿತ್ಯ ಎರಡರಲ್ಲಿಯೂ ಪರಿಣತಿ ಮತ್ತು ಪಾರಂಗತಿ. ಆದರೂ ಕನ್ನಡ ಭಾಷೆಯತ್ತ ಒಲವು. ದಾಸಪಂಥದಲ್ಲಿ ಅಭಿನವೇಶ. ಗುರುಜಗನ್ನಾಥ ವಿಠ್ಠಲ ಎಂಬ ಅಂಕಿತದಿಂದ ಹಲವಾರು ಕೀರ್ತನೆಗಳನ್ನು ರಚಿಸಿದ್ದಾರೆ.

ಇವರ ಕೀರ್ತನೆಗಳಲ್ಲಿ ಜ್ಞಾನದ ಗಾಂಭೀರ್ಯವು ಪ್ರತಿಬಿಂಬಿತವಾಗಿದೆ. ಸರಸ ಸಜ್ಜನಿಕೆ ಒಡಮೂಡಿದೆ. ಪ್ರಮೇಯ ಜ್ಞಾನದ ರೇಖಾಂಕನವು ಇವರ ಪದ್ಯ ಪದ್ಧತಿಯಲ್ಲಿ ಸ್ಫುಟವಾಗಿ ಗೋಚರಿಸುತ್ತದೆ. ಪ್ರಾಸಾದಿಕೆಯ ಪ್ರಾಸಾದದಲ್ಲಿ ಪ್ರಮೇಯರತ್ನಗಳನ್ನೆಲ್ಲ ಪಾರದರ್ಶಕವಾದ ತಮ್ಮ ಪ್ರತಿಭೆಯ ಗೋಲಕದಿಂದ ದರ್ಶನ ಮಾಡಿಸುತ್ತಾರೆ. ಉದಾಹರಣೆಗಾಗಿ ಅವರ ಒಂದು ಪದ್ಯವನ್ನು ಓದಬಹುದು.

"ಏಕಾಂತದಿ ಶ್ರೀಕಾಂತನ ಭಜಿಸಲು ।
ಲೋಕಾಂತರ ಸುಖ ಪ್ರಾಪ್ತಿ ॥
ಭೂಕಾಂತನ ಭಜಿಸದೆ ಮಾಕಾಂತ ಒಲಿಯನು ।
ಲೋಕಾಂತರ ನಿರಯಪ್ರಾಪ್ತಿ ॥
ಸಿರಿ ರಮಣನ ಪದಯುಗಳವ ಭಜಿಸಲು ।
ದೊರೆವುದೀಗ ಮೋಕ್ಷ ॥
ನರಜನಗುಣಗಳ ವರಣನೆ ಮಾಡಲು ।
ನಿರಯದುಃಖ ಪ್ರತ್ಯಕ್ಷ ॥
ವೀತದೋಷ ನಿರ್ಭೀತ ಗುರು ಜಗ ।
ನ್ನಾಥ ವಿಠಲರೇಯ ॥
ಮಾತು ಕೇಳಿ ನಿಜಮಾತೆಯು ತೆರದಲಿ ।
ದೂತನು ಪಿಡಿವನು ಕೈಯ ॥"

ಕನ್ನಡದಂತೆ ಸಂಸ್ಕೃತದಲ್ಲಿಯೂ ಶ್ರೀ ಕೋಸಗಿ ಸ್ವಾಮಿರಾಯಾಚಾರ್ಯರಿಗೆ ಕವಿತ್ವ ಶಕ್ತಿ ಇದ್ದಿತು. ಅವರು ಶ್ರೀ ವರದೇಂದ್ರರ ಮೇಲೆ ಸಂಸ್ಕೃತದಲ್ಲಿ ರಚಿಸಿದ— "ಗುರುರಾಜ ಸ್ತೋತ್ರ"ವು ಸುಪ್ರಸಿದ್ಧವಿರುತ್ತದೆ.

ಶ್ರೀರಾಮ ಪಾದ ಸರಸೀರುಹ ಮತ್ತ ಭೃಂಗಃ।
ಶ್ರೀರಾಮ ಪಾದ ಕಮಲಾರ್ಚನ ಸ್ವಾಂತ ರಂಗಃ॥
ಶ್ರೀ ಜ್ಞಾನ ಭಕ್ತಿ ಸುವಿರಾಗ ಗುಣೌಘ ಸಂಘಃ।
ಶ್ರೀ ಪಾದಪದ್ಮಯುಗಳೋದ್ಭವ ರೇಣು ಸಂಘಃ॥

ಶ್ರೀ ವರದೇಂದ್ರ ಸಾಹಿತ್ಯ ಮಂಡಲದವರು ಹರಿಕಥಾಮೃತಸಾರ ಟೀಕಾ ಪಂಚ ರತ್ನ ಪ್ರಕಾಶಿಕೆಯ ಮೊದಲು ಭಾಗದ ಪ್ರಾರಂಭದಲ್ಲಿ ಶ್ರೀ ಕೋಸಗೀ ಆಚಾರ್ಯರ ಈ ಸಂಸ್ಕೃತ ಸ್ತೋತ್ರವನ್ನು ಪ್ರಕಟಿಸಿದ್ದಾರೆ. ಆದರೆ ಈ ಶ್ಲೋಕದಲ್ಲಿ ಪ್ರಕಾಶಕರ ಹಾಗೂ ಮುದ್ರಕರ ಅನವಧಾನದಿಂದ ಛಂದೋ ದೋಷ, ವ್ಯಾಕರಣ ದೋಷಗಳು ಹೇರಳವಾಗಿ ನುಸುಳಿಕೊಂಡು, ಮೂಲ ಸ್ತೋತ್ರದ ಸೌಂದರ್ಯಕ್ಕೆ ವ್ಯತ್ಯಯ ಬರುವಂತೆ ಎನಿಸುವಂತಾಗಿದೆ. ಅದರ ಪುನರ್ಮುದ್ರಣ ಪ್ರಸಂಗದಲ್ಲಾದರೂ ಮೂಲ ಪ್ರತಿಯನ್ನು ಸರಿಯಾಗಿ ಪಂಡಿತರಿಂದ ಪರಿಶೋಧಿಸಿ ತಿದ್ದಿ ಶುದ್ಧ ಮಾಡಿ ಪ್ರಕಟಿಸಬೇಕೆಂದು ಸೂಚಿಸಬಯಸುತ್ತೇವೆ.

## ೬೨ ಮೊದಲಕಲ್ಲು ಶೇಷದಾಸರು

ಗದ್ವಾಲದಿಂದ ೫ ಮೈಲು ದೂರದಲ್ಲಿರುವ ಹರೋರ ಗ್ರಾಮದಲ್ಲಿ ಜನಿಸಿದ ಶ್ರೀ ಶೇಷದಾಸರು ಮೊದಲು ಕುಲಕರ್ಣಿಕೆಯನ್ನು ಮಾಡುತ್ತಿದ್ದರು. ಗದ್ವಾಲದ ಸೋಮಭೂಪಾಲ ಎಂಬ ಸಂಸ್ಥಾನಿಕನು ಇವರಿಗೆ ತಾಡನ ಪೀಡನಾದಿಗಳಿಂದ ವಿಚಿತ್ರ ಹಿಂಸೆಗೆ ಈಡುಮಾಡಿದ್ದರಿಂದ ಇವರಿಗೆ ಒಮ್ಮೆಲೆ ವಿಷಯದಲ್ಲಿ ವಿರಕ್ತಿ ಮೂಡಿತು. ಲೌಕಿಕದಲ್ಲಿ ಜಿಗುಪ್ಸೆ ಹುಟ್ಟಿತು. ತತ್‌ಕ್ಷಣವೇ ತಮ್ಮ ಉದ್ಯೋಗಕ್ಕೆ ರಾಜಿನಾಮೆ ಕೊಟ್ಟು ನೇರವಾಗಿ ಚಿಂತಲದೇವಿ ಎಂಬ ಗ್ರಾಮದಲ್ಲಿ ನಿಂತು ಪ್ರಾಣ ದೇವರನ್ನು ಕುರಿತು ತಪಸ್ಸು ಮಾಡಿದರು. ಹರಿವಾಯುಗಳ ಅನುಗ್ರಹವಾಯಿತು. ಶ್ರೀವಿಜಯದಾಸರು ಸ್ವಪ್ನದಲ್ಲಿ ಕಾಣಿಸಿಕೊಂಡು ದಾಸ ದೀಕ್ಷೆಯನ್ನು ತೊಡಲು ಉಪದೇಶ ಮಾಡಿದರು.

ಯಳಮೇಲಿ ಹಯಗ್ರೀವಾಚಾರ್ಯರು ಇವರು ಇದ್ದಲ್ಲಿಗೆ ಬಂದು ವಿಶೇಷವಾಗಿ ಹರಿಗುರುಗಳ ಆರಾಧನೆ ಮಾಡಬೇಕೆಂದು ಅಪ್ಪಣೆ ಮಾಡಿದರು.

ಆದರಂತೆ ಶೇಷಪ್ಪನವರು ಚೀಕಲಪರವಿ, ಚಿಪ್ಪಿಗಿರಿ, ಚಕ್ರತೀರ್ಥ ಮುಂತಾದ ಕ್ಷೇತ್ರಗಳಲ್ಲಿ ನಿಂತು ತಪಸ್ಸು ಮಾಡಿ ದಾಸರ ಅನುಗ್ರಹವನ್ನೂ ಈಶನ ಪ್ರಸಾದ ವನ್ನೂ ಹೊಂದಿದರು. ವಿಜಯದಾಸರು ಶೇಷಪ್ಪನ ಉಗ್ರಧ್ಯಾನೋಪಾಸನೆಗಳಿಂದ ಪ್ರಸನ್ನರಾಗಿ ಸ್ವಪ್ನದಲ್ಲಿ ಬಂದು ಶ್ರೀ ಗುರು ವಿಜಯ ವಿಠ್ಠಲ ಎಂದು ಅಂಕಿತವನ್ನು ಕೊಟ್ಟು ಕರುಣಿಸಿದರು.

ಅವರ ಅಪ್ಪಣೆಯ ಮೇರೆಗೆ ಶೇಷಣ್ಣನವರು ಮೊದಲುಕಲ್ಲಿಗೆ ಬಂದು ಶಿವ ಪಂಚಾಕ್ಷರಿ ಮಂತ್ರವನ್ನು ಒಂದು ವರ್ಷ ಪಯೋವ್ರತದಿಂದ ಇದ್ದು ಮಾಡಿದರು. ಆದರಿಂದ ಮನೋನಿಯಾಮಕರಾದ ಮಹಾರುದ್ರದೇವರ ಅನುಗ್ರಹವನ್ನು ಅನಂತರ ಹರಿವಾಯುಗಳ ನಿರಂತರ ಧ್ಯಾನದಿಂದ ಹರಿ–ಗುರುಗಳ ಪ್ರಸಾದವನ್ನು ಪಡೆದರು.

ಮುಂದೆ ದಾಸರ ಕೀರ್ತಿಯು ದೇಶ–ದೇಶದಲ್ಲಿ ಬೆಳೆಯತೊಡಗಿತು. ಅವರ ಆಶೀರ್ವಾದದಿಂದ ಜನರ ದುಃಖ ಚಿಂತೆಗಳು ಪರಿಹಾರವಾಗತೊಡಗಿದವು.

ದಾಸರ ವಿಷಯದಲ್ಲಿ ಕುಹಕಿಗಳು ಕಿವಿಯೂದಿ ಶ್ರೀ ಉತ್ತರಾದಿ ಮಠದಿಂದ ಅವರಿಗೆ ಬಹಿಷ್ಕಾರ ಬರುವಂತೆ ಮಾಡಿದರು. ಮುಂದೆ ಶ್ರೀಗಳವರಿಗೆ ದಾಸರ ಹರಿ–ಗರು ಭಕ್ತಿಯ ಅರಿವಾಗಿ ಅವರನ್ನು ಗೌರವಿಸಿ ಅನುಗ್ರಹಿಸಿದರು.

ಇವರು ಅನೇಕ ಪದ–ಪದ್ಯ, ಸುಳಾದಿ ಕೀರ್ತನೆಗಳನ್ನು ರಚಿಸಿದ್ದಾರೆ. ಅದರ ಪೈಕಿ ೧೮ ತಾಳಗಳುಳ್ಳ ಅತಿ ಮಹತ್ವದ ಸುಳಾದಿ ಇರುವದು. ಇವರು ಶಾ. ಶಕೆ ೧೮೦೭ ರಲ್ಲಿ ವೈಕುಂಠವಾಸಿಗಳಾದರು. ದಾಸರ ದೇಹ ಸಂಸ್ಕಾರವಾದ ಸ್ಥಳದಲ್ಲಿ ಕಟ್ಟೆಯೊಂದನ್ನು ಕಟ್ಟಿಸಿದ್ದಾರೆ. ಭಕ್ತರು ದಾಸರ ಈ ಕಟ್ಟೆಯ ಸೇವೆಯನ್ನು ಮಾಡಿ ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುತ್ತಲಿರುವರು. ವೈಶಾಖ ಶುದ್ಧ ಅಷ್ಟಮಿ ದಾಸರ ಪುಣ್ಯದಿನವಿರುತ್ತದೆ. ಮೊದಲಕಲ್ಲಿನಲ್ಲಿ ಪ್ರತಿ ವರ್ಷ ಇವರ ಆರಾಧನೆಯು ಬಹು ವಿಜೃಂಭಣೆಯಿಂದ ನೆರವೇರುತ್ತದೆ.

ಇವರ ಕೀರ್ತನೆಗಳೆಲ್ಲ ಪ್ರಮೇಯಪೂರಿತವಾಗಿದ್ದು ವೇದಾಂತದ ಒಗಟುಗಳ ನ್ನೆಲ್ಲ ತಿಳಿಗನ್ನಡದ ಸರಳ ಶೈಲಿಯುಲ್ಲಿ ಬಿಡಿಸಿಡುತ್ತವೆ. ಛಾಂದೋಗ್ಯ, ಬೃಹದಾರಣ್ಯ, ಐತರೇಯ ಮುಂತಾದ ಉಪನಿಷತ್ತುಗಳಲ್ಲಿಯೂ ಹಾಗೂ ಆಚಾರ್ಯರ ಬೇರೆ ಪ್ರಮೇಯ ಗ್ರಂಥಗಳಲ್ಲಿಯೂ ಹೇಳಿದ ಸೂಕ್ಷ್ಮವಾದ ತಾತ್ವಿಕ ವಿಷಯುಗಳನ್ನೆಲ್ಲ ಶ್ರೀ ವಿಜಯದಾಸ, ಶ್ರೀಗೋಪಾಲದಾಸರ ನಂತರ ಸ್ವಚ್ಛ ಕನ್ನಡದಲ್ಲಿ ಬಿಚ್ಚಿ ಹೇಳಿದ ಶ್ರೇಯಸ್ಸು ಶ್ರೀ ಶೇಷದಾಸರದಾಗಿದೆ. ಆದುದರಿಂದಲೇ ಶೇಷದಾಸರ ಕೃತಿ ಗಳಲ್ಲಿ ಸಾಹಿತ್ಯದ ಸೊಬಗಿಗಿಂತ ವೇದಾಂತದ ಮೆರುಗು, ತಾತ್ವಿಕತೆಯ ಬಿಗುವು ಹೆಚ್ಚಾಗಿ ಕಂಡುಬರುತ್ತದೆ.

ಇತ್ತೀಚಿನ ನೂರಾರು ವರ್ಷಗಳಲ್ಲಿ ವೇದಾಂತದ ಭಾವಾಭಿವ್ಯಕ್ತಿಗೆ ಸಮರ್ಥವಾದ ಕನ್ನಡ ಮಾಧ್ಯಮವನ್ನು ಒದಗಿಸಿ ಸಾಹಿತ್ಯದಲ್ಲಿ ಮೂಡುವಂತೆ ಮಾಡಿದ ಮಹನೀಯರೆಂದರೆ ಮೊದಲುಕಲ್ಲಿನ ಶ್ರೀ ಗುರು ವಿಜಯ ವಿಠ್ಠದಾಸರು.

ಅವರು ರಚಿಸಿದ ಪ್ರಾಣದೇವರ ಒಂದು ಸುಳಾದಿಯಲ್ಲಿಯ ಪ್ರಮೇಯ ರಹಸ್ಯಗಳ ಗುಟ್ಟು ಕನ್ನಡದ ತಿಳಿಯಾದ ಶೈಲಿಯಲ್ಲಿ ಬಯಲಾಗಿ ಹೇಗೆ ಬಿತ್ತರಗೊಂಡಿದೆಂಬುದನ್ನು ನೋಡಿರಿ—

"ಘನದಯಾನಿಧಿಯಾದ ಪವನರಾಯನೆ ನಮೋ ।
ಪುನರಪಿ ನಮೋ ನಿನ್ನ ಪಾದಸರಸೀರುಹಕ್ಕೆ ।
...................................................................
...................................................................
ದಳಾಷ್ಟವುಳ್ಳ ರಕ್ತಾಂಬುಜದ ಮಧ್ಯ ।
ಪೊಳೆವ ಕರ್ಣಿಕೆಯಲ್ಲಿ ಶೋಭಿಸುವ ।
ಮೂಲೇಶನ ಪಾದಪಂಕಜದಲಿನಿಂದ ಸಲೆಭಕುತಿಯಿಂದ ।
ಭಜಿಸುವ ಪೂಜಿಸುವ ನಿನ್ನ ಚರಣ ।
ಮೂಲದಲ್ಲಿ ಜೀವ ಆಶ್ರಯಿಸಿ ಇಪ್ಪನಾಗಿ ।
ಸ್ಥಳವಸೇರಿಪ ಭಾರ ನಿನ್ನದಯ್ಯಾ ।
ಒಲ್ಲೆನೆಂದರೆ ಬಿಡದು ಭಕುತರ ಅಭಿಮಾನ ।
ಒಲಿದು ಪಾಲಿಸಬೇಕು ಘನ ಮಹಿಮ ।
ಖಳದರ್ಪ ಭಂಜನ ಗುರು ವಿಜಯ ವಿಠಲ ॥
ಒಲಿವ ನಿನ್ನಯ ಕೃಪೆಗೆ ವಿಮಲ ಚರಿತ ।
ಜಾಗರ ಸ್ವಪ್ನ ಸುಷುಪ್ತಿಯಲಿ ನೀನೆ ।
ಜಾಗೂರಕನಾಗಿ ಜೀವರ ಪಾಲಿಪೆ ।
ಭಾಗತ್ರಯದಲಿ ವಿಭಾಗ ಮಾಡುವೆ ।
ನಾಗಭೂಷಣಾದಿ ಸುರರಿಗೆ ಜೀವನ ।
ಸಾಗರ ಮೊದಲಾದ ಸಕಲದಲಿ ವ್ಯಾಪ್ತ ।
ನಾಗರಾಜನ ಅಂಗುಟ ಮೀಟಿದ ಶಕ್ತ ।
ಯುಗಾದಿ ಕೃತಿನಾಮ ಗುರು ವಿಜಯ ವಿಠಲನ ।
ಯೋಗವ ಪಾಲಿಸಿ ಭವದೂರ ಮಾಡುವದು ॥

ಇವೇ ಮುಂತಾದ ಪ್ರಮೇಯ ಪುಂಜಗಳನ್ನು ಹಿಂಜಿ ಹೇಳುವ ಸುಳಾದಿಗಳಲ್ಲ ರಂಜಕತೆಯೂ, ರಸಾಳತೆಯೂ ಕಿಂಚಿದಿವ ಕುಂದಿ ಕಂದಿದಂತೆ ತೋರಿದರೂ ಇದೇ ದಾಸರ ಬೇರೆ-ಬೇರೆ ಸ್ತವನ, ಕವನಗಳಲ್ಲಿ ನೈಜತೆಯೂ, ಸಾರಲ್ಯ ಹಾಗೂ ಸಾಹಿತ್ಯ ಗುಣಗಳು ಮುಪ್ಪರಿಗೊಂಡು ರಸದ ಹೊನಲಾಗಿ ಹರಿದಿವೆ.

# ೬೩ ಶ್ರೀ ಹೊನ್ನಾಳಿ ವೆಂಕಟದಾಸರು

ಹರಿಹರ, ಶಿವಮೊಗ್ಗಾದ ಮಧ್ಯದಲ್ಲಿ ತುಂಗಾ ತಟಾಕದಲ್ಲಿರುವ ಹೊನ್ನಾಳಿಯು ಎರಡನೇ ಮಂತ್ರಾಲಯವೆಂದು ಪ್ರಸಿದ್ಧವಾಗಿದೆ. ಶ್ರೀ ರಾಘವೇಂದ್ರ ಸ್ವಾಮಿಗಳ ಮೂಲ ವೃಂದಾವನವು ಮಂತ್ರಾಲಯದಲ್ಲಿ ಆದಬಳಿಕ ಮೊಟ್ಟ ಮೊದಲಿನ ಮೃತ್ತಿಕಾ ವೃಂದಾವನವು ಆದದ್ದು ಈ ಹೊನ್ನಾಳಿಯಲ್ಲಿಯೇ ಎಂದು ಹೇಳುತ್ತಾರೆ.

ಇಂಥ ರಾಯರ ಕ್ಷೇತ್ರದಲ್ಲಿ ಜನಿಸಿದ ಶ್ರೀ ಹೊನ್ನಾಳಿ ವೆಂಕಟದಾಸರು ಶ್ರೀ ವಿಜಯದಾಸರ ಸಾಕ್ಷಾತ್ ಶಿಷ್ಯರು. ಶ್ರೀ ಜಗನ್ನಾಥದಾಸರ ಒಡನಾಡಿಗಳು. ವಿಜಯದಾಸರು ಇವರಿಗೆ ಬರೀ ದಾಸ ದೀಕ್ಷೆಯನ್ನು ಕೊಟ್ಟದ್ದು ಮಾತ್ರವಲ್ಲದೆ ತಮ್ಮ ದಿವ್ಯ ಜ್ಞಾನೋಪದೇಶದಿಂದ ಸಾಕ್ಷಾತ್ ಶ್ರೀ ಹರಿಯ ಅಪರೋಕ್ಷಾನುಭೂತಿ ಯಾಗುವಂತೆ ಅನುಗ್ರಹಿಸಿದರು.

ಇವರ ಅನುಭಾವದ ನುಡಿಗಳು ತತ್ವಜ್ಞಾನದ ರಹಸ್ಯಗಳನ್ನೆಲ್ಲ ತುಂಬಿಕೊಂಡು ಸಾಹಿತ್ಯದ ಶೈಲಿ ಲಾಲಿತ್ಯವನ್ನು ಒಳಗೊಂಡು ಚಿನ್ನದ ಪ್ರಮೇಯ ಕರಂಡಗಳಂತೆ ಶೋಭಿಸುತ್ತವೆ.

ಶ್ರೀ ಹೊನ್ನಾಳಿ ವೆಂಕಟದಾಸರ ಪದ ಪದ್ಯ ಸುಳಾದಿ ಉಗಾಭೋಗಗಳನ್ನೆಲ್ಲ ಚಿಪ್ಪಗಿರಿ ಶ್ರೀ ಮೋಹನದಾಸರು ತಮ್ಮ ಸ್ವಂತ ಕೈಯಿಂದ ಬರೆದಿಟ್ಟಿದ್ದಾರೆ. ಇದರ ಮೇಲಿಂದಲೇ ಹೊನ್ನಾಳಿದಾಸರ ಕೃತಿಗಳ ಘನತೆ, ಮೌಲ್ಯಗಳು ಯಾವ ಮಟ್ಟದ ವಿರುತ್ತವೆ ಎಂಬುವದನ್ನು ನಾವು ಊಹಿಸಬಹುದು.

ಶ್ರೀ ವೆಂಕಟದಾಸರ ಪದಪದ್ಯಗಳ ಪೋಥಿ ಎಂದರೆ ಪ್ರಮೇಯ ಪಾರಿಜಾತ. ಆದರ ಕಂಪು ಕಾವ್ಯದ್ದಾದರೆ ಪೆಂಪು ವೇದಾಂತಿಕವಾಗಿದೆ. ಶ್ರೀ ವಿಜಯರಾಯರ ಪೂರ್ಣ ಅನುಗ್ರಹವು ಇವರಮೇಲೆ ಆದುದಕ್ಕೆ ಇವರ ಪದ ಪದ್ಯಗಳ ಪದ್ಧತಿಯಲ್ಲಿ ಧುಮ್ಮಿಕ್ಕಿ ಹರಿದ ಭಾವಗಂಗೆಯ ಭಕ್ತಿಯ ಪ್ರವಾಹವೇ ಆಗಿದೆ.

ಚಿಪ್ಪಗಿರಿಯಲ್ಲಿ ಮೋಹನದಾಸರು ಬರೆದಿಟ್ಟುಕೊಂಡ ಕೈಬರಹದ ಪದ್ಯ ಪೋಥಿಯ ೭೭ನೇ ಪುಟದಲ್ಲಿ ಶ್ರೀ ಸತ್ಯಬೋಧರಾಯರನ್ನು ಕುರಿತು ಒಂದು ಹಾಡು ಇದ್ದು ಅದು ೩೭೧ ನೇ ಪದವಾಗಿರುತ್ತದೆ.

"ಸತ್ಯಬೋಧರಾಯಾ ಪಾಲಿಸೋ ಭೃತ್ಯಜನರ ಪ್ರೀಯಾ ।<br>
ನಿತ್ಯದಲಿ ತುತಿಪೆ ಮನದೊಳು ಚಿತ್ತಜ ಪಿತನಲಿ ಉತ್ತಮ ಮತಿಕೊಡು ।<br>
ಸೂರಿ ಜನರ ವಂದ್ಯ ।

ಈ ಭವವಾರಿಧಿಯೊಳು ನೊಂದಾ ।
ಆರಾತ ಜನರಿಗೆ ತೋರಿಸಿ ಹರಿಯನು ।
ಕೀರುತಿಯಲಿ ಸು ।
ವಾರುತೆ ಪೇಳಿಸೊ ॥
ಅಪರಾತ್ರಿಯೊಳ ಅನ್ನ ಉಣುವ ವಿಪರೀತವೇನೆಂದು ।
ಅಪಹಾಸ ಮಾಡಿವವರಿಗಾಕ್ಷಣ ।
ತಪನ ತೋರಿದಾ ವಿಪರೀತ ಮಹಿಮನೆ ॥
ಗಂಗೆಗೆ ನೀ ಪೋಗಿತಾ ಉತ್ತುಂಗಮನಿರೆಯೋಗಿ ।
ಅಂಗನೆ ತಾನತಿಶಯದಿ ತೆರಳಿ ಬಂದು ।
ಮಂಗಳ ಸ್ನಾನವ ಮಾಡಿಸಿದಳು ಅಂದು ॥
ಸಾರ್ವನಾ ನಿನ್ನ ನೀ ಇನ್ನು ದೂರ ನೋಡದೆ ಎನ್ನ ।

ಸಾರಿಗರಿದು ಶ್ರೀ ವೆಂಕಟವಿಠಲನ ಚರಣಗಳ ತೋರು ರಕ್ಷಿಸುತ ॥ ”

ಹೀಗೆ ಹೊನ್ನಾಳಿ ವೆಂಕಟದಾಸರ ಕೃತಿಗಳಲ್ಲಿ ಹರಿಭಕ್ತಿ ಗುರುಭಕ್ತಿ ಸಂಗಮಿಸಿ ಸಾಹಿತ್ಯದ ರಂಗವೇದಿಕೆಯ ಮೇಲೆ ಶಾಸ್ತ್ರೀಯ ತತ್ವಗಳ ಸಮ್ಯಕ್ ಪ್ರದರ್ಶನವು ಏರ್ಪಡುವಂತೆ ಮಾಡಿವೆ.

## ೬೪ ಶ್ರೀ ಶ್ರೀನಿವಾಸದಾಸರು

ಹೊನ್ನಾಳಿ ದಾಸರ ಪರಂಪರೆಗೆ ಸೇರಿದ ಶ್ರೀ ಶ್ರೀನಿವಾಸ ದಾಸರು ಮೈಸೂರು ಪಟ್ಟಣದವರು. ಜಯವಿಠ್ಠಲ ಎಂಬ ಅಂಕಿತದಿಂದ ಎಷ್ಟೋ ದೇವರ ನಾಮಗಳನ್ನು ರಗಳೆ ಆಖ್ಯಾನಗಳನ್ನು ಬರೆದಿದ್ದಾರೆ. ಅವುಗಳಲ್ಲಿ ವಿರಾಡ್ರೂಪ ವರ್ಣನೆ, ಮೋಹಿಸಿ ರೂಪ ವರ್ಣನೆ, ದ್ವಾರಕಾ ವರ್ಣನೆ ಮುಂತಾದ ಪದ್ಯ ಕೃತಿಗಳು ಕನ್ನಡದ ಶುದ್ಧ ದೇಶಿ ಛಂದಸ್ಸಿನಿಂದ ರಚಿತವಾಗಿವೆ. ಇವರ ಮೇಲೆ ಮರಾಠಿಯ ಗೀಗೀ ಪದ, ಹಿಂದಿ ಕವಾಲಿ ಮಾದರಿಯ ಮೊದಲಾದ ಜಾನಪದ ಗೀತಗಳ ಪ್ರಭಾವವು ವಿಶೇಷ ವಾಗಿರುವಂತೆ ತೋರುತ್ತದೆ.

ಕನ್ನಡ ಲಾವಣಿ ಗತ್ತುಗಳಲ್ಲಿ ಅಧ್ಯಾತ್ಮ ಗೀತಗಳನ್ನು ಬರೆದ ದಾಸ ಕವಿಗಳಲ್ಲಿ ಇವರೇ ಮೊದಲಿನವರು ಮತ್ತು ಕೊನೆಯವರೂ ಎಂದು ಹೇಳಬಹುದು.

ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಒಂದು ದಿನ ಮಹಾರಾಜರು ಹಿಂದಿನ ಹರಿದಾಸರ ಶೈಲಿಯಲ್ಲಿ— “ಅರಮನೆಯನ್ನು ಬಣ್ಣಿಸುವವರು ಯಾರಾದರೂ ಇದ್ದರೆ ಮುಂದೆ ಬನ್ನಿರಿ” ಎಂದು ಆಹ್ವಾನವನ್ನು ಇತ್ತರು. ಆಗ ಯಾರಿಗೂ ಧೈರ್ಯವಾಗದೆ ಸಭೆಯಲ್ಲವೂ ಸ್ತಬ್ಧವಾಗಿ ತೆಪ್ಪನೆ ಕುಳಿತು ಕೊಂಡಿತು.

ಆಗ ಶ್ರೀನಿವಾಸದಾಸರು ಎದ್ದು ಧೈರ್ಯದಿಂದ— "ಪ್ರಭೋ, ನನಗೆ ರಾಜರ ಅರಮನೆ, ಸಿರಿಮನೆಗಳನ್ನು ಬಣ್ಣಿಸಿ ಅಭ್ಯಾಸವಿಲ್ಲ. ಹರಿಮನೆಯನ್ನು ಈಗಲೇ ಹರಿದಾಸರ ಶೈಲಿಯಲ್ಲಿ ಕೈಲಾದಷ್ಟು ವರ್ಣಿಸುತ್ತೇನೆ" ಎಂದು ಹೇಳಿದರು. ಅದಕ್ಕೆ ಕೃಷ್ಣರಾಜರು ಆಗಬಹುದು ಎಂದು ಹೇಳಿದರು. ಕೂಡಲೇ ದಾಸರು ಸದ್ಯಃ ಸ್ಫೂರ್ತಿಯಿಂದ ಶ್ರೀ ಕೃಷ್ಣನ ದ್ವಾರಕಾ ಪಟ್ಟಣವನ್ನೂ ಅಲ್ಲಿರುವ ಹರಿ ಮಂದಿರದ ವೈಭವವನ್ನೂ ಅಷ್ಟೇ ಶ್ರೀಮಂತವಾದ ಭಾಷೆಯಿಂದ, ಪ್ರೌಢ–ಸುಂದರವಾದ ಶೈಲಿಯಿಂದ ವರ್ಣಿಸತೊಡಗಿದರು.

"ಮಹಾರಾಜ ಯದುಕುಲ ಧಾಮ
ಸುರರಾಜ ಸುಂದರ ಶ್ಯಾಮ
ದ್ವಿಜರಾಜ ವಂವಶಲಲಾಮ
ದನುಜಾಂತಕವರ ನಿಸ್ಸೀಮ
ಮಹಾರಾಜಾ ಮಹಾರಾಜಾ
ಸುಂದರತರ ದ್ವಾರಾವತಿ ನಗರ
ಸುತ್ತಯೋಜನ ದ್ವಾದಶ ವಿಸ್ತಾರ
ಸಿಂಧೂರ ಶಿಪ್ಪಿದ ಗೋಪೂರ
ಶಶಿಕೋಟಿ ಪ್ರಭೆಗಳ ಧಿಕ್ಕಾರ
ಒಂದಾರಿಂದಲಿಹುದು ಪ್ರಾಕಾರ
ವಜ್ರಾನ್ವಿತ ಕವಾಟ ದ್ವಾರ
....................................
ವರಕುಂದಣದಂತೆ ವಿರಾಜಿಸುವಾಮಲ ಭಿತ್ತಿಗಳು । ನವರತ್ನಗಳು ।
ಸಾಲಿಂದಲೆಸೆವ ನವ ದ್ವಾರಗಳು । ಆಗಾರಗಳು ।
ಥರದಿಂದ ತೋಳ್ಪ ಮೇಲ್ಕಟ್ಟುಗಳು ।
ಮೇಲ್ಗಟ್ಟುಗಳು ಜಲಬಿಂದುಗಳಿಂದಾನಂದಕೊಡುವ ಕಾರಂಜಿಗಳು ।
ಸುಮಪುಂಜಗಳು ।
..................................................
ಝುಗಝುಗಿಸುವ ಶಿರಿಕರದ ಕನ್ನಡಿಯೋ ।
ಜಗದೊಗಿಳಲ್ಲದ ಸ್ಮರನ ಗರುಡಿಯೋ ।
ನಗವೈರಿಗೆ ಇದು ನಾಟ್ಯ ಚಾವಡಿಯೋ ।
ನಾಗನಗರಿಯ ಪ್ರಭೆಗೆ ಇಮ್ಮಡಿಯೋ ।
ನಾಗರತ್ನದಿಂ ರಚಿಸಿದ ಗುಡಿಯೋ ।
ವಿಗಡ ಮದನಕರ ಸುರಗಿಯ ಕಿಡಿಯೋ ।
ಮೃಗಶ್ಯಾವಾಕ್ಷಿಯರಿಗೆ ಎದೆ ಪುಡಿಯೋ ।

ಮೃಗಧರ ಮಾರ್ತಾಂಡರುಗಳ ಪಡೆಯೋ ।
ಮಜಭಾಪುರಿ ವೈರಾಜನ ಸಭೆಯೋ ।
ಜಗವನು ಬೆಳಗಿಪ ದೀಪದ ಕುಡಿಯೋ ।
ಜಗತೀಪತಿ ಶ್ರೀಹರಿ ದೇವಡಿಯೋ ।
ನಗುತಿವೆ ದೀಪಾವಳಿಗಳು ಸ್ತಂಭಾ ।
ದಿಗಳಲಿ ಸ್ವರ್ಗವ ನೋಡಿ ಮೇಲ್ ।
ಗಗನವ ಚುಂಬಿಪ ಗಾಢ ತರದಿ ।
ಗಂಭೀರದಲೊಪ್ಪುವ ಮಹಡಿ ।
ಕುಸುಮಗಳಿಂದೊಪ್ಪುವ ಬೇಲುಗಳು ।
ಜಾಗರದಲಿ ರಂಜಿಪ ನವಿಲುಗಳು ।
ಅರಗಿಳಿಯ ಸಾಲುಗಳು ।
ಅರಳಗುಚ್ಛಗಳು ।
ಅಗಣಿತ ರತ್ನಾನ್ವಿತ ಪೀಠಗಳು ।
ಅದ್ಭುತವಾದ ವಿಚಿತ್ರ ದ್ವಾರಗಳು ।
ಸೊಗಸಿನ ಚಿತ್ರದ ಮೇಲ್ಕಟ್ಟುಗಳು ।
ತೆಗೆದ ಲಕ್ಷ ಗವಾಕ್ಷಗಳು ।
ತಾರೆಗಳಲಿ ತಿದ್ದಿದ ಕುಸುರಿಗಳು ।
ಕುಸುರಿಗಳಲಿ ಮುತ್ತಿನ ಚಂಡುಗಳು ।
ಚಂಡುಗಳಿಗೆ ರತ್ನದ ಗೊಣಸುಗಳು
ಗೊಣಸುಗಳಲಿ ಮೇಲೊಪ್ಪುವ ಕಮಲಗಳು
ಕಮಲಗಳಲಿ ಮೆರೆವಾ ಭ್ರಮರಗಳು
ಮಘಮಘಸುವ ಗಂಧಾದಿಗಳಿಂದೊಪ್ಪುವ ಮಂಚಗಳು ।
ಸ್ಮರಸಂಚುಗಳು ।
ತೆಗೆಮಿಗಿಲುಂಟೆ ಈ ಜಗದೊಳು ಶಿರೀ ।
ಕರಯುಗಳದಿ ಸೌಭಾಗ್ಯವ ತಾ ಧರಿಸಿ ನಗರದಿ ನೆಲಿಸಿ
ಹಳ್ಳೆ ಹರಿಮರಸಿ ।
ತಾಮನವೆರಿಸಿ ।
ಸುಖವನುಸುರಿಸಿ
ಹರಿಯನುಸರಿಸಿ
ದುಃಖವ ಮರೆಸಿ
ಪೊಗಳಲೊಶವೇ ಮಹಾರಾಜ ಸುರೋತ್ತಮ ॥ ”

ಈ ತರಹದ ಬಣ್ಣನಿಗೆ ಚಾತುರಿ ಪೂರ್ಣವಾದ ವರ್ಣಾವೈಖರಿಗೆ ಕೃಷ್ಣರಾಜ ಒಡೆಯರು ಪರಮಪ್ರೀತರಾಗಿ ಒಂದು ಬೆಳ್ಳಿಯ ದೊಡ್ಡ ಪಾತ್ರೆಯ ತುಂಬ ನಾಣ್ಯಗಳನ್ನೂ ಕೊಟ್ಟು ಜರತಾರಿ ಶಾಲು ಜೋಡಿಗಳಿಂದ ಗೌರವಿಸಿದರಂತೆ.

## ೬೫ ಶ್ರೀ ಮೈಸೂರ ಕೃಷ್ಣದಾಸ

ಮೈಸೂರಿನ ಊರವರಾದ ಈ ಕೃಷ್ಣದಾಸರು ಹೊನ್ನಾಳಿ ವೆಂಕಟದಾಸರ ಪೀಳಿಗೆಯವರಲ್ಲಿ ಅಂಕಿತೋಪದೇಶ ಪಡೆದು ಗುರು ಶ್ರೀನಿವಾಸ ವಿಠಲ ಎಂಬ ಮುದ್ರಿಕೆಯಿಂದ ಹಲವು ಕೀರ್ತನೆಗಳನ್ನು ಕೆಲವು ಕಾವ್ಯಗಳನ್ನು ರಚಿಸಿದ್ದಾರೆ.

ಇವರ ಪದ ಸುಳಾದಿಗಳೆಲ್ಲವೂ ಪ್ರಮೇಯ ಭೂಯಿಷ್ಠವಾಗಿ ತಾತ್ವಿಕ ಕಾವ್ಯಗಳಾಗಿವೆ. ಇವರು "ಗಯ ಚರಿತ್ರ" ಎಂಬ ಮಧುರ ಕಾವ್ಯವನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾರೆ. "ಸಂಪೂರ್ಣ ಭಗವದ್ಗೀತೆ"ಯನ್ನೂ ಭಾಮಿನಿ ಷಟ್ಪದಿಯ ಛಂದಸ್ಸಿನಲ್ಲಿ ಕನ್ನಡಕ್ಕೆ ಇಳಿಸಿದ್ದಾರೆ. ಇವರ ಕೃತಿಗಳಲ್ಲಿ ಸಾಹಿತ್ಯದ ರಸೋತ್ಕಟತೆಯು ವೇದಾಂತದ ಸಮತೂಕದಲ್ಲಿ ಬೆರೆತು ಹೊಸ ಪಾಕವನ್ನೇ ನಿರ್ಮಾಣ ಮಾಡಿದೆ.

ಇತ್ತೀಚಿನ ಶಾಸ್ತ್ರ ಸಾಹಿತ್ಯಗಳ ಪ್ರಭುತ್ವದ ಪ್ರೌಢಿಮೆಯಿಂದ ಹರಿದಾಸ ಸಾಹಿತ್ಯವನ್ನು ಬಳಸಿ-ಬೆಳಗಿಸಿದ ಧೀರ ಧೀಮಂತ ದಾಸರೆಂದರೆ— ಕೃಷ್ಣದಾಸರು.

## ೬೬ ಶ್ರೀ ರಾಮರಾಯರು

ಮೈಸೂರಿನ ಸರಕಾರಿ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀ ರಾಮರಾಯರು ವೇದಾಂತ ಶಾಸ್ತ್ರದಲ್ಲಿ ತಜ್ಞಾಭಿಜ್ಞರಾಗಿದ್ದರು. ಇವರು ಇಭರಾಂಪುರದ ಕೃಷ್ಣಾಚಾರ್ಯರ ಶಿಷ್ಯರು. ಅನೇಕ ಅರ್ವಾಚೀನ ದಾಸ ಧುರೀಣರಿಗೆ ಗುರುಗಳು. ಮೈಸೂರಿನ ಶ್ರೀ ಅಟ್ಟಾಜಿ ವೆಂಕಟರಾಯರು ಈ ರಾಮರಾಯರಿಂದಲೇ ದೀಕ್ಷಾಪ್ರೇಕ್ಷಗಳನ್ನು ಪಡೆದು ಧರ್ಮಧುರಂಧರರೆಂದು ಪ್ರಖ್ಯಾತರಾದರು.

# ೬೭ ಜಯೇಶ ವಿಠಲರು
## (ಶ್ರೀ ಅಟ್ಪಾಜಿ ವೆಂಕಟರಾಯರು)



ಶ್ರೀ ಜಯೇಶ ವಿಠಲಾಂಕಿತರಾದ ಶ್ರೀ ಅಟ್ಪಾಜಿ ವೆಂಕಟರಾಯರು ಮೈಸೂರು ದೇಶದ ಭಕ್ತಿ ಪ್ರಸಾರದ ಕೇಂದ್ರವೆನಿಸಿದವರು. ಶ್ರೀ ಇಭರಾಂಪುರದ ಅಪ್ಪಾ ಅವರ ಪಟ್ಟ ಶಿಷ್ಯರಾದ ಇವರು "ಜಯೇಶ ವಿಠ್ಠಲ"ವೆಂಬ ಮುದ್ರಿಕೆಯಿಂದ ಅನೇಕ ದೇವರ ನಾಮಗಳನ್ನು ರಚಿಸಿದ್ದಾರೆ. ಹೈದರಾಬಾದಿನ ಪ್ರೊ. ಹನಮಂತರಾಯರ ಮನೆಯ ಪುಸ್ತಕ ಭಾಂಡಾರದಲ್ಲಿ ಶ್ರೀ ವೆಂಕಟರಾಯರ ಹಲವಾರು ಕೀರ್ತನೆಗಳು ಈಗಲೂ ದೊರಕುತ್ತವೆ.

ಮದ್ರಾಸಿನ ಸಮಾಜ ಭೂಷಣ ದಿ. ಕೆ. ಸೀತಾರಾಮರಾಯರ ತಂದೆಯವರಾದ ವೈ. ವಾ. ಭಕ್ತ ಗೋವಿಂದದಾಸರು ವೆಂಕಟರಾಯರ ಅಧ್ಯಾತ್ಮ ಬಂಧುಗಳಾಗಿದ್ದರು. ಇವರು ಲೌಕಿಕದಲ್ಲಿ ಉದ್ಯೋಗ ಮಾಡಿ ಡೆ|| ಕಮೀಶನರ ಆಗಿ ನಿವೃತ್ತರಾದರು. ಇಂಥ ದೊಡ್ಡ ಸರಕಾರಿ ಉದ್ಯೋಗದಲ್ಲಿದ್ದರೂ ಶ್ರೀ ವೆಂಕಟರಾಯರು "ಪದ್ಮಪತ್ರ ಇವಾಂಭಸಾ" ತೋಯದ ತಾವರೆಯಂತೆ ನಿರ್ಲಿಪ್ತರಾಗಿದ್ದರು. ಪ್ರಪಂಚದಲ್ಲಿದ್ದರೂ ಪರಮಾರ್ಥ ಸಾಧನೆ ಮಾಡಿಕೊಂಡು ಹಿಂದಿನ ಕಾಲದ ರಾಜರ್ಷಿಗಳಂತೆ ಪಾವನ ಜೀವನ ನಡೆಸಿದ ಪುಣ್ಯಾತ್ಮರೆಂದರೆ— ಶ್ರೀ ವೆಂಕಟರಾಯರು.

ಶ್ರೀ ವೆಂಕಟರಾಯರು ಅಪ್ಪಾ ಅವರ ನಿವಾಸ ಹಾಗೂ ಶ್ರೀ ಗೋಪಾಲಕೃಷ್ಣನ ಸನ್ನಿಧಾನದಿಂದಲೂ ಪವಿತ್ರವಾದ ಕಟ್ಟೆ ಮನೆಯಲ್ಲಿ ವಾಸವಾಗಿದ್ದುಕೊಂಡು ಪ್ರತಿನಿತ್ಯವೂ ಪುರಾಣ, ಪಾಠ, ಪ್ರವಚನ, ಉಪನ್ಯಾಸ,

ಭಜನ, ಹರಿಕಥೆ, ನಾಮ ಸಂಕೀರ್ತನ, ಬ್ರಾಹ್ಮಣರ ಭೋಜನ, ಹಬ್ಬ ಹರಿದಿನಗಳ ಆಚರಣೆ, ಪುಣ್ಯತಿಥಿ, ಉತ್ಸವ ಮೊದಲಾದವುಗಳಿಂದ ನಿರಂತರವೂ ಜನರಲ್ಲಿ ಭಕ್ತಿ ಉತ್ಪಾದನ ಕಾರ್ಯವನ್ನು ಮಾಡುತ್ತಲೇ ಇದ್ದರು. ಅವರು ಇರುವವರೆಗೂ ಮೈಸೂರಿನ ಕಟ್ಟೆಮನೆಯು ವೇದಾಂತದ ಕೇಂದ್ರವಾಗಿತ್ತು. ದಾಸಕೂಟದ ಧರ್ಮಸ್ಥಳವಾಗಿತ್ತು. ವ್ಯಾಸಪೀಠವಾಗಿತ್ತು. ಭಕ್ತ ಜನರಿಗೆಲ್ಲ ಅವರು ಮಾಡಿಟ್ಟ ಒಂದು ವ್ಯವಸ್ಥೆಯಿಂದ ಅಲ್ಲಿ ಈಗಲೂ ಇವೆಲ್ಲ ಕಾರ್ಯಗಳು ನಡೆಯುತ್ತಲೇ ಇವೆ. ಈ ಶತಮಾನದಲ್ಲಿ ದಾಸಕೂಟದ ಧರ್ಮಧ್ವಜವನ್ನು ವ್ಯಾಸಕೂಟದ ವಿಜಯ ಪತಾಕೆಯನ್ನೂ ಎತ್ತಿಹಿಡಿದು ಸದ್ದುಗದ್ದಲವಿಲ್ಲದೆ ಭಕ್ತಿ ಕಾರ್ಯಗಳನ್ನು ತತ್ಪರತೆಯಿಂದ ಮಾಡುತ್ತಲಿರುವ ಸಂಸ್ಥೆ ಮೈಸೂರಿನ ಕಟ್ಟೆಮನೆಯೆಂದರೆ ಶ್ರೀ ಗೋಪಾಲಕೃಷ್ಣ ದೇವಸ್ಥಾನವಾಗಿರುತ್ತದೆ.

## ೬೮ ಶ್ರೀ ದೂರಪ್ಪದಾಸರು

ಇವರು ಸವಣೂರಿನ ದಿವಾಣ ಖಂಡೇರಾಯರ ಮಕ್ಕಳು. ಮೈಸೂರಿನ ದಿವಾಣ ಪೂರ್ಣಯ್ಯನವರು ತಮ್ಮ ಅನಂತರ ಸಂಸ್ಥಾನದ ದಿವಾಣಗಿರಿಯನ್ನು ಈ ದೂರ್ವಾಸ ರಾಯರಿಗೆ ಕೊಡಬೇಕೆಂದು ಸಂಕಲ್ಪಿಸಿದ್ದರು. ಅದಕ್ಕೆ ಮಹಾರಾಜರ ಸಮ್ಮತಿಯೂ ದೊರಕಿದ್ದಿತು. ಆದರೆ ಕರ್ಜಗಿಯ ಶ್ರೀ ಶ್ರೀದ ವಿಠ್ಠಲದಾಸರು ಇವರನ್ನು ಏಕಾಂತದಲ್ಲಿ ಕರೆದು "ಕೃಷ್ಣರಾಜರ ದಿವಾಣರಾಗುವದಕ್ಕಿಂತ ನಮ್ಮ ಕೃಷ್ಣರಾಯನ ದಾಸನಾಗು" ಎಂದು ಉಪದೇಶ ಮಾಡಿದರು.

ಹದಗೊಂಡ ಹೃದಯದಲ್ಲಿ ಬಿತ್ತಿದ ಬೀಜವು ಫಲಿತವಾಯಿತು. ದೂರ್ವಾಸ ರಾಯರ ಮನಸ್ಸು ಅಧ್ಯಾತ್ಮದೆಡೆಗೆ ತಿರುಗಿ ದಿವಾನಗಿರಿಯ ಆಶೆಯ ಬಿಟ್ಟು ದಾಸ ಪಂಥದ ದೀಕ್ಷೆ ತೊಟ್ಟರು. ಭಾಗ್ಯನಿಧಿ ವಿಠ್ಠಲ ಎಂಬ ಅಂಕಿತ ಪಡೆದು ಅನೇಕ ದೇವರನಾಮಗಳನ್ನು ರಚಿಸಿದರು. ದಿವಾಣರಾಗಿ ಬರಬೇಕಾದವರು ದಾಸರಾಗಿ ಭಜನೆ ಮಾಡುತ್ತ ಬಂದದ್ದನ್ನು ನೋಡಿ ಪೂರ್ಣಯ್ಯನವರೂ ಶ್ರೀ ಕೃಷ್ಣರಾಜ ಒಡೆಯರೂ ಇವರ ವೈರಾಗ್ಯ ವೃತ್ತಿಯಿಂದ ಪ್ರಭಾವಿತರಾಗಿ ವಿಶೇಷ ಮಾನ ಮನ್ನಣೆ ಮಾಡಿದರಂತೆ. ಇವರು ದೂರಪ್ಪ ದಾಸರೆಂದು ಪ್ರಸಿದ್ಧರಾಗಿದ್ದಾರೆ. ಇವರ ಗೀತ ಪದ್ಯಗಳಲ್ಲಿ ಸಾಹಿತ್ಯದ ಗಾಡಿ ಮೊಡಿಗಳು ಇವೆ. ಮಾತುಗಳಲ್ಲಿ ಚುರುಕು ಚೈತನ್ಯಗಳಿವೆ. ಶೈಲಿಯಲ್ಲಿ ಲಾಲಿತ್ಯವಿದೆ. ಶಬ್ದಗಳಲ್ಲಿ ಸಾಹಿತ್ಯವಿದೆ. ಬೆಂಕಿಯ ಕಲ್ಲುಗಳನ್ನು ಕಟೆದಂತೆ ಇವರ ನುಡಿ-ನುಡಿಗಳು ಕಡೆದು ಅರ್ಥದ ಕಿಡಿ ಹಾರುತ್ತಿದೆ. ಉದಾಹರಣೆ—

"ಧನ ನಿಲ್ಲದಯ್ಯ । ಸಾ । ಧನ ನಿಲ್ಲುವದಯ್ಯಾ ।
ತನು ನಿಲ್ಲದಯ್ಯಾ । ದಾ । ತನು ಎನಿಸಯ್ಯಾ ।
ಜನಬರುವರೊ । ಸ । ಜ್ಜನ ಬಾರರಯ್ಯ ।

ಅನುಸರಿಸಿ ಜೀ। ವನ ಪೊರೆಯಯ್ಯಾ ॥
ಹಣಪುಟ್ಟುವದೊ । ಸು । ಗುಣ ಪುಟ್ಟದಯ್ಯಾ ।
ಗುಣನಿಧಿ ಹಂಗುಣ। ಗುಣಿಸಿ ಬಾಳಯ್ಯಾ ।
ಭಾಗ್ಯನಿಧಿ ವಿಠಲನ। ಆಜ್ಞೆ ಇದಯ್ಯಾ ।
ಸುಜ್ಞರ ಸೇವಿಸಿ। ಪ್ರಾಜ್ಞನಾಗಯ್ಯಾ ॥

ಈ ದೂರಪ್ಪದಾಸರ ಆತ್ಮ ನಿರೀಕ್ಷಣ ಶಕ್ತಿಯು ಅದ್ಭುತವಾಗಿತ್ತು. ಅವರ ಮನೋಬೋಧವು ಶ್ರವಣೀಯವಾಗಿದೆ. ಅವರ ಉಪದೇಶದಲ್ಲಿ ಅಲಂಕಾರಗಳ ನಿರ್ದೇಶ, ರಸ ಸಂದೇಶಗಳು ಕೂಡಿ ಚಿತ್ತಚೋದನೆಯೂ, ಆತ್ಮ ಶೋಧನೆಯೂ ಎರಡೂ ಆಗುತ್ತವೆ.

ಛೀ ಛೀ ಪಾಪಿ ಮನವೇ ಛೀ ಛೀ ।
ನಾಚಿಕಿಲ್ಲವೆ ನಿನಗೆ ಛೀ ಛೀ ।
ಅಲ್ಪರಿಗಾಲ್ಪರಿದರೆ ಸ್ವಲ್ಪವಾದರೂ ।
ಕರುಣವುಂಟೆ ಕಲ್ಪ-ಕಲ್ಪ ಕುದಾತರ ।
ಅಹಿ। ತಲ್ಪಶಾಯಿ ಕಲ್ಪಿಸಿಹನು ॥
ಬರಡೆಮ್ಮೆಗೆ ಉಪಚರಿಸಲು । ಕರೆಬಲ್ಲುದೆ ಪಾಲು ।
ಜಾಲೀ। ಕೊರಡನು ತೇಯ್ದರೆ ಪರಿಮಳ ।
ಹೊರಡುವದೇ ಎಂದಿಗಾದರೂ ।
ಎಷ್ಟುವಿಧಿದಿ ನೀಲಿಯ ತೊಳೆದರೆ ಬಿಟ್ಟು ಕೊಡುವದೇ ವರಣ ।
ದುಷ್ಟಗೆ ಶಿರಿಭಾಗ್ಯ ನಿಧಿ ವಿಠಲ ಒಲಿವನೆ ॥ ”

ಇವರ ಕೀರ್ತನೆಗಳಲ್ಲಿ ಉಪಮೆ ಅರ್ಥಾಂತರನ್ಯಾಸ ಉತ್ಪ್ರೇಕ್ಷೆ ಸಮಾಸೋಕ್ತಿ ಮುಂತಾದ ಬಗೆ ಬಗೆಯ ಅಲಂಕಾರಗಳು ಸದ್ದಿಲ್ಲದೆ ಮೂಡಿ ಭಾವೋನ್ನತಿಗೆ ಕಾರಣವಾಗಿವೆ.

## ೬೯ ಮುಡಕಶಿರದ ಭೀಮದಾಸರು

ಇವರು ಮೈಸೂರಿನಲ್ಲಿ ಅಧ್ಯಯನ ಮಾಡುತ್ತಿದ್ದಾಗ ಪುಣೆಯ ತ್ರ್ಯಂಬಕ ಶಾಸ್ತ್ರಿಗಳು ಬಂದರು. ಕೃಷ್ಣರಾಜ ಒಡೆಯರು ಅವರಿಗೆ ಅತ್ಯದ್ಭುತವಾದ ಸ್ವಾಗತ ಸತ್ಕಾರಮಾಡಿ ಶಾಸ್ತ್ರಿಗಳ ಮೇಲೆ ಸುವರ್ಣ ವೃಷ್ಟಿಯನ್ನೇ ಸುರಿಸಿದರು.

ಅವರಿಗೆ ರಾಜ ದರ್ಬಾರದಲ್ಲಿ ಆದ ಗೌರವವನ್ನು ಕಂಡು ಈ ಭೀಮಾಚಾರ್ಯರಲ್ಲಿ ಹೇವ ಹುಟ್ಟಿತಂತೆ. ತಾವೂ ಅಂಥ ಪಾಂಡಿತ್ಯವನ್ನು ಸಂಪಾದಿಸಿ ರಾಜಮನ್ನಣೆ

ಯನ್ನು ಪಡೆಯಬೇಕೆಂದು ಅವರು ಪಾದಚಾರಿಗಳಾಗಿಯೇ ಬಂಗಾಲಕ್ಕೆ ಹೋಗಿ ನವದ್ವೀಪದಲ್ಲಿ ತರ್ಕಶಾಸ್ತ್ರವನ್ನು ಅಧ್ಯಯನ ಮಾಡಿದರು. ಪ್ರಗಾಢ ಪಂಡಿತರಾದರು. ಬಂಗಾಲಿ, ಹಿಂದಿ ಭಾಷೆಯ ಪರಿಚಯದೊಂದಿಗೆ ಉತ್ತರ ದೇಶದ ಚೈತನ್ಯ ಪಂಥೀಯ ಭಕ್ತಿಯುಕ್ತವಾದ ಸಂಕೀರ್ತನ ಪದ್ಧತಿಯು ಭೀಮಶರ್ಮರ ಮನಸ್ಸಿನ ಮೇಲೆ ವಿಲಕ್ಷಣ ಪರಿಣಾಮ ತೂಡಿತು.

ವಿದ್ಯಾಧ್ಯಯನವೆಲ್ಲ ಮುಗಿಸಿ ಮಹಾ ವಿದ್ವಾಂಸರೆನಿಸಿ ಅದೇ ರಾಜ ಮಹಾರಾಜ ರಿತ್ತ ಶಾಲು ಶಕಲಾತಿಗಳನ್ನು ಧರಿಸಿ ತಮ್ಮ ಬಿರುದು ಬಾವಲಿಗಳನ್ನು ಮೆರಿಸುತ್ತ ಬಳ್ಳಾರಿಗೆ ಬಂದರು. ಶರ್ಮರ ವಿಲಕ್ಷಣ ಶಾಸ್ತ್ರಪಾಂಡಿತ್ಯ, ರಾಜಗೌರವ, ಜಯಪತ್ರ, ಪ್ರಮಾಣ ಪತ್ರಗಳನ್ನು ನೋಡಿ ಬಳ್ಳಾರಿಯ ನಾಗರಿಕರೆಲ್ಲರೂ ಹೆಮ್ಮೆಗೊಂಡು ಅವರ ಮದುವೆ ಮಾಡಿದರು.

ಭೀಮಶರ್ಮರ ಸಂಸಾರವು ಬೆಳೆದ ಬಳಿಕ ಸಂಸಾರಕ್ಕೆ ಚಿಂತೆಯಾಗತೊಡಗಿತು. ಬಡತನದಲ್ಲಿದ್ದರೂ ಪಾಂಡಿತ್ಯದ ಮದದಿಂದ ಬೀಗಿ ನಡೆಯುತ್ತಿದ್ದ ಭೀಮಶರ್ಮರು ನಿರ್ವಾಹವಿಲ್ಲದೆ ಒಬ್ಬ ವಕೀಲನ ಕಡೆಗೆ ದೇಶಾವರಿಗೆ ಹೋಗಿದ್ದರು. ಅವನು ಮೂರು ಪೈಸೆ ದೇಶಾವರಿಯನ್ನಿತ್ತ. "ಇಷ್ಟೇ ಮಾತ್ರವೇ ನನ್ನ ಪಾಂಡಿತ್ಯಕ್ಕೆ ಬೆಲೆ" ಎಂದೆಂದು ಭೀಮಶರ್ಮರು ಅವನ ಕೊಟ್ಟ ಪುಡಿಕಾಸು ಅಲ್ಲಿಯೇ ಇಟ್ಟು ದಾಸದೀಕ್ಷೆ ತೊಟ್ಟು ತಂಬೂರಿ ಹಿಡಿದು ಹೊರಟರು. ಭೀಮೇಶವಿಠಲ ಎಂಬ ಅಂಕಿತದಿಂದ ಅನೇಕ ಪದ ಪದ್ಯ ಕೀರ್ತನೆಗಳನ್ನು ರಚಿಸಿದರು.

ಭೀಮದಾಸರ ಕವಿತೆಗಳಲ್ಲಿ ಆನಂದದಾಸರ ಜಾಡು, ಜಾಣ್ಮೆಗಳು ಮೈದೋರಿವೆ. ಇವರು ಹಲವಾರು ಆಖ್ಯಾನಗಳನ್ನೂ, ಬಿಡಿ ದೇವರ ನಾಮಗಳನ್ನೂ ರಚಿಸಿದ್ದಾರೆ. ಸಂಸ್ಕೃತದ ಉದ್ದಾಮ ಪಂಡಿತರಾಗಿದ್ದರೂ, ತಿರುಳುಗನ್ನಡ ಶೈಲಿಯಲ್ಲಿ ಮನೋಜ್ಞ ಕೀರ್ತನೆಗಳನ್ನು ಕಟ್ಟುವದು ಇವರ ವೈಶಿಷ್ಟ್ಯವಾಗಿದೆ. ದ್ರಾಕ್ಷಾ ಪಾಕದಲ್ಲಿ ಸಂಸ್ಕೃತದ ಪುರಾಣ, ಉಪನಿಷತ್ತುಗಳ ಸಾರವನ್ನೆಲ್ಲ ಕನ್ನಡೀ ಕರಿಸುವ ಹದ ಹವಣಗಳು ಭೀಮೇಶದಾಸರಲ್ಲಿ ಆಸ್ವಾದ್ಯದೃಶ್ಯವಾಗಿವೆ. ಆಂಧ್ರ ದೇಶದಲ್ಲಿಯೂ ಕರ್ನಾಟಕದಲ್ಲಿಯೂ ಇವರ ಹೆಸರು ಪ್ರಖ್ಯಾತವಾಗಿದೆ.

## ೭೦ ಶ್ರೀ ಕಮಲಾಪತಿದಾಸರು

ಇವರು ಮೈಸೂರು ಜಿಲ್ಲೆಯ ತಿರುಮಕೂಡ್ಲು ನರಸೀಪುರದವರು. ಹರಿಕಥಾಮೃತಸಾರಕ್ಕೆ ಇವರು ಒಂದು ಸುಂದರವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಕಮಲಾಪತಿ ವಿಠಲ ಎಂಬ ಮುದ್ರಿಕೆಯಿಂದ ಅನೇಕ ದೇವರ ನಾಮಗಳನ್ನು ರಚಿಸಿದ್ದಾರಂತೆ.

## ೭೧ ಶ್ರೀ ಬೇಲೂರ ವೆಂಕಟೇಶುಬ್ಬದಾಸರು

ಧಾರವಾಡ ಜಿಲ್ಲೆಯ ರೋಣ ಗ್ರಾಮದವರಾದ ಶ್ರೀ ವೆಂಕಟದಾಸರ ಪೂರ್ವಜರಾದ ವೆಂಕಟದಾಸರು ವಿಜಯದಾಸರ ಶಿಷ್ಯರಾಗಿ ಶ್ರೀರಂಗಪಟ್ಟಣದಲ್ಲಿ ವಾಸವಾಗಿದ್ದರು. ಮೈಸೂರಿನ ರಾಜಕುಮಾರನನ್ನು ಈ ವೆಂಕಟದಾಸರ ಮೊಮ್ಮಕ್ಕಳಾದ ವೆಂಕಟೇಶದಾಸರು ಟಿಪ್ಪುಸುಲ್ತಾನನ ದಾಳಿಯ ವೇಳೆಯಲ್ಲಿ ಬಚ್ಚಿಟ್ಟು ಸಂರಕ್ಷಿಸಿದವರಂತೆ. ಇವರ ಈ ಉಪಕಾರವನ್ನು ನೆನೆದು ಮೈಸೂರ ಮಹಾರಾಜರು ಮನೆ ಹಾಗೂ ಮಾಶಾಸನವನ್ನಿತ್ತು ಮೈಸೂರಲ್ಲಿಟ್ಟುಕೊಂಡರು.

ಸಂಸ್ಕೃತ, ಕನ್ನಡ, ಆಂಧ್ರ ಭಾಷೆಗಳಲ್ಲಿ ಪಂಡಿತರಾದ ವೆಂಕಟೇಶದಾಸರು ಅರಮನೆ, ಗುರುಮನೆಗಳಲ್ಲಿ ಮಾನ್ಯತೆ ಪಡೆದಿದ್ದರು. ಇವರು ಒಮ್ಮೆ ಉಡುಪಿಗೆ ಹೋದಾಗ ಇವರಿಗೆ ಕಾಲರಾ ಬೇನೆ ಬಂದು ಶ್ರೀ ಅಪ್ಪಾಅವರ ಅನುಗ್ರಹದಿಂದ ಬದುಕಿ ಉಳಿದರು. ಅವರ ಅನುಗ್ರಹದಿಂದ ಹುಟ್ಟಿದ ಮಕ್ಕಳೇ ಶ್ರೀ ವೆಂಕಟಸುಬ್ಬದಾಸರು.

ಇವರು ಮಂತ್ರಾಲಯಮಠದ ಶ್ರೀ ಸುಧರ್ಮೇಂದ್ರ ತೀರ್ಥರಲ್ಲಿ ಶಾಸ್ತ್ರಾಧ್ಯಯನ ಮಾಡಿ ಪಂಡಿತರಾದರು. ಸುರಪುರದ ಆನಂದದಾಸರಲ್ಲಿ ಕೀರ್ತನ ಅಭ್ಯಾಸವನ್ನು ಮಾಡಿದರು. ಮುಂದೆ ಇವರು ಪ್ರಖ್ಯಾತ ಕೀರ್ತನಕಾರರಾಗಿ ಬೇಲೂರಿನಲ್ಲಿ ವಾಸವಾಗಿದ್ದರಿಂದ ಬೇಲೂರ ದಾಸರೆಂದು ಈ ಮನೆತನದವರು ಪ್ರಸಿದ್ಧರಾದರು.

ಇವರು ಹೆಚ್ಚು ಕೀರ್ತನೆಗಳನ್ನು ಬರೆಯದಿದ್ದರೂ ಬರೆದಷ್ಟು ಕೀರ್ತನೆಗಳು ಇವರ ಉಚ್ಚ ಮಟ್ಟದ ಕವಿತಾಶಕ್ತಿಯನ್ನು ತೋರಿಸಲು ಪರ್ಯಾಪ್ತವಾಗಿವೆ. ಗುರು ಭೀಮೇಶ ವಿಠಲ ಎಂಬ ಅಂಕಿತದಿಂದ ಇವರು ರಚಿಸಿದ ವಿರಳ ಗೀತಗಳಲ್ಲಿಯೇ ಕಲ್ಪನಾಸಂಪನ್ನವಾದ ಕವಿತಾ ಕೌಶಲವು ತನ್ನ ಗರಿಮೆಯ ಗರಿ ಗೆದರಿದ್ದನ್ನು ನಾವು ಕಾಣಬಹುದು. ಉಡುಪಿಯ ಕೃಷ್ಣಾಪುರ ಮಠದ ಶ್ರೀ ವಿದ್ಯಾಧೀಶಸ್ವಾಮಿಗಳನ್ನು ಬಣ್ಣಿಸಿದ ಪರಿಯನ್ನು ನೋಡಿರಿ—

"ಕಾಮಕ್ರೋಧ ಮದಮತ್ಸರ ಪಿಸಿನಕೆ
ಧೂಮಧ್ವಜನೆನಿಸಿ
ಶ್ರೀಮಧ್ವಾಭಿದ ಮುನಿಮತವನಿಧಿಗೆ
ಸೋಮನಂತೆ ಚರಿಸಿ
ಕಾಮಧೇನು ವರ ಕಲ್ಪವೃಕ್ಷ ಚಿಂ
ತಾಮಣಿ ಧಿಕ್ಕರಿಸಿ ॥
ಸಾಮಸನ್ನುತ ಶ್ರೀಧಾಮಸ್ಥಿತಗುರು
ಭೀಮೇಶವಿಠಲನ ಪ್ರೇಮದಿ ಭಜಿಪರ ॥"

## ೬೨ ಕರ್ಜಗಿಯ ರಾಜಗೋಪಾಲದಾಸರು

ಇವರ ಊರು ಕಡಕೋಳ. ಆದರೆ ನಿರಂತರ ನಿವಾಸ ಕರ್ಜಗಿಯಲ್ಲಿ. ಆದುದರಿಂದಲೇ ಇವರ ಹೆಸರಿಗೆ ಕರ್ಜಗಿ ಅಡ್ಡ ಹೆಸರಾಗಿ ಸೇರಿಕೊಂಡಿತು. ಇವರು ರಚಿಸಿದ "ಕೀಚಕ ವಧೆ" ಎಂಬ ಪ್ರಹಸನವು ಆಕರ್ಷಕ ಕೃತಿಯಾಗಿದೆ. ಇವರು ಸದ್ಯಃಸ್ಫೂರ್ತಿಯಿಂದ ಅನೇಕ ಪದ್ಯ–ಪ್ರಬಂಧಗಳನ್ನೂ ದೇವರ ನಾಮುಗಳನ್ನೂ ಬರೆದಿರುವರು. ಇವರ ಅಂಕಿತ ರಾಜಗೋಪಾಲದಾಸ.

ಇವರು ಕರ್ಜಗಿಯಲ್ಲಿರುವ ಗಲಗಲಿ ಗೋಪಾಲಕೃಷ್ಣಾಚಾರ್ಯರ ಶಿಷ್ಯರಾಗಿದ್ದರು. ಅವರ ಕೀಚಕ ವಧೆಯ ಮಂಗಳಾಚರಣದಲ್ಲಿ ಗಲಗಲಿಯ ಮುದ್ಗಲಾಚಾರ್ಯರ ಮನೆತನದ ಪಂಡಿತರನ್ನು ಬಣ್ಣಿಸಿ ವಂದಿಸಿದ್ದಾರೆ.

"ಧಾತ್ರಿಯೊಳು ವಿಚಿತ್ರ ಗಾಲವ।
ಕ್ಷೇತ್ರದಲ್ಲಿಹ ಮುದ್ಗಲಾರ್ಯರ।
ಪುತ್ರ–ಪೌತ್ರ–ಪ್ರಪೌತ್ರ ಮೊದಲು ಕ।
ಳತ್ರ ಮಿತ್ರರು ಛಾತ್ರ ವರ್ಗಕೆ।
ಪಾತ್ರ ಪದ ಶತ ಪತ್ರಕೆ ವರ।
ಗಾತ್ರದಿಂದಭಿನಮಿಸಿ ವರಗಳ।"

ಇವರು ಶೈಲಿಯು ಹಲವೆಡೆ ಪ್ರಸನ್ನ ಗಂಭೀರವಾಗಿಯೂ ಕೆಲವು ಕಡೆ ಕೋಮಲವಾಗಿಯೂ, ಅಲ್ಲಲ್ಲಿ ಜಾನಪದ ಜಾಡಿನ ಗತ್ತು–ಸುತ್ತುಗಳಲ್ಲಿ ಹರಿದು ಮೊರೆಯುತ್ತವೆ.

ಕೀಚಕನನ್ನು ಕೊಲ್ಲುವಾಗ ಭೀಮನು ಕಾಮಿನೀ ವೇಷ ತೊಟ್ಟದ್ದನ್ನು ಎಂಥ ಮನೋಜ್ಞ ಮಾರ್ಮಿಕ ಶೈಲಿಯಲ್ಲಿ ಈ ದಾಸರು ಬಣ್ಣಿಸಿದ್ದಾರೆ ನೋಡಿರಿ.

"ಭೀಮನು ಸರ್ವಜನ ಮೋಹಿಸುವಂಥ।
ಕಾಮಿನಿಯ ರೂಪವ ತೊಟ್ಟನು ॥ ಪ ॥
ಸೋಮ ಸಮಾನನ ತಾಮರ ಸಾಂಬಕ ಹೇಮಾಂಬರ
ಕಂಠಿ ಮಣಿ ಗಣಸು–
ತ್ರಾಮಕಾಮಿನಿಯ ವ್ಯಾಮೋಹಿಪ ಅಭಿರಾಮ
ರೂಪ ನಿಸ್ಸೀಮ ಗುಣಾಢ್ಯ ॥ ಅ. ಪ. ॥

## ೬೩ ಶ್ರೀ ವರದೇಶ ವಿಠ್ಠಲರು

ಇವರು ಲೌಕಿಕವಾಗಿಯೂ, ಅಧ್ಯಾತ್ಮಿಕವಾಗಿಯೂ ಪ್ರಾಣೇಶದಾಸರಿಗೆ ಸಂಬಂಧಿಸಿದವರು. ಶ್ರೀ ಪ್ರಾಣೇಶದಾಸರ ದೌಹಿತ್ರರೇ ಶ್ರೀ ವರದೇಶ ವಿಠ್ಠಲರು. ಇವರೇ ಬರೆದಿಟ್ಟ ಆತ್ಮ ಚರಿತ್ರ (ಗದ್ಯ) ದಿಂದ ಇವರ ಕಾಲವನ್ನು ೧೮೦೭ ರಿಂದ ೧೮೪೦ ವರೆಗೆ ಎಂದು ನಿರ್ಧರಿಸಲಾಗಿದೆ. ಇವರ ಜನ್ಮಸ್ಥಳ ಲಿಂಗಸೂಗೂರು. ವೃತ್ತಿಯಲ್ಲಿ ವಕೀಲರು. ಶ್ರೀ ವರದೇಂದ್ರರ ಭಕ್ತರು. ಇವರು ಒಂದು ಸಲ ಮಂತ್ರಾಲಯದಿಂದ ಹಿಂದಿರುವಾಗ ಅಣು ಮಂತ್ರಾಲಯದಲ್ಲಿ ಶ್ರೀ ರಘುಕಾಂತ ತೀರ್ಥರ ಮತ್ತು ರಘುದಾಂತತೀರ್ಥರ ದಿವ್ಯ ದರ್ಶನವಾಯಿತಂತೆ. ಅಂದಿನಿಂದ ಇವರ ಜೀವನ ದಿಶೆ ಬದಲಾಯಿತು ಶ್ರೀ ಗೋಪಾಲದಾಸರ ಶಿಷ್ಯ ಪರಂಪರೆಯಲ್ಲಿ ಒಬ್ಬರಾದ ಕೋಸಗಿಯ ಶ್ರೀ ಗುರು ಜಗನ್ನಾಥದಾಸರಿಂದ ಇವರಿಗೆ "ವರದೇಶ ವಿಠ್ಠಲ" ಎಂಬ ಅಂಕಿತ ದೊರೆಯಿತು.

ದಾಸರಿಗೆ ಸಂಸ್ಕೃತ, ಕನ್ನಡ, ಉರ್ದು, ಫಾರ್ಸಿ, ಮರಾಠಿ ಭಾಷೆಗಳಲ್ಲಿ ಪಾಂಡಿತ್ಯ ವಿತ್ತು. ಫಾರ್ಸಿ ಭಾಷೆಯಲ್ಲಿ ಕವನಗಳನ್ನು ರಚಿಸಿದ್ದಾರೆ. ಇವರು ಬರೆದ ಗ್ರಂಥಗಳಲ್ಲಿ ಶ್ರೀ ವರದೇಂದ್ರರ ಸ್ವಪ್ನವೃಂದಾವನಾಖ್ಯಾನ, ಶ್ರೀ ಪ್ರಲ್ಹಾದ ಚರಿತ್ರೆಗಳು ಉತ್ತಮ ವಾಗಿವೆ. ಅನೇಕ ಉಗಾಭೋಗ, ಪದ, ಸ್ತೋತ್ರಗಳನ್ನು ರಚಿಸಿದ್ದಾರೆ. ಇವರು ಅಂಕಿತ ಗುರುಗಳಾದ ಶ್ರೀಗುರು ಜಗನ್ನಾಥದಾಸರು ಅಪ್ಪಣಾಚಾರ್ಯರ ಅವತಾರ ವೆಂದು ಹಾಡಿ ಹೊಗಳಿದ್ದಾರೆ. ('ಸ್ಮರಿಸಿ ಬದುಕಿರೋ ಗುರುರಾಯನ ಪಾದವ ಕೊಡುವನು ಸಂಪದವ')

ಬಲ್ಲಟಿಗಿ ಶಾಮಸುಂದರರು (ಗುಂಡಾಚಾರ್ಯರು) ಶ್ರೀ ವರದೇಶ ವಿಠ್ಠಲರನ್ನು "ಪ್ರಭುರಾಯಾ। ಪ್ರಭುರಾಯಾ। ಅಭಿವಂದಿಸುವೆನು ಶುಭಮತಿ ಪಾಲಿಸು." ಎಂದು ಪ್ರಾರ್ಥಿಸಿದ್ದಾರೆ.

## ೬೪ ಶ್ರೀನಿವಾಸ ವಿಠ್ಠಲರು

ಇವರ ಹೆಸರು ತಿಮ್ಮಪ್ಪಯ್ಯ ದೇವರು. ಗುಲ್ಬುರ್ಗಾ ಜಿಲ್ಲೆಯ ತಿಂಥಿಣಿ ಗ್ರಾಮದ ಕುಲಕರ್ಣಿ. ಶ್ರೀ ವೆಂಕಟೇಶ್ವರನ ದರುಶನಕ್ಕಾಗಿ ತಿರುಪತಿಗೆ ಹೋದರು. ಅಲ್ಲಿ ವೆಂಕಟೇಶ್ವರನ ಅನುಗ್ರಹದಿಂದ ಇವರಿಗೆ " ಶ್ರೀನಿವಾಸ ವಿಠಲ " ಎಂಬ ಅಂಕಿತ ದೊರಕಿತು. ಮುಂದೆ ಇವರ ಆರಾಧ್ಯ ದೇವರು ವೆಂಕಟೇಶ್ವರನ ಆಜ್ಞೆಯ ಮೇರೆಗೆ ರಾಯಚೂರು ಜಿಲ್ಲೆಯ ದೇವದುರ್ಗದಲ್ಲಿ ಬಂದು ನೆಲೆಸಿದರು. ಇವರು ಸುಮಾರು ೫೦೦ ಹಾಡುಗಳನ್ನು ರಚಿಸಿರುವರೆಂದು ಅವರ ವಂಶಜರಿಂದ ತಿಳಿದುಬಂದಿದೆ. ಇವರು

ತಮ್ಮ ೭೦ನೇ ವಯಸ್ಸಿನಲ್ಲಿ ಕಾಲಾಧೀನವಾದರೆಂದು ಹೇಳಲಾಗುತ್ತಿದೆ. ಇವರ ಜನನ ಮತ್ತು ಜೀವನದ ಹೆಚ್ಚಿನ ವಿಷಯಗಳು ತಿಳಿದುಬಂದಿಲ್ಲ. ಇವರ ಮೊಮ್ಮಕ್ಕಳು ದೇವದುರ್ಗದಲ್ಲಿಯೂ ರಾಯಚೂರಿನಲ್ಲಿಯೂ ಇರುವರು. ಶ್ರೀನಿವಾಸ ವಿಠಲರಿಗೆ ರೈತಭಕ್ತರೇ ಹೆಚ್ಚು ಜನರೆಂದು ತಿಳಿದುಬಂದಿದೆ. ಇವರ ರೈತ ಭಕ್ತರೇ ಇವರಿಗೆ ವಿಶೇಷವಾಗಿ ಭೂಮಿಗಳನ್ನು ದಾನವಾಗಿ ಕೊಟ್ಟಿರುವರೆಂದು ಅವರ ವಂಶಜರ ಹೇಳಿಕೆ.

## ೭೫ ಅಸಿಗ್ಯಾಳ ಗೋವಿಂದ ದಾಸರು

ಇವರದು ದಾಸ ಮನೆತನ. ಇವರ ಮನೆತನದಲ್ಲಿ ಪ್ರತಿಮೂರನೆಯ ತಲೆಮಾರಿಗೊಮ್ಮೆ ಒಬ್ಬ ದಾಸರು ಆಗಿಹೋಗಿದ್ದಾರೆಂದು ಹೇಳಿಕೆ ಇದೆ. ಇವರಿಗೆ ಮಹಬೂಬ ನಗರದ (ಪಾಲಮೂರ) ಶ್ರೀ ರಾಘವೇಂದ್ರ ದಾಸರು ಗುರುಗಳಾಗಿದ್ದರು. ಅಂಕಿತ "ಸಿರಿಗೋವಿಂದ ವಿಠಲ". ಹುಟ್ಟಿ ಬೆಳೆದ ಊರು ಅಸಿಗ್ಯಾಳ. ಇವರು ಚಿಕ್ಕ ವಯಸ್ಸಿನಲ್ಲಿಯೇ ತಾಯಿ ತಂದೆಗಳ ಪ್ರೇಮದಿಂದ ವಂಚಿತರಾದರು. ಅಸಿಗ್ಯಾಳದಲ್ಲಿ ತಮ್ಮ ಅಣ್ಣಂದಿರಲ್ಲಿ ಬಂದು ಉಳಿದರು. ಇವರು ವರಕವಿಗಳಾಗಿದ್ದರು. ಇವರು ಬರೆದ ಪದಗಳ ಪೈಕಿ ಕೇವಲ ೨೩ ಪದಗಳು ಉಪಲಬ್ಧವಾಗಿವೆ. ಅವಿನ್ನೂ ಅಚ್ಚಾಗಿಲ್ಲ. ಜನರ ಬಾಯಲ್ಲಿ ಉಳಿದಿವೆ. " ಕನಕಾಂಗಿ ಕಲ್ಯಾಣ " ವೆಂಬ ಬೈಲಾಟವನ್ನೂ, ಪುರಂದರದಾಸರ ಜೀವನವನ್ನು ಆಧಾರವಾಗಿಟ್ಟುಕೊಂಡು "ದಾಸಪ್ರಬಂಧ" ಎಂಬ ನಾಟಕವನ್ನೂ ಬರೆದಿದ್ದಾರೆಂದು ತಿಳಿದುಬಂದಿದೆ. ಇವರು ಬರೆದ ಕಲಿಯುಗದ ಲಾವಣಿ "ಕೇಳಿರಿ ಜನಗಳೆ, ಬಾಳಿದಂಥ ವಿಪ್ರಾಳಿಯು ತುಂಬಾ ಹೀನಸ್ಥಿತಿ ಕಾಲಕೆ ಸರಿಯಾಗಿ ಕೆಟ್ಟು ಹೋಯಿತು ಮಾಲೋಲನ ಪಾದದ ಭಕುತಿ। ಹಿಂದಕೆ ಈ ಕುಲ ಒಂದೆ ಮನದಿ ಗೋವಿಂದನ ಮನವನು ವಲಿಸಿತ್ತು" ಬಹಳ ಜನಪ್ರಿಯವಾಗಿದೆ.

ಶ್ರೀ ಗೋವಿಂದದಾಸರು ಚಿಕ್ಕ ವಯಸ್ಸಿನಲ್ಲಿಯೇ ಅಂದರೆ ೨೮ನೆಯ ವರುಷಕ್ಕೆ ಕಾಲವಾದರು. ತಮ್ಮ ಗುರುಗಳ ದರುಶನಕ್ಕೆ ಹೊರಡುವ ಮುಂದೆ ಮನೆಯವರಿಗೆಲ್ಲ "ಇದೇ ನನ್ನ ಕೊನೆಯ ಭೆಟ್ಟಿ " ಯೆಂದು ಹೇಳಿ ಹೋದವರು, ತಿರುಗಿ ಬರಲೇ ಇಲ್ಲ. ಇಂದಿಗೆ ಸುಮಾರು ಐವತ್ತು ವರುಷಗಳ ಹಿಂದೆ ತೀರಿಕೊಂಡರು. ಇವರು ಅನೇಕ ಹರಿಜನರಿಗೆ ದಾಸ ದೀಕ್ಷೆಯನ್ನು ಕೊಟ್ಟಿದ್ದಾರೆ.

## ೭೬ ಮಾನವಿ ಗುಂಡಾಚಾರ್ಯರು

ಇವರು ವರಕವಿಗಳು. ಇವರ ಆಶುಕವಿತ್ವ ಪ್ರತಿಭೆ ಅಸಾಮಾನ್ಯವಾಗಿತ್ತು. "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ" ಇವರದಾಗಿತ್ತು. ಪ್ರಾಥಮಿಕ ಅಭ್ಯಾಸ ಮುಗಿಸಿ ಕೆಲ ದಿನ ಅಧ್ಯಾಪಕರಾಗಿದ್ದರು. ಅವರ ಮನಸ್ಸಿಗೆ ಏನು ಹೊಳೆಯಿತೋ ಅಧ್ಯಾಪಕ ವೃತ್ತಿಗೆ ರಾಜಿನಾಮೆ ಇತ್ತರು. ಪದಗಳನ್ನು ರಚಿಸಲು ಪ್ರಾರಂಭಿಸಿದರು. ಇವರಿಗೆ ಅನುಭವವೇ ಒಂದು ದೊಡ್ಡ ಶಾಲೆಯಾಗಿತ್ತು. ದಾಸಸಾಹಿತ್ಯದ ಮೇಲೆ, ಪ್ರಮೇಯಭಾಗಗಳ ಬಗ್ಗೆ ಅಗಾಧ ಪಾಂಡಿತ್ಯವಿತ್ತು. ಜನರು ಇವರಿಗೆ ಜೀವಂತ ಅರ್ಥಕೋಶ ಎನ್ನುತ್ತಿದ್ದರು. ಯಾರು ಏನೇ, ಎಷ್ಟೇ ಕಠಿಣವಾದ, ಶಬ್ದಗಳನ್ನಾಗಲಿ ಪ್ರಮೇಯ ಭಾಗಗಳನ್ನಾಗಲೀ ಕೇಳಿದರೆ ತತ್‌ಕ್ಷಣ ಉತ್ತರಿಸುತ್ತಿದ್ದರು. ಮಾನ್ವಿಗೆ ಬಿ. ಎಂ. ಶ್ರೀಯವರು ಬಂದಾಗ ಶ್ರೀ ಗುಂಡಾಚಾರ್ಯರ ಕಾವ್ಯ ಪ್ರತಿಭೆಯನ್ನು ಕೊಂಡಾಡಿದರು. ಇವರು "ಶಾಮಸುಂದರ" ಎಂಬ ಅಂಕಿತದಿಂದ ನೂರಾರು ಪದ ಪದ್ಯಗಳನ್ನು ರಚಿಸಿದ್ದಾರೆ. ಅವು ಇನ್ನೂ ಅಚ್ಚಾಗದೆ, ಹಾಗೆಯೇ ಜನರ ಬಾಯಲ್ಲಿ ಉಳಿದಿವೆ. ಇವರು ಸತ್ಯನಾರಾಯಣ ಕಥೆಯನ್ನು ಕನ್ನಡದಲ್ಲಿ ಸರಸವಾಗಿ ಬರೆದಿದ್ದಾರೆ. ಹುಟ್ಟಿದ ಊರು ಬಲ್ಲಟಗಿ. ಹೆಚ್ಚು ಕಾಲ ಮಾನ್ವಿಯಲ್ಲಿಯೇ ಇದ್ದರು.

## ೭೭ ಶ್ರೀ ಗೋವಿಂದತೀರ್ಥರು (ಗೋವಿಂದ ಒಡೆಯರು)

ಇವರು ಶ್ರೀ ವ್ಯಾಸರಾಜರ ಸಾಕ್ಷಾತ್ ಶಿಷ್ಯರು. ಶ್ರೀ ವ್ಯಾಸರಾಜರು ೨೪ ಜನ ಶಿಷ್ಯರಿಗೆ ಪಾಠ ಹೇಳಿ ಪಂಡಿತೋತ್ತಮರನ್ನಾಗಿ ಮಾಡಿ ಅವರಿಗೆ ಸನ್ಯಾಸಾಶ್ರಮ ವನ್ನಿತ್ತು ಕೇಶವ, ನಾರಾಯಣ ಎಂದು ೨೪ ದೇವರ ನಾಮಗಳನ್ನು ತಮ್ಮ ಆ ಸನ್ಯಾಸಿ ಶಿಷ್ಯರಿಗೆ ಇತ್ತರಂತೆ.

ಅವರಲ್ಲಿ ನಾಲ್ಕನೇ ಶಿಷ್ಯರೇ ಈ ಶ್ರೀ ಗೋವಿಂದ ಒಡೆಯರು. ೫ ನೇ ಯವರೇ ಶ್ರೀ ವಿಷ್ಣುತೀರ್ಥ ಎಂದು ಮೊದಲಿನ ಹೆಸರುಳ್ಳ ಶ್ರೀ ವಿಜಯೀಂದ್ರತೀರ್ಥರು.

ಹೀಗೆ ಚತುರ್ವಿಂಶತಿ ಶಿಷ್ಯ ಶ್ರೇಣಿಯಲ್ಲಿ ಗಣನೀಯ ಗೌರವವನ್ನು ಪಡೆದ ಶ್ರೀ ಗೋವಿಂದ ಒಡೆಯರು ಅಸಮಾನ್ಯ ವಾಗ್ವಿಭೂತಿಗಳಾಗಿದ್ದರು.

ಇವರು ಮೊದಲು ಖಟ್ಟಾ ಅದ್ವೈತಿಗಳಾಗಿದ್ದರು. ಘನಪಂಡಿತರೂ ಆಗಿದ್ದರು. ಕರ್ನಾಟಕ ಸಾಮ್ರಾಜ್ಯದ ವಿಜಯನಗರಲ್ಲಿ ನಿಂತು ದ್ವೈತ ದುಂದುಭಿಯನ್ನು ಮೊಳ ಗಿಸುತ್ತಿರುವ ಶ್ರೀ ವ್ಯಾಸರಾಜರ ಪರಮೋತ್ಕರ್ಷವು ಪರಮತದ ಅನೇಕ ಪಂಡಿತರಿಗೆ ಹೊಟ್ಟೆಯುರಿಯಾಗಿಪ್ಪಿತು. ಆಗ ಅದ್ವೈತಮತದ ಪಂಡಿತರೆಲ್ಲರೂ ಕೂಡಿ ತಮ್ಮ

ಸಮಾಜದಲ್ಲಿಯೇ ಮೇರು ಮನೀಷಿ ಎನಿಸಿದ ಶ್ರೀ ಗೋವಿಂದ ಸೂರಿಗಳನ್ನು ಮುಂದೆ ಮಾಡಿಕೊಂಡು ಶ್ರೀ ವ್ಯಾಸರಾಜರೊಡನೆ ವಾಕ್ಯಾರ್ಥಕ್ಕೆ ಇಳಿದರು.

೧೮ ದಿನ ನಡೆದ ವಾಕ್ಯಾರ್ಥದಲ್ಲಿ ಗೋವಿಂದ ಸೂರಿಗಳೇ ಮೊದಲಾದ ಎಲ್ಲ ಪಂಡಿತರೂ ಸೋತು ಶ್ರೀ ಚಂದ್ರಿಕಾಚಾರ್ಯರಿಗೆ ಶರಣಾಗತರಾದರು. ಅವರಿಂದಲೇ ವೈಷ್ಣವ ದೀಕ್ಷೆಯನ್ನು ಪಡೆದು ಶಂಖ, ಚಕ್ರಾದಿ ತಪ್ತ ಮುದ್ರಾಧಾರಣೆ ಮಾಡಿಸಿ ಕೊಂಡು ಅವರಲ್ಲಿ ತತ್ತ್ವೋಪದೇಶ ಪಡೆದರು.

ಶ್ರೀ ವ್ಯಾಸರಾಜರು ಅವರಿಗೆ ಗೋವಿಂದತೀರ್ಥ ಎಂದು ನಾಮಕರಣ ಮಾಡಿ ವೇದಾಂತ ಶಾಸ್ತ್ರದ ತತ್ತ್ವದ ತಿರುಳನ್ನೆಲ್ಲ ತಿಳಿಸಿ ಹೇಳಿದರು.

ಇಂತು ಮಹಾಮಹಿಮರಾದ ಶ್ರೀ ವ್ಯಾಸರಾಜರಿಂದ ವ್ಯಾಸದೀಕ್ಷೆಯನ್ನು ಪಡೆದ ಶ್ರೀ ಗೋವಿಂದ ಯತಿಗಳು ಗುರುಮುದ್ದುಕೃಷ್ಣ ಎಂಬ ಅಂಕಿತವನ್ನು ಅವರಿಂದಲೇ ಪಡೆದು ದಾಸ ಪಂಥದಲ್ಲಿಯೂ ದಿಟ್ಟ ಹೆಜ್ಜೆಯನ್ನಿಟ್ಟರು.

ಗುರುಮುದ್ದುಕೃಷ್ಣ ಎಂಬ ಅಂಕಿತದಿಂದ ಶ್ರೀ ಗೋವಿಂದತೀರ್ಥರು ರಚಿಸಿದ ಅನೇಕ ಕನ್ನಡ ದೇವರ ನಾಮಗಳು ಸುಳಾದಿಗಳು ಅವರ ಉಚ್ಚಮಟ್ಟದ ಹರಿ–ಗುರು ಭಕ್ತಿಯನ್ನೂ ಕವಿತಾಶಕ್ತಿಯನ್ನೂ ಎತ್ತಿ ತೋರಿಸುತ್ತವೆ.

ಶ್ರೀ ವಿಜಯದಾಸರಂಥ ಅಪರೋಕ್ಷ ಜ್ಞಾನಿಗಳೂ, ಶ್ರೀ ಜಗನ್ನಾಥದಾಸರಂಥ ಅನುಭಾವಿಗಳೂ ಶ್ರೀ ಗೋವಿಂದತೀರ್ಥರ ಮಹಿಮೆಯನ್ನು ಕೊಂಡಾಡಿದ್ದಾರೆ. ಮಹಾನುಭಾವರಾದ ಶ್ರೀವರದಗೋಪಾಲವಿಠ್ಠಲದಾಸರು ಕೂಡ ಶ್ರೀ ಗೋವಿಂದ ತೀರ್ಥರ ಘನತೆ ಗೌರವಗಳನ್ನು ಕೊಂಡಾಡಿದ್ದಾರೆ.

ಈ ಗೋವಿಂದತೀರ್ಥರು ತಮ್ಮ ಆಶ್ರಮ ಗುರುಗಳಾದ ಶ್ರೀ ಚಂದ್ರಿಕಾಚಾರ್ಯರ ಬಳಿಯಲ್ಲಿಯೇ ತಾವೂ ವೃಂದಾವನಸ್ಥರಾಗಿದ್ದಾರೆ.

## ೭೮ ಶ್ರೀ ಗೋಪತಿ ಕೃಷ್ಣವಿಠ್ಠಲದಾಸರು

ಇವರ ಹೆಸರು ಶ್ರೀ ಸುಬ್ಬಣ್ಣಾಚಾರ್ಯರು. ಮೂಲತಃ ಇವರು ಸುರಪುರ ದವರು. ಅಲ್ಲಿ ಆ ಸಂಸ್ಥಾನದ ಆಸ್ಥಾನ ಪಂಡಿತರಾಗಿದ್ದರು. ಮುಂದೆ ಇವರು ಧಾರವಾಡ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಹೊಳೆಆನವೇರಿಯಲ್ಲಿ ವಾಸ ವಾಗಿದ್ದರೆಂದು ತಿಳಿದು ಬರುತ್ತದೆ.

ಕುಮದ್ವತಿ-ತುಂಗಭದ್ರಾ ಸಂಗಮದ ಹತ್ತಿರವಿರುವ ಮುದೇನೂರಿನ ಸಂಗಮೇಶ್ವರ ದೇವಸ್ಥಾನದಲ್ಲಿ ತಪಸ್ಸು ಮಾಡಿದರು. ಇದರಿಂದ ಪ್ರಭಾವಿತನಾದ ಆ ಊರ ಗೌಡನು ಇವರ ಯೋಗಕ್ಷೇಮ ತಕ್ಕೊಳ್ಳುತ್ತಿದ್ದನು. ಮುಂದೆ ಇವರಿಗೆ ಮುದೇನೂರ ಆಚಾರ್ಯರೆಂದು ಕರೆಯಹತ್ತಿದರು.

ಇವರು ಅನೇಕ ಕೀರ್ತನೆಗಳನ್ನು ರಚಿಸಿರುವರು. ಗೋಪಾಲಕೃಷ್ಣ ವಿಠ್ಠಲ ಎಂಬುದು ಇವರ ಅಂಕಿತ. ಆಚಾರ್ಯರು ಮುದೇನೂರಲ್ಲಿ ಒಂದು ಪ್ರಾಣದೇವರನ್ನು ಪ್ರತಿಷ್ಠಿಸಿರುವರು. ಇವರಿಗೆ ಬೇಡರ ಕನಕನೆಂಬ ಶಿಷ್ಯನಿದ್ದನು. ಯಾವಾಗಲೂ ಆಚಾರ್ಯರ ಸೇವೆ ಮಾಡಿಕೊಂಡು ಅವರ ನೆರಳಿನಂತಿದ್ದನು.

ಆಚಾರ್ಯರು ಹಾವನೂರಿನಲ್ಲಿ ದೇಹವಿಟ್ಟರೆಂದು ತಿಳಿದುಬರುತ್ತದೆ. ಇವರ ಕಾಲ ಕ್ರಿ. ಶ. ೧೮೭೫. ಇವರ ಶಿಷ್ಯ ಕನಕನು ಆಚಾರ್ಯರು ದೇಹಬಿಟ್ಟ ೧೧ ನೇ ದಿನವೇ ದೇಹಬಿಟ್ಟನು. ಇವರ ಕೀರ್ತನೆಗಳು ವಿಶೇಷ ದೊರಕಿಲ್ಲ. ಇವರ ಪದಗಳಲ್ಲಿ ಆರ್ತಭಾವದೊಂದಿಗೆ ಪ್ರಮೇಯ ಜ್ಞಾನವು ತುಂಬಿದೆ.

ಇವರ ಒಂದು ಕೀರ್ತನೆ ನೋಡಿರಿ—

" ಪಾಲಿಸೊ ಪಾರ್ವತಿ ರಮಣಾ । ನಿನ್ನ ।
ಪಾಲಿಗೆ ಬಂದೆನೋ ಪಾಲಿಸೆನ್ನದೆ ॥ ಪಲ್ಲ ॥
ವೇದ ವೇದಾಂತ ಪುರಾಣಗಳೆಲ್ಲ ।
ನೀ ದಯಾಳುವೆಂದು ಪೊಗಳುತಿರೆ ॥
ಹಾದಿ ಬೀದಿ ದೇವತೆಗಳಿಗೆರಗಿನಾ ।
ಖೇದಬಟ್ಟು ನಿನ್ನ ಮೊರೆ ಹೊಕ್ಕೆ ಮಹಾದೇವ ॥ ೧ ॥

ತುಂಗಾ ಕುಮದ್ವತಿ ಸಂಗಮೇಶ್ವರ ನನ್ನ ।
ಕಂಗಳಿಂದಲಿ ನೋಡೊ ಕರುಣದಿಂದ ॥
ಕಂಗೆಟ್ಟು ಕಳವಳಿಸುತಿರೆನೀ ನೋಡಿ ।
ಭಂಗಪಡಿಸಿದರೇನು ಭಾಗ್ಯವು ಬರುವದು ॥ ೨ ॥

ಆಪತ್ತು ಕಳೆದು ಸಂಪತ್ತು ನಿನ್ನ ।
ರೂಪವ ತೋರಿಸೋ ತ್ವರಿತದಲಿ ॥
ಗೋಪತಿಕೃಷ್ಣ ವಿಠಲನೆಲ್ಲ ಲೋಕವ ।
ವ್ಯಾಪಿಸಿರಲು ಸಂದೇಹವ್ಯಾತಕಯ್ಯಾ ॥ ೩ ॥

# ೭೯ ಐಹೊಳಿಯ ವೆಂಕಟದಾಸರು

ಇವರು ಕನ್ನಡ, ಸಂಸ್ಕೃತಗಳಲ್ಲಿ ಪಂಡಿತರು. ವಿಜಾಪುರ ಜಿಲ್ಲೆಯ ಐಹೊಳಿಯವರು. ಅಲ್ಲಿಯ ಕುಲಕರ್ಣಿಯವರ ಮನೆತನಕ್ಕೆ ಸೇರಿದವರು. ಇವರ ಹೆಸರು ಭೀಮರಾಯ. ಕೆಲವು ದಿನ ಇಂಗ್ಲೀಷ ಅಧ್ಯಾಪಕರಾಗಿಯೂ ಮುಂದೆ ಪೋಲೀಸ ಇಲಾಖೆಯಲ್ಲಿಯೂ ಕೆಲಸ ಮಾಡಿದರೆಂದು ತಿಳಿದುಬರುತ್ತದೆ. ಇವರು ಪೂಜ್ಯ ಶ್ರೀ ಗಲಗಲಿ ಆಚಾರ್ಯರ ಶಿಷ್ಯರೆಂದು ಕಂಡು ಬಂದಿದೆ. ಇವರು ಒಂದು ಕೀರ್ತನೆಯಲ್ಲಿ ತಪಸ್ವಿಗಳಾದ ಶ್ರೀ ನರಸಿಂಹಾಚಾರ್ಯ ಗಲಗಲಿಯವರನ್ನು ಸ್ತುತಿಸಿದ್ದಾರೆ.

"ಪೊಗಳಲೆನ್ನಳವಲ್ಲ ಪರಮ ಪಾವನರಾದ ।
ಸುಗಣರು ನರಸಿಂಹಾಚಾರ್ಯರು ॥"

ಇವರ ಅಂಕಿತ ವೆಂಕಟ. ಸ್ವಪ್ನಲಬ್ಧವಾದ ಈ ಮುದ್ರಿಕೆಯಿಂದಲೇ ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರಲ್ಲದೆ ಏಕಾದಶೀ ಮಹಾತ್ಮ್ಯ, ಎಂಬುದನ್ನು ಷಟ್ಪದಿಯಲ್ಲಿ ರಚಿಸಿರುವರು. ಇವಲ್ಲದೆ ವಿರಾಟ ಪರ್ವ, ರಾಮ ಪಾರಿಜಾತ, ರುಕ್ಮಾಂಗದ ನಾಟಕ, ನಳೋಪಾಖ್ಯಾನ, ಅಂಬರೀಷ ನಾಟಕ, ಕೃಷ್ಣ ಪಾರಿಜಾತ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

ಏಕಾದಶೀ ಮಹಾತ್ಮ್ಯದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ ಮತ್ಸ್ಯ ಪುರಾಣದ ೧೧ ನೇ ಅಧ್ಯಾಯದ ಕಥೆಯಿರುವದು. ಆದರ ಫಲಶ್ರುತಿಯಲ್ಲಿ ತಮ್ಮ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ.

ಧಾರುಣೀಯೊಳಗಧಿಕ ಮೆನಿಸುವ ।
ಭೂರಮಣವಿರುವ ಕ್ಷೇತ್ರದೊಳಗಿಹ ।
ಸಾರ ಐಹೊಳಿ ಪುರದಿ ಭಾರದ್ವಾಜ ಗೋತ್ರದಲೀ ॥
ಧೀರ ರಾಘವನಿಂದ ಜನಿಸಿದ ।
ಮಾರುತಾತ್ಮಜನೆಂಬ ನಾಮವು ।
ಚಾರು ಮಧ್ವಮತಾನುಗನು ಶ್ರೀ ಹರಿಯ ಕಿಂಕರನು ॥

ಇದರ ಮೇಲಿಂದ ಇವರು ಭಾರದ್ವಾಜ ಗೋತ್ರದ ಮಾಧ್ವರಾದ ರಾಘವೇಂದ್ರ ರಾಯರ ಮಗ ಭೀಮರಾಯನೆಂದು ಗೊತ್ತಾಗುವದು.

ಇವರ ಕೀರ್ತನೆಗಳಲ್ಲಿ ಸಾಹಿತ್ಯದ ಸೊಬಗಿದೆ. ಕಲ್ಪನೆಯ ನಾವೀನ್ಯವಿದೆ. ಜಾನಪದದ ರೀತಿಗೆ ಕನ್ನಡದ ಸಾಹಿತ್ಯಕ ಸಂಪ್ರದಾಯದ ಒಪ್ಪ ಹಾಕಿ ಹೊಸ ಛಂದಸ್ಸುಗಳ ಚಾಲು, ಲೀಲೆಗಳನ್ನು ಓಲೈಸುವ ಇವರ ಜಾಣ್ಮೆ ಮೇಲ್ಮಟ್ಟದ್ದಾಗಿದೆ. ಜನ–ಮನದ ಲೋಪದೋಷಗಳನ್ನು ತಿದ್ದುವಲ್ಲಿ ಇವರ ವಚನ ವಿನ್ಯಾಸಗಳು ಒಳ್ಳೆ ಪ್ರಭಾವಶಾಲಿಯಾದ ಕಾರ್ಯ ಮಾಡುತ್ತದೆ.

ಇಂದ್ರಿಯ ಲೌಲ್ಯದಿಂದ ವಾಮಾಚಾರಕ್ಕಿಳಿಯುವ ಪಾಪಿಗಳಿಗೆ ಪರತ್ರ ಎಂಥ ಘೋರವಾದ ಪರಿಣಾಮವು ಕಾದಿದೆ ಎಂಬುದನ್ನು ವೆಂಕಟದಾಸರು ಬಹು ಮಾರ್ಮಿಕ ವಾಗಿ ಚಿತ್ರಿಸಿದ್ದಾರೆ.

ತಿಳಿವಿಕೆಯಲ್ಲಿ ನಡಿ ಮನುಜಾ । ಯಮ ।
ನಲಿ ಯಾಗುವ ಭವಣಿಯು ತಪ್ಪದು ನೈಜಾ ।
ಸುಳ್ಳು ಮಾತುಗಳಾಡೋದಿಲ್ಲೆ । ನಿನ್ನ ಹಲ್ಲು ಕಿತ್ತಿಸಿ ಕಡಿದ್ದಾಕುವರಲ್ಲೆ ॥
ಕಳ್ಳತನ ಮಾಡೋದಿಲ್ಲೆ । ಬೆನ್ನೆಸೆಳ್ಳೀ ಎಬ್ಬಿಸಿ ಕೈಯ ಕಡಿಸುವರಲ್ಲೆ ॥
ದತ್ತಾಪಹಾರ ಮಾಡೋದಿಲ್ಲೆ । ಜಿಹ್ವೆಕತ್ತರಿಸುವರೆಲೊ ಅಂತಕರಲ್ಲೆ ॥
ವೃತ್ತಿಚ್ಛೇದನ ಮಾಡೋದಿಲ್ಲೆ । ನಿನ್ನ । ಎತ್ತಿಹಾಕುವರು ಕುಂಭಿ ಪಾಕದಲ್ಲೆ ॥
ಪರಸತಿಯರನುಪ್ಪುದುದಿಲ್ಲೆ । ನಿನ್ನ । ಉರಿವ ಉಕ್ಕಿನ ಕಂಭ ತೆಕ್ಕಿಸೋರಲ್ಲೆ ॥
ಮರವಿ ಮೋಸವ ಮಾಡೋದಿಲ್ಲೆ । ನಿನ್ನ । ಪರಿಪರಿಯ ಭವಣಿಯ ಬಡಿಸೋರಲ್ಲೆ ॥
ಪ್ರಾಣ ಹಿಂಸೆ ಮಾಡೋದಿಲ್ಲೆ । ಕಲ್ಲ । ಗಾಣದೊಳಗಿಕ್ಕಿ ತಿರುಗಿಸೋರಲ್ಲೆ ॥
ಮಾನಿನಿಯರನು ನೋಡೋದಿಲ್ಲೆ । ಶಸ್ತ್ರ । ಪೋಣಿಸಿ ಕಣ್ಣು ಮೀಟಸುವರಲ್ಲೆ ॥
ಹೇಸಿವಿಷಯನುಂಬೋದಿಲ್ಲೆ । ಸೀಸ । ಕಾಸಿ ಹೊಯ್ಯುವರೆಲೊ ನಿನ್ನ ಬಾಯಲ್ಲೆ ॥
ದೂಷಣ ನಿಂದೆಗಳಿಲ್ಲೆ ಬಲು । ದೋಷ ಎನ್ನುತ ನಿನ್ನ ಘಾಸಿಪರಲ್ಲೆ ॥

ಹೀಗೆ ಐಹಿಕ ಸುಖ ವಿಲಾಸ ಹಾಗೂ ಅದರಿಂದಾಗಬಹುದಾದ ಯಮ ಯಾತನೆಗಳ ಎರಡೂ ಚಿತ್ರಗಳನ್ನು ತೋರಿಸಿ ಪಾಪಾಚಾರದಿಂದ ಜನರ ಮನಸ್ಸನ್ನು ತಿರುಗಿಸುವ ಹವಣು ಹಂಬಲಗಳು ಇಲ್ಲಿ ಕಂಡು ಬರುತ್ತಿವೆ.

ದಾಸರ ದ್ವೈತ ದೀಕ್ಷೆಯು ಅಸಾಧಾರಣವಾಗಿದ್ದಿತು. ವೇದ ವಚನಗಳ ತಿರು ಳೆಲ್ಲವೂ ಅವರ ವಾಚೋ ವಿಚಿಗಳಲ್ಲಿ ತೇಲಿ ಬಂದಿದೆ.

ಜೀವೇಶರೊಂದೆಂಬ ಹೊಲಿಯ । ಪರಿ ।
ಭಾವಿಸೊ ದ್ವಾಸುಪರ್ಣ ಎಂಬ ಶ್ರುತಿಯ ॥
ಕಾಮನೈಯ್ಯನೆ ಜಗದೊಡೆಯ । ನಮ್ಮ ।
ದೇವಗೆ ಜೀವಾತ್ಮ ಭೃತ್ಯನೋಖರಿಯ ॥
ಅದ್ವೈತ ಕೂಡನಾಟ ಬ್ಯಾಡ । ನಮ ।
ಮಧ್ವ ಮತದ ಪದ್ಧತಿ ಬಿಡ ಬ್ಯಾಡ ।
ಖದ್ಯೋತ ಸುತ ಗಂಜ ಬ್ಯಾಡ । ನೀನು ।
ಪೊಂದು ಐಹೊಳಿಯ ವೆಂಕಟನಂಘ್ರಿಯ ಗಾಢಾ ॥

ಲಾವಣಿ ಹಾಗೂ ಪಾರಿಜಾತ ಪದ್ಧತಿಯಲ್ಲಿ ಸಾಹಿತ್ಯದ ಮನೋಧರ್ಮವನ್ನು ಮೂಡಿಸಿ ಮೆರೆಯಿಸಿದ ಶ್ರೇಯಸ್ಸು ಶ್ರೀ ವೆಂಕಟದಾಸರದಾಗಿದೆ.

## ೮೦ ಶ್ರೀ ಆದವಾನಿಯ ರಾಮಸುಂದರದಾಸರು

ಶ್ರೀ ಜಗನ್ನಾಥದಾಸರ ಸಮಕಾಲೀನರಾದ ಶ್ರೀ ರಾಮ ಸುಂದರ ದಾಸರು ರಾಮಸುಂದರ ವಿಠಲ ಎಂಬ ಅಂಕಿತದಿಂದ ಸಮಗ್ರ ಭಾಗವತವನ್ನು ಕನ್ನಡ ಕೀರ್ತನಕ್ಕೆ ಇಳಿಸಿದ್ದಾರೆ. ಇವರ ಕವಿತೆಗಳು ಭಾವಸಂಪುಷ್ಟತೆಯಿಂದಲೂ, ಅರ್ಥ ಚಮತ್ಕೃತಿಯಿಂದಲೂ ಓದುಗರ ಹೃದಯವನ್ನು ಸೆಳೆಯುತ್ತಿವೆ.

" ಪೋಗಿ ಬರುವ ಗೋಪ। ನಾಗವೇಣಿಯರೇ ॥ "

ಎಂಬ ದೇವರ ನಾಮವು ಕನ್ನಡ ನಾಡಿನಲ್ಲೆಲ್ಲ ಬಹು ಜನರ ಮುಖದಲ್ಲಿ ನಲಿದಾಡುತ್ತಲಿದೆ.

ಇವರು ಶ್ರೀ ಜಗನ್ನಾಥದಾಸರ ಎದುರು ಹರಕೀರ್ತನೆ ಮಾಡಿ ಅವರನ್ನು ಸಂತೋಷಪಡಿಸಿದರು. ಇವರ ಕೀರ್ತನ ಪದ್ಧತಿಯನ್ನು ನೋಡಿ ಸಂತುಷ್ಟರಾದ ಶ್ರೀ ಜಗನ್ನಾಥ ದಾಸರು ಶ್ರೀ ರಾಮಸುಂದರ ದಾಸರಿಗೆ ದಿವ್ಯ ಜ್ಞಾನೋಪದೇಶ ಮಾಡಿ ಉದ್ಧರಿಸಿದರು.

## ೮೧ ಶ್ರೀ ವೆಂಕಟೇಶ ವಿಠ್ಠಲದಾಸರು

ಶತಾಯುಷಿಗಳಾದ ಶ್ರೀ ವೆಂಕಟೇಶ ವಿಠ್ಠಲದಾಸರ ಹೆಸರು ಜೋಶಿ ವೆಂಕಪ್ಪಾಚಾರ್ಯರು. ಇವರು ಮೊದಲು ವೈಶ್ಯ ವರ್ಗದ ಪುರೋಹಿತರಾಗಿದ್ದರು.

" ರಾಜಾ ರಾಷ್ಟ್ರಕೃತಂ ಪಾಪಂ ರಾಜಪಾಪಂ ಪುರೋಹಿತಃ "

ಎಂಬ ಸಂಸ್ಕೃತ ವಚನವನ್ನು ಕೇಳಿ ಅವರಿಗೆ ಬಹಳ ಕೆಡುಕೆನಿಸಿತು. ಕೂಡಲೇ ಅವರು ತಮ್ಮ ವೃತ್ತಿಗೆ ತಿಲಾಂಜಲಿ ಇತ್ತು ನಿಸ್ಪೃಹ ವೃತ್ತಿಯಿಂದ ಯಾವಜ್ಜನ್ಮ ಹರಿನಾಮ ಸ್ಮರಣೆಗೆ ತಮ್ಮನ್ನು ತಾವೇ ಅರ್ಪಿಸಿಕೊಂಡರು.

ಇವರು ಗದ್ವಾಲಿಯಲ್ಲಿ ಕಾವ್ಯಶಾಸ್ತ್ರಾಧ್ಯಯನಮಾಡಿ ಸುರಪುರದ ಆನಂದ ದಾಸರಿಂದ ವೆಂಕಟೇಶ ವಿಠ್ಠಲ ಎಂಬ ಅಂಕಿತ ಪಡೆದು ಹರಿದಾಸರೆಂದು ಪ್ರಸಿದ್ಧರಾದರು.

ನಾರಾಯಣಸ್ವಾಮಿ ಎಂಬ ಗಾನ ಪಂಡಿತರಲ್ಲಿ ಕ್ರಮ ಪ್ರಕಾರವಾಗಿ ಅಧ್ಯಯನ ಮಾಡಿದ್ದರಿಂದ ಸಂಗೀತ ಶಾಸ್ತ್ರದಲ್ಲಿಯೂ ಇವರಿಗೆ ಪ್ರಾವಣ್ಯ ಪ್ರಾವೀಣ್ಯಗಳು ಹೇಳುಕೊಳ್ಳುವಂತಿದ್ದವು. ಅದರ ಜೊತೆಗೆ ಕವಿತ್ವ ಹಾಗೂ ಶಾಸ್ತ್ರಜ್ಞಾನಗಳು ಸೇರಿ ಇವರ ಕೀರ್ತನೆಗಳಲ್ಲಿ ಕಲ್ಪನಾ ಮೂಲವಾದ ಕಲಾವಂತಿಕೆಯು ಪ್ರಮುಖ ಗುಣವಾಗಿ ಎದ್ದು ಕಾಣುತ್ತಿದೆ.

ಇವರು ಇಪ್ಪತ್ತು ಆಖ್ಯಾನಗಳನ್ನು ರಚಿಸಿದ್ದಾರೆ. ಇವರು ತಮ್ಮ ಕೀರ್ತನೆಗಳಲ್ಲಿ ಬಳಸಿದ ಛಂದಸ್ಸಿನ ಅಂದವೇ ಬೇರೆ, ಭಾವಕ್ಕೆ ತಕ್ಕಂತೆ ಪದ ಪದ್ಯ ಪದ್ಧತಿಯಲ್ಲಿ ಅರ್ಥೋಲ್ಲಾಸಕಾರಿಯಾದ ಮುರುವು ತಿರುವುಗಳನ್ನು ಅಲ್ಲಲ್ಲಿ ಮಿಂಚುವಂತೆ ಮಾಡಿದ್ದು ಗಾನ ಪದ್ಧತಿಗೆ ಅತ್ಯಂತ ಉಪಯುಕ್ತವೆನಿಸಿವೆ.

ಇವರ ಒಂದು ಪದದ ಮಾದರಿ ನೋಡಿರಿ—

ಬಂದಳಾ ಜನಕನಂದನೆ ರಾಜರ।
ಸಂದಣಿಯೊಳು ಸಭೆಗೆ ಸರಸದಿ ॥ ಪ ॥
ಸುಂದರ ರಾಮಚಂದಿರನ ಪದ।
ದ್ವಂದ್ವ ನೋಡಲಾನಂದದಲಿ ನಡೆದು ॥ ಅ ॥
ಎಡ–ಬಲದಿ ಛಡಿಗಳ್ಹಿಡಿದಾರ್ಭಟದಿಂದ।
ಬಿಡಿ–ಬಿಡಿ ಪಥವೆನ್ನುತ।
ಗಡಣೆ ಮಾಳ್ಪ ಭೃತ್ಯರ ನಿವಹಗಳಿಂದ।
ಕೂಡಿ ನಡೆದ ಸಾಲ್ಹಿಡಿದ ಕರಪಿಡಿದ।
ಮಡದಿಯರು ಬರುತಿರುವ ಸಡಗರ।
ನೋಡಿ ರಾಜರ ಎದೆ ಬಡೆದರಾ।
ದೃಢತರಾ–ವಚನವ। ೬
ನುಡಿಯದೆ ಜನರೋಳ್। ನಡುಗತಲಿರಲಾ।
ಪಡವಿ ಕುವರಿ ಜಡಿದಡಿ ಇಡುತ। ನಗುತ ॥

## ೮೨ ಹರಪನಹಳ್ಳಿ ರಾಮಾಚಾರ್ಯರು

ಆನಂದದಾಸರ ಶಿಷ್ಯರಾದ ಇವರ ಮೂಲ ಊರು ಹರಪನಹಳ್ಳಿಯಾಗಿದ್ದರೂ ಇವರು ಮುಂದೆ ಗುರುಸ್ಥಾನವಾದ ಮಂತ್ರಾಲಯದಲ್ಲಿಯೇ ನೆಲಿಸಿದರು. ಇವರಿಗೆ ಸುರಪುರದ ಆನಂದದಾಸರು ಇಂದಿರೇಶ ಎಂಬ ಅಂಕಿತವಿತ್ತು ಉಪದೇಶ ಮಾಡಿದರು.

ಈ ಮುದ್ರಿಕೆಯಿಂದ ಇವರು ಅನೇಕ ಆಖ್ಯಾನಗಳನ್ನು ರಚಿಸಿದ್ದಾರೆ. ಇವರ ವಾಣಿಯ ಜಾಜ್ವಲ್ಯ, ಪ್ರಸಾದ ಬಾಹುಲ್ಯ, ಅರ್ಥ ವೈಶಾಲ್ಯ ಹಾಗೂ ಶೈಲಿಯ ಸಾರಲ್ಯಗಳಿಗಾಗಿ ಕೆಳಗಿನ ಅವರ ಒಂದು ಹಾಡನ್ನು ಗಮನಿಸಿ—

ಉತ್ತರ ಗೋಗ್ರಹಣ ಕಾಲದಲ್ಲಿ ಬೃಹನ್ನಳೆಯು ಸುಧೇಷ್ಣೆಗೆ ಹೇಳಿದ ಮಾತು ಮನನೀಯವೂ ಆಗಿವೆ. ರಮಣೀಯವೂ ಆಗಿವೆ.

ಪೋಗಿ ಬರುವೆನೆ ಭೂವರನ ರಾಣಿ। ಗಂಭೀರವಾಣಿ।
ಬಾಗಿ ಬೇಡುವೆ ಪರಮ ಕಲ್ಯಾಣಿ। ಕಾಳಾಹಿವೇಣಿ ॥ ಪ ॥
ನಿನ್ನ ಮಗನಿಗೆ ಬಂದುದೇನೋ ಭಯ। ನಾನಿರಲು ಜಯ।
ಘನವಾಗಿರಲಮ್ಮ ನಿಮ್ಮ ದಯ।
ಸನ್ನಿಹಿಸುವನೆ ರಥವ ಹೇಮಮಯ। ಕಾಳಗಕೆ ಸಮಯ।

ಇಲ್ಲಿ ಬೃಹನ್ನಳೆಯು—"ನಾನಿರಲು ವಿಜಯ ನಿಮ್ಮ ಮಗನಿಗೆ ಬಂದುದೇನು ಭಯ" ಎಂದು ಹೇಳಿದ ಮಾತಿನಲ್ಲಿ ನಾನು "ವಿಜಯ" ಅಂದರೆ ಅರ್ಜುನ. ನಾನಿರಲು ನಿಮಗೇಕೆ ಭಯ! ನಿಮಗೆ ವಿಜಯವೇ— ಗೆಲವು ನಿಶ್ಚಯ ಎಂಬ ಮಾತಿನಿಂದ ವಿಜಯ ಶಬ್ದದ ಶ್ಲೇಷಾರ್ಥವನ್ನು ಮಾರ್ಮಿಕವಾಗಿ ಉಪಯೋಗಿಸಿದ್ದು ಕಂಡು ಬರುತ್ತಿದೆ. ಇವರು ಸಂಸ್ಕೃತದ ಆರ್ಯಾ ಛಂದಸ್ಸನ್ನೂ, ಕನ್ನಡದಲ್ಲಿ ಹಾಳತವಾದ ಭಾವಾವತರಣಕ್ಕೆ ಹವಣುಗೊಳಿಸಿ ಹಾಡಿದ್ದಾರೆ.

"ತಾಯಿ ತವಾನುಗ್ರಹವಳಿ
ತಾಯತವಾಗಿರಲಿ ತಾಳ್ವೆ ತಾಯಿತವ
ತಾಯಿ ತವರಮನೆಯೊಳುಗುರು
ತಾಯಿತವರ ಗೆಲುವೆ ನಾತತಾಯಿತವ"

ಇದರ ತಾತ್ಪರ್ಯವನ್ನು ದಿ. ಬೇಲೂರ ಕೇಶವದಾಸರ ಭಾಷೆಯಲ್ಲಿ ಕೇಳಿರಿ.

ತಾಯಿ ನಿನ್ನ ಅನುಗ್ರಹ ಒಳ್ಳೇದಾಗಿ ವಿಸ್ತಾರವಾಗಿರಲಿ. ಶತ್ರುಗಳನ್ನು ಗೆಲ್ಲುವ ದರಲ್ಲಿ ಕಂಕಣ ಕಟ್ಟುತ್ತೇನೆ ತಾಯಿ! ಅವರ ಗುರುತು ತವರ ಮನೆಯಲ್ಲಿಯೇ ಆಯಿತು. ನಿನಗೆ ಈಗ ಆತ ತಾಯಿಗಳಾಗಿ ಬಂದಿದ್ದಾರೆ. ಗೆದ್ದು ಬಿಡುತ್ತೇನೆ."

ಹೀಗೆ ಹರಪನಹಳ್ಳಿ ಇಂದಿರೇಶದಾಸರು ಶ್ರವಣ ರಮಣೀಯವಾದ ತಮ್ಮ ಪದ ಪದ್ಯಗಳ ಅರ್ಥ ಪ್ರಖರತೆ, ಹಾಗೂ ನಾದ ಮುಖರತೆಗಳಿಂದ ಸಹೃದಯರ ಮನಃ ಪ್ರೀಣನವನ್ನು ಮಾಡುತ್ತಾರೆ. ಇವರ ಜಾವಡಿಗಳು ಬಹು ಜನಪ್ರಿಯವಾಗಿವೆ.

## ೮೩ ಶ್ರೀ ಕೃಷ್ಣರಾವ ಹಾಗಲವಾಡಿ

ಕೋಲಾರ ಜಿಲ್ಲೆಯ ಶಿಡ್ಲಘಟ್ಟದ ಇವರು ಸರಕಾರಿ ನೌಕರಿಯಲ್ಲಿದ್ದಾಗಲೇ ವಿರಕ್ತ ರಾಗಿ ದಾಸಧರ್ಮವನ್ನು ಅವಲಂಬಿಸಿದರು. ಬಿರೂರು ಮಾರುತಿ ದೇವಾಲಯದಲ್ಲಿ ನೆಲಸಿ ನಿರಂತರ ಭಗವಧ್ಯಾನದಲ್ಲಿ ನಿರತರಾದರು. 'ವೇಣು ಗೋಪಾಲ' ಮುದ್ರಿಕೆ ಯಿಂದ ಸುಮಾರು ೨೦೦ ಕೀರ್ತನೆಗಳನ್ನು ರಚಿಸಿದ್ದಾರೆ.

## ೮೪ ಸಕ್ಕರಿ ಬಾಳಾಚಾರ್ಯರು

ಧಾರವಾಡ ಜಿಲ್ಲೆಯ ಸಾತೇನಹಳ್ಳಿಯ ಬಾಳಾಚಾರ್ಯರು ಕನ್ನಡ ಶಾಲಾಧ್ಯಾಪಕರಾಗಿ ಕೆಲಸ ಮಾಡಿದರು. ಇವರು ಕನ್ನಡ ಕವಿಗಳೂ, ಕೀರ್ತನಕಾರರೂ ಆಗಿದ್ದರು. ಶಾಂತಕವಿ ಎಂಬ ಮುದ್ರಿಕೆಯಿಂದ ಇವರು ಆನಂದ ಲಹರಿ, ಕನ್ನಡ ದಾಸಯ್ಯನ ಪದಗಳು ಕೀಚಕ ವಧೆ, ಕೃಷ್ಣದಾನಾಮೃತ, ಕೃಷ್ಣಮೋಹಿನಿ ದುಂದುಮಿ, ವತ್ಸಲಾಹರಣ, ವ್ಯಭಿಚಾರಾರ್ಥ ಸಿಂಧು, ಸೌಗಂಧಿಕಾ ಪರಿಣಯ ಮುಂತಾದ ನಾಲ್ವತ್ತು, ಐವತ್ತು, ಕಾವ್ಯ, ನಾಟಕ, ಸಂಭಾಷಣೆ, ಚಾಟು ಶ್ಲೋಕಗಳು, ವಿಡಂಬನ ಪದ್ಯಗಳು ಮುಂತಾಗಿ ವಿವಿಧ ಸಾಹಿತ್ಯವನ್ನು ವಿಪುಲವಾಗಿ ನಿರ್ಮಿಸಿದ್ದಾರೆ.

## ೮೫ ಶ್ರೀ ಭಗವದ್ದಾಸರು

ಮುಂಬೈ ಸರಕಾರದ ಶಿಕ್ಷಣ ಇಲಾಖೆಯಲ್ಲಿ ಅಕೌಂಟಂಟರಾಗಿ ಕೆಲಸ ಮಾಡುತ್ತಿದ್ದ ಇವರು ವಿಜಾಪುರದ ಬೆಳ್ಳುಬ್ಬಿ ಅಣ್ಣೈಯಾಚಾರ್ಯರಲ್ಲಿ ವೇದಾಂತ, ಧರ್ಮ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು. ಇವರು ಭಗವದ್ದಾಸ ಎಂಬ ಅಂಕಿತದಿಂದ ಭಾಗವತಸಾರ, ಭಗವದ್ಗೀತಾರ್ಥ ದರ್ಶನ, ಬ್ರಹ್ಮಸೂತ್ರಾರ್ಥ ದರ್ಶನ, ಗಜೇಂದ್ರ ಮೋಕ್ಷ ಅಕ್ರೂರಾನುಭವ, ಜ್ಯೋತಿರ್ಭಾಂಡಾರ ಬ್ರಹ್ಮಸೂತ್ರಾರ್ಥದರ್ಶನ ಮುಂತಾಗಿ ಅನೇಕ ಕಾವ್ಯ ಕೃತಿಗಳನ್ನೂ ತಾತ್ವಿಕ ಗ್ರಂಥಗಳನ್ನು ಬರೆದಿದ್ದಾರೆ. ಇವರ ಹೆಸರು ರಾಮಚಂದ್ರ ವೆಂಕಟೇಶ ಹೊದಲೂರು ೧೯೩೫ ರಲ್ಲಿ ಇವರು ದಿವಗಂತರಾದರು.

## ೮೬ ತೃಣಪುರೀಶದಾಸರು

ನಂಜಿನಗೂಡ ತಾಲೂಕಿನ ಹುಲ್ಲಹಳ್ಳಿ ಗ್ರಾಮದಲ್ಲಿ ಉಪಾಧ್ಯಾಯರಾಗಿದ್ದ ರಾಮಣ್ಣನವರು ತೃಣಪುರೀಶ ಎಂಬ ಅಂಕಿತದಿಂದ ಅನೇಕ ದೇವರ ನಾಮಗಳನು ರಚಿಸಿದ್ದಾರೆ. ಮತ್ತು ರುಕ್ಮಿಣಿಕಲ್ಯಾಣ, ಸೀತಾಕಲ್ಯಾಣ, ದೂರ್ವಾಸ ಚರಿತ್ರೆ, ಧ್ರುವ ಚರಿತ್ರೆ, ಕನಕಾಂಗೀ ಕಲ್ಯಾಣ, ಗಿರಿಜಾ ಕಲ್ಯಾಣ, ರುಕ್ಮಾಂಗದ ಚರಿತ್ರೆ, ಚಂದ್ರಾಂಗದ ಚರಿತ್ರೆ ಮುಂತಾವ ಅನೇಕ ಸಂಗೀತ ನಾಟಗಳನ್ನು ಬರೆದಿದ್ದಾರೆ. ಇವರು ಒಳ್ಳೆ ಕೀರ್ತನಕಾರರಾದುದರಿಂದ ತಮ್ಮ ಉಪಾಧ್ಯಾಯ ವೃತ್ತಿಯನ್ನು ಬಿಟ್ಟು ಊರೂರಿಗೆ ಹರಿಕಥೆಯನ್ನು ಹೇಳುತ್ತ ತಿರುಗಾಡಿ ಭಾಗವತ ಧರ್ಮವನ್ನು ಪ್ರಚಾರ ಮಾಡಿದರು.

## ೮೭ ಶ್ರೀ ಎ. ತಿರುಮಲರಾವ ಮದ್ರಾಸ

ಇವರು ಹರಿಕಥಾಮೃತವನ್ನು ಪರಿಷ್ಕರಿಸಿ ಪ್ರಸಿದ್ಧಿಸಿದ್ದಾರಲ್ಲದೆ ಭಗವದ್ಗೀತೆಗೆ ಅರ್ಥವನ್ನು ಬರೆದಿರುವರು. ಮಧ್ವ ಸಿದ್ಧಾಂತ ಗ್ರಂಥಮಾಲಿಕಾ ಮಾಸ ಪತ್ರಿಕೆಯ ಸಂಪಾದಕರಾಗಿದ್ದರು. ಇವರು ಮದ್ರಾಸದಲ್ಲಿ ವಕೀಲರಾಗಿದ್ದರು.

## ೮೮ ಶ್ರೀ ಅನಂತಾಚಾರ್ಯ ಗೋಕಾವಿ

ಇವರು ಬೆಳಗಾವಿ ಜಿಲ್ಲೆಯ ಗೋಕಾಕ ಗ್ರಾಮದವರು. ಸಂಸ್ಕೃತದಲ್ಲಿ ಪಂಡಿತರು. ಸಂಗೀತದಲ್ಲಿ ವಿದ್ವಾಂಸರು. ಕಾವ್ಯಕಲಾ ಪರಿಣತರು. ಪಾರಿಜಾತ ಆಟದಲ್ಲಿ ಪಳಗಿದವರು. ಧ್ರುವ ಚರಿತ್ರ, ಪ್ರಲ್ಹಾದ ಚರಿತ್ರ, ವೆಂಕಟೇಶ ಪಾರಿಜಾತ, ಶಿವಪಾರಿಜಾತ ಮೊದಲಾದ ಅನೇಕ ಕಾವ್ಯಕೃತಿಗಳನ್ನು ಮಧುರ, ಮನೋಹರವಾಗಿ ನಿರ್ಮಿಸಿದ್ದಾರೆ.

"ಅನಂತಾದ್ರೀಶ" ಎಂಬ ಮುದ್ರಿಕೆಯಿಂದ ದೇವರ ನಾಮುಗಳನ್ನು ಹರಿ–ಗುರು ಸ್ತೋತ್ರಗಳನ್ನು ರಚಿಸಿದ್ದಾರೆ. ಇವರ ಪದ್ಯಗಳಲ್ಲಿ ಛಂದಸ್ಸಿನ ಹೊಸತನವಿದೆ, ಜಾನಪದ ಗೀತೆಗಳ ಕಾವು–ಕೆಚ್ಚುಗಳಿಂದ ಕಸವು ಪಡೆದ ಇವರ ಕವಿತೆಗಳಿಗೆ ಅಭಿಜಾತ ಕಾವ್ಯ ವಾಙ್ಮಯದ ಒಪ್ಪು, ಒನಪುಗಳು ಮೇಳವಿಸಿದ್ದರಿಂದ ಹೃದ್ಯತೆಯು ತಾನೇ ತಾನಾಗಿ ಬೆಳಗುತ್ತಲಿದೆ. ಇವರು ೧೮೦೦ ನೇ ಇಸ್ವಿಯಲ್ಲಿ ಜನಿಸಿ, ೧೮೮೦ ನೇ ಇಸ್ವಿಯಲ್ಲಿ ದಿವಂಗತರಾದರು.

## ೮೯ ಶ್ರೀರಂಗ ಒಲಿದ ಚಿಕ್ಕದಾಸರು

ಶ್ಯಾಮಾಚಾರ್ಯರು ಕೊಯಿಮತ್ತೂರಿನವರು. ಚೆಂಗಲ್ ಪೇಟೆಯಲ್ಲಿ ಶಿಕ್ಷಕರಾಗಿದ್ದರು. ತಂದೆ ಪುರಂದರ ವಿಠಲ, ಶ್ರೀರಂಗ ಒಲಿದ ಚಿಕ್ಕದಾಸರು ಎಂಬ ಅಂಕಿತದಿಂದ ಅನೇಕ ಕೀರ್ತನೆ, ದೇವರ ನಾಮು, ಸುಳಾದಿಗಳನ್ನು ರಚಿಸಿದ್ದಾರೆ. ಇವರ ಪದಗಳ ಸಂಗ್ರಹ ನಾಗರಿ ಲಿಪಿಯಲ್ಲಿ ೧೯೩೮ ನೇ ಇಶ್ವಿಯಲ್ಲಿ ಎಂ. ಲಕ್ಷ್ಮಣರಾವ ಕಡಲೂರ (ದಕ್ಷಿಣ ಅರ್ಕಾಟ) ಇವರಿಂದ ಪ್ರಸಿದ್ಧವಾಗಿದೆ. ಇವರು ೧೯೩೮ ರಲ್ಲಿ ಕಾಲವಾದರು.

## ೯೦ ವೆಂಕಣ್ಣ ಕವಿ ಮೂಲ್ಕಿ

ಇವರು "ಒಳಲಂಕೆಯ ಶ್ರೀ ನೃಸಿಂಹ'' ಎಂಬ ಅಂಕಿತದಿಂದ ಅನೇಕ ದೇವರ ನಾಮುಗಳನ್ನು ರಚಿಸಿರುವರು. ನರಸಿಂಹಾವತಾರವನ್ನು ಕುರಿತು ೧೫ ಚರಣಗಳ ಒಂದು ಪ್ರೌಢ ಪದ್ಯವನ್ನು ರಚಿಸಿದ್ದಾರೆ. ಇವರು ದಕ್ಷಿಣ ಕನ್ನಡ ಜಿಲ್ಹೆಯ ಮೂಲ್ಕಿಯುವರು. ೧೮೭೫ ನೇ ಇಸ್ವಿಯಲ್ಲಿ ಕಾಲವಾದರು.

## ೯೧ ಶ್ರೀ ಶ್ಯಾಮುರಾಯರು

ಇವರು ಅರಣ್ಯ ಶಾಖೆಯುಲ್ಲಿ ಕೆಲಸ ಮಾಡಿ ನಿವೃತ್ತರಾಗಿದ್ದರು. ಮಡಕೇರಿಯವರು. ವೆಂಕಟಾದ್ರೀಶ, ವೆಂಕಟಗಿರಿಪತಿ, ವೆಂಕಟಗಿರಿ ನಿಲಯ ಎಂಬ ಅಂಕಿತದಿಂದ ಅನೇಕ ದೇವರ ನಾಮುಗಳನ್ನು ರಚಿಸಿದ್ದಾರೆ. ೧೯೧೭ ನೇ ಇಸ್ವಿಯಲ್ಲಿ ವೈಕುಂಠ ವಾಸಿಗಳಾದರು.

# ೯೨ ಶ್ರೀ ವ್ಯಾಸರಾಜ ಮಠದ
# ಶ್ರೀ ೧೦೮ ಶ್ರೀ ವಿದ್ಯಾರತ್ನಾಕರತೀರ್ಥ ಶ್ರೀಗಳು

ಇತ್ತೀಚೀನ ನೂರಾರು ವರ್ಷಗಳಲ್ಲಿ ಅಪ್ರತಿಮ ಪಂಡಿತ ಸಾರ್ವಭೌಮರೆಂದು ಸುಪ್ರಸಿದ್ಧರಾದ ಶ್ರೀ ವಿದ್ಯಾರತ್ನಾಕರತೀರ್ಥ ಶ್ರೀಪಾದಂಗಳವರು ನಿಜವಾಗಿಯೂ ಸರ್ವ ವಿದ್ಯೆಗಳ ಆಕರರೇ ಆಗಿದ್ದರು. ಶ್ರೀ ಚಂದ್ರಿಕಾಚಾರ್ಯರ ವಿದ್ಯಾ ಸಿಂಹಾಸನನನ್ನು ಆರೋಹಣ ಮಾಡಿದ ಶ್ರೀ ವಿದ್ಯಾರತ್ನಾಕರತೀರ್ಥರು ಶ್ರೀ ವ್ಯಾಸರಾಜ ಮಠದ ಪಂಡಿತ ಪರಿವ್ರಾಜಕ ಪೀಳಿಗೆಯಲ್ಲಿ ತೊಳಗುವ ದಿವ್ಯ ನಕ್ಷತ್ರವಾಗಿ ತಮ್ಮ ವಿದ್ವತ್ ಪೀಠದ ಗೌರವದ ಗರಿಮೆಯನ್ನು ಹೆಚ್ಚಳ ಹಿರಿಮೆಯನ್ನು ಅನೂಚಾನವಾಗಿ ಪಾಲಿಸಿ ಕೊಂಡು ಬಂದ ಧೀಮಂತ ಧೌರೇಯರಾಗಿದ್ದರು.

ಅವರಲ್ಲಿ ಪ್ರಖರ ನಿಖರವಾದ ಶಾಸ್ತ್ರಪಾಂಡಿತ್ಯವು ಪರಿಪೂರ್ಣವಾಗಿದ್ದಂತೆ ಸರಸ ಸುಂದರವಾದ ಕವಿತ್ವ ಕೌಶಲ್ಯವೂ ಪರ್ಯಾಪ್ತವಾಗಿದ್ದಿತು. ಅವರು ಸಂಸ್ಕೃತದಲ್ಲಿ ರಚಿಸಿದ ಅನೇಕ ದೇವತಾ ಸ್ತೋತ್ರಗಳೂ ಮತ್ತು ಶ್ರೀಮತ್ಸು ಮಧ್ವವಿಜಯದ ಸಾರ ಸಂಗ್ರಹಾತ್ಮಕವಾದ ಪದ್ಯ ಪ್ರಬಂಧವೂ ಹಾಗೂ ರಾಮಾಷ್ಟಕ, ಕೃಷ್ಣಾಷ್ಟಕ, ಅಶ್ವ ಧಾಟಿ ದಶಾವತಾರ ಸ್ತೋತ್ರ ಮುಂತಾದ ಗೀತಗಾಥೆಗಳು ಅವರ ವಿಬುಧವಾಣಿ ವಾಲ್ಲಭ್ಯ ಅನನ್ಯಲಭ್ಯವಾದ ಅವರ ಶೈಲಿಯ ಭಾವಾರ್ಥ ಸೌಲಭ್ಯಕ್ಕೂ ಸಾಕ್ಷಿಯಾಗಿವೆ.

ಇದರಂತೆ ಕನ್ನಡ ಸಾಹಿತ್ಯದಲ್ಲಿಯೂ ಶ್ರೀ ವಿದ್ಯಾರತ್ನಾಕರರಿಗೆ ನಿರಂತರ ಅಗ್ರ ಪೂಜಾ ಮಾನವನ್ನು ಒದಗಿಸಬಲ್ಲ ಪೂರ್ಣಪ್ರಭುತ್ವ, ಆಶುಕವಿತ್ವಗಳು ಇದ್ದವು. ದಾಸ ಪಂಥದ ಮೂಲ ಕೇಂದ್ರದಂತಿದ್ದ ಶ್ರೀ ಚಂದ್ರಿಕಾಚಾರ್ಯರ ಮಹಾ ಸಿಂಹಾಸನದಲ್ಲಿ ಮಂಡಿಸಿದ ಅವರು ತಮ್ಮ ವಿದ್ಯಾರತ್ನಾಕರ ಮತ್ತು ನಾಮಗಿರಿ ನರಹರಿ ಎಂಬ ಮುದ್ರಿಕೆ ಗಳಿಂದ ಅನೇಕ ದೇವರ ನಾಮಗಳನ್ನು ರಚಿಸಿ ತಮ್ಮ ಪರಂಪರೆಯ ಗೌರವ, ಘನತೆ ಗಳನ್ನು ಮತ್ತೊಮ್ಮೆ ಆ ಉಚ್ಚಾಂಕಕ್ಕೆ ಎತ್ತರಿಸಿದರು.

ಶ್ರೀ ಶ್ರೀಗಳವರಿಗೆ ಕನ್ನಡ ಸಂಸ್ಕೃತ ಸಾಹಿತ್ಯಗಳ ಪ್ರಗಾಢ ಪಾಂಡಿತ್ಯದೊಂದಿಗೆ ಸಂಗೀತ ಶಾಸ್ತ್ರದ ರಾಗ-ರಾಗಿಣೀ ಹಾಗೂ ತಾಳ-ಮಟ್ಟುಗಳ ಸಾಕಷ್ಟು ಪರಿಜ್ಞಾನ ವಿದ್ದುದರಿಂದ ಅವರ ಪದಗಳು ಭಾವಾರ್ಥ ಪುಂಜಿತವಾದಂತೆ ರಾಗ ರಂಜಿತವೂ ಶಬ್ದ ಸಿಂಜಿತವೂ ಆಗಿ ಮೆರೆಯುತ್ತಲಿವೆ.

ಅವರ ದೇವರ ನಾಮಗಳ ಮೋಹಕ ಶೈಲಿಯ ಮಾಧುರಿಯ ಪರಿಚಯವು ಓದುಗರಿಗೆ ಆಗಬೇಕೆಂಮು ಕೆಲವು ಮಾದರಿ ಪದ್ಯಗಳನ್ನು ಕೆಳಗೆ ಕೊಡಲಾಗಿದೆ.

ಬೆಟ್ಟದ ಶೃಂಗವ ಹತ್ತಿ ಧುಮುಕುವೆ ನಾನು।
ಕೃಷ್ಣನೇ ಸರ್ವೋತ್ತಮತ್ತಾರಿಲ್ಲವೆಂದೂ ॥ ಅ. ಪ ॥

ಪಂಕಜಾಸನಾ ಹಿಪ ಶಂಕರಾದಿಗಳು ಹರಿಗೆ।
ಕಿಂಕರರು ಮತ್ತು ಇವಗೆ ಪುತ್ರ–ಪೌತ್ರರು।
ಏಕೋ ನಾರಾಯಣ ಆಸೀನ್ನ ಬ್ರಹ್ಮೇತಿ" ಶ್ರುತಿಯೊಂದೆ।
ಸಾಕೊ ಮತ್ತಿನ್ಯಾಕೆ ಸಂಶಯ ಹರಿ ನೀನೆ ಗತಿಯಂದು ॥ ೧ ॥

"ಯಂಕಾಮಯೆ'' ಎಂಬ ಶ್ರುತಿ ಪಂಕಜಾಸನಾ ನಿಲ।
ಶಂಕರರೆಲ್ಲರೂ ಹರಿಕಿಂಕರ ಸಿರಿಗೆ।
ಕಿಂಕರರೆಂಬುದ ನಿಶ್ಶಂಕವಾಗಿ ಪೇಳಲು।
ಶಂಕೆಯಾಕೆ ಸಲಹೋ ಶ್ರೀ ಪಂಕಜಲೋಚನವೆಂದು ॥

ಹೀಗೆ ಶ್ರೀಗಳು ರಚಿಸಿದ ಪದ್ಯಗಳು ಸಾಹಿತ್ಯದ ಸುವರ್ಣ ಪಾತ್ರದಲ್ಲಿ ದ್ವೈತ ಸಿದ್ಧಾಂತದ ಪ್ರಮೇಯ ರತ್ನಗಳನ್ನಿರಿಸಿ ಪಂಡಿತ ಪಾಮರ ರೋಚನ ರಂಜನವಾಗುವಂತೆ ಮಾಡುತ್ತವೆ.

ಶ್ರೀ ಶ್ರೀಗಳವರು ಜಂಜೂಟಿ ರಾಗದ ಆದಿ ತಾಳದಲ್ಲಿ ವಿನೋದ ವೈಖರಿಯ ಲೀಲಾಲಾಲಿತ್ಯದಿಂದ ಲಹರಿಸಿದ ಒಂದು ಲಘುಗೀತೆಯ ವ್ಯಂಗ್ಯಭಂಗಿಯನ್ನು ಕಾಕು ವಿಡಂಬನೆಯನ್ನು ನೋಡಿರಿ.

" ಶಾರದೇಂದು ಮುಖಿ ನೀರಜ ನಯನನೆ।
ಬಾರೆಲೆ ಬಾಗಿಲ ತೆಗಿಯಲೇ ಭಾಮೇ ॥ ಪ ॥
ಯಾರಯ್ಯಾ ಬಾಗಿಲ ಹೊರಗೆ ನಿಂತಿರುವನು।
ಜಾರಪುರುಷನಂತೆ ತೋರುವೆ ನೀನು ॥ ಅಪ ॥
ಜಾರನಾದರೆ ನಿನಗೆ ಜಾರನಲ್ಲವೇ ಮೀನಾ।
ಕಾರ ಧರಿಸಿರುವ ಹರಿಯಲೇ ಭಾಮೇ।
ಮೀನನಾದರೆ ಬಲು ಮೌನವಲ್ಲಿರದಂತೆ।
ಮಾನವರಂತೆ ಮಾತು ಯಾವದೋ ನಿನಗೆ ॥
ಮಂದರಗಿರಿಯ ಬೆನ್ನಿಂದ ಧರಿಸಿರುವ।
ಅಂದ ಕೂರ್ಮನಲ್ಲವೇನೆ ಭಾಮೆ।
ಕೂರ್ಮ ನೀನಾದರೆ ಕೂಪದೊಳಿರುವದೇ।
ಧರ್ಮವೆಂಬುದನು ಮರೆತಯಾ ನೀನು ॥

ಹೀಗೆ ಈ ವಕ್ರೋಕ್ತಿಯ ಸಂಭಾಷಣೆಯು ಹನ್ನೊಂದು ಪದ್ಯಗಳವರೆಗೆ ಸಾಗಿದೆ

ಇವರ ಕನ್ನಡ ಪದ್ಯಗಳಲ್ಲಿ ಸಾಹಿತ್ಯಕ್ಕಿಂತ ಶಾಸ್ತ್ರದ ತೂಕವೇ ಹೆಚ್ಚು. ಕನ್ನಡಕ್ಕಿಂತ ಸಂಸ್ಕೃತ ಶಬ್ದಗಳದೇ ಎಲ್ಲ ಕಡೆಗೂ ರಿಂಗಣ ಗುಣಿತವು ಕೇಳಬರುತ್ತಿದೆ. ಪೀಠದ ಮೇಲ್ಮೆ, ಸಂಪ್ರದಾಯನಿಷ್ಠೆ, ಜ್ಞಾನದ ಮಟ್ಟಗಳಿಗೆ ತಕ್ಕಂತೆ ಕನ್ನಡ ಕಾವ್ಯ ಪ್ರಜ್ಞೆಯು ಇಲ್ಲಿ ಜಾಗರೂಕವಾಗಿ ಹೆಜ್ಜೆ ಇರಿಸಿವೆ. ಪ್ರತಿಭೆ ತನ್ನ ಗೆಜ್ಜೆಯ ಕಿಂಕಿಣಿಯನ್ನು ಗಿಲಿಗಿಲಿಸಿದೆ.

ಶ್ರೀ ಶ್ರೀ ವಿದ್ಯಾರತ್ನಾಕರ ಶ್ರೀಗಳವರ ವಿದ್ಯಾಪಕ್ಷಪಾತ ಹಾಗೂ ವಿದ್ವತ್ ಪೋಷಣ ದೀಕ್ಷಾದಾಕ್ಷ್ಯಗಳಿಗೆ ಸಾಕ್ಷೀಭೂತವಾಗಿ ಅವರು ಸ್ಥಾಪಿಸಿದ ಶ್ರೀಮದ್ದಶ ಪ್ರಮತಿ ದರ್ಶನ ಪ್ರಕಾಶಿನೀ ಎಂಬ ವಿದ್ವತ್ಸಭೆಯು ಈಗಲೂ ನಡೆಯುತ್ತಲಿದೆ.

## ೯೩ ಶ್ರೀ ೧೧೦೮ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಗಳು

ಶ್ರೀ ವ್ಯಾಸರಾಜ ಮಠದ ವಿದ್ಯಾ ಸಿಂಹಾನದ ಮೇಲೆ ಪ್ರಕೃತ ವಿರಾಜಮಾನರಾದ ಶ್ರೀ ವಿದ್ಯಾಪ್ರಸನ್ನತೀರ್ಥರು ತಮ್ಮ ಪರಮ ಗುರುಗಳಂತೆ ಸಂಸ್ಕೃತ ಪಂಡಿತರಾಗಿಯೂ ಕನ್ನಡ ಕವಿಗಳಾದ ಪುಣ್ಯಾತ್ಮರು. ಸುಧಾ ಓದಿಯೂ ಪದ ಮಾಡುವಂಥ ನಿರಹಂಕಾರಿ ವಾಗ್ವಿಭೂತಿ.ಗಳು. ಇವರು ಅಖಂಡ ೩೦ ವರ್ಷಗಳಿಂದ ಶ್ರೀ ಚಂದ್ರಿಕಾಚಾರ್ಯರ ವಿದ್ಯಾ ಸಿಂಹಾಸನವನ್ನು ಆರೋಹಣ ಮಾಡಿ ವೇದಾಂತ ಸಾಮ್ರಾಜ್ಯವನ್ನು ಸಮರ್ಥರೀತಿಯಿಂದ ಆಳುತ್ತಲಿದ್ದಾರೆ.

ಅಖಿಲ ಭಾರತ ಮಾಧ್ವ ಮಹಾ ಮಂಡಲ ಸಂಸ್ಥೆಯ ಬೆನ್ನಿಗೆ ಭೀಮನ ರಕ್ಷೆಯಾಗಿ, ಕಣ್ಣಿಗೆ ಕೇಶವನ ರಕ್ಷೆಯಾಗಿ ಕಾಪಾಡುತ್ತಲಿದ್ದಾರೆ. ಅನೇಕ ವರ್ಷ ಮಹಾ ಮಂಡಲದ ಅಧ್ಯಕ್ಷರಾಗಿಯೂ, ಸಕ್ರಿಯ ಬೆಂಬಲಿಗರಾಗಿಯೂ ಆ ಸಂಸ್ಥೆಯ ಉತ್ಕರ್ಷಕ್ಕೆ ಕಾರಣರಾಗಿದ್ದಾರೆ. ತಮ್ಮ ಪರಮ ಗುರುಗಳು ಸ್ಥಾಪಿಸಿದ ಶ್ರೀಮದ್ ದಶಪ್ರಮತಿ ದರ್ಶನ ಪ್ರಕಾಶನೀ ಸಭೆಯನ್ನು ನಿಯಮಿತವಾಗಿ ನಡೆಯಿಸುತ್ತ ಬಂದಿದ್ದಾರೆ.

ಲೌಕಿಕದಲ್ಲಿಯೂ, ವೈದಿಕದಲ್ಲಿಯೂ ಪರಣತಿ ಪಾರಂಗತಿ ಎರಡನ್ನೂ ಪಡೆದ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು ತಮ್ಮ ಸಂಸ್ಥಾನದ ಸಂಪ್ರದಾಯದಂತೆ ದಾಸಕೂಟದ ಆಧ್ವರ್ಯವನ್ನು ವಿದ್ವದ್ಯೋಗ್ಯವಾಗಿ ನಿರ್ವಹಿಸಿದ್ದಾರೆ. ಕನ್ನಡದಲ್ಲಿ ರಾಗತಾಳಗಳಿಗೆ ಅನುಗುಣವಾಗಿ ನೂರಾರು ಪದ್ಯಗಳನ್ನು ಅನೇಕ ದೇವರ ನಾಮುಗಳನ್ನೂ ರಚಿಸಿ ಪ್ರಕಟಿಸಿದ್ದಾರೆ.

ಶ್ರೀ ಶ್ರೀಗಳವರ ದೇವರ ನಾಮುಗಳಲ್ಲಿ ಭಾವದ ನಿಲುಗಡೆಗೆ ಅನುಗುಣವಾಗಿ ರಾಗ ಬಂಧವನ್ನು ನಿರ್ಮಿಸಿ ಅದಕ್ಕೆ ಅನುರೂಪವಾದ ತಾಳ, ಲಯ, ಪ್ರಾಸ

ಗಳನ್ನು ಮೇಳಗೊಳಿಸಿದ್ದರಿಂದ ಮಧುರ ಗಾನಕ್ಕೂ ತನ್ಮಯ ಧ್ಯಾನಕ್ಕೂ ಅನುಕೂಲ ಒದಗಿದೆ.

ಮಾದರಿಗಾಗಿ ಅವರ ಒಂದು ಪದ್ಯವನ್ನು ನೋಡಬಹುದು.

ಮಧುರಾನಾಥನ ನಾಮವು ॥ ಪ ॥
ದಧಿ ಮಧು ದ್ರಾಕ್ಷಾ ಸುಧೆ ರಸಗಿಂತ ॥ ಅ ಪ ॥
ಸುಂದರ ವದನನ ಅರವಿಂದ ನಯನನ।
ನಂದ ಕುಮಾರನ ಚಂದದ ನಾಮವು।
ಗಾನವಿಲೋಲನ। ದಾನವ ಕಾಲನ।
ಲೀಲೆಗಳನು ಸದಾ। ಲಾಲಿಸಿ ಪೊಗಳಲು॥

ಶ್ರೀ ಶ್ರೀಗಳವರ ಅನೇಕ ಪದ್ಯಗಳಲ್ಲಿ ಭಾಗವತ ದಶಮ ಸ್ಕಂದದ ಶ್ರೀ ಕೃಷ್ಣನ ಬಾಲಲೀಲೆ ಎಲ್ಲವು ಮಧುರ ಮನೋಹರವಾಗಿ ಮೂಡಿ ಬಂದಿದೆ. ವೀತ ರಾಗ ಪೂತಾತ್ಮರಾದ ಶ್ರೀ ಶ್ರೀಗಳವರಿಗೆ ತಮ್ಮ ಪಾಂಡಿತ್ಯ ಪ್ರದರ್ಶನದ ಅಭೀಪ್ಸೆ ಯಾಗಲೀ ತಮ್ಮ ಕಲ್ಪನಾ ಕೌಶಲ್ಯದ ನಿದರ್ಶನದ ಹಂಬಲವಾಗಲೀ ಇನಿತೂ ಇಲ್ಲ. ಬಾಲಕೃಷ್ಣನ ಲೊಲ-ಲೀಲೆಗಳನ್ನು ಸರಳ ಶೈಲಿಯಲ್ಲಿ ತಿಳಿ ಹೇಳಿ ಭಕ್ತಿಯನ್ನುಂಟು ಮಾಡುವದೇ ಅವರ ಮುಖ್ಯ ಗುರಿಯಾಗಿದೆ. ಆದುದರಿಂದಲೇ ಅವರು ತಮ್ಮ ಕೃತಿ ಗಳಲ್ಲಿ ಯಾವದೇ ಶುಷ್ಕ ಪಾಂಡಿತ್ಯ ಅಥವಾ ಶಬ್ದಾಡಂಬರ ಇಲ್ಲವೇ ಚಿಲ್ಲರೇ ಮಾತಿನ ಚಮತ್ಕಾರವನ್ನು ತೋರಿಸುವ ಚಾಪಲ್ಯಕ್ಕೆ ಇಳಿಯದೆ ಗುರುಗಂಭೀರವಾದ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಕೃಷ್ಣನ ಮಹಿಮೆಯನ್ನು ತಿಳಿ-ತಿಳಿಯಾಗಿ ತಿರುಳುಗನ್ನಡದಲ್ಲಿ ತಿಳಿಯಪಡಿಸಿದ್ದಾರೆ. ಇವರ ಅಂಕಿತವು— ಪ್ರಸನ್ನ.

ಶ್ರೀ ಶ್ರೀಗಳವರು ರಚಿಸಿದ ವೈಕುಂಠ ವರ್ಣನೆ ಎಂಬ ಪುಟ್ಟ ಪದ್ಯ ಪ್ರಬಂಧ ದಲ್ಲಿ ಅವರ ಕವಿತ್ವ ಶಕ್ತಿಯ ಪ್ರೌಢಿಮೆಯ ಗುರುತು ತೋರುವದು.

"ಅಂಗವಿಲಾಸದ ಸೊಬಗಿನ ನಾಟ್ಯಮ್ಮ।
ದಂಗವಾದ್ಯ ಮಧುಗಾಯನ ಸುಖದಲಿ।
ಇಂಗಿತ ವರುಹಲು ಪ್ರೇಮದಿ ತಮತಮ।
ಹೆಂಗಳನನು ರಂಜಿಸುವರು ಬಗೆ ಬಗೆ।
ತುಂಗವಿಮಾನ ಮಂಡಲದಿಂ ಪತಿಗಳ।
ಸಂಗಡ ಬರುವ ಕುರಂಗ ನಯನೆಯರು।
ಶೃಂಗಾರೋಪವನಂಗಳ ಸೇರಲು ಕಂಗಳೊಸುವ ಶಶಿಕಾಂತಿಯಂತಿಹರು।"

ಹೀಗೆ ಕನ್ನಡ ಸಾಹಿತ್ಯದಲ್ಲಿ ಎಂದೊ ಕಣ್ಮರೆಯಾದಂತಿರುವ ರಗಳೆಯ ಛಂದಸ್ಸನ್ನು ಪುನರುಜ್ಜೀವನಗೊಳಿಸಿ ಅದನ್ನು ಪ್ರಮೇಯ ಭರಿತವಾದ ತಾತ್ವಿಕ ವಿಷಯಗಳನ್ನು ಬಿತ್ತರಿಸಲು ಸಮರ್ಥವಾಹಕವೆಂದೂ ಸಿದ್ಧಮಾಡಿ ಸಜ್ಜುಗೊಳಿಸಿದ್ದನ್ನು ನಾವು ಇಲ್ಲಿ ಕಾಣಬಹುದು.

## ೯೪ ತಮ್ಮಣ್ಣ ಅಪರಾಳ

ಇವರು ರಾಯಚೂರಿನವರು. ೧೮೧೫ ನೇ ಇಸ್ವಿಯಲ್ಲಿ ಜನಿಸಿದರೆಂದು ತಿಳಿದಿದೆ. "ಗೋಪಾಲ" ಎಂಬ ಅಂಕಿತದಿಂದ ದೇವರನಾಮಗಳನ್ನು ರಚಿಸಿದ್ದಾರೆ.

## ೯೫ ಶ್ರೀ ಮುಂಡೇವಾಡಿದಾಸರು

ಇವರ ಮೂಲಸ್ಥಳ ಆಗರಬೇಡ. ಇವರ ಬಾಲ್ಯ ತಾರುಣ್ಯಗಳೆಲ್ಲ ಆಟಪಾಟಗಳಲ್ಲಿ ಕಳೆದವು. ಭಜರಂಗಬಲಿಯ ದಯೆಯಿಂದ ಇವರು ಪ್ರಾಯದಲ್ಲಿ ಒಳ್ಳೆ ಬಲಿಷ್ಠರಾಗಿ ಅಪ್ರತಿಮಮಲ್ಲರೂ ಎಂದು ಎನಿಸಿದ್ದರು. ಎಂಥೆಂಥ ಜಟ್ಟಿಗಳೂ ಅವರಿಂದ ಪರಾಜಯ ಹೊಂದುತ್ತಿದ್ದರು.

ಒಂದು ಸಲ ನಾಡಿನಲ್ಲೆಲ್ಲ ನಾಮಾಂಕಿತನಾದ ಓರ್ವ ಜಗಜಟ್ಟಿಯೊಡನೆ ಈ ಆಗರಬೇಡ ಆಚಾರ್ಯರಿಗೆ ಕುಸ್ತಿಯ ಕಣಕ್ಕೆ ಇಳಿಯುವ ಸಂದರ್ಭ ಒದಗಿತು. ಭೀಮಬಲದ ಆಚಾರ್ಯರು ಲೀಲಾಲಾಲಿತ್ಯದಿಂದಲೇ ಆ ಮಹಾಮಲ್ಲನನ್ನು ಕೆಳಗೆ ಒಗೆದು ಮೃತ್ತಿಕಾ ಸ್ನಾನಮಾಡಿಸಿದರು. ಆಗ ಆ ಮಲ್ಲನು ಅವರಿಗೆ "ಎಲೆ ಆಚಾರಪ್ಪ! ನೀನು ಎಲ್ಲ ಜಾತಿಯ ಗುರುವಾದ ಬ್ರಾಹ್ಮಣ ಕುಲದವನಿದ್ದು ಹುಂಬರಂತೆ ಗುದ್ದಾಡುವ ಕೀಳು ಕೆಲಸಕ್ಕೆ ಇಳಿದಿಯಲ್ಲ. ನಿಮ್ಮಂಥ ಬ್ರಾಹ್ಮಣರು ವೇದಶಾಸ್ತ್ರ ಓದಿ ದೇವರ ದಯೆಯಿಂದ ಜನರ ಉದ್ಧಾರ ಮಾಡುವದು ಬಿಟ್ಟು ಕುಸ್ತಿಯ ಕಣದ ಕೆಂಧೂಳಿನಲ್ಲಿ ಹೊರಳಾಡುವದನ್ನು ನೋಡಿದರೆ ನನಗೇ ಕೆಡಕೆನಿಸುತ್ತದೆ" ಎಂದು ಮೂದಲಿಸಿ ಮಾತನಾಡಿದನು.

ಕೂಡಲೇ ಆಚಾರ್ಯರಿಗೆ ಜ್ಞಾನೋದಯವಾಯಿತು. ಕೂಡಲೇ ತಮ್ಮ ಕುಸ್ತಿಯ ಚಡ್ಡಿಯನ್ನು ಹರಿದು ಹಾಕಿ ಅಧ್ಯಾತ್ಮದೆಡೆಗೆ ಮನಸ್ಸನ್ನು ತಿರುಗಿಸಿದರು. ಧೂಳಿಯಲ್ಲಿ ಕುಸ್ತಿ ಕೇಳಿಯಾಡುವದು ಬಿಟ್ಟು ತಾಳ ಹಿಡಿದು ದೇವರ ಧ್ಯಾನಮಾಡತೊಡಗಿದರು. ೧೨ ವರ್ಷಕಾಲ ಏಕಭುಕ್ತರಾಗಿ ಏಕಾಂತದಲ್ಲಿ ನಿಂತು ಹರಿವಾಯುಗಳ ಆರಾಧನೆಯನ್ನು ಮಾಡಿದರು. ಬಹುಕಾಲದ ಮಂತ್ರಪುರಶ್ಚರಣ ನಿರಂತರ ಧ್ಯಾನದಿಂದ ಆಗರಬೇಡ ಆಚಾರ್ಯರು ಸಿದ್ಧಿಪಥದಿಂದ ಮುಂದುವರೆದರು.

ಅವರು ಬಹುಕಾಲ ಮುಂಡೇವಾಡಿಯಲ್ಲಿದ್ದುದರಿಂದ ಮುಂಡೇವಾಡಿ ದಾಸರೆಂದು ಪ್ರಸಿದ್ಧರಾದರು. ಇವರ ಭಜನಾ ಪದ್ಧತಿಗಳಿಂದ ಆಕೃಷ್ಟರಾಗಿ ಎಷ್ಟೋ ಶಿಷ್ಟ ವಿಶಿಷ್ಟ ಜನರು ಇವರ ಶಿಷ್ಯರಾದರು.

ಇವರು ಪ್ರತಿ ವರ್ಷವೂ ದಾಸಪಂಥದ ಪ್ರವರ್ತಕ ಆಚಾರ್ಯರಾದ ಶ್ರೀ ಪುರಂದರ ದಾಸರ ಪುಣ್ಯತಿಥಿಯನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಲಿದ್ದರು. ಅನೇಕಾನೇಕ ಜನರಿಗೆ ಇವರು ದಾಸ ದೀಕ್ಷೆಯಿತ್ತು, ಲುಪ್ತವಾಗುತ್ತ ಬಂದ ಹರಿದಾಸ ಸಂಪ್ರದಾಯಕ್ಕೆ ಕಾಯಕಲ್ಪವನ್ನು ಮಾಡಿ ಅದರ ಪುನರುಜ್ಜೀವನಗೈದರು.

## ೯೬ ದಿ. ಪಾವಂಜೆ ಗುರುರಾಯರು

ದಾಸಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಕೆಲವೇ ಮಹನೀಯರಲ್ಲಿ ಉಡುಪಿಯ ದಿ. ಪಾವಂಜೆ ಗುರುರಾಯರು ಒಬ್ಬರಾಗಿದ್ದಾರೆ. ಗುರುರಾಯರು ಲೌಕಿಕ ವಿದ್ಯೆಯಾದ ಇಂಗ್ಲೀಷದ ಜೊತೆಗೆ ದೈವಭಕ್ತಿ, ವೈಷ್ಣವ ದೀಕ್ಷೆ, ಶಾಸ್ತ್ರಗಳಲ್ಲಿ ಆದರ ಮುಂತಾದವುಗಳನ್ನು ಬೆಳೆಸಿಕೊಂಡರು.

ಆ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಸಂಧ್ಯಾವಂದನಾದಿ ಸಂಸ್ಕೃತ ಅಭ್ಯಾಸ ಮಾಡಲಿಕ್ಕೆ ಒಂದು ಪಾಠ ಶಾಲೆಯನ್ನು ಪ್ರಾರಂಭಿಸಿದರು. ಮಾಧ್ವ ಜನತೆಗೆ ಉಪಯೋಗವಾಗಲೆಂದು ಸಂಧ್ಯಾವಂದನೆ, ಮಂತ್ರ, ಸ್ತೋತ್ರಗಳ ಚಿಕ್ಕ-ಚಿಕ್ಕ ಪುಸ್ತಕಗಳನ್ನು ಕನ್ನಡ ಲಿಪಿಯಲ್ಲಿ ಅಚ್ಚು ಹಾಕಿಸಿ ತಮಗೆ ಹಾನಿಯಾದರೂ ಕೂಡ ಅಲ್ಪ ಬೆಲೆಯಲ್ಲಿ ಮಾರಾಟ ಮಾಡತೊಡಗಿದರು.

ಕೆಲವು ಕಾಲ ಗೌರವ ಉಪಾಧ್ಯಾಯರಾಗಿ ಉಡುಪಿ ಮಧ್ವ ಸಿದ್ಧಾಂತ ಪ್ರಬೋಧಿನಿ ಪಾಠ ಶಾಲೆಯಲ್ಲಿ ದುಡಿದರು. ೧೯೦೮ ನೇ ಇಸ್ವಿಯಲ್ಲಿ ಮಧ್ವಸಿದ್ಧಾಂತ ಗ್ರಂಥಾಲಯ ಎಂಬ ಸಂಸ್ಥೆಯನ್ನೂ, ಶ್ರೀ ಕೃಷ್ಣ ಮುದ್ರಣಾಲಯವನ್ನೂ ೧೯೧೯ ನೇ ಇಸ್ವಿಯಲ್ಲಿಯೂ ಸ್ಥಾಪಿಸಿದರು. ಮಾಧ್ವರಲ್ಲಿ ದುರ್ಮಿಳವಾದ ಅನೇಕ ಗ್ರಂಥಗಳನ್ನು ಪಂಡಿತರಿಂದ ಸಂಶೋಧಿಸಿ, ಪರಿಷ್ಕರಿಸಿ ಅಚ್ಚು ಹಾಕಿಸಿದರು.

ಇವರು ಮಾಡಿದ ಮಹಾ ಕಾರ್ಯವೆಂದರೆ— ಪುರಂದರದಾಸ, ಕನಕದಾಸ. ಮುಂತಾದವರ ಕೀರ್ತನೆಗಳನ್ನು ಕಷ್ಟಬಟ್ಟು ಸಂಗ್ರಹಿಸಿ, ಸಂಶೋಧಿಸಿ, ಶುದ್ಧಪಾಠದೊಂದಿಗೆ ಮುದ್ರಿಸಿ ಪ್ರಕಟಿಸಿದ್ದು. ಸಾವಿರಾರು ದಾಸರ ಪದಗಳನ್ನು ಭಾಗ-ಭಾಗವಾಗಿ ಪ್ರಕಟಿಸಿ ಮಹೋಪಕಾರಮಾಡಿದ್ದಾರೆ. ಇದರಲ್ಲಿ ಇವರೇ ಮೊದಲಿಗರೆಂದು ಹೇಳಬಹುದು.

ಇವರು ೧೮೬೯ ರಲ್ಲಿ ಜನಿಸಿ ೧೯೪೮ ರಲ್ಲಿ ಉಡುಪಿಯಲ್ಲಿಯೇ ವೈಕುಂಠವಾಸಿಗಳಾದರು. ಇವರು ಸ್ಥಾಪಿಸಿದ ಮಧ್ವ ಸಿದ್ಧಾಂತ ಗ್ರಂಥಾಲಯ ಮತ್ತು ಶ್ರೀ ಕೃಷ್ಣ ಮುದ್ರಣಾಲಯವು ರಾಯರು ಪ್ರಾರಂಭಿಸಿದ ಕಾರ್ಯವನ್ನು ಮುಂದುವರಿಸಿಕೊಂಡು ಹೋಗುತ್ತಲಿವೆ.

## ೯೭ ದಿ. ಗೋರೆಬಾಳ ಹನುಮಂತರಾಯರು



ರಾಯಚೂರು ಜಿಲ್ಲೆಯ ಲಿಂಗಸೂಗೂರಿನ ಶ್ರೀ ಗೋರೆಬಾಳ ಹನುಮಂತರಾಯರು ೨೦ ನೇ ಶತಮಾನದಲ್ಲಿ ದಾಸ ಸಾಹಿತ್ಯವನ್ನು ಉದ್ಧಾರ ಮಾಡಿದರು ಎನ್ನುವದಕ್ಕಿಂತ ತಾವೇ ಅದರಿಂದ ಉದ್ಧೃತರಾದರೆಂದು ಹೇಳುವದು ಸೂಕ್ತವೂ ಸಮಂಜಸವೂ ಆದೀತು. ದಾಸ ಸಾಹಿತ್ಯದ ಹುಚ್ಚಿನಿಂದ ಕೈತುಂಬ ಹಣ ತರುವ ವಕೀಲಿ ವ್ಯವಸಾಯಕ್ಕೆ ಶರಣು ಹೊಡೆದು ಹರಿದಾಸ ದೀಕ್ಷೆತ್ತೊಟ್ಟು ಮೂಲೆಗುಂಪಾದ ದಾಸ ವಾಙ್ಮಯವನ್ನೆಲ್ಲ ಬೆಳಕಿಗೆ ತಂದ ಸಾಹಸ ಜೀವಿಗಳೆಂದರೆ ಶ್ರೀ ಹನುಮಂತರಾಯರು.

ಮನೆ ಮನೆಗಳಲ್ಲಿ ಬರೆದಿಟ್ಟ ಪುಸ್ತಕಗಳು ಅಲ್ಲಿಯೇ ನಶಿಸಿ ಇಲಿ, ಗೆದ್ದಲು ತಿಂದು ಅಥವಾ ಖಜ್ಜೂರ, ಕರದಂಟು ಅಂಗಡಿಗಳ ಪಾಲಾಗಿ, ಪೋಲಾಗಿ ಹಾಳಾಗಿ ಹೋಗುತ್ತಿರುವ ಹರಿದಾಸ ವಾಙ್ಮಯವನ್ನು ಹಳ್ಳಿ ಹಳ್ಳಿಗೆ ಹೋಗಿ ಸಂಗ್ರಹಿಸಿ, ವಿದ್ವಾಂಸರಿಂದ ಪರಿಶೋಧಿಸಿ ಜನರ ಸಹಾಯವನ್ನು ಯಾಚಿಸಿ, ಮುದ್ರಿಸಿ, ಪ್ರಕಟಪಡಿಸಿ, ಪ್ರಚಾರಗೈದ ಶ್ರೇಯಸ್ಸು ಹನುಮಂತರಾಯರದಾಗಿದೆ.

ಸ್ವಯಂ ಹನುಮಂತರಾಯರು ಬಹುಶ್ರುತರೂ, ಪ್ರಮೇಯಜ್ಞರೂ, ದಾಸ ಧುರೀಣರೂ, ಲೇಖಕರೂ, ಪ್ರಚಾರಕರೂ ಆಗಿದ್ದರು.

ಆದುದರಿಂದಲೇ ಅವರು ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದಿಂದ ೫೦ ವರ್ಷಗಳಿಂದ ದಾಸ ಸಾಹಿತ್ಯಕ್ಕಾಗಿಯೇ ಶ್ರಮಿಸಿ ೫೦ ರಷ್ಟು ಗ್ರಂಥಗಳನ್ನು ಬೆಳಕಿಗೆ ತಂದಿದ್ದಾರೆ. ಇವರ ದಾಸ ಪಂಥದಲ್ಲಿದ್ದ ದೀಕ್ಷಾದಾರ್ಢ್ಯವನ್ನು ಕಂಡು ಶ್ರೀ ಕೋಸಗಿದಾಸರು ಇವರಿಗೆ 'ಸುಂದರ ವಿಠಲ ಎಂಬ ಅಂಕಿತಯಿತ್ತು ಅನುಗ್ರಹಿಸಿದ್ದರು.

ಆ ಅಂಕಿತದಿಂದ ಹನುಮಂತರಾಯರು ಅನೇಕ ದೇವರ ನಾಮುಗಳನ್ನೂ ಮತ್ತು ಹಲಕೆಲವು ಷಟ್ಪದಿ ಸಾಂಗತ್ಯ ಕಾವ್ಯಗಳನ್ನೂ ರಚಿಸಿದ್ದಾರೆ. ಆದರೆ ಅವರ ಮುಖ್ಯ ಉದ್ದೇಶ ಹಳೇಕಾಲದ ಹರಿದಾಸರೆಲ್ಲರ ಹೊನ್ನುರನ್ನಗಳಂತಿರುವ ಕೃತಿಗಳನ್ನು ಜನ ಸಾಮಾನ್ಯರಿಗೆ ಲಭ್ಯವಾಗುವಂತೆ ಪ್ರಕಟಿಸಿ ಪ್ರಚುರ ಪಡಿಸುವದೇ ಆಗಿದ್ದಿತು. ಅದಕ್ಕಾಗಿಯೇ ಅವರು ತಮ್ಮ ಜೀವನದ ಬಹು ಭಾಗವನ್ನು ವ್ಯಯಿಸಿ ಕನ್ನಡದಲ್ಲಿ ಬರೆಯಲ್ಪಟ್ಟ ಎಲ್ಲ ಸಮೀಚೀನವಾದ ಪ್ರಾಚೀನ ವಾಙ್ಮಯವನ್ನೂ ಸುಮಧ್ವವಿಜಯ, ವಾಯುಸ್ತುತಿ, ಮುಂತಾದ ಸದ್ವೈಷ್ಣವ ಗ್ರಂಥಗಳ ಕನ್ನಡ ಅನುವಾದ ರೂಪವಾದ ಪದ್ಯ ಪುಸ್ತಕಗಳನ್ನೂ, ಅನೇಕ ದಾಸರ ದೇವರ ನಾಮುಗಳನ್ನೂ, ಹರಿದಾಸರ ಕೀರ್ತನ ಮಾಲೆಗಳನ್ನೂ ಮತ್ತು ವಿಜಯದಾಸರಂಥ ಮಹಾನುಭಾವರು ರಚಿಸಿದ ಸ್ತೋತ್ರ ಭಾಗ, ಉಪಾಸನಾಭಾಗ, ಸಾಧನಭಾಗ, ಕ್ಷೇತ್ರ ಮಹಿಮಾ ಭಾಗ, ಸೃಷ್ಟಿ ಪ್ರಕರಣ ಮುಂತಾಗಿ ಬಹು ವಿಧದಿಂದ ಬಿತ್ತರಗೊಂಡ ಸುಳಾದಿ ಗ್ರಂಥಗಳನ್ನೂ ಪ್ರಕಟ ಗೊಳಿಸಿದ್ದಾರೆ.

ಶ್ರೀ ಗೋಪಾಲದಾಸರು ತೆಗೆದ ಚಕ್ರಾಬ್ಜ ಮಂಡಲ, ಬ್ರಹ್ಮಾಂಡ ಪಟು ಪಿಂಡಾಂಡಪಟ, ವಿರಾಡ್ರೂಪ ಮುಂತಾದ ವಿವಿಧ ಚಿತ್ರಪಟಗಳನ್ನೂ ಸರಿಯಾದ ವರ್ಣಮಿಶ್ರಣದೊಂದಿಗೆ ಮುದ್ರಿಸಿ ಪರನೋಪಕಾರ ಮಾಡಿದ್ದಾರೆ. ಹರದಾಸ ಸಾಹಿತ್ಯ, ದ್ವೈಮಾಸಿಕದ ಮುಖಾಂತರವೂ ಅವರು ದಾಸಸಾಹಿತ್ಯದ ಸೇವೆಗೈಯ್ದಿದ್ದಾರೆ.

ಹರಿಕಥಾಮೃತಸಾರದ ೫-೬ ಅಪೂರ್ವ ಸಂಸ್ಕೃತ, ಕನ್ನಡ ವ್ಯಾಖ್ಯಾನಗಳನ್ನು ಸಂಗ್ರಹಿಸಿ ೬ ಭಾಗಗಳಲ್ಲಿ ಅಂದರೆ ಸುಮಾರು ಎಂಡು ಸಾವಿರ ಪುಟಗಳಲ್ಲಿ ಪ್ರಕಾಶ ಪಡಿಸಿದ್ದಾರೆ. ಇನ್ನೂ ೫೦-೬೦ ಪುಸ್ತಕಗಳು ಆಗುವಷ್ಟು ಹರಿದಾಸ ವಾಙ್ಮಯ ಭಾಂಡಾರವು ಅವರ ವೈಯಕ್ತಿಕ ಪುಸ್ತಕ ಸಂಗ್ರಹಾಲಯದಲ್ಲಿರುತ್ತದೆ. ಅವುಗಳನ್ನೆಲ್ಲ ಶ್ರೀ ವರದೇಂದ್ರ ಸಾಹಿತ್ಯ ಮಂಡಲದವರು ಕ್ರಮವಾಗಿ ಪ್ರಕಾಶಿಸುತ್ತಾರೆಂದ ಆಶಿಸ್ತುತೇವೆ. ಇವರ ನಿರ್ಯಾಣದಿಂದ ಹರಿದಾಸ ಸಾಹಿತ್ಯದ ಓರ್ವ ಸಮರ್ಥ ಹರಿಕಾರರು ಇಲ್ಲದಂತಾಗಿದೆ.

# ೯೮ ದಿ. ಭಕ್ತ ಶ್ರೀ ಗೋವಿಂದದಾಸರು



ಉಡುಪಿಯ ಹತ್ತಿರ ಕುತ್ತೆತ್ತೂರ ಗ್ರಾಮದ ಶ್ರೀ ಗೋವಿಂದದಾಸರು ಶ್ರೀ ಕೃಷ್ಣನಿಗೆ ಸರ್ವಾರ್ಪಣೆಗೈದ ಅಗ್ರ ಶ್ರೇಣಿಯ ಹರಿದಾಸರಲ್ಲಿ ಕೊನೆಯವರಾಗಿದ್ದಾರೆ. ಉಡುಪಿಯ ಶ್ರೀ ಕೃಷ್ಣಾಪುರ ಮಠಾಧೀಶರಾದ ಶ್ರೀ ವಿದ್ಯಾಧೀಶತೀರ್ಥರ ಅನುಗ್ರಹ ದಿಂದ ಇವರಲ್ಲಿ ಅಂಕುರಿಸಿದ ಆಧ್ಯಾತ್ಮಿಕ ಒಲವು ಶ್ರೀ ಶಿರೂರು ಮಠದ ಶ್ರೀ ಲಕ್ಷ್ಮೀ ವಲ್ಲಭ ತೀರ್ಥ ಶ್ರೀಪಾದಂಗಳವರಿಂದ ಪಲ್ಲವಿತವಾಗಿ ಹರಿದಾಸತನದ ಹಿರಿಮೆಯಲ್ಲಿ ಪರಿಣತಿಯನ್ನು ಹೊಂದಿತು. ಶ್ರೀ ಲಕ್ಷ್ಮೀವಲ್ಲಭ ತೀರ್ಥರೊಂದಿಗೆ ಶ್ರೀ ಗೋವಿಂದ ದಾಸರು ಎಲ್ಲ ತೀರ್ಥಕ್ಷೇತ್ರ ಯಾತ್ರೆ ಮಾಡಿಕೊಂಡು ಬಂದರು. ಯಾತ್ರೆಯ ನಿಕಟ ಸಂಪರ್ಕದಲ್ಲ ಶ್ರೀ ಶ್ರೀಗಳವರಿಗೆ ಶ್ರೀ ಗೋವಿಂದರಾಯರ ಅಚಲ ವೈರಾಗ್ಯ, ಹಾಗೂ ಪರಿಪಕ್ವ ಭಕ್ತಿಗಳ ಗಾಢಪರಿಚಯವಾಗಿ ಅವರ ಪೂಜೆಗಾಗಿ ಒಂದು ಪ್ರಾಣದೇವರ ಪ್ರತಿಮೆಯನ್ನು ಕೊಟ್ಟರು, ಮತ್ತು 'ದಾಸ' ಎಂಬ ಪದವಿಯನ್ನಿತ್ತು ಅನುಗ್ರಹಿಸಿದರು.

ಅಂದಿನಿಂದ ಕುತ್ತೆತ್ತೂರ ಗೋವಿಂದಾಚಾರ್ಯರು ಗೋವಿಂದದಾಸರೆಂದೇ ಪ್ರಸಿದ್ಧರಾದರು.

ದಾಸ ಪಂಥದ ದೀಕ್ಷೆಯನ್ನು ಹೊತ್ತ ಗೋವಿಂದದಾಸರು ದಾಸ ಸಾಹಿತ್ಯದ ಸುವಿಮಲ ಜ್ಞಾನಕ್ಕೆ ವ್ಯಾಸಸಾಹಿತ್ಯದ ಆಳವಾದ ಅಭ್ಯಾಸವು ಅತ್ಯಗತ್ಯವೆಂದು ಮನಗಂಡು ಶ್ರೀ ಕಾಣಿಯೂರುಮಠದ ಶ್ರೀ ವಿದ್ಯಾನಿಧಿತೀರ್ಥರಲ್ಲಿಯೂ ಮತ್ತು ತಮ್ಮ ಗುರುಮಠವಾದ ಶ್ರೀ ಪೇಜಾವರ ಮಠದ ಶ್ರೀ ವಿಶ್ವಜ್ಞತೀರ್ಥರಲ್ಲಿಯೂ ವೇದಾಂತ ಅಧ್ಯಯನವನ್ನು ಮಾಡಿದರು. ತಾವು ಅಧ್ಯಯನವನ್ನು ಮಾಡಿದ ವೇದಾಂತ ಗ್ರಂಥಗಳನ್ನು ಅಕ್ಷರಶಃ ಆಚರಣೆಯಲ್ಲಿ ತಂದರು.

ಅತ್ಯಂತ ವಿರಕ್ತರಾಗಿ ಕಾಲಿಗೆ ಗೆಜ್ಜೆಕಟ್ಟಿ ಮೈಮರೆತು ದಾಸರ ಪದ್ಯಗಳನ್ನು ಹಾಡುತ್ತ ಪಾಡುತ್ತ ಪರವಶರಾಗಿ ಕುಣಿಯುತ್ತ ಬೀದಿಬೀದಿಗಳಲ್ಲಿ ಹರಿನಾಮ ಘೋಷಣೆ ಮಾಡುತ್ತ ಸಂಚರಿಸುತ್ತಿದ್ದರು. ಮಧುಕರಿ ವೃತ್ತಿಯಿಂದ ಬಂದದ್ದರಲ್ಲಿಯೇ ೧೨ ಜನ ಬ್ರಾಹ್ಮಣರಿಗೆ ಊಟಕ್ಕೆ ಹಾಕಿ ಉಳಿದದ್ದರಲ್ಲಿಯೇ ತಾವೂ ತಮ್ಮ ಪರಿವಾರ ದವರು ಉಂಡು ಹರಿಧ್ಯಾನೈಕಲೀನರಾಗುತ್ತಿದ್ದರು.

ಹೀಗೆ ದ್ವೈತ ಸಿದ್ಧಾಂತವನ್ನೂ, ಹರಿನಾಮವನ್ನೂ ಉಚ್ಚಕಂಠದಿಂದ ಎಚ್ಚರಿಸುತ್ತ ಊರೂರಿಗೆ ಹೋಗಿ ಓಣಿಓಣಿಗೆ ತಿರುಗಿ ದಾಸ ಸಂದೇಶವನ್ನು ಮನೆ ಮನೆಗೆ ಮುಟ್ಟಿಸಿದ ಮಹನೀಯರೆಂದರೆ ಶ್ರೀ ಗೋವಿಂದದಾಸರು.

ನೂರಾರು ವರ್ಷಗಳಿಂದ ಲುಪ್ತವಾಗಿ ಹೋಗಿದ್ದ ಹರಿದಾಸ ಪಂಥದ ಆಚರಣ, ಉಚ್ಚಾರಣ, ಪ್ರಚಾರಣ ಮೂರನ್ನೂ ಮಾಡಿ ಎಲ್ಲ ಅರ್ಥದಲ್ಲಿಯೂ ಹರಿದಾಸರೆಂದು ಎನಿಸಿದ ವೈರಾಗ್ಯ ಮೂರ್ತಿಗಳೆಂದರೆ ಶ್ರೀ ಗೋವಿಂದದಾಸರು.

'ಇತ್ತೀಚೆಗೆ ಹರಿದಾಸರೆಂದರೆ ಬಾಯಿಯಿಂದ ಹಲವಾರು ದೇವರ ನಾಮಗಳನ್ನು ಸುಶ್ರಾವ್ಯವಾಗಿ ಹಾಡಿದರೆ ಸಾಕು ಮಧುರಕಂಠದಿಂದ ಹಾಡು ಹಾಡಿದವನೇ ಹರಿದಾಸ' ಎಂಬ ಭಾವನೆ ಬೆಳೆದು ಬಂದಿತ್ತು. ಗೋಪಾಲದಾಸ, ವಿಜಯದಾಸರಂತೆ ಕೈಯಲ್ಲಿ ಜೋಳಿಗೆಹಾಕಿ ಮನೆಮಾರುಬಿಟ್ಟು ಗೋಪಾಳಬುಟ್ಟಿಹಿಡಿದು, ತಂಬೂರಿ ಪಿಡಿದು ದೇವರ ಧ್ಯಾನ ಗಾನ ಮಾಡುತ್ತ ಯದೃಚ್ಛಾಲಾಭ ಸಂತುಷ್ಟರಾಗಿ ದೇವರ ಮಹಿಮೆಗಳನ್ನು ದೇಶಭಾಷೆಯಲ್ಲಿ ಹಾಡುತ್ತ ಹೋಗುವ ನಿಜವಾದ ಹರಿದಾಸರು ಎಲ್ಲಿಯೂ ಕಾಣದಂತಾಗಿದ್ದರು. ಆ ಪರಂಪರೆಯನ್ನು ಮತ್ತೊಮ್ಮೆ ಎತ್ತಿ ಹಿಡಿದು ೨೦ ನೇ ಶತಮಾನದಲ್ಲಿ ಪುರಂದರದಾಸರ ಕಾಲದ ಹರಿದಾಸ ಯುಗವನ್ನು ಪ್ರತ್ಯಕ್ಷವಾಗಿ ಜನರ ಕಣ್ಣೆದುರು ತಂದು ತೋರಿದ ಪುಣ್ಯಾತ್ಮರೆಂದರೆ ಶ್ರೀ ಗೋವಿಂದದಾಸರು.

ಕಂಚಿ, ಮಧುರೆ, ಶ್ರೀರಂಗ, ರಾಮೇಶ್ವರ, ತಿರುಪತಿ, ಮಂತ್ರಾಲಯ, ಕನ್ಯಾಕುಮಾರಿ, ತಿರಚಾನೂರು, ಮದ್ರಾಸ ಮುಂತಾದ ಕಡೆಗಳಲ್ಲಿ ಹಾದಿ ಬೀದಿಯಲ್ಲಿ ಹರಿನಾಮವನ್ನು ಉಗ್ಗಡಿಸುತ್ತ ಭಕ್ತಿಪರವಶತೆಯಿಂದ ಕುಣಿದು ಹಾಡು ಹಾಡುತ್ತಿರುವ ಶ್ರೀಗೋವಿಂದದಾಸರನ್ನು ನೋಡಿದವರು ಎಷ್ಟೋ ಜನರು ಈಗಲೂ ಇದ್ದಾರೆ.

ಅವರ ಮಕ್ಕಳಾದ ಸಮಾಜಭೂಷಣ ದಿ. ಕೆ. ಸೀತಾರಾಮರಾಯರೇ ಮೊದಲಾದ ಅವರ ಮಕ್ಕಳು ಶ್ರೀ ಕೆ.ಬಾಳಕೃಷ್ಣರಾಯರೇ ಮೊದಲಾದ ಮೊಮ್ಮಕ್ಕಳು ಎಂಥ ಸಿರಿವಂತಿಕೆಯಲ್ಲಿದ್ದರೂ ತಮ್ಮ ಕುಲ ಪರಂಪರಾಪ್ರಾಪ್ತವಾದ ಆ ದಾಸ ಪಂಥದ ಅಭಿನಿವೇಶವನ್ನು ಬಿಡದೆ ಶ್ರೀ ಗೋವಿಂದದಾಸರ ಪದ್ಧತಿಯಿಂದಲೇ ಇಂದಿಗೂ ತಾರತಮ್ಯೋಕ್ತ ಭಜನೆಯನ್ನು ಮಾಡುತ್ತಲಿದ್ದಾರೆ.

ಇವರು ಪ್ರತಿಯೊಂದು ಸಭಾ ಸಮ್ಮೇಲನಗಳಲ್ಲಿ ಬಂದು ನಿರ್ದುಷ್ಟವಾದ ಗೋವಿಂದದಾಸ ಪ್ರದರ್ಶಿತವಾದ ಸಾಂಪ್ರದಾಯಿಕ ರೀತಿಯಿಂದ ನಾಮ ಸಂಕೀರ್ತನ ಮಾಡಿ ಸಜ್ಜನರನ್ನೆಲ್ಲ ತಣಿಸುತ್ತಾರೆ. ಶ್ರೀ ಗೋವಿಂದದಾಸರು ಹಾಕಿಕೊಟ್ಟ ಭಜನಾ ಪದ್ಧತಿಯಲ್ಲಿಯ ತಾರತಮ್ಯಾನುಗುಣವಾದ ಹಾಡುಗಳನ್ನೆಲ್ಲ ಪುಸ್ತಕರೂಪದಲ್ಲಿ ಪ್ರಕಟಿಸಿದ್ದಾರೆ.

ಹೀಗೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳಲ್ಲಿಯೂ ಹರಿಭಕ್ತಿಯು ಹರಿದು ಬಂದು ಹುಟ್ಟಿದ ಕೂಸುಗಳೆಲ್ಲವೂ ಗೆಜ್ಜೆಕಟ್ಟಿ, ತಾಳತಟ್ಟಿ ಹಾಡು ಹಾಡುತ್ತ ನಿಲ್ಲು

ವಂತೆ ಮಾಡಿದ್ದು ಶ್ರೀ ಗೋವಿಂದದಾಸರ ಮೂಲಭೂತವಾದ ಭಕ್ತಿ ಪ್ರಸಾರಣದ ಗೈಮೆಯ ಮೈಮೆಯಾಗಿದೆ.

ಹೀಗೆ ಯಾವಜ್ಜನ್ಮ ಭಕ್ತರಾಗಿ ಪರಿಶುದ್ಧ ಜೀವನವನ್ನು ನಡೆಯಸಿವ ಶ್ರೀ ಗೋವಿಂದದಾಸರು ತಮ್ಮ ಗೂನೆಗಾಲದಲ್ಲಿಯೂ ಉಡುಪಿಯ ಶ್ರೀಕೃಷ್ಣನ ರಥೋತ್ಸವ ಕಾಲದಲ್ಲಿ ದೇವರ ಮುಂದೆ ಹಾಡಿ ಕುಣಿಯುತ್ತಲಿರುವಾಗಲೇ ವಿವಶತೆಯಿಂದ ಕೂಗಿ ಕರೆದು ಭಕ್ತಿ ಉದ್ರೇಕದಿಂದ ಭಗವಂತನ ಚರಣಗಳಲ್ಲಿ ಕರಗಿ ಹೋದರು.

" ಬಾರೋ ಬೇಗ ಬಾರೋ ನೀಲವರ್ಣ
ಬಾರೋ ಬೇಗ ಬಾರೋ ವೇಲಾಪುರ ಚನ್ನ "

ಎಂದು ಹಾಡುತ್ತ ದೇವರನ್ನು ಕರೆಯುತ್ತಲಿರುವಾಗಲೇ ದೇವರು ಅವರನ್ನು ತನ್ನಲ್ಲಿಗೆ ಕರೆದಂತಾಯಿತು.

ಅಲ್ಲಿಂದ ಊರಿಗೆ ಬಂದು ದಾಸರು ಪ್ರಪಂಚವನ್ನೆಲ್ಲ ಮರೆದು ಭಗವಂತನ ಧ್ಯಾನೈಕತಾ ಲೀನಮಾನಸರಾದರು. ಮರಣದ ಕ್ಷಣದ ವರೆಗೂ ನಾರಾಯಣನ ನಿರಂತರ ನಾಮಸ್ಮರಣ ಮಾಡುವ ಭಾಗ್ಯ ಅವರದಾಗಿತ್ತು. ಅವರ ಪುಣ್ಯವೇ ಅವರ ಮಕ್ಕಳು ಮೊಮ್ಮಕ್ಕಳಲ್ಲಿ ಹರಿದು ಬಂದು ದಾನ, ಧರ್ಮ, ಪುಣ್ಯ ಕರ್ಮ ನಾಮ ಸಂಕೀರ್ತನ, ಜ್ಞಾನಪ್ರಸಾರಣಾದಿ ಸತ್ಕಾರ್ಯಗಳನ್ನು ಮಾಡಿಸುತ್ತಲಿದೆ. ಇವರು ೧೯೪೦ ನೇ ಇಸ್ವಿಯಲ್ಲ ವೈಕುಂಠ ವಾಸಿಗಳಾದರು.

## ೯೯ ದಿ. ಗೋವಿಂದರಾವ ಸವಣೂರ



ಧಾರವಾಡದ ಶ್ರೀ ಸವಣೂರ ಗೋವಿಂದರಾಯರು ಮುಂಬೈ ಕರ್ನಾಟಕದ ಶಿಕ್ಷಣ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ದ್ವೈತ ವೇದಾಂತದಲ್ಲಿ ಮೊದಲಿನಿಂದಲೂ ಅಚಲ ಶ್ರದ್ಧೆಯುಳ್ಳವರಾಗಿದ್ದರು. ಮಧ್ವ ಸಿದ್ಧಾಂತವನ್ನು ಅಧ್ಯಯನ ಮಾಡ

ಬೇಕೆನ್ನುವ ವಿದ್ಯಾರ್ಥಿಗಳಿಗಾಗಲೀ, ಪಾಠ ಹೇಳಬಯಸುವ ಪಂಡಿತರಿಗಾಗಲೀ ದ್ವೈತ ವೇದಾಂತ ಪುಸ್ತಕಗಳು ದೊರಕದೆ ಅವರೆಲ್ಲರೂ ಪಡುವ ಪಾಡನ್ನೂ ಬಡುವ ಬವಣೆಯನ್ನೂ ಕಂಡು ಅವರ ಮನಸ್ಸು ನೊಂದಿತು.

ಕೂಡಲೇ ಅವರು ಮಾಧ್ವ ಗ್ರಂಥಗಳನ್ನೆಲ್ಲ ಮುದ್ರಿಸಬೇಕೆಂದು ಸಂಕಲ್ಪ ಗೈದರು. ಅವರು ಅಲ್ಲಲ್ಲಿ ಹೋಗಿ ಬೇಡಿಕಾಡಿ, ಕೊಂಡುಕೊಂಡು ಅಪೂರ್ವವಾದ ವೈಷ್ಣವ ಮತದ ವೇದಾಂತ ಪುಸ್ತಕಗಳನ್ನು ಸಂಗ್ರಹಿಸಿದರು. ಟೀಕಾ–ಟಿಪ್ಪಣಿ ಗಳನ್ನು ಕೂಡಿ ಹಾಕಿದರು. ತಾಡಪತ್ರ, ಕ್ರೋಡಪತ್ರಗಳನ್ನೆಲ್ಲ ಕಲೆ ಹಾಕಿದರು. ಗ್ರಂಥ ಪ್ರಕಾಶನವನ್ನು ಪ್ರಾರಂಭ ಮಾಡಿದರು.

ಶ್ರೀಮನ್ನ್ಯಾಯ ಸುಧಾ ಗ್ರಂಥದ ಶ್ರೀನಿವಾಸತೀರ್ಥ, ಯಾದುಪತ್ಯ, ಸನ್ಯಾಯ ರತ್ನಾವಳಿ, ನ್ಯಾಯಚಂದ್ರಿಕಾ, ಕಾಶಿ ಟಿಪ್ಪಣಿ, ಕಂಬಾಲು ಟಿಪ್ಪಣಿ ಮುಂತಾದ ೬–೭ ಟಿಪ್ಪಣಿ ಸಹಿತವಾಗಿ ಸಮಗ್ರ ನ್ಯಾಯ ಸುಧಾ ಗ್ರಂಥವನ್ನು ಸರ್ವೋತ್ಕೃಷ್ಟ ವಾದ ರಂಗೀತ ದಪ್ಪ ಕಾಗದಗಳ ಮೇಲೆ ಒಪ್ಪಾಗಿ ಮುದ್ರಿಸಿದ ಸಾಹಸಿಗಳೆಂದರೆ— ಶ್ರೀ ಸವಣೂರ ಗೋವಿಂದರಾಯರೊಬ್ಬರೇ. ಈ ವರೆಗೂ ಅಂಥ ಸಾಹಸವನ್ನು ಯಾರೂ ಮಾಡಲಿಲ್ಲ.

ಅವರೆ ಶ್ರೀ ಗೋವಿಂದರಾಯರು ಮುದ್ರಿಸಿದ ಗ್ರಂಥಗಳಲ್ಲಿ ಮುದ್ರಕರ ತಪ್ಪಿನಿಂದಲೂ, ಪ್ರತಿ ಮಾಡುವವರ ಪ್ರಮಾದದಿಂದಲೂ, ಪ್ರೂಫ್ ತಿದ್ದುವ ಅನವ ಧಾನದಿಂದಲೂ ಅನೇಕ ದೋಷಗಳು, ಪಾಠ ಪ್ರಮಾದಗಳು ಹೇರಳವಾಗಿ ಉಳಿದುಕೊಂಡದ್ದೇನೋ ನಿಜ. ಆದರೆ ಪಂಡಿತರ ಮನೆಗಳ ಕತ್ತಲೆ ಕೋಣೆಗಳಲ್ಲಿ ಅಜ್ಞಾತವಾಸವನ್ನು ಅನುಭವಿಸುತ್ತ ಬಿದ್ದಿರುವ ಕ್ರಿಮಿ, ಕೀಟಕ, ದೂಷಿತ, ಮೂಷಿಕ ಮೂಷಿತವಾದ ಪ್ರಾಚೀನ ಪುಣ್ಯ ಗ್ರಂಥಗಳಿಗೆಲ್ಲ ಬಂಧ ಮೋಚನ ಮಾಡಿಸಿ ಬೆಳಕಿನ ಮೋರೆ ತೋರಿಸಿ ಯಾವದಾದರೂ ಒಂದು ರೂಪದಲ್ಲಿ ಬದುಕಿ ಉಳಿಯುವಂತೆ ಮಾಡಿದ ಶ್ರೇಯಸ್ಸು ಶ್ರೀ ಗೋವಿಂದರಾಯರದಾಗಿದೆ.

ಶ್ರೀಮದ್ಭಾಗವತ ಗ್ರಂಥಕ್ಕೆ ಶ್ರೀ ಗೋವಿಂದರಾಯರು ಯಾದುಪತ್ಯ, ಸತ್ಯ ಧರ್ಮ, ಲಿಂಘೇರಿ, ಮುಂದನಂದಿನಿ, ಭಲಾರಿ, ಶ್ರೀನಿವಾಸತೀರ್ಥ ಮುಂತಾದ ಟಿಪ್ಪಣಿ ಗಳನ್ನು ಮೂಲದೊಂದಿಗೆ ಕೂಡಿಸಿ ಪ್ರಕಟಗೊಳಿಸಿದ್ದಾರೆ.

ಶ್ರೀಗುರು ಸಾರ್ವಭೌಮ ಶ್ರೀ ರಾಘವೇಂದ್ರಸ್ವಾಮಿಗಳವರ ದಶೋಪನಿಷತ್ ಖಂಡಾರ್ಥಗಳನ್ನೆಲ್ಲ ಮುದ್ರಿಸಿದ್ದಾರೆ.

ಇದರಂತೆ ಎಂಟು ಟಿಪ್ಪಣಿಗಳೊಂದಿಗೆ 'ಪ್ರಮಾಣ ಪದ್ಧತಿ' ನಾಲ್ಕು ಟಿಪ್ಪಣಿಗಳೊಂದಿಗೆ 'ಭೇದೋಜ್ಜೀವನ' ಮೂರು ಟಿಪ್ಪಣಿಗಳೊಂದಿಗೆ 'ವಾದಾವಲಿ' ಗ್ರಂಥಗಳನ್ನು ಇದಂ ಪ್ರಾಥಮ್ಯೆಯ ಗೋವಿಂದರಾಯರು ಪ್ರಕಾಶಪಡಿಸಿದರು.

ಇವಲ್ಲದೆ ಸೂತ್ರಾರ್ಥ ರತ್ನಾವಳಿ, ಸೂತ್ರದೀಪಿಕಾ, ನಾರಾಯಣೋಪನಿಷತ್, ಶ್ವೇತಾಶ್ವೇತರೋಪನಿಷತ್, ವಿಷ್ಣು ಸಹಸ್ರನಾಮ ಮುಂತಾದ ಅನೇಕ ಅಪೂರ್ವ ಕೃತಿಗಳು ಇವರಿಂದ ಬೆಳಕು ಕಂಡವು.

ಶ್ರೀ ವಿಷ್ಣುತೀರ್ಥರೆಂದು ಹೆಸರಾದ ಶ್ರೀ ಅಡವೀ ಆಚಾರ್ಯರ ಸೂಕ್ಷ್ಮ ಪ್ರಮೇಯ ಪುಂಜಭರಿತವಾದ ಷೋಡಶೀ, ಚತುರ್ದಶೀ, ಅಧ್ಯಾತ್ಮ ರಸರಂಜನೀ ಮುಂತಾದ ಅನೇಕ ಗ್ರಂಥಗಳನ್ನು ಅವರು ಅಚ್ಚುಹಾಕಿಸಿದರು.

ಶ್ರೀ ಗೋವಿಂದರಾಯರು ಸ್ವಯಂ ವೇದಾಂತವನ್ನು ಗುರುಗಳಲ್ಲಿ ಅಧ್ಯಯನ ಮಾಡಿ ಕೆಲವು ಸಂಸ್ಕೃತ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಗೀತಾರ್ಥ ಬೋಧಿನಿ ಎಂಬ ಪುಸ್ತಕವೂ ಎರಡು ಭಾಗಗಳಲ್ಲಿದ್ದು ಶ್ರೀ ಮಂತ್ರಾಲಯ ಸ್ವಾಮಿಗಳ ಗೀತಾ ವಿವೃತ್ತಿಯ ಭಾವವನ್ನು ತಿಳಿಗನ್ನಡದಲ್ಲಿ ತಿಳಿಸಿ ಹೇಳುವ ಉಪಯುಕ್ತ ಗ್ರಂಥವಾಗಿದೆ. ಅವರ ಉಪನಿಷದರ್ಥ ಬೋಧಿನಿ ಎಂಬ ಕನ್ನಡ ಗ್ರಂಥವಾದರೂ ಕನ್ನಡದ ಓದುಗರಿಗೆ ಶ್ರೀ ಮಂತ್ರಾಲಯರಾಯರ ಖಂಡಾರ್ಥದ ಭಾವವನ್ನು ಸರಳಗೊಳಿಸಿ ಸಾರ ರೂಪವಾಗಿ ಒದಗಿಸುತ್ತದೆ.

ಶ್ರೀ ಗೋವಿಂದರಾಯರು ಶ್ರೀಮಧ್ವಾಚಾರ್ಯರ ಶ್ರೀ ವಿಷ್ಣು ತತ್ವ ನಿರ್ಣಯಕ್ಕೆ ೮ ಟಿಪ್ಪಣಿಗಳನ್ನು ಸಂಗ್ರಹಿಸಿ ಕೂಡಿಸಿ ಇಟ್ಟಿದ್ದರು. ಇದರಂತೆ ಇನ್ನೂ ಎಷ್ಟೋ ಮಾಧ್ವ ಗ್ರಂಥಗಳಿಗೆ ಅನೇಕ ಅಮುದ್ರಿತ, ಅಪರೂಪ ಟೀಕಾ ಟಿಪ್ಪಣಿಗಳನ್ನು ಕಷ್ಟಪಟ್ಟು ಕೂಡಿಸಿಟ್ಟು ಮುದ್ರಣಗೊಳಿಸಬೇಕೆಂದು ಉಜ್ಜುಗಿಸುತ್ತಿದ್ದರು.

ಆದರೆ ಅಷ್ಟರಲ್ಲಿಯೇ ದುರ್ವಿಧಿಯು ಅವರನ್ನು ಸೆಳೆದು ಒಯ್ದುದ್ದರಿಂದ ಅವೆಲ್ಲ ಅಮೂಲ್ಯ ಮಾಧ್ವ ಗ್ರಂಥ ಪ್ರಕಾಶನ ಕಾರ್ಯವು ಇದ್ದಲ್ಲಿಯೇ ಸ್ಥಗಿತ ಮುಗಿತವನ್ನು ಹೊಂದಿದೆ. ಯಾರಾದರೂ ಪುಣ್ಯಾತ್ಮರು ಅರ್ಧಾವಶಿಷ್ಟವಾದ ಕಾರ್ಯವನ್ನು ಮುಂದುವರಿಸಬೇಕೆಂದು ಮಠ ಮಾನ್ಯದವರಲ್ಲಿಯೂ ಸಮಾಜ, ಸರಕಾರ, ಸಾಹುಕಾರರಲ್ಲಿಯೂ ವಿನಯಪೂರ್ವಕವಾಗಿ ಕೇಳಿಕೊಳ್ಳುತ್ತೇವೆ.

ಶ್ರೀ ಗೋವಿಂದಾಯರು ಪ್ರಕಟಿಸಿದ ಗ್ರಂಥಗಳಲ್ಲಿ ಯಾವ ಪುಸ್ತಕಗಳೂ ದೊರಕುವದಿಲ್ಲ. ಅವೆಲ್ಲವೂ ಅತ್ಯುಪಯುಕ್ತವಾಗಿದ್ದು ಅವನ್ನೆಲ್ಲ ಪುನಃ ಪರಿಶಿಲಿಸಿ, ಪರಿಷ್ಕರಿಸಿ, ಪುನರ್ಮುದ್ರಿಸುವದು ಅತ್ಯಗತ್ಯದ ಕರ್ತವ್ಯವಾಗಿದೆ.

# ೧೦೦ ದಿ. ಬೇಲೂರ ಕೇಶವದಾಸರು



ಬೇಲೂರಿನ ವೆಂಕಟೇಶದಾಸರ ಚಿರಂಜೀವರಾದ ಶ್ರೀ ಕೇಶವದಾಸರು ದಾಸ ಪಂಥವ ದಟ್ಟ ವಾತಾವರಣದಲ್ಲಿಯೇ ಉಸಿರಾಡಿಸಿ ಬೆಳೆದವರು. ಅಪ್ಪ ಆರು ತಲೆ ಮುತ್ತ್ಯಾ ಮೂರು ತಲೆ ದಾಸರಾಗಿಯೇ ಹುಟ್ಟಿ, ದಾಸರಾಗಿಯೇ ಬೆಳೆದು, ದಾಸಜೀವನ ದಲ್ಲಿಯೇ ಕೊನೆಯ ಶ್ವಾಸ ಎಳೆದ ಹರಿದಾಸರ ವಂಶದ ಕುಡಿಯಾಗಿ ಬೆಳೆದು ಬಂದ ಭಾಗ್ಯ ಅವರದಾಗಿತ್ತು.

ಆದುದರಿಂದಲೇ ಇಂಗ್ಲೀಷು ಕಲಿತು ಆ ಕಾಲದಲ್ಲಿ ಉಚ್ಚ ಅಧಿಕಾರಿಗಳಾಗ ಬಹುದಾಗಿದ್ದ ಅವರು ಯಾವ ಅಧಿಕಾರ, ಐಶ್ವರ್ಯಗಳ ಆಮಿಷಕ್ಕೆ ಒಳಗಾಗದೇ ತಮ್ಮ ತಂದೆಯವರ ಆಜ್ಞೆಯಂತೆ ಇಂಗ್ಲೀಷ ಕಲಿತರೂ ತಾಳ ಹಿಡಿದರು. ಊರೂರಿಗೆ ಹೋಗಿ ಹರಿಕಥೆ ಮಾಡಿದರು. ಜನಮನದಲ್ಲಿ ಭಕ್ತಿಯ ಅಂಕುರವನ್ನು ಬೆಳಸಿದರು. ಪುರಂದರಾದಿ ದಾಸರು ಹಿಡಿದ ಪಂಥದಲ್ಲಿ ಜನರಿಗೆ ಶ್ರದ್ಧೆಯನ್ನು ಹುಟ್ಟಿಸಿದರು.

ಮಹಾರಾಷ್ಟ್ರದ ಅಭಂಗ, ಆರ್ಯಾ ಮುಂತಾದವುಗಳ ಹುಚ್ಚು ಪ್ರಭಾವಕ್ಕೆ ಒಳಗಾಗಿ ತನ್ನ ಅಚ್ಚಕನ್ನಡತನವನ್ನೇ ಕಳೆದುಕೊಂಡ ಕೀರ್ತನ ಸಂಪ್ರದಾಯವನ್ನು ಮತ್ತೆ ಎತ್ತಿ ಹಿಡಿದು ಅದಕ್ಕೆ ಶುದ್ಧ ಕನ್ನಡದ ದೀಕ್ಷೆ ಕೊಟ್ಟವರು ಕೇಶವದಾಸರು.

ಆ ಕಾಲದ ಕೀರ್ತನಕಾರರೆಲ್ಲರೂ ಉತ್ತರ ಕರ್ನಾಟಕದಲ್ಲಿ ತಮ್ಮ ಕೀರ್ತನಗಳಲ್ಲಿ ಮರಾಠಿ, ಹಿಂದೀ, ಸಾಧು ಸಂತರ ವಚನ ಹಾಗೂ ಚರಿತ್ರೆಗಳನ್ನು ಉದಾಹರಿಸುತ್ತ ಅದೇ ಹಿಂದೀ ಮರಾಠಿ ಚಾಲುಗಳಲ್ಲಿ ಹಾಡುಗಳನ್ನು ಹೇಳಿ, ತಾಳ ತಂಬೂರಿ ಮುಟ್ಟದೆ, ಗೆಜ್ಜೆ ಚಿಟಕಿಗಳನ್ನು ಹಿಡಿಯದೆ, ಕೈಪೇಟಿ, ಕಾಲಪೇಟಿಗಳ ಮೇಲೆಯೇ ಹರಿಕಥೆ ಮಾಡುತ್ತಿದ್ದರು. ಗಂಧರ್ವ ಕಂಪನಿ, ಕಿರ್ಲೋಸ್ಕರ ಕಂಪನಿ ಮುಂತಾದ ಮರಾಠಿ ರಂಗ ಭೂಮಿಯ ಬಲವಾದ ವರ್ಚಸ್ಸಿಗೆ ಒಳಗಾದ ಕನ್ನಡಿಗರ ಕೀರ್ತನಗಳಲ್ಲಿಯೂ ಕನ್ನಡ ಭಾಷೆಯೊಡನೆ ದಾಸಸಾಹಿತ್ಯ ಮಧ್ವ ಸಿದ್ಧಾಂತ ಎರಡೂ ಕುತ್ತುಸಿರುಬಿಡುವ ಪ್ರಸಂಗ ಬಂದಿಪ್ಪಿತು.

ಇಂಥ ವೇಳೆಯಲ್ಲಿ ಕರ್ನಾಟಕ ಸಂಗೀತ ಪದ್ಧತಿಯಲ್ಲಿ ಕನ್ನಡದ ರಾಗ ಮಟ್ಟುಗಳನ್ನು ಬಳಸಿಕೊಂಡು, ಅಚ್ಚಗನ್ನಡದ ದಾಸರ ಪದ ಪದ್ಯಗಳನ್ನು ಉದಾಹರಿಸಿ, ಪುರಂದರ, ಕನಕ, ವಿಜಯದಾಸ, ಗೋಪಾಲದಾಸ ಮುಂತಾದ ಕರ್ನಾಟಕ ಸಾಧು ಸಂತರ ಸುಳಾದಿ, ಉಗಾಭೋಗ, ಕೀರ್ತನೆಗಳನ್ನು ಸ್ಪಷ್ಟವಾಗಿ ಉಚ್ಚರಿಸಿ, ಅರ್ಥವಾಗುವ ಕ್ರಮದಲ್ಲಿ ಹಾಡುತ್ತ ಕೀರ್ತನೆಗಳನ್ನು ಮಾಡುತ್ತ ನಡೆದ ದಿ. ಕೇಶವದಾಸರು ಒಂದು ದೊಡ್ಡ ಕ್ರಾಂತಿಯನ್ನೇ ಮಾಡಿದರು. ಎಲ್ಲರಲ್ಲಿಯೂ ತನ್ನತನದ ಅರಿವು ಮೂಡಿತು. ಅರ್ಥವು ಸ್ಫುಟವಾಗಿ ತಿಳಿಯುವಂತೆ, ಪ್ರಾಸವಿಲಾಸಗಳನ್ನು ಸ್ಪಷ್ಟವಾಗಿ ಬಿಡಿಬಿಡಿಸಿ ಮುಖೋದ್ಗತವಾಗಿ ಸಹಸ್ರಾರು ಪದಪದ್ಯಗಳನ್ನು ಉದಾಹರಿಸುವ ಕೇಶವ ದಾಸರ ಕೀರ್ತನ ವೈಖರಿಯು ಶುದ್ಧಕನ್ನಡದ ಹೊಸ ಕೀರ್ತನ ಕ್ರಮಕ್ಕೆ ನಾಂದಿಯಾಯಿತು.

ದಿ. ಕೇಶವದಾಸರು ಬರಿ ಕೀರ್ತನಗಳನ್ನು ಹಾಡಿ ಹೇಳುವದಲ್ಲದೆ ಹಿಂದಿನ ದಾಸರುಗಳು ಇದ್ದ ಹಳ್ಳಿಪಳ್ಳಿಗಳನ್ನು ಹೊಕ್ಕು, ಗುಡಿ ಗುಂಡಾರಗಳನ್ನು ಸುತ್ತಿ, ಮನೆ ಮಠ ಮಂದಿರಗಳನ್ನು ಸೋಸಿ ವೃದ್ಧ ಪ್ರಬುದ್ಧರನ್ನು ಕಂಡು ಮಾತನಾಡಿಸಿ, ಎಲ್ಲ ದಾಸರಾಯರ ಬಗ್ಗೆ ದೀರ್ಘ ಸಂಶೋಧನೆ ನಡೆಸಿದರು. ಅವರ ಕೃತಿ ಕೀರ್ತನೆಗಳನ್ನು ಸಂಗ್ರಹಿಸಿದರು. ಅವರ ಚಿತ್ರ, ಚರಿತ್ರೆಗಳನ್ನು ಕಲೆಹಾಕಿದರು ಅವರ ಪವಾಡ ಪ್ರಭಾವಗಳನ್ನು ಕೇಳಿಕೊಂಡು ಬರೆದುಕೊಂಡರು.

ಅವರ ಚಿರಕಾಲೀನ ಪ್ರಯತ್ನ, ಪ್ರದೀರ್ಘ ಪರಿಶ್ರಮದ ಫಲವಾಗಿಯೇ "ಕರ್ನಾಟಕ ಭಕ್ತವಿಜಯ" ಎಂಬ ಅರಸು ಕೃತಿಯು ರೂಪುಗೊಂಡಿತು. ಹಿಂದೆ ಎಂದೋ ಗತಿಸಿ ಕಾಲಗರ್ಭದಲ್ಲಿ ಅಡಗಿಹೋದ ಅನೇಕ ದಾಸ ಧುರೀಣರು ಕನ್ನಡದ ಕನ್ನಡಿಯಲ್ಲಿ ಒಮ್ಮೆಲೆ ಮರುಜನ್ಮ ಪಡೆದು ಮೂಡಿ ಬಂದರು. ಕರ್ನಾಟಕದ ಹರಿದಾಸರ ಬಗ್ಗೆ ಅಧಿಕೃತವಾಗಿ ವಿವರ ವೃತ್ತಾಂತವನ್ನು ಒದಗಿಸುವ ಜೀವನದರ್ಶನಾತ್ಮಕವಾದ ಏಕೈಕ ಪುಸ್ತಕವೆಂದರೆ ಕೇಶವದಾಸರ ಕರ್ನಾಟಕ ಭಕ್ತವಿಜಯ. ಅದಕ್ಕೂ ಮೊದಲು ಅಂಥ ಗ್ರಂಥವು ಅಸ್ತಿತ್ವದಲ್ಲಿಯೇ ಬಂದಿರಲಿಲ್ಲ. ಅದಾದ ಬಳಿಕ ಈಗ ೩-೪ ದಶಕಗಳಲ್ಲಿಯೂ ಇಂದಿಗೂ ಒಂದೂ ಅಂಥ ವ್ಯಾಪಕವಾದ ದಾಸಸಾಹಿತ್ಯದ ಬಗೆಗಿನ ಪುಸ್ತಕವು ಹೊರಬಂದಿಲ್ಲ. ಇದು ಅಲ್ಲದೆ ಅವರುರಾಘವೇಂದ್ರ ವಿಜಯವನ್ನು ಬರಿದಿದ್ದಾರೆ.

ಹೀಗೆ ದಾಸ ಸಾಹಿತ್ಯಕ್ಕೂ, ಅದರ ಮುಖಾಂತರ ಕನ್ನಡ ಸಾಹಿತ್ಯಕ್ಕೂ, ತನ್ಮುಖಾಂತರ ಮಧ್ವ ಸಿದ್ಧಾಂತಕ್ಕೂ ತದ್ವಾರಾ ದ್ವೈತ ಸಂಪ್ರದಾಯಕ್ಕೂ ಕೊನೆಯವರೆಗೆ ನೆನಪಿನಲ್ಲಿ ಉಳಿಯುವಂಥ ಸೇವೆ ಸಲ್ಲಿಸಿದ ಕೇಶವದಾಸರು ದಾಸ ಸಾಹಿತ್ಯದ ಇತಿಹಾಸದಲ್ಲಿ ಕಲ್ಪಕಾಲದ ವರೆಗೂ ಹಚ್ಚುಹಸಿರಾಗಿ ಉಳಿಯುವಂಥ ಹೆಸರನ್ನು ಪಡೆದಿದ್ದಾರೆ. ಇವರು 'ಹರಿಮಂದಿರ' ಎಂಬ ಸಂಸ್ಥೆ ಸ್ಥಾಪಿಸಿ ಅದರ ಮುಖಾಂತರ ಕರ್ನಾಟಕ ಸಂಗೀತ, ಹರಿದಾಸ ಸಾಹಿತ್ಯ ಮಾಧ್ವ ತತ್ವಜ್ಞಾನದ ಸಂಶೋಧನ ಪ್ರಕಾಶನ ಕಾರ್ಯ ಮಾಡಿದರು. ಇವರಿಗೆ ಕೀರ್ತನಾಚಾರ್ಯ ಎಂಬ ಬಿರುದಿದ್ದಿತು.

# ೧೦೧ ಶ್ರೀ ಸುಬೋಧ ರಾಮರಾಯರು



ದಿ. ಕರ್ಪೂರ ಶ್ರೀನಿವಾಸರಾಯರ ನೆರವು ಪ್ರೋತ್ಸಾಹಗಳಿಂದ ಮುಂದೆ ಬಂದು ಬೆಂಗಳೂರಿನಲ್ಲಿ ಇಂದು ಗಣ್ಯವ್ಯಕ್ತಿ ಎನಿಸಿದ ಶ್ರೀ ಸುಬೋಧರಾಮರಾಯರು ದಾಸ ಸಾಹಿತ್ಯದ ಪ್ರಚಾರಕರೂ, ಪುರಸ್ಕರ್ತರೂ, ಪ್ರಕಾಶಕರೂ ಆಗಿದ್ದಾರೆ.

ಈಗ ೫೦ ವರ್ಷಗಳಿಂದ ಪತ್ರಿಕಾ ವ್ಯವಸಾಯ ಮತ್ತು ಗ್ರಂಥ ಪ್ರಕಾಶನ ಕಾರ್ಯಗಳನ್ನು ಅವಿಚ್ಛಿನ್ನವಾಗಿ ಮಾಡುತ್ತ ಬಂದ ರಾಮರಾಯರು ತಮ್ಮ ಸುಬೋಧ ಕುಸುಮಾಂಜಲಿ ಎಂಬ ಗ್ರಂಥ ಮಾಲೆಯಲ್ಲಿ ೧೪೦ ಮಹನೀಯರ ಜೀವನ ಚರಿತ್ರದ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಹಾಗೂ ಶ್ರೀ ಮದ್ಭಾಗವತವನ್ನು ಮೂರು ಭಾಗಗಳಲ್ಲಿ ಸರಸ ಸುಂದರವಾದ ಸರಳಗನ್ನಡ ಶೈಲಿಯಲ್ಲಿ ಅನುವಾದ ಮಾಡಿ ಕನ್ನಡದಲ್ಲಿ ಆಧ್ಯಾತ್ಮಿಕ ಸಾಹಿತ್ಯದ ಕೊರತೆಯನ್ನು ಹೋಗಲಾಡಿಸಿದ್ದಾರೆ.

ಬಾಲ್ಯದಿಂದಲೂ ದಾಸ ಸಾಹಿತ್ಯದಲ್ಲಿ ವಿಶೇಷ ಒಲವು ಹಾಗೂ ಆಸಕ್ತಿವುಳ್ಳ ರಾಮರಾಯರು ಅನೇಕ ದಾಸಶ್ರೇಷ್ಠರ ದೇವರ ನಾಮಗಳನ್ನು ಪರಿಶೋಧಿಸಿ "ಹರಿ ದಾಸ ಕೀರ್ತನ ತರಂಗಿಣಿ" ಎಂಬ ಗ್ರಂಥ ಮಾಲೆಯ ಮೂಲಕ ಅಧಿಕೃತ ದಾಸ ಸಾಹಿತ್ಯ ಪ್ರಕಟನೆಯನ್ನು ಪ್ರಾರಂಭ ಮಾಡಿದರು. ಅದರಲ್ಲಿ ದಾಸರ ಅನೇಕ ಕೃತಿಗಳು, ಜೀವನ ಪರಿಚಯಗಳು ಪ್ರಕಟನೆಗೊಂಡವು. ಅಲ್ಪ ಬೆಲೆಯಲ್ಲಿಯೇ ಎಲ್ಲ ದಾಸರಾಯರ ಅಮೂಲ್ಯ ಕೃತಿಗಳು ಜನರಿಗೆಲ್ಲ ಲಭ್ಯವಾದವು.

ಬೆಂಗಳೂರಿನಲ್ಲಿ ಮಾಧ್ವ ಸಂಘ, ಮಾಧ್ವ ಯುವಕ ಸಂಘಗಳ ಮುಖಾಂತರ ಸಮಾಜ ಸೇವೆಯನ್ನು ಅನವರತ ಮಾಡುತ್ತ ಬಂದ ರಾಮ ರಾಯರು ಶ್ರೀ ಪುರಂದರ ದಾಸರ ನಾಲ್ಕು ನೂರನೇ ಉತ್ಸವ ಸಂದರ್ಭದ ಸವಿ ನೆನಪಿಗಾಗಿ ಶ್ರೀ ಪುರಂದರ ದಾಸರ ಜೀವನ ಹಾಗೂ ಗೈಮೆ, ಮೈಮೆಗಳನ್ನು ಅಧಿಕರಿಸಿ ನಾಲ್ಕು ನೂರು ಕನ್ನಡ ಶ್ಲೋಕಗಳನ್ನು ರಚಿಸಿ ದಾಸ ಶ್ರೇಷ್ಠರಿಗೆ ತಮ್ಮ ಪದ್ಯ ಪೂಜೆಯನ್ನು ಅರ್ಪಿಸಿದ್ದಾರೆ.

ಇತ್ತೀಚೆಗೆ ದುರ್ಮಿಳವಾಗಿದ್ದ ಬೇಲೂರ ಕೇಶವದಾಸರ "ಕರ್ನಾಟಕ ಭಕ್ತಿ ವಿಜಯ" ಪುಸ್ತಕದ ಎರಡೂ ಭಾಗಗಳನ್ನು ಕೂಡಿಸಿ ಶ್ರೀ ಸುಬೋಧರಾಮರಾಯರು ಒಂದು ಪುಸ್ತಕವನ್ನಾಗಿ ಪುನರ್ಮುದ್ರಿಸಿ ಜನರಿಗೆ ಸಿಕ್ಕುವಂತೆ ಮಾಡಿದ್ದಾರೆ.

## ೧೧೦೨ ಶ್ರೀ ದಿವಾಕರ ರಂಗರಾಯರು

ಕನ್ನಡಿಗರಿಗೆ ಶ್ರೀ ದಿವಾಕರರ ಪರಿಚಯ ಮಾಡಿಕೊಡುವದು ಮುಗಿಲಿನಲ್ಲಿಯ ದಿವಾಕರನ ಪರಿಚಯ ಮಾಡಿಕೊಟ್ಟಂತಾದೀತು. ನಾಡ ಸೇವೆಗಾಗಿ ಸ್ವಾತಂತ್ರ್ಯಾಂದೋಲನದಲ್ಲಿ ಧುಮುಕಿ ಅನೇಕ ಬಾರಿ ಜೇಲು ಯಾತ್ರೆ ಮಾಡಿದ ಶ್ರೀ ದಿವಾಕರರು ಕೇಂದ್ರದಲ್ಲಿ ಮಂತ್ರಿಯಾಗಿ, ರಾಜ್ಯಪಾಲರಾಗಿ ಕೊನೆಗೆ ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಕಾರ್ಯ ಮಾಡುತ್ತಲಿದ್ದಾರೆ.

ಕರ್ನಾಟಕದಲ್ಲಿ ಪತ್ರಿಕಾ ವ್ಯವಸಾಯವನ್ನು ಊರ್ಜಿತ ಮಟ್ಟಕ್ಕೆ ಮುಟ್ಟಿಸಿದ ಶ್ರೀ ರಂಗರಾಯರ ವ್ಯಕ್ತಿತ್ವದ ರಾಜಕೀಯ ಮುಖದಷ್ಟೇ ಉಜ್ವಲವಾದ ಇನ್ನೊಂದು ಮುಖವೆಂದರೆ— ಆಧ್ಯಾತ್ಮಿಕತೆ.

ಪ್ರಾಯಃ ಎಲ್ಲ ಉಪನಿಷತ್ತುಗಳನ್ನು ಕನ್ನಡಿಸಿಕೊಟ್ಟ ರಾಯರು ದಾಸ ಸಾಹಿತ್ಯದಲ್ಲಿಯೂ ಅಭಿರುಚಿ, ಆಸಕ್ತಿ ತಳೆದು "ಹರಿಭಕ್ತಿಸುಧೆ" ಎಂಬ ದಾಸರ ಕೀರ್ತನೆಗಳ ಸಂಕಲನಾತ್ಮಕ ಗ್ರಂಥವನ್ನು ಪ್ರಕಟಿಸಿ ಲೋಕೋಪಕಾರಗೈದರು. ದೇವರ ನಾಮಗಳ ಆಯ್ಕೆಯ ಕ್ರಮ, ಹಾಗೂ ಮುನ್ನುಡಿ ಮುಂತಾದವುಗಳನ್ನು ಪರಿಶೀಲಿಸಿದರೆ ಭಕ್ತಿ ರಂಗದಲ್ಲಿ ಶ್ರೀರಂಗರಾಯರಿಗೆ ಇರುವ ಗಾಢವಾದ ಅಭಿನಿವೇಶ, ಗೂಢ ಪ್ರೇಮ ಮತ್ತು ದಾಸವಾಙ್ಮಯದಲ್ಲಿ ಅವರಿಗಿರುವ ಪ್ರೌಢ ಪಾಂಡಿತ್ಯಗಳ ಕಲ್ಪನೆಯು ಯಾರಿಗಾದರೂ ಬರಲಿಕ್ಕೆ ಸಾಕು.

ಅವರ ಉಪನಿಷತ್ ಕಥಾವಲಿ ಮತ್ತು ಗೀತೆಯ ಗುಟ್ಟು ಮುಂತಾದ ಅನೇಕ ಗ್ರಂಥಗಳೂ ಹಾಗೂ ಆಧ್ಯಾತ್ಮ ಕಾರ್ಯಾಲಯದ ಮುಖಾಂತರ ಅವರು ಪ್ರಕಟಿಸಿದ ಬೇರೆ ಹಲವಾರು ಆಧ್ಯಾತ್ಮಿಕ ಪುಸ್ತಕಗಳು ತಾತ್ವಿಕ ಸಾಹಿತ್ಯದ ಬಗೆಗೆ ಅವರಿಗಿರುವ ಸದಭಿರುಚಿಯನ್ನು ಸಾರಿ ಹೇಳುತ್ತವೆ.

## ೧೧೦೩ ಪಾಂಡುರಂಗರಾವ ಕಸ್ಬೆ

ಇವರು ದಾಸ ದೀಕ್ಷೆಯನ್ನು ವಹಿಸಿ ದಾಸರೆಂದೆನಿಸಿಕೊಂಡಿರದಿದ್ದರೂ ದಾಸರ ಅನುಯಾಯಿಗಳಾಗಿ ದಾಸ ಪರಂಪರೆಯಲ್ಲಿ ವಿಶ್ವಾಸ ಭಕ್ತಿಗಳನ್ನಿಟ್ಟು ಅಂಕಿತ ಪಡೆದು ಪದಪದ್ಯಗಳನ್ನು ರಚಿಸಿರುವರು.

ಇವರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಪರೀಕ್ಷೆಯ ಫಲಿತಾಂಶದಿಂದ ಮನಸ್ಸಿಗೆ ಬೇಸರಪಟ್ಟುಕೊಂಡು ಮನೆಯಲ್ಲಿ ಹೇಳದೆ ಕೇಳದೆ ತಿರುಪತಿಗೆ ಹೋದರು. ಅಲ್ಲಿ ಪಾಂಡುರಂಗೀ ಹುಚ್ಚಾಚಾರ್ಯರಲ್ಲಿ ಒಂದು ಸಪ್ತಾಹ ಇದ್ದು ಅವರಿಂದಲೇ 'ಪಾಂಡು ರಂಗ ವಿಠಲ' ಎಂದು ಅಂಕಿತವನ್ನು ಪಡೆದರು. ಆಗಲೇ ಪದಗಳನ್ನು ರಚಿಸಲು ಪ್ರಾರಂಭಿಸಿದರು. ಇವರು ಜಗನ್ನಾಥ ದಾಸರ ಚರಿತ್ರೆ, ರಾಘವೇಂದ್ರಸ್ವಾಮಿ ಸ್ತೋತ್ರ (ಅಶ್ವಧಾಟಿಯಲ್ಲಿ) ಕೊಪ್ಪರ ನರಸಿಂಹ ಸ್ತೋತ್ರ ಮುಂತಾದವುಗಳನ್ನು ರಚಿಸಿದ್ದು ಇವು ಪ್ರಕಟವಾಗಿವೆ. ಉತ್ತರ ಗೋಗ್ರಹಣ, ರಾಮಾಂಜನೇಯ ಯುದ್ಧ ಎಂಬ ಹರಿ ಕೀರ್ತನೆಗಳನ್ನೂ ರಚಿಸಿರುವರು. ಇವರು ರಾಯಚೂರಿನ ಕುಲಕರ್ಣಿಯವರು. ಇವರಿಗೆ ಈಗ ವಯಸ್ಸು ೫೫. ೨೦–೩೦ ಪದಗಳನ್ನು ರಚಿಸಿರುವರು.

### ಶ್ರೀ ನರಹರಿ ವಿಠಲ

ಸುಮಾರು ೧೫೦ ವರ್ಷಗಳ ಹಿಂದೆ ಗದ್ವಾಲ ಸಂಸ್ಥಾನದಲ್ಲಿ ನರಹರಿರಾವ ಎಂಬವರು ದಿವಾನರಾಗಿ ಹೋದರು. ಇವರು ಸುಮಾರು ೭೦೦ ಪದಗಳನ್ನು "ನರಹರಿ ವಿಠ್ಠಲ" ಎಂಬ ಅಂಕಿತದಿಂದ ರಚಿಸಿರುವರೆಂದು ತಿಳಿದು ಬಂದಿದೆ ಈ ನರಹರಿರಾಯರ ವಂಶಜರೇ ಪಾಂಡುರಂಗರಾವ ಕಸ್ಬೆಯವರೆಂದು ಹೇಳಲಾಗುತ್ತಿದೆ.

## ೧೦೪ ಹುಯಿಲಗೋಳ ನಾರಾಯಣರಾಯರು

ಕರ್ನಾಟಕದ ನವೋತ್ಥಾನದ ನಸುಕಿನಲ್ಲಿಯೇ ಉದಯ ರಾಗವನ್ನು ಹಾಡಿ ಶುಭ ನುಡಿದ 'ದ್ವಿಜ' ಶ್ರೇಷ್ಠರೆಂದರೆ ಶ್ರೀ ಹುಯಿಲಗೋಳ ನಾರಾಯಣರಾಯರು. ವಕೀಲಿ ವ್ಯವಸಾಯದಲ್ಲಿದ್ದರೂ ಮೊದಲಿನಿಂದಲೂ ಕನ್ನಡ ರಂಗಭೂಮಿಯ ಸೇವೆಗಾಗಿ ಮೈಸವೆಸಿದ ಗದುಗಿನ ಶ್ರೀ ನಾರಾಯಣರಾಯರು ದಾಸ ಕೂಟದ ಕೊನೆಯ ಕೊಂಡಿ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಕವಿಗಳೂ, ನಾಟಕಕಾರರೂ ಆದ ನಾರಾಯಣರಾಯರು 'ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು' ಎಂದು ಹಾಡಿದ್ದಲ್ಲದೆ ಗದುಗಿನ ವೀರನಾರಾಯಣನ ಅಂಕಿತದಿಂದ ನೂರಾರು ದೇವರ ನಾಮ ಗಳನ್ನು ರಚಿಸಿದ್ದಾರೆ. ನಿಜವಾಗಿಯೂ ಅವರ ಕೃತಿಗಳಲ್ಲಿ ಪುರಂದರಯುಗ ವಿಜಯದಾಸರ ಯುಗಗಳಲ್ಲಿ ಮಿಂಚಿ ಮಿನುಗಿದ ದಾಸ ಸಾಹಿತ್ಯದ ಕಂಪಿಂಪು, ನುಣ್ಪು, ಪೆಂಪು, ಸೊಂಪುಗಳು ಮರಳಿ ಮತ್ತೊಮ್ಮೆ ಪುನರ್ಜನ್ಮ ಪಡೆದಂತೆ ತೋರುತ್ತವೆ.

ಇವರ ಕೃತಿಗಳಲ್ಲಿ ಅರ್ಥದ ಎತ್ತರಕ್ಕೆ ಭಾಷೆಯು ಏರುತ್ತದೆ. ಭಾವದ ಕಾವಿಗೆ ಶೈಲಿಯು ಅನುಗುಣವಾಗಿ ಮಾರ್ನುಡಿಯುತ್ತದೆ. ಈ ಭಾವಾರ್ಥ ಸಾಮರಸ್ಯದ ತೂಕದಲ್ಲಿ ಹೊಚ್ಚ ಹೊಸದಾದ ರಸಪಾಕವೊಂದು ತಲೆದೋರಿ ಭಕ್ತಿಯ ಉದ್ರೇಕಕ್ಕೆ ಅನುವು ಉಂಟಾಗುತ್ತದೆ.

# ೧೦೫ ಭಾರತ ಬಿಂದುರಾಯರು



ಚಿತ್ರದುರ್ಗದ ಶ್ರೀ ಸಂ. ಗೋ. ಬಿಂದುರಾಯರು ಕನ್ನಡದಲ್ಲಿ ಗಮಕ ಕಲೆಗೆ ಆಧ್ಯಾತ್ಮ ದೀಕ್ಷೆಕೊಟ್ಟ ಪುಣ್ಯಜೀವಿಗಳು. ಕನ್ನಡ ಸಾಹಿತ್ಯದಲ್ಲಿಯೇ ಅನರ್ಘ್ಯರತ್ನ ವೆಂದು ವೆಗ್ಗಳಿಕೆ ಪಡೆದ ಕುಮಾರವ್ಯಾಸನ ಭಾರತವನ್ನು ಮಾಧ್ವ ಗ್ರಂಥವನ್ನಾಗಿ ಮಾರ್ಪಡಿಸಿದ ಸಾಹಸಾಂಕ ಶ್ರೇಯಸ್ಸು ಬಿಂದೂರಾಯರಿಗೆ ಮೀಸಲು.

ಕನ್ನಡ ನಾಡಿನ ಎಲ್ಲ ಪ್ರಮುಖ ಪಟ್ಟಣಗಳಲ್ಲಿಯೂ ಗದುಗಿನ ಭಾರತ ವನ್ನು ಶ್ರೀ ಮಧ್ವಾಚಾರ್ಯರ ತಾತ್ಪರ್ಯ ನಿರ್ಣಯ, ಹರಿಕಥಾಮೃತಸಾರ ಭಾಗವತ ಸಾರೋದ್ಧರ ಮತ್ತು ಶ್ರೀ ಸತ್ಯಧ್ಯಾನರ ಗೀತೋಪನ್ಯಾಸಗಳು ಮುಂತಾದ ಅಪ್ಪಟ ಮಾಧ್ವ ಗ್ರಂಥಗಳ ಅಭಿಪ್ರಾಯಕ್ಕೆ ಅನುಗುಣವಾಗಿ ಅರ್ಥವಿಸಿ ಕನ್ನಡ ಭಾರತದ ತುಂಬ ಹರಿವಾಯುಗಳ ಮಹಿಮೆಯೇ ವಿಜೃಂಭಿಸುತ್ತದೆ ಎಂದು ಡಂಗುರ ಹೊಡೆದ ಧೀರ ಧೀಮಂತ ಗಮಕಿಗಳೆಂದರೆ ಶ್ರೀ ಬಿಂದುರಾಯರು.

ಅವರ ಪ್ರವಚನಗಳಲ್ಲಿ ವ್ಯಾಸವಚನಗಳಂತೆ ಹೇರಳವಾಗಿ ದಾಸಸೂಕ್ತಿಗಳ ಸಂದರ್ಭೋಚಿತ ಉದ್ಧರಣೆ, ಉದಾಹರಣೆ, ಉಚ್ಚಾರಣೆಗಳು ಕಂಡು ಬರುತ್ತಿದ್ದವು. ನಾರಣಪ್ಪನ ಭಾರತವನ್ನು ಹೊಸಗನ್ನಡದ ರಸಪಾಕದಲ್ಲಿ ಇಳಿಸಿ ಶ್ರೀ ಬಿಂದೂರಾಯರು ಭಾರತ ಸಾರೋದ್ಧಾರ ಎಂಬ ಗ್ರಂಥವನ್ನು ಬರೆದು ಕುಮಾರವ್ಯಾಸನ ವಾಗ್ವೈಭವದ ರಸರುಚಿಗಳು ಪ್ರತಿಯೊಬ್ಬ ಆಸ್ತಿಕರ ಗಂಟಲಿಗೆ ಇಳಿಯುವಂತೆ ಮಾಡಿದ್ದಾರೆ.

## ೧೧೦೭ ಸಿ. ಎಚ್. ಕೃಷ್ಣರಾಯರು

ಅಖಿಲ ಭಾರತ ಮಾಧ್ವ ಮಹಾ ಮಂಡಳದ ಪ್ರಥಮ ಪ್ರಧಾನ ಕಾರ್ಯದರ್ಶಿಗಳಾಗಿ ಮತ್ತು ತತ್ವವಾದ ಪತ್ರಿಕೆಯ ಆದ್ಯ ಸಂಪಾದಕರಾಗಿ ಬಹು ಕಾಲ ಕೆಲಸ ಮಾಡಿದ ಕೃಷ್ಣರಾಯರು ದಾಸನಿಷ್ಠರು. ದಾಸಪ್ರೇಮಿಗಳು. ದಾಸೋಲ್ಲಾಸಿಗಳು.

ಮೈಸೂರ ಸಂಸ್ಥಾನದ ಕಂದಾಯ ಶಾಖೆಯಲ್ಲಿ ಕೆಲಸ ಮಾಡಿ ನಂತರ ಹೈದರಾಬಾದ ಸಂಸ್ಥಾನದಲ್ಲಿ ಮಂತ್ರಿಗಳಾಗಿ ಕಾರ್ಯಮಾಡಿದ ಕೃಷ್ಣರಾಯರು ತಮ್ಮ ಆಯುಷ್ಯದ ಉತ್ತರಾಯಣದಲ್ಲಿ ಸಮಾಜದ ಹಾಗೂ ಮಾಧ್ವ ಮಹಾ ಮಂಡಳದ ಸರ್ವತೋಮುಖವಾದ ಉನ್ನತಿಗಾಗಿ ಶ್ರಮಿಸಿ ಚಿರಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ.

ಕನ್ನಡ ಭಾಷೆಯ ವೈಶಿಷ್ಟ್ಯವಾದ ದಾಸ ಸಾಹಿತ್ಯದ ಸೊಬಗು ಸೊಗಸುಗಳು ಎಲ್ಲರಿಗೂ ತಿಳಿಯಬೇಕು ಎಂಬ ಸದುದ್ದೇಶದಿಂದ ಇವರು ಇಂಗ್ಲೀಷಿನಲ್ಲಿ ಎಷ್ಟೋ ಲೇಖನಗಳನ್ನೂ ದಾಸರ ಪದಗಳನ್ನು ಭಾಷಾಂತರ ಮಾಡಿ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. ದಾಸ ವಾಙ್ಮಯದ ಕೃತಿ ಕಲಶವೆನಿಸಿದ ಹರಿಕಥಾಮೃತಸಾರವನ್ನು ಇಂಗ್ಲೀಷಿಗೆ ಇಳಿಸಿದ್ದಾರೆ. ಅವರ ಇಂಥ ಪವಿತ್ರವಾದ ವಾಙ್ಮಯೀನ ವ್ಯಾಪಾರಕ್ಕೆ ಶ್ರೀ ರಾಜಗೋಪಾಲಾಚಾರ್ಯರು (ರಾಜಾಜಿ) ಮುನ್ನುಡಿಯ ಮುಕುರವಿನ್ನಿಟ್ಟು ಮೆಚ್ಚುಗೆಯನ್ನು ವ್ಯಕ್ತಮಾಡಿದ್ದಾರೆ.

ಇವರು ಮಹಾಭಾರತ ತಾತ್ಪರ್ಯ ನಿರ್ಣಯವನ್ನು ಇಂಗ್ಲೀಷಿಗೆ ಪರಿವರ್ತಿಸಿರುವರು. ಶ್ರೀಕೃಷ್ಣರಾಯರ ಕರ್ತೃತ್ವಶಕ್ತಿಯ ನಿದರ್ಶನಗಳಾಗಿ ಬೆಂಗಳೂರಿನಲ್ಲಿ ಮಾಧ್ವ ಯುವಕ ಸಂಘ ಮುಂತಾದ ಅನೇಕ ಸಂಸ್ಥೆಗಳು ತಲೆ ಎತ್ತಿ ನಿಂತುದು ಎಲ್ಲರಿಗೂ ಸುಪರಿಚಿತವಿದೆ.

## ೧೧೦೮ ಮೇಲಗಿರಿದಾಸರು

ಶ್ರೀ ಮೇಲಗಿರಿದಾಸರು ಶ್ರೀ ವಿಜಯದಾಸರ ವಂಶಕ್ಕೆ ಸೇರಿದವರು. ಇವರ ಸ್ಥಳ ಚೀಕಲಪರವಿ. ಇವರ ತಂದೆ ವೆಂಕೋಬದಾಸರು. ತಾಯಿಯ ಹೆಸರು ಶ್ರೀಮತಿ ರಾಧಮ್ಮ. ಇವರು ಚಿಕ್ಕಂದಿನಿಂದ ಪದ–ಸುಳಾದಿಗಳಲ್ಲಿ ಆಸಕ್ತಿ ವಹಿಸಿ ಸುಶ್ರಾವ್ಯವಾಗಿ ಹಾಡಲು ಅಭ್ಯಾಸ ಮಾಡಿಕೊಂಡರು. ದಾಸ ಸಾಹಿತ್ಯದ ಪ್ರಚಾರಕ್ಕಾಗಿ ಕಂಕಣಬದ್ಧರಾದವರು. ಶ್ರೀ ಗೋವಿಂದದಾಸರ ಶಿಷ್ಯರಾಗಿ ಕಲ್ಲೂರಿನ ಶ್ರೀ ಜಯದಾಸರ ಸಂಗಡಿಗರಾಗಿ ಕೆಲಸ ಮಾಡಿದ್ದಾರೆ. ಸ್ವಭಾವದಿಂದ ಶ್ರೀ ಮೇಲಗಿರಿದಾಸರು ರಸಿಕರು. ತಮ್ಮ ಹಾಸ್ಯವೃತ್ತಿಯಿಂದ ನಗೆಯ ಹೊನಲನ್ನು ಹರಿಸುವರು. ಇವರ ವಯಸ್ಸು ಸುಮಾರು ೬೬ ವರುಷ. ದಾಸಕೂಟದಲ್ಲಿ ವಿಶ್ವಾಸವಿದ್ದುದರಿಂದ ಸಂಸಾರದಲ್ಲಿ ಇವರಿಗೆ ಆಸಕ್ತಿ ತುಂಬ ಕಡಿಮೆ. ದೇವರಿಟ್ಟಂತಾಗಲಿ ಎಂಬುದೇ ಇವರ ವಿಶ್ವಾಸ. ಮನೆತನದ ಕ್ಲೇಶ ಕಷ್ಟಗಳನ್ನು ತುಂಬ ಧೈರ್ಯದಿಂದ ಎದುರಿಸಿ ತಮ್ಮ ರಸಿಕ ವೃತ್ತಿಯನ್ನು ಮಾಸಗೊಟ್ಟಿಲ್ಲ.

ಇತ್ತೀಚಿಗೆ ದಾಸರ ಉಗಾಭೋಗ ಸುಳಾದಿಗಳನ್ನು ಕ್ರಮಬದ್ಧವಾಗಿ ಹೇಳುವವರೇ ವಿರಳ. ಉಗಾಭೋಗ, ಸುಳಾದಿಗಳನ್ನು ಹೇಳುವ ಪದ್ಧತಿಯೇ ಬೇರೆ. ಹಾಡುಗಳನ್ನು ಹಾಡುವ ರೀತಿಯೇ ಬೇರೆ. ಈ ಉಗಾಭೋಗ, ಸುಳಾದಿಗಳನ್ನು ಕ್ರಮಬದ್ಧವಾಗಿ ಹೇಳುವ ಕೆಲವೇ ಜನರಲ್ಲಿ ಇವರು ಪ್ರಮುಖರಾಗಿರುವರು.

## ೧೦೮ ರಂಗಣ್ಣನವರು



ಇವರು ಧಾರವಾಡದ ಹತ್ತಿರದ ನರೇಂದ್ರ ಗ್ರಾಮದವರು. ಇವರ ತಂದೆ ಬಳವಂತರಾವ ಮುತಾಲಿಕ ದೇಸಾಯಿಯವರು. ಶ್ರೀ ರಂಗರಾಯರು ಮಾಧ್ವ ಸಂಸ್ಕೃತಿಯ ತೊಟ್ಟಿಲಲ್ಲಿ ಬೆಳಗಿದವರು. ಇವರಿಗೆ ದಾಸಸಾಹಿತ್ಯದಲ್ಲಿ ಬಹಳ ಆಸಕ್ತಿ. ನಿತ್ಯವೂ ದಾಸರ ಪದಗಳನ್ನು ಹಾಡಿ, ಪಾಡಿ ನಲಿಯುವರು. ಒಳ್ಳೆ ಸಾತ್ವಿಕರಾಗಿದ್ದುಕೊಂಡು ಅನೇಕ ಸಾರ್ವಜನಿಕ ಕಾರ್ಯಗಳಲ್ಲಿ ಬಹಳ ಶ್ರದ್ಧೆಯಿಂದ ದುಡಿಯುವರು.

ಧಾರವಾಡದಲ್ಲಿಯ ಅಖಿಲ ಭಾರತ ಮಾಧ್ವ ಮಹಾ ಮಂಡಲದಿಂದ ಚಾಲಿತವಾದ ವಿದ್ಯಾರ್ಥಿ ನಿಲಯಕ್ಕೆ ತಮ್ಮ ತಂಗಿಯವರ ಕಡೆಯಿಂದ ಅವರ ಮನೆಯನ್ನು ದಾನವಾಗಿ ಕೊಡಿಸಿದ ಶ್ರೇಯಸ್ಸು ಇವರದಾಗಿದೆ. ಆ ಮನೆಯೇ ಈಗ "ಪ್ರಲ್ಹಾದ ವಿದ್ಯಾರ್ಥಿ ನಿಲಯ"ವೆಂದು ಪ್ರಸಿದ್ಧವಾಗಿದೆ.

ಶ್ರೀ ರಂಗಣ್ಣನವರು ಧಾರವಾಡದಲ್ಲಿ ವ್ಯಾಸಕೂಟ, ದಾಸಕೂಟಗಳ ಧುರೀಣರಿಗೆ ಆಶ್ರಯಸ್ಥಾನವಾಗಿದ್ದಾರೆ.



# ಪ್ರಕರಣ : ೮

# ದಾಸ ಸಾಹಿತ್ಯಕ್ಕೆ ಮಾಧ್ವ ಮಹಿಳೆಯರ ಕಾಣಿಕೆ

ವಾಯುದೇವರ ಮೂರನೇ ಅವತಾರಭೂತರಾದ ಶ್ರೀ ಮಧ್ವಾಚಾರ್ಯರು ವೇದಮತವನ್ನು ಪುನರುದ್ಧಾರ ಮಾಡಿದರು. ಕಂಡ ಕಂಡವರು ಭಾಷ್ಯ ಟೀಕಾದಿಗಳನ್ನು ಬರೆದು ಬಾದರಾಯಣರ ಭಾವಕ್ಕೆ ವಿರುದ್ಧವಾಗಿಯೇ ಪ್ರಸ್ಥಾನತ್ರಯಕ್ಕೆ ಅರ್ಥ ಹೇಳಿ, ಜನರನ್ನೆಲ್ಲ ಅನರ್ಥಕ್ಕೆ ಗುರಿಯಾಗುವಂತೆ ಮಾಡಿದಾಗ ಆನಂದತೀರ್ಥರು ಆ ಪ್ರಸ್ಥಾನ ತ್ರಯಕ್ಕೂ ಭಾಷ್ಯ ಬರೆದು ಜಗತ್ತಿಗೆ ಯಥಾರ್ಥ ಮಾರ್ಗದರ್ಶನ ಮಾಡಿಸಿದರು.

ಮುಂದೆ ಟೀಕಾಚಾರ್ಯರು ಶ್ರೀ ರಘೂತ್ತಮರೂ ಶ್ರೀ ಚಂದ್ರಿಕಾಚಾರ್ಯರೂ ಶ್ರೀ ವಾದಿರಾಜರೂ ಶ್ರೀ ಮಂತ್ರಾಲಯ ಪ್ರಭುಗಳೂ ಆಚಾರ್ಯರ ಆ ಭಾವವನ್ನು ಜನತೆಗೆ ತಿಳಿಯುವಂತೆ ಸಂಸ್ಕೃತ ಸರಳ ಶೈಲಿಯಲ್ಲಿ ತಿಳಿಸಿ ಪರಮೋಪಕಾರ ಮಾಡಿದರು.

ಸಂಸ್ಕೃತ ಶಾಸ್ತ್ರ ತಿಳಿಯದ ಮಂದರಿಗೆ ಪುರಂದರದಾಸರು ವಿಜಯದಾಸರೇ ಮೊದಲಾದ ದಾಸ ಧುರೀಣರು ಕನ್ನಡದಲ್ಲಿ ಅನೇಕ ಪದ ಪದ್ಯ ಸುಳಾದಿಗಳ ಮೂಲಕ ಮಧ್ವ ಶಾಸ್ತ್ರದ ತಿರುಳನ್ನು ತಿಳಿಸಿ ಭಕ್ತಿ ಭಾಗೀರಥಿಯ ಪ್ರವಾಹವು ಕರ್ನಾಟಕದಲ್ಲಿ ಎಂದಿಗೂ ಹರಿಗಡಿಯದಂತೆ ನೋಡಿಕೊಂಡರು.

ಈ ದಾಸ ಸಾಹಿತ್ಯದ ಕನ್ನಡ ಪದ ಹಾಗೂ ಅನೇಕ ಖಂಡ ಕಾವ್ಯಗಳಿಂದ ಪುರುಷರಂತೆ ಸ್ತ್ರೀಯರಲ್ಲಿಯೂ ಮಧ್ವ ಸಿದ್ಧಾಂತದ ಬಗ್ಗೆ ಭಕ್ತಿ ಶ್ರದ್ಧಾದರ ಬೆಳೆದು ಗೌರವ ಬುದ್ಧಿಯು ನಿರಂತರ ನೆಲೆಸುವಂತಾಯಿತು.

ಅಸಂಖ್ಯ ಪದ ಪದ್ಯಗಳು, ಅನೇಕ ಖಂಡ ಕಾವ್ಯಗಳು, ಅಪರಿಮಿತ ಉಗಾಭೋಗಗಳು, ಲೆಕ್ಕವಿಲ್ಲದಷ್ಟು ಸುಳಾದಿಗಳು ಹಾಗೂ ಕೀರ್ತನಗಳಿಂದ ಪ್ರಚಂಡ ಪ್ರಮಾಣದಲ್ಲಿ ಬೃಹದ್ಗಾತ್ರವಾಗಿ ಬೆಳೆದು ನಿಂತ ಈ ಹರಿದಾಸ ವಾಙ್ಮಯವನ್ನು ಮುದ್ರಣ ಸೌಕರ್ಯವಿಲ್ಲದ ಆ ಕಾಲದಲ್ಲಿ ಅಳಿಯದಂತೆ ಉಳಿಸಿ ಬೆಳಿಸಿಕೊಂಡು ಇಂದಿನ ವರೆಗೆ ಅವನ್ನೂ ಅಕ್ಷತವಾಗಿ ರಕ್ಷಿಸಿದ ಶ್ರೇಯಸ್ಸು ಬಹುಮಟ್ಟಿಗೆ ಮಾಧ್ವಮಹಿಳೆಯರಿಗೆ ಸೇರುತ್ತದೆ.

ಗಂಡಸರು ಲೌಕಿಕ ವಿದ್ಯೆ, ಉದ್ಯೋಗ, ಶಾಸ್ತ್ರ, ವೇದ ವೇದಾಂತಾದಿ ಅಧ್ಯಯನಗಳಲ್ಲಿ ದಾಸ ಸಾಹಿತ್ಯವನ್ನು ಕಡೆಗಣಿಸಿದರೂ ಹೆಣ್ಣು ಮಕ್ಕಳು ಮಾತ್ರ

ಅಪರೋಕ್ಷ ಜ್ಞಾನಿಗಳಾದ ದಾಸರಾಯರ ಪದ ಪದ್ಯಗಳನ್ನೇ ತಮ್ಮ ಜೀವನದ ಉಸಿರನ್ನಾಗಿ ಮಾಡಿಕೊಂಡಿದ್ದಾರೆ.

ಇಂದಿಗೂ ಮಾಧ್ವರ ಮನೆಯಲ್ಲಿ ದಾಸರ ಪದ ಬಾರದ ಹೆಣ್ಣುಮಕ್ಕಳು ಹುಡುಕಿದರೂ ಸಿಗುವದಿಲ್ಲವೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಮಾಧ್ವ ಮಹಿಳೆಯರು ಹಿರಿಯರಾದ ಹಿಂದಿನ ದಾಸರಾಯರ ಕೀರ್ತನೆಗಳನ್ನು ತಾವೇ ಸಾಮೂಹಿಕವಾಗಿ ಗುಡಿ–ಗುಂಡಾರ, ಕಟ್ಟೆ-ಕೋಣೆಗಳಲ್ಲಿ ಅನ್ನುವದು ಮಾತ್ರ ವಲ್ಲದೇ ತಾವೂ ಅಂಥ ಭಕ್ತಿರಸ ಪ್ರಧಾನವಾದ ಆಧ್ಯಾತ್ಮಿಕ ಸಾಹಿತ್ಯವನ್ನು ಕನ್ನಡದಲ್ಲಿ ರಚನೆ ಮಾಡಿ, ಮಾಧ್ವ ವಾಙ್ಮಯಕ್ಕೆ ಪರಮೋಪಕಾರಗೈದಿದ್ದಾರೆ. ಚಮತ್ಕಾರಾನು ಪ್ರಣಿತವಾದ ಈ ವನಿತಾ ವಾಙ್ಮಯದ ಚಾತುರ್ಯ ಮಾಧುರ್ಯದಿಂದ ಆಕೃಷ್ಟರಾಗಿ ಸಾವಿರಾರು ನಾರಿಯರು ಇಂದಿಗೂ ಅವುಗಳನ್ನು ಕಂಠಪಾಠ ಮಾಡಿ, ಒಳ್ಳೇ ಸಂಸ್ಕಾರ ಪಡೆದು ಮಧ್ವ ಸಿದ್ಧಾಂತಾನುಸಾರವಾಗಿ ಭಕ್ತಿತತ್ವವನ್ನು ತಿಳಿದುಕೊಂಡು ಉದ್ಧೃತ ರಾಗುತ್ತಲಿದ್ದಾರೆ.

ಅಂಥ ಸರ್ವಜ್ಞರ ವಾಚನೀಯವಾದ ಹರಿದಾಸ ಸಾಹಿತ್ಯವನ್ನು ನಿರ್ಮಿಸಿದ ಕವಿ ಕಾಮಿನಿಯರ ಹಲವು ಭವಿಭಾಮಿನಿಯರ ಅನುಭಾವಿ ಪ್ರಭಾವಿಯಾದ ಪಾವನ ಜೀವನ ಚರಿತ್ರೆಗಳನ್ನು ಇಲ್ಲಿ ಕೊಡಲಾಗಿದೆ.

## ೧ ಹೆಳವನಕಟ್ಟೆ ಗಿರಿಯಮ್ಮ

ಕರ್ಣಾಟಕದ " ಮೀರಾ " ಎಂದು ಹೆಸರಾದ ಹೆಳವನಕಟ್ಟೆಯ ಗಿರಿಯಮ್ಮ ಹರಿಭಕ್ತಿಯ ಸಾಕಾರರೂಪಳೇ ಆಗಿರುವಳೆಂದು ವಿಮರ್ಶಕರು ಬಣ್ಣಿಸಿದ್ದಾರೆ. ರಾಣೇ-ಬಿನ್ನೂರ ಜೋಯಿಸ್ಸಿ ಬಿಷ್ಟಪ್ಪನವರ ಮಗಳಾದ ಇವಳನ್ನು ಷುಲೆಬೆನ್ನೂರಿನ ಶಾನು ಭೋಗ ತಿಪ್ಪರಸನಿಗೆ ಮದುವೆಮಾಡಿಕೊಟ್ಟಿತ್ತು. ಗಿರಿಯಮ್ಮನಿಗೆ ಬಾಲ್ಯದಿಂದಲೂ ಭಕ್ತಿಮನಸ್ಸಿಗೆ ಅಂಟಿಕೊಂಡಿತ್ತು. ವಿರಕ್ತಿಮೈಗೆ ಹಿಡಿದುಕೊಂಡಿತ್ತು. ಆದರಿಂದ ಅವಳು ವಿಷಯವಿಮುಖಳಾಗಿ ಹೆಳವನಕಟ್ಟೆಯ ರಂಗನಾಥಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಸೇವೆ ಮಾಡಿದಳು.

ದೇವನ ಸೇವೆಯಿಂದ ಅವಳಿಗೆ ಒಳ್ಳೆ ತಿಳಿವು ಮೂಡಿ ಕವಿತಾಶಕ್ತಿಯೂ ಬಂದು ಅವಳು ಅನೇಕ ದೇವರ ನಾಮುಗಳನ್ನೂ ಕಾವ್ಯಕೃತಿಗಳನ್ನೂ ರಚಿಸಿದಳು.

ಹೀಗೆ ರಂಗನಾಥನ ಭಗವಂತನ ಭಕ್ತಿಯುಕ್ತವಾದ ನಿತ್ಯ ನಿರಂತರ ಸೇವೆಯಿಂದ ಅವಳಿಗೆ ಸಾಹಿತ್ಯದಲ್ಲಿ ರಸಸಿದ್ಧಿಯಾದರೆ ಜೀವನದಲ್ಲಿ ವಾಕ್‌ಸಿದ್ಧಿಯೂ ಆಯಿತು. ಅವಳಾಡಿದ ಒಂದೊಂದು ವಚನವೂ ವರದ ಸತ್ವವನ್ನು ಪಡೆದು ಸತ್ಯೋಕ್ತಿಯಾಗಿ ಪರಿಣಮಿಸತೊಡಗಿದವು.

ಪುಂಗನೂರಿನ ರಾಜಕುಮಾರನಿಗೆ ಎಳೆಯವರೆಯವಲ್ಲಿಯೇ ಕಣ್ಣು ಹೋಗಿ ಗೋಳಾಡುತ್ತಿದ್ದನು. ಗಿರಿಯಮ್ಮನು ತಾನು ದೇವರಿಗೆ ಹಚ್ಚುವ ದೀಪದ ಕಾಡಿಗೆಯನ್ನು ಲೇಪಿಸಿ ಆ ರಾಜಕುಮಾರನಿಗೆ ಕಣ್ಣು ಬರುವಂತೆ ಮಾಡಿದಳು.

ನಾಡಿಗೆ ಭೀಕರ ಬರಬಂದು ಮಳೆಯಿಲ್ಲದೆ ಜನ ಕಂಗಾಲಾಗಿ ಕೈಕಾಲುಗೆಟ್ಟಾಗ ಗಿರಿಯಮ್ಮ ದೇವರಲ್ಲಿ ಮೊರೆಯಿಟ್ಟಳು—

"ಮಳೆಯ ದಯ ಮಾಡೋ ರಂಗ ನಿಮ್ಮ<br>
ಕರುಣೆ ತಪ್ಪಿದರೆ ಉಳಿಯದೋ ಲೋಕ<br>
ಪಶು ಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ<br>
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು<br>
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು<br>
ದೆಸೆದೆಸೆಗೆ ಬಾಯ್ಬಿಡುವವಯ್ಯ ಹರಿಯೇ ||

...............................................

ಸಂದು ಹೋದವು ಜ್ಯೇಷ್ಠ ಆಷಾಢ ಶ್ರಾವಣ<br>
ಬಂದಿದೆ ಭಾದ್ರಪದ ಮಾಸವೀಗ<br>
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೋ<br>
ಸಂದೇಹವ್ಯಾಕೆ ಹೆಳವನ ಕಟ್ಟೆಯ ರಂಗ ||

ಅವಳ ಈ ಪ್ರಾರ್ಥನೆಯಿಂದ ಆ ದೇಶಕ್ಕೆ ಸಮೃದ್ಧ ಮಳೆಯಾಗಿ ಬೆಳೆಬಂದು ನಾಡೆಲ್ಲವೂ ಸುಜಲಾ ಸುಫಲಾ ಆಯಿತು.

ಹೀಗೆ ಶ್ರೀ ರಾಘವೇಂದ್ರ, ಸತ್ಯಬೋಧ ಮುಂತಾದ ಯೋಗಿಗಳಂತೆ ತನ್ನ ತಪೋ ಬಲವನ್ನೆಲ್ಲ ಗಿರಿಯಮ್ಮನೂ ಪ್ರಜಾ ಕ್ಷೇಮಕ್ಕೆ ಧಾರೆಯೆರೆದು ಕೊಟ್ಟು ಲೋಕ ಕ್ಷೇಮಾಕಾಂಕ್ಷಿಣಿಯಾದ ತಪೋಯೋಗಿನೀ ಎಂದು ನಾಡಿನಲ್ಲೆಲ್ಲ ಸುಪ್ರಥಿತಳಾಗಿ ದ್ದಾಳೆ.

ಶ್ರೀ ಗೋಪಾಲದಾಸರು ಒಮ್ಮೆ ಮಳೆಬಿನ್ನೂರಿಗೆ ಬಂದಾಗ ಗಿರಿಯಮ್ಮನು ರಂಗವಲ್ಲಿಯಲ್ಲಿ ಚಿತ್ರಿಸಿದ ರಂಗನಾಥನ ಮಂಗಳ ಮೂರ್ತಿಯನ್ನು ಕಂಡು ದಂಗುಪಟ್ಟು ನಿಂತರಂತೆ. ಶ್ರೀ ರಾಘವೇಂದ್ರ ಮಠದ ಶ್ರೀ ಸುಮತೀಂದ್ರ ತೀರ್ಥ ಶ್ರೀಪಾದಂಗಳವರು ಮಳೆಬಿನ್ನೂರಿಗೆ ಬಂದಾಗ ಗಿರಿಯಮ್ಮನ ಹರಿಭಕ್ತಿ ಗುರುಭಕ್ತಿ ಹಾಗೂ ತಪಃಪ್ರಭಾವ ಗಳನ್ನು ಕಂಡು ಕೇಳಿ ಪುಳಕಿತರಾದರಂತೆ. ಶ್ರೀ ಸುಮತೀಂದ್ರತೀರ್ಥ ಶ್ರೀಪಾದಂಗಳವರು ಪೂಜಿಸುತ್ತಿದ್ದ ಸಂಸ್ಥಾನದ ಶ್ರೀ ಸೀತಾರಾಮ ಪ್ರತಿಮೆಗಳನ್ನು ನೋಡಿ ಹೃದಯ ತುಂಬಿದ ಗಿರಿಯಮ್ಮನು ಕಂಠ ತುಂಬಿ ಹಾಡಿದಳು.

ಮದನಕೋಟಿ ಮೋಹನಾಂಗ
ಮಾಧವ ಪುಣ್ಯಚರಿತ ಕರುಣಾಪಾಂಗ
ಹೆಳವನಕಟ್ಟೆ ನಿಲಯ ವೆಂಕಟ ಶ್ರೀರಂಗ
ಸುಮತೀಂದ್ರ ಹೃದಯ ಪಂಕಜ ಭೃಂಗ ಸದಾನಂದ
ಕದನವಿಕ್ರಮಬಾಹು ಕೋದಂಡ ಧೃತ ಸೀತಾರಾಮ
ಶ್ರೀರಘುನಂದನ......................................

ಗಿರಿಯಮ್ಮನು ಶ್ರೀಗಳವರಿಗೆ ತಪ್ತ ಮುದ್ರೆಯನ್ನು ಕೊಡಬೇಕೆಂದು ಬಿನ್ನವಿಸಲು "ಶ್ರೀ ಹರಿಯೇ ಚಕ್ರಾಂಕನ ಮಾಡಿರುವ ನಿನ್ನಂಥವಳಿಗೆ ಚಕ್ರಾಂಕನ ಮಾಡುವ ಅಧಿಕಾರ ನಮಗೆಲ್ಲಿದೆಯಮ್ಮ ?" ಎಂದರಂತೆ ಸುಮತೀಂದ್ರಸ್ವಾಮಿಗಳು ! *

ಒಮ್ಮೆ ರಂಗನಾಥ ದೇವರ ಕೈಯಲ್ಲಿಯ ರತ್ನದ ಉಂಗುರವು ಕಾಣದಾದಾಗ ಪೂಜಾರಿಯ ಮೇಲೆ ಸಂಶಯ ಬಂದಿತು. ನಿರಪರಾಧಿಯಾದ ಪೂಜಾರಿಯು ತನ್ನನ್ನು ಪಾರುಮಾಡಬೇಕೆಂದು ಗಿರಿಯಮ್ಮನನ್ನು ಪ್ರಾರ್ಥಿಸಲು ಅವಳು—

"ಹೊನ್ನು ತಾ ಗುಬ್ಬಿ ಹೊನ್ನು ತಾ ।
ನಮ್ಮ ಚಿನುಮಯ ಮೂರುತಿ ಚೆಲುವ ರಂಗನ ಕೈಗೆ...."

ಎಂದು ಹಾಡನ್ನು ಹಾಡುವಷ್ಟರಲ್ಲಿ ಒಂದು ಗುಬ್ಬಿಯು ಬಾಯಲ್ಲಿ ರಂಗನಾಥನ ಉಂಗುರವನ್ನು ಕಚ್ಚಿ ತಂದು ಅಲ್ಲಿ ಚೆಲ್ಲಿ ಹೋಯಿತಂತೆ.

ಗಿರಿಯಮ್ಮನ ದೇವರ ನಾಮಗಳಲ್ಲಿ ಗಜೇಂದ್ರನ ಮೊರೆಯಿದೆ. ದ್ರೌಪದಿಯ ಕರೆಯಿದೆ. ಧ್ರುವನ ಕರುಣೆಯ ಕೂಗಿದೆ. ಪ್ರಲ್ಹಾದನ-ಆತ್ಮನಿವೇದನೆಯಿದೆ. ನಾರದರ ಭಕ್ತಿಯ ಉದ್ರೇಕವಿದೆ. ಪುಂಡರೀಕನ ಆರ್ತತೆಯಿದೆ. ಆದುದರಿಂದಲೇ ಗಿರಿಯಮ್ಮನು ಕರೆದಾಗೆಲ್ಲ ಕಣ್ಣು ತೆರೆದಿದ್ದಾನೆ. ಕರುಣೆಯ ಕೈವಾರಿಯಾದ ಜಗದೀಶ್ವರ.

ಕುರುಡನಾದ ಪುಂಗನೂರ ರಾಜಕುಮಾರನಿಗೆ ಕಣ್ಣು ಕೊಡು ಎಂದು ಗಿರಿಯಮ್ಮ ಭಗವಂತನಿಗೆ ದೀನಳಾಗಿ ಕೇಳಿಕೊಂಡಳು. "ನಿನ್ನ ಮಹಿಮೆ ಹಿಂದೇನೋ ಬಗೆ-ಬಗೆಯಾಗಿ ಬೆಳಗಿ ಹೋಯಿತಂತೆ; ಇಂದೇಕೆ ಆ ನಿನ್ನ ಮೈಮೆಯನ್ನು ಜಗತ್ತಿಗೆ ತೋರಬಾರದು ? ಉಪಕಾರ ಮಾಡಬಾರದು ?" ಎಂದು ಸಲುಗೆಯ ಸವಾಲನ್ನು ಹಾಕುತ್ತಾಳೆ ಉಚ್ಚ ಶ್ರೇಣಿಯ ಭಕ್ತಮಣಿಯಾದ ಗಿರಿಯಮ್ಮ ಶ್ರೀ ಹರಿಗೇನೇ ಸಾಕ್ಷಾತ್ತಾಗಿ.

* "ಕರ್ನಾಟಕದ ಕವಿಯತ್ರಿಯರು" ಲೇ.– ಡಾ. ಸರೋಜಿನಿ ಮಹಿಷಿ.

ತೋರಬಾರದೇ ನಿಮ್ಮ ಚರಿತೆಯ
ನರರೊಳು ನಗೆಗೇಡು ಮಾಡದೇ ॥
ಕಲ್ಲೊಳು ಕಾಂತೆಯ ಮಾಡಿದವನೆಂ–
ದೆಲ್ಲರು ಜಗದೊಳು ಪೇಳುವರು
ಅಲ್ಲಿ ಮಾಡಿದ ಹಾಗೆ ಇಲ್ಲಿ ತೋರಿಸಿದರೆ
ಬಲ್ಲಿದೆನ್ನೊಡೆಯಾ ದೊಡ್ಡವನೆಂದು ಸಾರುವೆ ॥
ಅಹಹ ಕುಬುಜೆಯಳ ತನುವನೆತ್ತಿ
ಮಹಿಯೊಳು ಯುವತಿಯ ಮಾಡಿದೆಯೆಂಬರು
ಬಹು ಪರಾಕ್ರಮವನ್ನು ಈಗ ತೋರಿಸಿದರೆ
ಅಹುದೋ ಎನ್ನೊಡೆಯ ದೊಡ್ಡವನೆಂದು ಹೊಗಳುವೆ ॥
ನೀನೇ ಗತಿಯೆಂದು ಬಂದ ಭಕ್ತನ ಕ–
ಣ್ಣೋವ ಕಳೆದು ನಿಜವ ತೋರಿಸಯ್ಯ
ದೀನದಯಾಳೊ ಹೆಳವನಕಟ್ಟೆ ರಂಗಯ್ಯ
ದಾನಿ ಎನ್ನೊಡೆಯ ದೊಡ್ಡವನೆಂದು ಹೊಗಳುವೆ

ಹೀಗೆ ದೇವರ ವಿಷಯದಲ್ಲಿ ಜನಮನದಲ್ಲಿ ಮೂಡುವ ಭಾವಗಳಿಗೆಲ್ಲ ಭಾಷೆಯಾಗಿದೆ ಗಿರಿಯಮ್ಮನ ವಾಣಿ. ಭಕ್ತ ಮತ್ತು ಭಗವಂತರ ನಡುವಿನ ಸ್ನೇಹ ಸೇತುವೆಯಂತೆ ನಿಂತುಕೊಂಡು ಪರಸ್ಪರ ಮಧುರ ಮಿಲನದ ಮಂಗಳಾಷ್ಟಕವನ್ನು ಹೇಳುತ್ತಾಳೆ ಅನುಭಾವಿನೀ ಯೋಗಿನಿಯಾದ ಗಿರಿಯಮ್ಮ. ಇಂಥ ಅವಳ ಕರುಣಾಕ್ರಂದನಕ್ಕೆ ದೇವನ ಹೃದಯ ಕರಗದಿದ್ದೀತೇ! ಕೂಡಲೇ ಈ ಅಂಧ ರಾಜಕುಮಾರನಿಗೆ ಅಂದವಾದ ಕಣ್ಣುಗಳು ಬಂದದ್ದರಲ್ಲಿ ಆಚ್ಚರಿಯೇನಿಲ್ಲ.

ಹೀಗೆ ಅನೇಕ ಪವಾಡ, ಪ್ರಭಾವಗಳನ್ನು ತೋರಿಸಿ ಭಗವನ್ಮಾಹಾತ್ಮ್ಯವನ್ನೂ ಭಕ್ತರ ಯೋಗ್ಯತೆಗಳನ್ನೂ ಜಗತ್ತಿನ ಸಿದರ್ಶನಕ್ಕೆ ತಂದುಕೊಟ್ಟ ಗಿರಿಯಮ್ಮನು ದಾಸಸಾಹಿತ್ಯದಲ್ಲಿ ವನಿತಾ ವಿಭಾಗವು ವಿಶಿಷ್ಟ ಮಾನ ಮನ್ನಣೆಯನ್ನು ಪಡೆಯುವಂತೆ ಮಾಡಿದ್ದಾಳೆ.

ಗಿರಿಯಮ್ಮನು ಅನೇಕಾನೇಕ ದೇವರ ನಾಮಗಳನ್ನು ರಚಿಸಿರುವಳಲ್ಲದೇ— "ಚಂದ್ರಹಾಸ ಚರಿತ್ರ", "ಸೀತಾ ಕಲ್ಯಾಣ" ಮುಂತಾದ ಕಾವ್ಯಗಳನ್ನು ಸಾಂಗತ್ಯ ಛಂದದಲ್ಲಿ ರಚಿಸಿದ್ದಾಳೆ. ಮತ್ತು ಬ್ರಹ್ಮ–ಕೊರವಂಜಿ, ಲವ–ಕುಶರ ಕಾಳಗ, ಉದ್ದಾಲಕನ ಹಾಡು, ಶಂಕರ ಗಂಡನ ಕಥೆ, ಕೃಷ್ಣ–ಕೊರವಂಜಿ, ಗಜೇಂದ್ರ ಮೋಕ್ಷ, ಗಿಳಿ–ಪಾರಿಜಾತ ಮುಂತಾದ ಅನೇಕ ಕಥನ ಕಾವ್ಯಗಳನ್ನೂ ನಿರ್ಮಿಸಿದ್ದಾಳೆ.

ಬ್ರಹ್ಮ ಕೊರವಂಜಿಯಲ್ಲಿ— ಕಂಸನ ಬಂದೀಖಾನೆಯಲ್ಲಿದ್ದ ದೇವಕಿಯ ದುಃಖ ವನ್ನು ಕಡಿಮೆ ಮಾಡಲಿಕ್ಕಾಗಿ ಪರಮಾತ್ಮನು ಕೊರವಂಜಿಯ ವೇಷ ತಳೆದು ಕೃಷ್ಣಾವತಾರದ ಕಣಿ ಹೇಳಿ ಕಂಸನ ಮೃತ್ಯುವನ್ನು ಸಾರಿ ಆ ತಾಯಿಯನ್ನು ಸಮಾಧಾನ ಪಡಿಸುತ್ತಾನೆ.

ಗಿರಿಯಮ್ಮನು ಬರೆದ ಲವ-ಕುಶರ ಕಾಳಗದಲ್ಲಿ ಕವಯಿತ್ರಿಯ ಕಲ್ಪನಾಶಕ್ತಿಯು ಗರಿಗೆದರಿ ರಾಮಾಯಣದ ಉತ್ತರ ಕಾಂಡ ಕಥೆಗೆ ಹೊಸ ರೂಪವನ್ನೇ ಕೊಟ್ಟಿದೆ. ಅಗಸನು ಕೊಟ್ಟ ಅಪಶಬ್ದದಿಂದ ರಾಮನು ಸೀತೆಯನ್ನು ಕಾಡಿಗಟ್ಟಿದ ಸನ್ನಿವೇಶ ವನ್ನು ಬದಲಿಸಿ ಅದನ್ನು ಇನ್ನೊಂದು ರೀತಿಯಿಂದ ಹೇಳಲಾಗಿದೆ—

ಒಂದು ದಿನ ಸೀತಾರಾಣಿಯ ಬಳಿಗೆ ಶೂರ್ಪನಖಿಯು ಒಬ್ಬ ಕೊರವಂಜಿಯ ವೇಷದಿಂದ ಬಂದು— "ನಿನ್ನ ಗಂಡ ರಾಮನು ಕೊಂದ ರಾವಣನು ಹೇಗಿದ್ದ? ಅವನದೊಂದು ಚಿತ್ರ ಬರೆ'' ಎಂದು ಹೇಳಿ ಯುಕ್ತಿಯಿಂದ ಬರೆಸುವಳು. ಸೀತೆ ರಾವಣನ ಪಟ ಬರೆದ ಬಳಿಕ ಕೊರವಿಯು "ಇದು ಬಹಳ ಚಂದಾದ ಚಿತ್ರಪಟವಿದೆ. ಇದು ಎಂದಿಗೂ ಅಳಿಯದಂತೆ ವರವ ಕೊಡು" ಎಂದು ಕೇಳಿಕೊಳ್ಳುವಳು.

ಸೀತೆಯ ವರದಂತೆ ಅಮರವಾದ ಆ ರಾವಣನ ಚಿತ್ರವು ಕುಣಿದು ಕುಪ್ಪಳಿಸ ತೊಡಗಿತು. ಬೆಂಕಿಯಲಿ ಸುಡದೇ, ಸಾಗರದಲ್ಲಿ ಮುಳುಗದೇ ಹಾರಾಡುವ ಆ ಪಟ ವನ್ನು ಸೀತೆಯು ಕೊನೆಗೆ ತನ್ನ ಮಂಚವ ಕೆಳಗಿಟ್ಟು ಮಲಗಿಕೊಂಡಳು. ರಾಮ ಬಂದು ಮಂಚದ ಮೇಲೆ ಕುಳಿತುಕೋಂಡಾಗ ಮಂಚ ಮುರಿದು ಕೆಳಗಿದ್ದ ರಾವಣನ ಪಟ ಮೇಲೆದ್ದು ಕುಣಿಯತೊಡಗಿತು.

ಸೀತೆಯ ಮಂಚದ ಬುಡದಲ್ಲಿ ರಾವಣನ ಚಿತ್ರವನ್ನು ಕಂಡು ರಾಮನಿಗೆ ಸಂಶಯ ಬಂದಿತು—

''ಭೂದೇವಿ ಮಗಳೆಂದು ನಾ ತಂದೆನು ನಾಡೊಳಗ ಪತಿವ್ರತೆಯೆಂದು।
ಪ್ರಾಣದೊಲ್ಲಭೆ ನೀನು ಗತಿಯೆಂದು ನಂಬಿದೆ ರಾವಣಗ ಮರುಳಾಗೊದರಿಯೆ॥"

ಎಂದು ನಿಂದಿಸಿ ಅವಳನ್ನು ಕಾಡಿನಲ್ಲಿ ಕೊಂದು ಬರಲು ಲಕ್ಷ್ಮಣನಿಗೆ ಆಜ್ಞಾಪಿಸುವನು.

ಆದರೆ ಲಕ್ಷ್ಮಣನು ಅವಳನ್ನು ಕೊಲ್ಲದೇ ಕಾಡಿನಲ್ಲಿ ವಾಲ್ಮೀಕಿಯ ಆಶ್ರಮದ ಬಳಿಬಿಟ್ಟು ಕೊಂದು ಬಂದೆ ಎಂದು ಹೇಳುವನು. ಆಗ ರಾಮನಿಗೆ ಕೆಡುಕೆನಿಸಿ— "ಸಂತಾಪದ ಭರದಲ್ಲಿ ನಾನು ಹೇಳಿದ ಮಾತನ್ನು ನೀನು ನಡೆಸಿಯೇ ಬಿಡಬೇಕೇ!" ಎಂದು ಗೋಳಾಡುವನು. ಅದಕ್ಕೆ ಲಕ್ಷ್ಮಣನು—

"ಸಿಟ್ಟಿನ ವೇಳೆಗೆ ಮೂಗು ಕೊಯ್ದರೆ ಅಣ್ಣ ಶಾಂತ ವೇಳೆಗೆ ಹತ್ತುವದೇ?" ಎಂದು ಮೂದಲಿಸಿ ನುಡಿಯುವನು.

ಮುಂದೆ ಸೀತೆಯಿಂದ ಜನಿಸಿದ ಲವ-ಕುಶರು ರಾಮನ ಯಜ್ಞಾಶ್ವವನ್ನು ಕಟ್ಟಿ ಹಾಕಿದಾಗ ರಾಮನಿಗೂ, ಅವರಿಗೂ ಯುದ್ಧವಾಗಿ ವಾಲ್ಮೀಕಿ ಮುನಿಗಳು ಆ ತಂದೆ ಮಕ್ಕಳನ್ನೂ ಸೀತೆಯನ್ನೂ ಒಂದು ಗೂಡಿಸುವರು. ಈ ಕಾವ್ಯವು ಅತ್ಯಂತ ಹೃದಯಂಗಮವಾಗಿದೆ.

"ಉದ್ದಾಲಕ ಕಥೆ" ಇದು ಐದು ನೂರು ಪದ್ಯಗಳ ದೀರ್ಘ ಕಾವ್ಯವಾಗಿದ್ದು ಕಲ್ಪನಾ ರಮಣೀಯತೆಯಿಂದ ವಿಶಿಷ್ಟವಾದ ಸೊಬಗುಗಾರಿಕೆಯನ್ನು ಪಡೆದಿದೆ.

ಇದರಂತೆ ಗಿರಿಯಮ್ಮ ಬರೆದ— "ಚಂದ್ರಹಾಸನ ಕತೆ", "ಶಂಕರ ಗಂಡನ ಹಾಡು'', ''ಸೀತಾ-ಕಲ್ಯಾಣ'' ಮುಂತಾದ ಎಲ್ಲ ಕೃತಿಗಳೂ ಒಂದೊಂದು ರಸ ಘಟ್ಟಿಗಳೇ ಆಗಿ ಕಂಗೊಳಿಸುತ್ತವೆ.

ಕನ್ನಡದಲ್ಲಿ ಕನಕದಾಸರ ನಂತರ ದಾಸ ಸಾಹಿತ್ಯ ಹಾಗೂ ಕಾವ್ಯ ಕ್ಷೇತ್ರ ಎರಡರಲ್ಲಿ ಸರಿಯಾಗಿ ಕೃಷಿ ಮಾಡಿ ಕವಿತೆ, ಕೀರ್ತನೆಗಳೆರಡನ್ನೂ ಬರೆದ ಕೆಲವೇ ಕವಿದಾಸರಲ್ಲಿ ಗಿರಿಯಮ್ಮ ಅಗ್ರಣೀ ಆಗಿದ್ದಾಳೆ.

ಹೆಣ್ಣು ಮಕ್ಕಳಲ್ಲಿಯಂತೂ ಹೀಗೆ ಶ್ರೇಷ್ಠ ಕಾವ್ಯ ಕರ್ತ್ರಿಯಾಗಿಯೂ ಅನೇಕ ಕೀರ್ತನೆಗಳ ರಚಯಿತ್ರಿಯೂ ಆದ ಕಲ್ಪನಾ ಕುಶಲ ಕವಿ ಕಾಮಿನಿ ಎಂದರೆ ಪ್ರಾಯಃ ಗಿರಿಯಮ್ಮಳೊಬ್ಬಳೇ ಎಂದು ತೋರುತ್ತದೆ.

## ೨ ಗಲಗಲಿಯ ಅವ್ವನವರು

ಭಕ್ತಿಪರವಾದ ಗೀತಪದ್ಯಗಳು ಮತ್ತು ಪ್ರಮೇಯ ಭಾಗವನ್ನು ತಿಳಿಸುವ ಹಾಡು-ಪಾಡುಗಳನ್ನು ಬರೆದು ಉತ್ತರ ಕರ್ನಾಟಕದಲ್ಲಿ ಸುಪ್ರಸಿದ್ಧಳಾದ ಇನ್ನೊಬ್ಬ ಮಹಿಳೆಯೆಂದರೆ ಗಲಗಲಿಯ ಅವ್ವನವರು.

ದಕ್ಷಿಣ ಭಾರತದಲ್ಲಿ ಮಹರ್ಷಿಗಳ ಮನೆತನವೆಂದು ಪ್ರಸಿದ್ಧವಾದ ಪೂಜ್ಯ ಗಲಗಲಿ ಆಚಾರ್ಯ ವಂಶದ ತಪೋ ವಿಭೂತಿಗಳಾದ ಶ್ರೀ ಮುದ್ಗಲಾಚಾರ್ಯರ ಧರ್ಮ ಪತ್ನಿಯೇ ಈ ಅವ್ವನವರು. ಉತ್ತರಾದಿ ಮಠದ ಶ್ರೀ ಸತ್ಯಧರ್ಮತೀರ್ಥ ಶ್ರೀಗಳವರೂ ಕೂಡ ಅವ್ವನವರ ಪ್ರಮೇಯ ಜ್ಞಾನಕ್ಕೆ :ತಲೆದೂಗಿರಂತೆ. ಅವ್ವನವರಿಗೆ ನ್ಯಾಯ ಶಾಸ್ತ್ರದಲ್ಲಿಯೂ ಅಪ್ರತಿಮ ಪಾಂಡಿತ್ಯವಿದ್ದಿತು.

ಅವರಿಗೆ ಆರುಜನ ದಿಗ್ಗಜ ಪಂಡಿತರಾದ ಮಕ್ಕಳಿದ್ದರು. ಪುಣೆಯ ಪೇಶ್ವೆ ದರ್ಬಾರದಲ್ಲಿ ಸರ್ವಜ್ಞ "ಷಟ್ಕ" ಎಂದು ಪ್ರಸಿದ್ಧರಾದ ಆರೂ ಗಾಲವ ಪಂಡಿತರು ಉತ್ತರ ದೇಶದ ಕಾಶೀ ಪಂಡಿತರೊಡನೆ ತರ್ಕ ಶಾಸ್ತ್ರದಲ್ಲಿ ವಾಕ್ಯಾರ್ಥಕ್ಕೆ ಇಳಿದಾಗ ಯಾವದೋ ಒಂದು ವಿಷಯ ನಿಂತಾಗ ಜನಾನಖಾನಾದಲ್ಲಿ ಕುಳಿತ ಅವ್ವನವರು

ಕೂಡಲೇ ಅದಕ್ಕೆ ಉತ್ತರವನ್ನು ಸೂಚಿಸಿದರಂತೆ. ಅದನ್ನು ನೋಡಿ ಆಶ್ಚರ್ಯ ಚಕಿತರಾದ ಪೇಶ್ವೆಯವರು ಅವ್ವನವರ ಹೆಸರಿನಿಂದಲೇ ವರ್ಷಾಶನ ಹಾಕಿಕೊಟ್ಟರು. ಅದು ಸಂಸ್ಥಾನಗಳ ವಿಲೀನೀಕರಣವಾಗುವ ವರೆಗೆ ಆ ಮನೆತನಕ್ಕೆ ನಡೆಯುತ್ತಿತ್ತು.

ಅವ್ವನವರ ಈ ವಿಚಿತ್ರ ಪಾಂಡಿತ್ಯ ಕೀರ್ತಿ ಕೇಳಿದ ಮೈಸೂರ ಮಹಾರಾಜರು ಅವರನ್ನೂ ಅವರ ಪಂಡಿತ ಪುತ್ರರನ್ನೂ ಮೈಸೂರಿಗೆ ಬರಮಾಡಿಕೊಂಡು ಅವರಿಗೆ ಭೂಮಿ ಕಾಣಿಗಳನ್ನಿತ್ತು ಗೌರವಿಸಿದರು.

ಅವ್ವನವರು— ಮುಯ್ಯದ ಹಾಡು, ಶೃಂಗಾಗ ತಾರತಮ್ಯ, ಮೋರೆಗೆ ನೀರು ತಂದ ಹಾಡುಗಳು ಮುಂತಾದ ಅಧ್ಯಾತ್ಮ ಗೀತ ಕಾವ್ಯಗಳನ್ನು ಬರೆದಿದ್ದಾರೆ.

ಅವ್ವನವರ ಶಿಷ್ಯೆಯೊಬ್ಬಳು ತನ್ನ ಗಂಡನನ್ನು ಅಲಂಕಾರ ಆಭರಣಗಳಿಗಾಗಿ ಬಹಳ ಪೀಡಿಸುತ್ತಿದ್ದಳಂತೆ ಅವಳಿಗೆ ತಿಳುವಳಿಕೆ ಹೇಳಲಿಕ್ಕಾಗಿ ಈ ಶೃಂಗಾರ ತಾರತಮ್ಯ ಎಂಬ ಪ್ರಮೇಯ ಪ್ರಚುರವಾದ ಗೇಯ ಪ್ರಬಂಧವನ್ನು ಅವ್ವನವರು ರಚಿಸಿದರಂತೆ—

ಹರಿಯು ಒಬ್ಬ ಸರ್ವೋತ್ತಮ ತರುವಾಯ ಶ್ರೀ ದೇವಿಯೆಂದು ।
ಪರಮ ಭಕ್ತಿಯಿಂದ ಮುಕ್ತಿ ಕರದೊಳು ಪಿಡಿದವರ ಸಂಗ ಮಾಡೋ ॥
ತಾರತಮ್ಯ ಪದ್ಧತಿಯಿಂದ ಸಾರ ಭೂಷಣವನ್ನಿಟ್ಟ ಬಾಲೇರು ।
ಶ್ರೀ ರಾಮೇಶನ ದಯದಿ ಮುಕ್ತಿಸಾರವನ್ನೆ ಪಡೆದವರ ಸಂಗವ ಮಾಡೋ ॥

ಮುಂತಾದ ಹೆಣ್ಣುಮಕ್ಕಳಿಗೆ ಅವರಿಗೆ ಪ್ರಿಯವಾದ ಆಭರಣ, ಅಲಂಕಾರಗಳ ಮುಖಾಂತರವೇ ದೇವತಾ ತಾರತಮ್ಯದ ತತ್ವವನ್ನೆಲ್ಲ ತಿಳಿಯಾಗಿ ತಿಳಿಸಿಕೊಟ್ಟಿದ್ದಾರೆ. ಇದರಲ್ಲಿ ಶಾಸ್ತ್ರ ಹಾಗೂ ಸಾಹಿತ್ಯ ಎರಡರಲ್ಲಿಯೂ ಅವ್ವನವರ ಪ್ರಭುತ್ವವನ್ನೂ ಮತ್ತು ವೈರಾಗ್ಯ ಭಾವವನ್ನು ಕಾಣಬಹುದು. ಇವರ ಮುಯ್ಯದ ಪದಗಳಲ್ಲಿ ಭಕ್ತಿಯ ಜೊತೆಗೆ ಶೃಂಗಾರ, ಹಾಸ್ಯ, ಕರುಣೆಗಳ ಕಾರಂಜಿಯೂ ಅಲ್ಲಲ್ಲಿ ಪುಟಿದು ಹೊಸದಾದ ಒಂದು ರಸರಂಗವೇ ಏರ್ಪಟ್ಟಂತೆ ತೋರುತ್ತದೆ. ಗಂಗೆ–ಗೌರಿ, ದ್ರೌಪದಿ–ಸುಭದ್ರೆ, ರುಕ್ಮಿಣಿ–ಸತ್ಯಭಾಮೆ ಮುಂತಾದವರ ಮೂದಲಿಕೆಯ ಮಾತುಗಳು ಮಾರ್ಮಿಕವೂ, ಮನರಂಜಕವೂ ಆಗಿವೆ. ಸುಭದ್ರೆ ದ್ರೌಪದಿಗೆ ಹೇಳುವ ಚುಚ್ಚು ಮಾತು—

ಕೆಂಡವ ತುಂಬಿದ ಕುಂಡದಿ ಪುಟ್ಟೀದಿ ಕಂಡ ಜನಕೆಲ್ಲ ಭಯವಾದಿ ।
ಕಂಡ ಜನಕೆಲ್ಲ ಭಯವಾದಿ । ಭೀಮ ನಿನ ಗಂಡ ಎಂಥವನ ಎದೆಗಾರ ॥
ಪಲ್ಯದ ತುದಿಯಿಂದ ಎಲ್ಲ ಪದಾರ್ಥವ ಮಾಡಿ ಬಲ್ಲಿದ ಮುನಿಗೆ ಉಣಿಸೀದಿ ।
ಬಲ್ಲೀದ ಮುನಿಗೆ ಉಣಿಸೀದಿ । ಇಂದ್ರಜಾಲ ಬಲ್ಲವಳಿಗೆಂಥ ಭಯವುಂಟು ॥

ಪ್ರಬಲ ಹೆಂಡಂದಿರಾದ ರುಕ್ಮಿಣೀ ಸತ್ಯಭಾಮೆಯರ ನಡುವೆ ತನ್ನ ಅಣ್ಣ ಕೃಷ್ಣಯ್ಯನ ಪಾಡು ಏನಾಯಿತೆಂಬುವದು ದ್ರೌಪದಿಯ ಮಾತಿನಲ್ಲಿ ಮಾರ್ಮಿಕವಾಗಿ ಮೂಡಿ ಬಂದಿದೆ. ಆದರಲ್ಲಿ ಈ ಮೂದಲಿಕೆಯ ನೆವದಿಂದ ಕೊನೆಗೆ ವ್ಯಕ್ತವಾಗುವದು ಶ್ರೀ ಕೃಷ್ಣನ ಅಚಿಂತ್ಯಾದ್ಭುತವಾದ ಮಹಾ ಮಹಿಮೆಯೇ. ಅವರ ಈ ಕೃತಕ ಕಲಹಗಳೆಲ್ಲ ಹರಿಯ ಚರಿತ್ರ ಹಾಗೂ ದಿವ್ಯ ಲೀಲಾ ವಿಭೂತಿಗಳನ್ನು ಬಗೆ-ಬಗೆ ಯಿಂದ ಸ್ಮರಣಕ್ಕೆ ತಂದುಕೊಳ್ಳಲಿಕ್ಕೆ ಹಾಗೂ ಅದರಿಂದ ಮತ್ತೆ ಅವನಲ್ಲಿ ಹೆಚ್ಚಿನ ಭಕ್ತಿಮಾಡಲಿಕ್ಕೆ ಆ ದೇವ ಚರಿತೆಯ ನೆನಪಿಗೊಂದು ಮೀಟಗೋಲಾಗುತ್ತವೆ ಅಷ್ಟೇ.

"ನಾರೇರಿಬ್ಬರ ಬಿಟ್ಟು ನೀರೊಳಡಗಿದಾ ಮೋರೆ ತೋರದಲೆ ನೆಲವನ್ಸಖಿಯೇ।
ಮೋರೇ ತೋರದಲೇ ನೆಲವ ಬಗೆದು ಅತಿ ಕ್ರೂರನಾದರೂ ಬಿಡಿರಲೆ ಸಖಿಯೇ।
ತಿರಕತಾಯಿ ಸುದ್ದಿ ಅರಿತವನಲ್ಲವೆ ದೊರೆತನವ ಬಿಟ್ಟು ದನವನ್ಸೆ ಸಖಿಯೇ।
ದೊರೆತನ ಬಿಟ್ಟು ದನವ ಕಾಯಿದಾರು ನಿಮ್ಮ ಕರಿಕರಿ ಒಂದು ಬಿಡರೆಲ್ಲಾ ಸಖಿಯೇ।
ಮುದ್ದು ರಾಮೇಶಗೆ ಕದ್ದು ಓಲೆಯ ಬರೆಯೆ ಹದ್ದು ವಾಹನನು ಎರಗಿದಾ ಸಖಿಯೇ।
ಹದ್ದು ವಾಹನನು ಎರಗೀದ ಕಾರಣ ವಿದ್ವಜ್ಜನರೆಲ್ಲ ನಮಿಸೂತ ಸಖಿಯೆ॥

ಅವ್ವನವರ ಕಾವ್ಯದಲ್ಲಿ ನವರಸಗಳೆಲ್ಲ ಉಕ್ಕೇರಿ ಹರಿಯುತ್ತಿದ್ದರೂ ಅವೆಲ್ಲವೂ ಭಕ್ತಿಯ ಭಟ್ಟಿಯಲ್ಲಿ ಪಾವನತೆಯ ಪುಟಗೊಂಡೇ ಬರುತ್ತವೆ. ಉಪಮೆ, ಉತ್ಪ್ರೇಕ್ಷೆ, ಅಲಂಕಾರ, ವಕ್ರೋಕ್ತಿ, ವ್ಯಾಜೋಕ್ತಿ ಎಲ್ಲವೂ ಅವ್ವನವರ ಕಾವ್ಯದಲ್ಲಿ ನೀತಿ ಬೋಧಕವಾಗಿ ಹರಿ ಪ್ರೀತಿ ಕಾರಣವಾಗಿಯೇ ಬೆಳಗುತ್ತವೆ. ಸಜ್ಜನ ಸಹವಾಸದ ಮಹಿಮೆಯನ್ನು ಪಾಮರರಿಗೂ ತಿಳಿಸುವ ಅವರ ಸರಳ ಸರಸ ದೃಷ್ಟಾಂತ ಪ್ರದರ್ಶನದ ಸುಂದರ ಪದ್ಧತಿಯ ಒಂದು ಮಾದರಿ—

ಭಾವಜ್ಞರ ಸಂಗ ಶಾವಿಗೆ ಉಂಡಂತೆ ಭಾವವರಿಯದಾ ಪಾಮರರ।
ಭಾವವರಿಯದಾ ಪಾಮರರ ಸಹವಾಸ ಬೇವಿನ ಹಾಲು ಕುಡಿದಂತೆ॥

ಅವ್ವನವರು ಶೂರ್ಪಾಲಿಯಿಂದ ಒಲಿದು ಬಂದ ಗಲಗಲಿ ಕ್ಷೇತ್ರದ ನರಸಿಂಹ ದೇವರ ಉಪಾಸಕರು. ಅವರ ಅಂಕಿತ— "ರಾಮೇಶ" ಎಂದು.

ಲಕ್ಷ್ಮೀರಮಣನೆ ಪಕ್ಷಿವಾಹನ ಸ್ವಾಮಿ ಕುಕ್ಷಿಲೆ ಜಗವ ಸಲಹುವಿ।
ಕುಕ್ಷೀಲೆ ಜಗವ ಸಲಹುವಿ ಶೂರ್ಪಾಲಿ ವೃಕ್ಷರಾಜನ ಬಲ ಗೊಂಬೆ॥
ಗಲಗಲಿ ನರಸಿಂಹ ಬಲು ದಯವಂತನು ಸುಲಭಾದಿ ವರವ ಕೊಡುವನಾ।
ಸುಲಭಾದಿ ವರವ ಕೊಡುವ ರಾಮೇಶನ ಚೆಲುವ ಮೂರುತಿಯ ಬಲಗೊಂಬೆ॥

ಉತ್ತರ ಕನ್ನಡದ ಹೆಂಗಳೆಯರು ಅವ್ವನವರ ಪದ್ಯಗಳನ್ನು ಸಪ್ತಾಹ ಕ್ರಮ ದಲ್ಲಿ ಹೇಳುವ ಸಂಪ್ರದಾಯ ಈಗಲೂ ಉಂಟು.

# ೩ ಪ್ರಯಾಗವ್ವ

ಪರಮ ಭಗವದ್ಭಕ್ತೆಯೂ ಪ್ರಮೇಯ ವಿಜ್ಞಳೂ ಆದ ಪ್ರಯಾಗಬಾಯಿಯ ಹೆಸರನ್ನು ಯಾರೂ ಕೇಳಿರಲಿಕ್ಕಿಲ್ಲ. ಆದರೆ ನಾವು ಇಲ್ಲಿ ಉಲ್ಲೇಖಿಸಿದ ಈ ಮಾಧ್ವ ಮಹಿಳೆಯು ಕಥಾ ಪ್ರಧಾನವಾದ ಪುರಾಣ ವಸ್ತುಗಳನ್ನು ಆಯ್ದುಕೊಂಡು ಅದರಲ್ಲಿ ಹರಿಭಕ್ತಿ ರಸವನ್ನು ತುಂಬಿ ಕಾವ್ಯ ಕುಶಲಗಳನ್ನಾಗಿ ಮಾಡಿ ಮೆರೆದಿದ್ದಾಳೆ. ಆದರೆ ಪ್ರಯಾಗವ್ವ ಬರೀ ಕವಿಯಲ್ಲ, ಮಹಾ ತತ್ವಜ್ಞಾನಿಯಾದ ವೇದಾಂತವಿದುಷಿ.

ಇವಳು ಗಲಗಲಿ ಅವ್ವನವರು ಶಿಷ್ಯಳು. ಮಾಧ್ವ ತತ್ವಜ್ಞಾನದ ಬೋಧನ ಪ್ರಧಾನವಾದ 'ಶೃಂಗಾರ ತಾರತಮ್ಯ' ಮುಂತಾದ ಅವ್ವನವರ ಸತ್ಕೃತಿಗಳಿಂದ ಸ್ಫೂರ್ತಿ ಪಡೆದು ಇವಳೂ ಕೃತಿ ರಚನೆಗೆ ಕೈ ಹಾಕಿದಳು. ಅವ್ವನವರ ಹಿಂದೆ ಇದ್ದು ಅವರು ಆಗಾಗ ಹೇಳುವ ಹಾಡುವ ಪದಗಳನ್ನು ಬರೆದುಕೊಂಡು ತಾನೂ ಹಾಡುವದೇ ಅವಳ ಮುಖ್ಯ ಕೆಲಸವಾಗಿದ್ದಿತು.

ಅವ್ವನವರು ಕಾಶೀ ಯಾತ್ರೆಗೆ ಹೊರಟಾಗ ಅವರ ಜೊತೆಗೆ ಹೊರಟ ನೂರಾರು ಜನ ಶಿಷ್ಯರಲ್ಲಿ ಪ್ರಯಾಗವ್ವನೂ ಇದ್ದಳು. ಕಾಶಿಯಲ್ಲಿದ್ದಾಗ ಪ್ರಯಾಗವ್ವನಿಗೆ ವಾಂತಿ ಭ್ರಾಂತಿ ಸುರುವಾಗಿ ಕಾಲರಾ ಬಂದಿತು. ಆಗ ಅವಳು ಅವ್ವನವರ ಪಾದದ ಮೇಲೆ ತಲೆ ಇಟ್ಟು ತನ್ನನ್ನು ಈ ಮೃತ್ಯು ಸಂಕಟದಿಂದ ಪಾರುಮಾಡಬೇಕೆಂದು ಬೇಡಿಕೊಂಡಳು. ಆಗ ಅವ್ವನವರು ಅವಳಿಗೆ ಭಾಗವತ ತೃತಿಯ ಸ್ಕಂದವನ್ನು ಕನ್ನಡ ಪದ್ಯದಲ್ಲಿ ಭಾಷಾಂತರಿಸಲಿಕ್ಕೆ ಹೇಳಿದರು.

ಅದರಂತೆ ಪ್ರಯಾಗವ್ವನು ಸಂಕಲ್ಪ ಮಾಡಿದಾಗ ಅವಳ ಕಾಲರಾ ರೋಗವು ಕಡಿಮೆಯಾಯಿತು.

ಆದರೆ ಭಾಗವತದಂಥ ಕಠಿಣ ಪುರಾಣ, ಅದರಲ್ಲಿಯೂ ಪ್ರಮೇಯ ಜಾಲ ಜಟಿಲವಾದ ತೃತಿಯ ಸ್ಕಂದವನ್ನು ಕನ್ನಡಿಸುವದು ಹೇಗೆ! ಪ್ರಯಾಗವ್ವನು ಹಾಗೆ ಅಪ್ಪಣೆ ಮಾಡಿದ ಅವ್ವನವರಿಗೆ ಶರಣು ಹೋದಳು. ಆಗ ಅವ್ವನವರು ಅವಳಿಗೆ ತೃತಿಯ ಸ್ಕಂದದ ತತ್ವಗಳ ತಿರುಳನ್ನೂ ಪ್ರಮೇಯ ಭಾಗಗಳ ವಿವರವನ್ನೂ ಸರಳವಾಗಿ ತಿಳಿಸಿ ಕೊಟ್ಟು ಇದನ್ನು ಕನ್ನಡಿಸು ಎಂದು ಹೇಳಿದರು. ವಿಜಯಧ್ವಜೀಯ ಟೀಕೆಗೆ ಅನುಗುಣವಾಗಿ ಸಮಗ್ರ ತೃತಿಯ ಸ್ಕಂದವನ್ನು ಸರಸ ಸುಂದರವಾಗಿ ಕನ್ನಡ ಪದ್ಯ ಬದ್ಧವಾಗಿ ಮಾಡಿದ ಪ್ರಯಾಗವ್ವನ ಜಾಣ್ಮೆ ನೈಪುಣ್ಯಗಳು ಅಸಾಧಾರಣವಾಗಿವೆ.

ಈ ಗ್ರಂಥದ ಪ್ರಾರಂಭದಲ್ಲಿ ಕವಯಿತ್ರಿಯು ತನ್ನ ಗುರುಗಳಾದ ಗಲಗಲಿ ಮನೆತನದ ಕುಲದೇವರಾದ ಪುಂಡಲೀಕವರದ ಪಾಂಡುರಂಗ ವಿಠ್ಠಲನನ್ನೇ ಭಕ್ತಿಯಿಂದ ವಂದಿಸಿ ಹರಿಗುರು ಭಕ್ತಿಯನ್ನು ಮೆರೆದಿರುವಳು.

"ಪುಂಡರೀಕನ ಪ್ರಭು, ಪಾಂಡುರಂಗನ ಪಾದ ಕಂಡು ವಂದನೆಯ ಮಾಡುವೆನು।
ದಂಡಿಸಿ ದೇಹವ ತಾಂಡವ ಕೃಷ್ಣನ ಕೊಂಡಾಡಿ ಪದವ ಹೇಳುವೆನು ||"

ಗಲಗಲಿ ಆಚಾರ್ಯರಂಥ ಅಪರೋಕ್ಷ ಜ್ಞಾನಿಗಳ ಪತ್ನಿಯ ಸಹವಾಸ ತನಗೆ ದೊರೆತಿದ್ದು ತನ್ನ ಏಸು ಜನ್ಮದ ಭಾಗ್ಯವೋ ಏನೋ ಎಂದು ಅವ್ವನವರಿಗೆ ಈ ಗ್ರಂಥ ಪ್ರಾರಂಭದಲ್ಲಿ ಗ್ರಂಥ ಕರ್ತಳು ಕೃತಜ್ಞತೆಯನ್ನು ಸಲ್ಲಿಸಿದ್ದಾಳೆ.

"ಏಸು ಜನ್ಮದ ಪುಣ್ಯವಾಸವಾಯಿತೋ ವಿಷ್ಣು ದಾಸರ ದಾಸಿ ನಾನಾದೆ ।
ಈ ಸಂಸಾರ ಕ್ಲೇಶವ ಕಳೆದು ಸುವಾಸನೆಯ ಕೊಡು ಗುರುರಾಜ ||"

ಇಂಥ ವಿಷ್ಣುದಾಸರ ಮನೆಯ ದಾಸಿಯಾಗಿದ್ದೊಂದು ತನ್ನ ದೊಡ್ಡ ಭಾಗ್ಯ ಎಂದು ಪ್ರಯಾಗವ್ವ ಅಭಿಮಾನದಿಂದ ಹೇಳಿಕೊಂಡಿದ್ದಾಳೆ.

ಭಾಗವತದ ಹನ್ನೆರಡು ಸ್ಕಂದಗಳಲ್ಲಿ ಹೆಚ್ಚಾಗಿ ಮೂರನೆಯ ಸ್ಕಂದದಲ್ಲಿ ಬರೀ ವೇದಾಂತ ವಿಷಯವೇ ತುಂಬಿದೆ. ಕಥಾ ಪ್ರಚುರವಾದ ೮-೯-೧೦ ನೇ ಸ್ಕಂದಗಳನ್ನು ಬಿಟ್ಟು ಸೃಷ್ಟಿ ಪ್ರಕ್ರಿಯೆ, ಸಾಂಖ್ಯತತ್ವ, ಧರ್ಮ ಸೂಕ್ಷ್ಮ, ಕರ್ಮಮೀಮಾಂಸಾ ಮುಂತಾದ ಕ್ಲಿಷ್ಟ ವಿಷಯಗಳನ್ನು ವಿವರಿಸುವ ತೃತಿಯ ಸ್ಕಂದವನ್ನೇ ಆಯ್ದು ಅತ್ಯಂತ ಸಮರ್ಥ ರೀತಿಯಿಂದ ಕನ್ನಡಿಸಿ ಅದರಲ್ಲಿ ಭಾಗವತ ತಾತ್ಪರ್ಯ, ವಿಜಯಧ್ವಜೀಯ, ಯಾದುಪತ್ಯ ಮುಂತಾದ ಟೀಕಾ ಟಿಪ್ಪಣಿಗಳಿಗೆ ಅನುಗುಣವಾಗಿಯೇ ತತ್ವಾರ್ಥಗಳನ್ನು ನಿರೂಪಿಸಿದ ಪ್ರಯಾಗವ್ವನು ವೇದಾಂತ ವಾಙ್ಮಯಕ್ಕೆ ಅದರಲ್ಲಿಯೂ ಮಾಧ್ವ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯು ಅಪೂರ್ವವೂ ಅಭಿನಂದನೀಯವೂ ಆಗಿದೆ.

ಗಹನಗೂಢವಾದ ತತ್ವಗಳಿಂದ ತುಂಬಿದ ಈ ತೃತಿಯ ಸ್ಕಂದದ ಕನ್ನಡೀಕರಣ ಶಕ್ತಿಯನ್ನು ತನಗೆ ಕೊಡು ಎಂದು ಮೊದಲು ಸಾಂಪ್ರದಾಯಿಕವಾಗಿ ಗಣಪತಿಯನ್ನು ಸ್ತುತಿಸಿ, ಕೊನೆಗೆ ನಿಜವಾದ ವಿಘ್ನಹರ್ತಾಸ್ವಾಮಿ ಶ್ರೀ ಹರಿಯೇ ಎಂದು ಶ್ರೀವಿಷ್ಣುವಿಗೇ ಶರಣು ಹೋಗಿ ತನ್ನ ಕಾಮಿತವಾದ ಗ್ರಂಥ ಪೂರ್ತಿಯು ರಾಮನ ದಯೆಯಿಂದಲೇ ಸಾಧ್ಯ ಎಂಬುದನ್ನು ತಾರತಮ್ಯಕ್ರಮ ತಿಳಿದ ಪ್ರಯಾಗವ್ವ ಪ್ರಾರಂಭದಲ್ಲಿಯೇ ತಿಳಿಸಿದ್ದಾಳೆ. ಇದರಿಂದಲೇ ಆವಳ ಅಚ್ಚ ವೈಷ್ಣವ ಸಿದ್ಧಾಂತದ ನಿಚ್ಚಳ ಜ್ಞಾನ ಎಷ್ಟು ಪ್ರಖರವಾಗಿದ್ದಿತೆಂಬುದು ಸ್ಪಷ್ಟವಾಗುತ್ತದೆ.

"ತೃತಿಯ ಸ್ಕಂದದಲ್ಲಿ ರತಿಯಿಟ್ಟು ಮನದಲ್ಲೆ ಯತಿ
ಮುನಿರಾಯನಿಗೊಂದಿಸುವೆ ಅತಿ ಭಕ್ತಿಯಿಂದಲೆ
ಮತಿಬೇಡಿ ಪಾರ್ವತಿ ಸುತಗೆ ವಂದನೆಯ ಮಾಡುವೆನು
ಸ್ವಾಮಿ ಗುರುಗಳ ಪಾದ ನೇಮದಿ ಭಜಿಸುವೆ"

ಸ್ತೋಮ ಮುಖಿಯ ಪತಿಯಾದ ರಾಮ ನಾಮವ ।
ಪ್ರೇಮದಿಂದಲಿ ಪಾಡಿ ಕಾಮಿತ ಫಲವ ಐದುವೆನು ॥

ದುರ್ಯೋಧನನ ದುಷ್ಟ ಮಾತುಗಳಿಂದ ನೊಂದ ವಿದುರನು ತೀರ್ಥ ಯಾತ್ರೆಗೆ ಹೊರಟು ದಾರಿಯಲ್ಲಿ ಉದ್ಧವನ ಆದೇಶದ ಮೇರೆಗೆ ಮೈತ್ರೇಯರ ಬಳಿಗೆ ಬಂದು "ಸೃಷ್ಟಿಸ್ಥಿತಿಲಯದಷ್ಟು ವಿಸ್ತಾರಗಟ್ಯಾಗಿ ವಿಮರ ಕೇಳಿದನು."

ಆಗ ಸಾಕ್ಷಾದ್ಭಗವಂತನ ಬಾಯಿಯಿಂದಲೇ ಕೇಳಿ ತತ್ವಜ್ಞಾನದ ತಿರುಳನ್ನೆಲ್ಲ ತಿಳಿಯಾಗಿ ತಿಳಿದ ವಿಮಲಜ್ಞಾನಿ ಮೈತ್ರೇಯರು ವಿದುರನಿಗೆ ಶ್ರೀ ಹರಿಯ ಮಹಾ ಮಹಿಮಾ ರೂಪವಾದ ಸೃಷ್ಟಿ ಸ್ಥಿತಿಲಯಾದಿಗಳನ್ನು ನಿರೂಪಿಸಲು ಪ್ರಾರಂಭಿಸುತ್ತಾರೆ.

"ಸುತ ಬ್ರಹ್ಮರಾಯಗ ಶತವರುಷ ಮುಗಿಯಲು ಅತಿಶಯ ಜಲವು ತುಂಬಿದವು ।
ಇತರ ದೇವತೆಗಳು ಮತಿಭ್ರಾಂತರಾಗಿ ಶ್ರೀಪತಿ ನೀನೆ ಗತಿ ನಮಗೆನಲು ॥
ಆಲದೆಲೆಯಮ್ಯಾಲೆ ನೀಲ ಮೇಘಸ್ವಾಮಿ ಬಾಲನಾಗಿ ಮಲಗಿರಲು
ಲೋಲಾಕ್ಷನ ಮಹಿಮೆ- ಮಹಾಲಕ್ಷ್ಮಿ ತಾ ತಿಳಿದು
ಮೇಲಾಗಿ ಸ್ತೋತ್ರ ಮಾಡಿದಳು ಆಮ್ನಾಯಣಿ ಸೂಕ್ತದಲೆ
ಅಂಬುಜನಾಭನ್ನ ನಂಬಿ ಸ್ತೋತ್ರವನೆ ಮಾಡಿದಳು ರಮೆಯು
ಸ್ತುತಿ ಕೇಳಿ ಅಂಬುದಿಂದಲೆ ಎದ್ದು ಕಂಬು ಕಂಧರ ಬಂದನಾಗ
ಅನಿರುದ್ಧ ಪ್ರದ್ಯುಮ್ನ ಘನಸಂಕರಷಣ ಸನಕಾದಿಪತಿ ವಾಸುದೇವ
ಕನಿಕಿ ಮಾಯಾ ಜಯ ಕೃತು ಶಾಂತದೇವಿಯರು ಅನುಕೂಲವಾಗಿ ಪುಟ್ಟಿದರು"

ಹೀಗೆ ವೇದಾಂತ ಮೀಮಾಂಸಾ ಶಾಸ್ತ್ರಗಳ ಕಠಿಣ ವಿಷಯಗಳನ್ನೂ ನೀರು ನೀರಾಗಿ ಹಿಂಜಿ ಹಿಗ್ಗಿಸಿ ಮನಂಬುಗುವ ರೀತಿಯಲ್ಲಿ ಹೇಳುವ ಹದ ಹವಣು ಪ್ರಯಾಗ ಬಾಯಿಯಂತೆ ಬೇರಾರಿಗೂ ಸಾಧಿಸಿದಂತೆ ಕಂಡು ಬರುವದಿಲ್ಲ.

ಇಂಥ ರೂಕ್ಷ ವಿಷಯದಲ್ಲಿ ತನ್ನ ವಾಣಿಯನ್ನು ಓಡಿಸಿದ್ದರೂ ಪ್ರಯಾಗವ್ವನ ಕಾವ್ಯದ ಝರಿ ಬತ್ತಿಲ್ಲ. ಪ್ರಸಂಗ ಬಂದಾಗ ಆವಳ ಸರಸ ಕವಿತ್ವವು ರಸಕಾರಂಜಿಯನ್ನು ಚಿಮ್ಮಿಸದೆ ಬಿಟ್ಟಿಲ್ಲ. ಕರ್ದಮ ದೇವಹೂತಿಯರ ವಿವಾಹ, ತದನಂತರದ ಪ್ರಣಯ ವಿಲಾಸ, ಸರಸ ಸಂಭಾಷಣೆಯ ಪ್ರಸಂಗಗಳನ್ನು ಶೃಂಗಾರ ತರಂಗಿತವಾದ ಸುಮಧುರ ಶೈಲಿಯಲ್ಲಿ ಕವಯಿತ್ರಿಯು ಚಿತ್ತರಿಸುತ್ತಾಳೆ.

"ಬಂದ ಸ್ವಯಂಭುಮನುಮಂದಿರದೊಳಗಿದ್ದ ಛಂದುಳ್ಳ ಋಷಿಯ ನೋಡಿದನು ।
ವಂದಿಸಿ ಚರಣಕೆ ಹೊಂದಿಸಿ ದೇವಹೂತಿ ಆನಂದದಲಿ ವಿವಾಹ ಮಾಡಿದನ" ॥

ಮದುವೆಯಲ್ಲಿ ನಡೆದ ಭೋಜನದ ಸಂಭ್ರಮ, ಭಕ್ಷ್ಯ ಭೋಜ್ಯಗಳ ಬಣ್ಣನೆ, ಕೇಳಿದರೆ ಈಗೀನ ರೀತನ್ನ ಕಾಲದ ಯಾರಾದರೂ ನಾಲಿಗೆ ಚಪ್ಪರಿಸಬಹುದು.

"ಸಂಡಿಗೆ ಹಪ್ಪಳ ಮಂಡಿಗೆ ಗುಳ್ಳೋರಿಗಿ ದಿಂಡುಸೂರಣೆ ಬಡಿಸುವರು.
ಬೆಂಡೀಕಾಯಿ ಶಾಖಸಂಡಗಿ ಹುಳಿಶಾಖ ಗಂಡಸರು ಭೂಮ ಬಡಿಸಿದರು.''

ಉರುಟಣೆ, ಭೂಮದ ಹಾಡು, ಹಸೆಕರೆದ ಪದಗಳಲ್ಲಿ ಮಧುರಸ ಹೊಸ ರೀತಿಯಿಂದಲೆ, ಹರಿದು ಎಲ್ಲೆಡೆಗೂ ಹೌಸು ಹುಮ್ಮಸುಗಳ ಸೌರಭ ಬೀಸಿ ಬಂದಂತೆನಿಸುತ್ತದೆ.

ಮುಂದೆ ದೇವಹೂತಿಯ ಪರಿ ಪರಿ ಸೇವೆಗೆ ಮೆಚ್ಚಿದ ಕರ್ದಮ ಋಷಿಯು ಒಲಿದು ವರ ಬೇಡೆಂದಾಗ ಆ ರಸಿಕಋಷಿ ರಮಣಿಯು "ವಸುಧಾಧಿಪತಿಪುತ್ರಿ ಹೊಸದಾಗಿ ನುಡಿದಳು ಹಸನಾದ ಮೋಕ್ಷ ಹಾಂಗಿರಲೆ । ಕುಸುಮನಾಭ ನೀವು ದಶದಿಕ್ಕಿನಲ್ಲೆ ಸೆವೊ ಮಂದಿರ ಮಾಡೆನ್ನಲು ॥

ಇಲ್ಲಿ ಸಂದರ್ಭೋಚಿತವಾಗಿ ತಕ್ಕ ಪದ ಪ್ರಯೋಗ ಮಾಡುವ ಈ ಕವಿಕಾಮಿನಿಯ ಶಬ್ದಶಕ್ತಿ ಜ್ಞಾನದ ಅಗಾಧತೆಯನ್ನು ಕಾಣಬಹುದು. ತಮ್ಮ ವಿಹಾರಕ್ಕಾಗಿ ಭವ್ಯ ಅರಮನೆ ದಿವ್ಯ ವಸ್ತ್ರಾಭರಣಗಳನ್ನೂ ಅನೇಕ ದಾಸ–ದಾಸಿಯರು ಚಂದನ ಗಂಧ, ಕುಸುಮ ಹಾರ, ಹೂವಿನ ಹಾಸಿಗೆ ಮುಂತಾದ ವಿವಿಧ ವಿಲಾಸಿ ವಸ್ತುಗಳನ್ನೂ ಬೇಡುವ ದೇವಹೂತಿಗೆ ಕವಯಿತ್ರಿ 'ವಸುಧಾಧಿಪತಿಪುತ್ರಿ' ಎಂಬ ಹೇತುಗರ್ಭ ವಿಶೇಷಣವನ್ನುಕೊಟ್ಟು ವಿಶೇಷಾರ್ಥವೊಂದು ಧ್ವನಿತವಾಗುವಂತೆ ಮಾಡಿದ್ದಾಳೆ. "ದೇವಹೂತಿ ಬಡ ಬ್ರಾಹ್ಮಣನ ಮಗಳಾದ ಬರೀ ವೈದಿಕ ಮುತ್ತೈದೆಯಲ್ಲ. ಅವಳು ಮೊದಲು ವಿಶ್ವ ಸಮ್ರಾಟನ ಮಗಳು. ಅವಳಿಗೆ ರಾಜಭೋಗದ ಅನುಭವವಿದೆ. ಆದುದರಿಂದಲೇ ಗುಡಿಸಲದ ಗೃಹಸ್ಥರಿಗೆ ಕಲ್ಪನೆಕೂಡ ಇಲ್ಲದ ವಿಲಾಸ ಸಾಮಗ್ರಿಗಳನ್ನು ಸಿದ್ಧಪಡಿಸಲು ಸಿದ್ಧತಾಪಸರಾದ ಕರ್ದಮ ಮುನಿಗಳಿಗೆ ಬಿನ್ನವಿಸಿದಳು'' ಎಂದು ಸೂಚ್ಯವಾಗಿ ಈ 'ವಸುಧಾಧಿಪತಿಪುತ್ರಿ' ಎಂಬ ವಿಶೇಷಣದಿಂದ ಕಾಣಿಸಿದ್ದಾಳೆ. ಮತ್ತು ಅದೇ ಪದ್ಯದಲ್ಲಿ 'ಹೊಸದಾಗಿ' ನುಡಿದಳು ಎನ್ನುವದರಿಂದ ದೇವಹೂತಿಯು ಸಾಮಾನ್ಯ ನಾರಿಯಂತೆ ಬರೀ ವಿಲಾಸಪ್ರಿಯಳಾಗಿದ್ದಿಲ್ಲ. ಅಂತೆಯೇ ಅವಳು ಹಿಂದೆಂದೂ ಇಂಥ ಕಾಮನೆಯನ್ನು ಮಾಡಿದ್ದಿಲ್ಲ. ಇಂದು ಒಂದು ಸಲ ತಮ್ಮ ಇಡೀ ಆಯುಷ್ಯದಲ್ಲಿಯೇ ಒಂದು ಸಾರಿ ಅವರು ಲೌಕಿಕ ವಿಷಯ ಸುಖಕ್ಕೆ ಇಳಿಯುವವರಿದ್ದರು. ಆದುದರಿಂದಲೇ ಅವಳು ಆ ನಿಮಿಷ ರಸನಿಮಿಷವಾಗಲಿ ಎಂದು ಅಂದು ಅದಕ್ಕೆ ಬೇಕಾದ ಸುಖೋಪಭೋಗ ಸಾಮಗ್ರಿಗಳನ್ನೆಲ್ಲ ಅದೇ ಮೊದಲುಬಾರಿ ಅಪೇಕ್ಷಿಸಿದ್ದು ಎಂಬುದನ್ನು 'ಹೊಸದಾಗಿ' ಎಂಬ ಶಬ್ದದಿಂದ ಸೂಚಿಸಿ ದೇವಹೂತಿಯ ವೈರಾಗ್ಯ ಹಾಗೂ ವಿಷಯ ಸುಖ ವಿಮುಖ ಪ್ರವೃತ್ತಿಗಳನ್ನು ಎತ್ತಿ ತೋರಿಸಿದ್ದಾಳೆ.

ಎಂತಲೇ ಅವಳು ತನ್ನ ಪತಿಗೆ ರಾಜಮಹಾರಾಜನಾಗಿ ಸಿರಿಸಂಪದಗಳಿಂದ ಮೆರೆಯುವ ಮಗನನ್ನು ಕೊಡು ಎಂದು ಕೇಳದೆ "ಇತರ ವಿಷಯ ಬಿಟ್ಟು ಗತಿ ಮೋಕ್ಷ ನೀಡುವಂಥ ಸುತನ ಕೊಡೆಂದು ಕೇಳಿದಳು।"

ಅವಳ ಅಪೇಕ್ಷೆಯಂತೆ ಅಷ್ಟ ಮಹಾ ಸಿದ್ಧಿಗಳನ್ನೆಲ್ಲ ಸ್ವಾಧೀನಪಡಿಸಿಕೊಂಡ ಕರ್ದಮರು ದಿವ್ಯಮಂದಿರ, ವಿಹಾರ ವಿಮಾನ, ವಿಲಾಸ ಸಾಮಗ್ರಿಗಳನ್ನೆಲ್ಲ ತಪೋ ಬಲದಿಂದ ನಿರ್ಮಿಸಿ ರಾಜಪುತ್ರಿಯಾದ ದೇವಹೂತಿಯ ಕಾಮನೆಗಳನ್ನೆಲ್ಲ ಪೂರೈಯಿಸಿ ಸಂತವಿಸಿ ಅವಳಿಗೆ—

''ಮನು ಪುತ್ರಿ ನೀ ಕೇಳು ಮನದಲ್ಲಿ ಖೇದವು ಬೇಡ
ವನಜಲೋಚನೆ ನಿನ್ನುದರದಲಿ ।
ಜನಿಸುವಾಗಲೇ ಘನ ಮಹಿಮ ಕೃಷ್ಣನು ।
ಮನಿಸಿನಿಂದಾತನ ಭಜಿಸು ॥

ಎಂದು ಹೇಳಿದರು. ಅದರಂತೆ ಕಪಿಲಾವತಾರವಾಯಿತು. ಮತ್ತು ಒಂಭತ್ತು ಜನ ಕನ್ಯೆಯರೂ ದೇವಹೂತಿಯಲ್ಲಿ ಕರ್ದಮರಿಂದ ಜನಿಸಿದರು. ಅವರು ದೊಡ್ಡವರಾದ ಬಳಿಕ ದೇವಹೂತಿಯು ಪತಿಗೆ

"ಕನ್ಯಾರತ್ನಗಳಿಗೆ ಚೆನ್ನೀಗವರಗಳ ಚೆನ್ನಾಗಿ ಕುಲಶುದ್ಧಿ ನೋಡಿ
ತನ್ನಿದೇವಹೂತಿದೇವಿ ತನ್ನ ಪತಿಗೆ ಬಿನ್ನಹ ಮಾಡಿವಳಾಗ ॥
ಕರ್ದಮಋಷಿಯು ಅವಳ ಅಪೇಕ್ಷೆಯಂತೆ ।
ಋಷಿಗಳಿಗೆ ಒಂಬತ್ತು ಕನ್ನಿಕೇರ ಕೊಟ್ಟು ।
"ಅಂಬುಜನಾಭನ ಪಾದನಂಬಿದ್ದ ।
ಕೊಂಬುಕಾಳಿಗಳೀದ ರಂಭೇರ ಒಡಗೂಡಿ ಛಂದದಿ ಮದಿವಿಮಾಡಿದನು ॥

ಅನಂತರ "ಸಿದ್ಧಕರ್ದಮ ಋಷಿ ಗೆದ್ದು ಭವಸಾಗರ ಎದ್ದು ವನಕೆ ತೆರಳಿದನು."

ಇತ್ತ ದೇವಹೂತಿಯು ಮಗನಾದ ಕಪಿಲನಿಗೆ ತತ್ವೋಪದೇಶ ಮಾಡು ''ಸೌಪರ್ಣವಾಹನ ಅಪರಿಮಿತ ಮಹಿಮನೆ ಉಪದೇಶ ಎನಗೆ ಮಾಡೆನಲು'' ಎಂದು ಜಿಜ್ಞಾಸೆಯಿಂದ ಕೇಳಿದಳು. ಆಗ ಕಪಿಲನು

''ಹಡೆದ ತಾಯ ವಾಕ್ಯ ಪೊಡನಿಯೊಡೆಯ ಕೇಳಿ ಕಡುಹರುಸಪಟ್ಟು ಮನದಲ್ಲಿ।
ಮನದಲ್ಲಿ ಬಿಡದೆ ಪ್ರಕೃತಿ ಗುಣ ಪಡೆವ ಬ್ರಹ್ಮನಸೃಷ್ಟಿ ದೃಢವಾಗಿ
ತಾಯಿಗ್ಹೇಳಿದನು ॥"

ಕಪಿಲನಾಮಕವಾದ ಪರಮಾತ್ಮನು ತಾಯಿಗೆ ಸರಸವಾಣಿಯಿಂದ ಗಹನ ತತ್ವ ಜ್ಞಾನದ ಸುರುಳಿಯನ್ನೇ ಬಿಚ್ಚಿ ನಿಚ್ಚಳವಾಗಿ ನಿರೂಪಿಸುತ್ತ ಹೋಗುತ್ತಾನೆ. ಸತ್ವರಜ-ಸ್ತಮೋ ಗುಣಗಳ ಪ್ರಮಾಣಬದ್ಧ ಸಂಶ್ಲೇಷಣ ವಿಶ್ಲೇಷಣ ಮೂಲಕವಾದ ಸೃಷ್ಟಿ ವೈವಿಧ್ಯ, ಜನ್ಮಕರ್ಮಗಳ ರಹಸ್ಯ, ಪಿಂಡಾಂಡಗಳ ರಚನಾರೂಪಣ, ಅವತಾರ ಮೀಮಾಂಸೆ, ಜನನ ಮರಣ ಜಾಲದ ಜಂಜಡ, ವರ್ಣಾಶ್ರಮ ಧರ್ಮವಿಚಾರ,

ಮೋಕ್ಷೋಪಾಯಪರಿಶೀಲನ ಮುಂತಾದ ಅನೇಕ ವೇದ ಗುಹ್ಯ, ಶಾಸ್ತ್ರಗೂಢವಾದ ಜಟಿಲ ವಿಷಯಗಳನ್ನು ತಿಳಿಗನ್ನಡ ಓಘವತಿಯಾದ ಶೈಲಿಯಲ್ಲಿ ಬಿಡಿಸುತ್ತ ನಡೆಯುತ್ತಾನೆ.

ಆಗಾಗ ತಾಯಿಯು ತತ್ವವಿಚಾರ ಗೂಢಗುಂಜನವಾದಾಗ ಏನೂ ತಿಳಿಯದೇ ತಬ್ಬಿಬ್ಬಾಗಿ ಮತ್ತೆ ಮಗನನ್ನು ತಡೆದು ಅವರಮೇಲೆ ಪ್ರಶ್ನೆ ಕೇಳುತ್ತಾಳೆ. ಆಗ ಶ್ರೀ ಹರಿಯು ಮತ್ತೆ ಆ ಪ್ರಮೇಯವನ್ನು ಸರಳ ದೃಷ್ಟಾಂತದಿಂದ ಬಿಡಿಸಿ ಬಿಚ್ಚಿ ಸುಲಭ ರೀತಿಯಿಂದ ತಿಳಿಹೇಳಿ, ಮತ್ತೆ ಮುಂದುವರಿಯುತ್ತಾನೆ.

"ಜನನಿ ಪ್ರಶ್ನೆ ಕೇಳಿ ವನಜಲೋಚನಮುನಿ ಘನ ಹರುಷಬಟ್ಟು ಮನದಲ್ಲಿ ।
ವನಕಾಷ್ಠದಲ್ಲಿಹೋ ಘನ ಅಗ್ನಿದೃಷ್ಟಾಂತ ವನಜಲೋಚನೆಗೆ ಹೇಳಿದನು ॥"

ಹೀಗೆ ಮಗನ ಬಾಯಿಂದ ಸೃಷ್ಟಿರಹಸ್ಯ ಮತ್ತು ಭಗವನ್ಮಹಿಮೆಗಳನ್ನು ಕೇಳಿ ಧನ್ಯಳಾದ ದೇವಹೂತಿಯು ಅಲ್ಲಿಯೇ ಇದ್ದ ಬಿಂದು ಸರೋವರದಲ್ಲಿ ಸ್ನಾನ ಮಾಡಿ ನದಿಯಾಗಿ ಹರಿದಳು.

ಇಂತು ಇಂಥ ಕ್ಲಿಷ್ಟವಾದ ತತ್ವಜ್ಞಾನದ ಭಾಗವನ್ನು ಸಾಹಿತ್ಯ ಶೈಲಿಗೆ ಹೊಂದಿಸಿಗೊಂಡು ಶಾಸ್ತ್ರಗಂಧಿ ಕಾವ್ಯವನ್ನು ಬರೆದ ಪ್ರಯಾಗಬಾಯಿಯು ಕವಿಯೂ ಹೌದು, ಪಂಡಿತಳೂ ಹೌದು, ತತ್ವಜ್ಞಾನಿಯೂ ಹೌದು. ಮಾಧ್ವ ವಾಙ್ಮಯಕ್ಕೆ ಇಂಥ ಮೌಲಿಕವಾದ ತಾತ್ವಿಕ ಕಾಣಿಕೆ ಕೊಟ್ಟ ಮಹಿಳೆಯರಲ್ಲಿ ಪ್ರಯಾಗಬಾಯಿಗೆ ಅಗ್ರಸ್ಥಾನ, ವಿಶಿಷ್ಟ ಮಾನಗಳು ಸಲ್ಲುವವರಲ್ಲಿ ಸಂದೇಹವಿಲ್ಲ.

ಈ ಕವಯಿತ್ರಿಯ ಬೇರೆ ಕೃತಿಗಳು ಉಪಲಬ್ಧವಿಲ್ಲ. ಇಷ್ಟೆಲ್ಲ ಶಾಸ್ತ್ರಸಾಹಿತ್ಯ ಪರಿಣತ ಪ್ರಜ್ಞೆಯಿಂದ ಅತ್ಯುತ್ತಮವಾದ ಗ್ರಂಥರತ್ನವನ್ನು ಬರೆದಿದ್ದರೂ ಪ್ರಯಾಗವ್ವನಿಗೆ ಅಹಂಕಾರದ ಲವಲೇಶವೂ ಇರಲಿಲ್ಲ. ಅವಳು ತನ್ನನ್ನು ವಿಷ್ಣುದಾಸರ ದಾಸಿ ಎಂದು ಹೇಳಿಕೊಂಡು

"ಕುಂದಹಾಸನ ಕಥಿ ಮಂದ ಬುದ್ಧಿಯಿಂದ ಹಿಂದುಮುಂದಾಗಿ ಬಂದಿರಲು ।
ತಂದೆ ಪಾಂಡುರಂಗ ವಂದಿಸುವೆನು ನಿಮಗ ಛಂದಾಗಿ ಕರುಣಿಸು ಮತಿಯ॥"

ಎಂದು ವಿನಯದಿಂದ ಕೇಳಿಕೊಂಡಿದ್ದಾಳೆ. ಇವಳಿಗೆ ಭಾಗಮ್ಮ ಎಂದು ಬೇರೆ ಹೆಸರಿದ್ದಂತೆ ತಿಳಿದುಬರುತ್ತದೆ. ಇವಳು ಬಹುಕಾಲ ಕಾಶಿಯಲ್ಲಿದ್ದು ಈ ಕೃತಿಯನ್ನು ರಚಿಸಿದಳೆಂದು ಅವಳ

"ಕಾಶಿ ಪಟ್ಟಣದಲ್ಲಿ ವಾಸಾದ ಭಾಗಮ್ಮನು ಕಟ್ಟಿದ ಪದ್ಯವನು
ಭೂಸುರರೆಲ್ಲರು ಉದಾಸೀನ ಮಾಡದೆ ಲೇಸಾಗಿ ಪದ್ಯವನು ತಿದ್ದುವದು"

ಎಂಬ ಪದ್ಯದಿಂದ ಗೊತ್ತಾಗುತ್ತದೆ. ಆದರೆ ಪಾಂಡುರಂಗನ ಮುದ್ರಿಕೆಯ ಕೆಲವು ಭಕ್ತಿಪರ ಹಾಡುಗಳು ಭಾಗಮ್ಮನವೆಂದು ಹೇಳುತ್ತಾರೆ. ಈ ವಿಷಯದಲ್ಲಿ ಇನ್ನೂ ಶೋಧ ನಡೆಸುವದು ಅಗತ್ಯವಾಗಿದೆ.

# ೪ ವಿಷ್ಣುಭಕ್ತಳಾದ ತುಳಸಾಬಾಯಿ

ಭಕ್ತಿಪ್ರಧಾನವಾದ ಹಾಡು, ಕವಿತೆ, ನಾಟಕ, ಕಾವ್ಯ ಮುಂತಾಗಿ ವಿವಿಧ ವಾಙ್ಮಯವನ್ನು ರಚಿಸುವದರಲ್ಲಿ ಪಳಗಿದ ಪಂಡಿತ ಪ್ರಮದೆಯೆಂದು ಹೆಸರಾದ ಶ್ರೀ ತುಳಸಾಬಾಯಿಯು ಹುಟ್ಟಿದ್ದು ಧಾರವಾಡ ತಾಲೂಕಿನ ಸದ್ವೈಷ್ಣವ ಶ್ರೀಮಂತ ಜಹಗೀರದಾರರಾದ ಹೆಬ್ಬಳ್ಳಿಯ ಧನಿಯರ ಮನೆಯಲ್ಲಿ. ಇವಳ ಕಾಲ ಇ.ಸ. ೧೮೭೧.

ತುಳಸಾಬಾಯಿಯು ಬಾಲ್ಯದಿಂದಲೂ ಕವಿಪ್ರಕೃತಿಯವಳು. ದೇವಭಕ್ತಿಯು ಅವಳಿಗೆ ಹುಟ್ಟಿದಂದಿನಿಂದಲೇ ಮೈಗೂಡಿ ಬಂದಿತ್ತು. ಅಪರೋಕ್ಷಜ್ಞಾನಿಗಳಾದ ಪುರಂದರದಾಸ, ಕನಕದಾಸ ಮುಂತಾದವರ ಹಾಡು ಸುಳಾದಿಗಳನ್ನು ಯಾರಾದರೂ ಹಾಡಹತ್ತಿದರೆ ಅವಳು ಎಲ್ಲವನ್ನೂ ಮರೆತು ಚಿತ್ತವಿಟ್ಟು ಕೇಳುತ್ತ ನಿಂತುಬಿಡುತ್ತಿದ್ದಳು. ಭಿಕ್ಷುಕರು, ದಾಸಯ್ಯನವರು ಹಾಡು ಹೇಳುತ್ತ ತಂಬೂರಿಯೊಂದಿಗೆ ಓಣಿಯಲ್ಲಿ ಬಂದಾಗ ತುಳಸಾಬಾಯಿಯು ಅವರನ್ನು ಮನೆಗೆ ಕರೆತಂದು ಅವರ ಬಾಯಿಯಿಂದ ಬೇರೆ ಬೇರೆ ದಾಸರ ಪದಪದ್ಯಗಳನ್ನು ಹಾಡಿಸಿ ಕೇಳಿ ಕಾಳು, ಕಾಸು, ಕೊಟ್ಟು ಕಳಿಸುತ್ತಿದ್ದಳು. ಮಗಳ ಪ್ರೀತಿಗಾಗಿ ಜಹಗೀರದಾರ ಮನೆಯವರು ಇಂಪಾಗಿ ದೇವರ ನಾಮ ಹೇಳುವ ಭಿಕ್ಷುಕರ ಜೋಳಿಗೆ ತುಂಬಿ ಕಳಿಸುತ್ತಿದ್ದರು. ತುಳಸಾಬಾಯಿಯು ಪ್ರತಿದಿನವೂ ಮೂರು ಹೊತ್ತು ತಮ್ಮ ಕುಲದೇವರಾದ ಶ್ರೀ ವೆಂಕಟೇಶ ದೇವರ ಗುಡಿಗೆ ಹೋಗಿ ಗಂಟೆಗಟ್ಲೆ ದೇವರ ಎದುರು ಕೈಮುಗಿದುಕೊಂಡು ಹಾಡುತ್ತ ಕುಳಿತುಬಿಡುತ್ತಿದ್ದಳು.

ಅವಳ ದೇವಭಕ್ತಿ ಮತ್ತು ಸಾಹಿತ್ಯದಲ್ಲಿಯ ಆಸಕ್ತಿ, ಅದರಲ್ಲಿಯೂ ದಾಸ ವಾಙ್ಮಯದಲ್ಲಿ ಅವಳಿಗಿರುವ ಅನುರಕ್ತಿ ಇವೆಲ್ಲವನ್ನೂ ಅನುಲಕ್ಷಿಸಿ ಅವಳನ್ನು ಕರ್ನಾಟಕದ ಸುಪ್ರಸಿದ್ಧ ಮನೆತನದ ಆಚಾರ್ಯರ ಕುಲವೆಂದು ಪ್ರಸಿದ್ಧವಾದ ಚಿತ್ತಾಪುರ ಜಹಗೀರದಾರರ ಮನೆಗೆ ಮದುವೆ ಮಾಡಿಕೊಟ್ಟರು. ಚಿತ್ತಾಪುರ ಆಚಾರ್ಯರ ಮನೆತನವು ಎಂದಿನಿಂದಲೂ ಪಂಡಿತ ಪುಂಡರೀಕರ ಮನೆತನವೆಂದು ಕರ್ನಾಟಕದಲ್ಲಿ ಕೀರ್ತಿವೆತ್ತಿದೆ. ಅದರಲ್ಲಿಯೂ ಆ ಮನೆತನದಲ್ಲಿಯ ಒಬ್ಬ ವಿದ್ವದ್ವಿಭೂತಿಗಳು ಉತ್ತರಾದಿ ಮಠದ ಆಸ್ಥಾನವನ್ನು ಏರಿ ಶ್ರೀ ಸತ್ಯಪರಾಕ್ರಮತೀರ್ಥ ಸ್ವಾಮಿಗಳಾದಾಗ ಆ ಮನೆತನದ ಕೀರ್ತಿಗೆ ಕಳಸವಿಟ್ಟಂತಾಯಿತು.

ಇಂಥ ಅಧ್ಯಾತ್ಮನಿಷ್ಠ ಶ್ರೀಮಂತ ಹಾಗೂ ಧೀಮಂತ ಮನೆತನಕ್ಕೆ ಸೊಸೆಯಾಗಿ ಬಂದ ತುಳಸಾಬಾಯಿಯ ಕವಿತ್ವದ ಅಂಕುರವು ಚಿಗುರೊಡೆದು ಹೂತುಕಾತುಫಲ ಕೊಡಲು ತಡವಾಗಲಿಲ್ಲ. ಶ್ರೀ ಶ್ರೀಗಳವರು ವೃಂದಾವನಸ್ಥರಾದ ಬಳಿಕವೂ ಆ ಮನೆತನದ ಬದುಕನ್ನೆಲ್ಲ ಬಳಸಿ ನಿಂತ ಪಾಂಡಿತ್ಯದ ವಾತಾವರಣ ಹಾಗೂ ಭಕ್ತಿಯ ಪರಿಸ್ಫುರಣ

ಗಳು ತುಳಸಾಬಾಯಿಯ ಹೃದಯಕ್ಕೆ ಒಳ್ಳೆಯ ಸಂಸ್ಕಾರವನ್ನು ಒದಗಿಸಿದವು. ಅವರ ಮನೆಯಲ್ಲಿ ನಿತ್ಯವೂ ನಡೆಯುವ ವಾಕ್ಯಾರ್ಥ, ಪ್ರಮೇಯ ವಿಚಾರ ಮತ್ತು ತತ್ವ ಚಿಂತನೆಗಳು ಅವಳ ಸಾಹಿತ್ಯಕ ಪ್ರಜ್ಞೆಗೆ ತಾತ್ವಿಕ ಹಿನ್ನೆಲೆಯನ್ನು ಒದಗಿಸಿದವು.

ಹರಿದಾಸ ಸಾಹಿತ್ಯಕ್ಕೆ ಕೇಂದ್ರ ಸ್ಥಳವಾದ ಲಿಂಗಸೂಗೂರು ಚಿತ್ರಾಪುರಕ್ಕೆ ಸಮೀಪವಾದದರಿಂದಲೂ ಅವರೆಲ್ಲರೂ ಸಂಬಂಧಿಗಳಾಗಿದ್ದರಿಂದಲೂ ತುಳಸಾಬಾಯಿಯ ದಾಸ ಸಾಹಿತ್ಯದ ಶ್ರವಣ, ಮನನದ ಹಸಿವನ್ನು ತಣಿಸಲು ಒಳ್ಳೇ ಅನುಕೂಲ ಸಂದರ್ಭವು ಪ್ರಾಪ್ತವಾದಂತಾಗಿತ್ತು. ಅವಳು ಹುಟ್ಟಿದ್ದು ಜಹಗೀರದಾರ ಮನೆತನ, ಅವಳನ್ನು ಕೊಟ್ಟದ್ದು ಜಹಗೀರದಾರ ಮನೆತನವೇ. ಮನೆಯಲ್ಲಿ ವಿಶೇಷ ಕೆಲಸ–ಬೊಗಸೆಗಳ ತೊಂದರೆ ಇರದ್ದರಿಂದ ಬಿಡುವಿನ ವೇಳೆಯಲ್ಲಿ ಪುರಾಣ, ಪುಣ್ಯಕಥಾ ಶ್ರವಣ, ಹಾಡು–ಪಾಡುಗಳನ್ನು ಹೇಳುವದು ಇವರಲ್ಲಿಯೇ ಹೋಗುತ್ತಿತ್ತು.

ಆದರೆ ಸಿರಿವಂತರ ಮನೆಯಲ್ಲಿ ಲಕ್ಷ್ಮಿಯು ತೊಡೆಯ ಮೇಲೆ ಕುಳಿತು ತುಳಸಾಬಾಯಿಯು ನಡೆಸಿದ ಈ ಶಾರದೆಯ ಉಪಾಸನೆ ವಿಧಿಯ ಮನಸ್ಸಿಗೆ ಬರಲಿಲ್ಲ. ಅವಳ ಕುಂಕುಮದ ಪುಣ್ಯಕ್ಕೆ ಸಂಚಕಾರ ಬಂದು ದುರ್ವಿಧಿಯು ಅವಳ ಮಂಗಲ ಸೂತ್ರವನ್ನು ಕಸಿದಿತು. ತುಳಸಾಬಾಯಿಗೆ ಇನ್ನೂ ಪ್ರಾಯದ ಪ್ರಾರಂಭಿಕ ದೆಶೆ. ಜೀವನದ ಯಾವ ಸುಖ–ಸೌಭಾಗ್ಯವನ್ನೂ ಅವಳು ಕಂಡಿರಲಿಲ್ಲ. ಪ್ರಾಯದಲ್ಲಿ ಪ್ರವೇಶಿಸಬೇಕೆನ್ನುವಷ್ಟರಲ್ಲಿಯೇ ನಿಯತಿಯು ಅವಳ ಜೀವನದಲ್ಲಿ ನಿರಾಶೆಯ ಬರಸಿಡಿಲು ಬೀಳುವಂತೆ ಮಾಡಿತ್ತು.

ಇಂಥ ನಿರಾಶೆಯ ಅಂಧಕಾರಮಯವಾದ ದುಃಖದಗ್ಧ ಜೀವನದಲ್ಲಿ ತುಳಸಾಬಾಯಿಗೆ ಸಾಂತ್ವನ ಸಿಂಚನ ಮಾಡಿದ್ದೇನಂದರೆ— ಅವಳು ಬಾಲ್ಯದಿಂದಲೂ ಬೆಳೆಸಿಕೊಂಡು ಬಂದ ಭಗವದ್ಭಕ್ತಿ. ಅವಳ ಮುಂದಿನ ಜೀವನದಲ್ಲಿ ದೇವಭಕ್ತಿ, ಗುರುಭಕ್ತಿ, ಗುರು–ಹಿರಿಯರ ಸೇವೆ, ಪುರಾಣ–ಪುಣ್ಯಕಥಾ ಶ್ರವಣ, ಹರಿದಾಸರ ಹಾಡು ಪಾಡು, ಸುಳಾದಿ ಉಗಾ ಭೋಗ ಮುಂತಾದವುಗಳ ನಿತ್ಯ ನಿರಂತರ ವಾಚನ, ಅಧ್ಯಯನ ವಿವರಣಾದಿಗಳೇ ಮುಖ್ಯವಾದವು.

ಸಾರ್ವಕಾಲಿಕವಾದ ಅವಳ ಸಾಹಿತ್ಯದ ಶ್ರವಣ ಮನನಾದಿಗಳು ಅವಳಲ್ಲಿ ಪ್ರಾಪ್ತವಾದ ಸ್ವಾಭಾವಿಕ ಕವಿತ್ವ ಶಕ್ತಿಯ ಅಭಿವ್ಯಕ್ತಿಗೆ ಅನುಕೂಲ ವಾತಾವರಣವನ್ನು ನಿರ್ಮಿಸಿದವು. ಅವಳು ಅನೇಕ ಭಕ್ತಿ ಪ್ರಧಾನವಾದ ಕೃತಿಗಳನ್ನು ರಚಿಸಿದಳು. ಅನೇಕ ಹಾಡುಗಳನ್ನು ಬರೆದಳು. ಅವುಗಳಲ್ಲಿ ಈಗ ಉಳಿದುದೆಷ್ಟೋ? ಅಳಿದುದೆಷ್ಟೋ? ಈಗ ದೊರಕುವ ಅವಳ ಕೃತಿಗಳಲ್ಲಿ ಕೃಷ್ಣನ ಹುಟ್ಟು, ರುಕ್ಮಾಂಗನ ಚರಿತ್ರೆ, ಸುಭದ್ರಾ ಮುಯ್ಯ, ರುಕ್ಮಿಣಿ ಪರಿಣಯ, ಶುಕ್ರವಾರ ಗೌರಿ ಹಾಡು, ರುಕ್ಮಿಣಿ ಮುಯ್ಯ, ಸುಭದ್ರಾ ಕಲ್ಯಾಣ, ಶನಿವಾರ ಗೌರಿ ಹಾಡು ಮೊದಲಾದವುಗಳು ಮುಖ್ಯವಾಗಿವೆ.

ತುಳಸಾಬಾಯಿಯ ಈ ಎಲ್ಲ ಕೃತಿಗಳಲ್ಲಿ ಶ್ರದ್ಧಾಮೂಲಕವಾದ ಬಣ್ಣಬಣ್ಣದ ವಿವಿಧ ಭಾವಾನುಭಾವಗಳ ಕಣ್ಣು ಕೋರೈಸುವ ರಂಗುರಂಜನೆಗಳು ಕಂಗೊಳಿಸುತ್ತವೆ. ಅವಳ ಕಾವ್ಯ ಪ್ರತಿಭೆಯ ಜೊತೆಗೆ ನಾಟ್ಯ ಕಲೆಯ ಕಲ್ಪನಾ ಕೌಶಲ್ಯವೂ ಸೇರಿ ಅಲ್ಲಲ್ಲಿ ನವರಸಗಳ ಓಕುಳಿಯೇ ಸೂಸಾಡಿದಂತಿದೆ.

ಅವಳ ಈ ಎಲ್ಲ ಸಾಹಿತ್ಯಿಕ ಪ್ರತಿಭಾ ಉನ್ಮೇಷದ ಹಿನ್ನೆಯಲ್ಲಿ ಕೈಯಾಡಿಸುವ ಮೂಲ ಸೂತ್ರವೆಂದರೆ ಅವಳ ವೆಂಕಟೇಶ ಭಕ್ತಿ. ಅವಳ ಪ್ರತಿಯೊಂದು ಕೃತಿಯೂ ಕೊನೆಗೆ ವೆಂಕಟೇಶನ ಪಾದಕ್ಕೆ ಹಣೆಯೊತ್ತಿ ಶ್ರೀ ವೆಂಕಟೇಶ ಮುದ್ರಿಕೆಯನ್ನೇ ಧರಿಸಿಕೊಂಡು ಹೊರಗೆ ಬರುತ್ತವೆ. "ಶ್ರೀ ವೆಂಕಟೇಶಾ ಬೆಟ್ಟದೊಡೆಯ", "ಶ್ರೀ ವೆಂಕಟೇಶಾ" ಎಂಬುವದು ಅವಳ ಕಾವ್ಯಮುದ್ರಿಕೆಯಾಗಿದೆ.

ಈ ಕವಯಿತ್ರಿಗೆ ತಮ್ಮ ಮನೆತನದ ಪಂಡಿತ ಪರಿವ್ರಾಜಕರಾದ ಶ್ರೀ ಸತ್ಯ ಪರಾಕ್ರಮ ಶ್ರೀಪಾದಂಗಳವರ ಬಗೆಗೆ ಅಭಿಮಾನ ಬಹಳ. ಅವಳ ಅನೇಕ ಕೃತಿ ಗಳಲ್ಲಿ ಈ ಗುರುಭಕ್ತಿ ಮಾವನವರ ಬಗೆಗಿನ ಅಭಿಮಾನ ಉಕ್ಕಿ ಹರಿದಿದೆ.

"ಸತ್ಯಪರಾಕ್ರಮ ತೀರ್ಥರವರಿಗೆ ।
ನಿತ್ಯದಲಿ ನಾ ನಮಿಸಿ ಪೇಳುವೆ ।
ಶೇಷಪರ್ವತ ವೆಂಕಟೇಶನ ದಾಸವರ್ಗಕೆ ನಮಿಸಿ ಪೇಳುವೆ ॥"

ಎಂದು ಹೇಳುವಲ್ಲಿ ಅವಳ ಹರಿಗುರು ಭಕ್ತಿಯು ಸ್ಫುಟವಾಗಿ ಒಡೆದುಕಾಣುತ್ತದೆ.

ತುಳಸಾಬಾಯಿಯು ಜ್ಞಾನನಿಷ್ಠಳಾದ ಕವಿಯಿತ್ರಿ. ಮಾಧ್ವ ಮನೆತನಸ್ಥ ಮಹಿಳೆಯಾದ ಅವಳ ಮನಸ್ಸಿನಲ್ಲಿ ತಾರತಮ್ಯ ಜ್ಞಾನವು ನಿಚ್ಚಳವಾಗಿ ಮೂಡಿದ್ದು ಜೀವೋತ್ತಮರಾದ ಪ್ರಾಣದೇವರ ಮೇಲೆ ಅವಳಿಗೆ ಅಗಾಧ ಶ್ರದ್ಧೆ ಇದೆ. ಆದುದ ರಿಂದಲೇ ವೀರ ವೈಷ್ಣವ ಮನೆತನದವಳಾದ ಅವಳು ತನ್ನ ಕೃತಿಗಳಲ್ಲಿ ಅಲ್ಲಲ್ಲಿ ಪ್ರಾಣ ದೇವರಿಗೆ ಭಕ್ತಿಯ ಪ್ರಣಾಮಾಂಜಲಿಯನ್ನು ಅರ್ಪಿಸುವದನ್ನು ನಾವು ಕಾಣಬಹುದು.

"ಪವನಸುತನ ಮನದೊಳ್ ನೆನೆಸುತ ಪಾವನವಾಗುವೆನೆಂದೆನುತ" ಎಂದು ಸಂದರ್ಭ ಬಂದಾಗೆಲ್ಲ ತನ್ನ ಪಾತ್ರಗಳಿಂದ ಪ್ರಾಣದೇವರಿಗೆ ಪ್ರಣಾಮ ಮಾಡಿಸುತ್ತಾಳೆ ಅವಳ ಕೃತಿಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದೆಂದರೆ ರುಕ್ಮಿಣಿ ಸ್ವಯಂವರ. ಇದರಲ್ಲಿ ಭಾಗ ವತದ ಕೃಷ್ಣ ರುಕ್ಮಿಣಿಯರ ಕತೆ ಹೊಸ ಮೆರಗು ಪಡೆದುಬಂದಿದೆ. ಭಕ್ತಿಯ ಸ್ಥಾಯಿ ಯಲ್ಲಿ ಶೃಂಗಾರಕಾರುಣ್ಯ ಹಾಸ್ಯ ವೀರ ಮೊದಲಾದ ಭಾವಗಳು ರಸಪರಿಣಿತಿಯನ್ನು ಹೊಂದಿದ ಮನೋಜ್ಞ ಸನ್ನಿವೇಶವನ್ನು ಇಲ್ಲಿ ಕಾಣಬಹುದು.

"ವಿದರ್ಭರಾಜನ ಕುವರಿಯ ಸ್ವಯಂವರ ಪೇಳುವೆನು ಪದುಮನಾಭನು ಮುದದಿ ದ್ವಾರಕಾವತಿಯಲವ ತರಿಸಿರದು ಮದನನಯ್ಯನ ಮದುವೆಯುತ್ಸವ ಮುದದಿ ಪೇಳುವೆನು." ಇಲ್ಲಿ ಕವಯಿತ್ರಿಯು "ಮದನನಯ್ಯನ ಮದುವೆ'' ಎಂದು ಮದುವೆಯಾಗುವಕ್ಕಿಂತ ಮೊದಲೇ ಕೃಷ್ಣನಿಗೆ ಮದನನ ತಂದೆ ಎಂದು ವಿಶೇಷಣವಿತ್ತು ಮುಂದೆ ಕಾಮನು ರುಕ್ಮಿಣಿಯ ಹೊಟ್ಟೆಯಿಂದ ಹುಟ್ಟುತ್ತಾನೆ ಎಂಬುದನ್ನು ಧ್ವನಿಪೂರ್ಣವಾಗಿ ಸೂಚಿಸಿದ್ದಾಳೆ. ಮತ್ತು ನಿತ್ಯಾವಿಯೋಗಿನಿಯರಾದ ಆ ಲಕ್ಷ್ಮೀನಾರಾಯಣರಿಗೆ ಇದೇನು ಹೊಸ ಮದುವೆಯಲ್ಲ. ಈ ಮದುವೆಗಿಂತ ಮೊದಲೇ ಅವರು ಮಗನನ್ನು ಪಡೆದದ್ದರಿಂದ ಅವರಿಬ್ಬರೂ ಅನಾದಿದಂಪತಿಗಳೆಂಬ ತತ್ವವನ್ನೂ ಸೂಚಿಸಿದ್ದಾಳೆ.

ತುಳಸಾಬಾಯಿಗೆ ಪದ್ಯನಿರ್ಮಿತಿಯ ಮೇಲಿದ್ದಷ್ಟೇ ಪ್ರಭುತ್ವವು ಗದ್ಯ ಗ್ರಥನದಲ್ಲಿಯೂ ಇದ್ದಿತು. ಅವಳ ಗದ್ಯದ ನಾಡಿಯನ್ನು ಗಮನಿಸಿರಿ.

"ಇಂದಿರೆಯು ತಾ ಭೀಷ್ಮಕನ ನಂದಿನಿಯಾಗಿ ಛಂದದಿಂದಲಿ ಜನಿಸಿರಲು |
ಮುಂದ ಭೀಷ್ಮಕ ತನ್ನ ನಂದನೆಗೆ ರುಕ್ಮಿಣಿಗೆ ಬಂದ ಯೌವ್ವನವ ನೋಡಿ ||"
"ಕಂದ ರುಕ್ಮನ ಬೇಗ ತ್ವರೆಯಿಂದ ಕರೆಯಿಸಿದನು |
ಕಂದಯ್ಯ ನೀ ಪೇಳು ಸುಂದರಿಗೆ ವರನಾರು ?"

ಅದಕ್ಕೆ ರುಕ್ಮಿಣಿಯ ಶಿಶುಪಾಲನಿಗೆ ಕೊಡುವ ತನ್ನ ನಿರ್ಧಾರವನ್ನು ತಿಳಿಸಿದಾಗ ತಂದೆಗೆ ಇದು ಸರಿಬರಲಿಲ್ಲ.

"ಆಹಾ ಅನಂತ ಮಹಿಮ ಸನಕಾದಿ ವ್ಯಂದನಬಿಟ್ಟು ಹೀನ ಶಿಶುಪಾಲನಿಗೆ |
ನೀನು ಕೊಡೆಂಬುದು ಥರವಲ್ಲ, ಕಂದ್ಯ ಇದು ಥರವಲ್ಲ ||"
ಶ್ರೀಪತಿಗೆ ಕೊಡು ಎಂಬ ಆ ಪಿತನ ನುಡಿ ಕೇಳಿ ಕೋಪದಲಿ ತನ್ನ ತಾ ಶಾಪಿಸುತ |
ಮನದಲ್ಲೆ ಅಪಾರ ಮಹಿಮನ ಗುಣಗಳರಿಯದಲೆ ತಾ ನುಡಿದ ನೀ ಪರಿಯಲಿ ||"

ಇಲ್ಲಿಯು ಗದ್ಯಪದ್ಯಗಳ ಸರಿಬೆರಕೆ ಸಮುಚಿತ ಸುಂದರ ಸಂದರ್ಭದ ಮೇಲಿಂದ ಈ ಕವಿಯಿತ್ರಿ ಸವ್ಯಸಾಚಿಯಂತೆ ಉಭಯ ಪರಿಣತ ಮತಿಯಾಗಿದ್ದಳೆಂದು ವ್ಯಕ್ತವಾಗುತ್ತದೆ.

ತುಳಸಾಬಾಯಿಯ ಸಂಭಾಷಣಾ ಚಾತುರ್ಯವು ಅವಳ ಮುಯ್ಯದ ಪದಗಳಲ್ಲಿ ಚನ್ನಾಗಿ ವ್ಯಕ್ತವಾಗಿದೆ.

ರುಕ್ಮಿಣೀ ಮುಯ್ಯದಲ್ಲಿ ರುಕ್ಮಿಣೀ ಹಾಗೂ ಸೋದರ ಸವತಿಯರೆಲ್ಲರೂ ಕೂಡಿ ಸುಭದ್ರಾ, ದ್ರೌಪದಿಯರೂ ಮುಯ್ಯ ತಂದಾಗ "ದಾರು ಬಂದಾರೆಂದು ಹೇಳಿರಿ ನಿಮ್ಮ ಹೆಸರು" ನಾರಿ ಪಾಂಚಾಲಿ ನುಡಿದಳು.

"ಮತ್ಸ್ಯಾವತಾರನ ಮಡದಿಯರು ಬಂದೇವೆ ಮತ್ಸ್ಯಂಗಗಳೆ ತಿಳಿ ನೀನು"
"ಮತ್ಸ್ಯಾವತಾರನ ಮಡದಿಯರಾದರೆ ಸ್ವಚ್ಛ ನೀರೊಳಗಿರ ಹೋಗಿ"
"ಕೂರ್ಮಾವತಾರನ ನಾರಿಯರು ಬಂದೇವೆ ನಾರಿ ಬಾಗಿಲವ ತೆಗೆ ನೀನು"
"ವಂಚಿಸಿ ಬಲಿಗೆ ತಾನು ದಾನವ ಬೇಡಿದವನ ಕೆಂಚೆಯರೆಲ್ಲೂ ರ ಬಂದೇವ"
"ವಂಚಕನ ಮಡದಿಯರೆ ಮುಂಚೆ ತಿರುಗಿರಿ ನಿಮ್ಮ ಹಂಚಿಕೆ ನಮಗೆ ತಿಳಿಯದು"
"ಕೋಮಲಾಂಗ ಶ್ರೀರಾಮನ ಸತಿಯರು ಪ್ರೇಮದಿಂದಲಿ ತಿಳಿ ನೀನು"
"ರಾಮನರಸಿಯರಾದರೆ ವಾನರ ಸೈನ್ಯದೊಳಿರ ಹೋಗಿ"

ಇಲ್ಲಿ ಸಂಭಾಷಣೆಯ ನೆಪದಿಂದ ಹತ್ತವತಾರಗಳ ಮಹಾಲೀಲೆಗಳನ್ನು ಹಾಸ್ಯದ ಎರಕದಲ್ಲಿ ಒತ್ತಿ ಭಕ್ತಿಯ ಪಣತಿಯಲ್ಲಿ ಎತ್ತಿ ತೋರುವ ಜಾಣ್ಮೆ ಕಂಡುಬರುತ್ತದೆ.

ಮುಯ್ಯದ ಹಾಡುಗಳೆಂದರೆ ಈಗಿನವರು ಮೂಗು ಮುರಿಯಬಹುದು. ಆದರೆ ಮುಯ್ಯದ ಪದಗಳಲ್ಲಿ ನಮ್ಮೆಲ್ಲರ ಪೂಜೆಗೆ ಪಾತ್ರರಾದ ದಿವ್ಯ ವ್ಯಕ್ತಿಗಳ ಜೀವನ ದಲ್ಲಿಯ ಸೂಕ್ಷ್ಮ ಸಂದರ್ಭಗಳ ಮೇಲೆ ಬೆರಳನ್ನಿಟ್ಟು ಮರ್ಮೋದ್ಘಾಟನ ಮಾಡುವ ಪರಿ ಮೋಜಿನದಾಗಿರುತ್ತದೆ. ಈ ಮುಯ್ಯದ ಪದದಲ್ಲಿ ರುಕ್ಮಿಣಿ ದ್ರೌಪದಿಯರ ಸಂವಾದ ದಲ್ಲಿ ನಡುವೆ ತುಳಸಾಬಾಯಿಯು ಕೃಷ್ಣಾರ್ಜುನರನ್ನು ತಂದು ನಿಲ್ಲಿಸಿ ಸಂಭಾಷಣೆಗೆ ಒಳ್ಳೇ ಕಳೆಕಟ್ಟುವಂತೆ ಮಾಡುತ್ತಾಳೆ. ಕೃಷ್ಣ ದ್ರೌಪದಿಯ ಪಕ್ಷವಹಿಸಿ ಮಾತನಾಡಿದರೆ ಅರ್ಜುನನು ರುಕ್ಮಿಣೀದೇವಿಯ ಪರವಾಗಿ ವಾದಿಸುತ್ತಾನೆ.

ಕೃಷ್ಣ– ಪಾರ್ಥ ಯಾಕೆ ಅಂಥ ಬಿಂಕವ ಮಾತನಾಡುವಿ ಸೋಕುಲೆತ್ತವಲ್ಲಿ ಯಾತಕೆ ಅಡವಿ ಸೇರಿದೆ.

ಅರ್ಜುನ– ಮಡುವು ಸೇರಿ ಕಲ್ಲುಘಡಿಯೊಳಡಗಿದೇತಕೆ ? ಬಿಡದೇ ಭಾರ ಬೆನ್ನಮೇಲೆ ಪೊತ್ತಿಯೇತಕೆ ?

ಕೃಷ್ಣ– ಮೋಸ ಮಾಡಿ ಸನ್ಯಾಸಿಯ ವೇಷ ಧರಿಸಿದೆಯೋ ಘಾಶಿಮಾಡಿ ಕುರುಪನನ್ನು ಓಡಿಸಿದೆಯೋ ನಾರಿ ವೇಷದಿಂದ ಪಾರ್ಥ ಚರಿಸುವದೇನಿದು ಗುರುಗಳಲ್ಲಿ ಶಸ್ತ್ರವನ್ನು ಪಿಡಿಯುವದೇನಿದು ?

ಅರ್ಜುನ– ಶ್ರೀಶ ನಾರಿ ವೇಷದಿ ಯಾಕೆ ಅಮೃತ ಬಡಿಸಿದ್ಯೋ ಶೇಷಗಿರಿ ವೆಂಕಟೇಶ ಮೋಸ ಮಾಡಿದ್ಯೋ.

ಈ ಮಹಿಳಾ ಕವಿಯು ಸಂಭಾಷಣೆಯ ಆವೇಗದಿಂದ ಗಂಡ–ಹೆಂಡರನ್ನೂ ಬಿಡುವದಿಲ್ಲ. ಒಮ್ಮೊಮ್ಮೆ ಈ ವಿನೋದ ವಿರಸವಾಗಿ ನಗೆಹೊಗೆಯಾಗಿ ಕಂಬನಿಯ ಹೊನಲನ್ನೇ ಧುಮುಕಿಸುವದೂ ಉಂಟು.

ರುಕ್ಮಿಣಿಯ ಪಕ್ಷ ಹಿಡಿದು ಮಾತನಾಡುವ ಅರ್ಜುನನನ್ನು ಹೀಯಾಳಿಸಿ ಕೃಷ್ಣನು ತನ್ನ ಪತ್ನಿ ರುಕ್ಮಿಣಿಗೆ

ಕೃಷ್ಣ– ಸರಸಿಜಾಕ್ಷಿಯೇ ನಮಗೆ ಸಿರಿಯೆ ಪಾಂಡವರು ದೊರೆತನವಿಲ್ಲದೆ ಧರಣಿಯ ಮೇಲೆ ಚರಿಸುತಿರುವರು.

ರುಕ್ಮಿಣಿ– ಗೊಲ್ಲರ ಮನೆಯಲಿ ಪುಟ್ಟಿ ಬಲ್ಲಿದ ಗೋಗಳ ಕಾಯ್ದಿರಿ ಫುಲ್ಲನಯನ ಪಾಂಡವರ ಸರಿಯೇನೋ ನೀನು.

ಕೃಷ್ಣ– ಬೃಹನ್ನಳೆ ವೇಷವ ಧರಿಸಿ ವರಹೆಣ್ಣಿಗೆ ವಿದ್ಯವ ಕಲಿಸಿ ಫಲ್ಗುಣ ನಿಮ್ಮಣ್ಣ ಬಲುಶೌರ್ಯವಂತನೆ.

ರುಕ್ಮಿಣಿ– ಹೆಣ್ಣಿಗೆ ವಿದ್ಯ ಕಲಿಸಿದನೆಂದು ಸಣ್ಣ ಮಾತು ನುಡಿಯುವಿರಾ ಹೆಣ್ಣಾಗಿ ಸುರರಿಗೆ ಅಮೃತವ ಬಡಿಸಿದವರಾರು.

ಕೃಷ್ಣ– ಬಲುಚದುರ ನಿನ ತಮ್ಮ ಚೆಲುವ ತೇಜಿಯ ನಡಿಸುವದಕೆ ಬಲವಂತನಹುದೆಂದು ಹರಿ ಕಿಲಿ ಕಿಲಿ ನಕ್ಕನು.

ರುಕ್ಮಿಣಿ– ಚದುರ ನಮ್ಮ ತಮ್ಮನೀಗ ಕುದುರೆಸ್ವಾರನೆಂದು ನುಡಿದಿರಿ ಮುದದಿ ಪಾರ್ಥಗೆ ಸಾರಥಿಯಾದವರಾರು ?

ಕೃಷ್ಣ– ಸಾರಥಿಯಾದವಗೆ ನಾರಿ ಏತಕೆ ಓಲೆಯ ಬರೆದೆ ಸೇರಿ ಹೋಗಿ ಶಿಶುಪಾಲನ ಸುಖದಲ್ಲಿರೆ ಎಂದ! ಅಣ್ಣನ ವಂಚಿಸಿ ಓಲೆಯ ಬರೆದ ಹೆಣ್ಣಿನ ಗುಣ ತಿಳಿಯದೆಂದು ಬಣ್ಣಗಾರತಿ ಹೌದೆಂದು ರುಕ್ಮಿಣಿಗೆ ನುಡಿದನು.

ಇದನ್ನು ಕೇಳಿದ ತಕ್ಷಣ ರುಕ್ಮಿಣಿಯು ನೆಲಕ್ಕುರುಳಿ ಮೂರ್ಛೆ ಹೋಗಿ ಬೀಳುತ್ತಾಳೆ. ಗಂಡಸರು ಆಡಾಡುತ್ತ ಹೇಗೆ ಕೋಪದ ಕೊನೆ ಏರಿ ಹೆಣ್ಣು ಹೃದಯಕ್ಕೆ ಎಂಥ ಗಾಯ ಮಾಡುವರೆಂಬುದನ್ನು ಕವಯಿತ್ರಿ ಇಲ್ಲಿ ಚನ್ನಾಗಿ ತೋರಿಸಿದ್ದಾಳೆ. ಇಂಥ ಸರಸ–ವಿರಸಗಳ ಮಾತುಗಳನ್ನು ಮಥಿಸಿ ನಗೆ ಹೊಗೆಗಳನ್ನು ನೋವು–ನಲಿವುಗಳನ್ನು ಹದ್ಮಿಶ್ರಿಸಿ ಕಾವ್ಯದುದ್ದಕ್ಕೂ ಕೌತುಕದ ಕಾವು ಆರದಂತೆ ಬೇಸರದ ಬೇವು ರಸಗೆಡಿಸದಂತೆ ನೋಡಿಕೊಂಡಿದ್ದಾಳೆ.

ಇನ್ನೊಮ್ಮೆ ಇಂಥ ವಾದ–ವಿವಾದದಲ್ಲಿ ಆವೇಶ ಉದ್ರೇಕಗೊಂಡು ವಿವೇಕದ ತೂಕ ತಪ್ಪಿಸಿ ಮಾತು ಮಿತಿಯ ಮೇರೆ ಮೀರಿ ಸ್ವೈರಗಾಲು ಹಾಕುತ್ತಿದ್ದಾಗ ದ್ರೌಪದಿಯ ಶಾಂತವೃತ್ತಿ, ಧೈರ್ಯ ಸಂಯಮಗಳು ವಾದದ ಕೆಂಧೂಳಿಯನ್ನೇ ಆರಿಸಿ ಶಾಂತ ಮಾಡಿ ಬಿಡುತ್ತವೆ. ರುಕ್ಮಿಣಿ ಸತ್ಯಭಾಮೆಯರು ತಂದ ಮುಯ್ಯಕ್ಕೆ ದ್ರೌಪದಿ ಸುಭದ್ರೆಯರು ಇದಿರು ಮುಯ್ಯ ತಂದು ತೀರಿಸುತ್ತಾರೆ. ಆಗ ದ್ರೌಪದಿಗೂ ರುಕ್ಮಿಣಿಗೂ ತುರುಸಿನ ಸಂಭಾಷಣೆ ನಡೆದು ವಿರಸದ ಅಂಚಿಗೆ ವೈ ಒರಿಸಿ ಕಾವು ಕೆನಗಟ್ಟಿ ಮಾತು ಮಸೆಯ ಹತ್ತುತ್ತವೆ.

ದ್ರೌಪದಿ– ಭಾಸುರಾಂಗಿಯೆ ಶಿಶುಪಾಲಗೆ ಮೋಸ ಮಾಡಿದ್ದಾಂಗಲ್ಲೆ ಶ್ರೀಶನ ವಶ ಮಾಡಿ ಕೊಂಡೆ ಕೇಳೆ ರುಕ್ಮಿಣಿ.

ರುಕ್ಮಿಣಿ– ಮೀನಗಾರನಲ್ಲಿ ನೀನು ಮಾನಿನಿ ಮನಸಿಟ್ಟಂಗಲ್ಲೇ ಘನ ಮಾತುಗಳಾಡು ವರೆನೆ ಕೇಳೆ ಪಾಂಚಾಲಿ.

ದ್ರೌಪದಿ– ಅಚ್ಯುತ ಮಾಡಿದ ಅಚ್ಚದಿಂದ ತುಚ್ಛ ಮಾತಾಡುತ್ತೀಯ ಮೆಚ್ಚರೀ ಮಾತಿಗೆ ಜನರು ಕೇಳೆ ರುಕ್ಮಿಣಿ.

ರುಕ್ಮಿಣಿ– ಎರಳೆಗಂಗಳೆ ನಿನ್ನ ಸೆಳೆದ ದುಃಶಾಸನನು ತಾನು ಸೆಳೆದನುಟ್ಟಸೀರೆಯನು ಕೇಳೆ ಪಾಂಚಾಲಿ.

ದ್ರೌಪದಿ– ಪತಿವ್ರತೆ ತಾನೆಂದು ಬಲು ಅತಿ ಶೀಘ್ರದಲಿ ಅಣ್ಣಯ್ಯ ಬಂದು ಜತನ ಮಾಡಲಿಲ್ಲವೇನೆ ಕೇಳೆ ರುಕ್ಮಿಣಿ.

ರುಕ್ಮಿಣಿ– ಪತಿವ್ರತೆ ನೀನಾದರೆ ಕೇಳು ಕ್ಷಿತಿಯೊಳೀಕೆ ಜಂಬು ಫಲವು ಮತಿವಂತೆ ಮೇಲಕೇರಲಿಲ್ಲ ಹೇಳೆ ಪಾಂಚಾಲಿ.

ಹೀಗೆ ರುಕ್ಮಿಣಿ ತನ್ನ ಸತೀತ್ವದ ಮರ್ಮವನ್ನೇ ಕೆಣಕಿ ಮಾತಾಡಿದರೂ ಧೀರೆ ನೀರೆಯಾದ ದ್ರೌಪತಿ ಸತೀತ್ವದ ಆತ್ಮ ವಿಶ್ವಾಸದಿಂದ ಅವಿಚಲಿತಳಾಗಿ— "ನಿನ್ನ ಗಂಡನನ್ನೆ ಈ ಬಗ್ಗೆ ಕೇಳು" ಎಂದು ಉತ್ತರಿಸುತ್ತಾಳೆ.

"ಕ್ಷಿತಿಯೊಳಗೆ ಅತಿ ಪತಿವ್ರತೆ ಕೇಳೆ ನೀನೆಸಿಕೊಂಡೆ
ಶ್ರೀಪತಿಯು ಬಲ್ಲ ನನ್ನ ಗುಣವ ಕೇಳೆ ರುಕ್ಮಿಣಿ"

ಈ ತರಹದ ಸಂವಾದ ಶೈಲಿಯ ಶಯ್ಯೆಯಲ್ಲಿ ಭಾರತ, ಭಾಗವತ ಕತೆಗಳ ನ್ನೆಲ್ಲ ನಯವಾಗಿ ನೆಯ್ದು ಚಿತ್ರಪಟದಂತೆ ಸುರುಳಿ ಬಿಚ್ಚಿ ತೋರಿಸುವ ತುಳಸವ್ವನ ಸರಳ ದ್ರಾಕ್ಷಾಪಾಕ ರುಚಿಕರವಾಗಿದೆ.

## ೫. ಹರಪನಹಳ್ಳಿ ಭೀಮವ್ವ

ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ತಾಲೂಕಿನಲ್ಲಿ ನಾರಾಯಣದೇವರ ಕೆರೆ ಎಂಬ ಗ್ರಾಮವಿತ್ತು. ಅದು ಈಗ ತುಂಗೆಯ ಹೊಸಪೇಟೆಯ ಬಳಿಯಲ್ಲಿ ಕಟ್ಟಿದ ಆಣೆಕಟ್ಟಿನಿಂದಾಗಿ ಮುಳಗಿ ಹೋಗಿದೆ. ಆ ಊರಲ್ಲಿ ದಾಸಕೂಟದ ಧುರೀಣರಾದ ನರಹರಿ ಆಚಾರ್ಯರ ಮನೆತನದ ರಾಘಮ್ಮ ರಘುನಾಥಾಚಾರ್ಯರ ಮಗಳೇ ಭೀಮಾ ಬಾಯಿ. ಇವರನ್ನು ರಾಯದುರ್ಗ ತಾಲೂಕಿನ ಹಿರೇಹಾಲ ಗ್ರಾಮದ ಮುನಿಯಪ್ಪನಿಗೆ ಮದುವೆ ಮಾಡಿಕೊಡಲಾಯಿತು.

ಭೀಮವ್ವನಿಗೆ ಓದಲಿಕ್ಕೂ ಬರುತ್ತಿರಲಿಲ್ಲ. ಬರೆಯಲಿಕ್ಕಂತೂ ಗೊತ್ತೇ ಇರಲಿಲ್ಲ. ಆದರೂ ದೇವತಾ ಅನುಗ್ರಹದಿಂದ ಅವಳ ಬಾಯಿಂದ ನಿರರ್ಗಳವಾಗಿ ಹಾಡು, ಕತೆ ಕೀರ್ತನೆ, ಕಾವ್ಯಗಳು ಹೊಮ್ಮಿ ಹರಿದು ಬರುತ್ತಿದ್ದವು. ಹತ್ತರ ಇದ್ದವರು ಅವುಗಳನ್ನು ಬರೆದು ಇಡುತ್ತಿದ್ದರು. ಹೆಣ್ಣು ಮಕ್ಕಳೆಲ್ಲರೂ ಹಾಡುತ್ತಿದ್ದರು.

ಹೀಗೆ ಜನ ಬಂದು ಈ ಭೀಮವ್ವನಿಂದ ಹಾಡು ಹೇಳಿಸಿಕೊಂಡು ಅಲ್ಲಲ್ಲಿ ಹಾಡುತ್ತ ಕೂಡುವದು ಅತ್ತೆ ಮಾವಂದಿರಿಗೆ ಸೇರದೆ ಅವರು ಭೀಮವ್ವನಿಗೆ ಹಾಡನ್ನು ಮಾಡಕೂಡದು, ಮಾಡಿದ್ದನ್ನು ಹಾಡಕೂಡದು ಎಂದು ಕಟ್ಟಪ್ಪಣೆ ವಿಧಿಸಿದರಂತೆ. ಇದರಿಂದ ಅತ್ತೆಮಾವ ಇಬ್ಬರಿಗೂ ಉರಿ, ಸಂಕಟ, ಉಬ್ಬಸ, ಪ್ರಾರಂಭವಾಗಿ ಕೊನೆಗೆ ಕನಸು ಬಿದ್ದು ತಾನಾಗಿ ಭೀಮವ್ವನ ಹಾಡಿಗೆ ಸಂತೋಷದಿಂದ ಅನುಮತಿಯನ್ನಿತ್ತ ರಂತೆ. ಭೀಮವ್ವನು ಉಡುಪಿ, ಪ್ರಯಾಗ, ಕಾಶಿ, ತಿರುಪತಿ ಮುಂತಾದ ಭಾರತದ ಎಲ್ಲ ಯಾತ್ರೆ ಮಾಡಿಕೊಂಡು ಬಂದು ೧೯೦೨ ನೇ ಇಶ್ವಿಯಲ್ಲಿ ಹೊಸಪೇಟೆಯಲ್ಲಿ ತೀರಿದಳು. ಇವಳ ಮುದ್ರೆ 'ಭೀಮೇಶ ಕೃಷ್ಣ'.

ಇವಳ ತವರು ಮನೆಯ ಹೆಸರು ಭೀಮವ್ವ, ಅತ್ತೆಯ ಮನೆಯ ಹೆಸರು ಕೃಷ್ಣಾ ಆದುದರಿಂದ ಭೀಮೇಶಕೃಷ್ಣ ಎಂಬ ಮುದ್ರಿಕೆಯಿಂದಲೇ ಇವಳು ಕೃಷ್ಣ ದಾನವ್ರತ, ಸುಭದ್ರಾ ಕಲ್ಯಾಣ, ರತಿ ಕಲ್ಯಾಣ, ಮುಯ್ಯದ ಹಾಡು, ನಳಚರಿತ್ರೆ, ಜಲಕ್ರೀಡೆ, ಸುಧಾಮ ಚರಿತ್ರೆ, ಶುಕ್ರವಾರ ಶನಿವಾರದ ಹಾಡು, ಐದು ಶುಕ್ರವಾರದ ಹಾಡು ಮುಂತಾಗಿ ಅನೇಕ ಕವನ, ಹಾಡು, ಒಗಟು ಬಿಡಿ ಪದ್ಯಗಳನ್ನೂ ಬರೆದಿದ್ದಾಳೆ.

ಇಷ್ಟು ವಿಪುಲವಾಗಿ, ಅದೂ ಇಷ್ಟು ಸುಂದರವಾಗಿ ಕನ್ನಡದಲ್ಲಿ ಕೃತಿ ನಿರ್ಮಾಣ ಮಾಡಿದ ಕವಯಿತ್ರಿಯರು ಬೇರೆ ಯಾರೂ ಇಲ್ಲ ಎಂದು ಹೇಳಿದರೆ ಅತಿಶಯೋಕ್ತಿ ಯಾಗಲಿಕ್ಕಿಲ್ಲ. ಭಾರತ, ರಾಮಾಯಣ, ಭಾಗವತಾದಿ ಪೌರಾಣಿಕ ಗ್ರಂಥಗಳಿಂದ ಒಳ್ಳೊಳ್ಳೆ ರಸಘಟ್ಟಗಳನ್ನು ಆಯ್ದುಕೊಂಡು ಅವುಗಳನ್ನು ಕನ್ನಡದ ದ್ವಿಪದೀ ಛಂದಸ್ಸಿನ ದ್ವಿತಿಯಾಕ್ಷರ ಪ್ರಾಸದ ಸರಳ ಸುಂದರ ಶೈಲಿಗೆ ಹೊಂದಿಸಿಕೊಂಡು, ಬಂಧುರವಾಗಿ ಹೇಳಿದ್ದೇ ಭೀಮವ್ವನ ವೈಶಿಷ್ಟ್ಯವಾಗಿದೆ. ವೇದ ಪುರಾಣಗಳನ್ನು ಓದಲಿಕ್ಕೆ ಅಧಿಕಾರವಿಲ್ಲದ ತನ್ನ ಸೋದರ ಸ್ತ್ರೀಯರಿಗೆ ಆ ಶಾಸ್ತ್ರ ಪುರಾಣಗಳ ಕಥೆ ಹಾಗೂ ಅಲ್ಲಿಯ ನೀತಿ ತತ್ವಗಳ ತಿರುಳು ಸರಳವಾಗಿ ತಿಳಿಯಲೆಂದು ಭೀಮವ್ವ ಅವುಗಳನ್ನೆಲ್ಲ ಭಕ್ತಿಯ ಎರಕದಲ್ಲಿ ಕನ್ನಡೀಕರಿಸಿದ್ದಾಳೆ.

ಹರಿವಂಶ ಪುರಾಣದಲ್ಲಿ ಸಂಕ್ಷೇಪವಾಗಿ ಬಂದ ಕೃಷ್ಣದಾನ ವ್ರತದ ಕಥೆಯನ್ನು ಭೀಮವ್ವ ಸ್ವಾರಸ್ಯವಾಗಿ ತನ್ನ ಕೃಷ್ಣದಾನ ಕಥನ ಕವನಕ್ಕೆ ಅಳವಡಿಸಿಕೊಂಡಿದ್ದಾಳೆ. ಇಲ್ಲಿ ವಸ್ತು ಹಳೆಯದಾದರೂ ನೆಯ್ಗೆ ನವೀನವಾಗಿದೆ. ಭಕ್ತಿಯ ಹಾಸಿನಲ್ಲಿ

ಹಾಸ್ಯದ ಹೊಕ್ಕನ್ನು ಹಾಯಿಸಿ ಮಧುರ ಶೃಂಗಾರ ತರಂಗಿತವಾಗುವಂತೆ ಮಾಡಿದ ಈ ಕನ್ನಡ ಕವಿಯಿತ್ರಿಯ ಕಲ್ಪನಾ ವಿಲಾಸ ಕಾವ್ಯ ಕೌಶಲ್ಯಗಳು ನಿಜವಾಗಿಯೂ ಅಪೂರ್ವವಾಗಿವೆ. ಇಲ್ಲಿ ಮಾತು ಮಾತಿಗೆ ಚಮತ್ಕಾರದ ಊಟೆ ಪುಟಿಮು ಭಾವ ಅರಳಿ ನಿಲ್ಲುತ್ತದೆ.

ತುಳಸೀದಳ ಪ್ರಿಯನಾದ ಶ್ರೀಕೃಷ್ಣನಿಗೆ ಅಡವಿಯಲ್ಲಿ ಬೆಳೆದ ತೊಪ್ಪಲ ತಂದು

"ಮಡದಿಯೆಂಬೋರೆ ಮಹಾರಾಯ ಕಡಿಮೆ ಹೆಂಡಿರು ಹದಿನಾರು ಸಾವಿರ
ಮಂದಿ ಬಿಡು ನಿನ್ನ ಚಾಳಿತನವೆಂದ"

ಎಂದು ನಾರದರು ನುಡಿದ ಈ ವ್ಯಂಗ ಮಾತಿನಲ್ಲಿ ಶ್ರೀ ಹರಿಯ ನಡತೆ ಶಂಕಿತವಾದರೂ ಇಲ್ಲಿ ಶುದ್ಧ ಸಾತ್ವಿಕ ಹಾಸ್ಯದಲ್ಲಿ ಭಗವಂತನ ಭಕ್ತವಾತ್ಸಲ್ಯ ಅಂಕಿತವಾಗಿದೆ.

ಅವಳ ದಮಯಂತಿ ಕಲ್ಯಾಣ ಅಥವಾ ನಳಚರಿತ್ರವನ್ನು ಓದಿದಾಗ ಕಣ್ಣೀರು ಕೋಡಿಯೊಡೆಯುವದು. ನಳನನ್ನು ಅಗಲಿದ ದಮಯಂತಿಯ ವಿಲಾಪವು ವ್ಯಾಸ ಭಾರತದ ಕರುಣಾರ್ತವನ್ನೆಲ್ಲ ಕ್ರೋಡಿಕರಿಸಿ ಕನ್ನಡದಲ್ಲಿ "ಶ್ಲೋಕಃ ಶೋಕತ್ವ ಮಾಗತಃ" ಎಂಬಂತಾದದ್ದು ಎಂದು ತೋರುತ್ತದೆ.

ಭೀಮವ್ವನ ಪ್ರತಿಭೆಯ ದಿವ್ಯತೆಯ ಜೊತೆಗೆ ಕಲ್ಪನೆಯ ನವ್ಯತೆಯನ್ನು ಕಾಣಬೇಕಾದರೆ ಅವಳ ರತಿ ಕಲ್ಯಾಣ ಕಾವ್ಯವನ್ನು ಓದಬೇಕು. ಅವಳ ನಾಟ್ಯ ಪ್ರತಿಭೆ ಹಾಗೂ ಕಥಾಂತರೀಕರಣ ಕೌಶಲ್ಯವನ್ನು ತಿಳಿಯಬೇಕಾದರೆ ಶಕುಂತಲಾ ಚರಿತ್ರವನ್ನು ನೋಡಬೇಕು. ಸಂಭಾಷಣೆಯ ಚಾತುರ್ಯ, ವ್ಯಂಗ್ಯೋಕ್ತಿ, ವಕ್ರೋಕ್ತಿಗಳ ವಿಕ್ರಮ ವನ್ನು ಕಾಣಬೇಕಾದರೆ ಅವಳ ಸುಭದ್ರಾ ಕಲ್ಯಾಣವನ್ನು ಪರಿಶೀಲಿಸಬೇಕು. ವಾಣಿಯಲ್ಲಿ ಓಜ, ಓಟದಲ್ಲಿ ತೇಜ, ಬಂಧದಲ್ಲಿ ಅಂದ, ಛಂದದಲ್ಲಿ ಚೆಂದ, ಭಾವೋನ್ಮೇಷದಲ್ಲಿ ಸ್ವಚ್ಛಂದ, ಕಾವ್ಯೋನ್ಮೀಲನದಲ್ಲಿ ಆನಂದ, ಶಬ್ದ ವಿನ್ಯಾಸದಲ್ಲಿ ಪಾಟವ, ಅರ್ಥಾವಿಷ್ಕರಣದಲ್ಲಿ ಹೊಸ ಮಿಂಚು, ಹೆಜ್ಜೆ-ಹೆಜ್ಜೆಗೂ ರಸೋತ್ಕಟಿಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ ಹರಪನಹಳ್ಳಿಯ ಈ ಹೆಂಗಳೆಯ ಸೀರೆ ಹಾಡು, ಸುಧಾಮನ ಹಾಡು, ಐದು ಶುಕ್ರವಾರದ ಹಾಡು, ಶನಿವಾರ ಗೌರಿಯ ಹಾಡು, ವೆಂಕಟೇಶ ಮಹಾತ್ಮ್ಯ ಮುಂತಾದ ರಸಾಲ ಕೃತಿಗಳ ವೈಶಾಲ್ಯವನ್ನು ಪರೀಕ್ಷಿಸಬೇಕು.

ಹರಪನಹಳ್ಳಿ ಭೀಮವ್ವನ ಸಾಹಿತ್ಯಸುಧೆಯ ಹೊನಲಿನ ಹರವು, ಹಸನ, ಹುರುಡುಗಳನ್ನು ಬೇರಾವ ಹೆಂಗಸಿನ ವಾಚೋ ವಿಸ್ತಾರದಲ್ಲಿಯೂ ನಾವು ಕಾಣಲಾರೆವು. ಅವಳ ಕವಿತ್ವ ಪ್ರಜ್ಞೆಯು ಭಕ್ತಿಯ ಭಟ್ಟಿಯಲ್ಲಿಯೇ ವಿವಿಧ ಭಾವಾನುಭಾವಗಳ ಅಭಿವ್ಯಕ್ತಿಗೊಳಿಸುವ ವಿಚಿತ್ರ ಶಕ್ತಿ ಸತ್ವಗಳನ್ನು ಹೊಂದಿದೆ. ಕಿರಿದಾದ ಪದ್ಯಗಳಲ್ಲಿ ದೊಡ್ಡ ಅರ್ಥವನ್ನು ಹುದುಗಿಸಿ ಹೇಳುವ ಹದ ಹವಣು ಭೀಮವ್ವನಿಗೆ ಇದೆ ಎನ್ನುವದಕ್ಕೆ

"ಪ್ರಳಯ ಕಾಲದಲ್ಲಿ ಹರಿಯು ಸರ್ವ ಜೀವರನ್ನೆಲ್ಲ ತನ್ನ ಹೃದಯದೊಳಗಿಂ ಬಿಟ್ಟುಕೊಂಡು ಉಲವು ಮಾಡದಂತೆ ತನ್ನ ಬೆರಳು ಬಾಯೊಳಗಿಟ್ಟು ಚೀಪುತಾ''

''ಅಶೋಕವೃಕ್ಷ ನಿನ್ನ ಮುಂದೆ ಶೋಕದಿಂದ ಬಂದೆ ನಾನು ।
ನಾ ಕೈಮುಗಿದು ಬೇಡಿಕೊಂಬೆ ಅಶೋಕಳನೆ ಮಾಡು ಬೇಗ ॥

ಮುಂತಾದ ಪದ್ಯಗಳೇ ಸಾಕ್ಷಿಯಾಗಿವೆ.

ಸುಭದ್ರಾ ಸ್ವಯಂವರದಲ್ಲಿ ಬಲರಾಮನು ತಮ್ಮ ತಂಗಿ ಸುಭದ್ರೆಯನ್ನು ದುರ್ಯೋಧನನಿಗೆ ಕೊಡುತ್ತೇನೆ ಎಂದಾಗ ಕೃಷ್ಣನು ಆಡಿದ ಮಾತು ಮಾರ್ಮಿಕ ವಾಗಿದೆ. ಕೇಳಿರಿ.

''ಆಣೆ ಮುತ್ತಿನ ಸರ ಕೋಣಕೆ ಕೊಡುವದು ಜಾಣತನವೇ ನಿಮಗೆ
ಮಾಣಿಕದ ಹರಳು ಮಂಗನ ಕೈಯಲ್ಲಿಡುವದೆ ಕಾಣೆನೆಂದನು ಕೃಷ್ಣನು''

ಕಪಟ ಸನ್ಯಾಸಿಯಾದ ಅರ್ಜುನನನ್ನು ಬಲರಾಮನು ಅರಮನೆಗೆ ಕರೆತರೋಣ ಎಂದಾಗ ಕೃಷ್ಣನು

''ಅಣ್ಣ ನನಗೆ ಈ ಸನ್ಯಾಸಿಯು ಪಾಶಗಾರನಾಗಿ ತೋರುವನು । "
ಹೆಣ್ಣಿನಾಶೆಯಿಂದಲಿ ಬಂದಿಹನು ॥

ಎಂದು ನುಡಿಯುವನು. ಆದಕ್ಕೆ ಬಲರಾಮನು ಸಿಟ್ಟಿಗೆದ್ದು ಕೃಷ್ಣನಿಗೆ

" ಸಿಂಹಕೆ ನರಿಯೆಂದಾಡುವರೆ, ಹಡೆದವ್ವಗೆಲ್ಲಾದರೂ ದಾಸಿಯೆಂಬುವರೇ, ಅನ್ಯಾಯ ಮಾತಾಡುವರೆ, ಇಂಥ ಸನ್ಯಾಸಿಗೆ ಹೆಣ್ಣಿನಾಶೆಯೆಂಬುವರೇ, ಉಡುವ ಸೀರೆಗಳನ್ನು ಕದ್ದಿ ನೀ, ಕಡ ಆಲದ ಮರವನೇರಿದ್ದು ಪ್ರಸಿದ್ಧಿ, ಮಡದಿಯರ ಕೂಡ ಕುಚೋದ್ಯ, ಇನ್ನೂ ಬಿಡಲೊಲ್ಲಿ ಭೀಮೇಶ ಕೃಷ್ಣ ನಿನ ಬುದ್ಧಿ.''

ಇವಲ್ಲದೆ ಭೀಮವ್ವ ಅನೇಕ ಬಿಡಿ ಪದಗಳನ್ನೂ ಕಟ್ಟಿದ್ದಾಳೆ. ಕೃಷ್ಣ ರುಕ್ಮಿಣಿಗೆ ಒಂದು ಒಗಟು ಹಾಕಿ ಒಡೆ ಎನ್ನುತ್ತಾನೆ.

''ಕಾಡಿಗೆಗಣ್ಣವಳು ತುಡುಗು ಮಾರಿಯವಳು, ದಾವದಾವಾಗ್ಗೆ ಪರರ ಮನಿ ತಿರುಗೋಳು ನಾರೀ ನೀ ಒಗಟ ಒಡೆಯೆಂದ ॥"

ಆದಕ್ಕೆ ರುಕ್ಮಿಣಿಯು, ''ಅಕ್ಕನ್ನ ಮಾಳಿಗೆಗೆ ಚಕ್ಕನ್ನೇ ಹಾರುವ ಹೆತ್ತುಪ್ಪ ಬೆಣ್ಣೆ ಮೆಲ್ಲುವ ಬೆಕ್ಕು ಮತ್ತೇನೂ ಅರಸರ" ಎಂದು ಸರಳವಾಗಿ ಬಿಡಿಸುವಳು.

ಮತ್ತೆ ಕೃಷ್ಣ "ಹೊರಗೆ ಹೊರಳಿ ಕೋಟಿ, ಒಳಗೆ ಬೆಳ್ಳಿ ಕೋಟೆ ತಿಳಿಸಿರೀನಾಗ ಅಮೃತವ ರುಕ್ಮಿಣಿ ನಾರಿ ಈ ಒಗಟ ಒಡೆಯೆಂದ।"

ಅದಕ್ಕೆ ರುಕ್ಮಿಣಿ "ಅಟ್ಟಂಬೋ ಅಡಿವ್ಯಾಗ ಬೆಟ್ಟಂಬೋ ಗಿಡ ಹುಟ್ಟಿ ತುಟ್ಟ ತುದಿಗೆ ನೂರೆಂಟು ಫಲವಾಗಿ ತೆಂಗಿನಕಾಯಿ ಮತ್ತೇನೂ ಅರಸರ ॥"

ಎಂದು ಲೀಲಾಜಾಲವಾಗಿ ಕೃಷ್ಣನು ಹಾಕಿದ ಒಗಟುಗಳನ್ನೆಲ್ಲ ರುಕ್ಮಿಣಿಯು ಸರಳ ಸುಂದರವಾಗಿ ಬಿಡಿಸಿ ಬಿಡುತ್ತಾಳೆ. ಆದರೆ ಜಾಣೆ ರುಕ್ಮಿಣಿ ಹಾಕಿದ ಗೂಡಾರ್ಥ ವನ್ನು ಮಾತ್ರ ಶ್ರೀ ಕೃಷ್ಣನಿಗೆ ಬಿಡಿಸಲಾಗದೆ ಅಲಗ ಹರಿಯಬೇಕಾಗುತ್ತದೆ. ಈ ಕೌತುಕದ ಸಂವಾದ ಕೇಳಿರಿ.

"ಒಬ್ಬನ್ನ ಒಳಗಿಟ್ಟೆ, ಒಬ್ಬನ್ನ ಹೊರಗಿಟ್ಟೆ, ಒಬ್ಬನ್ನ ನೋಡಿ ನಗುತಿದ್ದೆ ನೆನುತಲೆ ರಂಭೆ ಹಾಕಿದಳು ಒಗಟವ"

ಇದನ್ನು ಒಡೆಯಲಾರದೆ ಕೃಷ್ಣ ಅಲಗ ಹಿರಿದು ನೀನೆ ಅರ್ಥ ಹೇಳು ಎನ್ನು ತ್ತಾನೆ. "ದಾವನ್ನ ಒಳಗಿಟ್ಟೆ, ದಾವನ್ನ ಹೊರಗಿಟ್ಟೆ, ದಾವನ್ನ ನೋಡಿ ನಗುತ್ತಿದ್ದೆ"

ರುಕ್ಮಿಣಿ– ಕಾಡಿಗೆ ಒಳಗಿಟ್ಟೆ, ಕುಂಕುಮ ಹೊರಗಿಟ್ಟೆ, ಕನ್ನಡಿ ನೋಡಿ ನಗುತ್ತಿದ್ದೆ.
ರುಕ್ಮಿಣಿ– ಒಬ್ಬನ್ನ ಕಟ್ಟಿದ್ದೆ, ಒಬ್ಬನ್ನ ಬಿಟ್ಟಿದ್ದೆ, ಒಬ್ಬನ್ನ ಓಳಗೆ ಕರೆದೊಯ್ದೆ?
ಕೃಷ್ಣ—ದಾವನ್ನ ಕಟ್ಟಿದ್ದೆ, ದಾವನ್ನ ಬಿಟ್ಟಿದ್ದೆ, ದಾವನ್ನ ಒಳಗೆ ಕರೆದೊಯ್ದೆ?
ರುಕ್ಮಿಣಿ– ಆಕಳ ಕಟ್ಟಿದ್ದೆ, ಕರುವನ್ನ ಬಿಟ್ಟಿದ್ದೆ ನೊರೆ ಹಾಲು ಒಳಗೆ ಕರೆದೊಯ್ದೆ.
ರುಕ್ಮಿಣಿ–ಒಬ್ಬನ್ನ ಹಾಕಿದ್ದೆ, ಒಬ್ಬನ ನೂಕಿದ್ದೆ,ಒಬ್ಬನ ತೋಳಿಗೆ ತಲೆಗೊಟ್ಟು ಮಲಗಿದ್ದೆ?
ಕೃಷ್ಣ–ದಾವನ್ನ ಹಾಕಿದ್ದೆ, ದಾವನ್ನ ನೂಕಿದ್ದೆ, ದಾವನ ತೋಳಿಗೆ ತಲೆಗೊಟ್ಟು ಮಲಗಿದ್ದೆ?
ರುಕ್ಮಿಣಿ– ಬಾಗಿಲ ಹಾಕಿದ್ದೆ, ಅಗಳಿಯ ನೂಕಿದ್ದೆ, ಭೀಮೇಶ ಕೃಷ್ಣರಾಯನ ತೋಳಿಗೆ ತಲೆಗೊಟ್ಟು ಮಲಗಿದ್ದೆ ಎಂದು ಹೇಳಲು ಕೃಷ್ಣನು ಮುಗುಳು ನಗೆ ನಗಹತ್ತಿದನು.

ಹೀಗೆ ಭೀಮವ್ವನ ಕೃತಿಗಳಲ್ಲಿ— ತಿಳಿಯಾದ ಹಾಸ್ಯ, ಸಾತ್ವಿಕ ಶೃಂಗಾರ, ಗಂಭೀರವಾದ ಕರುಣೆ, ಅಚಲವಾದ ಭಕ್ತಿ, ಪದವಿನ್ಯಾಸದಲ್ಲಿ ಲಾಲಿತ್ಯ, ಸನ್ನಿವೇಶ ದಲ್ಲಿ ಔಚಿತ್ಯ, ಶೈಲಿಯಲ್ಲಿ ಪ್ರಸಾದ ಭೂಯಿಷ್ಠತೆ ಮುಂತಾದ ಶ್ರೇಷ್ಠ ಕಾವ್ಯದ ಸದ್ಗುಣವನ್ನು ಕಾಣಬಹುದು. ನಾರೀ ಸಾಹಿತ್ಯದಲ್ಲಿ— ವೈವಿಧ್ಯ, ವೈಚಿತ್ರ್ಯ, ವೈಪುಲ್ಯ ಮೂರು ದೃಷ್ಟಿಯಿಂದ ಭೀಮವ್ವನ ಕೃತಿಗಳು ಅಪ್ರತಿಮವಾಗಿವೆ. ಆದುದ ರಿಂದಲೇ ಭೀಮವ್ವನಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ವೈಶಿಷ್ಟ್ಯಪೂರ್ಣವಾದ ಸ್ಥಾನವಿದೆ.

ಸರ್ವಶ್ರೀ ಕಲಮುದಾನಿ ಗುರುರಾಯರು, ಸರೋಜಿನಿ ಮಹಿಷಿ, ಆರ್. ನರಸಿಂಹಾಚಾರ್ಯ, ಬೆಟಗೇರಿ ಕೃಷ್ಣಶರ್ಮ, ಆರ್. ಕಲ್ಯಾಣಮ್ಮ ಮುಂತಾದವರು ಸಂಕ್ಷೇಪ ವಿಸ್ತಾರಗಳಿಂದ ಕರ್ನಾಟಕದ ಹರಿದಾಸರು, ಕರ್ನಾಟಕದ ಕವಯಿತ್ರಿಯರು, ಕನ್ನಡ ಕವಿಚರಿತೆ, ಸಾಹಿತ್ಯವು ಸಾಗಿದ ದಾರಿ ಮುಂತಾದ ತಮ್ಮ-ತಮ್ಮ ಗ್ರಂಥಗಳಲ್ಲಿ ಕನ್ನಡದ ಭಕ್ತ ಕವಯಿತ್ರಿಯೂ, ವಿರಕ್ತ ವನಿತೆಯೂ ಆದ ಭೀಮವ್ವನ ಸಂಕ್ಷಿಪ್ತ ಜೀವನದ ಪರಿಚಯ ಹಾಗೂ ಕೃತಿ-ಪರಾಮರ್ಶಗಳನ್ನು ಮಾಡಿದ್ದಾರೆ.

ಭೀಮವ್ವನು ತಾನು ಬದುಕಿದ್ದಾಗ ಗದುಗಿಗೂ ಬಂದಿದ್ದಳೆಂದು ಐತಿಹ್ಯವಿದೆ. ಅವಳು ಇಲ್ಲಿಗೆ ಬಂದು ವೀರನಾರಾಯಣ ಹಾಗೂ ಲಕ್ಷ್ಮೀನರಸಿಂಹ ದೇವರ ದರ್ಶನ ತೆಗೆದುಕೊಂಡು ಕುಮಾರವ್ಯಾಸನ ಕಾವ್ಯ ಸ್ಫೂರ್ತಿಯ ಸೆಲೆ ನೆಲೆಯಾದ ಈ ಕ್ರತುಪುರದ ಆಧ್ಯಾತ್ಮನಿಷ್ಠವಾದ ಕಾವ್ಯಮಯ ವಾತಾವರಣದಿಂದ ತುಂಬ ಪ್ರಭಾವಿತಳಾಗಿದ್ದಳಂತೆ.

ಆ ಕಾಲದಲ್ಲಿ ಗದುಗಿನಲ್ಲಿ ಸೊರಟೂರ ಭೀಮಸೇನಾಚಾರ್ಯರೆಂಬ ನ್ಯಾಯಶಾಸ್ತ್ರದ ದಿಗ್ಗಜ ಪಂಡಿತರಿದ್ದರು. ವಾಕ್ಯಾರ್ಥ ವಾದ ವಿವಾದಗಳಲ್ಲಿ ಆ ಕಾಲದಲ್ಲಿ ಆಚಾರ್ಯರ ಕೈ ಹಿಡಿಯುವರಾರೂ ಇದ್ದಿರಲಿಲ್ಲ.

ಇಂಥ ಉದ್ದಾಮ ಪಂಡಿತರಾದ ಶ್ರೀ ಸೊರಟೂರ ಭೀಮಸೇನಾಚಾರ್ಯರನ್ನು ಭೀಮವ್ವನು ಕಂಡು ಅವರಿಗೆ ತನ್ನ ಕಾವ್ಯಗಳನ್ನೂ, ಭಕ್ತಿ ಗೀತೆಗಳನ್ನೂ ಓದಿ ತೋರಿಸಿದಳಂತೆ. ಗುಣಗ್ರಾಹಿಗಳಾದ ಶ್ರೀ ಭೀಮಸೇನಾಚಾರ್ಯರು ಭೀಮವ್ವನ ಎಲ್ಲ ಕಾವ್ಯ ಹಾಡುಗಳನ್ನು ಅಲ್ಲಲ್ಲಿ ಓದಿಸಿ ಕೇಳಿ ಆನಂದಬಟ್ಟು ಅವಳ "ದಾನವ್ರತ" ಎಂಬ ಕಾವ್ಯವನ್ನು ಮಾತ್ರ ಮೊದಲಿನಿಂದ ಕೊನೆಯ ವರೆಗೂ ಓದಿಸಿ ಕೇಳಿ ಸಂತೋಷಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರಂತೆ.

ಇವಳ ಕೃತಿಗಳಲ್ಲಿ ಬಹುಭಾಗವು ಮುದ್ರಣದ ಮುಖ ಕಾಣದೇ ಬರೀ ಕೆಲ ಹಳೇ ಹೆಂಗಳೆಯರ ಬಾಯಲ್ಲಿ ಉಳಿದುಕೊಂಡಿವೆ. ಮತ್ತೆ ಕೆಲವು ಕೃತಿಗಳು ಉಡುಪಿಯ ಮಧ್ವ ಸಿದ್ಧಾಂತ ಗ್ರಂಥಾಲಯದ ಪಾವಂಜೆ ಗುರುರಾಯರಿಂದ ಪ್ರಕಟಿಸಲ್ಪಟ್ಟಿವೆ. ಎಷ್ಟೋ ಪದ್ಯಗಳ ಸಂಕಲನ ಪುಸ್ತಕಗಳಲ್ಲಿಯೂ ಅಚ್ಚಾಗಿವೆ. ಆದರೂ ಅಚ್ಚಾಗದೇ ಅಲ್ಲಲ್ಲಿ ಇದ್ದು-ಬಿದ್ದು ಹೋಗುತ್ತಿರುವದೇ ಹೆಚ್ಚು. ಸಂಶೋಧಕರು ಅವುಗಳನ್ನೆಲ್ಲ ಸಂಗ್ರಹಿಸಿ, ಶೋಧಿಸಿ ಪ್ರಕಟಪಡಿಸಿದರೆ ಈ ಕವಯಿತ್ರಿಯ ಆಧ್ಯಾತ್ಮಿಕ ಕಾವ್ಯ ಪ್ರತಿಭೆಯ ಎಲ್ಲ ಎಸಳುಗಳ ಸೊಬಗು-ಸೊಗಸುಗಳನ್ನು ತಿಳಿಯಲಿಕ್ಕೆ ಅನುಕೂಲವಾಗುವದು.

## ೬ ತುಂಗಮ್ಮ

ಸುರಪುರದ ಆನಂದದಾಸರ ಮಗಳಾದ ತುಂಗಮ್ಮನೂ ಅನೇಕ ಪದಪದ್ಯ ದೇವರ ನಾಮಗಳನ್ನು ರಚಿಸಿದ್ದು ಕಂಡುಬರುತ್ತದೆ. ಇವಳು ರಾಯಚೂರಿನಲ್ಲಿ ವಾಸ ವಾಗಿದ್ದಳು. ಪಂಡಿತರಿಗೆ ದುರ್ಗಾಹವಾದ ವೇದಾಂತ ಪ್ರಮೇಯಗಳನ್ನು ಲಲಿತ ಶೈಲಿಯಲ್ಲಿ ಹೇಳುವದು ತುಂಗಮ್ಮನ ವೈಶಿಷ್ಟ್ಯವಾಗಿದ್ದಿತು.

ಆನಂದದಾಸರ ಶೈಲಿಯ ಪ್ರಭಾವವು ತುಂಗಮ್ಮನ ತರಂಗಮಯ ಸಾಹಿತ್ಯ ಸರಣಿಯಲ್ಲಿ ಪ್ರತಿಬಿಂಬಿತವಾದದ್ದು ಕಂಡುಬರುತ್ತಿದೆ. ತುಂಗಮ್ಮನು ತನ್ನ ಮಧುರ ಕಂಠದಿಂದ ಹಾಡತೊಡಗಿದರೆ ಹಾವು ಹೆಡೆ ತೂಗುತ್ತಿದ್ದವು. ಆವು ಮೇವು ತಿನ್ನದೆ ಕಿವಿ ನಿಮಿರಿ ನಿಲ್ಲುತ್ತಿದ್ದವು ಎಂದು ಹಿರಿಯರು ಹೇಳುತ್ತಿದ್ದವು.

## ೬ ಓರಬಾಯ ಲಕ್ಷ್ಮೀದೇವಮ್ಮ

ಸೊಂಡೂರು ಸಂಸ್ಥಾನದ ದಿವಾನರಾಗಿದ್ದ ಆಚಪ್ಪ ನಾಯಿಕರ ಅಚ್ಚುಮೆಚ್ಚಿನ ಮಗಳೇ ಲಕ್ಷ್ಮೀದೇವಮ್ಮ. ಇವಳು ಹುಟ್ಟಿದ್ದು ಬಳ್ಳಾರಿ ಜಿಲ್ಲೆ ಸೊಂಡೂರಿನಲ್ಲಿ. ಗುತ್ತಿಯಲ್ಲಿ ವಕೀಲರಾಗಿದ್ದ ಓರಬಾಯ ಮಾಧವರಾಯರಿಗೆ ಇವಳನ್ನು ಧಾರೆಯೆರೆದು ಕೊಡಲಾಗಿತ್ತು.

ಮಾಧವರಾಯರು ಬೇಗನೆ ತೀರಿಕೊಂಡದ್ದರಿಂದ ಲಕ್ಷ್ಮೀದೇವಮ್ಮನಿಗೆ ಬಾಲ ವೈಧವ್ಯವು ಪ್ರಾಪ್ತವಾಯಿತು. ಅಂದಿನಿಂದ ಆವಳು ಸಂಸಾರದಿಂದ ಮನಸ್ಸು ತಿರುಗಿಸಿ ಕಂಸಾರಿಯ ಸೇವೆಯಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸಿದಳು.

ಪುರಂದರಾದಿ ದಾಸರಾಯರ ಭಕ್ತಿಗೀತಗಳನ್ನೆಲ್ಲ ಆಮೂಲಾಗ್ರವೆಲ್ಲ ಅಧ್ಯಯನ ಮಾಡಿ, ಹಾಡಿ, ಪಾಡಿ ಅಹರ್ನಿಶ ಭಗವಧ್ಯಾನವನ್ನು ಮಾಡುತ್ತಲಿದ್ದಳು.

ಬಳ್ಳಾರಿಯಲ್ಲಿ ಶ್ರೀ ನರಸಿಂಹ ದೇವರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ತನ್ನ ಸರ್ವಸ್ವವನ್ನೂ ಧಾರೆ ಎರೆದುಕೊಟ್ಟಳು. ಸಾಯುವ ವರೆಗೂ ಶ್ರೀ ನರಸಿಂಹ ದೇವರ ಸೇವೆ ಮಾಡಿ ಕೃತಾರ್ಥಳಾದಳು.

ದಾಸ ಸಾಹಿತ್ಯದ ನಿರಂತರ ಚಿಂತನ ಮಂಥನದಿಂದ ಹಾಗೂ ಧ್ಯಾನಗಾನಗಳಿಂದ ಅವಳಲ್ಲಿ ಸುಪ್ತವಾದ ಕವಿತ್ವಶಕ್ತಿಗೆ ಅಂಕುರ ಒಡೆಯಿತು. ಅಂತರಂಗದ ಅಂತರಾಳದಲ್ಲಿ ಕಡಲಾಡುವ ಭಕ್ತಿಭಾವವು ಹಾಡಿನ ರೂಪದಿಂದ ಹೊಮ್ಮಿ ಹರಿಯಿತು.

ಭಕ್ತಿ ಪ್ರಧಾನವಾದ ಲಕ್ಷ್ಮೀದೇವಿಯ ಕೃತಿಗಳಲ್ಲಿ ಅವಳ ಕನ್ನಡ ಸಾಹಿತ್ಯದ ಆಳವಾದ ಅಭ್ಯಾಸ, ಪ್ರಮೇಯ ಪರಿಜ್ಞಾನ, ಕಲ್ಪನಾಕೌಶಲ ಮೂರೂ ಮುಪ್ಪುರಿಗೊಂಡು ರಸಾಲತೆಯನ್ನು ಒದಗಿಸುತ್ತವೆ. ಲಕ್ಷ್ಮೀಬಾಯಿಗೆ ಮಂತ್ರಾಲಯದ ಗುರು ಸಾರ್ವಭೌಮರಲ್ಲಿ ನಿರತಿಶಯ ವಾದ ಭಕ್ತಿ, ರಾಯರ ಮೇಲಿನ ಅವರ ಪದಗಳಲ್ಲಿ ಶಬ್ದಾಲಂಕಾರ ವೈಭವವು ಅರ್ಥಚಮತ್ಕೃತಿಯೊಡನೆ ಸಹೃದಯ ವೇದ್ಯವಾಗುತ್ತದೆ. ಪ್ರತಿ ನುಡಿಯ ಮೊದಲಿನ ಅಕ್ಷರವನ್ನು ಕೂಡಿಸಿದರೆ ರಾಘವೇಂದ್ರ ಎಂಬ ಶಬ್ದವು ನಿಷ್ಪನ್ನವಾಗುವಂತೆ ಒಂದು ಪದ್ಯವನ್ನು ರಚಿಸಿದ್ದಾಳೆ.

"ರಾಮಧ್ಯಾನವ ಮಾಡುತ ಮನದಲಿ ಜಯಿಸಿದ ರಾಕ್ಷಸರಾ ।
..............................................................
ಘನ ಜಾಡ್ಯಗಳ ಕಳೆದು ಜನರಿಗೆ ಸುರಸುವಿ ಸುಖಮೇಘ ।
..............................................................
ವೇದಶಾಸ್ತ್ರ ಪಾರಾಯಣ ಮಾಡುತ್ತ ವೃಂದಾವನದಿರುವೆ ।
..............................................................
ದ್ರಾಕ್ಷಾ ಫಲದಂಥ ಮಧುರವ ತಂದ ತೋರೊ ಗುರು ಸಾಂದ್ರಾ"
..............................................................

ಲಕ್ಷ್ಮೀಬಾಯಿಯ ಅಂಕಿತವು ನರಸಿಂಹ ವಿಠ್ಠಲ. ಪ್ರಲ್ಹಾದ, ನಾರದ, ಪುರಂದರ ಪುಂಡರೀಕ ಮುಂತಾದ ಭಗವದ್ಭಕ್ತರಂತೆ ಭಗವಂತನನ್ನೇ ಮೊರೆ ಹೊಕ್ಕ ಲಕ್ಷ್ಮೀಬಾಯಿಯ ಶ್ರೀ ಹರಿಯ ಕರೆಯಲ್ಲಿ ಆರ್ತ ಭಕ್ತಿಯ ಉತ್ಕಟತೆಯು ಕರಳು ಕರಗಿಸುವ ಕಾರುಣ್ಯದಲ್ಲಿ ಓತ-ಪ್ರೋತವಾಗಿ ಹರಿದಿದೆ.

"ಎಂಥೆಂಥವರ ನೀ ಪೊರೆದಿ ಎನ್ನಂಥವರು ನಿನಗೇನು ಅರಿದು ।
ಪಂಥದಿಂದ ನಾ ನಿನ್ನ ಕರೆದೇನೆ ।
ಮನದ ಚಿಂತೆಗಳಾ ನಾ ತೊರೆದು ।
ತಪ್ಪೇನು ಮಾಡಿದೆನೋ ನಾನು ।
ಸರ್ವ ಒಪ್ಪಿಕೊಳ್ಳೊ ಸ್ವಾಮಿ ನೀನು ।
ನೀನು ಒಪ್ಪದಿದ್ದರೆ ಗತಿಯೇನು ।
ನಮ್ಮಪ್ಪ ಕ್ಷಮಿಸೋ ಕಾಮಧೇನು ॥"

ಲಕ್ಷ್ಮೀಬಾಯಿಯ ಪದ್ಯಗಳಲ್ಲಿ, ಪ್ರಾಸದ ಚೌಕಟ್ಟಿನಲ್ಲಿ ಉಂಗುರದಲ್ಲಿ ಹರಳನಿಟ್ಟಂತೆ ಅಚ್ಚುಕಟ್ಟಾಗಿ ಜೋಡಿಸಿ ಕೂಡಿಸಿದ ಮಾರ್ಮಿಕವಾದ ಮಾತು ತನ್ನ ಅಚ್ಚುಕಟ್ಟುತನದಿಂದ ಮುಕ್ತಕದ ಮಾತಿನಂತೆ, ಸುಂದರವಾದ ನಾಣ್ಣುಡಿಯಂತೆ ಹೃದಯ ಸ್ಪರ್ಶಿಯಾಗಿ ಭಾವ ತೀವ್ರತೆಯನ್ನು ವ್ಯಕ್ತಗೊಳಿಸುತ್ತದೆ.

'ನಿನ್ನ ಮೆಚ್ಚಿಸಲೆನಗಿಲ್ಲ ಶಕ್ತಿ ।
ಕೇಳೋ ಘನಮಹಿಮಕೊಡೆನಗೆ ಭಕ್ತಿ ॥
ಇನ್ನು ಬೇಡುವೆನು ವಿರಕ್ತಿ ।
ಎನಗೆ ಚನ್ನಾಗಿ ಪಾಲಿಸೋ ಮುಕ್ತಿ ॥"

ಸಂಸ್ಕೃತದ ಶ್ಲೇಷಾಲಂಕಾರಕ್ಕೆ ಕನ್ನಡ ಕವಚ ತೊಡಿಸಿ ಅದು ಕನ್ನಡ ಸಾಹಿತ್ಯದ ಎರೆನೆಲದಲ್ಲಿಯೇ ಹುಟ್ಟಿದ ಅಲಂಕಾರವೋ ಏನೋ ಎನ್ನುವಂತೆ ಮಾಡಿದ್ದಾಳೆ ಲಕ್ಷ್ಮೀಬಾಯಿ. ಹಳೆಗನ್ನಡ ಕಾವ್ಯದಲ್ಲಿ ಬರುವ ಶ್ಲೇಷಾಲಂಕಾರಗಳಲ್ಲಿ ನೂರಕ್ಕೆ ೯೮ ಪಾಲು ಸಂಸ್ಕೃತದಿಂದ ಎರವು ತಂದವುಗಳೇ. ಆದರೆ ಈ ಲಕ್ಷ್ಮೀಬಾಯಿಯು ವಿದಗ್ಧ ಕಲ್ಪನಾಕೌಶಲ್ಯದಿಂದ ಅಚ್ಚ ಕನ್ನಡದ ಅಲಂಕಾರದ ಪಡಿಯಚ್ಚಿನಲ್ಲಿಯೇ ಶ್ಲೇಷ, ಉತ್ಪ್ರೇಕ್ಷೆ, ಉಪಮೆ ಮುಂತಾದ ರಸಾಲಂಕಾರಗಳನ್ನು ವಿನೂತನವಾಗಿ ವಿರಚಿಸಿ ಬರೆದಿದ್ದಾಳೆ. ಆವಳ ಸ್ವಂತಿಕೆಯ ಧೀಮಂತಿಕೆಯ ಅಚ್ಚು ಒತ್ತಿದಂತಿದ್ದ ಈ ಶುದ್ಧ ಕನ್ನಡದ ಶ್ಲೇಷಾಲಂಕಾರದ ಸೊಬಗನ್ನು ನೋಡಿರಿ—

"ನಿನ್ನ ದಾಸರ ಬಿಟ್ಟು ನಾ **ಬಾಳೆ** ಕಾಯೋ ।
ಪ್ರಸನ್ನ ಮೂರುತಿ ಹರಿ ನೀ **ನೆಂಬೆ** ಕಾಯೋ ।
ಮಾರ ಜನಕನೆ ಅಳಿದ **ಮಾವನ್ನ** ಕಾಯೋ ।
ಸಾರೆ ಕರೆದರೆ ಯಾಕೆ ನೀ **ಬಾರೆ** ಕಾಯೋ ।
ಮಾರ ಜನಕ ಶ್ರೀ ನರಸಿಂಹ ವಿಠ್ಠಲ ನೀ ।
ಮಾಡಿದ್ದೆಲ್ಲವೂ ಎನಗೆ **ಸಮತೆ** ಕಾಯೋ ॥"

ಈ ಪದ್ಯದಲ್ಲಿ ಬಾಳೆಕಾಯಿ, ನಿಂಬೆಕಾಯಿ, ಮಾವಿನ ಕಾಯಿ, ಬಾರೆ ಕಾಯಿ, ಸಮತೆ ಕಾಯಿ ಮುಂತಾದ ಶಬ್ದಗಳನ್ನೆಲ್ಲ ಚಿತ್ರವಾದ ಶ್ಲೇಷಾರ್ಥದಲ್ಲಿ ಉಪಯೋಗಿಸಿ ಬೇರೊಂದು ಅರ್ಥವೂ ಸಂದರ್ಭ ವಶದಿಂದ ಪರಿಸ್ಫುರಿಸುವಂತೆ ಶಬ್ದ ಪ್ರಯೋಗ ಮಾಡಿ ದೇವರನ್ನು ರಕ್ಷಣೆ ಮಾಡು ಎಂದು ಪ್ರಾರ್ಥಿಸಲಾಗಿದೆ.

ಲಕ್ಷ್ಮೀದೇವಿಯ ಕಾವ್ಯದಲ್ಲಿ ಸಾಹಿತ್ಯಶ್ರೀ ಭಕ್ತಿದೇವಿಯ ಕಿಂಕರಿಯಾಗಿ ಭಾವ ಬನಶಂಕರಿಯಾಗಿ ಮೈದೋರಿದೆ.



# ಪ್ರಕರಣ: ೯

# ಮಧ್ವ ಸಿದ್ಧಾಂತ ರಕ್ಷಕರು

"ವಿನಾಶ್ರಯಾ ನ ಶೋಭಂತೆ ಪಂಡಿತಾಃ ವನಿತಾಃ ಲತಾಃ"

ಆಶ್ರಯವಿಲ್ಲದೆ ಪಂಡಿತರು, ಬಳ್ಳಿಗಳು, ಸ್ತ್ರೀಯರು ಶೋಭಿಸುವದಿಲ್ಲ ಎಂದು ಒಂದು ಸಂಸ್ಕೃತ ನಾಣ್ಣುಡಿ ಏನೋ ಇದೆ. ಅದು ಬಳ್ಳಿ ಹಾಗೂ ಅಬಲೆಯರ ವಿಷಯದಲ್ಲಿ ನಿಜವಾಗಿದ್ದರೂ ಪಂಡಿತರ ವಿಷಯದಲ್ಲಿ ಅದರಲ್ಲಿಯೂ ವಿರಕ್ತರಾದ ಮಾಧ್ವ ವಾಙ್ಮಯ ತಪಸ್ವಿಗಳ ವಿಷಯದಲ್ಲಿ ಮಾತ್ರ ಯಥಾರ್ಥವೆನಿಸಲಾರದು.

ಭಗವಂತನನ್ನು ಮಾತ್ರ ನಿರಪಾಯ ಆಶ್ರಯವೆಂದು ನಂಬಿ ನಡೆದ ಮಧ್ವ ಮತದ ಮಹಾನುಭಾವರಿಗೆ ಯಾವ ರಾಜರ ಹಂಗು ಏನು ? ಯಾವ ಶಿರಿವಂತರ ಪರಿವೆ ಏನು ? ಶ್ರೀ ಟೀಕಾಚಾರ್ಯರಂಥ ಮಹನೀಯರು

"ಯತಿವರತಿಲಕೋಸೌ ಯಾವನಾಳಾ ದುವಾಸ"

ನುಚ್ಚು ರೊಟ್ಟಿ ತಿಂದು, ಬೆಟ್ಟದ ಗವಿಗಳಲ್ಲಿದ್ದು ಸುಧಾದಿ ಗ್ರಂಥಗಳನ್ನು ಬರೆದು ಲೋಕೋದ್ಧಾರ ಮಾಡಿದ ಪುಣ್ಯಾತ್ಮರಿಗೆ ಯಾವ ಅರಸನ ಸಹಾಯ ಬೇಕಾದೀತು ! ಏತಕ್ಕೆ ಬೇಕಾದೀತು !

ಆದರೆ ಸರ್ವಭೂತಹಿತರಾದ ಈ ಮಧ್ವಗುರುಗಳಿಗೂ, ಅವರ ಅನುಯಾಯಿ ಮುನಿಗಳಿಗೂ,ರಾಜ ಎಂದು ದ್ವೇಷವಿಲ್ಲ. ರಂಕ ಎಂದು ತೋಷವಿಲ್ಲ. ಅನುಗ್ರಹವನ್ನು ಯಾಚಿಸಿ ಬಂದವರಿಗೆಲ್ಲ ಸರಿಯಾದ ದಾರಿ ತೋರಿ ತತ್ವಜ್ಞಾನದ ಬೆಳಕು ಬೀರಿ ಅಧ್ಯಾತ್ಮ ಪಥದಲ್ಲಿ ಮುಂದುವರೆಯುವಂತೆ ಮಾಡುವದೇ ಅವರ ಮುಖ್ಯ ಕರ್ತವ್ಯವಾಗಿತ್ತು.

ಅರಸನೆಂಬ ಆದರವೂ ಇಲ್ಲ. ಆಗಸನೆಂದು ಅಸಡ್ಡೆಯೂ ಇಲ್ಲ. ಯಾರೇ ಬಂದರೂ ' ಶಿಷ್ಯಸ್ತೇಹಂ ' ಎಂದರೂ ಅವರಿಗೆ ಅವರವರ ಜಾತಿ, ಧರ್ಮಗಳನುಸರಿಸಿ ಉಪದೇಶಗೈದು ಭಗವಂತನ ಸಮೀಪಕ್ಕೆ ಹೋಗಲು ಸಾಧ್ಯವಾದಷ್ಟು ಅನುವು ಅನುಕೂಲತೆಗಳನ್ನು ಒದಗಿಸಿ ಕೊಟ್ಟಿದ್ದಾರೆ.

ಎಷ್ಟೋ ಜನ ರಾಜಮಹಾರಾಜರು, ಅಧಿಕಾರಿ ಐಶ್ವರ್ಯವಂತರು ಮಾಧ್ವ ಸಾಧುಗಳ ಈ ನಿಸ್ಪೃಹ, ನಿಷ್ಕಾಮ ವೃತ್ತಿ ಪ್ರವೃತ್ತಿಗಳನ್ನು ಅನುಲಕ್ಷಿಸಿ ಭಕ್ತಿ ನಮ್ರತೆಗಳಿಂದ ಅವರ ಉಪಸತ್ತಿಯನ್ನು ಮಾಡಿ ಅವರ ದಯೆಯಿಂದ ಆತ್ಮೋದ್ಧಾರಮಾಡಿಕೊಂಡಿದ್ದಾರೆ. ಅವರನ್ನು ಯಾಚಿಸಿ, ಪ್ರಾರ್ಥಿಸಿ ತಮ್ಮ ಬಯಕೆಯನ್ನು ಸೂಚಿಸಿ ಆ ಮಾಧ್ವ ಮಹಾ ಯೋಗಿಗಳು ಕೈಕೊಂಡ ಧರ್ಮಜಾಗೃತಿ, ಸಿದ್ಧಾಂತ ಪ್ರಸಾರ ಕಾರ್ಯಗಳಲ್ಲಿ ಸ್ವಯಂ ಪ್ರೇರಣೆಯಿಂದ ಸ್ವಸಂತೋಷದಿಂದ ಯಥಾ ಶಕ್ತಿ ಸೇವೆ ಸಲ್ಲಿಸಿ ಶ್ರೇಯೋಭಾಗಿಗಳಾಗಿದ್ದಾರೆ.

ಶ್ರೀಮಧ್ವಾಚಾರ್ಯ, ಶ್ರೀ ಜಯತೀರ್ಥರ ನಂತರ ಎಲ್ಲ ಕಡೆಗೂ ದಾಗುಂಡಿ ಇಟ್ಟು ಬೆಳೆಯುತ್ತ ನಡೆದ ವೈಷ್ಣವ ಮತದ ವ್ಯಾಪಕವಾದ ಅಭಿವೃದ್ಧಿ, ಸಾಮಾಜಿಕ ಸಂಘಟನೆ, ವ್ಯಾವಹಾರಿಕ ಭದ್ರತೆಗಳಿಗಾಗಿ ಕೈಂಕರ್ಯದಿಂದ ಕೈಕಟ್ಟಿಕೊಂಡು ಭೃತ್ಯಭಾವದಿಂದ ಸೇವಾರ್ಥಿಯಾಗಿ ಸ್ವಯಮುಪನತವಾದ ರಾಜಾಶ್ರಯವು ಸಿದ್ಧಾಂತ ಪ್ರಸಾರಕ್ಕೆ ಅನುಕೂಲವೇ ಆಯಿತು.

ಅದರಿಂದ ಮಧ್ವ ಮತದ ಹರವು ಹಬ್ಬುಗೆಗಳಿಗೆ ಸಾಕಷ್ಟು ಸೌಲಭ್ಯವು ಒದಗಿತು. ಅಂಥ ಲೌಕಿಕ ಜನರೂ ಶಿಷ್ಯ ಭಾವದಿಂದ ಸೇವೆಮಾಡಿ ಕೃತಾರ್ಥರಾದರು.

ಲೌಕಿಕದಲ್ಲಿದ್ದುಕೊಂಡೂ ಹರಿ-ಗುರುದಾಸ್ಯ-ಭೃತ್ಯಮನೋಭಾವದಿಂದ ಮಾಧ್ವ ಮಹಾನುಭಾವರ ಆಜ್ಞಾನುವರ್ತಿಗಳಾಗಿ ಮಧ್ವಮತದ ಹಾಗೂ ಸಿದ್ಧಾಂತ ಪ್ರಸಾರ ಕಾರ್ಯದಲ್ಲಿ ತಮ್ಮ ಪಾಲಿನ ಅಳಿಲಿ ಸೇವೆಯನ್ನು ಸಲ್ಲಿಸಿದ ಹಲವಾರು ರಾಜ ಮಹಾ ರಾಜರ, ಶ್ರೇಷ್ಠಿ, ಸಾಹುಕಾರರ, ಲೌಕಿಕ ಪ್ರತಿಷ್ಠಿತರ, ಗೃಹಸ್ಥ, ಅಧಿಕಾರಿಗಳ ಅಲ್ಪ ಪರಿಚಯವನ್ನು ಇಲ್ಲಿ ನಮಗೆ ಲಭ್ಯವಾದಷ್ಟು ಮಾಡಿಕೊಡಲಾಗಿದೆ.

## ೧ ಜಯಸಿಂಹ ಮಹಾರಾಜ

ಶ್ರೀ ಮಧ್ವಾಚಾರ್ಯರ ಜೀವನದಲ್ಲಿ ಆನುಷಂಗಿಕವಾಗಿ ಅನೇಕ ಅರಸರ ಸಂಪರ್ಕ ಬಂದರೂ ಅವರ ವಿಶೇಷ ಅನುಗ್ರಹಕ್ಕೆ ಪಾತ್ರನಾದವನೆಂದರೆ ಜಯಸಿಂಹ ರಾಜನು. ಆಚಾರ್ಯರು ಆಸೇತು ಹಿಮಾಚಲ ಸಂಚರಿಸಿ ಅದ್ವೈತ ಮತವು ಅವೈದಿಕವೆಂದೂ, ಪ್ರಚ್ಛನ್ನ ಬೌದ್ಧ ಮತವೆಂದೂ ಸಿದ್ಧಮಾಡಿ ತೋರಿಸಿ ಎಲ್ಲೆಡೆಗೂ ಡಂಗುರವೆನ್ನು ಹೊಡೆಯಲು ಎಷ್ಟೋ ಅದ್ವೈತ ಸ್ವಾಮಿಗಳಿಗೆ ಹೊಟ್ಟೆಕಿಚ್ಚು ಭುಗಿಲ್ಲೆಂದಿತು. ಆದರೆ ಮಾಡುವದೇನು !

ಅವಮಾನಿತರಾದ ಅವರು ಗುರುಮಧ್ವರೊಡನೆ ವಾದ ಹೂಡಿದಾಗಲೆಲ್ಲ ಮುಖ ಭಂಗವಾಗಿ ಸಭೆಯಲ್ಲಿಯೇ ಅವರಿಗೆ ಮಂಗಳಾರತಿ ಆಗುತ್ತಿತ್ತು. ದಿನದಿನಕ್ಕೆ ಮಧ್ವರ ಕೀರ್ತಿಯೂ ದ್ವೈತ ಸಿದ್ಧಾಂತದ ಪ್ರಸಾರವೂ ಅಭಿವೃದ್ಧಿ ಹೊಂದುತ್ತ ನಡೆದವು.

ವಾದಲ್ಲಿ ಅವರನ್ನು ಸೋಲಿಸುವದಂತೂ ಕೈಲಾಗದ ಮಾತಾಗಿತ್ತು. ಕೊನೆಗೆ ಅವರು ಮಧ್ವಾಚಾರ್ಯರ ಗ್ರಂಥ ಭಂಡಾರವನ್ನೆಲ್ಲ ಕದ್ದುಬಿಟ್ಟರು.

ಪುಂಡರೀಕಪುರಿ, ಪದ್ಮತೀರ್ಥರೇ ಮೊದಲಾದ ಕೆಲವು ಮಾಯಾವಾದಿಗಳು ಆಚಾರ್ಯರಿಂದ ವಾದದಲ್ಲಿ ಸೋತು ಕೊನೆಗೆ ಇಂಥ ಕಳ್ಳತನದ ಕೀಳುತನಕ್ಕೆ ಇಳಿದರು. ಪುಸ್ತಕಗಳನ್ನು ಕದ್ದರೆ ದ್ವೈತ ಸಿದ್ಧಾಂತವೇ ಲುಪ್ತವಾಗಿ ಬಿಡುತ್ತದೆಂದು ಅವರ ಕಲ್ಪನೆಯಾಗಿತ್ತು. ಭೂಗೋಲ ಪುಸ್ತಕವನ್ನು ಕಳವು ಮಾಡಿದರೆ ಭೂಮಿಯೇನು ಮುಳಗಿ ಹೋಗುವದಿಲ್ಲವಷ್ಟೆ! ಅಂಥ ಸಹಸ್ರಾರು ಗ್ರಂಥಗಳನ್ನು ಸೃಜಿಸಬಲ್ಲ ಆಚಾರ್ಯರು ಯಥಾ ಪ್ರಕಾರ ತಮ್ಮ ಪಾಠ ಪ್ರವಚನ, ಉಪನ್ಯಾಸಗಳಿಂದ ಧರ್ಮೋಪದೇಶ ಮಾಡುತ್ತ ಪ್ರಾಗ್ರ್ಯವಾಟ ಗ್ರಾಮದಿಂದ ಸ್ವಾರಾಜ್ಯ ಗ್ರಾಮಕ್ಕೆ ದಯಮಾಡಿಸಿದರು. ಅದೇ ಗ್ರಾಮದಲ್ಲಿಯೇ ಗ್ರಂಥ ಭಾಂಡಾರವನ್ನು ಕದ್ದ ಪದ್ಮತೀರ್ಥಾದಿಗಳು ಆ ಪುಸ್ತಕಗಳನ್ನೆಲ್ಲ ಅಲ್ಲಿಯೇ ಬಿಟ್ಟು ಯಾರಿಗೂ ಹೇಳದೆ ಕೇಳದೆ ಅಪರಾತ್ರಿಯಲ್ಲಿ ಓಡಿಹೋದರು.

ಆಗ ಅಲ್ಲಿಯ ಗ್ರಾಮಸ್ಥರು ಆ ಗ್ರಂಥಗಳನ್ನೆಲ್ಲ'ತಂದು ಶ್ರೀಮಧ್ವಾಚಾರ್ಯರಿಗೆ ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ಆಗ ಲೋಕ ಶಿಕ್ಷಕರಾದ ಶ್ರೀಆಚಾರ್ಯರು ಕಳುವಾದ ಮಾಲನ್ನು ಯಾರಾದರೂ ಮುಖ್ಯ ಮಧ್ಯಸ್ಥರಿಲ್ಲದೆ ನಾವು ಸ್ವೀಕರಿಸುವದಿಲ್ಲವೆಂದು ಹೇಳಿದರು.

ಆ ದೇಶದ ದೊರೆಯಾದ ಜಯಸಿಂಹರಾಜನಿಗೆ ತನ್ನ ರಾಜ್ಯದ ಸೀಮೆಯಲ್ಲಿ ಸರ್ವಜ್ಞಾಚಾರ್ಯರು ದಯಮಾಡಿಸಿದ್ದು ತಿಳಿದಿತ್ತು. ಪದ್ಮತೀರ್ಥ, ಪುಂಡರೀಕ ಪುರಿಯಂಥ ಕ್ಷುದ್ರ ಮನಸ್ಕರು ಅಂಥ ಮಹಾತ್ಮರ ಗ್ರಂಥ ಚೌರ್ಯ ಮಾಡಿದ ಸಮಾಚಾರವೂ ಅವನ ಕಿವಿಗೆ ಬಂದಿತ್ತು. ತನ್ನ ರಾಜ್ಯದಲ್ಲಿ ಇಂಥ ಮಹಾನುಭಾವರ ಶಾರದಾ ಭಾಂಡಾರವು ಕಳುವಾದದ್ದು ಕೇಳಿ ಅವನಿಗೆ ಕೆಡುಕೆನಿಸಿದ್ದಿತು. ಅವನು ಆಚಾರ್ಯರನ್ನು ತನ್ನ ರಾಜಧಾನಿಗೆ ದಯಮಾಡಿಸಬೇಕೆಂದು ದೂತರ ಮುಖಾಂತರ ಪ್ರಾರ್ಥಿಸಿಕೊಂಡನು.

ಆಚಾರ್ಯರು ಕಜೆನಾಡಿನ ಅರಸನಾದ ಜಯಸಿಂಹ ಭೂಪಾಲನ ಬಿನ್ನಹವನ್ನು ಮನ್ನಿಸಿ ವಿಷ್ಣುಮಂಗಲದೇವಾಲಯಕ್ಕೆ ಹೊರಟರು. ದೇವಾಲಯದ ಹತ್ತಿರ ಆಚಾರ್ಯರು ದಯಮಾಡಿಸಿದಾಗ ಜಯಸಿಂಹರಾಜನು ವಾಹನದಿಂದ ಇಳಿದು ಸ್ವಯಂ ಪಾದಚಾರಿಯಾಗಿ ಆಚಾರ್ಯರನ್ನು ಎದುರಗೊಂಡು ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಈ ಸಂದರ್ಭವನ್ನು ಪಂಡಿತಾಚಾರ್ಯರು ಸುಮಧ್ವವಿಜಯದಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಮದನೇಶ್ವರ ವಲ್ಲಭ ಪ್ರದೇಶೇ ಪ್ರಭು ಮಾಯಾಂತ ಮಥಾಭ್ಯಪದ್ಯತದ್ರಾಕ್ ।
ಜಯಸಿಂಹ ಇಮಂ ನೃಸಿಂಹವರ್ಯಂ ಶುಭಧೀಸ್ತಂಭವಿಶಿಷ್ಟ ನಾಮಾ ॥
ಅವತೀರ್ಯ ಪುರೈವ ವಾಹನಾತ್ಸ್ವದಪಿ ಮಾರ್ಗಾದಪಸಾರ್ಯ ಸೈನಿಕಾನ್ ಸಃ ।
ಸಹ ಕೈಶ್ಚನ ಭೂಸುರೈರವಾಪ್ತ: ತ್ರಿಜಗತ್ಪೂಜ್ಯ ಪದೇಽಂತಿಕೇ ನನಾಮ ॥

.... .... .... .... .... .... .... ....

ಕಲಿತಾಂಜಲಿನಾಸ್ಫುಟಾನು ಯಾಂತಂ ಜನಸಂಬಾಧಸಹೇನ ಭೂಮಿಭರ್ತ್ರಾ ।
ಕರುಣಾ ವಿಷಯಂ ಚಿಕೀರ್ಷುಣಾ ಸ್ವಂ ವ್ರಜತಾ ಕಿಂಕರತಾಮಕೈತವೇನ ॥ "

ಇದೇ ಸಭೆಯಲ್ಲಿ ಮಹಾ ತೇಜಸ್ವಿಗಳಾದ ತ್ರಿವಿಕ್ರಮ ಪಂಡಿತಾಚಾರ್ಯರು ಆಗಮಿಸಿ, ಆನಂದತೀರ್ಥರ ಪಾದಕಿಂಕರರಾಗಿ, ಜಯಸಿಂಹರಾಜನ ನಯ–ವಿನಯ ಭಯ–ಭಕ್ತಿಗಳನ್ನು ಕಂಡು ಆನಂದ ಭರಿತರಾಗಿ, ಅವನಿಗೆ ಸದ್ಯಃ ಸ್ಫೂರ್ತಿಯಿಂದ ಒಂದು ಸುಂದರವಾದ ಪದ್ಯ ರಚಿಸಿ ಪಠಿಸಿದರು.

"ಸ್ವಃಸುಂದರೀ ಭುಜಲತಾ ಪರಿರಂಭಿಣೀಭೂಃ ।
ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ॥
ಆನಂದತೀರ್ಥ ಭಗವತ್ ಪದಪದ್ಮರೇಣುಃ ।
ಸ್ವಾನಂದದೋ ಭವತು ತೇ ಜಯಸಿಂಹಭೂಪ ॥"

"ಮಧ್ವಾಚಾರ್ಯರ ಅಡಿಯ ಹುಡಿಯನ್ನು ತಲೆಯಲ್ಲಿ ಮುಡಿದವರ ಸೇವೆಯನ್ನು ಸ್ವರ್ಗಲೋಕದ ಸಾಮ್ರಾಜ್ಯಲಕ್ಷ್ಮಿಯು ಸ್ವತಃ ದಾಸಿಯಾಗಿ ಮಾಡುತ್ತಾಳೆ. ಇಂಥ ಆಚಾರ್ಯರ ಚರಣ ಧೂಳೀಕಣವು ನಿನಗೆ ಆನಂದವನ್ನು ನೀಡಲಿ"

ಇದರಿಂದ ಜಯಸಿಂಹರಾಜನಿಗೆ ಇನ್ನಷ್ಟು ಆದರವು ಬೆಳೆಯಿತು. ಜಯಸಿಂಹ ರಾಜನ ಸಮಕ್ಷಮದಲ್ಲಿಯೇ ಶ್ರೀ ಮಧ್ವಾಚಾರ್ಯರಿಗೂ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರಿಗೂ ಹದಿನೈದು ದಿನ ವೇದಾಂತ ವಾಕ್ಯಾರ್ಥ ನಡೆಯಿತು. ಕೊನೆಗೆ ತ್ರಿವಿಕ್ರಮ ಪಂಡಿತಾಚಾರ್ಯರು ವಾದದಲ್ಲಿ ಸೋತು ಮೋದತೀರ್ಥರ ಬಳಿಗೆ ಓತು ಪ್ರೀತಿಯಿಂದ ವೈಷ್ಣವ ದೀಕ್ಷೆಯನ್ನು ಕೊಡಬೇಕೆಂದು ಕೇಳಿಕೊಂಡು ಅವರ ಶಿಷ್ಯರಾದರು.

ಜಯಸಿಂಹ ಮಹಾರಾಜನಿಗೆ ತನ್ನ ನಾಡಿನಲ್ಲಿ ಇಂಥ ಕ್ರಾಂತಿಕಾರಕ ಘಟನೆ ನಡೆದಿದ್ದು ಧನ್ಯತೆ ಎನಿಸಿತು. ಆ ತುಂಬಿದ ಸಭೆಯಲ್ಲಿಯೇ ಅವನು ಕಳವಾಗಿ ಹೋದ ಆಚಾರ್ಯರ ಗ್ರಂಥಗಳನ್ನೆಲ್ಲ ತರಿಸಿ, ಒಪ್ಪಿಸಿ, ಸ್ವೀಕರಿಸಬೇಕೆಂದು ಆಚಾರ್ಯರನ್ನು ಬಿನ್ನವಿಸಿಕೊಂಡನು. ಮತ್ತು "ಕೃತಮಪಕೃತಮಾರ್ಯೈಃ ಕ್ಷಮ್ಯತಾಂ ಕ್ಷಾಂತಿಭೂಷೈಃ ಎಂದು ಭಕ್ತಿ ನಮ್ರನಾಗಿ—

"ಪಾಪಿಗಳು ಮಾಡಿದ ಈ ಅಪಚಾರವನ್ನು ಕ್ಷಮಾಭೂಷರಾದ ಶ್ರೀ ಚರಣರು ಕ್ಷಮಿಸಬೇಕು ಎಂದು ಬಾಗಿ ಬೇಡಿಕೊಂಡನು."

ಆಗ ಆಚಾರ್ಯರು ನಸುನಕ್ಕು ಜಯಸಿಂಹ ದೊರೆಯ ಪ್ರಾರ್ಥನೆಯನ್ನು ಮನ್ನಿಸಿ ಆ ಗ್ರಂಥಗಳನ್ನು ತಮ್ಮ ಶಿಷ್ಯರಾದ ಶಂಕರಾಚಾರ್ಯರಿಗೆ ಮರಳಿ ತೆಗೆದು ಕೊಳ್ಳಲು ಅಪ್ಪಣೆ ಇತ್ತರು.

ಹೀಗೆ ಮಧ್ವಾಚಾರ್ಯರನ್ನು ಸ್ವಾಗತಿಸಿ ತನ್ನ ಊರಿಗೆ ಕರೆತಂದು ರಾಜಧಾನಿ ಯಲ್ಲಿ ಅವರ ವೈಭವದ ಮೆರವಣಿಗೆಯನ್ನು ಮಾಡಿಸಿ ಸಿಪಾಯಿಗಳನ್ನೆಲ್ಲ ದೂರ ಸರಿಸಿ ಸ್ವಯಂ ತಾನೇ ಪಾದಚಾರಿಯಾಗಿ ಅವರಿಗೆ ದಾರಿ ಬಿಡಿಸುತ್ತ ವಿಷ್ಣು ಮಂಗಲ ದೇವಾ ಲಯಕ್ಕೆ ಕರೆತರುವ ಭಾಗ್ಯ ಅವನದಾಗಿತ್ತು. ಸಭೆ ಸೇರಿಸಿ ಶ್ರೀ ಮಧ್ವಾಚಾರ್ಯರ ದಿವ್ಯವಾದ ಉಪದೇಶವನ್ನು ಸಹಸ್ರಾರು ಜನರೊಡನೆ ಕೇಳುವ ಸೌಭಾಗ್ಯವು ಅವನ ದಾಗಿತ್ತು. ಇಷ್ಟೇ ಅಲ್ಲದೇ ಕುಹಕಿಗಳು ಕಳವು ಮಾಡಿದ ಶ್ರೀ ಮಧ್ವಾಚಾರ್ಯರ ಅಮೂಲ್ಯವಾದ ಗ್ರಂಥ ಭಾಂಡಾರವನ್ನು ಪತ್ತೆ ಹಚ್ಚಿ ತರಿಸಿ ಮರಳಿ ಅವರಿಗೆ ಒಪ್ಪಿಸುವ ಪುಣ್ಯ ಅವನದಾಗಿತ್ತು.

## ೨ ಕಲಿಂಗರಾಜನಾದ ನರಸಿಂಹದೇವ

ಕಲಿಂಗದೇಶದ (ಓರಿಸಾ) ನರಸಿಂಹ ದೇವನು ಪರಮ ಧಾರ್ಮಿಕನಾದ ದೊರೆ ಯಾಗಿದ್ದನು. ಈ ಕಲಿಂಗ ರಾಜ್ಯದ ಮೊದಲಿನ ಅರಸರಾದ ಅನಂಗಭೀಮದೇವ ಮುಂತಾದವರು ಕೂಡ ಅತ್ಯಂತ ಆಸ್ತಿಕರಾಗಿದ್ದರು. ಈ ಅನಂಗ ಭೀಮದೇವನ ಕಾಲ ದಲ್ಲಿಯೇ ಶ್ರೀ ನರಹರಿ ತೀರ್ಥರ ಪೂರ್ವಾಶ್ರಮದ ತಂದೆಯಾದ ನರಸಿಂಹ ಭಟ್ಟರು ಮಂತ್ರಿಗಳಾಗಿದ್ದರು. ಮುಂದೆ ಇದೇ ಕಲಿಂಗ ದೇಶದ ದೊರೆಯಾದ ೧ನೇ ನರಸಿಂಹ ದೇವನ ಆಡಳಿತದಲ್ಲಿ ಶ್ಯಾಮಶಾಸ್ತ್ರಿಗಳು (ಶ್ರೀನರಹರಿತೀರ್ಥರು) ಮಂತ್ರಿಗಳಾಗಿದ್ದರು.

ಈ ಶ್ಯಾಮಶಾಸ್ತ್ರಿಗಳ ಪ್ರೇರಣೆಯಿಂದ ನರಸಿಂಹದೇವನು ಅನೇಕ ದಾನ ಧರ್ಮ ಗಳನ್ನೂ ದತ್ತಿ ಶಾಸನಗಳನ್ನೂ ಕೊಟ್ಟಿದ್ದರ ಉಲ್ಲೇಖ ಉಂಟು.

ನರಸಿಂಹದೇವನ ಅನಂತರದಲ್ಲಿ ೧ನೇ ಭಾವದೇವ, ೨ನೇ ನರಸಿಂಹದೇವ ಎಂಬ ರಾಜರು ಓರಿಸಾ ದೇಶದ ರಾಜಧಾನಿಯಾದ ಗಜಪತಿ ನಗರದಲ್ಲಿ ಪಟ್ಟಾಭಿಷಿಕ್ತರಾಗಿ ಧರ್ಮರಾಜ್ಯವನ್ನು ಆಳಿದರು. ಇವರಿಬ್ಬರ ಕಾಲದಲ್ಲಿಯೂ ನರಹರಿ ತೀರ್ಥರು ತಮ್ಮ ಪೂರ್ವಾಶ್ರಮದಲ್ಲಿ ಪಂತಪ್ರಧಾನರಾಗಿ ಇದ್ದುಕೊಂಡು ಅನೇಕ ಧಾರ್ಮಿಕ ಕಾರ್ಯ ಗಳನ್ನು ಮಾಡಿಸಿದರು.

## ೬ ಮತ್ಸ್ಯರಾಜನಾದ ಜಯಂತ

ವಡ್ಡೀವಾಡಿಯ ಜಯಂತರಾಜನು ಕಲಿಂಗ ದೇಶದ ಅಧಿಪತಿಗಳಾದ ಗಂಗರಾಜರಿಗೆ ಮಾಂಡಲಿಕರಾಗಿದ್ದರು. ಅವರಲ್ಲಿ ಜಯಂತದೇವನು. ಸಿಂಹಾಚಲದ ಕ್ಷೇತ್ರಸ್ವಾಮಿಗೆ ಅನೇಕ ದಾನ ಧರ್ಮಗಳನ್ನು ನೀಡಿದ್ದಾನೆಂದು ವಿಶಾಖಾಪಟ್ಟಣದ ಗೆಜೇಟಿಯರದಲ್ಲಿ ಉಲ್ಲೇಖಿಸಲಾಗಿದೆ.

ಈ ವಡ್ಡಿವಾಡಿಯ ಮತ್ಸ್ಯರಾಜ ಕುಲದಲ್ಲಿ ಅರ್ಜುನ, ಮಂಕಾದಿತ್ಯ ಮುಂತಾದ ರಾಜರು ಶ್ರೀ ನರಹರಿತೀರ್ಥರಿಂದ ಮಧ್ವ ಮತದ ಹಿರಿಮೆಯನ್ನು ಅರಿತು ವೈಷ್ಣವರಾದರು. ಹಾಗೂ ಮಧ್ವ ಮತದ ಪ್ರಸಾರಕ್ಕೆ ಕಾರಣರಾದರು. ಈ ವಿಷಯದಲ್ಲಿ ಮದ್ರಾಸಿನ ೧೯೦೦ ನೇ ಇಸ್ವಿಯ ಎಪಿಗ್ರಾಫಿಕಲ್ ರಿಪೋರ್ಟಿನ ಒಂದನೇ ಭಾಗವನ್ನೂ ಹಾಗೂ ಕೆಲವು ತಾಮ್ರ ಫಲಕಗಳನ್ನೂ ಅವಲೋಕಿಸಬಹುದು.

ಈ ಜಯಂತರಾಜನು ಸಿಂಹಾಚಲ ಸ್ವಾಮಿಯ ನಿತ್ಯ ಸೇವೆಗಾಗಿ ಒಂದು ದೊಡ್ಡ ಹೂದೋಟವನ್ನು ದಾನ ಕೊಟ್ಟಿದ್ದನೆಂದು ೧೨೬೨ ನೇ ಇಸ್ವಿಯ ಮತ್ತೊಂದು ಶಾಸನದಿಂದ ತಿಳಿದು ಬರುತ್ತದೆ.

ಕಳಿಂಗ ದೇಶದ ರಾಜರ ಸಮ್ಮತಿಯಿಂದ ಸ್ವಯಂ ಶ್ರೀ ನರಹರಿತೀರ್ಥರೇ ಕೂರ್ಮ ಕ್ಷೇತ್ರದಲ್ಲಿಯೂ ಸಿಂಹಾಚಲ ಕ್ಷೇತ್ರದಲ್ಲಿಯೂ ಅನೇಕ ದಾನ-ದತ್ತಿಗಳನ್ನು ಕೊಟ್ಟಿದ್ದರ ಉಲ್ಲೇಖವಿದೆ. ಶ್ರೀ ಕೂರ್ಮದೇವರ ದೀಪಾರಾಧನೆಗಾಗಿ ಅನೇಕ ದೀಪ ಸ್ತಂಭಗಳನ್ನೂ ಯೋಗಾನಂದ ದೇವರ ಉತ್ಸವ ಆರಾಧನೆಗಳಿಗಾಗಿ ಎಷ್ಟೋ ಗದ್ದೆ ಮತ್ತು ತೋಟಗಳನ್ನು ದಾನಹಾಕಿ ಕೊಟ್ಟಿದ್ದರು.

ಇದಲ್ಲದೆ ಶ್ರೀ ನರಹರಿತೀರ್ಥರು ಅನೇಕ ರಾಜ-ಮಹಾರಾಜರಿಗೆ ಹೇಳಿ— ದೇವಸ್ಥಾನ, ಧರ್ಮಸ್ಥಾನ, ತೀರ್ಥಕ್ಷೇತ್ರ ಹಾಗೂ ಪಂಡಿತ ಪೀಠಾಧಿಪತಿಗಳಿಗೆ ದತ್ತಿ ವೃತ್ತಿಗಳನ್ನು ವಿಪುಲವಾಗಿ ಕೊಡಿಸಿದ್ದರೆಂಬುವದಕ್ಕೆ ಸಾಕಷ್ಟು ಶಿಲಾ ಶಾಸನಗಳೂ ತಾಮ್ರ ಶಾಸನಗಳು ದೊರಕಿರುತ್ತವೆ.

ಮುಂದೆ ಇದೇ ಗಜಪತಿ ದೇಶದ ದೊರೆಯು ಆಕಸ್ಮಿಕ ಮೃತನಾದಾಗ ಶ್ರೀ ಶ್ಯಾಮ ಶಾಸ್ತ್ರಿಗಳು ರಾಜಕಾರಣದಿಂದಲೂ, ಸಂಸಾರದಿಂದಲೂ ನಿವೃತ್ತರಾಗಿ ಸನ್ಯಾಸಾಶ್ರಮ ಸ್ವೀಕರಿಸಿದ್ದರೂ ಶ್ರೀ ಮಧ್ವಾಚಾರ್ಯರ ಅಪ್ಪಣೆಯಿಂದ ಮತ್ತೆ ಗಜಪತಿ ನಗರಕ್ಕೆ ಬಂದು ೧೨ ವರ್ಷ ರಾಜ್ಯ ಶಾಸನವನ್ನು ನಡೆಸಿದರು.

ಇವರ ರಾಜ್ಯ ಶಾಸನದ ಪರಿಣಾಮವಾಗಿ ಮೂಲರಾಮದೇವರು ಸರ್ವಜ್ಞ ಸಿಂಹಾಸನಕ್ಕೆ ಲಭಿಸಿದರು. ಅಂತೂ ಮಠತ್ರಯಗಳಿಗೆಲ್ಲ ಮಾನ್ಯವಾದ ಮೂಲರಾಮ ದೇವರನ್ನು ಸರ್ವಜ್ಞ ಸಿಂಹಾಸನಕ್ಕೆ ನೀಡಿದ ಶ್ರೇಯಸ್ಸು ಈ ಕಲಿಂಗ ದೇಶದ ರಾಜರದಾಗಿದೆ.

## ೬ ಆನೆಗೊಂದಿಯ ಮಹಾರಾಜ

ಇವನು ಅತ್ಯಂತ ಧಾರ್ಮಿಕನಾಗಿದ್ದನು. ಇವನು ತೀರ್ಥಕ್ಷೇತ್ರ ಯಾತ್ರೆಯನ್ನು ಕೈಕೊಂಡಾಗ ಶ್ರೀ ೧೦ಲ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರ ದರ್ಶನವಾಯಿತು. ಸಂತಾನ ವಿಹೀನನಾದ ಈ ರಾಜನ ಬಿನ್ನಹವನ್ನು ಮನ್ನಿಸಿ ಶ್ರೀ ಅಕ್ಷೋಭ್ಯತೀರ್ಥರು ಕರುಣೆದುಂಬಿ ಫಲಮಂತ್ರಾಕ್ಷತೆ ಇತ್ತು ಆಶೀರ್ವದಿಸಿದರು. ಅವರ ಅನುಗ್ರಹದಿಂದ ಈ ರಾಜನಿಗೆ ಗಂಡು ಸಂತತಿಯಾಯಿತು.

ಆಗ ಮಹಾರಾಜನು ಅತ್ಯಂತ ಸಂತೋಷದಿಂದ ವಿಪುಲವಾದ ಐಶ್ವರ್ಯವನ್ನು ದಾನಕೊಡಬೇಕೆಂದು ತೆಗೆದುಕೊಂಡು ಬಂದನು. ವಿರಕ್ತರಾದ ಸ್ವಾಮಿಗಳು ಇದು ತಮಗೆ ಯಾವದೂ ಬೇಡ ಎಂದು ನಿರಾಕರಿಸಿದರು. ಆಗ ರಾಜನು ಅದೇ ಹಣದಿಂದ ಶ್ರೀಗಳವರು ಇರುವ ಆ ಕೂಡಲಿ ಗ್ರಾಮದಲ್ಲಿ ಹರಿದಿರುವ ತುಂಗಾ ನದಿಗೆ ಒಳ್ಳೆ ಶಿಲಾಮಯವಾದ ಘಾಟನ್ನು ಕಟ್ಟಿಸಿದನು. ಸ್ವತಃ ಶ್ರೀಪಾದಂಗಳವರಿಗೆ ಪೂಜಾದಿ ಪಾಠ ಪ್ರವಚನ ಮಾಡಿಕೊಂಡು ಶಿಷ್ಯರೊಂದಿಗೆ ವಾಸಮಾಡಲು ಒಂದು ಭದ್ರ ಭವ್ಯ ವಾದ ಮಠವನ್ನು ಕಟ್ಟಿಸಿಕೊಟ್ಟನು. ಕೂಡಲೀ ಕ್ಷೇತ್ರದಲ್ಲಿ ಅವೆರಡನ್ನೂ ಈಗಲೂ ನಾವು ಕಾಣಬಹುದು.

## ೫ ಕುಮಾರ ಕಂಪರಾಯ

ವಿಜಯನಗರದ ಸಮ್ರಾಟ ಮೊದಲನೇ ಹರಿಹರನ ಮಗನಾದ ಕುಮಾರ ಕಂಪ ರಾಯನು ಮುಳಬಾಗಿಲು ರಾಜಧಾನಿಯಲ್ಲಿ ವಿಜಯನಗರ ರಾಜರ ಪ್ರತಿನಿಧಿಯಾಗಿದ್ದನು.

ಶ್ರೀ ಅಕ್ಷೋಭ್ಯತೀರ್ಥ ಶ್ರೀಪಾದಂಗಳವರು ವಿಜಯನಗರದ ರಾಜಗುರು ಶ್ರೀ ವಿದ್ಯಾರಣ್ಯರ ಜೊತೆಗೆ ವಾಕ್ಯಾರ್ಥವನ್ನು ಮಾಡಬೇಕೆಂದು ಆಹ್ವಾನವನ್ನು ಕಳಿಸಿದರು. ಆದರೆ ರಾಜಕೀಯ ಬೆಂಬಲವಿಲ್ಲದ ಶ್ರೀ ಅಕ್ಷೋಭ್ಯತೀರ್ಥರ ಜೊತೆಗೆ ವಾಕ್ಯಾರ್ಥಕ್ಕೆ ಬರಲು ಶ್ರೀ ವಿದ್ಯಾರಣ್ಯರು ಒಪ್ಪಲಿಲ್ಲ.

ಆಗ ಕಂಪರಾಯನು ಸ್ವತಃ ತಾನು ವಿದ್ಯಾರಣ್ಯರಿಗೆ ಹೇಳಿ ವಾಕ್ಯಾರ್ಥಕ್ಕೆ ಒಪ್ಪಿಸಿ ಅವರನ್ನು ಮುಳಬಾಗಿಲಕ್ಕೆ ಕರೆತಂದನು. ತನ್ನ ನೇತೃತ್ವದಲ್ಲಿಯೇ ಹಂಚು ಕಲ್ಲು ಬೆಟ್ಟದ ಮೇಲೆ ಶ್ರೀ ವೇದಾಂತ ದೇಶಿಕರ ಮಾಧ್ಯಸ್ಥಿಕೆಯಿಂದ ವಾಕ್ಯಾರ್ಥವು ನಡೆಯುವಂತೆ ವ್ಯವಸ್ಥೆ ಮಾಡಿದನು.

ಮುಂದೆ ಇತಿಹಾಸ ಪ್ರಸಿದ್ಧವಾದ ಆ ವಾಕ್ಯಾರ್ಥದಲ್ಲಿ ವಿದ್ಯಾರಣ್ಯರು ಪರಾಜಯ ವನ್ನು ಹೊಂದಿದರೆಂದು ಮಧ್ಯಸ್ಥರಾದ ಶ್ರೀ ವೇದಾಂತ ದೇಶಿಕರು ಬರೆದು ಕಳಿಸಿದರು. ಅವರ "ಅಸಿನಾ ತತ್ವಮಸಿನಾ" ಎಂಬ ಪದ್ಯವನ್ನು ಕಲ್ಲಿನಲ್ಲಿ ಕೊರಿಸಿ ಪ್ರಾಮಾಣಿಕ ನಾದ ಕಂಪರಾಯನು ದೊಡ್ಡದಾದ ಒಂದು ವಿಜಯ ಸ್ತಂಭವನ್ನು ಅದೇ ಬೆಟ್ಟದ ಮೇಲೆ ನಿಲ್ಲಿಸಿ ಶ್ರೀ ಅಕ್ಷೋಭ್ಯತೀರ್ಥರಿಗೆ ಈ ಪ್ರಚಂಡ ವಿಜಯಕ್ಕಾಗಿ ವಿಶೇಷ ಪುರಸ್ಕಾರಮಾಡಿ ಅವರ ಆಶೀರ್ವಾದ ಪಡೆದನು.

ಈ ವಿಷಯವು ಶ್ರೀ ರಾಮಾನುಜೀಯರ ಅನೇಕ ಗ್ರಂಥಗಳಲ್ಲಿ ಉಲ್ಲೇಖಿತ ವಾಗಿದೆ.

## ೬ ಸಾಳ್ವ ನರಸಿಂಹ

ಇವನು ವಿಜಯನಗರ ಸಾಮ್ರಾಜ್ಯದ ಮಹಾ ಮಾಂಡಲಿಕನಾಗಿದ್ದನು. ಅತ್ಯಂತ ಪರಾಕ್ರಮಶಾಲಿಯೂ, ಧೀರ ಧಾರ್ಮಿಕನೂ ಆದ ಈ ನರಸಿಂಹನು ವಿಜಯನಗರ ಸಾಮ್ರಾಟನ ಸಂಗಮ ವಂಶದ ಕೊನೆಯ ದೊರೆಯಾದ ಮುಮ್ಮಡಿ ವಿರುಪಾಕ್ಷನ ಕಾಲದಲ್ಲಿ ತನ್ನ ವೀರ ಬಾಹುಗಳಿಂದ ಮುಂದೆ ಬಂದನು. ಮುಮ್ಮಡಿ ವಿರುಪಾಕ್ಷನು ಹೇಡಿಯೂ, ದುರಾಚಾರಿಯೂ ಆದುದರಿಂದ ಎಲ್ಲೆಡೆಗೆ ಅಸಂತೋಷವು ಉಂಟಾಗಿತ್ತು.

ಶ್ರೀ ವಿದ್ಯಾರಣ್ಯರು ಭುವನೇಶ್ವರಿಯ ಕೃಪೆಯಿಂದ ಹುಕ್ಕ-ಬುಕ್ಕರ ಸಹಾಯ ದೊಂದಿಗೆ ತುಂಗಾ ತೀರದಲ್ಲಿ ಕಟ್ಟಿ ಬೆಳೆಸಿದ ಹಿಂದೂ ಸಾಮ್ರಾಜ್ಯಕ್ಕೆ ಅಳಿಗಾಲವು ಬರುವ ಸಂದರ್ಭವು ಒದಗಿತು. ಆಗ ಪೆನಗೊಂಡಿಯ ಅರಸನಾದ ಈ ಸಾಳ್ವ ನರ ನರಸಿಂಹನು ಮುಮ್ಮಡಿ ವಿರೂಪಾಕ್ಷನನ್ನು ಮೂಲಿಗೊತ್ತಿ ತಾನೇ ವಿಜಯನಗರ ಸಿಂಹಾಸನವನ್ನು ಆರೋಹಣ ಮಾಡಿದನು.

ಈ ಕಾಲದಲ್ಲಿ ತಿರುಪತಿ ದೇವಸ್ಥಾನದ ಮಹಾಂತರು ಶ್ರೀ ವೆಂಕಟೇಶ ದೇವರ ಐಶ್ವರ್ಯ, ಭೋಗ, ಭಾಗ್ಯಗಳನ್ನೆಲ್ಲ ತಮ್ಮ ಸ್ವಂತಕ್ಕಾಗಿ ಉಪಯೋಗ ಮಾಡಿ ಕೊಂಡು ಮದಾಂಧರಾಗಿ ಮೆರೆಯುತ್ತಿದ್ದರು. ಸಾಳ್ವ ನರಸಿಂಹನು ದೇವಸ್ವವನ್ನು ಪೋಲು ಮಾಡಬಾರದೆಂದು ಬುದ್ಧಿ ಹೇಳಿದರೂ ಅವರು ಕೇಳದೆ ಮುಮ್ಮಡಿ ವಿರೂಪಾಕ್ಷನ ಬೆಂಬಲ ಅವರಿಗೆ ಇದ್ದುದರಿಂದ ಅವರೆಲ್ಲರನ್ನೂ ಕಡೆಗಣಿಸಿ ಸ್ವಾರ್ಥಲೋಲುಪರಾಗಿಯೇ ನಡೆಯತೊಡಗಿದರು.

ಇದನ್ನು ನೋಡಿ ನರಸಿಂಹ ದೊರೆಗೆ ಕೋಪ ಬಂದು ವೆಂಕಟೇಶ ದೇವಸ್ಥಾನದ ಕುಬೇರ ಐಶ್ವರ್ಯದಮೇಲೆ ಸ್ವಾರ್ಥದ ಚಕ್ಕಂದವಲೀಲೆ ಆಡುವ ಆ ದೇವಸ್ಥಾನದ ಪೂಜಾರಿಗಳನ್ನೆಲ್ಲ ಸಿಟ್ಟಿನಿಂದ ತಲೆ ಕಡಿಸಿ ಹಾಕಿ ಬಿಟ್ಟನು. ಇದೇ ವೇಳೆಯಲ್ಲಿಯೇ ಶ್ರೀಚಂದ್ರಿಕಾಚಾರ್ಯರು ತಿರುಪತಿದೇವಸ್ಥಾನದಲ್ಲಿದ್ದು ಶ್ರೀನಿವಾಸದೇವರನ್ನು ೧೨ವರ್ಷ ಪೂಜೆ ಮಾಡಿದರು.

ಆದರೆ ಪಾಪಭೀರುವಾದ ನರಸಿಂಹ ಭೂಪಾಲನಿಗೆ ಪೂಜಾರಿಗಳನ್ನು ಕೊಲ್ಲಿಸಿದ್ದರಿಂದ ತನಗೆ ಬ್ರಹ್ಮಹತ್ಯಾದೋಷವು ತಗಲಿತೆಂದು ಚಿಂತೆಯಾಯಿತು. ಆಗ ಅವನು ಬ್ರಹ್ಮಹತ್ಯಾದೋಷ ಪರಿಹಾರಕ್ಕಾಗಿ ಮುಳಬಾಗಿಲಿನ ಶ್ರೀಪಾದರಾಜರನ್ನು ಶರಣು ಹೋದನು. ಅವರು ಅವನ ಸರ್ವ ಪಾಪಗಳನ್ನು ಪರಿಹರಿಸಿದರು.

ಶ್ರೀಪಾದರಾಜರ ತಪಃಪ್ರಭಾವ ಹಾಗೂ ಶಾಪಾನುಗ್ರಹಸಾಮರ್ಥ್ಯದಿಂದ ವಿಸ್ಮಿತನಾದ ಸಾಳ್ವ ನರಸಿಂಹರಾಜನು ಅವರನ್ನು ತನ್ನ ಸಿಂಹಾಸನದಮೇಲೆ ಕುಳ್ಳಿರಿಸಿ ರತ್ನಾಭಿಷೇಕವನ್ನು ಮಾಡಿದನು. ಈ ಮಾತನ್ನು ಸ್ವಯಂ ಶ್ರೀ ವ್ಯಾಸರಾಜರೇ ತಾವು ರಚಿಸಿದ ಶ್ರೀಪಾದರಾಜಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ.

"ಶ್ರೀಮದ್ವೀರನೃಸಿಂಹರಾಜನೃಪತೇಃ ಭೂದೇವಹತ್ಯಾ ವ್ಯಥಾಂ ।
ದೂರೀಕೃತ್ಯ ತದರ್ಪಿತೋಜ್ವಲ ಮಹಾ ಸಿಂಹಾಸನೇ ಸಂಸ್ಥಿತಃ ।
ಶ್ರೀಮತ್ಪೂರ್ವಕವಾಟನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ ।
ಶ್ರೀ ಶ್ರೀಪಾದಯತೀಂದ್ರಶೇಖರಮಣಿಃ ಭೂಯಾತ್‌ನಃ ಶ್ರೇಯಸೇ ॥"

ಶ್ರೀಪಾದರಾಜರು ಈ ಸಾಳ್ವ ನರಸಿಂಹನಿಗೆ 'ಮೋಹನ ಮುರಾರಿ' ಎಂದು ಹೆಸರು ಇಟ್ಟಿದ್ದರು ಶ್ರೀ ಶ್ರೀಪಾದರಾಜರ ಅಪ್ಪಣೆಯಂತೆ ಮುಕ್ತಹಸ್ತದಿಂದ ದಾನ ಧರ್ಮವಿತ್ತು ಮಧ್ವಸಿದ್ಧಾಂತದ ಉನ್ನತಿಗೆ ಕಾರಣನಾದನು.

ನರಸಿಂಹಭೂಪಾಲನು ಶ್ರೀಪಾದರಾಜರಿಗೆ ತನ್ನ ರಾಜಧಾನಿಗೆ ಬಂದು ತಮ್ಮ ರಾಜಗುರುಗಳಾಗಿ ಮಾರ್ಗದರ್ಶನ ಮಾಡಿಸಬೇಕೆಂದು ಬೇಡಿಕೊಂಡನು. ಅವರು ತಮ್ಮ ಶಿಷ್ಯರಾದ ಶ್ರೀವ್ಯಾಸರಾಜರನ್ನು ಚಂದ್ರಗಿರಿಗೆ ಕಳಿಸಿದರು. ಅನಂತರಕಾಲದ ವೀರ ನರಸಿಂಹ, ನರಸರಾಜ ಮುಂತಾದ ಚಂದ್ರಗಿರಿಯ ರಾಜರೂ ಶ್ರೀ ವ್ಯಾಸರಾಜರ ಶಿಷ್ಯರಾಗಿ ಧರ್ಮಸಾಮ್ರಾಜ್ಯವನ್ನು ಆಳಿದರು.

## ೭ ಕೃಷ್ಣದೇವರಾಯ

ವಿಜಯನಗರ ಸಾಮ್ರಾಜ್ಯವು ಯವನರ ಪ್ರಚಂಡ ವಿರೋಧವನ್ನು ಬದಿಗೊತ್ತಿ ದಕ್ಷಿಣದಲ್ಲಿ ದುರ್ಧರ್ಷ ಶಕ್ತಿಯಾಗಿ ತಲೆ ಎತ್ತಿ ನಿಲ್ಲಲು ಹುಕ್ಕ ಬುಕ್ಕರ ರಾಜಕೀಯ ಪ್ರಯತ್ನಕ್ಕೆ ರಕ್ಷಾಕವಚವಾಗಿ ನಿಂತುಕೊಂಡ ಶ್ರೀ ವಿದ್ಯಾರಣ್ಯರ ಅಧ್ಯಾತ್ಮಬಲವೇ ಕಾರಣವಾಗಿದ್ದಿತು.

ಮುಂದೆ ಹಲವು ವರ್ಷಗಳಲ್ಲಿ ಆ ಸಂಗಮ ಮನೆತನದ ಪುಣ್ಯವು ಕ್ಷೀಣಿಸಿ ಕರ್ನಾಟಕ ಸಾಮ್ರಾಜ್ಯಕ್ಕೆ ವಿನಾಶದ ಕರಿ ನೆರಳು ಮುಸುಕಿದಾಗ ಅದಕ್ಕೆ ಮೊದಲಿಗಿಂತಲೂ ಹೆಚ್ಚಿನ ಅಧ್ಯಾತ್ಮಶಕ್ತಿಯ ಬೆಂಬಲವು ಆವಶ್ಯಕವಾಗಿದ್ದಿತು. ಹೀಗೆ

ಮುನ್ನೂರ್ಷಾ ಅವಸ್ಥೆಗೆ ಬಂದ ಸಾಮ್ರಾಜ್ಯವನ್ನು ಸ್ವದೇಶಿ, ವಿದೇಶಿ ಎಲ್ಲ ಜನರ ಕಣ್ಣು ಕುಕ್ಕುವಂಥ ಉನ್ನತಿಯ ಉಚ್ಚ ಶಿಖರಕ್ಕೆ ಮುಟ್ಟಿಸಲು ದಿವ್ಯ ತಪೋಬಲವನ್ನು ಒದಗಿಸಿದ ಪುಣ್ಯ ಪುರುಷರೆಂದರೆ ಶ್ರೀ ವ್ಯಾಸರಾಜರು.

ಇವರ ಆಧ್ಯಾತ್ಮಿಕ ನೇತೃತ್ವದಲ್ಲಿ ಕನ್ನಡದ ಸಾಮ್ರಾಜ್ಯವು ಎಂದೂ ಕಾಣದ ಉತ್ಕರ್ಷದ ಪರಮೋಚ್ಚಾಂಕ ಬಿಂದುವನ್ನು ತಲುಪಿ ವೈಭವದ ಶಿಖರದಲ್ಲಿ ಮೆರೆಯಿತು. ಗೌರವದ ಗರಿಮೆಯಿನ್ನು ಮೆರೆಸಿತು.

ಇಂದಿನ ಇತಿಹಾಸಜ್ಞರು ಮಾಧ್ವರು ವಿಜಯನಗರ ಸಾಮ್ರಾಜ್ಯದ ಸರ್ವತೋ ಮುಖವೃದ್ಧಿ ಸಮೃದ್ಧಿ ಹಾಗೂ ಯಶಸ್ಸಿದ್ಧಿಗಳಿಗಾಗಿ ಸಲ್ಲಿಸಿದ ಸೇವೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವದು ಕನ್ನಡಿಗರ ದುರ್ದೈವವಾಗಿದೆ.

ಶ್ರೀ ವ್ಯಾಸರಾಜರು ಮೊದಲು ತಪಃಸ್ವಾಧ್ಯಾಯ ನಿರತರಾಗಿ ಆತ್ಮೋದ್ಧಾರ ಮಾಡಿಕೊಳ್ಳಬೇಕೆಂದು ಬಯಸಿದ್ದರು. ಆದರೆ ಶ್ರೀಪಾದರಾಜರು ಇಂಥ ಶಕಪುರುಷರ ಪುಣ್ಯ ಪ್ರಭಾವದ ಲಾಭವು ಕನ್ನಡ ಸಾಮ್ರಾಜ್ಯದ ಪುನರುತ್ಥಾನಕ್ಕೆ ಆಗಬೇಕೆಂದು ಅವರ ಮನಸ್ಸನ್ನು ಒಲಿಸಿದರು. ಆತ್ಮೋದ್ಧಾರದ ಜೊತೆಗೆ ಲೋಕೋದ್ಧಾರವನ್ನೂ ನಿಮ್ಮಂಥ ಸಮರ್ಥ ಪುರುಷರು ಮಾಡಬೇಕೆಂದು ಅವರನ್ನು ಚಂದ್ರಗಿರಿ ರಾಜ್ಯಕ್ಕೆ ಕೊಟ್ಟು ಕಳಿಸಿದ್ದರು.

ಈ ಚಿಕ್ಕ ರಾಜ್ಯದಲ್ಲಿ ಶ್ರೀ ವ್ಯಾಸರಾಜರ ಅಸಾಧಾರಣವಾದ ಕರ್ತೃತ್ವಶಕ್ತಿ, ಸಂಘಟನಾ ಕೌಶಲ್ಯಗಳು ವ್ಯಕ್ತವಾಗಿ ಎಲ್ಲ ರಾಜಕೀಯ ಮುಂದಾಳುಗಳ ಲಕ್ಷವು ಅವರೆಡೆಗೆ ಕೇಂದ್ರೀಕರಿಸಲ್ಪಟ್ಟಿತು. ಅಂತಃಕಲಹ, ಒಡಕು, ಬಿರುಕುಗಳಿಂದ ಪತನೋ ನ್ಮುಖವಾದ ಕನ್ನಡ ಸಾಮ್ರಾಜ್ಯಕ್ಕೆ ಇಂಥ ಪುಣ್ಯ ಪುರುಷರ ಹಸ್ತ ಸ್ಪರ್ಶವಿಲ್ಲದೆ ಪುನರುತ್ಥಾನವು ಆಗಲಾರದು ಎಂದು ಮನಗಂಡ ವಿಜಯನಗರದ ತಿಮ್ಮರಸ ಮುಂತಾದ ಮಂತ್ರಿಮಹನೀಯರೆಲ್ಲರು ಶ್ರೀ ವ್ಯಾಸರಾಜರ ಸಂಪೂರ್ಣ ಬೆಂಬಲವುಳ್ಳ ಚಂದ್ರಗಿರಿ ರಾಜರನ್ನೇ ತಮ್ಮ ವಿಜಯನಗರದ ಪಟ್ಟದಮೇಲೆ ಕೂಡಿಸಿದರು.

ವ್ಯಾಸರಾಜರ ದಿವ್ಯ ನೇತೃತ್ವದ ನಿಜವಾದ ಮರ್ಮ ಮಹತಿಯನ್ನು ಅರಿತ ಅರಸನೆಂದರೆ ಕೃಷ್ಣದೇವರಾಯ. ಶ್ರೀ ವ್ಯಾಸರಾಜರಂಥ ಮಹಾ ವ್ಯಕ್ತಿಗಳು ತನ್ನನ್ನು ಮುನ್ನಡೆಸುವ ರಾಜಗುರುಗಳಾಗಿ, ಮಾರ್ಗದರ್ಶಕರಾಗಿ, ಕರುಣೆಯ ಬೆಳಕಾಗಿ ದೊರ ಕಿದ್ದು ಅಹೋಭಾಗ್ಯವೆಂದು ಬಗೆದನು. ಅವರ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ನಡೆದನು. ಅವರ ಹೇಳಿಕೆಯಂತೆ ವಿಜಯನಗರದಲ್ಲಿ ವೇದಾಂತ ವಿಶ್ವವಿದ್ಯಾನಿಲಯವನ್ನು ಘೋಷಿಸಿದನು. ವ್ಯಾಸಕೂಟಕ್ಕೆ ಮುಖ್ಯ ಆಧಾರನಾಗಿ ನಿಂತುಕೊಂಡನು. ಗೀತೋಕ್ತ ಮಾರ್ಗದಿಂದ ವೈರಿಗಳನ್ನೆಲ್ಲ ಸದೆಬಡೆದು ಹಿಂದೂ ಸಾಮ್ರಾಜ್ಯದ ಭದ್ರ, ಭವ್ಯ ವೈಭವದ ಮೆರವಣಿಗೆಗೆ ಕಾರಣನಾದನು.

ವ್ಯಾಸರಾಜ ವಿಶ್ವವಿದ್ಯಾಲಯದ ಶಾಖೋಪಶಾಖೆಗಳನ್ನು ಆಸೇತು ಹಿಮಾಚಲ ಪರ್ಯಂತ ಅನೇಕ ಕೇಂದ್ರ ಸ್ಥಳಗಳಲ್ಲಿ ಸ್ಥಾಪಿಸಿ ನಡೆಸಲು ನೆರವಾಗಿ ಮಧ್ವ ಮತದ ಸಾರ್ವತ್ರಿಕ ಪ್ರಸಾರಕ್ಕೆ ಅನುವುಮಾಡಿಕೊಟ್ಟನು.

ಅನೇಕ ಪೀಠಾಧಿಪತಿಗಳಿಗೆ ತನ್ನ ರಾಜಧಾನಿಯಲ್ಲಿ ಹಾಗೂ ಬೇರೆ ಬೇರೆ ಸ್ಥಳ ಗಳಲ್ಲಿ ನೆಲೆ ನಿಂತು ವೇದಶಾಸ್ತ್ರ ಪ್ರವಚನ ಕಾರ್ಯವನ್ನು ನಿರಂತರ ನಡೆಸಲು ಸಹಾಯವನ್ನು ಸಲ್ಲಿಸಿದನು.

ಸಾವಿರಾರು ಜನ ವಿದ್ವಾಂಸರನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಪೋಷಿಸಿ ದನು. ಸಾವಿರಾರು ಜನ ಸದ್ಬ್ರಾಹ್ಮಣರಿಗೆ, ಪೀಠಾಧಿಪತಿಗಳಿಗೆ, ಹಾಗೂ ದೇವಸ್ಥಾನ, ಧರ್ಮಸ್ಥಾನಗಳಿಗೆ ಹೇರಳವಾಗಿ ದಾನದತ್ತಿಗಳನ್ನಿತ್ತು ಧರ್ಮ ಕಾರ್ಯವನ್ನು ಪ್ರೋತ್ಸಾಹಿಸಿದನು. ಶ್ರೀವಾದಿರಾಜರ ಪರ್ಯಾಯ ಕಾಲದಲ್ಲಿ ಶ್ರೀಉಡುಪಿ ಶ್ರೀಕೃಷ್ಣ ಮಠವನ್ನು ಜೀರ್ಣೋದ್ಧಾರ ಮಾಡಿಸಿದನು.

ಮುಂದೆ ಕೃಷ್ಣದೇವರಾಜನಿಗೆ ಹಣದ ಕೊರತೆಯಾದಾಗ ಶ್ರೀ ವಾದಿರಾಜರಲ್ಲಿ ವಿಜ್ಞಾಪನೆ ಮಾಡಿಕೊಂಡನು. ಆಗ ದಿವ್ಯದೃಷ್ಟಿಯುಳ್ಳ ಶ್ರೀರಾಜರು ಆ ರಾಜನನ್ನು ಹಂಪೆಯ ಬಳಿಯ ವಾಲಿಯ ಗುಹೆಗೆ ಕರೆದುಕೊಂಡು ಹೋಗಿ ಅಲ್ಲಿದ್ದ ಗುಪ್ತ ರತ್ನ ಭಾಂಡಾರವನ್ನು ತೋರಿಸಿದರು. ಆಭೂಗರ್ಭದಲ್ಲಿಯ ಅಪಾರ ಸಂಪದವನ್ನೆಲ್ಲ ಹೊರ ತರಿಸಿ ರತ್ನ, ಮುತ್ತು, ಬಂಗಾರವನ್ನೆಲ್ಲ ರಾಶಿರಾಶಿಯಾಗಿ ಗುರುರಾಜರ ಮುಂದೆ ವಟ್ಟೈಸಿ "ಇದೆಲ್ಲವೂ ತಮ್ಮದೇ. ತಮ್ಮ ದಯೆ. ಇದನ್ನು ತಮ್ಮ ಶ್ರೀಮಠಕ್ಕೆ ಸ್ವೀಕರಿಸಬೇಕೇಂದು ಬಿನ್ನವಿಸಿದನು."

ಶ್ರೀ ವಾದಿರಾಜ ಪೂಜ್ಯ ಶ್ರೀಚರಣರು ಕನ್ನಡ ಚಕ್ರವರ್ತಿಯ ಬಿನ್ನಹದ ಹಿನ್ನೆಲೆಯ ಗುರುಭಕ್ತಿಯನ್ನು ಮೆಚ್ಚಿದರೂ ಸ್ವಯಂ ನಿಸ್ಪೃಹಚಕ್ರವರ್ತಿಗಳಾದುದ ರಿಂದ ಅದಾವದನ್ನೂ ಮುಟ್ಟದೆ ಮಹಾರಾಜನ ಮನಸ್ಸಿಗೆ ಅಸಮಾಧಾನವಾಗ ಬಾರದೆಂದು ಆ ಸಂಪದ್ಭಾಂಡಾರದ ಮಧ್ಯದಲ್ಲಿದ್ದ ಸುಗ್ರೀವಪೂಜಿತ ಶ್ರೀರಾಮನ ಪ್ರತಿಮೆಯನ್ನೂ ವಾಲಿಪೂಜಿತ ವಿಠ್ಠಲಮೂರ್ತಿಯನ್ನೂ ತೆಗೆದುಕೊಂಡರು. ಅವು ಗಳನ್ನು ಈಗಲೂ ಶ್ರೀ ವಾದಿರಾಜ ಸೋದಾಮಠದ ಪೂಜಾ ಮಂಟಪದಲ್ಲಿ ಕಾಣಬಹುದು.

ಶ್ರೀ ವಾದಿರಾಜರು ಶ್ರೀಕೃಷ್ಣದೇವರಾಯನು ಎಷ್ಟೇ ಪ್ರಾರ್ಥನೆ ಮಾಡಿದರೂ ಆ ವಾಲಿಗುಹೆಯ ಗುಪ್ತ ಐಶ್ವರ್ಯ ನಿಧಿಯನ್ನೆಲ್ಲ ವಿಜಯ ನಗರದ ಭಾಂಡಾರಕ್ಕೆ ಸೇರಿಸಲು ಅಪ್ಪಣೆ ಇತ್ತರು. ಅಪರಂಪಾರವಾದ ಆ ಪ್ರಭೂತ ದ್ರವ್ಯಭಾಂಡಾರದಿಂದ ವಿಜಯನಗರ ಸಾಮ್ರಾಜ್ಯದ ಹಣಕಾಸಿನ ಮುಗ್ಗಟ್ಟು ಬಿಕ್ಕಟ್ಟುಗಳೆಲ್ಲ ಪರಿಹಾರವಾಗಿ ರಾಷ್ಟ್ರದ ಅಭ್ಯುದಯಕ್ಕೆ ಕಾರಣವಾಯಿತು.

ಹರಿಹರನು ವಿದ್ಯಾರಣ್ಯರ ಅನುಗ್ರಹದಿಂದ ಕನ್ನಡ ನಾಡಿನಲ್ಲಿ ಸುವರ್ಣವೃಷ್ಟಿಯನ್ನು ಮಾಡಿಸಿದರೆ ಕೃಷ್ಣದೇವರಾಯನು ಮಾಧ್ವ ಯತಿಪುಂಗವರ ಕೃಪಾಬಲದಿಂದ ಮತ್ತೊಮ್ಮೆ ರತ್ನವೃಷ್ಟಿಯನ್ನೇ ಮಾಡಿಸಿ ಕನ್ನಡ ನಾಡಿನ ಸಾಂಪತ್ತಿಕ ಪುನರುತ್ಥಾನವನ್ನು ಸಾಧಿಸಿದನು.

ಅವನ ಇಂಥ ಈ ಎಲ್ಲ ಪುಣ್ಯಕಾರ್ಯ ಧೌರಂಧರ್ಯವನ್ನು ಕಂಡು ಸುಪ್ರೀತರಾದ ಶ್ರೀ ವ್ಯಾಸರಾಜ ಶ್ರೀಪಾದಂಗಳವರು ಆ ಮಹಾರಾಜನಿಗೆ ಒದಗಿ ಬಂದ ಕುಹುಯೋಗವನ್ನು ತಪೋಬಲದಿಂದ ನಿವಾರಣ ಮಾಡಿ ಕರ್ನಾಟಕದ ರಮಾರಮಣನಾಗಿ ಹಿಡಿದ ಗ್ರಹಣವನ್ನು ಬಿಡಿಸಿ ಅವನನ್ನು ಮತ್ತಿಷ್ಟು ಉಜ್ವಲಗೊಳಿಸಿದರು.

ಕರ್ನಾಟಕ ಸಾಮ್ರಾಜ್ಯದ ಇಂಥ ವಿಪತ್ತ ಕಾಲದಲ್ಲಿ ಸ್ವಯಂ ತಾವೇ ವಿಜಯನಗರ ಸಾಮ್ರಾಜ್ಯ ಸಿಂಹಾಸನವನ್ನು ಆರೋಹಣ ಮಾಡಿ ರಾಜಪ್ರಜರನ್ನೆಲ್ಲ ಭೀಕರವಾದ ವಿನಾಶದಿಂದ ಪಾರುಮಾಡಿದರು.

ಶ್ರೀ ಮಾಧ್ವ ಪೀಠಾಧಿಪತಿಗಳ ಈ ಪರಮಾನುಗ್ರಹದ ಉಪಕಾರ ಭಾರದಿಂದ ಪ್ರೀತ ಪ್ರಣತನಾದ ಶ್ರೀಕೃಷ್ಣ ದೇವರಾಜನು ಶ್ರೀ ಚಂದ್ರಿಕಾಚಾರ್ಯರಿಗೆ ಕನಕಾಭಿಷೇಕವನ್ನು ಮಾಡಿದನು. ಅಷ್ಟರಿಂದ ತೃಪ್ತನಾಗದೇ ಮತ್ತೊಮ್ಮೆ ರತ್ನಾಭಿಷೇಕವನ್ನೂ ಮಾಡಿದನು. ತನ್ನ ಸರ್ವಸ್ವನ್ನೂ ಅವನ ಅಡಿದಾವರೆಗಳಿಗೆ ಅರ್ಪಿಸಿ ಕೃತಾರ್ಥನಾದನು.

ಶ್ರೀ ವ್ಯಾಸರಾಜರ ಕಾಲದಲ್ಲಿ ಶ್ರೀಕೃಷ್ಣದೇವರಾಯನು ಅವರ ಅಪ್ಪಣೆಯಂತೆ ಸಂಸ್ಕೃತಕವಿ ಪಂಡಿತರ ಮನೆಮನೆಗಳಲ್ಲಿ ಸುವರ್ಣ ವೃಷ್ಟಿಯನ್ನೇ ಮಾಡಿದನು.

ಇಂಥ ಈ ಮಹಾರಾಜನು ಗುರುಗಳಾದ ಶ್ರೀ ವ್ಯಾಸರಾಜರ ಆದೇಶದಿಂದ ಮಾಡಿದ ಇಂಥ ಅನೇಕಾನೇಕ ಪುಣ್ಯಕಾರ್ಯದಿಂದ ಭುವನೇಶ್ವರಿಯೂ ಹಾಗೂ ಜಗದೀಶ್ವರಿಯೂ ತುಷ್ಟರಾಗಿ ಹರಿವಾಯುಗಳು ಸುಪ್ರಸನ್ನರಾಗಿ ಕೃಷ್ಣದೇವರಾಯನ ದೀರ್ಘಕಾಲದ ಆಡಳಿತದ ಉದ್ದಕ್ಕೂ ನಿರಂತರವಾಗಿ ಶಾಂತಿ, ಸಂತಸ, ತುಷ್ಟಿ, ಪುಷ್ಟಿ, ಸಿರಿ-ಸಂಪದ, ವಿಜಯ, ಭೂತಿ ಮುಂತಾದವುಗಳು ಶಾಶ್ವತವಾಗಿ ನೆಲೆಸುವಂತೆ ಮಾಡಿದವು.

ಕೃಷ್ಣದೇವರಾಯನ ಕಾಲದಲ್ಲಿ ವಾಸಿಸಿದ್ದ ಸೋಮನಾಥ ಕವಿಯು ಸ್ವಯಂ ಶೈವನಾದರೂ ವ್ಯಾಸರಾಜರ ಅತ್ಯದ್ಭುತವಾದ ವ್ಯಕ್ತಿತತ್ವದಿಂದ ಪ್ರಭಾವಿತನಾಗಿ ವ್ಯಾಸಯೋಗಿ ಚರಿತಂ ಎಂಬ ಚಂಪೂಕಾವ್ಯವನ್ನು ಬರೆದಿದ್ದಾನೆ. ಅದರಲ್ಲಿ ಚಂದ್ರಿಕಾಚಾರ್ಯರ ಉನ್ನತೋನ್ನತವಾದ ಮಹಿಮಾಮಯ ಜೀವನದ ಮೇರು ಮುಖಗಗನ್ನೆಲ್ಲ ಸುಂದರವಾಗಿ ಕಾಣಿಸಿ ಅವರ ಆ ದಿವ್ಯಾನುಭಾವ ಪ್ರಭಾವದಿಂದ ಕೃಷ್ಣದೇವ

ರಾಜನು ಎಂಥ ಧೀರೋದಾತ್ತ ವ್ಯಕ್ತಿತ್ವದ ದೇದೀಪ್ಯಮಾನವಾದ ಘನತೆಯನ್ನು ಮೆರೆದನೆಂಬುವದು ಕೂಡ ಮಾರ್ಮಿಕವಾಗಿ ಚಿತ್ರಿಸಿದ್ದಾನೆ.

ಶ್ರೀಕೃಷ್ಣದೇವರಾಯನ ಕಾಲವೆಂದರೆ ಮಧ್ವಮತದ ಸುವರ್ಣದ ನಡುಹಗಲು. ಕನ್ನಡ ರಾಜಕೀಯ ಜೀವನವು ಮುಂದೆಂದೂ ಇಂಥ ಉತ್ಕರ್ಷದ ಚರಮ ಸೀಮೆಯನ್ನು ಮುಟ್ಟಲಿಲ್ಲ. ಕೃಷ್ಣದೇವರಾಯನಂಥ ಶ್ರೀ ಮಧ್ವಮತದ ನಿಷ್ಠಾವಂತ ಅನುಯಾಯಿಗಳು ಕಣ್ಮರೆಯಾದ ಕೂಡಲೇ ಕನ್ನಡ ಸಾಮ್ರಾಜ್ಯಕ್ಕೆ ಮಾಧ್ವರ ತಪೋಬಲದ ಬೆಂಬಲವು ಇಲ್ಲದಂತಾಗಿ ಸ್ವಲ್ಪೇ ಕಾಲದಲ್ಲಿ ಆ ವಿಶಾಲ ಸಾಮ್ರಾಜ್ಯವು ಮಣ್ಣುಪಾಲಾಗುವ ಪ್ರಸಂಗವು ಒದಗಿ ಬಂದಿತು.

ಶ್ರೀ ವ್ಯಾಸರಾಜರು ತಾವು ಅಪ್ಪಟ ಮಾಧ್ವರಾಗಿದ್ದರೂ ತಮ್ಮ ಶಿಷ್ಯನಾದ ಕೃಷ್ಣದೇವರಾಯನಿಂದ ಎಲ್ಲ ಮತಗಳ ಎಲ್ಲ ಮಠಗಳ ಪಂಡಿತರಿಗೂ ಪೀಠಾಧಿಪತಿಗಳಿಗೂ ಸರಿಯಾದ ಮಾನಮನ್ನಣೆ ಮಾಡಿಸಿದ್ದು ದಾನದತ್ತಿಗಳನ್ನು ನೀಡಿಸಿದ್ದು ಅವರ ಪಕ್ಷಾತೀತವಾದ ಪಾರಮಹಂಸ್ಯಕ್ಕೆ ಸಮಂಜಸವಾದ ವ್ಯಂಜಕವಾಗಿದೆ.

ಕೃಷ್ಣದೇವರಾಜನ ಕಾಲದಲ್ಲಿ ಚಂದ್ರಿಕಾಚಾರ್ಯರ ನೇತೃತ್ವದಲ್ಲಿ ಪ್ರೋತ್ಸಾಹನೆ ಪಡೆಯದ ಧರ್ಮವಿಲ್ಲ, ಉತ್ತೇಜನ ಹೊಂದದ ವಿದ್ಯೆ ಇಲ್ಲ, ಪ್ರಗತಿ ಹೊಂದದ ಭಾಷೆ ಇಲ್ಲ.

ಹೀಗೆ ಸರ್ವಸಮ್ಮತವಾದ ಧರ್ಮರಾಜ್ಯವನ್ನು ಆಳಿ ಮಧ್ವ ಮತದ ಪರಮೋತ್ಕರ್ಷಕ್ಕೆ ಕಾರಣನಾದ ಶ್ರೀ ಕೃಷ್ಣದೇವರಾಯನು ಮಾಧ್ವರ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖನೀಯವಾದ ಸ್ಥಾನಮಾನಗಳನ್ನು ಪಡೆದ ಅಮರ ಅರಸನಾಗಿದ್ದಾನೆ

## ೮ ದಿವಾಣ ವೆಂಕಣ್ಣನವರು

ಇವರು ಮಾನವಿಹಳ್ಳಿಯ ಕಂದನಾತಿ ಗ್ರಾಮದವರು. ಬಾಲ್ಯದಲ್ಲಿಯೇ ತಾಯಿ ತಂದೆಗಳು ತೀರಿಕೊಂಡರು. ಈ ತಬ್ಬಲಿ ವೆಂಕಣ್ಣನನ್ನು ಸಂಬಂಧಿಕರು ದನಕಾಯಲಿಕ್ಕೆ ಹಚ್ಚಿದರು. ಅವನು ಚಿಕ್ಕವನಿದ್ದಾಗ ಶ್ರೀ ರಾಘವೇಂದ್ರಸ್ವಾಮಿಗಳು ಆ ಗ್ರಾಮಕ್ಕೆ ದಯಮಾಡಿಸಿದ್ದರು. ಈ ತರಳ ತಬ್ಬಲಿ ವೆಂಕಣ್ಣ ಗುರುಪಾದಕ್ಕೆ ತಲೆ ತಿಕ್ಕಿದ. ಶ್ರೀಗಳವರು ಅವನ ಶಿರದಲ್ಲಿ ವರದ ಕರವನ್ನಿಟ್ಟರು.

ಒಂದು ದಿನ ವೆಂಕಣ್ಣ ಊರ ಹೊರಗೆ ತುರುಕರುಗಳನ್ನು ಕಾಯುತ್ತಲಿದ್ದ. ಆ ಕಾಲಕ್ಕೆ ಆದವಾನಿಯ ಮಾಂಡಲಿಕನಾದ ಸಿದ್ದಿಮಸೂದಖಾನನು ಆ ಹಳ್ಳಿಗೆ ಬಂದಿದ್ದ. ವಿಜಾಪುರದ ನವಾಬನಿಂದ ಅವನು ಅಲ್ಲಿ ಇದ್ದಾಗ ಖಾನನಿಗೆ ಒಂದು ಪತ್ರ ಬಂದಿತು.

ಖನಾನೂ ಅವನ ಪರಿವಾರದವರೂ ಅಕ್ಷರ ಶತ್ರುಗಳು. ಯಾರಿಗೂ ಪತ್ರ ಓದಲು ಬರಲಿಲ್ಲ. ಅಲ್ಲಿಯೇ ದನಕಾಯುತ್ತಿರುವ ವೆಂಕಣ್ಣನ ಮೇಲೆ ಖಾನನದೃಷ್ಟಿ ಬಿದ್ದಿತು.

ಮುಖ ವರ್ಚಸ್ಸನ್ನು ನೋಡಿಯೇ ಇವನು ಬ್ರಾಹ್ಮಣ ಬಾಲಕನಾಗಿರಬೇಕೆಂದು ಖಾನನು ತರ್ಕಿಸಿದ. ಬ್ರಾಹ್ಮಣರಾದವರಿಗೆಲ್ಲ ಓದು ಬರೆ ಸ್ವಾಭಾವಿಕವಾಗಿ ಬಂದೇ ಬರುತ್ತದೆಂದು ಅವನ ವಿಶ್ವಾಸ. ಆದುದರಿಂದ ವೆಂಕಣ್ಣನನ್ನು ಹಿಡಿದು ತರಿಸಿ ಪತ್ರವನ್ನು ಅವನ ಕೈಯಲ್ಲಿರಿಸಿ ಅವನಿಗೆ ಓದು ಎಂದು ಹುಕುಮ್ ಮಾಡಿದ.

ವೆಂಕಣ್ಣನಿಗೂ ಬ್ರಾಹ್ಮಣನಾಗಿದ್ದರೂ ಅಕ್ಷರಗಳ ಪರಿಚಯವೇ ಇರಲಿಲ್ಲ. ನನಗೆ ಓದಲು ಬರುವದಿಲ್ಲ ಎಂದು ಅವನು ನಮ್ರನಾಗಿ ತಿಳಿಸಿದ. ಕೂಡಲೇ ಖಾನನು ಖಡ್ಗವನ್ನು ಝಳಪಿಸಿದ. 'ಬ್ರಾಹ್ಮಣನಾಗಿ ಓದುಲಿಕ್ಕೆ ಬರುವದಿಲ್ಲವೊ ? ಸುಳ್ಳು ಹೇಳುವಿ ಈ ಪತ್ರವನ್ನು ಓದದಿದ್ದರೆ ನಿನ್ನ ಹೆಗಲ ಮೇಲಿನ ಶಿರಭಾರವನ್ನೇ ಇಳಿಸಿ ಬಿಡುವೆ" ಎಂದು ಗರ್ಜಿಸಿದ.

ವೆಂಕಣ್ಣನ ಮೈಬೆವಂತು. ನಖಶಿಖಾಂತ ಮೈನಡುಗಿತು. ಕಣ್ಣು ಕತ್ತಲೆಗೂಡಿತು. ಕೂಡಲೇ ಅವನಿಗೆ ಹಿಂದೆ ಒಂದು ದಿನ ತನ್ನ ತಲೆಯ ಮೇಲೆ ಕೈಯಿರಿಸಿದ ಶ್ರೀ ರಾಘವೇಂದ್ರಸ್ವಾಮಿಗಳ ನೆನಪಾಯಿತು. ಕಣ್ಣುಮುಚ್ಚಿ ಧ್ಯಾನಮಾಡಿದ 'ಗುರೋ ಈ ಘೋರ ಗಂಡಾಂತರದಿಂದ ಪಾರುಮಾಡು' ಎಂದು ಬೇಡಿಕೊಂಡ.

"ಬೇಗ ಓದು. ಇಲ್ಲದಿದ್ದರೆ ಪ್ರಾಣ ನೀಗು". ಖಾನನ ಖಡಕ ಅವಾಜು. ಬೆಚ್ಚಿ ಬಿದ್ದ ವೆಂಕಣ್ಣ ಹುಚ್ಚನಂತೆ ತಬ್ಬಿಬ್ಬಾಗಿ ಕಣ್ಣು ತೆರೆದ. ಎದುರಿಗೆ ವಿಜಾಪುರ ನವಾಬನ ಪತ್ರದ ಸುರಳೆಯನ್ನು ಬಿಡಿಸಿ ಹಿಡಿದಿದೆ. ಅದರಲ್ಲಿಯ ಅಕ್ಷರಗಳೆಲ್ಲವೂ ವೆಂಕಣ್ಣನಿಗೆ ಚನ್ನಾಗಿ ತಿಳಿದುಹೋದವು. ನೆಟ್ಟಗೆ ಓದುವಷ್ಟು ಅರಿವು ಅವನಲ್ಲಿ ತಾನಾಗಿ ಮೂಡಿ ಬಂದಿತ್ತು.

ಕೂಡಲೇ ಅವನು ಸಟೆದು ನಿಂತ. ಒನಪಿನಿಂದ ಆ ಪತ್ರವನ್ನು ಕೈಯಲ್ಲಿ ತೆಗೆದುಕೊಂಡ. ಪತ್ರದ ಒಕ್ಕಣಿಕೆಯನ್ನು ಒಮ್ಮೆ ಮೊದಲಿನಿಂದ ತುದಿಯುವರೆಗೆ ನೋಡಿ ಓದಲು ಪ್ರಾರಂಭಿಸಿದ. ಯಾವ ಅಳುಕು ಅಡ್ಡಿ ಇಲ್ಲದೆ ಪೂರ್ಣ ಪತ್ರವನ್ನು ಓದಿ ಮುಗಿಸಿದ.

ಮಸೂದಖಾನನಿಗೆ ವೆಂಕಣ್ಣನ ವಚನವಾಚನ ವೈಖರಿಯನ್ನು ಕಂಡು ತೃಪ್ತಿ ಎನಿಸಿತು. ಅವನ ಮುಖದ ವರ್ಚಸ್ಸನ್ನು ಕಂಡು ಆತ್ಮೀಯ ಭಾವನೆ ಹುಟ್ಟಿತು. ಅವನನ್ನು ತನ್ನ ದಿವಾಣನನ್ನಾಗಿ ನೇಮಿಸಿಕೊಂಡ. ಹೀಗೆ ದನ ಕಾಯುವ ವೆಂಕಣ್ಣ ದಿವಾಣನಾಗಿ ಬಿಟ್ಟ.

ಇದೆಲ್ಲವೂ ಗುರುಕಾರುಣ್ಯದ ಫಲವೆಂದು ತಿಳಿಯಲಾರದಷ್ಟು ಮೂರ್ಖನಾಗಿರಲಿಲ್ಲ ವೆಂಕಣ್ಣನು.

ಮುಂದೆ ಶ್ರೀ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು ಆದವಾನಿಗೆ ದಿಗ್ವಿಜಯ ಮಾಡಿಸಿದಾಗ ವೆಂಕಣ್ಣ ಅಮಾತ್ಯನು ಗುರು ಪಾದಕ್ಕೆ ಹಣೆ ಚಾಚಿದ. ಅವನ ಕೈಂಕರ್ಯ ಕುಬೇರನ ಸೇವೆಗೆ ಸಾಟಿಯಾಗಿತ್ತು. ಪಶುಗಳಲ್ಲಿಯ ಪಶುವಾಗಿದ್ದ ತನ್ನನ್ನು ಇಂಥ ಗೌರವದ ಗದ್ದುಗೆಯಮೇಲೆ ತಂದು ಕುಳ್ಳಿರಿಸಿದ ಗುರುವಿಗೆ ಏನು ಸೇವೆ ಮಾಡಲಿ ಎಂದು ಕಾತುರಸುತ್ತಲಿತ್ತು ಅವನ ಆತುರಚಿತ್ತ. ಗುರುಗಳೋ ಆಶಾವಿದೂರರು. ನಿಸ್ಪೃಹ ನಿರೀಹರು.

ವೆಂಕಣ್ಣನು ತನ್ನ ಒಡೆಯ ಮಸೂದಖಾನನನ್ನು ಶ್ರೀಗಳವರಲ್ಲಿಗೆ ತಂದು ಭೇಟಿ ಮಾಡಿಸಿದ. ಖಾನನು ದೈವೀ ತೇಜಸ್ಸಿನ ಆ ಮಿಂಚಿನ ಮೂರುತಿಯನ್ನು ಕಂಡೇ ಅಪ್ರತಿಭನಾದ. ಆ ಗುರು ಮೂರುತಿಯ ಅಡಿದಾವರೆಗಳ ಮುಂದೆ ಅಡ್ಡಬಿದ್ದು ಸೇವೆಯನ್ನು ಸ್ವೀಕರಿಸಬೇಕೆಂದು ಬಿನ್ನವಿಸಿಕೊಂಡ. ಗುರುಚಿತ್ತಕ್ಕೆ ಏನು ತೋರಿತೋ ಏನೋ ! "ಮಂತ್ರಾಲಯ ಕ್ಷೇತ್ರವು ಆಗಬಹುದು" ಎಂದು ಸೂಚಿಸಿದರು. ನವಾಬನಿಗೆ ಇಂಥ ಮಹಾ ಗುರುಮೂರ್ತಿಗೆ ಇಷ್ಟು ಚಿಕ್ಕ ಗ್ರಾಮದ ಕಾಣಿಕೆಯನ್ನು ನೀಡಲು ನಾಚಿಕೆ ಎನಿಸಿತು. ಅಷ್ಟೇ ಸಾಕು ಎಂದಿತು ಗುರುವಾಣಿ. ಮೊಗರೂರು, ತಿಮ್ಮಾಪುರ ಗ್ರಾಮಗಳನ್ನು ಸೇರಿಸಿ ಮೂರು ಗ್ರಾಮಗಳನ್ನು ಧಾರೆಎರೆದು ದಾನವಿತ್ತ ವೆಂಕಣ್ಣ ನವಾಬರ ಪರವಾಗಿ.

ಹಿಂದೆ ಪ್ರಲ್ಹಾದರಾಜರು ಯಜ್ಞ ಮಾಡಿದ ಸ್ಥಳವೇ ಮಂಚಾಲಿ. ತುಂಗಾತೀರದ ಈ ಮಂಗಲ ಭೂಮಿಯೇ ಗುರು ಚಿತ್ತಕ್ಕೆ ಬೇಕೆನಿಸಿದ್ದಿತು. ಮಂತ್ರಾಲಯದಲ್ಲಿ ಗುರು ಸಾರ್ವಭೌಮರು ನಿರಂತರ ನೆಲೆನಿಲ್ಲುವಂತೆ ಮಾಡಿದ ಶ್ರೇಯಸ್ಸು ವೆಂಕಣ್ಣನದು. ಅವನ ಉಡಿಯಲ್ಲಿ ಆ ಹಿಡಿ ಪುಣ್ಯವನ್ನು ಹಾಕಿದ ಶ್ರೇಯಸ್ಸು ಗುರು ಕರುಣೆಯದು.

ಕೃತಯುಗದಲ್ಲಿ ಶ್ರೀ ಪ್ರಲ್ಹಾದರಾಜರು ಯಜ್ಞ ಮಾಡಿದ ಸ್ಥಳದಲ್ಲಿಯೇ ಒಂದು ಗುಡಿಯನ್ನು ಕಟ್ಟಿಸಬೇಕೆಂದು ಗುರುಗಳು ಯೋಚಿಸುತ್ತಿರುವಾಗಲೇ ವೆಂಕಣ್ಣ ಅದನ್ನು ಕಟ್ಟಿಸಿ ಕೃತಾರ್ಥನಾದ.

ಮುಂದೆ ಒಂದು ದಿನ ಗುರು ಸಾರ್ವಭೌಮರು ತಮ್ಮ ಮಹಾ ಪ್ರಯಾಣದ ದಿನವನ್ನು ಮುಂಗಂಡು ತಮಗೊಂದು ಶಿಲಾ ವೃಂದಾವನವನ್ನು ಮಾಡಿಸಬೇಕೆಂದು ವೆಂಕಣ್ಣ ಪಂತರಿಗೆ ಆಜ್ಞೆ ಇತ್ತರು. ದಿವಾಣರಿಗೆ ಇದನ್ನು ಕೇಳಿ ಆಘಾತವಾಯಿತು. ಆದರೂ ಗುರುಗಳ ಉಪದೇಶದಿಂದ ಚೇತರಿಸಿಕೊಂಡು ಕಟೆದಕಲ್ಲಿನ ಒಂದು ಸುಂದರ ವೃಂದಾವನವನ್ನು ತಯಾರು ಮಾಡಿ ತರಿಸಿದ.

"ಇದು ಮುಂದಿನವರಿಗೆ. ಇದು ನಮಗೆ ಉಪಯೋಗವಿಲ್ಲ" ಎಂದರು— ಶ್ರೀಪಾದಂಗಳವರು.

ವೆಂಕಣ್ಣನಿಗೆ ಅಚ್ಚರಿಯು ಮೇಲೆ ದಿಗ್ಭ್ರಮೆ, ಮೇಲೆ ಅಳುಕು— "ಹಾಗಾದರೆ ಇವರ ಭಾವಿ ಸಮಾಧಿಗೆ ಯಾವ ಕಲ್ಲಾಗಬೇಕು?"

ಅವನ ಚಿತ್ತ ವಿಕ್ಷೇಪವನ್ನು ಗುರುತಿಸಿದ ಗುರುಮೂರ್ತಿ ಕರುಣೆಯಿಂದ ನುಡಿಯಿತು.

"ವತ್ಸ ! ಅಚ್ಚರಿಯಾಕೆ. ತ್ರೇತಾಯುಗದ ಕತೆ ಕೇಳಿಲ್ಲವೆ ? ಶ್ರೀ ರಾಮನ ಕಾಲು ಸೋಂಕಿದ ಕಲ್ಲು ಅಹಲ್ಯೆಯಾಯಿತು" ಎಂದು.

"ರಾಮನ ಪಾದವು ತಾಕಿದ ಆ ಕಲ್ಲೇ ನಮ್ಮ ಮುಂದಿನ ಶಿಲಾ ತಪಸ್ಸಿಗೆ ಬೇಕಾಗಿದೆ. ಮಾಧಾವರದ ಬಳಿಯಲ್ಲಿರುವ ರಾಮ ಪಾದ ಸ್ಪರ್ಶದಿಂದ ಪಾವನವಾದ ಆ ಪಾಷಾಣ ಖಂಡವನ್ನು ತರಿಸು. ವೃಂದಾವನದ ಆಕಾರದಲ್ಲಿ ಅದನ್ನು ಕೊರಿಸು."

ಗುರುಗಳ ದಿವ್ಯ ಜೀವನದ ಹೊಸ ಮುಖವೊಂದು ಅಂದು ವೆಂಕಣ್ಣನಿಗೆ ಗೋಚರಿಸಿತು. ಇಂಥ ದಿವ್ಯ ಚೇತನದ ಸೇವೆಯ ಸೌಭಾಗ್ಯವು ದೊರಕಿ ತನ್ನ ಜೀವನವೇ ಧನ್ಯ ಎಂದುಕೊಂಡ.

ಹನುಮಂತನಂತೆ ಹಾರುತ್ತ ಹೋಗಿ ಮಾಧಾವರದಿಂದ ರಾಮನ ಕಾಲು ತಾಕಿದ ಆ ಹೆಬ್ಬಂಡೆಯನ್ನು ಹೊತ್ತು ತರಿಸಿದ. ಕುಶಲ ಶಿಲ್ಪಿಗಳಿಂದ ಸುಂದರವಾದ ಒಂದು ವೃಂದಾವನವನ್ನು ನಿರ್ಮಾಣಗೊಳಿಸಿದ.

ವೆಂಕಣ್ಣನು ತಯಾರು ಮಾಡಿಸಿದ ಈ ಶಿಲಾವೃಂದಾವನದಲ್ಲಿಯೇ ಶ್ರೀಗುರು ಸಾರ್ವಭೌಮರು ಸಶರೀರಪ್ರವೇಶ ಮಾಡಿದರು. ಗುರುರಾಜರ ಆಜ್ಞೆಯಂತೆ ವೆಂಕಣ್ಣನು ೧೨೦೦ ಶಾಲಿಗ್ರಾಮಗಳನ್ನು ತರಿಸಿ ವೃಂದಾವನದ ಮೇಲ್ಭಾಗದಲ್ಲಿ ಇರಿಸಿ ಅದರ ಮೇಲೆ ಸಂಪುಟಶಿಲೆಯನ್ನಿಟ್ಟು ಆದರಮೇಲೆ ವೃತ್ತಿಕೆಯನ್ನು ಹಾಕುವ ಏರ್ಪಾಡನ್ನು ಮಾಡಿದನು.

ಆದರಂತೆ ವೆಂಕಣ್ಣ ಅಮಾತ್ಯರು ಗುರುಗಳ ಅಪೇಕ್ಷೆಯಂತೆ ತನ್ನ ಮನೆತನದ ಪುರೋಹಿತರನ್ನೇ ಶ್ರೀಗುರುಸಾರ್ವಭೌಮರ ಪೂಜೆಗೆಂದು ನೇಮಿಸಿದರು. ಅರ್ಚಕರಿಗೂ ಉಳಿದ ಸೇವಾಪರಿಚಾರಕರಿಗೂ ಅನೇಕ ಹೊಲಗಳನ್ನು ಉಂಬಳಿಯಾಗಿ ಹಾಕಿಕೊಟ್ಟನು. ಹಾಗೂ ಗುರುಸಾರ್ವಭೌಮರ ಉತ್ತರಾಧಿಕಾರಿಗಳಾದ ಶ್ರೀ ಯೋಗೀಂದ್ರ ತೀರ್ಥರ ಹಾಗೂ ಗುರುಮಠದ ಸೇವೆಯನ್ನು ವೆಂಕಣ್ಣ ದಿವಾಣರು ಮಾಡಿ ಕೃತಾರ್ಥರಾದರು.

## ೯ ವಿಜಯನಗರದ ಅರಸು ರಾಮರಾಯ

ಕೃಷ್ಣದೇವರಾಯನ ಕಾಲದಲ್ಲಿ ಅಳಿಯ ರಾಮರಾಯನ ಪಿತಾಮಹನಾದ ಈ ರಾಮರಾಯನ ವರ್ಚಸ್ಸು ವಿಜಯನಗರದಲ್ಲಿ ವಿಶೇಷವಾಗಿತ್ತು. ಈ ರಾಮರಾಯನು ಶ್ರೀರಾಯರ ಮಠದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ಹಂಪಿಗೆ ಕರೆದು ಕೊಂಡು ಬಂದು ರಾಮನವಮಿ ಉತ್ಸವವನ್ನು ವೈಭವದಿಂದ ನೆರವೇರಿಸಿದನು.

ವಿಜಯವಿಠ್ಠಲನ ದೇವಾಲಯದ ಪಕ್ಕದಲ್ಲಿಯೇ ದಕ್ಷಿಣದ ಬಾಗಿಲಿನ ಹತ್ತಿರ ದಿವ್ಯ ಭವ್ಯವಾದ ಛತ್ತು, ಛಾವಣಿ, ಚಪ್ಪರಗಳನ್ನು ಹಾಕಿ ಅನೇಕ ಪಂಡಿತರನ್ನೂ ಪ್ರತಿಷ್ಠಿತರನ್ನೂ, ಮಾಂಡಲಿಕರನ್ನೂ ಕರೆಯಿಸಿ ಶ್ರೀರಾಮವಿಠ್ಠಲರ ಉತ್ಸವವು. ಅಭೂತ ಪೂರ್ವವಾಗಿ ನೆರವೇರುವಂತೆ ಮಾಡಿದ.

ಅದೇ ಕಾಲದಲ್ಲಿ ರಾಮರಾಯನು ರಾಜಧಾನಿಯಲ್ಲಿ ನಡೆದ ಶ್ರೀರಾಮದೇವರ ಮಹಾಭಿಷೇಕೋತ್ಸವದ ಸವಿನೆನಪಿಗಾಗಿ ಲೇಬಗಿರಿ, ಶಿರಾಪುರ, ಮಲ್ಲಾಪುರ, ಹೊನ್ನ ಮಟ್ಟಿ, ಹೇರಕಲ್ಲು, ಕಂಬಾರಕಟ್ಟಿ, ಚಿಕ್ಕಮರಟಿ, ಕೊಳಲಿ, ಆನೆಹೊಸೂರು ಮುಂತಾದ ಅನೇಕ ಗ್ರಾಮಗಳನ್ನು ಉಂಬಳಿ ಹಾಕಿಕೊಟ್ಟು ಶ್ರೀ ಮಧ್ವಮತದ ಸೇವೆ ಗೈಯ್ದನು

## ೧೦ ಅಳಿಯ ರಾಮರಾಯ

ವಿಜಯನಗರದ ಕೊನೆಯ ಅರಸನಾದ ಅಳಿಯ ರಾಮರಾಯನು ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರನ್ನು ವಿಶೇಷವಾಗಿ ಸತ್ಕರಿಸಿದನು. ದಕ್ಷಿಣ ದೇಶದ ದಿಗ್ವಿಜಯವನ್ನು ಪೂರೈಯಿಸಿಕೊಂಡು ಬಂದ ಶ್ರೀಗಳವರ ಬಳಿಗೆ ತನ್ನ ರಾಯಭಾರಿ ಗಳನ್ನು ಕಳಿಸಿ ಶ್ರೀ ವ್ಯಾಸರಾಜರು ಕೃಷ್ಣದೇವರಾಯನಿಗೆ ಅನುಗ್ರಹಗೈಯ್ದಂತೆ ನನ್ನ ರಾಜಧಾನಿಗೆ ಬಂದು ತನನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡ.

ಶ್ರೀ ವಿಜಯೀಂದ್ರತೀರ್ಥರಿಗೂ ವಿಜಯನಗರಕ್ಕೆ ಹೋಗಿ ತಮ್ಮ ಗುರುಗಳಾದ ಶ್ರೀ ಚಂದ್ರಿಕಾಚಾರ್ಯರ ವೃಂದಾವನ ದರ್ಶನ ತೆಗೆದುಕೊಳ್ಳಬೇಕಂದು ಮನೀಷೆ ಇದ್ದಿತು.

ಆದರಂತೆ ಅವರು ವಿಜಯನಗರಕ್ಕೆ ದಯಮಾಡಿಸಿದಾಗ ರಾಮರಾಯನು ಅವರನ್ನು ರಾಜ ಗೌರವದಿಂದ ವೈಭವ ಪೂರ್ಣವಾಗಿ ಸತ್ಕರಿಸಿದನು. ಆನೆಯ ಮೇಲೆ ಅಂಬಾರಿಯನ್ನು ಹಾಕಿ ಶ್ರೀಗಳವರನ್ನು ಮೆರೆಯಿಸಿ ತನ್ನ ಆಸ್ಥಾನಕ್ಕೆ ಕರೆತಂದು ಅವರಿಗೆ ಭಕ್ತಿಯಿಂದ ರತ್ನಾಭಿಷೇಕವನ್ನು ಮಾಡಿದನು. ಈ ಸಂದರ್ಭವನ್ನು ರಾಘ ವೇಂದ್ರ ವಿಜಯದಲ್ಲಿ—

"ವಿದ್ವದ್ವರೋಸ್ಮಾತ್ ವಿಜಯೀಂದ್ರ ಯೋಗೀ ವಿದ್ಯಾಸುಹೃದ್ಯಾ
ಸ್ವತುಲ ಪ್ರತಾಪಃ।
ರತ್ನಾಭಿಷೇಕಂ ಕಿಲ ರಾಮ ರಾಜಾತ್ ಪ್ರಾಪ್ಯಗ್ರುಲಕ್ಷ್ಮಿ
ನ ಕೃತಾ ಗ್ರಹರಾನ್॥"

## ೧೧ ಜೀವಪ್ಪ ನಾಯಕ

ತಂಜಾವೂರ ನಾಯಕರು ಅತ್ಯಂತ ಆಸ್ತಿಕರಾಗಿದ್ದರು. ಜೀವಪ್ಪನಾಯಕನು ಶ್ರೀವಿಜಯೀಂದ್ರತೀರ್ಥರ ತಪಃಪ್ರಭಾವದಿಂದ ಆಕರ್ಷಿತನಾಗಿ ವಿದ್ಯಾವೈಭವಕ್ಕೆ ಮುಗ್ಧನಾಗಿ ೧೫೭೭ನೇ ಇಸ್ವಿಯಲ್ಲಿ ಆರವಿಲಿಮಂಗಲಂ, ಕೊಕ್ಕೂರು, ಗುಳ್ಳೂರು, ಪಲ್ಲಂ, ಮತ್ತು ರಘುಪಕಪ್ಪಲೆ ಮುಂತಾದ ಗ್ರಾಮಗಳ ಜಹಗೀರು ಹಾಕಿಕೊಟ್ಟನು.

## ೧೨ ಚನ್ನಜೀವಪ್ಪ ನಾಯಿಕ

ತಂಜಾವೂರ ನಾಯಕ ಮನೆತನದ ಇವನು ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರ ಭಕ್ತನಾಗಿ ಕುಂಭಕೋಣದಲ್ಲಿಯೇ ಅವರ ಸೇವೆ ಮಾಡುತ್ತ ವಾಸ ವಾಗಿದ್ದ. ೧೬೧೪ನೇ ಇಸ್ವಿಯ ಆನಂದನಾಮ ಸಂವತ್ಸರದ ರಾಮನವಮಿಯ ದಿನ ಶ್ರೀಮಠದಲ್ಲಿ ನಡೆಯುವ ಶ್ರೀರಾಮದೇವರ ಮಹಾಭಿಷೇಕ ಮಹೋತ್ಸವಾದಿಗಳಿಗೆ ಕಾವೇರಿ ತೀರದ ಎರಡು ವೇಲಿ ಗ್ರಾಮುಗಳನ್ನು ಉಂಬಳಿಯಾಗಿ ಕೊಟ್ಟನು.

## ೧೩ ತಂಜಾಊರಿನ ರಘುನಾಥ ಭೂಪಾಲ

ತಂಜಾವೂರಿನ ನಾಯಿಕ ವಂಶದಲ್ಲಿ ರಘುನಾಥರಾಜನು ಅತ್ಯಂತ ಪ್ರಭಾವಶಾಲಿ ಯಾದ ಪಂಡಿತ ಪೃಥ್ವೀಪತಿ ಎನಿಸಿದ್ದ. ಅವನ ಆಸ್ಥಾನ ವಿದ್ವಾಂಸರಾದ ಕೃಷ್ಣಯಜ್ಞ ಕವಿಗಳು ರಘುನಾಥ ಭೂಪಾಲೀಯ ಎಂಬ ಗ್ರಂಥವನ್ನು ರಚಿಸಿದ್ದನು. ಆ ಗ್ರಂಥಕ್ಕೆ ಮೂಲಾರ್ಥಕ್ಕೆ ಹೆಚ್ಚಿನ ವೈಶದ್ಯ ಹಾಗೂ ಪಾವಿತ್ರ್ಯಗಳನ್ನು ತರುವಂಥ ಒಂದು ವ್ಯಾಖ್ಯಾನವನ್ನು ಬರೆಯಬೇಕೆಂದು ಆ ಮಹಾರಾಜನು ಸರ್ವಜ್ಞಸಿಂಹಾಸನಾಧೀಶ್ವರ ಶ್ರೀರಾಯರಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರಿಗೆ ಪ್ರಾರ್ಥನೆಯನ್ನು ಮಾಡಿಕೊಂಡನು.

ರಾಜನ ಅಪೇಕ್ಷೆಯಂತೆ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರು ಶ್ರೀ ರಘು ನಾಥ ಭೂಪಾಲಿಯ ಗ್ರಂಥಕ್ಕೆ ಮೂಲವನ್ನೇ ಮರೆಸಿ, ಮೀರಿಸಿ ಮೆರೆಯುವ "ಸಾಹಿತ್ಯ ಸಾಮ್ರಾಜ್ಯ" ಎಂಬ ವ್ಯಾಖ್ಯಾನವನ್ನು ರಚಿಸಿದರು. ಇದೊಂದು ಸಂಸ್ಕೃತ ಸಾಹಿತ್ಯದ ವಿಶ್ವಕೋಶದಂತಿದೆ.

ಇಂಥ ಕೃತಿ ರತ್ನದಿಂದ ಪ್ರಭಾವಿತನಾದ ಮಹಾರಾಜನು ಶ್ರೀಪಾದಂಗಳವರನ್ನು ತನ್ನ ಅರಮನೆಗೆ ಕರೆಯಿಸಿಕೊಂಡು ಅವರಿಗೆ ಕನಕಾಭಿಷೇಕ ಮಾಡಿ ಗೌರವಿಸಿದನು.

## ೧೪ ವೆಂಕಟಪತಿರಾಜ

ವಿಜಯನಗರದ ಅಧಿಪತಿಯಾದ ವೆಂಕಟಪತಿರಾಜನು ಶ್ರೀಸುಧೀಂದ್ರತೀರ್ಥರನ್ನು ತನ್ನ ರಾಜಧಾನಿಯಾದ ಪೆನಗೊಂಡಿಗೆ ಕರೆದುಕೊಂಡು ಹೋಗಿ ಅವರ ಶಿಷ್ಯನಾಗಿ ರತ್ನಾಭಿಷೇಕವನ್ನು ಮಾಡಿದನು. ಇವನು ವೀರಭದ್ರ ಮತ್ತು ಭೈರವಭಟ್ಟ ಎಂಬ ಶೈವ ಪಂಡಿತರನ್ನು ಸೋಲಿಸಿದ್ದಕ್ಕಾಗಿ ಗ್ರಾಮಭೂಮಿಗಳನ್ನು ದಾನವಿತ್ತನು. ಶ್ರೀ ವಾದಿರಾಜ ಶ್ರೀಪಾದಂಗಳವರಿಗೂ ಅವನು ತನ್ನ ಗುರುಕಾಣಿಕೆಯನ್ನಿತ್ತು ಧನ್ಯನಾದನು.

## ೧೫ ಶ್ರೀ ರಂಗರಾಜ

ವಿಜಯನಗರದ ಮತ್ತೊಬ್ಬ ರಾಜನಾದ ಶ್ರೀರಂಗರಾಯನು ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ತನ್ನ ಅರಮನೆಗೆ ಕರೆದೊಯ್ದು ಸತ್ಕರಿಸಿದನು. ಮತ್ತು ಯುವ ಸಂವತ್ಸರದ ಶಿವರಾತ್ರಿ ದಿನ ಪಂಪಾ ವಿರೂಪಾಕ್ಷನ ಸನ್ನಿಧಿಯಲ್ಲಿ ಬಚ್ಚನಹಾಳ, ಖ್ಯಾಡ, ಯಡ್ವಾಕ, ಚಂಚಲ, ಅರಳಿಹಳ್ಳಿ ಮುಂತಾದ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟನು. ಇವನು ಉತ್ತರಾದಿ ಮಠದ ಶ್ರೀವೇದವ್ಯಾಸತೀರ್ಥ ಶ್ರೀಪಾದಂಗಳವರಿಗೂ ವಿಶೇಷ ದಾನಧರ್ಮವಿತ್ತು ಸತ್ಕರಿಸಿದನು.

## ೧೬ ವಿಜಯನಗರದ ಅಚ್ಯುತದೇವರಾಯ

ಕೃಷ್ಣದೇವರಾಯನ ತರುವಾಯ ವಿಜಯನಗರದ ಸಿಂಹಾಸನವನ್ನು ಆರೋಹಣ ಮಾಡಿದ ಶ್ರೀ ಅಚ್ಯುತದೇವರಾಯನು ಪರಮ ಧಾರ್ಮಿಕನಾಗಿದ್ದನು. ಅವನು ಶ್ರೀಕೃಷ್ಣದೇವರಾಯನಂತೆ ಶ್ರೀವ್ಯಾಸರಾಜತೀರ್ಥರನ್ನೇ ತನ್ನ ಗುರುಗಳನ್ನಾಗಿ ಮಾಡಿಕೊಂಡು ಬಂದನು. ಅವನು ಅನೇಕ ದಾನಧರ್ಮಗಳನ್ನು ಮಾಡಿ ವೈಷ್ಣವ ಧರ್ಮಪ್ರಸಾರಕ್ಕೆ ಸಹಾಯ ಮಾಡಿದನು. ಇವನು ಶ್ರೀವಾದಿರಾಜ ಶ್ರೀಪಾದಂಗಳವರ ಶಿಷ್ಯನಾಗಿ ಶ್ರೀಉಡುಪಿಯ ಶ್ರೀಕೃಷ್ಣಮಠಕ್ಕೂ ಶ್ರೀ ಗುರುರಾಜರಿಗೂ ದಾನದತ್ತಿಗಳನ್ನಿತ್ತನು. ಅಚ್ಯುತರಾಯನು ಶ್ರೀ ಗುರುರಾಜರಿಗಿತ್ತ ಆಸನ, ಶ್ವೇತಛತ್ರ, ಬಿರುದಾವಳಿಗಳನ್ನು ಶ್ರೀರಾಜರ ಪುಣ್ಯದಿನಗಳಲ್ಲಿ ಶ್ರೀಮಠದವರು ಹೊರತೆಗೆದು ಭಕ್ತಾದಿಗಳಿಗೆ ಪ್ರದರ್ಶನ ಮಾಡುತ್ತಾರೆ.

## ೧೭ ಮೈಸೂರಿನ ದೊಡ್ಡದೇವರಾಜ

ಮೈಸೂರಿನ ಮಹಾರಾಜನಾದ ಶ್ರೀದೊಡ್ಡದೇವರಾಜನು ಶ್ರೀರಾಘವೇಂದ್ರತೀರ್ಥ ಮಹಾಸ್ವಾಮಿಗಳ ಅಚ್ಛಿನ್ನಭಕ್ತ. ಒಂದು ಸಲ ಶ್ರೀರಾಘವೇಂದ್ರಸ್ವಾಮಿಗಳನ್ನು ಅವನು ತನ್ನ ರಾಜಧಾನಿಯಾದ ಶ್ರೀರಂಗಪಟ್ಟಣದಲ್ಲಿಯೇ ಚಾತುರ್ಮಾಸ್ಯ ಸಂಕ

ಲ್ಪಕ್ಕೆ ಕೂಡಲು ಪ್ರಾರ್ಥಿಸಿಕೊಂಡ. ಆಷಾಢ ಶುದ್ಧ ಏಕಾದಶಿ ಪವಿತ್ರದಿನದಂದು ಶ್ರೀರಾಘವೇಂದ್ರತೀರ್ಥ ಶ್ರೀಪಾದಂಗಳವರಿಗೆ ನಲ್ಲೂರು, ದೇವರಾಜಪುರ ಎಂಬ ಎರಡು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟು ಜ್ಞಾನ ಪ್ರಸಾರಕ್ಕೆ ಅನುವು ಅನುಕೂಲತೆ ಮಾಡಿಕೊಟ್ಟನು.

## ೧೮ ಮದ್ದಲಗಾದ್ರಿ ನಾಯಿಕ

ಮಧುರೆಯ ತಿರುಮಲ ನಾಯಕನ ಮೊಮ್ಮಗನಾದ ಇವನು ಶ್ರೀ ಯೋಗೀಂದ್ರ ತೀರ್ಥರಿಗೆ ೧೬೭೫ನೇ ಇಸ್ವಿಯ ಅಕ್ಷಯ ತೃತಿಯಾ ಸುಮುಹೂರ್ತದಲ್ಲಿ ಶ್ರೀರಂಗ ಕ್ಷೇತ್ರದಲ್ಲಿ ಒಂದು ಕಲ್ಲು ಮಠವನ್ನೂ ತಾಮ್ರಪರ್ಣಿ ತೀರದ ಆರಂಭಣ್ಣ ಎಂಬ ಗ್ರಾಮನ್ನೂ ದಾನಕೊಟ್ಟನು.

## ೧೯ ರಾಣಿ ಮೊಂಗಮ್ಮ

ಮಧುರೆಯ ವಿಶ್ವನಾಥ ನಾಯಕನ ಸೊಸೆಯಾದ ಈ ಮೊಂಗಮ್ಮ ರಾಣಿಯು ಧಾರ್ಮಿಕ ಇತಿಹಾಸದಲ್ಲಿ ಚಿರಸ್ಮರಣೀಯಳಾಗಿದ್ದಾಳೆ. ವಿದ್ಯಾಪಕ್ಷಪಾತಿನಿಯಾದ ಅವಳು ತನ್ನ ಶಾಸನ ಕಾಲದಲ್ಲಿ ಮಠತ್ರಯ, ಮಠತ್ರಯ ಪೀಠಾಧಿಪತಿಗಳನ್ನು ಕರೆ ಯಿಸಿ ವಿದ್ವತ್ಸಭೆಗಳನ್ನು ಏರ್ಪಡಿಸುತ್ತಿದ್ದಳು. ವಾಕ್ಯಾರ್ಥಗೋಷ್ಠಿಗಳನ್ನು ನೆರೆಯಿಸು ತ್ತಿದ್ದಳು. ಪ್ರಾಯಃ ಅವಳು ಎಲ್ಲ ಮಠದವರಿಗೂ ಗ್ರಾಮ–ಧಾಮ ದಾನ, ದತ್ತಿಗಳನ್ನು ಇತ್ತು ಜ್ಞಾನ ಪ್ರಸರಣದ ಕಾರ್ಯದಲ್ಲಿ ಎಲ್ಲರ ನೆರವಿಗೆ ನಿಂತಳು.

ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಶ್ರೀ ಸುಮತೀಂದ್ರತೀರ್ಥರಿಗೆ ಆಯಿರ್ದಮ ಎಂಬ ಗ್ರಾಮುವನ್ನೂ ಮತ್ತು ತಮ್ಮ ಅರಮನೆಯ ದೇವಾಗಾರದಲ್ಲಿದ್ದ ನವರತ್ನ ಖಚಿತ ವಾದ ವೈಕುಂಠ ವಾಸುದೇವ ಪ್ರತಿಮೆಯನ್ನೂ ಒಂದು ಕಲ್ಪವೃಕ್ಷವನ್ನೂ ಕೊಟ್ಟಳು.

## ೨೦ ಸಾತಾರೆಯ ಶಹಾಜಿ ಮಹಾರಾಜ

ಶಿವಾಜಿಯ ಮೊಮ್ಮಗನಾದ ಶಹಾಜಿಗೆ ಧರ್ಮಶ್ರದ್ಧೆಯು ಅನುವಂಶಿಕವಾಗಿ ಬಂದಿದ್ದಿತು. ಶ್ರೀ ಸುಮತೀಂದ್ರತೀರ್ಥಸ್ವಾಮಿಗಳಿಗೆ ಅವನು ವಿಶೇಷ ಭಕ್ತಿಯಿಂದ ಅನೇಕ ಭೂಸ್ವಾಸ್ಥ್ಯಗಳನ್ನು ದಾನದತ್ತಿರೂಪವಾಗಿ ಹಾಕಿಕೊಟ್ಟನು. ಶ್ರೀ ಸುಮತೀಂದ್ರ ತೀರ್ಥರು ಪೂರ್ವಾಶ್ರಮದಲ್ಲಿಯೇ ಈ ಶಹಾಜಿ ಮಹಾರಾಜನ ಮೇಲೆ ಶಾಹುವಿಜಯ, ಜಯ ಘೋಷಣ, ರಾಜಸ್ತುತಿ, ಚಕ್ರವಾಲ ಪ್ರಬಂಧ ಮುಂತಾದ ಅನೇಕ ಸಂಸ್ಕೃತ ಪ್ರಬಂಧಗಳನ್ನು ಬರೆದಿದ್ದರು.

### ೨೧ ರಾಮ ಭೂಪಾಲ

ಇವನೊಬ್ಬ ಪಾಳೆಯಗಾರನಾಗಿದ್ದು ಸೋಮನಹಳ್ಳಿ ಎಂಬ ಗ್ರಾಮವನ್ನು ಶ್ರೀ ವಸುಧೇಂದ್ರತೀರ್ಥ ಶ್ರೀಪಾದಂಗಳವರಿಗೆ ಉಂಬಳಿಯಿತ್ತು ಕೃತಾರ್ಥನಾದ.

### ೨೨ ವೀರವೆಂಕಟ ತಿರುಮಲರಾಯ

ಇವನು ಅತ್ಯಂತ ಉದಾರಿಯಾಗಿದ್ದು ಶ್ರೀ ರಾಘವೇಂದ್ರ ಮಠದ ಶ್ರೀ ವರದೇಂದ್ರತೀರ್ಥ ಶ್ರೀಪಾದಂಗಳವರಿಗೆ ಥಾಣಾಪುರ ಗ್ರಾಮವನ್ನು ದಾನವಾಗಿತ್ತನು.

### ೨೩ ಸೋಮಪ್ಪನಾಯಿಕ ದೇಸಾಯಿ

ಇವನು ಅತ್ಯಂತ ಆಸ್ತಿಕನಾಗಿದ್ದನು. ಬೈರಬಾಳನಾಯಕನಾದ ಇವನು ಶ್ರೀ ಭುವನೇಂದ್ರತೀರ್ಥರಿಗೆ ನಾಗಲದಿನ್ನಿ ಗ್ರಾಮವನ್ನು ದಾನಕೊಟ್ಟನು.

### ೨೪ ಸೋಮಶೇಖರನಾಯಿಕ

ಇವನು ಶ್ರೀ ಭುವನೇಂದ್ರತೀರ್ಥರಿಗೆ ಚೆನಕಾಪುರ ಎಂಬ ಗ್ರಾಮವನ್ನು ದಾನವಾಗಿ ಇತ್ತನು.

### ೨೫ ಸೀತಾರಾಮ ಭೂಪಾಲ

ಗದ್ವಾಲದ ಅರಸನಾದ ಇವನು ಶ್ರೀ ರಾಯರ ಮಠದ ಗುರುಪೀಠಗೆಗೆ ಹತ್ತಿದ ಶ್ರೀ ವ್ಯಾಸತತ್ವಜ್ಞರನ್ನು ತನ್ನ ಅರಮನೆಗೆ ಕರೆಯಿಸಿ ವಿಶೇಷ ರೀತಿಯಿಂದ ಸತ್ಕರಿಸಿದನು. ಹಾಗೂ ಶ್ರೀಗಳವರಿಗೆ ಅನೇಕ ಗ್ರಾಮ ಭೂಮಿಗಳನ್ನು ದಾನವಿತ್ತನು.

### ೨೬ ಕಿರೀಟಗೇರಿಯ ವೆಂಕಟ ದೇಸಾಯಿ

ಗದಗ ತಾಲೂಕಿನ ಕಿರೀಟಗೇರಿಯ ದೇಸಾಯರಾದ ಇವರು ಶ್ರೀ ರಾಘವೇಂದ್ರ ಸ್ವಾಮಿಗಳ ಭಕ್ತರು. ಇವರು ಒಮ್ಮೆ ವಸಂತ ಮಾಸದಲ್ಲಿ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರನ್ನು ಕರೆಯಿಸಿ ಭಿಕ್ಷೆ ಮಾಡಿಸಿದರು. ಬ್ರಾಹ್ಮಣರಿಗೆ ಬಡಿಸಲಿಕ್ಕೆಂದು ಮಾವಿನಹಣ್ಣು ಹಿಂಡಿಟ್ಟ ಶೀಕರಣೆಯ ಕೊಳಗದಲ್ಲಿ ಅವರ ಮಗು ಬಿದ್ದು ಸತ್ತು ಹೋಯಿತು. ಶ್ರೀಗಳು ಮರಣ ಹೊಂದಿದ ಆ ದೇಸಾಯಿಯವರ ಮಗನನ್ನು ಕರುಣೆಯಿಂದ ಬದುಕಿಸಿದರು. ಆದರಿಂದ ಸಂತುಷ್ಟರಾದ ದೇಸಾಯರು ತಮ್ಮ ಆ ಕಿರೀಟಗೇರಿ ಗ್ರಾಮವನ್ನು ಶ್ರೀ ಮಂತ್ರಾಲಯ ಪ್ರಭುಗಳಿಗೆ ದಾನಕೊಟ್ಟು ಬಿಟ್ಟರು. ಅದು ಈಗಲೂ ಶ್ರೀಮಠಕ್ಕೆ ನಡೆದು ಬರುತ್ತದೆ.

### ೨೭ ವಿಜಯ ರಾಘವನಾಯಕ

ಇವನು ಶ್ರೀ ರಾಘವೇಂದ್ರ ಶ್ರೀಪಾದಂಗಳವರ ಪ್ರಭಾವದಿಂದ ಆಕರ್ಷಿತನಾಗಿ ಅವರಿಗೆ ಅನೇಕ ಗ್ರಾಮಭೂಮಿಗಳನ್ನು ಕೊಟ್ಟನು. ತಂಜಾವೂರ ಪ್ರಾಂತದಲ್ಲಿ

ಭಯಂಕರವಾದ ಬರಗಾಲವು ತಲೆದೋರಿದಾಗ ಶ್ರೀಗಳವರು ತಮ್ಮ ಜಪತಪ ಪ್ರಭಾವ ದಿಂದ ಮಳೆಯನ್ನು ತರಿಸಿ ಸುಭಿಕ್ಷವನ್ನು ಬರಿಸಿದರು ಅದರಿಂದ ಸಂತುಷ್ಟರಾದ ಚೋಳಮಂಡಲದ ಪ್ರಜಾಜನರ ಪ್ರೀತಿಯ ಕುರುಹು ಆಗಿ ಇವನು ಶ್ರೀಗಳವರಿಗೆ ಒಂದು ನವರತ್ನ ಹಾರವನ್ನು ಸಮರ್ಪಿಸಿದನು.

ನಿಸ್ಪೃಹರಾದ ಶ್ರೀರಾಯರು ಮಳೆಯತರಿಸಲಿಕ್ಕಾಗಿ ಹೊತ್ತಿಸಿದ ಯಜ್ಞಕುಂಡದಲ್ಲಿ ಆ ಹಾರವನ್ನು ಒಗೆದು ಅಗ್ನಿನಾರಾಯಣನಿಗೆ ಅರ್ಪಿಸಿದರು. ಮಹಾರಾಜನು ಚಿಂತೋದ್ಭ್ರಾಂತನಾಗಿ ನಿಂತುಕೊಂಡಾಗ ಯಜ್ಞಾಗ್ನಿಯ ಕಿಚ್ಚಿನಲ್ಲಿಯೂ ಅದು ತಳತಳ ಹೊಳೆದು ಮೇಲೆ ಬಂದಿತು.

## ೨೮ ಜಯವಂತಬಾಯಿ ವೆಂಕಟಪ್ಪಯ್ಯ ಬಹದ್ದೂರ ದೇಸಾಯಿ ಡಂಬಳ

೧೭೩೪ನೇ ಇಸ್ವಿಯ ಕಾಲದಲ್ಲಿ ಡಂಬಳ ದೇಸಗತಿಯನ್ನು ಆಳುತ್ತಿದ್ದ ದೇಸಾಯಿಣಿಯಾದ ಜಯವಂತಿಬಾಯಿಯು ಅನೇಕ ದಾನ ಧರ್ಮಗಳನ್ನು ಕೊಟ್ಟು ಹೆಸರು ಪಡೆದಿದ್ದಾಳೆ. ಶ್ರೀಗದುಗಿನ ಶ್ರೀವೀರನಾರಾಯಣ ದೇವಸ್ಥಾನಕ್ಕೆ ಈ ದೇಸಾಯಿಣಿಯು ಭೂಮಿಸ್ವಾಸ್ತಿಗಳನ್ನು ಕೊಟ್ಟಿದ್ದಾಳೆ.

ಶ್ರೀರಾಘವೇಂದ್ರತೀರ್ಥಸ್ವಾಮಿಗಳಿಗೆ ವೆಂಕಟದೇಸಾಯಿ ಕೊಟ್ಟ ಕಿರೀಟಗೇರಿ ಗ್ರಾಮವು ಕೈತಪ್ಪಿಹೋಗಿತ್ತು. ಅದನ್ನು ಜಯವಂತಿಬಾಯಿಯು ಶ್ರೀರಾಯರ ಮಠದ ಶ್ರೀವಾದೀಂದ್ರತೀರ್ಥಶ್ರೀಪಾದಂಗಳವರಿಗೆ ಕೊಟ್ಟು ಕಾಗದ ಪತ್ರಗಳನ್ನು ಭದ್ರವಾಗಿ ಮಾಡಿ ಒಪ್ಪಿಸಿದಳು.

## ೨೯ ರಂಗರಾಯ

ಇವನು ಶ್ರೀವ್ಯಾಸರಾಜ ಮಠದ ಶ್ರೀ ಲಕ್ಷ್ಮೀನಾಥತೀರ್ಥಶ್ರೀಪಾದಂಗಳವರಿಗೆ ದತ್ತಿದಾನಗಳನ್ನು ೧೬೬೩ನೇ ಇಸ್ವಿಯ ಶಾಸನಪೂರ್ವಕ ದಾನಕೊಟ್ಟನು.

## ೩೦ ತಿರುಮಲರಾಯ

ಶ್ರೀ ವ್ಯಾಸರಾಜಮಠದ ಶ್ರೀಲಕ್ಷ್ಮೀನಾಥ ಶ್ರೀಪಾದಂಗಳವರಿಗೆ ಈ ತಿರುಮಲರಾಯನು ವಿಶೇಷ ದಾನದತ್ತಿಗಳನ್ನು ಇತ್ತನೆಂದು ೧೬೪೩ನೇ ಇಸ್ವಿಯ ಅವನ ಶಾಸನದಿಂದ ತಿಳಿದು ಬರುತ್ತದೆ.

## ೩೧ ಜಯರಂಗರಾಯ — ಚೊಕ್ಕನಾಥರಾಯ

ಶ್ರೀವ್ಯಾಸರಾಜಮಠದ ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷಿಕ್ತರಾದ ಶ್ರೀಪಾದಂಗಳವರಿಗೆ ಈ ಜಯರಂಗರಾಯನು ಭೂಮಿಕಾಣಿಯನ್ನಿತ್ತು ಕೃತಾರ್ಥನಾದನು. ೧೬೭೦ನೇ ಇಸ್ವಿಯ ಒಂದು ಶಾಸನದಿಂದ ಇದು ವ್ಯಕ್ತವಾಗುತ್ತದೆ. ಇದೇ ಶಾಸನದಲ್ಲಿ ಚೊಕ್ಕನಾಥರಾಯನು ಶ್ರೀರಘುನಾಥತೀರ್ಥ ಶ್ರೀಪಾದಂಗಳವರಿಗೆ ವಿಶೇಷವಾಗಿ ದಾನ ಧರ್ಮ ಮಾಡಿದ ಉಲ್ಲೇಖ ಬರುತ್ತದೆ.

## ೩೨ ಶ್ರೀರಂಗಪಟ್ಟಣದ ರಂಗರಾಜ

ಇವನು ಉತ್ತರಾದಿ ಮಠದ ಶ್ರೀವೇದವ್ಯಾಸತೀರ್ಥ ಶ್ರೀಪಾದಂಗಳವರು ಉತ್ತರ ದೇಶದ ವಾದಿಗಳನ್ನೆಲ್ಲ ಗೆದ್ದು ದಿಲ್ಲೀಶ್ವರನಿಂದಲೂ ಗೌರವಿತರಾಗಿ ದಕ್ಷಿಣ ದೇಶಕ್ಕೆ ಬಂದ ಸಮಾಚಾರವನ್ನು ಕೇಳಿ ಅವರನ್ನು ತನ್ನ ರಾಜಧಾನಿಯಾದ ಶ್ರೀರಂಗ ಪಟ್ಟಣಕ್ಕೆ ಬರಮಾಡಿಕೊಂಡು ಕೈತಪ್ಪಿಹೋದ ಹಿರೇಮರಳಿ, ಚಿಕ್ಕಮರಳಿ ಗ್ರಾಮ ಗಳನ್ನು ಮರಳಿಕೊಟ್ಟು ಮತ್ತೆ ಬೇರೆ ಊರುಗಳನ್ನೂ ಉಂಬಳಿ ಹಾಕಿಕೊಟ್ಟನು.

ಹೇಮಾವತೀ ನದೀತೀರದ ಶ್ರೀ ನರಸಿಂಹಪುರ ಕ್ಷೇತ್ರದಲ್ಲಿ ಶ್ರೀಗಳವರಿಗೆ ಇರಲು ದೊಡ್ಡ ಮಠವನ್ನು ಕಟ್ಟಿಸಿ ಕೊಟ್ಟು ಸಂಸ್ಥಾನಕ್ಕೆ ಭೂಷಣವಾದ ವಸ್ತು ವಹನಾದಿ ಗಳನ್ನು ಅರ್ಪಿಸಿದನು.

## ೩೩ ಮೈಸೂರಿನ ನರಸರಾಜ

ಮೈಸೂರಿನ ಒಡೆಯನಾದ ನರಸರಾಜನಿಗೆ ಬ್ರಹ್ಮಹತ್ಯಾದೋಷವು ತಟ್ಟಿ ಉಣ್ಣುವ ಅನ್ನದಲ್ಲಿ ಹುಳಗಳು ಕಾಣುತ್ತಿದ್ದವು. ಉತ್ತರಾದಿ ಮಠದ ಶ್ರೀವಿದ್ಯಾಧೀಶ ತೀರ್ಥ ಶ್ರೀಪಾದಂಗಳವರ ಪರಮಾನುಗ್ರಹದಿಂದ ಆ ಬ್ರಹ್ಮಹತ್ಯಾ ದೋಷವು ಪರಿಹಾರವಾಗಿ ಹುಳ ಕಾಣುವದು ನಿಂತಿತು. ಅದರಿಂದ ಸಂತುಷ್ಟನಾದ ಮಹಾರಾಜನು ಶ್ರೀ ಶ್ರೀಗಳವರಿಗೆ ಚಿಣ್ಯ, ವೃತ್ತಿ, ಸಣ್ಣಚಿಕ್ಕೂರು ಎಂಬ ಮೂರು ಊರುಗಳನ್ನು ದಾನ ಕೊಟ್ಟು ಕೃತಾರ್ಥನಾದನು.

## ೩೪ ನಾರೋಭಾಸ್ಕರ

ಇವನು ದಿಲ್ಲಿ ಸುಲ್ತಾನ ಔರಂಗಜೇಬನ ಸೈನ್ಯದಲ್ಲಿ ಅಧಿಕಾರಿಯಾಗಿದ್ದನು. ಔರಂಗಜೇಬನು ದಕ್ಷಿಣದ ದಂಡಯಾತ್ರೆಗೆ ಬಂದಾಗ ನಾರೋಭಾಸ್ಕರನು ಶ್ರೀಉತ್ತರಾದಿ ಮಠದ ಶ್ರೀಸತ್ಯಾಭಿನವತೀರ್ಥ ಶ್ರೀಪಾದಂಗಳವರ ಮಹಿಮೆಯನ್ನು ತಿಳಿಸಿ ಹೇಳಿದನು. ಅದರಿಂದ ಸಂತುಷ್ಟನಾದ ಔರಂಗಜೇಬನು ಶ್ರೀಗಳವರಿಗೆ ಚಕ್ರವರ್ತಿ ಮುದ್ರೆವುಳ್ಳ ತಾಮ್ರಶಾಸನವನ್ನಿತ್ತು ರಾಜಗೌರವದಿಂದ ಬೀಳ್ಕೊಟ್ಟನು. ನಾರೋಭಾಸ್ಕರನು ಆನೆಯಮೇಲೆ ಅಂಬಾರಿ ಹಾಕಿ ಶ್ರೀಗಳವರನ್ನು ಅದರಲ್ಲಿ ಕೂಡಿಸಿ ಮೆರೆಸಿ ತನ್ನ ಮನೆಗೆ ಕರೆತಂದು ಅವರಿಗೆ ಸರ್ವಾರ್ಪಣಗೈದನು.

## ೩೫ ದಿವಾಣ ಕೃಷ್ಣಾಜಿಪಂತ

ಇವನು ಹುಟ್ಟ ಕುಂಟ. ಅಷ್ಟ ದರಿದ್ರ. ಆದರೂ ಗುರುಭಕ್ತಿಯು ಅವನಲ್ಲಿ ಅತ್ಯಧಿಕ. ಉತ್ತರಾದಿ ಮಠದ ಶ್ರೀ ಸತ್ಯಪೂರ್ಣತೀರ್ಥರು ತಮ್ಮ ಊರಿಗೆ ಬಂದಾಗ ಮನೆಗೆ ಕರೆದು ಪಾದಪೂಜೆ ಮಾಡಿ ತನ್ನ ಮನೆಯಲ್ಲಿದ್ದ ಒಂದು ಬೆಳ್ಳಿಯ ಪ್ರಣತಿ ಯನ್ನು ಅವರಿಗೆ ದಾನವಿತ್ತನು. ಶ್ರೀಗಳವರು ಅವನಿಗೆ ತಲೆಯ ಮೇಲೆ ಕೈಇಟ್ಟು ಮಂತ್ರಾಕ್ಷತೆ ಹಾಕಿ ಉತ್ತರೋತ್ತರ ಉತ್ಕರ್ಷವಾಗಲೆಂದು ಆಶೀರ್ವದಿಸಿದರು.

ಅವರ ಅನುಗ್ರಹ ಬಲದಿಂದ ಕುಂಟ ಕೃಷ್ಣಾಜಿಪಂತನು ಏರುತ್ತ ಏರುತ್ತ ಅರ್ಕಾಟ ನವಾಬನ ಮಂತ್ರಿಯಾದನು. ಇದೆಲ್ಲವೂ ಶ್ರೀಗಳವರ ಮಂತ್ರಾಕ್ಷತೆಯ ಮಹಿಮೆಯೆಂದು ಬಗೆದ ಕೃಷ್ಣಾಜಿಪಂತನು ಶ್ರೀ ಸತ್ಯಪೂರ್ಣ ಶ್ರೀಪಾದಂಗಳವರಿಗೆ ಅನೇಕ ಬಂಗಾರದ ಆಭರಣಗಳನ್ನೂ, ರಾಶಿರಾಶಿಯಾಗಿ ಮುತ್ತು ರತ್ನಗಳನ್ನೂ ಒಂದು ಮಣಭಾರದ ಬಂಗಾರದ ಸರಪಳಿಯನ್ನು ಸಮರ್ಪಿಸಿದನು.

ಮುಂದೆ ಶ್ರೀ ಸತ್ಯಪ್ರಿಯತೀರ್ಥ ಶ್ರೀಪಾದಂಗಳವರಿಗೆ ಕೃಷ್ಣಾಜಿಪುತನು ಕನಕಾಭಿಷೇಕವನ್ನು ಮಾಡಿಸಿ ರತ್ನಖಚಿತವಾದ ವಜ್ರ ಸಂಪುಷ್ಪವನ್ನೂ, ವಿಪುಲವಾದ ಬಂಗಾರ, ಮುತ್ತು ರತ್ನಗಳನ್ನು ದಾನವಿತ್ತನು.

## ೩೬ ಆರಣಿರಾಜ

ಇವನು ಶ್ರೀ ಸತ್ಯವಿಜಯತೀರ್ಥ ಶ್ರೀಪಾದಂಗಳವರಿಗೆ ಕೆಲವು ಗ್ರಾಮಗಳನ್ನು ಉಂಬಳಿಹಾಕಿಕೊಟ್ಟುಶ್ರೀಗಳವರನ್ನು ಬಹುಕಾಲ ತನ್ನ ರಾಜ್ಯದಲ್ಲಿ ಇಟ್ಟುಕೊಂಡಿದ್ದನು.

ಮುಂದೆ ಶ್ರೀಗಳವರ ಅಪೇಕ್ಷೆಯಂತೆ ಕೌಂಡಿಣ್ಯ ನದೀತೀರದಲ್ಲಿ ಒಂದು ಉತ್ತಮವಾದ ವೃಂದಾವನವನ್ನು ಸಿದ್ಧಪಡಿಸಿ ಅವರ ನಿರಂತರ ಧ್ಯಾನ ಸಮಾಧಿಗೆ ಸರ್ವಾನುಕೂಲ ಮಾಡಿಕೊಟ್ಟನು.

## ೩೭ ಮೊದಲನೇ ಬಾಜೀರಾಯ

ಇವನು ಶ್ರೀ ಉತ್ತರಾದಿಮಠದ ಶ್ರೀ ಸತ್ಯಪ್ರಿಯತೀರ್ಥ ಶ್ರೀಪಾದಂಗಳವರ ತಪಃ ಪ್ರಭಾವದಿಂದ ಹರ್ಷಿತಾಕರ್ಷಿತನಾಗಿ ರಾಮನಗರ ಎಂಬ ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಮತ್ತು ಎಲ್ಲ ರಾಜ ಮಹಾರಾಜರೂ ಇಂಥ ಮಹಾ ತಪೋಯೋಗಿಗಳನ್ನು ಸತ್ಕರಿಸಬೇಕೆಂದು ಶಾಸನವನ್ನು ಹೊರಡಿಸಿದನು.

## ೩೮ ರಂಗ ಅರಸ

ಶ್ರೀರಂಗ ಕ್ಷೇತ್ರದ ಅಧಿಪತಿಯಾದ ಈ ರಂಗಅರಸನು ಶ್ರೀ ಸತ್ಯಪ್ರಿಯತೀರ್ಥ ಶ್ರೀಪಾದಂಗಳವರನ್ನು ಆದರಿಸಿ ಪೂಜಿಸಿ ಶ್ರೀ ಮಠಕ್ಕೆ ಶ್ವೇತಛತ್ರ, ರತ್ನಸಂಪುಟ, ಹಾಗೂ ಬೆಳ್ಳಿ, ಬಂಗಾರದ ಬೆತ್ತಗಳನ್ನು ಕೊಟ್ಟನು.

## ೩೯ ಆಂಧ್ರದೇಶದ ವಿಜಯನಗರದ ಮಹಾರಾಜ

ಈ ಮಹಾರಾಜನು ಉತ್ತರಾದಿಮಠದ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಘನ ಮಹಿಮೆಯನ್ನು ಕಂಡು ಅವರ ಭಕ್ತಭೃತ್ಯ ಶಿಷ್ಯನಾದನು. ಶ್ರೀಗಳವರನ್ನು ಒಂಮ ತಿಂಗಳವರೆಗೆ ತನ್ನ ಅರಮನೆಯಲ್ಲಿಟ್ಟುಕೊಂಡು ಆದರಿಸಿದನು. ಶ್ರೀ ಸೀತಾರಾಮ ಪ್ರತಿಮೆಗಳನ್ನು ಅಲಂಕರಿಸಲು ಮುತ್ತಿನಕಂಠಿ, ನವರತ್ನಖಚಿತವಾದ ಪೀಠಪ್ರಭಾವಳಿ ಹಾಗೂ ಇನ್ನೂ ಅನೇಕ ಮೌಕ್ತಿಕ ರತ್ನಾಭರಣಗಳನ್ನು ಮಾಡಿಸಿ ಕೊಟ್ಟನು.

ಇವನ ಆಜ್ಞೆಯಿಂದಲೂ, ಶ್ರೀಗಳವರ ಪ್ರಭಾವದಿಂದಲೂ ೫೦೦ ಜನ ಸ್ಮಾರ್ತ ಕುಟುಂಬಗಳು ದ್ವೈತ ದೀಕ್ಷೆ ವಹಿಸಿ ವೈಷ್ಣವರಾದರು.

## ೪೦ ಬಾಜೀರಾವ ಘೋರ್ಪಡೆ

ಮಹಾರಾಷ್ಟ್ರ ದೇಶದ ಪುಣೆ ಪಟ್ಟಣದ ಸರ್ವಾಧಿಕಾರಿಯಾದ ಈ ಘೋರ್ಪಡೆ ಬಾಜೀರಾಯನು ಶ್ರೀಸತ್ಯಧರ್ಮತೀರ್ಥ ಶ್ರೀಪಾದಂಗಳವರ ಆಧ್ಯಾತ್ಮಿಕ ದಿವ್ಯ ತೇಜಸ್ಸಿನ ಮಹಾಮಹಿಮೆಯನ್ನು ಕಂಡು ಕೇಳಿ ಪ್ರಭಾವಿತನಾಗಿದ್ದನು.

ಶ್ರೀ ಶ್ರೀಗಳವರನ್ನು ಪುಣೆಗೆ ಆದರದಿಂದ ಬರಮಾಡಿಕೊಂಡು ರಾಜವೈಭವದಿಂದ ಸತ್ಕರಿಸಿದನು. ಅವನ ಅಷ್ಟಪ್ರಧಾನರೆಲ್ಲರೂ ಶ್ರೀ ಚರಣರ ಸೇವಾಕೈಂಕರ್ಯಕ್ಕಾಗಿ ಕೈಕಟ್ಟಿಕೊಂಡು ನಿಂತಿದ್ದರು. ಸರ್ವಜ್ಞ ಸಿಂಹಾಸನವನ್ನು ತಿಂಗಳಗಟ್ಟಲೆ ಪುಣೆಯಲ್ಲಿ ಇಟ್ಟುಕೊಂಡು ಒಂದುಲಕ್ಷ ವರಹಗಳನ್ನು ಮಕರಕಂಠಿ, ಮುತ್ತಿನ ವೈಜಯಂತಿಮಾಲಾ, ಎರಡು ಮಣಬಂಗಾರದ ಮಂಟಪ, ನಾಲ್ಕು ಅಂಬಾರಿ ಸಹಿತ ಆನೆಗಳು ಮುಂತಾಗಿ ವಿಪುಲ ಐಶ್ವರ್ಯವನ್ನು ಮಠಕ್ಕೆ ದಾನಕೊಟ್ಟು ಸಂಸ್ಥಾನಕ್ಕೆ ಒಂದು ಸ್ಥೈರ್ಯವನ್ನು ಕೊಟ್ಟನು.

## ೪೧ ಕೊಲ್ಹಾಪುರ ಮಹಾರಾಜ

ಈ ಮಹಾರಾಜನು ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಜ್ಞಾನದಾನಗಳ ಕೀರ್ತಿಯನ್ನು ಕೇಳಿಯೇ ಪ್ರಭಾವಿತನಾಗಿದ್ದನು. ಅವರನ್ನು ತನ್ನ ರಾಜಧಾನಿಯಾದ ಕೊಲ್ಹಾಪುರಕ್ಕೆ ಕರೆದುಕೊಂಡು ಹೋಗಿ ಒಂದು ತಿಂಗಳವರೆಗೆ ಇಟ್ಟುಕೊಂಡಿದ್ದನು.

ಆ ಕಾಲದಲ್ಲಿ ಮಿರ್ಜಿ, ಸಾಂಗಲಿ, ಕೊಲ್ಹಾಪುರ ಮುಂತಾದ ಭಾಗಗಳಲ್ಲಿದ್ದ ಸ್ಮಾರ್ತ ಪಂಡಿತರು ಶ್ರೀಗಳವರೊಡನೆ ವಾದಮಾಡಿ ಸೋತು ಶರಣಾಗತರಾಗಿ ವೈಷ್ಣವರಾದರು.

ಸಂತಾನ ಹೀನನಾದ ಕೊಲ್ಹಾಪುರ ಮಹಾರಾಜನಿಗೆ ಶ್ರೀಗಳವರ ಆಶೀರ್ವಾದದಿಂದ ಗಂಡು ಸಂತತಿ ಆಯಿತು. ಅದರಿಂದ ಪರಿತುಷ್ಟನಾದ ಮಹಾರಾಜನು ಶ್ರೀಗಳವರಿಗೆ ಹತ್ತುಸಾವಿರ ಲಕ್ಷ್ಮೀ ಮುದ್ರೆಯುಳ್ಳ ವರಹಗಳು, ನವರತ್ನ ಕಲಶದ ಬಂಗಾರದ ಪಲ್ಲಕ್ಕಿ, ಅನೇಕ ರತ್ನಾಭರಣಗಳು, ಎರಡು ಬೆಳ್ಳಿ ಬಂಗಾರದ ಆಭರಣಗಳಿಂದ ಕೂಡಿದ ಆನೆ ಅಂಬಾರಿಗಳು, ಹಾಗೂ ಬಗೆಬಗೆಯ ಬಂಗಾರದ ಪಾತ್ರೆಗಳು ಮುಂತಾದವುಗಳನ್ನು ಕೊಟ್ಟು ವಿಶೇಷ ಅನುಗ್ರಹ ಪಡೆದನು.

## ೪೨ ಬಾಜೀರಾವ ಪೇಶ್ವೆ (ಕಡೆಯ)

ಪೇಶ್ವಾಯಿಯು ಕೊನೆಗಾಲದಲ್ಲಿ ಬ್ರಿಟಿಶರಿಂದ ನಿರ್ವಾಸಿತನಾಗಿ ಬ್ರಹ್ಮಾವರ್ತದಲ್ಲಿ ಪಿಂಚಣಿ ಕೊಟ್ಟು ಇರಿಸಲ್ಪಟ್ಟ ಶ್ರೀಮಂತ ಬಾಜಿರಾಯನು ಅತ್ಯಂತ ಆಸ್ತಿಕ ಸ್ವಭಾವದವನಾಗಿದ್ದನು. ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪರಾಯಣತೀರ್ಥ ಶ್ರೀಗಳವರು ಅತ್ತಕಡೆ ದಯಮಾಡಿಸಿದಾಗ ಅವರನ್ನು ತನ್ನ ಅರಮನೆಗೆ ಕರೆದೊಯ್ದು ವಿಶೇಷ

ಪೂಜಾ ಪುರಸ್ಕಾರ ಮಾಡಿದರು. ಪ್ರತಿದಿನವೂ ೫ ಸಾವಿರ ಜನರಿಗೆ ಪಂಚಭಕ್ಷ್ಯ ಪಕ್ವಾನ್ನದ ಊಟ, ಉಪಚಾರಗಳು ವೈಭವದಿಂದ ನಡೆದವು. ಹೀಗೆ ೮ ದಿನಗಳ ವರೆಗೆ ಸಂಸ್ಥಾನವನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಶ್ರೀಮಂತ ಬಾಜಿರಾಯನು ಕೊನೆಯ ದಿನ ಮೂವತ್ತುಸಾವಿರ ರೂಪಾಯಿ, ಏಳು ಎಳೆಯ ಮುತ್ತಿನ ಕಂಠಿ, ವೈಜಯಂತಿಮಾಲಾ, ಎರಡು ಆನೆಗಳು ಹಾಗೂ ಬೆಳ್ಳಿ ಬಂಗಾರದ ಪಾತ್ರೆ, ಅಭರಣಗಳನ್ನು ದಾನವಿತ್ತನು.

## ೪೩ ಕೆಳದಿ ಸಿದ್ದಣ್ಣ ನಾಯಿಕ

ಇವನು ಶ್ರೀಗೋಕರ್ಣ ಪರ್ತಗಾಳಿ ಜೀವೋತ್ತಮ ಮಠದ ಪರಂಪರೆಯಲ್ಲಿ ಮಹಾಮಹಿಮಾಶಾಲಿಗಳಾದ ಶ್ರೀ ನಾರಾಯಣತೀರ್ಥ ಶ್ರೀಪಾದಂಗಳವರಿಗೆ ಮಠ ಮಾನ್ಯಗಳನ್ನು ಕೊಟ್ಟಿದ್ದಲ್ಲದೆ "ಶ್ರೀಪಾದಒಡೆಯರು" ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದನು. ಮುಂದೆ ಈ ಮಠದ ಪೀಳಿಗೆಯವರು ತಮ್ಮ ಹೆಸರಿನ ಮುಂದೆ ಶ್ರೀಪಾದ ಒಡೆಯರು ಎಂಬ ಬಿರುದನ್ನು ಹಚ್ಚಿಕೊಳ್ಳುವ ಪರಿಪಾಠ ಬಂದಿದೆ.

## ೪೪ ಸೋದೆಯ ಅರಸಪ್ಪ ನಾಯಿಕ

ಇವನು ಮೊದಲು ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳಲ್ಲಿ ಪ್ರವೀಣನಾದ ಓರ್ವ ಲಿಂಗಾಯತ ಗುರುವಿನ ಪ್ರಭಾವಕ್ಕೆ ಒಳಗಾಗಿದ್ದನು. ತನ್ನ ರಾಜಾಶ್ರಯ ಬಲದಿಂದ ಬ್ರಾಹ್ಮಣರನ್ನೆಲ್ಲ ವೀರಶೈವರನ್ನಾಗಿ ಪರಿವರ್ತಿಸುವ ಸಾಹಸಕ್ಕೆ ಇಳಿದಿದ್ದನು.

ಒಮ್ಮೆ ಅರಸಪ್ಪನಾಯಕನ ರಾಜಧಾನಿಯಮೇಲೆ ಉದ್ದಂಡ ಪರಾಕ್ರಮಶಾಲಿಗಳಾದ ಶತ್ರು ಸೈನಿಕರು ಲಗ್ಗೆ ಇಟ್ಟರು. ಇಂಥ ಪ್ರಚಂಡ ವೈರಿಗಳನ್ನು ಎದುರಿಸಲಾರದೆ ಮಂತ್ರಿ ಮಹಾರಾಜ ಆ ಶೈವ ಗುರು ಮುಂತಾದವರೆಲ್ಲರೂ ಭಯೋದ್ಭ್ರಾಂತರಾಗಿ ನಿಂತುಕೊಂಡಾಗ ಅಲ್ಲಿಯೇ ಶಾಲ್ಮಲೀ ನದಿಯ ದಂಡೆಯಮೇಲೆ ತಪಂಗೈಯುತ್ತ ಕುಳಿತ ಶ್ರೀವಾದಿರಾಜ ಸ್ವಾಮಿಗಳ ದಿವ್ಯ ಮೂರ್ತಿಯು ಅವರ ಕಣ್ಣಿಗೆ ಬಿತ್ತು. ಕೂಡಲೇ ರಾಜಪ್ರಜರೆಲ್ಲರೂ ಹೋಗಿ ಶ್ರೀವಾದಿರಾಜರ ಮುಂದೆ ಅಡ್ಡ ಬಿದ್ದು ತಮಗೆ ಒದಗಿದ ಶತ್ರು ಸಂಕಟದಿಂದ ನಮ್ಮ ಸಂಸ್ಥಾನವನ್ನು ಪಾರು ಮಾಡಬೇಕು. ಎಂದು ಅಂಗಲಾಚಿ ಬೇಡಿಕೊಂಡರು.

ಆಗ ಶ್ರೀ ಗುರುರಾಜರು ಮಹಾರಾಜನಿಗೆ ವಾಯುದೇವರನ್ನು ಸ್ಮರಿಸಿ ಮಂತ್ರಾಕ್ಷತೆಯನ್ನಿತ್ತು ಹರಸಿ ಯುದ್ಧಕ್ಕೆ ಕಳಿಸಿದರು. ಮಂತ್ರ ಬಲದ ಬೆಂಬಲ ಪಡೆದ ಅರಸಪ್ಪನಾಯಿಕನ ಸೈನಿಕರು ಯುದ್ಧದಲ್ಲಿ ಪ್ರವೇಶಿಸಿದ ಕೂಡಲೇ ಅವರ ವೀರವಿಕ್ರಮಗಳನ್ನು ಸಹಿಸದೆ ಶತ್ರು ಸೈನ್ಯವೆಲ್ಲವೂ ಚಲ್ಲಾಪಿಲ್ಲಿಯಾಗಿ ಚದುರಿ ಓಡಿ ಹೋಯಿತು.

ಅನಂತರ ಶ್ರೀ ಗುರುರಾಜರು ಶೈವಗುರುವನ್ನು ಆಹ್ವಾನಿಸಿ ಅವನೊಡನೆ ವಾದ ಮಾಡಿ ಸೋಲಿಸಿದರು. ಶ್ರೀ ರಾಜರ ಅಮಾನುಷವಾದ ದಿವ್ಯ ಪಾಂಡಿತ್ಯದ ಎದುರು

ನಿಲ್ಲಲಾರದೆ ತಲ್ಲಣಿಸಿ ಹೋದ ಆ ವೀರಶೈವ ಗುರುವು ಯಾವದೇ ಸದ್ದು ಸೊಲ್ಲುಗಳಿಲ್ಲದೆ ಪಲಾಯನಗೈದನು.

ಶ್ರೀ ರಾಜರು ಈ ಪ್ರಚಂಡ ಶೈವವಾದಿಯನ್ನು ಗೆದ್ದು ವೈದಿಕ ಮತದ ವಿಜಯ ಧ್ವಜವನ್ನು ಎತ್ತಿ ಹಿಡಿದ ಸವಿನೆನಪಿಗಾಗಿ ಅರಸಪ್ಪನಾಯಕನು ಆ ಶೈವ ಗುರುವು ಉಪಯೋಗಿಸುತ್ತಿದ್ದ ಬಸವ ಚಿನ್ಹಿತವಾದ ಗಂಟೆಯನ್ನು ಶ್ರೀರಾಜರಿಗೆ ಕೊಟ್ಟು ಸ್ವಯಂ ತಾನು ಅತ್ಯಂತ ಭಕ್ತಿಯಿಂದ ಮುತ್ತಿನ ಸಿಂಹಾಸನ, ಛತ್ರ, ಚಾಮರ, ಮುಕುಟ ಮುಂತಾದ ೧೮ ರಾಜಚಿನ್ಹೋಪೇತವಾದ ವಸ್ತುಗಳನ್ನು ಕಾಣಿಕೆಯಾಗಿ ಕೊಟ್ಟು ಕೈಮುಗಿದನು. ಹಾಗೂ ತ್ರಿವಿಕ್ರಮ ದೇವಾಲಯಕ್ಕೆ ಬೇಕಾದ ಸ್ಥಳವನ್ನು ಕೊಟ್ಟು ದೇವಸ್ಥಾನವನ್ನೂ ಒಂದು ವಿಶಾಲವಾದ ಮಠವನ್ನೂ ಕಟ್ಟಿಸಿಕೊಟ್ಟನು. ಇವಲ್ಲದೆ ವಿಪುಲವಾದ ಭೂಮಿಕಾಣಿಗಳನ್ನು ಶ್ರೀ ಶ್ರೀಗಳವರಿಗೆ ದಾನವಿತ್ತು ನರ ಕೊತ್ತರ ತೀರ್ಥವನ್ನೂ ಕಟ್ಟಿಸಿ ಗುರುರಾಜರಿಗೆ ದಾನವಿತ್ತನು-

## ೪೫ ಕೋಚೀನ ಸಂಸ್ಥಾನದ ರಾಜಾರಾಮವರ್ಮ

ಆದಿ ಶಂಕರಾಚಾರ್ಯರ ಜನ್ಮಸ್ಥಳವಾದ ಕೇರಳ ದೇಶದಲ್ಲಿ ಅದ್ವೈತ ಮತದ ಪ್ರಾಬಲ್ಯವು ಬಹಳ. ಕೇರಳ ರಾಜಧಾನಿಯಾದ ಕೊಚ್ಚಿಯ ರಾಜರಂತೂ ನಂಬೂದ್ರಿ ಬ್ರಾಹ್ಮಣರ ಪ್ರಭಾವಕ್ಕೊಳಗಾದ ಸ್ಮಾರ್ತ ಭೂಪಾಲರಾಗಿದ್ದರು.

ಇಂಥ ಅದ್ವೈತ ಮತದ ಜನ್ಮ ಸ್ಥಳವಾದ ಕೇರಳದ ರಾಜಮನೆತನದಲ್ಲಿ ವಿಷ್ಣು ಭಕ್ತಿಯ ಬೀಜವನ್ನು ಬಿತ್ತದವರು ಶ್ರೀವಾದಿರಾಜ ಶ್ರೀಚರಣರು.

ಈ ವಿಷ್ಣುಭಕ್ತಿಯ ಬೀಜವು ರಾಜಮನೆತನದ ತರುಣ ರಾಜಕುಮಾರನಾದ ರಾಜಾರಾಮವರ್ಮನ ಮನಸ್ಸಿನಲ್ಲಿ ಮೊಳೆತು, ಪಲ್ಲವಿಸಿ ನಿಂತಿತು. ಅವನು ಅದೇ ಗುರುರಾಜರ ಪೀಠ ಪರಂಪರೆಯಲ್ಲಿ ಬಂದ ಶ್ರೀವಿಶ್ವಾಧೀಶತೀರ್ಥ ಶ್ರೀಪಾದಂಗಳವರನ್ನು ತನ್ನಲ್ಲಿ ಬಹುಮಾನಪೂರ್ವಕವಾಗಿ ಬರಮಾಡಿಕೊಂಡು ಅವರಲ್ಲಿ ಶ್ರೀಮಧ್ವಶಾಸ್ತ್ರ ವನ್ನು ವಾಸಂಗ ಮಾಡಿದನು.

ಇವರಿಂದ ಅದ್ವೈತ ಸಂಸ್ಕಾರವು ಇನ್ನೂ ಪ್ರಖರವಾಗಿದ್ದ ಅವರ ತಂದೆಯು ಕುಪಿತನಾಗಿ ಶ್ರೀಗಳವರನ್ನು ತನ್ನ ದೇಶದಿಂದ ಹೊರಗೆ ಕಳಿಸಿದನು. ಆದರೆ ಅವನು ಸತ್ತ ಬಳಿಕ ರಾಜ್ಯಾರೂಢನಾದ ರಾಜಾರಾಮವರ್ಮನು ಆ ಕಾಲದಲ್ಲಿ ಸೋದಾಮಠ ವನ್ನು ಆಳುತ್ತಿದ್ದ ಶ್ರೀ ವಿಶ್ವೇಶತೀರ್ಥರನ್ನು ಕರೆಯಿಸಿಕೊಂಡು ಅವರಿಂದ ಮಾಧ್ವ ದೀಕ್ಷೆಯನ್ನು ಪಡೆದನು. ಶ್ರೀ ಮಧ್ವಶಾಸ್ತ್ರವನ್ನು ಅವರಲ್ಲಿ ಚನ್ನಾಗಿ ಓದಿದನು.

ಕೇರಳ ದೇಶದಲ್ಲಿ ಮಧ್ವಮತ ಪ್ರಸಾರಕ್ಕೆ ಸಕಲ ವಿಧವಾದ ಅನುಕೂಲತೆ ಗಳನ್ನು ಕಲ್ಪಿಸಿಕೊಟ್ಟನು.

## ೪೬ ಕೋಚೀನದ ರಾಜಾ ರವಿವರ್ಮ

ಇವನು ಮಧ್ವ ಮತದಲ್ಲಿ ಆಸಕ್ತಿಯುಳ್ಳನನಾದುದರಿಂದ ಉಡುಪಿಯ ಶ್ರೀಸೋದಾಸರ್ವಜ್ಞ ಸಿಂಹಾಸನಾಧೀಶ್ವರರಾದ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದಂಗಳವರಿಗೆ ತನ್ನ ರಾಜಧಾನಿಗೆ ಬರಬೇಕೆಂದು ಪ್ರಾರ್ಥಿಸಿಕೊಂಡನು. ಅವನ ಪ್ರಾರ್ಥನೆಯನ್ನು ಮನ್ನಿಸಿ ಶ್ರೀವೃಂದಾವನಾಚಾರ್ಯರೆಂದು ಪ್ರಸಿದ್ಧರಾದ ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದಂಗಳವರು ಕೋಚೀನಕ್ಕೆ ದಯಮಾಡಿಸಿದಾಗ ರಾಜನು ಸ್ವತಃ ಪಾದಚಾರಿಯಾಗಿ ಶ್ರೀಗಳವರನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ತಾನು ಚಾಮರ ಬೀಸುತ್ತ ಮೆರವಣಿಗೆಯಿಂದ ಅರಮನೆಗೆ ಕರೆತಂದನು.

ಕೆಲವು ದಿನಗಳವರೆಗೆ ಅವರನ್ನು ತನ್ನಲ್ಲಿಯೇ ಇಟ್ಟುಕೊಂಡು ಅವರ ಮುಖದಿಂದ ಸರ್ವಜ್ಞ ಶಾಸ್ತ್ರವನ್ನು ಶ್ರವಣ ಮಾಡಿದನು. ಮತ್ತು ರಾಜಾ ಮತ್ತು ಸಚಿವರ ಆಜ್ಞೆಯಂತೆ ಅಲ್ಲಿ ಒಂದು ಹನುಮಂತ ದೇವರ ಪ್ರತೀಕವನ್ನೂ ಶ್ರೀವಾದಿರಾಜರ ಮೃತ್ತಿಕಾ ಸಂಪುಟವನ್ನು ಸ್ಥಾಪಿಸಿದರು.

## ೪೭ ಮೂಟರಾಜಾ

ಮೌಕ್ತಿಕಪುರದಲ್ಲಿ ವಾಸಮಾಡುವ ಮೂಟರಾಜನು ವೃಂದಾವನಾಚಾರ್ಯರನ್ನು ಪ್ರಾರ್ಥಿಸಿಕೊಂಡು ಚಿತ್ರಪುರ ಎಂಬ ಸ್ಥಳದಲ್ಲಿ ಅವರನ್ನು ಕೆಲವು ಕಾಲ ಇರಿಸಿಕೊಂಡನು ಅವರ ಮುಖದಿಂದ ಸರ್ವಜ್ಞ ಶಾಸ್ತ್ರವನ್ನು ಶ್ರವಣಮಾಡಿ ಛತ್ರ, ಚಾಮರ, ರಥ, ಕುದುರೆ ಮತ್ತು ಪ್ರಭೂತ ದ್ರವ್ಯದಾನವನ್ನಿತ್ತು ಸಮೀಪಿಸಿದ ಅವರ ಪರ್ಯಾಯಕ್ಕೆ ವಿಶೇಷ ಸಹಾಯವನ್ನು ಸಲ್ಲಿಸಿದನು.

## ೪೮ ಆಲೂರು ಪಾಳೇಗಾರ

ಶ್ರೀ ವಾದಿರಾಜ ಶ್ರೀಪಾದಂಗಳವರು ಸಂಚಾರದಲ್ಲಿದ್ದಾಗ ಆಲೂರ ಸಬ್ ಪಾಳ್ಯಕ್ಕೆ ಹೋಗಿದ್ದರು. ಅಲ್ಲಿಯ ಜನಾರ್ದನಸ್ವಾಮಿಯ ದೇವಸ್ಥಾನದ ಸಮೀಪದ ಶಂಖತೀರ್ಥದಲ್ಲಿ ಸ್ನಾನಮಾಡಿ ದಂಡೆಯ ಬಂಡೆಗಲ್ಲಿನ ಮೇಲೆ ಆಹ್ನಿಕ ಮಾಡುತ್ತ ಕುಳಿತಿದ್ದರು.

ಅದೇ ವೇಳೆಯಲ್ಲಿ ದುರ್ಗದ ಪಾಳೆಗಾರನು ಅಶ್ವಾರೋಹಿಯಾಗಿ ತನ್ನ ಮನೆಯಿಂದ ಹೊರಟು ಬರುವಾಗ ಒಂದು ಬೆಳಿಯ ಕುದುರೆಯೊಂದನ್ನು ಕಂಡನು. ಉಚ್ಚೈಃಶ್ರವವಂತೆ ಅಚ್ಚ ಬಿಳಬಣ್ಣದಿಂದ ಒಪ್ಪುವ ಆ ಕುದುರೆಯ ಸೌಂದರ್ಯದಿಂದ ಮುಗ್ಧನಾಗಿ ಆ ಪಾಳೆಗಾರನು ಅದನ್ನೇ ಬೆಂಬಿಡಿದು ಹಿಂಬಾಲಿಸುತ್ತ ಬಂದನು. ಆ ಚಲುವಿನ ಕುದರೆಯು ಶ್ರೀ ಗುರುರಾಜರು ಪೂಜೆಮಾಡುತ್ತ ಕುಳಿತ ಶಂಖತೀರ್ಥದ ದಂಡೆಯ ಮೇಲಿನ ಹೆಬ್ಬಂಡೆಯವರೆಗೆ ಬಂದು ಅಲ್ಲಿಯೇ ಅದೃಶ್ಯವಾಯಿತು.

ಆಗ ಅವನು ಗುರುರಾಜರಿಗೆ ಸಾಷ್ಟಾಂಗ ನಮಸ್ಕಾರಮಾಡಿ ತಾನು ಕಂಡ ಕುದುರೆಯ ಆಕಾರ, ಪ್ರಕಾರಗಳನ್ನು ಬಣ್ಣಿಸಿ 'ಅದಾವ ಕುದುರೆ ? ಎಲ್ಲಿ ಹೋಯಿತು' ಎಂದು ಕೇಳಿದನು. ಆಗ ರಾಜರು ನಸುನಕ್ಕು 'ಪುಣ್ಯಾತ್ಮಾ ನಮ್ಮ ಹಯಗ್ರೀವ ಸ್ವಾಮಿಯನ್ನು ಕಣ್ಣಾರೆ ಕಂಡ ನೀನೇ ಧನ್ಯ" ಎಂದು ಹೇಳಿ ಹರಸಿದರು.

ಆಗ ಶ್ರೀರಾಜರಲ್ಲಿ ವಿಶೇಷ ಭಕ್ತಿ ಉದಿಸಿದ ಪಾಳೆಗಾರನು ಅಲ್ಲಿಂದ ಕಣ್ಣಿಗೆ ಕಾಣುವಷ್ಟು ಹೊಲವನ್ನೆಲ್ಲ ಶ್ರೀಹಯಗ್ರೀವ ದೇವರ ನೈವೇದ್ಯಕ್ಕೆಂದು ದಾನವಿತ್ತನು. ಆ ೪೦ ಎಕರೆ ಭೂಮಿಯು ಈಗಲೂ ಸೋದಾಮಠದ ಸ್ವಾಧೀನದಲ್ಲಿದೆ.

## ೪೯ ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರು

ವಿಜಯನಗರದ ಕೃಷ್ಣದೇವರಾಯನಂತೆ ಮೈಸೂರಿನ ಇತಿಹಾಸದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಖ್ಯಾತಾಭಿಗೀತರಾಗಿದ್ದಾರೆ. ಸ್ವಯಂ ಪಂಡಿತರೂ, ಕವಿಗಳೂ, ಸಂಸ್ಕೃತ ಕನ್ನಡ ಉಭಯ ಭಾಷಾವಿಶಾರದರೂ ಆದ ಶ್ರೀಕೃಷ್ಣರಾಜ ಒಡೆಯರು ಅನೇಕ ಕನ್ನಡ, ಸಂಸ್ಕೃತ ಕಾವ್ಯ ಪ್ರಬಂಧಾದಿಗಳನ್ನು ರಚಿಸಿದ್ದಾರೆ.

ಅವರು ಅನೇಕ ಪಂಡಿತರಿಗೂ ಕವಿಗಳಿಗೂ ಕಲಾವಿದರಿಗೂ, ಸಂಗೀತ ವಿದ್ವಾಂಸರಿಗೂ, ಮಲ್ಲರಿಗೂ ತಮ್ಮ ಆಸ್ಥಾನದಲ್ಲಿ ಉದಾರಾಶ್ರಯವಿತ್ತು ಪೋಷಿಸುತ್ತಲಿದ್ದರು.

ಧರ್ಮಕಾರ್ಯಧುಂಧರರಾದ ಅವರು ಎಲ್ಲ ಧರ್ಮಪೀಠಗಳಿಗೂ, ದೇವಸ್ಥಾನಗಳಿಗೂ ವಿಶೇಷವಾಗಿ ದಾನದತ್ತಿಗಳನ್ನಿತ್ತರು. ಉತ್ತರಾದಿ ಮಠದ ಶ್ರೀಪಾದಂಗಳವರಿಗೆ ಹೊಳೆನರಸೀಪುರ, ಶ್ರೀರಾಘವೇಂದ್ರಮಠದ ಶ್ರೀಪಾದಂಗಳವರಿಗೆ ನಂಜನಗೂಡು ಶ್ರೀ ವ್ಯಾಸರಾಜಮಠಾಧೀಶರಿಗೆ ಸೋಸಲೆ ಮುಂತಾದ ನದೀ ತೀರದ ಗ್ರಾಮಗಳಲ್ಲಿ ಮಠಗಳನ್ನು ಕಟ್ಟಿಸಿಕೊಟ್ಟು ಮುತ್ತುರತ್ನಾದ್ಯಾಭರಣಗಳನ್ನು ಸಂಸ್ಥಾನದ ಪ್ರತಿಮೆಗಳಿಗೆ ದಾನವಿತ್ತು ಭೂಮಿಕಾಣಿಗಳನ್ನಿತ್ತು ಎಲ್ಲ ಮಾಧ್ವ ಮಠಗಳಿಗೂ ಪೋಷಣೆ, ಪ್ರೋತ್ಸಾಹನೆಗಳನ್ನು ಒದಗಿಸಿ ಧರ್ಮಾತ್ಮರೆಂದು ಹೆಸರಾದರು.

ಶ್ರೀ ಚಂದ್ರಿಕಾಚಾರ್ಯರ ಮಹಾ ಸಂಸ್ಥಾನದಿಂದ ನಿರಂತರ ನಡೆಯುವ ಮಧ್ವಸಿದ್ಧಾಂತ ಪ್ರಚಾರ ಕಾರ್ಯವನ್ನು ಕಂಡು ಮುದಿತೋದಿತರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಆ ಮಠದ ಶ್ರೀ ಶ್ರೀ ವಿದ್ಯಾಕಾಂತ ಮಹಾಸ್ವಾಮಿಗಳವರಿಗೆ ಹಾಲ್ಕುರಕೆ, ಸಾರ್ಥನಹಳ್ಳಿ ಎಂಬ ಎರಡು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟರು. ಹಾಗೂ ರತ್ನಖಚಿತವಾದ ವಜ್ರಖಂಡಿತವಾದ ದಿವ್ಯ ವೈಜಯಂತೀ ಮಾಲೆಯನ್ನೂ ಶ್ರೀ ಮಠಕ್ಕೆ ಒಪ್ಪಿಸಿದರು.

ಶ್ರೀ ವ್ಯಾಸರಾಜ ಮಠದ ಪೀಠಾಧಿಪತಿಗಳಾದ ಶ್ರೀ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರಿಗೂ ಮುಮ್ಮಡಿ ಕೃಷ್ಣರಾಜ ಒಡೆಯರು ವಿಶೇಷವಾದ ಗುರುಸೇವೆ ಯನ್ನು ಸಲ್ಲಿಸಿದರು. ಮಹಾರಾಜರು ಶ್ರೀ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರ ಆ ಕಾಲದಲ್ಲಿ ಶ್ರೀಮಠಕ್ಕೆ ಬರೆದುಕೊಟ್ಟ ಅನೇಕ ವಿಜ್ಞಾಪನ ಪತ್ರಗಳಲ್ಲಿ ಕಾಲದಲ್ಲಿ ಶ್ರೀ "ಮಠವೆಂದರೆ ಶ್ರೀ ವ್ಯಾಸರಾಜಮಠ, ಸ್ವಾಮಿಗಳೆಂದರೆ ಶ್ರೀ ವಿದ್ಯಾಪೂರ್ಣತೀರ್ಥರು, ಅಭೀಷ್ಟಪ್ರದ ಗುರುಗಳೆಂದರೆ ಶ್ರೀ ರಾಘವೇಂದ್ರತೀರ್ಥಸ್ವಾಮಿಗಳು, ದೇವರೆಂದರೆ ಶ್ರೀ ಶ್ರೀನಿವಾಸದೇವರು" ಎಂದು ಉಲ್ಲೇಖಿಸಿದ್ದಲ್ಲದೆ ದೊಡ್ಡ ದೊಡ್ಡ ಪಂಡಿತ ಸಭೆ ಗಳಲ್ಲೂ ಕೂಡ ಘೋಷಣೆಯನ್ನು ಮಾಡುತ್ತಿದ್ದರಂತೆ.

ಎಲ್ಲ ಸಂಸ್ಕೃತ ಶಾಸ್ತ್ರ ಪಂಡಿತರಿಗೂ ಉದಾರಾಶ್ರಯ ನೀಡುವ ಶ್ರೀ ಕೃಷ್ಣರಾಜರ ಕೀರ್ತಿಯು ಕರ್ನಾಟಕದಲ್ಲಿ ಮಾತ್ರವಲ್ಲದೆ ಮಹಾರಾಷ್ಟ್ರ, ಮಧ್ಯ ಪ್ರದೇಶಗಳಲ್ಲಿಯೂ ಹರಡಿ ಉತ್ತರ ಪ್ರದೇಶಕ್ಕೂ ಮುಖ ಚಾಚಿತ್ತು. ಪುಣೆಯ ಪೇಶ್ವಾಯಿ ಆಸ್ಥಾನದಲ್ಲಿದ್ದ ಅಲ್ಲಿಯ ಪ್ರಚಂಡ ಪಂಡಿತರಾದ ತ್ರ್ಯಂಬಕ ಶಾಸ್ತ್ರಿಗಳು ಕೃಷ್ಣ ರಾಜ ಅರಸರ ಕೀರ್ತಿಯನ್ನು ಕೇಳಿ ಮೈಸೂರಿಗೆ ಬಂದರು. ಶಾಸ್ತ್ರಿಗಳ ಜೊತೆಗೆ ನಡೆದ ತುರುಸಿನ ವಾಕ್ಯಾರ್ಥದಲ್ಲಿ ಮೈಸೂರು ಆಸ್ಥಾನದ ಪಂಡಿತರೆಲ್ಲರೂ ಪರಾಜಿತರಾದರು. ಆಗ ಮಹಾರಾಜರಿಗೆ ಅದೊಂದು ದೊಡ್ಡ ಚಿಂತೆಯಾಗಿ ಅವರು ನಂಜಿನಗೂಡಿನಲ್ಲಿ ಪೂರ್ಣಯ್ಯನವರ ಛತ್ರದಲ್ಲಿರುವ ಶ್ರೀ ರಾಯರ ಮಠಾಧೀಶ ಶ್ರೀ ಸುಜನೇಂದ್ರತೀರ್ಥ ಶ್ರೀಗಳವರಿಗೆ ಬಿನ್ನಹ ಪತ್ರವನ್ನು ಕಳಿಸಿ ಅರಮನೆಗೆ ಬರಮಾಡಿಕೊಂಡರು.

ಆಕಾರದಿಂದ ತುಸು ವಾಮನಮೂರ್ತಿಗಳಾದ ಶ್ರೀಗಳವರನ್ನು ಕಂಡು ಶಾಸ್ತ್ರಿ ಗಳು "ಆಕಾರೋಹ್ರಸ್ವಃ" ಎಂದರಂತೆ ತತ್‌ಕ್ಷಣದಲ್ಲಿಯೇ ಶ್ರೀಗಳವರು ಅದೇ ಶಾಸ್ತ್ರಿ ಗಳ ಮಾತಿನ ಎಳೆಯನ್ನೇ ಎತ್ತಿಕೊಂಡು 'ಆಕಾರಸ್ಯಹ್ರಸ್ವತ್ವಂ ಕಥಂ' ಎಂದು ವಾಕ್ಯಾರ್ಥವನ್ನು ಪ್ರಾರಂಭಿಸಿದರು. ವ್ಯಾಕರಣ, ತರ್ಕ, ಮೀಮಾಂಸಾ ಕೊನೆಗೆ ವೇದಾಂತ ಶಾಸ್ತ್ರದಲ್ಲಿಯೂ ಚರ್ಚೆ ನಡೆದು ಸಾಯಂಕಾಲದಷ್ಟೊತ್ತಿಗೆ ಶಾಸ್ತ್ರಿಗಳ ಬಾಯಿಕಟ್ಟಿತು. ಶ್ರೀಗಳವರ ಆಕ್ಷೇಪಕ್ಕೆ ಉತ್ತರ ಕೊಡಲಾಗದೆ ಅವರು ಸೋತು ಸುಮ್ಮನಾದರು.

ಅದನ್ನು ಕಂಡು ಮಹಾರಾಜರಿಗೆ ಅತ್ಯಂತ ಸಂತೋಷವಾಗಿ ತಮ್ಮ ಕೊರಳಲ್ಲಿ ರುವ ಮುತ್ತಿನ ಕಂಠಿಯನ್ನು ತೆಗೆದು ಶ್ರೀ ಚರಣರ ಚರಣಕಮಲಗಳ ಮೇಲೆ ಇರಿಸಿದರು.

ನಂಜಿನಗೂಡಿನಲ್ಲಿಯೇ ಶ್ರೀಗಳವರಿಗೆ ನಿರಂತರ ನೆಲೆಸಲು ಏರ್ಪಾಡನ್ನು ಮಾಡಿ ಶ್ರೀಗಳವರು ವಾಸಿಸುತ್ತಿದ್ದ ಶ್ರೀ ಪೂರ್ಣಯ್ಯನವರ ಛತ್ರವನ್ನೇ ದಾನಕೊಟ್ಟು ಶ್ರೀ ಮಠದ ನಿತ್ಯದ ಖರ್ಚಿಗಾಗಿ ತನ್ನ ರಾಜಭಂಡಾರದಿಂದ ೩೬೦ ಕಂಠೀವರಹಗಳನ್ನು

ಕೊಡುವ ಏರ್ಪಾಡನ್ನು ಮಾಡಿದರು, ಮತ್ತು ಅಂಬಳೆ, ಕಗ್ಗಲೂರು, ಹಾಗೂ ಕೊಂಗ ಹಳ್ಳಿ ಮುಂತಾದ ಗ್ರಾಮಗಳನ್ನು ಶ್ರೀ ಸುಬೋಧೇಂದ್ರ ಹಾಗೂ ಅವರ ಶಿಷ್ಯರಾದ ಶ್ರೀ ಸುಜನೇಂದ್ರತೀರ್ಥ ಸ್ವಾಮಿಗಳಿಗೆ ಸಂಕಲ್ಪಪೂರ್ವಕವಾಗಿ ದಾನವಿತ್ತರು.

ಶ್ರೀ ಉತ್ತರಾದಿಮಠದ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ಅಗ್ನಿಪ್ರಕೋಪದಿಂದ ಅಮೂಲ್ಯವಾದ ದೇವರ ಆಭರಣಗಳು ದಗ್ಧವಾದಾಗ ಮಹಾ ರಾಜರು ತಮ್ಮ ದಿವಾಣ ಬಾಬುರಾಯನಿಗೆ ಹೇಳಿ ಎರಡು ಲಕ್ಷ ವರಹಗಳನ್ನು ತಮ್ಮ ರಾಜಭಾಂಡಾರದಿಂದ ಕೊಟ್ಟು ಸುಟ್ಟು ಹೋದ ಎಲ್ಲ ಆಭರಣಗಳನ್ನು ಮತ್ತೆ ಮಾಡಿಸಿ ಶ್ರೀರಾಮ ದೇವರ ಸೇವೆಗಾಗಿ ಶ್ರೀಗಳವರಿಗೆ ಅರ್ಪಿಸಿದರು.

ಶ್ರೀ ಸತ್ಯಸಂಕಲ್ಪತೀರ್ಥರ ಕಾಲದಲ್ಲಿಯೂ ಮಹಾರಾಜರು ಶ್ರೀಗಳವರಿಗೆ ನವ ರತ್ನಾಭಿಷೇಕವನ್ನು ನಡೆಯಿಸಿದರು. ಕೊರೆಯದ ಮುತ್ತುಗಳನ್ನು ಬೊಗಸೆ ತುಂಬ ಕೊಟ್ಟು ಶ್ರೀರಾಮ ದೇವರಿಗೆ ಮುತ್ತಿನ ಅಭಿಷೇಕವನ್ನು ಮಾಡಿಸಿದರು.

ಮಹಾರಾಜರ ಪ್ರಾರ್ಥನೆಯಿಂದ ಉತ್ತರಾದಿಮಠದ ಸಿಂಹಾಸನವನ್ನು ಆರೋ ಹಣ ಮಾಡಿದ ಶ್ರೀ ಸತ್ಯಸಂತುಷ್ಟತೀರ್ಥ ಶ್ರೀಪಾದಂಗಳವರ ಕಾಲದಲ್ಲಿಯೂ ಅವರು ನೆರವೇರಿಸಿದ ಚತುಃಶಾಸ್ತ್ರ ಪಂಡಿತರ ಸಭೆಯಲ್ಲಿ ಮಹಾರಾಜರು ಸ್ವಯಂ ಉಪಸ್ಥಿತರಿದ್ದರು. ಸಭೆಯ ಕೊನೆಗೆ ಕೃಷ್ಣರಾಜ ಒಡೆಯರು ರಾಜಭಾಂಡಾರದಿಂದ ೩ ಸಾವಿರ ವರಹಗಳನ್ನು ತರಿಸಿ ಪ್ರತಿಯೊಬ್ಬ ಪಂಡಿತನಿಗೂ ಒಂದು ಜರದ ಶಾಲು, ಒಂದು ಬೊಗಸೆ ವರಹಗಳನ್ನು ಕೊಟ್ಟರು.

ಶ್ರೀಗಳವರಿಗೆ ಮೈಸೂರಿನಲ್ಲಿರಲು ಅರಮನೆ ಸಮೀಪದಲ್ಲಿಯೇ ಒಂದು ಮಠವನ್ನು ಕಟ್ಟಿಸಿಕೊಟ್ಟು ಎಲ್ಲ ರೀತಿಯಿಂದ ಸಂಸ್ಥಾನದ ಖರ್ಚಿಗೆ ಏರ್ಪಾಡನ್ನು ಮಾಡಿದರು.

ಶ್ರೀ ಸತ್ಯಕಾಮತೀರ್ಥರ ಕಾಲದಲ್ಲಿಯೂ ಶ್ರೀಗಳವರನ್ನು ಅನೇಕ ದಿನ ಮೈಸೂರಲ್ಲಿಟ್ಟುಕೊಂಡು ಅರಮನೆಯಿಂದ ವರ್ಷಾಶನ ಮತ್ತು ಮಹಾ ಸಮಾರಾಧನೆಯ ವೆಚ್ಚವನ್ನು ತಾವೇ ಕೊಟ್ಟು ಗುರುಭಕ್ತಿಯನ್ನು ವ್ಯಕ್ತಮಾಡಿದರು.

ಅವರು ಶ್ರೀ ವೃಂದಾವನಾಚಾರ್ಯರ ಕಾಲದಲ್ಲಿ ಉಡುಪಿಗೆ ಹೋಗಿ ತಮ್ಮ ಕುಲದೇವತೆಯಾದ ಶ್ರೀ ಕೃಷ್ಣನಿಗೆ ನವರತ್ನ ಹಾರವನ್ನು ಸಮರ್ಪಿಸಿದರು. ಮತ್ತು ನಿರಂತರವಾಗಿ ಮೈಸೂರು ಸಂಸ್ಥಾನದ ವತಿಯಿಂದ ಶ್ರೀ ಕೃಷ್ಣಪರಮಾತ್ಮನ ವಿಶೇಷ ಸೇವಾ, ಸಂಭಾವನೆಗಳು ನಡೆಯುವಂತೆ ವ್ಯವಸ್ಥೆ ಮಾಡಿದ್ದಾರೆ.

## ೫೦ ದಿವಾಣ ಪೂರ್ಣಯ್ಯನವರು

ಮಧ್ವ ಸಿದ್ಧಾಂತಕ್ಕೆ ಹಾಗೂ ಮಾಧ್ವ ವಿದ್ವಾಂಸರಿಗೆ ಮತ್ತು ಮಾಧ್ವ ಪೀಠಾಧಿಪತಿಗಳಿಗೆ ಉದಾರಾಶ್ರಯ ನೀಡಿ ಉತ್ತೇಜನೆಯನ್ನಿತ್ತ ದಿವಾಣರಲ್ಲಿ ಶ್ರೀ ಪೂರ್ಣಯ್ಯನವರು ಪ್ರಮುಖರಾಗಿದ್ದಾರೆ. ಜನ್ಮತಃ ಧಾರ್ಮಿಕ ಪ್ರವೃತ್ತಿಯವರಾದ ಅವರು ಬಡತನದಲ್ಲಿದ್ದರೂ ತಮ್ಮ ಬುದ್ಧಿ ಬಲದಿಂದ ಮುಂದೆ ಬಂದ ಮೈಸೂರಿನ ದಿವಾಣ ಪದವಿಗೇರಿದರು. ಎಲ್ಲ ರೀತಿಯಿಂದಲೂ ಮೈಸೂರು ಸಂಸ್ಥಾನವನ್ನು ಆದರ್ಶವನ್ನಾಗಿ ಮಾಡಲು ಹೆಣಗಿದರು.

ಧರ್ಮವರ್ಮರಾದ ದಿವಾಣ ಪೂರ್ಣಯ್ಯನವರು ಸರ್ವಜ್ಞ ಸಿಂಹಾಸನವಾದ ಶ್ರೀ ವ್ಯಾಸರಾಜ ಮಠದ ಶ್ರೀ ಗೋಪಾಲಕೃಷ್ಣ ದೇವರ ಸೇವೆಗಾಗಿ ೧೮೦೯ ನೇ ಇಸ್ವಿಯಲ್ಲಿ ಬಂಗಾರದ ಮಂಟಪವನ್ನುಮಾಡಿಸಿ ಶ್ರೀವ್ಯಾಸರಾಜಮಠದ ಶ್ರೀವಿದ್ಯಾವಲ್ಲಭ ತೀರ್ಥರಿಗೆ ಸಮರ್ಪಿಸಿದರು. ಈ ಅಂಶವು ಶ್ರೀ ಮಠದ ಸುವರ್ಣಮಯ ಮಂಟಪದ ಮೇಲಿನ ಲೇಖನದಿಂದ ಸ್ಪಷ್ಟವಾಗುವದು.

ಧರ್ಮ ಶ್ರದ್ಧಾಳುಗಳಾದ ಪೂರ್ಣಯ್ಯನವರು ಉತ್ತರಾದಿಮಠದ ಶ್ರೀ ಸತ್ಯವರ ತೀರ್ಥ ಶ್ರೀಪಾದಂಗಳವರ ಕಾಲದಲ್ಲಿಯೂ, ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರ ಕಾಲದಲ್ಲಿಯೂ ಶ್ರೀ ಮಠಕ್ಕೆ ವಿಶೇಷ ಸೇವೆಯನ್ನು ಸಲ್ಲಿಸಿದರು.

ಮೈಸೂರಿಗೆ ಭದ್ರವಾದ ಕೋಟೆಯನ್ನು ಕಟ್ಟಿಸಿದ ಪೂರ್ಣಯ್ಯನವರು ಅರಮನೆಯ ಆವರಣದಲ್ಲಿ ವರಾಹ ದೇವರ ಗುಡಿಯನ್ನು ಕಟ್ಟಿಸಿ ಮೂರ್ತಿ ಪ್ರತಿಷ್ಠಾನೆಗಾಗಿ ಶ್ರೀ ಸತ್ಯಧರ್ಮತೀರ್ಥ ಶ್ರೀಗಳವರನ್ನು ಮೈಸೂರಿಗೆ ಬರಮಾಡಿಕೊಂಡರು. ೧೫ ದಿನ ಸಂಸ್ಥಾನವನ್ನು ರಾಜಧಾನಿಯಲ್ಲಿಟ್ಟುಕೊಂಡು ಅರಮನೆಯಲ್ಲಿ ಪೂಜಾ ಪ್ರತಿಷ್ಠೆಗಳನ್ನು ಮಾಡಿಸಿ ಮೈಸೂರು ರಾಜ್ಯದಲ್ಲಿಯೇ ಇರಬೇಕೆಂದು ಶ್ರೀಗಳವರನ್ನು ಪೂರ್ಣಯ್ಯನವರು ಪ್ರಾರ್ಥಿಸಿಕೊಂಡರು.

ಹೇಮಾವತಿ ನದೀತೀರದ ಹೊಳೆ ನರಸಿಂಹಪುರ ಗ್ರಾಮದಲ್ಲಿ ಪೂರ್ಣಯ್ಯನವರು ೨೦ ಸಾವಿರ ವರಹಗಳನ್ನು ಕೊಟ್ಟು ಮಠವನ್ನು ಜೀರ್ಣೋದ್ಧಾರ ಮಾಡಿ ದಿವ್ಯ ಭವ್ಯವಾಗಿ ಕಟ್ಟಿಸಿಕೊಟ್ಟರು.

ಮಹಾಸಮಾರಾಧನೆ, ವಿದ್ವತ್ ಸಭೆ ಹಾಗೂ ಪಾಠ ಪ್ರವಚನಾದಿಗಳಿಗೆ ಅನುಕೂಲವಾಗುವಂತೆ ಏಕಕಾಲದಲ್ಲಿ ೧೦-೧೫ ಸಾವಿರ ಜನರು ಭೋಜನಕ್ಕೆ ಕುಳಿತುಕೊಳ್ಳಲು ಅನುಕೂಲವಾಗುವಷ್ಟು ವಿಶಾಲವಾಗಿದ್ದಿತು ಅವರು ಪುನಃ ನಿರ್ಮಿಸಿದ ಮಠ.

ಶ್ರೀಗಳವರು ಅಲ್ಲಿದ್ದಾಗ ಅನೇಕಾನೇಕ ಲೌಕಿಕ ವೈದಿಕ ಜನರು ಅಧ್ಯಯನಕ್ಕೆಂದು ಅಲ್ಲಿ ಬಂದು ನೆಲಿಸಿದರು. ಈ ಎಲ್ಲ ವಿದ್ಯಾರ್ಥಿಗಳಿಗೂ ಪಂಡಿತರಿಗೂ ದೇವರ ಅಭಿಷೇಕಕ್ಕೂ ಉಪಯೋಗಕ್ಕಾಗಿ ಒಂದು ಸಾವಿರ ಅಮೃತಮಹಾಲ ಕಚೇರಿಯ ಆಕಳಗಳನ್ನೂ ಅವುಗಳ ಮೇವಿಗಾಗಿ ೫೦೦ ಎಕರೆ ಭೂಮಿಯ:ನ್ನೂ ಹತ್ತಿರ ಗ್ರಾಮಗಳಲ್ಲಿಯ ಅನೇಕ ತೆಂಗಿನ ತೋಟಗಳನ್ನೂ, ಹುಣಶೆ ಮರಗಳನ್ನೂ ದತ್ತಿ ಹಾಕಿಕೊಟ್ಟು ಮಠದ ಪರಿಚಾರಕರಿಗೆಲ್ಲ ವರ್ಷಾಶನವನ್ನೂ ತಾಲೂಕ ಕಚೇರಿಯಿಂದಲೇ ಸಿಗುವಂತೆ ವ್ಯವಸ್ಥೆ ಮಾಡಿದರು.

ಸ್ವತಃ ಪೂರ್ಣಯ್ಯನವರು ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರಲ್ಲಿ ಸರ್ವಜ್ಞಾಚಾರ್ಯರ ೩೭ ಗ್ರಂಥಗಳನ್ನೂ ಶಾಂತಿ ಹಾಕಿ ಹೊಳೆನರಸೀಪುರದಲ್ಲಿಯೇ ನಿಂತು ಅಧ್ಯಯನ ಮಾಡಿದರು. ಸರ್ವಮೂಲ ಗ್ರಂಥ ಮಂಗಲ ಮಹೋತ್ಸವವನ್ನು ಅತ್ಯಂತ ವೈಭವದಿಂದ ನೆಂವೇರಿಸಿ ಕಾಶೀ ತಿಮ್ಮಣ್ಣಾಚಾರ್ಯ, ಕೌಲಗಿ ಬಾಳಾಚಾರ್ಯ, ಗಾರ್ಲವಾಡ ಕೃಷ್ಣಾಚಾರ್ಯ, ಕಲ್ಲಾಪುರ ರಾಮಚಂದ್ರಾಚಾರ್ಯ, ಉಡುಪಿ ವಾಸುದೇವಾಚಾರ್ಯ, ಹೊಸಕೋಟೆ ಗೋವಿಂದಾಚಾರ್ಯ, ಬೆಂಗಳೂರ ದಾಸಾಚಾರ್ಯ, ಹೈದರಾಬಾದ ಅನಂತಾಚಾರ್ಯ ಮುಂತಾದ ಅಲ್ಲಿಗೆ ಬಂದ ಎಲ್ಲ ಪಂಡಿತರಿಗೂ ಬಂಗಾರದ ಕಂಠಿ, ಬೆಳ್ಳಿ ತಂಬಿಗಿ. ಮತ್ತು ಅನರ್ಘ್ಯವಾನ ಆಭರಣಗಳನ್ನು ದಕ್ಷಣೆಯಾಗಿ ಕೊಟ್ಟರು.

ಮೈಸೂರು ಸಂಸ್ಥಾನದ ದಿವಾಣಗಿರಿಯಿಂದ ನಿವೃತ್ತಿಯಾದ ಬಳಿಕವೂ ಪೂರ್ಣಯ್ಯನವರು ಶ್ರೀ ಸತ್ಯಧರ್ಮ ಶ್ರೀಪಾದಂಗಳವರ ಚರಣ ಸನ್ನಿಧಿಯಲ್ಲಿ ೩೦ ಸಾವಿರ ವರಹಗಳನ್ನು ತಂದಿಟ್ಟು ನನ್ನ ಈ ಕೊನೆಯ ಸೇವೆಯನ್ನು ಸ್ವೀಕರಿಸಬೇಕೆಂದು ಬೇಡಿಕೊಂಡರು.

ಪೂರ್ಣಯ್ಯನವರು ಶ್ರೀಸತ್ಯಧರ್ಮತೀರ್ಥರ ಕೊನೆಗಾಲದಲ್ಲಿ ಅವರಿಗೆ ಹೊಳೆಹೊನ್ನೂರಿನಲ್ಲಿ ಇರಲಿಕ್ಕಾಗಿ ೧೬ ಸಾವಿರ ವರಹಗಳಿಂದ ಹೊಸಮಠವನ್ನು ಕಟ್ಟಿಸಿ ಮೈಸೂರು ಸಂಸ್ಥಾನದಿಂದಲೇ ಎಲ್ಲ ವ್ಯವಸ್ಥೆಯನ್ನು ಮಾಡಲಾಯಿತು.

ಶ್ರೀಗಳು ಹೊಳೆಹೊನ್ನೂರಲ್ಲಿಯೇ ನಿರ್ಯಾಣವನ್ನು ಹೊಂದಿದ ಬಳಿಕ ಅವರ ವೃಂದಾವನದ ಪೂಜೆಗಾಗಿ ಅರ್ಚಕರಿಗೆ ಅರಮನೆಯಿಂದಲೇ ಸಂಬಳವು ಸಂದಾಯವಾಗುವಂತೆ ವ್ಯವಸ್ಥೆ ಮಾಡಲಾಯಿತು.

ಪೂರ್ಣಯ್ಯನವರಿಂದ ಮಠಕ್ಕೆ ಬಹಳ ಸಹಾಯವಾದುದರಿಂದ ಅಂದಿನಿಂದ ಉತ್ತರಾದಿ ಮಠದಲ್ಲಿ ಈ ಮನೆತನದವರಿಗೆ ವಿಶೇಷ ಮರ್ಯಾದಿಯು ಸಿಕ್ಕುತ್ತಲಿರುವದು.

ಇದೇ ರೀತಿಯಾಗಿ ಪೂರ್ಣಯ್ಯನವರು ಮಧ್ವ ಸಂಪ್ರದಾಯದ ಎಲ್ಲ ಮಠ ಗಳಿಗೂ, ಪೀಠಾಧಿಪತಿಗಳಿಗೂ ವಿಶೇಷಾಕಾರೇಣ ಸಹಾಯ ಸಲ್ಲಿಸಿ ಸೇವೆ ಗೈದು ಶ್ರೇಯಃಪಾತ್ರರಾದರು.

ಇವರು ೧೭೪೬ನೇ ಇಸ್ವಿಯಲ್ಲಿ ಜನಿಸಿದರು. ಇವರು ಕೊಯಿಮತ್ತೂರ ಕಡೆ ಯವರು. ಆರವೇಲು ಪಂಗಡದ ಮಾಧ್ವರು. ಇವರ ತಂದೆ ಕೃಷ್ಣಾಚಾರ್ಯರು ದೊಡ್ಡ ಸಂಸ್ಕೃತ ಪಂಡಿತರು. ತಾಯಿ ಲಕ್ಷ್ಮೀಬಾಯಿ. ಪೂರ್ಣಯ್ಯನವರ ತಂದೆ ಇವರು ಚಿಕ್ಕವರಿರುವಾಗಲೇ ತೀರಿಕೊಂಡರು. ತಾಯಿ ಮತ್ತು ಸೋದರ ಮಾವನ ಆಶ್ರಯದಲ್ಲಿ ಬೆಳೆದರು. ಬಡತನದಲ್ಲಿಯೂ ತಮ್ಮ ಬುದ್ಧಿವಂತಿಕೆ ಸ್ವಪರಾಕ್ರಮದಿಂದ ಮುಂದೆ ಬಂದರು. ಮುಮ್ಮಡಿ ಕೃಷ್ಣರಾಜ ಒಡೆಯರು ಇವರಿಗೆ ಯಳಂದೂರನ್ನು ಜಹಗೀರು ಹಾಕಿಕೊಟ್ಟರು. ಇವರು ಶ್ರೀರಂಗಪಟ್ಟಣದಲ್ಲಿ ೧೮೧೨ನೇ ಇಸ್ವಿಯಲ್ಲಿ ವೈಕುಂಠವಾಸಿ ಗಳಾದರು. ಇವರು ಕನ್ನಡ, ಸಂಸ್ಕೃತ, ಪಾರ್ಶಿ, ಮರಾಠಿ ಭಾಷೆಗಳಲ್ಲಿ ಪ್ರಭುತ್ವ ಪಡೆದಿದ್ದರು.

### ೫೧ ದಿವಾಣ ಖಂಡೇರಾಯರು

ಸವಣೂರ ನವಾಬರ ದಿವಾಣರಾದ ಖಂಡೇರಾಯರು ಪೂರ್ಣಯ್ಯನವರಂತೆ ದಕ್ಷ ಧಾರ್ಮಿಕ, ದಾನಶೂರ ದಿವಾಣರೆಂದು ಪ್ರಸಿದ್ಧರಾದರು. ೧೮ನೇ ಶತಮಾನದ ಸವಣೂರ ನವಾಬನಾದ ಅಬ್ದುಲ್ ಹಕೀಮನ ಕಾಲದಲ್ಲಿ ಖಂಡೇರಾಯನು ಸಂಸ್ಥಾನ ದಲ್ಲಿ ಲೋಕೋಪಯೋಗಿ ಖಾತೆಯಲ್ಲಿ ಕಾರಕೂನನಾಗಿದ್ದನು. ಹರಿಹರಕ್ಕೆ ಉತ್ತರಾದಿ ಮಠದ ಶ್ರೀ ಸತ್ಯಬೋಧತೀರ್ಥ ಶ್ರೀಪಾದಂಗಳವರು ದಿಗ್ವಿಜಯ ಮಾಡಿದಾಗ ಖಂಡೇ ರಾಯನು ಸವಣೂರಿಗೆ ಬರಬೇಕೆಂದು ಶ್ರೀಗಳವರನ್ನು ಪ್ರಾರ್ಥಿಸಿಕೊಂಡನು.

ಆಗ ಶ್ರೀಗಳು ಮುಗುಳು ನಕ್ಕು '' ನೀನು ಸವಣೂರಿನ ದಿವಾಣನಾದ ಬಳಿಕ ನಾವು ಅಲ್ಲಿಗೆ ಬರುತ್ತೇವೆ ಎಂದು ಹೇಳಿ ಮಂತ್ರಾಕ್ಷತೆ ಇತ್ತರು. ಅವರ ಅನುಗ್ರಹದಿಂದ ಖಂಡೇರಾಯನು ಕೆಲವೇ ದಿನಗಳಲ್ಲಿ ಮಂತ್ರಿಪದವಿಗೇರಿದ.

ಅವನು ದಿವಾಣನಾದ ಬಳಿಕ ಶ್ರೀಸತ್ಯಬೋಧ ಶ್ರೀಪಾದಂಗಳವರಲ್ಲಿ ಬಂದು ಅವರಿಗೆ ತಾವಿತ್ತ ವಚನವನ್ನು ನಡೆಸಿಕೊಡಬೇಕೆಂದು ಬೇಡಿಕೊಂಡನು. ಶ್ರೀಗಳವರು ತಮ್ಮ ಮಾತಿನಂತೆ ಸವಣೂರಿನಲ್ಲಿ ಬಂದು ನೆಲಿಸಿದರು.

ಶ್ರೀಗಳವರಿಗೆ ಇರಲಿಕ್ಕಾಗಿ ವಿಶಾಲವಾದ ಒಂದು ಮಠವನ್ನೂ ಸ್ನಾನಕ್ಕಾಗಿ ವಿಷ್ಣುತೀರ್ಥ ಎಂಬ ಸರೋವರವನ್ನೂ ಅದರ ದಂಡೆಯಮೇಲೆ ಗೋಪಾಲಕೃಷ್ಣ ದೇವಸ್ಥಾನವನ್ನೂ ಕಟ್ಟಿಸಿಕೊಟ್ಟನು. ಶ್ರೀಗಳವರಲ್ಲಿ ಪಾಠ ಓದಲಿಕ್ಕೆ ಬಂದ ನೂರಾರು ಕುಟುಂಬಗಳಿಗೆ ಇರಲಿಕ್ಕಾಗಿ ಸವಣೂರಲ್ಲಿ ಹೊಸ ಮನೆಗಳನ್ನು ಕಟ್ಟಿಸಿಕೊಟ್ಟನು.

ಮೋತಿ ತಲಾವ ಎಂಬ ದೊಡ್ಡ ಕೆರೆಯನ್ನು ಕಟ್ಟಿಸಿ ಅದರ ಕೆಳಗೆ ಸುಂದರವಾದ ಎಲೆ ಬಳ್ಳಿ ತೋಟಗಳನ್ನು ನಿರ್ಮಿಸುವ ವ್ಯವಸ್ಥೆ ಮಾಡಿದನು.

ಶ್ರೀ ಸತ್ಯಬೋಧ ಸ್ವಾಮಿಗಳ ಮುಖಚಿತ್ರವುಳ್ಳ ಬೆಳ್ಳಿ, ಬಂಗಾರದ ನಾಣ್ಯಗಳನ್ನು ಮುದ್ರಿಸಿ ಚಲಾವಣೆಯಲ್ಲಿ ತಂದನು.

ಆ ಕಾಲದ ಮಹಾ ಕವಿಗಳಾದ ಕಂಚಿ ಕೃಷ್ಣಾಚಾರ್ಯರಿಂದ ಶ್ರೀ ಸತ್ಯಬೋಧ ವಿಜಯವೆಂಬ ಮಹಾಕಾವ್ಯವನ್ನು ಬರೆಯಿಸಿದನು.

ಖಂಡೇರಾಯನು ಮಾಡಿದ ಮತ್ತೊಂದು ಮಹತ್ಕಾರ್ಯವೆಂದರೆ ಹಿಂದೂ ಧರ್ಮದ್ವೇಷಿಯಾದ ಮುಸಲ್ಮಾನಜಾತಿಯ ಸವಣೂರ ನವಾಬನನ್ನು ಶ್ರೀ ಸತ್ಯಬೋಧರ ಶಿಷ್ಯನನ್ನಾಗಿ ಮಾಡಿದ್ದು.

ಶ್ರೀಗಳವರ ನಡುರಾತ್ರಿಯಲ್ಲಿಯೇ ಸೂರ್ಯದರ್ಶನ, ಮಾಂಸಗಳನ್ನು ಫಲ ಪುಷ್ಪಗಳನ್ನಾಗಿ ಮಾರ್ಪಡಿಸುವ ತಪೋಮಹಿಮೆ ಮುಂತಾದವುಗಳನ್ನು ಕಂಡು ಕೇಳಿ ನವಾಬನಿಗೂ ಅವರಲ್ಲಿ ನಿರತಿಶಯ ಶ್ರದ್ಧೆ ಉತ್ಪನ್ನವಾಯಿತು.

ಶ್ರೀಗಳ ತಪಃಶಕ್ತಿಯಿಂದ ಆಕೃಷ್ಟನಾದ ನವಾಬನು ಖಂಡೇರಾಯನ ಪ್ರೇರಣೆಯಿಂದ ಸವಣೂರ ಗ್ರಾಮದ ವಿಸ್ತಾರವಾದ ಸ್ಥಳವೊಂದನ್ನು ಕೊಟ್ಟದ್ದಲ್ಲದೆ ವರದಾ ತೀರದ ಮೆಳ್ಳೆಗಟ್ಟೆ ಎಂಬ ಗ್ರಾಮವನ್ನು ಉಂಬಳಿ ಹಾಕಿ ಕೊಟ್ಟನು. ಸ್ವಯಂ ಖಂಡೇರಾಯನು ಆ ಮಠಕ್ಕೆ ಅಮೂಲ್ಯವಾದ ಮೌಕ್ತಿಕ ರತ್ನಾಭರಣಗಳನ್ನು ದಾನವಾಗಿತ್ತನು.

ಸವಣೂರಿನ ಶ್ರೀಸತ್ಯಬೋಧ ಮಠದ ವೃಂದಾವನದ ಗರ್ಭಗುಡಿಯ ಬಾಗಿಲದ ಹತ್ತಿರ ಖಂಡೇರಾಯನ ಕೈಮುಗಿದುಕೊಂಡು ನಿಂತ ಶಿಲಾಪ್ರತಿಮೆ ಈಗಲೂ ಇರುತ್ತದೆ.

ಖಂಡೇರಾಯನು ಚಾಣಾಕ್ಷನಿದ್ದಷ್ಟೇ ಶೂರನೂ ಆಗಿದ್ದನು. ಸವಣೂರ ನವಾಬನಿಗೂ ಮೈಸೂರಿನ ಹೈದರಅಲ್ಲಿಗೂ ಶರೀರಸಂಬಂಧ ಬೆಳಿಸಿ ಸ್ನೇಹಸಂಪರ್ಕ ಏರ್ಪಡಿಸಿದ್ದನು.

ಹೈದರಅಲ್ಲಿಯು ಇಂಗ್ಲೀಷರ ಜೊತೆಗೆ ಕಾಂಜೀವರದ ಹತ್ತಿರ ಘನಘೋರ ಯುದ್ಧ ಮಾಡಿ ಕೈಸೋತು ಪಲಾಯನವನ್ನು ಪ್ರಾರಂಭಿಸಿದಾಗ ಖಂಡೇರಾಯನು ತನ್ನ ಸವಣೂರಿನ ಸೈನ್ಯ ತೆಗೆದುಕೊಂಡು ಧಾವಿಸಿ ಅಲ್ಲಿಗೆ ಹೋಗಿ ಹೈದರನ ಪರವಾಗಿ ಭಯಂಕರ ಯುದ್ಧ ಮಾಡಿ ತೋಫಿನಿಂದ ಗುಂಡಿನ ಮಳೆ ಸುರಿಸಿ

ಸೋಲಿಸಿಬಿಟ್ಟನು. ಕರ್ನಲ್ ಬೇಲಿ, ಸರದಾರ ನಾಶೇರಅಲ್ಲಿ ಮುಂತಾದ ಅನೇಕ ಇಂಗ್ಲೀಷ ಸೈನಿಕರನ್ನು ಸೆರೆ ಹಿಡಿದು ಶ್ರೀರಂಗ ಪಟ್ಟಣದ ಜೇಲಿಗೆ ಅಟ್ಟಿದನು.

ಇವನ ಈ ಶೌರ್ಯವನ್ನು ಕಂಡು ಹೈದರಲ್ಲಿಯು ಅತ್ಯಂತ ಸಂತುಷ್ಟನಾಗಿ ಖಂಡೇರಾಯನನ್ನು ಶ್ರೀರಂಗಗಟ್ಟಣಕ್ಕೆ ಕರೆದುಕೊಂಡು ಬಂದು ಆನೆಯಮೇಲೆ ಕೂಡಿಸ ಮೆರವಣಿಗೆ ಮಾಡಿದನು. ಮುಂದೆ ಟಿಪ್ಪುಸುಲ್ತಾನನು ಖಂಡೇರಾಯನನ್ನು ತನ್ನ ದರಬಾರಿನಲ್ಲಿರಿಸಿಕೊಂಡಿದ್ದನು.

## ೫೨ ಕಂಚಿ ಸುಬ್ಬರಾಯರು



ಯಾವ ಮಠಾಧಿಪತಿಯಾಗದಿದ್ದರೂ, ಸಂಸ್ಥಾನಾಧೀಶ್ವರರಾಗದಿದ್ದರೂ ಅಂಥವರು ಮಾಡತಕ್ಕ ಮಹಾ ಕಾರ್ಯವನ್ನು ಸಮರ್ಥ ರೀತಿಯಿಂದ ಮಾಡಿ ನಿರ್ವಹಿಸಿದ ಏಕೈಕ ಮಾಧ್ವ ಗೃಹಸ್ಥರೆಂದರೆ ಶ್ರೀ ಕಂಚಿ ಸುಬ್ಬರಾಯರು. ತಿರುಪತಿಯ ಬಳಿಯ ಪದ್ಮ ಸರೋವರದ ಪುಷ್ಕರಣಿ ದಂಡೆಯಮೇಲೆ ೧೨-೧೩ ಸಾವಿರ ಜನರನ್ನು ಹಿಡಿಯ ಬಹುದಾದ ಎರಡಂತಸ್ತಿನ ದಿವ್ಯ ಭವ್ಯವಾದ ಕಟ್ಟಡವು ಅವರ ಕರ್ತೃತ್ವ ಶಕ್ತಿಗೆ ಸಾಕ್ಷಿ ಯಾದರೆ ಅಖಿಲ ಮಾಧ್ವರ ಪ್ರಾತಿನಿಧಿಕ ಸಂಸ್ಥೆಯಾಗಿ ಅರ್ಧ ಶತಮಾನದಷ್ಟು ಕಾಲ ಮಧ್ವ ಸಿದ್ಧಾಂತ ಪ್ರಚಾರ ಕಾರ್ಯವನ್ನು ಮಾಡಿ ಮಧ್ವ ಸಿದ್ಧಾಂತ ಉನ್ನಾಹಿನೀ ಸಭೆಯು ಅವರ ದ್ವೈತ ದೀಕ್ಷೆಯ ದ್ಯೋತಕವಾಗಿದೆ.

ಇಂದು ಆ ಕಟ್ಟಡ ಕಳೆಗುಂದಿದರೂ ಆ ಸಭೆ ಸಂಪುಷ್ಟಕ್ಕೆ ಬಂದಿದ್ದರೂ ಕಂಚಿ ಸುಬ್ಬರಾಯರ ಅದ್ಭುತ ಕಾಯಕದ ನೆನಪು ಮಾತ್ರ ಜನರ ಹೃದಯದಿಂದ ಇನ್ನೂ ಅಳಿಸಿಲ್ಲ.

೧೮೪೦ನೇ ಇಸ್ವಿಯಲ್ಲಿ ಸೇಲಮ್‌ದಲ್ಲಿ ಜನಿಸಿದ ಸುಬ್ಬರಾಯರು ೧೬ನೇ ವಯಸ್ಸಿನಲ್ಲಿ ೧೨ ರೂಪಾಯಿ ಸಂಬಳದ ಸರಕಾರಿ ನೌಕರಿ ಸೇರಿದರು. ಮುಂದೆ ಅವರು ತಮ್ಮ ಕರ್ತೃತ್ವಶಕ್ತಿಯಿಂದಲೇ ತಹಶೀಲದಾರರಾಗಿ ಕೊನೆಗೆ ಡೆ|| ಕಲೆಕ್ಟರರಾಗಿ ಕೆಲಸ ಮಾಡಿ ನಿವೃತ್ತರಾದರು. ಕಾಳಹಸ್ತಿ ಸಂಸ್ಥಾನದಲ್ಲಿ ಇವರು ಕೆಲವು ದಿನ ದಿವಾಣರಾಗಿದ್ದರು.

ಸುಬ್ಬರಾಯರು ಮಾಡಿದ ಮಹತ್ಕಾರ್ಯವೆಂದರೆ ಕೌಕೂರು ರಾಮಚಂದ್ರ ರಾಯರೇ ಮುಂತಾದ ಗೃಹಸ್ಥರಿಂದ ಕೂಡಿ ಮಹಾ ಪ್ರಯತ್ನ ಮಾಡಿ ವೇದಾಂತ ವಿದ್ಯೆಯ ಪುನರುಜ್ಜೀವನಕ್ಕಾಗಿ ತಿರುಚಾನೂರಿನಲ್ಲಿ ೧೮೭೮ನೇ ಇಸ್ವಿಯಲ್ಲಿ ಮಧ್ವ ಸಿದ್ಧಾಂತ ಉನ್ನಾಹಿನೀ ಸಭೆಯನ್ನು ಸ್ಥಾಪನೆ ಮಾಡಿದ್ದು. ರಾಜಾಶ್ರಯ ವಿಲ್ಲದೆ ಜನತೆಯ ಬೆಂಬಲದಿಂದಲೇ ವಿಶಿಷ್ಟ ರೀತಿಯ ಸಭೆಯನ್ನು ಪ್ರಾರಂಭಿಸಿ ಆದರ ಮುಖಾಂತರ ವಿದ್ವಾಂಸರಿಗೂ ವಿದ್ಯಾರ್ಥಿಗಳಿಗೂ ದಾನದಕ್ಷಿಣೆಯಿತ್ತು ಶಾಸ್ತ್ರಾಧ್ಯಯನ ಕ್ರಮಕ್ಕೆ ಹೊಸ ಚಾಲನೆಯನ್ನಿತ್ತ ಮಾಧ್ವ ಮುಖಂಡರೆಂದರೆ ಶ್ರೀ ಸುಬ್ಬರಾಯರೇ.

ಈ ಸಭೆಗೆ ಎಲ್ಲ ಮಠದ ಪಂಡಿತರೂ ಪೀಠಾಧಿಪತಿಗಳೂ ಛಾತ್ರರರೂ ಲೌಕಿಕ ಗೃಹಸ್ಥರೂ ಉತ್ಸಾಹದಿಂದ ಬಂದು ಅಹಮಹಮಿಕೆಯಿಂದ ಭಾಗವಹಿಸಿ ಪರೀಕ್ಷೆ ಇತ್ತು ವಾಕ್ಯಾರ್ಥ ಮಾಡಿ ಉಪನ್ಯಾಸ ಹೇಳಿ ಪ್ರಬಂಧಗಳನ್ನು ಓದಿ ಗ್ರಂಥಗಳನ್ನು ಪ್ರಕಟಿಸಿ ಧಾರ್ಮಿಕ ಸಮಸ್ಯೆಗಳಿಗೆಲ್ಲ ವಿದ್ವದ್ವೃಂದ ಚರ್ಚೆಯ ಮೂಲಕ ಸೂಕ್ತ ಪರಿಹಾರವನ್ನು ಕಂಡುಹಿಡಿದು ಧರ್ಮಾಭಿವೃದ್ಧಿಗೂ ಅಖಿಲಭಾರತ ಮಾಧ್ವರ ಸಂಘಟನೆಗೂ ಮುಖ್ಯ ಕಾರಣವಾಗಿದ್ದಿತು.

ಮಠತ್ರಯದ ಮಾಧ್ವರೆಲ್ಲರೂ ಈ ಸಭೆಯಿಂದಾಗಿ ಒಂದು ವೇದಿಕೆಯ ಮೇಲೆ ಸ್ನೇಹಸಹಕಾರಭಾವದಿಂದ ಕೂಡಿ ಪರಸ್ಪರ ವಿಚಾರವಿನಿಮಯ ಮಾಡಿ ಸನಾತನ ಧರ್ಮ ಹಾಗೂ ಸಿದ್ಧಾಂತ ಪ್ರಚಾರ ಕಾರ್ಯಗಳಿಗಾಗಿ ಒಮ್ಮುಖದಿಂದ ಪ್ರಯತ್ನ ಮಾಡುವ ಅನುವು ಅವಕಾಶಗಳು ದೊರೆಯುತ್ತಿದ್ದವು.

ಸಾವಿರಾರು ಜನ ಮಾಧ್ವ ವಿದ್ಯಾರ್ಥಿಗಳು ನೂರಾರು ಜನ ಪಂಡಿತರು ಹತ್ತೆಂಟು ಸಾವಿರ ಲೌಕಿಕ ಗೃಹಸ್ಥರೂ ಪ್ರತಿವರ್ಷವೂ ಶ್ರೀನಿವಾಸ ದೇವರ ಪಾದೋಪಾಂತ ಪ್ರದೇಶವಾದ ಪದ್ಮಾವತಿಯಲ್ಲಿ ಸೇರಿ ಒಕ್ಕೊರಲಿನಿಂದ ದ್ವೈತಮತದ ಜಯಘೋಷ ವನ್ನು ಉಗ್ಗಡಿಸಿ, ಮಧ್ವಮತದ ಡಿಂಡಿಮವನ್ನು ಬಾರಿಸುವ ದೃಶ್ಯವು ಅತ್ಯಪೂರ್ವ ವಾಗಿದ್ದಿತು. ಮಠಮಠಗಳ ಕಲಾಪದಿಂದ ಈ ಸಭೆಯು ತನ್ನ ಪೂರ್ವ ವೈಭವವನ್ನು ಕಳೆದುಕೊಂಡಿದೆ. ಕಂಚಿ ಸುಬ್ಬರಾಯರು ಸ್ಥಾಪಿಸಿದ ಮಧ್ವಸಿದ್ಧಾಂತ ಉನ್ನಾಹಿನೀ ಸಭೆಯು ಈಗಲೂ ಪ್ರತಿವರ್ಷ ನಡೆಯುತ್ತಲಿದೆ. ಆ ಸಭೆ ಈ ಕಟ್ಟಡ ಇರುವವರೆಗೆ ಸುಬ್ಬರಾಯರ ಹೆಸರು ಕೂಡ ಅಜರಾಮರವಾಗಿ ಉಳಿಯುವದರಲ್ಲಿ ಸಂದೇಹವಿಲ್ಲ.

## ೫೪ ಕಮಲಾಪುರ ಭೀಮರಾಯರು

ಧಾರವಾಡದ ಕಮಲಾಪುರ ಭೀಮರಾಯರು ಲೌಕಿಕದಲ್ಲಿ ಸರಕಾರದ ಉಚ್ಚ ಹುದ್ದೆಯಲ್ಲಿದ್ದರೂ ಒಳ್ಳೆ ಕರ್ಮಠರಾದ ಮಾಧ್ವ ಮುಂದಾಳುಗಳೂ ಆಗಿದ್ದರು. ೧೮೧೬ನೇ ಇಸ್ವಿಯಲ್ಲಿಯೇ ತಮ್ಮ ಅಣ್ಣ ಶ್ರೀನಿವಾಸರಾಯರೊಂದಿಗೆ ಕುಸನೂರ ವಿಷ್ಣು ತೀರ್ಥಾ ಚಾರ್ಯರಲ್ಲಿ ಭಾಷ್ಯಾದಿ ಗ್ರಂಥಗಳನ್ನು ಶಾಂತಿ ಹಾಕಿ ಅಧ್ಯಯನ ಮಾಡಿದರು.

೧೮೧೭ನೇ ಶಕ ಸಂವತ್ಸರದಲ್ಲಿ ಭೀಮರಾಯರು ಮಧ್ವ ಸಿದ್ಧಾಂತ ಪ್ರಸಾರದ ಉದ್ದೇಶದಿಂದ ಧಾರವಾಡದಲ್ಲಿ ಶ್ರೀಮನ್ಮಧ್ವ ಸಿದ್ಧಾಂತ ಉತ್ತೇಜಕ ಸಭೆಯನ್ನೂ ಅದರಂಗವಾಗಿ ಶ್ರೀಸತ್ಯಧೀರ ಪಾಠಶಾಲೆಯನ್ನೂ ಪ್ರಾರಂಭಿಸಿದರು. ಈ ಸಭೆ ಮತ್ತು ಪಾಠಶಾಲೆಗಳು ನಿರಂತರವಾಗಿ ನಡೆಯಬೇಕು ಮತ್ತು ಸಭೆಯಲ್ಲಿ ಪರೀಕ್ಷೆ ಕೊಟ್ಟ ವಿದ್ಯಾರ್ಥಿಗಳಿಗೂ, ಧರ್ಮಾಧಿಕಾರಿಗಳಿಗೂ ದಕ್ಷಿಣೆ ಕೊಡಲು ಅನುಕೂಲವಾಗಬೇಕು ಎಂಬ ಉದ್ದೇಶದಿಂದ ತಮ್ಮ ಸ್ವಂತ ಹೊಲಗಳನ್ನು ಅದಕ್ಕೆ ದಾನವಿತ್ತರು. ಆ ಸಭೆ ಮತ್ತು ಪಾಠಶಾಲೆ ಈಗಲೂ ನಡೆಯುತ್ತಲಿವೆ.

ಸರ್ವಜ್ಞಾಚಾರ್ಯರ ಶಾಸ್ತ್ರದಲ್ಲಿ ನಿರತಿಶಯ ಆಸ್ಥೆ, ಆದರ, ಅಭಿರುಚಿಯುಳ್ಳ ಭೀಮರಾಯರು ಶ್ರೀ ಅಗ್ನಿಹೋತ್ರಿ ತಮ್ಮಣ್ಣಾಚಾರ್ಯರೆಂಬ ಪಂಡಿತರನ್ನು ಅಧ್ಯಾಪಕರೆಂದು ನೇಮಿಸಿ ಅವರಲ್ಲಿ ಪ್ರತಿ ದಿನ ತಾವೇ ಸ್ವಂತ ಬಂದು ದ್ವೈತ ವೇದಾಂತ ಗ್ರಂಥಗಳನ್ನು ಅಧ್ಯಯನ ಮಾಡುತ್ತಿದ್ದರು.

ಭೀಮರಾಯರು ಬರೆದ ಶ್ರೀಮದ್ಬ್ರಹ್ಮಸೂತ್ರ ರಚನಾಪ್ರಕಾಶವೆಂಬ ಗ್ರಂಥವು ಅವರ ಮಧ್ವಶಾಸ್ತ್ರಪಾಂಡಿತ್ಯ ಹಾಗೂ ಪರಿಶ್ರಮಗಳನ್ನು ಎತ್ತಿ ತೋರಿಸುತ್ತವೆ. ಉತ್ತರಾದಿ ಮಠದ ಗುರುಪರಂಪರೆಯ ಸಾಗ್ರ ಸಮಗ್ರ ಇತಿಹಾಸವನ್ನು ಬಿತ್ತರಿಸುವ ' ಸತ್ಕಥಾ ' ಎಂಬ ಪುಸ್ತಕವನ್ನು ಬರೆದು ಅದರಲ್ಲಿ ಉತ್ತರಾದಿ ಮಠತ ಶ್ರೀಪಾದಂಗಳವರ ಚರಿತ್ರೆಗಳಲ್ಲದೆ ಬೇರೆ ಮಠಗಳ ವಾಗ್ವಿಭೂತಿಗಳ ಚಾರುಚರಿತೆಗಳನ್ನು ಕೊಡಲಾಗಿದೆ. ಮಾಧ್ವಗ್ರಂಥಗಳ ಟೀಕೆ, ಟಿಪ್ಪಣಿಕಾರರ ಪರಿಚಯವನ್ನೂ ಮಾಡಿಕೊಡಲಾಗಿದೆ. ಇವಲ್ಲದೆ ಭೀಮರಾಯರು ಗೀತಾಉಪನ್ಯಾಸ, ಷಟ್‌ಶಾಸ್ತ್ರಸಾರ ಎಂಬ ಪುಸ್ತಕಗಳನ್ನೂ ಬರೆದು ಪ್ರಕಟಿಸಿರುವರು.

ಧಾರವಾಡದ ಮುದಿ ಹನುಮಂತದೇವರ ಗುಡಿಯ ಜೀರ್ಣೋದ್ಧಾರವೇ ಮೊದಲಾದ ಅನೇಕ ಧಾರ್ಮಿಕ ಕಾರ್ಯಗಳನ್ನು ಮಾಡಿದರು. ಇವರು ೧೯೧೬ರಲ್ಲಿ ವೈಕುಂಠವಾಸಿಗಳಾದರು.

## ೫೪ ರಾಮಕೃಷ್ಣಪ್ಪನವರು ಬೆಂಗಳೂರು

ಬೆಂಗಳೂರ ತಾಲೂಕಿನ ಐವರು ಕಂಡಪುರ ಎಂಬ ಗ್ರಾಮದ ಶ್ರೀರಾಮಕೃಷ್ಣಪ್ಪನವರಿಗೆ ಬಾಲ್ಯದಲ್ಲಿ ವೆಂಕಟರಾಮಭಟ್ಟ ಎಂಬವರಲ್ಲಿ ವೇದಾಧ್ಯಯನವಾಯಿತು.

ತಮ್ಮ ಪಾಲಿಗೆ ಬಂದ ಮನೆ, ಹೊಲ, ಗದ್ದೆ ಮುಂತಾದ ಸರ್ವಸ್ವವನ್ನೂ ಗುರುದಕ್ಷಿಣೆಯಾಗಿ ಸಮರ್ಪಿಸಿ ಉದಾರಮನಸ್ಕರಾದ ಶ್ರೀರಾಮಕೃಷ್ಣಪ್ಪನವರು ಉದ್ಯೋಗಕ್ಕಾಗಿ ಬೆಂಗಳೂರಿಗೆ ಬಂದರು. ಬಳಿಕ ಬೆಂಗಳೂರು ಮೈಸೂರಿನಲ್ಲಿ ಮಂಡಿ ಸಾಹುಕಾರರ ಬಳಿ ವ್ಯಾಪಾರ ವ್ಯವಹಾರಗಳಲ್ಲಿ ಪಾಲುಗಾರರಾಗಿ ವ್ಯಾಪಾರ ಉದ್ಯೋಗ ಮಾಡಿ

ಅಪಾರ ಅನುಭವವನ್ನು ಗಳಿಸಿದರು. ಅನಂತರ ಸ್ವಂತ ಅನುಭವದ ಬಂಡವಳದ ಮೇಲಿಂದ ರೇಶ್ಮೆ, ಜವಳಿ, ಮಂಡಿ ವ್ಯಾಪಾರಗಳನ್ನೂ ಲೇವಾದೇವಿ ವ್ಯವಹಾರವನ್ನೂ ದಕ್ಷತೆಯಿಂದ ಮಾಡಿ ವಿಪುಲವಾಗಿ ಸ್ಥಿರ–ಚರ ಆಸ್ತಿಗಳನ್ನು ಸಂಪಾದಿಸಿದರು.

ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಹೊಲ, ಗದ್ದೆ, ಮನೆಗಳನ್ನೂ, ನಗದು, ನಾಣ್ಯ ಹಣವನ್ನೂ ವಿಶೇಷವಾಗಿ ಗಳಿಸಿದರು. ತಾವು ಸಂಪಾದಿಸಿದ್ದನ್ನೆಲ್ಲ ಬರಿ ತಮ್ಮ ಸ್ವಾರ್ಥಕ್ಕಾಗಿ ಇಟ್ಟುಕೊಳ್ಳದೆ ತಮ್ಮ ವ್ಯಾಪಾರದ ಲಾಭಾಂಶದ ಬಹುಭಾಗವನ್ನು ದೇವ, ಬ್ರಾಹ್ಮಣರ ಸಲುವಾಗಿಯೂ, ವಿದ್ಯಾರ್ಥಿಗಳ ಸಲುವಾಗಿಯೂ ಚಿಕ್ಕಪೇಟೆ ಗೋಪಾಲಕೃಷ್ಣ ದೇವಸ್ಥಾನದಲ್ಲಿ ದೇವರ ನಿತ್ಯಸೇವೆ, ವಿಶೇಷ ಉತ್ಸವ ಸಮಾರಂಭ ಗಳಲ್ಲಿ ದೇವರಿಗೆ ಇಡಿಸಲು ವಜ್ರದಂಗಿ, ಕಿರೀಟ ಮುಂತಾದ ಆಭರಣಗಳನ್ನು ಮಾಡಿಸಿ ಇಟ್ಟು, ನಿರಂತರ, ಅನ್ನದಾನ, ವಸ್ತ್ರದಾನ ಮುಂತಾದವುಗಳು ಅವ್ಯಾಹತವಾಗಿ ನಡೆ ಯುವಂತೆ ಏರ್ಪಾಡು ಮಾಡಿದ್ದಾರೆ.

ಅವರು ತಮ್ಮ ಮೃತ್ಯುಪತ್ರದಲ್ಲಿ ತಮ್ಮ ಕೆಲವು ಮನೆ, ಅಂಗಡಿ, ಗಾಡಿಖಾನೆ ಗಳನ್ನು ಸಂಸ್ಕೃತ ಪಾಠಶಾಲಾ, ವಿದ್ಯಾರ್ಥಿವೇತನ, ವೇದಾಧ್ಯಯನ, ಪಾಠಪ್ರವಚನ ಮುಂತಾದ ಜ್ಞಾನಪ್ರಸಾರ ಕಾರ್ಯಕ್ಕಾಗಿಯೇ ಮೀಸಲಾಗಿರಿಸಬೇಕೆಂದು ಸ್ಪಷ್ಟವಾಗಿ ನಮೂದಿಸಿದ ಮುಜರಾಯಿ ಇಲಾಖೆಯವರು ಆ ಹಣದಿಂದ ತಮ್ಮ ಉದ್ದೇಶಗಳಿಗೆ ಅನುಗುಣವಾಗಿ ಪಾಠಶಾಲಾದಿ ವ್ಯವಸ್ಥೆಯನ್ನು ಮಾಡಬೇಕೆಂದು ಬರೆದಿಟ್ಟಿದ್ದಾರೆ.

ಅವರು ೧೯೩೦ನೇ ಇಸ್ವಿಯಲ್ಲಿ ವೈಕುಂಠವಾಸಿಗಳಾದ ಬಳಿಕ ಮುಜರಾಯಿ ಇಲಾಖೆಯವರು ಅವರು ಜ್ಞಾನಪ್ರಸಾರಕ್ಕಾಗಿ ಕೊಟ್ಟ ಸ್ಥಿರಾಸ್ತಿಗಳನ್ನೆಲ್ಲ ಹರಾಜು ಮಾಡಿ ಬಂದ ಒಂದು ಲಕ್ಷ ಅರವತ್ತುಸಾವಿರ ರೂಪಾಯಿಗಳ ನಿಧಿಯಿಂದ ರಾಮ ಕೃಷ್ಣಪ್ಪ ದ್ವೈತವೇದಾಂತ ಪಾಠಶಾಲಾ ಎಂಬ ಸಂಸ್ಥೆಯನ್ನು ಸ್ಥಾಪಿಸಿ ನಡೆಸಿದ್ದಾರೆ. ಈ ಸಂಘಕ್ಕೆ ಮಾಧ್ವಭೂಷಣ, ಸಚ್ಛಾಸ್ತ್ರಪ್ರವಚನರತ್ನ ಬಿ. ವೆಂಕಟೇಶಾಚಾರ್ಯರು ಅಧ್ಯಕ್ಷರಾಗಿದ್ದು ಬೇರೆ ಬೇರೆ ವಿದ್ವಾಂಸರಿಂದ ಸಚ್ಛಾಸ್ತ್ರಗ್ರಂಥಗಳ ಪಾಠ ಪ್ರವಚನ, ಉಪನ್ಯಾಸಮಾಲಾ, ಧರ್ಮೋಪನಯನ ಗ್ರಂಥಪ್ರಕಾಶನ ಮುಂತಾದ ಕಾರ್ಯಗಳು ನಡೆಯಿಸಲ್ಪಡುತ್ತವೆ. ಶಾಸ್ತ್ರಾಧ್ಯಯನ ಮಾಡತಕ್ಕ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವೂ ಕೊಡಲ್ಪಡುವದು.

### ೫೫ ದಿವಾಣ ಬಾಬುರಾವ

ಪೂರ್ಣಯ್ಯನವರು ಮೈಸೂರು ದಿವಾಣಗಿರಿಯಿಂದ ವಿಶ್ರಾಂತರಾದ ಬಳಿಕ ಇವರು ಮುಮ್ಮಡಿ ಕೃಷ್ಣರಾಜರ ದಿವಾಣರಾಗಿ ಕೆಲಸ ಮಾಡಿದರು. ಪೂರ್ಣಯ್ಯ ನವರಂತೆ ಇವರಾದರೂ ಎಲ್ಲ ಮಾಧ್ವಮಠಮಾನ್ಯಗಳಿಗೆ ದಾನಧರ್ಮಗಳನ್ನು ಮಾಡಿ ಸಕಲ ವಿಧವಾದ ಸಹಾಯ ಸಹಕಾರಗಳನ್ನು ನೀಡಿದರು.

ಉತ್ತರಾದಿ ಮಠದ ದೇವರ ಆಭರಣಗಳು ಹಿಂದೊಮ್ಮೆ ಅಗ್ನಿಸ್ವಾಹಾ ಆದಾಗ ಮಹಾರಾಜರ ಅಪ್ಪಣೆಯಂತೆ ಸ್ವತಃ ದಿವಾಣ ಬಾಬುರಾಯರೇ ಅಕ್ಕಸಾಲಿಗರನ್ನು ಕರೆಯಿಸಿ ಹಗಲು ರಾತ್ರಿ ಕೆಲಸ ಮಾಡಿಸಿ ಎಂಟೇ ದಿನಗಳಲ್ಲಿ ಸರ್ವಾಭರಣಗಳನ್ನೂ ಸಿದ್ಧಪಡಿಸಿ ಶ್ರೀಗಳವರಿಗೆ ದೇವರ ಪೂಜೆಗಾಗಿ ಸಮರ್ಪಿಸಿದರು.

## ೫೬ ಕರ್ಪೂರ ಶ್ರೀನಿವಾಸರಾಯರು



ಈ ಮನೆತನದ ಹಿರಿಯರು ತಿರುಪತಿಯ ವೆಂಕಟೇಶದೇವರ ಎದುರಿಗೆ ದೀಪೋತ್ಸವವನ್ನು ಮಾಡಿ ಮಣಗಟ್ಲೆ ಕರ್ಪೂರದ ಗಡ್ಡೆಗಳನ್ನು ಉರಿಸುತ್ತಿದ್ದುದರಿಂದ ಇವರಿಗೆ ಕರ್ಪೂರದವರು ಎಂಬ ಅಡ್ಡ ಹೆಸರು ಬಂದಿತು.

ಈ ಮನೆತನದ ಶ್ರೀ ಶ್ರೀನಿವಾಸರಾಯರು ಬೆಂಗಳೂರು, ಮೈಸೂರುಗಳಲ್ಲಿ ಬಾಲ್ಯ ವಿದ್ಯಾಭ್ಯಾಸಾದಿಗಳನ್ನು ಮುಗಿಸಿ ಸರಕಾರದ ವಿದ್ಯಾರ್ಥಿವೇತನವನ್ನು ಪಡೆದು ಪುಣೆಯಲ್ಲಿ ವ್ಯಾಸಂಗ ಮಾಡಿ ಇಂಜನಿಯರರಾದರು.

ಬೆಳಗಾವಿ, ನಾಸಿಕ, ಕರಾಚಿ, ಸಿಂಧಹೈದರಾಬಾದ ಮುಂತಾದ ಕಡೆಗಳಲ್ಲಿ ಸರಕಾರಿ ಉದ್ಯೋಗದಲ್ಲಿದ್ದು ಅನೇಕ ದೊಡ್ಡ ದೊಡ್ಡ ಕೆರೆ, ಕಾಲುವೆ, ಅಣೆಕಟ್ಟು, ಸೇತುವೆ ಹಾಗೂ ಕಟ್ಟಡಗಳನ್ನು ಕಟ್ಟಿಸಿ ಸಮರ್ಥ ಇಂಜನೀಯರರೆಂದು ಹೆಸರಾದರು.

ಮುಂದೆ ನಾಲ್ವಡಿ ಕೃಷ್ಣರಾಜರ ಆಹ್ವಾನದಂತೆ ಮೈಸೂರಿಗೆ ಬಂದು ಚೀಫ ಇಂಜನಿಯರ ಆಗಿ ಕನ್ನಂಬಾಡಿ ಆಣೆಕಟ್ಟಿನ ಕಾರ್ಯ ಪೂರ್ತಿಗೊಳಿಸಿದರು. ಮದ್ರಾಸ ಸರಕಾರದಿಂದ ಆಹ್ವಾನಿತರಾಗಿ ಕಾವೇರಿ ನದಿ ನೀರಿನ ತಂಟೆಯಲ್ಲಿ ಮಧ್ಯಸ್ಥರಾಗಿ ಬ್ರಿಟಿಶ್ ಸರಕಾರದ ಹಾಗೂ ಮೈಸೂರು ಮಹಾರಾಜರ ವಿಶೇಷ ಮೆಚ್ಚುಗೆಗೆ ಪಾತ್ರರಾದರು. ಮಹಾರಾಜರು ಶ್ರೀನಿವಾಸರಾಯರಿಗೆ 'ರಾಜಸಭಾಭೂಷಣ' ಎಂಬ

ಪದವಿಯನ್ನೂ ಕನ್ನಂಬಾಡಿಯಲ್ಲಿ ಅವರು ಮಾಡಿದ ಕುಶಲ ಕಾರ್ಯಕ್ಕಾಗಿ ೨೦ ಸಾವಿರ ರೂಪಾಯಿಗಳನ್ನೂ ಕೊಟ್ಟು ಗೌರವಿಸಿದರು.

ಸಂಸ್ಕೃತ ಹಾಗೂ ದ್ವೈತ ವೇದಾಂತಗಳನ್ನು ಮನೆಯಲ್ಲಿ ತಮ್ಮ ೩ನೇ ವಯಸ್ಸಿನಿಂದ ಪ್ರಾರಂಭಿಸಿ ಕೇಲವೇ ವರ್ಷಗಳಲ್ಲಿ ಪರಿಣತೆಯನ್ನು ಪಡೆದರು. ಸಂಸ್ಕೃತ ಓದುವ ವಿದ್ಯಾರ್ಥಿಗಳಿಗೆ ಶ್ರೀನಿವಾಸರಾಯರು ವಿಶೇಷವಾಗಿ ಪುರಸ್ಕಾರ ನೀಡುತ್ತಿದ್ದರು. ಆಂಗ್ಲ ವಿದ್ಯಾಭ್ಯಾಸ ಮಾಡುವ ಛಾತ್ರರಿಗೂ ಪ್ರತಿ ತಿಂಗಳವೂ ತಮ್ಮ ಸಂಬಳದಲ್ಲಿ ೨೦೦–೩೦೦ ರೂ. ಗಳನ್ನು ತಗೆದಿರಿಸಿ ವಿದ್ಯಾರ್ಥಿವೇತನವನ್ನು ಕೊಡುತ್ತಿದ್ದರು.

ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯಪರಿಷನ್ಮಂದಿರ, ಆಯುರ್ವೇದ ಸಮ್ಮೇಲನ, ಕೀರ್ತನ ಸಮ್ಮೇಲನ, ಆರ್ಯಧರ್ಮಬೋಧನೀಸಭಾ, ಮಧ್ವ ಸಿದ್ಧಾಂತ ಉನ್ನಾಹಿನಿ ಸಭಾ, ಉಡುಪಿಯ ಮಧ್ವಮುನಿ ಸೇವಾಸಂಘ ಮುಂತಾದ ಸಾಹಿತ್ಯಕ, ಸಾಮಾಜಿಕ, ಧಾರ್ಮಿಕ, ತಾತ್ವಿಕ. ಸಂಘ ಸಂಸ್ಥೆಗಳಿಗೆ ಪ್ರವರ್ತಕರೂ, ಪಾಲಕರೂ, ಪೋಷಕರೂ, ಅಧ್ಯಕ್ಷರೂ, ನಿರ್ವಾಹಕರೂ, ಸದಸ್ಯರೂ ಆಗಿ ಅಭಿವೃದ್ಧಿಗೆ ಕಾರಣರಾದರು.

## ೫೭. ದಿ. ಧರ್ಮಭೂಷಣ ಕೆ. ಸೀತಾರಾಮರಾಯರು



ಈ ಕಲಿಯುಗದಲ್ಲಿ ಕರ್ಣನಂತೆ ದಾನ ಮಾಡಿದ ಕೊಡುಗೈ ಮಾಧ್ವರೆಂದರೆ ದಿ. ಸೀತಾರಾಮರಾಯರು. ಪ್ರಲ್ಹಾದನಂತೆ ವಿಷ್ಣುಭಕ್ತಿಯನ್ನು ಮಾಡಿದವರೆಂದರೆ ಶ್ರೀ ಸೀತಾರಾಮರಾಯರು. ಮುಮ್ಮಡಿ ಕೃಷ್ಣರಾಜ ಒಡೆಯರಂತೆ ಎಲ್ಲ ಪೀಠಾಧಿಪತಿಗಳಿಗೆ ಉದಾರಾಶ್ರಯವಿತ್ತವರೆಂದರೆ ಶ್ರೀ ಸೀತಾರಾಮರಾಯರು. ಪುಂಡಲೀಕ, ಶ್ರವಣ ಕುಮಾರರಂತೆ ಮಾತಾಪಿತೃಗಳ ಸೇವೆ ಮಾಡಿದವರೆಂದರೆ ಶ್ರೀ ಸೀತಾರಾಮರಾಯರು.

ಶ್ರೀ ಶ್ರೀಸತ್ಯಧ್ಯಾನರಂತೆ ವಿದ್ವಾಂಸರಿಗೂ ರಜತಪಾತ್ರ, ಧನಕನಕ, ದಾನದಕ್ಷಿಣೆ ಗಳನ್ನಿತ್ತು ಸತ್ಕರಿಸಿದವರೆಂದರೆ ಶ್ರೀ ಸೀತಾರಾಮರಾಯರು. ಭೋಜರಾಜ, ವಿಕ್ರಮ ರಾಜರಂತೆ ಸಂಸ್ಕೃತ ವಿದ್ಯೆಗೆ ಪ್ರೋತ್ಸಾಹನೆಯನ್ನಿತ್ತು ಪಂಡಿತ ಪೋಷಣೆ ಮಾಡಿದ ಪುಣ್ಯ ಕೀರ್ತಿಗಳೆಂದರೆ ಶ್ರೀ ಸೀತಾರಾಮರಾಯರು. ಶ್ರೀ ಶ್ರೀ ಪೇಜಾವರ ಶ್ರೀಗಳವರು ಎಲ್ಲ ಮಠಾಧೀಶರ ಸಹಕಾರದಿಂದ ಪ್ರಾರಂಭಿಸಿದ ಸಕಲ ಮಾಧ್ವರ ಏಕೈಕ ಪ್ರಾತಿನಿಧಿಕ ಸಂಸ್ಥೆಯಾದ ಅ.ಭಾ.ಮಾ.ಮ. ಮಂಡಳಕ್ಕೆ ಅತ್ಯಧಿಕ ಸಹಾಯ ಸಲ್ಲಿಸಿದ ದಾನವೀರ ರೆಂದರೆ ಶ್ರೀ ಸೀತಾರಾಮರಾಯರು.

ಶ್ರೀವಾದಿರಾಜರ ಪರ್ಯಾಯಕ್ಕೆ ವಿಜಯನಗರದ ಕೃಷ್ಣದೇವರಾಯನಂತೆ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರ ಪರ್ಯಾಯಕ್ಕೆ ಸರ್ವತೋಧಿಕ ಸಹಾಯ ವನ್ನು ಸಲ್ಲಿಸಿದ ಉದಾರಿಗಳೆಂದರೆ ಶ್ರೀ ಸೀತಾರಾಮರಾಯರು. ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ಮಧ್ವಸಿದ್ಧಾಂತ ಸಂವರ್ಧಿನೀ ಸಭೆಗೆ ಮುಕ್ತ ಹಸ್ತದಿಂದ ಸಹಾಯ ಜನರಿಂದಲೂ ಮಾಡಿಸಿ ಅದು ಚಿರಕಾಲ ನಡೆಯುಂತೆ ಮಾಡಿದ ಧೀರ ದಾತೃಗಳೆಂದರೆ ಶ್ರೀ ಸೀತಾರಾಮರಾಯರು.

"ಕಿಂಬಹುನಾ ? "

ಮಾಧ್ವ ಸಮಾಜಕ್ಕಾಗಿ ಸಿದ್ಧಾಂತ ಪ್ರಸಾರಕ್ಕಾಗಿ ಸತ್ಕಾರ್ಯಗಳನ್ನು ಮಾಡುವ ಸ್ವಾಮಿಗಳಿಗಾಗಿ, ಪಂಡಿತರಿಗಾಗಿ, ದಾಸ ಸಾಹಿತ್ಯ ಪ್ರಚಾರಕ್ಕಾಗಿ, ಶೈಕ್ಷ ಕಣೆ ಅಭಿವೃದ್ಧಿಗಾಗಿ ಸರ್ವಸ್ವಾರ್ಪಣವನ್ನು ಮಾಡಲು ಸಿದ್ಧರಿದ್ದ ಇತ್ತೀಚಿನ ಅತ್ಯುದಾರ ಮಾಧ್ವ ಮುಂದಾಳುಗಳೆಂದರೆ ಶ್ರೀಭಕ್ತ ಗೋವಿಂದದಾಸರ ಚಿರಂಜೀವರಾದ ಶ್ರೀ ಕುತ್ತೆತೂರ ಸೀತಾರಾಮರಾಯರು ಎಂದು ಹೇಳಿದರೆ ಯಾರಿಗೂ ಅತ್ಯುಕ್ತಿ ಎನಿಸಲಿಕ್ಕಿಲ್ಲ.

೧೮೯೯ನೇ ಇಸ್ವಿಯಲ್ಲಿ ಮಂಗಳೂರಿನ ಹತ್ತಿರದ ಕುತ್ತೆತ್ತೂರಿನಲ್ಲಿ ಭಕ್ತ ಗೋವಿಂದದಾಸ ಹಾಗೂ ಶತಾಯುಷಿ ಗಂಗಾಬಾಯಿ ದಂಪತಿಗಳಿಂದ ಮೂರನೆಯ ಸತ್ಪುತ್ರರಾಗಿ ಜನಿಸಿದ ಶ್ರೀ ಸೀತಾರಾಮರಾಯರು ಮೈಸೂರಿನಲ್ಲಿ ಎಫ್. ಎ. ದ ವರೆಗೆ ಓದಿ ಸ್ವಯಂ ಕರ್ತೃತ್ವಶಕ್ತಿಯಿಂದ ಮುಂದೆ ಬಂದರು. ಮೈಸೂರಿನಲ್ಲಿ ತಮ್ಮ ಬಂಧು ಗಳೊಂದಿಗೆ ಒಂದು ಹೋಟೆಲ್ಲನ್ನು ಪ್ರಾರಂಭಿಸಿ ಮುಂದೆ ಮದ್ರಾಸಕ್ಕೆ ಬಂದು ದಕ್ಷಿಣ ಭಾರತದ ಪ್ರಮುಖ ಸ್ಥಳಗಳಲ್ಲೆಲ್ಲ ತಮ್ಮ ಉದ್ಯೋಗವನ್ನು ಪ್ರಾರಂಭಿಸಿದರು.

ಲೌಕಿಕಕ್ಕಾಗಿ ತಾವು ಕೈಕೊಂಡ ಉದ್ಯೋಗದಲ್ಲಿ ಒಳ್ಳೆಯ ಯಶಸ್ಸನ್ನೂ, ಸಂಪದವನ್ನೂ ಸಿದ್ಧಿಯನ್ನೂ ಸಮೃದ್ಧಿಯನ್ನೂ ಪಡೆದಿದ್ದರೂ ಶ್ರೀ ಸೀತಾರಾಮ

ರಾಯರಿಗೆ ಅದೇ ಮುಖ್ಯ ಗುರಿಯಾಗಿರಲಿಲ್ಲ. ವ್ಯವಹಾರದಿಂದ ಹಣಗಳಿಸಿ ಅದರಿಂದ ಧರ್ಮಕಾರ್ಯಗಳನ್ನು ಮಾಡಬೇಕೆಂಬುದೇ ಮುಖ್ಯಗುರಿಯಾಗಿರಲಿಲ್ಲ. ವ್ಯವಹಾರ ದಿಂದ ಹಣ ಗಳಿಸಿ ಅದರಿಂದ ಧರ್ಮಕಾರ್ಯಗಳನ್ನು ಮಾಡಬೇಕೆಂಬುದೇ ಅವರ ಹಿರಿಯ ಹಂಬಲವಾಗಿದ್ದಿತು. ಅದಕ್ಕಾಗಿ ೧೯೩೦ರಲ್ಲಿ ದಾಸ ಪ್ರಸಾದ ಎಂಬ ಭವ್ಯಭವನ ವನ್ನು ನಿರ್ಮಿಸಿ ಅಲ್ಲಿ ಎಲ್ಲ ಪೀಠಾಧಿಪತಿಗಳನ್ನೂ ಪಂಡಿತರನ್ನೂ ಬರಮಾಡಿಕೊಂಡು ಶ್ರೀಭಕ್ತಗೋವಿಂದದಾಸರ ಸಂಪ್ರದಾಯದಂತೆ ಭಜನಾಪದ್ಧತಿಯನ್ನು ಪ್ರಾರಂಭಿಸಿದರು. ವ್ಯಾಪಕ ಪ್ರಮಾಣದಲ್ಲಿ ಶ್ರೀಮಧ್ವನವಮಿ ಉತ್ಸವವನ್ನು ಪ್ರಾರಂಭಿಸಿದರು. ತಮ್ಮ ತಾಯಿ ಗಂಗಾಬಾಯಿಯವರ ಹೆಸರಿನಿಂದ ಧರ್ಮಪ್ರಕಾಶ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅನೇಕ ಧರ್ಮಕಾರ್ಯಗಳನ್ನು ನೆರವೇರಿಸತೊಡಗಿದರು. ವಿಶಿಷ್ಟ ರೀತಿಯ ಸಾಮೂಹಿಕ ತ್ರಿಮತಸ್ಥರ ಉಪನಯನ ಸಮಾರಂಭಗಳನ್ನು ಜರುಗಿಸಲು ಮೊದಲು ಮಾಡಿದರು. ಹೀಗೆ ಮುದ್ರಣಾಲಯ, ಗ್ರಂಥಪ್ರಕಾಶನ, ಸಭಾ ಸಮ್ಮೇಲನ, ವಿದ್ವ ದ್ಗೋಷ್ಠಿ, ಧಾರ್ಮಿಕ ಗ್ರಂಥಭಾಂಡಾರ ಉತ್ಸವಾದ್ಯಾಚರಣ ಮುಂತಾಗಿ ಹಲವಾರು ಬಗಿಯಾಗಿ ಧಾರ್ಮಿಕ ಕಾರ್ಯಗಳನ್ನು ಅವಿರತವಾಗಿ ನಡೆಯಿಸಿದರು.

ಅವರು ತಾವಿರುವ ವರೆಗೆ ನಡೆಸಿದ ಗುಪ್ತದಾನ, ವ್ಯಕ್ತದಾನ, ಹರಿಗುರುಸೇವೆ, ಸಂಘಸಂಸ್ಥಾಪೋಷಣ, ವ್ಯಕ್ತಿಶಃ ಪಾಂಡಿತ್ಯಪ್ರೋತ್ಸಾಹನೆ, ದೇವಸ್ಥಾನ ಸಹಾಯ, ಧರ್ಮಸ್ಥಾನ ಸೇವಾಸಹಕಾರ ಪ್ರದಾನ ಮುಂತಾದ ವಿವಿಧ ವಿಶಿಷ್ಟ ಸತ್ಕರ್ಮಸದ್ಧರ್ಮ ಗಳಿಗೆ ಅವರು ನೀಡಿದ ದಾನಗಳಿಗೆ ಲೆಕ್ಕವೇ ಇಲ್ಲ.

ತಾರತಮ್ಯೋಕ್ತವಾದ ಭಜನಾಪದ್ಧತಿಯಂತೆ ಶ್ರೀ ಸೀತಾರಾಮರಾಯರು ತಮ್ಮ ಸೋದರ ಮತ್ತು ಪುತ್ರರೊಡನೆ ಕೂಡಿ ಪರವಶರಾಗಿ ಭಕ್ತಿಭಾವ ಪುಲಕಿತರಾಗಿ ಮಾಡುವ ಧ್ಯಾನ, ಭಜನ ಕಾರ್ಯಕ್ರಮವನ್ನು ನೋಡಿ ಶ್ರೀ ರಾಜಗೋಪಾಲಾಚಾರ್ಯ, ಹಿಂದಿನ ರಾಷ್ಟ್ರಾಧ್ಯಕ್ಷ ಶ್ರೀ ರಾಧಾಕೃಷ್ಣನ್, ಹಂಗಾಮಿ ರಾಷ್ಟ್ರಾಧ್ಯಕ್ಷ ವ್ಹಿ. ವ್ಹಿ. ಗಿರಿ, ಶ್ರೀ ಕೆ. ಎಂ. ಮುನಶಿ, ಶ್ರೀ:ಅನಂತಶಯನಂ ಅಯ್ಯಂಗಾರ ಮುಂತಾದ ರಾಜಕೀಯ ಧುರೀ ಣರೂ, ಮೈಸೂರು, ತ್ರಾವಣಕೋರು, ಕೋಚೀನ ಮುಂತಾದ ಸಂಸ್ಥಾನಿಕರೂ, ರಾಜ್ಯಪಾಲರೂ ಮಂತ್ರಿ ಮಹಾಜನರೂ, ಪಂಡಿತ ಪೀಠಾಧಿಪತಿಗಳೂ ತಮ್ಮ ಮೆಚ್ಚುಗೆ ಯನ್ನು ವ್ಯಕ್ತ ಮಾಡಿ ಮೇಲಿಂದಮೇಲೆ ದಾಸ ಪ್ರಸಾದಕ್ಕೆ ಬಂದು ಕಣ್ಣಾರೆ ಕಂಡು ಸಂತುಷ್ಟರಾಗಿ ಹೋಗುತ್ತಿದ್ದರು.

ಉಡುಪಿಯಲ್ಲಿ ಶ್ರೀಸೀತಾರಾಮರಾಯರು ಶ್ರೀ ಪುತ್ತಿಗಾಮಠದ ಶತಾಯುಷೀ ಶ್ರೀಸುಧೀಂದ್ರತೀರ್ಥಶ್ರೀಪಾದಂಗಳವರ ಶತಮಾನೋತ್ಸವವನ್ನು ಅತ್ಯಂತ ವೈಭವದಿಂದ ನೆರವೇರಿಸಿದ್ದನ್ನು ಯಾರೂ ಮರೆಯುವಂತಿಲ್ಲ. ಇದರಂತೆ ಶ್ರೀ ಸೀತಾರಾಮರಾಯರು ನೆರವೇರಿಸಿದ ಸ್ವಂತ ಷಷ್ಠ್ಯಬ್ದಿ ಸಮಾರಂಭ, ನಾಲ್ಕನೇ ಮಾಧ್ವ ತತ್ವಜ್ಞಾನ ಸಮ್ಮೇ

ಲನ, ಮಧ್ವನವಮಿ ರಜತೋತ್ಸವ, ಮಾ॥ ಗಂಗಾಬಾಯಿ, ಶತಮಾನೋತ್ಸವ, ಬೆಂಗಳೂರ ಅಧಿವೇಶನದ ವಿದ್ವದ್ಗೋಷ್ಠಿ, ಪೂರ್ಣಪ್ರಜ್ಞ ವಿದ್ಯಾಪೀಠದ ಆವರಣದಲ್ಲಿ ಪೂಜಾಗೃಹ ಮುಂತಾದ ಅನೇಕ ಕಟ್ಟಡಗಳ ನಿರ್ಮಾಣ, ಮಾಧ್ವ ಮಹಾಮಂಡಳಕ್ಕೆ ವಿಶಿಷ್ಟ ಸಹಾಯ, ಪ್ರತಿವರ್ಷ ಮಧ್ವನವಮಿ, ಶ್ರೀವಾದಿರಾಜರ ಪುಣ್ಯತಿಥಿ, ಶ್ರೀ ಪುರಂದರದಾಸರ ಪುಣ್ಯತಿಥಿ ಆಚರಣ, ತುಳಸೀಪೂಜಾಮಹೋತ್ಸವ, ಶ್ರೀ ಶ್ರೀ ಪೇಜಾವರ ಶ್ರೀಗಳವರ ಪರ್ಯಾಯ ಪೂರ್ವಭಾವಿಯಾಗಿ ಸಂಚಾರದಲ್ಲಿ ಸತ್ಕಾರ ಸಮಾರಂಭ ವಿಶ್ವ ಹಿಂದೂ ಪರಿಷತ್ತಿನ ವಿದ್ವತ್ಸಭಾಧಿವೇಶನ ಮುಂತಾದ ಅನೇಕ ಕಾರ್ಯಗಳು ಬರಿ ಮಾಧ್ವರ ಇತಿಹಾಸದಲ್ಲಿ ಮಾತ್ರವಲ್ಲ ಭಾರತದ ಧಾರ್ಮಿಕ ಇತಿಹಾಸದಲ್ಲಿಯೇ ಬಂಗಾರದ ಅಕ್ಷರಗಳಿಂದ ಬರೆದಿಡಲು ಯೋಗ್ಯವಾದ ಒಂದೊಂದು ಹೊಸ ಅಧ್ಯಾಯಗಳೇ ಆಗಿರುತ್ತವೆ.

ಶ್ರೀ ಸೀತಾರಾಮರಾಯರ ಮಧ್ವಸಿದ್ಧಾಂತದ ಅಭಿಮಾನದ ಒಂದು ದೊಡ್ಡ ಕುರುಹು ಎಂದರೆ ಶ್ರೀ ನಾರಾಯಣದಾಸ ಎಂಬ ತಮ್ಮ ಮಗನನ್ನು ತಮ್ಮ ಕುಲ ಗುರುಗಳಾದ ಶ್ರೀ ಶ್ರೀ ಪೇಜಾವರ ಶ್ರೀಗಳವರಲ್ಲಿ ವೇದಾಂತ ಶಾಸ್ತ್ರಾಧ್ಯಯನಕ್ಕೆ ಇರಿಸಿದ್ದು. ಇಂದಿನ ಕಲಿಕಾಲದಲ್ಲಿ ಎಂಥೆಂಥ ಘನಗಜ ಪಂಡಿತರೂ ಎಷ್ಟೋ ಸರ್ವಜ್ಞ ಸಿಂಹಾಸನಾಧಿಪತಿಗಳೂ ತಮ್ಮ ಪುತ್ರ, ಸೋದರರನ್ನು ಇಂಗ್ಲೀಷ ವಿದ್ಯಾಭ್ಯಾಸ ಮಾಡಿಸುವಾಗ ಶ್ರೀಸೀತಾರಾಮರಾಯರು ಮಾತ್ರ ಮಧ್ವ ಸಿದ್ಧಾಂತದ ಮೇಲಿನ ತಮ್ಮ ಬದ್ಧ ಶ್ರದ್ಧೆ, ಪೂಜ್ಯ ಬುದ್ಧಿಯಿಂದಾಗಿ ಶುದ್ಧ ಸಂಸ್ಕೃತ ವಿದ್ಯಾಧ್ಯಯನಕ್ಕಾಗಿ ಒಬ್ಬ ಬುದ್ಧಿವಂತ ಮಗನನ್ನು ಇರಿಸಿದ್ದು ಅನುಕರಣೀಯವೂ ಶ್ಲಾಘನೀಯವೂ ಆಗಿದೆ.

ಶ್ರೀ ಸೀತಾರಾಮರಾಯರ ಈ ಸಿದ್ಧಾಂತದೀಕ್ಷೆ, ಹರಿಗುರುಭಕ್ತಿ, ಮಾತಾ ಪಿತೃ ಶ್ರದ್ಧೆ ಸಮಾಜಕಾರ್ಯ ಮುಂತಾದ ಸದ್ಗುಣಗಳನ್ನು ನೋಡಿ ಉಡುಪಿಯ ಅಷ್ಟ ಮಠಾಧೀಶರೂ ಮತ್ತು ಅಖಿಲ ಭಾರತ ಮಾಧ್ವ ಮಹಾಮಂಡಲದವರೂ ಉಳಿದ ಅನೇಕ ಪೀಠಾಧಿಪತಿಗಳೂ ಅವರಿಗೆ ಧರ್ಮಭೂಷಣ, ಪಿತೃಭಕ್ತಿಪರಾಯಣ, ಶ್ರೀಕೃಷ್ಣ ಸೇವಾಧುರೀಣ ಮುಂತಾದ ಪದವಿ, ಪ್ರಶಸ್ತಿಗಳನ್ನಿತ್ತು ಗೌರವಿಸಿದರು.

ಕೊನೆಗೆ ೧೯೬೭ರಲ್ಲಿ ೧೦೨ವರ್ಷದ ತಾಯಿಯವರೊಂದಿಗೆ ಬದರೀಯಾತ್ರೆಯನ್ನು ಮಾಡಿಕೊಂಡು ಬಂದು ೧೮-೧-೧೯೬೮ ರಂದು ಸ್ವಗೃಹದಲ್ಲಿಯೇ ಶ್ರೀಕೃಷ್ಣಪಾದಾರ ವಿಂದವನ್ನು ಸೇರಿದರು.

ಶ್ರೀ ಕೆ. ಬಾಳಕೃಷ್ಣರಾಯರೇ ಮೊದಲಾದ ಇವರ ಎಲ್ಲ ಮಕ್ಕಳೂ ತಮ್ಮ ತಂದೆ ಹಾಗೂ ತಾತಂದಿರ ಹೆಜ್ಜೆಯಮೇಲೆ ಹೆಜ್ಜೆಯನ್ನಿರಿಸಿ ಹಿರಿಯರು ಪ್ರಾರಂಭಿಸಿದ ಎಲ್ಲ ಧರ್ಮಕಾರ್ಯಗಳನ್ನೂ ಅನೂಚಾನವಾಗಿ ಒಮ್ಮೊಮ್ಮೆ ತತೋಪ್ಯತಿಶಯವಾಗಿಯೂ

ನೆರವೇರಿಸುತ್ತಿರುವುದು ಮಾಧ್ವ ಸಮಾಜಕ್ಕೆಲ್ಲ ಹೆಮ್ಮೆಯ ವಿಷಯವಾಗಿದೆ. ಹರುಷದ ಸಂಗತಿಯೂ ಆಗಿದೆ. ಶ್ರೀ ಸೀತಾರಾಮರಾಯರ ೯ ಜನ ಮಕ್ಕಳೂ ಮಾಧ್ವ ಸಮಾಜದ ನವರತ್ನದ ನಿಧಿಯಂತೆ ಅಭಿಮಾನಾಸ್ಪದರಾಗಿದ್ದು ಅವರ ತಂದೆಯವರು ಹಚ್ಚಿಟ್ಟ ಸಮಾಜ ಸಿದ್ಧಾಂತಸೇವಾರೂಪವಾದ ನಂದಾದೀವಿಗೆಗೆ ಸ್ನೇಹಪೂರಣವನ್ನು ಮಾಡುತ್ತಲೇ ಇದ್ದುದು ವೈಷ್ಣವರ ಸೌಭಾಗ್ಯವಾಗಿದೆ.

## ೫೮ ದಿವಾಣ ಕೃಷ್ಣಮೂರ್ತಿಗಳು

ಪೂರ್ಣಯ್ಯನವರ ವಂಶದಲ್ಲಿ ಐನೇಯವರಾದ ಶ್ರೀಕೃಷ್ಣಮೂರ್ತಿರಾಯರು ಒಳ್ಳೇ ಸಮರ್ಥ ದಿವಾಣರೆಂದು ಪ್ರಸಿದ್ಧರಾದರು. ಅವರು ದಕ್ಷ ಆಡಳಿತಗಾರರಿದ್ದಂತೆ ಶ್ರದ್ಧಾಳುಗಳಾದ ಮಾಧ್ವ ಧುರೀಣರೂ ಆಗಿದ್ದರು. ಅವರು ತಮ್ಮ ದಿವಾಣಗಿರಿಯಲ್ಲಿ ಅನೇಕ ಮಾಧ್ವ ಪಂಡಿತರಿಗೂ ಪೀಠಾಧಿಗತಿಗಳಿಗೂ, ಧರ್ಮಸ್ಥಾನ ದೇವಸ್ಥಾನಗಳಿಗೂ ಸೇವಾ ಸಹಾಯ ಸಲ್ಲಿಸಿದರು.

ಇವರು ಬೆಂಗಳೂರಿನ ರೇಸಕೋರ್ಸಿನ ಹತ್ತಿರವಿರುವ ಸುಂದರವಾದ ಪ್ರಾಣದೇವರ ದೇವಸ್ಥಾನವನ್ನು ಕಲಾಪೂರ್ಣವಾಗಿ ಕಟ್ಟಿಸಿ ಪೂಜಾಸೇವಾದಿಗಳ ಏರ್ಪಾಡನ್ನು ಮಾಡಿದರು.

## ೫೯ ದಿ. ಹೆಚ್. ಸಿ. ಸುಬ್ಬರಾವ

ಮೈಸೂರು ಸಂಸ್ಥಾನದ ಹೊಳೆಹೊನ್ನೂರಿನಲ್ಲಿ ಜನಿಸಿದ ಸುಬ್ಬರಾಯರು ರೆವ್ಹಿನ್ಯು ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿದ್ದು ಕೆಲಸಮಾಡಿ ನಿವೃತ್ತರಾದರು. ಬೆಂಗಳೂರಿನ ಪೂರ್ಣಪ್ರಜ್ಞವಿದ್ಯಾಪೀಠ, ಮೈಸೂರು ವಿದ್ಯಾರ್ಥಿನಿಲಯ ಕಟ್ಟಡಕ್ಕೆ ಇವರು ಸಹಸ್ರಾರು ರೂಪಾಯಿಗಳ ಸಹಾಯವನ್ನು ಕೊಟ್ಟಿದ್ದಾರೆ.

ಮೂವತ್ತು ಸಾವಿರ ರೂಪಾಯಿಗಳ ಟ್ರಸ್ಟ ಮಾಡಿ ಬಡ ಮಾಧ್ವ ವಿದ್ಯಾರ್ಥಿಗಳಿಗೆ ಊಟ ವಸತಿಗಳ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಇವರಿಗೆ ಬೆಂಗಳೂರಿನಲ್ಲಿ ನಡೆದ ೫ ನೇ ಅ.ಭಾ. ಮಾಧ್ವತತ್ವಜ್ಞಾನ ಸಮ್ಮೇಲನ ಕಾಲದಲ್ಲಿ ಮಂಡಲದ ಪರವಾಗಿ " ಸಮಾಜ ಭೂಷಣ " ಎಂಬ ಪ್ರಶಸ್ತಿಯನ್ನು ಕೊಡಲಾಯಿತು. ಇವರು ೩೦–೧೦–೬೫ ನೇ ದಿನಾಂಕದಂದು ವೈಕುಂಠವಾಸಿಗಳಾದರು.



# ಪ್ರಕರಣ ೯

# ಮಾಧ್ವ ಸಿದ್ಧಾಂತ ಪ್ರಸಾರಕ ಸಭಾ ಸಂಸ್ಥೆಗಳು

## ೧ ಮಧ್ವ ಸಿದ್ಧಾಂತ ಉನ್ನಾಹಿನೀ ಸಭಾ ಪದ್ಮಸರೋವರ (ತಿರುಪತಿ)

ವೈ. ವಾ. ಕಂಜೀ ಸುಬ್ಬರಾಯರು ಎಲ್ಲ ಮಾಧ್ವವರ ಸಹಾಯ ಸಹಕಾರದಿಂದ ೧೮೭೦ನೇ ಇಸ್ವಿಯಲ್ಲಿ ತಿರುಪತಿಯ ಬೆಟ್ಟದ ಕೆಳಗಿನ ಪದ್ಮಸರೋವರದಲ್ಲಿ ಈ ಸಭೆಯನ್ನು ಸ್ಥಾಪನೆ ಮಾಡಿದರು.

ಎಲ್ಲ ಮಾಧ್ವ ಮಠಗಳ ಪಂಡಿತರೂ, ಪೀಠಾಧಿಪತಿಗಳೂ, ಗೃಹಸ್ಥರೂ ಮುಕ್ತ ಮನಸ್ಸಿನಿಂದ ಇದರಲ್ಲಿ ಭಾಗವಹಿಸಿ ತಾತ್ವಿಕ, ಧಾರ್ಮಿಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಎಲ್ಲ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಅವರವರ ಯೋಗ್ಯತೆಯನ್ನನುಸರಿಸಿ ಸಂಭಾವನೆಯನ್ನು ಕೊಡಲಾಗುತ್ತಿತ್ತು. ನಾನಾದೇಶಗಳಿಂದ ಬಂದ ವಿದ್ಯಾರ್ಥಿಗಳನ್ನು ಆಯಾ ಶಾಸ್ತ್ರಗಳಲ್ಲಿ ಪರೀಕ್ಷಿಸಲಾಗುತ್ತಿತ್ತು.

ಪದ್ಮಸರೋವರದ ದಂಡೆಯಲ್ಲಿಯೇ ಎರಡು ಅಂತಸ್ತಿನ ಭವ್ಯ ಕಟ್ಟಡ ಕಟ್ಟಿಸಿ ಮಧ್ಯದಲ್ಲಿ ಶ್ರೀ ವೇದವ್ಯಾಸ ದೇವರನ್ನು ಪ್ರತಿಷ್ಠಿಸಲಾಗಿದೆ. ಇದಕ್ಕೆ ಸಹಾಯಕವಾಗಿ ಸಾರ್ವಜನಿಕರಿಂದ ವರ್ಗಣಿಯನ್ನು ಕೂಡಿಸುವದಲ್ಲದೆ ಮಧ್ವ ಸಿದ್ಧಾಂತ ಉನ್ನಾಹಿನೀ ಬ್ಯಾಂಕನ್ನು ಮದ್ರಾಸ್ಸಿನಲ್ಲಿ ಸ್ಥಾಪಿಸಿ ರಜಿಸ್ಟರ ಮಾಡಿಸಲಾಗಿತ್ತು. ಈ ವಿಶ್ವಸ್ತ ನಿಧಿಯವರೂ ಈಗಲೂ ಈ ಸಭೆಯನ್ನು ಡಿಸೆಂಬರ ತಿಂಗಳಲ್ಲಿ ಪ್ರತಿ ವರ್ಷವೂ ಯಥಾ ಯೋಗ್ಯವಾಗಿ ನಡೆಸುತ್ತಲಿದ್ದಾರೆ.

## ೨ ಮಧ್ವ ಸಿದ್ಧಾಂತ ಉತ್ತೇಜಕ ಸಭಾ ಧಾರವಾಡ

ಧಾರವಾಡದ ಕಮಲಾಪೂರ ಭೀಮರಾಯರೇ ಮೊದಲಾದ ಗೃಹಸ್ಥರು ಮಧ್ವ ಮತ ಪ್ರಸಾರಕ್ಕಾಗಿ ಈ ಉತ್ತೇಜಕ ಸಭೆಯನ್ನೂ ಅದರ ಅಂಗವಾಗಿ ಶ್ರೀ ಸತ್ಯಧೀರ ಪಾಠಶಾಲೆಯನ್ನೂ ತಮ್ಮ ಮಿತ್ರರ ಸಹಾಯದಿಂದ ೧೮೧೭ನೇ ಶಕ ಸಂವತ್ಸರದಲ್ಲಿ ಶ್ರೀ ಶ್ರೀ ಉತ್ತರಾದಿ ಮಠದ ಶ್ರೀ ಶ್ರೀ ಸತ್ಯಧೀರತೀರ್ಥ ಶ್ರೀಪಾದಂಗಳವರ ಅಮೃತ ಹಸ್ತದಿಂದ ಪ್ರಾರಂಭಿಸಿದರು. ಅದಕ್ಕಾಗಿ ತುಸು ಹೊಲ, ಮನೆ, ಉತ್ಪತ್ತಿಯು ಬರುವಂತೆ ಮಾಡಿದ್ದು ಮೂಲ ಧನಕ್ಕಾಗಿ ಒಂದು ವಿಶ್ವಸ್ತ ಮಂಡಲವನ್ನು ಏರ್ಪಡಿಸ

ಲಾಗಿದೆ. ಆದರ ವತಿಯಿಂದ ಪ್ರತಿ ವರ್ಷವೂ ಅಲ್ಪ ಪ್ರಮಾಣದಲ್ಲಿಯಾದರೂ ಸುವ್ಯವಸ್ಥಿತವಾಗಿ ನಡೆಯುತ್ತಲಿದ್ದು ಪಾಠ ಶಾಲೆಯೂ ತನ್ನ ಪಾಠ ಪುರಾಣ, ಪ್ರವಚನಾದಿ ಕಾರ್ಯವನ್ನು ಮುಂದುವರಿಸಿದೆ.

## ೩ ಶ್ರೀ ಮಧ್ವ ಸಿದ್ಧಾಂತಾಭಿವೃದ್ಧಿಕಾರಿಣೀ ಸಭಾ ಶ್ರೀ ಉತ್ತರಾದಿಮಠ

ಶ್ರೀ ಶ್ರೀ ಸತ್ಯಧೀರ ಶ್ರೀಪಾದಂಗಳವರ ಅನುಗ್ರಹದಿಂದ ಪ್ರಾರಂಭವಾದ ಸಭೆಯು ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಕಾಲದಲ್ಲಿ ಪರಮೋತ್ಕರ್ಷ ಚರಮ ಸೀಮೆಯನ್ನು ಮುಟ್ಟಿತು. ಮೊದ ಮೊದಲು ಪ್ರಚಂಡ ಪ್ರಮಾಣದಿಂದ ನೆರವೇರುವ ಶ್ರೀ ಮಠದ ಮಹಾ ಸಮಾರಾಧನೆಗಳೊಂದಿಗೆ ನಡೆಯುವ ಈ ಸಭೆಯನ್ನು ಶ್ರೀ ಸತ್ಯಧ್ಯಾನತೀರ್ಥರು ತಿರುಪತಿಯ ಹತ್ತಿರ ಪದ್ಮಸರೋವರದಲ್ಲಿ ನೆಡೆಯಿಸುತ್ತಿದ್ದರು.

ಈ ಸಭೆಗೆ ಪ್ರತಿ ವರ್ಷವೂ ದಿಗ್ದೇಶಗಳಿಂದ ಶ್ರೀಮಠಸ್ಥ ಪಂಡಿತರೂ, ತ್ರಿಮಠ ಪಂಡಿತರೂ ಬಂದು ಸೇರಿ ಪರೀಕ್ಷೆ ವಾಕ್ಯಾರ್ಥ, ವಾದ ವಿವಾದಗಳಿಂದ ಒಳ್ಳೆ ಕಳೆಕಟ್ಟುತ್ತಿತ್ತು.

ಸಭೆಯ ಕೊನೆಗೆ ಬಂದ ವಿದ್ವಾಂಸರಿಗೂ ವಿದ್ಯಾರ್ಥಿಗಳಿಗೂ ಅವರವರ ಯೋಗ್ಯತಾನುಗುಣವಾಗಿ ದಾನ, ದಕ್ಷಿಣೆ, ರಜತಪಾತ್ರ, ಶಾಲು ಶಕಲಾತಿಗಳನ್ನು ಕೊಟ್ಟು ಆಶೀರ್ವದಿಸಲಾಗುತ್ತಿತ್ತು. ಇದರಿಂದ ಅನೇಕ ಜನರಿಗೆ ಸಂಸ್ಕೃತ ಅಭ್ಯಾಸಕ್ಕೆ ಅನುಕೂಲತೆ ದೊರೆತು ಶಾಸ್ತ್ರವಿದ್ಯೆಯು ಮತ್ತೆ ನೂರುವರ್ಷ ಜೀವ ಹಿಡಿಯುವಂತಾಯಿತು.

ಈ ಸಭೆಯು ಶಾಶ್ವತವಾಗಿ ನಡೆಯಬೇಕೆಂದು ಶ್ರೀ ಶ್ರೀ ಸತ್ಯಧ್ಯಾನತೀರ್ಥರು ತೆಂಬರಿ, ರಾಜಗೋಪಾಳಪುರ ಎಂಬ ಎರಡು ಗ್ರಾಮಗಳನ್ನು ಕೊಂಡು ಆದಕ್ಕಾಗಿ ಮೀಸಲಾಗಿಯೇ ಇರಿಸಿದ್ದರು.

ಈ ಸಭೆಯನ್ನು ಈಗಿನ ಉತ್ತರಾದಿ ಮಠಾಧೀಶರಾದ ಶ್ರೀ ೧೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ತಮ್ಮ ಗುರುಗಳ ಸಮಾರಾಧಾನೆಯ ಕಾಲದಲ್ಲಿ ನಡೆಯಿಸಿಕೊಂಡು ಬರುತ್ತಲಿದ್ದಾರೆ.

## ೪ ಶ್ರೀ ಮದ್ದಶಪ್ರಮತಿ ದರ್ಶನ ಪ್ರಕಾಶನೀ ಸಭಾ ಶ್ರೀ ವ್ಯಾಸರಾಜ ಮಠ

ಶ್ರೀ ವ್ಯಾಸರಾಜ ಮಠದ ಶ್ರೀ ಶ್ರೀ ವಿದ್ಯಾರತ್ನಾಕರತೀರ್ಥರ ಶ್ರೀಪಾದಂಗಳವರು ಬೆಂಗಳೂರಿನಲ್ಲಿ ಈ ಸಭೆಯನ್ನು ಪ್ರಾರಂಭಿಸಿದರು. ಇದರ ಪ್ರಾರಂಭದ ಸಭೆಯಲ್ಲಿ

ಸಹಸ್ರಾರರು ವಿದ್ವಾಂಸರ ವಿದ್ಯಾರ್ಥಿಗಳ ಪರೀಕ್ಷಾದಿಗಳು ನಡೆದು ಎಲ್ಲರಿಗೂ ಯೋಗ್ಯ ಸನ್ಮಾನ ಮಾಡಲಾಯಿತು. ಅನಂತರ ಈ ಸಭೆಯನ್ನು ಮಹಾ ಸಂಸ್ಥಾನದ ಕೇಂದ್ರ ಸ್ಥಳವಾದ ವ್ಯಾಸರಾಜ ಪುರದಲ್ಲಿ ನಡೆಯಿಸಲಾಗುತ್ತದೆ.

ಪ್ರಕೃತ ಶ್ರೀ ವ್ಯಾಸರಾಜ ಮಠಾಧೀಶರಾದ ಶ್ರೀ ೧೦೮ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರು ಶ್ರಿಮಠಸ್ಥ ಪಂಡಿತರನ್ನೂ ಕರೆಯಿಸಿ ವಾಕ್ಯಾರ್ಥ ಉಪನ್ಯಾಸ ಹರಿ ಕಥಾದಿಗಳನ್ನು ಏರ್ಪಡಿಸುತ್ತಾರೆ. ಇದೇ ಕಾಲದಲ್ಲಿ ಪಂಡಿತರಿಗೆ, ಕೀರ್ತನಕಾರರಿಗೆ ಯೋಗ್ಯ ಪದವಿ ಪ್ರಶಸ್ತಿಗಳನ್ನಿತ್ತು ಗೌರವಿಸುತ್ತಾರೆ.

## ೫ ಶ್ರೀ ಸಮೀರ ಸಮಯ ಸಂವರ್ಧಿನೀ ಸಭಾ
## ಶ್ರೀ ರಾಘವೇಂದ್ರಸ್ವಾಮಿಮಠ

ಶ್ರೀ ಸುಕೃತೀಂದ್ರತೀರ್ಥ ಶ್ರೀಪಾದಂಗಳವರ ಆದೇಶದಂತೆ ಶ್ರೀ ರಾಯರಮಠದ ಶ್ರೀ ಶ್ರೀ ಸುಶೀಲೇಂದ್ರತೀರ್ಥ ಶ್ರೀಪಾದಂಗಳವರು ಈ ಸಭೆಯನ್ನು ಶ್ರೀ ಮಂತ್ರಾಲಯ ದಲ್ಲಿ ಪ್ರಾರಂಭಿಸಿದರು.

ಮುಂದೆ ನಂಜನಗೂಡಿನಲ್ಲಿಯೂ, ಕುಂಭಕೋಣದಲ್ಲಿಯೂ, ಮಂತ್ರಾಲಯ ದಲ್ಲಿಯೂ ಈ ಮಠದ ಅಧಿವೇಶನಗಳು ಶ್ರೀ ಸುಶೀಲೇಂದ್ರತೀರ್ಥ ಹಾಗೂ ಶ್ರೀ ಸುವೃತೀಂದ್ರತೀರ್ಥ ಶ್ರೀಗಳವರ ಕಾಲದಲ್ಲಿ ವೈಭವದಿಂದ ನಡೆದವು.

ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರು ೨೫ ವರ್ಷಗಳ ಕಾಲ ಅಖಂಡ ವಾಗಿ ಶ್ರೀರಾಯರ ಆರಾಧನಾ ಕಾಲದಲ್ಲಿ ಈ ಸಭೆಯನ್ನು ನಡೆಯಿಸಿಕೊಂಡು ಬಂದರು. ಪ್ರಕೃತ ಈಗೀನ ಪೀಠಾಧಿಪತಿಗಳಾದ ಶ್ರೀ ೧೦೮ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳವರು ವರ್ಷಕ್ಕೆ ಎರಡು ಸಲ ಈ ಸಮೀರ ಸಮಯ ಸಂವರ್ಧಿನೀ ಸಭೆ ಯನ್ನು ನಡೆಯಿಸಿ ಶ್ರಿಮಠಸ್ಥ ಪಂಡಿತರನ್ನೂ ಕರೆಯಿಸಿ ವಾಕ್ಯಾರ್ಥ ಉಪನ್ಯಾಸ ಶಾಸ್ತ್ರ ಚರ್ಚೆಗಳನ್ನು ಏರ್ಪಡಿಸಿ ವಿದ್ವಾಂಸ ವಿದ್ಯಾರ್ಥಿಗಳಿಗೆ ಪ್ರಭೂತವಾದ ದಾನ ದಕ್ಷಿಣೆ ಪದವಿ ಪ್ರಶಸ್ತಿಗಳನ್ನಿತ್ತು ಯಥಾ ಯೋಗ್ಯವಾಗಿ ಸತ್ಕರಿಸುತ್ತಾರೆ.

## ೬ ಶ್ರೀಮನ್ಮಾಧ್ವಸಿದ್ಧಾಂತ ಸಂವರ್ಧಿನೀ ಸಭಾ
## ಶ್ರೀ ಭಂಡಾರಕೇರಿಮಠ

೨೫ ವರ್ಷಗಳ ಹಿಂದೆ ಶ್ರೀ ಸತ್ಯಧ್ಯಾನತೀರ್ಥರ ಪ್ರೇರಣಾನುಸಾರವಾಗಿ ಭಂಡಾರ ಕೇರಿಯಲ್ಲಿ ಶ್ರೀ ೧೦೮ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರಿಂದ ಪ್ರಾರಂಭಿಸಲ್ಪಟ್ಟ ಈ ಸಭೆಯು ಈ ಕಾಲು ಶತಮಾನದಲ್ಲಿ ಪ್ರಚಂಡ ಧರ್ಮ ಜಾಗೃತಿಯನ್ನು ಉಂಟು ಮಾಡಿದೆ.

ಮೊದಲಿನ ೧೦–೧೨ ವರ್ಷ ಶ್ರೀ ಭಂಡಾರಕೇರಿಯಲ್ಲಿಯೇ ನೆರವೇರಿಸುತ್ತಿದ್ದ ಈ ಸಭೆಯ ಅಧಿವೇಶನಗಳನ್ನು ಉಡುಪಿ, ಬೆಂಗಳೂರು, ಮುಗಟಖಾನ ಹುಬ್ಬಳ್ಳಿ, ಚೀಕಲಪರವಿ, ವೇಣೀಸೋಮಪುರ, ಮದ್ರಾಸ ಮುಂತಾದ ಕಡೆಗಳಲ್ಲಿ ನೆರವೇರಿಸುತ್ತಲಿರುವದರಿಂದ ಎಲ್ಲ ಜನರಲ್ಲಿಯೂ ಮಧ್ವಮತದಬಗ್ಗೆ ಶ್ರದ್ಧೆಯು ಇಮ್ಮಡಿಸುವಂತಾಗಿದೆ.

ಬಂದ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ, ಬೊಗಸೆ ಬೊಗಸೆಯಾಗಿ ದಕ್ಷಿಣೆಯನ್ನಿತ್ತು ಪುರಸ್ಕರಿಸುವದರಿಂದ ಈ ಸಭೆಯಲ್ಲಿ ಎಲ್ಲ ಮತದವರೂ, ತ್ರಿಮತಸ್ಥರೂ ಉತ್ಸಾಹದಿಂದ ಭಾಗವಹಿಸುತ್ತಾರೆ.

ಎಲ್ಲ ಪಂಡಿತರಿಗೂ, ವಿದ್ವಾಂಸರಿಗೂ ಗಣನೀಯ ಪ್ರಮಾಣದಲ್ಲಿ ಸಂಭಾವನೆಯನ್ನಿತ್ತು ಶಾಸ್ತ್ರವಿದ್ಯೆಗೆ ನಿಜವಾದ ಪ್ರೋತ್ಸಾಹನೆಯನ್ನೀಡುವ ಸಂಸ್ಥೆಯ ಬಗೆಗೆ ಎಲ್ಲ ಮಾಧ್ವರಲ್ಲಿಯೂ ಆದರಾಭಿಮಾನ ಮೂಡಿ ಆತ್ಮೀಯ ಭಾವನೆ ಹುಟ್ಟಿದೆ. ಆದುದರಿಂದ ಜನರು ಈ ಸಭೆಯನ್ನು ತಮ್ಮ ತಮ್ಮ ಗ್ರಾಮಗಳಲ್ಲಿ ನಡೆಯಿಸಬೇಕೆಂದು ಸ್ವಯಂ ಪ್ರೇರಣೆಯಿಂದ ಮುಂದೆ ಬಂದು ಸ್ವಸಂತೋಷದಿಂದ ಊಟ ವಸತಿ ಸೌಕರ್ಯಗಳನ್ನು ಏರ್ಪಡಿಸಿ ಈ ಸಭೆಯು ತಮ್ಮ ತಮ್ಮ ಊರುಗಳಲ್ಲಿ ವಿಜೃಂಭಣೆಯಿಂದ ನೇರವೇರುವಂತೆ ಮಾಡುತ್ತಾರೆ.

ಮತತ್ರಯ ಮತತ್ರಯ ಪಂಡಿತರೂ ಈ ಸಭೆಯಲ್ಲಿ ಸೇರಿ ಶಾಸ್ತ್ರೀಯ ವಾಕ್ಯಾರ್ಥ, ವಿವಾದ, ಉಪನ್ಯಾಸಗಳನ್ನು ಮಾಡುತ್ತಾರೆ.

ಶ್ರೀಮನ್ನ್ಯಾಯಸುಧಾ ಸ್ಪರ್ಧಾ ಪರೀಕ್ಷೆಯನ್ನು. ಏರ್ಪಡಿಸಿ ಸುಧಾ ಪಂಡಿತರಿಗೆ ವಿಶೇಷ ಸಂಭಾವನೆಯನ್ನು ಕೊಡಲಾಗುವದು.

ಭಂಡಾರಕೇರಿ ಶ್ರೀಪಾದಂಗಳವರ ಈ ಸಭೆಯಲ್ಲಿ ನೂರರ ಕೆಳಗೆ ದಕ್ಷಿಣೆಯೇ ಇಲ್ಲ. ಮೃಷ್ಟಾನ್ನದ ಹೊರತು ಭೋಜನವಿಲ್ಲ. ಇದಕ್ಕಾಗಿ ಪ್ರತಿವರ್ಷವೂ ಸೇರುವ ಜನ ಹತ್ತೆಂಟು ಸಾವಿರಕ್ಕೆ ಕಡಿಮೆ ಇಲ್ಲ. ಇಲ್ಲಿ ನಡೆಯುವ ಪ್ರಚಂಡ ಪ್ರಮಾಣದ ಬ್ರಾಹ್ಮಣ ಭೋಜನ, ಲಕ್ಷಾವಧಿರೂಪಾಯಿಗಳ ಪ್ರಭೂತ ದಕ್ಷಿಣೆಗಳನ್ನು ನೋಡಿದರೆ ವೈಷ್ಣವ ಸಮಾಜದಲ್ಲಿ ಸುವರ್ಣ ಯುಗವನ್ನೇ ಇಳಿಸಿದ ಶ್ರೀ ಸತ್ಯಧ್ಯಾನತೀರ್ಥರ ಸಭಾ, ಮಹಾ ಸಮಾರಾಧನೆಗಳ ಮಧುರ ನೆನಪು ಮತ್ತೆ ಮರಕಳಿಸುತ್ತದೆ.

ಇದೇ ವರ್ಷ ಉಡುಪಿಯಲ್ಲಿ ಈ ಸಭೆಯ ರಜತೋತ್ಸವವನ್ನು ಆಚರಿಸಲಾಯಿತು. ಪರ್ಯಾಯ ಶ್ರೀಗಳವರಾದ ಶ್ರೀ ಪೇಜಾವರ ಶ್ರೀಪಾದಂಗಳವರ ಉಡುಪಿಯ ಮಠಾಧೀಶರ ಹಾಗೂ ಮತತ್ರಯ ಶ್ರೀಪಾದಂಗಳವರ ಹೃತ್ಪೂರ್ವಕವಾದ ಬೆಂಬಲದಿಂದ ಶ್ರೀಕೃಷ್ಣನ ಸನ್ನಿಧಿಯಲ್ಲಿ ನೆರವೇರಿದ ಈ ರಜತೋತ್ಸವವು ಧರ್ಮರಾಜನ ರಾಜ

ಸೂಯಯಾಗದಂತೆ ಅಭೂತಪೂರ್ವವಾಗಿ ನಡೆಯಿತು. ೧,೬೦೦೦೦ ರೂಪಾಯಿಗಳಿಗೂ ಮಿಕ್ಕಿ ದಕ್ಷಿಣೆಯನ್ನು ಈ ಅಧಿವೇಶನದಲ್ಲಿ ಕೊಡಲಾಯಿತು. ಹಾಗೂ ಶ್ರೀ ಮಳಗಿ ವೇದವ್ಯಾಸಾಚಾರ್ಯ, ಶ್ರೀ ಪಡಮುನ್ನೂರ ನಾರಾಯಣಾಚಾರ್ಯ, ಗಲಗಲಿ ರಾಮಾಚಾರ್ಯ, ಕಾಶಿಯ ಶ್ರೀ ರಾಜೇಶ್ವರ ಶಾಸ್ತ್ರಿ ಮುಂತಾದ ದಿಗ್ಗಜ ಕವಿ ಪಂಡಿತರಿಗೆ ಎರಡು ಸಹಸ್ರ ರೂಪಾಯಿ ಬಹುಮಾನದೊಂದಿಗೆ ಪದವಿ ಪ್ರಶಸ್ತಿಗಳನ್ನಿತ್ತು ಸತ್ಕರಿಸ ಲಾಯಿತು.

ಈ ಸಭೆಯು ಆ ಚಂದ್ರಾರ್ಕವಾಗಿ ನಡೆಯಬೇಕೆಂಬ ಸದುದ್ದೇಶದಿಂದ ಶ್ರೀ ೧೦೮ ಶ್ರೀ ಭಂಡಾರಕೇರಿ ಶ್ರೀಪಾದಂಗಳವರು ಅನೇಕ ಪೀಠಾಧಿಪತಿಗಳು ಹಾಗೂ ಪ್ರತಿಷ್ಠಿತ ಗೃಹಸ್ಥರನ್ನೊಳಗೊಂಡ ಒಂದು ವಿಶ್ವಸ್ತ ನಿಧಿಯನ್ನು ಏರ್ಪಡಿಸಿ ಸುಮಾರು ಎರಡು ಲಕ್ಷ ರೂಪಾಯಿಗಳ ಶಾಶ್ವತ ನಿಧಿಯನ್ನು ಏರ್ಪಡಿಸಿದ್ದಾರೆ. ಅದಕ್ಕಾಗಿ ಭೂಮಿ, ಸ್ವಾಸ್ಥ್ಯಗಳನ್ನು ಸಂಗ್ರಹಿಸುತ್ತಲಿದ್ದಾರೆ

ಈ ಸಂಸ್ಥೆಯ ಪರವಾಗಿ ಶ್ರೀಗಳವರು ಅನೇಕ ಪಾಠಶಾಲೆಗಳನ್ನೂ ಸ್ಥಾಪಿಸಿದ್ದು ಎಷ್ಟೋ ಪಂಡಿತರಿಗೆ ವರ್ಷಾಶನ, ಮಾಸಾಶನಗಳನ್ನು ಕೊಡುತ್ತಲಿದ್ದಾರೆ. ಅನೇಕ ಉಪಯುಕ್ತವಾದ ಗ್ರಂಥಗಳನ್ನು ಪ್ರಕಾಶಪಡಿಸುತ್ತಲಿದ್ದಾರೆ.

ಈ ಸಭೆಯ ವತಿಯಿಂದ ಶ್ರೀಮಧ್ವಾಚಾರ್ಯರ ಎಲ್ಲ ಗ್ರಂಥಗಳನ್ನೂ ಶ್ರೀ ಜಯತೀರ್ಥರ ಟೀಕೆ ಹಾಗೂ ಉಳಿದೆಲ್ಲ ಟಿಪ್ಪಣಿ ಸಹಿತವಾಗಿ ಮುದ್ರಿಸುವ ಯೋಜನೆ ಯನ್ನು ಮಾಡಿದ್ದು ಈಗ ಗುರು ಮಧ್ವರ ದಶ ಪ್ರಕರಣಗಳನ್ನು ಭಾರತ ಸರಕಾರದ ಸಹಾಯದಿಂದ ಮುದ್ರಿಸಿ ಪ್ರಕಾಶಗೊಳಿಸಲಾಗಿದೆ.

## ಮಾಧ್ವ ಸಂಘ ಮದ್ರಾಸ

ಮದ್ರಾಸ ಮಹಾ ನಗರದಲ್ಲಿ ಸುಮಾರು ೩೦ ವರ್ಷಗಳಿಂದ ಶ್ರೀಮಧ್ವನವಮಿ ಉತ್ಸವ, ಶ್ರೀ ಪುರಂದರದಾಸರ ಉತ್ಸವ ಮುಂತಾದ ಧಾರ್ಮಿಕ ಸಮಾರಂಭಗಳನ್ನು ಈ ಸಂಸ್ಥೆಯು ಒಳ್ಳೇ ವಿಜೃಂಭಣೆಯಿಂದ ಮಾಡುತ್ತಲಿದೆ.

ವೈ. ವಾ. ಕೆ. ಸೀತಾರಾಮರಾವ, ವೈ. ವಾ. ಯು. ಕೃಷ್ಣರಾವ, ವೈ. ವಾ ಸಿ. ಆರ್. ಕೃಷ್ಣರಾವ ಮುಂತಾದ ಕೊಡುಗೈ ಮಾಧ್ವ ಧುರೀಣರ ಸಕ್ರಿಯ ಸಹಕಾರ ಸಹಾನುಭೂತಿಗಳಿಂದ ವಿಶೇಷ ಪ್ರಗತಿ ಹಾಗೂ ಉತ್ಕರ್ಷವನ್ನು ಹೊಂದಿದ ಈ ಸಂಸ್ಥೆಯು ನಾಲ್ಕು ವರ್ಷಗಳ ಹಿಂದೆ ಮದ್ರಾಸಿನ ಮಿತ್ರ ಸಮಾಜ, ದಿ. ಧರ್ಮಭೂಷಣ ಸೀತಾರಾಮರಾಯರ ನೇತೃವಿನಿಂದ ತನ್ನ ರಜತೋತ್ಸವವನ್ನು ಬಹು ವಿಜೃಂಭಣೆಯಿಂದ ಆಚರಿಸಿತು.

## ೮ ಮಾಧ್ವ ಸಂಘ ಚಾಮರಾಜಪೇಟೆ ಬೆಂಗಳೂರು

ಮಾಧ್ವರ ಕೇಂದ್ರವಾದ ಬೆಂಗಳೂರಿನಲ್ಲಿ ಅನೇಕ ವರ್ಷಗಳಿಂದ ಈ ಸಂಸ್ಥೆಯು ಪಾಠ–ಪ್ರವಚನ, ಪುರಾಣ, ಉಪನ್ಯಾಸ, ವಾಚನಾಲಯ ಮುಂತಾಗಿ ಹಲವಾರು ಬಗೆಯಿಂದ ವೈಷ್ಣ ಸಿದ್ಧಾಂತ ಪ್ರಚಾರಕ್ಕೆ ಪ್ರಯತ್ನಿಸುತ್ತಿದೆ.

ಚಾಮರಾಜಪೇಟೆ ೫ ನೇ ಬೀದಿಯಲ್ಲಿ ಸ್ವಂತ ಕಟ್ಟಡದಲ್ಲಿ ಸ್ವಾಧ್ಯಾಯ ಜ್ಞಾನಯಜ್ಞವನ್ನು ದಶಕಾನುದಶಕಗಳಿಂದ ಅವ್ಯಾಹತವಾಗಿ ನಡೆಸುತ್ತಿರುವ ಈ ಮಾಧ್ವ ಸಂಘವು ಬೆಂಗಳೂರಿನ ವೈಷ್ಣವರಿಗೆಲ್ಲ ಆನಂದತೀರ್ಥರ ಸಂದೇಶವನ್ನು ತಲುಪಿಸುವ ಮುಖ್ಯ ಸಾಧನವಾಗಿದೆ. ಈ ಸಂಘವು ಬೆಂಗಳೂರ ಮಾಧ್ವ ಗ್ರಂಥ ಮಾಲಾದಿಂದ ಅನೇಕ ಮಾಧ್ವ ಗ್ರಂಥಗಳನ್ನು ಪ್ರಕಟಿಸುತ್ತ ಜ್ಞಾನಪ್ರಸಾರ ಕಾರ್ಯವನ್ನು ಮಾಡುತ್ತಲಿದೆ. ಮಹಾಭಾರತದ ಸನ್‌ತ್ಸುಜಾತೀಯವನ್ನು ಶ್ರೀ ವಾದಿ ರಾಜ ವ್ಯಾಖ್ಯಾನ ಸಹಿತ ಪ್ರಕಾಶಿಸಿದ್ದಾರೆ.

## ೯ ಮಾಧ್ವ ಸಂಘ ಮಲ್ಲೇಶ್ವರ ಬೆಂಗಳೂರು

ಬೆಂಗಳೂರಿನ ಮಲ್ಲೇಶ್ವರದಲ್ಲಿ ವಿಸ್ತಾರವಾದ ಸ್ಥಳಾವಕಾಶ ಹಾಗೂ ಸ್ವಂತ ಕಟ್ಟಡವನ್ನು ರೂಪಿಸಿಕೊಂಡು ತಲೆ ಎತ್ತಿದ ಈ ಮಾಧ್ವ ಸಂಘವು ಅನುದಿನವೂ ಪುರಾಣ ಪ್ರವಚನಾದಿ ಕಾರ್ಯಕ್ರಮಗಳಿಂದ ಜನತೆಗೆ ಜ್ಞಾನದಾನಮಾಡುತ್ತಲೇ ಇದೆ. ಅನೇಕ ಪಂಡಿತರ ಪಾಠ ಪ್ರವಚನ, ಉಪನ್ಯಾಸ, ಹರಿಕಥೆ ಸಂಗೀತ ಸೇವೆ. ಪುಣ್ಯ ದಿನಾಚರಣೆ ಮುಂತಾದ ಧಾರ್ಮಿಕ ಕೃತ್ಯಗಳು ಇಲ್ಲಿ ಎಡೆಬಿಡದೆ ನಡೆದಿರುತ್ತವೆ.

ಈಗ ೨ ವರ್ಷಗಳಿಂದ ಶ್ರೀ ಶ್ರೀ ಕುಂದಾಪುರ ಮಠಾಧೀಶರಿಂದ ಪರಿಣಾಮಕಾರಿ ಯಾದ ಪ್ರಭಾವಶಾಲಿ ಉಪನ್ಯಾಸಗಳು ಇಲ್ಲೇ ಜರುಗುತ್ತಲಿದ್ದು ಸಾವಿರಾರು ಜನರು ಕಿಕ್ಕಿರಿದು ಸೇರಿ ಶ್ರವಣ ಮಾಡಿ ಕೃತಾರ್ಥರಾಗುತ್ತಾರೆ.

## ೧೦ ಮಾಧ್ವ ಯುವಕ ಸಂಘ ಬೆಂಗಳೂರು

ಇಂಗ್ಲೀಷ ಅಭ್ಯಾಸ ಮಾಡುತ್ತಲಿರುವ ಮಾಧ್ವ ವಿದ್ಯಾರ್ಥಿಗಳಲ್ಲಿ ವೈಷ್ಣವೀಯ ಸಂಸ್ಕಾರಗಳು ಉಳಿದು ಇಂದಿನ ತರುಣ ಪೀಳಿಗೆಯು ಅಪ್ಪಟ ಮಾಧ್ವರಾಗಿ ಉಳಿಯ ಬೇಕೆಂಬ ಘನೋದ್ದೇಶದಿಂದ ಈ ಸಂಘವು ಸ್ಥಾಪಿತವಾಗಿದೆ.

ಸಮಾಜದ ಸಹೃದಯ ಸಿರಿವಂತರ ಮತ್ತು ಶ್ರೀ ಶ್ರೀಗಳವರ ಸಹಾಯದಿಂದ ಆದರ್ಶವಾದ ವಿದ್ಯಾರ್ಥಿ ನಿಲಯವನ್ನು ವಿಶಾಲ ತಳಹದಿಯ ಮೇಲೆ ಕಟ್ಟಿಕೊಂಡು ಅನೇಕ ಬಡ ಮಾಧ್ವ ವಿದ್ಯಾರ್ಥಿಗಳ ಶಿಕ್ಷಣ, ರಕ್ಷಣ, ಧರ್ಮಸಂಸ್ಕಾರ ಅಭಿವರ್ಧನ ಮಾಧ್ವಸಿದ್ಧಾಂತಶ್ರದ್ಧೋತ್ಪಾದನೆ ಮುಂತಾದ ಕಾರ್ಯಗಳಿಂದ ಬೆಂಗಳೂರಿನ ಹೆಮ್ಮೆಯ ಸಂಸ್ಥೆಯಾಗಿ ಈ ಸಂಘವು ತಲೆ ಎತ್ತಿ ನಿಂತಿದೆ.

## ೧೧ ಪರಿಮಳ ಸಂಶೋಧನ ಪ್ರಕಾಶನ ಮಂದಿರ ನಂಜನಗೂಡು

ವೈ. ವಾ. ೧೧೮ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಆಜ್ಞಾನುಸಾರ ೧೯೪೫ ನೇ ಇಸ್ವಿಯಲ್ಲಿ ಅವರ ಮಹಾ ಪೋಷಕತ್ವದಲ್ಲಿ ಸ್ಥಾಪಿತವಾದ ಈ ಸಂಸ್ಥೆಯು ಈ ವರೆಗೆ ೩೦–೪೦ ಉಪಯುಕ್ತವಾದ ಸಿದ್ಧಾಂತ ಸಾಹಿತ್ಯಕ ಗ್ರಂಥಗಳನ್ನು ಪ್ರಕಟಿಸಿದೆ.

ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರ— ೧) ಬ್ರಹ್ಮಸೂತ್ರ ನ್ಯಾಯ ಸಂಗ್ರಹ, ೨) ಶೈವ ಸರ್ವಸ್ವವ ಖಂಡನ, ೩) ಭೇದ ವಿದ್ಯಾ ವಿಲಾಸ, ೪) ಉಪ ಸಂಹಾರ ವಿಜಯ, ೫) ಪರತತ್ವಪ್ರಕಾಶಿಕಾ ಮುಂತಾದ ಗ್ರಂಥಗಳನ್ನೂ ಶ್ರೀವಾದಿರಾಜ ಶ್ರೀಪಾದಂಗಳವರ ಸನತ್ಸುಜಾತೀಯ ವ್ಯಾಖ್ಯಾನದ ಕನ್ನಡ ಅನುವಾದ, ತೀರ್ಥ ಪ್ರಬಂಧ ಕನ್ನಡ ಅನುವಾದವನ್ನೂ, ಶ್ರೀ ರಾಘವೇಂದ್ರಸ್ವಾಮಿಗಳ ಪ್ರಾತಃಸಂಕಲ್ಪ ಗದ್ಯ, ರಾಮಾಚಾರಿತ್ರ್ಯಮಂಜರಿ, ಅಣು ಮಧ್ವ ವಿಜಯ ವ್ಯಾಖ್ಯಾನ ಮುಂತಾದ ಚಿಕ್ಕ ಪುಟ್ಟ ಆಕಾರವಿದ್ದರೂ ಬೃಹದರ್ಥೋಪೇತವಾದ ಆ ಗ್ರಂಥಗಳನ್ನೂ ಹಾಗೂ ಸನಾತನ ಧರ್ಮಪ್ರದೀಪ, ನಾರದೀಯ ಶಿಕ್ಷಾ, ಕರ್ನಾಟಕದ ಹರಿದಾಸರು ಮುಂತಾದ ಅನೇಕ ಉಪಯುಕ್ತ ಹೊತ್ತಿಗೆಗಳನ್ನು ಸಂಶೋಧಿಸಿ ಪ್ರಕಟಿಸಲಾಗಿದೆ.

ಪರಿಮಳವೆಂಬ ಸಾಂಸ್ಕೃತಿಕ ಮಾಸ ಪತ್ರಿಕೆಯನ್ನೂ ಪ್ರತಿ ತಿಂಗಳ ಪ್ರಕಟಿಸ ಲಾಗುತ್ತಿದೆ. ಶ್ರೀ ರಾಜಾ ಎಸ್. ಗುರುಜಾಚಾರ್ಯರು ಸಂಪಾದಕರಾಗಿದ್ದಾರೆ.

## ೧೨ ಮಧ್ವ ಮುನಿ ಸೇವಾ ಸಂಘ ಉಡುಪಿ

ಶ್ರೀಮದಾನಂದತೀರ್ಥರ ಜನ್ಮಭೂಮಿ, ಕರ್ಮಭೂಮಿ, ತಪೋಭೂಮಿ ಎನಿಸಿದ ಉಡುಪಿಯಲ್ಲಿ ಈ ಮಧ್ವ ಮುನಿಸೇವಾ ಸಂಘ ಸಂಸ್ಥೆಯು ೧೯೨೭ ನೇ ಇಸ್ವಿಯಲ್ಲಿ ಶ್ರೀಮನ್ಮಧ್ವಾಚಾರ್ಯರ ೩೭ ಗ್ರಂಥಗಳನ್ನು ಟೀಕಾ, ಟಿಪ್ಪಣಿಗಳ ಭಾವಾರ್ಥದ ಬೆಳಕಿನಲ್ಲಿ ಭಾಷಾಂತರಿಸಿ ಕನ್ನಡ ಜನತೆಗೆ ನೀಡಬೇಕೆಂಬ ಸದುದ್ದೇಶದಿಂದ ಜನ್ಮ ತಾಳಿತು.

ಆ ವರ್ಷ ಉಡುಪಿಗೆ ಮುನ್ಸೀಫರಾಗಿ ಆಗಮಿಸಿದ ಕೊಯಂಬತ್ತೂರಿನ ಶ್ರೀ ಸಿ. ಆರ್ ಕೃಷ್ಣರಾಯರು ಇದಕ್ಕೆ ಮುಖ್ಯ ಪ್ರವರ್ತಕರಾಗಿದ್ದರು. ಆ ಕಾಲದ ಶ್ರೀ ಅದಮಾರುಮಠದ ಶ್ರೀ ವಿಬುಧಪ್ರಿಯತೀರ್ಥರೇ ಮೊದಲಾದ ಉಡುಪಿಯ ಅಷ್ಟ ಮಠಾಧೀಶರೂ, ಶ್ರೀ ಉತ್ತರಾದಿಮಠದ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರೂ, ಶ್ರೀ ವ್ಯಾಸರಾಯಮಠದ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀಪಾದಂಗಳವರೂ ಶ್ರೀ ಕಾಶೀ ಮಠದ ಶ್ರೀ ಸುಕೃತೀಂದ್ರತೀರ್ಥ ಶ್ರೀಪಾದಂಗಳವರೂ ಶ್ರೀ ಗೋಕರ್ಣ ಪರ್ತಗಾಳೀ ಜೀವೋತ್ತಮಠಾಧೀಶ ಶ್ರೀ ದ್ವಾರಕಾನಾಥ ಶ್ರೀಪಾದಂಗಳವರೂ, ಶ್ರೀ ಸುಬ್ರಹ್ಮಣ್ಯ

ಮಠದ ಶ್ರೀ ವಿದ್ಯಾಪೀಠ ಶ್ರೀಪಾದಂಗಳವರೂ ಹಾಗೂ ಇತರ ಅನೇಕ ಲೌಕಿಕ ಗೃಹಸ್ಥರೂ, ಪಂಡಿತರೂ ಈ ಸಂಸ್ಥೆಯ ನೆರವಿಗೆ ಬಂದು ನಿಂತಿದ್ದರಿಂದ ಈ ಸಂಸ್ಥೆಯು ಕೂಡಲೇ ಊರ್ಜಿತ ಸ್ಥಿತಿಗೆ ಬಂದಿತು.

ಈ ೪೦ ವರ್ಷ ಕಾಲಾವಕಾಶದಲ್ಲಿ ಶ್ರೀ ಆನಂದತೀರ್ಥರ ಸರ್ವಮೂಲ ೩೭ ಗ್ರಂಥಗಳ ಕನ್ನಡ ಅನುವಾದವನ್ನು ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳೇ ಮೊದಲಾದ ಖ್ಯಾತನಾಮ ಪಂಡಿತರಿಂದ ಸಂಪೂರ್ಣವಾಗಿ ಮಾಡಿಸಿ ಕೃತಕೃತ್ಯತೆಯನ್ನೂ, ಧನ್ಯತೆಯನ್ನೂ, ಮಾನ್ಯತೆಯನ್ನೂ ಪಡೆದಿದೆ ಈ ಮಧ್ವ ಮುನಿ ಸೇವಾ ಸಂಘ.

ಈಗ ಈ ಸಂಘವು ಜನತೆಗೆ ಬೇಕಾದ ಮತ್ತು ತೀರಿ ಹೋದ ತನ್ನ ಹಳೆಯ ಪುಸ್ತಕಗಳ ಪುನರ್ಮುದ್ರಣವನ್ನೂ ಹಾಗೂ ಶ್ರೀ ಜಯತೀರ್ಥರ ಹಾಗೂ ಶ್ರೀಗುರುರಾಜರ ಗ್ರಂಥಗಳನ್ನು ಅನುವಾದಿಸಿ ಕೊಡುವ ಗುರಿಯನ್ನು ಇರಿಸಿಕೊಂಡು ಹೊಸ ಯೋಜನೆಯನ್ನು ಮಾಡುತ್ತಲಿದೆ.

## ೧೩ ಶ್ರೀ ಮಧ್ವ ಸಿದ್ಧಾಂತ ಪ್ರಬೋಧಿನಿ ಸಂಸ್ಕೃತ ಪಾಠಶಾಲಾ ಉಡುಪಿ

ಅನೇಕ ದಶಕಗಳಿಂದ ಗುರು ಮಧ್ವ ಕ್ಷೇತ್ರವಾದ ಉಡುಪಿಯಲ್ಲಿ ಮಧ್ವ ಸಿದ್ಧಾಂತ ಗ್ರಂಥಗಳ ಹಾಗೂ ಇತರ ಶಾಸ್ತ್ರಗಳ ಅವಿಚ್ಛಿನ್ನ ಪಾಠ ಪ್ರವಚನ ಪರಂಪರೆಯನ್ನು ಈ ವರೆಗೆ ವಿಶಿಷ್ಟ ರೀತಿಯಿಂದ ನಡೆಯಿಸಿಕೊಂಡು ಬಂದ ಏಕೈಕ ಸಂಸ್ಥೆ ಎಂದರೆ ಉಡುಪಿಯ ಶ್ರೀ ಮಧ್ವ ಸಿದ್ಧಾಂತ ಪ್ರಬೋಧಿನೀ ಪಾಠ ಶಾಲೆ.

ಪುತ್ತಿಗೆ ಮಠದ ಶತಾಯುಷಿ ಶ್ರೀ ಸುಧೀಂದ್ರತೀರ್ಥ ಶ್ರೀಪಾದಂಗಳವರೇ ಮೊದಲಾದ ಉಡುಪಿಯ ಅಷ್ಟ ಮಠಾಧೀಶರ ಪ್ರೋತ್ಸಾಹನ ಹಾಗೂ ಪ್ರಭೂತ ಧನ ಸಹಾಯದಿಂದ ೧೯೦೪ನೇ ಇಸ್ವಿಯಲ್ಲಿ ಪ್ರಾರಂಭವಾಗಿ ಬೆಳೆದು ಸಹಸ್ರಾರು ಮಾಧ್ವ ತತ್ವಜ್ಞರನ್ನೂ ಮಾಧ್ವ ಪಂಡಿತರನ್ನು ಸಿದ್ಧಪಡಿಸಿದ ಈ ಸಂಸ್ಥೆಯು ಪ್ರತಿಯೊಬ್ಬ ವೈಷ್ಣವನೂ ಹೆಮ್ಮೆಪಟ್ಟು ಕೊಳ್ಳುವಂಥ ವೇದಾಂತ ವಿದ್ಯೆಯ ಕೇಂದ್ರವಾಗಿದೆ. ೧೯೧೩ ನೇ ಇಸ್ವಿಯಲ್ಲಿ ೧೫ ಜನ ಸದಸ್ಯರುಳ್ಳ S. M. S. P. ಸಭಾ ಎಂಬ ಸಂಸ್ಥೆಯು ಈ ಪಾಠಶಾಲೆಯ ಆಡಳಿತವನ್ನು ವಹಿಸಿಕೊಂಡಿತು.

ಪ್ರಾರಂಭದಲ್ಲಿ ಶ್ರೀ ಅನಂತೇಶ್ವರ ಶ್ರೀ ಚಂದ್ರಮೌಳೀಶ್ವರ ದೇವಸ್ಥಾನಗಳಲ್ಲಿ ನಡೆಯುತ್ತಲಿದ್ದ ಈ ಸಂಸ್ಕೃತ ಕಲಾ ಶಾಲೆಯು ಶ್ರೀ ಫಲಿಮಾರುಮಠದ ವೈ. ವಾ. ಶ್ರೀ ರಘುಮಾನ್ಯತೀರ್ಥರೇ ಮೊದಲಾದ ಪೀಠಾಧಿಪತಿಗಳ ಪ್ರಯತ್ನದಿಂದ ಈಗಿರುವ ದಿವ್ಯಭವ್ಯವಾದ ವಿಶಾಲ ಕಟ್ಟಡವನ್ನು ಪಡೆದು ಉತ್ಕರ್ಷವನ್ನು ಹೊಂದಿತು.

ಪಂಡಿತ ಪ್ರಕಾಂಡರಾದ ಉಡುಪಿಯ ತ್ಯಾಗಬುದ್ಧಿಯ ಅಧ್ಯಾಪಕರ ಸಂತತ ಪರಿಶ್ರಮಪೂರ್ವಕ ಪಾಠ ಪ್ರವಚನ ಪರಿಣಾಮವಾಗಿ ಈ ಸಂಸ್ಥೆಯಿಂದ ಹೊಸ ಹೊಸ ಪಂಡಿತರ ಪಡೆಗಳು ತಯಾರಾಗುತ್ತಲೇ ಇವೆ. ಶಾಸ್ತ್ರ ಪಂಡಿತರ ಒಂದು ಕಮ್ಮಟ ದಂತಿರುವ ಈ ಪಾಠಶಾಲೆಯಿಂದ ಅನೇಕಾನೇಕ ಛಾತ್ರರರು ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾ, ಸಾಹಿತ್ಯ, ಜ್ಯೋತಿಷ್ಯ, ವೇದ, ಧರ್ಮಶಾಸ್ತ್ರ ಇತ್ಯಾದಿ ವಿವಿಧ ವಿಷಯಗಳಲ್ಲಿ ಪಾರಂಗತರಾಗಿ ಮೈಸೂರಿನ ವಿದ್ವಾನ್, ಮದ್ರಾಸದ ಶಿರೋಮಣಿ ಮುಂತಾದ ಪರೀಕ್ಷೆಗಳಿಗೆ ಕಟ್ಟಿ ಉತ್ತೀರ್ಣರಾಗಿ ಉತ್ತಮೋತ್ತಮ ಪಂಡಿತರಾಗಿ ಶಾಸ್ತ್ರ ವಿದ್ಯೆಯ ಸಂಜೀವನಮಣಿಗಳಾಗಿ ಇಲ್ಲಿ ಮತ್ತು ಅಲ್ಲಲ್ಲಿ ಜ್ಞಾನಪ್ರಸಾರದ ಕಾರ್ಯವನ್ನು ಮಾಡುತ್ತಲೇ ಇದ್ದಾರೆ.

ಬಹು ವರ್ಷಗಳಿಂದ ಶಾಸ್ತ್ರಾಧ್ಯಯನ ಅಧ್ಯಾಪನಾದಿ ಕಾರ್ಯವನ್ನು ಅಖಂಡ ನಡೆಯಿಸಿಕೊಂಡು ಬರುವ ಈ ಸಂಸ್ಥೆಗೆ ಸರಕಾರದ ಶಿಕ್ಷಣ ಇಲಾಖೆಯಿಂದ ಗ್ರ್ಯಾಂಟ ಧನಸಹಾಯವು ದೊರಕುತ್ತಿರುವದರಿಂದ ಇನ್ನು ಮುಂದೆ ಈ ಸಂಸ್ಥೆಯು ಇನ್ನೂ ಹೆಚ್ಚಿನ ಅಭಿವೃದ್ಧಿಯನ್ನು ಹೊಂದುವ ನಿರೀಕ್ಷೆ ಇದೆ.

## ೧೪ ಶ್ರೀ ಭುವನೇಂದ್ರ ಸಂಸ್ಕೃತ ಮಹಾ ಪಾಠ ಶಾಲಾ ಕಾರ್ಕಳ

ಕಾಶೀಮಠದ ವಿದ್ವದ್‌ಯತಿವರೇಣ್ಯರಾದ ಶ್ರೀ ಭುವನೇಂದ್ರತೀರ್ಥ ಶ್ರೀಪಾದಂಗಳ ವರ ಪೂರ್ಣಾನುಗ್ರಹದ ಪರಿಣಾಮವಾಗಿ ಅಸ್ತಿತ್ವದಲ್ಲಿಬಂದ ಈಪಾಠಶಾಲೆಯು ಅನೇಕ ದಶಕಗಳಿಂದ ಶಾಸ್ತ್ರ ವಿದ್ಯೆಯ ಜ್ಞಾನದಾನವನ್ನು ಅವಿರತವಾಗಿ ಮಾಡುತ್ತ ಬಂದಿದೆ.

ದ್ವೈತ ವೇದಾಂತ ಹಾಗೂ ಇತರ ಷಟ್‌ಶಾಸ್ತ್ರ ವ್ಯಾಸಂಗಕ್ಕೆ ಜಿಜ್ಞಾಸು ವಿದ್ಯಾರ್ಥಿಗಳಿಗೆ ಸಕಲ ವಿಧವಾದ ಅನುಕೂಲತೆಗಳನ್ನು ಒದಗಿಸಿ ಶಿರೋಮಣಿ, ವಿದ್ವಾನ್ ಮುಂತಾದ ಪರೀಕ್ಷೆಗಳಿಗೆ ಛಾತ್ರರರನ್ನು ತರಬೇತಿಗೊಳಿಸುವ ಈ ಸಂಸ್ಥೆಯ ಹೆಸರು ದ್ವೈತ ಸಿದ್ಧಾಂತದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿಯುವದರಲ್ಲಿ ಸಂದೇಹವಿಲ್ಲ.

## ೧೫ ಶ್ರೀಗುರು ಸಾರ್ವಭೌಮ ಸಂಸ್ಕೃತ ಪಾಠ ಶಾಲಾ ಮಂತ್ರಾಲಯ

ಶ್ರೀ ರಾಘವೇಂದ್ರಸ್ವಾಮಿಗಳ ಮಠದ ಶ್ರೀ ೧೦೮ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರಿಂದ ಸ್ಥಾಪಿಸಲ್ಪಟ್ಟ ಈ ಪಾಠಶಾಲೆಯಲ್ಲಿ ಶಾಸ್ತ್ರ ಓದುವ ವಿದ್ಯಾರ್ಥಿ ಗಳಿಗೆ ಊಟ, ವಸತಿ ಎಲ್ಲ ಸೌಕರ್ಯಗಳನ್ನು ಒದಗಿಸಲಾಗುತ್ತದೆ.

ಶಿರೋಮಣಿ, ವಿದ್ವಾನ್ ಪರೀಕ್ಷೆಗಳಿಗೆ ಇಲ್ಲಿಂದ ಅನೇಕ ವಿದ್ಯಾರ್ಥಿಗಳು ಕುಳಿತು ಉತ್ತೀರ್ಣರಾಗುತ್ತಿದ್ದಾರೆ. ಮುಖ್ಯವಾಗಿ ದ್ವೈತವೇದಾಂತ, ಧರ್ಮಶಾಸ್ತ್ರ, ಸಾಹಿತ್ಯ, ಮೀಮಾಂಸಾ, ತರ್ಕ, ವ್ಯಾಕರಣ, ಜ್ಯೋತಿಷ್ಯ, ವೇದ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ವಿದ್ಯಾರ್ಥಿಗಳನ್ನು ತರಬೇತುಗೊಳಿಸಲಾಗುವದು.

## ೧೬ ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ ದಾವಣಗೇರಿ

೧೯೩೪ನೇ ಇಸ್ವಿಯಲ್ಲಿ ದ್ವೈತ ಸಿದ್ಧಾಂತದ ಪಾಠ ಪ್ರವಚನ ಮತ್ತು ಪ್ರಚಾರದ ಉದ್ದೇಶದಿಂದ ದಾವಣಗೇರಿಯ ವಕೀಲ ಬಿ. ಭೀಮರಾಯರ ಮನೆಯಲ್ಲಿಯೇ ಪ್ರಾರಂಭವಾದ ಈ ಸಂಸ್ಥೆಯು ೧೯೬೫ ನೇ ಇಸ್ವಿಯಲ್ಲಿ ತನ್ನದೇ ಆದ ಒಂದು ಸುಂದರವಾದ ಮಂದಿರವನ್ನು ನಿರ್ಮಿಸಿಕೊಂಡು ತನ್ನ ಕಾರ್ಯಕ್ರಮಗಳನ್ನೆಲ್ಲ ಅಲ್ಲಿಯೇ ಕೇಂದ್ರೀಕರಿಸಿತು.

ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಅಮೃತಹಸ್ತದಿಂದ ಶಂಕುಸ್ಥಾಪನೆ ಮಾಡಲ್ಪಟ್ಟ ಈ ಕಟ್ಟಡದಲ್ಲಿ ಈಗ ಪ್ರತಿದಿನವೂ ಪಾಠ ಪ್ರವಚನ ಉಪನ್ಯಾಸಗಳು ನಡೆಯುತ್ತಲಿದ್ದು ಶ್ರೀ ಮಧ್ವ ನವಮಿ ಮೊದಲಾದ ವಿಶೇಷ ಸಂದರ್ಭದಲ್ಲಿ ಬೇರೆ ಕಡೆಯಿಂದ ಪ್ರಸಿದ್ಧ ಪಂಡಿತರನ್ನು ಕರೆಯಿಸಿ ಉಪನ್ಯಾಸ, ಪುರಾಣ, ಶಾಸ್ತ್ರಾನುವಾದವನ್ನು ಏರ್ಪಡಿಸಲಾಗುವದು.

ಮೊದಲು ಕಲ್ಲಬಾಳು ಪ್ರಾಣದೇವರ ಸನ್ನಿಧಿಯಲ್ಲಿ ಹತ್ತು ವರ್ಷಗಳ ಕಾಲ ಶ್ರೀ ಮಧ್ವ ನವಮಿ ಮೊದಲಾದ ಸಮಾರಂಭಗಳನ್ನು ನಡೆಸುತ್ತಲಿದ್ದ ಈ ಸಂಸ್ಥೆಯು ಇತ್ತೀಚೆಗೆ ಹೆಚ್ಚು ಹೆಚ್ಚು ಜನರಿಗೆ ಉಪಯೋಗವಾಗಲೆಂದು ದಾವಣಗೇರಿಯಲ್ಲಿಯೇ ತನ್ನ ಜ್ಞಾನ ಪ್ರಯೋಜಕ ಕಾರ್ಯಗಳನ್ನು ನಡೆಯಿಸುತ್ತಲಿದೆ.

ಈ ಸಂಘದ ಕಟ್ಟಡದಲ್ಲಿ ವಿಶಾಲವಾದ ಒಂದು ಗ್ರಂಥ ಭಾಂಡಾರವಿದ್ದು ಅದರಲ್ಲಿ ಎಲ್ಲ ಧಾರ್ಮಿಕ ಗ್ರಂಥಗಳನ್ನೂ ಶೇಖರಿಸಲಾಗಿದೆ.

ಈ ಸಂಸ್ಥೆಯು ಶಾಸ್ತ್ರಾಧ್ಯಯನ, ಅಧ್ಯಾಪನ ಕಾರ್ಯಕ್ಕೆ ಪ್ರಸಿದ್ಧ ಪಂಡಿತರಿಗೆ ಅಲ್ಲಿಯೇ ವಸತಿ ಸೌಕರ್ಯ ಕಲ್ಪಿಸಿ ಕೊಟ್ಟು ಅನುಕೂಲ್ಯವನ್ನು ಒದಗಿಸಿ ಕೊಟ್ಟದ್ದಲ್ಲದೆ ಗ್ರಂಥ ಸಂಶೋಧನ, ಪ್ರಕಾಶನ ಕಾರ್ಯವನ್ನೂ ಸಮರ್ಥ ರೀತಿಯಿಂದ ನಿರ್ವಹಿಸುತ್ತಲಿದೆ.

ಭಾಗವತ ಸಾರೋದ್ಧಾರ, ಕೃಷ್ಣಾರ್ಜುನ ಸಂವಾದ, ಮುಕುಂದ ಗುಣಮಾಲಾ, ಪೂರ್ಣಪ್ರಜ್ಞ ದರ್ಶನ ಸಂಗ್ರಹ, ಉಪನ್ಯಾಸ ಭಾರತಿ, ಶ್ರೀಮದ್ಭಾಗವತ ಪ್ರದೀಪಿತ

ಸೂತ್ರಾರ್ಥಸಾರ, ಸಂಗ್ರಹರಾಮಾಯಣ, ಆಗಮಪ್ರಾಮಾಣ್ಯ, ನಾಸ್ತಿಕ್ಯನಿರಾಸ ಮುಂತಾದ ಅನೇಕ ಮೌಲಿಕ, ಅನುವಾದ ಗ್ರಂಥಗಳು ಈ ಸಂಸ್ಥೆಯ ವತಿಯಿಂದ ಪ್ರಕಟಿಸಲಾಗಿದೆ.

## ೧೭ ಶ್ರೀರಾಮಕೃಷ್ಣಪ್ಪ ದ್ವೈತ ವೇದಾಂತ ಪಾಠಶಾಲಾ ಬೆಂಗಳೂರು

ಬೆಂಗಳೂರಿನ ಶ್ರೀರಾಮಕೃಷ್ಣಪ್ಪನವರ ಪಾಠಶಾಲಾ ಸ್ಥಾಪನೆಗಾಗಿ ಒದಗಿಸಿದ ಮೂಲಧನದ ಬಡ್ಡಿಯಿಂದ ಈ ಪಾಠಶಾಲೆಯು ನಡೆಸಲ್ಪಡುತ್ತಿದೆ. ಸುಮಾರು ೫೦ ವರ್ಷಗಳಿಂದ ಚಾಮರಾಜಪೇಟೆಯ ೫ ನೇ ಬೀದಿಯ ಮಾಧ್ವ ಸಂಘದ ಆವರಣದಲ್ಲಿಯ ಸ್ವಂತ ಕಟ್ಟಡದಲ್ಲಿ ಪ್ರಸಿದ್ಧ ಪಂಡಿತರಿಂದ ನಿತ್ಯವೂ ಈ ಸಂಸ್ಥೆಯಿಂದ ವೇದ ಶಾಸ್ತ್ರ ಪಾಠಗಳು ನಡೆಯಿಸಲ್ಪಡುತ್ತವೆ.

ಬೇರೆ ಬೇರೆ ಗ್ರಾಮಗಳಿಂದ ಪ್ರಸಿದ್ಧ ಪಂಡಿತರನ್ನು ಕರೆಯಿಸಿ ದ್ವೈತ ವೇದಾಂತದ ವಿಶಿಷ್ಟ ಗ್ರಂಥಗಳ ಮೇಲೆ ಅಭ್ಯಾಸಪೂರ್ಣವಾದ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲಾಗುತ್ತಿದೆ.

ಈ ಸಂಸ್ಥೆಯಿದ ಒಂದು ಗ್ರಂಥಾಲಯವುವಿದ್ದು ಗ್ರಂಥ ಪ್ರಕಾಶನ ಕಾರ್ಯವನ್ನೂ ಜನೋಪಯೋಗಿಯಾಗುವಂತೆ ನಡೆಯಿಸಲಾಗುತ್ತಿದೆ. ಶ್ರೀಮದಾಚಾರ್ಯರ ತತ್ವ ಸಂಖ್ಯಾನ ಟಿಪ್ಪಣಿ ಸಮೇತ ಮತ್ತು ಶ್ರೀ ವಾದಿರಾಜ ಪೂಜ್ಯ ಚರಣರ ಸರಸ-ಭಾರತೀ ವಿಲಾಸ ಮತ್ತು ವಿಶೇಷ ಹಾಗೂ ಸುಮಧ್ವವಿಜಯ ಛಲಾರಿ ಟೀಕಾ ಸಹಿತ ವಿಷ್ಣುತತ್ವನಿರ್ಣಯ ಜಯತೀರ್ಥ ಟೀಕಾ ಸಹಿತ, ಮಾಧ್ವ ವೈಷ್ಣ ತ್ರಿಕಾಲ ಸಂಧ್ಯಾವಂದನ ವಿಧಿ ಮುಂತಾದ ಅನೇಕ ಗ್ರಂಥಗಳನ್ನು ಪ್ರಕಾಶನಗೊಳಿಸಲಾಗಿದೆ.

## ೧೮ ದ್ವೈತ ವೇದಾಂತ ಗ್ರಂಥಾಲಯ ವಿಜಾಪುರ

ವೈ. ವಾ. ಕೆಂಭಾವಿ ರಾಘವೇಂದ್ರರಾಯರು ಏರ್ಪಡಿಸಿದ ವಿಶ್ವಸ್ತನಿಧಿಯಿಂದ ಈ ಸಂಸ್ಥೆಯು ನಡೆಯಿಸಲ್ಪಡುತ್ತದೆ. ಈ ಗ್ರಂಥಾಲಯದಲ್ಲಿ ಮುದ್ರಿತಾಮುದ್ರಿತವಾದ ಅನೇಕ ಮಾಧ್ವ ಗ್ರಂಥಗಳೂ ಹಾಗೂ ವಿವಿಧ ಭಾಷೆಯ ಧಾರ್ಮಿಕ ಗ್ರಂಥಗಳೂ, ೧೮ ಪುರಾಣಗಳೂ ಇತರ ವೇದ ವೇದಾಂತ ಶಾಸ್ತ್ರಾದಿ ಗ್ರಂಥಗಳು ಇಲ್ಲಿ ಶೇಖರಿಸಿ ವ್ಯವಸ್ಥಿತವಾಗಿ ಇರಿಸಲ್ಪಟ್ಟಿರುತ್ತವೆ.

ಪ್ರಮಿತ ಪಂಡಿತರನ್ನು ಇಲ್ಲಿಯೇ ಇರಿಸಿಕೊಂಡು ಅವರಿಂದ ವೇದಾಂತ ಪಾಠ ಪ್ರವಚನ ನಡೆಯುವಂತೆ ಮಾಡಲಾಗುವದು.

## ೧೯ ವಾಣಿವಿಲಾಸ ಸಂಸ್ಕೃತ ಪಾಠಶಾಲಾ ಬಾಗಲಕೋಟಿ

ಕರ್ನಾಟಕದ ಸುಪ್ರಸಿದ್ಧ ಪಂಡಿತರಾದ ಶ್ರೀ ಮಳಗಿ ವೇದವ್ಯಾಸಾಚಾರ್ಯರು ತಮ್ಮ ಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರ ಆದೇಶದ ಮೇರೆಗೆ ಸುಮಾರು ೪೦ ವರ್ಷಗಳ ಹಿಂದೆ ತಮ್ಮ ಮನೆಯಲ್ಲಿಯೇ ಈ ಪಾಠಶಾಲೆಯನ್ನು ಪ್ರಾರಂಭಿಸಿದರು.

೫೦-೬೦ ವಿದ್ಯಾರ್ಥಿಗಳನ್ನು ಮನೆಯಲ್ಲಿಯೇ ಇಟ್ಟುಕೊಂಡು ಅನ್ನ ವಸ್ತ್ರ ಕೊಟ್ಟು ವಿದ್ಯಾವಂತರನ್ನಾಗಿ ಮಾಡಿದ ಶ್ರೇಯಸ್ಸು ಈ ಪಾಠಶಾಲೆಗೆ ಇರುತ್ತದೆ.

ಶ್ರೀ ಸತ್ಯಧ್ಯಾನತೀರ್ಥರ ಆಜ್ಞೆಯ ಮೇರೆಗೆ ಬಾಗಲಕೋಟೆಯ ಶ್ರೀಸತ್ಯಬೋಧ ಸ್ವಾಮಿಗಳ ಮಠದಲ್ಲಿಯೇ ಈ ಪಾಠಶಾಲೆಯನ್ನು ನಡೆಯಿಸಲಾಗುತ್ತಿದೆ. ಊರಲ್ಲಿಯ ಅನೇಕ ಗೃಹಸ್ಥರೂ ಇದರ ಲಾಭವನ್ನು ಪಡೆದಿದ್ದಾರೆ.

## ೨೦ ಪೂರ್ಣಪ್ರಜ್ಞ ಪಾಠಶಾಲಾ ಪಂಢರಪುರ

ಮಹಾರಾಷ್ಟ್ರದ ಮಹಾ ಪಂಡಿತರೆನಿಸಿದ ಪರಮಪೂಜ್ಯ ವೈ. ವಾ. ವರಖೇಡ ಪ್ರದ್ಯುಮ್ನಾಚಾರ್ಯ ಮತ್ತು ನರಸಿಂಹಾಚಾರ್ಯರಿಂದ ೪೦ ವರ್ಷಗಳ ಹಿಂದೆಯೇ ಸ್ಥಾಪಿಸಲ್ಪಟ್ಟ ಈ ಪಾಠಶಾಲೆಯಲ್ಲಿ ಒಂದು ಕಾಲದಲ್ಲಿ ನೂರಾರು ಜನ ವಿದ್ಯಾರ್ಥಿಗಳು ಇರುತ್ತಿದ್ದರು. ಕರ್ನಾಟಕ, ಮಹಾರಾಷ್ಟ್ರ ಮತ್ತು ಉತ್ತರ ಪ್ರದೇಶದ ಅನೇಕ ವಿದ್ಯಾರ್ಥಿಗಳು ಈ ಆಚಾರ್ಯರಲ್ಲಿ ದ್ವೈತ ಶಾಸ್ತ್ರಾಧ್ಯಯನ ಮಾಡಿ ಆನಂದತೀರ್ಥರ ಸಂದೇಶ ವಾಹಕರಾಗಿ ಅಲ್ಲಲ್ಲಿ ಜ್ಞಾನ ಪ್ರಸಾರಕಾರ್ಯ ಮಾಡುತ್ತಲಿದ್ದಾರೆ.

ಇಬ್ಬರೂ ಪಂಡಿತರ ತರುವಾಯ ಶ್ರೀ ಪ್ರದ್ಯುಮ್ನಾಚಾರ್ಯರ ಮಕ್ಕಳಾದ ಶ್ರೀ ಬಾಳಾಚಾರ್ಯರು ಚಂದ್ರಭಾಗಾ ನದೀ ಆಚೆಯ ಪಾಠಶಾಲಾ ಕಟ್ಟಡ ಬಿಟ್ಟು ಈಚೆ ದಂಡೆಯ ದತ್ತ ಘಾಟದಲ್ಲಿರುವ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥರ ಸನ್ನಿಧಾನದಲ್ಲಿ ಅಗ್ನಿಹೋತ್ರವನ್ನಿಟ್ಟು ವೃಂದಾವನದ ಪೂಜೆ ಮಾಡುತ್ತ ಆ ಪಾಠ ಶಾಲೆಯನ್ನು ನಡೆಯಿಸುತ್ತಲಿದ್ದಾರೆ.

## ೨೧ ವಿಷ್ಣುಪಾದ ಪಾಠಶಾಲಾ ಗಯಾ

ಗಯಾ ಗದಾಧರನ ಅರ್ಚಕರಾದ ಗಯಾವಾಡರು ಅಪ್ಪಟ ಮಾಧ್ವರಾಗಿದ್ದು ಶ್ರೀ ಸತ್ಯಧ್ಯಾನತೀರ್ಥರು ಅಲ್ಲಿಗೆ ಹೋದಾಗ ತಮ್ಮಲ್ಲಿ ಒಂದು ಮಾಧ್ವ ಪಾಠ ಶಾಲೆಯನ್ನು ಸ್ಥಾಪಿಸಬೇಕೆಂದು ಶ್ರೀಗಳವರಲ್ಲಿ ಬಿನ್ನವಿಸಿದರು.

ಶ್ರೀಪಾದಂಗಳವರು ಅಲ್ಲಿಯ ಜನರ ಅಪೇಕ್ಷೆಯ ಮೇರೆಗೆ ವಿಷ್ಣುಪಾದ ಪಾಠ ಶಾಲೆ ಪ್ರಾರಂಭಿಸಿ ವೈ. ವಾ. ವರಖೇಡ ಪ್ರದ್ಯುಮ್ನಾಚಾರ್ಯರನ್ನು ನಿಯಮಿಸಿದರು. ಕೆಲ ವರ್ಷಗಳ ಮೇಲೆ ಆಚಾರ್ಯರು ಪಂಢರಪುರಕ್ಕೆ ಬಂದ ಮೇಲೆ ಶ್ರೀ ಆದ್ಯ ಮಧ್ವಾಚಾರ್ಯರು ಕೆಲಸ ಮಾಡುತ್ತಿದ್ದರು. ಈಗಲೂ ಆ ಪಾಠ ಶಾಲೆಯು ನಡೆಯುತ್ತಲಿದೆ.

## ೨೨ ಶ್ರೀ ವರದೇಂದ್ರ ಸಾಹಿತ್ಯ ಮಂಡಲ ಲಿಂಗಸೂಗೂರು

ಕಾಟಾಪುರದ ಶ್ರೀಮಂತ ರಾಮಪ್ಪಯ್ಯ ದೇಸಾಯಿ ಇವರ ಅಧ್ಯಕ್ಷತೆಯಲ್ಲಿ ಶ್ರೀ ಗೋರೆಬಾಳ ಹನುಮಂತರಾಯರ ಪ್ರಯತ್ನದಿಂದ ರೂಪಗೊಂಡ ಈ ಸಂಸ್ಥೆಯು ಕರ್ನಾಟಕದ ಹರಿದಾಸ ವಾಙ್ಮಯ ಪ್ರಕಾಶನ ಕಾರ್ಯದಲ್ಲಿ ಅಭಿನಂದನೀಯವಾದ ಶ್ರೇಯಸ್ಸನ್ನು ಸಂಪಾದಿಸಿರುತ್ತದೆ.

ಹಳ್ಳಿ-ಪಳ್ಳಿಗಳಲ್ಲಿ, ಕ್ರಿಮಿ-ಕೀಟ, ಕಸದಕುಂಡ ಪಾಲಾಗುತ್ತಿರುವ ದಾಸ ಸಾಹಿತ್ಯವನ್ನು ಬಹು ಪರಿಶ್ರಮಪೂರ್ವಕವಾಗಿ ಸಂಗ್ರಹಿಸಿ ಸಂಶೋಧಿಸಿ ವ್ಯಾಪಕ ಪ್ರಮಾಣದಲ್ಲಿ ಪ್ರಕಾಶನಗೊಳಿಸಿದ ಮಹತ್ಕಾರ್ಯವನ್ನು ಈ ಸಂಸ್ಥೆಯು ಸಾಧಿಸಿರುತ್ತದೆ.

ಹರಿಕಥಾಮೃತಸಾರ ಪಂಚರತ್ನ ಪ್ರಕಾಶಿಕಾ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸ, ಮೋಹನದಾಸ, ಪ್ರಾಣೇಶದಾಸ ಮುಂತಾದ ದಾಸ ಧುರೀಣರ ಪದ ಪದ್ಯ, ಉಗಾ ಭೋಗ, ಸುಳಾದಿ ಮುಂತಾದವುಗಳನ್ನು ಇದಂ ಪ್ರಾಥಮ್ಯೇನ ಈ ಸಂಸ್ಥೆಯು ಪ್ರಕಟಪಡಿಸಿದ್ದು ದಾಸ ಸಾಹಿತ್ಯದ ಪುನರುದ್ಧಾರದ ಸುವರ್ಣ ಯುಗಕ್ಕೆ ನಾಂದಿಯಾಗಿದೆಂದು ಹೇಳಬಹುದು.

## ೨೩ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ

ವೈ. ವಾ. ಪಾವಂಜೆ ಗುರುರಾಯರು ಉಡುಪಿಯಲ್ಲಿ ೧೯೦೮ ನೇ ಇಸ್ವಿಯಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಿ ಅನೇಕ ನಿತ್ಯೋಪಯುಕ್ತವಾದ ಆಚಾರ ಕಾಂಡ ಹಾಗೂ ಜ್ಞಾನಕಾಂಡಗಳ ಸರಿಯಾದ ತಿಳುವಳಿಕೆಯನ್ನು ಜನರಿಗೆ ಮಾಡಿಕೊಡುವ ಅನೇಕ ಪುಸ್ತಕಗಳನ್ನು ಪ್ರಸಿದ್ಧಿಸಿದ್ದಾರೆ.

ದಾಸ ಸಾಹಿತ್ಯದ ಅಧ್ವರ್ಯುಗಳಾದ ಶ್ರೀ ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸ ಮುಂತಾದವರ ಪದ ಪದ್ಯ ಸುಳಾದಿ, ಉಗಾಭೋಗಗಳನ್ನೂ ಪ್ರಕಟಪಡಿಸಿದ್ದಾರೆ.

## ೨೪ ಆನಂದತೀರ್ಥ ಗ್ರಂಥಮಾಲಾ

ಇದು ಶ್ರೀ ಮಧ್ವ ಸಿದ್ಧಾಂತ ಗ್ರಂಥಾಲಯವನ್ನು ನಡೆಯಿಸಿದ ಶ್ರೀ ಪಾವಂಜೆ ಗುರುರಾಯರ ಶ್ರೀ ಮಧ್ವಾಚಾರ್ಯರ ಗ್ರಂಥಗಳ ಅಧಿಕೃತವಾದ ಕನ್ನಡ ಭಾಷಾಂತರ ಪುಸ್ತಕಗಳನ್ನು ಪ್ರಕಟಿಸಲಕ್ಕಾಗಿ ರೂಪಿಸಿದ ಮತ್ತೊಂದು ಗ್ರಂಥ ಮಾಲೆಯಾಗಿದೆ.

ಇದರಲ್ಲಿ ದ್ವಾದಶ ಸ್ತೋತ್ರ, ಸದಾಚಾರ ಸ್ಮೃತಿ, ಕೃಷ್ಣಾಮೃತ ಮಹಾರ್ಣವ, ಮುಂತಾದ ಆಚಾರ್ಯರ ಚಿಕ್ಕ ಪುಟ್ಟ ಕೃತಿಗಳ ಸರಸ ಸುಂದರವಾದ ಅನುವಾದ ಪುಸ್ತಿಕೆಗಳು ಪ್ರಕಟವಾಗಿದ್ದು ಶ್ರೀಮದಾನಂದತೀರ್ಥರ ತಂತ್ರಸಾರ ಸಂಗ್ರಹ ಗ್ರಂಥವು ಕನ್ನಡದಲ್ಲಿ ಪಡಿಮೂಡಿ ಬಂದದ್ದು ಅತ್ಯಂತ ಉಪಯುಕ್ತವಾಗಿದೆ.

## ೨೫ ಶ್ರೀ ವಾದಿರಾಜೀಯ ಗ್ರಂಥ ಪ್ರಕಾಶನ ಸಮಿತಿ ಉಡುಪಿ

ಉಡುಪಿಯ ಅಷ್ಟ ಮಠಾಧೀಶರೂ ಹಾಗೂ ಶ್ರೀ ಭಂಡಾರಕೇರಿ ಮಠಾಧೀಶ ಶ್ರೀಪಾದಂಗಳವರ ಅನುಗ್ರಹ ಆಶೀರ್ವಾದಗಳಿಂದ ಪ್ರಾರಂಭವಾದ ಈ ಸಮಿತಿಯು ಶ್ರೀ ವಾದಿರಾಜ ಗುರುಸಾರ್ವಭೌಮರ ಎಲ್ಲ ಗ್ರಂಥಗಳನ್ನೂ, ಟೀಕಾ ಟಿಪ್ಪಣಿಗಳನ್ನೂ ಪ್ರಕಟಿಸುವ ಹೆಗ್ಗುರಿಯನ್ನಿಟ್ಟುಕೊಂಡು ಕಾರ್ಯಪ್ರವೃತ್ತವಾಗಿರುತ್ತದೆ.

ಈ ಸಮಿತಿಯ ದ್ವಾರಾ ಶ್ರೀ ಗುರುರಾಜರ ಶ್ರುತಿತತ್ವ ಪ್ರಕಾಶಿಕಾ, ಹರಿ ಭಕ್ತಿ ಲತಾ ಮುಂತಾದ ಸ್ವತಂತ್ರ ಕೃತಿಗಳಲ್ಲದೆ ಮಹಾಭಾರತ ತಾತ್ಪರ್ಯ ನಿರ್ಣಯದ ಶ್ರೀ ವಾದಿರಾಜರ ಭಾವಪ್ರಕಾಶಿಕಾ ಟೀಕೆಯೂ, ಸುಧಾ, ತತ್ವ ಪ್ರಕಾಶಿಕೆಗಳಿಗೆ ಶ್ರೀ ವಾದಿರಾಜ ಶ್ರೀ ಚರಣರು ಬರೆದ ಗುರ್ವರ್ಥ ದೀಪಿಕಾ ಎಂಬ ಟಿಪ್ಪಣಿಗಳೂ ಮತ್ತು ಉಳಿದ ಉಪನಿಷತ್ ಭಾಷ್ಯ ಟಿಪ್ಪಣಿಗಳೂ ಲಕ್ಷಾಲಂಕಾರ ಗ್ರಂಥವೂ ಮುದ್ರಿತ ವಾಗಿರುತ್ತವೆ.

## ೨೬ ಶ್ರೀ ರಾಮತತ್ವ ಪ್ರಕಾಶಿಕಾ ಬೆಳಗಾಂವಿ

ಕರ್ನಾಟಕದಲ್ಲಿ ಧಾರ್ಮಿಕ ಗ್ರಂಥಗಳನ್ನು ಪ್ರಕಾಶನಗೊಳಿಸುವ ಮಹಾ ಸಾಹಸವನ್ನು ರಾಮತತ್ವ ಪ್ರಕಾಶಿಕೆ ಮುದ್ರಾಣಲಯದ ಒಡೆಯರಾದ ಶ್ರೀ ಆಬಾಜಿ ರಾಮಚಂದ್ರ ಸಾವಂತರವರು ಕೈಕೊಂಡರು.

ಅವರು ಶ್ರೀ ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯ ಟೀಕಾಸಹಿತ, ಪ್ರಮಾಣ ಪದ್ಧತಿ, ಮುಂತಾದ ಅನೇಕ ಉಪಯುಕ್ತವಾದ ಆಚಾರ ವಿಚಾರ ಗ್ರಂಥಗಳನ್ನು ಪ್ರಕಟಪಡಿಸಿದರು. ಪುರಾಣ, ವ್ರತ, ಕಥಾ, ಸ್ತೋತ್ರ ಮುಂತಾದ ವಿವಿಧ ಧಾರ್ಮಿಕ ಪುಸ್ತಕಗಳು ಇವರಿಂದ ಬೆಳಕು ಕಂಡವು.

## ೨೭ ದ್ವೈತ ವೇದಾಂತ ಕಾರ್ಯಾಲಯ
## ಶನಿವಾರ ಪೇಟೆ ೫೮, ಪುಣೆ ನಂ. ೨

ಈಗ ೨೫ ವರ್ಷಗಳಿಂದ ಮಹಾರಾಷ್ಟ್ರದಲ್ಲಿ ದ್ವೈತ ವೇದಾಂತದ ಪ್ರಸಾರಕ್ಕಾಗಿ ಏಕೈಕ ವೀರರಾಗಿ ಹೋರಾಡುತ್ತಿರುವ ಅವಧಾನಿ ರಾಮಾಚಾರ್ಯರು ದ್ವೈತ ಸಿದ್ಧಾಂತ ಕಾರ್ಯಾಲಯದಿಂದ 'ದ್ವೈತ ಸಿದ್ಧಾಂತಕೇಸರಿ' ಎಂಬ ಮಾಸ ಪತ್ರಿಕೆಯನ್ನು ಮರಾಠಿ ಯಲ್ಲಿ ಹೊರಡಿಸುತ್ತಲಿದ್ದಾರೆ.

ಈ ಕಾರ್ಯಾಲಯದಲ್ಲಿ ದ್ವೈತ ವೇದಾಂತ ಒಂದು ಗ್ರಂಥಾಲಯವನ್ನೂ ಜಯ ತೀರ್ಥ ಮುದ್ರಣಾಲಯ ಎಂಬ ಮುದ್ರಣ ಶಾಲೆಯನ್ನು ನಡೆಯಿಸುತ್ತಲಿರುವ ಶ್ರೀ ಅವಧಾನಿಯವರು ಶ್ರೀ ಮಧ್ವಾಚಾರ್ಯರ ಜೀವನ ಮತ್ತು ಸಂದೇಶ, ಶ್ರೀ ವ್ಯಾಸ ರಾಜತೀರ್ಥರು ಶ್ರೀ ಸತ್ಯಧ್ಯಾನತೀರ್ಥರ ಚರಿತ್ರೆ ಮುಂತಾದ ಅನೇಕ ಪುಸ್ತಕಗಳನ್ನು ಮರಾಠಿ ಭಾಷೆಯಲ್ಲಿ ಬರೆದು ಪ್ರಸಿದ್ಧಿಸಿದ್ದಾರೆ.

ಪುಣ್ಯತಿಥಿ ಆಚರಣೆ, ಉತ್ಸವ ಸಮಾರಂಭಾನುಷ್ಠಾನ, ಪತ್ರಿಕಾ, ಪುಸ್ತಕಾದಿ ಪ್ರಕಾಶನ, ಉಪನ್ಯಾಸ ಮುಂತಾದವುಗಳಿಂದ ಮಹಾರಾಷ್ಟ್ರ ದೇಶದಲ್ಲಿ ಮಾಧ್ವ ತತ್ವಜ್ಞಾನ ಪ್ರಚಾರವನ್ನು ಈ ಸಂಸ್ಥೆಯು ಅವಿತರವಾಗಿ ಮಾಡುತ್ತಲಿದೆ.

## ೨೮ ಇಂದಿರಾಕಾಂತ ಸಂಸ್ಕೃತ ಪಾಠಶಾಲೆ
## ಪರ್ತಗಾಳಿಮಠ ಗೋವಾ

ಶ್ರೀ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠಾಧೀಶರಾದ ಶ್ರೀ ಶ್ರೀ ದ್ವಾರಕಾನಾಥ ಶ್ರೀಪಾದ ಒಡೆಯರು ಗೋವಾ ಪ್ರಾಂತದ ಪರ್ತಗಾಳಿಯ ತಮ್ಮ ಮಠದಲ್ಲಿ ಇಂದಿರಾ ಕಾಂತ ಸಂಸ್ಕೃತ ಪಾಠಶಾಲೆಯನ್ನು ೩೦ ವರ್ಷಗಳ ಹಿಂದೆ ಸ್ಥಾಪಿಸಿ ನಡೆಯಿಸಿಕೊಂಡು ಬಂದಿರುತ್ತಾರೆ.

ದ್ವೈತ ವೇದಾಂತ, ನ್ಯಾಯ, ಮೀಮಾಂಸಾ, ವ್ಯಾಕರಣ, ಸಾಹಿತ್ಯ, ವೇದ, ಜ್ಯೋತಿಷ್ಯ ಮುಂತಾದ ಶಾಸ್ತ್ರಗಳ ವ್ಯಾಸಂಗವು ಇಲ್ಲಿ ನಡೆಯುತ್ತಿದೆ.

ಇಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಊಟ, ವಸತಿಗಳನ್ನು ಉಚಿತವಾಗಿ ಕೊಟ್ಟು ಪಾಠ ಹೇಳುವ ಪರಿಪಾಠವಿದೆ.

## ೨೯ ಶ್ರೀ ಪೂರ್ಣಪ್ರಜ್ಞ ಸಂಸ್ಕೃತ ಪಾಠಶಾಲೆ
## ಮುಂಬೈ ವಡಾಲಾ

ಶ್ರೀ ಗೋಕರ್ಣ ಪರ್ತಗಾಳಿ ಮಠಾಧೀಶರಾದ ಶ್ರೀ ಶ್ರೀ ದ್ವಾರಕಾನಾಥ ಶ್ರೀಪಾದ ಒಡೆಯರು ಮುಂಬೈ ವಾಡಾಲಾದಲ್ಲಿ ದ್ವಾರಕಾನಾಥ ಭವನ ಎಂಬ ಭವ್ಯ ಮಂದಿರವನ್ನು ನಿರ್ಮಿಸಿದ್ದಾರೆ.

ಶ್ರೀ ಶ್ರೀಪಾದಂಗಳವರು ಸಂಸ್ಕೃತ ಶಿಕ್ಷಣ ಪ್ರಸಾರ ಸಮಿತಿ ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿ ಅವರ ಮುಖಾಂತರ ಶ್ರೀ ಪೂರ್ಣಪ್ರಜ್ಞ ಸಂಸ್ಕೃತ ಪಾಠಶಾಲೆಯನ್ನು ನಡೆಯುಸಿತ್ತಲಿದ್ದಾರೆ. ಅನೇಕ ವಿದ್ಯಾರ್ಥಿಗಳು ಸಂಸ್ಕೃತವನ್ನು ಅಂದರೆ ಸಾಹಿತ್ಯ, ವೇದಾಂತಗಳನ್ನು ಓದುತ್ತಲಿದ್ದಾರೆ.

## ೩೦ ಸದ್ಧರ್ಮ ಗ್ರಂಥಮಾಲಾ

ಗೌಡಸಾರಸ್ವತ ಸಮಾಜದ ಪಂಡಿತರಾದ ಗೋವಾ ಪ್ರಾಂತದ ಶ್ರೀ ಅನಂತ ಜೀವೋತ್ತಮ ಪ್ರಭುಶಾಸ್ತ್ರಿಗಳು ಈ ಗ್ರಂಥಮಾಲೆಯ ಮುಖಾಂತರ ದ್ವೈತ ಮಂಡನ, ದ್ವೈತಾರ್ಥ ಮಂಜರಿ, ಜಯತೀರ್ಥ ವಿಜಯ ಮೊದಲಾದ ದ್ವೈತಮತ ಪ್ರಸಾರಕ ಗ್ರಂಥಗಳನ್ನು ಮರಾಠಿಯಲ್ಲಿ ಬರೆದಷ್ಟನ್ನು ಸುಬ್ಬಾಭಟ್ಟ ಅಣ್ಣಭಟ್ಟ ಶೀಸಿ ಇವರು ಪ್ರಕಾಶ ಪಡಿಸಿದರು.

ಈ ಗ್ರಂಥಮಾಲೆಯ ದ್ವೈತ ಮಂಡನ ಪುಸ್ತಕವು ಧಾರವಾಡ ವೃತ್ತ ಎಂಬ ಪತ್ರಿಕೆಯಲ್ಲಿ ಪ್ರಕಟವಾದ ವೇದಾಂತಸಾರ ಎಂಬ ಅದ್ವೈತ ಗ್ರಂಥದ ಖಂಡನ ರೂಪ ವಾಗಿರುತ್ತದೆ. ಇದು ಅತ್ಯಂತ ಉಪಯುಕ್ತವಾಗಿದೆಂದು ಮಧ್ವಸಿದ್ಧಾಂತ ಉನ್ನಾಹಿನೀ ಸಭೆಯ ಸಂಸ್ಥಾಪಕರಾದ ಶ್ರೀ ಕಂಚಿ ಸುಬ್ಬರಾಯರು ಕನ್ನಡದಲ್ಲಿ ಪಾಂಘ್ರೀ ಸಮೀರಣಾಚಾರ್ಯರೇ ಮೊದಲಾದವರಿಂದ ಬರೆಯಿಸಿ ಇದನ್ನು ಪ್ರಕಟಪಡಿಸಿದರು.

## ೩೧ ತಮಿಳನಾಡ ಮಾಧ್ವ ಸಂಘ ನಾಚಾರಕೊಯಿಲ

ಈ ಸಂಸ್ಥೆಯು ಬಹು ವರ್ಷಗಳಿಂದ ತಮಿಳ ನಾಡಿನಲ್ಲಿ ಮಧ್ವ ಸಿದ್ಧಾಂತ ಪ್ರಚಾರ ಕಾರ್ಯವನ್ನು ಬಹು ದಕ್ಷತೆಯಿಂದ ಮಾಡುತ್ತಲಿದೆ. ಪ್ರತಿ ವರ್ಷ ಬೇರೆ ಬೇರೆ ಸ್ಥಳಗಳಲ್ಲಿ ಈ ಸಂಸ್ಥೆಯು ಮಧ್ವಸಿದ್ಧಾಂತ ಸಮ್ಮೇಲನಗಳನ್ನು ಏರ್ಪಡಿಸಿ ಜನರಲ್ಲಿ ದ್ವೈತಪ್ರಜ್ಞೆಯು ಜಾಗರೂಕವಾಗಿ ಉಳಿಯುವಂತೆ ಪ್ರಯತ್ನಿಸುತ್ತದೆ.

ತಮಿಳ ನಾಡಿನಲ್ಲಿ ಎಲ್ಲ ಕಡೆಗೂ ಹರಡಿರುವ ಅನೇಕ ಮಾಧ್ವ ಸಂಘ ಸಂಸ್ಥೆಗಳನ್ನೆಲ್ಲ ಏಕ ಮುಖವಾಗಿ ಸಂಘಟಿಸಿ ಆಗಾಗ ಸಂಯುಕ್ತ ಸಭಾ ಸಮ್ಮೇಲನಗಳನ್ನು ಏರ್ಪಡಿಸಿ ಅದರ ಮುಖಾಂತರ ಅಖಿಲ ತಮಿಳ ನಾಡಿನ ಮಾಧ್ವರಲ್ಲಿ ಸ್ನೇಹ ಸೌರ್ದ ಸಂಪರ್ಕಗಳು ಬೆಳೆಯುವಂತೆ ಪ್ರಯತ್ನ ಮಾಡುತ್ತಲಿದೆ.

ಈ ವರ್ಷ ೨೭-೪-೬೯ ರಂದು ಶ್ರೀ ಮುಷ್ಣಮಂ ಕ್ಷೇತ್ರದಲ್ಲಿ ತಮಿಳನಾಡಿನ ೬ನೇ ಮಧ್ವಸಿದ್ಧಾಂತ ಸಮ್ಮೇಲನವನ್ನು ವೈಭವ ಪೂರ್ಣವಾಗಿ ನೆರವೇರಿಸಲಾಯಿತು.

ಪ್ರತಿಯೊಂದು ಜಿಲ್ಲೆಯಲ್ಲಿಯೂ ಒಂದೊಂದು ಜಿಲ್ಲಾಮಟ್ಟದ ಮಾಧ್ವ ತತ್ವ ಜ್ಞಾನ ಸಮ್ಮೇಲನವನ್ನು ಕರೆದು ಪ್ರತಿಯೊಬ್ಬ ಮಾಧ್ವನ ಅಂತರಂಗದಲ್ಲಿಯೂ ಆಚಾರ್ಯರ ಸಿದ್ಧಾಂತದ ಅರಿವನ್ನು ಮೂಡಿಸುವ ಮಹಾ ಸಂಕಲ್ಪ ಗೈದು ಆ ದಿಶೆಯಲ್ಲಿ ಈಗಾಗಲೇ ಹೆಜ್ಜೆಯನ್ನು ಇರಿಸಿದ್ದಾಗಿದೆ. ಈ ಜಿಲ್ಲಾವಾರ ಮಾಧ್ವ ಸಮ್ಮೇಲನಗಳನ್ನು ಸಂಘಟಿಸಲಿಕ್ಕಾಗಿ ಶ್ರೀ ರಾಜಗೋಪಾಲರಾವ ನಾಚಾರಕೊಯಿಲ ಇವರ ಅಧ್ಯಕ್ಷತೆಯಲ್ಲಿ ಸಮಿತಿ ನಿರ್ಮಾಣವಾಗಿರುತ್ತದೆ.

ಈ ರೀತಿಯಾಗಿ ಸರ್ವರೀತಿಯಿಂದಲೂ ಎಲ್ಲ ಮಾಧ್ವರ ಸಂಘಟನೆಯನ್ನು ಮಾಡುವ ವಿರಾಡ್ ಯೋಜನೆಯನ್ನು ಇಟ್ಟುಕೊಂಡಿರುವ ಈ ತಮಿಳನಾಡ ಮಾಧ್ವ ಸಂಘಕ್ಕೆ--

ಚಿಂತಲವಾಡಿಯ ಸರ್ವಶ್ರೀ ಆರ್. ಹಿರಣ್ಯರಾವ ಅಧ್ಯಕ್ಷರಾಗಿಯೂ ಆರ್. ರಾಜಗೋಪಾಲರಾವ ನಾಚಾರಕೊಯಿಲ. ಕೆ. ಎಸ್. ನಾಗರಾಜರಾವ ಮಯೂರಮ್, ಎಸ್. ಕೃಷ್ಣರಾವ ಉದಮಲಪೇಟ, ಕೆ. ವ್ಹಿ. ಲಕ್ಷ್ಮಣರಾವ ಕೊಯಿಮತ್ತೂರ, ಎಸ್. ಸುಬ್ಬರಾವ ಸೇಲಮ್, ಎಸ್. ವೇದಗಿರಿರಾವ ಗುಡ್ಡಲೂರು, ಎಂ. ಶಾರಂಗಪಾಣಿರಾವ ಇವರೆಲ್ಲರೂ ಉಪಾಧ್ಯಕ್ಷರಾಗಿಯೂ ಆರಿಸಲ್ಪಟ್ಟಿದ್ದಾರೆ. ಹಾಗೂ ಸರ್ವಶ್ರೀ ಆರ್. ವಾಸುದೇವನ್ ಇವರು ಕಾರ್ಯದರ್ಶಿಗಳಾಗಿಯೂ ಸಿ. ಎಲ್. ವೆಂಕಟರಮಣ ಗುಡ್ಲೂರ, ಆರ್. ವಿಜಯೀಂದ್ರನ್ ಕುಂಭಕೋಣ ಇವರಿಬ್ಬರೂ ಸಹ ಕಾರ್ಯದರ್ಶಿಗಳಾಗಿದ್ದು ಎಸ್. ನಾರಾಯಣರಾವ ಮಯೂರಮ್ ಇವರು ಕೋಶಾಧ್ಯಕ್ಷರಾಗಿದ್ದಾರೆ.

### ೩೨ ಮಾಧ್ವ ಯುವಕ ಸೇವಾ ಸಂಘ ದಕ್ಷಿಣ ಅರ್ಕಾಟ ಜಿಲ್ಲೆ

ಈ ಸಂಸ್ಥೆಯು ದಕ್ಷಿಣ ಆರ್ಕಾಟ ಜಿಲ್ಲೆಯಲ್ಲಿ ಮಾಧ್ವ ತರುಣರ ಮನಸ್ಸಿನಲ್ಲಿ ಧರ್ಮಶ್ರದ್ಧೆಯು ಕುದುರಿಸಿ ಮಧ್ವ ಸಿದ್ಧಾಂತದಲ್ಲಿ ವಿಶ್ವಾಸವನ್ನು ಹುಟ್ಟಿಸುವದಕ್ಕಾಗಿ ಮಹಾ ಪ್ರಯತ್ನವನ್ನು ಮಾಡುತ್ತಲಿದೆ.

### ೩೩ ಮಾಧ್ವ ಸಿದ್ಧಾಂತ ಸಭಾ ತ್ರಿಚನಾಪಲ್ಲಿ

ಈ ಸಂಸ್ಥೆಯು ವಿವಿಧ ಮುಖಗಳಿಂದ ಮಧ್ವ ಸಿದ್ಧಾಂತದ ಹಾಗೂ ಮಾಧ್ವರ ಉನ್ನತಿಗಾಗಿ ಶ್ರಮಿಸುತ್ತಲಿದೆ.

### ೩೪ ಮಾಧ್ವ ಯುವಕ ಸಂಘ ಬೇಲುಪಲ್ಲಿ

ಚಿತ್ತೂರ ಜಿಲ್ಲೆಯ ಬೇಲುಪಲ್ಲಿಯಲ್ಲಿ ಪ್ರಾರಂಭವಾದ ಈ ಸಂಸ್ಥೆಯು ಮಾಧ್ವ ಯುವಕರಲ್ಲಿ ವೈಷ್ಣವೀ ಭಾವನೆಯನ್ನು ಜಾಗ್ರತಗೊಳಿಸಿ ದ್ವೈತ ದರ್ಶನದಲ್ಲಿ ನವಯುವಕರಿಗೆ ವಿಶ್ವಾಸ ಹುಟ್ಟುವಂತೆ ಪ್ರಯತ್ನ ಮಾಡುತ್ತಲಿದೆ.

### ೩೫ ವಾಣೀವಿಹಾರ ಸಂಸ್ಕೃತ ವಿದ್ಯಾಲಯ ಮಾತುಂಗಾ ಮುಂಬೈ

ಉತ್ತರಾದಿ ಮಠದ ಶ್ರೀ ಸತ್ಯಧ್ಯಾನತೀರ್ಥರ ಪ್ರೇರಣೆಯಂತೆ ಅವರ ಅಚ್ಚು ಮೆಚ್ಚಿನ ಶಿಷ್ಯರಾದ ಶ್ರೀ ಮಾಹುಲಿ ಗೋಪಾಲಾಚಾರ್ಯರು ಮುಂಬೈಯಲ್ಲಿ ೨೮ ವರ್ಷಗಳ ಹಿಂದೆ ಈ ಸಂಸ್ಥೆಯನ್ನು ಪ್ರಾರಂಭಿಸಿದರು.

ನಿತ್ಯ ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾ, ಸಾಹಿತ್ಯ, ಅವಿರತ ಪಾಠ, ಕನ್ನಡ, ಹಿಂದಿ, ಇಂಗ್ಲೀಷ ಭಾಷೆಗಳಲ್ಲಿ ಉಪನ್ಯಾಸ, ಮಧ್ವ ನವಮಿ, ಮತ್ತು ದೊಡ್ಡವರ ಪುಣ್ಯ ದಿನದ ಆಚರಣೆ ಮುಂತಾದ ವಿವಿಧ ಕಾರ್ಯಕ್ರಮ ಗಳಿಂದ ಮುಂಬೈ ಮಹಾನಗರದಲ್ಲಿ ಇರುವ ಮಾಧ್ವರೆಲ್ಲರಿಗೂ ಇದೊಂದು ಹೆಮ್ಮೆಯ, ಹಾಗೂ ಆತ್ಮೀಯ, ಉಪಯುಕ್ತ ಸಂಸ್ಥೆಯಾಗಿ ಮಾರ್ಪಟ್ಟಿದೆ.

ಈ ವರೆಗೆ ಈ ಸಂಸ್ಥೆಯಲ್ಲಿ ೫೦–೬೦ ವಿದ್ಯಾರ್ಥಿಗಳು ಓದಿ ಶಾಸ್ತ್ರ, ಸಾಹಿತ್ಯ ಗಳಲ್ಲಿ ಪರಿಣತರಾಗಿ ಅಲ್ಲಲ್ಲಿ ಸಂಸ್ಕೃತ, ಸಂಸ್ಕೃತಿ ಪ್ರಚಾರ ಮಾಡುತ್ತಲಿದ್ದಾರೆ.

ಬಂದ ವಿದ್ಯಾರ್ಥಿಗಳಿಗೆಲ್ಲ ಉಚಿತವಾಗಿ ಅಶನ, ವಸನ, ವಸತಿ, ಪುಸ್ತಕ ಮೊದಲಾದವುಗಳನ್ನು ಉಚಿತವಾಗಿ ಕೊಟ್ಟು ಇಲ್ಲಿ ಪಾಠ ಹೇಳಲಾಗುತ್ತಿದೆ.

ಈಗ ೨ ವರ್ಷಗಳ ಹಿಂದೆ ಮುಂಬೈ ನಗರದ ಮಹಾಜನರೆಲ್ಲರು ಸೇರಿ ಈ ವಾಣಿ ವಿಹಾರ ಸಂಸ್ಕೃತ ವಿದ್ಯಾಲಯದ ಬೆಳ್ಳಿ ಮಹೋತ್ಸವವನ್ನು ಅತ್ಯಂತ ವೈಭವ, ವಿಜೃಂಭಣೆಗಳಿಂದ ಆಚರಿಸಿದರು.

ಈ ಸಂಸ್ಥೆಯು ನಿರಂತರ ಜ್ಞಾನದಾನ ಮಾಡುತ್ತ ಮುಂದುವರೆಯಬೇಕೆಂಬ ಸದುದ್ದೇಶದಿಂದ ಲಕ್ಷಾವಧಿ ರೂಪಾಯಿ ನಿಧಿಯನ್ನು ಶೇಖರಿಸಿ ವಿದ್ಯಾಲಯದ ಸಂಸ್ಥಾಪಕರೂ, ಸಂಚಾಲಕರೂ ಆದ ಪಂಡಿತರಾಜ ಶ್ರೀ ಗೋಪಾಲಾಚಾರ್ಯರಿಗೆ ನಿಧಿರೂಪವಾಗಿ ಸಮರ್ಪಿಸಲಾಯಿತು.

ಈ ವಿದ್ಯಾಲಯದ ಪರವಾಗಿ ಮಾಯಾವಾದ ಖಂಡನ ಪರಶು ಟೀಕಾ ಸಹಿತ ಮತ್ತು ಸಂಧ್ಯಾ ರಹಸ್ಯ ಮುಂತಾದ ಪುಸ್ತಕಗಳನ್ನು ಪ್ರಕಟಿಸಲಾಗಿದೆ.

### ೪೬ ಶ್ರೀ ಗುರುರಾಜ ಸಂಸ್ಕೃತ ಪಾಠಶಾಲೆ ಧಾರವಾಡ

ಧಾರವಾಡದ ಶ್ರೀ ಹಾವನೂರ ನಾರಾಯಣಾಚಾರ್ಯರು ಶ್ರೀ ಗುರುರಾಜ ಸಂಸ್ಕೃತ ಪಾಠ ಶಾಲೆಯನ್ನು ೧೦–೧೨ ವರ್ಷಗಳಿಂದ ಉತ್ತಮ ರೀತಿಯಿಂದ ನಡೆಯಿಸಿಕೊಂಡು ಬರುತ್ತಲಿದ್ದಾರೆ. ಅನೇಕ ವಿದ್ಯಾರ್ಥಿಗಳು ಮಂತ್ರ, ಸ್ತೋತ್ರ, ಕಾವ್ಯ, ಯಾಜ್ಞಿಕ ಮುಂತಾದವುಗಳನ್ನು ಅಧ್ಯಯನ ಮಾಡುತ್ತಲಿದ್ದಾರೆ.

### ೪೭ ಶ್ರೀ ಸತ್ಯಪ್ರಮೋದತೀರ್ಥ ಸಂಸ್ಕೃತ ಪಾಠಶಾಲಾ ಜಮಖಂಡಿ

ಉತ್ತರಾದಿ ಮಠಾಧೀಶ ಶ್ರೀಪಾದಂಗಳವರ ಸಹಾಯದಿಂದ ನಡೆಯಿಸಲ್ಪಡುವ ಈ ಪಾಠಶಾಲೆಯಲ್ಲಿ ಅನೇಕ ವಿದ್ಯಾರ್ಥಿಗಳೂ, ಲೌಕಿಕ ಗೃಹಸ್ಥರೂ ಅಧ್ಯಯನ ಮಾಡುತ್ತಲಿದ್ದಾರೆ. ಸಂಚಾಲಕರಾದ ಶ್ರೀ ಗಲಗಲಿ ಶುಕಾಚಾರ್ಯರು ನಿತ್ಯ ಪುರಾಣ, ಪಾಠ, ಉಪನ್ಯಾಸಗಳನ್ನು ಪಾಠಶಾಲೆಯ ಮುಖಾಂತರ ಮಾಡುತ್ತಲಿದ್ದಾರೆ.

**೩೮ ಸಚ್ಛಾಸ್ತ್ರ ಪಾಠಶಾಲಾ ಹೊಸಪೇಟೆ**

ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಆಜ್ಞಾನುಸಾರವಾಗಿ ನೂತನವಾಗಿ ನಿರ್ಮಿತವಾದ ಭವ್ಯ ಕಟ್ಟಡದಲ್ಲಿ ಈ ಪಾಠ ಶಾಲೆಯು ನಡೆಯುತ್ತಲಿದೆ.

ಮಹಾ ಪಂಡಿತರಾದ ಶ್ರೀ ವೆಂಕಣ್ಣಾಚಾರ್ಯ ಬನ್ನಿಗೋಳ ಇವರು ಅಧ್ಯಾಪಕ ರಾಗಿದ್ದು ಪ್ರೌಢ ವಿದ್ಯಾರ್ಥಿಗಳಿಗೆ ಶಾಸ್ತ್ರೀಯ ಉದ್ಗ್ರಂಥಗಳ ಪಾಠ ಇಲ್ಲಿ ಹೇಳಲಾಗುವದು.

ಇಲ್ಲಿಯ ಉತ್ತರಾದಿ ಮಠದ ಹೊಸ ಕಟ್ಟಡದಲ್ಲಿ ದ್ವೈತ ದರ್ಶನದ ದೊಡ್ಡ ಗ್ರಂಥ ಭಾಂಡಾರವನ್ನು ಸ್ಥಾಪಿಸಲಾಗಿದ್ದು ಅದರಲ್ಲಿ ಅತ್ಯಪೂರ್ವವಾದ ಅಸಂಖ್ಯ ಪ್ರಾಚೀನ ಮಾಧ್ವ ಗ್ರಂಥಗಳನ್ನು ಸಂಗ್ರಹಿಸಲಾಗಿದೆ. ಅವುಗಳನ್ನೆಲ್ಲ ರೇಶ್ಮೆ ಬಟ್ಟೆ ಗಳಿಂದ ಸುತ್ತಿ ಭದ್ರವಾದ ಬೀರುಗಳಲ್ಲಿ ಇರಿಸಲಾಗಿದ್ದು ಅವುಗಳ ಸರ್ವಂಕಷ ಕ್ಯಾಟ ಲಾಗನ್ನು ತಯಾರಿಸುವ ಯೋಜನೆ ಇದೆ.

**೩೯ ಶ್ರೀ ವಿದ್ಯಾಧೀಶ ಮಾನಸ್ಕ್ರಿಪ್ಟ ಲಾಯಬ್ರರಿ ಧಾರವಾಡ**

ಬೆಂಗಳೂರ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ಮುಖ್ಯ ಪ್ರಾಚಾರರಾದ ಶ್ರೀ ಕೆ. ಟಿ. ಪಾಂಡುರಂಗಿ ಎಂ. ಎ. ಯವರು ೧೯೪೮ ನೇ ಇಸ್ವಿಯಲ್ಲಿ ಕೈಬರಹದ ಪುಸ್ತಕಗಳ ಗ್ರಂಥಾಲಯವನ್ನು ಧಾರವಾಡದಲ್ಲಿ ಪ್ರಾರಂಭಿಸಿದರು. ೧೯೬೧ನೇ ಇಸ್ವಿ ಯಲ್ಲಿ ಇದನ್ನು ರಜಿಸ್ಟರ ಮಾಡಿಸಲಾಯಿತು.

ಮೈಸೂರು ಪ್ರಾಂತದ ಹಳ್ಳಿಹಳ್ಳಿಗಳಲ್ಲಿರುವ ಪ್ರಾಚೀನ ಪಂಡಿತರ ಮನೆ ಮನೆತನ ಗಳಲ್ಲಿ ಕೃಶಿಸಿ ನಶಿಸಿ ಹೋಗುತ್ತಿರುವ ತಾಡವಾಲೆ ಪುಸ್ತಕಗಳನ್ನೂ ಕೋರಿ ಕಾಗದಗಳ ಮೇಲೆ ಬರೆದ ಅಪೂರ್ವ ಟೀಕಾ ಟಿಪ್ಪಣೆಗಳನ್ನು ಸಂಗ್ರಹಿಸಿ ತಂದು ಅವುಗಳನ್ನು ಆ ಪಾದ ಮೌಲಿಪರ್ಯಂತ ಸಂಶೋಧಿಸಿ ಅಚ್ಚುಕಟ್ಟಾಗಿ ಇರಿಸಲಾಯಿತು.

ಅನಂತರ ಆ ಎಲ್ಲ ಓಲೆಗರಿಯ ಮುದ್ರಿತಾಮುದ್ರಿತ ಜೀರ್ಣ ಶೀರ್ಣ ಪೂರ್ಣಾ ಪೂರ್ಣ ಪುಸ್ತಕಗಳನ್ನೆಲ್ಲ ಪರಿಶೋಧಿಸಿ, ಸಂಶೋಧಿಸಿ, ವರ್ಗೀಕರಿಸಿ ಕೇಂದ್ರ ಸರಕಾರದ ಸಹಾಯದಿಂದ ವಿವರಣಾತ್ಮಕ ಸೂಚೀ ಪತ್ರ (ಡಿಸ್ಕ್ರಿಪ್‌ಟಿವ್ಹ ಕ್ಯಾಟಲಾಗ) ವನ್ನು ಸಿದ್ಧಪಡಿಸಿ ಮುದ್ರಿಸಲಾಗಿದೆ.

ಅದ್ವೈತನವನೀತ ಮೊದಲಾದ ಕೆಲವು ಪುಸ್ತಕಗಳನ್ನು ಪ್ರಕಟಿಸಲಾಗಿದೆ.

## ೪೦ ಶ್ರೀ ಸುಧಾ ಮಾಸಪತ್ರಿಕೆ ಬೆಂಗಳೂರು

ಉತ್ತರಾದಿ ಮಠದ ಶ್ರೀ ೧೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಕೃಪಾಪೋಷಿತವಾದ ಈ ಮಾಸ ಪತ್ರಿಕೆಯು ೧೬ ವರ್ಷಗಳಿಂದ ಅಧ್ಯಾತ್ಮ ಪ್ರಪಂಚ ದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತ ಬಂದಿದೆ.

ಈ ಪತ್ರಿಕೆಯಲ್ಲಿ ಭಾಗವತ, ಬ್ರಹ್ಮಸೂತ್ರ ಭಾಷ್ಯ, ಗೀತಾ ಪ್ರತಿಪದಾರ್ಥ ಚಂದ್ರಿಕಾ ಮುಂತಾದ ಅತ್ಯುಪಯುಕ್ತವಾದ ಕನ್ನಡ ಭಾವಾರ್ಥವನ್ನು ಧಾರವಾಹಿ ಯಾಗಿ ಪ್ರಕಟಿಸುತ್ತಲಿರುವದು ಮಾಧ್ವ ಜಿಜ್ಞಾಸುಗಳಿಗೆ ಪರಮೋಪಕಾರವಾಗಿದೆ. ಶ್ರೀ ಎಚ್. ಕೆ. ರಂಗನಾಥಾಚಾರ್ಯರ ಸಂಪಾದಕತ್ವದಲ್ಲಿ ಹೊರಡುತ್ತಲಿದೆ.

## ೪೧ ಶ್ರೀ ಸತ್ಯಧ್ಯಾನ ವಿದ್ಯಾಪೀಠ, ಮುಂಬೈ

ಶ್ರೀ ಉತ್ತರಾದಿ ಮಠದ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಸಾನುಗ್ರಹ ಬೆಂಬಲದಿಂದ ಪ್ರಾರಂಭವಾದ ಈ ಸಂಸ್ಥೆಯು ಮಧ್ವ ಮಠದ ಸರ್ವತೋ ಮುಖ ಅಭಿವೃದ್ಧಿಗಾಗಿ ಅನೇಕ ವರ್ಷಗಳಿಂದ ಪ್ರಯತ್ನಿಸುತ್ತಿದೆ.

ಕೆಲವು ವರ್ಷ ಪಂಢರಪುರದಲ್ಲಿ ಪ್ರೌಢ ಸಂಸ್ಕೃತ ಪಾಠಶಾಲೆಯನ್ನು ನಡೆ ಯಿಸುತ್ತಲಿದ್ದ ಈ ವಿದ್ಯಾ ಪೀಠವು ಈಗ ಜಮಖಂಡಿ, ಹೊಸಪೇಟೆ, ಗಲಗಲಿ, ಮುಂಬೈ ಮೊದಲಾದ ಕಡೆಗಳಲ್ಲಿ ವೇದಾಂತ ಪಾಠಶಾಲೆಗಳನ್ನು ಸ್ಥಾಪಿಸಿ ಪಂಡಿತ ಪೋಷಣ ಕಾರ್ಯವನ್ನು ಮಾಡುತ್ತಲಿದೆ.

ಅನೇಕ ಕಡೆಗಳಲ್ಲಿ ಪ್ರತಿವರ್ಷ ಜ್ಞಾನಸತ್ರಗಳನ್ನು ನಡೆಯಿಸಿ ಅಲ್ಲಲ್ಲಿ ಮಾಧ್ವ ರಲ್ಲಿ ದ್ವೈತ ಪ್ರಜ್ಞೆಯನ್ನು ಜಾಗೃತಗೊಳಿಸುವದಲ್ಲದೆ, ಮುಂಬೈಯಲ್ಲಿ ದೊಡ್ಡದಾದ ಗ್ರಂಥ ಭಾಂಡಾರವನ್ನು ನಿರ್ಮಿಸಲಾಗಿದೆ. ಸಂಶೋಧನೆ, ಪ್ರಕಾಶನಾದಿ ಕಾರ್ಯಗಳು ಅವಿರತವಾಗಿ ನಡೆದಿರುತ್ತವೆ.

ಈಗಾಗಲೇ ೨೦-೨೫ ಮಾಧ್ವ ಪ್ರಾಚೀನ ಗ್ರಂಥಗಳು ಪ್ರಕಟವಾಗಿದ್ದು ಅವುಗಳಲ್ಲಿ ಶ್ರೀ ಪದ್ಮನಾಭತೀರ್ಥರ ಗೀತಾ ತಾತ್ಪರ್ಯ ನಿರ್ಣಯ ಪ್ರಕಾಶಿಕಾ, ಶ್ರೀ ರಘೂತ್ತಮತೀರ್ಥ ಶ್ರೀಪಾದಂಗಳವರ ಅನುವ್ಯಾಖ್ಯಾನ ನ್ಯಾಯಮಾಲಾ, ಪ್ರಮೇಯದೀಪಿಕಾ ಭಾವಬೋಧ, ಶ್ರೀ ಸತ್ಯವ್ರತತೀರ್ಥರ ನ್ಯಾಯಸುಧಾ ವಿವೃತ್ತಿ, ಶ್ರೀ ಸತ್ಯನಾಥತೀರ್ಥರ ಋಗ್‌ಭಾಷ್ಯ ಟೀಕಾ ಪ್ರಕಾಶ (ರೂಪಾವತಾರ) ಕರ್ಮ ನಿರ್ಣಯ ಟೀಕಾ ಟಿಪ್ಪಣಿ, ಶ್ರೀ ಶ್ರೀನಿವಾಸತೀರ್ಥರ ತತ್ವ ಪ್ರಕಾಶಿಕಾ ವಿವರಣ ಮುಂತಾದ ಅನೇಕ ಪುಸ್ತಕಗಳನ್ನು ಪ್ರಕಟಿಸಲಾಗಿದೆ.

ರಜಿಸ್ಟರ ಮಾಡಿದ ಈ ಸಂಸ್ಥೆಯ ಚಾಲಕರಾದ ಶ್ರೀ ಮಾಹುಲಿ ಗೋಪಾಲಾ ಚಾರ್ಯರು ಪ್ರತಿವರ್ಷ ಪಂಢರಪುರದಲ್ಲಿ ಶ್ರೀ ಸತ್ಯಧ್ಯಾನತೀರ್ಥರ ಆರಾಧನೆಯ ಕಾಲದಲ್ಲಿ ಒಂದು ವಿದ್ವತ್ಸಭೆಯನ್ನು ಏರ್ಪಡಿಸುವರು.

ಬೆಳಗಾವಿಯಲ್ಲಿ ಶ್ರೀ ಗಲಗಲಿ ರಾಮಾಚಾರ್ಯರ ಸಂಪಾದಕತ್ವದಲ್ಲಿ 'ವಿದ್ಯಾ' 'ಮಧುರವಾಣಿ' ಸಂಸ್ಕೃತ ಮಾಸ ಪತ್ರಿಕೆ ನಡೆಯಿಸಿ ಈಗ ಪ್ರಾಚೀನ ಗ್ರಂಥ ಪ್ರಕಾಶನ, ಹಾಗೂ ಜ್ಞಾನ ಸತ್ರಗಳಲ್ಲಿ ಸರ್ವ ಪ್ರಯತ್ನಗಳನ್ನು ಕೇಂದ್ರಿಕರಿಸಲಾಗಿದೆ.

## ೪೨ ಶ್ರೀ ವಿದ್ಯಾಮಾನ್ಯ ಸಂಸ್ಕೃತ ಪಾಠಶಾಲಾ, ಕೊಯಿಮತ್ತೂರ

ಶ್ರೀ ೧೦೮ ಶ್ರೀ ಭಂಡಾರಕೇರಿ ಶ್ರೀಪಾದಂಗಳವರ ಪ್ರೇರಣಾನುಸಾರ ಕೊಯಿ ಮತ್ತೂರಿನ ಆಸ್ತಿಕ ಜನರಪೇಕ್ಷೆಯ ಮೇರೆಗೆ ಪ್ರಾರಂಭಿಸಲ್ಪಟ್ಟ ಈ ಪಾಠಶಾಲೆಯು ೨-೩ ದಶಕಗಳಿಂದ ಜ್ಞಾನದ ನಂದಾ ದೀವಿಗೆಯನ್ನು ಹೊತ್ತು, ಮಾಧ್ವ ತತ್ವದ ಕಿರಣಗಳ ಬೆಳಕನ್ನು ಎಲ್ಲೆಡೆಗೂ ಚೆಲ್ಲುತ್ತಲಿದೆ.

ಇಲ್ಲಿಯ ವಿದ್ವಾನ್ ಅಧ್ಯಾಪಕರಾದ ಶ್ರೀ ಬಿ. ವಾದಿರಾಜಾಚಾರ್ಯರು ಕೊಯಿ ಮತ್ತೂರನಲ್ಲಿಯೆ ಅನೇಕ ಲೌಕಿಕ, ವೈದಿಕ ಜಿಜ್ಞಾಸುಗಳಿಗೆ ಆಚಾರ್ಯರ ಗ್ರಂಥಗಳ ಪಾಠಹೇಳಿ ತಮಿಳ ನಾಡಿನಲ್ಲಿಯೇ ದ್ವೈತ ದರ್ಶನದ ಅರಿವು ಜನ ಸಾಮಾನ್ಯರ ಹೃದಯದಲ್ಲಿ ಅರಳುವಂತೆ ಮಾಡಿದ್ದಾರೆ.

## ೪೩ ವೇದ ಪುರಾಣ ಸಾಹಿತ್ಯಮಾಲಾ ಗದಗ

ನಾಲ್ಕು ವೇದ, ೧೮ ಪುರಾಣ, ಉಪಪುರಾಣ, ಬ್ರಾಹ್ಮಣ ಆರಣ್ಯಕಾದಿ ಪ್ರಾಚೀನ ವೇದಶಾಸ್ತ್ರ, ಪುರಾಣ ವಾಙ್ಮಯವನ್ನೆಲ್ಲ ಸರಳಗನ್ನಡದಲ್ಲಿ ಸುಲಭ ಬೆಲೆಯಲ್ಲಿ ಎಲ್ಲರಿಗೂ ದೊರಕುವಂತೆ ಮಾಡುವ ಉದ್ದೇಶದಿಂದ ಈ ಗ್ರಂಥಮಾಲೆಯು ೧೯೬೮ ನೇ ಇಶ್ವಿ ಆಗಷ್ಟ ತಿಂಗಳಲ್ಲಿ ಶ್ರೀ ಪಂಢರೀನಾಥಾಚಾರ್ಯ ಗಲಗಲಿಯವರಿಂದ ಪ್ರಾರಂಭಿಸ ಲ್ಪಟ್ಟಿತು.

ಈಗ ವಿಷ್ಣು ಪುರಾಣ ಗ್ರಂಥದ ಭಾಷಾಂತರ ಕಾರ್ಯವು ಪೂರ್ಣ ಮುಗಿದಿದ್ದು ೫೨೦ ಪುಟದ ಗ್ರಂಥವಾಗಿ ಪ್ರಕಟವಾಗಿರುತ್ತದೆ.

ಪ್ರಸ್ತುತ ವರಾಹ ಪುರಾಣದ ಮುದ್ರಣವು ಪ್ರಾರಂಭವಾಗಿರುತ್ತದೆ. ಪ್ರತಿ ವರ್ಷವೂ ೧೨೦೦ ಪುಟದ ವೇದಪುರಾಣ ಸಾಹಿತ್ಯವನ್ನು ಈ ವೇದಪುರಾಣ ಸಾಹಿತ್ಯಮಾಲೆಯ ಮುಖಾಂತರ ಪ್ರಕಟಿಸಲಾಗುವದು.

## ೪೪ ಹರಿದಾಸ ಭಾರತಿ ಗ್ರಂಥರತ್ನಮಾಲಾ ಬೆಂಗಳೂರು

ಹರಿದಾಸರತ್ನ ಗೋಪಾಲದಾಸರು ಈ ಮಾಲೆಯ ಮುಖಾಂತರ ದಾಸಶ್ರೇಷ್ಠರ ಪದ-ಪದ್ಯ ಸುಳಾದಿ, ಉಗಾಭೋಗ ಮುಂತಾದ ಅಪೂರ್ವ ಕೃತಿರತ್ನಗಳನ್ನು ಬೆಳಕಿಗೆ ತರುತ್ತಲಿದ್ದಾರೆ.

ಶ್ರೀ ಜಗನ್ನಾಥದಾಸರ ತತ್ವಸುವಾಲಿ ಎಂಬ ಪುಸ್ತಕವನ್ನು ಶ್ರೀ ಬಿ. ಭೀಮರಾವ ಡಾವಣಗೇರಿ ಇವರ ಕನ್ನಡ ವ್ಯಾಖ್ಯಾನದೊಂದಿಗೆ ಪ್ರಕಟಿಸಲಾಗಿದ್ದು, ಹರಿದಾಸರ ಉಗಾಭೋಗಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸಿರುವರು.

## ೪೫ ವೈದಿಕ ಗ್ರಂಥ ಪ್ರಕಾಶನ ಸಮಿತಿ, ಗದಗ.

ಬಾಗಲಕೋಟೆಯ ವೇದ ವಿದ್ವಾಂಸರಾದ ಶ್ರೀ ಬುರ್ಲಿ ರಾಘವೇಂದ್ರಾಚಾರ್ಯರು ಗದುಗಿಗೆ ಬಂದ ಬಳಿಕ ವೈದಿಕ ಗ್ರಂಥ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿ ನಿತ್ಯ ನೈಮಿತ್ತಿಕ ಧರ್ಮ ಕಾರ್ಯಗಳಿಗೆ ಉಪಯುಕ್ತವಾದ ಅನೇಕ ಚಿಕ್ಕ-ಚಿಕ್ಕ ಗ್ರಂಥಗಳನ್ನು ಪ್ರಕಟಪಡಿಸಿದ್ದಾರೆ.

ದಶಮಸ್ಕಂದಭಾಗವತಸ್ವಾಹಾಕಾರ, ಋಗ್ ಯಜುರ್ವೇದಿಯ ಶ್ರಾದ್ಧ ಪ್ರಯೋಗ, ವೈಷ್ಣವೀಯ ನಿತ್ಯಾನ್ಹಿಕ ಪದ್ಧತಿ ಮುಂತಾದ ಅನೇಕ ಗ್ರಂಥಗಳು ಈಗಾಗಲೇ ಮುದ್ರಿತ, ಪ್ರಕಾಶಿತವಾಗಿರುತ್ತವೆ.

## ೪೬ ದಾಸಾಶ್ರಮ, ರಾಜಾಜಿ ನಗರ ಬೆಂಗಳೂರು.

ಶ್ರೀ ಭದ್ರಗಿರಿ ಕೇಶವದಾಸರು ಮತ್ತು ಶ್ರೀ ಭದ್ರಗಿರಿ ಅಚ್ಯುತದಾಸ ಬಂಧುಗಳು ದಾಸ ಪಂಥ, ದಾಸ ಸಾಹಿತ್ಯ, ಭಕ್ತಿ ಮಾರ್ಗ ಪ್ರಚಾರ ಮಾಡುವ ಮಹೋದ್ದೇಶದಿಂದ ಈ ದಾಸಾಶ್ರಮವನ್ನು ೧೯೬೦ ನೇ ಇಸ್ವಿಯಲ್ಲಿ ಸ್ಥಾಪನೆ ಮಾಡಿರುವರು.

ಇಲ್ಲಿ ದಾಸರ ಕುಲದೈವವಾದ ಶ್ರೀ ಪಾಂಡುರಂಗ ವಿಠ್ಠಲ ಮೂರ್ತಿ ಮತ್ತು ಹರಿದಾಸ ಪರಂಪರೆಯ ಆಚಾರ್ಯ ಪುರುಷರಾದ ಶ್ರೀ ಪುರಂದರ ದಾಸರ ಶಿಲಾ ಪ್ರತಿಮೆಯನ್ನೂ ಪ್ರತಿಷ್ಠಿಸಿದ್ದಾರೆ. ಈ ದಾಸ ಬಂಧುಗಳು ಇಲ್ಲಿ ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಲನವನ್ನು ಜರುಗಿಸಿದರು. ಈ ಆಶ್ರಮದಿಂದ ದಾಸವಾಣಿ ಎಂಬ ಕನ್ನಡ ಮಾಸ ಪತ್ರಿಕೆಯನ್ನು ಹೊರಡಿಸಿ ಹರಿದಾಸ ಸಾಹಿತ್ಯವನ್ನು ಪ್ರಚಾರ ಮಾಡುತ್ತಲಿರುವರು. ಇನ್ನೂ ಅನೇಕ ಹರಿದಾಸ ಸಾಹಿತ್ಯದ ಪುಸ್ತಕಗಳನ್ನೂ ಪ್ರಕಟಿಸಿರುವರು. ಕೀರ್ತನ ಕಾಲೇಜನ್ನು ಪ್ರಾರಂಭಿಸಿ ಈಗಾಗಲೇ ಕೆಲವು ನೂತನ ಕೀರ್ತನಕಾರರನ್ನು ಸಿದ್ಧಪಡಿಸಿರುವರು.

## ೪೭ ಶ್ರೀ ಮನ್ಮಥ್ವವಿಲಾಸ ಪುಸ್ತಕಾಲಯ, ಕುಂಭಕೋಣ

ಪ್ರಾಯಃ ಮಧ್ವಮತದ ಎಲ್ಲ ಪ್ರಸಿದ್ಧೋಪಲಬ್ಧ ಪುಸ್ತಕಗಳನ್ನು ಮುದ್ರಿಸಿದ ಪುಣ್ಯಾತ್ಮರೆಂದರೆ ಕುಂಭಕೋಣದ ದಿ. ಟಿ. ಆರ್. ಕೃಷ್ಣಾಚಾರ್ಯರು.

ಮಧ್ವ ಶಾಸ್ತ್ರವನ್ನು ಓದುವ ಹಾಗೂ ಹೇಳುವ ಮತ್ತು ಪರಾಮರ್ಶ ಮಾಡ ಬಯಸುವ ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಮತ್ತು ವಿಮರ್ಶಕರಿಗೂ ಈಗ ನೂರಿನ್ನೂರು ವರ್ಷಗಳ ಹಿಂದೆ ಆಗುವ ತೊಂದರೆ ತ್ರಾಸುಗಳ ಕಲ್ಪನೆಕೂಡ ಇಂದಿನವರಿಗೆ ಬರಲಾರದು.

ಮುದ್ರಿತ ಪುಸ್ತಕಗಳಿಲ್ಲದೆ ಅಲ್ಲಲ್ಲಿದ್ದ ಒಂದೆರಡು ಕೈ ಬರಹದ ಪ್ರತಿಗಳನ್ನೆ ಆ ಪುಸ್ತಕದ ಯಜಮಾನರು ಕೊಟ್ಟರೆ ಮಾತ್ರ ಅವರಿಂದ ಇಸಿದುಕೊಂಡು ಓರೆದು ಕೊಂಡು ಓದಬೇಕಾಗುತ್ತಿತ್ತು. ಇಷ್ಟು ಶ್ರಮ ಪಡಲಾರದ ಎಷ್ಟೋ ಜನರು ಅಧ್ಯ ಯನವನ್ನು ಬಿಟ್ಟು ಬಿಡುತ್ತಿದ್ದರು. ಜಿಜ್ಞಾಸುಗಳ ಈ ಸಂಕಷ್ಟವನ್ನು ಕಂಡು ಸ್ವಯಂ ಮಧ್ವ ಸಿದ್ಧಾಂತವನ್ನು ಅಧ್ಯಯನ ಮಾಡಿ ಅದರ ಅತ್ಯಂತ ಅಭಿಮಾನಿ ಗಳಾದ ದಿ. ಟಿ. ಆರ್. ಕೃಷ್ಣಾಚಾರ್ಯರು ಮಾಧ್ವ ಗ್ರಂಥಗಳನ್ನೆಲ್ಲ ಮುದ್ರಿಸಿ ಬಿಡಬೇಕೆಂದು ಸಂಕಲ್ಪಿಸಿದರು.

ಆದರೆ ಈ ಕಾರ್ಯದಲ್ಲಿ ಅವರಿಗೆ ಎದುರಾದ ವಿಘ್ನ ವಿಚಿತ್ರವಾಗಿದ್ದವು. ಪವಿತ್ರವಾದ ಶ್ರೀ ಮಧ್ವಾಚಾರ್ಯರ ಗ್ರಂಥಗಳನ್ನು ಶೂದ್ರ ಮಳೆ ಜೋಡಿಸುವವರ ಕೈಯಲ್ಲಿ ಕೊಟ್ಟು ಮುದ್ರಾ ರಾಕ್ಷಸನ ಒಡಲಿನಲ್ಲಿಟ್ಟು ಪ್ರಕಟಪಡಿಸಿಬಿಟ್ಟರೆ ಅವುಗಳ ಪಾವಿತ್ರ್ಯವು ಹಾಳಾಗುತ್ತದೆಂದು ಕೆಲವರು ವಿರೋಧಿಸಿದರೆ ಮತ್ತೆ ಕೆಲವು ಕಟ್ಟಾ ಸನಾತನಿಗಳು ಮುದ್ರಣ ಮಾಡುವದರಿಂದ ಹೊಲೆ–ಹದಿನೆಂಟು ಜಾತಿಯ ಜನರೆಲ್ಲರೂ ನಮ್ಮ ಮಾಧ್ವ ಗ್ರಂಥಗಳನ್ನು ಕೊಂಡು ಓದುವಂತಾಗಿ ಆ ಪಾಪಕ್ಕೆ ಮುದ್ರಕರೂ, ಪ್ರಕಾಶಕರೂ, ಮುದ್ರಣಕ್ಕಾಗಿ ತಮ್ಮಲ್ಲಿಯ ಪಾಂಡು ಲಿಪಿಯ ಗ್ರಂಥಗಳನ್ನು ಕೊಟ್ಟವರೂ ಪಾತ್ರರಾಗುವರೆಂದು ಹೆದರಿ ಮುದ್ರಣ ಕಾರ್ಯವನ್ನೇ ಪ್ರತಿಭಟಿಸು ತ್ತಿದ್ದರು.

ಇಷ್ಟೆಲ್ಲ ವಿರೋಧಿ ಕೋಟಿಯ ಚಕ್ರವ್ಯೂಹಗಳನ್ನು ದಾಟಿ ಮಧ್ವ ಮತ ಪ್ರಸಾರವಾಗಬೇಕೆಂಬ ಸದುದ್ದೇಶದಿಂದ ಶ್ರೀ ಟಿ. ಆರ್. ಕೃಷ್ಣಾಚಾರ್ಯರು ಮನೆ–ಮನೆ ಸುತ್ತಿ, ಮಠ–ಮಠ ಅಲೆದು, ಕಂಡವರಿಗೆಲ್ಲ ಕೈ ಮುಗಿದು, ಪಂಡಿತರಿಗೆಲ್ಲ ಬೇಡಿಕೊಂಡು ಕತ್ತಲೆಯ ಕೋಣೆಯಲ್ಲಿ ಕಟ್ಟಿ ಒಗೆದ ಮಾಧ್ವ ಗ್ರಂಥಗಳನ್ನೆಲ್ಲ ಅಂಧಕಾರ ಬಂಧ ನಿವೃತ್ತಿ ಮಾಡಿಸಿ ಮುದ್ರಿಸಿ ಪ್ರಕಾಶಗೊಳಿಸಿದರು.

ಆ ಕಾಲದಲ್ಲಿ ಅತ್ಯುತ್ತಮವಾದ ಮುದ್ರಣವನ್ನು ಮಾಡುವಲ್ಲಿ ಹೆಸರಾದ ಮುಂಬೈ ನಿರ್ಣಯಸಾಗರ ಪ್ರೆಸ್ಸಿನಲ್ಲಿಯೇ ಪ್ರಾಯಃ ಎಲ್ಲ ಮಾಧ್ವ ಗ್ರಂಥಗಳನ್ನು ಅಚ್ಚುಕಟ್ಟಾಗಿ, ಸ್ವಚ್ಛ-ಸುಂದರವಾಗಿ ಪ್ರಾಯಃ ಪರಿಶುದ್ಧವಾಗಿಯೂ ಮುದ್ರಿಸಿ ಕುಂಭಕೋಣದಲ್ಲಿಯ ತಮ್ಮ ಮಧ್ವವಿಲಾಸ ಪುಸ್ತಕಾಲಯದಲ್ಲಿ ಪ್ರಕಾಶ ಪಡಿಸಿ ಬೆಲೆಗೆ ದೊರೆಯುವಂತೆ ಮಾಡಿದರು.

ಮುಂದೆ ಅನೇಕ ಜನರು ಮಾಧ್ವ ಗ್ರಂಥಗಳನ್ನು ಮುದ್ರಿಸಿದರೂ ಇಷ್ಟು ಶುದ್ಧ ವಾಗಿ ತಪ್ಪಿಲ್ಲದೆ ಸುಂದರವಾಗಿ ಯಾರಿಗೂ ಮುದ್ರಿಸಲಿಕ್ಕಾಗಲಿಲ್ಲ. ಅದಕ್ಕಾಗಿ ಅತ್ಯಂತ ಜಾಗ್ರತಿಯನ್ನು ವಹಿಸಿದ ಕೃಷ್ಣಾಚಾರ್ಯರು ಬೇಡಿದಷ್ಟು ಸಂಬಳವಿತ್ತು ಅನೇಕ ಜನ ಪಂಡಿತರನ್ನು ಇಟ್ಟು ಬೇರೆ ಬೇರೆ ಪ್ರತಿಗಳನ್ನು ಸಂಶೋಧಿಸಿ ಶುದ್ಧ ಪ್ರತಿಯನ್ನು ಸಿದ್ಧ ಪಡಿಸಿ ಮುಂಬೈಯಲ್ಲಿ ಮುದ್ರಣದ ವ್ಯವಸ್ಥೆ ಮಾಡಿದ್ದರು.

ಮುಂಬೈಯಲ್ಲಿಯೇ ಕೆಲವು ದಕ್ಷಿಣದ ಪಂಡಿತರನ್ನಿಟ್ಟು ಮಧ್ವಶಾಸ್ತ್ರ ಪರಿಣತ ರಾದ ಅವರಿಂದಲೇ ಪ್ರೂಫ್ ತಿದ್ದುವದನ್ನು ಮಾಡಿಸುತ್ತಿದ್ದರು.

ಇತ್ತೀಚಿನ ಕಾಲದಲ್ಲಿ ಶ್ರೀ ಸತ್ಯಧ್ಯಾನರ ಸುವರ್ಣ ಯುಗದಲ್ಲಿ ಮಧ್ವಶಾಸ್ತ್ರದ ಸರ್ವತೋಮುಖ ಪ್ರಚಾರ, ಪಾಠ, ಪ್ರವಚನ, ಅಧ್ಯಯನ, ಅಧ್ಯಾಪನಾದಿಗಳು ಭರ ಭರಾಟಗೆ ಟಿ. ಆರ್. ಕೃಷ್ಣಾಚಾರ್ಯರ ಸುಲಭ ಪ್ರಾಪ್ಯವಾದ ಮುದ್ರಿತ ಪುಸ್ತಕಗಳೂ ಕಾರಣವಾದವೆಂದು ಹೇಳಬಹುದು.

ಸರ್ವಮೂಲ, (ಶ್ರೀ ಮಧ್ವಾಚಾರ್ಯರ ಎಲ್ಲ ಗ್ರಂಥಗಳು) ಶ್ರೀ ಜಯತೀರ್ಥರ ಶ್ರೀ ಮನ್ನ್ಯಾಯ ಸುಧಾ, ಪರಿಮಳಾ, ವಾಕ್ಯಾರ್ಥಚಂದ್ರಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ, ಭಾವದೀಪ, ಚಂದ್ರಿಕಾ, ಪ್ರಕಾಶ, ನ್ಯಾಯಾಮೃತ, ಶ್ರೀಮದಾಚಾರ್ಯರ ದಶಪ್ರಕರಣ ಟೀಕಾ ಟಿಪ್ಪಣಿಗಳು, ಮಧ್ವಮಂತ್ರಾರ್ಥರತ್ನಾಕರ, ದಶೋಪನಿಷದ್ ಭಾಷ್ಯ, ಮುಂತಾದ ಮುಖ್ಯ ಮುಖ್ಯವಾದ ಎಲ್ಲ ಮಾಧ್ವ ಗ್ರಂಥ ಗಳನ್ನು ಟೀಕಾ ಟಿಪ್ಪಣಿ ಸಹಿತ ಮುದ್ರಿಸಲಾಯಿತು.

ಇವಲ್ಲದೆ ಭಾಗವತ, ಭಾರತ, ರಾಮಾಯಣ ಮುಂತಾದ ಸರ್ವ ವೈದಿಕ ಸಾಮಾನ್ಯವಾದ ಮಾನ್ಯ ಗ್ರಂಥಗಳೂ ಅಲ್ಲಲ್ಲಿ ಮುದ್ರಿತವಾಗಿದ್ದರೂ ಅದ್ವೈತ, ವಿಶಿಷ್ಟಾ ದ್ವೈತ ಪಾಠಾನುಸಾರಿಯಾಗಿ ಮುದ್ರಿತವಾಗಿದ್ದರಿಂದ ಮಾಧ್ವರಿಗೆ ಅನುಪಯುಕ್ತವೇ ಆಗಿದ್ದವು. ಅದನ್ನು ನೋಡಿ ಮನನೊಂದ ದಿ. ಟಿ. ಆರ್. ಕೃಷ್ಣಾಚಾರ್ಯರು ಆ ಎಲ್ಲ ಪುರಾಣ ಗ್ರಂಥಗಳನ್ನು ಮಾಧ್ವ ಪಾಠಾನುಸಾರಿಯಾಗಿ ಮತ್ತೆ ಮುದ್ರಿಸಿ ಪರಮೋಪ ಕಾರ ಮಾಡಿದ್ದಾರೆ.

ಇವಲ್ಲದೆ ಮಾಧ್ವರ ಆಚಾರ, ಮತ್ತು ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನಕ್ಕೆ ಉಪಯುಕ್ತವಾಗುವ ಕರ್ಮಕಾಂಡದ ಪುಸ್ತಕಗಳನ್ನೂ, ಜ್ಞಾನ ಕಾಂಡದ ಪುಸ್ತಕಗಳನ್ನೂ, ಅನೇಕ ಧಾರ್ಮಿಕ ಕೃತಿಗಳನ್ನೂ ಪ್ರಕಾಶ ಪಡಿಸಿದ ದಿ. ಟಿ. ಆರ್. ಕೃಷ್ಣಾಚಾರ್ಯರ ಕುಂಭಕೋಣದ ಮಧ್ವವಿಲಾಸ ಗ್ರಂಥಾಲಯದ ಹೆಸರು— ವೈಷ್ಣವರ ಸಾರಸ್ವತ ಇತಿಹಾಸದಲ್ಲಿ ಸ್ಥಿರ ನಕ್ಷತ್ರದಂತೆ ಚಿರಸ್ಥಾನವಾಗಿ ಬೆಳಗುವದರಲ್ಲಿ ಸಂದೇಹವಿಲ್ಲ.

## ೪೮ ಗುರುಕೃಪಾ ಗ್ರಂಥಮಾಲಾ, ಮೈಸೂರು.

ಶ್ರೀ ಗೋವಿಂದರಾಯರು ಗುರುಗೋವಿಂದ ವಿಠ್ಠಲನಾಮದಿಂದ ಈ ಗ್ರಂಥ ಮಾಲೆಯಲ್ಲಿ ಅನೇಕ ಗ್ರಂಥಗಳನ್ನು ಪ್ರಚುರಪಡಿಸಿದ್ದಾರೆ.

ಶ್ರೀಮನ್‌ಮಹೈತರೇಯೋಪನಿಷತ್, ಈಶಾವಾಸ್ಯ, ತೈತ್ತಿರೀಯ ಮುಂತಾದ ಉಪನಿಷತ್ತುಗಳನ್ನು ಭಾಷ್ಯ ತಾತ್ಪರ್ಯದೊಂದಿಗೆ ಕನ್ನಡ ಪದ್ಯರೂಪದಲ್ಲಿ ಅನುವಾದಿಸಲಾಗಿದೆ.

ಹರಿಭಕ್ತಿವಿಜಯ, ವಾದಿರಾಜಋಜುತ್ವಪ್ರಕಾಶಿಕಾ ಮುಂತಾದ ಗದ್ಯ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ.

## ೪೯ ಮಾಧ್ವ ವಿದ್ಯಾಪೀಠ, ಧಾರವಾಡ.

ಪಂಡಿತರಾದ ಶ್ರೀ ತೆರಗುಂಡಿ ಗೋಪಾಲಕೃಷ್ಣಾಚಾರ್ಯರು ಈ ಮಾಧ್ವ ವಿದ್ಯಾಪೀಠದ ಮುಖಾಂತರ ಈಗಾಗಲೇ ದ್ವಾದಶ ಸ್ತೋತ್ರ, ಪ್ರತಿಪದಾರ್ಥ ಕನ್ನಡ ಪದ್ಯ ಅರ್ಥಸಹಿತ, ವಾಯು ಸ್ತುತಿ ಪ್ರತಿಪದಾರ್ಥ ಕನ್ನಡ ಪದ್ಯ ಅರ್ಥ ಸಹಿತ ಮತ್ತು ಸುಮಧ್ವವಿಜಯ ಕನ್ನಡ ಅನುವಾದ ಪದ್ಯದಲ್ಲಿ ಕೊಟ್ಟು ಅರ್ಥವನ್ನೂ ಕೊಟ್ಟಿದ್ದಾರೆ.

## ೫೦ ಪ್ರಕಾಶಿನಿ ಮಾಸ ಪತ್ರಿಕೆ, ಉಡುಪಿ.

ಉಡುಪಿಯ ಶ್ರೀ ಕೃಷ್ಣಾಪುರ ಮಠಾಧೀಶರಾದ ಶ್ರೀ ೧೦೮ ಶ್ರೀ ವಿದ್ಯಾರತ್ನ ತೀರ್ಥ ಶ್ರೀಪಾದಂಗಳವರು ಶ್ರೀ ಶ್ರೀಪತಿಆಚಾರ್ಯ, ಬಿ. ಎ. ಇವರ ಸಂಪಾದಕತ್ವದಲ್ಲಿ ಪ್ರಕಾಶಿನಿ ಎಂಬ ಧಾರ್ಮಿಕ ಮಾಸ ಪತ್ರಿಕೆಯನ್ನು ಅನೇಕ ವರ್ಷಗಳಿಂದ ನಿಯತ ವಾಗಿ ಹೊರಡಿಸುತ್ತಲಿರುವರು.

ಈ ಪತ್ರಿಕೆಯು ಜನಪ್ರಿಯವಾಗಿದೆ. ಇದರಲ್ಲಿ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಮಾಧ್ವ ತತ್ವಜ್ಞಾನದ ಬಗ್ಗೆ ಒಳ್ಳೊಳ್ಳೆ ಲೇಖನಗಳೂ, ಪುರಾಣ ಗ್ರಂಥಗಳೂ ಪ್ರಕಟವಾಗುತ್ತಲಿವೆ.

## ೫೧ ಶ್ರೀ ಮಧ್ವನವಮಿ ವಿದ್ವತ್ಸಭೆ, ಉಡುಪಿ.

ಉಡುಪಿ ಶ್ರೀ ಕಾಣಿಯೂರು ಮಠಾಧೀಶರಾದ ಶ್ರೀ ೧೦೮ ಶ್ರೀ ವಿದ್ಯಾವಾರಿ ನಿಧಿ ತೀರ್ಥ ಶ್ರೀಪಾದಂಗಳವರು ತಮ್ಮ ಪರ್ಯಾಯ ಕಾಲದಲ್ಲಿ ಶ್ರೀ ಮಧ್ವನವಮಿ ವಿದ್ವತ್ಸಭೆ ಎಂಬುದನ್ನು ಸ್ಥಾಪಿಸಿ ಶ್ರೀ ಮಧ್ವನವಮಿಯಂದು ಆಚರಿಸುತ್ತಾರೆ.

ಈ ಸಭೆಯ ಪರವಾಗಿ ಪಂಡಿತರಿಗೆ ವಿದ್ವತ್ಸಂಭಾವನೆಯನ್ನು ವಿತರಣ ಮಾಡಿ ಪಂಡಿತರಿಗೆ ಪ್ರೋತ್ಸಾಹಿಸುತ್ತಲಿದ್ದಾರೆ.

## ೫೨ ಜೀವೋತ್ತಮ ತ್ರೈಮಾಸಿಕ

ಶ್ರೀ ಗೋಕರ್ಣ ಪರ್ತಗಾಳೀ ಜೀವೋತ್ತಮ ಮಠದ ಪರವಾಗಿ ಜೀವೋತ್ತಮ ಎಂಬ ಪತ್ರಿಕೆಯು ನಿಯತವಾಗಿ ೧೧ ವರ್ಷಗಳಿಂದ ಹೊರಡುತ್ತ ಆಸ್ತಿಕರನ್ನು ಆಕರ್ಷಿಸುತ್ತಲಿದೆ. ಇದು ಕುಮಠೆಯಿಂದ ಹೊರಡುತ್ತಲಿದೆ. ಶ್ರೀ ನರಸಿಂಹ ದಯಾನಂದ ಶ್ಯಾನಭಾಗರು ಸಂಪಾದಕರಾಗಿದ್ದಾರೆ.

## ೫೩ ಅಧಮಾರು ಮಠ ವಿದ್ಯಾಪೀಠ, ಉಡುಪಿ

ಇದು ಶ್ರೀ ಅಧಮಾರು ಮಠಾಧೀಶ ಶ್ರೀ ವಿಬುಧೇಶತೀರ್ಥರಿಂದ ಪ್ರಾರಂಭಿಸಲ್ಪಟ್ಟಿದ್ದು ಅನೇಕ ವಿದ್ಯಾರ್ಥಿಗಳಿಗೆ ಉಚಿತ ಅಶನ, ವಸನ ನೀಡಿ ವೇದಾಧ್ಯಯನ ಕರ್ಮಕಾಂಡ, ವೇದಾಂತ ವಿಷಯಗಳ ಪಾಠ ಪ್ರವಚನ ನಡೆಯಿಸುತ್ತಲಿದೆ. ಈ ಸಂಸ್ಥೆಯಿಂದ ನೂರಾರು ವಿದ್ಯಾರ್ಥಿಗಳು ಸಿದ್ಧರಾಗಿ ಹೊರಬಿದ್ದಿದ್ದಾರೆ.

## ೫೪ ಪೇಜಾವರ ಮಠದ ಗ್ರಂಥಾಲಯ

ಉಡುಪಿಯ ಪೇಜಾವರ ಮಠದಲ್ಲಿ ಪ್ರಾಚೀನ ತಾಡೋಲೆಯ ಗ್ರಂಥಗಳ ದೊಡ್ಡ ಸಂಗ್ರಹವಿದೆಯಲ್ಲದೆ ಅರ್ವಾಚೀನ ಅತ್ಯಮೌಲ್ಯ ಗ್ರಂಥಗಳ ಸಂಗ್ರಹ ದೊಡ್ಡ ಪ್ರಮಾಣದಲ್ಲಿದೆ.

ಮಾಧ್ವ ಅನೇಕ ಪ್ರಾಚೀನ ಟೀಕ ಟಿಪ್ಪಣಿಗಳು ಈ ಗ್ರಂಥಾಲಯದಲ್ಲಿ ದೊರಕಿವೆ. ಈಗಿನ ಶ್ರೀ ಪೇಜಾವರಮಠಾಧೀಶರಾದ ಶ್ರೀ೧೦೮ ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರು ಇಬ್ಬರು ಪಂಡಿತರನ್ನು ತಮ್ಮ ಮಠದಿಂದ ಇಟ್ಟುಕೊಂಡು ಸಂಶೋಧನೆ ಕಾರ್ಯವನ್ನು ನಡೆಯಿಸಿದ್ದಾರೆ.

ಪ್ರಾಚೀನ ಗ್ರಂಥಗಳ ವಿವರಣಾತ್ಮಕ ಯಾದಿಯನ್ನು ಸಿದ್ಧಪಡಿಸಿದ್ದಾರೆ. ಶ್ರೀಮದ್ಭಾಗವತ ಗ್ರಂಥವನ್ನು ಅನೇಕ ಪಾಠಾಂತರಗಳಿಂದ ಶುದ್ಧಪ್ರತಿಯನ್ನು ಸಿದ್ಧಪಡಿಸಿ ಅನೇಕ ಹೊಸ ಟೀಕೆ ಟಿಪ್ಪಣಿಗಳಿಂದ ಮುದ್ರಣಕ್ಕೆ ಅಣಿಗೊಳಿಸಿರುವರು.

## ೫೫ ಶ್ರೀ ಸೋದಾ ಮಠ ಗ್ರಂಥಾಲಯ

ಶ್ರೀ ಸೋದಾ ಶ್ರೀ ವಾದಿರಾಜ ಮಠದ ಗ್ರಂಥಾಲಯವು ದೊಡ್ಡದಾಗಿದೆ. ತಾಡೋಲೆ, ಕೈಬರಹದ ಪ್ರಾಚೀನ ಗ್ರಂಥಗಳ ಬೃಹತ್ ಸಂಗ್ರಹವು ಮಠವ ಗ್ರಂಥಾಲಯದಲ್ಲಿದೆ. ಶ್ರೀ ವಾದಿರಾಜ ಶ್ರೀ ಚರಣರ ಎಷ್ಟೋ ಅಮೌಲ್ಯ ಗ್ರಂಥಗಳು ಈ ಗ್ರಂಥಾಲಯದಲ್ಲಿ ಸಿಕ್ಕಿದ್ದು ಅವುಗಳನ್ನೆಲ್ಲ ಸಂಶೋಧಿಸಿ ಶ್ರೀ ಮಠದಿದಂದ ಶ್ರೀ ೧೦೮ ಶ್ರೀ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು ಪ್ರಕಾಶಿದ್ದಲ್ಲದೆ ಶ್ರೀವಾದಿರಾಜೀಯ ಗ್ರಂಥ ಪ್ರಕಾಶನ ಸಮಿತಿಯವರೂ ಕೆಲವನ್ನು ಪ್ರಕಾಶನಪಡಿಸಿರುವರು. ಇನ್ನೂ ಎಷ್ಟೋ ಮಾಧ್ವ ಗ್ರಂಥಗಳು ದೊರಕಿದ್ದು ಅವುಗಳ ಸಂಶೋಧನೆ ನಡೆದಿದೆ.

## ೫೬ ಅಖಿಲ ಭಾರತ ಮಾಧ್ವ ಮಹಾ ಮಂಡಲ

ಹದಿನಾರು ವರ್ಷಗಳ ಹಿಂದೆ ೧೯೫೩ ನೇ ಇಸ್ವಿಯಲ್ಲಿ ಶ್ರೀ ೧೦೮ ಶ್ರೀ ಪೇಜಾವರ ಶ್ರೀಪಾದಂಗಳವರ ಪ್ರಥಮ ಪರ್ಯಾಯ ಸಂದರ್ಭದಲ್ಲಿ ಶ್ರೀಕೃಷ್ಣ ಪರಮಾತ್ಮನ ದಿವ್ಯ ಸನ್ನಿಧಿಯಲ್ಲಿ ಶ್ರೀಮನ್ಮಧ್ವಾಚಾರ್ಯರ ಪಾವನ ಕ್ಷೇತ್ರವಾದ ರಜತ ಪೀಠಪುರಿ (ಉಡುಪಿ) ಯಲ್ಲಿ ೨೩ ಮಾಧ್ವ ಪೀಠಾಧಿಪತಿಗಳ ತುಂಬು ಹೃದಯದ ಬೆಂಬಲದಿಂದ ಜನ್ಮತಾಳಿದ ಅ. ಭಾ. ಮಾ. ಮ. ಮಂಡಳವು ಸಮಸ್ತ ಮಾಧ್ವರ ಪ್ರಾತಿನಿಧಿಕವಾದ ಏಕೈಕ ಸಂಸ್ಥೆಯಾಗಿ ಎಲ್ಲರ ಹೆಮ್ಮೆಯ ಹೆಮ್ಮರವಾಗಿ ಹಬ್ಬಿನಿಂತಿದೆ.

ಭಾರತದ ಮೂಲೆ ಮೂಲೆಯಲ್ಲಿರುವ ಎಲ್ಲ ಮಾಧ್ವರನ್ನೂ ಸ್ನೇಹ ಸೌಹಾರ್ದದ ಸುವರ್ಣ ಸೂತ್ರದಲ್ಲಿ ಸಂಘಟಿಸಿ ಒಂದು ವೇದಿಕೆಯ ಮೇಲೆ ತಂದುನಿಲ್ಲಿಸಿದ ಶ್ರೇಯಸ್ಸು ಮಾಧ್ವ ಮಹಾ ಮಂಡಳಕ್ಕೆ ಮೀಸಲಾಗಿದೆ.

ಮಾಧ್ವರ ಸಾಮಾಜಿಕ, ಶೈಕ್ಷಣಿಕ, ತಾತ್ವಿಕ, ಧಾರ್ಮಿಕ, ನೈತಿಕ, ಆರ್ಥಿಕ ಕುಂದು ಕೊರತೆಗಳನ್ನೂ ತೊಡರು, ತೊಂದರೆಗಳನ್ನೂ ಗಮನಿಸಿ ಪರಿಹಾರೋಪಾಯ ಗಳನ್ನು ಯೋಚಿಸಿ, ಯೋಜಿಸಿ ಸರ್ವ ಕ್ಷೇತ್ರಗಳಲ್ಲಿಯೂ ಮಾಧ್ವರ ಹೆಜ್ಜೆಯು ಮುಂದೆ ಬೀಳಬೇಕೆಂದು ಈ ಸಂಸ್ಥೆಯು ಶ್ರಮಿಸುತ್ತದೆ.

ಇದರ ಬಹು ಸಮಯದ ಅಧ್ಯಕ್ಷರೂ, ಮುಖ್ಯ ಕಾರಣ ಪುರುಷರೂ ಆದ ಶ್ರೀ ಶ್ರೀ ಪೇಜಾವರ ಶ್ರೀಪಾದಂಗಳವರು ಸ್ವಯಂ ಸರ್ವಜ್ಞ ಪೀಠದ ಅಧೀಶ್ವರರಾಗಿ ದ್ದರೂ ಸುಸಂಪನ್ನರಾಗಿದ್ದರೂ, ಮಹಾ ಪಂಡಿತೋತ್ತಮರಾಗಿದ್ದರೂ ವೈಯಕ್ತಿಕ ಸ್ವಾರ್ಥ, ಸ್ವಾಭಿಮಾನಗಳನ್ನೂ, ಪೀಠಾಧಿಪತಿ ಸಹಜವಾದ ಪ್ರತಿಷ್ಠಾ, ಗೌರವಗಳನ್ನು ಬದಿಗಿರಿಸಿ ಎಲ್ಲ ಮಾಧ್ವರ ಹಿತೋದ್ದೇಶದಿಂದ ಸಂಘಟನೆಯನ್ನು ಮಾಡುವ ಘನೋದ್ದೇಶದಿಂದ ಊರೂರಿಗೆ ಹೋಗಿದ್ದಾರೆ. ಮನೆ ಮನೆಗೆ ಅಲೆದಿದ್ದಾರೆ. ಮಠಮಠಗಳಿಗೆ ತಿರುಗಿದ್ದಾರೆ.

ಗೃಹಸ್ಥರನ್ನು ಸಂತೈಸಿದ್ದಾರೆ. ಸ್ವಾಮಿಗಳನ್ನು ಸೆರಗೊಡ್ಡಿ ಬೇಡಿಕೊಂಡಿದ್ದಾರೆ. ಅವಮಾನವನ್ನು ಸೈರಿಸಿದ್ದಾರೆ. ಅಪಶಬ್ದಗಳನ್ನು ಸಹಿಸಿದ್ದಾರೆ. ಕೋಪತಾಪಗಳನ್ನು ಎದುರಿಸಿದ್ದಾರೆ. ವ್ಯಂಗ್ಯೋಕ್ತಿ ನಿಂದಾ ನಿರ್ಭರ್ತ್ಸನೆಗಳನ್ನು ಕೇಳಿ ತಾಳಿದ್ದಾರೆ.

ಮಾಧ್ವ ಮಹಾ ಮಂಡಳವು ಈಗ ವಿರೋಧಿಗಳಿಗೂ ಸ್ಪೃಹಣೀಯವಾಗುವಂಥ ಶ್ರೇಯಸ್ಸಿದ್ಧಿಯನ್ನು ಪಡೆದಿದ್ದು ಶ್ರೀಗಳವರ ಕರ್ತೃತ್ವಶಕ್ತಿಯ ಪರಿಣಾಮ ಎಂಬ ಮಾತು ದಿಟವಾಗಿದ್ದರೂ ಅವರ ಸೌಜನ್ಯವೃತ್ತಿಗೂ ಅದರಲ್ಲಿ ಬಹುಮಟ್ಟಿನ ಪಾಲ ವಿರುತ್ತದೆಂಬುವದು ಎಲ್ಲರೂ ಒಪ್ಪತಕ್ಕ ಮಾತು.

ಮಂಡಲವು ಈ ಒಂದು ವಿರಾಟ್ ಶಕ್ತಿಯಾಗಿ, ಬಲಿಷ್ಠ ಶಕ್ತಿಯಾಗಿ ತಲೆ ಎತ್ತಿ ನಿಲ್ಲುವಲ್ಲಿ ಇತರ ಪೀಠಾಧಿಪತಿಗಳ ಸಂಪೂರ್ಣ ಬೆಂಬಲ, ಸಹಾನುಭೂತಿಗಳೂ ಕಾರಣ ವಾಗಿವೆ. ಆ ಆ ಮಠದ ಶಿಷ್ಯರೂ ಶ್ರೀ ಶ್ರೀಗಳವರ ಸ್ವಾರ್ಥವಿದೂರ ಸೇವಾಭಾವ, ಸುಸ್ವಭಾವಗಳಿಗೆ ಆಕರ್ಷಿತರಾಗಿ ವೈಯಕ್ತಿಕ ಮತಭೇದ, ಮಠಭೇದ ಮರೆತು 'ಬಾಂಧವಾ ವಿಷ್ಣು ಭಕ್ತಾಶ್ಚ' ವಿಷ್ಣುಭಕ್ತರಾದ ಮಾಧ್ವರೆಲ್ಲರೂ ಒಂದು ಎಂಬ ಸ್ನೇಹ ಸೂತ್ರದಿಂದ ಏಕೀಭೂತರಾಗ ಶ್ರೀಗಳವರ ಸಂಕಲ್ಪವನ್ನು ಫಲೇಗ್ರಾಹಿಯನ್ನಾಗಿ ಮಾಡಲು ಬದ್ಧಕಂಕಣವಾಗಿ ಪ್ರಯತ್ನವನ್ನು ಮಾಡಿದರು.

ಈ ಎಲ್ಲ ಬಡವ-ಬಲ್ಲಿದ, ಲೌಕಿಕ-ವೈದಿಕ, ಗುರು-ಶಿಷ್ಯ, ಪಂಡಿತ-ಪಾಮರ, ಸನ್ಯಾಸಿ-ಸಂಸಾರಿಗಳ ಸಂಯುಕ್ತ ಪ್ರಯತ್ನ ಹಾಗೂ ನಿಸ್ವಾರ್ಥ ಸೇವೆಯ ಪರಿಣಾಮ ವಾಗಿ ಮಾಧ್ವ ಮಹಾ ಮಂಡಳವು ಶಾಖೋಪ ಶಾಖೆಯಾಗಿ ಬೆಳೆದು ನಿಂತಿದೆ.

ಅದರ ಒಂದೊಂದು ಘಟಕಗಳೂ ಪೂರ್ಣಸಂಸ್ಥೆ ಎನ್ನುವಷ್ಟು ಸ್ವಾಲಂಬಿಯಾಗಿ ಬೆಳೆದು ಬಲಿತು ಲೋಕೋಪಕಾರ, ಮಾಧ್ವ ಸಂಸ್ಕೃತಿ ಪ್ರಸಾರ, ವೈಷ್ಣಾಭಿವೃದ್ಧಿ ಮುಂತಾದ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಲಿವೆ. ಮಾಧ್ವ ಮಹಾ ಮಂಡಳದ ಅಂಗಸಂಸ್ಥೆಗಳ ಪರಿಚಯವನ್ನು ಮಾಡಿಕೊಡಲಿಕ್ಕೂ ಒಂದೊಂದು ಪುಸ್ತಕ ವನ್ನು ಬರೆಯಬೇಕಾದೀತು. ಇಲ್ಲಿ ಹಕ್ಕಿ ನೋಟವಲ್ಲಿ ಸಮಷ್ಟಿ ದೃಷ್ಟಿಯಿಂದ ಅ. ಭಾ. ಮಾ. ಮ. ಮಂಡಳದ ಅಂಗಸಂಸ್ಥೆಗಳ ಸ್ಥೂಲ ಪರಿಚಯವನ್ನು ಮಾಡಿಕೊಡ ಲಾಗುವದು.

## A ಪೂರ್ಣಪ್ರಜ್ಞ ವಿದ್ಯಾಪೀಠ

ಪಾಶ್ಚಾತ್ಯ ಶಿಕ್ಷಣದ ಪ್ರಬಲ ಪ್ರಭಾವ, ಪ್ರವಾಹಗಳಲ್ಲಿ ಭಾರತೀಯ ವಿದ್ಯೆ ಸಂಸ್ಕೃತಿಗಳೆಲ್ಲ ಕೊಚ್ಚಿಕೊಂಡು ಹೋಗುತ್ತಿರುವ ಈ ಕಾಲದಲ್ಲಿ ವೇದಶಾಸ್ತ್ರಗಳ ಅಧ್ಯ ಯನವೇ ಲೋಪವಾಗುತ್ತಿರುವ ಇಂದಿನ ಕಾಲದಲ್ಲಿ ಮಾಧ್ವ ಗ್ರಂಥಗಳ 'ವಕ್ತಾಶ್ರೋ

ತಾ ಚ ದುರ್ಲಭಃ' ಕೇಳುವವರು ಸಿಗುವದಿಲ್ಲ. ಹೇಳುವವರು ಇರುವದಿಲ್ಲ ಎಂಬ ಪರಿಸ್ಥಿತಿ ತಲೆದೋರಿದೆ.

ಹಿಂದೆ ಗೌತಮ ಋಷಿಯ ಶಾಪದಿಂದ ಜ್ಞಾನ ಸಾಮಾನ್ಯ ಲೋಪವಾದಂತೆ ಈಗಲೂ ಕಲಿಯ ಶಾಪದಿಂದ ವೇದವೇದಾಂತ ಜ್ಞಾನಕ್ಕೆ 'ತಸ್ಯಲೋಪಃ' ಎಂಬ ಪಾಣಿನಿಯ ಸೂತ್ರ ಲಾಗುವಾಗಿರುತ್ತದೆ.

ದ್ವೈತ ವೇದಾಂತದ ಪರಂಪರೆಯು ಇನ್ನು ಮುಂದೆ ನಾಶವಾಗಿ ಹೋಗಬಾರದು ಎಂಬ ಸದುದ್ದೇಶದಿಂದ ಸರ್ವಜ್ಞಪೀಠಾಧಿರೂಢರಾದ ಶ್ರೀ ಪೇಜಾವರ ಶ್ರೀಪಾದಂಗಳವರು ಬೆಂಗಳೂರಲ್ಲಿ ಪೂರ್ಣಪ್ರಜ್ಞ ವಿದ್ಯಾಪೀಠ ಎಂಬ ಸಂಸ್ಥೆಯನ್ನು ಮಾಧ್ವ ಮಹಾ ಮಂಡಳದ ಅಂಗವಾಗಿ ಸ್ಥಾಪಿಸಿದರು. ದಿ. ಕೆ. ಸೀತಾರಾಮರಾಯರೇ ಮೊದಲಾದ ಉದಾರ ಚರಿತರ ನೆರವಿನಿಂದ ಶ್ರೀ ನರಸಿಂಹರಾಜಾ ಕಾಲನಿಯ ಹತ್ತರ ವಿಶಾಲವಾದ ೩ ಎಕರೆದಷ್ಟು ಸ್ಥಳವನ್ನು ಕೊಂಡು ೩-೪ ಲಕ್ಷ ರೂಪಾಯಿಗಳ ವೆಚ್ಚದಿಂದ ಅನೇಕ ಕಟ್ಟಡಗಳನ್ನು ಕಟ್ಟಿಸಿ ವಿದ್ಯಾಪೀಠ ನಡೆಯುವಂತೆ ಮಾಡಿದ್ದಾರೆ.

ಪ್ರಾಚೀನ ಗುರುಕುಲ ಪದ್ಧತಿಯಿಂದ ೧೨ ವರ್ಷದ ಶಾಸ್ತ್ರಾಧ್ಯಯನದ ಪದ್ಧತಿಯನ್ನು ಏರ್ಪಡಿಸಿ ೯-೧೧ಜನ ಪರಿಣತ ಪ್ರತಿಭರಾದ ಪಂಡಿತರನ್ನುಅಧ್ಯಾಪಕರನ್ನಾಗಿ ನೇಮಿಸಿ ನೂರಾರು ಜನ ವಿದ್ಯಾರ್ಥಿಗಳಿಗೆ ಶಾಸ್ತ್ರ ಶಿಕ್ಷಣದ ಸೌಕರ್ಯವನ್ನು ಇಲ್ಲಿ ಏರ್ಪಡಿಸಲಾಗಿದೆ.

ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ೫೦-೬೦ ವಿದ್ಯಾರ್ಥಿಗಳು ಓದುತ್ತಲಿದ್ದು ಎಲ್ಲ ವಿದ್ಯಾರ್ಥಿಗಳಿಗೂ ಊಟ, ಉಪಹಾರ, ವಸತಿ, ವಸನ, ಪುಸ್ತಕ, ವರ್ಷಕ್ಕೊಮ್ಮೆ ಊರಿಗೆ ಹೋಗಿ ಬರುವ ಮಾರ್ಗವ್ಯಯ, ಮತ್ತು ವಿದ್ಯಾರ್ಥಿವೇತನಗಳನ್ನೂ ಕೂಡ ಪ್ರತಿ ತಿಂಗಳೂ ಕೊಡಲಾಗುತ್ತಿದೆ.

ವಿದ್ಯಾಪೀಠವು ಪ್ರಾರಂಭವಾದಂದಿನಿಂದ ೧೨ ವರ್ಷಗಳಲ್ಲಿ ವಿದ್ಯಾಪೀಠದ ಸಂಪೂರ್ಣ ಅಧ್ಯಯನ ಕ್ರಮವನ್ನು ಮುಗಿಯಿಸಿ ಸುಧಾಮಂಗಳ ಮಾಡಿ ಶಾಸ್ತ್ರ ಪಂಡಿತರಾಗಿ ಹೊರಬಿದ್ದ ಐವರು ವಿದ್ಯಾರ್ಥಿಗಳಿಗೆ ಪದವಿ, ಪ್ರಶಸ್ತಿ, ಶಾಲುಜೋಡಿಗಳನ್ನಿತ್ತು ಸತ್ಕರಿಸಿ ಅವರಿಗೆಲ್ಲ ಪಾಠಪ್ರವಚನ ಜೀವನಕ್ಕೂ ಸೌಕರ್ಯಗಳನ್ನು ಕಲ್ಪಿಸಿಕೊಡಲಾಗಿದೆ.

## B ಸಂಶೋಧನ—ಪ್ರಕಾಶನ

ಒಂದು ದೊಡ್ಡ ಗ್ರಂಥಾಲಯವನ್ನು ಮಾಡಿ ಅತ್ಯಪೂರ್ವವಾದ ಲಿಖಿತ, ಮುದ್ರಿತ ಗ್ರಂಥರಾಶಿಗಳನ್ನು ಶೇಖರಿಸಲಾಗಿದೆ.

ತೈಲಬುದ್ಧಿಯ ಅನೇಕ ಪ್ರಾಜ್ಞ ಪುಂಗವರನ್ನು ನೇಮಿಸಿ ತೌಲನಿಕ ದೃಷ್ಟಿಯ ಸಂಶೋಧನ ಕಾರ್ಯವನ್ನೂ ಮುಂದುವರಿಸಲಾಗುತ್ತಿದೆ. ಈ ಉಡುಪಿ, ಬೆಂಗಳೂರು ಮುಂತಾದ ಕಡೆಗಳಲ್ಲಿ ಶ್ರೀಮದಾನಂದ ತೀರ್ಥರ ಸರ್ವಮೂಲ ಗ್ರಂಥಗಳ ಹೃಷೀಕೇಶ ತೀರ್ಥೀಯ ಪಾಠ ಸಹಿತವಾಗಿ ಗದುಗಿನ ಶ್ರೀ ಕೆ. ನಾರಾಯಣರಾಯರ ಸಹಾಯದಿಂದ ಬೆಂಗಳೂರಿನಲ್ಲಿ ಮುದ್ರಿಸಲಾಗುತ್ತಿದೆ. ಈಗ ಒಂದು ಭಾಗ ಹೊರ ಬಂದಿದೆ. ಲಕ್ಷಾವಧಿ ರೂಪಾಯಿ ವೆಚ್ಚದ ಈ ಸರ್ವಮೂಲದ ಮುದ್ರಣ ಕಾರ್ಯವು ಮುಗಿಯುತ್ತ ಬಂದಿದೆ. ಹಾಗೂ ಮದ್ರಾಸಿನಲ್ಲಿ ಶೇಷಚಂದ್ರಿಕಾ ಗ್ರಂಥದ ಮುದ್ರಣವೂ ನಡೆದಿದ್ದು ಒಂದು ಭಾಗ ಹೊರಬಂಧಿದೆ. ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ತತ್ತ್ವ ಪ್ರದೀಪ ಗ್ರಂಥವನ್ನು ಈ ನೊದಲೇ ಅಚ್ಚುಹಾಕಿಸಲಾಗಿದೆ.

## C ವಿದ್ಯಾರ್ಥಿ ನಿಲಯಗಳು

ಇಂದಿನ ಕಾಲ ಪ್ರವಾಹದಲ್ಲಿ ಇಂಗ್ಲೀಷ ವಿದ್ಯಾಧ್ಯಯನವು ಅನಿವಾರ್ಯವಾಗಿದ್ದರೂ ಆಂಗ್ಲ ವಿದ್ಯೆಯ ಜೊತೆಗೆ ನಮ್ಮ ಮಾಧ್ವಸಂಪ್ರದಾಯ ಸಂಸ್ಕೃತಿಗಳ ಅರಿವು ಮಕ್ಕಳಲ್ಲಿ ಅಳಿದು ಹೋಗಬಾರದೆಂಬ ಸದುದ್ದೇಶದಿಂದ ಮಾಧ್ವ ವಿದ್ಯಾರ್ಥಿ ನಿಲಯಗಳನ್ನು ಅಲ್ಲಲ್ಲಿ ಸ್ಥಾಪಿಸುವ ಯೋಜನೆಯನ್ನು ಮಾಡಲಾಯಿತು.

ಆ ಸಂಕಲ್ಪಾನುಸಾರವಾಗಿ ಮೈಸೂರು, ಧಾರವಾಡ, ಹುಬ್ಬಳ್ಳಿ, ಬೆಳಗಾಂವ, ಬಾಗಲಕೋಟ, ರಾಯಚೂರ, ಮುಂಬಯಿ, ಉಡುಪಿ ಮುಂತಾದ ಕಡೆಗಳಲ್ಲಿ ವಿದ್ಯಾರ್ಥಿ ನಿಲಯಗಳಿಗೆ ಸ್ವಂತ ಕಟ್ಟಡಗಳನ್ನು ಕಟ್ಟಿಸಿ ನಡೆಯಿಸಲಾಗುತ್ತಿದೆ. ಅನೇಕ ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿಯೇ ಅವಕಾಶವನ್ನು ನೀಡಲಾಗುವದು. ಅಧ್ಯಾಪಕರ ಮುಖಾಂತರ ಅಲ್ಲಿಯ ವಿದ್ಯಾರ್ಥಿಗಳಿಗೆ ಮಾಧ್ವ ಸಂಪ್ರದಾಯ ಮಾಧ್ವ ತತ್ವಜ್ಞಾನದ ಸಾಮಾನ್ಯ ತಿಳುವಳಿಕೆಯನ್ನೂ ಸಂಸ್ಕೃತ ಭಾಷೆಯ ಪ್ರಾಥಮಿಕ ಪರಿಚಯವನ್ನೂ ಮಾಡಿಕೊಡಲಾಗುವದು.

## D ಪ್ರಾದೇಶಿಕ ಶಿಕ್ಷಣ ನಿಧಿ

ಇಂದಿನ ಕಾಲದಲ್ಲಿ ವಿದ್ಯಾರ್ಥಿಯು ಎಷ್ಟೇ ಬುದ್ಧಿವಂತನಿದ್ದರೂ ಅವನಿಗೆ ಮುಂದೆ ಅಭ್ಯಾಸ ಮಾಡಲು ಅನುಕೂಲತೆಗಳು ಇರುವದಿಲ್ಲ. ಇದರಿಂದ ಎಷ್ಟೋ ಪ್ರತಿಭಾಶಾಲಿ ಮಾಧ್ವ ವಿದ್ಯಾರ್ಥಿಗಳ ಭವಿಷ್ಯವೇ ಹಾಳಾಗುವದು.

ಇದನ್ನು ಅರಿತು ಮಾಧ್ವ ಮಂಡಳದವರು ಬುದ್ಧಿವಂತರಾದ ಬಡ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ತಮ್ಮ ಶಿಕ್ಷಣವನ್ನು ಮುಂದುವರಿಸಲು ಅನುಕೂಲವಾಗಬೇಕೆಂದು ಈ ಪ್ರಾದೇಶಿಕ ಸಾಲರೂಪ ಶಿಕ್ಷಣ ನಿಧಿಯನ್ನು ಏರ್ಪಡಿಸಲಾಗಿದೆ. ಇದರಲ್ಲಿ

ಕರ್ನಾಟಕ, ತಮಿಳ ನಾಡು, ಆಂಧ್ರ, ಮಹಾರಾಷ್ಟ್ರ ಮುಂತಾದ ಪ್ರಾದೇಶಿಕ ವಿಭಾಗ ಮಾಡಿಕೊಂಡು ಆ ಪ್ರಾಂತದ ಯೋಗ್ಯ ಬಡ ವಿದ್ಯಾರ್ಥಿಗಳಿಗೆ ಉಚ್ಚ ಶಿಕ್ಷಣವನ್ನು ಮುಂದುವರಿಸಲು ಈ ಸಾಲ ರೂಪ ಶಿಷ್ಯ ವೇತನಗಳನ್ನು ಕೊಡಲಾಗುವದು.

ಇದರ ಸದುಪಯೋಗ ಮಾಡಿಕೊಂಡು ಅನೇಕ ವಿದ್ಯಾರ್ಥಿಗಳು ತಮ್ಮ ಲೌಕಿಕ ವಿದ್ಯಾ ವ್ಯಾಸಂಗವನ್ನು ಮುಂದುವರಿಸಿ ಮುಗಿಸಿ ಈಗ ದೊಡ್ಡ ದೊಡ್ಡ ಹುದ್ದೆಗಳಲ್ಲಿ ಇರುತ್ತಾರೆ.

## E ತತ್ತ್ವಜ್ಞಾನ ಸಮ್ಮೇಲನಗಳು

ಭಾರತದ ಎಲ್ಲ ಮಾಧ್ವರಲ್ಲಿಯೂ ಮಾಧ್ವ ತತ್ತ್ವಜ್ಞಾನದ ಬಗ್ಗೆ ಜಾಗ್ರತಿಯನ್ನು ಹುಟ್ಟಿಸಿ ಆದರ ಆಸ್ಥೆಗಳನ್ನು ಜನಮನಗಳಲ್ಲಿ ಹುಟ್ಟಿಸಲಿಕ್ಕಾಗಿ ಎರಡು ವರ್ಷಕ್ಕೊಮ್ಮೆ ಬೇರೆ ಬೇರೆ ಸ್ಥಾನಗಳಲ್ಲಿ ಮಾಧ್ವ ತತ್ತ್ವಜ್ಞಾನ ಸಮ್ಮೇಲನವನ್ನು ಕರೆಯಲಾಗುವದು.

ಆ ಸಂದರ್ಭದಲ್ಲಿ ಅನೇಕ ಮಾಧ್ವ ಪೀಠಾಧಿಪತಿಗಳೂ, ಮಹಾ ಮಹಾ ಪಂಡಿತರೂ, ಲೌಕಿಕ ಗೃಹಸ್ಥರು ಒಂದೆಡೆ ಸೇರಿ ಪರಸ್ಪರ ವಿಚಾರ ವಿನಿಮಯದಿಂದ ಮಿಥಃ ಸ್ನೇಹ ಸಂಬಂಧವನ್ನು ಬೆಳಿಸಿಕೋಡು ಒಟ್ಟು ಮಾಧ್ವರ ಏಳ್ಗೆಯ ಉಪಾಯಗಳನ್ನು ಪರೀಶೀಲಿಸಿ ಯೋಗ್ಯ ಮಾರ್ಗವನ್ನು ಕಂಡು ಹಿಡಿಯಲು ಅನುಕೂಲ ವಾಗುವದು. ಪಂಡಿತರ ಹಾಗೂ ಪೀಠಾಧಿಪತಿಗಳ ಉಪದೇಶ ಉಪನ್ಯಾಸಗಳಿಂದ ಜನರಲ್ಲಿ ಮಧ್ವ ಸಿದ್ಧಾಂತದ ಬಗ್ಗೆ ಶ್ರದ್ಧಾ ಬುದ್ಧಿಗಳು ವೃದ್ಧಿಗೊಳ್ಳುವವು.

ಉಡುಪಿ, ಕೊಯಿಮತ್ತೂರು, ಹೈದರಾಬಾದ, ಮದ್ರಾಸ, ಬೆಂಗಳೂರು, ವಿಜಯವಾಡ ಮುಂತಾದ ನಾನಾ ಭಾಗಗಳಲ್ಲಿ ನೆರವೇರಿದ ಈ ಮಾಧ್ವ ತತ್ತ್ವಜ್ಞಾನ ಸಮ್ಮೇಲನಗಳಿಂದ ಪ್ರಚಂಡವಾದ ಧರ್ಮ ಜಾಗ್ರತಿಯು ಉಂಟಾಗಿರುತ್ತದೆ. ಪ್ರತಿಯೊಬ್ಬ ವೈಷ್ಣವ ಮನಸ್ಸಿನಲ್ಲಿಯೂ ಈ ಸಮ್ಮೇಲನಗಳಿಂದ ಮಾಧ್ವ ಪ್ರಜ್ಞೆ ಜಾಗ್ರತವಾಗಿ ಕಾರ್ಯೋನ್ಮುಖವಾದದ್ದು ಕಂಡುಬರುತ್ತಿದೆ.

ಈ ಸಮ್ಮೇಲನಗಳ ಜೊತೆಗೆ ವಿದ್ವತ್ಸಭೆಗಳನ್ನೂ ಏರ್ಪಡಿಸುವದರಿಂದ ನಾಡಿನ ಎಲ್ಲ ಪಂಡಿತರೂ ಎಲ್ಲೆಡೆ ಸೇರಿ ಧಾರ್ಮಿಕ ಹಾಗೂ ಶಾಸ್ತ್ರೀಯ ವಿಷಯ ಗಳನ್ನು ಚರ್ಚಿಸಲಿಕ್ಕೆ ಅವಕಾಶ ಉಂಟಾಗುತ್ತದೆ. ಸಾಮಾನ್ಯ ಜನರಿಗೂ ಕೂಡ ಮಾಧ್ವ ಮತದ ವಿಶಿಷ್ಟ ಪಂಡಿತರ ಬಗ್ಗೆ ಆದರ ಆತ್ಮೀಯ ಭಾವನೆಗಳು ಉಂಟಾಗಿ ಲೌಕಿಕ ವೈದಿಕ ಜನರಲ್ಲಿ ಸ್ನೇಹ ಸಂಪರ್ಕ ಉಂಟಾಗಲು ಯೋಗ್ಯ ವಾತಾವರಣವು ನಿರ್ಮಾಣವಾಗುತ್ತಿದೆ.

## F ಅಧ್ಯಾತ್ಮ ಶಿಬಿರಗಳು

ಬೇಸಿಗೆಯ ಬಿಡುವಿನ ದಿನಗಳಲ್ಲಿ ಒಂದು ಕಡೆ ಅಧ್ಯಾತ್ಮ ಶಿಬಿರಗಳನ್ನು ಏರ್ಪಡಿಸಿ ಒಂದೆರಡು ವಾರಗಳ ಪರ್ಯಂತ ಸಂಪೂರ್ಣ ಧಾರ್ಮಿಕ ವಾತಾವರಣ ವನ್ನು ನಿರ್ಮಾಣ ಮಾಡುವದೇ ಈ ಶಿಬಿರಗಳ ಉದ್ದೇಶವಾಗಿರುತ್ತದೆ.

ವರ್ಷದ ೧೧ ತಿಂಗಳಲ್ಲಿ ಲೌಕಿಕ, ಸಾಮಾಜಿಕ, ಹಾಗೂ ರಾಜಕೀಯ ಜೀವನ ಪ್ರವಾಹಗಳಲ್ಲಿ ಗತಾನುಗತಿಕರಾಗಿ ತೇಲಿಕೊಂಡು ನಡೆದಿರುವ ಗೃಹಸ್ಥರಿಗೂ ವಿದ್ಯಾರ್ಥಿಗಳಿಗೂ ಆಧ್ಯಾತ್ಮಿಕ ವಾತಾವರಣದಲ್ಲಿ ಕನಿಷ್ಠ ೧೦ ದಿನಗಳಾದರೂ ಧರ್ಮಮಯವಾದ ಪ್ರಶಾಂತ ಜೀವನವನ್ನು ನಡೆಯಿಸಿ ಮಧ್ವ ಮತದ ಜೀವನ ಪದ್ಧತಿ ಆಚಾರ ವಿಚಾರ ಕ್ರಮ ಸಾಮಾನ್ಯತಃ ಮಾಧ್ವ ತತ್ವಗಳ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ಸ್ವಾದಿ, ಮಹಿಷಿ, ಕೊಯಿಮುತ್ತೂರು, ಹೊಸಪೇಟೆ, ಉಡುಪಿ, ಬೆಂಗಳೂರು ಮುಂತಾದ ಕಡೆಗಳಲ್ಲಿ ಆಧ್ಯಾತ್ಮ ಶಿಬಿರಗಳು ಯಶಸ್ವಿ ಯಾಗಿ ನೆರವೇರಿದವು.

ಪ್ರಸಿದ್ಧ ತೀರ್ಥಕ್ಷೇತ್ರ ಮಠಮಂದಿರಗಳಲ್ಲಿ ವಸಂತ ಋತುವಿನಲ್ಲಿ ನಡೆಯಿಸ ಲ್ಪಡುವ ಈ ಶಿಬಿರಗಳಿಗೆ ಅನೇಕ ಪೀಠಾಧಿಪತಿಗಳೂ, ಪಂಡಿತರೂ ಆಗಮಿಸಿ ತಮ್ಮ ಉಪದೇಶ, ಉಪನ್ಯಾಸಗಳಿಂದ ಮಾರ್ಗದರ್ಶನ ಮಾಡಿಸುವರು.

ಸ್ನಾನ, ಸಂಧ್ಯಾ, ದೇವತಾರ್ಚನೆ, ಜಪ, ಆಹ್ನಿಕ ಮುಂತಾದವುಗಳನ್ನು ಹೇಗೆ ಮಾಡಬೇಕೆಂಬುವದನ್ನೂ ಪರಿಣತರಾದ ಆಚಾರ್ಯರು ಪ್ರತ್ಯಕ್ಷ ಪ್ರಯೋಗ ದಿಂದಲೇ ಮಾಡಿ ಮಾಡಿಸಿ ತೋರಿಸುವರು. ಮಾಧ್ವರ ಪ್ರತಿಯೊಂದು ಆಚಾರ, ವಿಚಾರ, ಮಂತ್ರ, ತಂತ್ರ, ಸಂಪ್ರದಾಯಗಳ ಅರ್ಥ, ಆಶಯ, ಹಿನ್ನೆಲೆಗಳ ಕಾರಣಗಳನ್ನು ವಿವರಿಸಿ ಹೇಳುವದರಿಂದ ನಮ್ಮ ವೈದಿಕ ಜೀವನದ ಕ್ರಮದ ಬಗ್ಗೆ ಜನರಿಗೆ ನಿಜವಾದ ವಿಶ್ವಾಸವು ಹುಟ್ಟುವಂತಾಗುವದು. ಈ ಶಿಬಿರ ಕಾಲದಲ್ಲಿ ವಿದ್ವ ತ್ಸಭೆಗಳನ್ನು ಏರ್ಪಡಿಸುವದರಿಂದ ಎಲ್ಲ ಮಾಧ್ವ ಪಂಡಿತರ ದಿವ್ಯಜ್ಞಾನದ ಉಪ ಯೋಗವನ್ನು ಪಡೆಯಲು ಶ್ರೀ ಸಾಮಾನ್ಯರಿಗೂ ಅನುಕೂಲವಾಗುವದು.

## G ಧರ್ಮಾರ್ಥ ಉಪನಯನಗಳು

ಪ್ರತಿವರ್ಷ ಆರಾಧನೆ ಹಾಗೂ ಸುಮುಹೂರ್ತ ಕಾಲಗಳಲ್ಲಿ ಮಾಧ್ವ ಮಂಡ ಲದ ಶಾಖೆಗಳಿದ್ದಲ್ಲೆಲ್ಲ ಧರ್ಮಾರ್ಥ ಉಪನಯನದ ಪರಿಪಾಟಿಯನ್ನು ಇಟ್ಟದ್ದು ಮಾಧ್ವ ವಟುಗಳಿಗೆಲ್ಲ ಒಂದು ವರದಾನವಾಗಿದೆ.

ನಮ್ಮ ಸಮಾಜದ ಆರ್ಥಿಕ ಮುಗ್ಗಟ್ಟು ಹಾಗೂ ಧಾರ್ಮಿಕ ಶ್ರದ್ಧೆಯ ಶೈಥಿಲ್ಯದಿಂದ ಬ್ರಾಹ್ಮಣರ ಜೀವನದಲ್ಲಿಯೇ ಅತ್ಯಂತ ಮಹತ್ವದ್ದಾದ ಉಪನಯನ ಸಂಸ್ಕಾರವೇ ಕ್ಷೀಣದೆಶೆಗೆ ಬಂದು ಮದುವೆಯ ಕಾಲಕ್ಕೆ ಮುಂಜವಿಯನ್ನು ಮಾಡುವ ಪ್ರಸಂಗವು ಬರುತ್ತಿರುವದು ಸತ್ಯಸಂಗತಿಯಾಗಿದೆ. ಆದುದರಿಂದ ಉಪನಯನದ ಮಹತ್ವವನ್ನು ತಿಳಿಸಿ ಸಕಾಲದಲ್ಲಿ ಅದನ್ನು ಮಾಡಲೇಬೇಕೆಂಬ ತಿಳಿವನ್ನು ಹುಟ್ಟಿಸಿ ಅದನ್ನು ಮಾಡಲಿಕ್ಕೆ ಆರ್ಥಿಕ ಅನುಕೂಲತೆಯಿಲ್ಲದವರಿಗೆ ಊರೂರಿಗೆ ಧರ್ಮಾರ್ಥ ಉಪನಯನದ ಸೌಲಭ್ಯವನ್ನು ಏರ್ಪಡಿಸಿ ಮಾಧ್ವ ಯುವಕರಿಗೆಲ್ಲ ಮೀಸಿ ಬರುವ ದೊರಳಗಾಗಿ ಮೌಂಜೀಬಂಧನದ ಸುಪ್ರಸಂಗವು ಬರುವಂತೆ ಮಾಡಲಾಗುತ್ತಿದೆ.

## H ಹುಂಡೀ ಯೋಜನೆ

ಹೀಗ ಶಾಖೋಪಶಾಖೆಯಾಗಿ ಬೆಳೆದು ನಿಂತ ಮಾಧ್ವ ಮಹಾ ಮಂಡಳದ ಬಹುಮುಖ ಕಾರ್ಯಗಳಿಗೆಲ್ಲ ಆರ್ಥಿಕ ನೆರವನ್ನು ಒದಗಿಸಲು ಈ ಹುಂಡೀ ಯೋಜನೆಯನ್ನು ಮಾಡಲಾಗಿದೆ.

ಶ್ರೀಮಧ್ವಾಚಾರ್ಯರ ಮುಖಚಿತ್ರವುಳ್ಳ ಒಂದೊಂದು ಡಬ್ಬಿಯನ್ನು ಆಸ್ಥೆವುಳ್ಳ ಧಾರ್ಮಿಕರ ಮನೆಗಳಲ್ಲಿ ಇರಿಸಲಾಗುವದು. ಮಾಧ್ವರ ಸರ್ವೋತೋಮುಖವಾದ ಉನ್ನತಿಯು ಆಗಬೇಕೆಂಬ ಬಯಕೆಯುಳ್ಳ ಯಜಮಾನರು ಪ್ರತಿದಿನ ಇಲ್ಲವೆ ಹಬ್ಬಹರಿದಿನ, ಪುಣ್ಯತಿಥಿ, ಪಿತೃತಿಥಿ ಹುಟ್ಟಿದದಿನ ಹಾಗೂ ಇತರ ಮಂಗಲ ಪ್ರಸಂಗಗಳಲ್ಲಿ ಆ ಡಬ್ಬಿಯಲ್ಲಿ ಯಥಾ ಶಕ್ತಿ ಹಣವನ್ನು ಹಾಕುವರು. ವರ್ಷಕ್ಕೊಂದು ಬಾರಿ ಮಂಡಲದ ಅಧಿಕೃತ ಕಾರ್ಯಕರ್ತರೊಬ್ಬರು ಊರೂರಿಗೆ ಹೋಗಿ ಮನೆಮನೆಗೆ ಭೆಟ್ಟಿ ಕೊಟ್ಟು ಆ ಮನೆಯ ಜನರ ಸಮಕ್ಷಮವೇ ಆ ಹುಂಡಿ ಡಬ್ಬಿಯನ್ನು ತೆರೆದು ಇಡೀ ವರ್ಷ ಅದರಲ್ಲಿ ಶೇಖರಿತ ದ್ರವ್ಯವನ್ನೆಲ್ಲ ಎಣಿಸಿ ಅದಕ್ಕೆ ಪಾವತಿ ಕೊಟ್ಟು ಮತ್ತೆ ಅದನ್ನು ಬಾಯಿ ಮುಚ್ಚಳವನ್ನು ಭದ್ರಪಡಿಸಿ ಸೀಲ ಮಾಡಿ ಅವರ ಮನೆಯಲ್ಲಿಯೇ ಇಟ್ಟುಬರುವರು.

ಹೀಗೆ ಪ್ರತಿಯೊಂದು ಮನೆಯಿಂದ ಸಂಗ್ರಹೀತವಾದ ಆ ಆ ಊರುಗಳ ಒಟ್ಟು ಹಣದಲ್ಲಿ ಕೆಲ ಭಾಗಗಳನ್ನೂ ಕೇಂದ್ರಕ್ಕೂ ಉಳಿದ ಭಾಗವನ್ನು ಆ ಊರಿನಲ್ಲಿಯ ವಿಧಾಯಕ ಧಾರ್ಮಿಕ ಕಾರ್ಯಕ್ಕೆ ವಿನಿಯೋಗಿಸಲು ಕೊಡಲಾಗುವದು. ಪ್ರತಿ ವರ್ಷವೂ ಅನೇಕ ಸಹಸ್ರ ರೂಪಾಯಿಗಳ ಸಂಗ್ರಹವಾಗುತ್ತಿದ್ದು ಮಂಡಲದ ವಿವಿಧ ಕಾರ್ಯಕ್ರಮಗಳಿಗೆಲ್ಲ ಇದರಿಂದ ಉಪಯೋಗವಾಗುತ್ತಿದೆ.

## I ತತ್ವವಾದ ಪತ್ರಿಕೆ

ಜನಸಾಮಾನ್ಯರಲ್ಲಿ ಮಾಧ್ವ ತತ್ವಜ್ಞಾನ ಹಾಗೂ ಧಾರ್ಮಿಕ ಭಾವನೆಗಳನ್ನು ಕುದುರಿಸುವದಕ್ಕಾಗಿ ಮಾಧ್ವ ಮಹಾ ಮಂಡಳವು ಪ್ರಾರಂಭದಿಂದಲೂ ಕನ್ನಡ, ಇಂಗ್ಲೀಷ, ಭಾಷೆಗಳಲ್ಲಿ ತತ್ವವಾದ ಎಂಬ ಪತ್ರಿಕೆಯನ್ನು ಹೊರಡಿಸುತ್ತಲಿದೆ.

ಅತ್ಯಂತ ಜನಪ್ರಿಯವಾದ ಈ ತತ್ವವಾದದ ತೆಲಗು ಆವೃತ್ತಿಯು ಹೈದರಾಬಾದಿನಿಂದ ಹೊರಡುತ್ತಲಿದೆ. ಅಖಿಲ ಭಾರತದ ಮಾಧ್ವರೆಲ್ಲರ ಮುಖಪತ್ರಿಕೆಯಾದ ಈ ತತ್ವವಾದ ಮಾಸ ಪತ್ರಿಕೆಯು ಕರ್ನಾಟಕ, ಮಹಾರಾಷ್ಟ್ರ, ತೆಲಗು, ತಮಿಳು ದೇಶಗಳಲ್ಲಿ ಹರಡಿ ಹಂಚಿ ಹೋದ ಎಲ್ಲ ಮಾಧ್ವ ಕುಟುಂಬಗಳ ಸ್ನೇಹ ಸಂಪರ್ಕವನ್ನು ನಿರ್ಮಾಣ ಮಾಡುವ ಏಕೈಕ ಸೌಹಾರ್ದದ ಸೇತುವೆಯಾಗಿದೆ.

ಸಮಸ್ತ ಮಾಧ್ವರ ಸಂಘಟನಾ ಸೂತ್ರದಂತಿದ್ದ ತತ್ವವಾದ ಪತ್ರಿಕೆಯ ವತಿಯಿಂದ ಒಂದು ಪುಸ್ತಕ ಪ್ರಕಾಶನ ವಿಭಾಗವನ್ನು ಪ್ರಾರಂಭ ಮಾಡಿದ್ದು ಪ್ರಾತಃಸ್ತೋತ್ರ (ಚಿಕ್ಕಪುಸ್ತಕ) ಕನ್ನಡ, ಹಿಂದಿ,ತಮಿಳು,ತೆಲಗು ಭಾಷೆಗಳಲ್ಲಿ ಪ್ರಕಟವಾಗಿವೆ. ಮಂಗಳಾಷ್ಟಕ ಅರ್ಥ ಸಹಿತ, ಶ್ರೀ ಶ್ರೀ ಪೇಜಾವರ ಶ್ರೀಗಳವರ ನುಡಿಮುತ್ತುಗಳು (ಶ್ರೀ ವಿಶ್ವೇಶ್ವರ ಉವಾಚ) ಮಾಧ್ವಮತಕ್ಕೆ ಉಡುಪಿಯ ಕಾಣಿಕೆ, ಉಪನಿಷತ್‌ಗಳು ಎಂಬ ಇಂಗ್ಲೀಷ ಪುಸ್ತಕ ಇಂಥ ಅನೇಕ ಚಿಕ್ಕ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಲಾಗಿದೆ.



## ಪ್ರಕರಣ ೧೦

# ದ್ವೈತ ವೇದಾಂತದ ಇತಿಹಾಸ



'ನಾಸ್ಮದುಕ್ತಿ ಸದೃಶಂ ಹಿತ ರೂಪಂ'

—ಶ್ರೀ ಮಧ್ವಾಚಾರ್ಯರು

" ಅಂತೇ ಸಿದ್ಧಸ್ತು ಸಿದ್ಧಾಂತಃ ಮಧ್ವಸ್ಯಾಗಮ ಏವಹಿ "

(ಶ್ರೀ ವಾದಿರಾಜ ಪೂಜ್ಯ ಚರಣಾಃ)

"ನ ಚ ಮಧ್ವಸಮೋ ಗುರುಃ, ನ ತದ್ವಾಕ್ಯ ಸಮಂ ಶಾಸ್ತ್ರಂ ।"

ಭಾರತೀಯ ತತ್ವಜ್ಞಾನದ ಇತಿಹಾಸದಲ್ಲಿ ದ್ವೈತ ಸಿದ್ಧಾಂತವು 'ಅಂತೇಸಿದ್ಧ' ವಾಗಿದೆ. ಅಂತೆಯೇ ಸಿದ್ಧಾಂತವೆನಿಸಿದೆ. ವೇದ ವಾದದ ವೀಥಿಯಲ್ಲಿ ಉತ್ಕ್ರಾಂತಿಯನ್ನು ಹೊಂದುತ್ತ ಪರಿಪೂರ್ಣ ವಿಕಾಸವನ್ನು ಹೊಂದಿ ಸರ್ವಾಂಗ ಸುಂದರವಾದ ನಿರ್ದುಷ್ಟ ಸಿದ್ಧಾಂತ ಸ್ವರೂಪದಲ್ಲಿ ಅರಳಿ ನಿಂತ ತತ್ವಜ್ಞಾನವೆಂದರೆ ಮಾಧ್ವ ತತ್ವಜ್ಞಾನವೇ ಸರಿ.

ವೇದ ಮೂಲಕವಾದ ಆರ್ಯ ಹಿಂದೂ ತತ್ವಜ್ಞಾನಗಳ ಬೆಳವಣಿಗೆಯಲ್ಲಿ ಶ್ರೀ ಮಧ್ವ ಸಿದ್ಧಾಂತವೇ ಕೊನೆಯದು. ಇಂಥ ಪರಿಪೂರ್ಣತೆಯನ್ನು ಕಂಡ ತಾತ್ವಿಕ ವಿಕಸನ ಕ್ರಮಗಳಲ್ಲಿ ಇದೇ ಮೊದಲು.

ಶ್ರೀ ಮಧ್ವಾಚಾರ್ಯರು ಹುಟ್ಟಿ ಬೆಳೆದು ವೇದಶಾಸ್ತ್ರೋದಧಿಯನ್ನು ಕಡೆದು ಪ್ರಮಾಣ ಗ್ರಂಥಗಳನ್ನೆಲ್ಲ ಮಂಥನ, ಚಿಂತನಮಾಡಿ ನಿಷ್ಕೃಷ್ಟವಾಗಿ ನಿರ್ದುಷ್ಟವಾಗಿ ಸಿದ್ಧಪಡಿಸಿದ ಈ ಮಧ್ವ ತತ್ವಜ್ಞಾನವು ಹುಟ್ಟಿ ಬೆಳೆದು ೮೦೦ ವರ್ಷಗಳಾಗಿದ್ದರೂ ಆ ವೈದಿಕ ವೇದಿಕೆಯ ಮೇಲೆ ಮತ್ತೊಂದು ಮತ ತಲೆ ಎತ್ತಿಲ್ಲ. ಬೇರೊಂದು ವೈದಿಕ ಸಿದ್ಧಾಂತವು ಮಧ್ವಾಚಾರ್ಯರ ನಂತರ ಈ ವರೆಗೂ ಮೂಡಿ ಬಂದಿಲ್ಲ. ಇದೇ ಮಾತನ್ನೇ ಶ್ರೀ ವಾದಿರಾಜ ಭಗವತ್ಪಾದರು ಮಾರ್ಮಿಕವಾಗಿ 'ಅಂತೇ ಸಿದ್ಧಸ್ತು ಸಿದ್ಧಾಂತಃಮಧ್ವಸ್ಯಾಗಮ ಏವಹಿ' ಎಂದು ಖಚಿತ ನಿಚಿತವಾಗಿ ಹೇಳಿದ್ದಾರೆ.

ಶ್ರೀ ಪೂರ್ಣಪ್ರಜ್ಞರಿಂದ ಶ್ರೀ ಸತ್ಯಧ್ಯಾನ ತೀರ್ಥರ ವರೆಗೆ ೮೦೦ ವರ್ಷಗಳಲ್ಲಿ ಹೊಮ್ಮಿ ಹರಿದು ಚಿಮ್ಮಿ ಮೋದು ಯುಗಯುಗಗಳಲ್ಲಿ ಮೆರೆದು ಮುಂದುವರಿದು ಬಂದ ಈ ಪವಿತ್ರ ಜ್ಞಾನ ಗಂಗೆಯ ಕ್ರಮ ಪ್ರಕ್ರಮಗಳ ಇತಿಹಾಸವು ನಿಜವಾಗಿಯೂ ಚಾರುಚೇತೋಹಾರಿಯಾಗಿದೆ. ಪ್ರತಿಯೊಬ್ಬ ಮಾಧ್ವನೂ ಇದನ್ನು ತಿಳಿದುಕೊಳ್ಳು ವದು ಅತ್ಯವಶ್ಯವಾಗಿದೆ.

ಆದರೆ ಈಗಾಗಲೇ ಪ್ರಕೃತ ಗ್ರಂಥದ ಪುಟ ಪರಿಣಾಹಗಳು ನಮ್ಮ ಪರಿಮಿತಿಯ ಗಾತ್ರವನ್ನು ಮೀರಿದ್ದರಿಂದ ಸಂಕ್ಷೇಪವಾಗಿ ಇಲ್ಲಿ ಮಾಧ್ವ ಗ್ರಂಥಗಳ ಸಾರಾಂಶದ ದಿಗ್ದರ್ಶನವನ್ನು ಮಾಡಲಾಗುವದು.

## ಶ್ರೀ ಮಧ್ವಾಚಾರ್ಯರು

ಶ್ರೀ ಮಧ್ವಾಚಾರ್ಯರು ೧೩೦೦ನೇ ಶತಮಾನದ ಸುಮಾರಿನಲ್ಲಿ ಉಡುಪಿಯ ಹತ್ತಿರ ಪಾಜಕದಲ್ಲಿ ಅವತಾರವನ್ನು ತಾಳಿದರು. ಬಾಲ್ಯದಲ್ಲಿಯೇ ಸನಕಾದಿಗರು ಪರಂಪರಾಪ್ರಾಪ್ತವಾದ ಪರಮಹಂಸ ಪೀಠವನ್ನು ಆರೋಹಣಮಾಡಿ ಮಾಯಾವಾದವೇ ಮೊದಲಾದ ದುರ್ಮತಗಳನ್ನೆಲ್ಲ ಖಂಡಿಸಿ ವೇದಮತದ ಪುನರುದ್ಧಾರ ಮಾಡಿದರು.

ಅನೇಕ ಸನ್ಯಾಸಿ ಶಿಷ್ಯರನ್ನು ಸ್ವೀಕರಿಸಿ ದ್ವೈತ ಮತದ ಪ್ರಸಾರಕ್ಕಾಗಿ ಅನೇಕ ವೈಷ್ಣವ ಪೀಠಗಳನ್ನು ಸ್ಥಾಪಿಸಿದರು. ೩೭ ಗ್ರಂಥಗಳನ್ನು ಬರೆದರು. ಅವರ ಎಲ್ಲ ಗ್ರಂಥಗಳ ಮೊತ್ತಕ್ಕೆ ಸರ್ವಮೂಲ ಎಂದು ಹೆಸರು. ಆ ಸರ್ವಮೂಲ ಘಟಕವಾದ ಮಧ್ವಾಚಾರ್ಯರ ಗ್ರಂಥಗಳು.

**(೧೦) ದಶಪ್ರಕರಣಗಳು** :— ಪ್ರಮಾಣ ಲಕ್ಷಣ, ಕಥಾಲಕ್ಷಣ, ಮಾಯಾವಾದ ಖಂಡನ, ಮಿಥ್ಯಾತ್ವಾನುಮಾನಖಂಡನ, ಉಪಾಧಿಖಂಡನ, ತತ್ವಸಂಖ್ಯಾನ, ತತ್ತ್ವೋದ್ಯೋತ, ಕರ್ಮನಿರ್ಣಯ, ವಿಷ್ಣುತತ್ವ ನಿರ್ಣಯ, ತತ್ವವಿವೇಕ.

## ದಶೋಪನಿಷದ್ಭಾಷ್ಯಗಳು ೧೦

ಈಶಾವ್ಯಾಸ್ಯ, ಷಟ್‌ಪ್ರಶ್ನ, ಐತರೇಯ, ತೈತ್ತಿರೇಯ, ಛಾಂದೋಗ್ಯ, ಬೃಹದಾರಣ್ಯ, ತಲವಕಾರ, ಕಾಠಕ, ಅಥರ್ವಣ, ಮಾಂಡೂಕ್ಯ, ಈ ದಶೋಪನಿಷತ್ತುಗಳಿಗೆ ಬರೆದ ಭಾಷ್ಯಗಳು—

## ಸೂತ್ರ ಪ್ರಸ್ಥಾನ ೪

ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ, ನ್ಯಾಯ ವಿವರಣ.

## ಗೀತಾ ಪ್ರಸ್ಥಾನ ೨

ಗೀತಾಭಾಷ್ಯ, ಗೀತಾತಾತ್ಪರ್ಯ.

## ಪುರಾಣ ಪ್ರಸ್ಥಾನ ೩

ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ಯಮಕ ಭಾರತ.

## ತಂತ್ರ-ಆಚಾರ ೫

ಸದಾಚಾರಸ್ಮೃತಿ, ತಂತ್ರಸಾರ, ಕೃಷ್ಣಾಮೃತ ಮಹಾರ್ಣವ, ಯತಿಪ್ರಣವ ಕಲ್ಪ, ಜಯಂತಿಕಲ್ಪ.

## ವೈದಿಕ ವಿಭಾಗ ೧

ಋಗ್‌ಭಾಷ್ಯ.

## ಸ್ತೋತ್ರ ವಿಭಾಗ ೨ + ೩

ದ್ವಾದಶಸ್ತೋತ್ರ, ನಖಸ್ತುತಿ, ಅಂಬರಗಂಗಾ ಇತ್ತೀಚೆಗೆ ಆಚಾರ್ಯರವೆಂದು ತರ್ಕಿಸಲಾದ ನ್ಯಾಸ ಪದ್ಧತಿ, ತಿಥಿನಿರ್ಣಯ.

ಶ್ರೀ ಮಧ್ವಾಚಾರ್ಯರ ಗ್ರಂಥ ಲೇಖನ ಶೈಲಿಯು ಗಹನಗಂಭೀರವೂ, ನಿರ್ದುಷ್ಟವೂ, ನಿಷ್ಕೃಷ್ಟವೂ ಆಗಿದೆ.

ಆಚಾರ್ಯರು ನಿರೂಪಿಸುವ ಪ್ರತಿಯೊಂದು ಮಾತು ಹಾಗೂ ವಿಧಾನಗಳ ಹಿಂದೆ ಅನೇಕ ಪ್ರಮಾಣ ವಚನಗಳನ್ನು ಉದಾಹರಿಸುವದರಿಂದ ಅವು ಕೇವಲ ಪ್ರಮಾಣ ಪುಂಜಮಂಜೂಷಿಕೆಗಳಂತೆ ಕಾಣುತ್ತಿವೆ. ಯಾವ ಭಾಷೆಯ ಆಡಂಬರವೂ ಇಲ್ಲದೆ ನೇರವಾಗಿ ಪ್ರಮೇಯಗಳನ್ನು ವೇದಶಾಸ್ತ್ರಪ್ರಮಾಣಗಳಿಂದ ಸಾಧಿಸಿ ಸಿದ್ಧಾಂತಿಸುವ ಅವರ ಗ್ರಂಥ ಪ್ರಣಯನ ಪರಿಪಾಟಿಯು ವಿಶ್ವಮಾನ್ಯವಾಗಿದೆ.

ಅವರ ಗ್ರಂಥಗಳನ್ನು ಓದಿದರೆ ಸಾಕು. ಅವರು ಸರ್ವಜ್ಞರೆಂದು ಯಾರಿಗಾದರೂ ಖಚಿತವಾಗದೇ ಇರದು.



## ಶ್ರೀ ಮಧ್ವಾಚಾರ್ಯರ ಮೂವತ್ತೇಳು ಗ್ರಂಥಗಳು

## ಅವುಗಳ ಟೀಕೆ ಟಿಪ್ಪಣಿಗಳು

### ಗೀತಾಭಾಷ್ಯ

ಮಹಾಭಾರತದ ಸಾರಸರ್ವಸ್ವಭೂತವಾದ ಸುಧಾ ಕಲಶದಂತಿರುವ ಶ್ರೀಮದ್ ಭಗವದ್ಗೀತಾ ಗ್ರಂಥವು ಶ್ರೀಮನ್ ಮಧ್ವಾಚಾರ್ಯರಿಗೆ ಪರಮ ಪ್ರಿಯವಾದುದು. ಎಲ್ಲ ಮತಾಚಾರ್ಯರು ಗೀತೆಯ ಮೇಲೆ ಒಂದೊಂದು ವ್ಯಾಖ್ಯಾನವನ್ನು ಬರೆದು ಕೃತ ಕೃತ್ಯರಾದರೆ ಶ್ರೀಮದಾನಂದತೀರ್ಥ ಭಗವತ್‌ಪಾದರು ಒಂದಲ್ಲದಂತೆ ಎರಡು ವ್ಯಾಖ್ಯಾನಗಳನ್ನು ಆ ಭಗವದ್ಗೀತೆಯ ಮೇಲೆ ಬರೆದು, ತಮ್ಮಲ್ಲಿಯ ಗೀತಾ ಗೌರವವನ್ನು ವ್ಯಕ್ತಪಡಿಸಿದ್ದಾರೆ. ಗುರುಮಧ್ವರ ಗೀತಾಭಾಷ್ಯ ಮತ್ತು ಗೀತಾ ತಾತ್ಪರ್ಯ ಎರಡೂ ಗ್ರಂಥಗಳು ಆಧ್ಯಾತ್ಮ ಪ್ರಪಂಚದ ಎರಡು ಕಣ್ಣುಗಳಿದ್ದಂತೆ. ವೇದಾಂತ ಭಂಡಾರದ ಎಲ್ಲ ಪ್ರಮೇಯ ಪುಂಜಗಳ ಸುಂದರ ಮಂಜೂಷಿಕೆಗಳಿದ್ದಂತೆ.

ಶ್ರೀ ಗೀತಾಭಾಷ್ಯ ಗ್ರಂಥವನ್ನು ಆಚಾರ್ಯರು ರಚಿಸಿ, ಶ್ರೀಮನ್ ನಾರಾಯಣ ನಿಗೆ ಸಮರ್ಪಣಗೈದರು. ಅದನ್ನು ನೋಡಿ ಪರಮಾತ್ಮನು ಬಹಳ ಸಂತೋಷವನ್ನು ವ್ಯಕ್ತಪಡಿಸಿದನು. ಎಂದು ಸುಮಧ್ವವಿಜಯದಲ್ಲಿ ಹೇಳಲಾಗಿದೆ.

ಹೀಗೆ ಸ್ವಯಂ ಗೀತಾಚಾರ್ಯನು ತನ್ನ ಗೀತೆಯ ಮೇಲಿನ ವ್ಯಾಖ್ಯಾನವನ್ನು ನೋಡಿ ಅದಕ್ಕೆ ತನ್ನ ಸಮ್ಮತಿಯ ಮುದ್ರೆಯನ್ನು ಇತ್ತಿದ್ದು ಶ್ರೀ ಮಧ್ವ ಭಾಷ್ಯಕ್ಕೆ ಮಾತ್ರ. ಈ ಪ್ರಪಂಚದಲ್ಲಿ ಈ ವರೆಗೆ ಭಗವದ್ಗೀತೆಯ ಮೇಲೆ ಟೀಕೆ ಟಿಪ್ಪಣಿ ಗಳೇನೊ ಸಾವಿರಾರು ಆಗಿರಬಹುದು. ಆದರೆ ಯಾವ ಭಾಷ್ಯವು ಮೂಲ ಗ್ರಂಥಕಾರ ರಾದ ಭಗವಾನ್ ಬಾದರಾಯಣರ ಸಮ್ಮತಿಯ ಸೌಭಾಗ್ಯವನ್ನು ಪಡೆದದ್ದು ಅವರವರ ಮತೀಯ ಗ್ರಂಥದಲ್ಲಿಯೂ ಐತಿಹಾಸದಲ್ಲಿಯೂ ಕಂಡುಬರುವದಿಲ್ಲ.

ಆದರೆ ಮಧ್ವಾಚಾರ್ಯರ ಗೀತಾ ಭಾಷ್ಯವನ್ನು ಆ ಗೀತೆಯನ್ನು ಅರ್ಜುನ ನಿಗೆ ಸ್ವಯಂ ಉಪದೇಶ ಮಾಡಿದ ಸ್ವಯಂ ಗೀತಾಕಾರನಾದ ಆ ಪರಮಾತ್ಮನು ಓದಿ, ಕೇಳಿ, ತಿಳಿದು, ನೋಡಿ ತನ್ನ ಹೃದಯವೆಲ್ಲವೂ ಅದರಲ್ಲಿ ಪಡಿಮೂಡಿದೆ ಎಂದು ಖಾತ್ರಿ ಮಾಡಿಕೊಂಡು ಅದಕ್ಕೆ ತನ್ನ ಆಶೀರ್ವಾದವನ್ನು ಇತ್ತಿದ್ದಾನೆ. ಇದರಲ್ಲಿ ಬರೆದಪ್ಪಕ್ಕಿಂತ ಹೆಚ್ಚು ಅರಿಯಬಲ್ಲ. ಮತ್ತು ಬರಿಯಬಲ್ಲ ಯೋಗ್ಯತೆಯು ಈ ಸರ್ವಜ್ಞಾಚಾರ್ಯರಲ್ಲಿ ಉಂಟು ಉಂಬುವದನ್ನು ಆ ಗ್ರಂಥ ಪ್ರಾರಂಭದಲ್ಲಿಯ

ಶಕ್ತಿತಃ ಎಂಬ ಪದದ ಬದಲಾಗಿ ಲೇಶತಃ ಎಂಬ ಪದವು ಇರಲಿ. (ನನ್ನ ಶಕ್ತ್ಯಾನುಸಾರ ಬರೆಯುತ್ತೇವೆ ಎಂಬ ಶಬ್ದದ ಬದಲಾಗಿ ನನಗೆ ತಿಳಿದದ್ದು ಬೇಕಾದಷ್ಟು ಇದ್ದರೂ ಜನರು ತಿಳಿದುಕೊಳ್ಳುವ ಶಕ್ತ್ಯಾನುಸಾರವಾಗಿ ತುಸು ಹೇಳುತ್ತೇನೆ.) ಎಂದು ಚಿಕ್ಕ ತಿದ್ದುಪಡೆಯನ್ನು ಮಾಡಿ ಶ್ರೀ ಮಧ್ವಾಚಾರ್ಯರ ಈ ಗೀತಾವ್ಯಾಖ್ಯಾನದ ಗರಿಮೆ ಹಿರಿಮೆಗಳಿಗೆ ತನ್ನ ಗೌರವದ ಸುಸ್ಪಷ್ಟ ಬೆಂಬಲವನ್ನು ವ್ಯಕ್ತಪಡಿಸಿದ್ದಾನೆ.

ಈ ಗೀತಾ ಭಾಷ್ಯದ ಪ್ರಾರಂಭದಲ್ಲಿ ಆಚಾರ್ಯರು ಮಹಾಭಾರತದ ಮಹತಿಯನ್ನು ಹೇಳಿ ಆ ಭಾರತವೆಂಬ ಪಾರಿಜಾತ ವೃಕ್ಷಕ್ಕೆ ಅರಳಿದ ಪ್ರಮೇಯ ಪುಷ್ಪಗಳ ಜೇನು ಈ ಗೀತೆ. "ಮಹಾಭಾರತ ಪಾರಿಜಾತ ಮಧುಭೂತಾಂ ಗೀತಾಂ" ಎಂದು ಗೀತೆಯನ್ನು ಬಣ್ಣಿಸಿದ್ದಾರೆ.

ಇದರಲ್ಲಿ ಧರ್ಮ ಸಮ್ಮೂಢ ಚೇತಸ್ಕನಾದ ಅರ್ಜುನನನ್ನು ನಿಮಿತ್ತ ಮಾಡಿಕೊಂಡು ಧರ್ಮಾಧರ್ಮಗಳ ನಿರ್ಣಯವನ್ನು ಮಾಡಿದ್ದಾನೆ. ಆಪ್ತೇಷ್ಟರನ್ನು ಗುರು ಹಿರಿಯರನ್ನು ಯುದ್ಧದಲ್ಲಿ ಕೊಂದರೆ ಪಾಪ ಬರುವದಲ್ಲವೇ ಎಂಬ ಅರ್ಜುನನ ಆ ಶಂಕೆಗೆ ನಾರಾಯಣನ ದ್ವೇಷಿಗಳೂ ಅವರಿಗೆ ಸಹಾಯ ಮಾಡುವವರೂ ಅಂಥ ಪಾಪಿಗಳನ್ನು ವಧ ಮಾಡುವ ಈ ಯುದ್ಧವು ಭಗವತ್ ಪೂಜಾ ಎಂಬ ಬುದ್ಧಿಯಿಂದ ಮಾಡಿದರೆ ಪುಣ್ಯವೇ ಆಗುವದು ಎಂದು ಬೋಧನೆ ಮಾಡಿದ್ದಾರೆ. ಜೀವನ ನಿತ್ಯತ್ವವನ್ನು ದೇಹದೇಹಿ ಭೇದವನ್ನೂ, ಸರ್ವತ್ರ ವ್ಯಾಪ್ತನಾದ ಭಗವಂತನ ಸ್ವರೂಪವನ್ನೂ ಗೀತೆಯು ಹೇಗೆ ಬೋಧಿಸುತ್ತದೆ ಎಂಬುದನ್ನು ಆಚಾರ್ಯರು ಮಾರ್ಮಿಕವಾಗಿ ತೋರಿಸಿಕೊಟ್ಟಿದ್ದಾರೆ.

ಮೊದಲಿನ ಆರು ಅಧ್ಯಾಯಗಳಲ್ಲಿ ಜ್ಞಾನಯೋಗ, ಕರ್ಮಯೋಗಗಳ ಮಹತ್ವವನ್ನು ಚನ್ನಾಗಿ ವಿವರಿಸಲಾಗಿದೆ. ಏಳರಿಂದ ಹನ್ನೆರಡನೆಯ ಅಧ್ಯಾಯದ ಎರಡನೆಯ ಷಟ್ಕದಲ್ಲಿ ಆ ಪರಮಾತ್ಮನ ವಿಭೂತಿರೂಪ, ವಿಶ್ವರೂಪಗಳ ಬಗೆಗೆ ವಿವರವಾದ ನಿರೂಪಣೆ ಇದೆ. ಕೊನೆಯ ಷಟ್ಕದಲ್ಲಿ ಜ್ಞಾನ ಸಾಧನವಾದ ನಿಷ್ಕಾಮ ಕರ್ಮ ಹಾಗೂ ಜ್ಞಾನ ಯೋಗಗಳ ಇತಿ ಕರ್ತವ್ಯತಾಂಶವನ್ನು ತಿಳಿಸಿದ್ದಾರೆ.

ಶ್ರೀ ಭಗವದ್ಗೀತೆಯು ಅತೀ ಪ್ರಸಿದ್ಧವಾಪುದ, ಒಂದು ರೀತಿಯೀದ ಬಾಧಕವಾಗಿದೆ. ಬರಿ ಮತಾಚಾರ್ಯರು ಮಾತ್ರವಲ್ಲದೆ ಅನೇಕ ರಾಜಕಾರಣಿಗಳು ಅದರಲ್ಲಿ ಕೈಹಾಕಿ, ತಮ್ಮ ಮೂಗಿನ ನೇರಿಗೆ ಅದನ್ನು ಎಳೆದಿದ್ದಾರೆ. ಟಿಳಕ, ಗಾಂಧಿ, ಅರವಿಂದಘೋಷ, ಆ್ಯನಿಬೆಜಂಟ, ರಾಧಾಕೃಷ್ಣನ್‌ರಂತಹ ರಾಜಕಾರಣಿಗಳೂ ಅರ್ಧಮರ್ಧ ಪಂಡಿತರೂ ತಮಗೆ ತೋಚಿದ ಅರ್ಥವನ್ನು ಗೀತೆಯಿಂದ ಹೊರಡಿಸಲು ಹೆಣಗಿದ್ದಾರೆ.

ಆದರೆ ಗೀತೆಯ ನಿಜವಾದ ಮರ್ಮವನ್ನು ಕಂಡುಹಿಡಿಯಬೇಕಾದರೆ ಸರ್ವಜ್ಞರಿಗೆ ಮಾತ್ರ ಸಾಧ್ಯ. ಅಂಥ ಸರ್ವಜ್ಞತ್ವವು ಶ್ರೀಮಧ್ವಾಚಾರ್ಯರಲ್ಲಿಯೇ ವ್ಯವಸ್ಥಿತ ಆದುದರಿಂದ ಅವರು ಹೇಳಿದ್ದೇ ಗೀತೆಯ ನಿಜವಾದ ಅರ್ಥ. ಅದೇ ಯಥಾರ್ಥ. ಅದರಿಂದಲೇ ಪುರಷಾರ್ಥ.

ಭಗವತ್‌ಪಾದರು ಸಮಗ್ರವಾದ ಗೀತಾ ಗ್ರಂಥವು ಭಗವನ್ ಮಹಾಮಹಿಮಾ ಪ್ರತಿಪಾದಕ ಎಂದು ಸಾಧಿಸಿದ್ದಾರೆ. ಮುಕ್ತಿಗೆ ಕಾರಣವಾದ ಯಥಾರ್ಥಜ್ಞಾನದ ಸ್ವರೂಪ ಏನು ? ಪರಬ್ರಹ್ಮರ ಮಹಿಮೆ ಎಂತಹದು ಅವನ ಸರ್ವೋತ್ತಮತ್ವ, ಸರ್ವ ನಿಯಾಮಕತ್ವ, ಸರ್ವಗುಣಪೂರ್ಣತ್ವ ಮೊದಲಾದ ಪ್ರಮೇಯಗಳು ಗೀತೆಯ ಪ್ರತಿ ಪದದಲ್ಲಿಯೂ, ಪ್ರತಿ ಅಧ್ಯಾಯದಲ್ಲಿಯೂ ಹೇಗೆ ಪ್ರತಿಪಾದಿತವಾಗಿವೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ಜ್ಞಾನಯೋಗ, ಕರ್ಮಯೋಗಗಳ ಪರಸ್ಪರ ಪೋಷಕತ್ವ ಹಾಗೂ ಸಾಮರಸ್ಯ ಸಮನ್ವಯಗಳನ್ನು ಸಮಂಜಸವಾಗಿ ಬಿಡಿಸಿ ಹೇಳಿದ್ದಾರೆ. ನಿಷ್ಕಾಮಕರ್ಮ, ನಿವೃತ್ತಿಮಾರ್ಗ, ಅಪರೋಕ್ಷಜ್ಞಾನ, ನಿರಂತರಧ್ಯಾನ, ಉತ್ಕಟಭಕ್ತಿ ಮೊದಲಾದ ಎಲ್ಲ ಸಾಧನಗಳನ್ನು ನಿರೂಪಿಸಿ ಭಗವಚ್ಛರಣಾಗತಿಗೆ ಮುಖ್ಯವಾದ ಮೋಕ್ಷೋಪಾಯವೆಂದು ಭಗವದಭಿಪ್ರಾಯವನ್ನು ಪ್ರಮಾಣಾಂತರ ವಚನೋಪನ್ಯಾಸಕ ಪುಷ್ಟೀಕರಿಸಿ ಶಾಶ್ವತ ಸತ್ಯವನ್ನು ಪ್ರತಿಪಾದಿಸಿದ್ದಾರೆ.

## ಗೀತಾ ತಾತ್ಪರ್ಯ

ಗೀತಾ ತಾತ್ಪರ್ಯ ಭಾಷ್ಯಾಭ್ಯಾಂ ಅಭ್ಯಾಂ ವಿಶ್ವಂ ಪ್ರಕಾಶತೇ ।
ಗೋಗಣೆ ರಪ್ರತೀಕಾರ್ಯೈ ರರ್ಕೇಂದುಭ್ಯಾಂ ಮಿವಾಧಿಕಂ ॥

ಎಂದು ಸುಮಧ್ವವಿಜಯದಲ್ಲಿ ಪಂಡಿತಾಚಾರ್ಯರು ಶ್ರೀಮನ್ ಮಧ್ವಾಚಾರ್ಯರ ಗೀತಾಭಾಷ್ಯ, ಗೀತಾ ತಾತ್ಪರ್ಯ ಎಂಬ ಎರಡು ಗ್ರಂಥಗಳು ತಮ್ಮ ಬೆಳಕಿನ ಬಳ್ಳಿಗಳಿಂದ ಪ್ರಪಂಚವನ್ನೆಲ್ಲ ಅತ್ಯುಜ್ವಲವಾಗಿ ಬೆಳಗುತ್ತವೆ. ಯಥಾರ್ಥವಾಗಿಯೇ ನುಡಿದ್ದಾರೆ. ಆಚಾರ್ಯರು ಗೀತಾಭಾಷ್ಯದಲ್ಲಿ ಗೀತೆಯ ಎರಡನೇ ಅಧ್ಯಾಯದ "ಅಶೋಚ್ಯಾ ನನ್ವಶೋಚಸ್ತ್ವಂ" ಎಂಬ ಶ್ಲೋಕದಿಂದ ಭಾಷ್ಯ ಬರೆಯಲು ಪ್ರಾರಂಭಿಸಿ ಅವಶ್ಯಕವಿದ್ದಲ್ಲೆಲ್ಲ ವಿಶದವಾಗಿ ವಿಷಯವನ್ನು ವಿವೇಚನಗೈದಿದ್ದಾರೆ. ಇದರಿಂದ ಆಪಾತತಃ ತೋರಬಹುದಾದ ಗೀತಾ ಭಾಷ್ಯಯ ಅಪೂರ್ಣತೆಯನ್ನು ದೂರ ಮಾಡಿ ಸಮಗ್ರ ಗೀತೆಯ ಪ್ರತಿ ಅಧ್ಯಾಯದ ಭಾವಾರ್ಥವು ಕಣ್ಣಿಗೆ ಕಟ್ಟುವಂತೆ ಈ ಗೀತಾ ತಾತ್ಪರ್ಯ ಗ್ರಂಥವನ್ನು ಆಚಾರ್ಯರು ರಚಿಸಿದ್ದಾರೆ.

ಈ ಗೀತಾ ತಾತ್ಪರ್ಯ ಗ್ರಂಥದಲ್ಲಿ ಆಚಾರ್ಯರು ಎಲ್ಲ ಅಧ್ಯಾಯಗಳ ಪ್ರಾರಂಭದಲ್ಲಿ ಆ ಆ ಅಧ್ಯಾಯದಲ್ಲಿ ಬರುವ ವಿಷಯಗಳನ್ನೆಲ್ಲ ನಿರೂಪಿಸಿ ಸಾಧಕ ಬಾಧಕ

ವಿಮರ್ಶನದಿಂದ ಆ ಅಧ್ಯಾಯದ ನಿಷ್ಕೃಷ್ಟಾರ್ಥವನ್ನು ಮಥಿಸಿ ತೋರಿಸಿದ್ದಾರೆ. ಈ ಗ್ರಂಥದ ಭಾಷೆಯಾದರೂ ಗೀತಾ ಭಾಷ್ಯಕ್ಕಿಂತ ಸುಲಭವಿದ್ದು ಸರಳ ರಗಳೆಯಂತೆ ವಿವೇಚನಾ ಪ್ರಚುರವಾದ ಪ್ರವಾಹಿ ನಿರೂಪಣಕ್ಕೆ ತಕ್ಕದ್ದಾಗಿದೆ.

ಕೆಲವೇ ಶಬ್ದಗಳಲ್ಲಿ ೧೮ ಅಧ್ಯಾಯ ಭಗವದ್ಗೀತೆಯ ಸಾರಸಂದೇಶವನ್ನು ಸುಂದರವಾದ ವಚನ ರಚನೆಯಿಂದ ಕ್ರೋಡೀಕರಿಸಿ ಭಾವಪೂರ್ಣವಾಗಿ ತಿಳಿಸುವ ಪಾವಮಾನೀ ಪದ್ಧತಿಯನ್ನು ನೋಡಿರಿ.

ತತ್ರ ಸಾಕ್ಷಾದಿಂದ್ರಾವತಾರ ಮುತ್ತಮಾಧಿಕಾರಿಣ ಮಾತ್ಮನಃ ಪ್ರಿಯತಮ ಮರ್ಜುನಂ ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್ತ್ವವನು ಬಂಧಿ ನಿಗ್ರಹಂ ಬಂಧು ಸ್ನೇಹಾದಧರ್ಮತ್ವೇ ನಾಶಙ್ಕ್ಯ ತತೋ ನಿವೃತ್ತ ಪ್ರಾಯಂ ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋಧರ್ಮಸ್ತದ್ವಿರುದ್ಧಃ ಸರ್ವೋಽಪ್ಯ ಧರ್ಮೋ ಭಗವದಧೀನತ್ವಾತ್ಸರ್ವಸ್ಯೇತಿ ಬೋಧಯತಿ ಭಗವನ್ನಾರಾಯಣಃ।

ಶ್ರೀ ಗೀತಾ ತಾತ್ಪರ್ಯ, ಗೀತಾ ಭಾಷ್ಯ ಇವೆರಡೂ ಗ್ರಂಥಗಳು ಪರಸ್ಪರ ಪೂರಕವಾಗಿವೆ. ಭಾಷ್ಯದಲ್ಲಿ ಆಚಾರ್ಯರು ಗೀತೆಗೆ ತಮಗೆ ಅಭಿಪ್ರೇತವಾದ ಅರ್ಥವನ್ನು ಮಾತ್ರ ಬರೆದಿದ್ದಾರೆ. ಆದರೆ ತಾತ್ಪರ್ಯ ಗ್ರಂಥದಲ್ಲಿ ಅದಕ್ಕೆ ವಿರುದ್ಧವಾದ ವಾದಿಗಳ ದುರ್ಮತಗಳನ್ನು ಖಂಡಿಸಿದ್ದಾರೆ. ಭಾಷ್ಯದಲ್ಲಿ ಗೀತಾಚಾರ್ಯನ ಆಶೆಯ ಆಕೂತಗಳಿಗೆ ಅನುಕೂಲವಾಗಿ ಅನೇಕ ಪ್ರಮೇಯಗಳನ್ನು ನಿರೂಪಿಸಿದ್ದಾರೆ. ಗೀತಾ ತಾತ್ಪರ್ಯದಲ್ಲಿ ಅಲ್ಲಿ ನಿರೂಪಿಸಿದ ಪ್ರಮೇಯ ಪುಂಜಗಳಿಗೆಲ್ಲ ವಿವಿಧ ಗ್ರಂಥಾಂತರಗಳ ಪ್ರಮಾಣ ಸಂವಾದವನ್ನು ಇಲ್ಲಿ ಪ್ರದರ್ಶಿಸಲಾಗಿದೆ, ಮತ್ತು ಗೀತೆಯ ಪದ್ಯಗಳ ಪ್ರತೀಕವನ್ನು ಹಿಡಿಯದೆ ಅವುಗಳ ಗೂಢ ರೂಢ ಭಾವಾವಿರ್ಭಾವವನ್ನು ಮಾಡಿ ಇಡೀ ಅಧ್ಯಾಯದ ಚಿಂತನ ಮಂಥನದಿಂದ ನಿರ್ಗಲಿತವಾದ ತಾತ್ಪರ್ಯವನ್ನು ಇಲ್ಲಿ ನಿರೂಪಿಸುತ್ತಾರೆ ಆಚಾರ್ಯರು. ಭಾಷ್ಯದಲ್ಲಿ ತಾವು ಮಾಡಿದ ಕೆಲವು ಪದ್ಯಗಳ ವಿವರಣವನ್ನು ವಿಶೇಷಾಕಾರವಾಗಿ ಉಪಬೃಂಹಣ ಮತ್ತು ಅರ್ಥಾಂತರ ಪ್ರದರ್ಶನ ವನ್ನು ಅನೇಕ ಸಂದರ್ಭಗಳಲ್ಲಿ ಇಲ್ಲಿ ಕಾಣಬಹುದು. ಶ್ರೀ ಗೀತಾ ತಾತ್ಪರ್ಯ ಗ್ರಂಥದಲ್ಲಿ ಸತ್ಕಾರ್ಯವಾದವನ್ನು ಖಂಡಿಸಿ ಅಸತ್ಕಾರ್ಯವಾದವನ್ನು ಅಲ್ಲಗಳೆದು ಅನಿರ್ವಚನೀಯ ವಿಚಾರ ಸ್ವರೂಪವನ್ನು ಯುಕ್ತಿಯುಕ್ತವಾಗಿ ನಿರಾಕರಿಸಿ ಸ್ವಪ್ರಕಾಶತ್ವ ವಿಚಾರವನ್ನು ದೂಷಿಸಿ ಭಾಸ್ಕರ ಮತವನ್ನು ತಿರಸ್ಕರಿಸಿ ಶಂಕರ ಮತದ ಸಿದ್ಧಾಂತ ವನ್ನೆಲ್ಲ ಧೂಳೀಪಟವನ್ನಾಗಿ ಮಾಡಿ ಗೀತೆಯ ಗೋಪುರದ ಮೇಲೆ ಕೇವಲ ದ್ವೈತ ಮತದ ಜಯ ವೈಜಯಂತಿಯು ಗೆಲುವಿನ ಗುರುತಾಗಿ ನಿಲ್ಲುವಂತೆ ಮಾಡಿದ್ದಾರೆ.

ಆಚಾರ್ಯರ ಗೀತಾ ಪ್ರವಚನದಲ್ಲಿ ಕರ್ಮಯೋಗ ಕೌಶಲದ ನಿರೂಪಣೆ ಯಲ್ಲಿ ಹೊಸ ಅರ್ಥವಿದೆ. ಶ್ರೀಕೃಷ್ಣನ ನೈಷ್ಕರ್ಮ್ಯವೆಂದರೆ ಶಂಕರಾದ್ವೈತಿಗಳ

ಅವಿದ್ಯಾವಸ್ಥೆಯಲ್ಲ ಎಂಬುವದನ್ನು ಆಚಾರ್ಯರು ತೋರಿಸಿದ್ದಾರೆ. ಈ ನಿಷ್ಕಾಮ ಕರ್ಮವು ಅಂತಃಕರಣಸಿದ್ಧಿದ್ವಾರಾ ಜ್ಞಾನಭಕ್ತಿಗಳ ಅಭಿವೃದ್ಧಿಗೆ ಕಾರಣವಾಗುತ್ತದೆ. ಜ್ಞಾನಪೂರ್ವಕವಾದ ಈ ನಿಷ್ಕಾಮ ಕರ್ಮಾನುಷ್ಠಾನವೇ ನಿವೃತ್ತಿಮಾರ್ಗವೆನಿಸುತ್ತದೆ. ಈ ನಿವೃತ್ತಿ ಮಾರ್ಗದಿಂದ ಬ್ರಹ್ಮಪ್ರಾಪ್ತಿಯಾಗುವದೆಂದು ವ್ಯಾಸಸ್ಮೃತಿಯ

ನಿಷ್ಕಾಮಂ ಜ್ಞಾನಪೂರ್ವಂತು ನಿವೃತ್ತ ಮಿಹಚೋಚ್ಯತೆ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಪ್ಯೇತಿ ಸನಾತನಂ ॥

ಅದ್ವೈತಿಗಳ ಅವಿದ್ಯಾ ಅವಸ್ಥೆಗೂ ಗೀತಾ ಪ್ರೋಕ್ತವಾದ ಕರ್ಮಯೋಗಕ್ಕೂ ಯಾವ ಸಂಬಂಧವೂ ಇಲ್ಲವೆಂಬುವದನ್ನು ಈ ಶ್ಲೋಕದಲ್ಲಿ ತೋರಿಸಿ ಆಚಾರ್ಯರು

ಜ್ಞಾನೇಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮ ಸತತಂ ।
ನ ಸರ್ವ ಕರ್ಮಣಾಂ ತ್ಯಾಗಃ ಕಸ್ಯಚಿದ್ಭವತಿ ಕ್ವಚಿತ್ ॥

ಎಂದು ಜ್ಞಾನೋತ್ತರದಲ್ಲಿಯೂ ಕರ್ಮವನ್ನು ಮಾಡಲೇಬೇಕು ಸರ್ವ ಕರ್ಮಗಳ ತ್ಯಾಗವು ಯಾವ ಕಾಲದಲ್ಲಿಯೂ ವಿಹಿತವಲ್ಲವೆಂದು ಹೇಳಿದ್ದಾರೆ.

ಫಲಾಪೇಕ್ಷೆ ಇಲ್ಲದೆ ಸರ್ವಾರ್ಪಣಭಾವದಿಂದ ಜ್ಞಾನಪೂರ್ವಕವಾಗಿ ವಿಹಿತ ಕರ್ಮಗಳನ್ನು ಮಾಡುವದೇ ಕರ್ಮಯೋಗದ ಕೌಶಲ ಎಂದು ಹೇಳಿ ಕರ್ಮ ಕಾಂಡದ ಕಾಳಿಮೆ ಕೀಳಿಮೆಗಳನ್ನು ಕಳೆದು ಕರ್ಮ ಮಾರ್ಗಕ್ಕೆ ಕರ್ಮಯೋಗ ಎಂಬ ಪದವಿಯನ್ನು ತಂದುಕೊಟ್ಟು ಮೋಕ್ಷಜನಕವಾದ ಜ್ಞಾನಯೋಗಕ್ಕೆ ಹೊಯ್ ಕೈಯ್ಯಾಗಿ ತಂದು ನಿಲ್ಲಿಸಿದ ಶ್ರೇಯಸ್ಸು ಶ್ರೀ ಮಧ್ವಾಚಾರ್ಯರಿಗೇ ಸಲ್ಲುತ್ತದೆ. ಮತ್ತು ಜೀವಾತ್ಮರ ಬಿಂಬ ಪ್ರತಿಬಿಂಬ ಭಾವವನ್ನು ಶ್ರೀಮಧ್ವಾಚಾರ್ಯರಷ್ಟು ಸಮಂಜಸವಾಗಿ ತರ್ಕಬದ್ಧವಾಗಿ ಪ್ರಮಾಣಾವಿರೋಧವಾಗಿ ಯಾರೂ ಪ್ರತಿಪಾದಿಸಿಲ್ಲ ಎಂಬುವದು ಅವರ ಈ ಗೀತೆಯ ಮೇಲಿನ ವ್ಯಾಖ್ಯಾನ ಗ್ರಂಥಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ನಿಗಮಾಗಮ ವಚನಗಳಲ್ಲಿ ಎಲ್ಲಿಯಾದರೂ ಜೀವನಿಗೆ ಆಪಾತತಃ ಬ್ರಹ್ಮಭಾವವನ್ನು ಹೇಳುವ ಮಾತುಗಳು ಬಂದರೂ ಯಾರೂ ಕಂಗೆಡುವ ಕಾರಣವಿಲ್ಲ. ಜೀವಾತ್ಮನ ಸರ್ವಥಾ ಪರಾಧೀನ ಕರ್ತೃತ್ವವನ್ನು ಅನೇಕ ಪದ್ಯಗಳಿಂದ ತೋರಿಸಿಕೊಟ್ಟು ಕಾದಾಚಿತ್ಕವಾದ ತಾದಾತ್ಮ್ಯ ವಚನಗಳಿಗೆಲ್ಲ

"ಸರ್ವಮೇತತ್ ಬ್ರಹ್ಮೇತ್ಯುಚ್ಯತೆ ತದಧೀನ ಸತ್ತಾ
ಪ್ರವೃತ್ತಿಮತ್ವಾತ್ ನ ತು ತತ್ಸ್ವರೂಪತ್ವಾತ್ "

ಎಂದು ಹೇಳಿ ಜೀವನ ಬ್ರಹ್ಮಾಧೀನವಾದ ಸತ್ತಾಪ್ರವೃತ್ತಿಗಳೇ ಅಲ್ಲಿ ಮುಖ್ಯ ಕಾರಣ ಎಂದು ತೋರಿಸಿದ್ದಾರೆ.

ಹೀಗೆ ಕರ್ಮಯೋಗದ ಉದ್ಧಾರ ಮಾಡಿ ಜ್ಞಾನಯೋಗವ ನಿಜವಾದ ಮಹತಿಯನ್ನು ತಿಳಿಸಿ ಉಭಯ ಸಂಸ್ಲಿಷ್ಟವಾದ ಭಕ್ತಿಯೋಗದಿಂದ ಮೋಕ್ಷಜನಕವಾದ ಭಗವಂತನ ಅತ್ಯರ್ಥ ಪ್ರಸಾದವು ಹೇಗೆ ದೊರಕುವದೆಂಬುದನ್ನು ತಮ್ಮ ಈ ಎರಡು ಗೀತಾವ್ಯಾಖ್ಯಾನಗಳಲ್ಲಿ ನಿಚ್ಚಳವಾಗಿ ಮನಗಾಣಿಸಿಕೊಟ್ಟಿದ್ದಾರೆ.

## ಋಗ್ಭಾಷ್ಯ

" ತ್ರ್ಯರ್ಥತಾಂ ಶ್ರುತಿಷು ವಿತ್ತ ದಶಾರ್ಥಂ "

ಎಂಬ ವಚನದಂತೆ ಶ್ರೀಮದಾನಂದ ತೀರ್ಥರು ವೇದ ಮಂತ್ರಗಳಿಗೆಲ್ಲ ಮೂರು ಅರ್ಥಗಳು ಉಂಟು ಎಂದು ಪ್ರತಿಪಾದಿಸಿದ್ದಾರೆ.

" ಅಗ್ನಿ ಮೀಳೆ ....................... "

ಎಂದು ಮುಂತಾಗಿ ಅಗ್ನಿಸೂಕ್ತದಲ್ಲಿ ಸ್ತುತಿಸಲ್ಪಟ್ಟ ಅಗ್ನಿ ಎಂದರೆ ಬರಿ ಬೆಂಕಿ ಎಂದಿಷ್ಟೇ ಅರ್ಥವಲ್ಲ ಅಥವಾ ತದಭಿಮಾನಿಯಾದ ಅಗ್ನಿದೇವತಾ ಮಾತ್ರವೂ ಅಲ್ಲ. ಆ ಅಗ್ನ್ಯಂತರ್ಗತನಾದ ನಾರಾಯಣನೇ ಅಗ್ನಿ ಶಬ್ದದ ಪರಮ ಮುಖ್ಯಾರ್ಥ ಎಂದು ಸಪ್ರಮಾಣವಾಗಿ ಸಾಧಿಸಿದ್ದಾರೆ ಶ್ರೀಮದಾಚಾರ್ಯರು.

ಕೇವಲ ಜಡಜೀವಪರವಾಗಿ ವೇದಗಳಿಗೆ ಅರ್ಥ ಮಾಡಿದ'ಉತ್ತಾನದೃಷ್ಟಿಯ' ವೇದಭಾಷ್ಯಕಾರರು ವೇದಪುರುಷನಿಗೆ ಮಹಾ ಅಪಚಾರ ಮಾಡಿದ್ದಾರೆ.

ಆದರೆ ಶ್ರೀ ಮಧ್ವಾಚಾರ್ಯರು ಮಾತ್ರ ಸಮಗ್ರ ವೇದ ಮಂತ್ರಗಳಿಗೆ ಮಾತ್ರವಲ್ಲದೆ ವೇದದ ಸ್ವರ, ವರ್ಣ, ಪದ, ವಾಕ್ಯ, ಪೂರ್ವೋತ್ತರಾಕ್ಷರಗಳ ಸಂಧಿ, ಮಾತೃಕಾದಿಗಳಿಂದ ಕೂಡ ಶ್ರೀ ಹರಿಯೇ ಪ್ರತಿಪಾದ್ಯ ಎಂದು ಸಾಧಿಸಿ ವೇದೋದ್ಧಾರವನ್ನೇ ಮಾಡಿದ್ದಾರೆ. ಸಕಲ ವೇದಗಳೂ ಆ ಭಗವಂತನ ಗುಣಗಾನ ಮಾಡಲಿಕ್ಕೇ ಹೊರಟಿವೆ ಎಂಬುವದು ಆಚಾರ್ಯರ ಸಿದ್ಧಾಂತವಾಗಿದೆ.

ಇದು ಕೇವಲ ಪ್ರೌಢಿಮೆಯಾಗಿಲ್ಲ. ಪ್ರತಿಯೊಂದು ಮಂತ್ರಕ್ಕೂ ಮೂರು ಅರ್ಥ ಹೇಳಿ ಭಗವತ್ಪರವಾಗಿ ಅವನ ಮಹಾಮಹಿಮಾಸಾಧಕವಾಗಿ ಅರ್ಥವಿಸಲು ಬರುತ್ತದೆ ಎಂದು ದಿಕ್ ಪ್ರದರ್ಶನಕ್ಕಾಗಿ ಆಚಾರ್ಯರು ಋಗ್ವೇದದಲ್ಲಿಯ ನಲವತ್ತು ಸೂಕ್ತ ಗಳಿಗೆ ಭಾಷ್ಯ ಬರೆದಿದ್ದಾರೆ. ಅದೇ ಋಗ್ಭಾಷ್ಯ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

## ಉಪನಿಷದ್‌ಭಾಷ್ಯಗಳು ಈಶಾವಾಸ್ಯೋಪನಿಷತ್‌ಭಾಷ್ಯ

ಈ ಚಿಕ್ಕದಾದ ಉಪನಿಷತ್ತಿನಲ್ಲಿ ಘನತರವಾದ ಅರ್ಥವು ಅಡಕವಾಗಿದೆ ಎಂದು ಆಚಾರ್ಯರು ತಮ್ಮ ಈಶಾವಾಸ್ಯೋಪನಿಷದ್ ಭಾಷ್ಯದಲ್ಲಿ— ಪ್ರಂಪಚದ ತುಂಬ ಪರಮಾತ್ಮನು ಅಡಕವಾಗಿದ್ದಾನೆ. ವಿಶ್ವದ ಪ್ರವೃತ್ತಿಗೆಲ್ಲ ಆತನೇ ಮೂಲ ಕಾರಣ. ಆ ಪರಮಾತ್ಮನು ಕೊಟ್ಟಿದ್ದರಿಂದಲೇ ನೀನು ತೃಪ್ತನಾಗಿರು· ಇನ್ನೊಬ್ಬರ ಹಣಕ್ಕೆ

ಆಶೆ ಮಾಡಬೇಡ. ವಿಹಿತ ಕರ್ಮಾನುಷ್ಠಾನವನ್ನು ಮಾಡಿ, ಪೂರ್ಣಾಯುಷಿಯಾಗಿರು. ಜ್ಞಾನಕ್ಕೆ ಕರ್ಮವೇ ಮೂಲ. ಕೃತಕರ್ಮಗಳನ್ನೆಲ್ಲ ಕೃಷ್ಣಾರ್ಪಣ ಎಂದು ಒಪ್ಪಿಸುವವನಿಗೆ ಯಾವ ಕರ್ಮ ಲೇಪವೂ ಇಲ್ಲ. ಕರ್ಮದಿಂದ ಜ್ಞಾನಿಗೂ ಸಹ ಮೋಕ್ಷದಲ್ಲಿ ಆನಂದಾತಿಶಯವುಂಟು. ಆದುದರಿಂದ ಎಂಥ ಜ್ಞಾನಿಯೂ ವಿಹಿತ ಕರ್ಮಗಳನ್ನು ಬಿಡಕೂಡದು. ಮೋಕ್ಷಾಪೇಕ್ಷಿಯು ಎಂದೂ ಕರ್ಮ ತ್ಯಾಗವನ್ನು ಮಾಡಬಾರದು.

ಮಿಥ್ಯಾಜ್ಞಾನವು ಬಹಳ ಅನರ್ಥಕರ. ಪರಮಾತ್ಮನ ಯಥಾರ್ಥ ಸ್ವರೂಪವನ್ನು ಬಿಟ್ಟು ಬೇರೊಂದು ರೂಪದಿಂದ ಅನ್ಯಥಾಕಾರವಾಗಿ ಉಪಾಸನೆ ಮಾಡುವವರಿಗೆ ಅಂಧಃತಮಸ್ಸು ಕಟ್ಟಿಟ್ಟದ್ದು. ಮಿಥ್ಯಾ ಜ್ಞಾನವನ್ನೂ ಖಂಡಿಸದಿದ್ದರೂ ಮಹಾ ಅನರ್ಥವನ್ನು ಹೇಳಿದ್ದಾರೆ. ಕೊನೆಗೆ ಭಗವಂತನನ್ನು ಸನ್ಮಾರ್ಗದಲ್ಲಿ ಕರೆದೊಯ್ಯಬೇಕೆಂದು ಪ್ರಾರ್ಥನೆಯನ್ನು ಸಲ್ಲಿಸಿದ್ದಾರೆ. ಹೀಗೆ ಜ್ಞಾನ, ಕರ್ಮ, ಭಕ್ತಿ ಮೂರನ್ನು ಆತ್ಮೋದ್ಧಾರಕ್ಕೆ ಅತ್ಯಾವಶ್ಯಕ ಎಂಬುದನ್ನು ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿದೆ.

## ಕೇನೋಪನಿಷತ್ ಭಾಷ್ಯ

ಎಲ್ಲ ದಿಕ್ಪಾಲಕರು ದೇವತೆಗಳಿಗಿಂತ ಶ್ರೀ ವಿಷ್ಣುವೇ ಸರ್ವೋತ್ತಮ ಮತ್ತು ಸರ್ವನಿಯಾಮಕ ಎಂಬ ಸಿದ್ಧಾಂತವನ್ನು ಈ ಕೇನೋಪನಿಷತ್ತು ಒಂದು ಮನೋಹರವಾದ ಯಕ್ಷನ ಆಖ್ಯಾಯಿಕೆಯಿಂದ ಸುಂದರವಾಗಿ ಇಲ್ಲಿ ಸಂಸ್ಥಾಪಿಸುತ್ತದೆ.

ಅನಂತಗುಣ ಪರಿಪೂರ್ಣನಾದ ಆ ಪರಮಾತ್ಮನು ದೇವತೆಗಳಿಗೂ ಸಂಪೂರ್ಣವಾಗಿ ತಿಳಿಯಲು ಅಶಕ್ಯನು. ನಮ್ಮ ಕಣ್ಣು, ಕಿವಿ, ಮನಸ್ಸು ಮುಂತಾದ್ದಕ್ಕೆ ಅವನು ಗೋಚರವಾಗಲಾರ. ಕಣ್ಣು ಮುಚ್ಚಿ ಧ್ಯಾನ ಸಮಾಧಿಯಲ್ಲಿ ಇದ್ದಂತೆ ನಟಿಸಿ ನಾವು ದೇವರನ್ನು ಕಂಡೆವೆಂದು ಹೇಳುವವರಿಂದ ಬಹು ದೂರ ಇದ್ದಾನೆ ಆ ಭಗವಂತ. ಅವರು ಕಂಡೆವೆಂದು ಹೇಳುವದು ಬರಿ ವಾಸನಾರೂಪವೇ ಹೊರತು ನಿಜವಾದ ವಾಸುದೇವನ ರೂಪವಲ್ಲ.

ಆ ಭಗವಂತನನ್ನು ನಾನು ಚನ್ನಾಗಿ ಬಲ್ಲೆ ಎಂದು ಹೇಳುವವನಷ್ಟು ಅಜ್ಞಾನಿಯು ಬೇರೆ ಯಾರೂ ಇಲ್ಲ. ಅನಂತಗುಣ ಪರಿಪೂರ್ಣನಾದ ಆ ಭಗವಂತನನ್ನು ನಾನೆಂತು ಅರಿಯಬಲ್ಲೆ ಎಂದು ಹೇಳುವವನೇ ನಿಜವಾಗಿ ಅವನನ್ನು ಅರಿತ ಮಹಾಜ್ಞಾನಿ.

ಎಲ್ಲವೂ ಶ್ರೀ ಹರಿಯ ಅಧೀನ. ಮಾನವರ ಗೆಲಿವು, ನಲಿವು, ಬಲ, ಮಾನ, ಐಸಿರಿ, ಸರ್ವಪ್ರದನೂ ಶ್ರೀ ಹರಿಯೇ. ಮಾನವನ ಕರ್ತೃತ್ವಾಭಿಮಾನವು ಪೊಳ್ಳು ಸುಳ್ಳು. ಅದು ವಿನಾಶದ ದಾರಿ. ಇದಕ್ಕೆ ಇಲ್ಲಿ ಬರುವ ಯಕ್ಷ ಕತೆಯೇ ದೃಷ್ಟಾಂತ.

ಹೀಗೆ ನಾನು ಕರ್ತಾ ಎಂದರೆ ಅನರ್ಥವಾಗುವಾಗ ನಾನು ಜಗತ್ಕರ್ತಾ, ಬ್ರಹ್ಮ ಅಥವಾ ನಾನೇ ದೇವರು ಎಂದು ತಿಳಿದುಕೊಂಡರೆ ಎಂಥ ಅನರ್ಥವಾಗಬೇಡ.

ಆದುದರಿಂದ ಗುರು ಮುಖದಿಂದ ಶ್ರೀ ಹರಿಯ ಸರ್ವ ಕರ್ತೃತ್ವ, ಸರ್ವೋತ್ತಮತ್ವ, ಸರ್ವನಿಯಾಮಕತ್ವಾದಿಗಳನ್ನು ತಿಳಿದು ಆ ದಿವ್ಯ ಜ್ಞಾನದಿಂದ ಸದ್ಗತಿಯನ್ನು ಹೊಂದಬೇಕೆಂಬುದನ್ನು ಅನೇಕ ಸಂವಾದಿ ಪ್ರಮಾಣವಚನೋಪನ್ಯಾಸಪೂರ್ವಕವಾಗಿ ಈ ಉಪನಿಷದ್ಭಾಷ್ಯದಲ್ಲಿ ಪ್ರತಿಪಾದಿಸಿದ್ದಾರೆ.

## ಕಾಠಕೋಪನಿಷತ್ ಭಾಷ್ಯ

ಪರಮಾತ್ಮನ ಸಾರ್ವಭೌಮಾಧಿಕಾರವು ಈ ಲೋಕಕ್ಕೆ ಮಾತ್ರ ಸೀಮಿತವಾಗಿದೆಯೋ ಅಥವಾ ಪರಲೋಕದಲ್ಲಿಯೂ ಮುಕ್ತಿಮಂದಿರದಲ್ಲಿಯೂ ಅವನದೇ ಅಧಿಕಾರ ನಡೆಯುವದೋ? ಅಂದರೆ ಜೀವನು ಸಂಸಾರಾವಸ್ಥೆಯಲ್ಲಿ ಪರಮಾತ್ಮನ ಅಧೀನನಾಗಿ ಮುಕ್ತನಾದ ಬಳಿಕ ಅಜ್ಞಾನದಿಂದ ನಿವೃತ್ತಿಯನ್ನು ಹೊಂದಿ ಸರ್ವತಂತ್ರಸ್ವತಂತ್ರನಾಗಿ ಇರಬಲ್ಲನೋ ? ಅಲ್ಲಿಯೂ ಸರ್ವಜೀವರಿಗೆ ನಿಯಾಮಕನಾಗಿ ಇರುವದುಹೇಗೆ? ಹಾಗಿದ್ದರೆ,ಆಗಿದ್ದರೆ ಆಗ, ಅಲ್ಲಿ,ಅವನ,ಅದರ ಸ್ವರೂಪು ಏನು? ಎಂತು?

ಇದು ಈ ಕಾಠಕೋಪನಿಷತ್ತು ಎತ್ತಿಕೊಂಡ ಮೂಲಪ್ರಶ್ನೆ.

ತಂದೆಯ ಕೋಪಕ್ಕೆ ಗುರಿಯಾದ ನಚಿಕೇತನು ನಿನ್ನನ್ನು ಯಮನಿಗೆ ಕೊಟ್ಟಿದ್ದೇನೆ ಎಂಬ ಸಿಟ್ಟಿನ ಮಾತನ್ನು ಕೇಳಿ ಯಮಪಟ್ಟಣಕ್ಕೆ ಹೋದನು. ಯಮದೇವ ಮನೆಯಲ್ಲಿ ಇರಲಿಲ್ಲ. ಅವನ ಮಡದಿ ಶಾಮಲಾದೇವಿಯ ಒಲುಮೆಯ ಆತಿಥ್ಯವನ್ನು ಸ್ವೀಕರಿಸದೇ ಜಿಜ್ಞಾಸುಯಾಗಿ ಕುಳಿತುಕೊಂಡ. ನಚಿಕೇತುವಿಗೆ ಅವನನ್ನು ಸಮಾಧಾನಗೊಳಿಸಲು ಯಮದೇವರು ಮೂರು ವರಗಳನ್ನು ಕೊಟ್ಟು ಕರುಣಿಸಿದನು.

ಮೊದಲನೇ ವರದಿಂದ ಸಿಟ್ಟಿಗೆದ್ದ ತನ್ನ ತಂದೆಯು ತನ್ನ ಮೇಲೆ ಪ್ರೀತಪ್ರಸನ್ನನ್ನಾಗಲಿ ಎಂದು ಕೇಳಿಕೊಂಡ.

ಎರಡನೇ ವರದಿಂದ ಸ್ವರ್ನ್ಯಾಗ್ನಿ ವಿಷಯವನ್ನು ತಿಳಿಸಿ ಕೊಡಬೇಕೆಂದು ಕೇಳಿಕೊಂಡ. ಅದಕ್ಕೆ ಯಮದೇವರು ಆ ಋಷಿಪುತ್ರನ ಜಿಜ್ಞಾಸೆಯಿಂದ ಪ್ರಸನ್ನನಾಗಿ ಆ ಅಗ್ನಿಗೆ ನಾಚಿಕೇತಾಗ್ನಿ ಎಂದು ಹೆಸರಿಟ್ಟು ಅದರ ರಹಸ್ಯವನ್ನು ತಿಳಿಸಿಕೊಟ್ಟ.

ಸ್ವರ್ಗವೆಂದರೆ ಬರಿ ಒಂದು ಮುಗಿಲ ಮಲ್ಲಿಗೆ ಅಲ್ಲ. ಅಗ್ನಿಯಂದರೆ ಬರೀ ಜಡಭೂತವಾದ ಪಾಕವನ್ನು ಅಡುವ ಅಥವಾ ಸುಡುವ ಬೆಂಕಿಯಲ್ಲ. ತದಂತರ್ಯಾಮಿಯಾದ ಶ್ರೀ ಹರಿಯು ಅಲ್ಲಲ್ಲಿ ನಿಂತು ತತ್ ಚ್ಛಬ್ದ ವಾಚ್ಯನಾಗಿ ತತ್ ಚ್ಛಕ್ತಿ ಪ್ರಬೋಧಕನಾಗಿದ್ದಾನೆ. ಅವನ ಉಪಾಸನೆಯಿಂದಲೇ ದಿವ್ಯಗತಿ, ಸುಖಾವಾಪ್ತಿ ಉಂಟು ಎಂದು ರಹಸ್ಯ ವಿಶೇಷವನ್ನು ತಿಳಿಸಿ ಹೇಳಿದರು.

ಅನಂತರ ನಚಿಕೇತನು ಕೇಳಿದ ಮೂರನೇ ವರವೇ ಮೇಲೆ ಹೇಳಿದ ಪ್ರಾರಂಭದ ಪ್ರಶ್ನೆ. ಮಾನವನು ಮುಕ್ತನಾದ ಬಳಿಕ ಭಗವನ್ನಿಯಮ್ಯನು ಅಹುದೋ ಅಲ್ಲವೋ ? ಇದೇ ನಚಿಕೇತನ ಮೂರನೇ ಪ್ರಶ್ನೆ. ಮೂರನೇ ವರ.

'ಪ್ರೇತೆಮುಕ್ತೆ ಮನುಷ್ಯೇ ನಿಯಾಮಕತ್ವೇನ ಭಗವನಸ್ತೀತಿ
ಜ್ಞಾನಿನೋ ವದಂತಿ । ನಾಸ್ತೀತ್ಯಜ್ಞಾಃ ।
ತಸ್ಯ ನಿಯಾಮಕಸ್ಯ ಸ್ವರೂಪಂ ಯಥಾವತ್ ಅಹಂ ವಿದ್ಯಾಂ ।'

ಈ ಕಠೋಪನಿಷತ್ ವಾಕ್ಯಕ್ಕೆ ಶ್ರೀ ಶಂಕರಾಚಾರ್ಯರು ಸತ್ತ ಮೇಲೆ ಜೀವವು ಇರುತ್ತದೆಯೋ ಇಲ್ಲವೋ ಎಂದು ನಚಿಕೇತನ ಪ್ರಶ್ನದ ಅಭಿಪ್ರಾಯವೆಂದು ವ್ಯಾಖ್ಯಾನಿಸಿದ್ದಾರೆ.

ಇದಕ್ಕೆ ಮರಣಾನಂತರ ಯಮಧರ್ಮನ ಬಳಿಗೆ ಬಂದ ಸ್ವಯಂ ನಚಿಕೇತನೇ ಉತ್ತರನಾಗಿದ್ದಾನೆ. ಮರಣಾನಂತರದಲ್ಲಿ ಮತ್ತೆ ಪಕ್ವವಾಗಿ ಅಳಿದ ಸಸ್ಯದಂತೆ ಮರಳಿ ಚಿಗಿತು ಬಂದ ನಚಿಕೇತನಿಗೆ ಜೀವನಮರಣೋತ್ತರ ಸ್ಥಿತಿಯ ಬಗ್ಗೆ ಸಂದೇಹ ಬರಲಿಕ್ಕೆ ಪ್ರಸಕ್ತಿಯೇ ಇಲ್ಲ. ಆದುದರಿಂದ ಅದು ಸರ್ವಾತ್ಮನಾ ಅಸದ್ಧವೆಂದು ಹೇಳಿ ಮುಕ್ತಾವಸ್ಥೆಯಲ್ಲಿ ಪರಮಾತ್ಮನಿಗೆ ಜೀವನಿಯಾಮಕತ್ವವು ಇದ್ದುದಾದರೆ ಅದರ ಸ್ವರೂಪವನ್ನು ತಿಳಿದುಕೊಳ್ಳಬೇಕೆಂಬುದೇ ನಚಿಕೇತನ ಮೂರನೇ ವರದ ಅಭಿಪ್ರಾಯವಾಗಿದ್ದಿತು. ಅದರಂತೆ ಯಮಧರ್ಮನು ಪರಮಾತ್ಮನು ಜೀವಿಗಳ ಮುಕ್ತಾಮುಕ್ತ ಅವಸ್ಥೆಯಲ್ಲಿಯೂ ಜಾಗ್ರತ್, ಸ್ವಪ್ನಾದ್ಯವಸ್ಥೆಗಳಲ್ಲಿಯೂ ಕಿಂಬಹುನಾ ಸರ್ವಾವಸ್ಥೆಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವಾತ್ಮನಾ ನಿಯಾಮಕನಾದ ಸ್ವಾಮಿಯಾಗಿದ್ದಾನೆ ಎಂಬುವದನ್ನು ತಿಳಿಸಿ ಹೇಳಿದನೆಂದು ಆಚಾರ್ಯರು ತಮ್ಮ ಈ ಭಾಷ್ಯದಲ್ಲಿ ವಿವರಿಸಿದ್ದಾರೆ.

## ಅಥರ್ವಣೋಪನಿಷತ್ ಭಾಷ್ಯ

ಈ ಉಪನಿಷತ್ತಿನಲ್ಲಿ ಆಚಾರ್ಯರು ಪರಾಪರ ವಿದ್ಯೆಯನ್ನು ಚನ್ನಾಗಿ ವಿಮರ್ಶಿಸಿ ಋಗಾದಿಗಳಿಗೂ ಪರವಿದ್ಯಾತ್ವವು ಉಂಟು ಎಂದು ಸಾಧಿಸಿದ್ದು ವೈಶಿಷ್ಟ್ಯ ಪೂರ್ಣವಾಗಿದೆ.

'ದ್ವೇವಿದ್ಯೇ ವೇದಿತವ್ಯೆ ಪರಾ ಚೈವಾಪರಾ ಚ ।
ಅಥಪರಾ ಯಯಾ ತದಕ್ಷರ ಮಧಿಗಮ್ಯತೆ ॥'

ಅಕ್ಷರ ಬ್ರಹ್ಮಾವಗತಿ ಕಾರಣವಾದ ಉಪನಿಷದ್ಭಾಗವು ಮಾತ್ರ ಪರವಿದ್ಯೆ. ಋಗ್ವೇದ, ಯಜುರ್ವೇದ, ಅಥರ್ವಣ ವೇದ ಮುಂತಾದ ವೇದ ಭಾಗವೆಲ್ಲವೂ ಅಪರ

ವಿದ್ಯೆ ಎಂಬ ಶಂಕರಾಚಾರ್ಯರ ಅರ್ಥಾಪನ ರೀತಿಯನ್ನು ಶ್ರೀಮಧ್ವ ಭಾಷ್ಯದೊಂದಿಗೆ ಹೋಲಿಸಿ ನೋಡಿದಾಗ ಇದರ ಮಹತಿ ಮತ್ತು ಔಚಿತ್ಯವು ಯಾರಿಗಾದರೂ ಸ್ಪಷ್ಟ ವಾಗಿ ತಿಳಿದು ಬರಲಿಕ್ಕೆ ಸಾಕು.

ಋಗಾದಿಗಳು ವಿಷ್ಣುವಾಚಕವಾದಾಗ ಪರವಿದ್ಯೆ ಎನಿಸುತ್ತವೆ. ವಿಷ್ಣುವಾಚಕ ವಾಗದಿದ್ದಾಗ ಅದೇ ಅಪರವಿದ್ಯೆ ಎನಿಸುತ್ತದೆ. ವೇದ ಸಂಹಿತೆಯ ಅಪರತ್ವವು ಅವುಗಳ ಅವಸ್ಥಾ ವಿಶೇಷವೇ ಹೊರತು ಅವುಗಳ ಸ್ವರೂಪಭೂತವಲ್ಲ. ವಿಷ್ಣುಬೋಧಕವಾದಾಗ ಅವೇ ಪರವಿದ್ಯೆನೆನಿಸುತ್ತದೆಂದು ಶ್ರೀ ಮಧ್ವಾಚಾರ್ಯರು ನಿರೂಪಿಸಿ ಅದಕ್ಕೆ ಪಂಚ ರಾತ್ರಾಗಮದ ಪರಮ ಸಂಹಿತೆಯ ವಾಕ್ಯವನ್ನು ಉದಾಹರಿಸಿದ್ದಾರೆ.

"ಋಗಾದ್ಯಾಅಪರಾವಿದ್ಯಾ ಯದಾವಿಷ್ಣೋರ್ನವಾಚಕಾಃ ।
ತಾ ಏವ ಪರಮಾವಿದ್ಯಾ ಯದಾ ವಿಷ್ಣೋಃಸ್ತುವಾಚಕಾಃ "

ಜ್ಞಾನ ಕರ್ಮಗಳ ಸುಂದರ ಸಮನ್ವಯವನ್ನು ಸಾಧಿಸಿದ ಈ ಉಪನಿಷದ್ಭಾಷ್ಯದಲ್ಲಿ ಆಚಾರ್ಯರು ಇಲ್ಲಿಯ

"ಜುಷ್ಟಂ ಯದಾಪಶ್ಯತ್ಯನ್ಯಮೀಶಂ''
''ದ್ವಾಸುಪರ್ಣಾ ಸಯುಜಾ ಸಖಾಯಾ"
.............................................
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ
ಅನಶ್ನನ್ ಅನ್ಯಃ ಅಭಿಚಾಕ ಶೀತಿ"
"ಶರವತ್ ನಮ್ಮಯೋಭವೇತ್"

ಇತ್ಯಾದಿ ವಾಕ್ಯಗಳಿಂದ ಜೀವಪರಮಾತ್ಮರ ತಾತ್ವಿಕ ಭೇದ, ಮತ್ತು ತಾರತಮ್ಯಗಳು ವ್ಯವಸ್ಥಾಪಿತವಾಗುತ್ತವೆ ಎಂಬುವದನ್ನು ಸೂಚಿಸಿದ್ದಾರೆ ಶ್ರೀ ಸರ್ವಜ್ಞರು.

ಈ ಉಪನಿಷತ್ತಿನಲ್ಲಿ ಆಪಾತತಃ ಅದ್ವೈತರಿಗೆ ಸಾಧಕವೆಂದು ತೋರಬಹುದಾದ ವಾಕ್ಯವೆಂದರೆ

''ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇ ಅವ್ಯಯೇ ಸರ್ವ ಏಕೀ ಭವಂತೀ"

ಮತ್ತು ಇದರ ಮುಂದಿನ

"ಬ್ರಹ್ಮವೇದ ಬ್ರಹ್ಮೈವ ಭವತಿ"

ಎಂಬ ವಾಕ್ಯವು ಇದಕ್ಕೆ ಪರಕೀಯರು ಮೋಕ್ಷದಲ್ಲಿ ಷೋಡಶಕಲಾಭಿಮಾನಿ ದೇವತೆಗಳೂ, ಕರ್ಮಜ ದೇವತೆಗಳೂ ಹಾಗೂ ಇತರ ದೇವತೆಗಳು ಮುಕ್ತರಾಗಿ ಬಂದಿರುತ್ತಾರೆ. ಅಲ್ಲಿಗೆ ಈ ಮುಕ್ತನಾದ ಜೀವನು ಹೋದಾಗ ಎಲ್ಲರೂ ಆ ಪರಮಾತ್ಮನಲ್ಲಿ ಏಕೀಭೂತರಾಗುತ್ತಾರೆ. ಐಕ್ಯಹೊಂದುತ್ತಾರೆ ಎಂದು ಅರ್ಥವನ್ನು ಮಾಡುತ್ತಾರೆ.

ಆದರೆ ಶ್ರೀಮದಾಚಾರ್ಯರು ಆ ಅರ್ಥವನ್ನು ಖಂಡಿಸಿ 'ಏಕೀ ಭವಂತಿ' ಎನ್ನುವದಕ್ಕೆ ಎಲ್ಲಗೂ ಒಂದು ಸ್ಥಾನದಲ್ಲಿ ಇದ್ದು ಏಕಾಧಿಷ್ಠಾನಕರರಾಗಿ ಏಕಾಭಿಪ್ರಾಯದಿಂದ ಸಮರಸ ಜೀವನವನ್ನು ಬಾಳುತ್ತಾರೆ ಎಂದು ಅರ್ಥವಿಸಿದ್ದಾರೆ. ಮುಂದಿನ 'ಬ್ರಹ್ಮೈವ ಬ್ರಹ್ಮೈವ ಭವತಿ' ಎಂಬ ವಾಕ್ಯಕ್ಕೂ ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಹೋದುತ್ತಾನೆ ಮತ್ತು ಅವನ ಅನುಗ್ರಹದಿಂದ ಅವನಂತೆ ಯಥಾಯೋಗ್ಯ ಪೂರ್ಣತೆಯನ್ನು ಪಡೆಯುತ್ತಾನೆ ಎಂದು ಅನೇಕ ಶ್ರುತಿಸ್ಮೃತಿ ವಾಕ್ಯೋದಾಹರಣ ಪೂರ್ವಕವಾಗಿ ಈ ಉಪನಿಷದ್ಭಾಷ್ಯದಲ್ಲಿ ನಿರೂಪಿಸಿದ್ದಾರೆ.

ಈ ಉಪನಿಷತ್ತಿನ " ಸರ್ವ ಏಕೀಭವಂತೀ " ಎಂಬ ವಾಕ್ಯದ ನಿಜವಾದ ಅರ್ಥವನ್ನು ನಿರ್ಣಯಿಸುವದಕ್ಕಾಗಿಯೇ ಶ್ರೀ ಭಗವಾನ್ ಬಾದರಾಯಣರು "ಓಂ ಭೋಕ್ತ್ರಾಪತ್ತೇಃ ಅವಿಭಾಗಶ್ಚೇತ್ ಸ್ಯಾತ್ ಲೋಕವತ್" ಎಂಬ ಸೂತ್ರವನ್ನು ರಚಿಸಿ ಜೀವ ಬ್ರಹ್ಮರಿಗೆ ಯಥಾರ್ಥವಾದ ಭೇದವೇ ಉಂಟೆಂದು ಸಿದ್ಧಾಂತಿಸಿದ್ದಾರೆ. ತದನುಗುಣವಾಗಿಯೇ ಆಚಾರ್ಯರು 'ಸರ್ವ ಏಕೀ ಭವಂತಿ' ಎಂಬ ಶ್ರುತಿಗೆ ಏಕಾಭಿಪ್ರಾಯಕತ್ವ, ಏಕಸ್ಥಾನ ಸ್ಥಿತಿಕತ್ವ, ಮುಂತಾದ ಅರ್ಥವನ್ನು ಮಾಡಿದ್ದಾರೆ.

## ಷಟ್‌ಪ್ರಶ್ನೋಪನಿಷತ್ ಭಾಷ್ಯ

ಪಿಪ್ಪಲಾದ ಮುನಿಯು ಸತ್ಯಕಾಮ, ಸುಕೇಶ, ಗಾರ್ಗ್ಯ, ಆಶ್ವಲಾಯನ, ಭಾರ್ಗವ, ಕಾತ್ಯಾಯನ, ಎಂಬ ಆರು ಶಿಷ್ಯರ ಆರು ಪ್ರಶ್ನೆಗಳಿಗೆ ಹೇಳಿದ ಉತ್ತರ ರೂಪವಾಗಿದೆ ಈ ಷಟ್‌ಪ್ರಶ್ನೋಪನಿಷತ್ತು. ವಾಯುದೇವರ ಮಹಾಮಹಿಮೆಯ ಆವಿಷ್ಕಾರವು ಈ ಚಿಕ್ಕ ಉಪನಿಷತ್ತಿನಲ್ಲಿ ಚೆನ್ನಾಗಿ ಆಗಿದೆಯೆಂದು ಹೇಳಬಹುದು. ಕಬಂಧಿಯ ಪ್ರಜಾಸೃಷ್ಟಿಯ ಮೂಲ ಮೀಮಾಂಸೆಗೆ ಮಹರ್ಷಿ ಪಿಪ್ಪಲಾದರು ಪ್ರಜಾಪತಿ ಶಬ್ದ ವಾಚ್ಯನಾದ ಶ್ರೀ ವಿಷ್ಣುವು ತನ್ನ ಸಂಕಲ್ಪ ಸಂದೇಶಗಳಿಗೆ ಅನುಸರಿಸಿ ಪ್ರಜಾಸೃಷ್ಟಿ ಮಾಡಬಲ್ಲರೆಂದು ರಯಿಪ್ರಾಣರನ್ನು ನಿರ್ಮಿಸಿದನು. ಆ ರಯಿ ಪ್ರಾಣರೇ ಭಾರತೀಮುಖ್ಯಪ್ರಾಣರು. ಈ ಭಾರತೀವಾಯುಗಳು ಶ್ರೀ ಹರಿಯ ಪ್ರೇರಣೆಯಂತೆ ಈ ಎಲ್ಲ ಮೂರ್ತಾಮೂರ್ತ ಪ್ರಪಂಚವನ್ನು ಸೃಷ್ಟಿ ಮಾಡಿದರು.

ಈ ಪ್ರಾಣದೇವರ ಉತ್ತಮಿಕೆಯನ್ನು ಪ್ರಶ್ನಿಸಿ ಇಂದ್ರಿಯಾಭಿಮಾನಿ ದೇವತೆಗಳೆಲ್ಲರೂ ಅವರೊಡನೆ ಸ್ಪರ್ಧೆಗೆ ಇಳಿದಾಗ ನಡೆದ ಒಂದು ಚಮತ್ಕಾರ ಸಂದರ್ಭ

ವನ್ನು ಈ ಉಪನಿನಿಷತ್ತು ಉಲ್ಲೇಖಿಸುತ್ತದೆ. ಕಣ್ಣು, ಕಿವಿ, ಮೂಗು, ನಾಲಿಗೆ, ನೆಲ, ಜಲ, ಮುಗಿಲು, ಬೆಂಕಿ ಮುಂತಾದ ವಸ್ತುಗಳ ಅಭಿಮಾನಿ ದೇವತೆಗಳೆಲ್ಲರೂ ತಮ್ಮೆಲ್ಲರ ಧಾರಕಪ್ರಕಾಶಕರಾದ ವಾಯುದೇವರು ಎಷ್ಟು ಹೇಳಿದರೂ ಕೇಳದೇ "ನಾವೇ ಈ ದೇಹಧಾರಕರು ಮತ್ತು ನಾವೇ ಶಬ್ದಾದಿ ವಿಷಯ ಪ್ರಕಾಶಕರು"ಎಂದು ವಾದಿಸತೊಡಗಿದರು.

ಆಗ ವಾಯುದೇವರು ಆ ದೇವತೆಗಳಿಗೆಲ್ಲ ಅವರವರ ಶಕ್ತಿ ಅಶಕ್ತಿಗಳ ಜ್ಞಾನ ಮಾಡಿಕೊಡಬೇಕೆಂದು ತಾವು ಆ ದೇಹವನ್ನು ಬಿಟ್ಟು ಹೊರಟುಹೋದರು. ಆಗ ಉಳಿದ ಯಾವ ದೇವತೆಗಳಿಗೂ ಆ ಶರೀರದಲ್ಲಿ ಇರಲಿಕ್ಕೂ ಆಗಲಿಲ್ಲ. ಆ ದೇಹ ವನ್ನು ಧರಿಸಲಿಕ್ಕೂ ಆಗಲಿಲ್ಲ. ಅನಂತರ ವಾಯುದೇವರು ಬಂದು ಆ ದೇಹದಲ್ಲಿ ಪುನಃ ಪ್ರತಿಷ್ಠಿತರಾದ ಬಳಿಕ ಎಲ್ಲ ಇಂದ್ರಿಯಾಭಿಮಾನಿ ದೇವತೆಗಳೂ ಬಂದು ಅಲ್ಲಿ ಸೇರಿಕೊಂಡರು. ಶಬ್ದಾದಿ ವಿಷಯಪ್ರಕಾಶನವನ್ನು ಮಾಡಲು ಸಮರ್ಥರೂ ಆದರು. ಆದರಿಂದ ದೇವತೆಗಳಿಗೆಲ್ಲ ವಾಯುದೇವರ ಮಹಾ ಮಹಿಮೆಯು ಗೊತ್ತಾಗಿ ಅವರೆಲ್ಲರೂ ಭಕ್ತಿಯಿಂದ ವಾಯುದೇವರನ್ನು ಸ್ತೋತ್ರ ಮಾಡಿ ಅವರ ಶಕ್ತಿ ತಮ್ಮ ಅಶಕ್ತಿಯನ್ನು ಒಪ್ಪಿಕೊಂಡು ಅವರಿಗೆ ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು.

ಹೀಗೆ ವಾಯುದೇವರ ಮಹಾಮಹಿಮೆಯನ್ನು ಬಗೆಬಗೆಯಿಂದ ಬಣ್ಣಿಸತಕ್ಕ ಈ ಉಪನಿಷತ್ತು ಮಾಧ್ವರಿಗೆ ಅತ್ಯಂತ ಮಹತ್ವದ್ದಾಗಿದೆ. ವಾಯುಜೀವೋತ್ತಮತ್ವ ಸಿದ್ಧಾಂತಕ್ಕೆ ಈ ಉಪನಿಷತ್ತಿನಲ್ಲಿಯೇ ಭದ್ರಬುನಾದಿ ಬಿದ್ದಿದೆಯೆಂದರೆ ಅತಿಶಯೋಕ್ತಿ ಎನಿಸಲಿಕ್ಕಿಲ್ಲ.

ಪ್ರತಿಯೊಂದು ಉಪನಿಷತ್ತಿನಲ್ಲಿ ಬರುವ ಆಪಾತತಃ ಅದ್ವೈತಪರವಾಗಿ ತೋರುವ ವಾಕ್ಯಗಳಿಗೆಲ್ಲ ಪರಕೀಯರು ಹೇಳುವ ಅಪಾರ್ಥಗಳನ್ನು ಖಂಡಿಸಿ ಅವು ಗಳ ಯಥಾರ್ಥ ಅರ್ಥವನ್ನು ಶ್ರುತಿ ಸ್ಮೃತಿ ಪ್ರಮಾಣಗಳ ಬೆಳಕಿನಲ್ಲಿ ಕಂಡರಿ ಸುವದು ಆಚಾರ್ಯರ ಭಾಷ್ಯದ ವೈಶಿಷ್ಟ್ಯವಾಗಿದೆ.

ಆದರಂತೆ ಈ ಉಪನಿಷತ್ತಿನಲ್ಲಿಯಾದರೂ ಕೊನೆಗೆ ಸುಕೇಶ ಭಾರದ್ವಾಜರ ಷೋಡಶ ಕಲಾತ್ಮಕ ಪುರುಷ ಪ್ರಶ್ನೆಗೆ ಉತ್ತರಿಸುತ್ತ—

"ಯಥೇಮಾ ನದ್ಯಃ ಸ್ಪಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯ ಅಸ್ತಂ ಗಚ್ಛತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ ಏವ ಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯ ಅಸ್ತಂಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ । ಸ ಏಷೋ ಅಕಲೋ ಅಮೃತೋ ಭವತಿ ॥"

ಗಂಗಾದಿ ನದಿಗಳು ಸಮುದ್ರಕ್ಕೆ ಹೋಗಿ ಕೂಡಿದ ಬಳಿಕ ಅದರಲ್ಲಿಯೇ ಏಕರೂಪ ವಾದಂತಾಗಿ ತಮ್ಮ ನಾಮರೂಪಗಳನ್ನು ಕೂಡ ಬಿಟ್ಟು ಸಮರಸವಾದಂತೆ ಮುಕ್ತರಾದ ಪ್ರಾಣದೇವರೇ ಮೊದಲಾದ ಕಲಾಭಿಮಾನಿ ದೇವತೆಗಳೆಲ್ಲರೂ ಪರಮಾತ್ಮನನ್ನು ಹೊಂದಿ ಅವನಲ್ಲಿಯೇ ತಮ್ಮ ನಾಮರೂಪಗಳನ್ನು ಬಿಟ್ಟು ಏಕೀಭೂತರಾಗುತ್ತಾರೆ.

ಇಲ್ಲಿ ಆಪಾತತಃ ತೋರುವಂತೆ "ಭಿದ್ಯೇತೇ ತಾಸಾಂ ನಾಮರೂಪೇ" ಎಂದರೆ ಅವರ ನಾಮರೂಪಗಳು ನಾಶವಾಗುತ್ತವೆ ಎಂದು ಅರ್ಥವಲ್ಲ. ಭೇದ ಶಬ್ದಕ್ಕೆ ನಾಶ ಎಂದು ಎಲ್ಲಿಯೂ ಅರ್ಥವಿಲ್ಲ. ಬಹುಭಾವ ಎಂದು ಅರ್ಥ. ನಾಶವು ಅರ್ಥಾಪತ್ತಿಯಿಂದ ಜ್ಞಾತ ವಾಗಬಹುದು. ಇಲ್ಲಿ ನಾಮರೂಪಗಳು ಮಡಿಕೆಯ ಒಡಕುಗಳಂತೆ ಅನೇಕ ಪ್ರಕಾರ ಗಳಾಗಿ ನಿಲ್ಲುವದಿಲ್ಲ. ಆದುದರಿಂದ ಇಲ್ಲಿ 'ಭಿದ್ಯೇತೇ' ಎಂದರೆ ಬೇರೆಯಾಗುತ್ತವೆ ಎಂದೇ ಅರ್ಥ ಎಂದು ಪ್ರತಿಪಾದಿಸಿದ್ದಾರೆ.

> ನ ಚ ಭೇದ ಶಬ್ದೋ ನಾಶೇ ಪ್ರಯುಜ್ಯಮಾನಃ ಕ್ವಾಪಿ ದೃಷ್ಟಃ ।
> ಘಟಾದಿಷ್ವಪಿ ಬಹುಭಾವ ಏವ ಭೇದ ಶಬ್ದಃ ಪ್ರಯುಜ್ಯತೇ ।
> ನಾಶಸ್ತ್ವರ್ಥತ ಏವಾಗತಃ ।
> ನ ಚಾತ್ರ ಅರ್ಥತೋಽಪಿ ನಾಶೋಽವಗಮ್ಯತೇ ।
> ನ ಹಿ ನಾಮಾನಿ ರೂಪಾಣಿ ಚ ಕಪಾಲವತ್ ಬಹುಧಾ ಭೂತಾನಿ ತಿಷ್ಠಂತಿ ।
> ಅತೋ ಭಿದ್ಯೇತೆ ಇತಿ ಪೃಥಕ್ತ್ವಮೇವೋಚ್ಯತೇ ॥

ಸಮುದ್ರದಲ್ಲಿ ಸೇರಿದ ಗಂಗಾದಿ ನದಿಗಳ ನಾಮರೂಪಗಳು ನಾಶವಾಗುವದಿಲ್ಲ. ಅಜ್ಞರಿಗೆ ತಿಳಿಯದಿದ್ದರೂ ಬಲ್ಲವರ ಕಣ್ಣಿಗೆ ಅವು ಬೇರೆ ರೂಪ ಬೇರೆ ನಾಮಗಳಿಂದ ಒಡೆದು ಕಾಣುತ್ತವೆ. ಸೂರ್ಯನು ನಮ್ಮ ಕಣ್ಣಿಗೆ " ಅಸ್ತಂಗಚ್ಛತಿ " ಅಸ್ತವನ್ನು ಹೊಂದುತ್ತಾನೆ ಎಂದು ಕಂಡರೂ ಲೋಕಾಂತರದಲ್ಲಿ ಹೇಗೆ ಕಾಣುತ್ತಾನೋ ಹಾಗೆ ಅಜ್ಞರ ಕಣ್ಣಿಗೆ ಕಾಣದಿದ್ದರೂ ಪ್ರಾಜ್ಞರ ದೃಷ್ಟಿಗೆ ಅವರ ನಾಮರೂಪಾದಿಗಳು ಬೇರೆಬೇರೆಯಾಗಿಯೇ ತಿಳಿದುಬರುತ್ತವೆ. ಮುಂದಿನ ಮಂತ್ರದಲ್ಲಿ " ಅರಾ ಇವ ರಥ ನಾಭೌ " ರಥದ ಗಾಲಿಯಲ್ಲಿ ಅದರ ಬೇರೆ ಬೇರೆ ಹಲ್ಲುಗಳು ಸೇರಿದಂತೆ–ಎಂದು ಇನ್ನೂ ಸುಸ್ಪಷ್ಟ ದೃಷ್ಟಾಂತವನ್ನು ಕೊಟ್ಟಿದ್ದಾರೆ. ಕಣ್ಣಿಟ್ಟು ನೋಡುವವರಿಗೆ ರಥದ ಗಾಲಿಯಲ್ಲಿ ಅಚ್ಚಿಮರಗಳು ಇದ್ದದ್ದು ಸ್ಪಷ್ಟವಾಗಿಯೇ ಕಂಡುಬರುವಂತೆ ಪರಮಾತ್ಮನಲ್ಲಿ ತಲ್ಲೀನರಾದ ಕಲಾಭಿಮಾನಿಗಳ ನಾಮರೂಪಗಳು ಬೇರೆ ಬೇರೆ ಯಾಗಿಯೇ ತೋರಿಬರುತ್ತವೆ ಎಂದು ಆ ಎಲ್ಲ ಕಲಾಭಿಮಾನಿ ದೇವತೆಗಳು ಹಾಗೂ ಮುಖ್ಯಪ್ರಾಣರಿಂದ ಮುಕ್ತಿಯಲ್ಲಿಯೂ ಭಿನ್ನನಾಗಿ ಅವರೆಲ್ಲರಿಗೂ ನಿಯಾಮಕ ನಾಗಿರುವ ಶ್ರೀ ಹರಿಯನ್ನು ತಿಳಿದು ಆರಾಧಿಸುವವರು ಮೃತ್ಯುವಿನಿಂದ ಪಾರಾಗು ತ್ತಾರೆ ಎಂದು ಈ ಭಾಷ್ಯದಲ್ಲಿ ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

## ಐತರೇಯೋಪನಿಷದ್ ಭಾಷ್ಯ

ಇತರಾದೇವಿಯ ಮಗನಾದ ಮಹಿದಾಸನು ಉಪದೇಶ ಮಾಡಿದುದರಿಂದ ಇದಕ್ಕೆ ಐತರೇಯೋಪನಿಷದ್ ಎಂಬ ಹೆಸರು ಬಂದಿತು. "ಇತರಾ ಎಂದರೆ ಬ್ರಾಹ್ಮಣೇತರಾ ಅರ್ಥಾತ್ ಓರ್ವದಾಸಿ. ಅವಳ ಮಗ ಮಹಿದಾಸ. ದಾಸ ಎಂಬ ಶಬ್ದವು ಅವನ ಹೆಸರಿನ ಕೊನೆಗೆ ಇರುವದರಿಂದ ಅವನೊಬ್ಬ ಶೂದ್ರಮುನಿ. ಅವನು ಹೇಳಿದ ಈ ಉಪನಿಷತ್ತು ಶೂದ್ರೋಪನಿಷತ್ತು" ಎಂದು ಕೆಲವು ಅರ್ವಾಚೀನ ವಿಮರ್ಶಕರು ಗುಲ್ಲೆಬ್ಬಿಸಿದ್ದಾರೆ.

ಆದರೆ ಸರ್ವಜ್ಞರಾದ ಶ್ರೀಮದಾಚಾರ್ಯರು ಈ ಉಪನಿಷತ್ತಿನ ಮೂಲ ಮಹತಿಯನ್ನು ಸರಿಯಾಗಿ ಕಂಡುಹಿಡಿದು ಇದನ್ನು ಮಾಡಿದವನು ಸಾಮಾನ್ಯ ಶೂದ್ರನಲ್ಲ ಸಾಕ್ಷಾತ್ ಶ್ರೀಹರಿ ಎಂದು ಸಿದ್ಧಮಾಡಿದ್ದಾರೆ. ಬ್ರಹ್ಮದೇವನ ಮಗನಾದ ವಿಶಾಲ ಎಂಬ ಮಹಾರಾಜನಿಗೆ ಇತರಾದೇವಿಯೆಂಬ ಮಡದಿಯಿದ್ದಳು. ಇವರಿಬ್ಬರ ತಪಸ್ಸಿಗೆ ಪರಮಾತ್ಮನು ಮೆಚ್ಚಿ ಈ ದಂಪತಿಗಳ ಹೊಟ್ಟೆಯಿಂದ ಪ್ರಾದುರ್ಭೂತನಾದನು. ಅವನೇ ಮಹಿದಾಸ. ಮಹೀತಲದಲ್ಲಿ ಮಹಿತರಾದ ಮಹಾ ವ್ಯಕ್ತಿಗಳೆಲ್ಲರೂ ಅವನ ದಾಸರು. ಆದುದರಿಂದಲೇ ಆ ಈಶನಿಗೆ ಮಹಿದಾಸ ಎಂಬ ಹೆಸರು ಸಾರ್ಥಕವಾಗಿದ್ದಿತು. ಒಂದು ಮಹಾ ಸತ್ರದಲ್ಲಿ ನೆರೆದ ಬ್ರಹ್ಮಾದಿ ದೇವತೆಗಳು ಈ ಮಹಿದಾಸನ ಚರಣದಾಸರಾಗಿ ಜ್ಞಾನವನ್ನು ಉಪದೇಶ ಪಡೆದರು. ಆ ಮಹಿದಾಸ ರೂಪಿಯಾದ ಭಗವಂತನು ಬೋಧಿಸಿದ ದಿವ್ಯ ಜ್ಞಾನವೇ ಈ ಉಪನಿಷತ್ತು. ಇದಕ್ಕೆ ಋಕ್‌ಸಂಹಿತೆಯ ಋಕ್ಕುಗಳೇ ಪ್ರಮಾಣ.

ಈ ಉಪನಿಷತ್ತಿನ ತುಂಬ ಮುಖ್ಯವಾಗಿ ಪ್ರತಿಪಾದಿತವಾದ ವಿಷಯವೇನೆಂದರೆ ಹರಿಯ ಹಿರಿಮೆ. ವಾಯುವಿನ ಮಹಿಮೆ.

ಮಹಾಭೂತಿ ಶ್ರುತಿಸ್ಸ್ವೈಷಾ ಮಹಾಭೂತಿ ಯತೋಹರಿಃ ।
ವಿಶೇಷಾತ್ಸಕಥಿತಃ ಸರ್ವಜ್ಞಃ ಶಾಶ್ವತಃ ಪ್ರಭುಃ ॥

ಎಂಬ ಋಕ್ಸಂಹಿತಾ ವಾಕ್ಯವು ಮಹಾಭೂತಿಯಾದ ಶ್ರೀ ಹರಿಯ ಮಹಾ ಮಹಿಮೆಯನ್ನು ಇಲ್ಲಿ ಹೇಳಿದ್ದರಿಂದ ಇದು ಮಹಾಭೂತಿ ಶ್ರುತಿಯಾಗಿದೆ ಎಂದು ನಿರೂಪಿಸಿದೆ.

ಹರಿವಾಯುಗಳ ಮಹಿಮೆಯನ್ನು ಮೊದಲಿನಿಂದಲೂ ಕೊನೆಯವರೆಗೂ ಪ್ರತಿಪಾದಿಸುವ ಇದು ಮಧ್ವಾಚಾರ್ಯರಿಗೆ ಅತ್ಯಂತ ಪ್ರಿಯತಮವಾದ ಉಪನಿಷತ್ತಾಗಿದೆ. ಅವರ ಅವತಾರ ಕಾರ್ಯದ ಪ್ರಾರಂಭವು ಇದೇ ಉಪನಿಷತ್ತಿನಿಂದ. ಅವರು ಮೊಟ್ಟಮೊದಲು ತನ್ನ ವೇದ ಶಿಕ್ಷಕರಿಗೆ ಈ ಉಪನಿಷತ್ತನ್ನೇ ಉಪದೇಶಿಸಿ ಉದ್ಧಾರದ ದಾರಿಯನ್ನು ತೋರಿದರು. ತಮ್ಮ ನೆಚ್ಚಿನ ಶಿಷ್ಯರಾದ ಶ್ರೀ ಸತ್ಯತೀರ್ಥರಿಗೆ ಮೇಲಿಂದ ಮೇಲೆ ಇದನ್ನೇ ಉಪದೇಶಿಸಿದರು. ಕೊನೆಗೆ ಈ ಐತರೇಯೋಪನಿಷತ್ತಿನ ಪ್ರವಚನವನ್ನು ಮಾಡುತ್ತಲೇ ಅದೃಶ್ಯರಾದರು.

ಶ್ರೀಮನ್ ನಾರಾಯಣನ ಮೊದಲನೆಯ ಆವಿರ್ಭಾವವಾದ ವಾಸು ದೇವಾದಿ ಚತುರೂಪಗಳ ಚತುರತಾಪೂರ್ಣ ಚತುರ್ವಿಧ ವರ್ಣನೆಯಿಂದ ಪ್ರಾರಂಭವಾದ ಈ ಉಪನಿಷತ್ತಿನಲ್ಲಿ ಹರಿಯ ಸರ್ವೋತ್ತಮತ್ವ ವಾಯುವಿನ ಜೀವೋತ್ತಮತ್ವ ಎರಡೂ ಮುಖ್ಯವಾಗಿ ಮಾರ್ಮಿಕವಾಗಿ ಪ್ರತಿ ಪಾದಿತವಾಗಿವೆ. ಎಲ್ಲ ತತ್ವಾಭಿಮಾನಿ ಮತ್ತು ಇಂದ್ರಿಯಾಭಿಮಾನಿ ದೇವತೆಗಳೊಂದಿಗೆ ಪ್ರಥಮ ಶರೀರದಲ್ಲಿ ಪ್ರವೇಶಿಸಿದ ಶ್ರೀ ಹರಿಯು ಪಾದದಿಂದ ಆರಂಭಿಸಿ ಸರ್ವ ಶರೀರ ವನ್ನು ವ್ಯಾಪಿಸುತ್ತ ಹೃದಯದಲ್ಲಿ ಮನೆಮಾಡಿ ಶಿರಸ್ಸಿನಲ್ಲಿ ತನ್ನ ಕಾರ್ಯಗಳನ್ನು ಕೇಂದ್ರೀಕರಿಸುವನು. ಆದುದರಿಂದಲೇ ಇಂದಿಗೂ ಪ್ರಾಣಿಗಳ ತಲೆಯು ಎಲ್ಲ ಜ್ಞಾನೇಂದ್ರಿ ಯಗಳ ಕೇಂದ್ರವೆನಿಸುತ್ತದೆ. ತತ್ವಾಭಿಮಾನಿ ದೇವತೆಗಳನ್ನು ಆ ಆ ಸ್ಥಾನದಲ್ಲಿ ಇರಿಸಿ ಅವರಿಂದ ಸರ್ವಕಾರ್ಯವನ್ನು ನಿರ್ವಾಹ ಮಾಡಿಸುವವನು ಶ್ರೀ ಹರಿಯೇ. ಈ ತತ್ವಾಭಿಮಾನಿ ದೇವತೆಗಳಲ್ಲಿ ನಾನು ಹೆಚ್ಚು, ನಾನು ಮಿಗಿಲು ಎಂದು ವಾದಕ್ಷೋದ ವೆದ್ದಾಗ ಗೆಲವು ವಾಯುದೇವರ ಕಡೆಗೆ ತನ್ನ ಒಲವು ತೋರುವದು. ರುದ್ರಾದಿ ಸರ್ವ ದೇವತೆಗಳಿಗಿಂತಲೂ ಪ್ರಾಣದೇವರೇ ಶ್ರೇಷ್ಠವೆಂದು ಶ್ರೀ ಹರಿಯ ಸಮುಕ್ಷವೇ ನಿರ್ಣಯ ವಾಗುವದು.

ಈ ಉಪನಿಷತ್ತಿನಲ್ಲಿ ಶ್ರೀ ವಿಷ್ಣುವೇ ಸರ್ವಶಬ್ದ ವಾಚ್ಯ. ಸರ್ವ ನಾಮಗಳು ಅವನಲ್ಲಿಯೇ ಸುಂದರವಾಗಿ ಸಮನ್ವಯ ಹೊಂದುತ್ತವೆ ಎಂಬುವದನ್ನು ಆಚಾರ್ಯರು ತಮ್ಮ ಭಾಷ್ಯದಲ್ಲಿ ತೋರಿಸಿಕೊಟ್ಟಿದ್ದಾರೆ. ಅನೇಕಾನೇಕ ಶಬ್ದಗಳ ಉತ್ಪತ್ತಿ ಹಾಗೂ ಶಾಸ್ತ್ರೋಕ್ತ ನಿರ್ವಚನಗಳನ್ನು ಹೇಳಿ ಎಲ್ಲ ಶಬ್ದಗಳೂ ಮಹಾಯೋಗ ವಿದ್ವದ್ ರೂಢಿ ಗಳಿಂದ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ ಎಂದು ಸೋದಾಹರಣವಾಗಿ ಸಿದ್ಧಮಾಡಿ ಭಗವಂತನಲ್ಲಿ ಸರ್ವಶಬ್ದ ಸಮನ್ವಯ ಮಾಡಿದ್ದಾರೆ.

ಈ ಉಪನಿಷತ್ತಿನಲ್ಲಿಯ "ಯೋಽಹಂ ಸೋಽಸೌ ಯೋಽಸೌಸೋಽಹಂ" ಎಂಬ ವಚನಕ್ಕೆ ಆಚಾರ್ಯರು ಒರೆದ ಅರ್ಥವು ನಿಜವಾಗಿಯೂ ಉದ್ಬೋಧಕವಾಗಿದೆ. ಆಪಾತತಃ ತೋರಿದಂತೆ ಅವನೇ ನಾನು ನಾನೇ ಅವನು. ಅರ್ಥಾತ್ ನಾನೇ ಪರಮಾತ್ಮ ಪರಮಾತ್ಮನೇ ನಾನು ಎಂದು ಅದ್ವೈತಮತರೀತ್ಯಾ ಜೀವಬ್ರಹ್ಮೈಕ್ಯ ಪರವಾಗಿ ಅರ್ಥ ಮಾಡಿದರೆ ಪುನರುಕ್ತಿ ದೋಷವು ಪ್ರಾಪ್ತವಾಗುತ್ತದೆ. ಶ್ರೀ ಮಧ್ವರು ಹೇಳಿದಂತೆ ಅರ್ಥ ಮಾಡಿದರೆ ಆ ದೋಷವು ಪರಿಹಾರವಾಗುತ್ತದೆ. ಈ ಉಪನಿಷತ್ತಿಗೆ ಜೀವಬ್ರಹ್ಮೈ ಕ್ಯವೇ ವಿವಕ್ಷಿತವಾಗಿದ್ದರೆ "ಯೋಽಹಂ ಸೋಽಸೌ" ಎಂಬ ಒಂದೇ ವಾಕ್ಯವು ಸಾಕಾಗಿದ್ದಿತು. ಇಲ್ಲಿ ವೀಪ್ಸಾ ಅಥವಾ ದ್ವಿರುಕ್ತಿಯು ವಕ್ತವ್ಯಾರ್ಥ ಪುಷ್ಟಿಗಾಗಿ ಮಾಡಲ್ಪಟ್ಟಿದೆ ಎಂದು ಹೇಳಲಿಕ್ಕೂ ಅವಕಾಶವಿಲ್ಲ. ಒಂದೇ ಆನುಪೂರ್ವಿಗೆ ಇಲ್ಲಿ ಪುನರುಚ್ಚಾರವಿಲ್ಲ. ಆದುದರಿಂದ ಏಕಾಭಿಪ್ರಾಯದ ಭಿನ್ನ ಶಬ್ದಗಳ ಪುನಃ ಪುನಃ ಪ್ರಯೋಗವು ಜೀವಪರಮಾತ್ಮರ ಅನ್ಯೋನ್ಯತೆಯ ಹಾಗೂ ಬಿಂಬ ಪ್ರತಿಬಿಂಬ ಭಾವದ ಸೂಚಕವಾಗಿದೆಯೆಂದು ಆಚಾರ್ಯರು ಅನುಭವಾರೂಢವಾಗುವಂತೆ ತೋರಿಸಿದ್ದಾರೆ.

ಕೊನೆಗೆ ಪರಮ ಮಂಗಳಕರವಾದ ಪರಬ್ರಹ್ಮನಾದ ಶ್ರೀ ಹರಿಯ ವಿಷ್ಣು ಶಬ್ದದ ಅರ್ಥ ವಿವರಣೆಯೊಂದಿಗೆ ಈ ಉಪನಿಷತ್ತು ಕೊನೆಗೊಂಡಿದೆ. ಈ ಅರ್ಥದ ಅನುಸಂಧಾನ ಮಾಡಿಕೊಂಡು ಸಮಗ್ರವಾದ ಈ ಮಹೈತರೇಯೋಪನಿಷತ್ತನ್ನು ಅಧ್ಯಯನಮಾಡಿ ಉದ್ಧೃತರಾಗಬೇಕೆಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ.

## ತೈತ್ತಿರೀಯೋಪನಿಷದ್‌ಭಾಷ್ಯ

ವೇದಾಂತದ ದೃಷ್ಟಿಯಿಂದ ಇದು ಅತ್ಯಂತ ಮಹತ್ತರವಾದ ಉಪನಿಷತ್ತಾಗಿದೆ. ಬ್ರಹ್ಮಮೀಮಾಂಸಾ ಶಾಸ್ತ್ರದ ವಿಷಯ ವಾಕ್ಯಗಳಿಗೆಲ್ಲ ಇದೊಂದು ಆಕರದಂತೆ ಇರುತ್ತದೆ. ಇದರಲ್ಲಿ ಶಿಕ್ಷಾವಲ್ಲಿ, ಬ್ರಹ್ಮವಲ್ಲಿ, ಭೃಗುವಲ್ಲಿ ಎಂದು ಮೂರು ಭಾಗಗಳಿದ್ದು ಬ್ರಹ್ಮ , ಬ್ರಹ್ಮಜ್ಞಾನ, ಮತ್ತು ಬ್ರಹ್ಮಪ್ರಾಪ್ತಿ ಈ ಮೂರು ವಿಷಯಗಳನ್ನು ಕೊನೆಯ ಕಾಂಡದಲ್ಲಿ ಚೆನ್ನಾಗಿ ವಿವೇಚಿಸಲಾಗಿದೆ. ಮೊದಲನೆಯ ಶಿಕ್ಷಾವಲ್ಲಿಯಲ್ಲಿ ವರ್ಣ ಸ್ವರಸಂಧಿಗಳಲ್ಲಿರುವ ಭಗವದ್ರೂಪಗಳನ್ನು ತೋರಿಸಿದ್ದಾರೆ. ಮತ್ತು ಲೋಕ, ವಿದ್ಯಾ, ಜ್ಯೋತಿಷ, ಪ್ರಜಾ ಹಾಗೂ ಆತ್ಮ ಈ ಐದೂ ಅಧಿಕರಣಗಳಲ್ಲಿ ನಿಯಾಮಕವಾಗಿರುವ ಭಗವದ್ರೂಪ ಪಂಚಕವನ್ನು ಹೇಳಿದ್ದಾರೆ ಮತ್ತು ವೇದ, ಶಾಸ್ತ್ರಾಧ್ಯಯನದ ಆವಶ್ಯಕತೆಯನ್ನು ಒತ್ತಿಹೇಳಿದ್ದು ಸ್ವಾಧ್ಯಾಯವೇ ಒಂದು ದೊಡ್ಡ ತಪಸ್ಸು ಈ ಜ್ಞಾನಯಜ್ಞವನ್ನು ಎಂದೂ ಎಂಥ ಪ್ರಸಂಗದಲ್ಲಿಯೂ ತಪ್ಪಿಸತಕ್ಕದ್ದಲ್ಲ. ಈ ದಿವ್ಯಜ್ಞಾನವ ಫಲವೆಂದರೆ ತಾಯಿ ತಂದೆ ಹಾಗೂ ಗುರುಗಳ ಸೇವೆ ಎಂದು ಮುಂತಾಗಿ ವಿವರಿಸಲಾಗಿದೆ.

ಎರಡನೆಯ ಬ್ರಹ್ಮವಲ್ಲಿಯಲ್ಲಿ "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂದು ಪರಬ್ರಹ್ಮನ ಲಕ್ಷಣವನ್ನು ಹೇಳಲಾಗಿದೆ. ಸತ್ಯ ಎಂಬ ಶಬ್ದಲಬ್ಧವಾದ ಜಗಜ್ಜನ್ಮಾದಿ ಕಾರಣತ್ವವೇ ಪರಬ್ರಹ್ಮನ ಮುಖ್ಯ ಲಕ್ಷಣ. ಬಾದರಾಯಣ ರಚಿತವಾದ ಬ್ರಹ್ಮಮೀಮಾಂಸಾ ಶಾಸ್ತ್ರದ "ಜನ್ಮಾದ್ಯಸ್ಯ ಯತಃ" ಎಂಬ ಎರಡನೆಯ ಸೂತ್ರದಿಂದ ಇದನ್ನೇ ಪರಬ್ರಹ್ಮನ ಲಕ್ಷಣವೆಂದು ಹೇಳಲಾಗಿದೆ. ಆಚಾರ್ಯರ ಭಾಷ್ಯವು ಇದನ್ನೆಲ್ಲವನ್ನು ಆಧರಿಸಿಯೇ ರಚಿತವಾಗಿದೆ. ಭಗವಂತನ ಈ ಜಗಜನ್ಮಾದಿಕಾರಣತ್ವ ರೂಪಮಹಾವೈಭವವೇ ಮುಂದಿನ ಪ್ರಕರಣದಲ್ಲಿ ವಿವೃತವಾಗಿದೆಯೆಂದು ತೋರಿಸಿ ಕೊಟ್ಟಿದ್ದಾರೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಪ್ರಕರಣಗಳು ಐದೂ ಪರಬ್ರಹ್ಮಪರವೆಂದು ಆಚಾರ್ಯರು ಇಲ್ಲಿ ಹೇಳಿದ್ದಾರೆ.

ಈ ಅನ್ನಮಯಾದಿಗಳೆಲ್ಲವೂ ಪರಮಾತ್ಮನ ಪಂಚರೂಪವೆಂದು ಪ್ರತಿಪಾದಿಸಿ ಈ ಉಪನಿಷತ್ತಿನ ಘನತೆಯನ್ನು ಹೆಚ್ಚಿಸಿದವರೆಂದರೆ ಶ್ರೀ ಮಧ್ವಾಚಾರ್ಯರೊಬ್ಬರೇ

ಶಂಕರಾಚಾರ್ಯರು "ಈ ಅನ್ನಮಯಾದಿಗಳು ಐದೂ ಪ್ರಾಕೃತ ಜೀವಕೋಶಗಳೇ. ಆನಂದಮಯವೂ ಕೂಡ ಬ್ರಹ್ಮನಲ್ಲ." ಎಂದು ಹೇಳಿದ್ದಾರೆ. ರಾಮಾನುಜರು ಆನಂದಮಯ ಒಂದೇ ಬ್ರಹ್ಮ ಎಂದು ಹೇಳಿ ಉಳಿದೆಲ್ಲವೂ ಪ್ರಾಕೃತಿಕ ಕೋಶ ಗಳೆಂದು ಹೇಳಿದ್ದಾರೆ.

ಇದನ್ನು ಸರ್ವಾಪಸದ್ಧವೆಂದು ಶ್ರುತಿಸೂತ್ರ ಉಪನಿಷದ್ ವಾಕ್ಯ ಹಾಗೂ ಯುಕ್ತಿಗಳಿಂದ ಖಂಡಿಸಿ ಅವು ಐದೂ ಭಗವದ್ರೂಪಗಳೇ ಎಂದು ಆಚಾರ್ಯರು ವ್ಯವಸ್ಥೆ ಮಾಡಿದ್ದಾರೆ.

ಅನ್ನಮಯಾದಿ ಶಬ್ದಗಳಲ್ಲಿಯ ಮಯಟ್ ಪ್ರತ್ಯಯಕ್ಕೆ 'ವಿಕಾರ' ಎಂದು ಅರ್ಥ ಮಾಡದೇ 'ಪ್ರಾಚುರ್ಯ, ಪೌಷ್ಕಲ್ಯ, ಪೂರ್ಣತೆ ಎಂದೇ ಅರ್ಥ ಮಾಡಬೇಕೆಂದು "ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್" ಎಂದು ಸೂತ್ರಕಾರರಾದ ಬಾದ ರಾಯಣರ ಸ್ಪಷ್ಟ ಅಭಿಪ್ರಾಯವಾಗಿದೆ.

ಬ್ರಹ್ಮೋಪದೇಶವನ್ನು ಮಾಡಬೇಕೆಂದು ಕೇಳಿದ ಭೃಗುಮುನಿಗೆ ಮಹಾಜ್ಞಾನಿ ಯಾದ ವರುಣದೇವನು ಅನ್ನ, ಪ್ರಾಣ ಮುಂತಾಗಿ ಬ್ರಹ್ಮೋಪದೇಶ ಮಾಡಿದಾಗ ಆ ಅನ್ನ ಪ್ರಾಣ ಶಬ್ದಗಳಿಗೆ ಬ್ರಹ್ಮ ಎಂದು ಅರ್ಥಮಾಡದಿದ್ದರೆ ಸಂದರ್ಭ ವಿರೋಧ ಬರು ತ್ತದೆ. ಅನ್ನ ಮಯಾಧಿಗಳು ಬ್ರಹ್ಮವಾಗದಿದ್ದರೆ ಬ್ರಹ್ಮಜಿಜ್ಞಾಸೆಯಿಂದ ಬಂದವನಿಗೆ ಅನ್ನವಿಕಾರಗಳಾದ ಜೀವಕೋಶಗಳನ್ನೇಕೆ ವರುಣನು ಹೇಳಬೇಕಾಗಿತ್ತು ?

ಮತ್ತು ಅನ್ನಮಯಾದಿಗಳು ಬ್ರಹ್ಮ ಅಲ್ಲ ಎಂಬಲ್ಲಿ ಏನಾದರೂ ಪ್ರಮಾಣ ಉಂಟೇ ! ಎಂದು ಕೇಳುತ್ತಾರೆ ಆಚಾರ್ಯರು—

"ನ ಚ ಅನ್ನಮಯಾದೀನಾಂ ಅಬ್ರಹ್ಮತ್ವೇ ಕಿಂಚಿನ್ಮಾನಂ !"

ಇನ್ನು ಅನ್ನಮಯಾದಿಗಳು ಬ್ರಹ್ಮ ಎನ್ನುವದಕ್ಕೆ "ಯೇಽನ್ನಂ ಬ್ರಹ್ಮೋಪಾಸತೆ ಯೇ ಪ್ರಾಣಂ ಬ್ರಹ್ಮೋಪಾಸತೆ, ಆನಂದಂ ಬ್ರಹ್ಮಣೋ ವಿದ್ವಾನ್, ವಿಜ್ಞಾನಂ ಬ್ರಹ್ಮ ಚೇದ್ ವೇದ" ಮುಂತಾದ ಅನೇಕ ವಚನಗಳೇ ಸ್ಪಷ್ಟವಾಗಿ ಅನ್ನಾದಿಗಳಿಗೆ ಬ್ರಹ್ಮತ್ವ ವನ್ನು ಹೇಳುತ್ತವೆ.

ಹಾಗೂ ಲೌಕಿಕ ಅನ್ನಕ್ಕೆ ಅತ್ತೃತ್ವ ಅರ್ಥಾತ್ ಸಂಹಾರಕತ್ವವು ಎಲ್ಲಿದೆ ? (ನ ಚ ಲೌಕಿಕಾನ್ನಸ್ಯ ಅತ್ತೃತ್ವಮಸ್ತಿ) "ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ" ಎಂಬ ವಚನದಲ್ಲಿ ಅನ್ನಕ್ಕೆ ಅತ್ತೃತ್ವವನ್ನು ಹೇಳಿದ್ದು ಅಸಂಗತವೇ ಆಗುತ್ತದೆ.

ಹೀಗೆ ಅನೇಕ ಯುಕ್ತಿಗಳನ್ನೂ, ಉಕ್ತಿಗಳನ್ನೂ ಉದಾಹರಿಸಿ ಅನ್ನಮಾಯಾದಿ ಪಂಚಕವೂ ಪರಬ್ರಹ್ಮವೇ. ಅನಿರುದ್ಧಾದಿ ನಾರಾಯಣಾಂತ ಪಂಚ ರೂಪಗಳ ವ್ಯೂಹಾತ್ಮಕವಾದ ಬಣ್ಣನೆಯೇ ಇಲ್ಲಿದೆ ಎಂದು ಆಚಾರ್ಯರು ಪ್ರತಿಪಾದಿಸಿದ್ದಾರೆ.

ಈ ಉಪನಿಷತ್ತಿನ ಕೊನೆಗೆ ಹೇಳಿದ ಆನಂದ ತಾರತಮ್ಯವು ಮಾಧ್ವರ ದೃಷ್ಟಿಯಿಂದ ಬಹಳ ಮಹತ್ವದ್ದಾಗಿದೆ. ಬ್ರಹ್ಮಸ್ವರೂಪ ಲಕ್ಷಣಗಳನ್ನು ತಿಳಿಸಿದ ಬಳಿಕ ಅಂಥ ಬ್ರಹ್ಮಜ್ಞಾನದಿಂದ ಮೋಕ್ಷವಾಗಿ ಸಜ್ಜೀವಿಯು ಪರಬ್ರಹ್ಮನನ್ನು ಪಡೆಯುತ್ತಾನೆ. ಸಂಸಾರಾವಸ್ಥೆಯಂತೆ ಮೋಕ್ಷದಲ್ಲಿ ಜೀವಬ್ರಹ್ಮಭೇದ, ಭಗವದಧೀನತೆ ತಾರತಮ್ಯ ಮುಂತಾದವುಗಳು ಇದ್ದದ್ದೇ. ಇಲ್ಲಿ ಮಾಡಿದ ಆನಂದ ಮೀಮಾಂಸೆಯಿಂದ ಆನಂದ ತಾರತಮ್ಯವೂ ಜೀವತಾರತಮ್ಯವೂ ಸ್ಪಷ್ಟವಾಗಿಯೇ ವ್ಯಕ್ತವಾಗುವದೆಂದು ಆಚಾರ್ಯರು ತೋರಿಸಿಕೊಟ್ಟಿದ್ದಾರೆ.

ಮುಕ್ತಿಯಲ್ಲಿ ಜೀವಬ್ರಹ್ಮೈಕ್ಯವಾಗುವದೆಂಬ ವಾದವನ್ನೂ ಮೋಕ್ಷದಲ್ಲಿ ತಾರತಮ್ಯವೇ ಇಲ್ಲ ಎಂಬ ವಾದವನ್ನೂ ಖಂಡಿಸಿ

"ಶ್ರೋತ್ರಿಯಸ್ಯಾಕಾಮಹತಸ್ಯ"

ಮುಂತಾದ ಹೇತುಗರ್ಭ ವಿಶೇಷಣ ವಿಶೇಷ್ಯಗಳ ರಹಸ್ಯಾರ್ಥವನ್ನು ತಿಳಿಸಿ ಮುಕ್ತಿಯಲ್ಲಿಯೂ ಮುಕುಂದನ ನಿಯಾಮಕತ್ವವು ಅಬಾಧಿತವಾಗಿದೆ ಎಂದು ಈ ಉಪನಿಷತ್ತಿನಲ್ಲಿ ಸಾಧಿಸಿದ್ದಾರೆ.

## ಮಾಂಡೂಕ್ಯೋಪನಿಷದ್ ಭಾಷ್ಯ

ಈ ಉಪನಿಷದ್ ಭಾಷ್ಯದಲ್ಲಿ ಓಂಕಾರಾರ್ಥದ ವಿರಾಡ್ ದರ್ಶನವಿದೆ. ಪ್ರಣವ ವಿದ್ಯೆಯ ಸರ್ವಾಂಗ ಸುಂದರವಾದ ವಿವೇಚನೆಯನ್ನು ಇಲ್ಲಿ ಮಾಡಲಾಗಿದೆ. ಸಮಸ್ತ ಜೀವಕೋಟಿಯನ್ನು ನಿಯಮಿಸುವ ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂಬ ನಾಲ್ಕು ಪರಮಾತ್ಮನ ರೂಪಗಳು ಓಂಕಾರದ ನಾಲ್ಕು ಅವಯವಗಳಾಗಿವೆ. ಜೀವಿಯ ಜಾಗ್ರತ್, ಸ್ವಪ್ನ, ಸುಷುಪ್ತಿ ಮತ್ತು ಮೋಕ್ಷ ಎಂಬ ನಾಲ್ಕು ಅವಸ್ಥೆಗಳನ್ನು ಸರ್ವ ನಿಯಮನ ಚತುರವಾದ ದೇವನ ಈ ಚತುರ್ ರೂಪಗಳೇ ನಿಯಂತ್ರಿಸುತ್ತಿವೆ. ಭಗವಂತನ ಈ ಚತುರ್ಮುಖ ರೂಪಗಳ ಉಪಾಸನೆಯ ಕ್ರಮ ಹಾಗೂ ಅದರ ಫಲ ಪ್ರಯೋಜನೆಗಳನ್ನು ಈ ಉಪನಿಷತ್ತಿನಲ್ಲಿ ವಿವರಿಸಲಾಗಿದೆ.

ಇದರಲ್ಲಿ ನಾಲ್ಕು ಖಂಡಗಳಿದ್ದು ಪ್ರತಿಯೊಂದು ಖಂಡದಲ್ಲಿಯೂ ಕೊನೆಗೆ "ಅತ್ರೈತೇ ಶ್ಲೋಕಾ ಭವಂತಿ'' ಎಂದು ಪ್ರಮಾಣತ್ವೇನ ಕೆಲವು ಮಂತ್ರಗಳನ್ನು ಉದಾ

ಹರಿಸಲಾಗುತ್ತಿದೆ. ಈ ಉದಾಹೃತ ಪ್ರಮಾಣೋದಾಹರಣ ಮಂತ್ರಗಳಿಗೆ ಆಚಾರ್ಯರು ಸಮಂಜಸವಾದ ಅರ್ಥವನ್ನು ಬರೆದಿದ್ದಾರೆ ತಮ್ಮ ಭಾಷ್ಯದಲ್ಲಿ.

ಇಲ್ಲಿ ಒಂದು ಗೊಂದಲವಾಗಿದೆ. ಶಂಕರಾಚಾರ್ಯರ ಪರಮ ಗುರುಗಳಾದ ಗೌಡಪಾದರು ಒಂದು ಕಾರಿಕಾ ಗ್ರಂಥವನ್ನು ರಚಿಸಿ ಮಾಂಡೂಕ್ಯೋಪನಿಷತ್ತಿನ ನಾಲ್ಕೂ ಖಂಡಗಳ ಎಲ್ಲ ಪದ್ಯಗಳನ್ನೂ ಒಟ್ಟು ಸೇರಿಸಿ ಒಂದು 'ಆಮಪ್ರಕರಣ' ಎಂದು ಉಲ್ಲೇಖಿಸಿದ್ದಾರೆ. ಗೌಡಪಾದರು ಸಂಗ್ರಹಿಸಿದ ಆ ಮಾಂಡೂಕ್ಯೋಪನಿಷತ್ತಿನ ಪದ್ಯಗಳೆಲ್ಲ ಗೌಡಪಾದ ಕರ್ತೃಕವೇ ಎಂದು ಭ್ರಮಿಸಿ ಕೆಲವು ಅದ್ವೈತ ಮತಾನುಯಾಯಿಗಳು ಅವುಗಳ ಮೇಲೆ ಮಧ್ವಾಚಾರ್ಯರು ಭಾಷ್ಯ ಬರೆದಿದ್ದು ಉಪನಿಷತ್ತಿನ ಮೂಲಾಪರಿಜ್ಞಾನದ್ಯೋತಕವಾಗಿದೆಯೆಂದು ಆಕ್ಷೇಪಿಸುತ್ತಿದ್ದಾರೆ.

ಇದು ವಸ್ತುಸ್ಥಿತಿಯ ಅರಿವು ಇಲ್ಲದೇ ನುಡಿದ ಮಾತು. ಸ್ವಯಂ ಶಂಕರಾಚಾರ್ಯರು 'ವಿವೇಕ ಚೂಡಾಮಣಿ'ಯಲ್ಲಿ ಆ ಪದ್ಯಗಳೆಲ್ಲ ವೇದ ಮಂತ್ರಗಳೆಂಬುದನ್ನು "ಇತಿಶ್ರುತೇಃ" ಎಂಬ ವಚನದಿಂದ ಸ್ಪಷ್ಟಗೊಳಿಸಿದ್ದಾರೆ. ಮತ್ತು ಮಧ್ವಾಚಾರ್ಯರಗಿಂತ ಮೊದಲಿನ ಹಾಗೂ ಅನಂತರದ ಅನೇಕ ಗ್ರಂಥಕಾರರು ಅವು ಉಪನಿಷನ್ಮಂತ್ರಗಳೆಂದೇ ಹಿಡಿದಿದ್ದಾರೆ. ಆದುದರಿಂದ ಮಧ್ವರ ಮೇಲಿನ ಅವರ ಆಕ್ಷೇಪವು ನಿರ್ಮೂಲವಾಗಿದೆ.

ಆಪಾತತಃ ಅದ್ವೈತಪರವಾಗಿ ತೋರುವ ಈ ಉಪನಿಷತ್ತಿನಲ್ಲಿಯ

"ಪ್ರಪಂಚೋ ಯದಿ ವಿದ್ಯೇತ....ಜ್ಞಾತೇ ದ್ವೈತಂ ನ ವಿದ್ಯತೇ"

ಮುಂತಾದ ವಾಕ್ಯಗಳಿಗೆ ಅದ್ವೈತಿಗಳು ಮಾಡುವ ಮಿಥ್ಯಾತ್ವ ಹಾಗೂ ಅಭೇದಪರ ಅರ್ಥವನ್ನು ಖಂಡಿಸಿ ಜಗತ್ಸತ್ಯತ್ವ ಹಾಗೂ ಪಂಚಭೇದ ಸಿದ್ಧಾಂತವೇ ಇವುಗಳಿಂದಲೂ ಬೋಧಿತವಾಗುತ್ತದೆ ಎಂದು ಬ್ರಹ್ಮ ತರ್ಕಾದಿ ಪ್ರಮಾಣವಚನಗಳನ್ನು ಉದಾಹರಿಸಿ ಸಾಧಿಸಿದ್ದಾರೆ. ಪರಮಾತ್ಮನೊಬ್ಬನೇ ಸರ್ವತಂತ್ರ ಸ್ವತಂತ್ರ, ಸರ್ವೋತ್ತಮ. ಈ ಸಿದ್ಧಾಂತಕ್ಕೆ ಎರಡು ಬಗೆಯುವದೇ ದ್ವೈತ. ಅದಕ್ಕೆ ಹೊಂದಿಕೊಂಡು " ಪರಮಾತ್ಮನು ಅದ್ವಯ ಅಸಮ " ಎಂದು ಭಾವಿಸುವದೇ ಅದ್ವೈತ. ಈ ಪ್ರಪಂಚ ಹಾಗೂ ಶರೀರ ಸಂಬಂಧಗಳು ಅವನ ಅನುಗ್ರಹದಿಂದ ನಿವೃತ್ತವಾಗುತ್ತವೆ. ವಿಶ್ವವೆಲ್ಲವೂ ಅವನ ಮಾಯಾ ಮಾತ್ರ. ಅಂದರೆ ಇಚ್ಛಾಧೀನ. ದೊಡ್ಡವರ ಉಪದೇಶದಿಂದ ಮಿಥ್ಯಾಜ್ಞಾನವನ್ನು ಕಳೆದುಕೊಂಡು ದಿವ್ಯಜ್ಞಾನವನ್ನು ಸಂಪಾದಿಸಿ ಅದ್ವಯ ಅಸದೃಶನಾದ ಭಗವಂತನ ಅನುಗ್ರಹವನ್ನು ಪಡೆಯಬೇಕು. ತುರ್ಯನಾಮಕ ಪರಮಾತ್ಮನು ಇಂಥ ಜ್ಞಾನೋಪಾಸನೆಯಿಂದ ಸಂತುಷ್ಟನಾಗಿ ಪರಮಪುರುಷಾರ್ಥವಾದ ಮೋಕ್ಷವನ್ನು ದಯಪಾಲಿಸುವನು ಎಂದು ಆಚಾರ್ಯರು ಈ ಉಪನಿಷದ್ಭಾಷ್ಯದಲ್ಲಿ ನಿರೂಪಿಸಿದ್ದಾರೆ.

## ಬೃಹದಾರಣ್ಯಕೋಪನಿಷದ್‌ಭಾಷ್ಯ

ಶ್ರೀ ಮಧ್ವಾಚಾರ್ಯರು ವ್ಯಾಖ್ಯಾನಿಸಿದ ೧೦ ಉಪನಿಷತ್ತುಗಳಲ್ಲಿ ಇದರ ಗ್ರಂಥ ಸಂಖ್ಯೆ ೧೮೬೦. ಆಕಾರದಿಂದ ಬೃಹತ್ತಾದ ಅರ್ಥದಿಂದ ಮಹತ್ತಾದ ಈ ಉಪನಿಷತ್ತಿನಲ್ಲಿ ವಿವೇಚಿಸಿದ ವಿಷಯಗಳ ನಾಮಸೂಚಿಯನ್ನು ಮಾಡಿದರೂ ಅದೂ ಒಂದು ಹೊತ್ತಿಗೆಯೇ ಆದೀತು. ಇದು ಅನೇಕ ವೈಷ್ಣವ ಪ್ರಮೇಯಗಳ ಆಕರಭೂತವಾದ ಉಪನಿಷತ್ತಾಗಿದೆ.

"ಉಪನಿಷದಾಂಚ ವಿಷ್ಣು ಅವಾಚಕತ್ವ ದಶಾಯಾ ಏವ
ಅಭಾವಾತ್ ತಾಸಾಂ ಸರ್ವದಾಪಿ ಪರವಿದ್ಯಾತ್ವಂ"

ಎಂಬ ಮಾತು ಶ್ರೀಮದಾಚಾರ್ಯರ ಭಾಷ್ಯದಿಂದಲೇ ಚರಿತಾರ್ಥವಾಗುತ್ತದೆ. ಭಾಷ್ಯಗಳು ಟೀಕಿಸಲು ಪ್ರಾರಂಭ ಮಾಡಿದ ಈ ಉಪನಿಷತ್ತಿನ

"ಓಂ ಉಷಾವಾ ಅಶ್ವಸ್ಯ ಮೇಧ್ಯಸ್ಯ ಶಿರಃ"

ಎಂಬ ವಾಕ್ಯಕ್ಕೆ ಶಂಕರಾಚಾರ್ಯರೇ ಮೊದಲಾದ ಬೇರೆ ಭಾಷ್ಯಕಾರರು ಅಶ್ವಮೇಧ ಕುದುರೆಯ ಪ್ರತಿಯೊಂದು ಅವಯವಗಳನ್ನೂ ಒಂದೊಂದು ದೇವತೆಯೆಂದು ಕಲ್ಪಿಸಿ ಅರ್ಥ ಹೇಳಿದ್ದಾರೆ. ಆದರೆ ಶ್ರೀಮಧ್ವಾಚಾರ್ಯರು ಅಶ್ವಾಂತರ್ಗತನಾದ ಅವ್ಯಕ್ತ ರೂಪಿ ಪರಬ್ರಹ್ಮನ ಸಮಗ್ರ ದೇವತೆಗಳ ಉತ್ಪತ್ತಿನಿಕೇತನವಾದ ವಿರಾಟ ಸ್ವರೂಪವನ್ನು ವರ್ಣಿಸಲು ಈ ಭಾಗವು ಉಪಕ್ರಾಂತವಾಗಿದೆ. ಕುದುರೆಯ ಅಂಗಾಂಗಗಳಲ್ಲಿ ದೇವತಾ ತಾದಾತ್ಮ್ಯವನ್ನು ಕಲ್ಪಿಸಿದರೆ ಯಾವ ತತ್ವವನ್ನು ಹೇಳಿದಂತಾದೀತು ?? ಕಲ್ಪನಾ ಸೌಂದರ್ಯದಿಂದ ಕಲಾತ್ಮಕವಾಗಿ ವಾಣೀವಿಲಾಸವನ್ನು ಮಾಡಲು ಇದು ಕಾವ್ಯವಲ್ಲ. ಸತ್ಯನಿಷ್ಠವಾದ ತತ್ವಬೋಧಕವಾದ ಉಪನಿಷತ್ತು. ಆದುದರಿಂದ ಇಲ್ಲಿ "ಅಶ್ವ" ಯೆಂದರೆ

"ಅಶ್ವಸ್ವರೂಪೋ ಬ್ರಹ್ಮಾಭೂದಶ್ವರೂಪೋಜನಾರ್ದನಃ ।
ತತ್ರ ಸನ್ನಿಹಿತೋ ವಿಷ್ಣುರಶ್ವರೂಪಃಸ್ವಯಂ ಪ್ರಭುಃ"

ಎಂಬ ಪ್ರಮಾಣವಚನಾನುಸಾರವಾಗಿ ಈ ಅಶ್ವಾಂತರ್ಗತನಾದ ಪರಮಾತ್ಮನ ವಿಶಾಲವಾದ ನಿಜರೂಪವನ್ನು ವರ್ಣಿಸಿ ಅವನ ಅದ್ಭುತ ಸತ್ಯ ಕಲ್ಪನೆಯನ್ನು ಮಾನವನಿಗೆ ಒದಗಿಸಿ, ಅವನ ಆಧ್ಯಾತ್ಮಿಕ ಉನ್ನತಿಗೆ ಸಹಾಯ ಮಾಡುವದೇ ಉಪನಿಷತ್ತುಗಳ ಉದ್ದೇಶವಾಗಿದೆಯೆಂಗು ಈ ಸಮಗ್ರ ಉಪನಿಷತ್ತಿಗೆ ವಿಷ್ಣು ವಾಚಕತ್ವವನ್ನು ಉಪಪಾದಿಸಲು ಮೊದಲು ಮಾಡಿದ್ದಾರೆ. ಈ ಬೃಹದಾಕಾರದ ಉಪನಿಷತ್ತಿನಲ್ಲಿ ಹೇಳದ ವಿಷಯವಿಲ್ಲ. ನಿರೂಪಿಸದ ಪ್ರಮೇಯವಿಲ್ಲ.

ಮೋಕ್ಷದಲ್ಲಿ ಭೇದ ಮತ್ತು ತಾರತಮ್ಯ ಅಬಾಧಿತವಾಗಿರುತ್ತವೆ. ಮುಕ್ತ ಜೀವರ ನಿಯಾಮಕತ್ವವು ಶ್ರೀ ಹರಿಗೆ ಸಾರ್ವಕಾಲಿಕ ಆದಕ್ಕೆ ಎಂದೂ ಚ್ಯುತಿಯೇ ಇಲ್ಲ. ಮೋಕ್ಷದಲ್ಲಿಯೂ ಮುಕ್ತಜೀವರಲ್ಲಿ ಪರಸ್ಪರ ತಾರತಮ್ಯ ಉಂಟೇಉಂಟು. ಪರಮಾತ್ಮನ ಅವತಾರಾದಿ ಅನೇಕ ರೂಪಗಳಲ್ಲಿಯೂ ಜ್ಞಾನಾನಂದಾದಿ ಅನೇಕ ಗುಣಗಳಲ್ಲಿಯೂ ಅಂಗಾಂಗಗಳಲ್ಲಿಯೂ ಭೇದವಿಲ್ಲ. ಭಕ್ತಿಯಲ್ಲಿ ವೈವಿಧ್ಯ, ವೈಚಿತ್ರ್ಯ ಮುಂತಾದ ಅನೇಕ ವಿಷಯಗಳನ್ನು ಈ ಉಪನಿಷತ್ ಭಾಷ್ಯದಲ್ಲಿ ಆಚಾರ್ಯರು ವಿವೇಚಿಸಿದ್ದಲ್ಲದೇ, ಜೀವಬ್ರಹ್ಮೈಕ್ಯಸಿದ್ಧಾಂತವನ್ನೂ ಪ್ರಾಭಾಕರರನ್ನೂ ಕಾರ್ಯತಾವಾದ ವನ್ನೂ ಖಂಡಿಸಿ, ಆಗಮಗಳ ಸ್ವತಃಪ್ರಾಮಾಣ್ಯ, ಪ್ರಮಾಣತ್ರೈವಿಧ್ಯ, ವಿಶೇಷದ ಅಭ್ಯುಪಪತ್ತಿ, ಅನೇಕ ಮಹತ್ವದ ಶ್ರುತಿಗಳ ಅರ್ಥಪರಾಮರ್ಶ, ಮುಂತಾದ ಅಸಂಖ್ಯ ವಿಷಯಗಳನ್ನು ಆಚಾರ್ಯರು ಈ ಗ್ರಂಥದಲ್ಲಿ ನಿರೂಪಣೆ ಮಾಡಿದ್ದಾರೆ.

ಈ ಉಪನಿಷತ್ತು ೩ನೇ ಅಧ್ಯಾಯದಲ್ಲಿ ಒಂದು ಚಮತ್ಕಾರಿಕವಾದ ಪ್ರಶ್ನೆ ಯನ್ನು ಮಾಡಿಕೊಂಡು ಆದಕ್ಕೆ ಉತ್ತರ ರೂಪವಾಗಿ ಬ್ರಹ್ಮಜ್ಞಾನದಿಂದಲೇ 'ಮುಕ್ತಿ, ಪೂರ್ಣತೆ' ಎಂಬ ಸಿದ್ಧಾಂತವನ್ನು ದೃಢೀಕರಿಸುತ್ತದೆ.

"ತದಾಹುರ್ಯದ್ ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಂತೋ ಮನುಷ್ಯಾಮನ್ಯಂತೆ"
ಕಿಮುತದ್ ಬ್ರಹ್ಮಾವೈದ್ಯಸ್ಮಾ ತತ್‌ಸರ್ವಮಭವದಿತಿ"

"ಬ್ರಹ್ಮವಿದ್ಯೆಯಿಂದಲೇ ಮಾನವರು ಪೂರ್ಣತೆಯನ್ನು ಹೊಂದುತ್ತಾರೆ ಎಂದು ಬಲ್ಲವರು ಹೇಳುತ್ತಾರೆ. ಹಾಗಿದ್ದರೆ. ಬ್ರಹ್ಮನೂ ಕೂಡ ತನ್ನ ಸ್ವರೂಪವನ್ನು ತಿಳಿದು ಕೊಂಡೇ ಪೂರ್ಣತೆಯನ್ನು ಪಡೆದನೋ ಹೇಗೇ ?"

ಈ ಪ್ರಶ್ನೆಗೆ ಉಪನಿಷತ್ತು ಸ್ವಯಂ ಉತ್ತರಕೊಡುತ್ತದೆ.

"ಬ್ರಹ್ಮವಾಇದಮಗ್ರ ಆಸೀತ್ತದಾತ್ಮಾನಮೇವಾವೇದಹಂ
ಬ್ರಹ್ಮಾಸ್ಮೀತಿ। ತಸ್ಮಾತ್ತತ್ಸರ್ವಮಭವತ್"

"ಸೃಷ್ಟಿಯ (ಪೂರ್ವಕಾಲದಲ್ಲಿ) ಮೊದಲು ಅನಾದಿ ಕಾಲದಿಂದಲೂ ಇದ್ದವ ನೆಂದರೆ ಬ್ರಹ್ಮನೊಬ್ಬನೇ. ಅವನು ಬೇರಾರೂ ಗುಣಪೂರ್ಣರು ಇಲ್ಲದಿರುವ ದರಿಂದ ನಾನೇ ಗುಣಪರಿಪೂರ್ಣನಾದ ಬ್ರಹ್ಮನೆಂದು ತಿಳಿದುಕೊಂಡನು. ಆದುದ ರಿಂದ ಅವನು ಪೂರ್ಣನೂ ಆದನು. ಇದರಂತೆ ದೇವ ಮಾನವರಲ್ಲಿ ಆ ಪರಬ್ರಹ್ಮನು ಗುಣಪೂರ್ಣನೆಂದು ತಿಳಿದು ಯಾರು ಉಪಾಸನೆ ಮಾಡುವರೋ ? ಅವರೆಲ್ಲರೂ ಸ್ವಯೋಗ್ಯವಾದ ಪೂರ್ಣತೆಯನ್ನು ಹೋದುವರು. ಇದಕ್ಕೆ ಭಿನ್ನವಾಗಿ ಅಂದರೆ ವಿಪರೀತವಾಗಿತಿಳಿದರೆ ಅವನು ಮೂರ್ಖ. ಅವನು ಪಶು."

ಹೀಗೆ ಜೀವನು ಆನಂದಾದಿ ಗುಣಪೂರ್ಣತೆಯನ್ನು ಹೊಂದಬೇಕಾದರೆ ಪರ ಬ್ರಹ್ಮನು ಜ್ಞಾನಾನಂದಾದಿ ಗುಣಗಳಿಂದ ಪರಿಪೂರ್ಣನು. ಹೇಯನಲ್ಲವಾದುದರಿಂದ "ಅಹಂ" ಎಂದು ಅವನಿಗೆ ಹೆಸರು. ಗುಣಪೂರ್ಣನಾದುದರಿಂದ ಬ್ರಹ್ಮನೆಂದು ಹೆಸರು. ಸರ್ವಕಾಲದಲ್ಲಿಯೂ ಇರುವದರಿಂದ ' ಅಸ್ಮಿ ' ಎಂಬುದು ಆ ಪರಬ್ರಹ್ಮ ವಾಚಕ ಶಬ್ದವೇ. ಹೀಗೆ 'ಅಹಂ ಬ್ರಹ್ಮಾಸ್ಮಿ' ಎಂಬ ಶಬ್ದದಿಂದ ಅಹೇಯತ್ವ, ಗುಣಪೂರ್ಣತ್ವ, ಸಾರ್ವಕಾಲಿಕತ್ವ ಮುಂತಾದ ಭಗವದ್ಗುಣಗಳನ್ನು ತಿಳಿದು ಯಾರು ಭಗವಂತನ ಉಪಾಸನೆಯನ್ನು ಮಾಡುವರೋ, ಅವರು ಪೂರ್ಣತೆಯನ್ನು ಪಡೆಯು ವರು. ಮೋಕ್ಷವನ್ನು ಹೊಂದುವರು.

ಆದರೆ ಈ ಅಹಂಬ್ರಹ್ಮಾಸ್ಮಿ ಎಂಬ ವಾಕ್ಯಕ್ಕೆ ಜೀವಬ್ರಹ್ಮೈಕ್ಯವೇ ಅರ್ಥ ಎಂದು ಹೇಳುವ ಮಾಯಾವಾದಿಗಳನ್ನು ಶ್ರೀ ಮಧ್ವಾಚಾರ್ಯರು ಈ ಉಪನಿಷದ್ ಭಾಷ್ಯದಲ್ಲಿ ಮುಂದೆ ಎಂದೂ ಎಲ್ಲಿಯೂ ತಲೆ ಎತ್ತದಂತೆ ಖಂಡಿಸಿಹಾಕಿದ್ದಾರೆ.

ಆಪಾತತಃ ಅದ್ವೈತಪರವಾಗಿ ತೋರುವ 'ತತ್ವಮಸಿ' 'ಏಕಮೇವಾದ್ವಿತೀಯಂ ಬ್ರಹ್ಮ'ನೇಹನಾನಾಸ್ತಿ ಕಿಂಚನ,'ಮೃತ್ಯೋಃ ಸಮೃತ್ಯುಮಾಪ್ನೋತಿ'ಇಹನಾನೇವಪಶ್ಯತಿ ವರದೇವಾನುದ್ರಷ್ಟವ್ಯಂ, 'ಏತದಾತ್ಮ್ಯಮಿದಂ ಸರ್ವಂ,' ವಾಚಾರಂಭಣಂ ನಾಮ ವಿಕಾರೋ ನಾಮಧೇಯಂ, 'ತದ್ಯೋsಹಂಸೋsಸೌ' ಮುಂತಾದ ವಾಕ್ಯಗಳನ್ನೆಲ್ಲ ವಿಮ ರ್ಶಿಸಿ ಉಪಕ್ರಮ ಉಪಸಂಹಾರ ಮುಂತಾದ ಷಡ್ವಿಧ ತಾತ್ಪರ್ಯ ಲಿಂಗಗಳಿಂದ ಆ ಎಲ್ಲ ವಾಕ್ಯಗಳಿಗೂ ಭೇದಬೋಧನದಲ್ಲಿಯೇ ತಾತ್ಪರ್ಯವು ಎಂದು ಸಿದ್ಧಮಾಡಿ ತೋರಿಸಿದ್ದಾರೆ. ಅನಂತರ "ದ್ವಾವಿಮೌ ಪುರುಷೌ ಲೋಕೇ" ಮುಂತಾದ ಸ್ಮೃತಿ ವಾಕ್ಯಗಳನ್ನು "ದ್ವಾಸುಪರ್ಣಾ" 'ಮಚ್ಛಂದದಾಪ್ಯ ವಿಷ್ಣುಂ' ಇತ್ಯಾದಿ ಶ್ರುತಿ ವಾಕ್ಯ ಗಳನ್ನೂ ಉದಾಹರಿಸಿ ಜೀವೇಶಭೇದವನ್ನು ಸ್ಥಾಪಿಸಿದ್ದಾರೆ.

ಮೋಕ್ಷಜನಕವಾದ ಭಗವತ್ ಪ್ರಸಾದವು ದೊರಕಬೇಕಾದರೆ ಅವನಲ್ಲಿ ಎಲ್ಲ ಇಷ್ಟ ವಸ್ತುಗಳಿಗಿಂತ ಅಧಿಕವಾದ ಪ್ರೀತಿಯನ್ನು ಮಾಡಬೇಕು. ತಮಗೆ ಅತ್ಯಂತ ಪ್ರೀತ್ಯಾಸ್ಪದರಾದ ಪುತ್ರರು ಮಿತ್ರಕಲತ್ರಾದಿಗಳು ಪ್ರಿಯರೆನಿಸುವದು ಆ ಶ್ರೀ ಹರಿಯ ಸಂಕಲ್ಪದಿಂದಲೇ. ಇಲ್ಲದಿದ್ದರೆ ಯಾರೂ ಯಾವ ಬಂಧು ಬಳಗದವರೂ ಪರಸ್ಪರ ಪ್ರೀತಿ ಮಾಡುವದೇ ಅಸಂಭವ. ಭಗವಂತನ ಸನ್ನಿಧಾನವಿಲ್ಲದಿದ್ದರೆ ಎಲ್ಲ ದೇಹಗಳೂ ಶವ ಎನಿಸಿ ಅಸಹ್ಯವಾಗಿ ಬಿಡುವವು. ಆದುದರಿಂದ ನಮ್ಮ ಎಲ್ಲ ಪ್ರೀತಿಯ ವಸ್ತುಗಳ ಪ್ರಿಯತೆಯ ಜೀವಾಳವಾದ ಆ ಭಗವಂತನಲ್ಲಿ ನಮ್ಮ ಎಲ್ಲ ಪ್ರಿಯವಸ್ತುಗಳಿಗಿಂತ ಅನಂತ ಪಟ್ಟು ಹೆಚ್ಚು ಪ್ರೀತಿಯನ್ನು ಅರ್ಥಾತ್ ಭಕ್ತಿಯನ್ನು ಮಾಡಿ ಉದ್ಧೃತ ರಾಗಬೇಕು ಎಂದು ಈ ಉಪನಿಷತ್ತು ಬೋಧಿಸುತ್ತದೆಂದು ಶ್ರೀಮದಾಚಾರ್ಯರು ಭಾಷ್ಯ ಬರೆದಿದ್ದಾರೆ.

## ಛಾಂದೋಗ್ಯೋಪನಿಷದ್ ಭಾಷ್ಯ

ಬೃಹದಾರಣ್ಯಕೋಪನಿಷತ್ತಿನಂತೆ ಇದಾದರೂ ದೊಡ್ಡದಾದ ಉಪನಿಷತ್ತು ಆಗಿದ್ದು ದ್ವೈತ ಸಿದ್ಧಾಂತದ ಅನೇಕ ವಿಷಯಗಳನ್ನು ಇಲ್ಲಿ ವಿವರಿಸಲಾಗಿದೆ.

ಆಚಾರ್ಯರು ಭಾಷ್ಯವನ್ನು ಬರೆಯದಿರುವ ಈ ಉಪನಿಷತ್ತಿನ ಪ್ರಥಮಾಧ್ಯಾಯ, ದ್ವಿತೀಯಾಧ್ಯಾಯಗಳಲ್ಲಿ ಅಂತಃಕರಣಶುದ್ಧಿದ್ವಾರಾ ಬ್ರಹ್ಮವಿದ್ಯಾಧಿಕಾರವು ಸಿದ್ಧಿಸಲಿಕ್ಕಾಗಿ ಕರ್ಮಸ್ವರೂಪವನ್ನು ನಿರೂಪಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಪರಮಾತ್ಮನ ಪ್ರಿಯತಮ ಪುತ್ರರಾದ ಮುಖ್ಯ ಪ್ರಾಣ ದೇವರ ಮಹಾ ಮಹಿಮೆಯನ್ನು ಬಣ್ಣಿಸಲಾಗಿದೆ. ಉದ್ಗೀಥ ಪ್ರತಿಪಾದ್ಯನೂ ಓಂಕಾರ ಪ್ರತಿಪಾದ್ಯನೂ, ಆದ ಉದ್ಗೀಥನಾಮಕ ಶ್ರೀ ಹರಿಯನ್ನು ಭಗವಂತನ ಮುಖ್ಯಪ್ರತೀಕರಾದ ಮುಖ್ಯ ಪ್ರಾಣದೇವರಲ್ಲಿ ಧ್ಯಾನಿಸಬೇಕೆಂದು ಹೇಳಿದ್ದಾರೆ. ಯಾಕಂದರೆ 'ಅಪಹತಪಾಪ್ಮಾ ಹ್ಯೇಷಃ' ಕಲ್ಯಾದಿ ದೈತ್ಯರಿಗೆ ಸನಿಹದಲ್ಲಿ ಸುಳಿಯಲಿಕ್ಕೂ ಅವಕಾಶ ಕೊಡದ ಪರಿಶುದ್ಧತಮವಾದ ಪದಾರ್ಥವೆಂದರೆ ಪ್ರತ್ಯಕ್ಷ ಬ್ರಹ್ಮರಾದ ವಾಯುದೇವರೇ ಸರಿ. ಇದೇ 'ಮಾತನ್ನು 'ಉದ್ಗೀಥಾಖ್ಯಸ್ಯ ವಿಷ್ಣೋಃ ವಿಶಿಷ್ಟ ಪ್ರತಿಮಾ ವಾಯುದೇವಃ' ಎಂಬ ಉಕ್ತಿಯಿಂದ ವ್ಯಕ್ತಪಡಿಸಿದ್ದಾರೆ.

ಸರ್ವ ವೇದಗಳಿಗೂ ಪುರುಷಸೂಕ್ತವು ಮೂಲಭೂತವೂ ಆಗಿದೆ. ಮುಕುಟಭೂತವೂ ಆಗಿದೆ. ಈ ಪುರುಷಸೂಕ್ತಕ್ಕೆ ಗಾಯತ್ರಿಯು ಮೂಲ. ಆ ವ್ಯಾಹೃತಿತ್ರಯಕ್ಕೆ ಓಂಕಾರವು ಮೂಲ. ಇದರಿಂದ ಸಮಸ್ತ ವೇದರಾಶಿಗೂ ಓಂಕಾರವೇ ಮೂಲವೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಎಲ್ಲ ವೇದಗಳ ಪ್ರಾರಂಭವು "ಹರಿಃ ಓಂ" ಎಂದು ಓಂಕಾರಪೂರ್ವಕವಾಗಿಯೇ ಆಗುತ್ತದೆ. "ಹರಿಃ ಓಂ" ಎಂಬಲ್ಲಿಯ ಹರಿ ಎಂದರೆ ಶ್ರೀ ವಿಷ್ಣುವು. "ಓಂ" ಎಂದರೆ ಗುಣಪರಿಪೂರ್ಣ ಎಂದು ಅರ್ಥ. ಓಂಕಾರಾರ್ಥವಾದ ಈ ಹರಿಸರ್ವೋತ್ತಮತ್ವವೇ ಮೊದಲಿನಿಂದ ಕೊನೆಯ್ವರೆಗೂ ಈ ಉಪನಿಷತ್ತಿನಲ್ಲಿ ಪ್ರತಿಪಾದಿತವಾಗಿದೆ. ಈ ಓಂಕಾರ ರೂಪವಾದ ಪ್ರಣವದ ಉಪಾಸನೆಯಿಂದ ಸಂತಾನ, ಸಂಪತ್ತು ಐಹಿಕ ಫಲಗಳಲ್ಲದೆ ಮೋಕ್ಷ ರೂಪ ಪರಮ ಪುರುಷಾರ್ಥವನ್ನೂ ಪಡೆಯಬಹುದೆಂದು ನಿರೂಪಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಐದು, ಏಳು ಅಂಶಗಳುಳ್ಳ ಸಾಮ ಮಂತ್ರಗಳಲ್ಲಿ ಕೊಂಡಾಡಲ್ಪಡುವ ಶ್ರೀ ಹರಿಯ ಉಪಾಸನೆಯನ್ನೂ, ಮಳೆ, ನೀರು, ಋತು, ಇಂದ್ರಿಯಗಳಲ್ಲಿ ಪಂಚರೂಪವುಳ್ಳ ಶ್ರೀ ವಿಷ್ಣುವನ್ನೂ, ಸಪ್ತನಾಮಗಳಲ್ಲಿ ಸಪ್ತ ರೂಪಿಯಾದ ಪರಮಾತ್ಮನನ್ನೂ ಸರ್ವೋತ್ಕೃಷ್ಟನೆಂದು ಉಪಾಸನೆ ಮಾಡಿದರೆ ಸ್ವರ್ಗ ಮೋಕ್ಷಾದಿ ಫಲಗಳು ದೊರಕುತ್ತವೆಯೆಂದು ತಿಳಿಸಿದ್ದಾರೆ.

ವಸ್ವಾದಿ ದೇವತೆಗಳು ಸೂರ್ಯಾಂತರ್ಗತನಾದ ಆ ಜಗದೀಶ್ವರನ ಉಪಾಸನೆಯಿಂದಲೇ ತಮ್ಮ ಸ್ಥಾನಮಾನಗಳನ್ನು ಪಡೆದರೆಂದು ತಿಳಿಸಿ ಅವನ ಅಚಿಂತ್ಯಾದ್ಭುತವಾದ ಶಕ್ತಿಯ ಪರಿಚಯವನ್ನು ಮಾಡಿಕೊಟ್ಟಿದ್ದಾರೆ ಐದ್ಯನೇ ಅಧ್ಯಾಯದಲ್ಲಿ.

ಆರನೇ ಅಧ್ಯಾಯದಲ್ಲಿ ಮಹಾಜ್ಞಾನಿಗಳಾದ ರೈಕ್ವ ಮುನಿಗಳಿಂದ ಪೌತ್ರಾಯಣ ರಾಜನು ಪ್ರಾಣ ವಿದ್ಯೆಯನ್ನು ಪಡೆದುಕೊಂಡನೆಂಬ ಉಲ್ಲೇಖವು ಬಂದಿದೆ. ಸತ್ಯಕಾಮಜಾಬಾಲಿಯು ಗುರುಗಳಾದ ಗೌತಮರ ಆದೇಶದಂತೆ ಗೋ ಸೇವೆಮಾಡಿ ವಾಯುವಾದಿ ದೇವತೆಗಳಿಂದಲೂ, ಗೌತಮ ಗುರುಗಳಿಂದಲೂ ತತ್ತ್ವೋಪದೇಶವನ್ನು ಪಡೆದ ಸಂದರ್ಭವು ಚಿತ್ರಿಸಲ್ಪಟ್ಟಿದೆ.

ಮೋಕ್ಷವನ್ನು ಸಾಕ್ಷಾತ್ತಾಗಿ ಪ್ರದಾನ ಮಾಡುವವನು ಶ್ರೀ ಹರಿಯೇ. ಆದರೆ ಅವಕ್ಕೆ ಪೂರ್ವಭಾವಿಯಾಗಿ ಪ್ರಾಣದೇವರ ಪ್ರಸಾದವು ಅತ್ಯಗತ್ಯ. ಆದುದರಿಂದ ಆ ಮುಖ್ಯಪ್ರಾಣ ದೇವರಿಗೆ ಶ್ರೇಷ್ಠತ್ವವನ್ನೂ, ಪ್ರೇಷ್ಠತ್ವವನ್ನೂ ಹೇಳುವ ಪ್ರಾಣವಿದ್ಯೆಯನ್ನು ಏಳನೆ ಅಧ್ಯಾಯದಲ್ಲಿ ವಿವರಿಸಲಾಗಿದೆ. ಅದಲ್ಲದೆ ಪಂಚಾಗ್ನಿವಿದ್ಯೆ, ಧೂಮ ಮಾರ್ಗ, ಅರ್ಚಿರಾದಿ ಮಾರ್ಗಗಳ ವಿವರಣೆಯೂ ಇಲ್ಲಿದೆ.

ಶೈವ, ವೈಷ್ಣವರ ಮುಖ್ಯ ವಾಕ್ಯಾರ್ಥದ ವಾದ ವೇದಿಕೆ ಎನಿಸಿದ "ತತ್ತ್ವಮಸಿ" ವಚನಸಂದರ್ಭವು ಈ ಛಾಂದೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿದೆ. ಅಧ್ಯಯನ ಮಾಡಿ ಪಾಂಡಿತ್ಯದ ದುರಭಿಮಾನದಿಂದ ತನಗೆ ಸಮಾನರಾದ ವಿದ್ವಾಂಸರೇ ಇಲ್ಲವೆಂದು ಬಿಮ್ಮಿನಿಂದ ಬೀಗಿ ಬರುತ್ತಿರುವ ಮಗ ಶ್ವೇತಕೇತುವಿಗೆ ತಂದೆ ಉದ್ದಾಲಕರು ಅವನ ಗರ್ವವನ್ನು ಇಳಿಸುವದಕ್ಕಾಗಿ

"ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ"

ಎಂಬ ಮಾತನ್ನು ಹೇಳುತ್ತಾರೆ. ಇದಕ್ಕೆ ಜೀವ ಬ್ರಹ್ಮ ಐಕ್ಯದಲ್ಲಿಯೇ ತಾತ್ಪರ್ಯವಿದೆ ಎಂದು ಪರಕೀಯರು ಸಾಧಿಸುತ್ತಾರೆ. ಆದರೆ ಆಚಾರ್ಯರು ಅದನ್ನು ಖಂಡಿಸಿ ತತ್ ಎಂಬ ಅವ್ಯಯಕ್ಕೆ ಎಲ್ಲ ವಿಭಕ್ತಿಗಳ ಅರ್ಥವನ್ನು ಹೇಳಿ ಯಾವದರಿಂದಲೂ ಜೀವಪರಮಾತ್ಮರ ಅಭೇದಾರ್ಥವು ಬೋಧಿತವಾಗದೇ ಭೇದಘಟಿತವಾದ ಬಗೆಬಗೆಯ ಜೀವಪರಮಾತ್ಮರ ಸಂಬಂಧವೇ ಇಲ್ಲಿ ಸೂಚಿತವಾಗಿದೆ ಎಂದು ಯುಕ್ತಿ ಪುರಸ್ಸರವಾಗಿ ಬಹು ಪ್ರಮಾಣೋದಾಹರಣ ಪೂರ್ವಕವಾಗಿ ನಿರೂಪಿಸಿದ್ದಾರೆ. ಐಕ್ಯಬೋಧನೆಯೇ ಈ ವಾಕ್ಯದ ತಾತ್ಪರ್ಯವಾಗಿದ್ದರೆ 'ಸಆತ್ಮಾ' ಎಂದು ಪುಲ್ಲಿಂಗದಿಂದ ಪರಬ್ರಹ್ಮನ ನಿರ್ದೇಶಮಾಡಿ 'ತತ್' ಎಂದು ನಪುಂಸಕಲಿಂಗದಿಂದ ಪರಾಮರ್ಶಮಾಡಿರುವದು ಕೂಡುವದಿಲ್ಲ. ಹಾಗೂ ಇಲ್ಲಿ "ಸಆತ್ಮಾತತ್ತ್ವಮಸಿ" ಎಂಬಲ್ಲಿ "ಅತತ್ತ್ವಮಸಿ" ಎಂದು

ಪದಚ್ಛೇದ ಮಾಡಿ ನೀನು ಆ ಪರಬ್ರಹ್ಮನಿಂದ ಭಿನ್ನನಿರುತ್ತೀ ಎಂದು ಅರ್ಥವಿಸು ವದೇ ಸಂದರ್ಭಕ್ಕೆ ಅನುಗುಣವಾಗುತ್ತದೆ. ಮತ್ತು ಉದ್ದಾಲಕರು ತಾವು ಮಾಡುವ ಉಪದೇಶ ಹಾಗೂ ಹೇಳುವ ಮಾತು ತಮ್ಮ ಮಗನ ಮನಸ್ಸಿಗೆ ಚನ್ನಾಗಿ ಬಿಂಬಿಸ ಬೇಕೆಂದು ಒಂಬತ್ತು ಬೇರೆ ಬೇರೆ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. ಆ ಒಂಬತ್ತರ ಪೈಕಿ ಒಂದು ದೃಷ್ಟಾಂತದಲ್ಲಿಯೂ ಐಕ್ಯಬೋಧನೆ ಇಲ್ಲ. ಭೇದಬಾಧನೆ ಇಲ್ಲ. ಅದ್ವೈತಸಾಧನೆ ಇಲ್ಲ.

ಇಂಥ ಮಹತ್ವದ ಅರ್ಥವನ್ನು ನಿರ್ಣಯಿಸುವಾಗ ಪೂರ್ವಾಪರ ಸಂದರ್ಭ ವನ್ನು ಗಮನಿಸುವದು ಅತ್ಯವಶ್ಯವಾಗಿದೆ. ಈ ತತ್ವಮಸಿ ವಾಕ್ಯದ ಹಿನ್ನೆಲೆಯನ್ನು ಉಪನಿಷತ್ತು ಮಾರ್ಮಿಕವಾಗಿ ಬಿತ್ತರಿಸಿದೆ ಕೇಳಿ

"ಸಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್
ವೇದಾನ್ ಅಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ"

ಶ್ವೇತಕೇತುವು ೧೨ ವರ್ಷದವನಿದ್ದಾಗ ಗುರುಗಳ ಮನೆಗೆ ಹೋಗಿ ೨೪ ವರ್ಷ ಎಲ್ಲ ವೇದಗಳನ್ನು ಅಧ್ಯಯನ ಮಾಡಿ ನಾನು ಸಕಲ ವೇದಪಾರಂಗತನಾದ ಮಹಾ ಪಂಡಿತನಾದೆ ಎಂಬ ಗರ್ವದಿಂದ ಉಬ್ಬಿ, ಕೊಬ್ಬಿ ತಂದೆಯ ಬಳಿಗೆ ಬಂದು

"ಏನಾಶ್ರುತಂ ಶ್ರುತಂ ಭವತಿ "

ಎಂದು ಮುಂತಾಗಿ ಆಧ್ಯತೆಯಿಂದ ಪ್ರಶ್ನೆ ಕೇಳುತ್ತಾನೆ.

ಹೀಗೆ ಪಾಂಡಿತ್ಯದ ಮದ ಮಿದುಳಿಗೇರಿ ಸೊಕ್ಕು ಉಕ್ಕುತ್ತಲಿರುವ ಮಗನಿಗೆ 'ನೀನೇ ಬ್ರಹ್ಮ' ಎಂದು ಉದ್ದಾಲಕರು ಹೇಗೆ ಹೇಳಿಯಾರು ? ನೆತ್ತಿಗೇರಿದ ಪಾಂಡಿ ತ್ಯದ ಮದವನ್ನು ಇಳಿಸಬೇಕಾದರೆ "ನೀನೇನು ದೇವರಲ್ಲ. ನೀನು ಅವನ ದಾಸ. ಅವನಿಂದಲೇ ಹುಟ್ಟಿದವ. ಅವನಿಂದಲೇ ಬದುಕಿದವ. ನೀನು ಅವನ ಭೃತ್ಯ. ಅವನು ಭಗವಂತ. ನೀನು ಪರತಂತ್ರ. ಅವನು ಸ್ವತಂತ್ರ. ಆದುದರಿಂದ ನಿನಗೆ ಇಂಥ ಅಹಂಕಾರ ಕೂಡದು" ಎಂದು ವ್ಯಾಖ್ಯಾನಿಸುವದೇ ಸಂದರ್ಭೋಚಿತವೂ ಉದ್ದಾಲ ಕರ ಅಭಿಪ್ರಾಯಾನುಗುಣವೂ ಆಗುತ್ತದೆ. ಇಲ್ಲದಿದ್ದರೆ 'ನೀನೇ ಪರಬ್ರಹ್ಮ ' ಎಂದು ಅವರ ಅಭಿಪ್ರಾಯವನ್ನು ವರ್ಣಿಸಿದರೆ ಮೊದಲೇ ಮದಾಂಧನಾದ ಮಗನ ಮನ ವನ್ನು ಉನ್ಮಾದದ ಅವಸ್ಥೆಗೆ ತಲುಪಿಸಿ ಮಗನ ತಲೆ ಕೆಡಿಸುವ ಮೂರ್ಖತನವನ್ನು ಉದ್ದಾಲಕರಂಥ ಜ್ಞಾನಿ ತಪಸ್ವಿಗಳು ಮಾಡಿದರೆಂದು ಆರೋಪಿಸಿದಂತಾಗುತ್ತದೆ. ಆದುದರಿಂದ ಅಲ್ಲಿ ಭಗವದಧೀನತ್ವವನ್ನು ಹೇಳುವದು ಉದ್ದಾಲಕರ ಅಭಿಪ್ರಾಯ ವಾಗಿತ್ತೆಂದು ಸ್ಥಾಪಿಸಿ ಭೇದಜ್ಞಾನಿಗೆ ಮೋಕ್ಷ. ಅಭೇದ್ಯಜ್ಞಾನಿಗೆ ಅಂಧಃ ತಮಸ್ಸು ಕಟ್ಟಿಟ್ಟ ಬುತ್ತಿ ಎಂಬ ಅರ್ಥದಲ್ಲಿ ಪ್ರಮಾಣ ವಚನ ತೋರಿಸಿದ್ದಾರೆ.

ಮುಂದೆ ಒಂಬತ್ತನೆಯ ಅಧ್ಯಾಯದಲ್ಲಿ ದೇವತಾ ತಾರತಮ್ಯವನ್ನೂ ಹತ್ತನೆಯ ಅಧ್ಯಾಯದಲ್ಲಿ ಮುಮುಕ್ಷುಗಳ ಉಪಾಸನಾಯೋಗ್ಯವಾದ ಭಗವದ್ರೂಪವನ್ನೂ ತಿಳಿಸಿ ಶ್ರೀ ಹರಿಸರ್ವೋತ್ತಮತ್ವ, ಪ್ರಪಂಚಸತ್ಯತ್ವ, ಪಂಚಭೇದ, ತಾರತಮ್ಯ, ಭಗವಂತನ ಸರ್ವಾಧಾರತ್ವ ಮುಂತಾದವುಗಳು ಸರ್ವ ಉಪನಿಷತ್ತುಗಳ ಸಾರಭೂತವಾದ ಸತ್ ತತ್ವವಾಗಿವೆ ಎಂಬುವದನ್ನು ಆಚಾರ್ಯರು ಈ ಉಪನಿಷತ್ ಭಾಷ್ಯದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ.

ಶ್ರೀಮದಾನಂದ ತೀರ್ಥರ ಭಾಷ್ಯಗಳಿಂದ ಪುರಸ್ಕೃತ ಪರಿಷ್ಕೃತ ಅಲಂಕೃತವಾದ ಈ ಹತ್ತು ಉಪನಿಷತ್ತುಗಳ ಅರ್ಥ ಗೌರವ ಹಾಗೂ ಪುರುಷಾರ್ಥ ಪ್ರದಾತೃತ್ವಾದಿಗಳನ್ನು ಶ್ರೀ ಮಧ್ವರ ಸಾಕ್ಷಾತ್ ಶಿಷ್ಯರಾದ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಬಹು ಸುಂದರವಾಗಿ ಬಣ್ಣಿಸಿದ್ದಾರೆ. ಓದಿರಿ, ಈ ಪದ್ಯವನ್ನು ಮನನ ಮಾಡಿರಿ.

**"ದಶೋಪನಿಷದೋ ದೇವೀರ್ದೇವಾ ಇವ ಸಮೀಪ್ಸಿತಾಃ**
**ಯುಕ್ತ್ಯಾಃ ಪ್ರಸಾದಯಂತ್ಯರ್ಥಾ ಏಷು ಭಾಷ್ಯಾಲಯೇಷ್ವಲಂ"**

## ಶ್ರೀಮನ್ ಮಧ್ವಾಚಾರ್ಯರು ರಚಿಸಿದ

# ದಶಪ್ರಕರಣಗಳು



## ೧ ಪ್ರಮಾಣಲಕ್ಷಣ

ಪ್ರಮೇಯ ಜ್ಞಾನವಾಗಬೇಕಾದರೆ ಮೊದಲು ಪ್ರಮಾಣಗಳನ್ನು ತಿಳಿದುಕೊಳ್ಳಬೇಕು. ಪ್ರಮಾಣ ಸ್ವರೂಪಜ್ಞಾನವನ್ನು ಮಾಡಿಕೊಡಲಿಕ್ಕಾಗಿಯೇ ಆಚಾರ್ಯರು ಈ ಗ್ರಂಥವನ್ನು ರಚಿಸಿದ್ದಾರೆ. "ಯಥಾರ್ಥಂ ಪ್ರಮಾಣಂ" (ಯಥಾವಸ್ಥಿತಜ್ಞೇಯ ವಿಷಯೀಕಾರಿತ್ವಂ) ಎಂದು ಹೇಳಿದ ಆಚಾರ್ಯರು ಪ್ರಮಾಣವು ಕೇವಲ ಪ್ರಮಾಣ ಅನುಪ್ರಮಾಣ ಎಂದು ಎರಡು ಬಗೆಯಾಗಿದೆ ಎಂದು ನಿರೂಪಿಸುತ್ತಾರೆ.

ಕೇವಲ ಜ್ಞಾನವು ಮತ್ತೆ ಈಶ್ವರಜ್ಞಾನ, ಲಕ್ಷ್ಮೀಜ್ಞಾನ, ಯೋಗಿಜ್ಞಾನ, ಅಯೋಗಿಜ್ಞಾನ ಎಂದು ನಾಲ್ಕು ಬಗೆಯಾಗಿದೆ. ಅನುಪ್ರಮಾಣವೂ ಕೂಡ ಪ್ರತ್ಯಕ್ಷ. ಅನುಮಾನ, ಆಗಮ ಎಂದು ತ್ರಿವಿಧವಾಗಿದೆ.

ನೈಯಾಯಿಕರ 'ಉಪಮಾನ', ಮೀಮಾಂಸಕರ 'ಅರ್ಥಾಪತ್ತಿ', ಭಾಟ್ಟರ 'ಅನುಪಲಬ್ಧಿ' ಮುಂತಾದ ಪ್ರಮಾಣಗಳೆಲ್ಲವೂ ಈ ಮೂರರಲ್ಲೇ ಅಂತರ್ಭೂತವಾಗುತ್ತವೆ ಎಂದು ತೋರಿಸಿದ್ದಾರೆ.

ಆಗಮದಲ್ಲಿಯೂ ನಿತ್ಯ ಅನಿತ್ಯ ಎಂದು ಎರಡು ಬಗೆಯಿದೆ. ಅನಿತ್ಯಾಗಮ ಎಂದರೆ ಪುರಾಣ. ನಿತ್ಯಾಗಮವೆಂದರೆ ವೇದ. ಈ ವೇದದಿಂದ ಭಗವಂತನನ್ನು ತಿಳಿದುಕೊಂಡು ಉದ್ಧೃತರಾಗಬೇಕು ಎಂದು ಅಪ್ಪಣೆ ಕೊಡಸಿದ್ದಾರೆ.

ಈ ಪ್ರಮಾಣ ಲಕ್ಷಣ ಗ್ರಂಥವು ಚಿಕ್ಕದಾದರೂ ಬಹಳ ಗಂಭೀರವಾದುದು. ಶ್ರೀ ಜಯತೀರ್ಥರು ವಿದ್ಯಾರಣ್ಯರಿಗೆ ಮೊದಲು ಇದನ್ನು ತೋರಿಸಿದಾಗ ಅವರಿಗೆ ಅರ್ಥವೇ ಆಗಲಿಲ್ಲ. ಮುಂದೆ ಜಯತೀರ್ಥರು ಬರೆದ ಟೀಕೆಯನ್ನು ನೋಡಿದ ಬಳಿಕ ಅವರಿಗೆ ಪ್ರಮಾಣಲಕ್ಷಣದ ಅರ್ಥಗಾಂಭೀರ್ಯವು ತಿಳಿದು ಅದನ್ನು ಆನೆಯಮೇಲಿಟ್ಟು ಮೆರೆಸಿದರಂತೆ.

## ೨ ಕಥಾಲಕ್ಷಣ

ಅನೇಕ ವಿದ್ವಾಂಸರು ಒಂದೆಡೆಗೆ ಸೇರಿ ತತ್ವನಿರ್ಣಯವನ್ನು ಮಾಡಿಕೊಳ್ಳಲಿಕ್ಕಾಗಿ ನಡೆಯಿಸುವ ವಿಚಾರಕ್ಕೆ ಕಥೆ ಎಂದು ಹೆಸರು. ಇದೊಂದು ಸಭಾಶಾಸ್ತ್ರ. (ಅನೇಕ ವಿದ್ವತ್ ಕರ್ತೃಕ ವಿಚಾರಗೋಚರ ವಾಕ್ಯಪ್ರಬಂಧಃ)

ಈ ಕಥೆ, ವಾದ, ಜಲ್ಪ, ವಿತಂಡಾ ಎಂದು ಮೂರು ಬಗೆಯಾಗಿದೆ. ತತ್ತ್ವನಿರ್ಣಯವನ್ನು ಮಾಡಿಕೊಳ್ಳಲಿಕ್ಕಾಗಿ ಗುರುಶಿಷ್ಯರು ಕೂಡಿ ನಡೆಯಿಸುವ ತಾತ್ವಿಕ ಚರ್ಚೆಯು ವಾದ ಎನಿಸುತ್ತದೆ. ಪರಸ್ಪರ ಗೆಲ್ಲಬೇಕೆಂದು ಹುರುಡುಗಟ್ಟಿ ವಾದಿಪ್ರತಿವಾದಿಗಳಿಬ್ಬರೂ ಸ್ಪರ್ಧೆಯಿಂದ ನಡೆಯಿಸುವ ವಾದವಿವಾದಕ್ಕೆ ಜಲ್ಪ ಎಂದು ಹೆಸರು. ಸಜ್ಜನರು ಅಸಜ್ಜನರೊಡನೆ ವಾದ ಹೂಡಿ ಅವರ ವಾದಗಳನ್ನೆಲ್ಲ ಉಕ್ತಿಯುಕ್ತಿಗಳಿಂದ ಖಂಡಿಸಿ ತಮ್ಮ ಮತವನ್ನು ಪ್ರತಿಪಾದಿಸುವದಕ್ಕೆ ವಿತಂಡ ಎನ್ನುತ್ತಾರೆ.

ಈ ವಾದ ಕಥೆಗಳಲ್ಲಿ ವಾದಿಪ್ರತಿವಾದಿಗಳ ತಪ್ಪುಒಪ್ಪುಗಳನ್ನು ಶಾಸ್ತ್ರೋಕ್ತ ಮಾರ್ಗದಿಂದ ಮಧ್ಯಸ್ಥರೇ ನಿರ್ಣಯಿಸುವರು. ಇಂಥ ಚರ್ಚಾಕೂಟ ಅಥವಾ ವಾದ ಕಥೆಗಳಿಂದ ತತ್ವಜ್ಞಾನ ವಿರೋಧಿಯಾದ ನಾಸ್ತಿಕರ ದುರ್ನಡತೆಗಳ ಖಂಡನೆಯಾಗಿ ಸಜ್ಜನರ ಸಂಶಯಗಳೆಲ್ಲ ತೊಲಗಿ ತತ್ವಜ್ಞಾನವು ತಿಳಿಗಟ್ಟಿ ನಿಲ್ಲುವದು. ಪ್ರಮಾಣ ಲಕ್ಷಣದಂತೆ ಕಥಾಲಕ್ಷಣವನ್ನೂ ಆಚಾರ್ಯರು ಬ್ರಹ್ಮತರ್ಕಾನುಸಾರವಾಗಿ ಹೇಳಿದ್ದಾರೆ.

"ಆನಂದತೀರ್ಥಮುನಿನಾ ಬ್ರಹ್ಮತರ್ಕಾನುಸಾರತಃ ।
ಕಥಾಲಕ್ಷಣಮಿತ್ಯುಕ್ತಂ ಪ್ರೀತ್ಯರ್ಥಂ ಶಾರ್ಙ್ಗಧನ್ವನಃ ॥

ಈ ಚರ್ಚಾಗೋಷ್ಠಿಗಳಲ್ಲಿ ಸಭಾಪತಿ, ಪ್ರಾಶ್ನಿಕ, ಕಥಕ, ಸದಸ್ಯ ಮುಂತಾದವರಿರುವರು. ಇದರಲ್ಲಿ ಮೊದಲಿನ ವಾದ ಕಥೆಯಲ್ಲಿ ಪ್ರಾಶ್ನಿಕರು ಅತ್ಯಾವಶ್ಯಕರಾಗಿರದಿದ್ದರೂ ಜಲ್ಪ ವಿತಂಡಾಗಳಲ್ಲಿ ಮಾತ್ರ ಅವರು ಇರಲೇಬೇಕು. ಅವರು ವಾದ ಪ್ರತಿವಾದಗಳ ಒಳಿತು ಕೆಡುಕು ಸತ್ವಾಸತ್ವಗಳನ್ನು ನಿರ್ಣಯಿಸುವಷ್ಟು ಬುದ್ಧಿವಂತರಿರಬೇಕಲ್ಲದೇ ಮುಖ್ಯವಾಗಿ ವಿಷ್ಣುಭಕ್ತರಾಗಿರಬೇಕು ಎಂದು ಮುಂತಾಗಿ ಹೇಳಿ ಆಚಾರ್ಯರು ವಾಕ್ಯಾರ್ಥವನ್ನು ನಡೆಯಿಸುವ ಕ್ರಮ ಮತ್ತು ತತ್ವನಿರ್ಣಯಕ್ರಮಗಳನ್ನು ತಿಳಿಸಿ ಜಯಪರಾಜಯಗಳ ನಿರ್ಧಾರಕ್ಕೆ ಸರಿಯಾದ ಗಮಕಗಳನ್ನೂ ಸೂಚಿಸಿದ್ದಾರೆ.

ಹಾಗೂ ಪ್ರತ್ಯಕ್ಷ ಸಾಕ್ಷಿ ಮತ್ತು ಆಗಮ ಪ್ರಮಾಣಗಳ ಅಧಿಕಾರ ಕಕ್ಷೆಗಳನ್ನು ವಿವರಿಸುತ್ತ ಐಂದ್ರಿಯಿಕ ವಿಷಯದಲ್ಲಿ ಪ್ರತ್ಯಕ್ಷವೂ ಜ್ಞಾನವಿಷಯದಲ್ಲಿ ಸಾಕ್ಷಿಯೂ, ಅತೀಂದ್ರಿಯ ವಿಷಯಗಳಲ್ಲಿ ವೇದಾದ್ಯಾಗಮುಗಳೂ ಪರಮಪ್ರಮಾಣವಾಗಿವೆ ಎಂದು ಸಾರಿದ್ದಾರೆ.

ಇಂಥ ನಿತ್ಯವಾದ ವೇದ, ಅನಿತ್ಯಾಗಮವಾದ ಪುರಾಣ, ಸ್ಮೃತಿ, ಭಾರತ, ಪಂಚರಾತ್ರ ಮತ್ತು ತದನುಸಾರಿ ಗ್ರಂಥಗಳನ್ನು ಮಾತ್ರ ಈ ಕಥಾಪ್ರಸಂಗಗಳಲ್ಲಿ ಉದಾಹರಿಸಬೇಕೆಂದು ನಿರ್ಬಂಧಪಡಿಸಿ ಮುಖ್ಯವಾಗಿ ತತ್ವನಿರ್ಣಯವೇ ಈ ಮೂರೂ ಕಥೆಗಳ ಉದ್ದೇಶವೆಂದು ಸ್ಪಷ್ಟಪಡಿಸಿದ್ದಾರೆ.

## ೪ ಪ್ರಪಂಚಮಿಥ್ಯಾತ್ವಾನುಮಾನಖಂಡನ

ಜಗನ್ಮಿಥ್ಯಾತ್ವವನ್ನು ಸಾಧಿಸಲಿಕ್ಕೆ ವೇದಪುರಾಣವಚನಗಳಿಂದ ಸಾಧ್ಯವಾಗದ ಅದ್ವೈತಿಯು ಅನುಮಾನ ಬಲದಿಂದ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳಹೊರಟರೆ ಅದನ್ನೂ ಕೂಡ ಅಪದ್ಧ ಎಂದು ಆಚಾರ್ಯರು ಇದರಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ.

ವಿಶ್ವಕ್ಕೆ ಅಸತ್ಯತ್ವವನ್ನು ಸಾಧಿಸುವ ಅದ್ವೈತಿಗಳ

"ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಪರಿಚ್ಛಿನ್ನತ್ವಾತ್ ಜಡತ್ವಾತ್ ಶುಕ್ತಿರೂಪ್ಯವತ್"

ಎಂಬ ಅನುಮಾನವನ್ನು ಇದರಲ್ಲಿ ಮತ್ತೆಲ್ಲಿಯೂ ತಲೆ ಎತ್ತದಂತೆ ಖಂಡಿಸಲಾಗಿದೆ.

ಈ ಅನುಮಾನದಲ್ಲಿ ಪಕ್ಷಭೂತವಾದ ವಿಶ್ವವೇ ಮಿಥ್ಯೆಯಾದರೆ ಆಶ್ರಯವೇ ಅಸಿದ್ಧವಾಗಿ ಮಿಥ್ಯಾತ್ವರೂಪ ಸಾಧ್ಯವನ್ನು ಸಾಧನಮಾಡುವದೆಲ್ಲಿ ? ಎಂಬ ಪ್ರಶ್ನೆ ಬರುವದು.

ಮತ್ತು ಮಾಯಿಗಳಿಗೆ ಮಿಥ್ಯಾತ್ವವನ್ನು ಸರಿಯಾಗಿ ನಿರ್ವಚನ ಮಾಡಲಿಕ್ಕೂ ಬರಲಾರದು. ಸತ್ ಮತ್ತು ಅಸತ್ ಪರಸ್ಪರ ವಿರುದ್ಧವಾದುದರಿಂದ ಮಿಥ್ಯಾ ಎಂದರೆ ಅಸತ್ಯವಲ್ಲ, ಸತ್ ಅಲ್ಲ. ಸದಸದ್ ವಿಲಕ್ಷಣ ಅನಿರ್ವಚನೀಯ ಎಂಬ ಮಾತಂತೂ ಸರ್ವಾಪದ್ಧ. ಅಂಥ ಅನಿರ್ವಚನೀಯ ವಸ್ತುವೇ ಅಪ್ರಸಿದ್ಧ, ಅಪ್ರಾಮಾಣಿಕ.

ಹೇತುಭೂತವಾದ ದೃಶ್ಯತ್ವದ್ದೂ ಇದೇ ಹಾಡು. ಬ್ರಹ್ಮಾತಿರಿಕ್ತವಾದ 'ದೃಶ್ಯತ್ವ' ಸತ್ಯವೋ ಮಿಥ್ಯವೋ ? ಸತ್ಯ ಎಂದರೆ ಅದ್ವೈತ ಹಾನಿ. ಮಿಥ್ಯೆಯೆಂದರೆ ಅಸಾಧಕತ್ವ ಬಂದು ಅಪ್ರಯೋಜಕವಾಗಿ ಬಿಡುವದು. ಮತ್ತೆ ಅದೇ ರಾಗ. ಸದಸದ್ವಿಲಕ್ಷಣ. ಅನಿರ್ವಚನೀಯ ಎನ್ನಬೇಕು. ಅದೋ ಅಪ್ರಸಿದ್ಧ, ಅಪ್ರಮಾಣ ಎಂದು ಹೇಳಿಯಾಗಿದೆ.

ಮೇಲಾಗಿ ಅನುಮಿತಿ ಹುಟ್ಟಬೇಕಾದರೆ ವ್ಯಾಪ್ತಿಜ್ಞಾನ ಬೇಡವೇ ! ಹೇತು ಸಾಧ್ಯಗಳಿಗೆ ವ್ಯಾಪ್ತಿಯೆಲ್ಲಿ ? ಇಲ್ಲಿ ಸಾಧ್ಯ ಮಿಥ್ಯಾತ್ವ. ಹೇತು ದೃಶ್ಯತ್ವ. ಮಿಥ್ಯಾತ್ವ

ರೂಪಸಾಧ್ಯವು ಇಲ್ಲದ ಪರಬ್ರಹ್ಮನಲ್ಲಿ ಶಾಸ್ತ್ರವೇದ್ಯತ್ವರೂಪವಾದ ದೃಶ್ಯತ್ವವು ಇದ್ದುದರಿಂದ 'ವ್ಯಭಿಚಾರಃ'. ಮತ್ತು ಪಕ್ಷಧರ್ಮತಾಜ್ಞಾನವಿಲ್ಲದಿದ್ದರೆ ಪರಾಮರ್ಶವಿಲ್ಲ ಅನುಮಿತಿ ಇಲ್ಲ. ಹೇತುಭೂತವಾದ ದೃಶ್ಯತ್ವವು ಬ್ರಹ್ಮಾತಿರಿಕ್ತವಾದುದರಿಂದ ಮಿಥ್ಯೆಯಾದರೆ ಹೇತುವೇ ಅಸಿದ್ಧವಾಯಿತು. ಅಂದಬಳಿಕ

"ಸಾಧ್ಯವ್ಯಾಪ್ಯಹೇತುಮಾನ್ ಪಕ್ಷಃ"

ಎಂಬ ಪಕ್ಷಧರ್ಮತಾಜ್ಞಾನ ಹೇಗೆ ವ್ಯಾಪ್ತಿ ಪಕ್ಷಧರ್ಮತಾ ಜ್ಞಾನಗಳಿಲ್ಲದ ಬಳಿಕ ಅನುಮಿತಿ ಎಂತುಂಟಾದೀತು !

ಇದಲ್ಲದೇ ಈ ಅನುಮಾನಕ್ಕೆ ಅಸಿದ್ಧಿ ವ್ಯಭಿಚಾರ ಬಾಧ ಸತ್ಪ್ರತಿಪಕ್ಷ ಮುಂತಾಗಿ ಅನುಮಾನ ದೋಷಗಳೆಲ್ಲವೂ ಬರುವದರಿಂದ ಈ ಅನುಮಾನದಿಂದಾಗಲಿ ಇಂಥ ಬೇರಾವ ಅನುಮಾನದಿಂದಾಗಲಿ ಪ್ರಪಂಚವು ಅಸತ್ಯ ಮಿಥ್ಯಾ ಎಂದು ಸಾಧಿಸುವದು ಶಕ್ಯವಿಲ್ಲ ಎಂದು ಅಚಾರ್ಯರು ನಿರ್ಧರಿಸಿದ್ದಾರೆ.

ಮತ್ತು ಈ ಪ್ರಪಂಚವು ಪರಮಾರ್ಥತಃ ಸತ್ಯ ಎಂಬುವದಕ್ಕೆ ಪ್ರತ್ಯಕ್ಷ ಅನುಮಾನ ಆಗಮ ಮೂರು ಪ್ರಮಾಣಗಳಿರುತ್ತವೆ. ಇಂಥ ಸತ್ಯಭೂತವಾದ ಜಗತ್ತಿನ ಸೃಷ್ಟ್ಯಾದ್ಯಷ್ಟಕರ್ತೃತ್ವವೇ ಗುಣಪೂರ್ಣನಾದ ಪರಮಾತ್ಮನ ಮುಖ್ಯಲಕ್ಷಣವಾಗಿದೆಯೆಂದು ಈ ಗ್ರಂಥದಲ್ಲಿ ಚೆನ್ನಾಗಿ ಆಚಾರ್ಯರು ನಿರೂಪಿಸಿದ್ದಾರೆ.

## ಮಾಯಾವಾದಖಂಡನ

ಅದ್ವೈತಿಗಳ ಮೂಲಸಿದ್ಧಾಂತವಾದ ಮಾಯಾವಾದವನ್ನು ಯುಕ್ತಿಯುಕ್ತವಾಗಿ ಆಚಾರ್ಯರು ಇದರಲ್ಲಿ ಖಂಡಿಸಿದ್ದಾರೆ. " ಜೀವನು ಪರಬ್ರಹ್ಮನ ಸ್ವರೂಪನೇ ಆಗಿದ್ದು ಈ ಜಗತ್ತೆಲ್ಲವೂ ಅಜ್ಞಾನಕಲ್ಪಿತ, ಮಿಥ್ಯಾ. ಅಜ್ಞಾನದಿಂದ ಜೀವನಿಗೆ ದುಃಖಾದಿಗಳು ಉಂಟಾಗುತ್ತವೆ. ಬ್ರಹ್ಮವೊಂದೇ ಸತ್ಯ. ಬ್ರಹ್ಮೈಕತ್ವಜ್ಞಾನದಿಂದ ಅಜ್ಞಾನನಿವೃತ್ತಿಯಾಗಲಿಕ್ಕೆ ವೇದಾದಿ ಶಾಸ್ತ್ರಗಳು ಆವಶ್ಯಕ" ಎಂಬ ಅದ್ವೈತಿಗಳ ಮಾತನ್ನು ನಿರ್ಯುಕ್ತಿಕ ಮತ್ತು ಪ್ರಮಾಣವಿರುದ್ಧ ಎಂದು ಈ ಚಿಕ್ಕ ಪ್ರಬಂಧದಲ್ಲಿ ಆಚಾರ್ಯರು ತೋರಿಸಿಕೊಟ್ಟಿದ್ದಾರೆ.

"ಜೀವಬ್ರಹ್ಮೈಕ್ಯವು ಸತ್ಯವೋ ಮಿಥ್ಯವೋ ? ಬ್ರಹ್ಮಾತಿರಿಕ್ತವಾದುದರಿಂದ ಅದು ಮಿಥ್ಯೆ ಸುಳ್ಳು ಎಂದರೆ ವೇದಗಳೆಲ್ಲ ಮಿಥ್ಯಾಬೋಧಕವಾಗಿ ಅಪ್ರಮಾಣವಾಗುವ ಪ್ರಸಂಗ. ಸತ್ಯ ಎಂದರೆ ಬ್ರಹ್ಮಭಿನ್ನವಾವ ಮತ್ತೊಂದು ಸತ್ಯಪದಾರ್ಥವನ್ನು ಒಪ್ಪಿದಂತಾಗಿ ಬ್ರಹ್ಮ ಒಂದೇ ಸತ್ಯ ಎಂಬ ಅದ್ವೈತ ಸಿದ್ಧಾಂತವೇ ಹಾಳಾಗುವದು" ಹೀಗೆ ಅನೇಕ ದೋಷಗಳನ್ನು ಉದ್ಘಾಟಿಸಿ ಮಾಯಾವಾದಿಯ ತಪ್ಪುಗಳನ್ನೆಲ್ಲ ಅವನ ಕೊರಳಿಗೇ ಹಾಕಿದ್ದಾರೆ. ಇದೇ ವಿಚಾರದ ಜಾಡನ್ನು ಹಿಡಿದು ಅಜ್ಞಾನ ಯಾರಿಗೆ ? ಅಜ್ಞಾನಕ್ಕೆ ವಿಷಯವಾವುದು ? ಅಧಿಕರಣ ಯಾವುದು ? ಅಜ್ಞಾನ ಜೀವನಿಗೋ ? ಬ್ರಹ್ಮನಿಗೋ ?

ಸ್ವಪ್ರಕಾಶನಾದ ಬ್ರಹ್ಮನಿಗೆ ಅಜ್ಞಾನವು ಆವರಿಸಲಾರದು. ಜೀವನಿಗೆ ಎಂದು ಹೇಳಲಿಕ್ಕೂ ಬಾರದು. ಯಾಕಂದರೆ ಜೀವಜಡಾದಿ ಪ್ರಪಂಚವೆಲ್ಲವೂ ಅಜ್ಞಾನ ಕಾರ್ಯವೇ ಆದುದರಿಂದ ತನ್ನ ಕಾರಣವಾದ ಅಜ್ಞಾನಕ್ಕಿಂತ ಪೂರ್ವಭಾವಿ ಎಂತಾದೀತು !

ಈ ಅಜ್ಞಾನಕ್ಕೆ ವಿಷಯ ಯಾವುದು ? ಬ್ರಹ್ಮವಂತೂ ಸ್ವಪ್ರಕಾಶವಾದುದರಿಂದ ಅಜ್ಞಾನಕ್ಕೆ ವಿಷಯವಾಗಲಾರದು. ಇನ್ನು ಜೀವಬ್ರಹ್ಮೈಕ್ಯವೇ ಅಜ್ಞಾನಕ್ಕೆ ವಿಷಯವೆಂದರೆ ಆ ಐಕ್ಯವು ಬ್ರಹ್ಮ ಭಿನ್ನವೋ ಅಭಿನ್ನವೋ ? ಬ್ರಹ್ಮನಿಂದ ಅಭಿನ್ನವೆಂದಾದರೆ ಅದೂ ಬ್ರಹ್ಮನಂತೆ ಸ್ವಪ್ರಕಾಶವಾಗಿ ಅಜ್ಞಾನಕ್ಕೆ ವಿಷಯವಾಗಲಾರದು. ಬ್ರಹ್ಮನಿಂದ ಭಿನ್ನ ಎಂದರೆ ಅದು ಸತ್ಯವೋ ಮಿಥ್ಯವೋ ಎಂದು ಪ್ರಶ್ನೆ. ಸತ್ಯವಾದರೆ ಬ್ರಹ್ಮಾತಿರಿಕ್ತವಾದ ಬೇರೊಂದು ಸತ್ಯಪದಾರ್ಥವನ್ನು ಒಪ್ಪಿದ್ದರಿಂದ ಅದ್ವೈತ ಸಿದ್ಧಾಂತ ಹಾನಿ. ಮಿಥ್ಯೆ ಎಂದರೆ ಶಾಸ್ತ್ರಗಳಿಗೆ ಮಿಥ್ಯಾಬೋಧಕತ್ವ, ಅತತ್ವಾವೇದಕತ್ವ ಪ್ರಸಂಗ. ಇದರಂತೆ ಅಜ್ಞಾನದ ಅಧಿಕರಣ ಯಾವದು ? ನಿತ್ಯಸಿದ್ಧವಾದ ಬ್ರಹ್ಮವಲ್ಲ. ಅಜ್ಞಾನಕಾರ್ಯವಾದ ಜೀವನಲ್ಲ. ಹೀಗೆ ವಿಷಯ ಆಶ್ರಯ ಅಧಿಕರಣ ಯಾವದೂ

ಇಲ್ಲದ್ದರಿಂದ ಅದ್ವೈತ ಮತದಲ್ಲಿ ಅಜ್ಞಾನವೇ ಕೂಡಲಿಕ್ಕೆ ಸಾಧ್ಯವಿಲ್ಲ. ಅದರಂತೆ ಮೋಕ್ಷವೂ ಕೂಡ ಆತ್ಮಸ್ವರೂಪವೇ ಆದುದರಿಂದ ಅದು ಮೊದಲೇ ಸಿದ್ಧವಾದುದ ರಿಂದ ಅದ್ವೈತ ಶಾಸ್ತ್ರಕ್ಕೆ ಮೋಕ್ಷವು ಪ್ರಯೋಜನವಾಗಲಾರದು.

"ಅಜ್ಞಾನಾಸಂಭವಾದೇವ ತನ್ಮತಮಖಿಲಮಪಾಕೃತಂ "

ಅಜ್ಞಾನವೇ ಕೂಡದಿದ್ದ ಬಳಿಕ ಅದರ ತಳಹದಿಯಮೇಲೆಯೇ ಕಟ್ಟಲಾದ ಮಾಯಾ ವಾದದ ಮಂಜಿನ ಮನೆಯೆಲ್ಲವೂ ವಿಚಾರರಶ್ಮಿಗೆ ಕರಗಿ ಹೋಗುವದು.

ಇವೇ ಮೊದಲಾದ ಯುಕ್ತಿಗಳಿಂದ ಮಾಯಾವಾದವನ್ನು ಖಂಡಿಸಿ

"ದ್ವಾವಿಮೌಪುರುಷೌ ಲೋಕೇ "............ಉತ್ತಮಃ ಪುರುಷಸ್ತ್ವನ್ಯಃ

ಮುಂತಾದ ಗೀತಾವಚನ ಪ್ರಮಾಣಗಳಿಂದಲೂ ಸೂತ್ರವಾಕ್ಯಗಳಿಂದಲೂ ಶ್ರೀ ಹರಿಯೇ ಸರ್ವೋತ್ತಮ, ಸರ್ವಗುಣಪೂರ್ಣ, ಜೀವಜಡಾತ್ಮಕವಾದ ಪ್ರಪಂಚ ವೆಲ್ಲವೂ ಸತ್ಯ ಪರಮಾತ್ಮನಿಂದ ಅತ್ಯಂತ ಭಿನ್ನ, ಅವನ ಅಧೀನ ಎಂದು ಮುಂತಾಗಿ ಸಪ್ರಮಾಣವಾಗಿ ಪ್ರಸ್ಥಾಪಿಸಿದ್ದಾರೆ.

## ೫. ಉಪಾಧಿಖಂಡನ

ಅದ್ವೈತ ಮತದಲ್ಲಿ ಜೀವಬ್ರಹ್ಮೈಕ್ಯವೇ ಶಾಸ್ತ್ರಾರ್ಥ. ಆದರೆ ಸರ್ವಜ್ಞತ್ವಾದಿ ಗುಣವಿಶಿಷ್ಟನಾದ ಬ್ರಹ್ಮನಿಗೂ ಅಲ್ಪಜ್ಞತ್ವ ಪಾರತಂತ್ರ್ಯ ದುಃಖಾದಿಗಳಿಂದ ಒಡಗೂಡಿದ ಜೀವನಿಗೂ ಐಕ್ಯವು ಕೂಡುವದೆಂತು? ಆದಕ್ಕಾಗಿ ಪರಬ್ರಹ್ಮನ ಗುಣಪೂರ್ಣತ್ವವು ಸ್ವಾಭಾವಿಕವಲ್ಲ, ಔಪಾಧಿಕ, ಮಿಥ್ಯಾ ಎಂದು ಹೇಳಬೇಕು. ಜೀವನ ಅಲ್ಪಜ್ಞತ್ವಾದಿಗಳೂ ಔಪಾಧಿಕ, ಈ ಅಜ್ಞಾನೋಪಾಧಿಯಿಂದ ಪರಮಾತ ನಲ್ಲಿ ಗುಣಪೂರ್ಣತ್ವವು ತೋರುತ್ತದೆ. ಸ್ಫಟಿಕಮಣಿಯ ಮೇಲೆ ದಾಸಾಳದ ಹೂವ ನ್ನಿರಿಸಿದರೆ ಶುದ್ಧ ಸ್ಫಟಿಕವೂ ಕೆಂಪುಕೆಂಪಾಗಿಯೇ ಕಾಣುವದಿಲ್ಲವೇ! ಎಂದೂ ಇಲ್ಲದ ಕೆಂಬಣ್ಣ ಬಿಳಿ ಸ್ಫಟಿಕದಲ್ಲಿ ಜಪಾಕುಸುಮರೂಪವಾದ ಉಪಾಧಿಯಿಂದ ತೋರುವಂತೆ ಅಜ್ಞಾನರೂಪ, ಉಪಾಧಿಯಿಂದ ಬ್ರಹ್ಮನಲ್ಲಿಯೂ ಮಿಥ್ಯಾಭೂತವಾದ ಸರ್ವಜ್ಞತ್ವ, ಗುಣಪೂರ್ಣತ್ವಾದಿಗಳು ತೋರುತ್ತವೆ. ಈ ಉಪಾಧಿಮೂಲಕವಾಗಿ ಜೀವ ಬ್ರಹ್ಮರಲ್ಲಿ ಭೇದ ಉಂಟಾಗಿರುತ್ತದೆ. ಈ ಔಪಾಧಿಕ ಭೇದವನ್ನು ನಿರಾಕರಿಸಿ ಸ್ವಾಭಾವಿಕವಾದ ಜೀವಬ್ರಹ್ಮರ ಅಭೇದವನ್ನು ತಿಳಿಸಿಕೊಡುವದೇ ಸರ್ವಶಾಸ್ತ್ರಗಳ ಪ್ರಧಾನ ಉದ್ದೇಶವಾಗಿದೆ ಎಂಬ ಅದ್ವೈತಿಗಳ ವಾದವನ್ನು ಈ ಉಪಾಧಿಖಂಡನ ಗ್ರಂಥದಲ್ಲಿ ಗುರುಮಧ್ವರು ಅಕ್ಷರಶಃ ಖಂಡಿಸಿ ಹಾಕಿದ್ದಾರೆ.

ಹಿಂದೆ ಮಾಯಾವಾದ ಖಂಡನದಲ್ಲಿ ಅದ್ವೈತ ಮತದಲ್ಲಿ ಅಜ್ಞಾನವೇ ಕೂಡುವದಿಲ್ಲ. ಎಂದು ಸಿದ್ಧಮಾಡಲಾಗಿದೆ. ಇಲ್ಲಿ ಸರ್ವಜ್ಞನಾದ ಆ ಪರಬ್ರಹ್ಮನಿಗೆ ಉಪಾಧಿ ಸಂಬಂಧವು ಆಗಲಿಕ್ಕೇ ಸಾಧ್ಯವಿಲ್ಲ ಎಂದು.

"ಅಜ್ಞತಾಖಿಲ ಸಂವೇತ್ತುರ್ಘಟತೇ ನ ಕುತಶ್ಚನ"

ಎಂಬ ವಾಕ್ಯದಿಂದ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ಜೀವಬ್ರಹ್ಮಭೇದವು ಔಪಾಧಿಕ ಅಂದರೆ ಉಪಾಧಿ ಮೂಲಕ ಎಂದಾದರೆ ಆ ಉಪಾಧಿಯು ಸ್ವಾಭಾವಿಕವೋ ಕಲ್ಪಿತವೋ ? ಸ್ವಾಭಾವಿಕವಾದರೆ ಜೀವಬ್ರಹ್ಮ ಭೇದವು ಸತ್ಯವೆಂದು ಸಿದ್ಧವಾಯಿತು. ಕಲ್ಪಿತ ಅರ್ಥಾತ್ ಅಜ್ಞಾನಕಾರ್ಯ ಎಂದರೆ ಈ ಅಜ್ಞಾನ ಕೂಡುವದಿಲ್ಲವೆಂದು ಈ ಮೊದಲೇ ಖಂಡಿಸಲಾಗಿದೆ. ಮತ್ತು ಉಪಾಧಿಯು ವಸ್ತುತಸ್ತು ಪೂರ್ವದಲ್ಲಿ ಇದ್ದ ಭೇದವನ್ನು ವ್ಯಕ್ತಗೊಳಿಸುವದೇ ಹೊರತು ಇರದೇ ಇದ್ದ ಹೊಸ ಭೇದ.ವನ್ನು ಹುಟ್ಟಿಸುವದಿಲ್ಲ.

"ವಿದ್ಯ ಮಾನಸ್ಯ ಭೇದಸ್ಯ । ಜ್ಞಾಪಕೋನ್ನೈವಕಾರಕಃ ।
ಉಪಾಧಿ ದೃಷ್ಟ ಪೂರ್ವಃ ॥"

ಉಪಾಧಿಯಿಂದಲೇ ಜೀವಭೇದ ಹುಟ್ಟುತ್ತದೆ ಎಂದು ಹೇಳಿದರೆ ವಸ್ತುತಸ್ತು ಅಭೇದವೇ ಇದ್ದುದರಿಂದ ಚೈತ್ರನ ಸುಖದುಃಖಾನುಭವ ಮೈತ್ರನಿಗೂ ಬರಬೇಕಾದೀತು. ಭೋಗಾನುಸಂಧಾತೃವಾದ ಜೀವ ಒಂದೇ ಅಲ್ಲವೇ ! ಹೀಗೆ ಅನೇಕ ದೋಷಗಳನ್ನು ಹೇಳಿ ಉಪಾಧಿಯಿಂದ ಭೇದವನ್ನು ಸಂಗಮನ ಮಾಡಿ ಜೀವ ಬ್ರಹ್ಮರ ಐಕ್ಯವನ್ನು ಶಾಸ್ತ್ರಾರ್ಥ ಎಂದು ಹೇಳಲಿಕ್ಕೆ ಎಂದಿಗೂ ಬರಲಾರದು ಎಂದು ನಿರ್ಣಯಿಸಿದ್ದಾರೆ.

ಜೀವೇಶ ಭೇದವು ಯಥಾರ್ಥ ಸತ್ಯವಾದದ್ದೆಂಬಲ್ಲಿ ಪ್ರತ್ಯಕ್ಷ ಅನುಮಾನ ಆಗಮ ಮೂರೂ ಪ್ರಮಾಣಗಳು ಒಮ್ಮತದ ಸಮ್ಮತಿಯನ್ನು ಸಾರುತ್ತಲಿವೆ. ಹೀಗೆ ಸರ್ವಪ್ರಮಾಣಸಿದ್ಧವಾದ ಭೇದವಾದವನ್ನು ಯಾರಿಗೂ ಅಲ್ಲಗಳೆಯಲು ಸಾಧ್ಯವಿಲ್ಲ. ಎಂದು ಸೋಪಪತ್ತಿಕವಾಗಿ ಸಿದ್ಧಮಾಡಿ ಉಪಾಧಿ ಮೂಲಕ ಭೇದಸಂಗಮನ ಮಾಡುವ ಮಾಯಾವಾದಿಗಳ ಉಕ್ತಿಯುಕ್ತಿಗಳನ್ನು ಚೆನ್ನಾಗಿ ಇಲ್ಲಿ ಆಚಾರ್ಯರು ಖಂಡಿಸಿದ್ದಾರೆ.

## ೬. ತತ್ತ್ವವಿವೇಕ

ಈ ಗ್ರಂಥದಲ್ಲಿ ಶ್ರೀ ಮಧ್ವಾಚಾರ್ಯರು ದ್ವೈವ ಸಿದ್ಧಾಂತಕ್ಕೆ ಅನುಸಾರವಾಗಿ ಪರಾಪರ ತತ್ತ್ವಗಳನ್ನು ವಿಭಜಿಸಿ ವಿವರವಾಗಿ ಹೇಳಿದ್ದಾರೆ.

ಆಚಾರ್ಯರ ದೃಷ್ಟಿಯಲ್ಲಿ ಮುಖ್ಯತತ್ತ್ವ ಎಂದರೆ ಸರ್ವತಂತ್ರಸ್ವತಂತ್ರವಾದ ಬ್ರಹ್ಮತತ್ತ್ವ. ಉಳಿದೆಲ್ಲವೂ ಅಸ್ವತಂತ್ರ. ಈ ಅಸ್ವತಂತ್ರತತ್ತ್ವವೂ ಯಾವಾಗಲೂ ಸ್ವತಂತ್ರ ತತ್ತ್ವಕ್ಕೆ ಅಧೀನ. ತನ್ನಿಯಮ್ಯ. ಮಧ್ವರ ದೃಷ್ಟಿಯಲ್ಲಿ ಜಗತ್ತಿನಲ್ಲಿ ಎರಡೇ ತತ್ತ್ವಗಳು. ಒಂದು ಸ್ವತಂತ್ರ. ಎರಡು ಅಸ್ವತಂತ್ರ. ಆದಕ್ಕಾಗಿಯೇ ಅವರ ಸಿದ್ಧಾಂತಕ್ಕೆ ದ್ವೈತ ಸಿದ್ಧಾಂತ ಎಂದು ಹೆಸರು.

"ಸ್ವತಂತ್ರಮಸ್ವತಂತ್ರಂಚ ದ್ವಿವಿಧಂ ತತ್ತ್ವಮಿಷ್ಯತೇ"

ಆದರೆ ಇಲ್ಲಿ ಅಸ್ವತಂತ್ರ ಎಂದರೆ ಮಿಥ್ಯಾ ಎಂದು ಮಾತ್ರ ಅರ್ಥವಲ್ಲ. ಅಸ್ವತಂತ್ರವಾದರೂ ಅಸತ್ಯವಲ್ಲ. ಅಸ್ವತಂತ್ರ ತತ್ತ್ವವಾದರೂ ಶ್ರೀಹರಿಯಂತೆ ಸತ್ಯವಾಗಿದೆ.

ಆ ಅಸ್ವತಂತ್ರ ಸೃಷ್ಟಿಯಲ್ಲಿಯೂ ವೈವಿಧ್ಯವಿದೆ. ತಾರತಮ್ಯವಿದೆ. ಅಸ್ವತಂತ್ರ ತತ್ತ್ವವು ಭಾವ, ಅಭಾವ ಎಂದು ಇಬ್ಬಗೆಯಾಗಿದೆ. ಅಭಾವವು ಮತ್ತೆ ಪ್ರಾಗಭಾವ ಪ್ರಧ್ವಂಸಾಭಾವ, ಸದಾಭಾವ ಎಂದು ಮೂರು ಬಗೆಯಾಗಿದೆ.

ಭಾವ ಪ್ರಪಂಚವೂ ಕೂಡ ಚೇತನ, ಅಚೇತನ ಎಂದೂ ಇಬ್ಬಗೆಯಾಗಿದ್ದು ಈ ಚೇತನಾಚೇತನಾತ್ಮಕವಾದ ಸೃಷ್ಟಿಯೂ ಮುಂದೆ ಬಹು ಪ್ರಕಾರ ಭಿನ್ನವಾಗಿದೆ.

ಚೇತನರಲ್ಲಿ ಮುಕ್ತಿ ಯೋಗ್ಯ, ತಮೋ ಯೋಗ್ಯ, ನಿತ್ಯ ಸಂಸಾರಿಗಳೆಂದು ಮೂರು ಪ್ರಕಾರಗಳಿದ್ದು ಮೋಕ್ಷಾಪೇಕ್ಷಿಗಳು ಶ್ರೀಹರಿಯನ್ನು ತಿಳಿದು ಭಜಿಸಿ ಅವನ ಅನುಗ್ರಹದಿಂದ ಪರಗತಿಯನ್ನು ಹೊಂದಬೇಕು.

## ೭. ತತ್ವ ಸಂಖ್ಯಾನ

ಸ್ವತಂತ್ರ, ಅಸ್ವತಂತ್ರ, ಭಾವಾಭಾವ, ಚೇತನಾಚೇತನ, ನಿತ್ಯಾನಿತ್ಯ, ಸೃಷ್ಟಾ ಸೃಷ್ಟ, ಮುಕ್ತಾಮುಕ್ತ ಮುಂತಾಗಿ ಬಗೆ-ಬಗೆಯ ಭೇದಭಾವ ಭಿನ್ನವಾದ ಈ ಪ್ರಪಂಚಕ್ಕೆ ಒಡೆಯ ಶ್ರೀಹರಿ. ಅವನಿಂದಲೇ ಈ ಜಗತ್ತಿಗೆ ಸೃಷ್ಟಿ-ಸ್ಥಿತಿ-ಸಂಹಾರಾದಿಗಳು.

ಸೃಷ್ಟಿಃಸ್ಥಿತಿಃಸಂಹೃತಿಶ್ಚನಿಯಮೋಽಜ್ಞಾನ ಬೋಧನೇ |
ಬಂಧೋ ಮೋಕ್ಷಃ ಸುಖಂ ದುಃಖಂ ಆವೃತ್ತಿ ಜ್ಯೋರ್ತಿರೇವಚ
ವಿಷ್ಣುನಾಸ್ಯ ಸಮಸ್ತ್ಯಸ್ಯ ಸಮಾಸ ವ್ಯಾಸಯೋಗತಃ ||

ಸರ್ವ ಪದಾರ್ಥಗಳ ತತ್ತದ್ ವ್ಯಾಪಾರಗಳಲ್ಲಿ ಮುಖ್ಯ ಪ್ರೇರಕನೂ, ಸ್ಥಿತಿ ಕಾರಕನೂ ಶ್ರೀ ಹರಿಯೇ ಆಗಿದ್ದಾನೆ. ಅನಿತ್ಯ ಹಾಗೂ ನಿತ್ಯಾನಿತ್ಯ ಪದಾರ್ಥಗಳಿಗೆ ಸೃಷ್ಟಿ ಸಂಹಾರಗಳು ಆ ಈಶನಿಂದಲೇ ಸಂಭವಿಸುತ್ತವೆ. ದುಃಖ ಸ್ಪೃಷ್ಟ, ಚೇತನಗಳಿಗೆ ಭಾವರೂಪ ಅಜ್ಞಾನವನ್ನೂ, ಸಕಲಾ ಚೇತನಗಳಿಗೆ ಜ್ಞಾನಾಭಾವವನ್ನು ಚೇತನರಿಗೆ ಬೋಧನವನ್ನೂ, ಪ್ರಾಪ್ತತಮಸ್ಕರಿಗೆ ದುಃಖವನ್ನೂ, ಉಳಿದವರಿಗೆ ಸುಖವನ್ನೂ ಕೊಡುವ ಮಹಾಪ್ರಭು ಶ್ರೀ ವಿಷ್ಣುವೇ. ಸರ್ವಪ್ರಾಣಿಗಳ ಸತ್ತಾ ಪ್ರವೃತ್ತಿಗಳೆಲ್ಲವು ಅವನ ಅಧೀನವೇ. ಹೀಗೆ ಈ ಚರಾಚರಾತ್ಮಕವಾದ ಪ್ರಪಂಚಕ್ಕೆಲ್ಲ ನಿಯಾಮಕನೂ, ನಿಯೋಜಕನೂ ಶ್ರೀ ಹರಿಯೇ ಎಂದು ತಿಳಿದು ಉಪಾಸನೆ ಮಾಡಿದರೆ ಅವನ ಪ್ರಸಾದವಾದ ಮೋಕ್ಷಪ್ರಾಪ್ತಿಯಾಗುವದು. ಎಂದು ಆಚಾರ್ಯರು ಈ ಚಿಕ್ಕ ಪ್ರಬಂಧದಲ್ಲಿ ನಿರೂಪಣಗೈದಿದ್ದಾರೆ.

## ೮. ತತ್ತ್ವೋದ್ಯೋತ

ಸರ್ವತ್ರಾಖಿಲ ಸಚ್ಛಕ್ತಿಃ ಸ್ವತಂತ್ರೋSಶೇಷ ದರ್ಶನಃ।
ನಿತ್ಯಾSತಾದೃಶ ಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ ॥

ಈ ಪ್ರಪಂಚದಲ್ಲಿ ರಮಾಪತಿಯಾದ ನಾರಾಯಣನೊಬ್ಬನೇ ಸರ್ವತಂತ್ರ ಸ್ವತಂತ್ರ. ಸರ್ವಜ್ಞ. ಸರ್ವಕರ್ತ. ಸರ್ವಸಮರ್ಥ. ಅವನ ಹೊರತು ಉಳಿದೆಲ್ಲ ಜೀವರೂ ಅಸ್ವತಂತ್ರರು. ರುದ್ರಾದಿ ದೇವತೆಗಳೂ ಕೂಡ ಅಸ್ವತಂತ್ರರು. ಅಲ್ಪ ಜ್ಞಾನಿಗಳು. ಅಲ್ಪಶಕ್ತಿವುಳ್ಳವರು. ಈ ಎಲ್ಲ ಅಸ್ವತಂತ್ರ ಜಗತ್ತಿಗೂ, ಜೀವರಾಶಿಗೂ, ಸರ್ವಾವಸ್ಥೆಯಲ್ಲಿಯೂ ಆ ಪರಮಾತ್ಮನೇ ನಿಯಾಮಕ. ಸಂಸಾರಾವಸ್ಥೆಯಲ್ಲಿಯೂ ಜೀವರು ಈಶನಿಂದ ಭಿನ್ನರು ಮತ್ತು ನಿಯಮ್ಯರು. ಮುಕ್ತಾವಸ್ಥೆಯಲ್ಲಿಯೂ ಜೀವರಿಗೆ ಭಗವಂತನೇ ನಿಯಾಮಕ. ಜೀವರು ಎಂದಾದರೂ ಆ ಪರಚೇತನದ ಅಧೀನರು. ದಾಸರು.

ಇದು ಅದ್ವೈತಿಗಳಿಗೆ ಅಪಥ್ಯ. ಸಂಸಾರಾವಸ್ಥೆಯಲ್ಲಿ ಪ್ರತ್ಯಕ್ಷಾದಿ ಪ್ರಮಾಣ ಗಳಿಂದ ಈಶ್ವರನು ಈ ಜೀವಜಡಾತ್ಮಕ ಪ್ರಪಂಚಕ್ಕೆ ನಿಯಾಮಕನಾಗಿರಲಿ. ಯಾಕಂದರೆ ಇಲ್ಲಿ ಜೀವನಲ್ಲಿ ಅಲ್ಪಜ್ಞತ್ವಾದಿಗಳೂ ಪರಮಾತ್ಮನಲ್ಲಿ ಸರ್ವಜ್ಞತ್ವಾದಿ ಗಳೂ ಅನುಭವಸಿದ್ಧವಾಗಿರುತ್ತವೆ. ಭೇದ ಪ್ರತ್ಯಕ್ಷಕ್ಕೆ ಪ್ರತಿಯೋಗಿ, ಅನುಯೋಗಿ ಎರಡೂ ಪ್ರತ್ಯಕ್ಷ ಗೋಚರವಾಗಿರಲೇಬೇಕೆಂದು ನಿಯಮವೇನಿಲ್ಲ. ಅನುಯೋಗಿಯ ಪ್ರತ್ಯಕ್ಷವಿದ್ದು, ಪ್ರತಿಯೋಗಿಯ ಪ್ರತೀತಿ ಇದ್ದರೂ ಸಾಕು. ಅನುಯೋಗಿಯಾದ 'ಅಹಂ'ದ ಪ್ರತ್ಯಕ್ಷವು ಸಾಕ್ಷಿಯಿಂದ ಸಿದ್ಧವಾಗಿರುತ್ತದೆ. ಪ್ರತಿಯೋಗಿಯಾದ ಪರ ಮಾತ್ಮನು "ಯಃ ಸರ್ವಜ್ಞಃ ಸ ಸರ್ವವಿತ್" ಮುಂತಾದ ವೇದ ವಚನಗಳಿಂದ ಜ್ಞಾತನಾಗಿದ್ದಾನೆ. ಹೀಗೆ "ನಾ ಹಂ ಸರ್ವಜ್ಞಃ" "ಅಹಂ ಅಲ್ಪಜ್ಞಃ" ಮುಂತಾದ ಅನುಭವಗಳಿಂದ ಜೀವ–ಪರಮಾತ್ಮರಲ್ಲಿ ಅಲ್ಪಜ್ಞತ್ವ ಸರ್ವಜ್ಞತ್ವಾದಿ ವಿರುದ್ಧ ಧರ್ಮ ಗಳು ಸ್ಪಷ್ಟವಾಗಿ ಪ್ರತೀತವಾಗುವವರಿಂದ ಇಲ್ಲಿ ಜೀವ ಪರಮಾತ್ಮರಲ್ಲಿ ಭೇದವಿದೆ ಎಂದು ಒಪ್ಪದೇ ಗತ್ಯಂತರವಿಲ್ಲ.

ಆದರೆ ಮೋಕ್ಷದಲ್ಲಿ ಈ ತೊಂದರೆ ಇಲ್ಲ. ಆದುದರಿಂದ ಅಲ್ಲಿ ಭೇದವೂ ಇಲ್ಲ. ನಿಯಮ್ಯ ನಿಯಾಮಕ ಭಾವವೂ ಇಲ್ಲ. ಯಾಕಂದರೆ ಆತ್ಮ ಭೇದವು ಅಜ್ಞಾನ ಮೂಲಕ. ಮುಕ್ತ್ಯವಸ್ಥೆಯಲ್ಲಿ ಭೇದಕಾರಕವಾದ ಆ ಅಜ್ಞಾನವೇ ನಿವೃತ್ತವಾದುದ ರಿಂದ ತತ್ಕಾರ್ಯವಾದ ಆತ್ಮ ಭೇದವೂ ತಾನಾಗಿ ಮಾಯವಾಗಿ ಜೀವೇಶ್ವರ ಐಕ್ಯವು ಅಲ್ಲಿ ತಾನೇ ತಾನಾಗಿ ವಿಜೃಂಭಿಸುತ್ತದೆ."

ಅದ್ವೈತಗ ಈ ಪೂರ್ವಪಕ್ಷವನ್ನು ತತ್ತ್ವೋದ್ಯೋತದಲ್ಲಿ ಆಚಾರ್ಯರು ಖಡಾ ಖಂಡಿತವಾಗಿ ಖಂಡಿಸಿದ್ದಾರೆ. ಜೀವೇಶ ಭೇದವು ತಾತ್ಕಾಲಿಕವಲ್ಲ, ಶಾಶ್ವತ. ಔಪಾಧಿಕ ವಲ್ಲ, ಸ್ವಾಭಾವಿಕ. ಅದು ಸತ್ಯವಾದಂತೆ ನಿತ್ಯವೂ ಆಗಿದೆ. ಜೀವೇಶ್ವರರಲ್ಲಿ ತಾರತಮ್ಯ, ಭೇದ, ನಿಯಮ್ಯ ನಿಯಾಮಕ ಭಾವ ಇವು ಶಾಶ್ವತವಾಗಿರುತ್ತವೆ ಎಂಬುದು ಸರ್ವ ಪ್ರಮಾಣಸಿದ್ಧವಾದ ನಿರ್ದುಷ್ಟವಾದ ಪ್ರಮೇಯವಾಗಿದೆ ಎಂದು ಈ ತತ್ತ್ವೋದ್ಯೋತ ಗ್ರಂಥದಲ್ಲಿ ಆಚಾರ್ಯರು ಪ್ರತಿಪಾದಿಸಿದ್ದಾರೆ.

ಅಜ್ಞಾನಾವಸ್ಥೆಯಲ್ಲಿ ಭೇದಕ್ಕೆ ನಿಮಿತ್ತವಾದ ಅಜ್ಞಾನವು ಮುಕ್ತಿಯಲ್ಲಿ ಸ್ವಯಂ ಅಪಗತವಾಗುವದರಿಂದ ನೈಮಿತ್ತಿಕವಾದ ಭೇದವೂ ನಷ್ಟವಾಗುವದೆಂಬ ಅದ್ವೈತರ ವಾದವನ್ನು ಖಂಡಿಸಿ ಜೀವೇಶ್ವರ ಭೇದವು ಶಾಶ್ವತ ಸತ್ಯ ಎಂದು ಸಾಧಿಸಲಿಕ್ಕಾಗಿ ಆಚಾರ್ಯರು ನಿರವಕಾಶವಾದ ಯುಕ್ತಿ ನಿರಪವಾದ ಉಕ್ತಿಗಳನ್ನು ಈ ಗ್ರಂಥದಲ್ಲಿ ಹೇಳಿದ್ದಾರೆ.

" ವಿಮತೋಭಿನ್ನಃ ಮುಕ್ತತ್ವಾತ್‌ಯದಿಥ್ಥಾ ತತ್ತಥಾ ಯಥಾ ಸಂಪ್ರತಿಪನ್ನಃ "

ಎಂಬ ಅನುಮಾನದಿಂದ ಭೇದವನ್ನು ಸಾಧಿಸಿದ್ದಾರೆ. ಮತ್ತು ಈ ನಿತ್ಯ ಸತ್ಯ ವಾದ ಜೀವೇಶ್ವರ ಭೇದಕ್ಕೆ ಸಾಧಕವಾಗಿ—

" ಇದಂ ಜ್ಞಾನ ಮುಪಾಶ್ರಿತ್ಯಮಮ ಸಾಧರ್ಮ್ಯ ಮಾಗತಾಃ "

ಮುಂತಾದ ಅನೇಕ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಈ ಅನುಮಾನಕ್ಕೆ ಅದ್ವೈತಿಗಳು ಕೊಡಬಹುದಾದ ಎಲ್ಲ ದೋಷಗಳನ್ನೂ ಅನುವಾದಿಸಿ ಕೊನೆಗೆ ಎಲ್ಲವನ್ನು ಖಂಡಿಸಿ ಮುಕ್ತಿಯಲ್ಲಿ ಭೇದವನ್ನು ವ್ಯವಸ್ಥಾಪಿಸಿದ್ದಾರೆ. ಅದರಂತೆ ಪ್ರತ್ಯಕ್ಷ ಸಿದ್ಧವಾದ ಈ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಯಾವ ಅನುಮಾನ ಆಗಮಗಳೂ ಸಾಧಿಸಲಾರವು. "ಅಹಂ ಬ್ರಹ್ಮಾಸ್ಮಿ" 'ತತ್ವಮಸಿ' ವಾಕ್ಯಗಳಿಂದ ಆಪಾತತಃ ತೋರಬಹುದಾದ ಅಭೇದವು ಪ್ರತ್ಯಕ್ಷ ಭೇದಬಾಧಿತವಾದದ್ದರಿಂದ ನಾನು ಬ್ರಹ್ಮ ಸದೃಶನಿದ್ದೇನೆ ಎಂದೇ ಅರ್ಥ ಮಾಡಬೇಕು ಎಂದು ನಿರೂಪಿಸಿದ್ದಾರೆ.

ಶಂಕರಾಚಾರ್ಯರು ತಮಗೆ ಸಾಧಕವೆಂದು ಉದಾಹರಿಸಿದ ನಾಸದೀಯ ಸೂಕ್ತಕ್ಕೆ ಅರ್ಥಾಂತರವನ್ನು ಹೇಳಿ, ದೃಶ್ಯತ್ವಾನುಮಾನಕ್ಕೂ ಅನೇಕ ದೋಷಗಳನ್ನು ತಿಳಿಸಿ ಮಾಯಾವಾದಕ್ಕೂ ಬೌದ್ಧರ ಶೂನ್ಯವಾದಕ್ಕೂ ಏನೂ ವೈಲಕ್ಷಣ್ಯವೇ ಇಲ್ಲ ಎಂದು ನಿರೂಪಿಸಿದ್ದಾರೆ. ಎರಡೂ ಮತಗಳ ತಾತ್ವಿಕ ತುಲನೆಯನ್ನು ಇಲ್ಲಿ ಮಾಡಿದ್ದು ಮಾರ್ಮಿಕವಾಗಿದೆ.

" ನ ಚ ಶೂನ್ಯವಾದಿನಃ ಸಕಾಶಾದ್ ವೈಲಕ್ಷಣ್ಯಂ ಮಾಯಾವಾದಿನಃ ।
ವ್ಯಾವಹಾರಿಕ ಸತ್ಯಸ್ಯ ತೇನಾಪ್ಯಂಗೀಕ್ರಿಯಮಾಣತ್ವಾತ್ ॥
ಸತ್ಯಂ ತು ದ್ವಿವಿಧ ಪ್ರೋಕ್ತಂ ಸಾಂ ವೃತಂ ಪಾರಮಾರ್ಥಿಕಂ ।
ಸಾಂ ವೃತಂ ವ್ಯಾವಹಾರ್ಯಂ ಸ್ಯಾತ್ ನಿವೃತ್ತಂ ಪಾರಮಾರ್ಥಿಕಂ ॥ "

ಶ್ರೀ ಮಧ್ವಾಚಾರ್ಯರಗಿಂತ ಪ್ರಾಚೀನರಾದ— ಭಾಸ್ಕರ, ಪಾರ್ಥಸಾರಥಿ ಮಿಶ್ರ, ಯಾದವಪ್ರಕಾಶ, ರಾಮಾನುಜ, ಮುಂತಾದ ಅನೇಕ ದಾರ್ಶನಿಕರು ಮಾಯಾವಾದ, ಶೂನ್ಯವಾದಗಳ ಸಾದೃಶ್ಯವನ್ನು ಗುರುತಿಸಿದ್ದರೂ ಅವುಗಳನ್ನು ಶಾಸ್ತ್ರೀಯ ಪಾರಿಭಾಷಿಕ ಚೌಕಟ್ಟಿನಲ್ಲಿಟ್ಟು, ತುಲನಾತ್ಮಕವಾಗಿ ಆಲೋಚಿಸಿ, ಅವೆರಡರ ಏಕರೂಪತೆಯನ್ನು ಅದ್ವೈತರಿಗೂ ಒಪ್ಪಿಗೆಯಾಗುವಂತೆ ಇರಿಸಿದ ಶ್ರೇಯಸ್ಸು ಶ್ರೀಮದಾಚಾರ್ಯರಿಗೇ ಮೀಸಲು. ಅವರ ತತ್ತ್ವೋದ್ದ್ಯೋತಕ್ಕೇ ಮುಡಿಪು.

ಹೀಗೆ ಬಗೆ–ಬಗೆಯ ಪ್ರಕಾರಗಳಿಂದ ಅದ್ವೈತಿಗಳ ಮಿಥ್ಯಾವಾದವನ್ನು ಖಂಡಿಸಿ ಆಚಾರ್ಯರು ತಮ್ಮ ಭೇದವಾದ ಹಾಗೂ ಸತ್ಸತ್ಯಸಿದ್ಧಾಂತಕ್ಕೆ ಉಪಷ್ಟಂಭಕವಾಗಿ ಅನೇಕಾನೇಕ ಪ್ರಮಾಣ ವಚನಗಳನ್ನು ಉದಾಹರಿಸಿ ಸತ್ಯಭಿನ್ನವಾದ ಈ ಜೀವ ಜಡಾತ್ಮಕವಾದ ಪ್ರಪಂಚಕ್ಕೆ ಮುಕ್ತಾಮುಕ್ತ ಸರ್ವಾವಸ್ಥೆಯಲ್ಲಿಯೂ ತದ್ವಿಲಕ್ಷಣನಾದ ಪರಮಾತ್ಮನೇ ನಿಯಾಮಕನಾಗಿದ್ದಾನೆ ಎಂದು ಸಿದ್ಧಾಂತಿಸಿದ್ದಾರೆ.

ಇದರಲ್ಲಿ ಕೊನೆಗೆ ಏಕಜೀವ ವಾದವನ್ನು ಖಂಡಿಸಿದ್ದಾರೆ. ಅನಂತ ಜೀವರಾಶಿ, ಅವರಲ್ಲಿ ಪರಸ್ಪರ ಸ್ವಾಭಾವಿಕ ಭೇದ, ಮತ್ತು ಭಗವದಧೀನತ್ವ ಇವುಗಳನ್ನು ಎಲ್ಲರೂ ಒಪ್ಪಲೇಬೇಕಾಗುವದೆಂದು ಪ್ರಮಾಣೋದಾಹರಣಪೂರ್ವಕವಾಗಿ ವ್ಯವಸ್ಥಾಪಿಸಿದ್ದಾರೆ.

ಆಚಾರ್ಯರು ಪುಂಡರೀಕಪುರಿ ಮತ್ತು ಪದ್ಮತೀರ್ಥರ ಅದ್ವೈತ ವಾದಗಳನ್ನು ಖಂಡಿಸಲಿಕ್ಕಾಗಿ ಈ ತತ್ತ್ವೋದ್ದ್ಯೋತವನ್ನು ಬರೆದು ದ್ವೈತ ಸಿದ್ಧಾಂತವನ್ನು ಶಾಸ್ತ್ರದ ಭದ್ರ ಬುನಾದಿಯ ಮೇಲೆ ಪ್ರತಿಷ್ಠಾಪಿಸಿದರೆಂದು ಜಯತೀರ್ಥರು ಹೇಳಿದ್ದಾರೆ.

## ೯. ವಿಷ್ಣು ತತ್ವ ನಿರ್ಣಯ

ಇದು ಮಧ್ವಾಚಾರ್ಯರ ದಶಪ್ರಕರಣಗಳಲ್ಲಿ ಎಲ್ಲಕ್ಕಿಂತ ದೊಡ್ಡದಾಗಿದೆ. ಇದರಲ್ಲಿ ಅದ್ವೈತವಾದವನ್ನು ಮಾತ್ರವಲ್ಲದೇ ಬೌದ್ಧ, ಚಾರ್ವಾಕ, ವೈಶೇಷಿಕ ಜೈನ, ಪ್ರಾಭಾಕರ ಮುಂತಾದ ಮತಗಳನ್ನು ಖಂಡಿಸಿ ವೈದಿಕ ಸಿದ್ಧಾಂತವನ್ನು ನಿಜ ರೂಪದಲ್ಲಿ ಮಂಡಿಸಿದ್ದಾರೆ.

ಒಂದು ದೃಷ್ಟಿಯಿಂದ ತತ್ವ ನಿರ್ಣಯ ಗ್ರಂಥವು ವೇದ ಮಾರ್ಗಾನುಯಾಯಿ ಗಳೆಲ್ಲರೂ ಅವಶ್ಯವಾಗಿ ಓದಲೇಬೇಕಾದ ಅತ್ಯುಪಯುಕ್ತವಾದ ಗ್ರಂಥವಾಗಿದೆ. ಇದಕ್ಕೆ ಶ್ರೀ ಜಯತೀರ್ಥ ಶ್ರೀಮಚ್ಚರಣರು ಬರೆದ ಟೀಕೆಯಿಂದ ಇದರ ಗೌರವವು ಗರಿಮಾತಿಶಯದ ಚರಮಸೀಮೆಯನ್ನೇ ತಲುಪಿದೆ. "ಅಣುಸುಧಾ" ಎಂದು ಇದರ ಟೀಕೆಗೆ ಹೆಸರು ಬರಲು ಮೂಲ ಇದರಲ್ಲಿಯ ವಿಷಯ ವೈವಿಧ್ಯ, ವಿವೇಚನೆಯ ಪ್ರೌಢಿಮೆಗಳೇ ಕಾರಣವಾಗಿವೆ.

ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳನ್ನೆಲ್ಲ ಆಚಾರ್ಯರು ಪ್ರಾರಂಭದ ಮಂಗಳ ಪದ್ಯದಲ್ಲಿಯೇ ಸೂಚಿಸಿದ್ದಾರೆ.

> ಸದಾಗಮೈಕ ವಿಜ್ಞೇಯಂ ಸಮತೀತ ಕ್ಷರಾಕ್ಷರಂ ।
> ನಾರಾಯಣಂ ಸದಾ ವಂದೇ ನಿರ್ದೋಷಾಶೇಷ ಸದ್ಗುಣಂ ॥
> ವಿಶೇಷಣಾನಿ ಯಾನೀಹ ಕಥಿತಾನಿ ಸದುಕ್ತಿಭಿಃ ।
> ಸಾಧಯಿಷ್ಯಾಮಿ ತಾನ್ಯೇವ ಕ್ರಮಾತ್ ಸಜ್ಜನಸಂವಿದೇ ॥

ಆಚಾರ್ಯರು ತಾವೇ ಹೇಳಿದಂತೆ ಇಡೀ ಗ್ರಂಥವೆಲ್ಲವೂ ಪ್ರಥಮ ಮಂಗಳಾ ಚರಣ ಪದ್ಯಕ್ಕೆ ವ್ಯಾಖ್ಯಾನ ರೂಪವಾಗಿರುತ್ತದೆ.

ಇದರಲ್ಲಿ ಮೂರು ಪರಿಚ್ಛೇದಗಳಿದ್ದು ಪ್ರಥಮ ಪರಿಚ್ಛೇದದಲ್ಲಿ ನಾರಾಯಣನು ಸದಾಗಮೈಕವೇದ್ಯ ಅಂದರೆ ವೇದಾದಿಗಳಿಂದ ಮಾತ್ರ ತಿಳಿಯಲ್ಪಡತಕ್ಕವನು ಎಂದು ಹೇಳಿದ್ದಾರೆ.

ಎರಡನೇ ಪರಿಚ್ಛೇದದಲ್ಲಿ ನಾರಾಯಣನು ಸಮತೀತಕ್ಷರಾಕ್ಷರನಾಗಿದ್ದಾನೆ ಎಂದು ಸಮರ್ಥಿಸಿದ್ದಾರೆ. ಕ್ಷರ ಎಂದರೆ ಜೀವರಾಶಿ. ಅಕ್ಷರ ಎಂದರೆ ಲಕ್ಷ್ಮೀದೇವಿ ಇವರಿಬ್ಬರಿಗಿಂತಲೂ ಅಧಿಕನಾಗಿ ಇಬ್ಬರಿಗೂ ನಿಯಾಮಕನಾಗಿದ್ದುದರಿಂದ ಶ್ರೀಹರಿಯು ಸಮತೀತಕ್ಷರಾಕ್ಷರ ಎಂಮು ಕರೆಯಿಸಿಕೊಳ್ಳಲ್ಪಡುತ್ತಾನೆ ಎಂದು ಪ್ರಮಾಣದಿಂದ ಯುಕ್ತಿಯಿಂದ ಸಿದ್ಧಮಾಡಿದ್ದಾರೆ.

ಮೂರನೆಯ ಪರಿಚ್ಛೇದದಲ್ಲಿ ಶ್ರೀ ಹರಿ ನಿರ್ದೋಷಾಶೇಷ ಸದ್ಗುಣ. ಅವನಲ್ಲಿ ದೋಷಕ್ಕೆ ಪ್ರಸಕ್ತಿಯೇ ಇಲ್ಲ. ತಾರತಮ್ಯ ಶ್ರೇಣಿಯಲ್ಲಿ ಅತ್ಯುಚ್ಚಮಟ್ಟದಲ್ಲಿ ತಾನೇ ತಾನಾಗಿ ಏಕಮಾತ್ರನಾಗಿ ವಿರಾಜಿಸುವ ಶ್ರೀ ಹರಿಗೆ ನಿರ್ದೋಷತ್ವವೂ ಸಕಲಗುಣ ಪರಿಪೂರ್ಣತ್ವವೂ ಸ್ವತಃ ಸಿದ್ಧವೆಂದು ಸಿದ್ಧ ಮಾಡಿದ್ದಾರೆ.

ಈ ಗ್ರಂಥವು ಜಗನ್ಮಾನ್ಯವಾಗಿದೆ. ಅದಕ್ಕೆ ಕಾರಣ ಇದರಲ್ಲಿ ವೈದಿಕ ಪ್ರಪಂಚದ ಸಮಸ್ಯೆಗಳನ್ನೆಲ್ಲ ಆಚಾರ್ಯರು ಬಹು ಸುಂದರವಾಗಿ ಬಿಡಿಸಿದ್ದಾರೆ. ವರ್ಣನಿತ್ಯತ್ವ, ಈಶ್ವರಾಸ್ತಿತ್ವ, ವೇದಾ ಪೌರುಷೇಯತ್ವ, ಸದಾಗಮ ಪ್ರಾಮಾಣ್ಯ, ವಾಕ್ಯಗಳಿಗೆ ಸಿದ್ಧಾರ್ಥಬೋಧಕತ್ವ ಮುಂತಾದ ವಿಷಯಗಳನ್ನು ಆಚಾರ್ಯರು ವಾದಿ ಪ್ರತಿವಾದಿ ಗಳಿಬ್ಬರಿಗೂ ಮನಂಬುಗುವ ರೀತಿಯಿಂದ ಯುಕ್ತಿ ಯುಕ್ತವಾಗಿ ಇದರಲ್ಲಿ ಪ್ರತಿಪಾದಿ ಸಿದ್ದಾರೆ.

ವೈದಿಕರೆಲ್ಲರ ತಲೆ ತಿನ್ನುವ ವೇದಾಪೌರುಷೇಯತ್ವ ವಿಷಯವನ್ನು ಶ್ರೀಮದಾ ಚಾರ್ಯರಷ್ಟು ಸಮಂಜಸವಾಗಿ, ಯುಕ್ತಿ ಪುರಸ್ಸರವಾಗಿ ಮಾರ್ಮಿಕವಾದ ರೀತಿಯಲ್ಲಿ ಅವರಿಗಿಂತ ಮೊದಲಾಗಲಿ ಅನಂತರವಾಗಲಿ ಯಾರೂ ಸಾಧನ ಮಾಡಿಲ್ಲ, ಮಾಡಲಿಲ್ಲ. ಆದುದರಿಂದಲೇ ಪಂಡಿತಾಚಾರ್ಯರು—

ಏಕಾಕೀ ಕಿಲ ಯಶ್ಚಕ್ರೇ ಪದಂ ಮೌಲಿಷು ವಿದ್ವಿಷಾಂ ।
ತತ್ವನಿರ್ಣಯ ಪಾರ್ಥೋsಯಂ ಕೇನ ನಾಮ ನ ಸೇವ್ಯತೇ ॥

ಶಾಸ್ತ್ರ ಪ್ರಪಂಚದಲ್ಲಿ ಇದೊಂದು ಪಾರ್ಥ. ಎಲ್ಲ ಅಪಾರ್ಥ, ಅನರ್ಥಗಳನ್ನು ಹೊಡೆದು ಹಾಕಿ ಪುರುಷಾರ್ಥವನ್ನು ಸಾಧಿಸಿ ಕೊಡುವ ಮಹಾ ಸದ್ಗ್ರಂಥ ಎಂದು ಮುಂತಾಗಿ ಆ ಹಿರಿಯರು ಬಣ್ಣಿಸಿದ್ದಾರೆ.

ಈ ಗ್ರಂಥದ ವಿಶೇಷವೆಂದರೆ— ಜೈನ, ಬೌದ್ಧ, ಚಾರ್ವಾಕರಂಥ ಶುದ್ಧ ನಾಸ್ತಿಕರೂ ಕೂಡ ಅಪೌರುಷೇಯ ವಾಕ್ಯವನ್ನು ಒಪ್ಪುವಂತೆ ಮಾಡುವದು. ಅಪೌರುಷೇಯ ವಾಕ್ಯವಿಲ್ಲದೇ ಧರ್ಮಾಧರ್ಮ ವ್ಯವಸ್ಥೆಯನ್ನು ಯಾರಿಗೂ ಮಾಡ ಲಿಕ್ಕೆ ಸಾಧ್ಯವಿಲ್ಲ. ವಾಕ್ಯ ಪ್ರಾಮಾಣ್ಯಕ್ಕೆ ಆಪ್ತ ವಾಕ್ಯತ್ವ, ಈಶ್ವರ ಪ್ರಣೀತತ್ವಾದಿ ಗಳು ಅಪ್ರಯೋಜಕ. ಎಂಥ ಆಪ್ತನೇ ಆಗಲಿ, ಸಾಕ್ಷಾದ್ ದೇವರೇ ಆಗಲಿ. ಒಂದೊಂದು ಸಂದರ್ಭದಲ್ಲಿ ಪ್ರತಾರಣೆಯನ್ನು ಮಾಡಲಿಕ್ಕುಂಟು. ಇನ್ನು ಒಂದು ವ್ಯಕ್ತಿಗೆ ದಿವ್ಯ ಜ್ಞಾನಿತ್ವವನ್ನೂ ಅವಂಚಕತೆಯನ್ನೂ ಈ ವಾಕ್ಯಕ್ಕೆ ತತ್ಪ್ರಣೀತತ್ವವನ್ನೂ ಕಲ್ಪಿಸ ಬೇಕು. ಮನಬಂದಂತೆ ಕಲ್ಪನೆಯ ಜಾಲವನ್ನು ನೇಯುತ್ತ ಹೋಗಲು ಏನು ಗಮಕ ! ಇಷ್ಟೆಲ್ಲ ಮುಗಿಲು ಮಲ್ಲಿಗೆಗಳನ್ನು ಕಲ್ಪಿಸುವದಕ್ಕಿಂತ ಪುರುಷ ಸಹಜ ದೋಷಗಳಾದ ವಂಚನೆ, ಅಜ್ಞಾನ, ಭ್ರಾಂತಿ, ಅಪಾಟವ ಮುಂತಾದವುಗಳ ಪ್ರಸಕ್ತಿಯಿಲ್ಲದ

ಅಪೌರುಷೇಯ ವಾಕ್ಯವನ್ನು ಒಪ್ಪಿಬಿಟ್ಟರೆ ನಿಶ್ಚಿಂತೆಯಲ್ಲವೇ ! ಅಪೌರುಷೇಯವಾದ ಬಳಿಕ ಆ ವಾಕ್ಯಗಳಲ್ಲಿ ಪುರುಷ ದೋಷಗಳಿಗೆ ಪ್ರಸಕ್ತಿಯೇ ಬರಲಾರದು. ಧರ್ಮಾಧರ್ಮ ಸಿದ್ಧಿಗಾಗಿ ಇಂಥ ಅಪೌರುಷೇಯ ವಾಕ್ಯವನ್ನು ಒಪ್ಪಲೇಬೇಕು ಎಂದು ನಾಸ್ತಿಕ ಮತವನ್ನು ಖಂಡಿಸಿ ವೇದ ಪ್ರಾಮಾಣ್ಯವನ್ನು ಸ್ಥಿರಪಡಿಸಿ ಅದರ ಮೇಲೆ ಬರಬಹುದಾದ ನೈಷ್ಫಲ್ಯ ಮಿಥ್ಯಾರ್ಥಕತ್ವಾದಿಗಳಿಗೆ ಉಪಪತ್ತಿಯನ್ನು ಹೇಳಿ ಇಂಥ ಅಪೌರುಷೇಯವಾದ ವೇದ, ಆಮ್ನಾಯ, ಅಥವಾ ಶ್ರುತಿಗಳೇ ಸದಾಗಮಗಳೆಂದು ನಿರೂಪಿಸಿದ್ದಾರೆ.

ಈ ಸದಾಗಮಗಳಿಗೆ ಪ್ರಾಮಾಣ್ಯವು ಸ್ವತಃ ಎಂದರೆ ಬೇರೆ ಅನುಮಾನಾದಿ ಪ್ರಮಾಣಗಳಿಂದ ಅವುಗಳ ಪ್ರಾಮಾಣ್ಯವನ್ನು ಸಾಧಿಸುವ ಆವಶ್ಯಕತೆ ಇಲ್ಲ. ಇಲ್ಲದಿದ್ದರೆ ಹೀಗೆ ಪ್ರಮಾಣದ ಪ್ರಾಮಾಣ್ಯವನ್ನು ಬೇರೆ ಪ್ರಮಾಣಗಳಿಂದ ಸಾಧಿಸುತ್ತ ಹೊರಟರೆ ಮತ್ತೆ ಆ ಪ್ರಮಾಣದ ಪ್ರಾಮಾಣ್ಯಕ್ಕೆ ಪುನಃ ಬೇರೆ ಪ್ರಮಾಣ. ಅದಕ್ಕೆ ಮತ್ತೆ ಬೇರೆ. ಹೀಗೆ ಅನವಸ್ಥೆಗಿಡುತ್ತದೆ. ಆದುದರಿಂದ ಅಪೌರುಷೇಯವಾದ ಈ ಸದಾಗಮಗಳೆಲ್ಲವೂ ಸ್ವತಃ ಪ್ರಮಾಣ ಎಂದೇ ಒಪ್ಪಬೇಕು ಎಂದು ನಿರ್ಧಾರ ಪೂರ್ವಕವಾಗಿ ನುಡಿದಿದ್ದಾರೆ ಶ್ರೀ ಮಧ್ವರು.

ಮಾನವರ ಉಚ್ಚಾರದಿಂದ ವರ್ಣಗಳು ಹುಟ್ಟುತ್ತವೆ. ವರ್ಣ ಸಮೂಹದಿಂದ ವಾಕ್ಯಗಳು ನಿರ್ಮಿತವಾಗುತ್ತವೆ. ಈ ವಾಕ್ಯ ಸಮೂಹವೇ ವೇದ. ಅಂದ ಬಳಿಕ ವೇದವು'ಅನಿತ್ಯವಾಯಿತಲ್ಲ! ಎಂಬ ಶಂಕೆಗೆ ಆಚಾರ್ಯರು "ಸೋऽಯಂ ಗಕಾರಃ"ಎಂಬ ಪ್ರತ್ಯಭಿಜ್ಞಾ ಪ್ರಮಾಣದಿಂದ ವರ್ಣಗಳಿಗೆ ನಿತ್ಯತ್ವವನ್ನು ಹೇಳಿ ಉಚ್ಚಾರಣೆಯು ಈ ನಿತ್ಯವರ್ಣಗಳ ಅಭಿವ್ಯಕ್ತಿ ಸಾಧನವಾಗಿದೆ ಎಂದು ತಿಳಿಸಿದ್ದಾರೆ.

" ವಾಚಾ ವಿರೂಪ ನಿತ್ಯಯಾ "
" ಅನಾದಿ ನಿಧನಾ ನಿತ್ಯಾವಾಗುಚ್ಛೃಷ್ಟಾ ಸ್ವಯಂಭುವಾ "

ಇತ್ಯಾದಿ ಪ್ರಮಾಣ ವಚನಗಳಿಂದ ಸದಾಗಮಗಳು ನಿತ್ಯವೆಂದೂ ಅಪೌರುಷೇಯವೆಂದೂ ಸಿದ್ಧಮಾಡಿದ್ದಾರೆ.

ಕಾರ್ಯತಾ ಬೋಧಕವಾದ ವೇದಗಳಿಗೆ ಸಿದ್ಧಾರ್ಥನಾದ ನಾರಾಯಣ ಬೋಧಕತ್ವವು ಹೇಗೆ ಎಂಬ ಪ್ರಾಭಾಕರ ಮೀಮಾಂಸಕರ ಆಕ್ಷೇಪಕ್ಕೆ ವ್ಯಾಕರಣ ಕೋಶ, ನಿರುಕ್ತ ಮತ್ತು "ಇಯಂ ತೇ ಮಾತಾ" "ಅಯಂ ತೇ ಪಿತಾ" ಮುಂತಾದ ಲೌಕಿಕ ವಾಕ್ಯ ದೃಷ್ಟಾಂತದಿಂದ ಸಿದ್ಧಾರ್ಥದಲ್ಲಿಯೂ ವಾಕ್ಯಗಳಿಗೆ ಶಕ್ತಿ ಉಂಟೆಂದು ಸ್ಥಾಪಿಸಿ ಸಿದ್ಧಾರ್ಥನಾದ ನಾರಾಯಣನು ಸದಾಗಮೈಕ ವಿಜ್ಞೇಯನಾಗಲಿಕ್ಕೆ ಯಾವ ಆತಂಕವೂ ಇಲ್ಲವೆಂದು ಹೇಳಿದ್ದಾರೆ.

ಇದರ ಮೇಲೆ ನಿರ್ಗುಣ ಬ್ರಹ್ಮವೇ ವೇದ ಪ್ರತಿಪಾದ್ಯ ಎಂದು ಹೇಳುವ ಅದ್ವೈತಿಗಳ ಜೀವ ಬ್ರಹ್ಮೈಕ್ಯವೇ ಶ್ರುತಿ ತಾತ್ಪರ್ಯ ವಿಷಯವಾಗಿದೆ ಎಂಬ ಮಾತನ್ನು ಆಚಾರ್ಯರು ಸಮಂಜಸವಾಗಿ ನಿರಾಕರಣ ಮಾಡಿದ್ದಾರೆ.

"ದ್ವಾಸುಪರ್ಣಾ ಸಯುಜಾ ಸಖಾಯಾ" ಎಂಬ ಶ್ರುತಿ ವಾಕ್ಯವು ಪ್ರತ್ಯಕ್ಷ ಅನುಮಾನಾದಿ ಪ್ರಮಾಣ ಸಿದ್ಧವಾದ ಭೇದವನ್ನು ಅನುವಾದ ಮಾಡುತ್ತದೆ. ಅನುವಾದಕ ವಾಕ್ಯಗಳು ಪ್ರಮಾಣವಲ್ಲ. 'ನೇಹನಾನಾsಸ್ತಿಕಿಂಚನ' ಮುಂತಾದ ಶ್ರುತಿ ವಾಕ್ಯಗಳು ಆ ಭೇದವನ್ನು ಖಂಡಿಸುತ್ತವೆ. ಹೀಗೆ ಮಾನಾಂತರ ಪ್ರಾಪ್ತವಾದ ಭೇದ ಬೋಧಕವಾದ 'ದ್ವಾಸುಪರ್ಣಾ' ಶ್ರುತಿ ದುರ್ಬಲವಾಗಿದೆ.

ಆದರೆ ಜೀವಬ್ರಹ್ಮಾಭೇದವು ಮಾತ್ರ ಪ್ರಮಾಣಾಂತರ ಸಿದ್ಧವಾಗಿಲ್ಲ. ಅಪೂರ್ವವಾಗಿದೆ. ಇಂಥ ಅಪೂರ್ವವಾದ ಐಕ್ಯವನ್ನು ಪ್ರತಿಪಾದಿಸುವ "ಅಹಂ ಬ್ರಹ್ಮಾಸ್ಮಿ" "ನೇಹ ನಾನಾಸ್ತಿ ಕಿಂಚನ" ಮುಂತಾದ ವಾಕ್ಯಗಳು ಪ್ರಬಲವಾದವು. ಇವುಗಳ ಮೇಲಿಂದ ಅಭೇದವೇ ವೇದ ತಾತ್ಪರ್ಯ ವಿಷಯೀಭೂತವಾದ ಅರ್ಥ".

ಈ ಅದ್ವೈತಿಗಳ ವಾದವನ್ನು ಆಚಾರ್ಯರು ಸಮೂಲವಾಗಿ ಖಂಡಿಸಿ ಹಾಕಿದ್ದಾರೆ. ಪ್ರತ್ಯಕ್ಷಾದಿಗಳಿಂದ ಜೀವ ಬ್ರಹ್ಮ ಭೇದವು ಎಂದೂ ಸಿದ್ಧಿಸಲಾರದು. ಜೀವೇಶ್ವರ ಪ್ರತ್ಯಕ್ಷವಿಲ್ಲದೇ ಅವರ ಭೇದ ಪ್ರತ್ಯಕ್ಷವು ಬರುವದೆಂತು?

ಅನುಮಾನಕ್ಕಂತೂ ಸ್ವತಂತ್ರವಾಗಿ ಈಶ್ವರನನ್ನು ಸಾಧಿಸುವ ಸಾಮರ್ಥ್ಯವಿಲ್ಲ. ಅಂದಬಳಿಕ ಭೇದವು ಮಾನಾಂತರ ಪ್ರಾಪ್ತವಲ್ಲ. ಮತ್ತು ಆ ಭೇದ ಬೋಧಕವಾದ "ದ್ವಾಸುಪರ್ಣಾ" ಮುಂತಾದ ವೇದ ವಾಕ್ಯಗಳು ಅನುವಾದಕಗಳಲ್ಲ. ಅತಏವ ದುರ್ಬಲವೂ ಅಲ್ಲ.

ಇನ್ನು ಭೇದವು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧ ಎಂದು ಒಪ್ಪಿದರೂ ತಪ್ಪಿಲ್ಲ. ಭೇದಗ್ರಾಹಕ ಪ್ರತ್ಯಕ್ಷ ಪ್ರಮಾಣದಿಂದಲೇ ಅಭೇದ ಬೋಧಕ ವಾಕ್ಯಗಳು ಅಪ್ರಮಾಣ ಎಂದು ಸಿದ್ಧವಾಗುವದು. ಅನುವಾದಕ ವಾಕ್ಯಗಳು ಅಪ್ರಮಾಣವಲ್ಲ. ಇನ್ನೂ ಹೆಚ್ಚಿನ ದಾರ್ಢ್ಯವನ್ನೇ ಹುಟ್ಟಿಸಿ ಕೊಡುತ್ತವೆ. ಇಷ್ಟೇ ಅಲ್ಲ ಪ್ರತ್ಯಕ್ಷ ಆಗಮ, ಅನುಮಾನಾದಿ ಬಹು ಪ್ರಮಾಣ ವಿರುದ್ಧವಾದುದರಿಂದ ಐಕ್ಯಬೋಧಕ ವಾಕ್ಯಗಳಿಗೆ ಅಭೇದಾರ್ಥವನ್ನು ಹೇಳದೇ ನಾವು ತೋರಿಸಿದಂತೆ ಭೇದಪರವಾದ ಅರ್ಥವನ್ನೇ ಹೇಳಬೇಕು. ಇಲ್ಲದಿದ್ದರೆ ವೇದ ಪ್ರಾಮಾಣ್ಯಕ್ಕೆ ಭಂಗ ಬಂದೀತು. ಇದರ ಮೇಲಿಂದ ಐಕ್ಯವು ವೇದಾರ್ಥವಲ್ಲ. ಭೇದವೇ ಶ್ರುತಿ ತಾತ್ಪರ್ಯ ವಿಷಯವಾಗಿದೆ ಎಂದು ಸಿದ್ಧವಾಯಿತು. ವಿಷ್ಣು ಸರ್ವೋತ್ತಮತ್ವದಲ್ಲಿಯೇ ವೇದ ಶಾಸ್ತ್ರಗಳ

ನೈರ್ಭರ್ಯವಿದೆ ಎಂಬದು ವ್ಯಕ್ತವಾಯಿತು. ಜೀವ ಬ್ರಹ್ಮರಲ್ಲಿ ಭೇದವು ಸಾರ್ವಕಾಲಿಕ, ಮುಕ್ತಿಕಾಲಿಕ, ಸ್ವಾಭಾವಿಕ ಎಂಬುದು ವೇದಶಾಸ್ತ್ರಸಿದ್ಧವಾದ ಪ್ರಮೇಯವಾಗಿದೆ.

ವಸ್ತು ಸ್ಥಿತಿ ಹೀಗಿದ್ದ ಬಳಿಕ ನಾನೇ ಆ ವಿಷ್ಣು ಎಂದು ಐಕ್ಯ ಚಿಂತನ ಮಾಡಿದರೆ ಅವನ ಪ್ರಸಾದ ಎಂತಾದೀತು ! ಅವನ ಪ್ರಸಾದವಿಲ್ಲದೇ ಮೋಕ್ಷ ಹೇಗೆ ಲಭಿಸೀತು ! ಸಾಮಾನ್ಯ ಒಬ್ಬ ರಾಜನ ಎದುರು ಬಂದು ಯಾರಾದರೂ ಒಬ್ಬರು "ನಾನೇ ರಾಜ" ಎಂದು ನುಡಿದರೆ ತಕ್ಷಣದಲ್ಲಿಯೇ ರಾಜನು ಅವನನ್ನು ಸಂಹರಿಸಿ ಬಿಡುವನು. ಆದರಂತೆ ಪರತಂತ್ರರಾದ ನಾವು "ನಾನೇ ದೇವರು" ಎಂದರೆ ಆ ದೇವನ ಪ್ರಸಾದವು ನಮಗೆ ಎಂದಿಗೂ ಆಗಲಾರದು. "ಘಾತಯಂತಿ ಹಿ ರಾಜಾನೋ ರಾಜಾಹ ಮಿತಿ ವಾದಿನಂ" ಆದುದರಿಂದ ನಾನೇ ದೇವರು ಎಂದು ಹೇಳುವ ಜೀವ–ಬ್ರಹ್ಮೈಕ್ಯ ವಾದಿಗಳ ಮತವು ಸರ್ವಥಾ ಅನುಪಾದೇಯವಾಗಿದೆ ಎಂದು ಹೇಳಿದ್ದಾರೆ.

ಅಪೌರುಷೇಯವಾದ ವೇದಗಳಿಂದ ಮುಖ್ಯ ಪ್ರತಿಪಾದ್ಯ ಪರಮಾತ್ಮನೇ. ಕರ್ಮಾದಿಗಳು ಅವಾಂತರ ಪ್ರತಿಪಾದ್ಯ. ಅವುಗಳಿಗೂ ಅವನ ಪ್ರೀತಿ, ಪ್ರತಿಪತ್ತಿಗಳೇ ಪ್ರಯೋಜನ. ಈ ನಾರಾಯಣನು ಕ್ಷರಾಕ್ಷರ ಪ್ರಪಂಚಕ್ಕೆ ನಿಯಾಮಕನೂ, ಪುರುಷಾರ್ಥ ಪ್ರದಾಯಕನೂ ಆಗಿದ್ದಾನೆಂದು ತಿಳಿದು ಅವನನ್ನೇ ಅನನ್ಯ ಭಕ್ತಿಯಿಂದ ಆರಾಧಿಸಬೇಕೆಂದು ಶ್ರೀ ಮಧ್ವಾಚಾರ್ಯರು ತಮ್ಮ ಈ ತತ್ತ್ವ ನಿರ್ಣಯ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ.

## ೧೦. ಕರ್ಮನಿರ್ಣಯ

ಸರ್ವವೇದ ಪ್ರತಿಪಾದ್ಯತ್ವವು ವಿಷ್ಣುವಿಗೆ ಇರುತ್ತದೆ ಎಂದು ಆಚಾರ್ಯರ ಸಿದ್ಧಾಂತ. ಮಂತ್ರ ಭಾಗಾತ್ಮಕವಾದ ವೇದದಲ್ಲಿ ಇದನ್ನು ಸುಲಭವಾಗಿ ಹೊಂದಿಸಬಹುದು. ಆದರೆ ಕರ್ಮಕಾಂಡಪರವಾದ ವೇದ ವಿಭಾಗಕ್ಕೆ ವಿಷ್ಣುಪ್ರತಿಪಾದಕತ್ವವು ಹೇಗೆ ಕೂಡುವದು ಎಂಬ ಆಕ್ಷೇಪಕ್ಕೆ ಉತ್ತರರೂಪವಾಗಿ ಈ ಗ್ರಂಥವನ್ನು ಆಚಾರ್ಯರು ಬರೆದಿದ್ದಾರೆ. ವೇದದ ಕರ್ಮಕಾಂಡವೂ ಕೂಡ ವಿಷ್ಣುವಿನಲ್ಲಿಯೇ ಮಹಾತಾತ್ಪರ್ಯವುಳ್ಳದ್ದಾಗಿದೆ ಎಂಬುದಕ್ಕೆ ಉದಾಹರಣವಾಗಿ ಐತರೇಯ ಆರಣ್ಯಕದಲ್ಲಿಯ ಮಹಾನಾಮ್ನೀ ಋಕ್ಕುಗಳಿಗೆ ವಿಷ್ಣು ಪ್ರತಿಪಾದಕತ್ವವನ್ನು ಇದರಲ್ಲಿ ತಿಳಿಸಿ ಕೊಟ್ಟಿದ್ದಾರೆ.

ಈ ಸೂಕ್ತಕ್ಕೆ "ಮಹಾನಾಮ್ನಿ" ಎಂಬ ಹೆಸರು ಬರಲು ಇದರ ವಿಷ್ಣುಬೋಧಕತ್ವವೇ ಮುಖ್ಯ ಕಾರಣ ಎಂದು ತೋರಿಸಿಕೊಟ್ಟಿದ್ದಾರೆ.

"ಮಹತ್‌ನಾಮ ಯಾಸುಋಕ್ಸು ವಿದ್ಯತೇ ತಾ ಮಹಾನಾಮ್ನ್ಯಃ।
ಪರಸ್ಯ ಬ್ರಹ್ಮಣೋ ಯನ್ನಾಮ ಇಂದ್ರಾದಿಕಂ ತತ್ ಮಹಾರ್ಥತ್ವಾತ್ ಮಹತ್ ॥"

"ಮಹದ್ಧಿ ತತ್ಪರಂ ಬ್ರಹ್ಮ"

ಇಂದ್ರಾದಿ ಸರ್ವನಾಮಗಳ ಮುಖ್ಯಾರ್ಥನಾದ ಪರಬ್ರಹ್ಮನ ಹೆಸರು 'ಮಹತ್' ಎನಿಸುತ್ತದೆ. ಇಂಥ ಮಹತ್ ಶಬ್ದ ವಾಚ್ಯವಾದ ಆ ಪರಬ್ರಹ್ಮವನ್ನು ಬೋಧಿಸುವ ಋಕ್ಕುಗಳು ಮಹಾನಾಮ್ನೀ ಋಕ್ಕುಗಳೆಂದು ಕರೆಯಲ್ಪಡುತ್ತವೆ.

ಶ್ರುತಿಗಳು ನಿರ್ಗುಣ ಬ್ರಹ್ಮನನ್ನು ಪ್ರತಿಪಾದನಮಾಡುತ್ತವೆ ಎಂಬ ಅದ್ವೈತ ಮತವನ್ನು ಆಚಾರ್ಯರು ಇಲ್ಲಿ ವಿಶದವಾಗಿ ಖಂಡಿಸಿದ್ದಾರೆ. ಆಪಾತತಃ ನಿರ್ವಿಶೇಷತ್ವ ನಿರ್ಗುಣತ್ವವನ್ನು ಹೇಳುವ ಶ್ರುತಿಗಳಿಗೆ ಪ್ರಾಕೃತಿಕವಾದ ಸತ್ವಾದಿ ಗುಣ ವಿಶೇಷ ರಹಿತ ಎಂದು ಅರ್ಥಮಾಡಬೇಕು. ಇಲ್ಲದಿದ್ದರೆ ಶ್ರುತಿಗೆ ಸ್ವವಚನ ವಿರೋಧವು ಬರುತ್ತದೆ.

"ಸತ್ವಾದಿ ಗುಣಾ ಭಾವೋಕ್ತೇಃ । ತೇನ ಅನ್ಯಥಾ ಏಕೋ ದೇವಃ
ಸರ್ವ ಭೂತೇಷು ಗೂಢಃ ಇತ್ಯಾದೀನಾಂ ಗುಣತ್ವಾತ್ ಸ್ವೋಕ್ತಿ ವಿರೋಧಃ ॥"

ನಿರ್ಗುಣ ಎನ್ನುವದಕ್ಕೆ ಸತ್ವಾದಿ ಗುಣ ಎಂದೇ ಅರ್ಥ ಮಾಡಬೇಕು. ಇಲ್ಲದಿದ್ದರೆ ನಿರ್ಗುಣ ಬ್ರಹ್ಮನನ್ನು ಪ್ರತಿಪಾದಿಸುವ ವಾಕ್ಯದಲ್ಲಿಯೇ ಸರ್ವಾಂತರ್ಯಾಮಿತ್ವ ಏಕತ್ವಾದಿ ಗುಣಗಳನ್ನು ಹೇಳುವದರಿಂದ ತನ್ನ ಮಾತಿಗೆ ತಾನೇ ವಿರುದ್ಧ ನುಡಿದಂತಾಗುವದು.

ನಿರ್ವಿಶೇಷತ್ವ ವಾದಿಗಳಿಗೆ ಆಚಾರ್ಯರು ಹಾಕುವ ಸವಾಲು ಚಮತ್ಕಾರಿಕವಾಗಿದ್ದು ಅವರ ಮರ್ಮಸ್ಥಳಕ್ಕೇ ಬೆರಳಿಡುತ್ತದೆ. ಅವರ ಮಾತನ್ನು ಅವರ ಕೊರಳಿಗೇ ಕಟ್ಟಿ ಉರುಳಾಗುವಂತೆ ಮಾಡುವ ಅವರ ಕೌಶಲ್ಯವು ಅನ್ಯಾದೃಶವಾಗಿದೆ.

"ನಿರ್ವಿಶೇಷತ್ವೇನ ವಿಶಿಷ್ಟಂ ತತ್ ನವೇತ್ಯುಕ್ತೇ ಯದ್ಯ ವಿಶಿಷ್ಟಂ
ನ ವಿಶೇಷ ನಿರಾಕರಣಂ।
ವಿಶೇಷವತ್ವ ಮೇವ ಭವತಿ ಯದಿ ತೇನ ವಿಶಿಷ್ಟಸ್ಸ ಏವ ವಿಶಿಷ್ಟಂ
ವ್ಯಾಹತಿಃ ||"

ನಿರ್ವಿಶೇಷತ್ವ ಶ್ರುತಿಪ್ರತಿಪಾದ್ಯವಾದ ಆ ಪರಬ್ರಹ್ಮವು ನಿರ್ವಿಶೇಷತ್ವ ವಿಶಿಷ್ಟವಾಗಿದೆಯೋ ಇಲ್ಲವೋ? ನಿರ್ವಿಶೇಷತ್ವ ವಿಶಿಷ್ಟವಾಗಿಲ್ಲವೆಂದರೆ ಬ್ರಹ್ಮನಲ್ಲಿ ವಿಶೇಷವತ್ವವನ್ನು ನಿರಾಕರಿಸಿದಂತೆಯೇ ಆಗುವದಿಲ್ಲ. ಯಾಕಂದರೆ ನಿರ್ವಿಶೇಷತ್ವ ವೈಶಿಷ್ಟ್ಯದ ಅಭಾವವೆಂದರೆ ವಿಶೇಷವತ್ವ ಅರ್ಥಾತ್ ವಿಶೇಷವುಂಟೆಂದೇ ಹೇಳಿದಂತಾಗುವದು. ಇನ್ನು ನಿರ್ವಿಶೇಷತ್ವ ವಿಶಿಷ್ಟವಾಗಿದೆ. ಆ ಬ್ರಹ್ಮ ಎಂದರೆ ಆ ವೈಶಿಷ್ಟ್ಯವೇ ಒಂದು ವಿಶೇಷವಾಗಿ ವ್ಯಾಹತಿಯು ಬರುವದು.

ಪೂರ್ವ ಮೀಮಾಂಸಕರು ಹೇಳುವಂತೆ ಕೇವಲ ಕರ್ಮ ಬೋಧನದಲ್ಲಿ ವೇದಗಳಿಗೆ ತಾತ್ಪರ್ಯವಿರಲಾರದು.

"ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ"

ಎಂಬ ವಚನಾನುಸಾರವಾಗಿ ಜೀವರ ದುಃಖವನ್ನು ಕಳೆಯುವದಕ್ಕಾಗಿಯೇ ಶ್ರುತಿಯು ಹೊರಟಿರುತ್ತದೆ. ಜೀವರ ಸಾಂಸಾರಿಕ ದುಃಖಗಳನ್ನು ದೂರಪಡಿಸಿ ಶಾಶ್ವತ ಆನಂದವನ್ನು ಕೊಡುವ ಶಕ್ತಿಯು ಕೇವಲ ಕರ್ಮಕ್ಕೆ ಎಲ್ಲಿಂದ ಬಂದೀತು? ಹಾಗೆ ವೇದಗಳಿಗೆ ಕೇವಲ ಕರ್ಮ ಪರಿಚಯ ಮಾತ್ರ ತಾತ್ಪರ್ಯಕತ್ವವನ್ನೇ ಹೇಳಿದರೆ ವೇದಕ್ಕೆ ನೈರುಕ್ಯರ್ಥವೇ ಬರುವದು. ಆದುದರಿಂದ ಕರ್ಮಕಾಂಡ, ಜ್ಞಾನ ಕಾಂಡ ರೂಪವಾದ ಸಕಲ ವೇದವೂ "ಭಗವತ್ ತಾತ್ಪರ್ಯಕ" ಎಂದೇ ಹೇಳಬೇಕೆಂದು ಆಚಾರ್ಯರು ಇದರಲ್ಲಿ ಪ್ರತಿಪಾದಿಸಿದ್ದಾರೆ. ಇದರಲ್ಲಿ ಪ್ರಾಭಾಕರರ ವಾಕ್ಯಗಳಿಗೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಯೇ ಇಲ್ಲ ಎಂಬ ವಾದವನ್ನು ಖಂಡಿಸಿ ಸಿದ್ಧಾರ್ಥ ನಾರಾಯಣನಲ್ಲಿಯೇ ಎಲ್ಲ ವೇದಗಳ ತಾತ್ಪರ್ಯ ಉಂಟು ಎಂದು ಸಿದ್ಧಾಂತಿಸಿದ್ದಾರೆ.

ಹೀಗೆ ವೇದದ ಸಕಲ ಕರ್ಮಕಾಂಡ, ಜ್ಞಾನಕಾಂಡ ಪ್ರತಿಪಾದ್ಯನು ಶ್ರೀಮನ್ನಾರಾಯಣನು ಎಂದು ಹೇಳಿ—

"ಅಶೇಷಕರ್ಮ ಪೂಗೋಽಪಿ ನ ವಿಷ್ಣುಧ್ಯಾನ ಲೇಶಭಾಕ್।
ತಚ್ಚ ಧ್ಯಾನಂ ಹರೇರ್ಜ್ಞಾನ ಕೋಟ್ಯಂಶಾಯ ನ ಪೂರ್ಯತೇ ||"

ಎಂದು ಕರ್ಮವಿವೇಕದ ವಚನವನ್ನುದ್ಧರಿಸಿ ಉಳಿದ ಎಲ್ಲ ಕರ್ಮಗಳೂ ಶ್ರೀಹರಿಯ ಧ್ಯಾನ, ಜ್ಞಾನದ ಕೋಟ್ಯಂಶಕ್ಕೂ ಸರಿತೂಗಲಾರವು ಎಂದು ಹೇಳಿ ಅಂಥ ಜ್ಞಾನ ಭಕ್ತಿ ವೈರಾಗ್ಯ ಪೂರ್ವಕವಾಗಿಯೇ ಸರ್ವ ಕರ್ಮಗಳನ್ನು ಆಚರಿಸಬೇಕು.

"ಭಗವದ್ ಭಕ್ತಿಜ್ಞಾನ ವೈರಾಗ್ಯ ಪೂರ್ವಕಂ ಕರ್ಮ ಕರ್ತವ್ಯಂ||"

ಎಂದು ಅಪ್ಪಣೆಗೈದಿದ್ದಾರೆ.

# ಸೂತ್ರ ಪ್ರಸ್ಥಾನ

## ೧. ಬ್ರಹ್ಮಸೂತ್ರ ಭಾಷ್ಯ

ಭಗವಾನ್ ವೇದವ್ಯಾಸ ದೇವರು ರಚಿಸಿದ ಬ್ರಹ್ಮಸೂತ್ರಗಳಿಗೆ ಮಧ್ವಾಚಾರ್ಯರಿಗಿಂತ ಮೊದಲು ೨೧ ಭಾಷ್ಯಗಳು ಇದ್ದವಂತೆ. ಎಲ್ಲ ಭಾಷ್ಯಗಳನ್ನೂ ಖಂಡಿಸಿ ಬಾದರಾಯಣರ ಅಭಿಪ್ರಾಯಾನುಗುಣವಾಗಿ ಭಾಷ್ಯವನ್ನು ನಿರ್ಮಿಸಿದವರೆಂದರೆ ಶ್ರೀ ಮಧ್ವಾಚಾರ್ಯರೇ ಸರಿ. ಆ ೨೧ ಭಾಷ್ಯಕಾರರೆಂದರೆ—

(೧) ಭಾರತೀ ವಿಜಯ (೨) ಸಚ್ಚಿದಾನಂದ (೩) ಬ್ರಹ್ಮಘೋಷ (೪) ಶತಾನಂದ (೫) ಉದ್ವರ್ತ (೬) ವಿಜಯ (೭) ರುದ್ರಭಟ್ಟ (೮) ವಾಮನ (೯) ಯಾದವ ಪ್ರಕಾಶ (೧೦) ರಾಮಾನುಜ (೧೧) ಭರ್ತೃಪ್ರಪಂಚ (೧೨) ದ್ರವಿಡ (೧೩) ಬ್ರಹ್ಮದತ್ತ (೧೪) ಭಾಸ್ಕರ (೧೫) ಪಿಶಾಚ (೧೬) ವೃತ್ತಿಕಾರ (೧೭) ವಿಜಯಭಟ್ಟ (೧೮) ವಿಷ್ಣುಕಾಂತ (೧೯) ವಾದೀಂದ್ರ (೨೦) ಮಾಧವದಾಸ (೨೧) ಶಂಕರಾಚಾರ್ಯ.

ಈ ೨೧ ಭಾಷ್ಯಗಳಲ್ಲಿಯ ಖಂಡನೀಯ ಅಂಶಗಳನ್ನೆಲ್ಲ ಸಕಾರಣ, ಪ್ರಮಾಣೋದಾಹರಣ ಪುರಸ್ಸರವಾಗಿ ನಿರಾಕರಣ ಮಾಡಿ ಬಾದರಾಯಣರ ಮನಸ್ಸಿನಲ್ಲಿದ್ದ ಅರ್ಥವನ್ನೇ ಅಭಿವ್ಯಕ್ತಗೊಳಿಸುತ್ತ ಮಹಾಭಾಷ್ಯವನ್ನು ಬರೆದಿದ್ದಾರೆ ಶ್ರೀಮದಾನಂದ ತೀರ್ಥರು.

ಸೂತ್ರಪ್ರಸ್ಥಾನದ ಮೇಲೆ ಮಧ್ವಾಚಾರ್ಯರು ಉಳಿದ ಆಚಾರ್ಯರಂತೆ ಬರೀ ಭಾಷ್ಯವೊಂದನ್ನೇ ಬರೆಯದೇ ಭಾಷ್ಯ ಅನುವ್ಯಾಖ್ಯಾನ, ನ್ಯಾಯ ವಿವರಣ, ಅಣು ಭಾಷ್ಯ, ಎಂದು ೪ ಗ್ರಂಥಗಳನ್ನು ಬರೆದಿದ್ದಾರೆ.

ಸೂತ್ರದ ಮೇಲಿನ ಈ ನಾಲ್ಕೂ ಗ್ರಂಥಗಳ ರೀತಿಯು ಒಂದೇ ತರಹ ಆದರೂ ರಚನೆಯಲ್ಲಿ ವೈಚಿತ್ರ್ಯವಿದೆ. ವಿಷಯ ಒಂದೇ ಆದರೂ ವಿನ್ಯಾಸದಲ್ಲಿ ವೈಲಕ್ಷಣ್ಯವಿದೆ. ಒಂದರಲ್ಲಿ ಖಂಡನಕ್ಕೆ ಪ್ರಾಶಸ್ತ್ಯವಿದ್ದರೆ ಮತ್ತೊಂದರಲ್ಲಿ ಮಂಡನಕ್ಕೆ ಪ್ರಾಧಾನ್ಯ. ಒಂದು ಸೂತ್ರ ನಿಷ್ಠವಾದರೆ ಮತ್ತೊಂದು ನ್ಯಾಯನಿಷ್ಠವಾಗಿರುತ್ತದೆ. ಶ್ರೀ ವೇದ ವ್ಯಾಸರ ಅಭಿಪ್ರೇತಾರ್ಥವನ್ನು ಸಂರಕ್ಷಿಸುವ ಚತುರ್ಭಿತ್ತಿಗಳಂತೆ, ಅಂಗರಕ್ಷಕರಂತೆ ವಿದ್ವಜ್ಜನ ಮನೋಹರವಾಗಿ ಕಣ್ಗೆಸೆಯುವ ಈ ಚತುರ್ಗ್ರಂಥಗಳು ಬಾದರಾಯಣರ ಹೃದಯಕ್ಕೆ ಹಿಡಿದ ರನ್ನಗನ್ನಡಿಗಳಂತೆ ಶೋಭಿಸುತ್ತವೆ.

ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವು ಚತುರಧ್ಯಾಯಾತ್ಮಕವಾಗಿದ್ದು, ಪ್ರತಿ ಒಂದು ಅಧ್ಯಾಯದಲ್ಲಿ ನಾಲ್ಕು ಪಾದಗಳಿರುತ್ತವೆ. ಪ್ರತಿ ಪಾದದಲ್ಲಿ ಕೆಲವು ಅಧಿಕರಣಗಳಿರುತ್ತವೆ. ಮಧ್ವಾಚಾರ್ಯರು ಟೀಕಿಸಿದ ಒಟ್ಟು ಸೂತ್ರಗಳ ಸಂಖ್ಯೆ ೫೬೪. ಶಂಕರಾಚಾರ್ಯರು ಬ್ರಹ್ಮಸೂತ್ರಗಳ ಸಂಖ್ಯೆ ೫೫೫ ಎಂದು ಹೇಳಿದರೆ ರಾಮಾನುಜರ ದೃಷ್ಟಿಯಲ್ಲಿ ಈ ವ್ಯಾಸ ಸೂತ್ರಗಳ ಸಂಖ್ಯೆ ಇನ್ನೂ ಕಡಿಮೆಯಾಗಿ ೫೪೫ ಕ್ಕೆ ಇಳಿದಿದೆ. ಇದಕ್ಕೆ ಕಾರಣ ಶಂಕರ, ರಾಮಾನುಜರು ಸೂತ್ರ ಪರಿಗಣನೆಯಲ್ಲೇ ಗೊಂದಲ ಮಾಡಿಕೊಂಡಿದ್ದಾರೆ. ಹಲವು ಕಡೆ ಎರಡೆರಡು ಸೂತ್ರಗಳನ್ನು ಕೂಡಿಸಿ ಒಂದೇ ಸೂತ್ರಎಂದು ಗಣಿಸಿಬಿಡುತ್ತಾರೆ. ಸರಿಯಾಗಿ ಪರಾಮರ್ಶೆ ಮಾಡಿದರೆ ಅವರ ಸೂತ್ರದ ಗಣಿಕೆ ಅರ್ಥದ ಎಣಿಕೆ ಎರಡೂ ತಪ್ಪಾಗಿದೆಯೆಂದು ಯಾರಿಗಾದರೂ ತಿಳಿದು ಬರಲು ಸಾಕು.

ಮಧ್ವಾಚಾರ್ಯರು ನಿರ್ದೇಶಿಸಿದ ೫೬೪ ಬ್ರಹ್ಮಸೂತ್ರಗಳ ಸಂಖ್ಯೆಗೆ ಒಂದು ವಿಶಿಷ್ಟವಾದ ಸಾಂಕೇತಿಕ ಅರ್ಥವೂ ಉಂಟು. ಈ ಬ್ರಹ್ಮಸೂತ್ರಗಳ ಮುಖ್ಯಾರ್ಥನಾದ "ವಿಷ್ಣು" ಎಂಬ ಅರ್ಥವು ೫೬೪ ರ ಸಂಖ್ಯೆಯಿಂದಲೇ ಲಬ್ಧವಾಗುತ್ತದೆ.

"ಅಂಕಾನಾಂ ವಾಮತೋ ಗತಿಃ" ಎಂಬ ಸಂಖ್ಯಾ ಶಾಸ್ತ್ರದ ಪ್ರಕಾರ 'ವಿಷ್ಣು' ಎಂಬ ಭಗವನ್ನಾಮದ ಅಕ್ಷರಗಳನ್ನು ತಿರುವು–ಮುರುವಾಗಿ ಎಣಿಸಿದರೆ ೫೬೪ ಎಂಬ ಸಂಖ್ಯೆಯು ಹೊರಡುತ್ತದೆ. 'ಣ' ಕಾರವು 'ಟ' ವರ್ಗದ ಐದನೆಯ ಅಕ್ಷರವಾದ್ದರಿಂದ '೫' ಸಂಖ್ಯೆಯ ಪ್ರತಿನಿಧಿ ಎಂದು ಹಿಡಿಯಬಹುದು. 'ಷ' ಅಕ್ಷರವು ಅವರ್ಗೀಯ ವ್ಯಂಜನದ '೬' ನೇಯದಾಗಿರುತ್ತದೆ. 'ವಿ' ಎಂಬುದು '೪' ನೆಯ ಅಕ್ಷರವಾಗಿರುತ್ತದೆ. ಹೀಗೆ ವಿಷ್ಣು ಶಬ್ದ ಲಬ್ಧವಾದ '೫೬೪' ಸಂಖ್ಯೆಯು ಮುಖ್ಯವಾಗಿ ಆ ವಿಷ್ಣುವನ್ನೇ ಪ್ರತಿಪಾದಿಸುವ ಬ್ರಹ್ಮ ಸೂತ್ರಗಳ ಸಂಖ್ಯೆಯು ಮಧ್ವಾಚಾರ್ಯರು ಹೇಳಿದಂತೆ ಇರಲೇಬೇಕೆಂದು ವಿಮರ್ಶಕರಿಗೆ ದೃಢನಿಶ್ಚಯವಾಗಲಿಕ್ಕೆ ಸಾಕು. ನಾಲ್ಕು-ನಾಲ್ಕು ಪಾದಗಳುಳ್ಳ, ನಾಲ್ಕು ಅಧ್ಯಾಯಗಳ ಈ ಬ್ರಹ್ಮ ಸೂತ್ರಭಾಷ್ಯ ಗ್ರಂಥದಲ್ಲಿ ಶ್ರೀ ಮಹಾ ವಿಷ್ಣುವೇ ಸಮಸ್ತ ವೇದರಾಶಿಗಳ ತಾತ್ಪರ್ಯ ವಿಷಯೀಭೂತನಾದ ಪರಮ ಮುಖ್ಯಾರ್ಥನಾಗಿದ್ದಾನೆ ಎಂಬ ಸಿದ್ಧಾಂತವನ್ನು ಪ್ರತಿಪಾದಿಸಲಾಗಿದೆ. ಸರ್ವ ಶಾಸ್ತ್ರಗಳ ನಿರ್ಣಯವೂ ಇದರಿಂದಲೇ ಆಗುವದರಿಂದ ಈ ನಿರ್ಣಾಯಕ ಗ್ರಂಥವು ಸರ್ವ ಶಾಸ್ತ್ರಗಳ ಮೂರ್ಧನ್ಯಸ್ಥಾನಾಪನ್ನವಾಗಿದೆ ಎಂದು ಶ್ರೀ ಗುರು ಮಧ್ವರು ಅಭಿಪ್ರಾಯಪಟ್ಟಿದ್ದಾರೆ.

ಈ ಬ್ರಹ್ಮ ಸೂತ್ರಗಳ ನಾಲ್ಕು ಅಧ್ಯಾಯಗಳಿಗೆ— ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ ಹಾಗೂ ಫಲಾಧ್ಯಾಯ ಎಂದು ಕರೆದದ್ದು ಔಚಿತ್ಯಪೂರ್ಣವೂ, ಯಥಾರ್ಥವೂ ಆಗಿರುತ್ತದೆ. ಪ್ರಥಮಾಧ್ಯಾಯದ ಪ್ರಾರಂಭದ

ಪಂಚ ಪ್ರಕರಣಗಳು ಪೀಠಿಕಾರೂಪವಾಗಿದ್ದು ಆನಂದಮಯಾಧಿಕರಣದಿಂದ ನಿಜವಾದ ಉದ್ದಿಷ್ಟವಾದ ಸಮನ್ವಯವು ಪ್ರಾರಂಭವಾಗುತ್ತದೆ. ಜಿಜ್ಞಾಸಾಧಿಕರಣ, ಜನ್ಮಾಧಿಕರಣ, ಶಾಸ್ತ್ರಯೋನಿತ್ವಾಧಿಕರಣ, ಸಮನ್ವಯಾಧಿಕರಣ, ಈಕ್ಷತ್ಯಧಿಕರಣ ಎಂಬ ಅಧ್ಯಾಯ ಪಾದ ಪೀಠಿಕಾರೂಪವಾದ ಈ ಪಂಚಾಧಿಕರಣೀ ಭಾಷ್ಯ, ಅನುವ್ಯಾಖ್ಯಾನಗಳಲ್ಲಿ ಆಚಾರ್ಯರು ಬಹು ವಿಷಯಗಳನ್ನು ಶಾಸ್ತ್ರಾನುಗುಣವಾಗಿ ವಿಮರ್ಶಿಸಿದ್ದಾರೆ.

ಈ ಪೀಠಿಕಾ ಭಾಗದಲ್ಲಿ ಮೊದಲನೇ ಸೂತ್ರದಿಂದ ಗುಣಪರಿಪೂರ್ಣನಾದ ಪರಬ್ರಹ್ಮನ ಜಿಜ್ಞಾಸೆಯು ಅವಶ್ಯ ಕರ್ತವ್ಯವೆಂದು ಹೇಳಿ ಜಿಜ್ಞಾಸ್ಯ ಬ್ರಹ್ಮನು ನಿರ್ಗುಣ ಎಂದು ಹೇಳುವ ಪರವಾದಿಗಳ ಮತವನ್ನು ಖಂಡಿಸಿದ್ದಾರೆ. ಎರಡನೆಯ ಸೂತ್ರದಿಂದ ಸ್ವಯಂ ಬಾದರಾಯಣರೇ ಗುಣಪರಿಪೂರ್ಣತ್ವದ ಉಪಪಾದಕವಾದ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವನ್ನು ಹೇಳಿದ್ದಾರೆ. ಬ್ರಹ್ಮನು ನಿರ್ಗುಣ ಎಂದು ಹೇಳಿದ ಅದ್ವೈತವಾದಿಗಳಿಗೆ ಬಾದರಾಯಣರ "ಜನ್ಮಾದ್ಯಸ್ಯಯತಃ" ಎಂಬ ಎರಡನೆಯ ಸೂತ್ರವು ದೊಡ್ಡ ತಲೆ ಬೇನೆಯಾಗಿ ಪರಿಣಮಿಸುತ್ತದೆ. ಗುಣ–ಪರಿಪೂರ್ಣವಸ್ತುವೇ ಬ್ರಹ್ಮ ಎಂದು ಹೇಳಿದ ವೈಷ್ಣವರಿಗೆ ಜಗತ್ ಜನ್ಮಾದಿ ಕರ್ತೃತ್ವ ರೂಪ ಲಕ್ಷಣ ವಿಧಾಯಕವಾದ ದ್ವಿತೀಯ ಸೂತ್ರವು ಸಾಧಕವಾದರೂ ನಿರ್ಗುಣ ವಾದಿಗಳಿಗೆ ಅದು ನುಂಗಲಾರದ ತುತ್ತಾಗಿ "ಅದು ಸ್ವರೂಪ ಲಕ್ಷಣವಲ್ಲ" "ತಟಸ್ಥ ಲಕ್ಷಣ" ಎಂದು ಏನೇನೋ ಹೇಳಿ ಪಾರಾಗುವ ಹಾದಿಯನ್ನು ಹುಡುಕಾಡುತ್ತಾರೆ. ಒಂದು ತಪ್ಪನ್ನು ಮುಚ್ಚಿಕೊಳ್ಳಲು ಹೋಗಿ ನೂರು ಸುಳ್ಳು ತಪ್ಪುಗಳನ್ನು ಒಪ್ಪಿಕೊಳ್ಳುವ ಎಬಡನಂತೆ ಆಗುತ್ತದೆ ಅವರ ಪರಿಸ್ಥಿತಿ. ಆಚಾರ್ಯರು ಹೆಜ್ಜೆ-ಹೆಜ್ಜೆಗೂ ಅವರನ್ನು ಹಿಡಿದು ತಡೆದು ಎತ್ತ ಹೋದರೂ ನಿರ್ಗುಣಕ್ಕೆ ಪ್ರಸಕ್ತಿಯೇ ಇಲ್ಲವೆಂದು ಹೊಡೆದು ಹಾಕುತ್ತಾರೆ. ಹೀಗೆ ಆಚಾರ್ಯರು ಪೀಠಿಕಾ ಪ್ರಕರಣದಲ್ಲಿಯೇ ಪ್ರಧಾನಮಲ್ಲ ನಿಬರ್ಹಣ ನ್ಯಾಯದಿಂದ ಶಂಕರ, ರಾಮಾನುಜ, ಬೌದ್ಧ, ಭಾಸ್ಕರ, ಪ್ರಭಾಕರ, ವೈಶೇಷಿಕ ಮುಂತಾದ ವಿದ್ವದ್ವೇದಾಂತ ವಾದಿಗಳನ್ನೆಲ್ಲ ಖಂಡಿಸಿ ಅವರ ತಪ್ಪುಗಳನ್ನೂ ಅವರಿಂದಲೇ ಒಪ್ಪಿಸಿ ತೆಪ್ಪನೇ ಕೂಡಿಸಿಬಿಡುತ್ತಾರೆ.

ಈ ರೀತಿಯಾಗಿ ಈ ಪ್ರಸ್ತಾವನಾ ರೂಪವಾದ ಪಂಚಾಧಿಕರಣ ಪ್ರಕರಣಗಳಲ್ಲಿ ಬ್ರಹ್ಮ ವಿಚಾರದ ಆವಶ್ಯಕತೆ, ಆ ಪರಬ್ರಹ್ಮನ ಲಕ್ಷಣ ಹಾಗೂ ಅವನಿಗೆ ಶಾಸ್ತ್ರೈಕ್ಯಗಮತ್ವ ಸರ್ವ ಶಬ್ದವಾಚ್ಯತ್ವ ಮುಂತಾದ ವಿಷಯಗಳನ್ನು ಸಾಂಗೋಪಾಂಗವಾಗಿ ವಿಚಾರಿಸಿ, ಕೂಲಂಕಷವಾಗಿ ವಿಮರ್ಶಿಸಿ ಸಾಧಿಸಿ ಗುಣಪೂರ್ಣ ಎಂಬ ಆನಂದಮಯ ಅಧಿಕರಣದಿಂದ ಆ ಬ್ರಹ್ಮನು ಜಗಜ್ಜನ್ಮಾದಿಕಾರಣ ವಿಷಯದಲ್ಲಿ ಶ್ರುತಿ ಮನ್ವಯವನ್ನು ಮಾಡಿ ತೋರಿಸುತ್ತಾರೆ. ಇದೇ ಈ ಭಾಷ್ಯಕಾರರ ನಿಜವಾದ ವ್ಯಾಖ್ಯಾನದ ಮರ್ಮವಾಗಿದೆ.

ಅಪರಂಪಾರವಾದ ವೇದ ರಾಶಿಯಲ್ಲಿಯ ಎಲ್ಲ ಶ್ರುತಿ ವಾಕ್ಯಗಳ ಸಮನ್ವಯವನ್ನು ಪ್ರತ್ಯೇಕವಾಗಿ ಮಾಡಿತೋರಿಸುವದು ಅಶಕ್ಯ ಕೋಟಿಯ ಮಾತು. ಮತ್ತು ಅನವಶ್ಯಕವಾದ ಕಾರ್ಯ.ಒಂದು ವಿಶಿಷ್ಟ ನ್ಯಾಯ ಕ್ರಮದಿಂದ ಒಂದೊಂದು ಜಾತೀಯವಾದ ಶ್ರುತಿವಾಕ್ಯ ಸಮನ್ವಯವನ್ನು ಮಾಡಿಬಿಟ್ಟರೆ ತತ್ಸಮಕಕ್ಷ್ಯಾಪನ್ನವಾದ ಸಕಲ ಶ್ರುತಿಗಳ ಸಮನ್ವಯ ಕ್ರಮವು ತಾನಾಗಿಯೇ ತಿಳಿದುಹೋಗುವದು. ಅದಕ್ಕಾಗಿ ಶ್ರೀ ವೇದವ್ಯಾಸದೇವರು ಶೃಂಗಿಗ್ರಾಹಕತಯಾ ಪ್ರಾತಿನಿಧಿಕವಾಗಿ ಕೆಲವು ಶ್ರುತಿ ವಾಕ್ಯಗಳ ಸಮನ್ವಯವನ್ನು ತೋರಿಸಿದ್ದಾರೆ. ಅತ್ಯಂತ ಸಂಕ್ಷಿಪ್ತವಾದ ಸೂತ್ರಾವಯವದಲ್ಲಿ ಬ್ರಹ್ಮಾಂಡ ಅರ್ಥವನ್ನು ಹುದುಗಿಸಿ ಹೇಳುವ ಅನನ್ಯ ಸಾಮಾನ್ಯ ಜಾಣ್ಮೆಯುಳ್ಳ ಬಾದರಾಯಣರ ವಿಶಿಷ್ಟ ಶ್ರುತಿವಾಕ್ಯ ಉದ್ಧರಣದ ಉದ್ದೇಶ ಹಾಗೂ ಆಕೂತಗಳನ್ನು ಅರಿಯಲಾರದೇ ಉಳಿದೆಲ್ಲ ಭಾಷ್ಯಕಾರರು ತಡವರಿಸಿ ತಬ್ಬಿಬ್ಬಾಗಿ ಎಡವಿ ಬಿದ್ದಿದ್ದಾರೆ. ಅವರು ಮಾಡಿಕೊಂಡ ವ್ಯವಸ್ಥೆಯೆಲ್ಲವೂ ಕೊನೆಗೆ ಅವರನ್ನೇ ಗೊಂದಲಗೆಡಿಸಿ ಸಂದೇಹ ಸಾಮ್ರಾಜ್ಯವನ್ನು ನಿರ್ಮಿಸುತ್ತದೆ.

ಅದಕ್ಕಾಗಿ ಸರ್ವಜ್ಞರು ಅನುಸರಿಸಿದ ಪದ್ಧತಿಯೇ ಬೇರೆ. ಇದು ಅವರ ಶಾಸ್ತ್ರ ಪ್ರಜ್ಞೆಯ ಸೂಕ್ಷ್ಮತಮತೆಗೆ ನಿದರ್ಶನವಾಗಿದೆ. ಶಬ್ದಗಳನ್ನು ಅತ್ರಪ್ರಸಿದ್ಧ, ಅನ್ಯತ್ರ ಪ್ರಸಿದ್ಧ, ಉಭಯತ್ರ ಪ್ರಸಿದ್ಧ, ಅನ್ಯತ್ರೈವ ಪ್ರಸಿದ್ಧ, ಅರ್ಥಾತ್ ಬ್ರಹ್ಮನಲ್ಲಿ ಪ್ರಸಿದ್ಧ, ಬ್ರಹ್ಮನನ್ನು ಬಿಟ್ಟು ಬೇರೆ ಕಡೆಗೆ ಪ್ರಸಿದ್ಧ, ಬ್ರಹ್ಮನಲ್ಲಿಯೂ ಬೇರೆಕಡೆಯಲ್ಲಿಯೂ ಪ್ರಸಿದ್ಧ, ಮತ್ತು ಬ್ರಹ್ಮನನ್ನು ಬಿಟ್ಟು ಬೇರೆಕಡೆಯಲ್ಲಿಯೇ ಪ್ರಸಿದ್ಧ ಹೀಗೆ ನಾಲ್ಕು ರೀತಿಯಿಂದ ವಿಂಗಡಿಸಿದ್ದಾರೆ. ಈ ನಾಲ್ಕರಲ್ಲಿಯೂ ಮತ್ತೆ ನಾಮಾತ್ಮಕ ಮತ್ತು ಲಿಂಗಾತ್ಮಕ ಎಂದು ಎರಡು ವಿಭಾಗ ಮಾಡಿಕೊಂಡು ಇತರತ್ರ ಪ್ರಸಿದ್ಧವಾದ— ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಪ್ರಥಮ ಪಾದದಲ್ಲಿಯೂ, ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ದ್ವಿತೀಯ ಪಾದದಲ್ಲಿಯೂ, ಉಭಯತ್ರ ಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ತೃತೀಯ ಪಾದದಲ್ಲಿಯೂ, ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಚತುರ್ಥ ಪಾದದಲ್ಲಿಯೂ ಮಾಡಿ ತೋರಿಸಿದ್ದಾರೆ. ಬ್ರಹ್ಮನಲ್ಲಿ ಪ್ರಸಿದ್ಧವಾದ ಶಬ್ದಗಳಿಗಂತೂ ಪ್ರತ್ಯೇಕವಾಗಿ ಮಾಡಿ ತೋರಿಸುವ ಅವಶ್ಯಕತೆಯೇ ಇಲ್ಲ.

ಸಮನ್ವಯಾಧ್ಯಾಯ ಎಂದು ಹೆಸರಾದ ಈ ಪ್ರಥಮಾಧ್ಯಾಯದಲ್ಲಿ ಮುಖ್ಯವಾಗಿ ಆಚಾರ್ಯರು ಹೇಳಿದ್ದು ಸರ್ವಶಬ್ದಗಳೂ, ಯಾವ ಅಪವಾದವೂ ಇಲ್ಲದೇ ಪರಮ ಮುಖ್ಯ ವೃತ್ತಿಯಿಂದ ಪರಬ್ರಹ್ಮನನ್ನೇ ಬೋಧಿಸುತ್ತವೆ ಎಂಬುದು.

೧ನೇ ನಾಮ ಪಾದದಲ್ಲಿ ವಿಷ್ಣುವನ್ನು ಬಿಟ್ಟು ಬೇರೆಕಡೆ ಪ್ರಸಿದ್ಧವಾದ ಆನಂದಮಯ ಆಕಾಶ, ಪ್ರಾಣ ಜ್ಯೋತಿ, ಗಾಯತ್ರಿ ಮುಂತಾದ ನಾಮಾತ್ಮಕ ಶಬ್ದಗಳಿಗೆ ಪರಬ್ರಹ್ಮ

ನಲ್ಲಿಯೇ ಸುಂದರವಾದ ಸಮನ್ವಯವನ್ನು ಸಮರ್ಥಿಸಿ ತೋರಿಸಲಾಗಿದೆ. ಅಂತಃಸ್ಥತ್ವ ಲಿಂಗದ ಸಮನ್ವಯವನ್ನೂ ಹೃದಯಗ್ರಾಹಿಯಾಗುವಂತೆ ಮಾಡಿ ತೋರಿಸಿದ್ದಾರೆ ಈ ಇದೇ ಅಧ್ಯಾಯದಲ್ಲಿ ಶ್ರೀಮದಾಚಾರ್ಯರು.

ಎರಡನೇಯ ಲಿಂಗಪಾದದಲ್ಲಿ ಬ್ರಹ್ಮನಲ್ಲಿ ಅನ್ಯತ್ರ ಪ್ರಸಿದ್ಧವಾದ ಸರ್ವಗತತ್ವ, ಅತ್ತೃತ್ವ, ಗುಹಾಪ್ರವಿಷ್ಟತ್ವ, ಅಂತರ್ಯಾಮಿತ್ವ, ಅದೃಶ್ಯತ್ವ ಮುಂತಾದ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನೂ, ವೈಶ್ವಾನರ ನಾಮ ಸಮನ್ವಯವನ್ನೂ ಮನಂಬುಗುವ ರೀತಿಯಲ್ಲಿ ಆಚಾರ್ಯರು ಮಾಡಿ ತೋರಿಸಿದ್ದಾರೆ.

ಮೂರನೇಯ ನಾಮ ಲಿಂಗ ಪಾದದಲ್ಲಿ ದ್ಯುಭ್ವಾದ್ಯಾಯತನತ್ವ ಮುಂತಾದ ಲಿಂಗಾತ್ಮಕ ಶಬ್ದಗಳಿಗೂ ನಾಮಾತ್ಮಕಗಳಾದ ಭೂಮಾದಿ ಶಬ್ದಗಳಿಗೂ ಶ್ರೀ ಹರಿಯಲ್ಲಿ ಸಮನ್ವಯವನ್ನು ತೋರಿಸಿ ದೇವತೆಗಳ ಪ್ರವಾಹನಿತ್ಯ ಸ್ವರೂಪ, ಬ್ರಹ್ಮಜ್ಞಾನಾಧಿಕಾರ, ಶೂದ್ರರಿಗೆ ವೇದದಲ್ಲಿ ಅನಧಿಕಾರ ಮುಂತಾದ ವಿಷಯಗಳನ್ನು ಪ್ರತಿಪಾದಿಸಲಾಗಿದೆ.

ನಾಲ್ಕನೆಯ ನಾಮಲಿಂಗ ಪಾದದಲ್ಲಿ ಬ್ರಹ್ಮೇತರದಲ್ಲಿ ಮಾತ್ರವೇ ಪ್ರಸಿದ್ಧವಾದ ದುಃಖ, ಬದ್ಧ, ಅಭಾವ, ಅಸತ್, ಶೂನ್ಯ ಮೊದಲಾದ ಶಬ್ದಗಳಿಗೂ ಕೇವಲ ಕರ್ಮವಾಚಕವೆಂದು ಪ್ರಸಿದ್ಧವಾದ ಜ್ಯೋತಿರಾದಿ ಶಬ್ದಗಳಿಗೂ ಭಗವಂತನಲ್ಲಿಯೇ ಸಾಧು ಸಮನ್ವಯವನ್ನು ತೋರಿಸಿದ್ದಾರೆ.

ಬಹುವಿಧವಾದ ಶಬ್ದವೃತ್ತಿಗಳು ಅನೇಕವಿಧವಾಗಿದ್ದು ಬೇರೆ-ಬೇರೆ ವೃತ್ತಿಗಳಿಂದ ಬೇರೆ-ಬೇರೆ ವಸ್ತುಗಳನ್ನು ಬೋಧಿಸುತ್ತಿದ್ದರೂ ಲೌಕಿಕ ವೈದಿಕ ಎಲ್ಲ ಶಬ್ದಗಳು ಮಹಾಯೋಗವೃತ್ತಿಯಿಂದ ಬೋಧಿಸುವ ವಸ್ತು ಮಾತ್ರ ಒಂದೇ. ಅದೇ ಪರಬ್ರಹ್ಮ, ಪರಮಾತ್ಮ ಎಂಬುವದು ಈ ಪ್ರಥಮಾಧ್ಯಾಯದ ಸಾರವಾಗಿದೆ.

ಎರಡನೇ ಅಧ್ಯಾಯಕ್ಕೆ ಅವಿರೋಧಾಧ್ಯಾಯ ಎಂದು ಹೆಸರು. ಅದರಲ್ಲಿ ಯುಕ್ತಿ ವಿರೋಧ, ಸಮಯ ವಿರೋಧ, ಶ್ರುತಿ ವಿರೋಧ, ಶ್ರುತಿಯುಕ್ತಿ ವಿರೋಧಗಳನ್ನು ಆಶಂಕಿಸಿ ಪರಿಹರಿಸಲಾಗಿದೆ.

ಈ ಅಧ್ಯಾಯದ ಮೊದಲನೆಯ ಯುಕ್ತಿ ಪಾದದಲ್ಲಿ ರುದ್ರಾದಿಗಳಿಗೆ ಜಗತ್ಕಾರಣತ್ವ ಹಾಗೂ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಶೈವಾಗಮ ಹಾಗೂ ಪಾಶುಪತಾದಿ ಸ್ಮೃತಿ ವಿರೋಧವನ್ನೂ ಪರಿಹರಿಸಿದ್ದಾರೆ. ಸ್ಮೃತಿಗಳಿಗಿಂತ ಶ್ರುತಿಯು ಪ್ರಬಲ. ಶ್ರುತ್ಯನುಸಾರಿಯಾಗಿದ್ದರೆ ಮಾತ್ರ ಸ್ಮೃತಿಗಳಿಗೆ ಪ್ರಾಮಾಣ್ಯ. ಪಾಶು

ಪತಾದಿ ಸ್ಮೃತಿಗಳು ವೇದಾನುಗುಣವಾಗಿಲ್ಲವಾದ್ದರಿಂದ ಅವು ಪ್ರಮಾಣವಲ್ಲ. ವೇದಾನುಸಾರಿಯಾದ ವೈಷ್ಣವ ಸ್ಮೃತಿಗಳು ಪರಮ ಪ್ರಮಾಣವಾಗಿವೆ. ಅಲ್ಲಿ ವಿಷ್ಣುವಿಗೇ ಜಗತ್ಕಾರಣತ್ವವನ್ನು ಹೇಳಿದೆ. ಶೈವಾಗಮಗಳು ಅಪ್ರಾಣವಾದುದರಿಂದ ತ್ಯಾಜ್ಯ ಎಂದು ಹೇಳಿದ್ದಾರೆ.

ಎರಡನೆಯ ಸಮಯ ಪಾದದಲ್ಲಿ ವೈಶೇಷಿಕ, ಬೌದ್ಧ, ಜೈನ, ಚಾರ್ವಾಕ ಹಾಗೂ ನಿರೀಶ್ವರ ಸಾಂಖ್ಯ, ನ್ಯಾಯ, ಕಪಿಲ, ಕಣಾದ ಮುಂತಾದ ಮತಗಳನ್ನು ಆಚಾರ್ಯರು ಖಂಡತುಂಡವಾಗಿ ಖಂಡಿಸಿ ವೇದವಿರೋಧಿಯಾದ ಆ ದುರ್ಮತಗಳೆಲ್ಲವೂ ವೇದ ವಿರೋಧಿಯಾದ್ದರಿಂದ ಅಪ್ರಮಾಣ. ಅತಏವ ಅಗ್ರಾಹ್ಯ ಎಂದೂ ತೀರ್ಮಾನಿಸಿದ್ದಾರೆ.

ಮೂರನೆಯ ಪಾದದಲ್ಲಿ ಜೀವಾತ್ಮ, ಪರಮಾತ್ಮ, ಅಧಿಭೂತ, ಅಧಿದೈವ ವಿಷಯಕವಾದ ಶ್ರುತಿಗಳಲ್ಲಿಯ ಪರಸ್ಪರ ವಿರೋಧವನ್ನು ಪರಿಹಾರ ಮಾಡಲಾಗಿದೆ. ಆಕಾಶಕ್ಕೆ ಉತ್ಪತ್ತಿಯುಂಟುಎಂದು ಕೆಲವು ಶ್ರುತಿಗಳ ಅಭಿಪ್ರಾಯವಾದರೆ ಅದಕ್ಕೆ ಉತ್ಪತ್ತಿ ಇಲ್ಲ ಅದು ನಿತ್ಯ ಎಂದು ಹಲವು ಶ್ರುತಿಗಳು ಪ್ರತಿಪಾದಿಸುತ್ತವೆ. ಆಪಾತತಃ ಈ ಶ್ರುತಿ ವಿರೋಧವನ್ನು ಗೌಣ, ಮುಖ್ಯತ್ವಾಪೇಕ್ಷೆಯಿಂದ ಉತ್ಪತ್ತಿ, ಅನುತ್ಪತ್ತಿ ಎರಡನ್ನೂ ಒಪ್ಪಿ ಪರಿಹಾರವನ್ನು ಹೇಳಿದ್ದಾರೆ. ಹೀಗೆ ಶ್ರುತಿ ವಿರೋಧವನ್ನು ಪರಿಹರಿಸಿ ತತ್ವಮಸಿ ಅಹಂಬ್ರಹ್ಮಾಸ್ಮಿ ಮುಂತಾದ ಶ್ರುತಿ ವಚನಗಳಿಗೆ ಜೀವ ಬ್ರಹ್ಮೈಕ್ಯವು ಅರ್ಥವಲ್ಲ ದ್ವಾಸುಪರ್ಣಾ ಇತ್ಯಾದಿ ಶ್ರುತಿಬಲದಿಂದ 'ತತ್ಸದೃಶೋಸಿ' ಎಂದು ಅರ್ಥ ಮಾಡಬೇಕೇ ಹೊರತು'ತದಭಿನ್ನೋಸಿ'ಎಂದು ಸರ್ವಥಾ ಅರ್ಥ ಮಾಡಕೂಡದು. ಜೀವನ ಸ್ವರೂಪಭೂತವಾದ ಆನಂದಾದಿಗಳು ವ್ಯಕ್ತವಾಗಬೇಕಾದರೆ ಪರಮಾತ್ಮನ ಅನುಗ್ರಹ ಬೇಕೇಬೇಕು. ಜೀವನು ಪರಮಾತ್ಮನ ಅಂಶ, ಆದರೆ ಸ್ವರೂಪಾಂಶನಲ್ಲ. ಭಿನ್ನಾಂಶ. ಅವನ ಪ್ರತಿಬಿಂಬ. ಅವಿದ್ಯಾ ಕರ್ಮಾದಿಗಳಿಂದ ಜೀವರೆಲ್ಲರೂ ಪರಸ್ಪರ ಭಿನ್ನರು. ಭಗವಂತನ ಅನುಗ್ರಹದಿಂದಲೇ ಸರ್ವಜೀವರು ಮುಕ್ತಿ ಪಡೆಯಬಲ್ಲರು. ಮುಂತಾದ ಅನೇಕ ವಿಷಯಗಳನ್ನು ಈ ಎರಡನೇ ಅಧ್ಯಾಯದ ಮೂರನೇ ಪಾದದಲ್ಲಿ ಆಚಾರ್ಯರು ವಿವರಿಸಿದ್ದಾರೆ.

ನಾಲ್ಕನೆಯ ನ್ಯಾಯೋಪೇತ ಶ್ರುತಿಪಾದದಲ್ಲಿ ಯುಕ್ತಿ ಸಹಿತವಾದ ಶ್ರುತಿವಿರೋಧವನ್ನು ಪರಿಹರಿಸಲಾಗಿದೆ. ಕೆಲವು ಶ್ರುತಿಗಳು ಮನಸ್ಸು,ವಾಕ್,ಇಂದ್ರಿಯಗಳಿಗೆಲ್ಲಉತ್ಪತ್ತಿ ಇಲ್ಲಎಂದು ಹೇಳಿದರೆ ಮತ್ತೆ ಕೆಲವು ಶ್ರುತಿಗಳು ಅವೆಲ್ಲವೂ ಉತ್ಪನ್ನವಾಗಿರುತ್ತವೆ ಎಂದು ಹೇಳರುತ್ತವೆ. ಇಂಥ ವಿರೋಧಗಳನ್ನೆಲ್ಲ ಸಯುಕ್ತಿಕವಾಗಿ ಪರಿಹಾರ ಮಾಡಿ ಮುಖ್ಯ ಪ್ರಾಣದೇವರ ಮಹಿಮೆಯನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ. ಎಲ್ಲ ಇಂದ್ರಿಯಗಳೂ ಮುಖ್ಯಪ್ರಾಣನ ಅಧೀನ. ಅವನು ಭಗವದಧೀನ. ಶರೀರಾದಿ ಕರ್ತೃತ್ವವೂ ವಿಷ್ಣುವಿಗೇ ಸೇರಿದ್ದು. ಚತುರ್ಮುಖ ಬ್ರಹ್ಮನುದ್ಧಾರ ಕಾರಣ. ಶರೀರವು ತೇಜೋಬನ್ನಾತ್ಮಕವಾಗಿರುತ್ತದೆ. ಅದು ಬರೀ ಪಾರ್ಥಿವವಲ್ಲ ಎಂದು ಮುಂತಾಗಿ ಹೇಳಿದ್ದಾರೆ.

ಮೂರನೆಯ ಅಧ್ಯಾಯವು ಸಾಧನಾಧ್ಯಾಯ ಎಂದು ಕರೆಯಿಸಿಕೊಳ್ಳಲ್ಪಡುತ್ತದೆ. ಇದರಲ್ಲಿ ವೈರಾಗ್ಯಪಾದ, ಭಕ್ತಿಪಾದ ಉಪಾಸನಾಪಾದ ಮತ್ತು ಜ್ಞಾನಪಾದ ಎಂದು ೪ ಅಧ್ಯಾಯಗಳಿರುತ್ತವೆ. ಈ ೪ ಅಧ್ಯಾಯಗಳಲ್ಲಿಯೂ ಮೋಕ್ಷ ಸಾಧನವಾದ ವೈರಾಗ್ಯಾದಿಗಳ ವಿಚಾರವು ತುಂಬಿರುತ್ತದೆ.

ಈ ಅಧ್ಯಾಯದ ಮೊದಲನೇ ವೈರಾಗ್ಯ ಪಾದದಲ್ಲಿ ಜೀವಿಗೆ ಸ್ವರ್ಗ, ನರಕ, ಭೂಮಿ, ಮೂರು ಸ್ಥಾನಗಳಲ್ಲಿ ಪರಿಭ್ರಮಣ ಗರ್ಭವಾಸ ಮೊದಲಾದವುಗಳೆಲ್ಲವೂ ಅತ್ಯಂತ ದುಃಖಕಾರಕವಾಗಿವೆ. ಆದುದರಿಂದ ದುಃಖಕಾರಕವಾದ ಎಲ್ಲ ವಿಷಯ ಗಳನ್ನು ತ್ಯಾಗಮಾಡಿ ಪರಮಾತ್ಮನಲ್ಲಿ ನಿರಂತರ ಮನವನ್ನಿಡಬೇಕೆಂದು ಹೇಳಿದ್ದಾರೆ.

ಈ ಅಧ್ಯಾಯದ ಎರಡನೆಯ ಭಕ್ತಿಪಾದದಲ್ಲಿ ಪರಮಾತ್ಮನಲ್ಲಿ ನಿರಂತರ ಭಕ್ತಿ ದಾರ್ಢ್ಯವು ಉಂಟಾಗಲಿಕ್ಕಾಗಿ ಶ್ರೀ ಹರಿಯ ಮಹಿಮೆಯನ್ನು ಹೇಳಲಾಗಿದೆ. ಜೀವನ ಸ್ವಪ್ನ, ಸುಷುಪ್ತಿ, ಜಾಗ್ರತಿ ಮುಂತಾದವು ಭಗವದ್ ಅಧೀನವೇ ಆಗಿವೆ. ಶ್ರೀ ಹರಿಯು ಅನಂತ ರೂಪದಿಂದ ಅಸಂಖ್ಯ ಸ್ಥಾನದಲ್ಲಿದ್ದರೂ ಆ ಎಲ್ಲ ರೂಪಗಳಿಗೂ ಅಭೇದವೇ ಉಂಟು. ಜೀವ ಪರಮಾತ್ಮರಿಗೆ ಭೇದಾಭೇದವಿಲ್ಲ. ಅತ್ಯಂತ ಭೇದವೇ ಉಂಟು. ಪರಮಾತ್ಮನು ಅವ್ಯಕ್ತನಾಗಿದ್ದರೂ ಭಕ್ತಿಯಿಂದ ಆರಾಧಿಸಿದರೆ ಅವನ ಪ್ರಸಾದದಿಂದ ಭಗವದ್ ಅಪರೋಕ್ಷವಾಗುವದು. ಆದ್ದರಿಂದ ಅವನಲ್ಲಿ ದೃಢವಾದ ಭಕ್ತಿಯನ್ನು ಮಾಡ ಬೇಕು ಎಂದು ಹೇಳಿದ್ದಾರೆ.

ಮೂರನೆಯ ಉಪಾಸನಾ ಪಾದದಲ್ಲಿ ಸರ್ವವೇದ ಪ್ರತಿಪಾದ್ಯನಾದ ಶ್ರೀ ಹರಿಯ ಉಪಾಸನೆಯ ಕ್ರಮವನ್ನು ಹೇಳಿ ಕೊಡಲಾಗಿದೆ. ಆನಂದ, ಜ್ಞಾನ, ನಿರ್ದೋಷತ್ವ ಹಾಗೂ ಸ್ವಾಮಿತ್ವ ಈ ನಾಕು ಗುಣಗಳ ಉಪಾಸನೆಯನ್ನು ಮಾನ ವರೂ, ತದಧಿಕ ಗುಣೋಪಾಸನೆಯನ್ನು ದೇವತೆಗಳೂ ಮಾಡಬೇಕು. ಮಾನವರು ಬ್ರಹ್ಮಾದ್ಯಂಗ ದೇವತಾ ಉಪಾಸನಾಪೂರ್ವಕವಾಗಿ ಸಕಲ ಸಚ್ಛಾಸ್ತ್ರ ಶ್ರವಣ ಮನ ನಾದಿ ಶಾಸ್ತ್ರಾಭ್ಯಾಸ ರೂಪವಾದ ಭಗವದ್ ಉಪಾಸನೆಯನ್ನು ಅವಶ್ಯವಾಗಿ ಮಾಡ ಬೇಕೆಂದು ನಿರ್ದೇಶಿಸಲಾಗಿದೆ.

೪ ನೇಯ ಜ್ಞಾನ ಪಾದದಲ್ಲಿ ಸರ್ವ ಪುರುಷಾರ್ಥ ಸಾಧನೀಭೂತವಾದ ಜ್ಞಾನದ ಮಹಿಮೆಯು ನಿರೂಪಿಸಲ್ಪಟ್ಟಿದೆ. ಜ್ಞಾನಿಗಳಿಗೆ ದೋಷ ಲೇಪವಿಲ್ಲ. ಪರಮಾತ್ಮನ ಜ್ಞಾನವು ಯೋಗ್ಯರಿಗೆ ಮಾತ್ರ ದೊರಕುತ್ತದೆ. ಪ್ರತಿಬಂಧಕವಿಲ್ಲದಿದ್ದರೆ ಶ್ರವಣಾದಿ ಸಾಧನಾನುಷ್ಠಾನ ಮಾಡಿದ ಇದೇ ಜನ್ಮದಲ್ಲಿಯೇ ಆಗುವದು. ಇಲ್ಲದಿದ್ದರೆ ಜನ್ಮಾಂತರದಲ್ಲಿ ಅಂಥ ಜ್ಞಾನವು ಲಭ್ಯವಾಗುವದು.

೪ ನೇಯ ಫಲಾಧ್ಯಾಯದಲ್ಲಿ ವೈರಾಗ್ಯಾದಿ ಸಾಧನಗಳಿಂದ ಸಾಧ್ಯವಾದ ಬ್ರಹ್ಮಜ್ಞಾನಕ್ಕೆ ಫಲಸ್ವರೂಪವಾದ ಮೋಕ್ಷ ವಿಚಾರವನ್ನು ಮಾಡಲಾಗಿದೆ. ಅಪ

ಮೋಕ್ಷ ಜ್ಞಾನಕ್ಕೆ ಮುಖ್ಯ ಕಾರಣ ಶ್ರವಣ ಮನನಾದಿಗಳ ಆವೃತ್ತಿ. 'ಸರ್ವಸ್ವಾಮಿ ಮಮಸ್ವಾಮಿ' ಎಂದು ಶ್ರೀ ಹರಿಯ ಉಪಾಸನೆಯನ್ನೂ ತದಾಶ್ರಿತರೆಂದು ದೇವತೋಪಾಸನೆಯನ್ನೂ ಮಾಡಬೇಕು. ಮುಕ್ತಿ ಪೂರ್ವದಲ್ಲಿಯೂ, ಮುಕ್ತಿ ಪ್ರಾಪ್ತಿಯಾದ ಬಳಿಕವೂ ಭಗವಂತನ ಧ್ಯಾನೋಪಾಸನೆಯನ್ನು ಮಾಡಬೇಕು.

ಈ ತರಹದ ಉಪಾಸನೆಯಿಂದ ಅಪರೋಕ್ಷ ಜ್ಞಾನವಾಗಿ ಪೂರ್ವಕರ್ಮದ ನಾಶವಾಗುವದು. ಮುಂದಿನ ಕರ್ಮ ಲೇಪವು ತಪ್ಪಿ ಹೋಗುವದು. ಅಕ್ಷೀಣವಾಗಿ ಉಳಿದ ಪ್ರಾರಬ್ಧ ಕರ್ಮಕ್ಕೆ ಮಾತ್ರ ಮೋಕ್ಷದಿಂದಲೇ ಜಯ.

ದೇವತೆಗಳ ಹಾಗೂ ಮಾನವರ ಮೋಕ್ಷವನ್ನು ಕುರಿತು ಉತ್ಕ್ರಮಣ ಕ್ರಮವು ಭಿನ್ನ-ಭಿನ್ನವಾಗಿರುವದು. ದೇವತೆಗಳಲ್ಲಿ ವಾಗಭಿಮಾನಿ ದೇವತೆಗಳು ಮನೋಭಿಮಾನಿ ದೇವತೆಗಳಲ್ಲಿಯೂ,ಅವರು ಪ್ರಾಣಾಭಿಮಾನಿ ಚತುರ್ಮುಖನಲ್ಲಿಯೂ ಅವನು ಪರಮಾತ್ಮನಲ್ಲಿಯೂ ಲಯ ಹೊಂದುವರು. ಪ್ರಕೃತಿ ಅಭಿಮಾನಿಯಾದ ಮಹಾಲಕ್ಷ್ಮಿ ದೇವಿಯು ನಿತ್ಯ ಮುಕ್ತಳಾದುದರಿಂದಲೂ, ವಿಭುವು ಆದುದರಿಂದಲೂ ಅವಳಿಗೆ ಲಯವಿಲ್ಲ. ಉಳಿದ ದೇವತೆಗಳು ಬ್ರಹ್ಮ ದೇವರ ದ್ವಾರಾ ಪರಮಾತ್ಮನಲ್ಲಿ ಲೀನನಾಗುವರು.

ಮಾನವರಲ್ಲಿ ಮುಕ್ತಿಯೋಗ್ಯ ಜೀವರ ದೇಹೋತ್ಕ್ರಮಣ ಕಾಲದಲ್ಲಿ ಎದೆಯ ತುದಿಯಲ್ಲಿ ಜ್ಯೋತಿಯುಂಟಾಗುತ್ತದೆ. ಆ ಜ್ಯೋತಿ ಪ್ರಭೆಯಲ್ಲಿ ಸಜ್ಜೀವನು ಸುಷುಮ್ನಾನಾಡಿಯದ್ವಾರಾ ಉತ್ಕ್ರಮಣ ಹೊಂದಿ ಅರ್ಚಿರಾದಿ ಮಾರ್ಗದಿಂದ ಪ್ರಯಾಣ ಬೆಳೆಸುತ್ತಾನೆ. ಇದೇ ಮಾರ್ಗದಿಂದ ಮುಂದೆ ನಡೆವ ಅವನು ಅತಿವಾಹಕ ವಾಯು ತಟಿದಭಿಮಾನಿ ಲೋಕ, ವರುಣ ಇತ್ಯಾದಿ ದ್ವಾರಾ ಮುಖ್ಯ ವಾಯುವಿನ ಕಡೆಗೆ ಹೋಗುತ್ತಾನೆ. ಮುಖ್ಯಪ್ರಾಣರು ಅವನನ್ನು ಶ್ರೀ ಹರಿಯ ಕಡೆಗೆ ಕರೆದುಕೊಂಡು ಹೋಗುತ್ತಾರೆ.

ಹೀಗೆ ಭಗವಂತನನ್ನು ಹೊಂದಿದ ಭಕ್ತನು ಮುಕ್ತನು ತನ್ನ ಜೀವಸ್ವರೂಪ ಭೂತವಾದ ಆನಂದವನ್ನು ಪಡೆಯುತ್ತಾನೆ. ಆ ಅವಸ್ಥೆಯಲ್ಲಿ ಅವನ ದೇಹ ಜ್ಞಾನಾತ್ಮಕ ಸರ್ವಾಂಗವೂ ಆನಂದಮಯ. ಇಚ್ಛಾ ಮಾತ್ರದಿಂದಲೇ ಅವನು ಬೇಕಾದ ಭೋಗಗಳನ್ನು ಭೋಗಿಸಬಲ್ಲ. ಮುಕ್ತಿಯಲ್ಲಿ ಜೀವನಿಗೆ ಅವನ ಯೋಗ್ಯತಾನುಗುಣವಾಗಿ ಬೇಡಿದ ಸುಖ, ಬಯಸಿದ ಭೋಗ ಎಲ್ಲವೂ ದೊರೆಯುವದು. ಆದರೆ ಜಗತ್ ಸೃಷ್ಟ್ಯಾದಿ ಸಾಮರ್ಥ್ಯವು ಮಾತ್ರ ಇಲ್ಲ. ಅವನ್ನು ಅವನು ಬಯಸುವದೂ ಇಲ್ಲ. ಒಮ್ಮೆ ಮೋಕ್ಷ ಮಂದಿರದಲ್ಲಿ ಕಾಲಿರಿಸಿದ ಬಳಿಕ ಮರಳಿ ಬರುವಂತಿಲ್ಲ. ಹೊರಳಿ ಹುಟ್ಟುವಂತಿಲ್ಲ. ದುಃಖ ಎಂಬ ಶಬ್ದವೇ ಅಲ್ಲಿ ಇಲ್ಲ. ಸೊರಗುವಂತಿಲ್ಲ. ಸೊಕ್ಕುವಂತಿಲ್ಲ. ಕೇವಲ ಆನಂದ ಪೂರ್ಣನಾಗಿ ಭಗವಂತನ ಅನುಚರನಾಗಿ ತನ್ನ ಸ್ವರೂಪ ಸುಖವನ್ನು ಅನುಭವಿಸುತ್ತಿರುವದೇ ಮೋಕ್ಷ ಎಂದು ಆನಂದತೀರ್ಥರು ತಮ್ಮ ಬ್ರಹ್ಮಸೂತ್ರ ಭಾಷ್ಯ ಗ್ರಂಥದಲ್ಲಿ ಮೋಕ್ಷದಾಯಕ ಅನೇಕ ವಿಷಯಗಳನ್ನು ನಿರೂಪಿಸಿದ್ದಾರೆ.

# ೨. ಅನುವ್ಯಾಖ್ಯಾನ

ಅನುವ್ಯಾಖ್ಯಾನವು ಶ್ರೀ ಮಧ್ವರ ಕಲಶಕೃತಿ. ಅವರ ಸೂತ್ರ ಭಾಷ್ಯದಂತೆ ಇದಾದರೂ ಬಾದರಾಯಣರ ಬ್ರಹ್ಮ ಸೂತ್ರಗಳನ್ನು ಕುರಿತಾಗಿದ್ದರೂ ಇದರ ರೀತಿ ಅದಕ್ಕಿಂತ ಹರಿತ. "ದುರ್ವಾದಿ ಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಮ್" ದುರ್ವಾದಿಗಳ ಗರ್ವ ಪರ್ವತಕ್ಕೆ ಇದೊಂದು ವಜ್ರಾಯುಧ ಎಂದು ಪಂಡಿತಾ ಚಾರ್ಯರು ಇದನ್ನು ಬಣ್ಣಿಸಿದ್ದಾರೆ. ಆ ಶಿಷ್ಯೋತ್ತಮರ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಮದಾಚಾರ್ಯರು ಈ ಅನುವ್ಯಾಖ್ಯಾನವನ್ನು ನಾಕು ಜನ ಒಳ್ಳೇ ಚತುರ ಮತಿ ಗಳಾದ ಶಿಷ್ಯರನ್ನು ಕೂಡಿಸಿಕೊಂಡು ಏಕ ಕಾಲಕ್ಕೆ ಒಬ್ಬೊಬ್ಬರಿಗೆ ಒಂದೊಂದು ಅಧ್ಯಾಯವನ್ನು ಹೇಳುತ್ತ ನಾಲ್ಕೂ ಅಧ್ಯಾಯಗಳನ್ನು ಒಮ್ಮೆಲೇ ಬರೆಯಿಸಿ ಮುಗಿಸಿ ಬಿಟ್ಟರಂತೆ.

ಶ್ರೀಮದಾಚಾರ್ಯರ ಸರ್ವಜ್ಞತ್ವಕ್ಕೆ ಇನ್ನೇನು ನಿದರ್ಶನ ಬೇಕು! ಗುರು ಮಧ್ವರ ಸರ್ವಜ್ಞತ್ವವನ್ನು ಸಮರ್ಥಿಸಲಿಕ್ಕೆ ಅನುವ್ಯಾಖ್ಯಾನವೊಂದೇ ಸಾಕು. ಅತ್ಯಂತ ಕಠಿಣತರವಾದ ಶಾಸ್ತ್ರೀಯ ಜಟಿಲ ವಿಷಯಗಳನ್ನೆಲ್ಲ ಇಷ್ಟು ಸುಂದರ ಬಂಧುರವಾದ ಪ್ರಮಾಣ ಶುದ್ಧ ಪದ್ಧತಿಯಲ್ಲಿ ಕಾವ್ಯ ಶೈಲಿಯಲ್ಲಿ ನಿರೂಪಿಸಿರುವ ಪ್ರಬಂಧವೆಂದರೆ ಪ್ರಪಂಚದಲ್ಲಿಯೇ ಅನುವ್ಯಾಖ್ಯಾನವನ್ನು ಬಿಟ್ಟರೆ ಬೇರೊಂದಿಲ್ಲ. ಇದರಲ್ಲಿ ಅಪೂರ್ವ ಶಾಸ್ತ್ರೀಯ ವಿಷಯಗಳ ವಿಮರ್ಶನ ಹಾಗೂ ಪ್ರಮಾಣ ಪ್ರಮೇಯಗಳ ಸೂಕ್ಷ್ಮ ವಿವೇಚನೆಯ ಗಹನ ಕ್ರಮ ಸಂಭ್ರಮದಲ್ಲಿಯೂ ಸಹಜತೆಗೆ ಕುಂದು ಉಂಟಾಗಿಲ್ಲ. ಸ್ಪಷ್ಟತೆಗೆ ಚ್ಯುತಿ ಬಂದಿಲ್ಲ.

ಹೇಳಬೇಕಾದ ವಿಷಯವನ್ನು ನೇರವಾಗಿ ಹೇಳಿ ಅದಕ್ಕೆ ಉಪಷ್ಟಂಭಕವಾದ ಉಕ್ತಿ ಮತ್ತು ಉಪೋದ್ಬಲಕವಾದ ಯುಕ್ತಿಗಳನ್ನು ವಿಶದವಾಗಿ ತಿಳಿಸಿ, ಅದರ ಮೇಲೆ ಬರುವ ಆಕ್ಷೇಪ ಆಶಂಕೆಗಳಿಗೆಲ್ಲ ಸಮಂಜಸವಾದ ಸಮಾಧಾನವನ್ನು ಹೇಳಿ, ಪ್ರತಿ ವಾದಿಗಳ ವಿಧಾನಗಳನ್ನೆಲ್ಲ ಪ್ರಮಾಣೋದಾಹರಣ ಪುರಸ್ಸರವಾಗಿ ಯುಕ್ತಿವಿರೋಧ ಪ್ರದರ್ಶನ ಪೂರ್ವಕವಾಗಿ ಖಂಡಿಸಿ, ಸ್ವಮತವನ್ನು ಮಂಡಿಸುವ ಶ್ರೀಮದಾಚಾರ್ಯರ ಗ್ರಂಥ ಲೇಖನದ ಸೊಬಗು ಸೊಗಸುಗಾರಿಕೆಗಳನ್ನು ಅನುವ್ಯಾಖ್ಯಾನದಲ್ಲಿಯೇ ನೋಡಬೇಕು. ಒಂದೇ ಮಾತಿನಲ್ಲಿ ಈ ಗ್ರಂಥ ಪ್ರಣಯನದ ಪ್ರಣಾಲಿಕೆಯ ಬಗೆಗೆ ಹೇಳಬೇಕೆಂದರೆ—

"ಸ್ಫುಟತಾ ನ ಪದೈರಪಾಕೃತಾ ನ ಚ ನ ಸ್ವೀಕೃತಮರ್ಥಗೌರವಮ್ ।
ಇದಮೀದೃಗನೀದೃಗಾಶಯಃ ಪ್ರಸಭಂ ವಕ್ತು ಮುಪಕ್ರಮೇತ ಕಃ ?॥"

ಇಲ್ಲಿ ಸುಸ್ಪಷ್ಟತೆಯನ್ನು ಎಲ್ಲಿಯೂ ಕೈ ಬಿಟ್ಟಿಲ್ಲ. ಆದರೂ ಯಾವ ವಾಕ್ಯ ದಲ್ಲಿಯೂ ಅರ್ಥ ಗಾಂಭೀರ್ಯವು ಇಲ್ಲವೆಂದಿಲ್ಲ. ಸಕಲ ವಿಷಯಗಳನ್ನು ಬಲ್ಲ ಈ ಸರ್ವಜ್ಞರ ಹೊರತು ಇಂಥ ಗ್ರಂಥವನ್ನು ಯಾವನು ತಾನೇ ಬರೆಯಬಲ್ಲ ! ಹೇಳ ಬಲ್ಲ !

ಆಚಾರ್ಯರ ಶಾಸ್ತ್ರಾರ್ಥಗಳ ಕ್ರೋಢೀಕರಣ ವಿಶದೀಕರಣ ಮೀಮಾಂಸನಾದಿ ಕ್ರಮಗಳು ಅನ್ಯಾದೃಶವಾಗಿವೆ. ಅವರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯ, ಅಣು ಭಾಷ್ಯ, ಅನುವ್ಯಾಖ್ಯಾನ, ನ್ಯಾಯ ವಿವರಣ ಎಂದು ನಾಲ್ಕು ಗ್ರಂಥಗಳನ್ನು ಬರೆದರೂ ಒಂದರಿಂದ ಒಂದಕ್ಕೆ ಗತಾರ್ಥತೆಯಿಲ್ಲ. ವಿರೋಧವಂತೂ ಇಲ್ಲವೇ ಇಲ್ಲ. ಆದರೆ ಒಂದೊಂದರಲ್ಲಿಯೂ ಹೊಸ ಹೊಸ ವಿಷಯಗಳೇ. ಪ್ರತಿಯೊಂದರ ಗುರಿಯೂ ಬಾದರಾಯಣೀಯ ವಚನಗಳ ಭಾವ ಸಂಪದದ ಅಭಿವ್ಯಂಜನೆಯೇ.

ಈ ಅನುವ್ಯಾಖ್ಯಾನದಲ್ಲಿ ದ್ವೈತ ಮತದ ಮೇಲೆ ಈ ವರೆಗೆ ಬಂದ, ಮುಂದೆ ಬರಬಹುದಾದ ಎಲ್ಲ ದೋಷಗಳನ್ನೂ ಖಂಡಿಸಿ ವೈಷ್ಣವ ಮತದ ನಿರ್ದುಷ್ಟ ನಿಷ್ಕೃಷ್ಟ ಸ್ವರೂಪವನ್ನು ಸ್ಪಷ್ಟವಾಗಿಯೇ ಆಚಾರ್ಯರು ಮಂಡಿಸಿದ್ದಾರೆ. ಆಚಾರ್ಯರ ಶೈಲಿ ನಿಸ್ಸಂದಿಗ್ಧವಾದ ಸ್ಪಷ್ಟ ಪ್ರವಾಹಿನೀ ಶೈಲಿ. "ಅಸಂಶಯಃ ಸಂಶಯಛಿದ್ ಗುರುರುಕ್ತೋ ಮನೀಷಿಭಿಃ" ಎಂಬ ಮಾತು ಅಕ್ಷರಶಃ ಅವರಲ್ಲಿ ಮಾತ್ರ ಅನ್ವಯಿಸುತ್ತದೆ. ಅನು ವ್ಯಾಖ್ಯಾನದ ಪ್ರಾರಂಭದಲ್ಲಿ ಆಚಾರ್ಯರು ಓಂಕಾರಾರ್ಥವನ್ನು ನಿರ್ವಚನ ಮಾಡಿದ್ದು ಸರ್ವ ಸಂಶಯೋಚ್ಛೇದಿಯಾಗಿದ್ದು ಸರಳ ಸುಂದರವೂ ಭಾವಾರ್ಥ ಬಂಧುರವೂ ಆಗಿದೆ.

"ಓ ತತ್ತ್ವವಾಚೇಹ್ಯೋಂಕಾರೋ ವಕ್ತ್ಯ ಸೌ ತದ್ಗುಣೋತತಾಂ ।
ಸ ಏವ ಬ್ರಹ್ಮ ಶಬ್ದಾರ್ಥಃ ನಾರಾಯಣ ಪದೋದಿತಃ ।
ಸ ಏವ ಭರ್ಗ ಶಬ್ದಾರ್ಥಃ ವ್ಯಾಹೃತೀನಾಂ ಚ ಭೂಮತಃ ।
ಭಾವನಾಚ್ಚೈವ ಸುತ್ವಾಚ್ಚ ಸೋಽಯಂ ಪುರುಷ ಇತ್ಯಪಿ ।
ಸ ಏವ ಸರ್ವ ವೇದಾರ್ಥಃ ಜಿಜ್ಞಾಸ್ಯೋಽಯಂ ವಿಧೀಯತೆ ॥

ಗುಣಪರಿಪೂರ್ಣತ್ವ ವಾಚಕವಾದ 'ಓಂ' ಬ್ರಹ್ಮ , ನಾರಾಯಣ, ಮುಂತಾದ ಅನೇಕ ಶಬ್ದಗಳ ಪರಮ ಮುಖ್ಯಾರ್ಥನಾದ ಶ್ರೀ ಹರಿಯು ಸರ್ವವೇದ ಪ್ರತಿಪಾದ್ಯ. ಅವನ ಜಿಜ್ಞಾಸೆಯೇ ಇಲ್ಲಿ ಮಾಡಲ್ಪಡುತ್ತದೆ ಎಂದು ವಿಷ್ಣುವಿಗೆ ಸರ್ವವೇದ ಪ್ರತಿ ಪಾದ್ಯತ್ವವನ್ನು ಕ್ರಮಬದ್ಧವಾಗಿಯೂ ತರ್ಕಶುದ್ಧವಾಗಿಯೂ ಆಚಾರ್ಯರು ಪ್ರತಿ ಪಾದಿಸಿದ್ದು ಅತ್ಯಪೂರ್ವವೂ ಸರ್ವಶ್ರುತಿ ಸ್ಮೃತಿ ಸಮ್ಮತವೂ ವಿದ್ವನ್ಮಾನ್ಯವೂ ಆಗಿದೆ. ಓಂಕಾರವು ಭಗವದ್ವಾಚಕ. 'ಓ ಮಿತಿ ಬ್ರಹ್ಮ' ಎಂದು ಶ್ರುತಿ ಹೇಳುತ್ತದೆ. ಈ ಓಂಕಾರದ ವ್ಯಾಖ್ಯಾನವೇ ವ್ಯಾಹೃತಿ. ವ್ಯಾಹೃತಿ ವ್ಯಾಖ್ಯಾನ ಗಾಯತ್ರಿ, ಗಾಯತ್ರಿ

ವ್ಯಾಖ್ಯಾನ ಪುರುಷಸೂಕ್ತ. ವೇದಗಳೂ ಆ ಪುರುಷ ಸೂಕ್ತದ ಅರ್ಥಭೂತವಾಗಿವೆ. ಸರ್ವವೇದ ವ್ಯಾಖ್ಯೇಯವಾಗಿದೆ. ಪುರುಷಸೂಕ್ತ. ಪುರುಷಸೂಕ್ತ ವ್ಯಾಖ್ಯೇಯ ಗಾಯಿತ್ರೀ. ಗಾಯಿತ್ರೀ ವ್ಯಾಖ್ಯೇಯ ವ್ಯಾಹೃತಿ. ವ್ಯಾಹೃತಿ ವ್ಯಾಖ್ಯೇಯ ಓಂಕಾರ. ಆ ಓಂಕಾರಾರ್ಥವೇ ಶ್ರೀ ಹರಿಯಾದುದರಿಂದ ಅವನು ಸರ್ವ ವೇದಾರ್ಥ ಎಂಬ ಯುಕ್ತಿಗಳಿಂದ ತಾನೇ ಸಿದ್ಧವಾಗುವದೆಂದು ಮಾರ್ಮಿಕವಾಗಿ ಹೇಳಿದ್ದಾರೆ. ಇದರಲ್ಲಿಯ ಎಲ್ಲ ಮಾತುಗಳಿಗೂ ಶ್ರೀ ಜಯತೀರ್ಥರು ಆಚಾರ್ಯರು ಸೂಚಿಸಿದ ಪ್ರಮಾಣಗಳನ್ನು ಉದಾಹರಿಸಿದ್ದಾರೆ.

ಹೀಗೆ ಅನುವ್ಯಾಖ್ಯಾನದ ಮೊದಲಿನಿಂದ ತುದಿಯವರೆಗೂ ತರ್ಕ ಬದ್ಧತೆಯು ಎದ್ದು ಕಾಣುವ ಅಪೂರ್ವ ಗುಣವಾಗಿದೆ. ಇದನ್ನೇ ನಮ್ಮ ಪ್ರಾಚೀನ ಆಚಾರ್ಯರು "ಆಮೂಲಾಗ್ರನಿಬದ್ಧ ತರ್ಕ ಜಟಿಲಂ" ಎಂಬ ಶಬ್ದದಿಂದ ಬಣ್ಣಿಸಿದ್ದಾರೆ.

ಈ ಅನುವ್ಯಾಖ್ಯಾನದಲ್ಲಿ ಆಚಾರ್ಯರು ತಮ್ಮ ಸಮಕಾಲೀನ ಹಾಗೂ ಪೂರ್ವತನರಾದ ಯಾವ ಕುವಾದಿಗಳನ್ನೂ ಖಂಡಿಸದೇ ಬಿಟ್ಟಿಲ್ಲ. ವೇದ ಶಾಸ್ತ್ರ ಸಮ್ಮತವಾದ ಯಾವ ಪ್ರಮೇಯವನ್ನೂ ಮಂಡಿಸದೇ ಬಿಟ್ಟಿಲ್ಲ.

ಅನುವ್ಯಾಖ್ಯಾನದ "ವಿಮಲೈಃ ಶ್ರುತಿಶಾಣ ನಿಶಾತ ತಮೈಃ ಸುವಚೋಸಿ ಭಿಃ" ಅದ್ವೈತ ಮತೀಯ ಪ್ರಕ್ರಿಯೆಗಳಂತೂ ವಾತಾಹತವಾಗಿ, ಛಿನ್ನ-ಭಿನ್ನವಾಗಿ, ಧೂಳೀಪಟವಾಗಿ ಹೋಗಿವೆ.

ನಿರ್ಗುಣ ಬ್ರಹ್ಮ, ನಿರ್ವಿಶೇಷ ಬ್ರಹ್ಮ, ಅನಿರ್ವಚನೀಯ, ಸದಸದ್ವಿಲಕ್ಷಣ, ತಟಸ್ಥ ಲಕ್ಷಣ ಜಹದಜಹಲ್ಲಕ್ಷಣ, ಸತ್ಯಮಿಥ್ಯ ಉಪಾಧಿ, ಮಾಯಾ, ಅವಿದ್ಯಾ, ಅಧ್ಯಾಸ,ಮುಂತಾದ ಅದ್ವೈತಶಾಸ್ತ್ರದ ಪಾರಿಭಾಷಿಕಶಬ್ದಗಳ ತಳಬುಡಗಳನ್ನೆಲ್ಲ ಸೋಸಿ ಅವುಗಳ ಉತ್ಪತ್ತಿ, ನಿಷ್ಪತ್ತಿ, ಅರ್ಥ, ಅನರ್ಥ, ಶಾಸ್ತ್ರ ಪ್ರಪಚಂದಲ್ಲಿ ಅವುಗಳಿಂದಾಗುವ ಅನಾಹುತ ಆಭಾಸಗಳನ್ನೆಲ್ಲ ತೋರಿಸಿ ಅವಾವವೂ ವೇದಸಿದ್ಧವಾದ ವೈಷ್ಣವ ಮತಕ್ಕೆ ವಿರುದ್ಧವಾಗಿ ಜೀವ ಬ್ರಹ್ಮೈಕ್ಯ ಜಗನ್ಮಿಥ್ಯಾತ್ವಾದಿ ಸುಳ್ಳುಪೊಳ್ಳು ತತ್ವಗಳಿಗೆ ಸಂಸಾಧಕವಾಗಲಾರವೆಂದು ಸಿದ್ಧಪಡಿಸಿ "ಅನಂತದೋಷ ದುಷ್ಟಂ ಚ ಹೇಯಂ ಮಾಯಾ-ಮತಂ ಶುಭೈಃ" ಎಂದು ಉದ್ಘೋಷಿಸುತ್ತಾರೆ ಶ್ರೀ ಸರ್ವಜ್ಞಾಚಾರ್ಯರು.

ಜೀವ ಬ್ರಹ್ಮೈಕ್ಯವಾದಿಗಳ ಮತದಲ್ಲಿ ಶಾಸ್ತ್ರಾರಂಭವೇ ಕೂಡುವದಿಲ್ಲ ಎಂದು ಆಚಾರ್ಯರು ಸಾಧಿಸಿದ್ದು ನಿಷ್ಪಕ್ಷ ವಿಮರ್ಶಕರಿಗೆ ಒಳ್ಳೇ ಕೌತುಕಾಧಾಯಕವಾಗಿದೆ. ಅಷ್ಟೇ ಸುಸಂಗತವೂ ಆಗಿದೆ. ಇದರಂತೆ ಲಕ್ಷಣ ಸೂತ್ರಾರಂಭವೂ ಅದ್ವೈತ ಮತ ರೀತ್ಯಾ ಸರ್ವಥಾ ಅನುಪಪನ್ನವೇ ಆಗುತ್ತದೆ ಎಂದು ಆ ಅದ್ವೈತವಾದಿಗಳೇ ಒಪ್ಪು

ವಂತೆ ವಿವರ ವಿಶದವಾಗಿ ತಿಳಿ-ತಿಳಿಯಾಗಿ ತಿಳಿಸಿ ಹೇಳುತ್ತಾರೆ ಆಚಾರ್ಯರು. ಅವರ ಭಾವವನ್ನು ಟೀಕಾಚಾರ್ಯರ ಮುಖದಿಂದ ಕೊಂಚ ಕೇಳಿರಿ.

ಸಣ್ಣ ಹುಡುಗರಿಗೆ ಬೋಧಿಸುವಂತೆ ಮೊದಲಿನಿಂದಲೇ ಪ್ರಾರಂಭಿಸಿ ಲಕ್ಷಣ ವನ್ನು ಹೇಳುವ ಉದ್ದೇಶವೇನು ? ಎಂದು ಪ್ರಶ್ನಿಸಿಗೊಂಡು—

"ಲಕ್ಷಣಂ ಹಿ ಸಜಾತೀಯ ವಿಜಾತೀಯ ವ್ಯವಚ್ಛೇದಾರ್ಥಂ ಭವತಿ ।
ತಥಾ ಚ ಅನೇನ ಲಕ್ಷಣೇನ ಸಜಾತೀಯಾಜ್ಜೀವಾತ್ ವಿಜಾತೀಯಾದ್
ಜಡಾಚ್ಚ ಬ್ರಹ್ಮ ವ್ಯಾವರ್ತಿತಂ ಸೂತ್ರಕಾರೇಣ ।
ಜೀವೈಕ್ಯ ನಿರಾಕರಣ ಸೂತ್ರಸ್ಯಾರಂಭಃ ಕಥಂ ಜೀವೈಕ್ಯವಾದಿನಾಂ ಸ್ಯಾತ್॥?"

ಲಕ್ಷಣವನ್ನು ಹೇಳುವದು ತನ್ನ ಸಜಾತೀಯ ಹಾಗೂ ವಿಜಾತೀಯ ವಸ್ತುಗಳಿಂದ ಲಕ್ಷ್ಯ ವಸ್ತುವಿನಲ್ಲಿ ಭೇದ ಬುದ್ಧಿಯನ್ನು ಹುಟ್ಟಿಸಲಿಕ್ಕಾಗಿ. ಸರಿಯಷ್ಟೇ ! ಅಂದ ಬಳಿಕ ಬ್ರಹ್ಮನಿಗೆ ಲಕ್ಷಣ ಹೇಳುವ ಉದ್ದೇಶ ಬ್ರಹ್ಮನ ಸಜಾತೀಯವಾದ ಜೀವರಿಂದಲೂ, ವಿಜಾತೀಯವಾದ ಜಡದಿಂದಲೂ ಲಕ್ಷ್ಯ ಬ್ರಹ್ಮನಲ್ಲಿ ಭೇದ ಜ್ಞಾನ ವನ್ನು ಹುಟ್ಟಿಸುವದೇ ಎಂದಂತಾಯಿತು. ಏವಂಚ ಬ್ರಹ್ಮನಲ್ಲಿ ಜೀವೈಕ್ಯವನ್ನು ನಿರಾಕರಿಸಲಿಕ್ಕಾಗಿಯೇ ಹೊರಟ ಲಕ್ಷಣ ಸೂತ್ರದ ಪ್ರಾರಂಭವು ಜೀವೈಕ್ಯವಾದಿಗಳ ಮತದಲ್ಲಿ ಕೂಡುವದೆಂತು ?

ಜಗಜ್ಜನ್ಮಾದಿ ಕಾರಣತ್ವವು ಶ್ರೀ ವಿಷ್ಣುವಿನ ಸ್ವರೂಪಭೂತ ಲಕ್ಷಣವಾಗಿದೆ ಎಂದು ಹೇಳಿದ ಆಚಾರ್ಯರು ಅದಕ್ಕೆ ಭಾಗವತ ಪ್ರಮಾಣವನ್ನು ಕೊಟ್ಟು ಬಾದ ರಾಯಣರು ಜೀವೈಕ್ಯವನ್ನು ಈ ಲಕ್ಷಣ ಮೂಲಕ ನಿರಾಕರಿಸಿದ್ದಾರೆಂದು ಸ್ಪಷ್ಟ ಪಡಿಸಿದ್ದಾರೆ.

"ಜನ್ಮಾದ್ಯಸ್ಯೇತಿ ತೇನೈತದ್ವಿಷ್ಣೋರೇವ ಸ್ವಲಕ್ಷಣಂ
ಅಸ್ಯೋದ್ಭವಾದಿ ಹೇತುತ್ವಂ ಸಾಕ್ಷಾದೇವ ಸ್ವಲಕ್ಷಣಂ
ಕೃಷ್ಣಧ್ಯಾನಚ್ಛಲೇನೈವ ಸ್ವಯಂ ಭಾಗವತೇಽಬ್ರವೀತ್ ।
ಅತೋ ಜೀವೈಕ್ಯ ಮಪಿ ಸ ನಿರಾಚಕ್ರೆ ಜಗದ್ಗುರುಃ॥"

ಈ ಸಂದರ್ಭದಲ್ಲಿ ಭಾಗವತದ—

"ಬ್ರಹ್ಮಾಖ್ಯ ಮಸ್ಯೋದ್ಭವನಾದಿ ಹೇತುಭಿಃ ಸ್ವಲಕ್ಷಣೈಃ ಲಕ್ಷಿತ ಭಾವ ನಿರ್ವೃತಂ"

ಎಂದು ನ್ಯಾಯ ಸುಧಾದಲ್ಲಿ ಶ್ರೀ ಜಯತೀರ್ಥರು ಎತ್ತಿ ತೋರಿಸಿದ ಬಾದ ರಾಯಣರ ಭಾಗವತ ಪದ್ಯವನ್ನು ನೋಡಿದರೆ ವ್ಯಾಸರ ಅಭಿಪ್ರಾಯವು ಶ್ರೀ ಮಧ್ವಾ ಚಾರ್ಯರ ಮಾತಿನ ಪ್ರತಿಧ್ವನಿಯು ಮೂಲಧ್ವನಿಯಂತಿದೆಂಬುದು ಒಡೆದು ಕಾಣುವದು.

ಇದರಂತೆ ನಿರ್ಗುಣತ್ವವನ್ನು ಕೂಡ ಸಾಕ್ಷಾತ್ ಬಾದರಾಯಣರೇ ಖಂಡಿಸಿದ್ದಾರೆಂದು ಆಚಾರ್ಯರು ವ್ಯವಸ್ಥೆ ಮಾಡುತ್ತಾರೆ.

"ನಿರ್ಗುಣತ್ವಂ ಚ ತೇನೈವ ನಿಷಿದ್ಧಂ ಪ್ರಭುಣಾ ಸ್ವಯಂ"

ಇದೇ ಲಕ್ಷಣ ವಾಕ್ಯದಿಂದಲೇ ಅದ್ವೈತಿಗಳ ನಿರ್ಗುಣತ್ವ ವಾದವು ಪರಾಹತವಾದಂತಾಯಿತು.

ಲಕ್ಷಣ ವಾಕ್ಯವು ತನ್ನ ಮುಖ್ಯ ಲಕ್ಷ್ಯಕ್ಕೆ ಅಸಾಧಾರಣ ಧರ್ಮದ ಸಂಬಂಧವನ್ನು ಪ್ರತಿಪಾದಿಸುತ್ತ ಅಂಥ ಅಸಾಧಾರಣ ಧರ್ಮ ಸಂಪರ್ಕ ಮೂಲಕವಾಗಿಯೇ ಅದು ಲಕ್ಷ್ಯೇತರ ವಸ್ತುಗಳಿಂದ ಭಿನ್ನವಾಗಿರುತ್ತದೆಂದು ಇತರ ಭೇದವನ್ನೂ ಪ್ರತಿಪಾದಿಸುತ್ತದೆ. ಅದರಂತೆ ಈ 'ಜನ್ಮಾದ್ಯಸ್ಯಯತಃ' ಎಂಬ ಲಕ್ಷಣ ವಾಕ್ಯವು ಕೂಡ ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವ ಮತ್ತು ತದವಿನಾಭೂತವಾದ ಸರ್ವಜ್ಞತ್ವಾದಿ ಧರ್ಮಗಳ ಸಂಬಂಧವನ್ನು ಬ್ರಹ್ಮನಲ್ಲಿ ಪ್ರತಿಪಾದಿಸಿ ಬ್ರಹ್ಮೇತರವಾದ ಜೀವ ಜಡಾದಿ ಭೇದವನ್ನೂ ಬೋಧಿಸುತ್ತದೆ ಎಂದು ಹೇಳಬೇಕು. ಬ್ರಹ್ಮನಲ್ಲಿ ಜಗಜ್ಜನ್ಮಾದಿ ಕಾರಣತ್ವ, ಸರ್ವಜ್ಞತ್ವಾದಿ ಧರ್ಮಗಳ ಸಂಬಂಧವನ್ನು ಪ್ರತಿಪಾದಿಸುವ ಈ ಶ್ರುತಿಯು ಬ್ರಹ್ಮನ ನಿರ್ವಿಶೇಷತ್ವವನ್ನು ಖಂಡಿಸುತ್ತದೆ. ಅಂದ ಬಳಿಕ ನಿರ್ವಿಶೇಷತ್ವವಾದಿಗಳ ಮತದಲ್ಲಿ ನಿರ್ವಿಶೇಷತ್ವವನ್ನು ಖಂಡಿಸುವ ಸೂತ್ರಾರಂಭವು ಕೂಡುವ ಬಗೆ ಹೇಗೆ? ಎಂದು ಕೇಳಿದ್ದಾರೆ ಆಚಾರ್ಯರು.

ನಿರ್ವಿಶೇಷತ್ವವಾದಿನಾಂ ಚ ನಿರ್ವಿಶೇಷತ್ವಂ ನಿಷೇಧತಃ ಸೂತ್ರಸ್ಯ ಆರಂಭಃ
ಕಥಮ್ ಉಪಪದ್ಯತೇ ಇತಿ?"

ಹೀಗೆ ಮಾತು ಮಾತಿಗೂ ಅದ್ವೈತಿಗಳ ಉಸಿರು ಕಟ್ಟಿಸತಕ್ಕ ವಿವಿಧ ವಾಗ್ವ್ಯೂಹಗಳು, ಯುಕ್ತಿ ಜಾಲಗಳು ಈ ಅನುವ್ಯಾಖ್ಯಾನದಲ್ಲಿ ಹೇರಳವಾಗಿವೆ. ಮೊದಲಿನಿಂದಲೂ ಕೊನೆಯ ವರೆಗೆ ಅದ್ವೈತ ಮತವು ಶಾಸ್ತ್ರವಿರುದ್ಧ, ಸ್ವವ್ಯಾಹತ, ದೋಷಗ್ರಸ್ತ ಎಂಬುದನ್ನು ಅನುವ್ಯಾಖ್ಯಾನದ ಉದ್ದಕ್ಕೂ ಆಚಾರ್ಯರು ತೋರಿಸುತ್ತ ಹೋಗಿದ್ದಾರೆ. ಆದುದರಿಂದಲೇ ಇದಕ್ಕೆ "ಶಂಕರವಚೋ ಹುಂಕಾರ ಭಂಗ ಪ್ರದಂ" ಎಂದು ನಮ್ಮ ಪ್ರಾಚೀನ ಆಚಾರ್ಯರು ಕೊಟ್ಟ ವಿಶೇಷಣವು ಅನುವ್ಯಾಖ್ಯಾನಕ್ಕೆ ಅತ್ಯಂತ ಸಾರ್ಥಕವಾಗಿರುತ್ತದೆ.

ಅದ್ವೈತ ಮತವಾಗಲೀ ಅಥವಾ ಉಳಿದ ಮತಗಳಾಗಲೀ ಯಾವ ಪ್ರಮಾಣ ವಚನಗಳಿಗೂ ಜಗ್ಗದೆ, ಯಾವ ಯುಕ್ತಿಗಳಿಗೂ ಬಗ್ಗದೆ ತಮ್ಮದೇ ಶಾಠ್ಯ, ದೌಷ್ಟ್ಯ, ಧಾರ್ಷ್ಟ್ಯಗಳನ್ನು ಮೆರಯಿಸತೊಡಗಿದಾಗ ಆಚಾರ್ಯರು ನಿರುಪಾಯರಾಗಿ—

"ಕಶಾವೇತ್ರಾದಿಕಂ ತಸ್ಯ ತಸ್ಕರಸ್ಯೋತ್ತರಂ ವದೇತ್"

ಎಂದಂದು ಕೈಬಿಡುವದು ಉಂಟು.

ಒಮ್ಮೊಮ್ಮೆ ವಿಪಕ್ಷೀಯರ ಆಗ್ರಹವು ಅತಿಯಾದಾಗ ಹೇಳುವದನ್ನೆಲ್ಲ ಹೇಳಿ, ವಿವರಿಸುವದನ್ನೆಲ್ಲ ವಿವರಿಸಿ ತಿಳಿ ಹೇಳಿದರೂ ಕೇಳದಿದ್ದಾಗ ಸರ್ವಜ್ಞರಾದರೂ ಏನು ಮಾಡಬೇಕು ?

"ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ ತಂ ನರಂ ನ ರಂಜಯತಿ"

ಎಂಬ ವಚನದಂತೆ ಮಧ್ವಾಚಾರ್ಯರು ನಿರ್ಗುಣತ್ವವನ್ನು ಎಷ್ಟು ವಿಧವಾಗಿ ಖಂಡಿಸಿದರೂ, ನಿರ್ಗುಣನನ್ನು ಯಾವ ರೀತಿಯಿಂದಲೂ ನಿರೂಪಿಸಲು ಸಾಧ್ಯವಿಲ್ಲ ಎಂದು ಎಲ್ಲ ವಿಧದಿಂದಲೂ ತೋರಿಸಿ ಕೊಟ್ಟಾಗಲೂ ಕೇವಲ ದುರಾಗ್ರಹದಿಂದ ಆ ನಿರ್ಗುಣ ಬ್ರಹ್ಮದ ಬಡ–ಬಡಿಕೆಯನ್ನು ಮುಂದುವರಿಸಿದ ಅದ್ವೈತಿಯನ್ನು ಕುರಿತು—

"ನಿರ್ಗುಣತ್ವಂ ತದಾ ಚ ಸ್ಯಾತ್ ಆಸುರತ್ವಂ ನ ಚಾನ್ಯಥಾ"

ಎಂದು ಹೇಳಿಬಿಟ್ಟಿದ್ದಾರೆ.

ಇಡೀ ಅನುವ್ಯಾಖ್ಯಾನದಲ್ಲಿ ಪ್ರಪಂಚದ ಎಲ್ಲ ಶಾಸ್ತ್ರಗಳ ಖಂಡನ, ಮಂಡನ, ಮಂಥನ, ಸಮ್ಮರ್ಶನಾದಿಗಳು ಇದ್ದರೂ ಇದರ ಶೈಲಿಯು ಇನ್ನೂ ಅಲ್ಲಲ್ಲಿ—

"ಬಾಲಸಂಘಮಪಿ ಬೋಧಯದ್ಭೃಶಂ"

ಎಂಬಂತೆ ಲಲಿತ ಮನೋಹರವಾಗಿಯೇ ಕಂಡುಬರುತ್ತದೆ.

"ನಹಿ ಧರ್ಮಾದಿ ಸಿದ್ಧಿಸ್ಯಾತ್ ನಿತ್ಯವಾಕ್ಯಂ ವಿನಾ ಕ್ವಚಿತ್"
.... .... .... .... .... ....
'ಅಧರ್ಮವಾದಿನೋ ವಾಕ್ಯಂ ಅಪ್ರಯೋಜನಮೇಹಿ'............
.... .... .... .... .... ....
"ಯಥಾ ದೃಷ್ಟ್ವಾ ಪ್ರಸನ್ನಃ ಸನ್ ರಾಜಾ ಬಂಧಾಪನೋದಕೃತ್ ।
ಏವಂ ದೃಷ್ಟಃ ಸ ಭಗವಾನ್ ಕುರ್ಯಾದ್ ಬಂಧ ವಿಭೇದನಂ ॥"
.... .... .... .... .... ....

ಎಂದು ಮುಂತಾದ ಸಹಸ್ರಾರು ವಚನಗಳು ಆಚಾರ್ಯರ ಶೈಲಿಯ ಸಾರಲ್ಯ, ಪ್ರಸಾದ ಗುಣ. ಅರ್ಥ ಗಾಂಭೀರ್ಯ, ಸ್ಪಷ್ಟಾಭಿಪ್ರಾಯಕತೆಗಳಿಗೆ ನಿದರ್ಶನವಾಗಿ ಕಂಡು ಬರುತ್ತವೆ.

ಇಂಥ ಸರಳ ಸುಂದರವಾದ ದ್ರಾಕ್ಷಾಪಾಕದ ಶೈಲಿಯಲ್ಲಿಯ ಸುಲಲಿತ ಪದಗಳನ್ನು ತುಸು ಪರಕಿಸಿ ನೋಡಿದರೆ ಒಂದೊಂದು ಶಬ್ದದಲ್ಲಿಯೂ ಒಂದೊಂದು ಪದ್ಯದಲ್ಲಿಯೂ ಬ್ರಹ್ಮಾಂಡ ಅರ್ಥವು ಹುದುಗಿದ್ದು ಕಂಡು ಬಾರದೇ ಇರಲಾರರು.

ಶ್ರೀ ಮಧ್ವಾಚಾರ್ಯರ ಅರಸು ಕೃತಿಯಾದ ಈ ಅನುವ್ಯಾಖ್ಯಾನಕ್ಕೆ ಶ್ರೀ ಜಯತೀರ್ಥರು ಬರೆದ "ನ್ಯಾಯಸುಧಾ" ಎಂಬ ಗ್ರಂಥವು ಜಗನ್ಮಾನ್ಯವಾದ ಕೃತಿಯಾಗಿದೆ.

ಈ ನ್ಯಾಯಸುಧೆಗೆ ಶ್ರೀ ರಾಘವೇಂದ್ರಸ್ವಾಮಿಗಳು, ಶ್ರೀ ವಾದಿರಾಜರು, ಶ್ರೀ ವಿದ್ಯಾಧೀಶರು ಮೊದಲಾದ ಮಹನೀಯರು ಟಿಪ್ಪಣಿ ಬರೆದು ಮೂಲವಾದ ಪರಂಪರೆಯೂ, ಅನುವ್ಯಾಖ್ಯಾನದ ಗ್ರಾಂಥಿಕ ಗೌರವವು ಸುವ್ಯಕ್ತವಾಗುವಂತೆ ಮಾಡಿದ್ದಾರೆ.

ಈ ಅನುವ್ಯಾಖ್ಯಾನದ ಟೀಕೆಯಾದ ನ್ಯಾಯಸುಧಾ ಗ್ರಂಥದ ಮೇಲೆ ಬರೆಯಲಾದ ನೂರಾರು ಟೀಕಾ ಟಿಪ್ಪಣಿ ಗ್ರಂಥಗಳ ಬೆಳಕಿನಲ್ಲಿ ಅನುವ್ಯಾಖ್ಯಾನ ವಚನಗಳ ಪ್ರತಿಯೊಂದು ಶಬ್ದವನ್ನು ಅರ್ಥವಿಸ ಹೊರಟರೆ ಸರ್ವಜ್ಞಾಚಾರ್ಯರ ಭಾರತೀ ಪತಿತ್ವದ ಸಮ್ಯಗಾಕಲನವು ಧೀಮಂತರಿಗೆ ಆಗುವದರಲ್ಲಿ ಸಂದೇಹವಿಲ್ಲ.

## ೩. ನ್ಯಾಯಃ ವಿವರಣಂ

ಶ್ರೀ ಬಾದರಾಯಣರ ಬ್ರಹ್ಮ ಸೂತ್ರಗಳ ಮೇಲೆ ಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ ಎಂದು ಮೂರು ಗ್ರಂಥಗಳನ್ನು ರಚಿಸಿದ ಶ್ರೀ ಮಧ್ವಾಚಾರ್ಯರು ಅವೇ ಸೂತ್ರಗಳ ಮೇಲೆ ಮತ್ತೆ ನಾಲ್ಕನೆಯದಾದ ನ್ಯಾಯ ವಿವರಣ ಎಂಬ ಮತ್ತೊಂದು ಗ್ರಂಥವನ್ನು ರಚಿಸಿದ್ದಾರೆ. ಅದಕ್ಕೆ ಕಾರಣವನ್ನು ಸ್ವಯಂ ಪೂರ್ಣ ಪ್ರಜ್ಞರೇ ಈ ಗ್ರಂಥ ಪ್ರಾರಂಭದಲ್ಲಿ—

ಕೃತ್ವಾ ಭಾಷ್ಯಾನು ಭಾಷ್ಯೇಹಮಪಿ ವೇದಾರ್ಥ ಸತ್ಪತೇಃ।
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ಯಾಯ ವಿವೃತಿಂ ಸ್ಫುಟಂ॥
ಕರೋಮಿ ಮಂದ ಬುದ್ಧೀನಾಂ ಬುಧಾನಾಂ ಚೋಪಕಾರಿ ತಾಂ।
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದ ಪುರಸ್ಸರಃ॥

ಎಂಬ ಮಾತಿನಿಂದ ಹೇಳಿ ಅಜ್ಞರಿಗೂ, ಪ್ರಾಜ್ಞರಿಗೂ ಕೂಡಿಯೇ ಉಪಯೋಗವಾಗಬೇಕೆಂದು ಈ ಗ್ರಂಥವನ್ನು ರಚಿಸಲಾಗಿದೆ ಎಂದು ತಿಳಿಸಿದ್ದಾರೆ. ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನಗಳಲ್ಲಿ ಅಡಕವಾದ ನ್ಯಾಯಗಳ ವಿವರಣ ರೂಪವಾದುದರಿಂದ ಈ ಪುಟ್ಟ ಪ್ರಬಂಧವು ಸಮಗ್ರ ಸೂತ್ರ ಪ್ರಸ್ಥಾನದ ದಿವ್ಯ ದರ್ಶನವನ್ನು ಸಂಕ್ಷೇಪದಲ್ಲಿಯೇ ಸ್ವಾರಸ್ಯವಾಗಿ ಮಾಡಿಸುವ ಮಹಾ ಕೃತಿಯಾಗಿದೆ.

ಭಾಷ್ಯ, ಅನುವ್ಯಾಖ್ಯಾನಗಳನ್ನು ಚೆನ್ನಾಗಿ ಓದಿದ ಚೇತನಕ್ಕೆ ಸಮಗ್ರ ಸೂತ್ರಾರ್ಥವೆಲ್ಲವೂ ಏಕ ಬುದ್ಧ್ಯಾರೂಢವಾಗುವಂತೆ ಚಿತ್ತ ಭಿತ್ತಿಯಲ್ಲಿ ವಿಷಯವನ್ನು ಈ ಕಿರುಕೃತಿ ಒಟ್ಟೈಯಿಸುತ್ತದೆ. ಚತುರ ಧ್ಯಾಯಾತ್ಮಕವಾದ ಬ್ರಹ್ಮಮೀಮಾಂಸಾ ಶಾಸ್ತ್ರದ ಜ್ಞಾನ ಭಾಂಡಾರದ ನಾಕು ಬೀಗದ ಕೈಗಳನ್ನೇ ಓದುಗರ ಕೈಯಲ್ಲಿ ಈ ನ್ಯಾಯ ವಿವರಣವು ನೀಡುತ್ತದೆ.

ಆಚಾರ್ಯರ ಸ್ವಂತ ಶಬ್ದಗಳಲ್ಲಿ ಒಂದೊಂದು ಅಧಿಕರಣಗಳ ಸಂಕ್ಷಿಪ್ತ ಸಾರವನ್ನು ಕೇಳಿದಾಗ ಮೇರು ಮಂದರಗಳನ್ನೇ ಮುಷ್ಟಿಯಲ್ಲಿ ಮುಚ್ಚಿ ತಂದು ಕೊಟ್ಟ ಅನುಭವವಾಗುತ್ತದೆ. ತತ್ವಪ್ರಕಾಶಿಕಾ, ಸುಧಾ, ಚಂದ್ರಿಕಾದಿ ಗ್ರಂಥಗಳಲ್ಲಿ ಸಾವಿರಾರು ಪುಟಗಳಲ್ಲಿ ಧುಮ್ಮಿಕ್ಕಿ ಹರಿದು ಹೊಮ್ಮಿದ ಜಿಜ್ಞಾಸಾಧಿಕರಣದ ವಿಷಯಗಳನ್ನೆಲ್ಲ ನಾಕೇ ಮಾತುಗಳಲ್ಲಿ ಮುಗಿಸಿ ಬಿಡುವ ಆಚಾರ್ಯರ ಚಾತುರ್ಯವನ್ನು ನೋಡಿ ಚಿತ್ತವು ಚಮತ್ಕೃತವಾಗುತ್ತದೆ.

ಜೀವವ್ಯತಿರಿಕ್ತೇಶ್ವರಾಭಾವಾತ್ ತಸ್ಯಚಸ್ವಯಂ ಪ್ರಕಾಶತ್ವಾನ್ನ
ಜಿಜ್ಞಾಸ್ಯತೇತಿಪ್ರಾಪ್ತೇ "ಅಥಾತೋ ಬ್ರಹ್ಮ ಜಿಜ್ಞಾಸೇ"ತ್ಯಾಹ ।
ತದ್ಬ್ರಹ್ಮೇತಿ ಬ್ರಹ್ಮ ಶಬ್ದೇನ ಗುಣ ಪೂರ್ಣತ್ವೋಕ್ತೇಃ ನ ಅನುಭವ
ಸಿದ್ಧ ಅಲ್ಪ ಜೀವಾಭೇದಃ !
ಅಥ ಕಸ್ಮಾದುಚ್ಯತೇ ಬ್ರಹ್ಮೇತಿ "ಬೃಹಂತೋಹ್ಯಸ್ಮಿನ್ ಗುಣಾಃ"
ಇತಿ ಶ್ರುತೇಃ ಇತಿ ||

ಮುಗಿದೇ ಹೋಯಿತು ಜಿಜ್ಞಾಸಾಧಿಕರಣ. ಇದರಲ್ಲಿ ಯಾವ ವಿಷಯವು ಬಂದಿಲ್ಲ? ಎಲ್ಲವೂ ಬಂದಿದೆ. ಆದರೆ ಸಂಕ್ಷೇಪವಾಗಿ. ಸುಧಾ, ತತ್ವಪ್ರಕಾಶಿಕಾ, ಚಂದ್ರಿಕಾದಿ ಗ್ರಂಥಗಳಲ್ಲಿ ಇವೇ ಅಭಿಪ್ರಾಯವನ್ನೇ ಉಪಬೃಂಹಣ ಮಾಡಲಾಗಿದೆ.

(ಅದ್ವೈತ ಮತದಲ್ಲಿ) ಜೀವನೇ ಬ್ರಹ್ಮ. ಆ ಜೀವನಂತೂ ಸ್ವಯಂ ಸಿದ್ಧ. ಅಂದ ಬಳಿಕ ಜಿಜ್ಞಾಸೆಯೇಕೆ? ಯಾರದು? ಎಂಬ ಶಂಕೆಗೆ ಉತ್ತರ ಪ್ರಥಮಸೂತ್ರ "ಅಥಾತೋ ಬ್ರಹ್ಮ ಜಿಜ್ಞಾಸಾ" "ತದ್ವಿಜಿಜ್ಞಾಸಸ್ವ" ಎಂಬ ಶ್ರುತಿಯು ಜಿಜ್ಞಾಸೆಯನ್ನು ವಿಧಾನ ಮಾಡಿ "ತದ್ ಬ್ರಹ್ಮ" ಎಂದು ಜಿಜ್ಞಾಸ್ಯನಲ್ಲಿ ಬ್ರಹ್ಮ ಶಬ್ದವನ್ನು ಹೇಳಿದೆ. "ತದ್ ಬ್ರಹ್ಮ" ಎಂಬಲ್ಲಿಯ ಬ್ರಹ್ಮ ಶಬ್ದಕ್ಕೆ ಗುಣ ಪರಿಪೂರ್ಣ ಎಂದು ಅರ್ಥ. ಅಹ ಮಿತ್ಯಾಕಾರಕ ಅನುಭವಸಿದ್ಧನಾದ ಜೀವನಲ್ಲಿ ಅಂಥ ಗುಣ ಪೂರ್ಣತ್ವವಿಲ್ಲದ್ದರಿಂದ ಇವನು ಅವನಲ್ಲ. ಅವನ ಜ್ಞಾನವಿನ್ನೂ ನಮಗಿಲ್ಲ. ಆದಕ್ಕಾಗಿಯೇ ಆ ಗುಣ ಪೂರ್ಣ ವಸ್ತುವಾದ ಬ್ರಹ್ಮನ ವಿಚಾರವನ್ನು ಅವಶ್ಯವಾಗಿ ಮಾಡಲೇಬೇಕು.

ಜನ್ಮಾಧಿಕರಣವು ಇದಕ್ಕಿಂತಲೂ ಸಂಕ್ಷಿಪ್ತ. ಆದರೂ ಸರ್ವಾರ್ಥ ಸಂಗ್ರಾಹಕ.
"ನ ಜೀವ ಏ ವಾಯಂ ಬ್ರಹ್ಮ ಶಬ್ದಃ। ಯ ತೋವಾ ಇಮಾನಿ ಭೂತಾನಿ ಜಾಯಂತೇ"
ಇತ್ಯಾಧಿನಾ ಜನ್ಮಾದಿಕಾರಣತ್ವಸ್ಯೈವ ಬ್ರಹ್ಮ ಲಕ್ಷಣತ್ವೋಕ್ತೇಃ ||

ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದವು ಜೀವ ವಾಚಕವೇ ಎಂದೆನ್ನಕೂಡದು. ಯಾಕಂದರೆ ಶ್ರುತಿಯಲ್ಲಿ ಜಗಜ್ಜನ್ಮಾದಿಕಾರಣತ್ವವೇ ಬ್ರಹ್ಮನ ಲಕ್ಷಣ ಎಂದು ಹೇಳಲಾಗಿದೆ. ಅದು ಜೀವನಲ್ಲಿ ಅತ್ಯಂತ ಅಸಂಭಾವಿತ.

ಇದು ಜನ್ಮಾಧಿಕರಣದ ಸಾರಾಂಶ. ಹೀಗೆ ಎರಡೆರಡೇ ಮಾತು ವಚನಗಳಲ್ಲಿ ಆ ಆ ಅಧಿಕರಣಗಳ ಮರ್ಮ ಸ್ಥಳಗಳನ್ನೇ ಹಿಡಿದು ಶಾಸ್ತ್ರ ಸಿದ್ಧಾಂತಗಳನ್ನೆಲ್ಲ ಕೆನೆಗಟ್ಟಿಸುತ್ತ ಹೊರಟ ಈ ಪ್ರಬಂಧವು ಮಂದರಿಗಿಂತ ವಿದ್ವಾಂಸರಿಗೇ ತಾವು ಓದಿದ ಶಾಸ್ತ್ರವನ್ನೆಲ್ಲ ಮತ್ತೊಮ್ಮೆ ಮನನ ಮಾಡಿ ದೃಢಪಡಿಸಿಕೊಳ್ಳಲು ಅತ್ಯಂತ ಉಪಯುಕ್ತವಾಗಿದೆ.

೪೨೦ ಗ್ರಂಥಾತ್ಮಕವಾದ ಈ ಚಿಕ್ಕದಾದರೂ, ಚೊಕ್ಕ ತಕ್ಕ ಪ್ರಬಂಧಕ್ಕೆ ಶ್ರೀ ಜಯತೀರ್ಥರು ಎರಡು ಅಧ್ಯಾಯಕ್ಕೆ ಟೀಕೆ ಬರೆದರೆ, ಪ್ರಾಜ್ಞ ಪುಂಗವರಾದ ಶ್ರೀ ರಘೂತ್ತಮ ತೀರ್ಥರು ಮುಂದಿನ ಎರಡು ಅಧ್ಯಾಯಕ್ಕೆ ಟೀಕೆ ಬರೆದು ದ್ವಿತೀಯರಾದರೂ ಅದ್ವಿತೀಯ ಟೀಕಾಕೃತ್ಪಾದರೆನಿಸಿದ್ದಾರೆ. (ತದನಂತರಂ)

## ೪. ಅಣುಭಾಷ್ಯ

ಅನಂತಾರ್ಥಃ ಪ್ರಕಟಿತಃ ತ್ವಯಾಣಾ ಭಾಷ್ಯ ಸಂಗ್ರಹೇ ।
ಅಹೋ ಆತ್ಮ ಪರಿಜ್ಞಪ್ತ್ಯೈ ಕೃಷ್ಣೇಸ್ಯೈವಾನನಾಂತರೇ ॥

ಕೃಷ್ಣನು ತಾಯಿಗೆ ಬಾಯಲ್ಲಿಯೇ ಬ್ರಹ್ಮಾಂಡವನ್ನು ತೋರಿದಂತೆ, ಕೃಷ್ಣ ಭಕ್ತರಾದ ಗುರು ಮಧ್ವರು ೩೪ ಅನುಷ್ಟುಭ ಛಂದದ ಪದ್ಯಗಳಲ್ಲಿ ಚತುರಧ್ಯಾಯಾತ್ಮಕವಾದ ಸಮಗ್ರ ಬ್ರಹ್ಮ ಮೀಮಾಂಸಾ ಶಾಸ್ತ್ರವನ್ನೇ ತಂದು ತೋರಿಸಿದ್ದಾರೆ.

ತಮ್ಮ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರಿಗೆ ಸಾಧನೀ ದ್ವಾದಶಿಯ ದಿನ ಬ್ರಹ್ಮ ಸೂತ್ರ ಭಾಷ್ಯ ಪಾರಾಯಣಕ್ಕೆ ಅನುಕೂಲವಾಗಲಿ ಎಂದು ಆಚಾರ್ಯರು ಬ್ರಹ್ಮ ಸೂತ್ರ ಭಾಷ್ಯದ ಮುಖ್ಯ ಅಭಿಪ್ರಾಯವನ್ನೆಲ್ಲ ಪ್ರಾಯಃ ಒಂದೂ ಬಿಡದಂತೆ ಕ್ರೋಡೀಕರಿಸಿ ಈ ಅಣುಭಾಷ್ಯವನ್ನು ನಿರ್ಮಿಸಿದರೆಂದು ಐತಿಹ್ಯವಿದೆ.

ಸೂತ್ರ ಭಾಷ್ಯದ ಪ್ರತಿಬಿಂಬದಂತಿರುವ ಈ ಪುಟ್ಟ ಪ್ರಮೇಯ ಪ್ರಬಂಧವು ಆ ಮೂಲ ಗ್ರಂಥವಂತೆಯೇ ನಾಲ್ಕು ಅಧ್ಯಾಯಗಳುಳ್ಳದ್ದಾಗಿದೆ.

ಅದರ ಪ್ರಥಮಾಧ್ಯಾಯದಲ್ಲಿ ಶ್ರೀ ವಿಷ್ಣುವೇ ಜಿಜ್ಞಾಸ್ಯನಾಗಿದ್ದು ಅವನೇ ಜಗತ್ಕರ್ತಾ ಎಂದು ವೇದಗಳೆಲ್ಲ ಸಾರುತ್ತವೆ. ಅವನಲ್ಲಿಯೇ— ಪ್ರಾಣ, ಜ್ಯೋತಿ ಮುಂತಾದ ಸರ್ವ ಶಬ್ದಗಳೂ ಸಮನ್ವಯವಾಗುತ್ತವೆ ಎಂದು ನಿರೂಪಿಸಿದ್ದಾರೆ.

ದ್ವಿತೀಯಾಧ್ಯಾಯದಲ್ಲಿ ವೇದ-ವೇದಾನುಸಾರಿ ಸ್ಮೃತಿಗಳಿಗೆ ವಿರುದ್ಧವಾದ ಇತರ ಸ್ಮೃತಿಗಳು ಶ್ರೀ ಹರಿಯ ಗುಣಪರಿಪೂರ್ಣತೆಯನ್ನು ಅಲ್ಲಗಳೆಯಲಾರವು. ಅಪೌರುಷೇಯ ನಿತ್ಯವಾದ ವೇದಗಳು ಪರಮ ಪ್ರಮಾಣವಾದುದರಿಂದ ಭ್ರಾಂತಿ ಮೂಲವಾದ ಇತರಾಯುಕ್ತ ಸಮಯ ವಿರೋಧ ತೋರಿದರೂ ಆ ವೇದಗಳ ಪ್ರಾಮಾಣ್ಯ ಅಸಂದಿಗ್ಧ, ಸ್ವಯಂಸಿದ್ಧ.

ಈ ಜಗತ್ತೆಲ್ಲವೂ ಮುಖ್ಯ ಪ್ರಾಣ ದೇವರ ವಶವಲ್ಲಿದೆ. ಅವರು ಶ್ರೀ ಹರಿಯ ವಶವಲ್ಲಿರುವರು. ಸರ್ವ ದೋಷ ವರ್ಜಿತನಾದ ಶ್ರೀ ಹರಿಯೇ ಸರ್ವೋತ್ತಮ ಎಂದು ವೇದಗಳು ಸಾರುತ್ತಿವೆಯೆಂದು ನಿರೂಪಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸತ್ಕರ್ಮದಿಂದ ಸ್ವರ್ಗ. ದುಷ್ಕರ್ಮದಿಂದ ನರಕ. ಮಿಥ್ಯಾ ಜ್ಞಾನದಿಂದ ಅಂಧಂ ತಮಸ್ಸು ಹರಿ ಸರ್ವೋತ್ತಮತ್ವಾದಿ ಜ್ಞಾನದಿಂದ

ಮೋಕ್ಷ. ಆದುದರಿಂದ ಸಜ್ಜನರು ವಿರಕ್ತರಾಗಿ ದಿವ್ಯ ಜ್ಞಾನವನ್ನು ಪಡೆಯಬೇಕೆಂದು ಹೇಳಿ ಭಗವಂತನ ಉಪಾಸನಾ ಕ್ರಮವನ್ನು, ಜ್ಞಾನದ ವೈಶಿಷ್ಟ್ಯವನ್ನೂ ವಿವರಿಸಿದ್ದಾರೆ.

ನಾಲ್ಕನೇ ಅಧ್ಯಾಯದಲ್ಲಿ ಪರಬ್ರಹ್ಮಸ್ವರೂಪಿಯಾದ ಶ್ರೀ ವಿಷ್ಣುವೇ ಮೋಕ್ಷಾದಿ ಸಕಲ ಪುರುಷಾರ್ಥಪ್ರದ, ಜ್ಞಾನಪ್ರದ ಎಂದು ತಿಳಿದು ಎಂಥ ಆಪತ್ಕಾಲದಲ್ಲಿಯೂ ಬಿಡದೇ ಅವನನ್ನು ಉಪಾಸನೆ ಮಾಡಿದರೆ ಅಪರೋಕ್ಷ ಜ್ಞಾನವುಂಟಾಗಿ ಪ್ರಾರಬ್ಧೇತರ ಕರ್ಮಗಳು ಪರಿಕ್ಷೀಣವಾಗುವವು ಎಂದು ತಿಳಿಸಿದ್ದಾರೆ. ನಂತರ ಲಯದ ಕ್ರಮವನ್ನು ಹೇಳಿ ಮೋಕ್ಷದಲ್ಲಿಯ ಜೀವನ ಸ್ಥಿತಿ-ಗತಿ, ಸ್ಥಾನ-ಮಾನಗಳನ್ನು ನಿರೂಪಿಸಿ—

"ನಮೋ ನಮೋಽಶೇಷ ದೋಷ ದೂರ ಪೂರ್ಣ ಗುಣಾತ್ಮನೇ ।
ವಿರಿಂಚಿ ಶರ್ವ ಪೂರ್ವೇಡ್ಯ ವಂದ್ಯಾಯ ಶ್ರೀರಮಾಯ ತೇ ॥"

ಎಂದು ಭಗವನ್ನಮಸ್ಕಾರ ಪೂರ್ವಕವಾಗಿ ಮುಕ್ತಾಯಗೊಳಿಸಿದ್ದಾರೆ.

ಆ ಅಣುಭಾಷ್ಯವು ಆಕಾರದಿಂದ ಅಲ್ಪಗಾತ್ರವುಳ್ಳದ್ದಾಗಿ ಕಂಡರೂ ಗಹನತರವಾದ ಗೂಢಾರ್ಥದಿಂದ ಮಹತ್ತರವಾದ ಗ್ರಂಥವಾಗಿದೆ. ಇದರ ನಿಜವಾದ ಮರ್ಮವನ್ನು ತಿಳಿಯಬೇಕಾದರೆ ಶ್ರೀ ಮಂತ್ರಾಲಯ ಪ್ರಭುಗಳ ತತ್ವ ಮಂಜರೀ ಗ್ರಂಥವನ್ನು ನೋಡಬೇಕು.

# ಪುರಾಣ ಪ್ರಸ್ಥಾನ

## ೧. ಭಾಗವತ ತಾತ್ಪರ್ಯ

ಪುರಾಣಗಳಿಗೆಲ್ಲ ಶ್ರೀಮದ್ ಭಾಗವತವು ಮುಕುಟಪ್ರಾಯವಾಗಿದೆ. ಮುಖ್ಯವಾಗಿ ಶ್ರೀ ವಿಷ್ಣುವಿನ ಮಹಾ ಮಹಿಮೆಯನ್ನು ಹೇಳ ಹೊರಟ ಈ ಸರ್ವಾಂಗ ಸುಂದರ ವಾದ ಮಹಾ ಪುರಾಣದಲ್ಲಿ ಹಲವಾರು ಪದ್ಯಗಳು ಆಪಾತತಃ ಅದ್ವೈತಪರವಾಗಿ ತೋರುವದರಿಂದ ಬಹು ಜನ ಮಾಯಾವಾದಿಗಳು ಇದೊಂದು ತಮ್ಮ ಗ್ರಂಥವೆಂದೇ ಭಾವಿಸಿದ್ದಾರೆ. ಪುಣ್ಯಾರಣ್ಯ, ಚಿತ್ಸುಖಿ ಮುಂತಾದ ಅದ್ವೈತಿಗಳು ಇದಕ್ಕೆ ವ್ಯಾಖ್ಯಾನ ಬರೆದು ಭಾಗವತ ಗ್ರಂಥವೆಲ್ಲ "ಅದ್ವೈತಾಮೃತ ವರ್ಷಿಣೀ" ಎಂದೆನಿಸು ವಂತೆ ಮಾಡಿದ್ದರು.

ವೈಷ್ಣವ ಸತ್ಸಿದ್ಧಾಂತಗಳನ್ನೆಲ್ಲ ಸಮಂಜಸವಾಗಿ ಬೋಧಿಸುವ ಭಾಗವತದ ಮೇಲೆ ಬರೆಯಲ್ಪಟ್ಟ ಅದ್ವೈತ ಟೀಕೆಗಳಿಂದ ಇಡೀ ಭಾಗವತ ಗ್ರಂಥವೇ ಒಂದು ಮಾಯಿಕ ಗ್ರಂಥ ಎಂಬುವಂತಾದಾಗ ಸರ್ವಜ್ಞಾಚಾರ್ಯರು ಪ್ರವೃತ್ತರಾಗಬೇಕಾ ಯಿತು. ಅವರ ಪ್ರಯತ್ನದಿಂದ ಒಂದು ಸದ್ವೈಷ್ಣವ ಮಹಾಪುರಾಣವು ಅದ್ವೈತದ ಬಲೆಯಿಂದ ಪಾರಾಯಿತು.

ಈ ಭಾಗವತ ತಾತ್ಪರ್ಯದಲ್ಲಿ ಶ್ರೀ ಮಧ್ವಾಚಾರ್ಯರು ಆಪಾತತಃ ಅಜ್ಞ ದೃಷ್ಟಿಯಿಂದ ಅದ್ವೈತಪರವಾಗಿ ತೋರಬಹುದಾದ ಪದ್ಯಗಳಿಗೆಲ್ಲ ಸರಿಯಾಗಿವ್ಯಾಖ್ಯಾನ ಬರೆದು ಅವುಗಳ ಯಥಾರ್ಥ ಅರ್ಥವನ್ನು ಬಿಡಿಸಿ ಹೇಳಿದ್ದಾರೆ. ತಾವು ಹೇಳಿದ ದ್ವೈತಾರ್ಥಕ್ಕೆ ಉಪಷ್ಟಂಭಕವಾಗಿ ಸಾವಿರಾರು ಗ್ರಂಥಾಂತರ ಸಂವಾದಿ ವಚನಗಳನ್ನು ಉದಾಹರಿಸಿದ್ದಾರೆ.

ಆಚಾರ್ಯರ ದೃಷ್ಟಿಯಲ್ಲಿ ಭಾಗವತದ ಮುಖ್ಯ ಗುರಿ ವಿಷ್ಣು ಪಾರಮ್ಯ ಪ್ರಕ ಟಣೆ. ಭೇದ ಸಿದ್ಧಾಂತ ವಿವರಣೆಯೇ ಅದರ ಉದ್ದಿಷ್ಟ ಸಿದ್ಧಾಂತ. ಜೀವ ತಾರತಮ್ಯ ಅದರ ಜೀವಾಳ. ದೇವತಾ ತಾರತಮ್ಯ ಅದರ ವಿವಕ್ಷಿತ ಅಂತಃಪ್ರಮೇಯ. ಹರಿಯ ಸರ್ವ ಕರ್ತೃತ್ವ ಜೀವನ ಪಾರತಂತ್ರ್ಯಗಳು ಅದರ ವಿವಕ್ಷಿತ ತತ್ವಗಳು. ಅಲ್ಲಿಯ ಕತೆಗಳೆಲ್ಲವೂ "ಭಿನ್ನಾ ಜೀವಗಣಾ ಹರೇರನುಚರಾಃ" ಎಂಬ ತತ್ವದ ಸತ್ಯತೆಯನ್ನು ಸಾರುವ ಜೀವಂತ ದೃಷ್ಟಾಂತಗಳು. ಇಡೀ ಭಾಗವತದ ಅರಸುಗುರಿ ವಿಷ್ಣು ಭಕ್ತಿಯ ಪ್ರಸಾರ. ಈ ಎಲ್ಲ ಶುದ್ಧ ಸದ್ವೈಷ್ಣವ ತತ್ವಗಳ ಪ್ರಚಾರಕ್ಕಾಗಿಯೇ ವ್ಯಾಸರು ಅನೇಕ ಸುಂದರ ಮಾರ್ಮಿಕವಾದ ಕಥಾ ಸನ್ನಿವೇಶಗಳನ್ನು ಹೆಣೆದು ಈ ಪುರಾಣ ಪ್ರಣಯನವನ್ನು ಮಾಡಿದ್ದಾರೆಂಬ ಆಚಾರ್ಯರ ಭಾವ ಇದರಲ್ಲಿ ಆವಿರ್ಭಾವವನ್ನು ಹೊಂದಿದೆ.

ಮೂಲ ಭಾಗವತದ ೩೬ ಸಾವಿರ ಪದ್ಯಗಳಲ್ಲಿ ಆಚಾರ್ಯರು ಭಾಷ್ಯ ಬರೆದದ್ದು ಕೇವಲ ೧೬ ನೂರು ಪದ್ಯಗಳಿಗೆ ಮಾತ್ರ. ಈ ತಾತ್ಪರ್ಯ ಗ್ರಂಥದಲ್ಲಿ ಆಚಾರ್ಯರು ತಮ್ಮ ಮತಕ್ಕೆ ಪೋಷಕವಾಗಿ ೧೯೫ ಬೇರೆ ಬೇರೆ ಗ್ರಂಥಗಳ ಸಮಾಖ್ಯೆ ಸಂವಾದಗಳನ್ನು ಕೊಟ್ಟಿದ್ದಾರೆ. ಅದರಲ್ಲಿಯೂ ಪರಮಪ್ರಮಾಣವಾದ ಪ್ರಂಚರಾತ್ರ ಸಂಹಿತೆಗಳ ವಚನಗಳ ಉದಾಹರಣೆಗಳು ಹೇರಳವಾಗಿವೆ.

ಭಾಗವತದ ಅತಿ ಮಹತ್ವದ ಹಾಗೂ ಪ್ರಮೇಯ ಭಾವಗರ್ಭಿತವಾದ ೧೦-೧೧ ನೇ ಅಧ್ಯಾಯಗಳಲ್ಲಿ ಅದ್ವೈತ ಪರವಾಗಿ ಆಪಾತತಃ ತೋರುವ ಕೃಷ್ಣ ಉದ್ಧವ ಸಂವಾದವೇ ಮೊದಲಾದ ಸಂದರ್ಭಗಳ ಮೇಲೆ ಕ್ಷಕಿರಣ ಬೀರಿ ವಾಸ್ತವಾರ್ಥ ವನ್ನು ಆಚಾರ್ಯರು ನಿಚ್ಚಳವಾಗಿ ನಿರೂಪಿಸಿದ್ದಾರೆ. ಇದರಿಂದ ಐಕ್ಯವಾದ, ಮಿಥ್ಯಾತ್ವ ವಾದ ಮತ್ತು ನಿರ್ಗುಣೋಪಾಸನೆಗೆ ಭಾಗವತದಲ್ಲಿ ಎಲ್ಲಿಯೂ ಪ್ರಸಕ್ತಿ ಅಥವಾ ಅವಕಾಶವಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಅದ್ವೈತ ವಿಚಾರಕ್ಕೆ ಇಲ್ಲಿ ಅವಕಾಶವಿಲ್ಲ ಇಷ್ಟೇ ಅಲ್ಲ. ಇದ್ದ ಅವಕಾಶ ಅವಸರ ಗಳೆಲ್ಲ ದ್ವೈತಾರ್ಥ ಕಥನೋದ್ದೇಶಕಗಳೇ ಆಗಿವೆ ಎಂಬುದನ್ನು ಅಲ್ಲಿಯ ನೂರಾರು ಸಾವಿರಾರು ವಚನಗಳಿಂದ ಸಿದ್ಧಮಾಡಿ ತೋರಿಸಿದ್ದಾರೆ. ಸ್ಪಷ್ಟ ಶ್ರೀ ಮಧ್ವರು ದ್ವೈತ ಬೋಧಕ ವಾಕ್ಯಗಳು ಭಾಗವತದ ತುಂಬ ಮೊದಲಿನಿಂದ ತುದಿಯ ವರೆಗೆ ಹೇರಳ ವಾಗಿ ತುಂಬಿವೆ.

**ವಿದ್ಯಾತ್ಮನಿ ಭಿದಾಬೋಧಃ**
**ಕರ್ತೃತ್ವಾತ್ ಸಗುಣಂ ಬ್ರಹ್ಮ**
**ನಾರಾಯಣ ಪರಾ ವೇದಾಃ**
**ಮಾಂವಿಧತ್ತೇಽಭಿಧತ್ತೆ ಮಾಂ ವಿಕಲ್ಪ್ಯಾಪೋಹ್ಯ ಏವ ಚ**
**ಭಕ್ತಿಃ ಸಿದ್ಧೇರ್ಗರೀಯಸೀ**
**ನೈಕಾತ್ಮ್ಯತಾಂ ಮೇ ಸ್ಪೃಹಯಂತಿ**
**ನೈಕತ್ವ ಮಪ್ಯುತದೀಯ ಮಾನಂ ನ ಗೃಣ್ಣಂತಿ**
**ಮುಕ್ತಿರ್ಹಿತ್ವಾ ನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ**

ಹೀಗೆ ಅನೇಕಾನೇಕ ವಚನ ಪದ್ಯಗಳು "ಸಮಗ್ರ ಭಾಗವತವೆಲ್ಲವೂ ಕೇವಲ ವೈಷ್ಣವ ಸಿದ್ಧಾಂತವನ್ನು ಆಚೂಲಮೂಲವಾಗಿ ಪ್ರತಿಪಾದಿಸುವ ಮಹಾ ಪುರಾಣ ವಾಗಿದೆ" ಎಂಬುದನ್ನು ಖಾತರಿ ಮಾಡಿ ಕೊಡಲಿಕ್ಕೆ ಸಾಕು.

## ೨. ಮಹಾಭಾರತ ತಾತ್ಪರ್ಯ ನಿರ್ಣಯ

ಭಾರತೀಯ ಸಾಹಿತ್ಯ, ಸಂಸ್ಕೃತಿ ಹಾಗೂ ಧರ್ಮಗಳ ಜ್ಞಾನಕೋಶದಂತಿರುವ ಮಹಾಭಾರತವು ಹಿಮಗಿರಿ, ಗಂಗಾನದಿಗಳಂತೆ ಹಿಂದೂ ದೇಶದ ಹೆಮ್ಮೆಯ ವಸ್ತುವಾಗಿದೆ. ಸಾಕ್ಷಾನ್ನಾರಾಯಣ ಸ್ವರೂಪರಾದ ವೇದವ್ಯಾಸರು ರಚಿಸಿದ ಲಕ್ಷ ಶ್ಲೋಕಾತ್ಮಕವಾದ ಈ ಬೃಹದ್ಗ್ರಂಥದಲ್ಲಿ ಸಹಸ್ರಾರು ಶತಮಾನ ವಿಸ್ತೃತವಾದ ಬಿತ್ತರದ ಕಾಲಖಂಡದಲ್ಲಿ ಆಗಿ ಹೋದ ಪ್ರಕ್ಷೇಪಗಳೆಷ್ಟೋ! ಉತ್‌ಕ್ಷೇಪಗಳೆಷ್ಟೋ! ವ್ಯತ್ಯಾಸಗಳೆಷ್ಟೋ! ಆಚಾರ್ಯರ ಕಾಲದಲ್ಲಿಯೇ ನಡೆದ ಈ ಆವಾಪೋದ್ವಾಪಗಳ ಉಪದ್ವ್ಯಾಪವನ್ನು ಅವರೇ ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

"ಕ್ವಚಿದ್ ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ
ಕುರ್ಯುಃ ಕ್ವಚಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ||
ಅನುಚ್ಛಿನ್ನಾ ಅಪಿಗ್ರಂಥಾ ವ್ಯಾಕುಲಾ ಇತಿ ಸರ್ವಶಃ
ಉತ್ಸನ್ನಾಃ ಪ್ರಾಯಶಃ ಸರ್ವೇ ಕೋಟ್ಯಂಶೋಪಿ ನ ವರ್ತತೆ
ಕಲಾವೇವಂ ವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ ||

ಹೀಗೆ ಕೆಲವು ಕಡೆ ಛಿನ್ನ, ಹಲವು ಕಡೆ ವಿಚ್ಛಿನ್ನ, ಮತ್ತಿತರ ಕಡೆಗಳಲ್ಲಿ ಉಚ್ಛಿನ್ನ ಇತರತ್ರ ವ್ಯತ್ಯಸ್ತ ಈ ರೀತಿ ವ್ಯಾಕುಲವಾದ ಈ ಬೃಹದ್ ಗ್ರಂಥವನ್ನು ದೇಶ ವಿದೇಶಗಳಲ್ಲಿಯ ಎಲ್ಲ ಪಾಠ ಪ್ರತಿಗಳನ್ನು ಕೂಡಿ ಹಾಕಿ, ಪರಿಶೀಲಿಸಿ, ಸೂಕ್ಷ್ಮ ದೃಷ್ಟಿಯಿಂದ ಪರಿಶೋಧಿಸಿ, ಅದರ ತಾತ್ಪರ್ಯವನ್ನು ಮೊಟ್ಟ ಮೊದಲು ಮಥಿಸಿ ತೆಗೆದ ಮಹನೀಯರೆಂದರೆ ಮಧ್ವಾಚಾರ್ಯರು.

"ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್"

ಎಂಬ ಅವರ ಮಾತಿನಿಂದ ಮಹಾಭಾರತದ ಶುದ್ಧ ಪ್ರತಿಯನ್ನು ಸಿದ್ಧಪಡಿಸಲು ಅವರೆಷ್ಟು ಪರಿಶ್ರಮಬಟ್ಟರೆಂಬುದು ವ್ಯಕ್ತವಾಗುತ್ತದೆ.

ಇದು ಮಧ್ವಾಚಾರ್ಯರು ಮಹಾಭಾರತಕ್ಕೆ ಮಾಡಿದ ಬಹಿರಂಗ ಮಹೋಪಕಾರವಾದರೆ ಅದರ ಅಂತರಾರ್ಥ, ಮತ್ತು ಒಳಗಿನ ಗೂಢಗುಪಿತಗಳನ್ನೆಲ್ಲ ಕಂಡುಹಿಡಿಯಲು ಒಂದು ದಿವ್ಯ ಚಕ್ಷುವನ್ನೇ ಅವರು ಓದುಗರಿಗೆ ಒದಗಿಸಿದ್ದಾರೆ.

ಮನ್ವಾದಿ ಭಾರತಂ ಕೇಚಿದ್ ಆಸ್ತಿಕಾದಿ ತಥಾ ಪರೇ ||
ತಥೋಪರಿಚರಾದ್ಯನ್ಯೇ ಭಾರತಂ ಪ್ರವದಂತಿಹಿ ||

ಮಹಾಭಾರತ ಯುದ್ಧವು ಕುರುಪಾಂಡವರ ಸಂಘರ್ಷ ವ್ಯಾಜ್ಯದಿಂದ ಮಾನವನ ಅಂತರಂಗದಲ್ಲಿ ಸದ್ಗುಣ, ದುರ್ಗುಣಗಳ ನಡುವೆ ನಡೆಯುತ್ತಿರುವ ನೈತಿಕ ಅಂತ-ರ್ದ್ವಂದ್ವದ ಸಂಕೇತವಾಗಿದೆ ಎಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಇದೊಂದು ಐತಿಹಾಸಿಕ ವ್ಯಕ್ತಿಗಳ ಹೋರಾಟದ ಇತ್ಥಂಭೂತ ವೃತ್ತಾಂತ ನಿವೇದನೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಇನ್ನೂ ಹಲವರು ಆಧ್ಯಾತ್ಮಿಕ ಅರ್ಥಪರತಯಾ ಸಮಗ್ರ ಮಹಾಭಾರತವನ್ನು ಯೋಜಿಸುತ್ತಾರೆ.

ಮಧ್ವಾಚಾರ್ಯರ ದೃಷ್ಟಿಯಲ್ಲಿ ಭಾರತಕ್ಕೆ ಹತ್ತು ಅರ್ಥ ಮತ್ತು ಪುರಾಣಗಳನ್ನೆಲ್ಲ ಸಮಾಧಿ ಭಾಷಾ,ಗುಹ್ಯ ಭಾಷಾ, ದರ್ಶನ ಭಾಷಾ ಎಂದು ಮೂರು ಭಾಷೆಯಲ್ಲಿ ನಿರೂಪಿಸಿದ್ದಾರೆ ಬಾದರಾಯಣರು.

"ನಾಸ್ತಿ ನಾರಾಯಣ ಸಮೋ ನ ಭೂತಂ ನ ಭವಿಷ್ಯತಿ"
"ಸತ್ಯಂ ಸತ್ಯಂ"
"ನ ದೇವಃ ಕೇಶವಾತ್ ಪರಃ"

ಎಂದು ಮುಂತಾಗಿ ಸ್ಪಷ್ಟವಾಗಿಯೇ ವಿಷ್ಣುವಿನ ಉತ್ಕರ್ಷವನ್ನು ಹೇಳತಕ್ಕ ಭಾಷೆಯು ಸಮಾಧಿ ಭಾಷೆ !

ಅಜ್ಞಜನ ಮೋಹನಾರ್ಥವಾಗಿ ಶೈವ ದರ್ಶನಾದಿಗಳ ಅಭಿಪ್ರಾಯವನ್ನು ಮಧ್ಯ ಮಧ್ಯದಲ್ಲಿ ವ್ಯಾಸರು ದರ್ಶನ ಭಾಷೆಯಲ್ಲಿ ಹೇಳಲಿಕ್ಕೂ ಉಂಟು. "ರಾಮ ದೇವರು ಶಿವಲಿಂಗವನ್ನು ಪ್ರತಿಷ್ಠೆ ಮಾಡಿದರು. ಕೃಷ್ಣನು ಮಹಾದೇವರನ್ನು ಪೂಜಿಸಿದನು. ಅವನ ಅನುಗ್ರಹದಿಂದ ಸಂತಾನಾದಿಗಳನ್ನು ಪಡೆದನು." ಇವೇ ಮೊದಲಾದ ಮೂಢ ಜನ ವಿಡಂಬನಕ್ಕಾಗಿ ಹೇಳಿದ ಮಾತುಗಳೆಲ್ಲ ಉಪಕ್ರಮ, ಉಪಸಂಹಾರ, ಮತ್ತು ಅಭ್ಯಾಸ, ಉಪಪತ್ತಿ, ಶಾಸ್ತ್ರಾಂತರ ಸಂವಾದಗಳಿಂದ ಸ್ಪಷ್ಟವಾಗಿ ತಿಳಿದು ಬರುವ ವಿಷ್ಣು ಸರ್ವೋತ್ತಮತ್ವಕ್ಕೆ ವಿರುದ್ಧವಾದುದರಿಂದ ಆ ವಿಷಯದಲ್ಲಿ ಬಾದರಾಯಣರಿಗೆ ತಾತ್ಪರ್ಯ ಇಲ್ಲವೆಂದು ತಿಳಿಯಬೇಕು. ಆದರೂ ಅಸುರ ಮೋಹನಕ್ಕಾಗಿ ಪಾಶುಪತಾದಿ ಶಾಸ್ತ್ರಗಳಲ್ಲಿ (ದರ್ಶನಗಳಲ್ಲಿ) ಹೇಳಿದ ಮಾತುಗಳನ್ನು ಇಲ್ಲಿ ಅನುವಾದ ಮಾಡುವದರಿಂದ ಅದು ದರ್ಶನ ಭಾಷೆಯೆನಿಸುವದು.

"ಅಟ್ಟ ಶೂಲಾ ಜನಪದಾ ಶಿವಶೂಲಾಶ್ಚ ತುಷ್ಪಥಾಃ"

ಮುಂತಾದ ಗೂಢಾರ್ಥವುಳ್ಳ ಪದ್ಯಗಳು ಗುಹ್ಯಭಾಷೆಯವೆಂದು ತಿಳಿಯಬೇಕು. ಸಮಾಧಿ ಭಾಷೆಯಿಂದ ಹೇಳಿದ್ದೆಲ್ಲ ಗ್ರಾಹ್ಯವೇ. ಸಮಾಧಿ ಭಾಷೆಗೆ ಅವಿರುದ್ಧವಾದ ದರ್ಶನ ಭಾಷೋಕ್ತವಾದುದೂ ಗುಹ್ಯ ಭಾಷೋಕ್ತ ವಿಷಯಗಳೂ ಗ್ರಾಹ್ಯವಾಗಿದೆ.

ಇವಲ್ಲದೇ ಮೇಲೆ ಹೇಳಿದ "ಮನ್ವಾದಿ ಭಾರತಂ ಕೇಚಿದ್" ಎಂದು ಸ್ವಯಂ ವ್ಯಾಸರೇ ಮೂರು ವಿಧ ಅರ್ಥವುಳ್ಳದ್ದು ಭಾರತ ಎಂದು ಸಾರಿದ್ದಾರೆ—

"ಭಾರತಾರ್ಥಃ ತ್ರಿಧಾ ಪ್ರೋಕ್ತಃ ಸ್ವಯಂ ಭಗವತೈವ ಹಿ"

ವ್ಯಾಸರ ಈ ತ್ರಿವಿಧ ಅರ್ಥವನ್ನೂ ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದ ದ್ವಿತೀಯಾಧ್ಯಾಯದಲ್ಲಿ ವಿವರಿಸುತ್ತ—

ಸಕೃಷ್ಣಾನ್ ಪಾಂಡವಾನ್ ಗೃಹ್ಯ ಯೋಯಮರ್ಥಃ ಪ್ರವರ್ತತೆ
ಪ್ರಾತಿಲೋಮ್ಯಾದಿ ವೈಚಿತ್ರ್ಯಾತ್ ತಮಾಸ್ತೀಕಂ ಪ್ರಚಕ್ಷತೇ ॥

ಆಸ್ತಿಕರೂ, ಪರಮ ಭಗವದ್ಭಕ್ತರೂ ಆದ ಪಂಚಪಾಂಡವರ ಕಥೆಯನ್ನೇ ಐತಿಹಾಸಿಕ ದೃಷ್ಟಿಯಿಂದ ಚಿತ್ರಿಸುವ ಭಾಗವು ಆಸ್ತಿಕಾದಿ ಭಾರತ ಎನಿಸುತ್ತದೆ.

ಮನ್ವಾದಿ ಎಂಬಲ್ಲಿ "ಮೀಯತೆ ವಿಷ್ಣು ಏಭಿಃ ಇತಿ ಮನುಃ" ಅಂದರೆ— ಭಗವಂತನ ಜ್ಞಾನವನ್ನು ಉಂಟು ಮಾಡಿಕೊಡುವ ಸದ್ಗುಣ, ಧರ್ಮಗಳು ಎಂದು ಅರ್ಥಮಾಡಿ ಇಂಥ ಸದ್ಗುಣ ಹಾಗೂ ಇದಕ್ಕೆ ವಿಪರೀತವಾದ ದುರ್ಗುಣಗಳ ನಡುವಿನ ಹೋರಾಟ ಅರ್ಥಾತ್ ಧರ್ಮ–ಸ್ವಾರ್ಥ, ಪ್ರೇಮ–ಕರ್ತವ್ಯ, ಮಾನವ್ಯ–ದಾನವ್ಯ, ಸುದ್ಬುದ್ಧಿ–ದುರ್ಬುದ್ಧಿಗಳ ನಡುವಿನ ಅಂತಸ್ಸಂಘರ್ಷಗಳ ಸಾಂಕೇತಿಕವಾದ ರೂಪಕವೇ ಮಹಾ ಭಾರತ ಎಂಬ ದೃಷ್ಟಿ ಮನ್ವಾದಿ ಎನಿಸುತ್ತದೆ.

ಇಲ್ಲಿ ಪಾಂಡವರು ಧರ್ಮಾದಿ ಸದ್ಗುಣಗಳ ಪ್ರತೀಕರಾದರೆ, ದುರ್ಯೋಧನಾದಿ ಗಳು ದುರ್ಗುಣಗಳ ಸಂಕೇತರಾಗಿದ್ದಾರೆ. ಅದನ್ನು ಆಚಾರ್ಯರು ಸ್ಪಷ್ಟವಾಗಿ ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಮೊದಲು ತಿಳಿಸಿ ಭಾರತವನ್ನು ಯಾವ ದೃಷ್ಟಿಯಿಂದ ನೋಡಬೇಕೆಂಬುದನ್ನು ಕಲಿಸಿಕೊಡುತ್ತಾರೆ.

"ಧರ್ಮೋ ಭರ್ತ್ಯಾದಿ ದಶಕಃ ಶ್ರುತಾದಿಃ ಶೀಲವೈನಯೌ
ಸಬ್ರಹ್ಮಕೌಸ್ತುತೇಯತ್ರ ಮನ್ವಾದಿ ತಂ ವಿದುರ್ಭಾಃ ॥
ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಹೃದಿ ಸ್ಥಿತಿಃ
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿಸ್ಮೃತಃ ॥
ಅಜ್ಞಾನಾದಿ ಸ್ವರೂಪಸ್ತು ಕಲಿರ್ದುರ್ಯೋಧನಃ ಸ್ಮೃತಃ
ವಿಪರೀತಂತು ಯಜ್ಞಾನಂ ದುಶ್ಶಾಸನ ಇತೀರಿತಃ ॥
ನಾಸ್ತಿಕ್ಯಂ ಶಕುನಿರ್ನಾಮ ಸರ್ವದೋಷಾತ್ಮಕಾಃ ಪರೇ
ಧಾರ್ತರಾಷ್ಟ್ರಾಸ್ತ್ವಹಂಕಾರೋ ದ್ರೌಣೀ ರುದ್ರಾತ್ಮಕೋ ಯತಃ ॥
ಪಾಂಡವೇಯಾಶ್ಚ ಪುಣ್ಯಾನಿ ತೇಷಾಂ ವಿಷ್ಣು ರ್ನಿಯಾಮಕಃ
ಏವ ಮಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವಮುಚ್ಯತೇ ॥

ಧರ್ಮ ರಾಜನೇ ಮೊದಲಾದ ಪಂಚ ಪಾಂಡವರು ದ್ರೌಪದೀ ದೇವಿಯೂ ಧರ್ಮ, ಭಕ್ತಿ, ಶೀಲ, ವಿನಯ, ದಿವ್ಯಜ್ಞಾನ ಮುಂತಾದ ಸದ್ಗುಣಗಳ ಪ್ರತೀಕರು. ದುರ್ಯೋಧನ ಅಜ್ಞಾನದ ಪ್ರತಿನಿಧಿ. ಕಲಿಯ ಸ್ವರೂಪ. ವಿಪರೀತ ಜ್ಞಾನದ ಮೂರ್ತಿಮಂತ ವ್ಯಕ್ತಿ ದುಃಶ್ಯಾಸನ. ಶಕುನಿ ಎಂದರೆ ಸಾಕ್ಷಾತ್ ನಾಸ್ತಿಕ್ಯವೇ ಸರಿ. ಅಶ್ವತ್ಥಾಮನಂತೂ ಅಹಂಕಾರದ ಸಾಕಾರ ರೂಪ. ಹೀಗೆ ಕೌರವ ಪಕ್ಷೀಯರೆಲ್ಲರೂ ಸರ್ವ ದೋಷಗಳು ಒಟ್ಟೈಸಿದ ದುರ್ಗುಣಗಳ ಮೊಟ್ಟೆಗಳು.

ಆದರೆ ಪಾಂಡವರೋ— ಪುಣ್ಯದ ಪ್ರತಿನಿಧಿಗಳು. ಸದ್ಗುಣಗಳ ಸಂಕೇತ ಭೂತರು. ಜ್ಞಾನ, ಭಕ್ತಿ, ವೈರಾಗ್ಯ, ಧೈರ್ಯ, ಯೋಗ, ಪರಾಕ್ರಮ ಮುಂತಾದ ಸಕಲ ಸದ್ಗುಣಗಳ ಸಾಕಾರ ಸ್ವರೂಪನೇ ಭೀಮಸೇನ. ಸರ್ವ ವಿದ್ಯೆಗಳ ಪ್ರತಿನಿಧಿ ದ್ರೌಪದೀ.

ಮಾನವನು ತನ್ನ ಅಂತರಂಗದ ಕುರುಕ್ಷೇತ್ರದಲ್ಲಿ ಹೋರುತ್ತಿರುವ ಸದ್ಗುಣ ದುರ್ಗುಣಗಳ ತುಮುಲದಲ್ಲಿ ಶ್ರೀ ಕೃಷ್ಣನನ್ನು ನಂಬಿ ಅವನ ಆದೇಶದಂತೆ ಪಾಂಡವರ ಧರ್ಮಗಳಾದ ಸದ್ಗುಣಗಳನ್ನು ತನ್ನಲ್ಲಿ ಬೆಳಿಸಿಗೊಂಡು ಒಳಗೊಳಗೆ ತಲೆಯೆತ್ತಿ ಮೆರೆಯುತ್ತಿರುವ ದುಷ್ಟಕೌರವ ಶಕ್ತಿಗಳನ್ನೆಲ್ಲ ದಮನವಮಾಡಿ ಭಗವದನುಗ್ರಹಕ್ಕೆ ಪಾತ್ರ ರಾಗಬೇಕೆಂಬುದೇ ಆಚಾರ್ಯರು ಬೋಧಿಸಿದ ಮಹಾಭಾರತದ ತಾತ್ಪರ್ಯವಾಗಿದೆ.

ಈ ತಾತ್ಪರ್ಯ ನಿರ್ಣಯದ ಮೊದಲಿನ ಮೂರು ಅಧ್ಯಾಯಗಳಲ್ಲಿ ಸರ್ವ ಶಾಸ್ತ್ರಾರ್ಥಗಳನ್ನೂ ನಿರ್ಣಯ ಮಾಡಿ ಹೇಳಿದ್ದಾರೆ ಮಧ್ವ ಗುರುಗಳು. ಈ ಮೂರು ಅಧ್ಯಾಯಗಳಲ್ಲಿ ಬಾರದ ಪ್ರಮೇಯವೇ ಇಲ್ಲ. ಇತಿಹಾಸ ಪುರಾಣಗಳನ್ನು ಓದುವ ಕ್ರಮ, ಅರ್ಥೈಸುವ ರೀತಿ, ಅಲ್ಲಲ್ಲಿ ತೋರಬಹುದಾದ ಸಿದ್ಧಾಂತ ವಿರೋಧಿ ಮಾತುಗಳ ಸಮನ್ವಯ ಪ್ರಕಾರ, ಸೃಷ್ಟಿಕ್ರಮ, ತಾರತಮ್ಯ, ಮನುಷ್ಯ ಜನ್ಮದ ಇತಿಕರ್ತವ್ಯತೆ, ವಾಯುದೇವರ ಜೀವೋತ್ತಮತ್ವ ವೇದ ಪ್ರತಿಪಾದ್ಯತ್ವ, ಸಕಲ ಆಸ್ತಿಕ ನಿಗಮಾಗಮ ಗಳ ಸಾರ ಸಂದೇಶ ಎಲ್ಲವನ್ನೂ ಆಚಾರ್ಯರು ನಿರೂಪಣೆಗೈದಿದ್ದಾರೆ.

ಮುಂದೆ ನಾಲ್ಕನೇ ಅಧ್ಯಾಯದಿಂದ ಒಂಬತ್ತನೇ ಅಧ್ಯಾಯದ ವರೆಗೆ ರಾಮಾ ಯಣದ ಕಥೆಯನ್ನು ರಮಣೀಯವಾಗಿ ಕವನಿಸಿದ್ದಾರೆ. ವಾಲ್ಮೀಕಿ ರಾಮಾಯಣದ ಮೇಲೆ ಅನೇಕ ಆಕ್ಷೇಪಗಳಿಗೆ ಸಮಂಜಸವಾದ ಸಮಾಧಾನವು ಈ ಮಧ್ವ ರಾಮಾ ಯಣದಲ್ಲಿ ಇರುತ್ತವೆ. ವಾಲ್ಮೀಕಿ ರಾಮಾಯಣಕ್ಕೂ ಮಧ್ವ ಮುನಿಗಳು ಹೇಳಿದ ಕಥೆಗೂ ಅಲ್ಲಲ್ಲಿ ಬಹಳ ವ್ಯತ್ಯಾಸವಿದೆ. ಆಚಾರ್ಯರ ಹೇಳಿಕೆಯಂತೆ— ರಾವಣ ವೈಯ್ದದ್ದು ನಿಜವಾದ ಸೀತೆಯನ್ನಲ್ಲ. ನಕಲೀ ಸೀತೆ. ಅಶೋಕವನಿಕೆಯಲ್ಲಿ ಹನು ಮಂತ ಕಂಡದ್ದು ಸೀತೆಯನ್ನಲ್ಲ, ಸೀತೆಯ ನೆರಳು ಆಕೃತಿಯನ್ನುಮಾತ್ರ.

"ದದರ್ಶ ಶಿಂಶುಪಾವೃಕ್ಷ ಮೂಲ ಸ್ಥಿತ ರಮಾಕೃತಿಂ ||"

ಇದಕ್ಕೆಲ್ಲ ಆದಿತ್ಯ ಪುರಾಣ, ಪದ್ಮ ಪುರಾಣಗಳ ಪುಷ್ಟಿ ಇದೆ. ಇದು ಸಿದ್ಧಾಂತಕ್ಕೂ, ಲಕ್ಷ್ಮೀದೇವಿಯ ಮಹಾಮಹಿಮೆಗೂ ಸರಿ ಹೋಗುತ್ತದೆ. ಹೀಗೆ ರಾಮಾಯಣದ ಕಥೆಯ ಸೌಂದರ್ಯದಲ್ಲಿ ಸಿದ್ಧಾಂತಕ್ಕೆ ಸಾವು ಬಾರದಂತೆ ನೋಡಿ ಕೊಂಡಿದ್ದಾರೆ ಶ್ರೀಮದಾಚಾರ್ಯರು. ಹೀಗೆ ತಾತ್ವಿಕ ಹಿನ್ನೆಲೆಯಲ್ಲಿ ರಾಮಾಯಣ ವನ್ನು ಕಂಡವರು ಶ್ರೀಮಧ್ವಾಚಾರ್ಯರೊಬ್ಬರೇ.

ಈ ಮಹಾಭಾರತದ ತಾತ್ಪರ್ಯ ನಿರ್ಣಯದಲ್ಲಿ ಶ್ರೀ ಮಧ್ವಾಚಾರ್ಯರು ೯-೩೨ ರ ಅಧ್ಯಾಯದ ವರೆಗೆ ಭಾಗವತ, ಭಾರತ ಪುರಾಣಗಳ ಮಹತ್ವದ ಘಟ್ಟ ಗಳನ್ನೆಲ್ಲ ಮನೋಜ್ಞ ಶೈಲಿಯಲ್ಲಿ ವಿವರಿಸಿದ್ದಾರೆ. ವಿಷ್ಣು ಪಾರಮ್ಯ ಪ್ರತಿಪಾದಕ ವಾದ ಅಂಶಗಳನ್ನು— ಹರಿವಂಶ, ವಿಷ್ಣು ರಹಸ್ಯ, ಪದ್ಮ, ಬ್ರಹ್ಮ ಬ್ರಹ್ಮ ವೈರ್ತ್ತವು, ವಿಷ್ಣು ಪುರಾಣ ಮೊದಲಾದವುಗಳಿಂದ ಎತ್ತಿ ಎರಕ ಹಾಕಿ ವ್ಯಾಸೋಕ್ತಿಯ ಹರಿ ಸರ್ವೋತ್ತಮತ್ವ ಸಾಧನೆಗೆ ಎಲ್ಲಿಯೂ ಹರಕು ಮುರುಕು ತೋರದಂತೆ ಶಾಸ್ತ್ರ ಶುದ್ಧ ವಾದ ಹೆಣಿಗೆಯನ್ನು ಹಾಕಿದ್ದಾರೆ. ಮಧ್ವಾಚಾರ್ಯರ ದೃಷ್ಟಿಯಲ್ಲಿ ಸಮಗ್ರ ಮಹಾ ಭಾರತವೆಲ್ಲವೂ ಅಷ್ಟೇ ಏಕೆ ಸಕಲ ಪುರಾಣಗಳೂ ಶ್ರೀ ವಿಷ್ಣುವಿನ ಮಹಾಮಹಿಮೆ ಗಳ ಲೀಲಾವಿಷ್ಕಾರವಾಗಿವೆ.

"ಯಸ್ಯ ಪ್ರಸಾದಾತ್ ವಕ್ಷ್ಯಾಮಿ ನಾರಾಯಣ ಕಥಾ ಮಿಮಾಂ"
"ವಾಸುದೇವಸ್ಯ ಮಹಿಮಾ ಭಾರತೇ ನಿರ್ಣಯೋದಿತಃ''

ಮಹಾಭಾರತದ ನೆಪದಿಂದ ಸರ್ವ ವೇದಾಂತ ಶಾಸ್ತ್ರಗಳ ರಹಸ್ಯವನ್ನೇ ಆಚಾರ್ಯರು ಬಿತ್ತರಿಸಿದ್ದಾರೆ.

"ಭಾರತ ವ್ಯಪದೇಶೀನ ಹ್ಯಾಮ್ನಾನಾಥಪ್ರಃದರ್ಶಿತಃ''

ಕೃಷ್ಣನ ಅನಂತರ ಮಹಾಭಾರತದ ಮುಖ್ಯ ಪಾತ್ರವೆಂದರೆ— ಭೀಮಸೇನ ಎಂಬುವದನ್ನು ಆಚಾರ್ಯರು ಈ ತಾತ್ಪರ್ಯ ನಿರ್ಣಯದ ಉದ್ದಕ್ಕೂ ತೋರಿಸಿ ಕೊಟ್ಟಿದ್ದಾರೆ. ಮೂರೂ ಅವತಾರಗಳಲ್ಲಿಯೂ ವಾಯು ದೇವರಿಗೆ— "ಭಗವತ್ ಕಾರ್ಯ ಸಾಧಕಃ'' ಎಂಬ ಬಿರುದು ಇದೆ. ಭೂ-ಭಾರ ಹರಣ ರೂಪವಾದ ಶ್ರೀ ಕೃಷ್ಣನ ಮುಖ್ಯ ಅವತಾರ ಕಾರ್ಯಕ್ಕೆ ಮುಖ್ಯಪ್ರಾಣ ದೇವರ ೨ ನೇ ಅವತಾರ ಭೂತರಾದ ಭೀಮಸೇನ ದೇವರು ಮುಖ್ಯ ಸಾಧನೆಯಾಗಿದ್ದಾರೆ.

''ಭೂಭಾರ ಹರಣೋ ವಿಷ್ಣೋ ಪ್ರದಾನಾಂಗಂ ಹಿ ಮಾರುತಿಃ"

ಮಹಾಭಾರತದ ಮುಖ್ಯ ನಾಯಕ ಕೃಷ್ಣ. ಉಪನಾಯಕ ಭೀಮ. ಖಲ ನಾಯಕ ದುರ್ಯೋಧನ. ನಾಯಕ ಉಪನಾಯಕರಾದ ಕೃಷ್ಣ ಭೀಮರ ಪಾತ್ರ

ಚಿತ್ರಣದಲ್ಲಿ ಗುಣ, ಗೌರವದ ಬಿತ್ತರಣೆಯಲ್ಲಿ ಎಲ್ಲಿಯೂ ಕುಂದು–ಕೊರತೆ, ಲೋಪ ದೋಷಗಳು ಲೇಶತೋಪಿ ಇಲ್ಲ. ಅವರಲ್ಲಿ ಯಾವ್ರರ್ದೇ ನ್ಯೂನತೆಯು ಮಹಾಭಾರತ ದಲ್ಲಿ ಕಂಡು ಬರಲಾರದು ಎಂದು ಸ್ವಯಂ ಭೀಮಾವತಾರಿಗಳಾದ ಶ್ರೀ ಮಧ್ವರು ಪ್ರದರ್ಶಿಸಿದ್ದಾರೆ.

ಭೀಮನ ಸರ್ವರೀತಿಯಿಂದಲೂ ಪರಿಶುದ್ಧವಾದ ಶೀಲ, ಚಾರಿತ್ರ್ಯ, ಪಾವಿತ್ರ್ಯ, ತತ್ವ ನಿಷ್ಠೆ ಮುಂತಾದ ಸದ್ಗುಣಗಳ ಮೇಲೆ ಕಪ್ಪು ಗೆರೆಯನ್ನು ಎಳೆಯಬಹು ದಾದಂಥ ಭಾರತದಲ್ಲಿಯ ಅನೇಕ ವಿವಾದಾಸ್ಪದ ಪ್ರಸಂಗಗಳನ್ನು ಮಧ್ವಾಚಾರ್ಯರು ಎತ್ತಿಕೊಂಡುತಮ್ಮ ನಿರ್ಣಯದ 'ಕ್ಷ' ಕಿರಣವನ್ನು ಬೀರಿ, ಆ ಪಾವನ ಜೀವನದ ನಿಷ್ಕ ಲ್ಮಷತೆಯನ್ನು ಎತ್ತಿಸಾರಿದ್ದಾರೆ. ದುರ್ಯೋಧನನ ತೊಡೆಗೆ ಗದಾಪ್ರಹಾರ,ದುಶ್ಯಾಸನನ ರಕ್ತಪಾನ, ಹಿಡಿಂಬಾ ವಿವಾಹ, ದ್ರೌಪದೀ ವಸ್ತ್ರಾಹರಣ, ಭೀಮನ ಪ್ರಾಸಂಗಿಕ ಮೂರ್ಛೆ ಮರಣ, ಕೋಪ, ಔದ್ಧತ್ಯ, ಕ್ರೋಧ ವಚನ ಮುಂತಾದ ಅನೇಕ ಪ್ರಸಂಗ ಗಳನ್ನು ಎತ್ತಿಕೊಂಡು ಅಲ್ಲಿ ಎಲ್ಲ ಕಡೆಗೂ ಇರುವ ಅವನ ಸದುದ್ದೇಶ ಮತ್ತು ಮಾನವ ಕುಲ ಕಲ್ಯಾಣದ ಆಕಾಂಕ್ಷೆಯನ್ನು ಎತ್ತಿತೋರಿಸಿದ್ದಾರೆ ಶ್ರೀಮಧ್ವಾಚಾರ್ಯರು. ಆಪಾತತಃ ತೋರುವ ಅವನ ನ್ಯಾಯ ನೈಷ್ಠುರ್ಯ ವಾಚಃಕ್ರೌರ್ಯಗಳ ಹಿಂದೆ ಎಂಥ ಉದಾತ್ತವಾದ ಕರ್ತವ್ಯ ದಕ್ಷತೆ, ಉದ್ಧಾರದ ಆಕಾಂಕ್ಷೆ, ಅಂತಃಕರಣದ ಔದಾರ್ಯಗಳು ತುಂಬಿ ತುಳುಕುತ್ತಲಿವೆಯೆಂಬುದನ್ನು ಸೊಗಸಾಗಿ ಶ್ರೀಮಧ್ವಾ ಚಾರ್ಯರು ಸೋಪಪತ್ತಿಕವಾಗಿ ನಿರೂಪಿಸಿದ್ದಾರೆ.

ಸಕಲ ನಿಗಮಾಗಮಗಳ ಸಾರವನ್ನೂ ಸರ್ವ ವೈದಿಕ ದರ್ಶನಗಳ ಸೈದ್ಧಾಂತಿಕ ಸಂದೇಶವನ್ನೂ ವಿವಿಧ ಸನ್ನಿವೇಶ ಸಂದರ್ಭಗಳಿಂದ ಸೂಚಿಸುವ ಮಹಾ ಭಾರತದ ಗಹನ ಗಂಭೀರವಾದ, ರಹಸ್ಯ ಸ್ವಾರಸ್ಯಗಳನ್ನು ಇಷ್ಟು ಕ್ರಮಬದ್ಧ ಹಾಗೂ ಪ್ರಮಾಣ ಸಿದ್ಧವಾದ ಶೈಲಿಯಲ್ಲಿ ವಿವರಿಸಿ ಕಾವ್ಯ ಮಯವಾದ ತಾತ್ಪರ್ಯವನ್ನು ಬರೆದ ಪುಣ್ಯ ಪುರುಷರು ಶ್ರೀ ಮಧ್ವಾಚಾರ್ಯರ ಹೊರತು ಈ ವರೆಗೆ ಬೇರಾರೂ ಈ ಪ್ರಪಂಚದಲ್ಲಿ ಈ ವರೆಗೆ ಹುಟ್ಟಲಿಲ್ಲ. ಮಹಾರಾಷ್ಟ್ರದ ಸಂತರಾದ ಜ್ಞಾನೇಶ್ವರರು ಲಕ್ಷ ಶ್ಲೋಕಾತ್ಮವಾದ ಮಹಾ ಭಾರತದ ಏಕದೇಶವಾದ ಭಗವದ್ಗೀ ತೆಯ ೭೦೦ ಪದ್ಯಗಳಿಗೆ ಮಾತ್ರ ಒಂದು ಕಾವ್ಯಮಯವಾದ ವ್ಯಾಖ್ಯಾನವನ್ನು ಬರೆದದ್ದರಿಂದಲೇ ಜಗತ್ತು ಅವರನ್ನು ಕೊಂಡಾಡುತ್ತಲಿದೆ. ಅಂದ ಬಳಿಕ ಸಮಗ್ರ ಮಹಾಭಾರತಕ್ಕೆ ಅವಕ್ಕಿಂತ ಸುಂದರ ಹಾಗೂ ಪ್ರಮಾಣ ಪರಿಶುದ್ಧವಾದ ಸಂಸ್ಕೃತ ಪದ್ಯಮಯ ತಾತ್ಪರ್ಯ ಗ್ರಂಥವನ್ನು ಬರೆದವರಿಗೆ ಪೂರ್ಣಪ್ರಜ್ಞ ಎಂಬ ಹೆಸರು ಸರ್ವಜ್ಞತ್ವೋಪಜ್ಞವಾಗಿದೆ ಎಂಬುದು ಸುಪ್ರಸ್ಪವೇ ಆಗಿದೆ. ಗುರುಮಧ್ವರ ಇಂಥ ಬೃಹದ್ ಗ್ರಂಥ ಪ್ರಣಯನದ ಮಹೋಪಕಾರಕ್ಕಾಗಿ ಇಡೀ ಪ್ರಪಂಚವೇ ಕೃತಜ್ಞತೆ ಯಿಂದ ಅವರಿಗೆ ತಲೆಬಾಗಿಸಬೇಕಾಗಿದೆ. ೬೦೦೦ ಗ್ರಂಥಾತ್ಮಕವಾದ ಈ ಮಹತ್

ಪ್ರಬಂಧದ ಗುಣ ಗಾತ್ರಗಳ ಬಿತ್ತರವನ್ನು ಕಂಡೇ ಬುದ್ಧಿಯು ಬೆರಗುವಡೆಯುತ್ತಿದೆ. ಇದು ಅಸರ್ವಜ್ಞರ ಕೃತಿಯಲ್ಲವೆಂದು ಯಾರಿಗಾದರೂ ಎನಿಸಬಹುದು.

ಈ ಕಾವ್ಯಮಯವಾದ, ಬೃಹತ್ ಪ್ರಮೇಯ ಪ್ರತಿಪಾದಕವಾವ ಕಥಾಕೋಶದಲ್ಲಿ ಬಗೆ ಬಗೆಯ ಛಂದಸ್ಸುಗಳನ್ನು, ಅಲಂಕಾರಗಳನ್ನು, ನುಡಿಯ ಮೋಡಿಗಳನ್ನು ಆಚಾರ್ಯರು ಬಳಸಿಕೊಂಡಿದ್ದಾರೆ. ವಿಶಾಲ ಭಾರತದ ಬೃಹತ್ ಕಥಾ ಸಾಗರವನ್ನು ಕಡೆದು ಕ್ರೋಢೀಕರಿಸುವ ಇದರ ಪ್ರವಾಹೀ ಧಾಟಿಯ ಓಟದ ಸರಣಿಯಲ್ಲಿಯೂ ಸ್ವಯಂವರ, ಶ್ರೀಮದಾಚಾರ್ಯರ ಪ್ರಕೃತಿ ಸಹಜವಾದ ಕಾವ್ಯಶ್ರೀ ಮಿಂಚಾಡದೆಯಿಲ್ಲ. ಸೀತಾ ಶ್ರೀ ರಾಮ ಪಟ್ಟಾಭಿಷೇಕ, ವ್ಯಾಸ ಜನ್ಮ, ಸುಂದರ ಕಾಂಡದ ರಾಮಾಯಣ ಕಥಾ ಸಂದರ್ಭ, ರಾಜಸೂಯ ಯಾಗ ಸನ್ನಿವೇಶ ಮೊದಲಾದ ವಿವಿಧ ಪ್ರಸಂಗಗಳಲ್ಲಿ ಶ್ರೀಮಧ್ವಾಚಾರ್ಯರ ಲೆಕ್ಕಣಿಕೆಗೆ ಕುಶಲ ಚಿತ್ರಕಾರನ ಕುಂಚದ ಸ್ವರೂಪವು ಬಂದು ಹೊಸದಾದ ಒಂದು ರಸ ಪ್ರಪಂಚವೇ ಅರಳಿ ನಿಲ್ಲುತ್ತದೆ.

ಸೀತಾ ಸ್ವಯಂವರ ಕಾಲದಲ್ಲಿ ರಾಮ ಸೀತೆಯರ "ತಾರಾ ಮೈತ್ರಿ" ಎಂದರೆ ಪ್ರಥಮ ಸಂದರ್ಶನದ ಮಧುರ ಪ್ರಸಂಗವನ್ನು ಎಂಥ ಸುಂದರವಾವ ಶಬ್ದಗಳಲ್ಲಿ ಬಣ್ಣಿಸಿದ್ದಾರೆ, ನೋಡಿರಿ—

ತಮಬ್ಜನೇತ್ರಂ ಪೃಥು ತುಂಗ ವಕ್ಷಸಂ ಶ್ಯಾಮಾವದಾತಂ
ಚಲಕುಂಡಲೋಜ್ವಲಂ ।
ಶಶಕ್ಷತೋಥ್ಥೋಪಮಚಂದನೋಕ್ಷಿತಂ ದದರ್ಶ ವಿದ್ಯುದ್ವಸನಂ
ನೃಪಾತ್ಮಜಾ ॥

ವ್ಯಾಸಜನ್ಮ ಸಂದರ್ಭವನ್ನು ಆಚಾರ್ಯರ ವಾಣಿಯಲ್ಲಿಯೇ ಕೇಳಿರಿ—

ದ್ವೀಪೇ ಭಗಿನ್ಯಾಸ್ತು ಯಮಸ್ಯ ವಿಶ್ವಕೃತ್ ।
ಪ್ರಕಾಶತೇ ಜ್ಞಾನಮರೀಚಿ ಮಂಡಲಃ ॥
ಪ್ರಭಾಸಯನ್ನಂಡ ಬಹಿಸ್ತಥಾಂತಃ ।
ಸಹಸ್ರ ಲಕ್ಷಾ ಮಿತ ಭಾನು ದೀಧಿತಿಃ ॥

....

ಶುಭ ಮರಕತ ವರ್ಣೋ ರಕ್ತ ಪಾದಾಬ್ಜ ನೇತ್ರಾs
ಧರಕರ ನಖರ ಸನಾಗ್ರಶ್ಚಕ್ರಶಂಖಾಬ್ಜ ರೇಖಃ ॥
ರವಿಕರವರಗೌರಂ ಚರ್ಮ ಚೈಣಂ ವಸಾನಃ
ತಟಿದಮಲಜಟಾಸನ್ ದೀಪ್ತ ಚೂಡಂ ದಧಾನಃ ॥

ವಿಸ್ತೀರ್ಣ ವಕ್ಷಾಃ ಕಮಲಾಯತಾಕ್ಷೋ ಬೃಹದ್ಭುಜಃ
ಕಂಬು ಸಮಾನ ಕಂಠಃ।
ಸಮಸ್ತ ವೇದಾನ್ ಮುಖತಃ ಸಮುದ್ಗಿರನ್ ಅನಂತ
ಚಂದ್ರಾಧಿಕ ಕಾಂತಿ ಸನ್ಮುಖಃ॥
ಪ್ರಬೋಧ ಮುದ್ರಾs ಭಯದೋರ್ದ್ವಯಾಂಕಿತೋ
ಯಜ್ಞೋಪವೀತಾಜಿನ ಮೇಖಲೋಲ್ಲಸನ್॥
ದೃಶಾ ಮಹಾs ಜ್ಞಾನ ಭುಜಂಗದಷ್ಟದ
ಮುಜ್ಜೀವ ಯಾನೋ ಜಗದತ್ಯರೋಚತ॥

ಇಂಥ ಸಾವಿರಾರು ಸುಂದರವಾದ, ತತ್ವ ಬಂಧುರ ಪದ್ಯಗಳನ್ನು ಇಲ್ಲಿ ಉದಾಹರಿಸಬಹುದು. ಹೀಗೆ ಉಚ್ಚ ಮಟ್ಟದ ಸಾಹಿತ್ಯದ ಶೈಲಿಯಲ್ಲಿ ವೇದ ಶಾಸ್ತ್ರ ಸತ್ವಾರ್ಥ, ತತ್ವಾರ್ಥಗಳನ್ನು ಬಿತ್ತರಿಸುವ ಆಚಾರ್ಯರು—

"ಕವಯಂತಂ ರಾಮಕೀರ್ತ್ಯಾ ಹನುಮಂತಮುಪಾಸ್ಮಹೇ॥"

ಎಂಬಂತೆ ಸರ್ವಜ್ಞ ಚೂಡಾಮಣಿಗಳಾದ ಆ ವಾಯುದೇವರ ಮೂರನೇ ಅವತಾರರೇ ಎಂಬುದು ಸ್ಪಷ್ಟವಾಗುವದು. ಇವನ್ನೇ ಆಚಾರ್ಯರು ತಮ್ಮ ತಾತ್ಪರ್ಯದ ನಿರ್ಣಯ ಆದಿ ಅಂತ್ಯ ಭಾಗದಲ್ಲಿ ಹೇಳಿದ್ದು ಯಥಾರ್ಥವಾಗಿದೆ.

"ತನುಸ್ತ್ರತೀಯಾ ಪವನಸ್ಯ ಸೇಯಂ ಸದ್ಭಾರತಾರ್ಥ ಪ್ರತಿಪಾದನಾಯ॥
ಗ್ರಂಥಂ ಚಕಾರೇಮಮುದೀರ್ಣ ವಿದ್ಯಾ ಯಸ್ಮಿನ್ ರಮಂತೇ ಹರಿಪಾದಭಕ್ತಾಃ॥"

# ಇತರ ಕೃತಿಗಳು

## ೧. ಕೃಷ್ಣಾಮೃತ ಮಹಾರ್ಣವ

ಇದು ಶ್ರೀ ವಿಷ್ಣುವಿನ ಶ್ರೇಷ್ಠತೆಯನ್ನು ಹೇಳುವ ಸ್ಮೃತಿ ಪುರಾಣ ವಚನಗಳ ಸಂಗ್ರಹ ರೂಪವಾಗಿದೆ. ಇದರಲ್ಲಿ ೨೪೨ ಪದ್ಯಗಳಿದ್ದು, ಹೆಚ್ಚಾಗಿ ಅನುಷ್ಟುಪ ಛಂದಸ್ಸಿನಲ್ಲಿಯೇ ಇರುತ್ತವೆ. ಇದರಲ್ಲಿ ಬರುವ ಪದ್ಯಗಳೆಲ್ಲವೂ ನಾರದ, ಪುಲಸ್ತ್ಯ, ಮಾರ್ಕಂಡೇಯ, ಮರೀಚಿ, ನಾರದ, ಶಿವ, ಅತ್ರಿ, ಅಂಗೀರಸ, ಮೈತ್ರೇಯ, ವ್ಯಾಸ, ರುಕ್ಮಾಂಗದ ಮುಂತಾದ ಅನೇಕ ಅನುಭಾವಿಗಳ ಉಕ್ತಿಗಳೇ ಆಗಿವೆ. ಅಂಥ ವಿಷ್ಣು ಪಾರಮ್ಯ ಪ್ರತಿಪಾದಕವಾದ ಪದ್ಯಗಳನ್ನು ಆಯ್ದು ಇದರಲ್ಲಿ ಕೊಡಲಾಗಿದೆ. ಇಲ್ಲಿ ಉದಾಹರಿಸಿದ ಸಂಸ್ಕೃತ ಪದ್ಯಗಳೆಲ್ಲವೂ ಅತ್ಯಂತ ಮಾರ್ಮಿಕವಾಗಿದ್ದು ಎಲ್ಲ ಶ್ರುತಿ, ಸ್ಮೃತಿ, ಪುರಾಣಗಳಿಗೂ ವಿಷ್ಣು ಸರ್ವೋತ್ತಮತ್ವ ಪ್ರತಿಪಾದನೆಯಲ್ಲಿಯೇ ಮಹಾ ತಾತ್ಪರ್ಯ ಮತ್ತು ನೈರ್ಭಯ್ಯಗಳದ್ದದ್ದು ಇದರ ಮೇಲಿಂದ ಕಂಡುಬರುತ್ತದೆ.

ಏಕಾದಶೀ ಉಪೋಷಣ ಮತ್ತು ಏಕಾದಶೀ ನಿರ್ಣಯ, ದ್ವಾದಶೀ ಪಾರಣ, ಮತ್ತು ಶಾಲಿಗ್ರಾಮ ಪೂಜೆ, ಊರ್ಧ್ವ ಪುಂಡ್ರ ಧಾರಣ, ಭಗವದ್ಧ್ಯಾನ ಮುಂತಾದ ವಿಷಯಗಳನ್ನು ಈ ಪ್ರಕರಣದಲ್ಲಿ ಒತ್ತಿ ಹೇಳಲಾಗಿದೆ.

ಈ ಚಿಕ್ಕ ಗ್ರಂಥದಲ್ಲಿ ಹರಿಭಕ್ತಿಗೆ ವಿಶೇಷ ಪ್ರಾಧಾನ್ಯವನ್ನು ಕೊಟ್ಟು ಅದೇ ತಾರಕ ಎಂದು ಹೇಳಿದ್ದಾರೆ. ಕರ್ಮಗಳನ್ನೆಲ್ಲ ಸವೆಯಿಸಿಕೊಂಡು ಮೋಕ್ಷವನ್ನು ಹೊಂದುತ್ತೇನೆಂಬುದು ಅಶಕ್ಯ ಮತ್ತು ಅಸಂಭವ. ಯಾಕಂದರೆ ಮಾನವನಿಗೆ ತಿಳಿಯಲು ಮೊದಲಾಗುವ ೧೪ ನೇ ವರ್ಷದಿಂದ ಕೊನೆಯ ವರೆಗೆ ಅವನು ಮಾಡುವ ಪ್ರತಿದಿನದ ಕರ್ಮಗಳಿಂದ ಹತ್ತಕ್ಕೆ ಕಡಿಮೆಯಿಲ್ಲದಷ್ಟು ಜನ್ಮಗಳು ಬರುವದು ನಿಶ್ಚಿತ. ಅಂದ ಬಳಿಕ ಈ ಎಲ್ಲ ಕರ್ಮಗಳ ಕ್ಷಯ ಆಗುವದೆಂದು ? ಮುಕ್ತಿ ದೊರಕುವದೆಂದು?

ದಶಾವರಾಣಂ ದೇಹಾನಾಂ ಕಾರಣಾನಿ ಕರೋತ್ಯಯಮ್ ।
ಅತಃ ಕರ್ಮ ಕ್ಷಯಾನ್ ಮುಕ್ತಿಃಕುತ ಏವ ಭವಿಷ್ಯತಿ ॥

ಆದುದರಿಂದ ವಿಹಿತ ಕರ್ಮಗಳನ್ನು ಮಾಡಿ ಶ್ರೀ ಹರಿಯಲ್ಲಿ ನವ ವಿಧವಾದ ಭಕ್ತಿಯನ್ನು ಬೆಳೆಸಿಕೊಂಡು ನಿರಂತರ ಹರಿಧ್ಯಾನ ಮಾಡುವದೊಂದೇ ಕರ್ಮ ವಿನಾಶಕ್ಕೂ, ಹರಿಯ ಪ್ರಸಾದಕ್ಕೂ, ಮೋಕ್ಷ ಪ್ರಾಪ್ತಿಗೂ ಮುಖ್ಯ ಕಾರಣವೆಂದು ಹೇಳಿದ್ದಾರೆ.

## ೨. ದ್ವಾದಶ ಸ್ತೋತ್ರ

ಶ್ರೀ ಮಧ್ವಾಚಾರ್ಯರು ಸಮುದ್ರ ತೀರದಿಂದ ಉಡುಪಿಯ ಶ್ರೀ ಕೃಷ್ಣನ ಪ್ರತಿಮೆಯನ್ನು ತಲೆಯ ಮೇಲೆ ಹೊತ್ತು ತರುವಾಗ ಅವರ ಹೃದಯದಿಂದ ಹೊಮ್ಮಿ, ಹರಿದು, ಚಿಮ್ಮಿ ಬಂದ ಹೃದಯದ ಹಿಗ್ಗಿನ ಹಾಡೇ ಈ ದ್ವಾದಶ ಸ್ತೋತ್ರ. ಇದಕ್ಕೆ ಭಾವ ಗೀತದ ಬೆಡಗು ಇದೆ. ಆರ್ಷವಾಣಿಯ ಅಂತಃಸತ್ವವಿದೆ. ಹೃದಯ ತುಂಬುವ ಭಕ್ತಿಯ ಉತ್ಕಟತೆ ಇದೆ. ಇದರಲ್ಲಿ ೧೨ ಅಧ್ಯಾಯಗಳಿವೆ. ಒಂದೊಂದು ಅಧ್ಯಾಯವೂ ವಿಶಿಷ್ಟ ರಾಗ, ತಾಳ, ಲಯ, ಮಟ್ಟು, ಛಂದ-ಬಂಧಗಳಲ್ಲಿದ್ದುದರಿಂದ ಇದನ್ನು ಸಂಗೀತ ಶಾಸ್ತ್ರದ ತಾಲ-ಬೋಲಗಳಿಗೆ ಅನುಗುಣವಾಗಿ ತಜ್ಞರು ಸುಂದರವಾಗಿ ಹಾಡಬಹುದು. ಇಲ್ಲಿಯ ಹನ್ನೆರಡು ಅಧ್ಯಾಯಗಳಲ್ಲಿ ಬಗೆ-ಬಗೆಯಿಂದ ಭಗವಂತನನ್ನು ಕೊಂಡಾಡಲಾಗಿದೆ.

ಮಧ್ವಾಚಾರ್ಯರ ಪ್ರೀತಿಯ ಎತ್ತಿಗೆ ಯಾರೋ ಕುಹಕಿಗಳು ವಿಷ ಪ್ರಯೋಗ ಮಾಡಿದಾಗ ಆಚಾರ್ಯರು ಈ ದ್ವಾದಶ ಸ್ತೋತ್ರವನ್ನು ಪಠಿಸಿ ವಿಷಬಾಧೆಯನ್ನು ಪರಿಹರಿಸಿದರಂತೆ. ಅಂದಿನಿಂದ ದೇವರಿಗೆ ನೈವೇದ್ಯ ಸಮರ್ಪಣೆ ಮಾಡುವಾಗ ಅನ್ನವನ್ನು ದೂಷಿತಗೊಳಿಸುವ ದ್ರವ್ಯಗಳ ಮಿಶ್ರಣದ ದೋಷ ಪರಿಹಾರಾರ್ಥವಾಗಿ ದ್ವಾದಶ ಸ್ತೋತ್ರವನ್ನು ಪಠಿಸುವದು ಮಾಧ್ವರಲ್ಲಿ ಇಂದಿಗೂ ಒಂದು ಸತ್ಸಂಪ್ರದಾಯವಾಗಿದೆ. ಇಲ್ಲಿಯ ಗೀತ ಗಂಧಿಯಾದ ಅಂದ-ಚೆಂದದ ಛಂದಸ್ಸುಗಳನ್ನು ವಿಷ್ಣುವಿನ ಅನಂತ ಮಹಿಮೆಯನ್ನು ತೂಗುವ ಸುಂದರವಾದ ಆಂದೋಲಿಕೆಗಳನ್ನಾಗಿ ಮಾಡಿದ್ದಾರೆ ಶ್ರೀಮದಾನಂದತೀರ್ಥರು. ಇಲ್ಲಿಯ ಸಾಹಿತ್ಯದ ಹೆಣಿಗೆಯಲ್ಲಿ ಕಾವ್ಯಮಯವಾಗಿ ಬಂದ ವೇದಾಂತ ಪ್ರಮೇಯಗಳೂ ಹೃದ್ಯಾಸ್ವಾದ್ಯವಾಗಿಯೇ ಮೂಡಿ ಬಂದಿವೆ.

ಈ ದ್ವಾದಶ ಸ್ತೋತ್ರದಲ್ಲಿ ಮುಖ್ಯವಾಗಿ ಆಚಾರ್ಯರು ಧರ್ಮಾನುಸರಣ, ಕರ್ಮಾಚರಣ ಇವೆರಡಕ್ಕೆ ಮಹತ್ವವನ್ನು ಕೊಟ್ಟು ಅವೆರಡು ಹರಿಭಕ್ತಿ ಪೂರ್ವಕವಾಗಿಯೇ ನಡೆಯಬೇಕೆಂಬುದನ್ನು ಹೇಳಿದ್ದಾರೆ.

''ಕುರುಂ ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ।
ಹರಿಪಾದ ವಿನಮ್ರಧಿಯಾ ಸತತಂ ॥"

ಇದೊಂದು ಮಧ್ವಾಚಾರ್ಯರು ಮಾಡಿದ ಹರಿಸರ್ವೋತ್ತಮತ್ವದ ಘೋಷಣ ಪತ್ರಿಕೆಯೇ ಆಗಿದೆ.

"ನ ಹರೇಃ ಪರಮೋ ನ ಹರೇಃ ಸದೃಶಃ ।
ಪರಮಃ ಸ ತು ಸರ್ವ ಚಿದಾತ್ಮಗಣಾತ್ ॥"

ಹರಿಯೇ ಸರ್ವೋತ್ತಮ ಎಂದು ಅಂಧ-ಶ್ರದ್ಧೆಯಿಂದ ಕೂಗಾಡದೇ— ಹೇತು ಹೇಳಿ, ಅದರ ಸಾಧ್ಯವನ್ನು ನಿರ್ದೇಶಿಸಿ, ಅವುಗಳಿಗೆ ವ್ಯಾಪ್ತಿಯನ್ನು ಸೂಚಿಸಿ, ಅವುಗಳಿಗೆ ಅಪ್ರಯೋಜಕ ಶಂಕೆಯನ್ನು ಮಾಡಿದರೆ ತನ್ನಿವರ್ತಕವಾದ ಅನುಕೂಲ ತರ್ಕವನ್ನೂ ಕೂಡ ಹೇಳಿ—

"ಪರಮಃ ಸತು ಸರ್ವ ಚಿದಾತ್ಮಗಣಾತ್ ||"

ಎಂದು ಸಿದ್ಧಾಂತಿಸುತ್ತಾರೆ.

ಹರಿಯೇ ಸರ್ವೋತ್ತಮ, ದೇವೋತ್ತಮ, ಪರಮ, ಚರಮ, ಸ್ವರಮ ಎಂದು ಸಿದ್ಧಪಡಿಸಿದ್ದಾರೆ. ಈ ದ್ವಾದಶ ಸ್ತೋತ್ರದಲ್ಲಿ ಬರುವ ಕೇಶವಾದಿ ದ್ವಾದಶ ಮೂರ್ತಿಗಳ ವರ್ಣನೆ ಅರ್ಥಪೂರ್ಣವಾಗಿದೆ. ದಶಾವತಾರಗಳ ಬಣ್ಣನೆ ಸುಂದರ-ಬಂಧುರವಾಗಿದೆ. ಲಕ್ಷ್ಮೀ ದೇವಿಯ ಪ್ರಣಾಮ ಪದ್ಯಗಳು ತತ್ತ್ವಗರ್ಭಿತವಾಗಿ, ಚೇತೋಹಾರಿಯಾಗಿವೆ. ಇಲ್ಲಿಯ ಭಗವತ್ ಪ್ರಾರ್ಥನೆಯಲ್ಲಿ ಆರ್ತ ಭಕ್ತಿಯ ಮೊರೆ ಇದೆ. ಜಿಜ್ಞಾಸುವಿನ ಕರೆ ಇದೆ. ಅರ್ಥಾರ್ಥಿಯ ಜ್ಞಾನ ಭಕ್ತಿ ವೈರಾಗ್ಯಗಳ ಬೇಡಿಕೆ ಇದೆ. ಜ್ಞಾನಿಯ ಆತ್ಮಾರ್ಪಣೆಯೂ ಇದೆ. ಇದೊಂದು ವೇದಾಂತ ಪ್ರಸಂಗದಲ್ಲಿಯ ಸುಂದರವಾದ ಭಾವಗೀತ.

ಶ್ರೀಮದಾನಂದತೀರ್ಥರ ಗೇಯತಾ ಪ್ರಾಧಾನ್ಯವುಳ್ಳ ಈ ಗೀತ ಗುಚ್ಛವೇ ಮುಂದೆ ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳಲ್ಲಿ ಭಕ್ತಿ ಪ್ರಧಾನವಾದ ವೈಷ್ಣವ ಭಾವಗೀತ ಮತ್ತು ಹರಿದಾಸ ಸಾಹಿತ್ಯ, ಭಕ್ತಿ ಸಾಹಿತ್ಯಗಳಿಗೆ ಪ್ರೇರಣ, ಕಾರಣವಾದ ಆದರ್ಶ ಕೃತಿಯಾಯಿತು. ಇದೇ ಜಾಡನ್ನು ಹಿಡಿದೇ ಉತ್ತರಕಾಲೀನ ಹರಿದಾಸರು ಗೇಯತೆಯನ್ನು, ಭಕ್ತಿ-ಭೂಮತೆಯನ್ನೂ ಅಳವಡಿಸಿಕೊಂಡು ಕನ್ನಡ ಭಾಷೆಯಲ್ಲಿ ಭಗವನ್ಮಹಿಮಾಪ್ರತಿಪಾದಕವಾದ ಅನೇಕ ದೇವರ ನಾಮ, ಉಗಾಭೋಗ, ಸುಳಾದಿಗಳನ್ನು ರಚಿಸಿದರು.

## ೩. ನರಸಿಂಹ ನಖ ಸ್ತುತಿ

ಶ್ರೀ ಮಧ್ವಾಚಾರ್ಯರು ತಮ್ಮ ಉಪಾಸ್ಯ ಮೂರ್ತಿಯಾದ ನರಸಿಂಹ ದೇವರನ್ನೂ ಮತ್ತು ಅವರ ಉಗುರುಗಳನ್ನೂ ಇಲ್ಲಿ ಸ್ರಗ್ಧರಾವೃತ್ತದ ಎರಡು ಪದ್ಯಗಳಲ್ಲಿ ಬಣ್ಣಿಸಿದ್ದಾರೆ. ಈ ಎರಡು ಪದ್ಯಗಳು ಈಗ ಶ್ರೀ ತ್ರಿವಿಕ್ರಮ ಪಂಡಿತರು ರಚಿಸಿದ ವಾಯು ಸ್ತುತಿಯ ಪ್ರಾರಂಭಿಕ ಪದ್ಯಗಳಾಗಿ ಮಂಗಳಾಚರಣ ರೂಪದಿಂದ ಪಠಿಸಲ್ಪಡುತ್ತವೆ. ಇದಕ್ಕೆ ಒಂದು ಕಾರಣವೂ ಇದೆ.

ಒಂದು ದಿನ ಶ್ರೀಮಧ್ವಾಚಾರ್ಯರು ಗರ್ಭಗುಡಿಯ ಬಾಗಿಲು ಹಾಕಿಕೊಂಡು ಶ್ರೀ ಕೃಷ್ಣನನ್ನು ಪೂಜೆಮಾಡುವಾಗ ತ್ರಿವಿಕ್ರಮ ಪಂಡಿತಾಚಾರ್ಯರು ತುಸು ಬಾಗಿಲ ಸರಿಸಿ ಹಣಿಕಿ ಹಾಕಿ ನೋಡಿದರಂತೆ. ಅಲ್ಲಿ ಅವರಿಗೆ ಕಂಡದ್ದು— ರಾಮ-ಕೃಷ್ಣ, ವೇದವ್ಯಾಸ ದೇವರನ್ನು ಪೂಜಿಸುವ ತಮ್ಮ ಗುರುಗಳ ಹನುಮ–ಭೀಮ–ಮಧ್ವ ರೂಪಗಳು. ಆ ತಮ್ಮ ಅನುಭವವನ್ನೇ ವಾಯು ಸ್ತುತಿ ಎಂಬ ಸ್ತೋತ್ರ ಪ್ರಬಂಧವನ್ನು ರಚಿಸಿ, ಅದರಲ್ಲಿ ಮಧ್ವಾಚಾರ್ಯರ ಮೂರು ಅವತಾರಗಳ ಗೈಮೆ–ವೈಮೆಗಳನ್ನು ಬಣ್ಣಿಸಿ ಆಚಾರ್ಯರ ಮುಂದೆ ಇಟ್ಟರು. ಅದನ್ನು ನೋಡಿ ಮಧ್ವಾಚಾರ್ಯರು ಮೊದಲು ದೇವರ ಸ್ತೋತ್ರವಿಲ್ಲದೇ ನನ್ನ ಸ್ತುತಿಯು ಪ್ರಾರಂಭವಾಗಬಾರದು ಎಂಬ ಆಶಯದಿಂದ ನರಸಿಂಹ ದೇವರ ವರ್ಣನಾತ್ಮಕವಾದ ಎರಡು ಪದ್ಯಗಳನ್ನು ತಮ್ಮ ಶಿಷ್ಯರ ವಾಯು ಸ್ತುತಿಯ ಮಸ್ತಕಕ್ಕೆ ಇಟ್ಟು ಮುಕುಟ ಮಂಡನ ಮಾಡಿದರು.

ಮಧ್ವಾಚಾರ್ಯರು ಹೇಳಿದ ಈ ನರಸಿಂಹ ಸ್ತುತಿಯಲ್ಲಿ— "ಈ ಪ್ರಪಂಚದಲ್ಲಿ ನಾನೆಷ್ಟು ಹುಡುಕಾಡಿದೆ, ಎಲ್ಲ ಕಡೆಗೂ ತಡಕಾಡಿದೆ. ಹರಿಗೆ ಸಮಾನವಾದ ವಸ್ತುವನ್ನು ಎಲ್ಲಿಯೂ ಕಾಣಲಿಲ್ಲ. ಇನ್ನು ಅದಕ್ಕೆ ಮಿಗಿಲಾದ ಪದಾರ್ಥವೊ ಮುಗಿಲ ಮಲ್ಲಿಗೆ. ಎಂಟನೆಯ ರಸ. ಬಂಜೆಯ ಮಗ. ಯಾಕಂದರೆ ಈ ನರಸಿಂಹನ ಕೋಪದಿಂದ ಕೆಂಪಾದ ಕಣ್ಣಿನ ಒಂದು ಕಿಡಿಯೆ ಸಾಕು— ಇಡೀ ಜಗತ್ತನ್ನೆಲ್ಲ ಸುಟ್ಟು ಬೂದಿ ಮಾಡಲು. ಬ್ರಹ್ಮಾದಿ ದೇವತೆಗಳೂ ಆ ಕ್ರುದ್ಧೋಲ್ಕೆಯ ಸಿಡಿತಕ್ಕೆ ಭಸ್ಮವಾಗಲು ತಡವಾಗುವದಿಲ್ಲ. ಇಂಥ ಸರ್ವೋತ್ತಮ ನರಹರಿಯ ಉಗುರುಗಳು ನಮ್ಮನ್ನು ರಕ್ಷಿಸಲಿ" ಎಂಬ ಪ್ರಾರ್ಥನೆಯ ನೆವದಿಂದ ವೇದಶಾಸ್ತ್ರ ಸಾರಭೂತವಾದ ಮುಖ್ಯ ತತ್ತ್ವವನ್ನು ಸೋಪಪತ್ತಿಕವಾಗಿ ನಿರೂಪಿಸಿದ್ದಾರೆ.

ಅಂತೂ ಮಧ್ವಾಚಾರ್ಯರು ಮಾತು ಆಡಿದಲ್ಲೆಲ್ಲ ವೈಷ್ಣವತೆಯು ಹೂತು ನಿಲ್ಲುತ್ತದೆ. ನುಡಿ ಮೂಡಿದಲ್ಲೆಲ್ಲ ದ್ವೈತ ಸಿದ್ಧಾಂತವು ಗುಡಿ ಗೋಪುರವಾಗಿ ಎದ್ದು ನಿಲ್ಲುತ್ತದೆ.

## ೪. ಯಮಕ ಭಾರತ

೮೧ ಪದ್ಯಗಳ ಈ ಚಿಕ್ಕ ಕಾವ್ಯದಲ್ಲಿ ಶಾಸ್ತ್ರೀಯ ಪ್ರಪಂಚದ ಸೀಮಾ ಪುರುಷರಾದ ಶ್ರೀ ಮಧ್ವಾಚಾರ್ಯರ ಕವಿತಾ ಪ್ರೌಢಿಮೆ ಹಾಗೂ ಅಲಂಕಾರ ವೈದಗ್ಧ್ಯ, ಉಕ್ತಿ ಚಾತುರ್ಯ ಮುಂತಾದ ಗುಣಗಳು ಗೋಚರವಾಗುತ್ತವೆ. ಇಲ್ಲಿಯ ಪ್ರತಿಯೊಂದು ಪದ್ಯದಲ್ಲಿಯೂ ಭಾಸ, ಭಾರವಿ ಮುಂತಾದ ಕವಿಗಳಂತೆ ಸುಂದರವಾದ ಯಮಕ ಪ್ರಾಸ ವಿಲಾಸವನ್ನು ಉಲ್ಲಾಸಗೊಳಿಸಲಾಗಿದೆ. ಆದುದರಿಂದಲೇ ಇದಕ್ಕೆ ಯಮಕ ಭಾರತ ಎಂದು ಹೆಸರು ಬಂದಿದೆ.

"ಕೃಷ್ಣ ಕಥೇಯಂ ಯಮಿತಾ ಸುಖ ತೀರ್ಥೇನೋದಿತಾಽ
ನೇನೇ ಯಂ ಯಮಿತಾ ।
ಭಕ್ತಿಮತಾ ಪರಮೇಶೇ ಸರ್ವೋದ್ರೇಕಾ ತ್
ಸನಾಮವತಾಽಽ ಪರಮೇಶೆ ॥"

ಈ ಯಮಕ ಭಾರತದ ತುಂಬ ಪಾಂಡವ ಸಹಾಯಕನಾದ ಶ್ರೀ ಕೃಷ್ಣನ ಮಹಾ ಮಹಿಮೆಯನ್ನು ಪ್ರೌಢ ಕಾವ್ಯ ಶೈಲಿಯಲ್ಲಿ ರಸಾಲಂಕಾರ ಭರಿತವಾದ ಪದ ಪುಂಜಗಳಿಂದ ಸರ್ವಜ್ಞಾಚಾರ್ಯರು ಬಣ್ಣಿಸಿದ್ದಾರೆ.

## ೫. ಕಂದುಕ ಸ್ತುತಿ

ಶ್ರೀ ಮಧ್ವಾಚಾರ್ಯರು ಚಿಕ್ಕವರಿದ್ದಾಗ ಆಟದ ಸಮಯದಲ್ಲಿಯೂ ವ್ಯರ್ಥ ಕಾಲಹರಣ ಮಾಡುತ್ತಿದ್ದಿಲ್ಲ. ಗೆಳೆಯಂದಿರೊಡನೆ ಚಂಡಾಡುವಾಗ ಆ ವಾಸುದೇವ ನಾಮಕನಾದ ಮಧ್ವ ಬಾಲಕನು ತಾಳಬದ್ಧವಾಗಿ ಕೃಷ್ಣನ ಮಹಿಮೆಯನ್ನು ಹಾಡುತ್ತಲೇ ಚಂಡನ್ನು ಪುಟಿಸುತ್ತಿದ್ದರಂತೆ. ಚಿಕ್ಕ ಬಾಲಕ ವಾಸುದೇವನು ಕಂದುಕವನ್ನು ಪುಟಿಸುತ್ತ ತುಟಿಯಿಂದ ಪುಟ-ಪುಟಿಸಿದ ಪದ್ಯವೇ ಇಂದು ಕಂದುಕ ಸ್ತುತಿಯೆಂದು ಪ್ರಸಿದ್ಧವಾಗಿದೆ.

ಅಂಬರ ಗಂಗಾ ಚುಂಬಿತ ಪಾದಃ
ಪವತಲ ವಿದಲಿತ ಗುರುತರ ಶಕಟಃ ।

ಕಾಲಿಯ ನಾಗ ಕ್ಷ್ವೇಡ ನಿಹಂತಾ
ಸರಸಿಜ ನವದಲ ವಿಕಸಿತ ನಯನಃ ॥

ಕಾಲ ಘನಾಲೀ ಕರ್ಬುರ ಕಾಯಃ
ಶರಶತ ವಿಕಲಿತ ರಿಪುಶತ ನಿಕರಃ ।

ಸಂತತಮಸ್ಮಾನ್ ಪಾತು ಮುರಾರಿಃ
ಸತತಗ ಸಮಜವ ಖಗಪತಿ ನಿರತಃ ॥

## ೬. ಜಯಂತೀ ನಿರ್ಣಯ

೧೭ ಚಿಕ್ಕ ಪದ್ಯಗಳ ಈ ಪುಟ್ಟ ಕೃತಿಯಲ್ಲಿ ಕೃಷ್ಣಾಷ್ಟಮೀ ಅಥವಾ ಕೃಷ್ಣ ಜಯಂತೀ ವ್ರತವನ್ನು ಯಾವ ರೀತಿಯಿಂದ ಅನುಷ್ಠಾನ ಮಾಡಬೇಕು ಎಂಬ ವಿಷಯವನ್ನು ವಿವರಿಸಲಾಗಿದೆ. ಶ್ರೀ ಕೃಷ್ಣ ಜಯಂತಿಯು ವೈಷ್ಣವರಿಗೆಲ್ಲ ಅತ್ಯಂತ ಮಹತ್ವದ ಪುಣ್ಯದಿನವಾಗಿದೆ.

ಈ ಕೃಷ್ಣ ಜಯಂತಿಯ ಆಚರಣ ವಿಷಯದಲ್ಲಿ ಭಿನ್ನ-ಭಿನ್ನ ಗ್ರಂಥಗಳಲ್ಲಿ ಬೇರೆ ಬೇರೆ ಅಭಿಪ್ರಾಯಗಳು ಕಂಡು ಬರುತ್ತಿವೆ. ಸ್ಕಂದ ಪುರಾಣದಲ್ಲಿ ಶ್ರಾವಣ ಕೃಷ್ಣ ಪಕ್ಷದ ಅಷ್ಟಮಿಯ ದಿನ ಮಧ್ಯರಾತ್ರಿಯಲ್ಲಿ ಕೃಷ್ಣ ಜನನದ ವಿಶೇಷ ಪೂಜೆಗಳನ್ನು ಮಾಡಿ ಇಡೀ ರಾತ್ರಿ ಜಾಗರಣ ಮಾಡಬೇಕೆಂದು ಹೇಳಿದ್ದಾರೆ. ವಿಷ್ಣು ರಹಸ್ಯ ಗ್ರಂಥದಲ್ಲಿ ಉತ್ಸವವನ್ನು ಮುಗಿಸಿ ಮಲಗಬೇಕೆಂದು ಹೇಳಲಾಗಿದೆ. ಕೆಲವು ಗ್ರಂಥಗಳಲ್ಲಿ ರಾತ್ರಿ ಪಾರಣೆ ಮಾಡಬೇಕು ಎಂದಿದ್ದರೆ ಮತ್ತೆ ಹಲವು ಗ್ರಂಥಗಳಲ್ಲಿ ಬೆಳಿಗ್ಗೆ ಪಾರಣೆ ಮಾಡಬೇಕೆಂದಿದೆ. ತಿಥಿ, ನಕ್ಷತ್ರಗಳನ್ನು ಕಳೆದ ಬಳಿಕವೇ ಪಾರಣೆ ಎಂದು ಕೆಲವು ಕಡೆ ಇದೆ. ಹೀಗೆ ವಿವಾದವು ಬಂದದ್ದರಿಂದ ಸರ್ವಜ್ಞ ರಾಯರು ಸ್ವಯಂ ಪ್ರವೃತ್ತರಾಗಿ ವೈಷ್ಣವರಿಗೆಲ್ಲ ಅತ್ಯಂತ ಮಹತ್ವದ್ದಾದ ಕೃಷ್ಣ ಜಯಂತಿ ಉತ್ಸವದ ಅನುಷ್ಠಾನ, ವಿವಿಧ ವಿಧಾನಗಳ ಆಚರಣೆಯ ಬಗ್ಗೆ ಸರಿಯಾಗಿ ಮಾರ್ಗದರ್ಶನ ನೀಡುವ ನಿರ್ಣಾಯಕವಾದ ಈ ಚಿಕ್ಕ ಕೃತಿಯನ್ನು ರಚಿಸಿದ್ದಾರೆ.

ಈ ಕೃಷ್ಣಾಷ್ಟಮಿಯ ದಿನ— ಏಕಾದಶಿಯಂತೆ ನಿಶ್ಚಕ್ರ ಉಪವಾಸವು ಅತ್ಯವಶ್ಯ ಕರ್ತವ್ಯವಾಗಿದ್ದು ರಾತ್ರಿ ಚಂದ್ರೋದಯದ ಸಮಯದಲ್ಲಿ ವಿಶೇಷವಾಗಿ ಶ್ರೀ ಕೃಷ್ಣನ ಪೂಜೆಯನ್ನು ನೆರವೇರಿಸಿ ಅರ್ಘ್ಯವನ್ನು ಕೊಟ್ಟು, ಮರುದಿನ ಪಾರಣೆ ಮಾಡಬೇಕೆಂದು ಆಚಾರ್ಯರು ಅಪ್ಪಣೆ ಕೊಟ್ಟಿದ್ದಾರೆ.

## ೭. ಯತಿ ಪ್ರಣವ ಕಲ್ಪ

ಇದರಲ್ಲಿ ಆಚಾರ್ಯರು ಸನ್ಯಾಸಿಯಾಗುವ ವಿಧಾನವನ್ನೂ, ಅರ್ಹತೆಯನ್ನೂ, ಆದ ಬಳಿಕ ಅವರ ಕರ್ತವ್ಯವನ್ನೂ, ಹೊಣೆಗಾರಿಕೆಯನ್ನೂ ಮತ್ತು ಅವರ ನಿತ್ಯ ಚರ್ಯೆಯನ್ನೂ ತಿಳಿಸಿ ಕೊಟ್ಟಿದ್ದಾರೆ.

ಗುರು ಮಧ್ವರ ದೃಷ್ಟಿಯಲ್ಲಿ ಸನ್ಯಾಸದ ಮುಖ್ಯವಾದ ಅರ್ಹತೆಯೆಂದರೆ— ವೈರಾಗ್ಯ. ವಿರಕ್ತನಾಗಿದ್ದರೆ ಮಾತ್ರ ಸನ್ಯಾಸಿಯಾಗಬೇಕು. "ವಿರಕ್ತಃ ಪ್ರವ್ರಜೇತ್ ಹರಿಃ" ಈ ಸನ್ಯಾಸ ಸ್ವೀಕಾರವು ವೇದ ವೇದಾಂತ ಪರಿನಿಷ್ಠಿತರಾದ ಸದಾಚಾರ ಸಂಪನ್ನ ಯತಿಗಳಿಂದಲೇ ಆಗಬೇಕು. ಆ ಗುರುವು ಶಿಷ್ಯನ ಬಲಗಿವಿಯಲ್ಲಿ ಮೂರು ಬಾರಿ ಪ್ರಣವ ಮಂತ್ರವನ್ನು ಉಪದೇಶಿಸಬೇಕು. ಅದರ ಛಂದಸ್ಸು, ದೇವತೆ, ಋಷಿ, ಪ್ರತಿಪಾದ್ಯ ದೇವತೆ, ಹಾಗೂ ಪ್ರಣವ ಸ್ವರೂಪವನ್ನೂ ತಿಳಿಸಿಕೊಟ್ಟು ಅದರ ಧ್ಯಾನ ಪ್ರಕಾರಗಳನ್ನು ಹೇಳಿ ಕೊಡಬೇಕು. ಮತ್ತು ಗುರು ಸನ್ಯಾಸಿಯು ಶಿಷ್ಯ ಸನ್ಯಾಸಿಗಳಿಗೆ ಭಗವದ್ ವಿಷಯಕ ಜ್ಞಾನ ಮಾಡಿಕೊಟ್ಟು, ತನ್ನ ಶಿಷ್ಯ ಸನ್ಯಾಸಿಯಿಂದ ಪ್ರತಿಜ್ಞೆ ಮಾಡಿಸಬೇಕು.

ಈ ಪ್ರತಿಜ್ಞೆಯು ಮಹತ್ವಪೂರ್ಣವಾಗಿದ್ದು ಪ್ರತಿಯೊಬ್ಬ ಸನ್ಯಾಸಿಯು ಮನನ ಮಾಡುವಂತಹದಾಗಿದೆ.

''ನ ವಿಷ್ಣುಂ ವೈಷ್ಣವಾಂಶ್ಚೈವ ನ ವಿಸೃಜೇಯ ಮಿತಿಶ್ರಿಶಃ
ನ ಚಾನ್ಯದೇವತಾಸಾಮ್ಯಂ ತದೈಕ್ಯಮಥವಾ ಹರೇಃ
ಚಿಂತಯೇಯಂ ವ್ಯತೋ ವಾಪಿ ನ ಚಾಪ್ಯೇಕತ್ವವಾದಿಭಿಃ
ಸಮತ್ವವಾದಿಭಿರ್ವಾಹಂ ಸಂಗಚ್ಛೇಯಂ ಕದಾಚನ
ತನ್ನಿಂದಕೈಶ್ಚ ತದ್ಭಕ್ತನಿಂದಕೈರ್ವಾ ಮಹಾ ಮುನೇ"

"ವಿಷ್ಣು ವೈಷ್ಣವರನ್ನು ಎಂದೂ ಬಿಡುವದಿಲ್ಲ. ಎಂಥ ಪ್ರಾಣಾಂತಿಕ ಪ್ರಸಂಗದಲ್ಲಿಯೂ ಜೀವ ಬ್ರಹ್ಮೈಕ್ಯವಾದಿಗಳ ಜೊತೆಗೆ ವಿಷ್ಣು ದ್ವೇಷಿಗಳ ಜೊತೆಗೆ ಸಂಪರ್ಕ ಮಾಡುವದಿಲ್ಲ."

ಈ ಪ್ರತಿಜ್ಞೆಗೆ ಶಿಷ್ಯನು ಸ್ವಸಂತೋಷದಿಂದ ಸಮ್ಮತಿಸಿ, ಪ್ರತಿಜ್ಞಾಬದ್ಧನಾದ ಬಳಿಕವೇ ಗುರುವು ಅವನ ತಲೆಯ ಮೇಲೆ ಕೈ ಇಟ್ಟು ಆಶೀರ್ವಾದ ಮಾಡಬೇಕು, ಉಪದೇಶವನ್ನು ಕೊಡಬೇಕು. ಶ್ರೀ ಹರಿಯ ಪೂಜೆ, ಜಪ, ಧ್ಯಾನ, ಕನಿಷ್ಠ ೧೦೦೦ ಪ್ರಣವ ಮಂತ್ರ ಜಪ, ವೈಷ್ಣವ ಶಾಸ್ತ್ರ ಶ್ರವಣ, ಪಾಠ-ಪ್ರವಚನಾದಿಗಳನ್ನು ಸನ್ಯಾಸಿಯಾದವನು ಕಡ್ಡಾಯವಾಗಿ ಮಾಡಲೇಬೇಕು.

ಸನ್ಯಾಸಾಶ್ರಮವನ್ನು ಸ್ವೀಕರಿಸಿದ ಯತಿಯ ಆದ್ಯ ಕರ್ತವ್ಯ ಅಥವಾ ಮುಖ್ಯವಾದ "ಧರ್ಮ" ಎಂದು ಶ್ರೀ ಮಧ್ವಾಚಾರ್ಯರು ಯತಿ ಪ್ರಣವ ಕಲ್ಪದ ಕೊನೆಗೆ ನಿರ್ದೇಶಿಸಿದ ಮಾತು ಮನನೀಯವೂ ಆಗಿದೆ, ಮಾನನೀಯವೂ ಆಗಿದೆ.

ಇತಿಹಾಸ ಪುರಾಣಂ ಚ ಪಂಚ ರಾತ್ರಂ ತಥೈವ ಚ ।
ತದರ್ಥಾನ್ ಬ್ರಹ್ಮಸೂತ್ರೈಶ್ಚ ಸಮ್ಯಗ್ ನಿರ್ಣೀಯ ತತ್ವತಃ
ವಿಷ್ಣೋಃ ಸರ್ವೋತ್ತಮತ್ತ್ವಂ ಚ ಸರ್ವದಾ ಪ್ರತಿಪಾದಯ ॥

ಶ್ರೀ ವೇದವ್ಯಾಸ ದೇವರು ರಚಿಸಿದ ಬ್ರಹ್ಮಸೂತ್ರಗಳ ಬೆಳಕಿನಲ್ಲಿ ವೇದ–ಶಾಸ್ತ್ರ, ಪುರಾಣ–ಪಂಚರಾತ್ರಾದಿಗಳ ಅರ್ಥವನ್ನು ತಿಳಿದು, ತತ್ವಾರ್ಥ ಮಂಥನ–ಚಿಂತನದಿಂದ ಸಮ್ಯಗ್ ಜ್ಞಾನವನ್ನು ಪಡೆದು, ಸದಾ ಸರ್ವದಾ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸು, ಪ್ರಚಾರ ಮಾಡು, ಉಪನ್ಯಾಸ ಹೇಳು ಎಂದು ಆಚಾರ್ಯರು ಅಪ್ಪಣೆಯನ್ನು ನೀಡಿದ್ದಾರೆ.

ಇದರ ಮೇಲಿಂದ ನಿಜವಾದ ಸನ್ಯಾಸಿಯಾದವನು ಬರೀ ಜಪ, ಪೂಜೆ ಮಾತ್ರ ಮಾಡಿದರೆ ಸಾಲದು. ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಕ್ರಮ ಪ್ರಕಾರ ಅಧ್ಯಯನ ಮಾಡಿ, ವೇದಾಂತ ವಾಙ್ಮಯವನ್ನೆಲ್ಲ ಪರ್ಯಾಲೋಚನೆ ಗೈದು, ವೈಷ್ಣವಸಿದ್ಧಾಂತವನ್ನು ಪ್ರಚಾರ ಮಾಡಿ, ಸ್ವಾಧ್ಯಾಯ ಪಾಠ–ಪ್ರವಚನದ ಮುಖಾಂತರ ಪ್ರತಿಪಾದಿಸಿ ಪ್ರಚಾರ ಪಡಿಸಿದಾಗಲೆ ನಿಜವಾದ ಯತಿಯಾಗಬಲ್ಲನೆಂದು ಆಚಾರ್ಯರು ಸ್ಪಷ್ಟ ಸೂಚಿಸಿದ್ದಾರೆ.

## ೮. ಸದಾಚಾರ ಸ್ಮೃತಿ

೪೧ ಪದ್ಯಾತ್ಮಕವಾದ ಈ ಪುಟ್ಟ ಪ್ರಬಂಧದಲ್ಲಿ ಆಸ್ತಿಕರಾದವರು ಬೆಳಗಿನಿಂದ ರಾತ್ರಿ ಮಲಗುವ ವರೆಗೆ ಶಾಸ್ತ್ರಾನುಸಾರವಾಗಿ ಯಾವ-ಯಾವ ನಿತ್ಯ ಕರ್ಮ, ಹಾಗೂ ಧರ್ಮಗಳನ್ನು ಮಾಡಬೇಕು ಎಂಬುವದನ್ನು ಸರಳ, ಸುಂದರ ಪದ್ಯಗಳಿಂದ ಆಚಾರ್ಯರು ವಿವರಿಸಿದ್ದಾರೆ.

"ಆಚಾರ ಹೀನಂ ನ ಪುನಂತಿ ವೇದಾಃ"

ಎಂಬ, ಮುಂತಾದ ಅನೇಕ ಪ್ರಮಾಣ ವಚನಗಳು ಸದಾಚಾರ ಮಹಿಮೆಯನ್ನು ಒತ್ತಿ ಹೇಳುತ್ತವೆ. ಮಾನವರ ಕನಿಷ್ಠ ಪಕ್ಷದ ಆಚಾರವು ಎಷ್ಟಿರಬೇಕು ಮತ್ತು ಹೇಗಿರಬೇಕು ಎಂಬುದನ್ನು ಗುರು ಮಧ್ವರು ಇದರಲ್ಲಿ ಸಂಕ್ಷಿಪ್ತವಾಗಿ ಸೂಚಿಸಿದ್ದಾರೆ.

ಪ್ರಾತಃಕಾಲದಲ್ಲಿ ಎದ್ದು ಸ್ನಾನ, ಸಂಧ್ಯಾ, ಗಾಯತ್ರಿ ಜಪ, ದೇವ ಪೂಜೆ, ಅಷ್ಟಾಕ್ಷರಾದಿ ಮಂತ್ರ ಜಪ ಮುಂತಾದ ಪ್ರಾತಃ ಆಹ್ನಿಕವನ್ನು ಮಾಡಿ ಮುಗಿಸಿ, ಹರಿ ಗುರುಗಳಿಗೆ ನಮಸ್ಕರಿಸಬೇಕು. ಆನಂತರ ವಿಧಿ ಪೂರ್ವಕವಾಗಿ ದೇವರ ಪೂಜೆಯನ್ನು ಮಾಡಿ, ಭಕ್ತಿಯಿಂದ ವಿಷ್ಣುವಿನ ಉಪಾಸನೆ ಮಾಡಬೇಕು. ಭಗವದುಪಾಸನೆಯೆಂದರೆ ಧ್ಯಾನ, ಪ್ರವಚನಗಳಿಗಿಂತ ಬೇರೆ ಏನೂ ಇಲ್ಲ. ಪೂಜೆ ವೈಶ್ವದೇವ ಬಲಿಹರಣಗಳ ನಂತರ ಅತಿಥಿ ಪರಿವಾರದೊಂದಿಗೆ ಭೋಜನಾದಿಗಳನ್ನು ಮಾಡಿ ಮುಗಿಸಿದ ಬಳಿಕ ಸಾಯಂಕಾಲದ ವರೆಗೆ ವೇದ ಶಾಸ್ತ್ರಗಳ ಅಧ್ಯಯನ, ಅಧ್ಯಾಪನಗಳನ್ನು ಮಾಡಬೇಕು ಎಂದು ಉಪದೇಶಿಸಿದ್ದಾರೆ ಆಚಾರ್ಯರು. ಭಗವತ್ ಪ್ರೀತಿಗೆ ಅದೇ ಮುಖ್ಯ ಸಾಧನ ಎಂದು—

''ವೇದಶಾಸ್ತ್ರ ವಿನೋದೇನ ಪ್ರೀಣಯನ್ ಪುರುಷೋತ್ತಮಂ ।
ಅಹಶ್ಶೇಷಮ್ ನಯೇತ್ .... .... .... .... ...."

ರಾತ್ರಿ ಮಲಗುವಾಗ ಹರಿಯನ್ನು ಧ್ಯಾನಿಸಬೇಕು. ನಡು-ನಡುವೆ ರಾತ್ರಿ ಎಚ್ಚರಾದಾಗಲ್ಲ ದೇವರ ಸ್ಮರಣೆ ಮಾಡಬೇಕು ಅಂದಿದ್ದಾರೆ ಮಧ್ವಮುನಿಗಳು.

ಆಚಾರ ಪ್ರತಿಪಾದಕವಾದ ಈ ಚಿಕ್ಕ ಪ್ರಬಂಧದಲ್ಲಿ ಕೊನೆಗೆ ಪೂರ್ಣಪ್ರಜ್ಞರು ಗೀತೆಯಲ್ಲಿ ಹೇಳಿದ ಭಗವಂತನ ವಿಷ್ಣು ಸರ್ವೋತ್ತಮತ್ವ, ಭೇದ, ತಾರತಮ್ಯ ಪ್ರತಿಪಾದಕವಾದ ಗೀತಾದಿ ವಾಕ್ಯಗಳನ್ನು ಉದಾಹರಿಸಿ—

"ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ"

ಎಂದು ಮುಂತಾಗಿ ಬ್ರಹ್ಮಜ್ಞಾನದಿಂದಲೇ ಮೋಕ್ಷಪ್ರಾಪ್ತಿ ಎಂದು ಉದ್ಬೋಧಿಸಿದ್ದಾರೆ.

## ೯. ತಂತ್ರಸಾರ

"ಕಸ್ತಂತ್ರಸಾರಂಸಂ ಪ್ರಾಪ್ಯ ನ ಸ್ಯಾತ್ ಪರ್ಯಾಪ್ತ ವಾಂಛಿತಃ"

ಶ್ರೀಮದಾಚಾರ್ಯರು ರಚಿಸಿದ ತಂತ್ರಸಾರ ಗ್ರಂಥವು ಭೂಲೋಕದ ಕಾಮ ಧೇನು. ಕೈಗೆಟಕುವ ಕಲ್ಪವೃಕ್ಷ. ಭಾರತೀಯ ಸಂಸ್ಕೃತಿಯ ತವನಿಧಿಯಂತಿರುವ ಮಂತ್ರಶಾಸ್ತ್ರ ತಂತ್ರ ರಹಸ್ಯಗಳ ಬಣ್ಣವನ್ನೆಲ್ಲ ಬಯಲು ಮಾಡಿ ಆ ಸವಿಹಣ್ಣಿನ ತನಿರಸವು ಎಲ್ಲ ಯೋಗ್ಯ ಜೀವರಿಗೂ ದೊರಕುವಂತೆ ಮಾಡಿದ್ದಾರೆ ಶ್ರೀಮದಾಚಾರ್ಯರು. ಇದರ ಪಾರಾಯಣದಿಂದಲೇ ಸರ್ವಾಭೀಷ್ಟಗಳು ಸಿದ್ಧಿಸುವವು. ಅದನ್ನು ಸರಿಯಾಗಿ ತಿಳಿದುಕೊಂಡು ಅನುಷ್ಠಾನ ಮಾಡಿದರೆ ಎಂಥ ಫಲ ದೊರಕಬೇಡ!

ಈ ತಂತ್ರಸಾರದಲ್ಲಿ ೪ ಅಧ್ಯಾಯಗಳು ಇರುತ್ತವೆ. ಪ್ರಥಮಾಧ್ಯಾಯದಲ್ಲಿ ಅಷ್ಟ ಮಹಾ ಮಂತ್ರಗಳು, ಅವುಗಳ ಹುಟ್ಟಿನ ಬಗೆ, ಜಪದ ಕ್ರಮ ಮತ್ತು ದೇವ ಪೂಜೆಯ ರೀತಿಯನ್ನು ಹೇಳಿ ಕೊಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಹೋಮ, ಹವನ ಪ್ರಕ್ರಿಯೆ ಮತ್ತು ಕಲಶ ಪೂಜೆಯ ಕ್ರಮವನ್ನು ಹೇಳಲಾಗಿದೆ. ಮೂರನೇ ಅಧ್ಯಾಯದಲ್ಲಿ ದೇವಾಲಯಗಳ ರಚನೆ, ಮೂರ್ತಿಗಳ ಲಕ್ಷಣ, ದೇವತಾ ಪ್ರತಿಷ್ಠೆ, ಸಂಪ್ರೋಕ್ಷಣ, ಉತ್ಸವ, ಜೀರ್ಣೋದ್ಧಾರ ಮೊದಲಾದವುಗಳನ್ನು ನಿರೂಪಿಸಿದ್ದಾರೆ. ಶಿಲ್ಪ ಶಾಸ್ತ್ರ ದೃಷ್ಟಿಯಿಂದ ಅನೇಕ ಮೌಲಿಕವಾದ, ಮಹತ್ವದ ಸೂಚನೆಗಳನ್ನು ಆಚಾರ್ಯರು ಈ ಮೂರನೆಯ ಅಧ್ಯಾಯದಲ್ಲಿ ಮಾಡಿದ್ದಾರೆ.

ಸರ್ವಜ್ಞರಾದ ಆಚಾರ್ಯರಿಗೆ ವಾಸ್ತುಶಾಸ್ತ್ರ, ಶಿಲ್ಪಶಾಸ್ತ್ರ, ಮಂತ್ರವಿದ್ಯೆ, ತಂತ್ರ ವಿದ್ಯೆ, ಪ್ರಾಣಾಯಾಮ, ಸಮಾಧಿ, ಯಮ, ನಿಯಮ, ಪ್ರತ್ಯಾಹಾರ, ಧ್ಯಾನ, ಧಾರಣಾ, ಸಮಾಧಿ, ಮೋಕ್ಷವಿದ್ಯೆ ಮುಂತಾದ ಸರ್ವ ವಿಷಯಗಳಲ್ಲಿಯೂ ಪಾಂಡಿತ್ಯ, ಪ್ರಭುತ್ವಗಳಿದ್ದವೆಂಬುದಕ್ಕೆ ತಂತ್ರಸಾರವು ಸಾಕ್ಷಿಯಾಗಿದೆ.

ಅದರಲ್ಲಿಯೂ ಶ್ರೀ ಮಧ್ವಾಚಾರ್ಯರಿಗೆ ದೇವ ಮಂದಿರ ನಿರ್ಮಾಣ, ಮೂರ್ತಿ ಪ್ರತಿಷ್ಠಾಪನಾದಿ ವಿಷಯಗಳಲ್ಲಿ ಆಸಕ್ತಿ ಬಹಳ.

ಪ್ರತಿಮೆಗಳನ್ನು ನಿರ್ಮಿಸುವ ಮುನ್ನ ಅದಕ್ಕಾಗಿ ಒಳ್ಳೇ ಕಲ್ಲನ್ನು ಕಣ್ಣಿಟ್ಟು ಆರಿಸಬೇಕು.

"ಶಿಲಾಂಚೈವ ಪರೀಕ್ಷಯೇತ್"
"ಧ್ವನಿ ಭೇದೇನ ವಿಜ್ಞಾಯ ಶಿಲಾಂ ಗರ್ಭವತೀಂತ್ಯಜೇತ್"

ಒಳಗೆ ಟೊಳ್ಳಿದ್ದರೆ ಅಂಥ ಶಿಲೆ ಕೂಡದು, ಈ ಶಿಲೆಗಳಲ್ಲಿ— ಗಂಡು, ಹೆಣ್ಣು, ನಪುಂಸಕ ಎಂದು ಮೂರು ಬಗೆಯಾಗಿರುತ್ತವೆ.

ಶಿಲೆಗಳನ್ನು ಬಾರಿಸಿ ನೋಡಿ, ಮುಟ್ಟಿ ನೋಡಿ ಅದನ್ನು ನಿರ್ಧರಿಸಬೇಕು. ಮೂರ್ತಿ ಮಾಡಲಿಕ್ಕೆ ಗಂಡು ಶಿಲೆಯೇ ಆಗಬೇಕು. ಮೂರ್ತಿಯ ಕೆಳಗಿನ ಗದ್ದುಗೆಗೆ ಹೆಣ್ಣು ಶಿಲೆ, ಪೀಠದ ಕೆಳಗಿನ ಅಡಿಗಲ್ಲನ್ನು ನಪುಂಸಕ ಶಿಲೆಯಿಂದ ಮಾಡಲಡ್ಡಿ ಇಲ್ಲ ಬಿದ್ದ ನೀರು ಪೂರ್ವ, ಉತ್ತರ ಅಥವಾ ಈಶಾನ್ಯಾಭಿಮುಖವಾಗಿ ಹರಿದು ಹೋಗುವ ತಾಣದಲ್ಲಿ ದೇವಾಲಯವನ್ನು ಕಟ್ಟಬೇಕು.

ದೇವ ಮಂದಿರವನ್ನು ನಿರ್ಮಿಸುವ ಜಾಗವೂ ಸುಮನೋಹರವಾಗಿರಬೇಕು. ಊರಿನ ದಕ್ಷಿಣ ಅಥವಾ ಪಶ್ಚಿಮದಲ್ಲಿ ಹೂದೋಟ ಮರ ಬಳ್ಳಿಗಳಿಂದ ತೊನೆದು ತೂಗಾಡುವ ತಾಣದಲ್ಲಿ. ಬೆಟ್ಟಗಳ ತುಟ್ಟ ತುದಿಗಳಲ್ಲಿ ಗ್ರಾಮ ಅಥವಾ ಪಟ್ಟಣಗಳ ನಟ್ಟ ನಡುವೆ,ಪುಷ್ಕರಣಿಯ ನಡುನೀರಿನ ಮಧ್ಯಭಾಗದಲ್ಲಿ, ಸ್ಮಶಾನದಿಂದ ದೂರವಾದ ಸ್ವಚ್ಛ ಸುಂದರವಾದ ರಮಣೀಯವಾದ ಸನ್ನಿವೇಶದಲ್ಲಿ ದೇವಾಲಯವನ್ನು ನಿರ್ಮಿಸಬೇಕು.

ಹೀಗೆ ದೇವಸ್ಥಾನ ಸ್ಥಳದ ಉದ್ದಳತೆ ಎಷ್ಟು ? ಮೂರ್ತಿಯನ್ನು ಎಲ್ಲಿ ಕಟೆಯಬೇಕು? ಹೇಗೆ ಕಡೆಯ ಬೇಕು? ಅವರ ಅವಯವಗಳ ಅಳತೆ, ರಚನೆ, ಲಕ್ಷಣ ಏನು? ಪ್ರತಿಷ್ಠೆಯ ವಿಧಿ ವಿಧಾನ ಹೇಗೆ ? ಎಲ್ಲವನ್ನೂ ವಿವರವಾಗಿ ಹೇಳಿದ್ದಾರೆ ಆಚಾರ್ಯರು.

ನಾಲ್ಕನೇ ಅಧ್ಯಾಯದಲ್ಲಿ ಅನೇಕ ಮಂತ್ರಗಳನ್ನೂ, ಆಚಾರ್ಯ ಲಕ್ಷಣವನ್ನೂ ತಿಳಿಸಿ, ಯಮನಿಯಮ, ಪ್ರಾಣಾಯಾಮ, ಧ್ಯಾನ ಸಮಾಧಿ, ಅಪರೋಕ್ಷ ಜ್ಞಾನ, ಭಕ್ತಿ–ಮೋಕ್ಷಗಳ ಬಗೆಗೆ ನಿರೂಪಣಗೈದಿದ್ದಾರೆ.

ಈ ಗ್ರಂಥದಿಂದ ವಾಮ ಮಾರ್ಗದ ಕಾಮ ತಂತ್ರಗಳೆಡೆಗೆ ಒಲಿಯುತ್ತಿದ್ದ ಪ್ರಪಂಚಕ್ಕೆ ಸಾತ್ವಿಕ ತಂತ್ರಗಳ ತಂಬೆಳಕನ್ನು ತೋರಿಸಿ, ಮೋಕ್ಷದ ಮಾರ್ಗದಲ್ಲಿ ಮುನ್ನಡೆಯುವಂತೆ ಮಾಡಿದ ಶ್ರೇಯಸ್ಸು ಗುರು ಮಧ್ವರದಾಗಿದೆ.

# ಆಚಾರ್ಯರ ಗ್ರಂಥಗಳ ಮೇಲಿನ ಈ ವರೆಗೆ ಉಪಲಬ್ಧವಿದ್ದ ಟೀಕೆ - ಟಿಪ್ಪಣಿಗಳು

## ದಶಪ್ರಕರಣ

## ಪ್ರಮಾಣ ಲಕ್ಷಣ

**ಲೇಖಕರು : ಶ್ರೀ ಮಧ್ವಾಚಾರ್ಯರು**

೧) ಪ್ರಮಾಣ ಲಕ್ಷಣ ಟೀಕಾ
ಲೇಖಕರು : ನಾರಾಯಣ ಪಂಡಿತಾಚಾರ್ಯ

೨) ಪ್ರಮಾಣಲಕ್ಷಣ ಟೀಕಾ
ಲೇಖಕರು : ಶ್ರೀ ಜಯತೀರ್ಥರು

೩) ಪ್ರಮಾಣ ಲಕ್ಷಣ ಟೀಕಾ (ವೆಂಕಟಾದ್ರಿ ಭಟ್ಟೀಯ)
ಲೇಖಕರು : ರೊಟ್ಟಿ ವೆಂಕಟಾದ್ರಿ ಭಟ್ಟರು

### ಪ್ರಮಾಣ ಲಕ್ಷಣದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಪ್ರಮಾಣ ಲಕ್ಷಣ ಟೀಕಾ ವ್ಯಾಖ್ಯಾ : | ಶ್ರೀ ವಿಜಯೀಂದ್ರ ತೀರ್ಥರು |
| ೨) ಪ್ರಮಾಣ ಲಕ್ಷಣ ಟಿಪ್ಪಣೀ : | ವರಾಹಸೇವಿ ಶ್ರೀನಿವಾಸಾಚಾರ್ಯ |
| ೩) ಭಾವದೀಪ : | ಶ್ರೀ ರಾಘವೇಂದ್ರ ಸ್ವಾಮಿಗಳು |
| ೪) ಶ್ರೀನಿವಾಸ ತೀರ್ಥೀಯಾ : | ಬಿದರಳ್ಳಿ ಶ್ರೀನಿವಾಸಾಚಾರ್ಯರು |
| ೫) ವೇದೇಶ ತೀರ್ಥೀಯಾ : | ಶ್ರೀ ವೇದೇಶ ತೀರ್ಥರು |
| ೬) ಪ್ರಮಾಣ ಲಕ್ಷಣ ಟೀಕಾ ಟಿಪ್ಪಣೀ : | ಕಲ್ಲಾಪುರ ರಾಮಚಂದ್ರಾಚಾರ್ಯ |
| ೭) ಗುರುರಾಜೀಯಾ : | ಪಾಂಡುರಂಗಿ ಕೇಶವಾಚಾರ್ಯ |
| ೮) ಅನಂತಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೯) ಲಿಂಘೇರಿಯಾ : | ಶ್ರೀನಿವಾಸಾಚಾರ್ಯ ಲಿಂಘೇರಿ |
| ೧೦) ಪ್ರಮಾಣ ಲಕ್ಷಣ ಟೀಕಾ ಟಿಪ್ಪಣೀ : | ಶ್ರೀ ವಿದ್ಯಾಧೀಶ ಸ್ವಾಮಿಗಳು |

# ಕಥಾ ಲಕ್ಷಣ

ಲೇಖಕರು : ಶ್ರೀ ಮಧ್ವಾಚಾರ್ಯರು

೧) ಕಥಾ ಲಕ್ಷಣ ಟೀಕಾ
ಲೇಖಕರು: ಶ್ರೀ ಜಯತೀರ್ಥರು

೨) ಕಥಾ ಲಕ್ಷಣ ಟೀಕಾ (ವೆಂಕಟ ಭಟ್ಟೀಯಾ)
ಲೇಖಕರು : ರೊಟ್ಟಿ ವೆಂಕಟಾದ್ರಿ ಭಟ್ಟರು

## ಕಥಾ ಲಕ್ಷಣ ಟೀಕೆಯ ಟಿಪ್ಪಣಿಗಳು

ಲೇಖಕರು : ೧) ಶ್ರೀ ವೇದೇಶ ತೀರ್ಥರು
೨) ಶ್ರೀ ರಾಘವೇಂದ್ರ ತೀರ್ಥರು
೩) ರೊಟ್ಟಿ ವೆಂಕಟಾದ್ರಿ ಭಟ್ಟರು
೪) ಶ್ರೀ ವಿಜಯೀಂದ್ರ ತೀರ್ಥರು
೫) ಪಾಂಡುರಂಗೀ ಕೇಶವಾಚಾರ್ಯರು
೬) ಶ್ರೀಮುಷ್ಣ ಅನಂತಾಚಾರ್ಯರು
೭) ಲಿಂಗೇರಿ ಶ್ರೀನಿವಾಸಾಚಾರ್ಯ
೮) ಶ್ರೀ ವಿದ್ಯಾಧೀಶ ತೀರ್ಥರು

# ತತ್ತ್ವೋದ್ಯೋತ

**ಲೇಖಕರು : ಶ್ರೀ ಸರ್ವಜ್ಞಾಚಾರ್ಯರು**

೧) ತತ್ತ್ವೋದ್ಯೋತ ಟೀಕಾ ವಿವರಣಂ

ಲೇ : ಶ್ರೀ ಟೀಕಾಕೃತ್ಪಾದರು

೨) ವೆಂಕಟ ಭಟ್ಟೀಯ

ಲೇ : ರೊಟ್ಟಿ ಆಚಾರ್ಯರು

## ತತ್ತ್ವೋದ್ಯೋತದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ವಿಜಯೀಂದ್ರೀಯ ಗೂಢ ಭಾವ ಪ್ರಕಾಶಿಕಾ : | ಶ್ರೀ ವಿಜಯೀಂದ್ರ ತೀರ್ಥರು |
| ೨) ತತ್ತ್ವೋದ್ಯೋತ ಪಂಚಿಕಾ : | ಶ್ರೀ ವೇದೇಶ ತೀರ್ಥರು |
| ೩) ಭಾ ವ ದೀ ಪ : | ಶ್ರೀ ರಾಘವೇಂದ್ರ ಸ್ವಾಮಿಗಳು |
| ೪) ಶ್ರೀನಿವಾಸ ತೀರ್ಥೀಯ : | ಬಿದರಳ್ಳಿ ಶ್ರೀನಿವಾಸಾಚಾರ್ಯರು |
| ೫) ಕಾ ಶಿ ಕಾ : | ಕಾಶೀ ತಿಮ್ಮಣ್ಣಾಚಾರ್ಯ |
| ೬) ತತ್ತ್ವೋದ್ಯೋತ ಟೀಕಾ ಟಿಪ್ಪಣಿ : | ಶ್ರೀ ರಾಘವೇಂದ್ರರ ಶಿಷ್ಯರು |
| ೭) ದ್ವೈತದ್ಯುಮಣಿ : | ಶ್ರೀ ಹುಲಿಗಿ ಶ್ರಿಯಃಪತ್ಯಾಚಾರ್ಯ |
| ೮) ಗುರುರಾಜೀಯ : | ಪಾಂಡುರಂಗೀ ಕೇಶವಾಚಾರ್ಯರು |
| ೯) ತತ್ತ್ವೋದ್ಯೋತ ಟೀಕಾ ಟಿಪ್ಪಣಿ : | ಶ್ರೀ ವ್ಯಾಸರಾಜರು |
| ೧೦) ತತ್ತ್ವೋದ್ಯೋತ ಟೀಕಾ ಟಿಪ್ಪಣಿ ಅನಂತ ಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೧೧) ಲಿಂಗೇರಿ ಟಿಪ್ಪಣಿ : | ಲಿಂಗೇರಿ ಶ್ರೀನಿವಾಸಾಚಾರ್ಯ |
| ೧೨) ತತ್ತ್ವೋದ್ಯೋತ ಟೀಕಾ ಟಿಪ್ಪಣಿ : | ಶ್ರೀ ವಾದೀಂದ್ರ ತೀರ್ಥರು |
| ೧೩) ತತ್ತ್ವೋದ್ಯೋತ ಟೀಕಾ ಟಿಪ್ಪಣಿ : | ಶ್ರೀ ಕುಂಡಲಗಿರಿ ಆಚಾರ್ಯ |
| ೧೪) ತತ್ತ್ವೋದ್ಯೋತ ಪ್ರಥಮ ಶ್ಲೋಕ ವಿಚಾರಃ | ಶ್ರೀಕಂಚೀ ಸುಬ್ರಹ್ಮಣ್ಯಾಚಾರ್ಯ |

# ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ

## ಮೂಲ ಲೇಖಕರು : ಶ್ರೀ ಪೂರ್ಣಪ್ರಜ್ಞ ಭಗವತ್ಪಾದರು

೧) ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ ಟೀಕಾ
ಲೇ : ಶ್ರೀ ಜಯತೀರ್ಥರು

೨) ಉಪನ್ಯಾಸ ರತ್ನಮಾಲಾ
ಲೇ : ಶ್ರೀ ವಾದಿರಾಜ ತೀರ್ಥರು

೩) ವೆಂಕಟ ಭಟ್ಟೀಯಾ
ಲೇ : ರೊಟ್ಟಿ ವೆಂಕಣ್ಣಾಚಾರ್ಯರು

## ಪ್ರಪಂಚ ಮಿಥ್ಯಾತ್ವಾನುಮಾನ ಖಂಡನದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಮಂದಾರ ಮಂಜರಿ : | ಶ್ರೀ ಚಂದ್ರಿಕಾಚಾರ್ಯರು |
| ೨) ಪರಶು : | ಶ್ರೀ ಸತ್ಯನಾಥ ತೀರ್ಥರು |
| ೩) ಪಂಚಿಕಾ : | ಶ್ರೀನಿವಾಸ ತೀರ್ಥರು |
| ೪) ದೀಪಿಕಾ : | ಅಜ್ಞಾತ |
| ೫) ಗುರುರಾಜೀಯಾ : | ಪಾಂಡುರಂಗೀ ಕೇಶವಾಚಾರ್ಯ |
| ೬) ಅನಂತ ಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೭) ಲಿಂಗೇರಿಯಾ : | ಶ್ರೀನಿವಾಸಾಚಾರ್ಯ ಲಿಂಗೇರಿ |

# ಮಾಯಾವಾದ ಖಂಡನ

**ಲೇಖಕರು : ಶ್ರೀ ಮಧ್ವಾಚಾರ್ಯರು**

೧) ಮಾಯಾವಾದ ಖಂಡನ ಟೀಕಾ "ವಿವರಣ"
ಲೇ : ಶ್ರೀ ಟೀಕಾಕೃತ್ಪಾದರು

೨) ಉಪನ್ಯಾಸ ರತ್ನಮಾಲಾ
ಲೇ : ಶ್ರೀ ವಾದಿರಾಜ ತೀರ್ಥರು

**ಮಾಯಾವಾದ ಖಂಡನದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು**

| ಗ್ರಂಥಗಳು | ಲೇಖಕರು |
|---|---|
| ೧) ಮಂದಾರ ಮಂಜರಿ : | ಶ್ರೀ ಚಂದ್ರಿಕಾಚಾರ್ಯರು |
| ೨) ಪ ರ ಶು : | ಶ್ರೀ ಸತ್ಯನಾಥ ತೀರ್ಥರು |
| ೩) ಪ ಂ ಚಿ ಕಾ : | ಬಿದರಳ್ಳಿ ಶ್ರೀನಿವಾಸತೀರ್ಥರು |
| ೪) ವೆಂಕಟ ಭಟ್ಟೀಯಾ : | ರೊಟ್ಟಿ ವೆಂಕಟಾಚಾರ್ಯರು |
| ೫) ಗುರುರಾಜೀಯಾ : | ಕೇಶವಾಚಾರ್ಯ ಪಾಂಡುರಂಗೀ |
| ೬) ಅನಂತ ಭಟ್ಟೀಯಾ : | ಶ್ರೀ ಮುಷ್ಣಂ ಅನಂತಾಚಾರ್ಯ |
| ೭) ಲಿಂಗೇರೀಯಾ: | ಶ್ರೀನಿವಾಸಾಚಾರ್ಯ ಲಿಂಗೇರಿ |

# ಉಪಾಧಿ ಖಂಡನ

## ಲೇಖಕರು : ಶ್ರೀ ಮಧ್ವಾಚಾರ್ಯರು

೧) ಉಪಾಧಿ ಖಂಡನ ಟೀಕಾ
ಲೇ : ಶ್ರೀ ಜಯತೀರ್ಥರು

೨) ಉಪನ್ಯಾಸ ರತ್ನ ಮಾಲಾ
ಲೇ : ಶ್ರೀ ವಾದಿರಾಜ ಪೂಜ್ಯ ಪಾದರು

೩) ಉಪಾಧಿ ಖಂಡನ ಟೀಕಾ ವೆಂಕಟ ಭಟ್ಟೀಯ
ಲೇ : ರೊಟ್ಟಿ ವೆಂಕಟ ಭಟ್ಟರು

## ಉಪಾಧಿಖಂಡನದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಮಂದಾರ ಮಂಜರೀ : | ಶ್ರೀ ಚಂದ್ರಿಕಾಚಾರ್ಯರು |
| ೨) ಪ ರ ಶು : | ಶ್ರೀ ಸತ್ಯನಾಥ ತೀರ್ಥರು |
| ೩) ಶ್ರೀನಿವಾಸ ತೀರ್ಥೀಯಾ : | ಬಿದರಳ್ಳಿ ಶ್ರೀನಿವಾಸಾಚಾರ್ಯರು |
| ೪) ಗುರುರಾಜೀಯಾ : | ಪಾಂಡುರಂಗೀ ಕೇಶವಾಚಾರ್ಯ |
| ೫) ಅನಂತಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೬) ಲಿ ಂ ಗೇ ೕ ರಿ ಯಾ : | ಲಿಂಗೇರಿ ಶ್ರೀನಿವಾಸಾಚಾರ್ಯ |

# ತತ್ವವಿವೇಕ

**ಲೇಖಕರು : ಶ್ರೀಮದಾನಂದ ತೀರ್ಥರು**

೧) ತತ್ವವಿವೇಕ ಟೀಕಾ "ವಿವರಣ"
ಲೇ : ಶ್ರೀ ಜಯತೀರ್ಥರು

## ತತ್ವವಿವೇಕ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಮಂದಾರಮಂಜರೀ : | ಶ್ರೀ ಚಂದ್ರಿಕಾಚಾರ್ಯರು |
| ೨) ಟೀಕಾ ವಿವರಣಂ : | ಬಿದರಳ್ಳಿ ಶ್ರೀನಿವಾಸತೀರ್ಥರು |
| ೩) ಗುರುರಾಜೀಯ : | ಪಾಂಡುರಂಗೀ ಕೇಶವಾಚಾರ್ಯರು |
| ೪) ಅನಂತಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೫) ಲಿಂಗೇರಿಯಾ : | ಲಿಂಗೇರಿ ಶ್ರೀನಿವಾಸಾಚಾರ್ಯ |
| ೬) ತತ್ವವಿವೇಕ ಟೀಕಾ ಟಿಪ್ಪಣಿ : | ಕಂಬಾಲೂರು ರಾಮಚಂದ್ರತೀರ್ಥರು |
| ೭) ವೆಂಕಟ ಭಟ್ಟೀಯಾ : | ರೊಟ್ಟಿ ವೆಂಕಟಾದ್ರಿ ಭಟ್ಟರು |

# ತತ್ತ್ವ ಸಂಖ್ಯಾನ

## ಲೇಖಕರು ಃ ಶ್ರೀ ಪೂರ್ಣಬೋಧರು

೧) ತತ್ತ್ವ ಸಂಖ್ಯಾನ ಟೀಕಾ "ವಿವರಣ"
ಲೇ : ಶ್ರೀ ಜಯತೀರ್ಥ ಭಿಕ್ಷುಗಳು

## ತತ್ತ್ವಸಂಖ್ಯಾನದ ಜಯತೀರ್ಥರ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಭಾ ವ ದೀ ಪ ಃ | ಶ್ರೀ ರಾಘವೇಂದ್ರ ಸ್ವಾಮಿಗಳು |
| ೨) ವಿ ವ ರ ಣ : | ಬಿದರಳ್ಳಿ ಶ್ರೀನಿವಾಸ ತೀರ್ಥರು |
| ೩) ಕಾ ಶಿ ಕಾ : | ಕಾಶೀ ತಿಮ್ಮಣ್ಣಾಚಾರ್ಯರು |
| ೪) ತತ್ತ್ವಸಂಖ್ಯಾನ ಟೀಕಾ ಟಿಪ್ಪಣಿ : | ಶ್ರೀ ಸತ್ಯಧರ್ಮ ತೀರ್ಥರು |
| ೫) ಯಾ ದು ಪ ತ್ಯ : | ಶ್ರೀ ಯಾದವಾರ್ಯರು |
| ೬) ಟೀಕಾ ವ್ಯಾಖ್ಯಾ ಭಾವ ವರ್ಣನಂ : | ಶ್ರೀ ವಿಜಯೀಂದ್ರ ತೀರ್ಥರು |
| ೭) ಗುರುರಾಜೀಯ ಭಾವ ಚಂದ್ರಿಕಾ : | ಪಾಂಡುರಂಗೀ ಕೇಶವ ಭಟ್ಟಾರಕರು |
| ೮) ವೆಂಕಟ ಭಟ್ಟೀಯಾ : | ರೊಟ್ಟಿ ವೆಂಕಟಾದ್ರಿ ಭಟ್ಟರು |
| ೯) ಅನಂತ ಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೧೦) ಟೀಕಾ ಟಿಪ್ಪಣಿ : | ಚಿಕ್ಕೋಡಿ ಭಗವಂತರಾಯ |
| ೧೧) ಛಲಾರಿ ಟಿಪ್ಪಣಿ : | ಛಲಾರಿ ಶೇಷಾಚಾರ್ಯ |
| ೧೨) ಭಾವ ಚಂದ್ರಿಕಾ : | ಶ್ರೀ ವಿದ್ಯಾಧೀಶ ಶಿಷ್ಯ ಶ್ರೀ ನರಸಿಂಹ ಸೂರಿ |
| ೧೩) ತತ್ತ್ವ ಸಂಖ್ಯಾನ ಟಿಪ್ಪಣಿ : | ಲಿಂಗೇರಿ ಶ್ರೀನಿವಾಸಾಚಾರ್ಯ |
| ೧೪) ,, | ವಾನಿವಾಲ ವಿಠಲಾಚಾರ್ಯ |
| ೧೫) ,, | ಛಲಾರಿ ನರಸಿಂಹಾಚಾರ್ಯ |

# ಶ್ರೀ ವಿಷ್ಣುತತ್ವ ನಿರ್ಣಯ

**ಲೇಖಕರು : ಶ್ರೀ ಪೂರ್ಣಪ್ರಜ್ಞಾಚಾರ್ಯರು**

೧) ಶ್ರೀ ವಿಷ್ಣುತತ್ವ ನಿರ್ಣಯ ಟೀಕಾ
ಲೇ : ಶ್ರೀ ಜಯತೀರ್ಥ ಭಗವತ್ಪಾದರು

೨) ಶ್ರೀ ವಿಷ್ಣುತತ್ವ ನಿರ್ಣಯ ಟೀಕಾ
ಲೇ : ನಾರಾಯಣ ಪಂಡಿತಾಚಾರ್ಯರು

## ವಿಷ್ಣುತತ್ವ ನಿರ್ಣಯದ ಟೀಕೆಯ ಮೇಲಿನ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಭಾವದೀಪ : | ಶ್ರೀ ರಾಘವೇಂದ್ರ ತೀರ್ಥರು |
| ೨) ವೆಂಕಟ ಭಟ್ಟೀಯಾ : | ಓಟ್ಟಿ ವೆಂಕಟಾದ್ರಿ ಭಟ್ಟರು |
| ೩) ತಾಮ್ರಪರ್ಣೀಯಾ : | ತಾಮ್ರಪರ್ಣಿ ಕೃಷ್ಣಾಚಾರ್ಯರು |
| ೪) ವಿಜಯೀಂದ್ರೀಯಾ ಟೀಕಾ ವ್ಯಾಖ್ಯಾ : | ಶ್ರೀ ವಿಜಯೀಂದ್ರ ತೀರ್ಥರು |
| ೫) ಶ್ರೀನಿವಾಸ ತೀರ್ಥೀಯಾ : | ಶ್ರೀನಿವಾಸ ತೀರ್ಥರು |
| ೬) ಗೂಢ ಟಿಪ್ಪಣಿ : | ಗೂಢನಾಮ |
| ೭) ವಿಷ್ಣುತತ್ವ ನಿರ್ಣಯ ಟಿಪ್ಪಣಿ ಅನಂತ ಭಟ್ಟೀಯಾ : | ಅನಂತಾಚಾರ್ಯರು |
| ೮) ವಿಷ್ಣು ತತ್ವ ನಿರ್ಣಯ ಟಿಪ್ಪಣಿ ; | ಶ್ರೀ ವಿದ್ಯಾಧೀಶ ತೀರ್ಥರು |
| ೯) ತತ್ವ ನಿರ್ಣಯ ಟಿಪ್ಪಣಿ : | ಶ್ರೀ ಸತ್ಯಧರ್ಮ ತೀರ್ಥರು |
| ೧೦) ಗುರುರಾಜೀಯಾ : | ಕೇಶವಾಚಾರ್ಯ ಪಾಂಡುರಂಗೀ |
| ೧೧) ಅನಂತ ಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯ |
| ೧೨) ಆಯೀ ಟಿಪ್ಪಣೀ : | ಆಯೀ ಸತ್ಯನಾಥಾಚಾರ್ಯ |
| ೧೩) ಲಿಂಘೇರಿಯಾ : | ಲಿಂಘೇರಿ ಶ್ರೀನಿವಾಸಾಚಾರ್ಯ |
| ೧೪) ವಿಷ್ಣುತತ್ವ ನಿರ್ಣಯ ಟೀಕಾ ವ್ಯಾಖ್ಯಾನ: | ಉಮ್ಮರ್ಜಿ ಪ್ರಹ್ಲಾದ ಕೃಷ್ಣಾಚಾರ್ಯ |
| ೧೫) ವಿಷ್ಣುತತ್ವ ನಿರ್ಣಯ ಟಿಪ್ಪಣೀ : | ಅಜ್ಞಾತ |
| ೧೬) ಲಘು ಪ್ರಭಾ : | ಶ್ರೀ ವ್ಯಾಸತತ್ವಜ್ಞರು |
| ೧೭) ತತ್ವ ನಿರ್ಣಯ ಟೀಕಾ ಟಿಪ್ಪಣೀ : | ಆನೆಪ್ಪಾಚಾರ್ಯ |
| ೧೮) ಗುರುಪ್ರಭಾ : | ಶ್ರೀ ವ್ಯಾಸತತ್ವಜ್ಞರು |

# ಕರ್ಮ ನಿರ್ಣಯ

## ಮೂಲ ಲೇಖಕರು : ಶ್ರೀ ಸರ್ವಜ್ಞಾಚಾರ್ಯರು

೧) ಕರ್ಮ ನಿರ್ಣಯ ಟೀಕಾ (ಕರ್ಮ ಪ್ರಕಾಶಿಕಾ)
ಲೇ : ಶ್ರೀ ಸತ್ಯನಾಥ ತೀರ್ಥರು (ಉತ್ತರಾದಿ ಮಠ)

## ಕರ್ಮನಿರ್ಣಯದ ಮೇಲೆ ಬರೆದ ವ್ಯಾಖ್ಯಾನ ಗ್ರಂಥಗಳು

| ಗ್ರಂಥಗಳು | ಲೇಖಕರು |
|---|---|
| ೧) ಕರ್ಮ ನಿರ್ಣಯ ವ್ಯಾಖ್ಯಾನ (ಗುರುರಾಜೀಯಾ) : | ಪಾಂಡುರಂಗೀ ಕೇಶವಾಚಾರ್ಯ |
| ೨) ಶ್ರೀನಿವಾಸ ತೀರ್ಥೀಯಾ : | ಶ್ರೀನಿವಾಸ ತೀರ್ಥರು |
| ೩) ಅನಂತ ಭಟ್ಟೀಯಾ : | ಶ್ರೀ ಮುಷ್ಣಂ ಅನಂತಾಚಾರ್ಯ |
| ೪) ಲಿಂಗೇರೀಯಾ : | ಲಿಂಗೇರಿ ಶ್ರೀನಿವಾಸಾಚಾರ್ಯ |
| ೫) ಕರ್ಮ ನಿರ್ಣಯ ವ್ಯಾಖ್ಯಾ : | ಶ್ರೀ ಸತ್ಯಪ್ರಿಯ ತೀರ್ಥರು ( ಉತ್ತರಾದಿಮಠ ) |
| ೬) ಕರ್ಮನಿರ್ಣಯ ವ್ಯಾಖ್ಯಾ : | ಛಲಾರಿ ಶೇಷಾಚಾರ್ಯ |
| ೬) ಕರ್ಮ ನಿರ್ಣಯ ವ್ಯಾಖ್ಯಾನ : | ಶ್ರೀ ರಘುನಾಥ ತೀರ್ಥರು ( ವ್ಯಾಸರಾಜ ಮಠ ) |

# ಪುರಾಣ ಪ್ರಸ್ಥಾನ

## ಮಹಾಭಾರತ ತಾತ್ಪರ್ಯ ನಿರ್ಣಯ

**ಲೇಖಕರು : ಶ್ರೀಮದಾನಂದ ತೀರ್ಥರು**

### ಇದರ ಮೇಲಿನ ಟೀಕೆಗಳು

| ಗ್ರಂಥಗಳು | ಲೇಖಕರು |
|---|---|
| ೧) ಭಾವಪ್ರಕಾಶಿಕಾ : | ಶ್ರೀ ವಾದಿರಾಜ ತೀರ್ಥರು |
| ೨) ವರದ ರಾಜೀಯ ಸುಬೋಧಿನಿ : | ಶ್ರೀ ವರದರಾಜಾಚಾರ್ಯ ಆದ್ಯ |
| ೩) ಪದಾರ್ಥ ದೀಪಿಕಾ : | ಶ್ರೀ ಜನಾರ್ದನ ಭಟ್ಟರು |
| ೪) ಶ್ರೀನಿವಾಸ ತೀರ್ಥೀಯಾ: | ಶ್ರೀ ಬಿದರಳ್ಳಿ ಶ್ರೀನಿವಾಸತೀರ್ಥರು |
| ೫) ಮಹಾಭಾರತ ತಾತ್ಪರ್ಯ ನಿರ್ಣಯ ವ್ಯಾಖ್ಯಾನ : | ಶ್ರೀ ವೇದಾಂಗ ತೀರ್ಥರು (ಸೋದೇ ಮಠ) |
| ೬) ತಾತ್ಪರ್ಯ ನಿರ್ಣಯ ಸಾರಸಂಗ್ರಹ : | ಶ್ರೀ ರಾಘವೇಂದ್ರ ಶ್ರೀಪಾದಂಗಳವರು |
| ೭) ತಾತ್ಪರ್ಯ ನಿರ್ಣಯ ವ್ಯಾಖ್ಯಾನ : | ಶ್ರೀ: ನಾರಾಯಣಾಚಾರ್ಯ ಛಲಾರಿ |
| ೮) ತಾತ್ಪರ್ಯ ನಿರ್ಣಯ ಪ್ರಮಾಣ ಸಂಗ್ರಹ : | ,, ಶ್ರೀ ತಿರುಮಲ |
| ೯) ತಾತ್ಪರ್ಯ ನಿರ್ಣಯ ಭಾವ ಸಂಗ್ರಹ : | ಶ್ರೀ ರಾಘವೇಂದ್ರ ತೀರ್ಥರು |
| ೧೦) ಮಹಾಭಾರತ ತಾತ್ಪರ್ಯ ನಿರ್ಣಯ ವ್ಯಾಖ್ಯಾನ: | ಶ್ರೀ ವಿಜಯಧ್ವಜ ತೀರ್ಥರು |
| ೧೧) ಮಹಾಭಾರತ ತಾತ್ಪರ್ಯ ನಿರ್ಣಯ ವ್ಯಾಖ್ಯಾನ: | ಶ್ರೀ ವ್ಯಾಸ ತೀರ್ಥರು (ಟೀಕಾರಾಯರ ಶಿಷ್ಯ) |
| ೧೨) ಮಹಾಭಾರತ ತಾತ್ಪರ್ಯ ನಿರ್ಣಯ ವ್ಯಾಖ್ಯಾನ : | ಶ್ರೀ ಸತ್ಯಾಭಿನವ ತೀರ್ಥರು (ಉತ್ತರಾದಿ ಮಠ) |
| ೧೩) ಭಾರತ ತಾತ್ಪರ್ಯ ದೀಪಿಕಾ : | ಶ್ರೀ ಸರ್ವಜ್ಞ ನಾರಾಯಣ |

# ಶ್ರೀ ಭಾಗವತ ತಾತ್ಪರ್ಯ ನಿರ್ಣಯ

## ಲೇಖಕರು : ಶ್ರೀ ಪೂರ್ಣಪ್ರಜ್ಞರು

## ಇದರ ಮೇಲಿನ ಟೀಕೆಗಳು

೧] ಭಾಗವತ ತಾತ್ಪರ್ಯ ದೀಪಿಕಾ
ಲೇ : ಶ್ರೀ ನರಹರಿ ತೀರ್ಥರು

೨] ಶ್ರೀನಿವಾಸ ತೀರ್ಥೀಯ ಭಾಗವತ ತಾತ್ಪರ್ಯ ನಿರ್ಣಯ ಪ್ರಕಾಶ
ಲೇ : ಶ್ರೀ ಬಿದರಳ್ಳಿ ಶ್ರೀನಿವಾಸಾಚಾರ್ಯ

೩] ಯಾ ದು ಪ ತ್ಯ
ಲೇ : ಶ್ರೀ ಯಾದವಾರ್ಯರು

೪] ವಿಜಯಧ್ವಜೀಯಾ
ಲೇ : ಶ್ರೀ ವಿಜಯಧ್ವಜ ತೀರ್ಥರು

೫] ಭಾಗವತ ತಾತ್ಪರ್ಯ ವಿವರಣಂ
ಲೇ : ಶ್ರೀ ಕಟ್ಟಿ ತಿಮ್ಮಣ್ಣಾಚಾರ್ಯ

೬] ಭಾಗವತ ತಾತ್ಪರ್ಯ ಟಿಪ್ಪಣೀ
ಲೇ : ಶ್ರೀ ಛಲಾರಿ ನರಸಿಂಹಾಚಾರ್ಯ

೭] ಭಾಗವತ ತಾತ್ಪರ್ಯ ಟಿಪ್ಪಣೀ
ಲೇ : ಶ್ರೀ ಛಲಾರಿ ಶೇಷಾಚಾರ್ಯ

೮] ಭಾಗವತ ತಾತ್ಪರ್ಯ ನಿರ್ಣಯ ಪ್ರಬೋಧಿನೀ
ಲೇ : ಶ್ರೀ ಛಲಾರಿ ನಾರಾಯಣಾಚಾರ್ಯ

೯] ಭಾಗವತ ತಾತ್ಪರ್ಯ ಭಾವದೀಪ
ಲೇ : ಶ್ರೀ ಚಿಕ್ಕೋಡಿ ಭಗವಂತರಾಯರು

# ಯಮಕ ಭಾರತ

## ಲೇಖಕರು : ಶ್ರೀ ಪೂರ್ಣಬೋಧರು

## ಇದರ ಮೇಲಿನ ಟೀಕೆಗಳು

೧] ಯಮಕ ಭಾರತ ವ್ಯಾಖ್ಯಾನ
ಲೇ : ಶ್ರೀ ನಾರಾಯಣ ಪಂಡಿತಾಚಾರ್ಯರು

೨] ಯಮಕ ಭಾರತ ವ್ಯಾಖ್ಯಾನ
ಲೇ : ಶ್ರೀ ವಿಜಯಧ್ವಜ ತೀರ್ಥರು

೩] ತಿಮ್ಮಣ್ಣ ಭಟ್ಟೀಯಾ
ಲೇ : ಶ್ರೀ ತಿಮ್ಮಣ್ಣಾಚಾರ್ಯರು

೪] ವೆಂಕಟೇಶ್ವರೀಯಾ
ಲೇ : ಶ್ರೀ ವೆಂಕಟೇಶಾಚಾರ್ಯರು

೫] ನರಹರಿ ತೀರ್ಥೀಯಾ
ಲೇ : ಶ್ರೀ ನರಹರಿ ತೀರ್ಥರು

೬] ಯಮಕ ಭಾರತ ವ್ಯಾಖ್ಯಾನ
ಲೇ : ಶ್ರೀ ಯಾದವಾರ್ಯರು

೭] ಯಮಕ ಭಾರತ ವ್ಯಾಖ್ಯಾನ
ಲೇ : ಶ್ರೀ ನರಸಿಂಹಾಚಾರ್ಯ ಛಲಾರಿ

೮] ಯಮಕ ಭಾರತ ವ್ಯಾಖ್ಯಾನ
ಲೇ : ಶ್ರೀ ಚಿಕ್ಕೋಡಿ ಭಗವಂತರಾಯರು

# ಋಗ್ಭಾಷ್ಯ

ಲೇಖಕರು : ಶ್ರೀ ಸರ್ವಜ್ಞಾಚಾರ್ಯರು

## ಋಗ್ಭಾಷ್ಯದ ಟೀಕೆಗಳು

೧] ಜಯತೀರ್ಥೀಯಾ

ಲೇ : ಶ್ರೀ ಟೀಕಾಕೃತ್ಪಾದರು

೨] ಋಕ್ ಸೂಚೀ

ಲೇ : ಅಜ್ಞಾತ

೩] ಜಗನ್ನಾಥ ತೀರ್ಥಿಯಾ :

ಲೇ : ಶ್ರೀ ಜಗನ್ನಾಥ ತೀರ್ಥರು [ವ್ಯಾಸರಾಜ ಮಠ]

**ಋಗ್ಭಾಷ್ಯದ ಜಯತೀರ್ಥೀಯ ಟೀಕೆಯ ಮೇಲಿನ ಟಿಪ್ಪಣಿಗಳು**

| ಗ್ರಂಥಗಳು | ಲೇಖಕರು |
|---|---|
| ೧] ಟೀಕಾವಿವೃತಿಃ : | ಶ್ರೀ ಭಲಾರಿ ನರಸಿಂಹಾಚಾರ್ಯ |
| ೨] ಶ್ರೀನಿವಾಸತೀರ್ಥಿಯ: ಋಗರ್ಥ ಮಂಜರೀ : | ಶ್ರೀ ಬಿದರಳ್ಳಿ ಶ್ರೀನಿವಾಸಾಚಾರ್ಯ |
| ೩] ಕಂಬಾಲೂ ವ್ಯಾಖಾ : (ಋಗ್ಭಾಷ್ಯ ಟೀಕಾ ವಿವೃತ್ತಿ :) | ಶ್ರೀ ಕಂಬಾಲೂ ರಾಮಚಂದ್ರತೀರ್ಥರು [ವ್ಯಾಸರಾಜ ಮಠಾಧೀಶರು] |
| ೪] ಋಕ್‌ಪ್ರಸ್ಥಾನ : | ಶ್ರೀ ವಿಜಯೀಂದ್ರತೀರ್ಥರು |
| ೫] ಋಗ್ಭಾಷ್ಯ ಟೀಕಾ ವ್ಯಾಖ್ಯಾನ ಗುರುರಾಜೀಯ : | ಶ್ರೀ ಪಾಂಡುರಂಗೀ ಕೇಶವಾಚಾರ್ಯ |
| ೬] ಮಂತ್ರಾರ್ಥ ಮಂಜರೀ : | ಶ್ರೀ ರಾಘವೇಂದ್ರ ತೀರ್ಥರು |
| ೭] ವೇದತ್ರಯ ವಿವೃತ್ತಿ : | ,, ,, |
| ೮] ಋಗ್ಭಾಷ್ಯ ವ್ಯಾಖ್ಯಾನ ಭಾವರತ್ನಕೋಶ : | ಶ್ರೀ ಸುಮತೀಂದ್ರ ತೀರ್ಥರು |
| ೯] ಋಗ್ಭಾಷ್ಯ ಟಿಪ್ಪಣೀ : | ಆರೋಗ್ಯನಾಮಕ ಹರಿ |
| ೧೦] ಋಗ್ಭಾಷ್ಯ ಟೀಕಾ ಪ್ರಕಾಶ : | ಶ್ರೀ ಸತ್ಯನಾಥ ತೀರ್ಥರು [ಉತ್ತರಾದಿ ಮಠಾಧೀಶರು] |
| ೧೧] ಋಗ್ಭಾಷ್ಯ ಟೀಕಾ ವ್ಯಾಖ್ಯಾನ : | ಶ್ರೀಮುಷ್ಣಂ ಸೇತೂ ಮಾಧವಾಚಾರ್ಯ |

# ಸೂತ್ರ ಪ್ರಸ್ಥಾನ

## ಬ್ರಹ್ಮಸೂತ್ರ ಭಾಷ್ಯ

**ಲೇಖಕರು: ಶ್ರೀ ಮಧ್ವಾಚಾರ್ಯರು**

೧) ತತ್ವ ಪ್ರದೀಪಿಕಾ : ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು

೨) ತತ್ವ ಪ್ರಕಾಶಿಕಾ : ಶ್ರೀ ಜಯತೀರ್ಥರು

೩) ಗೋವಿಂದ ಭಾಷ್ಯ
ಲೇ : ಶ್ರೀ ಬಲದೇವ ವಿದ್ಯಾಭೂಷಣ

೪) ಸಂಬಂಧ ದೀಪಿಕಾ
ಲೇ : ಶ್ರೀ ಶಂಕರಾಚಾರ್ಯ (ತ್ರಿವಿಕ್ರಮ ಪಂಡಿತರ ಸಹೋದರ)

**ಇದರ ಮೇಲಿನ ಟೀಕೆಗಳು**

| ಗ್ರಂಥಗಳು | ಲೇಖಕರು |
|---|---|
| ೧) ತಂತ್ರ ದೀಪಿಕಾ : | ಶ್ರೀ ರಾಘವೇಂದ್ರ ಸ್ವಾಮಿಗಳು |
| ೨) ಭಾಷ್ಯ ದೀಪಿಕಾ : | ಶ್ರೀ ಜಗನ್ನಾಥಯತಿಗಳು (ವ್ಯಾಸರಾಯ ಮಠ) |
| ೩) ತತ್ವ ಮಾಣಿಕ್ಯ ಪೇಟಿಕಾ : | ಶ್ರೀ ವಿಜಯೀಂದ್ರ ತೀರ್ಥರು |
| ೪) ಬ್ರಹ್ಮಸೂತ್ರಾರ್ಥ ನಿಬದ್ಧ ನಾಮಾವಲಿ : | ಶ್ರೀ ವಾದಿರಾಜ ಸ್ವಾಮಿಗಳು |
| ೫) ಭಾಷ್ಯ ಘಟಕ ಶ್ರುತ್ಯರ್ಥ ರತ್ನಮಾಲಾ : | ಅಜ್ಞಾತ |
| ೬) ಸೂತ್ರಾರ್ಥ : | ಆಯೀ ನರಸಿಂಹಾಚಾರ್ಯ |
| ೭) ಬ್ರಹ್ಮ ಸೂತ್ರ ಯುಕ್ತಿ ಸಂಗ್ರಹ : | ಚಿಕ್ಕೋಡಿ ಭಗವಂತರಾಯರು |
| ೮) ಅಧಿಕರಣಾರ್ಥ ಸಂಗ್ರಹ : | ಕಲ್ಲಾಪೂರ ಅಣ್ಣೈಯ್ಯಾಚಾರ್ಯ |
| ೯) ಬ್ರಹ್ಮಸೂತ್ರ ಭಾಷ್ಯೋಕ್ತ ಶ್ರುತ್ಯರ್ಥ ಪ್ರಕಾಶಃ : | ರಾಮಕೃಷ್ಣ (ಪಾಂಡುರಂಗಿ ಕೇಶವಾಚಾರ್ಯರ ಶಿಷ್ಯ) |
| ೧೦) ಶ್ರುತ್ಯರ್ಥ ರತ್ನಮಾಲಾ : | ತೊನಸೀ ಶ್ರೀನಿವಾಸಾಚಾರ್ಯ |
| ೧೧) ನ್ಯಾಯ ಮಾಲಾ ಸಂಗ್ರಹಃ : | ಶ್ರೀ ವಿಜಯೀಂದ್ರ ತೀರ್ಥರು |
| ೧೨) ಸೂತ್ರ ದೀಪಿಕಾ : | ಶ್ರೀ ಜಗನ್ನಾಥ ತೀರ್ಥರು (ವ್ಯಾಸರಾಜ ಮಠ) |
| ೧೩) ಸೂತ್ರಾರ್ಥ ಸಂಗ್ರಹ : | ಅಜ್ಞಾತ |
| ೧೪) ಸೂತ್ರಾರ್ಥ ಪ್ರಬಂಧ : | ಅಜ್ಞಾತ |
| ೧೫) ಸೂತ್ರಾರ್ಥ ಮಂಜರೀ : | ಅಜ್ಞಾತ |

೧೮) ಸೂತ್ರ ಪ್ರಮೇಯಾವಲಿಃ : ಪಾಂಡುರಂಗೀ ಹುಚ್ಚಾಚಾರ್ಯ
೧೯) ಬ್ರಹ್ಮಸೂತ್ರ ಪೂರ್ವ ಪಕ್ಷ ಸಿದ್ಧಾಂತ
ಯುಕ್ತಿ ಸಂಗ್ರಹ ವ್ಯಾಖ್ಯಾ : ಚಿಕ್ಕೋಡಿ ಭಗವಂತರಾಯರು
೨೦) ಸೂತ್ರಾರ್ಥಸಾರಃ : ಅಜ್ಞಾತ
೨೧) ಸೂತ್ರ ಭಾಷ್ಯಾರ್ಥ ಸಂಗ್ರಹಃ : ಅಜ್ಞಾತ
೨೨) ವಿಷಯ ವಾಕ್ಯ ಸಂಗ್ರಹಃ ಶ್ರೀ ರಾಘವೇಂದ್ರ ಮಠಾಧೀಶ
(ಸೂತ್ರಭಾಷ್ಯಗತ) ಶ್ರೀ ವಸುಧೇಂದ್ರ ಸ್ವಾಮಿನಾಂ ಶಿಷ್ಯಃ
೨೩) ಸೂತ್ರಭಾಷ್ಯ ಭಾವ ರತ್ನಕೋಶ : ಶ್ರೀ ಸುಮತೀಂದ್ರ ತೀರ್ಥರು
೨೪) ಅಧಿಕರಣ ರತ್ನಮಾಲಾ : ಶ್ರೀ ಸುಮತೀಂದ್ರ ತೀರ್ಥರು (ರಾಯರ ಮಠ)
೨೫) ಸಿದ್ಧಾಂತ ರತ್ನ : ಬಲದೇವ ವಿದ್ಯಾಭೂಷಣ (ಚೈತನ್ಯ ಮತೀಯ)
೨೬) ನ್ಯಾಯ ಮಾಲಿಕಾ : ಕೊಜ್ಜಿ ರಂಗಪ್ಪಾಚಾರ್ಯ
೨೭) ನ್ಯಾಯ ಮಾಲಿಕಾ ಟಿಪ್ಪಣೀ : ಕೊಜ್ಜಿ ಮಧ್ವರಾಯಾಚಾರ್ಯ
೨೮) ಸೂತ್ರ ಪ್ರಮೇಯಾವಲೀ : ಪಾಂಡುರಂಗೀ ಹುಚ್ಚಾಚಾರ್ಯ
೨೯) ವಿಷಯ ವಾಕ್ಯ ಸಂಗ್ರಹ : ವಾಸುದೇವೇಂದ್ರ ಶಿಷ್ಯ
೩೦) ಬ್ರಹ್ಮ ಸೂತ್ರ ನಾಮಾವಳಿ : ಪಾಂಘ್ರಿ ಶ್ರೀನಿವಾಸಾಚಾರ್ಯ
೩೧) ಬ್ರಹ್ಮ ಸೂತ್ರ ಪಂಚಿಕಾ : ಚಿಕ್ಕೋಡಿ ಭಗವಂತರಾಯರು
೩೨) ಬ್ರಹ್ಮ ಸೂತ್ರ ಭಾಷ್ಯಾರ್ಥ ಮಂಜರೀ : ವೇದಗರ್ಭ ನಾರಾಯಣಾಚಾರ್ಯ
೩೩) ಭೇದ ಪರಾಣ್ಯೇವ ಖಲು ಬ್ರಹ್ಮ ಸೂತ್ರಾಣಿ : ಶ್ರೀ ಸತ್ಯಧ್ಯಾನ ತೀರ್ಥರು
೩೪) ಬ್ರಹ್ಮ ಸೂತ್ರ ಭಾಷ್ಯ ವ್ಯಾಖ್ಯಾ : ಶ್ರೀ ಮುಷ್ಣಂ ಸುಬ್ಬರಾಯಾಚಾರ್ಯ
೩೫) ಬ್ರಹ್ಮ ಸೂತ್ರ ಭಾಷ್ಯಾರ್ಥ : ಪಾಂಘ್ರಿ ಶ್ರೀನಿವಾಸಾಚಾರ್ಯ
೩೬) ಬ್ರಹ್ಮಸೂತ್ರಾರ್ಥ ಕೌಮುದೀ : ಕಾಳೂರ ಮಹಿದಾಸಾಚಾರ್ಯ, ಕೋಲಾರ
೩೭) ನ್ಯಾಯ ಮುಕ್ತಾವಳಿ : ಶ್ರೀ ರಾಘವೇಂದ್ರ ತೀರ್ಥರು
೩೮) ಅಧಿಕರಣಾರ್ಥ ಸಂಗ್ರಹ : ಶ್ರೀ ದಾಸಾಚಾರ್ಯ
೩೯) ವಿಷಯ ವಾಕ್ಯ ಸಂಗ್ರಹ : ಶ್ರೀ ಧೀರೇಂದ್ರ ಸ್ವಾಮಿಗಳು (ರಾಯರ ಮಠ)
೪೦) ಸೂತ್ರಾರ್ಥ ಮಣಿ ಮಂಜರೀ : ಶ್ರೀಮುಷ್ಣಂ ಸುಬ್ರಾಯಾಚಾರ್ಯ
೪೧) ಸೂತ್ರ ಭಾಷ್ಯ ಟೀಕಾ : ಶ್ರೀ ನರಹರಿತೀರ್ಥರು
೪೨) ಮಧ್ವ ತಂತ್ರ ನಯ ಮಂಜರೀ : ಶ್ರೀ ವಿಜಯೀಂದ್ರ ತೀರ್ಥರು
೪೩) ಬ್ರಹ್ಮ ಸೂತ್ರಾರ್ಥ ಸಂಗ್ರಹ : ,, ,,
೪೪) ಬ್ರಹ್ಮಸೂತ್ರಾರ್ಥಾಧಿಕರಣ ಸಂಗ್ರಹ : ಛಲಾರಿ ನರಸಿಂಹಾಚಾರ್ಯ
೪೫) ಸೂತ್ರವೃತ್ತಿ : ಸತ್ಯನಾಥ ಶಿಷ್ಯಃ
೪೬) ಸೂತ್ರಾರ್ಥ ಮಂಜರೀ : ಶರ್ಕರಾ ಶ್ರೀನಿವಾಸಾಚಾರ್ಯ

# ಶ್ರೀಮದ್ ಅನುವ್ಯಾಖ್ಯಾನ

ಲೇಖಕರು : ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು

## ಇದರ ಮೇಲಿನ ಟೀಕೆಗಳು

೧) ನ್ಯಾಯ ಚಂದ್ರಿಕಾ
ಲೇ : ಶ್ರೀ ನಾರಾಯಣ ಪಂಡಿತಾಚಾರ್ಯರು

೨) ಸನ್ನ್ಯಾಯ ರತ್ನಾವಲಿ
ಲೇ : ಶ್ರೀ ಪದ್ಮನಾಭ ತೀರ್ಥರು

೩) ಅನುವ್ಯಾಖ್ಯಾನವ್ಯಾಖ್ಯಾನ
ಲೇ : ಶ್ರೀ ಶಂಕರಾಚಾರ್ಯ ( ತ್ರಿವಿಕ್ರಮರ ತಮ್ಮ )

೪) ಶ್ರೀಮನ್ಯಾಯ ಸುಧಾ
ಲೇ : ಶ್ರೀ ಟೀಕಾಕೃತ್ಪಾದರು

೫) ಅನುವ್ಯಾಖ್ಯಾನ ಟೀಕಾ
ಲೇ : ಶ್ರೀ ವಿಜಯೀಂದ್ರತೀರ್ಥರು

೬) ಅನುವ್ಯಾಖ್ಯಾನ ದೀಪಿಕಾ
ಲೇ : ಶ್ರೀ ಲಿಂಗೇರಿ ಸ್ವಾಮಿರಾಯಾಚಾರ್ಯ

೭) ನ್ಯಾಯ ರತ್ನ ಸಂಬಂಧ ದೀಪಿಕಾ
ಲೇ : ಶ್ರೀ ರಘೂತ್ತಮ ತೀರ್ಥರು

# ಶ್ರೀ ಜಯತೀರ್ಥ ವಿರಚಿತ ಶ್ರೀಮನ್ನ್ಯಾಯ ಸುಧಾ ಗ್ರಂಥದ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಗುರ್ವರ್ಥ ದೀಪಿಕಾ : | ಶ್ರೀ ವಾದಿರಾಜ ತೀರ್ಥರು |
| ೨) ಪರಿಮಳ : | ಶ್ರೀ ರಾಘವೇಂದ್ರ ಸ್ವಾಮಿಗಳು |
| ೩) ಯಾದುಪತ್ಯ : | ಶ್ರೀ ಯಾದವಾರ್ಯರು |
| ೪) ವಾಕ್ಯಾರ್ಥ ಚಂದ್ರಿಕಾ : | ಶ್ರೀ ವಿದ್ಯಾಧೀಶ ತೀರ್ಥರು |
| ೫) ಶೇಷವಾಕ್ಯಾರ್ಥ ಚಂದ್ರಿಕಾ : | ಶ್ರೀ ಗುರುರಾಜರು (ಪಾಂಡುರಂಗೀ ಕೇಶವಭಟ್ಟರು) |
| ೬) ಶ್ರೀನಿವಾಸ ತೀರ್ಥೀಯಾ ಸುಧಾ ವಾಕ್ಯಾರ್ಥ ವಿವೃತಿಃ : | ಬಿದರಳ್ಳಿ ಶ್ರೀನಿವಾಸಾಚಾರ್ಯರು |
| ೭) ಶ್ರೀನಿಧಿತೀರ್ಥಿಯಾ : | ಶ್ರೀನಿಧಿತೀರ್ಥರು |
| ೮) ಕುಂಡಲಗಿರೀಯಾ : | ಶ್ರೀ ಕುಂಡಲಗಿರಿ ಆಚಾರ್ಯರು |
| ೯) ಕಾಶಿಕಾ : | ಶ್ರೀ ಕಾಶೀ ತಿಮ್ಮಣ್ಣಾಚಾರ್ಯರು |
| ೧೦) ಕಂಬಾಲು ಟಿಪ್ಪಣೀ : | ಶ್ರೀ ಕಂಬಾಲು ರಾಮಚಂದ್ರತೀರ್ಥರು (ವ್ಯಾಸರಾಜಮಠ) |
| ೧೧) ಚ ಷ ಕ : | ಶ್ರೀ ಗಾರ್ಲಪಾಡು ಶ್ರೀನಿವಾಸಾಚಾರ್ಯರು |
| ೧೨) ವಿಠ್ಠಲ ಭಟ್ಟೀಯಾ ; | ಶ್ರೀ ವಿಠ್ಠಲಾಚಾರ್ಯ |
| ೧೩) ಸುಧಾಸಾರ ಸಂಗ್ರಹ : | ಅಜ್ಞಾತ |
| ೧೪) ಪಂಚರತ್ನಸ್ತಬಕ : | ಶ್ರೀ ಗಲಗಲಿ ಗೋವಿಂದಾಚಾರ್ಯರು |
| ೧೫) ಹುಗ್ಗೀ ಟಿಪ್ಪಣೀ : | ಅಜ್ಞಾತ |
| ೧೬) ವಿಷ್ಣುತೀರ್ಥೀಯಾ : | ಶ್ರೀ ಅಡವಿ ವಿಷ್ಣುತೀರ್ಥಾಚಾರ್ಯರು |
| ೧೭) ಅನಂತಭಟ್ಟೀಯಾ : | ಶ್ರೀಮುಷ್ಣಂ ಅನಂತಾಚಾರ್ಯರು |
| ೧೮) ಪಂಚಾಧಿಕರಿಣೀ ಟಿಪ್ಪಣೀ : | ಶ್ರೀಮುಷ್ಣಂ ಆಚಾರ್ಯರು |
| ೧೯) ವಿಷಯ ವಾಕ್ಯಾರ್ಥ : | ಶ್ರೀ ಸತ್ಯನಾಥಾಚಾರ್ಯ ಆಯಿ |
| ೨೦) ಲಿಂಗೇರೀ ಸಿದ್ಧಾಂತ ಪ್ರಭಾ | ಶ್ರೀ ಲಿಂಗೇರಿ ಶ್ರೀನಿವಾಸಾಚಾರ್ಯ |
| ೨೧) ಸುಧಾ ಟಿಪ್ಪಣೀ : | ಶ್ರೀ ಉಮ್ಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯ |
| ೨೨) ಸುಧಾ ವಾಕ್ಯಾರ್ಥ ವಿನೋದಃ : | ಶ್ರೀ ಪಾಂಡುರಂಗೀ ಕೇಶವಾಚಾರ್ಯ |
| ೨೩) ಸುಧಾ ವಾಕ್ಯಾರ್ಥ ಮಂಜರೀ : | ,, ,, |
| ೨೪) ಸುಧಾ ಟಿಪ್ಪಣೀ : | ಶ್ರೀ ಮಹೇಶ್ವರ ಸೂರಿ |
| ೨೫) ಸುಧಾ ದುರ್ಘಟ ವಾಕ್ಯಾರ್ಥ ವಿಚಾರಃ | ಶ್ರೀ ಸತ್ಯನಾಥತೀರ್ಥರು (ಉತ್ತರಾದಿ ಮಠ) |

೨೬) ನ್ಯಾಯ ಸುಧೋಪನ್ಯಾಸ ವಾಗ್ವಜ್ರ : ಶ್ರೀ ಶ್ರೀಪಾದರಾಜರು

೨೭) ನ್ಯಾಯಸುಧಾ ಟಿಪ್ಪಣೀ: ಉಡುಪಿ ಶ್ರೀ ರಾಘವೇಂದ್ರತೀರ್ಥರು (ಪುತ್ತಿಗೆಮಠ)

೨೮) ನ್ಯಾಯಸುಧಾ ಪರಿಮಳ : ಶ್ರೀ ಸತ್ಯನಾಥ ತೀರ್ಥರು (ಉತ್ತರಾದಿಮಠ)

೨೯) ಶ್ರೀಮನ್ನ್ಯಾಯಸುಧಾ ವಿವೃತಿಃ : ಶ್ರೀ ಸತ್ಯವ್ರತತೀರ್ಥರು (ಉತ್ತರಾದಿಮಠ)

೩೦) ನ್ಯಾಯಸುಧಾ ಭಾವರತ್ನಕೋಶ : ಶ್ರೀ ಸುಮತೀಂದ್ರ ತೀರ್ಥರು (ಶ್ರೀ ರಾಯರಮಠ)

೩೧) ಸುಧಾರಸರಂಜಿನೀ (ಲಘು) : ಶ್ರೀ ವ್ಯಾಸತತ್ವಜ್ಞರು (ಏಜಿ ಆಚಾರ್ಯ)

೩೨) ,, (ಗುರು) : ,, ,,

೩೩) ವಾಕ್ಯಾರ್ಥ ರತ್ನಮಾಲಾ : ಶ್ರೀ ಪಾಂಡುರಂಗೀ ನರಸಿಂಹಾಚಾರ್ಯ (ಶ್ರೀ ವಿದ್ಯಾಧೀಶರ ಸುಧಾಟಿಪ್ಪಣಿ, ವಾಕಾರ್ಥ ಚಂದ್ರಿಕೆಯ ಟಿಪ್ಪಣಿ)

೩೪) ಸುಧಾ ಟಿಪ್ಪಣೀ : ಶ್ರೀ ಭೀಮರಾವ ಕುಲಕರ್ಣಿ, ಕುಂಬಾರಗೇರಿ

೩೫) ಸುಧಾ ಫಕ್ಕಿಕಾ : ಶ್ರೀ ಸತ್ಯಪರಾಕ್ರಮತೀರ್ಥ (ಉತ್ತರಾದಿ ಮಠ)

೩೬) ಸುಧಾ ಟಿಪ್ಪಣೀ (ಅಂಶತಃ) : ಶ್ರೀ ಹುಲಿಗಿ ಶ್ರಿಯಃಪತ್ಯಾಚಾರ್ಯ

೩೭) ಸುಧಾನಾದರಣೀಯ ಖಂಡನ : ಶ್ರೀ ವರಖೇಡಿ ತಿಮ್ಮಣ್ಣಾಚಾರ್ಯ

# ಶ್ರೀಮನ್ನ್ಯಾಯ ವಿವರಣ

**ಲೇಖಕರು : ಶ್ರೀ ಪೂರ್ಣಪ್ರಜ್ಞ ಯತೀಂದ್ರರು**

## ಇದರ ಮೇಲಿನ ಟೀಕೆಗಳು

೧) ನ್ಯಾಯ ವಿವರಣ ಸಂಬಂಧ ದೀಪಿಕಾ
ಲೇ : ಶ್ರೀ ಶಂಕರಾಚಾರ್ಯ (ತ್ರಿವಿಕ್ರಮರ ತಮ್ಮಂದಿರು)

೨) ನ್ಯಾಯ ವಿವರಣ ಪಂಚಿಕಾ :
ಲೇ : ಶ್ರೀ ಟೀಕಾಕೃತ್ಪಾದರು

೩) ಭಾವಬೋಧ ಟೀಕಾ
ಲೇ : ಶ್ರೀ ರಘೂತ್ತಮ ತೀರ್ಥರು

## ಶ್ರೀಮನ್ನ್ಯಾಯ ವಿವರಣ ಟೀಕಾ-ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಪ್ರದೀಪ : | ಅಜ್ಞಾತ |
| ೨) ವಿಶ್ವೋತ್ತಮ ತೀರ್ಥೀಯಾ : | ಶ್ರೀ ವಿಶ್ವೋತ್ತಮ ತೀರ್ಥರು (ಉಡುಪಿ ಮಠ) |
| ೩) ನ್ಯಾಯ ವಿವರಣ ವ್ಯಾಖ್ಯಾನ : | ಶ್ರೀ ವಿಜಯೀಂದ್ರತೀರ್ಥರು (ರಾಯರ ಮಠ) |
| ೪) ನ್ಯಾಯ ವಿವರಣೋದ್ಧಾರ : | ಶ್ರೀ ರಘೂತ್ತಮ ತೀರ್ಥರು (ಉತ್ತರಾದಿ ಮಠ) |

# ಶ್ರೀಮದ್ ಅಣುಭಾಷ್ಯ

## ಲೇಖಕರು : ಶ್ರೀಮನ್ಮಧ್ವಾಚಾರ್ಯರು

### ಇದರ ಮೇಲಿನ ಟೀಕೆಗಳು

೧] ಅಣುಭಾಷ್ಯಾರ್ಥ ಸಂಗ್ರಹ
ಲೇ : ಶ್ರೀ ನಾರಾಯಣ ಪಂಡಿತಾಚಾರ್ಯರು

೨] ತತ್ವಮಂಜರೀ
ಲೇ : ಶ್ರೀ ರಾಘವೇಂದ್ರಸ್ವಾಮಿಗಳು

೩] ಅಣುಭಾಷ್ಯ ವಿವರಣಂ
ಲೇ : ಶ್ರೀ ಬಿದರಳ್ಳಿ ಶ್ರೀನಿವಾಸ ತೀರ್ಥರು

೪] ಅಣು ಭಾಷ್ಯ ವ್ಯಾಖ್ಯಾನ
ಲೇ : ಶ್ರೀ ರಘುನಾಥ ತೀರ್ಥರು

೫] ಅಣು ಭಾಷ್ಯ ವ್ಯಾಖ್ಯಾನ
ಲೇ : ಶ್ರೀ ವಿಜಯೀಂದ್ರತೀರ್ಥರು

೬] ಭಲಾರೀ ಟಿಪ್ಪಣೀ
ಲೇ : ಶ್ರೀ ಶೇಷಾಚಾರ್ಯ ಭಲಾರಿ

೭] ಅಣು ಭಾಷ್ಯ ವ್ಯಾಖ್ಯಾನ
ಲೇ : ಶ್ರೀ ಆಯಿ ನರಹರಿ ಆಚಾರ್ಯರು

೮] ಅಣು ಭಾಷ್ಯ ಪ್ರದೀಪ
ಲೇ : ಅಜ್ಞಾತ

೯] ಅಣು ಭಾಷ್ಯ ಟಿಪ್ಪಣೀ
ಲೇ : ಶ್ರೀ ವಿದ್ಯಾಧೀಶ ತೀರ್ಥರ ಶಿಷ್ಯ ನರಸಿಂಹ ಯತಿ

೧೦] ರಾಮ ಶಬ್ದಾರ್ಥ ಗರ್ಭಿತ ಅಣುಭಾಷ್ಯ ವಿವರಣಂ
ಲೇ : ಶ್ರೀ ಸತ್ಯ ಸಂತುಷ್ಟ ಶಿಷ್ಯ

೧೧] ಆನಂದಮಾಲಾ
ಲೇ : ಶ್ರೀ ತ್ರಿವಿಕ್ರಮದಾಸ [ನಾರಾಯಣ ಪಂಡಿತಾಚಾರ್ಯರ ಶಿಷ್ಯ]

೧೨] ಅಣುಭಾಷ್ಯ ಪ್ರಕಾಶಿಕಾ
ಲೇ : ಶ್ರೀ ರಂಗಾಚಾರ್ಯ ಸುತ ಭೀಮಾಚಾರ್ಯ

# ದಶೋಪನಿಷತ್ತುಗಳು

## ಅಥರ್ವಣೋಪನಿಷದ್ ಭಾಷ್ಯ

**ಲೇಖಕರು : ಶ್ರೀ ದಶಪ್ರಮತಿಗಳು**

೧) ಅಥರ್ವಣ ಭಾಷ್ಯ ಟಿಪ್ಪಣಿ
ಲೇ : ಶ್ರೀ ವಾದಿರಾಜ ತೀರ್ಥರು

**ಅಥರ್ವಣೋಪನಿಷದ್ ಭಾಷ್ಯದ ಮೇಲೆ ರಚಿಸಿದ ವ್ಯಾಖ್ಯಾನ ಗ್ರಂಥಗಳು**

| ಗ್ರಂಥಗಳು | ಲೇಖಕರು |
|---|---|
| ೧) ಅಥರ್ವಣ ಭಾಷ್ಯ ಟೀಕಾ : | ಶ್ರೀ ವ್ಯಾಸ ತೀರ್ಥರು |
| ೨) ಅಥರ್ವಣ ಖಂಡಾರ್ಥ : | ಶ್ರೀ ರಾಘವೇಂದ್ರ ತೀರ್ಥರು |
| ೩) ಅಥರ್ವಣ ಭಾಷ್ಯ ವಿವರಣ : | ಶ್ರೀ ಉಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯರು |
| ೪) ಶ್ರುತ್ಯರ್ಥ ಪ್ರಕಾಶಿಕಾ : | ನೃಸಿಂಹ ಭಿಕ್ಷುಗಳು |
| ೫) ವರದ ತೀರ್ಥೀಯ : | ಶ್ರೀ ವರದಾಚಾರ್ಯರು |
| ೬) ಪ್ರಮೇಯ ಸಂಗ್ರಹ : | ಅಜ್ಞಾತ |
| ೭) ಅಥರ್ವಣೋಪನಿಷದ್ ವ್ಯಾಖ್ಯಾನ : | ಶ್ರೀ ವಿಜಯೀಂದ್ರ ತೀರ್ಥರು |
| ೮) ಅಥರ್ವಣೋಪನಿಷದ್ ಭಾಷ್ಯ ವಿವೃತಿಃ : | ಶ್ರೀನಿವಾಸ ತೀರ್ಥರು |
| ೯) ಅಥರ್ವಣ ಖಂಡಾರ್ಥ : | ಶ್ರೀ ವಿದ್ಯಾಧೀಶ ಶಿಷ್ಯ ನರಸಿಂಹ ಭಿಕ್ಷು |
| ೧೦) ಅಥರ್ವಣೋಪನಿಷತ್ ಖಂಡಾರ್ಥ : | ಶ್ರೀ ಆಯಿ ನರಹರಿ |

# ಐತರೇಯೋಪನಿಷದ್ ಭಾಷ್ಯ

## ಲೇಖಕರು : ಶ್ರೀ ಪೂರ್ಣಬೋಧ ಭಗವತ್ಪಾದರು

೧) ಐತರೇಯ ಖಂಡಾರ್ಥ
ಲೇ : ಶ್ರೀ ರಾಘವೇಂದ್ರ ತೀರ್ಥರು

## ಐತರೇಯೋಪನಿಷದ್ ಭಾಷ್ಯಾನುಸಾರಿಯಾದ ವ್ಯಾಖ್ಯಾನಗಳು

### ಐತರೇಯೋಪನಿಷದ್ ಭಾಷ್ಯ ಟೀಕೆಗಳು

| | ಗ್ರಂಥಗಳು | ಲೇಖಕರು |
|---|---|---|
| ೧) | ಐತರೇಯ ಭಾಷ್ಯ ರತ್ನಮಾಲಾ : | ಶ್ರೀ ತಾಮ್ರಪರ್ಣೀ ಆಚಾರ್ಯರು |
| ೨) | ರಾಮಚಂದ್ರ ತೀರ್ಥೀಯಾ : | ಶ್ರೀ ರಾಮಚಂದ್ರ ತೀರ್ಥರು |
| ೩) | ವರದ ತೀರ್ಥೀಯಾ : | ಶ್ರೀ ವರದ ತೀರ್ಥರು |
| ೪) | ವಿಶ್ವೇಶ ತೀರ್ಥೀಯಾ : | ಶ್ರೀ ವಿಶ್ವೇಶ ತೀರ್ಥರು (ಉಡುಪಿ ಮಠ) |
| ೫) | ಐತರೇಯ ಅನಂತಭಟ್ಟೀಯ ವ್ಯಾಖ್ಯಾನ : | ಶ್ರೀಮುಷ್ಣಂ ಅನಂತಾಚಾರ್ಯ |
| ೬) | ಕೃಷ್ಣಾಚಾರ್ಯ ಟಿಪ್ಪಣೀ : | ಶ್ರೀ ಕೃಷ್ಣಾಚಾರ್ಯರು |
| ೭) | ಐತರೇಯ ಭಾಷ್ಯ ಟೀಕಾ : | ಶ್ರೀ ವ್ಯಾಸತೀರ್ಥರು (ಜಯತೀರ್ಥ ಶಿಷ್ಯ) |
| ೮) | ಐತರೇಯ ವ್ಯಾಖ್ಯಾನ : | ಶ್ರೀ ವಿಜಯೀಂದ್ರ ತೀರ್ಥರು |
| ೯) | ಐತರೇಯ ವ್ಯಾಖ್ಯಾ : | ಶ್ರೀ ರಾಘವೇಂದ್ರಾಚಾರ್ಯ |
| ೧೦) | ಐತರೇಯ ಖಂಡಾರ್ಥ : | ಶ್ರೀ ವೆಂಕಟ ವರಾಹ |
| ೧೧) | ಐತರೇಯ ಖಂಡಾರ್ಥ : | ಶ್ರೀ ಕೃಷ್ಣಾವಧೂತ ಪಂಡಿತ |
| ೧೨) | ಐತರೇಯ ಭಾಷ್ಯ ಟೀಕಾ ವ್ಯಾಖ್ಯಾನ: | ಶ್ರೀ ಕಂಬಾಲು ರಾಮಚಂದ್ರತೀರ್ಥರು |
| ೧೩) | ಐತರೇಯ ಖಂಡಾರ್ಥ ವ್ಯಾಖ್ಯಾನ : | ಶ್ರೀ ಚಿಕ್ಕೋಡಿ ಭಗವಂತರಾಯರು |

# ತಲವಕಾರೋಪನಿಷದ್ ಭಾಷ್ಯ

## ಲೇಖಕರು : ಶ್ರೀಮದಾನಂದತೀರ್ಥ ಭಗವತ್ಪಾದರು

೧) ತಲವಕಾರೋಪನಿಷದ್ ಖಂಡಾರ್ಥ
ಲೇ : ಶ್ರೀ ವೇದೇಶ ತೀರ್ಥರು

೨) ತಲವಕಾರೋಪನಿಷದ್ ಖಂಡಾರ್ಥ
ಲೇ : ಶ್ರೀ ರಾಘವೇಂದ್ರ ತೀರ್ಥರು

೩) ತಲವಕಾರೋಪನಿಷದ್ ಭಾಷ್ಯ ವಿವರಣ
ಲೇ : ಶ್ರೀ ವ್ಯಾಸ ತೀರ್ಥರು (ಜಯತೀರ್ಥರ ಶಿಷ್ಯರು)

೪) ವರದ ತೀರ್ಥೀಯಾ :
ಲೇ : ಶ್ರೀ ವರದಾಚಾರ್ಯರು

## ತಲವಕಾರೋಪನಿಷದ್ ಭಾಷ್ಯ ಟೀಕಾ ಟಿಪ್ಪಣಿ

| ಗ್ರಂಥಗಳು | ಲೇಖಕರು |
|---|---|
| ೧) ಸರ್ವಸಾರ ಸಂಗ್ರಹ : | ಅಜ್ಞಾತ |
| ೨) ತಲವಕಾರೋಪನಿಷತ್ ಖಂಡಾರ್ಥ : | ಶ್ರೀ ವಿದ್ಯಾಧೀಶ ತೀರ್ಥರು |
| ೩) ಕೇನೋಪನಿಷದ್ ಭಾಷ್ಯ ವ್ಯಾಖ್ಯಾನ : | ಶ್ರೀ ತ್ರಿವಿಕ್ರಮದಾಸ (ನಾರಾಯಣ ಪಂಡಿತರ ಶಿಷ್ಯರು) |
| ೪) ಖಂಡಾರ್ಥ ಪ್ರಕಾಶಕ : | ಶ್ರೀ ನರಸಿಂಹ ಭಿಕ್ಷುಗಳು |

# ಈಶಾವಾಸ್ಯೋಪನಿಷದ್ ಭಾಷ್ಯ

**ಲೇಖಕರು : ಶ್ರೀ ಮಧ್ವ ಭಗವತ್ಪಾದರು**

## ಈಶಾವಾಸ್ಯೋಪನಿಷದ್ ಭಾಷ್ಯ ಟೀಕೆಗಳು

೧) ವಿವರಣಂ

ಲೇ : ಶ್ರೀ ಜಯತೀರ್ಥ ಭಿಕ್ಷುಗಳು

೨) ಈಶಾವಾಸ್ಯೋಪನಿಷತ್ ಖಂಡಾರ್ಥ

ಲೇ : ಶ್ರೀ ರಾಘವೇಂದ್ರ ತೀರ್ಥರು

೩) ವರದ ತೀರ್ಥೀಯಾ

ಲೇ : ಶ್ರೀ ವರದ ತೀರ್ಥರು

### ಜಯತೀರ್ಥರ ಟೀಕೆಯ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಟೀಕಾವಿವೃತಿಃ : | ಶ್ರೀ ರಘುನಾಥ ಯತಿಗಳು |
| ೨) ಈಶಾವಾಸ್ಯ ವ್ಯಾಖ್ಯಾನ : | ಶ್ರೀ ವಿಜಯೀಂದ್ರ ತೀರ್ಥರು |
| ೩) ಈಶಾವಾಸ್ಯ ಟಿಪ್ಪಣೀ ಗುರ್ವರ್ಥ ದೀಪಿಕಾ : | ಶ್ರೀ ವಾದಿರಾಜ ತೀರ್ಥರು |
| ೪) ಭಾಷ್ಯ ಟಿಪ್ಪಣೀ : | ಛಲಾರಿ ನರಸಿಂಹ ಆಚಾರ್ಯರು |
| ೫) ಈಶಾವಾಸ್ಯೋಪನಿಷದ್ ಭಾಷ್ಯ ವ್ಯಾಖ್ಯಾನ : | ಶ್ರೀನಿವಾಸ ತೀರ್ಥರು |
| ೬) ಈಶಾವಾಸ್ಯ ಖಂಡಾರ್ಥ : | ಶ್ರೀ ವಿದ್ಯಾಧೀಶತೀರ್ಥ ಶಿಷ್ಯ ನರಸಿಂಹಯತಿಃ |
| ೭) ಈಶಾವಾಸ್ಯ ಟಿಪ್ಪಣೀ : | ಶ್ರೀ ಸತ್ಯಪ್ರಜ್ಞರು |

# ಮಾಂಡೂಕ್ಯೋಪನಿಷದ್ ಭಾಷ್ಯ

**ಲೇಖಕರು : ಶ್ರೀ ಸರ್ವಜ್ಞಾಚಾರ್ಯರು**

೧) ಮಾಂಡೂಕ್ಯೋಪನಿಷದ್ ಭಾಷ್ಯ ಟಿಪ್ಪಣೀ
ಲೇ : ಶ್ರೀ ವಾದಿರಾಜ ತೀರ್ಥರು

## ಮಾಂಡೂಕೋಪನಿಷದ್ ಭಾಷ್ಯ ವ್ಯಾಖ್ಯಾನ ಗ್ರಂಥಗಳು

| | ಗ್ರಂಥಗಳು | ಲೇಖಕರು |
|---|---|---|
| ೧) | ಮಾಂಡೂಕ್ಯೋಪನಿಷದ್ ಖಂಡಾರ್ಥ : | ಶ್ರೀ ರಾಘವೇಂದ್ರ ತೀರ್ಥರು |
| ೨) | ಮಾಂಡೂಕ್ಯೋಪನಿಷತ್ ಖಂಡಾರ್ಥ : | ಶ್ರೀನಿವಾಸ ತೀರ್ಥರು |
| ೩) | ಮಾಂಡೂಕ್ಯೋಪನಿಷದ್ ಭಾಷ್ಯ ಟೀಕಾ : | ಶ್ರೀ ವ್ಯಾಸ ತೀರ್ಥರು |
| ೪) | ಮಾಂಡೂಕ್ಯೋಪನಿಷತ್ ಭಾಷ್ಯ ವ್ಯಾಖ್ಯಾ "ಪದಾರ್ಥ ದೀಪಿಕಾ" : | ಶ್ರೀನಿವಾಸ ತೀರ್ಥರು |
| ೫) | ವರದ ತೀರ್ಥೀಯಾ : | ಶ್ರೀ ವರದಾಚಾರ್ಯರು |
| ೬) | ಪ್ರಮೇಯ ಸಂಗ್ರಹ : | ಅಜ್ಞಾತ |
| ೭) | ಮಾಂಡೂಕ್ಯೋಪನಿಷತ್ ವ್ಯಾಖ್ಯಾನ : | ಶ್ರೀ ವಿಜಯೀಂದ್ರ ತೀರ್ಥರು |
| ೮) | ಮಾಂಡೂಕ್ಯೋಪನಿಷದ್ ಭಾಷ್ಯ ಟೀಕಾ : | ಶ್ರೀ ತ್ರಿವಿಕ್ರಮದಾಸ |
| ೯) | ಮಾಂಡೂಕ್ಯೋಪನಿಷದ್ ವ್ಯಾಖ್ಯಾ : | ಶ್ರೀ ಸತ್ಯಪ್ರಿಯ ತೀರ್ಥ |

# ಛಾಂದೋಗ್ಯೋಪನಿಷತ್ ಭಾಷ್ಯ

ಲೇಖಕರು : ಶ್ರೀ ಮಧ್ವಾಚಾರ್ಯರು

೧) ಛಾಂದೋಗ್ಯೋಪನಿಷದ್ ವ್ಯಾಖ್ಯಾ

ಲೇ : ಶ್ರೀ ವ್ಯಾಸತೀರ್ಥರು

೨) ಅನಂತ ಭಟ್ಟೀಯಾ ವ್ಯಾಖ್ಯಾ

ಲೇ : ಶ್ರೀಮುಷ್ಣಂ ಅನಂತಾಚಾರ್ಯ

೩) ಛಾಂದೋಗ್ಯ ಭಾಷ್ಯ ವ್ಯಾಖ್ಯಾ

ಲೇ : ಶ್ರೀ ವೇದೇಶ ತೀರ್ಥರು

೪) ಛಾಂದೋಗ್ಯ ಖಂಡಾರ್ಥ

ಲೇ : ಶ್ರೀ ರಾಘವೇಂದ್ರ ತೀರ್ಥರು

೫) ಛಾಂದೋಗ್ಯ ಭಾಷ್ಯ ಟೀಕಾ

ಲೇ : ಶ್ರೀ ವಿದ್ಯಾಧಿರಾಜ ತೀರ್ಥರು

# ತೈತ್ತಿರೀಯೋಪನಿಷದ್ ಭಾಷ್ಯ

**ಲೇಖಕರು : ಶ್ರೀ ಮಧ್ವಾಚಾರ್ಯರು**

೧) ತೈತ್ತಿರೀಯೋಪನಿಷದ್ ಭಾಷ್ಯ ಟಿಪ್ಪಣೀ
ಲೇ ಶ್ರೀ ವಾದಿರಾಜ ಶ್ರೀಚರಣರು

೨) ತೈತ್ತಿರೀಯೋಪನಿಷದ್ ಖಂಡಾರ್ಥ
ಲೇ : ಶ್ರೀ ರಾಘವೇಂದ್ರಸ್ವಾಮಿಗಳವರು

೩) ತೈತ್ತಿರೀಯೋಪನಿಷದ್ ಖಂಡಾರ್ಥ
ಲೇ : ಶ್ರೀ ನರಸಿಂಹ ಯತಿ

೪) ತೈತ್ತಿರೀಯೋಪನಿಷದ್ ಭಾಷ್ಯ ವಿವರಣ ಟೀಕಾ
ಲೇ: ಶ್ರೀ ವ್ಯಾಸತೀರ್ಥರು(ಜಯತೀರ್ಥರ ಶಿಷ್ಯರು)

೫) ತೈತ್ತಿರೀಯೊಪನಿಷದ್ ಭಾಷ್ಯ ವಿವೃತಿಃ ಟೀಕಾ ಪದಾರ್ಥ ದೀಪಿಕಾ
ಲೇ: ಶ್ರೀ ಶ್ರೀನಿವಾಸತೀರ್ಥರು

೬) ವರದ ತೀರ್ಥೀಯಾ
ಲೇ: ಶ್ರೀ ವರದಾಚಾರ್ಯರು

೭) ಉಮ್ಮರ್ಜಿ ಟಿಪ್ಪಣೀ
ಲೇ: ಶ್ರೀ ಉಮ್ಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯ

೮) ಪ್ರಮೇಯ ಸಂಗ್ರಹ
ಲೇ : ಅಜ್ಞಾತ

# ಷಟ್ ಪ್ರಶ್ನ ಭಾಷ್ಯ

ಲೇಖಕರು : ಶ್ರೀಮದಾನಂದ ತೀರ್ಥರು

೧) ಷಟ್ ಪ್ರಶ್ನ ಟೀಕಾ
ಲೇ : ಶ್ರೀ ಜಯತೀರ್ಥರು

೨) ಷಟ್ ಪ್ರಶ್ನ ಭಾಷ್ಯ ಟೀಕಾ ಟಿಪ್ಪಣಿ
ಲೇ : ಶ್ರೀ ವಾದಿರಾಜ ತೀರ್ಥರು

೩) ಷಟ್ ಪ್ರಶ್ನ ಖಂಡಾರ್ಥ
ಲೇ : ಶ್ರೀ ರಾಘವೇಂದ್ರ ತೀರ್ಥರು

೪) ಷಟ್ ಪ್ರಶ್ನೋಪನಿಷದ್ ಭಾಷ್ಯ ಟೀಕಾ ಟಿಪ್ಪಣಿ
ಲೇ : ಶ್ರೀನಿವಾಸ ತೀರ್ಥರು ಬಿದರಳ್ಳಿ

೫) ಛಲಾರೀ ವ್ಯಾಖ್ಯಾನ
ಲೇ : ಶ್ರೀ ಶೇಷಾಚಾರ್ಯ ಛಲಾರಿ

೬) ಛಲಾರೀ ವ್ಯಾಖ್ಯಾನ
ಲೇ : ಶ್ರೀ ನರಸಿಂಹಾಚಾರ್ಯ ಛಲಾರಿ

೭) ಷಟ್ ಪ್ರಶ್ನ ಖಂಡಾರ್ಥ
ಲೇ : ಉತ್ತರಾದಿಮಠದ ಶ್ರೀ ವಿದ್ಯಾಧೀಶತೀರ್ಥರ ಶಿಷ್ಯ ನರಸಿಂಹ

# ಬೃಹದಾರಣ್ಯಕೋಪನಿಷದ್ ಭಾಷ್ಯ

## ಮೂಲ ಲೇಖಕರು : ಶ್ರೀ ಸರ್ವಜ್ಞಾಚಾರ್ಯರು

## ಬೃಹದಾರಣ್ಯಕೋಪನಿಷದ್ ಭಾಷ್ಯ ಟೀಕೆಗಳು

೧) ಬೃಹದಾರಣ್ಯ ಭಾವಬೋಧ
ಲೇ : ಶ್ರೀ ರಘೂತ್ತಮ ತೀರ್ಥರು

೨) ಬೃಹದಾರಣ್ಯ ಖಂಡಾರ್ಥ
ಲೇ : ಶ್ರೀ ರಾಘವೇಂದ್ರ ತೀರ್ಥರು

೩) ವರದ ತೀರ್ಥೀಯಾ
ಲೇ : ಶ್ರೀ ವರದ ತೀರ್ಥರು

೪) ಬೃಹದಾರಣ್ಯೋಪನಿಷದ್ ವ್ಯಾಖ್ಯಾ
ಲೇ : ಶ್ರೀ ವ್ಯಾಸತೀರ್ಥರು

೫) ಬೃಹದಾರಣ್ಯ ವ್ಯಾಖ್ಯಾನ
ಲೇ : ಶ್ರೀ ವಿಜಯೀಂದ್ರ ತೀರ್ಥರು

೬) ಬೃಹದಾರಣ್ಯೋಪನಿಷದ್ ಭಾವ ಬೋಧ ಸಂಗ್ರಹ ಅನಂತ ಭಟ್ಟಿಯಾ
ಲೇ : ಶ್ರೀಮುಷ್ಣಂ ಅನಂತಾಚಾರ್ಯರು

೭) ಬೃಹದಾರಣ್ಯ ಭಾಷ್ಯ ವ್ಯಾಖ್ಯಾನ
ಲೇ : ಶ್ರೀ ಉಮ್ಮರ್ಜಿ ಪ್ರಲ್ಹಾದ ಕೃಷ್ಣಾಚಾರ್ಯ

# ಕಾಠಕೋಪನಿಷದ್ ಭಾಷ್ಯ

ಲೇಖಕರು : ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು

## ಇದರ ಮೇಲಿನ ವ್ಯಾಖ್ಯಾನಗಳು

೧) ಕಾಠಕೋಪನಿಷದ್ ಭಾಷ್ಯ ಟಿಪ್ಪಣೀ
ಲೇ ; ಶ್ರೀ ವಾದಿರಾಜ ತೀರ್ಥರು

೨) ಕಾಠಕೋಪನಿಷದ್ ವ್ಯಾಖ್ಯಾನ
ಲೇ : ಶ್ರೀ ವಿಜಯೀಂದ್ರತೀರ್ಥರು

೩) ಕಾಠಕೋಪನಿಷದ್ ಭಾಷ್ಯ ಟೀಕಾ
ಲೇ : ಶ್ರೀ ವೇದೇಶ ತೀರ್ಥರು

೪) ಕಾಠಕ ಟೀಕಾ
ಲೇ : ಶ್ರೀ ಜಯತೀರ್ಥರ ಶಿಷ್ಯ ವ್ಯಾಸತೀರ್ಥರು

೫) ವರದ ತೀರ್ಥಿಯಾ
ಲೇ : ಶ್ರೀ ವರದಾಚಾರ್ಯರು

೬) ಕಾಠಕೋಪನಿಷದ್ ಖಂಡಾರ್ಥ
ಲೇ : ಶ್ರೀ ರಾಘವೇಂದ್ರಸ್ವಾಮಿಗಳು

೭) ಕಾಠಕೋಪನಿಷದ್ ಖಂಡಾರ್ಥ
ಲೇ : ಶ್ರೀ ವೇದೇಶ ತೀರ್ಥರು

೮) ಕಾಠಕೋಪನಿಷದ್ ಖಂಡಾರ್ಥ
ಲೇ : ಶ್ರೀ ವಿದ್ಯಾಧೀಶ ತೀರ್ಥರ ಶಿಷ್ಯ ನರಸಿಂಹಸೂರಿ

೯) ವ್ಯಾಸ ತೀರ್ಥಿಯಾ
ಲೇ : ಶ್ರೀ ವ್ಯಾಸತೀರ್ಥರು

(ಶ್ರೀ ರಾಘವೇಂದ್ರತೀರ್ಥ ಸ್ವಾಮಿಗಳವರು ಹಾಗೂ ಶ್ರೀ ವೇದೇಶತೀರ್ಥ ಸ್ವಾಮಿಗಳವರು ಪ್ರಾಯಃ ಎಲ್ಲ ಉಪನಿಷತ್ತುಗಳಿಗೆ ಸ್ವತಂತ್ರವಾಗಿಯೇ ಖಂಡಾರ್ಥಗಳನ್ನು ಬರೆದಿದ್ದಾರೆ. ಆದರೆ ಆ ಖಂಡಾರ್ಥಗಳೂ ಕೂಡ ಭಾಷ್ಯಾನುಗುಣವಾಗಿಯೇ ಸರಳ ಸಂಸ್ಕೃತದಲ್ಲಿ ಉಪನಿಷದರ್ಥವನ್ನು ತಿಳಿಸುವದರಿಂದ ಅವುಗಳನ್ನೂ ಕೂಡ ಉಪನಿಷದ್ ಭಾಷ್ಯ ಟೀಕೆಗಳೆಂದೇ ಗಣಿಸಲಾಗಿದೆ.

# ಗೀತಾ ಪ್ರಸ್ಥಾನ

## ಶ್ರೀ ಗೀತಾ ಭಾಷ್ಯ

**ಲೇಖಕರು : ಶ್ರೀ ಮಧ್ವಾಚಾರ್ಯರು**

## ಇದರ ಮೇಲಿನ ಟೀಕೆಗಳು

೧) ಗೀತಾ ಭಾವ ಪ್ರಕಾಶಿಕಾ : ಶ್ರೀ ನರಹರಿ ತೀರ್ಥರು

೨) ಪ್ರಮೇಯ ದೀಪಿಕಾ

ಲೇ : ಶ್ರೀ ಟೀಕಾಚಾರ್ಯರು

**ಪ್ರಮೇಯ ದೀಪಿಕಾ ಟಿಪ್ಪಣಿಗಳು**

| ಗ್ರಂಥಗಳು | ಲೇಖಕರು |
|---|---|
| ೧) ಭಾವಬೋಧ : | ಶ್ರೀ ರಘೂತ್ತಮ ತೀರ್ಥರು |
| ೨) ಗೀತಾಭಾಷ್ಯ ಟೀಕಾ ವ್ಯಾಖ್ಯಾನ : | ಶ್ರೀ ರಾಘವೇಂದ್ರ ತೀರ್ಥರು |
| ೩) ಭಾವ ರತ್ನ ಕೋಶ : | ಶ್ರೀ ಸುಮತೀಂದ್ರ ತೀರ್ಥರು |
| ೪) ಪ್ರಮೇಯ ದೀಪಿಕಾ ಭಾವ ಪ್ರಕಾಶ : | ಶ್ರೀ ತಾಮ್ರಪರ್ಣಿ ಕೃಷ್ಣಾಚಾರ್ಯರು |
| ೫) ಗೀತಾ ಭಾಷ್ಯ ವ್ಯಾಖ್ಯಾ : | ಶ್ರೀಮುಷ್ಣ ಸುಬ್ಬರಾಯಾಚಾರ್ಯ |
| ೬) ಗೀತಾಭಾಷ್ಯ ಟೀಕಾ ವ್ಯಾಖ್ಯಾನ | ಬಿದರಳ್ಳಿ ಶ್ರೀನಿವಾಸತೀರ್ಥರು |

**ಮಾಧ್ವ ಭಾಷ್ಯಾನುಸಾರಿಯಾದ ಗೀತೆಯ ಮೇಲಿನ ಇತರ ಗ್ರಂಥಗಳು**

| | |
|---|---|
| ೧) ಗೀತಾ ವಿವೃತಿಃ : | ಟೀಕಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ವಿದ್ಯಾಧಿರಾಜ ತೀರ್ಥರು |
| ೨) ಗೀತಾ ವಿವೃತಿಃ : | ಶ್ರೀ ರಾಘವೇಂದ್ರ ಸ್ವಾಮಿಗಳು |
| ೩) ಗೀತಾ ಭಾವ ಚಂದ್ರಿಕಾ : | ಶ್ರೀ ಕೊಯಿಮತ್ತೂರು ಪದ್ಮನಾಭಾಚಾರ್ಯರು |
| ೪) ಗೀತಾ ವಿವೃತೀ : | ಶ್ರೀ ಆಯಿ ನರಹರಿ ತೀರ್ಥರು |
| ೫) ಪ್ರಮೇಯ ದೀಪಿಕಾ ಟಿಪ್ಪಣೀ : | ಶ್ರೀ ವಿಜಯೀಂದ್ರ ತೀರ್ಥರು |
| ೬) ಗುರುರಾಜೀಯಾ : | ಶ್ರೀ ಪಾಂಡುರಂಗೀ ಕೇಶವಾಚಾರ್ಯ |
| ೭) ಗೀತಾ ವಿವೃತಿಃ : | ಶ್ರೀ ಗೌಡೇಶ್ವರ ಮಠಾಧಿಪತಿ ವಿದ್ಯಾಧಿರಾಜತೀರ್ಥರು |
| ೮) ಗೀತಾ ಭಾಷ್ಯ ಟೀಕಾ ಪ್ರಮೇಯ ದೀಪಿಕಾ ವ್ಯಾಖ್ಯಾನ | ಶ್ರೀ ಪ್ರಹ್ಲಾದ ಕೃಷ್ಣಾಚಾರ್ಯ ಉಮ್ಮರ್ಜಿ |

# ಶ್ರೀ ಗೀತಾ ತಾತ್ಪರ್ಯ

## ಲೇಖಕರು: ಶ್ರೀ ಮಧ್ವಾಚಾರ್ಯರು

## ಇದರ ಮೇಲಿನ ಟೀಕೆಗಳು

೧) ನ್ಯಾಯ ದೀಪಿಕಾ
ಲೇ : ಶ್ರೀ ಜಯತೀರ್ಥರು

೨) ನ್ಯಾಯ ದೀಪಿಕಾ ಟಿಪ್ಪಣೀ-ವಿವರಣಂ
ಲೇ : ಶ್ರೀ ರಾಘವೇಂದ್ರತೀರ್ಥರು

೩) ನ್ಯಾಯ ದೀಪ ಕಿರಣಾವಳಿ
ಲೇ : ಶ್ರೀ ಬಿದರಳ್ಳಿ ಶ್ರೀನಿವಾಸ ತೀರ್ಥರು

೪) ನ್ಯಾಯದೀಪಿಕಾ ಟಿಪ್ಪಣೀ
ಲೇ : ಶ್ರೀ ವಿಜಯೀಂದ್ರ ತೀರ್ಥರು

೫) ಗೀತಾ ವ್ಯಾಖ್ಯಾನ ವಿವರಣಂ
ಲೇ : ಶ್ರೀ ವಾದಿರಾಜ ತೀರ್ಥರು

೬) ನ್ಯಾಯ ದೀಪಿಕಾ ಭಾವ ಪ್ರಕಾಶ
ಲೇ : ಶ್ರೀ ಸತ್ಯಪ್ರಜ್ಞ ತೀರ್ಥ
(ಉತ್ತರಾದಿ ಮಠದ ಶ್ರೀ ಸತ್ಯವ್ರತರ ಶಿಷ್ಯರು)

೭) ಶ್ರೀನಿವಾಸ ತೀರ್ಥಿಯಾ ಭಾವ ಪ್ರದೀಪಿಕಾ
ಲೇ ಶ್ರೀ ಬಿದರಳ್ಳಿ ಶ್ರೀನಿವಾಸ ತೀರ್ಥರು

೮) ವರದ ರಾಜೀಯಾ
ಲೇ : ಶ್ರೀ ವರದಾಚಾರ್ಯರು

೯) ದುರ್ಬೋಧ ಸ್ಥಲೀಯ ಟಿಪ್ಪಣೀ
ಲೇ : ಅಜ್ಞಾತ

# ಇತರ ಕೃತಿಗಳು

## ದ್ವಾದಶ ಸ್ತೋತ್ರ

ಲೇಖಕರು : ಶ್ರೀ ಸುಖತೀರ್ಥರು

ಇದರ ಮೇಲೆ ವ್ಯಾಖ್ಯಾನಗಳನ್ನು ಬರೆದವರು

೧) ಶ್ರೀ ಉಡುಪಿಯ ವಿಶ್ವಪತಿ ತೀರ್ಥರು

೨) ,, ಪುಣ್ಯಶ್ರವಣ ತೀರ್ಥರು

೩) ,, ಜನಾರ್ದನ ಭಟ್ಟರು

೪) ,, ಛಲಾರಿ ನರಸಿಂಹಾಚಾರ್ಯರು

೫) ,, ಕೊಯಮತ್ತೂರು ಪದ್ಮನಾಭಾಚಾರ್ಯರು

೬) ,, ಪಾಂಸ್ಥಿ ಶ್ರೀನಿವಾಸಾಚಾರ್ಯರು

# ಕೃಷ್ಣಾಮೃತ ಮಹಾರ್ಣವ

ಲೇಖಕರು : ಶ್ರೀ ಪೂರ್ಣಪ್ರಜ್ಞರು

ಕೃಷ್ಣಾಮೃತ ಮಹಾರ್ಣವ ವ್ಯಾಖ್ಯಾನ

ಲೇ : ಶ್ರೀ ಕಾಶೀ ತಿಮ್ಮಣ್ಣಾಚಾರ್ಯ

ಲೇ : ಶ್ರೀ ಶ್ರೀನಿವಾಸಾಚಾರ್ಯ

# ಜಯಂತೀ ನಿರ್ಣಯ

ಲೇಖಕರು : ಶ್ರೀಮದಾನಂದ ತೀರ್ಥರು

ಜಯಂತೀ ನಿರ್ಣಯ ಟೀಕಾ

ಲೇಖಕರು : ಶ್ರೀ ವರಖೇಡಿ ತಿಮ್ಮಣ್ಣಾಚಾರ್ಯ

# ಸದಾಚಾರ ಸ್ಮೃತಿ

## ಲೇಖಕರು : ಶ್ರೀಮದಾನಂದತೀರ್ಥ ಭಗವತ್ಪಾದರು

## ಸದಾಚಾರ ಸ್ಮೃತಿಯ ಟೀಕಾ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಶರ್ಕರಾ | ಲೇ : ಶ್ರೀ ಶ್ರೀನಿವಾಸಾಚಾರ್ಯ |
| ೨) ವೈಷ್ಣವಾಚಾರ ಪದ್ಧತಿ | ಲೇ : ಶ್ರೀ ನಾರಾಯಣಾಚಾರ್ಯರು |
| ೩) ವಾಕ್ಯಾರ್ಥ ವಿವೃತಿಃ | ಲೇ : ಶ್ರೀ ಆಯೀ ನರಹರಿ ಆಚಾರ್ಯರು |
| ೪) ಸದಾಚಾರ ಸ್ಮೃತಿ ವ್ಯಾಖ್ಯಾ : | ಶ್ರೀ ನರಸಿಂಹಾಚಾರ್ಯ ಭಲಾರಿ |
| ೫) ಶ್ರೀನಿವಾಸ ಭಟ್ಟೀಯಾ : | ಶ್ರೀ ಶ್ರೀನಿವಾಸ ಭಟ್ಟರು |
| ೬) ಭಾವ ಪ್ರಬೋಧಿನೀ : | ಶ್ರೀ ನರಹರಿ ಆಚಾರ್ಯರು |
| ೭) ಆನ್ಹಿಕ ಕೌಸ್ತುಭ : | ಶ್ರೀ ಶ್ರೀನಿವಾಸ ತೀರ್ಥರು |
| ೮) ಸದಾಚಾರ ಸ್ಮೃತಿ ವ್ಯಾಖ್ಯಾನ : | ಶ್ರೀ ಯಾದವಾರ್ಯರು |
| ೯) ಸದಾಚಾರ ಸ್ಮೃತಿ ಟೀಕಾ : | ಶ್ರೀ ಪಾಂಶ್ರಿ ಶ್ರೀನಿವಾಸಾಚಾರ್ಯ |
| ೧೦) ಸದಾಚಾರ ಸ್ಮೃತಿ ವ್ಯಾಖ್ಯಾ : | ಶ್ರೀ ನಾರಾಯಣಾಚಾರ್ಯ ಬಲ್ಲಾಳ |

# ತಂತ್ರಸಾರ

## ಲೇಖಕರು : ಶ್ರೀ ಮಧ್ವಾಚಾರ್ಯರು

## ತಂತ್ರಸಾರದ ಟೀಕಾ ಟಿಪ್ಪಣಿಗಳು

| ಗ್ರಂಥಗಳು | ಲೇಖಕರು |
|---|---|
| ೧) ಪದ್ಯ ಮಾಲಾ : | ಶ್ರೀ ಜಯತೀರ್ಥರು |
| ೨) ಸುಮತೀಂದ್ರ ತೀರ್ಥೀಯಾ : | ಶ್ರೀ ಸುಮತೀಂದ್ರ ತೀರ್ಥರು |
| ೩) ತಮ್ಮಣೀಯಾ : | ಶ್ರೀ ತಮ್ಮಣಾಚಾರ್ಯರು |
| ೪) ಭಲಾರಿ ಟೀಕಾ ತಂತ್ರ ಸಾರ ಸಂಗ್ರಹ : | ಶ್ರೀ ಶೇಷಾಚಾರ್ಯ ಭಲಾರಿ |
| ೫) ಪದಭಾವ ಪ್ರಬೋಧಿನೀ : | ಶ್ರೀ ವೇದವ್ಯಾಸ ಸೂರಿಗಳು |
| ೬) ವೆಂಕಟಪತೀಯಾ : | ಶ್ರೀನಿವಾಸ ತೀರ್ಥರ ಶಿಷ್ಯ ವೆಂಕಟಪತಿ ಪಂಡಿತರು |
| ೭) ಶರ್ಕರಾ : | ಶ್ರೀ ಶ್ರೀನಿವಾಸಾಚಾರ್ಯರು |
| ೮) ತಂತ್ರಸಾರ ಟೀಕಾ : | ಶ್ರೀ ವಾದಿರಾಜ ತೀರ್ಥರು |
| ೯) ಮಂತ್ರೋದ್ಧಾರ : | ಶ್ರೀ ಶ್ರೀನಿವಾಸಾಚಾರ್ಯ ಬಿದರಳ್ಳಿ |
| ೧೦) ತಂತ್ರಸಾರ ವ್ಯಾಖ್ಯಾ : | ಶ್ರೀ ಗಂಗೋದ ಮಿಶ್ರ |
| ೧೧) ತಂತ್ರಸಾರ ವ್ಯಾಖ್ಯಾ : | ಶ್ರೀ ವೇದವೇದ್ಯತೀರ್ಥ |
| ೧೨) ತತ್ವಕಣಿಕಾ : | ಶ್ರೀ ರಘುನಾಥತೀರ್ಥ (ವ್ಯಾಸರಾಜ ಮಠ) |
| ೧೩) ತಂತ್ರಸಾರ ವ್ಯಾಖ್ಯಾನ : | ಶ್ರೀ ಸುವ್ರತೀಂದ್ರ ತೀರ್ಥ (ರಾಯರ ಮಠ) |
| ೧೪) ತಂತ್ರಸಾರ ವ್ಯಾಖ್ಯಾ : | ಶ್ರೀ ವ್ಯಾಕರಣ ಸುಬ್ಬರಾಯಾಚಾರ್ಯ ಶ್ರೀಮುಷ್ಣಂ |

# ಜಯತೀರ್ಥರ ಗ್ರಂಥಗಳ ಮೇಲಿನ ಟಿಪ್ಪಣಿಗಳು

## ತತ್ವ ಪ್ರಕಾಶಿಕಾ

**ಲೇಖಕರು : ಶ್ರೀ ಜಯತೀರ್ಥರು**

| | ಗ್ರಂಥಗಳು | ಲೇಖಕರು |
|---|---|---|
| ೧) | ತಾತ್ಪರ್ಯ ಚಂದ್ರಿಕಾ : | ಶ್ರೀ ವ್ಯಾಸರಾಜ ತೀರ್ಥರು |
| ೨) | ಭಾವಬೋಧ : | ಶ್ರೀ ರಘೂತ್ತಮ ತೀರ್ಥರು |
| ೩) | ಗುರ್ವರ್ಥದೀಪಿಕಾ : | ಶ್ರೀ ವಾದಿರಾಜ ತೀರ್ಥರು |
| ೪) | ಭಾವದೀಪ : | ಶ್ರೀ ರಾಘವೇಂದ್ರ ತೀರ್ಥರು |
| ೫) | ಅಭಿನವ ಚಂದ್ರಿಕಾ : | ಶ್ರೀ ಸತ್ಯನಾಥ ತೀರ್ಥರು |
| ೬) | ಶೇಷ ತಾತ್ಪರ್ಯ ಚಂದ್ರಿಕಾ : | ಶ್ರೀ ರಘುನಾಥ ತೀರ್ಥರು (ವ್ಯಾಸರಾಜ ಮಠ) |
| ೭) | ಭಾವ ರತ್ನ ಕೋಶ : | ಶ್ರೀ ಸುಮತೀಂದ್ರ ತೀರ್ಥರು |
| ೮) | ತತ್ವ ಪ್ರಕಾಶಿಕಾ ಸಾರ : | ಅಜ್ಞಾತ |
| ೯) | ತತ್ವ ಪ್ರಕಾಶಿಕಾ ವ್ಯಾಖ್ಯಾ : | ಶ್ರೀ ಸತ್ಯಪ್ರಿಯ ತೀರ್ಥರು |
| ೧೦) | ತತ್ವ ಪ್ರಕಾಶಿಕಾ ಟಿಪ್ಪಣೀ (ಅನುಪಲಬ್ಧ) : | ಶ್ರೀ ಬ್ರಹ್ಮಣ್ಯ ತೀರ್ಥರು |
| ೧೧) | ಚಂದ್ರಿಕಾ ಬಿಂದು : | ಶ್ರೀ ಸತ್ಯಪ್ರಿಯ ತೀರ್ಥರು (ಉತ್ತರಾದಿ ಮಠ) |
| ೧೨) | ಚಂದ್ರಿಕಾ ಟಿಪ್ಪಣೀ : | ಶ್ರೀ ಶೇಷದಾಸಾರ್ಯ ಆದ್ಯ |
| ೧೩) | ಚಂದ್ರಿಕಾ ವ್ಯಾಖ್ಯಾನ : | ಶ್ರೀ ಸುಬ್ರಹ್ಮಣ್ಯಾಚಾರ್ಯ ಗುಜ್ಜಾರಿ |
| ೧೪) | ಶರದಾಗಮ ಚಂದ್ರಿಕಾ ಟಿಪ್ಪಣೀ : | ಶ್ರೀ ವ್ಯಾಸ ತತ್ವಜ್ಞರು |
| ೧೫) | ದ್ವೈತ ಭೂಷಣಂ (ಚಂದ್ರಿಕಾ ಖಂಡನ ಖಂಡನ) : | ಶ್ರೀ ಕಾಶೀ ತಿಮ್ಮಣ್ಣಾಚಾರ್ಯ |
| ೧೬) | ಚಂದ್ರಿಕಾ ಭೂಷಣಂ : | ಶ್ರೀ ಕೊಚ್ಚಿ ರಂಗಪ್ಪಾಚಾರ್ಯ |

೧೭) ಚಂದ್ರಿಕಾ ಪ್ರಕಾಶ ಪ್ರಸರ : ಶ್ರೀ ಗೌಡಗಿರಿ ವೆಂಕಟರಮಣಾಚಾರ್ಯ
೧೮) ಅದ್ವೈತ ದೀಪಿಕಾ ವಾತಾಗಮಃ ,, ,,
೧೯) ಚಂದ್ರಿಕಾ ಮಂಡನಂ : ಶ್ರೀ ಸತ್ಯಧ್ಯಾನ ತೀರ್ಥರು
೨೦) ಪ್ರಭಾ ಪ್ರಸರ : ಶ್ರೀ ಅನಂತಾಚಾರ್ಯ ಗಲಗಲಿ, ಸೊಂಡೂರು
೨೧) ತಾತ್ಪರ್ಯ ಚಂದ್ರಿಕಾ
ನ್ಯಾಯ ವಿವರಣಂ : ಶ್ರೀ ವರಖೇಡಿ ತಿಮ್ಮಣ್ಣಾಚಾರ್ಯ
೨೨) ತತ್ವ ಪ್ರಕಾಶಿಕಾ ಟಿಪ್ಪಣೀ : ಶ್ರೀ ಬಿದರಳ್ಳಿ ಶ್ರೀನಿವಾಸ ತೀರ್ಥರು
೨೩) ವಾಕ್ಯಾರ್ಥ ಮಂಜರೀ : ಶರ್ಕರಾ ಶ್ರೀನಿವಾಸ ತೀರ್ಥರು
೨೪) ತತ್ವ ಪ್ರಕಾಶಿಕಾ ಟಿಪ್ಪಣೀ : ಶ್ರೀ ವಿಜಯೀಂದ್ರ ತೀರ್ಥರು
೨೫) ಗುರುರಾಜೀಯಾ : ಶ್ರೀ ಪಾಂಡುರಂಗೀ ಕೇಶವಾಚಾರ್ಯರು
೨೬) ಅನಂತ ಭಟ್ಟೀಯಾ : ಶ್ರೀಮುಷ್ಣಂ ಅನಂತಾಚಾರ್ಯ
೨೭) ಕುಂಡಲಗಿರೀಯಾ : ಶ್ರೀ ಕುಂಡಲಗಿರಿ ಆಚಾರ್ಯರು
೨೮) ಭಾವ ಪ್ರದೀಪ ಭಾಷ್ಯ ವ್ಯಾಖ್ಯಾನ : ಶ್ರೀ ಚಿಕ್ಕೋಡಿ ಭಗವಂತರಾಯರು
೨೯) ಸುಬೋಧ ಚಂದ್ರಿಕಾ : ಶ್ರೀ ವರದಾಚಾರ್ಯ ಆದ್ಯ
೩೦) ನಯ ದರ್ಪಣ : ಶ್ರೀ ವಾದೀಂದ್ರ ತೀರ್ಥರು
೩೧) ತತ್ವ ಸುಬೋಧಿನೀ : ಶ್ರೀ ಪಾಂಡುರಂಗೀ ಶ್ರೀನಿವಾಸಾಚಾರ್ಯ
೩೨) ಪ್ರಮೇಯ ಮುಕ್ತಾವಲೀ : ತಾಮ್ರಪರ್ಣೀ ವಿಠ್ಠಲಾಚಾರ್ಯರ ಪುತ್ರ
ಶ್ರೀನಿವಾಸಾಚಾರ್ಯ
೩೩) ತತ್ವ ಪ್ರಕಾಶಿಕಾ ಟಿಪ್ಪಣೀ : ಶ್ರೀ ಛಲಾರಿ ಸಂಕರ್ಷಣಾಚಾರ್ಯ
೩೪) ವಾಕ್ಯಾರ್ಥ ಮುಕ್ತಾವಲೀ : ಶ್ರೀ ತಾಮ್ರಪರ್ಣೀ ಶ್ರೀನಿವಾಸಾಚಾರ್ಯ
೩೫) ತತ್ವ ಪ್ರಕಾಶಿಕಾ
ಟೀಕಾ ಟಿಪ್ಪಣೀ ಸಾರೋದ್ಧಾರ: ಶ್ರೀಪತಿ (ಮಹಿಷಿ) ವ್ಯಾಸರಾಯಾಚಾರ್ಯ
೩೬) ತತ್ವ ಪ್ರಕಾಶಿಕಾ ಸಾರ : ಶ್ರೀಧರಾಚಾರ್ಯ ಆಪಸಂಗಿ ಫೀಲಂಗಾ

# ಸ್ವತಂತ್ರ ಗ್ರಂಥಗಳು

| ಗ್ರಂಥಗಳು | ಲೇಖಕರು |
|---|---|
| ೧) ಉಷಾಹರಣ : | ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು |
| ೨) ನರಸಿಂಹ ಸ್ತುತಿ : | ,, ,, |
| ೩) ವಾಯು ಸ್ತುತಿ : | ,, ,, |
| ೧) ಸಂಪ್ರದಾಯ ಪದ್ಧತಿ : | ಶ್ರೀ ಹೃಷೀಕೇಶ ತೀರ್ಥರು |
| ೧) ಸನ್ಯಾಸ ಪದ್ಧತಿ | ಶ್ರೀ ವಿಷ್ಣು ತೀರ್ಥರು |
| ೨) ಶ್ರವಣ ದ್ವಾದಶೀ ನಿರ್ಣಯ : | ,, ,, |
| ೩) ರಮೇಶ ಸ್ತುತಿ : | ,, ,, |
| ೪) ಮಧ್ವ ವಿಜಯ ಪ್ರಮೇಯ ಮಾಲಿಕಾ : | ,, ,, |
| ೫) ರಮಾ ಸ್ತೋತ್ರ : | ,, ,, |
| ೧) ಸಂಗ್ರಹ ರಾಮಾಯಣ : | ಶ್ರೀ ನಾರಾಯಣ ಪಂಡಿತಾಚಾರ್ಯರು |
| ೨) ಮಧ್ವವಿಜಯ (ಕಾವ್ಯ) : | ,, ,, |
| ೩) ಅಣುಮಧ್ವ ವಿಜಯ (ಕಾವ್ಯ) | ,, ,, |
| ೪) ಮಧ್ವವಿಜಯ ಭಾವಪ್ರಕಾಶಿಕಾ : (ಮಧ್ವವಿಜಯ ಟಿಪ್ಪಣೀ) | ,, ,, |
| ೫) ಮಣಿ ಮಂಜರೀ (ಕಾವ್ಯ) | ,, ,, |
| ೬) ಶುಭೋದಯ (ಕಾವ್ಯ) | ,, ,, |
| ೭) ಪಾರಿಜಾತ ಹರಣ (ಕಾವ್ಯ) | ,, ,, |
| ೮) ಯೋಗ ದೀಪಿಕಾ (ಆಚಾರ ವಿಭಾಗ) | ,, ,, |
| ೯) ಶಿವ ಸ್ತುತಿ | ,, ,, |
| ೧೦) ಅಣು ವಾಯುಸ್ತುತಿ | ,, ,, |
| ೧೧) ಲಘು ತಾರತಮ್ಯ ಸ್ತೋತ್ರ | ,, ,, |
| ೧೨) ನರಸಿಂಹ ಸ್ತುತಿ | ,, ,, |
| ೧೩) ತಿಥಿತ್ರಯ ನಿರ್ಣಯ | ,, ,, |
| ೧೪) ಅಂಶಾಂಶಿ ನಿರ್ಣಯ | ,, ,, |

| | ಗ್ರಂಥಗಳು | ಲೇಖಕರು |
|---|---|---|
| ೧) | ಮುಕುಂದ ಸ್ತೋತ್ರ | ಕಲ್ಯಾಣೀ ದೇವಿ |
| ೨) | ತಾರತಮ್ಯ ಸ್ತೋತ್ರ | ,, |
| ೩) | ಅಣುಮಧ್ವ ವಿಜಯ | ,, |
| ೪) | ಅಣುವಾಯುಸ್ತುತಿ | ,, |
| ೧) | ವೇದ ಸಾರ ಸ್ತೋತ್ರ | ಶ್ರೀ ಅಕ್ಷೋಭ್ಯತೀರ್ಥರು |
| ೨) | ಮಧ್ವ ತತ್ವ ಸಾರ ಸಂಗ್ರಹ | ,, |
| ೧) | ವೇದತ್ರಯ ವ್ಯಾಖ್ಯಾನ | ಶ್ರೀ ಮಾಧವತೀರ್ಥರು |
| ೧) | ಹರಿಗಾಥಾ ಸ್ತುತಿ | ಶ್ರೀ ಕಮಲಾಕ್ಷ ತೀರ್ಥರು (ಶ್ರೀ ಪೇಜಾವರಮಠ) |
| ೧) | ರಾಮಸಂದೇಶ (ಕಾವ್ಯ) | ಶ್ರೀ ರಾಜರಾಜೇಶ್ವರ ತೀರ್ಥರು (ಫಲಿಮಾರು ಮಠ) |
| ೨) | ಮಂಗಳಾಷ್ಟಕ | ,, ,, |
| ೧) | ವಾದಾವಲಿ | ಶ್ರೀ ಟೀಕಾಕೃತ್ಪಾದರು (ಜಯತೀರ್ಥರು) |
| ೨) | ಪ್ರಮಾಣ ಪದ್ಧತಿ | ,, |
| ೩) | ಪದ್ಯಮಾಲಾ | ,, |
| ೪) | ಶತಾಪರಾಧ ಸ್ತೋತ್ರ | ,, |
| ೫) | ಅಧ್ಯಾತ್ಮ ತರಂಗಿಣಿ | ,, |
| ೧) | ಪದರತ್ನಾವಲಿ (ಭಾಗವತ ವ್ಯಾಖ್ಯಾನ) | ಶ್ರೀ ವಿಜಯಧ್ವಜ ತೀರ್ಥರು |
| ೨) | ದಶಾವತಾರ ಹರಿಗಾಥಾ (ಸ್ತೋತ್ರ) | (ಪೇಜಾವರ ಮಠ) |
| ೩) | ಕೃಷ್ಣಾಷ್ಟಕಂ ,, | ,, |
| ೧) | ಗೀತಾವಿವೃತ್ತಿ | ಶ್ರೀ ವಿದ್ಯಾಧಿರಾಜತೀರ್ಥರು (ಉತ್ತರಾದಿ ಮಠ) |
| ೨) | ವಿಷ್ಣುಸಹಸ್ರನಾಮ (ಭಾಷ್ಯ) | ,, |
| ೧) | ಗೀತಾವಿವೃತ್ತಿ | ಶ್ರೀ ವಿದ್ಯಾಧಿರಾಜತೀರ್ಥರು (ಗೌಡಸಾರಸ್ವತ ಮಠ) |
| ೧) | ವಾದರತ್ನಾವಲಿ | ಶ್ರೀ ವಿಷ್ಣುದಾಸಾಚಾರ್ಯರು |
| ೨) | ವಿವರಣ ವಿಡಂಬನಂ | ,, |
| ೩) | ಖಂಡನಖಂಡನಂ | ,, |
| ೧) | ಜಯತೀರ್ಥ ವಿಜಯ (ಬೃಹತ್ ಮತ್ತು ಅಣುಕಾವ್ಯ) | ಶ್ರೀ ವ್ಯಾಸತೀರ್ಥರು (ಜಯತೀರ್ಥರ ಶಿಷ್ಯ ಬಿಡಿ ಸನ್ಯಾಸಿಗಳು) |
| ೧) | ಕವಿಕರ್ಣಾಮೃತ (ವಾಯು ಸ್ತುತಿ ಟೀಕಾ) | ಶ್ರೀ ವೇದಾತ್ಮ ತೀರ್ಥರು (ಸೋದಾಮಠ) |

ಕನ್ನಡದಲ್ಲಿ ಆದಷ್ಟು ಮಧ್ವಮತ ಪ್ರಸಾರಕ ಸಾಹಿತ್ಯವು ಸಂಸ್ಕೃತವನ್ನು ಬಿಟ್ಟು ಉಳಿದ ಯಾವದೇ ಭಾರತೀಯ ಭಾಷೆಯಲ್ಲಿ ಆಗಿಲ್ಲ.

ಮುಖ್ಯವಾಗಿ ಕನ್ನಡದಲ್ಲಿ ಶ್ರೀ ಮಧ್ವಾಚಾರ್ಯರ ಎಲ್ಲ ಗ್ರಂಥಗಳನ್ನು ಭಾಷಾಂತರಿಸಿ, ಪ್ರಕಟಿಸಿ, ಪ್ರಚಾರಗೈದ ಸಂಪೂರ್ಣ ಶ್ರೇಯಸ್ಸು, ಉಡುಪಿಯ ಮಧ್ವ ಮುನಿ ಸೇವಾ ಸಂಘಕ್ಕೆ ಸಲ್ಲುತ್ತದೆ. ಶ್ರೀ ಅಗ್ರಹಾರ ನಾರಾಯಣ ತಂತ್ರಿಗಳಂಥ ವಿದ್ವಾಂಸರಿಂದ ಆಚಾರ್ಯರ ಗ್ರಂಥಗಳನ್ನೆಲ್ಲ ಇಡಿಕಿಡಿಯಾಗಿ ಭಾಷಾಂತರಿಸಿದ ಈ ಸಂಘದ ಪ್ರಕಟನೆಗಳಲ್ಲಿ ಬಹಳ ಕೃತಿಗಳು ಪುನಃ ಪರಿಷ್ಕರಣ ಪ್ರಕಾಶನಕ್ಕೆ ಅರ್ಹವಾಗಿವೆ.

ದಾವಣಗೇರಿಯ ಸರ್ವಜ್ಞ ಸೇವಾ ಸಂಘದವರೂ, ಪರಿಮಳ ಪ್ರಕಾಶನ ಮಂದಿರ, ಗುರುಕೃಪಾ ಗ್ರಂಥಮಾಲಾ, ಮಿಂಚಿನಬಳ್ಳಿ, ರಾಮಕೃಷ್ಣಪ್ಪ ದ್ವೈತ ವೇದಾಂತ ಪಾಠಶಾಲಾ, ಬೆಂಗಳೂರಿನ ಮಾಧ್ವ ಸಂಘಗಳೂ, ತತ್ವವಾದ ಪ್ರಕಾಶನ ಮಾಲಾ ವೇದಪುರಾಣ ಸಾಹಿತ್ಯ ಮಾಲಾ, ಉಡುಪಿಯ ಆನಂದತೀರ್ಥ ಗ್ರಂಥಮಾಲಾ, ಮುಂತಾದ ಅನೇಕ ಸಂಘ ಸಂಸ್ಥೆಗಳೂ ಮಾಧ್ವ ವಾಙ್ಮಯವನ್ನು ಕನ್ನಡಿಸುವ, ಮುದ್ರಿಸುವ, ಪ್ರಚುರ ಪಡಿಸುವ ಕಾರ್ಯವನ್ನು ಮಾಡುತ್ತಲಿವೆ.

ಶ್ರೀ ಗೋರೇಬಾಳ ಹನುಮಂತರಾಯರು ಪ್ರಾರಂಭಿಸಿದ ವರದೇಂದ್ರ ಸಾಹಿತ್ಯ ಮಾಲಾದವರು ಕನ್ನಡ ಹರಿದಾಸ ಸಾಹಿತ್ಯ ಪ್ರಸಾರ ಕಾರ್ಯದಲ್ಲಿ ಮಾಡಿದ ಸಾಹಸ ಮತ್ತು ಸಾಧಿಸಿದ ಸಿದ್ಧಿಗಳು ಅನುಪಮವಾಗಿದ್ದು ಸರ್ವ ಶ್ಲಾಘ್ಯವೂ, ಚಿರಸ್ಮರಣೀಯವೂ ಆಗಿರುತ್ತವೆ. ಈ ದಿಶೆಯಲ್ಲಿ ಉಡುಪಿಯ ಪಾವಂಜೆ ಗುರುರಾವ, ಬೆಂಗಳೂರಿನ ಹರಿದಾಸ ಭಾರತಿ, ಸುಬೋಧ ಕಾರ್ಯಾಲಯ, ಪುರಂದರದಾಸರ ೪೦೦ ನೇ ವರ್ಷದ ಉತ್ಸವ ಸಮಿತಿ ಧಾರವಾಡ ಮುಂತಾದ ಅನೇಕ ಸಂಘ ಸಂಸ್ಥೆಗಳೂ ದಾಸರ ಕೃತಿಗಳನ್ನು ಬೆಳಕಿಗೆ ತಂದು ಗ್ರಂಥ ರೂಪದಲ್ಲಿ ಪ್ರಕಟಪಡಿಸಿದವು.

ಪಂಡಿತ ವೈ. ಹೊಳವನಹಳ್ಳಿ ಶೇಷಾಚಾರ್ಯ, ವೈ. ಪುಂಗನೂರ ರಾಘವೇಂದ್ರಾಚಾರ್ಯ, ವೈ. ಡಿ. ವಾಸುದೇವಾಚಾರ್ಯ, ವೈ. ಸವಣೂರ ಗೋವಿಂದ ರಾವ, ವೈ. ಸಿ. ಎಂ. ಪದ್ಮನಾಭಾಚಾರ್ಯ, ವೈ. ಸಿ. ಆರ್. ಕೃಷ್ಣರಾವ, ವೈ. ಆಲೂರ ವೆಂಕಟರಾವ ಮುಂತಾದವರು ಅಲ್ಲದೇ ಈಗಿರುವ ಶ್ರೀ ಕೆ. ಟಿ ಪಾಂಡುರಂಗಿ, ಶ್ರೀ ಎಚ್. ಸುಬ್ಬರಾವ, ಶ್ರೀ ಬಿ. ಭೀಮರಾವ, ಶ್ರೀ ಬಿ. ಅಕ್ಷೋಭ್ಯಾಚಾರ್ಯ, ಶ್ರೀ ವೆಂಕಟೇಶಾಚಾರ್ಯ, ಶ್ರೀ ಜಾಲೀಹಾಳ ಕೇಶವಾಚಾರ್ಯ, ಶ್ರೀ ರಾಘವೇಂದ್ರಾಚಾರ್ಯ ಪಂಚಮುಖಿ, ಶ್ರೀ ನಂದಗುಡಿ ಕೃಷ್ಣಮೂರ್ತಿ ಆಚಾರ್ಯ, ಶ್ರೀ ಬನ್ನಂಜಿ ಗೋವಿಂದಾಚಾರ್ಯ, ಶ್ರೀ ಕೃಷ್ಣಸ್ವಾಮಿರಾವ, ಶ್ರೀ ಕೆ. ಎಂ. ಕೃಷ್ಣಮೂರ್ತಿರಾವ ಮುಂತಾದ ಅನೇಕ ಸಂಸ್ಕೃತ ಕನ್ನಡ ಉಭಯ ಭಾಷಾ ಪ್ರಭುತ್ವವಶ್, ಪ್ರೇಕ್ಷಾ

ವತ್ ಪಂಡಿತರು ಮಾಧ್ವ ಗ್ರಂಥಗಳ ಭಾಷಾಂತರ ಅಥವಾ ಭಾವ ಸೌರಭದಿಂದ ಸೂಸುವ ಸ್ವತಂತ್ರ ಕೃತಿಗಳಿಂದ ವಿಮರ್ಶಾತ್ಮಕ ಪ್ರಬಂಧಗಳಿಂದ ಕನ್ನಡ ವಾಙ್ಮಯ ಭಾಂಡಾರವನ್ನು ಘನ್ನ-ಸುಸಂಪನ್ನವಾಗಿ ಮಾಡಿದ್ದಾರೆ.

ಈ ದಿಸೆಯಲ್ಲಿ ಪ್ರಾತಃಸ್ಮರಣೀಯರಾದ ಶ್ರೀ ಸತ್ಯಧ್ಯಾನ ತೀರ್ಥರು ಮಾಡಿದ ಕಾರ್ಯವು ಕನ್ನಡ ವಾಙ್ಮಯದ ಆಧ್ಯಾತ್ಮಿಕ ಇತಿಹಾಸದಲ್ಲಿಯೇ ಬಂಗಾರದ ಬಳ್ಳಿಗಳಲ್ಲಿ ಬರೆದಿಡುವಂಥದಿದೆ. ಆಚಾರ್ಯರ ಸರ್ವಮೂಲ ಹಾಗೂ ಅದರ ಮೇಲಿನ ಎಲ್ಲ ಟೀಕಾ-ಟಿಪ್ಪಣಿಗಳನ್ನೂ ಕಡೆದು ವಿಷಯವನ್ನು ಮಥಿಸಿ, ಪ್ರಮೇಯ ಪಾರಿಜಾತಗಳನ್ನೇ ತೆಗೆದು ಅದರ ಪರಿಮಳವನ್ನೆಲ್ಲ ಕನ್ನಡದಲ್ಲಿ ಸೂಸುವಂತೆ ಮಾಡಿದ್ದಾರೆ ಆ ಪುಣ್ಯಾತ್ಮರು. "ಬಾಲಸಂಘ ಮಪಿ ಬೋಧಯದ್ಭೃಶಂ" ಎಂಬಂತೆ ತಿಳಿ-ತಿಳಿಯಾದ ಸವಿಗನ್ನಡ ಶೈಲಿಯಲ್ಲಿ ಕಠಿಣಾತ್-ಕಠಿಣತರವಾದ ವೇದಾಂತ ಶಾಸ್ತ್ರಗಳನ್ನೆಲ್ಲ ಎರಕ ಹಾಕಿ, ಅನೇಕ ಕನ್ನಡ ಸತ್‌ಪ್ರಬಂಧಗಳನ್ನು ಬರೆದಿಟ್ಟಿದ್ದಾರೆ.

ಜನಸಾಮಾನ್ಯರಿಗೆ ತಿಳಿಯಲಿ ಎಂಬ ಉದ್ದೇಶದಿಂದ ಅವರು ಕೋರ್ಟ ಕಚೇರಿ ಭಾಷೆಯಲ್ಲಿ ಬರೆದ— "ಸಿವಿಲ್ ಸೂಟ" ಎಂಬ ೫ ಗ್ರಂಥಗಳೂ, ಸಭಾಸಾರ ಸಂಗ್ರಹ, ಗೀತೋಪನ್ಯಾಸ, ಗೀತಾಪ್ರತಿಪದಾರ್ಥ ಚಂದ್ರಿಕಾ, ದ್ವೈತ ತತ್ವ ವಿಮರ್ಶೆ ಮುಂತಾದ ಅನೇಕಾನೇಕ ಗ್ರಂಥಗಳು ಕನ್ನಡದ ವ್ಯಾಸತ್ರಯಗಳಂತೆ, ದೇಶಭಾಷೆಯ ದಿವ್ಯ ಸುಧಾ ಗ್ರಂಥದಂತೆ ಅತ್ಯುಪಯುಕ್ತವೂ, ತತ್ವಬೋಧಕವೂ ಆಗಿರುತ್ತವೆ.

ಇತ್ತೀಚೆಗೆ ಶ್ರೀ ಪೇಜಾವರ ಶ್ರೀಪಾದಂಗಳವರು— ಶ್ರೀ ಮಧ್ವಾಚಾರ್ಯರ ಆಶಯಕ್ಕೆ ಅನುಗುಣವಾಗಿ "ಗೀತಾ ಸಾರೋದ್ಧಾರ" ಎಂಬ ಗ್ರಂಥವನ್ನು ಬರೆದು, ಕನ್ನಡದ ಆಧ್ಯಾತ್ಮಿಕ ಪ್ರಪಂಚಕ್ಕೆ ತಾತ್ವಿಕ ಶ್ರೀಮಂತಿಕೆಯನ್ನು ತಂದುಕೊಟ್ಟಿದ್ದಾರೆ.

ಶ್ರೀ ಶ್ರೀ ಭಂಡಾರಕೇರಿ ಶ್ರೀಪಾದಂಗಳವರೂ— ಸಭಾ ಸಾರೋದ್ಧಾರ, ಗಾಯತ್ರೀ ಗಾಂಭೀರ್ಯ, ಈಶಾವಾಸ್ಯೋಪನಿಷತ್ತು, ಖಂಡನತ್ರಯ ಭಾಷಾಂತರ ಮುಂತಾದ ಅನೇಕ ಗ್ರಂಥಗಳನ್ನು ಬರೆದು ಕನ್ನಡದ ತತ್ವ ಬುಭುತ್ಸುಗಳಿಗೆ ಪರಮೋಪಕಾರ ಗೈದಿದ್ದಾರೆ.



# ಪರಿಶಿಷ್ಟ

## ಶ್ರೀ ಕಾಣ್ವಮಠದ ಚರಿತ್ರೆ

### ಶ್ರೀಮನ್ಮಾಧವ ತೀರ್ಥರು

ಇವರು ಕಾಣ್ವಶಾಖೀಯ ಬ್ರಾಹ್ಮಣರಲ್ಲಿ ಪರಂಪರಾಗತವಾದ ಮಧ್ವ ಮತ ಪರಂಪರೆಯನ್ನು ಪುನರುಜ್ಜೀವನಗೊಳಿಸಿ ಪ್ರತ್ಯೇಕವಾಗಿ ಶ್ರೀ ಕಾಣ್ವ ಮಠವನ್ನು ಸ್ಥಾಪಿಸಿವ ಪ್ರಪ್ರಥಮ ಗುರುಗಳು. ಇವರು ಉಡುಪಿಯ ಶಿರೂರ ಮಠದ ಶ್ರೀ ಲಕ್ಷ್ಮೀ ಮನೋಹರ ತೀರ್ಥ ಶ್ರೀಪಾದಂಗಳವರಿಂದ ಆಶ್ರಮವನ್ನು ಪಡೆದು ಕಾಣ್ವ ಶಾಖೀಯ ಜನರಲ್ಲಿ ದ್ವೈತ ಮತ ಪ್ರಸಾರಕ್ಕಾಗಿ ಶಾಲಿವಾಹನ ಶಕೆ ೧೭೧೮ ರಲ್ಲಿ ಶ್ರೀ ಕಾಣ್ವಮಠವನ್ನು ಸ್ಥಾಪಿಸಿದರು. ಶ್ರೀ ಶಿರೂರ ಮಠದ ಶ್ರೀ ಲಕ್ಷ್ಮೀಮನೋಹರ ತೀರ್ಥ ಶ್ರೀಪಾದಂಗಳವರಿಂದ ಸಂಪ್ರಾಪ್ತವಾದ ಶ್ರೀ ವಿಠ್ಠಲಕೃಷ್ಣ ದೇವರೇ ಇವರ ಉಪಾಸ್ಯ ದೇವತೆ. ಪೂರ್ವದಿಂದಲೂ ಶ್ರೀ ಶೇಷರೂಪಿ ಪರಮಾತ್ಮನನ್ನು ಆರಾಧನ ಮಾಡಿ ತಪಸ್ಸಿನಿಂದ ಆತನನ್ನು ಒಲಿಸಿಕೊಂಡವರಾದ ಶ್ರೀಮನ್ಮಾಧವತೀರ್ಥ ಶ್ರೀ ಪಾದಂಗಳವರು ಕಾಣ್ವ ಮಠದ ಮೇಲೆ ಅಧಿಷ್ಠಿತವಾದ ಈ ದಿನವು ಸುವರ್ಣಾಕ್ಷರ ಗಳಿಂದ ಬರೆದಿಡಲು ಯೋಗ್ಯವಾದ ದಿನವೆಂದು ಮನದಂದು ಸುತ್ತಲಿನ ಜನರು ಪರಮ ಸಂತೋಷಕ್ಕೆ ಪ್ರಾಪ್ತರಾದರು.

ಶ್ರೀಗಳವರು ಕೃಷ್ಣಾ, ತುಂಗಾ ತೀರ ಪ್ರದೇಶಗಳಲ್ಲಿ ಪ್ರವಾಸ ಕೈಕೊಂಡು ಶ್ರೀಮದ್ವಿಠ್ಠಲಕೃಷ್ಣ ದೇವರ ಸಾಲಂಕೃತ ಪೂಜೆಗೈದು ಜನರ ಮನಸ್ಸಿಗೆ ಆನಂದ ವನ್ನುಂಟುಮಾಡುತ್ತ, ದ್ವೈತ ಮತ ದುಂದುಭಿಯನ್ನು ಎಲ್ಲಡೆಯಲ್ಲಿ ಮೊಳಗಿಸುತ್ತ ಪ್ರವಾಸ ಕ್ರಮದಲ್ಲಿ ಒಂದು ಸಲ ಶ್ರೀಗಳವರ ಸವಾರಿಯು ಸುರಪುರ ಗಾಮಕ್ಕೆ ಪ್ರಾಪ್ತವಾಯಿತು. ಅಲ್ಲಿ ಪೂರ್ವ ಕಾಲದಿಂದಲೂ ವಿಷ್ಣುಭಕ್ತರಾದ ರಾಜಾ ಕೃಷ್ಣಪ್ಪ ನಾಯಿಕ ಸರದಾರರ ಕರೆಗೆ ಓಗೊಟ್ಟು ಸಕಲ ರಾಜ ವೈಭವದೊಂದಿಗೆ ಅವರಿಂದ ಪಾದಪೂಜೆ ತೆಗೆದುಕೊಂಡು ಅವರ ಮೇಲೆ ಪರಮಾನುಗ್ರಹ ಮಾಡಿದರು. ಸಂತುಷ್ಟ ರಾದ ರಾಜರು ಕೆಲವು ಉಂಬಳಿಗಳನ್ನು ಹಾಕಿ ಕೊಡಲು ಅಪೇಕ್ಷಿಸಿದರೂ ಪರಮ ತ್ಯಾಗಿಗಳಾದ ಶ್ರೀಗಳವರು ಆ ರಾಜರ ಸಂಪತ್ತಿನ ದಾನಕ್ಕೆ ಮನಸ್ಸು ಮಾಡದೇ ತಮ್ಮ ನಿಸ್ಪೃಹ ವೃತ್ತಿಯನ್ನು ವ್ಯಕ್ತಮಾಡಿದರು.

ಶ್ರೀಮನ್ಮಾಧವ ತೀರ್ಥರ ಪೂರ್ವಾಶ್ರಮದ ಹೆಸರು— ವೇ|| ವೆಂಕಟೇಶಾ ಚಾರ್ಯರು. ಇವರ ವಾಸಸ್ಥಳ ಸುರಪುರವೇ ಆಗಿದೆ. ಇವರು ಮೊದಲಿನಿಂದಲೂ ಸದಾಚಾರ ಸಂಪನ್ನರೂ, ವೈದಿಕ ವಿದ್ಯಾ ನಿಷ್ಣಾತರೂ, ಶಾಸ್ತ್ರಾಧ್ಯಯನ ಅಧ್ಯಾ ಪನದಲ್ಲಿ ಪಳಗಿದವರೂ ಆಗಿದ್ದರು. ಇವರು ಇನ್ನುಳಿದ ಪ್ರಾಪಂಚಿಕ ಅಡಚಣೆಗಳನ್ನು ಹೆಚ್ಚು ಹಚ್ಚಿಕೊಳ್ಳದಿದ್ದರೂ ಹೀನ ಸ್ಥಿತಿಯಲ್ಲಿದ್ದ ಕಾಣ್ವ ಶಾಖೀಯ ಜನರ ಪರಿಸ್ಥಿತಿಯ ಚಿಂತೆಯು ಇವರನ್ನು ಯಾವಾಗಲೂ ಕೊರೆಯುತ್ತಿತ್ತು. ತಮ್ಮ ಆರಾಧ್ಯ ದೇವತೆ ಯಾದ ಶೇಷರೂಪಿ ಪರಮಾತ್ಮನ ಎದುರಿನಲ್ಲಿ ಕಾಣ್ವ ಸಮಾಜದ ಏಳಿಗೆಯನ್ನೇ ಸದಾ ಕಾಲದಲ್ಲಿ ಪ್ರಾರ್ಥಿಸುತ್ತಿದ್ದರು.

ಹೊಸದಾಗಿ ಮಠವು ಸ್ಥಾಪಿತವಾಗಿ ಸಕಲ ಜನತೆಯಲ್ಲಿ ಸದ್ವೈಷ್ಣವ ದೀಕ್ಷೆ ಯನ್ನು ಕೊಡುತ್ತಲಿರುವ ಕಾರ್ಯದಲ್ಲಿ ಅನೇಕ ಜನರಿಂದ ಅನೇಕ ತರಹದ ಅಡೆ- ತಡೆಗಳು ಬಂದೊದಗಿದರೂ ಅವುಗಳನ್ನು ತಮ್ಮ ತಪಸ್ಸಾಮರ್ಥ್ಯದ ಬಲದಿಂದ ದೂರ ಗೊಳಿಸಿ ತತ್ಕಾಲದ ಜನರನ್ನು ಚಕಿತಗೊಳಿಸಿದರು. ಸಂಪೂರ್ಣ ಕರ್ಣಾಟಕದ ತುಂಬೆಲ್ಲ ತಮ್ಮ ಮತ ಪ್ರಸಾರದ ಕಾರ್ಯವನ್ನು ನಿರ್ವಹಿಸಿ ಕೊನೆಗೆ ಶ್ರೀ ಬುದ್ದಿನ್ನಿ ದೇಸಾಯಿಯವರ ಪ್ರಾರ್ಥನೆಯ ಮೇರೆಗೆ ಭಾವಣಿ ಸಮೀಪದಲ್ಲಿರುವ ( ನೈಜಾಮ ) ಬುದ್ದಿನ್ನಿ ಎಂಬ ಗ್ರಾಮದಲ್ಲಿ ಶಾಲಿವಾಹನ ಶಕೆ ೧೭೩೩ ನೇ ಶುಕ್ಲನಾಮ ಸಂವತ್ಸರ ಚೈತ್ರ ಶುದ್ಧ ಚತುರ್ಥೀ ದಿನ ತಮ್ಮ ಐಹಿಕ ದೇಹನ್ನು ತ್ಯಜಿಸಿ ವೃಂದಾವನಸ್ಥ ರಾದರು. ಇಂದಿಗೂ ಕೂಡ ತಮ್ಮ ಪುಣ್ಯ ಪ್ರಭಾವದಿಂದ ಭಕ್ತ ಜನರ ಅಭೀಷ್ಟಗಳನ್ನು ಪೂರೈಸುತ್ತ ವಿರಾಜಮಾನರಾಗಿದ್ದಾರೆ.

## ಶ್ರೀ ವಾಮನತೀರ್ಥ ಶ್ರೀಪಾದಂಗಳವರು

ಇವರು ಶ್ರೀ ಕಾಣ್ವಮಠದ ಪರಂಪರೆಯ ಯತಿವರ್ಯರಾಗಧಿದ್ದರೂ ಮೋಕ್ಷಾರ್ಥಿ ಗಳಾದುದರಿಂದ ಶ್ರೀಮನ್ಮಾಧವತೀರ್ಥ ಶ್ರೀಪಾದಂಗಳವರಿಂದ ಯತ್ಯಾಶ್ರಮ ಸ್ವೀಕಾರ ಮಾಡಿ ತಮ್ಮ ಪರಮ ತಪಃ ಪ್ರಭಾವದಿಂದ ಜನತೆಯಲ್ಲಿ ಧರ್ಮ ಜಾಗ್ರತಿಯನ್ನು ಉಂಟು ಮಾಡಿದರು. ಇವರು ಶ್ರೀಮನ್ಮಾಧವತೀರ್ಥ ಶ್ರೀಪಾದಂಗಳವರ ಪೂರ್ವಾ ಶ್ರಮದ ಗುರುಗಳು. ಆದವಾನಿಯಲ್ಲಿಯ ವೈದಿಕ ಸತ್ಸಂಪ್ರದಾಯ ಪ್ರವರ್ತಕ ಮನೆತನದಲ್ಲಿ ಜನಿಸಿದವರು. ಇವರ ಪೂರ್ವಾಶ್ರಮದ ಹೆಸರು ಜೊಯಿಸ ಧರ್ಮಭಟ್ಟರು ಎಂದು. ಇವರು ವಿಜಯನಗರ ದೊರೆಯಾದ ದೇವರಾಯನ ಕಾಲದಲ್ಲಿ ಇದ್ದು ತಮ್ಮ ವಿದ್ವತ್ಪ್ರಚುರವಾದ ಪಾಠ ಪ್ರವಚನಗಳಿಂದ ರಾಜನಿಂದ ಇನಾಮು ಗ್ರಾಮ ಗಳನ್ನು ದೊರಕಿಸಿದ್ದರು.

ಇವರು ಯತ್ಯಾಶ್ರಮ ಸ್ವೀಕರಿಸಿದ ಕಾಲದಲ್ಲಿ ಮುಸಲ್ಮಾನ ಆಳರಸರ ಪ್ರಾಬ ಲ್ಯವು ಬಹಳವಾಗಿ ಇದ್ದಿತು. ಹಿಂದುಗಳು ತಮ್ಮ ಧರ್ಮವನ್ನು ಅನುಸರಿಸಿ ನಡೆಯು

ವದಕ್ಕೆ ಕಠಿಣವಾದ ಕಾಲ ಆದಾಗಿತ್ತು. ಶ್ರೀಗಳವರು ಆಗ ತಮ್ಮ ಧರ್ಮ ಪ್ರಭಾವದ ಅದ್ಭುತ ಚಮತ್ಕಾರಗಳಿಂದ ಮುಸಲ್ಮಾನರ ಮೇಲೆಯೂ ಪ್ರಭಾವ ಬೀಳುವಂತೆ ಮಾಡಿ ಹಿಂದೂ ಧರ್ಮದ ಏಳಿಗೆಯನ್ನು ತೋರ್ಪಡಿಸುತ್ತಲಿದ್ದರು. ಇವರ ಕಾರ್ಯ ಕ್ಷೇತ್ರವು (ಯಾದವ + ಅವನಿ—ಆದುವೆ ಮುಂದೆ ಬರಬರುತ್ತಾ ಆದವಾನಿ ಆಗಿರಬೇಕು) ಆಗಿತ್ತು. ಇವರು ತಪಸ್ಸನ್ನಾಚರಿಸಿದ ಪುಣ್ಯ ಕ್ಷೇತ್ರವು ಕಲ್ಯಾಣ ತೀರ್ಥವೆಂಬ ಹೆಸರಿನಿಂದ ಈಗಲೂ ಆದವಾನಿಯ ಹತ್ತಿರ ಪ್ರಸಿದ್ಧವಿದೆ.

ಒಂದು ಸಲ ಆದವಾನಿ ಹಾಗೂ ಕರ್ನೂಲ ಸಂಸ್ಥಾನಗಳ ನವಾಬರೀರ್ವರಲ್ಲಿ ವೈರಸ್ಯವು ಬೆಳೆದು ಕರ್ನೂಲಿನ ನವಾಬರ ಸೆರೆಯಾಳಾದ ಆದವಾನಿಯ ದೊರೆಯನ್ನು ಕರ್ನೂಲಿನ ದೊರೆಯ ಎದುರು ತಮ್ಮ ತಪಃಪ್ರಭಾವವನ್ನು ತೋರ್ಪಡಿಸಿ ಬಿಡುಗಡೆ ಮಾಡಿಸಿದರು. ಇದರಿಂದ ಉಪಕೃತನಾದ ಆದವಾನಿಯ ದೊರೆಯು ತನ್ನ ಅರ್ಧ ರಾಜ್ಯವನ್ನೇ ಒಪ್ಪಿಸಲು ಸಿದ್ಧನಾದಾಗ ಶ್ರೀಪಾದಂಗಳವರು ತ್ಯಾಗಬುದ್ಧಿಯಿಂದ ಅದನ್ನು ತೃಣೀಕರಿಸಿದರು. ಈ ಮೇರೆಗೆ ತಮ್ಮ ತಪಃ ಪ್ರಭಾವದಿಂದ ಧರ್ಮ ಜಾಗ್ರತಿಯನ್ನು ಮಾಡಿ ಆಷಾಢ ಶುದ್ಧ ಪೌರ್ಣಿಮೆಯ ದಿನ ವೃಂದಾವನಸ್ಥರಾದರು. ಇವರ ತಪಸ್ಸಿನ ಪ್ರಭಾವದಿಂದ ಈಗಲೂ ಕೂಡ ಸಕಲ ಜನರ ಅಭಿಲಷಿತಗಳು ಸಿದ್ಧಿಸುವವು ಮತ್ತು ಭೂತ ಪಿಶಾಚಿಗಳ ಬಾಧೆಯೂ ದೂರವಾಗುವದೆಂಬ ಪ್ರತೀತಿಯು ಪ್ರಸಿದ್ಧವಿದೆ.

## ಶ್ರೀ ವಿದ್ಯಾಸಂಪೂರ್ಣತೀರ್ಥ ಶ್ರೀಪಾದಂಗಳವರು

ಇವರು ಶ್ರೀ ವಿದ್ಯಾನಿಧಿತೀರ್ಥರವರಿಂದ ಆಶ್ರಮ ಪಡೆದು ಶ್ರೀ ವಿದ್ಯಾಸಂಪೂರ್ಣ ತೀರ್ಥರೆಂಬ ಅಭಿಧಾನದಿಂದ ಶ್ರೀ ಕಾಣ್ವ ಪೀಠವನ್ನು ಅಲಂಕರಿಸಿದರು. ಇವರ ಪೂರ್ವಾಶ್ರಮದ ತಮ್ಮಂದಿರಾದ ತಿಮ್ಮಣ್ಣಾಚಾರ್ಯ ಕನಕಗಿರಿ ಎಂಬವರು ವ್ಯಾಕರಣದಲ್ಲಿ ಅದ್ವಿತೀಯ ಪಂಡಿತರಾಗಿದ್ದರು. ಇವರೂ ಸಹ ಮಠದ ಸಂಸ್ಥಾನದೊಡನೆ ಇದ್ದು ಮಠದ ಏಳಿಗೆಯ ಸಲುವಾಗಿ ಸತತವಾಗಿ ಪ್ರಯತ್ನ ಪಟ್ಟರು. ಇವರು ಆಶ್ರಮವಾದ ಸ್ವಲ್ಪೇ ದಿನಗಳಲ್ಲಿ ಪಂಢರಪುರದ ಭಾಗದಲ್ಲಿ ಪ್ರವಾಸ ಕೈಕೊಂಡು, ಪಂಢರಪುರದಲ್ಲಿ ಶ್ರೀ ವಿಠ್ಠಲದೇವರ ಅರ್ಚಕರಾದ ಶ್ರೀ ಜಂಜೇಬಕರ ಎಂಬವರನ್ನು ಮಠದ ಅಧಿಕಾರಿಗಳನ್ನಾಗಿ ನಿಯಮಿಸಿದರು. ಅಲ್ಲದೆ ಮಾಧ್ವ ತತ್ವ ಜ್ಞಾನದ ಪ್ರಸಾರಕ್ಕಾಗಿ ಒಂದೇ ಸವನೆ ಪ್ರಯತ್ನಿಸಿದರು.

ನಂತರ ಶ್ರೀಗಳವರು ಆಗಡಿಯಲ್ಲಿಯ ಶ್ರೀ ಹಣಮಂತಗೌಡ ಬಹದ್ದೂರ ದೇಸಾಯಿಯವರ ಪ್ರಾರ್ಥನೆಯ ಮೇರೆಗೆ ಆಗಡಿಗೆ ಆಗಮನ ಮಾಡಿ ತಮ್ಮ ಸಾಲಂಕೃತವಂದ ದೇವರ ಆರಾಧನೆ ಮತ್ತು ವಿದ್ವದ್ಗೋಷ್ಠಿಗಳಿಂದ ಸುತ್ತಲಿನ ಜನರ ಮೇಲೆ ಪ್ರಭಾವ ಬೀಳುವಂತೆ ಮಾಡಿದರು. ಅದೇ ಸಮಯಕ್ಕೆ ಮಠದ ಅಧಿಕಾರದ ವಿಷಯದಲ್ಲಿ ಲೌಕಿಕ ಅಡೆತಡೆಗಳು ಬಂದರೂ ಅವೆಲ್ಲವನ್ನೂ ಶ್ರೀಗಳವರು ತಮ್ಮ

ವಿಶಿಷ್ಟ ಕರ್ತೃತ್ವ ಶಕ್ತಿಯಿಂದ ಸರಿಪಡಿಸಿ ಮಠದ ಅಧಿಕಾರವನ್ನು ರಕ್ಷಿಸಿದರು. ಇವರ ಕಾಲದಲ್ಲಿ ಮಠದ ಕೀರ್ತಿಯು ಹೆಚ್ಚು ಉಜ್ವಲವಾಗಿ ಬೆಳಗಿತು.

ಇವರು ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತರಾದುದರಿಂದ ಸಂಸ್ಕೃತದಲ್ಲಿ— "ರತ್ನಪಂಚಕ"ವೆಂಬ ಗ್ರಂಥವನ್ನು ರಚನೆ ಮಾಡಿದರಲ್ಲದೆ, ಏಕಾದಶೀ ನಿರ್ಣಯದ ಬಗ್ಗೆ ಒಂದು ನಿರ್ಧಾರಿತ ಸ್ವರೂಪವನ್ನು ಏರ್ಪಡಿಸಿ ಅದನ್ನು ಬರೆದು ಇಟ್ಟಿರುವರು. ಇವರ ನಿರ್ಧಾರವೇ ಇಂದು ಮಠದ ನಿರ್ಣಯವಾಗಿ ಉಳಿದಿದೆ. ಇವರ ಪೂರ್ವಾಶ್ರಮದ ಹೆಸರು ಕನಕಗಿರಿ ಹಣಮಂತಾಚಾರ್ಯರೆಂದು. ಇವರು ಶಾಲಿವಾಹನ ಶಕೆ ೧೭೮೮ ರಿಂದ ೧೮೧೧ ರ ವರೆಗೆ ಪೀಠವನ್ನು ಅಲಂಕರಿಸಿದ್ದರು.

## ಪ್ರಕೃತ ಪೀಠಾಧಿಷ್ಠಿತರಾದ
## ಶ್ರೀ ವಿದ್ಯಾತಪೋನಿಧಿತೀರ್ಥ ಶ್ರೀಪಾದಂಗಳವರು

ಇವರು ಶಾಲಿವಾಹನ ಶಕೆ ೧೮೮೯ ಪರಾಭವ ನಾಮ ಸಂವತ್ಸರ ಜೇಷ್ಠ ಮಾಸದಲ್ಲಿ ಶ್ರೀ ವಿದ್ಯಾಮನೋಹರ ತೀರ್ಥ ಶ್ರೀಪಾದಂಗಳವರಿಂದ ದೇವದುರ್ಗ ಮುಕ್ಕಾಮಿನಲ್ಲಿ ಆಶ್ರಮ ಪಡೆದರು. ಆಶ್ರಮವನ್ನು ಪಡೆದು ಸ್ವಲ್ಪೇ ದಿನಗಳಲ್ಲಿ ಉಡಪಿಯಲ್ಲಿ ನಡೆದ ಶ್ರೀ ಪೇಜಾವರ ಮಠ ಶ್ರೀಪಾದಂಗಳವರ ಪರ್ಯಾಯ ಮಹೋತ್ಸವದ ಆಮಂತ್ರಣ ಪಡೆದು ಉಡುಪಿಗೆ ವಿಜಯಂಗೈಸಿದರು. ಅಲ್ಲಿ ಸಂಸ್ಥಾನದ ಸಕಲ ಮರ್ಯಾದೆಯಿಂದ ಸತ್ಕೃತರಾದವರಾಗಿ ತಮ್ಮ ಅನುಗ್ರಹ ಭಾಷಣದಿಂದ ಅಲ್ಲಿಯ ಜನರನ್ನೆಲ್ಲ ಸಂತೋಷಗೊಳಿಸಿದರು.

ಇವರು ತಮ್ಮ ತಪಃ ಪ್ರಭಾವದಿಂದ ಮತ್ತು ಒಂದು ವಿಶಿಷ್ಟವಾದ ಕರ್ತೃತ್ವ ಶಕ್ತಿಯಿಂದ ಮಠದ ಸಂಪೂರ್ಣ ಆಡಳಿತವನ್ನು ವಹಿಸಿ ಹದಗೆಟ್ಟ ಕೆಲವು ವಿಷಯಗಳನ್ನು ಸರಿಪಡಿಸಿ ಮಠದ ಆಳ್ವಿಕೆಯನ್ನು ಒಂದು ಮಟ್ಟಕ್ಕೆ ತಂದರು. ಸತತವಾದ ತಮ್ಮ ಸಂಚಾರ ಕಾರ್ಯಕ್ರಮದಿಂದ ಸಮಸ್ತ ಭಕ್ತರಿಗೂ ಶ್ರೀ ವಿಠ್ಠಲ ಕೃಷ್ಣದೇವರ ಸಂದರ್ಶನ, ತೀರ್ಥ ಪ್ರಸಾದಗಳನ್ನು ದಯಮಾಡಿಸುತ್ತ ಧರ್ಮ ಜಾಗೃತಿಯಲ್ಲಿ ತೊಡಗಿದ್ದಾರೆ.

ಇವರ ಪೂರ್ವಾಶ್ರಮದ ಹೆಸರು ಶ್ರೀ ರಂಗಾಚಾರ್ಯ ಬಳೂತಿ ಎಂದು ಇತ್ತು. ಇವರು ಬಾಗೇವಾಡಿ ತಾಲೂಕಿನ ಕೊಲ್ಹಾರದ ಹತ್ತಿರ ಬಳೂತಿ ಎಂಬ ಗ್ರಾಮದವರು. ಇವರು ಪೂರ್ವಾಶ್ರಮದಲ್ಲಿಯೇ ತಪೋ ನಿಷ್ಠೆಯಲ್ಲಿ ಪ್ರಸಿದ್ಧರು. ಎಷ್ಟೋ ಸಲ ಅನ್ನಾಹಾರಗಳನ್ನು ತ್ಯಜಿಸಿ ಪರ್ವತದ ಗುಹೆಯಲ್ಲಿಯೋ, ನಿರ್ಜನ ದೇವಸ್ಥಾನದಲ್ಲಿಯೊ ಕುಳಿತು ತಪಸ್ಸನ್ನಾಚರಿಸಿದ ನಿದರ್ಶನಗಳು ಅನೇಕ ಉಂಟು. ಕೇವಲ ಉಪೋಷಣದಿಂದ ೪೦ ದಿನಗಳವರೆಗೆ ಶ್ರೀಮದ್ಭಾಗವತದ ಅನವರತ ಪಾರಾಯಣದಿಂದ ಸಿದ್ಧಿಯನ್ನು ಪಡೆದರು.

ಇಂಥ ಯೋಗ್ಯ ತಪಸ್ವಿಗಳನ್ನು ಆರಿಸಿ ಯತ್ಯಾಶ್ರಮ ಸ್ವೀಕರಿಸುವ ವಿಷಯ ದಲ್ಲಿ ದೇವದುರ್ಗದ ಪ್ರಸಿದ್ಧ ಮನೆತನದವರಾದ ವೈ. ತಿಮ್ಮಪ್ಪಯ್ಯನವರ ಪುತ್ರರಾದ ಶ್ರೀ ಶ್ರೀನಿವಾಸಯ್ಯನವರು ( ಆಡ್ವೋಕೆಟ, ರಾಯಚೂರ ) ಅನವರತ ಪ್ರಯತ್ನ ಪಟ್ಟು, ಶ್ರೀಗಳವರನ್ನು ಪೀಠಾಧಿಷ್ಠಿತರನ್ನಾಗಿ ಮಾಡಲು ತುಂಬಾ ಸಹಾಯಕರಾದರು.

ಪ್ರಕೃತ ಮಠದಲ್ಲಿ ಅಧಿಷ್ಠಿತ ಪಂಡಿತಪ್ರವರರಾದ ವೇ|| ವೆಂಕಪ್ಪಾಚಾರ್ಯ ಬಳಗಾನೂರ ಅವರು ಮಠದಲ್ಲಿ ದ್ವೈತ ಗ್ರಂಥಗಳ ಪಾಠ–ಪ್ರವಚನವನ್ನು ನಡೆಯಿ ಸುತ್ತ ಅವ್ಯಾಹತವಾದ ತಮ್ಮ ವಾಕ್ ಪ್ರವಾಹದಿಂದ ಶ್ರೀಮದ್ಭಾಗವತವನ್ನು ಪ್ರತಿ ನಿತ್ಯದಲ್ಲಿಯೂ ಶ್ರವಣ ಮಾಡಿಸುತ್ತಲಿರುವರು.

## ವೈ|| ದೇವರು ತಿಮ್ಮಪ್ಪಯ್ಯನವರು

ಇವರು ದೇವದುರ್ಗದ ಪ್ರತಿಷ್ಠಿತ ಮನೆತನದವರು. ಬಾಲ್ಯದಿಂದಲೂ ಇವರು ಸದಾಚಾರ ಸಂಪನ್ನರೂ ಪರೋಪಕಾರಿಗಳೂ ಆಗಿದ್ದರು. ದೇವರ ಅನುಗ್ರಹದಿಂದ ಇವ ರಿಗೆ ದೇವರ ಪ್ರಾಸಾದಿಕ ವಾಣಿಯು ಪ್ರಾಪ್ತವಾಗಿದ್ದಿತು. ಇವರು ಶ್ರೀನಿವಾಸದೇವರ ಪರಮ ಭಕ್ತರು. ಅನನ್ಯಭಾವದಿಂದ ಪರಮಾತ್ಮನ ಉಪಾಸನೆಗೈಯುವಾಗ ಒಂದು ಸಲ ಒಂದು ಸ್ವಪ್ನ ದೃಷ್ಟಾಂತವಾಗಿ ಶ್ರೀನಿವಾಸ ದೇವರ ಸೇವೆಗಾಗಿ ತಿರುಪತಿಗೆ ಹೋದರು. ತಮ್ಮ ತಪಸ್ಸಿನ ಪ್ರಭಾವದಿಂದ ಇವರಿಗೆ ತಿರುಪತಿಯ ದೇವಸ್ಥಾನದಿಂದ ಪರಮಾತ್ಮನ ಪ್ರತಿಮೆಯೂ, ಅಲಂಕಾರದ ಸಾಮಗ್ರಿಗಳೂ ಉಚಿತವಾಗಿ ದೇವರ ಅನುಗ್ರಹದಿಂದ ದೊರಕಿದವು. ಇಂದಿಗೂ ಕೂಡ ಇವರ ಮನೆತನದವರಿಗೆ ತಿರುಪತಿಯಲ್ಲಿ ಒಂದು ವಿಶಿಷ್ಟವಾದ ಸ್ಥಾನವಿದೆ.

ಶ್ರೀನಿವಾಸದೇವರ ಅನುಗ್ರಹಕ್ಕೆ ಪಾತ್ರರಾಗಿ ಬಂದ ಮೇಲೆ —"ಶ್ರೀನಿವಾಸ ವಿಠಲ" ಎಂಬ ಅಂಕಿತದಿಂದ ಇವರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವರ ಕೀರ್ತನೆಗಳಲ್ಲಿ ಹನುಮ, ಭೀಮ, ಮಧ್ವ ರೂಪಗಳ ಸುಂದರ ವರ್ಣನೆಯನ್ನು ಕಾಣುತ್ತೇವೆ. ಮತ್ತು ಪದ್ಯಗಳಲ್ಲಿ ಕಂಡು ಬರುವ ಭಕ್ತಿ ಭಾವದಿಂದ ನಾವು ಮೈ ಮರೆಯುತ್ತೇವೆ. ಇವರು ರಚಿಸಿದ—"ಪಾಲಿಪುದೈಯ್ಯ ವೆಂಕಟರಾಯ" ಎಂಬ ಪದ್ಯ ದಲ್ಲಿ ಸ್ಫುಟವಾಗಿ ಕಂಡುಬರುವ ಭಕ್ತಿ ಭಾವಕ್ಕೆ ತಿರುಪತಿಯ ದೇವರು ಒಲಿದು ತನ್ನ ಹಿಂದಿನ ಭಾಗದಲ್ಲಿಯ ಆದಿತ್ಯವಾರ ಮಂಟಪವನ್ನು ಪೂಜೆಗಾಗಿ, ಬಂಗಾರದ ವೈಜಯಂತೀ ಮಾಲೆಯಿಂದ ಕಳಚಿಬಿದ್ದ ಕವಚದಿಂದಿರುವ ಶಾಲಿಗ್ರಾಮವನ್ನೂ ದಯ ಪಾಲಿಸಿರುವನು. ಇದು ಮತ್ತು ಇತರ ಮರ್ಯಾದೆಗಳು ಇವರ ಮನೆತನಕ್ಕೆ ಈಗಲೂ ನಡೆದು ಬಂದಿವೆ.

# ಶ್ರೀ ಕಾಶೀ ಮಠದ ಚರಿತ್ರೆ

ದ್ವೈತಸಿದ್ಧಾಂತದ ಪ್ರಚಾರಕ್ಕಾಗಿ ಶ್ರೀಮನ್ಮಧ್ವಾಚಾರ್ಯರು ಸಂಚಾರದಲ್ಲಿ ನಿರತರಾಗಿರುತ್ತಿದ್ದರು. ಅವರು ಬದರಿಕಾಶ್ರಮದಿಂದ ಹಿಂತೆರಳುವಾಗ (ಕ್ರಿ. ಶ. ೧೩ನೆಯ ಶತಮಾನದಲ್ಲಿ) ಗೋಮಾಂತಕವನ್ನು ಸಂದರ್ಶಿಸಿದರು. ಅಲ್ಲಿ ಅವರು ಶಂಕರ ಎಂಬ ಹೆಸರಿನ ಸಾರಸ್ವತ ಬ್ರಾಹ್ಮಣನ ಮನೆಯಲ್ಲಿ ಉಳಕೊಂಡರು. ವಿದ್ವಾಂಸನಾದ ಈ ಬ್ರಾಹ್ಮಣನಿಗೆ ಶ್ರೀಮನ್ಮಧ್ವಾಚಾರ್ಯರು ದ್ವೈತಸಿದ್ಧಾಂತವನ್ನು ಬೋಧಿಸಿವರು ಮತ್ತು ನಾಲ್ಕು ಸಾವಿರ ಬಾಳೆ ಹಣ್ಣುಗಳನ್ನೂ ಮೂವತ್ತು ಕುಂಭ ಹಾಲನ್ನೂ ಭಕ್ಷಿಸಿದ ಪವಾಡವನ್ನು ನೂಡಿ ತೋರಿಸಿ, ತಾವು ವಾಯುವಿವ ಅವತಾರ ಎಂಬುದನ್ನೂ (ಹನುಮ, ಭೀಮ ಮತ್ತು ಮಧ್ವರು ವಾಯುವಿನ ಅವತಾರಗಳೆಂದು ಪ್ರಸಿದ್ಧ), ತಮ್ಮ ಸಿದ್ಧಾಂತವನ್ನು ಪ್ರಚಾರ ಮಾಡಲು ದೇವರು ತಮ್ಮನ್ನು ಕಳುಹಿಸಿದ್ದರೆಂಬುದನ್ನೂ ಅವರು ಅಲ್ಲಿಯವರಿಗೆ ಪ್ರಮಾಣೀಕರಿಸಿದರು. ಈ ಪ್ರಸ್ತಾಪವು ಶ್ರೀಮನ್ಮಧ್ವಾಚಾರ್ಯರ ಶಿಷ್ಯರಾದ ತ್ರಿವಿಕ್ರಮಪಂಡಿತಾಚಾರ್ಯರ ಪುತ್ರ ನಾರಾಯಣ ಪಂಡಿತಾಚಾರ್ಯರು ಬರೆದ "ಸುಮಧ್ವ ವಿಜಯ" ಎಂಬ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಶ್ರೀಮನ್ಮಧ್ವಾಚಾರ್ಯರ ಪವಾಡದ ಪ್ರಭಾವದಿಂದ ಗೋಮಾಂತಕದ ಕೆಲವು ಬಾಹ್ಮಣರು ಮಧ್ವಮತಾನುಯಾಯಿಗಳಾದರು. ಅನಂತರ ಶ್ರೀಮನ್ಮಧ್ವಾಚಾರ್ಯರ ಶಿಷ್ಯ ಪಂಥವವರಲ್ಲಿನ ಶ್ರೀಮತ್ ಪದ್ಮನಾಭತೀರ್ಥರೂ (ಮುಕ್ತಿ: ಕ್ರಿ. ಶ. ೧೩೨೩), ಶ್ರೀಮತ್ ಜಯತೀರ್ಥರೂ) ಮುಕ್ತಿ: ಕ್ರಿ. ಶ. ೧೩೮೮) ಸಹ ಗೋಮಾಂತಕಕ್ಕೆ ಹೋಗಿ ಇನ್ನೂ ಹೆಚ್ಚು ಮಂದಿ ಸಾರಸ್ವತ ಬ್ರಾಹ್ಮಣರನ್ನು ಅದ್ವೈತ ಮತದಿಂದ ದ್ವೈತ ಮತಕ್ಕೆ ಸೇರಿಸಿದರು. ಅಗ ಅಲ್ಲ ಉಳಿದ ಅದ್ವೈತ ಮತಾನುಯಾಯಿಗಳು ಈ ಮತಾಂತರವನ್ನು ಪ್ರತಿಭಟಿಸಿ, ಮಂಗೇಶಿ ದೇವಾಲಯದಲ್ಲಿ ಸಭೆ ಸೇರಿ ತಾವು ಮಧ್ವ ಮತಕ್ಕೆ ಸೇರಲಾರೆವೆಂದು ಪ್ರತಿಜ್ಞಾಬದ್ಧರಾಗಿ ಸಾರಿದರು. ಹೀಗಾಗಿ ಗೋಮಾಂತಕದಲ್ಲಿಯ ಸಾರಸ್ವತ ಬ್ರಾಹ್ಮಣಿ ಸಮಾಜವು ದ್ವೈತ ಮತಾನುಯಾಯಿಗಳೆಂದೂ, ಅದ್ವೈತ ಮತಾನುಯಾಯಿಗಳೆಂದು ವಿಭಜಿಸಲ್ಪಟ್ಟಿತು. ದ್ವೈತ ಮತಾನುಯಾಯಿಗಳು ಶ್ರೀಮನ್ಮಧ್ವಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಉತ್ತರಾದಿಮಠ ಶ್ರೀಮತ್ ಜಯತೀರ್ಥರ ಶಿಷ್ಯಸಮುದಾಯದವರಾದರು ಮತ್ತು ಅದ್ವೈತ ಮತಾನುಯಾಯಿಗಳು ಶ್ರೀ ಕೈವಲ್ಯ ಮಠದಲ್ಲೆ ಉಳಿದುಕೊಂಡರು.

ಗೋಮಾಂತಕದಲ್ಲಿಯ ಸಾರಸ್ವತ ಬ್ರಾಹ್ಮಣರಲ್ಲಿನ ಅನೇಕರು ದ್ವೈತಸಿದ್ಧಾಂತವನ್ನು ಅಂಗೀಕರಿಸಿ ವೈಷ್ಣವ ಪಂಥವನ್ನು ಸ್ವೀಕರಿಸಿದ್ದರೂ, ಅವರು ಆ ಮುಂಚೆನಿಂದ

ಆರಾಧಿಸುತ್ತ ಬಂದ ತಮ್ಮ ಶೈವ-ಶಾಕ್ತ ಕುಲದೇವತೆಗಳಲ್ಲಿ ಒಂದನ್ನಾದರೂ ಅಲ್ಲಗಳೆಯಲಿಲ್ಲ; ಅವುಗಳನ್ನು ಆರಾಧಿಸುವ ವಿಧಾನಗಳಲ್ಲಿ ಅಷ್ಟಷ್ಟು ಮಾರ್ಪಡಿಸಿದರು. ಮಾತ್ರವಲ್ಲದೆ, ಅವುಗಳಲ್ಲಿನ ಯಾವುದಾವದೊಂದನ್ನಾದರೂ ತೊರೆದು ಬಿಡಲಿಲ್ಲ. ಈಗಲೂ ತಮ್ಮ ಕುಲದೇವತೆಗಳೆಂದರೆ ಆ ಪ್ರಾಚೀನ ಕಾಲದಿಂದ ಇದ್ದುವೇ ಅಲ್ಲದೆ ಅವುಗಳಲ್ಲಿ ಒಂದಾದರೂ ಕಡಿಮೆಯಾಗಲಿಲ್ಲ.

ಕಾಲವು ಸಾಗುತ್ತ ಹೋದಂತೆ ಇನ್ನೊಂದು ಘಟನೆಯು ಸಂಭವಿಸಿತು. ಉತ್ತರಾದಿಮಠದ ಶ್ರೀಮದ್ರಾಮಚಂದ್ರತೀರ್ಥ ಸ್ವಾಮಿಯವರಲ್ಲೂ, ಪರಿಗ್ರಹಿಸಿದ ಶಿಷ್ಯಸ್ವಾಮಿಯವರಲ್ಲೂ, ಅಭಿಪ್ರಾಯ ಭೇದವು ಜನಿಸಲು ಅವರು ಇನ್ನೊಬ್ಬ ಶಿಷ್ಯರಿಗೆ ಸನ್ಯಾಸ ದೀಕ್ಷೆಯನ್ನಿತ್ತರು. ಹೀಗಾಗಿ ಉತ್ತರಾದಿ ಮಠದಲ್ಲಿ ಬಿರುಕು ಬಿದ್ದು, ಪ್ರಥಮ ಶಿಷ್ಯರಾದ ಶ್ರೀಮದ್ವಿಭುದೇಂದ್ರತೀರ್ಥಸ್ವಾಮಿಯವರು ಕುಂಭಕೋಣದಲ್ಲಿ ತಮ್ಮ ಮಠವನ್ನು (ಶ್ರೀ ಕುಂಭಕೋಣಮಠ) ಸಂಸ್ಥಾಪಿಸಿದರು. ಇತ್ತ ದ್ವಿತೀಯ ಶಿಷ್ಯರಾದ ಶ್ರೀಮದ್ವಿದ್ಯಾನಿಧಿತೀರ್ಥ ಸ್ವಾಮಿಯವರು ಉತ್ತರಾಧಿ ಮಠದ ಕಾರ್ಯಕಲಾಪಗಳನ್ನು ವಹಿಸಿಕೊಳ್ಳುತ್ತ ಬಂದರು. ಇದರಿಂದಾಗಿ ಮೂಲ ಮಠದ ಚರಾಚರ ಸೋತ್ತನ್ನೂ, ಶಿಷ್ಯವೃಂದವನ್ನೂ ಈ ಮಠಾಧೀಶರೀರ್ವರ ಉತ್ತರಾಧಿಕಾರಿಗಳು ತಮ್ಮ ತಮ್ಮೊಳಗೆ ವಿಭಜಿಸಿಕೊಂಡರೆಂದು ತೋರುತ್ತದೆ, ಈ ವಿಭಜನೆಯಿಂದಾಗಿ ಭಟ್ಕಳದಿಂದ ಉತ್ತರಕ್ಕೆ ಗೋಮಾಂತಕದವರೆಗೆ ಶಿಷ್ಯವರ್ಗದವರು ಉತ್ತರಾಧಿ ಮಠವನ್ನೂ, ಮಂಗಳೂರಿನಿಂದ ದಕ್ಷಿಣಕ್ಕೆ ಕೇರಳದ ವರೆಗಿನ ಶಿಷ್ಯವರ್ಗದವರು ಕುಂಭಕೋಣ ಮಠವನ್ನು ಅನುಸರಿಸಬೇಕೆಂದೂ, ಭಟ್ಕಳದಿಂದ ಮಂಗಳೂರಿನ ವರೆಗಿನ ಶಿಷ್ಯವರ್ಗವನ್ನೂ ವಿಭಜಿಸಿ ಅವರಲ್ಲಿನ ಕೆಲವರನ್ನು ಉತ್ತರಾದಿ ಮಠಕ್ಕೂ, ಉಳಿದವರನ್ನು ಕುಂಭಕೋಣಮಠಕ್ಕೂ ಸೇರಿಸಬೇಕೆಂದೂ ನಿರ್ಧರಿಸಲಾಯಿತು. ಮೂಲ ಉತ್ತರಾದಿ ಮಠದ ಈ ವಿಭಜನೆಯು ಶಾ. ಶ. ಹದಿನೈದನೆಯ ಶತಮಾನದ ಪ್ರಥಮಾರ್ಧದಲ್ಲಿ (ಕ್ರಿ. ಶ. ಹದಿನಾರನೆಯ ಶತಮಾನದ ಆದಿಯಲ್ಲಿ) ಆಗಿರಬೇಕೆಂದು ತೋರುತ್ತದೆ. ಇಷ್ಟರಲ್ಲೆ ಸಾರಸ್ವತ ಬ್ರಾಹ್ಮಣರು ಉತ್ತರ ಕನ್ನಡದಲ್ಲೂ, ದಕ್ಷಿಣ ಕನ್ನಡದಲ್ಲೂ, ಕೊಚ್ಚಿ ರಾಜ್ಯದಲ್ಲೂ, ಪಸರಿಕೊಂಡಿದ್ದು, ತಮ್ಮ ತಮ್ಮ ದೇವಾಲಯಗಳನ್ನು (ಮುಖ್ಯತಃ ಶ್ರೀ ವೆಂಕಟರಮಣ ದೇವಾಲಯಗಳನ್ನು) ಸ್ಥಾಪಿಸಿದ್ದರು.

## ಶ್ರೀ ಕಾಶೀ ಮಠದ ಸ್ಥಾಪನೆ

ಶ್ರೀ ಕುಂಭಕೋಣ ಮಠದ ಶಿಷ್ಯ ವರ್ಗದವರಾದ ಕೊಚ್ಚಿಯ ಸಾರಸ್ವತ ಬ್ರಾಹ್ಮಣರು ಕ್ರಿ. ಶ. ೧೫೪೯—೪೦ ರಲ್ಲಿನ ಚಾತುರ್ಮಾಸ್ಯ ವ್ರತವನ್ನು ತಮ್ಮ ಊರಿನಲ್ಲಿ ಆಚರಿಸಬೇಕೆಂದು ಶ್ರೀ ಕುಂಭಕೋಣ ಮಠದ ಅಂದಿನ ಪೀಠಾಧಿಪತಿಗಳಾದ ಶ್ರೀಮತ್ಸುರೇಂದ್ರ ತೀರ್ಥ ಸ್ವಾಮಿಗಳ ಶಿಷ್ಯ ಸ್ವಾಮಿಗಳಾದ ಶ್ರೀಮದ್ವಿಜ

ಯೀಂದ್ರತೀರ್ಥ ಸ್ವಾಮಿಯವರನ್ನು ಆಹ್ವಾನಿಸಿದರು. ಬೇರೆ ಬೇರೆ ಮಠದ ಸ್ವಾಮಿಗಳು ಒಂದು ವರ್ಷದಲ್ಲಿ ನಾಲ್ಕು ತಿಂಗಳು ಇದ್ದು ಚಾತುರ್ಮಾಸ್ಯ ವ್ರತವನ್ನು ಪಾಲಿಸುವ ವಾಡಿಕೆಯಿತ್ತು. ಈಗ ನಾಲ್ಕು ತಿಂಗಳ ಬದಲಿಗೆ ನಾಲ್ಕು ಪಕ್ಷ (ಎರಡು ತಿಂಗಳು) ಗಳನ್ನು ಸ್ವಾಮಿಯವರು ಆಯಾ ಊರುಗಳಲ್ಲಿ ಕಳೆಯುತ್ತಾರೆ. ಈ ಸಂಪ್ರದಾಯಕ್ಕನುಗುಣವಾಗಿ ಶ್ರೀ ಮದ್ವಿಜಯೀಂದ್ರತೀರ್ಥಸ್ವಾಮಿಗಳು ಕೊಚ್ಚಿಯಲ್ಲಿ ಚಾತುರ್ಮಾಸ್ಯ ವ್ರತವನ್ನಾಚರಿಸುತ್ತಿದ್ದಾಗ ಅಲ್ಲಿಯ ಸಾರಸ್ವತ ಬ್ರಾಹ್ಮಣ ಸಮಾಜದವರು ತಮ್ಮಲ್ಲಿನ ಒಬ್ಬ ಬ್ರಹ್ಮಚಾರಿಗೆ ಸನ್ಯಾಸ ದೀಕ್ಷೆಯನ್ನು ಕರುಣಿಸಬೇಕೆಂದು ಅವರೊಡನೆ ಪ್ರಾರ್ಥಿಸಿದರು. ಈ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಮದ್ವಿಜಯೀಂದ್ರತೀರ್ಥ ಸ್ವಾಮಿಗಳು ಸಾರಸ್ವತ ಬ್ರಾಹ್ಮಣ ಸಮಾಜದಲ್ಲಿನ ಯೋಗ್ಯನೂ, ಪಂಡಿತನೂ ಆದ ಒಬ್ಬ ಬಾಲಕನನ್ನಾರಿಸಿ (ಈತನ ಹೆಸರು ಹನಮಂತಭಟ್ಟ ಎಂದಿತ್ತು), ಅವಶ್ಯವಿದ್ದ ಶಿಕ್ಷಣವನ್ನು ಕೊಡಲು ತಮ್ಮೊಡನೆ ಕುಂಭಕೋಣಕ್ಕೆ ಕರೆದೊಯ್ದರು. ಅನಂತರ ಅಲ್ಲಿ ಶಿಕ್ಷಣವನ್ನು ಪೂರ್ಣಗೊಳಿಸಿದ ಮೇಲೆ ಶ್ರೀಮದ್ವಿಜಯೀಂದ್ರತೀರ್ಥಸ್ವಾಮಿಗಳು ತಮ್ಮ ಗುರುವರ್ಯರಾದ ಶ್ರೀಮತ್ಸುರೇಂದ್ರತೀರ್ಥ ಸ್ವಾಮಿಗಳ ಅನುಮತಿಯನ್ನು ಪಡೆದು, ಶ್ರೀ ಕ್ಷೇತ್ರ ಕಾಶಿಯಲ್ಲಿ ಪವಿತ್ರವಾದ ಗಂಗಾನದಿಯ ತೀರದಲ್ಲಿ ಒಂದಿಷ್ಟು ಸ್ಥಳವನ್ನು ಖರೀದಿಸಬೇಕೆಂದು ಕೊಚ್ಚಿಯ ಸಾರಸ್ವತ ಬ್ರಾಹ್ಮಣರಿಗೆ ಸೂಚಿಸಿದರು. ಇದರಂತೆ ಶ್ರೀ ಕ್ಷೇತ್ರ ಕಾಶಿಯಲ್ಲಿ ಈ ವ್ಯವಸ್ಥೆಯನ್ನು ಮಾಡಿದೊಡನೆ ಶ್ರೀಮದ್ವಿಜಯೀಂದ್ರತೀರ್ಥ ಸ್ವಾಮಿಗಳು ತಾವು ಆರಿಸಿದ ಬಾಲಬ್ರಹ್ಮಚಾರಿಯೊಂದಿಗೂ, ಕೊಚ್ಚಿಯಲ್ಲಿ ನೆಲಸಿದ ಸಾರಸ್ವತ ಬ್ರಾಹ್ಮಣವೃಂದದೊಂದಿಗೂ ಕುಂಭಕೋಣದಿಂದ ಹೊರಟು ಶ್ರೀಕ್ಷೇತ್ರ ಕಾಶಿಯತ್ತ ಪ್ರಯಾಣ ಬೆಳಸಿದರು. ಈ ಗುರು ಶಿಷ್ಯ ಮಂಡಳಿಯು ಶ್ರೀ ಕ್ಷೇತ್ರ ಕಾಶಿಯನ್ನು ತಲುಪಿದ ಮೇಲೆ ಶ್ರೀಮದ್ವಿಜಯೀಂದ್ರತೀರ್ಥಸ್ವಾಮಿಗಳು ಒಂದು ಶುಭದಿನದಂದು ಆ ಬ್ರಹ್ಮಚಾರಿಗೆ ಸಂನ್ಯಾಸದೀಕ್ಷೆಯನ್ನು ದಯಪಾಲಿಸಿ, ಶ್ರೀಮದ್ಯಾದವೇಂದ್ರತೀರ್ಥರೆಂದು ಪುನರ್ನಾಮಕರಣ ಮಾಡಿ ಅವರ ಈ ಹೊಸ ಮಠಕ್ಕೆ ಶ್ರೀಕಾಶೀಮಠ ಎಂಬ ಹೆಸರನ್ನಿಟ್ಟರು.

ಈ ಮಂಡಳಿಯು ಶ್ರೀ ಕ್ಷೇತ್ರ ಕಾಶೀಯಲ್ಲಿ ಕೆಲವು ದಿನವಿದ್ದು ಅನಂತರ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಕುಂಭಕೋಣಕ್ಕೆ ಹಿಂತಿರುಗಿತು. ಅಲ್ಲಿ ಈ ಹೊಸ ಕಾವ ಮಠದ ಅಧಿಪತಿಗಳಿಗೆ (ಶ್ರೀಮದ್ಯಾದವೇಂದ್ರತೀರ್ಥ ಸ್ವಾಮಿಗಳಿಗೆ ಶ್ರೀ ಕುಂಭಕೋಣ ಮಠದ ಅಧಿಪತಿಗಳಾದ ಶ್ರೀ ಮತ್ಸುರೇಂದ್ರತೀರ್ಥ ಸ್ವಾಮಿಗಳು ಶ್ರೀಮದ್ಯಾದವೇಂದ್ರತೀರ್ಥಸ್ವಾಮಿಗಳ ದೈನಂದಿನ ಪೂಜೆಗೆಂದು ಶ್ರೀ ರಾಮದೇವರ ಒಂದು ಪ್ರತಿಮೆಯನ್ನೂ, ಶ್ರೀ ವೇದವ್ಯಾಸರ ಒಂದು ಪ್ರತಿಮೆಯನ್ನೂ, ಒಂದು ಸಾಲಗ್ರಾಮವನ್ನೂ, ಶ್ರೀ ಕುಂಭಕೋಣ ಮಠದಲ್ಲಿ ಬಳಸಲ್ಪಡುವಂಥ ಇತರ ಎಲ್ಲ ಪೂಜಾ ಸಾಮಗ್ರಿಗಳನ್ನೂ ದಯಪಾಲಿಸಿದರು. ಅಂದಿನಿಂದ ಶ್ರೀ ಕಾಶೀಮಠದ ಪ್ರತಿಯೊರ್ವ ಸ್ವಾಮಿಗಳೂ

ಪೂಜಿಸುತ್ತ ಬಂದ ಈ ಪ್ರತಿಮೆಗಳೂ, ಶಾಲಗ್ರಾಮವೂ ಇಂದೂ ಇವೆ; ವಿದ್ಯಮಾನ ಪೀಠಾಧಿಪತಿ ಶ್ರೀಮತ್ಸರೇಂದ್ರತೀರ್ಥಸ್ವಾಮಿಗಳವರೂ ಇವುಗಳನ್ನು ಪೂಜಿಸುತ್ತಲಿದ್ದಾರೆ. ಅಂದು ಶ್ರೀಮತ್ಸುರೇಂದ್ರತೀರ್ಥ ಸ್ವಾಮಿಗಳು ಶ್ರೀಮದ್ಯಾದವೇಂದ್ರತೀರ್ಥಸ್ವಾಮಿಗಳ ಹೋಗುವ ಕಡೆಗಳಲ್ಲೆಲ್ಲ ಅವರ ಸಮಾಜದ ಸದಸ್ಯರಿಗೆ ಮುದ್ರಾಧಾರಣೆಯ ಹಾಗೂ ಮಂತ್ರೋಪದೇಶದ ವಿತರಣೆಯ ಅಧಿಕಾರವನ್ನೂ, ಆ ಸಮಾಜದ ಧಾರ್ಮಿಕ ವಿಧಿಗಳನ್ನು ನೆರವೇರಿಸುವಲ್ಲಿ ಆವಶ್ಯವಿದ್ದ ನಿಯಮಗಳನ್ನು ರಚಿಸುವ ಹಕ್ಕನ್ನೂ, ಈ ನಿಯಮಗಳ ಪಾಲನೆಯ ನೇತೃತ್ವವನ್ನೂ ಕೊಟ್ಟರು. ಈ ಸನದು ಶಾ.ಶ. ೧೪೬೩ನೆಯ (ಕ್ರಿ.ಶ. 1542) ಪ್ಲವನಾಮಸಂವತ್ಸರದ ಮಾಘ ಶುದ್ಧ ಪಂಚಮಿಯಂದು ಕೊಡಲ್ಪಟ್ಟಿತೆಂದು ಸಾರುವ ತಾಮ್ರ ಶಾಸನವೊಂದಿದೆ. ಈ ಶಾಸನವು ದೇವನಾಗರಿ ಲಿಪಿಯಲ್ಲಿದ್ದು ಕನ್ನಡ ಭಾಷೆಯಲ್ಲಿದೆ.

ಶ್ರೀ ಕಾಶೀಮಠಕ್ಕೆ ತಾಮ್ರ ಶಾಸನವನ್ನು ಕೊಟ್ಟ ಮೇಲೆ ಶ್ರೀಮತ್ಸುರೇಂದ್ರ ತೀರ್ಥಸ್ವಾಮಿಗಳು ಸಾರಸ್ವತ ಬ್ರಾಹ್ಮಣ ಸಮಾಜದವರು ಶ್ರೀಮದ್ಯಾದವೇಂದ್ರತೀರ್ಥ ಸ್ವಾಮಿಗಳಾಗಲಿ ಅವರ ಉತ್ತರಾಧಿಕಾರಿಗಳಾಗಲಿ ವಿಧಿಸುವ ಸರ್ವ ಆಜ್ಞೆಗಳನ್ನು ವಿಧೇಯಪೂರ್ವಕವಾಗಿ ಪಾಲಿಸ ಬೇಕೆಂದು ಆಜ್ಞಾಪಿಸುವ ರಾಯಸಪತ್ರಗಳನ್ನು ಅದೇ ವರ್ಷದ ಮಾಘ ಬಹುಳ ತೃತೀಯೆಯಂದು ರವಾನಿಸಿದರು. ಶ್ರೀ ಕಾಶೀಮಠದ ದಸ್ತಾವೇಜುಗಳಲ್ಲಿ ಇಂಥ ಒಂದು ರಾಯಸ ಪತ್ರವಿದೆ.

## ಶ್ರೀ ಕಾಶೀಮಠದ ಗುರುಪರಂಪರೆ

ಶ್ರೀಮಧ್ವಾಚಾರ್ಯರು
೧. ಶ್ರೀಮದ್ಯಾದವೇಂದ್ರತೀರ್ಥರು
೨. ಶ್ರೀಮತ್ಕೇಶವೇಂದ್ರತೀರ್ಥರು
೩. ಶ್ರೀಮದುಪೇಂದ್ರತೀರ್ಥರು
೪. ಶ್ರೀಮದ್ಯಾದವೇಂದ್ರತೀರ್ಥರು(2)
೫. ಶ್ರೀಮದ್ರಾಘವೇಂದ್ರತೀರ್ಥರು
೬. ಶ್ರೀಮದ್ದೇವೇಂದ್ರತೀರ್ಥರು
೭. ಶ್ರೀಮದ್ಮಾಧವೇಂದ್ರತೀರ್ಥರು
೮. ಶ್ರೀಮತ್ ಜ್ಞಾನೀಂದ್ರತೀರ್ಥರು
೯. ಶ್ರೀಮದ್ಯಾದವೇಂದ್ರತೀರ್ಥರು(3)
೧೦. ಶ್ರೀಮದುಪೇಂದ್ರತೀರ್ಥರು (2)
೧೧. ಶ್ರೀಮದ್ರಾಜೇಂದ್ರತೀರ್ಥ...
೧೨. ಶ್ರೀಮತ್ಸುರೇಂದ್ರತೀರ್ಥರು
೧೩. ಶ್ರೀಮದ್ವಿಷ್ಣು ತೀರ್ಥರು
೧೪. ಶ್ರೀಮದ್ವಿಭುದೇಂದ್ರತೀರ್ಥರು
೧೫. ಶ್ರೀಮತ್ಸುಮತೀಂದ್ರತೀರ್ಥರು
೧೬. ಶ್ರೀಮದ್ವಸುಧೇಂದ್ರತೀರ್ಥರು
೧೭. ಶ್ರೀಮದ್ಭುವನೇಂದ್ರತೀರ್ಥರು
೧೮. ಶ್ರೀಮದ್ವರದೇಂದ್ರತೀರ್ಥರು
೧೯. ಶ್ರೀಮತ್ಸುಕೃತೀಂದ್ರತೀರ್ಥರು
೨೦. ಶ್ರೀಮತ್ಸುಧೀಂದ್ರತೀರ್ಥರು
(ಈಗಿನವ...

# ಶ್ರೀಮತ್ಸುಧೀಂದ್ರತೀರ್ಥ ಶ್ರೀಪಾದಂಗಳವರು

ಶ್ರೀ ಸಂಸ್ಥಾನ ಕಾಶೀ ಮಠದ ವಿದ್ಯಮಾನ ಪೀಠಾಧೀಶರಾಗಿರುವ ಶ್ರೀಮತ್ಸು ಧೀಂದ್ರತೀರ್ಥ ಶ್ರೀಪಾದಂಗಳವರು ಈ ಗುರು ಪರಂಪರೆಯವರಲ್ಲಿನ ಇಪ್ಪತ್ತನೆಯ ಗುರುವರ್ಯರಾಗಿದ್ದಾರೆ. ಪೂರ್ವಾಶ್ರಮದಲ್ಲಿ ಇವರ ಹೆಸರು ಸದಾಶಿವ ಎಂದಿತ್ತು.

ಇವರ ಶಿಷ್ಯ ಸ್ವೀಕಾರ ಸಮಾರಂಭವನ್ನು ತಾ. ೨೪—೫—೧೯೪೪ ರಲ್ಲಿ ಶ್ರೀ ಮತ್ಸುಕೃತೀಂದ್ರತೀರ್ಥ ಶ್ರೀಪಾದಂಗಳವರು ದಕ್ಷಿಣ ಕನ್ನಡದ ಮೂಲ್ಕಿಯ ಶ್ರೀ ವೆಂಕಟರಮಣ ದೇವಾಲಯದಲ್ಲಿ ನೆರವೇರಿಸಿದರು. ಅನಂತರ ಶಿಷ್ಯ ಸ್ವಾಮಿಯವರು ಕೆಲವು ವರ್ಷಗಳ ವರೆಗೆ ಕಾರ್ಕಳದಲ್ಲಿದ್ದು ಸಂಸ್ಕೃತ ಭಾಷೆಯ ಉಚ್ಚ ಶಿಕ್ಷಣವನ್ನು ಪಡೆದಿದ್ದರು. ಪೂರ್ವಾಶ್ರಮದಲ್ಲಿ ಇವರಿಗೆ ಕಾಲೇಜ ವಿದ್ಯಾಭ್ಯಾಸವೂ ಲಭಿಸಿದ್ದಿತು.

ಶ್ರೀಸಂಸ್ಥಾನದಲ್ಲಿ ಹಿಂದಿನಿಂದ ನಡೆದುಬಂದ ಸಂಪ್ರದಾಯವೊಂದಿದೆ. ಇದರ ಮೇರೆಗೆ ಶ್ರೀ ಸಂಸ್ಥಾನದ ಗುರುವರ್ಯರು ರಾಮೇಶ್ವರಕ್ಕೆ ಸಂದರ್ಶನವನ್ನೀಯುವಾಗ ಅಲ್ಲಿನ ದೇವಾಲಯದ ಆಡಳಿತಗಾರರಿಗೆ ಮುಂದಾಗಿಯೆ ಈ ಸಮಾಚಾರವನ್ನು ತಿಳಿಸ ಲಾಗುತ್ತದೆ. ಅನಂತರ ಈ ಆಡಳಿತಗಾರರು ಗುರುವರ್ಯರನ್ನು ಗೌರವಪೂರ್ವಕವಾಗಿ ಉಗಿಬಂಡಿಯ ನಿಲ್ದಾಣದಲ್ಲಿ ಸ್ವಾಗತಿಸಿ, ಅಲ್ಲಿಂದ ಮೆರವಣಿಗೆಯ ಮೂಲಕ ಗುರು ಗಳನ್ನು ಮಠಕ್ಕೆ ಕೊಂಡೊಯ್ಯಲಾಗುತ್ತದೆ. ಆ ಮೇಲೆ ಗುರುವರ್ಯರನ್ನು ದೇವಾ ಲಯಕ್ಕೆ ಬಿರುದಾವಳಿಗಳೊಂದಿಗೆ ಸ್ವಾಗತಿಸಿ, ಅಲ್ಲಿ ಶ್ರೀಪಾದಂಗಳವರ ಸಮಕ್ಷಮ ದಲ್ಲಿ ದೇವತಾರ್ಚನೆಯನ್ನು ನಡೆಸಲಾಗುತ್ತದೆ.

ಶ್ರೀ ಸಂಸ್ಥಾನ ಕಾಶೀಮಠದ ಗುರುಗಳಿಗೆ ದೊರೆತ ಅನೇಕ ಗೌರವಗಳಲ್ಲಿ— ಮೈಸೂರು ಸರಕಾರದಿಂದ ದೊರೆತ ಗೌರವವೂ ಒಂದಾಗಿದೆ. ಇದರ ಮೇರೆಗೆ ಶ್ರೀಪಾದಂಗಳವರಿಗೆ ಮೈಸೂರು ರಾಜ್ಯದಲ್ಲೆಲ್ಲೂ ಬಿರುದಾವಳಿಗಳೊಂದಿಗೆ ಸಂಚರಿಸುವ ಹಕ್ಕನ್ನು ಕೊಡಲಾಗಿದೆ. ಅಲ್ಲದೆ ಅವರು ಸಂದರ್ಶಿಸುವ ಪ್ರತಿಯೊಂದು ಜಿಲ್ಲೆಯ ಗಡಿನಾಡಿನಲ್ಲೂ, ಮುಖ್ಯ ಪಟ್ಟಣದಲ್ಲೂ ಸರಕಾರದ ಅಧಿಕಾರಿಗಳು ಅವರನ್ನು ಸ್ವಾಗತಿಸಬೇಕಾಗಿದೆ. ಅಲ್ಲದೆ ಶ್ರೀಪಾದಂಗಳವರು ಬೆಂಗಳೂರಿಗೆ ಭೆಟ್ಟಿಯೀಯುವಾಗ ಅಂದಿನ ಭಿಕ್ಷೆಯಾಗಿ ಮೈಸೂರು ಸರಕಾರವು ೫೦ ರೂ. ಗಳನ್ನು ಶ್ರೀಪಾದಂಗಳವ ರಿಗೆ ಕೊಡಬೇಕಾಗಿದೆ. ಇವರು ಮೈಸೂರಿಗೆ ಭೇಟಿಯಿತ್ತಲ್ಲಿ ಇವರನ್ನು ಮೈಸೂರು ಅರಮನೆಯ ಬಿರುದಾವಳಿಗಳೊಂದಿಗೆ ಗೌರವಪೂರ್ವಕವಾಗಿ, ಪಲ್ಲಕ್ಕಿ ಸೇವೆಯೊತ ಗೂಡಿ, ಅರಮನೆಯ ವಾದ್ಯವೃಂದ ಸಮೇತವಾಗಿ ಮೆರವಣಿಗೆಯ ಮೂಲಕ ಶ್ರೀಪಾದಂಗಳವರ ಮೊಕ್ಕಾಮಿಗೆ ಬರಮಾಡಿಸಬೇಕಾಗಿದೆ. ಅಲ್ಲದೆ ಅಂದಿನ ಭಿಕ್ಷೆಯಾಗಿ ಅರಮನೆಯಿಂದ ೨೦೦ ರೂಪಾಯಿಗಳನ್ನೂ, ಒಂದು ಜತೆ ಪೀತಾಂಬರವನ್ನೂ ಶ್ರೀಪಾದಂಗಳವರಿಗೆ ಒಪ್ಪಿಸಬೇಕಾಗಿದೆ.

( ಡಾ॥ ವೆಂಕಟ್ರಾಯ ಅನಂತ ಶೆಣೈ ಇವರ "ಕಾಶೀಮಠದ ಸಂಕ್ಷಿಪ್ತ ಪರಿಚಯ"ದಿಂದ )

# ಮಹಿಷಿ ಆಚಾರ್ಯರು (ಶಿರಹಟ್ಟಿ)

೧೮ ನೇ ಶತಮಾನದ ಕೊನೆಯ ಭಾಗದಲ್ಲಿ ತುಂಗಾತೀರವಾದ ಮಹಿಷೀಕ್ಷೇತ್ರದಲ್ಲಿ ಬೋಧರಾಯಾಚಾರ್ಯರೆಂಬ ಮಹಾನುಭಾವರು ವಾಸವಾಗಿದ್ದರು. ಈ ಮನೆತನದವರಿಗೆ ವೇದ ವಿದ್ಯೆ ಹಾಗೂ ವೈದ್ಯಕ ವಿದ್ಯೆ ಎರಡರಲ್ಲಿಯೂ ವಂಶಪರಂಪರಾಗತವಾಗಿ ಸಿದ್ಧಿ-ಪ್ರಸಿದ್ಧಿಗಳೆರಡೂ ಇದ್ದವು.

## ೧. ಬೋಧರಾಯಾಚಾರ್ಯ ಮಹಿಷಿ

ವೇದ ಹಾಗೂ ಆಯುರ್ವೇದ ಎರಡರಲ್ಲಿಯೂ ಪರಿಣಿತರಿದ್ದರು. ಇವರಿಗೆ— ನಾರಾಯಣಾಚಾರ್ಯ, ಚಕ್ರಪಾಣಿಚಾರ್ಯ, ಕೇಶವಾಚಾರ್ಯ ಎಂಬ ಮೂವರು ಮಕ್ಕಳಿದ್ದರು.

## ೨. ನಾರಾಯಣಾಚಾರ್ಯ ಮಹಿಷಿ

ಶ್ರೀ ನಾರಾಯಣಾಚಾರ್ಯರು ವೈದ್ಯಕ ಹಾಗೂ ವೈದಿಕ ವಿದ್ಯೆಗಳೆರಡರಲ್ಲಿಯೂ ಪಾರಂಗತರಾಗಿ "ವೈದ್ಯೋ ನಾರಾಯಣೋ ಹರಿಃ" ಎಂಬ ಮಾತು ಅವರಲ್ಲಿ ಸಾರ್ಥಕತೆಯನ್ನು ಪಡೆದಿತ್ತು.

ಟೀಪುಸುಲ್ತಾನನ ಮಡದಿಗೆ ಪರಿಣಾಮಶೂಲೆ ಪ್ರಾರಂಭವಾಗಿ ಯಾವ ಸಮೀಪದ ರಾಜ ವೈದ್ಯರಿಂದಲೂ ಗುಣವಾಗದಿರಲು ಸ್ವಯಂ ಟಿಪ್ಪುವು ಬೇಗಂಳನ್ನು ಕರೆದುಕೊಂಡು ಮಹಿಷಿಗೆ ಬಂದನಂತೆ. ನಾರಾಯಣಾಚಾರ್ಯರ ಹಸ್ತಗುಣದಿಂದ ಟಿಪ್ಪುಸುಲ್ತಾನನ ಬೇಗಮ್ಮಳ ಉದರ ಶೂಲೆಯು ಪೂರ್ಣ ಗುಣವಾದುದರಿಂದ ಸಂತುಷ್ಟನಾದ ಸುಲ್ತಾನನು— "ಬಯಸಿದ್ದನ್ನು ಕೊಡುವೆನು, ಬೇಕಾದುದನ್ನು ಬೇಡಿರಿ" ಎಂದನು.

ಆದಕ್ಕೆ ನಾರಾಯಣಾಚಾರ್ಯರು— "ನನಗೇನು ಬೇಡ. ಹಿಂದುಗಳನ್ನು ಬಲವಂತದಿಂದ ಮುಸಲ್ಮಾನರನ್ನಾಗಿ ಮಾಡುವದನ್ನು ಕೂಡಲೇ ನಿಲ್ಲಿಸಿರಿ." ಸುಲ್ತಾನನು ಅವರ ಮಾತನ್ನು ಒಪ್ಪಿಕೊಂಡು, ಮತಾಂತರೀಕರಣವನ್ನು ನಿಲ್ಲಿಸಿದನು.

ಆಚಾರ್ಯರಿಗೆ ಬೇಡವೆಂದರೂ ಒಲುಮೆಯಿಂದ ಬಿನ್ನಹ ಮಾಡಿಕೊಂಡು ವಿಪುಲವಾಗಿ ಭೂಮಿ ಕಾಣಿಕೆಯನ್ನು ಉಂಬಳಿ ಹಾಕಿಕೊಟ್ಟನು. ಟೀಪು ಕೊಟ್ಟ ಆ ಭೂಮಿಯು ಇಂದು ಕೇಂದ್ರಸರಕಾರದ ಉಪಮಂತ್ರಿ ಶ್ರೀಮತಿ ಸರೋಜಿನಿ ಮಹಿಷಿ ಇವರ ಮನೆತನದ ವಶದಲ್ಲಿ ಇರುತ್ತದೆ.

ಶ್ರೀ ನಾರಾಯಣಾಚಾರ್ಯರ ಪಾಂಡಿತ್ಯ ಹಾಗೂ ವೈದ್ಯಕೀಯ ವೈಚಕ್ಷಣ್ಯಗಳನ್ನು ಕಂಡು ಕೇಳಿ ಶಿರಹಟ್ಟಿಯ ಸಂಸ್ಥಾನಿ ಸರ್ವಾಧಿಕಾರಿಗಳಾದ ಭಾವುಸಾಹೇಬಲಾಗು ಎಂಬವರು ತುಂಬ ಪ್ರಭಾವಿತರಾಗಿ ಆಚಾರ್ಯರನ್ನು ಶಿರಹಟ್ಟಿಗೆ ಕರೆತಂದು ಉದಾರಾಶ್ರಯ ನೀಡಿದರು.

ನಾರಾಯಣಾಚಾರ್ಯರಲ್ಲಿ ಅನೇಕ ಶಿಷ್ಯರು ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಅಧ್ಯಯನ ಮಾಡಿದರು.

ಗದುಗಿನಲ್ಲಿದ್ದ ಶ್ರೀ ಯೋಗಿ ನಾರಾಯಣಾಚಾರ್ಯರು ಈ ಶಿರಹಟ್ಟಿ ಮಹಿಷಿ ನಾರಾಯಣಾಚಾರ್ಯರಿಂದ ಭಾಗವತದ ಗೂಢಾರ್ಥಗಳನ್ನು ಕೇಳಿ ಸಂತೋಷಪಡುತ್ತಿದ್ದರು.

ನಾರಾಯಣಾಚಾರ್ಯರ ಕೊನೆಯ ಸಹೋದರರಾಗಿದ್ದ ಕೇಶವಾಚಾರ್ಯರು ರತ್ನಾಗಿರಿಯಲ್ಲಿ ವಾಸವಾಗಿದ್ದರು. ನಾರಾಯಣಾಚಾರ್ಯರು ಒಮ್ಮೆ ರತ್ನಾಗಿರಿಗೆ ಹೋದಾಗ್ಗೆ ಪೇಶ್ವೆ ದರ್ಬಾರದ ಆಸ್ಥಾನ ವಿದ್ವಾಂಸರಾದ ತ್ರ್ಯಂಬಕಶಾಸ್ತ್ರಿ ಮತ್ತು ಗೋಪಿನಾಥ ಶಾಸ್ತ್ರಿಗಳೊಡನೆ ವಾಕ್ಯಾರ್ಥ ಮಾಡಿ ಅವರನ್ನು ಗೆದ್ದರಂತೆ. ಬಂದ ಪಂಡಿತರೊಡನೆ ಕಾಲು ಚಾಚಿ ಕುಳಿತು ವಾಕಾರ್ಥ ಮಾಡುವ ಅವರ ದರ್ಪ, ದೌರ್ಜನ್ಯಗಳನ್ನು ಖಂಡಿಸಿ ಬುದ್ಧಿ ಹೇಳಿದರಂತೆ.

ಶಿರಹಟ್ಟಿಯಲ್ಲಿ ಆಚಾರ್ಯರ ಅಂತ್ಯ ಯಾತ್ರೆಯು ನಡೆದ ಸ್ಥಳದಲ್ಲಿ ಒಂದು ಅಶ್ವತ್ಥವೃಕ್ಷ ಬೆಳೆದಿದ್ದು ಆ ಅಶ್ವತ್ಥ ಕಟ್ಟೆಗೆ ಆಚಾರ್ಯರ ಕಟ್ಟೆ ಎಂದು ಕರೆಯುವರು.

## ೩. ಮಹಿಷಿ ವೆಂಕಟರಮಣಾಚಾರ್ಯ ಶಿರಹಟ್ಟಿ

ತಂದೆಯಂತೆ ಇವರು ಕೂಡ ಘನಪಂಡಿತರಾಗಿದ್ದರು. ಇವರ ಪ್ರಚಂಡಪಾಂಡಿತ್ಯವನ್ನು ಕಂಡು ಸಾಂಗಲಿಯ ಸಂಸ್ಥಾನಿಕರು ಇವರನ್ನು ತಮ್ಮ ಸಂಸ್ಥಾನದ ಆಸ್ಥಾನ ವಿದ್ವಾಂಸರನ್ನಾಗಿ ಮಾಡಿಕೊಂಡು ತಮ್ಮಲ್ಲಿಯೇ ಇಟ್ಟುಕೊಂಡರು.

ಭಾರತದ ವರಿಷ್ಠ ನಿವೃತ್ತ ನ್ಯಾಯಾಧೀಶರಾದ ಶ್ರೀ ಪಿ. ಬಿ. ಗಜೇಂದ್ರಗಡಕರ ಅವರ ತಂದೆ ಸಾತಾರಾ ಬಾಳಾಚಾರ್ಯರು ವೆಂಕಟರಮಣಾಚಾರ್ಯರ ಅನೇಕ ಪಂಡಿತ ಶಿಷ್ಯರಲ್ಲಿ ಪ್ರಮುಖರಾಗಿದ್ದರು.

## ೪. ಅಚ್ಯುತಾಚಾರ್ಯರು

ವೆಂಕಟರಮಣಾಚಾರ್ಯರ ಮೊಮ್ಮಕ್ಕಳಾದ ಅಚ್ಯುತಾಚಾರ್ಯರು ನ್ಯಾಯಶಾಸ್ತ್ರದಲ್ಲ ಅಪ್ರತಿಮ ಪಂಡಿತರಾಗಿದ್ದರು. ಇವರಲ್ಲಿ ಶಾಸ್ತ್ರ ವ್ಯಾಸಂಗ ಮಾಡಲಿಕ್ಕಾಗಿ ಕರ್ನಾಟಕ, ಮಹಾರಾಷ್ಟ್ರ ದೇಶಗಳಿಂದ ಅನೇಕ ವಿದ್ಯಾರ್ಥಿಗಳು ಬಂದು ಶಿರಹಟ್ಟಿಯಲ್ಲಿ ಇರುತ್ತಿದ್ದರು.

## ೫. ರಾಮದಾಸಾಚಾರ್ಯರು

ನಾರಾಯಣಾಚಾರ್ಯರ ಮೊಮ್ಮಕ್ಕಳಾದ ಶ್ರೀ ರಾಮದಾಸಾಚಾರ್ಯರು— ಸಂಸ್ಕೃತ ಹಾಗೂ ಆಯುರ್ವೇದಗಳಲ್ಲಿ ಪಂಡಿತರಾಗಿದ್ದರು. ಮಹಿಷಿ ಮನೆತನದ ಸೊತ್ತೆನಿಸಿದ್ದ ವೈದ್ಯ ವಿದ್ಯೆಯಲ್ಲಿಯಂತೂ ಇವರು ಸಿದ್ಧ ಹಸ್ತರು. ಆ ಕಾಲದ ಪ್ರಖ್ಯಾತ ವೈದ್ಯರೆನಿಸಿದ ಇವರು ತಮ್ಮ ಅನುಭವ ಹಾಗೂ ಪ್ರಯೋಗಗಳಿಂದ ಅನೇಕ ಹೊಸ ಆಯುರ್ವೇದ ಔಷಧಗಳನ್ನು ಸಿದ್ಧಪಡಿಸಿದ್ದರು.

## ೬. ಸಂಗೀತ ವಿದ್ವಾನ್ ಕೆ. ವಾಸುದೇವಾಚಾರ್ಯ, ಮೈಸೂರು

ಇತ್ತೀಚಿನ ಗಾನ ಗಂಧರ್ವರೆಂದು ಪ್ರಸಿದ್ಧರಾದ ಮೈ. ವಾ. ವಾಸುದೇವಾಚಾರ್ಯರು ಸಂಸ್ಕೃತ, ಶಾಸ್ತ್ರ, ಸಾಹಿತ್ಯ, ವೇದಾಂತ, ದಾಸ ಸಾಹಿತ್ಯಗಳಲ್ಲಿಯೂ ಗಣ್ಯ ಪಂಡಿತರಾಗಿದ್ದರು.

ಬಾಲ್ಯದಲ್ಲಿ ಬಡತನದ ಬೇಗೆಯಲ್ಲಿ ಬೆಂದ ಅವರು ಮೈಸೂರಿಗೆ ಬಂದು ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ವ್ಯಾಸಂಗ ಮಾಡಿ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮುಂದೆ ಸಂಗೀತದಲ್ಲಿ ಅಭಿರುಚಿ ಹುಟ್ಟಿದ ಇವರು ಅದರಲ್ಲಿಯೂ ಸಿದ್ಧಿಯನ್ನು ಪಡೆದು ಸ್ವರಬ್ರಹ್ಮರೆನಿಸಿದರು. ಇವರ ಶಾಸ್ತ್ರ, ಸಂಗೀತ, ಸಾಹಿತ್ಯಕ್ಕೆ ಮೆಚ್ಚಿದ ಮೈಸೂರಿನ ನಾಲ್ವಡಿ ಕೃಷ್ಣರಾಜ ಮಹಾರಾಜ ಒಡೆಯರು ಉದಾರಾಶ್ರಯವಿತ್ತು ಅರಮನೆಯ ಆಸ್ಥಾನ ವಿದ್ವಾಂಸರನ್ನಾಗಿ ಮಾಡಿಕೊಂಡು, ಪದವಿ ಪ್ರಶಸ್ತಿ, ಗೌರವಗಳನ್ನಿತ್ತು ಸತ್ಕರಿಸಿದರು.

ಸರಸ್ವತಿಯ ಸ್ತನದ್ವಯವೆಂದು ಪ್ರಸಿದ್ಧವಾದ ಸಾಹಿತ್ಯ, ಸಂಗೀತ ಎರಡರಲ್ಲಿಯೂ ಒಳ್ಳೇ ಪಾಂಡಿತ್ಯವನ್ನು , ವಿಶೇಷ ಗತಿ, ಪರಣತಿಗಳನ್ನು ಪಡೆದ ಆಚಾರ್ಯರಿಗೆ ಕೊನೆಗಾಲದಲ್ಲಿ ಭಾರತ ಕೇಂದ್ರ ಸರಕಾರವು ರಾಷ್ಟ್ರಪತಿ ಪ್ರಶಸ್ತಿಯನ್ನು ಕೊಟ್ಟು ತನ್ನನ್ನು ಮನ್ನಿಸಿಕೊಂಡಿತು.

ಕೊನೆಯ ಕಾಲದಲ್ಲಿ ಅಡಿಯಾರದ ಸಂಗೀತ ಎಕಾಡಮಿಯ ಡಾಯರೆಕ್ಟರರಾಗಿ ಅಲ್ಲಿಯೇ ಇದ್ದು ಸೇವೆ ಸಲ್ಲಿಸಿದರು.

ಶ್ರೀ ಮಧ್ವಾಚಾರ್ಯರ ದ್ವಾದಶ ಸ್ತೋತ್ರಕ್ಕೆ ಸಂಗೀತ ಶಾಸ್ತ್ರಾನುಸಾರಿಯಾದ ರಾಗ–ತಾಲ–ಲಯಗಳನ್ನು ತೋರಿಸಿ ಸ್ವರ, ಪ್ರಸ್ತಾರ ಹಾಕಿ ಒಳ್ಳೇ ಗೇಯತೆಯನ್ನು ವ್ಯಕ್ತಪಡಿಸಿದ್ದಾರೆ.

ಇವರು ಸಂಸ್ಕೃತ, ಕನ್ನಡ, ತೆಲಗು ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ.

ವಾಸುದೇವಾಚಾರ್ಯರು ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ದೀಕ್ಷೆಯುಳ್ಳವರೂ, ಶ್ರೀ ರಾಘವೇಂದ್ರಸ್ವಾಮಿಗಳವರ ಪರಮ ಭಕ್ತರೂ ಆಗಿದ್ದರು.

# ಹೊನ್ನಿಗನೂರ ಆಚಾರ್ಯರು

## ೭. ಪಂಡಿತ ಪೈಠಣಕರ ನಾರಾಯಣಾಚಾರ್ಯ

ಇವರು ಶಾಸ್ತ್ರದಲ್ಲಿ ಪಂಡಿತರಿದ್ದಂತೆ ರಾಜ್ಯ ಶಾಸ್ತ್ರ, ಯುದ್ಧ ಶಾಸ್ತ್ರಗಳಲ್ಲಿಯೂ ಪರಿಣತರಾಗಿದ್ದರು. ಬ್ರಿಟಿಶರು ಕ್ರಮೇಣ ಭಾರತ ದೇಶವನ್ನು ವಶಪಡಿಸಿಕೊಂಡು ಮಹಾರಾಷ್ಟ್ರದ ಪೇಶ್ವೇ ಸಾಮ್ರಾಜ್ಯವನ್ನು ಮಣ್ಣುಗೂಡಿಸಿದ್ದನ್ನು ಕಂಡು ಸ್ವಾತಂತ್ರ್ಯ ಪ್ರೇಮಿಗಳಾದ ನಾರಾಯಣಾಚಾರ್ಯರ ರಕ್ತವೂ ಕುದಿಯಿತು.

ಕೂಡಲೇ ಅವರು ದೇಶೀ ಸಂಸ್ಥಾನಿಕರನ್ನೂ, ಪ್ರಜೆಗಳನ್ನೂ ಹುರಿದುಂಬಿಸಿ ಪರಕೀಯ ಸತ್ತೆಯ ವಿರುದ್ಧ ಬಂಡು ಎಬ್ಬಿಸಿ ಆಂಗ್ಲರ ಕಪಿ ಮುಷ್ಟಿಯಿಂದ ದೇಶ ವನ್ನು ಸ್ವತಂತ್ರಗೊಳಿಸಬೇಕೆಂದು ಸಂಕಲ್ಪಿಸಿದರು. ಅದಕ್ಕಾಗಿ ಅವರು ಪೈಠಣದಿಂದ ಹೊರಬಿದ್ದು ಕರ್ನಾಟಕಕ್ಕೆ ಬಂದು— ಗಜೇಂದ್ರಗಡ, ನರಗುಂದ, ಬನ್ನಿಗೋಳ, ಮುಂಡರಗಿ ಮುಂತಾದ ಕಡೆಗಳಲ್ಲಿ ಸ್ವಾತಂತ್ರ್ಯದ ಕಿಡಿಗಳನ್ನು ಹೊತ್ತಿಸಿದರು. ಆಗಿನ ಆಳರಸರು ಇವರನ್ನು ಬಂಡಖೋರ ನಾರಾಯಣಾಚಾರ್ಯರೆಂದು ತಮ್ಮ ಕಾಗದ-ಪತ್ರಗಳಲ್ಲಿ ಉಲ್ಲೇಖಿಸಿದ್ದಾರೆ.

ಕರ್ನಾಟಕದಲ್ಲಿ ಹಳ್ಳಿ-ಹಳ್ಳಿಗೆ ತಿರುಗಾಡಿ, ಊರೂರಿಗೆ ಸುತ್ತಾಡಿ ಕ್ರಾಂತಿಯ ಜ್ವಾಲೆಯನ್ನು ಹರಡಿ, ೧೮೫೭ ನೇ ಇಸ್ವಿಯ ಬಂಡಾಯಕ್ಕೆ ಈ ಪ್ರಾಂತದಲ್ಲಿ ಸಂಘ ಟನೆಯನ್ನು ಮಾಡಿದವರೆಂದರೆ— ಈ ಪಂಡಿತ ನಾರಾಯಣಾಚಾರ್ಯರೇ.

ದುರ್ದೈವದಿಂದ ಕ್ರಾಂತಿ ವಿಫಲವಾದ ಬಳಿಕ ಆಚಾರ್ಯರು ನಿರಾಶರಾಗಿ, ತಪಃ ಸ್ವಾಧ್ಯಾಯಗಳಲ್ಲಿಯೇ ದೇಹ ಸವಿಸಿದರು. ವಾಯು ಸ್ತುತಿಯ ಪುರಶ್ಚರಣದಿಂದ ನಾರಾಯಣಾಚಾರ್ಯ, ದಾಸಾಚಾರ್ಯ, ಖೊಬ್ಬಾಚಾರ್ಯರೆಂಬ ಮೂವರು ಮಕ್ಕಳು ಜನಿಸಿದರು.

## ೮. ಬಾಳಾಚಾರ್ಯರು

ಇವರು ನ್ಯಾಯ, ವ್ಯಾಕರಣಗಳಲ್ಲಿ ಘನ ಪಂಡಿತರಾಗಿದ್ದರು. ಧಾರವಾಡದ ಕೋರ್ಟಿನಲ್ಲಿ ಧರ್ಮದರ್ಶಿಗಳಾಗಿದ್ದರು.

## ೯. ದಾಸಾಚಾರ್ಯರು

ಇವರು ನ್ಯಾಯ, ವೇದಾಂತ ಶಾಸ್ತ್ರಗಳಲ್ಲಿ ಅಪ್ರತಿಮ ಪಂಡಿತರಾಗಿದ್ದರು. ವಾದ ವೇದಿಕೆಯಲ್ಲಿಯೂ ಇವರೊಂದು— ವೀರಸಿಂಹ.

ಇವರ ಪ್ರತಿಭಾ ಪಾಂಡಿತ್ಯ ಹಾಗೂ ವಾದ ಕೌಶಲ್ಯಗಳನ್ನು ಕಂಡು ಹೈದರಾಬಾದ ನಿಜಾಮನು ಸಂತುಷ್ಟನಾಗಿ ಇವರಿಗೆ ಹೊನ್ನಿಗನೂರು ಎಂಬ ಗ್ರಾಮವನ್ನು ಜಹಗೀರು ಹಾಕಿಕೊಟ್ಟನು. ಅಂದಿನಿಂದ ಈ ಮನೆತನಕ್ಕೆ ಹೊನ್ನಿಗನೂರು ಆಚಾರ್ಯರ ಮನೆತನವೆಂದು ಹೆಸರಾಯಿತು.

ಇವರು ಅನೇಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಪಾಠ-ಪ್ರವಚನ ಮಾಡುತ್ತಿದ್ದರು.

## ೧೦. ಖೊಬ್ಬಾಚಾರ್ಯರು

ನಾರಾಯಣಾಚಾರ್ಯರು ಮಾಡಿದ ವಾಯುಸ್ತುತಿ ಪುರಶ್ಚರಣವು ಅವರ ಮಗ ಖೊಬ್ಬಾಚಾರ್ಯರಲ್ಲಿ ತನ್ನ ಬಲವೀರ್ಯವನ್ನು ನಿದರ್ಶನಕ್ಕೆ ಇಟ್ಟಂತಿತ್ತು.

ಬಾಲ್ಯದಲ್ಲಿ ವಿಶೇಷವಾಗಿ ಖೊಬ್ಬರಿಯನ್ನು ಇವರು ತಿನ್ನುತ್ತಿದ್ದರಿಂದ ಇವರಿಗೆ ಖೊಬ್ಬಾಚಾರ್ಯರೆಂದು ಹೆಸರಾಯಿತು. ಬಲಭೀಮನ ಆವೇಶವಾದಂತಿದ್ದ ಖೊಬ್ಬಾಚಾರ್ಯರ ಶೌರ್ಯ-ವಿಕ್ರಮಗಳ ಕಥೆಗಳು ಉತ್ತರ ಕರ್ನಾಟಕದಲ್ಲಿ ಈಗಲೂ ಎಲ್ಲರ ಮನೆಮಾತಾಗಿವೆ.

ಪಂಜೆಯಲ್ಲಿ ಗೋಕಾವಿಥಾಲಿಯನ್ನು ಕಟ್ಟ ಹಸಿದ ಹೆಬ್ಬುಲಿಯನ್ನು ಇವರು ಹೊಡೆದು ಕೊಂದರಂತೆ. ಒಂದು ರಾಜ ಸಭೆಯಲ್ಲಿ ದಕ್ಷಿಣೆ ಕೊಡಲು ತಡವಾದಾಗ ಖೊಬ್ಬಾಚಾರ್ಯರು ಸಭಾ ಭವನದ ದೊಡ್ಡ ಕಲ್ಲಿನ ಕಂಬವನ್ನು ಎತ್ತಿ ರಾಜನ ನಿಲುವಂಗಿಯ ಹಿಂದಿನ ಸೆರಗಿನ ಮೇಲೆ ಇಟ್ಟು ಮನೆಗೆ ಹೋದರಂತೆ. ರಾಜನು ಪುನಃ ಖೊಬ್ಬಾಚಾರ್ಯರನ್ನು ಕರೆಯಿಸಿಯೇ ತನ್ನ ಅಂಗಿಯನ್ನು ಬಿಡಿಸಿಕೊಳ್ಳಲಾಯಿತು. ಕಾಶಿಯಲ್ಲಿ ಕೊಬ್ಬಿದ ಗೂಳಿಯನ್ನು ಮಣಿಸಿ ಅಪ್ರತಿಮ ಮಲ್ಲರೆನಿಸಿದರಂತೆ.

ಬರೀ ದೇಹದಿಂದ ಮಾತ್ರವಲ್ಲದೆ ಖೊಬ್ಬಾಚಾರ್ಯರು ಶಾಸ್ತ್ರಗಳಲ್ಲಿಯೂ ಅಪ್ರತಿಮ ವಿದ್ವಾಂಸರಾಗಿದ್ದರು. ಸಾತಾರಾ ಆಚಾರ್ಯರಲ್ಲಿ ವ್ಯಾಕರಣ ಶಾಸ್ತ್ರವನ್ನು ಅಧ್ಯಯನ ಮಾಡಿ ಖೊಬ್ಬಾಚಾರ್ಯರು ಕಾಶಿಗೆ ಹೋಗಿ ತರ್ಕ, ವ್ಯಾಕರಣ ಶಾಸ್ತ್ರಗಳ ಉದ್ಗ್ರಂಥಗಳ ಅಧ್ಯಯನ ಮಾಡಿ ಪಂಡಿತರೆನಿಸಿದರು.

ಇವರು ಜೋಧಪುರ, ಬಡೋದಾ, ಪುಣೆ, ರಾಯಪುರ ಮುಂತಾದ ಸಂಸ್ಥಾನಗಳಲ್ಲಿ ನಡೆಯುತ್ತಿದ್ದ ವಿದ್ವತ್ಸಭೆಗಳಿಗೆ ಹೋಗಿ, ತಮ್ಮ— ಬುದ್ಧಿರ್ಬಲಂ ಯಶೋ ಧೈರ್ಯಂ ತೋರಿಸಿ ತಮ್ಮ ವಾಕ್ಪಟುತ್ವದಿಂದ ಮಾನ-ಮನ್ನಣೆ ಪಡೆದು, ದಾನ-ದಕ್ಷಿಣೆ ತೆಗೆದುಕೊಂಡು ಬರುತ್ತಿದ್ದರು.

## ೧೧. ಬಾಳಾಚಾರ್ಯ

ಖೊಬ್ಬಾಚಾರ್ಯರ ಮಕ್ಕಳಾದ ಇವರು ಒಂಬತ್ತು ವರ್ಷ ಉಡುಪಿಯಲ್ಲಿದ್ದು ನ್ಯಾಯ, ವೇದಾಂತಾದಿ ಶಾಸ್ತ್ರಗಳನ್ನು ಓದಿ ಪಂಡಿತರಾಗಿದ್ದರು.

# ಛಲಾರಿ ಆಚಾರ್ಯರು

ದ್ವೈತ ಸಾಹಿತ್ಯಕ್ಕೆ ಛಲಾರಿ ಆಚಾರ್ಯರ ಮನೆತನದವರು ನೀಡಿದ ವಾಙ್ಮಯೀನ ಕಾಣಿಕೆಯು ಗಣನೀಯವೂ, ಉಲ್ಲೇಖನೀಯವೂ ಆಗಿದೆ. ದ್ವೈತ ವೇದಾಂತ ಗ್ರಂಥಗಳಿಗೆ ಛಲಾರಿ ಆಚಾರ್ಯರು ಬರೆದ ಟೀಕೆ, ಟಿಪ್ಪಣಿಗಳು ಗಾತ್ರದಲ್ಲಿ ಬೃಹತ್ತರವಾಗಿವೆ. ಗುಣದಲ್ಲಿ ಮಹತ್ತರವಾಗಿವೆ.

## ೧೨. ಛಲಾರಿ ನರಸಿಂಹಾಚಾರ್ಯ

ಉತ್ತರಾದಿ ಮಠದ ಶ್ರೀ ಸತ್ಯನಾಥತೀರ್ಥರ ಸಮಕಾಲೀನ ಶಿಷ್ಯರಾದ ಇವರು ೧೫ ಕ್ಕೂ ಮಿಕ್ಕಿ ಗ್ರಂಥಗಳನ್ನು ಬರೆದಿದ್ದಾರೆ.

ಗುಲಬುರ್ಗಾ ಜಿಲ್ಲೆಯ ಮಳಖೇಡ ಬಳಿ ಛಲಾರಿ ಗ್ರಾಮ ನಿವಾಸಿಗಳಾದ ಶ್ರೀ ನರಸಿಂಹಾಚಾರ್ಯರು ಶಾಸ್ತ್ರ, ಸಾಹಿತ್ಯ, ಸ್ಮೃತಿ, ಪುರಾಣ, ಪ್ರಮೇಯ, ಸ್ತೋತ್ರ ಮುಂತಾದ ಪ್ರಬಂಧಗಳನ್ನು ರಚಿಸಿದ್ದಾರೆ. ನರಸಿಂಹಾಚಾರ್ಯರು ಬರೆದ ಭಾಗವತ ತಾತ್ಪರ್ಯ ಟೀಕಾ, ಋಗ್ ಭಾಷ್ಯ ಟೀಕಾ ಟಿಪ್ಪಣಿ, ಮತ್ತು ಸ್ಮೃತ್ಯರ್ಥಸಾಗರ ಮುಂತಾದ ಗ್ರಂಥಗಳು ಮುಖ್ಯವಾಗಿರುತ್ತವೆ.

ಶ್ರೀ ನರಸಿಂಹಾಚಾರ್ಯರ ಶಾಬ್ದಿಕ ಕಂಠ ಮಣಿ ಎಂಬ ಗ್ರಂಥವು ವೈದಿಕ ಸ್ವರ ಪ್ರಕ್ರಿಯಾ ಹಾಗೂ ವ್ಯಾಕರಣ, ನಿರುಕ್ತಿ ಮುಂತಾದ ವಿಷಯಗಳನ್ನು ಮಾರ್ಮಿಕವಾಗಿ ವಿವೇಚಿಸಿ ಮಾಧ್ವರ ಮಂತ್ರಾರ್ಥ ವಿವರಣೆಯ ಸಶಾಸ್ತ್ರೀಯತೆಯನ್ನು ಸುವ್ಯವಸ್ಥಿತವಾಗಿ ಪ್ರತಿಪಾದಿಸುವ ಬೃಹತ್ ಗ್ರಂಥವಾಗಿದೆ.

## ೧೩. ಶೇಷಾಚಾರ್ಯ ಛಲಾರಿ

ಅಣುಭಾಷ್ಯ, ತತ್ವಸಂಖ್ಯಾನ, ತಂತ್ರಸಾರ ಸಂಗ್ರಹ, ಕರ್ಮ ನಿರ್ಣಯ, ಮುಂತಾದ ಅನೇಕ ಗ್ರಂಥಗಳ ಮೇಲೆ ಟೀಕೆ-ಟಿಪ್ಪಣಿ ಬರೆದ ಶೇಷಾಚಾರ್ಯರು ಛಲಾರಿ ನರಸಿಂಹಾಚಾರ್ಯರ ಮಕ್ಕಳಾಗಿದ್ದು, ಒಟ್ಟು ೧೧ ಕೃತಿಗಳ ಕರ್ತಾರರಾಗಿದ್ದಾರೆ. ಮುಖ್ಯವಾಗಿ ಅವರು ಸುಮಧ್ವ ವಿಜಯಕ್ಕೆ ಬರೆದ ಮಂದೋಪಕಾರಿಣಿ ಎಂಬ ವ್ಯಾಖ್ಯಾನವು— "ಬಾಲ ಸಂಘ ಮಪಿ ಬೋಧಯತ್ಯಲಂ" ಎಂಬ ವಚನದಂತೆ ಸುಲಲಿತವೂ, ಸರಳವೂ, ಅತ್ಯುಪಯುಕ್ತವೂ ಆಗಿದೆ.

ಶೇಷಾಚಾರ್ಯರ ಪ್ರಮಾಣ ಚಂದ್ರಿಕಾ ಎಂಬ ಪುಸ್ತಕವು ದ್ವೈತ ಶಾಸ್ತ್ರ ಪ್ರವಿಕ್ಷುಗಳಿಗೆ ಒಂದು ಸುಂದರವಾದ ಚಿಕ್ಕ ಕೈಪಿಡಿಯಂತೆ ಅತ್ಯುಪಯುಕ್ತವೂ, ಮಾರ್ಗದರ್ಶಕವೂ ಆಗಿರುತ್ತದೆ. ದ್ವೈತ ಸಿದ್ಧಾಂತದ ಪ್ರಮೇಯಗಳನ್ನೆಲ್ಲ ಅನ್ನಂಭಟ್ಟನ ತರ್ಕ ಸಂಗ್ರಹದಂತೆ ವರ್ಗೀಕರಿಸಿ ಸಾಮಾನ್ಯರಿಗೂ ತಿಳಿಯುವಂತೆ, ನೆನಪಿನಲ್ಲಿ ಉಳಿಯುವಂತೆ ಅಚ್ಚುಕಟ್ಟಾಗಿ ಹೇಳಲಾಗಿವೆ.

## ೧೪. ಸಂಕರ್ಷಣಾಚಾರ್ಯರ ಛಲಾರಿ

ಛಲಾರಿ ಶೇಷಾಚಾರ್ಯರ ಮಕ್ಕಳಾದ ಸಂಕರ್ಷಣಾಚಾರ್ಯರು ದ್ವೈತ ಪ್ರಪಂಚದ ಸೂರ್ಯ—ಚಂದ್ರರಂತಿರುವ ಶ್ರೀ ಟೀಕಾಕೃತ್ಪಾದರ ಮತ್ತು ಶ್ರೀ ಸತ್ಯನಾಥ ಶ್ರೀಚರಣರ ಚರಿತ್ರೆಗಳನ್ನು ಕಾವ್ಯರೂಪದಲ್ಲಿ ಬರೆದಿದ್ದಾರೆ.

ಅವರ ಶ್ರೀ ಜಯತೀರ್ಥ ವಿಜಯವು ೫ ಸರ್ಗದ ಕಾವ್ಯವಾಗಿದ್ದು ಸರ್ವಜ್ಞಕಲ್ಪರಾದ ಅವರ ಪಾವನ ಜೀವನ ಚರಿತ್ರೆಯನ್ನು ಮನೋಹರವಾದ ಶೈಲಿಯಲ್ಲಿ ಚಿತ್ತರಿಸಿದ್ದಾರೆ. ಇವರ ಸತ್ಯನಾಥಾಭ್ಯುದಯವು ೧೧ ಸರ್ಗದ ದಿವ್ಯ ಕಾವ್ಯವಾಗಿದ್ದು ತಂಜಾವೂರ ಅರಮನೆಯ ಲಾಯಬ್ರರಿಯಲ್ಲಿ ಸುರಕ್ಷಿತವಾಗಿರುತ್ತದೆ.

## ೧೫. ಸುಬ್ರಹ್ಮಣ್ಯಾಚಾರ್ಯರ ಛಲಾರಿ

ಶ್ರೀ ಸತ್ಯಾಭಿನವ ತೀರ್ಥರ ಶಿಷ್ಯರಾದ ಇವರು ಸಂಕರ್ಷಣಾಚಾರ್ಯರ ತಮ್ಮಂದಿರಾಗಿದ್ದು ಶ್ರೀ ಸತ್ಯನಾಥಾಭ್ಯುದಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾರೆ. ಮಣಿಮಂಜರಿಗೂ ಇವರು ಒಂದು ವ್ಯಾಖ್ಯಾನವನ್ನು ಬರೆದಿದ್ದು ಅದು ೬೦ ವರ್ಷಗಳ ಹಿಂದೆ ಬೆಳಗಾವಿಯಲ್ಲಿ ಮುದ್ರಿತವಾಯಿತು.

## ೧೬. ಛಲಾರಿ ನಾರಾಯಣಾಚಾರ್ಯರ

ಇವರ ಶಾಸ್ತ್ರ, ಸಾಹಿತ್ಯ, ಪುರಾಣಗಳ ಪಂಡಿತರಾಗಿದ್ದು, ಅನೇಕ ಟೀಕೆ–ಟಿಪ್ಪಣಿಗಳನ್ನು ಬರೆದಿದ್ದಾರೆ. ಶ್ರೀ ಆನಂದ ತೀರ್ಥರ ಮಹಾಭಾರತ ತಾತ್ಪರ್ಯ ನಿರ್ಣಯ ಹಾಗೂ ಭಾಗವತ ತಾತ್ಪರ್ಯ ನಿರ್ಣಯಕ್ಕೆ ಇವರು ಬರೆದ ಪ್ರಬೋಧಿನಿ ಎಂಬ ವ್ಯಾಖ್ಯಾನವು ಅತ್ಯಂತ ಉಪಯುಕ್ತವಾಗಿರುತ್ತದೆ.

## ೧೭. ಛಲಾರಿ ಶ್ರೀನಿವಾಸಾಚಾರ್ಯರ

ದ್ವೈತ ವೇದಾಂತದಲ್ಲಿ ಸರ್ವಸಂಪ್ರತಿಪನ್ನ ಪಂಡಿತರಾದ ಶ್ರೀ ಶ್ರೀನಿವಾಸಾಚಾರ್ಯರು ಅನೇಕ ಟೀಕೆ ಟಿಪ್ಪಣಿಗಳನ್ನು ಬರೆದು ತಮ್ಮ ಮನೆತನದ ಕೀರ್ತಿಯನ್ನು ಕಾಯ್ದುಕೊಂಡಿದ್ದಾರೆ. ತತ್ವ ಸಂಗ್ರಹವೆಂಬ ಗ್ರಂಥವನ್ನು ಬರೆದು ಅದಕ್ಕೆ ತಾವೇ ವ್ಯಾಖ್ಯಾನವನ್ನೂ ಬರೆದಿದ್ದಾರೆ.

## ೧೮. ನ್ಯಾಯರತ್ನಾಕರಕಾರ

ಅಜ್ಞಾತ ನಾಮಧಾಮಾದಿಗಳುಳ್ಳ ಈ ಗ್ರಂಥಕಾರರು ನ್ಯಾಯಾಮೃತ ಮೇಲಿನ ಅನೇಕ ಖಂಡನ ಮಂಡನ ಗ್ರಂಥಗಳ ಪರಾಮರ್ಶಮಾಡಿ ಮೂಲ ಗ್ರಂಥದ ಅನುಚ್ಛಿದ್ಯಮಾನ ಸತ್ಯ ತತ್ವಾಬೋಧಾಯಕತ್ವವನ್ನು ವ್ಯವಸ್ಥೆ ಮಾಡಿದ್ದಾರೆ.

## ೧೯. ತತ್ವದೀಪಿಕಾಕಾರ

ಭಟ್ಟೋಜಿ ದೀಕ್ಷಿತರ ಮಾಧ್ವ ವಾಙ್ಮಯ ದೂಷಕವಾದ ತತ್ವ ಕೌಸ್ತುಭ ಎಂಬ ಗ್ರಂಥವನ್ನು ಖಂಡನೆ ಮಾಡಿ, ಈ ಪ್ರಬಂಧವು ವೈಷ್ಣವೀಯ ಆಚಾರ್ಯ ಪ್ರಯೋಗಗಳಿಗೆಲ್ಲ ವ್ಯಾಕರಣ ಶಾಸ್ತ್ರಾನುಸಾರವಾಗಿ ಸಾಧುತ್ವವನ್ನು ಸಮರ್ಥನೆ ಮಾಡುತ್ತದೆ. ಇದರ ಹೆಸರು—"ತತ್ವದೀಪಿಕಾ" ಎಂದಿದ್ದು, ಮೈಸೂರ ಓರಿಯಂಟಲ್ ಲಾಯಬ್ರರಿಯಲ್ಲಿ ಇದರ ಒಂದು ಪ್ರತಿ ಸುರಕ್ಷಿತವಿದೆ.

## ೨೦ ಪುರುಷೋತ್ತಮ ಸೂರಿ

೧೬೩೦ ನೇ ವರ್ಷದಲ್ಲಿ ಇದ್ದ ಇವರು, ವಾದಿಭೂಷಣಂ ಎಂಬ ಗ್ರಂಥವನ್ನು ಬರೆದು ಅದ್ವೈತಿಗಳ ಬಂಧ ಮಿಥ್ಯಾತ್ವದ ಪ್ರಕ್ರಿಯೆಯನ್ನು ಖಂಡಿಸಿದ್ದಾರೆ. ಇವರು ಉತ್ತರಾದಿ ಮಠದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ಸಾಕ್ಷಾತ್ ಶಿಷ್ಯರಾಗಿದ್ದು ಇವರ ಗ್ರಂಥ ಪ್ರಣಯನ ಪ್ರಣಾಲಿಕೆಯು ವಿದ್ವಚಿತ್ತ ಸಮಾಕರ್ಷಣೀ ಆಗಿದೆ. ಇವರ ಈ ವಾದಿಭೂಷಣ ಗ್ರಂಥವು ಅಮುದ್ರಿತವಿದ್ದು ಇಂಡಿಯಾ ಆಫೀಸ ಲಾಯಬ್ರರಿಯಲ್ಲಿ ಇದರ ಒಂದು ಪ್ರತಿ ಇರುತ್ತದೆ.

## ೨೦. ವೇಣೀದತ್ತಾಚಾರ್ಯ ತರ್ಕವಾಗೀಶ

ಇವರು ಉತ್ತರ ದೇಶದವರಿದ್ದು ನೃಸಿಂಹಾಶ್ರಮ ವಿರಚಿತ ಭೇದಧಿಕ್ಕಾರ ಮತ್ತು ಅದ್ವೈತ ದೀಪಿಕಾ ಗ್ರಂಥಗಳನ್ನು ಖಂಡಿಸಿ ಭೇದ ಜಯಶ್ರೀ ಎಂಬ ಪ್ರಗಲ್ಭ ಗ್ರಂಥವನ್ನು ಬರೆದಿದ್ದಾರೆ. ಈ ಗ್ರಂಥದಲ್ಲಿ ಶ್ರೀ ಮಧ್ವಾಚಾರ್ಯರು ಹೇಳಿದ ಪಂಚ ಭೇದ ಸಿದ್ಧಾಂತದ ಸತ್ಯತ್ವವನ್ನೂ, ಜೀವ ತಾರತಮ್ಯವನ್ನೂ, ಶಾಸ್ತ್ರೋಕ್ತವಾಗಿ ಮಂಡಿಸಲಾಗಿದೆ. ಗುರುಮಧ್ವರ ಈ ಭೇದ ಸಿದ್ಧಾಂತದ ಮೇಲೆ ನೃಸಿಂಹಾಶ್ರಮನೇ ಮೊದಲಾದ ಅದ್ವೈತ ಪಂಡಿತರು ಹೇಳಿದ ಒಂದೂ ದೂಷಣವು ಸುತರಾಂ ಹತ್ತುವದಿಲ್ಲ. ಮತ್ತು ಮಧ್ವಾಚಾರ್ಯರ ಮಾತು ಶ್ರುತಿ, ಸ್ಮೃತಿ ಸಮ್ಮತವಾಗಿದ್ದು— ಅಚ್ಛೇದ್ಯ, ಅಭೇದ್ಯ ಮತ್ತು ಅದೂಷ್ಯ ಎಂದು ಈ ಭೇದ ಜಯಶ್ರೀ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

ಈ ವೇಣೀ ದತ್ತಾಚಾರ್ಯರು ತಮ್ಮ ಹೆಸರಿನ ಮುಂದಿನ ತರ್ಕವಾಗೀಶ ಎಂಬ ಪದವೇ ಸೂಚಿಸುವಂತೆ ನ್ಯಾಯ ಶಾಸ್ತ್ರದಲ್ಲಿ ಅಪ್ರತಿಮ ವಿದ್ವತ್‌ಕುಲ ಚಕ್ರವರ್ತಿಗಳಾಗಿದ್ದರೆಂದು ತಿಳಿದು ಬರುತ್ತದೆ. ನವ್ಯ ನ್ಯಾಯದ ಸೀಮಾಪುರುಷರೆನಿಸಿದ ರಘುನಾಥ ಶಿರೋಮಣಿಯ -ದಿಧೀತಿ ಗ್ರಂಥದ ಅನೇಕ ವಿಧಾನಗಳನ್ನು ಇವರು ಖಂಡಿಸಿ ಕೆಲವೊಂದು ಪ್ರಬಂಧಗಳನ್ನು ಬರೆದಿದ್ದಾರೆ. ಇವಲ್ಲದೆ, ಇವರು ಇನ್ನೂ ಅನೇಕ ಶಾಸ್ತ್ರೀಯ ಉದ್ಗ್ರಂಥಗಳನ್ನು ರಚಿಸಿದ್ದರೆಂಬುವದು ಅವರ ಭೇದಜಯಶ್ರೀ ಗ್ರಂಥದ ಪ್ರಸ್ತಾವನೆಯಿಂದ ತಿಳಿದುಬಂದಿದೆ.

## ೨೨. ವನಮಾಲಿ ಮಿಶ್ರ

ಉತ್ತರ ಭಾರತದಲ್ಲಿ ಮಧ್ವ ಮತದ ಅಭ್ಯುದಯ ಹಾಗೂ ಪ್ರಸಾರಗಳಿಗೆ ಕಾರಣರಾದ ಕೆಲವು ವಿದ್ವದ್ವೈಷ್ಣವ ಚೇತನಗಳಲ್ಲಿ ವನಮಾಲಿ ಮಿಶ್ರರೂ ಒಬ್ಬರು. ವೃಂದಾವನದ ಹತ್ತಿರ ತ್ರಿಯುಗ ಪುರದಲ್ಲಿ ಸುಪ್ರತಿಷ್ಠಿತವಾದ ಭಾರದ್ವಾಜ ಗೋತ್ರದ ಒಂದು ಬ್ರಾಹ್ಮಣ ಕುಟುಂಬದಲ್ಲಿ ವನಮಾಲಿ ಮಿಶ್ರರು ಜನಿಸಿದರು.

ಇವರು ಬಿಹಾರದ ಮಾಧ್ವಮತಾನುಯಾಯಿಗಳಾದ ಗಯಾವಾಡರ ವಂಶದ ರಾಗಿರಬಹುದೆಂದು ವಿದ್ವಾಂಸರು ತರ್ಕಿಸಿದ್ದಾರೆ. ಉತ್ತರಾದಿ ಮಠದ ಶ್ರೀ ವಿದ್ಯಾಧೀಶ ಶ್ರೀಪಾದಂಗಳವರ ಕಾಲದಿಂದಲೇ ಗಯಾಕ್ಷೇತ್ರದ ವಿಷ್ಣುಪಾದದ ಅರ್ಚಕರು ಮಾಧ್ವ ರಾಗಿದ್ದು ಎಲ್ಲರಿಗೂ ತಿಳಿದ ವಿಷಯ.

ವನಮಾಲಿ ಮಿಶ್ರರು ನಿಂಬಾರ್ಕ ಮತಾನುಯಾಯಿಗಳೆಂದು ದಾಸಗುಪ್ತರಂಥ ವಿಮರ್ಶಕ ಪಂಡಿತರು ಬರೆದಿದ್ದು ಸೋಜಿಗದ ಸಂಗತಿಯಾಗಿದೆ. ವನಮಾಲಿ ಮಿಶ್ರರು ಬರೆದ ಅಥವಾ ಮಿಶ್ರರ ಮೇಲೆ ಗ್ರಂಥಗಳನ್ನು ನೋಡಿದರೆ ಮಿಶ್ರರು ಅಪ್ಪಟ ಮಾಧ್ವರೆಂಬುವದು ಯಾರಿಗಾದರೂ ತಿಳಿಯುವಂಥ ಮಾತು.

ಅವರು ಬರೆದ ತರಂಗಿಣಿ ಸೌರಭ, ಮಧ್ವ ಮುಖಾಲಂಕಾರ, ಮಧ್ವಾಧ್ವ ಕಂಟಕೋದ್ಧಾರ ಮುಂತಾದ ಗ್ರಂಥಗಳು ವನಮಾಲಿ ಮಿಶ್ರರಗಿರುವ ಮಧ್ವಸಿದ್ಧಾಂತ ದೀಕ್ಷೆಯನ್ನೂ ಮತ ದಾರ್ಢ್ಯವನ್ನೂ ಶ್ರದ್ಧಾ ಜಾಡ್ಯವನ್ನೂ ಎತ್ತಿ ತೋರುತ್ತವೆ. ವಾಗ್ವಿಭೂತಿಗಳಿಂದ ದಕ್ಷಿಣದ ಕೊಂಕಣ ಪಟ್ಟಿಯ ಕರಾವಳಿ ಪ್ರಾಂತದಲ್ಲಿ ಜನಿಸಿದ ಮಧ್ವ ಮಹಾಮುನಿಗಳ ದ್ವೈತ ಸಿದ್ಧಾಂತವು ಬಂಗಾಲ ಉಪಸಾಗರದ ವರೆಗೂ ತನ್ನ ತತ್ವವಾದದ ಕಹಳೆಯನ್ನು ಮೊಳಗಿಸಿ ವಿಶ್ವಪ್ರತಿಷ್ಠಿತ ಸೌಕರ್ಯ ಒದಗಿಸಿತು.

## ೨೩. ಶಂಕರ ಮಿಶ್ರ

ಉತ್ತರ ದೇಶದ ಮಹಾ ಪಂಡಿತರಾದ ಇವರು ಭೇದರತ್ನಂ ಎಂಬ ಗ್ರಂಥವನ್ನು ಬರೆದು ಶ್ರೀ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನೇ ಚನ್ನಾಗಿ ಮಂಡಿಸಿದ್ದಾರೆ. ಕಣಾದ ಸೂತ್ರಗಳ ಮೇಲೆ ಉಪಸ್ಕರ ವ್ಯಾಖ್ಯಾನವನ್ನು ಬರೆದ ಶಂಕರ ಮಿಶ್ರರೇ ಇವರು ಎಂದು ಡಾ|| ಬಿ. ಎನ್. ಕೆ. ಶರ್ಮರವರ ಅಭಿಪ್ರಾಯಪಟ್ಟಿದ್ದಾರೆ. ಇವರು ತಮ್ಮ ಭೇದರತ್ನ ಗ್ರಂಥದಲ್ಲಿ ವಿಶ್ವ ಮಿಥ್ಯಾತ್ವ ತತ್ವವನ್ನು ಖಂಡಿಸಿ, ಪ್ರಪಂಚ ಸತ್ಯತ್ವವನ್ನು ಯುಕ್ತಿಯುಕ್ತವಾಗಿ ಮಂಡಿಸಿದ್ದಾರೆ.

## ೨೪. ವಿಶ್ವನಾಥ ಪಂಚಾನನ

ನ್ಯಾಯಶಾಸ್ತ್ರದ ದಿನಕರೀ ಗ್ರಂಥದ ಮೂಲವಾದ ಮುಕ್ತಾವಲಿ ಎಂಬ ಗ್ರಂಥದ ಕರ್ತೃಗಳಾದ ವಿಶ್ವನಾಥ ಪಂಚಾನನರು ಒಳ್ಳೇ ನಿಷ್ಠಾವಂತ ದ್ವೈತವಾದಿಗಳಾಗಿದ್ದರು.

ಇವರು ಅದ್ವೈತಿಗಳ ಐಕ್ಯ ಸಿದ್ಧಾಂತವನ್ನು ಖಂಡಿಸಿ ಭೇದ ಸಿದ್ಧಿ ಎಂಬ ಗ್ರಂಥ ವನ್ನು ಬರೆದಿದ್ದು ಇದರಲ್ಲಿ ಭೇದವಾದದ ವಿರುದ್ಧವಾಗಿ ಅದ್ವೈತಿಗಳು ಹೇಳುವ ಪ್ರಮಾಣ ಪ್ರಮೇಯುಗಳನ್ನೆಲ್ಲ ಹರಿತ ಯುಕ್ತಿಗಳಿಂದ ನಿರಾಕರಿಸಿ ಭೇದ ಸಿದ್ಧಾಂತ ಅಬಾಧಿತತೆಯನ್ನು ಪ್ರಸ್ಥಾಪಿಸಿದ್ದಾರೆ.

### ೨೫. ರಘುನಾಥರಾವ

ಉತ್ತರಾದಿಮಠದ ೧೮ ನೇ ಶತಮಾನದ ಆದಿ ಭಾಗದಲ್ಲಿದ್ದ ಶ್ರೀ ಸತ್ಯಪೂರ್ಣ ತೀರ್ಥ ಶ್ರೀಪಾದಂಗಳವರ ಪ್ರಿಯ ಶಿಷ್ಯ ಸುಭಾನುರಾಯನ ಸಹೋದರನೇ ಈ ರಘುನಾಥರಾಯ. ಇವರ ತಂದೆ ವೇದಾಜಿ ಭಾಸ್ಕರ. ಆರಣಿಯ ಜಹಗೀರದಾರರಾದ ಈ ರಾಜ ಕುಟುಂಬವು ವಿದ್ವದ್ ರಾಜವಂಶವೆಂದು ಆ ಕಾಲದಲ್ಲಿ ಪ್ರಸಿದ್ಧವಾಗಿದ್ದಿತು. ಈ ಆರಣಿಯ ರಘುನಾಥರಾಯನು ಭೇದ ತರಂಗಿಣಿ ಎಂಬ ಗ್ರಂಥವನ್ನು ಬರೆದು ಶ್ರೀ ಮಧ್ವ ಪ್ರತಿಪಾದಿತ ಭೇದ ಸಿದ್ಧಾಂತದ ಅಖಂಡನೀಯತೆಯನ್ನು ಶಾಶ್ವತ ಸಿದ್ಧಾಂತ ರೂಪತೆಯನ್ನು ಪ್ರತಿಪಾದಿಸಿದ್ದಾನೆ.

### ೨೬. ಸಾಗರ ರಾಮಾಚಾರ್ಯ

ಸಾಗರ ವೆಂಕಟೇಶಾಚಾರ್ಯ ಮತ್ತು ಶ್ರೀಮತಿ ಶಾಂತಾಬಾಯಿಯವರ ಸತ್ಪುತ್ರರಾದ ಸಾಗರ ರಾಮಾಚಾರ್ಯರು ೧೭೦೦ ನೇ ಶಕ ವರ್ಷದಲ್ಲಿ ಮಾಧ್ವ ಸಂಪ್ರದಾಯದ ಗೌಡ ಸಾರಸ್ವತ ಸಮಾಜದಲ್ಲಿ ಜನಿಸಿದರು. ಮಧ್ವ ಸಿದ್ಧಾಂತ ಕಟ್ಟೆದೆಯ ಅಭಿಮಾನಿಗಳಾದ ಇವರು ೭ ಸಂಸ್ಕೃತ ಗ್ರಂಥಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಕೊಂಕಣಾಭ್ಯುದಯ ಕಾವ್ಯವು ೧೦ ಪ್ರಕರಣಗಳಿಂದ ಒಡಗೂಡಿದ್ದು ಗೌಡ ಸಾರಸ್ವತ ಸಮಾಜದ ಮೇಲ್ಮೆಯನ್ನು ಮಾಧ್ವ ಸಂಪ್ರದಾಯ ನಿಷ್ಠೆಯನ್ನೂ ವ್ಯಕ್ತಪಡಿಸುತ್ತದೆ.

ದ್ವೈತ ಸಿದ್ಧಾಂತದಲ್ಲಿ ಅಚಲ ಶ್ರದ್ಧೆಯುಳ್ಳ ರಾಮಾಚಾರ್ಯರು ಸನ್ನೀತಿ ರಾಮಾಯಣ ಎಂಬ ಕಾವ್ಯವನ್ನು ಬರೆದು ರಾಮಾಯಣದಲ್ಲಿಯ ನೈತಿಕ ಮಹತಿ ಯನ್ನು ಸುಂದರೂಗಿ ಕವನಬದ್ಧವಾಗಿ ಮಾಡಿದ್ದಾರೆ. ಇದಲ್ಲದೆ ಇವರು ಸುನೀತಿ ಭಾಗವತ, ಶಬ್ದ ನಿರ್ಣಯ, ಜ್ಯೋತಿಷ ನೀತಿ ರತ್ನ, ಕಥಾ ಸಂಗ್ರಹ, ಮಧ್ವ ಮಂತ್ರ, ಸೌರ ಮಂತ್ರ ವ್ಯಾಖ್ಯಾನ, ಮುಂತಾದ ಅನೇಕ ಗ್ರಂಥಗಳನ್ನು ಸಂಸ್ಕೃತ ದಲ್ಲಿ ರಚಿಸಿದ್ದಾರೆ. ಶ್ರೀ ಗೋಕರ್ಣ ಮಠದ ಶಿಷ್ಯರಾದ ಇವರು ಗೌಡ ಸಾರಸ್ವತ ಸಮಾಜವು ಮಾಧ್ವ ಸಂಪ್ರದಾಯಕ್ಕೆ ಇತ್ತ ಬೆಲೆಯುಳ್ಳ ವಾಙ್ಮಯೀನ ಕಾಣಿಕೆ ಯಾಗಿದ್ದಾರೆ.

## ೨೭. ಜನಾರ್ಧನ ಭಟ್ಟ

೧೭೦೦ ನೇ ಶಕ ವರ್ಷದಲ್ಲಿ ಜೀವಿಸಿದ ಶ್ರೀ ಜನಾರ್ಧನ ಭಟ್ಟರು ಮಹಾ ಭಾರತ ತಾತ್ಪರ್ಯ ನಿರ್ಣಯಕ್ಕೆ ಅತ್ಯುತ್ತಮವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಇವರು ಜಮದಗ್ನಿ ಗೋತ್ರದ ಹಿರಣ್ಯಭಟ್ಟ ಹಾಗೂ ಗಂಗಾಬಾಯಿ ಎಂಬ ತಾಯಿ ತಾಯಿ-ತಂದೆಗಳಿಂದ ಜನಿಸಿದರು ಎಂದು ಅವರ ಶ್ರೀಮದ್ಭಾರತ ಭಾವನಿರ್ಣಯ ಪದಾರ್ಥೋದ್ದೀಪಿಕಾ ಎಂಬ ಹೆಸರಿನ ತಾತ್ಪರ್ಯ ನಿರ್ಣಯ ಟೀಕೆಯ ಪ್ರತಿ ಅಧ್ಯಾಯದ ಅಂತಿಮ ಪದ್ಯದಿಂದ ಗೊತ್ತಾಗುತ್ತದೆ.

ಇವರು ತಮ್ಮ ವ್ಯಾಖ್ಯಾನವನ್ನು— ಉಡುಪಿಯ ಶ್ರೀ ವೇದಾಂಗ ತೀರ್ಥರು ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಬರದ ಪ್ರೌಢ ಸುಂದರವಾದ ವ್ಯಾಖ್ಯಾನ ವನ್ನು ಉಪಜೀವಿಸಿ ಬರೆದಿದ್ದಾರೆ ಎಂಬುದು "ಶ್ರೀ ವೇದಾಂಗತೀರ್ಥ ಸದ್ವ್ಯಾಖ್ಯಾ ಮಾಶ್ರಿತ್ಯ ಕ್ರಿಯತೆಮಯಾ" ಎಂಬ ಮಾತಿನಿಂದ ಪ್ರಾರಂಭದಲ್ಲಿ ಸ್ಪಷ್ಟಪಡಿಸಿದ್ದಾರೆ.

ಇವರು ಶ್ರೀ ಜಯತೀರ್ಥರ ಪ್ರಮಾಣ ಪದ್ಧತಿಗೂ ಒಂದು ಮಾರ್ಮಿಕವಾದ ಟಿಪ್ಪಣಿ ಬರೆದಿದ್ದಾರೆ. ಅದು ಪುಣೆಯಲ್ಲಿ ಅಚ್ಚಾಗಿರುತ್ತದೆ.

## ೨೮. ಇಂದೂರ ರಾಮಚಂದ್ರಾಚಾರ್ಯ, ಉಡುಪಿ

ಇವರು ಶಾಸ್ತ್ರ ಪಂಡಿತರಾಗಿದ್ದು ಅನೇಕ ಜನರಿಗೆ ಪಾಠ ಹೇಳಿ ವಿದ್ವಾಂಸರನ್ನು ತಯಾರು ಮಾಡಿದರು.

## ೨೯. ಪೇರಾಜೆ ನಾರಾಯಣಾಚಾರ್ಯ ರಾಮಕುಂಜ ಉಡುಪಿ

ತರ್ಕ ಶಾಸ್ತ್ರದಲ್ಲಿ ಅನನ್ಯಸಾಮಾನ್ಯ ಪಂಡಿತ ಪ್ರಕಾಂಡರೆನಿಸಿದ ಇವರು ಶ್ರೀ ವಿಶ್ವಜ್ಞತೀರ್ಥರ ಸಮಕಾಲೀನರು. ಸಾಹಿತ್ಯದಲ್ಲಿಯೂ ಇವರಿಗೆ ಅಕುಂಠಿತ ಗತಿ. ಕಿಂ ಬಹುನಾ ಸರ್ವಶಾಸ್ತ್ರಗಳಲ್ಲಿಯೂ ಅಕುತೋಭಯ ಮತಿ. ಮೇಧಾವಿತೆಗಳು ಇವರ ಅಸಾಧಾರಣ ಧರ್ಮಗಳಾಗಿದ್ದವು.

## ೩೦. ಉಳಿಯಾರು ಶೇಷಭಟ್ಟರು

ಇವರು ವ್ಯಾಕರಣದಲ್ಲಿ ವಿದ್ವಾಂಸರು. ಸಾಹಿತ್ಯದಲ್ಲಿ ಪರಿಣತ ಪ್ರಜ್ಞರು ಸಂಸ್ಕೃತ ಪಾಠ ಶಾಲೆಯ ಅಧ್ಯಾಪಕರಾಗಿದ್ದರು.

## ೩೧. ಅಡ್ಡೇ ಗುರುರಾಜಾಚಾರ್ಯ

ಕೃಷ್ಣಾಪುರದ ಶ್ರೀ ವಿದ್ಯಾಧೀಶತೀರ್ಥರಲ್ಲಿ ಶಾಸ್ತ್ರ ವ್ಯಾಸಂಗ ಮಾಡಿ ಮಹಾ ಪಂಡಿತರಾಗಿದ್ದರು. ಶ್ರೀ ಕರಂಬಳ್ಳಿ ಪದ್ಮನಾಭಾಚಾರ್ಯರೇ ಮೊದಲಾದ ಅನೇಕ ಶಿಷ್ಯರಿಗೆ ಪಾಠ ಹೇಳಿ ವಿದ್ವಾಂಸರನ್ನಾಗಿ ಮಾಡಿದರು.

### ೩೨. ಭಂ ರಾಘುವೇಂದ್ರಾಚಾರ್ಯ

ಇವರು ಸಾಹಿತ್ಯ, ವೇದಾಂತಗಳನ್ನು ಓದಿ ಚನ್ನಾಗಿ ಪುರಾಣ ಹೇಳುತ್ತಿದ್ದರು.

### ೩೩. ಕುತ್ಯಾರು ಕುಪ್ಪಣ್ಣ ತಂತ್ರಿಗಳು, ಉಡುಪಿ

ಇವರು ಯಜುರ್ವೇದದಲ್ಲಿ ಮಹಾ ಪಂಡಿತರು. ಯಾಜ್ಞಿಕದಲ್ಲಿಯೂ ನಿಸ್ಸೀಮ ವೈದುಷ್ಯ. ಸಾಹಿತ್ಯದಲ್ಲಿ ಚನ್ನಾಗಿ ಅವಗತಿ.

### ೩೪. ವಾಸುದೇವಾಚಾರ್ಯ ಉಡುಪಿ

ಇವರು ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದಂಗಳವರ ಸಮಕಾಲೀನರಾಗಿದ್ದು, ಶಂಕಾಪಂಕಪ್ರಕ್ಷಾಳನ ಎಂಬ ಗ್ರಂಥವನ್ನು ಬರೆದಿದ್ದಾರೆ. ಶ್ರೀ ಉತ್ತರಾದಿ ಮಠದ ಸತ್ಯಧರ್ಮ ತೀರ್ಥರು ದಿವಾನ ಪೂರ್ಣಯ್ಯನವರಿಗೆ ಸರ್ವ ಮೂಲಾದಿ ಗ್ರಂಥಗಳನ್ನು ಪಾಠ ಹೇಳಿ ಮಂಗಳ ಮಾಡಿದಾಗ್ಗೆ ಉಡುಪಿ ವಾಸುದೇವಾಚಾರ್ಯರಿಗೆ ಬೆಳ್ಳಿಯ ತಂಬಿಗೆ, ಬಂಗಾರದ ಕಂಠಿ, ಶಾಲುಜೋಡಿ ಮೇಲೆ ಪ್ರಭೂತ ದಕ್ಷಿಣೆಯನ್ನಿತ್ತು ಅನುಗ್ರಹಿಸಿದರು.

### ೩೫. ಉಡುಪಿ ಸೇತು ಮಾಧವಾಚಾರ್ಯರು

ಇವರು ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದಂಗಳವರ ನಚ್ಚಿನ ಶಿಷ್ಯರಾಗಿದ್ದರು. ವಿಶ್ವಪ್ರಿಯ ಗುರು ವಿಲಾಸ, ಸ್ವಾತ್ಪ್ನ ವೃಂದಾವನಾಖ್ಯಾನ ಪ್ರಾಮಾಣ್ಯ ದರ್ಪಣ ಎಂಬ ಗ್ರಂಥಗಳನ್ನು ಬರೆದಿದ್ದಾರೆ.

### ೩೬. ಸೋಸಲೆ ರಾಮದಾಸರು

ಇವರು ಒಳ್ಳೇ ಪ್ರಸಿದ್ಧ ಹರಿ ಕೀರ್ತನಕಾರರಾಗಿದ್ದರು. ಮೈಸೂರು ಪ್ರಾಂತ ದಲ್ಲಿ ಇವರ ಕೀರ್ತನೆಗೆ ಸಾವಿರಾರು ಜನರು ಸೇರುತ್ತಿದ್ದರು. ಖಂಜರೀ ವಾದನವಲ್ಲಿ ಇವರ ಹೆಸರು ಅಜರಾಮರ.

### ೩೭. ಶೇಷಗಿರಿರಾವ ಕಳ್ಳಂಕೆ

ಸಮಧ್ವ ವಿಜಯಕ್ಕೆ ಕನ್ನಡ ವ್ಯಾಖ್ಯಾನವನ್ನೂ, ಮಧ್ವ ಪ್ರಬಂಧಮಾಲಾ ಎಂಬ ಗ್ರಂಥವನ್ನೂ ಬರೆದು ಪ್ರಸಿದ್ಧಿಸಿದ್ದಾರೆ.

### ೩೮ ವಾಸುದೇವ ಶ್ಯಾನಭಾಗ

ಇವರು ಗೌಡ ಸಾರಸ್ವತ ವ್ಯಾಖ್ಯಾನ ಎಂಬ ಕಾವ್ಯವನ್ನು ಬರೆದಿದ್ದಾರೆ.

### ೩೯ ರಾಮಚಂದ್ರರಾವ ಪನಮಳೆ

ಶ್ರೀ ಮಧ್ವಾಚಾರ್ಯರ ಭಾಷ್ಯಾನುಸಾರಿಯಾಗಿ ಬಾದರಾಯಣರ ಬ್ರಹ್ಮಸೂತ್ರಗಳಿಗೆ ಕನ್ನಡ ಟೀಕೆಯನ್ನು ಬರೆದಿದಿದ್ದಾರೆ.

### ೪೦ ಮಧ್ವರಾವ ರಾಮಚಂದ್ರಪ್ಪ ಸತ್ಯಪ್ಪನವರ

ಶ್ರೀ ನಾರಾಯಣ ಪಂಡಿತರ ಶ್ರೀ ಮಧ್ವ ವಿಜಯವನ್ನು ಕನ್ನಡದ ಭಾಮಿನಿ ಷಟ್ಪದಿಯಲ್ಲಿ ಭಾಷಾಂತರಿಸಿದ್ದಾರೆ. ಇವರು ಗದುಗಿನವರು. ೧೮೮೮ ನೇ ಇಸ್ವಿಯಲ್ಲಿ ಇದ್ದರು. ಇವರ ವಂಶಜರು ಗದುಗಿನಲ್ಲಿಯೇ ಇದ್ದಾರೆ.

### ೪೧ ಕೃಷ್ಣಾಚಾರ್ಯ ಪುರಾಣಿಕ (೧೯೦೫ ನೇ ಇಶ್ವಿ)

ಶ್ರೀ ಮಧ್ವಾಚಾರ್ಯರ ಅಣು ಭಾಷ್ಯವನ್ನು ಪ್ರತಿಪದಾರ್ಥ, ಭಾವಾರ್ಥದೊಂದಿಗೆ ಇವರು ಕನ್ನಡದಲ್ಲಿ ಭಾಷಾಂತರಿಸಿದ್ದಾರೆ.

### ೪೨ ರಾಮರಾವ ಆನವಟ್ಟಿ

ಇವರು ಶ್ರೀ ಮಧ್ವಾಚಾರ್ಯರ ಚರಿತ್ರೆ ಮತ್ತು ಹನುಮದ್ವಿಲಾಸ ಎಂಬ ನಾಟಕಗಳನ್ನು ಬರೆದಿದ್ದಾರೆ.

### ೪೩ ನಾರಾಯಣಾಚಾರ್ಯ ರಾಜಪುರೋಹಿತ

ಇವರು ಸುಪ್ರಸಿದ್ಧ ಇತಿಹಾಸ ಸಂಶೋಧಕರಾಗಿದ್ದು ಅನೇಕ ಸಂಶೋಧನಾತ್ಮಕ ಪ್ರಬಂಧಗಳನ್ನು ಬರೆದು ಪ್ರಸಿದ್ಧಿಸಿರುವರು. ಇವರು ಶ್ರೀ ಮಧ್ವಾಚಾರ್ಯರ ಚರಿತ್ರೆ, ಜಯತೀರ್ಥರ ಚರಿತ್ರೆ, ಸುರೇಶ್ವರಾಚಾರ್ಯರ ಚರಿತ್ರೆ, ಯಾಜ್ಞವಲ್ಕ್ಯರ ಚರಿತ್ರೆ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.

### ೪೪ ಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಲಿ

ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರ ಸಾಕ್ಷಾತ್ ಶಿಷ್ಯರೆಂದು ಹೇಳಲಾಗುವ ಶ್ರೀ ಕೃಷ್ಣಾಚಾರ್ಯರು— "ಸ್ಮೃತಿ ಮುಕ್ತಾವಲಿ" ಎಂಬ ಮಾಧ್ವರಿಗೆ ಅತ್ಯುಪಯುಕ್ತವಾದ ಧರ್ಮ ಗ್ರಂಥವನ್ನು ಬರೆದಿದ್ದಾರೆ.

ಉಡುಪಿಯಲ್ಲಿ ಈ ಮೊದಲೇ ಮುದ್ರಿತವಾದ ಈ ಗ್ರಂಥದಲ್ಲಿ— ಕಾಲ ನಿರ್ಣಯ, ಆಹ್ನಿಕ ಪ್ರಕರಣ, ಷೋಡಶ ಕರ್ಮ ಮತ್ತು ಶ್ರಾದ್ಧ ಪ್ರಕರಣ ಎಂಬ ನಾಲ್ಕು ಭಾಗಗಳಿದ್ದು, ಅದರಲ್ಲಿ ವೈಷ್ಣವ ಸಂಪ್ರದಾಯದ ನಿತ್ಯ ನೈಮಿತ್ತಿಕ ಆಚಾರ ಪದ್ಧತಿಗಳನ್ನೆಲ್ಲ ಸಪ್ರಮಾಣವಾಗಿ ನಿರೂಪಿಸಲಾಗಿದೆ. ಇದು ಎಲ್ಲ ಮಾಧ್ವರಿಗೂ ವಿಶೇಷವಾಗಿ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದವರಿಗೆ ಶ್ರೇಷ್ಠ ಪ್ರಮಾಣವಾಗಿದೆ.

**೪೫ ರಘುನಾಥಯತಿ**

ಇವರು ತತ್ವಮಂಜರಿ ಎಂಬ ಗ್ರಂಥವನ್ನು ಬರೆದು ಮಧ್ವ ಸಿದ್ಧಾಂತದ ಸಾರ ಸಂದೇಶವನ್ನೆಲ್ಲ ಕ್ರೋಢಿಕರಿಸಿ ಹೇಳಿದ್ದಾರೆ.

**೪೬ ಕಲ್ಯಾಣಿ ಸೇತುಮಾಧವಾಚಾರ್ಯ, ಬೆಂಗಳೂರ**

ನ್ಯಾಯ, ವೇದಾಂತ ವ್ಯಾಕರಣ ಮೂರೂ ಶಾಸ್ತ್ರಗಳಲ್ಲಿ ಪಂಡಿತರಾದ ಇವರು ಬೆಂಗಳೂರಿನಲ್ಲಿ ಬಹುದಿನ ಪಾಠ-ಪ್ರವಚನ ಮಾಡಿಕೊಂಡು ವಾಸವಾಗಿದಾದ್ದರು.

**೪೭ ಬೋಡೇನಹಳ್ಳಿ ಕೃಷ್ಣಮೂರ್ತ್ಯಾಚಾರ್ಯ, ಬೆಂಗಳೂರ**

ಇವರು ದ್ವೈತ ವೇದಾಂತದಲ್ಲಿ ಒಳ್ಳೆ ಪಂಡಿತರಾಗಿದ್ದರು.

**೪೮ ಶ್ರೀ ಕಲ್ಯಾಣಿ ನಾಗರಾಜಾಚಾರ್ಯ, ಬೆಂಗಳೂರ**

ಇವರು ವೇದಾಂತದಲ್ಲಿಯೂ, ವ್ಯಾಕರಣದಲ್ಲಿಯೂ ವಿದ್ವಾಂಸರಾಗಿದ್ದಾರೆ. ಉತ್ತರಾಧಿ ಮಠಾಧಿಕಾರಿಗಳಾಗಿಯೂ ಬಹುಕಾಲ ಕೆಲಸ ಮಾಡಿ, ಬೆಂಗಳೂರಲ್ಲಿದ್ದಾರೆ.

**೪೯ ಶ್ರೀ ಸುಮತಿ ಅನಂತಾಚಾರ್ಯ, ಬೆಂಗಳೂರ**

ವೇದಾಂತ, ವ್ಯಾಕರಣ, ವಿದ್ವತ್ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಇವರು ಈಗ ಬೆಂಗಳೂರಿನ ಜಯನಗರದಲ್ಲಿದ್ದಾರೆ.

**೫೦ ಶ್ರೀ ರೊಟ್ಟಿ ಸೇತುಮಾಧವಾಚಾರ್ಯ, ಬೆಂಗಳೂರ**

ನ್ಯಾಯ, ವ್ಯಾಕರಣ, ವೇದಾಂತ ವಿದ್ವಾನ್ ಎನಿಸಿದ ಸೇತುಮಾಧವಾಚಾರ್ಯರು ಬೆಂಗಳೂರಲ್ಲಿ ಬಸವನಗುಡಿಯಲ್ಲಿದ್ದಾರೆ.

**೫೧ ಚಿಂಚೋಳಿ ಮೂರ್ತ್ಯಾಚಾರ್ಯ, ಬೆಂಗಳೂರ**

ದ್ವೈತ ವೇದಾಂತದಲ್ಲಿ ವಿದ್ವಾಂಸರಾದ ಇವರು ಬೆಂಗಳೂರಲ್ಲಿ ಪಾಠ-ಪ್ರವಚನ ಮಾಡಿಕೊಂಡಿದ್ದರು.

**೫೨. ದಿ. ಮುತ್ಯಾ ಶೇಷಾಚಾರ್ಯ, ಬೆಂಗಳೂರ**

ವೇದಾಂತ ವಿದ್ವಾನ್‌ರಾದ ಮುತ್ಯಾ ಶೇಷಾಚಾರ್ಯರು ಬೆಂಗಳೂರಿನ ಚಾಮರಾಜ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಅನೇಕರಿಗೆ ಪಾಠ ಹೇಳಿದರು.

**೫೩ ವೈ. ವಾ. ಪುರದ ಪುಟ್ಟಾಚಾರ್ಯ, ಬೆಂಗಳೂರ**

ದ್ವೈತ ವೇದಾಂತದಲ್ಲಿ ವಿದ್ವಾಂಸರಾದ ಇವರು ಚಾಮರಾಜೇಂದ್ರ ಸಂಸ್ಕೃತ ಕಲಾ ಶಾಲೆಯಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದರು.

### ೫೪ ಶ್ರೀ ಪುರಾಣಿಕ ಗುಂಡಾಚಾರ್ಯ ಸೊನ್ನಿ

ಇವರು ಸಾಹಿತ್ಯ, ಪುರಾಣ, ಅಧ್ಯಯನ ಮಾಡಿ ಈಗ ಚೆನ್ನಾಗಿ ಪುರಾಣ ಹೇಳುತ್ತಾರೆ.

### ೫೫ ಶ್ರೀ ಸೊನ್ನಿ ಹನುಮಂತಾಚಾರ್ಯ

ಉತ್ತರಾದಿ ಮಠದಲ್ಲಿ ಅಧ್ಯಯನ ಮಾಡಿದ ಇವರು ವೈದಿಕ ವೃತ್ತಿಯಲ್ಲಿರುತ್ತಾರೆ.

### ೫೬ ಟೀ. ವಿದುರಾಶ್ವತ್ಥರಾಮಾಚಾರ್ಯ, ಬೆಂಗಳೂರ

ಸಾಹಿತ್ಯ, ವೇದಾಂತ ವಿದ್ವಾನ್‌ರಾದ ಇವರು ಬೆಂಗಳೂರಿನ ಚಾಮರಾಜ ಸಂಸ್ಕೃತ ಕಾಲೇಜಿನಲ್ಲಿ ವೇದಾಂತ ಪಂಡಿತರಾಗಿ ಕೆಲಸ ಮಾಡುತ್ತಿದ್ದಾರೆ.

### ೫೭ ಶ್ರೀ ರಾಮನರಸಿಂಹಾಚಾರ್ಯ

ವೇದಾಂತ ವಿದ್ವಾಂಸರಾದ ಇವರು ಮೈಸೂರಿನಲ್ಲಿ ಆಗಮ ಪ್ರೊಫೆಸರರಾಗಿ ಕೆಲಸ ಮಾಡುತ್ತಿದ್ದಾರೆ.

## ರಾಯಚೂರ ಆಚಾರ್ಯರು

ಉತ್ತರಾದಿ ಮಠದ ಶ್ರೀ ಸತ್ಯಬೋಧ ಶ್ರೀಪಾದಂಗಳವರ ಪೂರ್ವಾಶ್ರಮದ ವಂಶಸ್ಥರಾದ ರಾಯಚೂರ ಆಚಾರ್ಯರ ಮನೆತನದಲ್ಲಿ ಅನೇಕ ಘನ ಪಂಡಿತರು ಉದಯಿಸಿ, ಮಧ್ವಭೂಷಣರೆನಿಸಿದರು.

### ೫೮ ಬೋಧರಾಯಾಚಾರ್ಯ ರಾಯಚೂರ

ಇವರು ದ್ವೈತ ವೇದಾಂತ ಪಂಡಿತರಾಗಿ ಶಾಸ್ತ್ರ ಪ್ರವಚನ ಮಾಡುತ್ತಲಿದ್ದರು.

### ೫೯ ರಾಮಾಚಾರ್ಯ ರಾಯಚೂರ

ವೇದಾಂತದಲ್ಲಿ ಪರಿನಿಷ್ಠಿತ ಪಂಡಿತರಾದ ಇವರು ಅನೇಕ ವಿದ್ಯಾರ್ಥಿಗಳನ್ನು ಮನೆಯಲ್ಲಿಟ್ಟುಕೊಂಡು ಯಾವಾಗಲೂ ಸಚ್ಛಾಸ್ತ್ರ ಪಾಠ-ಪ್ರವಚನ ಮಾಡುತ್ತಿದ್ದರು.

### ೬೦ ಗುರಾಚಾರ್ಯ ರಾಯಚೂರ

ಆಗರಖೇಡದ ಆದ್ಯ ಆಚಾರ್ಯರಲ್ಲಿ ನ್ಯಾಯ ಶಾಸ್ತ್ರವನ್ನು ಓದಿದ ಗುರಾಚಾರ್ಯರು ನ್ಯಾಯ, ವೇದಾಂತಾದಿ ಶಾಸ್ತ್ರಗಳಲ್ಲಿ ಘನಪಂಡಿತರು. ಸವಣೂರಿನ ಶ್ರೀ ಸತ್ಯಬೋಧ ಶ್ರೀಪಾದಂಗಳವರ ಎದುರಿನಲ್ಲಿ ಕುಳಿತು ಪ್ರತಿನಿತ್ಯವೂ ಶಾಸ್ತ್ರಗ್ರಂಥಗಳ ಪಾಠಪ್ರವಚನವನ್ನು ಯಾವಜ್ಜನ್ಮ ಮಾಡುತ್ತಲಿದ್ದರು.

## ೬೧ ಪುರುಷೋತ್ತಮಾಚಾರ್ಯ ರಾಯಚೂರ



ತಮ್ಮ ತಂದೆಯವರಲ್ಲಿ ವೇದಾಂತ ಕೆಲವು ಗ್ರಂಥಗಳನ್ನೂ ಹಾಗೂ ಭಾಗಗಳನ್ನೂ ವ್ಯಾಸಂಗ ಮಾಡಿದ ಇವರು— ಕೆಲವು ವರ್ಷ ವಕೀಲಿ ವ್ಯವಸಾಯವನ್ನು ಮಾಡುತ್ತಿದ್ದರು.

ಮುಂದೆ ಮುಂಬೈ, ಹುಬ್ಬಳ್ಳಿ, ಸವಣೂರು ಮುಂತಾದ ಕಡೆಗಳಲ್ಲಿ ಭಾಗವತಪ್ರವಚನ ನಡೆಸಿದರು. ತಮ್ಮ ಶ್ರೀ ಸತ್ಯಬೋಧ ಶ್ರೀಗಳವರ ಪರ್ಯಾಯ ಕಾಲದಲ್ಲಿ ಎಲ್ಲ ಪಂಡಿತರನ್ನೂ ಬರಮಾಡಿಕೊಂಡು ವಿಶಿಷ್ಟ ರೀತಿಯಿಂದ ಜ್ಞಾನ ಸತ್ರವನ್ನು ಪ್ರಾರಂಭ ಮಾಡಿದರು.

ಇವರು ಪ್ರಕೃತ ಗದುಗಿನಲ್ಲಿ ತಮ್ಮ ವೃದ್ಧಾಪ್ಯದಲ್ಲಿಯೂ ಪೂಜಾ ಅನುಷ್ಠಾನಗಳನ್ನು ಮಾಡಿಕೊಂಡಿದ್ದಾರೆ.

## ೬೨ ಶ್ರೀ ಕಾಂತಾರಾವ ದಾತಾರ

ವಿಜಾಪುರದ ಸಂಸ್ಕೃತ ಕವಿಗಳೂ ಪ್ರಸಿದ್ಧ ವಕೀಲರೂ ಆದ ಶ್ರೀ ಗುರುರಾವ ದಾತಾರರ ಮಕ್ಕಳಾದ ಶ್ರೀ ಕಾಂತಾರಾಯರು ತಮ್ಮ ಬುದ್ಧಿ ಬಲದಿಂದಲೇ ಉಚ್ಚ ನ್ಯಾಯಾಲಯದ ಗರಿಷ್ಠ ನಾಯಮೂರ್ತಿಗಳಾಗಿ ಕೆಲಸ ಮಾಡಿದರು.

ಸಂಸ್ಕೃತ ಜ್ಞಾನ, ಸಂಸ್ಕೃತಿ ಅಭಿಮಾನ, ಹಾಗೂ ಮಧ್ವ ಮತದ ಶ್ರದ್ಧೆಗಳು ಇವರಿಗೆ ಆನುವಂಶಿಕ ಗುಣಗಳಾಗಿ ಪ್ರಾಪ್ತವಾಗಿರುತ್ತವೆ.

## ೬೩ ಶ್ರೀ ಪಿ. ಬಿ. ಗಜೇಂದ್ರಗಡಕರ

ಸಾತಾರಾದ ಪಂಡಿತ ಪ್ರಕಾಂಡ ಶ್ರೀ ಬಾಳಾಚಾರ್ಯರ ಕೊನೆಯ ಮಕ್ಕಳಾದ ಶ್ರೀ ಪ್ರಲ್ಹಾದಾಚಾರ್ಯರು ತಮ್ಮ ವಕೀಲಿ ವೃತ್ತಿಯ ವೈದುಷ್ಯ ಮತ್ತು ಪ್ರಭಾವಶಾಲಿ ವ್ಯಕ್ತಿತ್ವದಿಂದ ಮುಂಬೈ ಹಾಯಕೋರ್ಟ ನ್ಯಾಯಾಧೀಶ, ಭಾರತದ ವರಿಷ್ಠ ನ್ಯಾಯಾಧೀಶರಾಗಿಯೂ, ಅನೇಕ ಆಯೋಗ, ನಿಯೋಗ, ಸಮಿತಿಗಳ ಅಧ್ಯಕ್ಷರಾಗಿಯೂ ಕಾರ್ಯ ಮಾಡಿ ಈಗ ಮುಂಬೈ ವಿಶ್ವ ವಿದ್ಯಾಲಯದ ಉಪಕುಲಪತಿಗಳಾಗಿದ್ದಾರೆ.

ಸಂಸ್ಕೃತದ ಪರಿಜ್ಞಾನ, ಧರ್ಮ ಶಾಸ್ತ್ರ, ಸಾಹಿತ್ಯ ಹಾಗೂ ವ್ಯಾಕರಣಗಳ ಪರಿಚಯ, ಪಾಂಡಿತ್ಯಗಳು ಅವರಿಗೆ ರಕ್ತಗತವಾಗಿ ಪಿತೃಪರಂಪರೆಯಿಂದಲೇ ಹರಿದು ಬಂದಿರುತ್ತವೆ.

## ೬೪ ಶ್ರೀ ಅಲೆವೂರ ಸೀತಾರಾಮಾಚಾರ್ಯ, ಉಡುಪಿ



ಉಡುಪಿ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ವೇದಾಂತ, ವ್ಯಾಕರಣ ಶಿರೋಮಣಿ, ದ್ವೈತ ವೇದಾಂತ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಶ್ರೀ ಸೀತಾರಾಮಾಚಾರ್ಯರು ಕೆಲವು ಕಾಲ ರಾಮಕುಂಜ ಪಾಠ ಶಾಲೆಯಲ್ಲಿ ಅಧ್ಯಾಪಕರಾಗಿದ್ದರು.

ಅನಂತರ ಉಡುಪಿಯ ಸಂಸ್ಕೃತ ಮಹಾ ಪಾಠ ಶಾಲೆಯಲ್ಲಿ ೨೫ ವರ್ಷಗಳ ಕಾಲ ವೇದಾಂತ ಮತ್ತು ವ್ಯಾಕರಣ ಪ್ರಧಾನ ಅಧ್ಯಾಪಕರಾಗಿ ಜ್ಞಾನ ದಾನ ಮಾಡಿದರು.

ಶ್ರೀ ಕಾಣಿಯೂರು ಮಠದ ಶ್ರೀ ವಿದ್ಯಾ ಸಮುದ್ರ ತೀರ್ಥರಲ್ಲಿ ಸುಧಾ, ತತ್ವ ಪ್ರಕಾಶಿಕಾ ಗ್ರಂಥಗಳನ್ನು ಶಾಂತಿಪಾಠ ಪೂರ್ವಕ ಓದಿದ ಇವರು ಶ್ರೀ ಸೋದೆ ಮಠದ ಶ್ರೀ ವಿಶ್ವೋತ್ತಮ ತೀರ್ಥ ಶ್ರೀಪಾದಂಗಳವರಿಗೆ ಸುಧಾಂತ ವೇದಾಂತ ಪಾಠ ಹೇಳಿದರು.

ಆಹಿತಾಗ್ನಿಗಳಾದ ಇವರು ದಕ್ಷಿಣ ಭಾರತದ ಸಂಸ್ಕೃತ ಗೋಷ್ಠಿಯಲ್ಲಿ ಸುವರ್ಣ ಪದಕದಿಂದ ಗೌರವಿತರಾದರು. ಇವರಿಗೆ ಪ್ರವಚನ ವಾಚಸ್ಪತಿ ಮುಂತಾದ ಬಿರುದುಗಳು ಬಂದಿರುತ್ತವೆ.

ಅನೇಕ ತೀರ್ಥ-ಕ್ಷೇತ್ರಗಳಲ್ಲಿ ಯಜ್ಞ-ಯಾಗಾದಿಗಳನ್ನು ನೆರವೇರಿಸಿದ ಇವರು ಉಡುಪಿಯ ಅಷ್ಟ ಮಠಗಳ ಆಸ್ಥಾನ ವಿದ್ವಾಂಸರೆಂದು ಮರ್ಯಾದಿತರಾಗಿದ್ದಾರೆ.

ಶ್ರೀ ಅದಮಾರು ಮಠದ ವಿದ್ಯಾ ಪೀಠದಲ್ಲಿ ಅಧ್ಯಾಪಕರೆಂದು ಕೆಲಸ ಮಾಡಿದ್ದಾರೆ.

ಶ್ರೀ ಸೀತಾರಾಮಾಚಾರ್ಯರು ಅನೇಕ ಕಾವ್ಯ, ನಾಟಕ, ಪ್ರಬಂಧ, ಸ್ತೋತ್ರಗಳನ್ನು ಬರೆದಿದ್ದಲ್ಲದೆ, ಲಕ್ಷಾಲಂಕಾರ ಮುಂತಾದ ಪ್ರಾಚೀನ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ.

ಆಚಾರ್ಯರು ವೇದಾಂತದಂತೆ ವ್ಯಾಕರಣದಲ್ಲಿಯೂ ಸಿದ್ಧಹಸ್ತರು. ಸಾಹಿತ್ಯದಲ್ಲಿಯಂತೂ ಸರಸ ಕವಿಗಳು. ಸಂಸ್ಕೃತ ಗದ್ಯ ಪದ್ಯ ರಚನೆಯಲ್ಲಿ ಸಿದ್ಧಿ-ಪ್ರಸಿದ್ಧಿಗಳನ್ನು ಪಡೆದ ಕೆಲವೇ ಮಾಧ್ವ ವಿದ್ವಾಂಸರಲ್ಲಿ ಶ್ರೀ ಸೀತಾರಾಮಾಚಾರ್ಯರು ಅಗ್ರಗಣ್ಯರಾಗಿದ್ದಾರೆ.

## ೬೫ ಡಾ॥ ಪಿ. ನಾಗರಾಜರಾವ, ಮದ್ರಾಸ



ಡಾ॥ ರಾಧಾಕೃಷ್ಣನ್ನರ ಇಂಗ್ಲೀಷ ಭಾಷಣದ ಶೈಲಿ, ಸೊಬಗು, ಪ್ರವಾಹ ಪರಿಪಾಟಿಗಳನ್ನು ಬಳಸಿ ಕೊಂಡು ದ್ವೈತ ಸಿದ್ಧಾಂತವನ್ನು ಸಮರ್ಥ ರೀತಿಯಿಂದ ಉಪನ್ಯಾಸ ಮಾಡಬಲ್ಲ ಬಲ್ಲಿದ ಭಾಷಣಕಾರರೆಂದರೆ— ಡಾ॥ ಪಿ. ನಾಗರಾಜರಾಯರು.

೧೯೩೪ ನೇ ಇಸ್ವಿಯಲ್ಲಿ ಸುವರ್ಣ ಪದಕದೊಂದಿಗೆ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಉತ್ತೀರ್ಣರಾದ ನಾಗರಾಜರಾಯರು ಮದ್ರಾಸ, ಬನಾರಸ, ವೀಸ ನಗರ, ಅಹಮದಾಬಾದ, ಧಾರವಾಡ, ಬೆಂಗಳೂರು, ತಿರುಪತಿ ಮುಂತಾದ ಬೇರೆ-ಬೇರೆ ವಿಶ್ವವಿದ್ಯಾನಿಲಯ ಹಾಗೂ ಕಾಲೇಜಗಳಲ್ಲಿ ವೇದಾಂತ ಪ್ರಾಧ್ಯಾಪಕರೆಂದು ಕೆಲಸ ಮಾಡಿದ್ದಾರೆ.

ಶ್ರೀ ರಾಧಾಕೃಷ್ಣನ್ನರು ಬನಾರಸ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಉಪ ಕುಲಪತಿಗಳಿದ್ದಾಗ ಇವರಿಗೆ "ಡಾಕ್ಟರೇಟ" ಪದವಿಯನ್ನು ಕೊಡಲಾಯಿತು.

ಶ್ರೀ ಶಂಕರಾಚಾರ್ಯ ಮತ್ತು ಶ್ರೀ ವ್ಹಾಯಿಟ ಹೆಡ್ಡರ ತತ್ವಗಳ ತುಲನಾತ್ಮಕ ಸಂಶೋಧನ ಪ್ರಬಂದದಿಂದಾಗಿ ಇವರಿಗೆ "ಡಿ. ಲಿಟ್." ಪದವಿಯೂ ದೊರೆಯಿತು.

ಇವರು ವೆಂಕಟೇಶ್ವರ ವಿಶ್ವವಿದ್ಯಾನಿಲಯ, ಅಣ್ಣಾಮಲೈ ವಿಶ್ವವಿದ್ಯಾ ನಿಲಯ, ಬರೋಡಾ, ಕೇರಳ ಮುಂತಾದ ಅನೇಕ ವಿಶ್ವವಿದ್ಯಾ ನಿಲಯಗಳಲ್ಲಿ ವಿವಿಧ ವಿಷಯ ಗಳನ್ನು ಕುರಿತು ವಿದ್ವತ್‌ಪೂರ್ಣ ಉಪನ್ಯಾಸಗಳನ್ನು ಕೊಟ್ಟಿದ್ದಾರೆ.

ಅಡಿಯಾರ ಲಾಯಬ್ರರಿ, ಭಾರತಿ ವಿದ್ಯಾಭವನ, ರಾಮಕೃಷ್ಣ ಸೇವಾ ಸಮಿತಿ ಅಹಮ್ಮದಾಬಾದ ಮುಂತಾದ ವಿದ್ಯಾ ಕೇಂದ್ರಗಳು ಇವರ ಅನೇಕ ವೇದಾಂತ ಪ್ರಬಂಧಗಳನ್ನು ಇಂಗ್ಲೀಷಿನಲ್ಲಿ ಪ್ರಸಿದ್ಧಿಸಿರುತ್ತವೆ.

ಶ್ರೀ ಜಯತೀರ್ಥರ ಪ್ರಮಾಣ ಪದ್ಧತಿ ಮತ್ತು ವಾದಾವಲಿ ಗ್ರಂಥಗಳನ್ನು ಇಂಗ್ಲೀಷ ಭಾಷೆಯಲ್ಲಿ— ಪ್ರತಿಪದಾರ್ಥ, ಭಾವಾರ್ಥ, ಭೂಮಿಕೆಗಳೊಂದಿಗೆ ಅಡಿ ಯಾರ ಲಾಯಬ್ರರಿಯವರು ಶ್ರೀ ನಾಗರಾಜರಾಯರಿಂದ ಬರೆಯಿಸಿ ಪ್ರಕಟಿಸಿದ್ದಾರೆ.

"ಸಮಸಾಮಯ್ಯಿಕ ಭಾರತೀಯ ತತ್ವ ಜ್ಞಾನ" ಎಂಬ ಇವರ ಮತ್ತೊಂದು ಇಂಗ್ಲೀಷ ಪ್ರಬಂಧವನ್ನು ಭಾರತೀಯ ವಿದ್ಯಾಭವನದವರು ಪ್ರಕಟನೆಗೆ ಎತ್ತಿಕೊಂಡಿ ದ್ದಾರೆ.

## ೬೬ ಶ್ರೀ ವ್ಹಿ. ಕೆ. ಆರ್. ವ್ಹಿ. ರಾವ

ಭಾರತ ಸರಕಾರದ ವಿದ್ಯಾ ಮಂತ್ರಿಗಳಾದ ಶ್ರೀ ವಿಜಯೀಂದ್ರ ಕಸ್ತೂರಿ ರಂಗ ವರದರಾಜ ರಾಯರು ಮೂಲತಃ ಕುಂಭಕೋಣದವರು. ಶ್ರೀ ವಿಜಯೀಂದ್ರಸ್ವಾಮಿಗಳ ಅನುಗ್ರಹದಿಂದ ಹುಟ್ಟಿದ ಅವರು ಪ್ರಾಯದಲ್ಲಿಯೇ ತಮ್ಮ ಅರ್ಥಶಾಸ್ತ್ರ ಪಾಂಡಿತ್ಯ, ಆಂಗ್ಲಭಾಷಾ ಪ್ರಭುತ್ವ ಮುಂತಾದ ಗುಣಗಳಿಂದ ಮಾಧ್ವರಿಗೆಲ್ಲ ಹೆಮ್ಮೆಯೆದೆನಿಸ ಬಹುದಾದ ಶಿಕ್ಷಣ ಶಾಖೆಯ ಸಚಿವ ಸ್ಥಾನದಲ್ಲಿ ಇಂದು ವಿರಾಜಮಾನರಾಗಿದ್ದಾರೆ.

ಅನೇಕ ವಿಶ್ವ ವಿದ್ಯಾನಿಲಯಗಳಲ್ಲಿ ಕೆಲಸ ಮಾಡಿದ ಅವರು ತಮ್ಮ ಮಿಂಚಿನ ಪ್ರತಿಭೆ, ಕಾರ್ಯದಕ್ಷತೆ, ಆಳವಾದ ಅಭ್ಯಾಸ, ಸರ್ವ ವಿಷಯ ಪರಿಜ್ಞಾನಗಳಿಂದ ಮುಂದೆ ಬಂದು ದಿಲ್ಲಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ, ಅನಂತರ ಕೇಂದ್ರ ಸರಕಾರದ ಮಂತ್ರಿಸ್ಥಾನವನ್ನು ಪಡೆದರು.

ಅಚ್ಚಕನ್ನಡಿಗರಾದ ಇವರು ಅಪ್ಪಟ ಮಾಧ್ವರೂ ಆಗಿದ್ದಾರೆ. ಕಳೆದ ವರ್ಷ ಶ್ರೀ ಭಂಡಾರಕೇರಿ ಶ್ರೀಗಳವರ ಸಭಾ ಪ್ರಾರಂಭದಲ್ಲಿ ಇವರು ಮಾಡಿದ ಗೀತಾ ಪ್ರವಚನವು ಅವರ ಸಂಸ್ಕೃತ ಪಾಂಡಿತ್ಯ, ಪ್ರಮೇಯ ಜ್ಞಾನ ಹಾಗೂ ಮಾಧ್ವ ಸಿದ್ಧಾಂತ ದೀಕ್ಷೆಗೆ ಸಾಕ್ಷಿಯಾಗಿದ್ದಿತು.

ಇಂಥ ಸಮರ್ಥ ಸಚಿವರ ಮುಂದಾಳುತನದಲ್ಲಿ ಶಾಸ್ತ್ರ ವಿದ್ಯೆಗೆ ಅದರಲ್ಲಿಯೂ ಶತಮಾನಗಳಿಂದ ಉದಾಸಿಸಲ್ಪಟ್ಟ ಮಾಧ್ವ ವಾಙ್ಮಯಕ್ಕೂ, ಮಾಧ್ವ ಪಂಡಿತರಿಗೂ ಭವ್ಯ ಭವಿಷ್ಯ ಕಾದಿದೆ ಎಂಬುದರಲ್ಲಿ ಸಂದೇಹವಿಲ್ಲ.

## ೬೭ ಶ್ರೀ ವರಖೇಡಿ ಅಣ್ಣಾಚಾರ್ಯ, ಕುಂಭಕೋಣ

ಇವರು ಋಗ್ವೇದದಲ್ಲಿ ಘನಾಂತ ವ್ಯಾಸಂಗ ಮಾಡಿ, ವೇದ ವಿದ್ವಾಂಸರು ಎನಿಸಿದ್ದಾರೆ.

## ೬೮ ಶ್ರೀ ಅಪಶಂಕರ ಬಾಳಕೃಷ್ಣಾಚಾರ್ಯ, ಕುಂಭಕೋಣ

ಇವರು ಘನಾಂತ ವೇದಾಧ್ಯಯನ ಮಾಡಿ ಕುಂಭಕೋಣ ಮಹಾರಾಜಾ ಸಂಸ್ಕೃತ ಪಾಠಶಾಲೆಯಲ್ಲಿ ವೇದಾಧ್ಯಾಪಕರಾಗಿದ್ದಾರೆ.

## ೬೯ ರಾಮಚಂದ್ರಾಚಾರ್ಯ ಘನಪಾಠಿ, ತಿರುಪತಿ

ತಿರುಪತಿ ಬೆಟ್ಟದ ಮೇಲಿನ ದೇವಸ್ಥಾನದ ಸಂಸ್ಕೃತ ಪಾಠ ಶಾಲೆಯಲ್ಲಿ ಇವರು ವೇದಾಧ್ಯಾಪಕರಾಗಿದ್ದಾರೆ. ಇವರು ಋಗ್ವೇದದಲ್ಲಿ ಘನಾಂತ ಅಧ್ಯಯನವನ್ನು ಮಾಡಿದ್ದಾರೆ.

## ೭೦ ಡಾ॥ ಸರೋಜಿನಿ ಮಹಿಷಿ

ಕರ್ನಾಟಕದ ಪಂಡಿತರ ಮನೆತನವಾದ ಮಹಿಷಿ ವಂಶದಲ್ಲಿ ಜನಿಸಿದ ಶ್ರೀಮತಿ ಸರೋಜಿನಿಯವರು ನಿಜವಾಗಿಯೂ ಕನ್ನಡ ನಾಡಿನ ಸರೋಜನಿ ನಾಯ್ಡುರಂತೆ ಖ್ಯಾತಿವೆತ್ತ ವಿದುಷಿಮಣಿಯಾಗಿದ್ದಾರೆ.

ಮೊದಲನೇ ಇಯತ್ತೆಯಿಂದ ಮಾಸ್ಟರ ಡಿಗ್ರಿಯವರೆಗೆ ಉತ್ತಮ ಶ್ರೇಣಿಯಲ್ಲಿ ಉತ್ತಮೋತ್ತಮರಾಗಿಯೇ ಉತ್ತೀರ್ಣರಾಗುತ್ತ ಬಂದ ಡಾ॥ ಸರೋಜನಿ ಮಹಿಷಿ ಇವರು ಕನ್ನಡದಲ್ಲಿ ಪಂಡಿತರು, ಸಂಸ್ಕೃತದಲ್ಲಿ ವಿದುಷಿಯರೂ, ಹಿಂದಿಯಲ್ಲಿ ವಿಶಾರದರು, ಇಂಗ್ಲೀಷಿನಲ್ಲಿ ಪರಿಣತ ಪ್ರತಿಭೆಯವರು. ಕಾಯ್ದೆಯಲ್ಲಿಯೂ ಅವರ ಕೈ ಹಿಡಿಯುವವರಿಲ್ಲ.

ಉಪನ್ಯಾಸಕರಲ್ಲಿ ಅವರು ಅಗ್ರೇಸರರು. ಲೇಖಕರಲ್ಲಿಯೂ ಅವರಿಗೆ ಅಗ್ರಪಂಕ್ತಿ, ರಾಜಕೀಯ ಕಾರ್ಯಕರ್ತರಲ್ಲಿ ಅವರಿಗೇ ಅಗ್ರಪೂಜೆ. ಸಾಮಾಜಿಕ ಕಾರ್ಯನಿರ್ವಾಹಕರಲ್ಲಿ ಅವರಿಗೆ ಅಗ್ರ ತಾಂಬೂಲ.

ಜನ ಸೇವೆ, ಸಾಹಿತ್ಯ ಸೇವೆ, ಸಮಾಜ ಸೇವೆ, ಸಂಸ್ಕೃತ ಸೇವೆ, ದೇಶ ಸೇವೆ, ಮುಂತಾದ ಪರೋಪಕಾರ ಕಾರ್ಯಗಳಿಗಾಗಿ ಅವರ ತನು-ಮನ-ಧನಗಳೆಲ್ಲ ಮೀಸಲು, ಅವರ ಜೀವನವೇ ಇದಕ್ಕಾಗಿ ಮುಡಿಪು.

ಕೇಂದ್ರಸರಕಾರದ ಮಂತ್ರಿ ಸ್ಥಾನದಲ್ಲಿ ಕೆಲಸ ಮಾಡುತ್ತಿರುವ ಇವರು ಬರೆದ ಲೇಖಗಳಿಗೆ ಲೆಕ್ಕವಿಲ್ಲ. ಮಾಡಿದ ಭಾಷಣಗಳಿಗೆ ಸಂಖ್ಯೆ ಇಲ್ಲ. ಗೈದ ಲೋಕಸೇವಾ ಕಾರ್ಯಗಳಿಗೆ ಮಿತಿ ಇಲ್ಲ.

ಜನತಾ ಶಿಕ್ಷಣ ಸಮಿತಿಯಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ ಅವರು ಬರೆದ ಪಿ. ಎಚ್. ಡಿ. ಪ್ರಬಂಧ "ಕರ್ನಾಟಕದ ಕವಯಿತ್ರಿ"ಯರು ಎಂಬ ಉದ್ಗ್ರಂಥ ಅವರ ಜ್ಞಾನಸಾಗರದ ಆಳ-ಅಗಲವನ್ನೂ, ಅನುಭವದ ಆಗರದ ವೈಶಾಲ್ಯವನ್ನೂ ಎತ್ತಿ ತೋರಿಸುತ್ತದೆ.

## ೭೧. ಅಲ್ಲಂಪಲ್ಲಿ ನಾರಾಯಣಾಚಾರ್ಯ

ಕೊಪ್ಪಳದ ಗಂಗೂರ ವೆಂಕೋಬಾಚಾರ್ಯರಲ್ಲಿ ವೇದಾಂತ ಅಧ್ಯಯನವನ್ನು ಮಾಡಿದ ಶ್ರೀ ನಾರಾಯಣಾಚಾರ್ಯರು ಅನಂತರ ಉತ್ತರಾದಿ ಮಠಕ್ಕೆ ಬಂದು ಶ್ರೀ ಸತ್ಯಧ್ಯಾನತೀರ್ಥರಲ್ಲಿ ಸುಧಾದಿ ಗ್ರಂಥಗಳನ್ನು ವ್ಯಾಸಂಗ ಮಾಡಿದರು. ಈಗ ಅವರು ಸ್ವಗ್ರಾಮವಾದ ಅಲಂಪಲ್ಲಿಯಲ್ಲಿ ಪಾಠ-ಪ್ರವಚನ ಮಾಡಿಕೊಂಡು ಇರುತ್ತಾರೆ. ಇವರಿಗೆ ಧರ್ಮ ಶಾಸ್ತ್ರದಲ್ಲಿಯೂ ವಿಶೇಷ ಪಾಂಡಿತ್ಯವಿದೆ.

## ೭೨ ದಿ. ಧಡೇಸೂಗೂರ ವೆಂಕೋಬಾಚಾರ್ಯರು

ರಾಯಚೂರ ಜಿಲ್ಲೆಯ ಧಡೇಸೂಗೂರಿನ ಶ್ರೀ ವೆಂಕೋಬಾಚಾರ್ಯರು ಒಳ್ಳೇ ಕವಿಗಳೂ, ಪಂಡಿತರೂ ಆಗಿದ್ದರು. ಇವರ ತಂದೆ— ರಾಮಾಚಾರ್ಯರು.

ಶ್ರೀ ವೆಂಕೋಬಾಚಾರ್ಯರು ಚಿಕ್ಕವರಿರುವಾಗಲೇ ಮೈಸೂರಿಗೆ ಹೋಗಿ ಅಲ್ಲಿ ರಾಮಾಚಾರ್ಯರಲ್ಲಿ ವಿದ್ಯಾಭ್ಯಾಸ ಮಾಡಿ ಮುಂದೆ ಕಾಶಿಗೆ ಹೋದರು. ಅಲ್ಲಿಯ ಪಂಡಿತ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಪಂಡಿತ ಮದನ ಮೋಹನ ಮಾಲವೀಯರಿಂದ ಪ್ರಶಸ್ತಿಪತ್ರವನ್ನು ಪಡೆದರು.

ಇವರು ೧೯೧೧ ರಲ್ಲಿ ಭೋಸಲೇ ಅವರ ಸಂಸ್ಥಾನದಲ್ಲಿಯ ವಿದ್ವತ್ ಸಭೆಗೆ ಹೋಗಿ ತಮ್ಮ ವಾಕ್ ಚಾತುರ್ಯ ಮತ್ತು ಕವಿತಾ ಸಾಮರ್ಥ್ಯದಿಂದ "ಸಾಹಿತ್ಯ ವಿದ್ಯಾನಿಧಿ" ಎಂಬ ಪ್ರಶಸ್ತಿಯನ್ನು ಪಡೆದರು.

ಗೃಹಸ್ಥಾಶ್ರಮಿಗಳಾದ ಮೇಲೆ ಮತ್ತೆ ಕಾಶಿಗೆ ಹೋಗಿ ಅಲ್ಲಿಯೇ ಕೆಲವು ವರ್ಷ ವಾಸವಾಗಿದ್ದರು. ಆಗ್ಗೆ— ಇಂದೂರ, ಗ್ವಾಲ್ಹೇರ, ವಿಜಯನಗರಂ ಮುಂತಾದ ಸಂಸ್ಥಾನ ಗಳಿಗೆ ಹೋಗಿ ಬಹುಮಾನಿತರಾಗಿ ಬರುತ್ತಿದ್ದರು.

ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಶ್ರೀ ಸುಶೀಲೇಂದ್ರ ತೀರ್ಥರು ಇವರ ವಿದ್ವತ್ತಿಗೆ ಮೆಚ್ಚಿ ವಿಶೇಷಾನುಗ್ರಹ ಮಾಡುತ್ತಿದ್ದರು.

ಆಚಾರ್ಯರು ಬಹು ಭಾಷಾ ಪಂಡಿತರಾಗಿದ್ದರು. ಇವರು ಸಂಸ್ಕೃತದಲ್ಲಿ ಅನೇಕ ಗದ್ಯ–ಪದ್ಯಗಳನ್ನು ರಚಿಸಿದ್ದಾರೆ. ಇವರು ೭೭ ವರ್ಷ ಬಾಳಿ, ೧೯೫೭ ನೇ ಇಸ್ವಿಯಲ್ಲಿ ಕಾಲವಾದರು.

## ೭೩ ದಿ. ಬಾಪು ಆಚಾರ್ಯ, ವೇಮಗಲ್ಲ

ವೇಮಗಲ್ಲಿನ ಪಂಡಿತ ಮನೆತನದಲ್ಲಿ ಬಾಪು ಆಚಾರ್ಯರು ಪ್ರಸಿದ್ಧರಾಗಿದ್ದರು. ಅವರು ವೇದಾಂತ ಹಾಗೂ ಧರ್ಮ ಶಾಸ್ತ್ರಗಳಲ್ಲಿ ಸಂಪ್ರತಿಪನ್ನ ಪಂಡಿತರಾಗಿದ್ದರು.

## ೭೪ ದಿ. ಸೊನ್ನಿ ಗೋವಿಂದಾಚಾರ್ಯರು

ಪ್ರಮೇಯಜ್ಞರಾದ ಇವರು ಚನ್ನಾಗಿ ಪುರಾಣ ಹೇಳುತ್ತಿದ್ದರು.

## ೭೫ ಶ್ರೀ ನದೀತೀರ ರಂಗಾಚಾರ್ಯರು, ಕುಂಭಕೋಣ

ವೇದಾಂತ ಶಿರೋಮಣಿ, ವ್ಯಾಕರಣ ಶಿರೋಮಣಿ ಪರೀಕ್ಷೆಯಲ್ಲಿ ಉತ್ತೀರ್ಣ ರಾದ ಇವರು ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದಾರೆ.

## ೭೦ ದಿ. ಬಿ. ಎನ್. ದಾತಾರ

ದಿ. ಬಲವಂತರಾವ ನಾಗೇಶರಾವ ದಾತಾರರು ಎಂ. ಎ. ಪರೀಕ್ಷೆಗೆ ಸಂಸ್ಕೃತ ತೆಗೆದುಕೊಂಡು ಮುಂಬೈ ವಿಶ್ವವಿದ್ಯಾಲಯದ ಝಾಲಾ ವೇದಾಂತ ಪಾರಿತೋಷಿಕ ಸುವರ್ಣ ಪದಕವನ್ನು ಪಡೆದು ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ಪ್ರತಿಭಾವಂತರು ಇವರು ನಾಮಾಂಕಿತ ವಕೀಲರಿದ್ದಂತೆ ಶ್ರೇಷ್ಠ ರಾಜಕಾರಣಿಗಳೂ ಆಗಿದ್ದರು. ಅಚ್ಚ ಕನ್ನಡಿಗರೂ ಅಪ್ಪಟ ಮಾಧ್ವರೂ ಆಗಿದ್ದರು. ಕೇಂದ್ರ ಸರಕಾರದ ಗೃಹ ಮಂತ್ರಿಗಳಾಗಿಯೂ ಕೆಲಸ ಮಾಡಿ ದಕ್ಷ ಆಡಳಿತಗಾರರೆಂದು ಹೆಸರಾದರು.

ಪ್ರಮೇಯಜ್ಞರೂ, ಮಧ್ವ ಸಿದ್ಧಾಂತದಲ್ಲಿ ಒಳ್ಳೆ ದೀಕ್ಷೆಯುಳ್ಳವರಾಗಿದ್ದರು.

## ೭೧ ದಿ. ಮೋಹರೆ ಹನುಮಂತರಾಯರು

ಸಂಯುಕ್ತ ಕರ್ನಾಟಕವೆಂದ ಕೂಡಲೇ ಶ್ರೀ ಮೋಹರೆಯವರು ಕಣ್ಣೆದುರಿಗೆ ಬರುತ್ತಾರೆ. ಸಂಯುಕ್ತ ಕರ್ನಾಟಕವನ್ನು ಲಾಲಿಸಿ, ಪಾಲಿಸಿ, ಬೆಳಿಸಿ, ಇಷ್ಟು ದೊಡ್ಡದನ್ನಾಗಿ ಮಾಡಿದ ಶ್ರೇಯಸ್ಸು ಶ್ರೀ ಮೋಹರೆ ಹನುಮಂತರಾಯರಿಗೆ ಸಲ್ಲುವದಾಗಿದೆ.

ಇವರು ರಾಜಕಾರಣಿಗಳಿದ್ದಂತೆ ಒಳ್ಳೇ ಧರ್ಮಾಭಿಮಾನಿಗಳೂ ಆಗಿದ್ದರು. ಸಂಸ್ಕೃತ ತಜ್ಞರೂ, ಜಿಜ್ಞಾಸುಗಳೂ ಆಗಿದ್ದರು. ಅ. ಭಾ. ಮಾಧ್ವ ಮಂಡಳದ ಉಪಾಧ್ಯಕ್ಷರಾಗಿ ಮಂಡಳದ ಶ್ರೇಯಸ್ಸಿಗೆ ತುಂಬ ದುಡಿದರು. ದಿ. ಮೋಹರೆಯವರಿಗೆ ಶ್ರೀ ಮದಾಚಾರ್ಯ ಮಹಾ ಭಾರತ ತಾತ್ಪರ್ಯ ನಿರ್ಣಯದಂಥ ಉದ್ಗ್ರಂಥಗಳು ಮುಖೋದ್ಗತವಾಗಿದ್ದವು.

## ೭೨ ವಿದ್ವಾನ್ ಜಯರಾಮಾಚಾರ್ಯ ನಂಜನಗೂಡು

ಶ್ರೀ ಜಯರಾಮಾಚಾರ್ಯರು ನ್ಯಾಯ ವೇದಾಂತಗಳ ವಿದ್ವತ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ನಂಜನಗೂಡಿನಲ್ಲಿ ಪಾಠ ಪ್ರವಚನ, ಲೇಖನಾದಿಗಳಲ್ಲಿ ಆಸಕ್ತರಾಗಿ ಇದ್ದು ಕೊಂಡಿದ್ದಾರೆ. ಇವರು ಶ್ರೀ ಗುರುರಾಜರ ವಂಶಸ್ಥರು.

## ೭೩ ದಿ. ಅನಂತರಾವ ಜಾಲೀಹಾಳ



ಗದುಗಿನ ಜಾಲೀಹಾಳ ಅನಂತರಾಯರು ಮಾಧ್ವ ಸಿದ್ಧಾಂತದಲ್ಲಿ ಅತ್ಯಂತಕ ನಿಷ್ಠೆಯುಳ್ಳವರೂ ಜಿಜ್ಞಾಸುಗಳೂ ಆಗಿ ಗೀತಾ ಮುಂತಾದ ಗ್ರಂಥಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು.

ಪ್ರಸಿದ್ಧ ವಕೀಲರೂ, ಒಳ್ಳೇ ದೇಶಾಭಿಮಾನಿಗಳೂ ಆಗಿದ್ದು ಮಾಧ್ವ ಮಹಾ ಮಂಡಳದ ಶ್ರೇಯಸ್ಸಿಗೆ ಕೊನೆಯುಸಿರು ಇರುವ ವರೆಗೂ ಶ್ರಮಪಟ್ಟರು.

## ೭೪ ಶ್ರೀ ರಾಮಾಚಾರ್ಯ ಅರ್ಚಕ

ಅರ್ಚಕ ರಾಮಾಚಾರ್ಯರು ನ್ಯಾಯ ವೇದಾಂತಗಳಲ್ಲಿ ಪರಿಣತ ಪಂಡಿತ ರಾಗಿದ್ದು ಹಾವೇರಿಯಲ್ಲಿ ಪಾಠ ಪ್ರವಚನ ಮಾಡಿಸುತ್ತಲಿದ್ದಾರೆ.

## ೭೫ . ಸೌ॥ ಭಾಗ್ಯನಗರ ಲಕ್ಷ್ಮೀದೇವಮ್ಮ ಹೈದರಾಬಾದ



ಶ್ರೀಮತಿ ಲಕ್ಷ್ಮೀದೇವಮ್ಮನವರು ಮಾಧ್ವ ಸಾಂಪ್ರದಾಯ ಸಂಸ್ಕೃತಿಗಳ ಪ್ರತೀಕದಂತಿರುವರು. ಇವರು ಉಸ್ಮಾನಿಯ ವಿಶ್ವವಿದ್ಯಾಲಯದ ಬಿ. ಎ. ಪದವೀಧರರಾಗಿ ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ಮಾಡುತ್ತಲಿರುವರು.

ಇವರು ಜಿಜ್ಞಾಸುಗಳೂ ಪ್ರಮೇಯ ಜ್ಞಾನವುಳ್ಳವರೂ ಆಗಿದ್ದು ದಾಸ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ತೆಲಗು, ಕನ್ನಡ, ಉರ್ದು, ಇಂಗ್ಲೀಷ ಭಾಷೆಗಳನ್ನು ಚನ್ನಾಗಿ ಬಲ್ಲವರಾಗಿರುವರು.

ಅ. ಭಾ. ಮಾ. ಮಹಾ ಮಂಡಳ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸಿ ಹೈದರಾಬಾದಿನಲ್ಲಿ ಒಳ್ಳೇ ಸಂಘಟನೆಯನ್ನು ಮಾಡುತ್ತಲಿದ್ದಾರೆ.

ಹೈದರಾಬಾದಿನಿಂದ ಮಹಾ ಮಂಡಳದ ಪರವಾಗಿ ಇತ್ತಿತ್ತಲಾಗಿ ತೆಲಗು ಭಾಷೆಯಿಂದ ಹೊರಡುವ ತತ್ತ್ವವಾದಕ್ಕೆ ಇವರು ಕೇಂದ್ರ ಬಿಂದುವಿನಂತಿದ್ದಾರೆ.

## ೭೬ ಡಾ. ಕುಮಾರಿ ಸುಝಾನಾ ಸಿಯೂನೊ



೧೯೫೪ ರಲ್ಲಿ ಫ್ರಾನ್ಸ ದೇಶದ ನ್ಯಾಶನಲ್ ಸೆಂಟರ್ ಆಫ್ ಸಾಯಿಂಟಿಫಿಕ್ ರಿಸರ್ಚ ಸಂಸ್ಥೆಯ ಪರವಾಗಿ ಭಾರತಕ್ಕೆ ಬಂದರು. ಮೈಸೂರಿನ ಎಚ್. ಎನ್. ರಾಘವೇಂದ್ರಾಚಾರ್ಯರಲ್ಲಿ ಒಂದು ವರ್ಷ ದ್ವೈತ ವೇದಾಂತವನ್ನು ಅಧ್ಯಯನ ಮಾಡಿ ತಮ್ಮ ದೇಶಕ್ಕೆ ಮರಳಿ ಹೋದರು.

ಪುನಃ ೧೯೫೭ ರಲ್ಲಿ ಭಾರತಕ್ಕೆ ಬಂದು ಮದ್ರಾಸಿನ ಡಾ. ನಾಗರಾಜ ಶರ್ಮಾ ಅವರಲ್ಲಿ ಅನುವ್ಯಾಖ್ಯಾನ ವ್ಯಾಸಂಗ ಮಾಡಿದರು. ೧೯೬೬ ರಿಂದ ೬೮ ರ ವರೆಗೆ ಬೆಂಗಳೂರಿನಲ್ಲಿದ್ದು ಪ್ರೊ. ಕೆ. ಟಿ. ಪಾಂಡುರಂಗಿಯವರಲ್ಲಿ ‘ ಉಪಾಧಿ ಖಂಡನ ’, ‘ ಮಂದಾರ ಮಂಜರಿ ’, ಸುಧಾದಲ್ಲಿಯ ‘ ಪಂಚಾಖ್ಯಾತಿವಾದ ’, ಸುಧಾ ನಾಲ್ಕನೆಯ ಅಧ್ಯಾಯ ಮುಂತಾದವುಗಳನ್ನು ಅಭ್ಯಾಸ ಮಾಡಿದರು.

ಇವರು ಮಧ್ವ ಶಾಸ್ತ್ರಾಧ್ಯಯನದಿಂದ ಆಕೃಷ್ಟರಾಗಿ ಫ್ರೆಂಚ ಭಾಷೆಯಲ್ಲಿ ‘ ಮಧ್ವಾಚಾರ್ಯರ ಸಿದ್ಧಾಂತ ’ ಎಂಬ ಗ್ರಂಥವನ್ನು ಬರೆದು ಪ್ರಸಿದ್ಧಿಸಿದ್ದರಲ್ಲದೆ ಅನುವ್ಯಾಖ್ಯಾನವನ್ನು ಫ್ರೆಂಚ ಭಾಷೆಗೆ ಭಾಷಾಂತರಿಸಿ ಪ್ರಸಿದ್ಧಿಸಿರುವರು.

ಇವರು ಸ್ವದೇಶಕ್ಕೆ ಮರಳಿ ಹೋದ ಮೇಲೆ ದ್ವೈತ ವೇಂದಾತದ ಪ್ರಚಾರವನ್ನು ಮಾಡಬೇಕೆಂದು ನಿಶ್ಚಯಿಸಿದ್ದಾರೆ.

